ಶ್ರೀಃ

ಶ್ರೀ ರಾಮಚನ್ದ್ರ ಪರಬ್ರಹ್ಮಣೇ ನಮಃ.

ಟೀಕಾ ತಾತ್ಪರ್ಯ ಸಹಿತ

ಶ್ರೀಮದ್ವಾಲ್ಮೀಕಿ ರಾಮಾಯಣ

# ಸುನ್ದರ ಕಾಣ್ಡ.



ಶ್ಲೋ॥ ವಾಲ್ಮೀಕಿ ಗಿರಿ ಸಮ್ಭೂತಾ ರಾಮ ಸಾಗರ ಗಾಮಿನೀ ।
ಪುನಾತಿ ಭುವನಂ ಪುಣ್ಯಾ ರಾಮಾಯಣ ಮಹಾನದೀ ॥

ಶ್ರೀ ಶಿವಗಂಗಾ ಮಠದ

ಶ್ರೀಶಾರದಾ ಮಾಸಪತ್ರಿಕಾ ಸಂಪಾದಕರಾದ

ವೇ॥ ದೊಡ್ಡಬೆಲೆ ನಾರಾಯಣ ಶಾಸ್ತ್ರಿಗಳಿಂದ

ಬರೆಯಲ್ಪಟ್ಟು,

---

ಬಿ, ಸೀತಾರಾಮ ಶಾಸ್ತ್ರಿ.

ಡಿ, ಲಕ್ಷ್ಮೀನರಸಿಂಹ ಶಾಸ್ತ್ರಿ.

ಇವರಿಂದ ಪ್ರಚುರಗೊಂಡಿದೆ

---

ಕೆ, ಎಸ್, ಕೃಷ್ಣಯ್ಯರ್, ಬಿ, ಎ, ಯವರ

"ಜರಿಷ್" ಮುದ್ರಾಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

ಬೆಂಗಳೂರು.

೧೯೧೩.

ಶ್ರೀಃ

ಶ್ರೀ ಸೀತಾಲಕ್ಷ್ಮಣ ಭರತ ಶತ್ರುಘ್ನ ಹನುಮತ್ಸಮೇತ

ಶ್ರೀ ರಾಮಚನ್ದ್ರ ಪರಬ್ರಹ್ಮಣೇ ನಮಃ.



# ಶ್ರೀ ಮ ದ್ವಾ ಲ್ಮೀ ಕಿ ರಾ ಮಾ ಯ ಣೇ .

# ಸು ನ್ದ ರ ಕಾ ಣ್ಡ ಪ್ರಾ ರ ಮ್ಭಃ



ಶ್ಲೋ॥ ವಾಲ್ಮೀಕಿ ಗಿರಿ ಸಂಭೂತಾ ರಾಮ ಸಾಗರ ಗಾಮಿನೀ।
ಪುನಾತಿ ಭುವನಂ ಪುಣ್ಯಾ ರಾಮಾಯಣ ಮಹಾನದೀ ॥

---

ಮೂಲ॥ ತತೋ ಽ ರಾವಣ ನೀತಾಯಾಃ ಸೀತಾಯಾ ಶ್ಶತ್ರುಕರ್ಶನಃ ।
ಇಯೇಷ ಪದ ಮನ್ವೇಷ್ಟುಂ ಚಾರಣಾಽಽಚರಿತೇ ಪಥಿ ॥೧॥

---

ಟೀಕು॥ ತತಃ - ಜಾಂಬವಂತನು ಪ್ರೋತ್ಸಾಹವನ್ನು ಮಾಡಿದ ಬಳಿಕ, ಶತ್ರು-ಹಗೆಗಳನ್ನು, ಕರ್ಶನಃ - ಸಂಹರಿಸುವ, ( ಹನೂಮಾನ್ - ಆಂಜನೇಯನು ) ರಾವಣ-ದಶಕಂಠನಿಂದ, ನೀತಾಯಾಃ-ಕೊಂಡು ಹೋಗಲ್ಪಟ್ಟಿರುವ, ಸೀತಾಯಾಃ-ಜಾನಕಿಯ, ಪದಂ-ಸ್ಥಳವನ್ನು, ಅನ್ವೇಷ್ಟುಂ-ಹುಡುಕಲಿಕ್ಕೆ ಚಾರಣ-ದೇವಗಾಯಕರಿಂದ, ಆಚರಿತೆ-ಚೆನ್ನಾಗಿ ಸಂಚರಿಸಲ್ಪಟ್ಟ, ಪಥಿ-ದಾರಿಯಲ್ಲಿ, (ಗಂತುಂ-ಪ್ರಯಾಣ ಮಾಡುವುದಕ್ಕೋಸ್ಕರ) ಇಯೇಷ - ಇಷ್ಟಪಟ್ಟನು ॥೧॥

---

ಕಂದ॥ ವಾತಾತ್ಮಜ ನಾಕಡಲಂ
ಕೌತೂಹಲದಿಂದೆ ದಾಂಟಿ ಲಂಕೆಯು ನುರುಹಿ।
ಸೀತಾ ಕುಶಲವ ನನುವಿಂ
ಸೀತಾಪತಿ ಗೊರೆದುದಲ್ತೆ ಸುಂದರಕಾಂಡಂ ॥

---

ತಾ॥ ಹಿಂದೆ ಕಿಷ್ಕಿಂಧಾಕಾಂಡದ ಕಡೆಯ ಭಾಗದೊಳಗೆ ಜಾಂಬವಂತನು —ಸಕಲಶಾಸ್ತ್ರಗಳನ್ನು ಬಲ್ಲವನಾಗಿ, ಕಪಿವೀರರಲ್ಲಿ ಮುಖ್ಯನಾಗಿರುವ ಎಲೈ ಆಂಜನೇಯನೇ! ಒಂದು ಮಾತನ್ನೂ ಆಡದೆ, ಏಕೆ* ಸುಮ್ಮನೆ ಕುಳಿತಿದ್ದೀಯೆ! ಗರುಡನಿಗಮ್ಮಡಿಯಾದಬಲ, ಬೃಹಸ್ಪತಿಗೆಮಿಂಚಿದ ಬುದ್ಧಿ, ವಾಯುವನ್ನತಿಕ್ರಮಿಸಿದ ಪರಾಕ್ರಮ, ಮನಸ್ಸನ್ನುಹಿಂದುಮಾಡಿದವೇಗ, ಸೂರ್ಯನನ್ನು ಹಿಮ್ಮೆಟ್ಟಿಸುವತೇಜ, ಮೇರುವಿಗೆ ನೂರ್ಮಡಿಯಾದಸತ್ವ, ಇತ್ಯಾದಿಗುಣಗಳು ನಿನ್ನಲ್ಲಿ ನೆಲೆಗೊಂಡಿರುವಲ್ಲಿ, ನೀನುಹೀಗೆ ಉದಾಸೀನನಾಗಿರುವುದು ನ್ಯಾಯವಲ್ಲ. ಈಕೆಲಸವನ್ನು ಕೈಕೂಡಿಸಲು ನೀನೇಶಕ್ತ" ಎಂಬಿವೇಮೊದಲಾದ ಮಾತುಗಳಿಂದ ಪ್ರೋತ್ಸಾಹ ಗೊಳಿಸಿದನು. ಆತನ ಪ್ರೇರಣೆಯಿಂದ ಆನಂದವು ಉಕ್ಕಿ ಉತ್ಸಾಹದಿಂದ ಉಬ್ಬಿದ ಹನುಮಂತನು-ಕಡಲನ್ನು ದಾಟುವ ವೇಗದಲ್ಲಿ ಗಮನಕೊಟ್ಟು, ಚಿತ್ತವನ್ನು ನೆಲೆಗೆ ನಿಲ್ಲಿಸಿ, ಹೊರಡಲಣಿಯಾಗಿ, ಮನಸ್ಸಿನಿಂದಲೇ ಲಂಕೆಯನ್ನು ಸೇರಿದ್ದನು.

---

*ಮಾನಸಿಕಸ್ಥಿತಿಯು ಮುಂದಿನ ತನ್ನಉದ್ಯೋಗ ವೈಭವಪ್ರಕಾಶಕ್ಕೆ ನಿಮಿತ್ತ.

ವಿಶೇಷ:—ಶತ್ರುಕರ್ಶನಃ, ಎಂಬುದರಿಂದ ಆಂಜನೇಯನು—ಕಾಮ, ಕ್ರೋಧ, ಲೋಭ,ಮೋಹ

ದುಷ್ಕರಂ ನಿಷ್ಪ್ರತಿದ್ವಂದ್ವಂ ಚಿಕೀರ್ಷನ್ ಕರ್ಮವಾನರಃ।
ಸಮುದಗ್ರ ಶಿರೋಗ್ರೀವೋ ಗವಾಂ ಪತಿ ರಿವಾಬಭೌ॥ ೨॥

ದುಷ್ಕರಂ-ಮತ್ತೊಬ್ಬರೂ ಮಾಡಲಿಕ್ಕಾಗದ, ಕರ್ಮ-ಕಡಲನ್ನು ದಾಟುವ ಕೆಲಸವನ್ನು, ನಿಷ್ಪ್ರತಿದ್ವಂದ್ವಂ-ಯಾವುದೊಂದು ಅಡ್ಡಿಯೂ ಇಲ್ಲದಂತೆ, ಚಿಕೀರ್ಷನ್-ಮಾಡಬೇಕೆಂದು ಬಯಸುವ, ವಾನರಃ-ಆಂಜನೇಯನು, ಸಮುದಗ್ರ-ಚೆನ್ನಾಗಿ ಮೇಲಕ್ಕೆತ್ತಿದ, ಶಿರೋಗ್ರೀವಃ-ತಲೆ, ಮತ್ತು ಕೊರಳುಗಳುಳ್ಳವನಾದುದರಿಂದಲೇ, ಗವಾಂಪತಿರಿವ-ದೊಡ ಗೂಳಿಯಹಾಗೆ, ಆಬಭೌ-ಪ್ರಕಾಶಿಸುತ್ತಿದ್ದನು ॥ ೨ ॥

ಅನಂತರದಲ್ಲಿ—ಹಗೆಗಳ ಹುಟ್ಟನ್ನು ಅಡಗಿಸತಕ್ಕ ಹನುಮಂತನು – ರಾವಣನು ಕೊಂಡುಹೋಗಿರುವ ಸೀತೆಯು ಇರತಕ್ಕ ಸ್ಥಳವನ್ನು ಹುಡುಕಬೇಕೆಂದು ನೆನೆದು, ಚಾರಣರೆಂಬ ದೇವಗಾಯಕರು ಹೋಗಿಬರುವ ದಾರಿಯಾದ, ಮುಗಿಲಮಾರ್ಗದಲ್ಲಿ ಹೊರಡಬೇಕೆಂದು ಮನಸ್ಸೊಳಗೆ ಗೊತ್ತುಮಾಡಿಕೊಂಡನು॥೧॥ ಈಗ ಬೇರೆಯಾರೂ ಮಾಡಲಾಗದ ಸಮುದ್ರವನ್ನು ದಾಟತಕ್ಕ ದೊಡ್ಡ ಕೆಲಸವನ್ನು ತಡೆಯಿಲ್ಲದೆ ಮಾಡಬೇಕೆಂದು ಬಯಸಿದ ಆ ಹನುಮಂತನು– ಶಿರವನ್ನೂ, ಕೊರಳನ್ನೂ, ಮೇಲಕ್ಕೆತ್ತಿ ನೆಟ್ಟಗೆ ನಿಂತಿದ್ದರೆ, ಕೊಬ್ಬಿದ ಗೂಳಿಯಂತೆ ಕಾಣಬರುತ್ತಿದ್ದನು॥ ೨॥

ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗವನ್ನೂ ಗೆದ್ದ, ಆಪನ್ನ ಬ್ರಹ್ಮಚಾರಿಯಾಗಿ, ಯೋಗಶಕ್ತಿ ಸಂಪನ್ನನಾಗಿರುವುದರಿಂದ ಆಕಾಶ ಗಮನಕ್ಕೆ ಶಕ್ತನಾದೀ ತೋರುತ್ತದೆ.

ಪೂರ್ವಕಾಂಡದಲ್ಲಿ ಸಕಲ ಕಲ್ಯಾಣ ಗುಣಾಕರನಾದ ಶ್ರೀರಾಮನಲ್ಲಿ- ಶರಣಾಗತ ಸಂರಕ್ಷಣಾರೂಪವಾದ ಅಸಾಧಾರಣ ಗುಣವು ವ್ಯಕ್ತವಾಯಿತು, ಇಲ್ಲಿ-ಪತಿವ್ರತೆಯಾದ ಹೆಂಗಸು ಹೀಗೆ ಇರಬೇಕು, ದೂತನಾದವನ ಕೆಲಸವು ಇಂಥದು, ಅತಿ ಕಾಮುಕನಾದವನ ಅವಸ್ಥೆಯು ಹೀಗಿರುವುದು ಎಂಬುದು ಸ್ಪಷ್ಟವಾಗುತ್ತದೆ, ಮತ್ತು ಶ್ರೀರಾಮನಲ್ಲಿ ಸರ್ವಪಾಲಕತ್ವವಲ್ಲದೆ ಸರ್ವಸಂಹಾರಕರ್ತೃತ್ವವೂ ಉಂಟೆಂಬುದು "ಪ್ರವಿಷ್ಟ ಸ್ಸಂಘಃ" ಎಂಬಲ್ಲಿ-ಶ್ರೀರಾಮನು ಯಾವನನ್ನು ಸಂಹರಿಸಬೇಕೆಂದು ನೆನೆವನೋ, ಅಂಥವನನ್ನು ಬ್ರಹ್ಮಾದಿಗಳೂ ಕಾಪಾಡಲಾರರು ಎಂಬುದರಿಂದ ವಿಶದವಾಗುತ್ತದೆ. ಮತ್ತು—

ಶತ್ರು ಕರ್ಶನಃ—'ಗುಶಬ್ದ ಸ್ತ್ವಂಧಕಾರಸ್ಸ್ಯಾದ್ರುಶಬ್ದ ಸ್ತನ್ನಿರೋಧಕಃ। ಅಂಧಕಾರ ನಿರೋಧಿತ್ವಾದ್ಗುರುರಿತ್ಯಭಿಧೀಯತೇ॥ ಅಜ್ಞಾನವೆಂಬ ಕತ್ತಲೇ ಶತ್ರು, ಅಂತಹ ಶತ್ರುವನ್ನು ನಾಶ ಮಾಡತಕ್ಕವನೇ ಗುರು, ಈತನೇ- ಚಾರಯಂತಿ - ಪ್ರಚಾರಯಂತಿ ಧರ್ಮಾನ್ ಇತಿ-ಚಾರಣಾಃ, ಎಂದರೆ-ಸಕಲ ಸದ್ಧರ್ಮಗಳನ್ನು ಲೋಕದಲ್ಲಿ ಹರಡತಕ್ಕ ಪೂರ್ವಾಚಾರ್ಯರು, ಇಂಥವರು-ಅನುಸರಿಸಿದ ಸನ್ಮಾರ್ಗದಲ್ಲಿರತಕ್ಕವನು ಆಚಾರ್ಯನು-ರಾವಯತಿ-ಅಸತ್ಪ್ರಲಾಪಾನ್ ಕಾರಯತಿಇತಿ - ರಾವಣಃ-ಅವಿವೇಕಃ, ಎಂದರೆ ಲೋಕವನ್ನು ವ್ಯಥೆಪಡಿಸುವ ಅವಿವೇಕ, ಇಂತಹ ಅವಿವೇಕದಿಂದ, ನೀತಾಯಾಃ - ಪರಾಧೀನವಾಗಿ ಬಲಗುಂದಿರುವ ಚೇತನನ, ಪದಂ-ಎಂದರೆ ಸಂಸಾರ ಮಂಡಲವನ್ನು, ಅನ್ವೇಷ್ಟುಂ - ಹುಡುಕಲಿಕ್ಕೆ ಎಂದರೆ ಸಾತ್ವಿಕ ಸಂಭಾಷಣೆಗಾಗಿ, ಅಥವಾ ಈ ಸಂಸಾರ ಚಕ್ರದಲ್ಲಿ ಭಗವತ್ಪ್ರಾಪ್ತಿಗಾಗಿ. ಯಾರು ವ್ಯವಸಾಯವುಳ್ಳವರಾಗಿದ್ದಾರೆ,? ಎಂದು ಹುಡುಕಲಿಕ್ಕೆ, ಇಯೇಷ-ಇಚ್ಛೆಪಟ್ಟನು. ಅಥವಾ- ಆಂಜನೇಯನೆಂಬ ಸದ್ಗುರುವು, ಅವಿವೇಕದಿಂದ ಪ್ರಕೃತಿ ವಶನಾಗಿರುವ ಚೇತನನನ್ನು ಸದುಪದೇಶದಿಂದ ಉದ್ಧರಿಸಬೇಕೆಂದು ಪ್ರಯತ್ನಿಸಿದನು, ಅಥವಾ-ಆಂಜನೇಯನು ಪರಮಗುರುವಿನಂತಿರುವ ಶ್ರೀರಾಮನಿಂದ ಅಂಗುಳೀಯಕ ರೂಪ

ಅಥ ವೈಡೂರ್ಯವರ್ಣೇಷು ಶಾದ್ವಲೇಷು ಮಹಾಬಲಃ ।
ಧೀರಃ ಸಲಿಲಕಲ್ಪೇಷು ವಿಚಚಾರ ಯಥಾಸುಖಂ ॥೩॥

ಟೀಕಾ:—ಅಥ - ಅನಂತರದಲ್ಲಿ, ಮಹಾಬಲಃ - ಹೆಚ್ಚಿದ ಬಲವುಳ್ಳ, ಧೀರಃ - ಜ್ಞಾನಿಯಾದ ಮಾರುತಿಯು, ವೈಡೂರ್ಯ ವರ್ಣೇಷು - ಗರುಡಪಚ್ಚೆಯ ಬಣ್ಣವುಳ್ಳ, ಸಲಿಲಕಲ್ಪೇಷು - ನೀರಿನಹಾಗೆ ತಂಪಾಗಿಯೂ ಥಳಥಳಿಸುತ್ತಲೂ ಇರುವ, ಶಾದ್ವಲೇಷು - ಹಸಿರು ಹುಲ್ಲಿನ ಬೈಲುಗಳಲ್ಲಿ, ಯಥಾಸುಖಂ - ಹಾಯಾಗಿ, ವಿಚಚಾರ - ನಡೆದನು ॥೩॥ ಧೀಮಾನ್ - ಬುದ್ಧಿವಂತನಾದ ಹನುಮಂತನು, ಪ್ರಹೃಷ್ಟಃ - ಬೆಳವಳಿಗೆ

ತಾ॥ ಬಳಿಕ ಮಹಾಬಲಶಾಲಿಯೂ ಧೀರನೂ ಆದ ಆಂಜನೇಯನು- ಮರಕತಮಣಿಯಂತೆ ಬೆಳಗುತ, ಬಲು ತಣ್ಣಗೆ ಇರುವ ವಿಸ್ತಾರವಾದ ಜಲ ಪ್ರದೇಶಗಳಂತೆ ಹೊಳೆಯುವ ಹಸಿರುಹುಲ್ಲಿನ ಬೈಲುನೆಲದಲ್ಲಿ ಹಾಯಾಗಿ ಹೊರಟು ॥ ೩ ॥ ಹಕ್ಕಿಗಳಿಗೆ

ವಾದ ಜ್ಞಾನಧನವನ್ನು ಪಡೆದು, ಈ ಪದಾರ್ಥವನ್ನು ಪಡೆಯುತಕ್ಕ ಸತ್ಪಾತ್ರವೆಲ್ಲಿರುವುದೆಂದು ಹುಡುಕಲಾರಂಭಿಸಿದನು ಇತ್ಯಾದ್ಯರ್ಥಗಳು ತೋರುತ್ತವೆ. ಮತ್ತು:-

ಶಬ್ದಕಲ್ಪದ್ರುಮ ಅರಿನೆಯ ಪತ್ರದಲ್ಲಿ ಉದಹರಿಸಿರುವಂತೆ ರತ್ನವಾಚಕವೆನಿಸಿ,ಗಾಯತ್ರಿಯ ಮೊದಲನೆಯ ವರ್ಣವಾದ ತಕಾರವು ಆರಂಭ ಶ್ಲೋಕದ ಆದ್ಯವರ್ಣವಾಗಿರುವುದರಿಂದಲೂ,ಗಾಯತ್ರಿಯ ಹನ್ನೆರಡನೆಯ ವರ್ಣವಾಗಿ ಅಮೃತ ಬೀಜಾಕ್ಷರವೆನಿಸಿದ ವಕಾರವು ಈ ಶ್ಲೋಕದ ನಾಲ್ಕನೆಯವರ್ಣವಾಗಿ ಇರುವುದರಿಂದಲೂ, ಭಕ್ತಿಯಿಂದ ಪಾರಾಯಣ ಮಾಡತಕ್ಕವರಿಗೆ ಚತುರ್ವಿಧ ಪುರುಷಾರ್ಥಗಳೂ ಸಿದ್ಧಿಸುತ್ತವೆ.

"ಸುಂದರಾದಿಮಸರ್ಗಸ್ಥ ಹನುಮದ್ವಿಕ್ರಮಾದಿಕಂ । ಶ್ರುತ್ವಾಪಸ್ಮಾರ ಕುಷ್ಠಾದಿ ಭೂತಭೇತಾಳನಾಶನಂ ॥೧॥ ಸನಿರ್ಜಿತ್ಯ ಪುರೀಂ ಶ್ರೇಷ್ಠಾಮಿತಿ ಶ್ಲೋಕಾದಿಮಾಕ್ಷರಂ । ಶ್ರುತ್ವಾಬನ್ಧಾದ್ವಿಮುಕ್ತಸ್ಸನ್ ಬ್ರಹ್ಮಭೂಯಾಯ ಕಲ್ಪತೇ ॥೨॥ ಸೀತಾ ಸಂದರ್ಶನಂ ಶ್ರುತ್ವಾಶೋಕ ಶೋಕೋ ಭವಿಷ್ಯತಿ । ಶ್ರುತ್ವಾತು ತ್ರಿಜಟಾ ಸ್ವಪ್ನಂ ದುಸ್ಸ್ವಪ್ನಂ ನಶ್ಯತಿ ಧ್ರುವಂ ॥೩॥ ಶ್ರೀರಾಮ ಮುದ್ರಿಕಾದಾನಂ ಯೇ ಶೃಣ್ವಂತ್ಯಾದರೇಣತು । ನಿರ್ಜಿತ್ಯ ಶತ್ರೂನ್ ಸಂಗ್ರಾಮೆ ಸ್ಥಿರಂ ರಾಜ್ಯಂ ಪ್ರಜಾನತಿ ॥೪॥ ಧನ್ಯಾದೇವಾಸ್ಸಗಂಧರ್ವಾಸ್ಸಿದ್ಧಾ ಇತ್ಯತ್ರ ಜಾದಿಮಂ । ಶ್ರುತ್ವಾಚತುರ್ದಶಂ ವರ್ಣ ಮಾರುತೋ ವಾಯುವಚ್ಚರೇತ್ ॥೫॥ ಹನೂಮದ್ಗ್ರಹಣಂ ಶ್ರುತ್ವಾ ಬಂಧಾನ್ಮುಚ್ಯೇತ ಮಾನವಃ । ಲಂಕಾದಾಹಾದ್ಯನು ಶ್ರುತ್ವಾ ತಾಪತ್ರಯ ಹತಿರ್ಭವೇತ್ ॥೬॥ ಮಂಗಳಾಭಿಮುಖೀತ್ಯಸ್ಮಿನ್ ಶ್ಲೋಕೇ ಯತ್ಪ್ರಥಮಾಕ್ಷರಂ । ತದ್ಗಾಯತ್ರ್ಯಾಃ ಪಂಚದಶಂ ಶ್ರುತ್ವಾಮದ್ರೂಪ ಭಾಗ್ಭವೇತ್ ॥ ೭ ॥ ಶ್ರುತ್ವಾತು ಪಂಚಮಂ ಕಾಂಡಂ ಹನೂಮದ್ವಿಜಯಾಂಕಿತಂ । ಆಂಜನೇಯ ಪ್ರಸಾದೇನ ಬ್ರಹ್ಮಲೋಕಂ ಸ ಗಚ್ಛತಿ ॥೮॥"

ಎಂದರೆ:—ಸುಂದರಕಾಂಡದ ಮೊದಲನೆಯ ಸರ್ಗದಲ್ಲಿ ಆಂಜನೇಯನ ವಿಕ್ರಮವನ್ನು ಕೇಳುವುದರಿಂದ ಅಪಸ್ಮಾರ, ಕುಷ್ಠ, ಮೊದಲಾದ ರೋಗ, ಭೂತಭೇತಾಳಗಳ ಬಾಧೆ,ಇವು ಪರಿಹಾರವಾಗುವುವು-ಎಂದೂ, ಗಾಯತ್ರೀ ರಾಮಾಯಣಕ್ಕೆ ಸೇರಿದದಾಗಿಯೂ ಪ್ರಕೃತ ಕಾಂಡದ ಮೂರನೆಯ ಸರ್ಗದ ಪ್ರಥಮ ಶ್ಲೋಕವಾಗಿಯೂ ಇರುವ "ಸನಿರ್ಜಿತ್ಯ" ಎಂಬಶ್ಲೋಕವನ್ನು ಶ್ರವಣಮಾಡುವುದರಿಂದ ಬಂಧವಿಮೋಚನೆಯಾಗುವುದರ ಮೂಲಕ ಬ್ರಹ್ಮಭಾವಪ್ರಾಪ್ತಿ, ಸೀತಾ ಸಂದರ್ಶನ ಶ್ರವಣದಿಂದ ಶೋಕಪರಿಹಾರ, ತ್ರಿಜಟಾ ಸ್ವಪ್ನಶ್ರವಣದಿಂದ ದುಸ್ಸ್ವಪ್ನ ದೋಷಪರಿಹಾರ, ಭಕ್ತಿಪೂರ್ವಕವಾಗಿ ಶ್ರೀರಾಮ ಮುದ್ರಿಕಾ ದಾನಶ್ರವಣದಿಂದ ಶತ್ರುಜಯ ಮತ್ತು ರಾಜ್ಯಲಾಭ, ಗಾಯತ್ರಿಯ ಹದಿನಾಲ್ಕನೆಯ ವರ್ಣದಿಂದ ಘಟಿತವಾಗಿ ಜಾನಕಿಯು ಹೇಳಿದ "ಧನ್ಯಾದೇವಾಃ"ಎಂಬುದನ್ನು ಶ್ರವಣಮಾಡಿದವರೆ, ಶರೀರಪಾತಾನಂತರ ವಾಯುವಿನಂತೆ ಸಂಚರಿಸುವ ಶಕ್ತಿ, ಹನುಮಂತನ ಬಂಧವನ್ನು ಶ್ರವಣಮಾಡಿದರೆ ಬಂಧವಿಮುಕ್ತಿ, ಲಂಕಾದಾಹ ಶ್ರವಣದಿಂದ

ದ್ವಿಜಾನ್ ವಿತ್ರಾಸಯನ್ ಧೀಮಾನ್ ಉರಸಾ ಪಾದಪಾನ್ ಹರನ್ ।
ಮೃಗಾಂಶ್ಚ ಸುಬಹೂನ್ ನಿಘ್ನನ್ ಪ್ರವೃದ್ಧಃ ಇವ ಕೇಸರೀ॥೪॥
ನೀಲ ಲೋಹಿತ ಮಾಂಜಿಷ್ಠ ಪತ್ರವರ್ಣೈಃ ಸಿತಾಸಿತೈಃ ।

ಯುಳ್ಳಿರುವ, ಕೇಸರೀವ -ಸಿಂಹದಂತೆ, ದ್ವಿಜಾನ್ - ಹಕ್ಕಿಗಳನ್ನು, ವಿತ್ರಾಸಯನ್ - ಹೆದರಿಸುವವನು, ಉರಸಾ - ಎದೆಯಿಂದ, ಪಾದಪಾನ್ - ಮರಗಳನ್ನು, ಹರನ್ - ಕೆಡಹುತ್ತಲಿರುವವನು, ಸುಬಹೂನ್ - ಅನೇಕವಾದ, ಮೃಗಾನ್ - ಜಂತುಗಳನ್ನು, ನಿಘ್ನಂಶ್ಚ - ಕೊಲ್ಲುತ್ತಿರುವವನೂ ಆಗಿ, ವಿಚಚಾರ - ನಡೆದನು ॥೪॥ ಯತ್ - ಯಾವ ಬೆಟ್ಟದ ಮೇಲುಭಾಗವು, ನೀಲ - ಕಪ್ಪು, ಲೋಹಿತ - ಕೆಂಪು, ಮಾಂಜಿಷ್ಠ - ಹಳದಿ, ಪತ್ರವರ್ಣೈಃ - ಎಲೆ ಹಸಿರು ಈ ಬಗೆಯ ಬಣ್ಣವುಳ್ಳ, ಸಿತಾಸಿತೈಃ - ಬೂದಿಯ ಬಣ್ಣದ, ಸ್ವಭಾವವಿಹಿತೈಃ - ಸಂಗಡಲೇ ಹುಟ್ಟಿದ, ಚಿತ್ರೈಃ - ಬಗೆಬಗೆಯ ಬಣ್ಣದವುಗಳಾಗಿಯೂ ಇರುವ ಧಾತುಭಿಃ - ಕಾವಿಯ ಕಲ್ಲು, ಮಣಿಶಿಲೆ, ಮೊದಲಾದ ಬಣ್ಣದ ಕಲ್ಲುಗಳಿಂದ, ಅಲಂಕೃತಂ - ಸಿಂಗರಿಸಲ್ಪಟ್ಟಿರುವುದೋ, (ಕಿಂಚ - ಮತ್ತು) ಕಾಮರೂಪಿಭಿಃ - ಬೇಕಾದ ವೇಷವನ್ನು ತಾಳತಕ್ಕ, ಸಪರಿಚ್ಛದೈಃ-

ಹೆದರಿಕೆಯನ್ನುಂಟುಮಾಡುತ್ತ ಬರುವಾಗ, ಎದೆಯ ವೇಗದಿಂದ ಮರಗಳನ್ನು ಉರುಳಿಸಿ, ಅನೇಕಮೃಗಗಳನ್ನು ಸದೆಬಡಿಯುತ್ತ, ಕೊಬ್ಬಿದ ಕೇಸರಿಯಂತೆ ಮೆರೆಯುತ್ತಿದ್ದನು ॥೪॥ ಆ ಕಪ್ಪು, ಕೆಂಪು, ಹಳದಿ, ಎಲೆಹಸಿರು, ಪಾದರಿ ಮೊದಲಾದ ಬಣ್ಣವುಳ್ಳವುಗಳಾಗಿಯೂ, ಸ್ವಭಾವದಿಂದಲೇ ಚಿತ್ರವರ್ಣದವುಗಳಾಗಿಯೂ ಇರುವ ಮಣಿಶಿಲೆ, ಕಾವಿ, ಮೊದಲಾದ ಬಗೆಬಗೆಯ ಕಲ್ಲುಗಳಿಂದ ಅಲಂಕಾರವಾಗಿ, ತಮ್ಮ ಮನಬಂದರೂಪವನ್ನು ತಾಳತಕ್ಕ ಶಕ್ತಿಯನ್ನು ಪಡೆದು, ಪರಿಜನರಿಂದ ಸಹಿತರಾಗಿ, ನಾನಾಲಂಕಾರ ಭೂಷಿತರಾಗಿಯೂ ಇರುವ ಯಕ್ಷರು, ಕಿನ್ನರರು, ಗಂಧರ್ವರು, ದೇವತೆಗಳ ಗಣವೆನಿಸಿದ ಸರ್ಪಗಳು, ಈ ಮುಂತಾದವರಿಂದ ತುಂಬಿ, ದೊಡ್ಡ ಛನೆಗಳಿಂದೊಡಗೂಡಿ

ತಾಪತ್ರಯ ಪರಿಹಾರ. ಗ ಪತ್ರಿಯ ಹದಿನೈದನೆಯ ವರ್ಣದಿಂದೊಡಗೂಡಿರುವ "ಮಂಗಳಾಭಿಮುಖೀ". ಎಂಬದಾಗಿ ಆಂಜನೇಯನಿಗೆ ಜಾನಕಿಯು ಅನುಗ್ರಹಿಸಿದ ಮಂಗಳಾಶಾಸನವನ್ನು ಶ್ರವಣಮಾಡಿದರೆ ಶ್ರೀರಾಮ ಸಾರೂಪ್ಯ, ಇತ್ಯಾದಿ ಫಲಗಳುಂಟಾಗುವವು. ಈ ಐದನೆಯ ಕಾಂಡವನ್ನು ಸಂಪೂರ್ಣವಾಗಿ ಶ್ರವಣಮಾಡಿದರೆ ಶ್ರೀಮದಾಂಜನೇಯನ ಪ್ರಸಾದದಿಂದ ಬ್ರಹ್ಮಲೋಕಪ್ರಾಪ್ತಿ ಎಂದೂ ಆನಂದ ರಾಮಾಯಣದಲ್ಲಿ ಸುಂದರಕಾಂಡ ಶ್ರವಣ ಫಲವು ವಿವರಿಸಲ್ಪಟ್ಟಿದೆ.

ಅಲ್ಲದೆ-ತತಃ, ಎಂದರೆ-ನಿತ್ಯಾನಿತ್ಯವಸ್ತು ವಿವೇಕ, ಇಹಪರಸುಖಗಳಲ್ಲಿ ವಿರಕ್ತಿ, ಶಮಾದಿಸಾಧನಸಂಪತ್ತು, ಮುಮುಕ್ಷುತೆ, ಎಂಬ ನಾಲ್ಕು ಸಾಧನಗಳು ಸಿದ್ಧಿಸಿದ ಬಳಿಕ, ಶತ್ರುಕರ್ಶನಃ, ಎಂದರೆ-ಅಂತರಂಗ ಶತ್ರುಗಳಾದ ಕಾಮಾದಿಗಳನ್ನು ಗೆದ್ದಿರುವ ಮಹಾಯೋಗಿಯು, ರಾವಣನೀತಾಯಾಃ, ಎಂದರೆ-ಅವಿವೇಕರೂಪನಾದ ರಾವಣನಿಂದಕೊಂಡು ಹೋಗಲ್ಪಡದಿರುವ, ಸೀತಾಯಾಃ ಎಂದರೆ ಸಾಕ್ಷಾತ್ ಲಕ್ಷ್ಮಿಗೆ, ಪದಂ ಎಂದರೆ-ಸ್ಥಾನವಾದ ಶ್ರೀಮನ್ನಾರಾಯಣನನ್ನು, ಚಾರಣಾಚರಿತೆ-ಪೂರ್ವಾಚಾರ್ಯರು ಅಭ್ಯಾಸಮಾಡಿರುವ ಯೋಗಮಾರ್ಗದಲ್ಲಿ, ಹೇಗೆ ಏಕಾಗ್ರ್ಯದಿಂದ ಹುಡುಕುವನೋ ಹಾಗೆ, ಶತ್ರುಸಂಹಾರಕನಾದ ಆಂಜನೇಯನು, ರಾವಣನು ಕೊಂಡುಹೋಗಿರುವ ಸೀತೆಯನ್ನು ದೇವತೆಗಳ ದಾರಿಯಾದ ಮುಗಿಲಮಾರ್ಗದಲ್ಲಿ ಏಕಾಗ್ರತೆಯಿಂದ ಹುಡುಕಲಿಕ್ಕೆ ಹೊರಟನು ಎಂದು ಸುಂದರಕಾಂಡ ಮಹಿಮಾರ್ಣವ.

ಸ್ವಭಾವ ವಿಹಿತೈಃ ಚಿತ್ರೈಃ ಧಾತುಭಿಃ ಸಮಲಂಕೃತಂ ॥೫॥
ಕಾಮರೂಪಿಭಿಃ ಆವಿಷ್ಟಂ ಅಭೀಕ್ಷ್ಣಂ ಸಪರಿಚ್ಛದೈಃ ।
ಯಕ್ಷಕಿನ್ನರ ಗಂಧರ್ವೈಃ ದೇವಕಲ್ಪೈಃ ಚ ಪನ್ನಗೈಃ ॥೬॥
ಸ ತಸ್ಯ ಗಿರಿವರ್ಯಸ್ಯ ತಲೇ ನಾಗವರಾಯುತೇ ।
ತಿಷ್ಠನ್ ಕಪಿವರಃ ತತ್ರ ಹ್ರದೇ ನಾಗಃ ಇವ ಆಬಭೌ ॥೭॥
ಸಃ ಸೂರ್ಯಾಯ ಮಹೇಂದ್ರಾಯ ಪವನಾಯ ಸ್ವಯಂಭುವೇ ।
ಭೂತೇಭ್ಯಃ ಚ ಅಂಜಲಿಂ ಕೃತ್ವಾ ಚಕಾರ ಗಮನೇ ಮತಿಂ ॥೮॥
ಅಂಜಲಿಂ ಪ್ರಾಙ್ಮುಖಃ ಕುರ್ವನ್ ಪವನಾಯ ಆತ್ಮಯೋನಯೇ ।
ತತಃ ಅಭಿವವೃಧೆ ಗಂತುಂ ದಕ್ಷಿಣಃ ದಕ್ಷಿಣಾಂ ದಿಶಂ ॥೯॥
ಪ್ಲವಂಗಪ್ರವರೈಃ ದೃಷ್ಟಃ ಪ್ಲವನೆ ಕೃತನಿಶ್ಚಯಃ ।

---

ಪರಿಜನರಿಂದ ಸಹಿತರಾದ (ಅಲಂಕಾರದಿಂದ ಕೂಡಿರುವ,) ಯಕ್ಷಕಿನ್ನರಗಂಧರ್ವೈಃ - ಯಕ್ಷ, ಕಿನ್ನರ, ಗಂಧರ್ವ ಎಂಬ ದೇವ ಭೇದದವರಿಂದಲೂ, ದೇವಕಲ್ಪೈಃ - ದೇವತೆಗಳಿಗೆ ಸಮಾನರಾದ, ಪನ್ನಗೈಶ್ಚ - ಸರ್ಪಗಳಿಂದಲೂ ಆವಿಷ್ಟಂ - ಸುತ್ತಲ್ಪಟ್ಟಿರುವುದೋ, ನಾಗವರ - ಸಲಗಗಳಿಂದ, ಆಯುತೆ - ತುಂಬಿರುವ, ತಸ್ಯ-ಆ, ಗಿರಿವರ್ಯಸ್ಯ - ಉತ್ತಮವಾದ ಮಹೇಂದ್ರಪರ್ವತದ, ತಲೆ - ಪ್ರದೇಶದಲ್ಲಿ,ತಿಷ್ಠನ್-ನಿಂತಿರತಕ್ಕ, ಕಪಿವರಃ - ಕಪಿಶ್ರೇಷ್ಠನಾದ ಹನುಮನು, ಹ್ರದೆ - ದೊಡ್ಡ ಮಡುವಿನೊಳಗಿರುವ, ನಾಗಇವ ಆನೆಯಹಾಗೆ, ಆಬಭೌ - ಹೊಳೆಯುತ್ತಿದ್ದನು ॥೫॥೬॥೭॥ ಸಃ - ಆ ಆಂಜನೇಯನು, ಸೂರ್ಯಾಯ-ರವಿಗೂ, ಮಹೇಂದ್ರಾಯ - ದೇವೇಂದ್ರನಿಗೂ, ಪವನಾಯ - ವಾಯುದೇವನಿಗೂ, ಸ್ವಯಂಭುವೇ - ಬ್ರಹ್ಮನಿಗೂ, ಭೂತೇಭ್ಯಶ್ಚ - ಸಕಲ ದೇವತೆಗಳಿಗೂ, ಅಂಜಲಿಂಕೃತ್ವಾ - ಕೈಮುಗಿದು, ಗಮನೆ - ಪ್ರಯಾಣದಲ್ಲಿ ಮತಿಂ - ಬುದ್ಧಿಯನ್ನು, ಚಕಾರ - ಮಾಡಿದನು, ॥೮॥ ದಕ್ಷಿಣಃ - ಸಮರ್ಥನಾದ ಮಾರುತಿಯು, ಪ್ರಾಙ್ಮುಖಸ್ಸನ್ - ಪೂರ್ವಾಭಿಮುಖನಾಗಿ, ಆತ್ಮಯೋನಯೆ - ತನ್ನ ಉತ್ಪತ್ತಿಗೆ ಕಾರಣನಾದ, ಪವನಾಯ - ವಾಯುವಿಗೆ, ಅಂಜಲಿಂ - ನಮಸ್ಕಾರವನ್ನು, ಕೃತ್ವಾ - ಮಾಡಿ, ತತಃ - ತರುವಾಯ, ದಕ್ಷಿಣಾಂದಿಶಂ - ದಕ್ಷಿಣದಿಕ್ಕನ್ನು ಕುರಿತು, ಗಂತುಂ - ಹೊರಡಲಿಕ್ಕೆ, ವವೃಧೆ - ಬೆಳೆದನು ॥೯॥ ಪ್ಲವಂಗ - ಕಪಿಗಳೊಳಗೆ, ಪ್ರವರೈಃ - ಬಹುಮುಖ್ಯರಾದ ಅಂಗದ ಮೊದಲಾದವರಿಂದ, ದೃಷ್ಟಃ- ನೋಡಲ್ಪಟ್ಟ ಮಾರುತಿಯು, ರಾಮವೃದ್ಧ್ಯರ್ಥಂ - ರಾಮನ ಪ್ರಯೋಜನಕ್ಕೋಸ್ಕರ, ಪ್ಲವನೆ - ಕಡಲನ್ನು ದಾಟುವುದರಲ್ಲಿ, ಕೃತ-

---

ಯೂ ಇರುವ ಆ ಮಹೇಂದ್ರಪರ್ವತದ ಮೇಲ್ಭಾಗದಲ್ಲಿ ನಿಂತಿದ್ದ ಧೀರನಾದ ಆ ಮಾರುತಿಯು, ದೊಡ್ಡ ಮಡುವಿನೊಳಗೆ ನಿಂತ ಮದದಾನೆಯಂತೆ ಹೊಳೆಯುತಿದ್ದನು ॥ ೫ ॥ ಆ ಮೇಲೆ, ಆಂಜನೇಯನು-ಸೂರ್ಯ, ದೇವೇಂದ್ರ ವಾಯುದೇವ ಬ್ರಹ್ಮ, ಇವರಿಗೂ, ಇತರ ಎಲ್ಲ ದೇವತೆಗಳಿಗೂ, ಅಂಜಲಿಯನ್ನು ಸಮರ್ಪಿಸಿದುದಲ್ಲದೆ, ಹಾರಲಿಕ್ಕೆ ಸಿದ್ಧನಾಗಿ, ಮೂಡಗಡೆಗೆ ತಿರುಗಿ, ಮೊದಲೇ ದೇವತೆಗಳ ಸಾಲಿನಲ್ಲಿ ನಮಸ್ಕರಿಸಿಇದ್ದರೂ,ಪುನಃ ವಿಶೇಷವಾಗಿ ತನ್ನ ತಂದೆಯಾದ ಮಾರುತನಿಗೆ ಅಭಿವಂದಿಸಿ, ಬಳಿಕ ತೆಂಕಲದೆಸೆಯನ್ನು ಕುರಿತು ತೆರಳಲು ಅಣಿಯಾಗುತ ಬೆಳೆದನು ॥೮-೯॥ ಆ ಸಮಯದಲ್ಲಿ:-ಅಂಗದನೇ ಮೊದಲಾದ ಕಪಿಗಳೆಲ್ಲ ಬಂದು ಕಾಣಿಸಿಕೊಂಡರು. ಮಾರುತಿಯು ಕಡಲನ್ನು ಹಾರಲಿಕ್ಕೆ ಮನವನ್ನು ನಿರ್ಧರಿಸಿ,

ವವೃಧೇ ರಾಮವೃದ್ಧ್ಯರ್ಥಂ ಸಮುದ್ರಃ ಇವ ಪರ್ವಸು ॥೧೧॥
ನಿಷ್ಪ್ರಮಾಣಶರೀರಃ ಸನ್ ಲಿಲಂಘಯಿಷುಃ ಅರ್ಣವಂ ।
ಬಾಹುಭ್ಯಾಂ ಪೀಡಯಾಮಾಸ ಚರಣಾಭ್ಯಾಂ ಚ ಪರ್ವತಂ ॥೧೧॥
ಸಃ ಚಚಾಲ ಅಚಲಃಚ ಅಪಿ ಮುಹೂರ್ತಂ ಕಪಿಪೀಡಿತಃ ।
ತರೂಣಾಂ ಪುಷ್ಪಿತಾಗ್ರಾಣಾಂ ಸರ್ವಂ ಪುಷ್ಪಂ ಅಶಾತಯತ್ ॥೧೩॥
ತೇನ ಪಾದಪಮುಕ್ತೇನ ಪುಷ್ಪೌಘೇಣ ಸುಗಂಧಿನಾ ।
ಸರ್ವತಃ ಸಂವೃತಃ ಶೈಲಃ ಬಭೌ ಪುಷ್ಪಮಯಃ ಯಥಾ ॥೧೪॥
ತೇನ ಚ ಉತ್ತಮ ವೀರ್ಯೇಣ ಪೀಡ್ಯಮಾನಃ ಸಃ ಪರ್ವತಃ।

ಮಾಡಲ್ಪಟ್ಟ, ನಿಶ್ಚಯಃ - ನೆಲೆಯುಳ್ಳವನಾಗಿ, ಪರ್ವಸು - ಹುಣ್ಣಿಮೆಗಳ ಇರುಳುಗಳಲ್ಲಿ, ಸಮುದ್ರಃಇವ - ಕಡಲಿನಹಾಗೆ, ವವೃಧೆ - ಬೆಳೆಯುತ ಹೋದನು, ॥೧೧॥ ಬಲವಾನ್ - ಬಹುಬಲವುಳ್ಳ, ಸಃ - ಆ ಆಂಜನೇಯನು, ಅರ್ಣವಂ - ಸಾಗರವನ್ನು, ಲಿಲಂಘಯಿಷುಃ - ದಾಟಲೆಳಸಿದವನಾದಕಾರಣವೇ, ನಿಷ್ಪ್ರಮಾಣ-ಅಳತೆಗೊಳಗಾಗದ, ಶರೀರಸ್ಸನ್ - ಮೈಯ್ಯುಳ್ಳವನಾಗಿ, ಬಾಹುಭ್ಯಾಂ - ತೋಳುಗಳಿಂದಲೂ, ಚರಣಾಭ್ಯಾಂ ಚ - ಕಾಲುಗಳಿಂದಲೂ, ಪರ್ವತಂ - ಬೆಟ್ಟವನ್ನು, ಪೀಡಯಾಮಾಸ - ಗಟ್ಟಿಯಾಗಿ ಊರಿದನು, ॥೧೧॥ ಕಪಿ - ಆಂಜನೇಯನಿಂದ, ಪೀಡಿತಃ - ಅದುಮಲ್ಪಟ್ಟ, ಸಃ - ಆ, ಅಚಲಶ್ಚಾಪಿ - ಮಹೇಂದ್ರ ಪರ್ವತವೂ ಮುಹೂರ್ತಂ - ಸ್ವಲ್ಪ ಹೊತ್ತಿನ ವರೆಗೂ, ಚಚಾಲ -ಅಲ್ಲಾಡಿತು, ಪುಷ್ಪಿತಾಗ್ರಾಣಾಂ - ಹೂತಿರುವ ಕೊನೆಗಳುಳ್ಳ, ತರೂಣಾಂ - ಮರಗಳ, ಸರ್ವಂ ಪುಷ್ಪಂ - ಹೂವನ್ನೆಲ್ಲ, ಅಶಾತಯತ್ - ಉದಿರಿಸಿತು ॥೧೩॥ ಪಾದಪ-ಮರಗಳಿಂದ, ಮುಕ್ತೇನ - ಉದುರಿಸಲ್ಪಟ್ಟ, ಸುಗಂಧಿನಾ - ಒಳ್ಳೆಯವಾಸನೆಯುಳ್ಳ, ಪುಷ್ಪೌಘೇಣ - ಹೂಗಳಗುಂಪಿನಿಂದ, ಸರ್ವತಃ - ಎಲ್ಲ ಕಡೆಯಲ್ಲಿಯೂ, ಸಂವೃತಃ - ಮುಚ್ಚಲ್ಪಟ್ಟ, ಶೈಲಃ-ಬೆಟ್ಟವು, ಪುಷ್ಪಮಯೋ ಯಥಾ - ಹೂವಿನರಾಶಿಯು ಹೇಗೋಹಾಗೆ, ಬಭೌ-ಹೊಳೆಯುತಲಿತ್ತು, ॥೧೪॥ (ಕೆಂಡ-ವಾಕ್ಯ) ಉತ್ತಮ-ಹೆಚ್ಚಿದ, ವೀರ್ಯೇಣ - ಬಲವುಳ್ಳ, ತೇನ - ಆ ಮಾರುತಿಯಿಂದ, ಪೀಡ್ಯಮಾನಃ - ತೊಂದರೆ ಪಡಿಸಲ್ಪಟ್ಟ, ಸಃ-ಆ, ಪರ್ವತಃ - ಬೆಟ್ಟವು, ಮತ್ತಃ - ಮದವೇರಿದ, ದ್ವಿಪಃ - ಆನೆ

ರಾಮನ ಕಾರ್ಯವನ್ನು ಸಾಧಿಸಬೇಕೆಂಬ ಉತ್ಸಾಹದಿಂದ ಪೂರ್ಣಿಮೆಯ ರಾತ್ರಿಯಲ್ಲಿ ಸಮುದ್ರವು ಮೇಲಕ್ಕೆ ಉಕ್ಕಿಬರುವ ಹಾಗೆ ಬೆಳೆಯುತ ಹೋದನು॥೧೧॥ ಅಳತೆ ಮಾಡಲಿಕ್ಕೆ ಅಸಾಧ್ಯವು ಎನಿಸುವಂತೆ ಶರೀರವು ಮಿತಿಮೀರಿ ಬೆಳೆಯಲು, ಮಾರುತಿಯು ಸಮುದ್ರವನ್ನು ಹಾರಬೇಕೆಂದು ಬಯಸಿ,ಹಾರುವಾಗ ಶರೀರದಲ್ಲಿ ಲಾಘವವು ಬರಲಿಕ್ಕಾಗಿ,ಮುಂದಿನ ಎರಡು ಅಂಗೈಗಳಿಂದಲೂ, ಹಿಂದಿನ ಎರಡು ಹೆಜ್ಜೆಗಳಿಂದಲೂ ಬೆಟ್ಟವನ್ನು ಗಟ್ಟಿಯಾಗಿ ಊರಿದನು ॥೧೧॥ ಹಾಗೆ ಹನುಮಂತು ಕಯ್ಯೂರಿದುದರಿಂದ ತೊಂದರೆಪಟ್ಟ ಬೆಟ್ಟವು ಸ್ವಲ್ಪಹೊತ್ತಿನವರೆಗೂ ಅಲ್ಲಾಡುತಲಿತ್ತು. ಆ ಬೆಟ್ಟದಲ್ಲಿನ ಮರಗಳ ಕೊನೆಗಳಲ್ಲಿದ್ದ ಹೂಗಳೆಲ್ಲವೂ ಒಂದೇ ಬಾರಿ ಉದುರಿದುವು ॥೧೩॥ ಏಕಾಕಾರವಾದ ರಾಶಿಯಾಗಿ ಉದುರುತ್ತಿರುವ ಸುವಾಸನೆಯ ಹೂವನ್ನು ನೋಡಿದರೆ, ಬೆಟ್ಟವೆಲ್ಲವೂ ಮೊಟ್ಟಮೊದಲಿನಿಂದ ತುಟ್ಟತುದಿಯವರೆಗೂ ಹೂವಿನ ಮಯವಾಗಿಯೇ ಇದೆಯೋ ಎಂಬಂತೆ ಕಾಣಬರುತ್ತಿತ್ತು ॥೧೪॥ ಮಹಾವೀರ್ಯಸಂಪನ್ನನಾದ ಮಾರುತಿಯಿಂದ ಪೀಡಿಸಲ್ಪಟ್ಟ ಆ ಬೆಟ್ಟವು, ಮದವೇರಿದ ಆನೆಯು

ಸಲಿಲಂ ಸಂ ಪ್ರಸುಸ್ರಾವ ಮದಂ ಮತ್ತ ಇವ ದ್ವಿಪಃ ॥೧೪॥
ಪೀಡ್ಯಮಾನಃ ತು ಬಲಿನಾ ಮಹೇಂದ್ರಃ ತೇನ ಪರ್ವತಃ ।
ರೀತೀಃ ನಿರ್ವರ್ತಯಾಮಾಸ ಕಾಂಚನಾಂಜನ ರಾಜತೀಃ ॥ ೧೫ ॥
ಮುಮೋಚ ಚ ಶಿಲಾಃ ಶೈಲಾಃ ವಿಶಾಲಾಃ ಸಮನಶ್ಶಿಲಾಃ ।
ಮಧ್ಯಮೇನ ಅರ್ಚಿಷಾ ಜುಷ್ಟಃ ಧೂಮರಾಜೀಃ ಇವ ಅನಲಃ ॥೧೬॥
ಗಿರಿಣಾ ಪೀಡ್ಯಮಾನೇನ ಪೀಡ್ಯಮಾನಾನಿ ಸರ್ವತಃ ।
ಗುಹಾವಿಷ್ಟಾನಿ ಭೂತಾನಿ ವಿನೇದುಃ ವಿಕೃತೈಃ ಸ್ವರೈಃ ॥೧೭॥
ಸಃ ಮಹಾಸತ್ವ ಸನ್ನಾದಃ ಶೈಲಪೀಡಾನಿಮಿತ ಜಃ ।

ಯು, ಮದಮಿವ-ಮದಜಲವನ್ನು ಹೇಗೋಹಾಗೆ, ಸಲಿಲಂ-ನೀರನ್ನು, ಸಂಪ್ರಸುಸ್ರಾವ-ಸುರಿಸಿತು ॥೧೪॥ ಬಲಿನಾ - ಶಕ್ತನಾದ, ತೇನ-ಆಮಾರುತಿಯಿಂದ, ಪೀಡ್ಯಮಾನಃ- ತೊಂದರೆಗೊಳಿಸಲ್ಪಟ್ಟ, ಮಹೇಂದ್ರಃ- ಮಹೇಂದ್ರವೆಂಬ, ಪರ್ವತಸ್ತು-ಬೆಟ್ಟವಾದರೋ, ಕಾಂಚನ-ಚಿನ್ನ, ಅಂಜನ-ಕಾಡಿಕೆ (ಕಬ್ಬಿಣ, ಕಪ್ಪು) ರಾಜತೀಃ - ಬೆಳ್ಳಿ, ಇವುಗಳಂತಿರುವ, ರೀತೀಃ - ಧಾರೆಗಳನ್ನು ( ಗೆರೆಗಳನ್ನು ) ನಿರ್ವರ್ತಯಾಮಾಸ - ಕಾಣಿಸುವಂತೆ ಮಾಡಿತು. ॥೧೫॥ ಮಧ್ಯಮೇನ - ನಡುವಣದಾದ, ಅರ್ಚಿಷಾ - ಧೂಮ್ರವರ್ಣವೆಂಬ ಜ್ವಾಲೆಯಿಂದ, ಜುಷ್ಟಃ - ಕೂಡಿದ, ಅನಲಃ - ಅಗ್ನಿಯು, ಧೂಮರಾಜೀರಿವ - ಹೊಗೆಯಸಾಲುಗಳನ್ನು ಹೇಗೋ ಹಾಗೆ, ಶೈಲಃ - ಆ ಮಹೇಂದ್ರಪರ್ವತವು, ಸಮನಶ್ಶಿಲಾಃ - ಮಣಿಶಿಲೆಗಳೆಂಬ ಬಣ್ಣದ ಕಲ್ಲುಗಳಿಂದ ಸಹಿತವಾದ, ವಿಶಾಲಾಃ - ದೊಡ್ಡವುಗಳಾದ (ಅಗಲವಾದ) ಶಿಲಾಃ - ಕಲ್ಲುಗಳನ್ನು, ಮುಮೋಚಚ - ಸುರಿಸುತಲೂ ಇತ್ತು ॥೧೬॥ (ತೇನ-ಆ ಆಂಜನೇಯನಿಂದ) ಪೀಡ್ಯಮಾನೇನ - ಪೀಡಿಸಲ್ಪಡುತ್ತಿರುವ (ತುಳಿಯಲ್ಪಡುತ್ತಿರುವ) ಗಿರಿಣಾ - ಬೆಟ್ಟದಿಂದ, ಪೀಡ್ಯಮಾನಾನಿ - ತೊಂದರೆಪಡಿಸಲ್ಪಟ್ಟ, ಗುಹಾ - ಗವಿಗಳಲ್ಲಿ, ನಿವಿಷ್ಟಾನಿ - ಪ್ರವೇಶಿಸಿದ್ದ, ಭೂತಾನಿ - ಪ್ರಾಣಿಗಳು, ಸರ್ವತಃ - ಎಲ್ಲ ಕಡೆಗಳಲ್ಲಿಯೂ, ವಿಕೃತೈಃ - ವಿಕಾರವಾದ, ಸ್ವರೈಃ - ಧ್ವನಿಗಳಿಂದ, ವಿನೇದುಃ - ಅರಚಿಕೊಂಡವು ॥೧೭॥ ಶೈಲ - ಬೆಟ್ಟಕ್ಕೆ ಉಂಟಾದ, ಪೀಡಾ - ತೊಂದರೆಯು, ನಿಮಿತ್ತ - ಕಾರಣದಿಂದ, ಜಃ-ಉಂಟಾದ, ಸಃ -

ಮದೋದಕವನ್ನು ಹೇಗೋ ಹಾಗೆ ಎಲ್ಲಕಡೆಗಳಲ್ಲಿಯೂ ನೀರನ್ನು ಸುರಿಸುತ್ತಲಿತ್ತು ॥೧೪॥ ಮತ್ತು-ಮಾರುತಿಯ ಕೈಕಾಲುಗಳ ತುಳಿತದಿಂದ ತೊಂದರೆಗೊಂಡ ಮಹೇಂದ್ರಪರ್ವತವು ತನ್ನ ಅಲ್ಲಾಟದೊಳಗೆ ಬಂಡೆಗಳ ಬಡಿದಾಟದಿಂದ ಅಲ್ಲಲ್ಲಿ-ಚಿನ್ನ, ಕಬ್ಬಿಣ, ಬೆಳ್ಳಿ ಇವುಗಳ ರೂಪವಾದ ರೇಖೆಗಳನ್ನು ತೋರ್ಪಡಿಸಿತು ॥ ೧೫ ॥ ಹನುಮಂತನು ಹಾರುವ ಸನ್ನಾಹದಲ್ಲಿ (ಕಾಳಿ, ಕರಾಳಿ, ವಿಸ್ಫುಲಿಂಗಿನಿ, ಸುಧೂಮ್ರವರ್ಣ, ವಿಶ್ವರುಚಿ, ಮನೋಜವ, ಸುಲೋಹಿತ ಎಂಬ) ಏಳುಜ್ವಾಲೆಗಳೊಳಗೆ ಮಧ್ಯಮವಾದ ಸುಧೂಮ್ರವರ್ಣವೆಂಬ ಜ್ವಾಲೆಯಿಂದೊಡಗೂಡಿದ ಅಗ್ನಿಯು, ಹೊಗೆಯ ತಂಡವನ್ನು ಕಾಣುವಹಾಗೆ, ಆ ಬೆಟ್ಟವೂ ಮಣಿಶಿಲೆಗಳಿಂದೊಡಗೂಡಿರುವ ಹೊಗೆಯ ಬಣ್ಣದ ದೊಡ್ಡದೊಡ್ಡ ಬಂಡೆಗಳನ್ನು ಉರುಳಿಸುತಲಿದ್ದಿತು ॥೧೬॥ ಹೊರಡುವ ಸಡಗರದಲ್ಲಿ ಹನುಮನ ತುಳಿತದಿಂದ ತೊಂದರೆಗೊಂಡ ಆ ಬೆಟ್ಟದ ಗವಿಯೊಳಗೆ ಸೇರಿಕೊಂಡಿದ್ದ, ಬಗೆಬಗೆಯಾದ ಮಿಕಗಳೆಲ್ಲವೂ ಹೆದರಿ, ಬಹುತರವಾಗಿ ಅಬ್ಬರಿಸಿಕೊಂಡುವು ॥೧೭॥ ಬೆಟ್ಟಕ್ಕೆ ಉಂಟಾದ ತೊಂದರೆಯ ನಿಮಿತ್ತದಿಂದ

ಪೃಥಿವೀಂ ಪೂರಯಾಮಾಸ ದಿಶಃ ಚ ಉಪ ವನಾನಿಚ ॥೧೮॥
ಶಿರೋಭಿಃ ಪೃಥುಭಿಃ ಸರ್ಪಾಃ ವ್ಯಕ್ತ ಸ್ವಸ್ತಿಕ ಲಕ್ಷಣೈಃ ।
ವಮಂತಃ ಪಾವಕಂ ಘೋರಂ ದದಂಶುಃ ದಶನೈಃ ಶಿಲಾಃ ॥೧೯॥
ತಾಃ ತದಾ ಸವಿಷೈಃ ದಷ್ಟಾಃ ಕುಪಿತೈಃ ತೈಃ ಮಹಾಶಿಲಾಃ ।
ಜಜ್ವಲುಃ ಪಾವಕೋದ್ದೀಪ್ತಾಃ ಬಿಭಿದುಃಚ ಸಹಸ್ರಧಾ ॥೨೦॥
ಯಾನಿ ಚ ಔಷಧಜಾಲಾನಿ ತಸ್ಮಿನ್ ಜಾತಾನಿ ಪರ್ವತೇ ।
ವಿಷಘ್ನಾನಿ ಅಪಿ ನಾಗಾನಾಂ ನ ಶೇಕುಃ ಶಮಿತುಂ ವಿಷಂ ॥೨೧॥
(ಅಪರೇತು ಮಹಾಕಾಯಾಃ ವಮಂತೋಽಗ್ನಿಂ ಸ್ವತೇಜಸಾ ।

ಈ ಮೇಲೆ ಹೇಳಿದ, ಮಹಾಸತ್ವ - ಅನೇಕ ಜಂತುಗಳ, ಸನ್ನಾದಃ - ದೊಡ್ಡಕೂಗು, ಪೃಥಿವೀಂ-ಭೂಮಿಯನ್ನು, ದಿಶಃ-ದಿಕ್ಕುಗಳನ್ನೂ, ಉಪವನಾನಿಚ-ಉದ್ಯಾನಗಳನ್ನೂ, ಪೂರಯಾಮಾಸ-ತುಂಬಿಸಿತು ॥೧೮॥ ಪೃಥುಭಿಃ - ಅಗಲವಾದವುಗಳಾದ ಕಾರಣವೇ, ವ್ಯಕ್ತ - ಚೆನ್ನಾಗಿ ಕಾಣಬರುವ, ಸ್ವಸ್ತಿಕ - ಸ್ವಸ್ತಿಕವೆಂಬ ಮಚ್ಚೆಯ, ಲಕ್ಷಣೈಃ - ಗುರುತುಳ್ಳ, ಶಿರೋಭಿಃ - ತಲೆಗಳಿಂದ (ಹೆಡೆಗಳಿಂದ) ಕೂಡಿರುವ, ಸರ್ಪಾಃ-ಹಾವುಗಳು, ಘೋರಂ - ಭಯಂಕರವಾದ, ಪಾವಕಂ - ವಿಷದಬೆಂಕಿಯನ್ನು, ವಮಂತಃ - ಕಾರುತ್ತಿರುವಂಥವುಗಳಾಗಿ, ದಶನೈಃ - ಹಲ್ಲುಗಳಿಂದ, ಶಿಲಾಃ - ಬಂಡೆಗಳನ್ನು, ದದಂಶುಃ - ಕಚ್ಚಿದುವು. ॥೧೯॥ ತದಾ-ಆಗ, ಸವಿಷೈಃ - ವಿಷದಿಂದ ಕೂಡಿದವುಗಳಾದ ಕಾರಣವೇ, ಕುಪಿತೈಃ - ರೋಷಗೊಂಡ, ತೈಃ, - ಆ ಸರ್ಪಗಳಿಂದ, ದಷ್ಟಾಃ - ಕಚ್ಚಲ್ಪಟ್ಟವಾದ ಕಾರಣವೇ, ಪಾವಕ - ವಿಷದ ಕಿಚ್ಚಿನಿಂದ, ಉದ್ದೀಪ್ತಾಃ-ಪ್ರಜ್ವಲಿಸಿದ, ತಾಃ - ಹಿಂದೆ ಹೇಳಿದ, ಮಹಾಶಿಲಾಃ - ದೊಡ್ಡಕಲ್ಲುಗಳು, ಜಜ್ವಲುಃ-ಉರಿದುವು, ಸಹಸ್ರಧಾ - ಸಾವಿರಾರುಬಗೆಯಾಗಿ, ಬಿಭಿದುಶ್ಚ - ಸೀಳಿಯೂ ಹೋದುವು, ॥೨೦॥ ತಸ್ಮಿನ್ - ಆ, ಪರ್ವತೇ-ಮಹೇಂದ್ರ ಪರ್ವತದಲ್ಲಿ, ಯಾನಿಚ-ಯಾವ ಯಾವ, ಔಷಧ - ಮೂಲಿಕೆಗಳ, ಜಾಲಾನಿ-ಗುಂಪುಗಳು, ಜಾತಾನಿ- ಹುಟ್ಟಿದ್ದುವೋ, ತಾನಿ - ಆ ಮೂಲಿಕೆಗಳೆಲ್ಲವೂ, ವಿಷಘ್ನಾನ್ಯಪಿ - ನಂಜನ್ನು ಇಳಿಸತಕ್ಕವುಗಳಾದರೂ, ನಾಗಾನಾಂ - ಆ ಮಹಾಸರ್ಪಗಳ, ವಿಷಂ - ನಂಜನ್ನು, ಶಮಿತುಂ - ಶಾಂತಿಗೊಳಿಸಲಿಕ್ಕೆ, ನಶೇಕುಃ - ಶಕ್ತಗಳಾಗಲಿಲ್ಲ. ॥೨೧॥ (ಮಹಾಕಾಯಾಃ-ತೋರವಾದ ಮಯ್ಯುಳ್ಳ, ಅಪರೇತು - ಮೇಲೆ

ಅಂಜಿದ ಮೃಗಗಳ ಬಾಯಿಂದ ಹೊರಟ ಘೋರವಾದ ಶಬ್ದವು ಭೂಮಂಡಲದಲ್ಲಿ ದಿಕ್ಕು ದಿಕ್ಕುಗಳೊಳಗೂ, ವನಗಳೊಳಗೂ ಹರಡಿಕೊಂಡಿತು॥೧೮॥ ಆ ಬೆಟ್ಟದೊಳಗೆ ಸೇರಿಕೊಂಡಿದ್ದ ದೊಡ್ಡದೊಡ್ಡ ಸರ್ಪಗಳು ತಮ್ಮ ಶಿರದೊಳಗೆ ಸ್ವಸ್ತಿಕ (S ಹಸೆ)ದಂತೆ ಕಾಣಬರುವ ಕರಿಯಮಚ್ಚೆಗಳುಳ್ಳ ಹೆಡೆಗಳನ್ನು ಹರಡಿ ತೋರ್ಪಡಿಸುತ್ತಾ, ರೋಷಗೊಂಡು, ಭಯಂಕರವಾದ ವಿಷಜ್ವಾಲೆಗಳನ್ನು ಕಾರುತ್ತಾ, ಹಲ್ಲುಗಳಿಂದ ಹತ್ತಿರದಲ್ಲಿದ್ದ ಕಲ್ಲುಗಳನ್ನು ಕಡಿಯುತ್ತಿದ್ದುವು ॥೧೯॥ ಹೀಗೆ ಸಿಟ್ಟುಗೊಂಡ ಸರ್ಪಗಳ ಕಡಿತದಿಂದ ಪೀಡಿಸಲ್ಪಟ್ಟ ಶಿಲೆಗಳೆಲ್ಲವೂ ವಿಷಜ್ವಾಲೆಗಳಿಂದ ತುಂಬಿದವುಗಳಾಗಿ ಸಾವಿರಸೀಳುಪಾಲಾಗಿ ಸಿಡಿಯುತ್ತಾ ಒಡೆದು ಉರಿಯುತಲಿದ್ದುವು ॥೨೦॥ ಇದಲ್ಲದೆ-ಆ ಬೆಟ್ಟದಲ್ಲಿ ವಿಷಜ್ವಾಲೆಯನ್ನು ಅಣಗಿಸತಕ್ಕ ಶಕ್ತಿಯನ್ನು ಪಡೆದಿದ್ದ ಮೂಲಿಕೆಗಳೆಷ್ಟಿದ್ದುವೋ ಅವುಗಳಲ್ಲೊಂದಾದರೂ ಆ ವಿಷದವೇಗವನ್ನು ಅಡಗಿಸಲಾರದೆ ಹೋದುವು ॥ ೨೧ ॥ (ಮತ್ತೆ ಕೆಲವು ಹೆಬ್ಬಾವುಗಳು ಹನುಮನ ಕಾಲಿನ

ಕಂದರೇಭ್ಯಃ ವಿನಿಷ್ಪೇತುಃ ಕಪಿಪಾದನಿಪೀಡಿತಾಃ ॥೧॥
ಗಿರೇಃ ಆಕ್ರಮ್ಯಮಾಣಸ್ಯ ತರವಃ ತರುಣಾಂಕುರಾಃ ।
ಮುಮುಚುಃ ಪುಷ್ಪವರ್ಷಾಣಿ ಮಧೂನಿ ಸುರಭೀಣಿ ಚ ॥೨॥
ಗೈರಿಕಾಂಜನಸಂಘೃಷ್ಟಾಃ ಹರಿತಾಳಸಮಾವೃತಾಃ ।
ವ್ಯದೀರ್ಯನ್ತ ಗಿರೇಃ ತಸ್ಯ ಶಿಲಾಃ ತಾಃ ಸಮನಶ್ಶಿಲಾಃ ॥೩॥
ಸ ಚಂದನರಸಃ ತತ್ರ ಚಿತ್ರಕಾನನಸಾನುಭಿಃ ।
ಕ್ಷಿಪ್ತಃ ಶಿಖಿಸಿಭೈಃ ದೀಪ್ತೈಃ ದೀಪ್ತಗೈರಿಕಧಾತುಭಿಃ ॥೪॥)

ಹೇಳವವುಗಳಿಗಿಂತ ಬೇರಾದ ಹಾವುಗಳು, ಕಪಿ - ಹನುಮನ, ಪಾದ - ಹೆಜ್ಜೆಗಳಿಂದ, ನಿಪೀಡಿತಾಃ - ಚೆನ್ನಾಗಿ ಹಿಂಡಲ್ಪಟ್ಟವುಗಳಾದ ಕಾರಣವೇ, ಅಗ್ನಿಂ - ವಿಷವಹ್ನಿಯನ್ನು, ವಮಂತಃ - ಕಾರುತ್ತಿರುವಂಥವುಗಳಾಗಿ, ಸ್ವ-ತನ್ನ, ತೇಜಸಾ - ವಿಷಜ್ವಾಲೆಗಳೊಡನೆ, ಕಂದರೇಭ್ಯಃ - ಗವಿಗಳನ್ನು ಬಿಟ್ಟು, ವಿನಿಷ್ಪೇತುಃ - ಬಹಳವಾಗಿ ಉರುಳಿದುವು ॥೧॥ ಆಕ್ರಮ್ಯಮಾಣಸ್ಯ - ಮಾರುತಿಯಿಂದ ತುಳಿಯಲ್ಪಡುತ್ತಿರುವ, ಗಿರೇಃ - ಮಹೇಂದ್ರಪರ್ವತದಲ್ಲಿನ, ತರುಣ - ಹೊಸದಾದ, ಅಂಕುರಾಃ-ಚಿಗುರು (ಮೊಳಕೆ) ಗಳುಳ್ಳ, ತರವಃ - ಮರಗಳು, ಪುಷ್ಪವರ್ಷಾಣಿ - ಹೂವಿನಮಳೆಗಳನ್ನೂ, ಸುರಭೀಣಿ - ಸುವಾಸನೆಗಳಾದ, ಮಧೂನಿಚ - ಪುಷ್ಪರಸಗಳನ್ನೂ, ಮುಮುಚುಃ - ಉದಿರಿಸಿದುವು ॥೨॥ ಗೈರಿಕ - ಕೆಂಗಾವಿ ಕಲ್ಲುಗಳಿಂದಲೂ, ಅಂಜನ - ಕರಂಗಾವಿಕಲ್ಲುಗಳಿಂದಲೂ, ಸಂಘೃಷ್ಟಾಃ - ಚೆನ್ನಾಗಿ ಅರೆಯಲ್ಪಟ್ಟ (ಒಂದಕ್ಕೊಂದು ತಗಲಿ ಉಜ್ಜಲ್ಪಟ್ಟ) ಹರಿತಾಳ -- ಅರಿದಳಗಳಿಂದ, ಸಮಾವೃತಾಃ-ಎಲ್ಲೆಡೆಗಳಲ್ಲಿಯೂ ತುಂಬಿದ, ಸಮನಶ್ಶಿಲಾಃ - ಮಣಿಶಿಲೆಗಳಿಂದ ಸಹಿತವಾದ, ತಸ್ಯ-ಆ, ಗಿರೇಃ - ಪರ್ವತದ, ಶಿಲಾಃ - ಕಲ್ಲುಗಳು, ವ್ಯದೀರ್ಯಂತ - ಸಿಡಿದು ಹೋದುವು (ಒಡೆದುವು) ॥ ೩ ॥ ಶಿಖಿಸಿಭೈಃ - ಬೆಂಕಿಗೆ ಸಮಾನಗಳಾದ, ದೀಪ್ತೈಃ - ಹೊಳೆಯುತಲಿರುವ, ದೀಪ್ತ-ಉರಿಯುತ್ತಲಿರುವ, ಗೈರಿಕ - ಬೆಟ್ಟದಲ್ಲಿರುವ, ಧಾತುಭಿಃ-ಬಗೆಬಗೆಯ ಬಣ್ಣದ ಕಲ್ಲುಗಳಿಂದಲೂ, ಚಿತ್ರ - ನಾನಾವಿಧವಾದ, ಕಾನನ - ವನಗಳ, ಸಾನುಭಿಃ-ತೊಪ್ಪಲುಗಳೊಡನೆ, ಚಂದನರಸಃ - ಗಂಧದಮರಗಳಸಾರವುಳ್ಳ, ಸಃ - ಆ ಪರ್ವತವು, ತೂರ್ಣಂ - ಜಾಗ್ರತೆಯಾಗಿ, ಕ್ಷಿಪ್ತಃ - ಎಸೆಯಲ್ಪಡುವಂತಿತ್ತು ॥ ೪ ॥ ತಪಸ್ವಿನಃ - ಆ ಬೆಟ್ಟದಲ್ಲಿದ್ದ ಮುನಿಗಳೂ, ವಿದ್ಯಾಧರಾಃ - ವಿದ್ಯಾಧರರೆಂಬ ದೇವತೆಗಳೂ, ಅಯಂ - ಈ, ಗಿರಿಃ - ಬೆಟ್ಟವು, ಭೂತೈಃ - ಸಕಲ ಪ್ರಾ

ತುಳಿತಕ್ಕೆ ಸಿಕ್ಕಿ, ನರಳಿ, ವಿಷಜ್ವಾಲೆಯನ್ನು ಕಾರುತ್ತಾ, ಗವಿಗಳ ದ್ವಾರಗಳಿಂದ ಕೆಳಕ್ಕೆ ಉರುಳುತ್ತಿದ್ದವು ॥ ೧ ॥ ಕುಪ್ಪಳಿಸಿ ಹಾರುವ ಸಂಭ್ರಮದಲ್ಲಿ ಆಂಜನೇಯನ ಪಾದತಲದಿಂದ ಆಕ್ರಮಿಸಲ್ಪಟ್ಟ ಆ ಗಿರಿಯೊಳಿದ್ದ ಮರಗಳೆಲ್ಲವೂ-ತಮ್ಮ ಕೊನೆಗಳಲ್ಲಿನ ಸುವಾಸನೆಯಾದ ಹೂಗಳನ್ನೂ, ಪುಷ್ಪರಸಗಳನ್ನೂ, ಏಕಾಕಾರವಾಗಿ ಮಳೆಗರೆದುವು ॥ ೨ ॥ ಮತ್ತು-ಆ ಪರ್ವತದಲ್ಲಿನ ಕೆಂಗಾವಿ, ಕರಂಗಾವಿ, ಅರಿದಳ ಮೊದಲಾದ ಬಗೆಬಗೆಯ ಕಲ್ಲುಗಳು ಒಂದಕ್ಕೊಂದು ತಗಲಿ, ಎಲ್ಲವೂ ಚೂರುಚೂರಾಗುತ್ತಲಿದ್ದವು ॥ ೩ ॥ ಉರಿಯುತ್ತಿರುವ ಬೆಂಕಿಯಿಂದ ಕಾಯ್ದ ನಾನಾವಿಧವಾದ ಶಿಲೆಗಳಿಂದ ವಿಚಿತ್ರವಾದ ಕಾನನವೊಳಗಿದ್ದ ಶ್ರೀ ಗಂಧದಮರಗಳ ಸಾರವಾದ ರಸವೆಲ್ಲ ಕುದಿಯುತಲಿದ್ದಿತು ॥೪॥ ಆ ಮಹೇಂದ್ರ

ಭಿದ್ಯತೇಽಯಂ ಗಿರಿಃ ಭೂತೈಃ ಇತಿ ಮತ್ವಾ ತಪಸ್ವಿನಃ ।
ತ್ರಸ್ತಾಃ ವಿದ್ಯಾಧರಾಃ ತಸ್ಮಾತ್ ಉತ್ಪೇತುಃ ಸ್ತ್ರೀಗಣೈಃ ಸಹ ॥೨೨॥
ಪಾನಭೂಮಿಗತಂ ಹಿತ್ವಾ ಹೈಮಂ ಆಸವಭಾಜನಂ ।
ಪಾತ್ರಾಣಿ ಚ ಮಹಾರ್ಹಾಣಿ ಕರಕಾನ್ ಚ ಹಿರಣ್ಮಯಾನ್ ॥೨೩॥
ಲೇಹ್ಯಾನ್ ಉಚ್ಚಾವಚಾನ್ ಭಕ್ಷ್ಯಾನ್ ಮಾಂಸಾನಿ ವಿವಿಧಾನಿ ಚ ।
ಆರ್ಷಭಾಣಿ ಚ ಚರ್ಮಾಣಿ ಖಡ್ಗಾನ್ ಚ ಕನಕತ್ಸರೂನ್ ॥೨೪॥
ಕೃತಕಂಠಗುಣಾಃ ಕ್ಷೀಬಾಃ ರಕ್ತಮಾಲ್ಯಾನುಲೇಪನಾಃ ।

ಣಿಗಳೊಡನೆ (ಪೃಥಿವಿ ಮೊದಲಾದ ಭೂತಗಳೊಡನೆ) ಭಿದ್ಯತೇ - ಸಿಡಿದುಹೋಗುತ್ತದೆ, ಇತಿ - ಹೀಗೆಂದು, ಮತ್ವಾ - ಭಾವಿಸಿ, ತ್ರಸ್ತಾಃ - ಹೆದರಿದವರಾಗಿ, ಸ್ತ್ರೀಗಣೈಸ್ಸಹ-ಅಲ್ಲಿದ್ದ ತಮ್ಮ ಹೆಂಗಸರ ಗುಂಪಿನೊಡನೆ, ತಸ್ಮಾತ್ - ಆ ಬೆಟ್ಟದ ಬಳಿಯಿಂದ, ಉತ್ಪೇತುಃ - ಮೇಲಕ್ಕೆ ಹಾರಿಹೋದರು ॥೨೨॥ ಕೃತ-ಧರಿಸಿದ, ಕಂಠಗುಣಾಃ - ಕೊರಳಹಾರಗಳುಳ್ಳ, ಕ್ಷೀಬಾಃ - ಮದ್ಯಪಾನದಿಂದ ಮತ್ತರಾದ, (ಅದರಿಂದಲೇ) ರಕ್ತಾಕ್ಷಾಃ - ಕೆಂಗಣ್ಣುಳ್ಳ, ಪುಷ್ಕರಾಕ್ಷಾಶ್ಚ - ತಾವರೆಯಂತಿರುವ ಕಣ್ಣುಳ್ಳವರೂ ಆಗಿರುವ, ರಕ್ತ - ಕೆಂಪಾದ, ಮಾಲ್ಯ - ಹೂವಿನಹಾರ, ಅನುಲೇಪನಾಃ-ಪರಿಮಳಗಳೂ ಉಳ್ಳ, (ತೇ-ಆ ವಿದ್ಯಾಧರರೇ ಮೊದಲಾದವರು) ಪಾನಭೂಮಿ - ಕುಡಿತದ ತಾವನ್ನು, ಗತಂ - ಹೊಂದಿರುವ, ಹೈಮಂ-ಚಿನ್ನದಿಂದ ಮಾಡಿರುವ, ಆಸವಭಾಜನಂ - ಮದ್ಯಪಾನಪಾತ್ರೆಯನ್ನೂ, ಮಹಾರ್ಹಾಣಿ - ಹೆಚ್ಚಿದ ಬೆಲೆಯುಳ್ಳ, ಪಾತ್ರಾಣಿ - ಊಟದ ಪಾತ್ರೆಗಳನ್ನೂ, ಹಿರಣ್ಮಯಾನ್ - ಬಂಗಾರದವುಗಳಾದ, ಕರಕಾಂಶ್ಚ - ಗಿಂಡಿ (ತಾಳಿ) ಗಳನ್ನೂ, ಲೇಹ್ಯಾನ್ - ನಂಚಿಕೊಂಬ ಸಾಮಾನುಗಳನ್ನೂ, ಉಚ್ಚಾವಚಾನ್ - ಉತ್ತಮಾಧಮಗಳಾದ, ಭಕ್ಷ್ಯಾನ್ - ತಿಂಡಿಯ ಪದಾರ್ಥಗಳನ್ನೂ, ವಿವಿಧಾನಿ - ಬಗೆಬಗೆಯಾದ, ಮಾಂಸಾನಿಚ - ಮಾಂಸಗಳನ್ನೂ, ಆರ್ಷಭಾಣಿಚ - ಎತ್ತಿನ ತೊಗಲಿನಿಂದ ಮಾಡಿದ, ಚರ್ಮಾಣಿ - ಗುರಾಣಿಗಳನ್ನೂ, ಕನಕತ್ಸರೂನ್ - ಚಿನ್ನದ ಹಿಡಿಗಳುಳ್ಳ, ಖಡ್ಗಾಂಶ್ಚ - ಕತ್ತಿಗಳನ್ನೂ, ಹಿತ್ವಾ-ಅಲ್ಲಿಯೇ ಬಿಟ್ಟು, ಗಗನಂ-ಆಕಾಶವನ್ನು, ಪ್ರತಿಪೇದಿರೆ-

ಪರ್ವತದಲ್ಲಿ ವಾಸಮಾಡುತಲಿದ್ದ ಮಹಾ ತಪಸ್ವಿಗಳೂ, ವಿದ್ಯಾಧರರೆಂಬ ದೇವತೆಗಳೂ ಆ ಪರ್ವತದ ಭಯಂಕರವಾದ ಸ್ಥಿತಿಯಿಂದ ಹೆದರಿ, "ಈ ಬೆಟ್ಟವು ತನ್ನಲ್ಲಿರುವ ಪ್ರಾಣಿಗಳೊಡನೆ ಸಿಡಿದುಹೋಗದಿರದು" ಎಂದು ಭಾವಿಸಿ, ಆ ಬೆಟ್ಟವನ್ನು ಬಿಟ್ಟು, ಕೂಡಲೇ ತಮ್ಮ ಸ್ತ್ರೀಯರೊಡನೆ ಸಹಿತರಾಗಿ ಮೇಲಕ್ಕೆ ಹಾರಿಹೋದರು ॥೨೨॥ ಅಷ್ಟುಮಾತ್ರವೇ ಅಲ್ಲ. ಆ ವಿದ್ಯಾಧರರು- ತಾವುತಾವು ಕುಳಿತಿದ್ದ ಪಾನಭೂಮಿಯಲ್ಲಿನ ಮದ್ಯಪಾನದ ಪಾತ್ರೆಗಳನ್ನೂ,ಶ್ರೇಷ್ಠಗಳಾದ ಭೋಜನ ಪಾತ್ರೆಗಳನ್ನೂ ಎತ್ತಿನ ಚರ್ಮದಿಂದ ಮಾಡಿದ ಗುರಾಣಿಗಳನ್ನೂ, ಚಿನ್ನದ ಹಿಡಿಗಳುಳ್ಳ ಖಡ್ಗಗಳನ್ನೂ, ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯಗಳೆಂಬ ಬಗೆಬಗೆಯ ಭಕ್ಷ್ಯಗಳನ್ನೂ, ಮಾಂಸವಿಶೇಷಗಳನ್ನೂ ಎಲ್ಲಿದ್ದವುಗಳನ್ನು ಅಲ್ಲಿಯೇ ಬಿಟ್ಟು ಹೊರಟರು. ಕೊರಳುಗಳಲ್ಲಿ ಹಾರಗಳನ್ನು ಇಳಿಯ ಹಾಕಿಕೊಂಡರು, ಮದ್ಯಪಾನದಿಂದ ಮದವು ತಲೆಗೇರಿತ್ತು, ಕೆಂಪು ಹೂವಿನಹಾರಗಳನ್ನು ಧರಿಸಿದ್ದರು, ರಕ್ತಚಂದನವನ್ನು ಲೇಪಿಸಿಕೊಂಡಿದ್ದರು, ಮತ್ತತೆಯಿಂದ ಕಣ್ಣುಗಳು ಕೆಂಪೇರಿದ್ದವು. ಮತ್ತು ತಾವರೆಗಳಂತೆ ಹೊಳೆಯುತ್ತಲೂ ಇದ್ದವು, ಈ ಸ್ಥಿತಿಯಲ್ಲಿಯೇ ಮೇಲಕ್ಕೆ ಹಾರಿ

ರಕ್ತಾಕ್ಷಾಃ ಪುಷ್ಕರಾಕ್ಷಾಶ್ಚ ಗಗನಂ ಪ್ರತಿಪೇದಿರೇ ॥೨೫॥
ಹಾರನೂಪುರಕೇಯೂರಪಾರಿಹಾರ್ಯಧರಾಃ ಸ್ತ್ರಿಯಃ ।
ವಿಸ್ಮಿತಾಃ ಸಸ್ಮಿತಾಃ ತಸ್ಥುರಾಕಾಶೇ ರಮಣೈಸ್ಸಹ ॥೨೬॥
ದರ್ಶಯಂತಃ ಮಹಾವಿದ್ಯಾಂ ವಿದ್ಯಾಧರಮಹರ್ಷಯಃ ।
ಸಹಿತಾಃ ತಸ್ಥುರಾಕಾಶೇ ವೀಕ್ಷಾಂಚಕ್ರುಶ್ಚ ಪರ್ವತಂ ॥೨೭॥
ಶುಶ್ರುವುಶ್ಚ ತದಾ ಶಬ್ದಂ ಋಷೀಣಾಂ ಭಾವಿತಾತ್ಮನಾಂ ।

ಹೊಂದಿದರು ॥೨೩-೨೪-೨೫॥ ಹಾರ...ಧರಾಃ, ಹಾರ-ಮುತ್ತಿನಹಾರಗಳನ್ನೂ, ನೂಪುರ-ಕಾಲು ಕಡಗಗಳನ್ನೂ, ಕೇಯೂರ - ಭುಜಕೀರ್ತಿ (ಬಾಪುರಿ) ಗಳನ್ನೂ, ಪರಿಹಾರ್ಯ-ಕೈಕಡಗಗಳನ್ನೂ, ಧರಾಃ-ಧರಿಸಿರುವ, ಸ್ತ್ರಿಯಃ - ವಿದ್ಯಾಧರಿಯರು, ರಮಣೈಸ್ಸಹ - ತಮ್ಮ ಗಂಡಂದಿರೊಡನೆ, ಆಕಾಶೆ - ಆಕಾಶದಲ್ಲಿ, ವಿಸ್ಮಿತಾಃ-ಆಶ್ಚರ್ಯಗೊಂಡವರಾಗಿಯೂ, ಸಸ್ಮಿತಾಃ-ಮುಗುಳ್ನಗೆಯಿಂದ ಕೂಡಿದವರಾಗಿಯೂ, ಮಹಾವಿದ್ಯಾಂ-ವಿದ್ಯಾಶಕ್ತಿಯನ್ನು, ದರ್ಶಯಂತಃ-ತೋರಿಸುತ್ತಿರುವವರಾಗಿಯೂ, ತಸ್ಥುಃ-ನಿಂತಿದ್ದರು. ॥ ೨೬ ॥ ವಿದ್ಯಾಧರಮಹರ್ಷಯಃ - ಮುನಿಗಳಂತಿರುವ ವಿದ್ಯಾಧರರು, (ವಿದ್ಯಾಧರಶ್ರೇಷ್ಠರು) ಆಕಾಶೆ - ಅಂಬರದಲ್ಲಿ, ಸಹಿತಾಃ - ಸೇರಿದವರಾಗಿ, ತಸ್ಥುಃ - ನಿಂತಿದ್ದರು, ಪರ್ವತಂಚ - ಬೆಟ್ಟವನ್ನೂ, ವೀಕ್ಷಾಂಚಕ್ರುಃ-ನೋಡುತ್ತಿದ್ದರು. ॥ ೨೭ ॥ (ಕಿಂಚ - ಮತ್ತು) ವಿಮಲೆ - ನಿರ್ಮಲವಾದ, ಅಂಬರೆ- ಆಕಾಶದಲ್ಲಿ, ತದಾ-ಆಗ, ಸ್ಥಿತಾನಾಂ - ಇದ್ದ, ಭಾವಿತಾತ್ಮನಾಂ - ಶುದ್ಧವಾದ ಮನಸ್ಸುಳ್ಳ, ಋಷೀಣಾಂ - ಮಹರ್ಷಿಗಳ, ಚಾರಣಾನಾಂ - ದೇವಗಾಯಕರ, ಸಿದ್ಧಾನಾಂ - ಸಿದ್ಧಪುರುಷರ ಶಬ್ದಂ - (ದನಿ ಹೇಳುವಂತೆ)

ಹೊಂದಿದರು ॥೨೩-೨೪-೨೫॥ ಮುತ್ತಿನಹಾರ, ಕಾಲುಕಡಗ, ಬಾಜಿ ಬಂದು, ಮೊದಲಾದ ಆಭರಣಗಳನ್ನು ಧರಿಸಿದ್ದ ವಿದ್ಯಾಧರಿಯರು ಆ ಬೆಟ್ಟದಲ್ಲಿನ ಸ್ಥಿತಿಯನ್ನೆಲ್ಲ ನೋಡಿ ಆಶ್ಚರ್ಯಪಟ್ಟು, ಮಂದಹಾಸದಿಂದೊಡಗೂಡಿ ತಮ್ಮ ಪತಿಗಳೊಡನೆ ಆಕಾಶಕ್ಕೆ ಹಾರಿ ನಲಿಯುತ್ತಿದ್ದರು ॥೨೬॥ ಮತ್ತು - ಮಹಾಮುನಿಗಳಂತೆ ಇದ್ದ ಬಿದ್ಯಾಧರರು ತಮ್ಮ § ಮಹತ್ತರವಾದ ವಿದ್ಯೆಗಳನ್ನು ಎಂದರೆ ಸಿದ್ಧಿಗಳನ್ನು ತೋರುತ್ತ ಬೆರಗಾಗಿ, ಹಾಗೆಂದರೆ-ಕೆಲವರು ಬಲು ಸಣ್ಣನೆಯರೂಪವನ್ನು ತಾಳಿ, ಕೆಲವರು ತೋರವಾದ ಆಕಾರವನ್ನಾಂತು, ಮತ್ತೆ ಕೆಲವರು ಭಾರವಾಗಿ ಕಾಣುವವೇಷವನ್ನು ತಳೆದು, ಇನ್ನು ಕೆಲವರು ಹಗುರವಾಗಿ ಕಾಣಬರುತ್ತಾ, ಪಲಬರು ಬಗೆಬಗೆಯರೂಪವ ಧರಿಸಿ, ಕೆಲವರು ಮನಬಂದಂತೆ ತಡೆಯಿಲ್ಲದೆ ಸಂಚರಿಸಲನುವಾದ ಆಕೃತಿಯನ್ನು ತಾಳ್ದು, ಅನೇಕರು ಬಹು ದೊಡ್ಡತನದ ಬಗೆಯನ್ನಳವಟ್ಟು, ಬಹುಮಂದಿ ಇಂದ್ರಿಯನಿಗ್ರಹವನ್ನು ಪಡೆದು, ಆಕಾಶಮಂಡಲದಲ್ಲಿ ಒಟ್ಟಿಗೆ ಸೇರಿ ಆ ಬೆಟ್ಟದ ಇರವನ್ನು ಬಲು ಅಚ್ಚರಿಯಿಂದ ದುರುದುರನೆ ನೋಡುತ್ತಿದ್ದರು ॥೨೭॥ ಅಷ್ಟುಮಾತ್ರವೇ ಅಲ್ಲ "ದೊಡ್ಡಬೆಟ್ಟದಂತೆ ಬೆಳೆದಿರುವ ವಾಯುಪುತ್ರನಾದ ಈ ಹನುಮಂತನು *ರಾಮಕಾರ್ಯಾರ್ಥವಾಗಿಯೂ ವಾನರರ ಜೀವನ ಪ್ರಯೋಜನಕ್ಕೋಸ್ಕರವಾಗಿಯೂ,ಮಾ

§ ಅಣುತ್ವ, ಮಹತ್ವ, ಗುರುತ್ವ, ಲಘುತ್ವ, ಸ್ವೇಚ್ಛಾಗಮನ, ನಾನಾರೂಪಧಾರಣ, ನಿಯಾಮಕತ್ವ, ಜಿತೇಂದ್ರಿಯತ್ವ ಇವು ಅಷ್ಟಸಿದ್ಧಿ.

* "ಅಸ್ಮಿನ್ ಕಾರ್ಯೆ ವಿನಿರ್ವೃತ್ತೆ ಕೃತೆ ದಾಶರಥೇಃ ಪ್ರಿಯೆ । ಋಣಾನ್ಮುಕ್ತಾ ಭವಿಷ್ಯಾಮಃ ಕ

ಚಾರಣಾನಾಂ ಚ ಸಿದ್ಧಾನಾಂ ಸ್ಥಿತಾನಾಂ ವಿಮಲೇಽಂಬರೇ ॥೨೮॥
ಏಷ ಪರ್ವತಸಂಕಾಶಃ ಹನೂಮಾನ್ ಮಾರುತಾತ್ಮಜಃ ।
ತಿತೀರ್ಷತಿ ಮಹಾವೇಗಃ ಸಮುದ್ರಂ ಮಕರಾಲಯಂ ॥೨೯॥
ರಾಮಾರ್ಥಂ ವಾನರಾರ್ಥಂ ಚ ಚಿಕೀರ್ಷನ್ ಕರ್ಮ ದುಷ್ಕರಂ ।
ಸಮುದ್ರಸ್ಯ ಪರಂ ಪಾರಂ ದುಷ್ಪ್ರಾಪಂ ಪ್ರಾಪ್ತುಮಿಚ್ಛತಿ ॥೩೦॥
ಇತಿ ವಿದ್ಯಾಧರಾಃ ಶ್ರುತ್ವಾ ವಚಃ ತೇಷಾಂ ಮಹಾತ್ಮನಾಂ ॥
(ಬಹುಮಾನೇನ ತೇ ಸರ್ವೇ ಹನೂಮನ್ತಂ ಪ್ರಪೇದಿರೇ ॥)

---

ಮಾತನ್ನು, ಶುಶ್ರುವುಃ - ಕೇಳಲೂ ಕೇಳಿದರು. ॥೨೮॥ (ಎಂತೆಂದರೆ-) ಪರ್ವತಸಂಕಾಶಃ - ಬೆಟ್ಟಕ್ಕೆ ಸಮನಾದ, ಮಾರುತಾತ್ಮಜಃ - ವಾಯು ಕುಮಾರನೆನಿಸಿದ, ಏಷಃ - ಈ, ಹನುಮಾನ್ - ಆಂಜನೇಯನು, ಮಕರ-ಮೊಸಳೆ ಮೊದಲಾದ ಜಲಜಂತುಗಳಿಗೆ, ಆಲಯಂ - ಮನೆಯಾದ ಕಡಲನ್ನು, ಮಹಾವೇಗಃ - ಬಲುವೇಗವುಳ್ಳವನಾಗಿ, ತಿತೀರ್ಷತಿ - ದಾಟಲೆಳಸುತಲಿದಾನೆ ॥ ೨೯ ॥ ರಾಮಾರ್ಥಂ - ಶ್ರೀ ರಾಮ ಪ್ರಯೋಜನಕ್ಕೂ, * ವಾನರಾರ್ಥಂಚ -ಕಪಿಗಳ ಕಾರ್ಯಾರ್ಥವಾಗಿಯೂ, ದುಷ್ಕರಂ - ಮಾಡಲಸವಳವಾದ, ಕರ್ಮ - ಕೆಲಸವನ್ನು, ಚಿಕೀರ್ಷನ್ - ಮಾಡಬೇಕೆಂದು ಬಯಸಿದವನಾಗಿ, ದುಷ್ಪ್ರಾಪಂ - ಹೊಂದಲಸದಳವಾದ, ಸಮುದ್ರಸ್ಯ - ಸಾಗರದ, ಪರಂಪಾರಂ- ಮತ್ತೊಂದು ದಡವನ್ನು, ಪ್ರಾಪ್ತುಂ-ಹೊಂದಲಿಕ್ಕೆ, ಇಚ್ಛತಿ-ಕೋರುತ್ತಿರುವನು. ॥೩೦॥ ವಿದ್ಯಾಧರಾಃ-ವಿದ್ಯಾಧರರೆಂಬ ದೇವತೆಗಳು, ಏವಂ- ಈ ಮೇಲೆ ಹೇಳಿದಂತೆ, ಮಹಾತ್ಮನಾಂ - ಮಹಾನುಭಾವರಾದ, ತೇಷಾಂ - ಆ ಋಷಿಗಳೇ ಮೊದಲಾದವರ, ವಚಃ - ಮಾತುಗಳನ್ನು, ಶ್ರುತ್ವಾ - ಆಲಿಸಿ, (ತೇ ಸರ್ವೇ - ಅವರೆಲ್ಲರೂ, ಬಹುಮಾನೇನ - ಗೌರವಬುದ್ಧಿಯಿಂದ, ಹನೂಮಂತಂ - ಆಂಜನೇಯನನ್ನು, ಪ್ರಪೇದಿರೆ - ಬೇಗನೆ ಬಂದು ಸೇರಿದರು) ಪರ್ವತೇ - ಆ ಬೆಟ್ಟದಲ್ಲಿ, ಅಪ್ರಮೇಯಂ - ಅಳತೆಗೆ ಒಳಗಾಗದಿರುವ, ತಂ - ಆ, ವಾನರರ್ಷಭಂ - ಕಪಿ

---

ಡಲಸದಳವೆನಿಸಿದ ಕೆಲಸವನ್ನೂ ಮಾಡಬೇಕೆಂದು ಬಗೆದು, ಬಹುವೇಗದಿಂದೊಡಗೂಡಿ ಮೊಸಳೆಯೇ ಮೊದಲಾದ ಜಲಜಂತುಗಳಿಗಾಸರೆಯೆನಿಸಿದ ಈ ಸಮುದ್ರವನ್ನು ದಾಟಬೇಕೆಂದು ಬಯಸುತ್ತಿರುವನು, ಅಹಹ ! ಹೊಂದಲಸದಳವಾದ ಈ ಕಡಲಿನ ಆಚೆಯದಡವನ್ನು ಸೇರಲು ನೆನೆದಿರುವನು” ಎಂದೀ ಪ್ರಕಾರ ಪರಸ್ಪರವಾಗಿ ಮಾತನಾಡಿಕೊಳ್ಳುತ, ನಿರ್ಮಲವಾದ ಆಕಾಶಮಂಡಲದಲ್ಲಿ ನಿಂತಿರುವ ಮಹಾಯೋಗಸಂಪನ್ನರಾದ ಮಹರ್ಷಿಗಳ, ಚಾರಣರ, ಮತ್ತು ಸಿದ್ಧರ, ನುಡಿಗಳನ್ನು ಕೇಳಿಸಿಕೊಂಡರು ॥೨೮-೨೯-೩೦॥ ಹಾಗೆ ಆ ಮಹಾತ್ಮರ ಮಾತುಗಳನ್ನಾಲಿಸಿದ ವಿದ್ಯಾಧರರೆಂಬ ದೇವತೆಗಳು-ಆ ಮೇಲೆ, ಆ ಪರ್ವತದಲ್ಲಿ ಅಳತೆಗೊಳಗಾಗದಹಾಗೆ ಬೆಳೆದುನಿಂತಿರುವ ವಾನರೋತ್ತಮನಾದ ಆಂಜನೇಯನನ್ನು

---

ತಂ ಋಷಾರ್ಥ ವಿದಾಂವರಾಃ ॥ ” ಸೀತಾ ಕುಶಲವೃತಾಂತವನ್ನು ತರೋಣ ವೆಂಬುದು ರಾಮನಿಗೆ ಪ್ರಿಯವಾದ ಕಾರ್ಯ, ಇದನ್ನು ನೀವು ನೆರವೇರಿಸಿದರೆ ನಾವೆಲ್ಲರೂ ಕೃತಾರ್ಥರೂ, ನೀತಿಜ್ಞರೂ, ಋಣಮುಕ್ತರೂ ಆಗುವೆವು. (ಕಿ. ಕಾಂ, ೩೩ಸ)

“ * ವ್ಯತೀತಸ್ತತ್ರನೋ ಮಾಸಃ ಯೋರಾಜ್ಞಾ ಸಮಯಃ ಕೃತಃ । ನ ತಾನಾಮಪಿ ಸರ್ವೇಷಾಂ ತತ್ರನೋ ನಾಸ್ತಿ ಜೀವಿತಂ ॥ ” ನಮಗೆ ಇದ್ದ ಒಂದು ತಿಂಗಳು ಮಾತ್ರ ಗಡುವೂ ಕಳೆದು ಹೋಯಿತು. ಕಾರ್ಯ ಸಿದ್ಧಿಯೂ ಇಲ್ಲದೆ ಹಿಂತಿರುಗಿ ಹೋದರೆ ನಮ್ಮ ಜೀವನವು ಉಳಿವುದಿಲ್ಲ (ಕಿ. ಕಾಂ. ೫೩ ಸ.)

ತಂ ಅಪ್ರಮೇಯಂ ದದೃಶುಃ ಪರ್ವತೇ ವಾನರರ್ಷಭಂ ॥೩೧॥
ದುಧುವೇ ಚ ಸ ರೋಮಾಣಿ ಚಕಂಪೇ ಚ ಅಚಲೋಪಮಃ ।
ನನಾದ ಸುಮಹಾನಾದಂ ಸುಮಹಾನಿವ ತೋಯದಃ ॥೩೨॥
ಆನುಪೂರ್ವ್ಯೇಣ ವೃತ್ತಂ ಚ ಲಾಂಗೂಲಂ ರೋಮಭಿಶ್ಚಿತಂ ।
ಉತ್ಪತಿಷ್ಯನ್ವಿಚಿಕ್ಷೇಪ ಪಕ್ಷಿರಾಜ ಇವೋರಗಂ ॥೩೩॥
ತಸ್ಯ ಲಾಂಗೂಲಮಾವಿದ್ಧಮಾತ್ತವೇಗಸ್ಯ ಪೃಷ್ಠತಃ ।
ದದೃಶೇ ಗರುಡೇನೇವ ಹ್ರಿಯಮಾಣೋ ಮಹೋರಗಃ ॥೩೪॥
ಬಾಹೂ ಸಂಸ್ತಂಭಯಾಮಾಸ ಮಹಾಪರಿಘಸನ್ನಿಭೌ ।

---

ಶ್ರೇಷ್ಠನನ್ನು, ದದೃಶುಃ - ನೋಡಿದರು ॥ ೩೧ ॥ ಅಚಲೋಪಮಃ - ಬೆಟ್ಟಕ್ಕೆ ಸಮನೆನಿಸಿದ, ಸಃ - ಆ ಆಂಜನೇಯನು, ರೋಮಾಣಿ - ಮೈಗೂದಲುಗಳನ್ನು, ದುಧುವೇ ಚ - ಒದರಿದನು, ಚಕಂಪೇ ಚ - ತಾನೂ ಅಲ್ಲಾಡಿದನು, ಸುಮಹಾನ್ - ಬಲುತೋರವಾದ, ತೋಯದ ಇವ - ಜಲಧರದಂತೆ, ಸುಮಹಾನಾದಂ - ಬಲುಸದ್ದಾಗುವಂತೆ, ನನಾದಚ-ಕೂಗಿದನು (ಅಬ್ಬರಿಸಿದನು) ॥ ೩೨ ॥ (ಕಿಂಚ-ಮತ್ತು, ಸಃ - ಆ ಆಂಜನೇಯನು) ಉತ್ಪತಿಷ್ಯನ್ - ಮೇಲಕ್ಕೆ ಹಾರಲು ಯತ್ನಿಸಿದವನಾಗಿ, ಆನುಪೂರ್ವ್ಯೇಣ (ಬುಡದಿಂದ ತುದಿಯುವರೆಗೂ) ಕ್ರಮದಿಂದ, ವೃತ್ತಂ - ದುಂಡಾದುದೂ, ರೋಮಭಿಃ - ಕೂದಲುಗಳಿಂದ, ಚಿತಂಚ - ತುಂಬಿದುದೂ ಆಗಿರುವ, ಲಾಂಗೂಲಂ - ಬಾಲವನ್ನು, ಪಕ್ಷಿರಾಜಃ - ಹಕ್ಕಿಗಳೊಡೆಯನಾದ ಗರುಡನು, ಉರಗಮಿವ - ಸರ್ಪವನ್ನು ಹೇಗೋ ಹಾಗೆ, ವಿಚಿಕ್ಷೇಪ - ಹಾರಿಸಿದನು (ಕುಣಿಸಿದನು) ॥೩೩॥ ಆತ್ತವೇಗಸ್ಯ - ವೇಗವನ್ನು ಕೈಗೊಂಡ, ತಸ್ಯ - ಆ ಮಾರುತಿಯ, ಪೃಷ್ಠತಃ-ಹಿಂಭಾಗದಲ್ಲಿ, ಆವಿದ್ಧಂ - ತುದಿಯು ಡೊಂಕಾಗಿ ನೀಳವಾಗಿರುವ, ಲಾಂಗೂಲಂ - ಬಾಲವು, ಗರುಡೇನ-ಗರುತ್ಮಂತನಿಂದ, ಹ್ರಿಯಮಾಣಃ - ಸೆಳೆದೊಯ್ಯಲ್ಪಡುತ್ತಿರುವ, ಮಹೋರಗ ಇವ, ದೊಡ್ಡ ಹಾವಿನ ಹಾಗೆ, ದದೃಶೇ - ಕಾಣಬಂದಿತು ॥೩೪॥ ಕಪಿಃ - ಆಂಜನೇಯನು, ಮಹಾ - ದೊಡ್ಡದಾದ, ಪರಿಘ - ಅಗುಳಿಗೆ (ಲಾಳವುಂಡಿಗೆಗೆ) ಸನ್ನಿಭೌ - ಸಮಾನಗಳಾದ, ಬಾಹೂ - ತೋಳುಗಳನ್ನು, ಸಂಸ್ತಂಭಯಾಮಾಸ - ಅಲುಗದಂತೆ ನಿಲ್ಲಿಸಿದನು, ಕಟ್ಯಾಂ - ಟೊಂಕದಲ್ಲಿ, ಸಸಾದಚ - ಬಡವಾದನು, ಚರಣೌ -

---

ಕಂಡರು ॥೩೧॥ ಆಗಲಾ ಕಪಿವೀರನಾದ ಹನುಮಂತನು ಬೆಟ್ಟದಂತೆ ಕಾಣಬರುತ್ತಾ, ಮಹೇಂದ್ರಪರ್ವತದಿಂದ ಕುಪ್ಪಳಿಸಿ ಹಾರುವ ಬಯ್ಯಾರದಲ್ಲಿ ಮೈಗೂದಲನ್ನು ಕೊಡಹಿದನು. ಹಾಗೆಯೇ ತಾನೂ ಅಲುಗಿದನು. ಮತ್ತು- ದೊಡ್ಡ ಮೋಡವು ಗುಡುಗುವಂತೆ ಸಿಂಹನಾದವನ್ನೂ ಮಾಡಿದನು. ॥೩೨॥ ಹಿಂಗಾಲು ಮುಂಗಾಲುಗಳಿಂದ ಎರಡು ಮೂರುಸಾರಿ ಕುಪ್ಪಳಿಸುವಂತೆ ಕುಣಿದು, ಹಾರಲಿಕ್ಕೆ ಸವರಿಸಿಕೊಂಡು, ಬುಡದಿಂದ ತುದಿಯುವರೆಗೂ ಗುಂಡಾಗಿಯೂ, ರೋಮಗಳಿಂದ ತುಂಬಿಯೂ ಇರುವ ಬಾಲವನ್ನು ಮೇಲಕ್ಕೆತ್ತಿ ಗರುಡನು ಹಾವನ್ನು ಅಪ್ಪಳಿಸುವ ಹಾಗೆ ಕೊಡಹಿ ಒಗೆದನು ॥೩೩॥ ಹಾಗೆ ಒಗೆದು, ವೇಗದಿಂದ ಹಾರಿ ಹೋಗುತ್ತಿರುವ ಹನುಮಂತನ ಹಿಂದೆ ತೇಲುವ ತುದಿಮುದುರಿದ ಬಾಲವು, ಗರುಡನು ಸೆಳೆದೊಯ್ಯುತ್ತಿರುವ ನೀಳವಾದ ಹಾವಿನಂತೆ ಕಾಣಬರುತ್ತಿತ್ತು ॥೩೪॥ ಹಾರಲಿಕ್ಕೆ ಸ್ವಲ್ಪ ಕಾಲಮುಂಚೆ ದೊಡ್ಡಲಾಳಮುಂಡಿಗೆಯಂತಿರುವ ಮುಂದೋಳುಗಳು ಕಂಬದಂತೆ ಅಲುಗದ

ಸಸಾದ ಚ ಕಪಿಃ ಕಟ್ಯಾಂ ಚರಣೌ ಸಂಚುಕೋಚ ಚ ॥೩೫॥
ಸಂಹೃತ್ಯ ಚ ಭುಜೌ ಶ್ರೀಮಾನ್ ತಥೈವ ಚ ಶಿರೋಧರಾಂ ।
ತೇಜಃ ಸತ್ವಂ ತಥಾ ವೀರ್ಯಂ ಆವಿವೇಶ ಸ ವೀರ್ಯವಾನ್ ॥೩೬॥
ಮಾರ್ಗ ಮಾಲೋಕಯನ್ ದೂರಾತ್ ಊರ್ಧ್ವಂ ಪ್ರಣಿಹಿತೇಕ್ಷಣಃ ।
ರುರೋಧ ಹೃದಯೆ ಪ್ರಾಣಾನ್ ಆಕಾಶ ಮವಲೋಕಯನ್ ॥೩೭॥

ಪಾದಗಳನ್ನು, ಸಂಚುಕೋಚಚ - ಸಂಕೋಚ ಪಡಿಸಿದನು ॥೩೫॥ ಶ್ರೀಮಾನ್ - ಕಾಂತಿಸಂಪನ್ನನೂ, ವೀರ್ಯವಾನ್ - ಪರಾಕ್ರಮಶಾಲಿಯೂ ಆದ ಮಾರುತಿಯು, ಭುಜೌ - ತೋಳುಗಳನ್ನೂ, ತಥೈವ - ಹಾಗೆಯೇ, ಶಿರೋಧರಾಂಚ - ಕಂಠವನ್ನೂ, ಸಂಹೃತ್ಯ - ಹಿಂದಕ್ಕೆ ಸೆಳೆದು (ಹಾರುವಾಗ ಹಿಂದಕ್ಕೆ ತಗ್ಗಾಡಿ ಮುಂದಕ್ಕೆ ಹಾರುವುದು ಸ್ವಭಾವ) ತಥಾ - ಹಾಗೆಯೇ, ತೇಜಃ - ಹೆರರನ್ನು ಹಿಮ್ಮೆಟ್ಟಿಸುವ ಪ್ರಭೆಯನ್ನೂ, ಸತ್ವಂ - ಮಿತಿಮೀರಿದ ಕೆಲಸವನ್ನು ಮಾಡುವುದಕ್ಕನುಗುಣವಾದ ಬಲವನ್ನೂ, ವೀರ್ಯಂ - ಆಕಾಶಗಮನ ಸಾಮರ್ಥ್ಯವನ್ನೂ, ಆವಿವೇಶ - ತೊಟ್ಟನು. (ಆವಾಹನ ಮಾಡಿಕೊಂಡನು) ॥೩೬॥ ಊರ್ಧ್ವಂ - ಮೇಲುಗಡೆ, ಪ್ರಣಿಹಿತ - ಇಡಲ್ಪಟ್ಟ (ಕಳುಹಲ್ಪಟ್ಟ) ಈಕ್ಷಣಃ - ನೋಟವುಳ್ಳವನಾಗಿ, ದೂರಾತ್ - ದೂರದಿಂದಲೇ, ಮಾರ್ಗಂ - ತಾನು ಹೊರಡಬೇಕಾಗಿರುವ ದಾರಿಯನ್ನು, ಆಲೋಕಯನ್ - ನೋಡಿದವನಾಗಿ, ಹೃದಯೆ-ಶರೀರದೊಳಗೆ, ಪ್ರಾಣಾನ್ - ಪ್ರಾಣವಾಯುವನ್ನು, ಆಕಾಶಂ - ಅಂತರಿಕ್ಷವನ್ನು, ಅವಲೋಕಯನ್ - ನೋಡುತ್ತಿರುವವನಾಗಿ, ರುರೋಧ-ತಡೆದನು ॥೩೭॥ ಮಹಾಬಲಃ - ಹೆಚ್ಚಿದ ಬಲವುಳ್ಳ, ಕಪಿಕುಂಜರಃ - ಕಪಿಗಳಲ್ಲಿ ಉತ್ತಮನೆನಿಸಿದ, ಸಃ-

ಉಬ್ಬಿನಿಂತಿದ್ದುವು, ಹಾರುವ ಪಿಸ್ಸಾಣದಲ್ಲಿ ಮೈ ನೀಳವಾಗಿದ್ದುದರಿಂದ ಟೊಂಕವು ಬಡವಾಗಿದ್ದಿತು, ಹೆಜ್ಜೆಗಳು ನಡುವೆ ಬಿಡುವಿಲ್ಲದೆ ಒತ್ತಾಗಿ ಅಲುಗದೆ ಸೇರಿದ್ದುವು. ॥೩೫॥ ಬಳಿಕ ಮಹಾವೀರನೂ ತೇಜಸ್ವಿಯೂ ಆದ ಆಂಜನೇಯನು ಹೆಗಲನ್ನೂ, ಹೆಗ್ಗತ್ತನ್ನೂ ತುಸ ಹಿಂದಕ್ಕೆ ತಂದು, ಮುಂದಕ್ಕೆ ತೂಗಿ, ಹಾರುವ ಸಡಗರದಲ್ಲಿ † ತೇಜಸ್ಸಿನ, ಸತ್ವದ, ಮತ್ತು ವೀರ್ಯದ ಆವೇಶವನ್ನು ತಾಳಿದನು ॥೩೬॥ ಬಳಿಕ ಆಕಾಶದಲ್ಲಿ ತಾನು ತೆರಳಬೇಕಾದ ದಾರಿಯನ್ನು ದೂರದಿಂದಲೇ ಮೇಲುನೋಟದಿಂದ ದೃಷ್ಟಿಸಿನೋಡಿ § ಮೇಲುಸಿರನ್ನು ಹೊರಗೆ ಬಿಡದೆ ಹಾಗೆಯೇ ಆಗಸವನ್ನು ನೋಡುತ ಎದೆಯೊಳಗೆ ತಡೆದನು ॥ ೩೭ ॥ ಕಪಿವರ್ಯನಾ ಬಳಿಕ ತನ್ನ ಕಾಲುಗಳನ್ನು ಬೆಟ್ಟದಲ್ಲಿ ಗಟ್ಟಿಯಾಗಿ ಊರಿ ಕಿವಿಗಳನ್ನು ತಗ್ಗಿಸಿ, ಇನ್ನೇನು ಈಗಾಗ ಹಾರುವನೆಂಬ ವೇಳೆಯೊಳಗೆ ಜಾಂಬವಂತನೇ ಮುಂತಾದವರನ್ನು ಕುರಿತು ಇಂತೆಂದನು ॥೩೮॥ ಎಲೈ ಕಪಿವೀರರೇ! ವಾಯುವಿಗಿಮ್ಮಡಿಯಾದ ವೇಗವುಳ್ಳ* ಶ್ರೀರಾಮಬಾಣವು ಹೇಗೆ ಹೋಗುವುದೋ ಹಾಗೆಯೇ ನಾನು ಇಗೋ!

† ತೇಜಸ್ಸು—ಹೆರರನ್ನು ಸೋಲಿಸುವ ಅಥವಾ ತಿರಸ್ಕರಿಸುವ ಸಾಮರ್ಥ್ಯ. ಸತ್ವ—ದೇಹಬಲ, ವೀರ್ಯ—ಆಕಾಶ ಮುಂತಾದುದರಲ್ಲಿ ಹಾರಿ ಇಲ್ಲವೆ ತೂರಿ ಹೋಗುವ ಶಕ್ತಿ. ಶೌರ್ಯ—ವಾಚಾ ಶಕ್ತಿ ಪ್ರಕಾಶ, ಪರಾಕ್ರಮ ಕ್ರಿಯೆಯಿಂದ ಸತ್ವ ಪ್ರಕಾಶ.

§ ಯೋಗ ಧಾರಣೆಯನ್ನು ಮಾಡಿದನು. * ರಾಮ ಬಾಣ ಸಾಮ್ಯವನ್ನು ಹೇಳಿರುವುದರಿಂದ ತನ್ನ ಪ್ರಯಾಣವು ತಡವಿಲ್ಲದುದೆಂತಲೂ, ತಡೆಯಿಲ್ಲದ್ದೆಂತಲೂ, ವ್ಯರ್ಥವಾಗದುದೆಂತಲೂ, ಸೂಚಿತವಾಗುವುದು

ಪದ್ಭ್ಯಾಂ ದೃಢಂ ಅವಸ್ಥಾನಂ ಕೃತ್ವಾ ಸ ಕಪಿಕುಂಜರಃ ।
ನಿಕುಂಚ್ಯ ಕರ್ಣೌ ಹನುಮಾನ್ ಉತ್ಪತಿಷ್ಯನ್ ಮಹಾಬಲಃ ॥೩೮॥
ವಾನರಾನ್ ವಾನರಶ್ರೇಷ್ಠಃ ಇದಂ ವಚನಂ ಅಬ್ರವೀತ್ ॥
ಯಥಾ ರಾಘವನಿರ್ಮುಕ್ತಃ ಶರಃ ಶ್ವಸನ ವಿಕ್ರಮಃ॥೩೯॥
ಗಚ್ಛೇತ್ ತದ್ವತ್ ಗಮಿಷ್ಯಾಮಿ ಲಂಕಾಂ ರಾವಣಪಾಲಿತಾಂ. ।
ನ ಹಿ ದ್ರಕ್ಷ್ಯಾಮಿ ಯದಿ ತಾಂ ಲಂಕಾಯಾಂ ಜನಕಾತ್ಮಜಾಂ ॥೪೦॥
ಅನೇನೈವ ಹಿ ವೇಗೇನ ಗಮಿಷ್ಯಾಮಿ ಸುರಾಲಯಂ ।
ಯದಿ ವಾ ತ್ರಿದಿವೇ ಸೀತಾಂ ನ ದ್ರಕ್ಷ್ಯಾಮಿ ಕೃತಶ್ರಮಃ ॥೪೧॥
ಬದ್ಧ್ವಾ ರಾಕ್ಷಸರಾಜಾನಂ ಆನಯಿಷ್ಯಾಮಿ ರಾವಣಂ ।
ಸರ್ವಥಾ ಕೃತಕಾರ್ಯೋಽಹಂ ಏಷ್ಯಾಮಿ ಸಹ ಸೀತಯಾ ॥೪೨॥

ಆ ಆಂಜನೇಯನು, ಪದ್ಭ್ಯಾಂ - ಹೆಜ್ಜೆಗಳಿಂದ, ದೃಢಂ - ಗಟ್ಟಿಯಾಗಿ, ಅವಸ್ಥಾನಂ - ನಿಲ್ಲುವಿಕೆಯನ್ನು ಕೃತ್ವಾ - ಮಾಡಿ, ಕರ್ಣೌ - ಕಿವಿಗಳನ್ನು, ನಿಕುಂಚ್ಯ - ಕೆಳಕ್ಕೆ ತಗ್ಗಿಸಿ, ಉತ್ಪತಿಷ್ಯನ್ - ಮೇಲಕ್ಕೆ ಹಾರಲೆಳಸಿ ನು ॥೩೮॥ (ಕಿಂಚ ಮತ್ತು) ವಾನರಶ್ರೇಷ್ಠಃ - ಕಪಿ ಮುಖ್ಯನಾದ ಆ ಹನುಮಂತನು, ವಾನರಾನ್ - ಕಪಿಗಳನ್ನು ಕುರಿತು, ಇದಂ - ಈ ಮುಂದಿನ, ವಚನಂ - ಮಾತನ್ನು, ಅಬ್ರವೀತ್ - ಹೇಳಿದನು (ಹೇ ವೀರಾಃ - ಎಲೈ ಕಪಿಶೂರರುಗಳಿರಾ) ಶ್ವಸನವಿಕ್ರಮಃ - ವಾಯುವಿನಂತೆ ವೇಗಶಕ್ತಿಯುಳ್ಳ, ರಾಘವನಿರ್ಮುಕ್ತಃ - ರಾಮನಿಂದ ಬಿಡಲ್ಪಟ್ಟ, ಶರಃ - ಬಾಣವು, ಯಥಾ - ಹೇಗೆ, ಗಚ್ಛೇತ್ - ಹೋಗಬಲ್ಲುದೋ, ತದ್ವತ್ - ಹಾಗೆಯೇ, ರಾವಣಪಾಲಿತಾಂ - ರಾವಣನಿಂದ ಪಾಲಿಸಲ್ಪಡುತ್ತಿರುವ, ಲಂಕಾಂ - ಲಂಕಾನಗರವನ್ನು ಕುರಿತು, ಗಮಿಷ್ಯಾಮಿ - ಹೋಗುವೆನು, ಲಂಕಾಯಾಂ - ಲಂಕೆಯೊಳಗೆ, ತಾಂ - ಆ, ಜನಕಾತ್ಮಜಾಂ - ಜನಕರಾಯನ ಮಗಳಾದ ಸೀತೆಯನ್ನು, ನಹಿದ್ರಕ್ಷ್ಯಾಮಿಯದಿ - ಕಾಣದೆ ಹೋಗುವ ಪಕ್ಷದಲ್ಲಿ, ಅನೇನ - ಈಗನಾನು ಹೋಗುವ, ವೇಗೇನೈವ - ವೇಗದಿಂದಲೇ, ಸುರಾಲಯಂ - ದೇವತೆಗಳ ಮನೆಯಾದ ಸ್ವರ್ಗವನ್ನು ಕುರಿತು, ಗಮಿಷ್ಯಾಮಿ - ಹೋಗುವೆನು, ಯದಿವಾ - ಒಂದು ವೇಳೆ, ತ್ರಿದಿವೇ - ಸ್ವರ್ಗದಲ್ಲಿಯೂ, ಸೀತಾಂ-ಜಾನಕಿಯನ್ನು, ನದ್ರಕ್ಷ್ಯಾಮಿ - ಕಾಣದೆ ಹೋಗುವೆನೋ? (ತದಾ - ಆಗ) ಅಕೃತಶ್ರಮಃ- ನಿರಾಯಾಸನಾಗಿಯೇ, ರಾಕ್ಷಸರಾಜಾನಂ-ರಾಕ್ಷಸರ ಅರಸನಾದ, ರಾವಣಂ-ದಶಮುಖನನ್ನು, ಬದ್ಧ್ವಾ - ಕಟ್ಟಿ, ಆನಯಿಷ್ಯಾಮಿ - ಕೊಂಡು ಬರುವೆನು ಅಹಂ - ನಾನು ಸರ್ವಥಾ-ಸರ್ವಪ್ರಕಾರದಿಂದಲೂ, ಕೃತಕಾರ್ಯಃ - ಕೈಗೂಡಿದ ಕೆಲಸವುಳ್ಳವನಾಗಿಯೇ, ಸೀತಯಾಸಹ-ಜಾನಕಿಯೊಡನೆ; ಏಷ್ಯಾಮಿ-ಬರುವೆನು ॥೩೯,೪೦,೪೧,೪೨॥ ವಾ-ಹಾಗೂ ಅನುಕೂಲಿಸದಿದ್ದರೆ, ಸರಾವಣಾಂ ಆ

ಆ ರಾವಣನಾಳುವ ಲಂಕೆಯನ್ನು ಕುರಿತು ತೆರಳುವೆನು ॥೩೯॥ ಒಂದು ವೇಳೆ ಆ ಲಂಕೆಯೊಳಗೆ ಜನಕರಾಯನ ಮಗಳಾದ ಜಾನಕಿಯನ್ನು ಕಾಣದೆ ಹೋದರೆ, ಈಗ ಯಾವ ವೇಗದಿಂದ ಹೋಗುವೆನೋ ಹೀಗೆಯೇ ಸ್ವರ್ಗಕ್ಕೆ ಹೋಗುವೆನು. ಆ ಅಮರಾವತಿಯಲ್ಲಿಯೂ ನಾನು ಸೀತೆಯನ್ನು ನೋಡದೆ ಹೋದೆನೋ, ಆಗಲೂ, ನನಗೇನೂ ಶ್ರಮವಿಲ್ಲ. ರಕ್ಕಸರೊಡೆಯನಾದ ಆ ರಾವಣನನ್ನು ಹೆಗ್ಗತ್ತು ಮುರಿಗಟ್ಟಿಕೊಂಡು ಬರುವೆನು. ಹೇಗಾದರೂ ಆಗಲಿ, ಅಂತೂ ಕೆಲಸವನ್ನು ಗೆದ್ದುಗೊಂಡೇ ಸೀತಾದೇವಿಯ ಸಂಗಡಲೇ ಹೊರಟು ಬರುವೆನು. ॥೪೦,೪೧॥ ಇಲ್ಲ? ಸರ್ವಪ್ರಕಾರದಿಂದಲೂ ಸೀತೆಯು ಸಿಕ್ಕದೆಯೇ ಹೋದಳೋ ?

ಆನಯಿಷ್ಯಾಮಿ ವಾ ಲಂಕಾಂ ಸಮುತ್ಪಾಟ್ಯ ಸರಾವಣಾಂ ।
ಏವ ಮುಕ್ತ್ವಾ ತು ಹನುಮಾನ್ ವಾನರಾನ್ ವಾನರೋತ್ತಮಃ ॥೪೩॥
ಉತ್ಪಪಾತ ಅಥ ವೇಗೇನ ವೇಗವಾನ್ ಅವಿಚಾರಯನ್ ।
ಸುಪರ್ಣಂ ಇವ ಚ ಆತ್ಮಾನಂ ಮೇನೇ ಸ ಕಪಿಕುಂಜರಃ ॥೪೪॥
ಸಮುತ್ಪತತಿ ತಸ್ಮಿನ್ ತು ವೇಗಾತ್ ತೇ ನಗರೋಹಿಣಃ ।
ಸಂಹೃತ್ಯ ವಿಟಪಾನ್ ಸರ್ವಾನ್ ಸಮುತ್ಪೇತುಃ ಸಮಂತತಃ ॥೪೫॥
ಸ ಮತ್ತಕೋಯಷ್ಟಿಮಕಾನ್ ಪಾದಪಾನ್ ಪುಷ್ಪಶಾಲಿನಃ ।

ರಾವಣನಿಂದ ಸಹಿತವಾದ, ಲಂಕಾಂ - ಲಂಕಾ ಪಟ್ಟಣವನ್ನೇ, ಸಮುತ್ಪಾಟ್ಯ - ಚೆನ್ನಾಗಿ ಬುಡವುಟ್ಟ ಮೇಲಕ್ಕೆತ್ತಿ, ಆನಯಿಷ್ಯಾಮಿ - ಕೊಂಡುತರುವೆನು. ವಾನರೋತ್ತಮಃ - ಕಪಿಗಳಲ್ಲಿ ಶೂರನಾದ, ಹನುಮಾನ್ - ಆಂಜನೇಯನು, ವಾನರಾನ್ - ಜಾಂಬವಾದಿಗಳನ್ನು ಕುರಿತು, ಏವಂ - ಈ ಪ್ರಕಾರವಾಗಿ ಉಕ್ತ್ವಾತು - ಹೇಳಿ, ಅಥ - ಆಮೇಲೆ, ವೇಗೇನ - ಸಂಭ್ರಮದಿಂದ, ಉತ್ಪಪಾತ-ಮೇಲಕ್ಕೆ ಹಾರಿದನು, ಅವಿಚಾರಯನ್ - ಬೇರಾವುದನ್ನೂ ಚಿಂತಿಸದಿರುವ, ಸಃ, ಆ, ಕಪಿಕುಂಜರಃ - ವಾನರೋತ್ತಮನಾದ ಆಂಜನೇಯನು, ವೇಗೇನ - ತಾನು ಹೋಗುತ್ತಿರುವ ವೇಗದಿಂದ, ಆತ್ಮಾನಂ - ತನ್ನನ್ನು, ಸುಪರ್ಣಮಿವ - ಪಕ್ಷಿರಾಜನಾದ ಗರುಡನನ್ನು ಹೇಗೋಹಾಗೆ, ಮೇನೆ-ತಿಳಿದುಕೊಂಡನು ॥೪೩, ೪೪॥ ತಸ್ಮಿನ್ - ಆ ಆಂಜನೇಯನು, ಸಮುತ್ಪತತಿ (ಸತಿ) ಮೇಲಕ್ಕೆ ಹಾರಿಹೋಗುತ್ತಿರಲಾಗಿ, ವೇಗಾತ್ತು - ಅತನ ವೇಗದ ಸೆಳೆಯಿಂದಲಾದರೋ, ತೇ - ಆ, ನಗರೋಹಿಣಃ- ಬೆಟ್ಟದಲ್ಲಿ ಬೆಳೆದಿರುವ ಮರಗಳು, ಸರ್ವಾನ್ - ಸಕಲವಾದ, ವಿಟಪಾನ್-ಕೊಂಬೆಗಳನ್ನೂ, ಸಂಹೃತ್ಯ - ಓಲಾಟದಿಂದ ಮುದುರಿಕೊಂಡು, ಸಮಂತತಃ- ಎಲ್ಲ ಕಡೆಗಳಲ್ಲಿಯೂ, ಸಮುತ್ಪೇತುಃ - ಕಿತ್ತುಬಂದುವು, ॥೪೫॥ ಸಃ - ಆ ಆಂಜನೇಯನು, ಪುಷ್ಪಶಾಲಿನಃ- ಹೂಗಳಿಂದ ಕೂಡಿರುವ, ಮತ್ತ - ಕೊಬ್ಬಿದ, ಕೋಯಷ್ಟಿಮಕಾನ್ - ಟಿಟ್ಟಿಭಗಳೆಂಬ ಹಕ್ಕಿಗಳುಳ್ಳ, ಪಾದಪಾನ್-ಮರಗಳನ್ನು, ಊರುವೇಗೇನ - ತೊಡೆಗಳ ಹೊಯ್ಲಿನಿಂದ, ಉದ್ವಹನ್ - ಸೆಳೆಯುತ್ತಿರುವವ

ಆಗ ಏನು ಮಾಡುವೆನು ಬಲ್ಲಿರಾ ? ಸುಮ್ಮನೆ ಬರುವುದಿಲ್ಲ, ರಾವಣ ಮುಂತಾದವರೊಡನೆ ಕೂಡಿರುವ ಲಂಕೆಯನ್ನೇ ಬುಡಸಹಿತ ಎಬ್ಬಿಕೊಂಡಾದರೂ ಬರುವೆನು. ಅಷ್ಟೇ ಹೊರತು ವ್ಯಥಾಬರುವುದಿಲ್ಲ. ಆಗ- ಶ್ರೀರಾಮನೇ ಸೀತೆಯನ್ನು ಹುಡುಕಿಕೊಳ್ಳಲಿ, ಎಂದು ಹೇಳಿ, ಕಪಿವೀರರಲ್ಲಿ ಹಮ್ಮಿರನಾದ ಹನುಮನು ಉಳಿದ ವಿಚಾರಗಳನ್ನೆಲ್ಲ ಬಿಟ್ಟು ಮೇಲಕ್ಕೆ ಹಾರಿಹೋಗುವ ವೇಗದಲ್ಲಿ ತನ್ನನ್ನು ಬಳ್ಳಿಯ ರಕ್ಕೆಗಳ ಬಲವುಳ್ಳ ಗರುತ್ಮಂತನನ್ನಾಗಿ ಭಾವಿಸಿದನು. ॥೪೨,೪೩,೪೪॥ ಆ ಬೆಟ್ಟದಲ್ಲಿ ಬೆಳೆದಿದ್ದ ಮರಗಳೆಲ್ಲವೂ ಹನುಮನ ಹಾರಾಟದ ವೇಗವಲ್ಲಿ ತಮ್ಮ ಕೊನೆಗಳನ್ನೆಲ್ಲ ಮುದುರಿಕೊಂಡು ಅವನನ್ನು ಎಡೆಬಿಡದೆ ಹಿಂಬಾಲಿಸುತ್ತಲಿದ್ದುವು॥೪೫॥ ಅದೆಂತನುಸರಿಸಿದವು? ಎಂದರೆ-ಬೆಟ್ಟದ ಮೇಲೆ ಹೆಜ್ಜೆಯ ತುಳಿತವು ಬಲವಾಗಲು, ತೊಡೆಯ ಬಲವಾದ ವೇಗದಿಂದ ಬೆಟ್ಟದ ಕಿಬ್ಬುರಿಯು ತಗ್ಗಿ, ಮೇಲ್ಭಾಗವು ಓಲಾಡುತ್ತಿರುವಲ್ಲಿ, ಟಿಟ್ಟಿಭವೆಂಬ ಹಕ್ಕಿಗಳಿಂದೊಡಗೂಡಿದ ಮರಗಳು ಕೊನೆಗಳ ಅಲ್ಲಾಟದಿಂದಿರಲು, ಹನುಮನು ತನ್ನ ಸಂಗಡಲೇ ಆತರುಗಳನ್ನೂ ಸೆಳೆದುಕೊಂಡು ನಿರ್ಮಲವಾದ ಆಕಾಶದಲ್ಲಿ

ಉದ್ವಹನ್ ಊರುವೇಗೇನ ಜಗಾಮ ವಿಮಲೇಂಬರೆ ॥೪೬॥
ಊರುವೇಗೋದ್ಧತಾಃ ವೃಕ್ಷಾಃ ಮುಹೂರ್ತಂ ಕಪಿಂ ಅನ್ವಯುಃ ।
ಪ್ರಸ್ಥಿತಂ ದೀರ್ಘಂ ಅಧ್ವಾನಂ ಸ್ವಬಂಧುಂ ಇವ ಬಾಂಧವಾಃ ॥೪೭॥
ತಂ ಊರುವೇಗೋನ್ಮಥಿತಾ ಸ್ಸಾಲಾಶ್ಚಾನ್ಯೇ ನಗೋತ್ತಮಾಃ ।
ಅನುಜಗ್ಮು ರ್ಹನೂಮಂತಂ ಸೈನ್ಯಾ ಇವ ಮಹೀಪತಿಂ ॥೪೮॥
ಸುಪುಷ್ಪಿತಾಗ್ರೈಃ ಬಹುಭಿಃ ಪಾದಪೈ ರನ್ವಿತಃ ಕಪಿಃ ।
ಹನೂಮಾನ್ ಪರ್ವತಾಕಾರೋ ಬಭೂವಾ ದ್ಭುತದರ್ಶನಃ ॥೪೯॥
ಸಾರವಂತೋಽಥ ಯೇ ವೃಕ್ಷಾ ನ್ಯಮಜ್ಜನ್ಲವಣಾಂಭಸಿ ।

ವನಾಗಿ, ವಿಮಲೆ - ನಿರ್ಮಲವಾದ, ಅಂಬರೆ - ಆಕಾಶದಲ್ಲಿ, ಜಗಾಮ - ಹೊರಟನು ॥೪೬॥ ಊರುವೇಗ - ತೊಡೆಯ ಸೆಳೆತದಿಂದ, ಉದ್ಧತಾಃ - ಕಿತ್ತುಬಂದ, ವೃಕ್ಷಾಃ - ಮರಗಳು, ದೂರಂ - ದೂರವಾದ ಅಧ್ವಾನಂ - ದಾರಿಯನ್ನು ಕುರಿತು, ಪ್ರಸ್ಥಿತಂ - ಪ್ರಯಾಣ ಮಾಡಿರುವ, ಸ್ವಬಂಧುಂ - ತಮ್ಮ ನಂಟನನ್ನು, (೧) * ಬಾಂಧವಾ ಇವ - ಬಂಧುಗಳು ಹೇಗೋ ಹಾಗೆ, ಕಪಿಂ - ಹನುಮಂತನನ್ನು, ಮುಹೂರ್ತಂ - ಸ್ವಲ್ಪ ಕಾಲದ ವರೆಗೂ, ಅನ್ವಯುಃ - ಅನುಸರಿಸಿ ಹೋದುವು ॥೪೭॥ ಊರುವೇಗ - ತೊಡೆಯ ವೇಗದಿಂದ, ಉನ್ಮಥಿತಾಃ - ಕೀಳಲ್ಪಟ್ಟ, ಸಾಲಾಃ - ಸಜ್ಜರಸದ ಮರಗಳೂ, ಅನ್ಯೇ - ಬೇರಾದ, ನಗೋತ್ತಮಾಃ - ಉತ್ತಮ ವೃಕ್ಷಗಳೂ, ಮಹೀಪತಿಂ - ಭೂಪಾಲನನ್ನು, (೨) * ಸೈನ್ಯಾ ಇವ - ಸೈನಿಕರು ಹೇಗೋ ಹಾಗೆ, ಹನೂಮಂತಂ - ಆಂಜನೇಯನನ್ನು, ಅನುಜಗ್ಮುಃ - ಹಿಂಬಾಲಿಸಿದುವು ॥ ೪೮ ॥

ಸುಪುಷ್ಪಿತ - ಸೊಂಪಾಗಿ ಹೂತಿರುವ, ಅಗ್ರೈಃ - ಕೊನೆಗಳುಳ್ಳ, ಬಹುಭಿಃ - ಅನೇಕಗಳಾದ, ಪಾದಪೈಃ - ವೃಕ್ಷಗಳಿಂದ, ಅನ್ವಿತಃ - ಬಳಸಲ್ಪಟ್ಟ, ಹನೂಮಾನ್ - ಸುಂದರವಾದ ಕೆನ್ನೆಯುಳ್ಳ, ಕಪಿಃ - ಆಂಜನೇಯನು, ಪರ್ವತಾಕಾರಃ - ಬೆಟ್ಟದಂತೆ ಆಕಾರವುಳ್ಳವನಾಗಿ, ಅದ್ಭುತ ದರ್ಶನಃ - ಆಶ್ಚರ್ಯಕರನೆನಿಸಿ ಕಾಣಬರತಕ್ಕವನು, ಬಭೂವ - ಆದನು ॥೪೯॥ ಅಥ - ಅನಂತರದಲ್ಲಿ, ಯೇ - ಯಾವ, ವೃಕ್ಷಾಃ - ಮರಗಳು, ಸಾರವಂತಃ - ಒಳ್ಳೆಯ ಸೇಗುಳ್ಳವುಗಳಾಗಿದ್ದುವೋ, (ತೆ - ಅವುಗಳು) ಮಹೇಂದ್ರಸ್ಯ - ದೇವೇಂದ್ರನ, ಭಯಾತ್ - ಭಯದ ಪೆಶಿಯಿಂದ, ವರಣಾಲಯೆ-ಜಲಧಿಯಲ್ಲಿ, (೩) * ಪರ್ವತಾ ಇವ - ಬೆ

ಹೋಗುತ್ತಿದ್ದನು ॥೪೬॥ಬಹು ದೂರದೇಶವನ್ನು ಕುರಿತು ಪ್ರಯಾಣ ಮಾಡಿದ ಬಂಧುವನ್ನು ಅವನ ನಂಟರಿಷ್ಟರು ಸಾಗಕಳುಹಿಸಲು ಹೋಗುತ್ತಿರುವ ಹಾಗೆ, ತೊಡೆಯ ವೇಗದಿಂದ ವಾಲಿದ ಮರಗಳೂ, ಸ್ವಲ್ಪ ಹೊತ್ತಿನವರೆಗೂ ಆ ಆಂಜನೇಯನನ್ನು ಅನುಸರಿಸಿ ಹೋಗುತ್ತಿದ್ದುವು ॥೪೭॥ ಹನುಮನ ತೊಡೆಯವೇಗದಿಂದ ಬುಡಸಹಿತ ಕಿತ್ತುರುಳುತ್ತಿರುವ ಮತ್ತಿಯ ಮರಗಳು ಮತ್ತು ಆ ಬೆಟ್ಟದಲ್ಲಿನ ಇತರ ವೃಕ್ಷಗಳೂ ಸಹ, ಅರಸಿನ ಪರಿಜನರು ಅರಸನನ್ನು ಹೇಗೋ ಹಾಗೆ ಹಿಂಬಾಲಿಸುತ್ತಿದ್ದುವು ॥೪೮॥ ಚೆನ್ನಾಗಿ ಹೂತಿರುವ ಕೊನೆಗಳಿಂದೊಡಗೂಡಿರುವ ಮರಗಳಿಂದ ಆವರಿಸಲ್ಪಟ್ಟಿರುವ ಆಂಜನೇಯನು ಹಾರಿಹೋಗುತ್ತಿರುವ, ದೊಡ್ಡಬೆಟ್ಟದಂತೆ ನೋಟಕರಿಗೆ ಬಲು ಅಂದವಾಗಿ ಕಾಣಬರುತ್ತಿದ್ದನು ॥೪೯॥ ಹನುಮನು ಹಾರುವ ಸಂಭ್ರಮದಲ್ಲಿ ಬೇರುಸಹಿತಕಿತ್ತು ಕಡಲಿನಲ್ಲಿ ಉರುಳುತ್ತಿರುವ ದೊಡ್ಡ ಮರಗಳು, ಇಂದ್ರನ ಅಂಜಿಕೆಯಿಂದ ಸಾಗರದೊಳಗೆ ತಲೆಮರೆಯಿಸಿಕೊಳ್ಳಲು

ಭಯಾದಿವ ಮಹೇಂದ್ರಸ್ಯ ಪರ್ವತಾ ವರುಣಾಲಯೇ ॥೪೦॥
ಸ ನಾನಾಕುಸುಮೈಃ ಕೀರ್ಣಃ ಕಪಿ ಸ್ಸಾಂಕುರಕೋರಕೈಃ ।
ಶುಶುಭೆ ಮೇಘಸಂಕಾಶಃ ಖದ್ಯೋತೈರಿವ ಪರ್ವತಃ ॥೫೦॥
ವಿಮುಕ್ತಾ ಸ್ತಸ್ಯ ವೇಗೇನ ಮುಕ್ತ್ವಾ ಪುಷ್ಪಾಣಿ ತೇ ದ್ರುಮಾಃ ।
ಅವಶೀರ್ಯಂತ ಸಲಿಲೇ ನಿವೃತ್ತಾ ಸ್ಸುಹೃದೋ ಯಥಾ ॥೫೨॥
ಲಘುತ್ವೇನ ಉಪಪನ್ನಂ ತದ್ವಿಚಿತ್ರಂ ಸಾಗರೇ ಪತತ್ ।
ದ್ರುಮಾಣಾಂ ವಿವಿಧಂ ಪುಷ್ಪಂ ಕಪಿವಾಯು ಸಮೀರಿತಂ ॥೫೩॥

---

ಟ್ಟಗಳ ಹಾಗೆ, ಲವಣಾಂಭಸಿ-ಆ ಉಪ್ಪಿನ ಕಡಲಿನಲ್ಲಿ, ನ್ಯಮಜ್ಜನ್-ಮುಳುಗಿದುವು ॥೪೦॥ ಸಾಂಕುರಕೋರಕೈಃ-ತಳಿರುಗಳಿಂದಲೂ ಮತ್ತು ಮೊಗ್ಗುಗಳಿಂದಲೂ ಸಹಿತವಾದ, ನಾನಾ ಕುಸುಮೈಃ-ಬಗೆಬಗೆಯ ಹೂಗಳಿಂದ, ಕೀರ್ಣಃ-ಆವರಿಸಲ್ಪಟ್ಟ, ಮೇಘಸಂಕಾಶಃ-ಬೆಟ್ಟಕ್ಕೆ ಣೆಯೆನಿಸಿದ, ಕಪಿಃ-ಆಂಜನೇಯನು, ಖದ್ಯೋತೈಃ - ಮಿಂಚು ಹುಳುಗಳಿಂದ ಬೆಳಗಲ್ಪಟ್ಟ, ಪರ್ವತ ಇವ- (೪) * ಬೆಟ್ಟದಹಾಗೆ, ಶುಶುಭೆ - ಹೊಳೆಯುತಿದ್ದನು ॥೫೧॥ ತಸ್ಯ - ಆ ಮಾರುತಿಯ, ವೇಗೇನ - ಗಮನವೇಗದಿಂದ, ವಿಮುಕ್ತಾಃ - ಹಿಂದಕ್ಕೆ ಬಿಡಲ್ಪಟ್ಟ, ತೇ ದ್ರುಮಾಃ - ಆ ಮರಗಳು, ಪುಷ್ಪಾಣಿ - ಹೂಗಳನ್ನು, ಮುಕ್ತ್ವಾ - ಸುರಿಸಿ, ಸಲಿಲೇ - ನೀರಿನ ಹತ್ತಿರದಲ್ಲಿ, ನಿವೃತ್ತಾಃ- ಹಿಂದಿರುಗಿದ, (೫) * ಸುಹೃದೋಯಥಾ - ಸ್ನೇಹಿತರಹಾಗೆ, ಅವಶೀರ್ಯಂತ-ಚೆದರಿ ಬೀಳುತ್ತಿದ್ದುವು ॥೫೨॥ ಕಪಿ - ಆಂಜನೇಯನ, ವಾಯು - ಹಾರುವ ವೇಗದಿಂದುಂಟಾದ ಗಾಳಿಯಿಂದ, ಸಮೀರಿತಂ - ಚೆದರಿಸಲ್ಪಟ್ಟುದಾದ ಕಾರಣವೇ, ವಿಚಿತ್ರಂ - ಅಚ್ಚರಿಯನ್ನುಂಟು ಮಾಡುತ್ತಿರತಕ್ಕ, ಸಾಗರೇ - ಕಡಲಿನಲ್ಲಿ, ಪತತ್ - ಬೀಳುತಲಿರುವ, ದ್ರುಮಾಣಾಂ - ಮರಗಳ, ವಿವಿಧಂ - ನಾನಾವಿಧವಾದ, ಪುಷ್ಪಂ-ಕುಸುಮಸಮೂಹವು, ಲಘುತ್ವೇನ - ಲಾಘವ (ಚಾತುರ್ಯ) ದಿಂದ, ಉಪಪನ್ನಂ - ಕೂಡಿ ಇತ್ತು ॥೫೩॥ (ತದಾ - ಆಗ) ಮಹಾರ್ಣವಸ್ಥ - ಆ ದೊಡ್ಡಕಡಲೂ, ತಾರಾಶತಂ - ಸಾವಿರಾರು

---

ಮುಳುಗುತ್ತಿರುವ ಬೆಟ್ಟಗಳಂತೆ ಕಂಡುಬಂದವು॥೪೦॥ಬೆಟ್ಟಕ್ಕೆ ಣೆಯಾಗಿ ಬೆಳೆದಿದ್ದ ವಾಯುಕುಮಾರನು ತನ್ನನ್ನು ಹಿಂಬಾಲಿಸಿ ಬರುವ ಮರಗಳಲ್ಲಿನ ಬಗೆಬಗೆಯಾದ ಹೂಗಳಿಂದಲೂ ಚಿಗುರುಗಳಿಂದಲೂ, ಎಳೆಯ ಮೊಗ್ಗುಗಳಿಂದಲೂ ಆವರಿಸಲ್ಪಟ್ಟದ್ದರೆ, ಮಿಂಚುಹುಳಗಳಿಂದ ಮುತ್ತಲ್ಪಟ್ಟ ಅಥವಾ ತಿರಸ್ಕರಿಸಲ್ಪಡುವ ಬೆಟ್ಟದಂತೆ ಕಂಗೊಳಿಸುತ್ತಿದ್ದನು॥೫೧॥ ಆತನ ವೇಗದಿಂದ ಉರುಳಿದ ಮರಗಳು ಹೂಗಳನ್ನು ಉದುರಿಸುತ್ತ ನೀರಿನಲ್ಲಿ ಬೀಳುತ್ತಿದ್ದರೆ, ತಮ್ಮ ಆಪ್ತಬಂಧುವನ್ನು ನೀರಿನವರೆಗೆ ಸಾಗಕಳುಹಿ ಹಿಂದಿರುಗುವ ಬಂಧುಗಳಂತೆ ಕಾಣಬರುತ್ತಿದ್ದುವು ॥೫೨॥ ಹನುಮಂತನ ವೇಗದಿಂದ ಉರುಳಿದ ಅನೇಕ ವೃಕ್ಷಗಳಿಂದ ಉದುರಿ,ಲಾಘವದಿಂದ ಕೂಡಿರುವ ಬಗೆಬಗೆಯ ಹೂಗಳು ಕಡಲಿನ ನೀರಿನಲ್ಲಿ ಬಿದ್ದಿದ್ದರೆ, ಆ ಕಡಲು, ಅನೇಕ ನಕ್ಷತ್ರಗಳಿಂದೊಡಗೂಡಿದ ಅಂತರಿಕ್ಷಮಂಡಲದಂತೆ ಒಪ್ಪುತಲಿದ್ದಿತು ॥೫೩॥

---

ಸುಂದರವಾದ ಉಪಮಾ. (೧, ೨, ೩, ೪, ೫) * ೫-"ಆ ಉದಕಾಂತಾತ್ ಸ್ನಿಗ್ಧೋ ಬಂಧು ಮನುವ್ರಜೇತ್" ಪ್ರಿಯಬಂಧುವು ತನ್ನ ಬಂಧುವನ್ನು ನೀರುಸಿಕ್ಕುವವರೆಗೆ ಹಿಂಬಾಲಿಸಿ ಸಾಗಕಳುಹಿಸಿ ಬರಬೇಕು ಎಂದು ಧರ್ಮಶಾಸ್ತ್ರ, ಎಂದು ಶ್ರೀರಾಮಾನುಜೀಯ (ಬಂಧುವು ಬಂಧುವನ್ನು ಅಗಲುವಾಗ ಕಣ್ಣೀರ ಬಿಡುವುದು ಸ್ವಭಾವ. ಮರಗಳಿಂದ ಹೂಗಳು ಉದಿರುತಿದ್ದರೆ ಕಣ್ಣೀರಸುರಿಸುವಂತಿದ್ದುವು. ತಿಲಕ.

ತಾರಾಶತ ಮಿವಾಕಾಶಂ ಪ್ರಬಭೌ ಚ ಮಹಾರ್ಣವಃ ।
ಪುಷ್ಪೌಘೇಣಾನುಬದ್ಧೇನ ನಾನಾವರ್ಣೇನ ವಾನರಃ ।
ಬಭೌ ಮೇಘ ಇವಾಕಾಶೇ ವಿದ್ಯುದ್ಗಣ ವಿಭೂಷಿತಃ ॥೫೪॥ ॥
ತಸ್ಯವೇಗ ಸಮಾಧೂತೈಃ ಪುಷ್ಪೈಸ್ತೋಯ ಮದೃಶ್ಯತ ।
ತಾರಾಭಿ ರಭಿರಾಮಾಭಿ ರುದಿತಾಭಿ ರಿವಾಂಬರಂ ॥೫೫॥ ॥
ತಸ್ಯಾಂಬರಗತೌ ಬಾಹೂ ದದೃಶಾತೇ ಪ್ರಸಾರಿತೌ ।
ಪರ್ವತಾಗ್ರಾದ್ವಿನಿಷ್ಕ್ರಾಂತೌ ಪಂಚಾಸ್ಯಾವಿವ ಪನ್ನಗೌ ॥೫೬॥ ॥
(ಪ್ರಚಕರ್ಷ ಮಹಾಮೇಘಂ ಸ ಪುರೋವಾತ ವಿದ್ಯುತ ।
ಪ್ರಬಲಃ ಕೇಟರಾಜಸ್ಯ ವಾಯುವೇಗೇನ ನಿಸ್ಸೃತಃ ॥

---

ನಕ್ಷತ್ರಗಳುಳ್ಳ, ಆಕಾಶಮಿವ-ಅಂತರಿಕ್ಷದಂತೆ, ಬಭೌ-ಪ್ರಕಾಶಿಸುತಲಿತ್ತು ॥೫೩॥ ಅನುಬದ್ಧೇನ - ತನ್ನನ್ನು ಅಂಟಿಕೊಂಡಿರುವ, ನಾನಾವರ್ಣೇನ- ಬಗೆಬಗೆಯ ಬಣ್ಣವುಳ್ಳ, ಪುಷ್ಪೌಘೇಣ - ಹೂಗಳ ಸಮೂಹದಿಂದ, ವಾನರಃ - ಆಂಜನೇಯನು, ವಿದ್ಯುದ್ಗಣ - ಮಿಂಚುಗಳ ಸಮೂಹದಿಂದ, ವಿಭೂಷಿತಃ - ಅಲಂಕರಿಸಲ್ಪಟ್ಟ ಮೇಘ ಇವ - ಮೋಡದಂತೆ, ಆಕಾಶೇ- ಅಂತರಿಕ್ಷದಲ್ಲಿ, ಬಭೌ- ಕಂಗೊಳಿಸುತ್ತಿದ್ದನು ॥೫೪॥ (ಶ್ಲೋಕ - ಮತ್ತು) ತಸ್ಯ - ಆ ಆಂಜನೇಯನ, ವೇಗ - ಗಮನವೇಗದಿಂದ, ಸಮಾಧೂತೈಃ-ಕೊಡಹಲ್ಪಟ್ಟ, ಪುಷ್ಪೈಃ-ಕುಸುಮಗಳಿಂದ, ತೋಯಂ ಸಮುದ್ರ ಜಲವು, ಉದಿತಾಭಿಃ-ಆಗತಾನೆ ಮೊಳೆತ, ಅಭಿರಾಮಾಭಿಃ- ಅಂದವಾಗಿರುವ, ತಾರಾಭಿಃ-ನಕ್ಷತ್ರಗಳಿಂದ ಕೂಡಿರುವ, ಅಂಬರಮಿವ- ಆಕಾಶ ಮಂಡಲದಂತೆ, ಅದೃಶ್ಯತ- ಕಾಣಬರುತ್ತಿತ್ತು ॥೫೫॥ ॥ ತಸ್ಯ-ಆ ಮಾರುತಿಯ, ಪ್ರಸಾರಿತೌ-ನೀಡಲ್ಪಟ್ಟವುಗಳಾದ [illegible], ಅಂಬರಗತೌ - ಆಕಾಶವನ್ನು ಹೊಂದಿರುವ, ಬಾಹೂ - ತೋಳುಗಳು, ಪರ್ವತಾಗ್ರಾತ್-ಬೆಟ್ಟದಕೋಡಿನಿಂದ, ವಿನಿಷ್ಕ್ರಾಂತೌ - ಹೊರಗೆ ಸರಿದು ಬಂದ, ಪಂಚಾಸ್ಯೌ- ಐದು ಹೆಡೆಗಳುಳ್ಳ, ಪನ್ನಗಾವಿವ- ಸರ್ಪಗಳ ಹಾಗೆ, ದದೃಶಾತೇ - ಕಾಣಬರುತ್ತಿದ್ದವು ॥೫೬॥ ॥ ಅಪಿಚ - ಮತ್ತು, ಸಃ - ಆ, ಮಹಾಕಪಿಃ - ಕಪಿ * ಪ್ರೇಟರಾಜಸ್ಯ (ಕೇಟರಾಜಸ್ಯ)- ಕಪಿ ಪ್ರವರನಾದ ಹನುಮನ, ವೇಗೇನ-ಗಮನವೇಗದಿಂದ, ನಿಸ್ಸೃ

---

ಬಗೆಬಗೆಯ ಬಣ್ಣದ ಅನೇಕ ಕುಸುಮಗಳಿಂದ ಆವರಿಸಲ್ಪಟ್ಟು ಆಕಾಶದಲ್ಲಿ ಹಾರುತ್ತಿರುವ ಹನುಮಂತನು ಮಿಂಚುಗಳಿಂದ ಬಳಸಲ್ಪಟ್ಟಿರುವ ಮೋಡದಂತೆ ಹೊಳೆಯುತ್ತಿದ್ದನು ॥೫೪॥ ಆತನ ವೇಗದಿಂದ ಉದುರಿದ ಹೂಗಳಿಂದೊಡಗೂಡಿದ ಸಮುದ್ರ ಜಲವು ಆಗತಾನೆ ಹುಟ್ಟಿದ ಅಂದವಾದ ನಕ್ಷತ್ರಗಳಿಂದ ಅಲಂಕರಿಸಲ್ಪಟ್ಟ ಅಂಬರದಂತೆ ಕಾಣಬರುತ್ತಿದ್ದಿತು ॥೫೫॥ * ಆಕಾಶದಲ್ಲಿ ತೇಲಿಹೋಗುತ್ತಿರುವಾಗ ಮುಂದಕ್ಕೆ ನೀಡಿರುವ ಆತನ ತೋಳುಗಳು ಬೆಟ್ಟದ ಕೋಡಿನಿಂದ ಹೊರಗೆ ಹೊರಟು ಹೆಡೆಯನ್ನು ಹರಡಿರುವ ಐದು ತಲೆಯ ನಾಗರಹಾವುಗಳಂತೆ ತೋರಿ ಬರುತ್ತಿದ್ದವು ॥೫೬॥ ಮತ್ತು ಆ ಆಂಜನೇಯನು ಮಹಾಸಮುದ್ರದಲ್ಲಿ ಈಜಿ [ಬಲುಬಿರುಸಿನಿಂದ ಹಾರುತಲಿರುವ ಹನುಮನ ವೇಗದಿಂದ ಹುಟ್ಟಿದ ಗಾಳಿಯು ಎದುರುಗಾಳಿಯಿಂದಲೂ, ಮಿಂಚಿನಿಂದಲೂ, ಸಹಿತವಾದ ಮೇಘವನ್ನು ಸೆಳೆದೊಯ್ಯುತಲಿದ್ದಿತು:

---

* ಕರ್ನಾಟಕಾಕ್ಷರದ ಬಂದು ಪುಸ್ತಕದಲ್ಲಿ ಮಾತ್ರ ಉಂಟು. ಅರ್ಥಚಮತ್ಕಾರವು, ಕಾವ್ಯಭಾವನಾ ಪರಿಪಕ್ವ ಬುದ್ಧಿಯುಳ್ಳವರಿಗೆ ಅಷ್ಟು ಸೊಗಸದೆಂತಲೂ, ಆದಿಕವಿಯದಲ್ಲವೆಂತಲೂ ತೋರುತ್ತದೆ.

ಸಮಮಾಸೀತ್ತದಾ ರೂಪಂ ಸಾಗರಸ್ಯಾಂ ಬರಸ್ಯಚಂ।
ಸಮುತ್ಪತಿತ ಮೇಘಸ್ಯ ಸಮುದ್ಧೂತ ಜಲಸ್ಯಚ ॥೨॥
ಪಿಬನ್ನಿವ ಬಭೌ ಚಾಪಿ ಸೋರ್ಮಿಜಾಲಂ ಮಹಾರ್ಣವಂ ।
ಪಿಪಾಸುರಿವ ಚಾಕಾಶಂ ದದೃಶೆ ಸ ಮಹಾಕಪಿಃ॥೫೩॥
ತಸ್ಯ ವಿದ್ಯುತ್ಪ್ರಭಾಕಾರೆ ವಾಯುಮಾರ್ಗಾ ನುಸಾರಿಣಃ ।
ನಯನೇ ವಿಪ್ರಕಾಶೇತೆ ಪರ್ವತಸ್ಥಾ ವಿವ ಅನಲೌ ॥೫೪॥
ಪಿಂಗೆ ಪಿಂಗಾಕ್ಷ ಮುಖ್ಯಸ್ಯ ಬೃಹತೀ ಪರಿಮಂಡಲೇ ।

---

ತಃ-ಹೊರಟುಬಂದ, ಪ್ರಬಲಃ-ಮಹಾಬಲವುಳ್ಳ, ವಾಯುಃ-ಗಾಳಿಯು, ಸಪುರೋವಾತವಿದ್ಯುತಂ-ಎದುರು ಗಾಳಿಯಿಂದಲೂ, ಮಿಂಚಿನಿಂದಲೂ। ಕೂಡಿರುವ, ಮಹಾಮೇಘಂ-ದೊಡ್ಡ ಮೋಡವನ್ನು, ಪ್ರಚಕರ್ಷ - ಬಲವಾಗಿ ಸೆಳೆಯುತಲಿತ್ತು, ತದಾ - ಆಗ, ಸಮುತ್ಪತಿತ - ಮೇಲೆ ತುಂಬಿರುವ, ಮೇಘಸ್ಯ - ಮೋಡಗ ಳುಳ್ಳ, ಅಂಬರಸ್ಯ - ಆಕಾಶಕ್ಕೂ, ಸಮುದ್ಧೂತ - ಮೇಲಕ್ಕೆ ಉಕ್ಕಿಬಂದ, ಜಲಸ್ಯ - ನೀರುಳ್ಳ, ಸಾಗ ರಸ್ಯಚ - ಸಮುದ್ರಕ್ಕೂ, ರೂಪಂ - ಸ್ವರೂಪವು, ಸಮಂ - ಸಮವಾದದ್ದು, ಆಸೀತ್-ಆಗಿತ್ತು ॥೭॥) ಶ್ರೀಷ್ಮನ, ಸೋರ್ಮಿಜಾಲಂ - ಅಲೆಗಳ ಗುಂಪಿನಿಂದ ಕೂಡಿರುವ, ಮಹಾರ್ಣವಂ - ದೊಡ್ಡಕಡಲನ್ನು ‡ಪಿಬನ್ನಿವ - ಕುಡಿಯುತ್ತಿರುವನೋ ಎಂಬಂತೆ, ಬಭೌ - ಹೊಳೆದನಲ್ಲದೆ, ಆಕಾಶಂಚ-ಅಂಬರವನ್ನೂ, §ಪಿಪಾಸುರಿವ - ಪಾನಮಾಡಲೆಳಸುವನೋ ಎಂಬ ಹಾಗೂ, ದದೃಶೆ - ಕಂಗೊಳಿಸುತ್ತಿದ್ದನು ॥ ೫೩॥ ॥ ವಾಯುಮಾರ್ಗ - ಮುಗಿಲಿನ ಮಾರ್ಗವನ್ನು, ಅನುಸಾರಿಣಃ - ಅನುಸರಿಸಿಹೋಗುತ್ತಿರುವ, ತಸ್ಯ - ಆ ಆಂಜನೇಯನ, ವಿದ್ಯುತ್ಪ್ರಭಾಕಾರೆ - ಮಿಂಚಿನ ಹೊಳವಿನಂತೆಸೆಯುವ, ನಯನೆ - ಕಣ್ಣುಗಳು, ಪರ್ವತಸ್ಥೌ - ಬೆಟ್ಟದ ಮೇಲೆ ಉರಿಯುತಲಿರುವ, ಅನಲಾವಿವ - ಬೆಂಕಿಯು ಎರಡು ರಾಶಿಗಳಹಾಗೆ, ವಿಪ್ರಕಾಶೇತೆ - ವಿಶೇಷವಾಗಿ ಬೆಳಗುತಿದ್ದುವು ॥ ೫೪ ॥ ಪಿಂಗಾಕ್ಷ ಮುಖ್ಯಸ್ಯ - (ಹೊಂಬಣ್ಣದ ಕಣ್ಣು ಗಳಳ್ಳ) ಕಪಿಗಳಲ್ಲಿ ಮುಖ್ಯನಾದ ಹನುಮಂತನ, ಪಿಂಗೆ - ಆರಿಸಿನದ ಬಣ್ಣವಾಗಿರುವ, ಬೃಹತೀ - ದೊಡ್ಡದಾದ, (ಅಗಲವಾದ) ಚಕ್ಷುಷೀ - ಕಣ್ಣುಗಳು ಉದಿತಾ - ಏಕಕಾಲದಲ್ಲಿ ಹುಟ್ಟಿರುವ

---

ಇಷ್ಟು ಮಾತ್ರವೇ ಅಲ್ಲ. ಆಂಜನೇಯನ ವೇಗದಿಂದ ಸೆಳೆಯಲ್ಪಡುತ್ತಿರುವ ಮೇಘಗಳ ನ್ನೊಳಗೊಂಡಿರುವ ಅಂತರಿಕ್ಷಕ್ಕೂ, ವಾಯುವೇಗದಿಂದ ಅಲ್ಲಾಡುತಲಿರುವ ಅಲೆಗಳಿಂದೊ ಡಗೂಡಿರುವ ಸಮುದ್ರಕ್ಕೂ ಪರಸ್ಪರವಾಗಿ ಸಾಮ್ಯವು ರಮಣೀಯವಾಗಿದ್ದಿತು ॥೨॥] ಕೊಂಡು ಹೋಗುತ್ತಿರುವಾಗ ತೆರೆಗಳನ್ನೆಲ್ಲ ಕುಡಿದುಬಿಡುವವನಂತೆಯೂ, ಗಗನದಲ್ಲಿ ತೇ ಲಿಹೋಗುತ್ತಿರುವಾಗ ಆಕಾಶವನ್ನು ಕುಡಿದು ಬಿಡುವನಂತೆಯೂ ಕಂಡು ಬಂದನು ॥೫೩॥ ವಾಯುಮಾರ್ಗವನ್ನು ಅನುಸರಿಸಿ ಹಾರಿಹೋಗುತ್ತಿರುವಲ್ಲಿ ಮಿಂಚಿನಹೊಳವಿನಂತೆ ತಳತಳ ಸುತ್ತಿದ್ದ ಆತನ ಕಣ್ಣುಗಳು ಬೆಟ್ಟದಮೇಲೆ ಉರಿಯುತಲಿರುವ ಕೆಂಡದ ರಾಶಿಗಳಂತೆ ಕಂಗೊ ಳಿಸುತಲಿದ್ದುವು ॥೫೪॥ ಕಪಿ ಮುಖ್ಯನಾದ ಆ ಆಂಜನೇಯನ ಬೆಳಗುತಲಿರುವ ಗುಂಡಾಗಿರುವ ಎರಡು ಕಣ್ಣುಗಳನ್ನು ನೋಡಿದರೆ ಏಕಕಾಲದಲ್ಲಿ ಆಕಾಶದೊಳಗೆ ಸೂರ್ಯಚಂದ್ರರಿಬ್ಬರೂ ಬೆಳಗುತಲಿರುವರೋ ಎಂಬ ಹಾಗೆ ತೋರುತ್ತಿದ್ದುವು ॥ ೫೫ ॥ ಕೆಂಪಾದ ಮೂಗಿನಿಂದೊಡ

ಚಕ್ಷುಷೀ ಸಂಪ್ರಕಾಶೇತೇ ಚಂದ್ರಸೂರ್ಯಾವಿವೋದಿತೌ ||೫೯|| ||
ಮುಖಂ ನಾಸಿಕಯಾ ತಸ್ಯ ತಾಮ್ರಯಾ ತಾಮ್ರಮಾಬಭೌ |
ಸಂಧ್ಯಯಾ ಸಮಭಿಸ್ಪೃಷ್ಟಂ ಯಥಾ ತತ್ಸೂರ್ಯಮಂಡಲಂ||೬೦|| ||
ಲಾಂಗೂಲಂಚ ಸಮಾವಿದ್ಧಂ ಪ್ಲವಮಾನಸ್ಯ ಶೋಭತೇ |
ಅಂಬರೇ ವಾಯುಪುತ್ರಸ್ಯ ಶಕ್ರಧ್ವಜ ಇವೋಚ್ಛ್ರಿತಃ ||೬೧|| ||
ಲಾಂಗೂಲಚಕ್ರೇಣ ಮಹಾನ್ ಶುಕ್ಲದಂಷ್ಟ್ರೋಽನಿಲಾತ್ಮಜಃ |
ವ್ಯರೋಚತ ಮಹಾಪ್ರಾಜ್ಞಃ ಪರಿವೇಷೀವ ಭಾಸ್ಕರಃ ||೬೨|| ||
ಸ್ಫಿಗ್ದೇಶೇನಾಭಿತಾಮ್ರೇಣ ರರಾಜ ಸ ಮಹಾಕಪಿಃ |
ಮಹತಾ ದಾರಿತೇನೇವ ಗಿರಿರ್ಗೈರಿಕಧಾತುನಾ ||೬೩|| ||

ಚಂದ್ರಸೂರ್ಯಾವಿವ - ಚಂದ್ರಸೂರ್ಯರಂತೆ, - ಸಂಪ್ರಕಾಶೇತೇ - ಥಳಥಳಿಸುತ್ತಿದ್ದುವು || ೫೯ || || ಸಂಧ್ಯಯಾ - ಸಂಜೆಗೆಂಪಿನಿಂದ, ಸಮಭಿಸ್ಪೃಷ್ಟಂ - ಬಳಸಲ್ಪಟ್ಟಿರುವ, ಸೂರ್ಯಮಂಡಲಂ ಯಥಾ - ಸೂರ್ಯಬಿಂಬವು ಹೇಗೋ ಹಾಗೆ, ತಸ್ಯ - ಆ ಆಂಜನೇಯನ, ತಾಮ್ರಯಾ - ಕೆಂಪಾಗಿರುವ, ನಾಸಿಕಯಾ - ಮೂಗಿನಿಂದೊಡಗೂಡಿದ, ತತ್-ಆ, ತಾಮ್ರಂ-ಕೆಂಪಗಿರುವ, ಮುಖಂ-ಮೊಗವು, ಆಬಭೌ - ಪ್ರಕಾಶಿಸುತಲಿದ್ದಿತು || ೬೦ || ಅಂಬರೇ-ಆಕಾಶದಲ್ಲಿ, ಪ್ಲವಮಾನಸ್ಯ-ತೇಲಿಕೊಂಡು ಹೋಗುತ್ತಿರುವ, ವಾಯುಪುತ್ರಸ್ಯ-ವಾಯುಕುಮಾರನ, ಸಮಾವಿದ್ಧಂ- ಮೇಲಕ್ಕೆತ್ತಿ ತುದಿಯು ಬಗ್ಗಿರುವ, ಲಾಂಗೂಲಂಚ - ಬಾಲವೂ, ಉಚ್ಛ್ರಿತಃ-ಮೇಲಕ್ಕೆತ್ತಿ ಕಟ್ಟಿರುವ, ಶಕ್ರಧ್ವಜ ಇವ - ಇಂದ್ರಧ್ವಜದಹಾಗೆ, ಶೋಭತೇ - ಹೊಳೆಯುತಲಿತ್ತು ||೬೧||ಮಹಾನ್-ಮಹಾನುಭಾವನು, ಶುಕ್ಲದಂಷ್ಟ್ರಃ - ಬಿಳಿಯದವಡೆಯುಳ್ಳವನು, ಮಹಾಪ್ರಾಜ್ಞಃ-ಬಹುಬುದ್ಧಿವಂತನೂ ಆಗಿರುವ, ಅನಿಲಾತ್ಮಜಃ-ವಾಯುಪುತ್ರನು, ಲಾಂಗೂಲ ಚಕ್ರೇಣ-ಚಕ್ರಾಕಾರವಾದ ಬಾಲದಿಂದ, ಪರಿವೇಷೀ - ಸುತ್ತಲೂ ಗೂಡುಕಟ್ಟಿರುವ, ಭಾಸ್ಕರಇವ-ಸೂರ್ಯನಹಾಗೆ, ವ್ಯರೋಚತ-ಕಂಗೊಳಿಸುತ್ತಿದ್ದನು || ೬೨|| || ಸಃ - ಆ, ಮಹಾಕಪಿಃ - ಆಂಜನೇಯನು, ಅಭಿತಾಮ್ರೇಣ - ಸುತ್ತಲೂ ಕೆಂಪಗಿರುವ, ಸ್ಫಿಗ್ದೇಶೇನ - ಬಾಲದ ಬುಡದ ಭಾಗದಿಂದ, ಮಹತಾ - ದೊಡ್ಡದಾದ, ದಾರಿತೇನ - ಸೀಳಲ್ಪಟ್ಟ, ಗೈರಿಕಧಾತುನಾ - ಬೆಟ್ಟದಕಾವಿ ಕಲ್ಲಿನಿಂದ ಕೂಡಿರುವ, ಗಿರಿರಿವ - ಬೆಟ್ಟದಂತೆ, ರರಾಜ - ವಿರಾಜಿಸುತ್ತಿದ್ದನು || ೬೩|| || ಸಾಗರಂ - ಸಮುದ್ರವನ್ನು, ಪ್ಲವಮಾನಸ್ಯ - ದಾಟುತಲಿ

ಗೂಡಿದ ಆತನ ತಾಮ್ರವರ್ಣದ ಮುಖವು ಸಂಜೆಗೆಂಪಿನಿಂದ ಬಳಸಲ್ಪಟ್ಟಿರುವ ಸೂರ್ಯಮಂಡಲದಂತೆ ಕಂಗೊಳಿಸುತಲಿತ್ತು ||೬೦|| ಅಂಬರವನ್ನು ತರಣಮಾಡುತಲಿರುವ ಆ ಕಪಿಪುಂಗವನ ತುದಿ ಬಗ್ಗಿ ಎತ್ತಲ್ಪಟ್ಟ ಬಾಲವು ಆಕಾಶದಲ್ಲಿ ನೆಲೆಗೊಂಡ ಇಂದ್ರಧ್ವಜದಂತೆ ಕಾಣಬಾದಿತು ||೬೧|| || ಮತ್ತೊಂದು ವೇಳೆ ಬಾಲವು ಆತನ ಸುತ್ತಲೂ ಬಳಸಿ ಸುತ್ತಿಕೊಂಡು ಚಕ್ರಾಕಾರವಾಗಿದ್ದರೆ ಅದರ ನಡುವೆ ಇರುವ ಬಿಳುಪಾದ ಕೋರೆಹಲ್ಲಿನ ಆ ಪ್ರಾಜ್ಞನಾದ ಹನುಮನು ಪರಿವೇಷವನ್ನು ಎಂದರೆ ಸುತ್ತು ಗೂಡನ್ನು ಕಟ್ಟಿಕೊಂಡಿರುವ ಸೂರ್ಯನಂತೆ ಕಾಣಬಂದನು ||೬೨|| ||ಬಾಲವನ್ನೆತ್ತಿಕೊಂಡು ಹಾರಿಹೋಗುತಲಿರುವಾಗ ಹನುಮನು ಬಲುಕೆಂಪು ಬಣ್ಣವುಳ್ಳ ಬಾಲದ ಬುಡದಭಾಗದಿಂದ ಕೆಂಪುಬಣ್ಣದ ಕಾವಿಯ ಕಲ್ಲುನೊಳೆತಿರುವ ಪ್ರದೇಶದಿಂದೊಡಗೂಡಿದ ದೊಡ್ಡಬೆಟ್ಟದಂತೆ ಕಂಗೊಳಿಸಿದನು|| ೬೩|| ||ಸಾಗರವನ್ನು

ತಸ್ಯ ವಾನರಸಿಂಹಸ್ಯ ಪ್ಲವಮಾನಸ್ಯ ಸಾಗರಂ ।
ಕಕ್ಷಾಂತರಗತೋ ವಾಯುರ್ಜೀಮೂತ ಇವ ಗರ್ಜತಿ ॥೬೪॥ ॥
ಖೇ ಯಥಾ ನಿಪತಂತ್ಯುಲ್ಕಾ ಹ್ಯುತ್ತರಾಂತಾದ್ವಿನಿಸ್ಸೃತಾ ।
ದೃಶ್ಯತೇ ಸಾನುಬಂಧಾಚ ತಥಾ ಸ ಕಪಿಕುಂಜರಃ ॥೬೫॥ ॥
ಪತತ್ಪತಂಗ ಸಂಕಾಶೋ ವ್ಯಾಯತಶ್ಶುಶುಭೆ ಕಪಿಃ ।
ಪ್ರವೃದ್ಧ ಇವ ಮಾತಂಗಃ ಕಕ್ಷ್ಯಯಾ ಬಧ್ಯಮಾನಯಾ ॥೬೬॥ ॥
ಉಪರಿಷ್ಟಾಚ್ಛರೀರೇಣ ಛಾಯಯಾ ಚಾವಗಾಢಯಾ ।
ಸಾಗರೆ ಮಾರುತಾವಿಷ್ಟಾ ನೌರಿವಾಸೀತ್ತದಾ ಕಪಿಃ ॥೬೭॥ ॥

ರುವ, ತಸ್ಯ - ಆ, ವಾನರಸಿಂಹಸ್ಯ - ಕಪಿಶ್ರೇಷ್ಠನ, ಕಕ್ಷ - ಕಂಕುಳಿನ, ಅಂತರ - ನಡುವೆ, ಗತಃ - ಹೋಗುತಲಿರುವ, ವಾಯುಃ - ಗಾಳಿಯು, ಜೀಮೂತ ಇವ - ಮೇಘದಂತೆ, ಗರ್ಜತಿ - ಧ್ವನಿಮಾಡುತಲಿತ್ತು ॥ ೬೪ ॥ ॥ (೧) *ಖೆ - ಅಂತರಿಕ್ಷದಲ್ಲಿ, ಉತ್ತರಾಂತಾತ್ - ಉತ್ತರದಿಕ್ಕಿನ ಮೇಲುಗಡೆಯಿಂದ, ವಿನಿಸ್ಸೃತಾ - ಬಿರ್ರನೆ ಹೊರಟು ಬಂದ, ನಿಪತಂತೀ-ಕೆಳಮುಖವಾಗಿ ಬೀಳುತಲಿರುವ, ಸಾನುಬಂಧಾಚ - ಬಾಲದಿಂದ ಕೂಡಿಯೂ ಇರುವ, ಉಲ್ಕಾ - ಕೊಳ್ಳಿಯು (ಧೂಮಕೇತು, ಬಾಲಚುಕ್ಕೆ) ಯಥಾ - ಹೇಗೋ, ಸಃ - ಆ, ಕಪಿಕುಂಜರಃ-ಕಪಿಶ್ರೇಷ್ಠನೂ, ತಥಾ ಹಾಗೆ, ದೃಶ್ಯತೆ-ಕಾಣಬರುತ್ತಿದ್ದನು ॥೬೫॥ ॥ (೨) *ಪತತ್ - ಆಕಾಶದಲ್ಲಿ ಹೋಗುತಲಿರುವ (ಹಾರುತ್ತಿರುವ) ಪತಂಗ - ಸೂರ್ಯನಿಗೆ (ಪಕ್ಷಿಗೆ) ಸಂಕಾಶಃ - ಸಮನೆನಿಸಿದ, (ಆದುದರಿಂದಲೇ) ವ್ಯಾಯತಃ - ನೀಳನಾದ, ಕಪಿಃ - ಆಂಜನೇಯನು, ಬಧ್ಯಮಾನಯಾ - ಕಟ್ಟಲ್ಪಡುತ್ತಿರುವ, ಕಕ್ಷ್ಯಯಾ - ಟೊಂಕದ ಕಟ್ಟಿನಿಂದ, ಪ್ರವೃದ್ಧಃ - ನೀಳವಾದ, ಮಾತಂಗಇವ - ಆನೆಯಂತೆ, ಶುಶುಭೆ - ಪ್ರಕಾಶಿಸುತ್ತಿದ್ದನು ॥ ೬೬ ॥ ॥ ತದಾ - ಆ ಹಾರಿಹೋಗುವ ಸಮಯದೊಳಗೆ, ಉಪರಿಷ್ಟಾತ್ - ಮೇಲೆ ಹೋಗುತ್ತಿರುವ, ಶರೀರೇಣ - ದೇಹದಿಂದಲೂ, ಸಾಗರೆ - ಕಡಲಿನಲ್ಲಿ, ಅವಗಾಢಯಾ - ಒಳಹೊಕ್ಕಿರುವ, ಛಾಯಯಾಚ - ನೆಳಲಿನಿಂದಲೂ, ಕಪಿಃ - ಆಂಜನೇಯನು, ಮಾರುತ - ಗಾಳಿಯಿಂದ, ಆವಿಷ್ಟಾ - ಸೆಳೆದೊಯ್ಯಲ್ಪಡುತ್ತಿರುವ, (ತುಂಬಲ್ಪಟ್ಟಿರುವ) ನೌರಿವ - ಹಡಗಿನಂತೆ, ಆಸೀತ್ - ಇದ್ದನು. ॥ ೬೭ ॥ ॥ ಸಃ - ಆ, ಮಹಾಕಪಿಃ - ಕಪಿಪ್ರವರನು,

ಲಂಘಿಸುತಲಿರುವ ಹನುಮನ ಕಂಕುಳಿನ ಸಂದಿನಲ್ಲಿ ಬಿರುಸಾಗಿ ಹಾದುಬರುವ ವಾಯುವು ಮೇಘದ ಗುಡುಗಿನಂತೆ ಸದ್ದು ಮಾಡುತಲಿದ್ದಿತು ॥೬೪॥ ॥ ಬಡಗಣದೆಸೆಯ ಮೇಲುಗಡೆಯಿಂದ ತೆಂಕಣಮುಖವಾಗಿ ಕಪಿಕುಂಜರನಾದ ಆಂಜನೇಯನು ಹಾರಿಬರುತಲಿದ್ದರೆ ಉತ್ತರದಿಕ್ಕಿನ ಮೇಲ್ಭಾಗದಿಂದ ದಕ್ಷಿಣಾಭಿಮುಖವಾಗಿ ಸರ್ರನೆ ರೇಖಾಕಾರವಾಗಿ ರಾವಣನ ಸಂಪತ್ತಿಗೆ ಆಪತ್ತನ್ನು ಸೂಚಿಸುತ್ತ ಬರುವ ಉಲ್ಕಾಪಾತವೋ [ಕೊಳ್ಳಿ] ಎಂಬಂತೆ ತೋರಿಬಂದನು ॥೬೫॥ ॥ ಹಿಂಗಾಲುಗಳನ್ನೂ, ಮುಂಗೈಗಳನ್ನೂ ನೀಡಿ, ನೀಳವಾಗಿ ಹಾರಿಬರುತಲಿರುವ ರವಿಗೆಣೆಯಾದ ಹನುಮನು ಗಜಶಾಲೆಯೊಳಗೆ ಹಿಂಗಟ್ಟುಮುಂಗಟ್ಟುಗಳಿಂದ ನೀಳವಾಗಿ ನಿಂತಿರುವ ಮಹಾಗಜದಂತೆ ಶೋಭಿಸುತ್ತಿದ್ದನು॥೬೬॥ ॥ ಸಾಗರದ ಮೇಲುಗಡೆ ಊಡಿಲ್ಲದೆ ತೇಲಿಹೋಗುತ್ತಲಿರುವ ಶರೀರದಿಂದಲೂ, ನೀರಿನೊಳಪೊಕ್ಕಿರುವ ನೆಳಲಿನಿಂದಲೂ, ಆಂಜನೇಯನು ಕಡಲಿನಲ್ಲಿ ಬಿರುಗಾಳಿಯಿಂದ ಸೆಳೆದೊಯ್ಯಲ್ಪಡುತ್ತಿರುವ

ಯಂಯಂ ದೇಶಂ ಸ ಮುದ್ರಸ್ಯ ಜಗಾಮ ಸ ಮಹಾಕಪಿಃ।
ಸ ಸ ತಸ್ಯೋರುವೇಗೇನ ಸೋನ್ಮಾದ ಇವ ಲಕ್ಷ್ಯತೆ ॥೧೮॥
ಸಾಗರಸ್ಯೋರ್ಮಿ ಜಾಲಾನಾ ಮುರಸಾ ಶೈಲವರ್ಷ್ಮಣಾಂ।
ಅಭಿಘ್ನಂಸ್ತು ಮಹಾವೇಗಃ ಪುಪ್ಲುವೆ ಸ ಮಹಾಕಪಿಃ ॥೧೯॥
ಕಪಿವಾತಶ್ಚ ಬಲವಾನ್ ಮೇಘವಾತಶ್ಚ ನಿಸ್ಸೃತಃ।
ಸಾಗರಂ ಭೀಮ ನಿರ್ಘೋಷಂ ಕಂಪಯಾಮಾಸತು ರ್ಭೃಶಂ ॥೨೦॥
ವಿಕರ್ಷ ನ್ನೂರ್ಮಿಜಾಲಾನಿ ಬೃಹಂತಿ ಲವಣಾಂಭಸಿ।

ಯಂ ಯಂದೇಶಂ - ಕಡಲಿನ ಯಾವ ಯಾವ ಭಾಗವನ್ನು, ಜಗಾಮ - ಹೊಂದುತಿದ್ದನೋ, ಸಃ ಸಃ - ಆಯಾಯ ಭಾಗವು, ತಸ್ಯ - ಆ ಆಂಜನೇಯುನ, ಊರುವೇಗೇನ - ತೊಡೆಗಳ ವೇಗದಿಂದ * ಸೋನ್ಮಾದಇವ - ಅಪಸ್ಮಾರವುಳ್ಳದ್ದರಹಾಗೆ, ಲಕ್ಷ್ಯತೆ - ಕಾಣಬರುತ್ತಲಿತ್ತು ॥೧೮॥ ಮಹಾವೇಗಃ - ಬಹುವೇಗವುಳ್ಳ, ಸಃ - ಆ, ಮಹಾಕಪಿಸ್ತು - ಆಂಜನೇಯುನಾದರೋ, ಸಾಗರಸ್ಯ - ಕಡಲಿನ, ಶೈಲವರ್ಷ್ಮಣಾಂ - ಬೆಟ್ಟದಷ್ಟು ತೋರವಾದ, ಊರ್ಮಿಜಾಲಾನಾಂ - ಅಲೆಗಳ ಸಮೂಹಗಳನ್ನು, ಉರಸಾ - ಎದೆಯುವೇಗದ ಗಾಳಿಯಿಂದ, ಅಭಿಘ್ನಂಸ್ತು - ಹೊಡೆದು ತಳ್ಳುತ್ತಿರುವವನಾಗಿ, ಪುಪ್ಲುವೆ - ತೇಲಿಹೋಗುತ್ತಿದ್ದನು ॥೧೯॥ ಬಲವಾನ್ - ಪ್ರಬಲವಾದ, ಕಪಿವಾತಶ್ಚ - ಹನುಮನವೇಗದ ಗಾಳಿಯೂ, ನಿಸ್ಸೃತಃ - ಬೀಸುತ್ತಿರುವ, ಮೇಘವಾತಶ್ಚ - ಮೋಡದಗಾಳಿಯೂ, ಭೀಮನಿರ್ಘೋಷಂ- ಭಯಂಕರವಾದ ಧ್ವನಿಯುಳ್ಳ, ಸಾಗರಂ - ಸಮುದ್ರವನ್ನು, ಭೃಶಂ - ಬಹಳವಾಗಿ, ಕಂಪಯಾಮಾಸತುಃ - ಅಲುಗಿಸಿದುವು ॥೨೦॥ ॥ಕಪಿಶಾರ್ದೂಲಃ - ಕಪಿಶ್ರೇಷ್ಠನು, ಲವಣಾಂಭಸಿ - ಉಪ್ಪಿನ ಕಡಲಿನಲ್ಲಿ, ಬೃಹಂತಿ - ದೊಡ್ಡವುಗಳಾದ, ಊರ್ಮಿ ಜಾಲಾನಿ - ತೆರೆಗಳ ಗುಂಪುಗಳನ್ನು, ವಿಕರ್ಷನ್ - ಸೆಳೆಯುತ್ತಿರುವವನಾಗಿ, ರೋದಸೀ - ಭೂಮ್ಯಂತರಿಕ್ಷಗಳನ್ನು (ಕುರಿತು) ವಿಕಿರನ್ನಿವ - ಎರಚುವವನ ಹಾಗೆ,

ದೊಡ್ಡ ಹಣಗಿನ ತೆ ಕಾಣಬಂದನು ॥೨೧॥ ಆ ಆಂಜನೇಯನು ನೀರಿನಲ್ಲಿ ಈಜಿಕೊಂಡು ಕಡಲಿನ ಯಾವಯಾವಭಾಗಕ್ಕೆ ಬರುತಿದ್ದನೋ ಆಯಾಯ ಭಾಗವು ಆತನ ತೊಡೆಯ ವೇಗದಿಂದುಂಟಾದ ನೀರಿನ ಹಾರಾಟ, ಸುಳಿ, ನೊರೆ, ನೊರೆತ ಈ ಮೊದಲಾದ ವಿಕಾರದಿಂದ ಅಪಸ್ಮಾರ (ಮೂರ್ಛೆ) ರೋಗವುಳ್ಳದ್ದರ ಹಾಗೆ ಇರುತ್ತಿದ್ದಿತು ॥೧೮॥ ದಾಟಿ ಹೋಗುವುದರಲ್ಲಿ ಬಹು ವೇಗವುಳ್ಳ ಆ ಆಂಜನೇಯನ ಎದೆಯ ಹೊಯ್ಲಿನಿಂದ ಬೆಟ್ಟದ ಆಕಾರವಾಗಿ ನುಗ್ಗಿಬರುವ ಅಲೆಗಳನ್ನು ತಳ್ಳಿಕೊಂಡು ತೇಲಿ ಹೋಗುತ್ತಿದ್ದನು ॥೧೯॥ ಹನುಮನ ಹಾರಾಟದ ಹೊಯ್ಲಿನಗಾಳಿಯೂ, ಮೇಘಗಳ ಮೇಲೆ ಬೀಸುವಗಾಳಿಯೂ, ಭಯಂಕರವಾಗಿ ಘೋಷಿಸುತ್ತಿರುವ ಕಡಲನ್ನು ಬಲವಾಗಿ ಅಲ್ಲಾಡಿಸಿದುವು ॥೨೦॥ ಆ ಹನುಮನು ಉಪ್ಪಿನ ಕಡಲಿನಲ್ಲಿ ತೆರಳಿಬರುವ ಪ್ರಬಲವಾದ ತೆರೆಗಳನ್ನು ಭೂಮ್ಯಂತರಿಕ್ಷಗಳೇಕ

* ಸುಳಿ, ನೀರಿನ ಸುತ್ತು, ಉಕ್ಕಳಿಕೆ, ನೊರೆ, ಇವುಗಳಿಂದ ಅಪಸ್ಮಾರ ರೋಗವುಳ್ಳದ್ದರಂತೆ ಇತ್ತು ಎಂದು ತಿಲಕ.

ಪುಪ್ಲುವೆ ಕಪಿ ಶಾರ್ದೂಲೋ ವಿಕಿರನ್ನಿವ ರೋದಸೀ ॥೨೧॥ ॥
ಮೇರುಮಂದರಸಂಕಾಶಾ ನುದ್ಧತಾನ್ ಸ ಮಹಾರ್ಣವೆ ।
ಅತಿಕ್ರಾಮ ನ್ಮಹಾವೇಗ ಸ್ತರಂಗಾನ್ ಗಣಯನ್ನಿವ ॥೨೨॥ ॥
ತಸ್ಯವೇಗಸಮುದ್ಧೂತಂ ಜಲಂ ಸ ಜಲದಂ ತದಾ ।
ಅಂಬರಸ್ಥಂ ವಿಬಭ್ರಾಜ ಶಾರದಾಭ್ರಮಿವಾತತಂ ॥೨೩॥ ॥
ತಿಮಿನಕ್ರಝಷಾಃ ಕೂರ್ಮಾ ದೃಶ್ಯಂತೆ ವಿವೃತಾ ಸ್ತದಾ ।
ವಸ್ತ್ರಾಪಕರ್ಷಣೇನೇವ ಶರೀರಾಣಿ ಶರೀರಿಣಾಂ ॥೨೪॥ ॥
ಪ್ಲವಮಾನಂ ಸಮೀಕ್ಷ್ಯಾಥ ಭುಜಂಗಾ ಸ್ಸಾಗರಾಲಯಾಃ ।

[ವಿಭಾಗಿಸುವವನಂತೆ] ಪುಪ್ಲುವೆ - ಕುಪ್ಪಳಿಸುತ್ತಿದ್ದನು ॥೨೧॥ ಮಹಾರ್ಣವೆ - ಮಹಾ ಸಮುದ್ರದಲ್ಲಿ, ಉದ್ಧತಾನ್ - ಮೇಲಕ್ಕೆದ್ದವುಗಳಾದ ಕಾರಣವೇ, ಮೇರುಮಂದರ ಸಂಕಾಶಾನ್-ಮೇರು ಮತ್ತು ಮಂದರಪರ್ವತಗಳಿಗೆಣೆಯೆನಿಸಿದ, ತರಂಗಾನ್ - ತೆರೆಗಳನ್ನು, ಗಣಯನ್ನಿವ - ಎಣಿಸುವವನಂತೆ, ಮಹಾವೇಗಃ - ಬಹು ವೇಗವುಳ್ಳವನಾಗಿ, ಅತಿಕ್ರಾಮತ್ - (ಅತ್ಯಕ್ರಾಮತ್) ದಾಟುತಿದ್ದನು ॥೨೨॥ ತಸ್ಯ - ಆ ಮಾರುತಿಯ, ವೇಗ - ಹಾರುವ ಬಿರಿಸಿನಿಂದ, ಸಮುದ್ಧೂತಂ - ಮೇಲಕ್ಕೆ ಹಾರಿಸಲ್ಪಟ್ಟುದಾದ ಕಾರಣವೇ, ಜಲಂ - ಉದಕವು, ತದಾ - ಆಗ, ಅಂಬರಸ್ಥಂ - ಆಕಾಶದಲ್ಲಿ ನೆಲೆಗೊಂಡುದಾಗಿ, ಸಜಲದಂ - ಮೇಘದಿಂದೊಡಗೂಡಿದುದೆನಿಸಿ, ಆತತಂ - ಹರಡಿಕೊಂಡಿರುವ, ಶಾರದಾಭ್ರಮಿವ, ಶರತ್ಕಾಲದ ಮೇಘದಂತೆ ವಿಬಭ್ರಾಜ - ತಳತಳಿಸುತಲಿತ್ತು ॥೨೩॥ ತದಾ - ಆಗ, ತಿಮಿ - ದೊಡ್ಡಮೀನು, ನಕ್ರ - ಮೊಸಳೆ, ಝಷಾಃ - ಮೀನು ಇವುಗಳೂ, ಕೂರ್ಮಾಃ - ಆಮೆಗಳೂ, ವಿವೃತಾಃ - ತೋರಿದವುಗಳಾಗಿ, ಶರೀರಿಣಾಂ - ಮನುಷ್ಯರ (ದೇಹಿಗಳ) ವಸ್ತ್ರ - ಹೊದಿಕೆಗಳನ್ನು, ಅಪಕರ್ಷಣೇನ - ಸೆಳೆತದಿಂದ, ಶರೀರಾಣೀವ - ಅವಯವಗಳಂತೆ, ದೃಶ್ಯಂತೆ - ಕಾಣಬರುತ್ತಿದ್ದುವು ॥೨೪॥ ಅಥ - ಅನಂತರದಲ್ಲಿ, ಸಾಗರಾಲಯಾಃ - ಕಡಲನ್ನು ಮನೆಮಾಡಿಕೊಂಡಿರುವ, ಭುಜಂಗಾಃ - ಸರ್ಪಗಳು, ವ್ಯೋಮ್ನಿ-ಮುಗಿಲಮಾರ್ಗದಲ್ಲಿ, ಪ್ಲವಮಾನಂ - ತೇಲಿಹೋಗುತಲಿರುವ, ಕಪಿಶಾರ್ದೂಲಂ - ಕಪಿಶ್ರೇಷ್ಠನಾದ, ತಂ - ಆತನನ್ನು, ಸಮೀಕ್ಷ್ಯ-

ವಾಗುವಂತೆ ಎರಚುತ್ತ ದಾಟುತಿದ್ದನು ॥೨೧॥ ॥ ಆ ಮಹಾಸಾಗರದಲ್ಲಿ ತನ್ನ ವೇಗಾತಿಶಯದಿಂದ ಮೇಲಕ್ಕೆ ಉಕ್ಕುತ ಬರುತ್ತಿರುವ ಮೇರುಮಂದರ ಪರ್ವತಗಳಿಗೆಣೆಯಾದ ತೆರೆಗಳನ್ನು ಎಣಿಸುವವನಂತೆ ಒಂದರಿಂದ ಮತ್ತೊಂದನ್ನು ಕ್ರಮವಾಗಿ ದಾಟುತಹೋದನು ॥೨೨॥ ಆ ಹನುಮನ ಹಾರಾಟದ ವೇಗದಲ್ಲಿ ಕಡಲಿನಿಂದ ಮೇಲಕ್ಕೆ ಹಾರಿದಜಲವು ಮುಗಿಲಮಾರ್ಗದಲ್ಲಿರುವ ಮೇಘಗಳ ಜೊತೆಯಲ್ಲಿ ಸೇರಿ, ಬೆಳ್ಳಗೆ ಹರಡಿಕೊಂಡು, ಆಶ್ವಯುಜ ಕಾರ್ತಿಕ ಮಾಸಗಳ ಬಿಳಿಯ ಮೋಡಗಳಂತೆ ಕಾಣಬರುತ್ತಿದ್ದಿತು ॥೨೩॥ ॥ ಉಚ್ಚಾವಚವಾಗಿ ನೀರು ಚೆದರಿ ಹಾರುತ್ತಿರುವಾಗ ತೆರಪಾಗುತ್ತಿರುವ ಕಡಲಿನಲ್ಲಿ ಕಾಣಬರುತ್ತಿರುವ ತೋರವಾದ ಮೀನು, ಮೊಸಳೆ, ಸಾಧಾರಣವಾದ ಮೀನು, ಆಮೆ, ಈ ಮೊದಲಾದ ಜಲಜಂತುಗಳು ವಿರಳವಾಗಿ ಕಾಣಬಂದು, ಮೈಮೇಲಣ ಹೊದಿಕೆಯನ್ನು ತೆಗೆದಾಗ ಕಾಣಬರುವ ಪ್ರಾಣಿಗಳ ಅವಯವಗಳಂತೆ ತೋರುತಲಿದ್ದುವು ॥೨೪॥ ॥ ಆಕಾಶದಲ್ಲಿ ತೋಳುಗಳನ್ನು ಬೀಸಿಕೊಂಡು ಹಾರಿಹೋಗುತಲಿರುವ ಹನುಮನನ್ನು ಆ ಕಡಲಿನಲ್ಲಿ ವಾಸಮಾಡುತಲಿರುವ

ವ್ಯೋಽಮ್ನಿ ತಂ ಕಪಿಶಾರ್ದೂಲಂ ಸುಪರ್ಣ್ಣ ಇತಿ ಮೇನಿರೇ ||೭೫|| ||
ದಶಯೋಜನವಿಸ್ತೀರ್ಣ್ಣಾ ತ್ರಿಂಶದ್ಯೋಜನ ಮಾಯತಾ |
ಛಾಯಾ ವಾನರ ಸಿಂಹಸ್ಯ ಜಲೇ ಚಾರುತರಾಭವತ್ ||೭೬|| ||
ಶ್ವೇತಾಭ್ರಘನರಾಜೀವ ವಾಯು ಪುತ್ರಾನುಗಾಮಿನೀ |
ತಸ್ಯ ಸಾ ಶುಶುಭೆ ಛಾಯಾ ವಿತತಾ ಲವಣಾಂಭಸಿ ||೭೭|| ||
ಶುಶುಭೆ ಸ ಮಹಾತೇಜಾ ಮಹಾಕಾಯೊ ಮಹಾಕಪಿಃ |
ವಾಯುಮಾರ್ಗೆ ನಿರಾಲಂಬೆ ಪಕ್ಷವಾನಿವ ಪರ್ವತಃ ||೭೮|| ||
ಯೇನಾಸೌ ಯಾತಿ ಬಲವಾನ್ ವೇಗೇನ ಕಪಿಕುಂಜರಃ |

ನೋಡಿ, ಸುಪರ್ಣ-ಇತಿ - ಗರುಡನೆಂದು, ಮೇನಿರೆ - ತಿಳಿದುಕೊಂಡವು, * || ೭೫|| ||ವಾನರಸಿಂಹಸ್ಯ- ಕಪಿಶ್ರೇಷ್ಠನ, ದಶಯೋಜನವಿಸ್ತೀರ್ಣಾ - ಹತ್ತುಗಾವುದದುದ್ದವೂ, ತ್ರಿಂಶದ್ಯೋಜನಂ - ಮೂವತ್ತು ಗಾವುದದಷ್ಟು, ಆಯತಾ - ಅಗಲವಾಗಿಯೂಇದ್ದ, ಛಾಯಾ - ನೆರಳು, ಜಲೆ - ನೀರಿನಲ್ಲಿ, ಚಾರುತರಾ - ಬಲು ಅಂದವಾದುದಾಗಿ, ಅಭವತ್ - ಇದ್ದಿತು ||೭೬|||| ಲವಣಾಂಭಸಿ-ಉಪ್ಪಿನ ಕಡಲಿನಲ್ಲಿ, ವಿತತಾ - ಹರಡಿರುವ, ತಸ್ಯ - ಆ ಮಾರುತಿಯ † ಛಾಯಾ - ನೆಳಲು, ವಾಯುಪುತ್ರ - ವಾಯು ಕುಮಾರನನ್ನು, ಅನುಗಾಮಿನೀ-ಹಿಂಬಾಲಿಸುತ್ತಿರುವ, ಶ್ವೇ...ವ, ಶ್ವೇತ - ಬಿಳುಪಾದ, ಅಭ್ರ - ಮೋಡಗಳ, ಘನ - ಒತ್ತಾದ, ರಾಜೀವ - ಸಾಲಿನಂತೆ, ಶುಶುಭೆ - ಹೊಳೆಯುತಲಿತ್ತು||೭೭|||| ಮಹಾತೇಜಾಃ- ಹೆಚ್ಚಿನ ಕಾಂತಿಯುಳ್ಳ, ಮಹಾಕಾಯಃ - ದೊಡ್ಡಮೈಯುಳ್ಳ, ಸಃ - ಆ, ಮಹಾಕಪಿಃ - ಆಂಜನೇಯನು, ನಿರಾಲಂಬೆ - ಆಸರೆಯಿಲ್ಲದ, ವಾಯುಮಾರ್ಗೆ - ಮುಗಿಲದಾರಿಯಲ್ಲಿ, ಪಕ್ಷವಾನ್ - ರೆಕ್ಕೆಗಳುಳ್ಳ, ಪರ್ವತಇವ - ದೊಡ್ಡ ಬೆಟ್ಟದಂತೆ, ಶುಶುಭೆ - ಒಪ್ಪುತ್ತಿದ್ದನು ||೭೮|||| ಬಲವಾನ್ - ಬಲಶಾಲಿಯು, ಕಪಿಕುಂಜರಃ - ಕಪಿಶ್ರೇಷ್ಠನೂ ಆದ, ಅಸೌ - ಈ ಆಂಜನೇಯನು, ಯೇನ - ಯಾವಮಾರ್ಗದಿಂದ,

ಸರ್ಪಗಳು ಕಂಡು, ಗರುತ್ಮಂತನನ್ನಾಗಿ ಭಾವಿಸಿದುವು||೭೫|| ||ಹತ್ತುಗಾವುದಗಳ ಉದ್ದವಾಗಿಯೂ, ಮೂವತ್ತುಗಾವುದಗಳ ಅಗಲವಾಗಿಯೂ ಇರುವ ಕಪಿಪ್ರವರನ ನೆಳಲು, ಆ ಕಡಲಿನ ನೀರಿನಲ್ಲಿ ಬಲು ಅಂದವಾಗಿ ಕಾಣಬರುತಲಿದ್ದಿತು ||೭೬|| || ಆ ಉಪ್ಪಿನ ಕಡಲಿನಲ್ಲಿ ವಿಸ್ತಾರವಾಗಿ ಹರಡಿಕೊಂಡು ಆಂಜನೇಯನನ್ನು ಹಿಂಬಾಲಿಸಿಯೇ ಹೋಗುತಲಿರುವ ಆತನ ನೆಳಲು ಬಿಳುಪಾಗಿಯೂ ಒತ್ತಾಗಿಯೂ ಇರುವ ಮೇಘಗಳ ಸಾಲಿನಂತೆ ವಿರಾಜಿಸುತಲಿದ್ದಿತು ||೭೭|| || ಮಹಾ ತೇಜಸ್ವಿಯೂ, ಮಹಾ ಶರೀರನೂ ಆಗಿರುವ ಕಪಿಪುಂಗವನು ಯಾವ ಆಧಾರವೂ ಇಲ್ಲದೆ ವಾಯುಮಾರ್ಗವಾದ ಅಂತರಿಕ್ಷದಲ್ಲಿ ಹಾರಿಹೋಗುತಲಿದ್ದರೆ, ರೆಕ್ಕೆಗಳನ್ನೊಳಗೊಂಡಿರುವ ದೊಡ್ಡಬೆಟ್ಟದಂತೆ ಕಾಣಬರುತ್ತಿದ್ದನು||೭೮|| || ಕಡಲಿನೊಳಗೆ ಆಂಜನೇಯನು ಯಾವ ಮಾರ್ಗದಲ್ಲಿ ನೀರನ್ನು ತಳ್ಳಿಕೊಂಡು ಹೋಗುತಿದ್ದರೆ

* ಸಿಂಹ, ಶಾರ್ದೂಲ, ನಾಗ, ಕುಂಜರ, ಪುಂಗವ, ಋಷಭ, ಮಣಿ, ಪ್ರಕಾಂಡ, ಇವು ಶ್ರೇಷ್ಠ ವಾಚಕಗಳು.

† ಇಲ್ಲಿ ಛಾಯಾ ಶಬ್ದಕ್ಕೆ ಪ್ರತಿಬಿಂಬವೆಂದು ಅರ್ಥವಲ್ಲ. ಪ್ರಾತಃಕಾಲದಲ್ಲಿಯೇ ಸಮುದ್ರ

ತೇನ ಮಾರ್ಗೇಣ ಸಹಸಾ ದ್ರೋಣೀಕೃತ ಇವಾರ್ಣವಃ ॥೨೯॥
ಆಪಾತೇ ಪಕ್ಷಿಸಂಘಾನಾಂ ಪಕ್ಷಿರಾಜ ಇವ ವ್ರಜನ್ ।
ಹನುಮಾನ್ ಮೇಘಜಾಲಾನಿ ಪ್ರಕರ್ಷನ್ಮಾರುತೋ ಯಥಾ ॥೩೦॥
ಪಾಂಡುರಾರುಣ ವರ್ಣಾನಿ ನೀಲಮಾಂಜಿಷ್ಠಕಾನಿ ಚ ।
ಕಪಿನಾ ಕೃಷ್ಯಮಾಣಾನಿ ಮಹಾಭ್ರಾಣಿ ಚಕಾಶಿರೇ ॥೩೧॥
ಪ್ರವಿಶನ್ನಭ್ರಜಾಲಾನಿ ನಿಷ್ಪತಂಶ್ಚ ಪುನಃಪುನಃ ।
ಪ್ರಚ್ಛನ್ನಶ್ಚ ಪ್ರಕಾಶಶ್ಚ ಚಂದ್ರಮಾ ಇವ ಲಕ್ಷ್ಯತೇ ॥೩೨॥
ಪ್ಲವಮಾನಂತು ತಂ ದೃಷ್ಟ್ವಾ ಪ್ಲವಂಗಂ ತ್ವರಿತಂ ತದಾ ।

ವೇಗೇನ - ವೇಗದೊಂದಿಗೆ, ಯಾತಿ - ಹೋಗುತ್ತಿದ್ದನೋ, ತೇನಮಾರ್ಗೇಣ - ಆ ಹಾದಿಯಿಂದ, ಅರ್ಣವಃ - ಸಮುದ್ರವು, ಸಹಸಾ - ವೇಗದಿಂದ, ದ್ರೋಣೀಕೃತಇವ - ಕೊಪ್ಪರಿಗೆಯಂತೆ ಮಾಡಲ್ಪಟ್ಟದು (ದೋಣಿಯುಳ್ಳದ್ದರಂತೆ ಮಾಡಲ್ಪಟ್ಟಿತು) ॥೨೯॥ ಪಕ್ಷಿಸಂಘಾನಾಂ - ಹಕ್ಕಿಯ ಹಿಂಡುಗಳ * ಆಪಾತೇ - ಹಾದಿಯಲ್ಲಿ, ಪಕ್ಷಿರಾಜಇವ - ಹಕ್ಕಿಗಳೊಡೆಯನಾದ ಗರುಡನಹಾಗೆ, ವ್ರಜನ್ - ಹೋಗುತಲಿರುವ, ಹನುಮಾನ್ - ಆಂಜನೇಯನು, ಮೇಘಜಾಲಾನಿ - ಮೋಡಗಳ ಗುಂಪನ್ನು, ಪ್ರಕರ್ಷನ್ - ಸೆಳೆಯುತ್ತಿರುವವನು (ಸೀಳುತ್ತಿರುವನು) ಅಭೂತ್ - ಆಗಿದ್ದನು, ॥೩೦॥ ಪಾಂಡುರಾರುಣವರ್ಣಾನಿ - ಬಿಳುಪು ಮತ್ತು ಕೆಂಪುಬಣ್ಣದವುಗಳಾಗಿಯೂ, ನೀಲಮಾಂಜಿಷ್ಠಕಾನಿಚ - ಕಪ್ಪು ಮತ್ತು ಹಸಿರು ಬಣ್ಣದವುಗಳಾಗಿಯೂ ಇರುವ, ಕಪಿನಾ - ಮಾರುತಿಯಿಂದ, ಕೃಷ್ಯಮಾಣಾನಿ -- ಸೆಳೆಯಲ್ಪಡುತ್ತಿರತಕ್ಕ, ಮಹಾಭ್ರಾಣಿ - ದೊಡ್ಡಮೇಘಗಳು, ಚಕಾಶಿರೇ - ಅಂದವಾಗಿ ಕಾಣಬರುತ್ತಿದ್ದುವು ॥೩೧॥ ಅಭ್ರಜಾಲಾನಿ - ಮೋಡಗಳ ಹಿಂಡುಗಳನ್ನು, ಪ್ರವಿಶನ್ - ಒಳಹೊಗುತ್ತಿರುವವನಾಗಿಯೂ, ಪುನಃಪುನಃ - ಅಡಿಗಡಿಗೂ, ನಿಷ್ಪತಂಶ್ಚ - ಹೊರಗೆ ಬರುತ್ತಿರುವವನಾಗಿಯೂ ಇರುವ, (ಸಃ - ಆ ಮಾರುತಿಯು) ಪ್ರಚ್ಛನ್ನಃ - ಮುಚ್ಚಲ್ಪಟ್ಟವನ, ಪ್ರಕಾಶಶ್ಚ - ಕಾಣಬರುತಲೂ ಇರುವ, ಚಂದ್ರಮಾಇವ - ಚಂದಿರನಹಾಗೆ, ಲಕ್ಷ್ಯತೇ - ಕಾಣಬರುತ್ತಿದ್ದನು ॥೩೨॥ ತದಾ - ಆಗ, ತ್ವರಿತಂ - ಬಲುಬೇಗನೆ, ಪ್ಲವಮಾನಂ - ಹಾರಿಹೋ

ಆ ಮಾರ್ಗದಲ್ಲಿ ಕಡಲು ಕೊಪ್ಪರಿಗೆಯಂತೆ ಎಡೆಗೊಟ್ಟು ಕಂಗೊಳಿಸುತಲಿದ್ದಿತು ॥೨೯॥ ಹಕ್ಕಿಗಳು ಹಾರಾಡುವ ದಾರಿಯಾಗಿರುವ ಮುಗಿಲಮಾರ್ಗದಲ್ಲಿ ಪಕ್ಷಿರಾಜನಾದ ಗರುಡನಂತೆ ಹಾರಿಹೋಗುತ್ತಿರುವ ಆಂಜನೇಯನು, ಮಹಾಮಾರುತವು ಹೇಗೋ ಹಾಗೆ ಮೇಘಗಳನ್ನು ಸೀಳಿದೊಯ್ಯುತ್ತ, ಪ್ರಯಾಣಮಾಡಿದನು ॥೩೦॥ ಹಾಗೆ ಅಂಜನಾಪುತ್ರನಿಂದ ಸೆಳೆಯಲ್ಪಡುತ್ತಿರುವ ಬಿಳುಪು, ಕೆಂಪು, ಕಪ್ಪು, ಹಸಿರು, ಮುಂತಾದ ಬಗೆಬಗೆಯ ಬಣ್ಣಗಳ ಮೇಘಗಳು ವಿಚಿತ್ರತರಗಳಾಗಿ ರಾರಾಜಿಸುತ್ತಿದ್ದುವು ॥೩೧॥ ಈ ರೀತಿಯಿಂದ ತೆರಳುತಲಿರುವ ಮಾರುತಿಯು ಒಂದುಸಾರಿ ಮೇಘಗಳ ಗುಂಪಿನೊಳ ಹೊಗುತ್ತಲೂ, ಮತ್ತೊಂದುಸಾರಿ ಆ ಮೇಘಮಂಡಲದಿಂದ ಹೊರಗೆ ಕಾಣಿಸಿಕೊಳ್ಳುತಲೂ ಇದ್ದರೆ, ಸ್ವಲ್ಪಮರೆಯಾಗುತ್ತಲೂ, ತುಸು ಕಾಣಬರುತಲೂ ಇರುವ ಚಂದ್ರಬಿಂಬದಂತೆ ಒಪ್ಪುತಲಿದ್ದನು ॥೩೨॥ ಈ ಪ್ರ

ತರವನ್ನು ಹೇಳಿದಾಗಿದೆ. ಆಗ ಅವನ ಪ್ರತಿ ಬಿಂಬವು ಹಾಗೆ ಕಾಣಬರುತ್ತಿದಿತು ಎಂದು ತಿಲಕ.

' ಆಪತಂತಿ ಸಂಚರಂತ್ಯಸ್ಮಿನ್ನಿತಿ ಆಪಾತೊ ಮಾರ್ಗಃ ಇತಿ ಮಹೇಶ್ವರ-

ವವರ್ಷುಃ ಪುಷ್ಪವರ್ಷಾಣಿ ದೇವಗಂಧರ್ವದಾನವಾಃ ॥೮೩॥ ॥
ತತಾಪ ನ ಹಿ ತಂ ಸೂರ್ಯಃ ಪ್ಲವಂತಂ ವಾನರೋತ್ತಮಂ ।
ಸಿಷೇವೇ ಚ ತದಾ ವಾಯೂ ರಾಮಕಾರ್ಯಾರ್ಥಸಿದ್ಧಯೇ॥೮೪॥॥
ಋಷಯಸ್ತುಷ್ಟುವುಶ್ಚೈನಂ ಪ್ಲವಮಾನಂ ವಿಹಾಯಸಾ ।
ಜಗುಶ್ಚ ದೇವಗಂಧರ್ವಾಃ ಪ್ರಶಂಸಂತೋ ಮಹೌಜಸಂ ॥೮೫॥ ॥
ನಾಗಾಶ್ಚ ತುಷ್ಟುವುರ್ಯಕ್ಷಾ ರಕ್ಷಾಂಸಿ ವಿಬುಧಾಃ ಖಗಾಃ ।
ಪ್ರೇಕ್ಷ್ಯ ಸರ್ವೇ ಕಪಿವರಂ ಸಹಸಾ ವಿಗತಕ್ಲಮಂ ॥೮೬॥ ॥

ಗುತಲಿರುವ, ತಂ - ಆ ಮಾರುತಿಯನ್ನು, ದೃಷ್ಟ್ವಾ - ನೋಡಿ, ದೇವಗಂಧರ್ವದಾನವಾಸ್ತು - ದೇವತೆಗಳು, ಗಂಧರ್ವರು ಮತ್ತು ರಾಕ್ಷಸರೂ, ಪುಷ್ಪವರ್ಷಾಣಿ - ಹೂವಿನ ಮಳೆಗಳನ್ನು, ವವರ್ಷುಃ- ಕರೆದರು ॥೮೩॥॥ಪ್ಲವಂತಂ-ಹಾರಿಹೋಗುತಲಿರುವ, ವಾನರೋತ್ತಮಂ-ಕಪಿಗಳಲ್ಲಿ ಉತ್ತಮನಾದ, ತಂ- ಆ ಆಂಜನೇಯನನ್ನು, ಸೂರ್ಯಃ - ಗುರುವಾದ ಸೂರ್ಯನು, ನಹಿತತಾಪ - ಸುಡುತ್ತಿರಲಿಲ್ಲ. ವಾಯುಶ್ಚ - ತಂದೆಯಾದ ಮಾರುತನೂ, ರಾಮಕಾರ್ಯ - ಸೀತೆಯನ್ನು ಹುಡುಕೋಣವೆಂಬ, ಅರ್ಥ - ಪ್ರಯೋಜನದ- ಸಿದ್ಧಯೆ - ಲಾಭಕ್ಕೋಸ್ಕರ, ಸಿಷೇವೆ - ಅನುಕೂಲನಾಗಿದ್ದನು ॥೮೪॥॥ಋಷಯಶ್ಚ -ಮುನಿಗಳೂ, ವಿಹಾಯಸಾ - ಆಕಾಶಮಾರ್ಗದಿಂದ, ಪ್ಲವಮಾನಂ - ತೇಲಿಹೋಗುತ್ತಿರುವ, ಏನಂ - ಈ ಮಾರುತಿಯನ್ನು, ತುಷ್ಟುವುಃ - ಸ್ತುತಿಸಿದರು, ದೇವಗಂಧರ್ವಾಶ್ಚ - ದೇವಗಾಯಕರೂ, ಮಹೌಜಸಂ - ಬಹುಪರಾಕ್ರಮಿಯಾದ ಮಾರುತಿಯನ್ನು, ಪ್ರಶಂಸಂತಃ - ಕೊಂಡಾಡುತ್ತಿರುವವರಾಗಿ, ಜಗುಃ - ಹೊಗಳಿದರು ॥೮೫॥॥ಸರ್ವೇಪಿ - ಸಮಸ್ತರಾದ, ನಾಗಾಃ - ಸರ್ಪಗಳೂ, ಯಕ್ಷಾಃ - ಯಕ್ಷರೂ, ರಕ್ಷಾಂಸಿ - ರಾಕ್ಷಸರೂ, ವಿಬುಧಾಃ - ದೇವತೆಗಳೂ, ಖಗಾಶ್ಚ - ಪಕ್ಷಿಗಳೂ, ಸಹಸಾ - ವೇಗದಿಂದ, ವಿಗತಕ್ಲಮಂ - ಆಯಾಸವಿಲ್ಲದಿರುವ, ಕಪಿವರಂ - ಕಪಿಶ್ರೇಷ್ಠನನ್ನು, ಪ್ರೇಕ್ಷ್ಯ - ಅಚ್ಚರಿಯಿಂದ ನೋಡಿ, ತುಷ್ಟುವುಃ - ನುತಿಗೈದರು ॥೮೬॥॥ಪ್ಲವಗಶಾರ್ದೂಲೆ - ಕಪಿವರನಾದ, ತಸ್ಮಿನ್ - ಆ, ಹನೂಮತಿ - ಆಂಜನೇಯನು, ಪ್ಲವ

ಕಾರವಾಗಿ ಗಗನಮಾರ್ಗದಲ್ಲಿ ಕುಪ್ಪಳಿಸುತ ಪಯಣವನ್ನು ಬೆಳೆಸುತಲಿರುವ ಮಾರುತಿಯನ್ನು ಕಂಡು, ದೇವತೆಗಳು, ಗಂಧರ್ವರು, ದಾನವರು, ಮುಂತಾದವರು ಅಚ್ಚರಿಗೊಂಡು ಹೂ ಮಳೆಯನ್ನುಕರೆಯುತಲಿದ್ದರು॥೮೩॥ ॥(ತನ್ನಲ್ಲಿ ವಿದ್ಯಾಭ್ಯಾಸಮಾಡಿದ ಪ್ರಿಯಶಿಷ್ಯನೆಂತಲೂ, ತನ್ನ ವಂಶದಲ್ಲಿ ಅವತರಿಸಿದ ಶ್ರೀರಾಮನ ಕಾರ್ಯಾರ್ಥವಾಗಿ ಹೋಗುತ್ತಿರುವನೆಂತಲೂ ಭಾವಿಸಿ) ಆಕಾಶವನ್ನು ತರಿಸುತಲಿರುವ ಆ ವಾನರಶ್ರೇಷ್ಠನನ್ನು ಸೂರ್ಯನು ಸಂತಾಪಗೊಳಿಸಲಿಲ್ಲ. (ಪುತ್ರನೆಂಬ ವಾತ್ಸಲ್ಯದಿಂದಲೂ) ಶ್ರೀರಾಮಕಾರ್ಯವು ಅನುಕೂಲಿಸಲೆಂಬ ಕೋರಿಕೆಯಿಂದಲೂ,ಆಂಜನೇಯನು ಪ್ರಯಾಣಮಾಡುವ ದಕ್ಷಿಣಾಭಿಮುಖವಾಗಿಯೇಬೀಸುತ್ತ,ವಾಯುವುಅನುಕೂಲನಾಗಿದ್ದನು॥೮೪॥॥ ಜ್ಞಾನಿಗಳೆನಿಸಿದಮುನಿಗಳು,ದೇವತೆಗಳು,ಗಂಧರ್ವರು ಸಹ, ಆಕಾಶಮಾರ್ಗದಲ್ಲಿ ಪ್ರಯಾಣಮಾಡುತಲಿರುವ ಮಹಾತೇಜಸ್ವಿಯಾದ ಆಂಜನೇಯನನ್ನು ಬಹುವಿಧವಾಗಿ ಕೊಂಡಾಡಿ, ಮಂಗಳಾಶಾಸನಪೂರ್ವಕವಾಗಿ ಹೊಗಳುತ್ತಿದ್ದರು ॥೮೫॥॥ ಮತ್ತು-ನಾಗರು, ಯಕ್ಷರು, ರಕ್ಷಸ್ಸುಗಳು, ವಿಬುಧರು, ಈ ಮುಂತಾದವರು, ನಿರಾಯಾಸವಾಗಿ ಮುಗಿಲಮಾರ್ಗದಲ್ಲಿ ಬಲುಬೇಗನೆ ತೇಲಿಹೋಗುತಲಿರುವ ಆಂಜನೇಯನನ್ನು ಬಲುಅಚ್ಚರಿಯಿಂದ ದೃಷ್ಟಿಸಿ ಭಾಪುಭಾಪೆಂದು ಸ್ತುತಿಸತೊಡಗಿದ್ದರು॥೮೬॥॥

ತಸ್ಮಿನ್ ಪ್ಲವಗಶಾರ್ದೂಲೇ ಪ್ಲವಮಾನೇ ಹನೂಮತಿ ।
ಇಕ್ಷ್ವಾಕುಕುಲಮಾನಾರ್ಥೀ ಚಿಂತಯಾಮಾಸ ಸಾಗರಃ ॥೯೭॥ ॥
ಸಾಹಾಯ್ಯಂ ವಾನರೇಂದ್ರಸ್ಯ ಯದಿನಾಹಂ ಹನೂಮತಃ ।
ಕರಿಷ್ಯಾಮಿ ಭವಿಷ್ಯಾಮಿ ಸರ್ವವಾಚ್ಯೋ ವಿವಕ್ಷತಾಂ ॥೯೮॥ ॥
ಅಹ ಮಿಕ್ಷ್ವಾಕು ನಾಥೇನ ಸಗರೇಣ ವಿವರ್ಧಿತಃ ।
ಇಕ್ಷ್ವಾಕು ಸಚಿವಶ್ಚಾಯಂ ನಾವಸೀದಿತು ಮರ್ಹತಿ ॥೯೯॥ ॥
ತಥಾ ಮಯಾ ವಿಧಾತವ್ಯಂ ವಿಶ್ರಮೇತ ಯಥಾ ಕಪಿಃ ।

ಮಾನೇ (ಸತಿ) ಹಾರಿಹೋಗುತ್ತಿರಲಾಗಿ, ಇಕ್ಷ್ವಾಕುಕುಲ- ಇಕ್ಷ್ವಾಕು ರಾಯನ ವಂಶಕ್ಕೆ, ಮಾನಾರ್ಥೀ-ಮನ್ನಣೆಯನ್ನು ಬಯಸುತಲಿರುವ, ಸಾಗರಃ - ಸಮುದ್ರರಾಜನು, ಚಿಂತಯಾಮಾಸ-ಯೋಚಿಸಿದನು॥೯೭॥॥ ಅಹಂ - ನಾನು, ವಾನರೇಂದ್ರಸ್ಯ - ಕಪಿವರನಾದ, ಹನೂಮತಃ - ಆಂಜನೇಯನಿಗೆ, ಸಾಹಾಯ್ಯಂ - ನೆರವನ್ನು, ನಕರಿಷ್ಯಾಮಿಯದಿ - ಮಾಡದೆ ಹೋದರೆ, ವಿವಕ್ಷತಾಂ - (ಲೋಕದಲ್ಲಿ) ಮಾತನಾಡಿಕೊಳ್ಳುವವರಿಗೆ, ಸರ್ವವಾಚ್ಯಃ - ಸರ್ವಪ್ರಕಾರದಿಂದಲೂ ಹೀಯಾಳಿಕೆಗೆ ಗುರಿಯಾದವನು, ಭವಿಷ್ಯಾಮಿ - ಆಗುವೆನು, ॥೯೮॥ ಅಹಂ - ನಾನು, ಇಕ್ಷ್ವಾಕುನಾಥೇನ - ಇಕ್ಷ್ವಾಕು ಕುಲದ ಅರಸಾದ, * ಸಗರೇಣ - ಸಗರ ಚಕ್ರವರ್ತಿಯಿಂದ, ವಿವರ್ಧಿತಃ - ಬೆಳೆಯಿಸಲ್ಪಟ್ಟನು, ಇಕ್ಷ್ವಾಕುಸಚಿವಃ - ಇಕ್ಷ್ವಾಕುವಂಶಕ್ಕೆ ಸಹಾಯಕನಾಗಿರುವ, ಅಯಂಚ - ಈ ಮಾರುತಿಯಾದರೋ, ಅವಸೀದಿತುಂ- ಕುಂದಲಿಕ್ಕೆ, ನಾರ್ಹತಿ - ತಕ್ಕವನಲ್ಲ ॥೯೯॥ ಕಪಿಃ - ಆಂಜನೇಯನು, ಮಯಿ - ನನ್ನಲ್ಲಿ, ಯಥಾ - ಹೇಗೆ, ವಿಶ್ರಮೇತ - ವಿಶ್ರಮಿಸಿಕೊಳ್ಳಬಲ್ಲನೋ, ವಿಶ್ರಾಂತಸ್ಸ - ಆಯಾಸವನ್ನು ಪರಿಹರಿಸಿಕೊಂಡವನಾಗಿ, ಶೇಷಂ -

ಹೀಗೆ ಕಪಿಶ್ರೇಷ್ಠನಾದ ಆ ಹನುಮಂತನು ಹಾರಿಹೋಗುತ್ತಿರುವಾಗ ಇಕ್ಷ್ವಾಕುರಾಜನ ವಂಶವನ್ನು ಈ ಸಮಯದಲ್ಲಿ ಗೌರವಿಸಬೇಕೆಂದು ಬಯಸಿದ ಸಮುದ್ರರಾಜನು ತನ್ನ ಮನದೊಳಗೆ ಇಂತು ಚಿಂತಿಸಿದನು ॥೯೭॥ ॥ ವಾನರೋತ್ತಮನಾದ ಈ ಹನುಮಂತನಿಗೆ ಈಗ ನಾನು ಉಚಿತವಾದ ಸಹಾಯವನ್ನು ಮಾಡದೆಹೋದರೆ, "ಇಕ್ಷ್ವಾಕುಕುಲದ ಅರಸರಿಂದಲೇ ಬೆಳೆದು, ಈಗ ಆ ಇಕ್ಷ್ವಾಕುಕುಲದ ಅರಸನಾದ ಶ್ರೀರಾಮನ ಕಾರ್ಯಾರ್ಥವಾಗಿ ಪೋಗುತ್ತಿರುವ ಈ ಮಾರುತಿಗೆ ಸ್ವಲ್ಪವಾದರೂ ಸಹಾಯವನ್ನು ಒದಗಿಸಿಕೊಡದೆ ಹೋದನಲ್ಲ ? ಅಹಹ ಈ ಸಮುದ್ರರಾಜನು ಕೃತಜ್ಞನಲ್ಲ" ಎಂದೀಪ್ರಕಾರವಾಗಿ ಲೋಕದ ಜನರು ಮಾತನಾಡಿಕೊಳ್ಳುವಾಗ ನನ್ನನ್ನು ಆಡಿಕೊಳ್ಳದೆ ಇರುವುದಿಲ್ಲ. ಎಲ್ಲರ ಹೀಯ್ಯಾಳಿಕೆಗೂ ನಾನು ಒಳಗಾಗುವೆನು ॥೯೮॥ ॥ ಇಕ್ಷ್ವಾಕುಕುಲದ ಅರಸಾದ ಸಗರಚಕ್ರವರ್ತಿಯಿಂದ ನಾನು ಏಳಿಗೆಯನ್ನು ಪಡೆದವನು, ಈಗ ಆ ವಂಶದವನಾದ ಶ್ರೀರಾಮನಿಗೆ ಸಹಾಯಮಾಡಲಿಕ್ಕೆ ಹೊರಟಿರುವ ಈ ಮಾರುತಿಗೆ ಆಯಾಸವು ಪರಿಹರವಾಗುವ ಹಾಗೆ ನಾನು ಏನಾದರೂ ಮಾಡಬೇಕು ॥೯೯॥ ॥ ಈ ಆಂಜನೇಯನು ಸ್ವಲ್ಪವಿಶ್ರಮಿಸಿಕೊಳ್ಳುವ ಹಾಗೆ ನಾನು ಸಹಾಯಮಾಡತಕ್ಕುದೇ ಪ್ರಕೃತೋಚಿತವಾದ ಕೆಲಸ. ಹಾಗಾದರೆ ಈತನ್ನು ಇಲ್ಲಿ

* ಸಗರಚಕ್ರವರ್ತಿಯ ಯಾಗದ ಕುದುರೆಯನ್ನು ಹುಡುಕುವಾಗ ಮಡಿದ ಆತನ ಮಕ್ಕಳಿಂದಲೂ, ಲೋಕಪಾವನಿಯಾದ ಗಂಗೆಯನ್ನು ತಂದ, ಭಗೀರಥನಿಂದಲೂ ನನ್ನ ಬೆಳವಳಿಗೆಯುಂಟಾಯಿತು. ಎಂದು ಶಾಮಾನುಜೀಯ

ಶೇಷಂ ಚ ಮಯಿ ವಿಶ್ರಾನ್ತೇ ಸ್ಸುಖೇನಾತಿ ತರಿಷ್ಯತಿ ॥೯೦॥ ॥
ಇತಿಕೃತ್ವಾ ಮತಿಂ ಸಾಧ್ವೀಂ ಸಮುದ್ರಶ್ಛನ್ನ ಮಂಭಸಿ ।
ಹಿರಣ್ಯನಾಭಂ ಮೈನಾಕ ಮುವಾಚ ಗಿರಿ ಸತ್ತಮಂ ॥೯೧॥ ॥
ತ್ವಮಿಹಾಸುರ ಸಂಘಾನಾಂ ಪಾತಾಳತಲವಾಸಿನಾಂ ।
ದೇವರಾಜ್ಞಾ ಗಿರಿಶ್ರೇಷ್ಠ ಪರಿಘ ಸ್ಸನ್ನಿವೇಶಿತಃ ॥೯೨॥ ॥
ತ್ವ ಮೇಷಾಂ ಜಾತ ವೀರ್ಯಾಣಾಂ ಪುನ ರೇವೋತ್ಪತಿಷ್ಯತಾಂ ।
ಪಾತಾಳಸ್ಯಾ ಪ್ರಮೇಯಸ್ಯ ದ್ವಾರ ಮಾವೃತ್ಯ ತಿಷ್ಠಸಿ ॥೯೩॥ ॥

---

ಉಳಿದಿರುವ ಹಾದಿಯನ್ನಾದರೂ, ಸುಖೇನ - ಅನಾಯಾಸದಿಂದ, ಅತಿಪತಿಷ್ಯತಿ - ದಾಟಿಹೋಗಬಲ್ಲನೋ, ತಥಾ - ಹಾಗೆ, ಮಯಾ - ನನ್ನಿಂದ, ವಿಧಾತವ್ಯಂ - ಮಾಡಬೇಕಾಗಿದೆ. ॥೯೦॥ ॥ ಇತಿ - ಈ ಮೇಲೆ ಹೇಳಿದಂತೆ, ಸಾಧ್ವೀಂ - ಮೇಲಾದ, ಮತಿಂ - ಯೋಚನೆಯನ್ನು, ಕೃತ್ವಾ - ಮಾಡಿ, ಅಂಭಸಿ - ನೀರಿನೊಳಗೆ, ಛನ್ನಂ - ಮುಳುಗಿಕೊಂಡಿರುವ, ¶ ಹಿರಣ್ಯನಾಭಂ - ಸುವರ್ಣವನ್ನು ಗರ್ಭದಲ್ಲಿ ಧರಿಸಿ ಇರುವ, (ಚಿನ್ನದ ಕೋಡುಳ್ಳ) ಗಿರಿಸತ್ತಮಂ - ಬೆಟ್ಟಗಳಲ್ಲಿ ಉತ್ತಮವೆನಿಸಿದ, ಮೈನಾಕಂ - ಮೈನಾಕ ಪರ್ವತವನ್ನು ಕುರಿತು, ಉವಾಚ - ಇಂತೆಂದನು ॥೯೧॥ ॥ ಹೇ ಗಿರಿಶ್ರೇಷ್ಠ - ಎಲೈ ಪರ್ವತರಾಜನೇ!, ತ್ವಂ - ನೀನು, ಇಹ - ಈ ನನ್ನೊಳಗೆ, § ಪಾತಾಳ ತಲ - ಪಾತಾಳ ಲೋಕದಲ್ಲಿ, ವಾಸಿನಾಂ - ವಾಸಮಾಡುತ್ತಿರುವ, ಅಸುರಸಂಘಾನಾಂ - ರಾಕ್ಷಸಸಮೂಹಗಳಿಗೆ, ಪರಿಘಃ - ಅಗುಳಿಯಾಗಿ (ಅಡ್ಡ ಕಟ್ಟಿಗೆಯಾಗಿ, ತಡೆಯಾಗಿ) ದೇವರಾಜ್ಞಾ - ದೇವರಾಜನಾದ ಇಂದ್ರನಿಂದ, ನಿವೇಶಿತಃ - ಇಡಲ್ಪಟ್ಟಿದ್ದೀಯೆ ॥೯೨॥ ॥ ತ್ವಂ - ನೀನು, ಜಾತ - ಉಂಟಾದ, ವೀರ್ಯಾಣಾಂ - ಪರಾಕ್ರಮವುಳ್ಳ, ಪುನಃಪುನಃ - ಬಾರಿಬಾರಿಗೂ, ಉತ್ಪತಿಷ್ಯತಾಂ - (ಲೋಕಹಿಂಸಾರ್ಥವಾಗಿ) ಮೇಲಕ್ಕೆ ಹಾರಿ ಬರಬೇಕೆಂದಿರುವ, ಏಷಾಂ - ಈ ರಾಕ್ಷಸರ, ಪಾತಾಳಸ್ಯ - (ವಾಸಸ್ಥಾನವಾದ) ಪಾತಾಳದ, ದ್ವಾರಂ - ಬಾಗಿಲನ್ನು, ಆವೃತ್ಯ - ತಡೆದುಕೊಂಡು, ತಿಷ್ಠಸಿ - ಇದ್ದೀಯೆ ॥೯೩॥ ॥

---

ತುಸ ಆಯಾಸವನ್ನು ಪರಿಹರಿಸಿಕೊಂಡು ಮುಂದೆ ಉಳಿದಿರುವ ದಾರಿಯನ್ನು ಸುಖವಾಗಿ ದಾಟಿಹೋಗಬಲ್ಲ ॥೯೦॥ ॥ ಎಂದೀ ಪ್ರಕಾರ ಚೆನ್ನಾಗಿ ಚಿಂತಿಸಿದ ಸಮುದ್ರನು ತನ್ನೊಳಗೆ ಬಹುಕಾಲದಿಂದ ಅವಿತುಕೊಂಡಿರುವ ಚಿನ್ನದ ಕೋಡಿನವನಾದ ಮೈನಾಕನೆಂಬ ಪರ್ವತರಾಜನನ್ನು ಕುರಿತು ಇಂತೆಂದನು:- ॥೯೧॥ ॥ಅಯ್ಯಾ ಮೈನಾಕ! ಈ ಪಾತಾಳತಲದೊಳಗೆ ವಾಸಮಾಡುತ್ತಿರುವ ರಕ್ಕಸರ ಹಿಂಡು ಲೋಕವನ್ನು ಹಿಂಸಿಸಲು ಹೊರಗೆ ಬಾರದಹಾಗೆ ತಡೆಯಾರುಗಿವಂತೆ ದೇವರಾಜನಾದ ಇಂದ್ರನು ನಿನ್ನನ್ನು ಪಾತಾಳದ್ವಾರದಲ್ಲಿ ಅಡ್ಡವಾದ ಅಗುಳಿಯಂತೆ ನೆಲೆಗೊಳಿಸಿದಾನೆ ॥೯೨॥ ॥ ಮಹಾ ಶೌರ್ಯಸಂಪನ್ನರೆನಿಸಿ ಬಾರಿಬಾರಿಗೂ ಮೇಲಕ್ಕೆ ಹಾರಿ ಬರಬೇಕೆಂದು ಬಯಸುತಲಿರುವ ಆ ರಾಕ್ಷಸರಿಗೆ ವಾಸಸ್ಥಾನವೆನಿಸಿರುವ ವಿಸ್ತಾರವಾದ ಪಾತಾಳದ ಬಾಗಿಲನ್ನು ನೀನು ಆವರಿಸಿಕೊಂಡು ನೆಲೆಗೊಂಡಿದ್ದೀಯೆ ॥೯೩॥ ॥

---

¶ ನಾಭಿ, ಇದು - ಅಧ್ಯೃಷ್ಟೆ, ಕಸ್ತೂರಿ, ಎಂಬರ್ಥದಲ್ಲಿ ವಿಶ್ವ ಮುತ್ತಾದವರ § ಶಿವಮುಖಗಳೆಂಬ ರಾಕ್ಷಸರು ಪಾತಾಳದಲ್ಲಿ ಸೇರಿಕೊಂಡು ಆಗಾಗ ಲೋಕಹಿಂಸೆ ಮಾಡುತ್ತಿದ್ದರೆಂತಲೂ, ಅವರು ಹೊರಗೆ ಬಾರದಹಾಗೆ ಮೈನಾಕನು ತಡೆಯಾಗಿದ್ದನೆಂತಲೂ ಪೌರಾಣಿಕರು.

ತಿರ್ಯಗೂರ್ಧ್ವ ಮಧಶ್ಚೈವ ಶಕ್ತಿಸ್ತೇ ಶೈಲವರ್ಧಿತುಂ ।
ತಸ್ಮಾತ್ಸಂಚೋದಯಾಮಿ ತ್ವಾ ಮುತ್ತಿಷ್ಠ ಗಿರಿಸತ್ತಮ ॥೯೪॥
ಸ ಏಷ ಕಪಿಶಾರ್ದೂಲ ಸ್ತ್ವಾ ಮುಪರ್ಯೇತಿ ವೀರ್ಯವಾನ್ ।
ಹನೂಮಾನ್ ರಾಮಕಾರ್ಯಾರ್ಥಂ ಭೀಮಕರ್ಮಾ ಖಮಾಪ್ಲುತಃ ॥೯೫॥ ॥
ಅಸ್ಯ ಸಾಹ್ಯಂ ಮಯಾಕಾರ್ಯ ಮಿಕ್ಷ್ವಾಕುಕುಲವರ್ತಿನಃ ।
ಮಮಹೀಕ್ಷ್ವಾಕವಃ ಪೂಜ್ಯಾಃ ಪರಂ ಪೂಜ್ಯತಮಾ ಸ್ತ್ವಪ ॥೯೬॥ ॥

---

ಹೇ ಶೈಲ - ಎಲೈ ಪರ್ವತರಾಜನೇ ! ತಿರ್ಯಕ್-ಅಡ್ಡಲಾಗಿಯೂ (ಅಗಲವಾಗಿಯೂ) ಊರ್ಧ್ವಂ - ಮೇಲ್ಮುಖವಾಗಿಯೂ, ಅಧಶ್ಚೈವ - ಕೆಳಮುಖವಾಗಿಯೂ, ವರ್ಧಿತುಂ - ಬೆಳೆಯಲಿಕ್ಕೆ, ತೇ - ನಿನಗೆ, ಶಕ್ತಿಃ - ಸಾಮರ್ಥ್ಯವು, ಅಸ್ತಿ - ಉಂಟು, ತಸ್ಮಾತ್ - ಅದರ ದೆಶೆಯಿಂದ, ಹೇಗಿರಿಸತ್ತಮ - ಎಲೈ ಗಿರಿವರನೇ ! ತ್ವಾಂ-ನಿನ್ನನ್ನು, ಸಂಚೋದಯಾಮಿ-ಪ್ರೇರಿಸುತ್ತೇನೆ, ಉತ್ತಿಷ್ಠ-ಹೊರಡು(ಏಳು)॥೯೪॥- ಸಃ - ಆ ನಾನು ಹೇಳಿದ, ಏಷಃ - ಈ, ವೀರ್ಯವಾನ್-ಶೂರನಾಗಿರುವ, ಕಪಿಶಾರ್ದೂಲಃ - ಕಪಿವರನಾದ, ಹನೂಮಾನ್ - ಆಂಜನೇಯನು, ರಾಮಕಾರ್ಯಾರ್ಥಂ-ಸೀತೆಯನ್ನು ಹುಡುಕೋಣ ವೆಂಬ ಶ್ರೀರಾಮನ ಕಾರ್ಯಕ್ಕೋಸ್ಕರ,ಭೀಮಕರ್ಮಾ - ಭಯಂಕರವಾದ ಕೆಲಸಮಾಡುವವನಾಗಿ, ಖಂ - ಆಕಾಶ ಮಾರ್ಗವನ್ನು ಕುರಿತು,ಆಪ್ಲುತಃ-ಹಾರಿದವನಾಗಿ , ತ್ವಾಂ ಉಪರಿ - ನಿನ್ನ ಮೇಲೆ, ಏತಿ - ಬರುತಲಿದಾನೆ ॥ ೯೫ ॥ ॥ ಇಕ್ಷ್ವಾಕು - ಇಕ್ಷ್ವಾಕುಮಹಾರಾಜನ, ಕುಲ - ವಂಶವನ್ನು (ವಂಶದ ಅರಸಿಗೆ) ವರ್ತಿನಃ - ಅನುಸರಿಸಿ ಇರುವ, (ಸೇವಕನಾದ) ಅಸ್ಯ - ಈ ಆಂಜನೇಯನಿಗೆ, ಸಾಹ್ಯಂ - ಸಹಾಯವು, ಮಯಾ - ನನ್ನಿಂದ, ಕಾರ್ಯಂ - ಮಾಡಲ್ಪಡತಕ್ಕದು, ಹಿ - ಏತಕ್ಕೆಂದರೆ, ಇಕ್ಷ್ವಾಕವಃ - ಇಕ್ಷ್ವಾಕು ಕುಲದರಸರು, ಮಮ - ನನಗೆ, ಪೂಜ್ಯಾಃ - ಮಾನ್ಯರು, ತವಪರಂ - ನಿನಗಾದರೋ, ಪೂಜ್ಯತಮಾಃ - ವಿಶೇಷವಾಗಿ ಮಾನನೀಯರು ॥೯೬॥ ಅಸ್ಮಾಕಂ - ನಮಗೆ, ಸಾಚಿವ್ಯಂ - ಬತ್ತಾಸೆಯನ್ನು, ಕುರು -

---

ಎಲೈ ಗಿರಿವರನೇ ! ಮೇಲು ಮುಖವಾಗಿಯೂ, ಕೆಳಮುಖವಾಗಿಯೂ, ಅಡ್ಡವಾಗಿಯೂ, ಬೆಳೆಯಲಿಕ್ಕೆ ನಿನಗೆ ಶಕ್ತಿಯುಂಟು, ಆದುದರಿಂದಲೇ ನಿನ್ನನ್ನು ಪ್ರೇರಿಸುತ್ತೇನೆ. ಎಲೈ ಪರ್ವತರಾಜನೇ! ಹೊರಡು ॥೯೪॥ ಭಯಂಕರವಾದ ಕರ್ಮವನ್ನು ಮಾಡತಕ್ಕವನೆನಿಸಿರುವ ಕಪಿರನ್ನನಾದ ಈ ಹನುಮಂತನು ಇಗೋ ಶ್ರೀರಾಮನ ಕೆಲಸಕ್ಕಾಗಿ ನಿನ್ನ ಮೇಲುಭಾಗದಲ್ಲಿ ಮುಗಿಲೊಳಗೆ ಹಾರಿಹೋಗುತಲಿದಾನೆ ॥೯೫॥ ॥ ಈಕ್ಷ್ವಾಕು ಕುಲಾಧಿಪತಿಯಾದ ಶ್ರೀರಾಮನಿಗೆ ಸೇವಕನಾಗಿ ಹೋಗುತ್ತಿರುವ ಈ ಮಾರುತಿಗೆ ನಾನು ಅವಶ್ಯವಾಗಿ ಸಹಾಯವನ್ನು ಮಾಡಲೇಬೇಕು. ಅದು ಏಕೆ, ಎಂಬೆಯೊ ? ಅಯ್ಯಾ ! ಇಕ್ಷ್ವಾಕು ಕುಲದ ಅರಸರೆಲ್ಲರೂ ನನಗೆ *ಪೂಜ್ಯರೆನಿಸಿದಾರೆ. * ನಿನಗಂತೂ ವಿಶೇಷವಾಗಿ ಪೂಜಾರ್ಹರು ॥೯೬॥ ॥ ಆಯ್ಯ

---

* ಇಕ್ಷ್ವಾಕುಕುಲದವರಿಂದ ಬೆಳೆದ ನನ್ನಲ್ಲಿ ನಿನಗೆ ಸುಖವಾಗಿರುವ ಸತಿಯು ದೊರೆತಿರುವುದರಿಂದಲೂ ಇಂದ್ರನು ಬೆಟ್ಟಗಳ ರೆಕ್ಕೆಯನ್ನು ಕತ್ತರಿಸುವಾಗ ನೀನು ಇಲ್ಲಿಗೆ ಓಡಿಬರುವ ವೇಳೆ ಈ ಮಾರುತಿಯ ತಂದೆಯಾದ ವಾಯುದೇವನು ನಿನಗೆ ಸಂಪೂರ್ಣಸಹಾಯ ಮಾಡಿರುವುದರಿಂದಲೂ ನಿನಗೆ ಈತನು ಪೂಜ್ಯ ತಮನಲ್ಲವೆ ? ಎಂದು ತಿಲಕ.

ಕುರು ಸಾಚಿವ್ಯ ಮಸ್ಮಾಕಂ ನ ನಃ ಕಾರ್ಯ ಮತಿಕ್ರಮೇತ್ ।
ಕರ್ತವ್ಯ ಮಕೃತಂ ಕಾರ್ಯಂ ಸತಾಂಮನ್ಯು ಮುದೀರಯೇತ್ ॥೯೭॥ ॥
ಸಲಿಲಾ ದೂರ್ಧ್ವ ಮುತ್ತಿಷ್ಠ ತಿಷ್ಠ ತ್ವೇಷ ಕಪಿಸ್ತ್ವಯಿ ।
ಅಸ್ಮಾಕ ಮತಿಥಿಶ್ಚೈವ ಪೂಜ್ಯಶ್ಚ ಪ್ಲವತಾಂವರಃ ॥೯೮॥ ॥
ಚಾಮೀಕರ ಮಹಾನಾಭ ದೇವಗಂಧರ್ವಸೇವಿತ ।
ಹನೂಮಾಂ ಸ್ತ್ವಯಿ ವಿಶ್ರಾಂತ ಸ್ತತ ಶ್ಶೇಷಂ ಗಮಿಷ್ಯತಿ ॥ ॥೯೯॥ ॥
(ಸ ಏಷ ಕಪಿಶಾರ್ದೂಲ ಸ್ತ್ವಾ ಮುಪರ್ಯೇತಿ ವೀರ್ಯವಾನ್ )

---

ಮಾಡು, ಕಾರ್ಯಂ - ಶ್ರೀರಾಮಕಾರ್ಯವು, ನಾತಿಕ್ರಮೇತ್ - ಮಿಂಚಿಹೋಗ ಬಾರದು, ಕರ್ತವ್ಯಂ - ಅವಶ್ಯ ಮಾಡಬೇಕಾಗಿರುವ, ಕಾರ್ಯಂ - ಅತಿಥಿಸತ್ಕಾರ ರೂಪವಾದ ಕೆಲಸವು, ಅಕೃತಂ - ಮಾಡಲ್ಪಡದೆ ಹೋದರೆ, ಸತಾಂ - ಸತ್ಪುರುಷರಿಗೆ, ಮನ್ಯುಂ - ಸಿಟ್ಟನ್ನು, ಉದೀರಯೇತ್-ಉಂಟುಮಾಡುವುದು ॥೯೭॥ ॥ ಸಲಿಲಾತ್ - ನೀರನ್ನು ಬಿಟ್ಟು, ಊರ್ಧ್ವಂ - ಮೇಲಕ್ಕೆ, ಉತ್ತಿಷ್ಠ - ಏಳು (ತಲೆಯನ್ನು ತೋರು) ಏಷಃ - ಈ, ಕಪಿಃ - ಆಂಜನೇಯನು, ತ್ವಯಿ - ನಿನ್ನಲ್ಲಿ, ತಿಷ್ಠತು - ಇಳಿದುನಿಲ್ಲಲಿ, ಪ್ಲವತಾಂ-ಹಾರಿಹೋಗುವವರೊಳಗೆ, ವರಃ - ಉತ್ತಮನಾದ ಈ ಮಾರುತಿಯು, ಅಸ್ಮಾಕಂ - ನಮಗೆ ಅತಿಥಿಶ್ಚೈವ-ಸತ್ಕಾರಕ್ಕೆ ಯೋಗ್ಯನಾದ ಅಭ್ಯಾಗತನೂ ಹೌದು, ಪೂಜ್ಯಶ್ಚ - ಮರ್ಯಾದಾರ್ಹನೂ ಹೌದು ॥ ೯೮ ॥ ॥ ಚಾಮೀಕರ - ಚಿನ್ನದ, ಮಹಾನಾಭ - ದೊಡ್ಡಕೋಡುಗಳುಳ್ಳವನಾಗಿ, ದೇವ - ದೇವತೆಗಳಿಂದಲೂ, ಗಂಧರ್ವ - ಗಂಧರ್ವರಿಂದಲೂ, ಸೇವಿತ - ಆಶ್ರಯಿಸಲ್ಪಟ್ಟ ಗಿರಿಯೇ ! ಹನೂಮಾನ್ - ಈ ಆಂಜನೇಯನು, ತ್ವಯಿ - ನಿನ್ನಲ್ಲಿ, ವಿಶ್ರಾಂತಃ - ಬಳಲಿಕೆಯನ್ನು ಕಳೆದುಕೊಂಡವನಾಗಿ, ತತಃ - ಆಮೇಲೆ, ಶೇಷಂ - ಮಿಕ್ಕಿರುವ ದಾರಿಯನ್ನು, ಗಮಿಷ್ಯತಿ - ದಾಟಿಹೋಗುವನು (ಸಃ - ನಾನುಹೇಳಿದ, ಏಷಃ - ಈ, ಕಪಿಶಾರ್ದೂಲಃ - ಕಪಿವರನಾದ ಹನುಮಂತನು, ತ್ವಾಮುಪರಿ - ಇಗೋ ನಿನ್ನ ಮೇಲೆ, ವೀರ್ಯವಾನ್ - ಮಹಾ ಪರಾಕ್ರಮ ಶಾಲಿಯಾಗಿ, ಏತಿ - ಹೋಗುತಲಿದಾನೆ) ॥೯೯॥ ॥ ಕಾಕುತ್ಸ್ಥಸ್ಯ - ಶ್ರೀರಾಮನಿಗೆ ಆನೃಶಂಸ್ಯಂ ಚ - ಸೀತೆಯ ವಿಷಯದಲ್ಲಿರುವ ದಯೆಯನ್ನೂ, ಮೈಥಿಲ್ಯಾಃ - ಜಾನಕಿಗೆ ಉಂಟಾಗಿರುವ

---

ಪರ್ವತೋತ್ತಮ ! ಮಾರುತಿಯ ಕೆಲಸಕ್ಕೆ ಕುಂದುಬಾರದ ಹಾಗೂ, ನಾವೀಗ ಆತನಿಗೆ ಮಾಡಬೇಕಾದ ಸತ್ಕಾರದ ಸಮಯವು ಮಿಂಚಿಹೋಗದ ಹಾಗೂ, ನೀನೀಗ ನಮಗೆ ಸಹಾಯ ಮಾಡು, ಸತ್ಪುರುಷರಿಗೆ ಮಾಡಬೇಕಾದ ಕೆಲಸವನ್ನು ಆಯಾ ಸಮಯಕ್ಕೆ ಸರಿಯಾಗಿ ಮಾಡದೆ ಹೋದರೆ ಅವರಿಗೆ ಸಿಟ್ಟನ್ನುಂಟು ಮಾಡಿದಂತಾಗುವುದು ॥೯೭॥ ॥ ಶೈಲೋತ್ತಮ ಕ್ತಿಯುಳ್ಳ ನೀನು ಈ ನೀರಿನಲ್ಲಿ ಮುಳುಗಿ ಇರೋಣವನ್ನು ಬಿಟ್ಟು ತುಸಮೇಲಕ್ಕೆ ಏಳು, ಈ ಆಂಜನೇಯನು ನಿನ್ನಲ್ಲಿ ಸ್ವಲ್ಪ ವಿಶ್ರಮಿಸಿಕೊಳ್ಳಲಿ, ನಮಗೆ ಈಗ ಈ ಮಾರುತಿಯು ಅತಿಥಿಯಾಗಿ, ಪೂಜ್ಯನೆನಿಸಿರುವನು. ॥ ೯೮॥ ॥ ಸುವರ್ಣಮಯ ವಾದ ನಾಭಿ ಅಥವಾ ಶಿಖರವುಳ್ಳವನಾಗಿ ದೇವಗಂಧರ್ವಾದಿಗಳಿಂದ ಸೇವಿಸಲ್ಪಡುತಲಿರುವ ಎಲೈ ಗಿರಿವರನೇ ? ಈ ಹನುಮಂತನು ನಿನ್ನಲ್ಲಿ ಉಳಿದು ಸ್ವಲ್ಪ ಮಟ್ಟಿಗೆ ಆಯಾಸವನ್ನು ಪರಿಹರಿಸಿಕೊಂಡು ಬಳಿಕ ಉಳಿದಿರುವ ಹಾದಿಯನ್ನು ಹಾರಿ ಹೋಗುವನು (ಇಗೋ ನಿನ್ನ ಮೇಲೆ ಹಾರಿ ಹೋಗುತಲಿರುವ ಈ ಹನುಮಂತನನ್ನು ನೋಡು) ॥೯೯॥ ॥. ಎಲೈ ಮೈನಾಕನೇ! ಕಕುತ್ಸ್ಥರಾಯನ

ಕಾಕುತ್ಸ್ಥಸ್ಯಾನೃಶಂಸ್ಯಂ ಚ ಮೈಥಿಲ್ಯಾಶ್ಚ ವಿವಾಸನಂ ।
ಶ್ರಮಂ ಚ ಪ್ಲವಗೇಂದ್ರಸ್ಯ ಸಮೀಕ್ಷ್ಯೋತ್ಥಾತುಮರ್ಹಸಿ ॥೧೦೦॥ ॥
ಹಿರಣ್ಯನಾಭೋ ಮೈನಾಕೋ ನಿಶಮ್ಯ ಲವಣಾಂಭಸಃ ॥
ಉತ್ಪಪಾತ ಜಲಾತ್ತೂರ್ಣಂ ಮಹಾದ್ರುಮಲತಾಯುತಃ ॥೧೦೧॥ ॥
ಸ ಸಾಗರಜಲಂ ಭಿತ್ವಾ ಬಭೂವಾಭ್ಯುತ್ಥಿತಸ್ತದಾ ।
ಯಥಾ ಜಲಧರಂ ಭಿತ್ವಾ ದೀಪ್ತರಶ್ಮಿರ್ದಿವಾಕರಃ ॥೧೦೨॥ ॥
ಸ ಮಹಾತ್ಮಾ ಮುಹೂರ್ತೇನ ಪರ್ವತಸ್ಸಲಿಲಾವೃತಃ ।

ವಿವಾಸನಂ ಚ - ದೇಶಾಂತರ ವಾಸವನ್ನೂ, ಪ್ಲವಗೇಂದ್ರಸ್ಯ - ಕಪಿವರನಾದ ಹನುಮನ, ಶ್ರಮಂ ಚ - (ಸ್ವಾಮಿ ಭಕ್ತಿಯಿಂದ ಈ ನಿರಾಲಂಬವಾದ ಮಾರ್ಗದಲ್ಲಿ ಹಾರಿಹೋಗುತ್ತಿರುವ) ಈ ಪ್ರಯಾಸವನ್ನೂ, ಸಮೀಕ್ಷ್ಯ - ನೀನು ಚೆನ್ನಾಗಿ ಚಿಂತಿಸಿ, ಉತ್ಥಾತುಂ - ಮೇಲಕ್ಕೆ ಹೊರಡಲು, ಅರ್ಹಸಿ - ಯೋಗ್ಯನಾಗಿದ್ದೀಯೆ ॥೧೦೦॥ ಹಿರಣ್ಯನಾಭಃ - ಚಿನ್ನದ ಕೋಡುಳ್ಳ, ಮೈನಾಕಃ - ಮೈನಾಕ ಪರ್ವತನು, ನಿಶಮ್ಯ - ಆ ಮಾತನ್ನು ಕೇಳಿ, ಲವಣಾಂಭಸಃ - ಸಮುದ್ರರಾಜನ, (ಉಪ್ಪಿನಕಡಲಿನ) ಜಲಾತ್ - ನೀರಿನೊಳಭಾಗವನ್ನು ಬಿಟ್ಟು, ತೂರ್ಣಂ - ಬೇಗನೆ, ಮಹಾದ್ರುಮ - ದೊಡ್ಡ ಮರಗಳಿಂದಲೂ, ಲತಾ-ಬಳ್ಳಿಗಳಿಂದಲೂ, ಯುತಃ - ಕೂಡಿದವನಾಗಿ, ಉತ್ಪಪಾತ - ಮೇಲಕ್ಕೆ ಹೊರಟನು ॥೧೦೧॥ ದೀಪ್ತರಶ್ಮಿಃ - ಬೆಳಗುತ್ತಿರುವ ಕಿರಣವುಳ್ಳ, ದಿವಾಕರಃ - ಸೂರ್ಯನು, ಜಲಧರಂ - ಮೇಘವನ್ನು, ಭಿತ್ವಾ - ಭೇದಿಸಿಕೊಂಡು, ಯಥಾ-ಹೇಗೆ (ಅಭ್ಯುತ್ತಿಷ್ಠತಿ-ಉದಿಸುತ್ತಾನೆಯೋ. ತಥಾ-ಹಾಗೆಯೇ) ಸಃ-ಆ ಮೈನಾಕನೂ, ಸಾಗರಜಲಂ-ಕಡಲಿನ ನೀರನ್ನು, ಭಿತ್ವಾ- ಭೇದಿಸಿಕೊಂಡು, ಅಭ್ಯುತ್ಥಿತಃ-ಮೇಲಕ್ಕೆ ಏಳುತ್ತಿರುವವನಾಗಿ, ಬಭೂವ-ಇದ್ದನು ॥೧೦೨॥ ಆದಿತ್ಯೋದಯ - ಸೂರ್ಯೋದಯ ಸಮಯಕ್ಕೆ, ಸಂಕಾಶೈಃ - ಸಮಾನಗಳೆನಿಸಿ, ಆಕಾಶಂ - ಅಂತರಿಕ್ಷವನ್ನು, ಆಲಿಖದ್ಭಿರಿವ - ಕೊರೆಯುತಲಿವೆಯೋ ಎಂಬುತಿರುವ, ಸಕಿನ್ನರಮಹೋರಗೈಃ - ಕಿನ್ನರರು, ಮಹಾನಾಗರು ಇವರಿಂದ ಸಹಿತವಾದ, ಶಾತಕುಂಭಮಯೈಃ - ಸುವರ್ಣ ಸ್ವರೂಪವಾಗಿರುವ, ಶೃಂಗೈಃ- ಕೋಡುಗಳಿಂದ. (ಉಪಲಕ್ಷಿತಃ - ಕೂಡಿರುವ) ಸಃ - ಆ, ಮಹಾತ್ಮಾ - ತೋರವಾದ ಮೆಯ್ಯುಳ್ಳ,

ಕುಲದಲ್ಲಿ ಜನಿಸಿದ ಶ್ರೀರಾಮಚಂದ್ರನ ನ್ಯಾಯವಾದ ನಡತೆಯನ್ನೂ, ಎಂದರೆ ಸೀತೆಯು ವಿಷಯದಲ್ಲಿ ತೋರುತ್ತಿರುವ ಕನಿಕರವನ್ನೂ, ಜನಕಮಹಾರಾಜನ ಪುತ್ರಿಯಾದ ಸೀತೆಗೆ ಬಂದಿರುವ ದೇಶಾಂತರವಾಸದ ಕಷ್ಟವನ್ನೂ, ಇದಕ್ಕಾಗಿ ಆಂಜನೇಯನು ಪಡುತ್ತಿರುವ ಶ್ರಮವನ್ನೂ, ಚೆನ್ನಾಗಿ ಚಿಂತಿಸಿ, ನೀನು ಬೇಗನೆ ಮೇಲಕ್ಕೆ ಹೊರಡಲು ಅಣಿಯಾಗು॥೧೦೦॥ ಎಂದ ಸಮುದ್ರರಾಜನ ವಚನವನ್ನಾಲಿಸಿ, ಸುವರ್ಣದಿಂದ ಪೂರ್ಣನಾದ ಮೈನಾಕನು ತನ್ನಲ್ಲಿರುವ ಅನೇಕವಾದ ವೃಕ್ಷಗಳಿಂದಲೂ, ಬಗೆಬಗೆಯಾದ ಬಳ್ಳಿಗಳಿಂದಲೂ ಒಡಗೂಡಿ, ಸಾಗರದ ಜಲದೊಳಗಿನಿಂದ ಮೇಲಕ್ಕೆ ಹೊರಟನು ॥೧೦೧॥ ॥ ಆಗ ಬೆಳಕಿನಿಂದ ಲೋಕವನ್ನು ಬೆಳಗಿಸುವ ಸೂರ್ಯನು ಮೇಘಮಂಡಲವನ್ನು ಭೇದಿಸಿಕೊಂಡು ಬರುವ ಹಾಗೆ, ಆ ಮೈನಾಕನು ಸಮುದ್ರ ಜಲವನ್ನು ಭೇದಿಸುತ್ತಾ ಮೇಲಕ್ಕೆ ತಲೆದೋರಿದನು ॥೧೦೨॥ ತೋರವಾದ ಆಕಾರವುಳ್ಳ ಆ ಮೈನಾಕನು-ಸ್ವಲ್ಪಹೊತ್ತು ನೀರಿನಿಂದ ಆವರಿಸಲ್ಪಟ್ಟಿದ್ದು, ಸಮುದ್ರನು ಬೇಗನೆ ಹೊರಪಡುವಂತೆ ಒತ್ತುತ್ತಿರಲು, ತನ್ನ ಕೋಡುಗಳನ್ನು ಮೇಲಕ್ಕೆ ಕಾಣ

ದರ್ಶಯಾಮಾಸ ಶೃಂಗಾಣಿ ಸಾಗರೇಣ ನಿಯೋಜಿತಃ ॥೧೦೩॥ ॥
ಶಾಂತಕುಂಭ ಮಯೈ ಶ್ಶೃಂಗೈ ಸ್ಸಕಿನ್ನರ ಮಹೋರಗೈಃ ।
ಆದಿತ್ಯೋದಯ ಸಂಕಾಶೈ ರಾಲಿಖದ್ಭಿ ರಿವಾಂಬರಂ ॥೧೦೪॥ ॥
ತಪ್ತ ಜಾಂಬೂನದೈ ಶ್ಶೃಂಗೈಃ ಪರ್ವತಸ್ಯ ಸಮುತ್ಥಿತೈಃ ।
ಆಕಾಶಂ ಶಸ್ತ್ರಸಂಕಾಶ ಮಭವತ್ಕಾಂಚನ ಪ್ರಭಂ ॥ ೧೦೫ ॥ ॥
ಜಾತರೂಪ ಮಯೈ ಶ್ಶೃಂಗೈ ಭ್ರಾಜಮಾನೈ ಸ್ಸ್ವಯಂ ಪ್ರಭೈಃ ।
ಆದಿತ್ಯ ಶತ ಸಂಕಾಶ ಸ್ಸೋಭವದ್ಗಿರಿ ಸತ್ತಮಃ ॥೧೦೬॥ ॥
ತಮುತ್ಥಿತ ಮಸಂಗೇನ ಹನೂಮಾ ನಗ್ರತ ಸ್ಥಿತಂ ।

ಸಲಿಲಾವೃತಃ-ನೀರಿನಿಂದ ಸುತ್ತಲ್ಪಟ್ಟದ್ದ, ಪರ್ವತಃ- ಮೈನಾಕನು, ಸಾಗರೇಣ - ಸಮುದ್ರ ರಾಜನಿಂದ, ನಿಯೋಜಿತಃ - ನಿಯಮಿಸಲ್ಪಟ್ಟವನಾಗಿ, ಶೃಂಗಾಣಿ - ತನ್ನ ಕೋಡುಗಳನ್ನು, ದರ್ಶಯಾಮಾಸ - ಮೇಲಕ್ಕೆ ತೋರ್ಪಡಿಸಿದನು ॥೧೦೩-೧೦೪॥ ॥

ತಪ್ತ ಜಾಂಬೂನದೈಃ - ಪುಟದಿಂದ ಶುದ್ಧವಾದ ಚಿನ್ನವನ್ನೊಳಗೊಂಡಿರುವ, ಸಮುತ್ಥಿತೈಃ - ಮೇಲಕ್ಕೆದ್ದ (ಮುಗಿಲಿನವರೆಗೆ ಬಂದ) ಪರ್ವತಸ್ಯ - ಮೈನಾಕನ, ಶೃಂಗೈಃ - ಕೋಡುಗಳಿಂದ, ಶಸ್ತ್ರಸಂಕಾಶಂ - ಕಬ್ಬಿಣಕ್ಕೆಣೆಯಾಗಿದ್ದ, ಆಕಾಶಂ - ಅಂಬರವು, ಕಾಂಚನ ಪ್ರಭಂ- ಚಿನ್ನದಂತೆ ಬೆಳಗುತಲಿರುವುದು, ಅಭವತ್ - ಆಯಿತು ॥೧೦೫॥॥ ಸ್ವಯಂಪ್ರಭೈಃ - ಸ್ವಾಭಾವಿಕವಾದ ಕಾಂತಿಯುಳ್ಳವುಗಳಾದ ಕಾರಣವೇ, ಭ್ರಾಜಮಾನೈಃ - ತಳತಳಿಸುತಲಿರುವ, ಜಾತರೂಪಮಯೈಃ - ಸುವರ್ಣಮಯವಾದ, ಶೃಂಗೈಃ - ಕೋಡುಗಳಿಂದ, ಸಃ - ಆ, ಗಿರಿಸತ್ತಮಃ - ಗಿರಿವರನು, ಆದಿತ್ಯ - ಸೂರ್ಯರ, ಶತ - ನೂರುಮಂದಿಯೊಡನೆ, ಸಂಕಾಶಃ - ಸಮನೆನಿಸಿದವನು, ಅಭವತ್ - ಆದನು ॥೧೦೬॥॥ ಹನೂಮಾನ್- ಆಂಜನೇಯನು, ಅಸಂಗೇನ- ಅಸಹಾಯದಿಂದ, ಉತ್ಥಿತಂ - ಮೇಲಕ್ಕೆದ್ದ, ಲವಣತೋಯಸ್ಯ - ಉಪ್ಪಿನ ಕಡಲಿನ, ಮಧ್ಯೇ - ನಡುವೆ, ಅಗ್ರತಃ - ತನಗೆ ಎದುರಾಗಿ, ಸ್ಥಿತಂ - ನಿಂತಿರುವ, ತಂ - ಆ ಮೈನಾಕನನ್ನು, (ಆಲೋಕ್ಯ - ನೋಡಿ) ಅಯಂ - ಇದು, ವಿಘ್ನಃ - (ತನ್ನ ಪ್ರಯಾಣಕ್ಕೆ) ಅಡ್ಡಿಯು, ಇತಿ - ಇಂತೆಂದು, ನಿಶ್ಚಿತಃ - ಗೊತ್ತು

ಬಗುವಂತೆ ತೋರ್ಪಡಿಸಿದನು ॥೧೦೩॥ ॥ ಆ ಶಿಖರಗಳು ಸುವರ್ಣಮಯಗಳಾಗಿ ಬೆಳಗುತ್ತಿದ್ದವು, ಅವುಗಳೊಳಗೆ ಕಿನ್ನರರು, ಸರ್ಪ ಮುಂತಾದವರೂ ಸೇರಿಕೊಂಡಿದ್ದರು, ಸೂರ್ಯೋದಯ ಸಮಯದಲ್ಲಿ ಹೇಗೋ ಹಾಗೆ ಆಕಾಶಮಂಡಲವು ವಿರಾಜಿಸುತಲಿದ್ದತು, ಮತ್ತು-ಕೋಡುಗಳು ಮುಗಿಲಮಂಡಲವನ್ನು ಕೊರೆಯುವಂತಿದ್ದವು. ॥೧೦೪॥ ॥ ಪುಟವಿಟ್ಟು ಶೋಧಿಸಿದ ಭಂಗಾರದಂತೆ ಪಳಪಳನೆ ಹೊಳೆಯುತ್ತಾ ಆಪರ್ವತದ ಶಿಖರಗಳು ಆಕಾಶದವರೆಗೂ ಬೆಳವಳಿಗೆಯನ್ನು ಹೊಂದಿ ರಾರಾಜಿಸುತ್ತಿರಲು, ನಭೋಮಂಡಲವು ಶಸ್ತ್ರಗಳಿಂದೊಡಗೂಡಿರುವಂತೆಯೂ, ಸುವರ್ಣಪ್ರಭೆಯಿಂದ ಸಹಿತವಾಗಿರುವಂತೆಯೂ ಕಾಣಬರುತ್ತಿತ್ತು ॥೧೦೫॥॥ ತಾನೇತಾನಾಗಿ ಥಳಥಳಿಸುತಲಿರುವ ಸ್ವರ್ಣಮಯವಾದ ಶಿಖರಗಳಿಂದ ಪರ್ವತರಾಜನಾದ ಆ ಮೈನಾಕನು, ನೂರಾರು ಸೂರ್ಯರು ಏಕಕಾಲದಲ್ಲಿ ಉದಿಸಿದ್ದಂತೆ ಬೆಳಗುತಲಿದ್ದನು ॥೧೦೬॥ ॥ ಆಗಲಾ ಹನುಮಂತನು-ಇದ್ದಕ್ಕಿದ್ದ ಹಾಗೆ ತನ್ನ ಮುಂದ ಉಪ್ಪಿನ ಕಡಲಿನ ನಡುವೆ, ಸರ್ರನೆ ಮೇಲಕ್ಕೆ ಬಂದು ಅಡ್ಡವಾಗಿ ನಿಂತ ಆ ತೋರವಾದ

ಮಧ್ಯೇ ಲವಣ ತೋಯಸ್ಯ ವಿಘ್ನೋಯ ಮಿತಿ ನಿಶ್ಚಿತಃ ||೧೦೭|| ||
ಸ ತ ಮುಚ್ಛ್ರಿತ ಮತ್ಯರ್ಥಂ ಮಹಾ ವೇಗೋ ಮಹಾ ಕಪಿಃ |
ಉರಸಾ ಪಾತಯಾಮಾಸ ಜೀಮೂತ ಮಿವ ಮಾರುತಃ ||೧೦೮|| ||
ಸ ತದಾ ಪಾತಿತ ಸ್ತೇನ ಕಪಿನಾ ಪರ್ವತೋತ್ತಮಃ |
ಬುದ್ಧ್ವಾ ತಸ್ಯ ಕಪೇರ್ವೇಗಂ ಜಹರ್ಷ ಚ ನನಂದಚ ||೧೦೯|| ||
ತ ಮಾಕಾಶಗತಂ ವೀರ ಮಾಕಾಶೇ ಸಮುಪಸ್ಥಿತಃ |
ಪ್ರೀತೋ ಹೃಷ್ಟಮನಾ ವಾಕ್ಯ ಮಬ್ರವೀ ತ್ಪರ್ವತಃ ಕಪಿಂ |
ಮಾನುಷಂ ಧಾರಯ್ನ್ ರೂಪ ಮಾತ್ಮನ ಶ್ಶಿಖರೇ ಸ್ಥಿತಃ ||೧೧೦ ||

ಮಾಡಿಕೊಂಡನು ||೧೦೭|| ||ಮಹಾವೇಗಃ-ಬಹು ವೇಗವುಳ್ಳ, ಸಃ - ಆ, ಮಹಾಕಪಿಃ-ಶೂರನಾದ ಆಂಜನೇಯನು, ಅತ್ಯರ್ಥಂ - ಅಧಿಕವಾಗಿ, ಉಚ್ಛ್ರಿತಂ - ಉದ್ದಕ್ಕೆ ನಿಂತಿರುವ, ತಂ - ಆ ಮೈನಾಕನನ್ನು, ಮಾರುತಃ - ವಾಯುವು, ಜೀಮೂತಮಿವ - ಮೋಡವನ್ನು (ಬೆಟ್ಟವನ್ನು) ಹೇಗೋ ಹಾಗೆ, ಉರಸಾ - ಎದೆಯ ವೇಗದಿಂದ, ಪಾತಯಾಮಾಸ - ಉರುಳಿಸಿದನು ||೧೦೮|| || ತೇನ-ಆ, ಕಪಿನಾ- ಆಂಜನೇಯನಿಂದ, ಪಾತಿತಃ - ಉರುಳಿಸಲ್ಪಟ್ಟ, ಸಃ - ಆ, ಪರ್ವತೋತ್ತಮಃ - ಗಿರಿವರನು, ತದಾ - ಆಗ, ತಸ್ಯ- ಆ, ಕಪೇಃ- ಆಂಜನೇಯನ, ವೇಗಂ - ವೇಗಶಕ್ತಿಯನ್ನು, ಬುದ್ಧ್ವಾ - ಅರಿತು, ಜಹರ್ಷಚ - (ಶರೀರದಲ್ಲಿ ರೋಮಾಂಚದಿಂದ) ಸಂತೋಷ ಪಟ್ಟನು, ನನಂದಚ-ಮನದೊಳಗೂ ಆನಂದಿಸಿದನು ||೧೦೯|| " ಪರ್ವತಃ- ಮೈನಾಕನು, ಆಕಾಶಗತಂ - ಆಕಾಶಗಮನವುಳ್ಳ, ವೀರಂ - ಶೂರನಾದ, ತಂಕಪಿಂ - ಆ ಆಂಜನೇಯನನ್ನು ಕುರಿತು, ಆಕಾಶೇ - ಅಂಬರದಲ್ಲಿಯೇ, ಸಮುಪಸ್ಥಿತಃ - ಹತ್ತಿರಕ್ಕೆ ಹೋದವನಾಗಿ, ಮಾನುಷಂ - ಮನುಷ್ಯರ ಸಂಬಂಧವಾದ, ರೂಪಂ - ಆಕಾರವನ್ನು, ಧಾರಯನ್ - ತಾಳಿದವನಾಗಿ, ಆತ್ಮನಃ - ತನ್ನ, ಶಿಖರೆ, ಕೋಡಿನಲ್ಲಿಯೇ, ಸ್ಥಿತಃ - ನಿಂತವನಾಗಿ, ಪ್ರೀತಃ - (ಆತನ ಸಾಮರ್ಥ್ಯದಿಂದ) ತೃಪ್ತನಾದ ಕಾರಣವೇ-ಹೃಷ್ಟಮನಾಃ - ಸಂತೋಷಪಟ್ಟ ಮನಸ್ಸುಳ್ಳವನಾಗಿ, ವಾಕ್ಯಂ - ಈ ಮುಂದೆ ಹೇಳುವ ಮಾತನ್ನು, ಅಬ್ರವೀತ್ - ಹೇಳಿದನು ||೧೧೦|| ಹೇವಾನರೋತ್ತಮ - ಎಲೈ ವಾನರವೀರನೇ ! ತ್ವಂ-ನೀನು, ದುಷ್ಕರಂ-

ಬೆಟ್ಟವನ್ನು ನೋಡಿ, ಓಹೊ ! ಇದೇನೋ ನನ್ನ ಪಯಣಕ್ಕೆ ಅಡ್ಡಿಯಾಗಿ ಬಂದಿತೆಂದು ನೆನೆದು ||೧೦೭|| || ಕೂಡಲೇ, ಬಹುವೇಗದಿಂದ ಹೋಗುತ್ತಲಿರುವ ಕಪಿ ವೀರನಾದ ಆಂಜನೇಯನು ಕಡಲಿನ ತಳದಿಂದ ಮುಗಿಲಿನ ತುದಿಯವರೆಗೂ ಏಕಾಕಾರವಾಗಿ ಬೆಳೆದು ನಿಂತಿರುವ ಆಬೆಟ್ಟವನ್ನು, ಬಿರುಗಾಳಿಯು ಮೋಡಗಳ ಹಿಂಡನ್ನು ತೂರಿ ಕೆದರುವ ಹಾಗೆ, ಎದೆಯಿಂದ ಹಾಯ್ದು ಉರುಳಿಸತೊಡಗಿದನು ||೧೦೮|| || ಆ ಮಾರುತಿಯ ಎದೆಯ ಹೊಯಿಲಿನಿಂದ ತಲೆಕೆಳಗಾಗುವಂತಾದ ಮೈನಾಕನು,ಆತನ ವೇಗಾತಿಶಯದಿಂದ ಚಮಕಿತನಾದುದಲ್ಲದೆ, ಹೊರಗೆ ರೋಮಾಂಚವನ್ನುತಾಳಿ, ಅಂತರಂಗದಲ್ಲಿ ಆನಂದ ಭರಿತನೂಆದನು || ಆಕಾಶಮಾರ್ಗದಲ್ಲಿ ತಡೆಯಿಲ್ಲದೆ ಹಾಯ್ದು, ಹೊರಟುಬರುತ್ತಲಿರುವ ಮಹಾ ವೀರನಾದ ಆಂಜನೇಯನನ್ನು ಇದಿರ್ಗೊಂಡು, ಸಂತುಷ್ಟಾಂತರಂಗನಾದ ಮೈನಾಕನು ಮಾನುಷ ರೂಪವನ್ನು ತಾಳಿ, ತನ್ನ ಶಿಖರದಲ್ಲಿಯೇ ನಿಂತು ಆತನನ್ನು ಕುರಿತು ಪ್ರೀತಿಪೂರ್ವಕವಾಗಿ ಹೇಳತೆಂದನು ||೧೧೦|| ಎಲೈ ವಾನರ ವೀರನೇ ! ನಿರಾಲಂಬವಾದ ಈ ಗಗನಮಾರ್ಗದಲ್ಲಿ ನೀನು

ದುಷ್ಕರಂ ಕೃತವಾನ್ಕರ್ಮ ತ್ವಮಿದಂ ವಾನರೋತ್ತಮ ।
ನಿಪತ್ಯ ಮಮ ಶೃಂಗೇಷು ವಿಶ್ರಮಸ್ವ ಯಥಾಸುಖಂ ॥೧೧೨॥
ರಾಘವಸ್ಯ ಕುಲೇ ಜಾತೈ ರುದಧಿಃ ಪರಿವರ್ಧಿತಃ ।
ಸ ತ್ವಾಂ ರಾಮಹಿತೇ ಯುಕ್ತಂ ಪ್ರತ್ಯರ್ಚಯತಿ ಸಾಗರಃ ॥೧೧೩॥
ಕೃತೇಚ ಪ್ರತಿಕರ್ತವ್ಯ ಮೇಷ ಧರ್ಮ ಸ್ಸನಾತನಃ ।
ಸೋಽಯಂ ತತ್ಪ್ರತಿಕಾರಾರ್ಥೀ ತ್ವತ್ತ ಸ್ಸಂ ಮಾನ ಮರ್ಹತಿ ॥೧೧೪॥

ಹೆರರು ಮಾಡಲಸದಳವೆನಿಸಿದ, ಇದಂ – ಈ ಆಕಾಶಯಾನರೂಪವಾದ, ಕರ್ಮ – ಕೆಲಸವನ್ನು, ಕೃತವಾನ್ – ಮಾಡುತ್ತಿರುವವನಾಗಿದ್ದೀಯೆ, ಮಮ – ನನ್ನ, ಶೃಂಗೇಷು – ಶಿಖರಗಳಲ್ಲಿ, ನಿಪತ್ಯ – ಉಳಿದುಕೊಂಡು, ಯಥಾಸುಖಂ – ನಿನಗೆ ಸುಖವುಂಟಾಗುವಂತೆ, ವಿಶ್ರಮಸ್ವ – ಬಳಲಿಕೆಯನ್ನು ಪರಿಹರಿಸಿಕೊಳ್ಳು ॥ ೧೧೨ ॥ ರಾಘವಸ್ಯ – ಶ್ರೀರಾಮನ, ಕುಲೆ – ವಂಶದವರಲ್ಲಿ, ಜಾತೈಃ – ಹುಟ್ಟಿದ ಅರಸರಿಂದ, ಉದಧಿಃ – ಸಮುದ್ರನು, ಪರಿವರ್ಧಿತಃ – ಮೇಲ್ಮೆಯನ್ನು ಪಡೆದವನು (ಬೆಳೆಸಲ್ಪಟ್ಟವನು) (ಅತಃ – ಆದಕಾರಣವೇ) ಸಃ – ಆ, ಸಾಗರಃ – ಸಮುದ್ರನು, ರಾಮ – ಶ್ರೀರಾಮನಿಗೆ, ಹಿತೆ – ಹಿತವನ್ನುಂಟುಮಾಡುವ ಕೆಲಸದಲ್ಲಿ, ಯುಕ್ತಂ – ಉದ್ಯುಕ್ತನಾಗಿರುವ, ತ್ವಾಂ – ನಿನ್ನನ್ನು, ಪ್ರತ್ಯರ್ಚಯತಿ – (ಕುಶಲ ಪ್ರಶ್ನಾದಿಗಳಿಂದ) ಪೂಜಿಸುತಲಿದ್ದಾನೆ ॥೧೧೩॥

ಕೃತೇಚ – ಬೇರೊಬ್ಬನು ತನಗೆ ಉಪಕರಿಸಿದಲ್ಲಿ, ಪ್ರತಿಕರ್ತವ್ಯಂ – ತಾನೂ ಅದಕ್ಕೆ ಬದಲಾಗಿ ಉಪಕರಿಸಲೇಬೇಕು, ಏಷಃ – ಹೀಗೆಂಬುದು, ಸನಾತನಃ – ಬಹುಕಾಲದಿಂದ ಬಂದಿರುವ, ಧರ್ಮಃ– ಧರ್ಮವು (ನಡತೆಯು), ಸಃ – ಅಂತಹ ಧರ್ಮತತ್ವವನ್ನು ತಿಳಿದಿರುವ ಅಯಂ – ಈ ಸಮುದ್ರನು, ತತ್ – ತಾನು ಪಡೆದಿದ್ದ ಆ ಉಪಕಾರಕ್ಕೆ, ಪ್ರತ್ಯುಪಕಾರ – ಬದಲಾಗಿ ನಿನಗೆ ಉಪಕಾರವನ್ನು, ಅರ್ಥೀ – ಮಾಡಬೇಕೆಂದು ಬಯಸುತ್ತಿರುವವನಾದಕಾರಣವೇ, ತ್ವತ್ತಃ – (ತಾನುಮಾಡುವ ಸತ್ಕಾರವನ್ನು ಸ್ವೀಕರಿಸುವ) ನಿನ್ನ ದೆಸೆಯಿಂದ, ಸಮ್ಮಾನಂ – ತನ್ನ ಕರ್ತ್ತವ್ಯವನ್ನು (ತಾನು ಮಾಡಿದೆನೆಂಬ ತೃಪ್ತಿರೂಪವಾದ

ಈ ರೀತಿಯಾಗಿ ಹಾರಿ ಬರುತಲಿರುವುದು ಇತರರಿಗೆ ಅಸದಳವೆನಿಸಿದ ಕೆಲಸವಾಗಿದೆ. ಆದುದರಿಂದ ನನ್ನ ಈ ಶಿಖರಗಳಲ್ಲಿ ಸ್ವಲ್ಪಹೊತ್ತುನಿಂತು, ಆಯಾಸವನ್ನು ಪರಿಹರಿಸಿಕೊಂಡು, ನಿನ್ನ ಶರೀರಕ್ಕೂ ಮನಸ್ಸಿಗೂ ಸುಖವಾಗುವಂತೆ ಮಾಡಿಕೊ ॥೧೧೨॥ ನಿಮ್ಮೊಡೆಯನಾದ ಶ್ರೀರಾಮನ ಪೂರ್ವಪುರುಷರಿಂದ ಈ ಸಮುದ್ರನು ಏಳಿಗೆಯನ್ನು ಹೊಂದಿದವನು. ಆದುದರಿಂದಲೇ ಶ್ರೀರಾಮನಿಗೆ ಹಿತವನ್ನು ಬಯಸಿ ಹೊರಟಿರುವ ನಿನಗೆ ಸುಖಾಗಮನವನ್ನು ಬಯಸುತ್ತಾ, ನಿನ್ನನ್ನು ಮನ್ನಿಸುತ್ತಿರುವನು, ಗೌರವಿಸುತಲಿರುವನು, ಆದರಿಸುತಲಿರುವನು ॥೧೧೩॥ ಅಯ್ಯಾ! ನಿಮ್ಮ ಸ್ವಾಮಿಯ ಪೂರ್ವಪುರುಷರೆಸಗಿದ ಉಪಕಾರವು ಬಹು ಪೂರ್ವಕಾಲದಲ್ಲಿ ನಡೆದುದಾದರೂ, ಅದನ್ನು ಮರೆಯದೆ ನೆನಪಿನಲ್ಲಿಟ್ಟಿದ್ದು, ಹುಯ್ಯಿಗೆ ಮುಯ್ಯಿ ಮಾಡತಕ್ಕದು ಬಹು ಪುರಾತನಕಾಲದಿಂದಲೂ ಬಂದ ಸತ್ಕ್ರಮವಾದ ಧರ್ಮವೆಂದು ಭಾವಿಸಿ, ಆ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಬೇಕೆಂದು ಬಯಸುತ್ತಿದ್ದಾನೆ. ಆತನ ಸತ್ಕಾರವನ್ನು ನೀನು ದಯೆಮಾಡಿ ಸ್ವೀಕರಿಸಿದರೆ, ನಿನ್ನಿಂದ ತಾನು ಮನ್ನಣೆಯನ್ನು ಪಡೆದಂತಾಗುವುದು. ಇದೇ ಆತನ ಬಯಕೆ ॥೧೧೪॥ ಎಲೈ ಕಪಿವರ್ಯನೆ! ನಿನ್ನಲ್ಲಿರುವ ಗೌರವ

ತ್ವನ್ನಿಮಿತ್ತ ಮನೇನಾಹಂ ಬಹುಮಾನಾ ತ್ಪ್ರಚೋದಿತಃ ।
ತಿಷ್ಠ ತ್ವಂ ಕಪಿ ಶಾರ್ದೂಲ ಮಯಿ ವಿಶ್ರಮ್ಯ ಗಮ್ಯತಾಂ ॥೧೧೫॥
ಯೋಜನಾನಾಂ ಶತಂ ಚಾಪಿ ಕಥಮೇಷಃ ಸಮಾಪ್ಲುತಃ ।
ತವ ಸಾನುಷು ವಿಶ್ರಾಂತ ಶ್ಶೇಷಂ ಪ್ರಕ್ರಮತಾ ಮಿತಿ ॥೧೧೬॥
ತದಿದಂ ಗಂಧವತ್ಸ್ವಾದು ಕಂದಮೂಲ ಫಲಂ ಬಹು ।
ತದಾಸ್ವಾದ್ಯ ಹರಿಶ್ರೇಷ್ಠ ವಿಶ್ರಾಂತೋ ನು ಗಮಿಷ್ಯಸಿ ॥೧೧೭॥
ಅಸ್ಮಾಕ ಮಪಿ ಸಂಬಂಧಃ ಕಪಿ ಮುಖ್ಯ ತ್ವಯಾಸ್ತಿ ವೈ ।

---

ಬಹುಮಾನವನ್ನು), ಅರ್ಹತಿ - ಪಡೆಯಲು ಯೋಗ್ಯನಾಗಿದ್ದಾನೆ ॥೧೧೪॥ ಏಷಃ - ಈ, ಕಪಿಃ - ಆಂಜನೇಯನು, ಯೋಜನಾನಾಂ - ಗಾವುದಗಳ, ಶತಂಚಾಪಿ - ನೂರನ್ನೂ, ಸಮಾಪ್ಲುತಃ - ಹಾರಿಹೋಗುತ್ತಿರುವನು, ತವ - ನಿನ್ನ, ಸಾನುಷು - ತಪ್ಪಲುಗಳಲ್ಲಿ (ಏರಿಗಳಲ್ಲಿ) ವಿಶ್ರಾಂತಃ - ವಿಶ್ರಮಿಸಿಕೊಂಡವನಾಗಿ, ಶೇಷಂ - ಉಳಿದ ಹಾದಿಯನ್ನು, ಪ್ರಕ್ರಮತಾಂ - ದಾಟಿಹೋಗಲಿ, ಇತಿ - ಹೀಗೆಂದು, ಅನೇನ - ಈ ಸಮುದ್ರನಿಂದ, ತ್ವನ್ನಿಮಿತ್ತಂ - ನಿನಗೋಸ್ಕರವಾಗಿಯೇ, ಬಹುಮಾನಾತ್ - ನಿನ್ನಲ್ಲಿರುವ ಗೌರವಬುದ್ಧಿಯಿಂದ, ಪ್ರಚೋದಿತಃ - ಕಳುಹಿಸಲ್ಪಟ್ಟಿದ್ದೇನೆ. ಹೇಕಪಿಶಾರ್ದೂಲ - ಎಲೈ ಹರಿವರನೇ ! ತ್ವಂ - ನೀನು, ತಿಷ್ಠ - ನಿಲ್ಲು, ಮಯಿ - ನನ್ನಲ್ಲಿ, ವಿಶ್ರಮ್ಯ - ವಿಶ್ರಮಿಸಿಕೊಂಡು, ಗಮ್ಯತಾಂ - ಮುಂದಕ್ಕೆ ಹೋದುವವನಾಗು ॥೧೧೫-೧೧೬॥ ಗಂಧವತ್ - ಗಮಗಮಿಸುತ್ತಿರುವ, ಸ್ವಾದು - ಸವಿಯಾದ, ಕಂದ - ಗೆಡ್ಡೆ, ಮೂಲ - ಬೇರು, ಫಲಂ - ಹಣ್ಣು, ತತ್ - ಅದೆಲ್ಲವೂ, ಬಹು - ಬೇಕಾದಷ್ಟು, ಇದಂ - ಈ ನನ್ನಲ್ಲಿ ಸಿದ್ಧವಾಗಿದೆ, ಹೇ ಹರಿಶ್ರೇಷ್ಠ - ಎಲೈ ಕಪಿವರನೆ, ತತ್ - ಅದನ್ನೆಲ್ಲ, ಆಸ್ವಾದ್ಯ- ಸವಿದು, ವಿಶ್ರಾಂತಃ - ಶ್ರಮರಹಿತನಾಗಿ, ಗಮಿಷ್ಯಸಿನು - ಹೊರಡುವಿಯಂತೆ ? (ಅನುಗಮಿಷ್ಯಸಿ - ಮುಂದಿನ ಪ್ರಯಾಣವನ್ನು ಬೆಳೆಸು ॥೧೧೭॥ (ಕಿಂಚಿತ್ ಮತ್ತು) ಹೇಕಪಿಮುಖ್ಯ - ಎಲೈ ಕಪಿವರ್ಯನೇ ! ತ್ವಯಾ-ನಿನ್ನೊಡನೆ ಅಸ್ಮಾಕಮಪಿ- ನಮಗೂ, ಮಹಾಗುಣ - ಸತ್ಪುರುಷರ, ಪರಿಗ್ರಹಃ - ಅತಿಥಿಭಾವವಸ್ವೀಕಾರವುಳ್ಳ, ತ್ರಿಷುಲೋಕೇಷು-ಮೂರುಲೋಕಗಳಲ್ಲಿಯೂ,ಪ್ರಖ್ಯಾತಃ-ಪ್ರಸಿದ್ಧವಾದ,ಸಂಬಂಧಃ-

---

ಬುದ್ಧಿಯಿಂದ ಲೇ "ಅಯ್ಯಾ ಮೈನಾಕ ! ಇದಕೋ, ಆಂಜನೆಯನು ಆಕಾಶದಲ್ಲಿ ಹೋಗುತಲಿದಾನೆ, ನಿನ್ನ ತಪ್ಪಲಿನಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ತರುವಾಯ ಉಳಿದಿರುವ ಮಾರ್ಗವನ್ನು ದಾಟಿಹೋಗಲಿ" ಎಂದು ನಿನ್ನನ್ನು ಅನುಸರಿಸಿ ಆದರಿಸುವುದಕ್ಕೋಸ್ಕರವೇ ಸಮುದ್ರರಾಜನು ನನ್ನನ್ನು ಪ್ರೇರಿಸಿ ಇದಾನೆ. ಆದಕಾರಣ ನನ್ನಲ್ಲಿ ಸ್ವಲ್ಪಕಾಲ ವಿಶ್ರಮಿಸಿಕೊಂಡಿದ್ದು ಬಳಿಕ ಪ್ರಯಾಣವನ್ನು ಬೆಳೆಸು ॥೧೧೬॥ ಇದಕೋ, ಈ ನನ್ನಲ್ಲಿ ಸುವಾಸನೆಯುಳ್ಳದಾಗಿಯೂ, ಬಹುರುಚಿಯುಳ್ಳುದಾಗಿಯೂ ಇರುವ ಗೆಡ್ಡೆ, ಗೆಣಸು, ಹಣ್ಣು ಹಂಪಲೂ ಸಹ ಬೇಕಾದಷ್ಟು ಸಿದ್ಧವಾಗಿದೆ, ಇಲ್ಲಿ ಇಳಿದು, ಇದನ್ನೆಲ್ಲ ಚೆನ್ನಾಗಿಸವಿದು, ಬಳಲಿಕೆಯನ್ನು ತೀರಿಸಿಗೊಂಡು, ಆ ಮೇಲೆ ಪ್ರಯಾಣಮಾಡುವಿಯಂತೆ ॥೧೧೭॥ ಅಯ್ಯ ಶ್ರೇಷ್ಠನಾದ ಮಾರುತಿ! "ಸಮುದ್ರನೇನೋ ನಿನ್ನನ್ನು ಪ್ರೇರಿಸಿದ, ಅದರಿಂದ ನೀನುನನ್ನನ್ನು ಸತ್ಕರಿಸಲಿಕ್ಕೆ ಬಂದೆ, ಅಷ್ಟೇ ಹೊರತು ನಿನಗೂ ನನಗೂ ಏನೂ ಸಂಬಂಧವಿಲ್ಲ" ಎಂದು ನೆನೆಯ ಬೇಡ, "ಮಹಾತ್ಮರನ್ನು ಪೂಜಿಸುವುದು ಮೂರು ಲೋಕದಲ್ಲಿಯೂ ಮಾನ್ಯವೇ."

ಪ್ರಖ್ಯಾತ ಸ್ತ್ರಿಷು ಲೋಕೇಷು ಮಹಾಗುಣ ಪರಿಗ್ರಹಃ ॥೧೧೮॥
ವೇಗವಂತಃ ಪ್ಲವಂತೋ ಯೇ ಪ್ಲವಗಾ ಮಾರುತಾತ್ಮಜ ।
ತೇಷಾಂ ಮುಖ್ಯತಮಂ ಮನ್ಯೇ ತ್ವಾ ಮಹಂ ಕಪಿ ಕುಂಜರ ॥೧೧೯॥
ಅತಿಥಿಃ ಕಿಲ ಪೂಜಾರ್ಹಃ ಪ್ರಾಕೃತೋಽಪಿ ವಿಜಾನತಾ ।

(ನಿನ್ನಂಥ ಮಹಾತ್ಮನು ಅತಿಥಿಯಾಗಬೇಕಾಗಿಯೂ, ನಮ್ಮಂಥವರು ನಿನ್ನಂತಹವನನ್ನು ಅತಿಥಿಯನ್ನಾಗಿ ಪಡೆಯಬೇಕಾಗಿಯೂ ಇರುವ) ಸಂಬಂಧವು, ಅಸ್ತಿವೈ-ವಾಡಿಕೆಯಾಗಿದೆಯಷ್ಟೆ ? (ರಾಮಾನುಜೀಯ) ಮಹಾಗುಣ-ಸಾಧುಗಳಿಗೆ,ಪರಿಗ್ರಹಃ- (ಬಂದವರನ್ನು ಅತಿಥಿಭಾವದಿಂದ ಪರಿಗ್ರಹಿಸಲ್ಪಡತಕ್ಕುದಾಗಿರುವ) ಸಂಬಂಧಃ-ಸಂಬಂಧವು, ತ್ರಿಷುಲೋಕೇಷು-ಮೂರುಲೋಕಗಳಲ್ಲಿಯೂ, ಪ್ರಖ್ಯಾತಃ ಪ್ರಸಿದ್ಧವಾದುದಾಗಿ, ಅಸ್ತಿವೈ-ಇದೆಯಷ್ಟೆ,(ಗೋವಿಂದರಾಜೀಯ) *ಮಹಾಗುಣ--ವಾಯುವಿನಿಂದ, ಪರಿಗ್ರಹಃ-ಸ್ವೀಕರಿಸಲ್ಪಡತಕ್ಕುದೆಂಬ (ನಿನಗೆ ಸತ್ಕಾರವನ್ನು ಮಾಡಿದರೆ ಅದು ನಿನ್ನ ತಂದೆಯಾದ ವಾಯುವಿಗೂ ಸೇರತಕ್ಕದೆಂಬ) ಸಂಬಂಧಃ ಪ್ರೀತಿಬಂಧವು, ತ್ರಿಷುಲೋಕೇಷು - ಮೂರಜಗದಲ್ಲಿಯೂ, ಪ್ರಖ್ಯಾತಃ-ಹೆಸರುವಾಸಿಯಾಗಿ, ಅಸ್ತಿವೈ -ಇದ್ದೇ ಇದೆ (ಮಹೇಶ್ವರತೀರ್ಥೀಯ) ॥೧೧೮॥ ಹೇಮಾರುತಾತ್ಮಜ - ಎಲೈ ವಾಯುಕುಮಾರನಾದ, ಕಪಿಕುಂಜರ - ಕಪಿಶ್ರೇಷ್ಠನೇ ! ವೇಗವಂತಃ - ವೇಗವುಳ್ಳವರಾಗಿಯೂ, ಪ್ಲವಂತಃ - ಹಾರುವವರಾಗಿಯೂ, ಯೇ - ಯಾವ (ಎಷ್ಟುಮಂದಿ) ಪ್ಲವಗಾಃ - ಕಪಿವೀರರು, (ಸಂತಿ - ಇದ್ದಾರೆಯೋ) ತೇಷಾಂ - ಅವರೊಳಗೆಲ್ಲ, ತ್ವಾಂ - ನಿನ್ನನ್ನು, ಮುಖ್ಯತಮಂ - ಅಗ್ರೇಸರನನ್ನಾಗಿ,ಅಹಂ - ನಾನು, ಮನ್ಯೇ - ತಿಳಿಯುತ್ತೇನೆ ॥೧೧೯॥ (ಕಿಂಚ -ಇಷ್ಟುಮಾತ್ರವೇ ಅಲ್ಲ, ಅಥವಾ:—ಇದೆಲ್ಲವೂ ಹಾಗಿರಲಿ) ಪ್ರಾಕೃತಃ - (ಯಾವ ಯೋಗ್ಯತೆಯೂ ಇಲ್ಲದ) ಸಾಧಾರಣನಾಗಿರುವ, ಅತಿಥಿರಪಿ - ಅಭ್ಯಾಗತನಾಗಿ ಬಂದವನು ಕೂಡ, ಧರ್ಮಂ - ಪುಣ್ಯವನ್ನು, ಜಿಜ್ಞಾಸಮಾನೇನ - ವಿಚಾರಮಾಡುತಲಿರುವ (ಸಂಪಾದಿಸಬೇಕೆಂಬ ಆಶೆಯುಳ್ಳ) ವಿಜಾನತಾ - ತಿಳಿವಳಿಕೆಯುಳ್ಳಪುರುಷನಿಂದ, ಪೂಜಾರ್ಹಃ - ಸತ್ಕಾರ

ಹಾಗೆ ಮೂರುಲೋಕದ ಮಾನ್ಯತೆಗೊಳಗಾದ ಮಾನ್ಯ ಸಂಬಂಧವು ನಿನ್ನೊಡನೆ ನಮಗೂ ಉಂಟು, ಆದುದರಿಂದ ಅನಾದರಿಸಬೇಡ ॥ ೧೧೮ ॥ ಎಲೈ ಕಪಿಕುಲ ಲಲಾಮನೇ! ಈ ಲೋಕದಲ್ಲಿ ಓಡತಕ್ಕವರಾಗಿಯೂ, ಹಾರತಕ್ಕವರಾಗಿಯೂ, ಎಷ್ಟುಮಂದಿ ಕಪಿವೀರರು ಇರುವರೋ, ವಾಯುಪುತ್ರನಾದ ನಿನ್ನನ್ನು ಅವರೊಳಗೆಲ್ಲ ಮೊದಲನೆಯವನನ್ನಾಗಿ ನಾನುತಿಳಿಯುತ್ತೇನೆ. ॥೧೧೯॥ ಇದೆಲ್ಲವೂ ಹಾಗಿರಲಿ, ಒಂದು ತಿಥಿಯಲ್ಲಿ ಪೂರ್ತಿಯಾಗಿ ಒಂದು ಸ್ಥಳದಲ್ಲಿ ನಿಲ್ಲದೆ ಸದುದ್ದೇಶವಿಂದ ಪ್ರಯಾಣಮಾಡುತ್ತಿರುವವನನ್ನು 'ಅತಿಥಿ, ಎಂದು ಪ್ರಾಜ್ಞರು ಹೇಳುತ್ತಾರೆ. ಅಂತಹ ಅತಿಥಿಯು,ಕುಲಗೋತ್ರಗಳು ತಿಳಿಯದು ಬರದ

* ಮಹಾನ್ತಃ ಗುಣಾಃ ಯೇಷಾಂತೇ-ಮಹಾಗುಣಾಃ-ಸತ್ಪುರುಷಾಃ, ಶಮದಮಾದಿ ಸುಗುಣ ಸಂಪನ್ನರಾದ ಸಾಧುಗಳು. ಅಥವಾ- ಮಹಾನ್, ಗುಣಃ ಸ್ಪರ್ಶರೂಪಃ ಯಸ್ಯಸಃ - ವಾಯುಃ (ರೂಪ ರಹಿತ ಸ್ಪರ್ಶವಾನ್ ವಾಯುಃ - ರೂಪವಿಲ್ಲದೆ ಸ್ಪರ್ಶರೂಪವಾದ ಗುಣವುಳ್ಳೊಣವೇ ವಾಯುವಿಗೆ ಲಕ್ಷಣ ಎಂದು ತರ್ಕಶಾಸ್ತ್ರ) ನೀನು ಸಾಧುವಾದ ಅತಿಥಿಯಾಗಿಯೂ, ನಿನ್ನಂಥ ಅತಿಥಿಯನ್ನು ಪಡೆದುದರಿಂದ ನಾನು ಅತಿಥಿವಂತನಾಗಿಯೂ ಆಗುವ ಸಂಬಂಧ.

ಧರ್ಮಂ ಜಿಜ್ಞಾಸಮಾನೇನ ಕಿಂ ಪುನ ಸ್ತ್ವಾದೃಶೋ ಮಹಾನ್ ||೧೨೦||
ತ್ವಂ ಹಿ ದೇವ ವರಿಷ್ಠಸ್ಯ ಮಾರುತಸ್ಯ ಮಹಾತ್ಮನಃ |
ಪುತ್ರ ಸ್ತಸ್ಯೈವ ವೇಗೇನ ಸದೃಶಃ ಕಪಿ ಕುಂಜರ ||೧೨೧||
ಪೂಜಿತೇ ತ್ವಯಿ ಧರ್ಮಜ್ಞ ಪೂಜಾಂ ಪ್ರಾಪ್ನೋತಿ ಮಾರುತಃ |
ತಸ್ಮಾ ತ್ತ್ವಂ ಪೂಜನೀಯೋ ಮೆ ಶೃಣು ಚಾಪ್ಯತ್ರ ಕಾರಣಂ ||೧೨೨||
ಪೂರ್ವಂ ಕೃತಯುಗೆ ತಾತ ಪರ್ವತಾಃ ಪಕ್ಷಿಣೋ ಽಭವನ್ |

ಪಾತ್ರನು, (ಪೂಜಿಸಲ್ಪಡತಕ್ಕವನು) (ಏವಂಸತಿ-ಹೀಗಿರಲಾಗಿ) ಮಹಾನ್-ಮಹಾತ್ಮನಾದ, ತ್ವಾದೃಶಃ-ನಿನ್ನಂಥವನು, ಕಿಂಪುನಃ ಹೇಳಬೇಕಾದುದೇನು (ಪೂಜ್ಯನಾಗದೆ ಹೋಗುವುದುಂಟೆ ? ) ||೧೨೦||( ನನ್ನಲ್ಲಿ ಅಂತಹ ಮಹತ್ವವೇನಿರುವುದು ಎಂಬೆಯೋ ? ) ಹೇ ಕಪಿಕುಂಜರ - ಎಲೈ ವಾನರೋತ್ತಮನೇ ! ತ್ವಂ - ನೀನು, ದೇವವರಿಷ್ಠಸ್ಯ - ದೇವತೆಗಳಲ್ಲಿ ಅಗ್ರಗಣ್ಯನೆನಿಸಿದ, ಮಹಾತ್ಮನಃ - ಮಹಾನುಭಾವನಾದ, ಮಾರುತಸ್ಯ - ವಾಯುದೇವನಿಗೆ, ಪುತ್ರೋಹಿ - ತನಯನಲ್ಲವೆ ? ವೇಗೇನ - ವೇಗದಿಂದಲೂ, ತಸ್ಯೈವ - ಆತನಿಗೇ, ಸದೃಶಃ - ಸಮಾನನಾಗಿದ್ದೀಯೆ ||೧೨೧|| ಧರ್ಮಜ್ಞ - ಎಲೈ ನ್ಯಾಯವನ್ನು ಬಲ್ಲವನೇ ! ತ್ವಯಿ - ನೀನು, ಪೂಜಿತೇಸತಿ - ಸತ್ಕರಿಸಲ್ಪಡುತ್ತಿರಲು, ಮಾರುತಃ - ನಿಮ್ಮ ತಂದೆಯಾದ ವಾಯುವು, ಪೂಜಾಂ - ಸತ್ಕಾರವನ್ನು, ಪ್ರಾಪ್ನೋತಿ - ಪಡೆದವನಾಗುತ್ತಾನೆ, [ತಸ್ಮಾತ್ - ಆದುದರಿಂದಲೇ, ತ್ವಂ - ನೀನು, ಮೇ - ನನಗೆ, ಪೂಜನೀಯಃ - ಪೂಜ್ಯನಾಗಿದ್ದೀಯೆ, ಅತ್ರ - ಈ ವಿಷಯದಲ್ಲಿ. ಕಾರಣಂಚ - ಬೇರೆ ನಿಮಿತ್ತವನ್ನೂ, ಶೃಣು - ಕೇಳು ||೧೨೨|| ತಾತ - ಒತಂದೆಯೇ !, ಪೂರ್ವಂ - ಪೂರ್ವಕಾಲದಲ್ಲಿ, ಕೃತಯುಗೆ - ಕೃತಯುಗದೊಳಗೆ, ಪರ್ವತಾಃ - ಬೆಟ್ಟಗಳು, ಪಕ್ಷಿಣಃ - ರೆಕ್ಕೆಗಳುಳ್ಳವುಗಳಾಗಿ, ಅಭವನ್ - ಇದ್ದುವು, ತೆ - ಆ ಬೆಟ್ಟಗಳು, ಗರುಡ - ಗರುತ್ಮಂತನ, ಅನಿಲ - ವಾಯುವಿನ, ವೇಗಿನಃ - ವೇಗದಂತೆ ವೇಗವುಳ್ಳವುಗಳಾಗಿ, ಸರ್ವಾಃ - ಸಮಸ್ತವಾದ, ದಿಶಃ -

ಯಾವನೋ ಒಬ್ಬಯಃ ಕಶ್ಚಿತ್ತೇ ಆಗಿದ್ದರೂ ಅಂಥವನನ್ನು, ಧರ್ಮದ ತತ್ವವನ್ನು ಅರಿಯಬೇಕೆಂದಿರುವವನೂ, ಧರ್ಮದ ರಹಸ್ಯವನ್ನು ಅರಿತವನೂ, ಧರ್ಮವನ್ನು ಸಂಪಾದಿಸ ಬೇಕೆಂದಿರುವವನೂ ಸಹ ಅವಶ್ಯಕವಾಗಿ ಪೂಜಿಸಲೇಬೇಕು. ಹೀಗಿರುವಲ್ಲಿ ಕಪಿವೀರಾಗ್ರೇಸರನೆನಿಸಿ,ವಾಯುಪುತ್ರನೂ ಆಗಿ,ಶ್ರೀರಾಮಚಂದ್ರನಿಗೆ ದೂತನಾಗಿಯೂ ಬಂದಿರುವನಿನ್ನಂತಹ ಮಹಾತ್ಮನನ್ನು ಪೂಜಿಸಬೇಕೆಂಬ ವಿಷಯದಲ್ಲಿ ಹೇಳಬೇಕಾದುದೇನು ? ||೧೨೦|| ಎಲೈ ವಾಯುನಂದನಾ ! ನೀನೇನು ಸಾಮಾನ್ಯನೆ ? ಲೋಕಕ್ಕೆಲ್ಲ ಜೀವನ ವೆನಿಸಿ, ದೇವತೆಗಳಲ್ಲಿ ಅಗ್ರಗಣ್ಯನಾಗಿರುವ ಮಹಾನುಭಾವನಾದ ಮಾರುತನ ಪ್ರಿಯಪುತ್ರನೆನಿಸಿದ ಮಾರುತಿಯಲ್ಲವೆ ? ಕಪಿವರನಾದ ಆ ನೀನು ವೇಗದಲ್ಲಿ ಆ ತಂದೆಗೆ ಸಮನೆನಿಸಿಯೇ ಇದ್ದೀಯೆ, ಧರ್ಮದ ರಹಸ್ಯವನ್ನರಿತಿರುವ ಎಲೈ ಮಹಾತ್ಮನೆ! ನಿನ್ನನ್ನು ನಾನು ಪೂಜಿಸಿದರೆ ವಾಯುದೇವನು ತನ್ನನ್ನೇ ಪೂಜಿಸಿದಂತೆ ಭಾವಿಸುವನು ಆದಕಾರಣ ನೀನು ನನಗೆ ಪೂಜ್ಯನಯ್ಯಾ. ಈಸಂದರ್ಭದಲ್ಲಿ ಇತಿಹಾಸರೂಪವಾಗಿರುವ ಮತ್ತೊಂದು ಕಾರಣವನ್ನು ತಿಳಿಸುತ್ತೇನೆಕೇಳು || ಅಪ್ಪಾ ಮಗೂ ! ಪೂರ್ವದಲ್ಲಿ ಕೃತಯುಗದೊಳಗೆ, ಬೆಟ್ಟಗಳೆಲ್ಲವೂ ರೆಕ್ಕೆಗಳನ್ನೊಳಗೊಂಡು ಹಾರಾಡುವ ಹಕ್ಕಿಗಳಂತಿದ್ದುವು. ಆಗ ಅವು, ಗರುಡನ ಮತ್ತು ವಾಯುವಿನ

ತೇ ಹಿ ಜಗ್ಮುರ್ದಿಶಃ ಸ್ಸರ್ವಾಃ ಗರುಡಾನಿಲ ವೇಗಿನಃ ॥೧೨೩॥
ತತ ಸ್ತೇಷು ಪ್ರಯಾತೇಷು ದೇವಸಂಘಾ ಸ್ಸಹರ್ಷಯಃ ।
ಭೂತಾನಿ ಚ ಭಯಂ ಜಗ್ಮು ಸ್ತೇಷಾಂ ಪತನ ಶಂಕಯಾ ॥೧೨೪॥
ತತಃ ಕ್ರುದ್ಧ ಸ್ಸಹಸ್ರಾಕ್ಷಃ ಪರ್ವತಾನಾಂ ಶತಕ್ರತುಃ ।
ಪಕ್ಷಾಂ ಶ್ಚಿಚ್ಛೇದ ವಜ್ರೇಣ ತತ್ರ ತತ್ರ ಸಹಸ್ರಶಃ ॥೧೨೫॥
ಸ ಮಾ ಮುಪ ಗತಃ ಕ್ರುದ್ಧೋ ವಜ್ರ ಮುದ್ಯಮ್ಯ ದೇವರಾಟ್ ।
ತತೋಽಹಂ ಸಹಸಾ ಕ್ಷಿಪ್ತಃ ಶ್ವಸನೇನ ಮಹಾತ್ಮನಾ ॥೧೨೬॥
ಅಸ್ಮಿನ್ ಲವಣ ತೋಯೇ ಚ ಪ್ರಕ್ಷಿಪ್ತಃ ಪ್ಲವಗೋತ್ತಮ ।

---

ದಿಕ್ಕುಗಳನ್ನು ಕುರಿತು, ಅಭಿಜಗ್ಮುಃ - ಪ್ರಯಾಣಮಾಡ ತೊಡಗಿದುವು, ॥೧೨೩॥ ತತಃ-ಅನಂತರದಲ್ಲಿ, ತೇಷು - ಆ ಬೆಟ್ಟಗಳು, ಪ್ರಯಾತೇಷು (ಸತ್ಸು) - ಪ್ರಯಾಣಮಾಡುತ್ತಿರಲಾಗಿ, ದೇವಸಂಘಾಃ - ದೇವಸಮೂಹದವರು, ಸಹರ್ಷಯಃ - ಮಹರ್ಷಿಗಳೊಡನೆ, ಭೂತಾನಿಚ - ಸಮಸ್ತಪ್ರಾಣಿಗಳೂ, ತೇಷಾಂ - ಆಬೆಟ್ಟಗಳ, ಪತನಶಂಕಯಾ - ತಮ್ಮ ತಲೆಯಮೇಲೆ ಬೀಳುವುವೆಂಬ ಊಹೆಯಿಂದ, ಭಯಂ - ಭೀತಿಯನ್ನು, ಜಗ್ಮುಃ - ಹೊಂದಿದುವು ॥೧೨೪॥ ತತಃ - ಆ ಮೇಲೆ, ಶತಕ್ರತುಃ - ನೂರು ಯಾಗಗಳನ್ನು ಮಾಡಿರುವನಾಗಿ, (ಬಹುಕೋಪದ ಸ್ವಭಾವವುಳ್ಳ) ಸಹಸ್ರಾಕ್ಷಃ - ಸಾವಿರ ಕಣ್ಣುಳ್ಳ ಇಂದ್ರನು, ಕ್ರುದ್ಧಃ- ಸಿಟ್ಟುಗೊಂಡವನಾಗಿ, ಪರ್ವತಾನಾಂ - ಆಬೆಟ್ಟಗಳ, ಪಕ್ಷಾನ್ - ರೆಕ್ಕೆಗಳನ್ನು, ತತ್ರ ತತ್ರ - ಅಲ್ಲಲ್ಲಿ (ಸಿಕ್ಕಿದ ಕಡೆಯಲ್ಲೆಲ್ಲ) ವಜ್ರೇಣ - ತನ್ನ ವಜ್ರಾಯುಧದಿಂದ, ಸಹಸ್ರಶಃ - ಸಾವಿರಾರು ತುಂಡುಗಳಾಗಿ ಚಿಚ್ಛೇದ - ಕತ್ತರಿಸಿದನು, ॥೧೨೫॥ ಸಃ - ಆ (ಅತಿಕೋಪಗಾಗಿ ಸಿಟ್ಟುಗೊಂಡಿದ್ದ) ದೇವರಾಟ್ - ದೇವರಾಜನು, ವಜ್ರಂ - ವಜ್ರಾಯುಧವನ್ನು ಉದ್ಯಮ್ಯ ಎತ್ತಿಹಿಡಿದು, ಮಾಂ - ನನ್ನನ್ನು, ಉಪಗತಃ - ಅಟ್ಟಿಕೊಂಡು ಬಂದನು, ತತಃ - ತರುವಾಯ, ಅಹಂ - ನಾನು, ಮಹಾತ್ಮನಾ - ಮಹಾನುಭಾವನಾದ, ಶ್ವಸನೇನ - ನಿಮ್ಮ ತಂದೆಯಾದ ವಾಯುವಿನಿಂದ, ಸಹಸಾ - ವೇಗದಿಂದ, ಕ್ಷಿಪ್ತಃ - ಬೀಸಿ ಎಸೆಯಲ್ಪಟ್ಟೆನು ॥೧೨೬॥ ಪ್ಲವಗೋತ್ತಮ - ಎಲೈ ವಾನರೋತ್ತಮನೇ !, ಅಸ್ಮಿನ್ - ಈ, ಲವಣತೋಯೇ - ಉಪ್ಪಿನಕಡಲಿನಲ್ಲಿ, ಪ್ರಕ್ಷಿಪ್ತಃ - ಮುಳುಗಿದವನಾಗಿ, ಗುಪ್ತ - ಕಾಪಾಡಿಕೊಳ್ಳಲ್ಪಟ್ಟ, ಪಕ್ಷಃ -

---

ವೇಗದಂತೆ ವೇಗವುಳ್ಳವುಗಳಾಗಿ ಎಲ್ಲ ದೆಸೆಗಳಲ್ಲಿಯೂ ಹಾರಾಡಲಿಕ್ಕೆ ಹೊರಟವು ॥೧೨೩॥ ಆಮೇಲೆ ಏನಾಯಿತು ಬಲ್ಲೆಯ ? ಅವೆಲ್ಲ ಹಾರಿ ಹೋಗುವಲ್ಲಿ, ತಮ್ಮ ತಲೆಗಳ ಮೇಲೆ ಎಲ್ಲಿ ಬೀಳುತವೆಯೋ ಎಂಬ ಸಂಶಯದಿಂದ ದೇವಸಮೂಹದವರೂ, ಮುನಿಗಳೂ, ಮನುಷ್ಯಾದಿಗಳೂ ಸಹ ಹೆದರಿದರು ॥೧೨೪॥ ಬಳಿಕ ಇದನ್ನರಿತು ಶತಮನ್ಯುವೆನಿಸಿದ ದೇವೇಂದ್ರನು- ಬಲು ಸಿಟ್ಟುಗೊಂಡು, ಆ ಪರ್ವತಗಳ ರೆಕ್ಕೆಗಳನ್ನೆಲ್ಲ, ತನ್ನ ವಜ್ರಾಯುಧದಿಂದ ಸಾವಿರಾರು ಬಗೆಯಾಗಿ ತುಂಡುತುಂಡಾಗುವಂತೆ ಅಲ್ಲಲ್ಲಿ ಕತ್ತರಿಸುತ ಬಂದನು ॥೧೨೫॥ ಅಗೋ, ಆಗಲೇ ಆ ದೇವರಾಜನು ವಜ್ರಾಯುಧವನ್ನು ಎತ್ತಿಹಿಡಿದು ಸಿಟ್ಟಿನಿಂದ ನನ್ನನ್ನೂ ಅಟ್ಟಿಕೊಂಡು ಬಂದನು,ಆಮೇಲೆ ಮಹಾರಾಯನಾದ ನಿಮ್ಮತಂದೆಯು ತನ್ನ ವೇಗದಿಂದ ನನ್ನನ್ನು ತಂದು ಎಸೆದನು ॥೧೨೬॥ ಓ ಪ್ಲವಂಗಪುಂಗವನಾದ ಮಾರುತೀ ! ಎಲ್ಲಿಗೆ ಎಸೆದನು ಬಲ್ಲೆಯ ? ಇಗೋ ಈ ಉಪ್ಪಿನಕಡಲಿನಲ್ಲಿ ಮುಳುಗುವಂತೆ ಇಟ್ಟನು. ಪ್ರಾಣಗಳೊಡನೆ

ಗುಪ್ತಪಕ್ಷ ಸ್ಸಮಗ್ರಾಙ್ಗ ಸ್ತವ ಪಿತ್ರಾಽಭಿರಕ್ಷಿತಃ ॥೧೨೭॥
ತತೋಽಹಂ ಮಾನಯಾಮಿ ತ್ವಾಂ ಮಾನ್ಯೋ ಹಿ ಮಮ ಮಾರುತಃ ।
ತ್ವಯಾ ಮೇ ಹ್ಯೇಷ ಸಂಬಂಧಃ ಕಪಿ ಮುಖ್ಯ ಮಹಾಗುಣಃ॥೧೨೮॥
ಅಸ್ಮಿನ್ನೇವಂ ಗತೇ ಕಾರ್ಯೇ ಸಾಗರಸ್ಯ ಮಮೈವಚ ।
ಪ್ರೀತಿಂ ಪ್ರೀತಮನಾಃ ಕರ್ತುಂ ತ್ವಮರ್ಹಸಿ ಮಹಾಕಪೇ ॥೧೨೯॥
ಶ್ರಮಂ ಮೋಕ್ಷಯ ಪೂಜಾಂ ಚ ಗೃಹಾಣ ಕಪಿ ಸತ್ತಮ।
ಪ್ರೀತಿಂ ಚ ಬಹುಮನ್ಯಸ್ವ ಪ್ರೀತೋಽಸ್ಮಿ ತವ ದರ್ಶನಾತ್ ॥೧೩೦॥

ರೆಕ್ಕೆಗಳುಳ್ಳವನಾಗಿಯೂ, ಸಮಗ್ರಾಙ್ಗ - ಅಂಗಹೀನನಾಗದೆಯೂ, ತವ-ನಿನ್ನ, ಪಿತ್ರಾ - ತಂದೆಯಿಂದ, ಅಭಿರಕ್ಷಿತಃ - ಸಂಪೂರ್ಣವಾಗಿ ಸಂರಕ್ಷಿಸಲ್ಪಟ್ಟೆನು, ॥೧೨೭॥ ತತಃ - ಆ ಕಾರಣದಿಂದಲೂ, ಅಹಂ - ನಾನು, ತ್ವಾಂ - ನಿನ್ನನ್ನು, ಮಾನಯಾಮಿ - ಪೂಜಿಸುತಲಿದೇನೆ, ಮಮ - ನನಗೆ, ಮಾರುತಃ - ವಾಯುವು, ಮಾನ್ಯೋಹಿ - ಪೂಜ್ಯನಲ್ಲವೆ ?, ಕಪಿಮುಖ್ಯ - ಓವಾನರೋತ್ತಮಾ ! , ತ್ವಯಾ - ನಿನ್ನೊಡನೆ, ಮೇ - ನನಗೆ, ಏಷಃ - ಈ ಪಿನವಾದ, ಸಂಬಂಧಃ -ಸ್ನೇಹ ಸಂಬಂಧವು, ಮಹಾಗುಣೋಹಿ - ಶ್ಲಾಘ್ಯವಾದ ಗುಣವುಳ್ಳುದಲ್ಲವೆ ? ॥೧೨೮॥ ಮಹಾ ಕಪೇ - ಎಲೈ ಆಂಜನೇಯನೇ, !, ಅಸ್ಮಿನ್ - ಈ, ಕಾರ್ಯೇ- ನಿನ್ನನ್ನು ಸತ್ಕರಿಸುವ ಕಾರ್ಯವು, ಏವಂ - ಈ ಪ್ರಕಾರವಾಗಿ, ಗತೇ (ಸತಿ) ಹೊಂದಿಕೆಯುಳ್ಳುದಾಗುತ್ತಿರಲಾಗಿ, ತ್ವಂ - ನೀನು, ಪ್ರೀತಮನಾಃ - ಸಂತೋಷಿಸುವ ಮನಸ್ಸುಳ್ಳವನಾಗಿ, ಸಾಗರಸ್ಯ - ಸಮುದ್ರನ, ಮಮೈವಚ - ಮತ್ತು ನನ್ನ, ಪ್ರೀತಿಂ - ಸಂತೋಷವನ್ನು (ಮಮತೆಯನ್ನು) ಕರ್ತುಂ - ನೆರವೇರಿಸಲಿಕ್ಕೆ (ಪೂರ್ತಿಮಾಡಲಿಕ್ಕೆ) ಅರ್ಹಸಿ - ತಕ್ಕವನಾಗಿದ್ದೀಯೆ ॥೧೨೯॥ ಕಪಿಸತ್ತಮ - ಎಲೈ ಸಾಧುವಾದ ಆಂಜನೇಯನೇ !, ಶ್ರಮಂ - (ದಾರಿಯನ್ನು ದಾಟಿಬಂದ) ಬಳಲಿಕೆಯನ್ನು, ಮೋಕ್ಷಯ - ಪರಿಹರಿಸಿಕೊ, ಪೂಜಾಂಚ - ನಾನುಮಾಡುವ ಸತ್ಕಾರವನ್ನು, ಗೃಹಾಣ - ಸ್ವೀಕರಿಸು, ಪ್ರೀತಿಂಚ - ನಮ್ಮ ಸ್ನೇಹವನ್ನು, ಬಹುಮನ್ಯಸ್ವ - ಸಮ್ಮಾನಿಸು, ತವ - ನಿನ್ನಯ, ದರ್ಶನಾತ್ - ದರ್ಶನದದೆಶೆಯಿಂದ, ಪ್ರೀತಃ - ಸಂತೋಷಿಸಿದವನಾಗಿ, ಅಸ್ಮಿ - ಇದೇನೆ ॥೧೩೦॥

ರೆಕ್ಕೆಗಳನ್ನೂ ಕಾಪಾಡಿಕೊಂಡು ಉಳಿಯುವ ಹಾಗೆ ನಿಮ್ಮಪ್ಪನು ನನ್ನನ್ನು ಸಂರಕ್ಷಿಸಿದನು, ಹೀಗೆ ರಕ್ಷಿಸಿದುದು ನಿಮ್ಮ ತಂದೆಯ ಮಹಾಗುಣವಲ್ಲವೆ ? ॥೧೨೭॥ ಈ ಕಾರಣದಿಂದಲೂ ನಿನ್ನನ್ನು ನಾನು ಬಹುಮಾನಿಸುವೆನು. ನಿಮ್ಮ ತಂದೆಯಾದ ವಾಯುವು ನನಗೆ ಮಾನ್ಯನಲ್ಲವೆ ? ಎಲೈ ಕಪಿಪ್ರವರನೇ! ಹೀಗೆ ನಿಮ್ಮಯ್ಯನೂ, ನೀನೂ ನನಗೆ ಪೂಜ್ಯರೆನಿಸಿ, ನಾನು ಪೂಜ್ಯಕನಾಗಿಯೂ ಇರುವ ನಮ್ಮ ಈ ಸಂಬಂಧವು ಮಹತ್ತರವಾದ ಗುಣವುಳ್ಳುದಲ್ಲವೆ ? ॥೧೨೮॥ ಎಲೈ ಮಹಾತ್ಮನಾದ ಆಂಜನೇಯಾ! ಈ ನನ್ನಯ ಸತ್ಕಾರರೂಪವಾದ ಕಾರ್ಯಸಂದರ್ಭವು ಈವಿಧವಾದ ಹೊಂದಿಕೆಯನ್ನೊಳಗೊಂಡಿರುವಲ್ಲಿ, ನೀನು ಪ್ರೀತಿಪೂರ್ವಕವಾದ ಮನಸ್ಸಿನಿಂದೊಡಗೂಡಿ, ನನ್ನ ಮತ್ತು ಸಮುದ್ರನ ಪ್ರೀತಿಯನ್ನು ನೆರವೇರಿಸತಕ್ಕವನಾಗಿದ್ದೀಯೆ. ॥೧೨೯॥ ಓ ವಾನರೋತ್ತಮಾ ! ನಿನ್ನ ದರ್ಶನಮಾತ್ರದಿಂದ ನಾನು ಬಹು ಸಂತುಷ್ಟನಾಗಿದೇನೆ, ಈ ನನ್ನ ಶಿಖರದಲ್ಲಿ ಇಳಿದು, ನಿನಗೆ ಉಂಟಾಗಿರುವ ಮಾರ್ಗಾಯಾಸವನ್ನು ಪರಿಹರಿಸಿಕೊ, ನಮ್ಮ ಅತಿಥಿ ಸತ್ಕಾರವನ್ನು ಪರಿಗ್ರಹಿಸು, ನಮ್ಮ ಮನಃಪೂರ್ವ

ಏವ ಮುಕ್ತಃ ಕಪಿ ಶ್ರೇಷ್ಠ ಸ್ತಂ ನಗೋತ್ತಮ ಮಬ್ರವೀತ್ ।
ಪ್ರೀತೋಽಸ್ಮಿ ಕೃತ ಮಾತಿಥ್ಯಂ ಮನ್ಯುರೇಷೋಽಪ ನೀಯತಾಂ॥೧೩೧॥
ತ್ವರತೇ ಕಾರ್ಯಕಾಲೋ ಮೇ ಅಹಶ್ಚಾ ಪ್ಯತಿ ವರ್ತತೇ।
ಪ್ರತಿಜ್ಞಾ ಚ ಮಯಾ ದತ್ತಾ ನ ಸ್ಥಾತವ್ಯ ಮಿಹಾಂತರೇ ॥೧೩೨॥
ಇತ್ಯುಕ್ತ್ವಾ ಪಾಣಿನಾ ಶೈಲ ಮಾಲಭ್ಯ ಹರಿಪುಂಗವಃ ।

ಏವಂ - ಈ ಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟ, ಕಪಿಶ್ರೇಷ್ಠಃ - ವಾನರೋತ್ತಮನಾದ ಆಂಜನೇಯನು, ತಂ - ಆ, ನಗೋತ್ತಮಂ - (ಪರ್ವತ ರಾಜನಾದ) ಮೈನಾಕನನ್ನು ಕುರಿತು, ಅಬ್ರವೀತ್ - ಹೀಗೆ ಹೇಳಿದನು, (ಹೇನಗೋತ್ತಮ - ಎಲೈ ಪರ್ವತ ರಾಜನೇ,) ಆತಿಥ್ಯಂ - ಅತಿಥಿ ಸತ್ಕಾರವು, ಕೃತಂ - ನಿನ್ನಿಂದಮಾಡಲ್ಪಟ್ಟಿತು, ಏಷಃ-ಈ, (ನನ್ನ ಅತಿಕ್ರಮದಿಂದುಂಟಾದ) ಮನ್ಯುಃ-ಕೋಪವು, ಅಪನೀಯತಾಂ - ಪರಿಹರಿಸಲ್ಪಡಲಿ, ॥೧೩೧॥ ಮೇ - ನನಗೆ, ಕಾರ್ಯ - ಕೈಗೊಂಡಿರುವ ಕಾರ್ಯದ, (ಸೀತೆಯನ್ನು ಹುಡುಕುವ ಕೆಲಸದ) ಕಾಲಃ - ಸಮಯವು, ತ್ವರತೇ - ನನ್ನನ್ನು ತೊಂದರೆ ಪಡಿಸುತಲಿದೆ, ಅಹಶ್ಚಾಪಿ - ಹಗಲೂಕೂಡ, ಅತಿವರ್ತತೆ - ಕಳೆದು ಹೋಗುತಲಿದೆ, ಇಹಅಂತರೆ - ದಾಟುತ್ತಿರುವ ಈ ಸಮುದ್ರ ಮಧ್ಯದಲ್ಲಿ, ನಸ್ಥಾತವ್ಯಂ-ನಾನು ಇರಕೂಡದು, (ನಿಲ್ಲಕೂಡದು) ಮಯಾ-ನನ್ನಿಂದ, ಪ್ರತಿಜ್ಞಾಚ - ಶಪಥವೂ, (ತಥೈವ - ಹಾಗೆಯೇ) ದತ್ತಾ - (ಜಾಂಬವಾದಿಗಳ ಬಳಿಯಲ್ಲಿ) ಹೇಳಲ್ಪಟ್ಟಿದೆ ॥೧೩೨॥ ವೀರ್ಯವಾನ್ - ಮಹಾ ಪರಾಕ್ರಮಶಾಲಿಯಾಗಿರುವ, ಹರಿಪುಂಗವಃ - ಕಪಿಪ್ರವರನಾದ ಹನುಮನು, ಪ್ರಹಸನ್ನಿವ - ಪ್ರಸನ್ನಮುಖನಾಗಿ, ಇತಿ - ಈಮೇಲೆ ಹೇಳಿದಂತೆ, ಉಕ್ತ್ವಾ - ಹೇಳಿ, ಶೈಲಂ - ಮೈನಾಕಪರ್ವತವನ್ನು, ಪಾಣಿನಾ - ತನ್ನ ಕರತಲದಿಂದ, ಆಲಭ್ಯ - ಊರಿಹಿಡಿದು, ಆಕಾಶಂ-ಅಂಬರವನ್ನು ಕುರಿತು, ಆವಿಶ್ಯ-ಹೊಗುತ್ತ, ಜಗಾಮ-ಪ್ರಯಾಣ ಮಾಡತೊಡಗಿದನು ॥೧೩೩॥

ಕವಾದ ಪ್ರೀತಿಯನ್ನು ಗೌರವಿಸು ॥೧೩೦॥ ಎಂದು ಈಪ್ರಕಾರ ಹೇಳಿದ ಮೈನಾಕನ ಪ್ರೀತಿವಚನವನ್ನಾಲಿಸಿದ ಆ ಆಂಜನೇಯನು ಬಹು ಸಂತೋಷದಿಂದ ಆತನೊಡನೆ ಇಂತೆಂದನು:—ಎಲೈ ಮೈನಾಕನೇ ! ನಿನ್ನ ಹೃದಯಂಗಮವಾದ ನುಡಿಗಳಿಗೆ ನಾನು ಬಹಳವಾಗಿ, ಸಂತೋಷಿಸುತಲಿದೇನೆ. ನಿನ್ನಯ ಅತಿಥಿಸತ್ಕಾರವನ್ನು ಕೈಗೊಂಡೆನೆಂದೇತಿಳಿ. ನಾನು ಅರಿಯದೆ ನಿನ್ನ ವಿಷಯದಲ್ಲಿ ಆಚರಿಸಿದ ಅತಿಕ್ರಮವನ್ನು ಮನ್ನಿಸು, ಕೋಪವನ್ನು ತೊರೆ. ನನ್ನಲ್ಲಿ ಕ್ರೋಧವನ್ನೆಣಿಸಬೇಡ, ಖಂಡಿತವಾಗಿಯೂ ಶಾಂತನಾಗು, ಲಂಕೆಗೆ ಹೋಗಬೇಕೆಂದು ಕೈಗೊಂಡಿರುವ ಕೆಲಸವು ನನ್ನನ್ನು ಬಹುವಾಗಿ ತ್ವರೆಪಡಿಸುತಲಿದೆ, ಈ ಹಗಲೂ ಕಳೆಯುತಬಂತು, ಹೊತ್ತು ಮುಳುಗುವುದಕ್ಕಿಂತ ಮುಂಚೆಯೇ ನಾನು ಅಲ್ಲಿಗೆ ಹೋಗಿ ಸೇರಬೇಕು. ಇದೂ ಅಲ್ಲದೆ ಈ ಕಡಲನ್ನು ದಾಟುವಾಗ ನಡುವೆ ತಡಮಾಡುವುದಿಲ್ಲವೆಂದು ಮೊದಲೇ ನಾನು ಪ್ರತಿಜ್ಞೆಯನ್ನೂ ಮಾಡಿದೇನೆ, ಆ ಶಪಥವನ್ನ ತಪ್ಪಿ ಈ ಮಧ್ಯೆ ನಾನು ಉಳಿಯಲಾರೆ, ಕ್ಷಮಿಸು ॥೧೩೧-೧೩೨॥ ಎಂದೀರೀತಿಯಿಂದ ಹರಿವರನಾದ ಹನುಮನು ಹೇಳುತ್ತಾ ತನ್ನ ಮೃದುತರವಾದ ಕರತಲದಿಂದ ಆ ಮೈನಾಕನನ್ನು ಮೈದಡವಿ, ಮಹಾವೀರ್ಯಸಂಪನ್ನನಾಗಿ, ಆಕಾಶದೊಳಹೊಗಲು ಹುಸಿನಗೆಯು ವೇಗದಿಂದ ಹೊರಟನು.

ಜಗಾಮಾಕಾಶ ಮಾವಿಶ್ಯ ವೀರ್ಯವಾನ್ ಶ್ವಸನ ಸನ್ನಿಭ ||೧೩೩||
ಸ ಪರ್ವತ ಸಮುದ್ರಾಭ್ಯಾಂ ಬಹುಮಾನಾ ದವೇಕ್ಷಿತಃ ।
ಪೂಜಿತಶ್ಚೋಪ ಪನ್ನಾಭಿ ರಾಶೀರ್ಭಿ ರನಿಲಾತ್ಮಜಃ ||೧೩೪||
ಅಥೋರ್ಧ್ವಂ ದೂರ ಮುತ್ಪತ್ಯ ಹಿತ್ವಾ ಶೈಲಮಹಾರ್ಣವೌ ।
ಪಿತುಃ ಪಂಥಾನ ಮಾಸ್ಥಾಯ ಜಗಾಮ ವಿಮಲೇಽಂಬರೇ ||೧೩೫||
ಭೂಯಶ್ಚೋರ್ಧ್ವ ಗತಿಂ ಪ್ರಾಪ್ಯ ಗಿರಿಂ ತ ಮವಲೋಕಯನ್ ।
ವಾಯುಸೂನು ರ್ನಿರಾಲಂಬೆ ಜಗಾಮ ವಿಮಲೇಂಬರೆ ||೧೩೬||
ತದ್ದ್ವಿತೀಯಂ ಹನುಮತೋ ದೃಷ್ಟ್ವಾ ಕರ್ಮ ಸುದುಷ್ಕರಂ ।

ಸಃ-ಆ ಆಂಜನೇಯನು, ಪರ್ವತಸಮುದ್ರಾಭ್ಯಾಂ-ಮೈನಾಕ ಮತ್ತು ಸಮುದ್ರರಾಜರಿಂದ, ಬಹುಮಾನಾತ್-ಸನ್ಮಾನ ಪೂರ್ವಕವಾಗಿ, ಅವೇಕ್ಷಿತಃ-ನೋಡಲ್ಪಡುತ್ತಿರುವವನಾಗಿಯೂ, ಉಪಪನ್ನಾಭಿಃ-ತಕ್ಕವುಗಳಾದ ಆಶೀರ್ಭಿಃ-ಹರಕೆಯ ಮಾತುಗಳಿಂದ, ಪೂಜಿತಶ್ಚ-ಗೌರವಿಸಲ್ಪಡುತ್ತಿರುವವನಾಗಿಯೂ ಇದ್ದನು||೧೩೪||ಅಥ-ಅನಂತರದಲ್ಲಿ- ಶೈಲಮಹಾರ್ಣವೌ-ಮೈನಾಕ ಸಮುದ್ರರನ್ನು, ಹಿತ್ವಾ-ಬಿಟ್ಟು, ಊರ್ಧ್ವಂ-ಮೇಲಕ್ಕೆ ದೂರಂ-ಬಹುದೂರವಾಗಿ, ಉತ್ಪತ್ಯ-ಹಾರಿ, ಪಿತುಃ-ತಂದೆಯಾದ ವಾಯುವಿನ, ಪಂಥಾನಂ-ಮಾರ್ಗವನ್ನು, ಆಸ್ಥಾಯ - ಆಶ್ರಯಿಸಿ, ವಿಮಲೆ - ನಿರ್ಮಲವಾದ, ಅಂಬರೆ - ಅಂತರಿಕ್ಷದಲ್ಲಿ, ಜಗಾಮ- ಹೊರಟನು||೧೩೫|| ಭೂಯಶ್ಚ - ಪುನಃ - (ಮತ್ತಷ್ಟು) ಊರ್ಧ್ವಗತಿಂ - ಉನ್ನತ ಗಮನವನ್ನು, ಪ್ರಾಪ್ಯ - ಹೊಂದಿ, ತಂ - ಆ, ಗಿರಿಂ - ಪರ್ವತವನ್ನು, ಅವಲೋಕಯನ್ - ನೋಡುತ್ತಿರುವವನಾಗಿ, ನಿರಾಲಂಬೆ-ಊರಿಲ್ಲದ, (ಆಸರೆಯಿಲ್ಲದ) ವಿಮಲೆ - ಶುಭ್ರವಾದ, ಅಂಬರೆ - ಆಕಾಶದಲ್ಲಿ, ಜಗಾಮ - ಹೊರಟನು ||೧೩೬|| ಸರ್ವೆ - ಸಮಸ್ತರಾದ, ಸುರಾಃ - ದೇವತೆಗಳೂ, ಸಿದ್ಧಾಃ - ಸಿದ್ಧರೂ, ಪರಮರ್ಷಯಃ - ಮಹರ್ಷಿಗಳೂ, ಹನುಮತಃ - ಆಂಜನೇಯನ, ಸುದುಷ್ಕರಂ - ಅತ್ಯಂತ ಅಸಾಧ್ಯವಾದ, ತತ್ - ಆ, ದ್ವಿತೀಯಂ - ಎರಡನೆಯದಾಗಿ, (ಸಮುದ್ರ ಲಂಘನಕ್ಕಿಂತ ಬೇರಾಗಿ ಮೈನಾಕ ವಿಜಯರೂಪವಾದ) ಕರ್ಮ - ಕೆಲಸವನ್ನು,

||೧೩೩|| ಆಗಲೂ ಮೈನಾಕ ಸಮುದ್ರರು ಆಂಜನೇಯನನ್ನು ಬಹುಮಾನಪೂರ್ವಕವಾಗಿ ನೋಡುತಿದ್ದುದಲ್ಲದೆ ಸಾರ್ಥಕಗಳಾದ ಮಂಗಳಾಶಾಸನದ ಮಾತುಗಳಿಂದ ಆದರಿಸುತಲೂ ಇದ್ದರು.|| ೧೩೪|| ಅಂತಹ ಅವರ ಆಶೀರ್ವಚನಗಳನ್ನು ವಿನಯಪೂರ್ವಕವಾಗಿ ಪರಿಗ್ರಹಿಸುತ್ತಾ, ಆ ಸಾಗರ ಮೈನಾಕರನ್ನು ಬಿಟ್ಟು, ದೂರವಾಗಿ ಮೇಲಕ್ಕೆ ಹಾರಿ, ತಂದೆಯಾದ ವಾಯುವಿನ ಮಾರ್ಗವನ್ನು ಆಶ್ರಯಿಸಿ, ನಿರ್ಮಲವಾದ ಅಂಬರತಲದಲ್ಲಿ ಪ್ರಯಾಣ ಮಾಡತೊಡಗಿದನು ||೧೩೫|| ಬಳಿಕ ಆ ಪವನನಂದನನು ಮತ್ತಷ್ಟು ಉನ್ನತಗತಿಯನ್ನು ಲಂಬಿಸಿ, ಪ್ರೀತಿಪೂರ್ಣವಾದ ನೋಟದಿಂದ ಮೈನಾಕನನ್ನು ಹಿಂದಿರುಗಿ ನೋಡುತ್ತಾ, ಬಹು ಶುಭ್ರವಾದ ಅಂಬರಮಾರ್ಗದಲ್ಲಿ ನಡೆಯುತ್ತಿದ್ದನು ||೧೩೬|| ಆಗ ಬಹುಮಂದಿ ದೇವತೆಗಳು, ಸಿದ್ಧರು, ಮಹಾಮುನಿಗಳೂ ಸಹ, ಬೇರೆಯಾರಿಂದಲೂ ಮಾಡಲಸದಳವೆನಿಸಿ, ಆಶ್ಚರ್ಯವನ್ನುಂಟುಮಾಡುವ, ಸಮುದ್ರಲಂಘನರೂಪವಾದ, ನಿರಾಯಾಸದ ಆ ವೇ ದಲನೆಯ ಕೆಲಸವನ್ನೂ, ಮೈನಾಕನಲ್ಲಿಯೂ ವಿಶ್ರಮಿಸಿಕೊಳ್ಳದೆಯೇ, ಆತನನ್ನೂ ಅತಿಕ್ರಮಿಸಿ ಹೊರಟ

ಪ್ರಶಶಂಸುಸ್ಸುರಾಃ ಸರ್ವೇ ಸಿದ್ಧಾಶ್ಚ ಪರಮರ್ಷಯಃ ||೧೩೭||
ದೇವತಾಶ್ಚಾಭವನ್ ಹೃಷ್ಟಾಸ್ತತ್ರಸ್ಥಾಸ್ತಸ್ಯ ಕರ್ಮಣಾ |
ಕಾಂಚನಸ್ಯ ಸುನಾಭಸ್ಯ ಸಹಸ್ರಾಕ್ಷಶ್ಚ ವಾಸವಃ ||೧೩೮||
ಉವಾಚ ವಚನಂ ಧೀಮಾನ್ ಪರಿತೋಷಾತ್ಸಗದ್ಗದಂ |
ಸುನಾಭಂ ಪರ್ವತಶ್ರೇಷ್ಠಂ ಸ್ವಯಮೇವ ಶಚೀಪತಿಃ ||೧೩೯||
ಹಿರಣ್ಯನಾಭ ಶೈಲೇಂದ್ರ ಪರಿತುಷ್ಟೋಽಸ್ಮಿ ತೇ ಭೃಶಂ |
ಅಭಯಂ ತೇ ಪ್ರಯಚ್ಛಾಮಿ ತಿಷ್ಠ ಸೌಮ್ಯ ಯಥಾಸುಖಂ ||೧೪೦||

---

ದೃಷ್ಟ್ವಾ - ನೋಡಿ, ಪ್ರಶಶಂಸುಃ - ಬಹಳವಾಗಿ ಕೊಂಡಾಡುತಿದ್ದರು ||೧೩೭|| ಕಾಂಚನಸ್ಯ - ಸುವರ್ಣಮಯವಾದ, ಸುನಾಭಸ್ಯ - ಮಧ್ಯಪ್ರದೇಶವುಳ್ಳ, ತಸ್ಯ - ಆ ಮೈನಾಕನ, ಕರ್ಮಣಾ - (ಆಂಜನೇಯನನ್ನು ಸತ್ಕರಿಸಿದ) ಕೆಲಸದಿಂದ, ತತ್ರಸ್ಥಾಃ - ಆ ಪ್ರದೇಶದಲ್ಲಿದ್ದ, ದೇವತಾಶ್ಚ - ದೇವತೆಗಳೂ, ಸಹಸ್ರಾಕ್ಷಃ - ಸಾವಿರ ಕಣ್ಣುಳ್ಳ, ವಾಸವಶ್ಚ - ಇಂದ್ರನೂ, ಹೃಷ್ಟಾಃ - ಬಹು ಸಂತೋಷಪಟ್ಟವರಾಗಿ, ಅಭವನ್ - ಇದ್ದರು ||೧೩೮|| ಧೀಮಾನ್ - ಬುದ್ಧಿವಂತನಾದ, ಶಚೀಪತಿಃ - ಶಚೀದೇವಿಯ ವಲ್ಲಭನಾದ ಇಂದ್ರನು ಸುನಾಭಂ - ಪ್ರಶಸ್ತವಾದ ಮಧ್ಯಭಾಗವುಳ್ಳ, ಪರ್ವತಶ್ರೇಷ್ಠಂ - ಗಿರಿವರನಾದ ಮೈನಾಕನನ್ನು ಕುರಿತು, ಸ್ವಯಮೇವ - ತಾನೇ, ಪರಿತೋಷಾತ್ - ಸಂತೋಷದ ದೆಸೆಯಿಂದ, ಸಗದ್ಗದಂ - ಅಸ್ಪಷ್ಟವಾದ ಸ್ವರದೊಡನೆ, ವಚನಂ - ಈ ಮುಂದಿನ ಮಾತನ್ನು, ಉವಾಚ - ಹೇಳಿದನು ||೧೩೯|| ಹಿರಣ್ಯನಾಭ - ಸ್ವರ್ಣಶಿಖರಗಳುಳ್ಳ, ಶೈಲೇಂದ್ರ - ಪರ್ವತರಾಜನಾದ ಮೈನಾಕನೇ! ತೇ - ನಿನ್ನ ವಿಷಯವಾಗಿ, ಭೃಶಂ - ಬಹಳವಾಗಿ, ಪರಿತುಷ್ಟಃ - ಸಂತೋಷಪಟ್ಟವನು, ಅಸ್ಮಿ - ಆಗಿದ್ದೇನೆ, ಸೌಮ್ಯ - ಎಲೈ ಶಾಂತಸ್ವಭಾವದವನೇ! ತೇ - ನಿನಗೆ, ಅಭಯಂ - ಅಭಯದಾನವನ್ನು, ಪ್ರಯಚ್ಛಾಮಿ - ಕೊಡುತ್ತೇನೆ, ಯಥಾಸುಖಂ - (ನಿನ್ನಿಂದ ಭಯಪಡುವುದಕ್ಕಿಂತ ಮುಂಚೆ ಹೇಗಿದ್ದೆಯೋ ಹಾಗೆ) ಸುಖವಾಗಿ, ತಿಷ್ಠ - ಇರು ||೧೪೦||

---

ಆತನ ಆ ಪರಾಕ್ರಮವನ್ನು, ಬಲು ಸಂತೋಷದಿಂದ ನೋಡಿ ಬಹು ಗೌರವದೊಡನೊಪ್ಪುತ್ತ ಹೇಳಿಕೊಳ್ಳುತ್ತ ಹೊಗಳುತ್ತಿದ್ದರು ||೧೩೭|| ಮತ್ತು - ಅಂತರಿಕ್ಷಗತರಾದ ದೇವತೆಗಳೂ, ಸಾವಿರ ಕಣ್ಣುಳ್ಳ ದೇವೇಂದ್ರನೂ, ಶ್ರೀಮದಾಂಜನೇಯನನ್ನು ಇದಿರುಗೊಂಡು, ಪ್ರೀತಿಪುರಸ್ಸರವಾಗಿ ಆದರಿಸಿದ ಚಿನ್ನದ ಕೋಡುಳ್ಳ ಮೈನಾಕನ ಶ್ಲಾಘ್ಯವಾದ ಕೆಲಸವನ್ನು ನೋಡಿ ಸಂತುಷ್ಟಾಂತರಂಗರಾದರು ||೧೩೮|| ಶ್ರೀ ರಾಮಕಾರ್ಯಕ್ಕೋಸುಗ ನಿರ್ವಿಘ್ನವಾಗಿ ಪ್ರಯಾಣಮಾಡುತ್ತಿರುವ ಆಂಜನೇಯನ ಮೂಲಕ ದುಷ್ಟನಿಗ್ರಹವು ಉಂಟಾಗಿ ದೇವತೆಗಳಿಗೆ ಮೇಲು ಸಂಭವಿಸುವುದೆಂದು ಅರಿತಿರುವ ಬುದ್ಧಿವಂತನಾದ ಶಚೀಪತಿಯು, ಮೈನಾಕನು ತೋರಿದ ಕೃತಜ್ಞತೆಯಿಂದ ಅಂತರಂಗದಲ್ಲಿನ ಆನಂದವು ಅಡಗದೆ, ಹರ್ಷಸೂಚಕವಾದ ಗದ್ಗದ ಸ್ವರದಿಂದ ಸುವರ್ಣಮಯವಾದ ಮಧ್ಯಪ್ರದೇಶವನ್ನುಳ್ಳಂತು ಪರ್ವತೋತ್ತಮನೆನಿಸಿದ ಆ ಮೈನಾಕನನ್ನು ಕುರಿತು ಇಂತೆಂದನು-||೧೩೯|| ಓ ಹಿರಣ್ಯನಾಭಾ! ಪರ್ವತರಾಜಾ! ನೀನೀ ಆಂಜನೇಯನ ವಿಷಯದಲ್ಲಿ ಆಚರಿಸಿದ ಸತ್ಕಾರಕಾರ್ಯದಿಂದ ಬಹಳವಾಗಿ ಸಂತೋಷಿಸಿದೆನು, ಇಗೋ ಇದಕ್ಕೋಸ್ಕರವೇ ನಿನಗೆ ಅಭಯದಾನವನ್ನು ಮಾಡಿದೇನೆ, ಎಲೈ ಶಾಂತಸ್ವಭಾವಾ! ಇನ್ನುಮೇಲೆ ನೀನು ನಿರ್ಭಯನಾಗಿ ಸುಖದಿಂದಿರು ||

ಸಾಹ್ಯಂ ಕೃತಂ ತೇ ಸುಮಹ ದ್ವಿಕ್ರಾಂತಸ್ಯ ಹನೂಮತಃ ।
ಕ್ರಮತೋ ಯೋಜನ ಶತಂ ನಿರ್ಭಯಸ್ಯ ಭಯೇಸತಿ ॥೧೪೧॥
ರಾಮಸ್ಯೈಷ ಹಿ ದೂತ್ಯೇನ ಯಾತಿ ದಾಶರಥೇರ್ಹರಿಃ ।
ಸತ್ಕ್ರಿಯಾಂ ಕುರ್ವತಾ ತಸ್ಯ ತೋಷಿತೋಽಸ್ಮಿ ದೃಢಂ ತ್ವಯಾ ॥೧೪೨॥
ತತಃ ಪ್ರಹರ್ಷಮಗಮ ದ್ವಿಪುಲಂ ಪರ್ವತೋತ್ತಮಃ ।
ದೇವತಾನಾಂ ಪತಿಂ ದೃಷ್ಟ್ವಾ ಪರಿತುಷ್ಟಂ ಶತಕ್ರತುಂ ॥೧೪೩॥
ಸ ವೈ ದತ್ತವರ ಶ್ಶೈಲೋ ಬಭೂವಾ ಽ ವಸ್ಥಿತ ಸ್ತದಾ ।

ನಿರ್ಭಯಸ್ಯ - ಮೊದಲು ಭಯವಿಲ್ಲದಿದ್ದವನಿಗೆ, ಭಯೆ - ನಾನು ರೆಕ್ಕೆಗಳನ್ನು ಕತ್ತರಿಸುವೆನೆಂಬ ಮಹಾ ಭೀತಿಯು, ಸತಿ(ಸತಿ)ನಿನಗೆ ಉಂಟಾಗಿದ್ದರೂ, ವಿಕ್ರಾಂತಸ್ಯ-ಪರಾಕ್ರಮವನ್ನು ತೋರುತಲಿರುವ ಯೋಜನ ಶತಂ - ನೂರುಗಾವುದಗಳ ದಾರಿಯನ್ನು, ಕ್ರಮತಃ - ದಾಟಿಹೋಗುತಲಿರುವ, ಹನೂಮತಃ- ಆಂಜನೇಯನಿಗೆ, ತೇ - ನಿನ್ನಿಂದ, ಸುಮಹತ್ - ಮಹತ್ತರವಾದ, ಸಾಹ್ಯಂ - ಸಹಾಯವು, ಕೃತಂ - ಮಾಡಲ್ಪಟ್ಟಿತು, ॥ ೧೪೧ ॥ ಏಷಃ - ಈ, ಹರಿಃ - ಆಂಜನೇಯನು, ದಾಶರಥೇಃ - ದಶರಥ ಪುತ್ರನಾದ, ರಾಮಸ್ಯ - ಶ್ರೀರಾಮನಿಗೆ, ದೂತ್ಯೇನ - ದೂತಕೃತ್ಯವನ್ನು ನೆರವೇರಿಸುವ ನಿಮಿತ್ತದಿಂದ, ಯಾತಿಹಿ - ಹೋಗುತ್ತಿರುವನಷ್ಟೆ, ತಸ್ಯ - ಆ ಆಂಜನೇಯನಿಗೆ, ಸತ್ಕ್ರಿಯಾಂ - ಸತ್ಕಾರವನ್ನು, ಕುರ್ವತಾ - ಮಾಡುತ್ತಿರುವ, ತ್ವಯಾ - ನಿನ್ನಿಂದ, ದೃಢಂ - ವಿಶೇಷವಾಗಿ, ತೋಷಿತಃ - ಸಂತೋಷಗೊಳಿಸಲ್ಪಟ್ಟೆನು, ॥ ೧೪೨ ॥ ತತಃ - ದೇವೇಂದ್ರನು ಹಾಗೆ ಸಂತೋಷಿಸಿದ ಮೇಲೆ, ಪರ್ವತೋತ್ತಮಃ-ಗಿರಿವರನಾದ ಮೈನಾಕನು, ದೇವತಾನಾಂ - ದೇವತೆಗಳ, ಪತಿಂ - ಒಡೆಯನಾದ, ಶತಕ್ರತುಂ - ಶತಮಖನೆನಿಸಿದ ಇಂದ್ರನನ್ನು, ಪರಿತುಷ್ಟಂ - ಸಂತೋಷ ಪಟ್ಟವನನ್ನಾಗಿ, ದೃಷ್ಟ್ವಾ - ತಿಳಿದು, ವಿಪುಲಂ - ಅಪಾರವಾದ, ಹರ್ಷಂ - ಆನಂದವನ್ನು, ಅಗಮತ್ - ಹೊಂದಿದನು ॥ ೧೪೩ ॥ ದತ್ತವರಃ - ಇಂದ್ರನಿಂದ ಕೊಡಲ್ಪಟ್ಟವರವುಳ್ಳ, ಸವೈ ಆ ಮೈನಾಕನವರೋ, ತದಾ - ಆಗ, ಅವಸ್ಥಿತಃ - ಸ್ವಸ್ಥಚಿತ್ತನಾಗಿ

"ನಾನು ಹೊರೆಗೆತಲೆಯನ್ನು ತೋರಿಸಿದರೆ ಇಂದ್ರನು ನನ್ನ ರೆಕ್ಕೆಗಳನ್ನು ಕತ್ತರಿಸುವನು" ಎಂಬ ಮಹತ್ತರವಾದ ಭಯವು ನಿನ್ನಮನದೊಳಗೆ ನೆಲೆಗೊಂಡಿದ್ದರೂ, ಆ ಅಂಜಿಕೆಯನ್ನು ಬಿಟ್ಟು, ಆಕಾಶದಲ್ಲಿ ನೂರುಗಾವುದ ದಾರಿಯನ್ನು ದಾಟಿ ಹೋಗುತ್ತಲಿದ್ದ ಹನುಮಂತನಿಗೆ ಬಹು ದೊಡ್ಡ ಸಹಾಯವನ್ನು ಮಾಡತೊಡಗಿದೆ ॥೧೪೧॥ ಶ್ರೀ ರಾಮರೂಪದಿಂದ ದಶರಥನಂದನನಾಗಿ ಅವತರಿಸಿರುವ ಶ್ರೀ ಹರಿಯ ದೂತಕೃತ್ಯವನ್ನು ನೆರವೇರಿಸಲು, ಹರಿಪ್ರವರನಾದ ಈ ಆಂಜನೇಯನು ಪ್ರಯಾಣಮಾಡುತಲಿದಾನೆ. ಅಂತಹ ಮಾರುತಿಗೆ ಬಹು ದೃಢವಾದ ಸಂಕಲ್ಪದಿಂದ ಸತ್ಕಾರವನ್ನು ಮಾಡಲೆಳಸಿದ ನಿನ್ನಿಂದ ನಾನು ಬಹಳ ಸಂತುಷ್ಟನಾಗಿದೇನೆ. ಇಂತಹ ನಿನಗೆ ಅಭಯವನ್ನು ಕೊಟ್ಟದೇನೆ, ಸುಖದಿಂದಿರು ॥೧೪೨॥ ಎಂದೀಪ್ರಕಾರವಾಗಿ ಹರ್ಷಪರವಶನಾಗಿ ಹೇಳುತಲಿರುವ ದೇವತೆಗಳೊಡೆಯನಾದ ಶತಮಖನನ್ನು ನೋಡಿ, ಪರ್ವತರಾಜನಾದ ಮೈನಾಕನು, ಅಪಾರವಾದ ಆನಂದವನ್ನು ಹೊಂದಿದನು ॥೧೪೩॥ ಬಳಿಕ್ಕ- ಆ ಪ್ರಕಾರ ಚಿತನಿಂದ ಅಭಯದಾನರೂಪವಾದ ವರವನ್ನು ಪಡೆದು ಕಡಲಿನೊಳಹೊಕ್ಕು ಸುಖದಿಂದಿದ್ದನು, ಮಾರುತಿಯೂ ಬಲು ಚಟಪಟಿಕೆಯಿಂದ ಬೇಗನೆ

ಹನೂಮಾಂಶ್ಚ ಮುಹೂರ್ತೇನ ವ್ಯತಿಚಕ್ರಾಮ ಸಾಗರಂ ॥೧೪೪॥
ತತೋ ದೇವಾಸ್ಸಗಂಧರ್ವಾಸ್ಸಿದ್ಧಾಶ್ಚ ಪರಮರ್ಷಯಃ ।
ಅಬ್ರುವನ್ಸೂರ್ಯಸಂಕಾಶಾಂ ಸುರಸಾಂ ನಾಗಮಾತರಂ ॥೧೪೫॥
ಅಯಂ ವಾತಾತ್ಮಜಶ್ಶ್ರೀಮಾನ್ ಪ್ಲವತೆ ಸಾಗರೋಪರಿ ।
ಹನೂಮಾನ್ನಾಮ ತಸ್ಯ ತ್ವಂ ಮುಹೂರ್ತಂ ವಿಘ್ನಮಾಚರ ॥೧೪೬॥
ರಾಕ್ಷಸಂ ರೂಪಮಾಸ್ಥಾಯ ಸುಘೋರಂ ಪರ್ವತೋಪಮಂ ।
ದಂಷ್ಟ್ರಾಕರಾಳಂ ಪಿಂಗಾಕ್ಷಂ ವಕ್ತ್ರಂ ಕೃತ್ವಾ ನಭಸ್ಸಮಂ ॥೧೪೭॥
ಬಲಮಿಚ್ಛಾಮಹೇ ಜ್ಞಾತುಂ ಭೂಯಶ್ಚಾಸ್ಯ ಪರಾಕ್ರಮಂ ।

(ನಿರ್ಭಯನಾಗಿ) ಬಭೂವ - ಇದ್ದನು, ಹನೂಮಾಂಶ್ಚ - ಆಂಜನೇಯನೂ, ಮುಹೂರ್ತೇನ - ಸ್ವಲ್ಪಕಾಲದಲ್ಲಿಯೇ, ಸಾಗರಂ - ಕಡಲನ್ನು, ವ್ಯತಿಚಕ್ರಾಮ - ದಾಟಿಹೋಗುತ್ತಿದ್ದನು ॥ ೧೪೪ ॥ ತತಃ - ಮೈನಾಕನು ಸಮಾಧಾನದಿಂದ ನಿಂತು ಆಂಜನೇಯನು ಹೊರಟ ಮೇಲೆ, ದೇವಾಃ-ದೇವತೆಗಳೂ, ಸಗಂಧರ್ವಾಃ - ಗಂಧರ್ವರಿಂದ ಸಹಿತರಾದ, ಸಿದ್ಧಾಶ್ಚ - ಸಿದ್ಧರೂ, ಪರಮರ್ಷಯಶ್ಚ - ಮಹರ್ಷಿಗಳೂ, ಸೂರ್ಯಸಂಕಾಶಾಂ - ಹೊಳಪಿನಲ್ಲಿ ಸೂರ್ಯನಿಗೆಣೆಯಾಗಿಯೂ, ನಾಗಮಾತರಂ-ನಾಗಗಳಿಗೆ ತಾಯಿಯಾಗಿಯೂ ಇರುವ, ಸುರಸಾಂ - ಸುರಸಾ ಎಂಬಾಕೆಯನ್ನು ಕುರಿತು, ಅಬ್ರುವನ್-ಹೀಗೆ ಹೇಳಿದರು ॥ ೧೪೫ ॥ ಅಯಂ - ಈ, ವಾತಾತ್ಮಜಃ - ವಾಯುಕುಮಾರನಾದ, ಶ್ರೀಮಾನ್- (ಬುದ್ಧಿ ಬಲ ಕೀರ್ತಿಗಳ ಸಂಪತ್ತನ್ನು ಪಡೆಯುತ್ತಿರುವ) ಸಂಪತ್ತಿನಿಂದೊಡಗೂಡಿದ, ಹನೂಮಾನ್ ನಾಮ - ಆಂಜನೇಯನೆಂಬ ಹೆಸರಿನ ಹರಿಯು, ಸಾಗರೋಪರಿ - ಸಮುದ್ರದ ಮೇಲೆ, ಪ್ಲವತೆ - ದಾಟಿಹೋಗುತಲಿದ್ದಾನೆ, ತಸ್ಯ - ಆ ಹನುಮಂತನಿಗೆ, ತ್ವಂ - ನೀನು, ಮುಹೂರ್ತಂ - ಸ್ವಲ್ಪಹೊತ್ತು, ವಿಘ್ನಂ - ತಡೆಯನ್ನು, ಆಚರ - ಮಾಡು. ॥ ೧೪೬ ॥ ಸುಘೋರಂ-ಬಹು ಭಯವನ್ನುಂಟು ಮಾಡತಕ್ಕದಾಗಿಯೂ, ಪರ್ವತೋಪಮಂ-

ಬ್ಬಾಂದಳವನ್ನು ದಾಟಿ ಹೋಗುತ್ತಲಿದ್ದನು ॥೧೪೪॥ ಬಳಿಕ ದೇವತೆಗಳು, ಗಂಧರ್ವರು, ಸಿದ್ಧರು, ಮಹರ್ಷಿಗಳು ಮುಂತಾದವರೆಲ್ಲರೂ, ಸೂರ್ಯನಂತೆ ಬೆಳಗುತಲಿರುವ ನಾಗಮಾತೆಯಾದ ಸುರಸೆಯೆಂಬಾಕೆಯನ್ನು ಕುರಿತು ಇಂತೆಂದರು ॥೧೪೫॥ ಎಲೌ ದೇವಿಯೇ! ವಾಯುನಂದನನೆನಿಸಿ- ಬುದ್ಧಿ, ಬಲ, ಯಶ, ಧೈರ್ಯ ಮೊದಲಾದವುಗಳ ಸಂಪದವನ್ನು ಪಡೆದಿರುವ ಇಗೋ ಈತನು ಕಡಲಿನಮೇಲುಗಡೆಹಾರಿಹೋಗುತಲಿದ್ದಾನೆ, ಹೆಸರಿನಲ್ಲಿ ಈತನನ್ನು ಹನುಮಂತನೆಂಬರು, ನೀನೀಗ ಭಯಂಕರವಾದ ರಾಕ್ಷಸರೂಪವನ್ನು ತಾಳ್ದು, ಬೆಟ್ಟದಂತೆ ತೋರವಾದ ಮತ್ತುಘೋರವಾಗಿರುವ ಆಕಾರವನ್ನಳವಟ್ಟು, ಕೋರೆದಾಡೆಗಳಿಂದಲೂ, ಹೊಂಬಣ್ಣದಿಂದ ಮಿಂಚುತಲಿರುವ ವಿಕಾರವಾದ ವದನವನ್ನೂ ಆಗಸದಬಿಲದಂತೆ ಅಗಲವಾದ ಬಾಯನ್ನೂ ಆಂತು, ಮಹಾಭಯಂಕರಳೆನಿಸಿ, ಈತನ ಪ್ರಯಾಣಕ್ಕೆ ಸ್ವಲ್ಪಕಾಲಮಾತ್ರ ವಿಘ್ನವನ್ನಾಚರಿಸು ॥೧೪೬-೧೪೭॥ ಅದು ಏಕೆ ಎಂಬೆಯೊ? ಈತನು ಬಾಲ್ಯದಲ್ಲಿಯೇ ಸೂರ್ಯಭಕ್ಷಣವೇ ಮೊದಲಾದ ಅಸಾಧ್ಯಕಾರ್ಯಗಳನ್ನಾಚರಿಸಿ ಬಹು ಸಮರ್ಥನೆನಿಸಿಕೊಂಡಿದ್ದನು.

ತ್ವಾಂ ವಿಜೇಷ್ಯತ್ಯುಪಾಯೇನ ವಿಷಾದಂ ವಾ ಗಮಿಷ್ಯತಿ ॥೧೪೮॥
ಏವಮುಕ್ತಾ ತು ಸಾ ದೇವೀ ದೈವತೈ ರಭಿ ಸತ್ಕೃತಾ ।
ಸಮುದ್ರಮಧ್ಯೇ ಸುರಸಾ ಬಿಭ್ರತೀ ರಾಕ್ಷಸಂ ವಪುಃ ॥೧೪೯॥
ವಿಕೃತಂ ಚ ವಿರೂಪಂ ಚ ಸರ್ವಸ್ಯ ಚ ಭಯಾವಹಂ ।
ಪ್ಲವಮಾನಂ ಹನೂಮಂತ ಮಾವೃತ್ಯೇದ ಮುವಾಚ ಹ ॥೧೫೦॥

---

ಬೆಳವಳಿಗೆಯಲ್ಲಿ ಬೆಟ್ಟದಂತಿರುವ ಹಾಗೂ, ರಾಕ್ಷಸಂ - ರಕ್ಕಸರ ಸಂಬಂಧವಾದ, ರೂಪಂ - ಆಕಾರವನ್ನು. ಆಸ್ಥಾಯ - ತಾಳಿ, ದಂಷ್ಟ್ರಾಕರಾಳಂ - ಕೋರೆಹಲ್ಲಿ (ದಾಡೆ) ನಿಂದ ಘೋರವಾಗಿಯೂ, ಪಿಂಗಾಕ್ಷಂ - ಹೊಂಬಣ್ಣದ ಕಣ್ಣುಗಳುಳ್ಳುದಾಗಿಯೂ, ನಭಸ್ಸಮಂ - ಆಗಸದ ಬಿಲದೊಡನೆ ಸಮವಾಗಿಯೂ ಇರುವಂತೆ, ವಕ್ತ್ರಂ - ಬಾಯನ್ನು, ಕೃತ್ವಾ - ಕಲ್ಪಿಸಿಕೊಂಡು (ತಿಷ್ಠ - ನಿಂತಿರು) ॥ ಅಸ್ಯ - ಈ ಆಂಜನೇಯನ, ಬಲಂ - ದೇಹಬಲವನ್ನೂ, ಪರಾಕ್ರಮಂಚ - ಸಾಮರ್ಥ್ಯವನ್ನೂ, ಭೂಯಃ ಪುನಃ - ಜ್ಞಾತುಂ - ತಿಳಿಯಲಿಕ್ಕೆ, ಇಚ್ಛಾಮಹೆ - ಕೋರುತಲಿದೇವೆ, ತ್ವಾಂ - ನಿನ್ನನ್ನು, ಉಪಾಯೇನ - ಯುಕ್ತಿಯಿಂದ, ವಿಜೇಷ್ಯತಿ - ಜಯಿಸುವನೋ (ಅಥವಾ-ಹಾಗಿಲ್ಲದಿದ್ದರೆ) ವಿಷಾದಂ - ಖೇದ (ಕ್ಲೇಶ) ವನ್ನು, ಗಮಿಷ್ಯತಿವಾ - ಹೊಂದುವನೋ (ಪಶ್ಯಾಮಃ - ನೋಡೋಣ) ॥೧೪೮॥ ಸಾ - ಆ ಸುರಸಾದೇವಿಯು, ದೈವತೈಃ - ದೇವತೆಗಳಿಂದ, ಏವಂ - ಈ ಪ್ರಕಾರವಾಗಿ, ಉಕ್ತಾತು - ಹೇಳಲ್ಪಟ್ಟವಳಾಗಿಯೂ, ಅಭಿಸತ್ಕೃತಾ - ಸತ್ಕರಿಸಲ್ಪಟ್ಟ (ಪ್ರೋತ್ಸಾಹ) ವಳಾಗಿಯೂ, (ಪ್ರಸ್ಥಾಯ - ಹೊರಟು) ಸಮುದ್ರಮಧ್ಯೇ - ಕಡಲಿನ ನಡುವೆ, ವಿಕೃತಂಚ - ವಿಕಾರವಾಗಿಯೂ, ವಿರೂಪಂಚ - ಭಯಂಕರವಾಗಿಯೂ, ಸರ್ವಸ್ಯ - ಸಮಸ್ತಭೂತಗಳಿಗೂ, ಭಯಾವಹಂ - ಭಯವನ್ನುಂಟುಮಾಡತಕ್ಕದಾಗಿಯೂ ಇರುವ, ರಾಕ್ಷಸಂ - ರಾಕ್ಷಸಿಯ ಸಂಬಂಧವಾದ, ವಪುಃ - ಶರೀರವನ್ನು, ಬಿಭ್ರತೀ - ಧರಿಸಿದವಳಾಗಿ- ಪ್ಲವಮಾನಂ - ದಾಟಿಹೋಗುತಲಿರುವ, ಹನೂಮಂತಂ - ಅಂಜನೇಯನನ್ನು, ಆವೃತ್ಯ - ಅಡ್ಡಗಟ್ಟಿ, ಉವಾಚ - ಹೀಗೆ ಹೇಳತೊಡಗಿದಳು ॥೧೪೯-೧೫೦॥ ವಾನರರ್ಷಭ - ಎಲೈ ಕಪಿವರನೇ! ಈಶ್ವರೈಃ - ದೇವತೆಗಳಿಂದ, ತ್ವಂ - ನೀನು, ಮಮ - ನನಗೆ, ಭಕ್ಷಃ-ಆಹಾರ ಪದಾರ್ಥವಾಗಿ, ಪ್ರದಿಷ್ಟಃ - ಕೊಡಲ್ಪಟ್ಟಿದ್ದೀಯೆ (ತೋರಿಸಲ್ಪಟ್ಟಿದ್ದೀಯೆ) ಮಮ - ನನ್ನ, ಆನನಂ-ಬಾಯನ್ನು, ಪ್ರವಿಶ-ಪ್ರವೇಶಿಸು, ಅಹಂ-

---

ಈಗ ಮಹೇಂದ್ರಪರ್ವತದಿಂದ ಹಾರಿ ಆಕಾಶದಲ್ಲಿ ಪಯಣಮಾಡುತಲಿದಾನೆ. ಮೊದಲೇ ಈತನ ಪರಾಕ್ರಮವನ್ನು ನಾವು ಬಲ್ಲವರಾದರೂ, ಈಗಲೂ ಅದೇ ಸಾಮರ್ಥ್ಯವು ಇದೆಯೋ ? ಅಥವಾ ಇಲ್ಲವೋ ? ಉಪಾಯದಿಂದ ನಿನ್ನನ್ನು ಗೆಲ್ಲಬಲ್ಲನೋ ? ಇಲ್ಲವೆ ಸೋತು ಕಳವಳಿಸುವನೊ ! ಪುನಃ ಈಗ ಈತನ ಬಲವನ್ನೂ, ಪರಾಕ್ರಮನ್ನೂ ತಿಳಿಯಬೇಕೆಂದು ಬಯಸುತಲಿದೇವೆ, ನೀನೀ ಕೆಲಸವನ್ನು ಮಾಡು ಎಂದು ಆಕೆಯನ್ನು ನೇಮಿಸಿ ಕಳುಹಿಸಿಕೊಟ್ಟರು ॥೧೪೮॥ ಇಂತು ಆ ದೇವತೆಗಳಿಂದ ಸತ್ಕರಿಸಲ್ಪಟ್ಟು ಕಳುಹಿಸಲ್ಪಟ್ಟ ಸುರಸಾದೇವಿಯು ಬಹು ವಿಕಾರವಾಗಿಯೂ, ಕುತ್ಸಿತವಾಗಿಯೂ, ಲೋಕಕ್ಕೆಲ್ಲ ಅಪಾರವಾದ ಭಯವನ್ನುಂಟುಮಾಡತಕ್ಕದಾಗಿಯೂ ಇರುವಂತೆ,ಘೋರವಾದ ರಾಕ್ಷಸಿಯ ಆಕೃತಿಯನ್ನು ಧರಿಸಿ, ಕಡಲಿನ ನಡುವೆ ಆಗಸದಲ್ಲಿ ನಿಂತು, ಕುಪ್ಪಳಿಸುತ ಹೋಗುತಲಿರುವ ಹನುಮಂತನ ಹಾದಿಯನ್ನು ಅಡ್ಡಗಟ್ಟಿ ಹೀಗೆಂದಳು:-॥೧೪೯-೧೫೦॥ ಎಲೈ ವಾನರವೀರನೇ!

ಮಮ ಭಕ್ಷಃ ಪ್ರದಿಷ್ಟ ಸ್ತ್ವಂ ಈಶ್ವರೈ ರ್ವಾನರರ್ಷಭ ।
ಅಹಂ ತ್ವಾಂ ಭಕ್ಷಯಿಷ್ಯಾಮಿ ಪ್ರವಿಶೇದಂ ಮಮಾನನಂ ॥೧೫೧॥
ಏವ ಮುಕ್ತ ಸ್ಸುರಸಯಾ ಪ್ರಾಂಜಲಿ ರ್ವಾನರರ್ಷಭಃ ।
ಪ್ರಹೃಷ್ಟವದನ ಶ್ಶ್ರೀಮಾ ನಿದಂ ವಚನ ಮಬ್ರವೀತ್ ॥೧೫೨॥
ರಾಮೋ ದಾಶರಥಿರ್ನಾಮ ಪ್ರವಿಷ್ಟೋ ದಂಡಕಾವನಂ ।
ಲಕ್ಷ್ಮಣೇನ ಸಹ ಭ್ರಾತ್ರಾ ವೈದೇಹ್ಯಾ ಚಾಪಿ ಭಾರ್ಯಯಾ ॥೧೫೩॥

---

ನಾನು, ತ್ವಾಂ - ನಿನ್ನನ್ನು, ಭಕ್ಷಯಿಷ್ಯಾಮಿ - ತಿನ್ನುವೆನು ॥೧೫೧॥ ಶ್ರೀಮಾನ್ - [ಧೈರ್ಯವನ್ನು ತೋರದೆ ಧೀರತೆಯು] ಸಂಪತ್ತುಳ್ಳ, ವಾನರರ್ಷಭಃ - ಕಪಿಪುಂಗವನಾದ ಆಂಜನೇಯನು, ಸುರಸಯಾ - ನಾಗಮಾತೆಯಿಂದ, ಏವಂ - ಈ ಮೇಲೆಹೇಳಿದಂತೆ, ಉಕ್ತಃ - ಹೇಳಲ್ಪಟ್ಟವನಾದರೂ, ಪ್ರಾಂಜಲಿಃ - ಕೈಗಳನ್ನು ಜೋಡಿಸಿಕೊಂಡವನಾಗಿಯೂ, ಪ್ರಹೃಷ್ಟವದನಃ - ಸಂತಸಗೊಂಡ ಮುಖವುಳ್ಳವನಾಗಿಯೂ, ಇದಂ - ಈ ಮುಂದೆಹೇಳುವ, ವಚನಂ - ಮಾತನ್ನು, ಅಬ್ರವೀತ್ - ಹೇಳತೊಡಗಿದನು ॥೧೫೨॥ ದಾಶರಥಿಃ - ದಶರಥ ನಂದನನೆನಿಸಿದ, ರಾಮೋನಾಮ - ಶ್ರೀ ರಾಮನೆಂದು ಲೋಕಪ್ರಸಿದ್ಧನಾಗಿರುವ ಮಹಾನುಭಾವನು, ಲಕ್ಷ್ಮಣೇನಸಹ - ತಮ್ಮನಾದ ಲಕ್ಷ್ಮಣನೊಡನೆಯೂ, ವೈದೇಹ್ಯಾ - ವಿದೇಹದೇಶದ ಅರಸನಾದ ಜನಕಮಹಾರಾಜನ ಪುತ್ರಿಎನಿಸಿದ, ಭಾರ್ಯಯಾಚ - ಸೀತೆಯೆಂಬ ಧರ್ಮಪತ್ನಿಯೊಡನೆಯೂ, ದಂಡಕಾವನಂ -

---

ದೇವತೆಗಳು ನಿನ್ನನ್ನು ನನಗೆ ಆಹಾರವನ್ನಾಗಿ ಕೊಟ್ಟಿದ್ದಾರೆ, ಆದರಿಂದ ನಾನೀಗ ನಿನ್ನನ್ನು ತಿಂದುಬಿಡುವೆನು, ಆದಕಾರಣ ನೀನೀಗ ತೆರೆದಿರುವ ನನ್ನಬಾಯಿಯಲ್ಲಿ ಹೊಗಬೇಕು॥೧೫೧ ಎಂದು ಬೆದರಿಸುತ್ತ ಹೇಳಿದ ಸುರಸೆಯ ಮಾತನ್ನಾಲಿಸಿ, ಮಹಾಧೀರನೆನಿಸಿದ ವಾನರೋತ್ತಮನಾದ ಆಂಜನೇಯನು ಮಂದಹಾಸದಿಂದೊಡಗೂಡಿದ ಮುಖವುಳ್ಳವನಾಗಿ, ಇಂತೆಂದನು- ॥ ೧೫೨ ॥ ಎಲೌ ನಾಗಮಾತೆಯಾದ ಸುರಸಾದೇವಿಯೇ ! ದಶರಥಚಕ್ರವರ್ತಿಗೆ ಕುಮಾರನೆನಿಸಿದ ಶ್ರೀರಾಮಚಂದ್ರನು ತಂದೆಯ ಅಪ್ಪಣೆಯನ್ನು ಶಿರದೊಳಾಂತು ಧರ್ಮಪತ್ನಿಯಾದ ಜಾನಕಿಯೊಡನೆಯೂ, ಸೋದರನಾದ ಲಕ್ಷ್ಮಣನಸಂಗಡಲೂ ಹೊರಟು, ದಂಡಕಾರಣ್ಯವನ್ನು ಹೊಕ್ಕನು ॥ ೧೫೩ ॥ ಆ ವನದಲ್ಲಿ ಎಲೆಮನೆಯೊಂದನ್ನು ಕಲ್ಪಿಸಿಕೊಂಡು ವಾಸಮಾಡುತ್ತಿದ್ದರು, ಒಂದು ಸಮಯ- ಮಾಯಾನಿಪುಣನಾದ ಮಾರೀಚನೆಂಬ ರಕ್ಕಸನು ಚಿನ್ನದ ಹುಲ್ಲೆಯರೂಪವನ್ನು ತಾಳಿ, ಸೀತೆಯ ಎದುರಿಗೆ ಸುಳಿದಾಡುತ್ತಿರಲು, ಆಗ ಆಕೆಯು ಆ ಬಂಗಾರದ ಜಿಂಕೆಯನ್ನು ಕೊಂಡುಬರುವಂತೆ ತನ್ನ ಪ್ರಿಯವಲ್ಲಭನನ್ನು ಪ್ರಾರ್ಥಿಸಿದಳು. ಬಳಿಕ ಶ್ರೀರಾಮಚಂದ್ರನು ಸೀತೆಯ ಕಾವಲಿಗೆ ಲಕ್ಷ್ಮಣನನ್ನು ನೇಮಿಸಿ, ಆ ಮಾಯಾಮೃಗವನ್ನು ಹಿಡಿದುತರಲು ಹಿಂಬಾಲಿಸಿ, ಜೀವಬೆರಸಿ ಹಿಡಿಯಲು ಅದು ಕೈಗೆ ಸಿಕ್ಕದಿರುವಲ್ಲಿ, ಅದರ ಮೇಲೆ ಬಾಣಪ್ರಯೋಗವನ್ನು ಮಾಡಿದನು. ವ್ಯರ್ಥವಾಗದ ಆ ರಾಮಬಾಣದ ಪೆಟ್ಟಿನಿಂದ ಸಾಯುವಕಾಲವು ಒದಗಲು, ಆ ಕಪಟಮೃಗವು ನಿಜರೂಪವನ್ನಾಂತು, ಹಾ ಲಕ್ಷ್ಮಣಾ ! ಹಾ ಸೀತೇ ! ಎಂದು ನೆಲದಲ್ಲಿ ಉರುಳಿತು. ಆಗ- ಆ ಕಪಟಕುರಂಗದ ದೀನಧ್ವನಿಯನ್ನು ಕೇಳಿ ಬಲವಾಗಿ ಅಂಜಿದ ಜಾನಕಿಯು ಬಲಾತ್ಕಾರ

ಅನ್ಯಕಾರ್ಯೈ ವಿಷಕ್ತಸ್ಯ ಬದ್ಧವೈರಸ್ಯ ರಾಕ್ಷಸೈಃ ।
ತಸ್ಯ ಸೀತಾ ಹೃತಾ ಭಾರ್ಯಾ ರಾವಣೇನ ಯಶಸ್ವಿನೀ ॥೧೫೪॥
ತಸ್ಯಾ ಸ್ಸಕಾಶಂ ದೂತೋಽಹಂ ಗಮಿಷ್ಯೇ ರಾಮ ಶಾಸನಾತ್ ।
ಕರ್ತುಮರ್ಹಸಿ ರಾಮಸ್ಯ ಸಾಹ್ಯಂ ವಿಷಯ ವಾಸಿನಿ ॥೧೫೫॥
ಅಥವಾ ಮೈಥಿಲೀಂ ದೃಷ್ಟ್ವಾ ರಾಮಂ ಚಾಕ್ಲಿಷ್ಟ ಕಾರಿಣಂ ।
ಆಗಮಿಷ್ಯಾಮಿ ತೇ ವಕ್ತ್ರಂ ಸತ್ಯಂ ಪ್ರತಿಶೃಣೋಮಿ ತೇ ॥೧೫೬॥

(ಪಿತ್ರಾಜ್ಞೆಯನ್ನು ಪಾಲಿಸಲು) ದಂಡಕಾರಣ್ಯವನ್ನು, ಪ್ರವಿಷ್ಟಃ-ಪ್ರವೇಶಿಸಿದನು ॥೧೫೩॥ ಅನ್ಯ-ಬೇರೊಂದಾದ (ಮೃಗವನ್ನು ಹಿಡಿಯಬೇಕೆಂಬ ಇಲ್ಲವೆ ಕೊಲ್ಲಬೇಕೆಂಬ) ಕಾರ್ಯ - ಕೆಲಸದಲ್ಲಿ, ವಿಷಕ್ತಸ್ಯ - ಆಸಕ್ತನಾಗಿದ್ದ, ರಾಕ್ಷಸೈಃ - ರಕ್ಕಸರೊಡನೆ, ಬದ್ಧ - ಕಟ್ಟುಬಿದ್ದ, ವೈರಸ್ಯ - ಹಗೆತನವುಳ್ಳ, ತಸ್ಯ - ಆ ಶ್ರೀ ರಾಮನ, ಯಶಸ್ವಿನೀ - ಪಾತಿವ್ರತ್ಯದಲ್ಲಿ ಲೋಕಮಾನ್ಯಳೆಂದು ಹೆಸರುವಾಸಿಯನ್ನು ಪಡೆದಿರುವ, ಭಾರ್ಯಾ - ಹೆಂಡತಿಯಾದ, ಸೀತಾ - ಸೀತೆಯು, ರಾವಣೇನ - ರಾವಣನೆಂಬುವವನಿಂದ, ಹೃತಾ - ಅಪಹರಿಸಲ್ಪಟ್ಟಿದ್ದಾಳೆ ॥೧೫೪॥ ಅಹಂ - ನಾನು, ದೂತಃ - ಸೇವಕನು, ರಾಮಶಾಸನಾತ್-ಶ್ರೀ ರಾಮನ ಆಜ್ಞೋಪದೇಶದಿಂದ, ತಸ್ಯಾಃ-ಆ ಜಾನಕಿಯ, ಸಕಾಶಂ-ಸನ್ನಿಧಾನವನ್ನು ಕುರಿತು, ಗಮಿಷ್ಯೇ - ಹೋಗುವವನಾಗಿದ್ದೇನೆ, ರಾಮಸ್ಯ - ಶ್ರೀ ರಾಮಚಂದ್ರನ, ವಿಷಯವಾಸಿನಿ - ವಿಷಯಃ- ಆ ಕ್ಷಿತೀಶ ಒಳಪಟ್ಟ ದೇಶದಲ್ಲಿ, ವಾಸಿನಿ - ವಾಸಮಾಡುತ್ತಿರುವ ಎಲೈ ನಾಗಮಾತೆಯೇ ? (ರಾಮಸ್ಯ - ಆ ತ್ರಿಲೋಕನಾಥನಾದ ಶ್ರೀ ರಾಮನಿಗೆ) ಸಾಹ್ಯಂ- ಇಷ್ಟುಮಟ್ಟಿನ ಸಹಾಯವನ್ನು, ಕರ್ತುಂ-ಮಾಡಲಿಕ್ಕೆ, ಅರ್ಹಸಿ - ಯೋಗ್ಯಳಾಗಿದ್ದೀಯೆ ॥೧೫೫॥ ಅಥವಾ - ಇಷ್ಟುಮಾತ್ರವೂ ನಿನಗೆ ಸಮ್ಮತವಿಲ್ಲದಿದ್ದರೆ, ಮೈಥಿಲೀಂ - ಜಾನಕಿಯನ್ನೂ, ಅಕ್ಲಿಷ್ಟಕಾರಿಣಂ - ಲೋಕರಕ್ಷಕನಾದ, ರಾಮಂ - ಶ್ರೀ ರಾಮನನ್ನು, ದೃಷ್ಟ್ವಾ - ನೋಡಿ, ತೇ - ನಿನ್ನ, ವಕ್ತ್ರಂ - ಬಾಯನ್ನು, ಆಗಮಿಷ್ಯಾಮಿ - ಪ್ರವೇಶಿಸುವೆನು, ತೇ - ನಿನಗೆ, ಸತ್ಯಂ - ನಿಜವನ್ನು [ಪ್ರಮಾಣವನ್ನು] ಪ್ರತಿಶೃಣೋಮಿ-ಪ್ರತಿಜ್ಞೆಮಾಡುತ್ತೇನೆ (ಆಣೆಯನ್ನಿಟ್ಟು

ದಿಂದ ಲಕ್ಷ್ಮಣನೂ ಬೆನ್ನಿಟ್ಟಂತು ಶ್ರೀರಾಮನನ್ನು ಅರಸುತ್ತ ಹೊರಟನು. ಹೀಗೆ ಲಕ್ಷ್ಮಣನೊಡನೆ ದಾಶರಥಿಯು ಬೇರೆ ಕೆಲಸದಲ್ಲಿ ಇದ್ದುದಲ್ಲದೆ, ಮೊದಲಿನಿಂದಲೂ ರಕ್ಕಸರೊಡನೆ ವೈರವು ಹೆಚ್ಚುತ್ತಲೇ ಇತ್ತು ; ಇಂತಹ ದಶರಥನನಂದನನ ಧರ್ಮಭಾರ್ಯೆಯನ್ನು ದಶಕಂಠನು ಅಪಹರಿಸಿಕೊಂಡು ಹೋದನು ॥ ೧೫೪ ॥ ಆದುದರಿಂದ ಶ್ರೀರಾಮಚರಣ ಸೇವಕನಾದ ನಾನು ಆ ಮಹಾನುಭಾವನ ಅಪ್ಪಣೆಯಂತೆ ದೂತಕೃತ್ಯವನ್ನು ನೆರವೇರಿಸಲು ಸೀತೆಯ ಚರಣ ಸನ್ನಿಧಿಯನ್ನು ಕುರಿತು ಹೋಗುತಲಿದ್ದೇನೆ. ತ್ರಿಲೋಕನಾಥನಾದ ಆ ದಾಶರಥಿಯ ಆಳ್ವಿಕೆಗೆ ಒಳಪಟ್ಟ ದೇಶದಲ್ಲಿ ವಾಸಮಾಡುತಲಿರುವ ಸಾಧ್ವಿಯಾದ ನೀನು ಇಷ್ಟುಮಾತ್ರವಾದರೂ ಸಹಾಯ ಮಾಡಬೇಕು. ॥ ೧೫೫ ॥ ಹೆಂಗಸಾದ ನಿನಗೆ ಇಷ್ಟುಮಾತ್ರದ ಸ್ಥೈರ್ಯವೂ ಇಲ್ಲದೆ ಹೋಗುವಪಕ್ಷದಲ್ಲಿ, ಎಂದರೆ- "ನಿನ್ನನ್ನು ಭಕ್ಷಿಸುವುದೇ ಸರಿ" ಎಂಬೆಯೊ ? ಹಾಗಾದರೆ—ಪತಿವ್ರತಾಶಿರೋಮಣಿಯೆನಿಸಿದ ಸರ್ವಲೋಕೋಪಕಾರಿಣಿಯಾದ ಸೀತೆಯನ್ನು ದರ್ಶನಮಾಡಿ, ಆಕೆಯ ಕುಶಲವೃತ್ತಾಂತವನ್ನು, ಸರ್ವಭೂತದಯಾಪರನನಿಸಿ ಸರ್ವಲೋಕಕ್ಷೇಮಂಕರನಾದ ಶ್ರೀರಾಮಚಂದ್ರನಿಗೆ ವಿಜ್ಞಾಪಿಸಿ,

ಏವಮುಕ್ತಾ ಹನುಮತಾ ಸುರಸಾ ಕಾಮರೂಪಿಣೀ ।
ಅಬ್ರವೀನ್ನಾತಿವರ್ತೇತ ಕಶ್ಚಿದೇಷ ವರೋ ಮಮ ॥೧೫೭॥
(ತಂ ಪ್ರಯಾಂತಂ ಸಮುದ್ವೀಕ್ಷ್ಯ ಸುರಸಾ ವಾಕ್ಯಮಬ್ರವೀತ್ ।
ಬಲಂ ಜಿಜ್ಞಾಸಮಾನಾ ವೈ ನಾಗಮಾತಾ ಹನೂಮತಃ ॥೧॥
ಪ್ರವಿಶ್ಯ ವದನಂ ಮೇऽದ್ಯ ಗಂತವ್ಯಂ ವಾನರೋತ್ತಮ ।

---

ಹೇಳುತ್ತೇನೆ) ॥೧೫೬॥ ಕಾಮರೂಪಿಣೀ - ಇಷ್ಟವಾದ ರೂಪವನ್ನು ತಾಳುವ, ಸಾ - ಆ ಸುರಸೆ ಯೆಂಬುವಳು, ಹನುಮತಾ- ಆಂಜನೇಯನಿಂದ, ಏವಂ - ಈ ಮೇಲೆ ಹೇಳಿದಂತೆ, ಉಕ್ತಾ-ಹೇಳಲ್ಪಟ್ಟ ವಳಾಗಿ, (ತಂ ಆ ಆಂಜನೇಯನನ್ನು ಕುರಿತು, ಏವಂ-ಈ ಮುಂದೆ ಹೇಳುವಹಾಗೆ) ಅಬ್ರವೀತ್ - ಹೇಳಿದಳು, ನಾತಿವರ್ತೇತ - ನೀನು ನನ್ನ ಮಾತನ್ನು ಮೀರಿಹೋಗಕೂಡದು, ಏಷಃ - ಇಲ್ಲಿಗೆ ಬಂದವರು ನನ್ನ ಅಪ್ಪಣೆಯಂತೆ ನಡೆಯಬೇಕು ಎಂಬುದು, ಮಮ - ನನಗೆ, ವರಃ - ವರವಾಗಿ ಬಂದಿದೆ. ಏವಂ - ಈ ಪ್ರಕಾರವಾಗಿ, ಉಕ್ತ್ವಾ - ಹೇಳಿ, ನಾಗಮಾತಾ - ನಾಗಗಳಿಗೆ ತಾಯಿಯಾದ, ಸುರಸಾ- ಸುರಸೆ ಯೆಂಬುವಳು, ಹನೂಮತಃ - ಆಂಜನೇಯನ, ಬಲಂ - ಶಕ್ತಿಯನ್ನು, ಜಿಜ್ಞಾಸಮಾನಾ ವೈ- ತಿಳಿಯಬೇಕೆಂಬ ಕೋರಿಕೆಯುಳ್ಳವಳಾದ ಕಾರಣನೇ, ಪ್ರಯಾಂತಂ - ಮೀರಿಹೋಗುತಲಿರುವ, ತಂ-ಆ ಆಂಜನೇಯನನ್ನು, ಸಮುದ್ವೀಕ್ಷ್ಯ - ದುರದುರನೆ ನೋಡಿ, ವಾಕ್ಯಂ - ಈ ಮಾತನ್ನು, ಅಬ್ರವೀತ್- ಹೇಳಿದಳು ॥೧॥ ಹೇ ವಾನರೋತ್ತಮ ! ಎಲೈ ಕಪಿವರನೇ ! ಅದ್ಯ - ಈಗ, ತ್ವಯಾ - ನಿನ್ನಿಂದ, ಮೆ- ನನ್ನ, ವದನಂ - ಬಾಯನ್ನು, ಪ್ರವಿಶ್ಯ - ಹೊಕ್ಕು, ಗಂತವ್ಯಂ - (ಮುಂದಕ್ಕೆ) ಪ್ರಯಾಣಮಾಡಲ್ಪಡತಕ್ಕದು, (ಏಷಃ - ಇಲ್ಲಿಗೆ ಬಂದವರು ಹೀಗೆ ನಡೆಯಬೇಕು ಎಂಬ) ಇದು, ಧಾತ್ರಾ - ಬ್ರಹ್ಮನಿಂದ, ಪುರಾ - ಪೂರ್ವಕಾಲದಲ್ಲಿ, ಮಮ - ನನಗೆ, ವರಃ - ವರವಾಗಿ, ದತ್ತಃ - ಕೊಡಲ್ಪಟ್ಟಿದೆ,

---

ಅಲ್ಲಿಂದ ಬಂದು ನಿನ್ನ ಬಾಯ ಒಳಹೊಗುವೆನು, ಈ ನನ್ನ ಮಾತನ್ನು ಸತ್ಯವಾದುದನ್ನಾಗಿ ನಂಬು. ನಾನೀಮಾತನ್ನು ಪ್ರಮಾಣಪೂರ್ವಕವಾಗಿ ಹೇಳುತ್ತೇನೆ ॥ ೧೫೬ ॥ ಎಂದೀ ಪ್ರಕಾರ ಆಂಜನೇಯನು ಮುಕುಳಿತ ಕರಸಂಪುಟನಾಗಿ ವಿಜ್ಞಾಪಿಸುತ್ತಿರಲು, ತನ್ನ ಮನ ಬಂದ ರೂಪವನ್ನು ತಾಳುವುದರಲ್ಲಿ ಸಮರ್ಥಳಾದ ಸುರಸೆಯು, ಎಲೈ ಕಪಿವರನೇ ! ನನ್ನ ಸಮೀಪಕ್ಕೆ ಬಂದ ಪ್ರಾಣಿಯು ನನ್ನನ್ನು ಮೀರಿಹೋಗುವುದೆಂಬುದು ಅಸಾಧ್ಯ. ನೀನು ಹಾಗೆ ಮೀರಿಹೋಗಲಾರೆ, ನೀನೀಗ ನನ್ನ ಬಾಯೊಳಗೆ ಪ್ರವೇಶಿಸಲೇಬೇಕು, ನನಗೆ ಈ ರೀತಿಯಾಗಿ ದೇವತೆಗಳ ವರವೂ ಉಂಟು ॥ ೧೫೭ ॥ (ಎಂದು ಹೇಳಿದುದಲ್ಲದೆ,ನಾಗಮಾತೆ ಯಾದ ಆ ಸುರಸೆಯು-ತನ್ನಷ್ಟಕ್ಕೆ ತಾನು ಪ್ರಯಾಣಮಾಡುತ್ತಿರುವ ಆಂಜನೇಯನಿಗೆ ಎದು ರಾಗಿನಿಂತು ಅವನನ್ನು ಹೆಜ್ಜೆಯಿಂದ ಶಿರದವರೆಗೂ ಬಿರುಬಿರನೆ ನೋಡಿ, ಆತನ ಬಲದ ಇಯು ತ್ತೆಯನ್ನು ತಿಳಿಯಬೇಕೆಂದು ನೆನೆದಿದ್ದಳಾದ್ದರಿಂದಲೇ ಮತ್ತಿಂತೆಂದಳು- ॥ ೧೫೮ ॥ ಎಲೈ ವಾನರೋತ್ತಮನೇ ! ನನ್ನ ಬಾಯನ್ನು ಹೊಕ್ಕು ಉಳಿದಬಳಿಕಲೇ ನೀನು ಮುಂದಕ್ಕೆ ಪಯಣಮಾಡಬೇಕು. ಇಲ್ಲಿಗೆ ಬಂದವರು ನನ್ನ ಬಾಯಿಯನ್ನು ಹೊಗದೆ ಮುಂದೆ ಪಯಣಮಾಡದಹಾಗೆ ನನಗೆ ಬ್ರಹ್ಮನ ವರವುಂಟು ಎಂದು ಹೇಳಿ, ಬಲುಬೇಗನೆ ಅವನನ್ನು

ವರ ಏಷ ಪುರಾ ದತ್ತೋ ಮಮ ಧಾತ್ರೇತಿ ಸತ್ವರಾ ॥೨॥
ವ್ಯಾದಾಯ ವಕ್ತ್ರಂ ವಿಪುಲಂ ಸ್ಥಿತಾ ಸಾ ಮಾರುತೇಃ ಪುರಃ ।
ಏವ ಮುಕ್ತ ಸ್ಸುರಸಯಾ ಕ್ರುದ್ಧೋ ವಾನರ ಪುಂಗವಃ ॥೩॥
ಅಬ್ರವೀ ತ್ಕುರು ವೈ ವಕ್ತ್ರಂ ಯೇನ ಮಾಂ ವಿಷಹಿಷ್ಯಸೇ ।
ಇತ್ಯುಕ್ತ್ವಾ ಸುರಸಾಂ ಕ್ರುದ್ಧೋ ದಶಯೋಜನ ಮಾಯತಃ ॥೪॥
ದಶಯೋಜನ ವಿಸ್ತಾರೋ ಬಭೂವ ಹನುಮಾಂ ಸ್ತದಾ ॥ ೪॥ ॥
ತಂ ದೃಷ್ಟ್ವಾ ಮೇಘಸಂಕಾಶಂ ದಶಯೋಜನ ಮಾಯತಂ ।
ಚಕಾರ ಸುರಸಾಚಾಸ್ಯಂ ವಿಂಶದ್ಯೋಜನ ಮಾಯತಂ ॥ ೫॥ ॥

ಇತಿ - ಹೀಗೆಂದು, ಸತ್ವರಾ - ವೇಗದಿಂದೊಡಗೂಡಿದವಳಾಗಿ ॥೨॥ ಸಾ ಆ ಸುರಸೆಯು, ವದನಂ - ಬಾಯನ್ನು, ವಿಪುಲಂ - ಬಲು ಅಗಲವಾಗಿ, ವ್ಯಾದಾಯ - ತೆರೆದುಕೊಂಡು, ಮಾರುತೇಃ - ಆಂಜನೇಯನ, ಪುರಃ - ಎದುರಿಗೆ, ಸ್ಥಿತಾ - ನಿಂತುಕೊಂಡಳು ॥೨॥ ॥ ಸುರಸಯಾ-ಸುರಸೆ ಯೆಂಬುವವಳಿಂದ, ಏವಂ - ಈ ಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟ, ವಾನರಪುಂಗವಃ - ಕಪಿವರನಾದ ಆಂಜನೇಯನು, ಕ್ರುದ್ಧಃ - ಸಿಟ್ಟುಗೊಂಡವನು ॥೩॥ (ಹೇ ಸುರಸೇ - ಎಲೌ ಸುರಸೆಯೇ ! ಯೇನ - ಎಂತಹ ಬಾಯಿಂದ ಮಾಂ - ಪ್ರಾರ್ಥಿಸುವ ನನ್ನನ್ನು, ವಿಷಹಿಷ್ಯಸೆ - ತಾಳಬಲ್ಲೆಯೋ, (ನುಂಗಬಲ್ಲೆಯೋ) ತತ್ - ಅಂತಹ (ಅಷ್ಟು ಅಗಲವ) ಬಾಯನ್ನು, ಕುರುವೈ - ಅಣಿಮಾಡಿಕೋ, ಇತಿ - ಹೀಗೆಂದು, ಸುರಸಾಂ - ಸುರಸೆಯನ್ನು ಕುರಿತು, ಉಕ್ತ್ವಾ - ಹೇಳಿ, ಕ್ರುದ್ಧಃ - ರೋಷಗೊಂಡವನಾದ ಕಾರಣವೇ, ತದಾ - ಆಗ, ಹನುಮಾನ್ - ಆಂಜನೇಯನು, ದಶಯೋಜನಂ - ಹತ್ತುಗಾವುದಗಳಷ್ಟು, ಆಯತಃ - ಉದ್ದವಾಗಿ ಬೆಳೆದವನೂ, ದಶಯೋಜನ - ಹತ್ತುಗಾವುದದಷ್ಟು, ವಿಸ್ತಾರಃ - ಅಗಲ (ಗಾತ್ರ) ನಾದವ ನಾಗಿ, ಬಭೂವ - ನಿಂತನು ॥ ೪ ॥ ॥ ದಶಯೋಜನಂ - ಹತ್ತು ಗಾವುದದಷ್ಟು ಉದ್ದನಾದ [illegible], ಮೇಘಸಂಕಾಶಂ - ಮೇಘಕ್ಕೆಣೆಯಾಗಿ ಕಾಣಬರುವ, ತಂ - ಆ ಆಂಜನೇಯನನ್ನು, ದೃಷ್ಟ್ವಾ - ನೋಡಿ, ಸುರಸಾಚ - ಸುರಸೆಯೂ, ಆಸ್ಯಂ - ತನ್ನ ಬಾಯನ್ನೂ, ವಿಂಶದ್ಯೋಜನಂ - ಇಪ್ಪತ್ತು ಗಾವುದಗಳಷ್ಟು, ಆಯತಂ - ಉದ್ದವಾದುದನ್ನಾಗಿಯೇ, ಚಕಾರ -

ನುಂಗಲಿಕ್ಕೆ ಅಣಿಯಾಗುವಂತೆ ತನ್ನ ಬಾಯನ್ನು ಅಗಲವಾಗಿ ತೆರೆದುಕೊಂಡು ಅವನ ಎದುರಿಗೆ ನಿಂತಳು ॥ ೨ ॥ ಇತ್ತ ಸುರಸೆಯು ಹೇಳಿದ ಕೂಡಲೇ ಹಮ್ಮೀರನಾದ ಹನುಮನಿಗೆ ಹೇರಳವಾಗಿ ಸಿಟ್ಟುಹತ್ತಿತು ॥ ೩ ॥ ಹಾಗೆ ರೋಷಬಂದಕೂಡಲೇ ಮಾರುತಿಯು ಎಲೆ ಸುರಸೆ ! ಒಳ್ಳೆಯದು! ಈ ನನ್ನ ಶರೀರವು ಹಿಡಿಸಲಿಕ್ಕೆ ಹೇಗಾದರೆ ತಕ್ಕುದಾಗುವುದೋ ಹಾಗೆ ನಿನ್ನ ಬಾಯನ್ನು ತೆರೆ, ನೋಡೋಣ, ಎಂದು ಅವಳನ್ನು ಕುರಿತು ಹೇಳಿ, ತಾನು ಹತ್ತುಗಾವುದಗಳಷ್ಟು ಉದ್ದವಾಗಿಯೂ, ಹತ್ತುಗಾವುದಗಳ ಪ್ರಮಾಣದಷ್ಟು ಅಗಲವಾಗಿಯೂ ಇರುವ ಹಾಗೆ ಬೆಳೆದು ನಿಂತನು ॥ ೪ ॥ ॥ ಹಾಗೆ ಹತ್ತುಗಾವುದದ ಎತ್ತರಕ್ಕೆ ಬೆಳೆದು ಮೇಘದಂತೆ ತೋರವಾಗಿ ಕಾಣಬರುತ್ತಿರುವ ಹನುಮನನ್ನು ನೋಡಿ, ಸುರಸೆಯು ಸುಮ್ಮನಾಗಲಿಲ್ಲ, ಅವನನ್ನು ನುಂಗಲಿಕ್ಕೆ ತಕ್ಕಂತೆ ತನ್ನ ಬಾಯನ್ನು ಇಪ್ಪತ್ತು ಗಾವುದಗಳಷ್ಟು ವಿಸ್ತರಿಸಿ ನಿಂತಳು. ॥೫॥ ॥ ಆಂಜನೇಯನು ಆ ಮೇಲೆ ಮತ್ತಷ್ಟು ಕೋಪ

ತಾಂ ದೃಷ್ಟ್ವಾ ವಿಸ್ತೃತಾಸ್ಯಾಂ ತು ವಾಯುಪುತ್ರಸ್ಸುಬುದ್ಧಿಮಾನ್ ।
ಹನೂಮಾಂಸ್ತು ತತಃ ಕ್ರುದ್ಧಸ್ತ್ರಿಂಶದ್ಯೋಜನಮಾಯತಃ ॥ ೬ ॥
ಚಕಾರ ಸುರಸಾ ವಕ್ತ್ರಂ ಚತ್ವಾರಿಂಶತ್ತಥೋಚ್ಛ್ರಿತಂ ।
ಬಭೂವ ಹನುಮಾನ್ವೀರಃ ಪಂಚಾಶದ್ಯೋಜನೋಚ್ಛ್ರಿತಃ ॥ ೭ ॥
ಚಕಾರ ಸುರಸಾ ವಕ್ತ್ರಂ ಷಷ್ಟಿಯೋಜನಮಾಯತಂ ।
ತಥೈವ ಹನುಮಾನ್ವೀರಸ್ಸಪ್ತತೀಯೋಜನೋಚ್ಛ್ರಿತಃ ॥ ೮ ॥
ಚಕಾರ ಸುರಸಾ ವಕ್ತ್ರಮಶೀತೀಯೋಜನಾಯತಂ ।
ಹನುಮಾನಚಲಪ್ರಖ್ಯೋ ನವತೀಯೋಜನೋಚ್ಛ್ರಿತಃ ॥ ೯ ॥

ಮಾಡಿದಳು ॥೫॥ ತತಸ್ತು - ಅದನ್ನು ನೋಡಿದ ಬಳಿಕಲಾದರೋ, ಸುಬುದ್ಧಿಮಾನ್ - ಬಹುಬುದ್ಧಿಶಾಲಿಯಾಗಿರುವ, ವಾಯುಪುತ್ರಃ - ವಾಯುಕುಮಾರನಾದ, ಹನೂಮಾನ್ - ಆಂಜನೇಯನೂ, ವಿಸ್ತೃತಾಸ್ಯಾಂ - ತೆರೆದಬಾಯುಳ್ಳ, ತಾಂ - ಆ ಸುರಸೆಯನ್ನು, ದೃಷ್ಟ್ವಾ - ನೋಡಿದ ಕೂಡಲೇ, ಕ್ರುದ್ಧಃ - ಕೋಪಿಸಿಕೊಂಡವನಾಗಿ, ತ್ರಿಂಶದ್ಯೋಜನಂ - ಮೂವತ್ತು ಗಾವುದಗಳಷ್ಟು, ಆಯತಃ - ಉದ್ದನಾಗಿ ಬೆಳೆದವನು, (ಬಭೂವ - ಆದನು) ॥೬॥ ಸುರಸಾ - ಸುರಸೆಯೂ, ತಥಾ - ಹಾಗೆಯೇ, ವಕ್ತ್ರಂ - ತನ್ನ ಬಾಯನ್ನೂ - ಚತ್ವಾರಿಂಶತ್ - ನಲವತ್ತು ಗಾವುದಗಳಷ್ಟು, ಉಚ್ಛ್ರಿತಂ - ಎತ್ತರವಾದುದನ್ನಾಗಿ, ಚಕಾರ - ಕಲ್ಪಿಸಿಕೊಂಡಳು ॥೭॥ ವೀರಃ - ಪರಾಕ್ರಮಶಾಲಿಯಾದ, ಹನುಮಾನ್ - ಆಂಜನೇಯನು, ಪಂಚಾಶತ್ - ಐವತ್ತಾದ, ಯೋಜನ - ಗಾವುದಗಳಷ್ಟು, ಉಚ್ಛ್ರಿತಃ - ಉನ್ನತನಾದವನು, ಬಭೂವ - ಆದನು ॥೭॥ ಸುರಸಾ - ಸುರಸೆಯು, ವಕ್ತ್ರಂ - ತನ್ನ ಬಾಯನ್ನು, ಷಷ್ಟಿಯೋಜನಂ - ಅರವತ್ತು ಗಾವುದಗಳಷ್ಟು, ಆಯತಂ - ವಿಸ್ತಾರವುಳ್ಳುದನ್ನಾಗಿ, ಚಕಾರ - ಮಾಡಿದಳು ॥೮॥ ವೀರಃ - ಶೂರನಾದ, ಹನುಮಾನ್ - ಆಂಜನೇಯನೂ, ತಥೈವ - ಹಾಗೆಯೇ, ಸಪ್ತತೀ - ಎಪ್ಪತ್ತಾದ, ಯೋಜನ - ಗಾವುದಗಳಷ್ಟು, ಉಚ್ಛ್ರಿತಃ - ಎತ್ತರನಾಗಿ ಬೆಳೆದವನು, ಬಭೂವ - ಆದನು ॥೮॥ ಸುರಸಾ - ಸುರಸೆಯು, ವಕ್ತ್ರಂ - ಬಾಯನ್ನು, ಅಶೀತೀ - ಎಂಭತ್ತು, ಯೋಜನ - ಗಾವುದಗಳಷ್ಟು, ಆಯತಂ - ವಿಶಾಲವಾದುದನ್ನಾಗಿ, ಚಕಾರ - ಮಾಡಿದಳು ॥೯॥ ಅಚಲಪ್ರಖ್ಯಃ - ಬೆಟ್ಟಕ್ಕೆ

ಗೊಂಡು ಮೂವತ್ತು ಗಾವುದಗಳ ಅಗಲವೂ, ಅಷ್ಟೇ ಉದ್ದವೂ ಆಗಿರುವಂತೆ ಬೆಳೆದುನಿಂತನು ॥೬॥ ಆ ಕೂಡಲೇ ಸುರಸೆಯೂ ತನ್ನ ಬಾಯನ್ನು ನಲವತ್ತು ಗಾವುದಗಳಷ್ಟು ವಿಶಾಲವಾಗುವಂತೆ ಕಲ್ಪಿಸಿನಿಂತಳು ॥೭॥ ಹನುಮನು ಅಲ್ಲಿಗೆ ಸುಮ್ಮನಾದನೆ ? ಇಲ್ಲ. ಮಹಾವೀರನಲ್ಲವೆ? ಐವತ್ತು ಗಾವುದಗಳಷ್ಟು ಉನ್ನತನಾದನು ॥೭॥ ಸುರಸೆಯೇನು ಸಾಮಾನ್ಯಳೆ ? ಅವಳೂ ಅರವತ್ತು ಗಾವುದಗಳಷ್ಟು ಉದ್ದಕ್ಕೆ ಬೆಳೆದಳು ॥೮॥ ಆಂಜನೇಯನು ಅವಳಿಗಿಂತ ಏನೂ ಕಡಮೆಯಿಲ್ಲ, ತಾನೂ ಎಪ್ಪತ್ತು ಗಾವುದಗಳ ಎತ್ತರನಾಗಿ ಕಾಣಿಸಿಕೊಂಡನು ॥೮॥ ಸುರಸೆಯು ಮತ್ತಿಷ್ಟು ಉಬ್ಬಿ ಎಂಭತ್ತು ಗಾವುದಗಳಷ್ಟಾದಳು ॥೯॥ ಬಳ್ಳಿಯದಣಿ ನೋಡೋಣ ಎಂದು ಮಾರುತಿಯು ಸರಿಯಾಗಿ ತೊಂಭತ್ತು ಗಾವುದಗಳ ಪರಿಮಾಣವುಳ್ಳವನಾಗಿ ನಿಂತನು ॥೯॥ ಸುರಸೆಯು ಇವನನ್ನು ಕೆಂಗಾಣಿಸಿಯೇ ಬಿಡಬೇಕೆಂದು ನೆನೆದು ಸರಿಯಾಗಿ ನೂರು ಗಾವುದಗಳಷ್ಟು ಉದ್ದವಾಗಿ ಬೆಳೆದು ಭೂಮ್ಯಂತರಿಕ್ಷ

ಚಕಾರ ಸುರಸಾ ವಕ್ತ್ರಂ ಶತಯೋಜನ ಮಾಯತಂ) ॥ ೧೦ ॥
ತದ್ದೃಷ್ಟ್ವಾ ವ್ಯಾದಿತಂ ತ್ವಾಸ್ಯಂ ವಾಯುಪುತ್ರ ಸ್ಸುಬುದ್ಧಿಮಾನ್॥
(ದೀರ್ಘಜಿಹ್ವಂ ಸುರಸಯಾ ಸುಘೋರಂ ನರಕೋಪಮಂ)
ಸುಸಂಕ್ಷಿಪ್ಯಾತ್ಮನಃ ಕಾಯಂ ಬಭೂವಾಂಗುಷ್ಠ ಮಾತ್ರಕಃ ॥೧೫೪॥
ಸೋಽಭಿಪತ್ಯಾಶು ತದ್ವಕ್ತ್ರಂ ನಿಷ್ಪತ್ಯ ಚ ಮಹಾಜವಃ ।
ಅಂತರಿಕ್ಷೇ ಸ್ಥಿತಃ ಶ್ರೀಮಾ ನಿದಂ ವಚನ ಮಬ್ರವೀತ್ ॥೧೫೫॥
ಪ್ರವಿಷ್ಟೋಽಸ್ಮಿ ಹಿ ತೇ ವಕ್ತ್ರಂ ದಾಕ್ಷಾಯಣಿ ನಮೋಽಸ್ತು ತೇ ।

ಎಣೆಯಾಗಿರುವ, ಹನುಮಾನ್-ಆಂಜನೇಯನು, ನವತೀ-ತೊಂಭತ್ತಾದ, ಯೋಜನ-ಗಾವುದಗಳ, ಉಚ್ಛ್ರಿತಃ-ಪ್ರಮಾಣದವನಾಗಿ ನಿಂತನು ॥೯॥ ಸುರಸಾ-ಸುರಸೆಯು, ವಕ್ತ್ರಂ - ತನ್ನ ಬಾಯನ್ನು, ಶತಯೋಜನಂ - ನೂರುಗಾವುದಗಳಷ್ಟು, ಆಯತಂ-ಪ್ರಮಾಣವುಳ್ಳುದನ್ನಾಗಿ, ಚಕಾರ-ಮಾಡಿದಳು ॥೧೦॥) ಸುಬುದ್ಧಿಮಾನ್ - ಬಹುಬುದ್ಧಿವಂತನಾದ, ವಾಯುಪುತ್ರಃ - ವಾಯುಕುಮಾರನಾದ ಆಂಜನೇಯನು, ಸುರಸಯಾ - ಸುರಸೆಯಿಂದ, ವ್ಯಾದಿತಂ - ತೆರೆಯಲ್ಪಟ್ಟಿರುವುದಾದಕಾರಣವೇ, (ದೀರ್ಘಜಿಹ್ವಂ - ನೀಳವಾದ ನಾಲಿಗೆಯುಳ್ಳ, ಸುಘೋರಂ - ಬಹು ಭಯಂಕರವಾದ, (ಅದರಿಂದಲೇ) ನರಕೋಪಮಂ - ಯಾತನಾಸ್ಥಾನಕ್ಕೆಣೆಯಾದ, ತತ್ - ಆ, ಆಸ್ಯಂ - ಬಾಯನ್ನು, ದೃಷ್ಟ್ವಾ - ನೋಡಿ, ಆತ್ಮನಃ - ತನ್ನ, ಕಾಯಂ - ಶರೀರವನ್ನು, ಸುಸಂಕ್ಷಿಪ್ಯ - ಬಹಳವಾಗಿ ಅಡಗಿಸಿ, ಅಂಗುಷ್ಠ ಮಾತ್ರಕಃ - ಹೆಬ್ಬೆರಳಿನಷ್ಟುಮಾತ್ರನಾದವನಾಗಿ, ಬಭೂವ - ಇದ್ದನು ॥೧೫೪॥ ಮಹಾಜವಃ - ಬಹುವೇಗವುಳ್ಳ, ಸಃ - ಆ ಆಂಜನೇಯನು, ತದ್ವಕ್ತ್ರಂ - ಆ ಸುರಸೆಯುತೆರೆದ ಬಾಯನ್ನು, ಆಶು - ಬಹುಬೇಗನೆ, ಅಭಿಪತ್ಯ (ಅವಳ ಕಣ್ಣೆದುರಿಗೇ) ಒಳಹೊಕ್ಕು, ನಿಷ್ಪತ್ಯಚ - ಹೊರಗೂ ಬಂದು, ಇದಂವಚನಂ - ಈ ಮುಂದಿನ ಮಾತನ್ನು, ಅಬ್ರವೀತ್ - ಹೇಳಿದನು - ॥೧೫೫॥ ದಾಕ್ಷಾಯಣಿ - ದಕ್ಷಪುತ್ರಿಯಾದ ಓಸುರಸಯೇ, ತೇ - ನಿನ್ನ, ವಕ್ತ್ರಂ - ಬಾಯನ್ನು, ಪ್ರವಿಷ್ಟಃ-ಪ್ರವೇಶಿಸಿದವನು, ಅಸ್ಮಿಹಿ - ಆಗಿದೇನೆಯಷ್ಟೆ, ತೇ - ನಿನಗೆ, ನಮಃ - ನಮಸ್ಕಾರವು, ಅಸ್ತು - ಆಗಲಿ, ವೈದೇಹೀ - ಜಾನಕಿಯು, ಯತ್ರ - ಎಲ್ಲಿರುವಳೋ, ತತ್ರ-ಅಲ್ಲಿ; ಗಮಿಷ್ಯೇ - ಹೊರಡುವೆನು, ತವ - ನಿನ್ನ, ವರಶ್ಚ - ಬ್ರಹ್ಮನಿಂದ ಪಡೆದಿ

ಗಳಿಗೆ ಏಕಾಕಾರವಾಗಿ ನಿಂತಳು ॥೧೦॥) ಆಗ-ಬಲುಜಾಣನಾದ ಆಂಜನೇಯನು ನೀಳವಾದ ನಾಲಿಗೆಯುಳ್ಳುದಾಗಿಯೂ, ಬಲು ಅಂಜಿಕೆಯನ್ನುಂಟುಮಾಡತಕ್ಕುದಾಗಿಯೂ, ಯಮಲೋಕದ ನರಕದಂತೆ ಕಾಣಬರತಕ್ಕುದಾಗಿಯೂ ಇರುವಂತೆ ತೆರದಿರುವ ಸುರಸೆಯ ಬಾಯನ್ನು ನೋಡಿ, ಇದೇ ನನ್ನ ಚಾತುರ್ಯಕ್ಕೆ ಸರಿಯಾದ ಸಮಯವೆಂದು ನೆನೆದು, ಕೂಡಲೇ, ಬಹು ಉನ್ನತವಾಗಿದ್ದ ತನ್ನ ಶರೀರವನ್ನು ಒಂದು ಹೆಬ್ಬೆರಳಿನಷ್ಟುಗಾತ್ರ ಸಣ್ಣಗಾಗುವಂತೆ ಮಾಡಿಕೊಂಡು, ಅದರೊಳಕ್ಕೆ ಪ್ರವೇಶಿಸಿ ಇದ್ದು, ಪುನಃ ಹೊರಕ್ಕೆ ಬಂದು, ಆಕಾಶದಲ್ಲಿ ನಿಂತು, ಆಕೆಯನ್ನು ಕುರಿತು ಇಂತೆಂದನು:— ॥ ೧೫೫ ॥ ದಕ್ಷಬ್ರಹ್ಮನ ಕುಮಾರಿಯಾದ ಎಲಾ ಸುರಸಾದೇವಿಯೇ! ನಿನ್ನ ಕೋರಿಕೆಯಂತೆಯೇ ನಾನು ನಿನ್ನಯ ಬಾಯೊಳಕ್ಕೆ ಪ್ರವೇಶಿಸಿ ಇದ್ದು ಹೊರಗೆ ಬಂದಿದೇನೆ, ನೀನು ಬ್ರಹ್ಮನಿಂದ ಪಡೆದುಕೊಂಡಿದ್ದ ವರವು ಸಫಲವಾಯಿತಷ್ಟೆ? ಇಗೋ ನಿನಗೆ ವಂದನೆಯನ್ನು ಒಪ್ಪಿಸುತ್ತೇನೆ. ಇನ್ನು ಜನಕನಂದಿನಿಯು

ಗಮಿಷ್ಯೇ ಯತ್ರ ವೈದೇಹೀ ಸತ್ಯಶ್ಚಾಸೀದ್ವಚಸ್ತವ ||೧೬೦||
ತಂ ದೃಷ್ಟ್ವಾ ವದನಾನ್ಮುಕ್ತಂ ಚಂದ್ರಂ ರಾಹುಮುಖಾದಿವ |
ಅಬ್ರವೀತ್ಸುರಸಾದೇವೀ ಸ್ವೇನ ರೂಪೇಣ ವಾನರಂ ||೧೬೧ ||
ಅರ್ಥಸಿದ್ಧ್ಯೈ ಹರಿಶ್ರೇಷ್ಠ ಗಚ್ಛ ಸೌಮ್ಯ ಯಥಾಸುಖಂ |
ಸಮಾನಯಸ್ವ ವೈದೇಹೀಂ ರಾಘವೇಣ ಮಹಾತ್ಮನಾ ||೧೬೨||
ತತ್ತೃತೀಯಂ ಹನುಮತೋ ದೃಷ್ಟ್ವಾ ಕರ್ಮ ಸುದುಷ್ಕರಂ |
ಸಾಧುಸಾಧ್ವಿತಿ ಭೂತಾನಿ ಪ್ರಶಶಂಸುಸ್ತದಾ ಹರಿಂ ||೧೬೩||
ಸ ಸಾಗರಮನಾಧೃಷ್ಯಮಭ್ಯೇತ್ಯ ವರುಣಾಲಯಂ |

---

ದ್ವಚನವೂ, ಸತ್ಯಃ - ವ್ಯರ್ಥವಾಗದಿರುವುದು, ಬಭೂವ-ಆಯಿತಲ್ಲವೆ? ||೧೬೦|| ಸುರಸಾ-ಸುರಸೆಯೆಂಬ, ದೇವೀ - ದೇವತಾಸ್ತ್ರೀಯು, ರಾಹು - ಸಿಂಹಿಕಾ ಪುತ್ರನಾದ ರಾಹುವಿನ, ಮುಖಾತ್ - ಬಾಯಿಯ ದೆಸೆಯಿಂದ, ಮುಕ್ತಂ - ಬಿಡಲ್ಪಟ್ಟ, ಚಂದ್ರಮಿವ - ಚಂದ್ರನಂತೆ, ವದನಾತ್ - ತನ್ನ ಮುಖದ ದೆಸೆಯಿಂದ, ಮುಕ್ತಂ - ಬಿಡಲ್ಪಟ್ಟ, ತಂ - ಆ, ವಾನರಂ - ಕಪಿವೀರನನ್ನು, ದೃಷ್ಟ್ವಾ - ನೋಡಿ, ಸ್ವೇನ - ತನ್ನ ಸ್ವಂತವಾದ, ರೂಪೇಣ - ಆಕಾರದಿಂದ (ಉಪಲಕ್ಷಿತಾ - ಕೂಡಿದವಳಾಗಿ) ಅಬ್ರವೀತ್ - ಇಂತೆಂದಳು, ||೧೬೧|| ಸೌಮ್ಯ - ಸುಮುಖನಾದ, ಹರಿಶ್ರೇಷ್ಠ - ಎಲೈ ಕಪಿವರನೇ! ಅರ್ಥಸಿದ್ಧ್ಯೈ - ಕಾರ್ಯವನ್ನು ನೆರವೇರಿಸಲಿಕ್ಕೆ, ಯಥಾಸುಖಂ - ಸುಖವಾಗಿ, ಗಚ್ಛ - ಪ್ರಯಾಣಮಾಡು, ಮಹಾತ್ಮನಾ - ಮಹಾನುಭಾವನಾದ ರಾಘವೇಣ - ಶ್ರೀರಾಮನೊಡನೆ, ವೈದೇಹೀಂ - ಜಾನಕಿಯನ್ನು, ಸಮಾನಯಸ್ವ - ಸೇರಿಸು, ||೧೬೨|| ಭೂತಾನಿ - ಸಕಲಜಂತುಗಳೂ, ಹನುಮತಃ - ಆಂಜನೇಯನ, ಸುದುಷ್ಕರಂ - ಅತ್ಯಂತ ಅಸಾಧ್ಯವಾದ, ತತ್ - ಆ, ತೃತೀಯಂ - ಮೂರನೆಯದಾದ, ಕರ್ಮ - (ಸುರಸೆಯ ಬಾಯಿಂದ ಹೊರಗೆ ಬಂದ) ಕೆಲಸವನ್ನು, ದೃಷ್ಟ್ವಾ - ನೋಡಿ, ತದಾ - ಆಗ, ಸಾಧುಸಾಧು - ಉತ್ತಮೋತ್ತಮ, ಇತಿ - ಹೀಗೆಂದು, ಪ್ರಶಶಂಸುಃ - ಹೊಗಳುತಿದ್ದರು ||೧೬೩|| ಗರುಡೋಪಮಃ - ಗರುತ್ಮಂತನಿಗೆಣೆಯೆನಿಸಿದ, ಸಃ - ಆ ಆಂಜನೇಯನು, ಅನಾಧೃಷ್ಯಂ-ಅತಿಕ್ರಮಿಸಲಾಗದ ವರುಣಾಲಯಂ- ವರುಣನಿಗೆ ನೆಲೆಯಾದ ,ಸಾಗರಂ-ಸಮುದ್ರವನ್ನು, ಅಭ್ಯೇತ್ಯ - ಅತಿಕ್ರಮಿಸಿ, ಆಕಾಶಂ - ಅಂಬರ

---

ಎಲ್ಲಿರುವಳೋ ಆ ಸ್ಥಳವನ್ನು ಕುರಿತು ಪ್ರಯಾಣಮಾಡುತ್ತೇನೆ ಎನಲು ||೧೬೦|| ಆಗಲಾ ಸುರಸೆಯು ರಾಹುವಿನ ಮುಖದೊಳಗೆ ಹೊಕ್ಕಿದ್ದು ಅಲ್ಲಿಂದ ಹೊರಗೆ ಬಂದ ಚಂದಿರನಂತೆ ಬೆಳಗುತಲಿರುವ ಆ ಆಂಜನೇಯನನ್ನು ನೋಡಿ, ತನ್ನ ಪೂರ್ವದ ನಿಜರೂಪವನ್ನು ತಾಳ್ದು ||೧೬೧|| ಎಲೈ ಕಪಿವರನಾದ ಆಂಜನೇಯನೇ! ಇನ್ನು ನೀನು ಕೈಗೊಂಡಿರುವ ಕೆಲಸವನ್ನು ಸಾಧಿಸಲಿಕ್ಕೆ ಶುಭಪ್ರಯಾಣವನ್ನು ಬೆಳೆಸಬಹುದು, ಬೇಗನ ವಿದೇಹರಾಜಪುತ್ರಿಯಾದ ಸೀತೆಯನ್ನು ಕರೆತಂದು ಮಹಾನುಭಾವನಾದ ಶ್ರೀರಾಮನೊಡನೆ ಸೇರಿಸುವವನಾಗು ಎಂದಳು ||೧೬೨|| ಆಗಲಾ ಅಂಬರಚರರಾದ ಅಮರರು ಆಂಜನೇಯನ ಅಸಾಧ್ಯವಾದ ಮೂರನೆಯ ಕೆಲಸವನ್ನು ನೋಡಿ ಆಶ್ಚರ್ಯಗೊಂಡು ಎಲ್ಲರೂ ಭಾಪುಭಾಪೆಂದು ಹರಿಯನ್ನು ಹೊಗಳುತಿದ್ದರು ||೧೬೩|| ಯಕ್ಷ ಕಿನ್ನರ ಗಂಧರ್ವಾದಿಗಳೆಲ್ಲರೂ ಏಕರೂಪವಾಗಿ ಹೊಗಳುತ್ತಿರಲು, ಆಂಜನೇಯನು ಅಗಾಧವಾದ ಸಾಗರವನ್ನು ಅತಿಕ್ರಮಿಸಿ

ಜಗಾಮಾಕಾಶ ಮಾವಿಶ್ಯ ವೇಗೇನ ಗರುಡೋಪಮಃ ॥೧೬೪॥ ॥
ಸೇವಿತೇ ವಾರಿಧಾರಾಭಿಃ ಪತಗೈಶ್ಚ ನಿಷೇವಿತೇ ।
ಚರಿತೇ ಕೈಶಿಕಾಽಽಚಾರ್ಯೈ ರೈರಾವತ ನಿಷೇವಿತೇ ॥೧೬೫॥
ಸಿಂಹ ಕುಂಜರ ಶಾರ್ದೂಲ ಪತಗೋರಗ ವಾಹನೈಃ ।
ವಿಮಾನೈ ಸ್ಸಂಪತದ್ಭಿಶ್ಚ ವಿಮಲೈ ಸ್ಸಮಲಂಕೃತೇ ॥೧೬೬॥
ವಜ್ರಾಶನಿ ಸಮಾಘಾತೈಃ ಪಾವಕೈ ರುಪಶೋಭಿತೇ ।
ಕೃತಪುಣ್ಯೈ ರ್ಮಹಾಭಾಗೈಸ್ಸ್ವರ್ಗ ಜಿದ್ಭಿರಲಂಕೃತೇ ॥೧೬೭॥
ವಹತಾ ಹವ್ಯ ಮತ್ಯರ್ಥಂ ಸೇವಿತೇ ಚಿತ್ರಭಾನುನಾ ।

ಆಕಾಶ, ಆವಿಶ್ಯ - ಹೊಕ್ಕು, ವೇಗೇನ - ಬಹುವೇಗದಿಂದ, ಜಗಾಮ - ಹೋಗುತ್ತಿದ್ದನು ॥ ೧೬೪ ॥ ವಾರಿಧಾರಾಭಿಃ - ಜಲಧಾರೆಗಳಿಂದ, ಸೇವಿತೇ - ತುಂಬಿ ಇರುವ, ಪತಗೈಶ್ಚ - ಪಕ್ಷಿಗಳಿಂದಲೂ, ನಿಷೇವಿತೇ - ಆಶ್ರಯಿಸಲ್ಪಟ್ಟ, ಕೈಶಿಕಾಚಾರ್ಯೈಃ - (ಸಂಗೀತಪ್ರವರ್ತಕರಾದ ತುಂಬುರು ಮೊದಲಾದ) ಗಾಯಕರಿಂದ, ಚರಿತೇ - ಸಂಚರಿಸಲ್ಪಟ್ಟಿರುವ, ಐರಾವತ ಐರಾವತವೆಂಬ ದಿಗ್ಗಜದಿಂದ (ಇಂದ್ರಾಯುಧದಿಂದ) ನಿಷೇವಿತೇ - ಆಶ್ರಯಿಸಲ್ಪಟ್ಟಿರುವ, ॥೧೬೫॥ ಸಿಂಹ - ಆನೆ, ಶಾರ್ದೂಲ-ಹುಲಿ, ಪತಗ-ಪಕ್ಷಿ, ಉರಗ-ಸರ್ಪ ಇವು ಳ, ವಾಹನೈಃ - ವಾಹನಗಳುಳ್ಳವರಿಂ ದ, ಸಂಪತದ್ಭಿಃ - ಓಡುತಲಿರುವ, ವಿಮಲೈಃ-ನಿರ್ಮಲವಾದ ವಿಮಾನೈಃ ವಿಮಾನಗಳಿಂದ, ಸಮಲಂಕೃತೇ-ಚೆನ್ನಾಗಿ ಅಲಂಕರಿಸಲ್ಪಟ್ಟಿರುವ, ॥೧೬೬॥ ವಜ್ರಾಶನಿ ... ಸಮಾನವಾದ, ಆಘಾತೈಃ-ಪೆಟ್ಟುಳ್ಳ, ಪಾವಕೈಃ-ಅಗ್ನಿಗಳಿಂದ ಉಪಶೋಭಿತೇ - ಪ್ರಕಾಶಿಸುತಲಿರುವ, ಕೃತಪುಣ್ಯೈಃ - ಸುಕೃತವನ್ನು ಸಂಪಾದಿಸಿ ಇರುವ, ಸ್ವರ್ಗಜಿದ್ಭಿಃ ಸ್ವರ್ಗಲೋಕವನ್ನು ಗೆದ್ದಿರುವ, ಮಹಾಭಾಗೈಃ - ಪುಣ್ಯಪುರುಷರಿಂದ, ಅಲಂಕೃತೇ-ಶೋಭಿಸುತ್ತಿರುವ ॥೧೬೭॥ ಹವ್ಯಂ (ಭೂಲೋಕದಲ್ಲಿ ದೇವತೆಗಳಿಗಾಗಿ ಕೊಡಲ್ಪಟ್ಟ) ಹೋಮದ್ರವ್ಯವನ್ನು, ಅತ್ಯರ್ಥಂ - ಬಹಳನಾಗಿ, ವಹತಾ - ಹೊತ್ತುಕೊಂಡಿರುವ, ಚಿತ್ರಭಾನುನಾ - (ವಿಚಿತ್ರವಾದ ತೇಜಸ್ಸುಳ್ಳ) ಅಗ್ನಿಯಿಂದ, ಸೇವಿತೇ - ಜತೆಗೂಡಿರುವ, ಗ್ರಹ....ವಿಭೂಷಿತೇ, ಗ್ರಹ - ಸೂರ್ಯಚಂದ್ರರನ್ನುಳಿದ

ಆಕಾಶಮಾರ್ಗದಲ್ಲಿ ಗರುತ್ಮಂತನಹಾಗೆ ಬಹುವೇಗದಿಂದ ಪ್ರಯಾಣಮಾಡುತ್ತಿದ್ದನು ॥೧೬೪॥ ಮೇಘಗಳ ಜಲಧಾರೆಗಳಿಗೆಡೆಯಾಗಿ, ಬಗೆಬಗೆಯಾದ ಹಕ್ಕಿಗಳ ಹಾರಾಟಕ್ಕೆ ಆಸರೆಯಾಗಿತ್ತು, ಕೈಶಿಕವೆಂಬ ರಾಗದ ಆಲಾಪನೆಯಲ್ಲಿ ಚತುರರಾದ ದೇವಗಾಯಕರ ಸಂಚಾರಕ್ಕೆ ಸ್ಥಾನವೆನಿಸಿ, ಐರಾವತವೆಂಬ ಇಂದ್ರಧನುಸ್ಸು (ಕಾಮನಬಿಲ್ಲು) ಹೊಳೆಯುಲಿಕ್ಕೆ ಆಕರವಾಗಿ ॥೧೬೫॥ ಸಿಂಹ, ಆನೆ, ಹುಲಿ, ಪಕ್ಷಿ, ಸರ್ಪ, ಈ ಮೊದಲಾದುವನ್ನು ವಾಹನಗಳನ್ನಾಗಿ ಕಲ್ಪಿಸಿಕೊಂಡು ದಿವ್ಯವಿಮಾನಗಳಿಂದ ಸಂಚರಿಸುವ ದೇವತೆಗಳ ಪ್ರಯಾಣಕ್ಕೆ ಎಡೆಗೊಟ್ಟು ಅಲಂಕಾರವಾಗಿ ॥೧೬೬॥ ಸಿಡಿಲುಗಳ ಹೊಡೆತದಿಂದ ಹುಟ್ಟಿದ ಅಗ್ನಿಜ್ವಾಲೆಗಳಿಂದ ಹೊಳೆಯುತ್ತ ತಂತಮ್ಮ ಪೂರ್ವಜನ್ಮಗಳ ಸುಕೃತಗಳಿಂದ ಸ್ವರ್ಗಲೋಕವನ್ನು ಪಡೆದಿರುವ ಮಹಾತ್ಮರಿಂದ ಅಲಂಕರಿಸಲ್ಪಟ್ಟು ॥೧೬೭॥ ಭೂಲೋಕದಲ್ಲಿ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿಗಳೆಂಬ ಅಗ್ನಿಗಳಲ್ಲಿ ವಿಧಿಪ್ರಕಾರವಾಗಿ ಇಂದ್ರಾದಿ ದೇವತೆಗಳನ್ನು ಕುರಿತು, ಹವನಮಾಡಿದ ಹವಿಸ್ಸುಗಳನ್ನು ಕ್ರಮವಾಗಿ ಆಯಾಯ ದೇವತೆಗಳಿಗೆ

ಗ್ರಹ ನಕ್ಷತ್ರ ಚಂದ್ರಾರ್ಕ ತಾರಾಗಣ ವಿಭೂಷಿತೇ ॥೧೭೮॥
ಮಹರ್ಷಿಗಣ ಗಂಧರ್ವ ನಾಗ ಯಕ್ಷ ಸಮಾಕುಲೇ ।
ವಿವಿಕ್ತೇ ವಿಮಲೇ ವಿಶ್ವೇ ವಿಶ್ವಾವಸು ನಿಷೇವಿತೇ ॥೧೭೯॥
ದೇವರಾಜ ಗಜಾಕ್ರಾಂತೇ ಚಂದ್ರಸೂರ್ಯಪಥೇ ಶಿವೇ ।
ವಿತಾನೇ ಜೀವಲೋಕಸ್ಯ ವಿತತೇ ಬ್ರಹ್ಮನಿರ್ಮಿತೇ ॥೧೮೦॥
ಬಹುಶ ಸ್ಸೇವಿತೇ ವೀರೈ ರ್ವಿದ್ಯಾಧರಗಣೈ ರ್ವರೈಃ ।
ಜಗಾಮ ವಾಯುಮಾರ್ಗೇತು ಗರುತ್ಮಾನಿವ ಮಾರುತಿಃ ॥೧೮೧॥
ಪ್ರದೃಶ್ಯಮಾನ ಸ್ಸರ್ವತ್ರ ಹನುಮಾ ನ್ಮಾರುತಾತ್ಮಜಃ ।

ಗ್ರಹಗಳಿಂದಲೂ, ನಕ್ಷತ್ರ-ಅಶ್ವಿನ್ಯಾದಿನಕ್ಷತ್ರಗಳಿಂದಲೂ, ಚಂದ್ರಾರ್ಕ-ಚಂದ್ರಸೂರ್ಯರಿಂದಲೂ, ತಾರಾಗಣ-ಇತರ ನಕ್ಷತ್ರಗಳ ಹಿಂಡಿನಿಂದಲೂ, ವಿಭೂಷಿತೆ-ಶೃಂಗರಿಸಲ್ಪಟ್ಟಿರುವ, ॥೧೭೮॥ ಮಹರ್ಷಿ...ಲೆ, ಋಷಿಗಳು, ಗಂಧರ್ವರು, ನಾಗರು, ಯಕ್ಷರು ಇವರಿಂದ ವ್ಯಾಪಿಸಲ್ಪಟ್ಟಿರುವ, ವಿವಿಕ್ತೆ-ಪರಿಶುದ್ಧವಾಗಿರುವ, ವಿಮಲೆ-ನಿರ್ಮಲವಾದ, ವಿಶ್ವೆ-ಪ್ರಪಂಚದಲ್ಲೆಲ್ಲ ಹರಡಿಕೊಂಡಿರುವ, ವಿಶ್ವಾವಸುನಿಷೇವಿತೇ-ವಿಶ್ವಾವಸುವೆಂಬ ಗಂಧರ್ವರಾಜನಿಂದ ಸೇವಿಸಲ್ಪಡುತ್ತಿರುವ, ದೇವರಾಜ ಗಜಾಕ್ರಾಂತೆ-ದಿಗ್ಗಜದಿಂದ ಆಕ್ರಮಿಸಲ್ಪಟ್ಟಿರುವ, ಚಂದ್ರಸೂರ್ಯಪಥೆ - ಚಂದ್ರಸೂರ್ಯರ ಸಂಚಾರಪಥವಾಗಿರುವ, ಶಿವೆ-ಮಂಗಳಕರವಾದ, ॥೧೭೯॥ ಜೀವಲೋಕಸ್ಯ-ಪ್ರಾಣಿವರ್ಗಕ್ಕೆ, ವಿತಾನ ಮೇಲುಕಟ್ಟಿನಂತಿರುವ, ವಿತತೆ-ಬಹು ವಿಶಾಲವಾಗಿರುವ, ಬ್ರಹ್ಮನಿರ್ಮಿತೆ-ಪರಮಾತ್ಮನಿಂದ ಸೃಷ್ಟಿಸಲ್ಪಟ್ಟಿರುವ, ॥೧೮೦॥ ವೀರೈಃ - ಪರಾಕ್ರಮಶಾಲಿಗಳೂ, ವರೈಃ-ಶ್ರೇಷ್ಠರೂ ಆಗಿರುವ, ವಿದ್ಯಾಧರಗಣೈಃ - ವಿದ್ಯಾಧರರ ಸಮೂಹಗಳಿಂದ, ಬಹುಶಃ - ಅನೇಕ ಪ್ರಕಾರವಾಗಿ, ಸೇವಿತೆ- ಸೇವಿಸಲ್ಪಡುತ್ತಲಿರುವ, ವಾಯುಮಾರ್ಗೆ - ಗಗನಮಾರ್ಗದಲ್ಲಿ, ಮಾರುತಿಸ್ತು - ಆಂಜನೇಯನಾದರೋ, ಗರುತ್ಮಾನಿವ - ಗರುಡನಂತೆ, ಜಗಾಮ - ಪ್ರಯಾಣಮಾಡುತಲಿದ್ದನು ॥೧೮೧॥ ಸರ್ವತ್ರ-ಎಲ್ಲಕಡೆಗಳಲ್ಲಿಯೂ, ಪ್ರದೃಶ್ಯಮಾನಃ - ಕಾಣಬರುತಲಿರುವ, ಮಾರುತಾತ್ಮಜಃ -

ಬಪ್ಪಿಸಲಿಕ್ಕೆ ಪ್ರಯಾಣಮಾಡುತಲಿರುವ ಅಗ್ನಿಪುರುಷನಿಂದ ಆಶ್ರಯಿಸಲ್ಪಟ್ಟು, ಸೂರ್ಯಚಂದ್ರಮಂಡಲಗಳು, ಅಂಗಾರಕಾದಿಗ್ರಹಗಳು, ಅಶ್ವಿನ್ಯಾದಿ ನಕ್ಷತ್ರಗಳು, ವಿಚಿತ್ರವಾದ ಇತರ ತಾರೆಗಳು ಈ ಮುಂತಾದವುಗಳಿಂದ ಶೋಭಾಯಮಾನವಾಗಿ ॥೧೭೮॥ ತಪೋನಿರತರಾದ ಮಹರ್ಷಿಗಳು, ಗಂಧರ್ವರು, ನಾಗರು, ಯಕ್ಷರು, ಈ ಮೊದಲಾದವರಿಗೆ ಅವಕಾಶವನ್ನಿತ್ತು, ಬಹುಪವಿತ್ರವೆನಿಸಿ, ನಿರ್ಮಲವಾಗಿ, ಪ್ರಪಂಚದಲ್ಲೆಲ್ಲ ಹರಡಿಕೊಂಡು, ವಿಶ್ವಾವಸುವೆಂಬ ಗಂಧರ್ವರಾಜನಿಂದ ಸೇವಿಸಲ್ಪಡುತ್ತ ॥೧೭೯॥ ದೇವೇಂದ್ರನ ಪಟ್ಟದಾನೆಯಾದ ಐರಾವತಕ್ಕೆ ಎಡೆಗೊಟ್ಟು, ಸೂರ್ಯಚಂದ್ರರ ಸಂಚಾರಕ್ಕೆ ಸುಪಥವೆನಿಸಿ, ಬಹುಮಂಗಳಕರವಾದುದಾಗಿ, ಸಕಲ ಪ್ರಾಣಿವರ್ಗಕ್ಕೂ ಮೇಲುಕಟ್ಟಿನಂದದಿಂದ ವಿಸ್ತಾರವಾಗಿ, ಪರಮಾತ್ಮನಿಂದ ನಿರ್ಮಿಸಲ್ಪಟ್ಟ ॥೧೮೦॥ ಅತ್ಯುತ್ತಮರೆನಿಸಿ ಮಹಾವೀರರೂ ಆದ ವಿದ್ಯಾಧರರೆಂಬ ದೇವಭೇದದವರಿಂದ ಆವರಿಸಲ್ಪಟ್ಟು ಇರುವ, ವಾಯುಮಾರ್ಗವೆನಿಸಿದ ಆಕಾಶಮಾರ್ಗದಲ್ಲಿ ವಾಯುನಂದನನಾದ ಶ್ರೀಮದಾಂಜನೇಯನು ಸುಖಪ್ರಯಾಣ ಮಾಡುತಲಿದ್ದನು ॥೧೮೧॥ ಮರುತಪುತ್ರನಾದ ಮಾರುತಿಯು ಎಲ್ಲಕಡೆಗಳಲ್ಲಿಯೂ ಎಲ್ಲರ ನೋಟಕ್ಕೂ ಕಾಣಬರುತ್ತ,

ಭೇಜೇಽಮ್ಬರಂ ನಿರಾಲಂಬಂ ಲಂಬಪಕ್ಷ ಇವಾದ್ರಿರಾಟ್ ||೧೭೨||
ಪ್ಲವಮಾನಂತು ತಂ ದೃಷ್ಟ್ವಾ ಸಿಂಹಿಕಾನಾಮ ರಾಕ್ಷಸೀ।
ಮನಸಾ ಚಿಂತಯಾಮಾಸ ಪ್ರವೃದ್ಧಾ ಕಾಮರೂಪಿಣೀ ||೧೭೩||
ಅದ್ಯ ದೀರ್ಘಸ್ಯ ಕಾಲಸ್ಯ ಭವಿಷ್ಯಾಮ್ಯಹ ಮಾಶಿತಾ ।
ಇದಂ ಹಿ ಮೇ ಮಹತ್ಸತ್ವಂ ಚಿರಸ್ಯ ವಶಮಾಗತಂ||೧೭೪||
ಇತಿ ಸಂಚಿಂತ್ಯ ಮನಸಾ ಛಾಯಾಮಸ್ಯ ಸಮಾಕ್ಷಿಪತ್ ||೧೭೪||
ಛಾಯಾಯಾಂ ಗೃಹ್ಯಮಾಣಾಯಾಂ ಚಿಂತಯಾಮಾಸ ವಾನರಃ ||೧೭೫||

ವಾಯುನಂದನನಾದ, ಹನುಮಾನ್ - ಆಂಜನೇಯನು, ಲಂಬಪಕ್ಷಃ - ಜೋಲಾಡುವ ರೆಕ್ಕೆಗಳುಳ್ಳ, ಅದ್ರಿರಾಡಿವ - ಪರ್ವತರಾಜನಂತೆ, ನಿರಾಲಂಬಂ - ನಿರಾಧಾರವಾದ, ಅಂಬರಂ - ಆಕಾಶಮಾರ್ಗವನ್ನು, ಭೇಜೇ - ಹೊಂದಿ ಇದ್ದನು ||೧೭೨|| ಸಿಂಹಿಕಾನಾಮ - ಸಿಂಹಿಕೆಯೆಂಬ ಹೆಸರಿನಿಂದ ಹೆಸರುವಾಸಿಗೆ ಬಂದಿರುವ, ರಾಕ್ಷಸೀ - ರಕ್ಕಸಿಯು, ಪ್ಲವಮಾನಂ - ದಾಟಿಹೋಗುತಲಿರುವ, ತಂತು - ಆ ಆಂಜನೇಯನನ್ನಾದರೋ, ದೃಷ್ಟ್ವಾ - ನೋಡಿ, ಕಾಮರೂಪಿಣೀ- ಮನಬಂದರೂಪವನ್ನು ತಾಳುವಶಕ್ತಿಯುಳ್ಳವಳಾದಕಾರಣವೇ, ಪ್ರವೃದ್ಧಾ - ಬಹು ಉದ್ದವಾಗಿ ಬೆಳೆದವಳಾಗಿ, ಮನಸಾ - ತನ್ನ ಮನಸ್ಸಿನಿಂದ, ಚಿಂತಯಾಮಾಸ - ವಿಚಾರಮಾಡಿದಳು ||೧೭೩|| ದೀರ್ಘಸ್ಯ - ಉದ್ದವಾದ (ಬಹಳವಾಗಿ ಕಳೆದುಹೋದ) ಕಾಲಸ್ಯ - ಸಮಯಕ್ಕೆ, ಅಹಂ - ನಾನು, ಅದ್ಯ - ಈಗ, ಅಶಿತಾ - ಅನ್ನವನ್ನು ಸಂಪಾದಿಸಿ ಕೊಂಡವಳು, ಭವಿಷ್ಯಾಮಿ - ಆಗತಕ್ಕವಳಾಗಿದ್ದೇನೆ, ಇದಂ - ಈ, ಮಹತ್ - ದೊಡ್ಡದಾದ, ಸತ್ವಂತು - ಜಂತುವಾದರೋ, ಚಿರಸ್ಯ - ಬಹುಕಾಲಕ್ಕೆ, ಮೇ - ನನಗೆ, ವಶಂ - ಸ್ವಾಧೀನತೆಯನ್ನು, ಆಗತಂ - ಹೊಂದಿ ಇದೆ, ಇತಿ - ಹೀಗೆಂದು, ಮನಸಾ - ಮನಸ್ಸಿನಿಂದ, ಸಂಚಿಂತ್ಯ - ಚೆನ್ನಾಗಿ ಯೋಚಿಸಿ, ಅಸ್ಯ - ಈ ಆಂಜನೇಯನ, ಛಾಯಾಂ - ಕಡಲಿನಲ್ಲಿ ಹರಡಿರುವ ನೆಳಲನ್ನು, ಸಮಾಕ್ಷಿಪತ್ - ಪಟ್ಟು ಹಿಡಿದಳು ||೧೭೪|| || ಛಾಯಾಯಾಂ - ತನ್ನ ನೆಳಲು, ಗೃಹ್ಯಮಾಣಾಯಾಂ (ಸತ್ಯಾಂ)-ಸಿಂಹಿಕೆಯಿಂದ ಹಿಡಿಯಲ್ಪಡುತ್ತಿರಲಾಗಿ,

ಯಾವ ಆಧಾರವೂ ಇಲ್ಲದ ಅಂಬರತಲದಲ್ಲಿ ಜೋಲಾಡುತಲಿರುವ ರೆಕ್ಕೆಗಳನ್ನೊಳಗೊಂಡ ದೊಡ್ಡ ಬೆಟ್ಟದಂತೆ ಹಾರಿಹೋಗುತಲಿದ್ದನು || ೧೭೨ || ಈತೆರನಾಗಿ ಆ ಪವನನಂದನನು ಅಂಬರದಲ್ಲಿ ಅಡ್ಡಿಯಿಲ್ಲದೆ ತೆರಳುತಲಿರುವಲ್ಲಿ, ಈತನನ್ನು ನೋಡಿದ ಸಿಂಹಿಕೆಯೆಂಬ ಒಬ್ಬ ರಕ್ಕಸಿಯು ಕಾಮರೂಪಳಾದುದರಿಂದಉಬ್ಬಿ ಬೆಳೆಯುತ್ತ ತನ್ನ ಮನದೊಳಗೆ ಇಂತು ಚಿಂತಿಸಿದಳು ||೧೭೩|| ಅಹಹ ! ಬಹುಕಾಲಕ್ಕೆ ನಾನು ನನ್ನ ಹೊಟ್ಟೆಗೆ ತಕ್ಕ ಅನ್ನವನ್ನು ಪಡೆಯುವವಳಾಗುವಂತಿದೆ. ಭಾಪು ಭಾಪು ! ನಾನೆಂದೂ ಇಷ್ಟು ದೊಡ್ಡ ಪ್ರಾಣಿಯನ್ನು ಉಂಡಿರಲಿಲ್ಲ. ಚಿರಕಾಲದಿಂದ ಕಾದಿದ್ದ ನನಗೆ ಇಂದೇನೋ ದೇವರ ದಯೆಯಿಂದ ನನ್ನ ಈ ದೊಡ್ಡ ಹೊಟ್ಟೆಯು ತುಂಬುವಂತಹ ಮಹಾಪ್ರಾಣಿಯು ಆಹಾರವಾಗಿ ದೊರೆಯುವಂತಿದೆ ಎಂದೀಪ್ರಕಾರ ನೆನೆದು ಮೆಲ್ಲಗೆ ಆ ಆಂಜನೇಯನ ನೆಳಲನ್ನು ಗಟ್ಟಿಯಾಗಿ ಪಟ್ಟುಹಿಡಿದಳು ||೧೭೪|| ಹೀಗೆ ಅರಿವಿಲ್ಲದೆ ನೆಳಲು ಹಿಡಿಯಲ್ಪಡಲು, ಇದೇನು ? ಅಕಸ್ಮಾತ್ತಾಗಿ ಇಂತಹ ತಡೆಯುಂಟಾಯಿತು ? ಎಂದು ಮಾರುತಿಯು ತನ್ನ ಮನದೊಳಾಲೋಚಿಸತೊಡಗಿದನು||೧೭೫|| ಆಹಹ ! ಈಗ ನಿಮಿಷಮಾತ್ರದಲ್ಲಿ ನನ್ನ ಪಯಣವು, ಕಡಲಿನಲ್ಲಿ

ಸಮಾಕ್ಷಿಪ್ತೋಽಸ್ಮಿ ಸಹಸಾ ಪಂಗೂಕೃತಪರಾಕ್ರಮಃ ।
ಪ್ರತಿಲೋಮೇನ ವಾತೇನ ಮಹಾನೌರಿವ ಸಾಗರೇ ॥ ೧೩೬॥
ತಿರ್ಯಗೂರ್ಧ್ವಮಧಶ್ಚೈವ ವೀಕ್ಷಮಾಣ ಸ್ತತಃ ಕಪಿಃ ।
ದದರ್ಶ ಸ ಮಹತ್ಸತ್ತ್ವ ಮುತ್ಥಿತಂ ಲವಣಾಂಭಸಿ ॥೧೩೭॥
ತದ್ದೃಷ್ಟ್ವಾ ಚಿಂತಯಾಮಾಸ ಮಾರುತಿ ರ್ವಿಕೃತಾನನಂ ।
ಕಪಿರಾಜೇನ ಕಥಿತಂ ಸತ್ತ್ವ ಮದ್ಭುತದರ್ಶನಂ ॥
ಛಾಯಾಗ್ರಾಹಿ ಮಹಾವೀರ್ಯಂ ತದಿದಂ ನಾತ್ರ ಸಂಶಯಃ ॥೧೩೮॥ ॥
ಸ ತಾಂ ಬುದ್ಧ್ವಾರ್ಥ ತತ್ತ್ವೇನ ಸಿಂಹಿಕಾಂ ಮತಿಮಾನಪಿ ।

ವಾನರಃ - ಆಂಜನೇಯನು, ಚಿಂತಯಾಮಾಸ- ತನ್ನ ಮನದೊಳಾಲೋಚಿಸಿದನು, (ಅಹಂ-ನಾನು,) ಸಹಸಾ - ಬೇಗನೆ, ಪಂಗೂಕೃತಪರಾಕ್ರಮಃ - ಕುಂಠಿತವಾದ ಪರಾಕ್ರಮವುಳ್ಳವನಾಗಿ (ತಪ್ಪಿಸಲ್ಪಟ್ಟ ನಡಗೆಯುಳ್ಳವನಾಗಿ) ಸಾಗರೇ - ಸಮುದ್ರದಲ್ಲಿ, ಪ್ರತಿಲೋಮೇನ - ಎದುರಾಗಿ ಬೀಸುತಲಿರುವ, ವಾತೇನ - ಗಾಳಿಯಿಂದ ಪೆಟ್ಟುಬಿದ್ದ, ಮಹಾನೌರಿವ - ದೊಡ್ಡ ಹಡಗಿನ ಹಾಗೆ, ಸಮಾಕ್ಷಿಪ್ತಃ - ಹಿಡಿಯಲ್ಪಟ್ಟವನು, ಅಸ್ಮಿ-ಆಗಿದೇನೆ ॥೧೩೬॥

ತತಃ - ಅನಂತರದಲ್ಲಿ, ಕಪಿಃ - ಆಂಜನೇಯನು, ತಿರ್ಯಕ್ - ಅಡ್ಡವಾಗಿಯೂ, ಊರ್ಧ್ವಂ - ಮೇಲ್ಮುಖವಾಗಿಯೂ, ಅಧಶ್ಚೈವ - ಕೆಳಮುಖವಾಗಿಯೂ, ವೀಕ್ಷಮಾಣಃ - ನೋಡುತ್ತಿರುವವನಾಗಿ, ಲವಣಾಂಭಸಿ - ಸಮುದ್ರ ಮಧ್ಯದಲ್ಲಿ, ಉತ್ಥಿತಂ - ಮೇಲಕ್ಕೆದ್ದು ನಿಂತಿರುವ, ಮಹತ್ - ಬಹುದೊಡ್ಡದಾದ, ಸತ್ವಂ - ಜಂತುವನ್ನು, ದದರ್ಶ - ನೋಡಿದನು ॥೧೩೭॥ ಮಾರುತಿಃ- ಆಂಜನೇಯನು, ತತ್-ಆ ರಾಕ್ಷಸಿಯ ಆಕಾರವನ್ನು, ದೃಷ್ಟ್ವಾ-ನೋಡಿ, ವಿಕೃತಾನನಂ-ವಿಕಾರವಾದ ಮುಖವುಳ್ಳುದಾಗಿಯೂ, ಅದ್ಭುತದರ್ಶನಂ-ನೋಡಲಸಾಧ್ಯವಾದದಾಗಿಯೂ, ಛಾಯಾಗ್ರಾಹಿ-ನೆಳಲನ್ನು ಹಿಡಿಯಬಲ್ಲುದುದಾಗಿಯೂ ಮಹಾವೀರ್ಯಂ-ಬಹು ಪರಾಕ್ರಮವುಳ್ಳುದಾಗಿಯೂ ಇರುವುದೆಂದು, ಪೂರ್ವ-ಪೂರ್ವದಲ್ಲಿ, ಕಪಿರಾಜೇನ-ಕಪಿಸಾರ್ವಭೌಮನಾದ ಸುಗ್ರೀವನಿಂದ, ಕಥಿತಂ-ಹೇಳಲ್ಪಟ್ಟದ್ದು, ತತ್-ಆ ಭೂತವು, ಇದಂ-ಇದೇಸರಿ, ಅತ್ರ-ಈ ವಿಷಯದಲ್ಲಿ, ನಸಂಶಯಃ - ಸಂದೇಹವೇ ಇಲ್ಲ ॥೧೩೮॥ ॥ ಸಃ - ಆ, ಮತಿಮಾನ್ - ಬುದ್ಧಿವಂತನಾದ,

ತಡೆಯಿಲ್ಲದೆ ಹೊರಡುತಲಿರುವ ಹಡಗು ಎದುರುಗಾಳಿಯ ಹೊಡೆತದಿಂದ ತಡೆಯಲ್ಪಡುವಹಾಗೆ ಪರಿಣಮಿಸಿತು, ಎಷ್ಟು ಬೇಗನೆ ನಿಲ್ಲಿಸಲ್ಪಟ್ಟೆ ? ನನ್ನ ಪರಾಕ್ರಮವೆಲ್ಲ ಕುಂಟನ ಶೌರ್ಯದಂತಾಯಿತಲ್ಲ? ಎಂದು ॥೧೩೬॥ ಪಾವನಿಯು ತನ್ನ ಮನದೊಳಗೆ ಹೀಗೆ ಅಂದುಕೊಂಡು, ಬಳಿಕ ತನ್ನ ಪಕ್ಕದಲ್ಲಿಯೇ ಮೇಲೂ, ಕೆಳಗಡೆಯೂ, ವಿಕಾರಾಕಾರವಾಗಿ ಬೆಳೆದು ಕಡಲಿನಲ್ಲಿ ನಿಂತಿರುವ ಮಹಾಭೂತವನ್ನು ಹಿಂದಿರುಗಿ ನೋಡಿದನು. ॥೧೩೭॥ ವಿಕಾರವಾದ ಮುಖವುಳ್ಳ ಆಭೂತವನ್ನು ನೋಡಿದ ಕೂಡಲೇ ಆಂಜನೇಯನು-ಓಹೋ ! ಸರಿಸರಿ, ಹಿಂದೆ ನಮ್ಮ ಕಪಿಸಾರ್ವಭೌಮನಾದ ಸುಗ್ರೀವನು ಹೇಳಿದ್ದ ಅದ್ಭುತವಾದ ಭೂತವು ಇದೇ ಇರಬಹುದಲ್ಲವೆ ? ಎಂದು ಆಲೋಚಿಸಿದನು ॥೧೩೮॥ ನೆಳಲನ್ನು ಹಿಡಿದು ನಿಲ್ಲಿಸತಕ್ಕ ಮಹಾಶೌರ್ಯದಿಂದೊಡಗೂಡಿದ ಛಾಯಾಗ್ರಾಹಿ ಎಂಬ ಮಹಾ ಭೂತವು ಇದೇಸ್ಸೈ, ಓ, ಈ ವಿಷಯದಲ್ಲಿ ಸಂದೇಹವೇ ಇಲ್ಲ. ಸುಗ್ರೀವನು ಹೇಳಿದ್ದುದೂ ಇದೇ ಸರಿ. ॥೧೩೮॥ ॥ ತತ್ತ್ವ

ವ್ಯವರ್ಧತ ಮಹಾಕಾಯಃ ಪ್ರಾವೃಷೀವ ವಲಾಹಕಃ॥೧೭೯॥ ॥
ತಸ್ಯ ಸಾ ಕಾಯ ಮುದ್ವೀಕ್ಷ್ಯ ವರ್ಧಮಾನಂ ಮಹಾಕಪೇಃ ।
ವಕ್ತ್ರಂ ಪ್ರಸಾರಯಾಮಾಸ ಪಾತಾಳಾಂತರಸನ್ನಿಭಂ ॥೧೮೦॥ ॥
ಘನರಾಜೀವ ಗರ್ಜಂತೀ ವಾನರಂ ಸಮಭಿದ್ರವತ್ ॥೧೮೧॥
ಸ ದದರ್ಶ ತತ ಸ್ತಸ್ಯಾ ವಿವೃತಂ ಸುಮಹನ್ಮುಖಂ ।
ಕಾಯ ಮಾತ್ರಂ ಚ ಮೇಧಾವೀ ಮರ್ಮಾಣಿ ಚ ಮಹಾಕಪಿಃ॥೧೮೨॥
ಸ ತಸ್ಯಾ ವಿವೃತೆ ವಕ್ತ್ರೇ ವಜ್ರಸಂಹನನಃ ಕಪಿಃ ।

ಕಪಿಃ - ಆಂಜನೇಯನು, ತಾಂ - ಆ, ಸಿಂಹಿಕಾಂ - ಸಿಂಹಿಕೆ (ಅಂಗಾರಿಕೆ) ಯನ್ನು, ಅರ್ಥತತ್ವೇನ - ಯಥಾರ್ಥ ಭಾವದಿಂದ, ಬುದ್ಧ್ವಾ - ತಿಳಿದು, ಪ್ರಾವೃಷಿ - ಮಳೆಗಾಲದಲ್ಲಿ, ವಲಾಹಕ ಇವ - ಮೇಘದಂತೆ ಮಹಾಕಾಯಃ-ಉನ್ನತವಾದ ಶರೀರವುಳ್ಳವನಾಗಿ, ವ್ಯವರ್ಧತ - ಬೆಳೆದನು (ಧೈರ್ಯದಿಂದ ದೇಹವನ್ನು ಬೆಳೆಸಿದನು) ॥೧೭೯॥ ॥ ತಸ್ಯ - ಆ, ಮಹಾಕಪೇಃ- ಕಪಿವೀರನಾದ ಹನುಮನ, ವರ್ಧಮಾನಂ - ಬೆಳೆಯುತ್ತಲಿರುವ, ಕಾಯಂ - ಶರೀರವನ್ನು, ಸಾ - ಆ ಸಿಂಹಿಕೆಯು, ಉದ್ವೀಕ್ಷ್ಯ - ತಲೆಯನ್ನೆತ್ತಿನೋಡಿ, ಪಾತಾಳಾಂತರಸನ್ನಿಭಂ - ಪಾತಾಳದ ಬಿಲದಂತೆ ಬಲು ಅಗಲವಾದ, ವಕ್ತ್ರಂ - ಬಾಯನ್ನು, ಪ್ರಸಾರಯಾಮಾಸ- ತೆರೆದು ಮುಂದಕ್ಕೆ ನೀಡಿದಳು. ॥೧೮೦॥ ॥ ಘನ-ಮೇಘಗಳ, ರಾಜೀವ-ಸಾಲಿನಂತೆ, ಗರ್ಜಂತೀ-ಅಬ್ಬರಿಸುತ್ತಿರುವವಳಾಗಿ, ವಾನರಂ - ಆಂಜನೇಯನನ್ನು, ಸಮಭಿದ್ರವತ್ - ಅಟ್ಟಿಕೊಂಡು ಹೋದಳು, ॥೧೮೧॥ ಮೇಧಾವೀ - ಪ್ರಜ್ಞಾಶಾಲಿಯಾದ, ಮಹಾಕಪಿಃ - ವಾನರವೀರನಾದ, ಸಃ - ಆ ಆಂಜನೇಯನು, ತತಃ - ಅನಂತರದಲ್ಲಿ, ತಸ್ಯಾಃ - ಆ ಸಿಂಹಿಕೆಯ, ವಿವೃತಂ - ತೆರೆಯಲ್ಪಟ್ಟಿರುವ, ಸುಮಹತ್ - ಬಲು ಎತ್ತರವಾಗಿಯೂ ಅಗಲವಾಗಿಯೂ, ಕಾಯಮಾತ್ರಂಚ - ತನ್ನ ಶರೀರವನ್ನು ನುಂಗಲಿಕ್ಕೆ ತಕ್ಕಷ್ಟು ಪ್ರಮಾಣವುಳ್ಳದಾಗಿಯೂ ಇರುವ, ಮುಖಂ - ಬಾಯನ್ನು, ಮರ್ಮಾಣಿಚ - ಅದಕ್ಕೆ ತಕ್ಕಂತೆ ಇರುವ ಅವಯವಗಳನ್ನೂ, ದದರ್ಶ - ನೋಡಿದನು. ॥೧೮೨॥ ವಜ್ರಸಂಹನನಃ - ವಜ್ರದಂತೆ ಗಟ್ಟಿಯಾದ ಮೈಯುಳ್ಳ, ಮಹಾಬಲಃ - ಬಹು ಬಲಶಾಲಿಯಾದ, ಸಃಕಪಿಃ- ಆ ಆಂಜನೇಯನು, ತಸ್ಯಾಃ - ಆ ಸಿಂಹಿಕೆಯ, ವಿವೃತೆ -

ವಿಚಾರದಲ್ಲಿ ಬಹುಜಾಣನಾದ ಆಂಜನೇಯನು ತನ್ನ ಬುದಿ ಕುಶಲತೆಯಿಂದ ಆರಕ್ಕಸಿಯನ್ನು ಸಿಂಹಿಕೆಯನ್ನಾಗಿ ಗೊತ್ತುಮಾಡಿಕೊಂಡನು ॥೧೭೯॥ ಬಳಿಕ ಏನಮಾಡಿದನು ? ಸುಮ್ಮನಿರಲಿಲ್ಲ. ಮುಂಗಾರಿನ ದೊಡ್ಡಮೋಡದಂತೆ ಅಡ್ಡಡ್ಡವಾಗಿಯೂ, ಉದ್ದವಾಗಿಯೂ, ಪಾರವಿಲ್ಲದಂತೆ ಘೋರವಾಗಿ ಬೆಳೆದನು ॥೧೭೯॥ ಆಗಲಾ ಸಿಂಹಿಕೆಯು ಮಿತಿಯಿಲ್ಲದೆ ಬೆಳೆದಿರುವ ಮಾರುತಿಯ ಮಹಾ ಶರೀರವನ್ನು ನೋಡಿದಳು ॥೧೮೦॥ ಒಡನೆಯೇ ಮಳೆಗಾಲದ ಮೋಡಗಳ ಹಿಂಡು ಗುಡುಗುವಂತೆ ಗಟ್ಟಿಯಾಗಿ ಗರ್ಜಿಸುತ್ತಿರುವವಳಾಗಿ, ಪಾತಾಳದ ಬಿಲದಂತೆ ಘೋರವಾದ ತನ್ನ ಮೋರೆಯನ್ನು ಮುಂದಕ್ಕೆ ನೀಡಿ ಆಂಜನೇಯನ ಬೆನ್ನಟ್ಟಿ ಓಡಿದಳು ॥೧೮೧॥ ಸಮಯೋಚಿತವಾಗಿ ಹೊಳೆಯುವ ಮಹಾ ಮತಿಯುಳ್ಳ ಆ ಮಾರುತಿಯು ಆಳೆಯಲಸದಳವೆನಿಸಿ ಬೆಳೆದಿರುವ ತನ್ನ ಶರೀರವನ್ನೂ ನುಂಗಲಿಕ್ಕೆ ತಕ್ಕಂತೆ, ಘೋರವಾಗಿ ತೆರೆದು ಅರಳಿಸಿ ಇರುವ ಅವಳ ಬಾಯನ್ನೂ, ಅದಕ್ಕೆ ತಕ್ಕಷ್ಟು ತೋರವಾಗಿರುವ ಅವಯವಗಳನ್ನೂ ನೋಡಿದನು ॥ ೧೮೨ ॥ ಬಳಿಕ ವಜ್ರದಂತೆ ಕಠಿನವಾದ

ಸಂಕ್ಷಿಪ್ಯ ಮುಹು ರಾತ್ಮಾನಂ ನಿಷ್ಪಪಾತ ಮಹಾಬಲಃ ||೧೯೩||
ಆಸ್ಯೇ ತಸ್ಯಾ ನಿಮಜ್ಜಂತಂ ದದೃಶು ಸ್ಸಿದ್ಧಚಾರಣಾಃ |
ಗ್ರಸ್ಯಮಾನಂ ಯಥಾಚಂದ್ರಂ ಪೂರ್ಣಂ ಪರ್ವಣಿ ರಾಹುಣಾ ||೧೯೪||
ತತ ಸ್ತಸ್ಯಾ ನಖೈ ಸ್ತೀಕ್ಷ್ಣೈ ರ್ಮರ್ಮಾಣ್ಯು ತ್ಕೃತ್ಯ ವಾನರಃ |
ಉತ್ಪಪಾತಾಥ ವೇಗೇನ ಮನಸ್ಸಂಪಾತವಿಕ್ರಮಃ ||೧೯೫||
ತಾಂ ತು ದೃಷ್ಟ್ವಾ ಚ ಧೃತ್ಯಾ ಚ ದಾಕ್ಷಿಣ್ಯೇನ ನಿಪಾತ್ಯಚ |
ಸ ಕಪಿಪ್ರವರೋ ವೇಗಾ ದ್ವವೃಧೆ ಪುನ ರಾತ್ಮವಾನ್ ||೧೯೬||

---

ತೆರೆಯಲ್ಪಟ್ಟಿರುವ, ವಕ್ತ್ರೆ - ಬಾಯಲ್ಲಿ, ಆತ್ಮಾನಂ - ತನ್ನನ್ನು, ಮುಹುಃ - ವಿಶೇಷವಾಗಿ, ಸಂಕ್ಷಿಪ್ಯ - ಸೂಕ್ಷ್ಮವಾಗಿ ಮಾಡಿಕೊಂಡು, ನಿಷ್ಪಪಾತ - ನುಗ್ಗಿದನು ||೧೯೩|| ಸಿದ್ಧಚಾರಣಾಃ - ಸಿದ್ಧರು ಮತ್ತು ಚಾರಣರು, ತಸ್ಯಾಃ - ಆ ಸಿಂಹಿಕೆಯ , ಆಸ್ಯೆ - ಬಾಯಲ್ಲಿ, ನಿಮಜ್ಜನ್ತಂ - ಮುಳುಗುತಲಿರುವ (ಬಳಹೊಗುತ್ತಿರುವ) ಆಂಜನೇಯನನ್ನು, ರಾಹಣಾ - ರಾಹುಗ್ರಹದಿಂದ, ಪರ್ವಣಿ - ಪರ್ವಕಾಲದಲ್ಲಿ, ಗ್ರಸ್ಯಮಾನಂ - ನುಂಗಲ್ಪಡುತಲಿರುವ, ಪೂರ್ಣಂ - ಪರಿಪೂರ್ಣನಾಗಿರುವ (ಗುಂಡಾಗಿರುವ) ಚಂದ್ರಂಯಥಾ - ಚಂದ್ರನನ್ನು ಹೇಗೋ ಹಾಗೆ, ದದೃಶುಃ - ನೋಡಿದರು ||೧೯೪|| ಅಥ - ಅನಂತರದಲ್ಲಿ, ಮನಸ್ಸಂಪಾತ - ಮನೋವೇಗದಂತೆ, ವಿಕ್ರಮಃ - ಗಮನ ಸಾಮರ್ಥ್ಯವುಳ್ಳ, ವಾನರಃ - ಆಂಜನೇಯನು, ತತಃ - ಅನಂತರದಲ್ಲಿ. ತಸ್ಯಾಃ - ಆ ಸಿಂಹಿಕೆಯ, ಮರ್ಮಾಣಿ - ಹೃದಯಸ್ಥಾನಗಳನ್ನು, ತೀಕ್ಷ್ಣೈಃ-ಹರಿತವಾದ, ನಖೈಃ- ಉಗುರುಗಳಿಂದ, ಉತ್ಕೃತ್ಯ - ಕತ್ತರಿಸಿ, ತತಃ - ಆ ಸಿಂಹಿಕೆಯ ಬಾಯಿಂದ, ವೇಗೇನ - ವೇಗದಿಂದ, ಉತ್ಪಪಾತ - ಮೇಲಕ್ಕೆ ಹಾರಿಬಂದನು ||೧೯೫||

ಆತ್ಮವಾನ್ - ಆತ್ಮಜ್ಞಾನವುಳ್ಳ (ಧೀರನಾದ) ಕಪಿಪ್ರವರಃ - ವಾನರೋತ್ತಮನಾದ ಸಃ - ಆ ಆಂಜನೇಯನು, ತಾಂತು - ಆ ಸಿಂಹಿಕೆಯನ್ನಾದರೋ, ದೃಷ್ಟ್ವಾ - ದೂರದ ನೋಟದಿಂದಲೂ, (ಸೂಕ್ಷ್ಮದೃಷ್ಟಿಯಿಂದಲೂ,) ಧೃತ್ಯಾಚ - ಧೈರ್ಯದಿಂದಲೂ, (ಆ ರಕ್ಕಸಿಯಲ್ಲಿ ಅಲಕ್ಷ್ಯತಾ ಬುದ್ಧಿಯಿಂದಲೂ)

---

ಶರೀರವುಳ್ಳವನಾದರೂ, ಅಪಾರವಾದ ಬಲವುಳ್ಳವನಾದ ಕಾರಣವೇ ಮಾರುತಿಯುತನ್ನ ಶರೀರವನ್ನು ಬಹಳ ಮಟ್ಟಿಗೆ ಸಣ್ಣದಾಗುವಂತೆ ಮಾಡಿಕೊಂಡು ಬಲು ಅಗಲವಾದ ಆನಿಶಾಚರಿಯ ಬಾಯೊಳಕ್ಕೆ ಅನೇಕಾವರ್ತಿ ಪ್ರವೇಶಿಸಿ ಅಡಿಗಡಿಗೂ ಹೊರಗೆ ಬರುತ್ತಿದ್ದನು ||೧೯೩|| ಆಗ ಆಂಜನೇಯನು ಆರಾತ್ರಿಂಚರಿಯ ವದನದೊಳಕ್ಕೆ ಹೋಗುತ್ತಿರುವಲ್ಲಿ ಅವಳಿಂದ ನುಂಗಲ್ಪಡುತ್ತಿರುವ ಆತನನ್ನು ಆಗಸದೊಳಗಿದ್ದ ಸಿದ್ಧಚಾರಣ ಗಂಧರ್ವರೇ ಮೊದಲಾದವರು ಗ್ರಹಣ ಕಾಲದೊಳಗೆ ರಾಹುವೆಂಬ ಗ್ರಹವು ನುಂಗುತಲಿರುವ ಚಂದ್ರನನ್ನು ಹೇಗೋಹಾಗೆ ಆಶ್ಚರ್ಯಪರವಶರಾಗಿ ನೋಡುತಲಿದ್ದರು ||೧೯೪|| ಹಾಗೆ ಬಳಹೊಕ್ಕ ಪವನನಂದನನು ಆರಾಕ್ಷಸಿಯ ಹೃದಯದೊಳಗೆ ಪ್ರಾಣಗಳಗೆಡೆಯಾದಮರ್ಮಸ್ಥಾನಗಳನ್ನು ತನ್ನ ಮೊನೆಯಾದ ಉಗುರುಗಳಿಂದ ಕತ್ತರಿಸಿ ಮನಸ್ಸಿಗೆ ಸಮಾನವಾದ ವೇಗವುಳ್ಳವನಾದ ಕಾರಣವೇ ನಿಮಿಷಮಾತ್ರದಲ್ಲಿ ಹೊರಗೆ ಹೊರಟು ಬಂದನು ||೧೯೫|| ಹೀಗೆ ಆತ್ಮತತ್ತ್ವಜ್ಞಾನವುಳ್ಳ (ಪ್ರಶಸ್ತಸ್ವಭಾವವುಳ್ಳ, ಶ್ಲಾಘ್ಯವಾದ ಪ್ರಯತ್ನವುಳ್ಳ) ಆಂಜನೇಯನು-ತಾನು ಕೈಗೊಂಡಿರುವ ಕೆಲಸವನ್ನು ಬೇಗ ನೆರವೇರಿಸಬೇಕೆಂಬ ಸೂಕ್ಷ್ಮದೃಷ್ಟಿಯಿಂದಲೂ,

ಹೃತಹೃತ್ಸಾ ಹನುಮತಾ ಪಪಾತ ವಿಧುರಾಂಭಸಿ ॥೧೯೬॥ ॥
ತಾಂ ಹತಾಂ ವಾನರೇಣಾಶು ಪತಿತಾಂ ವೀಕ್ಷ್ಯ ಸಿಂಹಿಕಾಂ।
ಭೂತಾನ್ಯಾಕಾಶ ಚಾರೀಣಿ ತಮೂಚುಃ ಪ್ಲವಗೋತ್ತಮಂ ॥೧೯೭॥।
ಭೀಮ ಮದ್ಯ ಕೃತಂ ಕರ್ಮ ಮಹತ್ಸತ್ವಾ ತ್ವಯಾ ಹತಂ ।
ಸಾಧಯಾರ್ಥ ಮಭಿಪ್ರೇತ ಮರಿಷ್ಟಂ ಪ್ಲವತಾಂವರ ॥೧೯೮॥।
ಯಸ್ಯತ್ವೇತಾನಿ ಚತ್ವಾರಿ ವಾನರೇಂದ್ರ ಯಥಾತವ ।

ದಾಕ್ಷಿಣ್ಯೇನ-ಸಾಮರ್ಥ್ಯದಿಂದಲೂ, (ಚಟುವಟಿಕೆಯಿಂದ ಕೆಲಸಮಾಡುವ ಜಾಣತನದಿಂದಲೂ) ನಿಪಾತ್ಯ ಚ-ಉರುಳಿಸಿಯೂ, ವೇಗಾತ್-ವೇಗದ ದೆಸೆಯಿಂದ, ಪುನಃ-ತಿರುಗಿ, ವವೃಧೆ - ಬೆಳೆದನು, ॥೧೯೬॥ ಸಾ - ಆ ಸಿಂಹಿಕೆಯು, ಹನುಮತಾ - ಆಂಜನೇಯನಿಂದ, ಹೃತಹೃತ್ - ಬಗೆಯಲ್ಪಟ್ಟ ಎದೆಯುಳ್ಳವಳಾದಕಾರಣವೇ, ವಿಧುರಾ - ಬಹು ಸಂಕಟಪಟ್ಟವಳಾಗಿ, ಅಂಭಸಿ - ಕಡಲಿನ ನೀರಿನಲ್ಲಿ, ಪಪಾತ-ಬಿದ್ದಳು ॥೧೯೬॥ ವಾನರೇಣ - ಆಂಜನೇಯನಿಂದ, ಆಶು - ಬಹುಬೇಗನೆ, ಹತಾಂ - ಕೊಲ್ಲಲ್ಪಟ್ಟ, ಪತಿತಾಂ- ಬಿದ್ದು ಹೋದ, ತಾಂ - ಆ ಸಿಂಹಿಕೆಯನ್ನು, ವೀಕ್ಷ್ಯ - ನೋಡಿ, ಆಕಾಶಚಾರೀಣಿ-ಅಂತರಿಕ್ಷದಲ್ಲಿ ಸಂಚರಿಸುವ, ಭೂತಾನಿ-ಪ್ರಾಣಿಗಳು, ತಂ - ಆ, ಪ್ಲವಗೋತ್ತಮಂ - ಕಪಿವರನಾದ ಆಂಜನೇಯನನ್ನು ಕುರಿತು, ಊಚುಃ - ಹೇಳಿದರು ॥೧೯೭॥ ॥ ಪ್ಲವತಾಂವರ - ಎಲೈ ಪ್ಲವಂಗ ಪ್ರವರನೇ! ಅದ್ಯ - ಈಗ, ಭೀಮಂ - ಭಯಂಕರವಾಗಿರುವ, ಕರ್ಮ - ಕೆಲಸವು, ಕೃತಂ-ನಿನ್ನಿಂದ ಮಾಡಲ್ಪಟ್ಟಿತು, ಮಹತ್-ಬಹುದೊಡ್ಡದಾದ, ಸತ್ತ್ವಂ ಜಂತುವು, ತ್ವಯಾ - ನಿನ್ನಿಂದ, ಹತಂ - ಕೊಲ್ಲಲ್ಪಟ್ಟಿತು, ಅಭಿಪ್ರೇತಂ - ನೀನು ಕೋರಿ ಇರುವ, ಅರಿಷ್ಟಂ - ಮಂಗಳಕರವಾಗಿರುವ, ಅರ್ಥಂ - ಸೀತಾದರ್ಶನವೇ ಮೊದಲಾದ ಪ್ರಯೋಜನವನ್ನು (ಕುರಿತು) ಸಾಧಯ - ಸಾಧಿಸು (ಹೊರಡು) ॥೧೯೮॥ ॥ ವಾನರೇಂದ್ರ- ಎಲೈ ಕಪಿವರನೇ! ತವಯ-ಥಾ-ನಿನ್ನಹಾಗೆ,

ಮಹತ್ತರವಾದ ಧೈರ್ಯದಿಂದಲೂ, ಚಾತುರ್ಯದಿಂದೊಡಗೂಡಿದ ಸಾಮರ್ಥ್ಯದಿಂದಲೂ ಆನಿಶಾಚರಿಯನ್ನು ನಿಪಾತಮಾಡಿ, ಪ್ರಕೃತ ಕಾರ್ಯನಿರ್ವಾಹಕ್ಕೋಸ್ಕರ ಪುನಃ ಪೂರ್ವದಂತೆ ಬೆಳೆಯತೊಡಗಿದನು ॥೧೯೬॥ ಆಗ ಹನುಮನ ಹರಿತವಾದ ಕಯ್ಯುಗುರಿನಗಾಯದಿಂದ ಎದೆಯ ಹುರುಡೆಲ್ಲ ಸಡಲಿಹೋಗಲು ಸಿಂಹಿಕೆಯು ಬಹಳವಾಗಿ ನೊಂದು ಬಾಧೆಯನ್ನು ತಾಳಲಾರದೆ ಉಪ್ಪಿನ ಕಡಲಿನೊಳಕ್ಕೆ ಉರುಳಿದಳು ॥೧೯೬॥ ॥ ಹಾಗೆ ಮಹಾವೀರನಾದ ಹನುಮನ ಹೊಡೆತದಿಂದ ನಿಮಿಷಮಾತ್ರದಲ್ಲಿ ಹತಳಾಗಿ ಸಾಗರದಲ್ಲಿ ಉರುಳಿದ ಸಿಂಹಿಕೆಯನ್ನು ಕಂಡು ಅಪಾರವಾದ ಆಶ್ಚರ್ಯವನ್ನು ಹೊಂದಿದವರಾಗಿ, ಆಕಾಶಚಾರಿಗಳಾದ ಸಿದ್ಧಚಾರಣ ಗಂಧರ್ವಾದಿಗಳು ಪ್ಲವಂಗ ಪುಂಗವನಾದ ಆಂಜನೇಯನನ್ನು ಹೀಗೆಂದು ಹೊಗಳತೊಡಗಿದರು ॥೧೯೭॥ ॥ ಹಾರುವಶಕ್ತಿಯನ್ನೊಳಗೊಂಡಿರುವ ಕಪಿಗಳಲ್ಲಿ ಹವ್ಮಿಾರನಾದ ಎಲೈ ಹನುಮನೇ! ಭಾಪು! ಭಾಪು!! ಈಗ ನೀನು ಒಹುಸಾಹಸದ ಕೆಲಸವನ್ನು ಮಾಡಿದೆ, ಇಂತಹ ದೊಡ್ಡಪ್ರಾಣಿಯನ್ನು ಹೊಡೆದು ಕೆಡಹಿದೆಯಲ್ಲಾ? ಅಹಹ! ಇದೇನು ಸಾಧಾರಣಜನರಿಗೆ ಸಾಧ್ಯವೆ? ಇದು ಬಹುಭಯಂಕರವಾದ ಕೆಲಸವಾಗಿದೆ. ಎಲೈ ವೀರ ಮಾರುತೀ! ಇನ್ನು ನೀನು ನೆನೆದಿರುವ ಕೆಲಸವನ್ನು ಕುರಿತು ತೆರಳು, ನಿನ್ನ ಇಷ್ಟವು ಸಿದ್ಧಿಸಲಿ, ಅನಿಷ್ಟವು ಪರಿಹಾರವಾಗಲಿ ಎಂದುದಲ್ಲದೆ ॥ ೧೯೮ ॥ ॥ ಎಲೈ ಪ್ಲವಂಗೇಂದ್ರನೇ!

ಧೃತಿ ರ್ದೃಷ್ಟಿ ರ್ಮತಿ ರ್ದಾಕ್ಷ್ಯಂ ಸ್ವ ಕರ್ಮಸು ನ ಸೀದತಿ॥೧೯॥
ಸ ತೈಸ್ಸಂಭಾವಿತಃ ಪೂಜ್ಯಃ ಪ್ರತಿಪನ್ನಪ್ರಯೋಜನಃ ।
ಜಗಾಮಾಕಾಶ ಮಾವಿಶ್ಯ ಪನ್ನಗಾಶನವ ತ್ಕಪಿಃ॥೯೦॥
ಪ್ರಾಪ್ತಭೂಯಿಷ್ಠಪಾರಸ್ತು ಸರ್ವತಃ ಪ್ರತಿಲೋಕಯನ್ ।

ಯಸ್ಯತು - ಯಾವನಿಗಾದರೆ, ಧೃತಿಃ - ಧೈರ್ಯವು, ದೃಷ್ಟಿಃ - ಕಾರ್ಯಸಾಧನಕ್ಕೆ ತಕ್ಕ ಸೂಕ್ಷ್ಮವಿಚಾರವು, ಮತಿಃ - ತನಗಾಗಬೇಕಾದ ಪ್ರಯೋಜನದ ರಹಸ್ಯಜ್ಞಾನವು, ದಾಕ್ಷ್ಯಂ - ಕಾರ್ಯಸಾಧನ ಸಾಮರ್ಥ್ಯವು ಎಂಬ, ಏತಾನಿ - ಈ, ಚತ್ವಾರಿ - ನಾಲ್ಕೂ, (ಸಂತಿ - ಇವೆಯೋ, ಸಃ - ಅವನು) ಸ್ವಕರ್ಮಸು - ತಾನು ಸಾಧಿಸಬೇಕಾದ ಕೆಲಸಗಳಲ್ಲಿ, ನಾವಸೀದತಿ - ವ್ಯಥೆಪಡುವುದಿಲ್ಲ. (ಕೆಡುವುದಿಲ್ಲ) ಅಥವಾ:-ಯಸ್ಯ - ದಾವನಿಗೆ, ಸ್ವಕರ್ಮಸು - ಸ್ವಕಾರ್ಯಗಳಲ್ಲಿ, ಯಾಧೃತಿಃ - ಯಾವಧೈರ್ಯವು, ನಾವಸೀದತಿ - ಕೆಡುವುದಿಲ್ಲವೋ (ನ್ಯೂನವಾಗುವುದಿಲ್ಲವೊ', ನಾಶವಾಗದೋ) ಯಾದೃಷ್ಟಿಃ - ಯಾವ ಸೂಕ್ಷ್ಮವಿಚಾರವು, ನಾವಸೀದತಿ - ಮಲಿನವಾಗದೋ, ಯಾಮತಿಃ - ಮುಂದೆ ಬರುವುದನ್ನೂ ಚಿಂತಿಸುವ ನಿಶ್ಚಯಜ್ಞಾನವು, ನಾವಸೀದತಿ - ಲುಪ್ತವಾಗದೋ, ಯತ್ದಾಕ್ಷ್ಯಂ - ಯಾವ ನಿರ್ವಾಹ ಚಾತುರ್ಯವು, ನಾವಸೀದತಿ - ಕೊರತೆಯನ್ನು ಪಡೆಯದೋ, ತ್ವಯಾ - ಅಂತಹ ನಿನ್ನಿಂದ, ತತ್ - ಆ ಜಂತುವು, ಹತಂ - ಕೊಲ್ಲಲ್ಪಟ್ಟಿತು, ತವಯಥಾ - ನಿನ್ನಹಾಗೆ, ಯಸ್ಯತು - ಮತ್ತೆಯಾವನಿಗಾದರೆ, ಸಂತಿ - ಇರುತ್ತವೆಯೋ, ಸಃ - ಅವನು, ಸ್ವಕರ್ಮಸು - ತನ್ನ ಕಾರ್ಯಗಳಲ್ಲಿ, ನಾವಸೀದತಿ - ದುಃಖಪಡುವುದಿಲ್ಲ ॥೧೯॥ ॥ ಪೂಜ್ಯಃ - ಪೂಜಾರ್ಹನಾದ, ಸಃ - ಆ, ಕಪಿಃ - ಆಂಜನೇಯನು, ತೈಃ - ಆ ಸಿದ್ಧಚಾರಣಾದಿಗಳಿಂದ, ಸಂಭಾವಿತಃ - ಗೌರವಿಸಲ್ಪಡುತ್ತಿರುವವನಾಗಿ, ಪ್ರತಿಪನ್ನ - ಪಡೆದ, ಪ್ರಯೋಜನಃ - (ಸಿಂಹಿಕಾ ವಿಜಯರೂಪ) ಪ್ರಯೋಜನವುಳ್ಳವನಾದಕಾರಣವೇ, ಆಕಾಶಂ - ಗಗನವನ್ನು, ಆವಿಶ್ಯ - ಪ್ರವೇಶಿಸಿ, ಪನ್ನಗಾಶನವತ್ - ಗರುಡನಹಾಗೆ, ಜಗಾಮ - ಹೊರಟನು ॥೯೦॥ ॥

ಸಃ - ಆ ಆಂಜನೇಯನು, ಯೋಜನಾನಾಂ - ಗಾವುದಗಳ, ಶತಸ್ಯ - ನೂರರ, ಅಂತೆ - ಕೊನೆಯಲ್ಲಿ, ಪ್ರಾಪ್ತ - ಹೊಂದಲ್ಪಟ್ಟ, ಭೂಯಿಷ್ಠ - ದೊಡ್ಡದಾದ, ಪಾರಸ್ತು - ತೀರವುಳ್ಳವನಾಗಿ, (ಕಡಲ

ಧೃತಿಯು (ಧೈರ್ಯವು,) ಕಾರ್ಯಸಾಧನಕ್ಕೆ ತಕ್ಕ ಸೂಕ್ಷ್ಮದೃಷ್ಟಿಯು ಎಂದರೆ ವಿಚಾರ ಸಾಮರ್ಥ್ಯವು, ವಸ್ತುವಿನ ವಾಸ್ತವ ಸ್ಥಿತಿಯನ್ನು ಮನಸ್ಸಿನಿಂದ ನಿಶ್ಚಯಿಸುವ ಮತಿಯು ಎಂದರೆ ಬುದ್ಧಿಶಕ್ತಿಯು, ಹಿಡಿದ ಕೆಲಸವನ್ನು ಮಾಡಿಯೇ ಮುಗಿಸುವ ದಕ್ಷತೆಯು ಎಂದರೆ ಕ್ರಿಯಾಸಾಧನ ಸಾಹಸವು ಎಂಬೀ ಅಸಾಧಾರಣವಾದ ಈ ನಾಲ್ಕುಗುಣಗಳು ಯಾವ ಪುರುಷನಲ್ಲಿ ನೆಲೆಗೊಂಡಿರುವುವೋ ಅಂತಹ ಮನುಷ್ಯನು ಯಾವ ಕಾರ್ಯವನ್ನು ನಿರ್ವಹಿಸುವುದರಲ್ಲಿಯೂ ಹಿಂದಾಳಾಗುವುದಿಲ್ಲ. ಈ ಶ್ಲಾಘ್ಯಗುಣಗಳು ನಿನ್ನನ್ನು ತವರುಮನೆಯನ್ನಾಗಿ ಮಾಡಿಕೊಂಡಿವೆ. ॥೧೯॥ ॥ ಎಂದೀಪ್ರಕಾರವಾಗಿ ಖೇಚರರಿಂದ ಕೊಂಡಾಡಲ್ಪಡುತ್ತಲಿರುವ ಪೂಜ್ಯನಾದ ಮಾರುತಿಯು ಸಿಂಹಿಕಾವಿಜಯರೂಪವಾಗಿರುವ ಪ್ರಕೃತಪ್ರಯೋಜನವನ್ನು ಪಡೆದವನಾಗಿ ಆಗಸದಬಿಲದಲ್ಲಿ ಹಾರಿ, ಹಾವನ್ನು ಆಹಾರವನ್ನಾಗಿ ಕೊಂಬ ಖಗೇಂದ್ರನಂತೆ ಪ್ರಯಾಣಮಾಡತೊಡಗಿದನು ॥ ೯೦॥ ॥ ಇಂತಾ ವಿಜಯಲಕ್ಷ್ಮೀ ಸಹಿತನಾದ ಶ್ರೀಮದಾಂಜನೇಯನು ನೂರು ಗಾವುದಗಳ ದಾರಿಯನ್ನೂ ಸಂಪೂರ್ಣವಾಗಿ

ಯೋಜನಾನಾಂ ಸ ತಸ್ಯಾಂತೇ ವನರಾಜಿಂ ದದರ್ಶ ಸಃ ॥೧೯೦॥ ॥
ದದರ್ಶ ಚ ಪತನ್ನೇವ ವಿವಿಧದ್ರುಮಭೂಷಿತಂ ।
ದ್ವೀಪಂ ಶಾಖಾಮೃಗಶ್ರೇಷ್ಠೋ ಮಲಯೋಪವನಾನಿಚ ॥೧೯೧॥ ॥
ಸಾಗರಂ ಸಾಗರಾನೂಪಂ ಸಾಗರಾನೂಪಜಾನ್ ದ್ರುಮಾನ್ ॥
ಸಾಗರಸ್ಯಚ ಪತ್ನೀನಾಂ ಮುಖಾನ್ಯಪಿ ವಿಲೋಕಯನ್ ॥೧೯೨॥ ॥

---

ದಡದ ಹತ್ತಿರಕ್ಕೆ ಬಂದವನಾಗಿ) ಸರ್ವತಃ - ಸುತ್ತಮುತ್ತಲೂ, (ನಾಲ್ಕು ಕಡೆಯಲ್ಲಿಯೂ) ಪ್ರತಿಲೋಕಯನ್ - ನೋಡುತ್ತಿರುವವನಾಗಿ, ವನರಾಜಿಂ - ವನಪಜ್ತಿಯನ್ನು, ದದರ್ಶ - ಕಂಡನು ॥೧೯೦॥ ॥ ಶಾಖಾಮೃಗ - ಕಪಿಗಳೊಳಗೆ, ಇಂದ್ರಃ - ಶ್ರೇಷ್ಠನಾದ ಆಂಜನೇಯನು, ಪತನ್ನೇವ - ಹಾರಿಹೋಗುತ್ತಿರುವವನಾಗಿಯೇ (ಇಳಿಯುತ್ತಿರುವವನಾಗಿಯೇ) ವಿವಿಧ - ಬಗೆಬಗೆಯಾದ, ದ್ರುಮ - ಮರಗಳಿಂದ, ಭೂಷಿತಂ - ಅಲಂಕರಿಸಲ್ಪಟ್ಟಿರುವ, ದ್ವೀಪಂ - ಲಂಕಾದ್ವೀಪವನ್ನೂ, ಮಲಯೋಪವನಾನಿಚ - ಲಂಕೆಯಲ್ಲಿನ ಮಲಯಪರ್ವತದ ಉದ್ಯಾನಗಳನ್ನೂ, ದದರ್ಶ - ನೋಡಿದನು ॥೧೯೧॥ ॥ ಆತ್ಮವಾನ್ - ಧೈರ್ಯಸಂಪನ್ನನಾದ, ಮತಿಮಾನ್ - (ಮುಂದಿನ ಆಗು ಹೋಗುಗಳನ್ನು ಚಿಂತಿಸುವ) ಜ್ಞಾನವುಳ್ಳ, ಸಃ - ಆಂಜನೇಯನು, ಸಾಗರಂ - ಸಮುದ್ರವನ್ನೂ, ಸಾಗರಾನೂಪಂ - (ಸಮುದ್ರತೀರದ) ಜಲಪ್ರಾಯ ಪ್ರದೇಶವನ್ನೂ, ಸಾಗರಾನೂಪಜಾನ್ - ತೀರದಲ್ಲಿ ಬೆಳೆದಿರುವ, ದ್ರುಮಾನ್ - ಮರಗಳನ್ನೂ, ಸಾಗರಸ್ಯ- ಸಮುದ್ರರಾಜನ, ಪತ್ನೀನಾಂ - ಹೆಂಡತಿಯರ, (ಎಂದರೆ - ಲಂಕಾಮಲಯೋತ್ಪನ್ನಗಳಾದ ನದಿಗಳ) ಮುಖಾನ್ಯಪಿ - ಮುಖಭಾಗಗಳನ್ನೂ,) (ಆರಂಭ ಪ್ರದೇಶಗಳನ್ನೂ) ವಿಲೋಕಯನ್ - ನೋಡುತ್ತಿರುವವನಾಗಿ, ಮಹಾ ಮೇಘಸಂಕಾಶಂ - ದೊಡ್ಡ ಮೇಘದಂತೆ ಕಂಡುಬರುತ್ತಿರುವುದಾದ ಕಾರಣವೇ, ಆಕಾಶಂ - ಆಗಸದಗಲವನ್ನು, ನಿರುನ್ಧಸ್ತಮಿವ - ತಡೆಯುವಂತಿರುವ (ತುಂಬುವಂತಿರುವ) ಆತ್ಮಾನಂ - ತನ್ನ ಶರೀರವನ್ನು, ಸಮೀಕ್ಷ್ಯ - ಚೆನ್ನಾಗಿನೋಡಿ, ಮತಿಂ - (ಮುಂದೆ ಹೇಳಹೋಗುವ ತರಹೆಯದಾದ) ಬುದ್ಧಿಯನ್ನು, ಚಕಾರ - ಮಾಡಿದನು ॥೧೯೨॥ ॥ ॥೧೯೩॥ ॥ ರಾಕ್ಷಸಾಃ - ರಕ್ಕಸರು, ಮಮ - ನನ್ನ,

---

ಕಡೆಹಾಯ್ದು ದಾಟಿಬರುತ ಗಗನಮಾರ್ಗದಲ್ಲಿ ಸುತ್ತಲೂ ನೋಡುತಿರುವಲ್ಲಿ, ತನ್ನ ಎದುರಿಗೆ ವಿಸ್ತಾರವಾಗಿರುವ ಒಂದಾನೊಂದು ವನಪಜ್ತಿಯುಂ ಕಂಡನು ॥೧೯೦॥ ॥ ಹಾಗೆಯೇ ಬರುತಲಿರುವ ಕಪಿಮಲ್ಲನಾದ ಮಾರುತಿಯು ಲಂಕೆಯ ಹತ್ತಿರದಲ್ಲಿ ಬಗೆಬಗೆಯ ಮರಗಳಿಂದೊಡಗೂಡಿ, ಬಲುಅಂದವಾಗಿ, ಸುತ್ತಲೂ ನೀರಿನ ಭಾಗವನ್ನೊಳಗೊಂಡಿರುವ ದ್ವೀಪವನ್ನೂ, ಆಲಂಕೆಯ ಅಂಚಿನಲ್ಲಿರುವ ಮಲಯವೆಂಬ ಬೆಟ್ಟದಲ್ಲಿನ ಉದ್ಯಾನವನ್ನೂ, ಹಾಯನೋಡಿದನು ॥೧೯೧॥ ॥ ಆಗಲೇ ಮಹಾ ಧೈರ್ಯಶಾಲಿಯೂ, ಮುಂದಿನ ಆಗು ಹೋಗುಗಳನ್ನು ಚಿಂತಿಸುವ ಮತಿವಂತನೂ ಆಗಿರುವ ಆಂಜನೇಯನು ಹಾಗೆಯೇ ಆಗಸದಲ್ಲಿ ಹಾರಿಹೋಗುತ್ತಾ ಕಡಲನ್ನೂ, ಆಕಡಲಿನ ದಡವನ್ನೂ, ಅಲ್ಲಿ ಬೆಳದಿರುವ ಬಗೆಬಗೆಯ ಮರಗಳನ್ನೂ, ಆಕಡಲಿನೊಳಕ್ಕೆ ಬಂದು ಧುಮುಕುತಲಿರುವ ಮಲಯಪರ್ವತದಂ ತಡಿಯಲ್ಲಿ ಹುಟ್ಟಿ ಸಮುದ್ರಪತ್ನಿಯ ರೆನಿಸಿದ ನದಿಗಳ ಮುಖಭಾಗಗಳನ್ನೂ ನೋಡುತ್ತಾ, ಮಹಾ ಮೇಘದಂತೆ ಬಲುತೋರವಾಗಿ ಕಾಣಬರುತ್ತಿರುವ ತನ್ನ ಶರೀರವನ್ನೂ ತಾನೇ ಚೆನ್ನಾಗಿ

ಸ ಮಹಾಮೇಘಸಂಕಾಶಂ ಸಮೀಕ್ಷ್ಯಾತ್ಮಾನ ಮಾತ್ಮವಾನ್ ॥
ನಿರುಂಧಂತ ಮಿವಾಕಾಶಂ ಚಕಾರ ಮತಿಮಾನ್ ಮತಿಂ ॥೧೯೪॥
ಕಾಯವೃದ್ಧಿಂ ಪ್ರವೇಗಂಚ ಮಮ ದೃಷ್ಟ್ವೈವ ರಾಕ್ಷಸಾಃ ।

ಕಾಯವೃದ್ಧಿಂ - ದೇಹದ ಬೆಳವಳಿಗೆಯನ್ನು, ದೃಷ್ಟ್ವೈವ-ನೋಡುತ್ತಲೇ, ಮಯಿ-ನನ್ನಲ್ಲಿ, ಕೌತೂಹಲಂ - ಕುತೂಹಲವನ್ನು (ಇದೇನೋ ವೇಷಧಾರಿಯಾಗಿ ವಂಚನೆಗೋಸ್ಕರ ಬಂದಿರುವ ಭೂತವಾಗಿದೆ, ಇದರ ನಿಜವನ್ನು ತಿಳಿಯಬೇಕು ಎಂಬ ಔತ್ಸುಕ್ಯವನ್ನು) ಕುರ್ಯುಃ - ಮಾಡಹೋಗುವರು, ಇತಿ - ಹೀಗೆಂದು, ಮಹಾಕಪಿಃ - ಆಂಜನೇಯನು, ಮೇನೆ - ತಿಳಿದುಕೊಂಡನು. (ನೆನೆದನು) * ತತಃ -

ಹಾಯನೋಡಿಕೊಂಡು, ಓಹೋ ! ಈ ನನ್ನ ದೇಹವು ಆಗಸದ ಬಿಲವನ್ನೇ ಮುಚ್ಚಿಬಿಡುವಂತಿದೆಯಲ್ಲಾ ? ನಾನು ಈ ಬಗೆಯ ಬೆಳವಳಿಗೆಯುಳ್ಳವನಾಗಿಯೇ ಇದ್ದರೆ, ಮುಂದೆ ಸೀತಾದೇವಿಯ ಸಂದರ್ಶನಕ್ಕೆ ಏನು ಅಡ್ಡಿಯು ಬಂದು ಒದಗುವುದೋ ಎಂದು ತನ್ನ ಮನದೊಳಗೆ ತಾನೇ ಹೀಗೆ ಚಿಂತಿಸತೊಡಗಿ ॥ ೧೯೩, ೧೯೪ ॥ ॥ ಇಷ್ಟು ಉನ್ನತವಾಗಿ

* ತತಃ - ಯಮನಿಯಮಾದಿ ಯೋಗ ಸಾಧನಗಳು ಸಿದ್ಧಿಸಿದ ಮೇಲೆ, ಆತ್ಮವಾನ್ - ಬ್ರಹ್ಮಜ್ಞಾನ ಸಂಪನ್ನನಾದ ಪರಮ ಹಂಸನು, ಮಹೀಧರಸನ್ನಿಭಂ - ಬೆಟ್ಟದಂತೆ ಸ್ಥೂಲವಾಗಿ ಕಂಡುಬರುವ, (ಶೀರ್ಯತೆ ಇತಿ ಶರೀರಂ) - ನಾಶವನ್ನು ಪಡೆಯತಕ್ಕುದಾದ ದೇಹವನ್ನು, ಸಂಕ್ಷಿಪ್ಯ - ದೂರವಾಗಿ ಎಸೆದು (ಜ್ಞಾನದಿಂದ ತೊರೆದು) ವೀತಮೋಹಃ - ಅಜ್ಞಾನದ ಸಂಬಂಧವು ತೊಲಗಿ ಹೋಗುವುದಾದ ಕಾರಣವೇ, ಪುನಃ - ತಿರುಗಿ, ಪ್ರಕೃತಿಮಿವ - ಪ್ರಪಂಚಕ್ಕೆ ಮೂಲ ಕಾರಣವಾದ ಪರಮಾತ್ಮನನ್ನು ಪಡೆಯುವ ಹಾಗೆ, ಸಃ - ಆ ಆಂಜನೇಯನೂ, ತತಾಂ - ಆ, ಮಹೀಧರಸನ್ನಿಭಂ - ಬೆಟ್ಟಕ್ಕೆಣೆಯಾದ, ಶರೀರಂ - ದೇಹವನ್ನು, ಸಂಕ್ಷಿಪ್ಯ - ತೊರೆದು, ಪುನಃ - ತಿರುಗಿ, ಪ್ರಕೃತಿಂ - ಮಾಯಾ ಕಲ್ಪಿತವಾದ ಸೂಕ್ಷ್ಮ ರೂಪವನ್ನು, ಆಪೇದೆ - ಹೊಂದಿದನು (ಎಂದು ಸುಂದರಕಾಂಡ ಮಹಿಮಾರ್ಣವ) ಮಹಾಕಪಿಃ - ಆತ್ಮವಾನ್ - ಪರಮಾತ್ಮೋಪಾಸಕನಾದ ಕಾರಣವೇ, ಅಥವಾ - ಸರ್ವಕಾರಣನಾದ ಶ್ರೀಮನ್ನಾರಾಯಣನೇ ಮುಖ್ಯೋಪಾಯವೆಂಬ ಮನೋನಿಷ್ಠೆಯನ್ನು ಪಡೆದ ಪ್ರಪನ್ನನಾದ ಕಾರಣವು, ವೀತಮೋಹಃ - ಕಳೆದುಹೋದ ಅವಿದ್ಯೆಯುಳ್ಳವನಾಗಿ, ಪ್ರಕೃತಿಮಿವ - ತನಗೆ ಅಸಾಧಾರಣವಾದ ಗುಣಾಷ್ಟಕವನ್ನು ಹೇಗೋಹಾಗೂ, ಅಥವಾ - ಪರಭಕ್ತಿ ಪರಜ್ಞಾನಾದಿಗಳನ್ನು ಹೇಗೋಹಾಗೂ, ಅಥವಾ- ಶೇಷತ್ವ ಪಾರತಂತ್ರ್ಯಾದಿಗಳನ್ನು ಹೇಗೋಹಾಗೂ, ಪ್ರಕೃತಿಂ- ತನ್ನ ಪೂರ್ವರೂಪವನ್ನು, ಆಪೇದೆ - ಹೊಂದಿದನು, ಪಾಪ, ಮುಪ್ಪು, ಮರಣ, ದುಃಖ, ಹಸಿವು, ಬಾಯಾರಿಕೆ, ಇವುಗಳೊಂದೂ ಇಲ್ಲದಿರುವುದು, ಕೋರಿದುದೆಲ್ಲ ಸಫಲವಾಗುವುದು, ನೆನೆದುದೆಲ್ಲ ಸತ್ಯವಾಗುವುದು, ಇವಿಷ್ಟೂ ಗುಣಾಷ್ಟಕ. 'ಪರಭಕ್ತಿ' ಎಂದರೆ - ಶಾಸ್ತ್ರಗಳಿಂದ ಅರಿತು, ದೃಷ್ಟಿಗೆ ಗೋಚರಿಸದಿರುವ ಪರಮಾತ್ಮನ ಸಾಕ್ಷಾತ್ಕಾರವಾಗಬೇಕೆಂಬ ಬಯಕೆ. 'ಪರಜ್ಞಾನ' ಎಂದರೆ - ಆ ಬಯಕೆಯು ಪ್ರಬಲವಾಗಿ ಪರಮಾತ್ಮನು ದೃಷ್ಟಿಗೆ ಗೋಚರಿಸಿದಂತೆ ಆಗುವುದು, 'ಪರಮ ಭಕ್ತಿ' ಎಂದರೆ - ಇಂತಹ ಪರಮಾತ್ಮನು ಪುನಃ ಕಾಣದೆ ಹೋಗುವನೋ ಏನೋ ಎಂದು ಭಯಪಡುವುದು, 'ಶೇಷತ್ವ' ಎಂದರೆ - ಜೀವೇಶ್ವರರೊಳಗೆ ಈಶ್ವರನು ಶೇಷಿ, ಆದುದರಿಂದ ಆ ಈಶ್ವರನಿಗೆ ಅತಿಶಯವನ್ನು ಕಲ್ಪಿಸುವುದು. 'ಪಾರತಂತ್ರ್ಯ' ಎಂದರೆ -ತನ್ನ ಪ್ರವೃತ್ತಿ, ನಿವೃತ್ತಿ, ಸ್ಥಿತಿಗಳೆಲ್ಲವೂ ಅನ್ಯಾಧೀನಗಳು ಎಂದು ಸ್ವಾತಂತ್ರ್ಯವನ್ನು ತೊರೆದಿರುವುದು (ಎಂದು ತಿಲಕ) ಆತ್ಮವಾನ್ - ಪ್ರಕೃತಿ ವಿಯುಕ್ತ ಆತ್ಮಜ್ಞಾನ ಸ್ವರೂಪವನ್ನು ಪಡೆದಿರುವ ಕೇವಲನು, ವೀತಮೋಹಃ - ಅವಿದ್ಯಾ ಸಂಬಂಧ ಶೂನ್ಯನಾಗಿ, ಪ್ರಕೃತಿಮಿವ . ಸಂಕುಚಿತವಾಗದ ಜ್ಞಾನೈಕಾಕಾರವನ್ನು ಹೇಗೋಹಾಗೆ (ಎಂದು ಯೋಗಮತ.)

ಮಯಿ ಕೌತೂಹಲಂ ಕುರ್ಯ್ಯ ರಿತಿ ಮೇನೆ ಮಹಾಕಪಿಃ ॥೧೯೫॥ ॥
ತತ ಶ್ಶರೀರಂ ಸಂಕ್ಷಿಪ್ಯ ತನ್ಮಹೀಧರ ಸನ್ನಿಭಂ।
ಪುನಃ ಪ್ರಕೃತಿ ಮಾಪೇದೇ ವೀತಮೋಹ ಇವಾತ್ಮವಾನ್ ॥೧೯೬॥ ॥
ತದ್ರೂಪ ಮತಿಸಂಕ್ಷಿಪ್ಯ ಹನುಮಾನ್ಪ್ರಕೃತೌ ಸ್ಥಿತಃ ।
ತ್ರೀನ್ಕ್ರಮಾನಿವ ವಿಕ್ರಮ್ಯ ಬಲಿವೀರ್ಯಹರೋ ಹರಿಃ ॥೧೯೭॥ ॥
ಸ ಚಾರುನಾನಾವಿಧರೂಪಧಾರೀ ಪರಂ ಸಮಾಸಾದ್ಯ ಸಮುದ್ರತೀರಂ ।

ಅನಂತರದಲ್ಲಿ, ಮಹೀಧರಸನ್ನಿಭಂ - ಬೆಟ್ಟಕ್ಕೆ ಸಮಾನವಾಗಿರುವ, ತತ್-ಆ ದೊಡ್ಡದಾದ, ಶರೀರಂ-ದೇಹವನ್ನು, ಸಂಕ್ಷಿಪ್ಯ - ಚಿಕ್ಕದಾಗಿ ಮಾಡಿಕೊಂಡು, ಪುನಃ - ತಿರುಗಿ, ಆತ್ಮವಾನ್ - ಆತ್ಮಜ್ಞಾನವುಳ್ಳವನು, ವೀತಮೋಹಃ-ನಿವರ್ತಿಸಿದ ಅಜ್ಞಾನವುಳ್ಳವನಾಗಿ, ಪ್ರಕೃತಿಮಿವ-ಸ್ವ (ನಿಜ) ಸ್ವರೂಪವನ್ನು ಹೇಗೋ ಹಾಗೆ, ಪ್ರಕೃತಿಂ-ಪೂರ್ವರೂಪವನ್ನು, ಆಪೇದೆ-ಹೊಂದಿದನು, (ಇಲ್ಲಿ ಆತ್ಮಶಬ್ದವು ಲಕ್ಷಣೆಯಿಂದ ಆತ್ಮಜ್ಞಾನಪರ) ॥೧೯೫॥॥೧೯೬॥॥(ಹಿಂದೆ ಹೇಳಿದ ಶರೀರ ಸಂಕ್ಷೇಪವು ಪುನಃ ದೃಷ್ಟಾಂತದೊಂದಿಗೆ ಹೇಳಲ್ಪಡುತ್ತಿದೆ) ಹನುಮಾನ್-ಆಂಜನೇಯನು, ತದ್ರೂಪಂ-ಆ ದೊಡ್ಡ ಆಕಾರವನ್ನು, ಅತಿಸಂಕ್ಷಿಪ್ಯ-ಬಹಳವಾಗಿ ಸೂಕ್ಷ್ಮರೂಪಕ್ಕೆ ತಂದು. ತ್ರೀನ್ - ಮೂರಾದ, ಕ್ರಮಾನ್ - ಪಾದವಿನ್ಯಾಸಗಳನ್ನು (ಅಡಿಗಳಿಡುವಿಕೆ) ವಿಕ್ರಮ್ಯ - ವಿಕ್ರಮಿಸಿ (ಇಡುತ್ತ) ಬಲಿ - ಬಲಿಚಕ್ರವರ್ತಿಯ, ವೀರ್ಯ - ಶೌರ್ಯ (ಪರಾಕ್ರಮ ಅಥವಾ ಹೆಮ್ಮೆ) ವನ್ನು, ಹರಃ - ಅಪಹರಿಸಿದ, ಹರಿರಿವ - (ವಾಮನಾವತಾರವನ್ನೆತ್ತಿದ) ವಿಷ್ಣುವಿನಂತೆ, ಪ್ರಕೃತೌ - ನಿಜರೂಪದಲ್ಲಿ, ಸ್ಥಿತಃ - ನಿಂತನು (ಇದ್ದನು) ॥೧೯೭॥ ॥

ಚಾರು...ಧಾರೀ - ಅಂದವಾಗಿ ಚಿಕ್ಕದು ಮತ್ತು ದೊಡ್ಡದು ಎನಿಸಿ ಬಗೆಬಗೆಯ ರೂಪಗಳನ್ನು

ಬೆಳೆದಿರುವ ಈ ನನ್ನ ಶರೀರವನ್ನೂ, ನಾನು ಹೋಗುತ್ತಿರುವ ವೇಗವನ್ನೂ, ರಕ್ಕಸರೇನಾದರು ನೋಡಿದರೋ ! ಆಗಲೇ ಇದೇನು, ಅದ್ಭುತವಾದ ವ್ಯಕ್ತಿಯಾಗಿದೆ, ಎಂದೂ ನೋಡಿಯದಿಲ್ಲವಲ್ಲ ? ಇದರ ತತ್ವವನ್ನು ಕಂಡು ಹಿಡಿಯಬೇಕು, ಎಂದೀ ಪ್ರಕಾರ ಕುತೂಹಲ ಪಡುವುದೇನೋ ನಿಶ್ಚಯ. ಆಗ ನನ್ನ ಗುಟ್ಟು ರಟ್ಟಾಗದಿರದು. ಹಾಗಾದರೆ ಅನರ್ಥವುಂಟಾದೀತು ಎಂದು ಭಾವಿಸಿ, ಬೆಟ್ಟದ ಹಾಗೆ ಬೆಳೆದು ದೊಡ್ಡ ಆಕಾರದಲ್ಲಿದ್ದ ತನ್ನ ಶರೀರವನ್ನು ಚಿಕ್ಕದಾಗುವಂತೆ ಮಾಡಿಕೊಂಡು, ಪರಮಾತ್ಮಜ್ಞಾನಸಂಪನ್ನನಾದ ಯೋಗಿಯು ಜ್ಞಾನದಿಂದ ಅಜ್ಞಾನವು ನಿವೃತ್ತವಾಗಲು ಪುನಃ ತನ್ನ ಸ್ವಸ್ವರೂಪವನ್ನು ಹೊಂದುವಹಾಗೆ ತನ್ನ ಪೂರ್ವದರೂಪವನ್ನೇ ತಾಳ್ದನು ॥೧೯೫॥, ॥೧೯೬॥ ॥ ಜಗ-ಪೂರ್ವದಲ್ಲಿ ಬಲಿಚಕ್ರವರ್ತಿಯ ಗರ್ವವನ್ನು ಅಣಗಿಸಲೆಣಿಸಿದ ಶ್ರೀಮನ್ನಾರಾಯಣನು ವಾಮನ ಮೂರ್ತಿಯಾಗಿ, ಮೊದಲು ಸೂಕ್ಷ್ಮರೂಪವನ್ನು ತಾಳ್ದು, ಬಳಿಕ ಬಲಿಯ ಹೆಮ್ಮೆಯನ್ನು ಡಗಿಸುವಾಗ ವಿಶ್ವರೂಪವನ್ನು ಧರಿಸಿ, ಆಮೇಲೆ ಪುನಃ ಸೂಕ್ಷ್ಮರೂಪವನ್ನಾಂತು, ಮೂರು ಕ್ರಮಗಳನ್ನು ತೋರಿದ ಹಾಗೆ, ಮಹಾ ಬಲಶಾಲಿಗಳ ವೀರ್ಯವನ್ನು ಸೆಳೆಯುವ ಹರಿಯೆನಿಸಿದ ಆಂಜನೇಯನೂ, ನಿಶಾಚರಿಯ ವಿಜಯಕ್ಕಿಂತ ಪೂರ್ವದಲ್ಲಿ ಸೂಕ್ಷ್ಮಸ್ವರೂಪವನ್ನು ಹೊಂದಿ, ತದನಂತರ ಮಹತ್ತರವಾದ ಆಕೃತಿಯನ್ನು ಅಳವಟ್ಟು, ತಿರುಗಿ ಮುನ್ನಿನ ಬಹು ಸೂಕ್ಷ್ಮಾಕೃತಿಯನ್ನೇ ತಳೆದು, ನಿಜರೂಪದಲ್ಲಿ ಉಳಿದು ವಿರಾಜಿಸುತಲಿದ್ದನು ॥ ೧೯೭॥ ॥ ಸಮಯೋಚಿತವಾಗಿ

ಪರ್ವೈರಶಕ್ಯಃ ಪ್ರತಿಪನ್ನರೂಪ ಸ್ಸಮೀಕ್ಷಿತಾತ್ಮಾ ಸಮವೇಕ್ಷಿತಾರ್ಥಃ ||
ತತ ಸ್ಸಲಂಬಸ್ಯ ಗಿರೇ ಸ್ಸಮೃದ್ಧೇ ವಿಚಿತ್ರಕೂಟೇ ನಿಪಪಾತ ಕೂಟೇ |
ಸಕೇತಕೋದ್ದಾಲಕನಾಳಿಕೇರೇ ಮಹಾದ್ರಿಕೂಟಪ್ರತಿಮೋಮಹಾತ್ಮಾ||
ತತಸ್ತು ಸಂಪ್ರಾಪ್ಯ ಸಮುದ್ರತೀರಂ ಸಮೀಕ್ಷ್ಯಲಂಕಾಂ ಗಿರಿವರ್ಯಮೂರ್ಧ್ನಿ
ಕಪಿಸ್ತು ತಸ್ಮಿನ್ನಿಪಪಾತಪರ್ವತೇ ವಿಧೂಯರೂಪಂವ್ಯಥಯನ್ಮೃಗದ್ವಿಜಾನ್ ||

ತಾಳಿದವನಾಗಿರುವ, ಪರೈಃ - ಸಿಂಹಿಕೆ ಮೊದಲಾದ ಹಗೆಗಳಿಂದ, ಅಶಕ್ಯಃ-ಜಯಿಸಲಸಾಧ್ಯನೆನಿಸಿದ,ಪ್ರತಿಪನ್ನರೂಪಃ - ಪೂರ್ವರೂಪವನ್ನು ಹೊಂದಿದವನೂ ಆಗಿರುವ, ಸಃ- ಆ ಆಂಜನೇಯನು, ಪರಂ - ಎರಡನೆಯದಾದ, ಸಮುದ್ರತೀರಂ - ಕಡಲಿನ ದಡವನ್ನು, ಸಮಾಸಾದ್ಯ - ಹೊಂದಿ, ಸಮೀಕ್ಷಿತಾತ್ಮಾ - ನೋಡಿಕೊಂಡ ತನ್ನ ಶರೀರವುಳ್ಳವನಾಗಿ, ಸಮೀಕ್ಷಿತಾರ್ಥಃ - ಮುಂದೆ ಮಾಡಬೇಕಾದ ಕೆಲಸವನ್ನು ಯೋಚಿಸಿದವನು, (ಅಭೂತ್ - ಆದನು) ||೧೯೯|| || ವ.ಹಾ - ದೊಡ್ಡದಾದ, ಅದ್ರಿ - ಬೆಟ್ಟದ, ಕೂಟ - ಕೋಡಿಗೆ, ಪ್ರತಿಮಃ - ಸಮಾನನಾಗಿರುವ, ಮಹಾತ್ಮಾ-ಮಹಾ ಧೈರ್ಯಶಾಲಿಯಾದ,- ಸಃ-ಆ ಆಂಜನೇಯನು, ಲಂಬಸ್ಯ - ಲಂಬವೆಂಬ, (ಕಾಣಬರದಿರುವ) ಗಿರೇಃ - ಬೆಟ್ಟದ, (ಸುವೇಲಾಚಲದ) ಸಮೃದ್ಧೇ - ಮರ ಮೊದಲಾದವುಗಳಿಂದ ನಿಬಿಡವಾಗಿ (ತುಂಬಿ) ರುವ, ವಿಚಿತ್ರಕೂಟೆ - ಬಗೆಬಗೆಯಾದ ಚಿತ್ರಶಿಖರಗಳುಳ್ಳ, ಸಕೇತಕೋದ್ದಾಲಕನಾಳಿಕೇರೆ, ಗೇದಿಗೆ, ಶ್ಲೇಷ್ಮಾತಕ, ತೆಂಗು ಮೊದಲಾದ ವೃಕ್ಷಗಳಿಂದ ಸಹಿತವಾದ, ಕೂಟೆ - ಉನ್ನತಶಿಖರದಲ್ಲಿ, ನಿಪಪಾತ - ಇಳಿದನು, || ೧೯೯|| || ತತಃ - ಅನಂತರದಲ್ಲಿ, ಕಪಿಃ - ಆಂಜನೇಯನು, ಸಮುದ್ರತೀರಂ - ಕಡಲಿನ ದಡವನ್ನು, ಸಂಪ್ರಾಪ್ಯ - ಸೇರಿ, ಗಿರಿವರ್ಯಮೂರ್ಧ್ನಿ - ಆ ದೊಡ್ಡಬೆಟ್ಟದ ಶಿಖರದಲ್ಲಿ. (ನಿಂತು) ಲಂಕಾಂ - ಲಂಕಾನಗರವನ್ನು, ಸಮೀಕ್ಷ್ಯ - ನೋಡಿ, ಮೃಗದ್ವಿಜಾನ್ - ಮೃಗ ಮತ್ತು ಪಕ್ಷಿಗಳನ್ನು, ವ್ಯಥಯನ್ - ಬಾಧೆಪಡಿಸುವ, ರೂಪಂ - ತನ್ನ ಪೂರ್ವರೂಪವನ್ನು, ವಿಧೂಯ - ಬಿಟ್ಟು, ತಸ್ಮಿನ್ - ಆ, ಪರ್ವತೆ - ಬೆಟ್ಟದಲ್ಲಿ, ನಿಪಪಾತ - ಇಳಿದನು || ೨೦೦|| || ಸಃ -

ಕಾರ್ಯಸಾಧನೆಗೋಸ್ಕರ ಸ್ಥೂಲಸೂಕ್ಷ್ಮಾದಿ ಸುಂದರವಾದ ಆಕಾರಗಳನ್ನು ಧರಿಸಿದವನೂ, ಸಿಂಹಿಕೆಯೇ ಮೊದಲಾದವರಿಂದ ಗೆಲ್ಲಲು ಅಸದಳನೆನಿಸಿದವನೂ ಆಗಿರುವ ಆಂಜನೇಯನು, ತಾನು ದಾಟುತಲಿದ್ದ ಸಾಗರದಪಾರವನ್ನು ಸೂಕ್ಷ್ಮಾಕೃತಿಯಿಂದ ಸೇರಿ ಬಹುಜ್ಞಾನನಾದುದರಿಂದ ಯಾವ ಅಪಾಯಕ್ಕೂ ಒಳಗಾಗದ ಹಾಗೆ ತಾನು ಮುಂದೆ ಮಾಡಬೇಕಾದ ಕೆಲಸವನ್ನು ಕುರಿತು ತನ್ನ ಮನದೊಳಗೆ ಆಲೋಚಿಸತೊಡಗಿದನು || ೧೯೯|| || ಅನಂತರದಲ್ಲಿ—ದೊಡ್ಡ ಬೆಟ್ಟದ ಕೋಡಿನಂತೆ ಬೆಳಗುತ್ತ, ಮಹಾಧೈರ್ಯಸಂಪನ್ನನಾದ ಮಾರುತಿಯು ವಿಚಿತ್ರತರವಾದುದೂ, ತುದಿಕಾಣಬರದ ಕೋಡುಳ್ಳುದೂ ಆಗಿರುವ ಲಂಬಪರ್ವತ (ಸುವೇಲಾಚಲ)ದ ಗೇದಿಗೆ, ಸುರಗಿ,ತೆಂಗು ಮೊದಲಾದ ಗಿಡಗಳಿಂದ ತುಂಬಿರುವ ಶಿಖರದಲ್ಲಿ ಇಳಿದನು || ೧೯೯|| || ಬಹುನಿರ್ವಾಹ ಶಾಲಿಯಾದ ಹನುಮಂತನು ಈಪ್ರಕಾರವಾಗಿ ಬಹುವೇಗದಿಂದ ಸಮುದ್ರವನ್ನು ದಾಟಿ, ಆಚೆಯ ದಡವನ್ನು ಸೇರಿ, ತ್ರಿಕೂಟಾಚಲದ ಶಿಖರವನ್ನು ಪ್ರವೇಶಿಸಿ, ಅಲ್ಲಿರುವ ಬಗೆಬಗೆಯ ಮೃಗಗಳಿಗೂ, ಖಗಗಳಿಗೂ, ಮಹಾಭೀತಿಯನ್ನುಂಟುಮಾಡುವ ಘೋರಾಕೃತಿಯನ್ನು ತೊರೆದು, ಆಪರ್ವತದಲ್ಲಿ ನಿಂತನು || ೨೦೦ || || ದನುವಿನಸಂತತಿಯಲ್ಲಿ ಜನಿಸಿದ ರಕ್ಕಸರಿಂದಲೂ, ಘೋರವಾದ

ಸ ಸಾಗರಂದಾನವಪನ್ನಗಾಯುತಂಬಲೇನವಿಕ್ರಮ್ಯಮಹೋರ್ಮಿಮಾಲಿನಂ।
ನಿಪತ್ಯತೀರೇಚಮಹೋದಧೇಸ್ತದಾದದರ್ಶ ಲಂಕಾಮಮರಾವತೀಮಿವ॥ ೨೦೧॥

ಇತಿ ಶ್ರೀಮತ್ಸುಂದರಕಾಂಡೇ-ಪ್ರಥಮಸ್ಸರ್ಗಃ.



ಆ ಆಂಜನೇಯನು, ದಾನವಪನ್ನಗಾಯುತಂ - ರಾಕ್ಷಸ, ಸರ್ಪ ಇತ್ಯಾದಿಗಳಿಂದ ಕೂಡಿರುವ, ಮಹೋರ್ಮಿಮಾಲಿನಂ - ದೊಡ್ಡ ತೆರೆಗಳನ್ನೊಳಗೊಂಡಿರುವ, ಸಾಗರಂ - ಸಮುದ್ರವನ್ನು, ಬಲೇನ - ಸಾಮರ್ಥ್ಯದಿಂದ, ವಿಕ್ರಮ್ಯ - ದಾಟಿ, ಮಹೋದಧೇಃ - ದೊಡ್ಡ ಕಡಲಿನ, ತೀರೆ - ದಡದಲ್ಲಿ, ನಿಪತ್ಯ - ಇಳಿದು, ತದಾ - ಆಗ, ಅಮರಾವತೀಮಿವ - ಸ್ವರ್ಗವನ್ನು ಹೇಗೋ(ಹಾಗೆ, ಲಂಕಾಂ - ಲಂಕಾಪಟ್ಟಣವನ್ನು ದದರ್ಶ - ಕಂಡನು ॥ ೨೦೧॥ ॥

ಇಂತು ರಸಾಯನ ಟೀಕೆಯಿಂದೊಡಗೂಡಿರುವ
ಶ್ರೀಮದ್ವಾಲ್ಮೀಕಿ ರಾಮಾಯಣದ ಸುಂದರಕಾಂಡದಲ್ಲಿ
ಮೊದಲನೆಯ ಸರ್ಗವು.

—ಶ್ರೀರಾಮಚಂದ್ರಾರ್ಪಣಂ—



ಸರ್ಪಗಳಿಂದಲೂ ಒಡಗೂಡಿ, ಮಹತ್ತರವಾದ ತರಂಗಗಳಿಂದ ಸಹಿತವಾದ ಸಾಗರವನ್ನು ತನ್ನ ಶೌರ್ಯಾತಿಶಯದಿಂದ ದಾಟಿದ ಆಂಜನೇಯನು ಆ ಮಹಾ ಸಮುದ್ರದ ಆಚೆಯ ದಡದಲ್ಲಿ ತಂಗಿ, ಇಂದ್ರನ ಮಂದಿರವಾದ ಅಮರಾವತಿಯಂತೆ ಬೆಳಗುತಲಿರುವ ಲಂಕಾನಗರವನ್ನು ಕಂಡನು.

ಹರಿಯಾ ಮಹೇಂದ್ರ ಗಿರಿಯಿಂ ।
ಸರಿದೀಶನ ದಾಂಟುತಾಂತು ಶೈಲಾದರಮಂ ।
ಸುರಸಾ ಸಿಂಹಿಕೆಯುರನುಂ ।
ಪರಿಭವಿಸಲು ಲಂಕೆ ಕಂಡು ದಮರಾವತಿವೋಲ್ ॥

ಇಂತು ರಸಾಯನವೆಂಬ ಟೀಕೆಯಿಂದೊಡಗೂಡಿರುವ ಶ್ರೀಮದ್ವಾಲ್ಮೀಕಿ
ರಾಮಾಯಣದ ಸುನ್ದರಕಾಣ್ಡದಲ್ಲಿ ಮೊದಲನೆಯ ಸರ್ಗವು.



ಶ್ರೀಃ

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ.

## * ದ್ವಿತೀಯಸ್ಸರ್ಗಃ *

ಸ ಸಾಗರ ಮನಾಧೃಷ್ಯ ಮತಿಕ್ರಮ್ಯ ಮಹಾಬಲಃ ।
ತ್ರಿಕೂಟಶಿಖರೇ ಲಂಕಾಂ ಸ್ಥಿತಾಂ ಸ್ವಸ್ಥೋ ದದರ್ಶ ಹ ॥೧॥
ತತಃ ಪಾದಪಮುಕ್ತೇನ ಪುಷ್ಪವರ್ಷೇಣ ವೀರ್ಯವಾನ್ ।
ಅಭಿವೃಷ್ಟ ಸ್ಸ್ಥಿತ ಸ್ತತ್ರ ಬಭೌ ಪುಷ್ಪಮಯೋ ಯಥಾ ॥೨॥
ಯೋಜನಾನಾಂ ಶತಂ ಶ್ರೀಮಾಂ ಸ್ತೀರ್ತ್ವಾ ಪ್ಯುತ್ತಮವಿಕ್ರಮಃ ।
ಅನಿಶ್ವಸನ್ ಕಪಿ ಸ್ತತ್ರ ನ ಗ್ಲಾನಿ ಮಧಿಗಚ್ಛತಿ ॥೩॥
ಶತಾನ್ಯಹಂ ಯೋಜನಾನಾಂ ಕ್ರಮೇಯಂ ಸುಬಹೂನ್ಯಪಿ ।

---

ಕಂದ॥ ಲಂಕೆಯು ಬಿಂಕವ ಸಿರುಕಿಸಿ । ಶಂಕೆಯು ನಿನಿಸಾಂತು ರಾಮಕಿಂಕರನಾಗಳ್ ॥
ಸಂಕುಚಿತಗಾತ್ರನಾಗುತೆ । ಲಂಕೆಯ ತಾನೊಳಪುಗಲ್ಕೆ ಸನ್ನಹೆಗೊಂಡಾಂ ॥

ಟೀ॥ ಮಹಾಬಲಃ - ಬಹು ಬಲಶಾಲಿಯಾದ, ಸಃ- ಆ ಆಂಜನೇಯನು, ಅನಾಧೃಷ್ಯಂ-ದಾಟಲಸದ್ಧಳವೆನಿಸಿದ, ಸಾಗರಂ - ಕಡಲನ್ನು, ಅತಿಕ್ರಮ್ಯ-ದಾಟಿಹೋಗಿ, ತ್ರಿಕೂಟಶಿಖರೆ - ತ್ರಿಕೂಟಪರ್ವತದ ತುದಿಯಲ್ಲಿ, ಸ್ವಸ್ಥಃ-ನೆಮ್ಮದಿಯಾಗಿ ನಿಂತವನಾಗಿ, ಲಂಕಾಂ - ಲಂಕಾನಗರವನ್ನು, ದದರ್ಶಹ - ಕಂಡನಷ್ಟೆ ? ॥೧॥ ತತಃ - ಅನಂತರದಲ್ಲಿ, ತತ್ರ - ಆ ಶಿಖರದಲ್ಲಿ, ಸ್ಥಿತಃ - ನಿಂತಿದ್ದ, ವೀರ್ಯವಾನ್ - ಪರಾಕ್ರಮಶಾಲಿಯಾದ ಮಾರುತಿಯು, ಪಾದಪಮುಕ್ತೇನ-ಮರಗಳಿಂದ ಉದುರಿದ, ಪುಷ್ಪವರ್ಷೇಣ-ಹೂವಿನ ಮಳೆಯಿಂದ,ಅಭಿವೃಷ್ಟಃ-ತೋಯಿಸಲ್ಪಟ್ಟವನಾಗಿ,ಪುಷ್ಪಮಯೋಯಥಾ-ಕುಸುಮರಾಶಿಯೋ ಎಂಬಂತೆ, ಬಭೌ-ವಿರಾಜಿಸುತಲಿದ್ದನು॥೨॥ಕಪಿಃ ಮಾರುತಿಯು, ಯೋಜನಾನಾಂ-ಗಾವುದಗಳ, ಶತಂ-ನೂರರಷ್ಟುದಾರಿಯನ್ನು,ತೀರ್ತ್ವಾಪಿ-ದಾಟಿಬಂದರೂ, ಉತ್ತಮವಿಕ್ರಮಃ-ಶ್ರೇಷ್ಠವಾದಪರಾಕ್ರಮವುಳ್ಳವನಾದಕಾರಣವೇ ಅನಿಶ್ವಸನ್ - ನಿಟ್ಟುಸಿರನ್ನು ಬಿಡದಿರುವವನಾಗಿ, ಶ್ರೀಮಾನ್ - ಕಳೆಗುಂದದವನಾಗಿಯೇ, ತತ್ರ - ಅಲ್ಲಿ, ಗ್ಲಾನಿಂ-ಆಯಾಸವನ್ನು, ನಾಧಿಗಚ್ಛತಿ-ಹೊಂದದೆಯೇ ಇರುತ್ತಿದನು ॥೩॥ ಅಹಂ - ನಾನು, ಯೋಜನಾನಾಂ - ಗಾವುದಗಳ, ಶತಾನಿ - ನೂರುಗಳನ್ನು (ಅಥವಾ-ಹಾಗಿಲ್ಲದಿದ್ದರೆ) ಸುಬಹೂನ್ಯಪಿ -

---

ಅಪರಿಮಿತ ಪರಾಕ್ರಮಶಾಲಿಯೆನಿಸಿದ ಆ ಆಂಜನೇಯನು ಅನ್ಯರು ಆಚರಿಸಲು ಅಶಕ್ಯವೆನಿಸಿದ ಆ ಕಡಲಂದಾಂಟುವ ಕಾರ್ಯವನ್ನೂ ಅನಾಯಾಸದಿಂದ ನೆರವೇರಿಸಿ, ಆಸರಿತ್ಪತಿಯ ಪಾರದಲ್ಲಿನ ತ್ರಿಕೂಟಪರ್ವತದಲ್ಲಿ ಕೋರೆಯಾಗಿ ನಿಂತು,ಆಗಿರಿಯ ಶಿರದೊಳೆಸೆವ ಲಂಕೆಯನ್ನು ಕಂಡನಷ್ಟೆ? ॥೧॥ ಈ ವೀರಹನುಮನು ಆ ಬೆಟ್ಟದಲ್ಲಿಳಿದ ಸಂಭ್ರಮದಲ್ಲಿ, ಅಲ್ಲಿನ ಮರಗಳು ಹೂಮಳೆಗರೆದುವು. ಆ ಪುಷ್ಪವೃಷ್ಟಿಯ ಮಧ್ಯದೊಳು ಸಿಲುಕಿದ ಮಾರುತಿಯು ಹೂವಿನ ರಾಶಿಯಂತೆ ಬೆಳಗುತ್ತಿದ್ದನು ॥೨॥ ಆಗಲೇ-ಮುಂದೆ ತನಗೊದಗುವ ಜಯದ ಸೊಬಗಿನಿಂದೆಸೆವ ವೀರವರನಾದ ಹನುಮನು ನೂರುಗಾವುದಗಳ ದೂರದ ದಾರಿಯನ್ನು ದಾಟಿಬಂದವನಾದರೂ ಆಯಾಸದಿಂದುಂಟಾಗುವ ನಿಟ್ಟುಸಿರನ್ನುಬಿಡದೆಯೂ, ಬಳಲದೆಯೂ, ಸ್ವಸ್ಥನಾಗಿಯೇ ಇರುತ್ತಿದ್ದನಲ್ಲದೆ ॥೩॥ ಹೋ ! ಸಾವಿರಾರುಗಾವುದಗಳ

ಕಿಂ ಪುನ ಸ್ಸಾಗರಸ್ಯಾಂತಂ ಸಂಖ್ಯಾತಂ ಶತಯೋಜನಂ ॥೪॥
ಸತು ವೀರ್ಯವತಾಂ ಶ್ರೇಷ್ಠಃ ಪ್ಲವತಾಮಪಿ ಚೋತ್ತಮಃ ॥
ಜಗಾಮ ವೇಗವಾನ್ ಲಂಕಾಂ ಲಂಘಯಿತ್ವಾ ಮಹೋದಧಿಂ ॥೫॥
ಶಾದ್ವಲಾನಿ ಚ ನೀಲಾನಿ ಗಂಧವಂತಿ ವನಾನಿ ಚ ।
ಗಂಡವಂತಿ ಚ ಮಧ್ಯೇನ ಜಗಾಮ ನಗವಂತಿ ಚ ॥೬॥
ಶೈಲಾಂಶ್ಚ ತರುಸಂಛನ್ನಾನ್ ವನರಾಜೀಶ್ಚ ಪುಷ್ಪಿತಾಃ ।
ಅಭಿಚಕ್ರಾಮ ತೇಜಸ್ವೀ ಹನೂಮಾನ್ ಪ್ಲವಗರ್ಷಭಃ ॥೭॥

ಲೆಕ್ಕವಿಲ್ಲದ ಗಾವುದಗಳನ್ನಾಗಲಿ, ಕ್ರಮೇಯಂ - ದಾಟಬಲ್ಲವನಾಗಿದ್ದೇನೆ, (ಏವಂಸತಿ-ಹೀಗಿರುವಲ್ಲಿ, ಸಂಖ್ಯಾತಂ - ಎಣಿಕೆಗೆ ಒಳಗಾದ, ಸಾಗರಸ್ಯ - ಈ ಕಡಲಿನ, ಅಂತಂ - ದಡವನ್ನು ಕುರಿತು ದಾಟಲು, ಕಿಂಪುನಃ - ಹೇಳಬೇಕಾದುದೇನು ? ॥೪॥ ವೀರ್ಯವತಾಂ - ದೇಹಬಲವುಳ್ಳವರೊಳಗೂ, ಶ್ರೇಷ್ಠಃ - ಅಗ್ರಗಣ್ಯನೆನಿಸಿದ, ಪ್ಲವತಾಮಪಿ - ದಾಟುವ ಶಕ್ತಿಯುಳ್ಳವರೊಳಗೂ, ಶ್ರೇಷ್ಠಃ - ಅಗ್ರೇಸರನೆನಿಸಿದ, ವೇಗವಾನ್ - ಬಹು ವೇಗಸಂಪನ್ನನಾದ, ಸತು-ಆ ಮಾರುತಿಯಾದರೋ, ಮಹೋದಧಿಂ - ಆ ಮಹಾಸಮುದ್ರವನ್ನು, ಲಂಘಯಿತ್ವಾ - ದಾಟಿ, ಲಂಕಾಂ - ಲಂಕಾನಗರವನ್ನು, ಜಗಾಮ - ಸೇರಿದನು ॥೫॥ (ಸಃ-ಆ ಮಾರುತಿಯು) ನೀಲಾನಿ - ಕಪ್ಪಗೆ ಕಾಣಬರುತ್ತಿರುವ, ಶಾದ್ವಲಾನಿಚ-ಹಸಿರುಹುಲ್ಲಿನ ಬಯಲುಗಳನ್ನು, ಗಂಡವನ್ತಿ - ಬಂಡೆಗಳನ್ನೊಳಗೊಂಡಿರುವ, ನಗವಂತಿಚ - ದೊಡ್ಡ ಮರಗಳನ್ನೊಳಗೊಂಡಿರುವ, (ಚಿಕ್ಕ ಗುಡ್ಡಗಳನ್ನೊಳಗೊಂಡಿರುವ) ಗನ್ಧವನ್ತಿಚ- ಗಮಗಮಿಸುತ್ತಿರತಕ್ಕ, ವನಾನಿಚ-ಅಡವಿಗಳನ್ನೂ, (ಪಶ್ಯನ್ - ನೋಡುತ್ತಿರುವವನಾಗಿ) ಮಧ್ಯೇನ - ಅವುಗಳ ನಡುವಣ ಹಾದಿಯಿಂದ, ಜಗಾಮ - ನಡೆದನು ॥೬॥ ತೇಜಸ್ವೀ - ಹೆಚ್ಚಿದ ಕಾಂತಿಯುಳ್ಳ, ಪ್ಲವಗರ್ಷಭಃ - ಕಪಿವರನೆನಿಸಿದ, ಹನುಮಾನ್ - ಅಂಜನೇಸುತನು, ತರುಸಂಛನ್ನಾನ್ - ಮರಗಳಿಂದ ಮರೆಯಾಗಿರುವ, ಶೈಲಾಂಶ್ಚ - ಸಣ್ಣ ಸಣ್ಣ ಗುಡ್ಡಗಳನ್ನೂ, ಪುಷ್ಪಿತಾಃ - ಚೆನ್ನಾಗಿ ಹೂತಿರುವ, ವನರಾಜೀಶ್ಚ - ಅಡವಿಗಳ ಸಾಲುಗಳನ್ನೂ ಅಭಿಚಕ್ರಾಮ - ದಾಟುತ ನಡೆದನು (ಬಳಸಿಕೊಂಡು ಹೋದನು) ॥೭॥ ಸಃ - ಆ, ಪವನಾತ್ಮಜಃ - ವಾಯುನಂದನನು, ಸಾನಾಗ್ರೇ - ಬೆಟ್ಟದ ಕೋಡುಗಳಿಂದ ಸಹಿತವಾದ, ತಸ್ಮಿನ್ - ಆ, ಅಚಲೇ -

ದೂರದ ದಾರಿಯನ್ನು,ಅಥವಾ ಅದಕ್ಕಿಂತಮಿಂಚಿದ ದೂರದದಾರಿಯನ್ನಾದರೂ,ತುಸವಾದರೂ ಆಯಾಸವಿಲ್ಲದಂತೆ ದಾಟಲು ಶಕ್ತನಾಗಿದೇನೆ. ಹೀಗಿರುವಲ್ಲಿ ನೂರುಗಾವುದಗಳೆಂದು ಎಣಿಕೆಗೆ ಒಳಗಾದ ಈ ಕಡಲನ್ನು ದಾಟುವುದೆಂಬುದು ನನಗೆ ಎಷ್ಟರಕೆಲಸ ? ಎಂದುಕೊಂಡು ॥೪॥ ಪ್ಲವಗಾಗ್ರೇಸರನೂ, ವೀರಾಗ್ರಗಣ್ಯನೂಆದ ಮಾರುತಿಯು ಸಾಗರವನ್ನು ದಾಟಿದ ವೇಗದಿಂದಲೇ ಲಂಕೆಯ ತಡಿಯನ್ನು ಸೇರಿದನು ॥೫॥ ಆ ಬಳಿಕ ದೂರಕ್ಕೆ ಕಪ್ಪಾಗಿ ಕಾಣಬರುವ ಹಸಿರುಹುಲ್ಲಿನ ವಿಶಾಲವಾದ ಬೈಲುಗಳನ್ನೂ, ಗಮಗಮಿಸುತಲಿರುವ ಹೂದೋಟಗಳನ್ನೂ, ದೊಡ್ಡ ಬಂಡೆಗಳುಳ್ಳ ಪ್ರದೇಶಗಳನ್ನೂ, ಸಣ್ಣಸಣ್ಣ ಕಲ್ಲಿನ ರಾಶಿಗಳುಳ್ಳ ಭಾಗಗಳನ್ನೂ ನೋಡಿಕೊಂಡು, ಅವುಗಳ ನಡುವೆ ಹಾಯ್ದು ॥೬॥ ಬಗೆಬಗೆಯ ಮರಗಳಿಂದ ಸುತ್ತಲ್ಪಟ್ಟಿರುವ ಗುಡ್ಡಗಳನ್ನೂ,ಚೆನ್ನಾಗಿ ಹೂತಿರುವ ಹೂವಿನ ಮರಗಳಿಂದ ಬೆಳಗುತಲಿರುವ ತೋಟಗಳ ಸಾಲನ್ನೂ ದಾಟಿ ಬರುತಲಿರುವ ಮಹಾತೇಜೋರಾಶಿಯಾದಹನುಮಂತನು ॥೭॥ ಆ ಬೆಟ್ಟದಲ್ಲಿ ಬರುತ ಬಂದೆಡೆಯೊಳು ಸ್ವಲ್ಪ ನಿಂತನು, ಪವನ ನಂದನನು

ಸ ತಸ್ಮಿನ್ನಚಲೇ ತಿಷ್ಠನ್ ವನಾನ್ಯುಪವನಾನಿ ಚ ॥
ಸ ನಗಾಗ್ರೇ ಚ ತಾಂ ಲಂಕಾಂ ದದರ್ಶ ಪವನಾತ್ಮಜಃ ॥೮॥
ಸರಳಾನ್ ಕರ್ಣಿಕಾರಾಂಶ್ಚ ಖರ್ಜೂರಾಂಶ್ಚ ಸುಪುಷ್ಪಿತಾನ್ ।
ಪ್ರಿಯಾಳಾನ್ ಮುಚುಳಿಂದಾಂಶ್ಚ ಕುಟಜಾನ್ ಕೇತಕಾನಪಿ ॥೯॥
ಪ್ರಿಯಂಗೂನ್ ಗಂಧಪೂರ್ಣಾಂಶ್ಚ ನೀಪಾನ್ ಸಪ್ತಚ್ಛದಾಂಸ್ತಥಾ ।
ಅಸನಾನ್ ಕೋವಿದಾರಾಂಶ್ಚ ಕರವೀರಾಂಶ್ಚ ಪುಷ್ಪಿತಾನ್ ॥೧೦॥
ಪುಷ್ಪಭಾರ ನಿಬದ್ಧಾಂಶ್ಚ ತಥಾ ಮುಕುಳಿತಾನಪಿ ।
ಪಾದಪಾನ್ ವಿಹಗಾಕೀರ್ಣಾನ್ ಪವನಾಧೂತಮಸ್ತಕಾನ್ ॥೧೧॥
ಹಂಸಕಾರಂಡವಾಕೀರ್ಣಾಃ ವಾಪೀಃ ಪದ್ಮೋತ್ಪಲಾಯುತಾಃ ।

---

ಸುವೇಲಾಚಲವಲ್ಲಿ, ತಿಷ್ಠನ್-ನಿಂತುಕೊಂಡವನಾಗಿ, ವನಾನಿ-ಅಡವಿಗಳನ್ನೂ, ಉಪವನಾನಿಚ - ತೋಟಗಳನ್ನೂ, ತಾಂ - ಆ ಹೆಸರುವಾಸಿಯನ್ನು ಪಡೆದಿರುವ, ಲಂಕಾಂ - ಲಂಕಾಪಟ್ಟಣವನ್ನೂ, ದದರ್ಶ - ಕಂಡನು, (ಸಃ - ಆ ಮಾರುತಿಯು) ತಸ್ಮಿನ್ ಅಚಲೇ - ಆ ಬೆಟ್ಟದಲ್ಲಿ, ತಿಷ್ಠನ್ - ನಿಂತವನಾಗಿ, ವನಾನಿ-ಅರಣ್ಯಗಳನ್ನೂ, ಉಪವನಾನಿಚ - ಉದ್ಯಾನಗಳನ್ನೂ, ದದರ್ಶ - ನೋಡಿದನು (ತತಃ - ಅನಂತರದಲ್ಲಿ) ಸಃಪವನಾತ್ಮಜಃ - ಆ ಹನುಮನು, ನಗಾಗ್ರೇಚ - ಬೆಟ್ಟದ ಕೋಡಿನಲ್ಲಿ ನಿಂತವನಾಗಿಯೇ, ಲಂಕಾಂ-ಲಂಕಾಪಟ್ಟಣವನ್ನೂ, ದದರ್ಶ - ನೋಡಿದನು ॥೮॥

ಸರಳಾನ್ - ದೇವದಾರುಗಿಡಗಳನ್ನೂ, ಕರ್ಣಿಕಾರಾಂಶ್ಚ - ಬೆಟ್ಟದಾವರೆಗಳನ್ನೂ, ಸುಪುಷ್ಪಿತಾನ್-ಚೆನ್ನಾಗಿ ಹೂತಿರುವ, ಖರ್ಜೂರಾಂಶ್ಚ - ಖರ್ಜೂರದ ಮರಗಳನ್ನೂ, ಪ್ರಿಯಾಳಾನ್ - ಮೊರಟೆಯ ಗಿಡಗಳನ್ನೂ, ಮುಚುಳಿಂದಾನ್ - ನಿಂಬೆಯ ಮರಗಳನ್ನೂ, ಕುಟಜಾನ್ - ಬೆಟ್ಟಮಲ್ಲಿಗೆಗಳನ್ನೂ, ಕೇತಕಾನಪಿ - ಗೇದಗೆಗಳನ್ನೂ, ಗಂಧಪೂರ್ಣಾನ್ - ಸುವಾಸನೆಯಿಂದ ತುಂಬಿರುವ, ಪ್ರಿಯಂಗೂನ್ - ಪಲನಿ ಮರಗಳನ್ನೂ, ನೀಪಾನ್ - ಚಿಟ್ಟೇಚಲುಗಳನ್ನೂ, ಸಪ್ತಚ್ಛದಾನ್-ಏಳೆಲೆಯ ಬಾಳೆಗಳನ್ನೂ, ತಥಾ - ಹಾಗೆಯೇ, ಅಸನಾನ್ - ಬಂದುಗೆಗಳನ್ನೂ, ಪುಷ್ಪಿತಾನ್ - ಹೂಬಿಟ್ಟಿರುವ, ಕರವೀರಾಂಶ್ಚ - ಕಣಿಗಿಲು ಗಿಡಗಳನ್ನೂ, ಪುಷ್ಪಭಾರನಿಬದ್ಧಾನ್ - ಹೂಗಳ ಹೊರೆಗಳಿಂದ ತುಂಬಿರುವ, ತಥಾ - ಹಾಗೆಯೇ, ಮುಕುಳಿತಾನ್ - ಮೊಗ್ಗುಗಳನ್ನೊಳಗೊಂಡಿರುವ, ವಿಹಗಾಕೀರ್ಣಾನ್ - ಹಕ್ಕಿಗಳಿಂದ ನಿಬಿಡವಾಗಿರುವ,

---

ತುಸುದೂರದಲ್ಲಿ ಕಂಗೊಳಿಸುವ ಕಾಡುಗಳನ್ನೂ, ಹತ್ತಿರದೊಳೆಸೆಯುವ ಉದ್ಯಾನಗಳನ್ನೂ ಸುತ್ತಬಳಸಿ ನೋಡಿಕೊಂಡು ಆ ಗಿರಿಯ ಶಿಖರದೊಳು ಸುಳಿವ ಲಂಕೆಯನ್ನು ಕಂಡನು ॥ ಅದರ ಹತ್ತಿರದಲ್ಲಿಯೇ ಸರಳ, ಕರ್ಣಿಕಾರ, ಖರ್ಜೂರ, ಪುಷ್ಪಿಸಿರುವ ಪ್ರಿಯಾಳು, ನಿಂಬೆ, ಗೋರಂಟ, ಗೇದಗೆ, ॥೯॥ ಪ್ರಿಯಂಗು, ಗಂಧಫಲ, ಚಿಟ್ಟೇಚಲು, ಏಳೆಲೆಯ ಬಾಳೆ ಹೂತಿರುವಬೆಟ್ಟಮಲ್ಲಿಗೆ ಸುರಹೊನ್ನೆ, ಕಣಿಗಿಲು, ಮುಂತಾದ ಮರಗಳನ್ನೂ ॥೧೦॥ ಹೂವಿನ ಹೊರೆಗಳಿಂದಲೂ,ಮೊಗ್ಗುಗಳ ಗೊಂಚಲುಗಳಿಂದಲೂ ಸೊಂಪಾಗಿ ಬೆಳೆದು ಬಗೆಬಗೆಯ ಹಕ್ಕಿಗಳ ಹಿಂಡಿಗೆ ಆಸರೆಯಾಗಿ ಗಾಳಿಯ ಹೊಯ್ಲಿಗೆ ಶಿರಗಳನಲ್ಲಾಡಿಸುತಲಿರುವ ತರುಗಳ ಸೊಬಗನ್ನೂ, ॥೧೧॥ ಹಂಸ, ಕಾರಂಡ ಮುಂತಾದ ನೀರಹಕ್ಕಿಗಳಿಂದಲೂ, ತಾವರೆ, ನೈದಿಲೆ ಮೊದಲಾದ ಹೂಗಳ ಸಾಲಿನಿಂದಲೂ ಸೊಗಸುತ ಅಂದವಾಗಿ ಕಾಣ

ಆಕ್ರೀಡಾನ್ ವಿವಿಧಾನ್ ರಮ್ಯಾನ್ ವಿವಿಧಾಂಶ್ಚ ಜಲಾಶಯಾನ್ ॥೧೨॥
ಸಂತತಾನ್ ವಿವಿಧೈ ರ್ವೃಕ್ಷೈ ಸ್ಸರ್ವರ್ತುಫ ಫಲಪುಷ್ಪಿತೈಃ ।
ಉದ್ಯಾನಾನಿ ಚ ರಮ್ಯಾಣಿ ದದರ್ಶ ಕಪಿಕುಂಜರಃ ॥೧೩॥
ಸಮಾಸಾದ್ಯಚ ಲಕ್ಷ್ಮೀವಾನ್ ಲಂಕಾಂ ರಾವಣಪಾಲಿತಾಂ ।
ಪರಿಘಾಭಿ ಸ್ಸಪದ್ಮಾಭಿ ಸ್ಸೋತ್ಪಲಾಭಿ ರಲಂಕೃತಾಂ ॥೧೪॥
ಸೀತಾಽಪಹರಣಾರ್ಥೇನ ರಾವಣೇನ ಸುರಕ್ಷಿತಾಂ ।

ಪವನ-ಗಾಳಿಯಿಂದ, ಆಧೂತ - ಅಲ್ಲಾಡಿಸಲ್ಪಡತ್ತಿರುವ, ಮಸ್ತಕಾನ್ - ತುದಿಗಳುಳ್ಳ, ಪಾದಪಾನಪಿ - ಮರಗಳನ್ನೂ, ಹಂಸ - ಅಂಚೆಗಳಿಂದಲೂ, ಕಾರಂಡವ - ಪ್ರಿಯಪಕ್ಷಿಗಳಿಂದಲೂ, ಆಕೀರ್ಣಾಃ - ತುಂಬಿರುವ, ಪದ್ಮ - ತಾವರೆಗಳಿಂದಲೂ, ಉತ್ಪಲ - ನೈದಿಲೆಗಳಿಂದಲೂ, ಆಯುತಾಃ - ಒಡಗೂಡಿರುವ, ವಾಪೀಃ - ಕೊಳಗಳನ್ನೂ, ವಿವಿಧಾನ್ - ಬಗೆಬಗೆಯವುಗಳಾದ, ರಮ್ಯಾನ್ - ಅಂದವಾಗಿರುವ, ಆಕ್ರೀಡಾನ್ - ಉದ್ಯಾನಗಳನ್ನೂ, ವಿವಿಧಾನ್ - ಅನೇಕ ಪ್ರಕಾರಗಳಾಗಿರುವ, ಸರ್ವರ್ತು - ಆರು ಋತುಗಳಲ್ಲಿನ, ಫಲ-ಹಣ್ಣುಗಳುಳ್ಳವುಗಳಾಗಿಯೂ, ಪುಷ್ಪಿತೈಃ - ಹೂಗಳುಳ್ಳವುಗಳಾಗಿಯೂ ಇರುವ, ವಿವಿಧೈಃ - ಅನೇಕ ಜಾತಿಯವುಗಳಾದ, ವೃಕ್ಷೈಃ - ಮರಗಳಿಂದ, ಸಂತತಾನ್ - ಸುತ್ತಲ್ಪಟ್ಟಿರುವ, ಜಲಾಶಯಾನ್ - ಸರೋವರಗಳನ್ನೂ, ರಮ್ಯಾಣಿ - ಮನೋಹರಗಳಾಗಿರುವ, ಉದ್ಯಾನಾನಿಚ - ವಿಹಾರದ ವನಗಳನ್ನೂ, ಕಪಿಕುಂಜರಃ - ಕಪಿಪ್ರವರನಾದ ಆಂಜನೇಯನು, ದದರ್ಶ - ನೋಡುತ ಬಂದನು ॥೧೩॥ ಲಕ್ಷ್ಮೀವಾನ್ - ಗೆಲುವನ್ನು ಸೂಚಿಸುವ ಕಾಂತಿಯುಳ್ಳ, ಹನುಮಾನ್ - ಆಂಜನೇಯನು, ರಾವಣಪಾಲಿತಾಂ - ರಾವಣನಿಂದ ಆಳಲ್ಪಡುತ್ತಿರುವ, ಸಪದ್ಮಾಭಿಃ - ತಾವರೆಗಳಿಂದೊಡಗೂಡಿದವುಗಳಾಗಿಯೂ, ಸೋತ್ಪಲಾಭಿಃ - ನೈದಿಲೆಗಳಿಂದೊಡಗೂಡಿದವುಗಳಾಗಿಯೂ ಇರುವ, ಪರಿಘಾಭಿಃ-ಕಂದಕ (ಅಗಳು) ಗಳಿಂದ, ಅಲಂಕೃತಾಂ - ಅಲಂಕರಿಸಲ್ಪಟ್ಟ, ಲಂಕಾಂ - ಲಂಕೆಯ ಸಮೀಪವನ್ನು, ಸಮಾಸಾದ್ಯಚ - ಸೇರಿಯೂ, ॥ ೧೪ ॥ ಸೀತಾಪಹರಣಾರ್ಥೇನ - ಸೀತೆಯನ್ನು ಅಪಹರಿಸಿದ ನಿಮಿತ್ತದಿಂದ, ಸಮಂತಾತ್ - ಎಲ್ಲ ಕಡೆಗಳಲ್ಲಿಯೂ, ವಿಚರದ್ಭಿಃ - ಸಂಚರಿಸುತ್ತಲಿರುವ, ಉಗ್ರಧನ್ವಿಭಿಃ - ಅಂಜಿಸುವ ಬಿಲ್ಲನ್ನು ಹಿಡಿದಿರತಕ್ಕ, ರಾಕ್ಷಸೈಃ-ರಕ್ಕಸರಿಂದ, ಸುರಕ್ಷಿತಾಂ-ಎಚ್ಚರಿಕೆಯಿಂದ ರಕ್ಷಿಸಲ್ಪಡುತಲಿರುವ॥೧೫॥

ಬರುವ ನೀರಾಟದ ಕೊಳಗಳ ಸಂಪದವನ್ನೂ, ದೊಡ್ಡಮಡುವುಗಳ ವೈಭವವನ್ನೂ, ಚಿತ್ರವಿಚಿತ್ರಗಳಾದ ಆಟದ ತೋಟಗಳನ್ನೂ ॥೧೨॥ ಹಾಗೆಯೇ, ವಸಂತ ಮೊದಲಾದ ಆರು ರುತುಗಳಲ್ಲಿಯೂ ತಪ್ಪದೆ ಪುಷ್ಪಫಲಭರಿತಗಳಾಗಿರುವ ನಾನಾ ವಿಧಗಳಾದ ಮಹೀರುಹಗಳಿಂದ ತುಂಬಿ ರಾರಾಜಿಸುತ್ತಲಿರುವ ತೋಟಗಳನ್ನೆಲ್ಲವನ್ನೂ ಕಣ್ಣಾರ ನೋಡುತ ಬಂದನು॥೧೩॥ ಬಳಿಕ ಬಹು ಲಕ್ಷಣಸಂಪನ್ನನಾದ ಪವಮಾನಾತ್ಮಜನು ಆ ರಾವಣನಾಳುವ ಲಂಕೆಯ ಹತ್ತಿರಕ್ಕೆ ಬರಲು, ಆಗ ಆ ಲಂಕೆಯು-ಹೊರವಾಗಿ ಬೆಳೆದ ತಾವರೆಗಳಿಂದಲೂ, ನೈದಿಲೆಗಳಿಂದಲೂ ಬೆಳಗುತಲಿರುವ ಜಲಭಾಗದಿಂದ ತುಂಬಿ ತುಳುಕುತಲಿರುವ ಅಗಳಿನಿಂದ ಅಂದವಾಗಿದ್ದಿತು ॥ ಮತ್ತು-ದಶಕಂಠನು ಸೀತೆಯನ್ನು ಕದ್ದು ತಂದಿಟ್ಟದ್ದನಾದುದರಿಂದಲೇ ಲಂಕೆಯನ್ನು ಬಲು ಎಚ್ಚರದಿಂದ ಕಾಯಬೇಕೆಂಬ ಆ ರಕ್ಕಸರೊಡೆಯನ ಅಪ್ಪಣೆಯಂತೆ ಕಾವಲುಗಾರರಾದ ಬಹುಮಂದಿ ರಾಕ್ಷಸವೀರರು ಬಹು ಭಯಂಕರಗಳಾದ ಬಿಲ್ಲುಗಳನ್ನು ಕೈಗಳಲ್ಲಾಂತು

ಸಮಂತಾ ದ್ವಿಚರದ್ಭಿಶ್ಚ ರಾಕ್ಷಸೈ ರುಗ್ರಧನ್ವಿಭಿಃ ॥೧೫॥
ಕಾಂಚನೇನಾವೃತಾಂ ರಮ್ಯಾಂ ಪ್ರಾಕಾರೇಣ ಮಹಾಪುರೀಂ ।
ಗೃಹೈಶ್ಚ ಗ್ರಹಸಂಕಾಶೈ ಶ್ಶಾರದಾಂಬುದ ಸನ್ನಿಭೈಃ ॥೧೬॥
ಪಾಂಡುರಾಭಿಃ ಪ್ರತೋಳೀಭಿ ರುಚ್ಚಾಭಿ ರಭಿಸಂವೃತಾಂ ।
ಅಟ್ಟಾಲಕಶತಾಕೀರ್ಣಾಂ ಪತಾಕಾಧ್ವಜಮಾಲಿನೀಂ ॥೧೭॥
ತೋರಣೈಃ ಕಾಂಚನೈ ರ್ದಿವ್ಯೈ ರ್ಲತಾಪಙ್ಕ್ತಿವಿಚಿತ್ರಿತೈಃ ।
ದದರ್ಶ ಹನುಮಾನ್ ಲಂಕಾಂ ದಿವಿ ದೇವಪುರೀಮಿವ ॥೧೮॥

ಕಾಂಚನೇನ - ಸುವರ್ಣಮಯವಾದ, ಪ್ರಾಕಾರೇಣ - ಪೌಳಿಗೋಡೆಯಿಂದಲೂ, ಶಾರದ- ಶರತ್ಕಾಲದಲ್ಲಿನ, ಅಂಬುದ - ಮೇಘಗಳಿಗೆ, ಸನ್ನಿಭೈಃ - ಸಮಾನಗಳಾಗಿಯೂ, ಗ್ರಹಸಂಕಾಶೈಃ - ಆದಿತ್ಯಾದಿ ಗ್ರಹಗಳಿಗೆಣೆಯೆನಿಸಿಯೂ ಇರುವ, ಗೃಹೈಶ್ಚ-ಮನೆಗಳಿಂದಲೂ, ಆವೃತಾಂ-ಸುತ್ತಲ್ಪಟ್ಟಿರುವ, ॥ ಪಾಂಡುರಾಭಿಃ - ಬಿಳುಪಾಗಿಯೂ, ಉಚ್ಚಾಭಿಃ - ಎತ್ತರವಾದವುಗಳಾಗಿಯೂ ಇರುವ, ಪ್ರತೋಳೀಭಿಃ - ರಾಜಬೀದಿಗಳಿಂದಲೂ, ಕಾಂಚನೈಃ - ಬಂಗಾರದವುಗಳಾಗಿರತಕ್ಕ, ದಿವ್ಯೈಃ - ಉತ್ತಮಗಳೆನಿಸಿದ, ಲತಾಪಙ್ಕ್ತಿ - ಬಳ್ಳಿಯ ಸಾಲುಗಳಿಂದ, ವಿಚಿತ್ರಿತೈಃ - ಚಿತ್ರದ ಕೆತ್ತನೆಗಳನ್ನು ಹೊಂದಿರುವ, ತೋರಣೈಃ - ಹೊರಬಾಗಿಲುಗಳಿಂದಲೂ, (ಸಿಂಹದ್ವಾರಗಳಿಂದಲೂ) ಅಭಿಸಂವೃತಾ- ಬಳಸಲ್ಪಟ್ಟಿರುವ, ಅಟ್ಟಾಲಕಶತ- ನೂರಾರು ಬುರುಜುಗಳಿಂದ, ಆಕೀರ್ಣಾಂ - ತುಂಬಿರುವ, ಪತಾಕಾ - (ಬಳ್ಳಿಯ ಚಿತ್ತಾರಗಳನ್ನು ಬರೆದ ಬಟ್ಟೆಗಳನ್ನು ತುದಿಗೆಕಟ್ಟಿರುವ) ಉನ್ನತಧ್ವಜಗಳ, ಧ್ವಜ - ಮನೆಗಳ ಮೇಲೆ ನಟ್ಟಿರುವ ದಾಳೆಗಳ, ಮಾಲಿನೀಂ - ಸಾಲುಳ್ಳ, ರಮ್ಯಾಂ - ಸುಂದರವೆನಿಸಿಯೂ ಇರುವ, ಲಂಕಾಂ - ಲಂಕೆಯೆಂಬ ಮಹಾನಗರವನ್ನು, ದಿವಿ - ಅಂಬರದಲ್ಲಿ, ದೇವಪುರೀಮಿವ - ಅಮರ ನಗರಿಯನ್ನು ಹೇಗೋಹಾಗೆ, ದದರ್ಶ -

ಹಗಲಿರುಳೂ ಬಲು ಎಚ್ಚರದಿಂದ ಕಾಯ್ದು ರಕ್ಷಿಸುತಲಿದ್ದರು ॥೧೫॥ ಆ ಮಹಾನಗರವು ಸುತ್ತಲೂ ಬಂಗಾರದಿಂದ ರಚಿಸಿದ ಪೌಳಿಗೋಡೆಯಿಂದ ಬೆಳಗುತಲಿದ್ದಿತು. ಮತ್ತು-ಆಗಸದಲ್ಲಿ ವಿರಾಜಿಸುವ ಸೂರ್ಯಚಂದ್ರಾದಿಗ್ರಹಗಳಂತೆ ಎತ್ತರವಾಗಿಯೂ, ವಿಸ್ತಾರಗಳಾಗಿಯೂ, ಶೋಭಿಸುತ್ತ, ಸುಧಾಲೇಪದಿಂದ ಶರತ್ಕಾಲದ ಬಿಳಿಯ ಮೋಡಗಳಂತೆ ತಳತಳಿಸುವ ಮನೆಗಳು ॥೧೬॥ ಇಕ್ಕೆಲದಲ್ಲಿಯೂ ಮುಗಿಲನ್ನು ಮುಟ್ಟುತಲಿರಲು, ನಡುವಣ ರಾಜಮಾರ್ಗಗಳು ಬಹು ರಮ್ಯವಾಗಿದ್ದುವು, ಉಪ್ಪರಿಗೆಗಳು ಸಾಲುಸಾಲಾಗಿ ಕಾಣಬರುತಲಿದ್ದುವು, ರಾವಣನ ಬಿರುದಾವಳಿಯಿಂದ ಕಂಗೊಳಿಸುವ ಬಿರದ ವಸ್ತ್ರಗಳಿಂದ ಶೋಭಿಸುವ ಉನ್ನತಗಳಾದ ಪತಾಕೆಗಳೂ, ಅಲ್ಲಲ್ಲಿ ಮೀನು, ಆಮೆ ಮೊದಲಾದ ಪ್ರಾಣಿಗಳ ಚಿತ್ರಗಳಿಂದಲೂ, ಹಂಸೆ ಮೊದಲಾದ ಹಕ್ಕಿಗಳ ಚಿತ್ತಾರಗಳಿಂದಲೂ ಅಲಂಕೃತಗಳಾದ ಬಟ್ಟೆಗಳನ್ನು ಕಟ್ಟಿ ಮನೆಗಳಮೇಲೆ ನಟ್ಟಿರುವ ಧ್ವಜಗಳಿಂದಲೂ, ಬಹು ಸುಂದರವಾಗಿದ್ದಿತು. ಮತ್ತು-ಬಗೆಬಗೆಯ ಬಳ್ಳಿಯಬರಿಸೆಗಳನ್ನು ಕುಂದಣದಿಂದ ಕೆತ್ತಿದ ಕೈವಾಡಗಾರರ ಚಿತ್ರಗಳಿಂದ ಸಂಶೋಭಿಸುವ ಹೊರಬಾಗಿಲುಗಳು ಭಾಸಮಾನಗಳಾಗಿದ್ದುವು, ಇಂತು ಅಂಬರತಲದಲ್ಲಿ ಬೆಳಗುವ ಅಮರಾವತಿಯಂತೆ ಅದ್ಭುತವೆನಿಸಿ ಮೆರೆಯುತಲಿರುವ ಆ ಮಹಾನಗರಿಯನ್ನು ಆಂಜನೇಯನು ಕಂಡನು ॥೧೮॥ ಅಂತಾ ಗಿರಿಯ ಶಿಖರದಲ್ಲಿ ಮಂಗಳಕರಗಳೆನಿಸಿ

ಗಿರಿಮೂರ್ಧ್ನಿ ಸ್ಥಿತಾಂ ಲಂಕಾಂ ಪಾಂಡುರೈ ರ್ಭವನೈ ಶ್ಶುಭೈಃ ।
ದದರ್ಶ ಸ ಕಪಿಶ್ರೇಷ್ಠಃ ಪುರ ಮಾಕಾಶಗಂ ಯಥಾ ॥
ಪಾಲಿತಾಂ ರಾಕ್ಷಸೇಂದ್ರೇಣ ನಿರ್ಮಿತಾಂ ವಿಶ್ವಕರ್ಮಣಾ ।
ಪ್ಲವಮಾನಾ ಮಿವಾಕಾಶೆ ದದರ್ಶ ಹನುಮಾನ್ ಪುರೀಂ ॥೨೦॥
ವಪ್ರಪ್ರಾಕಾರಜಘನಾಂ ವಿಪುಲಾಂಬು ನವಾಂಬರಾಂ ॥
ಶತಘ್ನೀ ಶೂಲ ಕೇಶಾಂತಾ ಮಟ್ಟಾಲಕ ವತಂಸಕಾಂ ॥೨೧॥

ನೋಡಿದನು ॥೧೭-೧೮॥ ಸ - ಆ, ಕಪಿಶ್ರೇಷ್ಠಃ - ಕಪಿವರನು, ಗಿರಿಮೂರ್ಧ್ನಿ - ಪರ್ವತ ಶಿಖರದಲ್ಲಿ, ಸ್ಥಿತಾಂ - ನೆಲೆಗೊಂಡಿದ್ದ, ಲಂಕಾಂ - ಲಂಕಾನಗರವನ್ನು, ಪಾಂಡುರೈಃ - ಬಿಳುಪಾದವುಗಳಾಗಿಯೂ, ಶುಭೈಃ - ಮಂಗಳಕರವಾದವುಗಳಾಗಿಯೂ ಇರುವ, ಭವನೈಃ - ಮನೆಗಳಿಂದ, ಆಕಾಶಗಂ - ಆಕಾಶವನ್ನು ಹೊಂದಿ ಇರುವ, ಪುರಂಯಥಾ - ಪಟ್ಟಣವನ್ನು ನೋಡುವಹಾಗೆ, ದದರ್ಶ - ನೋಡಿದನು ॥೧೯॥ ರಾಕ್ಷಸೇಂದ್ರೇಣ - ರಕ್ಕಸರೊಡೆಯನಾದ ರಾವಣನಿಂದ, ಪಾಲಿತಾಂ - ಆಳಲ್ಪಡುತಲಿರುವುದಾಗಿಯೂ, ವಿಶ್ವಕರ್ಮಣಾ ವಿಶ್ವಕರ್ಮನೆಂಬ ದೇವತೆಗಳ ಬಡಗಿಯಿಂದ, ನಿರ್ಮಿತಾಂ - ರಚಿಸಲ್ಪಟ್ಟುದಾಗಿಯೂ ಇರುವುದರಿಂದಲೇ, ಆಕಾಶೆ - ಅಂತರಿಕ್ಷದಲ್ಲಿ ಪ್ಲವಮಾನಾಮಿವ, - ತೇಲುತಲಿದೆಯೋ ಎಂಬಂತಿರುವ, ಪುರೀಂ - ಲಂಕಾನಗರವನ್ನು, ದದರ್ಶ - ನೋಡಿದನು ॥೨೦॥

(ಲಂಕೆಯು ಲಲನೆಯಂತೆ ಇದ್ದಿತೆಂದು ನಿರೂಪಣೆ) ವಪ್ರಪ್ರಾಕಾರ - ಕೋಟೆಯು ಪೌಳಿಗೋಡೆಯು ಎಂಬವೆಂಬ, ಜಘನಾಂ - ಸೊಂಟದ ಮುಂಭಾಗವುಳ್ಳ, ವಿಪುಲಾಂಬು - [ಅಗಳಿನಂತಿರುವ ಕಡಲಿನಲ್ಲಿ ತುಂಬಿರುವ] ವಿಸ್ತಾರವಾದ ಜಲಭಾಗವೆಂಬ, ನವಾಂಬರಾಂ - (ಉಟ್ಟಿರುವ) ಹೊಸಸೇಲೆಯುಳ್ಳ, ಶತಘ್ನೀಶೂಲ - (ಕೋಟೆಯ ತುದಿಯಲ್ಲಿ ಹಗೆಗಳನ್ನು ಹೊಡೆಯಲು ಅಣಿಮಾಡಿ ಇಟ್ಟಿರುವ) ಪಿರಂಗಿ-ಶೂಲಾಯುಧ ಮುಂತಾದವುಗಳೆಂಬ, ಕೇಶಾಂತಾಂ - ಮುಂದಲೆ (ಬೈತಲೆ) ಯುಳ್ಳ, ಅಟ್ಟಾಲಕ - (ಕೋಟೆಯಮೇಲೆ ಪಿರಂಗಿ ಮೊದಲಾದವುಗಳನ್ನು ಇಡಲು - ಬಿಡುವುಮಾಡಿರುವ) ಬುರುಜುಗಳೆಂಬ,

ಬೆಳ್ಳಗೆ ಬೆಳಗುತಲಿರುವ ಭವನಗಳಿಂದ ಬಲು ಅಂದವಾದ ಆನಗರಿಯನ್ನು ಹರಿವರನು ತನ್ನ ಶಿರವನ್ನೆತ್ತಿನೋಡಿ, ಹಾ ! ಆಹಾ !! ಈನಗರವೇನು ಆಗಸದೊಳಗೇ ನೆಲೆಗೊಂಡಿದೆಯೋ ಎಂದು ಅಚ್ಚರಿಗೊಂಡನು॥೧೯॥ಅಲ್ಲದೆ-ರಕ್ಕಸರೊಡೆಯನಾದ ರಾವಣನಆಳ್ವಿಕೆಗೆ ಒಳಪಟ್ಟಿರುವ ಈ ಲಂಕಾನಗರವನ್ನು ದೇವತೆಗಳ ಬಡಗಿಯಾದ ವಿಶ್ವಕರ್ಮನು ತನ್ನ ಕೈವಾಡದ ಚಾತುರ್ಯದಿಂದ ಆಕಾಶದಲ್ಲಿ ತೇಲಾಡುತ್ತಿರುವಂತೆಯೇ ರಚಿಸಿರುವನೋ ಏನೋ ಎಂದು ಭಾವಿಸಿದನು ॥೨೦॥ ಮತ್ತು-ಅಗಳಿನಲ್ಲಿ ತುಂಬಿ ತುಳುಕುತ ತಳತಳಿಸುತಲಿರುವ ನೀರೆಂಬ ಕರಿಯನೆರಿಗಯ ಹೊಸಸೇಲೆಯನ್ನು, ಪುರದ ಸುತ್ತಲೂ ತಳತಳಿಸುತಲಿರುವ ಪೌಳಿಗೋಡೆಯ ಕೆಳಭಾಗವೆಂಬ ಕಿಬ್ಬೊಟ್ಟೆಯ ಮೇಲಣ ಟೊಂಕದಲ್ಲಿ ಉಟ್ಟು, ಪುರದ ಹೊರಭಾಗದಲ್ಲಿ ದೂರದೊಳಗೆ ಕಾಣಬರುವ ಹಗೆಗಳ ಹುಟ್ಟನ್ನು ಅಣಗಿಸಲಿಕ್ಕೆಂದು, ಕೋಟೆ ಗೋಡೆಯ ಮೇಲುಗಡೆ ಸಾಲಾಗಿ ಅಣಿಮಾಡಿಟ್ಟಿರುವ ಶೂಲ, ಪಿರಂಗಿ ಮೊದಲಾದ ಆಯುಧಗಳೆಂಬ ಕರಿಗೂದಲಿನ ಮುಂದಲೆಯಿಂದ ವಿರಾಜಿಸುತ, ಪೌಳಿಗೋಡೆಯ ತುದಿಯಲ್ಲಿ ಆಯುಧಗಳನ್ನು ಇಡಲಿಕ್ಕಾಗಿ ಕಲ್ಪಿಸಿ ಇರುವ ವಿವರಗಳೆಂಬ ಕಿವಿಯ ಓಲೆಗಳಿಂದ ಓಲಾಡುತಲಿರುವ

ಮನಸೇವ ಕೃತಾಂ ಲಂಕಾಂ ನಿರ್ಮಿತಾಂ ವಿಶ್ವಕರ್ಮಣಾ ॥ ೨೦ ॥
ದ್ವಾರ ಮುತ್ತರಮಾಸಾದ್ಯ ಚಿಂತಯಾಮಾಸ ವಾನರಃ ॥ ೨೧ ॥
ಕೈಲಾಸ ಶಿಖರಪ್ರಖ್ಯಾ ಮಾಲಿಖಂತೀಮಿವಾಂಬರಂ ॥
ಡೀಯಮಾನ ಮಿವಾಕಾಶ ಮುಚ್ಛ್ರಿತೈರ್ಭವನೋತ್ತಮೈಃ ॥ ೨೨ ॥
ಸಂಪೂರ್ಣಾಂ ರಾಕ್ಷಸೈರ್ಘೋರೈರ್ನಾಗೈರ್ಭೋಗವತೀಮಿವ ।
ಅಚಿಂತ್ಯಾಂ ಸುಕೃತಾಂ ಸ್ಪಷ್ಟಾಂ ಕುಬೇರಾಧ್ಯುಷಿತಾಂ ಪುರಾ ॥ ೨೩ ॥

ಅವತಂಸಕಾಂ - ಕಿವಿಯ ಓಲೆಯುಳ್ಳ, ॥೨೦॥ ವಿಶ್ವಕರ್ಮಣಾ - (ದೇವತೆಗಳ ಬಡಗಿಯಾದ) ವಿಶ್ವಕರ್ಮಬ್ರಹ್ಮನಿಂದ, ನಿರ್ಮಿತಾಂ - ಕಲ್ಪಿಸಲ್ಪಟ್ಟಿದ್ದರೂ, ಮನಸಾ - ಮನಸ್ಸಿನಿಂದ, ಕೃತಾಮಿವ - ರಚಿಸಲ್ಪಟ್ಟಿದೆಯೋ ಎಂಬಂತಿರುವ, ಲಂಕಾಂ - ಲಂಕಾನಗರಿಯನ್ನು, (ದದರ್ಶ - ನೋಡಿದನು) ವಾನರಃ - ಆಂಜನೇಯನು, ಉತ್ತರಂ - ಆ ನಗರದ ಬಡಗದಿಕ್ಕಿನ, ದ್ವಾರಂ - ಬಾಗಿಲನ್ನು, ಆಸಾದ್ಯ - ಸೇರಿ, ಚಿಂತಯಾಮಾಸ - (ಸೀತೆಯನ್ನು ಹುಡುಕುವ ಹರುವನ್ನು) ಯೋಚಿಸಿದನು ॥೨೧॥ ಕೈಲಾಸಶಿಖರಪ್ರಖ್ಯಾಂ - ಕೈಲಾಸಶಿಖರದಂತೆ ಪ್ರಸಿದ್ಧಿಯನ್ನು ಪಡೆದಿರುವುದಾಗಿಯೂ, ಅಂಬರಂ - ಆಕಾಶವನ್ನು, ಆಲಿಖಂತೀಮಿವ- ಬರೆಯುತಲಿದೆಯೋ ಎಂಬಂತಿರುವುದಾಗಿಯೂ, ಉಚ್ಛ್ರಿತೈಃ - ಎತ್ತರಗಳಾದ, ಭವನೋತ್ತಮೈಃ - ಸುಂದರಗಳಾದ ಮನೆಗಳಿಂದ, ಆಕಾಶಂ - ಆಗಸವನ್ನು ಕುರಿತು, ಡೀಯಮಾನಾಮಿವ - ಹಾರಿಹೋಗುವಂತಿರುವುದಾಗಿಯೂ, ॥೨೨॥ ನಾಗೈಃ - ಸರ್ಪಗಳಿಂದ, ಭೋಗವತೀಮಿವ - (ಪಾತಾಳ) ಭೋಗವತೀ ಪಟ್ಟಣವನ್ನು ಹೇಗೋಹಾಗೆ, ಘೋರೈಃ - ಭಯಂಕರರಾದ ರಾಕ್ಷಸೈಃ - ರಕ್ಕಸರಿಂದ, ಸಂಪೂರ್ಣಾಂ - ತುಂಬಿ ಇರುವುದಾಗಿಯೂ, ಅಚಿಂತ್ಯಾಂ - ಹೀಗೆ ಇದೆಯೆಂದು ನೆನೆಯಲಸದಳವೆನಿಸಿದುದಾಗಿಯೂ, ಸುಕೃತಾಂ - ಜಾಣತನದ ರಚನೆಯುಳ್ಳುದಾಗಿಯೂ, ಸ್ಪಷ್ಟಾಂ-ಪ್ರತಿಯೊಂದು ಭಾಗದ ವಿವರಣೆಯುಳ್ಳುದಾಗಿಯೂ (ಮಾಲಿನ್ಯರಹಿತವೆನ್ನಿಸಿಯೂ) ಪುರಾ - ಪೂರ್ವದಲ್ಲಿ, ಕುಬೇರಾಧ್ಯುಷಿತಾಂ - ಕುಬೇರನಿಂದ ವಾಸಿಸಲ್ಪಡುತ್ತಿದ್ದುದಾಗಿಯೂ ॥೨೩॥ ದಂಷ್ಟ್ರಿಭಿಃ - ಕೋರೆದಾಡೆಗಳುಳ್ಳ, ಬಹುಭಿಃ -

ಆ ಲಂಕೆಯೆಂಬ ಬಿನ್ನಾಣದ ನಾರಿಯನ್ನು ನೋಡಿ ಪವನನಂದನನು ನಲಿಯುತ ॥೨೦॥ ಅಹಹಾ ! ! ! ಶಿಲ್ಪವಿದ್ಯಾವಿಶಾರದನಾದ ವಿಶ್ವಕರ್ಮನು ತಾನೇ ಬಂದು ವೇಳೆ ಈ ನಗರಿಯನ್ನು ನಿರ್ಮಿಸಿ ಇದ್ದರೂ ಕೈಲಿಮುಟ್ಟಿದರೆ ಏರೆಕೋರೆಗಳುಂಟಾದಾವು ಎಂದು ಅಂಜಿ, ತನ್ನ ಮನದಿಂದಲೇ ರಚಿಸಿ ಕಳೆಯನ್ನು ತುಂಬಿರುವನೆಂದೇ ನೆನೆದು, ಆನಗರಿಯ ಉತ್ತರಭಾಗದ ಬಾಗಿಲಿನ ಹತ್ತಿರಕ್ಕೆ ಬರುತ, ಮುಂದೆ ಸೀತಾದೇವಿಯನ್ನು ಕಾಣುವ ವಿಷಯವಾಗಿ ಉಪಾಯವನ್ನು ಯೋಚಿಸತೊಡಗಿದನು ॥೨೧॥ ಈ ಮಹಾನಗರವು ಕೈಲಾಸ ಶಿಖರದಂತೆ ಮಹೋನ್ನತವೆನಿಸಿ ಆಗಸವನ್ನು ಸೋಂಕುತಲಿದೆ. ಇದರೊಳಗೆ ಅತ್ಯುನ್ನತಗಳಾಗಿ ಶೋಭಿಸುವ ಮಹಾಭವನಗಳನ್ನು ನೋಡಿದರೆ ಈ ಪುರವು ರೆಕ್ಕೆಗಳಿಂದ ಹಾರಿ ಹೋಗಲೆಳಸುವುದೋ ಎಂಬಂತೆ ಕಾಣಬರುತಲಿದೆ, ॥೨೨॥ ಪಾತಾಳದಲ್ಲಿ ನಾಗರಾಜರು ಭೋಗವತೀನಗರವನ್ನು ಕಾಯುವಂತೆ ಮಹಾಭಯಂಕರರಾದ ರಾಕ್ಷಸರು ಈ ನಗರವನ್ನು ರಕ್ಷಿಸುತಲಿರುವರು, ಈ ಪಟ್ಟಣದ ರಚನಾ ಚಾತುರ್ಯವನ್ನು ಮನಸ್ಸಿನಿಂದಲೂ ನೆನೆಯಲಸದಳವೆನಿಸಿ ಇದೆ, ಈ ನಗರದ ಪ್ರತಿಯೊಂದು ಸೂಕ್ಷ್ಮಾವಯವದ ಕೆತ್ತನೆಯ ಕೈವಾಡವೂ ತುಸವಾದರೂ,

ದಂಷ್ಟ್ರಿಭಿ ರ್ಬಹುಭಿ ಶ್ಶೂರೈ ಶ್ಶೂಲ ಪಟ್ಟಸ ಪಾಣಿಭಿಃ ।
ರಕ್ಷಿತಾಂ ರಾಕ್ಷಸೈ ರ್ಘೋರೈ ರ್ಗುಹಾ ಮಾಶೀವಿಷೈರಿವ ॥೨೫॥
ತಸ್ಯಾಶ್ಚ ಮಹತೀಂ ಗುಪ್ತಿಂ ಸಾಗರಂ ಚ ನಿರೀಕ್ಷ್ಯ ಸಃ ।
ರಾವಣಂ ಚ ರಿಪುಂ ಘೋರಂ ಚಿಂತಯಾಮಾಸ ವಾನರಃ ॥೨೬॥
ಆಗತ್ಯಾಪೀಹ ಹರಯೋ ಭವಿಷ್ಯಂತಿ ನಿರರ್ಥಕಾಃ ।
ನ ಹಿ ಯುದ್ಧೇನ ವೈ ಲಂಕಾ ಶಕ್ಯಾ ಜೇತುಂ ಸುರೈರಪಿ ॥೨೭॥
ಇಮಾಂ ತು ವಿಷಮಾಂ ದುರ್ಗಾಂ ಲಂಕಾಂ ರಾವಣಪಾಲಿತಾಂ ।

---

ಅನೇಕರಾದ, ಶೂಲಪಟ್ಟಸಪಾಣಿಭಿಃ - ಶೂಲ-ಪಟ್ಟಿಸ,ಎಂಬ ಆಯುಧಗಳನ್ನು ಹಿಡಿದಿರುವ, ರಾಕ್ಷಸೈಃ - ದಾನವರಿಂದ, ಘೋರೈಃ - ಮಹಾಭಯವನ್ನುಂಟುಮಾಡುವ, ಆಶೀವಿಷೈಃ-ಸರ್ಪಗಳಿಂದ, ಗುಹಾಮಿವ - ಗವಿಯನ್ನು ಹೇಗೋಹಾಗೆ, ರಕ್ಷಿತಾಂ - ರಕ್ಷಿಸಲ್ಪಡುತಲಿರುವ ಪಟ್ಟಣವನ್ನೂ ॥೨೫॥ ತಸ್ಯಾಃ - ಆ ಲಂಕಾನಗರಿಯ, ಮಹತೀಂ - ಬಹುದೊಡ್ಡದೆನಿಸಿದ, ಗುಪ್ತಿಂ - ಸಂರಕ್ಷಣೆಯ ಕ್ರಮವನ್ನೂ, ಸಾಗರಂ-ಘನವಾದ ಸಮುದ್ರವನ್ನೂ, ಘೋರಂ - ಭಯಂಕರನೆನಿಸಿದ, ರಿಪುಂ - ಹಗೆಯಾದ, ರಾವಣಂಚ - ರಾವಣನನ್ನೂ, ನಿರೀಕ್ಷ್ಯ - ನೋಡಿ, ಸಃ - ಆ, ವಾನರಃ - ಆಂಜನೇಯನು, ಚಿಂತಯಾಮಾಸ - ಯೋಚಿಸತೊಡಗಿದನು॥ (ಚಿಂತಾಪ್ರಕಾರವೆಂತೆಂದರೆ) ಇಹ - ಇಲ್ಲಿಗೆ, ಹರಯಃ - ಕಪಿಗಳು, ಆಗತ್ಯಾಪಿ- ಬಂದರೂ, ನಿರರ್ಥಕಾಃ- ಉಪಯೋಗವಿಲ್ಲದವರೇ, ಭವಿಷ್ಯಂತಿ - ಆಗುವರು, ಯುದ್ಧೇನವೈ - ಕಾಳಗದಿಂದಲಾದರೋ, ಲಂಕಾ- ಲಂಕೆಯು, ಸುರೈರಪಿ-ದೇವತೆಗಳಿಂದಲಾದರೂ, ಜೇತುಂ-ಗೆಲ್ಲಲಿಕ್ಕೆ, ನಶಕ್ಯಾಹಿ-ತಕ್ಕುದಲ್ಲವಲ್ಲ ॥೨೭॥ ವಿಷಮಾಂ - ಹಳ್ಳ ದಿಣ್ಣೆಗಳುಳ್ಳುದೆನಿಸಿಯೂ, (ಕಷ್ಟತರವೆನಿಸಿಯೂ) ದುರ್ಗಾಂ - ಕೋಟೆಲಗಳುಳ್ಳುದೆನಿಸಿಯೂ ಇರುವ, ರಾವಣಪಾಲಿತಾಂ - ರಾವಣನಿಂದ ಸಂರಕ್ಷಿಸಲ್ಪಡುತಿರತಕ್ಕ, ಇಮಾಂ - ಇಂತಹ

---

ಬಂದರೆಲ್ಲಾ ವು ಜರೆದು ಮಲಿನವಾಗದೆ ಸ್ಪಷ್ಟವಾಗಿ ಕಾಣಬರುತಿದೆ, ಓಹೋ! ಕುಬೇರನು ಪೂರ್ವದಲ್ಲಿ ಇದರೊಳಗೇವಾಸಮಾಡುತ್ತಿದ್ದನು ॥೨೪॥ ಮಹಾಶೂರರೆನಿಸಿ, ಕೋರೆದಾಡೆಗಳಿಂದಲೂ, ಕೈಯೊಳಾಂತಿರುವ ಶೂಲ, ಪಟ್ಟಿಸಮುಂತಾದ ಬಗೆಬಗೆಯ ಆಯುಧಗಳಿಂದಲೂ, ಬಹುಭಯಂಕರರಾಗಿರುವ ಅನೇಕ ರಾಕ್ಷಸರು, ಸರ್ಪಗಳು ಗುಹೆಯನ್ನು ಹೇಗೋ ಹಾಗೆ ಬಲು ಎಚ್ಚರಿಕೆಯಿಂದ ಈ ನಗರವನ್ನು ಕಾಯುತ್ತಿರುವರು ॥೨೫॥ ಎಂದೀ ಪ್ರಕಾರ ಆ ಮಹಾ ನಗರದ ಕಾವಲಿನ ವೈಖರಿಯನ್ನೂ, ಅಪಾರವಾದ ಸಾಗರವನೂ ಶೂರಾಗ್ರಗಣ್ಯನೆನಿಸಿ ಹಗೆಯಾಗಿರುವ ಘೋರನಾದ ರಾವಣನನ್ನೂ ಪರಿಭಾವಿಸಿ, ವಾನರೋತ್ತಮನಾದ ಆಂಜನೇಯನು ಇತಿಕರ್ತವ್ಯವನ್ನು ಕುರಿತು ಮನದೊಳಾಲೋಚಿಸತೊಡಗಿದನು ॥೨೬॥ ಅಯ್ಯೋ! ನನ್ನೊಡನಾಡಿಗಳಾದ ಕಪಿಗಳೆಲ್ಲ ಇಲ್ಲಿಗೆ ಬರುವುದೇ ಅಸಾಧ್ಯ ಬಂದುವೇಳೆ ಬಂದರೂ ಯಾವ ಪ್ರಯೋಜನವನ್ನೂ ಪಡೆಯಲಾರರು. ಇಂದ್ರಾದಿದೇವತೆಗಳೇ ಯುದ್ಧಮಾಡಿ ಈ ಲಂಕೆಯನ್ನು ಗೆಲ್ಲುವುದು ಅಶಕ್ಯವಾಗಿರುವಲ್ಲಿ ಇನ್ನಿವರಿಗೆ ಶಕ್ಯವೆ? ಸರ್ವಥಾ ಇಲ್ಲ ॥೨೭॥ ಮತ್ತು-ಶ್ರೀರಾಮಚಂದ್ರನು ಮಹತ್ತರವಾದ ತೋಳುಬಲವುಳ್ಳವನೇ ಹೌದು, ಆದರೇನು? ಈ ಲಂಕೆಯು ಬಹು ಕಷ್ಟಸಾಧ್ಯವಾದ ಸ್ಥಳದಲ್ಲಿದೆ. ಇದರೊಳಗೆ ಪ್ರವೇಶಿಸಲಿಕ್ಕೆ ಖಂಡಿತವಾಗಿ ಆಗುವುದೇ ಇಲ್ಲ. ಆತನೇ ಬಂದರೂ ಏನಮಾಡ

ಪ್ರಾಪ್ಯಾಪಿ ಸ ಮಹಾಬಾಹುಃ ಕಿಂ ಕರಿಷ್ಯತಿ ರಾಘವಃ ॥೨೮॥
ಅವಕಾಶೋ ನ ಸಾಂತ್ವಸ್ಯ ರಾಕ್ಷಸೇಷ್ವಭಿಗಮ್ಯತೇ ।
ನ ದಾನಸ್ಯ ನ ಭೇದಸ್ಯ ನೈವ ಯುದ್ಧಸ್ಯ ದೃಶ್ಯತೇ ॥೨೯॥
ಚತುರ್ಣಾಮೇವ ಹಿ ಗತಿ ರ್ವಾನರಾಣಾಂ ಮಹಾತ್ಮನಾಂ ।
ವಾಲಿಪುತ್ರಸ್ಯ ನೀಲಸ್ಯ ಮಮ ರಾಜ್ಞಶ್ಚ ಧೀಮತಃ ॥೩೦॥

ಈ, ಲಂಕಾಂತು - ಲಂಕೆಯನ್ನಾದರೋ, ಮಹಾಬಾಹುಃ - ಹೆಚ್ಚಿದ ತೋಳುಬಲವುಳ್ಳ, ಸಃ - ಆ, ರಾಘವಃ - ರಘುನಂದನನೇ, ಪ್ರಾಪ್ಯಾಪಿ - ಹೊಂದಿಯೂ [ಇಲ್ಲಿಗೆ ಬಂದೂ] ಕಿಂಕರಿಷ್ಯತಿ - ಏನನ್ನು ಮಾಡುವನು ? ॥೨೮॥ ರಾಕ್ಷಸೇಷು - ರಕ್ಕಸರಲ್ಲಿ, ಸಾಂತ್ವಸ್ಯ - ಒಳ್ಳೆಯತನಕ್ಕೆ, ಅವಕಾಶಃ - ಎಡೆಯು, ನಾಭಿಗಮ್ಯತೇ - ಹೊಂದಿಕೆಯಾಗುವುದಿಲ್ಲ. ದಾನಸ್ಯ -ಏನಾದರು ಕೊಡಲಿಕ್ಕೂ, ನ- ಅವಕಾಶವಿಲ್ಲ, ಭೇದಸ್ಯ - ಮಿತ್ರಭೇದವಮಾಡಲಿಕ್ಕೂ, ನ - ಸಂದರ್ಭವಿಲ್ಲ, ಯುದ್ಧಸ್ಯ - ಕಾದಾಟಕ್ಕಂತೂ, (ಅವಕಾಶಃ ಇರುವುದನ್ನು) ನದೃಶ್ಯತೇ - ಕಾಣುವುದೇ ಇಲ್ಲ ॥೨೯॥

ಮಹಾತ್ಮನಾಂ-ಹೆಚ್ಚಿದ ಬುದ್ಧಿ ಬಲಾದಿಗಳುಳ್ಳ, ವಾಲಿಪುತ್ರಸ್ಯ-ಅಂಗದನಿಗೂ, ನೀಲಸ್ಯ-ನೀಲನಿಗೂ, ಮಮ-ನನಗೂ, ರಾಜ್ಞಶ್ಚ - ಸುಗ್ರೀವನಿಗೂ ಚತುರ್ಣಾಂ-ನಾಲ್ವರಾದ, ವಾನರಾಣಾಮೇವ-ಈ ವಾನರರಿಗೆ ಮಾತ್ರವೇ,ಗತಿಃ- ಈ ಲಂಕೆಗೆ ಬರಲು ಸಾಧ್ಯವು ॥೩೦॥ಜೀವತಿವಾ-ಬದುಕಿ ಇದಾಳೆಯೋ, ನವಾ-ಇಲ್ಲವೋ,

ಇಲ್ಲ ? ॥೨೮॥ ಅಥವಾ ರಾಜನೀತಿಯನ್ನು ಅನುಸರಿಸಿ ಆಲೋಚಿಸೋಣವೆಂದರೋ, ಈ ರಕ್ಕಸರು ಮೂರ್ಖರು, ಬಹು ಕ್ರೂರಸ್ವಭಾವದವರು, ಆದುದರಿಂದ ಇವರಲ್ಲಿ ಸಾಮೋಪಾಯಕ್ಕೆ ಎಡೆಯಿಲ್ಲ, ಒಳ್ಳೆಯ ಮಾತಿಗೆ ತಗ್ಗಿ ವಶವಾಗತಕ್ಕವರಲ್ಲ. ಯಾರವ ಮೂಲಕವಾಗಿ ಯಾದರೂ ಮಾಧ್ಯಸ್ಥ್ಯವನ್ನು ನಡೆಸಿ ಏನಾದರೂ ಲಂಚಕೊಟ್ಟು ಕೆಲಸವನ್ನು ಗೆದ್ದುಕೊಳ್ಳೋಣ ಎಂದು ನೋಡಹೋದರೋ, ಈ ರಾವಣನ ಐಶ್ವರ್ಯವು ಇಂದ್ರ ಕುಬೇರಾದಿಗಳ ಸಂಪದ ವೈಭವಗಳನ್ನು ಮೀರಿಸಿ ಇದೆ, ಆದುದರಿಂದ ಅದಕ್ಕೂ ಅವಕಾಶವಿಲ್ಲ. ಹಾಗಿಲ್ಲದಿದ್ದರೆ ಇವರೊಳಗೇ ಒಬ್ಬರೊಬ್ಬರಿಗೆ ಏನಾದರೂ ಕಂಟುತಾದು ಹಾಕಿ ಮಿತ್ರ ಭೇದವನ್ನು ನಡೆಸೋಣವೆ? ಎಂದರ ಇವರೆಲ್ಲರೂ ಬಹುಬಲದಿಂದ ಕೊಬ್ಬಿರುವುದಲ್ಲದೆ ಬಲು ಬಿಗ್ಗಟ್ಟಿನಿಂದಿರುವವರು, ಹೀಗಿರುವಲ್ಲಿ ಭೇದಕ್ಕೆ ಎಡೆಯೆಲ್ಲಿ ಬಂದೀತು ? ಈ ಮೂರನ್ನೂ ಬಿಟ್ಟು ಕಾದಿಯೇ ಗೆಲ್ಲೋಣ ಎಂದು ನೋಡಿದರೆ, ಇವರ ಬುದ್ಧಿ, ಬಲ, ವೀರ್ಯ, ಚಾತುರ್ಯ, ಪರಾಕ್ರಮ, ದರ್ಪ, ಯುದ್ಧಕುಶಲತೆ ಈ ಮುಂತಾದವುಗಳಿಂದ ಸರ್ವಾತ್ಮನಾ ಗೆಲ್ಲಲಿಕ್ಕೆ ದಾರಿಯೇ ಇಲ್ಲ. ॥೨೯॥ ಇತ್ತ-ನಮ್ಮ ಒಳಗುಟ್ಟನ್ನು ವಿಚಾರಿಸಲಿಕ್ಕೆ ಹೊರಟರೆ ಹುಡುಡಿಲ್ಲ. ಮಹಾ ಬಲಶಾಲಿಗಳೆನಿಸಿದ ವಾನರ ವೀರರೊಳಗೆ ವಾಲಿಕುಮಾರನಾದ ಅಂಗದನೊಬ್ಬ, ನೀಲನೊಬ್ಬ, ಬಹುಬುದ್ಧಿಶಾಲಿಯೆನಿಸಿ ನಮಗೆ ಅರಸನಾಗಿಯೂ ಇರುವ ಸುಗ್ರೀವನೊಬ್ಬ, ಇವರುಗಳ ಜೊತೆಗೆ ನಾನೊಬ್ಬ, ಈ ನಾಲ್ವರಿಗೆ ಮಾತ್ರವೇ ಇಲ್ಲಿನುಗ್ಗಲು ದಾರಿಯು ದೊರೆತೀತೇ ಹೊರತು ಉಳಿದವರಿಗೆ, ಹೆಪ್ಪಿಟ್ಟನ್ನು ಮೇಲಕ್ಕೆತ್ತಿದ ಹಿಂದೆಯನ್ನಲ್ಲಾಡಿಸುತ್ತ, ಬಾಯುಮುಚ್ಚಿ ಮೂಗಿನಿಂದ ಗಟ್ಟಿಯಾಗಿ ಹೂಂಕರಿಸುವುದೇ ಸೈ ॥೩೦॥ ಇದು ಇಂತಾಯಿತಷ್ಟೆ?

ಯಾವಜ್ಜಾನಾಮಿ ವೈದೇಹೀಂ ಯದಿ ಜೀವತಿ ವಾ ನ ವಾ ।
ತತ್ರೈವ ಚಿಂತಯಿಷ್ಯಾಮಿ ದೃಷ್ಟ್ವಾ ತಾಂ ಜನಕಾತ್ಮಜಾಂ ॥೩೧॥
ತತ ಸ್ಸ ಚಿಂತಯಾಮಾಸ ಮುಹೂರ್ತಂ ಕಪಿಕುಂಜರಃ ।
ಗಿರಿಶೃಂಗೇ ಸ್ಥಿತಃ ತಸ್ಮಿನ್ ರಾಮಸ್ಯಾಭ್ಯುದಯೇ ರತಃ ॥೩೨॥
ಅನೇನ ರೂಪೇಣ ಮಯಾ ನ ಶಕ್ಯಾ ರಕ್ಷಸಾಂ ಪುರೀ ।

---

ವೈದೇಹೀಂ - ಜಾನಕಿಯನ್ನು, ಯಾವತ್ - ಯಾವಾಗ, ಜಾನಾಮಿ - ಗುರುತುಹಿಡಿಯುತ್ತೇನೆಯೋ ? ಜೀವತಿಯದಿ - ಒಂದು ವೇಳೆ ಬದುಕಿ ಇದ್ದರೆ, ದೃಷ್ಟ್ವಾ - ನೋಡಿ, ತತ್ರೈವ - ಆಸಮಯದಲ್ಲಿಯೇ, ಚಿಂತಯಿಷ್ಯಾಮಿ - (ಮುಂದೆಮಾಡಬೇಕಾದುದನ್ನು) ಯೋಚಿಸುವೆನು, ಅಥವಾ - (ವೈದೇಹೀಂ - ಸೀತೆಯನ್ನು ಕುರಿತು, ಯಾವ ಜ್ಜಾನಾಮಿ - ಸಂಪೂರ್ಣವಾಗಿ ಭಾವಿಸುತ್ತೇನೆ, ಯದಿಜೀವತಿ - ಬದುಕಿ ಇದಾಳೆಯೋ, ನವಾ - ಇಲ್ಲವೋ ? ತಾಂಜನಕಾತ್ಮಜಾಂ - ಆ ಜಾನಕಿಯನ್ನು, ದೃಷ್ಟ್ವಾ-ನೆನೆದಮಾತ್ರವೇ, ತತ್ರೈವ - ಅವಳ ಜೀವನದ ವಿಷಯದಲ್ಲಿಯೇ, ಚಿಂತಯಿಷ್ಯಾಮಿ - ಸಂಶಯಪಡುತ್ತೇನೆ) ಅಥವಾ - (ವೈದೇಹೀಂ-ಸೀತೆಯನ್ನು, ಯಾವಜ್ಜಾನಾಮಿ - ಯಾವಾಗ ಕಾಣುತ್ತೇನೆಯೋ, ತಾವತ್ - ಆವರೆಗೂ, ಜೀವತಿವಾನವಾ - ಈ ರಕ್ಕಸರ ಹಿಂಸೆಯಲ್ಲಿ ಬದುಕಿರುವಳೋ ಇಲ್ಲವೋ ? ತಾಂಜನಕಾತ್ಮಜಾಂ - ಶ್ರೀರಾಮನು ಹೇಳಿ ಇರುವ ಗುರುತಿನ ಸೀತೆಯನ್ನು, ದೃಷ್ಟ್ವಾ - ನೋಡಿದರೆ, ತತ್ರೈವ-ಆಕೆ ಬದುಕಿ ಇದ್ದಾಳೆ ಎಂಬ ವಿಷಯದಲ್ಲಿಯೇ, ಚಿಂತಯಿಷ್ಯಾಮಿ - ಯೋಚಿಸುವೆನು) ॥ ೩೧ ॥ ತತಃ - ಅನಂತರದಲ್ಲಿ, ಸಃ - ಆ, ಕಪಿಕುಂಜರಃ - ಕಪಿಶ್ರೇಷ್ಠನಾದ ಆಂಜನೇಯನು, ತಸ್ಮಿನ್ - ಆ, ಗಿರಿಶೃಂಗೇ- ಪರ್ವತ ಶಿಖರದಲ್ಲಿ, ಸ್ಥಿತಃ - ನಿಂತುಕೊಂಡಿರುವವನಾಗಿ, ರಾಮಸ್ಯ - ಶ್ರೀರಾಮನ, ಅಭ್ಯುದಯೇ-ಮೇಲ್ಮೆಯಲ್ಲಿ, ರತಃ- ಆಸಕ್ತನಾದ ಕಾರಣವೇ, ಚಿಂತಯಾಮಾಸ - ಯೋಚಿಸತೊಡಗಿದನು ॥ ೩೨ ॥ ಬಲಸಮನ್ವಿತೈಃ - ಶಕ್ತಿಯಿಂದೊಡಗೂಡಿದವರಾದ ಕಾರಣವೇ. ಕ್ರೂರೈಃ - ಘಾತುಕರಾಗಿರುವ, ರಾಕ್ಷಸೈಃ-ರಕ್ಕಸರಿಂದ, ಗುಪ್ತಾ- ರಕ್ಷಿಸಲ್ಪಟ್ಟ, ರಕ್ಷಸಾಂ-ರಾಕ್ಷಸರ, ಪುರೀ - ಲಂಕಾಪಟ್ಟಣವು, ಮಯಾ - ನನ್ನಿಂದ, ಅನೇನರೂಪೇಣ -

---

ಇಲ್ಲಿ ಶ್ರೀರಾಮಚಂದ್ರನು ಹೇಳಿರುವ ಮಹಾಲಕ್ಷಣಗಳಿಂದೊಡಗೂಡಿ, ಪತಿವ್ರತಾಶಿರೋಮಣಿಯೆನಿಸಿದ ಮಹಾನುಭಾವಳಾದ ಸೀತೆಯನ್ನು ಕುರಿತು ಯೋಚಿಸಿ ನೋಡಹೋದರೆ-ಈ ದುರಾತ್ಮರ ನಡುವೆ ಸಿಕ್ಕಿದ ಆಕೆಯು ಬದುಕಿಇರುವಳೋ ಇಲ್ಲವೋ ಎಂದು ಸಂಶಯವೇ ಉಂಟಾಗುತ್ತದೆ. ನಾವೆಲ್ಲರೂ ಸೇರಿ ಯಾವ ಮಹಾಕಾರ್ಯವನ್ನು ಸಾಧಿಸಲಿಕ್ಕೆ ಪ್ರಯತ್ನಿಸುತ್ತಿರುವೆವೋ ಆ ಮೂಲವೇ ಸಂಶಯಾಸ್ಪದವಾಗಿದೆ. ಈ ವಿಷಯದಲ್ಲಿ ಯಾವ ಹಾದಿಯೂ ತೋರದು ಎಂದೀಮೊದಲಾಗಿ ಬಹುಪ್ರಕಾರಚಿಂತಿಸಿದನು ॥೩೧॥ ಆಂಜನಾಪುತ್ರನೇನು ಸಾಮಾನ್ಯನೇ ? ಬಹುಜಾಣ. ಆಮೇಲೆ ಆ ಬೆಟ್ಟದ ತುದಿಯಲ್ಲಿಯೇ ಸ್ವಲ್ಪಹೊತ್ತು ಸುಮ್ಮನೆನಿಂತು ಯಾವ ಹಾದಿಯಲ್ಲಿ ಹೋದರೆ ರಘುಕುಲ ಲಲಾಮನಿಗೆ ಮೇಲು ಉಂಟಾದೀತು ಎಂದು ತದೇಕಾಯತ್ತಚಿತ್ತನಾಗಿ ಒಂದು ಮುಹೂರ್ತಕಾಲದವರೆಗೂ ಚೆನ್ನಾಗಿ ಚಿಂತಿಸಿ ಹೀಗೆ ನಿಶ್ಚೈಸಿದನು ॥೩೨॥ ನಾನು ಈನನ್ನ ರೂಪದಿಂದಲೇ ಈ ರಾಕ್ಷಸರ ಪುರವನ್ನು ಪ್ರವೇಶಿಸಿ ಕೆಲಸವನ್ನು ಗೆಲ್ಲುವೆನು ಎಂಬುದು ಅಸಾಧ್ಯ;ಬಾಹುಬಲದಿಂದ ಕೊಬ್ಬಿ, ಬಹುಕ್ರೂರರಾಗಿ, ಹವಿಸ್ಮಾರರೆನಿಸಿದ ರಾಕ್ಷಸವೀರರು ವೈಯ್ಯೆಲ್ಲ

ಪ್ರವೇಷ್ಟುಂ ರಾಕ್ಷಸೈರ್ಗುಪ್ತಾಂ ಕ್ರೂರೈರ್ಬಲಸಮನ್ವಿತೈಃ ॥೩೩॥
ಉಗ್ರೌಜಸೋ ಮಹಾವೀರ್ಯಾ ಬಲವಂತಶ್ಚ ರಾಕ್ಷಸಾಃ ।
ವಂಚನೀಯಾ ಮಯಾ ಸರ್ವೇ ಜಾನಕೀಂ ಪರಿಮಾರ್ಗತಾ ॥೩೪॥
ಲಕ್ಷ್ಯಾಲಕ್ಷ್ಯೇಣ ರೂಪೇಣ ರಾತ್ರೌ ಲಂಕಾ ಪುರೀ ಮಯಾ ।
ಪ್ರವೇಷ್ಟುಂ ಪ್ರಾಪ್ತಕಾಲಂ ಮೇ ಕೃತ್ಯಂ ಸಾಧಯಿತುಂ ಮಹತ್ ॥೩೫॥
ತಾಂ ಪುರೀಂ ತಾದೃಶೀಂ ದೃಷ್ಟ್ವಾ ದುರಾಧರ್ಷಾಂ ಸುರಾಸುರೈಃ ।

ಈ ಆಕಾರದಿಂದಲೇ, ಪ್ರವೇಷ್ಟುಂ - ಪ್ರವೇಶಿಸಲಿಕ್ಕೆ, ನಶಕ್ಯಾ - ತಕ್ಕದಲ್ಲ. ॥ ೩೩ ॥ ಉಗ್ರೌಜಸಃ-ತೀಕ್ಷ್ಣವಾದ ದರ್ಪವುಳ್ಳವರು, ಮಹಾವೀರ್ಯಾಃ - ಹೆಚ್ಚಿದ ಪರಾಕ್ರಮವುಳ್ಳವರು, ಬಲವಂತಶ್ಚ - ದೇಹಶಕ್ತಿಯುಳ್ಳವರೂ ಆಗಿರುವ, ರಾಕ್ಷಸಾಃ - ಈ ರಕ್ಕಸರು, ಜಾನಕೀಂ - ಜನಕ ಪುತ್ರಿಯನ್ನು, ಪರಿಮಾರ್ಗತಾ-ಎಲ್ಲೆಲ್ಲಿಯೂ ಹುಡುಕಬೇಕೆಂದಿರುವ, ಮಯಾ - ನನ್ನಿಂದ, ವಂಚನೀಯಾಃ - ಮೋಸಪಡಿಸಲಿಕ್ಕೆ ಅರ್ಹರು ॥ ೩೪ ॥ ಲಕ್ಷ್ಯಾಲಕ್ಷ್ಯೇಣ - ಕಂಡುಕಾಣ ಬರದ ಹಾಗಿರುವ,ರೂಪೇಣ- ಆಕಾರ (ಶರೀರ)ದಿಂದಲೇ, ರಾತ್ರೌ- ನಿಶಿಯಲ್ಲಿ, ಪುರೀ - ಲಂಕಾಪುರವು, ಮಯಾ - ನನ್ನಿಂದ, ಪ್ರವೇಷ್ಟುಂ - ಪ್ರವೇಶಿಸಲಿಕ್ಕೆ, ಮೇ-ನನಗೆ, ಪ್ರಾಪ್ತಕಾಲಂ - ಸಮಯವಾಗಿದೆ, (ಕುತಃ-ಏತಕೆಂದರೆ) (ಅಹಂ-ನಾನು) ಮಹತ್ -ಬಹುದೊಡ್ಡದಾದ,ಕೃತ್ಯಂ-ಸೀತೆಯನ್ನು ಹುಡುಕುವ ಕಾರ್ಯವನ್ನು,ಸಾಧಯಿತುಂ- ಸಾಧಿಸಲಿಕ್ಕೆ,(ಉದ್ಯತಃ-ಉದ್ಯುಕ್ತನಾಗಿದೇನೆ) ಅಥವಾ - ರಾತ್ರೌ - ಈ ರಾತ್ರಿಯಲ್ಲಿ, ಮಯಾ - ನನ್ನಿಂದ, ಲಂಕಾಪುರೀ-ಲಂಕಾಪಟ್ಟಣವು, ಅಲಕ್ಷ್ಯೇಣ - ಯಾರಿಗೂ ಗೋಚರಿಸದಿರುವ, ರೂಪೇಣ - ರೂಪದಿಂದ, ಲಕ್ಷ್ಯಾ - ನೋಡಲ್ಪಡತಕ್ಕದಾಗಿದೆ, ಪ್ರವೇಷ್ಟುಂ-ಒಳಹೊಗಲಿಕ್ಕೆ, ಮಹತ್-ದೊಡ್ಡದಾದ, ಕೃತ್ಯಂ - ಕೆಲಸವನ್ನು, ಸಾಧಯಿತುಂ - ಸಾಧಿಸಲಿಕ್ಕೂ, ಮೇ - ನನಗೆ, ಪ್ರಾಪ್ತಕಾಲಂ - ಒದಗಿದ ಸಮಯವಾಗಿದೆ, ಅಥವಾ ಃ ಮೇ - ನನಗೆ, ಮಹತ್ - ಪ್ರಬಲವಾದ, ಕೃತ್ಯಂ - ಕಾರ್ಯವನ್ನು, ಸಾಧಯಿತುಂ - ನೆರವೇರಿಸಲಿಕ್ಕೆ ಪ್ರಾಪ್ತಕಾಲಂ - ಸಮಯವು ಒದಗಿದೆ, (ಅತಃ-ಆದಕಾರಣ) ಲಂಕಾಪುರೀ - ಲಂಕಾನಗರವು, ಅಲಕ್ಷ್ಯೇಣ-ಪರರಗೋಚರಕ್ಕೆ ಬಾರದ, ರೂಪೇಣ - ಆಕಾರದಿಂದಲೇ, ಪ್ರವೇಷ್ಟುಂ-ಪ್ರವೇಶಿಸಲಿಕ್ಕೆ, (ಯೋಗ್ಯಾ-ತಕ್ಕುದೆಂದು) ಮಯಾ - ನನ್ನಿಂದ, ಲಕ್ಷ್ಯಾ - ಊಹಿಸಬೇಕಾಗಿದೆ ॥ ೩೫ ॥ ಸುರಾಸುರೈಃ - ದೇವಾಸುರ

ಕಣ್ಣುಳ್ಳವರಾಗಿ ಈನಗರವನ್ನು ರಕ್ಷಿಸುತಲಿದಾರೆ. ಇದರ ಒಳಹೊಗಲಾಗುವುದೇ ಇಲ್ಲ॥೩೩॥ ಬಹುತೀಕ್ಷ್ಣವಾದ ತೇಜಸ್ಸುಳ್ಳವರು, ಮಹಾಪರಾಕ್ರಮಶಾಲಿಗಳು, ಅಪಾರವಾದ ದೇಹಬಲವುಳ್ಳವರು, ರಾಕ್ಷಸಸ್ವಭಾವವೆಂಬುದು ಜನ್ಮತಃ ಸಿದ್ಧವಾದುದು, ಆದಕಾರಣ ಜಾನಕಿಯನ್ನು ಹುಡುಕಲಿಕ್ಕೆ ಹೊರಟಿರುವ ಈ ನಾನು ಇವರೆಲ್ಲರನ್ನೂ ವಂಚಿಸಲೇಬೇಕು. ಈಗ ಇವರಲ್ಲಿ ನನಗೆ ಮೋಸವೇ ಕೆಲಸಕ್ಕೆ ಕೈಯೂಡು ॥೩೪॥ ದೊಡ್ಡ ಆಕಾರದಿಂದ ಈ ಲಂಕೆಯನ್ನು ಹೊಕ್ಕರೆ ರಾಕ್ಷಸರು ಕಂಡು ಹಿಡಿಯುವರು, ಬಲು ಸಣ್ಣನೆಯರೂಪದಿಂದ ಪ್ರವೇಶಿಸಿದರೆ ಜಾನಕಿಯನ್ನು ಹುಡುಕತಕ್ಕ ದೊಡ್ಡ ಕೆಲಸವನ್ನು ಮಾಡಲು ಸಾಕಾಗುವುದಿಲ್ಲ,ಆದುದರಿಂದ ಕಂಡು ಕಾಣಬಾರದ ಹಾಗಿರುವ ಒಂದು ಬಗೆಯ ಆಕೃತಿಯಿಂದಲೇ ಈ ಲಂಕೆಗೆ ಹೊಕ್ಕು ಕೆಲಸವನ್ನು ಸಾಧಿಸಬೇಕು. ಎಂದು ಆಲೋಚಿಸುತ್ತಾ ॥೩೫॥ ದೇವಾಸುರರಿಂದಲೂ ಪ್ರವೇಶಿಸಲಿಕ್ಕೆ ಅಸಾಧ್ಯವಾಗಿರುವ, ಆನಗರದ ಮಹತ್ವವನ್ನು ನೋಡಿ

ಹನುಮಾನ್ ಚಿಂತಯಾಮಾಸ ವಿನಿಶ್ವಸ್ಯ ಮುಹುರ್ಮುಹುಃ ॥ ೩೬ ॥
ಕೇನೋಪಾಯೇನ ಪಶ್ಯೇಯಂ ಮೈಥಿಲೀಂ ಜನಕಾತ್ಮಜಾಂ ।
ಅದೃಷ್ಟೋ ರಾಕ್ಷಸೇಂದ್ರೇಣ ರಾವಣೇನ ದುರಾತ್ಮನಾ ॥೩೭॥
ನ ವಿನಶ್ಯೇತ್ಕಥಂ ಕಾರ್ಯಂ ರಾಮಸ್ಯ ವಿದಿತಾತ್ಮನಃ ।
ಏಕಾಮೇಕಶ್ಚ ಪಶ್ಯೇಯಂ ರಹಿತೇ ಜನಕಾತ್ಮಜಾಂ ॥೩೮॥
ಭೂತಾಶ್ಚಾರ್ಥಾ ವಿಪದ್ಯಂತೇ ದೇಶಕಾಲವಿರೋಧಿತಾಃ ।

---

ರಿಂದಲೂ, ದುರಾಧರ್ಷಾಂ - ಅತಿಕ್ರಮಿಸಲಸಾಧ್ಯವಾಗಿರುವ, ತಾದೃಶೀಂ - ಅಂತಹ (ಸರ್ವಪ್ರಕಾರದಿಂದಲೂ ಎಚ್ಚರದಿಂದ ರಕ್ಷಿಸಲ್ಪಡುತಲಿರುವ) ತಾಂಪುರೀಂ-ಆ ಲಂಕೆಯನ್ನು, ದೃಷ್ಟ್ವಾ- ನೋಡಿ,ಹನುಮಾನ್ - ಆಂಜನೇಯನು, ಮುಹುರ್ಮುಹುಃ - ಪದೆಪದೆ, (ವಿನಿಶ್ವಸ್ಯ - ಇದರ ಒಳಹೊಗುವುದು ಬಹು ಕಷ್ಟ ಎಂದು ನಿಟ್ಟುಸಿರನ್ನು ಬಿಟ್ಟು) ವಿನಿಶ್ವಸ್ಯ - ಮೇಲೆ ಹೇಳಿದಂತೆ ನಿಶ್ವಸಿ, ಚಿಂತಯಾಮಾಸ - ಆಲೋಚಿಸಿದನು, ॥ ೩೬ ॥ ರಾಕ್ಷಸೇಂದ್ರೇಣ - ರಕ್ಕಸರೊಡೆಯನಾದ, ದುರಾತ್ಮನಾ-ದುಷ್ಟನಾಗಿರುವ, ರಾವಣೇನ-ರಾವಣನಿಂದ, ಅದೃಷ್ಟಃ - ನೋಡಲ್ಪಡದವನಾಗಿಯೇ, ಜನಕಾತ್ಮಜಾಂ - ಜನಕರಾಜನ ಪುತ್ರಿಯಾದ, ಮೈಥಿಲೀಂ - ಸೀತಾದೇವಿಯನ್ನು, ಕೇನೋಪಾಯೇನ- ಯಾವ ಉಪಾಯದಿಂದ, ಪಶ್ಯೇಯಂ- ನೋಡಲಿಕ್ಕೆ ಶಕ್ತನಾವೇನು ? ॥ ೩೭ ॥ ವಿದಿತಾತ್ಮನಃ - ಲಂಕೆಯ ಸ್ವರೂಪವನ್ನು ಬಲ್ಲವನಾಗಿರುವ (ನನ್ನ ಯೋಗ್ಯತೆಯನ್ನು ತಿಳಿದಿರುವ, ಸರ್ವತ್ರಪ್ರಸಿದ್ಧನಾದ) ರಾಮಸ್ಯ - ಶ್ರೀರಾಮನ, ಕಾರ್ಯಂ- ಕೆಲಸವು, ಕಥಂ - ಹೇಗೆ, ನವಿನಶ್ಯೇತ್ - ನಾಶವಾಗದೆ ಕೈಗೂಡೀತು ?, (ಕಥಂವಾ-ಮತ್ತೆಹೇಗೆ) ರಹಿತೇ - ಯಾರೂ ಇಲ್ಲದಿರುವ ಸ್ಥಾನದಲ್ಲಿ, ಏಕಾಂ - ಒಬ್ಬಳಾಗಿಯೇ ಇರುವ, ಜನಕಾತ್ಮಜಾಂ - ಜಾನಕಿಯನ್ನು, ಏಕಶ್ಚ - ನಾನೂ ಒಂಟಿಯಾಗಿಯೇ ಇರುವವನಾಗಿ, ಪಶ್ಯೇಯಂ-ನೋಡಿಯೇನು ?, ॥ ೩೮ ॥ ಭೂತಾಃ - ಸಿದ್ಧಪ್ರಾಯಗಳಾದ (ಇನ್ನೇನು ಕೈಗೂಡಿದುವು ಎನಿಸಿದ, ಸುಲಭಸಾಧ್ಯಗಳಾದ, ಒಳ್ಳೆಯ ಉಪಾಯದಿಂದ ನೆರವೇರಲಿಕ್ಕೆ ಬಂದ) ಅರ್ಥಾಃ - ಪ್ರಯೋಜನಗಳು, ವಿಕ್ಲಬಂ - ವಿವೇಕ ಹೀನನಾದ (ಹೇಡಿಯಾದ, ನಿರ್ವಹಿಸಲಾರದ) ದೂತಂ - ಭೃತ್ಯನನ್ನು, ಆಸಾದ್ಯ - ಹೊಂದಿ (ಎಂದರೆ ಅಂಥವನ ಕೈಗೆ ಸಿಕ್ಕಿ), ದೇಶಕಾಲ ವಿರೋಧಿತಾಃ-ದೇಶಕ್ಕೂ ಕಾಲಕ್ಕೂ ವಿರೋಧಿಸುವಂತೆ ಆಚರಿಸಲ್ಪಟ್ಟವುಗಳಾಗಿ, ಸೂರ್ಯೋದಯೇ - ಸೂರ್ಯನು ಹುಟ್ಟುತ್ತಿರುವಲ್ಲಿ, ತಮೋಯಥಾ - ಕತ್ತಲು ಹೇಗೋ ಹಾಗೆ,

---

ಮುಂದರಿಯಲು ಅಂದಸರಿಯದೆ ಅಡಿಗಡಿಗೂ ನಿಟ್ಟುಸಿರನ್ನು ಬಿಟ್ಟು॥೩೬॥ಅಹಹ! ಏನುಮಾಡಲಿ ? ಈ ದುರಾತ್ಮನಾದ ರಕ್ಕಸರೊಡೆಯನ ಕಣ್ಣಿಗೆ ಕಾಣಿಸಿಕೊಳ್ಳದೆ ಈಲಂಕೆಯೊಳಕ್ಕೆ ಹೋಗಿ ಯಾವ ಉಪಾಯದಿಂದ ಆಜನಕಮಹಾರಾಜನ ಪುತ್ರಿಯನ್ನು ನೋಡಿಯೇನು ? ॥೩೭॥ ಹೇಗಾದರೆ ಮಹಾನುಭವನಾದ ಆ ಶ್ರೀರಾಮಚಂದ್ರನ ಕೆಲಸಕ್ಕೆ ಕುಂದು ಬಾರದೆ ಇದ್ದೀತು ? ಕೀಳರಾದ ರಕ್ಕಸರ ಗದ್ದಲವಿಲ್ಲದೆ ಜಾನಕಿಯು ಒಂಟಿಯಾಗಿ ಎಲ್ಲಿರಬಹುದು. ಈ ನೀಚರಕಣ್ಣಿಗೆ ಕಾಣಿಸಿಕೊಳ್ಳದೆ ನಾನು ಒಂಟಿಯಾಗಿದ್ದು ಆಮಹಾನುಭಾವಳನ್ನು ಎಲ್ಲಿ ನೋಡಬಲ್ಲೆನು? ॥೩೮॥ ಚೆನ್ನಾಗಿ ಕೈಗೂಡುತಲೇ ಬಂದ ಕೆಲಸಗಳೇ ಆಗಿದ್ದರೂ ವಿವೇಕಹೀನನಾದ ದೂತನ ಕೈಸೇರಿದರೆ ದೇಶಕ್ಕೂ ಕಾಲಕ್ಕೂ ವಿರೋಧವಾಗಿ ನಡೆಸುವುದರಿಂದ ಹೊತ್ತು ಹುಟ್ಟುವಾಗ ಕತ್ತಲುಹೇಗೋ ಹಾಗೆ ಎಲ್ಲವೂ ಎಲ್ಲಿಯೋ ಹೇಗೋ ಹಾಳಾಗಿಹೋಗುವುವು, ಆದಕಾರಣ ಇಂತಹ ಸಂಧಿಕಾಲದಲ್ಲಿ ಕೆಲಸವನ್ನು

ವಿಕ್ಲಬಂ ದೂತಮಾಸಾದ್ಯ ತಮಃ ಸೂರ್ಯೋದಯೇ ಯಥಾ ॥೩೯॥
ಅರ್ಥಾನರ್ಥಾಂತರೇ ಬುದ್ಧಿಃ ನಿಶ್ಚಿತಾಪಿ ನ ಶೋಭತೇ ।
ಘಾತಯಂತಿ ಹಿ ಕಾರ್ಯಾಣಿ ದೂತಾಃ ಪಂಡಿತಮಾನಿನಃ ॥೪೦॥
ನ ವಿನಶ್ಯೇತ್ ಕಥಂ ಕಾರ್ಯಂ ವೈಕ್ಲಬ್ಯಂ ನ ಕಥಂಭವೇತ್ ।
ಲಂಘನಂ ಚ ಸಮುದ್ರಸ್ಯ ಕಥಂ ನು ನ ವೃಥಾ ಭವೇತ್ ॥೪೧॥
ಮಯಿ ದೃಷ್ಟೇತು ರಕ್ಷೋಭೀ ರಾಮಸ್ಯ ವಿದಿತಾತ್ಮನಃ ।

ವಿಪದ್ಯಂತೆ - ಹಾಳಾಗುವುವು ॥ ೩೯ ॥ ಅರ್ಥ - (ಸಂಪಾದಿಸಿಕೊಳ್ಳಬೇಕಾದ) ಪ್ರಯೋಜನದ, ಅನರ್ಥ - (ತಪ್ಪಿಸಿಕೊಳ್ಳಬೇಕಾದ) ತೊಂದರೆಯ, ಅಂತರೆ_ನಡುವೆ, ನಿಶ್ಚಿತಾ-(ಪ್ರಭುವಿನೊಡನೆ ಆಲೋಚಿಸಲ್ಪಟ್ಟು ದೃಢಪಟ್ಟಿರುವ) ಬುದ್ಧಿರಪಿ - ಮತಿಯುಕೂಡ, (ದೂತನು ವಿವೇಕಶೂನ್ಯನಾಗಿದ್ದರೆ) ನಶೋಭತೆ - ಹೊಳೆಯುವುದಿಲ್ಲ, ಪಂಡಿತಮಾನಿನಃ - ನಾವೇ ಎಲ್ಲವನ್ನೂ ಬಲ್ಲವರೆಂದು ಗರ್ವಪಡುವ ಅವಿವೇಕಿಗಳಾದ, ದೂತಾಃ-ಸೇವಕರು, ಕಾರ್ಯಾಣಿ - ಸ್ವಾಮಿಕಾರ್ಯಗಳನ್ನು, ಘಾತಯಂತಿಹಿ - ಕೆಡಿಸುತ್ತಾರಲ್ಲವೆ ? ॥ ೪೦ ॥ ಕಾರ್ಯಂ - ಪ್ರಕೃತವಾದ ಶ್ರೀರಾಮಕಾರ್ಯವು, ಕಥಂ - ಯಾವ ಉಪಾಯದಿಂದ ನವಿನಶ್ಯೇತ್- ಕೆಡದೆನಡೆದೀತು ? ಕಥಂ - ಮತ್ತಾವಉಪಾಯದಿಂದ (ಮಮ - ನನಗೆ) ವೈಕ್ಲಬ್ಯಂ - ಬುದ್ಧಿಮಾಂದ್ಯವು, ನಭವೇತ್ - ಉಂಟಾಗದೆ ಇದ್ದೀತು, ಸಮುದ್ರಸ್ಯ - ಈ ಕಡಲನ್ನು, ಲಂಘನಂಚ- ದಾಟಿಬಂದಿರೋಣವೂ, ಕಥಂನು - ಯಾವ ಉಪಾಯದಿಂದಲಾದರೆ, ನವೃಥಾಭವೇತ್ - ಸಾರ್ಥಕವಾದೀತು ॥ ೪೧ ॥ (ಮುಂದಾಲೋಚನೆಯುಬಗೆ) ಮಯಿ-ನಾನು, ರಕ್ಷೋಭಿಃ-ರಾಕ್ಷಸರಿಂದ, ದೃಷ್ಟೇತು-ನೋಡಲ್ಪಟ್ಟವನೇ ಆದರೆ, ರಾವಣಾನರ್ಥಂ - ರಾವಣನಿಗೆ ಕೇಡನ್ನು, ಇಚ್ಛತಃ - ಕೋರುತ್ತಿರುವ,

ಸಾಧಿಸಲು ಬಲು ಜಾಣತನವಿರಬೇಕು॥೩೯॥ ಸ್ವಲ್ಪಮುಂದರಿದು ಚಟುವಟಿಕೆಯಿಂದ ನವುರಾಗಿ ಕೆಲಸಮಾಡಿದರೆ ಕೆಲಸ ಕೈಗೂಡುವುದು, ಹಾಗಿಲ್ಲದೆ ತುಸ ಹಿಂದಾಗಿ ವೈಮರೆತು ಸಂಚುತಪ್ಪಿದರೆ ಕೂಡಿಬಂದ ಕೆಲಸವೂ ಕೈತಪ್ಪಿ ಹೋಗುವುದು ಎಂಬಿವುಗಳ ನಡುವೆ ಸಿಲುಕಿರುವ ಎಷ್ಟು ಸೂಕ್ಷ್ಮವಾದ ಬುದ್ಧಿಯಾದರೂ ಆ ಸಂಧಿಕಾಲದಲ್ಲಿ ಏರು ಕೋರೆಗಳನ್ನರಿಯಲಾರದೆ ಕಳವಳಿಸುವುದು. ಮಧ್ಯಕಾಲದಲ್ಲಿ ಮುಂದರಿಯುವಂತೆ ಮತಿಯು ಹೊಳೆಯುವುದು ಬಹುಕಷ್ಟ ! ಕೆಲವು ಮುಂದಿ ಕೈಲಾಗದ ದೂತರು ತಾವು ಚತುರರಲ್ಲದಿದ್ದರೂ ತಮ್ಮನ್ನು ತಾವು ಬಹುಚತುರರನ್ನಾಗಿ ತಿಳಿದುಕೊಂಡು ಹೆಮ್ಮೆಯಿಂದಉಪಾಯಾಪಾಯಗಳನ್ನು ಚಿಂತಿಸದೆಯೇ ಯದ್ವಾತದ್ವಾ ಕೆಲಸವನ್ನು ಮಾಡಲಿಕ್ಕೆ ಮುಂದರಿದು, ನಡುಗಾಲದಲ್ಲಿ ನರಳಿ ಪೇಚಾಡುತ್ತಾ ಕೈಗೊಂಡುದನ್ನು ಪೂರಯಿಸದೆಯೇ ಹಾಳುಮಾಡುವರು ॥೪೦॥ ಪ್ರಕೃತದಲ್ಲಿ ಸೀತೆಯನ್ನು ಕಾಣುವ ಕೆಲಸವು ಕುಂದುಬರದೆ, ಅಂದಗೆಡದೆ, ಹೇಗೆ ಕೈಗೂಡೀತು ? ಈ ಸಮಯದೊಳಗೆ ನನ್ನ ಬುದ್ಧಿಯು ಹೇಗೆ ಮಂಕಾಗದೆ ಇದ್ದೀತು ? ಕಡಲಿನಮೇಲೆ ಇಷ್ಟು ದೂರದ ದಾರಿಯನ್ನು ನಾನು ದಾಟಿ ಬಂದಿರುವುದೂ ವ್ಯರ್ಥವಾಗದೆ ಇರುವುದೆಂತು ? ಮುಂದೇನಮಾಡಲಿ ? ॥೪೦॥ ಲೋಕದ ಸ್ವಭಾವವನ್ನೆಲ್ಲ ಚೆನ್ನಾಗಿಬಲ್ಲ ಮಹಾನುಭಾವನಾದ ಶ್ರೀರಾಮಚಂದ್ರನು ನನ್ನನ್ನು ಬಹುಬುದ್ಧಿವಂತನನ್ನಾಗಿ ಭಾವಿಸಿ ನನ್ನಿಂದಲೇ ಈ ಕೆಲಸವು ಕೈಗೂಡುವುದೆಂದು ನೆನೆದು ಕಳುಹಿಸಿ

ಭವೇ ದ್ವ್ಯರ್ಥ ಮಿದಂಕಾರ್ಯಂ ರಾವಣಾನರ್ಥ ಮಿಚ್ಛತಃ ॥೪೨॥
ನ ಹಿ ಶಕ್ಯಂ ಕ್ವಚಿತ್ ಸ್ಥಾತು ಮವಿಜ್ಞಾತೇನ ರಾಕ್ಷಸೈಃ ।
ಅಪಿ ರಾಕ್ಷಸರೂಪೇಣ ಕಿಮುತಾನ್ಯೇನ ಕೇನಚಿತ್ ॥೪೩॥
ವಾಯು ರಪ್ಯತ್ರ ನಾಜ್ಞಾತ ಶ್ಚರೇದಿತಿ ಮತಿರ್ಮಮ ।
ನ ಹ್ಯಸ್ತ್ಯ ವಿದಿತಂ ಕಿಂಚಿದ್ರಾಕ್ಷಸಾನಾಂ ಬಲೀಯಸಾಂ ॥೪೪॥
ಇಹಾಹಂ ಯದಿ ತಿಷ್ಠಾಮಿ ಸ್ವೇನ ರೂಪೇಣ ಸಂವೃತಃ ।

ವಿದಿತಾತ್ಮನಃ - ತಿಳಿಯಲ್ಪಟ್ಟ ತನ್ನ ಮತ್ತು ಪರರ ಸ್ವರೂಪವುಳ್ಳ, (ದೂತನಾದ ನನ್ನ ಸ್ವರೂಪವನ್ನು ಅರಿತಿರುವ, ಲೋಕಪ್ರಸಿದ್ಧನಾದ) ರಾಮಸ್ಯ - ಶ್ರೀರಾಮನ, ಇದಂ - ಈ ಪ್ರಕೃತಕಾರ್ಯವು, ವ್ಯರ್ಥಂ- ನಿರರ್ಥಕವಾದುದು, ಭವೇತ್-ಆಗುವುದು ॥ ೪೨ ॥ ರಾಕ್ಷಸರೂಪೇಣಾಪಿ - ರಕ್ಕಸರ ರೂಪದಿಂದಲಾಗಲಿ, ಕಿಮುತ-ಹಾಗಿಲ್ಲದಿದ್ದರೆ, ಅನ್ಯೇನ - ಬೇರೊಂದಾದ, ಕೇನಚಿತ್ - ಆವುದಾದರೊಂದು ರೂಪದಿಂದಲಾಗಲಿ (ಉಪಾಯದಿಂದಲಾಗಲಿ) ರಾಕ್ಷಸೈಃ - ರಾಕ್ಷಸರಿಂದ, ಅವಿಜ್ಞಾತೇನ-ತಿಳಿಯಲ್ಪಡದಿರುವ ನನ್ನಿಂದ, ಕ್ವಚಿತ್- ಎಲ್ಲಿಯೂ, ಸ್ಥಾತುಂ-ಇರಲಿಕ್ಕೆ, ನಶಕ್ಯಂ - ಸಾಧ್ಯವಲ್ಲ, ಹಿ-ನಿಶ್ಚಯ ॥ ೪೩ ॥ ವಾಯುರಪಿ-ನನ್ನ ತಂದೆಯಾದ ವಾಯುವು ಸಹ, ಅತ್ರ - ಈ ಲಂಕೆಯೊಳಗೆ, ಅಜ್ಞಾತಃ - ಯಾರಿಂದಲೂ ತಿಳಿಯಲ್ಪಡದವನಾಗಿ, ನಚರೇತ್-ಸಂಚರಿಸಲಾರ, ಇತಿ-ಹೀಗೆಂದು, ಮಮ-ನನ್ನ, ಮತಿಃ-ಬುದ್ಧಿಯು, ಬಲೀಯಸಾಂ - ಬಲಿಷ್ಠರಾದ, ರಾಕ್ಷಸಾನಾಂ - ರಕ್ಕಸರಿಗೆ, ಅವಿದಿತಂ - ತಿಳಿಯದಿರುವುದು, ಕಿಂಚಿತ್- ಸ್ವಲ್ಪವಾದರೂ, ನಾಸ್ತಿಹಿ - ಇಲ್ಲವಲ್ಲ ! ॥ ೪೪ ॥ ಇಹ-ಇಂತಹ ಈ ಸ್ಥಳದಲ್ಲಿ, ಅಹಂ - ನಾನು, ಸ್ವೇನ-ನನ್ನ ಸ್ವಂತವಾದ, ರೂಪೇಣ-ನಾನರೂಪದಿಂದ, ಸಂವೃತಃ-ಕೂಡಿದವನಾಗಿ, ತಿಷ್ಠಾಮಿಯದಿ - ಇದ್ದುದೇ ಆದರೆ,

ಇದೇನೆ, ಹೀಗೆ ಇರುವಾಗ ನಾನು ಈ ನಗರವನ್ನು ಹೊಕ್ಕ ಬಳಿಕ ಈರಕ್ಕಸರೇನಾದರೂ ನನ್ನನ್ನು ಸ್ವಲ್ಪ ಕಂಡು ಬಿಟ್ಟರೋ ? ಆಗಲೇ ಶ್ರೀರಾಮನ ಕಾರ್ಯವೆಲ್ಲ ಸಂಪೂರ್ಣವಾಗಿ ಕೆಟ್ಟುಹೋಯಿತು, ಸಂದೇಹವೇ ಇಲ್ಲ. ಇಷ್ಟುಮಾತ್ರವೇ ಅಲ್ಲ. ''ರಾಮನು ಮೊದಲೇ ಸರಿಯಾದ ಮಂತ್ರಿಗಳೊಡನೆ ಚೆನ್ನಾಗಿ ಯೋಚಿಸಿ ಈ ರಾವಣನ ತಂತ್ರವನ್ನು ಗೆದ್ದು ಅವನನ್ನು ಸೋಲಿಸಲು ತಕ್ಕ ಭಟನನ್ನು ದೂತಕೃತ್ಯದಲ್ಲಿ ನೇಮಿಸಲಿಲ್ಲ. ಆದುದರಿಂದಲೇ ಎಸಯಲಿಕ್ಕೆ ಹೋಗಿ ಒಡ್ಡಿಕೊಂಡಂತಾಯಿತು !'' ಎಂದು ಕೆಟ್ಟಹೆಸರೂ ಲೋಕದಲ್ಲೆಲ್ಲ ಹರಡುವುದು ॥೪೨॥ ಇಲ್ಲಿಯಾದರೋ ರಾಕ್ಷಸರು ಅರಿಯದಂತೆ ಇರಲು ಎಲ್ಲಿಯೂ ತುಸವಾದರೂ ಎಡೆಯೇ ಇಲ್ಲ. ಈರಾಕ್ಷಸರ ರೂಪವನ್ನೇ ತಾಳಿ ಇರಲೇ ? ಅಥವಾ ಬೇರೆ ಇನ್ನಾವುದಾದರೊಂದು ರೂಪವನ್ನಾಂತಿರಲೆ ? ಹೇಗೆ ಮಾಡಲಿ ? ॥೪೩॥ ಅಹಹ ! ಯಾವುದೊಂದು ರೂಪವೂ ಇಲ್ಲದೆ, ಸ್ಪರ್ಶಮಾತ್ರದಿಂದ ಊಹೆಗೆ ಬಳಗಾಗ ತಕ್ಕವನೆನಿಸಿ ಗಗನಸಂಚಾರಿಯಾಗಿರುವ ನಮ್ಮ ತಂದೆಯಾದ ವಾಯುವು ಕೂಡ ಈರಕ್ಕಸರ ಅರಿವಿಗೆ ಬಾರದಂತೆ ಖಂಡಿತವಾಗಿ ಸಂಚರಿಸಲಾರ ಎಂದು ನಾನು ಭಾವಿಸುತ್ತೇನೆ, ಮಹಾಮಾಯಾವಿಗಳೆನಿಸಿ ಬಹುಬಲಶಾಲಿಗಳೂ ಆಗಿರುವ ಈ ನಿಶಾಚರರ ಅರಿತಕ್ಕೆ ಬಾರದ ದೇಶವೂ, ವಸ್ತುವೂ ವಿಷಯವೂ ಒಂದೂ ಇಲ್ಲವೆಂದು ನಂಬುತ್ತೇನೆ ॥೪೪॥ ಈಗ ಈ ನಾನು ಇಲ್ಲಿ ನನ್ನ ನಿಜರೂಪದಿಂದಲೇ ಒಂದು ವೇಳೆ ಎಲ್ಲಿಯಾದರೂ ತುಸ ಮರೆಯಾಗಿದ್ದರೂ ನಿಜವಾಗಿ

ವಿನಾಶ ಮುಪಯಾಸ್ಯಾಮಿ ಭರ್ತುರ್ರರ್ಥಶ್ಚ ಹೀಯತೇ ॥೪೫॥
ತದಹಂ ಸ್ವೇನ ರೂಪೇಣ ರಜನ್ಯಾಂ ಹ್ರಸ್ವತಾಂ ಗತಃ ।
ಲಂಕಾಮಧಿಪತಿಷ್ಯಾಮಿ ರಾಘವಸ್ಯಾರ್ಥ ಸಿದ್ಧಯೇ ॥೪೬॥
ರಾವಣಸ್ಯ ಪುರೀಂ ರಾತ್ರೌ ಪ್ರವಿಶ್ಯ ಸುದುರಾಸದಾಂ ।
ವಿಚಿನ್ವನ್ ಭವನಂ ಸರ್ವಂ ದ್ರಕ್ಷ್ಯಾಮಿ ಜನಕಾತ್ಮಜಾಂ ॥೪೭॥
ಇತಿ ಸಂಚಿನ್ತ್ಯ ಹನುಮಾನ್ ಸೂರ್ಯಸ್ಯಾಸ್ತಮಯಂ ಕಪಿಃ ।
ಆಚಕಾಂಕ್ಷೇ ತದಾ ವೀರೋ ವೈದೇಹ್ಯಾ ದರ್ಶನೋತ್ಸುಕಃ ॥೪೮॥
ಸೂರ್ಯೇ ಚಾಸ್ತಂಗತೇ ರಾತ್ರೌ ದೇಹಂ ಸಂಕ್ಷಿಪ್ಯ ಮಾರುತಿಃ ।

---

ವಿನಾಶಂ-ನಾಶವನ್ನು, ಉಪಯಾಸ್ಯಾಮಿ - ಬೇಗನೆ ಹೊಂದುವೆನು, ಭರ್ತುಃ-ನನ್ನ ರಾಜನಾದ ಸುಗ್ರೀವನ (ಸ್ವಾಮಿಯಾದ ಶ್ರೀರಾಮನ) ಅರ್ಥಶ್ಚ-ಪ್ರಯೋಜನವೂ, ಹೀಯತೇ - ಹಾಳಾಗುವುದು (ನನ್ನಿಂದ ಕೆಡಿಸಲ್ಪಟ್ಟಂತಾಗುವುದು) ॥ ೪೫ ॥ ತತ್ - ಆದಕಾರಣ, ಅಹಂ-ನಾನು, ಸ್ವೇನ-ಸ್ವಂತವಾದ, ರೂಪೇಣ - ರೂಪದಿಂದ, ರಜನ್ಯಾಂ - ರಾತ್ರಿಯಲ್ಲಿ, ಹ್ರಸ್ವತಾಂ - ಅಣುತ್ವವನ್ನು (ಸೂಕ್ಷ್ಮತೆಯನ್ನು) ಗತಃ ಹೊಂದಿದವನಾಗಿ, ರಾಘವಸ್ಯ- ಶ್ರೀರಾಮನ, ಅರ್ಥಸಿದ್ಧಯೇ - ಕಾರ್ಯದ ಸಫಲತೆಗೋಸ್ಕರ, ಲಂಕಾಂ - ಲಂಕಾನಗರವನ್ನು ಕುರಿತು, ಅಧಿಪತಿಷ್ಯಾಮಿ - ಪ್ರವೇಶಿಸುವೆನು ॥ ೪೬ ॥ ಸುದುರಾಸದಾಂ- ಪ್ರವೇಶಿಸಲಾಗದೆಯೇ ಇರುವ, ರಾವಣಸ್ಯ- ದಶಕಂಧರನ, ಪುರೀಂ-ನಗರವನ್ನು, ರಾತ್ರೌ-ಇರುಳು ಹೊತ್ತಿನಲ್ಲಿ, ಪ್ರವಿಶ್ಯ-ಒಳಹೊಕ್ಕು, ಸರ್ವಂ - ಸಮಸ್ತವಾದ, ಭವನಂ- ಮನೆಗಳನ್ನು, ವಿಚಿನ್ವನ್-ಹುಡುಕುತ್ತಿರುವವನಾಗಿ, ಜನಕಾತ್ಮಜಾಂ-ಜಾನಕಿಯನ್ನು, ದ್ರಕ್ಷ್ಯಾಮಿ - ಕಾಣುವೆನು ॥ ೪೭ ॥ ವೀರಃ-ಶೂರನಾದ, ಕಪಿಃ - ವಾನರನೆನಿಸಿದ, ಹನುಮಾನ್ - ಆಂಜನೇಯನು, ಇತಿ-ಈ ಪ್ರಕಾರವಾಗಿ, ಸಂಚಿನ್ತ್ಯ- ಚೆನ್ನಾಗಿ ಯೋಚನೆಮಾಡಿ, ವೈದೇಹ್ಯಾಃ-ವೈದೇಹಿಯ, ದರ್ಶನೋತ್ಸುಕಃ - ನೋಟದಲ್ಲಿ ಕುತೂಹಲವುಳ್ಳವನಾದ ಕಾರಣವೇ, ತದಾ -ಆಗ, ಸೂರ್ಯಸ್ಯ - ರವಿಯ, ಅಸ್ತಮಯಂ- ಅಸ್ತಂಗಮನವನ್ನು, (ಸಂಜೆಯನ್ನು) ಆಚಕಾಂಕ್ಷೇ-ಬಯಸುತ್ತಿದ್ದನು ॥ ೪೮ ॥ ಸೂರ್ಯೇ ಚ ರವಿಯೂ, ಅಸ್ತಂಗತೇ (ಸತಿ) ಅಸ್ತವನ್ನು

---

ಉಳಿಯುವುದೇ ಇಲ್ಲ ನನ್ನ ಸ್ವಾಮಿಯಾದ ಶ್ರೀರಾಮನಿಗೆ ಆಗಬೇಕಾದ ಪ್ರಯೋಜನವೂ ಮುಗುವಳಿಯಾದಂತೆಯೇ. ॥೪೫॥ ಹೀಗೆ ನಾನಾಮಾರ್ಗಗಳಲ್ಲಿಯೂ ಬಹುತೊಂದರೆಗಳಿವೆಯಲ್ಲಾ ? ಏನಮಾಡಲಿ ? ಒಳ್ಳೆಯದು, ಅದಕ್ಕೋಸ್ಕರ ನಾನು ಈ ರಾತ್ರಿ ಈ ನನ್ನ ಸ್ವಂತರೂಪವನ್ನೇ ಬಲುಚಿಕ್ಕದಾಗಿರುವಂತೆ ಮಾಡಿಕೊಂಡು ಲಂಕೆಯ ಒಳಹೋಗುವೆನು ಯಾವ ಅಡ್ಡಿಯೂ ಇಲ್ಲದೆ ಎಂತಾದರೂ ರಘುಕುಲೇಂದ್ರನ ಕಾರ್ಯವು ಸಿದ್ಧಿಸಬೇಕು ॥೪೬॥ ಯದ್ಯಪಿ ಈ ಲಂಕೆಯು ಪ್ರವೇಶಿಸಲಿಕ್ಕೆ ಅಸಾಧ್ಯವಾದುದೇ ಸರಿ, ಆದರೂ ಕತ್ತಲೊಂದು ಸಹಾಯವಾಗಿರುವುದರಿಂದ ಸೂಕ್ಷ್ಮರೂಪವನ್ನು ತಳೆದು ಈ ರಾತ್ರಿ ಈ ಪುರವನು ಹೊಕ್ಕು ಎಲ್ಲ ಮನೆಗಳಲ್ಲಿಯೂ ಜನಕಜಾತೆಯನ್ನು ಹುಡುಕಿನೋಡುವೆನು ಎಂದು ಗೊತ್ತುಮಾಡಿಕೊಂಡನು ॥೪೭॥ ಇಂತು ನಿಶ್ಚಯಿಸಿದ ವೀರಹರಿಯು ವಿದೇಹರಾಜನಂದಿನಿಯನ್ನು ಹುಡುಕಲಿಕ್ಕೆ ಸಂಪೂರ್ಣ ಸಾಧಕವಾದ ರಾತ್ರಿಯು ಬರಲು ಇನ್ನು ಎಷ್ಟು ಹೊತ್ತಿಗೆ ಹೊತ್ತು ಮುಳುಗುವುದೋ ಎಂದು ಸಮಯವನ್ನು ಎದುರುನೋಡುತ್ತಿದ್ದನು ॥೪೮॥ ಬಳಿಕ ಸ್ವಲ್ಪ

ಪೃಷದಂಶಕ ಮಾತ್ರಸ್ಸನ್ ಬಭೂವಾऽದ್ಭುತದರ್ಶನಃ ॥೪೯॥
ಪ್ರದೋಷಕಾಲೆ ಹನುಮಾನ್ ತೂರ್ಣ ಮುತ್ಪ್ಲುತ್ಯವೀರ್ಯವಾನ್ ।
ಪ್ರವಿವೇಶ ಪುರೀಂ ರಮ್ಯಾಂ ಸುವಿಭಕ್ತ ಮಹಾಪಥಾಂ ॥೫೦॥
ಪ್ರಾಸಾದ ಮಾಲಾ ವಿತತಾಂ ಸ್ತಂಭೈಃ ಕಾಂಚನರಾಜತೈಃ ।

ಪಡೆಯುತ್ತಿರಲು, ಮಾರುತಿಃ-ಆಂಜನೇಯನು, ರಾತ್ರೌ-ಇರುಳುಹೊತ್ತಿನಲ್ಲಿ, ದೇಹಂ-ತನ್ನ ಶರೀರವನ್ನು, ಸಂಕ್ಷಿಪ್ಯ- ಬಲು ಸಣ್ಣಗಾಗುವಂತೆ ಮಾಡಿಕೊಂಡು * ಪೃಷದಂಶಕಮಾತ್ರಸ್ಸನ್ - ಚಿಕ್ಕ ಬೆಕ್ಕಿನ ಪಿಳ್ಳೆಯಷ್ಟು ಗಾತ್ರದವನಾದಕಾರಣವೇ, ಅದ್ಭುತದರ್ಶನಃ - ಆಶ್ಚರ್ಯಕರವಾಗಿ ಕಾಣಬರತಕ್ಕವನು, ಬಭೂವ-ಆಗುತಿದ್ದನು ॥ ೪೯ ॥ ವೀರ್ಯವಾನ್ - ಮಹಾಬಲಸಂಪನ್ನನಾದ, ಹನುಮಾನ್ - ಆಂಜನೇಯನು, ಪ್ರದೋಷಕಾಲೆ-ಹೊತ್ತುಮುಳುಗುತ್ತಿರುವ ಸಮಯದಲ್ಲಿ, ತೂರ್ಣಂ- ಬೇಗನೆ, ಉತ್ಪ್ಲುತ್ಯ-ಮೇಲಕ್ಕೆ ಹಾರಿ, ಸುವಿಭಕ್ತ - ಚೆನ್ನಾಗಿ ವಿಭಾಗಿಸಲ್ಪಟ್ಟಿರುವ, ಮಹಾಪಥಾಂ - ರಾಜಮಾರ್ಗಗಳುಳ್ಳುದಾದಕಾರಣವೇ, ರಮ್ಯಾಂ-ಅಂದವಾಗಿ ಕಾಣಬರುತ್ತಿರುವ, ಪುರೀಂ - ಲಂಕಾನಗರವನ್ನು, ಪ್ರವಿವೇಶ - ಒಳಹೊಗುತ್ತಿದ್ದನು ॥ ೫೦ ॥ ಪ್ರಾಸಾದ - ಭಾಗ್ಯವಂತರ ಉಪ್ಪರಿಗೆ ಮನೆಗಳ, ಮಾಲಾ - ಸಾಲುಗಳಿಂದ, ವಿತತಾಂ-ವಿಸ್ತಾರವಾದ, (ತುಂಬಿರುವ) ಕಾಂಚನರಾಜತೈಃ - ಚಿನ್ನ ಮತ್ತು ಬೆಳ್ಳಿಗಳಿಂದ ಮಾಡಿ ಇರುವ, ಸ್ತಂಭೈಃ-ಕಂಬಗಳಿಂದಲೂ, ಶಾತಕುಂಭಮಯೈಃ - ಮೇಲಾದ ಚಿನ್ನದಿಂದ ರಚಿಸಿ ಇರತಕ್ಕ, ಜಾಲೈಃ-

ಹೊತ್ತಿಗೆ ಸೂರ್ಯನು ಅಸ್ತಂಗತನಾಗಿ ಹಗಲು ಕಳೆದು ಇರುಳು ಹತ್ತಿರವಾಗುತ ಬರಲು, ಅದ್ಭುತಾಕಾರನಾಗಿ ಕಾಣಬರುತಲಿದ್ದ ಪವನನಂದನನು ತನ್ನ ದೇಹವನ್ನು ಬಹಳವಾಗಿ ಸಂಕ್ಷೇಪಿಸಿ ಬಾಮು ಸಣ್ಣ ಬೆಕ್ಕಿನಷ್ಟು ಗಾತ್ರದವನಾಗಿ ನಿಂತನು ॥೪೯॥ ಅನಂತರದಲ್ಲಿ ಬಹುಪರಾಕ್ರಮಶಾಲಿಯಾದ ಆಮಾರುತಿಯು ಕಣ್ಣುಮುಚ್ಚಿನ ಸಂಜೆಯ ಸಮಯದೊಳಗೆ ಬೇಗನೆ ಅಲ್ಲಿಂದ ಕುಪ್ಪಳಿಸಿ ವಿಸ್ತಾರವಾಗಿಯೂ, ಸ್ಪಷ್ಟವಾಗಿಯೂ ವಿಭಾಗಿಸಲ್ಪಟ್ಟ ರಾಜಮಾರ್ಗಗಳುಳ್ಳುದಾಗಿ, ರಮಣೀಯವಾಗಿ ಕಾಣಬರುತಲಿರುವ ಲಂಕಾಪುರವನ್ನು ಒಳಹೊಗಲು ಉದ್ಯುಕ್ತನಾದನು ॥೫೦॥ ಆ ಮಹಾರಾಜಧಾನಿಯ ಸೊಬಗು ಹೇಗಿತ್ತೆಂದರೆ-ಮುಗಿಲಮಂಡಲವನ್ನು ಮುಟ್ಟುತಲಿರುವ ಉಪ್ಪರಿಗೆಗಳ ಸಾಲು ಬಲುನೀಳವಾಗಿ ಬೆಳಗುತಿದ್ದಿತು. ಅವುಗಳ ಮುಂಗಡೆಯಲ್ಲಿ ಉದ್ದಕ್ಕೂ ಬೆಳ್ಳಿ ಬಂಗಾರಗಳ ಕೆತ್ತನೆಯನ್ನು ಹೊಂದಿದ್ದ ಕಂಬಗಳು ಕಂಗೊಳಿಸುತಲಿದ್ದುವು, ಮೇಲಾದ ಚಿನ್ನದಿಂದ ರಚಿಸಿ ಇರುವ ಕಿಟಕಿಗಳ ಶ್ರೇಣಿಯು ಓರಣೆಯಾಗಿ ವಿರಾಜಿಸುತಿದ್ದಿತು. ಇದನ್ನೆಲ್ಲ ನೋಡಿದರೆ ಆಕಾಶದಲ್ಲಿ ಆಗಾಗ ಚಿತ್ರವಿಚಿತ್ರದ ಬಣ್ಣದಿಂದೊಡಗೂಡಿದ ಮೋಡಗಳು ಒಂದೆಡೆಯಲ್ಲಿ ಕಲೆತು ಕಾಣಬರುವ ಗಂಧರ್ವನಗರದಂತೆ ಅಥವಾ ಸ್ವರ್ಗಲೋಕದಂತೆ, ಇಲ್ಲವೆ "ಕಾಳಗದಲ್ಲಿ ಹಿಂದಾಗದೆ ಹಗೆಯೊಡನೆ ಕಾದಿ ಮಡಿದು ವೀರ ಸ್ವರ್ಗಕ್ಕೆ ಹೊರಟ ವೀರರಿಗೆ, ಆನೆ ಕುದುರೆ ಕಾಲಾಳುಗಳ

* ಪೃಷಾನ್, ದಶತಿಇತಿ-ಪೃಷದಂಶಃ, ಅಲ್ಪಃಪೃಷದಂಶಃ=ಪೃಷದಂಶಕಃ - ಇಲಿಗಳನ್ನು ತಿನ್ನುವ ಚಿಕ್ಕಬೆಕ್ಕು. ಪೃಷದಂಶಕಃ, ಮಾತ್ರಾ - ಪ್ರಮಾಣಂ, ಅಸ್ಯ-ಪೃಷದಂಶಕಮಾತ್ರಃ - ಬೆಕ್ಕಿನ ಪಿಳ್ಳೆಯಷ್ಟು ಅಳತೆಯುಳ್ಳವನು,

ಶಾತಕುಂಭಮಯೈರ್ಜಾಲೈರ್ಗಂಧರ್ವ ನಗರೋಪಮಾಂ ।
ಸಪ್ತಭೌಮಾಷ್ಟಭೌಮೈಶ್ಚ ಸ ದದರ್ಶ ಮಹಾಪುರೀಂ ।
ತಲೈಃ ಸ್ಫಾಟಿಕ ಸಂಕೀರ್ಣೈಃ ಕಾರ್ತಸ್ವರ ವಿಭೂಷಿತೈಃ ॥೫೨॥
ವೈಡೂರ್ಯ ಮಣಿಚಿತ್ರೈಶ್ಚ ಮುಕ್ತಾಜಾಲ ವಿಭೂಷಿತೈಃ ।
ತಲೈಶ್ಶುಶುಭಿರೆ ತಾನಿ ಭವನಾನ್ಯತ್ರ ರಕ್ಷಸಾಂ ॥೫೩॥
ಕಾಂಚನಾನಿ ವಿಚಿತ್ರಾಣಿ ತೋರಣಾನಿ ಚ ರಕ್ಷಸಾಂ ।
ಲಂಕಾ ಮುದ್ಯೋತಯಾಮಾಸುಃ ಸರ್ವತ ಸ್ಸಮಲಂಕೃತಾಂ ॥೫೪॥

---

ಕಿಟಕಿಗಳಿಂದಲೂ ಒಡಗೂಡಿರುವುದರಿಂದಲೇ, ಗಂಧರ್ವನಗರೋಪಮಾಂ-ಗಂಧರ್ವನಗರವನ್ನು ಹೋಲುತ್ತಿರುವುದಾಗಿಯೂ ॥೫೧॥ ಸಪ್ತಭೌಮಾಷ್ಟಭೌಮೈಶ್ಚ-ಏಳು ಎಂಟು ಅಂತಸ್ತು(ಮಹಡಿ)ಗಳಿಂದಲೂ, ಕಾರ್ತಸ್ವರವಿಭೂಷಿತೈಃ-ಚಿನ್ನದ ಚಿತ್ರ ಕೆಲಸದಿಂದ ಅಲಂಕರಿಸಲ್ಪಟ್ಟಿರುವ, ಸ್ಫಾಟಿಕಸಂಕೀರ್ಣೈಃ-ಸ್ಫಟಿಕಶಿಲೆಗಳಿಂದ ಪೂರ್ಣವಾಗಿರುವ, ತಲೈಃ-ಆಯಾ ಅಂತಸ್ತುಗಳ ನೆಲಗಳಿಂದಲೂ ಕೂಡಿ ಇರುವ, ಮಹಾಪುರೀಂ-ಆ ದೊಡ್ಡ ಪಟ್ಟಣವನ್ನು, ಸಃ - ಆಂಜನೇಯನು, ದದರ್ಶ - ನೋಡುತ್ತಿದ್ದನು ॥೫೨॥ ಅತ್ರ - ಈ ಲಂಕಾನಗರದಲ್ಲಿ, ರಕ್ಷಸಾಂ -ರಾಕ್ಷಸರ, ತಾನಿ - ಆ, ಭವನಾನಿ - ದಿವ್ಯಮಂದಿರಗಳು, ವೈಡೂರ್ಯಮಣಿಚಿತ್ರೈಶ್ಚ - ವೈಡೂರ್ಯವೆಂಬ ರತ್ನಗಳಲ್ಲಿನ ಚಿತ್ರದ ಕೆಲಸಗಳಿಂದಲೂ, ಮುಕ್ತಾಜಾಲವಿಭೂಷಿತೈಃ - ಮುತ್ತುಗಳ ಗೊಂಚಲುಗಳಿಂದ ಅಲಂಕರಿಸಲ್ಪಟ್ಟಿರುವ, ತಲೈಃ - ಭೂಭಾಗಗಳಿಂದಲೂ, ಶುಶುಭಿರೆ-ಪ್ರಕಾಶಿಸುತ್ತಿದ್ದವು ॥೫೩॥ ಕಾಂಚನಾನಿ-ಬಂಗಾರದಿಂದ ಕಲ್ಪಿಸಿ ಇರುವ ವಿಚಿತ್ರಾಣಿ - ಆಶ್ಚರ್ಯಕರಗಳಾದ, ರಕ್ಷಸಾಂ-ಅಸುರರ, ತೋರಣಾನಿಚ-ಹೊರಬಾಗಿಲುಗಳೂ, ಸರ್ವತಃ-ಎಲ್ಲಕಡೆಗಳಲ್ಲಿಯೂ, ಸಮಲಂಕೃತಾಂ-ಚೆನ್ನಾಗಿ ಅಲಂಕರಿಸಲ್ಪಟ್ಟಿರತಕ್ಕ, ಲಂಕಾಂ- ಲಂಕಾನಗರವನ್ನು ಉದ್ಯೋತಯಾಮಾಸುಃ- ಪ್ರಕಾಶಗೊಳಿಸುತಿದ್ದುವು ॥೫೪॥ ವೈದೇಹ್ಯಾಃ-ಜಾನಕಿಯ, ದರ್ಶನೋತ್ಸುಕಃ-ದರ್ಶನದಲ್ಲಿ ಕುತೂಹಲ (ಉದ್ಯೋಗ

---

ಕಡಿತದಿಂದ ರಣಭೂಮಿಯಲ್ಲಿ ಹರಿಯುವ ರಕ್ತದ ಬಗೆಬಗೆಯ ಬಣ್ಣದ ಹೊಳೆಯಂತೆ ಮೋಡಗಳಿಂದ ಕಲ್ಪಿತವಾಗಿ ಆಗಸದೊಳಗೆ ಗಂಧರ್ವನಗರವೊಂದು ಮೊದಲಿನ ಟಂಕಿಯಾಗಿ ಕಾಣಬರುವುದು, ಎಂದು ಹೇಳಿರುವ ಆ ಗಂಧರ್ವನಗರದಂತೆ ತೋರಿಬರುತ್ತಿದ್ದಿತು॥೫೧॥ ಮುತ್ತು-ಜೇಣೆಯಂತೆ ಬೆಳ್ಳಗೆ ಬೆಳಗುವ ಸ್ಫಟಿಕದ ಹಲಗೆಕಲ್ಲುಗಳನ್ನು ಹಾಸಿ ಅವುಗಳ ಸಣ್ಣ ಸಂದುಗಳಿಗೆಲ್ಲ ಕರಗಿದ ಬಂಗಾರದ ದ್ರವವನ್ನು ಸರಿಯಾಗಿ ಎಸೆಗೊಂಡುವಂತೆ ಬೆಸೆದು ಹೊಳವು ಕೊಟ್ಟಿರುವ ನೆಲಗಳುಳ್ಳುದಾಗಿ-ಏಳು ಎಂಟು ಅಂತಸ್ತುಗಳ ಹರ್ಮ್ಯಗಳನ್ನೊಳಗೊಂಡು ಮಹಾಪಟ್ಟಣವನ್ನು ನೋಡಿ ಆಂಜನೇಯನು ಬಲು ಅಚ್ಚರಿಗೊಂಡನು ॥೫೨॥ ವೈಡೂರ್ಯಮಣಿಗಳನ್ನೂ ತೋರವಾದ ಮುತ್ತುಗಳನ್ನೂ ಕಲೆಸಿ ಕಟ್ಟಿದ ಗೊಂಚಲುಗಳನ್ನು ಮಹಡಿಗಳ ಮುಂದಣ ಲೋವೆಗಳ ಕೆಳಭಾಗದಲ್ಲಿ ಸಾಲಾಗಿ ಕಟ್ಟಿದ್ದು ಅವುಗಳ ಚಿತ್ರಕಾಂತಿಯು ತಳತಳಿಸುತಲಿರುವ ನೆಲದ ಮೇಲೆ ಬೀಳುತಿದ್ದರೆ ರಕ್ಕಸರ ಮನೆಗಳೆಲ್ಲ ಥಳಥಳನೆ ಹೊಳೆಯುತಲಿದ್ದುವು ॥೫೩॥ ಆ ಮಹಾಪುರದ ಹೊರಬಾಗಿಲಿನಲ್ಲಿ ಸುತ್ತಲೂ ರಕ್ಕಸರ ಕೈವಾಡದ ಚಿನ್ನಗೆಲಸದಿಂದ ಕೆತ್ತಿರುವ ಚಿತ್ರಗಳು ಲಂಕೆಯನ್ನು ಬಲು ಅಂದವಾಗಿರುವಂತೆ ಬೆಳಗಿಸುತಲಿದ್ದುವು ॥೫೪॥ ಆಗಲಾ ವೀರಪ್ರಾಭಂಜನಿಯು ಮನದಿಂದ ನೆನೆಯಲು

ಅಚಿಂತ್ಯಾ ಮದ್ಭುತಾಕಾರಾಂ ದೃಷ್ಟ್ವಾ ಲಂಕಾಂ ಮಹಾಕಪಿಃ ।
ಆಸೀ ದ್ವಿಷಣ್ಣೋ ಹೃಷ್ಟಶ್ಚ ವೈದೇಹ್ಯಾದರ್ಶನೋತ್ಸುಕಃ ॥೫೫॥
ಸ ಪಾಂಡುರೋ ದ್ವಿದ್ಧ ವಿಮಾನ ಮಾಲಿನೀಂ ಮಹಾರ್ಹಜಾಂಬೂನದ ಜಾಲತೋರಣಾಂ।
ಯಶಸ್ವಿನೀಂ ರಾವಣ ಬಾಹುಪಾಲಿತಾಂ ಕ್ಷಪಾಚರೈ ರ್ಭೀಮಬಲೈಸ್ಸಮಾವೃತಾಂ॥೫೬॥
ಚಂದ್ರೋಽಪಿ ಸಾಚಿವ್ಯ ಮಿವಾಸ್ಯ ಕುರ್ವ್ಸ್ತಾರಾಗಣೈ ರ್ಮಧ್ಯಗತೋ ವಿರಾಜ ನ್ ।

---

ಉಳ್ಳವನಾದಕಾರಣವೇ, ಮಹಾಕಪಿಃ - ಕಪಿವರನಾದ ಹನುಮನು, ಅಚಿಂತ್ಯಾಂ-ಹೀಗೆ ಇದೆ ಎಂದು ಚಿಂತಿಸಲಶಕ್ಯವಾಗಿಯೂ, ಅದ್ಭುತಾಕಾರಾಂ -ಆಶ್ಚರ್ಯಕರವೆನಿಸಿದ ರೂಪವುಳ್ಳುದಾಗಿಯೂ, ಪಾಂಡುರ - ಸುಣ್ಣದಲೆಪ್ಪದಿಂದ ಬಿಳುಪಾದ, ಉದ್ವಿದ್ಧ - ಒಂದರಮೇಲೆ ಒಂದರಂತೆ ಒರಸೆಯಾಗಿ ಕಟ್ಟಿರುವ, ವಿಮಾನ - ಮೇಲಂತಸ್ತುಗಳ, ಮಾಲಿನೀಂ - ಸಾಲುಗಳುಳ್ಳದ್ದಾಗಿಯೂ, ಮಹಾರ್ಹ - ಬಹು ಬೆಲೆಯಾದ (ಶ್ಲಾಘ್ಯವಾದ) ಜಾಂಬೂನದ - ಚಿನ್ನದ ಕೈಗೆಲಸವುಳ್ಳ, ಜಾಲ - ಕಿಟಕಿ (ಬೆಳಗಂಡಿ) ಗಳುಳ್ಳ, ತೋರಣಾಂ- ಹೊರಬಾಗಿಲುಗಳುಳ್ಳುದಾಗಿಯೂ, ಯಶಸ್ವಿನೀಂ- (ಇಂತಹ ನಗರವಿನ್ನಿಲ್ಲೆಂದು) ಹೆಸರುವಾಸಿಯನ್ನು ಪಡೆದಿರತಕ್ಕುದಾಗಿಯೂ, ರಾವಣಬಾಹುಪಾಲಿತಾಂ-ರಾವಣನ ತೋಳುಬಲದಿಂದ ಆಳಲ್ಪಡುತ್ತಿರುವುದಾಗಿಯೂ, ಭೀಮಬಲೈಃ - ಭಯಂಕರವಾದ ಬಾಹುಬಲವುಳ್ಳ, ಕ್ಷಪಾಚರೈಃ - ನಿಶಾಚರರಿಂದ, ಸಮಾವೃತಾಂ - ಆವರಿಸಲ್ಪಟ್ಟಿದ್ದುದಾಗಿಯೂ ಇರುವ, ಲಂಕಾಂ - ಲಂಕಾನಗರವನ್ನು, ದೃಷ್ಟ್ವಾ - ನೋಡಿ, ವಿಷಣ್ಣಃ - (ಈ ಪಟ್ಟಣವೊಳಕ್ಕೆ ಹೋಗುವುದು ಬಹುಕಷ್ಟವೇ ಸರಿ ಎಂದು) ಸ್ವಲ್ಪ ಸಪ್ಪಗಾದವನೂ, ಹೃಷ್ಟಶ್ಚ- (ಲಂಕೆಯ ಸೊಬಗನ್ನು ಕಂಡು) ಹರ್ಷಗೊಂಡವನೂ, ಬಭೂವ - ಆಗಿದ್ದನು ॥೫೫-೫೬॥

ತಾರಾಗಣೈಃ - ನಕ್ಷತ್ರಗಳ ಹಿಂಡುಗಳಿಂದ, ಮಧ್ಯಗತಃ - ನಡುವೆ ಇರತಕ್ಕವನಾಗಿ, ವಿರಾಜನ್- ಪ್ರಕಾಶಿಸುತ್ತಲಿರುವ, ಚಂದ್ರೋಽಪಿ - ಸೂರ್ಯ, ವಾಯು, ಸಾಗರ, ಮೈನಾಕ ಇವರಹಾಗೆ ಚಂದಿರನೂ, ಅಸ್ಯ - ಈ ಹನುಮಂತನಿಗೆ, ಸಾಚಿವ್ಯಂ - ಸಹಾಯವನ್ನು, ಕುರ್ವನ್ನಿವ - ಮಾಡಲೆಳಸಿದನೋ ಎಂಬಂತೆ, ಜ್ಯೋತ್ಸ್ನಾ - ಬೆಳದಿಂಗಳಿಂದ, ವಿತಾನೇನ - (ಬೆಳತಿಂಗಳ ಸಮೂಹದಿಂದ) ಮೇಲ್ಕಟ್ಟಿನಿಂದ,

---

ಅಸದಳವೆನಿಸಿದ ಅದ್ಭುತಾಕಾರವನ್ನಾಂತಿರುವ ಆ ಲಂಕೆಯನ್ನು ನೋಡಿ ವೈದೇಹಿಯನ್ನು ಕಾಣುವುದರಲ್ಲಿ ಅತ್ಯಂತ ಕುತೂಹಲವುಳ್ಳವನಾಗಿದ್ದರೂ, ಪುರದ ಆಡಂಬರದಿಂದ ತುಸು ಅಂಜಿ ಸಪ್ಪಗಾದನು. ಆದರೂ ಪಟ್ಟಣದ ಸೊಬಗಿನಿಂದ ಮನಸೋತು ಬಹುಹರ್ಷಗೊಂಡನು ॥೫೫॥ ತಿಲ್ಲನೆ-ಸುಣ್ಣದ ಲೆಪ್ಪದಿಂದ ಬಲು ಬೆಳ್ಳಗೂ, ಒಂದರಮೇಲೊಂದಾಗಿಯೂ ಎತ್ತರವಾಗಿಯೂ ರಾಜಿಸಿ ಇರುವ ಮಹಡಿಗಳ ಸಾಲನ್ನಾಂತು, ಅಪಾರವಾದ ಬೆಲೆಯುಳ್ಳ ಕುಂದಣದ ಕೆಲಸದಿಂದ ಶೋಭಿಸುತಲಿರುವ ಹೊರಬಾಗಿಲುಳ್ಳುದಾಗಿ ರಾವಣನತೋಳುಬಲದಿಂದ ರಕ್ಷಿಸಲ್ಪಡುತ, ಎಣೆಯಿಲ್ಲದನಗರವೆಂದು ಮೂರುಲೋಕದಲ್ಲಿಯೂ ಹೆಸರುವಾಸಿಯನ್ನು ಪಡೆದು, ಭೀಮಬಲರಾದ ನಿಶಾಚರರಿಂದ ಆವರಿಸಲ್ಪಟ್ಟಿರುವ ಆ ಲಂಕೆಯನ್ನು ನೋಡಿದ ಹರಿಯು ಶಂಕಾನ್ವಿತನೂ, ಸಂತುಷ್ಟಾಂತರಂಗನೂ ಆದನು ॥೫೬॥ ಹಗೆಗಳ ಪೊಗರನ್ನಡಗಿಸುವ ಹೊತಕಾರಿಯಾದ ಹನುಮನು ಮಹಾಸಾಗರವನ್ನು ದಾಟಿ ಬರುವಾಗ ಸಮುದ್ರರಾಜನು ಕೃತಜ್ಞತೆಯಿಂದ ಹರಿಗೆ ಊಡಕೊಡಲು ಮೈನಾಕನನ್ನು ಪ್ರೇರಿಸಿದನು, ಮೈನಾಕನು ಮುಯ್ಯಿಗೆ ಮುಯ್ಯಮಾಡತೊಡಗಿದನು, ಗುರುವಾದ ಸೂರ್ಯನ್

ಜ್ಯೋತ್ಸ್ನಾ ವಿತಾನೇನ ವಿತತ್ಯ ಲೋಕ ಮುತ್ತಿಷ್ಠತೇ ನೈಕಸಹಸ್ರರಶ್ಮಿಃ ||೫೩||
ಶಂಖಪ್ರಭಂ ಕ್ಷೀರಮೃಣಾಳವರ್ಣ ಮುದ್ಗಚ್ಛಮಾನಂ ವ್ಯವಭಾಸಮಾನಂ|
ದದರ್ಶ ಚಂದ್ರಂ ಸ ಹರಿಪ್ರವೀರಃ ಪೋಪ್ಲೂಯಮಾನಂ ಸರಸೀವ ಹಂಸಂ||
ಇತಿ ಶ್ರೀಮತ್ಸುಂದರಕಾಂಡೆ ದ್ವಿತೀಯಸ್ಸರ್ಗಃ

ಲೋಕಂ - ಪ್ರಪಂಚವನ್ನು, ವಿತತ್ಯ - ವ್ಯಾಪಿಸಿ, (ಹರಡಿ) ನೈಕಸಹಸ್ರರಶ್ಮಿಃ - ಅನೇಕ ಸಾವಿರ ಕಿರಣಗಳುಳ್ಳವನಾಗಿ, ಉತ್ತಿಷ್ಠತೇ - ಉದಿಸುತಲಿದ್ದನು ||೫೩|| ಶಂಖಪ್ರಭಂ - ಶಂಖದಂತೆ ಹೊಳಪುಳ್ಳ, ಕ್ಷೀರಮೃಣಾಳವರ್ಣಂ - ಹಾಲು ಮತ್ತು ತಾವರೆದಂಟಿನ ಬಣ್ಣವುಳ್ಳ, ಉದ್ಗಚ್ಛಮಾನಂ - ಹುಟ್ಟಿ ಮೇಲಕ್ಕೆ ಬರುತಲಿರುವ, ವ್ಯವಭಾಸಮಾನಂ - ಎಲ್ಲ ಕಡೆಗಳಲ್ಲಿಯೂ ಹರಡಿ ಬೆಳಗುತಲಿಂತಕ್ಕ ಚಂದ್ರಂ, - [ಲೋಕಾನಂದಕರನಾದ] ಚಂದಿರನನ್ನು ಸರಸಿ - ಕೊಳದೊಳಗೆ, ಪ್ಲೋಪ್ಲೂಯಮಾನಂ - ಸುತ್ತುಬಳಸಿ ತೇಲಾಡುತಲಿರುವ, ಹಂಸಮಿವ - ಅಂಚೆಯನ್ನು ಹೇಗೋಹಾಗೆ, ಸಃ - ಆ, ಹರಿಪ್ರವೀರಃ - ವಾನರವರನಾದ ಆಂಜನೇಯನು ದದರ್ಶ - ಕಂಡನು ||೫೪||

ಇಂತು ರಸಾಯನವೆಂಬ ಟೀಕೆಯಿಂದೊಡಗೂಡಿರುವ ಶ್ರೀಮದ್ವಾಲ್ಮೀಕಿ ರಾಮಾಯಣದ ಸುನ್ದರಕಾಣ್ಡದಲ್ಲಿ ಎರಡನೆಯ ಸರ್ಗವು.

ತಪಿಸದೆ ತಣ್ಣಗಿದ್ದನು, ತಾದೆಸರಾದ ವಾಯುವು ಅನುಕೂಲನಾದನು, ಇಂತಹವರೆಲ್ಲರೂ ಹರಿಗೆ ಸಹಾಯಮಾಡುವಲ್ಲಿ ತಾನೊಬ್ಬನು ಮಾತ್ರ ಕೃತಘ್ನನಾಗಬಾರದೆಂದು ನೆನೆದವನಂತೆ ಚಂದಿರನು ತಾನೂ ಈತನಿಗೆ ಸ್ವಲ್ಪ ಸಹಾಯಮಾಡಲು ವಿಸ್ತಾರವಾದ ನಕ್ಷತ್ರಗಳ ಗುಂಪಿನ ನಡುವೆ ರಾರಾಜಿಸುತ, ತನ್ನ ಬೆಳ್ದಿಂಗಳೆಂಬ ಮೇಲುಕಟ್ಟನ್ನು ಆಕಾಶದ ಬೈಲಿನಲ್ಲಿ ಹರಡಿ, ಸಾಸಿರಕರಗಳೊಡನೆ ಬೆಳಗತೊಡಗಿದನು ||೫೩|| ಶಂಖದಂತೆ ಬೆಳಗುತ, ಹಾಲು ಮತ್ತು ತಾವರೆಯದಂಟು ಇವುಗಳಂತೆ ಧವಳವರ್ಣವನ್ನುಂಡು ಭಾಸಮಾನನಾಗಿ ಉದಯಿಸುತಲಿರುವ ಚಂದ್ರನನ್ನು ಹರಿವೀರನಾದ ಹನುಮನು ದೊಡ್ಡ ಮಡುವಿನೊಳಗೆ ತೇಲಾಡುತಲಿರುವ ಹಂಸೆಯನ್ನು ಹೇಗೋಹಾಗೆ ನೋಡಿ ಹರ್ಷಗೊಂಡನು, (ಲಂಕೆಯಬಿಂಕದಿಂದ ಮಾರುತಿಯ ಮನಕೆ ತುಸುಮಬ್ಬು ಉಂಟಾಗಲು ಮನೋಭಿಮಾನಿಯಾದ ಚಂದ್ರನು ಉದಿಸಿ ಪ್ರಸನ್ನತೆಯನ್ನುಂಟುಮಾಡಿದನು ||೫೪||

ಕಂದ|| ಹರಿಯಾಣತಿಯಿಂ ಹರಿ ಸಾ |
ಗರಮಂ ದಾಂಟುತ್ತೆ ಲಂಕೆಯುಂ ಪೊಗುವಂದಾ||
ಹರಿ ಹರಿ ಗಿರಿ ಪರಿದೀಶರ|
ನೆರೆಯುಂ ಸೇರಲ್ಕೆಬಾನೊಳಾಹರಿ ಮೆರೆದಂ||

ಇಂತು ರಸಾಯನವೆಂಬ ಟೀಕಾತಾತ್ಪರ್ಯದಿಂದೊಡಗೂಡಿರುವ ಶ್ರೀಮದ್ವಾಲ್ಮೀಕಿ ರಾಮಾಯಣದ ಸುನ್ದರಕಾಣ್ಡದಲ್ಲಿ ದ್ವಿತೀಯಸರ್ಗವು

— ಶ್ರೀರಾಮಚನ್ದ್ರಾರ್ಪಣಂ —

ಶ್ರೀಃ

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ.

## * ತೃತೀಯಸ್ಸರ್ಗಃ *

ಸ ಲಂಬಶಿಖರೇ ಲಂಬೇ ಲಂಬತೋಯದ ಸನ್ನಿಭೇ ।
ಸತ್ವ ಮಾಸ್ಥಾಯ ಮೇಧಾವೀ ಹನೂಮಾನ್ಮಾರುತಾತ್ಮಜಃ ॥೧॥
ನಿಶಿ ಲಂಕಾಂ ಮಹಾಸತ್ವೋ ವಿವೇಶ ಕಪಿಕುಂಜರಃ ।
ರಮ್ಯಕಾನನ ತೋಯಾಢ್ಯಾಂ ಪುರೀಂ ರಾವಣಪಾಲಿತಾಂ ॥೨॥

ಶ್ರೀಃ.

—ಶ್ರೀರಾಮಚಂದ್ರ ಪರಬ್ರಹ್ಮಣೇನಮಃ—

## ತೃತೀಯಸ್ಸರ್ಗಃ.

ಕಂದ॥ ಪೊಳಲೊಳ್ ಪೊಗುತಿರೆ ಮಾರುತಿ । ಘಳಿಲನೆ ತಾಂಕಂಡು ಲಂಕೆ ತಡೆಯಲ್ ಭರದಿಂ ॥
ಕೊಳುಗುಳದೊಳ್ ಸದೆಬಡಿದಾ । ಕುಳಮಿಲ್ಲದೆ ನುಸುಳ್ದ ನಲ್ತೆ ಮಾಬಲ ನಮವಾ ॥

ಟೀ॥ ಮಾರುತಾತ್ಮಜಃ - ಪವಮಾನಕುಮಾರನು, ಕಪಿಕುಂಜರಃ - ವಾನರೋತ್ತಮನು, ಮಹಾಸತ್ವಃ-(ಅಸಾಧ್ಯಸಾಧಕ) ಮಹಾ ಸಾಮರ್ಥ್ಯವುಳ್ಳವನೂ ಆಗಿರುವ, ಸಃ-ಆ ಮಹಾಮಹಿಮಶಾಲಿಯಾದ, ಹನುಮಾನ್ - ಆಂಜನೇಯನು, ಲಂಬ - ಜೋಲಾಡುತಲಿರುವ, ತೋಯದ - ನೀರುತುಂಬಿದ ಮೇಘದೊಡನೆ, ಸನ್ನಿಭೆ - ಸಮಾನವೆನಿಸಿದ, ಲಂಬೆ - ಲಂಬ ಎಂಬ ಹೆಸರಿನ, ಲಂಬಶಿಖರೆ - ಸುವೇಲಾಚಲದ ಶಿಖರದಲ್ಲಿ ನಿಂತು,ಮೇಧಾವೀ - ( ಕಾಲೋಚಿತವಾದ ಕಾರ್ಯವನ್ನು ಊಹಿಸುವ) ಪ್ರಶಸ್ತ ಪ್ರಜ್ಞೆಯುಳ್ಳವನಾದ ಕಾರಣವೇ, ಸತ್ವಂ-(ಲಂಕೆಯನ್ನು ಒಳಹೊಗಲು ತಕ್ಕುದಾದ ಉಪಾಯನ್ನು) ಸಾಮರ್ಥ್ಯವನ್ನು, ಆಸ್ಥಾಯ - ಆಶ್ರಯಿಸಿ (ಹೊಂದಿ, ಗೊತ್ತು ಮಾಡಿಕೊಂಡು) ರಮ್ಯ - ರಮಣೀಯವಾದ, ಕಾನನ-ತೋಟಗಳಿಂದಲೂ, ತೋಯ - ಜಲಭಾಗಗಳಿಂದಲೂ, ಆಢ್ಯಾಂ - ಕೂಡಿ ಇರುವ, ರಾವಣಪಾಲಿತಾಂ - ರಾವಣನಿಂದ ಪಾಲಿಸಲ್ಪಡುತಲಿರುವ, ಲಂಕಾಂಪುರೀಂ - ಲಂಕಾಪಟ್ಟಣವನ್ನು, ನಿಶಿ - ರಾತ್ರಿವೇಳೆ ಯಲ್ಲಿ, ವಿವೇಶ-ಪ್ರವೇಶಿಸಲುಪಕ್ರಮಿಸಿದನು ॥ ೧-೨ ॥ ಶಾರದ-ಶರದೃತುವಿನ, ಅಂಬುದ-ಜಲಧರಗಳಿಗೆ, ಪ್ರಖ್ಯೈಃ-

ಶ್ರೀಃ

— ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ —

ವಾನರವೀರಾಗ್ರಗಣ್ಯನೂ, ಕಾರ್ಯನಿರ್ವಾಹೋಚಿತ ಸತ್ವಸಂಪನ್ನನೂ, ಆಗಿರುವ ಆ ಪವಮಾನಪುತ್ರನಾದ ಆಂಜನೇಯನು ನೀರಿನಿಂದ ತುಂಬಿ ಇಳಿಯಬಿದ್ದಿರುವ ಮೇಘಮಂಡಲದಂತೆ ಹೊಳೆಯುತಲಿರುವ ಸುವೇಲಾಚಲದ ಲಂಬನೆಂಬ ಶಿಖರದಲ್ಲಿ ನಿಂತು, ಪ್ರಕೃತ ಕಾರ್ಯವನ್ನು ನಿರ್ವಹಿಸುವ ಸಂಧಿಸಂದರ್ಭದಲ್ಲಿ ಥಟ್ಟನೆ ಮುಂದಾಲೋಚನೆಯನ್ನು ಮಾಡತಕ್ಕ ಪ್ರತಿಭಾಶಕ್ತಿಯುಳ್ಳವನಾದ ಕಾರಣವೇ,ಅಂತಹ ಸತ್ವಗುಣದಿಂದ ಸಂಪನ್ನನಾಗಿ, ಶೃಂಗಾರವಾದ ತೋಟಗಳಿಂದಲೂ, ಅಂದವಾದ ಜಲಾಶಯಗಳಿಂದಲೂ ರಮಣೀಯವೆನಿಸಿ ರಾವಣನಿಂದ ಪಾಲಿಸಲ್ಪಡುತಲಿರುವ ಆ ಲಂಕಾನಗರಿಗೆ ಈ ಇರುಳಿನಲ್ಲಿಯೇ ಪ್ರವೇಶಿಸುವುದು ಸರಿಎಂದು ಮನದೊಳಗೆ ಗೊತ್ತುಮಾಡಿಕೊಂಡು ಅದರಂತೆ ಪ್ರವೇಶಿಸಲುದ್ಯುಕ್ತನಾಗುತಿದ್ದನು ॥ ೧-೨ ॥ ಆಗ ಆ ಲಂಕಾನಗರಿಯ ಸೊಬಗು ಹೇಗಿತ್ತೆಂದರೆ—ಸುಧಾ

ಶಾರದಾಂಬುಧರ ಪ್ರಖ್ಯೈ ರ್ಭವನೈ ರುಪಶೋಭಿತಾಂ ।
ಸಾಗರೋಪಮ ನಿರ್ಘೋಷಾಂ ಸಾಗರಾನಿಲ ಸೇವಿತಾಂ ॥೩॥
ಸುಪುಷ್ಟ ಬಲಸಂಘುಷ್ಟಾಂ ಯಥೈವ ವಿಟಪಾವತೀಂ ।
ಚಾರು ತೋರಣ ನಿರ್ವ್ಯೂಹಾಂ ಪಾಂಡುರ ದ್ವಾರ ತೋರಣಾಂ ॥೪॥
ಭುಜಗಾಚರಿತಾಂ ಗುಪ್ತಾಂ ಶುಭಾಂ ಭೋಗವತೀಮಿವ ।
ತಾಂ ಸ ವಿದ್ಯುದ್ಘನಾಕೀರ್ಣಾಂ ಜ್ಯೋತಿರ್ಮಾರ್ಗ ನಿಷೇವಿತಾಂ ॥೫॥

ಸಮಾನಗಳೆನಿಸಿದ, ಭವನೈಃ ಮನೆಗಳಿಂದ, ಉಪಶೋಭಿತಾಂ - ಹೊಳೆಯುತಲಿರುವುದಾಗಿಯೂ, ಸಾಗರ - ಸಮುದ್ರಘೋಷಕ್ಕೆ, ಉಪಮ - ಎಣೆಯೆನಿಸಿದ, ನಿರ್ಘೋಷಾಂ - ಜನಘೋಷವುಳ್ಳುದಾಗಿಯೂ, ಸಾಗರಾನಿಲ-ಕಡಲಿನ ಮೇಲಣ ಗಾಳಿಯಿಂದ, ಸೇವಿತಾಂ - ಇಂಪನ್ನು ಹೊಂದುತಲಿರುವುದಾಗಿಯೂ ॥೩॥ (೧) * ಯಥೈವವಿಟಪಾವತೀಂ - ಕುಬೇರನ ಅಲಕಾಪುರವು ಹೇಗೋ ಹಾಗೆ, ಸುಪುಷ್ಟ - ಚೆನ್ನಾಗಿ ಪೋಷಿಸಲ್ಪಟ್ಟ, ಬಲ - ಆನೆ ಕುದುರೆ ತೇರು ಕಾಲಾಳುಗಳ, ಸಂಘುಷ್ಟಾಂ - ಧ್ವನಿಯಿಂದ ತುಂಬಿರುವುದಾಗಿಯೂ, ಚಾರು - ಅಂದವಾಗಿರುವಂತೆ, ತೋರಣ - ಹೊರಬಾಗಿಲುಗಳಲ್ಲಿ ಕೂಡಲಿಕ್ಕೆ ಅಣಿಮಾಡಿರುವ, ನಿರ್ವ್ಯೂಹಾಂ-ಜಗುಲಿಗಳುಸಾಲುಗಳುಳ್ಳದಾಗಿಯೂ,(೨) * ಅಥವಾ(ಹೊರಬಾಗಿಲಿನಲ್ಲಿ ಸಾಲಾಗಿ ಕಟ್ಟಿರುವ ಆನೆಗಳುಳ್ಳ) ಪಾಂಡುರ - ಬೆಳ್ಳಗಿರುವ, ದ್ವಾರ ಬಾಗಿಲುಗಳಲ್ಲಿ ಕಟ್ಟಿರುವ, ತೋರಣಾಂ-ಮುತ್ತಿನ ಗೊಂಚಲುಗಳ ಸಾಲುತೋರಣಗಳುಳ್ಳದಾಗಿಯೂ ಇರುವ ॥ ೪ ॥ ಭುಜಗಾಚರಿತಾಂ - ಸರ್ಪಗಳಿಂದ ಸಂಚರಿಸಲ್ಪಡುತಲಿರುವ, ಭೋಗವತೀಮಿವ- ನಾಗಲೋಕವನ್ನು ಹೇಗೋ ಹಾಗೆ, ಗುಪ್ತಾಂ-ರಕ್ಷಿಸಲ್ಪಡುತಲಿರುವುದಾಗಿಯೂ, ಶುಭಾಂ-ಮಂಗಳಕರವೆನಿಸಿಯೂ, ವಿದ್ಯುತ್-ಮಿಂಚುಗಳಿಂದೊಡಗೂಡಿದ, ಘನ-ಮೇಘಗಳಿಂದ, ಆಕೀರ್ಣಾಂ - ಆವರಿಸಲ್ಪಟ್ಟಿರುವುದಾದಕಾರಣವೇ, ಜ್ಯೋತಿರ್ಮಾರ್ಗ - ನಕ್ಷತ್ರಮಾರ್ಗದಿಂದ, ನಿಷೇವಿತಾಂ - ಸೇವಿಸಲ್ಪಡುತಲಿರುವ, (ಅಂದರೆ ನಕ್ಷತ್ರಮಂಡಲದವರೆಗೆ ವ್ಯಾಪಿಸಿ ಇರುವ) ತಾಂ - ಲೋಕೋತ್ತರವೆನಿಸಿಕೊಂಡಿರತಕ್ಕ ॥ ೫ ॥ ಇಂದ್ರಸ್ಯ - ದೇವರಾಜನ, ಅಮರಾವತೀಂಯಥಾ-

ಧವಳಿತವಾಗಿದ್ದುದರಿಂದಲೇ ಶರತ್ಕಾಲದ ಮೇಘಗಳಂತೆ ಮನೆಗಳೆಲ್ಲ ಬಹಳವಾಗಿ ಶೋಭಿಸುತಲಿದ್ದುವು. ಪುರದೊಳಗೆ ರಕ್ಕಸರ ಗದ್ದಲವು ಹೆಚ್ಚಾಗಿದ್ದುದರಿಂದ ಕಡಲಿನ ತೆರೆಗಳಸದ್ದಿನಂತೆ ಗಜಬಜಿಸುತಲಿದ್ದಿತು. ಅಂಬುಧಿಯಮೇಲೆ ಹರಿಯುವ ಮಂದಮಾರುತವು ಬೀಸುತಲಿತ್ತು॥೩॥ಆಹಾರವೇ ಮೊದಲಾದವುಗಳಿಂದ ಚೆನ್ನಾಗಿ ಪೋಷಣೆಯನ್ನು ಪಡೆದಿರುವ ಆನೆಕುದುರೆ,ಕಾಲಾಳುಗಳ ವೈಭವದಿಂದ ಕುಬೇರನ ರಾಜಧಾನಿಯಾದ ಅಲಕಾಪುರಿಯಂತೆ ಮೆರೆಯುತಲಿತ್ತು.ಬಾಗಿಲುಗಳ ಮೇಲುಕಡೆಗಳಲ್ಲಿ ಮುತ್ತಿನ ಗೊಂಚಲುಗಳನ್ನು ಕಟ್ಟಿರುವ ಮನೆಗಳ ಹೊರಬಾಗಿಲುಗಳ ಸಾಲು ಕಂಗೊಳಿಸುತಲಿತ್ತು ॥೪॥ ಮಿಂಚುಗಳ ಹೊಳವಿನಿಂದ ಬೆಳಗುವ ಮೇಘಗಳಿಂದೊಡಗೂಡಿದ ಜ್ಯೋತಿರ್ಮಂಡಲದ ವರೆಗೂ ವ್ಯಾಪಿಸಿ ಅತ್ಯುನ್ನತವಾಗಿದ್ದುದರಿಂದ, ಮಹಾಸರ್ಪಗಳಿಂದ ಸಂರಕ್ಷಿಸಲ್ಪಡುತ್ತಿರುವ ಮಂಗಳಕರವೆನಿಸಿದ ಭೋಗವತೀ ನಗರಿಯಂತೆ ವಿರಾಜಿಸುತಿತ್ತು ॥೫॥ ಸುರರಾಜನಾದ ಇಂದ್ರನ ಅಮರಾವತಿಯಲ್ಲಿ

(೧) * "ಕ್ಷಯಃ ಪುಣ್ಯಜನಾನಾಂ ಸ್ಯಾತ್ ಅಲಕಾವಿಟಪಾವತೀ" ಎಂದು ಜ್ಞಾನಪ್ರಕಾಶ.
(೨) * "ನಿರ್ವ್ಯೂಹೋ ಮತ್ತವಾರಣಃ" ಎಂದು ವೈಜಯಂತಿ.

ಮಂದ ಮಾರುತ ಸಂಚಾರಾಂ ಯಥೇಂದ್ರಸ್ಯಾಮರಾವತೀಂ ।
ಶಾತಕುಂಭೇನ ಮಹತಾ ಪ್ರಾಕಾರೇಣಾಭಿಸಂವೃತಾಂ ॥೬॥
ಕಿಂಕಿಣೀ ಜಾಲ ಘೋಷಾಭಿಃ ಪತಾಕಾಭಿ ರಲಂಕೃತಾಂ ।
ಆಸಾದ್ಯ ಸಹಸಾ ಹೃಷ್ಟಃ ಪ್ರಾಕಾರ ಮಭಿಪೇದಿವಾನ್ ॥೭॥
ವಿಸ್ಮಯಾವಿಷ್ಟಹೃದಯಃ ಪುರೀ ಮಾಲೋಕ್ಯ ಸರ್ವತಃ ॥೭॥ ॥
ಜಾಂಬೂನದಮಯೈ ರ್ದ್ವಾರೈ ರ್ವೈಡೂರ್ಯ ಕೃತವೇದಿಕೈಃ ॥೮॥
ವಜ್ರಸ್ಫಟಿಕ ಮುಕ್ತಾಭಿ ರ್ಮಣಿ ಕುಟ್ಟಿಮಭೂಷಿತೈಃ ।

ಅಮರಾವತೀ ನಗರವು ಹೇಗೋ ಹಾಗೆ, ಮಂದಮಾರುತ - ಕಿರುಗಾಳಿಯ, ಸಂಚಾರಾಂ - ಸಂಚಾರವುಳ್ಳು ದಾಗಿಯೂ, ಶಾತಕುಂಭೇನ - ಚಿನ್ನದಿಂದ ರಚಿಸಿ ಇರುವ, ಮಹತಾ - ಎತ್ತರವಾದ, ಪ್ರಾಕಾರೇಣ-ಪೌಳಿ ಗೋಡೆಯಿಂದ, ಅಭಿಸಂವೃತಾಂ - ಬಳಸಲ್ಪಟ್ಟಿರುವುದಾಗಿಯೂ ಇರುವ ॥ ೬ ॥ ಕಿಂಕಿಣೀ - ಕಿರುಗಂಟೆ ಗಳ, ಜಾಲ - ಸಮೂಹದ, ಘೋಷಾಭಿಃ - ಧ್ವನಿಗಳುಳ್ಳ, ಪತಾಕಾಭಿಃ - ಧ್ವಜಗಳಿಂದ, ಅಲಂಕೃ ತಾಂ-ಅಲಂಕರಿಸಲ್ಪಟ್ಟಿರುವಆಪಟ್ಟಣವನ್ನು, ಸಃ - ಆ ಆಂಜನೇಯನು, ಆಸಾದ್ಯ - ಹತ್ತಿರಕ್ಕೆಸೇರಿ ಹೃಷ್ಟಃ- ಸಂತುಷ್ಟನಾಗಿ, ಸಹಸಾ - ಬೇಗನೆ, ಪ್ರಾಕಾರಂ - ಆ ನಗರದ ಆವರಣದ ಗೋಡೆಯನ್ನು ಅಭಿಪೇದಿವಾನ್-ಹೊಂದಿದನು ॥ ೭ ॥ ॥ ಪುರೀಂ - ಆ ಮಹಾನಗರವನ್ನು, ಸರ್ವತಃ-ಸುತ್ತಲೂ, ಆಲೋ ಕ್ಯ-ನೋಡಿ, ವಿಸ್ಮಯ-ಆಶ್ಚರ್ಯದಿಂದ, ಆವಿಷ್ಟ-ತುಂಬಿದ, ಹೃದಯಃ - ಮನಸ್ಸುಳ್ಳವನು, (ಬಭೂ ವ-ಆಗಿದ್ದನು) ॥ ೭ ॥ ಜಾಂಬೂನದಮಯೈಃ - ಚಿನ್ನದಿಂದ ಮಾಡಲ್ಪಟ್ಟವುಗಳಾಗಿಯೂ, ವೈಡೂರ್ಯ- ವೈಡೂರ್ಯವೆಂಬ ರತ್ನಗಳಿಂದ, ಕೃತ-ಕೆತ್ತಲ್ಪಟ್ಟಿರುವ, ವೇದಿಕೈಃ-ಜಗುಲಿಗಳುಳ್ಳವುಗಳಾಗಿಯೂ ಇರುವ- ದ್ವಾರೈಃ-ಬಾಗಿಲುಗಳಿಂದಲೂ ॥ ೮ ॥ ವಜ್ರ-ವಜ್ರಮಣಿಗಳಿಂದಲೂ, ಸ್ಫಟಿಕ-ಸ್ಫಟಿಕ ಶಿಲೆಗಳಿಂದಲೂ, ಮುಕ್ತಾಭಿಃ-ಮುತ್ತುಗಳಿಂದಲೂ ರಚಿಸಲ್ಪಟ್ಟಿರುವ, ಮಣಿಕುಟ್ಟಿಮ - ರತ್ನವೇದಿಕೆಗಳಿಂದ (ರತ್ನಖಚಿತ ವಾದ ಕಿರಿಯೋಗೃಹಗಳಿಂದ) ವಿಭೂಷಿತೈಃ-ಅಲಂಕರಿಸಲ್ಪಟ್ಟಿರುವ, ತಪ್ತ-ಪುಟವಿಟ್ಟು ಶೋಧಿಸಿದ, ಹಾಟಕ-

ಹೇಗೋಹಾಗೆ ಕಿರುಗಾಳಿಯು ಅನವರತವೂ ಸುಳಿಯುತಲಿತ್ತು. ಪುರವು ಚಿನ್ನದ ಇಟ್ಟಿಗೆ ಗಳನ್ನಿಟ್ಟು ಕಟ್ಟಿರುವ ಪೌಳಿಗೋಡೆಯಿಂದ ಬಳಸಲ್ಪಟ್ಟು ರಾರಾಜಿಸುತಲಿದ್ದಿತು ॥೬॥ ಪುರ ದೊಳಗೆಲ್ಲ ಉನ್ನತಗಳಾದ ಧ್ವಜಸ್ತಂಭಗಳನ್ನು ಅಲಂಕಾರವಾಗಿ ನಟ್ಟಿದ್ದರ ಅವುಗಳ ತು ದಿಯಲ್ಲಿ ಬಿಗಿದಿರುವ ಕಿರುಗಂಟೆಗಳು ಇಲ್ಲವೆ ಗೆಜ್ಜೆಗಳು ಕಿವಿಗಿಂಪಾಗಿ ಧ್ವನಿಗೆಯ್ಯುತಲಿ ದ್ದುವು. ಇಂತಪಾರಸೌಂದರ್ಯದಿಂದ ತಳತಳಿಸುವ ಆ ನಗರವನ್ನು ಕಂಡು ಹರ್ಷಗೊಂಡ ಮಾರುತಿಯು ಮೆಲ್ಲಗೆ ಪಟ್ಟಣದ ಪ್ರಾಕಾರದ ಬಳಿಗೆ ಬರುತ್ತಾ ॥೭॥ ಆ ನಗರಿಯ ಸುತ್ತ ಲೂ ನೋಡುತ್ತಾ ಅಚ್ಚರಿಗೊಂಡು ಸ್ತಬ್ಧನಾದನು ॥ ೭॥ ॥ ಆ ಮಹಾಪಟ್ಟಣದ ಸೌಭಾಗ್ಯ ವು ಬಣ್ಣಿಸಲಳವಲ್ಲ ! ಬಾಗಿಲುಗಳಗೆಲ್ಲ ಬಂಗಾರದ ತಗಡುಗಳನ್ನು ಬಿಗಿಸಿದ್ದರು. ಅವುಗಳ ಬಳಿ ಅಲ್ಲಲ್ಲಿ ವೈಡೂರ್ಯಮಣಿಗಳನ್ನು ಕೆತ್ತಿದ್ದ ವೇದಿಕೆಗಳನ್ನು (ಬರಗುದಿಂಡುಗಳನ್ನು) ರಚಿ ಸಿ ಇದ್ದರು ॥೮॥ ಅವುಗಳ ಹತ್ತಿರ ಗೋಪುರಗಳಂತೆ ಎತ್ತರವಾದ ತಿಟ್ಟುಗಳನ್ನು ಕಲ್ಪಿಸಿ ಅದರ ಸುತ್ತಲೂ ಸ್ಫಟಿಕಶಿಲೆಗಳಿಂದಲೂ, ವಜ್ರಗಳಿಂದಲೂ, ಮುತ್ತುಗಳಿಂದಲೂ ಅಲಂಕ ರಿಸಿ ಕುಂದಣದಿಂದಲೂ ಶ್ರೇಷ್ಠವಾದ ಬೆಳ್ಳಿಯಿಂದಲೂ ಚಿತ್ರ ಕೆಲಸಗಳನ್ನು ರಚಿಸಿ

ತಪ್ತಹಾಟಕನಿರ್ಯೂಹೈ ರಾಜತಾಮಲಪಾಂಡುರೈಃ ॥೯॥
ವೈಡೂರ್ಯಕೃತಸೋಪಾನೈಃ ಸ್ಫಾಟಿಕಾಂತರಪಾಂಸುಭಿಃ ।
ಚಾರುಸಂಜವನೋಪೇತೈಃ ಖಮಿವೋತ್ಪತಿತೈಃ ಶುಭೈಃ ॥೧೦॥
ಕ್ರೌಂಚಬರ್ಹಿಣಸಂಘುಷ್ಟೈ ರಾಜಹಂಸನಿಷೇವಿತೈಃ ॥
ತೂರ್ಯಾಭರಣನಿರ್ಘೋಷೈಃ ಸರ್ವತಃ ಪ್ರತಿನಾದಿತಾಂ ॥೧೧॥
ವಸ್ವೌಕಸಾರಾಪ್ರತಿಮಾಂ ತಾಂ ವೀಕ್ಷ್ಯ ನಗರೀಂ ತತಃ ॥
ಖಮಿವೋತ್ಪತಿತಾಂ ಕಾಮಾಂ ಜಹರ್ಷ ಹನೂಮಾನ್ ಕಪಿಃ ॥೧೨॥

---

ಬಂಗಾರದಿಂದ ರಚಿಸಿದ, ನಿರ್ಯೂಹೈಃ - ಇಕ್ಕೆಲದ ಸಾಲುಮನೆಗಳಿಂದಲೂ, ರಾಜತ-ಬೆಳ್ಳಿಯಿಂದ ನಿರ್ಮಿಸಲ್ಪಟ್ಟವುಗಳಾಗಿ, ಅಮಲ-ನಿರ್ಮಲಗಳಾಗಿಯೂ, ಪಾಂಡುರೈಃ-ಬಿಳುಪಾದ ಮೇಲ್ಭಾಗವುಳ್ಳವುಗಳಾಗಿಯೂ ॥ ಸ್ಫಾಟಿಕ- ಸ್ಫಟಿಕಶಿಲಾಮಯವಾದ, ಅಂತರಪಾಂಸುಭಿಃ-ನಡುವಣ ಪುಡಿಮಳಲುಳ್ಳ, ವೈಡೂರ್ಯಕೃತಸೋಪಾನೈಃ-ವೈಡೂರ್ಯರತ್ನಗಳಿಂದ ಕೆತ್ತಲ್ಪಟ್ಟಿರುವಹಂತ (ಮೆಟ್ಟಲು) ಗಳುಳ್ಳವುಗಳಾಗಿಯೂ, ಚಾರು-ಬಹು ಅಂದವಾದ, ಸಂಜವನ-ಇಕ್ಕೆಲದ ಸಭಾಮಂಟಪಗಳಿಂದ, ಉಪೇತೈಃ-ಕೂಡಿ ಇರುವ, ಖಂ-ಆಕಾಶವನ್ನು ಕುರಿತು, ಉತ್ಪತಿತೈರಿವ-ಮೇಲಕ್ಕೆ ಹಾರಿಹೋಗುತ್ತ (ತೇಲಿ) ಇವೆಯೋ ಎಂಬಂತಿರುವ. ಶುಭೈಃ- ಮಂಗಳಕರಗಳಾದ ॥೧೦॥ ಕ್ರೌಂಚ-ಬಕಪಕ್ಷಿಗಳಿಂದಲೂ, ಬರ್ಹಿಣ-ನವಿಲುಗಳಿಂದಲೂ, ಸಂಘುಷ್ಟೈಃ-ಧ್ವನಿಗಳುಳ್ಳ, ರಾಜಹಂಸನಿಷೇವಿತೈಃ-ರಾಜಹಂಸಪಕ್ಷಿಗಳಿಂದ ಸೇವಿಸಲ್ಪಟ್ಟವುಗಳಾಗಿಯೂ ಇರುವ, ತೂರ್ಯ-ನೃತ್ತಗೀತವಾದ್ಯಗಳ, ಆಭರಣ - ಪುಣ್ಯಜನರರತ್ನಾಭರಣಗಳ, ನಿರ್ಘೋಷೈಃ - ಮಹಾಧ್ವನಿಗಳಿಂದ, ಸರ್ವತಃ-ಎಲ್ಲ ಕಡೆಗಳಲ್ಲಿಯೂ, ಪ್ರತಿನಾದಿತಾಂ-ಪ್ರತಿಧ್ವನಿ (ಸೆಲೆ) ಯನ್ನುಂಟುಮಾಡುವ ॥೧೧॥ ‡ವಸ್ವೌಕಸಾರಾ-ಅಮರಾವತಿಯ, ಪ್ರತಿಮಾಂ-ಪ್ರತಿಬಿಂಬದಂತಿರುವ, ಖಂ-ಆಕಾಶವನ್ನು ಕುರಿತು, ಉತ್ಪತಿತಾಂ-ಹಾರಿಹೋಗಲಿಕ್ಕೆ, ಕಾಮಾಂ ಬಯಸುತಲಿದೆಯೋ ಎಂಬಂತಿರುವ, (ಅತ್ಯುನ್ನತವಾಗಿರುವ) ತಾಂ-ಆ ನಗರವನ್ನು, ವೀಕ್ಷ್ಯ-ಚೆನ್ನಾಗಿನೋಡಿ, ತತಃ-ಅನಂತರದಲ್ಲಿ, ಹನುಮಾನ್ ಕಪಿಃ-ವಾನರನಾದ ಆಂಜನೇಯನು, ಜಹರ್ಷ-ಅಪಾರವಾಗಿ

---

ಸ್ಫಟಿಕಶಿಲೆಯ ಧೂಳಮಣ್ಣಿನಿಂದೊಡಗೂಡಿಯೂ ಇರುವ ಸಾಲಾದ ಸೋಪಾನಗಳಿಂದ ಅಂದವಾಗಿ ಬೆಳಗುವ ಮಂಟಪಗಳು ಸಾಲುಗಟ್ಟಿ ಶೋಭಾಯಮಾನವಾಗಿದ್ದುವು ॥೯-೧೦॥ ಮತ್ತು-ಆ ಪಟ್ಟಣದ ದ್ವಾರದೊಳಗೆ ಸರೋವರಗಳಲ್ಲಿ ಬಕ, ನವಿಲು, ರಾಜಹಂಸೆ ಮೊದಲಾದ ಪಕ್ಷಿಗಳು ಇಂಪಾಗಿಧ್ವನಿಗೆಯ್ಯುತಲಿದ್ದುದರಿಂದಲೂ, ಜನರ ಆಭರಣಗಳ ಧ್ವನಿಗಳಿಂದಲೂ ಎಲ್ಲೆಲ್ಲಿಯೂ ನೃತ್ಯ, ಗೀತ, ವಾದ್ಯ ಇವುಗಳ ರವವು ತುಂಬಿ ತುಳುಕುತಲಿದ್ದುದರಿಂದಲೂ ಎಲ್ಲಿ ಕಿವಿಗೊಟ್ಟು ಕೇಳಿದರೂ ಅಖಂಡವಾಗಿ ಸೆಲೆಯು (ಪ್ರತಿಧ್ವನಿ) ಕೇಳಬರುತಲಿದ್ದಿತು ॥೧೧॥ ಇಂತು ಅಸದೃಶವಾದ ಸಂಪದದಿಂದೊಡಗೂಡಿದುದಾದ ಕಾರಣವೇ ದೇವರಾಜನ ರಾಜಧಾನಿಯೆನಿಸಿ ಪೂರ್ವದಿಕ್ಕಿನೊಳೆಸೆವ ವಸ್ವೌಕಸಾರವೆಂಬ ನಗರಿಯ ಪ್ರತಿಬಿಂಬದಂತಿರುತ್ತಾ ಔನ್ನತ್ಯದಿಂದ ಮುಗಿಲ ಮಾರ್ಗವನ್ನು ಕುರಿತು ಹಾರಿಹೋಗಲೆಳಸುತಿದೆಯೋ ಎಂಬಂತೆಸೆಯುವ ಆ ಲಂಕಾನಗರಿಯನ್ನು ನೋಡಿದ ಆಂಜನೇಯನು ಹೇರಳವಾಗಿ

---

‡ "ವಸ್ವೌಕಸಾರಾಶಕ್ರಸ್ಯ ಪೂರ್ವಸ್ಯಾಂದಿಶಿವೈಪುರೀ" ಎಂದು ಪುರಾಣ.

ತಾಂ ಸಮೀಕ್ಷ್ಯ ಪುರೀಂ ರಮ್ಯಾಂ ರಾಕ್ಷಸಾಧಿಪತೇಃ ಶುಭಾಂ ।
ಅನುತ್ತಮಾಂ ಋದ್ಧಿಯುತಾಂ ಚಿಂತಯಾಮಾಸ ವೀರ್ಯವಾನ್ ॥೧೩॥
ನೇಯ ಮನ್ಯೇನ ನಗರೀ ಶಕ್ಯಾ ಧರ್ಷಯಿತುಂ ಬಲಾತ್ ।
ರಕ್ಷಿತಾ ರಾವಣಬಲೈ ರುದ್ಯತಾಯುಧ ಧಾರಿಭಿಃ ॥೧೪॥
ಕುಮುದಾಂಗದಯೋ ರ್ವಾಪಿ ಸುಷೇಣಸ್ಯ ಮಹಾಕಪೇಃ ।

ಸಂತೋಷಿಸತೊಡಗಿದನು ॥ ೧೨ ॥ ವೀರ್ಯವಾನ್ - ಪರಾಕ್ರಮಶಾಲಿಯಾದ ಹನುಮಂತನು, ರಾಕ್ಷಸಾಧಿಪತೇಃ-ರಾಕ್ಷಸಚಕ್ರವರ್ತಿಯಾದ ರಾವಣನ, ಶುಭಾಂ-ಮಂಗಳಕರವೆನಿಸಿದ, ಅನುತ್ತಮಾಂ - ಎಣೆಯಿಲ್ಲದುದೆನಿಸಿರುವ, ಋದ್ಧಿಯುತಾಂ - ಸರ್ವವಸ್ತುಸಮೃದ್ಧಿಯಿಂದೊಡಗೂಡಿರುವ, ರಮ್ಯಾಂ - ರಮಣೀಯವೆನಿಸಿದ, ತಾಂಪುರೀಂ - ಆ ಲಂಕಾನಗರವನ್ನು, ಸಮೀಕ್ಷ್ಯ - ಚೆನ್ನಾಗಿ ಈಕ್ಷಿಸಿ, ಚಿಂತಯಾಮಾಸ - ಆಲೋಚಿಸತೊಡಗಿದನು, (ವಿಚಾರಮಾಡತೊಡಗಿದನು) ॥ ೧೩ ॥ ಉದ್ಯತ-ಕೈಗಳಲ್ಲಿ ಎತ್ತಿ ಹಿಡಿದಿರುವ, ಆಯುಧ - ಶಸ್ತ್ರಗಳನ್ನು, ಧಾರಿಭಿಃ - ಹಿಡಿದಿರುವ, ರಾವಣಬಲೈಃ - ರಾವಣನ ಸೈನಿಕರಿಂದ, ರಕ್ಷಿತಾಂ-ಸಂರಕ್ಷಿಸಲ್ಪಡುತಲಿರುವ ಇಯಂನಗರೀ - ಈ ಮಹಾನಗರವು, ಅನ್ಯೇನ - ಬೇರೊಬ್ಬನಿಂದ (ಯಾವ ಪ್ರಾಣಿಯಿಂದಲೂ) ಬಲಾತ್ - ಶಕ್ತಿವಿಶೇಷದ ದೆಶೆಯಿಂದ, ಧರ್ಷಯಿತುಂ - ತಿರಸ್ಕರಿಸಲಿಕ್ಕೆ, (ಗೆಲ್ಲಲಿಕ್ಕೆ) ನಶಕ್ಯಾ - ಸಾಧ್ಯವೇ ಅಲ್ಲ ॥ ೧೪ ॥ ಕುಮುದಾಂಗದಯೋರ್ವಾಪಿ - ಒಂದುವೇಳೆ ಕುಮುದ ಅಂಗದ ಎಂಬ ಕಪಿವರರಿಗೂ, ಮಹಾಕಪೇಃ - ವಾನರೋತ್ತಮನೆನಿಸಿದ, ಸುಷೇಣಸ್ಯ - ಸುಷೇಣನಿಗೂ, ಮೈಂದದ್ವಿವಿದಯೋರಪಿ - ಅಥವಾ ಮೈಂದ, ದ್ವಿವಿದ ಎಂಬುವವರಿಗೂ, ಪ್ರಸಿದ್ಧಾ-ಲೋಕ

ಹರ್ಷಗೊಂಡನು ॥೧೨॥ ಮಹಾವೀರ್ಯಸಂಪನ್ನನಾದ ಮಾರುತಿಯು ಆ ನಗರದ ಸೌಭಾಗ್ಯಕ್ಕೆ ಆನಂದಿಸಿ, ಆಹಾ ! ಈ ನಗರವು ಎಷ್ಟು ರಮಣೀಯವಾಗಿದೆ ? ರಾಕ್ಷಸಸಾರ್ವಭೌಮನಾದ ರಾವಣನು ಇಂತಹ ಮಂಗಳಕರವಾದಪಟ್ಟಣವನ್ನು ಪಾಲಿಸುತ್ತಿರುವನಲ್ಲ ? ಇಂತಹ ಪಟ್ಟಣವೇ ಮತ್ತೆಲ್ಲಿಯೂ ಕಂಡು ಬರುವುದಿಲ್ಲವೆ ? ಸಮಸ್ತವಸು ಸಮೃದ್ಧಿಯಿಂದಲೂ ಒಡಗೂಡಿರುವುದಲ್ಲ? ಎಂದು ಮನದೊಳಾಲೋಚಿಸುತ್ತಿದ್ದನು॥೧೩॥ ಆಮೇಲೆ ಅಹಹ! ಈಲೋಕದಲ್ಲಿ ಯಾರೇ ಆಗಲಿ ಈನಗರವನ್ನು ತಮ್ಮ ದೇಹಬಲದಿಂದಲಾಗಲೀ, ಬುದ್ಧಿಬಲದಿಂದಲಾಗಲೀ ಜಯಿಸುತ್ತೇವೆಂಬುದು ಎಂದಿಗೂ ಸಾಧ್ಯವಾಗತಕ್ಕ ಕೆಲಸವಲ್ಲ. ರಕ್ಕಸರೊಡೆಯನಾದ ರಾವಣನ ಕಿಂಕರರು ಆಯುಧಪಾಣಿಗಳಾಗಿ ತುಸವಾದರೂ ಬಿಡುವಿಲ್ಲದಂತೆ ಎಚ್ಚರಿಕೆಯಿಂದ ರಕ್ಷಿಸುತಲಿರುವರು॥೧೪॥*ನಮ್ಮ ಗುಂಪಿನೊಳಗೆ ಕುಮುದನೊಬ್ಬ, ವಾಲಿಕುಮಾರನಾಗಿ ಯುವರಾಜನೆನಿಸಿದ ಅಂಗದನೊಬ್ಬ, ಅಥವಾ ಕಪಿವರನಾದ ಸುಷೇಣನೊಬ್ಬ, ಒಂದುವೇಳೆ ಮೈಂದದ್ವಿವಿದರಿಬ್ಬರು, ಸೂರ್ಯನಂದನನಾಗಿರುವ ನಮ್ಮ ಅರಸಾದ ಸುಗ್ರೀವನೊಬ್ಬ, ಕಪಿವೀರನಾದ ಕುಶಪರ್ವನೊಬ್ಬ, ಋಕ್ಷನೊಬ್ಬ, ಕೇತುಮಾಲನೊಬ್ಬ,

* ಈ ಪಾಪಭೂಯಿಷ್ಠವಾದ ಲಂಕೆಯೆಂಬ ಲೋಕವನ್ನು ಗೆದ್ದು ಇದರಲ್ಲಿ ಸಿಕ್ಕುಬಿದ್ದಿರುವ ಸೀತಾರೂಪನಾದ ಚೇತನವನ್ನು ಶ್ರೀ ರಾಮರೂಪ ಶ್ರೀಮನ್ನಾರಾಯಣನ ನಿತ್ಯ ಕೈಂಕರ್ಯದಲ್ಲಿ ಅನುರಕ್ತವಾಗುವಂತೆ ಮಾಡುವುದು ಬಹು ಕಷ್ಟವಾದ ಕೆಲಸವಾಗಿದೆ ಎಂದು ಆಚಾರ್ಯರೂಪನಾದ ಆಂಜನೇಯನು ಯೋಚಿಸುತಲಿದ್ದನು ಎಂದು ಮಹಿಮಾದರ್ಶ.

ಪ್ರಸಿದ್ಧೇಯಂ ಭವೇದ್ಭೂಮಿ ರ್ಮೈಂದ ದ್ವಿವಿದಯೋರಪಿ ॥೧೫॥
ವಿವಸ್ವತ ಸ್ತನೂಜಸ್ಯ ಹರೇಶ್ಚ ಕುಶಪರ್ವಣಃ ।
ಋಕ್ಷಸ್ಯ ಕೇತುಮಾಲಸ್ಯ ಮಮಚೈವ ಗತಿ ರ್ಭವೇತ್ ॥೧೬॥
ಸಮೀಕ್ಷ್ಯ ತು ಮಹಾಬಾಹೂ ರಾಘವಸ್ಯ ಪರಾಕ್ರಮಂ ।
ಲಕ್ಷ್ಮಣಸ್ಯ ಚ ವಿಕ್ರಾಂತ ಮಭವತ್ ಪ್ರೀತಿಮಾನ್ ಕಪಿಃ॥೧೭॥
ತಾಂ ರತ್ನವಸನೋಪೇತಾಂ ಗೋಷ್ಠಾಗಾರಾವತಂಸಕಾಂ ।
ಯಂತ್ರಾಗಾರ ಸ್ತನೀಂ ಋದ್ಧಾಂ ಪ್ರಮದಾಮಿವ ಭೂಷಿತಾಂ ।

ಪ್ರಖ್ಯಾತವಾದ ಈ ಲಂಕೆಯು, ಭೂಮಿಃ-ಪ್ರವೇಶಿಸಲಿಕ್ಕೆ ತಕ್ಕ ಸ್ಥಲವು. ಭವೇತ್-ಆಗಬಹುದು ॥೧೫॥ ವಿವಸ್ವತಃ-ಸೂರ್ಯನಿಗೆ, ತನೂಜಸ್ಯ-ಪುತ್ರನಾದ ಸುಗ್ರೀವನಿಗೂ, ಹರೇಶ್ಚ - ಕಪಿಶೂರನೆನಿಸಿದ, ಕುಶ ಪರ್ವಣಃ- ಕುಶಪರ್ವನೆಂಬುವವನಿಗೂ, ಋಕ್ಷಸ್ಯ - ಋಕ್ಷನೆಂಬುವವನಿಗೂ, ಕೇತುಮಾಲಸ್ಯ - ಕೇತು ಮಾಲನಿಗೂ, ಮಮಚೈವ - ನನಗೊಬ್ಬನಿಗೂ, ಗತಿಃ - ಪ್ರವೇಶಿಸಲಿಕ್ಕೆ ದಾರಿಯು, ಭವೇತ್ - ಆದರೆ ಆಗಬಹುದು ॥ ೧೬ ॥ (ಎಂದು ಆಲೋಚಿಸಿದ ಬಳಿಕ) ಮಹಾಬಾಹುಃ-ನೀಳವಾದ ತೋಳುಳ್ಳ (ಹೆಚ್ಚಿದ ಬಾಹುಬಲವುಳ್ಳ) ಕಪಿಃ-ಆಂಜನೇಯನು, ರಾಘವಸ್ಯ- ಶ್ರೀರಾಮಚಂದ್ರನ, ಪರಾಕ್ರಮಂ-ಬಲಪ್ರಕಾಶವನ್ನೂ, ಲಕ್ಷ್ಮಣಸ್ಯ - ರಾಮಾನುಜನ, ವಿಕ್ರಾಂತಂಚ - ವಿಕ್ರಮವನ್ನೂ, ಸಮೀಕ್ಷ್ಯ-ಚೆನ್ನಾಗಿ ಚಿಂತಿಸಿ, ಪ್ರೀತಿಮಾನ್-(ತನ್ನ ಉದ್ದೇಶವು ನೆರವೇರುವುದೆಂದು) ಸಂತೋಷವುಳ್ಳವನು, ಅಭೂವ - ಆಗುತ್ತಿದ್ದನು ॥ ೧೭ ॥ ತಾಂ-ಲೋಕಪ್ರಸಿದ್ಧವೆನಿಸಿ ಇರುವ, ರತ್ನವಸನೋಪೇತಾಂ - ಶ್ರೇಷ್ಠವಾದ ವಸ್ತ್ರಗಳಿಂದೊಡಗೂಡಿದುದೂ, ಗೋಷ್ಠಾಗಾರಾವತಂಸಕಾಂ - ಕಿವಿಯ ಒಡವೆಯಂತಿರುವ ದನಗಳ ಮಂದೆಯುಳ್ಳದೂ, ಯಂತ್ರಾಗಾರಸ್ತನೀಂ-ಸ್ತನಗಳಂತಿರುವ ಯಂತ್ರಗೃಹಗಳುಳ್ಳುದೂ, ಋದ್ಧಾಂ-ಸರ್ವಸಂಪತ್ಸಮೃದ್ಧಿಯುಳ್ಳುದೂ ಆದಕಾರಣವೇ, ಭೂಷಿತಾಂ - ಸರ್ವಾಲಂಕಾರಶೋಭಿತೆಯಾದ, ಪ್ರಮದಾಮಿವ-ಮದವೇರಿದ ಕಾಮಿನಿಯಂತಿರುವ, ॥ ೧೮ ॥ ದೀಪ್ತೈಃ-ಕಾಂತಿಗಳಿಂದ ಹೊಳೆಯುತ್ತಿರುವುವು, ಭಾಸ್ವರೈಶ್ಚ-

ವಿನೋ ಹಾಗೂ ಹೀಗೂ ನಾನೊಬ್ಬ, ಇಷ್ಟು ಮಂದಿಗೆ ಮಾತ್ರ ಸರ್ವಲೋಕಪ್ರಸಿದ್ಧವಾದ ಈ ನಗರದೊಳಹೊಗಲಿಕ್ಕೆ ದಾರಿಸಿಕ್ಕೀತೋ ಹೇಗೋ ಸಂದೇಹವಾಗಿಯೇ ಇದೆ ॥ ಎಂದು ಹೀಗೆಲ್ಲ ಸ್ವಲ್ಪಹೊತ್ತು ಚಿಂತಿಸುತ್ತಾ, ಮಹಾ ಬಾಹುಬಲವುಳ್ಳ ಸಮೀರನಂದನನು ಹಾಗೆಯೇ ರಘುಪುಂಗವನಾದ ಶ್ರೀರಾಮಚನ್ದ್ರನ ಅನ್ಯಾದೃಶವಾದ ಪರಾಕ್ರಮಪರಿಪಾಟಿಯನ್ನೂ, ಮಹಾನುಭಾವನಾದ ಸೌಮಿತ್ರಿಯ ವಿಕ್ರಮಾತಿಶಯವನ್ನೂ, ಹಾಗಯೇ ಪರಿಭಾವಿಸಿ, ಛೇ, ಈ ಲಂಕೆಯನ್ನು ಗೆಲ್ಲುವುದೆಂಬುದು ಎಷ್ಟರಕೆಲಸ ? ಅವರ ಅಂತಸ್ತಿಗೆ ಇದೊಂದು ದೊಡ್ಡಕೆಲಸವೆ ? ಎಂದು ತನ್ನೊಳಗೆ ತಾನು ಮಹಾಪ್ರೀತಿಸಂಪನ್ನನಾದನು ॥ ೧೭ ॥ ತನ್ನೊಳಗೆ ಬೆಳಗುವ ರತ್ನರಾಶಿಗಳೆಂಬ ದಿವ್ಯವಸ್ತ್ರದಿಂದ ಅಲಂಕೃತಳಾಗಿ, ಗೋಶಾಲೆಗಳೆಂಬ ಕರ್ಣಾಭರಣಗಳನ್ನಳವಟ್ಟು, ಯಂತ್ರಗೃಹಗಳೆಂಬ ಉರೋಜಗಳ ಸೊಬಗಿನಿಂದೊಡಗೂಡಿ, ಸರ್ವಾಲಂಕಾರ ಸಂಶೋಭಿತೆಯಾದ ಸುಂದರಾಂಗಿಯಂತೆಸೆಯುತ್ತ, ಭಾಭಾಸಮಾನಗಳಾದ ವಿಚಿತ್ರಗೃಹಗಳ ಬೆಳಕಿನಿಂದ ಅಂಧಕಾರದ ಗಂಧವನ್ನೇ ಅರಿಯದೆ, ರಾಕ್ಷಸಚಕ್ರವರ್ತಿಯಾದ ರಾವಣನ ವಶವರ್ತಿಯಾಗಿರುವ ಲಂಕೆಯನ್ನೆಲ್ಲ ಹೊರಭಾಗದಲ್ಲಿ ಚೆನ್ನಾಗಿ

ತಾಂ ನಷ್ಟತಿಮಿರಾಂ ದೀಪ್ತೈರ್ಭಾಸ್ವರೈಶ್ಚ ಮಹಾಗೃಹೈಃ ।
ನಗರೀಂ ರಾಕ್ಷಸೇಂದ್ರಸ್ಯ ದದರ್ಶ ಸ ಮಹಾಕಪಿಃ ॥೧೯॥
ಅಥ ಸಾ ಹರಿಶಾರ್ದೂಲಂ ಪ್ರವಿಶಂತಂ ಮಹಾಬಲಂ ।
ನಗರೀ ಸ್ವೇನ ರೂಪೇಣ ದದರ್ಶ ಪವನಾತ್ಮಜಂ ॥೨೦॥
ಸಾ ತಂ ಹರಿವರಂ ದೃಷ್ಟ್ವಾ ಲಂಕಾಂ ರಾವಣಪಾಲಿತಾ ।
ಸ್ವಯಮೇವೋತ್ಥಿತಾ ತತ್ರ ವಿಕೃತಾನನ ದರ್ಶನಾ ॥೨೧॥
ಪುರಸ್ತಾತ್ ಕಪಿವರ್ಯಸ್ಯ ವಾಯುಸೂನೋ ರತಿಷ್ಠತ ।
ಮುಂಚಮಾನಾ ಮಹಾನಾದಮಬ್ರವೀತ್ ಪವನಾತ್ಮಜಂ ॥೨೨॥
ಕಸ್ತ್ವಂ ಕೇನ ಚ ಕಾರ್ಯೇಣ ಇಹ ಪ್ರಾಪ್ತೋ ವನಾಲಯ ॥

ಸಿಸ್ಮಲಗಳಾಗಿ ಪ್ರಕಾಶಿಸುತ್ತಿರುವುವೂ ಆಗಿರತಕ್ಕ, ಮಹಾಗೃಹೈಃ - ರಾಜಭವನಗಳಿಂದ, ನಷ್ಟತಿಮಿರಾಂ - ಕತ್ತಲಿನ ಸಂಬಂಧವೇ ಇಲ್ಲದಿರುವ, ತಾಂ-ಮೇಲೆಹೇಳಿದ, ರಾಕ್ಷಸೇಂದ್ರಸ್ಯ - ರಾಕ್ಷಸ ಸಾರ್ವಭೌಮನ, ನಗರೀಂ - ಲಂಕಾಪುರವನ್ನು, ಸಃ-ಆ, ಮಹಾಕಪಿಃ - ಕಪಿಪ್ರವರನಾದ ಹನುಮಂತನು, ದದರ್ಶ-ನೋಡಿದನು ॥ ೧೯ ॥ ಅಥ - ಅನಂತರದಲ್ಲಿ, ಸಾನಗರೀ - ಆ ಲಂಕಾನಗರಿಯು (ಲಂಕಾಭಿಮಾನಿದೇವತೆಯು) ಮಹಾಬಲಂ-ಬಹು ಬಲಶಾಲಿಯೂ, ಪ್ರವಿಶಂತಂ - ಒಳಹೋಗುತ್ತಿರುವವನೂ ಆಗಿರುವ, ಹರಿಶಾರ್ದೂಲಂ - ಕಪಿಕುಲಲಲಾಮನಾದ, ಪವನಾತ್ಮಜಂ - ವಾಯುನಂದನನೆನಿಸಿದ ಆಂಜನೇಯನನ್ನು, ಸ್ವೇನ-ತನ್ನ ಸ್ವಂತವಾದ, ರೂಪೇಣ - ಘೋರವಾದ ಸ್ತ್ರೀರೂಪದಿಂದ, ದದರ್ಶ-ನೋಡಿದಳು ॥ ೨೦ ॥ ರಾವಣಪಾಲಿತಾ - ರಾವಣನಿಂದ ಪಾಲಿಸಲ್ಪಡುತಲಿರುವ, ಸಾ - ಆ ಲಂಕೆಯು, ಸ್ವಯಮೇವ- ತಾನೇ, ಉತ್ಥಿತಾ - ಎದ್ದುನಿಂತವಳಾಗಿ, ತಂ - ಆ, ಹರಿವರಂ-ಕಪಿಪ್ರವರನಾದ ಆಂಜನೇಯನನ್ನು, ದೃಷ್ಟ್ವಾ-ನೋಡಿ, ವಿಕೃತ - ವಿಕಾರವಾಗಿ ಮಾಡಲ್ಪಟ್ಟ, ಆನನ - ಮುಖವನ್ನು, ದರ್ಶನಾ - ತೋರಿಸುತ್ತಿರುವವಳಾಗಿ ॥ ೨೧ ॥ ಕಪಿವರ್ಯಸ್ಯ - ವಾನರ ವರನಾದ, ವಾಯುಸೂನೋಃ-ಮಾರುತಪುತ್ರನ, ಪುರಸ್ತಾತ್

ನೋಡುತ್ತಾ ಹಾಗೆಯೇ ಒಳಹೋಗಲುದ್ಯುಕ್ತನಾಗುತ್ತಿದ್ದನು॥೧೮-೧೯॥ ಬಳಿಕ ಏನಾಯಿತು ಎಂದರೆ-ಪ್ಲವಂಗ ಪುಂಗವನಾಗಿ ಮಹಾಬಲಶಾಲಿಯಾದ ಪ್ರಾಭಂಜನಿಯು ಬೆಕ್ಕಿನಮರಿಯಂತೆ ಸೂಕ್ಷ್ಮರೂಪವನ್ನು ತಾಳ್ದು ಇರುಳು ಹೊತ್ತಿನಲ್ಲಿ ಮೆಲ್ಲಗೆ ಪುರದೊಳಕ್ಕೆ ಪ್ರವೇಶಿಸುತ್ತಿರಲು, ಆ ಲಂಕಾನಗರಾಭಿಮಾನಿದೇವತೆಯು ತನ್ನ ನಿಜರೂಪದಿಂದ ಪವನನಂದನನ್ನು ಕಂಡೇಬಿಟ್ಟಳು ॥೨೦॥ ಆ ಪುಣ್ಯಾತ್ಮಳು ಲೋಕಕಂಟಕನಾದ ರಾವಣನಿಂದ ರಕ್ಷಿಸಲ್ಪಟ್ಟವಳಲ್ಲವೆ? ಅಂಥವಳು ಕಂಡಬಳಿಕ ಸುಮ್ಮನಿರುವುದುಂಟೆ? ಹರಿವರನನ್ನು ನೋಡಿದಕೂಡಲೇ ವಿಕಾರವಾದ ಮೋರೆಯಿಂದ ಬಹು ಭಯಂಕರಳೆನಿಸಿ ತಾನೇ ಎದ್ದುಬಂದಳು ॥೨೧॥ ಕಪಿವರನೆನಿಸಿದ ಸಮೀರಸೂನುವಿನ ಇದಿರಿಗೆ ಉದ್ದಕ್ಕೆ ನಿಂತಳು. ಲೋಕವೆಲ್ಲ ಅಲ್ಲೋಲ ಕಲ್ಲೋಲವಾಗುವಂತೆ ಸಿಂಹಗರ್ಜನೆಯನ್ನು ಮಾಡಿದಳು, ರಕ್ಕಸರಿಗೆ ಇದು ಸ್ವಾಭಾವಿಕವಾಗಿದ್ದರೂ ಲೋಕಕ್ಕೆ ಮಾತ್ರ ಭಯಂಕರವಾಗಿದ್ದಿತು, ಹಾಗೆ ಗರ್ಜಿಸಿದ ಕೂಡಲೇ ಪ್ರಭಂಜನಾತ್ಮಜನನ್ನು ಕುರಿತು ಇಂತೆಂದಳು—॥೨೨॥ ಕಾಡನ್ನು ಮನೆಮಾಡಿಕೊಂಡಿರುವ ಎಲೈ ಮರ್ಕಟವೇ ನೀನಾರು? ಅವಕೆಲಸಕ್ಕಾಗಿ ಇಲ್ಲಿಗೆ ಬಂದೆ?

ಕಥಯಸ್ವೇಹ ಯತ್ತತ್ತ್ವಂ ಯಾವತ್ಪ್ರಾಣಾ ಧರಂತಿ ತೇ ॥೨೩॥
ನ ಶಕ್ಯಂ ಖಲ್ವಿಯಂ ಲಂಕಾ ಪ್ರವೇಷ್ಟುಂ ವಾನರ ತ್ವಯಾ ।
ರಕ್ಷಿತಾ ರಾವಣಬಲೈ ರಭಿಗುಪ್ತಾ ಸಮಂತತಃ ॥೨೪॥
ಅಥ ತಾ ಮಬ್ರವೀ ದ್ವೀರೋ ಹನೂಮಾ ನಗ್ರತ ಸ್ಸ್ಥಿತಾಂ ।
ಕಥಯಿಷ್ಯಾಮಿ ತೇ ತತ್ತ್ವಂ ಯನ್ಮಾಂ ತ್ವಂ ಪರಿಪೃಚ್ಛಸಿ ॥೨೫॥
ಕಾ ತ್ವಂ ವಿರೂಪನಯನಾ ಪುರದ್ವಾರೇಽವತಿಷ್ಠಸಿ ।

---

ಎದುರಿಗೆ, ಅತಿಷ್ಠತ - ನಿಂತಳು, (ಕಿಂಚಿ-ಮತ್ತು) ಮಹಾನಾದಂ - ಉಚ್ಚಸ್ವರದ ಗರ್ಜನೆಯನ್ನು, ಮುಂಚಮಾನಾ - ಅಬ್ಬರಿಸುತಲಿರುವವಳಾಗಿ, ಪವನಾತ್ಮಜಂ - ವಾಯುನಂದನನನ್ನು ಕುರಿತು, ಅಬ್ರವೀತ್-ಮಾತನಾಡಿದಳು ॥ ೨೨ ॥ ವನಾಲಯ-ಕಾಡುಮನೆಯುವನಾದ ಎಲೈ ಕಪಿಯೇ ! ತ್ವಂ - ನೀನು ಕಃ-ಯಾರು ? ಕೇನಚ-ಮತ್ತೆಯಾವ, ಕಾರ್ಯೇಣ-ಕೆಲಸದ ನಿಮಿತ್ತದಿಂದ, ಇಹ-ಈ ಸ್ಥಳದಲ್ಲಿ, ಪ್ರಾಪ್ತಃ-ಬಂದವನಾಗಿದ್ದೀಯೆ ? ತೇ-ನಿನ್ನ, ಪ್ರಾಣಾಃ-ಪ್ರಾಣಗಳು, ಯಾವತ್ - ಎಷ್ಟುಕಾಲದವರೆಗೂ, ಧರಂತಿ-ಉಳಿದಿರುತವೆಯೋ, ಇಹ-ಇಲ್ಲಿ, (ತಾವತ್ - ಅಷ್ಟರೊಳಗೆ) ಯತ್ - ಯಾವುದು, ತತ್ತ್ವಂ-ನಿಜವಾದ ಸಂಗತಿಯೋ, (ತತ್-ಅದನ್ನು) ಕಥಯಸ್ವ-ಹೇಳು ॥ ೨೩ ॥ ವಾನರ-ಎಲಕಪಿಯೇ ! ರಾವಣಬಲೈಃ-ರಾವಣನ ಸೈನಿಕರಿಂದ, ಸಮಂತತಃ - ಸುತ್ತಲೂ, ಅಭಿಗುಪ್ತಾ - ಚೆನ್ನಾಗಿ ಕಾಯಲ್ಪಡುತ್ತಿರುವುದಾದ, (ಬಳಸಲ್ಪಟ್ಟಿರುವುದಾದ) ಕಾರಣವೇ, ಸಂರಕ್ಷಿತಾ - ಸಂರಕ್ಷಿಸಲ್ಪಡುತ್ತಿರುವ, ಇಯಂ-ಈ, ಲಂಕಾ-ಲಂಕಾನಗರವು, ತ್ವಯಾ-ನಿನ್ನಿಂದ, ಪ್ರವೇಷ್ಟುಂ-ಪ್ರವೇಶಿಸಲಿಕ್ಕೆ, ನಶಕ್ಯಂಖಲು-ಸಾಧ್ಯವಲ್ಲವು ॥ ೨೪ ॥ ಅಥ-ಹಾಗೆ ಅವಳು ಹೇಳಿದಮೇಲೆ, ವೀರಃ - ಪರಾಕ್ರಮಶಾಲಿಯಾದ, ಹನುಮಾನ್ - ಆಂಜನೇಯನು, ಅಗ್ರತಃ-ಎದುರಿಗೆ, ಸ್ಥಿತಾಂ - ನಿಂತುಇರುವ, ತಾಂ-ಆ ರಕ್ಕಸಿಯನ್ನು ಕುರಿತು, ಯತ್ - ಯಾವಕಾರಣದಿಂದ, ಮಾಂ-ನನ್ನನ್ನು, ತ್ವಂ-ನೀನು, ಪೃಚಸಿ - ಕೇಳುತಲಿದೀಯೆಯೋ, (ತತ್-ಆ ಕಾರಣದಿಂದಲೇ) ಅಹಂ - ನಾನು, ತತ್ತ್ವಂ - ನಿಜವನ್ನು, ತೇ - ನಿನಗೋಸ್ಕರ, ಕಥಯಿಷ್ಯಾಮಿ - ಹೇಳುವೆನು ॥ ೨೫ ॥ ವಿರೂಪನಯನಾ - ವಿಕಾರಾಕಾರದ ಕಣ್ಣುಳ್ಳವಳಾಗಿರುವ, ತ್ವಂ- ನೀನು, ಕಾ - ಯಾರು ? ಕಿಮರ್ಥಂ

---

ನೀನು ಜೀವಬೆರಸೆ ಉಳಿದಿರುವುದರೊಳಗಾಗಿ ದಿಟವನ್ನು ಹೇಳು ॥ ೨೩ ॥ ಎಲ ಕೀಳ ಕಪೀ ! ರಾಜಾಧಿರಾಜನಾದ ರಾವಣನ ಕಿಂಕರರು ಈ ನಗರದೊಳೆಲ್ಲೆಲ್ಲಿಯೂ ಕಾವಲಾಗಿ ನಿಂತು ಕಾಯುತ್ತಿರುವಲ್ಲಿ ಇದರೊಳಹೊಗಲು ಕೋಡಗನಾದ ನಿನಗೆ ಕೈಲಾಗುವುದೆ? ॥೨೪॥ ಎನಲು, ವೀರಮಾರುತಿಯೇನು ಕೀಳಮನುಜನೆ? ಮಹಾಶೂರನಲ್ಲವೆ? ಆ ಅದುತಭೂತವನ್ನು ನೋಡಿ ತುಸವಾದರೂ ಹೆದರಲಿಲ್ಲ, ತನ್ನ ಎದುರಿಗೆ ನಿಂತು ಅವಳು ಹೇಳಿದುದನ್ನೆಲ್ಲ ಕೇಳಿ ಅವಳನ್ನು ಕುರಿತು ಎಲೆ ! ನೀನಾರೆಂಬುದನ್ನು ನಾನು ಅರಿಯೆನು, ಆದರೂ ನೀನು ನನ್ನನ್ನು ಕೇಳುತಲಿದ್ದೀಯೆ, ನಾನಾರೋ ? ಏತಕ್ಕೆ ಇಲ್ಲಿ ಬಂದಿರುವೆನೋ ? ಆ ಸಂಗತಿಯನ್ನೆಲ್ಲ ದಿಟವಾಗಿಯೂ ನಿನಗೆ ಹೇಳುತ್ತೇನೆ ಈ ವಿಷಯದಲ್ಲಿ ನಿನಗೆ ಸಂಶಯಬೇಡ॥ ಅದಂತಿರಲಿ, ವಿಕಾರವಾದ ರೂಪವನ್ನಂತು ವಕ್ರವಾದ ಕಣ್ಣುಗಳನ್ನುಳವಟ್ಟು, ಈ ಊರಿನ ಹೊರಬಾಗಿಲಿನಲ್ಲಿ ಹೀಗೆ ನಿಂತಿರುವ ನೀನು ಯಾರು ? ಇಷ್ಟು ಭಯಂಕರಾಕಾರದಿಂದ ನನ್ನನ್ನು ನೀನು ತಡೆಯಲು ಕಾರಣವೇನು ? ನನ್ನನ್ನು ಗದರಿಸಲು ನಿಮಿತ್ತವೇನು ?

ಕಿಮರ್ಥಂ ಚಾಪಿ ಮಾಂ ರುದ್ಧ್ವಾ ನಿರ್ಭರ್ತ್ಸಯಸಿ ದಾರುಣಾ ॥೨೬॥
ಹನುಮದ್ವಚನಂ ಶ್ರುತ್ವಾ ಲಂಕಾ ಸಾ ಕಾಮರೂಪಿಣೀ ।
ಉವಾಚ ವಚನಂ ಕ್ರುದ್ಧಾ ಪರುಷಂ ಪವನಾತ್ಮಜಂ ॥೨೭॥
ಅಹಂ ರಾಕ್ಷಸರಾಜಸ್ಯ ರಾವಣಸ್ಯ ಮಹಾತ್ಮನಃ ।
ಆಜ್ಞಾ ಪ್ರತೀಕ್ಷಾ ದುರ್ಧರ್ಷಾ ರಕ್ಷಾಮಿ ನಗರೀ ಮಿಮಾಂ ॥೨೮॥
ನ ಶಕ್ಯಾ ಮಾ ಮವಜ್ಞಾಯ ಪ್ರವೇಷ್ಟುಂ ನಗರೀ ತ್ವಯಾ ।
ಅದ್ಯ ಪ್ರಾಣೈಃ ಪರಿತ್ಯಕ್ತಃ ಸ್ವಪ್ಸ್ಯಸೇ ನಿಹತೋ ಮಯಾ ॥೨೯॥
ಅಹಂ ಹಿ ನಗರೀ ಲಂಕಾ ಸ್ವಯಮೇವ ಪ್ಲವಂಗಮ ।

---

ಪ್ರಾ.ಯಾವನಿಮಿತ್ತದಿಂದ, ಮಾಂ - ನನ್ನನ್ನು, ರುಧ್ವಾ-ತಡೆದು, ಪುರದ್ವಾರೆ - ಊರಬಾಗಿಲಿನಲ್ಲಿ, ಅವತಿಷ್ಠಸಿ-ನಿಂತುಇದ್ದೀಯೆ, ದಾರುಣಾ - ಬಹುಕ್ರೂರಳಾದವಳಾಗಿ, ನಿರ್ಭರ್ತ್ಸಯಸಿ - ಹೆದರಿಸುತಲಿದ್ದೀಯೆ (ತತ್ - ಆ ನಿಮಿತ್ತವನ್ನು, ಕಥಯ - ಹೇಳು, ಇತಿ-ಹೀಗೆಂದು, ಅಬ್ರವೀತ್ - ಹೇಳಿದನು) ॥ ೨೬ ॥ ಕಾಮರೂಪಿಣೀ - ಇಷ್ಟಾನುಸಾರವಾದ ರೂಪವನ್ನು ತಾಳುವ ಶಕ್ತಿಯುಳ್ಳ, ಸಾ - ಆ ಲಂಕಾಧಿ ದೇವತೆಯಾದ ರಾಕ್ಷಸಿಯು, ಹನೂಮದ್ವಚನಂ-ಆಂಜನೇಯನ ಮಾತನ್ನು, ಶ್ರುತ್ವಾ - ಕೇಳಿ, ಕ್ರುದ್ಧಾ-ಕೋಪಿಸಿಕೊಂಡವಳಾಗಿ, ಪವನಾತ್ಮಜಂ- ವಾಯುಪುತ್ರನನ್ನು ಕುರಿತು, ಪುರುಷಂ-ಬಹುಕಠಿನವಾದ, ವಚನಂ-ಮಾತನ್ನು, ಉವಾಚ-ಹೇಳತೊಡಗಿದಳು ॥ ೨೭ ॥

ರಾಕ್ಷಸರಾಜಸ್ಯ - ರಕ್ಕಸರಿಗೆ ಅರಸಾಗಿರುವ, ಮಹಾತ್ಮನಃ - ಹೆಚ್ಚಿದ ಮಹಿಮೆಯುಳ್ಳ, ರಾವಣಸ್ಯ - ರಾವಣಾಸುರನ, ಆಜ್ಞಾಪ್ರತೀಕ್ಷಾ - ಆಜ್ಞೆಯನ್ನು ಅನುಸರಿಸುತ್ತಿರುವವಳು, ದುರ್ಧರ್ಷಾ - ಪರರಿಂದ ಜಯಿಸಲಶಕ್ಯಳೂ ಆಗಿರುವ, ಇಮಾಂ - ಈ, ನಗರೀಂ-ಪಟ್ಟಣವನ್ನು, ರಕ್ಷಾಮಿ-ಕಾಪಾಡುತಲಿದೇನೆ ॥೨೮॥ ಮಾಂ - ಇಂತಹನನ್ನನ್ನು, ಅವಜ್ಞಾಯ - ಅಸಡ್ಡೆಮಾಡಿ, ನಗರೀ - ಈ ಲಂಕಾನಗರವು, ತ್ವಯಾ - ನಿನ್ನಿಂದ, ಪ್ರವೇಷ್ಟುಂ - ಒಳಹೊಗಲಿಕ್ಕೆ, ನಶಕ್ಯಾ - ಸಾಧ್ಯವಲ್ಲ, ಅದ್ಯ - ಈಗಲೇ, ಮಯಾ - ನನ್ನಿಂದ, ನಿಹತಃ - ಹೊಡೆಯಲ್ಪಟ್ಟವನಾಗಿ, ಪ್ರಾಣೈಃ - ಉಸಿರುಗಳಿಂದ, ಪರಿತ್ಯಕ್ತಃ - ಬಿಡಲ್ಪಟ್ಟವನಾದ ಕಾರಣವೇ, ಸ್ವಪ್ಸ್ಯಸೇ - ದೀರ್ಘನಿದ್ರೆಯನ್ನು ಹೊಂದುತ್ತೀಯೆ ॥೨೯॥ ಪ್ಲವಂಗಮ

---

ಇದನ್ನು ಮೊದಲು ನನಗೆ ಅರುಹು ॥೨೬॥ ಎಂದ ಹನುಮನ ವಚನವನ್ನಾಲಿಸಿದ ಕೂಡಲೇ ಕಾಮರೂಪಳಾದ ಲಂಕೆಯು ಬಲುಸಿಟ್ಟುಗೊಂಡವಳಾಗಿ ಪವನನಂದನನ್ನು ಕುರಿತು ಬಹು ಕಠಿನವಾಗಿ ಮಾತನಾಡ ತೊಡಗಿದಳು ॥ ೨೭ ॥ ಎಲವೋ ಹುಲ್ಲುಪೀ ! ನಾನಾರು ಎಂಬೆಯೋ ? ಲೋಕದ ಹೆಮ್ಮೆಯನ್ನೆಲ್ಲ ಅಣಗಿಸುವ ಮಹಿಮೆಯುಳ್ಳವನೆನಿಸಿರುವ ರಾಕ್ಷಸ ಸಾರ್ವಭೌಮನಾದ. ರಾವಣನಿಗೆ ನಾನು ಕಿಂಕರಿ, ಆತನ ಅಪ್ಪಣೆಗೆ ಹಸಾದವೆಂದು ಎದುರುನೋಡುತಲಿರುವವಳು, ಎಂಥವನಾದರೂ ನನ್ನ ಶೌರ್ಯವನ್ನು ಮೀರಿಹೋಗಲಾರ ಇಂತಹ ನಾನು ಈ ನಗರಿಯನ್ನು ಕಾಯುತಲಿರುವೆನು ॥೨೮॥ ಈ ನನ್ನನ್ನು ಜಯಿಸದೆ ನೀನೀನಗರದೊಳಕ್ಕೆ ಎಂದಿಗೂ ಪ್ರವೇಶಿಸಲಾರೆ, ನಿನ್ನನ್ನು ಈಗಲೆ ಸದೆ ಬಡಿಯುವೆನು, ನಿಮಿಷ ಮಾತ್ರದಲ್ಲಿ ಪ್ರಾಣಗಳನ್ನು ತೊರೆದು ನೆಲದ ಮೇಲೆ ಉರುಳುತ್ತೀಯೆ ॥೨೯॥ ಕಾಡಿನೊಳಗೆ ಮರದಿಂದ ಮರಕ್ಕೆ ಕುಪ್ಪಳಿಸುತ ಹಾರಾಡುವ ಎಲ ಹಸುಳೆ ಕಪಿಯೇ !

ಸರ್ವತಃ ಪರಿರಕ್ಷಾಮಿ ಹ್ಯೇತತ್ತೇ ಕಥಿತಂ ಮಯಾ ॥೩೦॥
ಲಂಕಾಯಾ ವಚನಂ ಶ್ರುತ್ವಾ ಹನುಮಾ ನ್ಮಾರುತಾತ್ಮಜಃ ।
ಯತ್ನವಾನ್ ಸ ಹರಿಶ್ರೇಷ್ಠಃ ಸ್ಥಿತ ಶ್ಶೈಲ ಇವಾಪರಃ ॥೩೧॥
ಸ ತಾಂ ಸ್ತ್ರೀರೂಪವಿಕೃತಾಂ ದೃಷ್ಟ್ವಾ ವಾನರಪುಂಗವಃ ।
ಅಬಭಾಷೇಽಥ ಮೇಧಾವೀ ಸತ್ವವಾನ್ ಪ್ಲವಗರ್ಷಭಃ ॥೩೨॥
ದ್ರಷ್ಟ್ಯಾಮಿ ನಗರೀಂ ಲಂಕಾಂ ಸಾಟ್ಟ ಪ್ರಾಕಾರ ತೋರಣಾಂ ।

ಎಲೈ ವಾನರನೇ, ಅಹಂಹಿ - ನಾನಾದರೋ, ನಗರೀ - ಈ ನಗರಾಧಿ ದೇವತೆಯಾದ, ಲಂಕಾ - ಲಂಕಾನಾಮವುಳ್ಳವಳು, ಸ್ವಯಮೇವ - ಈ ನಾನೇ, ಸರ್ವತಃ - ಸುತ್ತಲೂ, ಪರಿರಕ್ಷಾಮಿ - ಸಂರಕ್ಷಿ ಸುತಲಿದೇನೆ, ತೆ - ನಿನಗೋಸ್ಕರ, ಏತತ್ - ಈ ವೃತ್ತಾಂತವು, ಮಯಾ - ನನ್ನಿಂದ, ಕಥಿತಂ - ಹೇಳಲ್ಪಟ್ಟಿತು, ॥೩೦॥ ಮಾರುತಾತ್ಮಜಃ - ವಾಯುಕುಮಾರನಾದ, ಹರಿಶ್ರೇಷ್ಠಃ - ಕಪಿಪ್ರವರನೆನಿಸಿರುವ ಸಃ - ಆ, ಹನುಮಾನ್ - ಆಂಜನೇಯನು, ಲಂಕಾಯಾಃ - ಲಂಕಾಧಿದೇವತೆಯ, ವಚನಂ - ಮಾತನ್ನು ಶ್ರುತ್ವಾ - ಕೇಳಿ, ಯತ್ನವಾನ್ - ಪ್ರಯತ್ನವುಳ್ಳವನಾಗಿ, ಅಪರಃ - ಎರಡನೆಯದಾದ, ಶೈಲಇವ - ದೊಡ್ಡಬೆಟ್ಟದಂತೆ, ಸ್ಥಿತಃ - ಎದುರಿಗೆ ನಿಂತನು ॥೩೧॥ ಅಥ - ಅನಂತರದಲ್ಲಿ, ವಾನರಪುಂಗವಃ - ವಾನರ ಶ್ರೇಷ್ಠನೆನಿಸಿದ, ಸತ್ವವಾನ್ - ಮಹಾಬಲಸಂಪನ್ನನೆನಿಸಿರುವ, ಪ್ಲವಗರ್ಷಭಃ - ದಾಟುವಶಕ್ತಿಯುಳ್ಳವರೊಳಗೆ ಅಗ್ರಗಣ್ಯನೆನಿಸಿಕೊಂಡಿರತಕ್ಕ, ಮೇಧಾವೀ - ಬಹುಪ್ರಜ್ಞಾಶಾಲಿಯಾಗಿದ, ಸಃ - ಆ ಆಂಜನೇಯನು, ಸ್ತ್ರೀರೂಪ - ಹೆಂಗಸಿನ ಆಕಾರದಿಂದ, ವಿಕೃತಾಂ - ವಿಕಾರವಾಗಿ ಕಾಣಬರುತಲಿರುವ, ತಾಂ - ಆ ಲಂಕೆಯೆಂಬ ರಾಕ್ಷಸಿಯನ್ನು, ದೃಷ್ಟ್ವಾ - ನೋಡಿ, ಅಬಭಾಷೆ - ಮಾತನಾಡತೊಡಗಿದನು ॥೩೨॥ (ಅಯಿ - ಎಲೌ ಸುಂದರಿಯೇ!) ಸಾಟ್ಟಪ್ರಾಕಾರ ತೋರಣಾಂ - ಪೌಳಿ, ಉಪ್ಪರಿಗೆ, ಹೊರಬಾಗಿಲು ಇವುಗಳಿಂದ ಸಹಿತವಾಗಿರುವ, ಲಂಕಾಂ - ಲಂಕೆಯೆಂಬ, ನಗರೀಂ - ಈ ಪಟ್ಟಣವನ್ನು, ದ್ರಷ್ಟ್ಯಾಮಿ- ನೋಡಲಾಶೆಯುಳ್ಳವನಾಗಿರುವೆನು, ಇತ್ಯರ್ಥಂ - ಈ ನಿಮಿತ್ತದಿಂದಲೇ, ಇಹ - ಈ ಸ್ಥಲದಲ್ಲಿ, ಸಂಪ್ರಾಪ್ತಃ - ಬಂದವನಾಗಿದೇನೆ, ಮೆ - ನನಗೆ, ಪರಂ - ಬಹಳವಾದ, ಕೌತೂಹಲಂ - ಕುತೂಹಲವಿದೆ,

ಈನಗರಿಗೆ ಅಧಿದೇವತೆಯಾದನನ್ನನ್ನು ಹೆಸರಿನಲ್ಲಿ ಲಂಕೆಯೆಂದು ಹೇಳುತ್ತಾರೆ. ಈನಾನೇ ಆ ಲಂಕೆ.ನಾನೀ ನಗರಿಯನ್ನು ಎಲ್ಲ ಕಡೆಗಳಲ್ಲಿಯೂ ತುಸವಾದರೂ ತೊಂದರೆಯಿಲ್ಲದಂತೆ ಸಂರಕ್ಷಿಸುತಲಿದೇನೆ. ಇಂತೀ ನನ್ನ ತತ್ತ್ವವನ್ನು ನಿನಗೆ ಅರುಹಿರುವೆನು ಎನಲು॥೩೦॥ ಪ್ಲವಂಗೇಂದ್ರನಾದ ಮರುನ್ನಂದನನು ಆರಕ್ಕಸಿಯ ನುಡಿಯನ್ನು ಕೇಳಿ, ಅವಳನ್ನಿರಿಯಲು ತಕ್ಕಸನ್ನಾಹವನ್ನು ಸವರಿಸಿಕೊಳ್ಳುತ, ಎರಡನೆಯ ಬೆಟ್ಟದಂತೆ ಬೆಳೆದು ಕದಲದೆ ಗಾಂಭೀರ್ಯದಿಂದ ಕೋರೆಯಾಗಿ ನಿಂತನು॥೩೧॥ ಮಹಾಸತ್ವಶಾಲಿಯೆನಿಸಿರುವ ಪ್ಲವಂಗಪುಂಗವನಾದ ಮಾರುತಿಯು ಮಹತ್ತರವಾದ ಮೇಧಾಸಂಪನ್ನನಲ್ಲವೆ ? ಮಹಾವಿಕಾರವಾಗಿ ಕಾಣಬರುವ ಹೆಂಗಸಿನ ರೂಪವನ್ನು ತಾಳಿ, ತನ್ನೆದುರಿಗೆ ನಿಂತಿರುವ ಆ ರಕ್ಕಸಿಯನ್ನು ಕುರಿತು ಇಂತೆಂದನು ॥೩೨॥ ಎಲೌ ಲಂಕೇ! ವಿಚಿತ್ರವಾದ ಪೌಳಿಗಳಿಂದಲೂ, ಉಪ್ಪರಿಗೆಗಳಿಂದಲೂ, ತೋರಣಗಳಿಂದಲೂ ಅಲಂಕಾರವಾಗಿರುವ ಈ ನಗರಿಯನ್ನು ನೋಡಬೇಕೆಂದು ಬಂದಿರುವೆನು, ಇದನ್ನು ನೋಡುವ ವಿಷಯದಲ್ಲಿ ನನಗೆ ಹೇರಳವಾದ ಬಯಕೆಯುಂಟು.

ಇತ್ಯರ್ಥ ಮಿಹ ಸಂಪ್ರಾಪ್ತಃ ಪರಂ ಕೌತೂಹಲಂ ಹಿ ಮೆ ॥೩೩॥
ವನಾ ನ್ಯುಪವನಾನೀಹ ಲಂಕಾಯಾಃ ಕಾನನಾನಿ ಚ ।
ಸರ್ವತೋ ಗೃಹಮುಖ್ಯಾನಿ ದ್ರಷ್ಟು ಮಾಗಮನಂ ಹಿಮೆ ॥೩೪॥
ತಸ್ಯ ತದ್ವಚನಂ ಶ್ರುತ್ವಾ ಲಂಕಾ ಸಾ ಕಾಮರೂಪಿಣೀ ।
ಭೂಯ ಏವ ಪುನರ್ವಾಕ್ಯಂ ಬಭಾಷೆ ಪರುಷಾಕ್ಷರಂ ॥೩೫॥
ಮಾ ಮನಿರ್ಜಿತ್ಯ ದುರ್ಬುದ್ಧೇ ರಾಕ್ಷಸೇಶ್ವರ ಪಾಲಿತಾಂ ।
ನ ಶಕ್ಯ ಮದ್ಯ ತೇ ದ್ರಷ್ಟುಂ ಪುರೀಯಂ ವಾನರಾಧಮ ॥೩೬॥
ತತ ಸ್ಸ ಕಪಿಶಾರ್ದೂಲ ಸ್ತಾ ಮುವಾಚ ನಿಶಾಚರೀಂ ।

ಹಿ - ನಿಶ್ಚಯ ॥ ೩೩ ॥ ಇಹ ಈಸ್ಥಲದಲ್ಲಿ, ಲಂಕಾಯಾಃ - ಲಂಕೆಗೆಸೇರಿದ, ವನಾನಿ - ತೋಟಗಳನ್ನೂ, ಉಪವನಾನಿ - ಉದ್ಯಾನಗಳನ್ನೂ, ಕಾನನಾನಿಚ - ದೊಡ್ಡ ಅರಣ್ಯಗಳನ್ನೂ, ಸರ್ವತಃ - ಎಲ್ಲ ಕಡೆಗಳಲ್ಲಿರುವ, ಗೃಹಮುಖ್ಯಾನಿ - ಉತ್ತಮವಾದ ರಾಜಭವನಗಳನ್ನೂ, ದ್ರಷ್ಟುಂ - ನೋಡಲಿಕ್ಕಾಗಿಯೇ, ಮೆ - ನನ್ನ, ಆಗಮನಂ - ಬರುವಿಕೆ, ಹಿ - ನಿಶ್ಚಯ ॥೩೪॥

(ಅಥ-ಆ ಮೇಲೆ)! ಕಾಮರೂಪಿಣೀ - ಇಷ್ಟಾನುಸಾರರೂಪಗಳನ್ನು ತಾಳತಕ್ಕ, ಸಾ - ಆಲಂಕಾಧಿ ದೇವತೆಯು, ತಸ್ಯ - ಆ ಆಂಜನೆಯನ, ತತ್ - ಆ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಭೂಯ ಏವ - ಬಹಳವಾಗಿಯೇ, ಪುರುಷಾಕ್ಷರಂ - ಕ್ರೂರವಾದ ಅಕ್ಷರಗಳನ್ನೊಳಗೊಂಡಿರುವ, ವಾಕ್ಯಂ - ಮಾತನ್ನು, ಪುನಃ - ತಿರುಗಿ, ಬಭಾಷೆ - ಹೇಳತೊಡಗಿದಳು, ॥೩೫॥ ದುರ್ಬುದ್ಧೇ - ಎಲವೋ ಬುದ್ಧಿಹೀನನಾಗಿರುವ, ವಾನರಾಧಮ - ಕೀಳಕಪಿಯೇ! ರಾಕ್ಷಸೇಶ್ವರಪಾಲಿತಾಂ - ರಾಕ್ಷಸಸಾರ್ವಭೌಮನಿಂದ ಸಂರಕ್ಷಿಸಲ್ಪಡುತಲಿರುವ, ಮಾಂ - ನನ್ನನ್ನು, ಅನಿರ್ಜಿತ್ಯ - ಗೆಲ್ಲದೆಯೇ, ಇಯಂ-ಈ, ಪುರೀ ಲಂಕೆಯು, ಅದ್ಯ- ಈಗ, ತೆ-ನಿನಗೆ, ದ್ರಷ್ಟುಂ - ನೋಡಲಿಕ್ಕೂ' ನಶಕ್ಯಂ - ಸಾಧ್ಯವೇಅಲ್ಲ ॥ ೩೬ ॥ ತತಃ-ಅವಳು ಹಾಗೆ ಹೇಳಿದಮೇಲೆ, ಕಪಿಶಾರ್ದೂಲಃ - ವಾನರೋತ್ತಮನಾದ, ಸಃ-ಆ ಆಂಜನೇಯನು, ಭದ್ರೇ - ಓ ಸುಮಂಗಲೀ! ಇಮಾಂ-ಈ, ಪುರೀಂ - ಪಟ್ಟಣವನ್ನು, ದೃಷ್ಟ್ವಾ-ನೋಡಿಕೊಂಡು, ಪುನಃ-ತಿರುಗಿ, ಯಥಾಗತಂ-ಬಂದಹಾಗೆಯೇ, ಯಾಸ್ಯೆ - ಹೋಗುವವನಾಗಿದೇನೆ, ಇತಿ-ಹೀಗೆಂದು, ತಾಂ-ಆ,

ಇದೇ ನನ್ನ ಆಗಮನಕ್ಕೆ ನಿಮಿತ್ತ ॥೩೩॥ ಈ ಲಂಕೆಗೆ ಸೇರಿದ ಕಾಡುಗಳನ್ನೂ ಹೂದೋಟಗಳನ್ನೂ, ವಿಹಾರವನಗಳನ್ನೂ, ಈ ನಗರದೊಳಗಿರುವ ಶ್ರೇಷ್ಠವಾದ ಮಂದಿರಗಳನ್ನೂ ನೋಡಬೇಕೆಂಬುದೇ ನನ್ನ ಆಗಮನಕ್ಕೆ ಪ್ರಯೋಜನ ॥೩೪॥ ಹೀಗೆಂದ ಮಾರುತಿಯಮಾತನ್ನು ಕೇಳಿದ ಕಾಮರೂಪಿಯಾದ ಲಂಕೆಯು ಗಟ್ಟಿಯಾಗಿಗದರಿಸುತ ಆತನನ್ನು ಕುರಿತು ಪುನಃ ಇಂತೆಂದಳು ॥೩೫॥ ಎಲವೋ ಬುದ್ಧಿಹೀನಾ ! ವಾನರಾಧಮಾ ! ಮೊದಲೇ ನಾನೆಂದಮಾತು ನಿನ್ನ ಕಿವಿಯಲ್ಲಿ ಹೊಗಲಿಲ್ಲವೊ ? ಪುನಃ ಹೇಳುತ್ತೇನೆಕೇಳು ; ಈಗ ಈ ನನ್ನನ್ನು ಗೆಲ್ಲದೆ ಈ ಲಂಕೆಯೊಳಕ್ಕೆ ನೀನು ಹೊಗಲಾರೆ, ಮತ್ತು ಇದನ್ನು ನೋಡಲೂ ಆರೆ. ಖಂಡಿತವಾಗಿಯೂ ಶಕ್ಯವಲ್ಲ ॥೩೬॥ ಎನಲು ಬಳಿಕ ಕಪಿವರನಾದ ಮಾರುತಿಯು ಅವಳು ಅಷ್ಟು ಕಠಿನವಾಗಿ ನುಡಿದರೂ ಸಾಮೋಪಾಯವನ್ನು ಪ್ರಯೋಗಿಸಿ ನೋಡೋಣ ಎಂದು, ಆನಿಶಾಚರಿಯನ್ನು ಕುರಿತು ಪುನಃ ತಾನೂ ಇಂತೆಂದನು, ಎಲೌ ಮಂಗಳ

ದೃಷ್ಟ್ವಾ ಪುರೀ ಮಿಮಾಂ ಭದ್ರೇ ಪುನ ರ್ಯಾಸ್ಯೇ ಯಥಾಗತಂ ॥೩೭॥
ತತಃ ಕೃತ್ವಾ ಮಹಾನಾದಂ ಸಾ ವೈ ಲಂಕಾ ಭಯಾವಹಂ ।
ತಲೇನ ವಾನರಶ್ರೇಷ್ಠಂ ತಾಡಯಾಮಾಸ ವೇಗಿತಾ ॥೩೮॥
ತತ ಸ್ಸ ಕಪಿಶಾರ್ದೂಲಃ ಲಂಕಯಾ ತಾಡಿತೋ ಭೃಶಂ ।
ನನಾದ ಸುಮಹಾನಾದಂ ವೀರ್ಯವಾನ್ ಪವನಾತ್ಮಜಃ ॥೩೯॥
ತತ ಸ್ಸಂವರ್ತಯಾಮಾಸ ವಾಮಹಸ್ತಸ್ಯ ಸೋಽಂಗುಳೀಃ ।
ಮುಷ್ಟಿನಾಽಭಿ ಜಘಾನೈನಾಂ ಹನೂಮಾನ್ ಕ್ರೋಧಮೂರ್ಛಿತಃ ॥೪೦॥

---

ನಿಶಾಚರೀಂ- ರಾತ್ರಿಂಚರಿಯನ್ನು ಕುರಿತು, ಉವಾಚ - ಹೇಳಿದನು ॥ ೩೭ ॥ ತತಃ-ಅಬಳಿಕ, ಸಾ-ಆ, ಲಂಕಾವೈ-ಲಂಕೆಯಾದರೋ, ಭಯಾವಹಂ-ಬಹು ಭಯವನ್ನುಂಟುಮಾಡುವ, ಮಹಾನಾದಂ - ಸಿಂಹಗರ್ಜನೆಯನ್ನು, ಕೃತ್ವಾ- ಮಾಡಿ, ವೇಗಿತಾ - ಬಹುವೇಗವುಳ್ಳವಳಾಗಿ, (ಹತ್ತಿರಕ್ಕೆ ಬಂದು) ವಾನರಶ್ರೇಷ್ಠಂ-ಕಪಿವರನನ್ನು, ತಲೇನ-ಅಂಗಯ್ಯಿಂದ, ತಾಡಯಾಮಾಸ-ಹೊಡೆದಳು ॥ ೩೮ ॥ ತತಃ-ಆಮೇಲೆ ವೀರ್ಯವಾನ್ - ಬಹು ಪರಾಕ್ರಮವುಳ್ಳವನು, ಕಪಿಶಾರ್ದೂಲಃ - ಕಪಿಶ್ರೇಷ್ಠನು, ಪವನಾತ್ಮಜಃ - ಪವನನಂದನನೂ ಆಗಿರುವ, ಸಃ-ಆ ಹನುಮನು, ಲಂಕಯಾ - ಲಂಕೆಯಿಂದ, ಭೃಶಂ-ಬಲವಾಗಿ, ತಾಡಿತಃ-ಹೊಡೆಯಲ್ಪಟ್ಟವನಾಗಿ, ಸುಮಹಾನಾದಂ - ಅತ್ಯಂತ ಶಬ್ದವಾಗುವಹಾಗೆ, ನನಾದ - ಧ್ವನಿಮಾಡಿದನು- ತತಃ-ಆಮೇಲೆ, ಸಃ-ಆ, ಹನುಮಾನ್-ಆಂಜನೇಯನು, ಕ್ರೋಧಮೂರ್ಛಿತಃ-ರೋಷದಿಂದ ಮೈಮರೆತವನಾಗಿ, ವಾಮಹಸ್ತಸ್ಯ - ಎಡಗಯ್ಯ, ಅಂಗುಳೀಃ - ಬೆರಳುಗಳನ್ನು, ಸಂವರ್ತಯಾಮಾಸ-ಮುದುರಿಕೊಂಡನು, ಮುಷ್ಟಿನಾ-ಹಿಡಿಯಿಂದ, ಏನಾಂ - ಈ ರಕ್ಕಸಿಯನ್ನು, ಅಭಿಜಘಾನ - ಬಲವಾಗಿ ಬಾರಿಸಿದನು, (ತಿವಿದನು) ॥ ೪೦ ॥ ಸ್ತ್ರೀಚೇತಿ-ಹೆಂಗಸು ಎಂದು, ಮನ್ಯಮಾನೇನ-ನೆನೆಯುತಲಿದ್ದ ನಾದಕಾರಣವೇ ಸ್ವಯಂ-ತನ್ನಿಂದ, ಅತಿಕ್ರೋಧಃ -(ಅವಳನ್ನು ಸಂಹರಿಸುವಷ್ಟು) ಮಹಾಕೋಪವು, ನಕೃತಃ -

---

ಮುಖೀ ! ಈ ನಗರವನ್ನು ನೋಡಬೇಕೆಂದು ನನಗೆ ಬಹಳ ಕುತೂಹಲವಿದೆ, ಆದಕಾರಣ ಈ ಪಟ್ಟಣವನ್ನು ನೋಡಿಕೊಂಡು ಪುನಃ ನಾನು ಬಂದದಾರಿಯನ್ನ ಹಿಡಿದು ತೆರಳುವೆನು, ನೀನು ಬಹು ಸಾತ್ವಿಕಳಾಗಿ ಕಾಣುತ್ತೀಯೆ, ನನಗೆ ಇಷ್ಟು ಮಾತ್ರಸಹಾಯವನ್ನು ಮಾಡು, ಸಿಟ್ಟುಗೊಳ್ಳಬೇಡ, ಶಾಂತಳಾಗು ಎನಲು ॥೩೭॥ ಆಕ್ಷಣವೇ ರೌದ್ರಾವೇಶವನ್ನು ತಾಳಿದ ಲಂಕೆಯು ಸಿಂಹದಂತೆ ಗರ್ಜಿಸುತ ಮಹಾಭಯವನ್ನು ತೋರಿ ಓಡಿಬಂದು ಕಪಿವರನ ಕಪೋಲದಲ್ಲಿ ಕರತಲದಿಂದ ಅಪ್ಪಳಿಸಿದಳು ॥೩೮॥ ಮಹಾ ಶೂರನಾದ ಮಾರುತಿಗೆ ಅವಳಿಂದ ಬಲವಾದ ಪೆಟ್ಟುಬಿದ್ದಿತು. ಆಗಸದ ಬಿಲವೆಲ್ಲ ತುಂಬಿಹೋಗುವಂತೆ ಸಿಂಹನಾದವನ್ನು ಮಾಡಿದನು ॥೩೯॥ ಸಿಟ್ಟು ತಲೆಗೇರಿತು, ಎಡಗಯ್ಯ ಬೆರಳುಗಳನ್ನು ಮುದುರಿದನು,ಮಹಾಭೈರವಾಕೃತಿಯನಾಂತು ಮುಷ್ಟಿಯಿಂದ ಆ ನಿಶಾಚರಿಯನ್ನಿಕ್ಕಿದನು॥೪೦॥ ಅದುವರೆಗೆ ಆಂಜನೇಯನುಅಂತಹ ಪೆಟ್ಟನ್ನು ತಿಂದಿದ್ದವನಲ್ಲ. ಆದಕಾರಣರೋಷಾವೇಶದಿಂದ ಆಗಲೇ ಅವಳನ್ನು ಒಕ್ಕಲಿಕ್ಕಬೇಕಾದ್ದಾದರೂ, ಮಹಾತ್ಮರು ಮಹಾಕೋಪದ ಸಮಯದಲ್ಲೂ ತಾಳ್ಮೆಯನ್ನು ತಾಳುವುದು ಸ್ವಭಾವವಲ್ಲವೆ ? ಮಹಾನುಭಾವನಾದ ಮಾರುತಾತ್ಮಜನೂ ಶಾಂತಿಯನ್ನಳವಟ್ಟು " ಅಯ್ಯೋ, ಪಾಪ, ಹೆಂಗಸು ಎಷ್ಟು ಪ್ರಬಲೆಯಾದರೂ

ಸ್ತ್ರೀಚೇತಿ ಮನ್ಯಮಾನೇನ ನಾತಿಕ್ರೋಧ ಸ್ಸ್ವಯಂಕೃತಃ ॥೪೦॥-॥
ಸಾ ತು ತೇನ ಪ್ರಹಾರೇಣ ವಿಹ್ವಲಾಂಗೀ ನಿಶಾಚರೀ ।
ಪಪಾತ ಸಹಸಾ ಭೂಮೌ ವಿಕೃತಾನನ ದರ್ಶನಾ ॥೪೧॥-॥
ತತಸ್ತು ಹನುಮಾನ್ ಪ್ರಾಜ್ಞ ಸ್ತಾಂ ದೃಷ್ಟ್ವಾ ವಿನಿಪಾತಿತಾಂ ।
ಕೃಪಾಂ ಚಕಾರ ತೇಜಸ್ವೀ ಮನ್ಯಮಾನಃಸ್ತ್ರಿಯಂ ತು ತಾಂ ॥೪೨॥
ತತೋ ವೈ ಭೃಶಸಂವಿಗ್ನಾ ಲಂಕಾ ಸಾ ಗದ್ಗದಾಕ್ಷರಂ ।
ಉವಾಚಾ ಗರ್ವಿತಂ ವಾಕ್ಯಂ ಹನೂಮಂತಂ ಪ್ಲವಂಗಮಂ ॥೪೩॥-॥

---

ಮಾಡಲ್ಪಡಲಿಲ್ಲ ॥೪೦॥ ಸಾ-ಆ, ನಿಶಾಚರೀತು-ರಾತ್ರಿಂಚರಿಯಾದರೋ ತೇನ-ಆ ಹನುಮಂತನು ಹೊಡೆದ, ಪ್ರಹಾರೇಣ-ಪೆಟ್ಟಿನಿಂದ, ವಿಹ್ವಲಾಂಗೀ - ನೋವುಗೊಂಡ ಅವಯವಗಳುಳ್ಳವಳಾಗಿ, ವಿಕೃತ-ವಿಕಾರವನ್ನು ಹೊಂದಿರುವ, ಆನನ-ಮೋರೆಯೂ, ದರ್ಶನಾ-ದೃಷ್ಟಿಗಳೂ ಉಳ್ಳವಳಾದಕಾರಣವೇ, ಸಹಸಾ-ಬೇಗನೆ, ಭೂಮೌ-ನೆಲದಲ್ಲಿ, ಪಪಾತ - ಉರುಳಿಕೊಂಡಳು ॥ ೪೧ ॥ ತತಃ - ತರುವಾಯ, ತೇಜಸ್ವೀ- ಮಹಾ ಪರಾಕ್ರಮವುಳ್ಳವನಾದರೂ, ಪ್ರಾಜ್ಞಃ - ಮುಂದಾಲೋಚನೆಯುಳ್ಳವನಾದಕಾರಣವೇ (ಇವಳು ಸತ್ತು ಹೋದರೆ ಇವರಿಂದ ಸ್ವಕಾರ್ಯಕ್ಕೆ ಕುಂದು ಉಂಟಾದೀತು ಎಂಬ ಯೋಚನೆಯುಳ್ಳವನಾಗಿಯೂ) ಹನುಮಾನ್-ಆಂಜನೇಯನು, ವಿನಿಪಾತಿತಾಂ-ತನ್ನಿಂದ ಕೆಡಹಲ್ಪಟ್ಟ, ತಾಂ-ಸಂಕಟಪಡುತಲಿರುವ ಆ ಲಂಕೆಯನ್ನು, ದೃಷ್ಟ್ವಾ-ತು - ನೋಡಿದಮೇಲೆಯಾದರೋ, ತಾಂ-ಅವಳನ್ನು, ಸ್ತ್ರಿಯಂ - ಅಬಲೆಯನ್ನಾಗಿ, ಮನ್ಯಮಾನಃ - ಭಾವಿಸಿದನಾದಕಾರಣವೇ, ಕೃಪಾಂ - ಕೊಲ್ಲಬಾರದೆಂಬ ದಯೆಯನ್ನು, ಚಕಾರ-ಮಾಡಿದನು ॥ ೪೨ ॥ ತತಃ-ಆ ಹಿಂದೆ, ಸಾ-ಆ, ಲಂಕಾ-ಲಂಕೆಯು, ಭೃಶಸಂವಿಗ್ನಾ-ಬಹಳ ಹೆದರಿದವಳಾಗಿ, ಪ್ಲವಂಗಮಂ - ಹಾರುವುದರಲ್ಲಿ ಸಮರ್ಥನಾದ, ಹನುಮಂತಂ - ಆಂಜನೇಯನನ್ನು ಕುರಿತು, ಗದ್ಗದಾಕ್ಷರಂ - ತೊದಲುತಲಿರುವ ವರ್ಣಗಳುಳ್ಳುದಾಗಿಯೂ, ಅಗರ್ವಿತಂವೈ-ಹೆಮ್ಮೆಯನ್ನುಡುಗಿದುದಾಗಿಯೂ ಇರುವ, ವಾಕ್ಯಂ-ಮಾತನ್ನು, ಉವಾಚ-ಹೇಳಿದಳು ॥ ೪೩ ॥

---

ಅಬಲೆಯೇ ಸರಿ, ಇಂಥವಳನ್ನು ಕೊಲ್ಲುವುದು ನನ್ನಂಥವನಿಗೆ ತಕ್ಕುದಲ್ಲ'' ಎಂದು ದಯಾರ್ದ್ರಹೃದಯನಾಗಿ ಉಕ್ಕುತ್ತಿರುವ ಕ್ರೋಧವನ್ನು ಅಡಗಿಸಿಕೊಂಡನು ॥ ೪೦॥ ॥

ಬಳಿಕ ಹನುಮಂತನು ಹೊಡೆದ ಆ ಹೊಡೆತದಿಂದ ಬಲುನೋವುಗೊಂಡ ಅವಯವಗಳುಳ್ಳವಳಾದ ನಿಶಾಚರಿಯು ಕಳವಳಿಸಿ ಕಂಗೆಟ್ಟು ವಿಕಾರವಾದ ಮೋರೆಯನ್ನು ಮೇಲ್ಮುಖವಾಗಿ ತೆರೆದುಕೊಂಡು ನೆಲದಲ್ಲಿ ದಪ್ಪನೆ ಉರುಳಿದಳು ॥೪೧॥ ॥ ಅಂತು ಉರುಳಿ ನರಳುತ್ತಾ ಒದ್ದಾಟದಿಂದ ಬಲಿವಾಗಿ ಪೇಚಾಡುತಲಿರುವ ಆ ರಕ್ಕಸಿಯನ್ನು ನೋಡಿ ವೀರಹನುಮಂತನ ಮನವು ಕರಗಿತು, ಮಹಾತೇಜಸ್ವಿಯೂ ಪ್ರಾಜ್ಞನೂ ಆದ ಆಂಜನೇಯನು ಅಯ್ಯೋ, ಹೆಂಗಸಲ್ಲಾ ?, ಇವಳು ತೋರಿದ ಕ್ರೌರ್ಯಕ್ಕೆ ಕ್ರೂರವಾದ ಶಿಕ್ಷೆಯನ್ನು ಮಾಡಬೇಕಾದುದು ಉಚಿತವಾದರೂ ಸ್ತ್ರೀ ಸ್ವಭಾವವನ್ನು ಪರ್ಯಾಲೋಚಿಸಿ ಕನಿಕರವನ್ನು ತೋರಬೇಕು ಕೊಲ್ಲತಕ್ಕುದು ಉಚಿತವಲ್ಲ ಎಂದು ದಯಾಮಾನ ಮಾನಸನಾದನು ॥೪೨॥ ॥ ಆ ಬಳಿಕ ಆ ರಾತ್ರಿಂಚರಿಯು ಸಂಪೂರ್ಣವಾಗಿ ಹೆದರಿದಳು, ಉಡುಗಿದಳು, ಅದುರಿದಳು, ಕೊರಳಿನಿಂದ ಹೊರಡುವ ನುಡಿಯು ತೊದಲ ತೊಡಗಿತು, ಹೆಮ್ಮೆಯು ಹಾರಿಹೋಯಿತು

ಪ್ರಸೀದ ಸುಮಹಾಬಾಹೋ ತ್ರಾಯಸ್ವ ಹರಿಸತ್ತಮ ।
ಸಮಯೇ ಸೌಮ್ಯ ತಿಷ್ಠಂತಿ ಸತ್ವವಂತೋ ಮಹಾಬಲಾಃ ॥೪೪॥-॥
ಅಹಂತು ನಗರೀ ಲಂಕಾ ಸ್ವಯಮೇವ ಪ್ಲವಂಗಮ ।
ನಿರ್ಜಿತಾಽಹಂ ತ್ವಯಾ ವೀರ ವಿಕ್ರಮೇಣ ಮಹಾಬಲ ॥೪೫॥॥
ಇದಂತು ತಥ್ಯಂ ಶೃಣು ವೈ ಬ್ರುವಂತ್ಯಾ ಮೇ ಹರೀಶ್ವರ ।

---

(ಅದೆಂತೆಂದರೆ) ಸುಮಹಾಬಾಹೋ - ಅಪಾರವಾದ ತೋಳುಬಲವುಳ್ಳವನೇ ! ಹರಿಸತ್ತಮ - ಓ ವಾನರೋತ್ತಮನೇ ! ಸೌಮ್ಯ - ಎಲೈ ಸುಮುಖನೇ, ಪ್ರಸೀದ-ನನ್ನಲ್ಲಿ ದಯೆತೋರು, ತ್ರಾಯಸ್ವ - ನನ್ನನ್ನು ರಕ್ಷಿಸು, ಸತ್ವವಂತಃ - ಸತ್ತ್ವಗುಣವುಳ್ಳವರು, ಮಹಾಬಲಾಃ - ಮಹತ್ತರವಾದ ಬಲವುಳ್ಳವರಾದಾಗ್ಯೂ, ಸಮಯೆ - ಹೆಂಗಸನ್ನು ಕೊಲ್ಲಬಾರದೆಂಬ ಲೋಕಮರ್ಯಾದೆಯಲ್ಲಿ, ತಿಷ್ಠಂತಿ - ಅಲುಗದೆ ನೆಲೆಗೊಂಡಿರುವರು ॥೪೪॥॥ ಪ್ಲವಂಗಮ - ಎಲೈ ಆಂಜನೇಯಾ, ಅಹಂತು - ನಾನಾದರೋ, ಸ್ವಯಂ - ಸಾಕ್ಷಾತ್ತಾಗಿಯೇ, ಲಂಕಾನಗರ್ಯೇವ - ಲಂಕೆಯೆಂಬ ನಗರಾಧಿದೇವತೆಯೇ ಹೌದು (ರಾಕ್ಷಸಿಯೇ ಸರಿ) ಮಹಾಬಲ-ಓ ಹೇರಳವಾದ ಬಲವುಳ್ಳವನೇ, ವೀರ-ಶೂರನೇ ಅಹಂ-ನಾನು (ದುರ್ಧರ್ಷಾಪಿ-ಹೆರರಿಗೆ ಸೋಲದವಳಾದರೂ) ತ್ವಯಾ - ನಿನ್ನಿಂದ, ವಿಕ್ರಮೇಣ - ಪರಾಕ್ರಮದಿಂದ, ನಿರ್ಜಿತಾ-ಸೋಲಿಸಲ್ಪಟ್ಟವಳಾದೆನು ॥೪೫॥-॥ ಹರೀಶ್ವರ - ಎಲೈ ವಾನರೋತ್ತಮನೇ, ಪುರಾ - ಪೂರ್ವಕಾಲದಲ್ಲಿ. ಸ್ವಯಂಭುವಾ - ಬ್ರಹ್ಮನಿಂದ, ಮಮ - ನನಗೆ, ವರದಾನಂ - ವರಪ್ರದಾನವು, ಯಥಾ - ಹೇಗೆ, ದತ್ತಂ - ಕೊಡಲ್ಪಟ್ಟದೆಯೋ, ತಥಾ - ಹಾಗೆಯೇ, ಇದಂ - ಈ, ತಥ್ಯಂತು - ನಿಜವಾದ ಸಂಗತಿಯನ್ನೇ, ಬ್ರುವಂತ್ಯಾಃ - ಹೇಳುತಲಿರುವ, ಮೆ - ನನ್ನ, (ವಚನಂ - ಮಾತನ್ನು) ಶೃಣು - ಕೇಳು ॥೪೬॥ (ಹೆಲುಕೇ-ಎಲಾ

---

ಪ್ಲವಂಗೇಂದ್ರನಾದ ಹನುಮನನ್ನು ಕುರಿತು ಮೆಲ್ಲಗೆ ಮಾತನಾಡತೊಡಗಿದಳು ॥೪೩॥ ॥ ಓ ಆಂಜನೇಯಾ ! ನೀನು ಅಪರಿಮಿತ ಪರಾಕ್ರಮಶಾಲಿಯಾಗಿದ್ದೀಯೆ, ನಿನ್ನಯ ತೋಳಬಲವು ಹೊಗಳಲಸದಳವಾದುದು, ಎಲೈ ಮಹಾಬಾಹುವಾದ ಹರಿಸತ್ತಮ ! ನನ್ನ ವಿಷಯದಲ್ಲಿ ಪ್ರಸನ್ನನಾಗು, ನನ್ನನ್ನು ರಕ್ಷಿಸು, ಎಲೈ ಶಾಂತಮಾರುತಿಯೇ ! ಶಾಂತಿ ಸಂಪನ್ನರಾದವರು ಮಹಾಬಲ ಪರಾಕ್ರಮಶಾಲಿಗಳಾಗಿದ್ದರೂ ತಮ್ಮ ಶಾಂತಿ ಸ್ವಭಾವದ ಮರ್ಯಾದೆಯನ್ನು ಅತಿಕ್ರಮಿಸಿ ಹೋಗುವುದಿಲ್ಲ. ನೀನು ಮಹಾ ಸೌಮ್ಯನಾದ ಕಾರಣವೇ ಸ್ತ್ರೀವಧೆಯು ಶಾಸ್ತ್ರಗರ್ಹಿತವಾದುದೆಂಬುದನ್ನು ಅರಿಯದೆ ಇಲ್ಲ ॥೪೪॥ ॥ ಈ ನಗರದ ಅಧಿದೇವತೆ ಯೆನಿಸಿ ಕಾವಲುಗಾತಿಯೂ ಆಗಿರುವ ಲಂಕೆ ಎಂಬುವವಳು ನಾನು. ಎಲೈ ಮಹಾಬಲನೇ ! ನಿನ್ನಯ ವಿಕ್ರಮದಿಂದ ನಾನು ಸಂಪೂರ್ಣವಾಗಿ ಸೋತು ಹೋಗಿದೇನೆ ॥೪೫॥ ಎಲೈ ಹರೀಶ್ವರನೇ ! ನಾನು ನಿನಗೆ ಮತ್ತೊಂದು ನಿಜವಾದ ಸಂಗತಿಯನ್ನು ಬಲುಗುಟ್ಟಾಗಿದ್ದರೂ ಹೇಳುತ್ತೇನೆ ಕೇಳು.-ಪೂರ್ವದಲ್ಲಿ ಈ ಲಂಕಾರಮಣನಾದ ರಾವಣನು ದಿಗ್ವಿಜಯಾರ್ಥವಾಗಿ ಹೊರಟಿದ್ದನು, ಆಗ ಕೈಲಾಸದೆಡೆಯೊಳು ನಂದೀಶ್ವರನೇ ಮೊದಲಾದವರನ್ನು ಹಿಂಸಿಸುತಬಂದನು. ಆಗಲವರು ದಶಾನನನನ್ನು ಕುರಿತು "ನಿನ್ನಲಂಕೆಯು ಭಸ್ಮವಾಗಲಿ" ಎಂದು ಶಪಿಸಿದರು. ಆಸಮಯದಲ್ಲಿ ಮೊದಲೇ ನನಗೆ ಈ ಅವಸ್ಥೆ ಬಂದಿತಲ್ಲಾ ಎಂದು ನಾನು ಬ್ರಹ್ಮದೇವನಬಳಿಗೆ ಹೋಗಿ ಮೊರೆಯಿಟ್ಟೆನು, ಆಗಲಾಕರುಣಾಳುವಾದ ಚತುರಾನನನು

ಸ್ವಯಂಭುವಾ ಪುರಾ ದತ್ತಂ ವರದಾನಂ ಯಥಾ ಮಮ ॥೪೬॥ ॥
ಯದಾ ತ್ವಾಂ ವಾನರಃ ಕಶ್ಚಿತ್ವಿಕ್ರಮಾತ್ ವಶ ಮಾನಯೇತ್ ।
ತದಾ ತ್ವಯಾ ಹಿ ವಿಜ್ಞೇಯಂ ರಕ್ಷಸಾಂ ಭಯ ಮಾಗತಂ ॥೪೭॥ ॥
ಸ ಹಿ ಮೇ ಸಮಯ ಸ್ಸೌಮ್ಯ ಪ್ರಾಪ್ತೋಽದ್ಯ ತವ ದರ್ಶನಾತ್ ।
ಸ್ವಯಂಭು ವಿಹಿತ ಸ್ಸತ್ಯೋ ನ ತಸ್ಯಾಸ್ತಿ ವ್ಯತಿಕ್ರಮಃ ॥೪೮॥ ॥
ಸೀತಾನಿಮಿತ್ತಂ ರಾಜ್ಞಸ್ತು ರಾವಣಸ್ಯ ದುರಾತ್ಮನಃ ॥
ರಕ್ಷಸಾಂ ಚೈವ ಸರ್ವೇಷಾಂ ವಿನಾಶ ಸ್ಸಮುಪಾಗತಃ ॥೪೯॥-॥

---

ಲಂಕೆಯೇ) ಕಶ್ಚಿತ್ - ಬಬ್ಬನೊಬ್ಬ, ವಾನರಃ - ವಾನರನು, ಯದಾ - ಯಾವಾಗಲಾದರೆ, ತ್ವಾಂ - ನಿನ್ನನ್ನು, ವಿಕ್ರಮಾತ್ - ಶೌರ್ಯದ ದೆಶೆಯಿಂದ, ವಶಂ - ಸ್ವಾಧೀನತೆಯನ್ನು, ಆನಯೇತ್-ಹೊಂದಿಸಿ ಕೊಳ್ಳುತಾನೆಯೋ, ತದಾ - ಆಗಲೇ, ರಕ್ಷಸಾಂ - ರಾಕ್ಷಸರಿಗೆ, ಭಯಂ - ಭೀತಿಯು, ಆಗತಂ - ಬಂದಿತೆಂದು ತ್ವಯಾ - ನಿನ್ನಿಂದ, ವಿಜ್ಞೇಯಂ-ನಿಶ್ಚೈಸಲ್ಪಡತಕ್ಕುದು ॥೪೭॥ ॥
ಸೌಮ್ಯ-ಎಲೈ ಶಾಂತನೇ ! ಅದ್ಯ- ಈಗ, ತವ-ನಿನ್ನ, ದರ್ಶನಾತ್-ದರ್ಶನದದೆಶೆಯಿಂದ, ಸಃ-ಆ ಬ್ರಹ್ಮನು ಹೇಳಿದ್ದ, ಸಮಯಃ - ಕಾಲವು, ಪ್ರಾಪ್ತೋಹಿ - ಒದಗಿತಲ್ಲವೆ ? ಸ್ವಯಂಭುವಿಹಿತಃ - ಚತುರ್ಮುಖನಿಂದ ಹೇಳಲ್ಪಟ್ಟದ್ದು, ಸತ್ಯಃ - ನಿಜವಾದದ್ದು, ತಸ್ಯ - ಆ ಬ್ರಹ್ಮವಚನಕ್ಕೆ, ವ್ಯತಿಕ್ರಮಃ-ವ್ಯತ್ಯಾಸವೆಂಬುದು, ನಾಸ್ತಿ-ಇಲ್ಲವು ॥ ೪೮ ॥॥ ದುರಾತ್ಮನಃ - ದುರ್ಬುದ್ಧಿಯುಳ್ಳ, ರಾಜ್ಞಃ-ಅರಸಾದ, ರಾವಣಸ್ಯ-ರಾವಣನಿಗೂ, ಸರ್ವೇಷಾಂ-ಸಮಸ್ತರಾದ, ರಕ್ಷಸಾಂಚೈವ - ರಕ್ಕಸರಿಗೂ, ಸೀತಾನಿಮಿತ್ತಂ-ಜಾನಕಿಯನಿಮಿತ್ತವಾಗಿ, ವಿನಾಶಃ - ಕಡೆಗಾಲವು, ಸಮುಪಾಗತಃ - ಸಂಭವಿಸಿತು ॥೪೯॥ ತತ್-ಆದಕಾರಣ,

---

ನನ್ನ ದೈನ್ಯವನ್ನು ಲಾಲಿಸಿ ಇಂತುವರವನ್ನು ದಯೆಪಾಲಿಸಿದನು ॥ ೪೬॥ ॥ ಅದಾವುದು ಎಂಬೆಯೋ ? ಕೇಳು - ಎಲೌ ಲಂಕಾಧಿದೇವತೆಯೇ ! ದೇವಾಂಶಪುರುಷರ ಮಾತು ಸಟೆಯಾಗುವುದಿಲ್ಲ, ಆದರೆ ಇದಕ್ಕೆ ಒಂದು ಅವಧಿಯನ್ನು ಹೇಳುತ್ತೇನೆ ಕೇಳು-ಯಾವಾಗಲಾದರೆ ಒಬ್ಬನೊಬ್ಬ ವಾನರವೀರನು ನಿನ್ನ ನಗರದ ಒಳಗೆ ಬಂದು ತನ್ನಪರಾಕ್ರಮಾತಿಶಯದಿಂದ ನಿನ್ನನ್ನು ಸಂಪೂರ್ಣವಾಗಿ ಸೋಲಿಸಿ ವಶಪಡಿಸಿಕೊಳ್ಳುವನೋ, ಆಗಲೇ ನಿನ್ನ ಕಾವಲಿಗೊಳಪಟ್ಟ ನಗರದೊಳರುವ ರಕ್ಕಸರಿಗೆಲ್ಲ ಮಹಾಭಯವು ಒದಗಿ ವಿನಾಶಕಾಲವು ಸಂಭವಿಸಿತೆಂದು ಖಂಡಿತವಾಗಿ ತಿಳಿ ಎಂದು ಹೇಳಿದ್ದನು ॥ ೪೭॥ ॥ ಎಲೈ ಸಾಧುಶಿರೋಮಣಿಯೇ ! ನಿನಗೆ ಆ ಸಂಗತಿಯನ್ನು ಅರಿಕೆಮಾಡಿದೆನು, ಹೇ ಸೌಮ್ಯಾ ! ಇದಕೋ ಆಸಮಯವು ನಿನ್ನಯ ಸಂದರ್ಶನದಿಂದ ಈಗ ಒದಗಿತು, ಬ್ರಹ್ಮದೇವನಮಾತು ನಿಶ್ಚಯವಾಯಿತು ಅಹಹ ! ಆಸ್ವಯಂಭುವಿನ ವಚನಕ್ಕೆ ಅತಿಕ್ರಮವುಂಟೆ ? ಎಂದಿಗೂ ಇಲ್ಲ ॥ ೪೮॥ ॥ ಪತಿವ್ರತಾಶಿರೋಮಣಿಯಾಗಿ ಮಹಾನುಭಾವಳೆನಿಸಿರುವ ಲೋಕಮಾತೆಯಾದ ಸೀತಾದೇವಿಯ ವಿಷಯದಲ್ಲಿ ಅತಿಕ್ರಮವನ್ನು ತೋರಲಳಸಿ ಮಹಾಪಾಪಿಯಾಗಿರುವ ದುರಾತ್ಮನಾದ ಈರಾವಣನ ದೆಶೆಯಿಂದ ಈರಾಕ್ಷಸರಿಗೆಲ್ಲ ಹೋಗಾಲವು ಹತ್ತಿರವಾಯಿತಪ್ಪಾ ! ನಾನು ಇನ್ನೇನ ಹೇಳಲಿ ! ! ॥ ೪೯॥ ॥ ಎಲೈ ಹರಿವೀರನೇ ! ಇನ್ನು ನಿನಗೆ ಯಾವ ಅಡ್ಡಿಯೂ

ತತ್ಪ್ರವಿಶ್ಯ ಹರಿಶ್ರೇಷ್ಠ ಪುರೀಂ ರಾವಣಪಾಲಿತಾಂ ।
ವಿಧತ್ಸ್ವ ಸರ್ವಕಾರ್ಯಾಣಿ ಯಾನಿ ಯಾನೀಹ ವಾಂಛಸಿ ॥೫೦॥ ॥
ಪ್ರವಿಶ್ಯ ಶಾಪೋಪಹತಾಂ ಹರೀಶ್ವರ ಶ್ಶುಭಾಂ ಪುರೀಂ ರಾಕ್ಷಸಮುಖ್ಯಪಾಲಿತಾಂ ।
ಯದೃಚ್ಛಯಾ ತ್ವಂ ಜನಕಾತ್ಮಜಾಂ ಸತೀಂ ವಿಮಾರ್ಗ ಸರ್ವತ್ರಗತೋ ಯಥಾಸುಖಂ ॥

ಇತಿ ಶ್ರೀಮತ್ಸುಂದರಕಾಂಡೇ-ತೃತೀಯಸ್ಸರ್ಗಃ.

---

ಹರಿಶ್ರೇಷ್ಠ-ಎಲೈ ವಾನರೋತ್ತಮನೇ ! ರಾವಣಪಾಲಿತಾಂ - ರಾವಣನಿಂದ ಪಾಲಿಸಲ್ಪಡುತಲಿರುವ, ಪುರೀಂ-ಪಟ್ಟಣವನ್ನು, ಪ್ರವಿಶ್ಯ-ಪ್ರವೇಶಿಸಿ, ಇಹ-ಈ ಪಟ್ಟಣದಲ್ಲಿ, ಯಾನಿಯಾನಿ- ಯಾವಯಾವ ಕಾರ್ಯಗಳನ್ನು, ವಾಂಛಸಿ-ಮಾಡಬೇಕೆಂದು ಬಯಸಿರುವೆಯೋ,(ತಾನಿ-ಆ) ಸರ್ವಕಾರ್ಯಾಣಿ-ಸಮಸ್ತಕಾರ್ಯಗಳನ್ನೂ, ವಿಧತ್ಸ್ವ - ಮಾಡು ॥೫೦॥ ॥ ಹರೀಶ್ವರಃ-ವಾನರೋತ್ತಮನಾದ, ತ್ವಂ- ನೀನು, ಶಾಪ - ನಂದಿ ಮೊದಲಾದವರ ಶಾಪದಿಂದ, ಉಪಹತಾಂ - ಹೊಡೆಯಲ್ಪಟ್ಟಿರುವ, (ನಾಶವಾಗಿರುವ) ರಾಕ್ಷಸಮುಖ್ಯ-ರಾಕ್ಷಸರಾಜನಿಂದ, ಪಾಲಿತಾಂ-ಪಾಲಿಸಲ್ಪಟ್ಟುದಾಗಿಯೂ, ಶುಭಾಂ - ನಿಮಗೆ ಮಂಗಳಕರವಾದುದಾಗಿಯೂ ಇರುವ, ಪುರೀಂ - ಈ ಪಟ್ಟಣವನ್ನು, ಪ್ರವಿಶ್ಯ ಪ್ರವೇಶಿಸಿ, ಯದೃಚ್ಛಯಾ - ಸ್ವೇಚ್ಛೆಯಿಂದ, ಗತಃ - ಸಂಚರಿಸುತ್ತಿರುವವನಾಗಿ,ಸರ್ವತ್ರ - ಎಲ್ಲಕಡೆಗಳಲ್ಲಿಯೂ, ಯಥಾಸುಖಂ - ಸುಖವಾಗುವಹಾಗೆ, ಸತೀಂ - ಮಹಾಪತಿವ್ರತೆಯಾದ, ಜನಕಾತ್ಮಜಾಂ- ಸೀತಾದೇವಿಯನ್ನು, ವಿಮಾರ್ಗ-ಹುಡುಕಿಕೊಳ್ಳುವವನಾಗು ॥೫೧॥

ಇಂತು ರಸಾಯನವೆಂಬ ಟೀಕೆಯಿಂದೊಡಗೂಡಿರುವ ಶ್ರೀಮದ್ವಾಲ್ಮೀಕಿ ರಾಮಾಯಣದ
ಸುನ್ದರಕಾಣ್ಡದಲ್ಲಿ ಮೂರನೆಯ ಸರ್ಗವು.

—ಶ್ರೀ ರಾಮಚನ್ದ್ರಾರ್ಪಣಮ್—

---

ಇಲ್ಲ. ರಾವಣನಾಳುವ ಈ ಲಂಕೆಯಬಳಹೊಗಬಹುದು, ಸುಖವಾಗಿ ಬಳಹೊಕ್ಕು ಆವಾವ ಕೆಲಸಗಳನ್ನು ಮಾಡಬೇಕೆಂದು ನಿನ್ನ ಮನದೊಳು ನೆನೆದಿರುವೆಯೋ ? ಅವುಗಳನ್ನೆಲ್ಲ ಕ್ರಮವಾಗಿ ನೆರವೇರಿಸಿಕೊಳ್ಳು ॥೫೦॥ ಓವಾನರನಾಯಕಾ ! ಈ ನಗರವು ಶಾಪದ ಪೆಟ್ಟಿನಿಂದ ಹತವಾಯಿತು, ರಾಕ್ಷಸರೊಡೆಯನಿಂದ ಪಾಲಿಸಲ್ಪಡುತಲಿರುವ ಈ ಲಂಕೆಯನ್ನು ಹೊಕ್ಕು ಎಲ್ಲೆಡೆಗಳಲ್ಲಿಯೂ ತಡೆಯಿಲ್ಲದೆ ಸುಖವಾಗಿ ಸಂಚರಿಸಿ ಸ್ವೇಚ್ಛಾನುಸಾರವಾಗಿ ಸತೀಶಿರೋಮಣಿಯೆನಿಸಿರುವ ಲೋಕಮಾತೆಯಾದ ಸೀತೆಯನ್ನು ಹುಡುಕು, ನಿನಗೆ ಶುಭವಾಗಲಿ, ನಿನ್ನ ಮನೋರಥವು ಕೈಗೂಡಲಿ, ಎಂದು ಹೇಳಿ ಸುಮ್ಮನಾದಳು.॥೫೧॥ ॥

ಕಂದ ॥ ಸೊಕ್ಕಿದ ರಕ್ಕಸಿಯಂ ಹರಿ
ಗಕ್ಕನೆ, ತಾನೊಕ್ಕಲಿಕ್ಕು ತಬಲೆಯೆನುತ್ತಂ ।
ಅಕ್ಕರೆಯೊಳಸುವ ನುಳುಹಲ್
ಸಿಕ್ಕಳದು ದೆನುತ್ತ ಲಂಕೆ ಯೊಪ್ಪುಗೆ ಯಿತ್ತಳ್ ॥

ಇಂತು ರಸಾಯನ ಟೀಕಾತಾತ್ಪರ್ಯದಿಂದೊಡಗೂಡಿರುವ ಮೂರನೆಯ ಸರ್ಗಂಸಮಾಪ್ತಂ.

ಶ್ರೀಃ.

—ಶ್ರೀರಾಮಚಂದ್ರ ಪರಬ್ರಹ್ಮಣೇನಮಃ—

## —ಚತುರ್ಥಸ್ಸರ್ಗಃ.—

ಸ ನಿರ್ಜಿತ್ಯ ಪುರೀಂ ಶ್ರೇಷ್ಠಾಂ ಲಂಕಾಂ ತಾಂ ಕಾಮರೂಪಿಣೀಂ ।
ವಿಕ್ರಮೇಣ ಮಹಾತೇಜಾ ಹನೂಮಾನ್ ಕಪಿಸತ್ತಮಃ ।
ಅದ್ವಾರೇಣ ಮಹಾಬಾಹುಃ ಪ್ರಾಕಾರ ಮಭಿಪುಪ್ಲುವೇ ॥೧॥-॥
ಪ್ರವಿಶ್ಯ ನಗರೀಂ ಲಂಕಾಂ ಕಪಿರಾಜಹಿತಂಕರಃ ।

ಕಂದ॥ ಅಪ್ಪಳಿಸಿ ಯುಸುರಿಯುಂ ಹರಿ
ಸಪ್ಪಳವಂ ಮಾಡದಲ್ತೆ ಪೌಳಿಯ ನಿರುಳೊಳ್ ।
ಕುಪ್ಪಳಿಸು ತೈದೆ ನಗರದೊ
ಳೊಪ್ಪಿರ್ದುದು ಗಡ ದಶಾಸ್ಯ ನರಮನೆ ಯಾಗಳ '

ಕಪಿಸತ್ತಮಃ - ವಾನರೋತ್ತಮನೆನಿಸಿರುವ, ಮಹಾತೇಜಾಃ – ಬಹುತೇಜಸ್ವಿಯಾದ, ಸಃ-ಆ, ಹನೂಮಾನ್-ಆಂಜನೇಯನು, ಕಾಮರೂಪಿಣೀಂ - ಬಯಸಿದ ರೂಪವನ್ನು ತಾಳುವ ಶಕ್ತಿಯುಳ್ಳ, ತಾಂ-ಆ, ಲಂಕಾಂ - ಲಂಕೆಯೆಂಬ ರಕ್ಕಸಿಯನ್ನು, ವಿಕ್ರಮೇಣ - ಪರಾಕ್ರಮದಿಂದ, ನಿರ್ಜಿತ್ಯ- ಗೆದ್ದು, ಮಹಾಬಾಹುಃ-ಮಹತ್ತರವಾದ ಬಾಹುಬಲವುಳ್ಳವನಾದಕಾರಣವೇ (೧) * ಅದ್ವಾರೇಣ - ಬಾಗಿಲಿಲ್ಲದ ಭಾಗದಿಂದಲೇ, ಶ್ರೇಷ್ಠಾಂ-ಅತ್ಯುತ್ತಮವಾದ, ಪುರೀಂ - ಆ ಲಂಕಾಪಟ್ಟಣವನ್ನು ಸೇರಲು, ಪ್ರಾಕಾರಂ - ಪೌಳಿಗೋಡೆಯನ್ನು, ಅಭಿಪುಪ್ಲುವೆ-ಕುಪ್ಪಳಿಸಿಹಾರಿದನು ॥೧॥ ಕಪಿರಾಜ-ವಾನರರೊಡೆಯನಾದ ಸುಗ್ರೀವನಿಗೆ,

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ.

ಮಹಾತೇಜೋರಾಶಿಯೂ, ಬಹು ಬಲಶಾಲಿಯೂ, ವಾನರವೀರಾಗ್ರಣಿಯೂ ಆದ ಆಂಜನೇಯನು ಕಾಮರೂಪಳೆನಿಸಿದ ಆಲಂಕೆಯನ್ನು ತನ್ನ ಅಪ್ರತಿಮಶೌರ್ಯದಿಂದ ಗೆದ್ದು, ಹಗೆಗಳ ನಗರಿಯನ್ನು *ಪುರದ್ವಾರದಿಂದ ಪ್ರವೇಶಮಾಡುವುದು ಶಾಸ್ತ್ರ ಸಮ್ಮತವಲ್ಲವಾದ ಕಾರಣ ಬೇರೊಂದು ಕಡೆ ಪೌಳಿಗೋಡೆಯ ಮೇಲೆ ಹಾರಿಹೋಗಲಿಕ್ಕೆ ಕುಪ್ಪಳಿಸಿದನು ॥೧॥ ॥ಕಪಿಸಾರ್ವಭೌಮನೆನಿಸಿದ ಸುಗ್ರೀವನಿಗೆ ಹಿತವನ್ನೇ ಮಾಡುವುದರಲ್ಲಿ ಬದ್ಧಕಂಕಣನಾದ ಆ ಹನುಮನು ಹಾಗೆ ಲಂಕೆಯನ್ನು ಹೊಗುವಂದು ಬೃಹಸ್ಪತಿಯು ಹೇಳಿರುವ

(೧) ಗ್ರಾಮಂವಾ ನಗರಂ ವಾಪಿ ಪತ್ತನಂ ವಾ ಪರಸ್ಯಹಿ। ವಿಶೇಷಾತ್ಸಮಯೆ ಸೌಮ್ಯ ನ ದ್ವಾರೇಣ ವಿಶೇನ್ನೃಪಃ॥ ಎಲೈ ಸುಮುಖನಾದ ಅರಸೇ ಹಗೆಗಳಪಟ್ಟಣವನ್ನಾಗಲೀ, ಊರನ್ನಾಗಲಿ, ಗ್ರಾಮವನ್ನಾಗಲಿ ವಾಡಿಕೆಯಾಗಿರುವ ಬಾಗಿಲಿನಿಂದ ಒಳಹೊಗಬಾರದು ಎಂದು ರಾಜನೀತಿ. ರಾ॥

ವಜ್ರಾಂಕುಶ ನಿಕಾಶೈಶ್ಚ ವಜ್ರಜಾಲ ವಿಭೂಷಿತೈಃ ।
ಗೃಹಮೇಘೈಃ ಪುರೀ ರಮ್ಯಾ ಬಭಾಸೆದ್ಯಾ ರಿವಾಂಬುದೈಃ ॥ ೫॥ ॥
ಪ್ರಜಜ್ವಾಲ ತದಾ ಲಂಕಾ ರಕ್ಷೋಗಣ ಗೃಹೈ ಶ್ಶುಭೈಃ ॥
ಸಿತಾಭ್ರ ಸದೃಶೈ ಶ್ಚಿತ್ರೈಃ ಪದ್ಮಸ್ವಸ್ತಿಕ ಸಂಸ್ಥಿತೈಃ ।
ವರ್ಧಮಾನ ಗೃಹೈಶ್ಚಾಪಿ ಸರ್ವತ ಸ್ಸುವಿಭೂಷಿತಾ ।
(ಗೃಹಮುಖ್ಯೈಃ ಪುರೀ ರಮ್ಯಾ ಬಭಾಸೆ ದ್ಯಾರಿವಾಂಬುದೈಃ) ॥೭॥
ತಾಂ ಚಿತ್ರಮಾಲ್ಯಾಭರಣಾಂ ಕಪಿರಾಜ ಹಿತಂಕರಃ ।

ಗೃಹಗಳಿಂದಲೂ, ರಮ್ಯಾ-ರಮಣೀಯವಾಗಿರುವ, ಪುರೀ-ಲಂಕಾಪಟ್ಟಣವು, ಅಂಬುದೈಃ-ಮೇಘಗಳಿಂದ, ದ್ಯಾರಿವ-ಅಂತರಿಕ್ಷದಂತೆ, ಬಭಾಸೆ - ಹೊಳೆಯುತಲಿತ್ತು ॥ ೫ ॥ ಶುಭೈಃ -ಮಂಗಳಕರಗಳೆನಿಸಿದವುಗಳಾಗಿಯೂ, ಸಿತಾಭ್ರ-ಬಿಳಿಯ ಮೇಘಗಳಿಗೆ, ಸದೃಶೈಃ - ಸಮಾನವಾದವುಗಳಾಗಿಯೂ, ಚಿತ್ರೈಃ-ನಾನಾ ಬಣ್ಣವುಳ್ಳವುಗಳಾಗಿಯೂ, (೧) § ಪದ್ಮಸ್ವಸ್ತಿಕ-ಪದ್ಮ, ಸ್ವಸ್ತಿಕ ಎಂಬ ಹಸೆಗಳ, ಸಂಸ್ಥಿತೈಃ-ಕಟ್ಟಡದ ತರಹೆಗಳುಳ್ಳವುಗಳಾಗಿಯೂ ಇರುವ, ರಕ್ಷೋಗಣ-ರಾಕ್ಷಸರ ಸಮೂಹದ, ಗೃಹೈಃ - ಮನೆಗಳಿಂದಲೂ, ವರ್ಧಮಾನಗೃಹೈಃ - ವರ್ಧಮಾನವೆಂಬ ಕಟ್ಟಡದ ತರಹೆಯುಳ್ಳಮನೆಗಳಿಂದಲೂ, ಸರ್ವತಃ - ಎಲ್ಲಕಡೆಗಳಲ್ಲಿಯೂ, ಸುವಿಭೂಷಿತಾ-ಚೆನ್ನಾಗಿ ಅಲಂಕರಿಸಲ್ಪಟ್ಟಿರುವ, ಲಂಕಾ - ಲಂಕಾಪಟ್ಟಣವು, ತದಾ-ಆ ಮಾರುತಿಯು ಪ್ರವೇಶಿಸುವ ಕಾಲದಲ್ಲಿ, ಪ್ರಜಜ್ವಾಲ-ಪ್ರಕಾಶಿಸುತಲಿದಿ ತು ॥ ೭ ॥ ಕಪಿರಾಜ - ವಾನರ ರಾಜನಾದ ಸುಗ್ರೀವನಿಗೆ, ಹಿತಂಕರಃ - ಮೇಲನ್ನು ಮಾಡುವ ಆಂಜನೇಯನು, ಶ್ರೀಮಾನ್ - ಜಯಸೂಚಕವಾದ ಕಾಂತಿಯುಳ್ಳವನಾದ ಕಾರಣವೇ, ರಾಘವಾರ್ಥಂ - ಶ್ರೀರಾಮಕಾರ್ಯಾರ್ಥವಾಗಿ, ಚರನ್ -

ಮನೆಗಳಿಂದ ಶೋಭಿಸಿದ ನಗರವು ಗಗನದಂತೆಯೇ ಬೆಳಗುತಲಿತ್ತು ॥೫॥ ॥ ಆ ನಗರದೊಳಗೆ ಕೆಲವು ಮನೆಗಳನ್ನು ಪದ್ಮ, ಸ್ವಸ್ತಿಕ, ವರ್ಧಮಾನಮೊದಲಾದ ಭೇದಗಳಿಂದ ವಿಚಿತ್ರವಾಗಿಕಟ್ಟಿದ್ದರು. ಆ ರಾಕ್ಷಸರ ಮನೆಗಳು ಬಿಳಿಯ ಮೇಘಗಳಂತೆ ಹೊಳೆಯುತ್ತಾ ಎಲ್ಲ ಕಡೆಗಳಲ್ಲಿಯೂ ಸಿಂಗರಿಸಲ್ಪಟ್ಟು ಇದ್ದುದರಿಂದ ಲಂಕಾನಗರಿಯು ಪ್ರಜ್ವಲಿಸುತ್ತಿದ್ದಿತು॥೭॥ ಕಪಿರಾಜ ಹಿತಂಕರನೂ ಶ್ರೀಮಂತನೂ ಆದ ಆಂಜನೇಯನು ತನ್ನ ಮನದೊಳಗೆ

(೧) § "ಚತುಶ್ಶಾಲಾ ಚತುರ್ದ್ವಾರಾ ಸರ್ವತೋಭದ್ರಸಂಜ್ಞಿತಾ ।
ಪಶ್ಚಿಮದ್ವಾರರಹಿತಾ ಮಧ್ಯಾವರ್ತಾ ಹಯಾನನಾ ।
ದಕ್ಷಿಣದ್ವಾರರಹಿತಾ ವರ್ಧಮಾನಾ ಧನಪ್ರದಾ ।
ಪ್ರಾಗ್ದ್ವಾರರಹಿತಾ ಸ್ವಸ್ತಿಕಾಖ್ಯಾ ಪುತ್ರಧನಪ್ರದಾ ॥ "

ನಾಲ್ಕು ದಿಕ್ಕಿನಲ್ಲಿಯೂ ನಾಲ್ಕು ಕೈಸಾಲೆಗಳು ಅಥವಾ ನಾಲ್ಕು ತೊಟ್ಟಿಗಳೂ ಉಳ್ಳದಾಗಿ ನಾಲ್ಕುಕಡೆಗಳಲ್ಲಿಯೂ ಬಾಗಿಲುಗಳನ್ನಿಟ್ಟು ಕಟ್ಟಿರುವ ಮನೆಗೆ ಸರ್ವತೋಭದ್ರ ಎಂತಲೂ, ಪಡುವಣ ಬಾಗಿಲಿಲ್ಲದೆ ನಡುವೆ ಗುಂಡಾಗಿರುವಂತೆ ಕಟ್ಟಡವನ್ನು ಕಟ್ಟಿರುವ ಮನೆಗೆ ಹಯಾನನ ಎಂತಲೂ, ತೆಂಕಣ ಬಾಗಿಲಿಲ್ಲದಿದರೆ ಧನಸಮೃದ್ಧಿಯನ್ನುಂಟುಮಾಡುವ ವರ್ಧಮಾನ ಎಂತಲೂ, ಮೂಡಲ ಬಾಗಿಲಿಲ್ಲದಿದ್ದರೆ ಪುತ್ರಧನಸಮೃದ್ಧಿಕರವಾದ ಸ್ವಸ್ತಿಕ ಎಂತಲೂ ವರಾಹಮಿಹಿರ ಸಂಹಿತೆ ಎಂದು ಮು॥.

ರಾಘವಾರ್ಥಂ ಚರನ್ ಶ್ರೀಮಾನ್ ದದರ್ಶ ಚ ನನಂದ ಚ ॥೮॥
ಭವನಾದ್ಭವನಂ ಗಚ್ಛನ್ ದದರ್ಶ ಪವನಾತ್ಮಜಃ ।
ವಿವಿಧಾಕೃತಿ ರೂಪಾಣಿ ಭವನಾನಿ ತತಸ್ತತಃ ॥೯॥
ಶುಶ್ರಾವ ಮಧುರಂ ಗೀತಂ ತ್ರಿಸ್ಥಾನ ಸ್ವರಭೂಷಿತಂ ।
ಸ್ತ್ರೀಣಾಂ ಮದಸಮೃದ್ಧಾನಾಂ ದಿವಿ ಚಾಪ್ಸರಸಾ ಮಿವ ॥೧೦॥
ಶುಶ್ರಾವ ಕಾಂಚೀನಿನದಂ ನೂಪುರಾಣಾಂ ಚ ನಿಸ್ವನಂ ॥
ಸೋಪಾನ ನಿನದಾಂಶ್ಚೈವ ಭವನೇಷು ಮಹಾತ್ಮನಾಂ ॥೧೧॥

---

ಸಂಚರಿಸುತ್ತಿರುವವನಾಗಿ,ಚಿತ್ರಮಾಲ್ಯ-ವಿಚಿತ್ರವಾದ ಪುಷ್ಪಮಾಲಿಗೆಗಳುಳ್ಳುದೂ, ಆಭರಣಾಂ - ಅಲಂಕಾರವುಳ್ಳುದೂ ಆಗಿರುವ, ತಾಂ- ಆ ಲಂಕಾನಗರವನ್ನು, ದದರ್ಶ - ಕಣ್ಣಿನಿಂದ ನೋಡಿದನು, ನನಂದಚ- (ಶ್ರೀರಾಮ ಸುಗ್ರೀವರ ಅನುಗ್ರಹದಿಂದ ನಿರ್ವಿಘ್ನವಾಗಿ ಪ್ರವೇಶಿಸಿದೆನು, ಮುಂದೆ ಕೆಲಸವೂ ಹಾಗೆಯೇ ಕೈಗೂಡುವುದೆಂದು) ಆನಂದಿಸಿದನು ॥ ೮ ॥ ಪವನಾತ್ಮಜಃ - ವಾಯುನಂದನನು, ಭವನಾತ್-ಒಂದು ಮನೆಯ ದೆಸೆಯಿಂದ, ಭವನಂ-ಮತ್ತೊಂದು ಮನೆಯನ್ನು ಕುರಿತು, ಗಚ್ಛನ್- ನಡೆಯುತ್ತಿರುವವನಾಗಿ, ತತಸ್ತತಃ-ಅಲ್ಲಲ್ಲಿ, ವಿವಿಧ-ಬಗೆಬಗೆಯದಾದ, ಆಕೃತಿ-ಆಕಾರಗಳೂ, ರೂಪಾಣಿ-ಸೌಂದರ್ಯಗಳೂ ಉಳ್ಳ, ಭವನಾನಿ - ಮನೆಗಳನ್ನು, ದದರ್ಶ- ನೋಡುತ ಬಂದನು ॥ ೯ ॥ ದಿವಿ-ಆಗಸದಲ್ಲಿ, ಅಪ್ಸರಸಾಮಿವ-ದಿವ್ಯಾಂಗನೆಯರ ಗಾನವು ಹೇಗೋ ಹಾಗೆ, ಮದಸಮೃದ್ಧಾನಾಂ - ಮದದಿಂದ ಪರಿಪೂರ್ಣರಾಗಿರುವ, ಸ್ತ್ರೀಣಾಂ-ಅಂಗನೆಯರ, ತ್ರಿಸ್ಥಾನ-ಎದೆ, ಕೊರಳು, ಶಿರ ಎಂಬ ಮೂರುಸ್ಥಾನಗಳಲ್ಲಿ ಹುಟ್ಟಿದ, ಸ್ವರ-ಮಂದ್ರ, ಮಧ್ಯ, ತಾರಗಳೆಂಬ ಸ್ವರವಿಶೇಷಗಳಿಂದ, ಭೂಷಿತಂ-ಅಲಂಕರಿಸಲ್ಪಟ್ಟುದಾದ ಕಾರಣವೇ, ಮಧುರಂ-ಬಹುಇಂಪಾಗಿರುವ, ಗೀತಂ-ಸಂಗೀತಧ್ವನಿಯನ್ನು, ಶುಶ್ರಾವ-ಕೇಳಿದನು ॥೧೦॥ ಮಹಾತ್ಮನಾಂ-ಬಹು ಶ್ರೀಮದೈಶ್ವರ್ಯಸಂಪನ್ನರಾದ ರಾಕ್ಷಸರ, ಭವನೇಷು-ಮಂದಿರಗಳಲ್ಲಿ, ಕಾಂಚೀನಿನದಂ-ಒಡ್ಯಾಣಗಳಲ್ಲಿನ ಕಿರುಗೆಜ್ಜೆಗಳನಾದವನ್ನೂ,ನೂಪುರಾಣಾಂ-ಕಾಲುಕಡಗಗಳ,ನಿಸ್ವನಂ-ಧ್ವನಿಯನ್ನೂ,ಸೋಪಾನನಿನದಾಂಶ್ಚೈವ-

---

ಶ್ರೀರಾಮನ ಕಾರ್ಯವನ್ನೇ ಗುರಿಯಾಗಿ ಇಟ್ಟುಕೊಂಡು ದಾರಿನಡೆಯುತ್ತಾ ಚಿತ್ರಮಾಲ್ಯಗಳಿಂದಲೂ,ವಿಚಿತ್ರವಾದ ಆಭರಣಗಳಿಂದಲೂ ಕಂಗೊಳಿಸುತಲಿರುವ ನಗರಿಯನ್ನುನೋಡುತ್ತಾ ಬರುತ್ತಿದ್ದನು ॥೮॥ ಪವಮಾನಾತ್ಮಜನೀಪರಿ ಮನೆಯಿಂದ ಮನೆಗೆ ಸರಿಯುತ್ತಾ ಬಗೆಬಗೆಯ ಆಕಾರದವುಗಳಾಗಿಯೂ, ಸೌಂದರ್ಯದವುಗಳಾಗಿಯೂ ಇರುವ ಆಶ್ಚರ್ಯಕರವಾದ ಮನೆಗಳನ್ನೆಲ್ಲ ನೋಡಿಕೊಂಡು॥೯॥ ಬರುತ್ತಾ, ಮಧ್ಯಮಾರ್ಗದಲ್ಲಿ ಬಂದೆಡೆಯೊಳು ಮದದಿಂದ ಕೊಬ್ಬಿ ಸೌಂದರ್ಯದಲ್ಲಿ ದೇವಾಂಗನೆಯರಿಗೆ ಇಮ್ಮಡಿಯೆನಿಸಿರುವ ರಕ್ಕಸಿಯರ ಎದೆ, ಕೊರಳು, ಶಿರ ಎಂಬ ಮೂರುಸ್ಥಾನಗಳಲ್ಲಿ ಹುಟ್ಟಿ ಮಂದ್ರ, ಮಧ್ಯ, ತಾರಎಂಬ ಭೇದವನ್ನು ಹೊಂದಿರುವ ಮೃದು ಮಧುರವಾದ ಸುಂದರಗಾನವನ್ನು ಕೇಳಿದನು ॥೧೦॥ ಹಾಗೆಯೇ ಇನ್ನು ಸ್ವಲ್ಪಮುಂದೆ ಬರುವಲ್ಲಿ ಮತ್ತೆ ಕೆಲವು ಮನೆಗಳೊಳಗೆ ಸುಂದರಿಯರು ಕಾಲುಕಾಲುಪು, ಬುಯ್ಯಾರ,ಬಿಣ್ಪು,ಬಿನ್ನಾಣ ಮೊದಲಾದ ಸಡಗರದಿಂದ ನಡೆದು ಬರುತ್ತಿರುವಾಗ ಒಡ್ಡಿಯಾಣದ ಕಿರುಗೆಜ್ಜೆಗಳ ಇಂಪಾದ ದನಿಯನ್ನು ಕೇಳಿದನು, ಕಾಲಕಡಗಗಳ ಸಪ್ಪಳವೂ ಕೇಳಬರುತ್ತಿದ್ದಿತು, ಹಂತಗಳ ಮೇಲೂರುವ ಹೆಜ್ಜೆಗಳಸದ್ದನ್ನೂ ಕಿವಿಗೊಟ್ಟು

ದರ್ಭಮುಷ್ಟಿ ಪ್ರಹರಣಾ ನಗ್ನಿಕುಂಡಾಯುಧಾಂ ಸ್ತಥಾ ॥೧೫॥
ಕೂಟ ಮುದ್ಗರ ಪಾಣೀಂಶ್ಚ ದಂಡಾಯುಧ-ಧರಾನಪಿ ॥೧೬॥
ಏಕಾಕ್ಷಾ ನೇಕಕರ್ಣಾಂಶ್ಚ ಲಂಬೋದರ ಪಯೋಧರಾನ್ ।
ಕರಾಳಾ ನ್ಭುಗ್ನವಕ್ತ್ರಾಂಶ್ಚ ವಿಕಟಾ ನ್ವಾಮನಾಂ ಸ್ತಥಾ ।
ಧನ್ವಿನಃ ಖಡ್ಗಿನಶ್ಚೈವ ಶತಘ್ನೀ ಮುಸಲಾಯುಧಾನ್ ॥೧೭॥

ಇರುವವರನ್ನೂ, ಮುಂಡಾನ್-ದೀಕ್ಷಾನಂತರದಲ್ಲಿ ಕ್ಷೌರಮಾಡಿಸಿಕೊಂಡಿರುವವರನ್ನೂ, ಗೋಜಿನ-ಪಶುಚರ್ಮವೆಂಬ,ಅಂಬರ-ವಸ್ತ್ರಗಳ, ವಾಸಸಃ-ಹೊಂದಿಕೆಯುಳ್ಳವರನ್ನೂ, ದರ್ಭಮುಷ್ಟಿ-(ಅನಿಷ್ಟಪರಿಹಾರಕ್ಕೋಸ್ಕರ ಅನುಷ್ಠಾನಮಾಡುವಾಗ) ಸಣ್ಣದರ್ಭೆಯ ಕಟ್ಟೆಂಬ, ಪ್ರಹರಣಾನ್-ಆಯುಧಗಳುಳ್ಳವರನ್ನೂ, ತಥಾ-ಹಾಗೆಯೇ, ಅಗ್ನಿಕುಂಡ-(ಶತ್ರುಗಳು ರೋಗಾದ್ಯುಪದ್ರವಗಳಿಂದ ಸಾಯಬೇಕೆಂದುಸಂಕಲ್ಪಿಸಿ) ಕಯ್ಯಲ್ಲಿ ಹಿಡಿದಿರುವ ಅಗ್ಗಿಷ್ಟಿಕೆಗಳೆಂಬ, ಆಯುಧಾನ್ - ಆಯುಧವುಳ್ಳವರನ್ನೂ, ತಥಾ - ಹಾಗೆಯೇ ॥ ೧೫ ॥ ಕೂಟಮುದ್ಗರಪಾಣೀಂಶ್ಚ-ಕೂಟ, ಮುದ್ಗರ, ಮೊದಲಾದ ಆಯುಧಗಳನ್ನು ಹಸ್ತದಲ್ಲಿ ಧರಿಸಿ ಇರುವವರನ್ನೂ, ದಂಡಾಯುಧಧರಾನ್ ಅಪಿ - ದಂಡಾಯುಧಗಳನ್ನು ಹಿಡಿದಿರುವವರನ್ನೂ, ಏಕಾಕ್ಷಾನ್ - ಒಂದು ಕಣ್ಣಿನವರನ್ನೂ, ಏಕಕರ್ಣಾಂಶ್ಚ - ಒಂದು ಕಿವಿಯುವರನ್ನೂ, ಲಂಬ - ಜೋಲಾಡುತ್ತಿರುವ, ಉದರ-ಹೊಟ್ಟೆಗಳೂ, ಪಯೋಧರಾನ್-ಸ್ತನಗಳೂ ಉಳ್ಳವರನ್ನೂ ॥೧೬॥ ಕರಾಳಾನ್-ಭಯಂಕರರಾದವರನ್ನೂ, ಭುಗ್ನವಕ್ತ್ರಾಂಶ್ಚ - ಬೊಕ್ಕೆಯ ಮೋರೆಯುವರನ್ನೂ, ವಿಕಟಾನ್ - ಹಲ್ಲದಿಣ್ಣೆಯ ಮೋರೆಯುವರನ್ನೂ,

ಕೈಗೊಂಡಿದ್ದರು, ಕೆಲವರು ಜಡೆಗಳನ್ನು ಬೆಳೆಸಿಕೊಂಡು ವೀರವ್ರತಗಳಲ್ಲಿ ನಿರತರಾಗಿದ್ದರು, ಕೆಲವರು ಸಲಕ್ಷಣವಾಗಿ ಕ್ಷೌರಕರ್ಮವನ್ನು ಮಾಡಿಸಿಕೊಂಡು ದೀಕ್ಷಾವಿಸರ್ಜನೆಯನ್ನು ಪಡೆದವರಾಗಿದ್ದರು. ಮತ್ತೆ ಕೆಲವರು ಗೋಚರ್ಮ, ಮೃಗಚರ್ಮ, ದೀಕ್ಷಾವಸ್ತ್ರಗಳನ್ನು ಧರಿಸಿ ಬಗೆಬಗೆಯ ಕರ್ಮಾಚರಣೆಗಾಗಿ ಸಂಕಲ್ಪಿಸಿಕೊಳ್ಳುತ್ತಿದ್ದರು, ಇನ್ನು ಕೆಲವರು ಆಯಾಕರ್ಮಗಳನ್ನು ಮಾಡಲಿಕ್ಕೂ ಮಾಡಿಸಲಿಕ್ಕೂ ಸಮಿತ್ತು, ದರ್ಭೆ ಮುಂತಾದ ಹೋಮಸಾಧನದ್ರವ್ಯಗಳನ್ನು ಹಿಡಿದಿರುತ್ತಿದ್ದರು, ಬೇರೆ ಕೆಲವರು ಅಥರ್ವ ವೇದೋದಿತವಾಗಿ ಶತ್ರುಮಾರಣಾರ್ಥವಾದ ಶ್ಯೇನ (ಡೇಗೆ) ಯಾಗವೇ ಮೊದಲಾದ ಕ್ಷುದ್ರ ಕರ್ಮಗಳನ್ನು ಮಾಡಲಿಕ್ಕೆ ಸಂಕಲ್ಪಿಸಿ ಎಡಗೈಯೊಳಗೆ ಚಿಕ್ಕದಾದ ಅಗ್ಗಿಷ್ಟಿಕೆ (ಕುಂಪಟ) ಯನ್ನೂ, ಬಲದಕಯ್ಯಲ್ಲಿ ಲೋಹದಂಡವೇ ಮೊದಲಾದುದನ್ನೂ ಹಿಡಿದು ಅರ್ಧರಾತ್ರಿಯಲ್ಲಿ ಶತ್ರುಮಾರಣಹಿಂಸಾಸೂಚಕವಾದ ಕ್ರೂರಮಂತ್ರ ಪುರಶ್ಚರಣೆಯಲ್ಲಿ ಪರಾಯಣರಾಗಿರುವುದನ್ನೂ ನೋಡುತ ಬಂದನು ॥ ೫॥ ಇನ್ನು ಸ್ವಲ್ಪದಾರಿಯನ್ನು ದಾಟಿ ಬರುತ್ತಿರುವಾಗ ಕೆಲರು, ಕೂಟ, ಮುದ್ಗರ ಮೊದಲಾದ ಆಯುಧಗಳನ್ನು ಪಾಣಿಗಳಲ್ಲಿ ಧಾರಣಮಾಡಿ ಯಾವ ಅಪಾಯಕ್ಕೂ ಎಡೆಯಾಗದ ಹಾಗೆ ಎಚ್ಚರದಿಂದ ನಿಂತಿದ್ದರು, ಕೆಲವರು ವಿಚಿತ್ರದಂಡಪಾಣಿಗಳಾಗಿ ಇರುತ್ತಿದ್ದರು, ಒಕ್ಕಣ್ಣಿನವರು ಕೆಲವರು, ಒಂದೇ ಕಿವಿಯುವರು ಕೆಲವರು, ಬೊಜ್ಜುಹೊಟ್ಟೆಯುವರೂ, ಜೋಲಾಡುವ ಉರೋಜಗಳುಳ್ಳವರೂ ಆಗಿರತಕ್ಕವರು ಕೆಲವರು, ಇಂತಹವರನ್ನೆಲ್ಲ ನೋಡುತ್ತ ನಡೆದನು ॥೬॥ ಆ ರಾಕ್ಷಸರ ವೈಚಿತ್ರ್ಯವು ಹೇಳತೀರದಾಗಿದ್ದಿತು, ಕೆಲವರು ಬಹುಕ್ರೂರವಾದ ಆಕೃತಿಯನ್ನಾಂತಿದ್ದರು, ಕೆಲವರ ಮೋರೆಗಳು

ಪರಿಘೋತ್ತಮ ಹಸ್ತಾಂಶ್ಚ ವಿಚಿತ್ರ ಕವಚೋಜ್ಜ್ವಲಾನ್ ||
ನಾತಿಸ್ಥೂಲಾ ನ್ನಾತಿಕೃಶಾ ನ್ನಾತಿದೀರ್ಘಾ ತಿಹ್ರಸ್ವಕಾನ್ ||೧೪||
ನಾತಿಗೌರಾ ನ್ನಾತಿಕೃಷ್ಣಾ ನ್ನಾತಿಕುಬ್ಜಾ ನ್ನವಾಮನಾನ್ |
ವಿರೂಪಾ ನ್ಬಹುರೂಪಾಂಶ್ಚ ಸುರೂಪಾಂಶ್ಚ ಸುವರ್ಚಸಃ |
ಧ್ವಜೀನ್ ಪತಾಕಿನಶ್ಚೈವ ದದರ್ಶ ವಿವಿಧಾಯುಧಾನ್ ||೧೯||
ಶಕ್ತಿ ವೃಕ್ಷಾಯುಧಾಂಶ್ಚೈವ ಪಟ್ಟಸಾಶನಿ ಧಾರಿಣಃ |

---

ತಥಾ-ಹಾಗೆಯೇ, ನಾಮಧಾನ್ - ಗುಜ್ಜಾರಿ (ಕುಳ್ಳ) ಗಳನ್ನೂ, ಧನ್ವಿನಃ - ಬಿಲ್ಲಾಳುಗಳನ್ನೂ, ಖಡ್ಗಿನ ಶ್ಶಕ್ತಿನಃ-ಶಕ್ತಿಗಳನ್ನು ಹಿಡಿದಿರುವವರನ್ನೂ, ಶತಘ್ನೀ-ಪಿರಂಗಿ, ಮುಸಲ-ಒನಿಕೆ ಈ ಮೊದಲಾದ, ಆಯುಧ [illegible] ||೧೩|| ಪರಿಘೋತ್ತಮ- ದೊಡ್ಡ ಲಾಳಮುಂಡಿಗೆಗಳೇ, ಹಸ್ತಾಂಶ್ಚ-ಹಸ್ತದಲ್ಲಿ ಉಳ್ಳವರನ್ನೂ, ವಿಚಿತ್ರ - ನಾನಾವಿಧವಾದ, ಕವಚ - ಕವಚಗಳಿಂದ, ಉಜ್ಜ್ವಲಾನ್-ಪ್ರಕಾಶಿಸುತಲಿರುವವರನ್ನೂ, ನಾತಿಸ್ಥೂಲಾನ್ - ಬಲುದಪ್ಪನಾಗಿಲ್ಲದವರನ್ನೂ, ನಾತಿಕೃಶಾನ್ - ಬಲು ಬಡವಾಗಿಲ್ಲದವರನ್ನೂ, ನಾತಿದೀರ್ಘಾನತಿಹ್ರಸ್ವಕಾನ್ - ಬಲು ಉದ್ದವಾಗಿಯೂ ಬಲು ಮೋಟಾಗಿಯೂ ಇಲ್ಲದವರನ್ನೂ ||೧೪|| ನಾತಿಗೌರಾನ್-ಬಹು ಬೆಳ್ಳಗಿಲ್ಲದವರನ್ನೂ, ನಾತಿಕೃಷ್ಣಾನ್-ಬಹು ಕಪ್ಪಾಗಿಲ್ಲದವರನ್ನೂ, ನಾತಿಕುಬ್ಜಾನ್-ಬಹು ಗೂನಾಗಿಲ್ಲದವರನ್ನೂ, ನವಾಮನಾನ್ - ಕುರುಬಾಗಿಲ್ಲದವರನ್ನೂ, ವಿರೂಪಾನ್-ಕುರೂಪಿಗಳನ್ನೂ, ಬಹುರೂಪಾಂಶ್ಚ - ನಾನಾರೂಪಗಳುಳ್ಳವರನ್ನೂ, ಸುರೂಪಾಂಶ್ಚ - ಬಹು ಸುಂದರಾಕಾರರನ್ನೂ, ಸುವರ್ಚಸಃ-ಅತ್ಯುತ್ತಮವಾದ ತೇಜಸ್ಸುಳ್ಳವರನ್ನೂ||೧೮|| (ಧ್ವಜೀನ್)ಧ್ವಜಿನಃ-ಧ್ವಜಗಳನ್ನು ಹಿಡಿದಿರುವವರನ್ನೂ, ಪತಾಕಿನಶ್ಚೈವ - ಜಯದ ಧ್ವಜಗಳನ್ನು ಹಿಡಿದಿರುವವರನ್ನೂ, ವಿವಿಧಾಯುಧಾನ್-ನಾನಾವಿಧವಾದ ಆಯುಧಗಳನ್ನು ಧರಿಸಿ ಇರುವವರನ್ನೂ, ದದರ್ಶ- ನೋಡುತಬಂದನು ||೧೯|| || (ಶಕ್ತಿ-ಹಸ್ತ) ಶಕ್ತಿವೃಕ್ಷಾಯುಧಾಂಶ್ಚೈವ-ಶಕ್ತಿ, ವೃಕ್ಷ, ಈ ಮೊದಲಾದ ಆಯುಧಗಳನ್ನು ಹಿಡಿದು

---

[illegible] ಕೆಲವರ, ಬಲು ವಕ್ರಸ್ವಭಾವದವರಾಗಿದ್ದರು, ಕೆಲವರು [illegible]ಗಳಾಗಿರುತ್ತಿದ್ದರು, ಪಲಬರುಧನುರ್ಧಾರಿಗಳಾಗಿಯೂ, ಖಡ್ಗಪಾಣಿಗಳಾಗಿಯೂ ಇರುತ್ತಿದ್ದರು, ಹಲಬರು ಪಿರಂಗಿಗಳನ್ನು ಹಾರಿಸಲಿಕ್ಕೆ ಅಣಿಯಾಗಿದ್ದರು, ಮತ್ತೆ ಕೆಲವರು ಮುಸಲಹಸ್ತರಾಗಿದ್ದರು, ||೧೩|| ಹಾಗೆಯೇ ಪರಿಘಾಯುಧ ಪಾಣಿಗಳನ್ನೂ, ವಿಚಿತ್ರ ಕವಚಧಾರಿಗಳಾಗಿ ತೇಜಸ್ವಿಗಳಾಗಿರುವವರನ್ನೂ ಅಲ್ಲಲ್ಲಿ ನೋಡುತ್ತಾ, ಬಲು ಸ್ಥೂಲವಾಗಿಯೂ, ಬಲು ಕೃಶವಾಗಿಯೂ, ಬಹು ಉದ್ದವಾಗಿಯೂ, ಬಹುಕುಳ್ಳಾಗಿಯೂ, ಎತ್ತರವಾಗಿಯೂ ಇಲ್ಲದೆ ಸಮವಾಗಿಯೂ ಇರುವ ನಾನಾವಿಧದ ರಕ್ಕಸರನ್ನೆಲ್ಲ ನಿರುಕಿಸುತ್ತ ಬರುತ್ತಿದ್ದನು ||೧೪|| ಬಹು ಬಿಳಪ್ಪೂ, ಬಹುಕಪ್ಪೂ ಇಲ್ಲದೆಯೂ, ಬಹುಹೀನಾಂಗರೂ, ಬಹುವಿಕಾರಾಂಗರೂ ಆಗದೆ ಇರುವಂಥವರನ್ನೂ, ವಿಕಾರಾಂಗರನ್ನೂ, ವಿಚಿತ್ರ ವೇಷಧಾರಿಗಳನ್ನೂ, ಸುಂದರರೂ ಆಗಿ ಬಹುವರ್ಚಸ್ವಿಗಳಾಗಿಯೂ ಇರತಕ್ಕವರನ್ನೂ ಈಕ್ಷಿಸಿದನು ||೧೮|| ಧ್ವಜಗಳ ಬಳಿಯಲ್ಲಿ ಕೆಲವರು, ದಾಳಗಳನ್ನು ಹಿಡಿದು ಕೆಲವರು, ಆಯುಧಪಾಣಿಗಳಾಗಿ ಕೆಲವರು, ಹೀಗೆಲ್ಲ ಇರುತ್ತಿದ್ದರು ||೧೯|| ಶಕ್ತಿಹಸ್ತರು, ವೃಕ್ಷಪಾಣಿಗಳು, ಪಟ್ಟಸಧಾರಿಗಳೂ ಆಗಿದ್ದವರು ಕೆಲವರು, ||೨೦|| ಕ್ಷೇಪಣಿ, ಪಾಶ ಇತಾದಿ

ಕ್ಷೇಪಣೀಃ ಪಾಶಹಸ್ತಾಂಶ್ಚ ದದರ್ಶ ಸ ಮಹಾಕಪಿಃ ॥೨೦॥
ಸ್ರಗ್ವಿಣ ಸ್ತ್ವನುಲಿಪ್ತಾಂಶ್ಚ ವರಾಭರಣ ಭೂಷಿತಾನ್ ॥
ನಾನಾ ವೇಷಸಮಾಯುಕ್ತಾನ್ ಯಥಾಸ್ವೈರಗತಾನ್ ಬಹೂನ್ ।
ತೀಕ್ಷ್ಣ ಶೂಲ ಧರಾಂಶ್ಚೈವ ವಜ್ರಿಣಶ್ಚ ಮಹಾಬಲಾನ್ ॥೨೧॥
ಶತಸಾಹಸ್ರ ಮವ್ಯಗ್ರ ಮಾರಕ್ಷಂ ಮಧ್ಯಮಂ ಕಪಿಃ ।
ರಕ್ಷೋಧಿಪತಿ ನಿರ್ದಿಷ್ಟಂ ದದರ್ಶಾಂತಃ ಪುರಾಗ್ರತಃ ॥೨೨॥

---

ಇರುವವರನ್ನೂ, ಪಟ್ಟಸ-ಹದಕೊಟ್ಟ ಮೊನೆಗತ್ತಿ, ಅಸಿ - ಅಷ್ಟಮೂಲೆಯ ಆಯುಧ ಇವುಗಳನ್ನು, ಧಾರಿಣಃ-ಧರಿಸಿರುವವರನ್ನೂ ॥೨೦॥ ಕ್ಷೇಪಣೀಪಾಶಹಸ್ತಾಂಶ್ಚ-ಕ್ಷೇಪಣಿ, ಪಾಶ ಎಂಬ ಆಯುಧಗಳನ್ನು ಹಿಡಿದಿರುವವರನ್ನೂ, ಸ್ರಗ್ವಿಣಃ - ಮಾಲಾಧಾರಿಗಳನ್ನೂ, ತು-ಮತ್ತು, ಅನುಲಿಪ್ತಾಂಶ್ಚ -ಪರಿಮಳದಲೇಪವುಳ್ಳವರನ್ನೂ, ವರ - ಉತ್ತಮವಾದ, ಆಭರಣ - ಒಡವೆಗಳಿಂದ, ಭೂಷಿತಾಂಶ್ಚ - ಅಲಂಕರಿಸಲ್ಪಟ್ಟವರನ್ನೂ ॥ ೨೧ ॥ ನಾನಾವೇಷಸಮಾಯುಕ್ತಾನ್ - ಅನೇಕ ವೇಷಧಾರಿಗಳನ್ನೂ, ತಥಾ - ಹಾಗೆಯೇ ಬಹೂನ್-ಅನೇಕರಾದ, ಸ್ವೈರಗತಾನ್-ಮನಬಂದಂತೆ ತಿರುಗುತ್ತಿರುವವರನ್ನೂ, ತೀಕ್ಷ್ಣ-ಮೊನೆಯಾದ, ಶೂಲಧರಾಂಶ್ಚೈವ - ಶೂಲಾಯುಧಪಾಣಿಗಳನ್ನೂ, ಮಹಾಬಲಾನ್ - ಬಹು ಬಲಶಾಲಿಗಳಾದ, ವಜ್ರಿಣಶ್ಚ-ವಜ್ರಾಯುಧ ಹಸ್ತರನ್ನೂ, ಸಃ-ಆ, ಮಹಾಕಪಿಃ-ಕಪಿವೀರನು, ದದರ್ಶ-ನೋಡುತ್ತ ಬಂದನು ॥೨೧॥ ಕಪಿಃ-ಮಾರುತಿಯು, ಅನ್ತಃಪುರಾಗ್ರತಃ - ರಾಣಿಯರು ವಾಸಮಾಡುವ ಮನೆಯ ಮುಂದೆ, ಶತಸಾಹಸ್ರಂ-ಲಕ್ಷಸಂಖ್ಯೆಯುಳ್ಳ, ಅವ್ಯಗ್ರಂ - ರಕ್ಷಣಕಾರ್ಯದಲ್ಲಿ ಎಚ್ಚರವಾಗಿರುವ, ರಕ್ಷೋಧಿಪತಿ - ರಕ್ಕಸರೊಡೆಯನಿಂದ, ನಿರ್ದಿಷ್ಟಂ - ನೇಮಿಸಲ್ಪಟ್ಟಿರುವ, ಮಧ್ಯಮಂ - ಮಧ್ಯಭಾಗದೊಳಿರುವ, ಆರಕ್ಷಂ-ರಾಕ್ಷಸ ಬಲವನ್ನು, ದದರ್ಶ - ನೋಡಿದನು ॥ ೨೨ ॥ ಮಹಾಕಪಿಃ - ಕಪಿವೀರನಾದ, ಸಃ - ಆ ಹನುಮನು,

---

ಆಯುಧಗಳನ್ನೂ ಕೆಲವರು ಧರಿಸಿ ಇದ್ದರು ಇಂಥವರಲ್ಲದೆ ಮತ್ತೆ ಕೆಲವರು ದಿವ್ಯಮಾಲ್ಯಧಾರಿಗಳಾಗಿ ದಿವ್ಯ ಪರಿಮಳ ಗಂಧಲಿಪ್ತರೆನಿಸಿ ದಿವ್ಯವಸ್ತ್ರಾಭರಣಗಳನ್ನು ಧಾರಣಮಾಡಿ ಸರ್ವಾಲಂಕಾರ ಸಂಶೋಭಿತರಾಗಿ ಇರುತ್ತಿದ್ದರು ॥೨೦॥ ನಾನಾ ವೇಷಧಾರಿಗಳೂ, ಸ್ವೇಚ್ಛಾ ಚಾರಿಗಳೂ,ತೀಕ್ಷ್ಣತರಾಯುಧ ಪಾಣಿಗಳೂ,ವಜ್ರಾದ್ಯಾಯುಧಧರರೂ ಆಗಿ ಇರತಕ್ಕ ಬಹುಮಂದಿ ರಾಕ್ಷಸರನ್ನೂ ನೋಡುತ್ತಾ ಗುಟ್ಟಾಗಿ ಹೊರಟು ಬರುತ್ತಿದ್ದನು॥೨೧॥ಅಹಹ ! ಯಾಮಿನೀಚರನಾಯಕನಾದ ರಾವಣನೇನು ಸಾಮಾನ್ಯನೇ? ಆತನ ವಿದ್ಯೆ,ಶಕ್ತಿ,ವಿಭವ, ದರ್ಪ,ವೀರ್ಯ, ಶೌರ್ಯ, ವಿಜಯ ವಿಖ್ಯಾತಿ,ಪ್ರಭು ಮಂತ್ರ ಕ್ರಿಯಾಶಕ್ತಿಗಳು,ಇವೆಲ್ಲ ಏನುಸಾಮಾನ್ಯಗಳೆ ? ತ್ರೈಲೋಕ್ಯವೀರನಲ್ಲವೆ ? ಮಹಾತಪಸ್ವಿಯಲ್ಲವೆ ? ವರಬಲದಿಂದ ಮದೋನ್ಮತ್ತನಾಗಿದ್ದನಲ್ಲವೆ ? ಇಂಥವನ ಅಪಾರವಾದ ಸಂಪತ್ತಿನ ಪರಿಪಾಟಿಯನ್ನೆಲ್ಲ ಕ್ರಮವಾಗಿ ನೋಡುತ ಬರುತಲಿದ್ದ ಶ್ರೀಮದಾಂಜನೇಯನು ಮೆಲ್ಲಗೆ ರಾವಣನ ರಾಣಿವಾಸದ ಜನವು ವಾಸಮಾಡುವ ಅಂತಃ ಪುರದ ಬಳಿಗೆ ಬಂದನು, ಅಲ್ಲಿ ಒಂದುಲಕ್ಷ ಮಂದಿ ರಾಕ್ಷಸರು ಮೈಯಲ್ಲ ಕಣ್ಣುಳ್ಳವರಾಗಿ ರಾಕ್ಷಸ ಚಕ್ರವರ್ತಿಯ ಮುಖದಿಂದ ಹೊರಡುವ ಆಜ್ಞೆಯನ್ನು ಎದುರುನೋಡುತ್ತ ಬಹುಜಾಗರೂಕತೆಯಿಂದ ಇರುತ್ತಿದ್ದರು, ಇದು ಆರಾವಣನ ಮಧ್ಯಮವಾದ ಮೂಲಬಲ, ಇದು ಆನಗರದ ನಡುವೆ ಇದ್ದಿತು ॥ ೨೨ ॥ ಆಗಲಾ ಆಂಜನೇಯನು

ಸ ತದಾ ತದ್ಗೃಹಂ ದೃಷ್ಟ್ವಾ ಮಹಾ ಹಾಟಕ ತೋರಣಂ ।
ರಾಕ್ಷಸೇಂದ್ರಸ್ಯ ವಿಖ್ಯಾತ ಮದ್ರಿಮೂರ್ಧ್ನಿ ಪ್ರತಿಷ್ಠಿತಂ ॥೨೪॥
ಪುಂಡರೀಕಾವತಂಸಾಭಿಃ ಪರಿಘಾಭಿ ರಲಂಕೃತಂ ।
ಪ್ರಾಕಾರಾವೃತ ಮತ್ಯಂತಂ ದದರ್ಶ ಸ ಮಹಾಕಪಿಃ ॥೨೫॥
ತ್ರಿವಿಷ್ಟಪನಿಭಂ ದಿವ್ಯಂ ದಿವ್ಯ ನಾದ ವಿನಾದಿತಂ ।
ವಾಜಿಹೇಷಿತ ಸಂಘುಷ್ಟಂ ನಾದಿತಂ ಭೂಷಣೈ ಸ್ತಥಾ ॥೨೬॥
ರಥೈ ರ್ಯಾನೈ ರ್ವಿಮಾನೈಶ್ಚ ತಥಾ ಹಯ ಗಜೈ ಶ್ಶುಭೈಃ ।

ತದಾ-ಆಗ, ಮಹಾಹಾಟಕ - ಶ್ರೇಷ್ಠವಾದ ಚಿನ್ನದಿಂದ ಮಾಡಿರುವ, ತೋರಣಂ - ಹೊರಬಾಗಿಲುಳ್ಳ, ವಿಖ್ಯಾತಂ- ಹೆಸರುವಾಸಿಯನ್ನು ಪಡೆದಿರುವ, ಅದ್ರಿಮೂರ್ಧ್ನಿ - ಬೆಟ್ಟದ ತುದಿಯಲ್ಲಿ, ಪ್ರತಿಷ್ಠಿತಂ-ನೆಲೆಗೊಳಿಸಲ್ಪಟ್ಟಿರುವ, ರಾಕ್ಷಸೇಂದ್ರಸ್ಯ ನಿಶಾಚರ ಚಕ್ರವರ್ತಿಯ, ತತ್-ಆ, ಗೃಹಂ-ಮಂದಿರವನ್ನು, ದೃಷ್ಟ್ವಾ-ನೋಡಿ ॥ ೨೪ ॥ ಪುಂಡರೀಕಾವತಂಸಾಭಿಃ - ಬೆಳ್ದಾವರೆಗಳೇ ಅಲಂಕಾರವಾಗಿ ಉಳ್ಳ, ಪರಿಘಾಭಿಃ-ಅಗಳುಗಳಿಂದ, ಅಲಂಕೃತಂ - ಅಲಂಕರಿಸಲ್ಪಟ್ಟಿರುವುದಾಗಿಯೂ, ಪ್ರಾಕಾರಾವೃತಂ - ಪೌಳಿಗೋಡೆಯಿಂದ ಸುತ್ತಲ್ಪಟ್ಟುದಾಗಿಯೂ ಇರುವ, ಗೃಹಂ-ರಾವಣನ ರಾಣಿವಾಸವನ್ನು, ಅತ್ಯಂತಂ - ಚೆನ್ನಾಗಿ ಮನವಿಟ್ಟು (ಏಕಾಗ್ರಚಿತ್ತನಾಗಿ) ದದರ್ಶ - ನೋಡುತಿದ್ದನು ॥ ೨೫ ॥ ತ್ರಿವಿಷ್ಟಪನಿಭಂ - ಸ್ವರ್ಗವನ್ನು ಹೋಲುತಲಿರುವ, ದಿವ್ಯಂ-ಬಹುಶ್ರೇಷ್ಠವೆನಿಸಿದ, ದಿವ್ಯನಾದ-ದಿವ್ಯಮಂಗಳಗೀತದಿಂದ, ವಿನಾದಿತಂ-ಶಬ್ದಮಾಡಲ್ಪಟ್ಟುದಾಗಿಯೂ, ವಾಜಿ-ಕುದುರೆಗಳ, ಹೇಷಿತ - ಹೇಷಾರವದಿಂದ, ಸಂಘುಷ್ಟಂ-ವ್ಯಾಪಿಸಲ್ಪಟ್ಟುದಾದ, ತಥಾ-ಹಾಗೆಯೇ, ಭೂಷಣೈಃ- ವಿಚಿತ್ರಾಭರಣಗಳಿಂದ, ನಾದಿತಂ-ಧ್ವನಿಗೆಯ್ಯುತಲಿರುವ ॥೨೬॥ ರಥೈಃ-ತೇರುಗಳಿಂದಲೂ, ವಿಮಾನೈಶ್ಚ - ದೇವಯಾನಗಳಿಂದಲೂ, ತಥಾ- ಹಾಗೆಯೇ, ಶುಭೈಃ-ಮಂಗಳಕರಗಳೆನಿಸಿದ, ಹಯಗಜೈಃ - ಆನೆ ಕುದುರೆಗಳಿಂದಲೂ, ಶ್ವೇತಾಭ್ರ - ಬಿಳಿಯ ಮೋಡಗಳ, ನಿಚಯ-ಸಮೂಹಕ್ಕೆ, ಉಪಮೈಃ-ಸಮಾನಗಳಾದ, ಚತುರ್ದಂತೈಃ - ನಾಲ್ಕುಕೊಂಬು (ದಂತ) ಗಳುಳ್ಳ, ವಾರಣೈಶ್ಚ-

ಸುವೇಲಾಚಲದ ಶಿಖರದಲ್ಲಿ ನೆಲೆಗೊಂಡು ಮೆರೆಯುವ ಲಂಕಾ ಪಟ್ಟಣದೊಳಗೆ, ನಟ್ಟನಡುವೆ, ಎತ್ತರವಾದ ಸ್ಥಳದಲ್ಲಿ, ದಿವ್ಯವಾದ ಕುಂದಣಗೆಲಸದ ಕೈವಾಟದಿಂದೆಸೆಯುವ ಹೊರಬಾಗಿಲಿನಿಂದ ಒಪ್ಪುತಲಿರುವ ರಾಣಿಯರ ಸುಪ್ರಸಿದ್ಧವಾದ ಅರಮನೆಯನ್ನು ದೂರದಿಂದ ನೋಡಿದನು ॥೨೪॥ ಆ ಮನೆಯಸುತ್ತಲೂ ಅಗಳೊಂದು ನೆಗಳ್ದಿತ್ತು, ಅದರಲ್ಲಿ ಬೆಳ್ದಾವರೆಗಳು ಕಂಗೊಳಸುತಲಿದ್ದುವು. ಬಳಸಿರುವ ಪ್ರಾಕಾರವು ಮೆರೆಯುತಲಿತ್ತು. ಇಂತಹ ಮಂದಿರವನ್ನು ಕಂಡನು ॥೨೫॥ ಅದು ಮೂಲೋಕದೊಡೆಯನಾದ ದೇವೇಂದ್ರನ ತ್ರಿವಿಷ್ಟಪದಂತೆ ಶ್ರೇಷ್ಠವಾಗಿದ್ದಿತು, ಅಪ್ಸರಸ್ತ್ರೀಯರ ದಿವ್ಯಗಾನದಂತೆ ಆ ಅಂತಃಪುರದೊಳಗಣ ಅಖಂಡವಾದ ದಿವ್ಯಾಂಗನಾನಾದವು ಕೇಳಬರುತ್ತಿತ್ತು, ಅಶ್ವಗಳ ಹೇಷಾರವವನ್ನೂ, ಅಲ್ಲಿನ ಸುಂದರಿಯರ ದಿವ್ಯಾಂಬರಾಭರಣಗಳ ಅಮೋಘವಾದ ಶಬ್ದವನ್ನೂ ಆಲಿಸಿದನು ॥ ಮುಂದರಿದು ತುಸ ನಿರುಕಿಸಿದನು, ಅಹಹ ! ಏನ ಹೇಳೋಣ !! ಒಂದೆಡೆ ಶ್ರೇಷ್ಠವಾದ ರಥಗಳು, ಒಂದುಕಡೆ ದಿವ್ಯವಿಮಾನಗಳು, ಮತ್ತೊಂದುಕಡೆ ಉತ್ತಮಾಶ್ವಗಳು, ಭದ್ರ

ವಾರಣೈಶ್ಚ ಚತುರ್ದಂತೈ ಶ್ಶ್ವೇತಾಭ್ರ ನಿಚಯೋಪಮೈಃ ॥೨೭॥
ಭೂಷಿತಂ ರುಚಿರದ್ವಾರಂ ಮತ್ತೈಶ್ಚ ಮೃಗಪಕ್ಷಿಭಿಃ ।
ರಕ್ಷಿತಂ ಸುಮಹಾವೀರ್ಯೈ ರ್ಯಾತುಧಾನೈ ಸ್ಸಹಸ್ರಶಃ ॥
ರಾಕ್ಷಸಾಧಿಪತೇ ರ್ಗುಪ್ತ ಮಾವಿವೇಶ ಮಹಾಕಪಿಃ ॥೨೮॥
ಸಹೇಮ ಜಾಂಬೂನದ ಚಕ್ರವಾಳಂ
ಮಹಾರ್ಹ ಮುಕ್ತಾಮಣಿ ಭೂಷಿತಾಂಕಂ ।

---

ಆನೆಗಳಿಂದಲೂ ॥ ೨೭ ॥ ಮತ್ತೈಃ - ಮದಿಸಿ ಇರುವ, ಮೃಗಪಕ್ಷಿಭಿಃ - ನಾನಾ ಮೃಗಪಕ್ಷಿಗಳಿಂದಲೂ ಭೂಷಿತಂ - ಅಲಂಕರಿಸಲ್ಪಟ್ಟಿರುವ, ರಕ್ಷಿಭಿಃ - ಕಾವಲುಗಾರರಾದ, ಸುಮಹಾ ವೀರ್ಯೈಃ - ಅಪಾರ ವಾದ ದೇಹಬಲವುಳ್ಳ, ಯಾತುಧಾನೈಃ - ರಾಕ್ಷಸರಿಂದ, ಸಹಸ್ರಶಃ-ಸಾವಿರಾರು ಬಗೆಯಾಗಿ, (ತಂಡೋಪ ತಂಡವಾಗಿ) ರಕ್ಷಿತಂ - ಕಾಪಾಡಲ್ಪಟ್ಟಿದಾದ, ॥೨೮॥ ರಾಕ್ಷಸಾಧಿಪತೇಃ-ನಿಶಾಚರ ಸಾರ್ವಭೌಮನ, ಗುಪ್ತಂ - ಗೋಪ್ಯವಾದ, ರುಚಿರದ್ವಾರಂ - ಬಲು ಅಂದವಾದ ಬಾಗಿಲಿನಲ್ಲಿ, ಆವಿವೇಶ - ಪ್ರವೇಶಿಸುತಲಿದ್ದನು. ॥೨೮॥ ಸಹೇಮ -ಗಣಿಯ ಬಂಗಾರದಿಂದಲೂ, ಜಾಂಬೂನದ-ಜಂಬೂನದಿಯಲ್ಲಿ ಹುಟ್ಟಿದ ಸುವರ್ಣದಿಂದಲೂ ರಚಿಸಲ್ಪಟ್ಟಿರುವ, ಚಕ್ರವಾಳಂ - ಪೌಳಿಗೋಡೆಯುಳ್ಳ, ಮಹಾರ್ಹ - ಬಹು ಬೆಲೆಯುಳ್ಳ, ಮುಕ್ತಾಮಣಿ-ಮುತ್ತು ಮತ್ತು ರತುನಗಳಿಂದ, ಭೂಷಿತ-ಅಲಂಕರಿಸಲ್ಪಟ್ಟಿರುವ, ಅಂಕಂ - ಒಳಭಾಗವುಳ್ಳುದಾಗಿಯೂ, ಪರಾರ್ಥ್ಯ - ಶ್ರೇಷ್ಠವಾದ, ಕಾಲಾಗುರು - ಕೃಷ್ಣಾಗುರು ಗಂಧದಿಂದಲೂ,

---

ಗಜಗಳೂ, ಶುಭ್ರಮೇಘಗಳಂತೆ ಮೆರೆಯುವ ನಾಲ್ಕುಕೊಂಬುಗಳ ಮಂಗಳದ್ವಿಪಗಳೂ ವಿರಾಜಿಸುತಲಿದ್ದುವು ॥೨೭॥ ಆದಿವ್ಯಮಂದಿರದ ಮನೋಹರವಾದಮಹಾದ್ವಾರವು ಸರ್ವಾಲಂಕಾರ ಸಂಶೋಭಿತವಾಗಿ ಪ್ರಜ್ವಲಿಸುತಲಿತ್ತು. ಆ ದ್ವಾರವು ಇಕ್ಕೆಲದಲ್ಲಿನ ಮದವೇರಿದ ಆನೆಗಳಿಂದಲೂ, ನಾನಾವಿಧವಾದ ಮೃಗಗಳಿಂದಲೂ, ಬಗೆಬಗೆಯಾದ ಪಕ್ಷಿಗಳಿಂದಲೂ ಬಹುಭೂಷಿತವಾಗಿರುತ್ತಿತ್ತು. ಮತ್ತು-ವೀರಾನುವೀರರಾದ ಸಾವಿರಾರುಮಂದಿ ರಾಕ್ಷಸ ಭಟರು ದಿವ್ಯಾಯುಧ ಪಾಣಿಗಳಾಗಿ, ತುಸವಾದರು ಎಚ್ಚರದಪ್ಪದೆ, ಹಗಲಿರುಳೂ ಆ ದಿವ್ಯಭವನವನ್ನು ಕಾಯುತಲಿದ್ದರು. ಅಂತಹ ಮಹಾಭವನವನ್ನು ಆಂಜನೇಯನು ಒಳ ಹೊಗಲು ಉದ್ಯುಕ್ತನಾದನು ॥ ೨೮ ॥ ॥ ದೇಶಾಂತರದ ಗಣಿಗಳಲ್ಲಿಯೂ ಜಂಬೂನದಿಯಲ್ಲಿಯೂ ಹುಟ್ಟಿದ ಸುವರ್ಣದ ಮಯವಾಗಿಯೂ, ಅಪಾರವಾದಬೆಲೆಯ ವಜ್ರ,ವೈಡೂರ್ಯ, ಗೋಮೇಧಿಕ, ಪುಷ್ಯರಾಗ, ಮರಕತ, ಮಾಣಿಕ್ಯ, ಮುಕ್ತಾ, ಪ್ರವಾಳಾದಿ ದಿವ್ಯರತ್ನಗಳಿಂದ ಅಲಂಕೃತವಾಗಿಯೂ, ಶ್ರೇಷ್ಠತರವೆನಿಸಿರುವಕೃಷ್ಣಾಗುರು, ದಿವ್ಯಚಂದನ,ಮೊದಲಾದ ಪರಿಮಳದ್ರವ್ಯದಿಂದ ಘಮಘಮಿಸುತ್ತಿರುವುದಾಗಿಯೂ ಇರುವ, ಸರ್ವೋತ್ತಮವೆನಿಸಿದ ರಾವಣನ ಅಂತಃಪುರವನ್ನು ಅಂತರಂಗವಾಗಿಒಳಹೊಗುತಲಿದ್ದನು ॥ ೨೯ ॥ ॥

ಪರಾರ್ಥ್ಯ ಕಾಲಾಗುರು ಚಂದನಾಕ್ತಂ
ಸ ರಾವಣಾಂತಃ ಪುರ ಮಾವಿವೇಶ ॥೨೯॥ ॥
ಇತಿ ಶ್ರೀಮತ್ಸುಂದರಕಾಂಡೇ ಚತುರ್ಥಸ್ಸರ್ಗಃ.

ಚಂದನ - ದಿವ್ಯ ಪರಿಮಳದಿಂದಲೂ, ಆಕ್ತಂ- ವ್ಯಾಪಿಸಲ್ಪಟ್ಟಿರುವ, [ತುಂಬಿರುವ] ರಾವಣಾಂತಃಪುರಂ- ರಾವಣನ ರಾಣೀವಾಸವನ್ನು, ಆವಿವೇಶ - ಒಳಹೊಗುತ್ತಿದ್ದನು. ॥೨೯॥ ॥

ಇಂತು ರಸಾಯನ ಟೀಕಾಸಹಿತವಾಗಿರುವ ಶ್ರೀಮದ್ರಾಮಾಯಣದ ಸುನ್ದರಕಾಣ್ಡದಲ್ಲಿ
ನಾಲ್ಕನೆಯ ಸರ್ಗವು.

ಕಂದ॥ ಮಾರುತಿ ಸೀತೆಯು ಸರಸಲ್ ಮಾರಾಣಿಯ ಮಂದಿರಾಂತ ಕೈದುತ್ತಿರಲಾ ।
ಮಾರಾತ್ರಿಯು ಚಂದಿರನೆಂ ಬಾರಾಜಿಪ ದೀಪವನ್ನೆ ತೋರುತೆ ಮೆರೆದಳ್ ॥

ಇಂತುರಸಾಯನಟೀಕಾತಾತ್ಪರ್ಯದಿಂದೊಡಗೂಡಿರುವ
ಶ್ರೀಮದ್ವಾಲ್ಮೀಕಿ ರಾಮಾಯಣದ ಸುನ್ದರಕಾಣ್ಡದಲ್ಲಿ
ನಾಲ್ಕನೆಯ ಸರ್ಗವು.

ಪಂಚಮಸ್ಸರ್ಗಃ.

ಮೂ॥ ತತ ಸ್ಸಮಧ್ಯಂ ಗತ ಮಂಶುಮಂತಂ
ಜ್ಯೋತ್ಸ್ನಾವಿತಾನಂ ಮಹದುದ್ವಮಂತಂ ।
ದದರ್ಶ ಧೀಮಾ ದಿವಿ ಭಾನುಮಂತಂ
ಗೋಷ್ಠೇವೃಷಂ ಮತ್ತ ಮಿವ ಭ್ರಮಂತಂ ॥೧॥

ಓಂ ನಮೋ ಜಾನಕೀಜಾನಯೇ

ಟೀ॥ ‡ ತತಃ - ಹಾಗೆ ಪ್ರವೇಶಿಸಿದ ಬಳಿಕ, ಧೀಮಾ - ಬುದ್ಧಿವಂತನಾದ, ಸಃ-ಆ ಆಂಜನೇಯನು, ದಿವಿ - ಅಂತರಿಕ್ಷದಲ್ಲಿ, ಮಧ್ಯಂ - [ಆಕಾಶದ] ಮಧ್ಯಭಾಗವನ್ನು, ಗತಂ-ಹೊಂದಿ ಇರುವ, [ತಾರೆಗಳ ನಡುವೆ ಇರುವ] ಮಹತ್ - ಹೆಚ್ಚಾದ, ಜ್ಯೋತ್ಸ್ನಾವಿತಾನಂ - ಬೆಳದಿಂಗಳ ಸಮೂಹವನ್ನು, ಉದ್ವಮಂತಂ - ಕಾರುತಲಿರುವ, [ಹರಡುತಲಿರುವ] ಭಾನುಮಂತಂ-ಕಿರಣಗಳುಳ್ಳ ಚಂದ್ರನನ್ನು

—ಶ್ರೀರಘುನನ್ದನ ಪರಬ್ರಹ್ಮಣೇನಮಃ—

ಕಂದ॥ ಶಶಿಯಂದಾ ನಿಶೆಯೊಳ್ತಾ ನಶುಭಂ ತಮ ತೊಲಗಿತೆನ್ನು ತಾಗಸ ದೆಡೆಯೊಳ್ ।
ವಿಶದ ಪ್ರಭೆಗಳ ನೆಸೆದಂ ವೃಷ ಹಂಸ ಪ್ರಮುಖ ಶುಭ್ರ ವಸ್ತುವ ತೆರದೊಳ್ ॥

ಮುಗಿಲ ಮಂಡಲದ ನಡುವೆ ತುಂಬಿ ತುಳುಕುವಂತೆ ಬೆಳದಿಂಗಳನ್ನು ಹರಡುತ್ತ ನಡೆದುಬರುವ ಉಡುರಾಜನು ಕೊಟ್ಟಿಗೆಯೊಳಗೆ ಮದವೇರಿಸುತ್ತುತಲಿರುವ ದೊಡ್ಡ ಗೂಳಿಯಂತೆ ವಿರಾಜಿಸುತ, ಪವನನಂದನನ ನಯನ ಪಾವಿಗೆಡೆಯಾದನು. ಇಂತಾರಾಣಿವಾಸವನ್ನು ಜಾಣನಾದಮಾರುತಿಯು ಒಳಹೊಗುವಂದು, ನಟ್ಟಿರುಳು ಕಂಗೊಳಿಸುತಿರ್ದುದು.

‡ ಈ ಸರ್ಗದಲ್ಲಿ ಇಲ್ಲಿಂದ ಮುಂದೆ ಶಬ್ದಾರ್ಥಾಲಂಕಾರ ಸೌಂದರ್ಯ.

ಲೋಕಸ್ಯ ಪಾಪಾನಿ ವಿನಾಶಯಂತಂ
ಮಹೋದಧಿಂ ಚಾಪಿ ಸಮೇಧಯಂತಂ ।
ಭೂತಾನಿ ಸರ್ವಾಣಿ ವಿರಾಜಯಂತಂ
ದದರ್ಶ ಶೀತಾಂಶು ಮಥಾಭಿಯಾಂತಂ ॥೨॥
ಯಾ ಭಾತಿ ಲಕ್ಷ್ಮೀರ್ಭುವಿ ಮಂದರಸ್ಥಾ
ತಥಾ ಪ್ರದೋಷೇಷು ಚ ಸಾಗರಸ್ಥಾ ।
ತಥೈವ ತೋಯೇಷು ಚ ಪುಷ್ಕರಸ್ಥಾ
ರರಾಜ ಸಾ ಚಾರು ನಿಶಾಕರಸ್ಥಾ ॥೩॥

---

ಗೋಷ್ಠೇ - ದನಗಳ ಕೊಟ್ಟಿಗೆಯಲ್ಲಿ, ಭ್ರಮಂತಂ - ತಿರುಗುತಲಿರುವ, ಮತ್ತಂ-ಕೊಬ್ಬಿದ, ವೃಷಮಿವ - ಬಿಳಿಯ ಗೂಳಿಯನ್ನು ಹೇಗೋ ಹಾಗೆ, ದದರ್ಶ - ನೋಡಿದನು ॥ ೧ ॥ ಅಥ - ಆಮೇಲೆ, ಲೋಕಸ್ಯ- ಜನರ, ಪಾಪಾನಿ - ಪಾಪದ ಫಲವಾದ ದುಃಖಗಳನ್ನು (ಪಾಪರೂಪವಾದ ಕತ್ತಲನ್ನು) ವಿನಾಶಯಂತಂ- ಪರಿಹರಿಸುತಲಿರುವ, ಮಹೋದಧಿಂ ಚಾಪಿ - ದೊಡ್ಡ ಕಡಲನ್ನೂ, ಸಮೇಧಯಂತಂ- ಉಕ್ಕಿಸುತಲಿರುವ, ಸರ್ವಾಣಿ-ಸಮಸ್ತಗಳಾದ, ಭೂತಾನಿ-ಪ್ರಾಣಿಗಳನ್ನೂ, ವಿರಾಜಯಂತಂ, ಪ್ರಕಾಶಗೊಳಿಸುವ, ಅಭಿಯಾಂತಂ- ಗಗನಮಾರ್ಗದಲ್ಲಿ ತೆರಳುತಲಿರುವ, ಶೀತಾಂಶುಂ - ತಂಪಾದ ಕಿರಣಗಳುಳ್ಳ ಚಂದ್ರನನ್ನು, ದದರ್ಶ, ಕಂಡನು ॥ ೨ ॥ ಭುವಿ - ಭೂಲೋಕದಲ್ಲಿ, ಮಂದರಸ್ಥಾ - ಮಂದರ ಪರ್ವತದಲ್ಲಿ ನೆಲೆಗೊಂಡಿರುವ, ಲಕ್ಷ್ಮೀಃ - ಕಾಂತಿಯು, ಯಾ - ಎಂಥದಾಗಿ, ಭಾತಿ-ಪ್ರಕಾಶಿಸುತ್ತದೆಯೋ, ತಥಾ - ಹಾಗೆಯೇ, ಪ್ರದೋಷೇಷು - ನಿಶಾರಂಭಗಳಲ್ಲಿ, ಸಾಗರಸ್ಥಾ - ಕಡಲೊಳಗೆ ನೆಲೆಗೊಂಡುದಾಗಿ, ಭಾತಿ - ಹೇಗೆ ಪ್ರಕಾಶಿಸುತದೆಯೋ, ತೋಯೇಷು - ಉದಕಗಳಲ್ಲಿ ನೆಲೆಗೊಂಡಿರುವ, ಪುಷ್ಕರಸ್ಥಾ - ತಾವರೆಗಳಲ್ಲಿ ನೆಲೆಸಿರುವುದಾಗಿ, ಭಾತಿ - ಹೇಗೆ ಹೊಳೆಯುತ್ತದೆಯೋ, ತಥೈವ - ಹಾಗೆಯೇ, ಸಾ - ಆ, ಚಾರು-ಸುಂದರವಾದ, ನಿಶಾಕರ - ಚಂದ್ರನಲ್ಲಿ, ಸ್ಥಾ - ನೆಲೆಗೊಂಡಿರುವ ಕಾಂತಿಯೂ, ರರಾಜ -ಪ್ರಕಾಶಿಸುತಲಿದ್ದಿತು॥

---

ಮತ್ತು -ಚಂದ್ರಮನಂದು ಇನ್ನೆಂತು ಬೆಳಗುತಿರ್ದನೆಂದೊಡೆ —॥೧॥ಜನರಕಣ್ಣುಗಳಿಗೆ ಆವುದೊಂದುವಸ್ತುವನ್ನೂ ತೋರಗೊಡದೆ ಪ್ರಕಾಶಿಸುತಲಿರುವ ಕಗ್ಗತ್ತಲೆಂಬ ಕಲ್ಮಷವನ್ನು ತೊಲಗಿಸುತ್ತಲೂ, ತನ್ನನ್ನು ಭಜಿಸುವವರ ಪಾಪವನ್ನು ಪರಿಹರಿಸುತ್ತಲೂ, ತನ್ನ ಬೆಳಕನ್ನು ಹಬ್ಬಿಸಿ ಪೆರ್ಗಡಲನ್ನು ಉಕ್ಕುವಂತೆಮಾಡುತ್ತಲೂ, ತಾನು ಸಕಲಸಂಪತ್ತಿನಿಂದ ಕೂಡಿದವನಾದರೂ ಮಹೋದಾರನಾದ ಸತ್ಪುರುಷನಂತೆ ಇವನು ತನ್ನವನು, ಇವನು ಹೆರರವನು ಎಂದು ತುಸವಾದರೂ ಭೇದವನ್ನೆಣಿಸದೆ ಸಕಲ ಪ್ರಾಣಿಗಳಿಗೂ ಒಂದೇಸಮವಾಗಿ ಬೆಳ್ದಿಂಗಳೆಂಬ ಹಣವನ್ನು ಬೀರಿ, ತನ್ನ ಸಂಪದವನ್ನು ಸೂರೆಗೊಂಡರಲ್ಲಾ ಎಂದು ಇನಿಸಾದರೂ ಕೊರಗದೆ ಮೈದುಂಬಿ ಮೆರೆಯುತ್ತಿದ್ದನು. ॥೨॥ ಈ ನೆಲದಮೇಲೆ ಬೆಳ್ಳಗೆ ಬೆಳಗುವ ಮಂದರಗಿರಿಯ ಚಲುವಿಕೆಯಂತೆಯೂ, ಸಂಜೆಯುಸಮಯದಲ್ಲಿ ಸಂಜೆಗೆಂಪಿನ ಹರಡಿಕೆಯಿಂದ ಕಡಲಿನ ಅಂಗಳದ ಕಾಂತಿಯಂತೆಯೂ, ಕೊಳಗಳೊಳಗೆ ಮೆರೆಯುವ ಬೆಳ್ದಾವರೆಗಳ ಅಂದದಿಂದಲೂ,ತಣ್ಗದಿರನ ಮೈಕಾಂತಿಯು ಶೋಭಿಸುತಲಿದ್ದಿತು ॥೩॥ಪುಟವಿಟ್ಟ

ಹಂಸೊ ಯಥಾ ರಾಜತ ಪಂಜರಸ್ಥಃ
ಸಿಂಹೋ ಯಥಾಮಂದರ ಕಂದರಸ್ಥಃ ।
ವೀರೊ ಯಥಾ಼ಗರ್ವಿತ ಕುಂಜರಸ್ಥಃ
ಚಂದ್ರೋಽಪಿ ಬಭ್ರಾಜ ತಥಾಂ ಬರಸ್ಥಃ ॥೪॥
ಸ್ಥಿತಃ ಕಕುದ್ಮಾನಿವ ತೀಕ್ಷ್ಣಶೃಂಗೊ
ಮಹಾಚಲ ಶ್ವೇತ ಇವೋಚ್ಚಶೃಂಗಃ ।
ಹಸ್ತೀವ ಜಾಂಬೂನದ ಬದ್ಧಶೃಂಗೊ
ರರಾಜ ಚಂದ್ರಃ ಪರಿಪೂರ್ಣಶೃಂಗಃ ॥೫॥

---

ಹಂಸಃ - ರಾಜಹಂಸೆಯು, ರಾಜತಪಂಜರಸ್ಥಃ - ಬೆಳ್ಳಿಯ ಪಂಜರದೊಳಗೆ ನೆಲೆಗೊಂಡುದಾಗಿ, ಯಥಾ - ಹೇಗೆ, (ಭ್ರಾಜತೆ - ಹೊಳೆಯುತವೆಯೋ) ಸಿಂಹಃ - ಮೃಗೇಂದ್ರನು, ಮಂದರ - ಮಂದರ ಪರ್ವತದ, ಕಂದರಸ್ಥಃ - ಗುಹೆಯಲ್ಲಿ ನೆಲೆಗೊಂಡುದಾಗಿ, ಯಥಾ - ಹೇಗೆ, (ಭ್ರಾಜತೆ-ಹೊಳೆಯುತ್ತದೆಯೋ) ವೀರಃ - ಶೂರನು, ಗರ್ವಿತ - ಕೊಬ್ಬಿದ, ಕುಂಜರಸ್ಥಃ - ಆನೆಯಮೇಲೆ ಕುಳಿತವನಾಗಿ, ಯಥಾ - ಹೇಗೆ, (ಭ್ರಾಜತೆ - ವಿರಾಜಿಸುತ್ತಾನೆಯೋ) ಚಂದ್ರೋಽಪಿ - ಆಗಸದಲ್ಲಿನ ಚಂದಿರನೂ, ತಥೈವ - ಹಾಗೆಯೇ, ಅಂಬರಸ್ಥಃ - ಆಕಾಶದಲ್ಲಿರುವವನಾಗಿ, ಬಭ್ರಾಜ - ರಾರಾಜಿಸುತಲಿದ್ದನು ॥೪॥ ತೀಕ್ಷ್ಣಶೃಂಗಃ - ಮೊನೆಯಾಗಿರುವ ಕೋಡುಗಳುಳ್ಳುದಾಗಿ, ಸ್ಥಿತಃ-ಇರುವ, ಕಕುದ್ಮಾನಿವ-(ಇಳಲುಳ್ಳ) ಕೊಬ್ಬಿದಗೂಳಿಯ ಹಾಗೂ, ಉಚ್ಚಶೃಂಗಃ - ಎತ್ತರವಾದ ಕೋಡುಳ್ಳ, ಶ್ವೇತಃ - ಬಿಳುಪಾದ, ಮಹಾಚಲ ಇವ - ದೊಡ್ಡಬೆಟ್ಟದ ಹಾಗೂ, ಜಾಂಬೂನದ - ಬಂಗಾರದ ಕಟ್ಟ (ಗೊಲಸು) ನಿಂದ, ಬದ್ಧ - ಕಟ್ಟಲ್ಪಟ್ಟ, ಶೃಂಗಃ - ದಂತವುಳ್ಳ, ಹಸ್ತೀವ - ಬಿಳಿಯ ಆನೆಯಹಾಗೂ, ಚಂದ್ರಃ - ಚಂದ್ರನೂ, ಪರಿಪೂರ್ಣ-ತುಂಬಿದ, ಶೃಂಗಃ - ಕಳೆಗಳುಳ್ಳವನಾಗಿ, ರರಾಜ - ಪ್ರಕಾಶಿಸುತಲಿದ್ದನು ॥೫॥ ವಿನಷ್ಟ - ತೊಲಗಿಹೋದ, ಶೀತಾಂಶು ತುಷಾರ - ಮಂಜಿನ ಹನಿಗಳೆಂಬ, ಪಂಕಃ - ಕಲ್ಮಷವುಳ್ಳ, ಮಹಾಗ್ರಹ - ಬೃಹಸ್ಪತಿ ಮೊದಲಾದ ಗ್ರಹಗಳನ್ನು * (ಸೂರ್ಯಗ್ರಹದ) ಗ್ರಾಹ - ಆಕ್ರಮಣದಿಂದ, ವಿನಷ್ಟ-ನಶಿಸಿಹೋದ,

---

ಶೋಧಿಸಿದ ಚೊಕ್ಕ ಬೆಳ್ಳಿಯಪಂಜರದೊಳಗೆ ಬೆಳಗುವ ಅಂಚೆಯ ಹಾಗೂ, ಮಂದರ ಗಿರಿಯ ಗವಿಯಬಾಗಿಲಿನೊಳಗೆ ಠೀವಿಯಿಂದ ನಿಂತಿರುವ ಸಿಂಹದಹಾಗೂ, ಮದವೇರಿದ ಆನೆಯಮೇಲೆ ಬಿಂಕದಿಂದ ಕುಳಿತಿರುವ ಮಹಾವೀರನಹಾಗೂ, ನಿಶಾಕರನು ನಭೋಮಂಡಲದಮಧ್ಯಭಾಗದಲ್ಲಿ ರಾರಾಜಿಸುತ್ತಿದ್ದನು ॥೪॥ ನೀಳವೂ ಮೊನೆಯೂ ಆಗಿ, ಮಂಡಲಾ ಕೃತಿಯಿಂದ ಬಾಗಿರುವ ಕೋಡುಗಳುಳ್ಳುದಾಗಿ, ದೊಡ್ಡಇಳಲನ್ನು ಹೊಂದಿರುವ ಗೂಳಿಯೂ,ಮಹೋನ್ನತ ಶಿಖರವುಳ್ಳ ಹಿಮಾಚಲವೂ, ಬಂಗಾರದ ಕಣೆಗಟ್ಟನಿಂದ ಪರಿಶೋಭಿಪ ದಂತವುಳ್ಳ ಮದಗಜವೂ, ಬೆಳಗುವಂತೆ ಸಕಲಕಲಾ ಪರಿಪೂರ್ಣನಾದ ಕಳಾನಿಧಿಯೂ ಪ್ರಕಾಶಿಸುತ್ತಿದ್ದನು. ॥೫॥ ಮತ್ತು - ಅಪೂರ್ಣಚಂದ್ರಮಂಡಲದಲ್ಲಿ ಮಂಜಿನಹನಿಗಳೆಂಬ

---

* "ಸಲಿಲಮಯೆ ಶಶಿನಿ ರವೇಃ ದೀಧಿತಯೊ ಮೂರ್ಛಿತಾಃ ತಮೋ ನೈಶಂ
ಕ್ಷಪಯಂತಿ ದರ್ಪಣೋದರ ನಿಹಿತಾಇವ ಮಂದಿರಸ್ಯಾಂತಃ ॥" ಎಂದು ವರಾಹಮಿಹಿರಾಚಾರ್ಯ

ವಿನಷ್ಟ ಶೀತಾಂಬು ತುಷಾರಪಂಕೋ
ಮಹಾಗ್ರಹ ಗ್ರಾಹ ವಿನಷ್ಟಪಂಕಃ ।
ಪ್ರಕಾಶ ಲಕ್ಷ್ಮ್ಯಾಶ್ರಯ ನಿರ್ಮಲಾಂಕೋ
ರರಾಜ ಚಂದ್ರೋ ಭಗವಾನ್ ಶಶಾಂಕಃ ॥೬॥
ಶಿಲಾತಲಂ ಪ್ರಾಪ್ಯ ಯಥಾ ಮೃಗೇಂದ್ರೋ
ಮಹಾರಣಂ ಪ್ರಾಪ್ಯ ಯಥಾ ಗಜೇಂದ್ರಃ ।

---

ಪಂಕಃ - ಮಾಲಿನ್ಯವುಳ್ಳ, ಪ್ರಕಾಶ - ಹೊಳೆಯುತಲಿರುವ, ಲಕ್ಷ್ಮ್ಯಾಶ್ರಯ - ಕಾಂತಿಗಾಸರೆಯಾದ, ನಿರ್ಮಲಾಂಕಃ - ಸ್ವಚ್ಛವಾದ ಕಳಂಕವುಳ್ಳವನೂ ಆದ, (೧) (ನೆಲದನೆಳಲುಳ್ಳ) ಮೊಲದ ಆಕಾರದ ಮಚ್ಚೆಯುಳ್ಳ, ಭಗವಾನ್ - ಪೂಜ್ಯನಾದ, ಶಶಾಂಕಃ - ಚಂದ್ರನೂ, ರರಾಜ - ಪ್ರಕಾಶಿಸುತಲಿದ್ದನು ॥೬॥ ಶಿಲಾತಲಂ-ಬಂಡೆಯ ಮೇಲುಭಾಗವನ್ನು, ಪ್ರಾಪ್ಯ-ಹೊಂದಿ, ಮೃಗೇಂದ್ರಃ - ಸಿಂಹವು, ಯಥಾ-ಹೇಗೆ ಪ್ರಕಾಶಿಸುತದೆಯೋ, ಮಹಾರಣಂ-ದೊಡ್ಡ ರಣಭೂಮಿಯನ್ನು, ಪ್ರಾಪ್ಯ - ಆಶ್ರಯಿಸಿ, ಗಜೇಂದ್ರಃ-ಗಜರಾಜನು, ಯಥಾ-ಹೇಗೆ ಹೊಳೆಯುತದೆಯೋ, ರಾಜ್ಯಂ - ಮಂಡಲಾಧಿಪತ್ಯವನ್ನು, ಸಮಾಸಾದ್ಯ-ಹೊಸದಾಗಿ ಪಡೆದು, ನರೇಂದ್ರಃ-ಮಹಾರಾಜನು, ಯಥಾ-ಹೇಗೆ ಬೆಳಗುವನೋ, ತಥಾಪ್ರಕಾಶಃ-ಆವಿಧವಾದ

---

ಕತ್ತಲಿನ ಕಲೆಗಳೊಂದೂ ಕಾಣಬರುತ್ತಿರಲಿಲ್ಲ, ಬಾಗಿಲಿಗೆ ಎದುರಾಗಿ ಬೀದಿಯನಡುವೆ ನಿಂತು ಕೈಯಲ್ಲಿ ಹಿಡಿದ ಕನ್ನಡಿಯು ಬೆಳಕು,ಮನೆಯ ಒಳಹೊಕ್ಕು ಕತ್ತಲನ್ನು ತೊಲಗಿಸುವಂತೆ, ಜಲಮಯವಾಗಿರುವ ತನ್ನ ಶರೀರದಲ್ಲಿ ಸೂರ್ಯನ ಕಿರಣಗಳು ಒಳಹೊಕ್ಕು ಕತ್ತಲನ್ನು ಒತ್ತಲಿಸುವುದರಿಂದಲೇ ಮಬ್ಬಿನಗಬ್ಬೇ ಇರಲಿಲ್ಲ, ಆದುದರಿಂದಲೇ ಬೃಹಸ್ಪತಿಯೇ ಮೊದಲಾದ ನಕ್ಷತ್ರಗಳೆಲ್ಲವೂ ಸೂರ್ಯಾನುಗ್ರಹಕ್ಕೆ ಪಾತ್ರನಾದ ಕುಮುದಿನೀನಾಥನ ಕಾಂತಿಯಲ್ಲಿ ಎಲ್ಲಿಯೋ ಮುಳುಗಿಹೋಗಿದ್ದುವು, ಇಂತಸವಳವೆನಿಪ್ಪ ಕಳೆಗಳಸೊಬಗಿನಾಸರೆಯೆನಿಸಿ,ಮೊಲದಆಕಾರವನ್ನು ಪಡೆದಿರುವ ನೆಲದನೆರಳುಳ್ಳ ಭಗವಂತನಾದದ್ವಿಜ ರಾಜನು ವಿರಾಜಮಾನನಾಗಿದ್ದನು ॥೬॥ ಬೆಟ್ಟದನಡುವಣ ಬೈಲಿನಲ್ಲಿ ದೊಡ್ಡಬಂಡೆಯ ಮೇಲೆ ಮೋಡಿಯಗಾಡಿಯಿಂದ ನಿಂತಿರುವ ಕೊಬ್ಬಿದಸಿಂಹದ ತೆರನಾಗಿಯೂ, ಮಹಾರಣರಂಗದ ನಡುವೆ ಕಾಳಗಕ್ಕೆ ಅಣಿಯಾಗಿನಿಂತಿರುವ ಸಲಗನ ರೀತಿಯಿಂದಲೂ, ಭುಜಬಲದಿಂದ ಹಗೆಗಳನ್ನು

---

(೧) "ಅಂಕಂ ಕೇಪಿ ಶಶಂಕಿರೇ ಜಲನಿಧೇಃ ಪಂಕಂ ಪರೇಮೇನಿರೆ ಸಾರಂಗಂ ಕತಿಚಿಚ್ಚ ಸಂ ಜಗದಿರೆ ಭೂಚ್ಛಾಯ ಮೈಚ್ಛನ್ಪರೇ। ಇಂದೌ ಯದ್ದಲಿತೇಂದ್ರನೀಲ ರುಚಿಸಶ್ಯಾಮಂ ದರೀದೃಶ್ಯತೇ ತತ್ಸಾನ್ದ್ರಂ ನಿಶಿಪೀತ ಮನ್ಧತಮಸಂ ಕುಕ್ಷಿಸ್ಥಮಾಚಕ್ಷ್ಮಹೆ ॥" ಏನೋ:ಕಳಂಕ (ಕಲ್ಮಷ) ಎಂತಲೂ, ಕಡಲಿನೊಳಗಣಕೆಸರೆಂತಲೂ, ಜಿಂಕೆಎಂತಲೂ, ನೆಲದ ನೆಳಲು ಎಂತಲೂ, ಇಂದ್ರ ನೀಲಮಣಿಯ ಬಣ್ಣದಂತೆ ಚಂದ್ರನೊಳಗೆ ಕಾಣಬರುವ ಕಪ್ಪುಕಲೆಯನ್ನು ಕೆಲಕೆಲರು ಭಾವಿಸುತ್ತಾರೆ, ಚಂದ್ರನು ಮೂಡುತಲೇ ಬ್ರಹ್ಮಾಂಡದೊಳಗೆ ತುಂಬಿಕೊಂಡಿದ್ದ ಕತ್ತಲನ್ನೆಲ್ಲ ಕುಡಿದು ಬಿಡುವುದರಿಂದ ಬೆಳ್ಳಗೂ ತೆಳ್ಳಗೂ ಇರುವ ಅವನ ಹೊಟ್ಟೆಯೊಳಗಣಿಂದ ಆ ಕತ್ತಲು ಹೊರಗೆ ಕಾಣಬರುತದೆ ಎಂದು ನಾವು ಹೇಳುತ್ತೇವೆ ಎಂಬುದಾಗಿ ಕುವಲಯಾನಂದ. ಆದರೆ-ಇಲ್ಲಿ ನೆಲದ ನೆಳಲು ಎಂಬುದು ಆರ್ಯಭಟನಮತ.

ರಾಜ್ಯಂ ಸಮಾಸಾದ್ಯ ಯಥಾ ನರೇಂದ್ರಃ
ತಥಾ ಪ್ರಕಾಶೋ ವಿರರಾಜ ಚಂದ್ರಃ॥೭॥
ಪ್ರಕಾಶ ಚಂದ್ರೋದಯ ನಷ್ಟದೋಷಃ
ಪ್ರವೃದ್ಧ ರಕ್ಷಃಪಿಶಿತಾಶ ದೋಷಃ ।
ರಾಮಾಭಿ ರಾಮೇರಿತ ಚಿತ್ತದೋಷಃ
ಸ್ವರ್ಗಪ್ರಕಾಶೋ ಭಗವಾನ್ ಪ್ರದೋಷಃ ॥೮॥
ತಂತ್ರೀಸ್ವನಾಃ ಕರ್ಣಸುಖಾಃ ಪ್ರವೃತ್ತಾಃ

ಬೆಳಕುಳ್ಳ, ಚಂದ್ರಃ-ಚಂದ್ರನೂ, (ತಥಾ-ಅವರ ಹಾಗೆಯೇ) ವಿರರಾಜ-ರಾರಾಜಿಸುತಲಿದ್ದನು ॥ ೭ ॥ ಪ್ರಕಾಶ-ಚೆನ್ನಾಗಿ ಹೊಳೆಯುತಲಿರುವ, ಚಂದ್ರೋದಯ - ಚಂದ್ರನು ಮೂಡುವುದರಿಂದ, ನಷ್ಟ-ನಶಿಸಿಹೋದ, ದೋಷಃ - ಅಂಧಕಾರ ರೂಪವಾದ ದೋಷವುಳ್ಳುದೂ, ಪ್ರವೃದ್ಧ - ಹೆಚ್ಚಿದ, ರಕ್ಷಃ-ರಾಕ್ಷಸರ, ಪಿಶಿತಾಶ-ಮಾಂಸ ಭೋಜನದ, ದೋಷಃ - ದೋಷವುಳ್ಳುದೂ, ರಾಮಾಭಿರಾಮ - ಕಾಮದಿಂದ ಕೊಬ್ಬಿದ ನಾಯಿಕೇ ನಾಯಕರಿಂದ, ಈರಿತ- ತೊಳಗಿಸಲ್ಪಟ್ಟ, ದೋಷಃ - ಪ್ರಣಯಕಲಹರೂಪವಾದ ದೋಷವುಳ್ಳುದೂ ಆಗಿರುವ, ಸ್ವರ್ಗಪ್ರಕಾಶಃ - ಸ್ವರ್ಗಸುಖಕ್ಕೆ ಎಣೆಯಾದ ಸುಖವನ್ನು ಕೊಡುವ ಪ್ರಕಾಶವುಳ್ಳುದಾದ ಕಾರಣವೇ, ಭಗವಾನ್ - ಸರ್ವೋತ್ತಮವಾದ, ಪ್ರದೋಷಃ - ಆ ರಾತ್ರಿಯ ಪ್ರಾರಂಭವು, ರರಾಜ - ಭಾಸಮಾನವಾಗಿದ್ದಿತು, ॥ ೮ ॥ ತಂತ್ರೀಸ್ವನಾಃ - ವೀಣೆಮೊದಲಾದವುಗಳ ತಂತ್ರೀನಾದಗಳು, ಕರ್ಣಸುಖಾಃ-ಕಿವಿಗಿಂಪಾದವುಗಳಾಗಿ, ಪ್ರವೃತ್ತಾಃ-ಆರಂಭವಾಗಿದ್ದುವು, (ನಡೆಯುತಿದ್ದುವು) ಸುವೃತ್ತಾಃ-ಒಳ್ಳೆಯ ನಡತೆಯುಳ್ಳ, ನಾರ್ಯಃ - ಹೆಂಗಸರು, ಪತಿಭಿಃ - ತಮ್ಮ ಗಂಡಂದಿರೊಡನೆ, ಸ್ವಪಂತಿ-ಸುಖವಾಗಿ ನಿದ್ರಿಸುತ್ತಿದ್ದರು, ತಥಾ-ಹಾಗೆಯೇ, ನಕ್ತಂಚರಾಶ್ಚಾಪಿ - ಇರುಳುಹೊತ್ತಿನಲ್ಲಿತಿರುಗುವ

ಸಮೆಬಡಿದು ಹೊಸದಾಗಿ ರಾಜ್ಯವನ್ನು ಪಡೆದ ಪ್ರೌಢವಿಯ್ಯಾಣ್ಮನ ತೆರದಿಂದಲೂ, ಆಗಸದೊಳಗೆ ಸಿತಾನಾಥನು ಮಿಗಿಲಾಗಿ ಬೆಳಗುತಿದ್ದನು ॥೭॥ ಎಲ್ಲೆಲ್ಲಿಯೂ ಬೆಳ್ದನೆಯು ಬೆಳಕುತುಂಬಿದ್ದುದರಿಂದ ಕತ್ತಲಿನಸುಳಿವೇ ಇಲ್ಲದಿದ್ದಿತು, ಬಲುಬೆಳಗೆರೆಯೊಳಿದ್ದ ಚಂದಿರನ ಅಮಂದಕಾಂತಿಯಿಂದ ಸೊಕ್ಕಿದ ರಕ್ಕಸರೂ ಭೂತಪ್ರೇತಪಿಶಾಚಗಳೂ ಆಹಾರಕ್ಕಾಗಿ ಅಲೆಯತೊಡಗಿದ್ದರು, ತಾರಾನಾಥನು ತಲೆದೋರುವವರೆಗೂ ಕಾಮಿನೀ ಕಾಮುಕರು ಪರಸ್ಪರವಾಗಿ ಪ್ರಣಯ ಕಲಹವೇ ಮೊದಲಾದುದರಿಂದ ಮುನಿಸುಗೊಂಡಿದ್ದರೂ ಬೆಳ್ತಿಂಗಳಬೆಳಕು ಮೂಡುತಲೇ ಸಿಟ್ಟನ್ನು ಬಿಟ್ಟು ಪ್ರೇಮಭರದಿಂದ ಪರಿಪೂರ್ಣರಾಗಿ ತಂತಮ್ಮ ಆಟಗಳೊಳಗೆ ನಿರಾಟಂಕವಾಗಿ ಪ್ರವರ್ತಿಸುತ್ತಿದ್ದರು, ಇಂತೆಲ್ಲದೋಷಗಳೂ ಅಡಗಿದ್ದುದರಿಂದಲೇ ಆನಟ್ಟಿರುಳು ಬೆಡಗು ಸಗ್ಗಸೊಗಸಿಮ್ಮಡಿಯಾಗಿ ಕಂಗೊಳಿಸುತಲಿದ್ದಿತು ॥ ೮ ॥ ಅಂತೊಪ್ಪುವ ರಾತ್ರಿಯುಲ್ಲಿ ಎತ್ತಕಿಪಿಗೊಟ್ಟುಕೇಳಿದರೂ ವೀಣೆಯೇ ಮೊದಲಾದ ಮಂಗಳವಾದ್ಯಗಳ ಇಂಪಾದ ಗಾನವು ಕೇಳಬರುತಲಿತ್ತು, ಆ ರಕ್ಕಸರರಸಿಯರೊಳಗೆ ತಮ್ಮ ಒಳ್ಪಡೆಯಿಂದ ಗರತಿಯರೆನಿಸಿದ ಸುಮಂಗಲಿಯರು ತಂತಮ್ಮಪತಿಗಳೊಡನೆ ಮಲಗಿಸುಖವಾಗಿ ನಿದ್ರಿಸುತ್ತಿದ್ದರು, ಮತ್ತು-ಲೋಕಕ್ಕೆಲ್ಲಭಯವನ್ನುಂಟುಮಾಡುವ ನಿಶಾಚರರೆಲ್ಲರೂ ಹಿಂಸೆಯೇಮೊದಲಾದ ಘೋರಕಾರ್ಯಗಳಲ್ಲಿ ತಡೆಯಿಲ್ಲದೆತೊಡಗುತ್ತಿದ್ದರು॥೯॥ಆ ರಾತ್ರಿಯಹೊತ್ತಿನಲ್ಲಿ ಆಮನೆಗಳೊಳಗೆ

ಸ್ವಪಂತಿ ನಾರ್ಯಃ ಪತಿಭಿಸ್ಸುವೃತ್ತಾಃ ।
ನಕ್ತಂಚರಾಶ್ಚಾಪಿ ತಥಾಪ್ರವೃತ್ತಾಃ
ವಿಹರ್ತುಮತ್ಯದ್ಭುತ ರೌದ್ರವೃತ್ತಾಃ ॥೯॥
ಮತ್ತಪ್ರಮತ್ತಾನಿ ಸಮಾಕುಲಾನಿ
ರಥಾಶ್ವ ಭದ್ರಾಸನ ಸಂಕುಲಾನಿ ।
ವೀರಶ್ರಿಯಾ ಚಾಪಿ ಸಮಾಕುಲಾನಿ
ದದರ್ಶ ಧೀಮಾನ್ ಸ ಕಪಿಃ ಕುಲಾನಿ ॥೧೦॥
ಪರಸ್ಪರಂ ಚಾಧಿಕ ಮಾಕ್ಷಿಪಂತಿ
ಭುಜಾಂಶ್ಚ ಪೀನಾನಧಿವಿಕ್ಷಿಪಂತಿ ।
ಮತ್ತಪ್ರಲಾಪಾನಧಿಕಂ ಕ್ಷಿಪಂತಿ
ಮತ್ತಾನಿ ಚಾನ್ಯೋನ್ಯ ಮಧಿಕ್ಷಿಪಂತಿ ॥೧೧॥
ರಕ್ಷಾಂಸಿ ವಕ್ಷಾಂಸಿ ಚ ವಿಕ್ಷಿಪಂತಿ

---

ಭೂತಗಣಗಳೂ, ಅತ್ಯದ್ಭುತ- ಬಹು ಆಶ್ಚರ್ಯಕರವೂ, ರೌದ್ರ- ಭಯಂಕರವೂ ಆಗಿರುವ, ವೃತ್ತಾಃ-ನಡತೆಯುಳ್ಳವರಾಗಿ, ವಿಹರ್ತುಂ-ವಿಹಾರಮಾಡಲಿಕ್ಕೆ, ಪ್ರವೃತ್ತಾಃ-ಪ್ರವರ್ತಿಸುತ್ತಿದ್ದರು, ॥ ೯ ॥ ಧೀಮಾನ್-ಬುದ್ಧಿಶಾಲಿಯಾದ, ಸಃ-ಆ, ಕಪಿಃ - ಆಂಜನೇಯನು, ಮತ್ತ - ಮದಸಾಧಕವಾದ ಪದಾರ್ಥಗಳಿಂದ, ಪ್ರಮತ್ತಾನಿ - ತುಂಬಿದವುಗಳಾಗಿಯೂ, ಸಮಾಕುಲಾನಿ - ಬಲುಗದ್ದಲದಿಂದ ಕೂಡಿದವುಗಳಾಗಿಯೂ, ರಥ-ತೇರುಗಳಿಂದಲೂ, ಅಶ್ವ-ಕುದುರೆಗಳಿಂದಲೂ, ಭದ್ರ-ಆನೆಗಳಿಂದಲೂ, ಆಸನ - ಪೀಠಗಳಿಂದಲೂ, ಸಂಕುಲಾನಿ- ಪೂರ್ಣಗಳಾಗಿಯೂ ಇರುವ, ವೀರಶ್ರಿಯಾಚಾಪಿ-ವೀರವಾದಗಳ ಸೊಬಗಿನಿಂದಲೂ, ಸಮಾಕುಲಾನಿ - ದೊಂಬಿಯಾಗಿರುವ, ಕುಲಾನಿ - ಮನೆಗಳನ್ನು, ದದರ್ಶ - ನೋಡುತಲಿದ್ದನು ॥ ೧೦ ॥

(ತತ್ರ-ಆ ಮನೆಗಳೊಳಗೆ) ಪರಸ್ಪರಂಚ - ಅನ್ಯೋನ್ಯವಾಗಿ, ಅಧಿಕಂ - ಹೆಚ್ಚಾಗಿ, ಆಕ್ಷಿಪಂತಿ-ಹೀಯಾಳಿಸುತಿರುವ ( ವಿನೋದಮಾಡುತಿರುವ, ಹಾಸ್ಯಗೆಯ್ಯುತ್ತಲಿರುವ), ಪೀನಾನ್ - ಬಲಿತಿರುವ, ಭುಜಾಂಶ್ಚ -ಹೆಗಲುಗಳನ್ನು ಅಧಿವಿಕ್ಷಿಪಂತಿ - ಒಬ್ಬರಮೇಲೊಬ್ಬರಿಟ್ಟು ಕುಣಿಸುತ್ತಿರುವ, ಮತ್ತಪ್ರಲಾಪಾನ್-ಕೊಬ್ಬಿನ ಹರಟೆಗಳನ್ನು,ಅಧಿಕ್ಷಿಪಂತಿ-ಆಕ್ಷೇಪಿಸುತಲಿರುವ, ಮತ್ತಾನಿಚ-ಮದಿಸಿ ಇರುವವರನ್ನೂ

---

ತುಸಮದವೇರುವ ಮತ್ತು ಮಿಗಿಲು ಮದವೇರುವ ಪದಾರ್ಥಗಳನ್ನು ಸವಿದುಬಲುಗದ್ದಲದಿಂದಿರುವ ರಕ್ಕಸರ ಗುಜುಗುಂಪಲನ್ನು,ಆನೆ, ಕುದುರೆ, ತೇರು, ಕಾಲಾಳು ಗದ್ದಿಗೆ ಇವುಗಳ ಸಂದಣಿಯನ್ನೂ,ಮಹಾಮದ ಮತ್ತರ ವೀರವಾದಗಳನ್ನೂ, ಬಲುಜಾಣನಾದ ಮಾರುತಿಯು ಕಂಡುಕೇಳುತ್ತಲೂ ಬರುತ್ತಿದ್ದನು॥ ೧೦॥ ಅಲ್ಲಿನ ಸಂಚರಿಸುವ ... ವಿ... ಚರ ಳಗೆ ಕೆಲವರು ಮತ್ತೆ ಕೆಲವರನ್ನು ಹೀಯಾಳಿಸಿ ಮೂದಲಿಸತೊಡಗಿದ್ದರು, ಮತ್ತೆ ಕೆಲವರು ತಿಂದುಕೊಬ್ಬಿ ಭುಜಗಳನ್ನು ಕುಣಿಸುತಲಿದ್ದರು, ಇನ್ನು ಕೆಲವರು ಮದವೇರಿದ... ನುಡಿ...ನ್ನು ಆಕ್ಷೇಪಿಸಿ ಅಲ್ಲಲ್ಲಿ ಖಂಡಿಸುತ್ತಿದ್ದರು. ಬೇರೆ ಕೆಲವರು ತಮಗೆ ... ಪರಸ್ಪರವಾಗಿ ಕುಚೇಷ್ಟೆ ಮಾಡತೊಡಗಿ ಹೆಮ್ಮೆಯ ನುಡಿಗಳನ್ನಾಡುತಿದ್ದರು, ॥೧೧॥ ಮತ್ತೆ ಕೆಲವುಮಂದಿ ರಕ್ಕಸರು

ಗಾತ್ರಾಣಿ ಕಾಂತಾಸು ಚ ವಿಕ್ಷಿಪಂತಿ ।
ರೂಪಾಣಿ ಚಿತ್ರಾಣಿ ಚ ವಿಕ್ಷಿಪಂತಿ
ದೃಢಾನಿ ಚಾಪಾನಿ ಚ ವಿಕ್ಷಿಪಂತಿ ॥೧೨॥
ದದರ್ಶ ಕಾಂತಾಶ್ಚ ಸಮಾಲಭಂತ್ಯ
ಸ್ತಥಾ ಪರಾ ಸ್ತತ್ರ ಪುನ ಸ್ಸ್ವಪಂತ್ಯಃ ।
ಸುರೂಪವಕ್ತ್ರಾಶ್ಚ ತಥಾ ಹಸಂತ್ಯಃ
ಕ್ರುದ್ಧಾಃ ಪರಾಶ್ಚಾಪಿ ವಿನಿಶ್ವಸಂತ್ಯಃ ॥೧೩॥

---

ಅನ್ಯೋನ್ಯಂ- ಪರಸ್ಪರವಾಗಿ, ಅಧಿಕ್ಷಿಪಂತಿ - ಗದರಿಸುತಲಿರುವ ॥ ೧೧ ॥ (ಕಿಂಚ-ಮತ್ತು) ವಕ್ಷಾಸಿ - ಎದೆಗಳನ್ನು, ವಿಕ್ಷಿಪಂತಿ - ಅಗಲಿಸಿ, ಉಬ್ಬಿಸಿ, ಕುಣಿಸುತಲಿರುವ, ಗಾತ್ರಾಣಿ - ಶರೀರಗಳನ್ನು ಕಾಂತಾಸು-ತಮ್ಮ ರಮಣಿಯರಲ್ಲಿ, ವಿಕ್ಷಿಪನ್ತಿ- ಹೇರುತಲಿರುವ, ಚಿತ್ರಾಣಿ - ನಾನಾವಿಧವಾದ, ರೂಪಣಿ-ವೇಷಗಳನ್ನು, ವಿಕ್ಷಿಪಂತಿ - ವಿವರಿಸುತಲಿರುವ, ( ತಾಳುತಲಿರುವ ) ದೃಢಾನಿ - ಗಟ್ಟಿಯಾಗಿರುವ ಚಾಪಾನಿಚ-ಬಿಲ್ಲುಗಳನ್ನು, ವಿಕ್ಷಿಪಂತಿ- ಟಂಕಾರಗೊಳಿಸುತಲಿರುವವರೂ ಆಗಿರುವ, ರಕ್ಷಾಂಸಿ-ಬಗೆಬಗೆಯ ರಕ್ಕಸರನ್ನು, ದದರ್ಶ - ನೋಡುತಿದ್ದನು ॥ ೧೨ ॥ ಕಾನ್ತಾಶ್ಚ - ಮತ್ತೆ ಕೆಲವುಮಂದಿ ರಕ್ಕಸಿಯರು ಸಮಾಲಭಂತ್ಯಃ - ಪುಷ್ಪಚಂದನಾದಿಗಳಿಂದ ಅಲಂಕರಿಸಿಕೊಳ್ಳುತ್ತಿದ್ದರು, (ಪಾ॥ ಸಮಾಲಪಂತ್ಯಃ- ಸರಸಸಲ್ಲಾಪದಲ್ಲಿದ್ದರು) ತಥಾ - ಹಾಗೆಯೇ, ಅಪರಾಃಪುನಃ - ಮತ್ತೆ ಕೆಲವರಾದರೋ, ತತ್ರ-ಅಲ್ಲಿ, ಸ್ವಪಂತ್ಯಃ-ನಿದ್ರಿಸುತ್ತಿದ್ದರು, ಸುರೂಪವಕ್ತ್ರಾಶ್ಚ - ಸುಂದರ ಮುಖಿಯರಾದ ಇನ್ನು ಕೆಲವರು, ತಥಾ-ವಿಶೇಷವಾಗಿ, ಹಸಂತ್ಯಃ - ನಗೆಯೊಳಿದ್ದರು, ಪರಾಶ್ಚಾಪಿ - ಬೇರೆ ಕೆಲವರೂ, ಕ್ರುದ್ಧಾಃ - ಸಿಟ್ಟುಗೊಳ್ಳುವವರಾಗಿಯೂ, ವಿನಿಶ್ವಸಂತ್ಯಃ-ನಿಟ್ಟುಸಿರನ್ನು ಬಿಡುವವರಾಗಿಯೂ ಇರುತ್ತಿದ್ದರು, (ಏತಾಃ-ಇಂತಹ ಕಾಮಿನಿ

---

ಎದೆಗೆ ಎದೆಯನ್ನು ಆನಿಸುತ್ತಲೂ ತೋಳಿಗೆ ತೋಳನ್ನು ಒತ್ತುತಲೂ, ಹಣೆಗೆ ಹಣೆಯನ್ನು ತಾಡಿಸುತ್ತಲೂ ಕೊಬ್ಬಿ ಮೆರೆಯುತ್ತಿದ್ದರು. ಗಂಡಸರೂ ಹೆಂಗಸರೂ ಸೇರಿ ಒಬ್ಬರ ಮೇಲೆ ಮತ್ತೊಬ್ಬರು ಬಿದ್ದು ಉರುಳಾಡುತ್ತಿದ್ದರು. ಬಗೆಬಗೆಯ ವೇಷಗಳನ್ನು ತಾಳ್ದು ವಿಚಿತ್ರರೂಪದಿಂದ ಕೆಲವರು ಮೆರೆಯುತ್ತಿದ್ದರು, ಬಲವಾದಬಿಲ್ಲನ್ನು ಬಗ್ಗಿಸುವವರು ಕೆಲವರು, ಮುರಿಯುವವರು ಕೆಲವರು, ಇಂತು ನಾನಾವಿಧವಾದ ಆಟಪಾಟಗಳಲ್ಲಿ ನಿರತರಾದ ನಿಶಾಚರರನ್ನೆಲ್ಲ ನೋಡುತ ಬಂದನು ॥೧೨॥ ಮತ್ತೆ ಕೆಲವುಮಂದಿ ರಕ್ಕಸಿಯರು ಬಗೆಬಗೆಯ ಉಡಿಗೆ ತೊಡಿಗೆಗಳಿಂದ ಸಿಂಗರಿಸಿಕೊಳ್ಳುತಲಿದ್ದರು, ಕೆಲವರು ಸರಸಸಲ್ಲಾಪಗಳಲ್ಲಿದ್ದರು, ಮತ್ತೆ ಕೆಲವರು ನಿದ್ರೆಯಿಂದ ಮೈಮರೆತು ಮಲಗಿದ್ದರು, ಇನ್ನು ಕೆಲವರು ಆನಿದ್ದೆಯಲ್ಲಿ ಬಿದ್ದುರುಳಿರುವವರ ಮೋರೆಮೂಗು ಮೊದಲಾದ ಅವಯವಗಳ ರೂಪಸೌಂದರ್ಯಾದಿಗಳನ್ನು ನೋಡಿಹಾಸ್ಯಮಾಡುತಲಿದ್ದರು, ಅಂತಹಕುಚೋದ್ಯದಿಂದ ಸಿಟ್ಟುಗೊಂಡ ಕೆಲವರು ಹೂಂಕರಿಸಿ ಬಿರುಸಾಗಿ ಉಸಿರನ್ನು ಬಿಡುತಲಿದ್ದರು ॥೧೩॥ ಒಂದೆಡೆ ಮದಿಸಿದ ಆನೆಗಳು ಘೀಂಕಾರಗಳನ್ನು ಮಾಡಿ ಕಿರಿಚುತ್ತಿದ್ದುವು, ಮತ್ತೊಂದೆಡೆ ಚೆನ್ನಾಗಿ ತಿಂದು ತೇಗಿ ತೃಪ್ತಿಯಿಂದ ಹಾಯಾಗಿ ಕೆಲವರು ಕುಳಿತಿದ್ದರು. ಇನ್ನೊಂದು ಕಡೆ ಕೇಮಂದಿ ಮಹಾವೀರರು ಅಹಹಾ ! ನಮ್ಮೊಡನೆ ಬಡಿದಾಟಕ್ಕೆ ಬರಬಲ್ಲ ಮಲ್ಲರೇ ಇಲ್ಲವಲ್ಲಾ ಎಂದು ನಿಟ್ಟುಸಿರನ್ನು ಬಿಡುತಲಿದ್ದರು,

ಮಹಾಗಜೈಶ್ಚಾಪಿ ತಥಾ ನದದ್ಭಿಃ
ಸುಪೂಜಿತೈಶ್ಚಾಪಿ ತಥಾ ಸುಸದ್ಭಿಃ ।
ರರಾಜ ವೀರೈಶ್ಚ ವಿನಿಶ್ಶ್ವಸದ್ಭಿಃ
ಹ್ರದೋ ಭುಜಂಗೈ ರಿವ ನಿಶ್ಶ್ವಸದ್ಭಿಃ ॥೧೪॥
ಬುದ್ಧಿಪ್ರಧಾನಾನ್ ರುಚಿರಾಭಿಧಾನಾನ್
ಸಂಶ್ರದ್ದಧಾನಾನ್ ಜಗತಃ ಪ್ರಧಾನಾನ್ ।
ನಾನಾವಿಧಾನಾನ್ ರುಚಿರಾಭಿಧಾನಾನ್
ದದರ್ಶ ತಸ್ಯಾಂ ಪುರಿ ಯಾತುಧಾನಾನ್ ॥೧೫॥
ನನಂದ ದೃಷ್ಟ್ವಾ ಸ ಚ ತಾನ್ ಸುರೂಪಾನ್
ನಾನಾಗುಣಾ ನಾತ್ಮಗುಣಾ ನು ರೂಪಾನ್ ।

ಯರನ್ನು, ದದರ್ಶ - ನೋಡುತ್ತಿದ್ದನು) ॥ ೧೩ ॥ ತಥಾ- ಬಹಳವಾಗಿ, ನದದ್ಭಿಃ - ಧ್ವನಿಮಾಡುತ್ತಲಿರುವ, ಮಹಾಗಜೈಶ್ಚಾಪಿ-ದೊಡ್ಡ ಆನೆಗಳಿಂದಲೂ, ತಥಾ-ಹಾಗೆಯೇ, ಸುಪೂಜಿತೈಃ - ಅನ್ನಪಾನಾದಿಗಳಿಂದ ತೃಪ್ತರಾದ, ಸುಸದ್ಭಿಶ್ಚ - ಸುಖವಾಗಿ ಕುಳಿತಿರುವವರಿಂದಲೂ, ವಿನಿಶ್ಶ್ವಸದ್ಭಿಃ - ತಮಗೆ ಸಮಾನ ವೀರರಿಲ್ಲೆಂದು ನಿಟ್ಟುಸಿರು ಬಿಡುತಲಿರುವ, ವೀರೈಶ್ಚ - ಶೂರರಿಂದಲೂ, (ಲಂಕಾ-ಲಂಕೆಯು,) ನಿಶ್ಶ್ವಸದ್ಭಿಃ-ಬುಸುಗುಟ್ಟುತಲಿರುವ, ಭುಜಂಗೈಃ-ಸರ್ಪಗಳಿಂದ, ಹ್ರದಇವ-ದೊಡ್ಡ ಮಡುವು, (ಪಾತಾಳವು) ಹೇಗೋ ಹಾಗೆ, ರರಾಜ - ಪ್ರಕಾಶಿಸುತಲಿದಿತು ॥ ೧೪ ॥ (ಕಿಂಚ - ಮತ್ತು, ಸಃ- ಆಂಜನೇಯನು) ತಸ್ಯಾಂಪುರಿ-ಆ ಪಟ್ಟಣದಲ್ಲಿ, ಬುದ್ಧಿಪ್ರಧಾನಾನ್ - ಬುದ್ಧಿಯಿಂದ ಶ್ರೇಷ್ಠರಾದ, ರುಚಿರಾಭಿಧಾನಾನ್- ಸವಿನುಡಿಗಳನ್ನಾಡುತ್ತಿರುವ, ಸಂಶ್ರದ್ಧಧಾನಾನ್ - ಧರ್ಮಕರ್ಮಗಳಲ್ಲಿ ನಂಬಿಕೆಯುಳ್ಳ (ಆಸ್ತಿಕರಾದ) ಜಗತಃ-ಲೋಕದೊಳಗೆ, ಪ್ರಧಾನಾನ್ - ಹೆಸರುವಾಸಿಯಿಂದ ಮುಖ್ಯರೆನಿಸಿದ, ನಾನಾವಿಧಾನಾನ್ - ನಾನಾಕರ್ಮಗಳಲ್ಲಿ ಆಸಕ್ತರಾಗಿರುವ, ರುಚಿರಾಭಿಧಾನಾನ್ - ಮನೋಹರನಾಮಗಳುಳ್ಳ, ಯಾತುಧಾನಾನ್ - ರಾಕ್ಷಸರನ್ನು, ದದರ್ಶ-ಕಂಡನು. ॥ ೧೫ ॥ ಸಚ - ಆ ಆಂಜನೇಯನು, ಸುರೂಪಾನ್ - ಮಂಗಳರೂಪವುಳ್ಳ,

ಇಂತಪಾರಸಂಭ್ರಮದಿಂದ ಲಂಕೆಯು [illegible]ತೆಯೂ,ಮಹಾಸರ್ಪಗಳಿಂದ ತುಂಬಿರುವ ಪಾತಾಳದಂತೆಯೂ ಕಂಗೊಳಿಸುತಲಿತ್ತು॥ ೧೪॥ಆ ಪಲಾಶನರೊಳಗೆ ಕೆಲವರು ಬಹುಬುದ್ಧಿಶಾಲಿಗಳು, ಕೆಲವರು ಒಳ್ಳೆಯನುಡಿಗಳನ್ನಾಡತಕ್ಕವರು, ಕೆಲವುಮಂದಿ ಇಹಪರಲೋಕಗಳಲ್ಲಿಯೂ, ಧರ್ಮದೇವತೆಗಳಲ್ಲಿಯೂ ನಂಬಿಕೆಯುಳ್ಳವರಾಗಿ ಆಸ್ತಿಕರೆನಿಸಿದ್ದರು, ಇನ್ನು ಕೆಲವರು ಲೋಕದೊಳಗೆ ಶ್ರೇಷ್ಠರೆನಿಸಿಕೊಂಡಿದ್ದರು. ನಾನಾರೀತಿಗಳಿಂದ ಕೆಲವರಿದ್ದರು. ಚಿತ್ರವಿಚಿತ್ರವಾದ ಹೆಸರುಗಳುಳ್ಳವರಾಗಿ ಕೆಲವರಿರುತ್ತಿದ್ದರು, ಆಪಟ್ಟಣದೊಳಗೆ ಇಾತವರನೆಲ್ಲ ನೋಡುತ ಬಂದನು ॥೧೫॥ ಮಹಾವೀರನಾದ ಆ ಮಾರುತಿಯು ಅಂದವಾದರೂಪವುಳ್ಳ, ಸುಗುಣಸಂಪನ್ನರಾದ, ಗುಣಾನುಗುಣವಾದ ಸೌಂದರ್ಯವುಳ್ಳ, ಗುಣಸೌಂದರ್ಯಾನುಸಾರವಾದ ಒಳ್ಳೆಯ ನಡತೆಯೂ ಉಳ್ಳ ಮತ್ತು ಮಹಾಪ್ರಕಾಶದಿಂದಿರುವ,ಅದಕ್ಕೆ ತಕ್ಕ ಆಕಾರವೂ ಉಳ್ಳವರನ್ನೂ,ಅಂಥವರನ್ನಲ್ಲದೆ ವಿಚಿತ್ರವಿಕಾರರೂಪವುಳ್ಳ ಮತ್ತೆ ಕೆಲವರನ್ನೂ ಈಕ್ಷಿಸಿ ಆನಂದಿಸುತ ಬಂದನು ॥೧೬॥ ತದನಂತರ

ವಿದ್ಯೋತಮಾನಾನ್ ಸತತಾನುರೂಪಾನ್
ದದರ್ಶ ಕಾಂಶ್ಚಿಚ್ಚ ಪುನ ರ್ವಿರೂಪಾನ್ ॥೧೬॥
ತತೋ ವರಾರ್ಹಾ ಸ್ಸುವಿಶುದ್ಧಭಾವಾ
ಸ್ತೇಷಾಂ ಸ್ತ್ರಿಯ ಸ್ತತ್ರ ಮಹಾನುಭಾವಾಃ ।
ಪ್ರಿಯೇಷು ಪಾನೇಷು ಚ ಸಕ್ತಭಾವಾ
ದದರ್ಶ ತಾರಾ ಇವ ಸುಪ್ರಭಾವಾಃ ॥೧೭॥
ಶ್ರಿಯಾ ಜ್ವಲಂತೀ ಸ್ತ್ರಪಯೋಪಗೂಢಾ
ನಿಶೀಥ ಕಾಲೇ ರಮಣೋಪಗೂಢಾಃ ।

---

ನಾನಾಗುಣಾನ್-ವಿಚಿತ್ರಗುಣಗಳುಳ್ಳ, ಆತ್ಮಗುಣಾನುರೂಪಾನ್ - ತಮ್ಮ ಗುಣವನ್ನನುಸರಿಸಿದ ಉತ್ತಮ ವೇಷವುಳ್ಳ, ತಾನ್ - ಆ ರಾಕ್ಷಸರನ್ನು, ದೃಷ್ಟ್ವಾ-ನೋಡಿ, ನನಂದ - ಸಂತೋಷಿಸಿದನು, ಸಃ-ಆಮಾರುತಿಯು, ತದಾ - ಆಗ, ವಿದ್ಯೋತಮಾನಾನ್ - ಪ್ರಕಾಶಿಸುತಿರುವ, ಸುರೂಪಾನ್-ಉತ್ತಮಸೌಂದರ್ಯವುಳ್ಳ, ಕಾಂಶ್ಚಿತ್-ಕೆಲವರನ್ನೂ, ಕಾಂಶ್ಚಿತ್ - ಮತ್ತೆ ಕೆಲವರಾದ, ವಿರೂಪಾನ್ ಪುನಃ-ಕುರೂಪಿಗಳನ್ನೂ, ದದರ್ಶ - ನೋಡುತ್ತಿದ್ದನು ॥ ೧೬ ॥ ತತಃ - ತರುವಾಯ, ತತ್ರ-ಅಲ್ಲಿ, ವರಾರ್ಹಾಃ- ಶ್ರೇಷ್ಠವಾದ ಆಭರಣಗಳುಳ್ಳ, ಸುವಿಶುದ್ಧಭಾವಾಃ - ಬಹು ಪರಿಶುದ್ಧ ಸ್ವಭಾವವುಳ್ಳ, ಮಹಾನುಭಾವಾಃ - ಒಳ್ಳೆಯ ನಡತೆಯಿಂದ ಹೆಚ್ಚಿದ ಮಹತ್ವವುಳ್ಳ, ಪ್ರಿಯೇಷು - ವಲ್ಲಭರಲ್ಲಿಯೂ, ಪಾನೇಷು - ಪಾನಕಾರ್ಯಗಳಲ್ಲಿಯೂ, ಸಕ್ತಭಾವಾಃ - ಆಸಕ್ತವಾದ ಮನಸ್ಸುಳ್ಳ, ತಾರಾಇವ - ನಕ್ಷತ್ರಗಳಹಾಗೆ, ಸುಪ್ರಭಾವಾಃ - ಸಚ್ಚರಿತ್ರೆಗಳುಳ್ಳ, ತೇಷಾಂ-ಆ ರಾಕ್ಷಸರ, ಸ್ತ್ರಿಯಃ-ಅಂಗನೆಯರನ್ನು, ದದರ್ಶ-ನೋಡುತ್ತಿದ್ದನು ॥ ೧೭ ॥ ಶ್ರಿಯಾ-ಕಾಂತಿಯಿಂದ, ಜ್ವಲಂತೀಃ - ಹೊಳೆಯುತಲಿರುವವರನ್ನೂ, ತ್ರಪಯಾ-ನಾಚಿಕೆಯಿಂದ, ಉಪಗೂಢಾಃ - ಕೂಡಿದವರನ್ನೂ, ನಿಶೀಥಕಾಲೇ - ಅರ್ಧರಾತ್ರಿಯಲ್ಲಿ, ರಮಣೋಪಗೂಢಾಃ - ವಲ್ಲಭರೊಡನೆ ಸಹಿತರಾದವರನ್ನೂ, ದದರ್ಶ - ನೋಡಿದನು, ಕುಸುಮೋಪಗೂಢಾಃ - ಹೂವಿನರಾಶಿಯೊಳಡಗಿರುವ, ವಿಹಂಗಾಃಯಥಾ - ಹಕ್ಕಿಗಳು ಹೇಗೋಹಾಗೆ, ಪ್ರಮುದೋಪಗೂಢಾಃ - ಮಹತ್ತರವಾದ ಹರ್ಷದಿಂದೊಡಗೂಡಿರುವ, ಕಾಶ್ಚಿತ್ - ಮತ್ತೆ ಕೆಲವಂದಿ ಸುಂದರಿಯರನ್ನೂ, ದದರ್ಶ - ನೋಡುತ್ತಿದ್ದನು ॥ ೧೮ ॥

---

ಅಲ್ಲಿ ಕೆಲವು ಮಂದಿ ನಿಶಾಚರರು ನಡೆ, ನುಡಿ, ಮನ, ಈ ಮೂರರಲ್ಲಿಯೂ ಪರಿಶುದ್ಧವಾದ ಸ್ವಭಾವವುಳ್ಳವರಾಗಿಯೇ ಇರುತ್ತಿದ್ದರು. ಇವರಂತೆ ಇವರ ಹೆಂಡತಿಯರೂ ಪತಿವ್ರತಾ ಶಿರೋಮಣಿಯರೆನಿಸಿದ್ದರು, ಮತ್ತು ತಂತಮ್ಮ ಪತಿಗಳೊಂದಿಗೆ ಪಾನಾಸನ ಭೋಜನಗಳಲ್ಲಿ ಅನುರಕ್ತರಾಗಿರುತ್ತಿದ್ದರು. ಇಂತು ಒಳ್ಳೆಯ ಸ್ವಭಾವದವರನ್ನುನೋಡುತ್ತ ಕುಶಾಗ್ರಬುದ್ಧಿಯಾದ ಆಂಜನೇಯನು- ಶ್ರೀರಾಮಚಂದ್ರನುಹೇಳಿರುವ ಗುರುತುಳ್ಳ ಶ್ರೀಮತಿಯಾದ ಸೀತೆಯು ಆವಡೆಯಲ್ಲಿ, ಆವಗುಂಪಿನೊಳಗೆ ಇರಬಹುದೋ ಎಂದು ಸೂಕ್ಷ್ಮದೃಷ್ಟಿಯಿಂದನೋಡುತ ಬರುತ್ತಿದ್ದನು ॥೧೭॥ ಆ ಅರ್ಧರಾತ್ರಿಯ ಸಮಯದಲ್ಲಿ ಪವಮಾನನಂದನನು ಉತ್ತಮವಾದ ಕಾಂತಿಯಿಂದ ಬೆಳಗುತ್ತ, ಲಜ್ಜೆಯಿಂದ ತಮ್ಮ ಅವಯವಗಳನ್ನು ಅಡಗಿಸಿಕೊಂಡು ಹುದುಗಿ ಮಲಗಿರುವ ಕೆಲವು ಮಂದಿ ಹೆಂಗಸರನ್ನು ಕಂಡನು, ತಂತಮ್ಮ ವಲ್ಲಭರೊಂದಿಗೆ ಸೇರಿ ಅಡಗಿ ಶಯನಮಾಡಿರುವವರನ್ನೂ ನೋಡಿದನು, ಮತ್ತು ಹೂವಿನಪೊದೆಯೊಳಗೆ

ದದರ್ಶ ಕಾಶ್ಚಿತ್ಪ್ರಮದೋಪಗೂಢಾ
ಯಥಾ ವಿಹಂಗಾಃ ಕುಸುಮೋಪಗೂಢಾಃ ॥೧೮॥
ಅನ್ಯಾಃ ಪುನರ್ಹರ್ಮ್ಯ ತಲೋಪವಿಷ್ಟಾಃ
ತತ್ರ ಪ್ರಿಯಾಂಕೇಷು ಸುಖೋಪವಿಷ್ಟಾಃ ।
ಭರ್ತುಃ ಪ್ರಿಯಾ ಧರ್ಮಪರಾ ನಿವಿಷ್ಟಾ
ದದರ್ಶ ಧೀಮಾನ್ ಮದನಾಭಿವಿಷ್ಟಾಃ॥೧೯॥
ಅಪ್ರಾವೃತಾಃ ಕಾಂಚನ ರಾಜಿವರ್ಣಾಃ
ಕಾಶ್ಚಿತ್ಪರಾರ್ಧ್ಯಾಸ್ತಪನೀಯ ವರ್ಣಾಃ ।
ಪುನಶ್ಚ ಕಾಶ್ಚಿಚ್ಛಶಲಕ್ಷ್ಮ ವರ್ಣಾಃ
ಕಾಂತಪ್ರಹೀಣಾ ರುಚಿರಾಂಗವರ್ಣಾಃ ॥೨೦॥
ತತಃ ಪ್ರಿಯಾನ್ ಪ್ರಾಪ್ಯ ಮನೋಭಿರಾಮಾಃ

ಧೀಮಾನ್-ಬುದ್ಧಿವಂತನಾದ ಆಂಜನೇಯನು, ತತ್ರ-ಅಲ್ಲಿ, ಹರ್ಮ್ಯತಲ - ಉಪ್ಪರಿಗೆಗಳ ಮೇಲೆ, ಉಪವಿಷ್ಟಾಃ-ಕುಳಿತಿರುವ, ಅನ್ಯಾಃಪುನಃ-ಮತ್ತೆ ಕೆಲವರನ್ನೂ, ಪ್ರಿಯಾಂಕೇಷು- ತಮ್ಮ ಗಂಡಂದಿರ ತೊಡೆಗಳ ಮೇಲೆ, ಸುಖೋಪವಿಷ್ಟಾಃ - ಸುಖವಾಗಿ ಕುಳಿತಿರುವವರನ್ನೂ, ಭರ್ತುಃ - ಪತಿಗೆ, ಪ್ರಿಯಾಃ-ಪ್ರೀತಿಪಾತ್ರರಾದವರನ್ನೂ, ಧರ್ಮಪರಾಃ - ಧರ್ಮಕಾರ್ಯಾಸಕ್ತರಾಗಿ, ನಿವಿಷ್ಟಾಃ - ಕುಳಿತಿರುವವರನ್ನೂ, ಮದನಾಭಿವಿಷ್ಟಾಃ-ಕಾಮಾತುರರಾಗಿರುವವರನ್ನೂ, ದದರ್ಶ-ನೋಡಿದನು ॥ ೧೯ ॥ (ಕುತ್ರಚಿತ್ - ಮತ್ತೊಂದೆಡೆಯಲ್ಲಿ) ಕಾಶ್ಚನ - ಕೆಲವರು, ಅಪ್ರಾವೃತಾಃ - ಮೇಲುಸೆರಗಿಲ್ಲದವರಾಗಿದ್ದರು, ಕಾಶ್ಚನ-ಮತ್ತೆ ಕೆಲವರು, ಕಾಂಚನರಾಜಿವರ್ಣಾಃ - ಚಿನ್ನದಂತೆ ಹೊಳೆಯುವ ಬಣ್ಣವುಳ್ಳವರು, ಕಾಶ್ಚಿತ್ - ಇನ್ನು ಕೆಲವರು, ಪರಾರ್ಧ್ಯಾಃ - ಶ್ರೇಷ್ಠವಾದ ಜಾತಿಯವರು, (ಒಳ್ಳೆಯ ಹುಟ್ಟಾಣಿಕೆ) ಕಾಶ್ಚಿತ್ - ಬೇರೆ ಕೆಲವರು, ತಪನೀಯವರ್ಣಾಃ - ಕುಂದಣದ ಬಣ್ಣವುಳ್ಳವರು, ಪುನಶ್ಚ ಕಾಶ್ಚಿತ್ - ಇನ್ನು ಕೆಲವರಾದರೋ, ಶಶಲಕ್ಷ್ಮವರ್ಣಾಃ - (ವಿರಹವೇದನೆಯಿಂದ) ಚಂದ್ರನಂತೆ ಬಿಳಿಯ ಬಣ್ಣದವರು, ಕಾಶ್ಚಿತ್ - ಇತರರು, ರುಚಿರಾಂಗವರ್ಣಾಃ - ಮನೋಹರವಾದ ಅಂಗಸೌಂದರ್ಯವುಳ್ಳವರಾದರೂ, ಕಾಂತಪ್ರಹೀಣಾಃ - ಪತಿಸಾನ್ನಿಧ್ಯವಿಲ್ಲದವರಾಗಿದ್ದರು ॥ ೨೦ ॥ ತತಃ - (ಬಳಿಕ ಮತ್ತೊಂದೆಡೆಯಲ್ಲಿ,) ಸಃ - ಆ, ಹರಿಪ್ರವೀರಃ - ಕಪಿವೀರನು, ಪ್ರಿಯಾನ್-ವಲ್ಲಭರನ್ನು, ಪ್ರಾಪ್ಯ-ಹೊಂದಿ, ಮನೋಭಿರಾಮಾಃ-ಅವರ ಮನಸ್ಸಿಗೆ ಒಪ್ಪುತಲಿರುವವರಾಗಿ,

ಕಲೆತಿರುವ ಹಕ್ಕಿಗಳಂತೆ ಮದೋನ್ಮತ್ತರೂ, ಮಹಾ ಸಂತೋಷಭರಿತರೂ ಆಗಿ, ತಮ್ಮ ಪ್ರಾಣಕಾಂತರೊಡನೆ ಬೆರೆತು ಅಡಗಿ ಮಲಗಿರುವ ಕೆಲವು ಕೋಮಲಾಂಗಿಯರನ್ನೂ ಈಕ್ಷಿಸಿದನು ॥೧೮॥ ಆ ಮನೆಗಳೊಳಗೆ ಮಹಡಿಗಳ ಮೇಲೆ ಸುಖವಾಗಿ ಕುಳಿದ್ದವರು ಕೆಲವರು, ತಮ್ಮ ಪ್ರಾಣಕಾಂತರ ತೊಡೆಗಳ ಮೇಲೆ ಚಕ್ಕಂದದಿಂದ ಹಾಯಾಗಿ ಕುಳಿತಿದ್ದವರು ಕೆಲವರು, ಪ್ರಿಯಪತಿಯರೊಡನೆ ಧರ್ಮ ಕಾರ್ಯಾಸಕ್ತರಾಗಿದ್ದವರು ಕೆಲವರು, ಮದನಾವೇಶದಿಂದ ಮೈಮರೆತಿದ್ದವರು ಕೆಲವರು, ಹೀಗಿರುವವರಲ್ಲಿ ಬುದ್ಧಿಶಾಲಿಯಾದ ಮಾರುತಿಯು ಹಾಯನೋಡುತ ಬರುತ್ತಿದ್ದನು ॥೧೯॥ ಅವರಲ್ಲಿಯೂ ಕೆಲವರು ಮೇಲಣ ಸೆರಗಿಲ್ಲದವರಾಗಿ ಬಂಗಾರದಂತೆ ಬೆಳಗುವ ಬಣ್ಣದವರಾಗಿದ್ದರು. ಮತ್ತೆ ಕೆಲವು ಮಂದಿ ಉತ್ತಮಸ್ತ್ರೀ

ಸುಪ್ರೀತಿಯುಕ್ತಾಃ ಪ್ರಸಮೀಕ್ಷ್ಯರಾಮಾಃ ।
ಗೃಹೇಷು ಹೃಷ್ಟಾಃ ಪರಮಾಭಿ ರಾಮಾ
ಹರಿಪ್ರವೀರ ಸ್ಸ ದದರ್ಶ ರಾಮಾಃ ॥೨೦॥
ಚಂದ್ರಪ್ರಕಾಶಾಶ್ಚ ಹಿ ವಕ್ತ್ರಮಾಲಾ
ವಕ್ರಾಕ್ಷಿ ಪಕ್ಷ್ಮಾಶ್ಚ ಸುನೇತ್ರಮಾಲಾಃ ।
ವಿಭೂಷಣಾನಾಂ ಚ ದದರ್ಶ ಮಾಲಾ
ಶ್ಶತಹ್ರದಾನಾ ಮಿವ ಚಾರುಮಾಲಾಃ ॥೨೧॥
ನ ತ್ವೇವ ಸೀತಾಂ ಪರಮಾಭಿಜಾತಾಂ

ಸುಪ್ರೀತಿಯುಕ್ತಾಃ-ಪರಮಪ್ರೇಮದಿಂದ ಒಡಗೂಡಿ ಇರತಕ್ಕ, ರಾಮಾಃ-ಸುಂದರಿಯರನ್ನೂ, ಪ್ರಸಮೀಕ್ಷ್ಯ-ನೋಡಿಕೊಂಡು, ಗೃಹೇಷು - ಮತ್ತೆ ಕೆಲವು ಮನೆಗಳಲ್ಲಿ, ಹೃಷ್ಟಾಃ - ಬಹು ಸಂತುಷ್ಟರಾಗಿ, ಪರಮಾಭಿರಾಮಾಃ - ಅತ್ಯಂತ ಕ್ರೀಡಾಸಕ್ತರಾಗಿರುವ, ರಾಮಾಃ - ಕಾಮಿನಿಯರನ್ನೂ, ದದರ್ಶ - ಅವಲೋಕಿಸಿದನು ॥ ೨೦ ॥ ಚಂದ್ರಪ್ರಕಾಶಾಃ - ಚಂದಿರನಂತೆ ಹೊಳೆಯುತಲಿರುವ, ವಕ್ತ್ರಮಾಲಾಶ್ಚ - ಮುಖಗಳ ಸಾಲುಗಳನ್ನೂ, ವಕ್ರಾಕ್ಷಿಮಾಲಾಃ - ಡೊಂಕಾದ ಇಲ್ಲವೆ ಕೋರೆಯಾದ ದೃಷ್ಟಿಗಳುಳ್ಳ, ಸುನೇತ್ರಮಾಲಾಃ - ಅಂದವಾದ ಕಣ್ಣುಗಳ ಶ್ರೇಣಿಗಳನ್ನೂ, ವಿಭೂಷಣಾನಾಂ - ಆ ಅಂಗನೆಯರು ಧರಿಸಿ ಇರುವ ದಿವ್ಯಾಭರಣಗಳ, ಮಾಲಾಶ್ಚ - ಆವಳಿಗಳನ್ನು, ಶತಹ್ರದಾನಾಂ - ಮಿಂಚುಗಳ, ಚಾರುಮಾಲಾ ಇವ - ಅಂದವಾದ ರೇಖೆಗಳನ್ನು ನೋಡುವ ಹಾಗೆ, ದದರ್ಶ - ನೋಡುತ ಬಂದನು ॥ ೨೧ ॥ ಪರಮಾಭಿಜಾತಾಂ - ಶ್ರೇಷ್ಠವಾದ ಹುಟ್ಟಿನ ಆದಿಹೆಯುಳ್ಳವಳಾಗಿಯೂ, ಪಥಿ - ಸದಾಚಾರದ ಮಾರ್ಗದಲ್ಲಿ, ಸ್ಥಿತೆ - ಇರುವ, ರಾಜಕುಲೆ - ಜನಕಮಹಾರಾಜನ ಮನೆಯಲ್ಲಿ, (ವಂಶದಲ್ಲಿ) ಪ್ರಜಾತಾಂ - ಬೆಳವಳಿಗೆಯನ್ನು ಹೊಂದಿರುವ, ಸಾಧುಜಾತಾಂ - ಅಂದವಾಗಿ ಹುಟ್ಟಿ ಇರತಕ್ಕ, ಪ್ರಫುಲ್ಲಾಂ - ಹೊರವಾಗಿ ಅರಳಿರುವ

ಯರು ಕುಂದಣದಂತೆ ಮೆರೆಯುವಶರೀರದ ಸೊಬಗುಳ್ಳವರಾಗಿದ್ದರು, ಇನ್ನು ಕೆಲವರಾದರೋ ಕಪ್ಪಿನಿಂದ ಬೆರೆತಿರುವ ಬಿಳಿಯ ಬಣ್ಣದವರಾಗಿ ವಿರಾಜಿಸುತ್ತಿದ್ದರು. ಇನ್ನು ಕೆಲವರು ಪ್ರಾಣಪ್ರಿಯರ ಸಾನ್ನಿಧ್ಯವಿಲ್ಲದೆ ಆಹಾರ ವಿಶೇಷದಿಂದ ತಳತಳಿಸುತಲಿರುವ ಅಂಗಗಳ ಪ್ರಭೆಯುಳ್ಳವರಾಗಿದ್ದರು ॥೨೦॥ ಬಳಿಕ- ಪ್ರಿಯಭರ್ತರನ್ನು ಹೊಂದಿ ಮನೋಹರರಾಗಿರುವವರು, ಬಹು ಪ್ರೀತಿಸಂಪನ್ನರು, ಹರ್ಷಪರವಶರು, ಆನಂದದಿಂದ ಹಿಗ್ಗಿರುವವರು, ಪ್ರೇಮಭರಿತರೂ ಆಗಿ ಒಪ್ಪುತಲಿರುವ ಬಹುಮಂದಿ ಸುಂದರಿಯರನ್ನು ವೀರಹನುಮನಾಲೋಕಿಸಿದನು॥೨೦॥ ಬಗೆಬಗೆಯುತೆರದಿಂದ ಮಲಗಿರುವ ಮಾನಿನಿಯರ ಮುಖಗಳ ಸಾಲು, ಪೂರ್ಣಚಂದ್ರರ ಸಾಲಿನಂತೆ ಮೆರೆಯುತಲಿದ್ದಿತು,ವಕ್ರವಾದ ಇಲ್ಲವೆ ಕೋರೆಯಾದ ನೋಟಗಳೂ,ಡೊಂಕಾದ ಇಲ್ಲವೆ ಗುಂಡಾಗಿ ಬಳಬಾಗಿದ ರಪ್ಪೆಗಳೂ, ಅರೆ ಮುಗಿದ ಕಣ್ಣುಗಳೂ ಕಂಗೊಳಿಸುತಲಿದ್ದುವು, ಏಕಕಾಲದಲ್ಲಿ ಹುಟ್ಟಿ ಸಾಲಾಗಿಯೂ ನೆಲೆಯಾಗಿಯೂ ನಿಂತಿರುವ ಮಿಂಚುಗಳಂತೆ ಫಳಫಳನೆ ಹೊಳೆಯುತಲಿರುವ ಆ ಸರ್ವಾಂಗ ಸುಂದರಿಯರ ಅವಯವಗಳಲ್ಲಿ ಇಳಿಯಹಾಕಿರುವ ರತ್ನಾಭರಣಗಳ ಬೆಳಕು ಕಣ್ಣಿನ ನೋಟವನ್ನುತಟ್ಟನೆ ತಡೆಯುತಲಿದ್ದಿತು ॥೨೧॥ ಬಹು ಬುದ್ಧಿವಂತನಾದ ಪವಮಾನನಂದನನು ಯದ್ಯಪಿ ಲಕ್ಷಾಂತರ ಮಂದಿ

ಪಥಿ ಸ್ಥಿತೇ ರಾಜಕುಲೇ ಪ್ರಜಾತಾಂ ।
ಲತಾಂ ಪ್ರಫುಲ್ಲಾಮಿವ ಸಾಧುಜಾತಾಂ
ದದರ್ಶತನ್ವೀಂ ಮನಸಾ ಭಿಜಾತಾಂ ॥೨೩॥
ಸನಾತನೇ ವರ್ತ್ಮನಿ ಸನ್ನಿವಿಷ್ಟಾಂ

ಲತಾಮಿವ - ಎಳೆಬಳ್ಳಿಯಂತಿರತಕ್ಕ, (ಕೋಮಲಾಂಗಿಯಾದ) (೧) ಮನಸಾಭಿಜಾತಾಂ - ಅಯೋನಿಜಳಾದ (ಮನಸ್ಸಂಕಲ್ಪದಿಂದ) ಅವತರಿಸಿ ಇರುವ, ತನ್ವೀಂ - ಕೃಶಾಂಗಿಯಾಗಿರುವ, ಸೀತಾಂ - ಜಾನಕಿಯನ್ನಾದರೋ, ನೈವದದರ್ಶ - ನೋಡಲೇ ಇಲ್ಲ ॥ ೨೩ ॥ ಸನಾತನೇ - ಪುರಾತನ ಕಾಲದಿಂದಲೂ ಪರಿಶುದ್ಧವಾದ, ವರ್ತ್ಮನಿ - ಪಾತಿವ್ರತ್ಯಮಾರ್ಗದಲ್ಲಿ, ಸನ್ನಿವಿಷ್ಟಾಂ - ಚೆನ್ನಾಗಿ ನೆಲೆಗೊಂಡಿರುವ, ರಾಮೇಕ್ಷಣಾಂತಾಂ - ಶ್ರೀರಾಮಸಂದರ್ಶನದಲ್ಲಿ ಮನೋ ನಿಶ್ಚಯವುಳ್ಳ, ಮದನಾಭಿವಿಷ್ಟಾಂ- ಶ್ರೀರಾಮನಲ್ಲಿ ಅತ್ಯಂತ

ಸುಂದರಾಂಗಿಯರನ್ನೆಲ್ಲ ನೋಡುತಲೇ ಬಂದನು, ಆದರೇನು ? ಏನೂಪ್ರಯೋಜನವಾಗಲಿಲ್ಲ, ಏತಕ್ಕೆಂದರೆ-ಬಲು ಮುದ್ದಾದ ಹುಟ್ಟು, ಗುರುದೇವತಾ ವಿಶ್ವಾಸ, ಧರ್ಮಾಚರಣೆಯಲ್ಲಿ ಶ್ರದ್ಧಾಭಕ್ತಿಗಳು, ಸದಾಚಾರಸಂಪತ್ತಿ ಇತ್ಯಾದಿ ಸನ್ಮಾರ್ಗದಲ್ಲಿ ನೆಲೆಗೊಂಡಿರುವ ಮಹಾರಾಜನಾದ ಜನಕಮಹಾರಾಜನ ಮನೆಯಲ್ಲಿ ಬೆಳವಳಿಗೆ, ಮತ್ತು ಲೋಕದಲ್ಲಿನ ಸಾಮಾನ್ಯ ಜನರ ಜನದಂತಹ ಜನ್ಮವಲ್ಲ, ಗರ್ಭಜನ್ಮವೂ ಇಲ್ಲ, ಅರಳಿ ಹೊರವಾಗಿ ಬಲುಸೊಂಪಿನಿಂದ ಬೆಳದ ಬಹು ಅಂದವಾದ ಹುಟ್ಟಿನ ಕೋಮಲವಾದ ಲತೆಯಂತೆ ಮೃದು ಮಧುರವಾದ ಅಂಗಸೌಂದರ್ಯ, ಮಾನಸಿಕ ಸೃಷ್ಟಿ, ಇಂತು ಅಪರಿಮಿತ ಸೌಂದರ್ಯ ಸೌಭಾಗ್ಯದಿಂದ ಭಾಸಮಾನಳಾದ ಜನಕನಂದಿನಿಯೂ, ಶ್ರೀರಾಮಧರ್ಮಪತ್ನಿಯೂ ಆಗಿರುವ ಜಾನಕಿಯನ್ನು ಮಾತ್ರ ಎಲ್ಲಿಯೂ ಕಾಣಲೇ ಇಲ್ಲ, ॥೨೩॥ ಬಹುಪುರಾತನಕಾಲದಿಂದ ಆಚರಣೆಯಲ್ಲಿ

(೧) "ಯಸ್ಮಾತ್ ಪ್ರಧರ್ಷಿತಾ ಚಾಹಂ ಅಪಾಪಾ ಚಾಪ್ಯನಾಥವತ್ ।
ತಸ್ಮಾತ್ ತವ ವಧಾರ್ಥಂ ವೈ ಉತ್ಪತ್ಸ್ಯೇಹಂ ಧ್ರುವಂ ಪುನಃ ॥ " ಉತ್ತರಕಾಂಡ.

ಬೃಹಸ್ಪತಿ ಪುತ್ರನಾದ ಕುಶಧ್ವಜನು ವೇದಪಠಮಾಡುತ್ತಿರುವಾಗ ಬಾಯೊಳಗಿನಿಂದಹೊರಗೆಬಿದ್ದ ಬ್ರಹ್ಮಬಿಂದುವಿನಿಂದ ಹುಟ್ಟಿದ ವೇದವತಿಯು ಅಯೋನಿಜನಾದ ವಿಷ್ಣುವನ್ನೇ ವರಿಸುವೆನೆಂದು ತಪಸ್ಸು ಮಾಡುತಿದ್ದಳು. ಆಗ ದಿಗ್ವಿಜಯಾರ್ಥವಾಗಿ ಹೊರಟಿದ್ದ ರಾವಣನು ತನ್ನನ್ನು ವರಿಸುವಂತೆ ಆಕೆಯನ್ನು ಬಲಾತ್ಕರಿಸಿದನು, ಅದಕ್ಕೆ ಆಕೆ—ಎಲಮೂಢಾ ! ನಾನು ಪಾಪರಹಿತಳಾದರೂ ನನ್ನ ಸದುದ್ದೇಶವನ್ನು ಭಂಗಪಡಿಸಲಿಕ್ಕೆ ಯತ್ನಿಸಿ ನನ್ನನ್ನು ಅನಾಥಳೆಂದು ನೆನೆದು ಧಿಕ್ಕರಿಸುತ್ತಿದ್ದೀಯೆ, ಆದಕಾರಣ ನಾನು ನಿನ್ನ ಸಂಹಾರಕ್ಕೆ ನಿಮಿತ್ತವಾಗಲಿಕ್ಕೂ, ನನ್ನ ಉದ್ದೇಶವು ನೆರವೇರಲಿಕ್ಕೂ ಮುಂದೆ ಅವತರಿಸುವೆನು ಎಂದು ಶಪಿಸಿದಳು. ಇದರಿಂದ ನಾವು ಹಿಂದೆ ಸೂಚಿಸಿ ಇರುವಂತೆ ರಾವಣನು ಸಾಕ್ಷಾತ್ ಸೀತೆಯನ್ನು ಕೊಂಡುಹೋಗಲಿಲ್ಲವೆಂಬುದು ವ್ಯಕ್ತವಾಗುವುದು.

ಮತ್ತು :—" ಮಾರೀಚವಧಾರ್ಥವಾಗಿ ಶ್ರೀರಾಮನು ಕಾಡಿನೊಳಗೆ ದೂರವಾಗಿ ಹೋಗಿದ್ದು, ಹಿಂದಿರುಗಿ ಬರುವಾಗ ತನ್ನನ್ನು ಅರಸುತ್ತ ಬಂದ ಲಕ್ಷ್ಮಣನೊಡಗೂಡುತ್ತಿರುವಲ್ಲಿ, ಅತ್ತ ಪರ್ಣಶಾಲೆಯ ಬಳಿಗೆ ಬಂದ ರಾವಣನು, ಸೀತೆಯನ್ನು ಕೊಂಡು ಒಯ್ಯುತ್ತೇನೆ ಎಂದು ಸೀತಾಕೃತಿಯನ್ನು ಕೊಂಡು ಹೋದ " ಎಂದು ಶ್ರೀಮಧ್ವ ಸಂಪ್ರದಾಯಗ್ರಂಥವೂ ತಿಳಿಸುತ್ತಿದೆ. ಮ। ಸ ೨, ಶ್ಲೋ. ೧.

ರಾಮೇಕ್ಷಣಾಂ ತಾಂ ಮದನಾಭಿವಿಷ್ಟಾಂ ।
ಭರ್ತುರ್ಮನ ಶ್ರೀಮ ದನುಪ್ರವಿಷ್ಟಾಂ
ಸ್ತ್ರೀಭ್ಯೋ ವರಾಭ್ಯಶ್ಚ ಸದಾ ವಿಶಿಷ್ಟಾಂ ॥೨೪॥
ಉಷ್ಣಾರ್ದಿತಾಂ ಸಾನುಸೃತಾ ಸ್ರಕಂಠೀಂ
ಪುರಾ ವರಾರ್ಹೋತ್ತಮ ನಿಷ್ಕಕಂಠೀಂ ।

ವ್ಯಾಮೋಹವುಳ್ಳ, ಭರ್ತುಃ - ಪ್ರಿಯವಲ್ಲಭನ, ಶ್ರೀಮತ್ - ತನ್ನದರ್ಶನದಲ್ಲಿಯೇ ಅನುರಕ್ತವಾದ, ಮನಃ - ಮನಸ್ಸನ್ನು, ಅನುಪ್ರವಿಷ್ಟಾಂ - ಒಳಹೊಕ್ಕಿರುವ, ಸದಾ - ಯಾವಾಗಲೂ, ವರಾಭ್ಯಃ - ಶ್ರೇಷ್ಠರೆನಿಸಿದ, ಸ್ತ್ರೀಭ್ಯಶ್ಚ - ಸತಿಯರಿಗಿಂತಲೂ, ವಿಶಿಷ್ಟಾಂ - ವಿಶೇಷಗುಣವತಿಯೆನಿಸಿದ, ॥೨೪॥ ಉಷ್ಣಾರ್ದಿತಾಂ- (ಪತಿಯ ಅಗಲಿಕೆಯಿಂದುಂಟಾದ ಸಂತಾಪದಿಂದ) ತಪ್ತಳಾದ, ಸಾನುಸೃತಾಸ್ರ - ಹರಿದುಬರುವ ಕಣ್ಣೀರಿನಿಂದ ಕೂಡಿದ, ಕಂಠೀಂ - ಕೊರಳುಳ್ಳ, ಪುರಾ - ಮೊದಲು ಶ್ರೀರಾಮನೊಡನೆ ಇರುವಾಗ, ವರಾರ್ಹೋತ್ತಮ - ಉತ್ತಮೋತ್ತಮವಾದ, ನಿಷ್ಕಕಂಠೀಂ -ರತ್ನಖಚಿತವಾದ ಪದಕದಿಂದೊಡಗೂಡಿದ

ಬಂದಿರುವ ಸುಪಥದಲ್ಲಿ ನೆಲೆ, ಸರ್ವಧನವೆನಿಸಿದ ಶ್ರೀರಾಮಚಂದ್ರ ಸಂದರ್ಶನದಲ್ಲಿಯೇ ಅನವರತಾಸಕ್ತಿ, ಆಮಹಾನುಭಾವನೊಡನಾಟದಲ್ಲಿಯೇ ಕಾಮ, ಸಕಲಕಲ್ಯಾಣ ಗುಣಾಭಿರಾಮನೆನಿಸಿರುವ ಪ್ರಾಣವಲ್ಲಭನಾದ ಆರಾಮನಮನವನ್ನೇ ಹೊಕ್ಕಿರುವುದು,ಪತಿಭಕ್ತಿ, ಪತಿಸೇವೆ, ಪತಿಮನೋನುಸರಣ, ಪತ್ಯಾಜ್ಞಾಪರಿಪಾಲನ, ಪತಿಯಲ್ಲಿಸಕಲದೇವತಾಬುದ್ಧಿ, ಪತಿಯೇ ಸರ್ವಸ್ವವೆಂಬ ಸಂತತಭಾವನೆ, ಇತ್ಯಾದಿಸುಗುಣಗಳಲ್ಲಿ ಹೆಸರುವಾಸಿಯನ್ನು ಪಡೆದಿರುವ ಸರ್ವಸುಮಂಗಲಿಯರಿಗಿಂತಲೂ ಶ್ರೇಷ್ಠಳೆನಿಸಿದ ಸೀತೆಯನ್ನು ನೋಡಲೇ ಇಲ್ಲ. ॥ ೨೪ ॥ ಅಹಹ ! ಅಯ್ಯೋ !! ಬಹುಕಷ್ಟ !!! ತುಸ ನೆನೆವಗೂ ಖಂಡಿತವಾಗಿ

ಮತ್ತು:— "ದೇವ್ಯಾ ಸ್ಸಮೀಪ ಮಥರಾವಣ ಆಸಸಾದ ಸಾದೃಶ್ಯತಾಮಗಮ ದಪ್ಯವಿಷಹ್ಯಶಕ್ತೇಃ । ಸೃಷ್ಟ್ವಾತ್ಮನಃ ಪ್ರತಿಕೃತಿಂ ಪ್ರಯಯೌಚಶೀಘ್ರಂ ಕೈಲಾಸ ಮರ್ಚಿತ ಪದಾ ನ್ಯವಸಚ್ಛಿವಾಭ್ಯಾಂ ॥" ಸೀತಾಪಹಾರ ಸಮಯದಲ್ಲಿ-ರಾವಣನು ಸೀತೆಯಿದ್ದೆಡೆಗೆ ಬಂದನು. ಆಗ ಆಕೆ ಅದೃಶ್ಯಳಾದಳು, ಮತ್ತು ಆಕೆ ತನ್ನ ಪ್ರತಿಬಿಂಬವನ್ನು ಆದೇಹದಲ್ಲಿ ಇಟ್ಟು ಕೈಲಾಸಕ್ಕೆ ತೆರಳಿ, ಅಲ್ಲಿ ಪಾರ್ವತೀ ಪರಮೇಶ್ವರರಿಂದ ಗೌರವಿಸಲ್ಪಡುತ್ತಿದ್ದಳು ಎಂದು ಮ। ಭಾ। ತಾ। ನಿರ್ಣಯ. ಮತ್ತು-ಅಲ್ಲಿಯೇ-ಅ। ೫. ಶ್ಲೋ। ೩೭. "ತಸ್ಯಾಸ್ತುತಾಂ ಪ್ರತಿಕೃತಿಂ ಪ್ರವಿವೇಶ ಶಕ್ರೋ ದೇವ್ಯಾಶ್ಚಸನ್ನಿಧಯೇ ತಾಂ ವ್ಯವಹಾರ ಸಿದ್ಧ್ಯೈ ॥" ಬಳಿಕ ಇಂದ್ರನು-ಭವಿತವ್ಯತೆಯು ಎಂದರೆ ಮುಂದಿನ ಆಗುಹೋಗುಗಳ ನಿರ್ವಾಹಕ್ಕಾಗಿ ರಮಾದೇವಿಯ ಸಾನ್ನಿಧ್ಯವುಳ್ಳ ಆಪ್ರತಿ ಕೃತಿಯಲ್ಲಿ ತಾನು ಪ್ರವೇಶಿಸಿದ್ದನು. ಇದಲ್ಲದೆ, ಅ। ೮ ಶ್ಲೋ ೧೩ರಲ್ಲಿ :—"ಸೀತಾಕೃತಿಂತಾಂ ಅಥ ತತ್ರ ಚಾಗತಾಂ ದಿವ್ಯೇಕ್ಷಲೇ ನ ಪ್ರಣಿಧಾಯ ಪಾವಕೇ । ಕೈಲಾಸತಃ ತಾಂ ಪುನರೇವ ಚಾಗತಾಂ ಸೀತಾಂ ಅಗೃಹ್ಣಾತ್ ಹುತಭುಕ್ಸಮರ್ಪಿತಾಂ ॥ ಜಾನರ್ಗಿರೀ ಶಾಲಯಗಾಂ ಸಸೀತಾಂ ಸಮುಗ್ರಹೀತ್ ಪಾವಕ ಸಂಪ್ರದತ್ತಾಂ ॥" ರಾವಣವಧಾನಂತರ ತನ್ನ ಬಳಿಗೆ ಬಂದು ಪಾತಿವ್ರತ್ಯದ ಪ್ರಾಮಾಣ್ಯವನ್ನು ತೋರಿಸಬೇಕೆಂದು ಪ್ರಮಾಣ ಮಾಡುವ ನೆಪದಿಂದ ಅಗ್ನಿಯಲ್ಲಿ ಪ್ರತಿಬಿಂಬವನ್ನು ಇಟ್ಟು ಅಗ್ನಿಯಿಂದ ಸಮರ್ಪಿಸಲ್ಪಟ್ಟವಳಾಗಿ ಬಂದ ನಿಜಸೀತೆಯನು ಕೈಲಾಸದಲ್ಲಿದ್ದವಳನ್ನಾಗಿ ತಿಳಿದು ಶ್ರೀರಾಮನು ಆಕೆಯನ್ನು ಪರಿಗ್ರಹಿಸಿದನು.

ಸಂಜಾತಪಕ್ಷ್ಮಾ ಮಭಿರಕ್ತಕಂಠೀಂ
ವನೇ ಪ್ರನೃತ್ತಾ ಮಿವ ನೀಲಕಂಠೀಂ ॥೨೫॥
ಅವ್ಯಕ್ತರೇಖಾ ಮಿವ ಚಂದ್ರರೇಖಾಂ
ಪಾಂಸುಪ್ರದಿಗ್ಧಾ ಮಿವ ಹೇಮರೇಖಾಂ ।
ಕ್ಷತಪ್ರರೂಢಾ ಮಿವ ಬಾಣರೇಖಾಂ
ವಾಯು ಪ್ರಭಿನ್ನಾಮಿವ ಮೇಘ ರೇಖಾಂ ॥ ೨೬ ॥
ಸೀತಾ ಮಪಶ್ಯ ನ್ಮನುಜೇಶ್ವರಸ್ಯ
ರಾಮಸ್ಯ ಪತ್ನೀಂ ವದತಾಂ ವರಸ್ಯ ।

ಕೊರಳುಂಟಾಗಿದ್ದ, ಸುಜಾತ-ಸುಂದರವಾದ, ಪಕ್ಷ್ಮಾಂ-ಕಣ್ಣುರೆಪ್ಪೆಯುಳ್ಳ, ಅಭಿರಕ್ತ-ಕೆಂಪಗಿರುವ, ಕಂಠೀಂ-ಕಂಠವುಳ್ಳ, ವನೇ - ಅರಣ್ಯದಲ್ಲಿ, ಪ್ರನೃತ್ತಾಂ-ಪತಿಯೊಡನೆ ನಲಿಯುತಲಿದ್ದ ಳಾದಕಾರಣವೇ, ನೀಲಕಂಠೀಂ-ನವಿಲಿನಂತೆ ಒಪ್ಪುತಲಿರುವ ॥೨೫॥ (ಅಧುನಾ-ಈಗ) ಅವ್ಯಕ್ತರೇಖಾಂ- ಹೊರಗೆ ಚೆನ್ನಾಗಿ ಕಾಣಬರದಿರುವ ಪ್ರಕಾಶವುಳ್ಳ, ಚಂದ್ರರೇಖಾಮಿವ - ಚಂದ್ರಕಳೆಯಂತಿರುವ, ಪಾಂಸುಪ್ರದಿಗ್ಧಾಂ - ಧೂಳಿಯಿಂದ ತುಂಬಿದ, ಹೇಮರೇಖಾಮಿವ - ಚಿನ್ನದ ಸಲಾಕಿಯಂತಿರುವ, ಕ್ಷತಪ್ರರೂಢಾಂ - ಗಾಯದೊಳಗೆ ಸಿಕ್ಕಿಕೊಂಡಿರುವ, ಬಾಣರೇಖಾಂ - ಬಾಣದ ತುಂಡುಳ್ಳಂತಿರುವ (ಬಹಳ ವ್ಯಥೆಪಡುತಲಿರುವ) ವಾಯುಪ್ರಭಿನ್ನಾಂ - ಗಾಳಿಯುಪೆಟ್ಟಿನಿಂದ ಬೇರ್ಪಟ್ಟ, ಮೇಘರೇಖಾಂ - ಮೇಘಖಂಡದಂತಿರುವವಳೂ ಆದ, ॥ ೨೬ ॥ ಮನುಜೇಶ್ವರಸ್ಯ - ಸ್ವಾಮಿಯೂ, ವದತಾಂ - ಮಾತಿನ ಧಾಟಿಯುಳ್ಳವರೊಳಗೆ, ವರಸ್ಯ - ಉತ್ತಮನೂ ಆಗಿರುವ, ರಾಮಸ್ಯ - ಶ್ರೀರಾಮಚಂದ್ರನ, ಪತ್ನೀಂ - ಧರ್ಮಭಾರ್ಯೆಯಾದ, ಸೀತಾಂ - ಸೀತಾದೇವಿಯನ್ನು, ಚಿರಸ್ಯ - ಬಹಳ ಹೊತ್ತಿನಿಂದ ಹುಡುಕಿದರೂ, ಅಪಶ್ಯನ್ - ಕಾಣದಿರುವವನಾಗಿ, ಪ್ಲವಂಗಮಃ -

ತಾಳಲಾಗದ, ತೀಕ್ಷ್ಣವಾದ ದುಃಖದಬೇಗೆಯಿಂದ ನೊಂದಿದಾಳೆ, ಅಳುವಿನಿಂದ ಕೊರಳ್ಳಲ್ಲಿ ತೊದಲನುಡಿಯೂ ಹೊರಡದು, ಮೊದಲು ಉತ್ತಮವಾದ ರತ್ನದಪದಕದಿಂದ ಬೆಳಗುತಲಿದ್ದ ಕೊರಳಲ್ಲವೇ ? ಸುಂದರವಾದಕಣ್ಣಿನಿಂದಲೂ ಚಂದವಾದ ರೆಪ್ಪೆಯಿಂದಲೂ, ಸುಸ್ವರದಿಂದಲೂ ಮೃದುಮಧುರವಾದ ಕಂಠದಿಂದಲೂ ಒಪ್ಪುವ ಉತ್ತಮಾಂಗನೆಯಲ್ಲವೆ? ವನದೊಳಗೆ ತಡೆಯಿಲ್ಲದೆತಿರುದು ಉಲ್ಲಾಸದಿಂದ ಕುಣಿಯುತ ನವಿಲಿಗೆ ಎಣೆಯಾದ ಮಂಗಳನಾದದಿಂದ ಸುಲಲಿತ ಕಂಠಿಯಲ್ಲವೇ ? ಇಂತಹ ಮೃಗಾಕ್ಷಿಯನ್ನು ಈಕ್ಷಿಸಲಿಲ್ಲ ॥ ೨೫ ॥ ಆ ಮಹಾನುಭಾವನಾದ ಶ್ರೀರಾಮನನ್ನು ಅಗಲಿರುವುದರಿಂದ ಶುಕ್ಲಪಕ್ಷದ ಪ್ರತಿಪತ್ತಿನಲ್ಲಿ ಕಂಡುಕಾಣಬರದಂತಿರುವ ಚಂದ್ರರೇಖೆಯಂತಿರುವಳು. ಬಿರುಗಾಳಿಯಿಂದೆದ್ದ ಧೂಳಿಯಿಂದ ಮಲಿನವಾದ ಬಂಗಾರದ ಸಲಾಕಿಯಂತೆ ಶೋಭಿಸದಿರುವಳು, ಗಾಯದಲ್ಲಿ ತಗಲಿದ ಬಾಣದ ಅಲಗಿನಿಂದ ಉಂಟಾಗುವ ನೋವಿನಂತೆ ನೋವನ್ನು ಅನುಭವಿಸುತಲಿರುವವಳು, ಗಾಳಿಯಪೆಟ್ಟಿನಿಂದ ಛಿದ್ರೋಭಂಗವಾದ ಮೇಘ ಮಾಲೆಯಂತೆ ವಲ್ಲಭನ ಅಗಲಿಕೆಯಿಂದ ಚಂಚಲ ಚಿತ್ತಳಾಗಿರುವವಳು, ಇಂತು ಅಪರಿಮಿತ ಬಾಧೆಯನ್ನು ಅನುಭವಿಸುತಲಿರುವ ಮೈಥಿಲಿಯನ್ನು ಮಾರುತಿಯು ನಿರುಕಿಸಲಿಲ್ಲ ॥೨೬॥ ಅಯ್ಯೋ ಪಾಪ, ಆಂಜನೇಯನಿಗೆ ಬುದ್ಧಿಯೋ ಬಲುಚೂಟಿ, ಧೈರ್ಯವೋ ಹೆಚ್ಚು; ಹೊಂಚು ಹಾಕುವುದರಲ್ಲಿ ಮಿಂಚಿದವ

ಬಭೂವ ದುಃಖಾಭಿಹತಶ್ಚಿರಸ್ಯ
ಪ್ಲವಂಗಮೋ ಮಂದ ಇವಾಚಿರಸ್ಯ ॥೨೬॥

ಇತಿ ಶ್ರೀಮತ್ಸುಂದರಕಾಂಡೇ-ಪಂಚಮಸ್ಸರ್ಗಃ.

---

ಆಂಜನೇಯನು, ಅಚಿರಸ್ಯ - ಕೂಡಲೇ ; * ದುಃಖಾಭಿಹತಃ - ವ್ಯಸನದ ಪೆಟ್ಟುಬಿದ್ದವನಾಗಿ, ಮಂದ ಇವ - ಮೂಢನಂತೆ, ಬಭೂವ - ಇರುತ್ತಿದ್ದನು ॥೨೬॥

—ಇಂತು ರಸಾಯನ ಟೀಕೆಯಿಂದೊಡಗೂಡಿದ ಐದನೆಯ ಸರ್ಗವು—

—ಶ್ರೀರಾಮ ಚನ್ದ್ರಾರ್ಪಣಂ—

---

ನೇ ಹಾದು, ಸಂಚುಗಾರರಲ್ಲಿ ಗಟ್ಟಿಗನೇನು. ಮಿತಿಮೀರಿದ ಶೌರ್ಯ, ಅಪಾರವಾದ ಪರಾಕ್ರಮ, ಅನ್ಯಾದೃಶವಾದ ಜಾಣತನ, ಅಸದೃಶವಾದ ಆಲೋಚನಾಶಕ್ತಿ, ನಿರುಪಮವಾದ ಮಹತ್ವ, ಅಸಮಾನವಾದ ಸತ್ವ, ದೇಹಬಲಕ್ಕೆ ಎಣೆಯೇ ಇಲ್ಲ. ಅಪ್ರತಿಮವೀರ, ಅದ್ವಿತೀಯವಾದ ಪಾಂಡಿತ್ಯ, ಹೆಚ್ಚಿಗೆಯಿಂದೇನು, ಸಕಲಸುಗುಣ ಸಂಪನ್ನ, ಆದರೇನು ? ಯಥಾಪ್ರಕಾರ, ಏನೂ ಇಲ್ಲ. ಏಕೆ ? ರಘುಕುಲಲಲಾಮನೆನಿಸಿರುವ, ವಾಗ್ಮಿಗಳೊಳಗೆಲ್ಲ ವಾಚಾಲನಾದ ಶ್ರೀರಾಮಚಂದ್ರನ ಧರ್ಮಪತ್ನಿಯನ್ನು ಕಾಣದೆ ಶೋಕಸಾಗರದಲ್ಲಿ ಮುಳುಗಿದನು, ಮರುಗಿದನು, ಕೊರಗಿದನು, ಬಹಳ ಹೊತ್ತಿನವರೆಗೂ ಮಂಕಾದನು, ಮರುಳಾದನು, ಮುಂಗಾಣದೆ ಹೋದನು, ಏನೂ ತೋರಲೇಇಲ್ಲ. ಮುಗ್ಧನಾಗಿ ಹೆಮ್ಮರದಂತೆ ಅಲುಗದೆ ನಿಂತನು ॥೨೬॥

ಕಂ॥ ಎಲ್ಲೆಲ್ಲಲೆದಂ ಮಾರುತಿ ಸಲ್ಲಲಿತದ ಸುದತಿಯಪ್ಪ ಸೀತೆಯನಾಗಳ್ ।
ಬಲ್ಲಿದನಾದೊಡ ಮರಿಯದೆ ಮೃಲ್ಲೋಷ್ಠದ ತೆರದೊಳಿರ್ದ ಮಂದತೆಯಿಂದಲ್ ॥

— ಇಂತು ಐದನೆಯ ಸರ್ಗವು —



* ಮಾರುತಿಯು ನವವ್ಯಾಕರಣ ಪಂಡಿತ, ಸರ್ವಜ್ಞ, ವಾಯುನಂದನ, ಆದರೂ ಸೀತೆಯಿರುವ ಸ್ಥಳವನ್ನು ಅರಿಯಲಾರದೆ ಕಂಗೆಟ್ಟು, ಕಳವಳಿಸಿ, ಶೋಕಕ್ಕೆ ಈಡಾದನೆಂಬುದು ಪೂರ್ವೋತ್ತರ ವಿರೋಧವಾಗುವುದಲ್ಲದೆ, ಬ್ರಹ್ಮನ ಮಾನಸ ಪುತ್ರನಾದ ವಶಿಷ್ಠನೇ ಶ್ರೀರಾಮಚಂದ್ರನ ಪಟ್ಟಾಭಿಷೇಕಕ್ಕೆ ಮುಹೂರ್ತವನ್ನು ನಿಶ್ಚಯಿಸಿ ಇದ್ದನು, ಆ ಮುಹೂರ್ತವು ರಾಮನ ಅರಣ್ಯಯಾತ್ರೆಗೆ ಅನುಕೂಲಿಸಿತು ಎಂಬಂತೆ ಹಾಸ್ಯಾಸ್ಪದವೂ ಆಗುತ್ತದೆ ಎಂದು ಆಕ್ಷೇಪವು ತೋರಬಹುದು, ಆದರೆ- ಭವಿತವ್ಯತೆಯು (ಮುಂದಿನ ಆಗುಹೋಗುಗಳ) ನಿರ್ವಾಹಕ್ಕೂ, ಸ್ವಾಮಿದೂತನಾಗಿ ಬಂದವನ ನಹತೆಯನ್ನು ತೋರಲಿಕ್ಕೂ, ಲೋಕವ್ಯವಹಾರವನ್ನು ಅನುಸರಿಸಿ ತಿಳಿಯಲಿಕ್ಕೂ ಈಸಟನೆ ಎಂದು ಸಮಾಧಾನವನ್ನು ತಂದುಕೊಳ್ಳಬೇಕು.

ಶ್ರೀಃ.

## ಷಷ್ಠಸ್ಸರ್ಗಃ.

ಸ ನಿಕಾಮಂ ವಿಮಾನೇಷು ವಿಷಣ್ಣಃ ಕಾಮರೂಪಧೃತ್ ।
ವಿಚಚಾರ ಪುನರ್ಲಂಕಾಂ ಲಾಘವೇನ ಸಮನ್ವಿತಃ ॥ ೧ ॥
ಆಸಸಾದಾಥ ಲಕ್ಷ್ಮೀವಾನ್ ರಾಕ್ಷಸೇಂದ್ರನಿವೇಶನಂ ।
ಪ್ರಾಕಾರೇಣಾರ್ಕವರ್ಣೇನ ಭಾಸ್ವರೇಣಾಭಿಸಂವೃತಂ ॥೨॥
ರಕ್ಷಿತಂ ರಾಕ್ಷಸೈರ್ಘೋರೈಸ್ಸಿಂಹೈರಿವ ಮಹದ್ವನಂ ।

---

ಶ್ರೀಃ

—ಶ್ರೀಮದಿನಕುಲ ಲಲಾಮಾಯನಮಃ—

—ಷಷ್ಠಸ್ಸರ್ಗಃ—

ಕಂದ॥ ರಾವಣನಾಳುವಲಂಕೆಯೊ । ಳಾವೆಡೆಯೊಳ್ ಸೀತೆ ತನಗೆ ಕಾಣುವಳೆಂಬಾ ।
ಭಾವದಿ ಮನೆಮನೆಯೊಳ್ತಾಂ । ಪಾವನಿಯಾರಾತ್ರಿ ಸಿಲ್ಲದಲೆಯುತಲಿರ್ದಂ ॥

ಸಃ - ಆ ಮಾರುತಿಯು, ವಿಮಾನೇಷು - ಆಕಾಶ ಯಾನಗಳೊಳಗೆ, ನಿಕಾಮಂ - ಬಹಳವಾಗಿ, ವಿಷಣ್ಣಃ - (ಸೀತೆಯು ದೊರೆಯಲಿಲ್ಲವಲ್ಲಾ ಎಂದು) ವ್ಯಸನಪಡುತ್ತಿರುವವನಾಗಿ, ಕಾಮರೂಪಧೃತ್ - ಸಮಯೋಚಿತವಾದ ರೂಪಗಳನ್ನು ತಾಳುತ್ತಿರುವನಾಗಿಯೇ, ಲಾಘವೇನ - ಚಟುವಟಿಕೆಯಿಂದ, ಸಮನ್ವಿತಃ - ಕೂಡಿದವನಾಗಿ, ಪುನಃ - ತಿರುಗಿ, ಲಂಕಾಂ - ಲಂಕೆಯನ್ನು, ವಿಚಚಾರ - ಸೀತೆಯನ್ನು ಹುಡುಕುತ ನಡೆದನು ॥೧॥ ಅಥ - ಆಮೇಲೆ, ಲಕ್ಷ್ಮೀವಾನ್ - (ವ್ಯಸನದ ಸಮಯದಲ್ಲಿಯೂ) ಧೈರ್ಯಲಕ್ಷ್ಮಿಯಿಂದೊಡಗೂಡಿದ ಆಂಜನೇಯನು, ಅರ್ಕವರ್ಣೇನ - ಸೂರ್ಯನಂತೆ ಬೆಳಗುವ ಬಣ್ಣವುಳ್ಳುದಾದ ಕಾರಣವೇ, ಭಾಸ್ವರೇಣ - ಥಳಥಳಿಸುತಲಿರುವ, ಪ್ರಾಕಾರೇಣ - ಪೌಳಿಯಿಂದ, ಅಭಿಸಂವೃತಂ - ಸುತ್ತು ಬಳಸಲ್ಪಟ್ಟ, ರಾಕ್ಷಸೇಂದ್ರನಿವೇಶನಂ - ರಕ್ಕಸರೊಡೆಯನ ಮನೆಯನ್ನು, ಆಸಸಾದ - ಸೇರಿದನು ॥ ೨ ॥

---

— ಶ್ರೀಮದ್ವೈದೇಹೀವಲ್ಲಭಾಯನಮಃ —

ಬಳಿಕ ಸಮಯೋಚಿತವಾಗಿ ಸಣ್ಣ ಪುಟ್ಟರೂಪಗಳನ್ನು ತಾಳುತ, ಆಕಾಶದೊಳಗೆ ಸಂಚರಿಸುವ ವಿಮಾನಗಳಲ್ಲಿಯೂ ಜಾನಕಿಯನ್ನು ಹುಡುಕಿ ಕಾಣದೆ ಬಹಳವಾಗಿ ಕಳವಳಗೊಂಡು ನೊಂದುಕೊಂಡ ಮಾರುತಿಯು ಸ್ವಲ್ಪ ಹೊತ್ತಿನಮೇಲೆ ಚಟುವಟಿಕೆಯನ್ನು ತಾಳ್ದು ಪುನಃ ಆ ಲಂಕೆಯೊಳಗೆ ಸೀತೆಯನ್ನು ಹುಡುಕುತ ಬಂದನು ॥೧॥ ಹಾಗೆ ಬರುತಲಿರುವ ಮಹಾ ತೇಜಸ್ವಿಯಾದ ಪವನ ನಂದನನು ಸೂರ್ಯಮಂಡಲದಂತೆ ಗುಂಡಾಗಿಯೂ, ವಿರಾಜಮಾನವಾಗಿಯೂ ಇರುವ ಪ್ರಾಕಾರದಿಂದ ಸುತ್ತಲ್ಪಟ್ಟಿರುವ ರಾವಣನ ಉಪ್ಪರಿಗೆಯ ಮನೆಯ ಹತ್ತಿರಕ್ಕೆ ಬಂದನು ॥೨॥ ಒಳಗೆ ಸೇರಿಕೊಂಡು ಸಿಂಹಗಳು ಮಹಾರಣ್ಯವನ್ನು ರಕ್ಷಿಸುತ್ತಿರುವಂತೆ ಘೋರರಾದ ರಾಕ್ಷಸರು ಆ ಭವನವನ್ನು ಸಂರಕ್ಷಿಸುತ್ತಿದ್ದರು. ಅಂತಹ ದಿವ್ಯಮಂದಿರವನ್ನು ಕಪಿವರನಾದ ಮಾರುತಿಯುನೋಡುತ್ತಾ ಬೆರಗಾಗಿ ಅಧರ ಬೆಳಕಿನಿಂದ

ಸವಿಧಾಕ್ಷಮಾಣೋ ಭವನಂ ಚಕಾಶೆ ಕಪಿಕುಂಜರಃ ||೩||
ರೂಪ್ಯಕೋಪಹಿತೈಶ್ಚಿತ್ರೈಸ್ತೋರಣೈರ್ಹೇಮಭೂಷಿತೈಃ |
ವಿಚಿತ್ರಾಭಿಶ್ಚ ಕಕ್ಷ್ಯಾಭಿರ್ದ್ವಾರೈಶ್ಚ ರುಚಿರೈರ್ವೃತಂ ||೪||
ಗಜಾಸ್ಥಿತೈರ್ಮಹಾಮಾತ್ರೈಃ ಶೂರೈಶ್ಚ ವಿಗತಶ್ರಮೈಃ |
ಉಪಸ್ಥಿತಮಸಂಹಾರ್ಯೈರ್ಹಯೈಃ ಸ್ಯಂದನಯಾಯಿಭಿಃ ||೫||
ಸಿಂಹವ್ಯಾಘ್ರತನುತ್ರಾಣೈರ್ದಾಂತಕಾಂಚನರಾಜತೈಃ |
ಘೋಷವದ್ಭಿರ್ವಿಚಿತ್ರೈಶ್ಚ ಸದಾ ವಿಚರಿತಂ ರಥೈಃ ||೬||

---

ಮಹದ್ವನಂ - ಮಹಾರಣ್ಯವನ್ನು, ಘೋರೈಃ-ಭಯಂಕರಗಳಾದ, ಸಿಂಹೈರಿವ-ಸಿಂಹಗಳು ಹೇಗೋ ಹಾಗೆ, ಘೋರೈಃ - ಮಹಾಭಯಂಕರರಾದ, ರಾಕ್ಷಸೈಃ- ರಕ್ಕಸರಿಂದ, ರಕ್ಷಿತಂ - ಕಾಪಾಡಲ್ಪಡುತಲಿರುವ, ಭವನಂ - ರಾವಣನರಮನೆಯನ್ನು, ಸವಿಧಾಕ್ಷಮಾಣಃ - ನೋಡುತಲಿರುವ, ಕಪಿಕುಂಜರಃ - ಕಪಿವರನಾದ ಮಾರುತಿಯು, ಚಕಾಶೆ - (ಆ ದಿವ್ಯಭವನದ ಹೊಳವಿನಿಂದ) ಪ್ರಕಾಶಿಸುತಲಿದ್ದನು ||೩|| (ಆಮನೆಯು ಹೇಗಿತ್ತೆಂದರೆ ;-) ರೂಪ್ಯಕ - ಬೆಳ್ಳಿಯ ತಗಡುಗಳಿಂದ, ಉಪಹಿತೈಃ - ತಗಲಿಸಲ್ಪಟ್ಟಿರುವ, ಚಿತ್ರೈಃ - ವಿಚಿತ್ರತರವಾದ, ಹೇಮಭೂಷಿತೈಃ - ಬಂಗಾರದ ಮುಲಾಮು ಮಾಡಿರುವ, ತೋರಣೈಃ - ಹೊರಬಾಗಿಲುಗಳಿಂದಲೂ, ವಿಚಿತ್ರಾಭಿಃ - ಅತ್ಯಾಶ್ಚರ್ಯಕರಗಳಾದ, ಕಕ್ಷ್ಯಾಭಿಃ - ತೊಟ್ಟಿಗಳಿಂದಲೂ, ರುಚಿರೈಃ - ಬಲು ಅಂದವಾಗಿ ರಚಿಸಿ ಇರುವ, ದ್ವಾರೈಶ್ಚ - ಬಾಗಿಲುಗಳಿಂದಲೂ, ವೃತಂ - ಸುತ್ತಲ್ಪಟ್ಟಿರುವುದಾಗಿಯೂ, ||೪|| ಗಜಾಸ್ಥಿತೈಃ-ಆನೆಗಳ ಮೇಲೆ ಕುಳಿತಿರುವ, ಮಹಾಮಾತ್ರೈಃ-ಪ್ರಧಾನ ಮಂತ್ರಿಗಳಿಂದಲೂ, ವಿಗತಶ್ರಮೈಃ - ಶ್ರಮವಾದರು ಆಯಾಸವಿಲ್ಲದಿರುವ, ಶೂರೈಶ್ಚ - ಮಹಾವೀರರಿಂದಲೂ, ಅಸಂಹಾರ್ಯೈಃ - ತಡೆಯಲಶಕ್ಯವೆನಿಸಿದ, ಸ್ಯಂದನಯಾಯಿಭಿಃ - ತೇರುಗಳನ್ನೆಳೆದೊಯ್ಯುತಲಿರುವ, ಹಯೈಃ - ಕುದುರೆಗಳಿಂದ, ಉಪಸ್ಥಿತಂ - ಸೇವಿಸಲ್ಪಟ್ಟುದಾಗಿಯೂ ||೫|| ಸಿಂಹವ್ಯಾಘ್ರತನುತ್ರಾಣೈಃ - ಸಿಂಹ ಹುಲಿ ಇವುಗಳ ತೊಗಲಿನ ಕವಚವುಳ್ಳ, ದಾಂತಕಾಂಚನರಾಜತೈಃ - ಆನೆಯ ಕೊಂಬು, ಚಿನ್ನ, ಬೆಳ್ಳಿ, ಇವುಗಳಿಂದ ಕೈಗೆಲಸಮಾಡಿರುವ, ವಿಚಿತ್ರೈಃ - ಅಚ್ಚರಿಯನ್ನುಂಟುಮಾಡುತಿರತಕ್ಕ, ಘೋಷವದ್ಭಿಃ -ಥಥಥಥವೆಂದು ಮೊರೆಯುತಲಿರುವ, ರಥೈಃ - ತೇರುಗಳಿಂದ, ಸದಾ - ಯಾವಾಗಲೂ, ವಿಚರಿತಂ-ಸಂಚಾರವುಳ್ಳುದಾಗಿಯೂ ||೬||

---

ತಾನೂಬೆಳಗುತ್ತಿದ್ದನು ||೩|| ಆ ರಾಜಭವನದ ಹೊರಬಾಗಿಲುಗಳಿಗೆ ಬೆಳ್ಳಿಯ ತಗಡುಗಳನ್ನು ಕಚ್ಚಿಸಿ, ಅದರ ಮೇಲೆ ಬಂಗಾರದ ಮುಲಾಮನ್ನು ಮಾಡಿ ಇದ್ದರು. ವಿಚಿತ್ರವಾಗಿಯೂ ವಿಸ್ತಾರವಾಗಿಯೂ ಇರುವ ದೊಡ್ಡ ತೊಟ್ಟಿಗಳು ಕಂಗೊಳಿಸುತಿದ್ದುವು. ಬಲು ಅಂದವಾದ ಕದಗಳು ವಿರಾಜಿಸುತಲಿದ್ದುವು ||೪|| ಶೂರರಾದ ಕೆಲವು ಮಂದಿ ರಾವಣನ ಮುಖ್ಯ ಮಂತ್ರಿಗಳು ಶ್ರಮವಿಲ್ಲದೆ ಆ ನೆಗಳ ಮೇಲೆ ಕುಳಿತವರಾಗಿಯೂ, ಮಹಾ ವೇಗಶಾಲಿಗಳಾಗಿರುವುದರಿಂದ ಅಸಾಧ್ಯಗಳೆನಿಸಿ, ರಥಗಳನ್ನು ಸೆಳೆದೊಯ್ಯುತಲಿರುವ ಕುದುರೆಗಳಮೇಲೆ ಕುಳಿತವರಾಗಿಯೂ ಆ ಭವನವನ್ನು ಕಾಯುತಲಿದ್ದರು ||೫|| ಆನೆಯ ದಂತ ಬೆಳ್ಳಿ, ಚಿನ್ನ ಇವುಗಳಿಂದ ಅವಯವಗಳನ್ನು ಕಲ್ಪಿಸಿ, ಸಿಂಹ, ಹುಲಿಮೊದಲಾದ ಮೃಗಗಳ, ಚರ್ಮಗಳ ಮೇಲುಹೊದಿಕೆಯನ್ನುಪಡೆದು, ಕಿವಿಗಿಂಪಾಗಿರುವಂತೆ ದನಿಗೆಯ್ಯುತಲಿರುವ ದಿವ್ಯ ರಥಗಳು ಬಂದು ಭಾಗದಲ್ಲಿ ಯಾವಾಗಲೂ ಸಂಚರಿಸುತದ್ದುವು||೬||ಮತ್ತು ಆಭವನವನ್ನು

ಬಹುರತ್ನ ಸಮಾಕೀರ್ಣಂ ಪರಾರ್ಥ್ಯಾಸನ ಭಾಜನಂ ।
ಮಹಾರಥ ಸಮಾವಾಸಂ ಮಹಾರಥ ಮಹಾಸನಂ ॥೩॥
ದೃಶ್ಯೈಶ್ಚ ಪರಮೋದಾರೈ ಸ್ತೈಸ್ತೈಶ್ಚ ಮೃಗಪಕ್ಷಿಭಿಃ ।
ವಿವಿಧೈ ರ್ಬಹುಸಾಹಸ್ರೈಃ ಪರಿಪೂರ್ಣಂ ಸಮಂತತಃ ॥೪॥
ವಿನೀತೈ ರಂತಪಾಲೈಶ್ಚ ರಕ್ಷೋಭಿಶ್ಚ ಸುರಕ್ಷಿತಂ ।
ಮುಖ್ಯಾಭಿಶ್ಚ ವರಸ್ತ್ರೀಭಿಃ ಪರಿಪೂರ್ಣಂ ಸಮಂತತಃ ॥೫॥
ಮುದಿತ ಪ್ರಮದಾರತ್ನಂ ರಾಕ್ಷಸೇಂದ್ರ ನಿವೇಶನಂ ।

ಬಹುರತ್ನಸಮಾಕೀರ್ಣಂ - ಅನೇಕ ರತ್ನಗಳನ್ನು ಕೆತ್ತಿರುವ, ಪರಾರ್ಥ್ಯ - ಬಹುಶ್ರೇಷ್ಠಗಳೆನಿಸಿದ, ಆಸನಭಾಜನಂ - ಪೀಠಗಳೂ ಪಾತ್ರೆಗಳೂ ಉಳ್ಳುದಾಗಿಯೂ, ಮಹಾರಥಸಮಾವಾಸಂ - ✠ಮಹಾರಥಿಕರಿಗೆ ಆವಾಸವಾಗಿಯೂ, ಮಹಾರಥಮಹಾಸನಂ - ದೊಡ್ಡದೊಡ್ಡ ರಥಗಳನ್ನೂ ಸಿಂಹಾಸನಗಳನ್ನೂ ಉಳ್ಳುದಾಗಿಯೂ, ॥೩॥ ಬಹುಸಾಹಸ್ರೈಃ - ಅನೇಕ ಸಾವಿರಗಳಾದ, ವಿವಿಧೈಃ -ಬಹುವಿಧಗಳಾದ, ಪರಮೋದಾರೈಃ - ಬಹುಶ್ರೇಷ್ಠಗಳೆನಿಸಿದ, ದೃಶ್ಯೈಶ್ಚ - ಬಲು ಅಂದವಾಗಿಯೂ ಇರುವ, ತೈಸ್ತೈಶ್ಚ - ವಿಜಾತೀಯಗಳಾದ (ನಾನಾಜಾತಿಯುವುಗಳಾಗಿಯೂ ಇರುವ) ಮೃಗಪಕ್ಷಿಭಿಃ - ಮೃಗಗಳಿಂದಲೂ, ಪಕ್ಷಿಗಳಿಂದಲೂ, ಸಮಂತತಃ - ಎಲ್ಲ ಕಡೆಗಳಲ್ಲಿಯೂ, ಪರಿಪೂರ್ಣಂ -ತುಂಬಿ ಇರುವುದಾಗಿಯೂ ॥೪॥ ವಿನೀತೈಃ-ಸುಶಿಕ್ಷಿತರಾದ, (ಚೆನ್ನಾಗಿ ಪಳಗಿರುವ) ಅಂತಪಾಲೈಶ್ಚ - ಗಡಿಯು (ಎಲ್ಲೆಯ) ಕಾವಲುಗಾರರಾದ,ರಕ್ಷೋಭಿಃ - ರಾಕ್ಷಸರಿಂದ, ಸುರಕ್ಷಿತಂ - ಚೆನ್ನಾಗಿ ಸಂರಕ್ಷಿಸಲ್ಪಡುತಲಿರುವುದಾಗಿಯೂ ಮುಖ್ಯಾಭಿಃ- ಗೊತ್ತುಗೊತ್ತಾದ, (ರಾವಣನಿಗೆ ಪ್ರೀತಿಪಾತ್ರರಾದ) ವರಸ್ತ್ರೀಭಿಃ - ಉತ್ತಮಾಂಗನೆಯರಿಂದ, ಸಮಂತತಃ - ಸುತ್ತಲೂ, ಪರಿಪೂರ್ಣಂ - ನಿಬಿಡವಾಗಿರುವುದಾಗಿಯೂ ॥೫॥ ಮುದಿತ - ಸಂತೋಷವುಳ್ಳ, ಪ್ರಮದಾರತ್ನಂ ಉತ್ತಮ ಸ್ತ್ರೀಯರುಳ್ಳ, ರಾಕ್ಷಸೇಂದ್ರ- ರಾಕ್ಷಸಶ್ರೇಷ್ಠರ, ನಿವೇಶನಂ - ಮನೆಗಳುಳ್ಳುದಾಗಿಯೂ,

ಎಲ್ಲಿನೋಡಿದರೂ ದಿವ್ಯರತ್ನಗಳನ್ನು ಕೆತ್ತಿಯಿತ್ತು. ಶ್ರೇಷ್ಠವಾದ ಪೀಠಗಳೂ, ಪಾತ್ರೆಗಳೂ ತುಂಬಿಇದ್ದುವು.ತಮ್ಮನ್ನೂ ಸಾರಥಿಯನ್ನೂ, ತಮ್ಮ ತೇರಿನ ಕುದುರೆಗಳನ್ನೂ ಹಗೆಗಳ ಪೆಟ್ಟಿಗೀಡಾಗದಂತೆ ಕಾಪಾಡಿಕೊಂಡು ಯುದ್ಧಮಾಡುವುದರಲ್ಲಿ ಕುಶಲರಾದ ಮಹಾರಥರಿಗೆ ಆವಾಸವಾಗಿತ್ತು, ಎಲ್ಲಿನೋಡಿದರೂ ಮಹಾರಥಗಳೂ, ಮಹಾಸ್ಥಾನಗಳೂ ಕಾಣಬರುತ್ತಿದ್ದುವು. ॥೩॥ ಮಹಾಶ್ರೇಷ್ಠಗಳೆನಿಸಿ, ನಾನಾ ಜಾತಿಯುವುಗಳಾಗಿಯೂ, ನೋಡಲಿಕ್ಕೆ ಬಲುಅಂದವಾಗಿಯೂ ಇರುವಸಾವಿರಾರು ಮೃಗಗಳಿಂದಲೂ, ಪಕ್ಷಿಗಳಿಂದಲೂ ಆ ಅರಮನೆಯು ಸುತ್ತಲೂ ರಾರಾಜಿಸುತಲಿದ್ದುದು॥೪॥ ಎಲ್ಲ ವಿದ್ಯೆಗಳಲ್ಲಿಯೂ ಚೆನ್ನಾಗಿ ಶಿಕ್ಷೆಯನ್ನು ಪಡೆದು ಸ್ವಾಮಿ ಭಕ್ತಿಯುಳ್ಳ ಶೂರರಾದ ಬಹುಮಂದಿ ರಾಕ್ಷಸರು ಆಮನೆಯ ಎಲ್ಲೆಕಟ್ಟುಗಳಲ್ಲಿ ನಿಂತು ಎಚ್ಚರಿಕೆಯಿಂದಕಾಯುತಲಿದ್ದರು, ಎಲ್ಲಿನೋಡಿದರೂ ಬಹುಮುಖ್ಯರಾದ ಉತ್ತಮಸ್ತ್ರೀಯರು ತುಂಬಿದ್ದರು ॥ ೫ ॥

✠ 'ಆತ್ಮಾನಂ ಸಾರಥಿಂ ಚ ಅಶ್ವಾನ್ ರಕ್ಷನ್ ಯುಧ್ಯೇತಯೋನರಃ। ಸ ಮಹಾರಥ ಸಂಜ್ಞಸ್ಸ್ಯಾತ್ ಇತ್ಯಾಹುಃ ನೀತಿಕೋವಿದಾಃ ॥' ತನ್ನನ್ನೂ, ಸಾರಥಿಯನ್ನೂ, ತೇರಿನ ಕುದುರೆಗಳನ್ನೂ ಪೆಟ್ಟುಬೀಳದಂತೆ ರಕ್ಷಿಸಿಕೊಂಡು ಯುದ್ಧಮಾಡುವ ವೀರನನ್ನು ಮಹಾರಥನನ್ನಾಗಿ ನೀತಿಜ್ಞರು ಹೇಳುತ್ತಾರೆ.

ವರಾಭರಣ ಸಂಹ್ರಾದ್ಯೈ ಸ್ಸಮುದ್ರಸ್ವನ ನಿಸ್ಸನಂ ॥೧೦॥
ತದ್ರಾಜ ಗುಣಸಂಪನ್ನಂ ಮುಖ್ಯೈ ಶ್ಚಾಗುರು ಚಂದನೈಃ ।
ಮಹಾಜನ್ಯೈ ಸ್ಸಮಾಕೀರ್ಣಂ ಸಿಂಹೈರಿವ ಮಹದ್ವನಂ ॥೧೧॥
ಭೇರೀ ಮೃದಂಗಾಭಿರುತಂ ಶಂಖ ಘೋಷ ನಿನಾದಿತಂ ।
ನಿತ್ಯಾರ್ಚಿತಂ ಪರ್ವಹುತಂ ಪೂಜಿತಂ ರಾಕ್ಷಸೈ ಸ್ಸದಾ ॥೧೨॥
ಸಮುದ್ರಮಿವ ಗಂಭೀರಂ ಸಮುದ್ರಮಿವ ನಿಸ್ಸ್ವನಂ ।

ವರಾಭರಣ - ಉತ್ತಮ ಭೂಷಣಗಳ, ಸಂಹ್ರಾದ್ಯೈಃ - ಧ್ವನಿಗಳಿಂದ, ಸಮುದ್ರಸ್ವನ- ಕಡಲಿನದನಿಯಂತೆ, ನಿಸ್ಸ್ವನಂ - ವಿಶೇಷಧ್ವನಿಯುಳ್ಳುದಾಗಿಯೂ, ॥೧೦॥ ತದ್ರಾಜ - ಆ ರಾಕ್ಷಸಚಕ್ರವರ್ತಿಯ, ಗುಣ - ಲಕ್ಷಣವಾದ ಛತ್ರಚಾಮರಾದಿಗಳಿಂದ, ಸಂಪನ್ನಂ - ಕೂಡಿರುವುದಾಗಿಯೂ, ಅಗುರುಚಂದನೈಃ- ಅಗುರು ಚಂದನ ಮೊದಲಾದ ಪರಿಮಳ ಲೇಪನವುಳ್ಳ, ಮುಖ್ಯೈಃ - ಶ್ರೇಷ್ಠರಾದ, ಮಹಾಜನ್ಯೈಃ - ಬಹುಮಂದಿ ರಾಕ್ಷಸರಿಂದ, ಮಹದ್ವನಂ - ಮಹಾರಣ್ಯವು, ಸಿಂಹೈರಿವ-ಸಿಂಹಗಳಿಂದ ಹೇಗೋ ಹಾಗೆ, ಸಮಾಕೀರ್ಣಂ - ತುಂಬಿ ತುಳುಕುತಲಿರುವುದಾಗಿಯೂ ॥೧೧॥ ಭೇರೀಮೃದಂಗಾಭಿರುತಂ - ನಗಾರಿ ಮದ್ದಲೆ ಮೊದಲಾದ ವಾದ್ಯಗಳ ಧ್ವನಿಯುಳ್ಳುದಾಗಿಯೂ, ಶಂಖಧ್ವನಿನಿನಾದಿತಂ - ಶಂಖಧ್ವನಿಗಳಿಂದ ಪೂರ್ಣವಾಗಿಯೂ, ನಿತ್ಯಾರ್ಚಿತಂ - ಗಂಧಪುಷ್ಪಾದಿಗಳಿಂದ ಸದಾಪೂರ್ಣವಾಗಿಯೂ, ಪರ್ವಹುತಂ - ದರ್ಶಪೂರ್ಣ ಮಾಸಾದಿಗಳಲ್ಲಿ ಇಷ್ಟಾದಿ ಹೋಮವುಳ್ಳುದಾಗಿಯೂ, (ರಾವಣನು ಆಹಿತಾಗ್ನಿ ಎಂದು ಯುದ್ಧಕಾಣ್ಡ) ಅಥವಾ (ಪರ್ವ ಹುತಂ - ಬಹು ಉತ್ಸವಗಳುಳ್ಳುದಾಗಿಯೂ) ರಾಕ್ಷಸೈಃ - ರಕ್ಕಸರಿಂದ, ಸದಾ - ಯಾವಾಗಲೂ, ಪೂಜಿತಂ - ಸೇವಿಸಲ್ಪಡುತ್ತಲಿರುವುದಾಗಿಯೂ ॥೧೨॥ ಸಮುದ್ರಮಿವ - ಸಾಗರದಂತೆ, ಗಂಭೀರಂ - ವಿಜೃಂಭಣೆ ಯುಳ್ಳುದೂ, ಸಮುದ್ರಮಿವ - ಜಲನಿಧಿಯಂತೆ, ನಿಸ್ಸ್ವನಂ - ಮಹಾ ಧ್ವನಿಯುಳ್ಳುದೂ ಆಗಿರುವ, ಮಹಾತ್ಮನಃ - ಮಹಾರಾಜನಾದ ರಾವಣನ, ಮಹಾರತ್ನಪರಿಚ್ಛದಂ - ನಾನಾ ರತ್ನಖಚಿತವಾದ ವಸ್ತ್ರಗಳ

ಉಂತಪಾರವಾದ ವೈಭವದಿಂದೊಡಗೂಡಿ ಮದವತಿಯರಾದ ಸುಂದರಾಂಗಿಯರಿಂದ ಕಂಗೊಳಿಸುವ ಆ ಭವನವು, ಉತ್ತಮಾಂಗನೆಯರು ತೊಟ್ಟಿರುವ ದಿವ್ಯರತ್ನಾಭರಣಗಳ ಇಂಪಾದದನಿಗಳಿಂದ ಕಡಲಿನ ಅಲೆಗಳ ದನಿಗಳಿಂದ ಹೇಗೋ ಹಾಗೆ ತುಂಬಿದ್ದಿತು ॥೧೦॥ ಒಂದೆಡೆಯಲ್ಲಿ ಮಹಾರಾಜ ಲಕ್ಷಣವಾದ ಛತ್ರ ಚಾಮರಾದಿಗಳು ತಳತಳಿಸುತಲಿದ್ದುವು, ಅಗುರು ಮೊದಲಾದ ಸುಗಂಧ ಧೂಪಗಳೂ, ಗಮಗಮಿಸುತಲಿರುವ ಬಗೆಬಗೆಯ ಪರಿಮಳಗಳ ವ್ಯಾಪ್ತಿಯೂ ಮನೋಹರವಾಗಿತ್ತು, ಮಹಾರಣ್ಯದಲ್ಲಿ ಸಿಂಹಗಳು ಹೇಗೋ ಹಾಗೆ ಮಹಾಭಾಗ್ಯಶಾಲಿಗಳಾದ ರಾಕ್ಷಸರು ತುಂಬಿ ಇದ್ದರು ॥೧೧॥ ನಗಾರಿಗಳ, ಮದ್ದಲೆಗಳ, ಶಂಖಗಳ ಆರವವು ಸುತ್ತಲೂ ಕೇಳಬರುತಲಿತ್ತು, ದಿವ್ಯಭೋಗ್ಯವಸ್ತುಗಳ ಸಮೃದ್ಧಿಯಿಂದ ಮೆರೆಯುತಲಿದ್ದಿತು. ಮಹಾಕರ್ಮಠನಾದ ರಾವಣನು ನಿತ್ಯಕರ್ಮನಿರತನಾಗಿದ್ದುದರಿಂದ ಅವನನ್ನು ಅನುಸರಿಸಿ ಇರುವ ಬಹುಮಂದಿರಾಕ್ಷಸರು ದರ್ಶಪೂರ್ಣಮಾಸಗಳಲ್ಲಿಯೂ, ಇತರ ಉತ್ಸವಕಾಲಗಳಲ್ಲಿಯೂ, ಹೋಮನಿರತರಾಗಿಯೂ, ದೇವತಾಪೂಜಾಸಕ್ತರಾಗಿಯೂ, ಮಹಾ ಸಂಭ್ರಮದಿಂದ ಇರುತ್ತಿದ್ದರು ॥೧೨॥ ಸಾಗರದಂತೆಬಹುಗಂಭೀರವಾಗಿಯೂ, ವಜ್ರ, ವೈಡೂರ್ಯ, ಗೋಮೇಧಿಕ, ಪುಷ್ಯರಾಗ, ಮರಕತ, ಮಾಣಿಕ್ಯ, ಮುಕ್ತಾ, ಪ್ರವಾಳಾದಿ

ಮಹಾತ್ಮನೋ ಮಹದ್ವೇಶ್ಮ ಮಹಾರತ್ನ ಪರಿಚ್ಛದಂ ॥೧೩॥
ಮಹಾರತ್ನ ಸಮಾಕೀರ್ಣಂ ದದರ್ಶ ಸ ಮಹಾಕಪಿಃ
ವಿರಾಜಮಾನಂ ವಪುಷಾ ಗಜಾಶ್ವರಥ ಸಂಕುಲಂ ॥೧೪॥
ಲಂಕಾಭರಣ ಮಿತ್ಯೇವ ಸೋಽಮನ್ಯತ ಮಹಾಕಪಿಃ ॥
ಚಚಾರ ಹನುಮಾಂ ಸ್ತತ್ರ ರಾವಣಸ್ಯ ಸಮೀಪತಃ ॥೧೫॥
ಗೃಹಾ ದ್ಗೃಹಂ ರಾಕ್ಷಸಾನಾ ಮುದ್ಯಾನಾನಿ ಚ ವಾನರಃ ।
ವೀಕ್ಷಮಾಣೋ ಹ್ಯಸಂತ್ರಸ್ತಃ ಪ್ರಾಸಾದಾಂಶ್ಚ ಚಚಾರ ಸಃ ॥೧೬॥

ಮೇಲುಕಟ್ಟುಳ್ಳ, ಮಹಾರತ್ನಸಮಾಕೀರ್ಣಂ - ದಿವ್ಯರತ್ನಪರಿಪೂರ್ಣವಾದ, ವಪುಷಾ - ಆಕಾರ ವಿಶೇಷದಿಂದ, ವಿರಾಜಮಾನಂ - ರಾರಾಜಿಸುತಲಿರುವ, ರಥಾಶ್ವಗಜಸಂಕುಲಂ - ತೇರು, ಕುದುರೆ, ಆನೆ, ಮೊದಲಾದವುಗಳಿಂದ, ಸಂಕುಲಂ - ಗಜ ಬಜಿಸುತಲಿರುವ, ಮಹದ್ವೇಶ್ಮ - ಆ ದಿವ್ಯಭವನವನ್ನು, ಮಹಾಕಪಿಃ- ಕಪಿಶಾರ್ದೂಲನಾದ ಹನುಮನು, ದದರ್ಶ - ನೋಡಿದನು ॥೧೩॥ ॥೧೪॥ ಸಃ - ಆ, ಮಹಾಕಪಿಃ - ಶ್ರೀಮದಾಂಜನೇಯನು, (ತತ್ - ಆ ಮಂದಿರವನ್ನು) ಲಂಕಾಭರಣಮಿತ್ಯೇವ - ಲಂಕೆಯ ದಿವ್ಯಾಭರಣವನ್ನಾಗಿಯೇ, ಅಮನ್ಯತ - ತಿಳಿದನು ॥೧೪॥ ತತ್ರ - ಅಲ್ಲಿ, ಹನುಮಾನ್ - ಮಾರುತಿಯು, ರಾವಣಸ್ಯ - ಆ ರಾವಣ ಭವನದ, ಸಮೀಪತಃ - ಹತ್ತಿರದಲ್ಲಿಯೇ, ಚಚಾರ - ಸಂಚರಿಸುತಿದ್ದನು ॥೧೫॥ ಸಃ - ಆ ಮಾರುತಿಯು, ರಾಕ್ಷಸಾನಾಂ - ರಕ್ಕಸರ, ಗೃಹಾತ್ - ಒಬ್ಬರ ಮನೆಯಿಂದ, ಗೃಹಂ - ಮತ್ತೊಬ್ಬರ ಮನೆಯನ್ನೂ, ಉದ್ಯಾನಾನಿಚ - ಉಪವನಗಳನ್ನೂ, ಪ್ರಾಸಾದಾಂಶ್ಚ - ಧನಿಕರ ಮಹಡಿ ಮನೆಯನ್ನೂ, ವೀಕ್ಷಮಾಣಃ - ಹುಡುಕಿನೋಡುತ್ತಿರುವವನಾಗಿ, ಅಸಂತ್ರಸ್ತಃ - ಸ್ವಲ್ಪವಾದರೂ ಭಯವಿಲ್ಲದವನಾಗಿಯೇ, ಚಚಾರ - ಸಂಚರಿಸುತ್ತಿದ್ದನು ॥೧೬॥ (ಅದೆಂತು ಸಂಚರಿಸಿದನೆಂದರೆ) ಮಹಾವೇಗಃ - ಬಹುವೇಗವುಳ್ಳ, ವೀರ್ಯವಾನ್ - ಮಹಾ ಪರಾಕ್ರಮಶಾಲಿಯಾದ ಆಂಜನೇಯನು, ಪ್ರಹಸ್ತಸ್ಯ - ರಾವಣನ ಪ್ರಧಾನಮಂತ್ರಿಯಾದ ಪ್ರಹಸ್ತನ, ನಿವೇಶನಂ - ಮನೆಯನ್ನು ಕುರಿತು, ಅವಪ್ಲುತ್ಯ - ಕುಪ್ಪಳಿಸಿ ಬಂದು, ತತಃ -

ರತ್ನಗಳಿಂದಥಳಥಳಾಯಮಾನವಾಗಿಯೂ, ಮಹಾರತ್ನಗಳನ್ನುಕೆತ್ತಿರುವಮೇಲಣ ಮುಚ್ಚಳವುಳ್ಳದಾಗಿಯೂ, ಭಾಭಾಸಮಾನವಾದ ಲಂಕಾ ಸಾರ್ವಭೌಮನ ಮಹಾಭವನವನ್ನಾಲೋಕಿಸಿದ ಶ್ರೀಮಂತನಾದ ಸಮೀರನಂದನನು ಆನಂದಭರಿತನಾದನು ॥೧೩॥ ಆ ಲಂಕಾರಮಣನ ಅರಮನೆಯು ಬಹು ಮನೋರಮವಾಗಿದ್ದುದು. ಒಂದೆಡೆಯಲ್ಲಿ ಆನೆ ಕುದುರೆ ತೇರುಗಳ ಗದ್ದಲವು ತುಂಬಿದ್ದಿತು. ಸರ್ವಸಂಪತ್ಸಮೃದ್ಧಿಯಿಂದ ಸಂಶೋಭಿಸುವ ಮಹಾರಾಜ ಮಂದಿರವನ್ನು ಪವಮಾನ ಪುತ್ರನು ಲಂಕಾನಗರಿಯೆಂಬ ದಿವ್ಯನಾರಿಗೆ ಬಲುಅಂದವನ್ನುಂಟುಮಾಡುವ ರನ್ನದೊಡವೆಯನ್ನಾಗಿಯೇ ಭಾವಿಸಿದನು॥೧೪॥ ॥ಆ ದಶಾನನ ನಿವೇಶನದ ಸಮೀಪದಲ್ಲಿ ಸುಳಿಯುತಲಿರುವ ಮಹಾ ಮಾರುತಿಯು ಕ್ರಮವಾಗಿಒಬ್ಬೊಬ್ಬರಕ್ಕಸನಮನೆಯಿಂದ ಬೇರೊಬ್ಬ ಅಸುರನ ಗೃಹವನ್ನು ಸೇರುತಲೂ, ಅಲ್ಲಲ್ಲಿ ಜಾನಕಿಯನ್ನು ಹುಡುಕುತಲೂ, ತುಸವಾದರೂ ಭಯವಿಲ್ಲದೆ ಮಹಾಭಾಗ್ಯಶಾಲಿಗಳಾದ ದೈತ್ಯಪ್ರಭುಗಳ ಉಪ್ಪರಿಗೆಗಳನ್ನು ಕ್ರಮವಾಗಿ ಶೋಧಿಸುತಬರುತ್ತಿದ್ದನು ॥೧೬॥ ಆ ಬಳಿಕ ಬಹುವೇಗ ಸಂಪನ್ನನಾಗಿ ದಶಕಂಠನಿಗೆ ಮುಖ್ಯಮಂತ್ರಿಯೆನಿಸಿದ ಪ್ರಹಸ್ತನಮನೆಗೆ ಕುಪ್ಪಳಿಸಿ,ಅಲ್ಲಿ ನೋಡಿಕೊಂಡು,

ಅವಪ್ಲುತ್ಯ ಮಹಾವೇಗಃ ಪ್ರಹಸ್ತಸ್ಯ ನಿವೇಶನಂ ।
ತತೋಽನ್ಯತ್ಪುಪ್ಲುವೇ ವೇಶ್ಮ ಮಹಾಪಾರ್ಶ್ವಸ್ಯ ವೀರ್ಯವಾನ್ ॥೧೭॥
ಅಥ ಮೇಘಪ್ರತೀಕಾಶಂ ಕುಂಭಕರ್ಣನಿವೇಶನಂ ।
ವಿಭೀಷಣಸ್ಯ ಚ ತದಾ ಪುಪ್ಲುವೇ ಸ ಮಹಾಕಪಿಃ ॥೧೮॥
ಮಹೋದರಸ್ಯ ಚ ಗೃಹಂ ವಿರೂಪಾಕ್ಷಸ್ಯ ಚೈವಹಿ ।
ವಿದ್ಯುಜ್ಜಿಹ್ವಸ್ಯ ಭವನಂ ವಿದ್ಯುನ್ಮಾಲೇಸ್ತಥೈವಚ ॥
ವಜ್ರದಂಷ್ಟ್ರಸ್ಯ ಚ ತಥಾ ಪುಪ್ಲುವೇ ಸ ಮಹಾಕಪಿಃ ॥೧೯॥ ॥
ಶುಕಸ್ಯ ಚ ಮಹಾತೇಜಾಃ ಸಾರಣಸ್ಯ ಚ ಧೀಮತಃ ।
ತಥಾ ಚೇಂದ್ರಜಿತೋ ವೇಶ್ಮ ಜಗಾಮ ಹರಿಯೂಥಪಃ ॥೨೦॥ ॥
ಜಂಬೂಮಾಲೇಃ ಸುಮಾಲೇಶ್ಚ ಜಗಾಮ ಹರಿಸತ್ತಮಃ ॥

ಅನಂತರದಲ್ಲಿ, ಅನ್ಯತ್ -ಮತ್ತೊಂದಾದ, ಮಹಾಪಾರ್ಶ್ವಸ್ಯ-ಮಹಾ ಪಾರ್ಶ್ವನೆಂಬ ಮತ್ತೊಬ್ಬ ಮಂತ್ರಿಯ ವೇಶ್ಮ - ಮನೆಯನ್ನು ಕುರಿತು, ಪುಪ್ಲುವೆ - ದಾಟಿದನು ॥೧೭॥ ಅಥ - ಆಮೇಲೆ, ತದಾ - ಆಗ, ಸಃ - ಆ, ಮಹಾಕಪಿಃ - ಕಪಿವೀರನಾದ ಹನುಮಂತನು, ಮೇಘಪ್ರತೀಕಾಶಂ - (ಬಿಳಿಯ ಬಣ್ಣದಲ್ಲಿಯೂ, ಎತ್ತರ ವಾಗಿರುವುದರಲ್ಲಿಯೂ) ಮೇಘಕ್ಕೆ ಎಣೆಯಾದ, ಕುಂಭಕರ್ಣನಿವೇಶನಂ - ರಾವಣನ ತಮ್ಮನಾದ ಕುಂಭ ಕರ್ಣನ ಮನೆಯನ್ನೂ, ವಿಭೀಷಣಸ್ಯ - ವಿಭೀಷಣನೆಂಬ ತಮ್ಮನ, (ನಿವೇಶನಂಚ-) ಮನೆಯನ್ನು ಕುರಿತೂ, ಪುಪ್ಲುವೆ - ಹಾರಿದನು ॥೧೮॥ ಮಹೋದರಸ್ಯಚ - ಮಹೋದರನ, ವಿರೂಪಾಕ್ಷಸ್ಯಚ - ಮತ್ತು ವಿರೂಪಾಕ್ಷನ, ಗೃಹಂ - ಮನೆಯನ್ನೂ, ವಿದ್ಯುಜ್ಜಿಹ್ವಸ್ಯ - ವಿದ್ಯುಜ್ಜಿಹ್ವನೆಂಬುವವನ, ತಥಾಚೈವಹಿ- ಹಾಗೆಯೇ, ವಿದ್ಯುನ್ಮಾಲೇಶ್ಚ- ವಿದ್ಯುನ್ಮಾಲಿಯ, ತಥೈವಚ-ಹಾಗೆಯೇ, ವಜ್ರದಂಷ್ಟ್ರಸ್ಯ - ವಜ್ರದಂ ಷ್ಟ್ರನ, ಭವನಂಚ - ಮನೆಯನ್ನೂ, ॥೧೯॥ ತಥಾಚ - ಅದೇಕ್ರಮವಾಗಿ, ಧೀಮತಃ-ಬಹು ಬುದ್ಧಿಶಾಲಿ ಯಾದ, ಶುಕಸ್ಯ - ಶುಕನ, ಸಾರಣಸ್ಯ - ಸಾರಣನ, ಭವನಂಚ - ಮನೆಯನ್ನು ಕುರಿತೂ, ಸಃ - ಆ, ಮಹಾತೇಜಾಃ - ಮಹಾತೇಜಸ್ವಿಯಾದ, ಮಹಾಕಪಿಃ - ಆಂಜನೇಯನು, ಪುಪ್ಲುವೆ - ಹಾರಿದನು ॥೧೯॥ ಹರಿಯೂಥಪಃ - ವಾನರಾಗ್ರಗಣ್ಯನು, ತಥಾ - ಹಾಗೆಯೇ, ಇಂದ್ರಜಿತಃ - ರಾವಣನ ಮಗನಾದ ಇಂದ್ರಜಿ ತುವಿನ, ವೇಶ್ಮಚ-ಮನೆಯನ್ನು ಕುರಿತೂ, ಜಗಾಮ-ತೆರಳಿದನು ॥೨೦॥ ॥ ಹರಿಸತ್ತಮಃ-ಆ ಕಪಿವೀರನು,

ಆ ಮಹಾವೀರನು ಮಹಾ ಪಾರ್ಶ್ವನೆಂಬ ಪ್ರಧಾನನ ಮನೆಗೆ ಹಾರಿದನು॥೧೭॥ ತರುವಾಯ ಅಪರಿಮಿತವಾದ ಔನ್ನತ್ಯವುಳ್ಳುದಾಗಿಯೂ ಬಹುಧಾವಳ್ಯವುಳ್ಳುದಾಗಿಯೂ ಇದ್ದು, ಮೇಘ ಮಂಡಲದಂತೆಸೆಯುವ ರಾವಣನ ಸೋದರನಾದ ಕುಂಭಕರ್ಣನ,ಹಾಗೆಯೇ ಮಹಾಸತ್ವಗು ಣಸಂಪನ್ನನೆನಿಸಿದ ವಿಭೀಷಣನ ಮಂದಿರವನ್ನೂ ಹುಡುಕಿ ನೋಡಿದನು ॥೧೮॥ ಆಮೇಲೆ.- ಮಹೋದರ, ವಿರೂಪಾಕ್ಷ, ವಿದ್ಯುಜ್ಜಿಹ್ವ, ವಿದ್ಯುನ್ಮಾಲಿ, ವಜ್ರದಂಷ್ಟ್ರ ಇವರ ಮನೆಗಳ ಗೆಲ್ಲ ಕ್ರಮವಾಗಿ ಹಾರಿ,ಅಲ್ಲಿಯೂ ಭೂಪುತ್ರಿಯನ್ನು ಕಾಣದೆ, ಆ ಹಿಂದೆ ॥೧೯॥ ಮಹಾತೇ ಜಸ್ವಿಯಾದ ಶುಕ, ಬಹು ಬುದ್ಧಿಶಾಲಿಯೆನಿಸಿದ ಸಾರಣ, ಇವರ ಗೃಹಗಳೊಳಗೆ ಅನ್ವೇ ಷಣಮಾಡಿದ ವಾನರೇಂದ್ರನು ರಾವಣನಪುತ್ರನೂ,ಮಹಾಶೂರಾಗ್ರಗಣ್ಯನೂ ಆಗಿರುವ ಇಂ ದ್ರಜಿತುವಿನ ಮನೆಯಲ್ಲಿ ಬೆದಕಿ, ತದನಂತರದಲ್ಲಿ॥೨೦॥ ಜಂಬುಮಾಲಿ, ಸುಮಾಲಿ, ಶಿರಕೇತ್ರ

ರಶ್ಮಿಕೇತೋಶ್ಚ ಭವನಂ ಸೂರ್ಯಶತ್ರೋಸ್ತಥೈವಚ ॥೨೧॥
ವಜ್ರಕಾಯಸ್ಯ ಚ ತಥಾ ಪುಪ್ಲುವೆ ಸ ಮಹಾಕಪಿಃ ॥
ಧೂಮ್ರಾಕ್ಷಸ್ಯ ಚ ಸಂಪಾತೇರ್ಭವನಂ ಮಾರುತಾತ್ಮಜಃ ॥೨೨॥ ॥
ವಿದ್ಯುದ್ರೂಪಸ್ಯ ಭೀಮಸ್ಯ ಘನಸ್ಯ ವಿಘನಸ್ಯ ಚ ॥
ಶುಕನಾಸಸ್ಯ ವಕ್ರಸ್ಯ ಶಠಸ್ಯ ವಿಕಟಸ್ಯ ಚ ।
ಬ್ರಹ್ಮಕರ್ಣಸ್ಯ ದಂಷ್ಟ್ರಸ್ಯ ರೋಮಶಸ್ಯ ಚ ರಕ್ಷಸಃ ॥೨೪॥
ಯುದ್ಧೋನ್ಮತ್ತಸ್ಯ ಮತ್ತಸ್ಯ ಧ್ವಜಗ್ರೀವಸ್ಯ ನಾದಿನಃ ।
ವಿದ್ಯುಜ್ಜಿಹ್ವೇಂದ್ರ ಜಿಹ್ವಾನಾಂ ತಥಾ ಹಸ್ತಿಮುಖಸ್ಯಚ ॥೨೫॥
ಕರಾಳಸ್ಯ ಪಿಶಾಚಸ್ಯ ಶೋಣಿತಾಕ್ಷಸ್ಯ ಚೈವಹಿ ।

---

ಜಂಬುಮಾಲೇಃ-ಜಂಬುಮಾಲಿಯ, ಸುಮಾಲೇಶ್ಚ-ಸುಮಾಲಿಯೆಂಬುವವನ, ವೇಶ್ಮಚ-ಮನೆಯನ್ನುರಸುತ ಲೂ, ಜಗಾಮ - ನಡೆದನು ॥೨೦॥ ॥ ರಶ್ಮಿಕೇತೋಶ್ಚ - ರಶ್ಮಿಕೇತುವಿನ, ತಥೈವಚ - ಹಾಗೆಯೇ ಸೂರ್ಯಶತ್ರೋಶ್ಚ - ಸೂರ್ಯ ಶತ್ರುವಿನ, ತಥಾ -ವಜ್ರಕಾಯಸ್ಯ - ವಜ್ರಕಾಯನ, ಭವನಞ್ಚ - ಮನೆಯನ್ನು ಕುರಿತೂ, ಸಃಮಹಾಕಪಿಃ - ಆ ಹನುಮಂತನು, ಪುಪ್ಲುವೆ - ಕುಪ್ಪಳಿಸಿದನು, ॥೨೧॥ ಮಾರುತಾತ್ಮಜಃ - ವಾಯುನಂದನನು, ಧೂಮ್ರಾಕ್ಷಸ್ಯಚ - ಧೂಮ್ರಾಕ್ಷನ, ಸಂಪಾತೇಃ - ಸಂಪಾತಿಯ, ವಿದ್ಯುದ್ರೂಪಸ್ಯ, ಭೀಮಸ್ಯ, ಘನಸ್ಯ, ವಿಘನಸ್ಯಚ - ವಿದ್ಯುದ್ರೂಪ, ಭೀಮ, ಘನ, ವಿಘನ ಇವರ ॥೨೩॥ ಶುಕನಾಸಸ್ಯ, ವಕ್ರಸ್ಯ, ಶಠಸ್ಯ, ವಿಕಟಸ್ಯಚ - ಶುಕನಾಸ, ವಕ್ರ, ಶಠ, ವಿಕಟ ಇವರ; ಬ್ರಹ್ಮಕರ್ಣಸ್ಯ, ದಂಷ್ಟ್ರಸ್ಯ, ರೋಮಶಸ್ಯಚರಕ್ಷಸಃ - ಬ್ರಹ್ಮಕರ್ಣ, ದಂಷ್ಟ್ರ, ರೋಮಶ ಎಂಬ ರಾಕ್ಷಸರ; ॥೨೪॥ ಯುದ್ಧೋನ್ಮತ್ತಸ್ಯ - ಕಾಳಗದಲ್ಲಿ ಮದಿಸಿ ಇರುವ, ಮತ್ತಸ್ಯ - ಮತ್ತನೆಂಬುವವನ, ಧ್ವಜಗ್ರೀವಸ್ಯ, ನಾದಿನಃ, ವಿದ್ಯುಜ್ಜಿಹ್ವೇಂದ್ರಜಿಹ್ವಾನಾಂ- ಧ್ವಜಗ್ರೀವ, ನಾದಿ, ವಿದ್ಯುಜ್ಜಿಹ್ವ, ಇಂದ್ರಜಿಹ್ವ ಇವರ; ತಥಾ- ಹಾಗೆಯೇ, ಹಸ್ತಿಮುಖಸ್ಯಚ - ಹಸ್ತಿಮುಖನೆಂಬುವವನ, ಭವನಂಚ- ಮನೆಯನ್ನು ಕುರಿತೂ, ಜಗಾಮ- ತೆರಳಿದನು ॥೨೩॥೨೪॥೨೫॥ ಮಾರುತಾತ್ಮಜಃ - ವಾಯುಪುತ್ರನಾದ, ಹನೂಮಾನ್ - ಆಂಜನೇಯನು, ಕ್ರಮೇಣೈವ - ಮೇಲೆ ಹೇಳಿದ ಕ್ರಮದಿಂದಲೇ, ಕರಾಳಸ್ಯ, ಪಿಶಾಚಸ್ಯ, ಶೋಣಿತಾಕ್ಷಸ್ಯಚೈವಹಿ- ಕರಾಳ, ಪಿಶಾಚ, ಶೋಣಿತಾಕ್ಷ ಎಂಬಿವರ; ವೇಶ್ಮಚ - ಮಂದಿರಗಳನ್ನು ಕುರಿತೂ, ಕ್ರಮಮಾಣಃ - ಒಂದರಿಂದ ಮತ್ತೊಂದನ್ನು ದಾಟುತ್ತಿರುವವನಾಗಿ, ॥೨೬॥ ಮಹಾಯಶಾಃ - ಬಹು ಹೆಸರುವಾಸಿಯನ್ನು ಪಡೆದಿರುವ

---

ಹಾಗೆಯೇ ಸೂರ್ಯಶತ್ರು ಇವರ ಅಗಾರಗಳನ್ನು ಪಾರಗಾಣಿಸಿದ ಆಂಜನೇಯನು ವಜ್ರಕಾಯನ ಮನೆಯಲ್ಲಿಯೂ ತಡಕಿಬಿಟ್ಟನು ॥೨೨॥ ಅಲ್ಲಿಂದ ಮುಂದೆ, ಧೂಮ್ರಾಕ್ಷ, ಸಂಪಾತಿ, ವಿದ್ಯುದ್ರೂಪ, ಭೀಮ, ಘನ, ವಿಘನ, ॥೨೩॥ ಶುಕನಾಸ, ವಕ್ರ, ಶಠ ವಿಕಟ, ಬ್ರಹ್ಮಕರ್ಣ, ದಂಷ್ಟ್ರ, ರೋಮಶ ಎಂಬ ರಕ್ಕಸರ ಗೇಹಗಳಲ್ಲಿಯೂ, ॥೨೪॥ ಯುದ್ಧೋನ್ಮತ್ತ, ಮತ್ತ, ಧ್ವಜಗ್ರೀವ, ನಾದಿ, ವಿದ್ಯುಜ್ಜಿಹ್ವ, ಇಂದ್ರಜಿಹ್ವ, ಹಾಗೆಯೇ ಹಸ್ತಿಮುಖ, ॥೨೫॥ ಕರಾಳ, ಪಿಶಾಚ, ಶೋಣಿತಾಕ್ಷ ಇತ್ಯಾದಿ ರಾತ್ರಿಂಚರರ ಸದನಗಳಲ್ಲಿಯೂ ಕ್ರಮವಾಗಿ ಒಂದನ್ನೂ ಬಿಡದಂತೆ ಚೆನ್ನಾಗಿ ಪರೀಕ್ಷಿಸದುದಲ್ಲದೆ ಮಹಾಯಶಸ್ವಿಯಾದ ಮಾರುತಿಯು ಅಲ್ಲಲ್ಲಿ ಮಹದೈಶ್ವರ್ಯ ಸಂಪನ್ನರೆನಿಸಿರುವ ದೈತ್ಯರ ಅಮೂಲ್ಯವಾದ ಆಯಾಯಮನೆಗಳಲ್ಲಿನ

ಕ್ರಮಮಾಣಃ ಕ್ರಮೇಣೈವ ಹನೂಮಾನ್ಮಾರುತಾತ್ಮಜಃ ॥೨೬॥
ತೇಷು ತೇಷು ಮಹಾರ್ಹೇಷು ಭವನೇಷು ಮಹಾಯಶಾಃ ।
ತೇಷಾಮೃದ್ಧಿಮತಾಮೃದ್ಧಿಂ ದದರ್ಶ ಸ ಮಹಾಕಪಿಃ ॥೨೭॥
ಸರ್ವೇಷಾಂ ಸಮತಿಕ್ರಮ್ಯ ಭವನಾನಿ ಸಮಂತತಃ ।
ಆಸಸಾದಾಥ ಲಕ್ಷ್ಮೀವಾನ್ ರಾಕ್ಷಸೇಂದ್ರನಿವೇಶನಮ್ ॥೨೮॥
ರಾವಣಸ್ಯೋಪಶಾಯಿನ್ಯೋ ದದರ್ಶ ಹರಿಸತ್ತಮಃ ।
ವಿಚರನ್ ಹರಿಶಾರ್ದೂಲೋ ರಾಕ್ಷಸೀರ್ವಿಕೃತೇಕ್ಷಣಾಃ ॥
ಶೂಲಮುದ್ಗರಹಸ್ತಾಶ್ಚ ಶಕ್ತಿತೋಮರಧಾರಿಣೀಃ ॥೨೯॥
ದದರ್ಶ ವಿವಿಧಾನ್ ಗುಲ್ಮಾಂಸ್ತಸ್ಯ ರಕ್ಷಃಪತೇರ್ಗೃಹೇ ॥
ರಾಕ್ಷಸಾಂಶ್ಚ ಮಹಾಕಾಯಾನ್ನಾನಾಪ್ರಹರಣೋದ್ಯತಾನ್ ॥೩೦॥

---

ಸಃ ಮಹಾಕಪಿಃ - ಆ ಕಪಿ ವೀರನು, ಮಹಾರ್ಹೇಷು - ಅಮೂಲ್ಯಗಳಾದ, ತೇಷುತೇಷು - ಆಯಾಯು, ಭವನೇಷು - ಮನೆಗಳಲ್ಲಿ, ಋದ್ಧಿಮತಾಂ - ಮಹದೈಶ್ವರ್ಯಶಾಲಿಗಳಾದ, ತೇಷಾಂ - ಆ ರಾಕ್ಷಸರ, ಋದ್ಧಿಂ - ಸಮೃದ್ಧಿಯನ್ನು, ದದರ್ಶ - ನೋಡುತ ಬಂದನು ॥೨೭॥ ಅಥ - ಆಮೇಲೆ, ಲಕ್ಷ್ಮೀವಾನ್ - ಮಹಾತೇಜಸ್ಸಂಪನ್ನನಾದ ಹನುಮಂತನು, ಸರ್ವೇಷಾಂ - (ಹಿಂದೆ ಹೇಳಿದವರಲ್ಲದೆ ಇತರ) ಬಹುಮಂದಿ ರಾಕ್ಷಸರ, ಸಮಂತತಃ - ಎಲ್ಲ ಕಡೆಗಳಲ್ಲಿಯೂ ಇರುವ, ಭವನಾನಿ - ಮನೆಗಳನ್ನೂ, ಸಮತಿಕ್ರಮ್ಯ - ದಾಟಿ, ರಾಕ್ಷಸೇಂದ್ರ - ರಕ್ಕಸರ ಅರಸನಾದ ರಾವಣನ, ನಿವೇಶನಂ - ಮನೆಯನ್ನು ಹೊಗಬೇಕೆಂದು, ಆಸಸಾದ - ಹತ್ತಿರಕ್ಕೆ ಬಂದನು ॥೨೮॥ ಹರಿಸತ್ತಮಃ - ವಾನರೇಂದ್ರನು, ವಿಚರನ್ - ಅಲ್ಲಲ್ಲಿ ಸಂಚರಿಸುವವನಾಗಿ, ರಾವಣಸ್ಯ - ದಶಕಂಠನ, ಉಪಶಾಯಿನ್ಯಃ - ಹತ್ತಿರದಲ್ಲಿ ಪವಳಿಸಿ ಇರುವ, ವಿಕೃತೇಕ್ಷಣಾಃ - ವಿಕಾರವಾದ ಕಣ್ಣುಗಳುಳ್ಳ, ರಾಕ್ಷಸೀಃ - ರಕ್ಕಸಿಯರನ್ನು, ದದರ್ಶ - ನೋಡಿದನು ॥೨೯॥ ಹರಿಸತ್ತಮಃ - ಕಪಿವರನು, ತಸ್ಯ - ಆ, ರಕ್ಷಃಪತೇಃ - ರಾಕ್ಷಸ ಚಕ್ರವರ್ತಿಯ, ಗೃಹೇ - ಭವನದಲ್ಲಿ, ಶೂಲಮುದ್ಗರಹಸ್ತಾಶ್ಚ - ಶೂಲ ಮುದ್ಗರ ಎಂಬ ಆಯುಧಗಳನ್ನ ಕೈಯಲ್ಲಿ ಹಿಡಿದಿರುವ, ಶಕ್ತಿತೋಮರಧಾರಿಣೀಃ - ಶಕ್ತಿ, ತೋಮರ ಎಂಬ ಆಯುಧಗಳನ್ನು ಧರಿಸಿ ಇರುವ ರಾಕ್ಷಸಿಯರನ್ನೂ, ವಿವಿಧಾನ್ - ಅನೇಕ ವಿಧಗಳಾದ, ಗುಲ್ಮಾನ್ - ರಾಕ್ಷಸರ ಹಿಂಡುಗಳನ್ನೂ, ದದರ್ಶ - ಈಕ್ಷಿಸಿದನು ॥೩೦॥ ನಾನಾ - ಅನೇಕ ವಿಧವಾದ, ಪ್ರಹರಣ -

---

ಮಹತ್ತರವಾದ ಸಕಲ ಸಂಪತ್ಸಮೃದ್ಧಿಯನ್ನೆಲ್ಲ ಕಣ್ಣಾರನೋಡುತ ಬಂದನು ॥೨೬-೨೭॥ ಇಂತು ಮಹಾವೀರಲಕ್ಷ್ಮೀಸನಾಥನಾದ ಪಾವಮಾನಿಯು ಸಕಲ ನಿಶಾಚರರ ನಿಕೇತನಗಳನ್ನೆಲ್ಲ ದಾಟಿ ರಾಕ್ಷಸಸಾರ್ವಭೌಮನಾದ ರಾವಣನ ಮುಖ್ಯಾವಾಸದ ಸಮೀಪಕ್ಕೆ ಬಂದನು ॥೨೮॥ ಅಲ್ಲಿಯಾದರೋ ನಿರ್ಭಯನಾಗಿ ಸಂಚರಿಸುತಲಿರುವ ವೀರಮಾರುತಾತ್ಮಜನು ರಾವಣನಪಕ್ಕದಲ್ಲಿ ಪವಳಿಸಿರುವ ವಿಕಾರ ನಯನೆಯರಾದ ರಾಕ್ಷಸಿಯರನ್ನು ಕಂಡನು ॥೨೯॥ ಮತ್ತೊಂದು ಸ್ಥಳದಲ್ಲಿ ಕೆಲವುಮಂದಿ ರಕ್ಕಸಿಯರು ಶೂಲ, ಮುದ್ಗರ,ಮುಂತಾದ ಆಯುಧಗಳನ್ನು ಹಿಡಿದು ರಾವಣನ ಅರಸಿಯರನ್ನು ಕಾಯುತ್ತಲಿದ್ದುದನ್ನು ನಿರುಕಿಸಿದನು, ಆ ರಾಕ್ಷಸಪತಿಯ ಗೃಹದೊಳಗೊಂದೆಡೆ ತಂಡೋಪತಂಡವಾದ ಪರಿವಾರವನ್ನು ಈಕ್ಷಿಸಿದನು ॥೩೦॥ ಇನ್ನೊಂದು ತಾವಿನಲ್ಲಿ ಮಹೋನ್ನತ ಶರೀರರಾಗಿಯೂ, ವಿಚಿತ್ರಾಯುಧ ಪಾಣಿ

ರಕ್ತಾನ್ ಶ್ವೇತಾನ್ ಸಿತಾಂಶ್ಚೈವ ಹರೀಂಶ್ಚಾಪಿ ಮಹಾಜವಾನ್ ॥
ಕುಲೀನಾ ನ್ರೂಪ ಸಂಪನ್ನಾ ನ್ಗಜಾ ನ್ಪರಗಜಾರುಜಾನ್ ॥
ನಿಷ್ಠಿತಾ ನ್ಗಜಶಿಕ್ಷಾಯಾ ಮೈರಾವತ ಸಮಾ ನ್ಯುಧಿ ॥೨೨॥
ನಿಹಂತೄ ನ್ಪರಸೈನ್ಯಾನಾಂ ಗೃಹೆ ತಸ್ಮಿ ನ್ದದರ್ಶ ಸಃ ॥
ಕ್ಷರತಶ್ಚ ಯಥಾಮೇಘಾನ್ ಸ್ರವತಶ್ಚ ಯಥಾ ಗಿರೀನ್ ॥
ಮೇಘಸ್ತನಿತ ನಿರ್ಘೋಷಾ ನ್ದುರ್ಧರ್ಷಾನ್ ಸ್ಸಮರೆ ಪರೈಃ ॥೨೩॥ ॥
ಸಹಸ್ರಂ ವಾಹಿನೀ ಸ್ತತ್ರ ಜಾಂಬೂನದ ಪರಿಷ್ಕೃತಾಃ ॥

---

ಆಯುಧಗಳನ್ನು, ಉದ್ಯತಾನ್ - ಎತ್ತಿಹಿಡಿದಿರುವ, ಮಹಾಕಾಯಾನ್ - ಉನ್ನತಶರೀರಗಳುಳ್ಳ, ರಾಕ್ಷಸಾಂಶ್ಚ - ರಕ್ಕಸರನ್ನೂ, ರಕ್ತಾನ್ - ಕೆಂಪಗಿರುವ, ಶ್ವೇತಾನ್ - ಬೆಳ್ಳಗಿರುವ, ಸಿತಾನ್ ಚ - ಬಂಧನದಲ್ಲಿ (ಕಟ್ಟಿ) ರುವ, ಮಹಾಜವಾನ್ - ಬಹು ವೇಗಶಾಲಿಗಳಾದ, ಹರೀಂಶ್ಚಾಪಿ - ಉತ್ತಮಾಶ್ವಗಳನ್ನೂ, ॥೨೧॥ ಕುಲೀನಾನ್ - ಒಳ್ಳೆಯ ಜಾತಿಯವುಗಳಾದ, ರೂಪಸಂಪನ್ನಾನ್ - ಸೌಂದರ್ಯದಿಂದ ಕೂಡಿರುವ, ಪರಗಜಾರುಜಾನ್ - ಹಗೆಗಳ ಆನೆಗಳನ್ನು ಉರುಳಿಸುವ, ಗಜಶಿಕ್ಷಾಯಾಂ - ಆನೆಗಳನ್ನು ಪಳಗಿಸುವುದರಲ್ಲಿ (ಆನೆಗಳು ಕಲಿತಿರಬೇಕಾದ ವಿದ್ಯೆಯಲ್ಲಿ) ಪರಿನಿಷ್ಠಿತಾನ್ - ಪಾರಂಗತಗಳಾದ, ಯುಧಿ - ಕಾಳಗದಲ್ಲಿ, ಐರಾವತಸಮಾನ್ - ಇಂದ್ರನ ಆನೆಗೆ ಸಮಾನಗಳೆನಿಸಿರುವ, ॥೨೨॥ ಪರಸೈನ್ಯಾನಾಂ - ಶತ್ರು ಸೈನ್ಯಗಳನ್ನು, ನಿಹಂತೄನ್ - ಧ್ವಂಸಮಾಡುವ, ಮೇಘಾನ್ ಯಥಾ - ಮಳೆಗರೆಯುವ ಮೋಡಗಳ ಹಾಗೂ, ಸ್ರವತಃ - ಹರಿಯುವ ಜರಿಗಳನ್ನೊಳಗೊಂಡಿರುವ, ಗಿರೀನ್ ಯಥಾ ಚ - ಬೆಟ್ಟಗಳನ್ನು ಹೇಗೋ ಹಾಗೂ, ಮೇಘಸ್ತನಿತ - ಮೇಘಧ್ವನಿಯಂತೆ, ನಿರ್ಘೋಷಾನ್ - ಧ್ವನಿಗಳುಳ್ಳ, ಸಮರೆ - ಯುದ್ಧದಲ್ಲಿ, ಪರೈಃ - ಶತ್ರುಗಳಿಂದ, ದುರ್ಧರ್ಷಾನ್ - ತಡೆಯಲಸದಳವೆನಿಸಿದ, ಕ್ಷರತಶ್ಚ - ಮದೋದಕವನ್ನು ಸುರಿಸುತಲಿರುವ ಆನೆಗಳನ್ನೂ, ಸಃ - ಆ ಮಾರುತಿಯು, ದದರ್ಶ - ನೋಡಿದನು ॥೨೩॥ ॥ ರಾಕ್ಷಸೇಂದ್ರಸ್ಯ - ರಾಕ್ಷಸ ಸಾರ್ವಭೌಮನಾದ, ರಾವಣಸ್ಯ - ದಶವದನನ, ತತ್ರನಿವೇಶನೆ - ಆ ಮನೆಯಲ್ಲಿ, ಜಾಂಬೂನದ - ಸುವರ್ಣಾಭರಣಗಳಿಂದ, ಪರಿಷ್ಕೃತಾಃ - ಅಲಂಕರಿಸಲ್ಪಟ್ಟಿರುವ, ಹೇಮಜಾಲ - ಚಿನ್ನದ ಸರಿಗೆಗಳಿಂದ ಕೂಡಿದ,

---

ಗಳಾಗಿಯೂ ಇರುವ ನಿಶಿಚರವೀರರನ್ನೂ, ಮತ್ತು ಕೆಂಪು, ಬಿಳುಪು ಮೊದಲಾದ ಬಣ್ಣದವುಗಳಾಗಿಯೂ, ಕಟ್ಟಿಹಾಕಲ್ಪಟ್ಟವುಗಳಾಗಿಯೂ, ಮಹಾವೇಗಸಂಪನ್ನಗಳೆನಿಸಿದವುಗಳಾಗಿಯೂ ಇರುವ ಉತ್ತಮಾಶ್ವಗಳನ್ನೂ ಅವಲೋಕಿಸಿದನು, ॥೨೧॥ ಇದಲ್ಲದೆ ಉತ್ತಮವಾದ ಜಾತಿಯಲ್ಲಿ ಜನಿಸಿ, ಬಹು ಸೌಂದರ್ಯ ಶಾಲಿಗಳಾಗಿ, ಎದುರಿಸಿ ಬರುವ ಹಗೆಗಳ ಆನೆಗಳನ್ನು ಧ್ವಂಸಮಾಡುವ ಶೌರ್ಯವನ್ನು ಪಡೆದು, ಯೋಗ್ಯವಾದ ಶಿಕ್ಷೆಯನ್ನು ಹೊಂದಿ ಚೆನ್ನಾಗಿಪಳಗಿ, ಕಾಳಗ ಕೇಳಿಯಲ್ಲಿ ಅಸಮಾನಗಳೆನಿಸಿದವುಗಳಾದ ಕಾರಣವೇ ಅಮರಾಧಿಪನ ಐರಾವತಕ್ಕೆಣೆಯೆನಿಸಿದ ಮಹಾಗಜಗಳನ್ನಾಲೋಕಿಸಿದನು ॥೨೨॥ ಇವುಗಳನ್ನಲ್ಲದೆ ಮಳೆಗಾಲದಲ್ಲಿ ಜಲಧಾರೆಗಳನ್ನು ಕರೆಯುವ ಮೇಘಗಳ ಹಾಗೂ, ಹರಿಯುತಲಿರುವ ಕಿರುಹೊಳೆಗಳಿಂದೊಡಗೂಡಿದ ಬೆಟ್ಟಗಳಹಾಗೂ, ಮದೋದಕಧಾರೆಗಳನ್ನು ಕರೆಯುತಲಿರುವವುಗಳಾಗಿಯೂ, ರಣರಂಗಗಳಲ್ಲಿ ಹಗೆಗಳ ಪಡೆಗಳನ್ನು ಸದೆಬಡಿಯುತಕ್ಕವುಗಳಾಗಿಯೂ ಇರುವ ಮದದಾನಗಳನ್ನು ರಕ್ಕಸನರಮನೆಯಲ್ಲಿ ಕಂಡನು ॥೨೩॥ ಅಲ್ಲಿಂದ ನಡೆದು ಬೇರೊಂದುಕಡೆಗೆ ತಿರುಗಲು, ಸಮರದಲ್ಲಿ ಪರರು ಎದುರಿಸಲಳವಲ್ಲದೆ ಮೇಘಗಳಂತೆ ಘೀಂಕರಿಸುತಲಿರುವ

ಹೇಮಜಾಲ ಪರಿಚ್ಛನ್ನಾ ಸ್ತರುಣಾದಿತ್ಯ ಸನ್ನಿಭಾಃ ।
ದದರ್ಶ ರಾಕ್ಷಸೇಂದ್ರಸ್ಯ ರಾವಣಸ್ಯ ನಿವೇಶನೇ ॥೩೫॥
ಶಿಬಿಕಾ ವಿವಿಧಾಕಾರಾ ಸ್ಸ ಕಪಿ ರ್ಮಾರುತಾತ್ಮಜಃ ॥
ಲತಾಗೃಹಾಣಿ ಚಿತ್ರಾಣಿ ಚಿತ್ರಶಾಲಾ ಗೃಹಾಣಿ ಚ ॥೩೬॥
ಕ್ರೀಡಾಗೃಹಾಣಿ ಚಾನ್ಯಾನಿ ದಾರು ಪರ್ವತಕಾನಪಿ ।
ಕಾಮಸ್ಯ ಗೃಹಕಂ ರಮ್ಯಂ ದಿವಾಗೃಹಕ ಮೇವಚ ॥
ದದರ್ಶ ರಾಕ್ಷಸೇಂದ್ರಸ್ಯ ರಾವಣಸ್ಯ ನಿವೇಶನೇ ॥೩೭॥ ॥
ಸ ಮಂದರ ಗಿರಿಪ್ರಖ್ಯಂ ಮಯೂರಸ್ಥಾನ ಸಂಕುಲಂ ॥

---

ಪರಿಚ್ಛದಾಃ - ಮೇಲು ಹೊದಿಕೆಗಳುಳ್ಳ, (ಅದರಿಂದಲೇ) ತರುಣಾದಿತ್ಯ - ನಡುಹಗಲಿನ ಸೂರ್ಯನಿಗೆ, ಸನ್ನಿಭಾಃ - ಸಮಾನಗಳೆನಿಸಿದ, ಸಹಸ್ರಂ - ಸಾವಿರಾರು, ವಾಹಿನೀಃ - ಕಾಲುಬಲಗಳನ್ನು, ದದರ್ಶ - ನೋಡಿದನು ॥೩೫॥ ಮಾರುತಾತ್ಮಜಃ - ವಾಯುಕುಮಾರನಾದ, ಸಃಕಪಿಃ- ಆ ಆಂಜನೇಯನು, ವಿವಿಧಾಕಾರಾಃ- ಬಗೆಬಗೆಯ ಆಕಾರಗಳುಳ್ಳ, ಶಿಬಿಕಾಃ - ಪಲ್ಲಕ್ಕಿಗಳನ್ನೂ, ಚಿತ್ರಾಣಿ- ಆಶ್ಚರ್ಯಕರಗಳಾದ, ಲತಾಗೃಹಾಣಿ- ಹಬ್ಬಿರುವ ಬಳ್ಳಿಯ ಮನೆಗಳನ್ನೂ, ಚಿತ್ರಶಾಲಾಗೃಹಾಣಿಚ-ಚಿತ್ರಶಾಲೆಗಳಿಂದ ಕೂಡಿದ ಮನೆಗಳನ್ನೂ ॥ ಅನ್ಯಾನಿ - ಇತರಗಳಾದ, ಕ್ರೀಡಾಗೃಹಾಣಿಚ - ಆಟದ ಮನೆಗಳನ್ನೂ, ದಾರು - ಮರದಲ್ಲಿ ಕೆತ್ತಿ ಮಾಡಿರುವ, ಪರ್ವತಕಾನಪಿ - ಆಟದ ಬೆಟ್ಟಗಳನ್ನೂ, ಕಾಮಸ್ಯಗೃಹಕಂ - ಕಾಮದೇವನನ್ನು ಪೂಜಿಸುವ ಮನೆಯನ್ನೂ, ಅಥವಾ (ಭೋಗಶಾಲೆಗಳನ್ನೂ) ರಮ್ಯಂ - ರಮಣೀಯವಾದ, ದಿವಾಗೃಹಕಮೇವಚ - ಹಗಲಾಟದ ಮನೆಯನ್ನೂ, ರಾಕ್ಷಸೇಂದ್ರಸ್ಯ - ರಾಕ್ಷಸಾಧಿಪತಿಯಾದ, ರಾವಣಸ್ಯ - ರಾವಣನ, ನಿವೇಶನೇ - ಮನೆಯಲ್ಲಿ, ದದರ್ಶ - ಕಂಡನು ॥೩೭॥೩೮॥ ॥ ಸಃ - ಆ ಆಂಜನೇಯನು, ಮಂದರಗಿರಿಪ್ರಖ್ಯಂ -

---

ಮತ್ತೆ ಕೆಲವು ಆನೆಗಳ ಪಂಗಡಗಳು ಕಾಣಬಂದವು ॥೩೪॥ ॥ ಇದೂ ಅಲ್ಲದೆ ಬಗೆಬಗೆಯ ಕುಂದಣ ಗೆಲಸವನ್ನು ಮಾಡಿದ ಆಭರಣಗಳನ್ನು ಧರಿಸಿದವರಾಗಿಯೂ, ವಿಚಿತ್ರನಾದಸುವರ್ಣಕವಚಧಾರಿಗಳಾಗಿಯೂ, ಶೌರ್ಯದ ತೇಜಸ್ಸಿನಿಂದ ಮಧ್ಯಾಹ್ನಮಾರ್ತಾಂಡ ಮಂಡಲದಂತೆ ವಿರಾಜಿಸುತಲಿರುವವರಾಗಿಯೂ ಇರುವ ಸಾವಿರಾರು ಮಂದಿಯ ಕಾಲುಬಲವು ಕಪಿಕುಂಜರನ ಕಣ್ಣಿಗೆ ದಶಕಂಠನ ಮಂದಿರದಲ್ಲಿ ಕಾಣಬಂದಿತು ॥ ೩೫ ॥ ಅದನ್ನು ನೋಡಿಕೊಂಡು ಮುಂದೆ ತೆರಳುವಲ್ಲಿ ವಿಚಿತ್ರತರವಾದ ಆಕಾರವುಳ್ಳವುಗಳಾದ ಪಲ್ಲಕ್ಕಿಗಳೂ ಮೇನೆಗಳೂ, ಲತಾಗೃಹಗಳೂ, ಚಿತ್ರಶಾಲೆಗಳಿಂದೊಡಗೂಡಿದ ಮನೆಗಳೂ ಮಾರುತಾತ್ಮಜನಿಗೆ ಕಾಣಿಸಿದುವು ॥ ೩೬ ॥ ಇನ್ನೊಂದು ಪಕ್ಕದಲ್ಲಿ ಆಟದ ಮನೆಗಳೂ, ಮರದಿಂದ ಕೆತ್ತಿ ಮಾಡಿಟ್ಟಿರುವ ಆಟದ ಬೆಟ್ಟಗಳೂ, ಭೋಗಮಂದಿರಗಳೂ ಹಗಲಾಟದ ಕಿರುಕೋಣೆಗಳೂ ನೋಟಕರ ಕಣ್ಮನಗಳನ್ನು ಅಪಹರಿಸುತ ಕಂಗೊಳಿಸುತಲಿದ್ದುವು. ಇಂತೀ ವಿಚಿತ್ರಗಳನ್ನೆಲ್ಲ ಕಪಿಪುಂಗವನು ದಶಾಸ್ಯನರಮನೆಯಲ್ಲಿ ಕಂಡನು ॥೩೭॥ ॥ ಅವುಗಳನ್ನೆಲ್ಲ ಅವಲೋಕಿಸಿ ಬಲು ಅಚ್ಚರಿಗೊಂಡ ಆಂಜನೇಯನು ಅಲ್ಲಿಂದ ಮುಂದೆ ಬರುತ ಮಂದರಪರ್ವತದಂತೆ ಕಲ್ಲಿನಿಂದ ಕತ್ತಿ ನವಿಲುಗಳನ್ನು ಸಾಕಲು ಅಣಿಮಾಡಿರುವ ಮನೆಗಳನ್ನೂ ॥೩೮॥ ಧ್ವಜ, ಯಷ್ಟಿ ಮುಂತಾದ ಆಯುಧಗಳಿಂದ ತುಂಬಿರುವ ಆಯುಧಶಾಲೆಗಳನ್ನೂ,

ಧ್ವಜ ಯಷ್ಟಿಭಿ ರಾಕೀರ್ಣಂ ದದರ್ಶ ಭವನೋತ್ತಮಂ ।
ಅನೇಕರತ್ನ ಸಂಕೀರ್ಣಂ ನಿಧಿಜಾಲಂ ಸಮಂತತಃ॥
ಧೀರನಿಷ್ಠಿತ ಕರ್ಮಾಂತಂ ಗೃಹಂ ಭೂತಪತೇ ರಿವ ॥೩೯॥ ॥
ಅರ್ಚಿರ್ಭಿಶ್ಚಾಪಿ ರತ್ನಾನಾಂ ತೇಜಸಾ ರಾವಣಸ್ಯ ಚ ॥
ವಿರರಾಜಾಥ ತದ್ವೇಶ್ಮ ರಶ್ಮಿವಾನಿವ ರಶ್ಮಿಭಿಃ ॥೪೦॥॥
ಜಾಂಬೂನದ ಮಯಾನ್ಯೇವ ಶಯನಾ ನ್ಯಾಸನಾನಿ ಚ ॥
ಭಾಜನಾನಿ ಚ ಮುಖ್ಯಾನಿ ದದರ್ಶ ಹರಿಯೂಥಪಃ ॥೪೧॥ ॥
ಮಧ್ವಾಸವ ಕೃತಕ್ಲೇದಂ ಮಣಿಭಾಜನ ಸಂಕುಲಂ ॥

ಮಂದರಗಿರಿಯಂತೆ ಹೊಳೆಯುವ (ಮಂದರಗಿರಿಯೆಂದು ಹೆಸರುಳ್ಳ) ಮಯೂರಸ್ಥಾನ-ನವಿಲುಗಳನ್ನು ಸಾ
ಕುವಮನೆಗಳಿಂದ, ಸಂಕುಲಂ-ತುಂಬಿರುವ, ಧ್ವಜಯಷ್ಟಿಭಿಃ-ಧ್ವಜದಂಡ ಮೊದಲಾದ ಆಯುಧಗಳಿಂದ,
ಆಕೀರ್ಣಂ - ನಿಬಿಡವಾದ, ಭವನೋತ್ತಮಂ - ಉತ್ತಮ ಮಂದಿರವನ್ನು, ದದರ್ಶ - ನೋಡಿದನು ॥೩೮॥ ॥
ಅನೇಕರತ್ನ - ದಿವ್ಯರತ್ನ ರಾಶಿಗಳಿಂದ, ಸಂಕೀರ್ಣಂ - ಪರಿಪೂರ್ಣವಾದ, ನಿಧಿಜಾಲಂ- ನಿಕ್ಷೇಪಗಳ ಸಮೂ
ಹವನ್ನು, ಸಮಂತತಃ - ಎಲ್ಲ ಕಡೆಯಲ್ಲಿಯೂ, ದದರ್ಶ - ನೋಡಿದನು ॥೩೯॥ ಧೀರ - ದೃಢಸಂಕಲ್ಪ
ರಾದ, ಪರಿನಿಷ್ಠಿತ - ಕರ್ಮನಿಷ್ಠರಾದವರ, ಕರ್ಮ - ತಪೋರೂಪವಾದ ಕರ್ಮಕ್ಕೆ, ಅಂತಂ - ಫಲರೂಪವಾ
ಗಿರುವ, ಭೂತಪತೇರಿವ - ಪರಮೇಶ್ವರನ ಮಂದಿರವನ್ನು ಹೇಗೋಹಾಗೆ, ಭವನಂ - ಆ ರಾವಣನ ಮಂದಿ
ರವನ್ನು, ದದರ್ಶ - ನೋಡಿದನು, ॥೩೯॥ ॥ ರತ್ನಾನಾಂ - ನವರತ್ನಗಳ, ಅರ್ಚಿರ್ಭಿಶ್ಚಾಪಿ - ತೇಜಸ್ಸುಗ
ಳಿಂದಲೂ, ರಾವಣಸ್ಯ - ರಾವಣಾಸುರನ, ತೇಜಸಾಚ - ರಾಜತೇಜಸ್ಸಿನಿಂದಲೂ, ರಶ್ಮಿಭಿಃ- ಜ್ವಾಲೆಗಳಿಂದ
ರಶ್ಮಿವಾನಿವ - ಸೂರ್ಯನು ಹೇಗೋಹಾಗೆ, ತದ್ವೇಶ್ಮ - ಆ ರಾವಣನ ಮನೆಯು, ವಿರರಾಜ - ಪ್ರಕಾಶಿಸು
ತಲಿತ್ತು ॥೪೦॥ ॥ ಹರಿಯೂಥಪಃ - ವಾನರೇಂದ್ರನಾದ ಹನುಮಂತನು, ಜಾಂಬೂನದಮಯಾನ್ಯೇವ -
ಸುವರ್ಣ ಮಯಗಳಾಗಿಯೇ ಇರುವ, ಶಯನಾನಿ - ಹಾಸಿಗೆಗಳನ್ನೂ, ಆಸನಾನಿಚ - ಪೀಠಗಳನ್ನೂ, ಮು,
ಖ್ಯಾನಿ - ಶ್ರೇಷ್ಠವಾದ, ಭಾಜನಾನಿಚ - ಪಾತ್ರೆಗಳನ್ನೂ, ದದರ್ಶ-ಕಂಡನು ॥೪೧॥ ॥ ಮಧು - ಜೇನು

ನವರತ್ನ ರಾಶಿಗಳಿಂದಪರಿಪೂರ್ಣವಾಗಿರುವ ರತ್ನಭರಿತ ಭಾಂಡಾಗಾರಗಳನ್ನೂ ಒಂದೆಡೆ ಕಂ
ಡನು ॥೩೯॥ ಬೇರೊಂದು ಸ್ಥಳದಲ್ಲಿ ಮಹಾಶಾಸ್ತ್ರಪಾರಂಗತರಾಗಿ, ಕರ್ಮಶೂರರೆನಿಸಿ ನಿತ್ಯಾ
ಗ್ನಿಹೋತ್ರಿಯಾದ ರಾವಣನಂತೆ ಕರ್ಮಾನುಷ್ಠಾನ ತತ್ಪರರಾಗಿರುವ ರಾಕ್ಷಸ ಶ್ರೋತ್ರಿಯರಿಂದ
ತುಂಬಿರುವ ಭವನವು ಸತ್ಕರ್ಮ ಸುಕೃತಫಲವೆನಿಸಿದ ಪರಶಿವನ ಸದನದಂತೆ ಕಂಗೊಳಿಸುತಲಿ
ದ್ದಿತು. ॥೩೯॥ ॥ ಅಪರಿಮಿತ ಭಾಗ್ಯರಾಶಿಗೆ ನಿಕ್ಷೇಪವೆನಿಸಿದ ಆರಾಕ್ಷಸ ಚಕ್ರವರ್ತಿಯ
ಬಹುಸುಂದರವಾದ ಮಂದಿರವು ವಿಚಿತ್ರವೂ ಅಮೂಲ್ಯವೂ ಆದ ರತ್ನರಾಶಿಗಳ ಹೊಳವಿ
ನಿಂದಲೂ, ಶೌರ್ಯರಾಶಿಯಾದ ದಶಾಸ್ಯನ ರಾಜತೇಜಸ್ಸಿನಿಂದಲೂ, ತೇಜೋನಿಧಿಯಾಗಿ ಜ
ಗಚ್ಚಕ್ಷುವೆನಿಸಿದ ಭಾಸ್ಕರನು ಸಹಸ್ರರಶ್ಮಿಗಳಿಂದ ಹೇಗೋ, ಹಾಗೆ ವಿರಾಜಮಾನವಾಗಿ
ರುತ್ತಿತ್ತು ॥೪೦॥ ॥ ಆದಿವ್ಯಸುಂದರಮಂದಿರದೊಳಗಣ ಶಯನಗಳೂ, ಆಸನಗಳೂ,
ಭಾಜನಗಳೂ ಸಮಸ್ತವೂ ಸುವರ್ಣಮಯವಾಗಿಯೇ ಸಂಶೋಭಿಸುತಲಿದ್ದಿತು ॥ ೪೧॥ ॥
ಆ ವಿಚಿತ್ರ ವೈಭವವನ್ನು ಎಷ್ಟು ಕೊಂಡಾಡಿದರೂ ತೀರದು, ರಾವಣನೆಂದರೇನು

ಮನೋರಮಮಸಂಬಾಧಂ ಕುಬೇರ ಭವನಂ ಯಥಾ।
ನೂಪುರಾಣಾಂಚ ಘೋಷೇಣ ಕಾಂಚೀನಾಂ ನಿನದೇನ ಚ ॥೪೩॥
ಮೃದಂಗ ತಲಘೋಷೈಶ್ಚ ಘೋಷವದ್ಭಿ ರ್ವಿನಾದಿತಂ ।
ಪ್ರಾಸಾದ ಸಂಘಾತಯುತಂ ಸ್ತ್ರೀರತ್ನ ಶತಸಂಕುಲಂ ॥
ಸುವ್ಯೂಢ ಕಕ್ಷ್ಯಂ ಹನುಮಾ ನ್ಪ್ರವಿವೇಶ ಮಹಾಗೃಹಂ ॥೪೪॥ ॥
ಇತಿ ಶ್ರೀಮತ್ಸುಂದರಕಾಂಡೆ-ಷಷ್ಠಸ್ಸರ್ಗಃ.

ತುಪ್ಪದಿಂದಲೂ, ಆಸವ - ಮದ್ಯದಿಂದಲೂ (ಬಗೆಬಗೆಯ ಮಾದಕ ದ್ರವ್ಯಗಳಿಂದಲೂ) ಕೃತ - (ಪಾನದ ಸಮಯದಲ್ಲಿ) ಮಾಡಲ್ಪಟ್ಟಿರುವ, ಕ್ಲೇದಂ - ಕೆಸರುಳ್ಳ (ಬಂಕೆ ಅಥವಾ ಅಂಟುಳ್ಳ) ಮಣಿಭಾಜನ - ರತ್ನಗಳನ್ನು ಕೆತ್ತಿರುವ ಪಾತ್ರೆಗಳಿಂದ, ಸಂಕುಲಂ - ತುಂಬಿರುವ, ॥೪೨॥ ಕುಬೇರಭವನಂಯಥಾ - ಕುಬೇರನ ಮಂದಿರವು ಹೇಗೋಹಾಗೆ, ಅಸಂಬಂಧಂ - ಒಂದಕ್ಕೊಂದು ತಳೆಯದಿರುವ, ಮನೋಹರಂ- ಮನೋಹರವಾದ ಮನೆಯನ್ನು, ದದರ್ಶ - ನೋಡಿದನು ॥೪೨॥ ॥ ನೂಪುರಾಣಾಂ - ಹೆಂಗಸರ ಕಾಲು ಕಡಗಗಳ, ಘೋಷೇಣ - ಗಲಗಲ ಧ್ವನಿಯಿಂದಲೂ, ಕಾಂಚೀನಾಂ - ಗೆಜ್ಜೆಯ ಡಾಬುಗಳ, ನಿನದೇನಚ - ಕಲಕಲ ಶಬ್ದದಿಂದಲೂ, ॥೪೩॥ ಘೋಷವದ್ಭಿಃ - ಮೊರೆಯುತಲಿರುವ, ಮೃದಂಗತಲ - ಮದ್ದಲೆಗಳ ಮುಖಗಳಿಂದ ಹೊರಡುವ, ಘೋಷೈಶ್ಚ - ಶಬ್ದಗಳಿಂದಲೂ, ವಿನಾದಿತಂ - ವಿಶೇಷ ಶಬ್ದವುಳ್ಳುದಾಗಿರುವ, ಪ್ರಾಸಾದ - ಉಪ್ಪರಿಗೆ ಮನೆಗಳ, ಸಂಘಾತ - ಸಮೂಹದಿಂದ, ಯುತಂ - ಕೂಡಿರುವ, ಸ್ತ್ರೀರತ್ನಶತ - ನೂರಾರುಮಂದಿ ಉತ್ತಮ ಸ್ತ್ರೀಯರಿಂದ, ಸಂಕುಲಂ - ಪರಿಪೂರ್ಣವಾಗಿರುವ, ॥೪೪॥ ಸುವ್ಯೂಢಕಕ್ಷ್ಯಂ - ವಿಸ್ತಾರವಾದ ತೊಟ್ಟಿಗಳುಳ್ಳ, ಮಹಾಗೃಹಂ - ಆ ಮಹಾರಾಜ ಮಂದಿರವನ್ನು, ಹನುಮಾನ್ - ಆಂಜನೇಯನು, ಪ್ರವಿವೇಶ - ಪ್ರವೇಶಿಸಿದನು ॥೪೪॥ ॥

—ಇಂತು ರಸಾಯನ ಟೀಕಾಸಹಿತ ಶ್ರೀಮದ್ವಾಲ್ಮೀಕಿ ರಾಮಾಯಣದ—

—ಸುನ್ದರ ಕಾಣ್ಡದಲ್ಲಿ ಆರನೆಯ ಸರ್ಗವು—

ಸಾಮಾನ್ಯನೆ ? ಶೌರ್ಯರಾಶಿ, ತೇಜೋನಿಧಿ, ವೀರರವೀರ, ಹಮ್ಮೀರ, ಅಪಾರತಪಃಪೂರ, ಕರ್ಮಶೂರ, ಧೀರ, ಸೌಭಾಗ್ಯಸಾರ, ಧೈರ್ಯಸಾಗರ, ಸ್ಥೈರ್ಯಗುಣಾಕರ, ಬಹುಗಂಭೀರ, ಇಂತಪಾರಸಾಮ್ರಾಜ್ಯಸಂಪನ್ನನೆನಿಸಿದ ಆ ದಶಕಂಠನ ಅರಮನೆಯೊಳಗೆ ಬಗೆಬಗೆಯ ಮದ್ಯರಸಗಳಿಂದ ಭರಿತವಾದ ರತ್ನಖಚಿತ ಚಿತ್ರ ಪಾತ್ರೆಗಳು ತುಂಬಿದ್ದುವು ॥೪೨॥ ಆ ಮಹಾರಾಜಸದನದ ಮನೋಹರತೆಯು ನವನಿಧಿಗಳಿಗಧಿಪತಿಯಾದ ರಾಜರಾಜನ ಭವನದಮೈಭವಕ್ಕಿಮ್ಮಡಿಯಾಗಿದ್ದಿತು ॥ ೪೨॥ ॥ ರಾಕ್ಷಸ ರಮಣಿಯರ ಕಾಲುಕಡಗಗಳ ಮಂಗಳಧ್ವನಿ, ಒಡ್ಯಾಣಗಳ ಕಿರುಗೆಜ್ಜೆಯ ಸಿನಾದ, ॥೪೩॥ ಮೃದಂಗಗಳ ಮನೋಹರವಾದ, ನಾದ, ಮಂಜು ಭಾಷಿಣಿಯರ ನಿನದ, ಸರ್ವಸಮೃದ್ಧಿ ಸಂಪನ್ನರಾದ ನಿಶಾಚರರ ಉಪ್ಪರಿಗೆಗಳ ಪ್ರಕಾಶ, ಪ್ರಕಾಶವತಿಯರಾದ ಸಹಸ್ರಾಧಿಕ ಮತ್ತಕಾಶಿನಿಯರ ವಿಲಾಸ, ಬಹುವಿಶಾಲವಾದ ತೊಟ್ಟಿಗಳ ವಿಕಾಸ, ಇಂತನರ್ಘ್ಯ ಸಾಮ್ರಾಜ್ಯಲಕ್ಷ್ಮೀಸನಾಥನಾದ ಲಂಕಾನಾಥನ ಅರಮನೆಯೊಳಗೆ ಪ್ಲವಂಗಮನಾಥನು ಪ್ರವೇಶಿಸುತಲಿದ್ದನು॥ ೪೪॥ ॥

— ಇಂತು ಆರನೆಯ ಸರ್ಗವು —



ಶ್ರೀಃ

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ

# ಸಪ್ತಮಸ್ಸರ್ಗಃ

ಸ ವೇಶ್ಮಜಾಲಂ ಬಲವಾ ನ್ದದರ್ಶ ವ್ಯಾಸಕ್ತ ವೈಡೂರ್ಯ ಸುವರ್ಣಜಾಲಂ ।
ಯಥಾ ಮಹ ತ್ಪ್ರಾವೃಷಿ ಮೇಘಜಾಲಂ ವಿದ್ಯುತ್ಪಿನದ್ಧಂ ಸವಿಹಂಗಜಾಲಂ ॥
ನಿವೇಶನಾನಾಂ ವಿವಿಧಾಶ್ಚ ಶಾಲಾಃ ಪ್ರಧಾನ ಶಂಖಾಯುಧ ಚಾಪಶಾಲಾಃ ।
ಮನೋಹರಾ ಶ್ಚಾಪಿ ಪುನರ್ವಿಶಾಲಾ ದದರ್ಶ ವೇಶ್ಮಾದ್ರಿಷು ಚಂದ್ರಶಾಲಾಃ ॥

---

ಶ್ರೀಃ

—ಶ್ರೀಮದವನಿಜಾಜಾನಯೇನಮಃ—

## ಸಪ್ತಮಸ್ಸರ್ಗಃ.

ಕಂದ॥ ಪವಮಾನಾತ್ಮಜಭರದಿಂ । ದವನಿಜೆಯಂ ಪುಡುಕುತಲ್ಲಿಯುಸುರರಮನೆಯೊಳ್ ।
ಶಿವಸಖಸದನದತೆರದಿಹ । ಭವನವತಾಂಪ್ರೊಕ್ಕನಂದುಮುಂದರಿದಮವಾ ॥

ಬಲವಾನ್-ಮಹಾಬಲಶಾಲಿಯಾದ, ಸಃ- ಆ ಆಂಜನೇಯನು, ವ್ಯಾಸಕ್ತ-ತಗಲಿಸಲ್ಪಟ್ಟ, ವೈಡೂರ್ಯ-ವೈಡೂರ್ಯ ಮಣಿಗಳುಳ್ಳ, ಸುವರ್ಣ - ಚಿನ್ನದ ಕೆತ್ತನೆಯ, ಜಾಲಂ - ಕಿಟಕಿಗಳುಳ್ಳ, ವೇಶ್ಮಜಾಲಂ-ಮನೆಗಳ ಸಾಲನ್ನು, ಪ್ರಾವೃಷಿ - ಮಳೆಗಾಲದಲ್ಲಿ, ವಿದ್ಯುತ್ - ಮಿಂಚುಗಳಿಂದ, ಪಿನದ್ಧಂ-ಒಡಗೂಡಿರುವ, ಸವಿಹಂಗಜಾಲಂ - ಹಕ್ಕಿಗಳ ಹಿಂಡಿನಿಂದ ಸಹಿತವಾದ, ಮೇಘಜಾಲಂಯಥಾ- ಮೋಡಗಳ ಸಾಲನ್ನು ಹೇಗೋ ಹಾಗೆ, ದದರ್ಶ-ನೋಡಿದನು ॥ ೧ ॥ ನಿವೇಶನಾನಾಂ- ಆ ಮಹಾಮಂದಿರಗಳೊಳಗಿರುವ, ವಿವಿಧಾಃ-ಅನೇಕವಿಧವಾದ, ಶಾಲಾಶ್ಚ - ಮನೆಗಳನ್ನೂ, ಪ್ರಧಾನ - ಬಹುಮುಖ್ಯವಾದ, ಶಂಖಾಯುಧ-ಶಂಖವೇ ಮೊದಲಾದ ಆಯುಧಗಳ, ಚಾಪ - ಬಿಲ್ಲುಗಳ, ಶಾಲಾಃ - ಮನೆಗಳನ್ನೂ, ವೇಶ್ಮಾದ್ರಿಷು-ದೊಡ್ಡ ಬೆಟ್ಟಗಳಂತಿರುವ ಆ ಮನೆಗಳಮೇಲೆ, (ವೇಶ್ಮಾದಿಷು - ಮನೆಯ ಮೇಲಂತಸ್ತುಗಳಲ್ಲಿ) ಮನೋಹರಾಃ - ಬಹು ಸುಂದರಗಳಾಗಿರುವ, ಅಪಿಚ-ಮತ್ತು, ವಿಶಾಲಾಃ - ಬಹು ವಿಸ್ತಾರಗಳಾದ, ಚಂದ್ರಶಾಲಾಃಪುನಃ - ಶಿರೋಗೃಹಗಳನ್ನೂ, ದದರ್ಶ-ನೋಡಿದನು ॥ ೨ ॥ ಕಪಿಃ- ಆಂಜನೇಯನು, ನಾನಾ

---

--ಶ್ರೀಮದವನಿಜಾಪತಯೇನಮಃ--

ಬಳಿಕ ಬಹುಬಲಶಾಲಿಯಾದ ಮಹಾಬಲನಂದನನು ಮಳೆಗಾಲದಲ್ಲಿ ಮಿಂಚುಗಳಿಂದಲೂ, ವಿಚಿತ್ರವಾದ ಪಕ್ಷಿಗಳಿಂದಲೂ ಪ್ರಕಾಶಿಸುತಲಿರುವ ಮೋಘಗಳ ಸಾಲಿನಂತೆ, ಶೋಭಿಸುತಲಿರುವ ವೈಡೂರ್ಯಮಣಿಗಳನ್ನು ಕೆತ್ತಿದ ಚಿನ್ನದತಗಡುಗಳನ್ನು ತಗಲಿಸಿ ಅಂದವಾಗಿ ರಚಿಸಿ ಇರತಕ್ಕ, ಮಹಾಧನಿಕರ ಮನೆಗಳ ಸಾಲನ್ನು, ಕ್ರಮವಾಗಿ ನೋಡುತಬಂದನು॥೧॥ ದೊಡ್ಡದೊಡ್ಡ ಮನೆಗಳೊಳಗೆ ಸಾಲಾಗಿ ಕಿರುಮನೆಗಳೂ, ಬಹು ಮುಖ್ಯಗಳೆನಿಸಿಹ ಶಂಖ, ಧನುಸ್ಸು ಮೊದಲಾದ ಆಯುಧಗಳ ಶಾಲೆಗಳೂ, ಆ ಮಹಾಮಂದಿರಗಳ ಮೇಲ್ಭಾಗಗಳಲ್ಲಿ ಕಲ್ಪಿಸಿರುವ ವಿಸ್ತಾರಗಳಾದ ಚಂದ್ರಶಾಲೆಗಳೆಂಬ ಶಿರೋಗೃಹಗಳೂ, ಬಹು ಮನೋಹರಗಳಾಗಿ ಕಂಗೊಳಿಸುತಲಿದ್ದುವು ॥೨॥ ಮಹಾಧನಕನಕಗಳ ಸಮೃದ್ಧಿಯಿಂದ ರಾರಾಜಿಸುವುದ

ಗೃಹಾಣಿ ನಾನಾವಸು ರಾಜಿತಾನಿ ದೇವಾಸುರೈಶ್ಚಾಪಿ ಸುಪೂಜಿತಾನಿ ।
ಸರ್ವೈಶ್ಚ ದೋಷೈಃ ಪರಿವರ್ಜಿತಾನಿ ಕಪಿ ರ್ದದರ್ಶ ಸ್ವಬಲಾರ್ಜಿತಾನಿ ॥
ತಾನಿ ಪ್ರಯತ್ನಾಭಿ ಸಮಾಹಿತಾನಿ ಮಯೇನ ಸಾಕ್ಷಾದಿವ ನಿರ್ಮಿತಾನಿ ।
ಮಹೀತಲೇ ಸರ್ವಗುಣೋತ್ತರಾಣಿ ದದರ್ಶ ಲಂಕಾಧಿಪತೇ ರ್ಗೃಹಾಣಿ ॥೪॥
ತತೋ ದದರ್ಶೋಚ್ಛ್ರಿತಮೇಘರೂಪಂ ಮನೋಹರಂ ಕಾಂಚನ ಚಾರುರೂಪಂ

ವಸು - ಅನೇಕವಿಧವಾದ ಕಾಂತಿಗಳಿಂದ, (ಅನೇಕ ರತ್ನಗಳಿಂದ) ರಾಜಿತಾನಿ - ಹೊಳೆಯುತಲಿರುವ- ದೇವಾಸುರೈಶ್ಚಾಪಿ-ದೇವತೆಗಳಿಂದಲೂ ರಾಕ್ಷಸರಿಂದಲೂ, ಸುಪೂಜಿತಾನಿ-ಶ್ಲಾಘಿಸಲ್ಪಡುತಲಿರುವ, ಸರ್ವೈಃ- ಸಮಸ್ತವಾದ, ದೋಷೈಶ್ಚಾಪಿ - ದೋಷಗಳಿಂದಲೂ, ಪರಿವರ್ಜಿತಾನಿ- ಬಿಡಲ್ಪಟ್ಟಿರುವ, ಸ್ವಬಲಾರ್ಜಿತಾನಿ-ತನ್ನ ತೋಳುಬಲದಿಂದ ಕುಬೇರಾದಿಗಳನ್ನು ಸೋಲಿಸಿ ಸಂಪಾದಿಸಿ ಇರತಕ್ಕ, ಗೃಹಾಣಿ - ಮನೆಗಳನ್ನೂ, ದದರ್ಶ-ನೋಡುತಬಂದನು ॥ ೩ ॥ ಪ್ರಯತ್ನ - ಬುದ್ಧಿ ಕ್ರಿಯಾಶಕ್ತಿಗಳ ಹೆಚ್ಚಿದಿಂದ, ಅಭಿ ಸಮಾಹಿತಾನಿ-ಅಲ್ಲಲ್ಲಿಗೆ ತಕ್ಕಂತೆ ಅಂದವಾಗಿ ಜೋಡಿಸಿ ಇರುವ, ಮಯೇನ - ದೇವತೆಗಳ ಬಡಗಿಯಿಂದ, ಸಾಕ್ಷಾತ್ - ತನ್ನ ಸ್ವಂತ ಕೈವಾಡದಿಂದಲೇ, ಅಥವಾ ಸಂಕಲ್ಪದಿಂದಲೇ, ನಿರ್ಮಿತಾನೀವ - ನಿರ್ಮಿಸಲ್ಪಟ್ಟವುಗಳೇ ಆಗಿರುವ, ಅಥವಾ (ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟಿದ್ದರೂ ಮಯನಿಂದ ನಿರ್ಮಿಸಲ್ಪಟ್ಟವೆಯೋ ಎಂಬಂತಿರುವ ) ಅಥವಾ ( ಮಯನೇ ನಿರ್ಮಿಸಿ ಇರುವನೆಂಬ ಭ್ರಾಂತಿಯನ್ನು ಉಂಟುಮಾಡುವಹಾಗೆ ರಾವಣನ ಉಪಾಯದಿಂದ ನಿರ್ಮಿಸಲ್ಪಟ್ಟವುಗಳಾದ ) ಮಹೀತಲೆ - ಭೂಮಂಡಲದಲ್ಲಿ, ಸರ್ವಗುಣೋತ್ತರಾಣಿ - (ಸಕಲ ರಾಜಗೃಹಗಳಿಗಿಂತ ಅತಿ ಶ್ರೇಷ್ಠವಾದ) ಗುಣಗಳಿಂದ ಶ್ಲಾಘ್ಯವಾದ, ಲಂಕಾಧಿಪತೇಃ - ಲಂಕಾಸಾರ್ವಭೌಮನ, ಗೃಹಾಣಿ - ಮನೆಗಳನ್ನು, ದದರ್ಶ - ನೋಡಿದನು ॥ ೪ ॥ ತತಃ-ಆ ರಾವಣನ ಮನೆಗಳನ್ನು ನೋಡಿದಮೇಲೆ, ಉಚ್ಛ್ರಿತ - ಬಹು ಉನ್ನತವಾದ, ಮೇಘರೂಪಂ - ಮೇಘದಂತೆ ಆಕಾರವುಳ್ಳುದಾಗಿಯೂ, ಮನೋಹರಂ - ಮನಸ್ಸನ್ನು ಸೆಳೆಯುವುದಾಗಿಯೂ, ಕಾಂಚನ - ಸುವರ್ಣದಂತೆ, ಚಾರು - ಬಹುಸುಂದರವಾದ, ರೂಪಂ - ಆಕಾರವುಳ್ಳುದಾಗಿಯೂ, ಆತ್ಮ-ತನ್ನ, ಬಲ-

ರಿಂದಲೇ ದೇವಾಸುರರಿಂದಲೂ ಕೊಂಡಾಡಲ್ಪಡುತ ಲಿರುವವುಗಳಾಗಿಯೂ ಯಾವುದೊಂದು ದೋಷಲೇಶಕ್ಕೂ ಆಸ್ಪದವಿಲ್ಲದಿರುವಂತೆ ರಚಿಸಲ್ಪಟ್ಟವುಗಳಾಗಿಯೂ, ಇರುತ್ತಾ, ರಾವಣನ ಬಾಹುಬಲದಿಂದ ಕುಬೇರನನ್ನು ಓಡಿಸಿ ಅರ್ಜಿಸಲ್ಪಟ್ಟದಾಗಿರುವ ಲಂಕೆಯ ಭವನಗಳು ಶೋಭಾಯಮಾನವಾಗಿದ್ದುವು ॥೩॥ ಈ ಭೂಮಂಡಲದಲ್ಲಿ ಶಿಲ್ಪಕಲ್ಪನೆಯ ಚಾತುರ್ಯದ ಸಕಲ ಗುಣಗಳಲ್ಲಿಯೂ ಸರ್ವೋತ್ತಮಗಳೆನಿಸಿದ್ದುದರಿಂದ ಮಯನೆಂಬ ಶಿಲ್ಪಿಯು ವಿಶ್ವಕರ್ಮನ ಮೇಲಣ್ಣಾಹುದಿಂದ ತಾನೇ ಬಹು ಪ್ರಯತ್ನಪೂರ್ವಕವಾಗಿ ಮನಸ್ಸಂಕಲ್ಪದಿಂದ ನಿರ್ಮಿಸಿ ಇರುವನೋ ಎಂಬಂತೆ ಕಾಣಬರುವ ಲಂಕಾಮಂಡಲಾಧಿಪನ ಸ್ವಂತ ಆವಾಸದ ಸದನಗಳನ್ನು ಕಂಡನು ॥೪॥ ಇಂತೆಸೆಯುವ ಆವಾಸಗಳೆಲ್ಲ ಕ್ಕಿ ವಾದರೂ ಆಯಾಸವಿಲ್ಲದೆ ಜನಕನಂದಿನಿ ಎಲ್ಲಿರುವಳೋ ಎಂದು ತದೇಕಾ ಚಿತ್ತ ಹುಡುಕುತ ಮುಂದರಿದು ಬರುತಿರಲು ಮಾರುತಾತ್ಮಜನ ದೃಷ್ಟಿಪಥಕ್ಕೆ ಥಳಥಳಿಸುತ್ತಿರುವ ಒಂದು ದಿವ್ಯವಿಮಾನ ರತ್ನವು ಕಂಗೊಳಿಸಿತು. ಅದರ ಸೊಬಗು ಹೇಗಿತ್ತೆಂದರೆ—ಬಹು ಉನ್ನತವಾಗಿ ಬೆಳಗುವ ಮೇಘಮಂಡಲದಂತೆ ಬೆಳಗುತಲಿತ್ತು, ನೋಟಕರ ಕಣ್ಮನಗಳನ್ನು

ರಕ್ಷೋಽಧಿಪಸ್ಯಾತ್ಮಬಲಾನುರೂಪಂ ಗೃಹೋತ್ತಮಂ ಹ್ಯಪ್ರತಿರೂಪರೂಪಂ ॥
ಮಹೀತಲೇ ಸ್ವರ್ಗಮಿವ ಪ್ರಕೀರ್ಣಂ ಶ್ರಿಯಾ ಜ್ವಲಂತಂ ಬಹುರತ್ನಕೀರ್ಣಂ ।
ನಾನಾತರೂಣಾಂ ಕುಸುಮಾವಕೀರ್ಣಂ ಗಿರೇರಿವಾಗ್ರಂ ರಜಸಾವಕೀರ್ಣಂ ॥
ನಾರೀಪ್ರವೇಕೈರಿವ ದೀಪ್ಯಮಾನಂ ತಟಿದ್ಭಿರಂಭೋದವದರ್ಚ್ಯಮಾನಂ ।
ಹಂಸಪ್ರವೇಕೈರಿವ ವಾಹ್ಯಮಾನಂ ಶ್ರಿಯಾ ಯುತಂ ಖೇ ಸುಕೃತಾಂ ವಿಮಾನಂ ॥
ಯಥಾ ನಗಾಗ್ರಂ ಬಹುಧಾತುಚಿತ್ರಂ ಯಥಾ ನಭಶ್ಚ ಗ್ರಹಚಂದ್ರಚಿತ್ರಂ ।

ಶಕ್ತಿಗೆ, ಅನುರೂಪಂ - ತಕ್ಕುದಾಗಿಯೂ, ಅಪ್ರತಿರೂಪ - ಅಸಮಾನವಾದ, ರೂಪಂ- ಸ್ವರೂಪವುಳ್ಳುದಾಗಿಯೂ, ರಕ್ಷೋಽಧಿಪಸ್ಯ - ರಾಕ್ಷಸ ಚಕ್ರವರ್ತಿಯ, ಗೃಹೋತ್ತಮಂ - ಉತ್ತಮ ಮಂದಿರದಂತಿರುವುದಾಗಿಯೂ ॥ ೪ ॥ ಮಹೀತಲೆ-ಭೂಪ್ರದೇಶದಲ್ಲಿ, ಪ್ರಕೀರ್ಣಂ-ದೈವವಶದಿಂದ ಇಳಿದುಬಂದ, ಸ್ವರ್ಗಂ-ಸ್ವರ್ಗವೋ ಎಂಬಂತಿರುವ, ಶ್ರಿಯಾ - ಕಾಂತಿಯಿಂದ, ಜ್ವಲಂತಂ - ಬೆಳಗುತಲಿರತಕ್ಕ, ಬಹುರತ್ನಕೀರ್ಣಂ - ಅನೇಕ ರತ್ನಗಳಿಂದ ತುಂಬಿರುವುದಾಗಿಯೂ, ನಾನಾತರೂಣಾಂ - ಸಮಸ್ತ ವೃಕ್ಷಗಳ, ಕುಸುಮ-ಹೂಗಳಿಂದ, ಅವಕೀರ್ಣಂ - ಎಲ್ಲ ಕಡೆಗಳಲ್ಲಿಯೂ ನಿಬಿಡವಾದುದಾಗಿಯೂ, ರಜಸಾ- ಪುಷ್ಪಪರಾಗದಿಂದ, ಗಿರೇಃ-ಬೆಟ್ಟದ, ಅಗ್ರಮಿವ - ತುದಿಯಂತೆ ಇರುವುದಾಗಿಯೂ ॥ ೫ ॥ ತಟಿದ್ಭಿಃ- ಮಿಂಚುಗಳಿಂದ, ಅಂಭೋದವತ್ - ಮೇಘದಂತೆ, ನಾರೀಪ್ರವೇಕೈರಿವ - ಬಲು ಅಂದವಾದ ಸುಂದರಿಯರಿಂದಲೇ, ದೀಪ್ಯಮಾನಂ - ಹೊಳೆಯುತಲಿರುವುದಾಗಿಯೂ, ಅರ್ಚ್ಯಮಾನಂ - ಎಲ್ಲರಿಂದಲೂ ಹೊಗಳಲ್ಪಡುತಿರುವುದಾಗಿಯೂ, ಹಂಸಪ್ರವೇಕೈಃ - ಶ್ರೇಷ್ಠವಾದ ರಾಜಹಂಸೆಗಳಿಂದ, ದಿವಿ - ಸ್ವರ್ಗಲೋಕದಲ್ಲಿ, ವಾಹ್ಯಮಾನಂ-ಒಯ್ಯಲ್ಪಡುತಲಿರುವ ವಿಮಾನದಂತಿರುವ, ಶ್ರಿಯಾ-ಸಮಸ್ತ ಸೌಭಾಗ್ಯದಿಂದ, ಯುತಂ-ಕೂಡಿಇರತಕ್ಕ, ಖೇ - ಅಂತರಿಕ್ಷದಲ್ಲಿ, ಸುಕೃತಾಂ - ಪುಣ್ಯಶಾಲಿಗಳ, ವಿಮಾನಂ - ಆಕಾಶಯಾನದಂತಿರುವ ಪುಷ್ಪಕವಿಮಾನವನ್ನು, ದದರ್ಶ-ನೋಡಿದನು ॥ ೬ ॥ ಬಹುಧಾತು-ಅನೇಕ ಗೈರಿಕಾದಿ ಧಾತುಗಳಿಂದ,

ಸೆಳೆಯುತಲಿದ್ದಿತು, ಬಿಡಿಸಿದ ತುದಿಯವರೆಗೂ ಸುವರ್ಣಮಯವಾಗಿದ್ದಿತು. ಅದರ ಅಂದವೂ ಚಂದವೂ ಬಣ್ಣಿಸತೀರದು. ಮಹದೈಶ್ವರ್ಯಶಾಲಿಯೂ, ಅಪರಿಮಿತ ಬಲಶಾಲಿಯೂ ಆಗಿರುವ ಲಂಕಾರಮಣನಿಗೆ ತಕ್ಕುದಾಗಿದ್ದಿತು. ಮತ್ತು ಆ ನಿಶಾಚರ ಚಕ್ರವರ್ತಿಯು ವಾಸಮಾಡುವ ಮನೆಯೋ ಇದೋ ಎಂಬಂತೆ ಎಣೆಯಿಲ್ಲದುದು ಎನಿಸಿದುದು ॥೪॥ ಮತ್ತು ವಿಚಿತ್ರ ದಿವ್ಯ ರತ್ನಗಳ ಕೆತ್ತನೆಯಿಂದಲೂ, ಹೊಳೆಯುತಲಿರುವ ಕಾಂತಿಯ ಚಾಕಚಕ್ಯ, ಥಳಥಳ್ಯ, ಘಳಘಳ್ಯಗಳಿಂದಲೂ ಮೂಲೋಕ ನೋಡಿಸುವಾದ ಇಂದ್ರನ ಅಮರಾವತಿಯೇ ನೆಲಕ್ಕೆ ಇಳಿದುಬಂದಿದೆಯೋ ಎಂಬಂತೆ ಜ್ವಲಿಸುತಲಿತ್ತು, ಅಲ್ಲದೆ ಬಹುವಿಧವಾದ ಪುಷ್ಪಗಳಿಂದಲೂ, ಪುಷ್ಪಗಳಲ್ಲಿನ ಧೂಳಿಯಿಂದಲೂ ತುಂಬಿ, ಪರ್ವತಾಗ್ರದಂತೆ ಶೋಭಿಸುತಲಿತ್ತು ॥೫॥ ಥಳಥಳನೆ ಹೊಳೆಯುವ ಮಿಂಚುಗಳಿಂದೊಡಗೂಡಿರುವ ಮೇಘದಂತೆ ಬಹುಮಂದಿ ಸುಂದರಿಯರಿಂದ ಅಂದವಾಗಿ ಬೆಳಗುತಲಿದ್ದಿತು. ಮತ್ತು ಭೂಮಂಡಲದಲ್ಲಿ ಅಪಾರವಾದ ಸುಕೃತವನ್ನು ಸಂಪಾದಿಸಿ ಆ ಸುಕೃತಕ್ಕೆ ಫಲವೆನಿಸಿದ ಸ್ವರ್ಗವನ್ನು ಪಡೆದು ಆಕಾಶದಲ್ಲಿ ಹಂಸವಾಹನಗಳಿಂದ ಒಯ್ಯಲ್ಪಡುತಲಿರುವ ಪುಣ್ಯಾತ್ಮರ ದಿವ್ಯವಿಮಾನವು ಹೇಗೋ ಹಾಗೆ ದಿವ್ಯತೇಜಸ್ಸಿನಿಂದ ವಿರಾಜಿಸುತಲಿದ್ದಿತು॥೬॥ಕೆಂಗಾವಿ ಕರಿಗಾವಿ ಮೊದಲಾದ ನಾನಾ

ದದರ್ಶ ಯುಕ್ತೀಕೃತ ಮೇಘಚಿತ್ರಂ ವಿಮಾನರತ್ನಂ ಬಹುರತ್ನ ಚಿತ್ರಂ ||೮||
ಮಹೀಕೃತಾ ಪರ್ವತರಾಜಿ ಪೂರ್ಣಾ ಶೈಲಾಃ ಕೃತಾ ವೃಕ್ಷವಿತಾನ ಪೂರ್ಣಾಃ ।
ವೃಕ್ಷಾಃ ಕೃತಾಃ ಪುಷ್ಪ ವಿತಾನಪೂರ್ಣಾಃ ಪುಷ್ಪಂ ಕೃತಂ ಕೇಸರಪತ್ರಪೂರ್ಣಂ ॥
ಕೃತಾನಿ ವೇಶ್ಮಾನಿ ಚ ಪಾಂಡುರಾಣಿ ತಥಾ ಸುಪುಷ್ಪಾಣ್ಯಪಿ ಪುಷ್ಕರಾಣಿ ।
ಪುನಶ್ಚ ಪದ್ಮಾನಿ ಸಕೇಸರಾಣಿ ಧನ್ಯಾನಿ ಚಿತ್ರಾಣಿ ತಥಾವನಾನಿ ॥ ೧೦ ॥
ಪುಷ್ಪಾಹ್ವಯಂ ನಾಮ ವಿರಾಜಮಾನಂ ರತ್ನಪ್ರಭಾಭಿಶ್ಚ ವಿವರ್ಧಮಾನಂ ।

ಚಿತ್ರಂ- ಚಿತ್ರವರ್ಣವಾಗಿರುವ, ನಗಾಗ್ರಂಯಥಾ - ಬೆಟ್ಟದ ತುದಿಯು ಹೇಗೋ ಹಾಗೂ, ಗ್ರಹ-ಬೃಹಸ್ಪತಿ ಮೊದಲಾದ ಗ್ರಹಳಿಂದಲೂ, ಚಂದ್ರ - ಚಂದ್ರನಿಂದಲೂ, ಚಿತ್ರಂ - ಚಿತ್ರವರ್ಣವಾದ, ಯುಕ್ತೀಕೃತ - ಬಂದೆಡೆಯಲ್ಲಿ ಒಟ್ಟಾಗಿ ಸೇರಿರುವ, ಮೇಘ - ಜಲಧರಗಳಿಂದಲೂ, ನಭಶ್ಚ ಯಥಾ - ಆಕಾಶವು ಹೇಗೋ ಹಾಗೂ ಇರುವ, ಬಹುರತ್ನ - ಅನೇಕ ರತ್ನಗಳಿಂದ, ಚಿತ್ರಂ - ವಿಚಿತ್ರವಾಗಿರುವ, ವಿಮಾನ ರತ್ನಂ - ಶ್ರೇಷ್ಠವಾದ ಪುಷ್ಪಕವಿಮಾನವನ್ನು, ದದರ್ಶ-ಕಂಡನು || ೮ || ಯತ್ರ - ಯಾವ ಪುಷ್ಪಕ ವಿಮಾನದಲ್ಲಿ, ಪರ್ವತರಾಜಿ - ಬೆಟ್ಟಗಳ ಸಾಲಿನಿಂದ, ಪೂರ್ಣಾ - ತುಂಬಿರುವ, ಮಹೀ - ಭೂಭಾಗವು, ಕೃತಾ - ಚಿತ್ರದಿಂದ ರಚಿಸಲ್ಪಟ್ಟಿದ್ದಿತೋ, ವೃಕ್ಷವಿತಾನ - ಮರಗಳ ಗುಂಪಿನಿಂದ, ಪೂರ್ಣಾಃ - ತುಂಬಿರುವ, ಶೈಲಾಃ - ಬೆಟ್ಟಗಳು, ಕೃತಾಃ - ಕೈವಾಡದಿಂದ ಕಲ್ಪಿಸಲ್ಪಟ್ಟದ್ದುವೋ, ಪುಷ್ಪವಿತಾನ - ಕುಸುಮ ಸಮೂಹದಿಂದ, ಪೂರ್ಣಾಃ - ಭರಿತವಾದ, ವೃಕ್ಷಾಃ - ತರುಗಳು, ಕೃತಾಃ - ಕೈಗಾರಿಕೆಯಿಂದ ಕಲ್ಪಿಸಲ್ಪಟ್ಟದ್ದುವೋ, ಪುಷ್ಪಂ - ಆ ಕುಸುಮ ಸಮೂಹವು, ಕೇಸರ - ಬಳಲೇಕುಗಳಿಂದಲೂ (ಕಿಂಜಲ್ಕ) ಪತ್ರ-ಚಿಗುರುಗಳಿಂದಲೂ, ಪೂರ್ಣಂ - ತುಂಬಿ ಇದ್ದಿತೋ ||೯|| (ಕಿಂಚ - ಮತ್ತು) ಪಾಂಡುರಾಣಿ - ಧವಳವರ್ಣವಾಗಿರುವ, ವೇಶ್ಮಾನಿಚ - ಕಿರುಮನೆಗಳೂ, ಕೃತಾನಿ - ನಿರ್ಮಿಸಲ್ಪಟ್ಟಿದ್ದುವೋ, ತಥಾ - ಹಾಗೆಯೇ, ಸುಪುಷ್ಪಾಣಿ - ಉತ್ತಮ ಕಮಲಾದಿ ಕುಸುಮ ಪೂರ್ಣವಾದ, ಪುಷ್ಕರಾಣ್ಯಪಿ- ಕೊಳಗಳೂ. ಕೃತಾನಿ- ಕಲ್ಪಿಸಲ್ಪಟ್ಟದ್ದುವೋ. ಪುನಶ್ಚ - ಮತ್ತು, ಪದ್ಮಾನಿ - ಆ ಕೊಳಗಳಲ್ಲಿನ ಕಮಲಗಳೂ, ಸಕೇಸರಾಣಿ - ಕಿಂಜಲ್ಕಗಳಿಂದೊಡಗೂಡಿದ್ದುವೋ, ತಥಾ - ಹಾಗೆಯೇ, ವನಾನಿ - ಉದ್ಯಾನಗಳೂ, ಚಿತ್ರಾಣಿ, ಚಿತ್ರಲಿಖಿತಗಳಾಗಿದ್ದರೂ, ಧನ್ಯಾನಿ - ಅಕಲ್ಪಿತಗಳಂತೆ ಶ್ರೇಷ್ಠವಾದವುಗಳಾಗಿ, ಕೃತಾನಿ - ಕಲ್ಪಿಸಲ್ಪಟ್ಟದ್ದುವೋ ||೧೦|| ರತ್ನಪ್ರಭಾಭಿಃ-ರತ್ನ ಕಾಂತಿಗಳಿಂದ, ವಿರಾಜಮಾನಂ-ರಾರಾಜಿಸುತಲಿರುವ, ವಿವರ್ಧಮಾನಂ

ಗೈರಿಕಧಾತುಗಳಿಂದ ಬೆಟ್ಟದ ತುದಿಯು ಹೇಗೆ ವಿಚಿತ್ರವಾಗಿರುತ್ತದೆಯೋ, ಚಂದ್ರ, ಗುರು ಶುಕ್ರಾಂಗಾರಕಾದಿ ಗ್ರಹಗಳಿಂದ ನಭೋಮಂಡಲವೆಂತು ವಿಚಿತ್ರವಾಗಿರುತ್ತದೆಯೋ, ಹಾಗೆ ಮೇಘಗಳನ್ನೇ ಜೋಡಿಸಿ ರಚಿಸಿ ಇದೆಯೋ ಎಂಬಂತೆ ಬಹು ರತ್ನಗಳಿಂದ ಚಿತ್ರಿಸಲ್ಪಟ್ಟಿರುವ ಪುಷ್ಪಕ ವಿಮಾನವನ್ನು ಪವಮಾನ ನಂದನನು ಅವಲೋಕಿಸಿದನು ||೮|| ಬಹು ಉನ್ನತವೂ, ಅತಿವಿಸ್ತಾರವೂ ಆಗಿರುವ ಆದಿವ್ಯಪುಷ್ಪಕ ವಿಮಾನದಲ್ಲಿ ಬಹುಜಾಣತನದ ಕೈವಾಡದಿಂದ ಬೆಟ್ಟಗಳ ಸಾಲನ್ನೂ, ಅದರಮೇಲೆ ವಿಶಾಲವಾದ ಭೂಭಾಗಗಳನ್ನೂ, ಒಂದುಕಡೆ ಮರಗಳ ಗುಂಪಿನಿಂದೊಡಗೂಡಿದ ಶೈಲಗಳನ್ನೂ, ಪುಷ್ಪಸಮೂಹದಿಂದ ಸಹಿತವಾದ ವೃಕ್ಷಗಳನ್ನೂ, ಕಿಸಲಯಗಳಿಂದಲೂ, ಕೇಸರಗಳಿಂದಲೂ ಕೂಡಿರುವ ಪುಷ್ಪಗಳನ್ನೂ

ವೇಶ್ಮೋತ್ತಮಾನಾಮಪಿಚೋಚ್ಚಮಾನಂ ಮಹಾಕಪಿ ಸ್ತತ್ರ ಮಹಾವಿಮಾನಂ॥
ಕೃತಾಶ್ಚ ವೈಡೂರ್ಯಮಯಾ ವಿಹಂಗಾ ರೂಪ್ಯಪ್ರವಾಳೈಶ್ಚ ತಥಾ ವಿಹಂಗಾಃ।
ಚಿತ್ರಾಶ್ಚ ನಾನಾವಸುಭಿ ರ್ಭುಜಂಗಾ ಜಾತ್ಯಾನುರೂಪಾಸ್ತುರಗಾಶ್ಶುಭಾಂಗಾಃ ॥
ಪ್ರವಾಳ ಜಾಂಬೂನದ ಪುಷ್ಪಪಕ್ಷಾಃ ಸಲೀಲ ಮಾವರ್ಜಿತ ಜಿಂಹಪಕ್ಷಾಃ ।

---

ಉನ್ನತವಾಗುತಲೂ ಇರುವ, ವೇಶ್ಮೋತ್ತಮಾನಾಮಪಿ - ಉಪ್ಪರಿಗೆ ಮನೆಗಳಿಗಿಂತಲೂ, ಉಚ್ಚಮಾನಂ - ಬಹು ಉನ್ನತವೆನಿಸಿ ಇರುವ, ಪುಷ್ಪಾಹ್ವಯಂನಾಮ - ಪುಷ್ಪಕವಿಮಾನವೆಂದು ಹೆಸರುಳ್ಳುದಾಗಿ ಪ್ರಸಿದ್ಧಿಯನ್ನು ಪಡೆದಿರುವ, ಮಹಾವಿಮಾನಂ - ಉತ್ತಮೋತ್ತಮವಾದ ವಿಮಾನವನ್ನು, ಮಹಾಕಪಿಃ - ಶ್ರೀಮದಾಂಜನೇಯನು, ದದರ್ಶ - ನೋಡಿದನು ॥೧೧॥ ಯತ್ರ - ಯಾವ ವಿಮಾನದಲ್ಲಿ, ವೈಡೂರ್ಯಮಯಾಃ - ವೈಡೂರ್ಯ ಮಣಿಗಳನ್ನೇ ಕೆತ್ತಿರುವ, ವಿಹಂಗಾಃ - ಪಕ್ಷಿಗಳೂ, ರೂಪ್ಯಪ್ರವಾಳೈಶ್ಚ - ಬೆಳ್ಳಿ ಮತ್ತು ಹವಳಗಳಿಂದಲೂ, ತಥಾ - ಹಾಗೆಯೇ, ವಿಹಂಗಾಃ - ವಿಚಿತ್ರವಾದ ಹಕ್ಕಿಗಳೂ, ನಾನಾವಸುಭಿಃ- ಬಗೆಬಗೆಯ ಲೋಹಗಳಿಂದ, ಚಿತ್ರಾಃ - ವಿಚಿತ್ರಗಳಾದ, ಭುಜಂಗಾಃ - ಸರ್ಪಗಳೂ, ಜಾತ್ಯಾ - ಜಾತಿಯೊಡನೆ (ಹುಟ್ಟುಣಿಕೆಯೊಡನೆ) ಅನುರೂಪಾಃ - ಅನುಗುಣಗಳಾದ, ಶುಭಾಂಗಾಃ - ಮಂಗಳಾಂಗಗಳಾದ, ತುರಗಾಃ - ಕುದುರೆಗಳೂ, ಕೃತಾಶ್ಚ - ಚಿತ್ರದಲ್ಲಿ ಕಲ್ಪಿಸಲ್ಪಟ್ಟಿದ್ದವೋ ॥೧೨॥ ಪ್ರವಾಳ - ಹವಳಗಳಿಂದಲೂ, ಜಾಂಬೂನದ - ಚಿನ್ನದಿಂದಲೂ, ಪುಷ್ಪಪಕ್ಷಾಃ - ಹೂಗಳಿಂದೊಡಗೂಡಿದ ರೆಕ್ಕೆಗಳುಳ್ಳವುಗಳಾಗಿಯೂ, ಸಲೀಲಂ - ವಿಲಾಸದೊಡನೆ, ಆವರ್ಜಿತ - ತಗ್ಗಿಸಿ ಬಗ್ಗಿಸಿಯೂ ಇರುವ, ಜಿಂಹ - ವಕ್ರವಾದ, ಪಕ್ಷಾಃ - ರೆಕ್ಕೆಪುಕ್ಕಗಳುಳ್ಳವುಗಳಾಗಿಯೂ, ಕಾಮಸ್ಯ - ಮನ್ಮಥನಿಗೆ (ಕಾಮೋದ್ರೇಕಕ್ಕೆ) ಸಾಕ್ಷಾತ್- ಪ್ರತ್ಯಕ್ಷವಾಗಿ, ಪಕ್ಷಾಇವ - ಸಹಾಯಗಳಾಗಿವೆಯೋ ಎಂಬಂತೆ, ಸುಮುಖಾಃ - ಸುಂದರವಾದ ಮುಖ

---

ಚಿತ್ರದಲ್ಲಿ ಕಲ್ಪಿಸಿ ಇತ್ತು ॥೯॥ ಮತ್ತು ಸಾಲಾಗಿ ಬೆಳ್ಳಗಿರುವ ಕಿರುಮನೆಗಳನ್ನೂ ತಾವರೆಯೇ ಮೊದಲಾದ ಹೂಗಳಿಂದ ಬೆಳಗುವ ಕೊಳಗಳನ್ನೂ, ಕೇಸರಿಗಳಿಂದ ಪೂರ್ಣವಾದ ಕಮಲಗಳನ್ನೂ, ಬಹುಶ್ರೇಷ್ಠಗಳಾಗಿಯೂ, ವಿಚಿತ್ರತರಗಳಾಗಿಯೂ ಇರುವ ವನಗಳನ್ನೂ ಚಿತ್ರಿಸಿ ಇದ್ದಿತು. ॥೧೦॥ ಪುಷ್ಪಕವಿಮಾನವೆಂದು ಹೆಸರುವಾಸಿಯನ್ನು ಪಡೆದಿರುವುದೂ, ಕೆತ್ತಿರುವ ಬಗೆಬಗೆಯ ರತ್ನಗಳ ಪ್ರಭೆಯಿಂದ ಅತ್ಯುನ್ನತವಾಗಿರುವಂತೆ ಕಾಣಬರುತಲಿರುವುದೂ, ಉನ್ನತವಾದ ಉಪ್ಪರಿಗೆಗಳ ಮನೆಗಳಿಗಿಂತಲೂ ಉನ್ನತವಾದುದೂ ಆಗಿರುವ ಆ ಮಹಾ ವಿಮಾನವನ್ನು ಪವನಾತ್ಮಜನು ಕಂಡನು ॥೧೧॥ ಇಂತಹ ಆವಿಮಾನದೊಳಗೆ ವೈಡೂರ್ಯ ಮಣಿಗಳಿಂದಲೂ, ಬೆಳ್ಳಿಹವಳ ಮೊದಲಾದವುಗಳಿಂದಲೂ ವಿಚಿತ್ರತರಗಳಾಗಿ ಕಾಣಬರುವಂತೆ ಪಕ್ಷಿಗಳನ್ನು ಕೆತ್ತಿದ್ದರು. ಆಯಾಯ ಅವಯವಗಳಿಗೆ ಹೊಂದಿಕೆಯಾಗಿರುವಂತೆ ಬಗೆಬಗೆಯ ಲೋಹಗಳಿಂದ ಸರ್ಪಗಳನ್ನೂ, ಅದರ ಜಾತಿಗೆತಕ್ಕಹಾಗೆ ಇರುವಂತೆ ಅವಯವಗಳನ್ನೂ ಕಲ್ಪಿಸಿ ರಚಿಸಿ ಇರುವ ಉತ್ತಮಾಶ್ವಗಳನ್ನು ಕೆತ್ತಿ ಇದ್ದರು ॥೧೨॥ ಇನ್ನೊಂದು ಕಡೆಯಲ್ಲಿ - ಹವಳ, ಚಿನ್ನ ಇವುಗಳಿಂದ ಮೈಮೇಲೆ ಚಿತ್ರವಾದ ಹೂಗಳೂ, ಶರೀರದ ಆಯಾಯಭಾಗಕ್ಕೆ ಅನುಗುಣವಾಗಿ ಎತ್ತರ, ತಗ್ಗು, ಸಮ ಇತ್ಯಾದಿ ವಿಶೇಷ ಕಲ್ಪನೆಯಿಂದ ಡೊಂಕು ಡೊಂಕಾಗಿರುವ ರೆಕ್ಕೆ ಪುಕ್ಕ ಮುಂತಾದವುಗಳೂ, ಅಂದವಾದ ಮುಖಗಳೂ, ಸುಂದರವಾದ ಗರಿಗಳೂ ಉಳ್ಳವುಗಳಾಗಿ ರಚಿಸಲ್ಪಟ್ಟಿರುವ

ಕಾಮಸ್ಯ ಸಾಕ್ಷಾದಿವ ಭಾಂತಿ ಪಕ್ಷಾಃ ಕೃತಾ ವಿಹಂಗಾ ಸ್ಸುಮುಖಾ ಸ್ಸುಪಕ್ಷಾಃ॥
ನಿಯುಜ್ಯಮಾನಾ ಸ್ತು ಗಜಾ ಸ್ಸುಹಸ್ತಾ ಸ್ಸಕೇಸರಾ ಶ್ಚೋತ್ಪಲ ಪತ್ರಹಸ್ತಾಃ।
ಬಭೂವ ದೇವೀಚ ಕೃತಾ ಸುಹಸ್ತಾ ಲಕ್ಷ್ಮೀ ಸ್ತಥಾ ಪದ್ಮಿನಿ ಪದ್ಮಹಸ್ತಾ ॥೧೪॥
ಇತೀವ ತದ್ಗೃಹ ಮಭಿಗಮ್ಯ ಶೋಭನಂಸವಿಸ್ಮಯೋನಗಮಿವಚಾರುಶೋಭನಂ।
ಪುನಶ್ಚ ತತ್ಪರಮ ಸುಗಂಧಿ ಸುಂದರಂ ಹಿಮಾತ್ಯಯೇ ನಗಮಿವ ಚಾರುಕಂದರಂ ॥

---

ಗಳುಳ್ಳವುಗಳಾಗಿಯೂ, ಸುಪಕ್ಷಾಃ - ಅಂದವಾದ ರೆಕ್ಕೆಗಳುಳ್ಳವುಗಳಾಗಿಯೂ, ಕೃತಾಃ - ರಚಿಸಲ್ಪಟ್ಟಿರುವ, ವಿಹಂಗಾಃ - ಪಕ್ಷಿಗಳು, ಭಾತಿ - ಪ್ರಕಾಶಿಸುತಲಿದ್ದುವು ॥೧೩॥ ಯತ್ರ - ಯಾವ ವಿಮಾನದಲ್ಲಿ, ಉತ್ಪಲಪತ್ರಹಸ್ತಾಃ - ನೈದಿಲೆಯ ಎಲೆಗಳನ್ನು ಸೊಂಡಿಲಿನಲ್ಲಿ ಹಿಡಿದಿರತಕ್ಕವುಗಳಾಗಿ, ಪದ್ಮಿನಿ - ಕೆರೆಯೊಳಗೆ, ನಿಯುಜ್ಯಮಾನಾಃ - ಹೊಗುತಲಿರುವವುಗಳಾಗಿಯೂ, ಸುಹಸ್ತಾಃ - ಸುಂದರವಾದ ಸೊಂಡಿಲುಳ್ಳವುಗಳಾಗಿಯೂ, ಸಕೇಸರಾಃ -(ನೀರಿನಲ್ಲಿ ಮುಳುಗುವಾಗ ಹೂಪಿನೊಳಗಣ) ಕೇಸರಗಳಿಂದ ಸಹಿತವಾದವುಗಳಾಗಿಯೂ ಇರುವ, ಗಜಾಃ - ಆನೆಗಳು, ಕೃತಾಃ - ಚಿತ್ರಿಸಲ್ಪಟ್ಟದ್ದುವೊ, ತಥಾ - ಹಾಗೆಯೇ, ಪದ್ಮಹಸ್ತಾ - ತಾವರೆಯನ್ನು ಕರವಲ್ಲಿ ಪಿಡಿದಿರುವ, ಸುಹಸ್ತಾ - ಮಂಗಳಕರವಾದ ಪಾಣಿಯುಳ್ಳ, ಲಕ್ಷ್ಮೀಶ್ಚ - ಲಕ್ಷ್ಮೀದೇವಿಯೂ, ಕೃತಾ - ಚಿತ್ರಿಸಲ್ಪಟ್ಟವಳಾಗಿ, ಬಭೂವ - ಇದ್ದಳೋ,(ತತ್ - ಅಂತಹ ವಿಮಾನವನ್ನು, ದದರ್ಶ - ನೋಡಿದನು) ॥೧೪॥ ಇತೀವ - ಈ ಮೇಲೆ ಹೇಳಿದಂತೆ, ಶೋಭನಂ - ಮಂಗಳಕರವೆನಿಸಿದುದೂ, ನಗಮಿವ - ಪುಷ್ಪವೃಕ್ಷದಂತೆ, ಪರಮಸುಗಂಧಿ - ಅತ್ಯಂತ ಸುವಾಸನೆಯುಳ್ಳುದೂ, ಹಿಮಾತ್ಯಯೆ - ವಸಂತಸಮಯದಲ್ಲಿ, ಚಾರುಕಂದರಂ - ಅಂದವಾದ ಗವಿಯುಳ್ಳುದಾದಕಾರಣವೇ, ಚಾರುಶೋಭನಂ - ಅಂದವೂ ಶುಭಕರವೂ ಆಗಿರುವ, ನಗಮಿವ - ಬೆಟ್ಟದಂತೆ, ಸುಂದರಂ - ರಮಣೀಯವೆನಿಸಿರುವ, ತದ್ಗೃಹಂ - ಆ ರಾವಣಾಸುರನ ಮನೆಯನ್ನು, ಅಭಿಗಮ್ಯ - ಎಲ್ಲ ಕಡೆಗಳಲ್ಲಿಯೂ ಸುತ್ತಿ, ಪುನಶ್ಚ - ತಿರುಗಿ, ಸವಿಸ್ಮಯಃ - ಆಶ್ಚರ್ಯದಿಂದೊಡಗೂಡಿದವನು, (ಬಭೂವ-ಆದನು) ॥೧೫॥ ತತಃ- ಅನಂತರದಲ್ಲಿ,

---

ವಿಚಿತ್ರ ಪಕ್ಷಿಗಳು ಬಿಲ್ಲಾಳುತನದಿಂದ ಲೋಕವನ್ನು ಜಯಿಸಲಳಸುವ ಕಾಮನಿಗೆ ಸಂಪೂರ್ಣಸಹಾಯವಾಗಿರಲೆಂಬ ಎಣಿಕೆಯಿಂದ ಹೀಗೆ ಅಣಿಮಾಡಿಡಲ್ಪಟ್ಟವೆಯೋ ಎಂಬಂತೆ ಕಂಗೊಳಿಸುತಲಿದ್ದವು ॥೧೩॥ ಇದೂ ಅಲ್ಲದೆ - ಸರೋವರಗಳಲ್ಲಿ ಸ್ನಾನಾರ್ಥವಾಗಿ ಇಳಿಯುತ್ತಿರುವಹಾಗೂ, ಸುಂದರವಾದ ಸೊಂಡಿಲುಗಳುಳ್ಳವುಗಳಾಗಿಯೂ, ನೀರೊಳಗೆ ಮುಳುಗಿ ಮೇಲಕ್ಕೆ ಬರುವಾಗ ಆ ಶುಂಡಾದಂಡಗಳಿಗೆ ದಿವ್ಯಕೇಸರಗಳು ತಗಲಿ ಕೊಂಡಿರುವಹಾಗೂ, ಸೊಂಡಿಲುಗಳ ತುದಿಯಲ್ಲಿ ನೈದಿಲೆಯದಳಗಳು ಉಂಟಾಗಿರುವಂತೆಯೂ, ಚಿತ್ರಗೆಲಸದಲ್ಲಿ ಸಜ್ಜುಗೊಳಿಸಿ ಇದ್ದರು. ಇನ್ನೊಂದು ಪಕ್ಕದಲ್ಲಿ ಬಹು ಅಗಲವಾಗಿರುವಂತೆ ಒಂದು ಕೆರೆಯನ್ನೂ, ಅದರನಡುವೆ ಮಹಾಲಕ್ಷ್ಮಿಯನ್ನೂ, ಆ ಮಹಾದೇವಿಯ ದಿವ್ಯಹಸ್ತದಲ್ಲಿ ಮನೋಹರವಾದ ತಾವರೆಯನ್ನೂ ರಚಿಸಿ ಇದ್ದಿತು, ॥ ೧೪ ॥ ಇಂತುಅಪರಿಮಿತ ಮಹಿಮೆಯನ್ನುಪಡೆದು ಮಹೋಸ್ನತವಾದ ಪರ್ವತದಂತೆ ರಮಣೀಯವೂ ಶೋಭಾಯಮಾನವೂ ಆಗಿ, ತನ್ನಲ್ಲಿ ತುಂಬಿರುವ ವಿಚಿತ್ರ ಪುಷ್ಪ ಭರದ ಸುವಾಸನೆಯಿಂದ ಘಮಘಮಿಸುತ ವಸಂತರುತುವಿನಲ್ಲಿ ಅಂದವಾದ ಗುಹೆಗಳಿಂದೊಡಗೂಡಿದ ಮಹಾಪರ್ವತದಂತೆ ಪರಿಶೋಭಿಸುವ ಆ ಪುಷ್ಪಕ ವಿಮಾನದ ಬಳಿಯನ್ನು ಸೇರಿ, ಅದರ ಸುತ್ತಲೂ ಸಂಚರಿಸಿ,

ತತ ಸ್ಸತಾಂ ಕಪಿರಭಿಪತ್ಯ ಪೂಜಿತಾಂ ಚರನ್ಪುರೀಂ ದಶಮುಖ ಬಾಹುಪಾಲಿತಾಂ ।
ಅದೃಶ್ಯ ತಾಂ ಜನಕಸುತಾಂ ಸುಪೂಜಿತಾಂ ಸುದುಃಖಿತಃ ಪತಿಗುಣವೇಗನಿರ್ಜಿತಾಂ॥
ತತ ಸ್ತದಾ ಬಹುವಿಧ ಭಾವಿತಾತ್ಮನಃ ಕೃತಾತ್ಮನೋ ಜನಕಸುತಾ ಸುವರ್ತ್ಮನಃ ।
ಅಪಶ್ಯತೋ ಭವ ದತಿದುಃಖಿತಂ ಮನ ಸ್ಸುಚಕ್ಷುಷಃ ಪ್ರವಿಚರತೋ ಮಹಾತನಃ ॥

ಇತಿ ಶ್ರೀಮತ್ಸುಂದರಕಾಂಡೆ-ಸಪ್ತ ಮಸ್ಸರ್ಗಃ.

---

ಸಃ - ಆ, ಕಪಿಃ - ಆಂಜನೇಯನು, ಸುಪೂಜಿತಾಂ - ಸರ್ವರಿಂದಲೂ ಶ್ಲಾಘಿಸಲ್ಪಡುತಲಿರುವುದೂ, ದಶ ಮುಖ - ದಶಾನನನ, ಬಾಹು - ತೋಳು ಬಲದಿಂದ, ಪಾಲಿತಾಂ - ರಕ್ಷಿಸಲ್ಪಡುತಲಿರುವುದೂ ಆಗಿರುವ ತಾಂ - ಆ, ಪುರೀಂ - ಪಟ್ಟಣವನ್ನು, ಅಭಿಪತ್ಯ - ಒಳಹೊಕ್ಕು, ಚರ್ನ - ಅಲೆಯುತಲಿರುವವನಾಗಿ ಸುಪೂಜಿತಾಂ - ಸರ್ವರಿಂದ ಪೂಜಿಸಲ್ಪಟ್ಟವಳಾಗಿಯೂ, ಪತಿ - ಪ್ರಿಯವಲ್ಲಭನಾದ ಶ್ರೀರಾಮನ, ಗುಣ - ಕಲ್ಯಾಣ ಗುಣಗಳ, ವೇಗ - ವ್ಯಾಪ್ತಿಯಿಂದ, ನಿರ್ಜಿತಾಂ - ಜಯಿಸಲ್ಪಟ್ಟವಳಾಗಿಯೂ, (ರಾಮಾಧೀನ ಚಿತ್ತವುಳ್ಳ) ತಾಂ - ಆ, ಜನಕಸುತಾಂ - ಜನಕರಾಜ ಪುತ್ರಿಯನ್ನು, ಅದೃಶ್ಯ - ಕಾಣದೆಯೇ, ಸುದುಃಖಿತಃ-ಬಹುದುಃಖವುಳ್ಳವನು (ಬಭೂವ-ಆದನು) ॥೧೬॥ (ಹೇಳಿದ ಸಂಗತಿಯನ್ನೇ ಪುನಃ ವಿವರಿಸುತ್ತಾನೆ) ತತಃ - ತರುವಾಯು, ಬಹುವಿಧ - ಅನೇಕ ವಿಧವಾಗಿ, ಭಾವಿತ - ಚಿಂತಿಸಲ್ಪಟ್ಟ, ಆತ್ಮನಃ - ಮನಸ್ಸುಳ್ಳವನಾದರೂ, ಕೃತಾತ್ಮನಃ - ಶಿಕ್ಷಿತ ಬುದ್ಧಿಯುಳ್ಳವನಾದರೂ, ಸುವರ್ತ್ಮನಃ - ನೀತಿಮಾರ್ಗವುಳ್ಳವನಾದರೂ, ಸುಚಕ್ಷುಷಃ - ದೂರದೃಷ್ಟಿಯುಳ್ಳವನಾದರೂ (ಮುಂದಾಲೋಚನೆಯುಳ್ಳವನಾದರೂ) ಪ್ರವಿಚರತಃ - ಎಲ್ಲಕಡೆಗಳಲ್ಲಿಯೂ ಹುಡುಕುತ ತಿರುಗುತ್ತಿರುವವನಾದರೂ, ಜನಕಸುತಾಂ - ಸೀತಾದೇವಿಯನ್ನು, ಅಪಶ್ಯತಃ - ಕಾಣದಿರುವ, ಮಹಾತ್ಮನಃ - ಮಹಾನುಭಾವನಾದ ಆಂಜನೇಯನ, ಮನಃ - ಮನಸ್ಸು, ಅತಿದುಃಖಿತಂ - ಬಹು ಸಂಕಟವುಳ್ಳುದು, ಅಭವತ್ - ಆಯಿತು ॥೧೭॥

—ಇಂತು ರಸಾಯನ ಟೀಕೆಯಿಂದೊಡಗೂಡಿದ ಶ್ರೀಮದ್ವಾಲ್ಮೀಕಿ ರಾಮಾಯಣದ—

—ಸುನ್ದರ ಕಾಣ್ಡದಲ್ಲಿ ಏಳನೆಯ ಸರ್ಗವು—

ಶ್ರೀರಾಮಚನ್ದ್ರಾರ್ಪಣಂ.

---

ಲಂಕಾಧಿಪತಿಯ ಬಾಹುಬಲದಿಂದ ಪಾಲಿಸಲ್ಪಡುತಲಿರುವ ಆ ನಗರಿಯೊಳಗೆ ಎಲ್ಲಿ ಸಂಚರಿಸಿದರೂ ಶ್ರೀರಾಮಚಂದ್ರನ ಕಲ್ಯಾಣಗುಣಗಳ ಪಾಶದಿಂದ ಬದ್ಧಳಾಗಿ ಜನಕಮಹಾರಾಜನ ನಂದಿನಿಯಾಗಿರುವ ಪೂಜ್ಯಳಾದ ಸೀತೆಯನ್ನು ಕಾಣದೆ, ಮಾರುತಿಯು ಅಪಾರವಾದ ಕಳವಳಕ್ಕೆ ಈಡಾದನು ॥೧೬॥ ಏನಮಾಡತಕ್ಕದು ? ಪ್ರಾಭಂಜನಿಯು ಪಲತೆರನಾಗಿ ಚಿಂತಿಸಿದನು ಸುಶಿಕ್ಷಣದ ಬುದ್ಧಿಯುಳ್ಳವನು, ರಾಜನೀತಿಯನ್ನು ಚೆನ್ನಾಗಿ ಪರಿಶೀಲಿಸಿ ಇರತಕ್ಕವನು, ಬಹುದೂರ ದೃಷ್ಟಿಯುಳ್ಳವನು, ಹೆಚ್ಚಿಗೆಯಿಂದೇನು? ಸರ್ವಾಂಶದಲ್ಲಿಯೂ ಮಹಾಸಮರ್ಥ. ಆದರೇನು ? ಎಲ್ಲಿ ಅಲೆದರೂ ಮನದ ಕೋರಿಕೆಯಾದ ಸೀತಾ ಸಂದರ್ಶನವು ಮಾತ್ರ ಲಭಿಸಲಿಲ್ಲ. ದೂತಕೃತ್ಯವು ನೆರವೇರುವ ಸಮಯವು ಒದಗಲಿಲ್ಲ. ಮನಸ್ಸಿಗೆ ಬಲು ಆತಂಕ ಹತ್ತಿತು. ಪೇಚಾಟಕ್ಕೆ ಪಾರವಿಲ್ಲದಂತಾಯಿತು. ಬಹು ವ್ಯಥೆಗೆ ಒಳಗಾಗಿ ದುಃಖಪಡುತ್ತಿದ್ದನು ॥೧೭॥

— ಇಂತು ಏಳನೆಯ ಸರ್ಗಂ —

ಶ್ರೀಃ

ಶ್ರೀ ರಾಮಚನ್ದ್ರ ಪರಬ್ರಹ್ಮಣೇನಮಃ.

## — ಅಷ್ಟಮಸ್ಸರ್ಗಃ —



ಸ ತಸ್ಯ ಮಧ್ಯೇ ಭವನಸ್ಯ ಸಂಸ್ಥಿತಂ ಮಹದ್ವಿಮಾನಂ ಮಣಿವಜ್ರಚಿತ್ರಿತಂ ।
ಪ್ರತಪ್ತ ಜಾಂಬೂನದ ಜಾಲಕೃತ್ರಿಮಂ ದದರ್ಶ ವೀರಃ ಪವನಾತ್ಮಜಃ ಕಪಿಃ ॥೧॥
ತದಪ್ರಮೇಯಾ ಪ್ರತಿಕಾರ ಕೃತ್ರಿಮಂ ಕೃತಂ ಸ್ವಯಂ ಸಾಧ್ವಿತಿ ವಿಶ್ವಕರ್ಮಣಾ ।

---

ಶ್ರೀಃ

—ಶ್ರೀಮನ್ಮೈಥಿಲೀ ಮನೋಹರಾಯನಮಃ —

— ಅಷ್ಟಮಸ್ಸರ್ಗಃ —

(ಪುನಃ ಪುಷ್ಪಕ ವಿಮಾನವನ್ನು ಪ್ರಶಂಸಿಸುತ್ತಾನೆ) ವೀರಃ-ಪರಾಕ್ರಮಶಾಲಿಯೂ, ಪವನಾತ್ಮಜಃ-ವಾಯುಪುತ್ರನೂ ಆಗಿರುವ, ಸಃ - ಆ ಆಂಜನೇಯನು, ತಸ್ಯ - ಆ, ಭವನಸ್ಯ - ರಾವಣನ ಮಂದಿರದ, ಮಧ್ಯೆ - ನಟ್ಟನಡುವೆ, ಸಂಸ್ಥಿತಂ - ನೆಲೆಗೊಂಡಿರುವ, ಬಹುರತ್ನ (ಮಣಿವಜ್ರ) ಚಿತ್ರಿತಂ - ವಜ್ರಗೋಮೇಧಿಕಾದಿ ದಿವ್ಯ ರತ್ನಗಳಿಂದಲಂಕರಿಸಲ್ಪಟ್ಟುದೂ, ಪ್ರತಪ್ತ - ಚೆನ್ನಾಗಿ ಪುಟವಿಟ್ಟು ಶೋಧಿಸಿ ಇರುವ, ಜಾಂಬೂನದ - ಸುವರ್ಣದಿಂದ ರಚಿಸಿ ಇರುವ, ಜಾಲ - ಕಿಟಕಿಗಳ, ಕೃತ್ರಿಮಂ - ರಚನೆಯುಳ್ಳುದೂ ಆಗಿರುವ, ಮಹತ್ - ಅತ್ಯುತ್ಕೃಷ್ಟವಾದ, ವಿಮಾನಂ - ಪುಷ್ಪಕ ವಿಮಾನವನ್ನು, ದದರ್ಶ - ನೋಡಿದನು ॥೧॥ ಅಪ್ರಮೇಯ - ಅಳತೆಗೊಳಗಾಗದ, ಅಪ್ರತಿಕಾರ - ಎಣೆಯಿಲ್ಲದ, ಕೃತ್ರಿಮಂ - ನಿರ್ಮಾಣ ಚಾತುರ್ಯವುಳ್ಳುದೂ, ದಿವಂಗತಂ - ಆಕಾಶಗಮನವುಳ್ಳುದೂ (ಆಕಾಶದಂತೆ ವಿಸ್ತಾರವಾದುದೂ) ವಾಯುಪಥಪ್ರತಿಷ್ಠಿತಂ - ವಾಯು ಮಾರ್ಗದಲ್ಲಿ ನೆಲೆಗೊಂಡಿರುವುದೂ, (ಭೂಸಂಬಂಧವಿಲ್ಲದುದೂ) ಆಗಿರುವ,

---

—ಶ್ರೀಮತೇ ರಾಘವೇಂದ್ರಾಯನಮಃ.—

## — ಎಂಟನೆಯ ಸರ್ಗಂ —

ಅಂತು ಚಿಂತಾಕುಲನಾದ ಆಂಜನೇಯನು ಆ ದಿವ್ಯಪುಷ್ಪಕವಿಮಾನವನ್ನು ಕಂಡನಷ್ಟೆ ? ಆ ವಿಮಾನವು ಮತ್ತು ಹೇಗೆ ಇತ್ತೆಂದರೆ—ಹೀಗೆ ಇರುವುದೆಂದು ಬಣ್ಣಿಸಲಳವಲ್ಲದಾಗಿದ್ದಿತು. ಅದರ ಆಕಾರವನ್ನು ಹೋಲಿಸಿ ಹೇಳಲಾಗದ ರಚನೆಯುಳ್ಳುದಾಗಿದ್ದಿತು. ವಿಶ್ವಕರ್ಮನು ಇದಕ್ಕೆ ಸಮಾನವಾದ ವಿಮಾನವಿನ್ನಿಲ್ಲೆಂದು ಲೋಕದ ಜನರೆಲ್ಲರು ಹೇಳಬೇಕು ಎಂದು ತಾನೇ ತನ್ನ ಮನಸಾರ ಸರ್ವಶಕ್ತಿಯನ್ನೂ ವಿನಿಯೋಗಿಸಿ ಕಲ್ಪಿಸಿದ್ದನು. ಅದು ಆಕಾಶಗಮನಸಾಮರ್ಥ್ಯವನ್ನುಪಡೆದಿದ್ದಿತು. ವಾಯುಮಾರ್ಗದಲ್ಲಿ ನೆಲೆಗೊಂಡಿದ್ದಿತು. ಆದುದರಿಂದಲೇ ನಭೋಮಂಡಲದಲ್ಲಿ ಸೂರ್ಯನು ಸಂಚರಿಸುವ ಮಾರ್ಗವನ್ನು ಸೂಚಿಸುತಲಿದೆಯೋ

ದಿವಂ ಗತಂ ವಾಯುಪಥ ಪ್ರತಿಷ್ಠಿತಂ ವ್ಯರಾಜತಾದಿತ್ಯ ಪಥಸ್ಯ ಲಕ್ಷ್ಮವತ್ ॥೨॥
ನ ತತ್ರ ಕಿಂಚಿ ನ್ನಕೃತಂ ಪ್ರಯತ್ನತೋ ನ ತತ್ರ ಕಿಂಚಿನ್ನಮಹಾರ್ಹ ರತ್ನವತ್ ।
ನ ತೇ ವಿಶೇಷಾ ನಿಯತಾ ಸ್ಸುರೇಷ್ವಪಿ ನ ತತ್ರ ಕಿಂಚಿ ನ್ನ ಮಹಾವಿಶೇಷವತ್ ॥
ತಪ ಸ್ಸಮಾಧಾನ ಪರಾಕ್ರಮಾರ್ಜಿತಂ ಮನಸ್ಸಮಾಧಾನ ವಿಚಾರಚಾರಿಣಂ ।
ಅನೇಕ ಸಂಸ್ಥಾನ ವಿಶೇಷನಿರ್ಮಿತಂ ತತ ಸ್ತತ ಸ್ತುಲ್ಯವಿಶೇಷದರ್ಶನಂ ॥೪॥

ತತ್ - ಆ ಪುಷ್ಪಕ ವಿಮಾನವು, ಆದಿತ್ಯಪಥಸ್ಯ- ಸೂರ್ಯನ ಮಾರ್ಗಕ್ಕೆ, ಲಕ್ಷ್ಮವತ್-ಗುರುತಾಗಿದೆಯೋ ಎಂಬಂತೆ, ವ್ಯರಾಜತ - ಪ್ರಕಾಶಿಸುತಲಿತ್ತು ॥೨॥ ತತ್ರ - ಆ ವಿಮಾನದಲ್ಲಿ, ಕಿಂಚಿತ್ - ಸ್ವಲ್ಪವೂ, ಪ್ರಯತ್ನತಃ - ಪುರುಷ ಪ್ರಯತ್ನದಿಂದ, ನಕೃತಂ - ಮಾಡಲ್ಪಡದಿರುವುದು, ನ - ಇಲ್ಲವು, ತತ್ರ - ಆ ವಿಮಾನದೊಳಗೆ, ಕಿಂಚಿತ್ - ಕಿಂಚಿತ್ತಾದರೂ, ನಮಹಾರ್ಹರತ್ನವತ್-ಹೆಚ್ಚಿದ ಬೆಲೆಯುಳ್ಳುದುದಲ್ಲವೆಂಬುದು, ನ - ಇರಲೇ ಇಲ್ಲ, ತೆ - ಅಲ್ಲಿನ, ವಿಶೇಷಾಃ - ಚಿತ್ರದ ಅತಿಶಯಗಳು, ಸುರೇಷ್ವಪಿ - ದೇವತೆಗಳ ವಿಮಾನಗಳಲ್ಲಿಯೂ, ನನಿಯತಾಃ - ಕಲ್ಪಿಸಲ್ಪಟ್ಟಿರಲಿಲ್ಲವು, ತತ್ರ - ಆ ದಿವ್ಯ ವಿಮಾನದಲ್ಲಿ, ನಮಹಾವಿಶೇಷವತ್ - ವಿಚಿತ್ರವಾದ ಕೈಗಾರಿಕೆ ಯಿಲ್ಲವೆಂಬುದೂ, ನ - ಇಲ್ಲವು ॥೩॥ ತಪಸ್ಸಮಾಧಾನ - ಉತ್ತಮವಾದ ತಪಸ್ಸಿನ ಆಚರಣೆಯಿಂದಲೂ, ಪರಾಕ್ರಮ - ಶೌರ್ಯಾತಿಶಯದಿಂದಲೂ, ಆರ್ಜಿತಂ - ಸಂಪಾದಿಸಲ್ಪಟ್ಟುದಾಗಿಯೂ, ಮನಸ್ಸಮಾಧಾನ - ಮನೋನಿಶ್ಚಯದಿಂದ, ವಿಚಾರ - ಹೋಗಬೇಕಾದ ಸ್ಥಲದಲ್ಲಿ, ಚಾರಿಣಂ - ಸಂಚಾರವುಳ್ಳುದಾಗಿಯೂ, ಅನೇಕಸಂಸ್ಥಾನ - ನಾನಾ ತರಹೆಯಾದ, ವಿಶೇಷ - ಚಿತ್ರಕಲ್ಪನಾತಿಶಯಂಗಳಿಂದ, ನಿರ್ಮಿತಂ - ಕಲ್ಪಿಸಲ್ಪಟ್ಟುದಾಗಿಯೂ, ತತಸ್ತತಃ - ಅಲ್ಲಲ್ಲಿ, ತುಲ್ಯ - ಸಮಾನವಾದ, ವಿಶೇಷ - ಅತಿಶಯಗಳ, ದರ್ಶನಂ - ನೋಟವುಳ್ಳುದಾಗಿಯೂ, ॥೪॥ ತು - ಮತ್ತು, ಮನಃ - ಯಜಮಾನನ

ಎಂಬಂತೆ ಬೆಳಗುತಲಿದ್ದಿತು ॥೨॥ ಪವಮಾನತನೂಭವನಾದ ವಾನರವೀರನು ಯಾವಿನೀಚರ ಚಕ್ರವರ್ತಿಯಾದ ರಾವಣನ ಅರಮನೆಯ ನಡುವೆ ನೆಲೆಗೊಂಡು ವಜ್ರವೈಡೂರ್ಯಾದಿದಿವ್ಯರತ್ನಗಳಿಂದ ಅಲಂಕರಿಸಲ್ಪಟ್ಟು, ಪುಟಪಾಕಶೋಧಿತವಾಗಿರುವ ದಿವ್ಯಸುವರ್ಣಮಯವಾದ ಕಿಟಕಿಗಳಿಂದ ಬಹು ಅಂದವಾಗಿಯೂ ಇರುವ ವಿಮಾನವನ್ನು ನೋಡಿದನು ॥೧॥ ಮತ್ತು ಆ ವಿಮಾನದೊಳಗೆ ಪ್ರಯತ್ನಪೂರ್ವಕವಾಗಿ ಇಂತಹ ಚಿತ್ರವು ಚಿತ್ರಿಸಿ ಇಲ್ಲ ಎಂದು ಯಾರುಹೇಳಲಿಕ್ಕೂ ತುಸವಾದರೂ ಅವಕಾಶವೇ ಇರಲಿಲ್ಲ. ಇಂತಹ ರತ್ನಗೆಲಸವನ್ನು ಇಲ್ಲಿ ರಚಿಸಿ ಇಲ್ಲ ಎಂದುಹೇಳಲು ಯಾರಿಗೂ ಬಾಯಿ ಬಾರದು. ಈ ಬಳಿ ಇಂತಹ ಕೈವಾಡವನ್ನು ತೋರಿಸಿ ಇದ್ದರೆ ಚೆನ್ನಾಗಿತ್ತು ಎಂಬದಾಗಿ ಯಾವನೂ ಹೇಳಬಾರದಂತೆ ಬೆಳಗುತಲಿದ್ದಿತು ॥೩॥ ರಣದಿಶಾಪಟ್ಟ ಮಲ್ಲನಾದ ರಾವಣನು ತನ್ನ ಅಪಾರವಾದ ತಪ್ರೋವಿಶೇಷದಿಂದಲೂ, ಬಾಹುಪರಾಕ್ರಮಾತಿಶಯದಿಂದಲೂ, ಆರ್ಜನೆಮಾಡಿದ ಶ್ರೇಷ್ಠವಸ್ತುಗಳೊಳಗೆ ಇದೇ ಮೊದಲನೆಯದು, ಮನದೊಳಗೆ ಇಂತಹ ಸ್ಥಳಕ್ಕೆ ತೆರಳಬೇಕೆಂದು ನೆನೆದರೆ ಆ ಕೂಡಲೇ ಇಂಗಿತವನ್ನು ತಿಳಿದು ನಿಮಿಷಮಾತ್ರದಲ್ಲಿ ಉದ್ದಿಷ್ಟವಾದ ಸ್ಥಳಕ್ಕೆ ತೆರಳುವ ಸ್ವಭಾವವುಳ್ಳುದು. ದೇವಲೋಕದಲ್ಲಿನ ವಿಮಾನಗಳೊಳಗೆ ಆವಾವುದರಲ್ಲಿ ಆವಾವ ಚಿತ್ರವಿಶೇಷಗಳವೆಯೋ ಅವುಗಳೆಲ್ಲವೂ ಇದರಲ್ಲಿ ನೆಲೆಗೊಂಡಿದ್ದುವು. ಈ ವಿಮಾನಕ್ಕೆ ಈ ವಿಮಾನವೇ ಸರಿ ಎಂದು ಹೇಳಬೇಕಾಗಿದ್ದಿತಲ್ಲದೆ ಇದಕ್ಕೆ ಇನ್ನೊಂದು ಸಮವಾದುದು ಇದೆಎಂದು

ಮನಸ್ಸಮಾಧಾಯತು ಶೀಘ್ರಗಾಮಿನಂ ದುರಾವರಂ ಮಾರುತ ತುಲ್ಯಗಾಮಿನಂ ।
ಮಹಾತ್ಮನಾಂಪುಣ್ಯಕೃತಾಂಮಹರ್ಧಿನಾಂಯಶಸ್ವಿನಾಮಗ್ರ್ಯಮುದಾಮಿವಾಲಯಂ॥
ವಿಶೇಷ ಮಾಲಂಬ್ಯ ವಿಶೇಷ ಸಂಸ್ಥಿತಂ ವಿಚಿತ್ರಕೂಟಂ ಬಹುಕೂಟ ಮಂಡಿತಂ ।
ಮನೋಭಿರಾಮಂ ಶರದಿಂದುನಿರ್ಮಲಂ ವಿಚಿತ್ರಕೂಟಂ ಶಿಖರಂ ಗಿರೇರ್ಯಥಾ ॥೬॥
ವಹಂತಿ ಯಂ ಕುಂಡಲಶೋಭಿತಾನನಾ ಮಹಾಶನಾ ವ್ಯೋಮಚರಾ ನಿಶಾಚರಾಃ ।

---

ಮನಸ್ಸನ್ನು, ಸಮಾಧಾಯ-ಅಿತುಕೊಂಡು, ಶೀಘ್ರಗಾಮಿನಂ-(ಅದಕ್ಕೆ ಅನುಸಾರವಾಗಿ) ಬೇಗನೆ ಹೋಗುವ ಸ್ವಭಾವವುಳ್ಳುದಾಗಿಯೂ, ಮಾರುತತುಲ್ಯಗಾಮಿನಂ- ವಾಯುವೇಗ ಸಮಾನ ವೇಗವುಳ್ಳುದಾಗಿಯೂ, ಮಹಾತ್ಮನಾಂ - ಮಹಾನುಭಾವರಾದ, ಪುಣ್ಯಕೃತಾಂ - ಸುಕೃತಶಾಲಿಗಳಾದ, ಮಹರ್ಧಿನಾಂ - ಮಹದೈಶ್ವರ್ಯಶಾಲಿಗಳಾದ, ಯಶಸ್ವಿನಾಂ - ಕೀರ್ತಿಸಂಪನ್ನರಾದ, ಅಗ್ರ್ಯಮುದಾಂ - (ಮನುಷ್ಯಾದಿಗಳಿಗಿಂತ) ಶ್ರೇಷ್ಠವಾದ ಸಂತೋಷವುಳ್ಳ, (ಅಧಿಕಾನಂದವುಳ್ಳ) ಇಂದ್ರಾದಿ ದೇವತೆಗಳ, ಆಲಯಮಿವ - ಮನೆಯಾದ ಸ್ವರ್ಗವೋ ಎಂಬಂತಿರುವುದಾಗಿಯೂ, ॥೫॥ ವಿಶೇಷಂ - ಚಿತ್ರಗೆಲಸದ ಭೇದವನ್ನು (ರತ್ನವಿಶೇಷವನ್ನು) ಸಮಾಲಂಬ್ಯ - ಆಶ್ರಯಿಸಿ, ವಿಶೇಷ ಸಂಸ್ಥಿತಂ - ಕೈಗಾರಿಕೆಯ ಬಳಭೇದಗಳನ್ನೊಳಗೊಂಡಿರುವುದಾಗಿಯೂ, ವಿಚಿತ್ರಕೂಟಂ - ವಿಚಿತ್ರಗಳೆನಿಸಿದ ಶಿಖರಗಳುಳ್ಳುದಾಗಿಯೂ, ಬಹುಕೂಟ - ಅನೇಕ ಕೋಡುಗಳಿಂದ, ಮಂಡಿತಂ - ಅಲಂಕರಿಸಲ್ಪಟ್ಟುದಾಗಿಯೂ, ಮನೋಭಿರಾಮಂ - ಮನೋಹರವೆನಿಸಿದುದಾಗಿಯೂ ಇರುವ, ಶರದಿಂದು - ಶರತ್ಕಾಲದ ಚಂದ್ರನಂತೆ, ನಿರ್ಮಲಂ - ನಿರ್ದೋಷವೆನಿಸಿದುದಾಗಿಯೂ, ವಿಚಿತ್ರಕೂಟಂ - ಆಶ್ಚರ್ಯಕರವೆನಿಸಿದ ಬಣ್ಣದ ಕೋಡುಗಳುಳ್ಳುದಾಗಿಯೂ, ಗಿರೇಃ - ಮಹಾಪರ್ವತದ, ಶಿಖರಂ ಯಥಾ - ಮುಖ್ಯ ಶಿಖರದಂತೆ ಉನ್ನತವೆನಿಸಿದುದಾಗಿಯೂ ಇರುವ ಪುಷ್ಪಕ ವಿಮಾನವನ್ನು, ದದರ್ಶ - ನೋಡಿದನು ॥೬॥ ಕುಂಡಲ - ರತ್ನಖಚಿತ ಕರ್ಣಾಭರಣಗಳಿಂದ, ಶೋಭಿತ - ಹೊಳೆಯುತಲಿರುವ, ಆನನಾಃ - ಮುಖಗಳುಳ್ಳ, ಮಹಾಶನಾಃ - ಉನ್ನತ ಶರೀರಗಳುಳ್ಳ, ವ್ಯೋಮಚರಾಃ - ಆಕಾಶ ಚಾರಿಗಳಾದ,

---

ಹೇಳಿಕೊಳ್ಳುವ ಹಾಗೆ ಇರಲಿಲ್ಲ ॥೪॥ ಇಂತಹ ಸ್ಥಾನಕ್ಕೆ ಹೋಗಬೇಕು ಎಂದು ನೆನೆಯುವ ಕ್ಷಣವೂ, ಕುರಿತ ತಾವನ್ನು ಹೋಗಿಸೇರುವ ಕ್ಷಣವೂ ಒಂದೇ ಆಗುತಿತ್ತಲ್ಲದೆ ಬೇರಾಗುತ್ತಿರಲಿಲ್ಲ. ವಾಯುವೇಗಕ್ಕಿಮ್ಮಡಿಯಾದ ಇದರ ಗಮನವೇಗದಲ್ಲಿ ಎಲ್ಲಿಯೂ ಯಾವುದೊಂದು ತಡೆಯೂ ಉಂಟಾಗುತಲಿರಲಿಲ್ಲ. ಅಪಾರವಾದ ಮಹತ್ವವನ್ನು ಪಡೆದು, ಮಹಾ ಸುಕೃತಶಾಲಿಗಳೆನಿಸಿ, ಎಣೆಯಿಲ್ಲದ ಏಳಿಗೆಯನ್ನು ಹೊಂದಿ, ಅಸದೃಶ ಕೀರ್ತಿಸಂಪನ್ನರಾಗಿಯೂ ಇರುವ ಮಹದಾನಂದಭರಿತರಾದ ಇಂದ್ರನೇ ಮೊದಲಾದ ದೇವತೆಗಳಿಗೆ ಮಂದಿರವಾಗಿರುವ ವೀರಸ್ವರ್ಗವೇ ಇದೋ ಎಂಬಂತೆ ಕಂಗೊಳಿಸುತಲಿದ್ದಿತು ॥೫॥ ಲೋಕದಲ್ಲಿನ ಚಿತ್ರಗಳಿಗೆಲ್ಲ ತನ್ನಲ್ಲಿ ಎಡೆಗೊಟ್ಟು ಸಮಸ್ತವಿಶೇಷಗಳಿಗೂ ತಾನೇ ಉದಾಹರಣೆಯಾಗುತಲಿತ್ತು. ವಿಚಿತ್ರವಾದಕೋಡುಗಳನ್ನುಳವಟ್ಟಿದ್ದಿತು ಆ ಕೋಡುಗಳ ಸಾಲುಬಹು ಚಲ್ವಿಕೆಯನ್ನಾಂತಿರ್ದುದು. ಶರತ್ಕಾಲದ ಚಂದಿರನಂತೆ ನಿರ್ಮಲವಾಗಿ ಶೋಭಿಸುತಲಿತ್ತು. ಬೆಟ್ಟದ ಉನ್ನತವಾದ ಶಿಖರದಂತೆ ಬಹುಮನೋಹರವಾಗಿ ವಿರಾಜಿಸುತಲಿದ್ದುದು ॥೬॥ ಆ ಮಹಾವಿಮಾನದ ಮೂಲಭಾಗದಲ್ಲಿ ದಿವ್ಯರತ್ನ ಖಚಿತವಾದ ಕರ್ಣಾಭರಣಗಳಿಂದ ಥಳಥಳಾಯಮಾನವಾದ ಮುಖಸೌಂದರ್ಯವುಳ್ಳುವೂ, ಮಹೋನ್ನತಶರೀರಗಳುಳ್ಳುವೂ ನಭೋ

ವಿವೃತ್ತ ವಿಧ್ವಸ್ತ ವಿಶಾಲಲೋಚನಾ ಮಹಾಜವಾ ಭೂತಗಣಾಸ್ಸಹಸ್ರಶಃ ॥೭॥
ವಸಂತ ಪುಷ್ಪೋತ್ಕರ ಚಾರುದರ್ಶನಂ ವಸಂತಮಾಸಾದಪಿ ಕಾಂತದರ್ಶನಂ ।
ಸ ಪುಷ್ಪಕಂ ತತ್ರ ವಿಮಾನ ಮುತ್ತಮಂ ದದರ್ಶ ತದ್ವಾನರ ವೀರಸತ್ತಮಃ ॥೮॥
ಇತಿ ಶ್ರೀಮತ್ಸುಂದರಕಾಂಡೆ-ಅಷ್ಟಮಸ್ಸರ್ಗಃ.

ನಿಶಾಚರಾಃ - ರಾಕ್ಷಸರಂತಿರುವ, ವಿವೃತ್ತ - ವಿಶೇಷ ಗುಂಡಾಗಿಯೂ, ವಿಧ್ವಸ್ತ - ಹಳ್ಳವಾಗಿಯೂ ಇರುವ, ವಿಶಾಲಲೋಚನಾಃ - ಅಗಲವಾದ ಕಣ್ಣುಗಳುಳ್ಳ, ಮಹಾಜವಾಃ - ಬಹುವೇಗವುಳ್ಳವುಗಳಂತಿರುವ, ಸಹಸ್ರಶಃ - ಸಾವಿರಾರು, ಭೂತಗಣಾಃ - ಭೂತ ಸಮೂಹದಂತಿರುವ ಪ್ರತಿಮೆಗಳು, ಯಂ - ಯಾವ ದಿವ್ಯ ವಿಮಾನವನ್ನು ; § ವಹಂತಿ - ಹೊರುತಲಿವೆಯೋ (ಹೊರುವಂತೆ ಕೆತ್ತಲ್ಪಟ್ಟವೆಯೋ) ॥೭॥ ವಾನರ ವೀರಸತ್ತಮಃ - ಕಪಿಶೂರಾಗ್ರಗಣ್ಯನಾದ, ಸಃ - ಆ ಮಾರುತಿಯು, ತತ್ರ - ಆ ಲಂಕೆಯೊಳಗೆ, ವಸಂತ- ಚೈತ್ರ ವೈಶಾಖ ಮಾಸಗಳಲ್ಲಿನ, ಪುಷ್ಪ - ಕುಸುಮಗಳ, ಉತ್ಕರ - ಸಮೂಹದಂತೆ, ಚಾರು - ಬಲು ಅಂದವಾಗಿ, ದರ್ಶನಂ - ಕಾಣಬರುತಲಿರುವ, ವಸಂತಮಾಸಾದಪಿ - ಚೈತ್ರ ವೈಶಾಖ ಮಾಸಕ್ಕಿಂತಲೂ, ಕಾಂತ - ರಮಣೀಯವಾಗಿ, ದರ್ಶನಂ - ಹೊಳೆಯುತಲಿರುವ, ಉತ್ತಮಂ - ಶ್ರೇಷ್ಠವೆನಿಸಿದ, ತತ್ - ಆ, ಪುಷ್ಪಕಂವಿಮಾನಂ - ಪುಷ್ಪಕ ವಿಮಾನವನ್ನು, ದದರ್ಶ ನೋಡಿದನು ॥೮॥

—ಇಂತು ರಸಾಯನ ಟೀಕಾಸಹಿತ ಶ್ರೀಮದ್ವಾಲ್ಮೀಕಿ ರಾಮಾಯಣದ—
—ಸುನ್ದರಕಾಣ್ಡದಲ್ಲಿ ಎಂಟನೆಯ ಸರ್ಗವು—
—ಶ್ರೀರಾಮಚನ್ದ್ರಾರ್ಪಣಂ—

ಗಮನಕ್ಕೆ ಅಣಿಯಾಗಿರುವುವೋ ಎಂಬಂತೆ ಕಾಣಬರುವುವೂ, ಕೆಲವೆಡೆ ರಾತ್ರಿಂಚರರಂತೆ ಮಹಾಭಯಂಕರಗಳೂ, ಸುತ್ತಲೂ ಗುಂಡಾಗಿಯೂ ನಡುವೆ ಹಳ್ಳವಾಗಿಯೂ, ಬಹು ವಿಸ್ತಾರವಾಗಿಯೂ ಇರುವ ಕಣ್ಣುಗಳಿಂದೊಡಗೂಡಿರುವುವೂ, ಮಹಾವೇಗಸಂಪನ್ನಗಳಂತೆ ಕಾಣಬರುವುವೂ ಆಗಿರುವ ಮಹಾಭೂತಗಳಂತೆ ಸಾವಿರಾರು ಪ್ರತಿಮೆಗಳು ಸುತ್ತಲೂ ವಿಚಿತ್ರ ವೈಭವದಿಂದ ಕಾಣಬರುತ್ತಿದ್ದುವು ॥ ೭ ॥ ಮತ್ತು ಆ ಪುಷ್ಪಕವಿಮಾನವು ವಸಂತಸಮಯದಲ್ಲಿ ಪುಷ್ಪವಾಟಿಯೊಳಗೆ ಎತ್ತರವಾಗಿ ಸುರಿದಿರುವ ಪುಷ್ಪರಾಶಿಯಂತೆ ಸುಂದರವಾಗಿ ಕಾಣಬರುತಲಿತ್ತು. ವಸಂತಮಾಸದ ದಿವಸವುಬೆಳಗುವಂತೆ ಕಂಗೊಳಿಸುತಲಿದ್ದಿತು. ದಿವ್ಯವಿಮಾನವೆಂದು ಹೆಸರನ್ನು ಪಡೆದಿರುವ ವಿಮಾನಗಳೊಳಗೆಲ್ಲ ಇದೇಉತ್ತಮೋತ್ತಮವಾದುದು ಎಂಬ ಖ್ಯಾತಿಗೆ ಈಡಾಗಿರುವ ಪುಷ್ಪಕ ವಿಮಾನವನ್ನು ವಾನರವೀರನಾದ ಮಾರುತಿಯು ಮನವಾರ ನೋಡುತಿದ್ದನು ॥೮॥

— ಇಂತು ಎಂಟನೆಯ ಸರ್ಗವು. —

§ "ವಹಂತಿ" ಎಂಬೀ ಶ್ಲೋಕದಲ್ಲಿ—ರಾಕ್ಷಸರು ವಿಮಾನವನ್ನು ಹೊರುತ್ತಾರೆಎಂಬ ಅರ್ಥವು ತೋರುತ್ತದೆ. ಆ ಪುಷ್ಪಕವು ಇಚ್ಛಾನುಸಾರವಾಗಿ ಆಕಾಶ ಗಮನವುಳ್ಳುದುಎಂಬುದಕ್ಕೆ ವಿರೋಧಿಸುತ್ತದೆ. ವಹಂತಿ, ಎಂಬುದಕ್ಕೆ ರಕ್ಷಿಸುತ್ತಾರೆ ಎಂದು ಅರ್ಥವನ್ನು ಹೇಳುವುದೂ ಸಮಂಜಸವಲ್ಲ, ಏಕೆಂದರೆ - ಗೃಹಮಧ್ಯದಲ್ಲಿರುವುದಕ್ಕೆ ಬೇರೆ ರಕ್ಷಣೆಯು ಅವಶ್ಯಕವಿಲ್ಲ. ಆದುದರಿಂದ ಇಲ್ಲಿ ಸಮಾಧಾನವನ್ನು ವಿದ್ವಾಸರು ಚಿಂತಿಸಬೇಕು. ಎಂದು ವಿರೋಧವನ್ನು ಸೂಚಿಸಿ ಈ ಶ್ಲೋಕವು ಪ್ರಕ್ಷಿಪ್ತವೆಂಬರ್ಥವನ್ನು ಶ್ರೀಕಾಂತಾನುಜೀಯವ್ಯಾಖ್ಯಾನವು ಸೂಚಿಸುತ್ತಿದೆ. ಮೇಲೆ ವಿವರಿಸಿರುವುದು ಮ॥ ತೀ.

श्रीः

श्रीरामचन्द्र परब्रह्मणेनमः

— नवमस्सर्गः —

तस्यालय वरिष्ठस्य मध्ये विपुल मायतम् ।
ददर्श भवनश्रेष्ठं हनूमा न्मारुतात्मजः ॥१॥
अर्धयोजन विस्तीर्ण मायतं योजनं हि तत् ।
भवनं राक्षसेन्द्रस्य बहुप्रासाद सङ्कुलम् ॥२॥
मार्गमाणस्तु वैदेहीं सीता मायत लोचनाम् ।

---

ಶ್ರೀಃ

—ಶ್ರೀಮಜ್ಜನಕನಂದಿನೀ ಮನೋಹರಾಯನಮಃ—

—ನವಮಸ್ಸರ್ಗಃ—

ಕಂದ॥ ಅರಮನೆಯ ನಂತಪುರವಂ । ವರಪುಷ್ಪಕ ಮೆನಿಪ ದಿವ್ಯಯಾನವನುಂ ಹರಿ ।
ಪರಿಪರಿವಿಧದಿಂ ಪರಿಕಿಸಿ । ಧರೆಯುಣುಗಿಯ ಕಾಣದಲ್ತೆ ಚಿಂತೆಯೊಳಿಳಿದಂ ॥

ಮಾರುತಾತ್ಮಜಃ - ವಾಯುಕುಮಾರನಾದ, ಹನುಮಾನ್ - ಆಂಜನೇಯನು, ತಸ್ಯ - ಆ, (ಆರಾವಣಾಸುರನ) ಆಲಯವರಿಷ್ಠಸ್ಯ - ಶ್ರೇಷ್ಠವಾದ ಮನೆಯ (ಸ್ವಂತಮಂದಿರದ) ಮಧ್ಯೆ - ನಡುವೆ, ವಿಪುಲಂ - ವಿಸ್ತಾರವಾದ, ಆಯತಂ - ಎತ್ತರವಾದ, ಭವನಶ್ರೇಷ್ಠಂ - ಉತ್ತಮ ಸದನದಂತಿರುವ ಪುಷ್ಪಕ ವಿಮಾನವನ್ನು, ದದರ್ಶ - ನೋಡಿದನು. ಅಥವಾ - ತಸ್ಯ - ಆ, ಆಲಯವರಿಷ್ಠಸ್ಯ - ಶ್ರೇಷ್ಠವಾದ ಮಂದಿರದಂತಿರುವ ಪುಷ್ಪಕ ವಿಮಾನದ, ಮಧ್ಯೆ - ಮಧ್ಯಭಾಗದಲ್ಲಿ, ವಿಪುಲಂ - ದೊಡ್ಡದಾದ, ಆಯತಂ - ವಿಸ್ತಾರವಾದ, ಭವನಶ್ರೇಷ್ಠಂ - ಉತ್ತಮವಾದ ಗೃಹವನ್ನು, ದದರ್ಶ - ನೋಡಿದನು ॥ ೧ ॥ ಅರ್ಧಯೋಜನವಿಸ್ತೀರ್ಣಂ - ಅರೆಗಾವುದದ ಅಗಲವಾಗಿಯೂ, ಯೋಜನಂ - ಒಂದು ಗಾವುದದಷ್ಟು, ಆಯತಂ - ನೀಳವಾದುದಾಗಿಯೂ, ಬಹು - ಅನೇಕವಾದ, ಪ್ರಾಸಾದ - ದೇವತೆಗಳ ಮತ್ತು ಪ್ರಭುಗಳ ಮಂದಿರಗಳಿಂದ, ಸಂಕುಲಂ - ನಿಬಿಡವಾಗಿರುವ, ತತ್- ಆ ಪುಷ್ಪಕ ವಿಮಾನದ ನಡುವೆ ಇದ್ದ, ರಾಕ್ಷಸೇಂದ್ರಸ್ಯ - ರಕ್ಕಸರೊಡೆಯನ, ಭವನಂ - ಮುಖ್ಯವಾದ ವಾಸಗೃಹವನ್ನು, ದದರ್ಶ - ನೋಡಿದನು, ॥ ೨ ॥ ಅರಿಸೂದನಃ - ಶತ್ರು ಸಂಹಾರಕನಾದ ಮಾರುತಿಯು, ಸರ್ವತಃ - ಎಲ್ಲ ಕಡೆಗಳಲ್ಲಿಯೂ, ಆಯತ

---

—ಶ್ರೀಜಾನಕೀಜಾನಯೇನಮಃ—

ಮಾರುತಾತ್ಮಜನಾಬಳಿಕ ಆ ಮಹಾಭವನದ ಮಧ್ಯಭಾಗದಲ್ಲಿ ಬಲು ಉದ್ದವೂ ಅಗಲವೂ ಆಗಿರುವ ಮತ್ತೊಂದು ಉತ್ತಮವೆನಿಸಿದ ಒಳಮನೆಯೊಂದನ್ನು ಕಂಡನು ॥೧॥ ಅದರ ವಿಸ್ತಾರವು ಅರೆಗಾವುದ, ನೀಳದಲ್ಲಿ ಒಂದು ಗಾವುದವಿದ್ದಿತು, ಇದು ಆ ರಕ್ಕಸನರಸಿಯರು ಮಲಗುವ ಮನೆ, ಇದರ ಇಕ್ಕೆಲದಲ್ಲಿಯೂ ಉಪ್ಪರಿಗೆಗಳ ಸಾಲು ಕಂಗೊಳಿಸುತಲಿದ್ದಿತು ॥೨॥ ಅರಿಗಳನ್ನಿರಿಯುವ ಹರಿಯು ಅಲ್ಲೆಲ್ಲ ವಿಶಾಲನಯನೆಯಾದ ವೈದೇಹಿಯನ್ನು

ಸರ್ವತಃ ಪರಿಚಕ್ರಾಮ ಹನುಮಾನ್ ಅರಿಸೂದನಃ ||೩||
ಉತ್ತಮಂ ರಾಕ್ಷಸಾವಾಸಂ ಹನುಮಾನವಲೋಕಯನ್ ।
ಆಸಸಾದಾಥ ಲಕ್ಷ್ಮೀವಾನ್ ರಾಕ್ಷಸೇಂದ್ರನಿವೇಶನಂ ||೪||
ಚತುರ್ವಿಷಾಣೈರ್ದ್ವಿರದೈಸ್ತ್ರಿವಿಷಾಣೈಸ್ತಥೈವ ಚ ।
ಪರಿಕ್ಷಿಪ್ತಮಸಂಬಾಧಂ ರಕ್ಷ್ಯಮಾಣಮುದಾಯುಧೈಃ ||೫||
ರಾಕ್ಷಸೀಭಿಶ್ಚ ಪತ್ನೀಭೀ ರಾವಣಸ್ಯ ನಿವೇಶನಮ್ ।

ಲೋಚನಃ-ಅಗಲವಾದ ಕಣ್ಣುಳ್ಳ, ಸೀತಾಂ-ಸೀತಾದೇವಿಯನ್ನು, ಮಾರ್ಗಮಾಣಃ-ಹುಡುಕುತಲಿರುವವನಾಗಿ, ಪರಿಚಕ್ರಾಮ - ಸುತ್ತಲೂ ತಿರುಗಿದನು ||೩|| ಅಥ - ಅನಂತರದಲ್ಲಿ, ಲಕ್ಷ್ಮೀವಾನ್ - ಪ್ರಶಸ್ತವಾದ ಕಾಂತಿಯುಳ್ಳ, ಹನುಮಾನ್ - ಆಂಜನೇಯನು, ಉತ್ತಮಂ - ಶ್ಲಾಘ್ಯವಾದ, ರಾಕ್ಷಸಾವಾಸಂ- ಸಾಮಾನ್ಯರಾಕ್ಷಸರ ಮನೆಯನ್ನೂ, ರಾಕ್ಷಸೇಂದ್ರ ನಿವೇಶನಂ - ದಾನವೇಶ್ವರನ ಸ್ವಂತಮನೆಯನ್ನೂ, ಅವಲೋಕಯನ್ - ನೋಡುತ್ತಿರುವವನಾಗಿ, ||೪|| ಚತುರ್ವಿಷಾಣೈಃ - ನಾಲ್ಕು ಕೊಂಬುಗಳುಳ್ಳವುಗಳಾಗಿಯೂ, ತಥೈವಚ - ಹಾಗೆಯೇ, ತ್ರಿವಿಷಾಣೈಃ - ಮೂರುದಂತಗಳುಳ್ಳವುಗಳಾಗಿಯೂ ಇರುವ, ದ್ವಿರದೈಃ - ಆನೆಗಳಿಂದ, ಅಸಂಬಾಧಂ ಇಕ್ಕಟ್ಟು ಇಲ್ಲದಹಾಗೆ, ಪರಿಕ್ಷಿಪ್ತಂ - ಹರಡಿಕೊಂಡಿರುವ, ಉದಾಯುಧೈಃ - ಆಯುಧಪಾಣಿಗಳಾಗಿ ಇರತಕ್ಕ ರಕ್ಕಸರಿಂದ, ರಕ್ಷ್ಯಮಾಣಂ - ಸಂರಕ್ಷಿಸಲ್ಪಡುತಲಿರುವ, ||೫|| ರಾಕ್ಷಸೀಭಿಃ - ರಕ್ಕಸಿಯರಿಂದಲೂ, ಪತ್ನೀಭಿಶ್ಚ - ರಾವಣನ ಸತಿಯರಿಂದಲೂ, ಆಹೃತಾಭಿಃ - ಬಲಾತ್ಕರಿಸಿ ತಂದ, ರಾಜಕನ್ಯಾಭಿಃ - ರಾಜಪುತ್ರಿಯರಿಂದಲೂ, ಆವೃತಂ - ಸುತ್ತಲ್ಪಟ್ಟಿರುವ, ||೬|| (ಕಿಂಚ - ಮತ್ತು) ನಕ್ರಮಕರಾಕೀರ್ಣಂ - ಮೊಸಳೆ ಆವೆ ಮೊದಲಾದವುಗಳಿಂದ ತುಂಬಿ ಇರುವ, ‡ ತಿಮಿಂಗಿಲ - ತಿಮಿಂಗಿಲವೆಂಬ ಮೀನುಗಳಿಂದಲೂ, ಝಷ - ದೊಡ್ಡ ರೋಮಗಳುಳ್ಳ ಮತ್ಸ್ಯಗಳಿಂದಲೂ, ಆಕುಲಂ - ನಿಬಿಡವಾಗಿರುವ, ವಾಯುವೇಗ - ಗಾಳಿಯ ಹೊಡೆತದಿಂದ, ಸಮಾಧೂತಂ - ಹೆಚ್ಚಾಗಿ ಅಲುಗಿಸಲ್ಪಡುತಲಿರುವ, ಪನ್ನಗೈಃ- ಸರ್ಪಗಳಿಂದ ಒಡಗೂಡಿದ, ಸಾಗರಮಿವ - ಸಮುದ್ರದಂತೆ ಬಹು ಗದ್ದಲದಿಂದಿರತಕ್ಕ, ರಾವಣಸ್ಯ -

ಹುಡುಕುತ ಸುತ್ತುತಿದ್ದನು ||೩|| ಉತ್ತಮವೆನಿಸಿದ ರಾಕ್ಷಸನ ಮನೆಗಳನ್ನೆಲ್ಲ ನೋಡಿಕೊಂಡು ತೇಜಸ್ವಿಯಾದ ಹನುಮನು ರಾವಣನ ಸ್ವಂತವಾದ ಶಯನಗೃಹದ ಬಳಿಗೆ ಬಂದನು ||೪|| ಅಲ್ಲಿ ನಾಲ್ಕು ಕೊಂಬುಗಳ ಮತ್ತು ಮೂರುಕೊಂಬುಗಳ ಆನೆಗಳೂ, ಆಯುಧಪಾಣಿಗಳಾದ ರಕ್ಕಸರೂ ಇಕ್ಕಟ್ಟಿಗೆ ಎಡೆಯಾಗದಂತೆ ಎಚ್ಚರಿಕೆಯಿಂದ ಕಾಯುತಲಿದ್ದರು ||೫|| ಆ ನಿವೇಶನದಲ್ಲಿ ಬಹುಮಂದಿ ರಕ್ಕಸನ ಮಡದಿಯರಾದ ರಕ್ಕಸಿಯರೂ, ಮತ್ತು ಅವನು ವಿಕ್ರಮವನ್ನು ತೋರಿ ಅಪಹರಿಸಿ ತಂದ ರಾಜಪುತ್ರಿಯರೂ ನೆರೆದಿದ್ದರು, ||೬|| ಆವೆ, ಮೊಸಳೆ, ಬಹುಮೀನು, ತಿಮಿ, ತಿಮಿಂಗಿಲ, ಮಹಾಸರ್ಪ ಇತ್ಯಾದಿ ಜಲಜಂತುಗಳಿಂದೊಡಗೂಡಿ, ಗಾಳಿಯ ಪೆಟ್ಟಿನಿಂದ ಅಲ್ಲೋಲಕಲ್ಲೋಲವಾಗುತಲಿರುವ ಕಡಲಿನಂತೆ

‡ "ತಿಮಿಸ್ಸರ್ವಝಷಾದೀಸ್ಯಾತ್ ತಸ್ಯ ಘಾತು ತಿಮಿಂಗಿಲಃ । ತಿಮಿಂಗಿಲಗಿಲೋಪ್ಯಸ್ತಿ ತದ್ಗಿಲೋಪ್ಯಸ್ತಿ ರಾಘವಃ ॥" ಸಣ್ಣ ಮೀನುಗಳನ್ನೆಲ್ಲ ತಿನ್ನುವ ಮೀನಿಗೆ ತಿಮಿ ಎಂದು ಹೆಸರು. ಅದನ್ನು ಭಕ್ಷಿಸುವುದು ತಿಮಿಂಗಿಲ. ಅದನ್ನು ಬಾಯಲ್ಲಿಟ್ಟುಕೊಳ್ಳುವ ರಾಘವ ಎಂಬುದೂ ಉಂಟು.

ಆಹೃತಾಭಿಶ್ಚ ವಿಕ್ರಮ್ಯ ರಾಜಕನ್ಯಾಭಿ ರಾವೃತಮ್||೨||
ತನ್ನಕ್ರ ಮಕರಾಕೀರ್ಣಂ ತಿಮಿಂಗಿಲ ಝಷಾಕುಲಮ್ ।
ವಾಯುವೇಗ ಸಮಾಧೂತಂ ಪನ್ನಗೈ ರಿವ ಸಾಗರಮ್ ॥೩॥
ಯಾ ಹಿ ವೈಶ್ರವಣೇ ಲಕ್ಷ್ಮೀ ರ್ಯಾಚೇಂದ್ರೇ ಹರಿವಾಹನೇ ।
ಸಾ ರಾವಣ ಗೃಹೇ ಸರ್ವಾ ನಿತ್ಯಮೇವಾ ನಪಾಯಿನೀ ॥೪॥
ಯಾ ಚ ರಾಜ್ಞಃ ಕುಬೇರಸ್ಯ ಯಮಸ್ಯ ವರುಣಸ್ಯ ಚ ।
ತಾದೃಶೀ ತದ್ವಿಶಿಷ್ಟಾ ವಾ ಋದ್ಧೀ ರಕ್ಷೋಗೃಹೇ ಷ್ವಿಹ ॥ ೫ ॥
ತಸ್ಯ ಹರ್ಮ್ಯಸ್ಯ ಮಧ್ಯಸ್ಥಂ ವೇಶ್ಮ ಚಾನ್ಯ ತ್ಸುನಿರ್ಮಿತಂ ।

ದಶಕಂಠನ, ತತ್ - ಪ್ರಸಿದ್ಧವಾದ, ನಿವೇಶನಂ - ನಿವಾಸ ಗೃಹವನ್ನು, ಆಸಸಾದ - ಸೇರಿದನು ॥ ೨ ॥ ವೈಶ್ರವಣೇ - ವಿಶ್ರವಸ್ಸಿನ ಮಗನಾದ ಕುಬೇರನಲ್ಲಿ, ಯಾಹಿ - ಯಾವ ಬಗೆಯಾದ, ಲಕ್ಷ್ಮೀಃ - ಶೋಭೆಯುಂಟೋ, ಇಂದ್ರೇ - ದೇವೇಂದ್ರನಲ್ಲಿಯೂ, ಹರಿವಾಹನೇಚ- ಹಸಿರು ಬಣ್ಣದ ಕುದುರೆಗಳುಳ್ಳ ಸೂರ್ಯನಲ್ಲಿಯೂ (ಹರಿಯ ವಾಹನವಾದ ಗರುಡನಲ್ಲಿ) ಯಾಲಕ್ಷ್ಮೀಃ - ಯಾವತೇಜಸ್ಸು ಇದೆಯೋ, ಸರ್ವಾ - ಸಮಸ್ತವಾದ, ಸಾ - ಅಂತಹ ಸಂಪತ್ತು, ರಾವಣಗೃಹೇ - ರಾವಣಾಸುರನ ಮನೆಯಲ್ಲಿ, ನಿತ್ಯಂ - ಯಾವಾಗಲೂ, ಅನಪಾಯಿನ್ಯೇವ - ಎಡೆಬಿಡದೆಯೇ ಇರುವುದು ॥೪॥ ರಾಜ್ಞಃ - ಸರ್ವಜನ ಮನೋರಂಜಕನಾದ, ಕುಬೇರಸ್ಯ - ಧನಾಧಿಪತಿಗೂ, ಯಮಸ್ಯ - ಸವ ಪ್ರಾಣಿಗಳನ್ನು ದಂಡಿಸುವ ಮೃತ್ಯುವಿಗೂ, ವರುಣಸ್ಯಚ - ಜಲಾಧಿಪತಿಯಾದ ವರುಣನಿಗೂ, ಯಾಋದ್ಧಿಃ - ಯಾವ ಸಮೃದ್ಧಿಯುಂಟೋ, ತಾದೃಶೀಋದ್ಧಿಃ - ಅಂತಹ ಸಮೃದ್ಧಿಯು, ತದ್ವಿಶಿಷ್ಟಾವಾ - ಅಥವಾ ಅದಕ್ಕಿಂತ ಮಿಂಚಿದ ಸಂಪತ್ತು, (ಸರ್ವವಸ್ತು ಸಂಪೂರ್ಣತೆಯು) ಇಹರಕ್ಷೋಗೃಹೇಷು - ಈ ಲಂಕೆಯೊಳಗೆ (ಈ ರಾವಣನ ಮಂದಿರದಲ್ಲಿ) ಅಸ್ತಿ - ಉಂಟು ॥೫॥ ಪವನಾತ್ಮಜಃ - ವಾಯುಪುತ್ರನು, ತಸ್ಯ - ಆ, ಹರ್ಮ್ಯಸ್ಯ - ಪುಷ್ಪಕ ವಿಮಾನದ (ರಾಜಗೃಹದ) ಮಧ್ಯಸ್ಥಂ - ನಡುವೆ ಇರುವ, ಬಹು ನಿರ್ಯೂಹ ಸಂಕೀರ್ಣಂ - ಬಗೆಬಗೆಯ ಬರಗುದಿಂಡುಗಳಿಂದೊಡಗೂಡಿರುವ, ಸುನಿರ್ಮಿತಂ - ಬಹು ಅಂದವಾಗಿ ರಚಿಸಲ್ಪಟ್ಟರತಕ್ಕ, ಅನ್ಯತ್-ಬೇರೊಂದಾದ, ವೇಶ್ಮ ಚ

ಆಸದನವು ಕಂಗೊಳಿಸುತಲಿತ್ತು ॥೩॥ ನವನಿಧಿಗಳಿಗೆ ಅಧಿಪತಿಯೆನಿಸಿದ ಕುಬೇರನಲ್ಲಿಯೂ, ಮೂರೆಲೋಕದೊಡೆಯನಾದ ದೇವೇಂದ್ರನಲ್ಲಿಯೂ, ಹಸುರುಬಣ್ಣದ ಏಳು ಕುದುರೆಗಳನ್ನೇರುವ ಸೂರ್ಯನಲ್ಲಿಯೂ ಯಾವ ಸೌಭಾಗ್ಯಲಕ್ಷ್ಮಿಯು ಮೆರೆಯುತಲಿದೆಯೋ, ಅದೆಲ್ಲವೂ ಈರಾವಣನ ಮನೆಯಲ್ಲಿ ನೆಲೆಗೊಂಡಿದ್ದುದು. ಎಂದರೆ-ಇಂದ್ರ ಕುಬೇರಾದಿಗಳ ಸಂಪತ್ತಿಗೂ ಬಾದೊಂದು ವೇಳೆ ಕುಂದುಬರುವುದುಂಟು ಈ ದಶಾನನಿಗಾದರೆ ಹಾಗಲ್ಲ, ಉತ್ತರೋತ್ತರವಾಗಿ ಎಡೆಬಿಡದೆ ಏಳಿಗೆಯಲ್ಲಿಯೇ ಇರುತ್ತಿತ್ತು ॥೪॥ ಇದಲ್ಲದೆ ರಾಜರಾಜನಾದ ಕುಬೇರ, ಸಕಲ ಪ್ರಾಣಿಗಳನ್ನು ನಿಯಮಿಸುವ ಯಮ, ಸರ್ವಜಲಾಧಿಪತಿಯಾದ ವರುಣ, ಈ ಮೊದಲಾದವರಿಗೆಲ್ಲ ಎಣೆಯೆನಿಸಿದ ಅಥವಾ ಅವರಿಗಿಮ್ಮಡಿಯಾದ ಧನಕನಕ ಸಮೃದ್ಧಿಯು ರಾಕ್ಷಸಾಧಿಪತಿಯ ಅರಮನೆಯಲ್ಲಿ ತಾಂಡವಾಡುತ್ತಿದ್ದಿತು ॥೫॥ ಆ ವಿಶಾಲವಾದ ಉಪ್ಪರಿಗೆಯ ನಡುವೆ ಬಹು ಸುಂದರವಾದ ಮತ್ತೊಂದು ಭವನವು ವಿರಾಜಿಸುತಲಿದ್ದಿತು, ಇದರ ನಿರ್ಮಾಣಚಾತುರ್ಯವು ಹೇಳತೀರದು, ಇದರೊಳಗೆ ಬಗೆಬಗೆಯ ಬರೆಗು

ಬಹುನಿರ್ವ್ಯೂಹಸಂಕೀರ್ಣಂ ದದರ್ಶ ಪವನಾತ್ಮಜಃ ॥೧೦॥
ಬ್ರಹ್ಮಣೋಽರ್ಥೇ ಕೃತಂ ದಿವ್ಯಂ ದಿವಿ ಯದ್ವಿಶ್ವಕರ್ಮಣಾ ।
ವಿಮಾನಂ ಪುಷ್ಪಕಂ ನಾಮ ಸರ್ವರತ್ನವಿಭೂಷಿತಂ ॥
ಪರೇಣ ತಪಸಾ ಲೇಭೇ ಯತ್ಕುಬೇರಃ ಪಿತಾಮಹಾತ್ ॥೧೧॥-॥
ಕುಬೇರಮೋಜಸಾ ಜಿತ್ವಾ ಲೇಭೇ ತದ್ರಾಕ್ಷಸೇಶ್ವರಃ॥೧೨॥
ಈಹಾಮೃಗಸಮಾಯುಕ್ತೈಃ ಕಾರ್ತಸ್ವರಹಿರಣ್ಮಯೈಃ ।
ಸುಕೃತೈ ರಾಚಿತಂ ಸ್ತಂಭೈಃ ಪ್ರದೀಪ್ತಮಿವ ಚ ಶ್ರಿಯಾ ॥
ಮೇರುಮಂದರಸಂಕಾಶೈ ರುಲ್ಲಿಖದ್ಭಿರಿವಾಂಬರಂ ।

---

ಮನೆಯನ್ನೂ, ದದರ್ಶ - ನೋಡಿದನು ॥೧೦॥ ಯತ್ - ಯಾವ ಮೇಲೆ ಹೇಳಿದ, ಪುಷ್ಪಕಂನಾಮ- ಪುಷ್ಪಕ ವಿಮಾನವಾದರೆ, ಬ್ರಹ್ಮಣಃಅರ್ಥೇ - ಚತುರ್ಮುಖನಿಗೋಸ್ಕರ, ದಿವ್ಯಂ- ಸರ್ವೋತ್ತಮವೆನಿಸಿಯೂ, ಸರ್ವರತ್ನವಿಭೂಷಿತಂ - ಸಕಲ ರತ್ನಗಳಿಂದ ಅಲಂಕರಿಸಲ್ಪಟ್ಟುದಾಗಿಯೂ, ದಿವಿ - ಸ್ವರ್ಗದಲ್ಲಿ (ಸತ್ಯಲೋಕದೊಳಗೆ) ವಿಶ್ವಕರ್ಮಣಾ - ವಿಶ್ವಕರ್ಮನೆಂಬ ದೇವಶಿಲ್ಪಿಯಿಂದ, ಕೃತಂ - ನಿರ್ಮಿಸಲ್ಪಟ್ಟಿತೋ ॥೧೧॥ (ಕಿಂಚ - ಮತ್ತು) ಯತ್ - ಯಾವ ಪುಷ್ಪಕ ವಿಮಾನವನ್ನು, ಕುಬೇರಃ - ಕುಬೇರನು, ಪರೇಣ - ಉತ್ತಮವಾದ, ತಪಸಾ - ತಪಸ್ಸಿನಿಂದ, ಪಿತಾಮಹಾತ್ - ಬ್ರಹ್ಮನ ದೆಸೆಯಿಂದ, ಲೇಭೇ - ಪಡೆದನೋ, ತತ್ - ಅಂತಹ ಆ ಪುಷ್ಪಕವನ್ನು, ರಾಕ್ಷಸೇಶ್ವರಃ - ರಾಕ್ಷಸ ಚಕ್ರವರ್ತಿಯಾದ ರಾವಣನು, ಓಜಸಾ - ಪರಾಕ್ರಮದಿ ದ, ಕುಬೇರಂ - ಧನೇಶ್ವರನನ್ನು, ಜಿತ್ವಾ - ಜಯಿಸಿ, ಲೇಭೇ - ಪಡೆದನು. ॥೧೨॥ ಈಹಾಮೃಗ - ತೋಳಗಳಂತಿರುವ ಗೊಂಬೆಗಳಿಂದ, ಸಮಾಯುಕ್ತಂ - ಕೂಡಿರುವ, ಕಾರ್ತಸ್ವರಹಿರಣ್ಮಯೈಃ - ಚಿನ್ನಬೆಳ್ಳಿಗಳ ರೂಪಾಂತರವಾಗಿರತಕ್ಕ, ಸುಕೃತೈಃ- ಅಂದವಾಗಿ ನಿರ್ಮಿಸಲ್ಪಟ್ಟ, ಸ್ತಂಭೈಃ ಕಂಬಗಳಿಂದ, ಆಚಿತಂ - ತುಂಬಿರುವುದಾದ ಕಾರಣವೇ, ಶ್ರಿಯಾ - ವಿಚಿತ್ರಕಾಂತಿಯಿಂದ, ಪ್ರದೀಪ್ತಮಿವ - ಜ್ವಲಿಸುತಲಿರುವುದೋ ಎಂಬಂತಿರುವುದಾಗಿಯೂ, ॥೧೩॥ ಮೇರುಮಂದರಸಂಕಾಶೈಃ - ಮೇರು ಮತ್ತು ಮಂದರ ಪರ್ವತಗಳಿಗೆಣೆಯಾದವುಗಳಿಂದ ಕಾರಣವೇ, ಅಂಬರಂ - ಆಕಾಶವನ್ನು, ಉಲ್ಲಿಖದ್ಭಿರಿವ, ತಿವಿಯುತಲಿವೆಯೋ ಎಂಬ ಹಾಗಿರುವ, ಶುಭಾಕಾರೈಃ - ಮಂಗಳಕರವಾದ ಆಕಾರಗಳುಳ್ಳ, ಕೂಟಾಗಾರೈಃ - ಚಾವಡಿ

---

ದಿಂಡುಗಳು ಮೆರಯುತಿದ್ದುವು,ಇದನ್ನು ಪುಷ್ಪಕವೆಂಬರು.॥೧೦॥ ಇದನ್ನೇ ಪೂರ್ವದಲ್ಲಿ ವಿಶ್ವಕರ್ಮನೆಂಬದೇವಶಿಲ್ಪಿಯು ಸೃಷ್ಟಿಕರ್ತನಾದ ಚತುರ್ಮುಖನಿಗೋಸ್ಕರ ಸರ್ವರತ್ನಾಲಂಕೃತವಾಗಿ ಲೋಕೋತ್ತರವೆನಿಸುವಂತೆ ಸತ್ಯಲೋಕದಲ್ಲಿ ತನ್ನ ಸಂಕಲ್ಪವಿಶೇಷದಿಂದ ಕಲ್ಪಿಸಿ ಇದ್ದನು ॥೧೧॥ ಅಲಕಾಧಿಪತಿಯಾದ ಕುಬೇರನು ಬಹು ಕಾಲದವರೆಗೂ ತಪಸ್ಸನ್ನು ಮಾಡಿ ಇದನ್ನೇ ಪಿತಾಮಹನಿಂದ ವರವಾಗಿಪಡೆದು ತಂದಿದ್ದನು, ರಾಕ್ಷಸೇಶ್ವರನಾದ ದಶವದನನು ತನ್ನ ಪರಾಕ್ರಮದಿಂದ ತನ್ನ ಅಣ್ಣನಾದ ಆ ಕುಬೇರನನ್ನು ಸೋಲಿಸಿ ಇದನ್ನೇ ಕಿತ್ತುಕೊಂಡು ಬಂದುದು ಅಂತಹ ಆ ಪುಷ್ಪಕವನ್ನು ಪವಮಾನನಂದನನು ಪರಿಶೀಲಿಸಿದನು ॥೧೨॥ ಅದರೊಳಗೆ ಚಿನ್ನ ಮತ್ತು ಬೆಳ್ಳಿಗಳಿಂದ ತೋಳಗಳನ್ನು ಮಾಡಿಟ್ಟಿದ್ದರು, ಕಾಂತಿಯಿಂದ ಬೆಳಗುತಲಿರುವ ಅಂದವಾಗಿ ಕೆತ್ತಿದ ಕಂಬಗಳ ಸಾಲು ಮೆರೆಯುತಲಿತ್ತು ॥೧೩॥ ಆಕಂಬಗಳು ಮೇರುಮಂದರ ಪರ್ವತಗಳಂತೆ ಬಲು ಎತ್ತರವಾಗಿಮುಗಿಲನ್ನುಮುಟ್ಟುವಂತಿದ್ದುವು,

ಕೂಟಾಗಾರೈ ಶ್ಶುಭಾಕಾರೈ ಸ್ಸರ್ವತ ಸ್ಸಮಲಂಕೃತಂ ॥೧೪॥
ಜ್ವಲನಾರ್ಕ ಪ್ರತೀಕಾಶಂ ಸುಕೃತಂ ವಿಶ್ವಕರ್ಮಣಾ ।
ಹೇಮ ಸೋಪಾನ ಸಂಯುಕ್ತಂ ಚಾರುಪ್ರವರ ವೇದಿಕಂ ॥
ಜಾಲ ವಾತಾಯನೈ ರ್ಯುಕ್ತಂ ಕಾಂಚನೈ ಸ್ಸ್ಫಾಟಿಕೈರಪಿ ।
ಇಂದ್ರನೀಲ ಮಹಾನೀಲ ಮಣಿಪ್ರವರ ವೇದಿಕಂ ॥
ವಿದ್ರುಮೇಣ ವಿಚಿತ್ರೇಣ ಮಣಿಭಿಶ್ಚ ಮಹಾಧನೈಃ ।
ನಿಸ್ತುಲಾಭಿಶ್ಚ ಮುಕ್ತಾಭಿ ಸ್ತಲೇನಾಭಿ ವಿರಾಜಿತಂ ॥೧೭॥

ಗಳಿಂದಲೂ, (ಕಿರುಕೈಸಾಲೆಗಳಿಂದಲೂ) ಸರ್ವತಃ - ಸುತ್ತಲೂ, ಅಲಂಕೃತಂ - ಸಿಂಗರಿಸಲ್ಪಟ್ಟಿರುವುದಾಗಿಯೂ ॥೧೪॥ ಜ್ವಲನಾರ್ಕಪ್ರತೀಕಾಶಂ - ಅಗ್ನಿಸೂರ್ಯರಿಗೆಣೆಯೆನಿಸಿ, ವಿಶ್ವಕರ್ಮಣಾ - ದೇವತೆಗಳ ಬಡಗಿಯಿಂದ, ಸುಕೃತಂ - ಶ್ರೇಷ್ಠವಾಗಿ ನಿರ್ಮಿಸಲ್ಪಟ್ಟುದೂ, ಹೇಮಸೋಪಾನ - ಚಿನ್ನದ ಹಂತ (ಮೆಟ್ಟಿಲು) ಗಳಿಂದ, ಸಂಯುಕ್ತಂ - ಒಡಗೂಡಿರುವುದೂ, ಚಾರು - ಸುಂದರವಾದ, ಪ್ರವರ - ಅತ್ಯುತ್ತಮವೆನಿಸಿದ, ವೇದಿಕಂ - ಜಗುಲಿಗಳುಳ್ಳುದಾಗಿಯೂ ॥೧೫॥ ಕಾಂಚನೈಃ - ಚಿನ್ನದಿಂದ ಮಾಡಲ್ಪಟ್ಟವುಗಳೂ, ಸ್ಫಾಟಿಕೈಃ - ಸ್ಫಟಿಕ ಶಿಲೆಗಳಿಂದ ರಚಿಸಲ್ಪಟ್ಟವುಗಳೂ ಆಗಿರುವ, ಜಾಲ - ಕಿಟಕಿಗಳಿಂದಲೂ, ವಾತಾಯನೈರಪಿ - ಗವಾಕ್ಷಗಳಿಂದಲೂ, ಯುಕ್ತಂ - ಒಡಗೂಡಿರುವುದಾಗಿಯೂ ‡ ಇಂದ್ರನೀಲ - ಇಂದ್ರನೀಲಮಣಿಗಳಲ್ಲಿಯೂ, ಮಹಾನೀಲ - ಉದ್ಧನೀಲ ಶಿಲೆಗಳಲ್ಲಿಯೂ ಕೆತ್ತಿರುವ ಮಣಿಪ್ರವರ - ಶ್ರೇಷ್ಠಮಣಿಗಳಿಂದೊಡಗೂಡಿರತಕ್ಕ, ವೇದಿಕಂ - ಜಗುಲಿಗಳುಳ್ಳುದಾಗಿಯೂ, ॥೧೬॥ ವಿದ್ರುಮೇಣ - ಹವಳಗಳಿಂದಲೂ, ಮಹಾಧನೈಃ - ಬಹುಬೆಲೆಯುಳ್ಳ, ಮಣಿಭಿಶ್ಚ - ರತ್ನಗಳಿಂದಲೂ, ನಿಸ್ತುಲಾಭಿಃ - ಎಣೆಯಿಲ್ಲದ, (ಗುಂಡಾಗಿರುವ) ಮುಕ್ತಾಭಿಶ್ಚ - ಮುತ್ತುಗಳಿಂದಲೂ, ವಿಚಿತ್ರೇಣ - ಆಶ್ಚರ್ಯಕರವೆನಿಸಿದ, ತಲೇನ - ಕೆಳಭಾಗದಿಂದ (ನೆಲದಿಂದ) ಅಭಿವಿರಾಜಿತಂ - ಸುತ್ತಲೂ ಹೊಳೆಯುತಲಿರುವುದಾಗಿಯೂ ॥೧೭॥ ಸುವರ್ಣ್ಯಾಗಂಧಿನಾ - ಉತ್ತಮವಾದ

ಶುಭಕರವಾದ ಆಕಾರವುಳ್ಳ ಇಕ್ಕೆಲದ ಕಿರುಮನೆಗಳು ಅಲಂಕಾರವಾಗಿ ಕಾಣಬರುತಲಿದ್ದುವು ॥೧೪॥ ತೇಜೋರಾಶಿಯಾದ ಅಗ್ನಿಯಂತೆಯೂ, ಭಾಸ್ಕರನಂತೆಯೂ ಬೆಳಗುವಂತೆ ವಿಶ್ವಕರ್ಮನು ಅದನ್ನು ರಚಿಸಿದ್ದನು. ಅಲ್ಲಿಗಲ್ಲಿಗೆ ಜಗಲಿಗಳಿಂದೊಡಗೂಡಿರುವ ಚಿನ್ನದ ಸೋಪಾನಗಳ ಸಾಲು ಬಲು ಅಂದವಾಗಿದ್ದಿತು ॥೧೫॥ ಅದರ ಪಕ್ಕಗಳಲ್ಲಿ ದೊಡ್ಡ ದೊಡ್ಡ ಬಂಗಾರದ ಕಿಟಕಿಗಳೂ, ಮೇಲುಗಡೆ ಗವಾಕ್ಷಗಳೂ, ಸ್ಫಟಿಕ ಶಿಲೆಗಳಿಂದಲೂ, ಇಂದ್ರ ನೀಲಮಣಿಗಳಿಂದಲೂ, ಮಹಾ ನೀಲರತ್ನಗಳಿಂದಲೂ ರಚಿಸಿ ಇರುವ ವೇದಿಕೆಗಳು ವಿರಾಜಿಸುತಲಿದ್ದುವು ॥೧೬॥ ವಿಚಿತ್ರವಾದ ಹವಳ, ಅಮೂಲ್ಯವಾದ ರತ್ನ, ಎಣೆಯಿಲ್ಲದ ಮುತ್ತು ಈಮೊದಲಾದವುಗಳಿಂದ ಆ ಪುಷ್ಪಕದ ಕೆಳಭಾಗವು ಶೋಭಿಸುತಲಿತ್ತು ॥೧೭॥ ತಳತಳನೆ ಬಂಗಾರ

‡ “ ಕ್ಷೀರಮಧ್ಯೆಕ್ಷಿಪೇನ್ನೀಲಂ ಕ್ಷೀರಂಚೇತ್ ನೀಲತಾಂ ವ್ರಜೇತ್ । ಇಂದ್ರನೀಲಮಿತಿಖ್ಯಾತಂ ಇತಿಚ ಅಗಸ್ತ್ಯಭಾಷಿತಂ ॥ ” ಒಂದು ಪಾತ್ರೆಯೊಳಗಿರುವ ಹಾಲಿನಲ್ಲಿ ನೀಲಮಣಿಯನ್ನು ಹಾಕಿದಾಗ ಆ ಹಾಲು ನೀಲದಬಣ್ಣವಾಗಿಯೇ ಇದ್ದರೆ ಆ ಮಣಿಯು ಉತ್ತಮವಾದ ಇಂದ್ರನೀಲ ಎಂದು ತಿಳಿಯಬೇಕು ಎಂಬು ಅಗಸ್ತ್ಯ.

ಚಂದನೇನ ಚ ರಕ್ತೇನ ತಪನೀಯ ನಿಭೇನ ಚ ।
ಸುಪುಣ್ಯಗಂಧಿನಾ ಯುಕ್ತ ಮಾದಿತ್ಯ ತರುಣೋಪಮಂ ॥೧೮॥
ಕೂಟಾಗಾರೈ ರ್ವರಾಕಾರೈ ರ್ವಿವಿಧೈ ಸ್ಸಮಲಂ ಕೃತಂ ।
ವಿಮಾನಂ ಪುಷ್ಪಕಂ ದಿವ್ಯ ಮಾರುರೋಹ ಮಹಾಕಪಿಃ ॥೧೯॥
ತತ್ರಸ್ಥ ಸ್ಸ ತದಾ ಗಂಧಂ ಪಾನ ಭಕ್ಷ್ಯಾನ್ನ ಸಂಭವಂ ।
ದಿವ್ಯಂ ಸಂಮೂರ್ಛಿತಂ ಜಿಘ್ರದ್ರೂಪವಂತ ಮಿವಾನಿಲಂ ॥೨೦॥

---

ಸುವಾಸನೆಯುಳ್ಳುದೂ, ತಪನೀಯನಿಭೇನ - ಚಿನ್ನಕ್ಕೆ ಸಮಾನವಾದ, ರಕ್ತೇನ - ಕೆಂಪಗಿರುವ, ಚಂದನೇನ - ಪರಿಮಳದಿಂದಲೂ, ಯುಕ್ತಂ - ಕೂಡಿರುವುದುದಕಾರಣವೇ, ಆದಿತ್ಯತರುಣೋಪಮಂ - ಬಾಲಸೂರ್ಯನಿಗೆ ಸಮಾನವೆನಿಸಿದುದಾಗಿಯೂ, ॥೧೮॥ ವರಾಕಾರೈಃ- ಉತ್ತಮವಾದ ಆಕೃತಿಗಳುಳ್ಳ, ವಿವಿಧೈಃ- ಬಗೆಬಗೆಯುವುಗಳಾದ, ಕೂಟಾಗಾರೈಃ - ಬೆಟ್ಟದ ಕೋಡುಗಳಂತಿರುವ ಮನೆಗಳಿಂದಲೂ, ಸಮಲಂಕೃತಂ - ಎಲ್ಲ ಕಡೆಗಳಲ್ಲಿಯೂ ಅಲಂಕರಿಸಲ್ಪಟ್ಟುದಾಗಿಯೂ ಇರುವ, ದಿವ್ಯಂ - ಸರ್ವೋತ್ತಮವೆನಿಸಿದ, ಪುಷ್ಪಕಂ- ಪುಷ್ಪಕವೆಂಬ, ವಿಮಾನಂ - ಆಕಾಶವಾಹನವನ್ನು, ಮಹಾಕಪಿಃ - ವಾನರೋತ್ತಮನು, ಆರುರೋಹ- ಹತ್ತಿದನು ॥೧೯॥ ಸಃ - ಆ ಆಂಜನೇಯನು, ತತ್ರಸ್ಥಃ - ಆ ಪುಷ್ಪಕ ವಿಮಾನದಲ್ಲಿ ನಿಂತವನಾಗಿ, ತದಾ- ಆಗ, ಪಾನ - ಕುಡಿಯುವ ಪದಾರ್ಥಗಳಿಂದಲೂ, ಭಕ್ಷ್ಯಾನ್ನ-ಆಹಾರ ಪದಾರ್ಥಗಳಿಂದಲೂ, ಸಂಭವಂ- ಉಂಟಾದ, ಸಮ್ಮೂರ್ಛಿತಂ - ಎಲ್ಲ ಕಡೆಗಳಲ್ಲಿಯೂ ಹರಡಿಕೊಂಡಿರತಕ್ಕ, ದಿವ್ಯಂ - ಉತ್ತಮೋತ್ತಮವಾದ, ಗಂಧಂ - ಪರಿಮಳವನ್ನು, ರೂಪವಂತಂ - ಶರೀರವನ್ನಾಂತಿರುವ, ಅನಿಲಮಿವ - ವಾಯುವನ್ನು ಹೇಗೋ ಹಾಗೆ, ಜಿಘ್ರತ್ - ಆಘ್ರಾಣಿಸುತಲಿದ್ದನು ॥೨೦॥ ಸಃ - ಆ ಲೋಕ ಪ್ರಸಿದ್ಧನಾದ, ರಾವಣಃ - ದಶಕಂಧರನು, ಯತ್ರ - ಯಾವಸ್ಥಲದಲ್ಲಿರುವನೋ, ತತ್ರ - ಆಸ್ಥಲದಲ್ಲಿ, ಸಃ - ಆ ಸುವಾಸನೆಯು, ಮಹಾಸತ್ವಂ - ಮಹಾ ಬಲವುಳ್ಳ, ತಂ - ಆ ಆಂಜನೇಯನನ್ನು * ಬಾಂಧವಃ - ನಂಟನು, ಉತ್ತಮಂ -

---

ದಂತೆ ಹೊಳೆಯುತಲಿರುವ ರಕ್ತಚಂದನ ಮತ್ತು ಶ್ವೇತ ಚಂದನಗಳಿಂದ ಗಮಗಮಿಸುತಲೂ, ನಡುಹಗಲಿನ ರವಿಯಂತೆ ವಿರಾಜಿಸುತಲೂಇದ್ದಿತು ॥೧೮॥ ಚಿತ್ರವಿಚಿತ್ರವಾದ ರಚನೆಗಳಿಂದೊಡಗೂಡಿದ ಕೈಸಾಲೆಯುಳ್ಳನಾನಾತರಹೆಯ ಮನೆಗಳಿಂದ ಅಲಂಕರಿಸಲ್ಪಟ್ಟಿರುವ ಆ ದಿವ್ಯಪುಷ್ಪಕವಿಮಾನವನ್ನು ಪವಮಾನನಂದನನು ಏರಿದನು ॥೧೯॥ ಆಗ ಅಲ್ಲಿರುವ ವಿಚಿತ್ರಪಾನ ಪದಾರ್ಥಗಳ ಮತ್ತು ಆಶ್ಚರ್ಯಕರವಾದ ದಿವ್ಯಭಕ್ಷ್ಯವಸ್ತುಗಳ ಸುವಾಸನೆಯುನ್ನು ನೋಡಿದರೆ, ರೂಪರಹಿತನಾದರೂ ವಾಯುವು ತನ್ನ ಪುತ್ರನೆಂಬ ಮಮತೆಯಿಂದ ದಿವ್ಯ ಪರಿಮಳರೂಪವಾದ ಶರೀರರವನ್ನಾಂತು ಎಲ್ಲ ಕಡೆಗಳಲ್ಲಿಯೂ ಹರಡಿ ಮಾರುತಿಯನ್ನು ತೃಪ್ತಿಗೊಳಿಸುತಲಿರುವನೋ ಎಂಬಂತೆ ತೋರುತಲಿತ್ತು ॥೨೦॥ ಮತ್ತು-ಆಬಳಿಯೊಳೆಲ್ಲ ತುಂಬಿ

---

* " ದದಾತಿಪ್ರತಿಗೃಹ್ಣಾತಿ ಗುಹ್ಯಮಾಖ್ಯಾತಿ ಪೃಚ್ಛತಿ । ಭುಂಗ್ತೆ, ಭೋಜಯತೆ ಚೈವ ಷಡ್ವಿಧಂ ಬಂಧುಲಕ್ಷಣಂ ॥ ತನ್ನಲ್ಲಿದ್ದಾಗ ಕೊಡುವುದು, ಇಲ್ಲದಾಗ ಕೇಳಿ ತೆಗೆದುಕೊಳ್ಳುವುದು, ಗುಟ್ಟನ್ನು ಹೇಳುವುದು, ರಹಸ್ಯವನ್ನು ತಿಳಿದುಕೊಂಬುದು, ತಾನು ಬಂದು ಭೋಜನಮಾಡುವುದು, ತನ್ನ ಮನೆಯಲ್ಲಿ ಭೋಜನಮಾಡಿಸುವುದು ಎಂಬ ಆರು ಗುಣವುಳ್ಳವನೇ ಬಂಧು.

ಸ ಗಂಧ ಸ್ತಂ ಮಹಾಸತ್ವಂ ಬಾಧು ರ್ಬಂಧು ಮಿವೋತ್ತಮಂ ।
ಇತ ಏಹೀ ತ್ಯುವಾಚೇವ ತತ್ರ ಯತ್ರ ಸ ರಾವಣಃ ॥೨೧॥
ತತ ಸ್ತಾಂ ಪ್ರಸ್ಥಿತ ಶ್ಶಾಲಾಂ ದದರ್ಶ ಮಹತೀಂಶುಭಾಂ ।
ರಾವಣಸ್ಯ ಮನಃ ಕಾಂತಾಂ ಕಾಂತಾಮಿವ ವರಸ್ತ್ರಿಯಂ ॥೨೨॥
ಮಣಿ ಸೋಪಾನ ವಿಕೃತಾಂ ಹೇಮಜಾಲ ವಿಭೂಷಿತಾಂ ।
ಸ್ಫಾಟಿಕೈ ರಾವೃತತಲಾಂ ದಂತಾಂತರಿತ ರೂಪಿಕಾಂ ॥೨೩॥
ಮುಕ್ತಾಭಿಶ್ಚ ಪ್ರವಾಳೈಶ್ಚ ರೂಪ್ಯ ಚಾಮೀಕರೈ ರಪಿ ।

ಶ್ರೇಷ್ಠನಾದ, ಬಂಧುಮಿವ - ತನ್ನ ನಂಟನನ್ನು ಹೇಗೋಹಾಗೆ ಇತಏಹೀತಿ - ಇಲ್ಲಿಗೆ ಬಾರೆಂದು, ಉವಾಚೇವ - ಹೇಳುವಂತಿದ್ದಿತು ॥೨೧॥

ತತಃ - ಆ ಪುಷ್ಪಕವಿಮಾನವನ್ನು ಹತ್ತಿದಬಳಿಕ, ಸಃ - ಆ ಮಾರುತಿಯು, ತಾಂ - ಆ ರಾವಣನಿರುವ, ಶಾಲಾಂ - ಮಂದಿರವನ್ನು ಕುರಿತು, ಪ್ರಸ್ಥಿತಃ - ಸೀತೆಯನ್ನು ಹುಡುಕಲು ಪ್ರಯಾಣಮಾಡಿದವನಾಗಿ, ಮಹತೀಂ - ದೊಡ್ಡದಾದ, ಶುಭಾಂ-ಮಂಗಳಕರವೆನಿಸಿರುವುದಾದಕಾರಣವೇ, ಕಾಂತಾಂ-ಮನೋಹರಳೆನಿಸಿದ, ವರಸ್ತ್ರಿಯಮಿವ - ವರಾಂಗನೆಯು ಹೇಗೋ ಹಾಗೆ, ರಾವಣಸ್ಯ - ರಾವಣನಿಗೆ, ಮನಃಕಾಂತಾಂ - ಮನಸ್ಸಿಗೊಪ್ಪಿರುತ್ತದಾಗಿಯೂ ॥೨೨॥ ಮಣಿ - ರತ್ನಮಯವಾದ, ಸೋಪಾನ - ಹಂತಗಳಿಂದ ವಿಕೃತಾಂ - ವಿಶೇಷವಾದ ರಚನೆಯುಳ್ಳ, ಹೇಮಜಾಲ - ಸುವರ್ಣಮಯವಾದ ಕಿಟಕಿಗಳಿಂದ, ವಿಭೂಷಿತಾಂ - ಅಲಂಕರಿಸಲ್ಪಟ್ಟಿರುವ, ಸ್ಫಾಟಿಕೈಃ - ಸ್ಫಟಿಕ ಶಿಲೆಗಳಿಂದ, ಆವೃತ - ಹೊದಿಸಲ್ಪಟ್ಟ, ತಲಾಂ ನೆಲವುಳ್ಳ, ದಂತ - ಆನೆಯಕೊಂಬುಗಳಿಂದ, ಅಂತರಿತ - ಅಲ್ಲಲ್ಲಿ ಕೆತ್ತಿರುವ, ರೂಪಿಕಾಂ - ವಿಚಿತ್ರ ಚಿತ್ರವುಳ್ಳದಾಗಿಯೂ ॥೨೩॥ ಮುಕ್ತಾಭಿಶ್ಚ - ಮುತ್ತುಗಳಿಂದಲೂ, ಪ್ರವಾಳೈಶ್ಚ - ಹವಳಗಳಿಂದಲೂ, ರೂಪ್ಯಚಾಮೀಕರೈರಪಿ - ಚಿನ್ನಬೆಳ್ಳಿಗಳಿಂದಲೂ, ಅಲಂಕರಿಸಲ್ಪಟ್ಟಿರುವ, ಮಣಿಸ್ತಂಭೈಃ-ರತ್ನಖಚಿತವಾದ

ಇರುವ ಸುಗಂಧವನ್ನು ಘ್ರಾಣಿಸಿದರೆ, ಲೋಕದಲ್ಲಿ ಉತ್ತಮನಾದ ಬಂಧುವು ಯೋಗ್ಯನಾದ ತನ್ನ ಬಂಧುವನ್ನು ಆದರಿಸಿ ಕರೆಯುವ ಹಾಗೆ, "ಇದು ರಾವಣನ ಪುಷ್ಪಕ, ಇಲ್ಲಿ ರಾವಣನ ಮಡದಿಯರು ಮಲಗಿ ಇರುವರು, ಇದಕೋ ರಕ್ಕಸರೊಡೆಯನಿಲ್ಲಿ ಶಯನಮಾಡಿರುವನು, ಇಲ್ಲಿಗೆ ಬಾ" ಎಂದು ಉಪಚರಿಸಿ ಮಾರುತಿಯನ್ನು ಕರೆಯುತಲಿರುವುದೋ ಎಂಬಂತೆ ಇತ್ತು ॥೨೧॥ ಅಲ್ಲಿಯವರೆಗೂ ಬಂದ ಪವನಸುತನು ಆಬಳಿಕ ಮಣಿಮಯವಾದ ಸೋಪಾನಗಳಿಂದೊಡಗೂಡಿ, ಸ್ವರ್ಣಮಯವಾದ ಬೆಳಗಿಂಡಿಗಳಿಂದ ಅಲಂಕರಿಸಲ್ಪಟ್ಟು, ಸ್ಫಟಿಕಶಿಲೆಗಳನ್ನು ಹಾಸಿ, ಅಲ್ಲಲ್ಲಿ ಆನೆಯ ದಂತದಕೈಗೆಲಸವನ್ನು ಮಾಡಿಸಿ ರಚಿಸಿರುವ ವಿಚಿತ್ರ ಭೂಭಾಗದಿಂದ ಆದವಾಗಿ, ಮುತ್ತುಗಳನ್ನೂ, ಹವಳಗಳನ್ನೂ ಚಿನ್ನ ಬೆಳ್ಳಿಗಳನ್ನೂ, ಅಲ್ಲಲ್ಲಿಗೆ ಹೊಂದಿಕೆಯಾಗಿರುವಂತೆ ಕೈವಾಡದಿಂದ ಅಲಂಕಾರದ ಅಣಿಯನ್ನು ಸಮಗೊಳಿಸಿ, ನಡುನಡುವೆ ಕಿರುಗಂಬಗಳಿಂದ ಸಹಿತವಾದ ಎತ್ತರವಾಗಿಯೂ ಸಾಲಾಗಿಯೂ ಇರುವ ದಿವ್ಯ ಮಣಿಸ್ತಂಭಗಳನ್ನು ಸಜ್ಜುಗೊಳಿಸಿ, ಬಲುನಯವಾಗಿ, ನೆಟ್ಟನೆಯವುಗಳಾದ ಉನ್ನತ ಮಧ್ಯಸ್ತಂಭಗಳಿಂದ, ಹಕ್ಕಿಗಳು ರೆಕ್ಕೆಗಳ ಬಲದಿಂದ ಹಾರಿಹೋಗುವ ಹಾಗೆ ಇದೂ ಮುಗಿಲ ಮಂಡಲವನ್ನು ಕುರಿತು ಹಾರಿಹೋಗಲೆಳಸುತಿದೆಯೋ ಎಂಬಂತೆ ತೋರಿಬರುತ್ತ

ವಿಭೂಷಿತಾಂ ಮಣಿಸ್ತಂಭೈಸ್ಸುಬಹುಸ್ತಂಭ ಭೂಷಿತಾಂ ॥೨೪॥
ಸಮೈಃ ಋಜುಭಿ ರತ್ಯುಚ್ಚೈಸ್ಸಮಂತಾತ್ಸುವಿಭೂಷಿತೈಃ ।
ಸ್ತಂಭೈಃ ಪಕ್ಷೈ ರಿವಾತ್ಯುಚ್ಚೈ ರ್ದಿವಂ ಸಂಪ್ರಸ್ಥಿತಾ ಮಿವ ॥೨೫॥
ಮಹತ್ಯಾ ಕುಥಯಾ ಸ್ತೀರ್ಣಾಂ ಪೃಥಿವೀ ಲಕ್ಷಣಾಂಕಯಾ ।
ಪೃಥಿವೀಮಿವ ವಿಸ್ತೀರ್ಣಾಂ ಸರಾಷ್ಟ್ರಗೃಹಮಾಲಿನೀಂ ॥೨೬॥
ನಾದಿತಾಂ ಮತ್ತವಿಹಗೈ ರ್ದಿವ್ಯ ಗಂಧಾ ಧಿವಾಸಿತಾಂ ।
ಪರಾರ್ಥ್ಯಾ ಸ್ತರಣೋಪೇತಾಂ ರಕ್ಷೋಧಿಪ ನಿಷೇವಿತಾಂ ॥೨೭॥

---

ಸ್ತಂಭಗಳಿಂದಲೂ, ವಿಭೂಷಿತಾಂ - ಅಲಂಕರಿಸಲ್ಪಟ್ಟುದಾಗಿಯೂ, ಸುಬಹುಸ್ತಂಭ - ಅನೇಕವಾದ ಕಿರುಗಂಬಗಳಿಂದ, ಭೂಷಿತಾಂ - ಸಿಂಗರಿಸಲ್ಪಟ್ಟುದಾಗಿಯೂ ॥೨೪॥ ಸಮೈಃ - ಒಂದಕ್ಕೊಂದು ಸಮಾನವಾದವುಗಳಾಗಿಯೂ, ಋಜುಭಿಃ - ನೆಟ್ಟಗೆ (ಡೊಂಕಿಲ್ಲದೆ) ಇರತಕ್ಕವುಗಳಾಗಿಯೂ, ಅತ್ಯುಚ್ಚೈಃ - ಬಲು ಎತ್ತರವಾದವುಗಳಾಗಿಯೂ, ಸಮಂತಾತ್ - ಸುತ್ತಲೂ, ಸುವಿಭೂಷಿತೈಃ - ಚೆನ್ನಾಗಿ ಸಿಂಗರಿಸಲ್ಪಟ್ಟವುಗಳಾಗಿಯೂ ಇರುವ, ಅತ್ಯುಚ್ಚೈಃ - ಬಹು ಉನ್ನತಗಳಾದ, ಪಕ್ಷೈಃ - ರೆಕ್ಕೆಗಳಂತಿರುವ, ಸ್ತಂಭೈಃ - ನಡುಗಂಬಗಳಿಂದ, ದಿವಂ - ಆಕಾಶವನ್ನು ಕುರಿತು, ಪ್ರಸ್ಥಿತಾಮಿವ - ಪ್ರಯಾಣಿಮಾಡುತ್ತಿರುವುದೋ ಎಂಬಂತಿರುವುದಾಗಿಯೂ ॥೨೫॥ ಪೃಥಿವೀ-ಭೂಮಂಡಲದ, ಲಕ್ಷಣ-ಸ್ವರೂಪದ, ಅಂಕಯಾ - ಗುರುತುಳ್ಳ, ಮಹತ್ಯಾ - ಬಹು ವಿಸ್ತಾರವಾದ, ಕುಥಯಾ - ಚಿತ್ರಕಂಬಳಿ (ಮೇಲುಹಾಸಿಗೆ) ದಿಂದ, ಆಸ್ತೀರ್ಣಾಂ - ಹಸಲ್ಪಟ್ಟುದಾದಕಾರಣವೇ, ಸರಾಷ್ಟ್ರಗೃಹಮಾಲಿನೀಂ - ದೇಶಗಳ ಮತ್ತು ಮನೆಗಳ ಸಾಲನ್ನುಳ್ಳುದಾಗಿ, ವಿಸ್ತೀರ್ಣಾಂ - ಬಲು ಅಗಲವಾದ, ಪೃಥಿವೀಮಿವಸ್ಥಿತಾಂ - ಭೂಭಾಗದಂತಿರುವುದಾಗಿಯೂ ॥೨೬॥ ಮತ್ತವಿಹಗೈಃ - ಕೊಬ್ಬಿರುವ ಗಿಣಿ, ನವಿಲು, ಹಂಸೆ ಮೊದಲಾದ ಹಕ್ಕಿಗಳ, ನಾದಿತಾಂ- ದನಿಯುಳ್ಳುದೂ, ದಿವ್ಯಗಂಧ - ಶ್ರೇಷ್ಠವಾದ ಪರಿಮಳದಿಂದ, ಅಧಿವಾಸಿತಾಂ - ವಾಸನೆ ಕಟ್ಟಲ್ಪಟ್ಟುದೂ, ಪರಾರ್ಥ್ಯ - ಬಹು ಶ್ರೇಷ್ಠವಾದ, ಆಸ್ತರಣ - ಹಾಸಿಗೆಗಳಿಂದ, ಉಪೇತಾಂ - ಕೂಡಿರುವುದೂ, ರಕ್ಷೋಧಿಪ - ರಾಕ್ಷಸರಾಜನಾದ ರಾವಣನಿಂದ, ನಿಷೇವಿತಾಂ - ಅನುಭವಿಸಲ್ಪಡುತ್ತಿರುವುದೂ ಆಗಿಯೂ ॥೨೭॥

---

ನೆಲಕ್ಕೆ ಕಚ್ಚಿಕೊಂಡು,ಮನೆಗಳ, ಗ್ರಾಮಗಳ,ನಗರಗಳ ಆಕಾರವಾದ ಚಿತ್ರಗಳನ್ನು ಹೊಂದಿರುವ ಚಿತ್ರಕಂಬಳಿಗಳನ್ನು ಹಾಸಿ ಇರುವುದರಿಂದ ಅನೇಕ ಗೃಹಗಳನ್ನೂ, ದೇಶಗಳನ್ನೂ ಒಳಗೊಂಡಿರುವ ಭೂಭಾಗವೇ ಇದೋ ಎಂಬಂತೆ ಕಾಣಬರುತ್ತ, ಕೊಬ್ಬಿರುವ ಬಗೆಬಗೆಯ ಹಕ್ಕಿಗಳ ಸದ್ದುಳ್ಳುದಾಗಿ, ದಿವ್ಯ ಪರಿಮಳದ ಸುವಾಸನೆಯಿಂದ ಗರ್ಭಿತವಾಗಿ, ಶ್ರೇಷ್ಠಗಳಾದ ಮೇಲು ಹಾಸಿಗೆಗಳಿಂದ ಅಲಂಕರಿಸಲ್ಪಟ್ಟು, ಅನೇಕ ರಾಕ್ಷಸಾಧಿಪರನ್ನೊಳಗೊಂಡು,ಕಾಲಾಗುರು,ಮೊದಲಾದವುಗಳಧೂಪಧೂಮದಿಂದತುಂಬಿ,ನಿರ್ದೋಷವೆನಿಸಿ,ರಾಜಹಂಸದಂತೆ ಧವಳ ವರ್ಣದಿಂದ ಬೆಳಗುತ, ವಿಚಿತ್ರ ಪುಷ್ಪಾಲಂಕಾರದಿಂದ ಬಲುಅಂದವಾಗಿ, ನಂದಿನೀಧೇನುವಿನಂತೆ ಶೋಭಾಯಮಾನವೆನಿಸಿ, ಶುಕ್ಲ ನೀಲಪೀತಾದಿವರ್ಣಸಮುದಾಯಕ್ಕೂ ವರ್ಣಸೌಂದರ್ಯವನ್ನು ಕೊಡತಕ್ಕುದಾಗಿ, ನೋಡಿದಕೂಡಲೇ ಮನಸ್ಸಿಗುಂಟಾಗಿದ್ದ ಸಮಸ್ತವ್ಯಸನವನ್ನೂ ಪರಿಹರಿಸಿ, ಮನೋಲ್ಲಾಸವನ್ನುಂಟುಮಾಡುತ್ತಾ, ದಿವ್ಯಸೌಂದರ್ಯಲಕ್ಷ್ಮಿಗೆ ತಾಯಿಯಂತಿದ್ದು, ರಾಕ್ಷಸ ಸಾರ್ವಭೌಮನ ಮನಸ್ಸಿಗೆ ಒಪ್ಪುತಲಿರುವ ಮಹಾ

ಧೂಮ್ರಾ ಮಗರುಧೂಪೇನ ವಿಮಲಾಂ ಹಂಸಪಾಂಡುರಾಂ ।
ಚಿತ್ರಾಂ ಪುಷ್ಪೋಪಹಾರೇಣ ಕಲ್ಮಾಷೀಮಿವ ಸುಪ್ರಭಾಂ ॥ ೨೮॥
ಮನ ಸ್ಸಂಹ್ಲಾದ ಜನನೀಂ ವರ್ಣಸ್ಯಾಪಿ ಪ್ರಸಾದಿನೀಂ ।
ತಾಂ ಶೋಕನಾಶಿನೀಂ ದಿವ್ಯಾಂಶ್ರಿಯ ಸ್ಸಂಜನನೀ ಮಿವ ॥೨೯॥
ಇಂದ್ರಿಯಾ ಣೀಂದ್ರಿಯಾರ್ಥೈಸ್ತು ಪಂಚ ಪಂಚಭಿ ರುತ್ತಮೈಃ ।
ತರ್ಪಯಾಮಾಸ ಮಾತೇವ ತದಾ ರಾವಣಪಾಲಿತಾ ॥೩೦॥
ಸ್ವರ್ಗೋಯಂ ದೇವಲೋಕೋಯ ಮಿಂದ್ರಸ್ಯೇಯಂ ಪುರೀಭವೇತ್ ।

ಅಗುರು - ಅಗುರುವುಎಂಬ ಗಂಧದ ಚಕ್ಕೆಯ, ಧೂಪೇನ- ಹೊಗೆಯಿಂದ, ಧೂಮ್ರಾಂ - ಕೆಂಪು ಮತ್ತು ಕಪ್ಪು ಬಣ್ಣವುಳ್ಳುದೂ, ವಿಮಲಾಂ - ನಿರ್ಮಲವಾದುದೂ, ಹಂಸಪಾಂಡುರಾಂ - ಹಂಸೆಯಂತೆ ಬಿಳುಪಾದುದೂ, ಪುಷ್ಪೋಪಹಾರೇಣ - ಕುಸುಮಹಾರಾಲಂಕಾರದಿಂದ, ಸುಪ್ರಭಾಂ- ಮಹತ್ತರವಾದ ಕಾಂತಿಯುಳ್ಳುದೂ ಅದಕಾರಣವೇ, ಕಲ್ಮಾಷೀಮಿವ - ವಶಿಷ್ಠ ಮಹರ್ಷಿಯ ಚಿತ್ರವರ್ಣದ ನಂದಿನೀ ಧೇನುವಿನಂತಿರುವುದಾಗಿಯೂ, ॥೨೮॥ ಮನಸ್ಸಂಹ್ಲಾದಜನನೀಂ - ಮನಸ್ಸಿಗೆ ಅತ್ಯಂತ ಹರ್ಷವನ್ನುಂಟುಮಾಡುತಿರುವುದೂ ವರ್ಣಸ್ಯಾಪಿ - ಕೆಂಪು ಕಪ್ಪು ಬಿಳುಪು ಮೊದಲಾಗಿರುವ ಉತ್ತಮವಾದ ಬಣ್ಣಗಳಿಗೂ, ಪ್ರಸಾದಿನೀಂ - ತನ್ನ ಕಾಂತಿಯಿಂದ ಅಲಂಕಾರವನ್ನುಂಟುಮಾಡುತಲಿರುವುದೂ, ಶ್ರಿಯಃ- ಅಪರಿಮಿತಕಾಂತಿ ಸಂಪತ್ತಿಗೆ, ಸಂಜನನೀಮಿವ - ತಾಯಿಯಂತಿರುವ, ಶೋಕನಾಶಿನೀಂ - ನೋಡಿದಕೂಡಲೆ ಸಕಲದುಃಖ ಪರಿಹಾರಕವಾದ, ತಾಂ - ಆ ಲೋಕೋತ್ತರವಾದ ಮಂದಿರವನ್ನು, ದದರ್ಶ - ಕಂಡನು ॥೨೯॥ ರಾವಣ ಪಾಲಿತಾ - ರಾವಣನಿಂದ ಪಾಲಿಸಲ್ಪಡುತಲಿರುವ, ಸಾಶಾಲಾ - ಆ ದಿವ್ಯಮಂದಿರವು, ಮಾತೇವ - ತಾಯಿಯು ಹೇಗೋ ಹಾಗೆ, ತದಾ - ಆ ಮಾರುತಿಯು ಪ್ರವೇಶಿಸಿದ ಕಾಲದಲ್ಲಿ, ಉತ್ತಮೈಃ - ಬಹುಶ್ರೇಷ್ಠಗಳೆನಿಸಿದ, ಪಂಚಭಿಃ - ಐದಾದ, ಇಂದ್ರಿಯಾರ್ಥೈಸ್ತು - ರೂಪರಸ ಗಂಧ ಸ್ಪರ್ಶ ಶಬ್ದಗಳಿಂದಲಾದರೋ, (ತಸ್ಯ - ಆ ಆಂಜನೇಯನ) ಪಂಚ - ಐದಾದ, ಇಂದ್ರಿಯಾಣಿ - ಚಕ್ಷುರಾದಿ ಇಂದ್ರಿಯಗಳನ್ನು, ತರ್ಪಯಾಮಾಸ - ಆನಂದಗೊಳಿಸಿತು ॥೩೦॥ ಅಯಂ - ಇದು,(ಪುರಾ - ಪೂರ್ವದಲ್ಲಿ) ಸ್ವರ್ಗಃ - ಸುಕೃತಶಾಲಿಗಳು ಪಡೆಯು

ಸೌಭಾಗ್ಯನಿಧಿಯಾದ ದಿವ್ಯ ಮಂಗಳ ಮಹಿಳೆಯೋ ಎಂಬಂತಿರುವ ಆ ಪುಷ್ಪಕದ ಒಳಗಣ ಮಹಾಶಾಲೆಯನ್ನು ಕಂಡನು, ಅದರ ಒಳಹೊಗಲು ಉದ್ಯುಕ್ತನೂಆದನು॥೨೨,೨೪,೨೫,೨೬,೨೭,೨೭,೨೮,೨೯,॥ ಒಳಕ:-ಹೆತ್ತತಾಯಿ ಅಂದವಾದ ಪದಾರ್ಥವನ್ನು ತೋರಿ, ರುಚಿಯಾದ ಪದಾರ್ಥವನ್ನು ತಿನ್ನಲಿಕ್ಕೆ ಕೊಟ್ಟು, ದಿವ್ಯಪರಿಮಳದ್ರವ್ಯವನ್ನು ಮೈಗೆ ಸವರಿ, ಬಹು ಮೃದುವಾಗಿರುವ ತೊಡಿಗೆಗಳನ್ನು ತೊಡಿಸಿ, ಕಿವಿಗಿಂಪಾಗಿರುವಂತೆ ಮಂಗಳ ಪದ್ಯಗಳನ್ನು ಹಾಡಿ, ತನ್ನ ಕಂದನನ್ನು ಆನಂದಗೊಳಿಸುವಹಾಗೆ,ಅಂತಾ ದಿವ್ಯಶಾಲೆಯು ತನ್ನೊಳಗೆ ತುಂಬಿರುವ ರೂಪಸೌಂದರ್ಯವನ್ನು ಪಡೆದವಿಚಿತ್ರಪದಾರ್ಥ, ರಸವತ್ತರಗಳಾದ ದಿವ್ಯದ್ರವದ್ರವ್ಯ, ಗಮಗಮಿಸುವ ಪರಿಮಳವಸ್ತು, ಅವಯವಗಳಿಗೆ ಸೋಂಕಿದ ಕೂಡಲೇ ಆನಂದಗೊಳಿಸುವ ವಿಷಯ, ದಿವ್ಯಮಂಗಳಗಾನ, ಎಂಬ ಪಂಚೇಂದ್ರಿಯಾರ್ಥಗಳಿಂದ ಈಮಾರುತಿಯ ಮನವನ್ನೂ ತೃಪ್ತಿಗೊಳಿಸುತಲಿದ್ದಿತು ॥೩೦॥ ಇದಲ್ಲದೆ ಆ ಮಹಾಶಾಲೆಯನ್ನು ನೋಡಿದ ಆಂಜನೇಯನು ಇದೇನು ಸ್ವರ್ಲೋಕ ಸಾಮ್ರಾಜ್ಯವೋ ? ಅಥವಾ ಇಂದ್ರನೇಪಾಸವಮಾಡುವ

ಸಿದ್ಧಿರ್ವೇಯಂ ಪರಾ ಹಿ ಸ್ಯಾ ದಿತ್ಯಮನ್ಯತ ಮಾರುತಿಃ ॥೩೧॥
ಪ್ರಧ್ಯಾಯತ ಇವಾಪಶ್ಯ ತ್ಪ್ರದೀಪ್ತಾಂ ಸ್ತತ್ರ ಕಾಂಚನಾನ್ ।
ಧೂರ್ತಾನಿವ ಮಹಾಧೂರ್ತೈ ರ್ದೇವನೇನ ಪರಾಜಿತಾನ್ ॥೩೨॥
ದೀಪಾನಾಂ ಚ ಪ್ರಕಾಶೇನ ತೇಜಸಾ ರಾವಣಸ್ಯ ಚ ।
ಅರ್ಚಿರ್ಭಿ ರ್ಭೂಷಣಾನಾಂ ಚ ಪ್ರದೀಪ್ತೇ ತ್ಯಭ್ಯಮನ್ಯತ ॥೩೩॥
ತತೋ ಪಶ್ಯ ತ್ಕುಥಾಸೀನಂ ನಾನಾ ವರ್ಣಾಂಬರ ಸ್ರಜಂ ।

ತಕ್ಕ ಸ್ವರ್ಗಲೋಕವೇ, ಭವೇತ್ - ಆಗಿರಬೇಕು, (ಅಥವಾ - ಇಲ್ಲದಿದ್ದರೆ) ಅಯಂ - ಇದು, ದೇವಲೋಕಃ - ಇಂದ್ರನನ್ನು ಬಿಟ್ಟು ಇತರದಿಕ್ಪಾಲಕರ, ಲೋಕಃ - ಲೋಕವೇ, ಭವೇತ್ - ಆಗಿರಬೇಕು, (ಅಥವಾ - ಹಾಗಿಲ್ಲದಿದ್ದರೆ) ಇಂದ್ರಸ್ಯ - ದೇವೇಂದ್ರನವೇ ಆದ, ಪುರೀ - ಅಮರಾವತೀ ಪುರವೇ, ಭವೇತ್ - ಆಗಿರತಕ್ಕದ್ದು, (ಅಥವಾ - ಇಲ್ಲದ ಪಕ್ಷದಲ್ಲಿ) ಪರಾ - ಸರ್ವೋತ್ತಮವೆನಿಸಿದ, ಸಿದ್ಧಿರ್ವಾ - ಸರ್ವತಪಃಫಲವಾದ ಸತ್ಯಲೋಕವಾದರೂ, ಸ್ಯಾತ್ - ಆಗಿರಲೇಬೇಕು, ಇತಿ - ಹೀಗೆಂದು, ಮಾರುತಿಃ - ಆಂಜನೇಯನು, ಅಮನ್ಯತ - ಭಾವಿಸಿದನು ॥೩೧॥ (ಸಃ - ಆ ಮಾರುತಿಯು) ತತ್ರ - ಆ ಬ್ರಹ್ಮಲೋಕದಂತಿರುವ ಮನೆಯಲ್ಲಿ, ಕಾಂಚನಾನ್ - ಚಿನ್ನದಕಂಬಗಳಲ್ಲಿ ಕೆತ್ತಲ್ಪಟ್ಟವರಾದಕಾರಣವೇ, ಪ್ರದೀಪ್ತಾನ್ ಚಚ್ಚಾಗಿ ಹೊಳೆಯುತಲಿರುವ, ಧೂರ್ತಾನ್ - ಗೊಂಬೆಗಳರೂಪದಿಂದಿರುವ ಪಗಡೆಯಾಟದವರನ್ನು, ಮಹಾಧೂರ್ತೈಃ - ಬಲ್ಲಿದ ಜೂಜಾಟಗಾರರಿಂದ, ದೇವನೇನ - ಪಗಡೆಯಾಟದಿಂದ, ಪರಾಜಿತಾನಿವ - ಸೋಲಿಸಲ್ಪಟ್ಟವರಂತಿದ್ದರಾದಕಾರಣವೇ, ಪ್ರಧ್ಯಾಯತಇವ - ಚಲವಾಗಿಚಿಂತಿಸುತಲಿರುವವರನ್ನು ಹೇಗೋಹಾಗೆ ಅಪಶ್ಯತ್ - ನೋಡಿದನು ॥೩೨॥ (ಸಾ - ಆ ಶಾಲೆಯು) ದೀಪಾನಾಂ - ದೀವಿಗೆಗಳ, ಪ್ರಕಾಶೇನ - ಬೆಳಕಿನಿಂದಲೂ, ರಾವಣಸ್ಯ - ದಶಕಂಠನ, ತೇಜಸಾಚ - ರಾಜತೇಜಸ್ಸಿನಿಂದಲೂ, ಭೂಷಣಾನಾಂ - ಆಭರಣಗಳ, ಅರ್ಚಿರ್ಭಿಶ್ಚ - ಕಾಂತಿಗಳಿಂದಲೂ, ಪ್ರದೀಪ್ತೇತಿ - ಉರಿಯುತಲಿದೆಯೋ ಎಂದು, ಅಭ್ಯಮನ್ಯತ - ಸಂಭಾವಿಸಿದನು ॥೩೩॥ ತತಃ - ಅನಂತರದಲ್ಲಿ, ರಾತ್ರೌ - ಇರುಳಿನೊಳಗೆ, ಅರ್ಧರಾತ್ರೇ - ಅರ್ಧರಾತ್ರಿಯು, ಪರಿವೃತ್ತೇತು (ಸತಿ) ಕಳೆದುಹೋಗುತ್ತಿರಲಾಗಿ, ವರನಾರೀಣಾಂ - ಉತ್ತಮಾಂಗನೆಯರ, ಸಹಸ್ರಂ -

ಅಮರಾವತೀನಗರವೋ?, ಇಲ್ಲವೆ ಸುಕೃತಶಾಲಿಗಳಾದ ಪಿತೃದೇವತೆಗಳ ಸುಖಾವಾಸಸ್ಥಾನವೋ ? ಹಾಗಿಲ್ಲದಿದ್ದರೆ ತಪಸ್ಸಮೃದ್ಧಿಯ ಫಲಪರಿಣಾಮವೇನೋ ಎಂಬುದಾಗಿ ಭಾವಿಸಿದನು ॥೩೧॥ ಆವೇಳೆ ಸತ್ಯಲೋಕವನ್ನು ಹೋಲುತಲಿರುವ ಆ ದಿವ್ಯಮಂದಿರದೊಳು ಬೆಳಗುತಲಿರುವ ಸುವರ್ಣಮಯವಾದ ಸ್ತಂಭಗಳೊಳಗೆ ಪಗಡೆಯ ಆಟವನ್ನು ಆಡುತ್ತಿರುವ ಹಾಗೆ ಪ್ರತಿಮೆಯರೂಪದಿಂದ ಕೆತ್ತಿರುವ ಗೊಂಬೆಗಳನ್ನು ನೋಡಿದನು, ಆ ಪ್ರತಿಮಾರೂಪರಾದ ಆಟಗಾರರು ತಮಗಿಂತ ಗಟ್ಟಿಗರಾದ ಆಟಗಾರರು ತಮ್ಮನ್ನು ಆಟದಲ್ಲಿ ಸೋಲಿಸಲು ಆಕೊರತೆಯಿಂದ ಮನನೊಂದು ಬಹಳವಾಗಿ ಚಿಂತಿಸುತಲಿರುವರೋ ಎಂಬಂತೆ ಕಾಣಬರುತಲಿದ್ದರು ॥೩೨॥ ಮತ್ತು - ಆಮನೆಯೊಳಗೆ ಅಂಟಿಸಿ ಇರುವ ದೀಪಗಳ ಮಹಾಪ್ರಕಾಶದಿಂದಲೂ, ರಾವಣನ ತೇಜೋವಿಶೇಷದಿಂದಲೂ, ಅಲ್ಲಿ ಮಲಗಿರುವ ದಿವ್ಯ ಸುಂದರಿಯರ ರತ್ನಾಭರಣಗಳ ಹೊಳವಿನಿಂದಲೂ ಆ ಮನೆಯು ಥಳಥಳನೆ ಇಲ್ಲವೆ ಫಳಫಳನೆ ಅಥವಾಸಿಗನಿಗನೆ ರಾಶಿರೂಪವಾಗಿ ಜ್ವಲಿಸುತಲಿದೆಯೋ ಎಂಬಂತೆ ತೋರಿಬರುತಲಿದ್ದಿತು ॥೩೩॥

ಸಹಸ್ರಂ ವರನಾರೀಣಾಂ ನಾನಾವೇಷ ವಿಭೂಷಿತಂ ॥೩೪॥
ಪರಿವೃತ್ತೇ ರ್ಧರಾತ್ರೇತು ಪಾನನಿದ್ರಾ ವಶಂಗತಂ ।
ಕ್ರೀಡಿತ್ವೋ ಪರತಂ ರಾತ್ರೌ ಸುಷ್ವಾಪ ಬಲವತ್ತದಾ ॥೩೫॥
ತತ್ಪ್ರಸುಪ್ತಂ ವಿರುರುಚೆ ನಿಶ್ಶಬ್ದಾಂತರ ಭೂಷಣಂ ।
ನಿಶ್ಶಬ್ದ ಹಂಸಭ್ರಮರಂ ಯಥಾ ಪದ್ಮವನಂ ಮಹತ್ ॥೩೬॥
ತಾಸಾಂ ಸಂವೃತದಂತಾನಿ ಮೀಲಿತಾಕ್ಷಾಣಿ ಮಾರುತಿಃ ।
ಅಪಶ್ಯ ತ್ಪದ್ಮಗಂಧೀನಿ ವದನಾನಿ ಸುಯೋಷಿತಾಂ ॥೩೭॥

---

ಸಾವಿರವು, ಬಲವತ್ - ವಿಶೇಷವಾಗಿ, ಸುಷ್ವಾಪ- ಮಲಗಿನಿದ್ರೆಮಾಡುತಲಿತ್ತು, ಕುಥಾಸೀನಂ - ಹಾಸಿಗೆಯ ಮೇಲಿರುವ, ನಾನಾ - ಅನೇಕವಿಧವಾದ, ವರ್ಣ - ರೂಪಸೌಂದರ್ಯವೂ, ಅಂಬರ - ವಸ್ತ್ರಸೌಂದರ್ಯವೂ, ಸ್ರಜಾಂ - ಪುಷ್ಪಮಾಲಾಸೌಂದರ್ಯವೂಉಳ್ಳ, ನಾನಾವೇಷ - ಬಗೆಬಗೆಯ ಅಲಂಕಾರಗಳಿಂದ, ವಿಭೂಷಿತಂ- ಅಲಂಕರಿಸಲ್ಪಟ್ಟಿರುವ, ಕ್ರೀಡಿತ್ವಾ - ಬಗೆಬಗೆಯ ಆಟಗಳನ್ನಾಡಿ, ಉಪರತಂ - ಶಾಂತವಾಗಿರುವ, ಪಾನ - ಕುಡಿದಮತ್ತಿನಿಂದಲೂ, ನಿದ್ರಾ - ನಿದ್ದೆಗೂ, ವಶಂಗತಂ - ಸ್ವಾಧೀನವಾಗಿ ಹೋಗಿರುವ ಆ ಹೆಂಗಳಗುಂಪನ್ನು, ಅಪಶ್ಯತ್ - ನೋಡಿದನು ॥೩೪।೩೫॥ ಪ್ರಸುಪ್ತಂ- ಗಾಢನಿದ್ರೆಯೊಳಿರುವುದಾದಕಾರಣವೇ, ನಿಶ್ಶಬ್ದ - ಸದ್ದಿಲ್ಲದ, ಅಂತರ - ಮನೆಯೊಳಗಣ, ಭೂಷಣಂ - ಆಭರಣಗಳುಳ್ಳ, ತತ್ - ಆಸ್ತ್ರೀಸಹಸ್ರವೂ, ಮಹತ್ - ದೊಡ್ಡದಾದ, ನಿಶ್ಶಬ್ದಹಂಸಭ್ರಮರಂ - ಸದಿಲ್ಲದ ಹಂಸೆಮತ್ತು ದುಂಬಿಗಳುಳ್ಳ, ಪದ್ಮವನಂ ಯಥಾ - ತಾವರೆ ಹೂವೊಳವು ಹೇಗೊ ಹಾಗೆ, ವಿರುರುಚೆ - ವಿಶೇಷವಾಗಿ ಪ್ರಕಾಶಿಸುತಲಿತ್ತು ॥೩೬॥ ಮಾರುತಿಃ - ವಾಯುಪುತ್ರನು, ಸಂವೃತದಂತಾನಿ - ತುಟಿಗಳಿಂದ ಹಲ್ಲುಗಳನ್ನು ಮುಚ್ಚಿಕೊಂಡಿರುವುವೂ ಮೀಲಿತಾಕ್ಷಾಣಿ - ಮುಗಿದಕಣ್ಣುಳ್ಳವೂ, ಪದ್ಮಗಂಧೀನಿ - ತಾವರೆಯಂತೆ ಸುವಾಸನೆಯುಳ್ಳವೂ ಆಗಿರುವ, ತಾಸಾಂ - ಅಲ್ಲಿ ಮಲಗಿರುವ, ಸುಯೋಷಿತಾಂ-ಸುಂದರಾಂಗಿಯರ, ವದನಾನಿ-ಮುಖಗಳನ್ನು, ಅಪಶ್ಯತ್ -

---

ಅಂತಹ ಮಹಾಭವನದೊಳಗೆ ಬಂದು ಕಡೆ, ಮೃದುವಾಗಿಯೂ, ನಿರ್ಮಲವಾಗಿಯೂ, ವಿಚಿತ್ರವಾಗಿಯೂ, ಸುಖಕರವಾಗಿಯೂ ಇರುವ ಹಾಸಿಗೆಗಳ ಮೇಲೆ ದಿವ್ಯಾಭರಣಗಳನ್ನೂ, ದಿವ್ಯಸುಗಂಧ ಪರಿಮಳಯುಕ್ತವಾದ ವಿವಿಧ ಪುಷ್ಪಮಾಲಿಕೆಗಳನ್ನೂ ಧರಿಸಿ, ವಿಚಿತ್ರಾಲಂಕಾರಗಳಿಂದ ಅಲಂಕೃತರಾಗಿಯೂ ಇರುವ ಸರ್ವಾಂಗ ಸುಂದರಿಯರಾದ ಸಾವಿರಾರು ಮಂದಿ ಸುಂದರಿಯರು ಮಲಗಿರುವ ಪರಿಪಾಟಿಯನ್ನು ಪವಮಾನಪುತ್ರನು ಪರಿಕಿಸಿದನು ॥೩೪॥ ಅವರೆಲ್ಲಾ ಆಂಜನೇಯನು ಅಲ್ಲಿಗೆ ಪ್ರವೇಶಿಸುವ ಸಮಯದಲ್ಲಿ ಅರ್ಧರಾತ್ರಿಯು ಕಳೆದು ಹೋಗಿತ್ತು. ಅತಿತನ ಹೆಂಡತಿಯರೊಳಗೆ ಆ ಕಾಮಿನಿಯರೆಲ್ಲರೂ ಮನಬಂದಂತೆ ತಿಂದು, ಕುಡಿದು, ಆಟಪಾಟಗಳನ್ನಾಡಿ, ಶ್ರಾಂತರಾಗಿ, ನಿದ್ರಾಪರವಶತೆಯಿಂದ ಸುಖವಾಗಿ ಮಲಗಿದ್ದರು, ॥೩೫॥ ಹಾಗೆ ಮಲಗಿದ್ದ ಹೆಂಗಳ ಹಿಂಡು ಉಡಿಗೆತೊಡಿಗೆಗಳ ಸದ್ದೊಂದೂ ಇಲ್ಲದೆ, ನಿಶ್ಶಬ್ದವಾದ ಅಂಚೆಗಳನ್ನೂ, ದುಂಬೆಗಳನ್ನೂ ಒಳಗೊಂಡಿರುವ ತಾವರೆಗಳ ತೋಟದಂತೆ ಕಂಗೊಳಿಸುತಲಿದ್ದಿತು ॥೩೬॥ ತುಟಿಗಳಿಂದ ಮುಚ್ಚಿದ ಹಲ್ಲುಗಳನ್ನೂ, ಮುಗಿದ ಕಣ್ಣುಗಳನ್ನೂ ಒಳಗೊಂಡು, ತಾವರೆಗಳಂತೆ ಸುವಾಸನೆಗಳುಳ್ಳವಾದ ಆ ಮಾನಿನಿಯರ ಮುಖಗಳನ್ನೆಲ್ಲ ನೋಡುತ ಬಂದನು ॥೩೭॥ ಹಗಲಿನಲ್ಲೆಲ್ಲ ಕಳಕಳನೆ ಚೆನ್ನಾಗಿ ಅರಳಿದ್ದು ಸಂಜೆ

ಪ್ರಬುದ್ಧಾನೀವ ಪದ್ಮಾನಿ ತಾಸಾಂ ಭೂತ್ವಾ ಕ್ಷಪಾಕ್ಷಯೇ ।
ಪುನ ಸ್ಸಂವೃತ ಪತ್ರಾಣಿ ರಾತ್ರಾವಿವ ಬಭುಸ್ತದಾ ॥೩೮॥
ಇಮಾನಿ ಮುಖಪದ್ಮಾನಿ ನಿಯತಂ ಮತ್ತ ಷಟ್ಪದಾಃ ।
ಅಂಬುಜಾನೀವ ಫುಲ್ಲಾನಿ ಪ್ರಾರ್ಥಯಂತಿ ಪುನಃಪುನಃ ॥ ೩೯ ॥
ಇತಿಚಾ ಮನ್ಯತ ಶ್ರೀಮಾ ನುಪಪತ್ತ್ಯಾ ಮಹಾಕಪಿಃ ।
ಮೇನೇ ಹಿ ಗುಣತ ಸ್ತಾನಿ ಸಮಾನಿ ಸಲಿಲೋದ್ಭವೈಃ ॥೪೦॥
ಸಾ ತಸ್ಯ ಶುಶುಭೇ ಶಾಲಾ ತಾಭಿ ಸ್ತ್ರೀಭಿ ರ್ವಿರಾಜಿತಾ ।
ಶಾರದೀವ ಪ್ರಸನ್ನಾ ದ್ಯೌ ಸ್ತಾರಾಭಿ ರಭಿಶೋಭಿತಾ ॥೪೧॥
ಸ ಚ ತಾಭಿಃ ಪರಿವೃತ ಶ್ಶುಶುಭೇ ರಾಕ್ಷಸಾಧಿಪಃ ।

ಗುರುತುಹಿಡಿಯುಲಿಕ್ಕಾಗಿ ನೋಡಿದನು ॥ ೩೭ ॥ ತಾಸಾಂ - ಆ ಕಾಮಿನಿಯರ, ವದನಾನಿ - ಮುಖಗಳು, ಕ್ಷಪಾಕ್ಷಯೇ - ಹಗಲಹೊತ್ತಿನಲ್ಲಿ, ಪ್ರಬುದ್ಧಾನಿ - ಚೆನ್ನಾಗಿ ಅರಳಿದ್ದವುಗಳು, ಭೂತ್ವಾ - ಆಗಿ, ಪುನಃ - ಮರಳಿ, ರಾತ್ರೌ - ಇರುಳಿನಲ್ಲಿ, ಸಂವೃತಪತ್ರಾಣಿ - ಮುಗಿದ ಎಸಳುಗಳುಳ್ಳ, ಪದ್ಮಾನೀವ - ತಾವರೆಗಳಂತೆ, ತದಾ - ಆಗ, ಬಭುಃ - ಹೊಳೆಯುತಲಿದ್ದವು ॥೩೮॥ ಮತ್ತಷಟ್ಪದಾಃ - ಕೊಬ್ಬಿದ ದುಂಬಿಗಳು, ಇಮಾನಿ - ಈ, ಮುಖಪದ್ಮಾನಿ - ತಾವರೆಯಂತಿರುವ ಮೋರೆಗಳನ್ನು, ಫುಲ್ಲಾನಿ-ಅರಳಿದ, ಅಂಬುಜಾನೀವ - ತಾವರೆಗಳನ್ನು ಹೇಗೋ ಹಾಗೆ, ಪುನಃಪುನಃ - ಅಡಿಗಡಿಗೆ, ನಿಯತಂ - ನಿಜವಾಗಿಯೂ - ಪ್ರಾರ್ಥಯಂತಿ - ಬಯಸುತ್ತಿವೆ, ಇತಿ - ಹೀಗೆಂದು, ಅಮನ್ಯತ - ನೆನೆದನು ॥ ೩೯ ॥ ಶ್ರೀಮಾನ್ - ಬಹುತೇಜಸ್ವಿಯಾದ, ಮಹಾಕಪಿಃ - ಹನುಮಂತನು, ಇತಿ - ಈ ಮೇಲೆ ಹೇಳಿದ, ಉಪಪತ್ತ್ಯಾ ಚ - ದುಂಬಿಗಳು ಮೋರೆಗಳನ್ನು ಬಯಸುವ ಯುಕ್ತಿಯಿಂದಲೇ, ತಾನಿ - ಆ ಮುಖಗಳನ್ನು, ಗುಣತಃ- ಕೆಂಪು, ಸುವಾಸನೆ, ಮೃದುತ್ವವೊದಲಾದಗುಣಗಳಿಂದ, ಸಲಿಲೋದ್ಭವೈಃ-ತಾವರೆಗಳೊಡನೆ, ಸಮಾನಿ- ಸಮಾನವಾದವುಗಳನ್ನಾಗಿ, ಮೇನೆ - ತಿಳಿದನು, ಹಿ - ನಿಶ್ಚಯ ॥೪೦॥ ತಸ್ಯ - ಆ ರಾವಣನ, ತಾಭಿಃ - ಅಲ್ಲಿ ಬೆಳಗುತಲಿದ್ದ, ಸ್ತ್ರೀಭಿಃ - ಅಬಲೆಯರಿಂದ, ಸಾಶಾಲಾ - ಆ ಮಂದಿರವು, ತಾರಾಭಿಃ - ನಕ್ಷತ್ರಗಳಿಂದ, ಶಾರದೀ - ಆಶ್ವಯುಜ ಕಾರ್ತಿಕಮಾಸದಲ್ಲಿನ, ಪ್ರಸನ್ನಾ - ನಿರ್ಮಲವಾದ, ದ್ಯೌರಿವ, ಅಂತರಿಕ್ಷದಹಾಗೆ, ಅಭಿಶೋಭಿತಾ - ಸುತ್ತಲೂ ಬೆಳಗುತ್ತಲಿದ್ದಿತು ॥ ೪೧ ॥ ತಾಭಿಃ - ಆ ಸುಂದರಿಯ ರಿಂದ, ಪರಿವೃತಃ-

ಯಾಗುತಬರಲು ಮುಗಿದದಳಗಳುಳ್ಳ ಸರಸೀರುಹಗಳಂತೆ ಆ ತರುಣಿಯರ ಆ ಮುಖಗಳು ಕಂಡುಬಂದುವು ॥೩೮॥ ಅಹಹ ! ಇಂತಹ ಸುವಾಸನೆಯುಳ್ಳ ಮೊಗದಾವರೆಗಳನ್ನು ಕೊಬ್ಬಿದ ದುಂಬೆಗಳು ಅರಳಿದ ತಾವರೆಗಳನ್ನು ಅಡಿಗಡಿಗೂ ಬಯಸುತಿರುವುವು ಎಂದು ನನೆದನು ॥೩೯॥ ಮತ್ತು-ಈ ಸುದತಿಯರ ವದನಗಳ ಸೌಂದರ್ಯ, ಕಪೋಲಗಳ ಕೆಂಪು, ಬಾಯಿಯ ಸುವಾಸನೆ, ಮಾರ್ದವ, ಕೋಮಲತೆ ಇತ್ಯಾದಿಗುಣಗಳನ್ನು ನೋಡಿದರೆ ಖಂಡಿತವಾಗಿ ಕಮಲಗಳೊಡನೆ ಸಮಾನಗಳೆಂದು ಹೇಳಲು ಅಡ್ಡಿಯೇನೂ ಇಲ್ಲವೆಂತಲೂ ಭಾವಿಸಿದನು ॥೪೦॥ ಅಂತು ಭಾಸಮಾನರಾದ ಭಾಮಿನಿಯರಿಂದ ತುಂಬಿರುವ ಆಶಯನಶಾಲೆಯು, ಶರತ್ಕಾಲದಲ್ಲಿ ತಾರೆಗಳಿಂದ ಪ್ರಸನ್ನತೆಯನ್ನು ಪಡೆದಿರುವ ಮುಗಿಲಮಂಡಲದಂತೆ ಶೋಭಿಸುತಲಿದ್ದಿತು ॥ ೪೧ ॥ ಹಾಗೆಶೋಭಿಸುತ ಮಲಗಿರುವ ನಿತಂಬಿನಿಯರಿಂದ ಬಳಸಲ್ಪಟ್ಟ

ಯಥಾ ಹ್ಯುಡುಪತಿಃ ಶ್ರೀಮಾನ್ ತಾರಾಭಿರಭಿಸಂವೃತಃ ॥೪೦॥
ಯಾಶ್ಚ್ಯವಂತೇಂಬರಾತ್ತಾರಾಃ ಪುಣ್ಯಶೇಷಸಮಾವೃತಾಃ ।
ಇಮಾಸ್ತಾಸ್ಸಂಗತಾಃ ಕೃತ್ಸ್ನಾ ಇತಿ ಮೇನೇ ಹರಿಸ್ತದಾ ॥ ೪೧ ॥
ತಾರಾಣಾಮಿವ ಸುವ್ಯಕ್ತಂ ಮಹತೀನಾಂ ಶುಭಾರ್ಚಿಷಾಂ ।
ಪ್ರಭಾ ವರ್ಣ ಪ್ರಸಾದಾಶ್ಚ ವಿರೇಜುಸ್ತತ್ರ ಯೋಷಿತಾಂ ॥೪೨॥
ವ್ಯಾವೃತ್ತ ಗುರುಪೀನಸ್ರಕ್ಪ್ರಕೀರ್ಣ ವರಭೂಷಣಾಃ ।
ಪಾನ ವ್ಯಾಯಾಮ ಕಾಲೇಷು ನಿದ್ರಾಪಹೃತ ಚೇತಸಃ ॥೪೩॥

---

ಆವರಿಸಲ್ಪಟ್ಟಿರುವ, ಸಃ - ಆ, ರಾಕ್ಷಸಾಧಿಪತಿಶ್ಚ-ರಾಕ್ಷಸ ಸಾರ್ವಭೌಮನೂ, ತಾರಾಭಿಃ - ಚುಕ್ಕೆಗಳಿಂದ, ಅಭಿಸಂವೃತಃ - ಬಳಸಲ್ಪಟ್ಟಿರುವ, ಶ್ರೀಮಾನ್ - ಶೋಭಾತಿಶಯವುಳ್ಳ, ಉಡುಪತಿರ್ಯಥಾ - ಉಡುರಾಜನು ಹೇಗೋ ಹಾಗೆ, ಶುಶುಭೆ - ಹೊಳೆಯುತಲಿದ್ದನು ॥೪೦॥ ಯಾಃ - ಯಾವ ಆಕಾಶದಲ್ಲಿನ, ತಾರಾಃ - ನಕ್ಷತ್ರಗಳು, ಪುಣ್ಯಶೇಷ - ಸುಕೃತದ ಉಳಿವಿನಿಂದ, ಸಮಾವೃತಾಃ - ಕೂಡಿದವುಗಳಾಗಿ, ಅಂಬರಾತ್- ಆಕಾಶದ ದೆಸೆಯಿಂದ, ಚ್ಯವಂತೆ - ಜಾರಿಉದುರುತ್ತವೆಯೋ, ಸಂಗತಾಃ - ಒಟ್ಟಾಗಿಸೇರಿದ, ಕೃತ್ಸ್ನಾಃ- ಸಮಸ್ತಗಳಾದ, ತಾಃ - ಅವುಗಳೆಲ್ಲವೂ, ಇಮಾಃ - ಈ ಹೆಂಗಳೇಸರಿ, ಇತಿ - ಹೀಗೆಂಬದಾಗಿಯೂ, ತದಾ - ಆ ವನಿತೆಯರನ್ನು ನೋಡಿದಾಗ, ಹರಿಃ - ಮಾರುತಿಯು, ಮೇನೆ - ಭಾವಿಸಿದನು ॥೪೧॥ ಶುಭಾರ್ಚಿಷಾಂ - ಶುಭ್ರತರಕಾಂತಿಯುಳ್ಳ, ಮಹತೀನಾಂ - ತೋರಗಳಾದ, ತಾರಾಣಾಮಿವ - ನಕ್ಷತ್ರಗಳಿಗೆ ಹೇಗೋ ಹಾಗೆ, ತತ್ರ - ಆ ರಾವಣನ ಶಾಲೆಯೊಳಗೆ ಇದ್ದ, ಯೋಷಿತಾಂ - ಸೀಮಂತಿನಿಯರ, ಪ್ರಭಾವರ್ಣಪ್ರಸಾದಾಶ್ಚ - ಕಾಂತಿ, ರೂಪ, ನಿರ್ಮಲತ್ವ ಇವುಗಳು, ಸುವ್ಯಕ್ತಂ -ಬಹು ಸ್ಪಷ್ಟವಾಗಿ, ವಿರೇಜುಃ - ತಳತಳಿಸುತ್ತಲಿದ್ದುವು ॥೪೨॥ (ಕಿಂಚ - ಮತ್ತು) ಪಾನ - ಕುಡಿತದಲ್ಲಿಯೂ, ವ್ಯಾಯಾಮ- ಆಮೋಲಣ ಕುಣಿತದ, ಕಾಲೇಷು - ಸಮಯಗಳಲ್ಲಿಯೂ, ವ್ಯಾವೃತ್ತ - ಇಟ್ಟೆಡೆ ತಪ್ಪಿದ, ಗುರು - ಉತ್ತಮವಾದ, ಪೀನ - ತೋರವಾದ, ಸ್ರಕ್ - ಹೂವಿನಮಾಲೆಗಳು, ವರಭೂಷಣಾಃ - ಶ್ರೇಷ್ಠವಾದ ಆಭರಣಗಳೂಉಳ್ಳ, ತಾಃ - ಆ ಮಹಿಳೆಯರೂ, ನಿದ್ರಾ - ನಿದ್ದೆಯಿಂದ, ಅಪಹೃತ-ಅಪಹರಿಸಲ್ಪಟ್ಟ, ಚೇತಸಃ - ಮನಸ್ಸುಳ್ಳವರಾಗಿ, ವಿರೇಜುಃ - ವಿರಾಜಿಸುತಲಿದ್ದರು ॥೪೩॥ (ತಾಸು - ಆ ಕಾಮಿನಿಯರೊಳಗೆ) ಕಾಶ್ಚಿತ್-

---

ಶ್ರೀಮಂತನಾದ ರಾಕ್ಷಸಸಾರ್ವಭೌಮನು, ಬಾಂದಳದಲ್ಲಿ ತಾರೆಗಳಿಂದ ಪರಿವೃತನಾದ ತಾರಾಧಿಪನಂತೆ ಕಂಗೊಳಿಸುತಲಿದ್ದನು ॥೪೦॥ ಈ ಕರ್ಮಭೂಮಿಯಲ್ಲಿ ಸತ್ಕರ್ಮಗಳನ್ನಾಚರಿಸಿ, ಅದರಿಂದುಂಟಾದ ಸುಕೃತ ವಿಶೇಷದಿಂದ ನಕ್ಷತ್ರಸ್ಥಾನವನ್ನು ಪಡೆದು, ಅಲ್ಲಿನ ಸುಖವನ್ನು ಅನುಭವಿಸಿ, ಬಳಿಕ ಪುಣ್ಯಶೇಷದಿಂದ ಪೃಥಿವಿಗಿಳಿದ ತಾರಕೆಗಳೆಲ್ಲ ಒಟ್ಟು ಗೂಡಿ ಈ ರಕ್ಕಸನಾರಿಯರಾಗಿರುವರು ಎಂತಲೇ ಹರಿವರನು ತನ್ನ ಮನದೊಳು ಪರಿಭಾವಿಸಿದನು ॥೪೧॥ ಅಲ್ಲಿ ನೆರೆದಿರುವ ವರವರ್ಣಿನಿಯರ ಮೋರೆಗಳ ರೂಪರೇಖಾಲಾವಣ್ಯಗಳು ಶುಭಕರಗಳೆನಿಸಿದ ಮಹತ್ತರಗಳಾದ ತಾರೆಗಳ ಹಾಗೆಯೇ ಸ್ಪಷ್ಟವಾಗಿ ಪ್ರಕಾಶಿಸುತಲಿದ್ದುವು ॥೪೨॥ ಕುಡಿತದಿಂದಲೂ, ಕುಣಿತದಿಂದಲೂ ಆಯಾಸಗೊಂಡು ನಿದ್ರಾವಶಂಗತರಾದ ಆ ಮತ್ತಕಾಶಿನಿಯರು ಮೈಮರೆತಿದ್ದುದರಿಂದ, ಇಟ್ಟು ತೊಟ್ಟಿದ್ದ ವಸ್ತ್ರಾಭರಣಗಳೂ, ಹೂವಿನ ಹಾರಗಳೂ ತಂತಮ್ಮ ಸ್ಥಾನಗಳಲ್ಲಿಲ್ಲದೆ ವ್ಯತ್ಯಸ್ತಗಳಾಗಿದ್ದುವು ॥ ೪೩ ॥ ಅದೆಂತೆಂದರೆ- ಕೆಲವು ಮಂದಿ

ವ್ಯಾವೃತ್ತ ತಿಲಕಾಃ ಕಾಶ್ಚಿತ್ಕಾಶ್ಚಿದುದ್ಭ್ರಾನ್ತನೂಪುರಾಃ ।
ಪಾರ್ಶ್ವೇ ಗಳಿತಹಾರಾಶ್ಚ ಕಾಶ್ಚಿತ್ಪರಮಯೋಷಿತಃ ॥ ೪೬ ॥
ಮುಕ್ತಾಹಾರಾವೃತಾಶ್ಚಾನ್ಯಾಃ ಕಾಶ್ಚಿದ್ವಿಸ್ರಸ್ತವಾಸಸಃ ।
ವ್ಯಾವಿದ್ಧರಶನಾದಾಮಾಃ ಕಿಶೋರ್ಯ ಇವ ವಾಹಿತಾಃ ॥೪೭॥
ಸುಕುಂಡಲಧರಾಶ್ಚಾನ್ಯಾ ವಿಚ್ಛಿನ್ನಮೃದಿತಸ್ರಜಃ ।

---

ಕೆಲವುಮಂದಿ, ಪರಮಯೋಷಿತಃ - ಉತ್ತಮಸ್ತ್ರೀಯರು, ವ್ಯಾವೃತ್ತ - ಅಳಿಸಿಹೋದ, ತಿಲಕಾಃ - ಮೋರೆಯಬಟ್ಟುಳ್ಳವರಾಗಿಯೂ, ಕಾಶ್ಚಿತ್ - ಮತ್ತೆ ಕೆಲವರು, ಉದ್ಭ್ರಾಂತ - ಕಳಚಿಹೋದ, ನೂಪುರಾಃ - ಕಾಲುಕಡಗಗಳುಳ್ಳವರಾಗಿಯೂ, ಕಾಶ್ಚಿತ್ - ಇನ್ನು ಕೆಲವರು, ಪಾರ್ಶ್ವೇ - ಪಕ್ಕದಲ್ಲಿ, ಗಳಿತಹಾರಾಃ - ಜಾರಿಹೋದ ಮುತ್ತಿನಮಾಲೆಯುಳ್ಳವರಾಗಿಯೂ, ವಿರೇಜುಃ - ಕಾಣುತಿದ್ದರು ॥೪೬॥ ಅನ್ಯಾಶ್ಚ - ಬೇರೆ ಕೆಲವರಾದರೋ, ಮುಕ್ತಾಹಾರಾವೃತಾಃ - ಕಿತ್ತ ಮುತ್ತಿನ ಸರಗಳಿಂದ ಸುತ್ತಲ್ಪಟ್ಟವರಾಗಿಯೂ, ಕಾಶ್ಚಿತ್ - ಅನ್ಯರು ಕೆಲವರು, ವಿಸ್ರಸ್ತವಾಸಸಃ - ಸಡಲಿದ ಸೀರೆಯುಳ್ಳವರಾಗಿಯೂ, ಕಾಶ್ಚಿತ್ - ತದಿತರರು, ವ್ಯಾವಿದ್ಧ - ಇಳಿಯಬಿದ್ದ, ರಶನಾ - ಎಳೆಗಳ ಡಾಬಿನ, ದಾಮಾಃ - ಎಳೆಗಳುಳ್ಳವರಾಗಿಯೂ ನಿದ್ರಿಸುತಲಿದ್ದವರಾದಕಾರಣವೇ, ವಾಹಿತಾಃ - ಆಯಾಸಪರಿಹಾರಕ್ಕಾಗಿ ನೆಲದಮೇಲೆ ಹೊರಳುತಲಿರುವ, ಕಿಶೋರ್ಯಇವ - ಹೆಣ್ಣುಕುದುರೆಯ ಮರಿಗಳು ಹೇಗೋ ಹಾಗೆ, ವಿರೇಜುಃ - ತೋರಬರುತಲಿದ್ದರು ॥೪೭॥ ಅನ್ಯಾಶ್ಚ - ತದ್ಭಿನ್ನರಾದ ಕೆಲವರು, ಸುಕುಣ್ಡಲಧರಾಃ - ಶ್ರೇಷ್ಠವಾದಕರ್ಣಾಭರಣಗಳನ್ನಿಟ್ಟವರೂ, ವಿಚ್ಛಿನ್ನ - ತುಂಡಾಗಿಹೋದ, ಮೃದಿತ - ಮಗ್ಗಿ ಹೊಸಕಿಹೋದ, ಸ್ರಜಃ - ಹೂಮಾಲೆಯುಳ್ಳವರೂ ಆಗಿ, ಮಹಾವನೇ - ದೊಡ್ಡ ಅಡವಿಯಲ್ಲಿ, ಗಜೇಂದ್ರಮೃದಿತಾಃ - ಸಲಗಗಳತುಳಿತದಿಂದ ಹೊಸಕಲ್ಪಟ್ಟ, ಲತಾಇವ - ಬಳ್ಳಿಗಳಹಾಗೆ, ವಿರೇಜುಃ - ಬೆಳಗುತಲಿದ್ದರು ॥೪೮॥ ಚಂದ್ರ - ಚಂದಿರನ ಅಂಶುಕಿರಣ - ತೋರವಾದ ಮತ್ತು ಕಿರಿದಾದ ಕಳೆಗಳ, ಆಭಾಃ - ಹೊಳವಿನಂತೆ ಹೊಳವುಳ್ಳ, ಕಾಸಾಂಚಿತ್ - ಮತ್ತೆ ಕೆಲವರಾದ, ಯೋಷಿತಾಂ - ವನಿತೆಯರ, ಉತ್ಕಟಾಃ - ಬಲುತೋರವಾದ, ಹಾರಾಃ - ಮುತ್ತಿನಲಡಿಗಳು, ಸುಪ್ತಾಃ - ಮಲಗಿರುವ, ಹಂಸಾಇವ - ಹಂಸೆಗಳಂತೆ, ಸ್ತನಮಧ್ಯೇಷು -

---

ಮಹಿಳೆಯರ ಮುಖಗಳಲ್ಲಿನ ತಿಲಕಗಳು ಅಳಿಸಿಹೋಗಿದ್ದುವು, ಮತ್ತೆ ಕೆಲವರ ಕಾಲಕಡಗಗಳು ಕಳಚಿ ಕೊಂಡಿದ್ದುವು, ಇನ್ನು ಕೆಲವರ ಕೊರಳಹಾರಗಳು ಪಕ್ಕಗಳಲ್ಲಿ ಜಾರಿಬಿದ್ದಿದ್ದುವು ॥೪೬॥ ಕೆಲವರ ಮುತ್ತಿನ ಹಾರಗಳು ಸರಿದುಹೋಗಿ ಮುತ್ತುಗಳು ಸುತ್ತಲೂ ಉದುರಿದ್ದುವು, ಕೆಲವರ ಸೀರೆಗಳ ನೆರಿಗೆಗಳು ಸಡಲಿದ್ದುವು. ಕೆಲವರು ಟೊಂಕಗಳಲ್ಲಿ ಎಳೆಗಳರೂಪವಾದ ಒಡ್ಡಿಯಾಣಗಳು ಸಡಲಿನ್ಯೆಗೆ ಸುತ್ತಿಕೊಂಡು ಮಲಗಿದ್ದರೆ ಆಯಸಗೊಂಡಿದ್ದ ಕುದುರೆಮರಿಗಳು ನೆಲದ ಮೇಲೆ ಬಿದ್ದುರುಳುತ್ತಿದ್ದರೆ ಹೇಗೋಹಾಗೆ ಕಾಣಬರುತಲಿದ್ದರು ॥೪೭॥ ಸುಂದರವಾದ ಕರ್ಣಾಭರಣಗಳನ್ನು ಧರಿಸಿರುವ ಕೆಲನಾರಿಯರು ಹೊರಳಾಟದಿಂದ ಹೂವಿನಹಾರಗಳು ಕಿತ್ತೂ, ಮಗ್ಗಿಯೂ ಹೋಗಿದ್ದುದರಿಂದ, ಮಹಾವನದಲ್ಲಿ ಆನೆಗಳ ತುಳಿತದಿಂದ ಮಗ್ಗಿಹೋಗಿ ಹೊರವಾಗಿ ಬೆಳೆದಿದ್ದ ಎಳೆಬಳ್ಳಿಗಳ ಹಾಗೆ ಇರುತ್ತಿದ್ದರು ॥ ಕೆಲವು ಮಂದಿ ಲಲನೆಯರ ಕೊರಳಿನಿಂದ ಎದೆಯ ಮೇಲೆ ನೀಳವಾಗಿ ಬಿದ್ದಿರುವ ಮುತ್ತಿನ ಲಡಿಗಳನ್ನು ನೋಡಿದರೆ, ಸ್ತನಗಳ ಮಧ್ಯಗಳಲ್ಲಿ ರಾಜಹಂಸಗಳು ಪವಳಿಸಿ ಇವೆಯೋ

ಗಜೇಂದ್ರ ವ್ಯಧಿತಾಃ ಫುಲ್ಲಾ ಲತಾ ಇವ ಮಹಾವನೇ ॥೪೮॥
ಚಂದ್ರಾಂಶು ಕಿರಣಾಭಾಶ್ಚ ಹಾರಾಃ ಕಾಸಾಂ ಚಿದುತ್ಕಟಾಃ ।
ಹಂಸಾ ಇವ ಬಭುಸ್ಸುಪ್ತಾ ಸ್ತನಮಧ್ಯೇಷು ಯೋಷಿತಾಂ ॥ ೪೯ ॥
ಅಪರಾಸಾಂ ಚ ವೈಡೂರ್ಯಾಃ ಕಾದಂಬಾ ಇವ ಪಕ್ಷಿಣಃ ।
ಹೇಮಸೂತ್ರಾಣಿ ಚಾನ್ಯಾಸಾಂ ಚಕ್ರವಾಕಾ ಇವಾಭವನ್ ॥೫೦॥
ಹಂಸ ಕಾರಂಡವಾಕೀರ್ಣಾ ಶ್ಚಕ್ರವಾಕೋಪ ಶೋಭಿತಾಃ ।
ಆಪಗಾ ಇವ ತಾ ರೇಜು ರ್ಜಘನೈಃ ಪುಳಿನೈರಿವ ॥೫೧॥
ಕಿಂಕಿಣೀ ಜಾಲಸಂಕೋಶಾ ಸ್ತಾ ಹೈಮ ವಿಪುಲಾಂಬುಜಾಃ ।
ಭಾವಗ್ರಾಹಾ ಯಶಸ್ತೀರಾ ಸ್ಸುಪ್ತಾ ನದ್ಯ ಇವಾಬಭುಃ ॥೫೨॥

---

ಉರೋಜಗಳನಡುವೆ, ಬಭುಃ - ಭಾಸಮಾನಗಳಾಗಿದ್ದವು ॥ ೪೯ ॥ ಅಪರಾಸಾಂ - ಮತ್ತೆ ಕೆಲವುಮಂದಿ ಹೆಂಗಸರ, ವೈಡೂರ್ಯಾಶ್ಚ - ವಿಡೂರದೇಶದ ರತ್ನಗಳ ಹಾರಗಳು, ಕಾದಂಬಾಃ - ಹಂಸೆಗಳೆಂಬ, ಪಕ್ಷಿಣ ಇವ - ಹಕ್ಕಿಗಳಹಾಗೂ, ಅನ್ಯಾಸಾಂ - ಇನ್ನುಕೆಲವುಮಂದಿ ಸುಂದರಿಯರ, ಹೇಮಸೂತ್ರಾಣಿಚ - (ಕೊರಳಿನಲ್ಲಿನ) ಚಿನ್ನದ ಎಳೆನೂಲು, ಅಡ್ಡಿಕೆ ಮೊದಲಾದವುಗಳು, ಚಕ್ರವಾಕಾಇವ - ಚಕ್ರವಾಕ ಪಕ್ಷಿಗಳಹಾಗೂ, ಅಭವನ್ - ಇದ್ದುವು ॥೫೦॥ ಪುಳಿನೈಃ - ಮರಳು ದಿಣ್ಣೆಗಳಂತಿರುವ, ಜಘನೈಃ - ಟೊಂಕದಮುಂಭಾಗಗಳಿಂದ, ತಾಃ - ಆ ಅಂಗನೆಯರು, ಹಂಸಕಾರಂಡವಾಕೀರ್ಣಾಃ - ಹಂಸಮತ್ತು ಕಾರಂಡವ ಪಕ್ಷಿಗಳಿಂದ ತುಂಬಿರುವ, ಚಕ್ರವಾಕೋಪಶೋಭಿತಾಃ - ಚಕ್ರವಾಕ ಪಕ್ಷಿಗಳಿಂದಹೊಳೆಯುತಲೂ ಇರತಕ್ಕ ಆಪಗಾಇವ - ನದಿಗಳಹಾಗೆ, ರೇಜುಃ - ವಿರಾಜಿಸುತಲಿದ್ದರು ॥ ೫೧ ॥ ಕಿಂಕಿಣೀಜಾಲ - ಒಡ್ಡಿಯಾಣಗಳ ಕಿರುಗೆಜ್ಜೆಗಳಗುಂಪೆಂಬ, ಸಂಕೋಶಾಃ - ಹೂವಿನಮೊಗ್ಗುಗಳುಳ್ಳ, ಹೇಮ - ಸುವರ್ಣಾಭರಣಗಳೆಂಬ, ವಿಪುಲ - ವಿಸ್ತಾರವಾದ, ಅಂಬುಜಾಃ - ತಾವರೆಗಳುಳ್ಳ, ಭಾವ - ನಿದ್ರೆಯಲ್ಲಿಯೂ ಮಾಡುವ ಚೇಷ್ಟೆಗಳೆಂಬ, ಗ್ರಾಹಾಃ - ಮೊಸಳೆಗಳುಳ್ಳ, ಯಶಃ - ಬಹುಸುಂದರಿಯರೆಂಬ ಹೆಸರುವಾಸಿಗೆ ಮೂಲವಾದ ದೇಹಕಾಂತಿಯೆಂಬ, ತೀರಾಃ - ದಡಗಳುಳ್ಳ, ನದ್ಯಇವ - ಹೊಳೆಗಳಹಾಗೆ. ಸುಪ್ತಾಃ - ಮಲಗಿರುವ, ತಾಃ- ಆ ರಮಣಿಯರು, ಆಬಭುಃ - ಎಲ್ಲೆಲ್ಲಿಯೂ ಪ್ರಕಾಶಿಸುತಲಿದ್ದರು ॥೫೨॥ ಕಾಸಾಂಚಿತ್ - ಮತ್ತೆ

---

ಎಂಬಂತೆ ವಿರಾಜಿಸುತಲಿದ್ದಿತು॥೪೯॥ ಕೆಲವರ ಮೈಮೇಲೆ ವೈಡೂರ್ಯಮಣಿಗಳ ಸರಗಳು ಕಾದಂಬ ಪಕ್ಷಿಗಳ ಹಾಗೂ, ಕೆಲವರ ಕೊರಳಿನಲ್ಲಿನ ಬಂಗಾರದ ಸಣ್ಣಸರಿಗೆಗಳ ಹಾರದ ಎಳೆಗಳು ಚಕ್ರವಾಕಗಳ ಹಾಗೂ ಕಾಣಬರುತಲಿದ್ದುವು॥೫೦॥ ಇಂತಪ್ಪ ಆ ವರಾರೋಹೆಯರು ಹಂಸಕಾರಂಡವಾದಿ ಪಕ್ಷಿಗಳಿಂದ ಬಳಸಲ್ಪಟ್ಟು, ಚಕ್ರವಕ್ಕಿಗಳಿಂದ ಶೋಭಿಸುತ, ಅಲ್ಲಲ್ಲಿ ಮರಳದಿಣ್ಣೆಗಳಿಂದಲೂ ಒಡಗೂಡಿ, ರಮಣೀಯವಾಗಿರುವ ಹೊಳೆಗಳಂತೆ ಹೊಳೆಯುತಲಿದ್ದರು. ॥೫೧॥ ಕಿರುಮೊಗ್ಗುಗಳಂತಿರುವ ಸದ್ದಿಲ್ಲದ ಕಿರುಗೆಜ್ಜೆಗಳನ್ನೊಳಗೊಂಡು, ಅರಳಿದ ತಾವರೆಗಳಂತೆಸೆವ ಸ್ವರ್ಣಾಭರಣಗಳನ್ನಳವಟ್ಟು, ನಿದ್ರಾಸಮಯದಲ್ಲಿಯೂ ಆಗಾಗ ನಡೆಯುವ ಕೈಕಾಲುಗಳ ಚೇಷ್ಟೆಗಳೆಂಬ ಮೊಸಳೆಗಳನ್ನು ಹೊಂದಿ, ಬಹುಸೌಂದರ್ಯವತಿಯರೆಂಬ ಹೆಸರುವಾಸಿಗೀಡಾದ ಶರೀರವೆಂಬ ತೀರವನ್ನು ಪಡೆದು ಆ ಉತ್ತಮಸ್ತ್ರೀಯರು ಸದ್ದಿಲ್ಲದೆ ಹರಿಯುತಲಿರುವ ನದಿಗಳ ಹಾಗೆ ಕಾಣಬಂದರು॥೫೨॥ ಬಹುಕೋಮಲೆಯರಾದ ಆ ಅಬಲೆ

ಮೃದುಷ್ವಂಗೇಷು ಕಾಸಾಂ ಚಿತ್ಕುಚಾಗ್ರೇಷು ಚ ಸಂಸ್ಥಿತಾಃ ।
ಬಭೂವು ರ್ಭೂಷಣಾನೀವ ಶುಭಾ ಭೂಷಣ ರಾಜಯಃ ॥೫೨॥
ಅಂಶುಕಾಂತಾಶ್ಚ ಕಾಸಾಂ ಚಿನ್ಮುಖ ಮಾರುತಕಂಪಿತಾಃ ।
ಉಪರ್ಯುಪರಿ ವಕ್ತ್ರಾಣಾಂ ವ್ಯಾಧೂಯಂತೆ ಪುನಃಪುನಃ ॥೫೪॥
ತಾಃಪತಾಕಾಇವೋದ್ಧೂತಾಃ ಪತ್ನೀನಾಂ ರುಚಿರಪ್ರಭಾಃ।
ನಾನಾವರ್ಣ ಸುವರ್ಣಾನಾಂ ವಕ್ತ್ರಮೂಲೇಷು ರೇಜಿರೆ ॥೫೫॥
ವವಲ್ಗು ಶ್ಚಾತ್ರ ಕಾಸಾಂ ಚಿತ್ಕುಂಡಲಾನಿ ಶುಭಾರ್ಚಿಷಾಂ ।
ಮುಖಮಾರುತ ಸಂಸರ್ಗಾ ನ್ಮಂದಂಮಂದಂ ಸುಯೋಷಿತಾಂ ॥೫೬॥

---

ಕೆಲವುಂದಿ ಅತಿಸುಂದರಿಯರ, ಮೃದುಷು - ಕೋಮಲವಾದ, ಅಂಗೇಷು-ಅವಯವಗಳಲ್ಲಿಯೂ, ಕುಚಾಗ್ರೇಷುಚ - ಸ್ತನಾಗ್ರಗಳಲ್ಲಿಯೂ, ಸ್ಥಿತಾಃ - ನೆಲೆಗೊಂಡಿರುವ, ಭೂಷಣರಾಜಯಃ - ಆಭರಣಗಳಿಂದ ಹೊರಡುವತೇಜೋರೇಖೆಗಳು, ಭೂಷಣಾನೀವ - ಅಪೂರ್ವ ಬಂದುಬಗೆಯ ಆಭರಣಗಳೋ ಎಂಬಂತೆ, (ಭ್ರಮರಾಣೀವ - ದುಂಬಿಗಳಹಾಗೆ ?) ಬಭೂವುಃ - ಇದ್ದುವು ॥ ೫ ॥ ಕಾಸಾಂಚಿತ್ - ಇನ್ನು ಕೆಲವುಂದಿ ಲಲನೆಯರ, ಅಂಶುಕಾಂತಾಶ್ಚ - ಸೀರೆಗಳ ತೆಳುವಾದಸೆರಗುಗಳು, ಮುಖಮಾರುತ - ಮೂಗುಬಾಯಿಗಳಿಂದ ಹೊರಡುವ ಉಸಿರಿನಿಂದ, ಕಂಪಿತಾಃ - ಅಲುಗುತ್ತಿರುವವುಗಳಾಗಿ, ವಕ್ತ್ರಾಣಾಂ - ಮುಖಗಳ, ಉಪರ್ಯುಪರಿ-ಮೇಲೆಮೇಲೆ,ಪುನಃಪುನಃ-ಅಡಿಗಡಿಗೂ,ವ್ಯಾಧೂಯಂತೆ-ಅದರುತಲಿದ್ದುವು ॥ ನಾನಾವರ್ಣಸುವರ್ಣಾನಾಂ-ಬಗೆಬಗೆಯ ಉತ್ತಮವರ್ಣವುಳ್ಳ, ಪತ್ನೀನಾಂ-ರಾವಣ ಭಾರ್ಯೆಯರ,ವಕ್ತ್ರಮೂಲೇಷು-ಮುಖಗಳ ಹತ್ತಿರದಲ್ಲಿ,ಉದ್ಧೂತಾಃ-ಉಸಿರಿನಿಂದ ಅಲುಗುತಲಿರುವ,ತಾಃ-ಆ ಸೀರೆ ಸೆರಗುಗಳು,ರುಚಿರಪ್ರಭಾಃ-ಮನೋಹರವಾದಕಾಂತಿಯುಳ್ಳವುಗಳಾಗಿ,ಪತಾಕಾಇವ-ಸೌಂದರ್ಯಾತಿಶಯದಧ್ವಜಗಳೋ,ಎಂಬಂತೆ,ರೇಜಿರೆ-ಪ್ರಕಾಶಿಸುತಲಿದ್ದುವು॥ಅತ್ರ-ಈಹೆಂಗಳಸವಳಿಸಿರುವವುನೆಯಲ್ಲಿ, ಶುಭಾರ್ಚಿಷಾಂ-ಉತ್ತಮಕಾಂತಿಯುಳ್ಳ, ಕಾಸಾಂಚಿತ್-ಬೇರೆಕೆಲವರಾದ, ಯೋಷಿತಾಂ-ಕಾಮಿನಿಯರ, ಕುಂಡಲಾನಿ - ಕರ್ಣಾಭರಣಗಳು, ಮುಖ

---

ಯರಲ್ಲಿ ಕೆಲವರ ಮೃದುವಾದ ಶರೀರಗಳಲ್ಲಿ, ಮತ್ತೆ ಕೆಲವರ ಉರೋಜಗಳಲ್ಲಿಯೂ ತಳೆದಿರುವ ಉಡಿಗೆ ತೊಡಿಗೆಗಳ ಥಳಥಳಾಯಮಾನಗಳಾದ ಹೊಳಪುಗಳೂ ಆಸುಂದರಾಂಗಿಯರಿಟ್ಟಿರುವ ಯಾವುದೋ ಬಂದು ಬಗೆಯ ಆಭರಣಗಳೇನೋ ಎಂಬಂತೆ ರಾರಾಜಿಸುತಲಿದ್ದುವು ॥೫೩॥ ಆ ಪ್ರಕಾಶವತಿಯರುಟ್ಟಿರುವ ದಿವ್ಯಾಂಬರಗಳ ಬಹು ತೆಳ್ಳಗಿರುವ (ನವುರು) ಸೆರಗುಗಳು ಮೋರೆಗಳ ಮೇಲೆ ಬಿದ್ದು ಅವರ ನಿಶ್ವಾಸಮಾರುತಗಳಿಂದ ಅಡಿಗಡಿಗೂ ಅಂದವಾಗಿ ಅಲುಗುತಲಿದ್ದುವು ॥೫೪॥ ಆ ಮುದ್ದು ಮೊಗಗಳ ಮೇಲುಗಡೆ ಹಾಗೆ ಅಲುಗುತಲಿರುವ ಮನೋಹರವಾದ ಪ್ರಭೆಯುಸೆರಗುಗಳು ಇಕ್ಕೆಲದಲ್ಲಿ ಥಳುಕನ್ನು ಹರಡುತ,ಆಸುಂದರಾಂಗಿಯರ ಸೌಂದರ್ಯವನ್ನು ಸೂಚಿಸುವ ದಿವ್ಯಪತಾಕೆಗಳೋ ಎಂಬಂತೆ ಕಾಣಬಂದುವು ॥೫೫॥ ಶುಭತರವಾದ ಕಾಂತಿಯುಳ್ಳ ಕೆಲವು ಮಂದಿ ತರುಣಿಯರ ಕಿವಿಗಳೊಳಗಿನ ಒಡವೆಗಳು ಪಕ್ಕದಲ್ಲಿ ಪವಳಿಸಿರುವ ಮತ್ತೆ ಕೆಲವರ ಮುಖಮಾರುತಗಳಿಂದ ಮೆಲ್ಲಮೆಲ್ಲಗೆ ಅಲುಗುತ್ತಿದ್ದುವು ॥೫೬॥ ಸ್ವಭಾವದಿಂದಲೇ ಆ ಮಂದಯಾನೆಯರ ಮುಖಮಾರುತಗಳು

ಶರ್ಕರಾಸವ ಗಂಧೈಶ್ಚ ಪ್ರಕೃತ್ಯಾ ಸುರಭಿಸ್ಸುಖಃ ।
ತಾಸಾಂ ವದನ ನಿಶ್ವಾಸ ಸ್ಸಿಷೇವೇ ರಾವಣಂ ತದಾ ॥೪೭॥
ರಾವಣಾನನ ಶಂಕಾಶ್ಚ ಕಾಶ್ಚಿ ದ್ರಾವಣ ಯೋಷಿತಃ ।
ಮುಖಾನಿ ಸ್ಮ ಸಪತ್ನೀನಾ ಮುಪಾಜಿಘ್ರ ನ್ಪುನಃಪುನಃ ॥೪೮॥
ಅತ್ಯರ್ಥಂ ಸಕ್ತಮನಸೋ ರಾವಣೇ ತಾ ವರಸ್ತ್ರಿಯಃ ।
ಅಸ್ವತಂತ್ರಾ ಸ್ಸಪತ್ನೀನಾಂ ಪ್ರಿಯಮೇ ವಾಚರಂ ಸ್ತದಾ ॥೪೯॥
ಬಾಹೂ ನುಪನಿಧಾ ಯಾನ್ಯಾಃ ಪಾರಿಹಾರ್ಯ ವಿಭೂಷಿತಾನ್ ।

---

ಮಾರುತ-ನೀಳವಾದ ಉಸಿರಿನ,ಸಂಸರ್ಗಾತ್-ಸಂಬಂಧದ ದೆಸೆಯಿಂದ,ಮಂದಮಂದಂ-ಮೆಲ್ಲಮೆಲ್ಲಗೆ,ಪವಲ್ಗ ಚಲಿಸುತಿದ್ದವು ॥ ೪೬ ॥ ಪ್ರಕೃತ್ಯಾ - ಸ್ವಭಾವದಿಂದಲೇ, ಶರ್ಕರಾಸವಗಂಧೈಶ್ಚ - ಸಕ್ಕರೆಕಲಸಿದ ಮದ್ಯರಸದವಾಸನೆಗಳಿಂದ, ಸುರಭಿಃ - ಗಮಗಮಿಸುತಲಿರುವುದಾದ ಕಾರಣವೇ, ತಾಸಾಂ - ಆ ಮದವತಿಯರ, ವದನನಿಶ್ವಾಸಃ - ಮುಖಮಾರುತವು, ತದಾ - ಆಗ, ರಾವಣಂ - ರಾವಣನನ್ನು, ಸುಖಃ - ಹಾಯಾಗಿರುವಂತೆ, ಸಿಷೇವೆ - ಸೇವಿಸುತಲಿತ್ತು ॥ ೪೭ ॥ ಕಾಶ್ಚಿತ್ - ಕೆಲವುಮಂದಿ, ರಾವಣಯೋಷಿತಃ - ದಶಕಂಧರನಕಾಂತೆಯರು, ರಾವಣ - ದಶವದನನ, ಆನನ - ಮುಖಗಳೆಂಬ, ಶಂಕಾಃ (ಸತ್ಯಃ) ಊಹೆಯುಳ್ಳವರಾಗಿ, ತದಾ - ಆಗ, ಸಪತ್ನೀನಾಂ - ತಮ್ಮಸವತಿಯರ, ಮುಖಾನಿ - ಮೋರೆಗಳನ್ನು, ಪುನಃ ಪುನಃ - ಪದೇಪದೆ, ಉಪಾಜಿಘ್ರನ್ - ವಾಸಿಸುತಲಿದ್ದರು (ಮುತ್ತಿಟ್ಟುಕೊಳ್ಳುತಲಿದ್ದರು) ॥ ೪೮ ॥ ರಾವಣೇ - ದಶವದನನಲ್ಲಿ, ಅತ್ಯರ್ಥಂ - ವಿಶೇಷವಾಗಿ, ಸಕ್ತಮನಸಃ - ಆಸಕ್ತಚಿತ್ತರಾದ ಕಾರಣವೇ, ತಾಃ - ಆ ಮುತ್ತಿಡಿಸಿಕೊಂಡ,ವರಸ್ತ್ರಿಯಃ-ವರಸ್ತ್ರೀಯರು,ಅಸ್ವತಂತ್ರಾಃ-(ರಾವಣನುತಮ್ಮನ್ನುಮುತ್ತಿಟ್ಟುಕೊಂಡನೆಂಬ ಅನುರಾಗಾತಿಶಯದಿಂದ) ಪರವಶರಾಗಿ, ಸಪತ್ನೀನಾಂ-ಮುತ್ತಿಟ್ಟಸವತಿಯರಿಗೆ, ಪ್ರಿಯಮೇವ - (ವಲ್ಲಭನೆಂಬ ಬುದ್ಧಿಯಿಂದ ಪ್ರತಿಯಾಗಿ) ಮುತ್ತಿಡೋಣವನ್ನೇ, ತದಾ - ಆಗ, ಆಚರನ್ - ಆಚರಿಸಿದರು ॥ ೪೯ ॥

ಅನ್ಯಾಃ - ಬೇರೆಕೆಲವರಾದ,ಪ್ರಮದಾಃ - ಮಾನಿಯರು, ಪಾರಿಹಾರ್ಯವಿಭೂಷಿತಾನ್ - ಕಡಗಗಳಿಂದ ಅಲಂಕರಿಸಲ್ಪಟ್ಟ, ಬಾಹೂನ್ - ಇತರರ ತೋಳುಗಳನ್ನೂ, ರಮ್ಯಾಣಿ - ರಮಣೀಯಗಳಾದ,

---

ಸುವಾಸನೆಯುಳ್ಳುವಾದರೂ,ಸಕ್ಕರೆಯಂತೆ ಸಿಹಿಯಾಗಿದ್ದ ವಿಲಾಸವತಿಯರು ಪಾನಮಾಡಿದ್ದ ಮುಖಮಾರುತದ ಸುರಭಿ ಗಂಧವು ಸುಖವಾಗಿ ಪಕ್ಕದಲ್ಲಿ ಮಲಗಿದ್ದ ಕ್ಷಪಾಚರ ರೊಡೆಯನನ್ನು ಹಾಯಾಗುವಂತೆ ಆಗ ಸೇವಿಸುತಲಿದ್ದಿತು ॥೪೭॥ ಮತ್ತು-ಆಗ ಅಲ್ಲಿನ ವಿಚಿತ್ರಗಳು ಹೇಳಲಸದಳವಾಗಿದ್ದುವು, ಅದೇನೆಂದರೆ-ಕೆಲವು ಮಂದಿ ರಾವಣನ ನಾರಿಯರು ನಿದ್ರಾಮದ ಪರವಶರಾಗಿದ್ದರಾದುದರಿಂದ ತಮ್ಮ ಹತ್ತಿರದಲ್ಲಿ ಮಲಗಿರುವ ಸವತಿಯರ ಮುಖಗಳನ್ನು ರಾವಣನ ಮುಖವೆಂಬ ಭಾವನೆಯಿಂದ ಅಡಿಗಡಿಗೂ ಆಘ್ರಾಣಿಸುತಲಿದ್ದರು, ಇಲ್ಲವೆ ಮುತ್ತಿಡುತ್ತಿದ್ದರು ॥೪೮॥ ಅಲ್ಲಿ ಕೆಲವು ಮಂದಿಸೀರೆಯರು ಮತ್ತೆ ಕೆಲವರ ಕಡಗಗಳಿಂದ ಅಲಂಕರಿಸಲ್ಪಟ್ಟ ನೀಳವಾದ ತೋಳುಗಳನ್ನೂ, ದಿವ್ಯಾಂಬರಗಳನ್ನೂ, ತಲೆದಿಂಬುಮಾಡಿ ಶಯನಮಾಡಿದ್ದರು.॥೪೯॥ರಾವಣನಲ್ಲಿ ಅತ್ಯಂತಾನುರಾಗವುಳ್ಳ ಆವರಾಂಗನೆಯರು, ಮದಕ್ಕೂ ನಿದ್ರೆಗೂ ಪರವಶರಾಗಿ ರಾವಣನಿಗೇ ಹಿತವನ್ನು ಆಚರಿಸುತ್ತಿರುವೆವೆಂಬ ಭ್ರಾಂತಿಯಿಂದ

ಅಂಶುಕಾನಿ ಚ ರಮ್ಯಾಣಿ ಪ್ರಮದಾಸ್ತತ್ರ ಶಿಶ್ಯಿರೇ ||೬೦||
ಅನ್ಯಾ ವಕ್ಷಸಿ ಚಾನ್ಯಸ್ಯಾಸ್ತಸ್ಯಾಃ ಕಾಚಿತ್ಪುನರ್ಭುಜಂ |
ಅಪರಾ ತ್ವಂಕಮನ್ಯಸ್ಯಾಸ್ತಸ್ಯಾಶ್ಚಾಪ್ಯಪರಾ ಭುಜೌ ||೬೧||
ಊರುಪಾರ್ಶ್ವಕಟೀಪೃಷ್ಠಮನ್ಯೋನ್ಯಸ್ಯ ಸಮಾಶ್ರಿತಾಃ |
ಪರಸ್ಪರನಿವಿಷ್ಟಾಂಗ್ಯೋ ಮದಸ್ನೇಹವಶಾನುಗಾಃ ||೬೨||
ಅನ್ಯೋನ್ಯಭುಜಸೂತ್ರೇಣ ಸ್ತ್ರೀಮಾಲಾ ಗ್ರಥಿತಾ ಹಿ ಸಾ |
ಮಾಲೇವ ಗ್ರಥಿತಾ ಸೂತ್ರೇ ಶುಶುಭೇ ಮತ್ತಷಟ್ಪದಾ ||೬೩||
ಲತಾನಾಂ ಮಾಧವೇ ಮಾಸಿ ಫುಲ್ಲಾನಾಂ ವಾಯುಸೇವನಾತ್ |

---

ಅಂಶುಕಾನಿಚ - ಅಂಬರಗಳನ್ನೂ, ಉಪನಿಧಾಯ-ತಲೆದಿಂಬುಗಳನ್ನಾಗಿ ಮಾಡಿಕೊಂಡು, ತತ್ರ-ಆಶಯನ ಗೃಹದಲ್ಲಿ, ಶಿಶ್ಯಿರೇ - ಮಲಗಿ ಇದ್ದರು ||೬೦|| ಅನ್ಯಾ - ಒಬ್ಬಳು, ಅನ್ಯಸ್ಯಾಃ - ಮತ್ತೊಬ್ಬಳ, ವಕ್ಷಸಿ - ಎದೆಯಲ್ಲಿಯೂ, ಕಾಚಿತ್ - ಮತ್ತೊಬ್ಬಳು, ತಸ್ಯಾಃ - ಅವಳ, ಭುಜಂಪುನಃ - ತೋಳನ್ನೂ, ಅಪರಾತು - ಬೇರೊಬ್ಬಳಾದರೋ, ಅನ್ಯಸ್ಯಾಃ - ಮಗುದೊಬ್ಬಳ, ಅಂಕಂ - ತೊಡೆಯನ್ನೂ, ಅಪರಾಚಾಪಿ - ಇದಿತರಳೂ, ತಸ್ಯಾಃ - ಅವಳ, ಭುಜೌ - ಹೆಗಲನ್ನೂ, (ಹೀಗೆ) ಅನ್ಯೋನ್ಯಸ್ಯ - ಒಬ್ಬರೊಬ್ಬರ, ಊರುಪಾರ್ಶ್ವಕಟೀಪೃಷ್ಠಂ - ತೊಡೆ, ಪಕ್ಕೆ, ಟೊಂಕ, ಬೆನ್ನು ಇವುಗಳನ್ನು, ಸಮಾಶ್ರಿತಾಃ. ಊರುವಮಾಡಿಕೊಂಡವರಾಗಿ, ಮದಸ್ನೇಹವಶಾನುಗಾಃ-ಮತ್ತತೆ, ಅನುರಾಗ, ಇವುಗಳ ಹೆಚ್ಚಿಕೆಯಿಂದ, ಮೈಮರೆತವರಾದ ಕಾರಣವೇ, ಪರಸ್ಪರ - ಅನ್ಯೋನ್ಯರಲ್ಲಿ, ನಿವಿಷ್ಟ - ಇಟ್ಟ, ಅಂಗ್ಯಃ - ಅವಯವಗಳುಳ್ಳವರಾಗಿ, (ಶಿಶ್ಯಿರೇ - ಪವಳಿಸಿದ್ದರು) ||೬೧-೬೨|| ಸೂತ್ರೇ - ದಾರದಲ್ಲಿ, ಗ್ರಥಿತಾ - ಪೋಣಿಸಲ್ಪಟ್ಟ, ಮತ್ತಷಟ್ಪದಾ - ಕೊಬ್ಬಿದ ದುಂಬಿಗಳುಳ್ಳ, ಮಾಲೇವ - ಪುಷ್ಪಮಾಲೆಯಂತೆ, ಸಾ - ಈ ಮೇಲೆ ಹೇಳಿದ, ಸ್ತ್ರೀಮಾಲಾ - ಲಲನಾಮಣಿಯರ ಸಾಲು, ಅನ್ಯೋನ್ಯ - ಪರಸ್ಪರವಾದ, ಭುಜಸೂತ್ರೇಣ - ಸೂತ್ರದಂತಿರುವ ತೋಳುಗಳಿಂದ, ಗ್ರಥಿತಾಹಿ - ಪೋಣಿಸಲ್ಪಟ್ಟದ್ದಾಗಿ, ಶುಶುಭೇ - ಶೋಭಿಸುತಲಿತ್ತು ||೬೩|| ತತ್ - ಈಮುಂದೆ ಹೇಳಿದ, ರಾವಣಸ್ಯ-ದಶಕಂಧರನ, ಸ್ತ್ರೀವನಂ - ಹೆಂಗಳಹಿಂಡು, ಮಾಧವೇಮಾಸಿ - ಚೈತ್ರವೈಶಾಖಮಾಸದಲ್ಲಿ, ವಾಯುಸೇವನಾತ್-ಗಾಳಿಯನ್ನು ಕುಡಿವುದರಿಂದ, ಫುಲ್ಲಾನಾಂ-ಅರಳಿದ (ಹೊರವಾದ)

---

ತಮ್ಮ ಸಪತ್ನಿಯರಿಗೇ ಪುಂಬಚುಂಬನಾದಿಗಳನ್ನು ಸಮರ್ಪಿಸುತಲಿದ್ದರು || ೬೦ || ಒಬ್ಬಳು ಇನ್ನೊಬ್ಬಳ ಎದೆಯನ್ನೂ, ಇನ್ನೊಬ್ಬಳು ಮತ್ತೊಬ್ಬಳ ಹೆಗಲನ್ನೂ, ಮತ್ತೊಬ್ಬಳು ಬೇರೊಬ್ಬಳ ತೊಡೆಯನ್ನೂ, ಬೇರೊಬ್ಬಳು ಮಗುದೊಬ್ಬಳ ತೋಳುಗಳನ್ನೂ ಊಡು ಮಾಡಿ ಇಲ್ಲವೆ ತಲೆದಿಂಬು ಮಾಡಿಕೊಂಡು ಮಲಗಿದ್ದಳು ||೬೧|| ಹಾಗೆಯೇ ಕೆಲಕೆಲರು ಪರಸ್ಪರವಾಗಿ ತೊಡೆ, ಪಕ್ಕೆ, ಟೊಂಕ, ಬೆನ್ನು, ಇತ್ಯಾದಿ ಅವಯವಗಳನ್ನು ಆಸರೆಯ ಮಾಡಿಕೊಂಡು ಮದಪರವಶರೂ, ಸ್ನೇಹ ಪರವಶರೂ ಆಗಿ ಪವಳಿಸಿದ್ದರು ||೬೨|| ಒಬ್ಬೊಬ್ಬರ ತೋಳಿನಲ್ಲಿ ಬೇರೊಬ್ಬರ ತೋಳನ್ನು ಸೇರಿಸಿ ಪೋಣಿಸಿ ... ದಾರದಿಂದ ಹೂವನ್ನು ಪೋಣಿಸಿ ಅದರಲ್ಲಿ ... ಹೇಗೋ ಹಾಗೆ ವಿರಾಜಿಸುತಿದ್ದಿತು ||೬೩|| ಮತ್ತು - ಆ ಸೀಮಂತಿನಿಯರ ಶ್ರೇಣಿಯು ಚೈತ್ರ ವೈಶಾಖ ಮಾಸದಲ್ಲಿ ವಾಯುಸೇವನೆಯಿಂದ ಚಿಗುರಿ ಹೊರವಾಗಿ ಬೆಳೆದ ಬಾಲಲತೆಗಳು ಬಾಪಕ್ಕೊಂದು

ಅನ್ಯೋನ್ಯ ಮಾಲಾ ಗ್ರಥಿತಂ ಸಂಸಕ್ತ ಕುಸುಮೋಚ್ಚಯಂ ॥ ೬೪ ॥
ವ್ಯತಿವೇಷ್ಟಿತ ಸುಸ್ಕಂಧ ಮನ್ಯೋನ್ಯ ಭ್ರಮರಾಕುಲಂ ।
ಆಸೀ ದ್ವನ ಮಿವೋದ್ಧೂತಂ ಸ್ತ್ರೀವನಂ ರಾವಣಸ್ಯ ತತ್ ॥೬೫॥
ಉಚಿತೇಷ್ವಪಿ ಸುವ್ಯಕ್ತಂ ನ ತಾಸಾಂ ಯೋಷಿತಾಂ ತದಾ ।
ವಿವೇಕ ಶ್ಶಕ್ಯ ಆಧಾತುಂ ಭೂಷಣಾಂಗಾಂಬರ ಸ್ರಜಾಂ ॥೬೬॥
ರಾವಣೇ ಸುಖಸಂವಿಷ್ಟೇ ತಾ ಸ್ತ್ರಿಯೋ ವಿವಿಧ ಪ್ರಭಾಃ ।
ಜ್ವಲಂತಃ ಕಾಂಚನಾ ದೀಪಾಃ ಪ್ರೈಕ್ಷಂತಾ ನಿಮಿಷಾ ಇವ ॥೬೭॥
ರಾಜರ್ಷಿ ಪಿತೃದೈತ್ಯಾನಾಂ ಗಂಧರ್ವಾಣಾಂ ಚ ಯೋಷಿತಃ ।

---

ಲತಾನಾಂ - ಎಳೆಬಳ್ಳಿಗಳ, ಅನ್ಯೋನ್ಯ - ಪರಸ್ಪರವಾದ, ಮಾಲಾ - ಸಾಲಿನಿಂದ, ಗ್ರಥಿತಂ - ಹೆಣೆದುಕೊಂಡಿರುವ, ಸಂಸಕ್ತ - ಹೊಂದಿಕೊಂಡಿರತಕ್ಕ, ಕುಸುಮ - ಹೂಗಳ, ಉಚ್ಚಯಂ - ಸಮೂಹವುಳ್ಳ, ವ್ಯತಿವೇಷ್ಟಿತ - ಒಂದಕ್ಕೊಂದು ಸುತ್ತಿಕೊಂಡಿರುವ, ಸುಸ್ಕಂಧಂ - ಬುಡದಿಂದ ಕವಲಿನವರೆಗಿರುವ ಭಾಗವುಳ್ಳ, ಅನ್ಯೋನ್ಯ - ಒಂದೊಂದರಲ್ಲಿಯೂ, ಸಂಬಂಧಿಸಿ ಇರುವ, ಭ್ರಮರ - ದುಂಬಿಗಳಿಂದ ಆಕುಲಂ - ಗದ್ದಲವಾಗಿರುವ, ಉದ್ಧೂತಂ - ಅಲುಗುತಲಿರತಕ್ಕ, ವನಮಿವ - ತೋಟದಹಾಗೆ, ಆಸೀತ್ ಇದ್ದಿತು ॥೬೪-೬೫॥ ತದಾ - ಆ ಅವಸ್ಥೆಯಲ್ಲಿರುವಾಗ, ತಾಸಾಂ - ಆ, ಯೋಷಿತಾಂ - ಹೆಂಗಸರ, ಉಚಿತೇಷು - ತಕ್ಕ ಸ್ಥಳಗಳಲ್ಲಿ (ಸ್ಥಿತಾನಾಮಪಿ-ಇದ್ದುವುಗಳಾದರೂ) ಭೂಷಣಾಂಗಾಂಬರಸ್ರಜಾಂ-ಒಡವೆ, ಅವಯವಗಳ ವಸ್ತ್ರ, ಪುಷ್ಪದಮಾಲೆ ಇವುಗಳ, ವಿವೇಕಃ - ವಿವೇಚನೆಯು (ಇದು ಇಂತಿಂತಹದೇ ಸರಿ ಎಂಬ ಜ್ಞಾನವು) ಸುವ್ಯಕ್ತಂ - ಸ್ಪಷ್ಟವಾಗಿ, ಆಧಾತುಂ - ಮಾಡಲಿಕ್ಕೆ (ವಿಶದವಾಗಿ ಕಂಡು ಹಿಡಿಯಲಿಕ್ಕೆ), ಶಕ್ಯಃ - ಸಾಧ್ಯವಾದದ್ದು, ನ - ಆಗಲೇ ಇಲ್ಲ ॥೬೬॥ ರಾವಣೇ - ರಾವಣಾಸುರನು, ಸುಖಸಂವಿಷ್ಟೇ(ಸತಿ)-ಹಾಯಾಗಿ ಮಲಗಿರುತ್ತಿರಲಾಗಿ, ವಿವಿಧಪ್ರಭಾಃ-ವಿಚಿತ್ರಕಾಂತಿಯುಳ್ಳ ತಾಃಸ್ತ್ರಿಯಃ-ಆ ಕಾಂತಾರತ್ನಗಳನ್ನು, ಕಾಂಚನಾಃ - ಚಿನ್ನದ ಕಂಬಗಳಲ್ಲಿ ತಗಲಿಸಿ ಇರುವ, ಜ್ವಲಂತಃ - ಹೊಳೆಯುತಲಿರತಕ್ಕ, ದೀಪಾಃ - ದೀವಿಗೆಗಳು, ಅನಿಮಿಷಾಇವ- ರೆಪ್ಪೆಬಡಿಯದವುಗಳಾಗಿಯೇ, ಪ್ರೈಕ್ಷಂತೇವ-ನೋಡುತಲಿವೆಯೋ ಎಂಬಂತಿದ್ದುವು ॥೬೭॥

---

ಸುತ್ತಿಕೊಂಡು, ಹೆಣೆದುಕೊಂಡು, ಪುಷ್ಪಿಸಿ, ದುಂಬಿಗಳನ್ನೊಳಗೊಂಡು, ಗಾಳಿಯಿಂದ ಅಲುಗುತಲೂ ಇದ್ದರೆ ಹೇಗೋಹಾಗೆ ಶೋಭಿಸುತಲಿತ್ತು ॥ ೬೪-೬೫ ॥ ಮತ್ತು ಅಪ್ರತೀಪದರ್ಶಿನಿಯರ ಆಯಾಯ ಅವಯವಗಳೊಳಗೆ ಅಳವಟ್ಟ ದಿವ್ಯಾಂಬರಗಳಗೂ, ಅಮೋಘವಾದ ಆಭರಣಗಳಗೂ, ಅಸದೃಶವಾದ ಕುಸುಮಹಾರಗಳಗೂ, ಇದು ವಸ್ತ್ರ, ಇದು ಒಡವೆ, ಇದು ಹೂವಿನ ಸರ ಎಂದು ಭೇದವನ್ನು ಅರಿಯಲು ಅಸಾಧ್ಯವಾಗಿರುತ್ತಿತ್ತು ॥೬೬॥ ಇಂತು ಅಪಾರವಾದ ಸಂಭ್ರಮದಿಂದ ಆನಿಶಾಚರನಾಥನು ಮಲಗಿರುವಲ್ಲಿ ಸುತ್ತು ಬಳಸಿ ಪವಳಿಸಿ ಇರುವ ಮಹಿಳಾಶಿರೋಮಣಿಗಳ ಹೊಳವು ಎಲ್ಲೆಲ್ಲಿಯೂ ಪಸರಿಸಿ ಇದ್ದರೆ ಆನಟ್ಟಿರುಳಿನಲ್ಲಿ ಆ ಭವನದೊಳಗೆ ಸ್ವರ್ಣಸ್ತಂಭಗಳಲ್ಲಿ ತಗಲಿಸಿರುವ ದೀವಿಗೆಗಳು ತಾವಾದರೂ ಅಲುಗದಿರುವುದರಿಂದ ಆ ಚಂಚಲಾಕ್ಷಿಯರ ಚೆಲುವನ್ನು ಚಲಿಸದೆಯೂ, ರೆಪ್ಪೆ ಬಡಿಯದೆಯೂ ಬೆರಗಾಗಿ ನೋಡುತಲಿವೆಯೋ ಎಂಬಂತಿದ್ದುವು ॥ ೬೭ ॥ ರಾವಣನು ರಾಜಾಧಿರಾಜರ,

ರಾಕ್ಷಸಾನಾಂ ಚ ಯಾಃ ಕನ್ಯಾ ಸ್ತಸ್ಯ ಕಾಮವಶಂಗತಾಃ ॥ ೬೮ ॥
ಯುದ್ಧಕಾಮೇನ ತಾ ಸ್ಸರ್ವಾ ರಾವಣೇನ ಹೃತಾ ಸ್ತ್ರಿಯಃ ।
ಸಮದಾ ಮದನೇನೈವ ಮೋಹಿತಾಃ ಕಾಶ್ಚಿದಾಗತಾಃ ॥೬೯॥
ನ ತತ್ರ ಕಾಚಿ ತ್ಪ್ರಮದಾ ಪ್ರಸಹ್ಯ ವೀರ್ಯೋಪಪನ್ನೇನ ಗುಣೇನ ಲಬ್ಧಾ ।
ನಚಾನ್ಯ ಕಾಮಾಪಿನಚಾನ್ಯ ಪೂರ್ವಾವಿನಾವರಾರ್ಹಾಂಜನಕಾತ್ಮಜಾಂತಾಂ॥
ನಚಾಕುಲೀನಾ ನಚ ಹೀನರೂಪಾ ನಾದಕ್ಷಿಣಾ ನಾನುಪಚಾರಯುಕ್ತಾ ।

---

ರಾಜರ್ಷಿ ಪಿತೃದೈತ್ಯಾನಾಂ - ರಾಜಾಧಿರಾಜರ, ಪಿತೃದೇವತೆಗಳ, ಮತ್ತು ದಿತಿಪುತ್ರರ, ಗಂಧರ್ವಾಣಾಂ - ಗಂಧರ್ವರ, ರಾಕ್ಷಸಾನಾಂಚ - ಮತ್ತು ರಕ್ಕಸರ, ಯಾಃಕನ್ಯಾಃ - ಯಾವಪುತ್ರಿಯರುಂಟೋ (ತಾಃ - ಅವರೆಲ್ಲರೂ) ತಸ್ಯ - ಆ ರಾವಣನ, ಕಾಮವಶಂ - ಅಭಿಲಾಷೆಗೆ ಅಧೀನತೆಯನ್ನು, ಗತಾಃ - ಹೊಂದಿದವರಾಗಿ, ಯೋಷಿತಶ್ಚ - ಸತಿಯರೆನಿಸಿದ್ದರು ॥೬೮॥ ಯುದ್ಧಕಾಮೇನ - ಕಾಳಗದಲ್ಲಿ ಅಕ್ಕರೆಯುಳ್ಳ, ರಾವಣೇನ - ರಾವಣನಿಂದ, ಸರ್ವಾಃ - ಸಮಸ್ತರಾದ, ತಾಃ ಸ್ತ್ರಿಯಃ- ಆ ಕಾಮಿನಿಯರೆಲ್ಲರೂ, ಹೃತಾಃ - ಅಪಹರಿಸಿ ತರಲ್ಪಟ್ಟಿದ್ದರು, ಸಮದಾಃ - ಪ್ರಾಯದ ಸೊಕ್ಕಿನಿಂದ ಕೂಡಿದ, ಕಾಶ್ಚಿತ್ - ಕೆಲವುಮಂದಿ, ಅಂಗನಾಃ - ಸುಂದರಿಯರು, ಮದನೇನೈವ - ಕಾಮವಿಕಾರದಿಂದಲೇ, ಮೋಹಿತಾಃ - ಮೋಹಗೊಳಿಸಲ್ಪಟ್ಟಿದ್ದರು ॥೬೯॥ ತತ್ರ - ಬಲಾತ್ಕರಿಸಿತಂದ ಆ ಸುಂದರಿಯರೊಳಗೆ, ಕಾಚಿತ್ - ಯಾವಳೊಬ್ಬಳೂ, ಪ್ರಸಹ್ಯವೀರ್ಯೋಪಪನ್ನೇನ - ಪ್ರಬಲತರ ಶೌರ್ಯಸಂಪನ್ನನಾದ ರಾವಣನಿಂದ, ಲಬ್ಧಾ - ಹೊಂದಲ್ಪಟ್ಟವಳು, ನ - ಅಲ್ಲ, (ಕಿಂತು - ಮತ್ತೇನೆಂದರೆ) ಗುಣೇನ - ಸೌಂದರ್ಯಾದಿ ಗುಣದಿಂದ, ಲಬ್ಧಾ - ಹೊಂದಲ್ಪಟ್ಟವಳೂ, ಅನ್ಯಕಾಮಾಪಿ - ಬೇರೊಬ್ಬನಲ್ಲಿ ಆಸೆಯುಳ್ಳವಳೂ, ನಚ - ಇಲ್ಲ, ವರಾರ್ಹಾಂ - ಶ್ರೇಷ್ಠಳಾದ, ತಾಂ - ಆ ಲೋಕವಿಖ್ಯಾತಳೆನಿಸಿದ, ಜನಕಾತ್ಮಜಾಂವಿನಾ - ಜಾನಕಿಯೊಬ್ಬಳನ್ನುಬಿಟ್ಟು, ಅನ್ಯಪೂರ್ವಾಚ - ಮೊದಲು ಬೇರೊಬ್ಬಪುರುಷನಿಂದ ಪರಿಗ್ರಹಿಸಲ್ಪಟ್ಟವಳೂ, ನಚ - ಇರಲಿಲ್ಲ ॥೭೦॥ (ಕಿಂಚ ಮತ್ತು) ಅಕುಲೀನಾ - ಅಸದ್ವಂಶದಲ್ಲಿ ಹುಟ್ಟಿದವಳೊಬ್ಬಳೂ, ನಚ - ಇರಲಿಲ್ಲ, ಹೀನರೂಪಾಚ - ಕುರೂಪಿಯಾದವಳೂ, ನಚ - ಇರಲಿಲ್ಲ, ಅದಕ್ಷಿಣಾ- ಅಸಮರ್ಥಳೂ, ನಚ - ಇರಲಿಲ್ಲ,

---

ಪಿತೃದೇವತೆಗಳ, ಗಂಧರ್ವರ, ಮತ್ತು ರಾಕ್ಷಸರ ಸುಂದರಿಯರಾದ ಕನ್ಯೆಯರನ್ನೆಲ್ಲ ಕಾಮವಶರಾಗುವಂತೆಸಗಿ ತನ್ನ ವಶಪಡಿಸಿಕೊಂಡಿದ್ದನು. ಮತ್ತೆ ಕೆಲವರನ್ನು ಅವರ ಬಂಧುಗಳೊಡನೆ ಯುದ್ಧವನ್ನು ಬಯಸಿ ತಂದಿದ್ದನು ॥೬೮॥ ಬಂದು ವೇಳೆ ರಾವಣನು ದಿಗ್ವಿಜಯಾರ್ಥವಾಗಿ ಬರಲು ಬಹು ಮಂದಿ ಪ್ರಮದೆಯರು ಕಾಮಮೋಹಿತರಾಗಿ ಅವನಿಗೆ ಅಧೀನರಾದರು, ಅಂತವರನ್ನೆಲ್ಲ ತಂದಿದ್ದನು ॥೬೯॥ ಅಲ್ಲಿದ್ದ ವಾಮಲೋಚನೆಯರೊಳಗೆ ಯಾವಳೊಬ್ಬಳನ್ನೂ ರಾವಣನು ತನ್ನಯ ಅಪರಿಮಿತ ಪರಾಕ್ರಮವನ್ನು ತೋರಿಸಿತಂದವನಲ್ಲ, ಸೌಂದರ್ಯಗುಣಕ್ಕೆ ಅವರೆಲ್ಲರೂ ಮೆಚ್ಚಿಯೇ ಬಂದವರು, ಬಂದುವೇಳೆ ಅವರೆಲ್ಲರೂ ಅನ್ಯಪುರುಷರಲ್ಲಿ ಕಾಮನೆಯುಳ್ಳವರಾಗಿದ್ದರೂ ಅನ್ಯರನ್ನು ಪರಿಗ್ರಹಿಸಿ ಇದ್ದವರಲ್ಲ ಎಂದರೆ ಪರಪುರುಷನು ಪಾಣಿಗ್ರಹಣಮಾಡಿ ಸ್ವೀಕರಿಸುವುದಕ್ಕೆ ಮೊದಲೇ ಆಕನ್ಯೆಯರನ್ನೆಲ್ಲ ತಂದಿದ್ದನು, ಆದರೆ-ಶ್ರೀರಾಮಚಂದ್ರ ಪರಿಗೃಹೀತಳಾಗಿದ್ದ ಜನಕರಾಜಪುತ್ರಿಯೊಬ್ಬಳು ಮಾತ್ರವೇ ವಿವಾಹಿತ ಗೃಹಿಣಿಯಾಗಿದ್ದವಳು ॥೭೦॥ ಇವಲ್ಲದೆ ಅಲ್ಲಿದ್ದ ಸಾವಿರಾರು ಮಂದಿ ರಾವಣನ ಅರಸಿಯ

ಭಾರ್ಯಾ ಭವತ್ಯಸ್ಯ ನ ಹೀನಸತ್ತ್ವಾ ನಚಾಪಿ ಕಾಂತಸ್ಯ ನ ಕಾಮನೀಯಾ॥
*ಬಭೂವ ಬುದ್ಧಿಸ್ತು ಹರೀಶ್ವರಸ್ಯ ಯದೀದೃಶೀ ರಾಘವ ಧರ್ಮಪತ್ನೀ ।
ಇಮಾ ಯಥಾ ರಾಕ್ಷಸರಾಜಭಾರ್ಯಾಃ ಸುಜಾತಮಸ್ಯೇತಿ ಹಿ ಸಾಧುಬುದ್ಧೇಃ॥

ಅನುಪಚಾರಯುಕ್ತಾ - ರಾಜೋಪಚಾರಗಳಿಂದೊಡಗೂಡದವಳೂ, ನಚ - ಇರಲಿಲ್ಲ, ತಸ್ಯ - ಆ ರಾವಣನ, ಭಾರ್ಯಾ - ಯಾವಳೊಬ್ಬ ಹೆಂಡತಿಯೂ, ಹೀನಸತ್ವಾ - ಬಲಹೀನಳಾಗಿ, ನಚ - ಇರಲಿಲ್ಲ, ಕಾಂತಸ್ಯ - ವಲ್ಲಭನಾದ ರಾವಣನಿಗೆ, ನಕಾಮನೀಯಾಚ - ಮೋಹಿಸಲಿಕ್ಕೆ ಅನರ್ಹಳಾದವಳೊಬ್ಬಳೂ, ನಚ - ಇರಲೇ ಇಲ್ಲ ॥೩೧॥ (೧) ಇಮಾಃ - ಈ, ರಾಕ್ಷಸರಾಜಭಾರ್ಯಾಃ - ಲಂಕೇಶ್ವರನ ರಾಣಿಯರು, ಯಥಾ - ಹೇಗೋ, ತಥಾ - ಹಾಗೆಯೇ, ರಾಘವಧರ್ಮಪತ್ನೀ - ಶ್ರೀರಾಮನ ಧರ್ಮಭಾರ್ಯೆಯಾದ ಜಾನಕಿಯೂ, ಈದೃಶೀಯದಿ - ಧರ್ಮಭಂಗದಿಂದ ರಾಮನನ್ನು ವರಿಸುವುದಕ್ಕಿಂತ ಮೊದಲು ಈ ರಾವಣನಿಂದ ತರಲ್ಪಟ್ಟದ್ದರೆ, ಅಸ್ಯ - ಆಗ ಈ ರಾವಣನಿಗೆ, ಸುಜಾತಂ - ಮೇಲಾಗುತ್ತಲಿದ್ದಿತೋ ಏನೋ! ಇತಿ - ಹೀಗೆಂದು, ಸಾಧುಬುದ್ಧೇಃ - ಉತ್ತಮಬುದ್ಧಿಯುಳ್ಳ, ಹರೀಶ್ವರಸ್ಯತು - ಕಪಿಶ್ರೇಷ್ಠನಾದ ಮಾರುತಿಗಾದರೋ, ಇಯಂ - ಇಂತಹ, ಬುದ್ಧಿಃ - ಪರಿಶುದ್ಧಬುದ್ಧಿಯು, ಬಭೂವ - ಉಂಟಾಯಿತು, ಅಥವಾ - (೨) ಇಮಾಃ - ಈ, ರಾಕ್ಷಸರಾಜಭಾರ್ಯಾಃ - ರಾವಣನ ಸತಿಯರು, ಯಥಾ - ತಮ್ಮ ಪತಿಯೊಡಗೂಡಿ ಸಕಲಭೋಗ

ರಾವಣನ ಮಂದಿರದೊಳಗೆ ಒಬ್ಬಳಾದರೂ ಹೀನಕುಲದಲ್ಲಿ ಹುಟ್ಟಿದವಳಲ್ಲ, ಕುರೂಪಿಯಲ್ಲ, ಅನನುಕೂಲೆಯಲ್ಲ, ರಾವಣನನ್ನು ಉಪಚರಿಸುವುದರಲ್ಲಿ ಹಿಂದೆಗೆಯತಕ್ಕವಳಲ್ಲ. ಬಲಗುಂದಿದವಳನ್ನಂತೂ ರಾವಣನ ಮನಃಪ್ರೀತಿಗೆ ಪಾತ್ರಳಾದವಳಂತೆ ಇಲ್ಲದೆ ಇರಲೂ ಇಲ್ಲ. ಇಂತಹ ಮಂಗಳಾಂಗಿಯರನ್ನೆಲ್ಲ ಮಾರುತಿಯು ನೋಡುತ್ತಿದ್ದನು ॥೩೧॥ ಆಗ ಈ ಆಂಜನೇಯನ ಮನದೊಳಗೆ ಈ ವಿಧವಾದ ಸಂಕಲ್ಪಗಳುಂಟಾದುವು; ಅದೇನೆಂದರೆ:—ಹನುಮನು ಮಹಾಸಾತ್ವಿಕಬುದ್ಧಿಯುಳ್ಳವನಷ್ಟೆ, ಆದರೂ (೧) "ಜನಕರಾಯನು "ತನ್ನಲ್ಲಿರುವ ಧನುಸ್ಸನ್ನು ಮುರಿದವನಿಗೆ ತನ್ನ ಅಯೋನಿಜೆಯಾದ ಸೀತೆಯನ್ನು ಕೊಡುವುದು" ಎಂದು ಪಣವನ್ನು ಗೊತ್ತುಮಾಡಿದ್ದನು, ಆಗ ಅದರಂತೆ ಬಿಲ್ಲನ್ನು ಮುರಿದು ಶ್ರೀರಾಮನು ಸೀತೆಯನ್ನು ವರಿಸಿದನು, ಅದಕ್ಕಿಂತ ಮೊದಲೇ ಈ ರಾವಣನು ಇಲ್ಲಿರುವ ಈ ಕಾಂತೆಯರನ್ನೆಲ್ಲ ಕೊಂಡು ಬಂದ ಹಾಗೆ ಆ ಜಾನಕಿಯನ್ನೂ ಕನ್ಯಾವಸ್ಥೆಯಲ್ಲಿಯೇ ತಂದಿದ್ದರೆ ಇವನಿಗೆ ಆಗ ಬಾದುವೇಳೆ ಕ್ಷೇಮವಾಗುತಲಿತ್ತೋ ಏನೋ? ಎಂದೀಪ್ರಕಾರ ಸಾಧು ಬುದ್ಧಿಯುಳ್ಳ ಕಪಿವರನಿಗೆ ತನ್ನ ಜಾತಿಯನ್ನು ಅನುಸರಿಸಿದ ಪ್ರಮಾದ ಬುದ್ಧಿಯು ಉಂಟಾಯಿತು (೨) ಅಥವಾ:—ಈ

೧ ರಿಂದ ೧೧೦ ವರೆಗಿನ ಅರ್ಥಚಮತ್ಕೃತಿಯೆಲ್ಲವೂ ಶ್ರೀರಾಮಾನುಜೀಯ, ತಿಲಕ, ಗೋವಿಂದರಾಜೀಯ, ಮಹೇಶ್ವರ ತೀರ್ಥೀಯ, ರಾಮಾಯಣಮಹಿಮಾರ್ಣವ, ಸುಂದರಕಾಂಡ ಮಹಿಮಾದರ್ಶ ಇತ್ಯಾದಿ ವ್ಯಾಖ್ಯಾನಗಳನ್ನು ಅನುಸರಿಸಿ ಇವೆ. * ಅರ್ಥಚಮತ್ಕೃತಿಯ ಸೌಂದರ್ಯ.

* "ಉಪಕಾರಿಷು ಯಃ ಸಾಧುಃ ಸಾಧುತ್ವೇ ತಸ್ಯ ಕೋ ಗುಣಃ।
ಅಪಕಾರಿಷು ಯಃ ಸಾಧುಃ ಸ ಸಾಧುಃ ಸದ್ಭಿರುಚ್ಯತೇ ॥"

ಉಪಕರಿಸಿದವರಿಗೆ ಉಪಕರಿಸುವುದು ಏನೂ ಸಾಧುತನದ ಕೂಟವಲ್ಲ, ಅಪಕರಿಸಿದವರಿಗೂ ಉಪಕರಿಸಿದರೆ ಅಂಥವನೇ ಸಾಧು ಎಂದು ಸತ್ಪುರುಷರು ಹೇಳುತ್ತಾರೆ.

ಗಳನ್ನು ಹೇಗೆ ಅನುಭವಿಸುತಲಿದ್ದಾರೆಯೋ, (ತಥಾ - ಹಾಗೆಯೇ) ರಾಘವಧರ್ಮಪತ್ನೀ- ಶ್ರೀರಾಮಧರ್ಮಭಾರ್ಯೆಯಾದ ಜಾನಕಿಯೂ, ಈದೃಶೀಯದಿ - ಶ್ರೀರಾಮನೊಡಗೂಡಿ ಸರ್ವಸುಖಗಳನ್ನೂ ಅನುಭವಿಸುತ್ತಿರುವವಳೇ ಆಗಿದ್ದರೆ, (ತದಾ - ಆಗ) ಅಸ್ಯ- ಈ ರಾವಣನಿಗೆ, ಸುಜಾತಂ - ಹುಟ್ಟಿಸೌಭಾಗ್ಯಕವಾಗುತಲಿದ್ದಿತು, ಇತಿ - ಇಂತೆಂದು ಸಾಧುಬುದ್ಧೇಃ-ಹಗೆಗೂ ಮೇಲನ್ನು ಕೋರುವ ಸ್ವಭಾವವುಳ್ಳ, (ಆದುದರಿಂದಲೇ) ಹರೀಶ್ವರಸ್ಯ - ವಾನರೋತ್ತಮನೆನಿಸಿದ ಆಂಜನೇಯನಿಗೆ, ಬುದ್ಧಿಃ - ಮತಿಯು, ಬಭೂವ -

ಕಾಮಿನಿಯರು ತಮ್ಮ ಕಾಂತನಾದ ರಾವಣನಿಗೆ ಪ್ರೇಮವಲ್ಲಭೆಯರಾಗಿ ಹೇಗೆ ಸುಖಸಮೃದ್ಧಿಯನ್ನು ಅನುಭವಿಸುತಲಿರುವರೋ, ಹಾಗೆಯೇ ಶ್ರೀರಾಮ ಧರ್ಮಪತ್ನಿಯಾದ ಸೀತೆಯೂ ತನ್ನ ಪ್ರಿಯಪತಿಯೊಡನೆ ಸುಖವಾಗಿ ಇರುತ್ತಿದ್ದರೆ ಆಗ ಈ ರಾವಣನಿಗೆ ಸುಖವುಂಟಾಗುತಲಿತ್ತೋ ಏನೋ ಎಂಬುದಾಗಿ ಹಗೆಗೂ ಹಿತವನ್ನು ಕೋರುವ ಸದ್ಬುದ್ಧಿಯುಳ್ಳ ಕಪಿಪುಂಗವನಿಗೆ ಭಾವನೆಯುಂಟಾಯಿತು, (೩) ಅಥವಾ:-ಅಹಹ ! ನೀಚನಾದ ಈ ರಾವಣನು ಪರಸ್ತ್ರೀಯರನ್ನೆಲ್ಲ ಬಲಾತ್ಕಾರದಿಂದ ತಂದು ಹೇಗೆ ಸೇರಿಸಿಕೊಂಡಿರುವನೋ, ಹಾಗೆಯೇ ನಮ್ಮೊಡೆಯನಾದ ಸುಗ್ರೀವನೂ ಈ ರಾವಣನ ಅರಸಿಯರನ್ನೆಲ್ಲ ಬಲಾತ್ಕರಿಸಿ ಕೊಂಡು ಹೋದರೆ ಆಗ ಈತನಿಗೆ ಕೋರಿಕೆಗೆ ತಕ್ಕುದು ಮಾಡಿದಂತಾದೀತು ಎಂದು ಮಂತ್ರಿತ್ವಕ್ಕೆ ತಕ್ಕ ಬುದ್ಧಿಯುಳ್ಳ ಮಾರುತಿಗೆ ಈ ವಿಧವಾದ ಊಹೆಯು ತಲೆದೋರಿತು, (೪) ಅಥವಾ-ಅಯ್ಯೋ ಪಾಪೀ ! ಇವನಿಗೆ ಇಷ್ಟು ಮಟ್ಟಿಗೆ ತೋರದೆ ಹೋಯಿತೆ ? ಈ ನಾರಿಯರನ್ನೆಲ್ಲ ಇವನು ಹೇಗೆ ಅಪಹರಿಸಿ ತಂದನೋ, ಹಾಗೆ ಆ ಮಹಾದೇವಿಯಾದ ಸೀತೆಯನ್ನೂ ಅಪಹರಿಸಿ ತಂದದ್ದೇ ಆದರೆ ಆಗ ಇವನಿಗೆ ಕ್ಷೇಮವಾಗುವುದುಂಟೆ ? ಎಂದಿಗೂ ಉಂಟಾಗಲಾರದು ಎಂದು ಆ ಕಪಿಶಾರ್ದೂಲನಿಗೆ ಭಾವನೆಯುಂಟಾಯಿತು ; (೫) ಅಥವಾ:— ಈ ರಾಕ್ಷಸ

೫　　“ಯಸ್ತು ಮಾಸಾನ್ನಿವೃತ್ತೋಽಗ್ರೇ ದೃಷ್ಟಾ ಸೀತೇತಿ ವಕ್ಷ್ಯತಿ ।
ಮತ್ತುಲ್ಯ ವಿಭವೋ ಭೋಗ್ಯೈಸ್ಸುಖಂ ಸ ವಿಹರಿಷ್ಯತಿ ।
ತತಃಪ್ರಿಯತರೋ ನಾಸ್ತಿ ಮಮ ಪ್ರಾಣಾದ್ವಿಶೇಷತಃ”

ಒಂದು ತಿಂಗಳೊಳಗೆ ಹುಡುಕಿ “ಸೀತೆಯನ್ನು ಕಂಡೆನು” ಎಂದು ಯಾವನು ಹೇಳುತ್ತಾನೆಯೋ ಅಂಥವನನ್ನು ನನಗೆ ಸಮಾನವಾದ ಭಾಗ್ಯವಂತನನ್ನಾಗಿ ಮಾಡುವೆನು, ಮತ್ತು ಅವನು ನನ್ನ ಪ್ರಾಣಗಳಿಗಿಂತಲೂ ನನಗೆ ಪ್ರಿಯತಮನಾಗುವನು ಎಂದು ಸುಗ್ರೀವನು ಹೇಳಿ ಇರುವುದರಿಂದ ನಮ್ಮೊಡೆಯನಾದ ಸುಗ್ರೀವನಿಗೆ ಪರಮಾನಂದವುಂಟಾಗುವುದು.

“ಅಪ್ರವೃತ್ತೌ ಚ ಸೀತಾಯಾಃ ಪಾಪಮೇವ ಕರಿಷ್ಯತಿ ।
ತಸ್ಮಾತ್ ಕ್ಷಮಮಿಹಾದ್ಯೈವ ಪ್ರಾಯೋಪವಿಶನಂ ಹಿ ನಃ ॥
ತ್ಯಕ್ತ್ವಾ ಪುತ್ರಾಂಶ್ಚ ದಾರಾಂಶ್ಚ ಧನಾನಿ ಚ ಗೃಹಾಣಿ ಚ ।”

ಎಂದು ಅಂಗದನೇ ಮೊದಲಾದವರು-“ಸೀತೆಯನ್ನು ಕಾಣದೆಯೇ ಕಿಷ್ಕಿಂಧೆಗೆ ಹೋದೆವೋ ? ಸುಗ್ರೀವನು ನಮ್ಮಲ್ಲಿ ಒಬ್ಬನನ್ನೂ ಉಳಿಸುವುದೇ ಇಲ್ಲ.” ಆದಕಾರಣ ಹೆಂಡರು ಮಕ್ಕಳನ್ನೂ, ಹಣಕಾಸನ್ನೂ, ಮನೆಮಾಟೆಯನ್ನೂ ಬಿಟ್ಟು ಬಿಟ್ಟು, ಪ್ರಾಣವನ್ನು ತೊರೆಯಲು ಇಲ್ಲಿಯೇ ನೆಲದ ಮೇಲೆ ಬಿದ್ದು ಒರಗುವುದು ಲೇಸು ಎಂದು ಗೊತ್ತು ಮಾಡಿಕೊಂಡಿರುವ ಅಂಗದಾದಿಗಳಿಗೂ ಕ್ಷೇಮವಾಗುವುದು.

ಉದ್ಭವಿಸಿತು ಅಥವಾ - (೩) ರಾಘವಧರ್ಮಪತ್ನೀ-ಶ್ರೀರಾಮಚಂದ್ರನೊಡನೆ ಸಹಧರ್ಮಚಾರಿಣಿಯಾದ ಸೀತೆಯು, ಯಥಾ - ಹೇಗೆ ಈ ರಾವಣನಿಂದ ಅಪಹರಿಸಿತರಲ್ಪಟ್ಟಳೋ, ಇಮಾಃ - ಈ ರಕ್ಕಸನೊಡತಿಯರೂ ಈದೃಶ್ಯಃಯದಿ ಹೀಗೆಯೇ ಸುಗ್ರೀವನಿಂದಲೂ ಬಲಾತ್ಕರಿಸಿ ಕೊಂಡುಹೋಗಲ್ಪಟ್ಟವರಾದರೆ, ತದಾ - ಆಗ, ಹರೀಶ್ವರಸ್ಯ - ಕಪಿಸಾರ್ವಭೌಮನಾದ ಸುಗ್ರೀವನಿಗೆ, ಸುಜಾತಂ - ಬಹಳ ಒಳ್ಳೆಯದಲ್ಲವೆ? (ಹೆಸರುವಾಸಿಯಲ್ಲವೆ)? ಇತಿ - ಹೀಗೆಂದು, ಸಾಧುಬುದ್ಧೇಃ- ಮಂತ್ರಿಪದವಿಗೆ ಸರಿಯಾದಬುದ್ಧಿಯುಳ್ಳ ಅಸ್ಯ - ಈ ಹನುಮಂತನಿಗೆ, ಬುದ್ಧಿಃ - ಊಹೆಯು, ಬಭೂವ - ಹೊಳೆಯಿತು, ಅಥವಾ (೪) ಇಮಾಃ - ಈ, ರಾಕ್ಷಸರಾಜಭಾರ್ಯಾಃ - ರಾವಣನ ಮಡದಿಯರು, ಯಥಾ - ಯಾವಪ್ರಕಾರವಾಗಿ ರಾವಣನಿಂದ ಅಪಹರಿಸಲ್ಪಟ್ಟದಾರೆಯೋ, ರಾಘವಧರ್ಮಪತ್ನೀ - ಶ್ರೀರಾಮಗೃಹಿಣಿಯು, ಈದೃಶೀ - ಹಾಗೆ ಇವನಿಂದ ಅಪಹರಿಸಲ್ಪಟ್ಟವಳೇ ಆದರೆ, ತದಾ - ಅಂತಹ ಕ್ರೂರಸಂದರ್ಭದಲ್ಲಿ, ಅಸ್ಯ - ಈ ಅಧಮನಾದ ರಾವಣನಿಗೆ, ಸುಜಾತಂಯದಿ - ಮೇಲುಉಂಟಾಗುತದೆಯೆ! (ಎಂದಿಗೂ ಇಲ್ಲ) ಇತಿ - ಈ ವಿಧವಾಗಿ, ಸಾಧುಬುದ್ಧೇಃ- ಯುಕ್ತಾಯುಕ್ತ ವಿಚಾರಶಕ್ತಿಯುಳ್ಳ, ಹರೀಶ್ವರಸ್ಯ - ಕಪಿಪ್ರವರನಿಗೆ, ಬುದ್ಧಿಃ - ಸಂಭಾವನೆಯು, ಬಭೂವ - ಉದ್ಭವಿಸಿತು, ಅಥವಾ (೫) ಇಮಾಃ - ಈ, ರಾಕ್ಷಸರಾಜಭಾರ್ಯಾಃ - ದಶಾನನನ ಅರಸಿಯರು, ಯಥಾ - ಹೇಗೆ ನನ್ನಿಂದ ನೋಡಲ್ಪಟ್ಟರೋ, ರಾಘವಧರ್ಮಪತ್ನೀ - ಶ್ರೀರಾಮನ ಪಟ್ಟಮಹಿಷಿಯೂ, ಈದೃಶೀಯದಿ - ನನ್ನ ಕಣ್ಣಿಗೆ ಬೇಗನೆಕಾಣಬರುವವಳೇ ಆದರೆ, (ತದಾ - ಆಗ) ಅಸ್ಯ - ಈ ನನಗೂ ಅಥವಾ - ಶ್ರೀರಾಮನಿಂದಲೂ, ಸುಗ್ರೀವನಿಂದಲೂ ಶಿಕ್ಷೆಯು ಸಂಭವಿಸುವುದೆಂದು ಅಂಜುತಲಿರುವ ಅಂಗದನೇ ಮೊದಲಾದ ಕಪಿಗಳಸಮುದಾಯಕ್ಕೂ, ಸುಜಾತಂ - ಪ್ರಾಣಭಯವುತಪ್ಪಿ ಶುಭವು ಸಂಭವಿಸುವುದಲ್ಲವೆ? ಇತಿ - ಹೀಗೆಂದು, ಸಾಧುಬುದ್ಧೇಃ - ತನ್ನವರಿಗೆಲ್ಲ ಕುಶಲವನ್ನು ಬಯಸುವ ಸದ್ಬುದ್ಧಿಯುಳ್ಳ, ಹರೀಶ್ವರಸ್ಯ- ವಾನರಶ್ರೇಷ್ಠನಿಗೆ, ಬುದ್ಧಿಃ - ಯೋಚನೆಯು, ಬಭೂವ - ತೋರಿತು, ಅಥವಾ - (೬) ಇಮಾಃ - ಈ,

ರಾಜನ ಅರಸಿಯರು ತಮ್ಮ ಪ್ರಾಣಕಾಂತನೊಡನೆ ಸುಖವಾಗಿರುವುದನ್ನು ನಾನು ಹೇಗೆ ಕಣ್ಣಾರನೋಡಿದೆನೋ, ಹಾಗೆ ಸೀತೆಯೂ ತನ್ನ ಮನೋಹರನಾದ ಶ್ರೀರಾಮಚಂದ್ರನೊಡನೆ ಸುಖವಾಗಿರುವುದನ್ನು ನಾನು ನನ್ನ ಕಣ್ಣಾರನೋಡಿದರೆ ಆಗ ಈ ನನಗೂ, ಹೆಂಡರು ಮಕ್ಕಳನ್ನೆಲ್ಲ ಬಿಟ್ಟು ಪ್ರಾಣಕ್ಕೆ ಹೊಣೆಯನ್ನು ಕೇಳುತ, ಮಿಣಿ ಮಿಣನೆ ಕಣ್ಣು ಬಿಟ್ಟುಕೊಂಡು, ನನ್ನಬರವನ್ನೇ ಎದುರುನೋಡುತ, ಮಿಡುಕುತಲಿರುವ ಅಂಗದ ಜಾಂಬವಾದಿಗಳಿಗೂ, ವಾನರ ಸಾರ್ವಭೌಮನಾದ ಸುಗ್ರೀವನಿಗೂ ಎಷ್ಟೋ ಸಂತೋಷವುಂಟಾದೀತು, ಎಂದು ತನ್ನವರಿಗೆಲ್ಲ ಕುಶಲವನ್ನು ಬಯಸುವ ಸುಬುದ್ಧಿಯುಳ್ಳವನಿಗೆ ಊಹೆಯು ಹೊಳೆಯಿತು(೬) ಅಥವಾ:— ಸದ್ಯಕ್ಕೆ ಕಡಮೆಯದೆಲ್ಲ ಹೇಗಾದರೂ ಇರಲಿ, ಈ ರಾಕ್ಷಸ ರಾಜನ

೬ "ಜ್ಞಾಯತಾಂ ಸೌಮ್ಯ ವೈದೇಹೀ ಯದಿ ಜೀವತಿ ವಾ ನ ವಾ ।
ನಹ್ಯಹಂ ಜೀವಿತುಂ ಶಕ್ತಃತಾಂ ಋತೇ ಜನಕಾತ್ಮಜಾಂ॥

ಓ ಲಕ್ಷ್ಮಣಾ ! ಸೀತೆಯು ಬದುಕಿ ಇದ್ದಾಳೆಯೋ ಇಲ್ಲವೋ ಹುಡುಕಿನೋಡಪ್ಪಾ ! ಆ ಜಾನಕಿಯನ್ನು ಅಗಲಿ ನಾನೊಂದು ನಿಮಿಷವಾದರೂ ಜೀವಿಸಲಾರೆನಪ್ಪಾ ! ಎಂದು ರಾಮನು ಸೌಮಿತ್ರಿಗೆ ಹೇಳಿರುವನು, ಹೀಗೆ ಸೀತಾಜೀವಿತ ಸಂದೇಹದಿಂದ ಬಳಲುಕಳವಳಿಸುತಲಿರುವ ಆತನಿಗೆ ಅಪಾರವಾದ ಹರ್ಷವುಂಟಾಗುತ್ತದೆ.

ರಾಕ್ಷಸರಾಜಭಾರ್ಯಾಃ - ಲಂಕಾರವಣನಿಂದ ಅಪಹರಿಸಲ್ಪಟ್ಟ ರಾಣಿಯರು, ಯಥಾ - ಹೇಗೆ ಸುಖವಾಗಿ ಜೀವದಿಂದಿರುವರೋ, ರಾಘವಧರ್ಮಪತ್ನೀ - ಶ್ರೀರಾಮಧರ್ಮಜಾಯೆಯೂ, ಈದೃಶೀಯದಿ - ಹೀಗೆಯೇ ಜೀವಸಹಿತಳಾಗಿ ಸುಖದಿಂದ ಇರುವವಳೇ ಆದರೆ, ತದಾ - ಆಗ, ಅಸ್ಯ - ನಮ್ಮ ಪ್ರಭುವಾದ ಶ್ರೀರಾಮಚಂದ್ರನಿಗೆ, ಸುಜಾತಂ - ನಮ್ಮ ಮೂಲಕ ಶುಭಸಮಾಚಾರವು ತಿಳಿಯುವುದರಿಂದ ಬಹುಸಂತೋಷವುಂಟಾಗುವುದು, ಇತಿ - ಈ ವಿಧವಾಗಿಯೂ, ಸಾಧುಬುದ್ಧೇಃ - ಸ್ವಾಮಿಭಕ್ತಿಯುಳ್ಳ, ಹರೀಶ್ವರಸ್ಯ - ವಾನರವೀರನಾದ ಹನುಮನಿಗೆ, ಬುದ್ಧಿಃ - ಮಂಗಳಮತಿಯು, ಬಭೂವ - ಉದಿಸಿತು, ಅಥವಾ - (೭) ಹೇರಾಕ್ಷಸರಾಜ - ಎಲವೋ ರಕ್ಕಸರೊಡೆಯನಾದ ರಾವಣಾ! ಇಮಾಃ - ಸಾಧಾರಣರಾದ ಈ ಹೆಂಗಸರೆಲ್ಲರೂ, ಯಥಾಭಾರ್ಯಾಃ - ನಿನಗೆ ಹೇಗೆಹೆಂಡತಿಯರಾಗಿರುವರೋ, ರಾಘವಧರ್ಮಪತ್ನೀ -ಶ್ರೀರಾಮಪಾಣಿಗೃಹೀತಿಯೂ ಈದೃಶೀಯದಿ- ಹೀಗೆಯೇ ನಿನಗೆಭಾರ್ಯೆಯಾಗುವಳೆಂದು ನಿನ್ನಿಂದ ಭಾವಿಸಲ್ಪಟ್ಟವಳೇ ಆದರೆ, ತದಾ- ಆಗ, ಅಸ್ಯ - ಈ ಪುತ್ರಪೌತ್ರಾದಿ ಸಮೃದ್ಧಿಯಿಂದೊಡಗೂಡಿರುವ ನಿನಗೆ, ಸುಜಾತಂ - ಏಳಿಗೆಯುಂಟಾಗುವುದೆ? (ಎಂದಿಗೂ ಮೇಲಾಗದು) ಇತಿ - ಈ ತೆರನಾಗಿ, ಸಾಧುಬುದ್ಧೇಃ - ಸುಬುದ್ಧಿಯುಳ್ಳ, ಹರೀಶ್ವರಸ್ಯ - ಕಪಿಶ್ರೇಷ್ಠನಿಗೆ ಬುದ್ಧಿಃ - ಮುಂದಿನಬುದ್ಧಿವಾದದ ಪ್ರತಿಭೆಯು, ಬಭೂವ - ಈಗಲೇಉಂಟಾಯಿತು. ಅಥವಾ -(೮) ಇಮಾಃ ರಾಕ್ಷಸರಾಜಭಾರ್ಯಾಃ - ಈ ಶಕ್ತಿಶಾಲಿಯಾದ ರಾವಣನಾರಿಯರು, ಯಥಾ - ಹೇಗೆ ನಾನಾ ದುರ್ಲಕ್ಷಣವುಳ್ಳವರೋ, ರಾಘವಧರ್ಮಪತ್ನೀ - ಮೂಲೋಕಮಾತೆಯಾದ ಶ್ರೀರಾಮಧರ್ಮಪತ್ನಿಯೂ

ಭಾರ್ಯೆಯರೆಲ್ಲ ಹೇಗೆ ಪ್ರಾಣಸಹಿತರಾಗಿರುವರೋ, ರಾಘವಧರ್ಮಪತ್ನಿಯೂಹೀಗೆಜೀವಸಹಿತಳಾಗಿದ್ದು ನಾನು ಇವರನ್ನು ನೋಡಿದಹಾಗೆ ಬೇಗನೆ ಆಕೆಯನ್ನು ನೋಡಿದರೆ ಆಗ ಶ್ರೀರಾಮನಿಗೆ ಬಹಳ ಸಂತೋಷವಾಗೀತು, ಎಂದು ಸ್ವಾಮಿಭಕ್ತಿಯಿಂದ ಸ್ವಾಮಿಕಾರ್ಯಾರ್ಥವಾಗಿ ಬಂದಿರುವ ಮಹಾಬುದ್ಧಿಶಾಲಿಯಾದ ಈ ಆ ಜನೇಯನಿಗೆ ಪ್ರಕೃತೋಚಿತವಾದ ಬುದ್ಧಿಯು ತೋರಿತು(೭)ಅಥವಾ:-ಎಲವೋ ರಾಕ್ಷಸರಾಜಾ! ಈ ನಿನ್ನ ಹೆಂಡತಿಯರೆಲ್ಲ ನಿನಗೆ ಹೇಗೋ, ಶ್ರೀರಾಮಧರ್ಮಪತ್ನಿಯೂ ಆತನಿಗೆ ಹಾಗೆಯೇ ಮಹಾಪ್ರೀತಿಪಾತ್ರಳಲ್ಲವೆ? ಪುತ್ರಪೌತ್ರಾದಿ ಮಹಾಸಂಪತ್ಸಮೃದ್ಧಿಯಿಂದಿರುವ ನಿನಗೆ ಈ ವಿಧವಾದ ಅತಿಕ್ರಮ ಪ್ರವರ್ತನವು (ಸುಜಾತಂ ?) ಮೇಲನ್ನು ಮಾಡುವುದೆ ? ಸರ್ಪವು ಗರುಡನಿಗೆ ಕೇಡುಕನ್ನು ಎಣಿಸಬಹುದೆ ? ಹಾವನ್ನು ಮುತ್ತಿಡಲು ಪ್ರಯತ್ನಿಸಬಹುದೆ? ಸಿಂಹದ ಬಾಯೊಳಗಿನ ಹಲ್ಲನ್ನು ಕೀಳಲಿಕ್ಕೆ ಹೊರಡಬಹುದೆ ? ಅಗ್ನಿಜ್ವಾಲೆಯನ್ನು ಬಟ್ಟೆಯಿಂದ ಮೂಟೆಕಟ್ಟಲಿಕ್ಕೆ ಉಜ್ಜುಗಿಸಬಹುದೆ? ಹೀಗೆಂದು ರಾವಣನಿಗೆ ಬುದ್ಧಿವಾದವನ್ನು ಹೇಳಬೇಕೆಂಬದಾಗಿ ಬುದ್ಧಿಶಾಲಿಯಾದ ಹನುಮನಿಗೆ ಮತಿಯು ತಲೆದೋರಿತು(೮)ಅಥವಾ:-ಈ ರಾಕ್ಷಸರಾಜಪತ್ನಿಯರು ಎಂತಹ ಸೌಂದರ್ಯವತಿಯರೋ ಶ್ರೀರಾಮಧರ್ಮಪತ್ನಿಯೂ ಇಂತಹ ಸೌಂದರ್ಯವತಿಯೆ ?

೭ "ಮಮದಯಿತತರಾಹೃತಾ ವನಾಂತಾತ್ ರಜನಿಚರೇಣ ತದಾ ವಿಮಥ್ಯಸಾ। ಕಥಯಮಮರಿಪುಂ ತಮದ್ಯವೈಪ್ಲವಗಪತೇ ಯಮಸಾದನಂನಯಾಮಿ" ಎಲೈಕಪಿವರನಾದ ಸುಗ್ರೀವನೇ! ನನ್ನ ಪ್ರಿಯತಮಳಾದ ಸೀತೆಯನ್ನು ಈ ಅಡವಿಯನಡುವೆ ಒಬ್ಬ ರಕ್ಕಸನು ವಂಚಿಸಿ ಅಪಹರಿಸಿ ಓಡಿಹೋಗಿದಾನೆ ನೀನು ಆ ಕ್ರೂರನನ್ನು ಹುಡುಕಿ ನನಗೆ ತಿಳಿಸಿದರೆ ಅವನನ್ನು ಈಗಲೇ ಯಮನ ಮನೆಗೆ ಕಳುಹಿಸುತ್ತೇನೆ ಎಂದು ಶ್ರೀರಾಮನು ಸುಗ್ರೀವನನ್ನು ಕುರಿತು ಹೇಳಿ ಇರುವುದರಿಂದ ಇವನು ಏಳಿಗೆಯನ್ನು ಹೊಂದಲಾರ.

ಈದೃಶೀಯದಿ - ಇಂತವಲಕ್ಷಣವುಳ್ಳವಳೇ ಆಗಿದ್ದರೆ, ತದಾ - ಆಗ, ಸುಜಾತಂ - ಬಹುಸುಂದರ ವಾಯಿ ! (ಇಂತಹ ವಿಕಾರಲಕ್ಷಣವೊಂದೂ ಆಕೆಯಲ್ಲಿಲ್ಲ, ಅದರಿಂದಲೇ ಇಲ್ಲಿಇಲ್ಲ) ಇತಿ - ಈತೆರನಾಗಿ, ಅಸ್ಯ - ಈ ಸಾಮುದ್ರಿಕಶಾಸ್ತ್ರಪಾರಂಗತನಾದ, ಸಾಧುಬುದ್ಧೇಃ - ಮಹಾಕುಶಲಬುದ್ಧಿಯುಳ್ಳ, ಹರೀಶ್ವರಸ್ಯ - ಕಪಿಶಾರ್ದೂಲನಿಗೆ, ಬುದ್ಧಿಸ್ತು - ಜ್ಞಾನವು, ಬಭೂವಹಿ - ಉಂಟಾಯಿತಲ್ಲ! ಅಥವಾ:- (೯) ಹೇ ರಾಕ್ಷಸರಾಜ- ಎಲೈ ರಾಕ್ಷಸ ಚಕ್ರವರ್ತಿಯೇ ! ಇಮಾಃ ಯಥಾಭಾರ್ಯಾಃ - ಈ ರಮಣಿಯರೆಲ್ಲರೂ ನಿನಗೆ ವಲ್ಲಭೆಯರಾಗಿ ಹೇಗೆ ಸುಖದಿಂದಿರುವರೋ, ರಾಘವಧರ್ಮಪತ್ನೀ-ಶ್ರೀರಾಮನ ಪ್ರಾಣಪ್ರಿಯಳೂ ಈದೃಶೀಯದಿ-ಆತನ ಸನ್ನಿಧಾನದಲ್ಲಿರುವಂತೆ ನಿನ್ನಿಂದ ಸಮರ್ಪಿಸಲ್ಪಟ್ಟವಳೇ ಆದರೆ, ತದಾ - ಆಗ, ಅಸ್ಯತು - ಈ ನಿನಗಾದರೋ, ಸುಜಾತಂ - ಸರ್ವಾಂಶದಲ್ಲಿಯೂ ಸುಖವುಂಟಾಗುವುದು, (ನಿನ್ನ ಜನ್ಮವೂ ಸಫಲವಾಗುವುದು) ಇತಿ - ಈ ವಿಧವಾಗಿ, ಸಾಧುಬುದ್ಧೇಃ - ಲೋಕಮರ್ಯಾದೆಯನ್ನನುಸರಿಸಿದ ಬುದ್ಧಿಯುಳ್ಳ, ಹರೀಶ್ವರಸ್ಯ - ವಾನರ ಪುಂಗವನಿಗೆ, ಬುದ್ಧಿಃ - ನ್ಯಾಯವಾದ ಬುದ್ಧಿಯು, ಬಭೂವ - ತಲೆದೋರಿತು, ಹಿ - ನಿಶ್ಚಯ, ಅಥವಾ:- (೧೦) ಹೇ ರಾಕ್ಷಸರಾಜ - ಎಲೈ ಯಾಮಿನೀಚರ ಸಾರ್ವಭೌಮನೇ! , ಸಾಧುಬುದ್ಧೇಃ- ಬಹುಶ್ರೇಷ್ಠವಾದ ಬುದ್ಧಿಯುಳ್ಳ, ಅಸ್ಯಹಿ - ದಿಕ್ಪಾಲರನ್ನೆಲ್ಲ ಜಯಿಸಿರುವ ನಿನಗೂ, ಇಮಾಃ ಭಾರ್ಯಾಃ - ಈ ಹೆಂಡತಿಯರೆಲ್ಲ

---

ಎಂದಿಗೂ ಅಲ್ಲ. ಏಕೆಂದರೆ- ಇವರಂತೆ ಆಕೆಯೂ ಇದ್ದರೆ (ಸುಜಾತಂ) ಚೆನ್ನಾಯಿತು! ಆಗ ಆಕೆಯೂ ಇಲ್ಲಿಯೇ ಇರಬೇಕಿತ್ತು, ಸಮಾನಗುಣ ಕ್ರಿಯಾಸೌಂದರ್ಯಾದಿಗಳುಳ್ಳವರು ಬಾರದೇ ಗುಂಪಿನಲ್ಲಿರುವುದು ಸಂಭಾವಿತವಷ್ಟೆ ? ಈ ವಿಷಯದಲ್ಲಿ ಸಂಶಯವೇ ಇಲ್ಲ. ಶ್ರೀರಾಮನು ಲೋಕಮಾನ್ಯನಲ್ಲವೆ ? ಆತನ ಧರ್ಮಪತ್ನಿಯು ಲೋಕಪೂಜ್ಯಳೆನಿಸಿ ಸಕಲ ಸಲ್ಲಕ್ಷಣ ಸಂಪನ್ನೆಯಲ್ಲವೆ ? ಕಾಗೆಗಳ ಗುಂಪಿನಲ್ಲಿ ರಾಜಹಂಸೆಯು ಇರುವುದುಂಟೆ ? ಎಂದಿಗೂ ಇಲ್ಲ, ಅದರಿಂದಲೇ ಆ ಮಹಾಮಾತೆಯು ಇಲ್ಲಿ ಇಲ್ಲ. ಎಂದೀಪ್ರಕಾರವಾಗಿ ಸಕಲ ಸಾಮುದ್ರಿಕ ಶಾಸ್ತ್ರ ಪಾರಂಗತನಾದ ಮಾರುತಾತ್ಮಜನಿಗೆ ಮನೋಗತವುಂಟಾಯಿತು (೯) ಅಥವಾ:—ಎಲವೋ ರಾಕ್ಷಸಾ ! ನಿನ್ನ ಜಾತಿಬುದ್ಧಿಯನ್ನು ಬಿಡು, ಇವರೆಲ್ಲರೂ ಹೇಗೆ ರಾಜಭಾರ್ಯೆ ಎನಿಸಿಕೊಂಡಿರುವರೋ ಹಾಗೆಯೇ ಸೀತಾದೇವಿಯೂ ಧರ್ಮವಲ್ಲಭನಾದ ಆತನ ಬಳಿಯಲ್ಲಿ ಧರ್ಮಪತ್ನಿ ಎನಿಸಿಕೊಂಡಿರುವುದು ಒಳ್ಳೆಯದು, ನಿನ್ನ ಬುದ್ಧಿಗೆ ಅದು ಸಾಧು, ನೀನು ಆಕೆಯನ್ನು ಕರೆದುಕೊಂಡು ಹೋಗಿ ಶ್ರೀರಾಮನಿಗೆ ಸಮರ್ಪಿಸು, ಆಗ ನಿನಗೆ (ಸುಜಾತಂ) ಜನ್ಮಸಾಫಲ್ಯವುಂಟಾಗುತ್ತದೆ, ಹಾಲನ್ನು ಮಣ್ಣಾಗಿ ಮಾಡದೆ ನಿನ್ನ ಬಾಯಲ್ಲಿ ಮಣ್ಣು ಬೀಳುವುದಿಲ್ಲ. ಭದ್ರ, ಜೋಕೆ, ಎಂದೀಪ್ರಕಾರ ರಾವಣನಿಗೆ ಬೋಧಿಸಬೇಕೆಂದು ಹರೀಶ್ವರನಾದ ಹನುಮನಿಗೆ ಭಾವನೆಯು ಅಂಕುರಿಸಿತು (೧೦) ಅಥವಾ:—ಎಲವೋ ರಾಕ್ಷಸ ! ನಿನಗೆ ರಾಜಭಾರ್ಯೆಯರೆನಿಸಿಕೊಂಡಿರುವ ಇವರೆಲ್ಲರೂ ನಿನ್ನಿಂದ ಅಪಹರಿಸಲ್ಪಟ್ಟವರಷ್ಟೆ ?

---

೧೦ "ತಪ್ಯಮಾನಃ ದೃಷ್ಟಧರ್ಮಾರ್ಥಃ ತಪಃ ಕೃತಪರಿಗ್ರಹಃ ।
ಪರದಾರಾನ್ ಮಹಾಪ್ರಾಜ್ಞ ನೋ ಪರೋದ್ಧುಂ ತ್ವಮರ್ಹಸಿ ॥"

ಎಲೈ ಅಸುರಾಧಿಪಾ ! ನೀನು ಧರ್ಮಾರ್ಥಗಳನ್ನು ಬಲ್ಲವನು, ತಪಸ್ಸಿನ ಬಲದಿಂದ ಎಲ್ಲಮೇಲ್ಮೆಯನ್ನೂ ಪಡೆದಿದ್ದೀಯೆ, ಹೀಗೆ ಮಹಾಜ್ಞಾನಿಸಿಸಿದ ನೀನು ಹೆರರ ಹೆಂಡಿರನ್ನು ಸೆರೆಯುಲ್ಲಿಡುವುದು ತಕ್ಕುದಲ್ಲ. ಎಂದು ಬುದ್ಧಿವಾದವನ್ನು ಮುಂದೆ ಹೇಳಹೋಗುವನು.

ಪುನಶ್ಚ ಸೋಽಚಿಂತಯದಾರ್ತರೂಪೋ ಧ್ರುವಂವಿಶಿಷ್ಟಾಗುಣತೋ ಹಿ ಸೀತಾ।
ಅಥಾಯ ಮಸ್ಯಾಂ ಕೃತವಾ ನ್ಮಹಾತ್ಮಾ ಲಂಕೇಶ್ವರಃ ಕಷ್ಟಮನಾರ್ಯಕರ್ಮ॥
ಇತಿ ಶ್ರೀಮತ್ಸುಂದರಕಾಂಡೆ ನವಮಸ್ಸರ್ಗಃ

ರೂ, ಯಥಾ - ಹೇಗೆ ಅಧೀನರಾಗಿರುವರೋ, ರಾಘವಧರ್ಮಪತ್ನೀ - ತ್ರಿಲೋಕನಾಥನಾದ ಶ್ರೀರಾಮನಸಹ ಧರ್ಮಿಣಿಯೂ, ಈದೃಶೀಯದಿತಿ-ಇಂತಹ ಭಾಗ್ಯೆಯುಳ್ಳಾಗುವಳೆಂಬ ದುಷ್ಟ ಭಾವನೆಯುಂಟಾಗುವುದಾದರೆ, ತದಾ - ಆಗ, ಸುಜಾತಂ - ಬಹುಚೆನ್ನಾಯಿತ ! (ಎಷ್ಟೋ ಸುಖವನ್ನು ಅನುಭವಿಸಬೇಕೆಂದಿರುವ ನಿನಗೆ ಇಂತಹ ದುರಭಿಪ್ರಾಯವುಂಟಾಗಬೇಡ) ಇತಿ - ಹೀಗೆಂದು, ಹರೀಶ್ವರಸ್ಯ - ಶ್ರೀಮದಾಂಜನೇಯನಿಗೆ, ಬುದ್ಧಿಃ - ಪ್ರಜ್ಞೆಯು, ಬಭೂವ - ವೊಳೆಯಿತು ॥೩೭॥ ಅಥ - (ಲೋಕವನ್ನು ಅನುಸರಿಸಿ ಕಪಿಸ್ವಭಾವದಿಂದ ವೊಟ್ಟವೊದಲು ಹೇಳಿದ) ಆ ವಿಧಭಾವನೆಯುಂಟಾದ ಬಳಿಕ, ಸೀತಾ - ಅಯೋನಿಜಳಾದ ಸೀತಾದೇವಿಯು, ಗುಣತಃ - ಪಾತಿವ್ರತ್ಯಾದಿ ಸದ್ಗುಣಸಂಪತ್ತಿನಿಂದ, ಧ್ರುವಂ - ನಿಶ್ಚಯವಾಗಿಯೂ, ವಿಶಿಷ್ಟಾಹಿ-ಶ್ರೇಷ್ಠಳೆನಿಸಿದವಳಲ್ಲವೆ ?, ಅಸ್ಯಾಂ - ಇಂತಹ ಮಹಾಸೀಯಲ್ಲಿ, ಮಹಾತ್ಮಾ - ಸದ್ವಂಶದಲ್ಲಿ ಹುಟ್ಟಿದವನಾದರೂ, ಅಯಂ - ಈ, ಲಂಕೇಶ್ವರಃ - ಲಂಕಾಧಿಪನು, ಅನಾರ್ಯಕರ್ಮ - ಕೀಳರು ಮಾಡುವ ಕೆಲಸವನ್ನ (ಸೀತಾಪಹಾರರೂಪವಾದ ದುಶ್ಚೇಷ್ಟೆಯನ್ನು) ಕೃತವಾನ್-ಮಾಡಿಬಿಟ್ಟನು, ಕಷ್ಟಂ-ಅಯ್ಯೋ, ಇತಿ - ಹೀಗೆಂದು, ಆರ್ತರೂಪಃ - ಬಹುವ್ಯಥೆಪಟ್ಟವನಾಗಿ, ಹನುಮಾನ್ - ಆಂಜನೇಯನು, ಪುನಶ್ಚ - ತಿರುಗಿಯೂ, ಅಚಿಂತಯತ್ - ಯೋಚಿಸತೊಡಗಿದನು ॥ ೩೮ ॥

—ಇಂತು ರಘುಮನ ಟೀಕೆಯಿಂದೊಡಗೂಡಿದ ಶ್ರೀಮದ್ರಾಮಾಯಣ—.

ಸುನ್ದರಕಾಣ್ಡದಲ್ಲಿ ಒಂಭತ್ತನೆಯ ಸರ್ಗವು ಶ್ರೀರಾಮಾರ್ಪಣಂ.

ರಾಘವಧರ್ಮಪತ್ನಿಯಂತೆ ನಿನ್ನ ಧರ್ಮಪತ್ನಿಯಾದ ಮಂಡೋದರಿಯೂ ಮತ್ತೊಬ್ಬರಿಂದ ಅಪಹರಿಸಲ್ಪಟ್ಟಿದ್ದರೆ ಆಗ ಹಾಗೆ ಅಪಹರಿಸಿದವನಿಗೆ (ಸುಜಾತಂ) ಒಳ್ಳೆಯದಾಗುತಲಿತ್ತೆ ? ಆ ಅಪಹಾರಿಯನ್ನು ಧ್ವಂಸಮಾಡಬೇಕೆಂದು ನೀನು ಪ್ರಯತ್ನಿಸುತಲಿರಲಿಲ್ಲವೆ ? ಈಗ ನಮ್ಮ ಸ್ವಾಮಿಯೂ ಹಾಗೆಯೇ ಅಲ್ಲವೆ ? ಇದು ನಿನಗೆ ಶ್ರೇಯಸ್ಸಲ್ಲ. ನಿಶ್ಚಯ, ಎಂದು ಸಾಧು ಬುದ್ಧಿಯುಳ್ಳ ಹರೀಶ್ವರನಾದ ಮಾರುತಿಗೆ ತೋರಿತು. ಅಥವಾ(೧೧)ರಾಘವನಿಗೆ ಧರ್ಮಪತ್ನಿಯಾದ ಸೀತೆಯೂ, ಈ ರಾಕ್ಷಸರಾಜಭಾರ್ಯೆಯರು ಹೇಗೋಹಾಗೆ ಇವರಲ್ಲಿಯೇ ಒಂದು ವೇಳೆ ಕಲೆತುಹೋಗಿದ್ದರೆ ಆಗ ಶ್ರೀರಾಮನ ಉದ್ದೇಶ,ಸುಗ್ರೀವನ ಪ್ರಯತ್ನ, ಜಾಂಬವಾದಿಗಳ ಉತ್ಸಾಹ ಪ್ರೋತ್ಸಾಹಗಳು, ನನ್ನ ಇದುವರೆಗಿನ ಪ್ರಯಾಸ ಇದೆಲ್ಲವೂ ಬಹಳ ಚೆನ್ನವೇ ಆಯಿತು, ಇತಿ ಕರ್ತವ್ಯವೇನೂ ಉಳಿಯಲೇ ಇಲ್ಲ ಎಂದೂ ಹರೀಶ್ವರನೆನಿಸಿದ ಸಾಧು

(೧೧) " ಜ್ಞಾಯತಾಂ ಸೌಮ್ಯ ವೈದೇಹೀ ಯದಿ ಜೀವತಿ ವಾ ನ ವಾ ।
ನಷ್ಟ ಹಂ ಜೀವಿತುಂ ಶಕ್ತಃ ಕ್ಷಣಮಪಿ ಜನಕಾತ್ಮಜಾಂ ॥

ಓಲಕ್ಷ್ಮಣಾ! ಸೀತೆಯುಬದುಕಿದ್ದಾಳೆಯೋ ಇಲ್ಲವೋ ಹುಡುಕಿನೋಡಪ್ಪಾ! ಆ ಜಾನಕಿಯನ್ನು ಅಗಲಿ ನಾನೊಂದು ನಿಮಿಷವಾದರೂ ಜೀವಿಸಲಾರೆ ಪ್ಪಾ! ಎಂದು ರಾಮನು ಸೌಮಿತ್ರಿಗೆ ಹೇಳಿರುವನು, ಹೀಗೆ ಸೀತಾಜೀವಿತಸಂದೇಹದಿಂದ ಬಲು ಕಳವಳಿಸುತಲಿರುವ ಆತನಿಗೆ ಅಪಾರವಾದ ಹರ್ಷವುಂಟಾಗುತ್ತದೆ.

ಬುದ್ಧಿಯುಳ್ಳ ಈ ಆಂಜನೇಯನಿಗೂ ಈ ವಿಧವಾದ ಬುದ್ಧಿಯುಂಟಾಯಿತು ||೬೨|| ಆಂಜನೇಯನು ಮೊಟ್ಟಮೊದಲು ಸೀತಾದೇವಿಯ ವಿಷಯವಾಗಿ ಪ್ರಮಾದವಶದಿಂದ ಹಾಗೆ ಚಿಂತಿಸಿ,ಹೀಗೆ ಯೋಚಿಸುವುದು ನ್ಯಾಯವಲ್ಲವೆಂದು ಪಶ್ಚಾತ್ತಾಪಯುಕ್ತನಾಗಿ'ಸೀತೆ ಪಾತಿವ್ರತ್ಯವೇ ಮೊದಲಾದ ಸಕಲ ಸದ್ಗುಣಗಳಲ್ಲಿಯೂ ಸರ್ವೋತ್ತಮಳೆನಿಸಿದವಳು, ಈವಿಷಯದಲ್ಲಿ ಲೇಶವಾದರೂ ಸಂದೇಹವಿಲ್ಲ. ಈ ರಾವಣನಾದರೋ ಸಾಕ್ಷಾತ್ ಬ್ರಹ್ಮದೇವನಿಗೆಮೊಮ್ಮಗ, ಪುಲಸ್ತ್ಯನ ಮೊಮ್ಮಗ, ವಿಶ್ರವಸ್ಸಿನ ಮಗ, ಹೀಗೆ ಸತ್ಕುಲ ಪ್ರಸೂತನಾಗಿ ಅಗ್ನಿಹೋತ್ರವೇ ಮೊದಲಾದ ಸತ್ಕರ್ಮಗಳನ್ನು ಆಚರಿಸುವುದರಿಂದ ಮಹಾತ್ಮನೆನಿಸಿಯೂ ಇರುವವನು, ಆದರೂ ಆ ಮಹಾನುಭಾವಳ ವಿಷಯದಲ್ಲಿ ಅತಿಕ್ರಮಿಸಲೆಳಸಿದುದು ಬಲು ಕೀಳತನ ಎಂದು ಒಲುನೊಂದುಕೊಂಡನು. ಮತ್ತು—ಶ್ರೀರಾಮನು ಪಾಣಿಗ್ರಹಣಮಾಡುವುದಕ್ಕಿಂತ ಮೊದಲೇ ಸೀತೆಯನ್ನು ರಾವಣನು ಪರಿಗ್ರಹಿಸಿ ಇದ್ದರೆ ಇವನಿಗೆ ಮೇಲಾಗುತಲಿತ್ತು. ಈಗ ಇವನು ಈರೀತಿ ಅತಿಕ್ರಮಿಸಿದುದರಿಂದ ಇವನು ನಾಶವಾಗಿ ಹೋಗುವುದೇದಿಟ,ಏಕೆಂದರೆ-ಆಕೆ ಮಹಾಪತಿವ್ರತೆ-ಈ ಕೀಳನು ಆಕೆಯ ಕೋಪಾಗ್ನಿಯಿಂದ ಸಮೂಲವಾಗಿದಹಿಸಿ ಹೋಗುತ್ತಾನಲ್ಲಾ ? ಅಯ್ಯೋ, ನೆನೆದಮಾತ್ರದಲ್ಲಿಯೇ ಬಲು ಕಷ್ಟವಾಗಿದೆಯೋ ? ಎಷ್ಟು ವೈಭವ, ಅನ್ಯಾಯವಾಯಿತೇ ? ಎಂದು ಪಶ್ಚಾತ್ತಾಪಪಟ್ಟನು ; ಮತ್ತು-ಸೀತೆಯು ಸಾಕ್ಷಾಲ್ಲಕ್ಷ್ಮಿ, ರಾಮನು ಶ್ರೀಮನ್ನಾರಾಯಣನು, ಆತನ ಹೃದಯವನ್ನು ಬಿಟ್ಟು ಆಕೆ ಅಗಲುವವಳೇ ಅಲ್ಲ. ಆಕೆಗೆಂದಿಗೂ ಪಾತಿವ್ರತ್ಯಭಂಗವಾಗುವುದೇ ಇಲ್ಲ. ಇದು ಸತ್ಯ. ಈ ಅನಾರ್ಯನಾದ ರಾವಣನು ಲೋಕಾಪವಾದಕ್ಕೆ ಮಾತ್ರ ಈಡಾದನು. ಅಜ್ಞಾನಿಗಳು ಅರಿಯದೆ ಮನಬಂದಂತೆ ಮಾತನಾಡಿಕೊಳ್ಳುವಂತೆ ಮಾಡಿದನಲ್ಲಾ, ಅಯ್ಯೋ, ಅಕಟಾ,ಎಂದು ಕೊರಗಿದನು, ಮತ್ತು-ಅಹಹ! ನಾನೆಷ್ಟು ಅವಿವೇಕಿ, ಅಯ್ಯೋ, ಇಷ್ಟು ಮಟ್ಟಿಗೆ ನನಗೆ ಹೊಳೆಯಲಿಲ್ಲವೆ ? ಈ ಅತ್ಯಲ್ಪನಾದ ರಾವಣನ ಅರಸಿಯರೊಡನೆ ಲೋಕಪೂಜ್ಯಳಾದ ಆ ಮಹಾದೇವಿಯನ್ನು ಹೋಲಿಸಿದೆನಲ್ಲ, ಛಿ, ನನ್ನನ್ನು ಎಷ್ಟು ನಿಂದಿಸಿಕೊಂಡರೂ ಸಾಲದು, ರಾಕ್ಷಸಬುದ್ಧಿಯಿಂದೇನೋ ಇವನು ಅತಿಕ್ರಮಿಸಲೆಳಸಿದ, ನನ್ನ ಬುದ್ಧಿಗೇಕೆ ಇಂತಹ ಮರವೆಯುಂಟಾಯಿತು ? ಎಂದು ಅನುತಾಪಪಟ್ಟನು. ಸಾಕ್ಷಾತ್'ಲಕ್ಷ್ಮೀಸ್ವರೂಪಳಾದ ಸೀತೆಯೇನೋ ಶ್ರೀರಾಮನ ಅಂತರಂಗದಲ್ಲಿಯೇ ಇದ್ದಾಳೆ. ಈ ಪ್ರತಿಕೃತಿರೂಪಳಾದ ಸೀತೆಯಲ್ಲಿ ಇವನು ಅತಿಕ್ರಮಿಸಿಲೋಕಾಪವಾದಕ್ಕೆ ಗುರಿಯಾಗಿ,ಭ್ರಷ್ಟನೆನಿಸಿ,ತನ್ನ ಮೇಲ್ಮೆಯನ್ನೆಲ್ಲ ಕೆಡಿಸಿಕೊಳ್ಳಬೇಕಾಗಿ ಬಂದಿತು ಎಂದು ಪಶ್ಚಾತ್ತಾಪಪಟ್ಟನು ||೬೩||

ಇಂತು ಒಂಭತ್ತನೆಯ ಸರ್ಗಂ

ಕಂ|| ಚದುರೆಹರಿಯಂತಃಪುರದೊಳ್ | ಸುದತಿಯರಾಗತಿಯ ಕಂಡು ಕೀಳಂದನುಜಂ||
ಹದಿಬದೆಗೆಲ್ಲದುದೆಣಿಸಲ್ | ಪದುಳವತಾಂ ಪಡೆಯನೆಂದು ಚಿಂತಿಸುತಿರ್ದಂ||



ಶ್ರೀಃ

ಶ್ರೀ ರಾಮಚಂದ್ರ ಪರಬ್ರಹ್ಮಣೇನಮಃ.

## — ದಶಮಸ್ಸರ್ಗಃ —



ತತ್ರ ದಿವ್ಯೋಪಮಂ ಮುಖ್ಯಂ ಸ್ಫಾಟಿಕಂ ರತ್ನಭೂಷಿತಮ್ ।
ಅವೇಕ್ಷಮಾಣೋ ಹನುಮಾನ್ ದದರ್ಶ ಶಯನಾಸನಮ್॥ ೧॥
ದಾಂತ ಕಾಂಚನ ಚಿತ್ರಾಂಗೈ ರ್ವೈಡೂರ್ಯೈಶ್ಚ ವರಾಸನೈಃ ।
ಮಹಾರ್ಹಾ ಸ್ತರಣೋಪೇತೈ ರುಪಪನ್ನಂ ಮಹಾಧನೈಃ ॥ ೨ ॥
ತಸ್ಯ ಚೈಕತಮೇ ದೇಶೇ ಸೋಽಗ್ರ್ಯ ಮಾಲಾವಿಭೂಷಿತಂ ।

---

ಕಂದ ॥ ರಘುವರನರಸಿಯು ಕಾಂಬೊಡೆ । ಬಗೆಗಾಣದೆ ಕಂಡನಾಗಸುರರಿಪುಸತಿಯಂ ॥
ಬಗೆದಂಮನದೊಳು ಸೀತೆಯೆನುತ್ತಂ । ಮಿಗೆಹರಿಸದಿ ಕುಣಿದನಂ ದುವಾಲವನಗಿದು॥

ಹನುಮಾನ್- ಆಂಜನೇಯನು, ತತ್ರ - ಆ ಮಲಗುವ ಮನೆಯೊಳಗೆ, ಅವೇಕ್ಷಮಾಣಃ - ನಾಲ್ಕು ಪಕ್ಕವೂ ನೋಡುತಲಿರುವವನಾಗಿ, ದಿವ್ಯೋಪಮಂ-ಇಂದ್ರನ ಸುಪ್ಪತ್ತಿಗೆಗೆ ಸಮಾನವೆನಿಸಿದ, ಮುಖ್ಯಂ- ರಾವಣನಿಗೆ ಗೊತ್ತಾದ, ಸ್ಫಾಟಿಕಂ - ಸ್ಫಟಿಕ (ಅಮೃತ) ಶಿಲೆಯಿಂದ ಅಣಿಮಾಡಿರುವ, ರತ್ನಭೂಷಿತಂ- ನವರತ್ನಗಳಿಂದ ಸಿಂಗರಿಸಿ ಇರತಕ್ಕ, ದಾಂತ - ಆನೆಯ ದಂತದ ಕೆಲಸದಮೇಲೆ ಮಾಡಿರುವ, ಕಾಂಚನ- ಚಿನ್ನದ ಕೈವಾಡದಿಂದ ಕೂಡಿರುವ, ಚಿತ್ರಾಂಗೈಃ- ಅಚ್ಚರಿಯನುಂಟುಮಾಡುವ ಅವಯವಗಳುಳ್ಳ, ವೈಡೂರ್ಯೈಃ - ವಿಡೂರಮಣಿಗಳಲ್ಲಿ ರಚಿಸಿರತಕ್ಕ, ಮಹಾಧನೈಃ - ಬಹುಬೆಲೆಬಾಳುವ, ಮಹಾರ್ಹ - ಶ್ರೇಷ್ಠವಾದ, ಆಸ್ತರಣ - ಹಾಸಿಗೆಗಳಿಂದ, ಉಪೇತೈಃ - ಒಡಗೂಡಿರುವ, ಆಸನೈಶ್ಚ - ಪೀಠ (ಏರುವಹಂತ)ಗಳಿಂದಲೂ ಸಹಿತವಾದ, ಶಯನಾಸನಂ - ದಿವ್ಯತಲ್ಪ (ಮಂಚ) ವನ್ನು, ದದರ್ಶ - ನೋಡಿದನು ॥ ೧, ೨ ॥ ಸಃ - ಆ ಮಾರುತಿಯು, ತಸ್ಯ - ಆ ಮಂಚದ, ಏಕತಮೇದೇಶೆ - ಒಂದುಕಡೆಯ ಪಕ್ಕದಲ್ಲಿ, ಅಗ್ರ್ಯ -

---

ಆಹಿಂದೆ ವಾಯುನಂದನನು ಆ ರಾವಣನ ಶಯನಶಾಲೆಯೊಳಗೆ ರಕ್ಕಸರಾಯನು ಪವಳಿಸುವ ಸುಪ್ಪತ್ತಿಗೆಯಂ ಕಂಡನು. ಸ್ಫಟಿಕಮಣಿಮಯವಾದ ಆಶಯನವು ಇಂದ್ರನು ಮಲಗುವ ಹಂಸತೂಲಿಕಾ ತಲ್ಪಕ್ಕೆ ಇಮ್ಮಡಿಯಾದ ಸೊಬಗಿನಿಂದ ಕಂಗೊಳಿಸುತಲಿದ್ದಿತು. ॥ ೧ ॥ ಅಲ್ಲದೆ- ಆನೆಯದಂತ, ಚಿನ್ನ, ಇವುಗಳಿಂದ ಬಗೆಬಗೆಯ ಕೆತ್ತನೆಗಳನ್ನೂ, ಚಿತ್ರಗಳನ್ನೂ ಆಮಂಚದಲ್ಲಿ ರಚಿಸಿ ಇದ್ದರು, ಆಮಂಚವನ್ನು ಏರಲಿಕ್ಕೆ ವೈಡೂರ್ಯಮಣಿಯ ಹಂತಗಳನ್ನು ಕಲ್ಪಿಸಿ ಇದ್ದರು. ಬಹು ವಿಚಿತ್ರವೂ ಅಮೂಲ್ಯವೂ ಆಗಿ ಇರುವ ಮೇಲುಹಾಸಿಗೆಗಳನ್ನು ಹಾಸಿಇತ್ತು ॥೨॥ ಮತ್ತು ಆಪರ್ಯಂಕದ ಒಂದು ಭಾಗದಲ್ಲಿ

ದದರ್ಶ ಪಾಂಡುರಚ್ಛತ್ರಂ ತಾರಾಧಿಪತಿ ಸನ್ನಿಭಂ ॥ ೩ ॥
ಜಾತರೂಪ ಪರಿಕ್ಷಿಪ್ತಂ ಚಿತ್ರಭಾನು ಸಮಪ್ರಭಂ ।
ಅಶೋಕಮಾಲಾ ವಿತತಂ ದದರ್ಶ ಪರಮಾಸನಂ ॥ ೪ ॥
ವಾಲವ್ಯಜನ ಹಸ್ತಾಭಿ ರ್ವೀಜ್ಯಮಾನಂ ಸಮಂತತಃ ।

---

ಶ್ರೇಷ್ಠವಾದ, ದಾಮ್ನಾ - ಹೂವಿನಹಾರದಿಂದ, ವಿಭೂಷಿತಂ - ಶೃಂಗರಿಸಲ್ಪಟ್ಟಿರುವ, ತಾರಾಧಿಪತಿ - ಚಂದ್ರನೊಡನೆ, ಸನ್ನಿಭಂ- ಸಮಾನವೆನಿಸಿದ, ಪಾಂಡುರಛತ್ರಂ- ಬೆಳ್ಗೊಡೆಯನ್ನು, ದದರ್ಶ- ನೋಡಿದನು॥೩॥ (ಪ್ರಸಂಗವನ್ನು ಬಣ್ಣಿಸುತ್ತಾನೆ) ಸಃ - ಆ ಹನುಮಂತನು, ಜಾತರೂಪ - ಚಿನ್ನದ ತಗಡಿನಿಂದ, ಪರಿಕ್ಷಿಪ್ತಂ - ಕಟ್ಟಿಸಲ್ಪಟ್ಟಿದ್ದಾಗಿಯೂ, ಚಿತ್ರಭಾನು - ಸೂರ್ಯನಿಗೆ, ಸಮಪ್ರಭಂ - ಸರಿಯಾದ ಕಾಂತಿಯುಳ್ಳದಾಗಿಯೂ, ಅಶೋಕಮಾಲಾವಿತತಂ- ಅಶೋಕ ಕುಸುಮ ಮಾಲೆಯಿಂದ ಭೂಷಿಸಲ್ಪಟ್ಟದ್ದಾಗಿಯೂ॥೪॥ ವಾಲವ್ಯಜನಹಸ್ತಾಭಿಃ-ಬೀಸುವ ಚಾಮರಗಳನ್ನು ಕಯ್ಯಲ್ಲಿಹಿಡಿದು ಇರುವ ಸ್ತ್ರೀಯರಿಂದ, ಸಮಂತತಃ- ಸುತ್ತಲೂ, ವೀಜ್ಯಮಾನಂ - ಬೀಸಲ್ಪಡುತಲಿರುವುದಾಗಿಯೂ, ವಿವಿಧೈಃ - ಬಗೆಬಗೆಯವುಗಳಾದ, ಗಂಧೈಃ - ಪರಿಮಳದ್ರವ್ಯಗಳಿಂದ, ಜುಷ್ಟಂ - ಒಡಗೂಡಿರತಕ್ಕ, ವರಧೂಪೇನ - ಗಮಗಮಿಸುವ ಧೂಪದ

---

ಉತ್ತಮವಾದ ಮುತ್ತುಗಳ ಜಾಲರದಿಂದ ಅಲಂಕರಿಸಲ್ಪಟ್ಟು, ಮುಗಿಲಿನಲ್ಲಿ ಬೆಳಗುವ ಚಂದ್ರನಂತೆಸೆವ ಚೆಲುವಂದವಾದ ಬೆಳ್ಗೊಡೆಯು ವಿರಾಜಿಸುತಲಿದ್ದಿತು ॥ ೩ ॥ ಇದಲ್ಲದೆ ಬಂಗಾರದ ಬಳ್ಳಿಯು ಬರೆಸಿಯೊಂದೊಡಗೂಡಿ, ಮನೋಹರವಾದ ಪೂಮಾಲೆಯಿಂದ ಅಲಂಕರಿಸಲ್ಪಟ್ಟು, ಬಾಲಸೂರ್ಯನಂತೆ ಮಿರುಗುತಲಿರುವ ಮೆತ್ತೆಯೊಂದು ಕಾಣಬರುತಿತ್ತು ॥ ೪ ॥ ಅಂತಹ ದಿವ್ಯಶಯನ ತಲದಲ್ಲಿ ಮಹಾರಾಜಾಧಿ ರಾಜನಾದ ಲಂಕಾಚಕ್ರಾಧಿಪತಿಯು ಹಾಯಾಗಿ ಪವಳಿಸಿ ನಿದ್ರಿಸುತಲಿದ್ದನು. ಆಹಾ! ಆ ಪುಣ್ಯಪುರುಷನ ವೈಭವವನ್ನು ಏನ ಹೇಳೋಣ, ಇರಲಿ, ಮುಂದೆ ಎಷ್ಟಾದರೂ ಕಷ್ಟನಿಷ್ಠೂರಗಳು ಬರಲಿ, ಈ ಲೋಕದಲ್ಲಿ ಯಾವನ ಮನೆಯೊಳಗೆ ಹುಳುಕಿಲ್ಲ ? " ಎಲ್ಲರಮನೆದೋಸೆಯೂ ತೂತೇ " ಎಂಬುದನ್ನು ಲೋಕವೇ ಕಂಡಿದೆ, ಹುಟ್ಟಿದಂದಿನಿಂದಲೂ ರೋಗವನ್ನು ಅನುಭವಿಸದೆಯೇ ಇದ್ದವನಾರು ? ವ್ಯಸನಬರದೆ ಸತ್ತವನಾರು ? ನಾಮಕರಣ ಮೊದಲು ಮರಣಕಾಲದವರೆಗೂ ಸುಖದಲ್ಲಿಯೇ ಮುಳುಗಿದ್ದವನಾರು ? ಯಾವನೂ ಇಲ್ಲ. ಅದಂತಿರಲಿ. ಪಾ, ಶಹಬಾಸ್, ರಾವಣನ ಹುಟ್ಟೇ ಹುಟ್ಟು, ಅವನ ವೀರ್ಯವೇ ವೀರ್ಯ, ಅವನ ದರ್ಪವೇ ದರ್ಪ, ಅವನ ಠೀವಿಯೇ ಠೀವಿ, ಅವನ ಬಿಂಕವೇ ಬಿಂಕ, ಅವನ ಬಿನ್ನಾಣವೇ ಬಿನ್ನಾಣ, ಅವನ ಮೋಡಿಯೇ ಮೋಡಿ, ಅವನ ಸುಖದ ಥಕ್ಕಿಕೆಯೇ ಥಕ್ಕಿಕೆ, ಅವನ ಐಶ್ವರ್ಯದ ಪರಿಪಾಟಿಯೇ ಪರಿಪಾಟಿ. ಸಾಕು, ಒಂದು ಮುಹೂರ್ತ ಮಾತ್ರವಾದರೂ ಸಾಕು. ನಾಳೆಯೆತ್ತಲೋ ನಾವೆತ್ತಲೋ, ಸತ್ತಮೇಲೆ ಪುಟ್ಟಿಯೆತ್ತಲೋ, ಇಂದು ನಮ್ಮ ಕಣ್ಣಾರಕಂಡು, ಕಿವಿಯಾರಕೇಳಿ, ಬಾಯಾರತಿಂದು, ಮೂಗಾರವಾಸಿಸಿ, ಮಯ್ಯಾರಮುಟ್ಟಿ, ಮನದಣಿಯ ಅನುಭವಿಸಿದುದೇ ನಮ್ಮದು, ಹೊರತೆಲ್ಲಾ ಹೊರತೇ ಎಂದು ಭಾವಿಸುವ ಅವಿವೇಕಿಸಾರ್ವಭೌಮರಂತೆ ರಾವಣನು ಇರುತ್ತಿದ್ದನು. ಕೆಲಮಂದಿ

ಗಂಧೈಶ್ಚ ವಿವಿಧೈ ರ್ಜುಷ್ಟಂ ವರಧೂಪೇನ ಧೂಪಿತಂ ॥ ೫ ॥
ಪರಮಾ ಸ್ತರಣಾಸ್ತೀರ್ಣ ಮಾವಿಕಾಜಿನ ಸಂವೃತಮ್ ।
ದಾಮಭಿ ರ್ವರಮಾಲ್ಯಾನಾಂ ಸಮಂತಾ ದುಪಶೋಭಿತಮ್ ॥ ೬ ॥
ತಸ್ಮಿ ನ್ಜೀಮೂತ ಸಂಕಾಶಂ ಪ್ರದೀಪ್ತೋತ್ತಮ ಕುಂಡಲಮ್ ।
ಲೋಹಿತಾಕ್ಷಂ ಮಹಾಬಾಹುಂ ಮಹಾರಜತ ವಾಸಸಮ್ ॥ ೭ ॥
ಲೋಹಿತೇನಾ ನುಲಿಪ್ತಾಂಗಂ ಚಂದನೇನ ಸುಗಂಧಿನಾ ।

ಹೊಗೆಯಿಂದ, ಧೂಪಿತಂ - ವಾಸನೆ ಕಟ್ಟಲ್ಪಟ್ಟಿರುವುದೂ ಆಗಿರುವ ॥ ॥ ಪರಮಾಸ್ತರಣ - ಮೇಲಾದ ಹಾಸಿಗೆಗಳಿಂದ, ಆಸ್ತೀರ್ಣಂ - ಹಾಸಲ್ಪಟ್ಟದ್ದಾಗಿಯೂ, ಆವಿಕಾಜಿನ - ಮೃದುವಾದ ಕುರಿಯ ತೊಗಲುಗಳಿಂದ, ಸಂವೃತಂ - ಹೊದಿಸಲ್ಪಟ್ಟದ್ದಾಗಿಯೂ, ವರಮಾಲ್ಯಾನಾಂ - ಶ್ರೇಷ್ಠವಾದ ಪುಷ್ಪಮಾಲೆಗಳ, ದಾಮಭಿಃ - ಎಳೆಗಳಿಂದ, (ಸರಗಳಿಂದ) ಸಮಂತಾತ್ - ಎಲ್ಲೆಡೆಗಳಲ್ಲಿ, ಉಪಶೋಭಿತಂ - ಪ್ರಕಾಶಿಸುತಲಿರುವುದಾಗಿಯೂ ಇರುವ, ಪರಮಾಸನಂ - ದಿವ್ಯಮಂಚವನ್ನು, ದದರ್ಶ - ಕಂಡನು ॥೬॥ ತಸ್ಮಿನ್- ಆ ಉತ್ತಮ ಮಂಚದ ಹಾಸಿಗೆಯಮೇಲೆ, ಜೀಮೂತಸಂಕಾಶಂ - ಮೇಘಕ್ಕೆಣೆಯಾದ, ಪ್ರದೀಪ್ತ - ಥಳಥಳನೆ ಹೊಳೆಯುವ, ಉತ್ತಮಕುಂಡಲಂ - ಶ್ರೇಷ್ಠವಾದ ಕರ್ಣಾಭರಣವುಳ್ಳ, ಲೋಹಿತಾಕ್ಷಂ - ಕೆಂಗಣ್ಣುಗಳನ್ನೊಳಗೊಂಡಿರುವ, ಮಹಾಬಾಹು - ನೀಳವಾದ ತೋಳುಗಳುಳ್ಳ, ಮಹಾರಜತ - ಬಂಗಾರದ ಸರಿಗೆಗಳ, ವಾಸಸಂ - ವಸ್ತ್ರವನ್ನು ಹೊದೆದಿರುವ, ॥೭॥ ಸುಗಂಧಿನಾ-ದಿವ್ಯವಾದ ಸುವಾಸನೆಯುಳ್ಳ, ಲೋಹಿತೇನ - ಕೆಂಪಗಿರುವ, ಚಂದನೇನ - ಗಂಧದಿಂದ, ಅನುಲಿಪ್ತ - ಲೇಪಿಸಲ್ಪಟ್ಟ, ಅಂಗಂ - ಅವಯವಗಳುಳ್ಳ, ಆಕಾಶೆ - ಮುಗಿಲಿನಲ್ಲಿನ, ಸಂಧ್ಯಾ-ಸಂಜೆಗೆಂಪಿನಂತೆ, ರಕ್ತಂ - ರಕ್ತವರ್ಣವುಳ್ಳ, ಸತಟಿದ್ಗಣಂ- ಮಿಂಚುಗಳ ಹಿಂಡಿನಿಂದಕೂಡಿದ, ತೋಯದಮಿವ - ಮೇಘವೋ ಎಂಬಂತಿರುವ, ॥ ೮ ॥ ದಿವ್ಯೈಃ - ಉತ್ತಮೋತ್ತಮಗಳಾದ, ಆಭರಣೈಃ - ರತ್ನಾಭರಣಗಳಿಂದ, ವೃತಂ-ಶೃಂಗರಿಸಲ್ಪಟ್ಟಿರುವ, ಸುರೂಪಂ -

ದಾಸಿಯರು ಸುತ್ತಲೂನಿಂತು ಚಾಮರಗಳಿಂದ ಬೀಸುತಲಿದ್ದರು, ಮತ್ತೆ ಕೆಲವರು ಘುಮ ಘುಮಾಯಿಸುವಂತೆ ಬಗೆಬಗೆಯ ದಿವ್ಯಪರಿಮಳದ ಧೂಪದ ಹೊಗೆಗಳನ್ನು ಹಾಕ ತೊಡಗಿದ್ದರು ॥ ೫ ॥ ಬಹುಕೋಮಲವಾಗಿರುವ ಕುರಿಯ ತೊಗಲಿನ ಮೇಲುಹೊದಿಕೆಯಿಂದ ಹುಗಿಸಲ್ಪಟ್ಟು ಬಲು ಮೃದುವಾಗಿರುವ ಮತ್ತೆಯಮೇಲೆ ಮಲಗಿದ್ದನು, ಸುತ್ತಲೂ ದಿವ್ಯಪರಿಮಳದ ಸುವಾಸನೆಯುಳ್ಳ ಹೂವಿನ ಹಾರಗಳನ್ನು ಹರಡಿದ್ದರು, ಇದರಿಂದ ಆದಿವ್ಯಶಯನವು ಬಹುಶೋಭಾಯಮಾನವಾಗಿದ್ದಿತು ॥ ೬ ॥ ಅಂತಪ್ಪ ಬಲುಅಂದವಾದ ಹಾಸಿಗೆಯಲ್ಲಿ ಮಳೆಗಾಲ ದೊಳಗಣ ನೀರುತುಂಬಿದ ದೊಡ್ಡಮೇಘದಂತೆ ಬಹುಗಂಭೀರವಾಗಿ ಮಲಗಿದ್ದನು, ಅವನ ಇಕ್ಕೆಲದ ಕಿವಿಗಳೊಳಗಣ ದಿವ್ಯವಜ್ರಮಣಿ ಕರ್ಣಕುಂಡಲಗಳು ಭಾಭಾಯಮಾನವಾಗಿದ್ದುವು, ನಿದ್ದೆಯಿಂದ ಅರೆಮುಗಿದಿದ್ದರೂ ಕೆಂಗಣ್ಣುಗಳು ಬೆಳಗುತಲಿದ್ದವು, ನೀಳವಾದ ತೋಳುಗಳು ಬಹುಗಂಭೀರವಾಗಿದ್ದುವು, ಬಂಗಾರದ ಸರಿಗೆಗಳಿಂದ ಗರಿಮುರಿಯಾಗಿಯೂ, ಬಲು ನವುರಾಗಿಯೂ ಇರುವ ಉತ್ತಮೋತ್ತಮವೆನಿಸಿದ ವಸ್ತ್ರವನ್ನು ಹೊದೆದಿದ್ದನು ॥೭॥ ಗಮಗಮಾಯಿಸುತಲಿರುವ ರಕ್ತಚಂದನದಿಂದ ಲಿಪ್ತ

ಸಂಧ್ಯಾ ರಕ್ತ ಮಿವಾಕಾಶೇತೋಯದಂ ಸತಟಿದ್ಗಣಂ ॥ ೮॥
ವೃತ ಮಾಭರಣೈ ರ್ದಿವ್ಯೈ ಸ್ಸುರೂಪಂ ಕಾಮರೂಪಿಣಮ್ ।
ಸವೃಕ್ಷ ವನಗುಲ್ಮಾಢ್ಯಂ ಪ್ರಸುಪ್ತ ಮಿವ ಮಂದರಮ್ ॥ ೯ ॥
ಕ್ರೀಡಿತ್ವೋಪರತಂ ರಾತ್ರೌ ವರಾಭರಣ ಭೂಷಿತಂ ।
ಪ್ರಿಯಂ ರಾಕ್ಷಸ ಕನ್ಯಾನಾಂ ರಾಕ್ಷಸಾನಾಂ ಸುಖಾವಹಮ್ ॥ ೧೦ ॥
ಪೀತ್ವಾ ಪ್ಯುಪರತಂ ಚಾಪಿ ದದರ್ಶ ಸ ಮಹಾಕಪಿಃ ।
ಭಾಸ್ವರೇ ಶಯನೇ ವೀರಂ ಪ್ರಸುಪ್ತಂ ರಾಕ್ಷಸಾಧಿಪಮ್ ॥ ೧೧ ॥
ನಿಶ್ಶ್ವಸಂತಂ ಯಥಾನಾಗಂ ರಾವಣಂ ವಾನರರ್ಷಭಃ ।

---

ಸುಂದರಾಕಾರನೂ, ಕಾಮರೂಪಿಣಂ-ಇಷ್ಟಾನುಸಾರವಾದ ರೂಪಗಳನ್ನು ತಾಳತಕ್ಕವನೆನಿಸಿ ಇರುವವನೂ, ಸವೃಕ್ಷವನಗುಲ್ಮಾಢ್ಯಂ - ಮರ, ಕಾಡು ಪೊದೆ ಇವುಗಳಿಂದ ಕೂಡಿದ, ಪ್ರಸುಪ್ತಂ-ಅಲುಗದಿರುವ, ಮಂದರಮಿವ. ಮಂದರಪರ್ವತವೋ ಎಂಬಂತಿರುವವನೂ,॥೯॥ ವರಾಭರಣಭೂಷಿತಂ- ಉತ್ತಮಾಭರಣಾಲಂಕೃತನೂ,ರಾತ್ರೌ- ಇರುಳಿನಲ್ಲಿ, ಕ್ರೀಡಿತ್ವಾ-ಆಟಪಾಟಗಳನ್ನಾಡಿ,ಉಪರತಂ-ವಿಶ್ರಮಿಸಿಕೊಂಡಿರುವವನೂ,ರಾಕ್ಷಸಕನ್ಯಾನಾಂ - ರಕ್ಕಸನಾರಿಯರಿಗೆ, ಪ್ರಿಯಂ - ಪ್ರೀತಿಪಾತ್ರನೂ, ರಾಕ್ಷಸಾನಾಂ- ದೈತ್ಯರಿಗೆ, ಸುಖಾವಹಂ - ಸುಖಕರನೂ ॥೧॥ ಅಪಿಚ . ಮತ್ತು, ಪೀತ್ವಾ - ಚೆನ್ನಾಗಿ ಪಾನಮಾಡಿ, ಉಪರತಂಚ - ವ್ಯಾಪೃತನಾದಕಾರಣವೇ, ಭಾಸ್ವರೆ - ಫಳಫಳನೆ ಹೊಳೆಯುತಲಿರುವ, ಶಯನೆ- ಸುಖಶಯನದಲ್ಲಿ, ಪ್ರಸುಪ್ತಂ-ನಿದ್ರಿಸುತ್ತಲಿರುವವನೂ ಆಗಿರುವ, ವೀರಂ-ಮಹಾಶೂರನಾದ, ರಾಕ್ಷಸಾಧಿಪಂ-ರಾಕ್ಷಸಸಾರ್ವಭೌಮನನ್ನು, ದದರ್ಶ-ನೋಡಿದನು ॥೧೧॥ ಸಃ-ಆ, ವಾನರರ್ಷಭಃ-ಕಪಿವರನು ನಿಶ್ಶ್ವಸಂತಂ- ಬುಸುಗುಟ್ಟುತಲಿರುವ, ಯಥಾನಾಗಂ - ಮಹಾ ಸರ್ಪದಂತಿರುವ, ರಾವಣಂ - ದಶಕಂಧರನನ್ನು ಕುರಿತು, ಆಸಾದ್ಯ - ಹತ್ತಿರಕ್ಕೆ ಬಂದು, ಸುಭೀತವತ್ . ಪಿಶಾಚಾದಿಗಳನ್ನು ನೋಡಿ ಅಂಜಿದವನಂತೆ, ಪರಮೋದ್ವಿಗ್ನಃ -

---

ಹಾಗ ಅವನಶರೀರವು ಸಂಜೆಹೊತ್ತಿನಲ್ಲಿ ಮುಗಿಲಿನೊಳಗೆ ಮಿಂಚಿನ ಹೊಳವಿನಿಂದಬಿಡಗೂಡಿರುವ ನೋಡದಿಂದ ಸಹಿತವಾದ ಮುಗಿಲು ತೋರುವಂತೆ ಬೆಳಗುತಲಿತ್ತು ॥೮॥ ದಿವ್ಯರತ್ನಾಭರಣಗಳಿಂದ ಅಲಂಕರಿಸಲ್ಪಟ್ಟದ್ದನು, ಸಮಯೋಚಿತವಾದ ರೂಪಗಳನ್ನು ತಾಳತಕ್ಕಶಕ್ತಿಯುಳ್ಳವನು, ಎಂದರೆ ಕಾಮರೂಪಿ, ಇಂತಹ ಆರಾವಣನು-ಮರ, ಕಾಡು, ಪೊದೆ, ಈ ಮುಂತಾದವುಗಳಿಂದೊಡಗೂಡಿದ ಮಂದರ ಪರ್ವತದಂತೆ ಬಹುಠೀವಿಯಿಂದ ಮಲಗಿದ್ದನು ॥೯॥ ಬಹುಮಂದಿರಕ್ಕಸರಿಗೆ ಸುಖವನ್ನುಂಟುಮಾಡತಕ್ಕ ಆರಾವಣನು ದಿವ್ಯಾಲಂಕಾರಗಳಿಂದ ಅಲಂಕೃತನಾಗಿ ರಾಕ್ಷಸ ಕನ್ಯೆಯರಿಗೆ ಬಹು ಸುಖಕರನೆನಿಸಿ, ಮೊದಲಿರುಳಲ್ಲಿ ಬಗೆಬಗೆಯ ಆಟಗಳನ್ನಾಡಿ, ತಿಂದು, ಕುಡಿದು ಶ್ರಾಂತನಾಗಿ ಪವಳಿಸಿದ್ದನು, ಇಂತಹ ರಾವಣನನ್ನು ಮಾರುತಿಯು ಮನಸಾರನೋಡಿದನು ॥೧೦॥ ಥಳಥಳಾಯಮಾನವಾದ ಮಂಚದಮೇಲೆ ನಿದ್ರೆಯಿಂದ ಮಹಾಸರ್ಪದಂತೆ ನೀಳವಾದ ಉಸಿರನ್ನು ಬಿಡುತ್ತಾ, ಪವಳಿಸಿರುವ ಮಹಾ ವೀರಾಗ್ರಗಣ್ಯನಾದ ರಾವಣನನ್ನು ನೋಡಿದ ಪವಮಾನನಂದನನು ಮಹಾಭೂತವನ್ನು ಕಂಡವನಂತೆ ತುಸುಮಾತ್ರ ಅಂಜಿ,ಸ್ವಲ್ಪ ಅದುರುತ ಹಿಂಜರಿದನು ॥೧೨॥ ಬಳಿಕ

ಆಸಾದ್ಯ ಪರವೋದ್ವಿಗ್ನಃ ಸ್ಸೋಪಾಸರ್ಪ ತ್ಸುಭೀತವತ್ ॥ ೧೨ ॥
ಅಥಾರೋಹಣ ಮಾಸಾದ್ಯ ವೇದಿಕಾಂತರಮಾಶ್ರಿತಃ ।
ಸುಪ್ತಂ ರಾಕ್ಷಸಶಾರ್ದೂಲಂ ಪ್ರೇಕ್ಷತೇ ಸ್ಮ ಮಹಾಕಪಿಃ ॥ ೧೩ ॥
ಶುಶುಭೇ ರಾಕ್ಷಸೇಂದ್ರಸ್ಯ ಸ್ವಪತ ಶ್ಶಯನೋತ್ತಮಂ ।
ಗಂಧಹಸ್ತಿನಿ ಸಂವಿಷ್ಟೇ ಯಥಾ ಪ್ರಸ್ರವಣಂ ಮಹತ್ ॥ ೧೪ ॥
ಕಾಂಚನಾಂಗದ ನದ್ಧೌ ಚ ದದರ್ಶ ಸ ಮಹಾತ್ಮನಃ ।
ವಿಕ್ಷಿಪ್ತೌ ರಾಕ್ಷಸೇಂದ್ರಸ್ಯ ಭುಜಾ ವಿಂದ್ರಧ್ವಜೋಪಮೌ ॥ ೧೫ ॥
ಐರಾವತ ವಿಷಾಣಾಗ್ರೈ ರಾಪೀಡನ ಕೃತವ್ರಣೌ ।

---

ಬಹಳ ಕಂಪಿಸುತ್ತಿರುವವನಾಗಿ, ಉಪಾಸರ್ಪತ್- ಸ್ವಲ್ಪ ಹಿಂಜರಿದನು ॥೧೨॥ ಅಥ – ಹಾಗೆ ಸರಿದಮೇಲೆ, ಆರೋಹಣಂ – ಹಂತವನ್ನು, ಆಸಾದ್ಯ - ಹೊಂದಿ (ಏರಿ), ವೇದಿಕಾಂತರಂ – ಮತ್ತೊಂದು ಜಗುಲಿಯನ್ನು, ಆಶ್ರಿತಃ – ಆಶ್ರಯಿಸಿದವನಾಗಿ, ಮಹಾಕಪಿಃ – ಮಾರುತಿಯು, ಸುಪ್ತಂ- ನಿದ್ರಿಸುತಲಿರುವ, ರಾಕ್ಷಸಶಾರ್ದೂಲಂ – ರಾಕ್ಷಸಾಧಿಪತಿಯನ್ನು, ಪ್ರೇಕ್ಷತೇಸ್ಮ – ಚೆನ್ನಾಗಿ ನೋಡಿದನು ॥೧೩॥ ಸ್ವಪತಃ - ನಿದ್ರಿಸುತಲಿರುವ, ರಾಕ್ಷಸೇಂದ್ರಸ್ಯ – ರಾಕ್ಷಸಸಾರ್ವಭೌಮನ, ಶಯನೋತ್ತಮಂ – ಶ್ರೇಷ್ಠವಾದ ಶಯನವು, ಗಂಧಹಸ್ತಿನಿ - ಮದದಾನೆಯು, ಸಂವಿಷ್ಟೇಸತಿ - ಪ್ರವೇಶಿಸುತಲಿರಲಾಗಿ, ಮಹತ್- ದೊಡ್ಡದಾದ, ಪ್ರಸ್ರವಣಂ – ಪ್ರವಾಹವು, ಯಥಾ – ಹೇಗೆಯೋ, ತಥಾ – ಹಾಗೆ, ಶುಶುಭೆ – ಶೋಭಿಸುತಲಿದ್ದಿತು ॥೧೪॥ ಕಾಂಚನ – ಸುವರ್ಣದ, ಅಂಗದ – ಭುಜಕೀರ್ತಿ (ಬಾಹುಪುರಿ) ಗಳಿಂದ, ನದ್ಧೌ – ಕಟ್ಟಲ್ಪಟ್ಟಿರುವ (ಅಲಂಕರಿಸಲ್ಪಟ್ಟ) ವಿಕ್ಷಿಪ್ತೌ - ನೀಳವಾಗಿರುವ, ಇಂದ್ರಧ್ವಜೋಪಮೌ – ಇಂದ್ರಧ್ವಜಕ್ಕೆಣೆಯಾಗಿರುವ, ಮಹಾತ್ಮನಃ – ಮಹಾ ಶರೀರವುಳ್ಳ ರಾವಣನ, ಭುಜೌ – ಬಾಹುಗಳನ್ನು, ದದರ್ಶಚ- ನೋಡಿದನು ॥೧೫॥ (ಕಿಂಚ – ಮತ್ತು) ಐರಾವತವಿಷಾಣಾಗ್ರೈಃ – ಇಂದ್ರನಾನೆಯ ಕೋಡುಗಳ ತುದಿಗಳಿಂದ, ಆಪೀಡನ – ಕಾಳಗದ ಹೆಣಗಾಟದಲ್ಲಿ, ಕೃತ- ಮಾಡಲ್ಪಟ್ಟ, ವ್ರಣೌ -ಗಾಯವುಳ್ಳ, ವಜ್ರ- ವಜ್ರಾಯುಧದಿಂದ, ಉಲ್ಲಿಖಿತ – ತಿವಿಯಲ್ಪಟ್ಟ, ಪೀನ – ಬಲಿತು ಇರುವ, ಅಂಸೌ – ಹೆಗಲುಳ್ಳ, ವಿಷ್ಣುಚಕ್ರ –

---

ಜೇರೊಂದು ಪಕ್ಕಕ್ಕೆ ಬಂದು ಬಂದು ಎತ್ತರವಾದ ಜಗುಲಿಯನ್ನೇರಿ, ಒಂದು ಬಗೆಯ ಅಂದವಾದ ಗಾಂಭೀರ್ಯದಿಂದ ಮಲಗಿರುವ ರಾವಣನನ್ನು, ಸ್ವಲ್ಪಹೊತ್ತಿನವರೆಗೂ ಮಾರುತಿಯು ದುರುದುರನೆ ನೋಡುತ್ತಿದ್ದನು ॥೧೩॥ ಮಳೆಯಿಂದ ಸಂಪೂರ್ಣವಾಗಿ ತುಂಬಿ, ಉಬ್ಬಿ, ದೊಡ್ಡ ಹೊಳೆಯು ಹರಿಯುತ್ತಿರುವಲ್ಲಿ ಅಂತಹ ಹೊಳೆಯ ನಡುವೆ ಮದವೇರಿದ ಮಹಾಗಜವು ನಟ್ಟನಡುವೆ ಮಲಗಿದ್ದರೆ ಹೇಗೋಹಾಗೆ ಮಹಾರಾಕ್ಷಸನು ಮಲಗಿರುವ ಶಯನವು ಶೋಭಿಸುತಲಿದ್ದಿತು ॥೧೪॥ ರಾಕ್ಷಸನು ಭಂಗಾರದ ಬಾಹುಪುರಿ (ಭುಜಕೀರ್ತಿ) ಯೆಂಬ ಒಡವೆಯಿಂದ ಅಲಂಕರಿಸಲ್ಪಟ್ಟು ಇರುವ ತೋಳುಗಳನ್ನು ಉದ್ದವಾಗಿ ನೀಡಿ ಇದ್ದರೆ ಇಂದ್ರಧ್ವಜಗಳಂತೆ ಬೆಳಗುತಲಿದ್ದವು॥೧೫॥ಮತ್ತು-ಆರಾಕ್ಷಸ ಸಾರ್ವಭೌಮನ ತೋಳುಗಳು ಪೂರ್ವದಲ್ಲಿ ದಿಗ್ವಿಜಯಾರ್ಥವಾಗಿ ಹೋಗಿದ್ದವೇಳೆ ಇಂದ್ರನ ಐರಾವತದೊಡನೆ ಹೋರಾಡುವಾಗ ಅದರ ಕೊಂಬುಗಳ ತಿವಿತದಿಂದ ಗಾಯವಾಗಿ ಮಾದು ಜಡ್ಡುಗಟ್ಟಿ ಇದ್ದುವು.

ವಜ್ರೋಲ್ಲಿಖಿತ ಪೀನಾಂಸೌ ವಿಷ್ಣುಚಕ್ರ ಪರಿಕ್ಷತೌ ॥ ೧೬ ॥
ಪೀನೌ ಸಮ ಸುಜಾತಾಂಸೌ ಸಂಗತೌ ಬಲಸಂಯುತೌ।
ಸುಲಕ್ಷಣ ನಖಾಂಗುಷ್ಠೌ ಸ್ವಂಗುಳೀ ತಲಲಕ್ಷಿತೌ ॥ ೧೭ ॥
ಸಂಗತೌ ಪರಿಘಾಕಾರೌ ವೃತ್ತೌ ಕರಿಕರೋಪಮೌ ।
ವಿಕ್ಷಿಪ್ತೌ ಶಯನೇ ಶುಭ್ರೇ ಪಂಚಶೀರ್ಷಾ ವಿವೋರಗೌ ॥ ೧೮ ॥

ಶ್ರೀಹರಿಯ ಚಕ್ರಾಯುಧದಿಂದ, ಪರಿಕ್ಷತೌ - ಗಾಯಪಟ್ಟಿರುವ, ॥೧೬॥ ಪೀನೌ - ತೋರವಾಗಿರುವ, ಸಮ - ಏರುಪೇರುಗಳಿಲ್ಲದ, ಸುಜಾತ - ಸುಂದರವಾಗಿರುವ, ಅಂಸೌ - ಹೆಗಲುಗಳನ್ನೊಳಗೊಂಡಿರುವ, ಸಂಗತೌ - ಹೊಂದಿಕೊಂಡಿರತಕ್ಕ, (ಸಂದುಗೊಂದಿಲ್ಲದ) ಬಲಸಂಯುತೌ - ಶಕ್ತಿಯಿಂದೊಡಗೂಡಿರುವ, ಸುಲಕ್ಷಣ - ಒಳ್ಳೆಲಕ್ಷಣವಾಗಿರುವ, ನಖಾಂಗುಷ್ಠೌ - ಉಗುರು ಮತ್ತು ಹೆಬ್ಬೆರಳುಗಳೂ ಉಳ್ಳ, ಅಂಗುಳೀ ತಲಲಕ್ಷಿತೌ - ಉಂಗುರಗಳಿಂದ ಹೊಳೆಯುತಲಿರುವ, ಸಂಗತೌ- ದೇಹಕ್ಕೆ ಉಚಿತವಾಗಿರುವ॥೧೭॥ ಪರಿಘಾಕಾರೌ - ಅಗುಳಿನ ಆಕಾರವುಳ್ಳ (ಲಾಳ ಮುಂಡಿಗೆಯಂತಿರುವ) ವೃತ್ತೌ - ಗುಂಡಾಗಿರತಕ್ಕ, ಕರಿಕರೋಪಮೌ - ಆನೆಯ ಸೊಂಡಿಲನ್ನು ಹೋಲುತಲಿರುವ, ಶುಭ್ರೇ - ಪರಿಶುದ್ಧವಾದ, ಶಯನೆ - ಹಾಸಿಗೆಯಲ್ಲಿ, ವಿಕ್ಷಿಪ್ತೌ - ನೀಡಲ್ಪಟ್ಟಿರುವ, ಪಂಚಶೀರ್ಷೌ - ಐದುತಲೆಗಳುಳ್ಳ, ಉರಗೌಇವ - ಸರ್ಪಗಳೋಪಾದಿಯಂತಿರುವ, ॥೧೮॥ (ಕಿಂಚ - ಮತ್ತು) ಶತಕ್ಷತಜಕಲ್ಪೇನ-ವೊಲದ ರಕ್ತದಂತಿರತಕ್ಕ, ಸುಶೀತೇನ-

ಅಲ್ಲದೆ ಇಂದ್ರನ ವಜ್ರಾಯುಧದ ಪೆಟ್ಟುಗಳು ಬಿದ್ದು ಅದರ ಗಾಯಗಳು ಮಾಗಿ ಅಲ್ಲಲ್ಲಿ ಚರ್ಮದ ಗಂಟುಗಳನ್ನೊಳಗೊಂಡಿದ್ದುವು. ಇದೂ ಅಲ್ಲದೆ ವಿಷ್ಣು ಚಕ್ರಾವತಾರಿಯಾಗಿದ್ದ *ಕಾರ್ತವೀರ್ಯಾರ್ಜುನನ ಆಯುಧದ ಪೆಟ್ಟಿನಿಂದ ಉಂಟಾದ ಗಾಯವನ್ನೊಳಗೊಂಡಿದ್ದುವು ॥೧೬॥ ಹೆಗಲುಗಳು ಒಂದಕ್ಕೊಂದು ಸಮಾನಗಳೆನಿಸಿ, ಮಹಾಬಲಸಂಪನ್ನಗಳಾಗಿ, ಬಹು ಉತ್ತಮವಾದ ಲಕ್ಷಣವನ್ನು ಪಡೆದು, ಅಂದವಾದ ಉಗುರು, ಸುಂದರವಾದ ಹೆಬ್ಬೆರಳು, ದಿವ್ಯರತ್ನಾಂಗುಳೀಯಕ(ಉಂಗುರ) ಗಳಿಂದ ಶೋಭಾಯಮಾನವಾದ ಕರತಲದಿಂದ ಒಡಗೂಡಿದ್ದುವು ॥೧೭॥ ನೀಳವಾಗಿ, ಅಲ್ಲಲ್ಲಿ ಮೂಳೆಗಳನ್ನು ಬಿಟ್ಟುಕೊಂಡಿಲ್ಲದೆ ಸುಂದರಗಳಾಗಿ, • ಅಗುಳಿನಂತೆ ಗುಂಡಾಗಿ ಅಥವಾ ಲಾಳಮುಂಡಿಗೆಯಂತೆ ಬಲುಗಟ್ಟಿಯಾಗಿ, ಆನೆಯ ದುಂಡನೆ ಸೊಂಡಲಿನಂತೆ ಪ್ರಕಾಶಮಾನಗಳಾಗಿದ್ದುವು, ಇಂತಹ ತೋ

* ಪೂರ್ವದಲ್ಲಿ ವೈಕುಂಠಲೋಕದೊಳಗೆ ಶ್ರೀಮನ್ನಾರಾಯಣನ ಸಹಸ್ರಾಲಂಕಾರವಾದ ಚಕ್ರಾಯುಧದ ಮನದೊಳಗೆ "ನಾನು ಹಗೆಗಳನ್ನೆಲ್ಲ ಕೊಂದು ಬರುವೆನು, ವಿಷ್ಣುವಿಗೆ ಸರ್ವಶತ್ರು ಸಂಹಾರಿ ಎಂದು ಹೆಸರುವಾಸಿಬರುವುದು ಇದು ಎಲ್ಲಿಯನ್ಯಾಯ ?,, ಎಂದು ಅಹಂಕಾರಉಂಟಾಯಿತು, ಸರ್ವಜ್ಞನಾದ ಭಗವಂತನು ಚಕ್ರವನ್ನು ಸಂಬೋಧಿಸಿ " ನೀನು ಭೂಲೋಕದಲ್ಲಿ ಒಬ್ಬ ಅರಸಾಗಿಹುಟ್ಟು, ನಾನು ಒಬ್ಬ ಬ್ರಾಹ್ಮಣಕುಮಾರನಾಗಿ ಅವತರಿಸುವೆನು ಎಂದು ಹೇಳಿದನು, ಅದರಂತೆ ಚಕ್ರವು ಹೇಹಯ ದೇಶಕ್ಕೆ ಅರಸಾಗಿ ಕಾರ್ತವೀರ್ಯಾರ್ಜುನನೆಂಬ ಹೆಸರಿನಿಂದ ಹುಟ್ಟಿ ಬೆಳೆದಿತು, ಶ್ರೀ ಮಹಾವಿಷ್ಣುವು ಪರಶುರಾಮನಾಮದಿಂದ ಜಮದಗ್ನಿಕುಮಾರನಾಗಿ ವಿರಾಜಿಸಿದನು, ಆ ಸಂದರ್ಭದಲ್ಲಿ ದಶವದನನು ದಿಗ್ವಿಜಯಾರ್ಥವಾಗಿ ಸಂಚರಿಸುತ್ತ ಕಾರ್ತವೀರ್ಯಾರ್ಜುನನನ್ನು ಗೆಲ್ಲಲೆಳಸಿ ಅವನೊಡನೆ ಕಾದಿ ಪೆಟ್ಟುತಿಂದು ಬಂದುಸಾಹಿರ ವರ್ಷಗಳವರೆಗೂ ಕಾರಾಗೃಹದಲ್ಲಿ ಬಿದ್ದಿರಲು ಬಳಿಕ ಬ್ರಹ್ಮನುಬಂದು ಬಿಡಿಸಿದನು ಎಂದು ಉತ್ತರಕಾಂಡ ಕಥೆ.

ಶಶಕ್ಷತಜ ಕಲ್ಪೇನ ಸುಶೀತೇನ ಸುಗಂಧಿನಾ ।
ಚಂದನೇನ ಪರಾರ್ಧ್ಯೇನ ಸ್ವನುಲಿಪ್ತೌ ಸ್ವಲಂಕೃತೌ ॥ ೧೯ ॥
ಉತ್ತಮಸ್ತ್ರೀ ವಿಮೃದಿತೌ ಗಂಧೋತ್ತಮ ನಿಷೇವಿತೌ ।
ಯಕ್ಷಪನ್ನಗ ಗಂಧರ್ವ ದೇವ ದಾನವ ರಾವಿಣೌ ॥ ೨೦ ॥
ದದರ್ಶ ಸ ಕಪಿ ಸ್ತಸ್ಯ ಬಾಹೂ ಶಯನ ಸಂಸ್ಥಿತೌ ।
ಮಂದರಸ್ಯಾಂತರೆ ಸುಪ್ತೌ ಮಹಾಹೀ ರುಷಿತಾವಿವ ॥ ೨೧ ॥
ತಾಭ್ಯಾಂ ಸ ಪರಿಪೂರ್ಣಾಭ್ಯಾಂ ಭುಜಾಭ್ಯಾಂ ರಾಕ್ಷಸೇಶ್ವರಃ ।

---

ಖಲುತಣ್ಣಗಿರುವ, ಸುಗಂಧಿನಾ - ಉತ್ತಮವಾದ ಪರಿಮಳವುಳ್ಳ, ಪರಾರ್ಧ್ಯೇನ - ಶ್ರೇಷ್ಠವಾದ, ಚಂದನೇನ - ಶ್ರೀಗಂಧದಿಂದ, ಸ್ವನುಲಿಪ್ತೌ - ಚೆನ್ನಾಗಿ ಲೇಪಿಸಲ್ಪಟ್ಟ, ಸ್ವಲಂಕೃತೌ - ಸುಂದರವಾಗಿ ಅಲಂಕರಿಸಲ್ಪಟ್ಟಿರುವ ॥೧೯॥ ಉತ್ತಮಸ್ತ್ರೀವಿಮೃದಿತೌ - ಸುಂದರಾಂಗನಾಲಿಂಗನ ಸಮ್ಮರ್ದವುಳ್ಳ, ಗಂಧೋತ್ತಮನಿಷೇವಿತೌ - ಸುವಾಸನೆಯಿಂದೊಡಗೂಡಿರುವ, (ದಿವ್ಯಪರಿಮಳದ ಧೃತಿಯಿಂದ ಲೇಪಿಸಲ್ಪಟ್ಟ) ಯಕ್ಷಪನ್ನಗಗಂಧರ್ವದೇವದಾನವರಾವಿಣೌ - ಯಕ್ಷ, ಸರ್ಪ, ಗಂಧರ್ವ, ದೇವ, ದೈತ್ಯ ಮೊದಲಾದವರನ್ನೆಲ್ಲಾ ಗೋಳಾಡಿಸುತಲಿರುವ, ॥೨೦॥ ಮಂದರಸ್ಯ - ಮಂದರಪರ್ವತದ, ಅಂತರೆ - ನಡುವೆ, ಸುಪ್ತೌ - ಮಲಗಿರುವ, ರುಷಿತೌ - ರೋಷಗೊಂಡಿರತಕ್ಕ, ಮಹಾಹೀಇವ - ಮಹಾಸರ್ಪಗಳೋ ಎಂಬಂತೆ, ತತ್ರ - ಆ ಮಹಾಶಾಲೆಯಲ್ಲಿ, ಶಯನಸಂಸ್ಥಿತೌ - ಹಾಸಿಗೆಯಮೇಲೆ ಸುಖವಾಗಿಮಲಗಿಸಿ ಇರುವ, *ಬಾಹೂ - ರಾವಣನ ತೋಳುಗಳನ್ನು, ಸಃಕಪಿಃ - ಆ ಆಂಜನೇಯನು, ದದರ್ಶ - ನೋಡಿದನು ॥೨೧॥ ಅಚಲಸಂಕಾಶಃ - ದೊಡ್ಡಬೆಟ್ಟವನ್ನು ಹೋಲುತಲಿರುವ, ಸಃ - ಆ, ರಾಕ್ಷಸೇಶ್ವರಃ - ರಕ್ಕಸರೊಡೆಯನು, ಪರಿಪೂರ್ಣಾಭ್ಯಾಂ - ಸಕಲ ಲಕ್ಷಣಗಳಿಂದ ತುಂಬಿರುವ, ತಾಭ್ಯಾಂ - ಆ ಮಹತ್ತರವಾದ, ಭುಜಾಭ್ಯಾಂ - ಬಾಹುಗಳಿಂದ, ಶೃಂಗಾಭ್ಯಾಂ - ದೊಡ್ಡ ಶಿಖರಗಳಿಂದ, ಮಂದರಇವ - ಮಂದರಪರ್ವತದ ಹಾಗೆ, ಶುಶುಭೆ

---

ಳುಗಳು ಹಾಸಿಗೆಯ ಮೇಲೆ ಸೀಳವಾಗಿ ಐದು ಬೆರಳುಗಳಿಂದೊಡಗೂಡಿ ಮಲಗಿಸಿದ್ದರೆ ಐದು ತಲೆಗಳುಳ್ಳ ಮಹಾಸರ್ಪವು ಮಲಗಿಸಿದೆಯೋ ಎಂಬಂತೆ ಬೆಳಗುತಲಿದ್ದಿತು ॥೧೮॥ ಮೊಲದ ರಕ್ತದಂತೆ ಕೆಂಪಾಗಿಯೂ, ಬಲುತಂಪಾಗಿಯೂ, ಗಮಗಮಿಸುತಲೂ, ಇರುವ ಶ್ರೇಷ್ಠವಾದ ಚಂದನದ ಲೇಪವನ್ನು ಪಡೆದು, ದಿವ್ಯಾಲಂಕಾರಾಲಂಕೃತಗಳಾಗಿ, ॥೧೯॥ ಉತ್ತಮಾಂಗನೆಯರು ಒಡೆಸುವ ಬಗೆಬಗೆಯ ಸೇವೆಯನ್ನು ಕೈಗೊಳ್ಳುತ್ತಾ, ದಿವ್ಯ ಪರಿಮಳಯುಕ್ತಗಳಾಗಿ, ಯಕ್ಷಪನ್ನಗ, ಗಂಧರ್ವ, ದೇವ, ದಾನವಮೊದಲಾದ ಅನೇಕ ಪ್ರಾಣಿಗಳನ್ನು ಕಾಳಗದಲ್ಲಿ ಗೋಳಾಡಿಸಿದವುಗಳಾಗಿ ॥೨೦॥ ಮಂದರಪರ್ವತದ ಮೇಲೆ ಮಹಾ ರೋಷದಿಂದ ಮಲಗಿರುವ ಮಹಾಸರ್ಪಗಳೋ ಎಂಬಂತೆ ಕಾಣಬರುವ ಆರಾವಣನ ಬಾಹುದಂಡಗಳನ್ನು ಮಾರುತಿಯು ಚೆನ್ನಾಗಿ ಈಕ್ಷಿಸಿದನು ॥೨೧॥ ಆಗಲಾ ರಾಕ್ಷಸೇಶ್ವರನು ಸಕಲ ರಾಜಲಕ್ಷಣಗಳಿಂದೊಡಗೂಡಿರುವ ದೀರ್ಘಗಳಾದ ಬಾಹುಗಳಿಂದ ಮಂದರ ಪರ್ವತವು ಎತ್ತರವಾದ ಕೋಡುಗಳಿಂದ ಹೇಗೋ ಹಾಗೆ ವಿರಾಜಿಸುತಲಿದ್ದನು ॥೨೨॥ ಮಾವಿನ ಮತ್ತು

---

* ರಾವಣನಿಗೆ ಇಪ್ಪತ್ತು ತೋಳುಗಳಿದ್ದರೂ ಅವೆಲ್ಲವೂ ಮುಖ್ಯವಾದ ಎರಡು ತೋಳುಗಳಲ್ಲಿ ಕವಲೊಡೆದಿರುವುದರಿಂದ ಎರಡು ಎಂದು ದ್ವಿವಚನವನ್ನು ಹೇಳಿಇದೆ.

ಶುಶುಭೇS ಚಲಸಂಕಾಶಃ ಶೃಂಗಾಭ್ಯಾ ಮಿವಮಂದರಃ ॥ ೨೨ ॥
ಚೂತ ಪುನ್ನಾಗ ಸುರಭಿ ರ್ವಕುಳೋತ್ತಮ ಸಂಯುತಃ ।
ಮೃಷ್ಟಾನ್ನ ರಸ ಸಂಯುಕ್ತಃ ಪಾನ ಗಂಧಪುರಸ್ಸರಃ ॥ ೨೩ ॥
ತಸ್ಯ ರಾಕ್ಷಸಸಿಂಹಸ್ಯ ನಿಶ್ಚಕ್ರಾಮ ಮಹಾಮುಖಾತ್ ।
ಶಯಾನಸ್ಯ ವಿನಿಶ್ವಾಸಃ ಪೂರಯನ್ನಿವ ತದ್ಗೃಹಮ್ ॥ ೨೪ ॥
ಮುಕ್ತಾ ಮಣಿ ವಿಚಿತ್ರೇಣ ಕಾಂಚನೇನ ವಿರಾಜಿತಂ ।
ಮಕುಟೇ ನಾಪವೃತ್ತೇನ ಕುಂಡಲೋ ಜ್ಜ್ವಲಿತಾನನಮ್ ॥ ೨೫ ॥
ರಕ್ತ ಚಂದನ ದಿಗ್ಧೇನ ತಥಾ ಹಾರೇಣ ಶೋಭಿನಾ ।

ಶೋಭಿಸುತಲಿದ್ದನು ॥೨೨॥ ಚೂತ - ಮಾವಿನಹಣ್ಣಿನಂತೆಯೂ, (ಹೂವಿನಂತೆಯೂ) ಪುನ್ನಾಗ - ಸುರಹೊನ್ನೆಯ ಹೂವಿನಂತೆಯೂ, ಸುರಭಿಃ - ಸುವಾಸನೆಯಾಗಿರುವ, ವಕುಳೋತ್ತಮ - ಉತ್ತಮವಾದ ಪಗಡೆಯ ಹೂವಿನ ವಾಸನೆಯಿಂದೊಡಗೂಡಿರುವ, ಮೃಷ್ಟಾನ್ನರಸ - ಪರಿಶುದ್ಧಾನ್ನರಸದ ವಾಸನೆಯಿಂದ-ಸಂಯುಕ್ತಃ - ಕೂಡಿರುವ, ಪಾನಗಂಧ - ಮದ್ಯರಸದವಾಸನೆಯನ್ನು, ಪುರಸ್ಸರಃ - ಒಳಗೊಂಡಿರುವ, ನಿಶ್ವಾಸಃ - ರಾವಣನ ಮುಖದಿಂದಹೊರಡುವ ಗಾಳಿಯು, ತದ್ಗೃಹಂ - ರಾವಣನು ಮಲಗಿರುವ ಮನೆಯನ್ನು, ಪೂರಯನ್ನಿವ - ತುಂಬುತಲಿರುವುದೋ ಎಂಬಂತೆ, ಶಯಾನಸ್ಯ - ಸುಖಶಯನವಮಾಡಿರುವ, ತಸ್ಯ - ಆ, ರಾಕ್ಷಸಸಿಂಹಸ್ಯ - ರಾಕ್ಷಸಶ್ರೇಷ್ಠನ, ಮಹಾಮುಖಾತ್ - ಆ ದೊಡ್ಡಮೋರೆಗಳ ಸಾಲಿನ ವಸೆಯಿಂದ, ನಿಶ್ಚಕ್ರಾಮ - ಸನ್ನನೆ ಹೊರಟುಬರುತ್ತಲಿತ್ತು, ॥೨೩, ೨೪॥ ಮುಕ್ತಾ - ಮುತ್ತುಗಳಿಂದಲೂ-ಮಣಿ - ರತ್ನಗಳಿಂದಲೂ, ವಿಚಿತ್ರೇಣ - ಅಚ್ಚರಿಯ ಕೈವಾಡದ ಕೆಲಸವನ್ನು ಪಡೆದಿರುವ, ಕಾಂಚನೇನ, ಸುವರ್ಣಮಯವಾದ, ಅಪವೃತ್ತೇನ - ನಿದ್ರಾವಶದಿಂದ ತಾವು ತಪ್ಪಿರುವ, ಮಕುಟೇನ - ಕಿರೀಟದಿಂದ, ವಿರಾಜಿತಂ - ಬೆಳಗುತಲಿರುವ, ಕುಂಡಲ - ದಿವ್ಯಕರ್ಣಕುಂಡಲಗಳಿಂದ, ಉಜ್ವಲಿತ - ಥಳಥಳಿಸುತಲಿರುವ, ಆನನಂ-ಮುಖವುಳ್ಳ, ॥೨೫॥ ರಕ್ತಚಂದನ - ಕೆಂಪುಗಂಧದಿಂದ, ದಿಗ್ಧೇನ - ನೆನದಿರುವ, ತಥಾ- ಹಾಗೆಯೇ, ಶೋಭಿನಾ - ಬೆಳಗುತಲಿರುವ, ಹಾರೇಣ-ಮುಕ್ತಾಹಾರದಿಂದೊಡಗೂಡಿರುವ, ಪೀನ-ಬಲಿತಿರುವ

ಸುರಹೊನ್ನೆಯ ಸುವಾಸನೆಯಿಂದೊಡಗೂಡಿ, ಪಗಡೆಯ ಹೂವಿನಂತೆ ಗಮಗಮಿಸುತ್ತ, ಮೃದು ಮಧುರಗಳಾದ ಭಕ್ಷ್ಯಭೋಜ್ಯಗಳ ವಾಸನೆಯನ್ನೊಳಗೊಂಡು, ಬಗೆಬಗೆಯ ಮದ್ಯರಸಗಳ ಗಂಧದಿಂದೊಡಗೂಡಿಯೂ ಇರುತಿರುವ, ಅಲ್ಲಿ ಮಲಗಿ ಇರತಕ್ಕ ಮಹಾರಾಜಾಧಿರಾಜನಾದ ರಾಕ್ಷಸಸಾರ್ವಭೌಮನ ಮುಖದಿಂದ ಹೊರಡತಕ್ಕ ನಿಶ್ವಾಸಮಾರುತವು ಆಶಯನಗೃಹವನ್ನು ತುಂಬಿಕೊಳ್ಳುತ್ತಿರುವಂತಿದ್ದಿತು ॥೨೩, ೨೪॥ ಮುತ್ತು-ಮುತ್ತು ರತುನಗಳಿಂದ ಬಗೆಬಗೆಯ ಚಿತ್ರಕೆಲಸವನ್ನು ಪಡೆದು ಸುವರ್ಣಮಯವಾಗಿರುವ ದಿವ್ಯವಾದ ಕಿರೀಟವನ್ನು ಧರಿಸಿ ಇದ್ದನು. ಆದರೆ ಅದು ನಿದ್ರೆಯುಸಮಯದಲ್ಲಿ ಸ್ವಲ್ಪವ್ಯತ್ಯಸ್ತವಾಗಿದ್ದಿತು. ದಿವ್ಯರತ್ನ ಕುಂಡಲಗಳಿಂದ ಅವನಮುಖವು ವಿರಾಜಿಸುತಲಿದ್ದಿತು. ಪ್ರಾಯದವುದದಿಂದ ಕೊಬ್ಬಿ ನೀಳವಾಗಿಯೂ, ಬಹುವಿಸ್ತಾರವಾಗಿಯೂ ಇರುವ ಅವನ ವಕ್ಷಸ್ಥಲದಲ್ಲಿ ದಿವ್ಯರಕ್ತಗಂಧದಿಂದ ಮಿಶ್ರವಾಗಿರುವ ಶ್ರೇಷ್ಠವಾದ ಮುಕ್ತಾಹಾರವು ವಿರಾಜಿಸುತಲಿತ್ತು ॥೨೫-೨೬॥ ಒಲುಬೆಳ್ಳಗಿರುವ ಪಟ್ಟೆಯ ದುಕೂಲವನ್ನು ಹೊದೆದಿದ್ದನು, ಕಣ್ಣುಗಳು

ಪೀನಾಯತ ವಿಶಾಲೇನ ವಕ್ಷಸಾಽಭಿವಿರಾಜಿತಮ್ ॥ ೨೬ ॥
ಪಾಂಡರೇಣಾಪವಿದ್ಧೇನ ಕ್ಷೌಮೇಣ ಕ್ಷತಜೇಕ್ಷಣಂ ।
ಮಹಾರ್ಹೇಣ ಸುಸಂವೀತಂ ಪೀತೇನೋತ್ತಮವಾಸಸಾ ॥ ೨೭ ॥
ಮಾಷರಾಶಿ ಪ್ರತೀಕಾಶಂ ನಿಶ್ಶ್ವಸಂತಂ ಭುಜಂಗವತ್ ।
ಗಾಂಗೇ ಮಹತಿ ತೋಯಾಂತೆ ಪ್ರಸುಪ್ತಮಿವ ಕುಂಜರಂ ॥ ೨೮ ॥
ಚತುರ್ಭಿಃ ಕಾಂಚನೈರ್ದೀಪೈಃ ದೀಪ್ಯಮಾನಂ ಚತುರ್ದಿಶಂ ।
ಪ್ರಕಾಶೀಕೃತ ಸರ್ವಾಂಗಂ ಮೇಘಂ ವಿದ್ಯುದ್ಗಣೈರಿವ ॥ ೨೯ ॥
ಪಾದಮೂಲ ಗತಾಶ್ಚಾಪಿ ದದರ್ಶ ಸುಮಹಾತ್ಮನಃ ।
ಪತ್ನೀಸ್ಸ ಪ್ರಿಯಭಾರ್ಯಸ್ಯ ತಸ್ಯ ರಕ್ಷಃಪತೇರ್ಗೃಹೆ ॥ ೩೦ ॥

ಆಯತ - ನೀಳವಾದ, ವಿಶಾಲೇನ - ಅಗಲವೂ ಆಗಿರುವ, ವಕ್ಷಸಾ - ಎದೆಯಿಂದ, ಅಭಿವಿರಾಜಿತಂ - ಬಹು ಸುಂದರವಾಗಿರುವ ॥೨೬॥ ಪಾಂಡರೇಣ - ಬೆಳ್ಳಗಿರುವ, ಅಪವಿದ್ಧೇನ - ನಿದ್ರಾವಶದಿಂದ ವ್ಯತ್ಯಸ್ತವಾಗಿರುವ (ತಾವುತಪ್ಪಿರುವ) ಮಹಾರ್ಹೇಣ - ಬಹುಬೆಲೆಯುದಾದ, ಕ್ಷೌಮೇಣ - ದುಕೂಲದಿಂದಲೂ, ಪೀತೇನ - ಹೊಂಬಣ್ಣವಾದ, ಉತ್ತಮವಾಸಸಾ - ಶ್ರೇಷ್ಠವಸ್ತ್ರದಿಂದಲೂ, ಸುಸಂವೀತಂ - ಚೆನ್ನಾಗಿಹೊದೆಸಲ್ಪಟ್ಟಿರುವ, ಕ್ಷತಜೇಕ್ಷಣಂ - ರಕ್ತದಂತೆ ಕೆಂಪಾದ ಕಣ್ಣುಗಳುಳ್ಳ, ॥ ೨೭॥ ಮಾಷರಾಶಿಪ್ರತೀಕಾಶಂ - ಉದ್ದಿನರಾಶಿಗೆ ಸಮಾನವಾಗಿರುವ, ಭುಜಂಗವತ್ - ಮಹಾ ಸರ್ಪದಂತೆ, ನಿಶ್ಶ್ವಸನ್ತಂ - ನಿಟ್ಟುಸಿರನ್ನು ಬಿಡುತಲಿರುವ, ಮಹತಿ - ವಿಸ್ತಾರವಾದ, ಗಾಂಗೆತೋಯಾಂತೆ - ಗಂಗಾನದಿಯ ಮರಳುದಿಣ್ಣೆಯಲ್ಲಿ, ಪ್ರಸುಪ್ತಂ - ಸುಖವಾಗಿ ಮಲಗಿರುವ, ಕುಂಜರಮಿವ (ಸ್ಥಿತಂ) ಮದಗಜದಂತಿರುವ, ॥೨೮॥ ಚತುರ್ದಿಶಂ ನಾಲ್ಕು ದಿಕ್ಕುಗಳಲ್ಲಿಯೂ ಇಟ್ಟಿರುವ, ಕಾಂಚನೈಃ - ಸುವರ್ಣಮಯವಾದ, ದೀಪೈಃ - ದೀಪಗಳಿಂದ ದೀಪ್ಯಮಾನಂ - ಪ್ರಕಾಶಿಸುತಲಿರುವ, ವಿದ್ಯುದ್ಗಣೈಃ - ಮಿಂಚುಗಳ ಸಮೂಹಗಳಿಂದ, ಮೇಘಮಿವ - ಮೇಘವು ಹೇಗೋ ಹಾಗೆ, ಪ್ರಕಾಶೀಕೃತ - ಪ್ರಕಾಶಪಡಿಸಲ್ಪಟ್ಟ, ಸರ್ವಾಂಗಂ - ಸರ್ವಾವಯವಗಳೂ, ಉಳ್ಳ ರಾವಣನನ್ನು, ದದರ್ಶ - ನೋಡಿದನು ॥೨೯॥ ಗೃಹೆ - ಆ ಮನೆಯಲ್ಲಿ, ಸುಮಹಾತ್ಮನಃ - ಮಹಾ ಶರೀರವುಳ್ಳ, ತಸ್ಯ - ಆ, ಪ್ರಿಯಭಾರ್ಯಸ್ಯ - ಪ್ರಿಯಪತ್ನಿಯರುಳ್ಳ, ರಕ್ಷಃಪತೇಃ - ರಾಕ್ಷಸಾಧಿಪತಿಯ, ಪಾದಮೂಲಗತಾಃ - ಕಾಲುಗಳ ಕೆಳಭಾಗದಲ್ಲಿ ಮಲಗಿರುವ, ಪತ್ನೀಶ್ಚ - ಭಾರ್ಯೆಯರನ್ನು, ದದರ್ಶ

ಅರೆಮುಗಿದಿದ್ದರೂ ರಕ್ತದಂತೆ ಬಲುಕೆಂಪಗೆ ಕಂಗೊಳಿಸುತಲಿದ್ದವು, ದಿವ್ಯಪೀತಾಂಬರವನ್ನು ಉಟ್ಟಿದ್ದನು॥೨೭॥ ಆಜಾನುಬಾಹುವಾಗಿ ಮಹಾಸರ್ಪದಂತೆ ನೀಳವಾಗಿ ಉಸಿರನ್ನು ಬಿಡುತ್ತಾ ಮಹಾರಾಕ್ಷಸನು ಉದ್ದಿನರಾಶಿಯಂತೆ ಬಿದ್ದಿದ್ದರೆ ಗಂಗಾನದಿಯ ಮಹಾ ವಿಸ್ತಾರವಾದ ಮರಳು ದಿಣ್ಣೆಯ ಬೈಲಿನಲ್ಲಿ ಮಲಗಿರುವ ಮದದಾನೆಯಂತೆ ಕಾಣಬರುತ್ತಿದ್ದನು॥೨೮॥ ಆಶಯನಗೃಹದೊಳಗೆ ನಾಲ್ಕು ದಿಕ್ಕುಗಳಲ್ಲಿಯೂ ಸುವರ್ಣಸ್ತಂಭಗಳಲ್ಲಿ ನಟ್ಟಿರುವ ದೀಪಗಳು ಬೆಳಗುತಲಿದ್ದು, ನಟ್ಟನಡುವೆ ಮಲಗಿ ಇರುವ ಈ ರಾವಣನು ಮಿಂಚುಗಳ ಹೊಳಹುಗಳಿಂದ ಬೆಳಗುವ ಮಹಾಮೇಘದಂತೆ ವಿರಾಜಿಸುತಲಿದ್ದನು ॥೨೯॥ ಬಹುಮಂದಿ ಪ್ರಿಯಪತ್ನಿಯರನ್ನೊಳಗೊಂಡಿರುವ ರಾವಣನು ಈ ಪ್ರಕಾರ ಮಲಗಿ ಇದ್ದರೆ ಇವನ ಪಾದತಲದ ಪಕ್ಕದಲ್ಲಿ ಬಹುಮಂದಿ ಸುಂದರಿಯರು ಸಾಲಾಗಿ ಮಲಗಿರುವುದನ್ನು ಮಾರುತಿಯು

ಶಶಿಪ್ರಕಾಶ ವದನಾ ಶ್ಚಾರು ಕುಂಡಲ ಭೂಷಿತಾಃ ।
ಅಮ್ಲಾನ ಮಾಲ್ಯಾಭರಣಾ ದದರ್ಶ ಹರಿಯೂಥಪಃ ॥ ೪೧ ॥
ನೃತ್ತ ವಾದಿತ್ರ ಕುಶಲಾ ರಾಕ್ಷಸೇಂದ್ರ ಭುಜಾಂಕಗಾಃ ।
ವರಾಭರಣ ಧಾರಿಣ್ಯೋ ನಿಷಣ್ಣಾ ದದೃಶೇ ಹರಿಃ ॥ ೪೨ ॥
ವಜ್ರ ವೈಡೂರ್ಯ ಗರ್ಭಾಣಿ ಶ್ರವಣಾಂತೇಷು ಯೋಷಿತಾಂ ।
ದದರ್ಶ ತಾಪನೀಯಾನಿ ಕುಂಡಲಾ ನ್ಯಂಗದಾನಿ ಚ ॥ ೪೩ ॥
ತಾಸಾಂಚಂದ್ರೋಪಮೈ ರ್ವಕ್ತ್ರೈಃ ಶುಭ್ರೈ ರ್ಲಲಿತ ಕುಂಡಲೈಃ ।

ಕಂಡನು ॥೩೦॥ ಹರಿಯೂಥಪಃ -ಕಪಿಪ್ರವರನು, ಶಶಿಪ್ರಕಾಶವದನಾಃ-ಚಂದಿರನಂತೆ ಹೊಳೆಯುವ ಮುಖವುಳ್ಳ, ಚಾರು - ಸುಂದರವಾದ, ಕುಂಡಲ - ಕರ್ಣಾಭರಣಗಳಿಂದ, ಭೂಷಿತಾಃ - ಅಲಂಕೃತರಾದ, ಅಮ್ಲಾನ - ಬಾಡದಿರುವ, ಮಾಲ್ಯಾಭರಣಾಃ - ಪುಷ್ಪಹಾರಗಳೆಂಬ ಅಲಂಕಾರಗಳುಳ್ಳ ಅಂಗನೆಯರನ್ನು, ದದರ್ಶ - ನೋಡಿದನು ॥೩೧॥ (ಕಿಂಚ - ಮತ್ತು) ಹರಿಃ - ಆಂಜನೇಯನು, ನೃತ್ತ - (ನಿದ್ರೆಯಲ್ಲಿದ್ದರೂ ಅಭ್ಯಾಸಬಲದಿಂದ) ಕುಣಿತದಲ್ಲಿಯೂ, ವಾದಿತ್ರ - ವೀಣಾದಿ ವಾದ್ಯ ಗಳನ್ನು ಬಾರಿಸುವುದರಲ್ಲಿಯೂ, ಕುಶಲಾಃ - ಬಲುಜಾಣರಾದ, ರಾಕ್ಷಸೇಂದ್ರ - ರಾಕ್ಷಸಾಧಿಪತಿಯ, ಭುಜ - ಬಾಹುಗಳ ಭಾಗವನ್ನೂ, ಅಂಕ - ತೊಡೆಯ ಪ್ರದೇಶವನ್ನೂ, ಗಾಃ - ಹೊಂದಿರುವ, ವರಾಭರಣಧಾರಿಣ್ಯಃ ? - ಉತ್ತಮಾಲಂಕಾರಗಳನ್ನು ಪಡೆದಿರುವ, ನಿಷಣ್ಣಾಃ - ಪವಳಿಸಿರುವ ಸುಂದರಿಯರನ್ನು, ದದೃಶೆ - ನೋಡಿದನು ॥೩೨॥ ಯೋಷಿತಾಂ - ಮತ್ತೆ ಕೆಲವಂದಿ ಲಲನೆಯರ, ಶ್ರವಣಾಂತೇಷು - ಕೊನೆಗಿವಿಗಳಲ್ಲಿ, ವಜ್ರವೈಡೂರ್ಯಗರ್ಭೇಷು- ವಜ್ರವೈಡೂರ್ಯಾದಿ ರತ್ನಗಳನ್ನೊಳಗೊಂಡಿರುವ, ತಾಪನೀಯಾನಿ - ಕುಂದಣದಿಂದ ರಚಿಸಿ ಇರುವ, ಕುಂಡಲಾನಿ - ಕರ್ಣಾಭರಣಗಳನ್ನೂ, ಅಂಗದಾನಿಚ - ತೋಳುಗಳಲ್ಲಿನ ಭುಜಕೀರ್ತಿಗಳನ್ನೂ, ದದರ್ಶ- ನೋಡಿದನು ॥೩೩॥ ತಾಸಾಂ - ಆ ಸುಂದರಾಂಗಿಯರ, ಚಂದ್ರೋಪಮೈಃ - ಚಂದ್ರನಿಗೆ ಸಮಾನಗಳಾದ, ಶುಭ್ರೈಃ - ಮಂಗಳಕರಗಳೆನಿಸಿದ, ಲಲಿತಕುಂಡಲೈಃ - ಅಂದವಾದ ಓಲೆಗಳುಳ್ಳ, ವಕ್ತ್ರೈಃ - ಮುಖಗಳಿಂದಲೂ, ತತ್ - ಆ, ವಿಮಾನಂ - ಶಯನಶಾಲೆಯು, (ಪುಷ್ಪಕವಿಮಾನವು) ತಾರಾಗಣೈಃ - ನಕ್ಷತ್ರಗಳ

ಕಂಡನು ॥೪೦॥ ಆ ಸುಂದರಿಯರು ಚಂದಿರನಂತೆ ಬೆಳಗುವ ಮೊಗದ ಕಾಂತಿಯುಳ್ಳವರಾಗಿದ್ದರು. ದಿವ್ಯರತ್ನಕುಂಡಲಗಳಿಂದ ಅಲಂಕೃತರಾಗಿದ್ದರು, ಬಾಡದಿರುವ ಹೂಮಾಲೆಗಳಿಂದ ಶೋಭಾಯಮಾನರಾಗಿರುತ್ತಿದ್ದರು. ಇಂತಹವರನ್ನೆಲ್ಲ ಮಾರುತಿಯು ನೋಡುತ ಬಂದನು ಕುಣಿತದಲ್ಲಿಯೂ, ವಾದ್ಯಗಳನ್ನು ಬಾರಿಸುವುದರಲ್ಲಿಯೂ ಬಹುಜಾಣೆಯರಾದ ರಮಣಿಯರು ನಾನಾವಿಧವಾದ ಉತ್ತಮಾಭರಣಗಳಿಂದ ಅಲಂಕೃತರಾಗಿ, ರಾವಣನ ಭುಜಪಾರ್ಶ್ವ ಪಕ್ಕದಲ್ಲಿ ಪವಳಿಸಿರುವುದನ್ನು ಕಂಡನು ॥೪೨॥ ಆದಿವ್ಯಸುಂದರಿಯರ ಕಿವಿಗಳೊಳಗೆ ಕುಂದಣದಲ್ಲಿ ವಜ್ರವೈಡೂರ್ಯಾದಿ ರತ್ನಗಳನ್ನು ಕೆತ್ತಿರುವ ಓಲೆ ಮೊದಲಾದ ಆಭರಣಗಳೂ, ತೋಳುಗಳಲ್ಲಿ ಬಾಜಿಬಂದು, ಭುಜಕೀರ್ತಿ ಮುಂತಾದ ಒಡವೆಗಳೂ ಕಂಗೊಳಿಸುತಲಿದ್ದವು ॥೪೩॥ ಸುಂದರತರವಾದ ಕರ್ಣಕುಂಡಲ ಮೊದಲಾದ ಆಭರಣಗಳನ್ನೊಳಗೊಂಡು ಹುಣ್ಣಿಮೆಯ ಚಂದಿರನಂತೆ ಬೆಳಗುವ ಮೊಗಗಳಿಂದೊಡಗೂಡಿದ ಆ ಸುಂದರಿಯರಿಂದ ಆಶಯನ ಗೃಹವು ನಕ್ಷತ್ರಗಳ ಸಮೂಹಗಳಿಂದ ನಭೋಮಂಡಲವು ಹೇಗೋಹಾಗೆ ಪ್ರಕಾಶಿಸುತ

ವಿರರಾಜ ವಿಮಾನಂ ತನ್ನಭ ಸ್ತಾರಾಗಣೈರಿವ ॥ ೩೪ ॥
ಮದವ್ಯಾಯಾಮ ಖಿನ್ನಾಸ್ತಾ ರಾಕ್ಷಸೇಂದ್ರಸ್ಯ ಯೋಷಿತಃ ।
ತೇಷು ತೇಷ್ವವಕಾಶೇಷು ಪ್ರಸುಪ್ತಾ ಸ್ತನುಮಧ್ಯಮಾಃ ॥ ೩೫ ॥
ಅಂಗಹಾರೈ ಸ್ತಥೈವಾನ್ಯಾ ಕೋಮಲೈ ರ್ನೃತ್ತಶಾಲಿನೀ ।
ವಿನ್ಯಸ್ತ ಶುಭ ಸರ್ವಾಂಗೀ ಪ್ರಸುಪ್ತಾ ವರವರ್ಣಿನೀ ॥ ೩೬ ॥
ಕಾಚಿ ದ್ವೀಣಾಂ ಪರಿಷ್ವಜ್ಯ ಪ್ರಸುಪ್ತಾ ಸಂಪ್ರಕಾಶತೇ ।
ಮಹಾನದೀ ಪ್ರಕೀರ್ಣೇವ ನಳಿನೀ ಪೋತ ಮಾಶ್ರಿತಾ ॥ ೩೭ ॥
ಅನ್ಯಾ ಕಕ್ಷಗತೇನೈವ ಮಡ್ಡುಕೇ ನಾಸಿತೇಕ್ಷಣಾ ।

ಸಮೂಹಗಳಿಂದ, ನಭಇವ - ಅಂತರಿಕ್ಷವು ಹೇಗೋ ಹಾಗೆ, ವಿರರಾಜ-ಪ್ರಕಾಶಿಸುತಲಿತ್ತು ॥೩೪॥ ಮದವ್ಯಾಯಾಮ - ಪ್ರಾಯದ ಕೊಬ್ಬಿನ ಕುಣಿತದಿಂದ, ಖಿನ್ನಾಃ-ಆಯಾಸಪಟ್ಟಿರುವ, ತನುಮಧ್ಯಮಾಃ-ಬಲು ಸಣ್ಣಾಗಿರುವ ಟೊಂಕಗಳುಳ್ಳ, ರಾಕ್ಷಸೇಂದ್ರಸ್ಯ - ರಾಕ್ಷಸರಾಜನ, ತಾಃ - ಆ, ಯೋಷಿತಃ - ಭಾಮಿನಿಯರು, ತೇಷುತೇಷು - ಆಯಾಯ, ಅವಕಾಶೇಷು - ಸ್ಥಳಗಳಲ್ಲಿ, ಪ್ರಸುಪ್ತಾಃ - ಸುಖವಾಗಿ ಮಲಗಿದ್ದರು ॥೩೫॥ ನೃತ್ತಶಾಲಿನೀ-ಕುಣಿತದಲ್ಲಿ ಆಸಕ್ತಳಾಗಿದ್ದ, ಅನ್ಯಾ-ಒಬ್ಬ, ವರವರ್ಣಿನೀ-ಮಿರುಮಿರುಗುವ ಮೈಕಾಂತಿಯುಳ್ಳ ಕಾಮಿನಿಯು, ಕೋಮಲೈಃ - ಮೃದುತರಗಳಾದ, ಅಂಗಹಾರೈಃ - ಅಂಗವಿಕ್ಷೇಪಗಳಿಂದ, (ಹಾವಭಾವಗಳಿಂದ) ತಥೈವ - ಹಾಗೆಯೇ, ವಿನ್ಯಸ್ತ-ಹಾಸಿಗೆಯಲ್ಲಿ ಚೆಲ್ಲಲ್ಪಟ್ಟ, ಶುಭ - ಮಂಗಳಕರವಾದ, ಸರ್ವಾಂಗೀ - ಸರ್ವಾವಯವಗಳುಳ್ಳವಳಾಗಿ, ಪ್ರಸುಪ್ತಾ - ಮಲಗಿದ್ದಳು ॥೩೬॥ ವೀಣಾಂ - ವೀಣೆಯನ್ನು, ಪರಿಷ್ವಜ್ಯ - ಅಪ್ಪಿಕೊಂಡು, ಪ್ರಸುಪ್ತಾ - ಮಲಗಿರುವ, ಕಾಚಿತ್ - ಮತ್ತೊಬ್ಬ ಭಾಮಿನಿಯು, ಮಹಾನದೀ - ದೊಡ್ಡ ಹೊಳೆಯವೇಗದಿಂದ, ಪ್ರಕೀರ್ಣಾ - ಚೆದರಿಸಲ್ಪಟ್ಟದಾಗಿ, ಪೋತಂ- ಸಣ್ಣ ಓಡೆಯನ್ನು, ಆಶ್ರಿತಾ - ಹೊಂದಿರುವ (ಸುತ್ತಿಕೊಂಡಿರುವ) ನಳಿನೀವ - ತಾವರೆಯ ಬಳ್ಳಿಯ ಹಾಗೆ, ಸಂಪ್ರಕಾಶತೇ - ಹೊಳೆಯುತಲಿದ್ದಳು ॥೩೭॥ ಅನ್ಯಾ - ಇನ್ನೊಬ್ಬ, ಅಸಿತೇಕ್ಷಣಾ - ಕಾಡಿಗೆಯಿಂದ ಕಪ್ಪಾದ ಕಣ್ಣುಳ್ಳ, ಭಾಮಿನೀ - ಸೀಮಂತಿನಿಯು, ಕಕ್ಷಗತೇನೈವ,- ಧರಿಸುತಲಿದ್ದ ಹಾಗೆಯೇ ಕಂಕುಳಿನಲ್ಲಿರುವ, ಮಡ್ಡುಕೇನ - ಮಡ್ಡುಕ (ಡಿಂಡಿಮ) ವೆಂಬ ವಾದ್ಯದೊಡನೆಯೇ, ಪ್ರಸುಪ್ತಾ-ಮಲಗಿದವಳಾಗಿ, ವತ್ಸಲಾ-

ಇದ್ದಿತು ॥ ೩೪ ॥ ರಕ್ಕಸನಬಡನಡುವಿನ ಮಡದಿಯರು ಪ್ರಾಯದ ಕೊಬ್ಬಿನಿಂದ ಮದವೇರಿ ಕುಣಿದು ಬಳಲಿ ಎಲ್ಲೆಲ್ಲಿದ್ದವರು ಅಲ್ಲಲ್ಲಿಯೇ ಮಲಗಿ ನಿದ್ರಿಸುತಲಿದ್ದರು ॥೩೫॥ ಆಹೆಂಗಳು ಆಬಳ ಪವಳಿಸಿದ್ದ ಪರಿಯು ಬಲು ಅಚ್ಚರಿಯಾಗಿದ್ದಿತು, ಅದೆಂತೆಂದರೆ:-ಕುಣಿತದಲ್ಲಿ ಬಲುಗಟ್ಟಿಗಳೆನಿಸಿ ಮಿರುಮಿರುಗುವ ಮೈಕಾಂತಿಯುಳ್ಳ ಓರ್ವನಾರಿಯು ಬಗೆಬಗೆಯ ಮೃದುಮಧುರವಾದ ಅಂಗಚೇಷ್ಟೆಗಳಿಂದ ಹಾವಭಾವಗಳನ್ನು ತೋರಿ, ಬಳಲಿ ಸೊಕ್ಕಿದ ಅವಯವಗಳನ್ನು ಹಾಸಿಗೆಯ ಮೇಲೆ ಚೆಲ್ಲಿ ಹಾಗೆಯೇ ಮಲಗಿ ನಿದ್ರಾಪರವಶಳಾಗಿದ್ದಳು ॥೩೬॥ ಹೊಳೆಯ ಹೊಡೆತದಿಂದ ಚೆದರಿಹೋದ ತಾವರೆಯ ಬಳ್ಳಿಯು ಒಂದು ಸಣ್ಣ ತೆಪ್ಪವನ್ನು ಸುತ್ತಿಕೊಂಡಿದ್ದರೆ ಹೇಗೋ ಹಾಗೆ ಒಬ್ಬ ರಮಣಿಯು ಬಾರಿಸುತಲಿದ್ದ ವೀಣೆಯನ್ನು ಅಪ್ಪಿಕೊಂಡು ಹಾಗೆಯೇ ನಿದ್ರಿಸುತ ವಿರಾಜಿಸುತಲಿದ್ದಳು ॥೩೭॥ ಕಾಡಿಗೆಯಿಂದ ಕಪ್ಪಾದ ಕಣ್ಣುಳ್ಳ ಕಾಂತೆಯೊಬ್ಬಳು ಕಂಕುಳಲ್ಲಿದ್ದ ಮಡ್ಡುಕವೆಂಬ ವಾದ್ಯವನ್ನು

ಪ್ರಸುಪ್ತಾ ಭಾಮಿನೀ ಭಾತಿ ಬಾಲಪುತ್ರೀವ ವತ್ಸಲಾ ॥ ೩೮ ॥
ಪಟಹಂ ಚಾರು ಸರ್ವಾಂಗೀ ಪೀಡ್ಯ ಶೇತೇ ಶುಭಸ್ತನೀ ।
ಚಿರಸ್ಯ ರಮಣಂ ಲಬ್ಧ್ವಾ ಪರಿಷ್ವಜ್ಯೇವ ಭಾಮಿನೀ ॥ ೩೯ ॥
ಕಾಚಿದ್ವಂಶಂ ಪರಿಷ್ವಜ್ಯ ಸುಪ್ತಾ ಕಮಲ ಲೋಚನಾ ।
ರಹಃ ಪ್ರಿಯತಮಂ ಗೃಹ್ಯ ಸಕಾಮೇವ ಚ ಕಾಮಿನೀ ॥ ೪೦ ॥
ವಿಪಂಚೀಂ ಪರಿಗೃಹ್ಯಾನ್ಯಾ ನಿಯತಾ ನೃತ್ತಶಾಲಿನೀ ।
ನಿದ್ರಾವಶ ಮನುಪ್ರಾಪ್ತಾ ಸಹಕಾಂತೇವ ಭಾಮಿನೀ ॥ ೪೧ ॥
ಅನ್ಯಾ ಕನಕ ಸಂಕಾಶೈ ರ್ಮೃದುಪೀನೈ ರ್ಮನೋರಮೈಃ ।

---

ಮಕ್ಕಳಾಟದಲ್ಲಿ ಅಕ್ಕರೆಯುಳ್ಳವಳಾದಕಾರಣನೆ, ಬಾಲಪುತ್ರೀವ-ಪಕ್ಕದಲ್ಲಿ ಪವಳಿಸಿರುವ ಎಳೆಯ ಹಸುಳೆಯುಳ್ಳವಳಂತೆ, ಭಾತಿ - ಪ್ರಕಾಶಿಸುತಲಿದ್ದಳು ॥೩೮॥ ಚಾರು - ಸುಂದರವಾದ, ಸರ್ವಾಂಗೀ-ಸರ್ವಾವಯವಗಳುಳ್ಳ, ಶುಭಸ್ತನೀ - ಅಂದವಾದ ಉರೋಜಗಳುಳ್ಳ, ಭಾಮಿನೀ - ಬೇರೊಬ್ಬ ಸುದತಿಯು, ಪಟಹಂ-ಪಿಳ್ಳತಪಟೆಯನ್ನು, ಪೀಡ್ಯ - ಅಪ್ಪಿಕೊಂಡು, ಚಿರಸ್ಯ - ಬಹುಕಾಲಕ್ಕೆ, ರಮಣಂ - ಕಾಂತನನ್ನು, ಪರಿಷ್ವಜ್ಯೇವ - ತಬ್ಬಿಕೊಂಡಿರುವಳೋ ಎಂಬಂತೆ, ಶೇತೇ - ಮಲಗಿಕೊಂಡಿದ್ದಳು ॥೩೯॥ ಕಾಚಿತ್ - ಇನ್ನೊಬ್ಬ, ಕಮಲಲೋಚನಾ - ಕಮಲದಂತೆ ಕಣ್ಣುಳ್ಳ, ಕಾಮಿನೀ - ಭಾಮಿನಿಯು, ವಂಶಂ-ಪಿಳ್ಳಗೋವಿಯನ್ನು, ಪರಿಷ್ವಜ್ಯ - ಅಪ್ಪಿಕೊಂಡು, ರಹಃ - ಏಕಾಂತದಲ್ಲಿ, ಪ್ರಿಯತಮಂ-ವಲ್ಲಭನನ್ನು, ಗೃಹ್ಯ - ಪರಿಗ್ರಹಿಸಿ, ಸಕಾಮೇವ - ಕೈಗೂಡಿದ ಕೋರಿಕೆಯುಳ್ಳವಳಂತೆ, ಸುಪ್ತಾ - ಮಲಗಿದ್ದಳು ॥೪೦॥ ಅನ್ಯಾ - ಮಗುದೊಬ್ಬ, ಭಾಮಿನೀ - ವಾಮಲೋಚನೆಯು, ನೃತ್ಯಶಾಲಿನೀ - ಕುಣಿಯುತಲಿದವಳಾಗಿ, ನಿಯತಾ - ಹಾಗೆಯೇ ಶಾಂತಳಾಗಿ, ವಿಪಂಚೀಂ - ಏಳುತಂತಿಗಳುಳ್ಳ ವೀಣೆಯನ್ನು, ಪರಿಗೃಹ್ಯ - ಹಿಡಿದುಕೊಂಡು, ಸಹಕಾಂತೇವ - ಪತಿಯಿಂದ ಸಹಿತಳಾಗಿರುವಳೋ ಎಂಬಂತೆ, ನಿದ್ರಾವಶಂ - ನಿದ್ರಾಧೀನತೆಯನ್ನು, ಅನುಪ್ರಾಪ್ತಾ - ಹೊಂದಿ ಇದ್ದಳು ॥೪೧॥ ಮತ್ತಲೋಚನಾ - ಮದದಿಂದ ಕೆಂಪೇರಿದ ಕಣ್ಣುಳ್ಳ, ಅನ್ಯಾ - ಬೇರೊಬ್ಬ ರಮಣಿಯು, ಕನಕಸಂಕಾಶೈಃ - ಬಂಗಾರದಂತೆ ಬೆಳಗುತಲಿರುವ, ಮೃದುಪೀನೈಃ-ಕೋಮಲವಾಗಿಯೂ ಬಲಿತಿರುವುದಾಗಿಯೂ ಇರುವ, ಮನೋರಮೈಃ - ಮನೋಹರಗಳಾದ, ಅಂಗೈಃ -

---

ಹಾಗೆಯೇ ತಬ್ಬಿಕೊಂಡು, ಪಕ್ಕದಲ್ಲಿ ಪವಳಿಸಿರುವ ಎಳೆಯ ಹಸುಳೆಯನ್ನು ಎತ್ತಿಕೊಂಡಿರುವ ಪುತ್ರವಾತ್ಸಲ್ಯವುಳ್ಳ ಸುದತಿಯ ಹಾಗೆ ನಿದ್ರಾಧೀನಳಾಗಿದ್ದಳು ॥೩೮॥ ಸರ್ವಾವಯವ ಸೌಂದರ್ಯವುಳ್ಳ ಬೇರೊಬ್ಬ ಸುಂದರಸ್ತನಿಯಾದ ಭಾಮಿನಿಯು ತಾನು ಬಾರಿಸುತಲಿದ್ದ ಪಿಳ್ಳತಪಟೆಯನ್ನು ಗಟ್ಟಿಯಾಗಿ ಅಪ್ಪಿಕೊಂಡು ಮಲಗಿದ್ದರೆ, ಬಹುಕಾಲದಿಂದ ಪತಿಯನ್ನು ಅಗಲಿದ್ದು ಈಗ ವಲ್ಲಭನನ್ನು ತನ್ನ ಮನಸಾರ ಅಪ್ಪಿ ಪವಳಿಸಿರುವಳೋ ಎಂಬಂತೆ ಕಾಣಬರುತ್ತಿದ್ದಳು ॥೩೯॥ ಕಮಲನಯನೆಯಾದ ಕಾಮಿನಿಯೊಬ್ಬಳು ತನ್ನ ಬಾಯೊಳಗೆ ನುಡಿಸುತಲಿದ್ದ ಪಿಳ್ಳಗೋವಿ (ವೇಣು) ಯನ್ನು ತಬ್ಬಿಕೊಂಡು ಪ್ರಾಣಪ್ರಿಯನನ್ನು ಅಪ್ಪಿ ಕೃತಾರ್ಥಳಾದ ಮಹಿಳೆಯಂತೆ ಮಲಗಿ ಹೊಳೆಯುತಲಿದ್ದಳು ॥೪೦॥ ಏಳುತಂತಿಗಳನ್ನೊಳಗೊಂಡಿರುವ ವೀಣೆಯನ್ನು ನುಡಿಸುತ ಕುಣಿಯುತಲಿದ್ದ ನಿತಂಬಿನಿಯೊಬ್ಬಳು ಕಾಂತನೊಡಗೂಡಿದವಳಂತೆ ಹಾಗೆಯೇ ನಿದ್ದೆಗೆ ವಶಳಾಗಿದ್ದಳು ॥೪೧॥ ಮದವೇರಿ ಕೆಂಪಡರಿದ ಕಣ್ಣುಳ್ಳ

ಮೃದಂಗಂ ಪರಿಪೀಡ್ಯಾಂಗೈಃ ಪ್ರಸುಪ್ತಾ ಮತ್ತಲೋಚನಾ ॥ ೪೨ ॥
ಭುಜ ಪಾರ್ಶ್ವಾಂತರಸ್ಥೇನ ಕಕ್ಷಗೇನ ಕೃಶೋದರೀ ।
ಪಣವೇನ ಸಹಾನಿಂದ್ಯಾ ಸುಪ್ತಾ ಮದಕೃತಶ್ರಮಾ ॥ ೪೩ ॥
ಡಿಂಡಿಮಂ ಪರಿಗೃಹ್ಯಾನ್ಯಾ ತಥೈ ವಾಸಕ್ತ ಡಿಣ್ಡಿಮಾ ।
ಪ್ರಸುಪ್ತಾ ತರುಣಂ ವತ್ಸ ಮುಪಗೂಹ್ಯೇವ ಭಾಮಿನೀ ॥ ೪೪ ॥
ಕಾಚಿ ದಾಡಂಬರಂ ನಾರೀ ಭುಜಸಂಯೋಗ ಪೀಡಿತಂ ।
ಕೃತ್ವಾ ಕಮಲಪತ್ರಾಕ್ಷೀ ಪ್ರಸುಪ್ತಾ ಮದಮೋಹಿತಾ ॥ ೪೫ ॥

ಅಮಯವಗಳಿಂದ, ಮೃದಂಗಂ - ಮದ್ದಳೆಯನ್ನು, ಪರಿಪೀಡ್ಯ - ತಬ್ಬಿಕೊಂಡು, ಪ್ರಸುಪ್ತಾ -ನಿದ್ರಿಸುತ್ತಿದ್ದಳು ॥೪೨॥ ಅನಿಂದ್ಯಾ - ದೋಷಲೇಶವಿಲ್ಲದ, ಕೃಶೋದರೀ - ಬಡನಡುವುಳ್ಳ ನಿತಂಬಿನಿಯು, ಮದಕೃತಶ್ರಮಾ-ಮದದಿಂದ ಬಳಲಿದವಳಾಗಿ, ಭುಜಪಾರ್ಶ್ವ-ತೋಳು ಮತ್ತು ಪಕ್ಕಗಳ, ಅಂತರಸ್ಥೇನ-ನಡುವೆ ಇರುವ, ಕಕ್ಷಗೇನ - ಕಂಕುಳಿನಲ್ಲಿರತಕ್ಕ, ಪಣವೇನಸಹ - ಮದ್ದಲೆಯೊಡನೆಯೇ, ಸುಪ್ತಾ - ಮಲಗಿಕೊಂಡಿದ್ದಳು ॥೪೩॥ ಅನ್ಯಾ - ಮತ್ತೊಬ್ಬ, ಭಾಮಿನಿ - ಕೃಶೋದರಿಯು, ಡಿಂಡಿಮಂ- ಡಿಂಡಿಮವೆಂಬ ವಾದ್ಯವನ್ನು, ಪರಿಗೃಹ್ಯ - ಹಿಡಿದುಕೊಂಡು, ತಥೈವ - ಹಾಗೆಯೇ, ಆಸಕ್ತ - ಸಂಬಂಧಿಸಿದ, ಡಿಂಡಿಮಾ - ಮತ್ತೊಂದು ಡಿಂಡಿಮವುಳ್ಳವಳಾದಕಾರಣವೇ. ತರುಣಂ - ಪ್ರಾಯದಪತಿಯನ್ನೂ, ವತ್ಸಂ - ಕಂದನನ್ನೂ, ಉಪಗೂಹ್ಯೇವ - ತಬ್ಬಿಕೊಂಡಿರುವಳೋ ಎಂಬಂತೆ, ಪ್ರಸುಪ್ತಾ - ನಿದ್ರಿಸುತ್ತಿದ್ದಳು ॥೪೪॥ ಕಮಲಪತ್ರಾಕ್ಷೀ - ತಾವರೆಯ ಎಸಳಿನಂತೆ ಕಣ್ಣುಳ್ಳ, ಕಾಚಿತ್ - ಒಬ್ಬಳು, ನಾರೀ-ನೀರೆಯು ಮದಮೋಹಿತಾ- ಮದದಿಂದುಂಟಾದನಿದ್ದೆಯಿಂದ ಮೈಮರೆತವಳಾಗಿ, ಆಡಂಬರ-ತೂರ್ಯವೆಂಬ ವಾದ್ಯವನ್ನು (ಅಡಂಬರಃ - ಇದು ಆರಂಭ, ಆನೆಯಗರ್ಜನೆ, ತೂರ್ಯ, ಎಂಬ ಅರ್ಥಗಳಲ್ಲಿದೆ ಎಂದುವಿಶ್ವ) ಭುಜಸಂಯೋಗಪೀಡಿತಂ - ಭುಜಾಲಿಂಗನದಿಂದ ಪೀಡಿಸಲ್ಪಟ್ಟದನ್ನಾಗಿ, ಕೃತ್ವಾ - ಮಾಡಿ, ಪ್ರಸುಪ್ತಾ - ಪವಳಿಸಿದ್ದಳು ॥೪೫॥ ಅನ್ಯಾ-ಇನ್ನೊಬ್ಬ, ಭಾಮಿನೀ-ಮತ್ತಕಾಶಿನಿಯು, ಕಲಶಂ-ನೀರುತುಂಬಿದಕೊಡವನ್ನು

ಮತ್ತಕಾಶಿನಿಯೊಬ್ಬಳು ಪ್ರಾಯದಿಂದ ಬಲಿತಿರುವುದಾಗಿಯೂ, ಕೋಮಲವಾಗಿಯೂ, ಮನೋಹರವಾಗಿಯೂ ಇರುವ ಅವಯವಗಳಿಂದ ಮದ್ದಳೆಯನ್ನು ಗಟ್ಟಿಯಾಗಿ ಅಪ್ಪಿಕೊಂಡು ಮದಪರವಶಳೂ, ನಿದ್ರಾಪರವಶಳೂ ಆಗಿದ್ದಳು ॥೪೨॥ ಬಡನೆಯ್ಯ ಕೋಮಲಾಂಗಿಯಾದ ಮಾನಿನಿಯೊಬ್ಬಳು ತೋಳಿನ ಮತ್ತು ಪಕ್ಕೆಯನಡುವೆ ಕಂಕುಳಲ್ಲಿ ಅವಿತುಕೊಂಡಿರುವ ಮದ್ದಳೆಯೊಡನೆ ಮದಾವೇಶದಿಂದ ಬಳಲಿ ನಿದ್ರೆಗೆಯ್ಯುತಲಿದ್ದಳು॥೪೩॥ಬೇರೊಬ್ಬ ಭಾಮಾಮಣಿಯು ಒಂದು ಕೈಯಿಂದ ಡಿಂಡಿಮವೆಂಬ ವಾದ್ಯವನ್ನು ಬಾರಿಸುತಲಿದ್ದು, ಮತ್ತೊಂದುಕರತಲದಿಂದ ಬೇರೊಂದು ಡಿಂಡಿಮವನ್ನು ಬಾರಿಸತೊಡಗಿ, ಹಾಗೆಯೇ ನಿದ್ರಾವಶಳಾಗಿದ್ದರೆ ಒಂದು ಪಕ್ಕದಲ್ಲಿ ಎಳೆಯ ಕಂದನನ್ನೂ,ಮತ್ತೊಂದು ಪಾರ್ಶ್ವದಲ್ಲಿ ಪ್ರಿಯಪತಿಯನ್ನೂ ಅಪ್ಪಿ ಪವಳಿಸಿರುವಳೋ ಎಂಬಂತೆ ವಿರಾಜಿಸುತಲಿದ್ದಳು ॥೪೪॥ ತಾವರೆಯ ಎಸಳನಂತೆ ಮಿಸುಪನಯನವುಳ್ಳ ಮಾನಿನಿ ಯೋರ್ವಳು ಮದಾವೇಶದಿಂದ ಮೋಹಿತಳಾಗಿ ಎರಡು ಕೈಗಳಿಂದಲೂ ತೂರ್ಯವೆಂಬ ವಾದ್ಯವನ್ನು ಬಿಮ್ಮಗೆ ತಬ್ಬಿಕೊಂಡು ಮೈಮರೆತು ಮಲಗಿದ್ದಳು ॥೪೫॥ ಇನ್ನೊಬ್ಬರ ಮಣಿಯು ನೀರು ತುಂಬಿದ ಕೊಡವನ್ನು ತಲೆಯ ಅಡಿ

ಕಲಶೀ ಮಪವಿಧ್ಯಾನ್ಯಾ ಪ್ರಸುಪ್ತಾ ಭಾತಿ ಭಾಮಿನೀ ।
ವಸಂತೇ ಪುಷ್ಪಶಬಳಾ ಮಾಲೇವ ಪರಿಮಾರ್ಜಿತಾ ॥ ೪೬ ॥
ಪಾಣಿಭ್ಯಾಂ ಚ ಕುಚೌ ಕಾಚಿ ತ್ಸುವರ್ಣ ಕಲಶೋಪಮೌ ।
ಉಪ ಗೂಹ್ಯಾಬಲಾ ಸುಪ್ತಾ ನಿದ್ರಾಬಲ ಪರಾಜಿತಾ ॥ ೪೭ ॥
ಅನ್ಯಾ ಕಮಲಪತ್ರಾಕ್ಷೀ ಪೂರ್ಣೇಂದು ಸದೃಶಾನನಾ ।
ಅನ್ಯಾ ಮಾಲಿಂಗ್ಯ ಸುಶ್ರೋಣೀಂ ಪ್ರಸುಪ್ತಾ ಮದವಿಹ್ವಲಾ ॥ ೪೮ ॥
ಆತೋದ್ಯಾನಿ ವಿಚಿತ್ರಾಣಿ ಪರಿಷ್ವಜ್ಯ ವರಸ್ತ್ರಿಯಃ ।
ನಿಪೀಡ್ಯ ಚ ಕುಚೈ ಸ್ಸುಪ್ತಾಃ ಕಾಮಿನ್ಯಃ ಕಾಮುಕಾನಿವ ॥ ೪೯ ॥

---

ಅಪವಿಧ್ಯ - ತಲೆಯುಕೆಳಗೆ ಇಟ್ಟುಕೊಂಡು (ಬಾಯಿಕಟ್ಟ ತಲೆಕೆಳಗಾಗಿ ಇಟ್ಟುಕೊಂಡು), ವಸಂತೆ - ಚೈತ್ರ ವೈಶಾಖಮಾಸದಲ್ಲಿ, ಪರಿಮಾರ್ಜಿತಾ - ಬಾಡದಹಾಗೆ ತೋಯಿಸಲ್ಪಟ್ಟ, ಪುಷ್ಪಶಬಳಾ - ಹೂಗಳಿಂದ ಚಿತ್ರವಾಗಿರುವ, ಮಾಲೇವ - ಪುಷ್ಪಮಾಲೆಯುಂತೆ, ಪ್ರಸುಪ್ತಾ - ಮಲಗಿದವಳಾಗಿ, ಭಾತಿ- ಪ್ರಕಾಶಿಸುತಲಿದ್ದಳು ॥೪೬॥ ಕಾಚಿತ್ - ಬೇರೊಬ್ಬ, ಅಬಲಾ - ನಾರಿಯು, ಸುವರ್ಣಕಲಶೋಪಮೌ - ಬಂಗಾರದ ಕೊಡಗಳಿಗೆಣೆಯಾದ, ಕುಚೌತ - ತನ್ನ ಉರೋಜಗಳನ್ನೇ, ಪಾಣಿಭ್ಯಾಂ - ಕರತಲಗಳಿಂದ, ಉಪಗೂಹ್ಯ - ತಬ್ಬಿಕೊಂಡು, ನಿದ್ರಾ - ನಿದ್ರೆಯು, ಬಲ - ಶಕ್ತಿಯಿಂದ, ಪರಾಜಿತಾ - ಸೋಲಿಸಲ್ಪಟ್ಟವಳಾಗಿ (ವಶಮಾಡಲ್ಪಟ್ಟು) ಸುಪ್ತಾ - ಮಲಗಿದ್ದಳು ॥೪೭॥ ಕಮಲಪತ್ರಾಕ್ಷೀ - ತಾವರೆಯ ಎಸಳಿನಂತೆ ಕಣ್ಣುಳ್ಳ ಪೂರ್ಣೇಂದು - ಪೂರ್ಣಚಂದ್ರನಿಗೆ, ಸದೃಶಾನನಾ - ಸಮಾನವಾದ ಮುಖವುಳ್ಳ, ಅನ್ಯಾ- ಬೇರೊಬ್ಬ ಸುಂದರಿಯು, ಅನ್ಯಾಂ - ಇನ್ನೊಬ್ಬ, ಸುಶ್ರೋಣೀಂ- ದುಂಡಾದ ಬೆನ್ನಿನಕೆಳಭಾಗವುಳ್ಳ ಭಾಮಿನಿಯನ್ನು, ಆಲಿಂಗ್ಯ - (ರಮಣನೆಂಬ ಬುದ್ಧಿಯಿಂದ) ಅಪ್ಪಿಕೊಂಡು, ಮದವಿಹ್ವಲಾ - ಮದದಿಂದ ವ್ಯಾಕುಲತವಳಾಗಿ, ಪ್ರಸುಪ್ತಾ - ನಿದ್ರಿಸುತ್ತಿದ್ದಳು ॥೪೮॥ ವರಸ್ತ್ರಿಯಃ - ಮತ್ತೆ ಕೆಲವುಮಂದಿ ಉತ್ತಮಾಂಗನೆಯರು, ವಿಚಿತ್ರಾಣಿ - ಆಶ್ಚರ್ಯಕರಗಳಾದ, ಆತೋದ್ಯಾನಿ - ಬಗೆಬಗೆಯ ವಾದ್ಯಗಳನ್ನು, ಕುಚೈಃ - ಉರೋಜಗಳಿಂದ, ಕಾಮಿನ್ಯಃ - ಕಾಮಿನಿಯರು - ಕಾಮುಕಾನಿವ - ಕಾಮುಕರನ್ನು ಹೇಗೋಹಾಗೆ, ಪರಿಷ್ವಜ್ಯ - ಬಲವಾಗಿ ತಬ್ಬಿಕೊಂಡು, ಸುಪ್ತಾಃ - ಪವಳಿಸಿ ನಿದ್ರಿಸುತ್ತಿದ್ದರು ॥ ೪೯ ॥ ತಾಸಾಂ - ಆ

---

ಯೊಳಬ್ಬ ವಸಂತಋತುವಿನಲ್ಲಿ ಬಾಡದಿರುವುದಕ್ಕೆ ನೀರಿನಲ್ಲಿ ತೋಯಿಸಿದ ಚಿತ್ರ ಕುಸುಮಗಳನ್ನು ಕಟ್ಟಿರುವ ದಿವ್ಯ ಪುಷ್ಪಮಾಲೆಯೋಪಾದಿಯಂತೆ ರಾರಾಜಿಸುತಲಿದ್ದಳು ॥೪೬॥ ಬಬ್ಬಾನೊಬ್ಬ ಲಲನಾಶಿರೋಮಣಿಯು ತನ್ನ ಕರತಲಗಳಿಂದಲೇ ಬಂಗಾರದ ಕೊಡಗಳಿಗೆ ಣೆಯೆನಿಸಿದ ತನ್ನ ಉರೋಜಗಳನ್ನು ಗಟ್ಟಿಯಾಗಿ ಹಿಡಿ ಅಪ್ಪಿಕೊಂಡು ನಿದ್ರೆಯ ಅತಿಶಯದಿಂದ ಪ್ರಜ್ಞೆ ತಪ್ಪಿ ಮಲಗಿದ್ದಳು ॥೪೭॥ ಕಮಲಪತ್ರಾಕ್ಷಿಯೂ ಪೂರ್ಣಚಂದ್ರವದನೆಯೂ ಆಗಿಗಿರುವ ಬೇರೊಬ್ಬವನಿತೆಯು ಮದಾತಿರೇಕದಿಂದ ತನ್ನ ಕಾಂತನನ್ನೇ ಅಪ್ಪಿರುವೆನೆಂಬ ಭಾವನೆಯಿಂದ ಮತ್ತೊಬ್ಬ ರಮಣೀಮಣಿಯನ್ನು ಅಪ್ಪಿ ಪವಳಿಸಿದ್ದಳು ॥೪೮॥ ಇಂತು ಅನೇಕ ಮಂದಿ ಸುಂದರಾಂಗಿಯರು ಬಗೆಬಗೆಯ ವಾದ್ಯಗಳನ್ನು ನುಡಿಸುತಲಿದ್ದವರು ಹಾಗ ಹಾಗೆಯೇ ತಮ್ಮ ವಕ್ಷಸ್ಥಲಗಳಿಂದ ಗಟ್ಟಿಯಾಗಿ ತಬ್ಬಿಕೊಂಡು ಕಾಮಿನಿಯರು ಕಾಮುಕರನ್ನು ಅಪ್ಪಿ ಪವಳಿಸುವಂತೆ ಮಲಗಿ ನಿದ್ರೆಯೊಳಿರುತ್ತಿದ್ದರು ॥೪೯॥

ತಾಸಾ ಮೇಕಾಂತ ವಿನ್ಯಸ್ತೇ ಶಯಾನಾಂ ಶಯನೆ ಶುಭೆ ।
ದದರ್ಶ ರೂಪ ಸಂಪನ್ನಾ ಮಪರಾಂ ಸ ಕಪಿಸ್ತ್ರಿಯಮ್ ॥ ೫೦ ॥
ಮುಕ್ತಾಮಣಿ ಸಮಾಯುಕ್ತೈ ರ್ಭೂಷಣೈ ಸ್ಸುವಿಭೂಷಿತಾಮ್ ।
ವಿಭೂಷಯಂತೀ ಮಿವ ತತ್ ಸ್ವಶ್ರಿಯಾ ಭವನೋತ್ತಮಂ ॥ ೫೧ ॥
ಗೌರೀಂ ಕನಕ ವರ್ಣಾಭಾ ಮಿಷ್ಟಾ ಮಂತಃ ಪುರೇಶ್ವರೀಂ ।
ಕಪಿ ರ್ಮಂದೋದರೀಂ ತತ್ರ ಶಯಾನಾಂ ಚಾರು ರೂಪಿಣೀಮ್ ॥ ೫೨ ॥
ಸ ತಾಂ ದೃಷ್ಟ್ವಾ ಮಹಾಬಾಹು ರ್ಭೂಷಿತಾಂ ಮಾರುತಾತ್ಮಜಃ ।

---

ಸ್ತ್ರೀಯರೊಳಗೆ, ಏಕಾಂತವಿನ್ಯಸ್ತೆ - ಪ್ರತ್ಯೇಕವಾಗಿ ಹಾಸಿರುವ, ಶುಭೆ - ಮಂಗಳಕರವಾದ, ಶಯನೆ - ಹಾಸಿಗೆಯಲ್ಲಿ, ಶಯಾನಾಂ - ಮಲಗಿರುವ, ರೂಪಸಂಪನ್ನಾಂ - ಸೌಂದರ್ಯಗುಣಸಂಪನ್ನೆಯಾಗಿರುವ, ಅಪರಾಂ - ಬೇರೊಬ್ಬಳಾದ, ಸ್ತ್ರಿಯಂ - ಉತ್ತಮಾಂಗನೆಯನ್ನು, ಸಃಕಪಿಃ- ಆ ಹನುಮನು, ದದರ್ಶ - ಕಂಡನು ॥೫೦॥ ಮುಕ್ತಾಮಣಿ - ಮುತ್ತು ಮತ್ತು ರತುನಗಳಿಂದ, ಸಮಾಯುಕ್ತೈಃ - ಕೂಡಿರುವ, ಭೂಷಣೈಃ - ಆಭರಣಗಳಿಂದ, ಸುವಿಭೂಷಿತಾಂ - ಚೆನ್ನಾಗಿ ಶೃಂಗರಿಸಲ್ಪಟ್ಟಿರುವ, ಸ್ವಶ್ರಿಯಾ - ತನ್ನ ದೇಹಕಾಂತಿಯಿಂದ, ಭವನೋತ್ತಮಂ - ಆ ಶ್ರೇಷ್ಠವಾದ ಶಯನಮಂದಿರವನ್ನು, ವಿಭೂಷಯಂತೀಮಿವ - ಬೆಳಗಿಸುತಲಿರುವಳೋ ಎಂಬಂತಿರುವ, ॥೫೧॥ ಗೌರೀಂ-ನಡುಪ್ರಾಯದಲ್ಲಿರುವ (ಬೆಳ್ಳಗಿರುವ, ಹೊಂಬಣ್ಣದವಳಾದ, ಚಿಕ್ಕಪ್ರಾಯದಲ್ಲಿರುವ) ಕನಕವರ್ಣಾಭಾಂ - ಕುಂದಣದಂತೆ ತಳತಳಿಸುತಲಿರುವ, ಇಷ್ಟಾಂ - ರಾವಣನಿಗೆ ಪ್ರೀತಿಪಾತ್ರಳಾದ, ಅಂತಃಪುರೇಶ್ವರೀಂ - ರಾವಣನ ರಾಣಿವಾಸಕ್ಕೆ ಒಡತಿಯಾದ, ಚಾರುರೂಪಿಣೀಂ - ಸುಂದರತರ ರೂಪುಳ್ಳ, ತತ್ರ - ರಾವಣನ ಬಳಿಯೊಳು, ಶಯಾನಾಂ - ಪವಳಿಸಿರುವ, ಮಂದೋದರೀಂ - ಮಂಡೋದರಿಯೆಂಬ ರಾವಣನ ಪಟ್ಟದರಸಿಯನ್ನು, ಕಪಿಃ - ಆಂಜನೇಯನು, (ದದರ್ಶ - ಕಂಡನು) ॥೫೨॥ ಸಃ - ಆ, ಮಹಾಬಾಹುಃ - ಹೆಚ್ಚಿದತೋಳು ಬಲವುಳ್ಳ, ಮಾರುತಾತ್ಮಜಃ - ಮಾರುತಿಯು, ಭೂಷಿತಾಂ - ಸರ್ವಭೂಷಣಾಲಂಕೃತಳಾದ, ತಾಂ - ಆ ಮಂಡೋದರಿಯನ್ನು, ದೃಷ್ಟ್ವಾ - ನೋಡಿ, ರೂಪ- ಸೌಂದರ್ಯದ (ಆಕಾರದ) ಯೌವನ - ಪ್ರಾಯದ, ಸಂಪದಾ- ಸೌಭಾಗ್ಯದಿಂದ,

---

ಇಂತೀ ಕಾಮಿನಿಯರಿಗಿಂತ ಬೇರಾಗಿ ಒಂದುಸ್ಥಳದಲ್ಲಿ ಅಣಿಮಾಡಿದ ದಿವ್ಯಶಯನ ತಲದೊಳಗೆ ಅಪಾರವಾದ ಸೌಂದರ್ಯಕ್ಕೆ ಗಣಿಯೆನಿಸಿದ ಒಬ್ಬ ಮಹಿಳಾಶಿರೋರತುನವನ್ನು ಮಾರು ತಾತ್ಮಜನು ಕಂಡನು ॥೫೦॥ ಆಮಾನಿನೀಮಣಿಯು ಮುಕ್ತಾರತ್ನಗಳೇ ಮುಂತಾದ ಅನೇಕ ದಿವ್ಯಾಭರಣಗಳಿಂದ ಅಲಂಕೃತಳಾಗಿ, ತನ್ನ ಮೈಕಾಂತಿಯಿಂದ ಆ ಶಯನಶಾಲೆಯನ್ನು ಸಿಂಗರಿಸುವಂತೆ ವಿರಾಜಿಸುತಲಿದ್ದಳು ॥೫೧॥ ಆ ಕೋಮಲಾಂಗಿ ಉಬ್ಬುತಲಿರುವ ಪ್ರಾಯದಹೊಂಬಣದಿಂದ ಮೆರುಗುತಲಿದ್ದಳು, ಅವಳ ಮೈಕಾಂತಿಯು ಕುಂದಣದಂತೆ ಬೆಳಗುತಲಿದ್ದಿತು. ಇವಳು ಆ ಅಂತಃಪುರಕ್ಕೆ ಯಜಮಾನಿ, ರಾವಣನ ಪಟ್ಟದರಸಿ ಇವಳ ಹೆಸರು ಮಂಡೋದರಿ, ಬಹುಸೌಂದರ್ಯವತಿ, ಇವಳು ಅಲ್ಲಿ ಪವಳಿಸಿ ಇದ್ದಳು॥೫೨॥ ಮಹಾ ಬಾಹು ಬಲವುಳ್ಳ ವಾಯುನಂದನನು ಆಕೆಯನ್ನು ನೋಡಿದನು, ಮನದೊಳಗೆ ತುಸ ಆತಂಕವುಂಟಾಯಿತು. ಅವಳ ದಿವ್ಯವಾದರೂಪ, ಪ್ರಾಯ, ಲಾವಣ್ಯ, ಸೌಂದರ್ಯದ ಸೊಬಗು, ಇತ್ಯಾದಿಗಳನ್ನೆಲ್ಲ ನೋಡಿದ ಕೂಡಲೇ ಇವಳು ಸೀತೆಯಾಗಿರಬಹುದೆ ?

ತರ್ಕಯಾಮಾಸ ಸೀತೇತಿ ರೂಪ ಯೌವನ ಸಂಪದಾ ॥ ೫೩ ॥
ಹರ್ಷೇಣ ಮಹತಾ ಯುಕ್ತೋ ನನಂದ ಹರಿಯೂಧಪಃ ॥ ೫೩ ॥ ॥
ಆಸ್ಫೋಟಯಾ ಮಾಸ ಚುಚುಂಬ ಪುಚ್ಛಂ ನನಂದ ಚಿಕ್ರೀಡ ಜಗೌ ಜಗಾಮ॥
ಸ್ತಂಭಾ ನರೋಹ ನ್ನಿಪಪಾತ ಭೂಮೌ ನಿದರ್ಶಯನ್ ಸ್ವಾಂಪ್ರಕೃತಿಂಕಪೀನಾಮ್॥೫೪॥

ಇತಿ ಶ್ರೀಮತ್ಸುಂದರಕಾಂಡೆ - ದಶಮಸ್ಸರ್ಗಃ.



ಸೀತೇತಿ - ಜಾನಕಿಯಾಗಿರಬಹುದೆಂದು, ತರ್ಕಯಾಮಾಸ - ಊಹಿಸಿದನು, (ತತಃ - ಅನಂತರ) ಹರಿಯೂಧಪಃ - ಕಪಿಪ್ರವರನು, ಮಹತಾ - ಹೆಚ್ಚಾದ, ಹರ್ಷೇಣ - ಸಂತೋಷದಿಂದ, ಯುಕ್ತಃ - ಕೂಡಿದವನಾಗಿ, ನನಂದ - ಮನದೊಳಾನಂದಿಸಿದನು ॥೫೩॥ ॥ ಸಃ - ಆ ಅಂಜನೇಯನು, ಕಪೀನಾಂ- ವಾನರರ, ಸ್ವಾಂ - ಸ್ವಂತ, ಪ್ರಕೃತಿಂ - ಸ್ವಭಾವವನ್ನು, ನಿದರ್ಶಯನ್ - ತೋರುತ್ತಿರುವವನಾಗಿ, ಆಸ್ಫೋಟಯಾಮಾಸ - ಅಂಗಯ್ಯಿಂದ ತೋಳನ್ನು ತಟ್ಟಿಕೊಂಡನು, ಪುಚ್ಛಂ - ಬಾಲವನ್ನು, ಚುಚುಂಬ- ಮುತ್ತಿಟ್ಟುಕೊಂಡನು, ನನಂದ - ಮನದೊಳಗೆ ಹಿಗ್ಗಿದನು (ಹಲ್ಕಿರಿದು ಹರ್ಷಿಸಿದನು) ಚಿಕ್ರೀಡ - ಬಗೆಬಗೆಯ ಆಟವಾಡಿದನು, ಜಗೌ - ಮೆಲ್ಲಗೆ ಸಂಗೀತವನ್ನು ಹಾಡಿದನು, ಜಗಾಮ - ಇಲ್ಲಿಂದಲ್ಲಿಗೆ ತಿರುಗಾಡಿದನು, ಸ್ತಂಭಾನ್ - ಕಂಬಗಳನ್ನು, ಅರೋಹತ್ - ಹತ್ತಿದನು, ಭೂಮೌ - ನೆಲದಲ್ಲಿ, ನಿಪಪಾತ- (ಉರುಳಾಡಿದನು) ಕುಪ್ಪಳಿಸಿದನು ॥೫೪॥ ॥

— ಇಂತು ಹತ್ತನೆಯ ಸರ್ಗವು —

ಎಂದು ಊಹಿಸಿದನು॥೫೩॥ಆಕೂಡಲೇ ಕಪಿಪ್ರವರನಿಗೆ ಮಹತ್ತರವಾದ ಹರ್ಷವುಂಟಾಯಿತು, ಮನದೊಳಾನಂದಿಸಿದನು ॥ ೫೩ ॥ ॥ ಆಗಲೇ ತುಸ ಮೈಮರೆತನು, ಕಪಿಸ್ವಭಾವವು ತಲೆದೋರಿತು, ಆದುದರಿಂದಲೇ ಕರತಲದಿಂದ ತೋಳನ್ನು ಅಪ್ಪಳಿಸಿದನು, ಬಾಲವನ್ನು ಹಿಡಿದು ಬಾಯಿಂದ ಮುತ್ತಿಟ್ಟನು, ಮನದೊಳಗಾನಂದದಿಂದ ಉಬ್ಬಿದನು, ಹಲ್ಗಿರಿದು ಚೀರುಕೀರೆಂದು ಹರ್ಷಿಸಿದನು, ತಲೆಯನ್ನು ತೂಗುತ್ತ ಸಂಗೀತದಿಂದ ಓಲಾಡಿದನು. ಅಲ್ಲಿಂದಲ್ಲಿಗೆ ಓಡಾಡಿ ಕುಪ್ಪಳಿಸಿದನು, ಪಕ್ಕದೊಳಗಿರುವ ಎತ್ತರವಾದ ಕಂಬಗಳ ಮೇಲೆ ಏರಿದನು, ನೆಲಕ್ಕೆ ಧುಮ್ಮಿಕ್ಕಿದನು ಇಂತು ಬಗೆಬಗೆಯ ಹರ್ಷಸೂಚಕವಾದ ಕುರುಹುಗಳನ್ನೆಲ್ಲ ಹರಡುತಲಿದ್ದನು ॥ ೫೪॥ ॥

— ಇಂತು ಹತ್ತನೆಯ ಸರ್ಗವು —

ಶ್ರೀ.

# ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ

## ಶ್ರೀಮತ್ಸುನ್ದರಕಾಣ್ಡೇ ಏಕಾದಶಸ್ಸರ್ಗಃ.

ಅವಧೂಯ ಚ ತಾಂ ಬುದ್ಧಿಂ ಬಭೂವಾ ವಸ್ಥಿತ ಸ್ತದಾ ।
ಜಗಾಮ ಚಾಪರಾಂ ಚಿಂತಾಂ ಸೀತಾಂ ಪ್ರತಿ ಮಹಾಕಪಿಃ ॥೧॥
ನ ರಾಮೇಣ ವಿಯುಕ್ತಾ ಸಾ ಸ್ವಪ್ತು ಮರ್ಹತಿ ಭಾಮಿನೀ ।
ನ ಭೋಕ್ತುಂ ನಾ ಪ ಲಂಕರ್ತುಂ ನ ಪಾನ ಮುಪಸೇವಿತುಮ್ ॥೨॥
ನಾನ್ಯಂ ನರ ಮುಪಸ್ಥಾತುಂ ಸುರಾಣಾ ಮಪಿ ಚೇಶ್ವರಂ ।

---

—ಹನ್ನೊಂದನೆಯ ಸರ್ಗಂ—

ಕಂದ ॥ ಮಂದೋದರಿ ಸೀತೆ ಯೆನು । ತ್ತಂದಾ ಹರಿ ತರ್ಕಿಸುತ್ತೆ ತೊರೆದಾಮತಿಯಂ ॥
ಸುಂದರಿಯರ ನಿರುಕಿಸಿ ತಾಂ । ಮುಂದರಿದಂ ತಿರುಗಿ ಭೂಮಿ ಜಾತೆಯ ಪುಡುಕಲ್ ॥

ಮಹಾಕಪಿಃ - ಬುದ್ಧಿವಂತನಾದ ಹನುಮಂತನು, ತದಾ - ಆ ಅಪಾರಸಂತೋಷಸಮಯದಲ್ಲಿ, ತಾಂ ಬುದ್ಧಿಂ - ಮಂಡೋದರಿಯನ್ನು ಸೀತೆಯನ್ನಾಗಿ ಭಾವಿಸಿದ ಬುದ್ಧಿಯನ್ನು, ಅವಧೂಯಚ - ಸರಿಯಾದಕಾರಣದಿಂದ ತಿರಸ್ಕರಿಸಿ, ಅವಸ್ಥಿತಃ - ಇದ್ದವನಾಗಿ, ಸೀತಾಂಪ್ರತಿ - ಜಾನಕಿಯನ್ನು ಕುರಿತು, ಅಪರಾಂಚಿಂತಾಂ - ಬೇರೊಂದುಬಗೆಯಾದ ಯೋಚನೆಯನ್ನು, ಜಗಾಮಚ - ಹೊಂದಿದನು (ಮಾಡಲಾರಂಭಿಸಿದನು) ॥೧॥ ಸಾ - ಆ, ಭಾಮಿನೀ - ಸತೀಶಿರೋಮಣಿಯಾದ ಸೀತೆಯು, ರಾಮೇಣ - ಶ್ರೀರಾಮಚಂದ್ರನಿಂದ, ವಿಯುಕ್ತಾ - ಅಗಲಿದವಳಾಗಿ, ಸ್ವಪ್ತುಂ - ನಿದ್ರಿಸಲಿಕ್ಕೆ, ನಾರ್ಹತಿ - ಯೋಗ್ಯಳಾಗುವುದಿಲ್ಲ, ಭೋಕ್ತುಂ- ಊಟಮಾಡಲಿಕ್ಕೂ, ನ - ಒಪ್ಪಳು, ಅಲಂಕರ್ತುಂ - ಸಿಂಗರಿಸಿಕೊಳ್ಳಲಿಕ್ಕೂ, ನ - ಒಪ್ಪಳು, ಪಾನಂ-ಪಾನಪದಾರ್ಥವನ್ನು, ಉಪಸೇವಿತುಂ - ಅನುಭವಿಸಲಿಕ್ಕೂ, ನ- ಸಮ್ಮತಿಸಳು ॥೨॥ ಸುರಾಣಾಂ - ದೇವತೆಗಳಿಗೆ, ಈಶ್ವರಮಪಿ - ಸ್ವಾಮಿಯಾಗಿದ್ದರೂ, ಅನ್ಯಂ - ರಾಮವ್ಯತಿರಿಕ್ತನಾದ, ನರಂ - ಪುರುಷನನ್ನು, ಉಪಸ್ಥಾತುಂ - ಹತ್ತಿರನಿಲ್ಲಲಿಕ್ಕೂ, ನಚ - ಅನುಮೋದಿಸಳು, ಹಿ - ಏತಕೆಂದರೆ, ರಾಮಃಸಮಃ - ಶ್ರೀ

---

— ಹನ್ನೊಂದನೆಯ ಸರ್ಗಂ —

ಯದ್ಯಪಿ ಆಂಜನೇಯನು ಮಂಡೋದರಿಯನ್ನು ನೋಡಿದಾಗ ಸೀತೆಯನ್ನು ಕಂಡೆನೆಂಬ ಭ್ರಾಂತಿಯಿಂದ ಅಪರಿಮಿತಾನಂದ ಭರಿತನಾದನು. ಆಸಂತಸವೆಲ್ಲವೂ ಮುಗಿಲಿನಲ್ಲಿ ಹೊಳೆದ ಮಿಂಚಿನ ಹೊಳವಿನಂತೆ ನಿಮಿಷಮಾತ್ರದಲ್ಲಿ ಬಗ್ಗನೆ ಬರಿದಾಯಿತು. ಆಕೂಡಲೆ ಆಭ್ರಾಂತ ಬುದ್ಧಿಯನ್ನು ತೊರೆದನು, ಸ್ಥಿರಚಿತ್ತನಾದನು, ಸೀತೆಯವಿಷಯವಾಗಿ ಬೇರೊಂದು ಬಗೆಯಾಗಿ ಚಿಂತಿಸತೊಡಗಿದನು ॥೧॥ ಆಹಹ ! ಶ್ರೀರಾಮಚಂದ್ರನನ್ನು ಅಗಲಿರುವ ಸೀತೆಯು ಬಹುಚಿಂತಾಕ್ರಾಂತಳಾಗಿರುವುದರಿಂದ ಎಂದಿಗೂ ನಿದ್ರಿಸಲಾರಳು ಏನೊಂದುಪದಾರ್ಥವನ್ನು ಭುಜಿಸಲಿಕ್ಕೂ ಅವಳ ಮನವು ಒಪ್ಪದು, ಆತನನ್ನಗಲಿ ಶೃಂಗರಿಸಿಕೊಳ್ಳಲಾರಳು. ಮತ್ತು ಯಾವುದೊಂದು ದ್ರವದ್ರವ್ಯವನ್ನೂ ಪಾನಮಾಡಳು, ಇದು ನಿಶ್ಚಯ ॥೨॥ ಇದೂ ಅಲ್ಲದೆ, ದೇವತೆಗಳೊಡೆಯನಾದ ಇಂದ್ರನೇ ಆಗಿದ್ದರೂ ಆತನ ಬಳಿಯಲ್ಲಿ ನಿಮಿಷಮಾತ್ರಕೂಡಲಿಕ್ಕೂ ಆಮಹಾನುಭಾವಳ ಚಿತ್ತವು ಒಪ್ಪದು, ಶ್ರೀರಾಮಚಂದ್ರನನ್ನು ಹೋಲುವ ಪುರುಷನು ಮನುಷ್ಯರಲ್ಲಾಗಲೀ, ದೇವತೆಗಳಲ್ಲಾಗಲೀ ಬಬ್ಬನನ್ನೂ

ನ ಹಿ ರಾಮಸಮಃ ಕಶ್ಚಿ ದ್ವಿದ್ಯತೆ ತ್ರಿದಶೇಷ್ವಪಿ ॥
ಅನ್ಯೇಯ ಮಿತಿ ನಿಶ್ಚಿತ್ಯ ಪಾನಭೂಮೌ ಚಚಾರ ಸಃ ॥ ೩॥ ॥
ಕ್ರೀಡಿತೇ ನಾಪರಾಃ ಕ್ಲಾಂತಾ ಗೀತೇನ ಚ ತಥಾಪರಾಃ ॥
ನೃತ್ತೇನ ಚಾಪರಾಃ ಕ್ಲಾಂತಾಃ ಪಾನ ವಿಪ್ರಹತಾ ಸ್ತಥಾ।
ಮುರವೇಷು ಮೃದಂಗೇಷು ಪೀಠಿಕಾಸು ಚ ಸಂಸ್ಥಿತಾಃ ॥
ತಥಾಸ್ತರಣಮುಖ್ಯೇಷು ಸಂವಿಷ್ಟಾ ಶ್ಚಾಪರಾಃ ಸ್ತ್ರಿಯಃ ॥ ೫॥ ॥
ಅಂಗನಾನಾಂ ಸಹಸ್ರೇಣ ಭೂಷಿತೇನ ವಿಭೂಷಣೈಃ ॥
ರೂಪ ಸಲ್ಲಾಪ ಶೀಲೇನ ಯುಕ್ತ ಗೀತಾರ್ಥ ಭಾಷಿಣಾ ।
ದೇಶ ಕಾಲಾಭಿಯುಕ್ತೇನ ಯುಕ್ತ ವಾಕ್ಯಾ ಭಿಧಾಯಿನಾ ॥

---

ರಾಮನಿಗೆ ಎಣೆಎನಿಸಿದವನು, ತ್ರಿದಶೇಷ್ವಪಿ-ದೇವತೆಗಳಲ್ಲಿಯೂ, ಕಶ್ಚಿದಪಿ - ಒಬ್ಬನಾದರೂ, ನವಿದ್ಯತೆ-ಕಾಣಬರುವುದಿಲ್ಲ, (ಅತಃ - ಆದಕಾರಣ) ಇಯಂ - ಇಲ್ಲಿಮಲಗಿರುವ ಹೆಂಗಸು, ಅನ್ಯಾ - ಸೀತೆಯನ್ನೇ ಬಿಟ್ಟು ಬೇರೆಹೆಂಗಸೇ ಸರಿ, ಇತಿ - ಹೀಗೆಂದು, ನಿಶ್ಚಿತ್ಯ - ಗೊತ್ತುಮಾಡಿಕೊಂಡು, ಸಃ - ಆ ಆಂಜನೆಯನು, ಪಾನಭೂಮೌ- ಪಾನಶಾಲೆಯಲ್ಲಿ, ಚಚಾರ-ಸೀತೆಯನ್ನು ಹುಡುಕಲು ತಿರುಗತೊಡಗಿದನು ॥೩॥ ॥ (ತತ್ರ - ಆ ಪಾನಶಾಲೆಯಲ್ಲಿ) ಅಪರಾಃ - ಕೆಲವರು, ಕ್ರೀಡಿತೇನ - ಪಗಡೆ ಮೊದಲಾದ ಆಟದಿಂದಲೂ, ಅಪರಾಃ - ಮತ್ತೆ ಕೆಲವರು, ಗೀತೇನ - ಹಾಡಗಾರಿಕೆಯಿಂದಲೂ, ಕ್ಲಾನ್ತಾಃ - ಬಳಲಿದ್ದರು ॥ ೪ ॥ ಅಪರಾಶ್ಚ - ಇನ್ನುಕೆಲವರು, ನೃತ್ತೇನ-ಕುಣಿತದಿಂದಲೂ, ಕ್ಲಾಂತಾಃ-ಶ್ರಾಂತರಾಗಿದ್ದರು, ತಥಾ- ಹಾಗೆಯೇ, ಕಾಶ್ಚನ - ಕೆಲವರು, ಪಾನ - ಕುಡಿತದಿಂದ, ವಿಪ್ರಹತಾಃ - ಪೆಟ್ಟುಬಿದ್ದವರಾಗಿಯೂ, (ವ್ಯಾಮರೆತವರಾಗಿಯೂ] ಮುರವೇಷು - ಮುರವ ವಾದ್ಯವಾದನಗಳಲ್ಲಿಯೂ, ಮೃದಂಗೇಷು - ಮದ್ದಲೆಗಳನ್ನು ಬಾರಿಸೋಣಗಳಲ್ಲಿಯೂ, ಪೀಠಿಕಾಸುಚ - ಮಣೆಗಳನ್ನು ಎತ್ತಿ ಹಿಡಿಯುವುದರಲ್ಲಿಯೂ (ಹಾಸ್ಯಗಳಲ್ಲಿಯೂ, ಚಿತ್ರ ನೃತ್ಯಗಳಲ್ಲಿಯೂ) ಸಂಸ್ಥಿತಾಃ - ನೆಲೆಗೊಂಡಿದ್ದು ಮಲಗಿದ್ದರು ॥೫॥ ಅಪರಾಃಸ್ತ್ರಿಯಃ ಮತ್ತೆಕೆಲವುಂದಿ ಹೆಂಗಸರು, ಆಸ್ತರಣಮುಖ್ಯೇಷು - ಶ್ರೇಷ್ಠವಾದ ಹಾಸಿಗೆಗಳಲ್ಲಿ, ಸಂವಿಷ್ಟಾಃ - ಶಯನಮಾಡಿದ್ದರು, ವಿಭೂಷಣೈಃ - ವಿಚಿತ್ರಾಲಂಕಾರಗಳಿಂದ, ಭೂಷಿತೇನ ಅಲಂಕರಿಸಲ್ಪಟ್ಟಿರುವ, ರೂಪಸಲ್ಲಾಪಶೀಲೇನ - ಸೌಂದರ್ಯಸಂಭಾಷಣೆಯಲ್ಲಿ ಆಸಕ್ತವಾದ, ಯುಕ್ತ - ಉಚಿತವಾದ, ಗೀತಾರ್ಥ- ಸಂಗೀತಶಾಸ್ತ್ರಾರ್ಥದ (ಭರತಶಾಸ್ತ್ರಾರ್ಥದ) ಭಾಷಿಣಾ- ಸಂಭಾಷಣದಲ್ಲಿ ಆಸಕ್ತವಾದ, ದೇಶಕಾಲಾಭಿಯುಕ್ತೇನ-

---

ಕಾಣೆನು ॥೩॥ ॥ ಇಲ್ಲಿ ನನಗೆ ಸೀತೆಯೆಂದು ಭ್ರಾಂತಿಗೊಳಿಸಿದ ಹೆಂಗಸುಯಾವಳೋಬೇರೆ ಹೆಂಗಸೇ ಸರಿ ಎಂದು ಗೊತ್ತುಮಾಡಿಕೊಂಡು, ಪಾನಶಾಲೆಯೊಳಗೆ ಸಂಚರಿಸತೊಡಗಿದನು ॥೪॥ ಅಲ್ಲಿ ಕೆಲವು ಮಂದಿ ನಾರಿಯರು ಬಗೆಬಗೆಯ ಆಟಗಳನ್ನಾಡಿ ಬಳಲಿದ್ದರು, ಮತ್ತೆ ಕೆಲವುಂದಿ ನೀರೆಯರು ಪಾಡಿ ಆಯಾಸಗೊಂಡಿದ್ದರು. ॥೪॥ ॥ ಕುಣಿತದಿಂದಲೂ, ಮನವಾರ ಪಾನಮಾಡಿ ತಲೆಗೇರಿದ ಮದದಿಂದಲೂ, ವಾದ್ಯಗಳನ್ನು ನುಡಿಸುವುದರಿಂದಲೂ, ಮದ್ದಲೆಗಳನ್ನು ಬಾರಿಸುವುದರಿಂದಲೂ, ಶ್ರಾಂತರಾಗಿ ಕೆಲಕೆಲವರು ಪವಳಿಸಿ ಇದ್ದರು॥೫॥ ಬಹುಮಂದಿ ಉತ್ತಮಾಂಗನೆಯರು ಶ್ರೇಷ್ಠತರಗಳಾದ ಶಯನಗಳಲ್ಲಿ ಮಲಗಿದ್ದರು. ಬಗೆಬಗೆಯ ಅಲಂಕಾರಗಳಿಂದ ಅಲಂಕೃತರಾದ ಸಾವಿರಾರು ಮಂದಿ ಸುಂದರಿಯರು॥೬॥ ರಾವಣ

ರತಾಭಿ ರತಸಂಸುಪ್ತಂ ದದರ್ಶ ಹರಿಯೂಥಪಃ ॥ ೩॥ ॥
ತಾಸಾಂ ಮಧ್ಯೇ ಮಹಾಬಾಹು ಶ್ಶುಶುಭೆ ರಾಕ್ಷಸೇಶ್ವರಃ ।
ಗೋಷ್ಠೇ ಮಹತಿ ಮುಖ್ಯಾನಾಂ ಗವಾಂ ಮಧ್ಯೇ ಯಥಾವೃಷಃ ॥ ೪॥ ॥
ಸ ರಾಕ್ಷಸೇಂದ್ರ ಶ್ಶುಶುಭೆ ತಾಭಿಃ ಪರಿವೃತ ಸ್ಸ್ವಯಂ ॥
ಕರೇಣುಭಿ ರ್ಯಥಾರಣ್ಯೇ ಪರಿಕೀರ್ಣೋ ಮಹಾದ್ವಿಪಃ ॥ ೯॥ ॥
ಸರ್ವಕಾಮೈ ರುಪೇತಾಂ ಚ ಪಾನಭೂಮಿಂ ಮಹಾತ್ಮನಃ ।
ದದರ್ಶ ಹರಿಶಾರ್ದೂಲ ಸ್ತಸ್ಯ ರಕ್ಷಃ ಪತೇ ರ್ಗೃಹೆ ॥ ೧೦॥ ॥

---

ಆಯಾದೇಶಕಾಲಗಳಿಗುಚಿತವಾದ, ವಾಕ್ಯಾಭಿಧಾಯಿನಾ - ಸಲ್ಲಾಪದಲ್ಲಿ ಆಸಕ್ತವಾಗಿರುವ ಅಂಗನಾನಾಂ - ಕಾಮಿನಿಯರ, ಸಹಸ್ರೇಣ - ಸಾವಿರದೊಡನೆ, ರತಾಭಿರತ - ಬಗೆಬಗೆಯ ಕ್ರೀಡೆಗಳಿಂದಲೇ ಸಂಸುಪ್ತಂ - ಸುಖಶಯನಮಾಡಿರುವ ರಾವಣನನ್ನು, ಹರಿಯೂಥಪಃ- ಆಂಜನೇಯನು, ದದರ್ಶ -ನೋಡಿದನು ॥೬, ೩॥ ॥ ಮಹತಿ - ವಿಶಾಲವಾದ, ಗೋಷ್ಠೆ - ಗೋಶಾಲೆಯಲ್ಲಿ, ಗವಾಂಮಧ್ಯೇ -ಗೂಳಿಗಳನಡುವೆ, ಯಥಾವೃಷಃ-ಮಹಾ ವೃಷಭವುಹೇಗೋಹಾಗೆ, ತಾಸಾಂ-ಆ ಶೋಭನಾಂಗಿಯರ, ಮಧ್ಯೇ-ನಡುವೆ, ಮಹಾಬಾಹುಃ - ಆಜಾನುಬಾಹುವಾದ, ರಾಕ್ಷಸೇಶ್ವರಃ - ರಕ್ಕಸರೊಡೆಯನು, ಶುಶುಭೆ - ಪ್ರಕಾಶಿಸುತಲಿದ್ದನು ॥೪॥ ॥ ಸಃ - ಆ, ರಾಕ್ಷಸೇಂದ್ರಃ - ರಾಕ್ಷಸಸಾರ್ವಭೌಮನು, ತಾಭಿಃ - ಆ ಲಲನಾಮಣಿಯರಿಂದ ಪರಿವೃತಃ - ಸುತ್ತಲ್ಪಟ್ಟವನಾಗಿ, ಸ್ವಯಂ - ತಾನು, ಅರಣ್ಯೇ - ಅಡವಿಯಲ್ಲಿ, ಕರೇಣುಭಿಃ - ಹೆಣ್ಣಾನೆಗಳಿಂದ, ಪರಿಕೀರ್ಣಃ - ಸುತ್ತಲ್ಪಟ್ಟ, ಮಹಾದ್ವಿಪಃಯಥಾ - ಮದದಾನೆಯು ಹೇಗೋಹಾಗೆ, ಶುಶುಭೆ - ಶೋಭಿಸುತಲಿದ್ದನು ॥೯॥ ॥ ಹರಿಶಾರ್ದೂಲಃ- ಕಪಿಶ್ರೇಷ್ಠನಾದ ಮಾರುತಿಯು, ತಸ್ಯ - ಆ, ಮಹಾತ್ಮನಃ- ಮಹಾಕಾರವುಳ್ಳ, ರಕ್ಷಃಪತೇಃ - ರಾಕ್ಷಸಾಧಿಪತಿಯ, ಗೃಹೆ - ಮನೆಯಲ್ಲಿ, ಸರ್ವಕಾಮೈಃ - ಸರ್ವಕಾಮಿತಪದಾರ್ಥಗಳಿಂದ, ಉಪೇತಾಂ - ತುಂಬಿರುವ, ಪಾನಭೂಮಿಂ - ಪಾನಸ್ಥಾನವನ್ನು ದದರ್ಶ - ನೋಡಿದನು ॥೧೦॥ ॥ ತತ್ರಪಾನಭೂಮೌ- ಆ ಪಾನಸ್ಥಾನದಲ್ಲಿ, ಮೃಗಾಣಾಂ - ಜಿಂಕೆಗಳ, ಮಹಿಷಾಣಾಂ,

---

ನೊಡನೆ ರೂಪಸೌಂದರ್ಯಾದಿಗಳ ಸಂಭಾಷಣದಿಂದಲೂ, ವಿಚಿತ್ರತರವಾದ ಗಾನದಿಂದಲೂ, ಆ ಕಾಲೋಚಿತವಾದ ಸರಸಸಲ್ಲಾಪದಿಂದಲೂ, ಬಳಲಿರುವುದನ್ನೂ, ವಿಚಿತ್ರತರಕ್ರೀಡಾಸಕ್ತನಾಗಿದ್ದು ಪವಳಿಸಿರುವ ರಾವಣನನ್ನೂ ಮಾರುತಿಯು ಅವಲೋಕಿಸಿದನು ॥೩॥ ॥ಸುತ್ತುಬಳಸಿ ಪವಳಿಸಿರುವ ಪದ್ಮಗಂಧಿಯರನಡುವೆ ಆಜಾನುಬಾಹುವಾಗಿ ಮಲಗಿರುವರಾಕ್ಷಸಸಾರ್ವಭೌಮನು, ವಿಸ್ತಾರವಾದ ಗೋಶಾಲೆಯೊಳಗೆ ದೊಡ್ಡದೊಡ್ಡ ಗೂಳಿಗಳ ನಡುವೆ ಕಂಗೊಳಿಸುವ ಮಹಾವೃಷಭದಂತೆ ಕಾಣಬರುತಲಿದ್ದನು ॥೪॥ ॥ ಮತ್ತು-ಸರ್ವಾಲಂಕಾರ ಸಂಶೋಭಿತರಾದ ಆಭಾಮಿನಿಯರ ಮಧ್ಯದಲ್ಲಿದ್ದ ರಾಕ್ಷಸೇಶ್ವರನು, ಮಹಾರಣ್ಯದಲ್ಲಿ ಹೆಣ್ಣಾನೆಗಳಿಂದ ಬಳಸಲ್ಪಟ್ಟಿರುವ ಮಹಾಗಜದಂತೆ ವಿರಾಜಿಸುತಲಿದ್ದನು ॥ ೯॥ ॥ ಮಹದೈಶ್ವರ್ಯ ಸಂಪನ್ನನಾದ ಆರಾಕ್ಷಸೇಂದ್ರನ ಮನೆಯೊಳಗೆ ಮನದಲ್ಲಿ ಬಯಸುವ ಸಮಸ್ತಪದಾರ್ಥಗಳಿಂದಲೂ ಸಂಪೂರ್ಣವಾಗಿರುವ ಪಾನಸ್ಥಾನವನ್ನು ಪವಮಾನನಂದನನು ನೋಡಿದನು ॥ ೧೦॥ ॥ ಅಲ್ಲಿ ಕಾಣಬರುತಲಿದ್ದ ಪದಾರ್ಥಗಳ ವೈಖರಿಯು ಹೇಗಿತ್ತೆಂದರೆ

ಮೃಗಾಣಾಂ ಮಹಿಷಾಣಾಂ ಚ ವರಾಹಾಣಾಂ ಚ ಭಾಗಶಃ ।
ತತ್ರ ನ್ಯಸ್ತಾನಿ ಮಾಂಸಾನಿ ಪಾನಭೂಮೌ ದದರ್ಶ ಸಃ ॥ ೧೧ ॥
ರೌಕ್ಮೇಷು ಚ ವಿಶಾಲೇಷು ಭಾಜನೇಷ್ವರ್ಧಭಕ್ಷಿತಾನ್ ।
ದದರ್ಶ ಹರಿಶಾರ್ದೂಲೋ ಮಯೂರಾನ್ಕುಕ್ಕುಟಾಂಸ್ತಥಾ ॥ ೧೨ ॥
ವರಾಹ ವಾಧ್ರಾಣಸಕಾನ್ ದಧಿ ಸೌವರ್ಚಲಾ ಯುತಾನ್ ।
ಶಲ್ಯಾನ್ಮೃಗ ಮಯೂರಾಂಶ್ಚ ಹನೂಮಾನನ್ವವೈಕ್ಷತ ॥ ೧೩ ॥
ಕ್ರಕರಾನ್ವಿವಿಧಾನ್ಸಿದ್ಧಾನ್ ಚಕೋರಾನರ್ಧಭಕ್ಷಿತಾನ್ ।

---

ಕೋಣಗಳ, ವರಹಾಣಾಂಚ-ಹಂದಿಗಳ, ಭಾಗಶಃ-ಪಾಲುಮಾಡಿ, ನ್ಯಸ್ತಾನಿ-ಅಣಿಮಾಡಿ ಇಟ್ಟಿರುವ, ಮಾಂಸಾನಿ - ಮಾಂಸಗಳನ್ನು, ಸಃ - ಆ ಮಾರುತಿಯು, ದದರ್ಶ - ನೋಡಿದನು ॥೧೧॥ ॥ ರೌಕ್ಮೇಷು - ಚಿನ್ನದಿಂದ ಮಾಡಿರುವ, ವಿಶಾಲೇಷು - ಅಗಲವಾದ, ಭಾಜನೇಷು- ಪಾತ್ರೆಗಳಲ್ಲಿ (ತಟ್ಟೆಗಳೊಳಗೆ) ಅರ್ಧಭಕ್ಷಿತಾನ್ - ಅರ್ಧತಿಂದು ಅರ್ಧ ಉಳಿಸಿ ಇರುವ, ಮಯೂರಾನ್ - ನವಿಲುಗಳನ್ನೂ, ಕುಕ್ಕುಟಾನ್ - ಕೋಳಿಗಳನ್ನೂ, ಹರಿಶಾರ್ದೂಲಃ - ಕಪಿವರನು, ದದರ್ಶ - ನೋಡಿದನು ॥೧೨॥ ॥(ಕಿಂಚ - ಮತ್ತು) ವರಾಹವಾಧ್ರಾಣಸಕಾನ್ - ಹಂದಿಯ ಮತ್ತು ಖಡ್ಗಮೃಗದ ಅಥವಾ ಒಂದು ಬಗೆಯ ಪಕ್ಷಿಯ, ಇಲ್ಲವೆ ಬಿಳಿಯ ಮೇಕೆಯ ಮಾಂಸಗಳನ್ನೂ, ದಧಿಸೌವರ್ಚಲಾಯುತಾನ್-ಮೊಸರು ಸೌವರ್ಚಲ ಲವಣ, ಇವುಗಳಿಂದ ಕಲೆಸಿ ಬೇಯಿಸಿರುವ ಮಾಂಸಗಳನ್ನೂ, ಶಲ್ಯಾನ್ - ಶಲ್ಯಮೃಗಮಾಂಸಗಳನ್ನೂ, (ಒಂದುಬಗೆಯ ಮೀನಿನಮಾಂಸಗಳನ್ನೂ) ಮೃಗಮಯೂರಾಂಶ್ಚ-ಒಂದು ಬಗೆಯಾದ ಜಿಂಕೆ ಮತ್ತು ನವಿಲುಗಳ ಮಾಂಸಗಳನ್ನೂ, ಕ್ರಕರಾನ್ - ಕೊಕ್ಕರೆಗಳ ಮಾಂಸಗಳನ್ನೂ, ವಿವಿಧಾನ್ - ಬಗೆಬಗೆಯವುಗಳಾದ, ಅರ್ಧಭಕ್ಷಿತಾನ್ - ಅರೆವಾಸಿತಿಂದಿರುವ, ಸಿದ್ಧಾನ್- ಚೆನ್ನಾಗಿಬೇಯಿಸಿರುವ, ಚಕೋರಾನ್ - ಚಕೋರಪಕ್ಷಿಗಳ ಮಾಂಸಗಳನ್ನೂ, ಮಹಿಷಾನ್ - ಕೋಣನ ಮಾಂಸಗಳನ್ನೂ, ಏಕಶಲ್ಯಾಂಶ್ಚ - ಒಂದು ಮುಳ್ಳಿನ ಮೀನಿನಮಾಂಸಗಳನ್ನೂ, ಕೃತನಿಷ್ಠಿತಾನ್ - ಬೇಕಾದಷ್ಟು ಬಡಿಸಿ ಇರುವ, (ಇಂಗು ಜೀರಿಗೆ, ಮೆಣಸು ಬೆಳ್ಳುಳ್ಳಿ ಇವುಗಳ ಸಂಭಾರದಿಂದ ಬೇಯಿಸಿರುವ ಮಾಂಸಗಳನ್ನೂ) ಲೇಹ್ಯಾನ್ - ನೆಕ್ಕತಕ್ಕ ಚಟ್ನಿ ಉಪ್ಪಿನಕಾಯಿ

---

ಆಪಾನಭೂಮಿಯಲ್ಲಿ ಜಿಂಕೆಗಳ, ಕೋಣಗಳ, ಹಂದಿಗಳ ಮಾಂಸಗಳನ್ನು ಸಪ್ಪೆಯಾಗಿ ಬೇಯಿಸಿ ಒಂದರಲ್ಲೊಂದು ಕಲೆಯದಂತೆ ವಿಂಗಡಿಸಿ ಬೇರುಬೇರಾಗಿ ತಿನ್ನಲಿಕ್ಕೆ ಅಣಿಮಾಡಿ ಇಟ್ಟಿದ್ದರು, ಇವುಗಳನ್ನೆಲ್ಲ ನೋಡುತ ಬಂದನು ॥೧೧॥ ॥ ಅಗಲವಾಗಿರುವ ಚಿನ್ನದ ತಟ್ಟೆಗಳೊಳಗೆ ಸಿದ್ಧಪಡಿಸಿ ಇಟ್ಟಿದ್ದ ಮಾಂಸಗಳೊಳಗೆ ಅರ್ಧಭಾಗವನ್ನು ತಿಂದು ಉಳಿದ ಅರ್ಧಭಾಗವನ್ನು ಅಲ್ಲಿಯೇ ಬಿಟ್ಟಿದ್ದರು. ಹೀಗೆ ಉಳಿದಿರುವ ನವಿಲುಗಳ ಮತ್ತು ಕೋಳಿಗಳ ಮಾಂಸಭಾಗಗಳನ್ನು ನೋಡಿದನು ॥೧೨॥ ॥ಮೊಸರನ್ನೂ, ಸೌವರ್ಚಲಲವಣವನ್ನೂ ಸೇರಿಸಿ ಸಪ್ಪೆಯಾಗಿ ಬೇಯಿಸಿ ಅಣಿಮಾಡಿರುವ ಹಂದಿಗಳ, ವಾಧ್ರಾಣಸವೆಂಬ ಒಂದು ಬಗೆಯ ಪಕ್ಷಿಗಳ ಇಲ್ಲವೆ ಬಿಳಿಯ ಮೇಕೆಗಳ ಮಾಂಸಗಳನ್ನೂ, ಮತ್ತು ಸೀಗಡಿಮೀನುಗಳ ಅಥವಾ ಒಂಟಿಮುಳ್ಳಿನಮೀನುಗಳ, ಇಲ್ಲವೆ ಚಕ್ಕೆಮೀನುಗಳ, ನವಿಲುಗಳ, ಮಾಂಸ ತುಂಡಗಳನ್ನೂ ಹನುಮಂತನು ನಿರೀಕ್ಷಿಸಿದನು ॥೧೩॥ ॥ ಇದೂ ಅಲ್ಲದೆ, ಬಗೆಬಗೆಯ ಕೊಕ್ಕರೆಗಳ ಮಾಂಸಗಳನ್ನೂ, ಅರೆವಾಸಿ ತಿಂದು ಉಳಿದಿರುವ ಚಕೋರಪಕ್ಷಿಗಳ ಬಾಡುಗಳನ್ನೂ

ಮಹಿಷಾನೇಕಶಲ್ಯಾಂಶ್ಚ ಛಾಗಾಂಶ್ಚ ಕೃತನಿಷ್ಠಿತಾನ್ ॥೧೪॥
ಲೇಹ್ಯಾನುಚ್ಚಾವಚಾನ್ಪೇಯಾನ್ ಭೋಜ್ಯಾನಿ ವಿವಿಧಾನಿ ಚ ॥೧೫॥
ತಥಾಮ್ಲಲವಣೋತ್ತಂಸೈರ್ವಿವಿಧೈ ರಾಗಷಾಡಬೈಃ ।
ಹಾರನೂಪುರಕೇಯೂರೈರಪವಿದ್ಧೈರ್ಮಹಾಧನೈಃ ॥೧೬॥
ಪಾನಭಾಜನವಿಕ್ಷಿಪ್ತೈಃ ಫಲೈಶ್ಚ ವಿವಿಧೈರಪಿ ।
ಕೃತಪುಷ್ಪೋಪಹಾರಾ ಭೂರಧಿಕಂ ಪುಷ್ಯತಿ ಶ್ರಿಯಂ ॥೧೭॥
ತತ್ರ ತತ್ರ ಚ ವಿನ್ಯಸ್ತೈಃ ಸುಶ್ಲಿಷ್ಟೈಃ ಶಯನಾಸನೈಃ ।

ಮೊದಲಾದ ಪದಾರ್ಥಗಳನ್ನೂ, ಉಚ್ಚಾವಚಾನ್-ಉತ್ತಮಾಧಮಗಳಾದ, [ನಾನಾವಿಧವಾದ] ಪೇಯಾನ್ ಪಾನಾರ್ಥವಾದ ಪದಾರ್ಥಗಳನ್ನೂ ವಿವಿಧಾನಿ - ಬಗೆಬಗೆಯವುಗಳಾದ, ಭೋಜ್ಯಾನಿ - ಭಕ್ಷ್ಯವಿಶೇಷಗಳನ್ನೂ, ಹನುಮಾನ್ ಆಂಜನೇಯನು, ದದರ್ಶ-ನೋಡಿದನು ॥೧೩, ೧೪, ೧೫॥ ತಥಾ ಹಾಗೆಯೇ, ಆಮ್ಲಲವಣೋತ್ತಂಸೈಃ - ಹುಳಿಉಪ್ಪು ಇವುಗಳೇ ಹೆಚ್ಚಾಗಿರುವ, ವಿವಿಧೈಃ- ನಾನಾತರಹೆಯವುಗಳಾದ, ರಾಗಷಾಡಬೈಃ - ಸಕ್ಕರೆ, ದ್ರಾಕ್ಷಿ, ದಾಳಿಂಬೆಯ ರಸ ಇವುಗಳಿಂದ ಅಣಿಮಾಡಿದ ಪದಾರ್ಥಗಳಿಂದಲೂ (ಷಡ್ರಸಯುಕ್ತಪದಾರ್ಥಗಳಿಂದಲೂ) ಅಪವಿದ್ಧೈಃ - ಪಾನಕಾಲದಲ್ಲಿ ತೆಗೆದ, ಮಹಾಧನೈಃ - ಅಮೂಲ್ಯಗಳಾದ, ಹಾರನೂಪುರಕೇಯೂರೈಃ- ಮುತ್ತಿನಹಾರ, ಕಾಲುಕಡಗ, ಭುಜಕೀರ್ತಿ ಇತ್ಯಾದಿ ಆಭರಣಗಳಿಂದಲೂ ॥೧೬॥ ಪಾನಭಾಜನವಿಕ್ಷಿಪ್ತೈಃ ಪಾನಪಾತ್ರೆಗಳಲ್ಲಿ ಇಟ್ಟಿರುವ, ವಿವಿಧೈಃ - ನಾನಾವಿಧಗಳಾದ, ಫಲೈರಪಿ - ಹಣ್ಣುಗಳಿಂದಲೂ, ಕೃತ - ಅಲಂಕರಿಸಲ್ಪಟ್ಟ, ಪುಷ್ಪೋಪಹಾರಾ- ಚಿತ್ರಕುಸುಮಾಲಂಕಾರವುಳ್ಳ, ಭೂಃ- ಆ ಪಾನಭೂಮಿಯು, ಅಧಿಕಂ - ಅಪಾರವಾದ, ಶ್ರಿಯಂ - ಕಾಂತಿಯನ್ನು, ಪುಷ್ಯತಿ - ಹೆಚ್ಚಿಸುತಲಿತ್ತು ॥೧೭॥ ತತ್ರತತ್ರಚ - ಅಲ್ಲಲ್ಲಿ, ವಿನ್ಯಸ್ತೈಃ - ಇಟ್ಟಿರುವ, (ಅಣಿಮಾಡಿರುವ) ಸುಶ್ಲಿಷ್ಟೈಃ- ಬಹು

ಕಾಡು ಕೋಣಗಳ ಮಾಂಸಗಳನ್ನೂ, ಚಾಪ್ರಮಾಣುಗಳ ಮಾಂಸಗಳನ್ನೂ, ಜೀರಿಗೆ, ಮೆಣಸು, ಬೆಳ್ಳುಳ್ಳಿ, ಕೊತ್ತುಂಬರಿ, ಹಿಂಗು, ಮೊದಲಾದ ಸಂಭಾರಗಳನ್ನು ಮಿತಿಯನ್ನರಿತು ಸೇರಿಸಿ ಹದವಾಗಿ ಪಕ್ವಮಾಡಿರುವ ನಕ್ಕತಕ್ಕ ಇಲ್ಲವೆ ನಂಚತಕ್ಕ, ಮೆಲ್ಲತಕ್ಕ, ಅಗಿಯತಕ್ಕ, ಸುರಿಯತಕ್ಕ ಬಗೆಬಗೆಯ ಭಕ್ಷ್ಯಗಳನ್ನೂ, ವಿವಿಧಗಳಾದ ಪಾನಾರ್ಹ ಪದಾರ್ಥಗಳನ್ನೂ ಆಂಜನೇಯನು ಅವಲೋಕಿಸಿದನು ॥೧೫॥ ಮತ್ತು - ಉಪ್ಪು ಹುಳಿಗಳನ್ನು ಸ್ವಲ್ಪ ಹೆಚ್ಚಾಗಿ ಸೇರಿಸಿ ಷಡ್ರಸಮಿಶ್ರವಾದ ಪದಾರ್ಥಗಳೂ, ಸಕ್ಕರೆ, ದಾಳಿಂಬೆಯರಸ, ದ್ರಾಕ್ಷೆ, ಜೇನುತುಪ್ಪ ಇತ್ಯಾದಿ ಮಧುರ ಪದಾರ್ಥಗಳ ಬಟ್ಟಿಯಿಂದ ಇಳಿಸಿದ ಷಾಡಬವೆಂಬ ದಿವ್ಯ ಮದ್ಯರಸಗಳೂ ಮಾರುತಿಗೆ ಕಾಣಬಂದುವು. ಆಸ್ಥಲದಲ್ಲಿ ವಿವಿಧಭಕ್ಷ್ಯಗಳನ್ನು ಭಕ್ಷಿಸುವಾಗ, ಪಾನಮಾಡುವಾಗ, ಮದೋನ್ಮತ್ತತೆಯಿಂದ ಅಪಾರವಾದ ಬೆಲೆಯುಳ್ಳ ಮುಕ್ತಾದಿಹಾರಗಳನ್ನೂ, ಕಾಲುಕಡಗಗಳನ್ನೂ ಅಲ್ಲಲ್ಲಿ ತೆಗೆದೊಗೆದಿದ್ದರು ॥೧೬॥ ವಿಚಿತ್ರತರಗಳಾದ ಪಾನಪಾತ್ರೆಗಳಲ್ಲಿ ಕೆದರಿರುವ ಬಗೆಬಗೆಯ ಹಣ್ಣುಗಳಿಂದಲೂ, ನಾನಾತರಹೆಯ ಹೂಗಳ ಹಾರಗಳಿಂದಲೂ ಆ ಪಾನಭೂಮಿಯು ಮನೋಹರವಾದ ಕಾಂತಿಯನ್ನು ಬೀರುತಲಿದ್ದಿತು ॥೧೭॥ ಆ ಪಾನಶಾಲೆಯೊಳಗೆ ರಚನೆಯಾಗಿ ಹೊಂದಿಸಿ ಇಟ್ಟಿರುವ ಬಹುಸುಂದರವಾದ ಹಾಸಿಗೆಗಳಿಂದಲೂ

ಪಾನಭೂಮಿರ್ವಿನಾ ವಹ್ನಿಂ ಪ್ರದೀಪ್ತೇವೋಪಲಕ್ಷ್ಯತೇ ||೧೮||
ಬಹುಪ್ರಕಾರೈರ್ವಿವಿಧೈರ್ವರ ಸಂಸ್ಕಾರ ಸಂಸ್ಕೃತೈಃ |
ಮಾಂಸೈಃ ಕುಶಲ ಸಂಯುಕ್ತೈಃ ಪಾನಭೂಮಿಗತೈಃ ಪೃಥಕ್ ||೧೯||
ದಿವ್ಯಾಃ ಪ್ರಸನ್ನಾ ವಿವಿಧಾ ಸ್ಸುರಾಃ ಕೃತಸುರಾ ಅಪಿ |
ಶರ್ಕರಾಸವ ಮಾಧ್ವೀಕ ಪುಷ್ಪಾಸವ ಫಲಾಸವಾಃ ||೨೦||
ವಾಸಚೂರ್ಣೈಶ್ಚ ವಿವಿಧೈರ್ದೃಷ್ಟಾಸ್ತೈಸ್ತೈಃ ಪೃಥಕ್ಪೃಥಕ್ |
ಸಂತತಾ ಶುಶುಭೇ ಭೂಮಿರ್ಮಾಲ್ಯೈಶ್ಚ ಬಹುಸಂಸ್ಥಿತೈಃ ||೨೧||

---

ಸುಂದರಗಳಾದ, ಶಯನಾಸನೈಃ - ಹಾಸಿಗೆಗಳಿಂದಲೂ ಪೀಠಗಳಿಂದಲೂ ಸಹ, ಪಾನಭೂಮಿಃ - ಕುಡಿತದ ತಾವು, ವಹ್ನಿಂವಿನಾ - ಅಗ್ನಿಜ್ವಾಲೆಯಿಲ್ಲದಿದ್ದರೂ, ಪ್ರದೀಪ್ತೇವ-ಉರಿಯುತಲಿದೆಯೋ ಎಂಬಂತೆ, ಉಪಲಕ್ಷ್ಯತೇ - ಕಾಣಬರುತಲಿತ್ತು ||೧೮|| ಬಹುಪ್ರಕಾರೈಃ - ಅನೇಕ ತರಹೆಯುವುಗಳಾದ, ವಿವಿಧೈಃ - ಬಗೆಬಗೆಯಾಗಿ ಅಡಿಗೆಮಾಡಿರುವ, ವರ - ಉತ್ತಮವಾದ, ಸಂಸ್ಕಾರ - ಸೆಜ್ಜೆಯನ್ನು ಅರಿತು ಮಾಡಿರುವ ಪಾಕಗಳಿಂದ ಪಕ್ವವಾದ, ಕುಶಲಸಂಯುಕ್ತೈಃ - ರಚನೆಯ ಚಾತುರ್ಯಗಳಿಂದೊಡಗೂಡಿರತಕ್ಕ, ಪೃಥಕ್ - ಬೇರುಬೇರಾಗಿ, ಪಾನಭೂಮಿಗತೈಃ - ಪಾನಸ್ಥಾನವನ್ನು ಹೊಂದಿರುವ, ಮಾಂಸೈಃ - ಬಾಡುಗಳಿಂದ, (ಸಾ- ಆ ಸ್ಥಳವು, ವಿರರಾಜ - ಪ್ರಕಾಶಿಸುತಲಿತ್ತು) ||೧೯|| ಶರ್ಕರಾಸವ - ಸಕ್ಕರೆಯಿಂದ ತೆಗೆದ ಹೆಂಡಗಳು, ಮಾಧ್ವೀಕ - ದ್ರಾಕ್ಷಿಯಿಂದ ತೆಗೆದವುಗಳು, ಪುಷ್ಪಾಸವ- ಬಗೆಬಗೆಯ ಹೂಗಳಿಂದ ತೆಗೆದ ಮದ್ಯರಸಗಳು, ಫಲಾಸವಾಃ - ಹಣ್ಣುಗಳಿಂದ ತೆಗೆದ ಮದ್ಯರಸಗಳೂ, ಕೃತಸುರಾಅಪಿ - ಕೈಕರಣಗಳಿಂದ ತೆಗೆದ ಮದ್ಯಗಳಾದರೂ, ದಿವ್ಯಾಃಸುರಾಃ - ಕಡಲನ್ನು ಕಡೆದಾಗಹುಟ್ಟಿದ ವಾರುಣಿ ಕಾದಂಬರಿ ಮೊದಲಾದ ಮದ್ಯಗಳಿಗೆಣೆಯೆನಿಸಿ, ಪ್ರಸನ್ನಾಃ - ಬಹುನಿರ್ಮಲಗಳಾಗಿ, ಪೃಥಕ್ಪೃಥಕ್ - ಬೇರುಬೇರಾಗಿ, ತೈಃತೈಃ - ಆಯಾಯಮದ್ಯಕ್ಕೆ ತಕ್ಕಂತೆ ಕಲೆಸಿರುವ, ವಾಸಚೂರ್ಣೈಃ-ಪರಿಮಳದ್ರವ್ಯಗಳೊಡನೆಯೂ, ಬಹುಸಂಸ್ಥಿತೈಃ - ಬಹುಸ್ಥಲಗಳಲ್ಲಿ ಬಹುವಿಧವಾಗಿ ಅಣಿಮಾಡಿರುವ, ಮಾಲ್ಯೈಶ್ಚ - ಪುಷ್ಪಹಾರಗಳೊಡನೆಯೂ, ಸನ್ತತಾ- ತುಂಬಿರುವ, ಪಾನಭೂಮಿಃ - ಪಾನಶಾಲೆಯು, ಶುಶುಭೆ - ಶೋಭಿಸುತಲಿತ್ತು ||೨೧|| ಹಿರಣ್ಮಯೈಶ್ಚ - ಸುವರ್ಣಗಳಿಂದ ಮಾಡಿರುವ, ಸ್ಫಾಟಿಕೈರಪಿ - ಸ್ಫಟಿಕಶಿಲೆಗಳಿಂದಲೂ ರಚಿಸಿ ಇರುವ, ವಿವಿಧೈಃ -

---

ವಿಚಿತ್ರತರಗಳಾದ ಪೀಠಗಳಿಂದಲೂ ಆ ಪಾನಸ್ಥಾನವು ಬೆಂಕಿಯ ಬೆಳಕಿಲ್ಲದಿದ್ದರೂ ಬೆಳಕಿನರಾಶಿಯಾಗಿ ಕಂಗೊಳಸುತಲಿದ್ದಿತು ||೧೮|| ಆವಾವ ಮಾಂಸಗಳನ್ನು ಆವಾವಪದಾರ್ಥಗಳಿಂದ ಶುದ್ಧಿಮಾಡಬೇಕೋ ಹಾಗೆಯೇಮಾಡಿ, ಆಯಾಯ ಪರಿಕರಗಳಿಂದ ಸುಟ್ಟು, ಬೇಯಿಸಿ, ಬಹುರುಚಿಗೊಡುವಂತೆ ಅಣಿಮಾಡಿ, ಪರಸ್ಪರ ಮಿಶ್ರವಾಗದಂತೆ ಸಿದ್ಧಪಡಿಸಿಯೂ ಇದ್ದುದರಿಂದ ಬಹುಅಂದವಾಗಿದ್ದಿತು ||೧೯|| ಮತ್ತೊಂದು ಕಡೆ- ಸಕ್ಕರೆಯಮದ್ಯ, ದ್ರಾಕ್ಷಾರಸ, ಪುಷ್ಪರಸ, ಹಣ್ಣಿನರಸ, ಇವುಗಳ ಮೇಳನದಿಂದ ಬಗೆಬಗೆಯ ಮಧುರಸಗಳನ್ನು ಅಣಿಮಾಡಿಟ್ಟಿದ್ದರು, ಆದರೆ ಅವು ಕೃತ್ರಿಮರಸಗಳೇ ಆಗಿದ್ದರೂ ಕಡಲನ್ನು ಕಡೆದಾಗ ಹುಟ್ಟಿದ ವಾರುಣಿ, ಕಾದಂಬರಿ ಮೊದಲಾದ ಮದ್ಯರಸಗಳಿಗಿಂತಲೂ ಇಮ್ಮಡಿಯಾದ ಸವಿಯನ್ನೊಳಗೊಂಡಿದ್ದುವು ||೨೦|| ಅಲ್ಲಲ್ಲಿ ಚೆಲ್ಲಿರುವ ಬಗೆಬಗೆಯ ಗಂಧದ ಪುಡಿಗಳಿಂದಲೂ, ಅಲ್ಲಲ್ಲಿ ಸಿಂಗರಿಸಿರುವ ವಿಚಿತ್ರಪುಷ್ಪಹಾರಗಳಿಂದಲೂ, ಪಾನಭೂಮಿಯು

ಹಿರಣ್ಮಯೈಶ್ಚ ವಿವಿಧೈ ರ್ಭಾಜನೈಸ್ಸ್ಫಾಟಿಕೈ ರಪಿ ।
ಜಾಂಬೂನದ ಮಯೈ ಶ್ಚಾನ್ಯೈಃ ಕರಕೈ ರಭಿಸಂವೃತಾ ॥೨೨॥
ರಾಜತೇಷು ಚ ಕುಂಭೇಷು ಜಾಂಬೂನದ ಮಯೇಷು ಚ ।
ಪಾನಶ್ರೇಷ್ಠಂ ತದಾ ಭೂರಿ ಕಪಿ ಸ್ತತ್ರ ದದರ್ಶಸಃ ॥೨೩॥
ಸೋಽಪಶ್ಯ ಚ್ಛಾತಕುಂಭಾನಿ ಶೀಧೋ ರ್ಮಣಿಮಯಾನಿ ಚ ।
ರಾಜತಾನಿ ಚ ಪೂರ್ಣಾನಿ ಭಾಜನಾನಿ ಮಹಾಕಪಿಃ ॥೨೪॥
ಕ್ವಚಿ ದರ್ಧಾವಶೇಷಾಣಿ ಕ್ವಚಿ ತ್ಪೀತಾನಿ ಸರ್ವಶಃ ।
ಕ್ವಚಿ ನ್ನೈವ ಪ್ರಪೀತಾನಿ ಪಾನಾನಿ ಸ ದದರ್ಶ ಹ ॥೨೫॥

---

ಬಗೆಬಗೆಯವುಗಳಾದ, ಭಾಜನೈಃ-ತಟ್ಟೆ ಬಟ್ಟಲು ಮೊದಲಾದ ಪಾತ್ರೆಗಳಿಂದಲೂ; ಜಾಂಬೂನದಮಯೈಃ-ಚಿನ್ನದಿಂದಮಾಡಿರುವ, ಅನ್ಯೈಃ - ಬೇರೆವಿಧವಾದ, ಕರಕೈಶ್ಚ - ಗಿಂಡಿಗಳಿಂದಲೂ, ಅಭಿಸಂವೃತಾ - ತುಂಬಿರುವುದಾಗಿ, ಶುಶುಭೆ - ಪ್ರಕಾಶಿಸುತಲಿತ್ತು ॥೨೨॥ ತತ್ರ - ಆ ಪಾನಶಾಲೆಯೊಳಗೆ, ಮಹಾಕಪಿಃ - ಆಂಜನೇಯನು, ರಾಜತೇಷು - ಬೆಳ್ಳಿಯವುಗಳಾದ, ಕುಂಭೇಷು- ಗುಡಾಣ (ಗಡಿಗೆ)ಗಳಲ್ಲಿಯೂ, ಜಾಂಬೂನದಮಯೇಷು - ಚಿನ್ನದಿಂದ ಕಲ್ಪಿಸಿರುವ, ಕುಂಭೇಷು ಚ - ಕೊಡಗಳಲ್ಲಿಯೂ ತುಂಬಿರುವ, ಭೂರಿ - ಬಹಳವಾದ, ಪಾನಶ್ರೇಷ್ಠಂ - ಉತ್ತಮವಾದ ಪಾನಪದಾರ್ಥಗಳನ್ನು, ತದಾ - ಆಗ, ದದರ್ಶ - ನೋಡಿದನು ॥೨೩॥ ಸಃಮಹಾಕಪಿಃ - ಆ ಆಂಜನೇಯನು, ಶೀಧೋಃ - ಮದ್ಯದ, ಶಾತಕುಂಭಾನಿ - ಚಿನ್ನದಪಾತ್ರೆಗಳನ್ನೂ, ಮಣಿಮಯಾನಿಚ-ರತ್ನಖಚಿತಪಾತ್ರೆಗಳನ್ನೂ, ಪೂರ್ಣಾನಿ-ಪದಾರ್ಥತುಂಬಿರುವ,ರಾಜತಾನಿ-ಬೆಳ್ಳಿಯವುಗಳಾದ, ಭಾಜನಾನಿಚ - ಪಾತ್ರೆಗಳನ್ನೂ, ದದರ್ಶ - ನೋಡಿದನು ॥೨೪॥ ಕ್ವಚಿತ್ - ಒಂದುಕಡೆ, ಅರ್ಧಾವಶೇಷಾಣಿ - ಅರ್ಧ ಪಾನಮಾಡಿ ಅರ್ಧಉಳಿದಿರುವವುಗಳನ್ನೂ, ಕ್ವಚಿತ್ - ಮತ್ತೊಂದುಕಡೆ, ಸರ್ವಶಃ - ಸಂಪೂರ್ಣವಾಗಿ, ಪೀತಾನಿ - ಕುಡಿದಿರುವುಗಳನ್ನೂ, ಕ್ವಚಿತ್ - ಇನ್ನೊಂದುಸ್ಥಲದಲ್ಲಿ, ನೈವಪ್ರಪೀತಾನಿ - ಕುಡಿಯದೆಯೇ ಇರುವ, ಪಾನಾನಿ - ಪಾನಪಾತ್ರೆಗಳನ್ನೂ, ಸಃ - ಆಂಜನೇಯನು, ದದರ್ಶ - ನೋಡುತಬಂದನು ॥೨೫॥ ಕ್ವಚಿತ್ - ಒಂದೆಡೆ - ವಿವಿಧಾನ್ - ಬಗೆಬಗೆಯವುಗಳಾದ, ಭಕ್ಷ್ಯಾಂಶ್ಚ - ಅಗಿದು ತಿನ್ನುವ ಭಕ್ಷ್ಯಗಳನ್ನೂ, ಕ್ವಚಿತ್ - ಮತ್ತೊಂದೆಡೆ, ಭಾಗಶಃ - ಅರ್ಧವಾಗಿ

---

ಗಮಗಮಿಸುತ ಬಹಳವಾಗಿ ಶೋಭಿಸುತಲಿದ್ದಿತು॥೨೧॥ ಚಿನ್ನದ, ಬೆಳ್ಳಿಯ, ಸ್ಫಟಿಕ ಶಿಲೆಯ, ತಟ್ಟೆ, ಬಟ್ಟಲು, ತಂಬಿಗೆ, ಹೂಜಿ, ಮೊದಲಾದ ಪಾತ್ರೆಗಳಿಂದಲೂ, ಸುವರ್ಣಮಯವಾದ ಗಿಂಡಿ ಮೊದಲಾದವುಗಳಿಂದಲೂ, ತುಂಬಿರುವ ಆಪಾನಶಾಲೆಯು ಶೋಭಿಸುತಲಿದ್ದಿತು ॥೨೨॥ ಚಿನ್ನದ ಮತ್ತು ಬೆಳ್ಳಿಯ ಕುಂಭಗಳಲ್ಲಿ ಬಗೆಬಗೆಯ ರುಚಿಕರವಾದ ಶ್ರೇಷ್ಠತರದ ಮದ್ಯರಸಗಳನ್ನು ತುಂಬಿಟ್ಟದ್ದುದನ್ನು ಮಾರುತಿಯು ಕಂಡನು ॥೨೩॥ ಮತ್ತೊಂದೆಡೆಯೊಳು ಮಾದಕ ರಸದಿಂದ ತುಂಬಿದ ಬೆಳ್ಳಿ ಮತ್ತು ಭಂಗಾರದ, ರತ್ನಖಚಿತವಾದ ಅನೇಕಕೊಡಗಳು ಮಾರುತಿಗೆ ಗೋಚರಿಸಿದುವು ॥೨೪॥ ಕೆಲವು ಪಾತ್ರೆಗಳೊಳಗಿದ್ದ ರಸಗಳನ್ನೆಲ್ಲ ಕುಡಿದಿದ್ದರು, ಮತ್ತೆ ಕೆಲವುಗಳೊಳಗೆ ಅರ್ಧ ಕುಡಿದು ಅರ್ಧವನ್ನು ಉಳಿಸಿ ಇದ್ದರು. ಮತ್ತೆ ಕೆಲವನ್ನು ಕುಡಿದೇ ಇರಲಿಲ್ಲ, ಇಂತಹ ಪಾನಪಾತ್ರೆಗಳನ್ನೆಲ್ಲ ನೋಡುತ ಬಂದನು ॥೨೫॥ ಒಂದು ಕಡೆ ಸಿದ್ಧಪಡಿಸಿರುವ ಬಗೆಬಗೆಯ ಭಕ್ಷ್ಯಗಳನ್ನೂ

ಕ್ವಚಿ ದ್ಭುಕ್ತ್ವಾಂಶ್ಚ ವಿವಿಧಾನ್ ಕ್ವಚಿತ್ಪಾನಾನಿ ಭಾಗಶಃ ।
ಕ್ವಚಿ ದನ್ನಾವಶೇಷಾಣಿ ಪಶ್ಯನ್ವೈ ವಿಚಚಾರ ಹ ॥೨೬॥
ಕ್ವಚಿತ್ಪ್ರಭಿನ್ನೈಃ ಕರಕೈಃ ಕ್ವಚಿ ದಾಲೋಳಿತೈ ರ್ಘಟೈಃ ।
ಕ್ವಚಿ ತ್ಸಂಪೃಕ್ತಮಾಲ್ಯಾನಿ ಜಲಾನಿ ಚ ಫಲಾನಿ ಚ ॥೨೭॥
ಶಯನಾ ನ್ಯತ್ರ ನಾರೀಣಾಂ ಶುಭ್ರಾಣಿ ಬಹುಧಾ ಪುನಃ ।
ಪರಸ್ಪರಂ ಸಮಾಶ್ಲಿಷ್ಯ ಕಾಶ್ಚಿ ತ್ಸುಪ್ತಾ ವರಾಂಗನಾಃ ॥೨೮॥
ಕಾಶ್ಚಿಚ್ಚ ವಸ್ತ್ರ ಮನ್ಯಸ್ಯಾ ಸ್ಸ್ವಪಂತ್ಯಾಃ ಪರಿಧಾಯ ಚ ।
ಆಹೃತ್ಯ ಚಾಬಲಾ ಸ್ಸುಪ್ತಾ ನಿದ್ರಾಬಲ ಪರಾಜಿತಾಃ ॥೨೯॥
ತಾಸಾ ಮುಚ್ಛ್ವಾಸ ವಾತೇನ ವಸ್ತ್ರಮಾಲ್ಯಂ ಚ ಗಾತ್ರಜಂ ।

ಉಳಿದಿರುವ, ಪಾನಾನಿ - ಪಾನಪದಾರ್ಥಗಳನ್ನೂ, ಕ್ವಚಿತ್ - ಬೇರೊಂದೆಡೆಯಲ್ಲಿ, ಅನ್ನಾವಶೇಷಾಣಿ - ಅನ್ನಭಾಗಗಳನ್ನೂ, ಪಶ್ಯನ್ವೈ - ನೋಡುತ್ತಿರುವವನಾಗಿಯೇ, ವಿಚಚಾರಹ - ನಡೆದುಬಂದನು ॥ ೨೬ ॥ ಕ್ವಚಿತ್ - ಒಂದುತಾವಿನಲ್ಲಿ, ಪ್ರಭಿನ್ನೈಃ - ಒಡೆದುಹೋದ, ಕರಕೈಃ - ಗಿಂಡಿಗಳಿಂದಲೂ, ಕ್ವಚಿತ್ - ಮತ್ತೊಂದು ತಾವಿನಲ್ಲಿ, ಆಲೋಳಿತೈಃ - ಕಯ್ಯಿಟ್ಟು ಕಲಕಿರುವ, ಘಟೈಃ - ಕೊಡಗಳಿಂದಲೂ ಕೂಡಿರುವ, ಕ್ವಚಿತ್ - ಬೇರೊಂದುಕಡೆ, ಸಂಪೃಕ್ತಮಾಲ್ಯಾನಿ - ಹೊರಳಾಟದಿಂದ ಮುಗ್ಗಿದ ಹೂವಿನ ಹಾರಗಳನ್ನೂ, ಜಲಾನಿ - ಉದಕಗಳನ್ನೂ, ಫಲಾನಿಚ - ಹಣ್ಣುಗಳನ್ನೂ, ದದರ್ಶ - ನೋಡುತ ಬಂದನು ॥೨೭॥ ಅತ್ರ-ಆ ಶಾಲೆಯೊಳಗೆ, ನಾರೀಣಾಂ - ರಕ್ಕಸನಾರಿಯರ, ಬಹುಧಾ - ಅನೇಕವಿಧಗಳಾದ, ಶಯನಾನಿಪುನಃ - ಹಾಸಿಗೆಗಳನ್ನಾದರೋ, ದದರ್ಶ - ಕಂಡನು, ಕಾಶ್ಚಿತ್ - ಕೆಲವುಂದಿ, ವರಾಂಗನಾಃ - ಉತ್ತಮರಾದ ಹೆಂಗಸರು, ಪರಸ್ಪರಂ - ಒಬ್ಬರಿಗೊಬ್ಬರು, ಸಮಾಶ್ಲಿಷ್ಯ - ಚೆನ್ನಾಗಿ ಅಪ್ಪಿಕೊಂಡು, ಸುಪ್ತಾಃ - (ತಿಂದು ಕುಡಿದು) ಮಲಗಿದ್ದರು ॥೨೮॥ ನಿದ್ರಾಬಲಪರಾಜಿತಾಃ - ಹೆಚ್ಚಿದನಿದ್ರೆಯಿಂದ ಮೈಮರೆತ, ಕಾಶ್ಚಿತ್ - ಕೆಲವುಮಂದಿ, ಅಬಲಾಃ - ಲಲನೆಯರು, ಸ್ವಪಂತ್ಯಾಃ-ನಿದ್ರಿಸುತಲಿರುವ, ಅನ್ಯಸ್ಯಾಃ - ಮತ್ತೊಬ್ಬರವಳಿಯ, ವಸ್ತ್ರಂ - ಉಟ್ಟಬಟ್ಟೆಯನ್ನು, ಅಪಹೃತ್ಯ - ಸೆಳೆದು, ಪರಿಧಾಯ - ಹೊದೆದುಕೊಂಡು, ಸುಪ್ತಾಃ - ಮಲಗಿದ್ದರು ॥೨೯॥ ತಾಸಾಂ - ಅಲ್ಲಿ ಪವಳಿಸಿರುವ ಪದುಮವದನೆಯರ, ಉಚ್ಛ್ವಾಸವಾತೇನ - ಸಿಟ್ಟುಸಿರಿನ ಗಾಳಿಯಿಂದ, ಗಾತ್ರಜಂ - ಆ ಹೆಂಗಳ ಮೈಮೇಲೆ ಧರಿಸಿರುವ, ವಸ್ತ್ರಂ - ಬಟ್ಟೆಯೂ,

ಒಂದೆಡೆ ಪಾಲುಮಾಡಿ ಇಟ್ಟಿರುವ ಪಾನಪದಾರ್ಥಗಳನ್ನೂ, ಮತ್ತೊಂದೆಡೆ ಬಗೆಬಗೆಯ ಅನ್ನಗಳನ್ನಿಟ್ಟು ಇರುವುದನ್ನೂ ನೋಡುತ ಬಂದನು ॥೨೬॥ ಕೆಲವು ಪಾತ್ರೆಗಳು ಕುಡಿಯುವ ಮತ್ತು ತಿನ್ನುವ ಸಡಗರದಲ್ಲಿ ಒಡೆದು ಹೋಗಿದ್ದುವು, ಮತ್ತೆ ಕೆಲವುಪಾನಪಾತ್ರೆಗಳೊಳಗೆ ಕೈಯಿಟ್ಟು ಲೊಡಬಿದ್ದರು, ಇನ್ನು ಕೆಲವು ಪುಷ್ಪಹಾರಗಳು ಹೊರಳಾಟದಿಂದ ಮುಗ್ಗಿ ಹೋಗಿದ್ದುವು. ಹಾಗೆಯೇ ಜಲಗಳೂ ಫಲಗಳೂ ರೂಪಾಂತರಗಳನ್ನು ಹೊಂದಿ ಇದ್ದುವು ॥೨೭॥ ಅಲ್ಲಿ ಪವಳಿಸಿದ್ದ ನಾರೀಮಣಿಗಳ ಹಾಸಿಗೆಗಳು ನಾನಾವಿಧವಾಗಿ ಬೆಳಗುತಲಿದ್ದುವು, ಕೇವು ಮಂದಿ ಲಲನೆಯರು ಒಬ್ಬರಿಗೊಬ್ಬರು ಅಪ್ಪಿಕೊಂಡು ಪವಳಿಸಿದ್ದರು ॥೨೮॥ ಮಲಗಿರುವ ಭಾಮಿನಿಯರೊಳಗೆ ಕೆಲವರು ತಮ್ಮ ಪಕ್ಕದಲ್ಲಿ ಮಲಗಿರುವ ಕಾಂತೆಯರ ವಸ್ತ್ರಗಳನ್ನು ಸೆಳೆದು ತಾವೇ ಹೊದೆದು ಮದಪರವಶರಾಗಿ ಪ್ರಜ್ಞೆತಪ್ಪಿ ಮಲಗಿದ್ದರು ॥೨೯॥

ನಾತ್ಯರ್ಥಂ ಸ್ಪಂದತೆ ಚಿತ್ರಂ ಪ್ರಾಪ್ಯ ಮಂದಂ ಮಿವಾನಿಲಂ ॥೪೦॥
ಚಂದನಸ್ಯ ಚ ಶೀತಸ್ಯ ಶೀಧೋ ರ್ಮ್ಮಧುರಸಸ್ಯ ಚ ।
ವಿವಿಧಸ್ಯ ಚ ಮಾಲ್ಯಸ್ಯ ಧೂಪಸ್ಯ ವಿವಿಧಸ್ಯ ಚ॥ ೪೧॥
ಬಹುಧಾ ಮಾರುತ ಸ್ತತ್ರ ಗಂಧಂ ವಿವಿಧ ಮುದ್ವಹನ್ ।
ರಸಾನಾಂ ಚಂದನಾನಾಂ ಚ ಧೂಪಾನಾಂ ಚೈವ ಮೂರ್ಚ್ಛಿತಃ ॥
ಪ್ರವವೌ ಸುರಭಿ ರ್ಗಂಧೋ ವಿಮಾನೆ ಪುಷ್ಪಕೆ ತದಾ ॥೪೨॥ ॥
ಶ್ಯಾಮಾವದಾತಾ ಸ್ತತ್ರಾನ್ಯಾಃ ಕಾಶ್ಚಿ ತ್ಕೃಷ್ಣಾ ವರಾಂಗನಾಃ ॥
ಕಾಶ್ಚಿ ತ್ಕಾಂಚನ ವರ್ಣಾಂಗ್ಯಃ ಪ್ರಮದಾ ರಾಕ್ಷಸಾಲಯೆ ॥೪೪॥ ॥

ಮಾಲ್ಯಂಚ - ಪುಷ್ಪಹಾರವೂ, ಮಂದಂ ಅನಿಲಂ-ಮಂದಮಾರುತವನ್ನು, ಪ್ರಾಪ್ಯೇವ - ಹೊಂದಿಯೋ ಎಂಬಂತೆ, ಅತ್ಯರ್ಥಂ - ವಿಶೇಷವಾಗಿ, ನಸ್ಪಂದತೆ - ಚಲಿಸುತಲಿರಲಿಲ್ಲ ॥೩೦॥ ಶೀತಸ್ಯ - ತಂಪಾಗಿರುವ, ಚಂದನಸ್ಯ - ಗಂಧದ, ಮಧುರಸಸ್ಯಚ- ಮಧುರವಾದ ರುಚಿಯುಳ್ಳ, ಶೀಧೋಃ- ಮದ್ಯರಸದ, ವಿವಿಧಸ್ಯ-.ನಾನಾತರಹೆಯ-ದಾದ, ಮಾಲ್ಯಸ್ಯ - ಪುಷ್ಪಹಾರದ, ವಿವಿಧಸ್ಯ - ನನಾವಿಧವಾದ, ಧೂಪಸ್ಯಚ - ಧೂಪಗಳ, ಗಂಧಂ - ಸುವಾಸನೆಯುನ್ನು, ಉದ್ವಹನ್ - ವಹಿಸಿದುದಾಗಿ, ಮಾರುತಃ - ಗಾಳಿಯು, ತತ್ರ - ಆ ಪಾನಶಾಲೆಯೊಳಗೆ, ಬಹುಧಾ - ಅನೇಕಪ್ರಕಾರವಾಗಿ, ಪ್ರವವೌ - ಬೀಸುತಲಿತ್ತು ॥೩೧॥ ರಸಾನಾಂ- ಮದ್ಯರಸಗಳ, ಚಂದನಾನಾಂ - ಶ್ರೀಗಂಧಗಳ, ಧೂಪಾನಾಂಚ - ಧೂಪಗಳ - ಸುರಭಿಃ - ಗಮಗಮಿಸುತಲಿರುವ, ಗಂಧಃ - ಸವಾಸನೆಯು, ತದಾ- ಆಗ, ಪುಷ್ಪಕವಿಮಾನೆಚ್ಚೈವ- ಪುಷ್ಪಕವಿಮಾನದಲ್ಲಿಯೂ, ಮೂರ್ಛಿತಃ - ತುಂಬಿಕೊಂಡಿದ್ದಿತು ॥೩೨॥ ॥ ತತ್ರ ರಾಕ್ಷಸಾಲಯೆ - ಆ ಪಾನಶಾಲೆಯೊಳಗೆ, ಕಾಶ್ಚಿತ್ - ಕೆಲವರು, ಶ್ಯಾಮಾವದಾತಾಃ - ಕಪ್ಪು ಮತ್ತು ಬಿಳಿಯಬಣ್ಣದ ಹೆಂಗಸರೂ, ಅನ್ಯಾಃ - ಮತ್ತೆ ಕೆಲವುಮಂದಿ, ಕೃಷ್ಣಾ - ಅಚ್ಚಕಪ್ಪಿನ, ವರಾಂಗನಾಃ - ಉತ್ತಮಸ್ತ್ರೀಯರೂ, ಕಾಶ್ಚಿತ್ - ಇನ್ನು ಕೆಲವರು, ಕಾಂಚನವರ್ಣಾಂಗ್ಯಃ - ಬಂಗಾರದ ಬಣ್ಣದ, ಪ್ರಮದಾಃ - ಹೆಂಗಳೂ, ಶಿಶ್ಯಿರೆ- ಮಲಗಿದರು ॥೩೪॥ ॥ ನಿದ್ರಾವಶತ್ವಾಚ್ಚ - ನಿದ್ರಾಧೀನತೆಯ ದೆಶೆಯಿಂದಲೂ, ಮದನೇನ- ಕಾಮವಿಕಾರದಿಂದಲೂ, ಮೂರ್ಛಿತಂ-ತುಂಬಿ

ಅಂತು ಮಲಗಿನಿದ್ರಿಸುತಲಿರುವ ಕಾಮಿನಿಯರು ಉಟ್ಟುಹೊದೆದಿರುವ ದಿವ್ಯಾಂಬರಗಳು ಅವರ ಮುಖಮಾರುತದಿಂದ, ಮಂದಾನಿಲದಿಂದ ಹೇಗೋಹಾಗೆ ಮೆಲ್ಲಗೆ ಅಲುಗುತಲಿದ್ದುವು॥೪೦॥ ತಂಪಾದ ಶ್ರೀಗಂಧದ, ರುಚಿಕರವಾದ ಮಧುರಸದ, ಬಗೆಬಗೆಯಾದ ಪುಷ್ಪಮಾಲಿಕೆಗಳ, ಮತ್ತು ಬಗೆಬಗೆಯ ಧೂಪಗಳ ನಾನಾ ವಿಧವಾದ ಸುವಾಸನೆಯುನ್ನು ವಹಿಸಿರುವ ವಾಯುವು ಎಲ್ಲೆಲ್ಲಿಯೂ ಬೀಸುತಲಿದ್ದಿತು, ಇದಲ್ಲದೆ ಮಧುರಸಗಳ, ಮತ್ತು ಧೂಪಗಳಗಮಗಮಿಸುವ ಸುವಾಸನೆಯು ಆಗ ಅಲ್ಲಿನ ಪುಷ್ಪಕವಿಮಾನದೊಳಗೆಲ್ಲ ತುಂಬಿ ಹರಡಿಕೊಂಡಿದ್ದಿತು ॥೪೧, ೪೨॥ - ಆರಾಕ್ಷಸನ ಮನೆಯೊಳಗೆ ಕೆಲವು ಮಂದಿ ಕಾಂತೆಯರು ಕಪ್ಪು ಮತ್ತು ಬಿಳಿಯ ಬಣ್ಣದಿಂದ ಕೂಡಿ ಬೆಳಗುತಲಿದ್ದರು, ಮತ್ತೆ ಕೆಲವು ಮಂದಿ ಉತ್ತಮಾಂಗನೆಯರು ಕಪ್ಪಗೆ ಇದ್ದರೂ ಬಹುವಾಗಿ ಶೋಭಿಸುತಲಿದ್ದರು, ಇನ್ನು ಕೆಲವರು ಬಂಗಾರದ ಬಣ್ಣದಂತೆ ತಳತಳಸುತಲಿದ್ದರು॥೪೪॥ ॥ ನಿದ್ರಾಪರವಶತೆಯಿಂದಲೂ, ಕಾಮವಿಕಾರದಿಂದಲೂ ಅಲ್ಲಿ ನಿದ್ರಿಸುತಲಿದ್ದ ಭಾಮಾಮಣಿಯರ ಸ್ಥಿತಿಯು ಇರುಳುಹೊತ್ತಿನಲ್ಲಿ

ತಾಸಾಂ ನಿದ್ರಾವಶತ್ವಾಚ್ಚ ಮದನೇನ ವಿಮೂರ್ಛಿತಂ ॥
ಪದ್ಮಿನೀನಾಂ ಪ್ರಸುಪ್ತಾನಾಂ ರೂಪ ಮಾಸೀ ದ್ಯಥೈವಹಿ ॥೩೪॥ ॥
ಏವಂ ಸರ್ವ ಮಶೇಷೇಣ ರಾವಣಾಂತಃಪುರಂ ಕಪಿಃ ॥
ದದರ್ಶ ಸುಮಹಾತೇಜಾ ನ ದದರ್ಶ ಚ ಜಾನಕೀಂ ॥೩೫॥ ॥
ನಿರೀಕ್ಷಮಾಣ ಶ್ಚ ತದಾ ತಾಸ್ಸ್ತ್ರಿಯ ಸ್ಸ ಮಹಾಕಪಿಃ ।
ಜಗಾಮ ಮಹತೀಂ ಚಿಂತಾಂ ಧರ್ಮ ಸಾಧ್ವಸ ಶಂಕಿತಃ ॥೩೬॥
ಪರ ದಾರಾವರೋಧಸ್ಯ ಪ್ರಸುಪ್ತಸ್ಯ ನಿರೀಕ್ಷಣಂ ।
ಇದಂ ಖಲು ಮಮಾತ್ಯರ್ಥಂ ಧರ್ಮಲೋಪಂ ಕರಿಷ್ಯತಿ ॥೩೭॥ ॥
ನ ಹಿ ಮೇ ಪರದಾರಾಣಾಂ ದೃಷ್ಟಿ ರ್ವಿಷಯ ವರ್ತಿನೀ ।

---

ಇರುವುದಾಗಿಯೂ ಇರುವ, ತಾಸಾಂ-ಆ ಅಂಗನೆಯರ, ರೂಪಂ-ಸ್ವರೂಪವು (ಸ್ಥಿತಿಯು) ಪ್ರಸುಪ್ತಾನಾಂ-ನಿದ್ದೆಗಯ್ಯುತಲಿರುವ, ಪದ್ಮಿನೀನಾಂ- ತಾವರೆಯ ಬಳ್ಳಿಗಳ, ರೂಪಂಯಥಾ - ಸ್ಥಿತಿಯು ಹೇಗೋ ಹಾಗೆ, ಆಸೀತ್ - ಇದ್ದಿತು ॥೩೪॥ ॥ ಮಹಾತೇಜಾಃ - ಮಹಾತೇಜಸ್ವಿಯಾದ, ಕಪಿಃ - ಆಂಜನೇಯನು, ಸರ್ವಂ - ಸಮಸ್ತವಾದ, ರಾವಣಾಂತಃಪುರಂ - ರಾವಣನ ರಾಣಿವಾಸವನ್ನು, ಅಶೇಷೇಣ - ಸಂಪೂರ್ಣವಾಗಿ, ದದರ್ಶ - ಹುಡುಕಿನೋಡಿದನು, ಜಾನಕೀಂಚ - ಸೀತೆಯನ್ನಾದರೋ, ನಚದದರ್ಶ- ಕಾಣಲಿಲ್ಲ ॥೩೫॥ ॥ ಸಃ - ಆ, ಮಹಾಕಪಿಃ - ಬುದ್ಧಿವಂತನಾದ ಅಂಜನೇಯನು, ತದಾ - ಆಗ, ತಾಃಸ್ತ್ರಿಯಃ - ಆ ಹೆಂಗಸರನ್ನು, ನಿರೀಕ್ಷಮಾಣಃ - ನೋಡುತಲಿರುವವನಾಗಿ, ಧರ್ಮ - ಧರ್ಮದ, ಸಾಧ್ವಸ - ಭಯದಿಂದ, ಶಂಕಿತಃ - ಕಳವಳಿಸಿದವನಾಗಿ, ಮಹತೀಂಚಿಂತಾಂ - ಮಹತ್ತರವಾದ ಯೋಚನೆಯನ್ನು, ಜಗಾಮ - ಹೊಕ್ಕನು ॥೩೬॥ ॥ ಪ್ರಸುಪ್ತಸ್ಯ - ಮಲಗಿನಿದ್ರಿಸುತಲಿರುವ ಪರದಾರಾವರೋಧಸ್ಯ - ಪರಸ್ತ್ರೀರೂಪವಾದ ರಾಣಿವಾಸವನ್ನು, ಇದಂ - ಈ, ನಿರೀಕ್ಷಣಂ - ನನ್ನ ನೋಟವು, ಮಮ - ನನಗೆ, ಅತ್ಯರ್ಥಂ - ಬಹಳವಾದ, ಧರ್ಮಲೋಪಂ - ಧರ್ಮದ ನ್ಯೂನತೆಯನ್ನು, ಕರಿಷ್ಯತಿ - ಮಾಡುವುದು॥೩೭॥ ॥ ಹಿ - ಆದರೆ, ಮೇ- ನನ್ನ, ದೃಷ್ಟಿಃ - ನೋಟವಾದರೋ, ಪರದಾರಾಣಾಂ- ಪರಸ್ತ್ರೀಯರೊಳಗೆ, ವಿಷಯವರ್ತಿನೀ- ವಿಷಯ ಸುಖದಲ್ಲಿ ಅನುರಕ್ತವಾದುದಾಗಿ (ಭೋಗಾಭಿಲಾಷೆಯುಳ್ಳುದಾಗಿ) ನ - ಇಲ್ಲವು, ಅತ್ರ- ಇಲ್ಲಿ, ಅಯಂ -

---

ಕೊಳಗಳೊಳಗೆ ನಿದ್ರಿಸುತಲಿರುವ ತಾವರೆಯ ಬಳ್ಳಿಗಳ ಇರುವಿಕೆಯನ್ನು ಹೋಲುತಲಿದ್ದಿತು ॥ ೩೪ ॥ ॥ ಮಹಾತೇಜಸ್ವಿಯಾದ ಪಾವನಿಯು ರಾವಣನ ರಾಣಿವಾಸವನ್ನೆಲ್ಲವನ್ನೂ ಸ್ವಲ್ಪವೂ ಬಿಡದಂತೆ ಚೆನ್ನಾಗಿ ಹುಡುಕಿನೋಡಿದನು ಆದರೆ ಮಹಾನುಭಾವಳಾದ ಜಾನಕಿಯನ್ನು ಮಾತ್ರ ನೋಡಲಿಲ್ಲ ॥ ೩೫॥ ॥ ಅಲ್ಲಿರುವ ಸೀಮಂತಿನಿಯರನ್ನೆಲ್ಲ ಚೆನ್ನಾಗಿ ಪರಿಶೋಧಿಸಿದ ಆಂಜನೇಯನು ತನಗೆ ಧರ್ಮದ ಲೋಪವುಂಟಾಯಿತೆಂದು ಭಯದಿಂದ ಕಳವಳಿಸುತ ಪ್ರಬಲತರವಾದ ಚಿಂತೆಗೊಳಗಾದನು ॥ ೩೬॥ ॥ ಅಯ್ಯೋ ! ಈರಾಣಿವಾಸದಲ್ಲಿ ಪರಸ್ತ್ರೀಯರೆಲ್ಲ ಪವಳಿಸಿ ಇರುವರು, ಇಂಥವರನ್ನೆಲ್ಲ ನಾನು ಕಣ್ಣಾರನೋಡಿದೆನು, ಅದರಲ್ಲಿಯೂ ಪರೀಕ್ಷಿಸಿದೆನು, ಇಂತಹ ನೋಟವು ಖಂಡಿತವಾಗಿಯೂ ನನಗೆ ಧರ್ಮಭಂಗವನ್ನು ಮಾಡದಿರದು. ಮಾಡಲೇ ಮಾಡುವುದು ॥೩೭॥ ಆದರೆ-ನಾನು ಪರಸ್ತ್ರೀಯರನ್ನು ನೋಡಿದರೂ ಅವರೊಳಗೆ ನನ್ನ ದೃಷ್ಟಿಯೆಂಬುದು ಯಾವುದೊಂದು ಬಗೆಯಾದ ಸುಖಾಭಿಲಾಷೆ

ಅಯಂ ಚಾತ್ರ ಮಯಾ ದೃಷ್ಟಃ ಪರದಾರ ಪರಿಗ್ರಹಃ ॥೩೮॥ ॥
ತಸ್ಯ ಪ್ರಾದುರಭೂ ಚ್ಚಿಂತಾ ಪುನ ರನ್ಯಾ ಮನಸ್ವಿನಃ ॥
ನಿಶ್ಚಿ ತೈಕಾಂತಚಿತ್ತಸ್ಯ ಕಾರ್ಯನಿಶ್ಚಯ ದರ್ಶಿನೀ ॥೩೯॥ ॥
ಕಾಮಂ ದೃಷ್ಟಾ ಮಯಾ ಸರ್ವಾ ವಿಶ್ವಸ್ತಾ ರಾವಣಸ್ತ್ರಿಯಃ ॥
ನ ಹಿ ಮೇ ಮನಸಃ ಕಿಂಚಿ ದ್ವೈಕೃತ್ಯ ಮುಪಪದ್ಯತೇ ॥೪೦॥ ॥
ಮನೋ ಹಿ ಹೇತು ಸ್ಸರ್ವೇಷಾ ಮಿಂದ್ರಿಯಾಣಾಂ ಪ್ರವರ್ತನೆ ॥

---

ಈ, ಪರದಾರಪರಿಗ್ರಹಃ - ರಾವಣನುಮಾಡಿರುವ ಪರಾಂಗನಾಪಹಾರವೆಂಬುದು, ಮಯಾ- ನನ್ನಿಂದ, ದೃಷ್ಟಃ - ನೋಡಲ್ಪಟ್ಟಿರುವುದು ॥೩೮॥ ॥ ನಿಶ್ಚಿತ - ನಿಗ್ರಹಿಸಲ್ಪಟ್ಟ, ಏಕಾಂತ- ನೆಲೆಗೆನಿಲ್ಲಿಸಿದ, ಚಿತ್ತಸ್ಯ - ಮನಸ್ಸುಳ್ಳವನಾದಕಾರಣವೇ, ಮನಸ್ವಿನಃ - ಧೀರನಾದ, ತಸ್ಯ - ಆ ಆಂಜನೇಯನಿಗೆ, ಕಾರ್ಯ - ಪ್ರಕೃತಕಾರ್ಯವನ್ನು (ಸೀತಾನ್ವೇಷಣಕಾರ್ಯವನ್ನು] ನಿಶ್ಚಯ - ಗೊತ್ತುಮಾಡುವುದರಲ್ಲಿ, ದರ್ಶಿನೀ- ಪ್ರವರ್ತಿಸಿ ಇರುವ, (ನೆಲೆಗೊಂಡ) ಅನ್ಯಾ- ಬೇರೊಂದಾದ, ಚಿಂತಾಪುನಃ - ಯೋಚನೆಯಾದರೋ, ಪ್ರಾದುರಭೂತ್ - ಹೀಗೆ ಅಂಕುರಿಸಿತು ॥೩೯॥ ಸರ್ವಾಃ - ಸಮಸ್ತರಾದ, ವಿಶ್ವಸ್ತಾಃ - ರಾವಣನಲ್ಲಿ ವಿಶ್ವಾಸಪರರಾದ, ರಾವಣಸ್ತ್ರಿಯಃ - ರಾವಣಭಾರ್ಯೆಯರು, ಮಯಾ - ನನ್ನಿಂದ, ಕಾಮಂ - ಸಂಪೂರ್ಣವಾಗಿ, ದೃಷ್ಟಾಃ- ನೋಡಲ್ಪಟ್ಟರು, ಅಥವಾ:- ಮಯಾ - ನನ್ನಿಂದ, ಕಾಮಂ - ವಿಶೇಷವಾಗಿ, ದೃಷ್ಟಾಃ - ಶೋಧಿಸಲ್ಪಟ್ಟ (ಪರೀಕ್ಷಿಸಲ್ಪಟ್ಟ) ಸರ್ವಾಃ - ಸಮಸ್ತರಾದ, ರಾವಣಸ್ತ್ರಿಯಃ- ರಾವಣನ ರಾಣಿಯರು, ವಿಶ್ವಸ್ತಾಃ - ವಿಧವೆಯರಾಗತಕ್ಕವರೇಸರಿ, ಹಿ - ಯಾವಕಾರಣದಿಂದಲೂ, ಮೇ - ನನ್ನ, ಮನಸಃ - ಮನಸ್ಸಿಗೆ, ಕಿಂಚಿತ್- ತುಸವಾದರೂ, ವೈಕೃತ್ಯಂ - ವಿಕಾರವು, ನ - ಉಂಟಾಗಲಿಲ್ಲ ॥೪೦॥ ॥ ಸರ್ವೇಷಾಂ - ಸಮಸ್ತವಾದ- ಇಂದ್ರಿಯಾಣಾಂ - ಚಕ್ಷುರಾದಿ ಇಂದ್ರಿಯಗಳ, ಪ್ರವರ್ತನೆ - ಪ್ರವೇಶದಲ್ಲಿ (ಹೊಗುವಿಕೆಯಲ್ಲಿ) ಮನಃ, ಮನಸ್ಸು, ಹೇತುಃ- ಮೊದಲನೆಯ ಕಾರಣವಾಗಿದೆ, ತಚ್ಚ - ಆ ಮನಸ್ಸಾದರೋ, ಮೇ - ನನಗೆ, ಶುಭಾಶುಭಾಸು - ಮಂಗಳಾಮಂಗಳರೂಪವಾದ, ಅವಸ್ಥಾಸು - ಸ್ಥಿತಿಗಳಲ್ಲೆಲ್ಲಾ, ಸುವ್ಯವಸ್ಥಿತಂ - ಚಲಿಸದೆ

---

ಯಲ್ಲಿಯೂ ನಡಲಿಲ್ಲ. ಯದ್ಯಪಿ ಈ ಪರಸ್ತ್ರೀಯರನ್ನು ನಾನು ನೋಡಿದುದೇನೋ ದಿಟ, ಎಂದುಕೊಂಡನು॥೩೮॥ ॥ಆ ಮೇಲೆ ಜಿತೇಂದ್ರಿಯತ್ವದಿಂದ ನಿಶ್ಚಮಕ್ಕೆ ಒಳಗಾದಮನಸ್ಸುಳ್ಳವನೆನಿಸಿ ಧೀರನಾಗಿರುವ ಆಂಜನೇಯನಿಗೆ ಸೀತಾನ್ವೇಷಣರೂಪವಾದ ಪ್ರಕೃತಕಾರ್ಯವನ್ನು ನಿರ್ವಹಿಸುವುದರಲ್ಲಿಯೇ ಗುರಿಯಿಳ್ಳಮತ್ತೊಂದು ಬಗೆಯಾದ ಚಿಂತೆಯು ಈವಿಧವಾಗಿ ಅಂಕುರಿಸಿತು॥೩೯॥ ॥ಈ ರಾವಣನಲ್ಲಿ ಪ್ರೇಮವನ್ನು ನೆಲೆಗೊಳಿಸಿರುವ ಭಾಮಾಮಣಿಯರನ್ನೆಲ್ಲ ನಾನು ಚೆನ್ನಾಗಿ ಪರೀಕ್ಷಿಸಿನೋಡಿದೆನು, ಇವರೆಲ್ಲರೂ ವಿಧವೆಯರಾಗತಕ್ಕವರಲ್ಲದೆ ಸುಮಂಗಲಿಯ ಲಕ್ಷಣವುಳ್ಳವರಾಗಿಲ್ಲ, ಇವರೆಲ್ಲರೂ ಸರ್ವಾಂಗಸುಂದರಿಯರೇ ಹೌದು, ಇವರನ್ನೆಲ್ಲ ನಿರೀಕ್ಷಿಸಿದ ನನ್ನ ಮನಸ್ಸಿಗೆ ಲೇಶವಾದರೂ ವಿಕಾರವುಂಟಾಗಲಿಲ್ಲ. ॥೪೦॥ ॥ ಕಣ್ಣೇ ಮೊದಲಾದ ಯಾವ ಇಂದ್ರಿಯವೇ ಆಗಲಿ, ರೂಪವೇ ಮೊದಲಾದ ಯಾವವಿಷಯದಲ್ಲಿ ಪ್ರವರ್ತಿಸಬೇಕಾಗಿ ಬದ್ದರೂ ಮನಸ್ಸೇ ಮೊದಲನೆಯ ಕಾರಣ. ಏತಕೆಂದರೆ:-ಮನವು ಇಂದ್ರಿಯದೊಡನೆ ಕಲೆತರೇನೇ ಆ ಇಂದ್ರಿಯವು ವಿಷಯವನ್ನು ಹೊಕ್ಕು ಅದರ ವಿಷಯವಾದ ಸುಖದುಃಖಗಳನ್ನು ಉಂಟುಮಾಡುತ್ತದೆ. ಒಳ್ಳೆಯದನ್ನು ಕಂಡು ಕೇಳುವುದು, ಹಾಗೆಯೇ

ಶುಭಾಶುಭಾ ಸ್ವವಸ್ಥಾಸು ತಚ್ಚ ಮೇ ಸುವ್ಯವಸ್ಥಿತಂ ॥೪೧॥ ॥
ನಾನ್ಯತ್ರ ಹಿ ಮಯಾ ಶಕ್ಯಾ ವೈದೇಹೀ ಪರಿಮಾರ್ಗಿತುಂ ।
ಸ್ತ್ರಿಯೋ ಹಿ ಸ್ತ್ರೀಷು ದೃಶ್ಯಂತೇ ಸದಾ ಸಂಪರಿಮಾರ್ಗಣೇ ॥೪೨॥ ॥
ಯಸ್ಯ ಸತ್ವಸ್ಯ ಯಾ ಯೋನಿ ಸ್ತಸ್ಯಾಂ ತತ್ಪರಿ ಮಾರ್ಗ್ಯತೇ ॥
ನ ಶಕ್ಯಾ ಪ್ರಮದಾ ನಷ್ಟಾ ಮೃಗೀಷು ಪರಿಮಾರ್ಗಿತುಂ ॥೪೩॥ ॥
ತದಿದಂ ಮಾರ್ಗಿತಂ ತಾವ ಚ್ಛುದ್ಧೇನ ಮನಸಾ ಮಯಾ ॥
ರಾವಣಾಂತಃಪುರಂ ಸರ್ವಂ ದೃಶ್ಯತೇ ನ ಚ ಜಾನಕೀ ॥೪೪॥ ॥
ದೇವ ಗಂಧರ್ವ ಕನ್ಯಾಶ್ಚ ನಾಗಕನ್ಯಾಶ್ಚ ವೀರ್ಯವಾನ್ ॥

---

ನೆಲೆಗೊಂಡಿರುವುದು ॥೪೧॥ ॥ ವೈದೇಹೀ - ಜಾನಕಿಯು, ಅನ್ಯತ್ರ - ಬೇರೆಸ್ಥಳದಲ್ಲಿ, ಮಯಾ- ನನ್ನಿಂದ, ಪರಿಮಾರ್ಗಿತುಂ - ಹುಡುಕಲಿಕ್ಕೆ, ನಶಕ್ಯಾ - ಸಾಧ್ಯಳೇ ಅಲ್ಲ, ಹಿ - ನಿಶ್ಚಯ, ಸದಾ - ಯಾವಾಗಲೂ, ಸಂಪರಿಮಾರ್ಗಣೇ - ಹುಡುಕುವವಿಷಯದಲ್ಲಿ, ಸ್ತ್ರಿಯೋಹಿ - ಹೆಂಗಸರು, ಸ್ತ್ರೀಷು- ಹೆಂಗಸರಲ್ಲಿಯೇ, ದೃಶ್ಯಂತೇ - ಕಾಣಬರುವರು ॥೪೨॥ ॥ ಯಸ್ಯಸತ್ವಸ್ಯ - ಯಾವ ಪ್ರಾಣಿಗೆ, ಯಾಯೋನಿಃ - ಯಾವುದುಜನ್ಮಸ್ಥಾನವೋ, (ಜಾತಿ) ತಸ್ಯಾಂ-ಆ ಜನ್ಮಸ್ಥಾನದಲ್ಲಿ, (ಜಾತಿಯಲ್ಲಿ) ತತ್- ಆ ಪ್ರಾಣಿಯು, ಪರಿಮಾರ್ಗ್ಯತೇ - ಹುಡುಕಲ್ಪಡುತ್ತದೆ, ನಷ್ಟಾ-ತಪ್ಪಿಸಿಕೊಂಡಿರುವ(ಕಾಣದೆಹೋಗಿರುವ) ಪ್ರಮದಾ-ಹೆಂಗಸು, ಮೃಗೀಷು-ಹೆಣ್ಣುಜಿಂಕೆಗಳಲ್ಲಿ, ಪರಿಮಾರ್ಗಿತುಂ-ಹುಡುಕಲಿಕ್ಕೆ, ನಶಕ್ಯಾ- ಸಾಧ್ಯಳೇಅಲ್ಲ ॥೪೩॥ ॥ ತತ್ - ಆದಕಾರಣ. (ಹೆಂಗಸರಲ್ಲಿ ಹೆಂಗಸರನ್ನು ಹುಡುಕುವುದು ನ್ಯಾಯವಾದುದರಿಂದ) ಇದಂ - ಈ, ಸರ್ವಂ-ಸಮಸ್ತವಾದ, ರಾವಣಾಂತಃಪುರಂ - ರಾವಣನ ರಾಣಿವಾಸವೆಲ್ಲವೂ, ಮಯಾ - ನನ್ನಿಂದ, ಶುದ್ಧೇನಮನಸಾ- ಪರಿಶುದ್ಧವಾದ (ನಿಷ್ಕಲ್ಮಷವಾದ) ಮನಸ್ಸಿನಿಂದ, ತಾವತ್ - ಸ್ವಲ್ಪವೂಬಿಡದಂತೆ, ಪರಿಮಾರ್ಗಿತಂ - ಹುಡುಕಲ್ಪಟ್ಟಿತು, ಜಾನಕೀ - ಸೀತೆಯು, ನಚದೃಶ್ಯತೇ - ಕಾಣಬರುವುದೇಇಲ್ಲ ॥೪೪॥ ॥ ವೀರ್ಯವಾನ್ - ಪರಾಕ್ರಮಶಾಲಿಯಾದ, ಹನುಮಾನ್ - ಆಂಜನೇಯನು, ದೇವಗಂಧರ್ವಕನ್ಯಾಶ್ಚ-ದೇವತೆಗಳ ಮತ್ತು ಗಂಧರ್ವ ಕನ್ನೆಯರನ್ನು, ನಾಗಕನ್ಯಾಶ್ಚ - ನಾಗಕನ್ಯೆಯರನ್ನೂ, ಅವೇಕ್ಷಮಾಣಃ - ನೋಡುತ್ತಿರುವವನಾಗಿ,

---

ಕೆಟ್ಟುದನ್ನು ಕಂಡು ಕೇಳುವುದು ಇಂತೆಂಬ ಶುಭಾಶುಭಾವಸ್ಥೆಗಳೊಳಗೆಲ್ಲ ನನ್ನ ಮನವು ತುಸವಾದರೂ ಚಲಿಸದೆ ನೆಲೆಗೊಂಡಿದ್ದಿತು, ಆದುದರಿಂದಲೇ ಧರ್ಮಭಂಗವುಂಟಾಗಲಾರದು ॥ ೪೧ ॥ ॥ ಅಯ್ಯೋ ಏನಮಾಡಲಿ ? ಹೆಂಗಸರಲ್ಲಿ ಹೆಂಗಸರನ್ನು ಹುಡುಕಿ ಕಾಣಬೇಕು, ಇದು ಸಹಜ, ಸೀತೆಯನ್ನು ನಾನು ಇನ್ನೆಲ್ಲಿಯೂ ಹುಡುಕಿ ಕಾಣಲಾರೆ. ನನಗೆ ಇನ್ನೇನೂ ಯುಕ್ತಿಯುತೋರದು ॥ ೪೨ ॥ ॥ ಯಾವಪ್ರಾಣಿಯು ಯಾವಜಾತಿಯದೋ ಆಪ್ರಾಣಿಯನ್ನು ಆಜಾತಿಯವುಗಳಲ್ಲಿ ಹುಡುಕಬೇಕಾದುದು ಯುಕ್ತವಲ್ಲವೆ ? ಮಾನುಷಸ್ತ್ರೀಯು ಕಾಣದೆ ಹೋದರೆ ಹೆಣ್ಣುಹುಲ್ಲೆಗಳೊಳಗೆ ಆ ಹೆಂಗಸನ್ನು ಹುಡುಕಲಿಕ್ಕೆ ಸಾಧ್ಯವೆ? ಎಂದಿಗೂ ಆಗಲರಿಯದು ॥ ೪೩ ॥ ॥ ಬಹು ನಿರ್ಮಲವಾದ ಮನಸ್ಸಿನಿಂದ ನಾನು ಈರಾವಣನ ಅಂತಃಪುರವನ್ನೆಲ್ಲ ಚೆನ್ನಾಗಿ ಹುಡುಕಿ ನೋಡಿದೆನು, ಎಲ್ಲಿನೋಡಿದರೂ ಸೀತೆಯು ಮಾತ್ರ ಕಾಣಬರಲೇ ಇಲ್ಲ ॥ ೪೪ ॥ ॥ ದೇವತೆಗಳ ಮತ್ತು ಗಂಧರ್ವರ ಕನ್ಯೆಯರನ್ನೆಲ್ಲನೋಡಿದೆನು,ನಾಗಕನ್ಯೆಯರನ್ನು ಪರಿಶೀಲಿಸಿದೆನು, ಆದರೆ ಇಲ್ಲೆಲ್ಲಿಯೂ ಜಾನಕಿಯನ್ನು

ಅವೇಕ್ಷಮಾಣೋ ಹನುಮಾ ನ್ನೈವಾಪಶ್ಯತ ಜಾನಕೀಂ ॥೪೫॥

ತಾ ಮಪಶ್ಯ ನ್ಕಪಿಸ್ತತ್ರ ಪಶ್ಯಂ ಶ್ಚಾನ್ಯಾ ವರಸ್ತ್ರಿಯಃ ॥

ಅಪ್ರಕ್ರಮ್ಯ ತದಾ ವೀರಃ ಪ್ರಧ್ಯಾತು ಮುಪಚಕ್ರಮೇ ॥೪೬॥

ಸ ಭೂಯಸ್ತು ಪರಂ ಶ್ರೀಮಾ ನ್ಮಾರುತಿ ರ್ಯತ್ನ ಮಾಸ್ಥಿತಃ ॥

ಆಪಾನಭೂಮಿ ಮುತ್ಸೃಜ್ಯ ತದ್ವಿಚೇತುಂ ಪ್ರಚಕ್ರಮೇ ॥೪೭॥

— ಇತಿ ಶ್ರೀಮತ್ಸುನ್ದರಕಾಣ್ಡೇ ಏಕಾದಶಸ್ಸರ್ಗಃ —



ಜಾನಕೀಂ - ಸೀತೆಯನ್ನು, ನೈವಾಪಶ್ಯತ-ನೋಡಲೇಇಲ್ಲ ॥೪೫॥ ॥ ವೀರಃ - ಶೂರನಾದ, ಕಪಿಃ-ಆಂಜನೇಯನು, ತತ್ರ - ಆ ಪಾನಶಾಲೆಯೊಳಗೆ, ಅನ್ಯಾಃ - ಇತರರಾದ, ವರಸ್ತ್ರಿಯಃ - ಉತ್ತಮಾಂಗನೆಯರನ್ನು, ಪಶ್ಯನ್ - ನೋಡುತ್ತಿರುವವನಾಗಿಯೂ, ತಾಂ - ಆ ಜಾನಕಿಯನ್ನು ಮಾತ್ರ, ಅಪಶ್ಯನ್ - ಕಾಣದವನಾಗಿಯೂ, ತದಾ - ಆಗ, ಅಪಕ್ರಮ್ಯ - ಆ ಸ್ಥಲವನ್ನುಬಿಟ್ಟು ಹಿಂದಿರುಗಿ, ಪ್ರಧ್ಯಾತುಂ- ವಿಶೇಷವಾಗಿ ಚಿಂತಿಸಲಿಕ್ಕೆ, ಉಪಚಕ್ರಮೆ -ಆರಂಭಿಸಿದನು ॥೪೬॥ ಶ್ರೀಮಾನ್-ಚಿಂತೆಯಲ್ಲಿಯೂ ಕಳೆಗುಂದದಿರುವ, ಮಾರುತಿಸ್ತು - ಆಂಜನೇಯನಾದರೋ, ಪರಂ - ಹೆಚ್ಚಾದ, ಯತ್ನಂ - ಪ್ರಯತ್ನವನ್ನು, ಆಸ್ಥಿತಃ - ಆಶ್ರಯಿಸಿದವನಾಗಿ, ಆಪಾನಭೂಮಿಂ - ಪಾನಪ್ರದೇಶವನ್ನು, ಉತ್ಸೃಜ್ಯ - ಬಿಟ್ಟು, ಭೂಯಃ- ಪುನಃ, ತತ್-ಆ ಸೀತಾರೂಪಧನವನ್ನು, ವಿಚೇತುಂ - ಹುಡುಕಲಿಕ್ಕೆ, ಪ್ರಚಕ್ರಮೆ - ಪ್ರಾರಂಭಿಸಿದನು ॥೪೭॥ ॥

— ಇಂತು ಹನ್ನೊಂದನೆಯ ಸರ್ಗವು —

ನ್ನು ಮಾತ್ರ ಕಾಣಲಿಲ್ಲ. ॥ ೪೫॥ ॥ ಇಂತು ಆಂಜನೇಯನು ಅನೇಕ ವಿಧವಾದ ಉತ್ತಮಾಂಗನೆಯರನ್ನೆಲ್ಲ ಕಂಡು ಸೀತೆಯನ್ನು ಕಾಣದೆ, ಆಸ್ಥಲವನ್ನು ಬಿಟ್ಟು ದೂರಸರಿದು, ವಿಶೇಷವಾಗಿ ಚಿಂತಿಸತೊಡಗಿದನು ॥ ೪೬॥ ॥ ಎಷ್ಟು ಪ್ರಯತ್ನಮಾಡಿದರೂ ಜಾನಕಿಯನ್ನು ಕಾಣಲಿಲ್ಲವಲ್ಲ ಎಂದು ಕೊಂಡು, ಮಾರುತಿಯು ಅಂತಹ ಚಿಂತೆಯಲ್ಲಿಯೂ ಹಿಮ್ಮೆಟ್ಟದೆ ಪ್ರಯತ್ನವನ್ನವಲಂಬಿಸಿ ಪಾನಭೂಮಿಯನ್ನು ಬಿಟ್ಟು ಮುಂದೆ ಸರಿದು ಪುನಃ ಹುಡುಕಲಿಕ್ಕೆ ಮೊದಲು ಮಾಡಿದನು ॥ ೪೭॥ ॥

— ಇಂತು ಹನ್ನೊಂದನೆಯ ಸರ್ಗಂ —

ಶ್ರೀ.

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ

## ಶ್ರೀಮತ್ಸುನ್ದರಕಾಣ್ಡೇ ದ್ವಾದಶಸ್ಸರ್ಗಃ.

ಸ ತಸ್ಯ ಮಧ್ಯೇ ಭವನಸ್ಯ ಮಾರುತಿ ರ್ಲತಾಗೃಹಾಂ ಶ್ಚಿತ್ರಗೃಹಾ ನ್ನಿಶಾಗೃಹಾನ್ ।
ಜಗಾಮ ಸೀತಾಂ ಪ್ರತಿ ದರ್ಶನೋತ್ಸುಕೋ ನಚೈವ ತಾಂ ಪಶ್ಯತಿಚಾರುದರ್ಶನಾಂ॥
ಸ ಚಿಂತಯಾಮಾಸ ತತೋ ಮಹಾಕಪಿಃ ಪ್ರಿಯಾಮಪಶ್ಯ ನ್ರಘುನಂದನಸ್ಯತಾಂ ।
ಧ್ರುವಂ ಹಿ ಸೀತಾ ಮ್ರಿಯತೆ ಯಥಾ ನಮೆ ವಿಚಿನ್ವತೋ ದರ್ಶನಮೇತಿ ಮೈಥಿಲೀ ॥೨॥
ಸಾ ರಾಕ್ಷಸಾನಾಂ ಪ್ರವರೇಣ ಜಾನಕೀ ಸ್ವಶೀಲ ಸಂರಕ್ಷಣ ತತ್ಪರಾ ಸತೀ ।

---

### —ಹನ್ನೆರಡನೆಯ ಸರ್ಗ—

ಕಂದಂ—ಕುಡಿತದಮನೆಯೊಳ್ ಸೀತೆಯು । ತಡಿಗಾಣದೆ ಧರ್ಮಲೋಪಚಿಂತನೆಯಿಂದಲ್ ॥
ಮಿಡುಕುತೆ ಪುನರುಜ್ಜುಗದಿಂ । ಕಡುನೊಂದಂ ಮನದೊಳಂದು ಕಳವಳಿಸುತ್ತಲ್ ॥

ಸಃ - ಆ, ಮಾರುತಿಃ - ಆಂಜನೇಯನು, ಸೀತಾಂಪ್ರತಿ - ಜಾನಕಿಯನ್ನು ಕುರಿತು, ದರ್ಶನೋತ್ಸುಕಃ- ನೋಡುವುದರಲ್ಲಿ ಅತ್ಯಾತುರವುಳ್ಳವನಾಗಿ, ತಸ್ಯ - ಆ, ಭವನಸ್ಯ - ಮನೆಯ, ಮಧ್ಯೇ- ನಡುವೆ, ಲತಾಗೃಹಾನ್ - ಬಳ್ಳಿಯುಮನೆಗಳನ್ನೂ, ಚಿತ್ರಗೃಹಾನ್ - ಚಿತ್ರಶಾಲೆಗಳನ್ನೂ, ನಿಶಾಗೃಹಾನ್ - ಇರುಳಾಟದ ಮನೆಗಳನ್ನೂ. ಜಗಾಮ - ನೋಡುತಬಂದನು, (ಕಿಂತು - ಆದರೆ) ಚಾರುದರ್ಶನಾಂ - ಅಂದವಾದನೋಟವವುಳ್ಳ, ತಾಂ - ಆ ಸೀತಾದೇವಿಯನ್ನುಮಾತ್ರ, ನಚೈವಪಶ್ಯತಿ - ನೋಡಲೆ ಇಲ್ಲ ॥೧॥ ತತಃ - ತರುವಾಯ, ಸಃ - ಆ, ಮಹಾಕಪಿಃ - ಕಪಿವರನು, ರಘುನಂದನಸ್ಯ - ರಘುಕುಲೇಂದುವಿನ, ಪ್ರಿಯಾಂ - ಪ್ರಾಣಪ್ರಿಯಳಾದ, ತಾಂ - ಆ ಜಾನಕಿಯನ್ನು, ಅಪಶ್ಯನ್ (ಸನ್) ಕಾಣದಿರುವವನಾಗಿ, ಯಥಾ - ಯಾವಕಾರಣದಿಂದ, ವಿಚಿನ್ವತಃ - ಹುಡುಕುತಲಿರುವ, ಮೆ- ನನಗೆ, ಮೈಥಿಲೀ- ಸೀತಾದೇವಿಯು, ದರ್ಶನಂ- ದೃಷ್ಟಿಗೋಚರವನ್ನು, ನಏತಿ-ಹೊಂದಲಿಲ್ಲವೋ, ತತಃ- ಆಕಾರಣದಿಂದಲೇ, ಸೀತಾ- ಜಾನಕಿಯು, ಮ್ರಿಯತೇಹಿ - ಸತ್ತುಹೋಗಿಯೇ ಇದ್ದಾಳೆ, ಧ್ರುವಂ - ನಿಶ್ಚಯ, ಇತಿ- ಹೀಗೆಂದು, ಚಿಂತಯಾಮಾಸ- ಯೋಚಿಸಿದನು ॥೨॥ ಪರೆ - ಶ್ರೇಷ್ಠವೆನಿಸಿದ, ಆರ್ಯಪಥೆ - ಸನ್ಮಾರ್ಗದಲ್ಲಿ, ಸ್ಥಿತಾ-ನೆಲೆಗೊಂಡಿರುವ, ಜಾನಕೀ-

---

### ಹನ್ನೆರಡನೆಯ ಸರ್ಗಂ

ಹಾಗೆ ಹುಡುಕುತ ಹೊರಟ ಮಾರುತಿಯು ಸೀತೆಯನ್ನು ಕಾಣಬೇಕೆಂದು ಬಹಳವಾದ ಕುತೂಹಲವುಳ್ಳವನಾಗಿ ಆ ಮಹಾಭವನದ ನಡುವೆ ಲತಾಗೃಹಗಳನ್ನೂ, ಚಿತ್ರಶಾಲೆಗಳನ್ನೂ, ಇರುಳಾಟದ ಮನೆಗಳನ್ನೂ ಹುಡುಕಿ ನೋಡಿದನು. ಆದರೆ ಸುಂದರಾಂಗಿಯಾದ ಸೀತೆಯನ್ನು ಮಾತ್ರ ಎಲ್ಲಿಯೂ ಕಾಣಲಿಲ್ಲ ॥೧॥ ಬಳಿಕ ಕಪಿವರನು ರಘುನಂದನನ ಪ್ರಾಣಪ್ರಿಯಳಾದ ಸೀತೆಯನ್ನು ಕಾಣದೆ ಇಂತು ಚಿಂತಿಸತೊಡಗಿದನು. ಅಯ್ಯೋ ನಾನು ಇಷ್ಟುಹುಡುಕಿದರೂ ಸೀತೆಯು ಎಲ್ಲಿಯೂ ಕಾಣಬರಲಿಲ್ಲವಲ್ಲಾ ? ಅಹಹ ! ಯೋಚಿಸಿ ನೋಡಿದರೆ ಸತ್ಯವಾಗಿಯೂ ಆ ಸೀತಾದೇವಿಯು ತನ್ನ ಪ್ರಾಣವನ್ನು ತೊರೆದುಕೊಂಡೇ

ಅನೇನ ನೂನಂ ಪ್ರತಿದುಷ್ಟಕರ್ಮಣಾ ಹತಾ ಭವೇದಾರ್ಯಪಥೇ ಪರೇ ಸ್ಥಿತಾ ||೩||
ವಿರೂಪರೂಪಾ ವಿಕೃತಾ ವಿವರ್ಚಸೋ ಮಹಾನನಾ ದೀರ್ಘವಿರೂಪದರ್ಶನಾಃ |
ಸಮೀಕ್ಷ್ಯ ಸಾ ರಾಕ್ಷಸರಾಜಯೋಷಿತೋ ಭಯಾದ್ವಿನಷ್ಟಾ ಜನಕೇಶ್ವರಾತ್ಮಜಾ ||೪||
ಸೀತಾಮದೃಷ್ಟ್ವಾ ಹ್ಯನವಾಪ್ಯ ಪೌರುಷಂ ವಿಹೃತ್ಯ ಕಾಲಂ ಸಹ ವಾನರೈಶ್ಚಿರಂ |

ಸೀತಾದೇವಿಯು, ಸತೀ - ಪತಿವ್ರತಾಶಿರೋಮಣಿಯಾದಕಾರಣವೇ, ಸ್ವ - ತನ್ನ, ಶೀಲ - ಒಳ್ಳೆಯನಡತೆಯನ್ನು, ಸಂರಕ್ಷಣ - ಚೆನ್ನಾಗಿ ಕಾಪಾಡಿಕೊಳ್ಳುವುದರಲ್ಲಿ, ತತ್ಪರಾ - (ಸತೀ) ಆಸಕ್ತಳಾದ, ಸಾ - ಆಕೆಯು, ರಾಕ್ಷಸಾನಾಂ - ರಕ್ಕಸರಿಗೆ, ಪ್ರವರೇಣ - ಒಡೆಯನಾದ, ಪ್ರತಿದುಷ್ಟಕರ್ಮಣಾ - ಪ್ರತಿಕ್ಷಣದಲ್ಲಿಯೂ ಪಾಪಕರ್ಮವನ್ನೆಸಗುವ, ಅನೇನ - ಈ ರಾವಣನಿಂದ, ಹತಾ - ಕೊಲ್ಲಲ್ಪಟ್ಟವಳೇ, ಭವೇತ್ - ಆಗಿರಬೇಕು, ನೂನಂ - ನಿಶ್ಚಯ ||೩|| ವಿರೂಪರೂಪಾಃ - ವಿಕಾರವಾದ ಆಕಾರಗಳುಳ್ಳ, ವಿಕೃತಾಃ - ಕತವಕ್ರೂರವಾದ, ವಿವರ್ಚಸಃ - ಭಯಂಕರವಾದ ಕಾಂತಿಯುಳ್ಳ, ಮಹಾನನಾಃ - ಪ್ರಮಾಣಾಧಿಕವಾದ ಮೋರೆಗಳುಳ್ಳ, ದೀರ್ಘ - ಉದ್ದವಾಗಿಯೂ, ವಿರೂಪ - ಡೊಂಕು ಬಂಕಾಗಿಯೂ ಇರುವ, ದರ್ಶನಾಃ - ನೋಟಗಳುಳ್ಳ ರಾಕ್ಷಸಸ್ತ್ರೀರಾಜಯೋಷಿತಃ-ರಕ್ಕಸರೊಡೆಯನ ಸತಿಯರನ್ನು, ಸಮೀಕ್ಷ್ಯ- ನೋಡಿ, ಜನಕೇಶ್ವರಾತ್ಮಜಾ - ಜನಕ ಚಕ್ರವರ್ತಿಯ ಪುತ್ರಿಯಾದ, ಸಾ - ಆಕೋಮಲಾಂಗಿಯಾದ ಸೀತೆಯು, ಭಯಾತ್-ಮಹಾಭಯದ ದೆಸೆಯಿಂದ, ವಿನಷ್ಟಾ - ಮರಣವನ್ನು ಹೊಂದಿರಬೇಕು ||೪|| (ಇತಃಪರಂ - ಇನ್ನು ಮುಂದೆ) ಸೀತಾಂ - ಸೀತಾದೇವಿಯನ್ನು, ಅದೃಷ್ಟ್ವಾ - ನೋಡದೆಯೇ, ಪೌರುಷಂ - ಶತ್ರುವಿನಲ್ಲಿ

ಇರಬೇಕು ||೨|| ಏತಕೆಂದರೆ- ಆ ಮಹಾನುಭಾವಳು ಅತ್ಯುತ್ತಮವಾದ ಸನ್ಮಾರ್ಗದಲ್ಲಿ ನಡೆಯತಕ್ಕವಳು, ಯಾವಾಗಲೂ ತನ್ನ ಒಳ್ಳೆನಡೆಯನ್ನು ಕಾಪಾಡಿಕೊಳ್ಳುವುದರಲ್ಲಿಯೇ ಆಸಕ್ತಳು, ಸತೀ ಶಿರೋಮಣಿಯೆಂದು ಮೂಲೋಕದಲ್ಲಿಯೂ ಹೆಸರುವಾಸಿಯನ್ನು ಪಡೆದವಳು. ಈ ರಾವಣನಾದರೋ ಮಹಾಪಾಪಿ, ಪಾತಕಮನ್ನೇ ಆಚರಿಸತಕ್ಕವ, ಆದಕಾರಣ ತನ್ನ ಅನುಮತಿಯನ್ನು ಅನುಸರಿಸದಿರುವ ಆಕೆಯನ್ನು ಬಾಯುವೇಳೆ ಕೊಂದುಹಾಕಿದ್ದರೂ ಹಾಕಿರಬಹುದು, ಈ ನೀಚನು ಅದಕ್ಕೂ ಹಿಂಜೆಗೆಯತಕ್ಕವನಲ್ಲ ||೩|| ಹಾಗಿಲ್ಲದಿದ್ದರೆ ಜನಕರಾಜಪುತ್ರಿಯಾದ ಆ ಸೀತೆಯು ಬಹುಕೋಮಲಾಂಗಿ, ಹೆಣ್ಣುಹುಲ್ಲೆಯಂತೆ ಬಹು ಸಾತ್ವಿಕ ಸ್ವಭಾವದವಳು, ಭಯಂಕರರಾದ ರಾಕ್ಷಸಿಯರನ್ನು ಎಂದೂ ನೋಡಿದವಳಲ್ಲ, ಈ ನಗರವೋ ರಾಕ್ಷಸಮಯವಾಗಿದೆ, ಆದಕಾರಣ ಶತಸಹಸ್ರವಿಕಾರವಾದ ರೂಪವೂ, ಘೋರವಾದ ವೇಷವೂ, ಭಯಂಕರಗಳಾದ ಮೂತಿಗಳೂ, ಡೊಂಕುಬಂಕರಾದ ನೋಟಗಳೂ ಉಳ್ಳ ಈ ಕ್ರೂರರಾಕ್ಷಸಿಯರನ್ನು ನೋಡಿ, ಅಂಜಿ, ತಾಳಲಾರದೆ ಮರಣವನ್ನು ಹೊಂದಿದಳೋ ಏನೋ ? || ೪ || ಹಾ ! ಎಂತಹ ಕಷ್ಟವು ಬಂದುಬಿಟ್ಟಿತು, ಅಯ್ಯೋ ಏನಮಾಡಲಿ, ಇಷ್ಟುದೂರವೂ ಬಂದು, ಸೀತೆಯನ್ನೂ ಕಾಣದೆ, ಹಗೆಯಾದ ರಾವಣನಲ್ಲಿ ನನ್ನ ಪೌರುಷವನ್ನೂ ತೋರದೆ, ಏನೋ ಮಹಾಕಾರ್ಯವನ್ನು ಸಾಧಿಸುವೆನೆಂಬ ಹೆಮ್ಮೆಯಿಂದ ಅಂಗದನೇ ಮೊದಲಾದ ವಾನರವೀರರೊಡನೆ ಹೊರಟುಬಂದು, ಅಲ್ಲಲ್ಲಿ ಆಟವಾಡಿ, ಬಹುಕಾಲವನ್ನೂ ಕಳೆದು, ಈಗ ಮರಳಿ ಸುಗ್ರೀವನ ಬಳಿಗೆ ಹೋಗುವೆನೆಂಬ ಆಶೆಯೇ ನನಗೆ ಇಲ್ಲ. ಏನೊಂದು ಕೆಲಸವನ್ನೂ ಮಾಡದೆ ಆತನ ಎದುರಿಗೆ ಹೋಗುವುದು

ನಮೇಽಸ್ತಿ ಸುಗ್ರೀವ ಸಮೀಪಗಾ ಗತಿ ಸ್ಸುತೀಕ್ಷ್ಣ ದಂಡೋ ಬಲವಾಂಶ್ಚ ವಾನರಃ ॥೫॥
ದೃಷ್ಟ ಮಂತಃಪುರಂ ಸರ್ವಂ ದೃಷ್ಟಾ ರಾವಣಯೋಷಿತಃ ।
ನ ಸೀತಾ ದೃಶ್ಯತೇ ಸಾಧ್ವೀ ವೃಥಾ ಜಾತೋ ಮಮ ಶ್ರಮಃ ॥೬॥
ಕಿನ್ನು ಮಾಂ ವಾನರಾ ಸ್ಸರ್ವೇ ಗತಂ ವಕ್ಷ್ಯಂತಿ ಸಂಗತಾಃ ।
ಗತ್ವಾ ತತ್ರ ತ್ವಯಾ ವೀರ ಕಿಂಕೃತಂ ತದ್ವದಸ್ವ ನಃ ॥೭॥

'ಪರಾಕ್ರಮವನ್ನು, ಅನವಾಪ್ಯ-ಹೊಂದದೆ (ತೋರದೆ) ವಾನರೈಃ - ಅಂಗದನೇ ಮೊದಲಾದವರೊಡನೆ, ಚಿರಂಕಾಲಂ - ಬಹುಕಾಲವನ್ನು, ವಿಹೃತ್ಯ - ಆಟವಾಡಿ ಕಳೆದು, ಮೇ-ನನಗೆ, ಸುಗ್ರೀವ ಸಮೀಪಗಾ-ಸುಗ್ರೀವನ ಹತ್ತಿರವನ್ನು ಕುರಿತು ಹೋಗತಕ್ಕ, ಗತಿಃ - ದಾರಿಯು, ನ - ಇಲ್ಲವೇ ಇಲ್ಲ. ಹಿ-ಏತಕೆಂದರೆ, ವಾನರಃ - ಕಪಿಸಾರ್ವಭೌಮನಾದ ಸುಗ್ರೀವನು. ಸುತೀಕ್ಷ್ಣದಂಡಃ - ಬಹು ಕ್ರೂರವಾಗಿ ಶಿಕ್ಷಿಸುವ ಸ್ವಭಾವವುಳ್ಳವನು, ಬಲವಾಂಶ್ಚ - ಮಹಾಬಲಿಷ್ಠನೂ ಹೌದು ॥೫॥ ಸರ್ವಂ-ಸಮಸ್ತವಾದ, ಅಂತಃಪುರಂ-ರಾವಣನ ರಾಣಿವಾಸವು, ದೃಷ್ಟಂ-ಚೆನ್ನಾಗಿ ಶೋಧಿಸಲ್ಪಟ್ಟಿತು, ರಾವಣಯೋಷಿತಃ - ರಕ್ಕಸನರಸಿಯರೆಲ್ಲರೂ, ದೃಷ್ಟಾಃ-ಪರೀಕ್ಷಿಸಲ್ಪಟ್ಟರು, ಸಾಧ್ವೀ - ಪತಿವ್ರತಾಶಿರೋಮಣಿಯಾದ, ಸೀತಾ-ಸೀತಾದೇವಿಯು, ನದೃಶ್ಯತೆ - ಕಾಣಬರುವುದಿಲ್ಲ, ಮಮ-ನನ್ನ, ಶ್ರಮಃ - ಪ್ರಯತ್ನಪ್ರಯಾಸವೆಲ್ಲವೂ, ವೃಥಾಜಾತಃ-ವ್ಯರ್ಥವಾಗಿ ಪರಿಣಮಿಸಿತು ॥೬॥ ಹೇವೀರ - ಎಲೈಶೂರನೇ ! ತತ್ರ - ಆ ಲಂಕೆಯಲ್ಲಿ, ಗತ್ವಾ-ಹೋಗಿ, ತ್ವಯಾ - ನಿನ್ನಿಂದ, ಕಿಂ-ಯಾವ ದೊಡ್ಡ ಕೆಲಸವು, ಕೃತಂ - ಮಾಡಲ್ಪಟ್ಟಿತು ? ತತ್-ಅದನ್ನು, ನಃ-ನಮಗೆ, ವದಸ್ವ - ಹೇಳು, (ಇತಿ-ಹೀಗೆಂದು) ಗತಂ - ಇಲ್ಲಿಂದ ತಿರುಗಿಹೋದ, ಮಾಂ-ನನ್ನನ್ನು ಕುರಿತು, ಸರ್ವೇ-ಸಮಸ್ತರಾದ, ವಾನರಾಃ-ಅಂಗದ ಮುಂತಾದ ಕಪಿಗಳೆಲ್ಲರೂ, ಸಂಗತಾಃ.

ಹೇಗೆ ! ಅಬ್ಬಬ್ಬ ! ಸುಗ್ರೀವನೇನು ಸಾಮಾನ್ಯನ ? ಮಹಾವೀರನಲ್ಲವೆ ? ಕಪಿಸಾರ್ವಭೌಮನಲ್ಲವೆ ? ಬಹು ಕ್ರೂರವಾಗಿ ದಂಡಿಸತಕ್ಕವನಲ್ಲವೆ ? ಕೆಲಸವನ್ನು ಕೆಡಿಸಿಕೊಂಡು ಹೋಗಿ, ಅವನೆದುರಿಗೆ ನಿಂತು ಬಾಳಬಹುದೆ? ಎಂದಿಗೂ ಆಗುವ ಕೆಲಸವಲ್ಲ ॥೫॥ ನಾನೇನು ತಲೆಯನ್ನು ಬಚ್ಚಿಟ್ಟುಕೊಳ್ಳಲೆ ? ರಾವಣನ ರಾಣಿವಾಸವನ್ನೆಲ್ಲ ಹುಡುಕಿ ನೋಡಿದ್ದಾಯಿತು. ಈ ರಾವಣನ ಹೆಂಗಸರನ್ನೆಲ್ಲ ಪರೀಕ್ಷಿಸಿದ್ದೂ ಆಯಿತು. ಸತೀಶಿರೋಮಣಿಯಾದ ಸೀತೆಯನ್ನು ಕಾಣದೆ ಹೋದುದೂ ಆಯಿತು, ಇದುವರೆಗೆ ನಾನು ಪಟ್ಟ ಶ್ರಮವೆಲ್ಲವೂ ವ್ಯರ್ಥವೂ ಆಯಿತು ಇನ್ನೇನು ಎಲ್ಲವೂ ಮುಗಿಯಿತು ॥೬॥ ಒಂದೊಂದನ್ನು ನೆನೆದರೂ ಹೊಟ್ಟೆಯೊಳಗೆ ಭುಗಿಲ್ ಎನ್ನುವುದಲ್ಲಾ ? ದಿಕ್ಕುತೋರದೇ ? ಒಂದುವೇಳೆ ಹಿಂದಕ್ಕೆ ಹೋಗಲೆ ? ಅದು ಇದ್ದದ್ದೂ ಕಷ್ಟ. ಹಿಂದಿರುಗಿಹೋದರೆ ಆಗ ಏನಾಗುವುದು ಎಂದರೆ-ಕಡಲದಡದಲ್ಲಿ "ಹನುಮನು ಹಾರಿ ಹೋಗಿದಾನೆ; ಏನೋ ಕಡಿದು ಕಟ್ಟಿಹಾಕಿ ಬರುವನು" ಎಂದು ಕಣ್ಣುಗಳನ್ನು ಮಿಣಮಿಣನೆ ಬಿಟ್ಟುಕೊಂಡು ಮಿಡುಕುತ್ತ ನನ್ನ ಬರವನ್ನೇ ಹಾರೈಸುತಲಿರುವ ಕಪಿಗಳೆಲ್ಲರೂ ನನ್ನನ್ನುಕಂಡಕೂಡಲೇ ಕೇಕೆಹಾಕುತ್ತ ಎದ್ದು ಒಗ್ಗಟ್ಟಾಗಿ ನನ್ನ ಬಳಿಗೆ ಬಂದುಸೇರುವರು, ಆಮೇಲೆ;-ಏನಪ್ಪಾ ವೀರಹನುಮಾ ! ಲಂಕೆಗೆ ಹೋಗಿದ್ದೆಯೋ ? ಅಲ್ಲಿ ಏನೇನು ಕಾರ್ಯಭಾರವನ್ನು ನಡೆಸಿದೆ ! ಅದೆಲ್ಲವನ್ನೂ ನಮಗೆ ವಿಸ್ತರಿಸಿ ಹೇಳು ಎಂದರ ॥೭॥ ಆಗ ನನ್ನ ಬಾಳುಬೇಕೆ ? ಛೀ, ನಾನು ಹಾಗೆ ಅವರಿಗೆ ಮೋರೆಯನ್ನು

ಅದೃಷ್ಟ್ವಾ ಕಿಂ ಪ್ರವಕ್ಷ್ಯಾಮಿ ತಾಮಹಂ ಜನಕಾತ್ಮಜಾಂ ॥೭॥
ಧ್ರುವಂ ಪ್ರಾಯ ಮುಪೈಷ್ಯಂತಿ ಕಾಲಸ್ಯ ವ್ಯತಿವರ್ತನೇ ॥೮॥
ಕಿಂವಾ ವಕ್ಷ್ಯತಿ ವೃದ್ಧಶ್ಚ ಜಾಂಬವಾ ನಂಗದಶ್ಚ ಸಃ ।
ಗತಂ ಪಾರಂ ಸಮುದ್ರಸ್ಯ ವಾನರಾಶ್ಚ ಸಮಾಗತಾಃ ॥೯॥
ಅನಿರ್ವೇದಃ ಶ್ರಿಯೋಮೂಲ ಮನಿರ್ವೇದಃ ಪರಂ ಸುಖಂ ।

---

ಒಟ್ಟುಗೂಡಿದವರಾಗಿ, ಕಿಮ್ - ಏನೇನನ್ನು, ವಕ್ಷ್ಯಂತಿ - ಹೇಳುವರೋ ॥೬॥ ಅಹಂ ನಾನು, ತಾಂ-ಆಲೋಕವಮಾನ್ಯಳಾದ, ಜನಕಾತ್ಮಜಾಂ - ಸೀತಾದೇವಿಯನ್ನು, ಅದೃಷ್ಟ್ವಾ- ಕಾಣದೆಯೇ, ಕಿಂ-ಏನನ್ನು, ಪ್ರವಕ್ಷ್ಯಾಮಿ-ಹೇಳಲಿ, ಕಾಲಸ್ಯ - ಸಮಯದ, ವ್ಯತಿವರ್ತನೆ - ಅತಿಕ್ರಮದಲ್ಲಿ, (ನಾನು ಅಲ್ಲಿಗೆ ಹೋಗಲು ತಡಮಾಡಿದಲ್ಲಿ) ಪ್ರಾಯಂ - ಮರಣವನ್ನು, ಉಪೈಷ್ಯಂತಿ - ಹೊಂದುವರು, ಧ್ರುವಂ-ನಿಶ್ಚಯ ॥೮॥ ಸಮುದ್ರಸ್ಯ-ಕಡಲಿನ, ಪಾರಂ-ದಡವನ್ನು ಕುರಿತು, ಗತಂ-ಹೋದ ನನ್ನನ್ನು ಕುರಿತು, ವೃದ್ಧಃ-ಮುದುಕನಾದ, (ಹಿರಿಯವನಾದ) ಜಾಂಬವಾಂಶ್ಚ-ಜಾಂಬವಂತನೂ, ಸಃ-ಆ ಯುವರಾಜನಾದ, ಅಂಗದಶ್ಚ-ಅಂಗದನೂ, ಸಮಾಗತಾಃ-ನನ್ನಬಳಿಯೊಳು ಸೇರಿದ, ವಾನರಾಶ್ಚ-ಇತರ ಕಪಿಗಳೂ, ಕಿಂವಾ-ಏನೇನನ್ನು, ವಕ್ಷ್ಯಂತಿ - ಹೇಳುವರೋ ॥೯॥ ಅನಿರ್ವೇದಃ - ಉತ್ಸಾಹವು (ವ್ಯಸನವಿಲ್ಲದಿರೋಣವು) ಶ್ರಿಯಃ-ಐಶ್ವರ್ಯಕ್ಕೆ, ಮೂಲಂ-ಮೊದಲನೆಯ ಕಾರಣವು, ಅನಿರ್ವೇದಃ-ಉತ್ಸಾಹವೇ, ಪರಂ - ಹೆಚ್ಚಾದ, ಸುಖಂ - ಸುಖವನ್ನು ಉಂಟುಮಾಡತಕ್ಕದು, ಅನಿರ್ವೇದೋಹಿ - ಉತ್ಸಾಹವೇ ಅಲ್ಲವೇ, ಸತತಂ -

---

ತೋರುವುದಕ್ಕಿಂತ ಪ್ರಾಣವನ್ನು ತೊರೆವುದೇ ಮೇಲಲ್ಲವೆ? ಅವರು ನನ್ನನ್ನು ಹಾಗೆ ಕೇಳಿದಾಗ ಜನಕರಾಜಪುತ್ರಿಯನ್ನು ಕಾಣದೆಯೇ ಹೋದನಾನು ಅವರನ್ನು ಕುರಿತು ಏನಹೇಳಲಿ? ಮಾತನಾಡದೆ ಕೆಟ್ಟನೋರೆಯನ್ನು ಹಾಕಿಕೊಂಡಿರುವ ನನ್ನನ್ನು ನೋಡಿ ಅವರು ಸುಮ್ಮನಿರುವರೆ? ಛೀ, ಛೀ, ಆ ನನ್ನಬಾಳುಬೇಡ, ಅಥವಾ ನಾನು ಇಲ್ಲಿಂದ ಹಿಂದಿರುಗಿ ಹೋಗದೆ, ಇಲ್ಲಿಯೇ ಕಾಲವನ್ನು ಕಳೆಯಲಿ? ಹಾಗಾದರೆ-ಏನೋ ಹೋದವನು ಅತ್ತಲೇ ಹೋದ, ಅವನ ಸುಳಿವೇ ಇಲ್ಲ? ಎಂದು, ನಮಗೆ ಬೇರೆಗತಿಯೂ ಇಲ್ಲ ಎಂದು, ಅವರೆಲ್ಲರೂ ನೆಲದಮೇಲೆ ಬಿದ್ದು ಪ್ರಾಣತ್ಯಾಗಮಾಡುವರು ॥೮॥ ಅಯ್ಯೋ ಮುದುಕನಾಗಿ ಹಿರಿಯವನೆನಿಸಿಕೊಂಡಿರುವ ಜಾಂಬವಂತನಿಗೆ ನಾನು ಮುಖವನ್ನು ತೋರುವುದೆಂತು!, ಆತನೆಷ್ಟು ಛೀಗುಟ್ಟುವನೋ?. ನಾನಾದರೂ ಹೋಗಿಬರುತಲಿದ್ದೆ ನಲ್ಲಾ ನೀನೇನೋ ಪೌರುಷವನ್ನು ಕೊಚ್ಚಿಕೊಂಡು ಹಾರಿಹೋದೆಯಲ್ಲ, ಏನಕಡಿದುಬಂದೆ ! ಎಂದು ಯುವರಾಜನಾದ ಅಂಗದನು ಏನೇನ ಹೇಳುವನೋ ? ನಾನು ಆ ಕಡಲದಡಕ್ಕೆ ಹೋದಕೂಡಲೆ ಕಪಿಗಳೆಲ್ಲರೂ ನನ್ನಸುತ್ತಲೂ ಮುತ್ತಿಕೊಂಡು ಬಾಯಿಗೆ ಬಂದಂತೆಲ್ಲ ಆಡದಿರುವರೆ? ॥೯॥ ಎಂದೀಪ್ರಕಾರ ಬಲುತೆರನಾಗಿ ಪೇಚಾಡಿದ ಪವನನಂದನನು-ಇರಲಿ,ವೃಥಾ ಚಿಂತಿಸಿ ಫಲವೇನು? ಚಿಂತೆಯೇ ಮನುಷ್ಯನಿಗೆ ಮುಪ್ಪು, ಸಂತೋಷವೇ ಯೌವನ, ಚಿಂತೆಗೂ ಚಿತೆಗೂ ಬಿಂದುಸೊನ್ನೆಯ ಮಾತ್ರವೇ ವ್ಯತ್ಯಾಸ. ಚಿತೆಯು ನಿರ್ಜೀವವನ್ನು ಸುಡುತ್ತದೆ, ಚಿಂತೆಯು ಸಜೀವವನ್ನೇ ದಹಿಸುತ್ತದೆ, ಆದಕಾರಣ ಚಿಂತೆಯನ್ನು ತೊರೆಯಬೇಕು. ಉತ್ಸಾಹವೇ ಪುರುಷನ ಸಂಪತ್ತಿಗೆ ಮೂಲಕಾರಣ. ಉತ್ಸಾಹವೇ ಅಪಾರವಾದ ಸುಖವನ್ನುಂಟುಮಾಡುವುದು. ಉತ್ಸಾಹವೇ

ಅನಿರ್ವೇದೋ ಹಿ ಸತತಂ ಸರ್ವಾರ್ಥೇಷು ಪ್ರವರ್ತಕಃ ॥೧೦॥
ಕರೋತಿ ಸಫಲಂ ಜಂತೋಃ ಕರ್ಮ ಯತ್ತತ್ಕರೋತಿ ಸಃ ।
ತಸ್ಮಾದನಿರ್ವೇದ ಕೃತಂ ಯತ್ನಂ ಚೇಷ್ಟೇಽಹ ಮುತ್ತಮಂ ॥೧೧॥
ಭೂಯಸ್ತಾವ ದ್ವಿಚೇಷ್ಯಾಮಿ ದೇಶಾ ನ್ರಾವಣ ಪಾಲಿತಾನ್ ।
ಆಪಾನಶಾಲಾ ವಿಚಿತಾ ಸ್ತಥಾ ಪುಷ್ಪಗೃಹಾಣಿಚ ॥೧೨॥
ಚಿತ್ರಶಾಲಾ ಶ್ಚ ವಿಚಿತಾ ಭೂಯಃ ಕ್ರೀಡಾ ಗೃಹಾಣಿಚ ।
ನಿಷ್ಕುಟಾಂತರ ರಥ್ಯಾಶ್ಚ ವಿಮಾನಾನಿ ಚ ಸರ್ವಶಃ ॥೧೩॥

---

ಯಾವಾಗಲೂ, ಸರ್ವಾರ್ಥೇಷು-ಎಲ್ಲ ಕೆಲಸಗಳಲ್ಲಿಯೂ, ಪ್ರವರ್ತಕಃ- ಮುಂದರಿಸತಕ್ಕದು ॥೧೦॥ (ಜಂತುಃ-ಉತ್ಸಾಹದಿಂದೊಡಗೂಡಿದ ಪ್ರಾಣಿಯ ) ಯತ್‌ಕರ್ಮ - ಯಾವ ಕೆಲಸವನ್ನು, ಕರೋತಿ-ಮಾಡುತ್ತದೆಯೋ, ಜಂತೋಃ - ಆ ಪ್ರಾಣಿಯು, ತತ್‌ಕರ್ಮ - ಆ ಕೆಲಸವನ್ನು, ಸಃ - ಆ ಉತ್ಸಾಹವು, ಸಫಲಂ-ಸಾರ್ಥಕವಾದುದನ್ನಾಗಿ, ಕರೋತಿ - ಮಾಡುತ್ತದೆ, ತಸ್ಮಾತ್ - ಆದಕಾರಣದಿಂದಲೇ, ಅಹಂ-ನಾನು ಅನಿರ್ವೇದಕೃತಂ - ಉತ್ಸಾಹದಿಂದೊಡಗೂಡಿರುವ, ಉತ್ತಮಂ - ಶ್ರೇಷ್ಠವಾದ, ಯತ್ನಂ - ಪ್ರಯತ್ನವನ್ನು, ಇಹ-ಇಲ್ಲಿ, (ಈ ಸಂದರ್ಭದಲ್ಲಿ) ಚೇಷ್ಟೇ - ಮಾಡುತ್ತೇನೆ ॥೧೧॥ ಆಪಾನಶಾಲಾಃ - ಪಾನಪ್ರದೇಶಗಳು, ವಿಚಿತಾಃ - ಹುಡುಕಲ್ಪಟ್ಟವು, ತಥಾ - ಹಾಗೆಯೇ, ಪುಷ್ಪಗೃಹಾಣಿಚ - ಹೂವಿನ ಮನೆಗಳೂ, ಚಿತ್ರಶಾಲಾಶ್ಚ-ಚಿತ್ರಗೃಹಗಳೂ, ಕ್ರೀಡಾಗೃಹಾಣಿಚ- ಬಗೆಬಗೆಯ ಆಟದ ಮನೆಗಳೂ. ವಿಮಾನಾನಿಚ- ನಾನಾವಿಧವಾದ ವಿಮಾನಗಳೂ, ನಿಷ್ಕುಟಾಂತರರಥ್ಯಾಶ್ಚ - ಮನೆದೋಟಗಳ ಒಳಹಾದಿಗಳೂ ಸರ್ವಶಃ - ಎಲ್ಲ ಕಡೆಗಳಲ್ಲಿಯೂ, ವಿಚಿತಾಃ - ಹುಡುಕಲ್ಪಟ್ಟವು, (ತಥಾಪಿ-ಹಾಗಾದಾಗ್ಯೂ) ರಾವಣಪಾಲಿತಾನ್ - ರಾವಣನಿಂದ ಪಾಲಿಸಲ್ಪಡುತಲಿರುವ, ದೇಶಾನ್ - ಪ್ರದೇಶಗಳನ್ನೆಲ್ಲ, ಭೂಯಃ ಪುನಃ, ತಾವತ್-ಸಂಪೂರ್ಣವಾಗಿ, [ಚೆನ್ನಾಗಿ] ವಿಚೇಷ್ಯಾಮಿ - ಹುಡುಕುವೆನು ॥ ೧೨, ೧೩ ॥ ಇತಿ- ಹೀಗೆಂದು,

---

ಪುರುಷನನ್ನು ಯಾವಾಗಲೂ ಎಲ್ಲ ಕೆಲಸಗಳಲ್ಲಿಯೂ ಮುಂದರಿಯುವಂತೆ ಮಾಡತಕ್ಕದು ॥ ಆದಕಾರಣ ಉತ್ಸಾಹಸಂಪನ್ನನಾಗಿಯೇ ಕೆಲಸಮಾಡಬೇಕು. ಉತ್ಸಾಹಶಾಲಿಯಾಗಿ ಯಾವನು ಯಾವ ಕೆಲಸವನ್ನು ಮಾಡಿದರೂ ಆ ಉತ್ಸಾಹವು ಆ ಪ್ರಾಣಿಯ ಆ ಕೆಲಸವನ್ನು ಸಫಲವಾಗುವಂತೆ ಮಾಡುತ್ತದೆ. ಆದುದರಿಂದ ಪ್ರಕೃತದಲ್ಲಿ ನಾನೂ ಉತ್ಸಾಹಸಂಪನ್ನನಾಗಿಯೇ ಮುಂದಿನ ಶ್ರೇಷ್ಠವಾದ ಪ್ರಯತ್ನವನ್ನು ಮಾಡುವೆನು॥೧೧॥ಬಳ್ಳಿಯದು ಆಗಲಿ, ಪಾನಶಾಲೆಗಳಲ್ಲಿ ಹುಡುಕಿದೆನು, ಪುಷ್ಪವಾಟಿಗಳನ್ನು ಶೋಧಿಸಿದೆನು,ಚಿತ್ರಶಾಲೆಗಳನ್ನು ಬೆದಕಿದೆನು, ಆಟದ ಮನೆಗಳೊಳಗೆ ಅನ್ವೇಷಣಮಾಡಿದುದಾಯಿತು. ಮನೆದೋಟಗಳ ಒಳಹಾದಿಗಳನ್ನೆಲ್ಲ ಪರಿಕಿಸಿದುದಾಯಿತು, ವಿಮಾನಗಳನ್ನೆಲ್ಲ ಕಲಕಿದೆನು,ಎಲ್ಲೆಲ್ಲಿಯೂ ಹುಡುಕಿ ನೋಡಿಬಿಟ್ಟೆನು,ಆದರೂ ಈ ರಾವಣನಾಳುವ ದೇಶಗಳೆನ್ನೆಲ್ಲ ಮರಳಿ ಬಂದುಕಡೆಯಿಂದ ಇನ್ನೊಂದು ಬಾರಿ ಚೆನ್ನಾಗಿ ಹುಡುಕಿಕೊಂಡು ಬರುವೆನು ॥ ೧೨-೧೩ ॥ ಎಂದೀತರನಾಗಿ ಚಿಂತಿಸಿ ನೆಲಮನೆಗಳಲ್ಲಿಯೂ, ಚತುಷ್ಪಥಗಳಲ್ಲಿನ ಮಂಟಪಗಳಲ್ಲಿಯೂ, ಊರಮನೆಗಳನ್ನು ಬಿಟ್ಟು ದೂರವಾಗಿ ಕಟ್ಟಿರುವ ಮನೆಗಳಲ್ಲಿಯೂ ಪುನಃ ಜಾನಕಿಯನ್ನು ಹುಡುಕಲಿಕ್ಕೆ ಆರಂಭಿಸಿದನು ॥೧೪। ಎತ್ತರವಾದ ಸ್ಥಲಗಳಿಗೆ ಹಾರಿ ಏರಿದನು, ಅಲ್ಲಿ ನೋಡಿಕೊಂಡು ಕೆಳಕ್ಕೆ

ಇತಿ ಸಂಚಿಂತ್ಯ ಭೂಯೋऽಪಿ ವಿಚೇತು ಮುಪಚಕ್ರಮೇ ।
ಭೂಮೀ ಗೃಹಾಂ ಶ್ಚೈತ್ಯಗೃಹಾನ್ ಗೃಹಾತಿ ಗೃಹಕಾನಪಿ ॥೧೪॥
ಉತ್ಪತ ನ್ನಿಪತಂಶ್ಚಾ ಪಿ ತಿಷ್ಠ ನ್ಗಚ್ಛ ನ್ಪುನಃ ಪುನಃ ।
ಅಪಾವೃಣ್ವಂ ಶ್ಚ ದ್ವಾರಾಣಿ ಕವಾಟಾ ನ್ಯವಘಾಟಯನ್ ॥೧೫॥
ಪ್ರವಿಶ ನ್ನಿಷ್ಪತಂಶ್ಚಾಪಿ ಪ್ರಪತ ನ್ನುತ್ಪತನ್ನಪಿ ।
ಸರ್ವಮಪ್ಯ ವಕಾಶಂ ಸ ವಿಚಚಾರ ಮಹಾಕಪಿಃ ॥೧೬॥
ಚತುರಂಗುಳ ಮಾತ್ರೋऽಪಿ ನಾವಕಾಶ ಸ್ಸವಿದ್ಯತೇ ।
ರಾವಣಾಂತಃಪುರೇ ತಸ್ಮಿನ್ ಯಂ ಕಪಿ ರ್ನಜಗಾಮ ಸಃ ॥೧೭॥

---

ಸಂಚಿನ್ತ್ಯ-ಚೆನ್ನಾಗಿ ಯೋಚಿಸಿ, ಭೂಮೀಗೃಹಾನ್ - ನೆಲಮಾಳಿಗೆಗಳನ್ನೂ, ಚೈತ್ಯಗೃಹಾನ್ - ಚೌಕದಲ್ಲಿನ ಮಂಟಪಗಳನ್ನೂ, ಗೃಹಾತಿಗೃಹಕಾನಪಿ-ಊರಮನೆಗಳಿಗಿಂತ ದೂರವಾಗಿರುವ ಕಿರುಮನೆಗಳನ್ನೂ, ಭೂಯೋऽಪಿ-ಪುನಃ, ವಿಚೇತುಂ - ಹುಡುಕಲಿಕ್ಕೆ, ಉಪಚಕ್ರಮೇ - ಪ್ರಾರಂಭಿಸಿದನು ॥೧೪॥ ಸಃ-ಆ, ಮಹಾಕಪಿಃ - ಆಂಜನೇಯನು, ಉತ್ಪತನ್ - ಎತ್ತರವಾದ ಸ್ಥಳಕ್ಕೆ ಹಾರತಕ್ಕವನಾಗಿಯೂ, ನಿಷ್ಪತಂಶ್ಚಾಪಿ-ಉನ್ನತಪ್ರದೇಶದಿಂದ ಕೆಳಗೆ ಧುಮುಕುವವನಾಗಿಯೂ, ತಿಷ್ಠನ್ - ಅಲ್ಲಲ್ಲಿ ನಿಲ್ಲುತ್ತಿರುವವನಾಗಿಯೂ, ಪುನಃಪುನಃ ಅಡಿಗಡಿಗೂ, ಗಚ್ಛನ್ - ನಡೆಯುತ್ತಿರುವವನಾಗಿಯೂ, ದ್ವಾರಾಣಿ - ಬಾಗಿಲುಗಳನ್ನು, ಅಪಾವೃಣ್ವನ್-ತೆರೆಯುತ್ತಿರುವವನಾಗಿಯೂ, ಕವಾಟಾನಿ- ಕದಗಳನ್ನು, ಅವಘಾಟಯನ್-ಮುಚ್ಚುತಲಿರುವವನಾಗಿಯೂ, ಪ್ರವಿಶನ್ - ಮನೆಗಳ ಒಳಹೊಗುವವನಾಗಿಯೂ, ನಿಷ್ಪತಂಶ್ಚಾಪಿ-ಅಲ್ಲಿಂದ ಹೊರಹೊರಡುವವನಾಗಿಯೂ, ಪ್ರಪತನ್ - ನೆಲಮನೆಗಳಲ್ಲಿ ಇಳಿಯುವವನಾಗಿಯೂ, ಉತ್ಪತನ್ನಪಿ - ಅಲ್ಲಿಂದ ಮೇಲಕ್ಕೆ ಏರುವವನಾಗಿಯೂ, ಸರ್ವಂಅವಕಾಶಮಪಿ - ಎಲ್ಲಸ್ಥಳವನ್ನೂ. ವಿಚಚಾರ - ಹುಡುಕುತ ತಿರುಗಿಬಿಟ್ಟನು ॥೧೫, ೧೬॥

ತಸ್ಮಿನ್ - ಆ, ರಾವಣಾಂತಃಪುರೇ - ರಾವಣನ ರಾಣಿವಾಸದಲ್ಲಿ, ಸಃಕಪಿಃ - ಆ ಆಂಜನೇಯನು, ಯಂ - ಯಾವಪ್ರದೇಶ [illegible] ಹೆ [illegible]ಲ್ಲವೋ, ಸ - ಅಂತಹ, ಅವಕಾಶಃ -ಸ್ಥಲವು, ಚತು[illegible]ಮಾತ್ರೋऽಪಿ - ನಾಲ್ಕು[illegible]ಗಳ [illegible] ಸ್ಥಲವಾದರೂ, ನವಿದ್ಯತೆ- ಉಳಿಯಲಿಲ್ಲ ॥೧೭॥ ಪ್ರಾಕಾರಾಂತರ ರಥ್ಯಾಶ್ಚ - ಪೌಳಿಗಳೊಳಗಣ ಚೌಕದಹಾದಿಗಳೂ, ಚೈತ್ಯಸಂಶ್ರಯಾಃ -

---

ಧುಮುಕಿದನು, ಅಲ್ಲಲ್ಲಿ ನಿಂತು ಹಾಯನೋಡಿದನು, ಮೆಲ್ಲಗೆತುಸಮುಂದರಿದು ನಿರೀಕ್ಷಿಸಿದನು, ಅಡಿಗಡಿಗೆ ಮನೆಗಳ ಬಾಗಿಲುಗಳನ್ನು ಮುಂದಕ್ಕೆ ಸರಿಸಿನೋಡಿದನು, ಕದಗಳನ್ನು ಮುಚ್ಚುತ ಹಿಂಭಾಗ ಮುಂಭಾಗಗಳಲ್ಲಿ ಹೊಂಚುಕಾದು ಪರಿಕಿಸಿದನು, ಮನೆಗಳ ಒಳ ಹೊಕ್ಕು ಜೆದಕಿದನು,ಹೊರಗೆಬಂದು ಪರಿಭಾವಿಸಿದನು, ನೆಲಮಾಳಿಗೆಗಳೊಳಗೆ ಇಳಿದು ಹುಡುಕಿದನು, ಅಲ್ಲಿಂದ ಈಚೆಗೆ ಬಂದುಆಲೋಕಿಸಿದನು,ಎಲ್ಲೆಲ್ಲಿಯೂ ಅಲೆದುಹಿಟ್ಟಾಗಿ ಹಿಸಿಕಿ ಶೋಧಿಸಿಬಿಟ್ಟನು ॥೧೫-೧೬॥ ಮಾರುತಿಯು ಆ ರಾವಣನ ಅಂತಃಪುರದೊಳಗೆ ಹೊಕ್ಕು ನೋಡದಿರುವ ಸ್ಥಲವೇ ಇಲ್ಲ ಹೆಚ್ಚಿಗೆಯೇಂದೇನು? ಹನುಮಂತನು ನಾಲ್ಕು ಬೆರಳುಗಳಷ್ಟು ಸ್ಥಲವನ್ನೂ ಬಿಡದೆ ಎಲ್ಲೆಡೆಯನ್ನೂ ಅರಸಿನೋಡಿಬಿಟ್ಟನು॥೧೭॥ ಪೌಳಿಗಳನ್ನೂ ಅವುಗಳೊಳಗಣ ರಾಜವೀಧಿಗಳನ್ನೂ, ನಡುಬೀದಿಗಳಲ್ಲಿ ಕಟಿರುವ ಜಗುಲಿಗಳನ್ನೂ, ಇಳಿಯುವ

ಪ್ರಾಕಾರಾಂತರರಥ್ಯಾಶ್ಚ ವೇದಿಕಾ ಶ್ಚೈತ್ಯ ಸಂಶ್ರಯಾಃ ।
ದೀರ್ಘಿಕಾಃ ಪುಷ್ಕರಿಣ್ಯಶ್ಚ ಸರ್ವಂ ತೇನಾವ ಲೋಕಿತಂ ॥೧೮॥
ರಾಕ್ಷಸ್ಯೋ ವಿವಿಧಾಕಾರಾ ವಿರೂಪಾ ವಿಕೃತಾಸ್ತಥಾ ।
ದೃಷ್ಟಾ ಹನುಮತಾ ತತ್ರ ನತು ಸಾ ಜನಕಾತ್ಮಜಾ ॥೧೯॥
ರೂಪೇಣಾ ಪ್ರತಿಮಾ ಲೋಕೇ ವರಾ ವಿದ್ಯಾಧರ ಸ್ತ್ರಿಯಃ ।
ದೃಷ್ಟಾ ಹನುಮತಾ ತತ್ರ ನತು ರಾಘವ ನಂದಿನೀ ॥೨೦॥
ನಾಗಕನ್ಯಾ ವರಾರೋಹಾಃ ಪೂರ್ಣಚಂದ್ರ ನಿಭಾನನಾಃ ।
ದೃಷ್ಟಾ ಹನುಮತಾ ತತ್ರ ನತು ಸೀತಾ ಸುಮಧ್ಯಮಾ ॥೨೧॥
ಪ್ರಮಥ್ಯ ರಾಕ್ಷಸೇಂದ್ರೇಣ ನಾಗಕನ್ಯಾ ಬಲಾದ್ಧೃತಾಃ ॥

---

ಚತುಷ್ಪಥಗಳನ್ನವಲಂಬಿಸಿರುವ, ವೇದಿಕಾಶ್ಚ - ಎತ್ತರವಾದ ಜಗುಲಿಗಳೂ, ದೀರ್ಘಿಕಾಃ - ಇಳಿಯುವ ಕಲ್ಯಾಣಿಗಳೂ, ಪುಷ್ಕರಿಣ್ಯಶ್ಚ - ತಾವರೆಯ ಕೊಳಗಳೂ, ಸರ್ವಂ - ಇವೆಲ್ಲವೂ, ತೇನ - ಆ ಹನುಮನಿಂದ, ಅವಲೋಕಿತಂ - ನೋಡಲ್ಪಟ್ಟಿತು ॥೧೮॥ ತತ್ರ - ಆಯಾ ಸ್ಥಲದಲ್ಲಿ, ವಿವಿಧಾಕಾರಾಃ- ಬಗೆಬಗೆಯ ಆಕಾರಗಳುಳ್ಳ, ವಿರೂಪಾಃ - ವಿರುದ್ಧಸ್ವಭಾವವುಳ್ಳ, ತಥಾ - ಹಾಗೆಯೇ, ವಿಕೃತಾಃ - ವಿಕಾರವೇಷಗಳುಳ್ಳ, ರಾಕ್ಷಸ್ಯಃ - ರಾಕ್ಷಸಿಯರು. ಹನುಮತಾ - ಆಂಜನೇಯನಿಂದ, ದೃಷ್ಟಾಃ - ನೋಡಲ್ಪಟ್ಟರು, ಜನಕಾತ್ಮಜಾತು - ಜನಕಪುತ್ರಿಯಾದರೋ, ನತು - ನೋಡಲ್ಪಡಲೇ ಇಲ್ಲ ॥೧೯॥ ಲೋಕೇ - ಲೋಕದಲ್ಲಿ, ರೂಪೇಣ - ಸೌಂದರ್ಯದಿಂದ, ಅಪ್ರತಿಮಾಃ - ಅಸಮಾನರೆನಿಸಿದ, ವರಾಃ - ಸರ್ವೋತ್ತಮರಾದ, ವಿದ್ಯಾಧರಸ್ತ್ರಿಯಃ - ವಿದ್ಯಾಧರಾಂಗನೆಯರು, ಹನುಮತಾ - ಆಂಜನೇಯನಿಂದ, ತತ್ರ - ಅಲ್ಲಿ, ದೃಷ್ಟಾಃ - ನೋಡಲ್ಪಟ್ಟರು, ರಾಘವನಂದಿನೀತು - ರಘುನಂದನ ವಲ್ಲಭೆಯಾದರೋ, ನ - ನೋಡಲ್ಪಡಲಿಲ್ಲವು ॥೨೦॥ ವರಾರೋಹಾಃ - ಉತ್ತಮಾಂಗನೆಯರೆನಿಸಿದ, ಪೂರ್ಣಚಂದ್ರನಿಭಾನನಾಃ - ಪೂರ್ಣಚಂದ್ರನಿಗೆ ಸಮಾನವೆನಿಸಿದ ಮುಖಗಳುಳ್ಳ, ನಾಗಕನ್ಯಾಃ - ನಾಗಸ್ತ್ರೀಯರು, ತತ್ರ - ಅಲ್ಲಿ, ಹನುಮತಾ - ಆಂಜನೇಯನಿಂದ, ದೃಷ್ಟಾಃ - ನೋಡಲ್ಪಟ್ಟರು, ಸುಮಧ್ಯಮಾ - ಬಡನಡುವುಳ್ಳ, ಸೀತಾತು -, ರಾಮಭಾರ್ಯೆಯಾದರೋ, ನ- ನೋಡಲ್ಪಡಲಿಲ್ಲವು ॥೨೧॥ ರಾಕ್ಷಸೇಂದ್ರೇಣ - ರಾಕ್ಷಸೇಶ್ವರನಿಂದ, ಪ್ರಮಥ್ಯ - ದೇವತೆಗಳನ್ನು ಸದೆಬಡಿದು, ಬಲಾತ್ - ಬಲಾತ್ಕಾರವಾಗಿ, ಹೃತಾಃ - ಅಪಹರಿಸಲ್ಪಟ್ಟ, ದೇವಕನ್ಯಾಃ-ದೇವತಾಸ್ತ್ರೀಯರೆಲ್ಲರೂ,

---

ಕಲ್ಯಾಣಿಗಳನ್ನೂ, ಕಮಲಗಳ ಕೊಳಗಳನ್ನೂ ನೋಡಿಬಿಟ್ಟನು ॥ ಬಗೆಬಗೆಯ ಆಕಾರಗಳನ್ನು ಹೊತ್ತು ವಿಕಾರರೂಪರಾಗಿ, ಘೋರವೇಷಗಳನ್ನು ತಾಳ್ದಿರುವ ರಾಕ್ಷಸಿಯರನ್ನೆಲ್ಲ ಹನುಮನು ಕಂಡನು, ಜಾನಕಿಯನ್ನು ಮಾತ್ರ ಕಾಣಲಿಲ್ಲ॥೧೯॥ ಇವರನ್ನಲ್ಲದೆ ಅಸದೃಶಸೌಂದರ್ಯಶಾಲಿಗಳೆನಿಸಿ, ಬಳುಕೋಮಲಾಂಗಿಯರಾದ ವಿದ್ಯಾಧರ ಸ್ತ್ರೀಯರನ್ನೆಲ್ಲ ನೋಡಿದನು. ರಘುನಂದನನ ಧರ್ಮಭಾರ್ಯೆಯಾದ ಸೀತೆಯನ್ನು ಮಾತ್ರ ನೋಡಲೇ ಇಲ್ಲ ॥೨೦॥ ಹನುಮನು ಹುಣ್ಣಿಮೆಯ ಚಂದಿರನಂತೆ ಬೆಳಗುವ ಮೊಗಗಳುಳ್ಳ ಭಾಮಾಮಣಿಗಳಾದ ನಾಗಕನ್ಯೆಯರನ್ನೆಲ್ಲ ಕಂಡನು. ಬಡನಡುವುಳ್ಳ ಜಾನಕಿಯನ್ನು ಕಾಣಲಿಲ್ಲ॥೨೧॥ ರಕ್ಕಸರೊಡೆಯನಾದ ರಾವಣನು ದೇವಗಂಧರ್ವಾದಿಗಳನ್ನು ಬಿಕ್ಕಲಿಕ್ಕಿ ಬಲಾತ್ಕರಿಸಿ ಅಪಹರಿಸಿ ತಂದ ದೇವಕನ್ಯೆಯರನ್ನೆಲ್ಲ ಮಾರುತಿಯು ಕಂಡನಲ್ಲದೆ ಜನಕನಂದಿನಿಯನ್ನು ಮಾತ್ರ, ಎಲ್ಲಿಯೂ ಕಾಣಲಿಲ್ಲ.

ದೃಷ್ಟಾ ಹನುಮತಾ ತತ್ರ ನ ಸಾ ಜನಕನಂದಿನೀ ||೨೨||
ಸೋಽಪಶ್ಯಂಸ್ತಾಂ ಮಹಾಬಾಹುಃ ಪಶ್ಯಂಶ್ಚಾನ್ಯಾವರಸ್ತ್ರಿಯಃ ।
ವಿಷಸಾದ ಮುಹುರ್ಧೀಮಾನ್ ಹನೂಮಾನ್ಮಾರುತಾತ್ಮಜಃ ||೨೩||
ಉದ್ಯೋಗಂ ವಾನರೇಂದ್ರಾಣಾಂ ಪ್ಲವನಂ ಸಾಗರಸ್ಯ ಚ ।
ವ್ಯರ್ಥಂ ವೀಕ್ಷ್ಯಾನಿಲಸುತಶ್ಚಿಂತಾಂ ಪುನರುಪಾಗಮತ್ ||೨೪||
ಅವತೀರ್ಯ ವಿಮಾನಾಚ್ಚ ಹನುಮಾನ್ಮಾರುತಾತ್ಮಜಃ ।
ಚಿಂತಾಮುಪಜಗಾಮಾಥ ಶೋಕೋಪಹತಚೇತನಃ ||೨೫||

- ಇತಿ ಶ್ರೀಮತ್ಸುಂದರಕಾಂಡೇ ದ್ವಾದಶಸ್ಸರ್ಗಃ -

ತತ್ರ - ಅಲ್ಲಿ, ಹನುಮತಾ - ಆಂಜನೇಯನಿಂದ, ದೃಷ್ಟಾಃ - ನೋಡಲ್ಪಟ್ಟರು, ಜನಕನನ್ದಿನೀ ತು - ಜಾನಕಿಯಾದರೋ, ನ ದೃಷ್ಟಾ - ನೋಡಲ್ಪಡಲಿಲ್ಲ ||೨೨|| ಮಹಾಬಾಹುಃ - ಆಜಾನುಬಾಹುವಾದ, ಧೀಮಾನ್ - ಮಹಾಬುದ್ಧಿಶಾಲಿಯಾಗಿರುವ, ಮಾರುತಾತ್ಮಜಃ - ವಾಯುನಂದನನಾದ, ಸಃ ಹನುಮಾನ್ - ಆ ಆಂಜನೇಯನು, ಅನ್ಯಾಃ - ಇತರರಾದ, ವರಸ್ತ್ರಿಯಃ - ಉತ್ತಮಾಂಗನೆಯರನ್ನು, ಪಶ್ಯನ್ ಚ - ನೋಡುತ್ತಿರುವವನಾಗಿಯೂ, ತಾಂ - ಆ ಸೀತಾದೇವಿಯನ್ನು, ಅಪಶ್ಯನ್ - ಕಾಣದಿರುವವನಾಗಿಯೂ, ಮುಹುಃ - ಅಡಿಗಡಿಗೂ, ವಿಷಸಾದ - ಬಹಳವಾಗಿ ವ್ಯಥೆಪಟ್ಟನು ||೨೩|| ಅನಿಲಸುತಃ - ಪವನನಂದನನು, ವಾನರೇಂದ್ರಾಣಾಂ - ಕಪಿವೀರರ, ಉದ್ಯೋಗಂ - ಪ್ರಯತ್ನವನ್ನೂ, ಸಾಗರಸ್ಯ - ಸಮುದ್ರದ, ಪ್ಲವನಂ ಚ - ದಾಟುವಿಕೆಯನ್ನೂ, ವ್ಯರ್ಥಂ - ನಿರರ್ಥಕವಾದುದನ್ನಾಗಿ, ವೀಕ್ಷ್ಯ - ಭಾವಿಸಿ, ಪುನಃ - ಮರಳಿ, ಚಿಂತಾಂ - ಆಲೋಚನೆಯನ್ನು, ಉಪಾಗಮತ್ - ಮಾಡತೊಡಗಿದನು ||೨೪|| ಮಾರುತಾತ್ಮಜಃ - ವಾಯುಕುಮಾರನಾದ, ಹನುಮಾನ್ - ಆಂಜನೇಯನು, ಶೋಕ - ದುಃಖದಿಂದ, ಉಪಹತ - ಪೆಟ್ಟುಬಿದ್ದ, ಚೇತನಃ - ಮನಸ್ಸುಳ್ಳವನಾಗಿ, ಅಥ - ಆಮೇಲೆ, ವಿಮಾನಾತ್ - ಪುಷ್ಪಕವಿಮಾನದ ದೆಸೆಯಿಂದ, ಅವತೀರ್ಯ ಚ - ಇಳಿದು, ಚಿಂತಾಂ - ವಿಚಾರವನ್ನು, ಉಪಜಗಾಮ - ಹೊಂದಿದನು, (ಮಾಡತೊಡಗಿದನು) ||೨೫||

—ಇಂತು ಹನ್ನೆರಡನೆಯ ಸರ್ಗಂ—

||೨೨|| ಮಹಾಬುದ್ಧಿಶಾಲಿಯಾಗಿ, ಬಹು ಬಲಶಾಲಿಯಾದ ವಾಯುಪುತ್ರನು ಇಂತು ಅಲ್ಲಲ್ಲಿ ಉತ್ತಮ ಮತ್ತು ಕಾಶಿನಿಯರನ್ನೆಲ್ಲ ಕಂಡು ಲೋಕಮಾನ್ಯಳಾದ ಸೀತಾದೇವಿಯನ್ನು ಮಾತ್ರ ಕಾಣದೆ ಅಡಿಗಡಿಗೂ ಬಹಳವಾಗಿ ವಿಚಾರಪರನಾದನು||೨೩|| ಇಂತೆಲ್ಲವನ್ನೂ ಶೋಧಿಸಿದ ಬಳಿಕ ಪಾವನಿಯು ಅಯ್ಯೋ, ಅಂಗದ ಜಾಂಬವಂತರೇ ಮುಂತಾದ ವಾನರರ ಉದ್ಯೋಗವೆಲ್ಲ ವ್ಯರ್ಥವಾಯಿತಲ್ಲಾ, ನಾನು ಎಷ್ಟೋ ಸಾಹಸಮಾಡಿ ಸಾಗರವನ್ನು ದಾಟಿಬಂದುದೂ ನಿರರ್ಥಕವಾಯಿತೇ, ಇತಿ ಕರ್ತವ್ಯವೇನೋ ತೋರದಲ್ಲಾ ? ಎಂದುಕೊಂಡು, ಪುನಃಪುನಃ ಆಲೋಚಿಸತೊಡಗಿದನು ||೨೪|| ಆಹಿಂದೆ ಅಸಮನುವನನು ಪುಷ್ಪಕವಿಮಾನದಿಂದ ಕೆಳಗೆ ಇಳಿದು ಬಹುವಿಧವಾದ ಶೋಕಕ್ಕೆ ಈಡಾಗಿ ಪುನರಪಿ ವಿಚಾರಮಾಡತೊಡಗಿದನು ||೨೫||

—ಇಂತು ಹನ್ನೆರಡನೆಯ ಸರ್ಗಂ.—

ಶ್ರೀಃ.

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ

## ಶ್ರೀಮತ್ಸುನ್ದರಕಾಣ್ಡೇ ತ್ರಯೋದಶಸ್ಸರ್ಗಃ.

ವಿಮಾನಾತ್ತು ಸುಸಂಕ್ರಮ್ಯ ಪ್ರಾಕಾರಂ ಹರಿಯೂಥಪಃ ।
ಹನುಮಾನ್ವೇಗವಾನಾಸೀ ದ್ಯಥಾ ವಿದ್ಯುದ್ಘನಾಂತರೇ ॥೧॥
ಸಂ ಪರಿಕ್ರಮ್ಯ ಹನುಮಾನ್ ರಾವಣಸ್ಯ ನಿವೇಶನಾತ್ ।
ಅದೃಷ್ಟ್ವಾ ಜಾನಕೀಂ ಸೀತಾ ಮಬ್ರವೀ ದ್ವಚನಂ ಕಪಿಃ ॥೨॥

---

—ಹದಿಮೂರನೆಯ ಸರ್ಗಂ

ಕಂದ—ಅರಸುತೆ ಪುರದೊಳ್ ಹರಿ ತಾ । ತಿರೆಯಣುಗಿಯ ಕಾಣದಂದು ಕೊರಗುತೆ ಮನದೊಳ್
ಪರಿಪರಿ ವಿಧದಿಂ ಸುರರಂ । ಕರಯುಗದಿಂ ವಂದಿಸುತ್ತೆ ಬೇಡುತಲಿರ್ದಂ ॥

ಹರಿಯೂಥಪಃ - ಕಪಿವರನಾದ, ಹನುಮಾನ್ - ಮಾರುತಿಯು, ವಿಮಾನಾತ್ - ಪುಷ್ಪಕವಿಮಾನದದೆಸೆಯಿಂದ, ಪ್ರಾಕಾರಂ - ಕೋಟೆಯನ್ನು, ಸುಸಂಕ್ರಮ್ಯತು - ಹೊಂದಿದವನೇಲೆಯಾದರೋ, ಘನಾಂತರೇ - ಮೋಡಗಳನಡುವೆ, ವಿದ್ಯುತ್‍ಯಥಾ - ಮಿಂಚುಹೇಗೋಹಾಗೆ, ವೇಗವಾನ್ - (ಸೀತೆಯನ್ನು ಹುಡುಕುವಕೆಲಸದಲ್ಲಿ) ಬಹಳ ಆತುರವುಳ್ಳವನು, ಆಸೀತ್ - ಆಗಿದ್ದನು ॥೧॥ ಹನುಮಾನ್ - ಪ್ರಶಸ್ತವಾದ ಕಪೋಲವುಳ್ಳ, ಕಪಿಃ - ಆಂಜನೇಯನು, ರಾವಣಸ್ಯ - ದಶಕಂಧರನ, ನಿವೇಶನಾತ್ - ಮನೆಯದೆಸೆಯಿಂದ, ಸುಸಂಕ್ರಮ್ಯ - (ಕೋಟೆಯನ್ನು ಹಾರಿತು) ಹರಿ - ಜಾನಕೀಂ - ಜನಕಪುತ್ರಿಯಾದ, ಸೀತಾಂ - ಸೀತಾದೇವಿಯನ್ನು, ಅದೃಷ್ಟ್ವಾ - ಕಾಣದೆ, ವಚನಂ - ಈ ಮುಂದಿನಮಾತನ್ನು, ಅಬ್ರವೀತ್ - ಆಡಿಕೊಳ್ಳತೊಡಗಿದನು ॥೨॥ ರಾಮಸ್ಯ - ಶ್ರೀರಾಮನಿಗೆ ಪ್ರಿಯಂ - ಹಿತವನ್ನೇ, ಚರತಾ-ಆಚರಿಸುತಲಿರುವ ನನ್ನಿಂದ

---

## —ಹದಿಮೂರನೆಯ ಸರ್ಗಂ—

ಹನುಮನು ಹಾಗೆ ಬಹಳಹೊತ್ತು ಚಿಂತಿಸಿ ವ್ಯಥೆಪಡುತಲಿದ್ದು ಆಮೇಲೆ ಪುಷ್ಪಕವಿಮಾನದಿಂದ ಹಾರಿ, ಇಂದ್ರನೀಲಮಣಿಯ ಕೋಟೆಯಮೇಲೆ ಬಂದುಕುಳಿತು, ಮಳೆಗಾಲದ ಮೋಡದಲ್ಲಿನ ಮಿಂಚಿನ ಹಾಗೆ ಹೊಳೆಯುತ, ಪ್ರಕೃತಕಾರ್ಯದಲ್ಲಿ ಬಹು ವೇಗವುಳ್ಳವನಾಗಿದ್ದನು ॥೧॥ ರಾವಣನ ಮನೆಯನ್ನು ಬಿಟ್ಟು ಅಲ್ಲಿಗೆ ಬಂದಬಳಿಕ ಅದುವರೆಗೂ ಜಾನಕಿಯನ್ನು ಕಾಣದೆ ಹೋದುದರಿಂದ ಮನಸ್ಸಿಗೆ ಬಲುಗಾಬರಿಯಾಯಿತು, ಪೇಚಾಟವು ಬಲವಾಯಿತು, ಯಾರಿಗಾದರೆ ಏನು ? ಕೆಲಸಕೆಟ್ಟು ಮುಗ್ಗಿದ್ದೆಯಾದಾಗ ಎಷ್ಟು ಬಳ್ಳಿಯ ಬುದ್ಧಿಗಾದರೂ ಮಂಕುಮುಚ್ಚಿಕೊಳ್ಳುತ್ತದೆ, ಕೆಲಸದ ಮುಜಗರವು ಮಂಕುತನಕ್ಕೆ ತವರ್ಮನೆ ಎಂಬುದು ಸಟೆಯಲ್ಲ, ಆಗ ಆಂಜನೇಯನ ಬುದ್ಧಿಗೂ, ಬಲಕ್ಕೂ, ಯಶಸ್ಸಿಗೂ, ಧೈರ್ಯಕ್ಕೂ, ನಿರ್ಭಯತ್ವಕ್ಕೂ, ದೇಹಾರೋಗ್ಯಕ್ಕೂ, ಎಚ್ಚರಿಕೆಗೂ ಏನೂ ಪ್ರಯೋಜನವಿಲ್ಲದಂತಾಯಿತು ಏನಮಾಡಬಲ್ಲನು?, ಬಗೆಬಗೆಯಾಗಿ ಹಂಬಲಿಸತೊಡಗಿದನು ॥೨॥ ಅದೆಂತೆಂದರೆ—ಸೀತೆಯನ್ನು ಕಾಣಬೇಕು, ಶ್ರೀ ರಾಮನಿಗೆ ಮೇಲನ್ನು ಉಂಟುಮಾಡಬೇಕು,

ಭೂಯಿಷ್ಠಂ ಲೋಳಿತಾ ಲಂಕಾ ರಾಮಸ್ಯ ಚರತಾಪ್ರಿಯಂ ।
ನಹಿ ಪಶ್ಯಾಮಿ ವೈದೇಹೀಂ ಸೀತಾಂ ಸರ್ವಾಂಗ ಶೋಭನಾಂ ॥೩॥
ಪಲ್ವಲಾನಿ ತಟಾಕಾನಿ ಸರಾಂಸಿ ಸರಿತಸ್ತಥಾ ।
ನದ್ಯೋಽನೂಪ ವನಾಂತಾಶ್ಚ ದುರ್ಗಾಶ್ಚ ಧರಣೀಧರಾಃ ॥
ಲೋಳಿತಾ ವಸುಧಾ ಸರ್ವಾ ನತು ಪಶ್ಯಾಮಿ ಜಾನಕೀಂ ॥೪॥
ಇಹ ಸಂಪಾತಿನಾ ಸೀತಾ ರಾವಣಸ್ಯ ನಿವೇಶನೇ ।
ಆಖ್ಯಾತಾ ಗೃಧ್ರರಾಜೇನ ನಚ ಪಶ್ಯಾಮಿ ತಾಮಹಂ ॥೫॥ ॥
ಕಿನ್ನು ಸೀತಾಥ ವೈದೇಹೀ ಮೈಥಿಲೀ ಜನಕಾತ್ಮಜಾ ।

---

ಲಂಕಾ - ಲಂಕಾನಗರವು, ಭೂಯಿಷ್ಠಂ - ಬಹಳವಾಗಿ, ಲೋಳಿತಾ - ಕಲಕಲ್ಪಟ್ಟಿತು, ಸರ್ವಾಂಗಶೋಭನಾಂ - ಎಲ್ಲಅವಯವಗಳಲ್ಲಿಯೂ ಮಂಗಳಸ್ವರೂಪಳಾದ, ವೈದೇಹೀಂ - ವಿದೇಹರಾಜಪುತ್ರಿಯೆನಿಸಿದ, ಸೀತಾಂ - ಸೀತಾದೇವಿಯನ್ನು, ನಹಿಪಶ್ಯಾಮಿ - ಕಾಣದೆಯೇ ಇದ್ದೇನೆಯಲ್ಲಾ ॥೩॥ ಪಲ್ವಲಾನಿ- ಚಿಕ್ಕ ಕುಂಟೆಗಳು, ತಟಾಕಾನಿ - ಕೆರೆಗಳು, ಸರಾಂಸಿ - ಕೊಳಗಳು, ತಥಾ- ಹಾಗೆಯೇ, ಸರಿತಃ - ಸಣ್ಣಹೊಳೆಗಳು, ನದ್ಯಃ - ದೊಡ್ಡನದಿಗಳು, ಅನೂಪವನಾಂತಾಶ್ಚ- ನೀರಿನಪಕ್ಕದಲ್ಲಿನ ಪ್ರದೇಶಗಳೂ, ದುರ್ಗಾಃ- ಹೊಗಲಿಕ್ಕೆ ಅಸದಳವೆನಿಸಿದ, ಧರಣೀಧರಾಶ್ಚ-ಬೆಟ್ಟಗಳೂ, ಲೋಳಿತಾಃ - ಹುಡುಕಲ್ಪಟ್ಟವು ॥೪॥ ಸರ್ವಾ- ಸಮಸ್ತವಾದ, ವಸುಧಾ - ಭೂಮಿಯೂ, ಲೋಳಿತಾ - ಬೆದಕಲ್ಪಟ್ಟಿತು, ಜಾನಕೀಂ - ಜನಕನಂದಿನಿಯನ್ನು, ನತುಪಶ್ಯಾಮಿ -ನೋಡದೆಯೇ ಇದ್ದೇನೆ, ॥೪॥ ॥ ಗೃಧ್ರರಾಜೇನ- ಹದ್ದುಗಳಿಗೊಡೆಯನಾದ, ಸಂಪಾತಿನಾ-(ಜಟಾಯುವಿನ ಅಣ್ಣನಾದ) ಸಂಪಾತಿಯಿಂದ, ಇಹ-ಈ, ರಾವಣಸ್ಯ -ರಾವಣನ, ನಿವೇಶನೇ-ಮನೆಯಲ್ಲಿ, ಆಖ್ಯಾತಾ - ಇರುವಳೆಂದು ಹೇಳಲ್ಪಟ್ಟವಳು, ಅಹಂ - ನಾನು, ತಾಂ - ಆ ಸೀತಾದೇವಿಯನ್ನು, ನಚಪಶ್ಯಾಮಿ-ಕಾಣದಿರುವೆನಲ್ಲಾ ॥೫॥ ॥ವೈದೇಹೀ ದೇಹಾಭಿಮಾನವಿಲ್ಲದ ದೊರೆಯವಳೆನಿಸಿ, ಜನಕಾತ್ಮಜಾ - ಬ್ರಹ್ಮನಿಷ್ಠನಾದ ಜನಕನ ಮಾನಸಪುತ್ರಿಯಾಗಿ, ಸೀತಾ - ಅಯೋನಿಜಳೂ ಆದ, ಮೈಥಿಲೀ - ಸೀತೆಯು, ಅಥ - ಒಂದುವೇಳೆ, ವಿವಶಾ - (ಸತೀ) ಭ್ರಾಂತಳಾಗಿ (ಕಾಮಪರವಶಳಾಗಿ) ದುಷ

---

ಎಂಬ ಕೋರಿಕೆಯಿಂದಲೇ ಈ ಲಂಕೆಯನ್ನೆಲ್ಲ ಬಹಳವಾಗಿ ಕಲಕಿ ಹುಡುಕಿಬಿಟ್ಟೆನು, ಸರ್ವಾಂಗಸುಂದರಿಯಾದ ಆ ಜನಕರಾಜಪುತ್ರಿಯನ್ನು ಕಾಣಲೇ ಇಲ್ಲ ॥ ೩ ॥ ಸಣ್ಣಸಣ್ಣ ಕುಂಟೆಗಳಲ್ಲಿ ಹುಡುಕಿದುದಾಯಿತು, ಕೆರೆಗಳಲ್ಲಿ ಬೆದಕಿದೆನು, ಕೊಳಗಳಲ್ಲಿ ಶೋಧಿಸಿದೆನು, ಹೊಳೆಗಳನ್ನು ಪರೀಕ್ಷಿಸಿದೆನು,ಮಹಾನದಿಗಳಲ್ಲಿ ಅನ್ವೇಷಣಮಾಡಿದೆನು,ಜಲಪ್ರಾಯಪ್ರದೇಶಗಳಲ್ಲಿನ ತೋಟಗಳಲ್ಲಿ ನುಗ್ಗಿ ನೋಡಿದ್ದಾಯಿತು, ಹೊಗಲಾಗದ ಬೆಟ್ಟಗಳನ್ನು ಹೊಕ್ಕು ಹುಡುಕಿದ್ದಾಯಿತು, ಹೆಚ್ಚಿಗೆಯಿಂದೇನು, ಒಂದು ತೃಣಮಾತ್ರವೂ ಬಿಡದೆ ಈ ನೆಲವನ್ನೆಲ್ಲಾ ಕದಡಿಬಿಟ್ಟೆನು. ಎಲ್ಲಿಯೂ ಸೀತಾಸಂದರ್ಶನವಾಗಲಿಲ್ಲ ॥೪॥ ಈ ರಾವಣನ ಮನೆಯೊಳಗೆ ಸೀತೆಯು ಇರುವಳು ಎಂದು ಜಟಾಯುವಿನ ಅಣ್ಣನಾದ ದೂರದೃಷ್ಟಿಯುಳ್ಳ ಸಂಪಾತಿಯು ಕಡಲಿನ ದಡದಲ್ಲಿ ನಮ್ಮೊಡನೆ ಹೇಳಿದ್ದನು, ಇಲ್ಲಿ ನೋಡಿದರೆ ಆಕೆಯು ಕಾಣಬರಲಿಲ್ಲ. ಇದು ಏನುಅನ್ಯಾಯವೋ ನನಗೆ ಗೊತ್ತಿಲ್ಲ ॥೫॥ ಸೀತೆಯು ಅಯೋನಿಜೆ,ಯಜ್ಞಭೂಮಿಯಲ್ಲಿ ಹುಟ್ಟಿದವಳು,ವಿದೇಹದೇಶದ ಅರಸನಾದ ಜನಕನು ಸತ್ಕುಲದಲ್ಲಿ ಹುಟ್ಟಿದವದ

ಉಪತಿಷ್ಠೇತ ವಿವಶಾ ರಾವಣಂ ದುಷ್ಟಚಾರಿಣಂ ॥೬॥ ॥
ಕ್ಷಿಪ್ರ ಮುತ್ಪತತೊ ಮನ್ಯೇ ಸೀತಾ ಮಾದಾಯ ರಕ್ಷಸಃ ।
ಬಿಭ್ಯತೊ ರಾಮಬಾಣಾನಾ ಮಂತರಾ ಪತಿತಾ ಭವೇತ್ ॥೭॥ ॥
ಅಥವಾ ಹ್ರಿಯಮಾಣಾಯಾಃ ಪಥಿ ಸಿದ್ಧ ನಿಷೇವಿತೆ ।
ಮನ್ಯೆ ಪತಿತ ಮಾರ್ಯಾಯಾ ಹೃದಯಂ ಪ್ರೇಕ್ಷ್ಯ ಸಾಗರಂ ॥೮॥ ॥
ರಾವಣಸ್ಯೋರು ವೇಗೇನ ಭುಜಾಭ್ಯಾಂ ಪೀಡಿತೇನ ಚ ।
ತಯಾ ಮಸ್ಯೇ ವಿಶಾಲಾಕ್ಷ್ಯಾ ತ್ಯಕ್ತಂ ಜೀವಿತ ಮಾರ್ಯಯಾ ॥೯॥ ॥

---

ಚಾರಿಣಂ - ಕೆಟ್ಟಕೆಲಸವನ್ನು ಮಾಡುವ ಸ್ವಭಾವವುಳ್ಳ, ರಾವಣಂ - ರಾವಣನನ್ನು, ಉಪತಿಷ್ಠೇತ ಕಿನ್ನು - ಸೇವಿಸುತ್ತಲಿರಬಹುದೆ! (ಹಾಗಿರಲಾರದು) ॥೬॥ ॥ ಸೀತಾಂ - ಸೀತಾದೇವಿಯನ್ನು, ಆದಾಯ - ತೆಗೆದುಕೊಂಡು, ಕ್ಷಿಪ್ರಂ - ಬೇಗನೆ, ಉತ್ಪತತಃ - ಮೇಲಕ್ಕೆ ಹಾರಿಹೋಗುತಲಿರುವ, ರಾಮಬಾಣಾನಾಂ - ಶ್ರೀರಾಮ ಬಾಣಗಳ ದೆಸೆಯಿಂದ, ಬಿಭ್ಯತಃ - ಹೆದರುತಲಿರುವ, ರಕ್ಷಸಃ - ರಾಕ್ಷಸನ ದೆಸೆಯಿಂದ, ಅಂತರಾ - ನಡುವೆ, (ಮಾರ್ಗಮಧ್ಯದಲ್ಲಿಯೆ) ಪತಿತಾ - ಬಿದ್ದುಹೋದವಳು, (ಕೆಡಹಲ್ಪಟ್ಟವಳು), ಭವೇತ್ - ಆಗಿರಬಹುದೆ ? ಹಾಗೂ ಇರಲಾರದು ॥೭॥ ॥ ಅಥವಾ - ಹಾಗಿಲ್ಲದಿದ್ದರ, ಸಿದ್ಧ - ಸಿದ್ಧಪುರುಷರಿಂದ, ನಿಷೇವಿತೆ - ಸೇವಿಸಲ್ಪಡುತಲಿರುವ, (ಸಂಚರಿಸಲ್ಪಡುವ) ಪಥಿ - ಮಾರ್ಗದಲ್ಲಿ (ಆಕಾಶದಲ್ಲಿ) ಹ್ರಿಯಮಾಣಾಯಾಃ - ಅಪಹರಿಸಲ್ಪಡುತಲಿರುವ, ಆರ್ಯಾಯಾಃ - ಪೂಜ್ಯಳಾದ ಜಾನಕಿಯ, ಹೃದಯಂ - ಶರೀರವು, ಸಾಗರಂ - ಸಮುದ್ರವನ್ನು, ಪ್ರೇಕ್ಷ್ಯ - ನೋಡಿ, ಪತಿತಂ - ಉರುಳಿ ಇರಬಹುದೆಂದೂ, ಮನ್ಯೇ - ಊಹಿಸುತ್ತೇನ (ಇಲ್ಲಿ ಅವಯವಕ್ಕೂ ಅವಯವಿಗೂ ಅಭೇದವೆಂದು ಅರಿಯಬೇಕು ॥೮॥ ॥ ರಾವಣಸ್ಯ - ರಾವಣನ, ಊರುವೇಗೇನ - ಓಡುವಾಗ ತೊಡೆಯ ವೇಗದಿಂದಲೂ, ಭುಜಾಭ್ಯಾಂ - ತೋಳುಗಳಿಂದುಂಟಾದ, ಪೀಡಿತೇನಚ - ಹಿಂಸೆಯಿಂದಲೂ, ತಯಾ - ಆ, ವಿಶಾಲಾಕ್ಷ್ಯಾ - ಅಗಲವಾದ ಕಣ್ಣುಳ್ಳ, ಆರ್ಯಯಾ - ಪೂಜ್ಯಳಾದ ಸೀತೆಯಿಂದ, ಜೀವಿತಂ - ಪ್ರಾಣವು, ತ್ಯಕ್ತಂ - ಬಿಡಲ್ಪಟ್ಟಿರಬಹುದು.

---

ಬಹುಕರ್ಮಠ, ಯಾಜ್ಞವಲ್ಕ್ಯರ ಬಳಿಯಲ್ಲಿ ಬ್ರಹ್ಮವಿದ್ಯೆಯನ್ನು ಅಭ್ಯಾಸಮಾಡಿದವನು ಅಂಥವನ ಪಾಲನೆಗೆ ಒಳಗಾಗಿದ್ದ ಮಗಳು, ಮಹಾಪತಿವ್ರತೆ, ಆದರೂ ರಾವಣನ ಐಶ್ವರ್ಯಾದಿಗಳಿಂದ ಮೋಹಿತಳಾಗಿಯೋ, ಇಲ್ಲವೆ ಇವನ ಬಲಾತ್ಕಾರದಿಂದಲೋ, ದುರಾಚಾರಪರನಾದ ಈ ರಾವಣನನ್ನು ಸೇವಿಸುತ್ತಿರಬಹುದೆ ? ಛೆ, ಎಂದಿಗೂ ಹಾಗಿರಲಾರದು ॥೬॥ ॥ಒಂದು ವೇಳೆ ಈ ರಾವಣನು ವೇಷಧಾರಿಯಾಗಿ ಜನಸ್ಥಾನಕ್ಕೆ ಹೋಗಿ ಬೇಗನೆ ಸೀತೆಯನ್ನು ಎತ್ತಿಕೊಂಡು ಬರುತ್ತಿರುವಾಗ ರಾಮಬಾಣಗಳೆಲ್ಲಿಬಂದು ತನಗೆ ಬಡಿಯುವುವೋ ಎಂದು ಹೆದರಿ ನಡುದಾರಿಯಲ್ಲಿ ಆಕೆಯನ್ನು ನೆಲಕ್ಕೆ ಉರುಳಿಸಿ ಇರಬಹುದು ಎಂದು ಊಹಿಸುತ್ತೇನೆ ॥೭॥ ॥ ಅಥವಾ- ಈ ರಕ್ಕಸನು ಸಿದ್ಧಚಾರಣರು ತಿರುಗುವ ಮುಗಿಲಮಾರ್ಗದಲ್ಲಿ ಮೇಲುಗಡೆ ಹಾರಿ ಸೀತೆಯನ್ನು ತರುತ್ತಿರುವಾಗ ಮಹಾಸಮುದ್ರವನ್ನು ನೋಡಿ ಹೆದರಿದ ಆಕೆಯ ಶರೀರವು ಕಡಲಿನೊಳಗೆ ಬಿದ್ದು ಹೋಯಿತೋ ಏನೋ ಎಂತಲೂ ಯೋಚಿಸುತ್ತೇನೆ ॥ ಇಲ್ಲದಿದ್ದರೆ ಈ ನೀಚನಾದ ರಾವಣನು ತೊಡೆಗಳ ವೇಗದಿಂದ ಓಡಿಬರುತ್ತಾ ಆಕೆಯನ್ನು ಹಿಡಿದು ತರುವಲ್ಲಿ ಆಹಿಂಸೆಯನ್ನು ತಾಳಲಾರದೆ ಬಹು ಪ್ರೊಜ್ವಳಿಸಿರುವ ವಿಶಾಲಾಕ್ಷಿಯಾದ

ಉಪರ್ಯ್ಯುಪರಿ ವಾ ನೂನಂ ಸಾಗರಂ ಕ್ರಮತ ಸ್ತದಾ ।
ವಿವೇಷ್ಟಮಾನಾ ಪತಿತಾ ಸಮುದ್ರೇ ಜನಕಾತ್ಮಜಾ ॥೧೦॥ ॥
ಅಹೋ ಕ್ಷುದ್ರೇಣ ಚಾನೇನ ರಕ್ಷಂತೀ ಶೀಲ ಮಾತ್ಮನಃ ।
ಅಬಂಧು ರ್ಭಕ್ಷಿತಾ ಸೀತಾ ರಾವಣೇನ ತಪಸ್ವಿನೀ ॥೧೧॥ ॥
ಅಥವಾ ರಾಕ್ಷಸೇಂದ್ರಸ್ಯ ಪತ್ನೀಭಿ ರಸಿತೇ ಕ್ಷಣಾ ।

ಎಂತಲೂ, ಮನ್ಯೇ-ಭಾವಿಸುತ್ತೇನೆ ॥೯॥ ॥ ಸಾಗರಂ-ಸಮುದ್ರವನ್ನು, ಉಪರ್ಯುಪರಿ - ಮೇಲೆಮೇಲೆ ಕ್ರಮತಃ-ದಾಟಿಹೋಗುತಲಿರುವ, (ರಾವಣಸ್ಯ - ರಾವಣನನ್ನು ಲಕ್ಷ್ಯಮಾಡದೆಯೇ) ಜನಕಾತ್ಮಜಾ-ಸೀತೆಯು, ತದಾ-ಆಗ, ವಿವೇಷ್ಟಮಾನಾ - ದೇಹವನ್ನು ಅಡಗಿಸಿಕೊಂಡವಳಾಗಿ, ಸಮುದ್ರೇ - ಕಡಲಿನಲ್ಲಿ, ನೂನಂ ನಿಶ್ಚಯವಾಗಿಯೂ, ಪತಿತಾವಾ- ಬಿದ್ದಿರಬಹುದೋ ಏನೋ ? ॥೧೦॥ ॥ ಆತ್ಮನಃ-ತನ್ನ-ಶೀಲಂ-ಒಳ್ಳೆಯ ನಡತೆಯನ್ನು, (ಪಾತಿವ್ರತ್ಯವನ್ನು), ರಕ್ಷನ್ತೀ-ಕಾಪಾಡಿಕೊಳ್ಳುತಲಿರುವ, ತಪಸ್ವಿನೀ-ದೀನಳಾದ, (ಶೋಚನೀಯಳಾದ), ಸೀತಾ-ಜಾನಕಿಯು, ಅಬಂಧುಃ- (ಲಂಕೆಯಲ್ಲಿ ಬಂದಾಗ)ದಿಕ್ಕಿಲ್ಲದವಳಾದಕಾರಣವೇ, ಅನೇನ-ಈ, ಕ್ಷುದ್ರೇಣ- ನೀಚನಾದ ರಾವಣನಿಂದ, ಭಕ್ಷಿತಾವಾ-(ತನ್ನ ಇಷ್ಟವನ್ನು ಅನುಸರಿಸದೆ ಇದ್ದುದರಿಂದ) ತಿನ್ನಲ್ಪಟ್ಟಳೋ ಏನೋ, ಅಹೋ - ಅಯ್ಯೋ ॥೧೧॥ ॥ ಅಥವಾ-ಹಾಗಲ್ಲದಿದ್ದರೆ, ದುಷ್ಟಭಾವಾಭಿಃ (ನಮ್ಮಮೇಲೆ ಮತ್ತೊಬ್ಬಳನ್ನು ತಂದನಲ್ಲಾ ಎಂಬ) ಕೆಟ್ಟ ಎಣಿಕೆಯುಳ್ಳ, ರಾಕ್ಷಸೇಂದ್ರಸ್ಯ-ರಾವಣನ, ಪತ್ನೀಭಿಃ - ಹೆಂಡತಿಯರಿಂದ, ಅಸಿತೇಕ್ಷಣಾ - ಬಲುಕಪ್ಪನೆಯ ಕಣ್ಣುಗುಡ್ಡೆಳ್ಳ, ಅದುಷ್ಟಾ-ದೋಷಲೇಶವಿಲ್ಲದ, ಸಾ-ಆ ಸೀತೆಯು, ಭಕ್ಷಿತಾ- ತಿನ್ನಲ್ಪಟ್ಟವಳು, ಭವಿಷ್ಯತಿ-ಆಗಿರುವಳೊ

ಸೀತೆಯು ಛೆ, ನಾನಿನ್ನು ಬದುಕಿ ಇರಬಾರದು ಎಂದು ಪ್ರಾಣವನ್ನು ತೊರೆದುಕೊಂಡಿರಬಹುದು ಎಂತಲೂ ತರ್ಕಿಸುತ್ತೇನೆ ॥೯॥ ॥ ಹಾಗಿಲ್ಲದಿದ್ದರೆ ಸಮುದ್ರದ ಮೇಲೆಮೇಲೆ ಹಾರಿ ಹಾದು ಬರುತ್ತಿರುವಲ್ಲಿ ಭಯದಿಂದ ನಡುಗುತಲಿದ್ದು ಕಡೆಗೆ ರಾವಣನನ್ನು ಲಕ್ಷ್ಯಮಾಡದೆ ಪ್ರಾಣವನ್ನು ಧರಿಸಿ ಇರುವುದಕ್ಕಿಂತ ಸಾಯುವುದೇ ಲೇಸು ಎಂದು ಸಾಗರದಲ್ಲಿ ಧುಮುಕಿ ಬಿಟ್ಟಳೋ ಹೇಗೋ ಅದೂ ತಿಳಿಯದು॥೧೦॥॥ ಅಯ್ಯೋ ಸೀತೆ, ಮಹಾಪತಿವ್ರತೆ, ಲೋಕಮಾತೆ, ಪರಿಪ್ರೀತೆ, ಸತ್ಕುಲಪ್ರಸೂತೆ, ಕಲ್ಯಾಣಗುಣಜಾತೆ, ಮಂಗಳಚರಿತೆ, ಭರ್ತೃಹಿತೆ, ಅಸಮಯದಲ್ಲಿ ಏನುಮಾಡಬಲ್ಲಳು, ರಾವಣನ ಕೋರಿಕೆಯನ್ನು ಅನುಸರಿಸಲಿಲ್ಲ, ಆ ಮಹತ್ತರವಾದ ಇಕ್ಕಟ್ಟಿನ ಸಮಯದಲ್ಲಿಯೂ ತನ್ನ ಒಳ್ಳೆಯನಡತೆಯನ್ನೇ ಕಾಪಾಡಿಕೊಳ್ಳಲು ಪ್ರಯತ್ನಪಟ್ಟಿರಬೇಕು, ಆದರೆ ಬೇರಾರೂದಿಕ್ಕಿಲ್ಲ, ಶೋಚನೀಯಳು, ಅಂತಹಕಷ್ಟದಲ್ಲಿ ಸಿಲುಕಿದಾಗ, ಈ ಮಹಾಪಾಪಿ, ನೀಚ, ವಂಚಕ, ದ್ರೋಹಿ, ಮನುಷ್ಯಭಕ್ಷಕ, ಆದುದರಿಂದ ಆಕೆಯನ್ನು ತಿಂದುಬಿಟ್ಟನೋ ಏನೋ ॥೧೧॥॥ ಹಾಗೂ ಇಲ್ಲದಿದ್ದರೆ-ಈಕೀಳನಾದ ರಾವಣನು ಆಕೆಯನ್ನು ತಂದು ಇಲ್ಲಿನ ರಕ್ಕಸಿಯರವಶಕ್ಕೆ ಒಪ್ಪಿಸಿ ಇರಬೇಕು, ಆಮೇಲೆ ಅವರು ಆಕೆಗೆ ಬಹುತರವಾದ ದುರ್ಬೋಧನೆಯನ್ನು ಮಾಡಿರಬೇಕು, ತರುವಾಯ ಜಾನಕಿಯು ಅದನ್ನು ಒಪ್ಪದೆ ತಿರಸ್ಕರಿಸಿ ಇರಬೇಕು, ಆಗ ಆಪಾಪಿಷ್ಠೆಯರಿಗೆ ಸಿಟ್ಟುಹತ್ತಿ ಆಮಹಾನುಭಾವಳನ್ನು ಬಾಯೊಳಿಟ್ಟುಕೊಂಡಿರಬೇಕು. ಅಥವಾ-ರಾವಣನು ತಮ್ಮಮೇಲೆ ಮತ್ತೊಬ್ಬಳನ್ನು ತಂದನಲ್ಲಾ ಎಂಬ ಹೊಟ್ಟೆಕಿಚ್ಚಿನಿಂದ ಇವಳನ್ನು ಮುಗಿಯಿಸಿಕೊಳ್ಳಬೇಕೆಂದು

ಅದುಷ್ಟಾ ದುಷ್ಟ ಭಾವಾಭಿಃ ಭಕ್ಷಿತಾ ಸಾ ಭವಿಷ್ಯತಿ ||೧೨|| ||
ಸಂಪ್ರೂರ್ಣ ಚಂದ್ರ ಪ್ರತಿಮಂ ಪದ್ಮಪತ್ರ ನಿಭೇಕ್ಷಣಾಂ |
ರಾಮಸ್ಯ ಧ್ಯಾಯತೀ ವಕ್ತ್ರಂ ಪಂಚತ್ವಂ ಕೃಪಣಾ ಗತಾ ||೧೩|| ||
ಹಾರಾಮ ಲಕ್ಷ್ಮಣೇ ತ್ಯೇವಂ ಹಾಯೋಧ್ಯೇತಿಚ ಮೈಥಿಲೀ|
ವಿಲಪ್ಯ ಬಹು ವೈದೇಹೀ ನ್ಯಸ್ತದೇಹಾ ಭವಿಷ್ಯತಿ ||೧೪|| ||
ಅಥವಾ ನಿಹಿತಾ ಮನ್ಯೇ ರಾವಣಸ್ಯ ನಿವೇಶನೆ |
ನೂನಂ ಲಾಲಪ್ಯತೆ ಸೀತಾ ಪಂಜರಸ್ಥೇವ ಶಾರಿಕಾ ||೧೫|| ||
ಜನಕಸ್ಯ ಸುತಾ ಸೀತಾ ರಾಮಪತ್ನೀ ಸುಮಧ್ಯಮಾ |

ಏನೋ ? ||೧೨|| || (ಅಥವಾ - ಇಲ್ಲದಿದ್ದರೆ) ಸಂಪೂರ್ಣಚಂದ್ರಪ್ರತಿಮಂ - ಹುಣ್ಣಿಮೆಯ ಚಂದಿರನಿಗೆ ಸಮಾನವಾದ, ಪದ್ಮಪತ್ರನಿಭೇಕ್ಷಣಾಂ - ತಾವರೆಯ ಎಸಳನ್ನು ಹೋಲುವ ಕಣ್ಣುಳ್ಳ, ರಾಮಸ್ಯ - ರಾಘವನ, ವಕ್ತ್ರಂ - ಮುಖವನ್ನೇ, ಧ್ಯಾಯತೀ - ಧ್ಯಾನಿಸುತಲಿರುವ ಆ ಸೀತೆಯು, ಕೃಪಣಾ - ದೀನಳಾಗಿ, ಪಂಚತ್ವಂ - ಮರಣವನ್ನು, ಗತಾ - ಹೊಂದಿದಳೋ ಏನೋ ? ||೧೩|| || (ಅಥವಾ - ಹಾಗಿಲ್ಲದಿದ್ದರೆ) ಹಾರಾಮ - ಓ ರಾಮಚಂದ್ರ, ಹಾಲಕ್ಷ್ಮಣ - ಓ ಲಕ್ಷ್ಮಣನೇ! ಹಾ ಅಯೋಧ್ಯೇ - ಓ ಅಯೋಧ್ಯಾನಗರಿಯೇ ! ಇತಿಚ - ಹೀಗೆಂದು, ಬಹು - ಬಹಳವಾಗಿ, ವಿಲಪ್ಯ - ಪ್ರಲಾಪಿಸುತ, ಮೈಥಿಲೀ-ಜನಕಪುತ್ರಿಯಾದ, ವೈದೇಹೀ - ಸೀತೆಯು, ನ್ಯಸ್ತದೇಹಾ - ಶರೀರವನ್ನು ಬಿಟ್ಟವಳು, ಭವಿಷ್ಯತಿ - ಆಗಿರಬಹುದೆ ? ||೧೪|| || ಅಥವಾ-ಹಾಗೂ ಇಲ್ಲದಿದ್ದರೆ, ರಾವಣಸ್ಯ - ರಾವಣನ, ನಿವೇಶನೆ-ಮನೆಯಲ್ಲಿ, ಪಂಜರಸ್ಥಾ-ಪಂಜರದೊಳಗಿರುವ, ಶಾರಿಕೇವ-ಹೆಣ್ಣುಗೊರವಂಕದಂತೆ, ನೂನಂ - ನಿಜವಾಗಿಯೂ, ನಿಹಿತಾ-ಎಲ್ಲಿಯೋ ಬಚ್ಚಿಡಲ್ಪಟ್ಟವಳಾಗಿ, ಲಾಲಪ್ಯತೆ-ಗೋಳಾಡಿಸಲ್ಪಡುತಲಿದ ಳೆಯೋ (ನುಡಿಸಲ್ಪಡುತ್ತಿರುವಳೋ) ಏನೋ ಎಂದೂ, ಮನ್ಯೇ-ಭಾವಿಸುತ್ತೇನೆ ||೧೫|| || ಜನಕಸ್ಯ-ಕರ್ಮಠನಾದ ಜನಕಮಹಾರಾಜನ, ಸುತಾ-ಮಗಳ

ತಲೆಗಪ್ಪಷ್ಟು ತಿಂದುಬಿಟ್ಟಿರಬೇಕು,ಹೀಗೇನಾದರೂ ನಡೆದು ಇರಬಹುದೇ||೧೨||ಹೀಗೂಇಲ್ಲದಿದ್ದರೆ-ಕ್ಷಣಮಾತ್ರವೂ ಪತಿಯನ್ನು ಅಗಲಿ ಇರಲಾರದ ಸೀತೆಯುಕಮಲಪತ್ರಾಕ್ಷನಾದ ಶ್ರೀರಾಮಚಂದ್ರನ ಪೂರ್ಣಚಂದ್ರ ಸಮಾನವಾದ ಮುಖವನ್ನೇ ಸಂತತವೂಧ್ಯಾನಿಸುತ್ತ, ಅನ್ನಾಹಾರಾದಿಗಳನ್ನು ತೊರೆದು,ದೀನಳಾಗಿ,ಉಸಿರನ್ನು ಬಿಟ್ಟಿರಬೇಕು ಎಂದುನೆನೆಸುತ್ತೇನೆ||೧೩|| ಅಯ್ಯೋ, ಪತಿವ್ರತೆಯರಾದ ಹೆಂಗಸರಿಗೆ ಈವಿಧವಾದ ವಿಪತ್ತು ಒದಗುವುದು ಬಹುಕಷ್ಟ! ದಿಕ್ಕಿಲ್ಲದೆ ಇಕ್ಕಟ್ಟಿಗೆ ಸಿಕ್ಕಿಬಿಟ್ಟಳು, ಆಗಬೇಕಾದ ದಾರಿ ತೋರಲಿಲ್ಲ, ಹಾರಾಮಾ ! ಓಲಕ್ಷ್ಮಣಾ ! ಹಾ ಅಯೋಧ್ಯಾನಗರವೇ ! ನಾನು ಅಷ್ಟುವೈಭವವನ್ನು ಪಡೆದಿದ್ದವಳಾದರೂ ಇಂತಹ ಅಪಾರವಾದ ಶೋಕಕ್ಕೆ ಈಡಾದೆನೇ ಎಂದುಗೋಳಾಡುತ್ತಾ, ವೈಮರೆತು, ಶರೀರವನ್ನು ನೆಲದಮೇಲೆ ಅಪ್ಪಳಿಸಿ, ವೈದೇಹಿಯು ದೇಹವನ್ನು ಬಿಟ್ಟುಬಿಟಳೋ ಏನೋ ||೧೪|| ಇಂತಿಲ್ಲದಿದ್ದರೆ- ದುರುಳನಾದ ಈ ದಶವದನನು ಹೆಣ್ಣು ಗೊರವಂಕದಹಕ್ಕಿಯನ್ನು ಪಂಜರದಲ್ಲಿ ಇಡುವಂತೆ ಈಸೀತೆಯನ್ನೂ ಕೊಂಡುಹೋಗಿ ತನ್ನಮನೆಯೊಳಗೆ ಎಲ್ಲಿಯೋ ಬಂದುಕಡೆ ಗುಟ್ಟಾಗಿ ನಿರ್ಬಂಧದಲ್ಲಿ ಇಟ್ಟು, ಪಾಲಿಸುತ್ತಿರುವನೋ, ಇಲ್ಲವೆ ಮುದ್ದಾಗಿ ಮಾತನಾಡಿಸುತಲಿರುವನೋ, ಅಥವಾ ಗೋಳಾಡಿಸುತಲೇ ಇರುವನೋ ಅದೂಗೊತ್ತಿಲ್ಲ||೧೫|| ಅಹಹ!

ಕಥ ಮುತ್ಪಲ ಪತ್ರಾಕ್ಷೀ ರಾವಣಸ್ಯ ವಶಂ ವ್ರಜೇತ್ ॥೧೬॥
ವಿನಷ್ಟಾ ವಾ ಪ್ರಣಷ್ಟಾ ವಾ ಮೃತಾ ವಾ ಜನಕಾತ್ಮಜಾ ।
ರಾಮಸ್ಯ ಪ್ರಿಯಭಾರ್ಯಸ್ಯ ನ ನಿವೇದಯಿತುಂ ಕ್ಷಮಂ ॥೧೭॥
ನಿವೇದ್ಯಮಾನೇ ದೋಷ ಸ್ಸ್ಯಾದ್ದೋಷಸ್ಸ್ಯಾ ದನಿವೇದನೇ ॥
ಕಥ ನ್ನು ಖಲು ಕರ್ತವ್ಯಂ ವಿಷಮಂ ಪ್ರತಿಭಾತಿ ಮೇ ॥೧೮॥
ಅಸ್ಮಿ ನ್ನೇವಂ ಗತೇ ಕಾರ್ಯೇ ಪ್ರಾಪ್ತಕಾಲಂ ಕ್ಷಮಂ ಚ ಕಿಂ ।

ಪುತ್ರಿಯೆನಿಸಿದ, ರಾಮಪತ್ನೀ - ಶ್ರೀ ರಾಮಧರ್ಮಭಾರ್ಯೆಯಾಗಿರುವ, ಸುಮಧ್ಯಮಾ - ಬಡನಡುವುಳ್ಳ ಉತ್ಪಲಪತ್ರಾಕ್ಷೀ - ನೈದಿಲೆಯ ರೇಕಿನಂತೆ ಕಣ್ಣುಳ್ಳ, ಸೀತಾ - ಅಯೋನಿಜಳಾದ ಜಾನಕಿಯು, ರಾವಣಸ್ಯ - ರಾವಣನಿಗೆ, ವಶಂ - ಸ್ವಾಧೀನತೆಯನ್ನು, ಕಥಂ - ಹೇಗೆ, ವ್ರಜೇತ್ - ಹೊಂದಿಯಾಳು, ॥೧೬॥ ಜನಕಾತ್ಮಜಾ - ಜಾನಕಿಯು, ವಿನಷ್ಟಾವಾ - ನನಗೆ ಕಾಣಬರದೆ ಎಲ್ಲಿಯಾದರು ತಪ್ಪಿಸಿಕೊಂಡಿರುವಳೋ, ಪ್ರಣಷ್ಟಾವಾ - ಈ ಪಾಪಿರಾಕ್ಷಸರಿಂದ ಎಲ್ಲಿಯಾದರು ನಾಶಗೊಳಿಸಲ್ಪಟ್ಟಳೋ, ಮೃತಾವಾ - ರಾಮನನ್ನು ಅಗಲಿ ಇರಲಾರದೆ ಪ್ರಾಣವನ್ನೇ ತೊರೆದುಕೊಂಡಳೋ, ಪ್ರಿಯಭಾರ್ಯಸ್ಯ - ಪ್ರಾಣಪ್ರಿಯಳಾದ ಪತ್ನಿಯುಳ್ಳ, ರಾಮಸ್ಯ - ಶ್ರೀ ರಾಮನಿಗೆ, ನಿವೇದಯಿತುಂ - ಬಂದು ತಿಳಿಸುವುದಕ್ಕೂ, ನ ಕ್ಷಮಂ - ಸಾಧ್ಯವೇ ಅಲ್ಲ ॥೧೭॥ ನಿವೇದ್ಯಮಾನೇ - ಈ ಸ್ಥಿತಿಯನ್ನು ಆತನಿಗೆ ತಿಳಿಸಿದಲ್ಲಿ, ದೋಷಃ - ತಪ್ಪು, (ಕೆಡುಕು) ಸ್ಯಾತ್ - ಆಗುವುದು, ಅನಿವೇದನೇ - ತಿಳಿಯಪಡಿಸದೆ ಇದ್ದರೂ, ದೋಷಃ - ದೋಷವೇ, ಸ್ಯಾತ್ - ಆಗುವುದು, ಕಥಂನುಖಲು - ಈ ಸಂದರ್ಭದಲ್ಲಿ ಹೇಗೆ, ಕರ್ತವ್ಯಂ - ಮಾಡತಕ್ಕದ್ದೋ, ಮೇ - ನನಗೆ, ವಿಷಮಂ -

ಆ ಜನಕರಾಯನ ಮಗಳು, ಅಯೋನಿಜೆ, ಲೋಕಪ್ರಖ್ಯಾತನಾದ ಶ್ರೀರಾಮಚಂದ್ರನ ಧರ್ಮಭಾರ್ಯೆ, ಸಕಲಪಾತಿವ್ರತ್ಯ ಸುಗುಣ ಸಂಪನ್ನೆ, ನೈದಿಲೆ ಮುಂಬೊಗ್ಗೆ ನಯನವುಳ್ಳವಳು, ಬಡನಡುವಿನಗರತಿ, ಇಂತಿಹ ಆ ಸೀತೆ ಈ ಖೂಳನಾದ ರಾವಣನಿಗೆ ಎಂದಿಗೆ ವಶಳಾದಾಳು! ಸರ್ವಥಾ ಆಗಲಾರಳು, ಬಹುಶಃ ನನಗೆ ಕಾಣಬರದಹಾಗೆ ನೆಲಮಾಳಿಗೆ ಮೊದಲಾಗಿರುವ ಯಾವುದಾದರೊಂದು ಗುಟ್ಟಾದಸ್ಥಳದಲ್ಲಿ ಅಡಗಿ ಇರುವಳೋ? ಇಲ್ಲವೆ ಇಲ್ಲಿಗೆ ಬರುವಾಗ ದಾರಿಯೊಳಗೆ ನೆಲದಮೇಲೆಬಿದ್ದೋ, ಪವನತಪ್ಪಿ ಉರಳಿಯೋ, ಮನಃಪೂರ್ವಕವಾಗಿ ಧುಮುಕಿಯೋ, ಕಡಲಿನಲ್ಲಿ ಕುಪ್ಪಳಿಸಿಯೋ, ಅಪಮೃತ್ಯುವಿಗೆ ಈಡಾಗಿರಬೇಕು. ಅಥವಾ ಇಲ್ಲಿನವರು ತಿನ್ನುವುದರಿಂದಲೋ, ತಾನಾಗಿ ಪ್ರಾಣಗಳನ್ನ ತೊರೆದುಕೊಂಬುದರಿಂದಲೋ ಸತ್ತಿರಬೇಕು. ಹೀಗಿರಲಾಗಿ ಪಂಚಪ್ರಾಣಗಳನ್ನು ಈಕೆಯೊಳಿಟ್ಟುಕೊಂಡಿರುವ ಆ ರಾಮಭದ್ರನಿಗೆ ಈ ಸುದ್ದಿಯನ್ನು ತಿಳಿಸುವದು ಹೇಗೆ? ಸರ್ವಥಾ ಆಗುವುದೇ ಇಲ್ಲ ॥೧೭॥ ಅಯ್ಯೋ, ಬಹುಕಷ್ಟಕ್ಕೆ ಬಂದಿತಲ್ಲ ? ಮುಂದೇನುಗತಿ ? ಏನುಮಾಡಲಿ ? ಇನ್ನೆಲ್ಲಿಗೆಹೋಗಲಿ? ಯಾರೊಡನೆಹೇಳಲಿ, ಯಾರನ್ನಕೇಳಲಿ? ಇಲ್ಲಿದಿಕ್ಕು ಯಾರು? ಹಾ ದೈವವೇ ಎಷ್ಟುತೊಂದರೆಯನ್ನು ತಂದೊಡ್ಡಿದೆ, ಎಂತಹಸಂಕಟಕ್ಕೆ ಗುರಿಮಾಡಿದೆ ? ನಾನು ಸೀತೆಯನ್ನು ಕಾಣಲಿಲ್ಲವೆಂಬ ವಾರ್ತೆಯನ್ನು ರಾಮಾದಿಗಳಿಗೆ ತಿಳಿಸಿದರೆ ಅದೊಂದೊಡ್ಡ ಆಪತ್ತೇ, ತಿಳಿಸದೆಹೋದರೂ ವಿಪತ್ತೇ. ಹಿಂದಕ್ಕೆ ಅಡಿಯಿಟ್ಟರೆ ಬಾವಿ, ಮುಂದಕ್ಕೆ ಹೆಜ್ಜೆಯಿಟ್ಟರೆ ಕೆರೆ, ಅಲ್ಲಿಯೇನಿಂತಿದ್ದರೆ ಕುಸಿಯಬೀಳುವುದು ಎಂಬಂತೆ, ಕೆಲಸವು ಮುಗ್ಗುಡ್ಡಿಗೆ ಬಂದಿತಲ್ಲ? ಹೇಗೆಮಾಡಬೇಕೆಂಬುದೂ ತೋರದೆ

ಭವೇದಿತಿ ಮತಂ ಭೂಯೋ ಹನುಮಾ ನ್ಪ್ರವಿಚಾರಯತ್ ॥೧೯॥ ॥
ಯದಿ ಸೀತಾ ಮದೃಷ್ಟ್ವಾಹಂ ವಾನರೇಂದ್ರ ಪುರೀ ಮಿತಃ ।
ಗಮಿಷ್ಯಾಮಿ ತತಃ ಕೋ ಮೇ ಪುರುಷಾರ್ಥೋ ಭವಿಷ್ಯತಿ ॥೨೦॥ ॥
ಮಮೇದಂ ಲಂಘನಂ ವ್ಯರ್ಥಂ ಸಾಗರಸ್ಯ ಭವಿಷ್ಯತಿ ।
ಪ್ರವೇಶ ಶ್ಚೈವ ಲಂಕಾ ಯಾ ರಾಕ್ಷಸಾನಾಂ ಚ ದರ್ಶನಂ ॥೨೧॥ ॥
ಕಿಂ ಮಾಂ ವಕ್ಷ್ಯತಿ ಸುಗ್ರೀವೋ ಹರಯೋ ವಾ ಸಮಾಗತಾಃ ।

---

ಬಹು ಕಷ್ಟವಾಗಿಯೇ, ಪ್ರತಿಭಾತಿ - ತೋರುತಲಿದೆ ॥೧೮॥ ॥ ಅಸ್ಮಿನ್- ಈ, ಕಾರ್ಯೆ - ಕೆಲಸದ ಸಂದರ್ಭವು, ಏವಂಗತೇ (ಸತಿ) ಹೀಗೆ ನಡೆದಿರಲಾಗಿ, ಕಿಂ - ಯಾವದಾರಿಯು, ಪ್ರಾಪ್ತಕಾಲಂ -ಸಮಯೋಚಿತವಾದುದೂ, ಕ್ಷಮಂಚ - ತೊಂದರೆಯುಂಟಾಗದಿರುವುದೂ, ಭವೇತ್-ಆಗಬಹುದು, ಇತಿ - ಹೀಗೆಂಬ, ಮತಂ - ಅಭಿಪ್ರಾಯವನ್ನು, ಹನುಮಾನ್-ಆಂಜನೇಯನು, ಭೂಯಃ-ಬಹುವಿಧನಾಗಿ, ಪ್ರವಿಚಾರಯತ್-ಅಡಿಗಡಿಗೂ ಚಿಂತಿಸಿದನು ॥ ೧೯ ॥ ಅಹಂ-ನಾನು, ಸೀತಾಂ-ಜಾನಕಿಯನ್ನು ಅದೃಷ್ಟ್ವಾ-ಕಾಣದೆಯೇ, ಇತಃ-ಇಲ್ಲಿಂದ, ವಾನರೇಂದ್ರಪುರೀಂ-ಕಿಷ್ಕಿಂಧಾನಗರವನ್ನು ಕುರಿತು, ಗಮಿಷ್ಯಾಮಿಯದಿ-ಹೋಗುವವನೇ ಆದರೆ, ತತಃ-ಹಾಗೆ ಹೋಗುವುದರಿಂದ, ಮೇ-ನನಗೆ, ಕಃ-ಯಾವ, ಪುರುಷಾರ್ಥಃ-ಕಾರ್ಯಸಾಧನೆಯು, ಭವಿಷ್ಯತಿ - ನಡೆದಂತಾಗುವುದು ॥೨೦॥ ॥ ಮಮ - ನನ್ನ, ಇದಂ - ಈ, ಸಾಗರಸ್ಯ - ಸಮುದ್ರದ, ಲಂಘನಂ - ದಾಟುವಿಕೆಯೂ, ಲಂಕಾಯಾಃ - ಲಂಕೆಯನ್ನು, ಪ್ರವೇಶಶ್ಚೈವ - ಒಳಹೊಕ್ಕುದೂ, ರಾಕ್ಷಸಾನಾಂ - ರಾಕ್ಷಸರನ್ನು, ದರ್ಶನಂಚ - ನೋಡಿದುದೂ, ವ್ಯರ್ಥಂ - ನಿಷ್ಫಲವೇ - ಭವಿಷ್ಯತಿ - ಆಗುವುದು ॥೨೧॥ ॥ ಕಿಷ್ಕಿಂಧಾಂ - ಕಿಷ್ಕಿಂಧಾ ನಗರವನ್ನು. ಸಮನುಪ್ರಾಪ್ತಂ - ಹೋಗಿ ಸೇರಿದ, ಮಾಂ-ನನ್ನನ್ನು ಕುರಿತು, ಸುಗ್ರೀವಃ - ಕಪಿರಾಜನಾದ ಸುಗ್ರೀವನು, ಕಿಂವಕ್ಷ್ಯತಿ- ಏನಹೇಳುವನೋ, ಸಮಾ

---

ಬಹುಗಹನವಾದ ಸಂದರ್ಭವು ಬಂದದರಿತೆ? ॥೧೮॥ ಇಲ್ಲಿನಸಂಗತಿಯು ಹೀಗಿರಲಾಗಿ ಈ ಸಮಯಕ್ಕೆ ಉಚಿತವಾಗಿಯೂ,ಮುಂದೆಕೇಡಾಗದೆಯೂ ಇರುವಹಾದಿಯಾವುದು? ಎಂಬವಿಷಯವನ್ನು ವಾ ತಾತ್ಮಜನು ಬಹು ತರವಾಗಿ ಚಿಂತಿಸಿ ಚಿಂತಿಸಿ ಸಾಕಾಗ, ಪುನಃ ಚಿಂತಿಸತೊಡಗಿದನು ॥೧೯॥ ಬಾದ ವೇಳೆ ನಾನು ಇಲ್ಲಿ ಸೀತೆಯನ್ನು ಕಾಣದೆ ಹೀಗೆಯೇ ಇಲ್ಲಿಂದ ಕಿಷ್ಕಿಂಧಾನಗರವನ್ನು ಕುರಿತು ಹೋದರೆ, ಆಗ ನಾನು ಯಾವಪುರುಷಾರ್ಥವನ್ನು ಸಾಧಿಸಿದಂತಾಯಿತು ? ॥೨೦॥ ನಾನು ಪೌರುಷವನ್ನು ಕೊಚ್ಚಿಕೊಂಡು ಕಡಲನ್ನು ದಾಟಿಬಂದುದೂ, ಗಹನವಾಗಿದ್ದ ಲಂಕೆಯ ಒಳಹೊಕ್ಕುದೂ, ಅಲ್ಲಲ್ಲಿರುವ ರಕ್ಕಸರನ್ನೆಲ್ಲ ಕಂಡುದೂ, ಅಲ್ಲಲ್ಲಿ ಇಷ್ಟುಶ್ರಮಪಟ್ಟು ಹುಡುಕಿದುದೂ ಒಟ್ಟಿಗೆ ವ್ಯರ್ಥವೇ ಆಯಿತು ॥೨೧॥ ॥ ಇಲ್ಲಿಂದನಾನು ಬರಿಗೈಬೀಸಿಕೊಂಡು ಕಿಷ್ಕಿಂಧೆಗೆಹೋಗಿ ನಿಂತರೆ, ಆಗ ಸುಗ್ರೀವನು ಹತ್ತಿರಕ್ಕೆ ಬಂದು ಏನಪ್ಪ ! ಆಂಜನೇಯ ! ಏನುಮಾಡಿಕೊಂಡುಬಂದೆ, ಎಂದುನನ್ನಮೋರೆಯನ್ನು ನೋಡುತ ಕೇಳದರೆ, ಅಯ್ಯೋ, ಛಿ, ಛಿ, ಆಗನನ್ನಬಾಳುಬೇಕೆ, ಆ ಕಪಿಸಾರ್ವಭೌಮನಿಗೆ ಈ ನನ ಕೆಟ್ಟ ಮೋರೆಯನ್ನು ತೋರುವುದುಹೇಗೆ ? ಇದುಹಾಗಿರಲಿ, ಇದಕ್ಕಿಂತಮೊದಲೇ ನಾನ್ನುಹೋದಸುದ್ದಿಯು ತಿಳಿದಕೂಡಲೆ ಕಪಿಗಳೆಲ್ಲ ಒಗ್ಗಟ್ಟಾಗಿಸೇರಿ ನನ್ನಸಮೀಪಕ್ಕೆ ಬಂದು ಏನಯ್ಯ ! ನಾವೆಲ್ಲಕೈಲಾಗದ ಹೇಡಿಗಳು, ಸೀತೆಯನ್ನು ಎಲ್ಲಿಯೂ ಕಾಣಲಿಲ್ಲ. ನೀನುಮಹಾ

ಕಿಷ್ಕಿಂಧಾಂ ಸಮನುಪ್ರಾಪ್ತಂ ತೌ ವಾ ದಶರಥಾತ್ಮಜೌ ॥೨೨॥ ॥
ಗತ್ವಾ ತು ಯದಿ ಕಾಕುತ್ಸ್ಥಂ ವಕ್ಷ್ಯಾಮಿ ಪರ ಮಪ್ರಿಯಂ ।
ನ ದೃಷ್ಟೇತಿ ಮಯಾ ಸೀತಾ ತತ ಸ್ತ್ಯಕ್ಷ್ಯತಿ ಜೀವಿತಂ॥೨೩॥ ॥
ಪರುಷಂ ದಾರುಣಂ ಕ್ರೂರಂ ತೀಕ್ಷ್ಣ ಮಿಂದ್ರಿಯ ತಾಪನಂ ।
ಸೀತಾನಿಮಿತ್ತಂ ದುರ್ವಾಕ್ಯಂ ಶ್ರುತ್ವಾ ಸ ನ ಭವಿಷ್ಯತಿ ॥೨೪॥ ॥
ತಂ ತು ಕೃಚ್ಛ್ರಗತಂ ದೃಷ್ಟ್ವಾ ಪಂಚತ್ವ ಗತ ಮಾನಸಂ ।

---

ಗತಾಃ - ನನ್ನನ್ನು ಸುತ್ತಿಕೊಂಡ, ಹರಯೋವಾ-ವಾನರರೆಲ್ಲರೂ,ಕಿಂವಕ್ಷ್ಯಂತಿ-ಏನೇನ ಹೇಳುವರೋ, ತೌ-ಬ, ದಶರಥಾತ್ಮಜೌವಾ - ರಾಮಲಕ್ಷ್ಮಣರೂ. ಕಿಂವಕ್ಷ್ಯತಃ - ಮತ್ತೇನ ಹೇಳುವರೋ॥೨೨॥ ॥ಅಹಂ ನಾನು, ಗತ್ವಾ - ಇಲ್ಲಿಂದ ಹೋಗಿ, ಕಾಕುತ್ಸ್ಥಂ - ಶ್ರೀ ರಾಮನನ್ನು ಕುರಿತು, ಮಯಾ - ನನ್ನಿಂದ, ಸೀತಾ - ಸೀತೆಯು, ನದೃಷ್ಟಾ - ನೋಡಲ್ಪಡಲಿಲ್ಲ, ಇತಿ - ಹೀಗೆಂಬ, ಪರಂ - ಅತ್ಯಂತ, ಅಪ್ರಿಯಂ - ಅನಿಷ್ಟವಾದ ಮಾತನ್ನು, ವಕ್ಷ್ಯಾಮಿಯದಿ - ಹೇಳುವವನೇ ಆದರೆ, ತತಃ - ಆ ಕೂಡಲೇ, (ಸಃ - ಆ ಶ್ರೀರಾಮಚಂದ್ರನು) ಜೀವಿತಂ - ಪ್ರಾಣವನ್ನು, ತ್ಯಕ್ಷ್ಯತಿ - ಬಿಟ್ಟೇಬಿಡುವನು, ॥ ೨೩ ॥ ॥ಸೀತಾನಿಮಿತ್ತಂ-ಸೀತೆಯ ವಿಷಯವಾಗಿರುವ. ಪರುಷಂ - ಕರ್ಣಕಠೋರವಾದ, ದಾರುಣಂ - ಭಯಂಕರವಾದ, ಕ್ರೂರಂ - ಬಹುಉಗ್ರವಾದ, ಇಂದ್ರಿಯತಾಪನಂ - ಮನವೇ ಮೊದಲಾದ ಇಂದ್ರಿಯಗಳನ್ನು ಸಂಕಟಪಡಿಸುವುದೂ ಆಗಿರುವ, ದುರ್ವಾಕ್ಯಂ - ಕೇಳಬಾರದ ಮಾತನ್ನು, ಶ್ರುತ್ವಾ - ನನ್ನಿಂದ ಕೇಳಿ, ಸಃ - ಆ ಶ್ರೀರಾಮಚಂದ್ರನು, ನಭವಿಷ್ಯತಿ - ಖಂಡಿತವಾಗಿ ಉಳಿಯುವುದೇ ಇಲ್ಲ ॥೨೪॥ ॥

---

ಪೌರುಷಶಾಲಿ, ಮಹರಾಯ, ಶೌರ್ಯದಿಂದ ಸಿಂಧುವನ್ನು ದಾಟಿಹೋದೆ, ಕಾರ್ಯವನ್ನು ಸಾಧಿಸಿಕೊಂಡು ಬಂದೆಯಾ ? ಅಲ್ಲಿನಸುದ್ದಿ ಸಮಾಚಾರಗಳೇನು? ಎಲ್ಲವನ್ನು ವಿಸ್ತರಿಸಿ ಹೇಳಪ್ಪ, ಕೇಳೋಣ, ಎಂದರೆ, ಆಗ ನನ್ನ ಜನ್ಮವೇತಕ್ಕೆ? ನಾನು ಜೀವಿಸಿ ಇರಬಹುದೆ ? ಆಗ ನಾನು ಏನ ಉಸಿರಲಿ?ಅದೂ ಹಾಗಿರಲಿ, ನಾನು ಅಲ್ಲಿ ಇಳಿದಕ್ಷಣವೇ ಹನುಮಬಂದ,ಎಂಬ ಸುದ್ದಿಯು ರಾಮಲಕ್ಷ್ಮಣರ ಕಿವಿಗೆ ಬೀಳುವುದು,ಹಗಲಿರುಳೂ ಸೀತೆಯಹಂಬಲಿನಲ್ಲಿಯೇ ಇರುತ್ತಾ,ಹನುಮನು ಹೋಗಿದಾನೆ, ಸೀತೆಯ ಕುಶಲವಾರ್ತೆಯನ್ನ ತರುತ್ತಾನೆ ಎಂದು ಕಳವಳಿಸುತಲಿರುವ ಆ ಈರ್ವರೂ ಎಲ್ಲರಿಗಿಂತ ಮೊದಲೇ ನನ್ನಬಳಿಗೆಬಂದು ಮಾರುತೀ ! ಸೀತೆಯನ್ನು ಕಂಡೆಯ ? ಕುಶಲದಿಂದಿರುವಳೆ ? ಎಂದರೆ ಆಗನನ್ನ ಎದೆಯಿಂದ ಉಸಿರುಹಾರಿಹೋಗದೆ ಇರುವುದೆ? ಯಾರುಯಾರು ಏನೇನಹೇಳುವರೋ ತಿಳಿಯದು॥೨೨॥ ಆದದ್ದಾಗಲಿ ಎಂದು, ನಾನು ಇಲ್ಲಿಂದಹೋಗಿ ಸೀತೆಯನ್ನು ಅಲ್ಲೆಲ್ಲಿಯೂ ಕಾಣಲಿಲ್ಲಎಂದು ಇದ್ದದ್ದು ಇದ್ದಹಾಗೆಯೇ ಹೇಳಿದೆನೋ, ಆಯಿತು, ಆಗಲೇಮುಗಿಯಿತು, ಆಕರ್ಣಕಠೋರವಾದ ಮಾತನ್ನು ಕೇಳಿದಕೂಡಲೇ ಶ್ರೀರಾಮನು ಅಲ್ಲಿಯೇಪ್ರಾಣಗಳನ್ನು ಬಿಟ್ಟುಬಿಡುವನು ॥೨೩॥ ಬಹುಕಠಿನವೆನಿಸಿಯೂ, ಭಯಂಕರವಾಗಿಯೂ, ಉಗ್ರತರವಾಗಿಯೂ, ಕಣ್ಣುಗಳಲ್ಲಿ ನೀರನ್ನು ಊರಿಸುತ್ತಾ, ಕಿವಿಯನ್ನುಸುಡುತ್ತಾ,ಬಾಯಿಂದಫೂತ್ಕಾರವನ್ನು, ಸಿಟ್ಟುಸಿರನ್ನು ಹರಡಿಸುತ್ತಾ, ಮೂಗಿನಿಂದ ಹುಂಕಾರವನ್ನು ಹೊರಡಿಸುತ್ತಾ, ದೇಹವನ್ನೆಲ್ಲ ಶೋಷಿಸುತ್ತಾ, ಮನಸ್ಸಿಗೆತಾಳಲಾರದ ಸಂಕಟವನ್ನು ಉಂಟುಮಾಡುತ್ತಾ ಸರ್ವೇಂದ್ರಿಯಸಂ

ಭೃಶಾನುರಕ್ತೋ ಮೇಧಾವೀ ನ ಭವಿಷ್ಯತಿ ಲಕ್ಷ್ಮಣಃ ॥೨೫॥ ॥
ವಿನಷ್ಟೌ ಭ್ರಾತರೌ ಶ್ರುತ್ವಾ ಭರತೋಽಪಿ ಮರಿಷ್ಯತಿ ।
ಭರತಂ ಚ ಮೃತಂ ದೃಷ್ಟ್ವಾ ಶತ್ರುಘ್ನೋ ನ ಭವಿಷ್ಯತಿ ॥೨೬॥ ॥
ಪುತ್ರಾನ್ ಮೃತಾನ್ ಸಮೀಕ್ಷ್ಯಾಥ ನ ಭವಿಷ್ಯಂತಿ ಮಾತರಃ ।
ಕೌಸಲ್ಯಾ ಚ ಸುಮಿತ್ರಾ ಚ ಕೈಕೇಯೀ ಚ ನ ಸಂಶಯಃ ॥೨೭॥ ॥
ಕೃತಜ್ಞಃ ಸತ್ಯಸಂಧಶ್ಚ ಸುಗ್ರೀವಃ ಪ್ಲವಗಾಧಿಪಃ ।

ಕೃಚ್ಛ್ರಗತಂ - ಅಂತಹ ಕಷ್ಟವನ್ನು ಹೊಂದಿದವನಾದಕಾರಣವೇ, ಪಂಚತ್ವ - ಮರಣವನ್ನು ಹೊಂದುವುದರಲ್ಲಿ, ಗತ - ನಿಶ್ಚಯವನ್ನು ಪಡೆದ, ಮಾನಸಂ - ಮನಸ್ಸುಳ್ಳ, ತಂ - ಆ ರಾಮನನ್ನು, ದೃಷ್ಟ್ವೈವ ತು - ನೋಡಿದ ವೇಳೆಯೊದಲೋ, ಭೃಶಾನುರಕ್ತಃ - ಶ್ರೀ ರಾಮನಲ್ಲಿ ಪರಮಭಕ್ತಿಯುಳ್ಳ, ಮೇಧಾವೀ ಬಹು ದೂರದೃಷ್ಟಿಯುಳ್ಳ, ಲಕ್ಷ್ಮಣಃ - ಸೌಮಿತ್ರಿಯು, ನಭವಿಷ್ಯತಿ - ಜೀವಿಸಿರುವುದಿಲ್ಲ ॥ ೨೫ ॥ ॥ ವಿನಷ್ಟೌ - ಪ್ರಾಣವನ್ನು ತೊರೆದುಕೊಂಡ, ಭ್ರಾತರೌ - ಸೋದರರಾದ ರಾಮಲಕ್ಷ್ಮಣರನ್ನು, ಶ್ರುತ್ವಾ - ಕೇಳಿ, ಭರತೋಽಪಿ-ಭರತನೂ, ಮರಿಷ್ಯತಿ - ಸಾಯಲೇ ಸಾಯುವನು, ಮೃತಂ- ಸತ್ತುಹೋದ, ಭರತಂ - ಭರತನನ್ನು, ದೃಷ್ಟ್ವಾಚ - ಕಣ್ಣಾರ ನೋಡಿದನಂತರ, ಶತ್ರುಘ್ನಃ - ಶತ್ರುಘ್ನನೂ, ನಭವಿಷ್ಯತಿ - ಬದುಕಿರುವುದಿಲ್ಲ. ॥೨೬॥ ॥ ಮೃತಾನ್ - ಸತ್ತುಹೋದ, ಪುತ್ರಾನ್ - ಮಕ್ಕಳನ್ನೆಲ್ಲ, ಸಮೀಕ್ಷ್ಯ - ಕಣ್ಣಾರನೋಡಿ, ಅಥ - ಆಮೇಲೆ, ಮಾತರಃ - ತಾಯಿಯರಾದ, ಕೌಸಲ್ಯಾಚ - ಕೌಸಲ್ಯೆಯೂ, ಸುಮಿತ್ರಾಚ - ಸುಮಿತ್ರೆಯೂ, ಕೈಕಯೀಚ - ಕೈಕೇಯಿಯೂ, ನಭವಿಷ್ಯಂತಿ-ಭೂಮಿಯಲ್ಲಿ ಉಳಿಯುವುದೇ ಇಲ್ಲ, ನಸಂಶಯಃ- ಈ ವಿಷಯದಲ್ಲಿ ಸಂದೇಹವೂ ಇಲ್ಲ ॥೨೭॥ ॥ ಕೃತಜ್ಞಃ-ಮಾಡಿದ ಉಪಕಾರವನ್ನು

ತಾಪಕರವಾಗಿರುವ ಈ ಸೀತಾವಿಷಯವಾದ ಸಹಿಸಲಾರದ ದುರ್ವಾಕ್ಯವನ್ನು ಆರಾಮನು ಕೇಳಿ ಬದುಕುವುದುಂಟೆ ? ಸರ್ವಾತ್ಮನಾ ಬದುಕುವುದೇ ಇಲ್ಲ ॥ ೨೪ ॥ ॥ ಅಂತಹ ಅಣ್ಣನು ಆ ವಿಧವಾದ ಸಂಕಟವನ್ನೂ ಅನುಭವಿಸುತ್ತಾ, ಪ್ರಾಣಗಳನ್ನು ತೊರೆಯಲು ಬದ್ಧನಾಗಿರುವಲ್ಲಿ, ತನ್ನ ಸರ್ವಸ್ವವೂ ರಾಮನೇ ಎಂದು ಭಾವಿಸಿ, ಹಗಲಿರುಳೂ ಅವನಲ್ಲಿ ಭಕ್ತಿಯನ್ನಿಟ್ಟು ಶ್ರದ್ಧೆಯಿಂದ ಸೇವಿಸುತಲಿರುವ ಬಹು ಸೂಕ್ಷ್ಮಬುದ್ಧಿಯುಳ್ಳ, ಸುಭ್ರಾತನಾದ ಸೌಮಿತ್ರಿಯು ಉಳಿದಿರುವನೆ ? ಖಂಡಿತವಾಗಿ ಉಳಿಯುವುದಿಲ್ಲ ॥ ೨೫ ॥ ॥ ಭರತನ ವಿಷಯವಂತೂ ಮೊದಲೇ ತಿಳಿದಿದೆ. ಅನಾಯಾಸವಾಗಿ ಕೈಗೆಬಂದಿದ್ದ ಸಾಮ್ರಾಜ್ಯಾಧಿಪತ್ಯವನ್ನೂ ತೊರೆದು, ತಾಯಿಯ ಕೋರಿಕೆಯನ್ನು ತಿರಸ್ಕರಿಸಿ,ವಶಿಷ್ಠಾದಿಗಳ ಮಾತನ್ನೂ ಲಕ್ಷ್ಯವಿಡದೆ, ಮಲದಾಯಿಯ ಮಗನಾಗಿದ್ದರೂ ಸಕಲ ಕಲ್ಯಾಣ ಗುಣಾಭಿರಾಮನಾದ ರಾಮನಲ್ಲಿ ಭಕ್ತಿಯಿಂದ ಭರಿತನಾಗಿ, ಕಾಡಿಗೆ ಬಂದಿದ್ದ ಅಣ್ಣನನ್ನೇ ಹಿಂದಿರುಗಿಸಿ ಕರೆದುಕೊಂಡುಹೋಗಿ ಆತನನ್ನೇ ರಾಜ್ಯಾಧಿಪತ್ಯದಲ್ಲಿ ಪಟ್ಟಾಭಿಷಿಕ್ತನನ್ನಾಗಿ ಮಾಡಿ,ಅವನಿಗೆ ದಾಸನಾಗಿರಬೇಕೆಂಬ ಉದ್ದೇಶದಿಂದ ಅರಣ್ಯಕ್ಕೆ ಬಂದು, ಆತನನ್ನು ಪೀಡಿಸಿ ಸತ್ಯಪ್ರತಿಜ್ಞನಾದ ಆ ಶ್ರೀರಾಮನು ಹಿಂದಿರುಗದಿರಲು, ಆತನ ದಿವ್ಯಪಾದುಕೆಗಳನ್ನು ಕೊಂಡುಹೋಗಿ, ರಾಜಪ್ರತಿನಿಧಿಯಾಗಿ ಅವುಗಳನ್ನೇ ಸಿಂಹಾಸನದಲ್ಲಿ ಕುಳ್ಳಿರಿಸಿ, ಅವುಗಳಲ್ಲಿಯೇ ರಾಜಭಕ್ತಿಯನ್ನು ತೋರಿಸುತ್ತಾ, ಅಯೋಧ್ಯೆಯನ್ನೂ ಪ್ರವೇಶಿಸದೆ, ನಂದಿಗ್ರಾಮದಲ್ಲಿ ಜಟಾಚೀರ

ರಾಮಂ ತಥಾಗತಂ ದೃಷ್ಟ್ವಾ ತತ ಸ್ತ್ಯಕ್ಷ್ಯತಿ ಜೀವಿತಂ ॥ ೨೮ ॥ ॥
ದುರ್ಮನಾ ವ್ಯಥಿತಾ ದೀನಾ ನಿರಾನಂದಾ ತಪಸ್ವಿನೀ ।
ಪೀಡಿತಾ ಭರ್ತೃಜ ಶೋಕೇನ ರುಮಾ ತ್ಯಕ್ಷ್ಯತಿ ಜೀವಿತಂ ॥೨೯॥ ॥
ವಾಲಿಜೇನ ತು ದುಃಖೇನ ಪೀಡಿತಾ ಶೋಕ ಕರ್ಶಿತಾ ।

---

ನೆನೆಯುತಕ್ಕವನೂ, ಸತ್ಯಪ್ರತಿಜ್ಞಶ್ಚ-ಆಡಿದಂತೆ ನಡೆಯುತಕ್ಕವನೂ ಆಗಿರುವ, ಸುಗ್ರೀವಶ್ಚ - ಸುಗ್ರೀವನೂ, ತಥಾಗತಂ - ಆ ಬಗೆಯಾದ ಅವಸ್ಥೆಯನ್ನು ಹೊಂದಿದ, ರಾಮಂ - ಶ್ರೀ ರಾಮನನ್ನು, ದೃಷ್ಟ್ವಾ - ನೋಡಿ, ತತಃ - ಆ ಬಳಿಕ, ಜೀವಿತಂ - ಅಸುವನ್ನು, ತ್ಯಕ್ಷ್ಯತಿ - ತೊರೆಯುವನು, ॥೨೮॥ ॥ ಭರ್ತೃಜಶೋಕೇನ - ಗಂಡನಾದ ಸುಗ್ರೀವನ ಸಾವಿನಿಂದುಂಟಾದ ದುಃಖದಿಂದ, ಪೀಡಿತಾ - ಪೀಡಿಸಲ್ಪಟ್ಟ, ರುಮಾ - ಸುಗ್ರೀವನ ಹೆಂಡತಿಯಾದ ರುಮೆಯೂ, ದುರ್ಮನಾಃ - ಕೆಟ್ಟುಹೋದ ಮನಸ್ಸುಳ್ಳವಳೂ, ದೀನಾ - ದಿಕ್ಕಿಲ್ಲದವಳೂ, ನಿರಾನಂದಾ - ಸಂತೋಷಶೂನ್ಯಳೂ, ತಪಸ್ವಿನೀ - ಆರ್ತಳೂ ಆಗಿ, ಜೀವಿತಂ - ತನ್ನ ಜೀವನವನ್ನು, ತ್ಯಕ್ಷ್ಯತಿ - ತ್ಯಜಿಸುವಳು ॥೨೯॥-॥ ವಾಲಿಜೇನ - ಪತಿಯಾದ ವಾಲಿಯ ಮರಣದಿಂದ ಉಂಟಾದ, ಶೋಕೇನತು - ದುಃಖದಿಂದಲೇ, ಪೀಡಿತಾ - ಪೀಡಿಸಲ್ಪಟ್ಟವಳಾದಕಾರಣವೇ, ಶೋಕಕರ್ಶಿತಾ - ವ್ಯಥೆಯಿಂದ ಬಡವಾಗಿ ಹೋಗಿರುವ, ತಾರಾಪಿ - ವಾಲಿಪತ್ನಿಯೂ, ರಾಜ್ಞೀ -

---

ಧರನಾಗಿ ಮುನಿವೃತ್ತಿಯಿಂದಿರುತ್ತಾ ರಾಮನಾಗಮನವನ್ನೇ ನಿರೀಕ್ಷಿಸಿಕೊಂಡು ಪ್ರಾಣಧಾರಣವನ್ನು ಮಾಡಿಕೊಂಡಿರುವ ಭರತನೂ ಸೋದರರಾದ ರಾಮಲಕ್ಷ್ಮಣರಿಬ್ಬರೂ ಸತ್ತುಹೋದರೆಂಬ ಸುದ್ದಿಯನ್ನು ಕೇಳಿದಮೇಲೆ ಬದುಕಿ ಇರುವುದುಂಟೆ? ಅವನೂ ಸಾಯಲೇ ಸಾಯುತ್ತಾನೆ. ಅಂತಹ ಭರತನೇ ಹಾಗಾದಮೇಲೆ ಲಕ್ಷ್ಮಣನು ಶ್ರೀ ರಾಮನಲ್ಲಿ ಹೇಗೋಹಾಗೆ ಭರತ ಭಕ್ತಿ ಭರಿತನಾದ ಶತ್ರುಘ್ನನೂ ಮರಣವನ್ನೈದುವನು ॥೨೬॥-॥ ಹೀಗೆ ಮಕ್ಕಳೆಲ್ಲಾ ಒಟ್ಟಿಗೆ ಮರಣವನ್ನೈದಿದುದನ್ನು ಕಂಡಬಳಿಕ ಕೌಸಲ್ಯೆ, ಸುಮಿತ್ರೆ, ಕೈಕೇಯಿ ಮೊದಲಾದ ಮಾತೃವರ್ಗವು ಉಸಿರನ್ನು ತಾಳಿರುವುದುಂಟೆ? ಇಲ್ಲವೇ ಇಲ್ಲ. ಈ ವಿಷಯದಲ್ಲಿ ಸಂಶಯವೂ ಇಲ್ಲ ॥೨೭॥-॥ ಇಷ್ಟಾದಮೇಲೆ ನನ್ನೊಡೆಯನಾದ ಸುಗ್ರೀವನ ವಿಷಯವನ್ನು ಹೇಳತಕ್ಕುದೇನು? ನಾನೇ ಶ್ರೀ ರಾಮನನ್ನು ಸಂಪಾತೀರದಿಂದ ಕರೆದುಕೊಂಡು ಹೋಗಿ ಸ್ನೇಹವನ್ನು ಬೆಳೆಯಿಸಿದೆನು, ಶರಣಾಗತನಾದ ಸುಗ್ರೀವನಿಗೆ ಅಭಯದಾನವನ್ನು ಮಾಡಿ ಅದರಂತೆ ವಾಲಿಯನ್ನುಕೊಂದು, ಕಿಷ್ಕಿಂಧಾರಾಜ್ಯದಪಟ್ಟಾಭಿಷೇಕವನ್ನು ಮಾಡಿಸಿದನು. ಸುಗ್ರೀವನು ಆ ಉಪಕಾರವನ್ನು ಮರೆಯತಕ್ಕವನಲ್ಲ, ಅಲ್ಲದೆ ಈ ಭೂಮಂಡಲದಲ್ಲಿ ಎಲ್ಲಿದ್ದರೂ ಸೀತೆಯನ್ನು ಹುಡುಕಿಸಿ ಸುದ್ದಿಯನ್ನು ತರಿಸಿ ಹಗೆಯನ್ನುಕೊಲ್ಲಲು ಸರ್ವಸಹಾಯವನ್ನು ಮಾಡುತ್ತೇನೆಂದು ವಾಗ್ದಾನಮಾಡಿದ್ದನು. ಆಡಿದ ಮಾತನ್ನು ಎಂದಿಗೂ ತಪ್ಪತಕ್ಕವನಲ್ಲ. ಇಂಥವನು ಈ ವಿಧವಾದ ಅವಸ್ಥೆಯನ್ನು ಹೊಂದಿದ ಶ್ರೀ ರಾಮನನ್ನು ನೋಡಿದಕೂಡಲೇ ಜೀವಿತವನ್ನು ತ್ಯಜಿಸುವನು ॥೨೮॥-॥ ಹಾಗೆ ಪತಿಯಾದ ಸುಗ್ರೀವನು ಮೃತನಾದರೆ ಮಹಾವ್ಯಸನಾಕ್ರಾಂತವಾದ ಮನಸ್ಸುಳ್ಳವಳೂ, ಶೋಕಪೀಡಿತಳೂ, ಅನಾಥಳೂ, ಹರ್ಷಶೂನ್ಯಳೂ, ಆರ್ತಳೂ, ಆದ ರುಮೆಯು ಪತಿಶೋಕಪೀಡಿತಳಾಗಿ ಪ್ರಾಣತ್ಯಾಗಮಾಡುವಳು॥೨೯॥ ಮಹಾಪರಾಕ್ರಮಶಾಲಿಯಾಗಿದ್ದ ವಾಲಿಯ ಹೆಂಡತಿಯಾದ

ಪಂಚತ್ವಂ ಚ ಗತೇ ರಾಜ್ಞಿ ತಾರಾಪಿ ನ ಭವಿಷ್ಯತಿ ॥೨೦॥ ॥
ಮಾತಾಪಿತ್ರೋ ರ್ವಿನಾಶೇನ ಸುಗ್ರೀವ ವ್ಯಸನೇನ ಚ ।
ಕುಮಾರೋ ಪ್ಯಂಗದಃ ಕಸ್ಮಾ ದ್ಧಾರಯಿಷ್ಯತಿ ಜೀವಿತಂ ॥೨೧॥ ॥
ಭರ್ತೃಜೇನ ತು ದುಃಖೇನ ಹ್ಯಭಿಭೂತಾ ವನೌಕಸಃ ।
ಶಿರಾಂ ಸ್ಯಭಿ ಹನಿಷ್ಯಂತಿ ತಲ್ಯೈ ರ್ಮುಷ್ಟಿಭಿ ರೇವಚ ॥೨೨॥ ॥
ಸಾಂತ್ವೇನಾ ನುಪ್ರದಾನೇನ ಮಾನೇನ ಚ ಯಶಸ್ವಿನಾ ।

ಅರಸಾದ ಸುಗ್ರೀವನು, ಪಂಚತ್ವಂ - ಮರಣವನ್ನು, ಗತೇಚ(ಸತಿ) ಹೊಂದುತ್ತಿರಲಾಗಿ, ನಭವಿಷ್ಯತಿ - ಜೀವಸಹಿತಳಾಗಿರುವುದೇ ಇಲ್ಲ ॥೨೦॥-॥ ಮಾತಾಪಿತ್ರೋಃ - ತಾಯಿತಂದೆಯರಾದ ತಾರಾವಾಲಿಯರ, ವಿನಾಶೇನ - ಸಾವಿನಿಂದಲೂ, ಸುಗ್ರೀವ - ಚಿಕ್ಕಪ್ಪನಾದ ಸುಗ್ರೀವನ, ವ್ಯಸನೇನಚ-ಸಾವಿನಿಂದುಂಟಾದ ವ್ಯಥೆಯಿಂದಲೂ, ಕುಮಾರಃ - ಬಾಲಕನಾದ, ಅಂಗದಃ - ಅಂಗದನು, ಕಸ್ಮಾತ್ - ಯಾತ್ತಾವ ಆಶೆಯುದೆ ಶೆಯಿಂದ, ಜೀವಿತಂ-ಪ್ರಾಣವನ್ನು, ಧಾರಯಿಷ್ಯತಿ-ತಾಳಿರುವನು? (ಇಲ್ಲ,ಅವನೂ ಸಾಯುವನು) ॥೨೧॥ ಭರ್ತೃಜೇನ - ಪ್ರಭುಗಳಾದ ವಾಲಿ ಸುಗ್ರೀವರ ಸಾವಿನಿಂದುಂಟಾದ, ದುಃಖೇನ-ಶೋಕದಿಂದ, ಅಭಿಭೂತಾಃ - ಪೆಟ್ಟುಬಿದ್ದ, (ತಿರಸ್ಕರಿಸಲ್ಪಟ್ಟ) ವನೌಕಸಸ್ತು - ಕಪಿಗಳಾದರೋ, ತಲ್ಯೈಃ - ಅಂಗೈಗಳಿಂದಲೂ-ಮುಷ್ಟಿಭಿರೇವಚ - ಹಿಡಿಗಳಿಂದಲೂ, ಶಿರಾಂಸಿ - ತಲೆಗಳನ್ನು, ಅಭಿಹನಿಷ್ಯನ್ತಿ - ಬಡಿದುಕೊಳ್ಳುವರು,, ಯಶಸ್ವಿನಾ - ಯಶೋವಂತನಾದ, ಕಪಿರಾಜೇನ - ವಾನರರೊಡೆಯನಾದ ಸುಗ್ರೀವನಿಂದ, ಸಾನ್ತ್ವೇನ-ಮೃದುವಾದ ಮಾತುಗಳನ್ನಾಡುವುದರಿಂದಲೂ, ಅನುಪ್ರದಾನೇನ-ಉಚಿತವಾದ ಬಹುಮಾನಗಳನ್ನು ಕೊಡುವುದರಿಂದಲೂ, ಮಾನೇನಚ - ಯೋಗ್ಯತಾನುಸಾರವಾಗಿ ಗೌರವಿಸುತ್ತಿದ್ದುದರಿಂದಲೂ, ಲಾಲಿತಾಃ-ಪ್ರೀತಿಪೂರ್ವಕವಾಗಿ ಪಾಲಿಸಲ್ಪಡುತಲಿದ್ದ, ಪಾನರಾಃ - ಕಪಿಗಳು, ಪ್ರಾಣಾನ್ - ಉಸಿರುಗಳನ್ನು, ತ್ಯಕ್ಷ್ಯಾತಿ - ತೊರೆದುಕೊಂಬರು ॥೨೨॥ ॥ ಕಪಿಕುಂಜರಾಃ - ವಾನರ ವೀರರು, ಪುನಃ-ತಿರುಗಿ, ಸಮೇತ್ಯ -

ತಾರೆಯು ಗಂಡಸತ್ತ ದುಃಖದಿಂದ ಮೊದಲೇ ಕೃಶಳಾಗಿದಾಳೆ, ಅವಳ ಮನಸ್ಸಿನ ಚಿಂತೆಗೆ ಪಾರವೇ ಇಲ್ಲ, ಅಪಾರವಾದ ವ್ಯಥೆಯಲ್ಲಿ ಮುಳುಗಿದಾಳೆ; ಸಂತೋಷದ ಗಂಧವೇ ಇಲ್ಲ, ಬಹು ಶೋಚನೀಯಳೆನಿಸಿ ಇರುವಳು, ತನ್ನ ಮಗನಾಗಿ ಯುವರಾಜನೆನಿಸಿದ ಅಂಗದನಿಗೂ ತನಿಗೂ ದಿಕ್ಕಾಗಿ ಅರಸನೆನಿಸಿದ ಸುಗ್ರೀವನು ಮೃತನಾದರೆ ಆಕೆಯು ಜೀವನವನ್ನು ತೊರೆಯುವಳು ॥೨೦॥-॥ ಮಹಾ ವೀರಾಗ್ರೇಸರನೆನಿಸಿ ತಂದೆಯಾಗಿದ್ದ ವಾಲಿಯು ಮೊದಲೇ ಸತ್ತುಹೋಗಿದಾನೆ, ಅದರಮೇಲೆ ಈಗ ತಾಯಿಯೂ ಸತ್ತುಹೋಗಿ, ತನ್ನಲ್ಲಿ ಪರಮಪ್ರೀತಿಯನ್ನು ಇಟ್ಟು ಇದ್ದ ಚಿಕ್ಕಪ್ಪನೂ ಪ್ರಾಣವನ್ನು ಬಿಟ್ಟಬಳಿಕ ಇನ್ನೂ ಬಾಲ್ಯದಲ್ಲಿರುವ ಅಂಗದನು ಹೇಗೆ ಜೀವಿಸಿ ಇದ್ದಾನು ? ಅವನೂ ಪರಲೋಕವನ್ನೈದುವನು ॥ ೨೧॥-॥ ನಮಗೆಲ್ಲ ಸ್ವಾಮಿಯಾಗಿದ್ದ ಸುಗ್ರೀವನು ದಿವಂಗತನಾದ ಬಳಿಕ ಮಹಾರಾಜದುಃಖದಿಂದ ಕಾಡುಮನೆಯವರಾದ ವಾನರರೆಲ್ಲರೂ ಮುಖಕೆಟ್ಟು ಅಂಗೈಗಳಿಂದಲೂ, ಹಿಡಿಗಳಿಂದಲೂ, ದುಃಖವನ್ನು ತಾಳಲಾರದೆ ತಲೆಯನ್ನು ಕುಟ್ಟಿಕೊಳ್ಳುವರು ॥೨೨॥-॥ ಮಹಾರಾಜನಾದ ಸುಗ್ರೀವನು ಮೃದುಮಧುರವಾದ ಮಾತುಗಳಿಂದಲೂ, ಸಮಯವರಿತು ಬಹುಮತಿಗಳನ್ನು ಕೊಡುತಲಿದ್ದುದರಿಂದಲೂ, ಅವರವರ ಯೋಗ್ಯತೆಯನ್ನು ಅರಿತು ಗೌರವಿಸುತಲಿದ್ದುದರಿಂದಲೂ

ಲಾಲಿತಾಃ ಕಪಿರಾಜೇನ ಪ್ರಾಣಾಂ ಸ್ತ್ಯಕ್ಷ್ಯಂತಿ ವಾನರಾಃ ॥ ೪೨॥ ॥
ನ ವನೇಷು ನ ಶೈಲೇಷು ನ ನಿರೋಧೇಷು ವಾ ಪುನಃ।
ಕ್ರೀಡಾ ಮನುಭವಿಷ್ಯಂತಿ ಸಮೇತ್ಯ ಕಪಿ ಕುಂಜರಾಃ ॥ ೪೩॥ ॥
ಸಪುತ್ರದಾರಾ ಸ್ಸಾಮಾತ್ಯಾ ಭರ್ತೃವ್ಯಸನ ಪೀಡಿತಾಃ ।
ಶೈಲಾಗ್ರೇಭ್ಯಃ ಪತಿಷ್ಯಂತಿ ಸಮೇತ್ಯ ವಿಷಮೇಷು ಚ ॥೪೪॥
ವಿಷ ಮುದ್ಬಂಧನಂ ವಾ ಽ ಪಿ ಪ್ರವೇಶಂ ಜ್ವಲನಸ್ಯ ವಾ ।
ಉಪವಾಸ ಮಥೋ ಶಸ್ತ್ರಂ ಪ್ರಚರಿಷ್ಯಂತಿ ವಾನರಾಃ ॥ ೪೫॥ ॥

---

ಕಿಷ್ಕಿಂಧೆಯಲ್ಲಿ ಸೇರಿ, ಕ್ರೀಡಾಂ - ಆಟವನ್ನು ನಾನುಭವಿಷ್ಯಂತಿ ಅನುಭವಿಸುವುದಿಲ್ಲ, ವನೇಷು - ಅಡವಿಗಳಲ್ಲಿಯೂ, ಕ್ರೀಡಾಂ - ಆಟವನ್ನು, ನಾನುಭವಿಷ್ಯಂತಿ - ಅನುಭವಿಸುವುದಿಲ್ಲ, ಶೈಲೇಷು - ಬೆಟ್ಟಗಳಲ್ಲಿಯೂ, ನಾನುಭವಿಷ್ಯಂತಿ - ಅನುಭವಿಸುವುದಿಲ್ಲ, ನಿರೋಧೇಷುವಾ- ಹಿಂಡುಗಳಲ್ಲಿದ್ದೂ (ಟಿಕಾಣಿಗಳಲ್ಲಿ ನಿಂತೂ) ನಾನುಭವಿಷ್ಯಂತಿ - ಅನುಭವಿಸುವುದಿಲ್ಲ ॥ ೪೩॥- ॥ (ಕಿಂತು-ಮತ್ತೇನೆಂದರೆ) ಸಮೇತ್ಯಚ - ಕಿಷ್ಕಿಂಧೆಯೊಳಗೆ ಸೇರಿ, ಭರ್ತೃವ್ಯಸನ-ಪ್ರಭುಗಳಾದ ವಾಲಿ ಸುಗ್ರೀವಮೊದಲಾದವರ ಸಾವಿನಿಂದುಂಟಾದ ಶೋಕದಿಂದ, ಪೀಡಿತಾಃ - ವ್ಯಥೆಪಟ್ಟವರಾಗಿ, ಶೈಲಾಗ್ರೇಭ್ಯಃ - ಬೆಟ್ಟಗಳ ಕೋಡುಗಳ ದೆಶೆಯಿಂದ, ವಿಷಮೇಷು - ಹಳ್ಳಕೊಳ್ಳಗಳಲ್ಲಿ, ಪತಿಷ್ಯಂತಿ-ಬಿದ್ದುರುಳುವರು ॥೪೪॥ ॥ ವಾನರಾಃ - ಕಪಿಗಳು, ವಿಷಂ - ವಿಷಪಾನವನ್ನಾಗಲಿ, ಉದ್ಬಂಧನಂವಾಪಿ-ನೇಣುಹಾಕಿಕೊಳ್ಳೋಣವನ್ನಾಗಲಿ, ಜ್ವಲನಸ್ಯ-ಅಗ್ನಿಯೊಳಗೆ, ಪ್ರವೇಶಂವಾ - ಹೊಗುವಿಕೆಯನ್ನಾಗಲೀ, ಉಪವಾಸಂ - ತಿಂಡಿಯನ್ನು ತೊರೆಯೋಣವನ್ನಾಗಲಿ, ಅಥೋ - ಅಥವಾ, ಶಸ್ತ್ರಂ - ಕತ್ತಿಯಿಂದ ಕತ್ತನ್ನು ಉತ್ತರಿಸಿ ಕೊಳ್ಳೋಣವನ್ನಾಗಲೀ, ಪ್ರಚರಿಷ್ಯನ್ತಿ - ಮಾಡಿಕೊಳ್ಳುತ್ತಾರೆ ॥೪೫॥ ಮಯಿ - ನಾನು, ಗತೇ (ಸತಿ)- ಇಲ್ಲಿಂದ ಕಿಷ್ಕಿಂಧೆಗೆ ಹೋದವನೇ ಆದರೆ, ಘೋರಂ-ಭಯಂಕರವಾದ, ಆರೋದನಂ - ಗೋಳೂ, ಇಕ್ಷ್ವಾಕುಕುಲನಾಶಶ್ಚ-ರಘುವಂಶನಾಶವೂ, ವನೌಕಸಾಂ - ಕಾಡುಮನೆಯುವರಾದ ಕಪಿಗಳ, ನಾಶಶ್ಚೈವ - ಕುಲನಾಶವೂ

---

ಬಹುತರವಾದ ಪ್ರಜಾನುರಾಗವುಳ್ಳವನೆಂದು ಹೆಸರುವಾಸಿಯನ್ನು ಪಡೆದಿದ್ದನು. ಅಂತಹ ದೊರೆಯಿಂದ ಹೀಗೆ ಮಕ್ಕಳಗಿಂತ ಹೆಚ್ಚಾಗಿ ಲಾಲಿಸಲ್ಪಡುತಲಿದ್ದ ಕಪಿಗಳೆಲ್ಲರೂ ಒಟ್ಟಿಗೆ ಅಸುಗಳನ್ನು ತೊರೆಯುತ್ತಾರೆ ॥೪೨॥-॥ ಕಾಡುಗಳಲ್ಲಿಯೂ, ಬೆಟ್ಟಗಳಲ್ಲಿಯೂ, ಅಲ್ಲಲ್ಲಿನ ಟಿಕಾಣಿಗಳಲ್ಲಿಯೂ, ಕಪಿಗಳು ಪುನಃ ಒಗ್ಗಟ್ಟಾಗಿ ಸೇರಿ ಮೊದಲಿನಂತೆ ಸಂತೋಷದಿಂದ ಆಟಪಾಟಗಳನ್ನಾಡುವರೆಂಬ ಸುದ್ದಿಯೇ ಇನ್ನಿಲ್ಲ ॥೪೩॥-॥ ಹೆಂಡರು ಮಕ್ಕಳೊಡನೆಯೂ, ಪ್ರಧಾನ ಕಪಿಗಳೊಡನೆಯೂ ಸೇರಿ ಪ್ರಭುವಿನ ವಿಪತ್ತಿನಿಂದುಂಟಾದ ಮಹಾವ್ಯಸನದಿಂದ ಪೀಡಿತರಾಗಿ ಎಲ್ಲರೂ ಒಟ್ಟಾಗಿಸೇರಿ ಬೆಟ್ಟಗಳ ಮೇಲೆ ಹತ್ತಿ ಅಲ್ಲಿಂದ ಹಳ್ಳಕೊಳ್ಳಗಳಲ್ಲಿ ಬಿದ್ದು ಉರುಳಿ ದೇಹತ್ಯಾಗಮಾಡುವರು ॥೪೪॥-॥ ಹೀಗೆ ಸತ್ತವರು ಸಾಯುತ್ತ,ಕಳೆದುಳಿದ ಕಪಿಗಳು ವಿಷವನ್ನು ಕುಡಿದೋ ಇಲ್ಲವೇ ನೇಣುಹಾಕಿಕೊಂಡೋ ಅಥವಾ ಅಗ್ನಿಪ್ರವೇಶವನ್ನು ಮಾಡಿಯೋ, ಗೆಡ್ಡೆಗೆಣಸುಮೊದಲಾದಆಹಾರವನ್ನು ತೊರೆದೋ, ಹಾಗಿಲ್ಲದಿದ್ದರೆ ಕತ್ತಿ ಮೊದಲಾದ ಆಯುಧಗಳಿಂದ ಕತ್ತನ್ನು ಕತ್ತರಿಸಿಕೊಂಡೋ ಪ್ರಾಣಗಳನ್ನು ನೀಗಿಕೊಂಬರು ॥೪೫॥-॥ ನಾನು ಇಲ್ಲಿಂದ ಹಿಂದಿರುಗಿ ಮರಳಿ ಅಲ್ಲಿಗೆ ಹೋದರೆ ಇಷ್ಟ

ಘೋರ ಮಾರೋದನಂ ಮನ್ಯೇ ಗತೇ ಮಯಿ ಭವಿಷ್ಯತಿ ।
ಇಕ್ಷ್ವಾಕು ಕುಲನಾಶಶ್ಚ ನಾಶಶ್ಚೈವ ವನೌಕಸಾಂ ॥ ೩೭॥ ॥
ಸೋಽಹಂ ನೈವ ಗಮಿಷ್ಯಾಮಿ ಕಿಷ್ಕಿಂಧಾಂ ನಗರೀ ಮಿತಃ ।
ನಚ ಶಕ್ಷ್ಯಾ ಮ್ಯಹಂ ದ್ರಷ್ಟುಂ ಸುಗ್ರೀವಂ ಮೈಥಿಲೀಂ ವಿನಾ ॥ ೩೮॥ ॥
ಮಯ್ಯಗಚ್ಛತಿ ಚೇಹಸ್ಥೇ ಧರ್ಮಾತ್ಮಾನೌ ಮಹಾರಥೌ ।
ಆಶಯಾ ತೌ ಧರಿಷ್ಯೇತೇ ವಾನರಾಶ್ಚ ಮನಸ್ವಿನಃ ॥ ೩೯॥ ॥
ಹಸ್ತಾದಾನೋ ಮುಖಾದಾನೋ ನಿಯತೋ ವೃಕ್ಷಮೂಲಿಕಃ ।

---

ಭವಿಷ್ಯತಿ - ಆಗುವುದು ಎಂದು, ಮನ್ಯೇ - ಭಾವಿಸುತ್ತೇನೆ ॥ ೩೭॥ ॥ ಸೋಽಹಂ - ಇಷ್ಟು ತೊಂದರೆ ಯೊಳಗೆ ಸಿಲುಕಿರುವ ಆನಾನು, ಇತಃ - ಇಲ್ಲಿಂದ, ಕಿಷ್ಕಿನ್ಧಾಂನಗರೀಂ- ಕಿಷ್ಕಿನ್ಧಾನಗರವನ್ನು ಕುರಿತು, ನೈವಗಮಿಷ್ಯಾಮಿ - ಹೋಗುವುದೇ ಇಲ್ಲ, ಮೈಥಿಲೀಂ ವಿನಾ - ಸೀತೆಯ ಸುದ್ದಿಯೇ ಇಲ್ಲದೆ, ಸುಗ್ರೀವಂ - ಸುಗ್ರೀವನನ್ನು, ದ್ರಷ್ಟುಂ - ನೋಡಲಿಕ್ಕೆ, ನಚಶಕ್ಷ್ಯಾಮಿ - ಶಕ್ತನಾಗಲಾರೆನು ॥ ೩೮॥ ॥ ಇಹಸ್ಥೇ - ಇಲ್ಲಿರುವ, ಮಯಿ - ನಾನು, ಅಗಚ್ಛತಿ (ಸತಿ) ಅಲ್ಲಿಗೆಹೋಗದೆಯೇ ಇದ್ದರೆ, ಮಹಾತ್ಮಾನೌ- ಮಹಾರಥಿಕರೆನಿಸಿದ, ಧರ್ಮಾತ್ಮಾನೌ - ಬಹುಧರ್ಮತತ್ಪರರಾದ, ತೌ - ಆರಾಮ ಲಕ್ಷ್ಮಣರು, ಆಶಯಾ - ಹನುಮನು ಸೀತೆಯ ಕುಶಲವೃತ್ತಾಂತವನ್ನು ತಂದು ಹೇಳುವನೆಂಬ ಬಯಕೆಯಿಂದ, ಧರಿಷ್ಯೇತೇ- ಪ್ರಾಣಗಳನ್ನು ಉಳಿಸಿಕೊಂಡಿರುವರು, ವಾನರಾಶ್ಚ - ಸುಗ್ರೀವಾದಿಗಳು ಮತ್ತು ಜಾಂಬವ ಮೊದಲಾದವರೂ, ಮನಸ್ವಿನಃ-(ಮಾರುತಿಯು ಸೀತೆಯ ಸುದ್ದಿಯನ್ನು ತರುವನೆಂಬ) ಮನೋನಿಶ್ಚಯವುಳ್ಳವರಾಗಿಯೇ ಇರುವರು ॥೩೯॥ ॥
(ಅಹಂ - ನಾನು) ಜನಕಾತ್ಮಜಾಂ - ಸೀತೆಯನ್ನು, ಅದೃಷ್ಟ್ವಾ - ಕಾಣದೆ ಹೋಗುವಾಗ, ಹಸ್ತಾದಾನಃ-ಯಾರಾದರು ನನ್ನಅಂಗೈಯ್ಯೊಳಗೆನೀಡಿರುದನ್ನು ತಿಂದುಕೊಂಡಿರತಕ್ಕವನಾಗಿಯೂ,ಮುಖಾದಾನಃ-

---

ಘೋರವಾದ ಗೋಳು ಹರಡುವುದು ದಿಟ, ಇಕ್ಷ್ವಾಕುಮಹಾರಾಜನ ಮನೆತನವೇ ಹಾಳಾಗುವುದು, ಕಪಿಗಳ ಕುಲವೇ ಕೊಳ್ಳೆಹೋಗುವುದು ॥೩೭॥ ॥ ಅದರಿಂದ ಈಗ ನನಗೆ ಇನ್ನೊಂದುಯೋಚನೆಯು ಹೊಳೆಯುತ್ತದೆ. ಅದೇನೆಂದರೆ--ನಾನು ಇಲ್ಲಿಂದ ಹೋಗಿ ಅಲ್ಲಿ ದುಃಖದ ಕಡಲಿನ ಕಾಲುವೆಯನ್ನು ಹರಿಸುವುದಕ್ಕಿಂತಲೂ ಅಂತಪಾರಶೋಕಕ್ಕೆ ಮೂಲ ಕಾರಣನಾಗಿರುವ ನಾನು ಇಲ್ಲಿಂದ ಕಿಷ್ಕಿಂಧಾನಗರವನ್ನು ಹೋಗುವುದೇ ಇಲ್ಲ, ಸೀತೆಯನ್ನು ಕಾಣದೆ ನಾನು ಹೋಗಿ ನನ್ನ ಕೆಟ್ಟಮುಖವನ್ನು ಸುಗ್ರೀವನಿಗೆ ತೋರಿಸಲಾರೆ॥೩೮॥॥ ನಾನುಹೋಗದೆ ಇಲ್ಲಿಯೇ ಇದ್ದುಬಿಟ್ಟರೆ, ಮಹಾಧಾರ್ಮಿಕರೂ ಮಹಾರಥಿಕರೂ ಆಗಿರುವ ರಾಮಲಕ್ಷ್ಮಣರೂ ಇತರ ವಾನರರೂ ಸಹ ವಾಯುಪುತ್ರನು ವಾರಿಧಿಯನ್ನು ದಾಟಿ ಹೋಗಿದಾನೆ, ವೈದೇಹಿಯ ಕುಶಲವಾರ್ತೆಯನ್ನು ತರುವನು ಎಂಬ ಆಶೆಯಿಂದ ನನ್ನಲ್ಲಿಯೇ ಮನಸ್ಸುಳ್ಳವರಾಗಿ ಜೀವಸಹಿತರಾಗಿರುವರು, ಇದೇಬಳ್ಳೆಯಕೆಲಸವೆಂದುತೋರುತ್ತದೆ॥ ೩೯॥-॥ ಹಾಗೆ ನಾನು ಇಲ್ಲಿ ಉಳಿದರೂ ಸುಮ್ಮನಿರುವುದಿಲ್ಲ. ಸೀತೆಯನ್ನು ಕಾಣದೆ ಹೋಗುವ ಪಕ್ಷದಲ್ಲಿ ಮರಗಳಿಂದ ತಾನಾಗಿ ಕಯ್ಯಲ್ಲಿ ಉದುರಿದ ಹಣ್ಣನ್ನು, ಇಲ್ಲವೆ ಯಾರಾದರು ತಾವಾಗಿಯೇ ಕಯ್ಯಲ್ಲಿ ಹಾಕಿದ ಆಹಾರವನ್ನು ತಿಂದುಕೊಂಡು ಇಂದ್ರಿಯ ವ್ಯಾಪಾರಗಳನ್ನು

ವಾನಪ್ರಸ್ಥೋ ಭವಿಷ್ಯಾಮಿ ಹ್ಯದೃಷ್ಟ್ವಾ ಜನಕಾತ್ಮಜಾಂ ॥ ೪೦ ॥
ಸಾಗರಾನೂಪಜೇ ದೇಶೇ ಬಹುಮೂಲಫಲೋದಕೇ ।
ಚಿತಾಂ ಕೃತ್ವಾ ಪ್ರವೇಕ್ಷ್ಯಾಮಿ ಸಮಿದ್ಧ ಮರಣೀಸುತಂ ॥ ೪೧ ॥
ಉಪವಿಷ್ಟಸ್ಯ ವಾ ಸಮ್ಯಗ್ಲಿಂಗಿನಂ ಸಾಧಯಿಷ್ಯತಃ ।
ಶರೀರಂ ಭಕ್ಷಯಿಷ್ಯಂತಿ ವಾಯಸಾಶ್ಶ್ವಾಪದಾನಿ ಚ ॥ ೪೨ ॥
ಇದಂ ಮಹರ್ಷಿಭಿರ್ದೃಷ್ಟಂ ನಿರ್ಯಾಣಮಿತಿ ಮೇ ಮತಿಃ ।

---

ಹಾಗೆಯೇ ಯಾರಾದರು ತಾವಾಗಿ ನನ್ನ ಬಾಯೊಳಗೆ ಹಾಕಿದುದನ್ನು ತಿಂದು ಕೊಂಡಿರತಕ್ಕವನಾಗಿಯೂ, ನಿಯತಃ - ನಿಯಮಪರನಾಗಿ, ವೃಕ್ಷಮೂಲಿಕಃ - ಮರದ ಬುಡದ ಮನೆಯುಳ್ಳವನಾಗುತ್ತಾ ವಾನಪ್ರಸ್ಥಃ - ವನಪ್ರಯಾಣದಲ್ಲಿರತಕ್ಕವನೇ. ಭವಿಷ್ಯಾಮಿ - ಆಗುವೆನು, ಹಿ - ನಿಶ್ಚಯ, ॥ ೪೦ ॥ (ಅಥವಾ - ಹಾಗಿಲ್ಲದಿದ್ದರೆ) ಸಾಗರ - ಕಡಲಿನ, ಅನೂಪಜೇ - ನೀರಿನ ಅಂಚಿನಲ್ಲಿರುವ, ಬಹುಮೂಲಫಲೋದಕೇ - ಹೆಚ್ಚಾದ ಬೇರು, ಹಣ್ಣು, ನೀರು ಇರುವ, ದೇಶೇ - ಸ್ಥಲದಲ್ಲಿ, ಚಿತಾಂ - ಚಿತಿಯನ್ನು, ಕೃತ್ವಾ - ಸಿದ್ಧಪಡಿಸಿ, ಸಮಿದ್ಧಂ - ಚೆನ್ನಾಗಿ ಉರಿಯುತಲಿರುವ, ಅರಣೀಸುತಂ - ಅಗ್ನಿಯನ್ನು, ಪ್ರವೇಕ್ಷ್ಯಾಮಿ - ಪ್ರವೇಶಿಸುವೆನು ॥ ೪೧ ॥ ವಾ - ಅಥವಾ, ಉಪವಿಷ್ಟಸ್ಯ - ಸಾವಿಗಾಗಿ ಸಂಕಲ್ಪಿಸಿ ನೆಲದ ಮೇಲೆ ಆಶನವಿಲ್ಲದೆ ಕುಳಿತುಕೊಂಡ, ಲಿಂಗಿನಂ - ಆತ್ಮನನ್ನು, ಸಾಧಯಿಷ್ಯತಃ - ಶರೀರದಿಂದ ಬೇರ್ಪಡಿಸಲೆಳಸಿದ (ಲಿಂಗಿನಂ - ಸನ್ಯಾಸವನ್ನು, ಸಾಧಯಿಷ್ಯತಃ - ಆಶ್ರಯಿಸಿದ) ಮನ್ನ ಶರೀರಂ - ದೇಹವನ್ನು, ವಾಯಸಾಃ - ಕಾಗೆಗಳೂ, ಶ್ವಾಪದಾನಿ ಚ ? ಕುಲಿ ಮೊದಲಾದ ಘಾತಕ ಜಂತುಗಳೂ, ಸಮ್ಯಕ್ - ಚೆನ್ನಾಗಿ (ತೃಪ್ತಿಯಾಗುವಂತೆ) ಭಕ್ಷಯಿಷ್ಯನ್ತಿ - ತಿಂದುಕೊಳ್ಳುವುವು ॥ ೪೨ ॥ ‡ ಜಾನಕೀಂ - ಸೀತೆಯನ್ನು, ನಪಶ್ಯಾಮಿಚೇತ್ - ಕಾಣದೆಯೇ ಹೋದರೆ, ಆಪಃ - ಜಲವನ್ನು ? ಪ್ರವೇಕ್ಷ್ಯಾಮಿ - ಪ್ರವೇಶಿಸುವೆನು, ಇದಂ - ಈವಿಧವಾದ, ನಿರ್ಯಾಣಂ - ವಿಪತ್ಕಾಲದಲ್ಲಿನ ಸಾವು, ಮಹರ್ಷಿಭಿಃ -

---

ಅಡಗಿಸಿ ಮರಗಳ ಬುಡಗಳಲ್ಲಿ ವಾಸಮಾಡಿಕೊಂಡು ವಾನಪ್ರಸ್ಥನಾಗಿದ್ದುಕೊಂಡಿರುವೆನು ॥ ೪೦ ॥-॥ ಹಾಗೆಯೇ ಇರುತ್ತಿದ್ದು ಕಡಲಿನಪಕ್ಕದಲ್ಲಿನ ಗಡ್ಡೆ, ಗೆಣಸು, ಹಣ್ಣು ನೀರುಗಳಿಂದ ಪೂರ್ಣವಾಗಿರುವ ಜಲಪ್ರಾಯವಾದ ದೇಶದಲ್ಲಿ ಚಿತಿಯನ್ನು ಸಿದ್ಧಪಡಿಸಿ ಅಗ್ನಿಯನ್ನು ಚೆನ್ನಾಗಿ ಪ್ರಜ್ವಲಿಸುವಂತೆ ಮಾಡಿ ಆ ಚಿತಿಯಲ್ಲಿಯಾದರೂ ಪ್ರವೇಶಿಸುತ್ತೇನೆ ॥೪೧॥-॥ ಅಥವಾ ಯಾವುದಾದರೊಂದು ಸ್ಥಲದಲ್ಲಿ ಕುಳಿತು ಎಲ್ಲದರಲ್ಲಿಯೂ ಆಶೆಯನ್ನು ತೊರೆದು ಸನ್ಯಾಸವನ್ನು ಆಶ್ರಯಿಸಿ ದೇಹಾಭಿಮಾನವನ್ನು ತೊರೆದು, ಈ ದೇಹದಿಂದ ಆತ್ಮನನ್ನು ಬೇರ್ಪಡಿಸುವ ಪ್ರಯತ್ನದಲ್ಲಿರುವಾಗ ಕಾಗೆಗಳೋ, ನಾಯಿಗಳೋ, ನರಿಗಳೋ, ಈ ಶರೀರವನ್ನು ತಿಂದುಕೊಳ್ಳಲಿ, ಹಾಗಾದರೂ ಮಾಡುತ್ತೇನೆ ॥೪೨॥-॥ ಮಹಾವಿ

---

‡ " ಆಪದಂಪ್ರತಿಪನ್ನಸ್ಯ ಮಹಾಪಾಪಕೃತಸ್ತಥಾ । ಚಿರಂ ಕರ್ಮವಿಹೀನಸ್ಯ ಆತ್ಮಘಾತೋ ನ ದೋಷಭಾಕ್" ॥ ಪ್ರಬಲವಾದ ಅಪಕೀರ್ತಿ, ದೀರ್ಘರೋಗ ಮೊದಲಾದ ಆಪತ್ತನ್ನು ಹೊಂದಿದವನೂ, ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾಪವನ್ನು ಮಾಡಿದವನೂ, ಬಹುಕಾಲದವರೆಗೆ ಸ್ವಾಶ್ರಮ ಕರ್ಮಭ್ರಷ್ಟನಾದವನೂ ಭೃಗುಪತನಾ (ಬೆಟ್ಟದ ಮೇಲಿನಿಂದ ಉರುಳುವುದು), ದಿಗಳಿಂದ ಆತ್ಮ ತ್ಯಾಗವನ್ನು ಮಾಡಿಕೊಂಡರೆ ದೋಷವಿಲ್ಲವೆಂಬುದು—ರಾ॥ಮ॥ ಆ॥

ಸಮ್ಯಗಾಪಃ ಪ್ರವೇಕ್ಷ್ಯಾಮಿ ನ ಚೇತ್ಪಶ್ಯಾಮಿ ಜಾನಕೀಂ ॥ ೪೩॥ ॥
ಸುಜಾತಮೂಲಾ ಸುಭಗಾ ಕೀರ್ತಿಮಾಲಾ ಯಶಸ್ವಿನೀ ।
ಪ್ರಭಗ್ನಾ ಚಿರರಾತ್ರೀಯಂ ಮಮ ಸೀತಾ ಮಪಶ್ಯತಃ ॥ ೪೪॥ ॥
ತಾಪಸೋವಾ ಭವಿಷ್ಯಾಮಿ ನಿಯತೊ ವೃಕ್ಷಮೂಲಿಕಃ ।
ನೇತಃ ಪ್ರತಿಗಮಿಷ್ಯಾಮಿ ತಾ ಮದೃಷ್ಟ್ವಾಸಿತೇಕ್ಷಣಾಂ ॥೪೫॥ ॥

---

ಮಹಾಮುನಿಗಳಿಂದ, ದೃಷ್ಟಂ - ಕಂಡು ಹಿಡಿಯಲ್ಪಟ್ಟದಾರಿಯು (ನಿಶ್ಚಯಿಸಲ್ಪಟ್ಟಿದೆ) ಇತಿ - ಹೀಗೆಂದು ಮೇ - ನನಗೆ, ಮತಿಃ ಬುದ್ಧಿಯುಂಟಾಗಿದೆ ॥ ೪೩॥ ॥ ಸುಜಾತಮೂಲಾ - ಮೊಟ್ಟಮೊದಲಿನ ಲಂಕೆಯು ವಿಜಯದಿಂದ ಬಳ್ಳಿಯು ಹುಟ್ಟಿತ್ಲು, (ಬಳ್ಳಿಯು ಆರಂಭವುಳ್ಳ) ಸುಭಗಾ - ತರುವಾಯ ಚಂದ್ರೋದಯ ದಿಂದ ಬಹಳ ಮಂಗಳ ಕರವೆನಿಸಿದ, ಕೀರ್ತಿಮಾಲಾ - ಹನುಮನು ಹೊಳಲನ್ನು ಹೊಕ್ಕರಾತ್ರಿಯೆಂಬ ಹೆ ಸರುಮಾಸಿಯು ಹೂವಿನ ಹಾರವುಳ್ಳ, ಯಶಸ್ವಿನೀ - ನಾನು ಸೀತೆಯನ್ನು ಹುಡುಕುವಾಗ ಯಾವುದೊಂದು ಅಡ್ಡಿಯೂ ಇಲ್ಲದ ಸುಗುಣವುಳ್ಳ. ಇಯಂ - ಈ, ಚಿರರಾತ್ರೀ - ನನ್ನ ಜಾಗರಣೆಯಿಂದ ಚೆನ್ನಾಗಿ ಬೆಳೆದ ಇರುಳೆಂಬ ಮುತ್ತೈದೆಯು, ಸೀತಾಂ - ಸೀತೆಯನ್ನು, ಅಪಶ್ಯತಃ - ಕಾಣದಿರುವ, ಮೇ-ನನಗೆ, ಪ್ರಭಗ್ನಾ - ಪತಿಹೀನಳಾದ ಸತಿಯಂತೆ, (ನಶೋಭಿತ - ಪ್ರಕಾಶಿಸುವುದಿಲ್ಲ) ॥ ೪೪ ॥ ॥ ವಾ - ತಾಪಸವೃತ್ತಿ, ಮರಣವೃತ್ತಿಗಳೊಳಗೆ, ಅಸಿತೇಕ್ಷಣಾಂ - ಕಪ್ಪನೆಯ ಕಣ್ಣುಳ್ಳ, ತಾಂ - ಆ ಜಾನಕಿಯನ್ನು, ಅದೃಷ್ಟ್ವಾ - ಕಾಣದೆ ಹೋದಾಗ, ಇತಃ - ಇಲ್ಲಿಂದ, ನಪ್ರತಿಗಮಿಷ್ಯಾಮಿ - ಹಿಂತಿರುಗಿಹೋಗುವುದೇ ಇಲ್ಲ, ನಿಯತಃ-ವಾಕ್ ಮೌನವುಳ್ಳವನಾಗಿ (ಇಂದ್ರಿಯ ನಿಗ್ರಹವುಳ್ಳವನಾಗಿ) ವೃಕ್ಷಮೂಲಿಕಃ-ಮರದ ಬುಡದಲ್ಲಿ ವಾಸಮಾಡುತ್ತಿರುವವನಾಗಿಯೂ, ತಾಪಸಃ - ಮುನಿವೃತ್ತಿಯುಳ್ಳವನೇ, ಭವಿಷ್ಯಾಮಿ - ಆಗುವೆನು ॥ ೪೫॥ ॥

---

ಪತ್ತಿನಲ್ಲಿಯೂ, ದೀರ್ಘರೋಗವನ್ನು ಅನುಭವಿಸುತ್ತಿರುವಾಗಲೂ, ಮಹಾಪಾಪವನ್ನು ಆಚರಿಸಿದಾಗಲೂ, ಬಹುಕಾಲದವರೆಗೆ ಶಕ್ತ್ಯಭ್ರಷ್ಟನಾಗಿರುವಾಗಲೂ, ಈ ವಿಧವಾದ ಮರಣವು ಆತ್ಮಹತ್ಯಾದೋಷಕ್ಕೆ ಒಳಗಾಗದೆಂದು ಮಹರ್ಷಿಗಳು ಗೊತ್ತುಮಾಡಿ ಇದ್ದಾರೆ. ಇದೆ ಒಳ್ಳೆಯ [illegible]ಯೆಂದು ಭಾವಿಸುತ್ತೇನೆ. ಅಥವಾ ಜಾನಕಿಯನ್ನು ಕಾಣದೆ ಹೋದೆನೇ, [illegible] ಕಡೆ [illegible]ಯಾದರೂ ಧುಮಿಕಿ ಬಿಡುವೆನು॥ ಶ್ರೀರಾಮಕಾರ್ಯಾರ್ಥವಾಗಿ ಪ್ರವರ್ತಿಸಿದ ನನಗೆ ಶುಭಮುಹೂರ್ತವೇ ಕೊಡು ಮೊಟ್ಟಮೊದ [illegible] ಕಾವಿಜ[illegible]ಗಳಿಂದ ಆರಂಭವಾಗಿ (ಹನ್ನಿ [illegible]) ಬೆಳದಿಂಗಳ ಬೆಳಕಿನಿಂದ ಬಹು ಸೌಂದರ್ಯವತಿಯೆನಿಸಿ, ನನಗೆ ಯಾವುದೊಂದು ಅಡ್ಡಿಯೂ ಇಲ್ಲವಂತೆ ಮಾಡಿದುದರಿಂದ ಒಳ್ಳೆಯ ಹೆಸರನ್ನು ಪಡೆದು, ನಾನು ಪ್ರವೇಶಿಸಿದ ಇರುಳೆಂದು ಸುಪ್ರಸಿದ್ಧಿಯನ್ನು ಹೊಂದಿ, ಇದುವರಗೂ ಗರತಿಯಂತಿರುವ ಈ ರಾತ್ರಿಯೂ ಇಷ್ಟುದೂರ ಸುಖವಾಗಿ ಬೆಳೆದರೂ ನಾನು ಸೀತೆಯನ್ನು ಕಾಣದೆ ಹೋದದರಿಂದ ಈಗ ನನಗೆ ಸುಖಪರಿಣಾಮವುಳ್ಳುದಾಗದೆ ಹೋಯಿತು ॥೪೪॥-॥ ನಾನು ಹಿಂದಿನ ಹಾಗೆ [illegible] ತಾಪಸವೃತ್ತಿ, ಮರಣವೃತ್ತಿಗಳೊಳಗೆ,ಗಿಡ ಗಳ ಬುಡದಲ್ಲಿ ವಾಸಮಾಡುತ್ತಾ ಮುನಿವೃತ್ತಿಯುಳ್ಳವನೇ ಆಗುತ್ತೇನೆ. ಅಷ್ಟೇ ಹೊರತು ಕನ್ನೈದಿಲೆಯಂತೆ ಕಣ್ಣುಳ್ಳ ಆ ಸೀತಾದೇವಿಯನ್ನು ಕಾಣದೆ ಇಲ್ಲಿಂದ ಹೋಗುವುದೇ

ಯದೀತಃ ಪ್ರತಿಗಚ್ಛಾಮಿ ಸೀತಾ ಮನಧಿಗಮ್ಯ ತಾಂ ।
ಅಂಗದ ಸ್ಸಹ ತೈಸ್ಸರ್ವೈ ರ್ವಾನರೈ ರ್ನ ಭವಿಷ್ಯತಿ ॥ ೪೬ ॥
ವಿನಾಶೇ ಬಹವೋ ದೋಷಾ ಜೀವ ನ್ಭದ್ರಾಣಿ ಪಶ್ಯತಿ ।
ತಸ್ಮಾ ತ್ಪ್ರಾಣಾ ನ್ಧರಿಷ್ಯಾಮಿ ಧ್ರುವೋ ಜೀವಿತಸಂಗಮಃ ॥ ೪೭ ॥
ಏವಂ ಬಹುವಿಧಂ ದುಃಖಂ ಮನಸಾ ಧಾರಯ ನ್ಮುಹುಃ ।
ನಾಧ್ಯಗಚ್ಛ ತ್ತದಾ ಪಾರಂ ಶೋಕಸ್ಯ ಕಪಿಕುಂಜರಃ ॥ ೪೮ ॥

ತಾಂ - ಆ, ಸೀತಾಂ - ಸೀತಾದೇವಿಯನ್ನು, ಅನಧಿಗಮ್ಯ - ಕಾಣದೆಯೇ, ಇತಃ - ಇಲ್ಲಿಂದ, ಪ್ರತಿಗಚ್ಛಾಮಿಯದಿ - ಹಿಂದಿರುಗಿ ಹೋದವನೇ ಆದರೆ, ಅಂಗದಃ - ವಾಲಿಕುಮಾರನು, ತೈಃ - ಆ, ಸರ್ವೈಃ- ಸಮಸ್ತರಾದ, ವಾನರೈಸ್ಸಹ - ಕಪಿಗಳೊಡನೆ, ನಭವಿಷ್ಯತಿ - ಜೀವದೊಂದಿಗೆ ಉಳಿಯುವುದಿಲ್ಲ ॥೪೬॥ (ಹೀಗೆಂದುಕೊಂಡಬಳಿಕ) ವಿನಾಶೆ - ನಾನುಸತ್ತು ಹೋದಲ್ಲಿ, ಬಹವಃ - ಅನೇಕಗಳಾದ, ದೋಷಾಃ - ದೋಷಗಳಿವೆ, ಜೀವನ್ - ಜೀವಿಸುತಲಿರುವ ಮನುಷ್ಯನು, ಭದ್ರಾಣಿ - ಶುಭಗಳನ್ನು, ಪಶ್ಯತಿ - ಕಾಣುತ್ತಾನೆ, ತಸ್ಮಾತ್ - ಆದಕಾರಣದ ದೆಶೆಯಿಂದ, ಪ್ರಾಣಾನ್ - ಉಸಿರುಗಳನ್ನು, ಧರಿಷ್ಯಾಮಿ - ಧರಿಸಿರುವೆನು, ಜೀವಿತಸಂಗಮಃ - ಪ್ರಾಣಸಂಬಂಧವು, ಧ್ರುವಃ-ಶ್ರೇಯಸ್ಸಾಧನೆಯಲ್ಲಿ ನೆಲೆಯಾಗಿರುವುದು॥೪೭॥ ಕಪಿಕುಂಜರಃ - ಕಪಿವರನಾದ ಹನುಮನು, ಏವಂ - ಈ ಹಿಂದೆಹೇಳಿದ ರೀತಿಯಿಂದ, ಬಹುವಿಧಂ - ಅನೇಕಪ್ರಕಾರವಾದ, ದುಃಖಂ - ವ್ಯಸನವನ್ನು, ಮನಸಾ - ಮನಸ್ಸಿನಿಂದ, ಧಾರಯನ್ - ತಾಳುತ್ತಿರುವನಾಗಿ, ತದಾ - ಆಗ, ಶೋಕಸ್ಯ - ಅಪಾರವಾದ ದುಃಖದ, ಪಾರಂ - ತುದಿಯನ್ನು, ನಾಧ್ಯಗಚ್ಛತ್ ವ ಹೊಂದಲೇ ಇಲ್ಲ॥ ೪೮॥ ॥(ದೈನ್ಯವೇಕೆ? ಪೌರುಷವನ್ನೆ ಅವಲಂಬಿಸೋಣ ಎಂದುಕೊಂಡು)ಮಹಾಬಲಂ- ಬಹು ಬಲಶಾಲಿಯೆನಿಸಿದ, ದಶಗ್ರೀವಂ - ಹತ್ತು ಕೊರಳುಳ್ಳ, ರಾವಣಂವಾ - ರಾವಣನನ್ನಾದರೂ, ವಧಿ

ಇಲ್ಲ ॥೪೫॥-॥ ಸೀತೆಯ ಸಮಾಚಾರವನ್ನೇ ತಿಳಿಯಕೊಳ್ಳದೆ ಇಲ್ಲಿಂದ ನಾನು ಹಿಂದಿರುಗಿ ಹೋದರೆ ಮೊದಲು ಕಡಲಿನದಡದಲ್ಲಿ ನನ್ನ ಬರವನ್ನೇ ಎದುರುನೋಡುತ್ತಿರುವ ಅಂಗದ ಮೊದಲಾದವರ ಕಣ್ಣಿಗೆ ಬೀಳುವೆನು, ಸೀತೆಯನ್ನು ಕಾಣದಿರುವ ದುರ್ವಾರ್ತೆಯು ಮೊದಲು ಅವರ ಕಿವಿಗೇ ಬೀಳುವುದು. ಆಗ ಅಂಗದನು ಎಲ್ಲವಾನರರೊಡನೆ ಯಮ ಸೇರಿ, ಪೃಥ ಮತಃ ಪ್ರಾಣಗಳನ್ನು ಕಳೆದುಕೊಳ್ಳುವನು ಎಂದೀಪ್ರಕಾರ ಬಹಳ ಹೊತ್ತಿನವರೆಗೂ ಬಲುತರನಾಗಿ ಚಿಂತಿಸಿ ಕಟ್ಟಕಡೆಗೆ ಹೀಗೆ ನಿಶ್ಚಯಿಸಿದನು ॥೪೬॥ ॥ನಾನೇ ಸಾಯಲಿ, ಇಲ್ಲವೇ ರಾಮಾದಿಗಳೇ ಸಾಯಲಿ, ಬಹುವಿಧವಾದ ದೋಷಗಳು ತಲೆದೋರುವುವು, ಪ್ರಾಣಿಯು ಬದುಕಿದ್ದರೆ ಹೇಗಾದರೂ ಬಂದಲ್ಲದಿದ್ದರೆ ಮತ್ತೊಂದು ವೇಳೆ ಶುಭಗಳನ್ನು ಕಾಣುವನು, ಜೀವಿತವೊಂದು ಗಟ್ಟಿಯಾಗಿದ್ದರೆ ದೃಢವಾಗಿಯೂ ಶ್ರೇಯಸ್ಸಿನ ಸಂಬಂಧವುಂಟು ॥ ೪೭ ॥ ಎಂದೀಪರಿ ಅಡಿಗಡಿಗೂ ಬಗೆಬಗೆಯಾದ ದುಃಖಗಳನ್ನೆಲ್ಲ ಮನಸ್ಸಿನಿಂದ ತಾಳಿ, ಕಪಿವರನಾದಮಾರುತಿಯು ಶೋಕದ ಪಾರವನ್ನೇ ಕಾಣದೆ ಕರಗಿ, ಮರುಗಿ, ಕೊರಗಿ, ಇರುತ್ತಿದ್ದನು ॥೪೮॥ ॥ ಬಹಳ ಹೊತ್ತಿನವರೆಗೂ ಹಾಗೆ ಇದ್ದು ಆಮೇಲೆ ಅಂಜನೇಯನು ಮತ್ತೊಂದು ಬಗೆಯಾಗಿ ವಿಚಾರಮಾಡತೊಡಗಿದನು. ಅದೆಂತೆಂದರೆ-ಯಾವುದು ಹೇ

ರಾವಣಂ ವಾ ವಧಿಷ್ಯಾಮಿ ದಶಗ್ರೀವಂ ಮಹಾಬಲಂ ।
ಕಾಮ ಮಸ್ತು ಹೃತಾ ಸೀತಾ ಪ್ರತ್ಯಾಚೀರ್ಣಂ ಭವಿಷ್ಯತಿ ॥ ೪೯ ॥
ಅಥವೈನಂ ಸಮುತ್ಕ್ಷಿಪ್ಯ ಉಪರ್ಯುಪರಿ ಸಾಗರಂ ।
ರಾಮಾಯೋಪಹರಿಷ್ಯಾಮಿ ಪಶುಂ ಪಶುಪತೇ ರಿವ ॥ ೫೦ ॥
ಇತಿ ಚಿಂತಾಂ ಸಮಾಪನ್ನ ಸ್ಸೀತಾ ಮನಧಿಗಮ್ಯ ತಾಂ ।
ಧ್ಯಾನ ಶೋಕ ಪರೀತಾತ್ಮಾ ಚಿಂತಯಾಮಾಸ ವಾನರಃ ॥ ೫೧ ॥
ಯಾವ ತ್ಸೀತಾಂ ಹಿ ಪಶ್ಯಾಮಿ ರಾಮಪತ್ನೀಂ ಯಶಸ್ವಿನೀಂ ।
ತಾವ ದೇತಾಂ ಪುರೀಂ ಲಂಕಾಂ ವಿಚಿನೋಮಿ ಪುನಃ ಪುನಃ ॥ ೫೨ ॥

ಷ್ಯಾಮಿ - ಕೊಂದೇ ಬಿಡುವೆನು, ಸೀತಾ - ಜಾನಕಿಯು, ಹೃತಾಕಾಮಂ - ಅಪಹರಿಸಲ್ಪಟ್ಟವಳೇ, ಅಸ್ತು - ಆಗಿರಲಿ, ಪ್ರತ್ಯಾಚೀರ್ಣಂ - ಹಗೆತನವನ್ನು ತೀರಿಸಿ ಕೊಂಡಂತಾದರೂ, ಭವಿಷ್ಯತಿ - ಆಗುವುದು ॥೪೯॥ ಅಥವಾ - ಹಾಗಿಲ್ಲದಿದ್ದರೆ, ಏನಂ - ಈ ರಾವಣನನ್ನು, ಸಾಗರಂ ಉಪರ್ಯುಪರಿ - ಕಡಲಿನ ಮೇಲುಗಡೆಯಲ್ಲಿಯೇ, ಸಮುತ್ಕ್ಷಿಪ್ಯ - ಹಾರಿಸಿಕೊಂಡು, § ಪಶುಪತೇಃ - ಅಗ್ನಿಗೆ, ಪಶುಮಿವ - ಯಜ್ಞಪಶುವನ್ನು ಹೇಗೋ ಹಾಗೆ, ರಾಮಾಯ - ಶ್ರೀರಾಮನಿಗೆ, ಉಪಹರಿಷ್ಯಾಮಿ - ಕಾಣಿಕೆಯನ್ನಾಗಿ ಒಪ್ಪಿಸುವೆನು॥೫೦॥ ಇತಿ - ಈ ಪ್ರಕಾರವಾಗಿ, ಚಿಂತಾಂ - ವಿಚಾರವನ್ನು, ಸಮಾಪನ್ನಃ - ಮಾಡಿದವನಾಗಿ, ವಾನರಃ - ಮಾರುತಿಯು, ತಾಂ - ಆ, ಸೀತಾಂ - ಜಾನಕಿಯನ್ನು, ಅನಧಿಗಮ್ಯ - ಅರಿಯದೆ, ಧ್ಯಾನ - ಚಿಂತೆಯಿಂದಲೂ, ಶೋಕ - ದುಃಖದಿಂದಲೂ, ಪರೀತ - ತುಂಬಿದ, ಆತ್ಮಾ - ಮನಸ್ಸುಳ್ಳವನಾಗಿ, ಚಿಂತಯಾಮಾಸ - ಯೋಚಿಸತೊಡಗಿದನು ॥೫೧॥ ಯಶಸ್ವಿನೀಂ - ಒಳ್ಳೆಯ ಹೆಸರುವಾಸಿಯುಳ್ಳ, ರಾಮಪತ್ನೀಂ - ಶ್ರೀರಾಮವಲ್ಲಭೆಯಾದ, ಸೀತಾಂ - ಜಾನಕಿಯನ್ನು, ಯಾವದ್ಧಿ - ಯಾವಾಗ್ಗೆ, ಪಶ್ಯಾಮಿ - ನೋಡುವೆನೋ, ತಾವತ್ - ಅದುವರೆಗೂ, ಏತಾಂ - ಈ, ಲಂಕಾಂಪುರೀಂ - ಲಂಕಾಪಟ್ಟಣವನ್ನು, ಪುನಃ ಪುನಃ - ಅಡಿಗಡಿಗೂ ವಿಚಿನೋಮಿ - ಹುಡುಕುತ್ತಿರುವೆನು ॥೫೨॥ ಸಂಪಾತಿವಚನಾಚ್ಚಾಪಿ - ಸೀತೆಯು ಇಲ್ಲಿ ಇರುವಳೆಂದು

ಗಾದರೂ ಇರಲಿ ಮಹಾ ಬಲನೆನಿಸಿರುವ ದಶಗಳನಾದ ಈ ರಾವಣನನ್ನೇ ಮೊದಲು ಕೊಂದುಬಿಡುವೆನು, ಸೀತೆಯನ್ನು ಅಪಹರಿಸಿ ತಂದಿರುವನಲ್ಲ? ಅದಕ್ಕೆ ಏನಮಾಡಿದಂತಾಯಿತು ಎಂದರೆ, ಹಗೆತನದ ಹೊಟ್ಟೆಯುರಿಚ್ಚನ್ನಾದರೂ ತೀರಿಸಿಕೊಂಡಂತಾಗುವುದು॥೪೯॥ ಹಾಗಿಲ್ಲದಿದ್ದರೆ, ಯಜ್ಞದೊಳಗೆ ಅಗ್ನಿಗೆ ಪಶುವನ್ನು ಒಪ್ಪಿಸುವ ಹಾಗೆ, ಈ ರಾವಣನನ್ನು ಕಡಲಿನಮೇಲೆ ಕೊಂಡು ಹೋಗಿ ಆ ರಾಮನಿಗೇ ಬಲಿಯಾಗಿ ಒಪ್ಪಿಸುವೆನು॥೫೦॥ ಹೀಗೆಂದೂ ಚಿಂತಿಸುತ್ತಾ ಸೀತೆಯನ್ನು ಕಾಣದೆ ಮನದೊಳಗೆ ಜಾನಕಿಯನ್ನೇ ಧ್ಯಾನಿಸುತ್ತಿರುವವನಾಗಿ, ಬಹು ದುಃಖಪಡುತ್ತಾ ಪುನಃ ಮತ್ತೊಂದು ಬಗೆಯಾಗಿ ಆಲೋಚಿಸತೊಡಗಿದನು ॥೫೧॥ ಇಷ್ಟೆಲ್ಲ ಆಯಿತಷ್ಟೆ? ಇದೆಲ್ಲವೂ ಹಾಗಿರಲಿ, ಶ್ರೀರಾಮನ ಧರ್ಮಭಾರ್ಯೆಯೆನಿಸಿ, ಸಕಲ ಸದ್ಗುಣಸಂಪನ್ನೆಯೆಂದು ಲೋಕವಿಖ್ಯಾತಳಾಗಿರುವ ಸೀತೆಯನ್ನು ಕಾಣುವವರೆಗೂ

§ ಇಮಂ ಪಶುಂ ಪಶುಪತೇತೇ ಅದ್ಯ ಬಧ್ನಾ ಮ್ಯಗ್ನೇ ಎಂದು ಶ್ರುತಿ.

ಸಂಪಾತಿ ವಚನಾಚ್ಚಾಪಿ ರಾಮಂ ಯದ್ಯಾ ನಯಾಮ್ಯಹಂ ।
ಅಪಶ್ಯ ನ್ರಾಘವೋಃ ಭಾರ್ಯಾಂ ನಿರ್ದಹೇ ತ್ಸರ್ವ ವಾನರಾ‌ನ್ ॥ ೫೩ ॥
ಇಹೈವ ನಿಯತಾಹಾರೋ ವತ್ಸ್ಯಾಮಿ ನಿಯತೇಂದ್ರಿಯಃ ।
ನ ಮತ್ಕೃತೇ ವಿನಶ್ಯೇಯು ಸ್ಸರ್ವೇ ತೇ ನರ ವಾನರಾಃ ॥೫೪॥
ಅಶೋಕವನಿಕಾ ಚೇಯಂ ದೃಶ್ಯತೇ ಯಾ ಮಹಾದ್ರುಮಾ ।
ಇಮಾ ಮಧಿಗಮಿಷ್ಯಾಮಿ ನ ಹೀಯಂ ವಿಚಿತಾ ಮಯಾ ॥ ೫೫ ॥

ಹೇಳಿದ ಸಂಪಾತಿಯಮಾತಿನ ದೆಸೆಯಿಂದಲಾದರೂ, ರಾಮಂ - ಶ್ರೀರಾಮನನ್ನು, ಅಹಂ-ನಾನು, ಆನಯಾಮಿಯದಿ - ಇಲ್ಲಿಗೆ ಕರೆತಂದವನೇ ಆದರೆ, ರಾಘವಃ - ಶ್ರೀರಾಮನು, ಭಾರ್ಯಾಂ - ತನ್ನಪತ್ನಿಯನ್ನು, ಅಪಶ್ಯನ್ - ಇಲ್ಲಿಕಾಣದವನಾಗಿ, ಸರ್ವವಾನರಾನ್ - ಕಪಿಗಳನ್ನೆಲ್ಲ, ನಿರ್ದಹೇತ್-ಸುಟ್ಟುಬಿಟ್ಟಾನು ॥೫೩॥ (ತತಃ - ಆದಕಾರಣ) ಇಹೈವ - ಇಲ್ಲಿಯೇ, ನಿಯತಾಹಾರಃ - ಮಿತಾಹಾರಿಯಾಗಿಯೂ, (ಕಂದಮೂಲಗಳನ್ನು ತಿಂದುಕೊಂಡವನಾಗಿ) ನಿಯತೇಂದ್ರಿಯಃ - ಅಡಗಿಸಿದ ಇಂದ್ರಿಯವ್ಯಾಪಾರಗಳುಳ್ಳವನಾಗಿಯೂ, ವತ್ಸ್ಯಾಮಿ - ವಾಸಮಾಡಿಕೊಂಡಿರುವೆನು (ಏವಮಪಿ - ಹೀಗಾದರೂ) ಮತ್ಕೃತೇ - ನನ್ನ ನಿಮಿತ್ತದಿಂದ, ತೇ - ಆ, ಸರ್ವೇ - ಸಮಸ್ತರಾದ, ನರವಾನರಾಃ - ರಾಮಾದಿಗಳು ಮತ್ತು ಸುಗ್ರೀವಾದಿಗಳೂ, ನವಿನಶ್ಯೇಯುಃ - ನಾಶವಾಗದೆ ಇರಲಿ ॥೫೪॥

(ಅಹೋ-ಆಹಾ !) ಮಹಾದ್ರುಮಾ - ದೊಡ್ಡಮರಗಳುಳ್ಳ, ಯಾ - ಯಾವ, ಇಯಂ - ಈ, ಅಶೋಕವನಿಕಾಚ - ಅಶೋಕವೆಂಬ ತೋಟವೂ, ದೃಶ್ಯತೇ - ಕಾಣಬರುತಲಿದೆ, ಇಯಂ - ಈ ತೋಟವು, ಮಯಾ - ನನ್ನಿಂದ, ನವಿಚಿತಾಹಿ - ಹುಡುಕಲ್ಪಡಲಿಲ್ಲವಷ್ಟೆ ?, ಇಮಾಂ-ಈ ತೋಟವನ್ನು ಕುರಿತು, ಅಧಿಗಮಿಷ್ಯಾಮಿ - ತೆರಳುವೆನು, (ಇತಿ-ಹೀಗೆಂದುಕೊಂಡು) ॥೫೫॥ ವಸೂನ್-ಅಷ್ಟವಸುಗಳನ್ನೂ,

---

ಪುನಃ ಪುನಃ ಈ ಲಂಕೆಯೊಳಗೆ ಸುಡುಕುತಲೇ ಇರುವೆನು. ಸೀತೆಯನ್ನು ಯಾವಾಗ್ಗೆ ಕಾಣುವೆನೋ ನೋಡೋಣ ॥ ೫೨ ॥ ಹಿಂದೆ ಸಂಪಾತಿಯು ಹೇಳಿದಮಾತು ಸುಳ್ಳಾಗಲಿಕ್ಕಿಲ್ಲ ಅದರಂತೆ ಇಲ್ಲಿ ಸೀತೆಯು ನನ್ನ ಕಣ್ಣಿಗೇನೋ ಕಾಣಬರಲಿಲ್ಲ. ಒಂದು ವೇಳೆ ಅವಸವಾ ತನ್ನೇ ನಂಬಿ ರಾಘವನನ್ನೇ ಇಲ್ಲಿಗೆ ಕರತರಲೆ ? ಹಾಗೆ ಕರೆತಂದ ಬಳಿಕ ಆ ರಘುನಂದನನ ದೃಷ್ಟಿಗೂ ಸೀತೆಯು ಕಾಣಬರದೆ ಹೋದರೆ, ಆಗದಾಶರಥಿಗೆ ಮತ್ತಷ್ಟು ಸಿಟ್ಟು ಹೆಚ್ಚಿ, ಸಮಸ್ತ ಕಪಿಗಳನ್ನೂ ಒಂದೇ ಬಾರಿ ಒಟ್ಟಿಗೆ ಸುಟ್ಟೇ ಬಿಡುವನು ॥ ೫೩ ॥ ನನ್ನ ಮನಸ್ಸಿನ ಹಂಬಲಿಗೆ ಪಾರವೇ ಇಲ್ಲದಂತಾಗಿದೆ, ಏನಾದರಾಗಲಿ, ನಾನು ಹಿಂದಿರುಗಿ ಹೋಗಲೊಲ್ಲೆ, ಇಲ್ಲಿಯೇ ಗೆಡ್ಡೆಗೆಣಸುಗಳನ್ನು ತಿಂದು ಕೊಂಡು, ಮಿತಾಹಾರದಿಂದ ಇಂದ್ರಿಯನಿಗ್ರಹತತ್ಪರನಾಗಿ ವಾಸಮಾಡಿಕೊಂಡಿರುವೆನು, ಅನ್ಯಾಯವಾಗಿ ನನ್ನ ನಿಮಿತ್ತದಿಂದ ಕಪಿಗಳೆಲ್ಲರೂ ನಾಶವಾಗಿ ಹೋಗಬೇಡ ॥೫೪॥ ಎಂದು ಕೊಳ್ಳುತ್ತಿರುವಾಗ ತುಸಮುಬ್ಬು ಹರಿದು, ಸ್ವಲ್ಪದೂರದಲ್ಲಿ ಒಂದಾನೊಂದು ವನವು ಕಾಣಬರಲು, ಇಗೋ, ಇದೇನೋ ಇಲ್ಲಿ ದೊಡ್ಡಮರಗಳಿಂದ ತುಂಬಿದ ಒಂದು ಅಶೋಕವನವು ಕಾಣಬರುತಲಿದೆ, ಇಲ್ಲಿ ಮಾತ್ರ ಇನ್ನೂ ಸೀತೆಯನ್ನು ಹುಡುಕಿ ನೋಡಲಿಲ್ಲ. ಆದುದರಿಂದ ಅಲ್ಲಿಗೂ ಹೋಗಿನೋಡುವೆನು ॥ ೫೫ ॥ ಅಷ್ಟವಸುಗಳಿಗೂ, ಏಕಾದಶ ರುದ್ರರಿಗೂ, ಹಾಗೆಯೇ ಅಶ್ವಿನೀ

ವಸೂನ್ರುದ್ರಾಂಸ್ತಥಾದಿತ್ಯಾನಶ್ವಿನೌ ಮರುತೋಪಿ ಚ ।
ನಮಸ್ಕೃತ್ವಾ ಗಮಿಷ್ಯಾಮಿ ರಕ್ಷಸಾಂ ಶೋಕವರ್ಧನಃ ॥ ೫೬ ॥
ಜಿತ್ವಾ ತು ರಾಕ್ಷಸಾನ್ ಸರ್ವಾನಿಕ್ಷ್ವಾಕುಕುಲನಂದಿನೀಂ ।
ಸಂಪ್ರದಾಸ್ಯಾಮಿ ರಾಮಾಯ ಯಥಾ ಸಿದ್ಧಿಂ ತಪಸ್ವಿನೇ ॥ ೫೭ ॥
ಸ ಮುಹೂರ್ತಮಿವ ಧ್ಯಾತ್ವಾ ಚಿಂತಾವಗ್ರಥಿತೇಂದ್ರಿಯಃ ।
ಉದತಿಷ್ಠನ್ಮಹಾತೇಜಾ ಹನೂಮಾನ್ಮಾರುತಾತ್ಮಜಃ ॥ ೫೮ ॥
*ನಮೋಸ್ತು ರಾಮಾಯ ಸಲಕ್ಷ್ಮಣಾಯ ದೇವ್ಯೈ ಚ ತಸ್ಯೈ ಜನಕಾತ್ಮಜಾಯೈ।
ನಮೋಸ್ತು ರುದ್ರೇಂದ್ರಯಮಾನಿಲೇಭ್ಯೋ ನಮೋಸ್ತು ಚಂದ್ರಾರ್ಕಮರುದ್ಗಣೇಭ್ಯಃ॥

ರುದ್ರಾನ್ - ಏಕಾದಶರುದ್ರರನ್ನೂ, ತಥಾ - ಹಾಗೆಯೇ, ಆದಿತ್ಯಾನ್ - ದ್ವಾದಶಾದಿತ್ಯರನ್ನೂ, ಅಶ್ವಿನೌ - ಅಶ್ವಿನೀದೇವತೆಗಳನ್ನೂ, ಮರುತೋಪಿಚ-ಸಪ್ತಮರುತ್ತುಗಳನ್ನೂ ಕುರಿತು, ನಮಃ- ನಮಸ್ಕಾರವನ್ನು, ಕೃತ್ವಾ - ಮಾಡಿ, ರಕ್ಷಸಾಂ - ರಾಕ್ಷಸರಿಗೆ, ಶೋಕವರ್ಧನಃ - ದುಃಖವನ್ನು ಹೆಚ್ಚಿಸುವವನಾಗಿ, ಗಮಿಷ್ಯಾಮಿ - ಹೋಗುವೆನು, ॥ ೫೬ ॥ ಸರ್ವಾನ್ - ಸಮಸ್ತರಾದ, ರಾಕ್ಷಸಾನ್ - ರಕ್ಕಸರನ್ನು, ಜಿತ್ವಾ- ಗೆದ್ದು, ತಪಸ್ವಿನೆ - ತಪೋನಿಷ್ಠನಾದಮುನಿಗೆ, ಸಿದ್ಧಿಂ ಯಥಾ - ತಪಸ್ಸಿನ ಫಲವನ್ನು ದೈವವು ಹೇಗೆಕೊಡುವುದೋ ಹಾಗೆ, ಇಕ್ಷ್ವಾಕುಕುಲನಂದಿನೀಂತು - ಇಕ್ಷ್ವಾಕುವಂಶಕ್ಕೆ ಸಂತೋಷವನ್ನುಂಟು ಮಾಡುವ ಸೀತೆಯನ್ನಾದರೋ, ರಾಮಾಯ - ಶ್ರೀರಾಮನಿಗೆ, ಸಂಪ್ರದಾಸ್ಯಾಮಿ - ಕೊಡುವೆನು ॥೫೭॥ ಮಹಾತೇಜಾಃ- ಮಹಾತೇಜಸ್ವಿಯಾದ, ಮಾರುತಾತ್ಮಜಃ- ವಾಯುನಂದನನಾಗಿರತಕ್ಕ, ಸಃ - ಆ, ಹನುಮಾನ್- ಆಂಜನೇಯನು, ಮುಹೂರ್ತಮಿವ - ಸ್ವಲ್ಪಕಾಲಮಾತ್ರವೇ, ಚಿಂತಾ-ವ್ಯಸನದಿಂದ, ಅವಗ್ರಥಿತ - ತಡೆಯಲ್ಪಟ್ಟ (ಏನೊಂದೂ ತೋರದ) ಇಂದ್ರಿಯಃ - ಇಂದ್ರಿಯಗಳುಳ್ಳವನಾಗಿ, ಧ್ಯಾತ್ವಾ - ಯೋಚಿಸುತಲಿದ್ದು, ಉದತಿಷ್ಠತ್ - ಮೆಲ್ಲಗೆ ಎದ್ದನು ॥೫೮॥ * ಸಲಕ್ಷ್ಮಣಾಯ - ಲಕ್ಷ್ಮಣನಿಂದ ಸಹಿತನಾದ, ರಾಮಾಯ - ಶ್ರೀರಾಮಚಂದ್ರನಿಗೆ, ನಮಃ - ನಮಸ್ಕಾರವು, ಅಸ್ತು - ಆಗಲಿ, ತಸ್ಯೈ - ಆ ಲೋಕಮಾತೆಯಾದ, ಜನಕಾತ್ಮಜಾಯೈ - ಜನಕರಾಜಪುತ್ರಿಯಾಗಿರುವ, ದೇವ್ಯೈ - ಸೀತಾದೇವಿಗೂ, ನಮೋಸ್ತು -

ದೇವತೆಗಳಿಗೂ, ಸಪ್ತಮರುತ್ತುಗಳಿಗೂ ವಂದಿಸಿ, ಇಲ್ಲಿನ ರಕ್ಕಸರಿಗೆಲ್ಲ ವ್ಯಸನವನ್ನು ಹೆಚ್ಚಿಸತಕ್ಕವನಾಗಿ ಹೊರಡುವೆನು ॥೫೬॥ ತಪೋನಿಷ್ಠನಾದ ಮಹಾಮುನಿಗೆ ದೈವವು ಸಕಲ ವಿಘ್ನಗಳನ್ನೂ ತೊಲಗಿಸಿ, ತಪಸ್ಸಿನ ಫಲವನ್ನು ಒಪ್ಪಿಸುವ ಹಾಗೆ, ನಾನೂ ಸಕಲ ರಾಕ್ಷಸರನ್ನೂ ನಾಶಪಡಿಸಿ, ಬಹು ಕಷ್ಟದೊಳಗಿರುವ ಶ್ರೀರಾಮನಿಗೆ ಸೀತಾದೇವಿಯನ್ನು ಕೊಂಡೊಯ್ದು ಒಪ್ಪಿಸುವೆನು ॥ ೫೭ ॥ ಎಂದು ಸ್ವಲ್ಪ ಕಾಲದವರೆಗೂ ಧ್ಯಾನ ಪರನಾಗಿದ್ದು, ಬಹುತರವಾದ ಚಿಂತೆಗಳಿಂದ ನೊಂದಮನಸ್ಸುಳ್ಳವನಾಗಿ, ಮಹಾತೇಜಸ್ವಿಯಾದ ಮಾರುತಾತ್ಮಜನು ಮೆಲ್ಲಗೆ ಅಲ್ಲಿಂದ ಎದ್ದನು ॥ ೫೮ ॥ ಆಮೇಲೆ-ಸಕಲ ಸಲ್ಲಕ್ಷಣಗಳಿಂದೊಡಗೂಡಿದ ಲಕ್ಷ್ಮಣನಿಂದ ಸಹಿತನಾಗಿರುವ ಸಮಸ್ತ ಕಲ್ಯಾಣಗುಣಾಭಿರಾಮನಾದ ಶ್ರೀರಾಮನಿಗೂ, ಜನಕ ಮಹಾರಾಜಪುತ್ರಿಯೆನಿಸಿ ಸರ್ವಲೋಕ ಪೂಜ್ಯಳಾದ ಆ ಸೀತಾ

* ಇಲ್ಲಿ ಬಂದ ವಿಶೇಷವಾದ ರಹಸ್ಯವುಂಟು ಅದೇನೆಂದರೆ—“ನಮೋಸ್ತು ರಾಮಾಯ ಸಲಕ್ಷ್ಮಣಾಯ” ಎಂಬೀ ಶ್ಲೋಕವು ಸಾಧಾರಣಶ್ಲೋಕವಲ್ಲ (ಸಾರತರವೆನಿಸಿದ ಮಹಾಮಂತ್ರವಾಗಿದೆ). ಆಂಜನೇಯನು

ಸ ತೇಭ್ಯಸ್ತು ನಮಸ್ಕೃತ್ವಾ ಸುಗ್ರೀವಾಯ ಚ ಮಾರುತಿಃ ।
ದಿಶಸ್ಸರ್ವಾಸ್ಸಮಾಲೋಕ್ಯ ಹ್ಯಶೋಕವನಿಕಾಂಪ್ರತಿ ॥೬೦॥-॥

---

ಪ್ರಣಾಮವಾಗಲಿ, ರುದ್ರೇನ್ದ್ರಯಮಾನಿಲೇಭ್ಯಃ-ಶಿವ, ಇಂದ್ರ, ಯಮ, ವಾಯು ಇವರಿಗೂ, ನಮಃ ಅಸ್ತು - ವಂದನೆಯಾಗಲಿ, ಚಂದ್ರಾರ್ಕಮರುದ್ಗಣೇಭ್ಯಃ - ಚಂದ್ರ, ಸೂರ್ಯ, ದೇವತಾಸಮೂಹ

---

ದೇವಿಗೂ, ಈಶಾನ, ಇಂದ್ರ, ಯಮ, ಅನಿಲ ಮುಂತಾದ ದಿಕ್ಪಾಲಕರಿಗೂ, ಸೂರ್ಯ ಚಂದ್ರರಿಗೂ, ಸಮಸ್ತ ಮರುದ್ಗಣಗಳಿಗೂ ಸೀತಾ ಸಂದರ್ಶನಕಾರ್ಯ ಸಿದ್ಧಿಯುಂಟಾಗುವ

---

ಸ್ವಾಮಿಭಕ್ತಿಯು ಕೊನೆಗಾಣುವವರೆಗೂ ಸೀತಾದೇವಿಯ ಸಂದರ್ಶನಾರ್ಥವಾಗಿ ಅಲೆದು, ಬಳಲಿ, ಬಾಯಾರಿ ಹಂಬಲಿಸಿ, ಬಸವಳಿದು, ಬಹಳವಾಗಿ ವ್ಯಥೆಪಟ್ಟು, ಕಟ್ಟಕಡೆಗೆ ಭಗವಂತನನ್ನೇ ಶರಣುಹೊಗುವುದು ಹೊರತೂ ಬೇರೊಂದು ಹಾದಿಯಿಲ್ಲವೆಂದು ನಿರ್ಧರಿಸಿ, ಈ ಮಹಾಮಂತ್ರವನ್ನು ಪುರಶ್ಚರಣೆಮಾಡಿ, ಕಾರ್ಯಸಿದ್ಧಿಯನ್ನು ಪಡೆದನು. ಸಂಸಾರಿಗಳಾದವರೂ ಅಪಾರವಾದ ಕಷ್ಟಕ್ಕೆ ಸಿಲುಕಿ ನರಳಿ, ಪೇಚಾಡುತಲಿರುವಾಗ ಈ ಮಂತ್ರವನ್ನು ಸದ್ಗುರುವಿನ ಮೂಲಕ ಉಪದೇಶರೂಪವಾಗಿ ಪಡೆದು, ಮಾರುತಿಯ ಸನ್ನಿಧಾನದಲ್ಲಿ ಜಪಿಸುವವರೇ ಆದರೆ ಅವರು ಎಂತಹ ಕಷ್ಟಕ್ಕೆ ಸಿಕ್ಕಿಇದ್ದರೂ ಅವೆಲ್ಲವೂ ಪರಿಹಾರವಾಗಿ ಆ ಉಪಾಸಕರ ಮನೋರಥ ಖಂಡಿತವಾಗಿಯೂ ಕೈಗೂಡುವುದು. ಮಂತ್ರಪುರಶ್ಚರಣಕ್ರಮವೆಂತೆಂದರೆ:—

ಓಂ ಅಸ್ಯಶ್ರೀಮಾರುತೇರ್ಮಹಾಮಂತ್ರಸ್ಯ, ಶ್ರೀ ಭಗವಾನ್ ಹನುಮಾನ್ ಋಷಿಃ, ಶ್ರೀ ರಾಮಚನ್ದ್ರೋ ದೇವತಾ, ಶ್ರೀ ಸೀತೇತಿ ಬೀಜಂ, ಲಕ್ಷ್ಮಣ ಇತಿ ಶಕ್ತಿಃ, ಸಕಲದೇವತಾ ಇತಿಕೀಲಕಂ ಶ್ರೀ ಹನುಮತ್ಪ್ರೀತ್ಯರ್ಥೇ ಜಪೇವಿನಿಯೋಗಃ. ನಮೋಸ್ತುರಾಮಾಯ ।ಅಂ। ಸಲಕ್ಷ್ಮಣಾಯ। ತ। ದೇವ್ಯೈಚ ತಸ್ಯೈ। ಮ। ಜನಕಾತ್ಮಜಾಯೈ ।ಅ। ನಮೋಸ್ತುರುದ್ರೇಂದ್ರಯಮಾನಿಲೇಭ್ಯಃ। ಕ। ನಮೋಸ್ತು ಚನ್ದ್ರಾರ್ಕಮರುದ್ಗಣೇಭ್ಯಃ ।ಕರ। ಕರನಮಃ। ನಮೋಸ್ತುರಾಮಾಯ ಹೃದಯಾಯ। ಸಲಕ್ಷ್ಮಣಾಯ।ಶಿ। ದೇವ್ಯೈಚ ತಸ್ಯೈ। ಕವಚಾಯಹುಂ। ಜನಕಾತ್ಮಜಾಯೈ। ಶಿಖಾಯೈ ।ಚ। ನಮೋಸ್ತುರುದ್ರೇನ್ದ್ರಯಮಾನಿಲೇಭ್ಯಃ। ನೇತ್ರತ್ರಯಾಯ। ವ। ನಮೋಸ್ತುಚನ್ದ್ರಾರ್ಕಮರುದ್ಗಣೇಭ್ಯಃ ।ಅಸ್ತ್ರಾಯ। ಭೂರ್ಭುವಸ್ಸುವರೋಮಿತಿ। ದಿ। ಧ್ಯಾನಂ—ಆಂಜನೇಯ ಮತಿಪಾಟಲಾನನಂ ಕಾಂಚನಾದ್ರಿಕಮನೀಯವಿಗ್ರಹಂ । ಪಾರಿಜಾತತರುಮೂಲವಾಸಿನಂ ಭಾವಯಾಮಿ ಪವಮಾನನಂದನಂ ॥ ಎಂದು ಧ್ಯಾನಿಸಿ, ಬಳಿಕ “ನಮೋಸ್ತುರಾಮಾಯ” ಎಂಬ ಮಹಾಸಂಜೀವನ ಮಂತ್ರವನ್ನು ಯಥಾಶಕ್ತಿ ಜಪಿಸಬೇಕು. ಜಪಾನಂತರ ಉತ್ತರನ್ಯಾಸವನ್ನು ಆಚರಿಸಬೇಕು. ಆಮೇಲೆ ಯಸ್ಯಸ್ಮೃತ್ಯೇತ್ಯಾದಿ. ಈ ಕ್ರಮವನ್ನು ಒಂದುಸಪ್ತಕ, ಅಥವಾ ಅರ್ಧಮಂಡಲ, ಇಲ್ಲವೆ ಪೂರ್ಣಮಂಡಲದವರೆಗೆ ಏಕಭಕ್ತರಾಗಿ ಬ್ರಹ್ಮಚರ್ಯೆಯಿಂದ ನಿಯಮಬದ್ಧರಾಗಿ ಶ್ರದ್ಧಾಭಕ್ತಿಗಳಿಂದ ಅನುಷ್ಠಾನಮಾಡಿದರೆ ಕೋರಿಕೆಯು ಕೈಗೂಡುವ ವಿಷಯದಲ್ಲಿ ಸ್ವಪ್ನವಾಗುವುದು ಎಂಬುದು ಬಹು ಜನಾನುಭವಸಿದ್ಧವಾಗಿದೆ. ರಾ। ಮ। ಆ

ಸ ಗತ್ವಾ ಮನಸಾ ಪೂರ್ವಮಶೋಕ ವನಿಕಾಂ ಶುಭಾಂ।
ಉತ್ತರಂ ಚಿಂತಯಾಮಾಸ ವಾನರೋ ಮಾರುತಾತ್ಮಜಃ ॥೬೦॥
ಧ್ರುವಂ ತು ರಕ್ಷೋಬಹುಳಾ ಭವಿಷ್ಯತಿ ವನಾಕುಲಾ ।
ಅಶೋಕ ವನಿಕಾ ಚಿಂತ್ಯಾ ಸರ್ವ ಸಂಸ್ಕಾರ ಸಂಸ್ಕೃತಾ ॥೬೧॥
ರಕ್ಷಿಣಶ್ಚಾತ್ರ ವಿಹಿತಾ ನೂನಂ ರಕ್ಷಂತಿ ಪಾದಪಾನ್ ।

---

ಇವರಿಗೂ, ನಮಃಪ್ರಣತಿಯು, ಅಸ್ತು - ಆಗಲಿ, (ಇತಿ-ಹೀಗೆಂದು) ॥೫೯॥ ॥ ಸಃ - ಆ, ಮಾರುತಿಃ-ವಾಯುಪುತ್ರನು, ತೇಭ್ಯಸ್ತು - ರಾಮಾದಿಗಳಿಗೂ, ಸುಗ್ರೀವಾಯಚ - ಸುಗ್ರೀವನಿಗೂ, ನಮಸ್ಕೃತ್ಯ-ಕೈಗಳಿಂದಲೂ ನಮಸ್ಕಾರಮಾಡಿ, ಸರ್ವಾಃದಿಶಃ - ಎಲ್ಲದಿಕ್ಕುಗಳನ್ನೂ, ಸಮಾಲೋಕ್ಯ - ಚೆನ್ನಾಗಿ ನೋಡಿ, ಅಶೋಕವನಿಕಾಂಪ್ರತಿ - ಅಶೋಕವನಾಭಿಮಾನಿ ದೇವತೆಯನ್ನು ಕುರಿತೂ, ನಮಶ್ಚಕಾರ-ನಮಸ್ಕರಿಸಿದನು ॥೬೦॥ ॥ ಮಾರುತಾತ್ಮಜಃ - ವಾಯುನಂದನನಾದ, ವಾನರಃ - ಆ ಹನುಮಂತನು, ಪೂರ್ವಂ ಮೊದಲು, ಮನಸಾ - ಮನಸ್ಸಿನಿಂದ, ಶುಭಾಂ-ಮಂಗಳಕರವಾದ, ಅಶೋಕವನಿಕಾಂ - ಅಶೋಕವನ್ನು, ಕುರಿತು, ಗತ್ವಾ - ಹೋಗಿ, ಉತ್ತರಂ - ಮುಂದಿನ ಕೆಲಸವನ್ನು, ಚಿಂತಯಾಮಾಸ - ಯೋಚಿಸತೊಡಗಿದನು ॥೬೧॥ ॥ ರಕ್ಷೋಬಹುಳಾ-ವನಪಾಲಕರಾದ ರಕ್ಕಸರಿಂದ ತುಂಬಿರುವುದಾಗಿಯೂ, ವನಾಕುಲಾ-ಕಿರುದೋಟಗಳಿಂದ ಖಳಸಲ್ಪಟ್ಟುದಾಗಿಯೂ, ಸರ್ವಸಂಸ್ಕಾರ-ಎಲ್ಲಾ ಅಲಂಕಾರಗಳಿಂದ (ಕಸಿ ಮೊದಲಾದ ಸೆಬ್ಬೆಯಿಂದ) ಸಂಸ್ಕೃತಾ - ಅಲಂಕರಿಸಲ್ಪಟ್ಟುದೂ (ಸಂಸ್ಕರಿಸಲ್ಪಟ್ಟುದೂ) ಆಗಿರುವ, ಅಶೋಕವನಿಕಾತು-ಈ ಅಶೋಕವನವಾದರೋ, ಚಿಂತ್ಯಾ-ವಿಚಾರಿಸಿ ಹುಡುಕಿ ನೋಡತಕ್ಕದಾಗಿದೆ, ಧ್ರುವಂ-ನಿಶ್ಚಯು ॥

---

ವಿಷಯದಲ್ಲಿ ಅವರ ಪರಮಾನುಗ್ರಹ ವುಂಟಾಗಲೆಂದು ಇಗೋ ನಮಸ್ಕಾರವನ್ನು ಒಪ್ಪಿಸುತ್ತೇನೆ ॥ ೫೯॥ ॥ ಎಂದೀಪ್ರಕಾರ ಆದೇವತೆಗಳನ್ನು ವಂದಿಸಿ, ಹಾಗೆಯೇ ಕಪಿಸಾರ್ವಭೌಮನಾದ ಸುಗ್ರೀವನಿಗೆ ನಮಸ್ಕರಿಸಿ, ಎಲ್ಲದಿಕ್ಕುಗಳ ಕಡೆಗೂ ಹಾಯನೋಡಿ, ಅಶೋಕವನವನ್ನು ಕುರಿತುಪ್ರಯಾಣಮಾಡಲು ಅಣಿಯಾದನು॥೬೦॥॥ಹೀಗೆ ಮರುನ್ನಂದನನು ಮೊದಲು ಮನಸ್ಸಿನಿಂದ ಶುಭಕರವಾದ ಅಶೋಕವನವನ್ನು ಸೇರಿ, ಮುಂದೆ ಮಾಡಬೇಕಾದ ಕಾರ್ಯವನ್ನು ವಿಚಾರ ಮಾಡತೊಡಗಿದನು॥೬೧॥ ॥ಈ ಕಾಣಬರುವ ಅಶೋಕವನದಲ್ಲಿ ಬಹುಮಂದಿ ರಕ್ಕಸರು ಕಾಣಬರುತಲಿದಾರೆ, ಇದರಸುತ್ತಲೂ ಅನೇಕವಾದ ಕಿರುದೋಟಗಳು ಕಂಡುಬರುತಲಿವೆ. ನಾನಾವಿಧವಾದ ಅಲಂಕಾರಗಳಿಂದಲೂ, ಗಿಡಗಳಿಗೆ ಮಾಡಬೇಕಾದ ಕಸಿ(ದೋಹಲ)ಮೊದಲಾದ ಸಂಸ್ಕಾರಗಳಿಂದಲೂ, ಈ ವನವು ಶೋಭಿಸುತಲಿದೆ ಈ ಸ್ಥಳದಲ್ಲಿ ಸೀತೆಯನ್ನು ಚೆನ್ನಾಗಿ ವಿಚಾರಿಸಿ ಹುಡುಕಿ ನೋಡಬೇಕಾಗಿದೆ. ॥೬೨॥ ॥ ಕಾವಲುಗಾರರಾಗಿ ನಿಯಮಿಸಲ್ಪಟ್ಟಿರುವ ಬಹುಮಂದಿ ರಾಕ್ಷಸರು ಇಲ್ಲಿನ ಗಿಡ ಮರಗಳನ್ನು

---

ಶ್ಲೋಕೋಕ್ತರಾದ ದೇವತಾನುಗ್ರಹದಿಂದ ಕ್ಷುದ್ರವಿಘ್ನಪರಿಹಾರವೂ ಲಕ್ಷ್ಮಣಾನುಗ್ರಹದಿಂದ ಭಕ್ತ್ಯತಿಶಯವೂ, ಮಹಾದೇವೀ ವಾತ್ಸಲ್ಯದಿಂದ ಉಪಾಸನಾಪ್ರಾಬಲ್ಯವೂ, ಸದ್ಗುರುಸ್ಥಾನದ ಮಾರುತಿಯ ಕಟಾಕ್ಷದಿಂದ ಜ್ಞಾನಾಧಿಗಮವೂ, ತಾರಕಸ್ವರೂಪ ಶ್ರೀ ರಾಮಚಂದ್ರ ಪರಬ್ರಹ್ಮಪ್ರಸಾದದಿಂದ ಪರಮಪುರುಷಾರ್ಥ ಪ್ರಾಪ್ತಿಯೂ ಉಂಟಾಗುವುದೆಂಬುದು ಪರಮ ರಹಸ್ಯ ಎಂದು ಕೆಲವರು, ಎಂದು ಸುಂದರಕಾಂಡ ಮಹಿಮಾದರ್ಶ.

ಭಗವಾನಪಿ ಸರ್ವಾತ್ಮಾ ನಾತಿಕ್ಷೋಭಂ ಪ್ರವಾತಿ ವೈ ॥೬೩॥ ॥
ಸಂಕ್ಷಿಪ್ತೋಽಯಂ ಮಯಾತ್ಮಾಚ ರಾಮಾರ್ಥೇ ರಾವಣಸ್ಯಚ ।
ಸಿದ್ಧಿಂ ಮೇ ಸಂವಿಧಾಸ್ಯಂತಿ ದೇವಾಸ್ಸರ್ಷಿ ಗಣಾಸ್ತ್ವಿಹ ॥೬೪॥ ॥
ಬ್ರಹ್ಮಾ ಸ್ವಯಂಭೂ ರ್ಭಗವಾನ್ ದೇವಾ ಶ್ಚೈವ ದಿಶಂತು ಮೇ ।
ಸಿದ್ಧಿ ಮಗ್ನಿಶ್ಚ ವಾಯುಶ್ಚ ಪುರುಹೂತಶ್ಚ ವಜ್ರಭೃತ್ ॥೬೫॥ ॥
ವರುಣಃ ಪಾಶಹಸ್ತಶ್ಚ ಸೋಮಾದಿತ್ಯೌ ತಥೈವಚ ।

ಅತ್ರ - ಈ ವನದಲ್ಲಿ, ವಿಹಿತಾಃ - ನಿಯಮಿಸಲ್ಪಟ್ಟಿರುವ, ರಕ್ಷಿಣಶ್ಚ - ಕಾವಲುಗಾರರೂ, ಪಾದಪಾನ್ - ಗಿಡಗಳನ್ನು, ರಕ್ಷಂತಿ - ಪಾಲಿಸುತಲಿದಾರೆ, ಭಗವಾನ್ - ಪೂಜ್ಯನಾದ, ಸರ್ವಾತ್ಮಾಪಿ - ಸರ್ವವ್ಯಾಪಿಯಾದ ವಾಯುವೂ, ಅತಿಕ್ಷೋಭಂ - ಬಲುಗದ್ದಲವಾಗಿ, ನಪ್ರವಾತಿವೈ - ಬೀಸುತಲಿಲ್ಲ ॥೬೩॥ ॥ ರಾಮಾರ್ಥೇ- ಶ್ರೀರಾಮಕಾರ್ಯಾರ್ಥವಾಗಿಯೂ, ರಾವಣಸ್ಯಚ - ರಾವಣನು ನನ್ನನ್ನು ಕಂಡಾನೆಂಬ ನಿಮಿತ್ತವಾಗಿಯೂ, ಮಯಾಚ - ನನ್ನಿಂದಲೂ, ಆತ್ಮಾ - ಶರೀರವು, ಸಂಕ್ಷಿಪ್ತಃ - ಸೂಕ್ಷ್ಮವಾಗಿಮಾಡಲ್ಪಟ್ಟಿತು, ಸರ್ಷಿಗಣಾಃ - ಮುನಿಸಮೂಹದಿಂದೊಡಗೂಡಿದ, ದೇವಾಃ- ಸಮಸ್ತದೇವತೆಗಳೂ, ಮೇ- ನನಗೆ, ಇಹ - ಇಲ್ಲಿ, ಸಿದ್ಧಿಂ - ಕಾರ್ಯಸಿದ್ಧಿಯನ್ನು, ಸಂವಿಧಾಸ್ಯಂತಿ - ಚೆನ್ನಾಗಿಮಾಡುತ್ತಾರೆ ॥೬೪॥ ಸ್ವಯಂಭೂಃ - ತನ್ನಷ್ಟಕ್ಕೆತಾನೇ ಆವಿರ್ಭವಿಸುವ, ಭಗವಾನ್ - ಪೂಜ್ಯನಾದ. ಬ್ರಹ್ಮಾ - ಬ್ರಹ್ಮನೂ, ದೇವಾಶ್ಚೈವ - ಸಮಸ್ತದೇವತೆಗಳೂ, ಅಗ್ನಿಶ್ಚ - ಅಗ್ನಿಯೂ, ವಾಯುಶ್ಚ - ವಾಯುವೂ, ವಜ್ರಭೃತ್ - ವಜ್ರಪಾಣಿಯಾದ, ಪುರುಹೂತಶ್ಚ - ಇಂದ್ರನೂ ॥೬೫॥ ॥ ಪಾಶಹಸ್ತಃ - ಪಾಶಾಯುಧನಾದ, ವರುಣಶ್ಚ - ಜಲಾಧಿಪತಿಯಾದ ವರುಣನೂ, ತಥೈವಚ - ಹಾಗೆಯೇ, ಸೋಮಾದಿತ್ಯೌ - ಚಂದ್ರಸೂರ್ಯರೂ, ಮಹಾತ್ಮಾನೌ - ಮಹಾನುಭಾವರಾದ, ಅಶ್ವಿನೌಚ - ಅಶ್ವಿನೀದೇವತೆಗಳೂ, ಮರುತಃ - ಸಪ್ತಮರುತ್ತುಗಳೂ, ಶರ್ವಏವಚ - ಶಿವನೂ, ಮೇ - ನನಗೆ, ಸಿದ್ಧಿಂ - ಸೀತಾಸಂದರ್ಶನರೂಪಕಾರ್ಯಸಿದ್ಧಿಯನ್ನು, ದಿಶನ್ತು - ಕೊಡಲಿ,

ಕಾಪಾಡುತಲಿದಾರೆ, ಪೂಜ್ಯನೆನಿಸಿರುವ ನಮ್ಮ ತಂದೆಯಾದ ವಾಯುವೂ ಭಯಂಕರನೆನಿಸದೆ ಅನುಕೂಲವಾಗಿ ಪ್ರಸರಿಸುತಲಿರುವುದರಿಂದ ಸರ್ವಾತ್ಮನಾ ಸೀತೆಯು ಇಲ್ಲಿ ಇರಬಹುದೆಂದು ಸಂಭಾವಿಸುತ್ತೇನೆ ॥೬೩॥ ॥ ಈ ಮಧ್ಯೆ ನನ್ನನ್ನು ಯಾರಾದರೂ ಕಂಡು ರಾವಣನಿಗೆ ತಿಳಿದು, ಬಗೆ ಬಗೆಯ ಅಡ್ಡಿವಿಡ್ನಗಳೂ ಅಡರದೆ, ಸೀತಾ ಸಂದರ್ಶನರೂಪವಾದ ಶ್ರೀರಾಮಕಾರ್ಯವು ಸುಖವಾಗಿ ಸಿದ್ಧಿಸಲಿ ಎಂದು ನನ್ನ ಈ ಶರೀರವನ್ನು ಬಹಳವಾಗಿ ಅಡಗಿಸಿ ಸೂಕ್ಷ್ಮರೂಪಕ್ಕೆ ಇಳಿಸಿ ಇದ್ದೇನೆ, ಸಮಸ್ತ ದೇವತೆಗಳೂ, ಮಹರ್ಷಿಗಳೂ, ಈ ಸಂದರ್ಭದಲ್ಲಿ ನನಗೆ ಕಾರ್ಯಸಿದ್ಧಿಯುಂಟಾಗುವಂತೆ ಅನುಗ್ರಹಿಸತಕ್ಕವರಾಗಲಿ॥೬೪॥ತಾನಾಗಿಆವಿರ್ಭವಿಸತಕ್ಕವನೂ, ಷಡ್ಗುಣೈಶ್ವರ್ಯಸಂಪನ್ನನೂ, ಸರ್ವಲೋಕ ಪಿತಾಮಹನೂ ಆಗಿರುವ ಬ್ರಹ್ಮನೂ, ಆತನ ಲೋಕನಿವಾಸಿಗಳಾದ ದೇವತೆಗಳೂ, ಸರ್ವಲೋಕಪ್ರಕಾಶಕನಾದ ಅಗ್ನಿ, ಸರ್ವದೇಶವ್ಯಾಪಕನಾದ ವಾಯು, ನಿಖಿಲಬಲೈಶ್ವರ್ಯಾಭಿಮಾನಿ ದೇವತೆಯಾಗಿರುವ ವಜ್ರಹಸ್ತನಾದ ಇಂದ್ರ,॥೬೫॥ ॥ ಸಮಸ್ತ ಜಲಾಧಿಪತಿಯಾಗಿ ಪಾಶಹಸ್ತನೆನಿಸಿರುವ ವರುಣ, ಹಗಲು ರಾತ್ರಿಗಳಿಗೆ ಪ್ರಭುಗಳೆನಿಸಿರುವ ಸೂರ್ಯ ಚಂದ್ರರು, ಸರ್ವಾರೋಗ್ಯಪ್ರದರಾಗಿ ಮಹಾನುಭಾವರೆನಿಸಿದ ಅಶ್ವಿನೀದೇವತೆಗಳೂ, ಆನ ಕ್ಷುದ್ರವಿಘ್ನಗಳೂಬಾರದಂತೆ

ಅಶ್ವಿನೌ ಚ ಮಹಾತ್ಮಾನೌ ಮರುತ ಶ್ಚರ್ವ ಏವಚ ॥೬೬॥-॥
ಸಿದ್ಧಿಂ ಸರ್ವಾಣಿ ಭೂತಾನಿ ಭೂತಾನಾಂ ಚೈವ ಯಃ ಪ್ರಭುಃ ।
ದಾಸ್ಯಂತಿ ಮಮ ಯೇ ಚಾನ್ಯೇ ಹ್ಯದೃಷ್ಟಾಃ ಪಥಿ ಗೋಚರಾಃ ॥ ೬೭ ॥-॥
ತದುನ್ನಸಂ ಪಾಂಡುರ ದಂತಮವ್ರಣಂ ಶುಚಿಸ್ಮಿತಂ ಪದ್ಮಪಲಾಶಲೋಚನಂ।
ದ್ರಕ್ಷ್ಯೇ ತದಾರ್ಯಾ ವದನಂ ಕದಾ ನ್ವಹಂ ಪ್ರಸನ್ನ ತಾರಾಧಿಪತುಲ್ಯದರ್ಶನಂ ॥

(ಉಂಟುಮಾಡಲಿ) ॥೬೬॥ ॥ ಸರ್ವಾಣಿಭೂತಾನಿ - ಸಮಸ್ತಭೂತಗಳೂ, ಭೂತಾನಾಂಚೈವ - ಸಮಸ್ತಭೂತಗಳಿಗೂ, ಯಃ - ಯಾವನು, ಪ್ರಭುಃ - ಸ್ವಾಮಿಯೋ, ಸಃ - ಅಂತಹ ಪರಮೇಶ್ವರನೂ (ವಿಷ್ಣುವೂ) ಪಥಿ- ಮಾರ್ಗದಲ್ಲಿ, ಯೇಚಾನ್ಯೆ- ಮತ್ತಾವದೇವತೆಗಳು, ಅದೃಷ್ಟಾಃ- ಕಾಣಬರದಿರುವರೋ, ಗೋಚರಾಶ್ಚ - ಮತ್ತು ಕಾಣಬರುವರೋ, ತೇಹಿ - ಅವರೆಲ್ಲರೂ, ಮಮ - ನನಗೆ, ಸಿದಿಂ - ಪ್ರಕೃತಕಾರ್ಯಸಿದ್ಧಿಯನ್ನು, ದಾಸ್ಯನ್ತಿ - ಕೊಡತಕ್ಕವರಾಗಿದಾರೆ ॥೬೭॥ ॥ ತತ್ - ಆ ಸಮಸ್ತ ದೇವತಾನುಗ್ರಹದಿಂದ, ಉನ್ನಸಂ - ಎತ್ತರವಾದ ಮೂಗುಳ್ಳ, ಪಾಂಡುರದಂತಂ - (ಪತಿಯ ಅಗಲಿಕೆಯಿಂದ ತಾಂಬೂಲವಿಲ್ಲದಿರುವ ಕಾರಣ) ಬಿಳುಪಾದ ಹಲ್ಲುಗಳುಳ್ಳ, ಅವ್ರಣಂ - ಗಾಯವಿಲ್ಲದಿರುವ, ಶುಚಿಸ್ಮಿತಂ - ನಿರ್ಮಲವಾದ ಕಿರುನಗೆಯುಳ್ಳ, ಪದ್ಮಪಲಾಶಲೋಚನಂ - ತಾವರೆಯ ಎಸಳಿನಂತಿರುವ ಕಣ್ಣುಳ್ಳ, ಪ್ರಸನ್ನ - ಕಳಂಕರಹಿತನಾದ ತಾರಾಧಿಪ - ಚಂದ್ರನಿಗೆ, ತುಲ್ಯ - ಸಮಾನವಾದ, ದರ್ಶನಂ - ಮುಖಸೌಂದರ್ಯವುಳ್ಳ, ತತ್ - ಆ ಶ್ರೀರಾಮನುಹೇಳಿರುವ ಲಕ್ಷಣವುಳ್ಳ, ಆರ್ಯಾವದನಂ - ಪೂಜ್ಯಳಾದ ಸೀತೆಯ ಮುಖವನ್ನು, ಅಹಂ - ನಾನು, ಕದಾ - ಯಾವಾಗ್ಗೆ, ದ್ರಕ್ಷ್ಯೇನು - ನೋಡುವೆನೋ ॥೬೮॥ ॥ ಕ್ಷುದ್ರೇಣ - ನೀಚನೆನಿಸಿದ, ಪಾಪೇನ-

ದಯೆಗೈವ ಸಪ್ತಮರುತ್ತುಗಳು, ಜ್ಞಾನಾಭಿಮಾನಿ ದೇವತೆಯಾದ ಶರ್ವನೂ ॥೬೬॥ ॥ ಹಾಗೆಯೇ ಇತರ ಸರ್ವ ಭೂತಗಳೂ, ಸರ್ವಭೂತಾಧಿಪತಿಯಾದ ವಿಷ್ಣು ಅಥವಾ ಪರಮೇಶ್ವರನೂ, ಇವರಲ್ಲದೆ ಈಮಾರ್ಗದೊಳಗೆ ನನಗೆ ಗೋಚರಿಸುವ ಮತ್ತು ಗೋಚರಿಸದಿರುವ ಸಮಸ್ತ ಭೂತಗಳೂ ಸೀತಾ ಸಂದರ್ಶನ ಕಾರ್ಯ ಸಂಸಿದ್ಧಿಯಲ್ಲಿ ಪುನಃ ಪುನಃ ಪರಮಾನುಗ್ರಹವನ್ನು ದಯೆಪಾಲಿಸುವವರಾಗಲಿ ॥ ೬೭ ॥ ॥ ತುಸ ಎತ್ತರವಾದ ಮೂಗು, ಬೆಳ್ಳಗೆ ಮಲ್ಲಿಗೆಯ ಮೊಗ್ಗು ಮೊದಲಾದವುಗಳಹಾಗೆ ಬೆಳಗುತ್ತಾ ನಡುವೆ ಬಿಡುವಿಲ್ಲದ ಹಲ್ಲು, ಹೊಳೆವ ಕಿರುನಗೆ, ತಾವರೆಯ ಎಸಳನಂತೆಶೋಭಿಸುವ ಕಣ್ಣು, ಇತ್ಯಾದಿಗಳಿಂದೊಡಗೂಡಿ, ನಿಷ್ಕಳಂಕನಾದ ಶಶಾಂಕನಿಗೆಣೆಯೆನಿಸಿ, ಸಂಶೋಭಿಸುತಲಿರುವ ಸರ್ವಲೋಕವಂದಿತಳಾದ ಆ ಸೀತಾದೇವಿಯ ದಿವ್ಯ ವದನವನ್ನು ಯಾವಾಗ ದರ್ಶನ ಮಾಡುವೆನೋ ಅರಿಯೆನು ॥೬೮॥ ಬಲುಕೀಳನೂ, ಮಹಾ ಪಾಪಿಷ್ಠನೂ, ಕ್ರೂರಕರ್ಮಿಯೂ ಆಗಿರುವ ಈರಾವಣನು ಮಹಾ ಭಯಂಕರನಾದರೂ ಸುಂದರವಾದ ಸನ್ಯಾಸವೇಷ ಧಾರಣದಿಂದ ಅಪಹರಿಸಿ

ಕ್ಷುದ್ರೇಣ ಪಾಪೇನ ನೃಶಂಸಕರ್ಮಣಾ ಸು ದಾರುಣಾಲಂಕೃತ ವೇಷಧಾರಿಣಾ।
ಬಲಾಭಿಭೂತಾ ಹ್ಯಬಲಾ ತಪಸ್ವಿನೀ ಕಥನ್ನು ಮೇ ದೃಷ್ಟಿಪಥೇದ್ಯಸಾ ಭವೇತ್ ॥

ಇತಿ ಶ್ರೀಮತ್ಸುಂದರಕಾಂಡೆ ತ್ರಯೋದಶಸ್ಸರ್ಗಃ.

ಪಿಷ್ಟನಾದ, ನೃಶಂಸಕರ್ಮಣಾ - ಕ್ರೂರಕರ್ಮವುಳ್ಳ, ಸುದಾರುಣ - ಬಹುಭಯಂಕರನಾದರೂ, ಅಲಂಕೃತ ವೇಷ - ಅಲಂಕರಿಸಲ್ಪಟ್ಟ ವೇಷವನ್ನು, ಧಾರಿಣಾ - ಧರಿಸಿದ ರಾವಣನಿಂದ, ಬಲಾಭಿಭೂತಾ - ಬಲವಾಗಿ ತಿರಸ್ಕರಿಸಲ್ಪಟ್ಟಿರುವವಳಾದ ಕಾರಣವೇ, ಅಬಲಾ - ಅಸಹಾಯಳಾಗಿ, ತಪಸ್ವಿನೀ - ಬಹುದೀನಳೆನಿಸಿದ, ಸಾ - ಆ ಸೀತಾದೇವಿಯು, ಅದ್ಯ - ಇಂದು, ಮೇ- ನನ್ನ, ದೃಷ್ಟಿಪಥೆ- ದೃಷ್ಟಿಮಾರ್ಗದಲ್ಲಿ, ಕಥನ್ನು- ಹೇಗೆ, ಭವೇದ್ಧಿ - ಇರುವಳೋ (ಗೋಚರಿಸುವಳೋ) ॥೬೯॥ ॥

—ಇಂತು ಹದಿಮೂರನೆಯ ಸರ್ಗಂ—

—ಶ್ರೀ ರಾಮಾರ್ಪಣಂ—

ತಂದು ಬಹುವಾಗಿತೊಂದರೆಪಡಿಸಿ ಇರುವುದರಿಂದ ತಿರಸ್ಕಾರವನ್ನು ಪಡೆದು ಅಸಹಾಯಳಾಗಿ ಬಹು ಶೋಚನೀಯಳಾಗಿರುವ ಆ ಮಹಾನುಭಾವಳು ನನ್ನ ದೃಷ್ಟಿ ಪಥಕ್ಕೆ ಹೇಗೆ ಗೋಚರಿಸುವಳೋ ತಿಳಿಯದೇ ಎಂದು ಪವನನಂದನನು ಚಿಂತಿಸುತ್ತಿದ್ದನು ॥ ೬೯ ॥ ॥

— ಇಂತು ಹದಿಮೂರನೆಯಸರ್ಗಂ —

ಶ್ರೀ.

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ

# ಶ್ರೀಮತ್ಸುನ್ದರಕಾಣ್ಡೇ-ಚತುರ್ದಶಸ್ಸರ್ಗಃ.

**ಸ ಮುಹೂರ್ತ ಮಿವ ಧ್ಯಾತ್ವಾ ಮನಸಾ ಚಾಧಿಗಮ್ಯ ತಾಂ ।**
**ಅವಪ್ಲುತೋ ಮಹಾತೇಜಾಃ ಪ್ರಾಕಾರಂ ತಸ್ಯ ವೇಶ್ಮನಃ ॥೧॥**

---

## —ಹದಿನಾಲ್ಕನೆಯ ಸರ್ಗಂ—

**ಕಂದ—ಪ್ರಾಕಾರವ ತೊರೆದಾಹರಿ । ಶೋಕೇತರ ವನವ ನೈದಿ ಶಿಂಶುಪೆಯೆಂಬಾ ।**
**ನೋಕಹದೊಳ್ ಬೈತಿರ್ದ್ದ । ಕಾಕುತ್ಸ್ಥನ ಸತಿಯ ನಂತು ನಿರುಕಿಸುತಿರ್ದಂ ॥**

ಮಹಾತೇಜಾಃ - ಬಹುತೇಜಸ್ವಿಯಾದ, ಸಃ - ಆ ಮಾರುತಿಯು, ಮುಹೂರ್ತ್ತಮಿವ - ಸ್ವಲ್ಪಕಾಲ ಮಾತ್ರವೇ, ಧ್ಯಾತ್ವಾ - ವಿಚಾರಮಾಡಿ, ಮನಸಾ - ಮನಸ್ಸಿನಿಂದ, ತಾಂ - ಆ ಅಶೋಕವನನ್ನು, ಅಧಿಗಮ್ಯ - ಹೊಂದಿ, (ಅಶೋಕವನದಲ್ಲಿ ಮನಸ್ಸನ್ನಿಟ್ಟು) ತಸ್ಯವೇಶ್ಮನಃ - ಆ ತೋಟದಮನೆಯ, ಪ್ರಾಕಾರಂ - ಪೌಳಿಯನ್ನು ಕುರಿತು, ಅವಪ್ಲುತಃ - ಹಾರಿದನು, ಅಥವಾ—ಮಹಾತೇಜಾಃ - ತಪಸ್ಸಿದ್ಧಿಯುಳ್ಳ, ಸಃ - ಆ ಮಾರುತಿಯು, ಮುಹೂರ್ತ್ತಮಿವ - ಸ್ವಲ್ಪಕಾಲಮಾತ್ರ, ಧ್ಯಾತ್ವಾ - ಸಮಸ್ತದೇವತೆಗಳನ್ನೂ ವಂದಿಸಿ ಮನದೊಳಗೆ ಧ್ಯಾನಮಾಡಿ, ತಾಂ - ಆ ಸೀತಾದೇವಿಯನ್ನು, ಮನಸಾ - ಮನಸ್ಸಿನಿಂದ ಅಧಿಗಮ್ಯ - ಭಗವದನುಗ್ರಹದಿಂದ ದರ್ಶನಮಾಡಿ, ತಸ್ಯ - ಆ ಅಶೋಕವನಕ್ಕೆ ಸಂಬಂಧಪಟ್ಟ, ವೇಶ್ಮನಃ - ರಾವಣನುಬಂದು ಕೂಡುವಮನೆಯ, ಪ್ರಾಕಾರಂ - ಪೌಳಿಗೋಡೆಯನ್ನು ಕುರಿತು, ಅವಪ್ಲುತಃ - ಸೇರಿದನು ॥೧॥ ಸಃ- ಆ, ಮಹಾಕಪಿಸ್ತು - ಆಂಜನೇಯನಾದರೋ, ಸಂಹೃಷ್ಟ - ಮಾನಸಿಕವಾದ ಸೀತಾಸಾಕ್ಷಾತ್ಕಾರ (ಅಶೋಕವನದರ್ಶನ) ದಿಂದ ಅರಳಿದ, ಸರ್ವಾಂಗಃ - ಸರ್ವಾವಯವಗಳುಳ್ಳವನಾದ

---

ಶ್ರೀಃ.

## —ಹದಿನಾಲ್ಕನೆಯಸರ್ಗಂ—

ಮಹಾತೇಜಸ್ವಿಯಾದ ಮಾರುತಿಯು ಒಂದು ಮುಹೂರ್ತಕಾಲ ಪರದೇವತಾ ಧ್ಯಾನದೊಳದ್ದು ಮನಸ್ಸಿನೊಳಗೆ ಸೀತಾಸಾಕ್ಷಾತ್ಕಾರವನ್ನು ಪಡೆದನು. ಆಜನ್ಮಬ್ರಹ್ಮಚಾರಿಯಾಗಿ, ಯೋಗಪಾರಂಗತನೆನಿಸಿ, ಸ್ವಾಮಿಭಕ್ತಿಯೊಳಗೆ ನಿಸ್ಸೀಮನಾದ ಆ ಮಹಾನುಭಾವನ ಧ್ಯಾನದಿಂದ ಸಿದ್ಧಿಯಾಗುವುದು ದುರ್ಲಭವೆ ? ಕೂಡಲೆ ತಾನುಕುಳಿತಿದ್ದ ಪ್ರಾಕಾರವನ್ನು ಬಿಟ್ಟು, ಅಶೋಕವನದೊಳಿರುವ ರಾವಣನ ಮನೆಯ ಪೌಳಗೋಡೆಯ ಮೇಲೆ ಹಾರಿಬಂದು ಕುಳಿತನು ॥ ॥ ಮುಂದಿನ ಶುಭಕ್ಕೆ ಸೂಚಕವಾಗಿರುವ ಮಾನಸಿಕ ಸಾಕ್ಷಾತ್ಕಾರದಿಂದ ಪರಮಾನಂದ ಭರಿತನಾದನು, ಮೈ ಅರಳಿತು, ರೋಮಾಂಚವುಂಟಾಯಿತು, ಪ್ರಾಕಾರದಲ್ಲಿ ಕುಳಿತು ವಸಂತಾದಿಯಲ್ಲಿ ಎಂದರೆ ಫಾಲ್ಗುಣ ಬಹುಳ ಪ್ರತಿಪತ್ತಿನಲ್ಲಿ

ಸತು ಸಂಹೃಷ್ಟ ಸರ್ವಾಂಗಃ ಪ್ರಾಕಾರಸ್ಥೋ ಮಹಾಕಪಿಃ ।
ಪುಷ್ಪಿತಾಗ್ರಾನ್ವಸಂತಾದೌ ದದರ್ಶ ವಿವಿಧಾನ್ ದ್ರುಮಾನ್ ॥೨॥
ಸಾಲಾ ನಶೋಕಾ ನ್ಭವ್ಯಾಂಶ್ಚ ಚಂಪಕಾಂಶ್ಚ ಸುಪುಷ್ಪಿತಾನ್ ।

ಕಾರಣವೇ, ಪ್ರಾಕಾರಸ್ಥಃ-ಪೌಳಿಗೋಡೆಯಮೇಲೆ ಕುಳಿತವನಾಗಿ, *ವಸಂತಾದೌ-ವಸಂತಕಾಲದ ಆದಿಭಾಗದಲ್ಲಿ, ಪುಷ್ಪಿತ- ಹೂತಿರುವ, ವಿವಿಧಾನ್- ಅನೇಕವಿಧವಾದ, ದ್ರುಮಾನ್- ಮರಗಳನ್ನು ಎಂದರೆ, ಸಾಲಾನ್- ಮತ್ತಿಯಮರಗಳನ್ನೂ, ಭವ್ಯಾನ್ - ಬಲುಅಂದವಾಗಿರುವ, ಅಶೋಕಾನ್ - ಅಶೋಕವೃಕ್ಷಗಳನ್ನೂ, (ಮುಳ್ಳ ಮುತ್ತುಗ) ಸುಪುಷ್ಪಿತಾನ್- ಚೆನ್ನಾಗಿ ಹೂಬಿಟ್ಟಿರುವ, ಚಂಪಕಾಂಶ್ಚ-ಸಂಪಗೆಯಮರಗಳನ್ನೂ, ಉದ್ದಾಲಕಾನ್- ಚಳ್ಳಿಯಗಿಡಗಳನ್ನೂ, ನಾಗವೃಕ್ಷಾನ್-ನಾಗಸಂಪಗೆಗಳನ್ನೂ, ಚೂತಾನ್- ಮಾವಿನಮರಗಳನ್ನೂ, ಕಪಿಮುಖಾನಪಿ - ಮರ್ಕಟತರುಗಳನ್ನೂ, (ನಸುಗುನ್ನಿ) ದದರ್ಶ - ನೋಡಿದನು ॥೧, ೩॥ ಅಥ - ಅನಂತರದಲ್ಲಿ, ಆಮ್ರವಣ - ಮಾವಿನತೋಪಿನಿಂದ, ಸಂಛನ್ನಾಂ- ಬಳಸಲ್ಪಟ್ಟಿರುವ

ಬೆಳಗಿನಜಾವದಲ್ಲಿ ಚೆನ್ನಾಗಿ ಹೂತಿರುವ ಆ ವನದ ಮರಗಳನ್ನೆಲ್ಲ ನೋಡಿದನು ॥೨॥ ಆ ವನದಲ್ಲಿ ಸಜ್ಜಗಸದ ಮರಗಳು, ಅಶೋಕ, ಅಂದವಾಗಿ ಹೂತಿರುವ ಸುಂದರವಾದ ಸಂಪಗೆ, ನಾಗರಂಗ,ನಾಗಕೇಸರ, ಮಾವಿನಮರಗಳು, ಮರ್ಕಟತರುಗಳೂ ಕಪಿವರನಿಗೆ ಕಾಣಬಂದುವು ॥೩॥ ಆ ಬಳಿಕ ಮಾವಿನ ತೋಪಿನೊಳಗೆ ಅನೇಕವಿಧವಾದ ಹೂವಿನಬಳ್ಳಿಗಳು

* ಇಲ್ಲಿ ವಸಂತಾದಿ ಎಂದರೆ- ಫಾಲ್ಗುಣ ಶುದ್ಧ ಪೂರ್ಣಿಮೆ ಎಂದು ಅರ್ಥ. ಹುಣ್ಣಿಮೆಯಿಂದ ಹುಣ್ಣಿಮೆಯ ವರೆಗೆ ಬಂದುತಿಂಗಳು ಎಂಬ ಮತವನ್ನು ಅನುಸರಿಸಿ, ಚೈತ್ರವೈಶಾಖಗಳು ವಸಂತರ್ತುವಾದುದರಿಂದ ವಸಂತಾದಿ ಎಂದು ಹೇಳಿಇದೆ. ಭಾರದತಲ್ಲಿ ಉತ್ತರಗೋಗ್ರಹಣದೊಳಗೆ "ಪಾಂಡವರು ವನವಾಸಕ್ಕೆಹೋಗಿ ಹದಿಮೂರುವರ್ಷಗಳು ಆಗಿಲ್ಲ" ಎಂದು ಬಡಿದಾಟ ಹತ್ತಿದಾಗ, ಭೀಷ್ಮಾದಿಗಳು ಸಭೆಸೇರಿ,ಅಮಾವಾಸ್ಯೆಯಿಂದ ಅಮಾವಾಸ್ಯೆಯವರೆಗೆ ತಿಂಗಳೆಂದು ಲೆಕ್ಕವಿಟ್ಟೂ, ಅಧಿಕಮಾಸವನ್ನು ಲೆಕ್ಕವಿಟ್ಟೂ ತೀರ್ಮಾನಮಾಡಿದಾರೆ, ಅದರಂತೆ ಇಲ್ಲಿ ಲೆಕ್ಕಮಾಡುವದಾದರೆ ಫಾಲ್ಗುಣ ಬಹುಳ ಅಮಾವಾಸ್ಯೆಯು ವಸಂತಾದಿ ಎಂದು ಅರ್ಥವಾಗುವುದು, ಆಗ ತುಂಬ ತೊಂದರೆಗೆ-ಬರುತ್ತದೆ, ಹೇಗೆಂದರೆ- ಮಾರುತಿಯು ಲಂಕೆಯನ್ನು ಹೊಕ್ಕ ದಿವಸ ಸಂಜೆಯಾಗುತಲೆ ಚಂದ್ರೋದಯವಾಗಿ ಬೆಳದಿಂಗಳು ಬಂದಿತೆಂದೂ, ಬೆಳಗಾಗುವವರೆಗೂ ಇದ್ದಿತೆಂದೂ ಹಿಂದೆ ಸ್ಪಷ್ಟವಾಗಿ ಹೇಳಿದೆ. ಇದರಿಂದ ಪೂರ್ವೋತ್ತರ ವಿರೋಧವಾಗುವುದು. ಇದಲ್ಲದೆಜ್ಯೋತಿರ್ನಿಬಂಧ ಮೊದಲಾದ ಸ್ಥಲದಲ್ಲಿ ಚೈತ್ರಶುದ್ಧ ಪಾಡ್ಯಮಿಯನ್ನು ವತ್ಸರಾದಿ ಎಂತಲೂ, ಫಾಲ್ಗುಣಶುದ್ಧ ಪಾಡ್ಯವನ್ನು ವಸಂತಾದಿ ಎಂತಲೂ ಹೇಳಿ ಇದೆ ಎಂದು ಕೆಲವರು.

ಮಾಘಾದಿ ಪಂಚವಸಂತ ವೆಂತಲೂ, ಆದಕಾರಣವೇ ವಸಂತಾದಿ ಎಂದರೆ ಮಾಘ ಕೃಷ್ಣ ಪ್ರತಿಪತ್ತು ಎಂತಲೂ, ಇದರಂತೆ ಲೆಕ್ಕವಿಟ್ಟರೆ ಸೀತೆಯು ಲಂಕೆಯೊಳಿದ್ದುದು ಹತ್ತು ತಿಂಗಳು ಎಂಬುದು ಸರಿಹೋಗುವುದು ಎಂತಲೂ, ರಾವಣನು ಸೀತೆಯು ತನ್ನ ವಶವಾಗುವಂತೆ ಕಟ್ಟುಮಾಡಿ ಎರಡು ತಿಂಗಳ ಕಾಲ ಗಡುವನ್ನು ಕೊಟ್ಟುದು ಸಮಂಜಸವಾಗುವುದೆಂತಲೂ, ರಾಮನು ಋಶ್ಯಮೂಕ ಪರ್ವತದಲ್ಲಿ ವಾಸಮಾಡುತಲ್ಲಿದ್ದು ಶರದೃತುವಿನಲ್ಲಿ ಸುಗ್ರೀವನನ್ನುಎಚ್ಚರಿಸಿ, ಕಪಿಗಳನ್ನೆಲ್ಲ ಸೇರಿಸಿ, ಅವರನ್ನು ದಿಕ್ಕುದಿಕ್ಕಿಗೂ ಸೀತೆಯನ್ನು ಹುಡುಕಲಿಕ್ಕಾಗಿ ಕಳುಹಿಸಿದ ಮೇಲೆ ದಕ್ಷಿಣ ದಿಕ್ಕನ್ನು ಕುರಿತು ಹೊರಟ ಮಾರುತಿ ಮುಂತಾದವರು ಕಡಲಿನ ದಡವನ್ನು ಸೇರಿ, ನಮಗೆ ಸುಗ್ರೀವನು ಕೊಟ್ಟದ್ದ ಬಂದುತಿಂಗಳ ಗಡುವು ಕಳೆದು ಹೋಯಿತೆಂದು ಚಿಂತಿಸುತಿದ್ದುದೂ ಮೇಲಿನ ಲೆಕ್ಕಕ್ಕೆಸರಿಬರುವುದು ಎಂತಲೂ ಮತ್ತೆ ಕೆಲವರು.

ಉದ್ದಾಲಕಾ ನ್ನಾಗವೃಕ್ಷಾಂ ಶ್ಚೂತಾ ನ್ಕಪಿ ಮುಖಾನಪಿ ॥೩॥
ಅಥಾಮ್ರವಣ ಸಂಛನ್ನಾಂ ಲತಾಶತ ಸಮಾವೃತಾಂ ।
ಜ್ಯಾಮುಕ್ತ ಇವ ನಾರಾಚಃ ಪುಪ್ಲುವೇ ವೃಕ್ಷ ವಾಟಿಕಾಂ ॥೪॥
ಸ ಪ್ರವಿಶ್ಯ ವಿಚಿತ್ರಾಂತಾಂ ವಿಹಗೈ ರಭಿ ನಾದಿತಾಂ ।
ರಾಜತೈಃ ಕಾಂಚನೈ ಶ್ಚೈವ ಪಾದಪೈ ಸ್ಸರ್ವತೋ ವೃತಾಂ ॥೫॥
ವಿಹಗೈ ರ್ಮೃಗ ಸಂಘೈಶ್ಚ ವಿಚಿತ್ರಾಂ ಚಿತ್ರ ಕಾನನಾಂ ।
ಉದಿತಾದಿತ್ಯ ಸಂಕಾಶಾಂ ದದರ್ಶ ಹನುಮಾ ನ್ಕಪಿಃ ॥೬॥
ವೃತಾಂ ನಾನಾವಿಧೈ ರ್ವೃಕ್ಷೈಃ ಪುಷ್ಪೋಪಗ ಫಲೋಪಗೈಃ ।

---

ಲತಾಶತ - ನೂರಾರು ಎಳೆಬಳ್ಳಿಗಳಿಂದ, ಸಮಾವೃತಾಂ - ಸುತ್ತಲ್ಪಟ್ಟಿರತಕ್ಕ, ವೃಕ್ಷ ವಾಟಿಕಾಂ - ಮರಗಳಸಾಲನ್ನು, ಜ್ಯಾಮುಕ್ತಃ-ಹೆದೆಯಿಂದಬಿಡಲ್ಪಟ್ಟ, ನಾರಾಚಃಇವ-ನಾರಾಚವೆಂಬ ಬಾಣದಂತೆ,(ನಿಡುಸರಲಿನಂತೆ) ಪುಪ್ಲುವೇ-ಹಾರಿಒಳಹೊಕ್ಕನು ॥೪॥ ಸಃಹನುಮಾನ್-ಆ ಮಾರುತಿಯು, ಪ್ರವಿಶ್ಯ-ವೃಕ್ಷವಾಟಿಕೆಯಒಳಹೊಕ್ಕು, ವಿಚಿತ್ರಾಂ - ಅಚ್ಚರಿಯನ್ನುಂಟುಮಾಡುವ, ವಿಹಗೈಃ - ಬಗೆಬಗೆಯ ಹಕ್ಕಿಗಳಿಂದ, ಅಭಿನಾದಿತಾಂ - ಎಲ್ಲಕಡೆಗಳಲ್ಲಿಯೂ ಸದ್ದುಮಾಡಲ್ಪಡುತ್ತಿರುವ, ರಾಜತೈಃ - ಬೆಳ್ಳಿಯಬಣ್ಣದವುಗಳಾಗಿಯೂ, ಕಾಂಚನೈಶ್ಚೈವ - ಬಂಗಾರದಂತೆ ಥಳಥಳಿಸುವ, ಪಾದಪೈಃ - ಮರಗಳಿಂದ, ಸರ್ವತಃ - ಸುತ್ತಲೂ, ವೃತಾಂ - ಸುತ್ತಲ್ಪಟ್ಟಿರುವುದಾಗಿಯೂ ॥೫॥ ವಿಹಗೈಃ - ಹಂಸಮಯೂರಾದಿ ಪಕ್ಷಿಗಳಿಂದಲೂ ಮೃಗಸಂಘೈಶ್ಚ - ಮೃಗಗಳಹಿಂಡುಗಳಿಂದಲೂ, ವಿಚಿತ್ರಾಂ - ವಿನೋದಕರವಾದುದಾಗಿಯೂ, ಚಿತ್ರಕಾನನಾಂ - ಆಶ್ಚರ್ಯಕರಗಳೆನಿಸಿದ ಒಳದೋಟಗಳುಳ್ಳ, ಉದಿತ - ಆಗತಾನೆ ಹುಟ್ಟಿದ, ಆದಿತ್ಯ - ಸೂರ್ಯನಬೆಳಕಿನೊಡನೆ, ಸಂಕಾಶಾಂ - ಸಮಾನವೆನಿಸಿದುದಾಗಿಯೂ ॥೬॥ ಪುಷ್ಪೋಪಗ - ಬಗೆಬಗೆಯ ಹೂಗಳನ್ನು ಹೊಂದಿರುವುದಾಗಿಯೂ, ಫಲೋಪಗೈಃ- ನಾನಾವಿಧವಾದ ಹಣ್ಣುಗಳನ್ನುಳ್ಳವುಗಳಾಗಿಯೂ ಇರುವ, ವೃಕ್ಷೈಃ - ತರುಗಳಾದ, ವೃತಾಂ - ಆವರಿಸಲ್ಪಟ್ಟಿರುವುದಾಗಿಯೂ, ಕೋಕಿಲೈಃ- ಕೋಗಿಲೆಗಳಿಂದಲೂ ಮತ್ತೈಃ - ಕೊಬ್ಬಿರುವ, ಭೃಂಗರಾಜೈಶ್ಚ-ತೋರವಾದದುಂಬಿಗಳಿಂದಲೂ, ನಿತ್ಯನಿಷೇವಿತಾಂ -ಎಡೆಬಿಡದೆ

---

ಮರಗಳಿಗೆ ಹಬ್ಬಿರುವುದನ್ನು ನೋಡಿದನು, ತರುವಾಯ ಹೆದೆಯನ್ನು ಬಿಟ್ಟು ಹೊರಟಬಾಣದಂತೆ ಆ ವೃಕ್ಷವಾಟಿಕೆಯೊಳಕ್ಕೆ ತೂರಿದನು ॥೪॥ ಹಾಗೆ ಒಳಹೊಕ್ಕಾಗ ಬಗೆಬಗೆಯ ಹಕ್ಕಿಗಳು ಕಿವಿಗೆ ಇಂಪಾಗಿ ದನಿಗೈಯ್ಯುತಲಿದ್ದುವು, ವನವು ಬಲು ಅಚ್ಚರಿಯಾಗಿದ್ದಿತು, ವಿಜಾತೀಯಗಳಾಗಿ ಸುತ್ತಲೂ ಬೆಳೆಸಿ ಇದ್ದ ಕೆಲವು ವೃಕ್ಷಗಳು ರಜತವರ್ಣಗಳಾಗಿದ್ದುವು, ಮತ್ತೆ ಕೆಲವು ಸುವರ್ಣ ವರ್ಣಗಳಾಗಿದ್ದುವು ॥೫॥ ಆ ಮಹಾವನದೊಳಗಣ ಕಿರುದೋಟಗಳಲ್ಲಿ ಬಹು ವಿಧವಾದ ಪಕ್ಷಿಗಳೂ, ಅನೇಕ ತರಹೆಯವುಗಳಾದ ಮೃಗಗಳೂ ಗುಂಪುಗುಂಪಾಗಿ ಇರುತ್ತಿದ್ದುವು. ಇಷ್ಟು ವೈಭವದಿಂದ ಆ ವನವು ಉದಿಸುತಲಿರುವ ಸೂರ್ಯನಂತೆ ಬೆಳಗುತಲಿದ್ದಿತು, ಇದನ್ನೆಲ್ಲ ಕಪಿವರನು ಈಕ್ಷಿಸಿದನು ॥೬॥ ಕೆಲವು ತರುಗಳು ಪುಷ್ಪಭರಿತಗಳಾಗಿದ್ದುವು, ಮತ್ತೆ ಕೆಲವು ಫಲಪೂರ್ಣಗಳಾಗಿ ವಿರಾಜಿಸುತಲಿದ್ದುವು, ತಿಂದು ಕೊಬ್ಬಿರುವ ಕೋಗಿಲೆಗಳ ಪಂಚಮಸ್ವರಗಳೂ ಮತ್ತು ದುಂಬಿಗಳ ಝೇಂಕಾರಸ್ವರಗಳೂ

ಕೋಕಿಲೈ ರ್ಭೃಂಗ ರಾಜೈಶ್ಚ ಮತ್ತೈ ರ್ನಿತ್ಯ ನಿಷೇವಿತಾಂ ॥೭॥
ಪ್ರಹೃಷ್ಟ ಮನುಜೇ ಕಾಲೇ ಮೃಗಪಕ್ಷಿ ಸಮಾಕುಲೇ ।
ಮತ್ತ ಬರ್ಹಿಣ ಸಂಘುಷ್ಟಾಂ ನಾನಾ ದ್ವಿಜ ಗಣಾಯುತಾಂ ॥೮॥
ಮಾರ್ಗಮಾಣೋ ವರಾರೋಹಾಂ ರಾಜಪುತ್ರೀ ಮನಿಂದಿತಾಂ ।
ಸುಖಪ್ರಸುಪ್ತಾ ನ್ವಿಹಗಾನ್ ಬೋಧಯಾಮಾಸ ವಾನರಃ ॥೯॥
ಉತ್ಪತದ್ಭಿ ರ್ದ್ವಿಜಗಣೈಃ ಪಕ್ಷೈ ಸ್ಸಾಲಾ ಸ್ಸಮಾಹತಾಃ ।
ಅನೇಕ ವರ್ಣಾ ವಿವಿಧಾ ಮುಮುಚುಃ ಪುಷ್ಪವೃಷ್ಟಯಃ ॥೧೦॥
ಪುಷ್ಪಾವಕೀರ್ಣ ಶ್ಶುಶುಭೇ ಹನುಮಾನ್ಮಾರುತಾತ್ಮಜಃ ।

---

ಸೇವಿಸಲ್ಪಡುತಲಿರುವುದಾಗಿಯೂ ॥೭॥ ಮತ್ತಬರ್ಹಿಣಸಂಘುಷ್ಟಾಂ - ಮದಿಸಿದನವಿಲುಗಳಿಂದ ಧ್ವನಿ ಮಾಡಲ್ಪಡುತ್ತಿರುವುದಾಗಿಯೂ, ನಾನಾದ್ವಿಜಗಣಾಯುತಾಂ - ಬಗೆಬಗೆಯ ಸಣ್ಣಸಣ್ಣಪಕ್ಕಿಗಳಹಿಂಡುಗಳಿಂದೊಡಗೂಡಿದುದಾಗಿಯೂ ಇರುವ, ತಾಂ - ಆ ಅಶೋಕವನವನ್ನು, ಪ್ರಹೃಷ್ಟಮನುಜೇ- ಅಪಾರವಾದ ಸಂತೋಷವನ್ನು ಹೊಂದಿರುವಜನಗಳುಳ್ಳ, ಮೃಗಪಕ್ಷಿಸಮಾಕುಲೇ- ಮೃಗಗಳಿಂದಲೂ ಪಕ್ಷಿಗಳಿಂದಲೂ ನಿಬಿಡವಾಗಿರುವ, ಕಾಲೇ - ವಸಂತಕಾಲದಲ್ಲಿ, ದದರ್ಶ- ನೋಡಿದನು ॥೮॥ ವಾನರಃ- ಆಂಜನೇಯನು, ವರಾರೋಹಾಂ - ಉತ್ತಮಾಂಗನೆನಿಸಿದ, ಅನಿಂದಿತಾಂ - ದೋಷಲೇಶವಿಲ್ಲದ, ರಾಜಪುತ್ರೀಂ - ಜನಕರಾಜಕುಮಾರಿಯಾಗಿರುವ ಸೀತಾದೇವಿಯನ್ನು, ಮಾರ್ಗಮಾಣಃ - ಹುಡುಕುತಲಿರುವವನಾಗಿ, ಸುಖಪ್ರಸುಪ್ತಾನ್ - ಸುಖವಾಗಿನಿದ್ರೆಗೈಯ್ಯುತಲಿದ್ದ, ವಿಹಗಾನ್ - ಹಕ್ಕಿಗಳನ್ನು, ಬೋಧಯಾಮಾಸ - ಎಚ್ಚರಗೊಳಿಸಿದನು ॥೯॥ ಉತ್ಪತದ್ಭಿಃ- ಗದ್ದಲಗೊಂಡು ಮೇಲಕ್ಕೆ ಹಾರುತಲಿರುವ, ದ್ವಿಜಗಣೈಃ- ಪಕ್ಷಿಸಮೂಹಗಳಮೂಲಕ, ಪಕ್ಷೈಃ-ರೆಕ್ಕೆಗಳಿಂದ, ಸಮಾಹತಾಃ-ಎಲ್ಲಕಡೆಗಳಲ್ಲಿಯೂ ಚಟಪಟನೆ ಹೊಡೆಯಲ್ಪಟ್ಟವುಗಳಾದಕಾರಣವೇ, ಅನೇಕವರ್ಣಾಃ - ನಾನಾವರ್ಣವುಳ್ಳ, ವಿವಿಧಾಃ-ಬಗೆಬಗೆಯವುಗಳಾದ, ಪುಷ್ಪವೃಷ್ಟಯಃ - ಹೂವಿನಮಳೆಗಳು, ಮುಮುಚುಃ - ಸುರಿದುವು ॥೧೦॥ ಮಾರುತಾತ್ಮಜಃ- ವಾಯುಕುಮಾರನಾದ, ಹನುಮಾನ್ - ಆಂಜನೇಯನು, ಪುಷ್ಪಾವಕೀರ್ಣಃ- ಹೂಮಳೆಯಿಂದ ಎರಚಲ್ಪಟ್ಟವನಾಗಿ, ಅಶೋಕವನಿಕಾಮಧ್ಯೇ - ಅಶೋಕವನದ ನಡುವೆ, ಪುಷ್ಪಮಯಃ- ಹೂವಿನರಾಶಿಯರೂಪವಾದ, ಗಿರಿಃಯಥಾ-

---

ಮನೋಹರವಾಗಿದ್ದುವು ॥ ೭ ॥ ಸರ್ವಜನರೂ ಸಂತೋಷದಲ್ಲಿರತಕ್ಕುದಾಗಿಯೂ, ಮೃಗಪಕ್ಷಿಗಳ ಕೋಲಾಹಲವುಳ್ಳದಾಗಿಯೂ ಇರುವ ದಿವ್ಯವಾದ ವಸಂತಕಾಲದಲ್ಲಿ ಮದಿಸಿರುವ ಮನೋಹರವಾದ ನವಿಲುಗಳಿಂದಲೂ, ಹಕ್ಕಿಗಳ ಹಿಂಡುಗಳಿಂದಲೂ ರಮಣೀಯವಾಗಿರುವ ಅಶೋಕವನವನ್ನು ಆಂಜನೇಯನು ಅವಲೋಕಿಸಿದನು ॥೮॥ ವಾನರೋತ್ತಮನು ಸತೀಶಿರೋಮಣಿಯೆನಿಸಿದ ಜನಕರಾಜನಂದಿನಿಯನ್ನು ಆ ಮರಗಳ ಗುಂಪಿನೊಳಗೆ ಬೆದಕುತ್ತಾ ಸುಖನಿದ್ರೆಯೊಳಿದ್ದ ಹಕ್ಕಿಗಳನ್ನೆಲ್ಲ ಎಚ್ಚರಗೊಳಿಸಿದನು ॥೯॥ ಮರದಿಂದ ಮರಕ್ಕೆ ಹಾಯ್ದುಬರುವ ಹನುಮನ ಹಾವಳಿಯಿಂದ ಮೇಲಕ್ಕೆ ಹಾರಿದ ಹಕ್ಕಿಗಳ ರೆಕ್ಕೆಗಳ ಪೆಟ್ಟಿನಿಂದ ಮರಗಳೆಲ್ಲವೂ ನಾನಾ ವರ್ಣಗಳುಳ್ಳ ಪುಷ್ಪಗಳನ್ನು ಮಳೆಗರೆದುವು ॥ ಹಾಗೆ ಉದುರುತಲಿರುವ ಹೂವಿನ ರಾಶಿಯೊಳಗೆ ಸಿಲುಕಿದ ಹನುಮನು ಅಶೋಕವನದ ನಡುವೆ ನೆಲೆಗೊಂಡಿರುವ ಹೂವಿನ ಬೆಟ್ಟವೋ ಎಂಬಂತೆ ಬೆಳಗುತಲಿದ್ದನು ॥೧೧॥ ದಿಕ್ಕು

ಅಶೋಕ ವನಿಕಾ ಮಧ್ಯೇ ಯಥಾ ಪುಷ್ಪಮಯೋಗಿರಿಃ ॥೧೧॥
ದಿಶ ಸ್ಸರ್ವಾಃ ಪ್ರಧಾವಂತಂ ವೃಕ್ಷಷಂಡ ಗತಂ ಕಪಿಂ ।
ದೃಷ್ಟ್ವಾ ಸರ್ವಾಣಿ ಭೂತಾನಿ ವಸಂತ ಇತಿ ಮೇನಿರೆ ॥೧೨॥
ವೃಕ್ಷೇಭ್ಯಃ ಪತಿತೈಃ ಪುಷ್ಪೈ ರವಕೀರ್ಣಾ ಪೃಥಗ್ವಿಧೈಃ ।
ರರಾಜ ವಸುಧಾ ತತ್ರ ಪ್ರಮದೇವ ವಿಭೂಷಿತಾ ॥೧೩॥
ತರಸ್ವಿನಾ ತೇ ತರವ ಸ್ತರಸಾ ಭಿಪ್ರಕಂಪಿತಾಃ ।
ಕುಸುಮಾನಿ ವಿಚಿತ್ರಾಣಿ ಸಸೃಜುಃ ಕಪಿನಾ ತದಾ ॥೧೪॥
ನಿರ್ಧೂತ ಪತ್ರಶಿಖರಾ ಶ್ಶೀರ್ಣಪುಷ್ಪ ಫಲಾ ದ್ರುಮಾಃ ।

---

ಬೆಟ್ಟವು ಹೇಗೋ ಹಾಗೆ, ಶುಶುಭೇ - ಶೋಭಿಸುತಲಿದ್ದನು ॥೧೧॥ ಸರ್ವಾಃದಿಶಃ - ಎಲ್ಲದಿಕ್ಕುಗಳನ್ನು ಕುರಿತೂ, ಪ್ರಧಾವಂತಂ - ಓಡಾಡುತಲಿರುವ, ವೃಕ್ಷಷಂಡಗತಂ - ಮರಗಳ ಪೊದೆಯುಲ್ಲಿರತಕ್ಕ, ಕಪಿಂ - ಆಂಜನೇಯನನ್ನು, ದೃಷ್ಟ್ವಾ - ನೋಡಿ, ಸರ್ವಾಣಿ ಭೂತಾನಿ, ಸಮಸ್ತ ಪ್ರಾಣಿಗಳೂ, ವಸನ್ತ ಇತಿ - (ಶರೀರವನ್ನಾಂತು ಬಂದಿರುವ) ವಸಂತನೋ ಎಂಬಂತೆ, ಮೇನಿರೆ - ತಿಳಿದುಕೊಂಡುವು ॥೧೨॥ ವೃಕ್ಷೇಭ್ಯಃ - ಮರಗಳ ದೆಸೆಯಿಂದ, ಪತಿತೈಃ - ಕೆಳಗೆ ಉದುರಿದ, ಪೃಥಗ್ವಿಧೈಃ - ಅನೇಕಜಾತಿಯುವುಗಳಾದ, ಪುಷ್ಪೈಃ - ಹೂಗಳಿಂದ, ಅವಕೀರ್ಣಾ - ಹರಡಲ್ಪಟ್ಟ, (ತುಂಬಿರುವ) ವಸುಧಾ - ಭೂಮಿಯು, ತತ್ರ - ಆ ಅಶೋಕವನದಲ್ಲಿ, ವಿಭೂಷಿತಾ ಪುಷ್ಪಾಲಂಕೃತಳಾದ, ಪ್ರಮದೇವ, (ಕೊಬ್ಬಿದ) ಭಾಮಿನಿಯಂತೆ, ರರಾಜ-ಪ್ರಕಾಶಿಸುತಲಿದ್ದಿತು ॥೧೩॥ ತರಸ್ವಿನಾ - ಮಹಾಬಲಶಾಲಿಯೆನಿಸಿದ, ಕಪಿನಾ-ಮಾರುತಿಯಿಂದ, ತರಸಾ - ಬಲವಾಗಿ, ಅಭಿಪ್ರಕಂಪಿತಾಃ - ಎಲ್ಲಕಡೆಗಳಲ್ಲಿಯೂ ಅಲ್ಲಾಡಿಸಲ್ಪಟ್ಟ, ತೇ - ಆ, ತರವಃ - ಮರಗಳು, ತದಾ- ಆಗ ವಿಚಿತ್ರಾಣಿ - ಆಶ್ಚರ್ಯಕರಗಳಾದ, ಕುಸುಮಾನಿ - ಪುಷ್ಪಗಳನ್ನು, ಸಸೃಜುಃ - ಉದುರಿಸಿದವು ॥೧೪॥ ನಿರ್ಧೂತ - ಚೆನ್ನಾಗಿ ಅಲ್ಲಾಡಿಸಲ್ಪಟ್ಟ, ಪತ್ರಶಿಖರಾಃ - ಎಲೆಗಳೂ ಕುಡಿಗಳೂ ಉಳ್ಳವುಗಳಾದಕಾರಣವೇ, ಶೀರ್ಣ - ಚೆದರಿ (ಸಡಿಲು) ಹೋದ, ಪುಷ್ಪಫಲಾಃ - ಹೂವುಹಣ್ಣುಗಳುಳ್ಳ, ದ್ರುಮಾಃ - ಮರಗಳು, ಪರಾಜಿತಾಃ - ಸೋತುಹೋದವರಾದಕಾರಣವೇ ನಿಕ್ಷಿಪ್ತ - ಪಣ (ಜೂಜಾಡುವುದು)ಕ್ಕಾಗಿ ತೆಗೆದಿಡಲ್ಪಟ್ಟ, ವಸ್ತ್ರಾಭರಣಾಃ-ಬಟ್ಟೆಗಳೂ ಒಡವೆಗಳೂ ಉಳ್ಳ, ಧೂರ್ತಾ ಇವ - ಪಗಡೆಯಾಟದಲ್ಲಿ ದುಡುಕುವ

---

ದಿಕ್ಕಿಗೆ ಓಡುತಲೂ, ಮರಗಳ ಪೊದೆಯಲ್ಲಿ ಅಡಗುತಲೂ ಇರುವ ಮಾರುತಿಯನ್ನು ಕಂಡು ಅಲ್ಲಿನ ಸಮಸ್ತಪ್ರಾಣಿಗಳೂ ಶರೀರವನ್ನಾಂತು ವಸಂತನೇನಾದರು ಬಂದನೋ ಎಂಬಂತೆ ಭಾವಿಸಿದುವು ॥೧೨॥ ಮರಗಳು ಮಳೆಗರೆದ ನಾನಾಜಾತಿಯ ಕುಸುಮಗಳಿಂದ ತುಂಬಿದ ಆ ವನ ಭೂಮಿಯು, ಸರ್ವಾವಯವಗಳನ್ನೂ ಕುಸುಮಗಳಿಂದಲೇ ಸಿಂಗರಿಸಿಕೊಂಡ ಸೀಮಂತಿನಿಯೋ ಎಂಬಂತೆ ರಾರಾಜಿಸುತಲಿದ್ದಿತು ॥೧೩॥ ಮಹಾ ಬಲಶಾಲಿಯಾದ ಮಹಾಬಲನಂದನನು ಮಹಾಬಲದಿಂದ ಅಲ್ಲಿನ ಮರಗಳನ್ನು ಬಲವಾಗಿ ಅಲ್ಲಾಡಿಸಲು, ಅವುಆಗ ವಿಚಿತ್ರಗಳಾದ ಕುಸುಮಗಳನ್ನು ಸುರಿಸುತ್ತಿದ್ದುವು ॥೧೪॥ ಹನುಮನ ಹೊಡೆತದಿಂದ ಎಲೆ, ಕುಡಿ, ಹೂವು, ಹಣ್ಣು, ಇವುಗಳೆಲ್ಲ ಉದುರಿಹೋಗಿ ಬೆತ್ತಲೆಯಾಗಿ ನಿಂತ ಮರಗಳು ಜೂಜಾಡುವಾಗ ಹುರುಡಿನಿಂದ ಆಟವಾಡಿ ಸೋತು ಮೈಮೇಲಿದ್ದ ಒಡವೆ ವಸ್ತುಗಳನ್ನೂ, ಬಟ್ಟೆಬರೆಗಳನ್ನೂ ತೆಗೆದಿಟ್ಟು ಬೆತ್ತಲೆಯಾಗಿ ನಿಂತ ಆಟಗಾರರ ಹಾಗೆ ಕಾಣಬರುತಲಿದ್ದುವು ॥೧೫॥

ನಿಕ್ಷಿಪ್ತ ವಸ್ತ್ರಾಭರಣಾ ಧೂರ್ತಾ ಇವ ಪರಾಜಿತಾಃ ॥೧೫॥
ಹನೂಮತಾ ವೇಗವತಾ ಕಂಪಿತಾ ಸ್ತೇ ನಗೋತ್ತಮಾಃ ।
ಪುಷ್ಪಪರ್ಣ ಫಲಾ ನ್ಯಾಶು ಮುಮುಚುಃ ಪುಷ್ಪಶಾಲಿನಃ ॥೧೬॥
ವಿಹಂಗ ಸಂಘೈ ರ್ಹೀನಾ ಸ್ತೇ ಸ್ಕಂಧ ಮಾತ್ರಾಶ್ರಯಾ ದ್ರುಮಾಃ ।
ಬಭೂವು ರಗಮಾ ಸ್ಸರ್ವೇ ಮಾರುತೇನೇವ ನಿರ್ಧೂತಾಃ ॥೧೭॥
ನಿರ್ಧೂತ ಕೇಶೀ ಯುವತಿ ರ್ಯಥಾ ಮೃದಿತ ವರ್ಣಕಾ ।
ನಿಷ್ಪೀತ ಶುಭ ದಂತೋಷ್ಠೀ ನಖೈ ರ್ದಂತೈಶ್ಚ ವಿಕ್ಷತಾ ॥೧೮॥
ತಥಾ ಲಾಂಗೂಲ ಹಸ್ತೈಶ್ಚ ಚರಣಾಭ್ಯಾಂ ಚ ಮರ್ದಿತಾ ।
ಬಭೂವಾ ಶೋಕ ವನಿಕಾ ಪ್ರಭಗ್ನ ವರ ಪಾದಪಾ ॥ ೧೯ ॥

ಕೀಳರಂತೆ, (ದೃಶ್ಯಂತೇಸ್ಮ - ಕಾಣುತಲಿದ್ದುವು) ॥೧೫॥ ವೇಗವತಾ - ಬಹುವೇಗವುಳ್ಳ, ಹನುಮತಾ - ಮಾರುತಿಯಿಂದ, ಕಂಪಿತಾಃ - ಅಲುಗಿಸಲ್ಪಟ್ಟ, ಪುಷ್ಪಶಾಲಿನಃ - ಹೂಗಳಿಂದತುಂಬಿದ, ತೇ- ಆ ನಗೋತ್ತಮಾಃ - ಉತ್ತಮವಾದ ಮರಗಳು, ಪುಷ್ಪಪರ್ಣಫಲಾನಿ - ಹೂವು, ಎಲೆ, ಹಣ್ಣುಗಳನ್ನು, ಆಶು - ಬೇಗನೆ, ಮುಮುಚುಃ - ಉದುರಿಸಿದುವು ॥೧೬॥ ವಿಹಂಗಸಂಘೈಃ - ಹಕ್ಕಿಗಳಹಿಂಡುಗಳಿಂದ, ಹೀನಾಃ - ಶೂನ್ಯಗಳಾದ, ಸ್ಕನ್ಧಮಾತ್ರ - ಕೊನೆಗಳಿಲ್ಲದ ಸಾಗಗಳನ್ನುಮಾತ್ರವೇ, ಆಶ್ರಯಾಃ - ಹೊಂದಿದ್ದಿರುವ, ಸರ್ವೇ - ಸಮಸ್ತವಾದ, ತೇ-ಆ, ದ್ರುಮಾಃ- ಮರಗಳು, ಮಾರುತೇನ- ಗಾಳಿಯಿಂದ, ನಿರ್ಧೂತಾಃ- ಅಲ್ಲಾಡಿಸಲ್ಪಟ್ಟವುಗಳಾಗಿ, ಅಗಮಾಃ - ಹತ್ತಿರಸೇರಲಿಕ್ಕಾಗದವುಗಳು, ಬಭೂವುಃ- ಆಗಿದ್ದುವು॥೧೭॥ ನಿರ್ಧೂತ - ಬಲುಕೆದರಿದ, ಕೇಶೀ - ಕೂದಲುಳ್ಳ, ಶುಭ - ಬಹಳ ಅಂದವಾಗಿರತಕ್ಕ, ದಂತ - ಹಲ್ಲುಗಳೂ ಓಷ್ಠೀ - ತುಟಿಯೂಉಳ್ಳ, ನಖೈಃ - ಉಗುರುಗಳಿಂದಲೂ, ದಂತೈಶ್ಚ - ಹಲ್ಲುಗಳಿಂದಲೂ, ವಿಕ್ಷತಾ - ಗಾಯಪಟ್ಟ, ಯುವತಿರ್ಯಥಾ - ತರುಣಿಯುಹೇಗೋ, ತಥಾ - ಹಾಗೆ, ಲಾಂಗೂಲಹಸ್ತೈಶ್ಚ- ಬಾಲವುತ್ತು ಕೈಗಳಿಂದಲೂ, ಚರಣಾಭ್ಯಾಂಚ - ಪಾದಗಳಿಂದಲೂ, ಮರ್ದಿತಾ - ಬಗೆಬಗೆಯಾಗಿತೊಂದರೆ (ಮರ್ದನ) ಪಡಿಸಲ್ಪಟ್ಟುದಾದಕಾರಣವೇ, ಅಶೋಕವನಿಕಾ - ಅಶೋಕವನವು, ಪ್ರಭಗ್ನ - ಸಂಪೂರ್ಣವಾಗಿ ಮುರಿದುಹೋದ, ವರಪಾದಪಾ - ಬಹುಉತ್ತಮವಾದ ಮರಗಳುಳ್ಳುದು, ಬಭೂವ - ಆಗಿದ್ದಿತು ॥೧೮, ೧೯॥ ಪ್ರಾವೃಷಿ - ಮಳೆಗಾಲದಲ್ಲಿ, ವಿಂಧ್ಯಸ್ಯ - ವಿಂಧ್ಯದಸುತ್ತಲೂ ಇರುವ, ಮೇಘ

ಹಾರಾಡುತಲಿರುವ ಹನುಮನ ಬಹು ವೇಗದಿಂದ ಅಲ್ಲಾಡಿದ ಪಾದಪಗಳೆಲ್ಲವೂ ಪತ್ರ ಪುಷ್ಪ ಫಲಗಳನ್ನೆಲ್ಲ ಬಲು ಬೇಗಬೇಗನೆ ಕೆಳಗೆಸುರಿಸಿ ಬರಿದಾಗಿ ನಿಂತುವು ॥೧೬॥ ಹಕ್ಕಿಗಳೆಲ್ಲ ಹಾರಿಹೋಗಿ ಕೊನೆಕಡಿಗಳೆಲ್ಲ ಮುರಿದುಬಿದ್ದು ಬೋಳಾಗಿನಿಂತ ತರುಗಳು ಬಿರುಗಾಳಿಯ ಪೆಟ್ಟನಿಂದ ನಿರಾಶ್ರಯಗಳೆನಿಸಿ ಬಯಲುಮಾಡಲ್ಪಟ್ಟವೋ ಎಂಬಂತೆ ತೋರಿಬಂದುವು ॥೧೭॥ ಇದೂ ಅಲ್ಲದೆ ಹನುಮನ ಬಾಲದ ಪೆಟ್ಟಿನಿಂದಲೂ, ಹಸ್ತಗಳ ಆಘಾತದಿಂದಲೂ, ಪಾದಗಳ ತುಳಿತದಿಂದಲೂ, ಪಾದಪಗಳೆಲ್ಲ ಪುಡಿಪುಡಿಯಾಗಲು ಕೂದಲೆಲ್ಲ ಕೆದರಿ ಮುಖದ ತಿಲಕವೂ,ಮೆಯ್ಯ ಪರಿಮಳವೂ ಅಳಿಸಿಹೋಗಿ, ಪ್ರಿಯನದಂತಗಳಿಂದಲೂ ನಖಗಳಿಂದಲೂ, ಗಾಯಪಟ್ಟು, ದಂತೋಷ್ಠಗಳ ಸಾರವೆಲ್ಲ ತೊಲಗಿನಿಂತ ತರುಣಿಯಂತೆ ಆ ಅಶೋಕವನವು ಕಾಣಬಂದಿತು ॥೧೮-೧೯॥ ಮಳೆಗಾಲದೊಳಗೆ ವಿಂಧ್ಯಪರ್ವತದ ಸುತ್ತಲೂ ಆವರಿಸಿಕೊಂಡಿರುವ ಮೇಘಗಳನ್ನು ಬಿರುಗಾಳಿಯು ದಿಕ್ಕಾಪಾಲಾಗಿ ಕೆದರುವಹಾಗೆ, ಮಾರುತಿಯು

ಮಹಾಲತಾನಾಂ ದಾಮಾನಿ ವ್ಯಥಮತ್ತರಸಾ ಕಪಿಃ ।
ಯಥಾ ಪ್ರಾವೃಷಿ ವಿಂಧ್ಯಸ್ಯ ಮೇಘಜಾಲಾನಿ ಮಾರುತಃ ॥೨೦॥
ಸ ತತ್ರ ಮಣಿಭೂಮೀಶ್ಚ ರಾಜತೀಶ್ಚ ಮನೋರಮಾಃ ।
ತಥಾ ಕಾಂಚನ ಭೂಮೀಶ್ಚ ದದರ್ಶ ವಿಚರನ್ಕಪಿಃ ॥೨೧॥
ವಾಪೀಶ್ಚ ವಿವಿಧಾಕಾರಾಃ ಪೂರ್ಣಾಃ ಪರಮವಾರಿಣಾ ।
ಮಹಾರ್ಹೈರ್ಮಣಿಸೋಪಾನೈ ರುಪಪನ್ನಾಸ್ತತಸ್ತತಃ ॥೨೨॥
ಮುಕ್ತಾಪ್ರವಾಳ ಸಿಕತಾಃ ಸ್ಫಾಟಿಕಾಂತರ ಕುಟ್ಟಿಮಾಃ ।
ಕಾಂಚನೈಸ್ತರುಭಿಶ್ಚಿತ್ರೈಸ್ತೀರಜೈ ರುಪಶೋಭಿತಾಃ ॥೨೩॥

---

ಜಾಲಾನಿ - ಮೇಘಗಳಹಿಂಡುಗಳನ್ನು, ಮಾರುತಃ ಯಥಾ - ಬಿರುಗಾಳಿಯು ಹೇಗೋಹಾಗೆ, ಕಪಿಃ-ಆಂಜನೇಯನು, ಮಹಾಲತಾನಾಂ - ಬಲವಾಗಿಬೆಳೆದಿರುವ ಅನೇಕಬಳ್ಳಿಗಳ, ದಾಮಾನಿ - (ಸುರಳಿ) ಪೊದೆಗಳನ್ನೆಲ್ಲ, ತರಸಾ - ಬಲದಿಂದ, ವ್ಯಥಮತ್ - ಧ್ವಂಸಮಾಡಿದನು ॥೨೦॥ ಸಃ - ಆ, ಕಪಿಃ - ಆಂಜನೇಯನು, ತತ್ರ - ಆ, ಅಶೋಕವನದಲ್ಲಿ, ವಿಚರನ್ - ಸಂಚರಿಸುತ್ತಿರುವವನಾಗಿ, ಮನೋರಮಾಃ - ಬಲುಅಂದವಾಗಿರುವ, ಮಣಿಭೂಮೀಶ್ಚ - ರತ್ನಗಳನ್ನು ಕೆತ್ತಿರುವನೆಲಗಳನ್ನೂ, ರಾಜತೀಶ್ಚ - ಬೆಳ್ಳಿಯ ತಗಡುಗಳನ್ನು ಅಂಟಿಸಿರುವ ಭೂಭಾಗಗಳನ್ನೂ, ತಥಾ - ಹಾಗೆಯೇ, ಕಾಂಚನಭೂಮೀಶ್ಚ - ಚಿನ್ನಗೆಲಸ ಮಾಡಿರುವ ಪ್ರದೇಶಗಳನ್ನೂ ॥೨೧॥ ವಿವಿಧಾಕಾರಾಃ - ಬಗೆಬಗೆಯ ಆಕಾರಗಳುಳ್ಳ, ಪರಮವಾರಿಣಾ - ಶ್ರೇಷ್ಠವಾದ ಜಲದಿಂದ, ಪೂರ್ಣಾಃ - ತುಂಬಿರುವ, ಮಹಾರ್ಹೈಃ - ಬಹು ಬೆಲೆಯವುಗಳಾದ, ಮಣಿಸೋಪಾನೈಃ - ರತ್ನಮಯವಾದ ಹಂತಗಳಿಂದ, ತತಸ್ತತಃ - ಅಲ್ಲಲ್ಲಿ, ಉಪಪನ್ನಾಃ - ಕೂಡಿರುವ, ॥೨೨॥ ಮುಕ್ತಾ - ಮುತ್ತುಗಳಂತೆಯೂ, ಪ್ರವಾಳ - ಹವಳಗಳಂತೆಯೂ ಇರುವ, ಸಿಕತಾಃ - ಮರಳುಳ್ಳ, ಸ್ಫಾಟಿಕ - ಸ್ಫಟಿಕದ ಕಲ್ಲುಗಳಿಂದ ಕಟ್ಟಿರುವ, ಅಂತರ - ನಡುವೆ ಇರುವ, ಕುಟ್ಟಿಮಾಃ - ಜಗುಲಿಗಳು ಇಲ್ಲವೆ ಕಿರುಮಂಟಪಗಳೂಉಳ್ಳ, ಚಿತ್ರೈಃ- ಆಶ್ಚರ್ಯಕರಗಳಾಗಿಯೂ, ತೀರಜೈಃ-ದಡದಲ್ಲಿ ಬೆಳೆದವುಗಳಾಗಿಯೂ ಇರುವ, ಕಾಂಚನೈಃ - ಬಂಗಾರದ ಬಣ್ಣವುಳ್ಳ (ಬೇರು ಜಾತಿಯವುಗಳಾದ) ತರುಭಿಃ - ಮಹೀರುಹಗಳಿಂದ, ಉಪಶೋಭಿತಾಃ - ಪ್ರಕಾಶಿಸುತಲಿರುವ, ॥೨೩॥ ಫುಲ್ಲ - ಅರಳಿದ, ಪದ್ಮ - ತಾವರೆಗಳಿಂದಲೂ, ಉತ್ಪಲ-ನೈದಿಲೆಗಳಿಂದಲೂ ಕೂಡಿರುವ, ವನಾಃ - ಜಲಗಳುಳ್ಳ, ಚಕ್ರವಾಕ-ಚಕ್ರವಾಕ

---

ಅಲ್ಲಿಯ ಬಳ್ಳಿಗಳ ಪೊದೆಗಳನ್ನೆಲ್ಲ ತುಳಿದು ಪುಡಿಪುಡಿಮಾಡಿ ಹಾಳುಮಾಡಿದನು ॥ ಇಷ್ಟು ಕೆಲಸವನ್ನು ಕೊನೆಗಾಣಿಸಿದ ತರುವಾಯ ಮಾರುತಿಯು ಅಲ್ಲಲ್ಲಿ ಸಂಚರಿಸುತ್ತಾ, ಮನೋಹರವಾಗಿರುವ ಮಣಿಮಯವಾದ ಭೂಮಿಗಳನ್ನೂ, ರಜತವಿಕಾರವಾದ ಪ್ರದೇಶಗಳನ್ನೂ, ಸುವರ್ಣದಿಂದ ಶೋಭಿಸುವ ಅವಕಾಶಗಳನ್ನೂ ನೋಡುತ ಬಂದನು ॥೨೧॥ ಪಾವಮಾನಿಯಾಬಳಿಕ ಬಗೆಬಗೆಯ ಆಕಾರಗಳಾಗಿ ತಿದ್ದಲ್ಪಟ್ಟು, ಶ್ರೇಷ್ಠವಾದ ಶೀತ ಜಲದಿಂದ ಪರಿಪೂರ್ಣಗಳಾಗಿ, ಅಲ್ಲಲ್ಲಿ ದಿವ್ಯವಾದ ರತ್ನಗಳನ್ನು ಕೆತ್ತಿರುವ ಪಾವಟಿಗೆಗಳನ್ನುಳವಟ್ಟು, ॥ ೨೨ ॥ ಮುತ್ತು ಹವಳಗಳೆಂಬ ಮರಳನ್ನೊಳಗೊಂಡು, ನಡುನಡುವೆ ಸ್ಫಟಿಕಶಿಲಾಮಯವಾದ ಕಿರುಮಂಟಪಗಳಿಂದೊಡಗೂಡಿ, ಇಕ್ಕೆಲದ ದಡಗಳಲ್ಲಿ ಬೆಳೆದು ಸುವರ್ಣಮಯಗಳಾಗಿ ಶೋಭಿಸುವ ವಿಚಿತ್ರತರುಗಳಿಂದ ಶೋಭಿಸುತ ॥ ೨೩ ॥ ಅರಳಿದ ತಾವರೆಗಳನ್ನೂ,

ಫುಲ್ಲ ಪದ್ಮೋತ್ಪಲ ವನಾ ಶ್ಚಕ್ರವಾಕೋಪ ಕೂಜಿತಾಃ ।
ನತ್ಯೂಹ ರುತ ಸಂಘುಷ್ಟಾ ಹಂಸ ಸಾರಸ ನಾದಿತಾಃ ॥೨೪॥
ದೀರ್ಘಾಭಿ ರ್ದ್ರುಮ ಯುಕ್ತಾಭಿ ಸ್ಸರಿದ್ಭಿಶ್ಚ ಸಮಂತತಃ ।
ಅಮೃತೋಪಮ ತೋಯಾಭಿ ಶ್ಶಿವಾಭಿ ರುಪ ಸಂಸ್ಕೃತಾಃ ॥೨೫॥
ಲತಾಶತೈ ರವತತಾ ಸ್ಸಂತಾನ ಕುಸುಮಾವೃತಾಃ ।
ನಾನಾ ಗುಲ್ಮಾವೃತ ಘನಾಃ ಕರವೀರ ಕೃತಾಂತರಾಃ ॥೨೬॥
ತತೋಂಬುಧರ ಸಂಕಾಶಂ ಪ್ರವೃದ್ಧ ಶಿಖರಂ ಗಿರಿಂ ।
ವಿಚಿತ್ರ ಕೂಟಂ ಕೂಟೈಶ್ಚ ಸರ್ವತಃ ಪರಿವಾರಿತಂ ॥೨೭॥

ಪಕ್ಷಿಗಳ, ಉಪಕೂಜಿತಾಃ - ಕಲಕಲಧ್ವನಿಯುಳ್ಳ, ನತ್ಯೂಹ - ಭರತಪಕ್ಷಿಗಳ, ರುತ - ಶಬ್ದಗಳಿಂದ, ಸಂಘುಷ್ಟಾಃ - ದನಿಗೆಯ್ಯಲ್ಪಟ್ಟ, ಹಂಸ - ಅಂಚೆಗಳಿಂದಲೂ, ಸಾರಸ - ನೀರಹಕ್ಕಿಗಳಿಂದಲೂ, ನಾದಿತಾಃ - ದನಿಗಯ್ಯಲ್ಪಡುತಲಿರುವ ॥೨೪॥ ದೀರ್ಘಾಭಿಃ - ಉದ್ದವಾಗಿರುವ, ದ್ರುಮಯುಕ್ತಾಭಿಃ - ಇಕ್ಕೆಲದ ಗಿಡಗಳಿಂದೊಡಗೂಡಿದ, ಅಮೃತೋಪಮ ತೋಯಾಭಿಃ - ಅಮೃತಕ್ಕೆಣೆಯಾದ ಜಲವುಳ್ಳ, ವಾಭಿಃ - ಮಂಗಳ ಕರಗಳೆನಿಸಿದ, ಸಮಂತತಃ - ಎಲ್ಲ ಕಡೆಗಳಲ್ಲಿಯೂ ಹರಿಯುತಲಿರುವ, ಸರಿದ್ಭಿಶ್ಚ - ಕಿರುಹೊಳೆಗಳಿಂದಲೂ, ಉಪಸಂಸ್ಕೃತಾಃ - ಅಲಂಕರಿಸಲ್ಪಟ್ಟಿರುವ ॥೨೫॥ ಲತಾಶತೈಃ - ನೂರಾರುಜಾತಿಯ ಬಳ್ಳಿಗಳಿಂದ, ಅವತತಾಃ - ತುಂಬಿರುವ, ಸಂತಾನ ಕುಸುಮಾವೃತಾಃ - ಕಲ್ಪ ಲತೆಗಳ ಪುಷ್ಪಗಳಿಂದ ಪೂರ್ಣವಾದ, ನಾನಾ ಗುಲ್ಮ-ಅನೇಕವಿಧವಾದ ಪೊದೆಗಳಿಂದ, ಆವೃತ - ಸುತ್ತಲ್ಪಟ್ಟದಾದ ಕಾರಣವೇ, ಘನಾಃ - ದಟ್ಟವಾಗಿರುವ, ಕರವೀರಕೃತ - ಕಣಗಿಲು ಗಿಡಗಳಿಂದ ತುಂಬಿದ, ಅಂತರಾಃ - ಮಧ್ಯ ವಿಭಾಗಗಳುಳ್ಳವುಗಳಾಗಿಯೂ ಇರವ, ವಾಪೀಶ್ಚ-ಕೊಳ (ಕಲ್ಯಾಣಿ) ಗಳನ್ನೂ, ದದರ್ಶ-ಕಂಡನು, ತತಃ-ಅನಂತರದಲ್ಲಿ ಅಂಬುಧರಸಂಕಾಶಂ-ನೀರುತುಂಬಿದ ಮೋಡಕ್ಕೆಣೆಯೆನಿಸಿರುವ, ಪ್ರವೃದ್ಧ-ಎತ್ತರವಾದ, ಶಿಖರಂ ಶೃಂಗವುಳ್ಳ, ವಿಚಿತ್ರಕೂಟಂ-ಅಚ್ಚರಿಯ ಕೋಡುಗಳುಳ್ಳ, ಕೂಟೈಃ - ಶಿಖರಗಳಿಂದ

ಸ್ವದಿಲೆಗಳನ್ನೂ ಹೊಂದಿ, ಚಕ್ರವಾಕ ಪಕ್ಷಿಗಳ ಬಲು ಇಂಪಾದ ದನಿಗಳಿಂದ ವಿರಾಜಿಸುತ, ಭರತಪಕ್ಷಿಗಳ ನಿನಾದದಿಂದಲೂ, ಹಂಸಸಾರಪಕ್ಷಿಗಳ ಕಲಕಲಧ್ವನಿಗಳಿಂದಲೂ, ಶೋಭಾಯಮಾನವಾಗಿ ॥೨೪॥ ಬಲು ಉದ್ದವಾಗ ಹರಿಯುತ್ತ, ಅಮೃತಸದೃಶ ಜಲಗಳಿಂದ ಭರಿತಗಳಾಗಿ, ಮರಗಳ ಗುಂಪುಗಳಿಂದ ಸಹಿತವಾಗಿಯೂ ಇರುವ ಮಂಗಳ ಕರಗಳಾದ ಕಿರುಹೊಳೆಗಳಿಂದ ಸುತ್ತಲೂ, ಅಲಂಕೃತಗಳಾಗಿ, ॥೨೫॥ ಹರಡಿ ಬೆಳೆದಿರುವ ಸಾವಿರಾರುಬಗೆಯ ಬಳ್ಳಿಗಳಿಂದಲೂ ಕಲ್ಪಲತೆಗಳ ಕುಸುಮಗಳಿಂದಲೂ ಬಳಸಲ್ಪಟ್ಟು, ನಾನಾವಿಧಗಳಾದ ಲತೆಗಳ ಪೊದೆಗಳಿಂದ ದಟ್ಟವಾಗಿ, ಆಯಾಯ ಭಾಗಗಳಲ್ಲಿ ಅಂದವಾದ ಕಣಿಗಿಲುಗಿಡಗಳ ಅಂತರಾಳವುಳ್ಳವುಗಳಾಗಿಯೂ ಇರುವ ವಿಸ್ತಾರವಾದ ಕೊಳಗಳನ್ನೂ ನೋಡುತ ಬಂದನು ॥೨೬॥ ಬಳಿಕ ಮಹಾಮೇಘಕ್ಕೆ ಎಣೆಯೆನಿಸಿ, ಎತ್ತರವಾದ ಕೋಡುಗಳನ್ನೊಳಗೊಂಡು, ನಾನಾವರ್ಣದ ಬಳಕೋಡುಗಲ್ಲುಗಳಿಂದ ಅಲಂಕೃತವಾಗಿ, ನಡುನಡುವೆ ಶಿಖರಗಳಿಂದ ಬಳಸಲ್ಪಟ್ಟುದಾಗಿಯೂ ಇರುವ ಬಂದಾನೊಂದು ಪರ್ವತವನ್ನೂ ॥ ೨೭ ॥ ಹೇರಳವಾದ ಕಲ್ಲಿನ ಮಂಟಪಗಳಿಂದೊಡಗೂಡಿ, ನಾನಾವಿಧ ತರುಗಳಿಂದ ಆವರಿಸಲ್ಪಟ್ಟು

ಶಿಲಾಗೃಹೈ ರವತತಂ ನಾನಾ ವೃಕ್ಷೈ ಸ್ಸಮಾವೃತಂ ।
ದದರ್ಶ ಹರಿಶಾರ್ದೂಲೋ ರಮ್ಯಂ ಜಗತಿ ಪರ್ವತಂ ॥೨೮॥
ದದರ್ಶ ಚ ನಗಾ ತ್ತಸ್ಮಾ ನ್ನದೀಂ ನಿಪತಿತಾಂ ಕಪಿಃ ।
ಅಂಕಾದಿವ ಸಮುತ್ಪತ್ಯ ಪ್ರಿಯಸ್ಯ ಪತಿತಾಂ ಪ್ರಿಯಾಂ ॥೨೯॥
ಜಲೇ ನಿಪತಿತಾಗ್ರೈ ಶ್ಚ ಪಾದಪೈ ರುಪ ಶೋಭಿತಾಂ ।
ವಾರ್ಯಮಾಣಾ ಮಿವ ಕ್ರುದ್ಧಾಂ ಪ್ರಮದಾಂ ಪ್ರಿಯಬಂಧುಭಿಃ ॥೩೦॥
ಪುನ ರಾವೃತ್ತ ತೋಯಾಂ ಚ ದದರ್ಶ ಸ ಮಹಾಕಪಿಃ ।

---

ಸರ್ವತಃ-ಸುತ್ತಲೂ, ಪರಿವಾರಿತಂ-ಬಳಸಲ್ಪಟ್ಟಿರುವ. ಗಿರಿಂಚ-ಬೆಟ್ಟವನ್ನೂ, ಶಿಲಾಗೃಹೈಃ- ಕಲ್ಲುಮಂಟಪಗ ಳಿಂದ, ಅವತತಾ - ತುಂಬಿರುವ, ನಾನಾವೃಕ್ಷೈಃ - ಬಗೆಬಗೆಯ ಮರಗಳಿಂದ, ಸಮಾವೃತಂ - ಸುತ್ತ ಲ್ಪಟ್ಟಿರುವ. ರಮ್ಯ - ರಮಣೀಯವೆನಿಸಿದ, ಜಗತಿಪರ್ವತಂ - ಕೃತ್ರಿಮವಾದ ಬೆಟ್ಟವನ್ನೂ, ಹರಿಶಾರ್ದೂ ಲಃ - ಕಪಿವರನು, ದದರ್ಶ - ನೋಡಿದನು ॥೨೭-೨೮॥ ಪ್ರಿಯಸ್ಯ - ವಲ್ಲಭನ, ಅಂಕಾತ್ - ತೊಡೆಯದೆ ಶೆಯಿಂದ, ಸಮುತ್ಪತ್ಯ - ಹಾರಿ, ಪತಿತಾಂ - ಉರುಳಿಕೊಂಡ, ಪ್ರಿಯಾಮಿವ - ನಾಯಕಿಯೋ ಎಂಬಂತೆ ಕಾಣಬರುವ, ತಸ್ಮಾತ್ - ಮೇಲೆಹೇಳಿದ, ನಗಾತ್ - ಬೆಟ್ಟದ ದೆಸೆಯಿಂದ, ನಿಪತಿತಾಂ - ಧುಮಿಕಿಹರಿ ಯುತಲಿರತಕ್ಕದಾಗಿಯೂ, ಪ್ರಿಯಬಂಧುಭಿಃ - ನಂಟರಿಷ್ಟರಿಂದ, ವಾರ್ಯಮಾಣಾಂ - ತಡೆಯಲ್ಪಡುತಲಿ ರುವ, ಕ್ರುದ್ಧಾಂ - ಹೊಳೆಯೊಳಗೆ ಬೀಳಬೇಕೆಂದು ಸಿಟ್ಟುಕೊಂಡಿರತಕ್ಕ, ಪ್ರಮದಾಮಿವ - ಕೊಬ್ಬಿದ ಹೆಂಗಸೋ ಎಂಬಂತೆ, ಜಲೆ - ನೀರಿನಲ್ಲಿ, ನಿಪತಿತ - ಇಳಿಯಬಿದ್ದಿರುವ, ಅಗ್ರೈಃ - ಕೊನೆಗಳುಳ್ಳ, ಪಾದ ಪೈಃ - ಮರಗಳಿಂದ, ಉಪಶೋಭಿತಾಂ - ಪ್ರಕಾಶಿಸುತಲಿರುವುದಾಗಿಯೂ ಇರುವ, ನದೀಂ-ಹೊಳೆಯನ್ನು, ದದರ್ಶ - ಕಂಡನು ॥೩೦॥ ಪುನಃ - ಮತ್ತು, ಆವೃತ್ತತೋಯಾಂ - ಹರಿದುಹೋಗಿಹಿಂದುರುಗಿಬರು ತ್ತಿರುವನೀರುಳ್ಳದಾದಕಾರಣವೇ, ಕಾಂತಸ್ಯ- ಪ್ರಿಯನವಿಷಯವಾಗಿ, ಪ್ರಸನ್ನಾಂ- ಶಾಂತಕೋಪಳಾದ

---

ಇರುವ ಕೃತ್ರಿಮ ಕ್ರೀಡಾ ಪರ್ವತವನ್ನೂ ನೋಡಿದನು ॥೨೮॥ ಪ್ರಿಯವಲ್ಲಭನ ತೊಡೆಯ ಮೇಲಿನಿಂದ ನೆಲಕ್ಕೆ ಉರುಳಿದ ಮಹಿಳೆಯು ಹೇಗೋಹಾಗೆ ಆ ಕೃತ್ರಿಮದ ಬೆಟ್ಟದಿಂದ ಕೆಳಗೆ ಧುಮಿಕಿ ಹರಿಯುತಲಿರುವ ಒಂದು ಹೊಳೆಯನ್ನೂ ಕಂಡನು ॥೨೯॥ ಆ ಹೊಳೆಯ ಇಕ್ಕೆಲದ ದಡಗಳಲ್ಲಿಯೂ ಮರಗಳು ಸೊಂಪಾಗಿ ಬೆಳೆದು, ಅವುಗಳ ಕೊನೆಗಳು ಡೊಂಕಾಗಿ ಬಾಗಿ ಹೊಳೆಯನ್ನು ಮುಟ್ಟುತಲಿದ್ದರೆ, ಯಾವನಾದರೊಬ್ಬ ಸಂಸಾರಿಯ ಮನೆಯೊಳಗೆ ಗರತಿಯಲ್ಲದ ಹೆಂಡರು ಗಂಡನೊಡನೆ ಒಡಿದಾಡಿ, ಸಿಟ್ಟುಗೊಂಡು, ಓಡಿಹೋಗುತ್ತಿರುವಾಗ, ನಂಟರಿಷ್ಟರು ಬೇಗನೆ ಬಂದು ಆಕೆಯನ್ನು ಹಿಡಿದು ‚‚ಬೇಡವಮ್ಮ, ಬೇಡವೆ, ಗರತಿಯರು ಹೀಗೆ ಗಂಡನಮೇಲಣ ಮುನಿಸಿನಿಂದ ಕೈಹಿಡಿದವನನ್ನು ಬಿಟ್ಟು ಓಡಬಾರದು, ಇದು ತರವಲ್ಲ ” ಎಂದು ತಡೆಯಲ್ಪಡುತಲಿರುವ ತರುಣಿಯೋ ಎಂಬಂತೆ ಶೋಭಿಸುತಲಿತ್ತು ॥೩೦॥ ಮತ್ತು-ಆ ಕಪಟಹೊಳೆಯು ಸ್ವಲ್ಪದೂರ ಹರಿದುಹೋಗಿ ಎದುರಿಗೆ ಸಿಲುಕಿದ ಬಂಡೆಗೋ ಅಥವಾ ಮಣ್ಣಿನದಿಣ್ಣೆಗೋ ತಗಲಿ,ಹರಿತದ ಹೊಯ್ಲು ಹಿಂದಕ್ಕೆ ತಿರುಗಲು,ಆಗ ಆ ಮುನಿಸಿನ ಮಾನಿನಿಯು ಮನದನ್ನನವಿಷಯದಲ್ಲಿ ಪ್ರಸನ್ನಳಾಗಿ, ಮರಳಿ ರಮಣನ ಬಳಗೈದುತಿರುವಳೋ ಎಂಬಂತೆ ಬೆಳಗುತಲಿದ್ದಿತು ॥೩೦॥ ಆ ತರುವಾಯ ಮಾರುತಿಯು

ಪ್ರಸನ್ನಾ ಮಿವ ಕಾಂತಸ್ಯ ಕಾಂತಾಂ ಪುನ ರುಪಸ್ಥಿತಾಂ ॥ ೪೧ ॥
ತಸ್ಯಾ ದೂರಾ ತ್ಸಪದ್ಮಿನ್ಯೋ ನಾನಾ ದ್ವಿಜ ಗಣಾಯುತಾಃ ।
ದದರ್ಶ ಹರಿಶಾರ್ದೂಲೋ ಹನೂಮಾ ನ್ಮಾರುತಾತ್ಮಜಃ ॥೪೨॥
ಕೃತ್ರಿಮಾಂ ದೀರ್ಘಿಕಾಂ ಚಾಪಿ ಪೂರ್ಣಾಂ ಶೀತೇನ ವಾರಿಣಾ ।
ಮಣಿಪ್ರವರ ಸೋಪಾನಾಂ ಮುಕ್ತಾ ಸಿಕತ ಶೋಭಿತಾಂ ॥೪೪॥
ವಿವಿಧೈ ರ್ಮೃಗ ಸಂಘೈಶ್ಚ ವಿಚಿತ್ರಾಂ ಚಿತ್ರ ಕಾನನಾಂ ।

ಕಾರಣವೇ,(ಅನುಕೂಲಳಾದಕಾರಣವೇ)ಪುನಃ-ಮರಳಿ,ಉಪಸ್ಥಿತಾಂ-ಪ್ರಿಯನ ಬಳಿಗೆಬಂದ,ಕಾಂತಾಮಿವ-ನಾಯಕಿಯೋ ಎಂಬಂತಿರುವ, ನದೀಂ - ನದಿಯನ್ನು, ಸಃ - ಆ, ಮಹಾಕಪಿಃ - ಆಂಜನೇಯನು, ದದರ್ಶ - ಅವಲೋಕಿಸಿದನು ॥೪೧ ॥ ಹರಿಶಾರ್ದೂಲಃ - ಕಪಿವರನಾದ, ಸಃ ಮಾರುತಾತ್ಮಜಃ - ಆ ವಾಯುಪುತ್ರನೆನಿಸಿದ, ಹನುಮಾನ್ - ಮಾರುತಿಯು, ತಸ್ಯಾಃ - ಆಬೆಟ್ಟದಮೇಲಿನಿಂದಹರಿಯುವ ನದಿಯ, ದೂರಾತ್ - ಸ್ವಲ್ಪದೂರದಲ್ಲಿ, ನಾನಾದ್ವಿಜಗಣಾಯುತಾಃ - ಬಗೆಬಗೆಯ ಹಕ್ಕಿಯಹಿಂಡಿನಿಂದೊಡಗೂಡಿರುವ, ಪದ್ಮಿನ್ಯಃ - ತಾವರೆಯಬಳ್ಳಿಗಳನ್ನು (ದ್ವಿತೀಯಾರ್ಥದಲ್ಲಿ ಪ್ರಥಮಾ) ದದರ್ಶ - ನಿರುಕಿಸಿದನು ॥೪೨॥ ಮಣಿಪ್ರವರ - ರತ್ನಖಚಿತವಾದ, ಸೋಪಾನಾಂ - ಪಾವಟಿಗೆಗಳುಳ್ಳ, ಮುಕ್ತಾ-ಮುತ್ತುಗಳರೂಪವಾದ, ಸಿಕತ - ಮರಳಿನಿಂದ, ಶೋಭಿತಾಂ - ಪ್ರಕಾಶಿಸುತಲಿರುವ, ಶೀತೇನವಾರಿಣಾ - ತಂಪಾದನೀರಿನಿಂದ, ಪೂರ್ಣಾಂ- ತುಂಬಿಇರುವ, ಕೃತ್ರಿಮಾಂ-(ಧ್ರುವಜಲವಿಲ್ಲದೆ) ಕೈಕರಣದಿಂದ ಮಾಡಿಇರುವುದಾಗಿಯೂ ॥೪೩॥ ವಿವಿಧೈಃ - ನಾನಾವಿಧವಾದ, ಮೃಗಸಂಘೈಶ್ಚ - ಮೃಗಗಳ ಹಿಂಡುಗಳಿಂದಲೂ, ವಿಚಿತ್ರಾಂ - ಆಶ್ಚರ್ಯಕರವೆನಿಸಿದ, ಚಿತ್ರಕಾನನಾಂ - ರಮಣೀಯವಾದ ತೋಟಗಳುಳ್ಳುದಾಗಿಯೂ, ವಿಶ್ವಕರ್ಮಣಾ - ದೇವತೆಗಳ ಬಡಗಿಯಿಂದ, ನಿರ್ಮಿತೈಃ - ಕಲ್ಪಿಸಲ್ಪಟ್ಟ, ಸುಮಹದ್ಭಿಃ - ಬಹಳದೊಡ್ಡವುಗಳಾದ, ಪ್ರಾಸಾದೈಶ್ಚ -ಉಪ್ಪರಿಗೆಗಳಿಂದಲೂ, ಕೃತ್ರಿಮೈಃ - ಕಸಿಮೊದಲಾದವುಗಳಿಂದ ರಚಿಸಿಇರುವ, ಕಾನನೈಶ್ಚಾಪಿ-ತೋಟಗಳಿಂದಲೂ, ಸರ್ವತಃ - ಎಲ್ಲಕಡೆಗಳಲ್ಲಿಯೂ, ಸಮಲಂಕೃತಾಂ - ಅಲಂಕರಿಸಲ್ಪಟ್ಟಿರುವ, ದೀರ್ಘಿಕಾಂಚಾಪಿ

ಆ ಆಟದ ಬೆಟ್ಟಕ್ಕೆ ಸ್ವಲ್ಪದೂರದಲ್ಲಿ ತಳತಳಿಸುತಲಿರುವ ತಾವರೆಗಳನ್ನೊಳಗೊಂಡು, ಬಗೆಬಗೆಯ ಹಕ್ಕಿಗಳ ವಿಚಿತ್ರಧ್ವನಿಗಳಿಂದೊಡಗೂಡಿಯೂ ಇರುವ ರಮಣೀಯವಾದ ಕೊಳಗಳನ್ನು ಕಂಡನು ॥೪೨॥ ಹಾಗೆಯೇ ಅದರ ಪಕ್ಕದಲ್ಲಿ ಕೈವಾಡದ ಬೆಡಗಿನಿಂದ ಕಲ್ಪಿಸಲ್ಪಟ್ಟುದಾಗಿಯೂ,ತಂಪಾದ ನೀರಿನಿಂದ ತುಂಬಲ್ಪಟ್ಟುದಾಗಿಯೂ, ಮುತ್ತುಗಳರೂಪವಾದ ಮರಳಿನಿಂದೊಡಗೂಡಿದುದಾಗಿಯೂ, ಉತ್ತಮವಾದ ರತ್ನಗಳನ್ನು ಕೆತ್ತಿರುವ ಪಾವಟಿಗೆಗಳಿಂದ ಅಲಂಕರಿಸಲ್ಪಟ್ಟುದಾಗಿಯೂ ಇರುವ ಅಗಲವಾದ ನೀರಿನ ತೊಟ್ಟಿಗಳನ್ನು ನೋಡಿದನು ॥ ಅದರ ಸುತ್ತಲೂ ಬಗೆಬಗೆಯ ಮಿಗಗಳನ್ನು ಸಲಹಿ ಇದ್ದರು,ಕೈಸೇರಿನಿಂದ ಕಾಪಾಡುವ ಪರಿಪರಿಯ ಹೂವಿನ ಗಿಡಗಳನ್ನು ಕಲ್ಪಿಸಿದ್ದರು, ವಿಶ್ವಕರ್ಮನು ಅಲ್ಲಲ್ಲಿ ಎತ್ತರವಾದ ಉಪ್ಪರಿಗೆಯ ಮನೆಗಳನ್ನು ಅಣಿಮಾಡಿ ಇದ್ದನು. ಅದರ ಸುತ್ತಲೂ ಅಂದವಾದ ಕಿರುದೋಟಗಳು ಮೆರೆಯುತಲಿದ್ದುವು,ಅವುಗಳೊಳಗೆ ಕೆಲವು ಮರಗಳು ಹೂವಿನಿಂದ ತುಂಬಿಯೂ, ಮತ್ತೆ ಕೆಲವು ಹಣ್ಣಿನಿಂದ ಪರಿಪೂರ್ಣವಾಗಿಯೂ, ಬುಡಗಳ ಸುತ್ತಲೂ ಮಣ್ಣಿನ ಹೆಪ್ಪುಳ್ಳುವಾಗಿಯೂ,ಎತ್ತರವಾದ ಜಗುಲಿಗಳನ್ನೊಳಗೊಂಡಿರುವುವಾಗಿಯೂ, ಅವುಗಳಮೇಲೆ ಅಲ್ಲಲ್ಲಿ

ಪ್ರಾಸಾದೈ ಸ್ಸುಮಹದ್ಭಿಶ್ಚ ನಿರ್ಮಿತೈ ರ್ವಿಶ್ವ ಕರ್ಮಣಾ ||೨೪||
ಕಾನನೈಃ ಕೃತ್ರಿಮೈ ಶ್ಚಾಪಿ ಸರ್ವತ ಸ್ಸಮಲಂಕೃತಾಂ |
ಯೇ ಕೇಚಿ ತ್ಪಾದಪಾ ಸ್ತತ್ರ ಪುಷ್ಪೋಪಗ ಫಲೋಪಗಾಃ ||
ಸಚ್ಛತ್ರಾ ಸ್ಸವಿತರ್ದೀಕಾಃ ಸರ್ವೇ ಸೌವರ್ಣ ವೇದಿಕಾಃ ||೨೫||-||
ಲತಾಪ್ರತಾನೈ ರ್ಬಹುಭಿಃ ಪರ್ಣೈಶ್ಚ ಬಹುಭಿ ರ್ವೃತಾಂ |
ಕಾಂಚನೀಂ ಶಿಂಶುಪಾ ಮೇಕಾಂ ದದರ್ಶ ಹನುಮಾ ನ್ಕಪಿಃ |
ವೃತಾಂ ಹೇಮ ಮಯೀಭಿಶ್ಚ ವೇದಿಕಾಭಿ ಸ್ಸಮಂತತಃ ||೨೭||
ಸೋಪಶ್ಯ ದ್ಭೂಮಿ ಭಾಗಾಂಶ್ಚ ಗರ್ತ ಪ್ರಸ್ರವಣಾನಿ ಚ|
ಸುವರ್ಣ ವೃಕ್ಷಾ ನಪರಾನ್ ದದರ್ಶ ಶಿಖಿ ಸನ್ನಿಭಾನ್||೨೮||

ಕೊಳವನ್ನೂ, ದದರ್ಶ - ದೃಷ್ಟಿಸಿದನು || ೨೩, ೨೪ || || ತತ್ರ - ಅಲ್ಲಿ, ಯೇಕೇಚಿತ್ - ಕೆಲವಾದ, ಪುಷ್ಪೋಪಗ - ಹೂಗಳಿಂದತುಂಬಿರುವ, ಫಲೋಪಗಾಃ - ಹಣ್ಣುಗಳಿಂದಲೂ ನಿಬಿಡವಾಗಿರುವ, ಪಾದಪಾಃ - ವೃಕ್ಷಗಳುಂಟೋ?, ತೇ - ಅವು, ಸಚ್ಛತ್ರಾಃ - ಸುತ್ತು ಕಟ್ಟೆಯುಳ್ಳವುಗಳಾಗಿಯೂ, ಸವಿತರ್ದೀಕಾಃ-ಸುತ್ತಲದಿಣ್ಣೆಯುಳ್ಳವುಗಳಾಗಿಯೂ ಇರುವವುಗಳಾಗಿ, ಸರ್ವೇ-ಎಲ್ಲವೂ, ಸೌವರ್ಣವೇದಿಕಾಃ-ಬಂಗಾರದ ಇಟ್ಟಿಗೆಗಳ ಜಗುಲಿಯುಳ್ಳವುಗಳೆನಿಸಿ, ಆಸನ್-ಇದ್ದುವು||೨೫|| || ಬಹುಭಿಃ-ಅನೇಕವಾದ, ಲತಾಪ್ರತಾನೈಃ ಬಳ್ಳಿಗಳಸುರಳಿಗಳಿಂದಲೂ, ಬಹುಭಿಃ - ಅನೇಕವಾದ, ಪರ್ಣೈಶ್ಚ-ಎಲೆಗಳಿಂದಲೂ, ವೃತಾಂ-ಸುತ್ತಲ್ಪಟ್ಟಿರುವ, ಹೇಮಮಯೀಭಿಃ - ಸುವರ್ಣಕಲ್ಪಿತಗಳಾದ, ವೇದಿಕಾಭಿಃ - ವೇದಿಕೆಗಳಿಂದ, ಸಮಂತತಃ-ಎಲ್ಲಕಡೆಗಳಲ್ಲಿಯೂ, ವೃತಾಂ - ಬಳಸಲ್ಪಟ್ಟಿರುವ, ಏಕಾಂ - ಒಂದಾದ, ಶಿಂಶುಪಾಂ - ಶಿಂಶುಪಾವೃಕ್ಷವನ್ನಾದರೋ, ಹನೂಮಾನ್‌ಕಪಿಃ - ಆಂಜನೇಯನು, ದದರ್ಶ - ನಿರೀಕ್ಷಿಸಿದನು || ೨೬, ೨೭ || ಸಃ- ಆ ಮಾರುತಿಯು, ಭೂಮಿಭಾಗಾಂಶ್ಚ - ಕೆಲವು ಭೂಪ್ರದೇಶಗಳನ್ನೂ, ಗರ್ತಪ್ರಸ್ರವಣಾನಿಚ - ನೀರಿನಹಳ್ಳಗಳನ್ನೂ ಮತ್ತು ಹರಿವಕಾಲುವೆಗಳನ್ನೂ, ಅಪಶ್ಯತ್ - ಕಂಡನು, ಅಪರಾನ್ - ಬೇರೆಕೆಲವಾದ, ಶಿಖಿಸನ್ನಿಭಾನ್ - ಬೆಂಕಿಯಂತೆ ಬೆಳಗುವ, ಸುವರ್ಣವೃಕ್ಷಾನ್ - ಸ್ವರ್ಣವೃಕ್ಷಗಳನ್ನೂ, ದದರ್ಶ - ಕಂಡನು || ೨೮ || ಮೇರೋಃ - ಮೇರುಪರ್ವತದ, ಪ್ರಭಯಾ - ಕಾಂತಿಯಿಂದ, ದಿವಾಕರ ಇವ - ಸೂರ್ಯನು

ಕೂಡಲಿಕ್ಕೆ ಅಣಿಯಾದ ಸುವರ್ಣಮಯವಾದ ಮಂಚಗಳನ್ನುಳವಟ್ಟವುಗಳಾಗಿಯೂ ಶೋಭಿಸುತಲಿದ್ದುವು ||೨೪-೨೫||-|| ಅದರ ಪಕ್ಕದಲ್ಲಿ ಸುವರ್ಣಚ್ಛಾಯೆಯ ಶಿಂಶುಪಾವೃಕ್ಷವೊಂದು ರಮಣೀಯವಾಗಿ ಕಾಣಬಂದಿತು, ಅನೇಕತರಹೆಯ ಬಳ್ಳಿಗಳು ಆಮರದ ಮೇಲೆ ಹಬ್ಬಿದ್ದುವು, ಆ ಪಾದಪದಲ್ಲಿ ಪರಿಪೂರ್ಣವಾದ ಪತ್ರಗಳು ಶೋಭಿಸುತಲಿದ್ದುವು, ಆ ಮಹೀರುಹದ ಸುತ್ತಲೂ ಬಂಗಾರದ ಇಟ್ಟಿಗೆಗಳಿಂದ ಬಲು ಸುಂದರವಾದ ವೇದಿಕೆಗಳನ್ನು ಕಲ್ಪಿಸಿದ್ದರು. ಇಂತಹ ಪಾದಪವನ್ನೊಂದನ್ನು ನೋಡಿದನು|| ೨೭|| ಪಾವನಿಯು ಅದನ್ನು ಸುತ್ತು ಬಳಸಿದ ಕೆಲವು ಬೈಲು ನೆಲಗಳನ್ನೂ, ಮತ್ತೆ ಕೆಲವು ನೀರಹಳ್ಳಗಳನ್ನೂ, ಹರಿವ ಕಾಲುವೆಗಳನ್ನೂ, ಬಂಗಾರದಂತೆ ಬೆಳಕಿನಿಂದ ಬೆಂಕಿಗೆಣೆಯೆನಿಸಿದ ಮರಗಳನ್ನೂ ನಿರುಕಿಸಿದನು||೨೮|| ಮೇರುಪರ್ವತದ ಪ್ರಭೆಯಿಂದ ದಿವಾಕರನು ಹೇಗೋಹಾಗೆ ಆ ಸ್ವರ್ಣವರ್ಣದ ಶಾಖಿಗಳ ಶೋಭೆಯಿಂದ ಸಮೀರನಂದನನು ತನ್ನನ್ನೂ ಸುವರ್ಣಚ್ಛಾಯೆಯುವನನ್ನಾಗಿ ತಿಳಿದುಕೊಂಡನು ||೨೯||

ತೇಷಾಂ ದ್ರುಮಾಣಾಂ ಪ್ರಭಯಾ ಮೇರೋರಿವ ದಿವಾಕರಃ ।
ಅಮನ್ಯತ ತದಾ ವೀರಃ ಕಾಂಚನೋಽಸ್ಮೀತಿ ವಾನರಃ ॥೩೯॥
ತಾಂ ಕಾಂಚನೈಸ್ತರುಗಣೈರ್ಮಾರುತೇನ ಚ ವೀಜಿತಾಂ ।
ಕಿಂಕಿಣೀಶತನಿರ್ಘೋಷಾಂ ದೃಷ್ಟ್ವಾ ವಿಸ್ಮಯಮಾಗಮತ್ ॥೪೦॥
ಸ ಪುಷ್ಪಿತಾಗ್ರಾಂ ರುಚಿರಾಂ ತರುಣಾಂಕುರಪಲ್ಲವಾಂ ।
ತಾಮಾರುಹ್ಯ ಮಹಾಬಾಹುಃ ಶಿಂಶುಪಾಂ ಪರ್ಣಸಂವೃತಾಂ ॥೪೧॥
ಇತೋ ದ್ರಕ್ಷ್ಯಾಮಿ ವೈದೇಹೀಂ ರಾಮದರ್ಶನಲಾಲಸಾಂ ।

ಹೇಗೋ ಹಾಗೆ, ತೇಷಾಂದ್ರುಮಾಣಾಂ - ಆ ಮರಗಳ, ಪ್ರಭಯಾ - ಕಾಂತಿಯಿಂದ, ವೀರಃ - ಶೂರನಾದ, ವಾನರಃ - ಮಾರುತಿಯು, ತದಾ - ಆಗ, ಕಾಂಚನಃ - ಸುವರ್ಣಮಯನಾದವನು, ಅಸ್ಮಿ - ಆಗಿದೇನೆ, ಇತಿ - ಹೀಗೆಂದು, ಅಮನ್ಯತ - ಭಾವಿಸಿದನು ॥ ೩೯ ॥ ಕಾಂಚನೈಃ-ಸುವರ್ಣಮಯವಾದ, ತರುಗಣೈಃ - ಮರಗಳ ಗುಂಪುಗಳಿಂದೊಡಗೂಡಿ, ಮಾರುತೇನ - ಗಾಳಿಯಿಂದ, ವೀಜಿತಾಂಚ - ಬೀಸಲ್ಪಡುತಲಿರುವುದೂ ಆಗಿರುವ, ಕಿಂಕಿಣೀ - ಗೆಜ್ಜೆಗಳ ಗುಂಪಿನ, ನಿರ್ಘೋಷಾಂ-ಶಬ್ದದಂತೆ ಶಬ್ದವುಳ್ಳ, ತಾಂ- ಆ ಶಿಂಶುಪಾವೃಕ್ಷವನ್ನು, ದೃಷ್ಟ್ವಾ - ನೋಡಿ, ವಿಸ್ಮಯಂ - ಆಶ್ಚರ್ಯವನ್ನು, ಆಗಮತ್ - ಹೊಂದಿದನು ॥ ೪೦ ॥ ಮಹಾಬಾಹುಃ - ಆಜಾನುಬಾಹುವಾದ, ಸಃ - ಆ ಆಂಜನೇಯನು, ಪುಷ್ಪಿತ - ಹೂತಿರುವ, ಅಗ್ರಾಂ - ಕೊನೆಗಳುಳ್ಳ, ರುಚಿರಾಂ -ರಮಣೀಯವಾದ, ತರುಣಾಂಕುರ - ಎಳೆಯ ಕುಡಿಗಳು ಮತ್ತು ಚಿಗುರುಗಳೂ ಉಳ್ಳ, ಪರ್ಣಸಂವೃತಾಂ - ಪತ್ರಗಳಿಂದನಿಬಿಡವಾಗಿರುವ, ತಾಂ - ಆಶಿಂಶುಪಾ (ಅಗುರು, ಇರುಗುಡುಮ್ರಾನು) ವೃಕ್ಷವನ್ನು, ಆರುಹ್ಯ - ಏರಿ, ॥ ೪೧ ॥ ಇತಃ - ಇಲ್ಲಿ ಇದ್ದುಕೊಂಡು, ರಾಮದರ್ಶನ - ರಾಮನನ್ನು ನೋಡುವುದರಲ್ಲಿ, ಲಾಲಸಾಂ - ಅತ್ಯಾದರವುಳ್ಳ, ದುಃಖಾರ್ತಾಂ - ವ್ಯಥೆಯಿಂದ ದೀನಳಾದ, ಯದೃಚ್ಛಯಾ - ಸ್ವೇಚ್ಛೆಯಿಂದ, ಇತಶ್ಚೇತಶ್ಚ - ಇಲ್ಲಲ್ಲಿ, ಸಂಪತಂತೀಂ - ತಿರುಗಾಡುತ ಬರುವ, ವೈದೇಹೀಂ - ಜಾನಕಿಯನ್ನು, ದ್ರಕ್ಷ್ಯಾಮಿ - ನೋಡುವೆನು ॥ ೪೨ ॥ ದುರಾತ್ಮನಃ- ದುರ್ಬುದ್ಧಿಯುಳ್ಳರಾವಣನ, ಇಯಂ - ಈ, ಅಶೋಕವನಿಕಾಚ-ಅಶೋಕವನವೂ, ದೃಢಂ- ವಿಶೇಷವಾಗಿ

ಆ ಶಿಂಶುಪಾವೃಕ್ಷದಸುತ್ತಲೂ ಬಗೆಬಗೆಯ ಕಿರುಮರಗಳು ಅನೇಕವಾಗಿ ಬೆಳಗುತಲಿದ್ದುವು, ತಂಗಾಳಿಯು ಬೀಸುತಲಿದ್ದಿತು, ಕಿರುಗಂಟೆಗಳ ಸದ್ದಿನಂತೆ ಬಗೆಬಗೆಯ ಹಕ್ಕಿಗಳ ಸದ್ದು ಕಿವಿಗಿಂಪಾಗಿ ಕೇಳಬರುತಲಿತ್ತು. ಇಂತಪ್ಪ ಆ ಮರವನ್ನು ನಿರುಕಿಸಿದ ಮರುತ್ನಂದನನು ಬಲು ಅಚ್ಚರಿಗೊಂಡನು ॥ ೪೦ ॥ ಆ ಮರದಲ್ಲಿ ನೋಟಕರ ಕಣ್ಮನಗಳನ್ನು ಸೆಳೆಯುವಂತಹ ಕುಡಿಗಳೂ, ಚಿಗುರುಗಳೂ, ಹೂಗಳೂ ತುಂಬಿ ತಳತಳಿಸುತಲಿದ್ದುವು. ಎಲೆಗಳಿಂದ ತುಂಬಿ ಮೆರೆಯುವ ಆ ಮರವನ್ನು ಮಾರುತಿಯು ಏರಿದನು. ಬಳಿಕ ಹೀಗೆಂದುಕೊಳ್ಳಲಾರಂಭಿಸಿದನು ॥ ೪೧ ॥ ಓ ಇದೇಸರಿ, ಇಲ್ಲಿಯೇ ಇದ್ದುಕೊಂಡು, ದುಃಖದಿಂದ ದೀನಳಾಗಿ, ಶ್ರೀರಾಮಸಂದರ್ಶನದಲ್ಲಿಯೇ ಅತ್ಯಾಸಕ್ತಳಾಗಿರುವ ಆ ವೈದೇಹಿಯ ಆಗಮನವನ್ನು ಎದುರು ನೋಡುತ್ತೇನೆ, ಆ ಮಹಾನುಭಾವಳು ಅಲ್ಲಲ್ಲಿ ಸಂಚರಿಸುತ್ತಾ ಹಾಗೆಯೇ ಇಲ್ಲಿಗೆ ಬರಬಹುದು ಎಂದು ಭಾವಿಸುವೆನು ॥ ೪೨ ॥ ಸಂಪಗೆ, ಸಿರಿಗಂದ, ಪಗಡೆ, ಮೊದಲಾದ ಹೂವಿನ ಮರಗಳಿಂದಸಿಂಗರಿಸಲ್ಪಟ್ಟು ಬಲುಅಂದವಾಗಿರುವ ಈ ತೋಟವು ದುರಾತ್ಮನಾದ

ಇತಶ್ಚೇತಶ್ಚ ದುಃಖಾರ್ತಾಂ ಸಂಪತಂತೀಂ ಯದೃಚ್ಛಯಾ ॥೪೨॥
ಅಶೋಕ ವನಿಕಾ ಚೇಯಂ ದೃಢಂ ರಮ್ಯಾ ದುರಾತ್ಮನಃ ।
ಚಂಪಕೈ ಶ್ಚಂದನೈ ಶ್ಚಾಪಿ ವಕುಳೈಶ್ಚ ವಿಭೂಷಿತಾ ॥೪೩॥
ಇಯಂಚ ನಳಿನೀ ರಮ್ಯಾ ದ್ವಿಜ ಸಂಘ ನಿಷೇವಿತಾ ।
ಇಮಾಂ ಸಾ ರಾಮಮಹಿಷೀ ನೂನ ಮೇಷ್ಯತಿ ಜಾನಕೀ ॥೪೪॥
ಸಾ ರಾಮಾ ರಾಮಮಹಿಷೀ ರಾಘವಸ್ಯ ಪ್ರಿಯಾ ಸತೀ ।
ವನ ಸಂಚಾರ ಕುಶಲಾ ನೂನ ಮೇಷ್ಯತಿ ಜಾನಕೀ ॥೪೫॥
ಅಥವಾ ಮೃಗ ಶಾಬಾಕ್ಷೀ ವನಸ್ಯಾಸ್ಯ ವಿಚಕ್ಷಣಾ ।

ರಮ್ಯಾ - ಅಂದವಾಗಿದೆ, ಚಂಪಕೈಃ - ಸಂಪಗೆಯ ಗಿಡಗಳಿಂದಲೂ, ಚಂದನೈಶ್ಚಾಪಿ - ಶ್ರೀಗಂಧದ ಮರಗಳಿಂದಲೂ, ವಕುಳೈಶ್ಚ - ಪಗಡೆಯ ಗಿಡಗಳಿಂದಲೂ, ವಿಭೂಷಿತಾ - ಅಲಂಕರಿಸಲ್ಪಟ್ಟುದಾಗಿಯೂ ಇದೆ ॥ ೪೩ ॥ ದ್ವಿಜಸಂಘನಿಷೇವಿತಾ - ಹಕ್ಕಿಗಳಹಿಂಡಿನಿಂದ ಸೇವಿಸಲ್ಪಡುತಲಿರುವ, ಇಯಂ - ಈ, ನಳಿನೀಚ - ತಾವರೆಯ ಬಳ್ಳಿಯೂ (ಸರೋವರವೂ) ರಮ್ಯಾ - ರಮಣೀಯವೆನಿಸಿದೆ, ರಾಮಮಹಿಷೀ - ಶ್ರೀರಾಮನ ಪಟ್ಟದರಸಿಯಾದ, ಸಾ - ಆ ಜಾನಕಿಯು, ಇಮಾಂ - ಈ ತಾವರೆಯ ಕೊಳವನ್ನು ಕುರಿತು, ನೂನಂ - ನಿಜವಾಗಿಯೂ, ಏಷ್ಯತಿ - ಬರುವಳು ॥ ೪೪ ॥ ರಾಘವಸ್ಯ - ಶ್ರೀರಾಮಚಂದ್ರನ, ಪ್ರಿಯಾ ಸತೀ - ಪ್ರಿಯಪತ್ನಿಯೂ, ರಾಮಮಹಿಷೀ - ರಾಘವನ ಪಟ್ಟದರಸಿಯೂ ಆಗಿರುವ, ಸಾರಾಮಾ - ಆಸತೀ ಶಿರೋಮಣಿಯಾದ ಸೀತೆಯು, ವನಸಂಚಾರಕುಶಲಾ - ವನಸಂಚಾರದಲ್ಲಿ ಜಾಣೆಯಾದವಳು, ಸಾಜಾನಕೀ - ಆ ಸೀತೆಯು, ನೂನಂ - ನಿಜವಾಗಿಯೂ, ಏಷ್ಯತಿ - ಬರುವಳು ॥ ೪೫ ॥ ಅಥವಾ -ಹಾಗಿಲ್ಲದಿದ್ದರೆ, ಅಸ್ಯವನಸ್ಯ - ಈ ವನವನ್ನು, ವಿಚಕ್ಷಣಾ - ನೋಡುವುದಕ್ಕೆ ತಕ್ಕವಳೆನಿಸಿದ, ರಾಮಚಿಂತಾ - ಶ್ರೀರಾಮಧ್ಯಾನದಿಂದಲೇ, ಅನುಕರ್ಶಿತಾ - ಬಡವಾಗಿ ಹೋಗಿರುವ, ಸಾ ಆರ್ಯಾ - ಆ ಪೂಜ್ಯಳಾದ, ಮೃಗಶಾಬಾಕ್ಷೀ - ಹೆಣ್ಣು ಹುಲ್ಲೆಯಮರಿಯ ಕಣ್ಣಿನಂತೆ ಕಣ್ಣುಳ್ಳ ಸೀತೆಯು, ವನಂ - ಈ ತೋಟವನ್ನು ಕುರಿತು, ಏಷ್ಯತಿ - ಬರುವಳು ॥ ೪೬ ॥ ನಿತ್ಯಂ - ಯಾವಾಗಲೂ, ವನವಾಸೇ - ಅರಣ್ಯವಾಸದಲ್ಲಿ, ರತಾ - ಆಸಕ್ತಳಾಗಿದ್ದ, ರಾಮ - ಶ್ರೀರಾಮಚಂದ್ರನ, ಶೋಕ - ಅಗಲಿಕೆಯ ದುಃಖದಿಂದ, ಸಂತಪ್ತಾ -

ಆ ರಾವಣನದೇ ಸರಿ, ಸಂದೇಹವಿಲ್ಲ, ॥೪೩॥ ರಮಣೀಯವಾದ ತಾವರೆಯ ಕೊಳವೊಂದು ಇಲ್ಲಿ ಕಾಣಬರುತಲಿದೆ, ಹಕ್ಕಿಗಳ ಹಿಂಡು ಕಿವಿಗಿಂಪಾಗಿ ದನಿಗೆಯ್ಯುತಲಿವೆ, ಶ್ರೀರಾಮನ ಪಟ್ಟದರಸಿಯಾದ ಜಾನಕಿಯು ಇಲ್ಲಿಗೆ ಬರದೆ ಇರುವುದಿಲ್ಲ. ಖಂಡಿತವಾಗಿಯೂ ಬರುವಳು ॥೪೪॥ರಘುಕುಲೇಂದುವಿನ ಪ್ರಿಯಪತ್ನಿಯೂ, ಪಟ್ಟದರಾಣಿಯೂ ಆಗಿದ್ದರೂ, ಆ ಮಹಾನುಭಾವನ ಚಿತ್ತವೃತ್ತಿಯನ್ನು ಅನುಸರಿಸುವವಳಾದ ಕಾರಣವೇ ಅರಣ್ಯಸಂಚಾರದಲ್ಲಿ ಜಾಣೆಯೆನಿಸಿದ ಆ ಜಾನಕಿಯು ಇಲ್ಲಿಗೆ ಬರುವಳು ॥ ೪೫ ॥ ಸಂತತ ಶ್ರೀರಾಮಚಿಂತೆಯಿಂದ ಬಹುಕೃಶಳಾಗಿ, ಹೆಣ್ಣು ಹುಲ್ಲೆಯ ಮರಿಯಂತೆ ನೋಟವುಳ್ಳವಳಾಗಿ ಬಹುಜಾಣೆಯೆನಿಸಿದ ಆ ಪೂಜ್ಯಳಾದ ಸೀತೆಯು ಇಲ್ಲಿ ಈ ವನವನ್ನು ನೋಡುತ್ತಾ ಹಾಗೆಯೇ ಇಲ್ಲಿಬರುವಳು ॥೪೬॥ ಶ್ರೀರಾಮನನ್ನು ಅಗಲಿ ಇರುವ ಶೋಕದಿಂದ ಬಹಳವಾಗಿ ತಪಿಸುತಲಿರುವಳು,ಬಹುಕಾಲವನವಾಸದ ಅಭ್ಯಾಸವುಳ್ಳವಳು, ಸುಂದರನಯನೆ, ಆ ಸೀತಾದೇವಿಯು ವನದೊಳಗೆ

ವನ ಮೇಷ್ಯತಿ ಸಾರ್ಯೇಹ ರಾಮಚಂದ್ರಾನುಕರ್ಶಿತಾ ॥೪೬॥
ರಾಮ ಶೋಕಾಭಿಸಂತಪ್ತಾ ಸಾ ದೇವೀ ವಾಮಲೋಚನಾ ।
ವನವಾಸೇ ರತಾ ನಿತ್ಯ ಮೇಷ್ಯತೇ ವನಚಾರಿಣೀ ॥೪೭॥
ವನೇ ಚರಾಣಾಂ ಸತತಂ ನೂನಂ ಸ್ಪೃಹಯತೆ (ತೀ) ಪುರಾ ।
ರಾಮಸ್ಯ ದಯಿತಾ ಭಾರ್ಯಾ ಜನಕಸ್ಯ ಸುತಾ ಸತೀ ॥ ೪೮ ॥
ಸಂಧ್ಯಾ ಕಾಲ ಮನಾ ಶ್ಯಾಮಾ ಧ್ರುವಮೇಷ್ಯತಿ ಜಾನಕೀ ।
ನದೀಂ ಚೇಮಾಂ ಶಿವಜಲಾಂ ಸಂಧ್ಯಾರ್ಥೇ ವರವರ್ಣಿನೀ ॥೪೯॥
ತಸ್ಯಾಶ್ಚಾಪ್ಯ ನುರೂಪೇಯ ಮಶೋಕ ವನಿಕಾ ಶುಭಾ।

ಬಹಳವಾಗಿ ತಾಪವನ್ನು ಹೊಂದಿರುವ, ವಾಮಲೋಚನಾ-ಸುಂದರವಾದ ನಯನವುಳ್ಳ, ಸಾದೇವೀ-ಆ ಜಾನಕಿಯು, ವನಚಾರಿಣೀ - ವನದಲ್ಲಿ ಸಂಚರಿಸುತ್ತಿರುವವಳಾಗಿ, ಏಷ್ಯತೆ - ಬರುವಳು ॥ ೪೭ ॥

ರಾಮಸ್ಯ-ರಾಮನಿಗೆ,ದಯಿತಾ ಭಾರ್ಯಾ-ಪ್ರಿಯಪತ್ನಿಯೆನಿಸಿದವಳೂ, ಸತೀ-ಪತಿವ್ರತೆಯೆನಿಸಿದವಳೂ, ಜನಕಸ್ಯ - ಜನಕಮಹಾರಾಜನ, ಸುತಾ - ಪುತ್ರಿಯೆನಿಸಿದವಳೂ ಆಗಿರುವ, ಸೀತಾ-ಸೀತಾದೇವಿಯು ಪುರಾ - ಪೂರ್ವದಲ್ಲಿ, ವನೇಚರಾಣಾಂ - ಕಪಿಗಳ, ಕುಶಲಂ - ಸ್ನೇಹವನ್ನು, ಸ್ಪೃಹಯತೆ - ಬಯಸುತ್ತಾಳೆ, ಅಥವಾ - (ಕಾಡಿನಲ್ಲಿ ಮೃಗಗಳಿಗೂ ಹಕ್ಕಿಗಳಿಗೂ ಮೇಲನ್ನು ಬಯಸುತ್ತಿದ್ದವಳು) ॥೪೮॥ ವರವರ್ಣನೀ - ಉತ್ತಮವಾದ ರೂಪವುಳ್ಳ, (ಪತಿಗೆ ಹಿತಕರಳೆನಿಸಿದ) ಶ್ಯಾಮಾ - ನಡುಪ್ರಾಯದಲ್ಲಿರುವ, ಜಾನಕೀ - ಸೀತಾದೇವಿಯು, ಸಂಧ್ಯಾಕಾಲಮನಾಃ - ಸಂಧ್ಯಾವಂದನಕಾಲದಲ್ಲಿ (ಸಂಜೆಯ ಹೊತ್ತಿನಲ್ಲಿ) ಮನಸ್ಸುಳ್ಳವಳಾಗಿ, ಶಿವಜಲಾಂ - ಶುಭಕರವಾದ ಜಲವುಳ್ಳ, ಇಮಾಂ - ಈ, ನದೀಂಚ - ನದಿಯನ್ನು ಕುರಿತು, ಸಂಧ್ಯಾರ್ಥೆ - ಸಂಜೆಯ ಸಮಯದಲ್ಲಿ ವಂದಿಸಬೇಕಾದ ದೇವತೆಗಳನ್ನು ವಂದಿಸಬೇಕೆಂದು, ಪ್ರತ್ಯಹಂ ಪ್ರತಿದಿವಸದಲ್ಲಿಯೂ, ಧ್ರುವಂ - ನಿಶ್ಚಯವಾಗಿ, ಏಷ್ಯತೆ - ಇಲ್ಲಿಗೆ ಬರಬಹುದು ॥೪೯॥ ತಸ್ಯಾಃ - ಆ ಸೀತಾದೇವಿಗೆ, ಶುಭಾ - ಮಂಗಳಕರವೆನಿಸಿದ, ಇಯಂ - ಈ, ಅಶೋಕವನಿಕಾಚ - ಆಶೋಕವನವೂ, ಅನುರೂಪಾ - ತಕ್ಕುದಾಗಿದೆ, ಶುಭಾಯಾಃ - ಮಂಗಳಕರವೆನಿಸಿ ಇರುವ ಈ ಅಶೋಕವನಕ್ಕೆ, ಪಾರ್ಥಿವೇಂದ್ರಸ್ಯ - ರಾಘವೇಂದ್ರನಾದ, ರಾಮಸ್ಯ - ಶ್ರೀ ರಾಮಚಂದ್ರನ, ಪತ್ನೀಚ - ಭಾರ್ಯೆಯಾದ ಜಾನಕಿಯೂ, ಸಮ್ಮತಾ - ತಕ್ಕವಳು ॥ ೫೦ ॥ ತಾರಾಧಿಪನಿಭಾನನಾ- ಉಡುರಾಜನಂತೆ ಮುಖವುಳ್ಳ, ಸಾದೇವೀ - ಆ

ಸಂಚರಿಸುತ್ತಾ ಇಲ್ಲಿಗೆ ಬರುವಳು ॥೪೭॥ ಪೂರ್ವದಲ್ಲಿ ಜನಸ್ಥಾನದೊಳಗೆ ಅರಣ್ಯವಾಸಿಗಳಾಗಿದ್ದ ಮೃಗಪಕ್ಷಿಗಳನ್ನು ಬಹಳವಾಗಿ ಪ್ರೀತಿಸುತ್ತಾ ಸಲಹುತ್ತಿದ್ದವಳು, ಶ್ರೀರಾಮನಿಗೆ ಪ್ರಾಣಪ್ರಿಯಳು, ಜನಕರಾಜ ನಂದಿನಿ, ಮಹಾಪತಿವ್ರತೆಯರೊಳಗೆ ಅಗ್ರಗಣ್ಯಳು, ॥೪೮ ॥ ಇನ್ನೂ ಚಿಕ್ಕವಯಸ್ಸಿನವಳಾದರೂ ಈ ಸನ್ಧ್ಯಾಕಾಲದೊಳಗೆ ದೇವತಾಧ್ಯಾನದಲ್ಲಿ ಆಸಕ್ತಳಾದವಳು, ಇದಾದರೆ ಶುಭಜಲದಿಂದ ಪೂರ್ಣವಾದ ನದಿ, ಈ ವಾಹಿನಿಯ ಶುಭಜಲದಲ್ಲಿ ಮುಖವಾದ ಪ್ರಕ್ಷಾಳನಾದಿಗಳಿಂದ ಶುದ್ಧಳಾಗಿ, ದೇವತಾಸ್ಮರಣೆಯನ್ನು ಮಾಡಲೋಸುಗ ಆ ವರವರ್ಣಿನಿಯು ಇಲ್ಲಿಗೆ ಬರುವಳು ॥೪೯॥ ಬಹು ಮಂಗಳಕರವಾಗಿರುವ ಈ ಅಶೋಕವನವು ಆ ಮಹಾನುಭಾವಳು ಸಂಚರಿಸಲಿಕ್ಕೆ ತಕ್ಕುದು, ಶ್ರೀರಾಮಚಂದ್ರನ ಧರ್ಮಭಾರ್ಯೆಯೆನಿಸಿ ಪರಿಪೂರ್ಣಚಂದ್ರವದನೆಯಾಗಿರುವ ಆ ಸೀತಾದೇವಿಯು ಪ್ರಾಣಸಹಿತಳಾಗಿ

ಶುಭಾಯಾ ಪಾರ್ಥಿವೇಂದ್ರಸ್ಯ ಪತ್ನೀ ರಾಮಸ್ಯ ಸಮ್ಮತಾ ॥೫೦॥
ಯದಿ ಜೀವತಿ ಸಾ ದೇವೀ ತಾರಾಧಿಪ ನಿಭಾನನಾ ।
ಆಗಮಿಷ್ಯತಿ ಸಾ ವಶ್ಯ ಮಿಮಾಂ ಶಿವಜಲಾಂ ನದೀಂ ॥೫೧॥
ಏವಂ ತು ಮತ್ವಾ ಹನುಮಾನ್ಮಹಾತ್ಮಾ ಪ್ರತೀಕ್ಷಮಾಣೋ ಮನುಜೇಂದ್ರ ಪತ್ನೀಂ ।
ಅವೇಕ್ಷಮಾಣಶ್ಚ ದದರ್ಶ ಸರ್ವಂ ಸುಪುಷ್ಪಿತೇ ಪರ್ಣ ಘನೇ ನಿಲೀನಃ ॥೫೨॥

ಇತಿ ಶ್ರೀಮತ್ಸುಂದರಕಾಂಡೇ-ಚತುರ್ದಶಸ್ಸರ್ಗಃ



ಸೀತಾದೇವಿಯು, ಜೀವತಿಯದಿ - ಬದುಕಿ ಇದ್ದವಳೇ ಆದರೆ, ಸಾ - ಆಕೆ, ಶಿವಜಲಾಂ - ಶುಭೋದಕವುಳ್ಳ, ಇಮಾಂ - ಈ ನದಿಯನ್ನು ಕುರಿತು, ಅವಶ್ಯಂ - ತಪ್ಪದೆ, ಆಗಮಿಷ್ಯತಿ - ಬರುವಳು ॥೫೧॥ ಮಹಾತ್ಮಾ - ಮಹಾನುಭಾವನಾದ, ಹನುಮಾನ್ - ಆಂಜನೇಯನು, ಏವಂ-ಈ ಪ್ರಕಾರವಾಗಿ, ಮತ್ವಾ - ಭಾವಿಸಿಯಾದರೋ, ಪ್ರತೀಕ್ಷಮಾಣಃ - ಸೀತಾಗಮನವನ್ನು ಎದುರುನೋಡುತ್ತಿರುವವನಾಗಿಯೂ, ಮನುಜೇಂದ್ರ ಪತ್ನೀಂ - ಶ್ರೀ ರಾಮಭಾರ್ಯೆಯನ್ನು, ಅವೇಕ್ಷಮಾಣಶ್ಚ - ಅಲ್ಲಲ್ಲಿ ಹಾಯನೋಡುತ್ತಿರುವವನಾಗಿಯೂ, ಪರ್ಣಘನೇ - ಎಲೆಗಳಿಂದ ದಟ್ಟವಾಗಿರುವ, ಸುಪುಷ್ಪಿತೇ- ಚೆನ್ನಾಗಿ ಹೂತಿರತಕ್ಕ ಶಿಂಶುಪಾವೃಕ್ಷದಲ್ಲಿ, ನಿಲೀನಃ - ಅವಿತುಕೊಂಡಿರುವವನಾಗಿ, ಸರ್ವಂ - ಎಲ್ಲ ಭಾಗವನ್ನೂ, ದದರ್ಶ - ನೋಡುತಲಿದ್ದನು ॥೫೨॥

— ಇಂತು ಹದಿನಾಲ್ಕನೆಯ ಸರ್ಗಂ —



ಇರುವುದೇ ದಿಟವಾಗಿದ್ದರೆ ಶುಭಜಲವುಳ್ಳ ಈ ನದಿಯನ್ನು ಕುರಿತು ಬಂದೇ ಬರುವಳು ॥೫೦, ೫೧॥ ಮಹಾನುಭಾವನಾದ ಪವಮಾನಪುತ್ರನು ಸುಂದರವಾಗಿ ಕುಸುಮಿಸಿ ಇರುವ ಆ ಶಿಂಶುಪಾವೃಕ್ಷದ ತುದಿಯೊಳಗೆ ಎಲೆಗಳ ಪೊದೆಯಲ್ಲಿ ಅವಿತುಕೊಂಡು, ಮನುಕುಲಲಲಾಮನಾದ ಶ್ರೀರಾಮನ ಸತೀಶಿರೋಮಣಿಯ ಬರುವಿಕೆಯನ್ನು ನಿರೀಕ್ಷಿಸುತ್ತಾ, ಸುತ್ತುಮುತ್ತಲೂ ಹಾಯನೋಡುತ್ತಲೂ ಕುಳಿತಿದ್ದನು ॥೫೨॥

— ಇಂತು ಹದಿನಾಲ್ಕನೆಯ ಸರ್ಗಂ —



ಶ್ರೀಃ.

# ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ.

## —ಸುನ್ದರಕಾಣ್ಡೇ ಪಞ್ಚದಶಸ್ಸರ್ಗಃ.—

ಸ ವೀಕ್ಷಮಾಣ ಸ್ತತ್ರಸ್ಥೋ ಮಾರ್ಗಮಾಣಶ್ಚ ಮೈಥಿಲೀಂ ।
ಅವೇಕ್ಷಮಾಣಶ್ಚ ಮಹೀಂ ಸರ್ವಾಂ ತಾ ಮನ್ವ ವೈಕ್ಷತ ॥೧॥
ಸಂತಾನಕ ಲತಾಭಿಶ್ಚ ಪಾದಪೈ ರುಪ ಶೋಭಿತಾಂ ।
ದಿವ್ಯ ಗಂಧ ರಸೋಪೇತಾಂ ಸರ್ವತ ಸ್ಸಮಲಂಕೃತಾಂ ॥೨॥
ತಾಂ ನಂದನ ಸಂಕಾಶಾಂ ಮೃಗಪಕ್ಷಿಭಿ ರಾವೃತಾಂ ।
ಹರ್ಮ್ಯ ಪ್ರಾಸಾದ ಸಂಬಾಧಾಂ ಕೋಕಿಲಾಕುಲ ನಿಸ್ವನಾಂ ॥೩॥
ಕಾಂಚನೋತ್ಪಲ ಪದ್ಮಾಭಿ ರ್ವಾಪೀಭಿ ರುಪ ಶೋಭಿತಾಂ ।

### — ಹದಿನೈದನೆಯ ಸರ್ಗಂ —

ಕಂದ॥ ಆಮರ ದೆಲೆ ಮರೆಯೊಳ್ ಶ್ರೀ ರಾಮನ ಸತಿ ಬರುವಳೆಂದು ತಪಿಸುತ್ತಿರ್ದಾ ।
ಭೂಮಿರುಹ ದಡಿಯೊಳ್ ಹರಿ । ಭೂಮಿಜೆಯಂ ಕಂಡು ಭೂರಿ ತೊಳಲುತ್ತಿರ್ದಂ ॥

ಮೈಥಿಲೀಂ - ಜಾನಕಿಯನ್ನು, ಮಾರ್ಗಮಾಣಶ್ಚ - ಹುಡುಕಲೆಳಸಿದವನಾದ ಕಾರಣವೇ, ತತ್ರ - ಆ ಮರದ ತುದಿಯ ಪೊದೆಯಲ್ಲಿ, ಸ್ಥಃ - ಕುಳಿತುಕೊಂಡಿರುವ, ಸಃ - ಆ ಆಂಜನೇಯನು, ವೀಕ್ಷಮಾಣಃ ಸುತ್ತಲೂ ದೃಷ್ಟಿಯನ್ನು ಹರಡುತಲಿರುವವನೂ, ಅವೇಕ್ಷಮಾಣಶ್ಚ (ಸನ್) ಮರದ ಬುಡದಲ್ಲಿ ನೋಡು ತಲಿರುವವನೂ ಆಗಿ, ತಾಂ - ಆ ಅಶೋಕವನಕ್ಕೆ ಸಂಬಂಧಪಟ್ಟ, ಸರ್ವಾಂಮಹೀಂ - ಭೂಭಾಗವನ್ನೆಲ್ಲ, ಅನ್ವವೈಕ್ಷತ - ಒಂದುಕಡೆಯಿಂದ ಕ್ರಮವಾಗಿ ನೋಡುತ್ತಿದ್ದನು ॥೧॥ ಸಂತಾನಕಲತಾಭಿಶ್ಚ - ಕಲ್ಪಲತೆಗಳಿಂದಲೂ, ಪಾದಪೈಶ್ಚ - ಮರಗಳಿಂದಲೂ, ಉಪಶೋಭಿತಾಂ - ಹೊಳೆಯುತಲಿರುವ, ದಿವ್ಯ - ಶ್ರೇಷ್ಠವಾದ, ಗಂಧ - ಪರಿಮಳದ್ರವ್ಯಗಳಿಂದಲೂ, ರಸ - ಸವಿಯುತಕ್ಕ ವಸ್ತುಗಳಿಂದಲೂ, ಉಪೇತಾಂ - ಕೂಡಿರುವ, ಸರ್ವತಃ - ಸುತ್ತಲೂ, ಸಮಲಂಕೃತಾಂ - ಚೆನ್ನಾಗಿ ಅಲಂಕರಿಸಲ್ಪಟ್ಟಿರುವ ॥೨॥ ನಂದನಸಂಕಾಶಾಂ-ದೇವೇಂದ್ರವನಕ್ಕೆ ಎಣೆಯೆನಿಸಿದ, ಮೃಗಪಕ್ಷಿಭಿಃ-ಮೃಗಗಳಿಂದಲೂ ಪಕ್ಷಿಗಳಿಂದಲೂ, ಆವೃತಾಂ-

### —ಹದಿನೈದನೆಯ ಸರ್ಗಂ.—

ಶ್ರೀ ರಾಮಚಂದಿರನ ಮಡದಿಯು ಬರುವಳೆಂದು ಎದುರು ನೋಡುತ್ತಿರುವ ಮಾರುತಿಯು ಆ ಶಿಂಶುಪಾ ವೃಕ್ಷದ ತುದಿಯ ಪೊದೆಯೊಳಗೆ ಮರೆಯಾಗಿರುತ್ತಾ, ಮರದ ಬುಡದಲ್ಲಿ ಇಣಿಕಿನೋಡುತ್ತಲೂ, ಸುತ್ತಲೂ ಹುಡುಕುತ್ತಲೂ, ಅಲ್ಲಲ್ಲಿ ಹಾಯನೋಡುತ್ತಲೂ ಆ ಭೂಭಾಗವನ್ನೆಲ್ಲ ಕ್ರಮವಾಗಿ ದೃಷ್ಟಿಯಿಂದ ತಡಕುತ್ತಿದ್ದನು ॥೧॥ ಆ ಅಶೋಕವನದ ಸೌಭಾಗ್ಯವು ಹೇಳತೀರದುದಾಗಿದ್ದಿತು. ಅದೆಂತೆಂದರೆ—ಆ ವನದಲ್ಲಿ ಕಲ್ಪಲತೆಗಳು ನೆಗಳಿದ್ದುವು, ಶೋಭಿಸುವ ಮರಗಳು, ಪರಿಮಳದ್ರವ್ಯಗಳು, ರಸವತ್ತರ ಪದಾರ್ಥಗಳು, ಆ ವನವನ್ನು ಅಲಂಕರಿಸುತಲಿದ್ದುವು ॥೨॥ ಆ ವನವು ಇಂದ್ರನ ನಂದನ ವನಕ್ಕೆ ಎಣೆ ಎನಿಸಿ ಇದ್ದಿತು. ಕಲಕಲ ಧ್ವನಿಯ ಮೃಗಪಕ್ಷಿಗಳು ತುಂಬಿದ್ದುವು, ದಿವ್ಯವಾದ ಉಪ್ಪರಿಗೆಗಳೂ,

ಬಹ್ವಾಸನ ಕುಥೋಪೇತಾಂ ಬಹು ಭೂಮಿ ಗೃಹಾಯುತಾಂ ॥೪॥
ಸರ್ವರ್ತು ಕುಸುಮೈ ರಮ್ಯಾಂ ಫಲವದ್ಭಿಶ್ಚ ಪಾದಪೈಃ ।
ಪುಷ್ಪಿತಾನಾ ಮಶೋಕಾನಾಂ ಶ್ರಿಯಾ ಸೂರ್ಯೋದಯ ಪ್ರಭಾಂ ॥೫॥
ಪ್ರದೀಪ್ತಾ ಮಿವ ತತ್ರಸ್ಥೋ ಮಾರುತಿ ಸ್ಸಮುದೈಕ್ಷತ ।
ನಿಷ್ಪತ್ರ ಶಾಖಾಂ ವಿಹಗೈಃ ಕ್ರಿಯಮಾಣಾ ಮಿವಾಸಕೃತ್ ॥೬॥
ವಿನಿಷ್ಪತದ್ಭಿ ಶ್ಶತಶ ಶ್ಚಿತ್ರೈಃ ಪುಷ್ಪಾವತಂಸಕೈಃ ।

ಬಳಸಲ್ಪಟ್ಟಿರುವ, ಹರ್ಮ್ಯ-ಉಪ್ಪರಿಗೆಗಳಿಂದಲೂ, ಪ್ರಾಸಾದ-ಮಹಾರಾಜಾರ್ಹಭವನಗಳಿಂದಲೂ, ಸಂಬಾಧಾಂ-ದಟ್ಟವಾಗಿರುವ, ಕೋಕಿಲ-ಕೋಗಿಲೆಗಳ, ಆಕುಲನಿಸ್ಸ್ವನಾಂ-ಗದ್ದಲಡ ದನಿಯುಳ್ಳ,॥೩॥ ಕಾಂಚನ-ಸುವರ್ಣಚ್ಛಾಯೆಯು, ಉತ್ಪಲಪದ್ಮಾಭಿಃ - ನೈದಿಲೆಗಳು ಮತ್ತು ತಾವರೆಗಳೂಉಳ್ಳ, ವಾಪೀಭಿಃ - ಕೊಳಗಳಿಂದ, ಉಪಶೋಭಿತಾಂ - ಪ್ರಕಾಶಿಸಲ್ಪಡುತಲಿರುವ, ಬಹು - ಅನೇಕವಾದ, ಆಸನ - ಪೀಠಗಳಿಂದಲೂ, ಕುಥ - ಹಾಸಿಗೆಗಳಿಂದಲೂ, ಉಪೇತಾಂ - ಕೂಡಿರುವ, ಬಹು - ವಿವಿಧವಾದ, ಭೂಮಿಗೃಹಾಯುತಾಂ - ನೆಲಮಾಳಿಗೆಗಳಿಂದ ಸಹಿತವಾದ ॥ ೪ ॥ ಸರ್ವರ್ತು - ಎಲ್ಲರುತುಗಳಲ್ಲಿನ, ಕುಸುಮೈಃ - ಪುಷ್ಪಗಳಿಂದಲೂ, ಫಲವದ್ಭಿಃ- ಹಣ್ಣುಗಳನ್ನೊಳಗೊಂಡಿರುವ, ಪಾದಪೈಶ್ಚ - ಮರಗಳಿಂದಲೂ, ರಮ್ಯಾಂ-ರಮಣೀಯವಾಗಿರುವ, ಪುಷ್ಪಿತಾನಾಂ - ಚೆನ್ನಾಗಿ ಹೂತಿರುವ, ಅಶೋಕಾನಾಂ - ಅಶೋಕತರುಗಳ, ಶ್ರಿಯಾ - ಕಾಂತಿಯಿಂದ, ಸೂರ್ಯೋದಯಪ್ರಭಾಂ - ಸೂರ್ಯೋದಯದಲ್ಲಿನ ಕಾಂತಿಯಂತೆ ಕಾಂತಿಯುಳ್ಳುದಾದಕಾನನವ, ಪ್ರದೀಪ್ತಾ ಮಿವ - ಜ್ವಲಿಸುತಲಿದೆಯೋ ಎಂಬಂತಿರುವ, ॥೫॥ ವಿಹಗೈಃ - ಪಕ್ಷಿಗಳಿಂದ ಅಸಕೃತ್ - ಅಡಿಗಡಿಗೂ, ನಿಷ್ಪತ್ರಶಾಖಾಂ - ಎಲೆಗಳಿಂದಲೂ ಕುಡಿಗಳಿಂದಲೂ ಶೂನ್ಯವಾದುದನ್ನಾಗಿ, ಕ್ರಿಯಮಾಣಾಮಿವ - ಮಾಡಲ್ಪಡುತಲಿರುವುದೋ ಎಂಬಂತಿರುವ, ತಾಂ - ಆ ಅಶೋಕವನವನ್ನು ಸಃ - ಆ ಮಾರುತಿಯು, ತತ್ರಸ್ಥಃ - ಆ ಮರದ ಮೇಲಣ ಇಕ್ಕಟ್ಟಿನಲ್ಲಿರುವವನಾಗಿಯೇ, ಸಮುದೈಕ್ಷತ - ನೋಡುತಿದ್ದನು ॥೬॥ ಶತಶಃ - ನೂರಾರುಬಗೆಯಾದ, ವಿನಿಷ್ಪತದ್ಭಿಃ-ಕೆಳಗೆಬೀಳುತಲಿರುವ, ಚಿತ್ರೈಃ-ವಿಚಿತ್ರಗಳಾದ, ಪುಷ್ಪಾವತಂಸಕೈಃ - ಕುಸುಮಾಭರಣಗಳಿಂದಲೂ, ಆಮೂಲ - ಬುಡದಿಂದಲೂ, ಪುಷ್ಪ - ಹೂಗಳಿಂದ, ನಿಚಿತೈಃ - ತುಂಬಿರುವ, ಶೋಕನಾಶನೈಃ - ಮನೋವ್ಯಥೆಯನ್ನು ಪರಿಹರಿಸುವ,

ದೇವರಾಜಗೃಹಗಳೂ ಒಪ್ಪಿದ್ದುವು, ಕೋಗಿಲೆಗಳ ಇಂಪಾದಸದ್ದು ಕೇಳಬರುತಲಿದ್ದುದು॥೩॥ ಚಿನ್ನದಂತೆ ಬೆಳಗುವ ತಾವರೆಗಳಿಂದಲೂ, ನೈದಿಲೆಗಳಿಂದಲೂ ಸರೋವರಗಳು ಕಂಗೊಳಿಸುತಲಿದ್ದುವು, ಬಹುವಿಧವಾದ ಪೀಠಗಳಿಂದಲೂ, ವಿಚಿತ್ರತರವಾದ ಹಾಸಿಕೆಗಳಿಂದಲೂ, ನೆಲಮಾಳಿಗೆಗಳೂ ವಿರಾಜಿಸುತ್ತಲಿದ್ದುವು ॥೪॥ ವಸಂತಾದಿ ಎಲ್ಲ ರುತುಗಳಲ್ಲಿನ ಕುಸುಮಗಳಿಂದಲೂ, ಫಲವತ್ತಾದ ಮರಗಳಿಂದಲೂ, ಹೂತಿರುವ ಅಶೋಕ ತರುಗಳಿಂದಲೂ ಆ ವನವು ಬಹು ರಮಣೀಯವಾಗಿ ಸೂರ್ಯೋದಯದಲ್ಲಿ ಹೇಗೋ ಹಾಗೆ ರಾರಾಜಿಸುತಲಿದ್ದಿತು ॥೫॥ ಬೆಳಕಿನರಾಶಿಯಂತೆ ಹೊಳೆಯುತಲಿರುವ ಆ ವನವನ್ನು ಆ ಮಾರುತಿಯು ನಿರುಕಿಸಿದನು, ಹಕ್ಕಿಗಳ ಹಾರಾಟದಿಂದ ಗಿಡಗಳಲ್ಲಿನ ಎಲೆಗಳೂ, ಕುಡಿಗಳೂ, ಕೊನೆಗಳೂ ಉದುರಿ, ವನವು ಬೈಲಾಗುವುದೋ ಎಂಬಂತೆ ತೋರುತಲಿದ್ದಿತು ॥ ೬ ॥ ಅಡಿಗಡಿಗೆ ಕೆಳಗೆ ಬೀಳುತಲಿರುವ ವಿಚಿತ್ರ ಕುಸುಮಾಭರಣಗಳಿಂದಲೂ, ಬುಡದಿಂದ ತುದಿಯವರೆಗೂ ಮೊಳೆತಿರುವ

ಆಮೂಲ ಪುಷ್ಪಸಿಚಿತೈ ರಶೋಕೈ ಶ್ಶೋಕ ನಾಶನೈಃ ॥೭॥
ಪುಷ್ಪಭಾರಾತಿಭಾರೈ ಶ್ಚ ಸ್ಪೃಶದ್ಭಿ ರಿವ ಮೇದಿನೀಂ ।
ಕರ್ಣಿಕಾರೈಃ ಕುಸುಮಿತೈಃ ಕಿಂಶುಕೈಶ್ಚ ಸುಪುಷ್ಪಿತೈಃ ॥೮॥
ಸ ದೇಶಃ ಪ್ರಭಯಾ ತೇಷಾಂ ಪ್ರದೀಪ್ತ ಇವ ಸರ್ವತಃ ।
ಪುನ್ನಾಗಾ ಸ್ಸಪ್ತಪರ್ಣಾಶ್ಚ ಚಂಪಕೋ ದ್ದಾಲಕಾ ಸ್ತಥಾ ॥
ವಿವೃದ್ಧಮೂಲಾ ಬಹವ ಶ್ಶೋಭಂತೇ ಸ್ಮ ಸುಪುಷ್ಪಿತಾಃ ।
ಶಾತಕುಂಭನಿಭಾಃ ಕೇಚಿ ತ್ಕೇಚಿ ದಗ್ನಿ ಶಿಖೋಪಮಾಃ ॥
ನೀಲಾಂಜನನಿಭಾಃ ಕೇಚಿ ತ್ತತ್ರಾ ಶೋಕಾ ಸ್ಸಹಸ್ರಶಃ ॥೧೦॥-॥
ನಂದನಂ ವಿವಿಧೋ ದ್ಯಾನಂ ಚಿತ್ರಂ ಚೈತ್ರರಥಂ ಯಥಾ ।

---

ಅಶೋಕೈಃ - ಅಶೋಕ ಕುಸುಮಗಳಿಂದಲೂ ॥೭॥ ಪುಷ್ಪಭಾರ - ಹೂವಿನ ಗೊಂಚಲುಗಳ, ಅತಿಭಾರೈಶ್ಚ - ಹೊರೆಗಳಿಂದ, ಭೂಮಿಂ - ನೆಲವನ್ನು, ಸ್ಪೃಶದ್ಭಿರಿವ - ಮುಟ್ಟುತಲಿವೆಯೋ- ಎಂಬಂತಿರುವ, ಸುಪುಷ್ಪಿತೈಃ - ಚೆನ್ನಾಗಿಹೂತಿರುವ, ಕರ್ಣಿಕಾರೈಃ - ಕಣಿಗಿಲುಗಿಡಗಳಿಂದಲೂ, ಸುಪುಷ್ಪಿತೈಃ - ಬಳ್ಳಿಯುಹೂಗಳನ್ನೊಳಗೊಂಡಿರುವ, ಕಿಂಶುಕೈಶ್ಚ - ಮುತ್ತುಗದ ಗಿಡಗಳಿಂದಲೂ, (ಯುಕ್ತಾಂ- ಕೂಡಿರುವ, ತಾಂ - ಆ ವನವನ್ನು, ದದರ್ಶ - ನೋಡುತಲಿದ್ದನು) ॥೮॥ ತೇಷಾಂ - ಆ ಮರಗಿಡಬಳ್ಳಿಗಳ, ಪ್ರಭಯಾ - ಕಾಂತಿಯಿಂದ, ಸಃದೇಶಃ - ಆ ಪ್ರದೇಶವು, ಪ್ರದೀಪ್ತಇವ- ಉರಿಯುತಲಿದೆಯೋ ಎಂಬಂತೆ, (ಸ್ಥಿತಃ - ಇದ್ದಿತು) ॥೯॥ ॥ ವಿವೃದ್ಧಮೂಲಾಃ - ಬೆಳವಳಿಗೆಯ ಬೇರುಗಳುಳ್ಳ, (ಹೊರವಾಗಿಬೆಳೆದ ತಾಳುಗಳುಳ್ಳ) ಬಹವಃ - ಅನೇಕಗಳಾದ, ಸುಪುಷ್ಪಿತಾಃ - ಚೆನ್ನಾಗಿಹೂತಿರುವ, ಪುನ್ನಾಗಾಃ- ಸುರಹೊನ್ನೆಗಳೂ ಸಪ್ತಪರ್ಣಾಶ್ಚ - ಏಳೆಲೆಯ ಬಾಳೆಗಿಡಗಳೂ, ಚಂಪಕೋದ್ದಾಲಕಾಃ - ಸಂಪಿಗೆ ಮತ್ತು ನಾಗರಂಗಗಳೂ ತಥಾ - ಹಾಗೆಯೇ, ಶಾತಕುಂಭನಿಭಾಃ - ಚಿನ್ನದಂತೆ ಬೆಳಗುವ, ಕೇಚಿತ್ - ಕೆಲವುಮರಗಳೂ, ಅಗ್ನಿಶಿಖೋಪಮಾಃ - ಅಗ್ನಿಜ್ವಾಲೆಗೆ ಸಮಾನಗಳಾದ, ಕೇಚಿತ್ - ಮತ್ತೆ ಕೆಲವುಗಿಡಗಳೂ ॥೧೦॥ ನೀಲಾಂಜನನಿಭಾಃ-ನೀಲಮಣಿ ಮತ್ತು ಕಾಟಿಕೆಗೆಎಣೆಯೆನಿಸಿಕೊಂಡಿರುವ, ಸಹಸ್ರಶಃ-ಸಾವಿರಾರು ಸಾಲಾಗಿರುವ, ಕೇಚಿತ್ - ಕೆಲವಾದ, ಅಶೋಕಾಃ - ಅಶೋಕವೃಕ್ಷಗಳೂ, ತತ್ರ - ಆ ವನದಲ್ಲಿ, ಶೋಭನ್ತೇಸ್ಮ - ಪ್ರಕಾಶಿಸುತಲಿದ್ದುವು ।।೧೧।। ।। ವಿವಿಧೋದ್ಯಾನಂ - ಬಗೆಬಗೆಯ ಬಳದೋಟಗಳುಳ್ಳ, ಚಿತ್ರಂ - ಆಶ್ಚರ್ಯಕರವೆನಿಸಿದ, ನಂದನಂಯಥಾ - ಇಂದ್ರೋದ್ಯಾನದಹಾಗೂ, ಚೈತ್ರರಥಮಿವ - ಕುಬೇರವನದಹಾಗೂ ಇರು

---

ಪುಷ್ಪಗಳುಳ್ಳ ಅಶೋಕತರುಗಳಿಂದಲೂ,ತಲೆಯ ಮೇಲಣ ಹೂವಿನ ಹೊರೆಗಳಿಂದ ಬಾಗಿ ನೆಲವನ್ನುಮುಟ್ಟುತಲಿರುವ ಕಣಿಗಿಲು,ಮುತ್ತುಗ ಮುಂತಾದ ಮಹೀರುಹಗಳಿಂದಲೂ ಆಪ್ರದೇಶವೆಲ್ಲ ತಳತಳಿಸುತ ಜ್ವಾಲೆಯಂತೆ ಕಾಣಬರುತಲಿದ್ದಿತು ॥೮॥ ॥ ಬಲವಾದ ಬೇರುಳ್ಳವುಗಳಾಗಿ, ನೀಳವಾಗಿ ಬೆಳೆದು, ಚೆನ್ನಾಗಿ ಪುಷ್ಪಿಸಿಯೂ ಇರುವ ನಾಗಕೇಸರ, ಏಳೆಲೆಯ ಬಾಳೆಯಗಿಡ, ಸಂಪಿಗೆ, ನಾಗರಂಗಮೊದಲಾದ ಮರಗಳು ಶೋಭಿಸುತಲಿದ್ದುವು, ಕೆಲವು ಮರಗಳು ಚಿನ್ನದ ಬಣ್ಣದವುಗಳು, ಮತ್ತೆ ಕೆಲವು ಅಗ್ನಿಜ್ವಾಲೆಗೆಣೆಯಾದವುಗಳು, ॥೧೦॥ ನೀಲಮಣಿ,ಕಾಟಿಕೆ ಇವುಗಳಂತೆ ಕೆಲವು,ಇಂತು ಅಲ್ಲಿ ಸಾವಿರಾರು ಮರಗಳು ಸಾಲಾಗಿದ್ದುವು ॥೧೧॥ ಬಗೆ ಬಗೆಯ ಕಿರುದೋಟಗಳಿಂದ ನಂದನವನವು ಹೇಗೋ ಹಾಗೂ, ಚಿತ್ರ

ಅತಿವೃತ್ತ ಮಿವಾ ಚಿಂತ್ಯಂ ದಿವ್ಯಂ ರಮ್ಯಂ ಶ್ರಿಯಾ ವೃತಮ್ ।
ದ್ವಿತೀಯ ಮಿವ ಚಾಕಾಶಂ ಪುಷ್ಪಜ್ಯೋತಿ ರ್ಗಣಾಯುತಂ ॥೧೨॥
ಪುಷ್ಪರತ್ನಶತೈ ಶ್ಚಿತ್ರಂ ಪಂಚಮಂ ಸಾಗರಂ ಯಥಾ ।
ಸರ್ವರ್ತುಪುಷ್ಪೈ ರ್ನಿಚಿತಂ ಪಾದಪೈ ರ್ಮಧುಗಂಧಿಭಿಃ ॥೧೩॥
ನಾನಾನಿನಾದೈ ರುದ್ಯಾನಂ ರಮ್ಯಂ ಮೃಗಗಣೈ ರ್ದ್ವಿಜೈಃ ।
ಅನೇಕಗಂಧಪ್ರವಹಂ ಪುಣ್ಯಗಂಧಂ ಮನೋರಮಂ ।
ಶೈಲೇಂದ್ರ ಮಿವ ಗಂಧಾಢ್ಯಂ ದ್ವಿತೀಯಂ ಗಂಧಮಾದನಂ ॥೧೪॥-॥

ವುದಾದಕಾರಣವೇ, ಅತಿವೃತ್ತಂ- ಅಮಾನುಷಸ್ಥಿತಿಯುಳ್ಳ, (ಅದರಿಂದಲೇ) ಅಚಿಂತ್ಯಂ-ಹೀಗೆಇದೆಯೆಂದು ಚಿಂತಿಸಲಿಕ್ಕಾಗದ, ದಿವ್ಯಂ - ದೇವತಾಯೋಗ್ಯವೆನಿಸಿದ, ರಮ್ಯಂ - ರಮಣೀಯವಾದ, ಶ್ರಿಯಾ - ಅಸಾಧಾರಣವಾದ ಕಾಂತಿಯಿಂದ, ವೃತಂ - ಕೂಡಿಇರುವ, ಪುಷ್ಪಜ್ಯೋತಿರ್ಗಣಾಯುತಂ - ನಕ್ಷತ್ರಮಂಡಲದಂತಿರುವ ಪುಷ್ಪಗಳಿಂದೊಡಗೂಡಿರುವುದಾದಕಾರಣವೇ, ದ್ವಿತೀಯಂ - ಎರಡನೆಯದಾದ, ಆಕಾಶಮಿವ - ನಭೋಮಂಡಲದಂತಿರುವ ॥೧೨॥ ಪುಷ್ಪರತ್ನಶತೈಃ - ರತ್ನಗಳಂತಿರುವ ನೂರಾರುಬಗೆಯ ಪುಷ್ಪಗಳಿಂದ, ಚಿತ್ರಂ - ಆಶ್ಚರ್ಯಕರವೆನಿಸಿದುದಾದಕಾರಣವೇ, ಮಧುಗಂಧಿಭಿಃ - ಮದ್ಯದವಾಸನೆಯುಳ್ಳ, ಸರ್ವರ್ತುಪುಷ್ಪೈಃ - ಎಲ್ಲರುತುಗಳಲ್ಲಿನ ಪುಷ್ಪಗಳುಳ್ಳ, ಪಾದಪೈಃ - ತರುಗಳಿಂದ, ನಿಚಿತಂ - ನಿಬಿಡವಾದುದಾಗಿ, ಪಂಚಮಂ - ಐದನೆಯದಾದ, ಸಾಗರಂಯಥಾ - ಸಮುದ್ರವೋ ಎಂಬಂತಿರುವ, ॥೧೩॥ ನಾನಾನಿನಾದೈಃ - ಬಗೆಬಗೆಯ ಧ್ವನಿಗಳುಳ್ಳ, ಮೃಗಗಣೈಃ - ಮೃಗಗಳ ಹಿಂಡುಗಳಿಂದಲೂ, ದ್ವಿಜೈಃ - ಪಕ್ಷಿಗಳಿಂದಲೂ, ರಮ್ಯಂ - ರಮಣೀಯವೆನಿಸಿರುವ, ಅನೇಕಗಂಧಪ್ರವಹಂ - ನಾನಾವಿಧಪರಿಮಳವನ್ನು ಹರಡುತಲಿರುವ, ಪುಣ್ಯಗಂಧಂ - ಪವಿತ್ರವಾಸನೆಯುಳ್ಳ, ಶೈಲೇಂದ್ರಮಿವ - ಮಹಾಪರ್ವತದಂತೆ, ಮನೋರಮಂ- ರಮಣೀಯವಾದ, ದ್ವಿತೀಯಂ - ಎರಡನೆಯದಾದ, ಗಂಧಮಾದನಮಿವ - ಗನ್ಧಮಾದನಪರ್ವತವೋ ಎಂಬಂತಿರುವ, ಉದ್ಯಾನಂ- ಅಶೋಕವನವನ್ನು, (ಅಪಶ್ಯತ್- ನೋಡಿದನು)॥೧೪॥ ತಸ್ಯಾಂ - ಆ, ಅಶೋಕವನಿಕಾಯಾಂತು - ಅಶೋಕವನದಲ್ಲಿಯಾದರೋ, ವಾನರಪುಂಗವಃ - ಕಪಿವರನು

ತರವಾದ ಕುಬೇರೋದ್ಯಾನವು ಹೇಗೋ ಹಾಗೂ ಆ ವನವು ತಳತಳಸುತಲಿತ್ತು ॥೧೧॥ ಮತ್ತು ಆವನವು ಅಮಾನುಷಸ್ಥಿತಿಯಿಂದ ರಾರಾಜಿಸುತಲಿರುವ ಆ ವನವು ದಿವ್ಯವೆನಿಸಿಯೂ, ಚಿಂತಿಸಲಸಾಧ್ಯವೆನಿಸಿಯೂ, ರಮಣೀಯವೆನಿಸಿಯೂ ಇರುತ್ತಾ, ನಕ್ಷತ್ರಮಂಡಲದಂತಿರುವ ಪುಷ್ಪರಾಶಿಯಿಂ ದೊಡಗೂಡಿ ಎರಡನೆಯ ನಭೋಮಂಡಲವೋ ಎಂಬಂತೆ ತೋರುತ್ತಿತ್ತು ॥೧೨॥ ರತ್ನಗಳಂತೆಸೆವ ಪುಷ್ಪಗಳಿಂದೊಡಗೂಡಿ ವಿಚಿತ್ರತರವೆನಿಸಿ ಎಲ್ಲರುತುಗಳಲ್ಲಿನ ಕುಸುಮಗಳಿಂದ ಸಹಿತವಾಗಿರುವ ಮದ್ಯಗಂಧದ ಮಹೀರುಹಗಳಿಂದ ಬಳಸಲ್ಪಟ್ಟಿರುವ ಆ ವನವು ಐದನೆಯ ಸಾಗರದಂತೆ ಶೋಭಾಯಮಾನವಾಗಿದ್ದಿತು ॥ ೧೩ ॥॥ ವಿವಿಧ ಮೃಗಗಳ, ನಾನಾಪ್ರಕಾರದ ಮೃಗಗಳ ಕಲಧ್ವನಿಗಳಿಂದ ವಿಚಿತ್ರತರವಾಗಿ ರಮಣೀಯವೆನಿಸಿದ ಆಉದ್ಯಾನವು ಬಹುತರ ಪುಷ್ಪಗಳ ತರತರದ ಸುವಾಸನೆಯುನ್ನೊಳಗೊಂಡಿದ್ದುದಾಗಿ ಎಲ್ಲೆಲ್ಲಿಯೂ ಪವಿತ್ರತರ ಪರಿಮಳವನ್ನು ಹರಡುತ್ತಾ ಎರಡನೆಯ ಗಂಧ ಮಾಧನಪರ್ವತಗಳಂತೆ ಕಂಗೊಳಿಸುತಲಿದ್ದಿತು ॥೧೪॥ ॥ಅಂತಹ ಆ ಅಶೋಕವನದೊಳಗೆ ವಾನರೋ

ಅಶೋಕವನಿಕಾಯಾಂ ತು ತಸ್ಯಾಂ ವಾನರಪುಂಗವಃ ||೧೫||
ಸ ದದರ್ಶ ವಿದೂರಸ್ಥಂ ಚೈತ್ಯಪ್ರಾಸಾದ ಮುಚ್ಛ್ರಿತಂ |
ಮಧ್ಯೇ ಸ್ತಂಭಸಹಸ್ರೇಣ ಸ್ಥಿತಂ ಕೈಲಾಸಪಾಂಡುರಂ ||೧೬||
ಪ್ರವಾಳಕೃತಸೋಪಾನಂ ತಪ್ತಕಾಂಚನವೇದಿಕಂ |
ಮುಷ್ಣಂತ ಮಿವ ಚಕ್ಷೂಂಷಿ ದ್ಯೋತಮಾನ ಮಿವ ಶ್ರಿಯಾ |
ವಿಮಲಂ ಪ್ರಾಂಶುಭಾವತ್ವಾ ದುಲ್ಲಿಖಂತ ಮಿವಾಂಬರಂ ||೧೭||-||
ತತೋ ಮಲಿನ ಸಂವೀತಾಂ ರಾಕ್ಷಸೀಭಿ ಸ್ಸಮಾವೃತಾಂ ||೧೮||
ಉಪವಾಸ ಕೃಶಾಂ ದೀನಾಂ ನಿಶ್ಶ್ವಸಂತೀಂ ಪುನಃ ಪುನಃ |

ಅವಿದೂರಸ್ಥಂ - ಹತ್ತಿರದಲ್ಲಿರತಕ್ಕ, ಮಧ್ಯೇ - ನಡುವೆ, ಸ್ತಂಭಸಹಸ್ರೇಣ - ಸಾವಿರಕಂಭಗಳಿಂದ, ಕೈಲಾಸಪಾಂಡುರಂ - ರಜತಾದ್ರಿಯಂತೆ ಬೆಳ್ಳನೆಯದಾಗಿ, ಸ್ಥಿತಂ - ಇರುತಲಿರುವ, ||೧೬|| ಪ್ರವಾಳ- ಹವಳದಕಲ್ಲಿನಿಂದ, ಕೃತ - ರಚಿಸಲ್ಪಟ್ಟ, ಸೋಪಾನಂ - ಏರುವ ಪಾವಟಿಗೆಗಳುಳ್ಳ, ತಪ್ತ - ಪುಟದಿಂದ ಶುದ್ಧವಾದ, ಕಾಂಚನ - ಚಿನ್ನದ, ವೇದಿಕಂ - ಜಗುಲಿಗಳುಳ್ಳ, ಶ್ರಿಯಾ - ಹೊಳಪಿನಿಂದ, ದ್ಯೋತಮಾನ ಮಿವ - ತಳತಳಿಸುತಲಿರುವುದಾದಕಾರಣವೇ, ಚಕ್ಷೂಂಷಿ - ನೋಟಕರ ದೃಷ್ಟಿಗಳನ್ನು, ಮುಷ್ಣಂತ ಮಿವ - ಅಪಹರಿಸುವಂತಿರತಕ್ಕ, ವಿಮಲಂ - ಸ್ವಚ್ಛವಾಗಿರತಕ್ಕ, ಪ್ರಾಂಶುಭಾವತ್ವಾತ್ - ಬಹಳ ಎತ್ತರವಾಗಿರುವುದರ ದೆಸೆಯಿಂದ, ಅಂಬರಂ - ಆಕಾಶವನ್ನು, ಉಲ್ಲಿಖಂತಮಿವ- ತಿವಿಯುತಲಿದೆಯೋ ಎಂಬಂತೆಕಾಣಬರುವ, ಉಚ್ಛ್ರಿತಂ-ಬಲುನೀಳವಾದ, ಚೈತ್ಯಪ್ರಾಸಾದಂ-ಬೌದ್ಧಾಲಯದಂತೆಸೆವ ಮಹಡಿಯನ್ನು, ದದರ್ಶ - ನೋಡಿದನು ||೧೭|| ತತಃ - ತರುವಾಯ, ಮಲಿನಸಂವೀತಾಂ - ಮಾಸಿದಬಟ್ಟೆಯನ್ನುಟ್ಟಿರುವ, ರಾಕ್ಷಸೀಭಿಃ - ರಕ್ಕಸಿಯರಿಂದ, ಸಮಾವೃತಾಂ - ಸುತ್ತಲ್ಪಟ್ಟಿರತಕ್ಕ ||೧೮|| ಉಪವಾಸಕೃಶಾಂ - ಅನಶನದಿಂದ ಬಡವಾಗಿರುವ, ದೀನಾಂ - ಆರ್ತಳಾದ, ಪುನಃಪುನಃ - ಅಡಿಗಡಿಗೂ, ನಿಶ್ಶ್ವಸಂತೀಂ-ನಿಟ್ಟು

ತ್ತಮನು ಹತ್ತಿರದಲ್ಲಿಯೇ ಬೌದ್ಧಾಲಯದಂತೆ ಬಹು ವಿಸ್ತಾರವಾಗಿಯೂ, ಅತ್ಯುನ್ನತವಾಗಿಯೂ ಇರುತ್ತಾ, ಸಹಸ್ರಸ್ತಂಭಗಳನ್ನೊಳಗೊಂಡು, ಧವಳತರವಾದ ಕೈಲಾಸ ಪರ್ವತದಂತೆ ಬೆಳಗುತಲಿರುವ ಒಂದಾನೊಂದು ಉಪ್ಪರಿಗೆಯನ್ನು ಕಂಡನು ||೧೬|| ಅದನ್ನು ಏರಲಿಕ್ಕೆ ಹವಳದ ಕಲ್ಲುಗಳಿಂದ ಸೋಪಾನಗಳನ್ನು ಕಲ್ಪಿಸಿ ಇದ್ದರು, ಚಿನ್ನದ ಇಟ್ಟಿಗೆಗಳಿಂದ ವೇದಿಕೆಗಳನ್ನು ರಚಿಸಿ ಇದ್ದರು, ಅಂತಾ ಪ್ರಾಸಾದವು ತನ್ನಯ ಕಾಂತಿಯಿಂದ ವಿರಾಜಮಾನವಾಗಿ ನೋಟಕರ ಕಣ್ಮನಗಳನ್ನು ಅಪಹರಿಸುತ್ತಾ, ಅತ್ಯಂತ ನಿರ್ಮಲವಾಗಿ ತನ್ನಯ ಔನ್ನತ್ಯದಿಂದ ಮುಗಿಲನ್ನು ಮುಟ್ಟುತಲಿದ್ದಿತು ||೧೭|| ಇಂತಹ ಮಹಾ ವನವನ್ನು ಹಾಗೆ ಹಾಗೆಯೇ ಅಲ್ಲಲ್ಲಿ ನೋಡುತಲಿದ್ದನು, ಹೊತ್ತುಮೂಡುವುದಕ್ಕೆ ತುಸು ಮೊದಲು ಸ್ವಲ್ಪಮಾತ್ರವೇ ಮಬ್ಬು, ಎಲೆಗಳ ಸಂದಿನಲ್ಲಿ ಮರದಡಿ ಚೆನ್ನಾಗಿ ಇಣಿಕಿನೋಡಿದನು. ಆ ಮೇಲೆ ಅಹಹಾ! ಕಂಡ! ಕಂಡನು! ಯಾರನ್ನು? ಶ್ರೀ ರಾಮಚಂದ್ರನ ಪ್ರಾಣಪ್ರಿಯಳಾದಸೀತಾದೇವಿಯನ್ನು. ಅಯ್ಯೋ, ಆಗ ಆಕೆ ಹೇಗೆ ಇದ್ದಳು? ಆಸ್ಥಿತಿಯನ್ನು ಹೇಳಲಾಗದು. ನೋಡಲಾಗದು, ಕೇಳಲಾಗದು, ಬಹು ಕಷ್ಟವಾದಸ್ಥಿತಿ, ಉಟ್ಟ ಬಟ್ಟೆಯು ಬಲುಮಾಸಿಹೋಗಿದ್ದಿತು, ರಕ್ಕಸಿಯರು ಸುತ್ತಲೂ ಮುತ್ತಿಕೊಂಡಿದ್ದರು, ||೧೮|| ಉಪವಾಸದಿಂದ ಬಹು

ದದರ್ಶ ಶುಕ್ಲ ಪಕ್ಷಾದೌ ಚಂದ್ರರೇಖಾ ಮಿವಾ ಮಲಾಂ ॥೧೯॥
ಮಂದಪ್ರಖ್ಯಾಯ ಮಾನೇನ ರೂಪೇಣ ರುಚಿರ ಪ್ರಭಾಂ ।
ಪಿನದ್ಧಾಂ ಧೂಮಜಾಲೇನ ಶಿಖಾ ಮಿವ ವಿಭಾವಸೋಃ ॥೨೦॥
ಪೀತೇ ನೈಕೇನ ಸಂವೀತಾಂ ಕ್ಲಿಷ್ಟೇ ನೋತ್ತಮವಾಸಸಾ ।
ಸಪಂಕಾ ಮನಲಂಕಾರಾಂ ವಿಪದ್ಮಾ ಮಿವ ಪದ್ಮಿನೀಂ ॥೨೧॥
ವ್ರೀಳಿತಾಂ ದುಃಖ ಸಂತಪ್ತಾಂ ಪರಿಮ್ಲಾನಾಂ ತಪಸ್ವಿನೀಂ ।

ಸಿರನ್ನು ಬಿಡುತಲಿರುವ, ಶುಕ್ಲಪಕ್ಷಾದೌ - ಶುಕ್ಲಪಕ್ಷದ ಮೊದಲುಭಾಗದಲ್ಲಿ, ಅಮಲಾಂ - ನಿರ್ಮಲವಾದ, ಚಂದ್ರರೇಖಾಮಿವ (ಸ್ಥಿತಾಂ) ಚಂದ್ರಕಳೆಯಂತಿರುವ, ॥೧೯॥ ಮಂದಪ್ರಖ್ಯಾಯಮಾನೇನ- ಈಕೆಯೇ ಸೀತೆಎಂದು ಮೆಲ್ಲಗೆ ಸೂಚನೆಗೆಬರುವ, (ಆದರೂ) ರೂಪೇಣ - ಅಸದೃಶಸೌಂದರ್ಯದಿಂದೊಡಗೂಡಿದ, ರುಚಿರಪ್ರಭಾಂ - ಅಂದವಾದದೇಹಕಾಂತಿಯುಳ್ಳ, ಧೂಮಜಾಲೇನ - ಹೊಗೆಯಪುಂಜದಿಂದ, ಪಿನದ್ಧಾಂ- ಹೊದಿಸಲ್ಪಟ್ಟ, ವಿಭಾವಸೋಃ - ಅಗ್ನಿಯ, ಶಿಖಾಮಿವ (ಸ್ಥಿತಾಂ) ಜ್ವಾಲೆಯಂತಿರುವ ॥೨೦॥ ಪೀತೇನ - ಹೊಂಬಣ್ಣವಾದ, ಕ್ಲಿಷ್ಟೇನ - ಜೀರ್ಣವಾಗಿರುವ, ಏಕೇನ - ಒಂದಾದ, ಉತ್ತಮವಾಸಸಾ - ಶ್ರೇಷ್ಠವಾದ ವಸ್ತ್ರದಿಂದ, (ಯುಕ್ತಾಂ - ಕೂಡಿರುವ ಳಾದಕಾರಣವೇ), ಅನಲಂಕಾರಾಂ - ರಾಮನನ್ನು ಅಗಲಿ ಇರುವುದರಿಂದ ಶೃಂಗರಿಸಿಕೊಳ್ಳದಿರುವಳಾಗಿ, ಸಪಂಕಾಂ - ಕೆಸರಿನಿಂದ ಕೂಡಿರುವ, ವಿಪದ್ಮಾಂ- ತಾವರೆಗಳಿಲ್ಲದ, ಪದ್ಮಿನೀಮಿವ (ಸ್ಥಿತಾಂ) ಕೊಳದಂತಿರುವ ॥೨೧॥ ವ್ರೀಳಿತಾಂ - ನಾಚಿಕೆಯುಳ್ಳ (ತಲೆಯನ್ನು ತಗ್ಗಿಸಿಕೊಂಡಿರುವ) ದುಃಖಸಂತಪ್ತಾಂ - ಪತಿವಿಯೋಗದಿಂದ ತಪಿಸುತಲಿರುವ, ಪರಿಮ್ಲಾನಾಂ - ಬಲು ಬಾಡಿಹೋಗಿರುವ, ತಪಸ್ವಿನೀಂ - ತಪವನ್ನಾಚರಿಸುತಲಿರುವ ( ಶೋಚನೀಯಳಾದ ) ಅಂಗಾರಕೇಣ - ಅಂಗಾರಕವೆಂಬ, ಗ್ರಹೇಣೇವ - ಕ್ರೂರಗ್ರಹದಿಂದ, ಪೀಡಿತಾಂ-ಬಾಧಿಸಲ್ಪಡುತಲಿರುವ, ರೋಹಿಣೀಮಿವ-

ಕೃಶಳಾಗಿ ಹೋಗಿದ್ದಾಳೆ, ಸತ್ವವೇ ಇಲ್ಲ, ಅಡಿಗಡಿಗೂ ನಿಟ್ಟುಸಿರನ್ನು ಬಿಡುತಲಿದ್ದಾಳೆ, ಶುಕ್ಲಪಕ್ಷದ ಮೊದಲದಿನದಲ್ಲಿನ ಬಹು ಸೂಕ್ಷ್ಮವೂ, ನಿರ್ಮಲವೂ ಆದ ಚಂದ್ರ ರೇಖೆಯನ್ನು ಆಗ ಆಕೆಗೆ ಹೋಲಿಸಿ ಹೇಳಬಹುದು, ॥೧೯॥ ಆಕೆಯ ದೇಹಪ್ರಭೆಯೇನೋ ಬಹುಶ್ರೇಷ್ಠವಾದುದು, ಆದರೆ ಮಾಲಿನ್ಯದಿಂದ ಮುಚ್ಚಲ್ಪಟ್ಟದ್ದಿತಾಗಿ ಮಿಣ ಮಿಣನೆ ಮಿಣುಕುತಲಿತ್ತು. ಆದುದರಿಂದಲೇ ಹೊಗೆಯ ಗುಂಪಿನೊಳಗೆ ಸಿಲುಕಿರುವ ಅಗ್ನಿಜ್ವಾಲೆಯಂತೆ ತೋರುತಲಿತ್ತು ॥೨೦॥ ಹೊಂಬಣ್ಣದ ಒಳ್ಳೆಯ ಒಂದೇ ಸೀರೆಯನ್ನು ಉಟ್ಟಿದ್ದಾಳೆ, ಅದರಮೇಲೆ ಹೊದೆಯುವ ವಸ್ತ್ರವಿಲ್ಲ, ಅದೂ ಬಹುಮಲಿನವೂ, ಜೀರ್ಣವೂ ಆಗಿಹೋಗಿದೆ. ಪ್ರಿಯಪತಿಯನ್ನು ಅಗಲಿ ಇರುವುದರಿಂದಲೇ ಆಭರಣಗಳಿಂದ ಅಲಂಕರಿಸಿಕೊಂಡಿಲ್ಲ. ಆದಕಾರಣವೇ ಬರಿಯ ಕೆಸರಿನಿಂದೊಡಗೂಡಿ, ತಾವರೆಗಳೂ ಇಲ್ಲದೆ, ಶೃಂಗಾರವಾಗಿ ಕಾಣಬರದ ಸರೋವರದಂತಿದ್ದಾಳೆ, ॥ ೨೧ ॥ ಶ್ರೀ ರಾಮಚಂದ್ರಚರಣಾರವಿಂದ ಸಂದರ್ಶನವೊಂದನ್ನು ಬಿಟ್ಟು ಬೇರೊಂದೂ ಆಕೆಯ ಮನಸ್ಸಿಗೆ ಬೇಡವಾಗಿರುವುದರಿಂದ ನಾಚಿಕೆಗೊಂಡು ತಲೆಯನ್ನು ತಗ್ಗಿಸಿ ಕುಳಿತಿದ್ದಾಳೆ, ದುಃಖದಿಂದ ಬಹುತಪಿಸುತಲಿರುವಳು, ಬಲು ಬಾಡಿಹೋಗಿದ್ದಾಳೆ, ಆಕೆಯನ್ನು ನೋಡಿದ ಕೂಡಲೇ ಕ್ರೂರವಾದ ಅಂಗಾರಕಗ್ರಹದ ಬಾಧೆಗೆ ಈಡಾದ ರೋಹಿಣೀದೇವಿಯಂತೆ ಕಾಣಬರುತ್ತಿದ್ದಳು ॥೨೨॥

ಗ್ರಹೇ ಣಾಂಗಾರಕೇಣೇವ ಪೀಡಿತಾ ಮಿವ ರೋಹಿಣೀಂ ||೨೨||
ಅಶ್ರುಪೂರ್ಣ ಮುಖೀಂ ದೀನಾಂ ಕೃಶಾ ಮನಶನೇನ ಚ |
ಶೋಕ ಧ್ಯಾನ ಪರಾಂ ದೀನಾಂ ನಿತ್ಯಂ ದುಃಖ ಪರಾಯಣಾಂ ||೨೩||
ಪ್ರಿಯಂ ಜನ ಮಪಶ್ಯಂತೀಂ ಪಶ್ಯಂತೀಂ ರಾಕ್ಷಸೀಗಣಂ |
ಸ್ವಗಣೇನ ಮೃಗೀಂ ಹೀನಾಂ ಶ್ವಗಣಾಭಿ ವೃತಾಮಿವ ||೨೪||
ನೀಲ ನಾಗಾ ಭಯಾ ವೇಣ್ಯಾ ಜಘನಂ ಗತಯೈಕಯಾ |
ನೀಲಯಾ ನೀರದಾಪಾಯೇ ವನರಾಜ್ಯಾ ಮಹೀಮಿವ ||

(ಸ್ಥಿತಾಂ) ರೋಹಿಣೀನಕ್ಷತ್ರದಂತಿರುವ, ||೨೨|| ಅಶ್ರುಪೂರ್ಣಮುಖೀಂ - ಕಣ್ಣೀರಿನಿಂದ ತುಂಬಿದ ಮುಖವುಳ್ಳ, ದೀನಾಂ - ದುರವಸ್ಥೆಯಲ್ಲಿರತಕ್ಕ, ಅನಶನೇನ - ನಿರಾಹಾರದಿಂದ, ಕೃಶಾಂ - ಬಣಗಿಹೋಗಿರುವ, ಶೋಕಧ್ಯಾನಪರಾಂ - ಚಿಂತಾಶೋಕಗಳಿಗೆ ವಶಳಾಗಿರುವ, ದೀನಾಂ - ಸಪ್ಪಗಿರುವ, ನಿತ್ಯಂ - ಯಾವಾಗಲೂ, ದುಃಖಪರಾಯಣಾಂ - ದುಃಖದಲ್ಲಿ ಮುಳುಗಿರುವ (ದುಃಖಕ್ಕೆ ಆಸರೆಯಾಗಿರುವ) ||೨೩|| ಪ್ರಿಯಂ - ಇಷ್ಟವಾದ, ಜನಂ - ಬಂಧುಜನವನ್ನು, ಅಪಶ್ಯನ್ತೀಂ - ಕಾಣದಿರುವ, ರಾಕ್ಷಸೀಗಣಂ - ರಕ್ಕಸಿಯರಹಿಂಡನ್ನು, ಪಶ್ಯನ್ತೀಂ - ಯಾವಾಗಲೂ ಎದುರಿಗೆ ನೋಡುತಲಿರುವಳಾದ ಕಾರಣವೇ, ಸ್ವಗಣೇನ - ತನ್ನಹಿಂಡಿನಿಂದ, ಹೀನಾಂ - ಶೂನ್ಯವಾದುದೂ, ಶ್ವಗಣಾಭಿವೃತಾಂ - ನಾಯಿಗಳ ಹಿಂಡಿನಿಂದ ಸುತ್ತಲ್ಪಟ್ಟುದೂ ಆಗಿರುವ, ಮೃಗೀಮಿವಸ್ಥಿತಾಂ - ಹೆಣ್ಣುಹುಲ್ಲೆಯಂತಿರುವ ||೨೪|| ನೀಲನಾಗಾಭಯಾ - ಕರಿಯ ಹಾವಿನಕಾಂತಿಯಂತೆ ಕಾಂತಿಯುಳ್ಳ, ಜಘನಂ - ಟೊಂಕದ ಹಿಂಭಾಗವನ್ನು, ಗತಯಾ - ಹೊಂದಿ ಇರುವ, ಏಕಯಾ - ಒಂದೇ ಎಳೆಯಾಗಿರುವ, ವೇಣ್ಯಾ - ಜಡೆಯಿಂದ, ನೀರದಾಪಾಯೇ - ಶರದೃತುವಿನಲ್ಲಿ, ನೀಲಯಾ - ಕಪ್ಪಗಿರುವ, ವನರಾಜ್ಯಾ - ಕಾಡುಗಳ ಸಾಲಿನಿಂದ ಕೂಡಿದ, ಮಹೀಮಿವ (ಸ್ಥಿತಾಂ) - ಭೂಮಿಯಂತಿರುವ ||೨೫|| ಸುಖಾರ್ಹಾಂ - ಸೌಖ್ಯವನ್ನೇ ಅನುಭವಿಸಲು ತಕ್ಕವಳಾದರೂ,

ಮುಖವೋ ಕಣ್ಣೀರಿನಿಂದ ತುಂಬಿಹೋಗಿದೆ, ಆಹಾರವಿಲ್ಲದೆ ಸಣ್ಣಗಾಗಿ ಬಲುಸಪ್ಪಗೆ ಇದ್ದಾಳೆ, ಶೋಕವೋ ಹೆಚ್ಚು, ಸಂತತವೂ ಶ್ರೀರಾಮನ ಚಿಂತೆಹೊರತು ಬೇರೊಂದಿಲ್ಲ. ಬಹುಆರ್ತಳಾಗಿದಾಳೆ, ಆಕೆಯ ದುಃಖಕ್ಕೆ ಪಾರವೇ ಇಲ್ಲದಂತಿದೆ ||೨೩|| ತನಗೆ ಬೇಕಾದ ಜನವನ್ನು ಯಾರನ್ನೂ ಕಾಣಳು, ಅಲ್ಲಿ ಯಾರು ದಿಕ್ಕು? ಅಯ್ಯೋ? ಎತ್ತ ಕಣ್ಣುತೆರೆದುನೋಡಿದರೂ ಭಯಂಕರರಾದ ರಾಕ್ಷಸಿಯರೇ ಹೊರತೂ ಮತ್ತೊಬ್ಬರಿಲ್ಲ. ಬಂಧುವಾರು? ಬಳಗವಾರು? ಹಾ! ಆ ಅವಸ್ಥೆಯನ್ನು ನೆನೆದರೆ ಕಲ್ಲೆದೆಯಾದರೂ ಕರಗಿ ನೀರಾಗಿ ಹೋಗುವುದು. ವಜ್ರದಂತಹ ಹೃದಯವಾದರೂ ಒಡೆಯದಿರದು. ತನ್ನ ಜಾತಿಯ ಹಿಂಡನ್ನು ಅಗಲಿ ಕ್ರೂರಗಳಾದ ನಾಯಿಗಳಹಿಂಡಿನೊಳಗೆ ಸಿಕ್ಕುಬಿದ್ದ ಹೆಣ್ಣು ಹುಲ್ಲೆಯ ಕರುವಿನಂತಿದಾಳೆ. ||೨೪|| ತಲೆಗೂದಲು ಬಿರಿಯಾಗಿ, ಕೆದರಿಹೋಗಿ, ಒಂದೇ ಎಳೆಯಾಗಿ, ನೀಳವಾಗಿ, ಹಿಡಿ ಟೊಂಕದ ಹಿಂದುಗಡೆಯವರೆಗೂ ಇಳಿಯಬಿದ್ದಿದೆ, ಹೆಡೆಯನ್ನು ತೆರೆದ ಕೃಷ್ಣಸರ್ಪದಂತಿದೆ, ಆದುದರಿಂದಲೇ ಮಳೆಗಾಲವು ಕಳೆದಮೇಲೆ ಕಪ್ಪಾದ ಮರಗಳ ಸಾಲಿನಿಂದ ಕೂಡಿರುವ ಭೂಮಿಯಂತೆ ಕಾಣಬರುತ್ತಿರುವಳು, ||೨೫|| ಚಕ್ರವರ್ತಿಯ ಮಗಳು, ಸಾರ್ವಭೌಮನ ಸೊಸೆ, ರಾಜಾಧಿರಾಜನ ಹೆಂಡತಿ, ಅಪರಿಮಿತ ಸುಖವನ್ನು ಅನುಭವಿಸತಕ್ಕವಳು

ಸುಖಾರ್ಹಾಂ ದುಃಖ ಸಂತಪ್ತಾಂ ವ್ಯಸನಾನಾ ಮಕೋವಿದಾಂ ||೨೫||-||
ತಾಂ ಸಮೀಕ್ಷ್ಯ ವಿಶಾಲಾಕ್ಷೀ ಮಧಿಕಂ ಮಲಿನಾಂ ಕೃಶಾಂ ||
ತರ್ಕಯಾಮಾಸ ಸೀತೇತಿ ಕಾರಣೈ ರುಪ ಪಾದಿಭಿಃ ||೨೬||-||
ಹ್ರಿಯಮಾಣಾ ತದಾ ತೇನ ರಕ್ಷಸಾ ಕಾಮರೂಪಿಣಾ ||
ಯಥಾರೂಪಾ ಹಿ ದೃಷ್ಟಾ ವೈ ತಥಾ ರೂಪೇಯ ಮಂಗನಾ ||೨೭||-||

---

ವ್ಯಸನಾನಾಂ - ಮನೋವ್ಯಥೆಗಳನ್ನು, ಅಕೋವಿದಾಂ - ಅರಿಯದವಳಾಗಿದ್ದರೂ, ದುಃಖಸಂತಪ್ತಾಂ- ದುಃಖದಿಂದ ಬಾಧೆಪಡುತಲಿರುವ, ಸೀತಾಂ - ಸೀತಾದೇವಿಯನ್ನು, ಸಃ - ಆ ಮಾರುತಿಯು, ದದರ್ಶ-ನೋಡಿದನು ||೨೪|| || ಅಧಿಕಂ-ಹೆಚ್ಚಾಗಿ, ಮಲಿನಾಂ - ಮಾಸಿಹೋದವಳೂ, ಕೃಶಾಂ-ಬಡವಾದವಳೂ ಆಗಿರುವ, ವಿಶಾಲಾಕ್ಷೀಂ - ಅಗಲವಾದ ಕಣ್ಣುಗಳುಳ್ಳ, ತಾಂ - ಆಕೆಯನ್ನು, ಸಮೀಕ್ಷ್ಯ - ಚೆನ್ನಾಗಿ ಇಣಿಕಿನೋಡಿ, ಸೀತೇತಿ - ಈಕೆ ಸೀತೆಯೇಸರಿ ಎಂದು, ಉಪಪಾದಿಭಿಃ - ನಿರೂಪಿಸುವುದಕ್ಕೆ ಯೋಗ್ಯವಾದ, ಕಾರಣೈಃ- ಮುಂದೆ ಹೇಳುವ ಕಾರಣಗಳಿಂದ, ತರ್ಕಯಾಮಾಸ-ಊಹಿಸಿದನು||೨೬|| ತದಾ-ಆಗ (ರಾಮನು ಸೀತೆಯನ್ನು ಎಲೆಮನೆಯಲ್ಲಿ ಬಿಟ್ಟು ಬಂಗಾರದ ಜಿಂಕೆಯನ್ನು ಹೊಡೆಯಹೋದಾಗ) ಕಾಮರೂಪಿಣಾ-ತನ್ನ ಕೋರಿಕೆಯಂತೆ ವೇಷವನ್ನು ತಾಳಿದ, ರಕ್ಷಸಾ - ರಾವಣನಿಂದ, ಹ್ರಿಯಮಾಣಾ-ಒಯ್ಯಲ್ಪಡುತಲಿದ್ದ, ಅಂಗನಾ-ಹೆಂಗಸು, ಯಥಾರೂಪಾ- ಯಾವ ಬಗೆಯ ರೂಪವುಳ್ಳವಳಾಗಿ, ದೃಷ್ಟಾ - ನೋಟಕರಿಂದ ನೋಡಲ್ಪಟ್ಟಳೋ, (ನಮ್ಮಿಂದ ನೋಡಲ್ಪಟ್ಟಳೋ) ತಥಾರೂಪಾ - ಅಂತಹ ರೂಪವುಳ್ಳಹೆಂಗಸು, ಇಯಂವೈ - ಈಕೆಯೇ ಅಲ್ಲವೆ ? (ಇತಿ ತರ್ಕಯಾಮಾಸ- ಹೀಗೆಂದು ಊಹಿಸಿದನು ಇಲ್ಲವೆ ಸಂದೇಹಪಟ್ಟನು) ||೨೭|| || (ಕಿಂಚ ಮತ್ತು) ಪೂರ್ಣಚಂದ್ರಾನನಾಂ - ಹುಣ್ಣಿಮೆಯ ಚಂದಿರ

---

ಆದರೆ ಏನುಮಾಡತಕ್ಕದು? ದೈವವಶದಿಂದ ಅಪಾರವಾದ ಶೋಕಕ್ಕೆ ಒಳಗಾಗಿದಾಳೆ. ಆ ಸಂಕಟಕ್ಕೆ ಕೊನೆಯೇ ಇಲ್ಲ. ಬಹು ಸಂತಾಪ ಪಡುತಲಿದಾಳೆ, ಹುಟ್ಟಿದಂದಿನಿಂದ ವ್ಯಸನದ ಹುಟ್ಟನ್ನೇ ಅರಿತವಳಲ್ಲ, ಈಗ ಅಳಲಿನ ಕಡಲಿನಲ್ಲಿ ಮುಳುಗಿದಾಳೆ, ಸಂತೋಷದ ಕುರುಹೇ ಇಲ್ಲ, ಹಿಂದೆ ಆಕೆಯನ್ನು ಚೆನ್ನಾಗಿ ನೋಡಿದ್ದವರೇ ಈಗ ನೋಡಿದರೆ ಆ ಸೀತೆಯೇ ಈಕೆಎಂದು ಯಾರೂ ಗುರುತುಹಿಡಿಯುವ ಸ್ಥಿತಿಯಲ್ಲಿಲ್ಲ, ಇಂತಹ ಕಷ್ಟವಾದ ಅವಸ್ಥೆಗೆ ಸಿಲುಕಿದಾಗ ಇತರಹೆಂಗಸರು ಹೀಗೆ ಪಾತಿವ್ರತ್ಯಪಾಶಕ್ಕೆ ಒಳಗಾಗಿರುವುದುಂಟೆ? ಅಪಾರ ವಿಚಾರ ಸಾಗರದಲ್ಲಿಬಿದ್ದು ದಡವನ್ನೇ ಕಾಣದಿದಾಳೆ, ಆಗಿನ ಆಕೆಯ ದೆಶೆಯು-ಶೋಕ ಸಾಗರ, ದುಃಖದ ತವರ್ಮನೆ, ಚಿಂತೆಯ ಸಂತತಿ, ವ್ಯಸನಗಳ ರಾಶಿ, ಇನ್ನೂ ಹೆಚ್ಚಾಗಿಯೇ ಹೇಳಬೇಕು ಆದರೆ ಹೇಳಲಿಕ್ಕೆ ಅಂತಹ ಮಾತೇ ಇಲ್ಲ. ||೨೫|| ಆಕೆಯ ಮುಖಕ್ಕೆಲ್ಲ ಅಗಲವಾದ ಕಣ್ಣುಗಳೇ ಆಧಾರ, ಮಹತ್ತರವಾದ ಮಾಲಿನ್ಯ, ಹೇರಳವಾಗಿ ಶರೀರದ ಬಡತನ, ಇಂತಪಾರದುರ್ದಶೆಯಲ್ಲಿರುವ ಆ ಮಹಾನುಭಾವಳನ್ನು ಚೆನ್ನಾಗಿ ನೋಡಿದ ಆಂಜನೇಯನು ಸರಿಯಾದ ಕಾರಣಗಳಿಂದ ಈಕೆಯೇ ಸೀತೆಯಾಗಿರಬಹುದೆ? ಎಂದು ತನ್ನ ಮನದೊಳಗೆ ಚರ್ಚಿಸತೊಡಗಿದನು ||೨೬|| ಓಹೋ? ಇದೊಂದು ಸಂಗತಿಯು ನನ್ನ ನೆನಪಿಗೆ ಬರುತಲಿದೆ, ಅದೇನೆಂದರೆ:—ನಾವು ಋಶ್ಯಮೂಕಪರ್ವತದ ಬಳಿ ವಾಸಮಾಡುತ್ತಿರುವಾಗ ಯಾವನೋ ಒಬ್ಬ ರಾಕ್ಷಸನು ವೇಷಧಾರಿಯಾಗಿ ಕೊಂಡೊಯ್ಯುತ್ತಲಿದ್ದ

ಪೂರ್ಣಚಂದ್ರಾನನಾಂ ಸುಭ್ರೂಂ ಚಾರುವೃತ್ತ ಪಯೋಧರಾಂ ॥೨೮॥
ಕುರ್ವಂತೀಂ ಪ್ರಭಯಾ ದೇವೀಂ ಸರ್ವಾ ವಿತಿಮಿರಾ ದಿಶಃ ।
ತಾಂ ನೀಲಕೇಶೀಂ ಬಿಂಬೋಷ್ಠೀಂ ಸುಮಧ್ಯಾಂ ಸುಪ್ರತಿಷ್ಠಿತಾಂ ॥೨೯॥
ಸೀತಾಂ ಪದ್ಮ ಪಲಾಶಾಕ್ಷೀಂ ಮನ್ಮಥಸ್ಯ ರತಿಂ ಯಥಾ ।
ಇಷ್ಟಾಂ ಸರ್ವಸ್ಯ ಜಗತಃ ಪೂರ್ಣಚಂದ್ರ ಪ್ರಭಾಮಿವ ॥೩೦॥
ಭೂಮೌ ಸುತನು ಮಾಸೀನಾಂ ನಿಯತಾಮಿವ ತಾಪಸೀಂ ।
ನಿಶ್ಶ್ವಾಸ ಬಹುಳಾಂ ಭೀರುಂ ಭುಜಗೇಂದ್ರ ವಧೂಮಿವ ॥೩೧॥

ನಂತೆಸೆವ ಮುಖವುಳ್ಳ, ಸುಭ್ರೂಂ - ಅಂದವಾದ ಕಣ್ಣು ಉಬ್ಬುಳ್ಳ, ಚಾರುವೃತ್ತಪಯೋಧರಾಂ-ಚೆಲುವಾಗಿಯೂ, ಗುಂಡಾಗಿಯೂ ಇರುವ ಉರೋಜಗಳುಳ್ಳ ॥೨೮॥ ದೇವೀಂ-ತಳತಳಿಸುತಲಿರುವವಳಾದ ಕಾರಣವೇ, ಪ್ರಭಯಾ - ದೇಹಕಾಂತಿಯಿಂದ, ದಿಶಃ-ದಿಕ್ಕುಗಳನ್ನು, ವಿತಿಮಿರಾಃ - ಮಬ್ಬಿಲ್ಲದವುಗಳನ್ನಾಗಿ, ಕುರ್ವಂತೀಂ-ಮಾಡುತಲಿರುವ, ತಾಂ-ಲೋಕಮಾನ್ಯಳಾದ, ನೀಲಕೇಶೀಂ-ಕಪ್ಪುಗೂದಲುಳ್ಳ, ಬಿಂಬೋಷ್ಠೀಂ-ತೊಂಡೆಹಣ್ಣಿನಂತಿರುವ ತುಟಿಯುಳ್ಳ, ಸುಮಧ್ಯಾಂ - ಬಡನಡುವುಳ್ಳ, ಸುಪ್ರತಿಷ್ಠಿತಾಂ-ಬಳಿಯ ಹೆಸರುವಾಸಿಯನ್ನು ಪಡೆದಿರುವ, (ಏರುಕೋರೆಗಳಿಲ್ಲದೆ ಹೊಂದಿಕೆಯಾದ ಅವಯವಗಳುಳ್ಳ,) ॥೨೯॥ ಪೀತಾಂ - ಹೊಂಬಣ್ಣವಾಗಿರುವ, ಪದ್ಮಪಲಾಶಾಕ್ಷೀಂ-ತಾವರೆಯ ಎಸಳಿನಂತೆ ಕಣ್ಣುಳ್ಳ, ಮನ್ಮಥಸ್ಯ-ಮನ್ಮಥನ, ರತೀಮಿವ (ಸ್ಥಿತಾಂ)-ರತೀದೇವಿಯಂತಿರುವ, ಸರ್ವಸ್ಯ - ಸಮಸ್ತವಾದ, ಜಗತಃ - ಲೋಕಕ್ಕೆ, ಪೂರ್ಣಚಂದ್ರಪ್ರಭಾಮಿವ - ಪೂರ್ಣಚಂದ್ರಕಾಂತಿಯಂತೆ, ಇಷ್ಟಾಂ - ಪ್ರಿಯವಾಗಿರುವ ॥೩೦॥
ಸುತನುಂ - ಸುಂದರವಾದ ಶರೀರವುಳ್ಳ, ಭೂಮೌ- ಭೂಮಿಯಲ್ಲಿ, ಆಸೀನಾಂ - ಕುಳಿತುಕೊಂಡಿರುವವಳಾದ ಕಾರಣವೇ, ನಿಯತಾಂ - ನಿಯಮಪರಳಾದ, ತಾಪಸೀಮಿವ (ಸ್ಥಿತಾಂ)-ತಪಸ್ವಿನಿಯಂತಿರುವ, ನಿಶ್ಶ್ವಾಸಬಹುಳಾಂ - ಹೆಚ್ಚಾದನಿಟ್ಟುಸಿರುಳ್ಳವಳಾದ ಕಾರಣವೇ, ಭೀರುಂ - ಭಯದ ಸ್ವಭಾವದವಳಾದ, ಭುಜಗೇಂದ್ರವಧೂಮಿವ (ಸ್ಥಿತಾಂ) - ನಾಗಕನ್ಯೆಯಂತಿರುವ, ॥೩೧॥ ಮಹತಾ -ತಾಳಲಾಗದ, ವಿತತೇನ-

ಬ್ಬು ಗರತಿಯನ್ನು ನಾವೆಲ್ಲರೂ ನೋಡಿದ್ದವು ಅದೇರೂಪವು ಈಕೆಯಲ್ಲಿ ಕಂಡುಬರುತದೆ. ॥೨೭॥ ಹುಣ್ಣಿಮೆಯ ಚಂದಿರನನ್ನು ಹೋಲುವ ಮುಖ, ಅಂದವಾದ ಕಣ್ಣುಬ್ಬು, ಚಂದವಾಗಿಯೂ, ವರ್ತುಳವಾಗಿಯೂ ಇರುವ ಉರೋಜಗಳು, ॥೨೮॥ ತನ್ನ ದೇಹಪ್ರಭೆಯಿಂದ ದಿಕ್ಕುಗಳನ್ನೆಲ್ಲ ಬೆಳಗಿಸುತಲಿದಾಳೆ, ಕಪ್ಪಾದ ಕೂದಲು, ತೊಂಡೆಯ ಹಣ್ಣಿನಂತಿರುವ ತುಟಿ, ಬಡವಾದ ನಡುವು, ಎಲ್ಲ ಅವಯವಗಳೂ ಬಲು ಅಂದವಾಗಿಯೂ, ತಕ್ಕ ಪ್ರಮಾಣವನ್ನು ಅನುಸರಿಸಿದವುಗಳಾಗಿಯೂ, ನೆಲೆಗೊಂಡಿವೆ. ॥೨೯॥ ಹೊಂಬಣ್ಣದಗರತಿ, ತಾವರೆಯ ರೇಕಿನಂತೆಸೆವ ಕಣ್ಣುಗಳು, ಮನ್ಮಥನ ಸತಿಯಾದ ರತಿದೇವಿಯಂತೆ ರಾರಾಜಿಸುತಲಿರುವಳು, ಹುಣ್ಣಿಮೆಯ ಚಂದಿರನ ಬೆಳ್ದಿಂಗಳ ಬೆಳಕಿನಿಂದ ನೋಟಕರಿಗೆ ಹರ್ಷವುಂಟಾಗುವಹಾಗೆ ಈಕೆಯ ಸಂದರ್ಶನದಿಂದ ಆನಂದವುಂಟಾಗುತ್ತದೆ. ॥೩೦॥ ಇಂತಹ ಮಂಗಳಾಂಗಿಯು ಕ್ಲುಪ್ತವಾಗಿ ನೆಲದಮೇಲೆ ಕುಳಿತು ಇರುವುದ್ದರಿಂದ ತಪೋನಿರತಳಾದ ಮುನಿವಧುವಿನಂತೆ ಕಾಣಬರುತ್ತಿರುವಳು. ಅಡಿಗಡಿಗೂ ಪ್ರಮಾಣಾಧಿಕವಾಗಿ ಉಸಿರನ್ನು ಬಿಡುತಲಿರುವಳು. ಈ ಘೋರರಾಕ್ಷಸಿಯರ ನಡುವೆ ಸಿಕ್ಕಿ ಬಹಳವಾಗಿ ಹೆದರಿ ನಾಗಕನ್ಯೆಯಂತೆ

ಶೋಕಜಾಲೇನ ಮಹತಾ ವಿತತೇನ ನ ರಾಜತೀಂ ।
ಸಂಸಕ್ತಾಂ ಧೂಮಜಾಲೇನ ಶಿಖಾಮಿವ ವಿಭಾವಸೋಃ ॥೩೨॥
ತಾಂ ಸ್ಮೃತೀಮಿವ ಸಂದಿಗ್ಧಾಂ ವೃದ್ಧಿಂ ನಿಪತಿತಾಮಿವ ।
ವಿಹತಾಮಿವ ಚ ಶ್ರದ್ಧಾ ಮಾಶಾಂ ಪ್ರತಿ ಹತಾ ಮಿವ ॥ ೩೩॥
ಸೋಪಸರ್ಗಾಂ ಯಥಾ ಸಿದ್ಧಿಂ ಬುದ್ಧಿಂ ಸಕಲುಷಾ ಮಿವ ।
ಅಭೂತೇ ನಾಪವಾದೇನ ಕೀರ್ತಿಂ ನಿಪತಿತಾ ಮಿವ ॥೩೪॥
ರಾಮೋಪರೋಧ ವ್ಯಥಿತಾಂ ರಕ್ಷೋಽಹರಣ ಕರ್ಶಿತಾಂ ।

ಕೊನೆಗಾಣದಿರುವ, ದುಃಖಜಾಲೇನ - ದುಃಖಸಮೂಹದಿಂದ, ಸಂಸಕ್ತಾಂ - ಕೂಡಿ ಇರುವ, ವಿಭಾವಸೋಃ - ಅಗ್ನಿಯ, ಶಿಖಾಮಿವ - ಜ್ವಾಲೆಯಂತೆ, ನರಾಜತೀಂ - ಪ್ರಕಾಶಿಸದೆ ಇರುವ, ॥೩೨॥ ತಾಂ - ಪ್ರಾಮಾಣಿಕವಾದ, ಸಂದಿಗ್ಧಾಂ - ಅರ್ಥಸಂದೇಹಾಸ್ಪದವಾಗಿರತಕ್ಕ, ಸ್ಮೃತಿ ಮಿವ (ಸ್ಥಿತಾಂ)- ಧರ್ಮಶಾಸ್ತ್ರದಂತಿರುವ, ನಿಪತಿತಾಂ - ಕ್ಷಯಿಸಿಹೋದ, ವೃದ್ಧಿಮಿವ (ಸ್ಥಿತಾಂ) -ಸಂಪತ್ತಿನಂತಿರುವ, ವಿಹತಾಂ - ನಂಬಿಕೆಯಿಲ್ಲದೆ ನಶಿಸಿಹೋದ, ಶ್ರದ್ಧಾಮಿವ (ಸ್ಥಿತಾಂ)-ಆಸ್ತಿಕ್ಯಬುದ್ಧಿಯಂತಿರುವ, ಪ್ರತಿಹತಾಂ - ಫಲಿಸದೆಹೋದ, ಆಶಾಮಿವ(ಸ್ಥಿತಾಂ)- ಕೋರಿಕೆಯಂತಿರುವ, ॥೩೩॥ ಸೋಪಸರ್ಗಾಂ - ಅಡ್ಡಿಗಳಿಂದೊಡಗೂಡಿದ, ಸಿದ್ಧಿಂಯಥಾ - ತಪಸ್ಸಿದ್ಧಿಯಂತಿರುವ, ಸಕಲುಷಾಂ - ಕಲ್ಮಷದಿಂದೊಡಗೂಡಿದ (ಕದಡಿಹೋಗಿರುವ) ಬುದ್ಧಿ ಮಿವ (ಸ್ಥಿತಾಂ)-ಬುದ್ಧಿಯಂತಿರುವ, ಅಭೂತೇನ - ಅಸತ್ಯವಾದ, ಅಪವಾದೇನ-ದೂರಿನಿಂದ, ನಿಪತಿತಾಂ - ಕೆಟ್ಟುಹೋದ, ಕೀರ್ತಿಮಿವ (ಸ್ಥಿತಾಂ) ಯಶಸ್ಸಿನಂತಿರುವ, ॥೩೪॥ ರಾಮೋಪರೋಧ - ಶ್ರೀ ರಾಮಲಾಭದ ವಿಘ್ನದಿಂದ, ವ್ಯಥಿತಾಂ - ವ್ಯಸನವನ್ನುಂಟಾಗಿರುವ, ರಕ್ಷೋಽಪಹರಣ - ರಾಕ್ಷಸಾಪಹಾರದಿಂದ, ಕರ್ಶಿತಾಂ-ಕ್ಷಯಿಸಿಹೋಗಿರುವ, ಅಬಲಾಂ-ಸಹಾಯವಿಲ್ಲದಿರುವ, ಮೃಗಶಾಬಾಕ್ಷೀಂ-

ಕಾಣಬರುತಲಿವಾಳೆ ॥೩೧॥ ಪ್ರಬಲವಾಗಿಯೂ, ಅಖಂಡವಾಗಿಯೂ ಇರುವ ಶೋಕಸಂತತಿಯಿಂದ ಬಹಳವಾಗಿ ಬಳಲಿಹೋಗಿರುವ ಕಾರಣ ಹೊಗೆಯರಾಶಿಯೊಳಗೆ ಸಿಲುಕಿದ ಅಗ್ನಿಜ್ವಾಲೆಯಂತೆ ಶೋಭಿಸುತಲಿಲ್ಲ ॥೩೨॥ ನಂಬಿಕೆತಕ್ಕುದಾದರೂ ನಿಜವಾದ ಅರ್ಥವು ತೋರದೆ ಸಂಶಯಾಸ್ಪದವಾದ ಸ್ಮೃತಿಯಂತಿರುವಳು, ಪಾಪದ ಪೆಟ್ಟಿನಿಂದ ಕ್ಷಯಿಸಿಹೋಗುತಲಿರುವ ಸಂಪತ್ತಿನ ಸಮೃದ್ಧಿಯಂತೆ ತೋರುತ್ತಿರುವಳು, ಸತ್ಕರ್ಮವನ್ನು ಆಚರಿಸಬೇಕೆಂಬ ಆಸ್ತಿಕ್ಯ ಬುದ್ಧಿಯು ದೋಷದಿಂದ ಒಡಗೂಡಿದರೆ ಹೇಗೋ ಹಾಗೆ ಕಾಣಬರುವಳು, ಯಾವುದಾದರೊಂದು ಕೋರಿಕೆಯು ಕೈಗೂಡುವುದೆಂದು ಬಯಸುತಲಿದ್ದಾಗ ಆ ಮನೋರಥವು ಭಂಗವಾಗಲು ಆಗಿನ ಆಶೆಯಂತೆ ಇದಾಳೆ. ॥೩೩॥ ತಪಸ್ಸನ್ನು ಆಚರಿಸುತಲಿದ್ದು ಮಧ್ಯೆ ಪ್ರಬಲವಾದ ವಿಘ್ನವುಂಟಾಗಲು ಅಂತಹ ತಪಸ್ಸಿದ್ಧಿಯು ಹೇಗೋ ಹಾಗೂ, ಮಾಲಿನ್ಯದಿಂದೂಡಗೂಡಿದ ಬುದ್ಧಿಯುಹಾಗೂ, ಅಸತ್ಯವಾದ ಅಪವಾದದಿಂದ ದೋಷಕ್ಕೊಳಗಾದ ಒಳ್ಳೆಯ ಹೆಸರುವಾಸಿಯುಹಾಗೂ, ಇದಾಳೆ ॥೩೪॥ ಶ್ರೀರಾಮನ ಅಗಲಿಕೆಯಿಂದುಂಟಾದ ವ್ಯಥೆಯು ಹೊಟ್ಟೆಯೊಳಗೆ ಕುದಿಯುತಲಿದೆ, ರಾಕ್ಷಸನು ಅಪಹರಿಸಿ ತಂದು ಇರುವುದರಿಂದ ವ್ಯಸನಪಟ್ಟು ಕ್ಷಯಿಸಿಹೋಗಿವಾಳೆ, ಅಸಮಯು, ಸಹಾಯವಿಲ್ಲ, ಅನಾಥಳು, ಇಕ್ಕಟ್ಟಿಗೆ ಸಿಕ್ಕಿದ ಹೆಣ್ಣುಹುಲ್ಲೆಯ ಮರಿಯಂತೆ ಕಳವಳಿಸಿ, ಭಯಭ್ರಾಂತಳಾಗಿ, ಅಯ್ಯೋ, ತನ್ನವರೆನಿಸಿ

ಅಬಲಾಂ ಮೃಗಶಾಬಾಕ್ಷೀಂ ವೀಕ್ಷಮಾಣಾಂ ತತಸ್ತತಃ ॥೨೪॥
ಬಾಷ್ಪಾಂಬುಪರಿಪೂರ್ಣೇನ ಕೃಷ್ಣವಕ್ರಾಕ್ಷಿಪಕ್ಷ್ಮಣಾ ।
ವದನೇನಾಪ್ರಸನ್ನೇನ ನಿಶ್ಶ್ವಸಂತೀಂ ಪುನಃಪುನಃ ॥೨೫॥
ಮಲಪಂಕಧರಾಂ ದೀನಾಂ ಮಂಡನಾರ್ಹಾಮಮಂಡಿತಾಂ ।
ಪ್ರಭಾಂ ನಕ್ಷತ್ರ ರಾಜಸ್ಯ ಕಾಲಮೇಘೈರಿವಾವೃತಾಂ ॥೨೬॥
ತಸ್ಯ ಸಂದಿದಿಹೇ ಬುದ್ಧಿರ್ಮುಹುಸ್ಸೀತಾಂ ನಿರೀಕ್ಷ್ಯ ತು ।

---

ಜಿಂಕೆಯ ಮರಿಯಂತೆ ನೋಟವುಳ್ಳವಳಾದ ಕಾರಣವೇ, ತತಸ್ತತಃ - (ತನ್ನವರ ಸುಳಿವೇನಾದರು ಕಾಣಬರುವುದೋ ಏನೋ ಎಂದು) ಅಲ್ಲಲ್ಲಿ, ವೀಕ್ಷಮಾಣಾಂ - ನೋಡುತಲಿರುವ ॥ ೨೪ ॥ ಬಾಷ್ಪಾಂಬುಪರಿಪೂರ್ಣೇನ-ನೀರಿನಿಂದ ತುಂಬಿರುವುದೂ, ಕೃಷ್ಣವಕ್ರಾಕ್ಷಿಪಕ್ಷ್ಮಣಾ - ಕಪ್ಪಾಗಿಯೂ ಡೊಂಕಾಗಿಯೂ ಇರುವ ಕಣ್ಣಿನ ರೆಪ್ಪೆಯುಳ್ಳುದೂ, ಅಪ್ರಸನ್ನೇನ-ನಿರ್ಮಲವಾಗಿ ಇಲ್ಲದುದೂ, (ಸಂತೋಷಸೂಚಕವಲ್ಲದುದೂ) ಆಗಿರುವ, ವದನೇನ - ಮುಖದಿಂದ, ಪುನಃಪುನಃ-ಅಡಿಗಡಿಗೂ, ನಿಶ್ಶ್ವಸಂತೀಂ-ನಿಟ್ಟುಸಿರನ್ನು ಬಿಡುತಲಿರುವ ॥ ೨೫ ॥ ಮಲಪಂಕಧರಾಂ - ಹೆಚ್ಚಿದ ಕೊಳೆಯನ್ನುಂಟಾಗಿರುವ, ದೀನಾಂ-ಅನಾಥಳಾಗಿರುವ, ಮಂಡನಾರ್ಹಾಂ - ದಿವ್ಯಾಲಂಕಾರಕ್ಕೆ ಯೋಗ್ಯಳಾಗಿದ್ದರೂ, ಅಮಂಡಿತಾಂ-ಅಲಂಕರಿಸಿಕೊಳ್ಳದಿರುವ, ಕಾಲಮೇಘೈಃ - ಮಳೆಗಾಲದ ಮೋಡಗಳಿಂದ, ಆವೃತಾಂ - ಆವರಿಸಲ್ಪಟ್ಟ, ನಕ್ಷತ್ರರಾಜಸ್ಯ-ಚಂದ್ರನ, ಪ್ರಭಾಮಿವ-(ಸ್ಥಿತಾಂ) ಕಾಂತಿಯಂತಿರುವ ॥೨೬॥ ಅಮ್ನಾಯಾನಾಂ - ವೇದಗಳ ಅಯೋಗೇನ-ಸಂಬಂಧವಿಲ್ಲದಿರುವುದರಿಂದ, (ಅನಭ್ಯಾಸದಿಂದ) ಪ್ರಶಿಥಿಲಾಂ - ಪಟ್ಟಿಲ್ಲದ [ಪರಲೋಕಸಾಧಕವಾಗದ] ವಿದ್ಯಾಮಿವ-[ಸ್ಥಿತಾಂ] ವೇದಬಾಹ್ಯವಿದ್ಯೆಯಂತಿರುವ, ಅಥವಾ-ಆಮ್ನಾಯಾನಾಂ-ಸತ್ಯವಚನ,

---

ದವರ ಸುಳಿವೇನಾದರು, ಎಲ್ಲಿಯಾದರೂ ಕಾಣಬರುವುದೋ ಏನೋ ಎಂದು ಅತ್ತಯಿತ್ತ ನೋಡುತ ಅತ್ತಿತ್ತ ಚಪಲದೃಷ್ಟಿಯನ್ನು ಬೀರುತಲಿದ್ದಾಳೆ ॥೨೪॥ ಮುಖದಮೇಲೂ, ಕಣ್ಣಿನೊಳಗೂ ನೀರುತುಂಬಿದೆ, ಡೊಂಕಾಗಿಯೂ, ಕಪ್ಪಾಗಿಯೂ ಇರುವ ರೆಪ್ಪೆಯನ್ನೊಳಗೊಂಡು ಶೋಭಿಸದಿರುವ ಮುಖದಿಂದ ಪುನಃಪುನಃ ನಿಟ್ಟುಸಿರು ಹೊರಡುತಲಿದೆ. ॥೨೫॥ ದುಃಖಾತಿಶಯದಿಂದ ಏನೊಂದೂ ಬೇಡದಿರುವುದರಿಂದ ಹೇರಳವಾದ ಮಾಲಿನ್ಯವು ಮುಸುಕಿದೆ. ಬಹುದೀನಳಾಗಿದಾಳೆ, ರಾಜಯೋಗ್ಯವಾದ ದಿವ್ಯವಸ್ತ್ರಾಭರಣಗಳಿಂದ ಶೃಂಗರಿಸಿಕೊಳ್ಳಲು ತಕ್ಕವಳಾದರೂ, ಅಂತಹ ಅಲಂಕಾರಗಳನ್ನೆಲ್ಲ ತೊರೆದಿದಾಳೆ, ಆದುದರಿಂದಲೇ ಮಳೆಗಾಲದ ಮೋಡಗಳು ಮುಸುಕಿದ್ದರೆ ಹುಣ್ಣಿಮೆಯ ಚಂದಿರನ ಕಳೆಯಂತೆ ವಿರಾಜಿಸುವುದಿಲ್ಲ. ॥೨೬॥ ಇಂತಹ ಜಾನಕಿಯನ್ನು ಪವಮಾನಾತ್ಮಜನು ಪುನಃಪುನಃ ನೋಡಿದನು, ಅಡಿಗಡಿಗೂ ಆತನ ಮನಸ್ಸಿಗೆ ಸೀತೆಯು ಹೌದೋ, ಅಲ್ಲವೋ ಎಂಬ ಸಂಶಯವು ಉಂಟಾಗುತಲಿದ್ದಿತು. ಏನುಮಾಡಿಯಾನು ? ಎಂದೂ ನೋಡಿದವನಲ್ಲ, ಪ್ರಾಯಶಃ ಊಹೆಯಿಂದಲೂ, ಕೇವಲ ಲಕ್ಷಣಗಳಿಂದಲೂ, ಕಂಡು ಹಿಡಿಯಬೇಕು. ಕೇವಲವಾಗಿ ಊಹಿಸಿ ನಿಶ್ಚಯಿಸುವುದು ಬಹುಕಷ್ಟ; ಲಕ್ಷಣಗಳಿಂದ ನಿರ್ಧರಿಸಲಿಕ್ಕೆ ಬಳ್ಳಿಯಂತೆ ಬಹು ಬಡತನದಿಂದ ಕಳೆಗುಂದಿ ಹೋಗಿದಾಳೆ, ಹತ್ತಿರಕ್ಕೆ ಬಂದು ಪರೀಕ್ಷಿಸಲಿಕ್ಕೂ ಇಲ್ಲ. ಅವನಿಗೆ ಬದಗಿರುವ ತೊಂದರೆಯು ಅಷ್ಟೇ ಸ್ಪಷ್ಟವಲ್ಲ, ಆಶ್ರಮೋಚಿತವಾದ ವೇದಾ

ಆಮ್ನಾಯಾನಾ ಮಯೋಗೇನ ವಿದ್ಯಾಂ ಪ್ರಶಿಥಿಲಾಮಿವ ||೪೮||
ದುಃಖೇನ ಬುಬುಧೇ ಸೀತಾಂ ಹನುಮಾ ನನಲಂಕೃತಾಂ |
ಸಂಸ್ಕಾರೇಣ ಯಥಾ ಹೀನಾಂ ವಾಚ ಮರ್ಥಾಂತರಂ ಗತಾಂ||೪೯ ||
ತಾಂ ಸಮೀಕ್ಷ್ಯ ವಿಶಾಲಾಕ್ಷೀಂ ರಾಜಪುತ್ರೀ ಮನಿಂದಿತಾಂ |

ಪಾರಾಯಣಾದಿಗಳ, ಅಯೋಗೇನ- ಸಂಬಂಧವಿಲ್ಲದಿರುವುದರಿಂದ, ಪ್ರಶಿಥಿಲಾಂ- ಮರೆತುಹೋದ, ವಿದ್ಯಾಮಿವ- [ಸ್ಥಿತಾಂ] ವೇದವಿದ್ಯೆಯಂತಿರುವ, ಸೀತಾಂ - ಸೀತಾದೇವಿಯನ್ನು, ನಿರೀಕ್ಷ್ಯ -ನೋಡಿ, (ವರ್ತಮಾನಸ್ಯ - ಇರುತ್ತಲಿರುವ) ತಸ್ಯ-ಆ ಮಾರುತಿಯ, ಬುದ್ಧಿಃ-ಮತಿಯು, ಮುಹುಃ - ಪದೆಪದೆ, ಸಂದಿದಿಹೇ-ಸಂಶಯಪಡುತಲಿದ್ದಿತು ||೪೮|| ಸಂಸ್ಕಾರೇಣ - ವ್ಯುತ್ಪತ್ತಿಶಕ್ತಿಯಿಂದ, ಹೀನಾಂ-ಶೂನ್ಯವಾದುದಾದಕಾರಣವೇ, ಅರ್ಥಾಂತರಂ-ಬೇರೊಂದು ಅರ್ಥವನ್ನು, ಗತಾಂ-ಹೊಂದಿ ಇರುವ, ವಾಚಂ-ಶಬ್ದವನ್ನು, ಯಥಾ-ವ್ಯುತ್ಪತ್ತಿಶಕ್ತಿಯಿಂದ ತತ್ತ್ವಾರ್ಥವನ್ನು ತಿಳಿಯುವುದು ಹೇಗೋ. ತಥಾ-ಹಾಗೆ, ಹನುಮಾನ್-ಆಂಜನೇಯನು, ಅನಲಂಕೃತಾಂ-ಅಲಂಕಾರಾದಿಗಳಿಲ್ಲದಿರುವ, ಸೀತಾಂ - ಸೀತಾದೇವಿಯನ್ನು, ದುಃಖೇನ-ಬಹುಕಷ್ಟದಿಂದ, ಬುಬುಧೇ- ತಿಳಿದುಕೊಂಡನು, ಅಥವಾ:—ಅರ್ಥಾಂತರಂಗತಾಂ - ವಾಚಕನಿಗೆ ಜ್ಞಾನವಿಲ್ಲದುದರಿಂದ ಬೇರೊಂದು ಅರ್ಥವನ್ನು ಸೂಚಿಸಿ ಇರುವುದಾದಕಾರಣವೇ, ಹೀನಾಂ - ಶೋಭಿಸದಿರುವ, ವಾಚಂ-ಶಬ್ದವನ್ನು, ಸಂಸ್ಕಾರೇಣ - ವ್ಯಾಕರಣಾದಿ ಶಾಸ್ತ್ರಾಭ್ಯಾಸದಿಂದುಂಟಾದ ಜ್ಞಾನ (ಶಕ್ತಿ) ವಿಶೇಷದಿಂದ, ಯಥಾ - ತಿಳಿಯುವುದು ಹೇಗೋ, ತಥಾ-ಹಾಗೆಯೇ, ಹನುಮಾನ್ - ಆಂಜನೇಯನೂ, ಅನಲಂಕೃತಾಂ - ಪತಿಯ ಅಗಲಿಕೆಯಿಂದ ಅಲಂಕಾರಾದಿಗಳಿಲ್ಲದಿರುವ, ಸೀತಾಂ - ಸೀತಾದೇವಿಯನ್ನು, ದುಃಖೇನ-ಬಹುತರವಾದ ಕಷ್ಟದಿಂದ, ಬುಬುಧೇ-ಗುರುತುಹಿಡಿದನು ||೪೯||

ಮಾರುತಿಃ - ಆಂಜನೇಯನು, ವಿಶಾಲಾಕ್ಷೀಂ - ವಿಶಾಲನಯನೆಯೂ,ರಾಜಪುತ್ರೀಂ - ಜನಕರಾಜನಂದಿನಿಯೂ, ಅನಿಂದಿತಾಂ - ದೋಷಲೇಶವಿಲ್ಲದವಳೂ ಆಗಿರುವ, ತಾಂ - ಆಕೆಯನ್ನು ಉಪಪಾದಿಭಿಃ -

ಧ್ಯಯನವನ್ನು ಮಾಡದಿರುವ ಬ್ರಾಹ್ಮಣನ ಇತರ ವಿದ್ಯಾಭ್ಯಾಸವು ಪರಲೋಕ ಸಾಧಕವಾಗದೆ ಶೋಭಿಸದಹಾಗೆ ಅಥವಾ- ಸ್ವಾಧ್ಯಾಯನ ಸಂಬಂಧವಿಲ್ಲದುದರಿಂದ ಶಿಥಿಲವಾದ ವೇದವಿದ್ಯೆಯಹಾಗೆ ಇರುವ ಆ ಜಾನಕಿಯನ್ನು ನೋಡಿ ಮಾರುತಿಯ ಮನವು ಸಂಶಯಗೊಂಡಿತು ||೪೮|| ಲೋಕದಲ್ಲಿ ಯಾವನಾದರೊಬ್ಬ ಮನುಷ್ಯನು ಮೊದಲು ವ್ಯಾಕರಣ ಮೊದಲಾದ ಶಾಸ್ತ್ರಗಳನ್ನು ಅಭ್ಯಾಸಮಾಡದೇ ಇದ್ದಾಗ ಬೇರೊಂದು ವಿಧವಾದ ಅರ್ಥವುಳ್ಳದ್ದನ್ನಾಗಿ ತಿಳಿದುಕೊಂಡಿದ್ದ ಪದವನ್ನು, ಆ ಶಾಸ್ತ್ರಗಳನ್ನು ಚೆನ್ನಾಗಿ ಅಭ್ಯಾಸಮಾಡಿದ ಬಳಿಕ ಉಂಟಾದ ಜ್ಞಾನವಿಶೇಷದಿಂದ ಈ ಪದವು ಈ ಅರ್ಥವುಳ್ಳುದೇಸರಿ ಎಂದು ನಿರ್ಧರಿಸುವಹಾಗೆ, ಮಾರುತಿಯೂ ಯಾವುದೊಂದು ಅಲಂಕಾರಾದಿಗಳೂ ಇಲ್ಲದೆ, ಬಡತನವೇಮೊದಲಾದ ಬಹುಸಂಕಟಗಳೊಳಗೆ ಸಿಲುಕಿರುವ ಜಾನಕಿಯನ್ನು, ಈಕೆ ಸೀತೆಯುಹೌದೋ ಅಲ್ಲವೋ ಎಂದು ಬಹುವಿಧವಾಗಿ ಸಂಶಯಪಟ್ಟು, ಮನದೊಳಗೆ ಚರ್ಚಿಸಿ ಚರ್ಚಿಸಿ, ವಿಚಾರವಮಾಡಿ ಮಾಡಿ, ಕಾರಣಗಳನ್ನು ಹುಡಹುಡುಕಿ, ಕಡೆಗೆ ಬಹುಕಷ್ಟದಿಂದ ಈಕೆ ಸೀತೆಯೇಸರಿ,ಎಂದು ತಿಳಿದುಕೊಂಡನು ||೪೯|| ಮತ್ತೆ ಮಾರುತಿಯು ವಿಶಾಲನಯನೆಯೂ, ರಾಜಕುಮಾರಿಯೂ, ದೋಷಲೇಶ ರಹಿತಳೂ, ಸಕಲಪಾತಿವ್ರತ್ಯ ಸಲ್ಲಕ್ಷಣ ಸಂಪನ್ನಳೂ ಆಗಿರುವ

ತರ್ಕಯಾಮಾಸ ಸೀತೇತಿ ಕಾರಣೈರುಪಪಾದಿಭಿಃ ॥೪೦॥
ವೈದೇಹ್ಯಾ ಯಾನಿ ಚಾಂಗೇಷು ತದಾ ರಾಮೋಽನ್ವಕೀರ್ತಯತ್ ।
ತಾನ್ಯಾಭರಣಜಾಲಾನಿ ಶಾಖಾಶೋಭೀನ್ಯಲಕ್ಷಯತ್ ॥೪೧॥
ಸುಕೃತೌ ಕರ್ಣವೇಷ್ಟೌ ಚ ಶ್ವದಂಷ್ಟ್ರೌ ಚ ಸುಸಂಸ್ಥಿತೌ ।
ಮಣಿವಿದ್ರುಮಚಿತ್ರಾಣಿ ಹಸ್ತೇಷ್ವಾಭರಣಾನಿ ಚ ॥
ಶ್ಯಾಮಾನಿ ಚಿರಯುಕ್ತತ್ವಾತ್ತಥಾ ಸಂಸ್ಥಾನವಂತಿ ಚ ॥೪೨॥-॥
ತಾನ್ಯೇವೈತಾನಿ ಮನ್ಯೇಽಹಂ ಯಾನಿ ರಾಮೋಽನ್ವಕೀರ್ತಯತ್ ॥೪೩॥

---

ನಿಜವನ್ನು ತಿಳಿಸತಕ್ಕ, ಕಾರಣೈಃ-ನಿಮಿತ್ತಗಳಿಂದ, ಸೀತೇತಿ -ಸೀತೆಯೆಂದು, ತರ್ಕಯಾಮಾಸ-ಚರ್ಚಿಸಿ ಊಹಿಸಿದನು ॥೪೦॥ ರಾಮಃ - ಶ್ರೀರಾಮನು, ತದಾ-ಆಗ (ರಾಮನ ಅಪ್ಪಣೆಯನ್ನು ಪಡೆದು ಮಾರುತಿಯು ಇಲ್ಲಿಗೆ ಹೊರಡುವಾಗ) ವೈದೇಹ್ಯಾಃ - ಜಾನಕಿಯ, ಅಂಗೇಷು - ಅವಯವಗಳಲ್ಲಿ, ಯಾನಿ - ಯಾವ, ಆಭರಣಜಾಲಾನಿ - ಒಡವೆಗಳ ಸಮೂಹಗಳನ್ನು, ಅನ್ವಕೀರ್ತಯತ್ - ಶ್ರೀರಾಮನು ಕ್ರಮವಾಗಿ ಹೇಳಿ ಇದ್ದನೋ, ಶಾಖಾಶೋಭೀನಿ - ಕೊಂಬೆಯ ಮೇಲೆ ಕಾಣುತಿರುವ, ತಾನಿ - ಆ ಆಭರಣಗಳನ್ನೇ, ಸಃ - ಆ ಮಾರುತಿಯು, ಅಲಕ್ಷಯತ್ - ನೋಡಿ ಗುರುತುಹಿಡಿದನು ॥೪೧॥ ಸುಕೃತೌ - ಬಹುಚೆನ್ನಾಗಿ ರಚಿಸಿ ಇರುವ, ಕರ್ಣವೇಷ್ಟೌಚ - ಕಿವಿಯ ಓಲೆಗಳೂ, ಸುಸಂಸ್ಥಿತೌ - ಒಪ್ಪಿಯ ಕೈವಾಡವುಳ್ಳ, ಶ್ವದಂಷ್ಟ್ರೌ ಚ - ಬಾವಲಿಗಳೂ, ಮಣಿ - ರತ್ನಗಳಿಂದಲೂ, ವಿದ್ರುಮ - ಹವಳಗಳಿಂದಲೂ, ಚಿತ್ರಾಣಿ - ಆಶ್ಚರ್ಯಕರಗಳಾದ, ಹಸ್ತೇಷು - ಕೈಗಳಲ್ಲಿ ಧರಿಸತಕ್ಕ, ಆಭರಣಾನಿಚ - ಒಡವೆಗಳೂ ॥೪೨॥ ಚಿರಯುಕ್ತತ್ವಾತ್- ಬಹುಕಾಲದಿಂದ ಗಂಟುಕಟ್ಟಿರುವುದರದೆಸೆಯಿಂದ, ಶ್ಯಾಮಾನಿ-ಕೊಳೆಯಿಂದ ಕಪ್ಪಾದವುಗಳಾಗಿದ್ದರೂ, ತಥಾ - ಶ್ರೀರಾಮನು ಹೇಳಿ ಇದ್ದಹಾಗೆಯೇ, ಸಂಸ್ಥಾನವಂತಿಚ - ಗುರುತುಳ್ಳವುಗಳಾಗಿವೆ, ರಾಮಃ - ಶ್ರೀರಾಮನು, ಯಾನಿ - ಎಂಥವುಗಳನ್ನು, ಅನ್ವಕೀರ್ತಯತ್ - ಹೇಳಿ ಇದ್ದನೋ, ಏತಾನಿ - ಇವುಗಳನ್ನು

---

ಆಕೆಯನ್ನು ಚೆನ್ನಾಗಿ ಸಿರೀಕ್ಷಿಸಿ, ಬಲವತ್ತರವಾದ ಕಾರಣಗಳಿಂದ ಈಕೆ ಸೀತೆಯಾಗಿರಬಹುದು ಎಂದು ಊಹಿಸಿದನು ॥೪೦॥ ಹೀಗಿರುವಲ್ಲಿ—ತಾನು ಮೊದಲು ಶ್ರೀರಾಮನ ಅಪ್ಪಣೆಯನ್ನು ಪಡೆದು ಸೀತೆಯನ್ನು ಹುಡುಕಲಿಕ್ಕೆ ಹೊರಟಾಗ ರಾಮಚಂದ್ರನು ಸೀತೆಯ ಅವಯವಗಳಲ್ಲಿ ಯಾವ ಯಾವ ಆಭರಣಗಳು ಇರುವುವು ಎಂದು ಹೇಳಿಇದ್ದನೋ,ತಾನು ಕುಳಿತಿದ್ದ ಮರದ ಕೊನೆಯಲ್ಲಿ, ಪತಿಯನ್ನಗಲಿದಾಗ ಸತಿಯರು ಅಲಂಕರಿಸಿಕೊಳ್ಳುವುದು ತಕುದಲ್ಲವೆಂದು ತೆಗೆದುಗಂಟುಕಟ್ಟಿ ಇಟ್ಟಿರುವ ಆ ಆಭರಣಗಳನ್ನೆಲ್ಲ ಕಂಡನು.॥೪೧॥ಬಲುಅಂದವಾಗಿ ರಚಿಸಿಇರುವ ಓಲೆಗಳೆರಡು, ಬಹು ಚಮತ್ಕಾರದ ಕೈವಾಡದ ಕೆಲಸವನ್ನು ತೋರಿಸಿಇರುವ ಬಾವಲಿಗಳೆರಡು,ರತ್ನಗಳಿಂದಲೂ,ಹವಳಗಳಿಂದಲೂಕಲ್ಪಿಸಿ ಇರುವವುಗಳಾಗಿ, ಕೈಗಳಿಗೂ, ಬೆರಳುಗಳಿಗೂ ಇಟ್ಟುಕೊಳ್ಳತಕ್ಕ ಒಡವೆಗಳು ಕೆಲವು ಇವುಗಳನ್ನೆಲ್ಲ ನೋಡಿದನು ॥೪೨॥ ಆದರೆ—ಯದ್ಯಪಿ ಈ ಆಭರಣಗಳನ್ನು ಹೀಗೆ ಕಟ್ಟಿರಿಸಿ ಬಹು ದಿವಸಗಳಾಗಿವೆ, ಆದಕಾರಣವೇ ಕಪ್ಪುಹಿಡಿದಿವೆ, ಆದರೂ ಶ್ರೀರಾಮನು ಹೇಳಿರುವ ಗುರುತುಗಳೆಲ್ಲವೂ ಇವುಗಳಲ್ಲಿವೆ, ಆದುದರಿಂದ ಇವೆಲ್ಲವೂ ರಾಮನು ಹೇಳಿಇದ್ದ ಆಭರಣಗಳೇ ಸರಿ ಎಂದು ತಿಳಿಯುತ್ತೇನೆ. ॥೪೩॥ ಈಕೆ ಇಲ್ಲಿಗೆ ಬರುವಾಗ ಯಾವ ಯಾವ ಆಭರಣಗಳನ್ನು

ತಥಾಪಿ ನೂನಂ ತದ್ವರ್ಣಂ ತಥಾ ಶ್ರೀಮದ್ಯಥೇತರತ್ ॥೪೩॥
ಇಯಂ ಕನಕವರ್ಣಾಂಗೀ ರಾಮಸ್ಯ ಮಹಿಷೀ ಪ್ರಿಯಾ ।
ಪ್ರಣಷ್ಟಾಪಿ ಸತೀ ಯಸ್ಯ ಮನಸೋ ನ ಪ್ರಣಶ್ಯತಿ ॥೪೪॥
ಇಯಂ ಸಾ ಯತ್ಕೃತೇ ರಾಮಶ್ಚತುರ್ಭಿಃ ಪರಿತಪ್ಯತೇ ।
ಕಾರುಣ್ಯೇನಾನೃಶಂಸ್ಯೇನ ಶೋಕೇನ ಮದನೇನ ಚ ॥೪೫॥
ಸ್ತ್ರೀ ಪ್ರಣಷ್ಟೇತಿ ಕಾರುಣ್ಯಾದಾಶ್ರಿತೇತ್ಯಾನೃಶಂಸ್ಯತಃ ।

---

ವುಳ್ಳುದಾಗಿಯೂ, (ಅಸ್ತಿ - ಇದೆ) ನೂನಂ - ನಿಶ್ಚಯವು ॥೪೩॥ ಯಾ - ಯಾವಾಕೆಯಾದರೆ, ಕನಕವರ್ಣಾಂಗೀ - ಬಂಗಾರದ ಬಣ್ಣದಂತೆ ಅವಯವಗಳುಳ್ಳವಳೂ, ರಾಮಸ್ಯ - ಶ್ರೀರಾಮನಿಗೆ, ಪ್ರಿಯಾ - ಇಷ್ಟಳೂ, ಸತೀ - ಪತಿವ್ರತೆಯೂ, ಮಹಿಷೀ - ಪಟ್ಟದರಸಿಯೂ ಆಗಿರುವಳೆನಿಸಿ, ಪ್ರಣಷ್ಟಾಪಿ - ಕಾಣದೆಹೋಗಿದ್ದರೂ, ಅಸ್ಯ - ಈ ಶ್ರೀರಾಮನ, ಮನಸಃ - ಮನಸ್ಸಿನ ದೆಸೆಯಿಂದ, ನಪ್ರಣಶ್ಯತಿ - ದೂರವಾಗಿ ಹೋಗಿ ಇಲ್ಲವೋ, (ಸಾ - ಆಕೆಯು) ಇಯಂ - ನಾನು ನೋಡುತಲಿರುವ, ಈಕೆಯೇ ಸರಿ ॥೪೪॥ ಯತ್ಕೃತೇ - ಯಾವಾಕೆಯನ್ನು ಉದ್ದೇಶಿಸಿ, ರಾಮಃ - ಶ್ರೀರಾಮನು, ಕಾರುಣ್ಯೇನ - ದಯೆಯಿಂದಲೂ, ಆನೃಶಂಸ್ಯೇನ - ಕ್ರೂರತನವಿಲ್ಲದುದರಿಂದಲೂ, ಶೋಕೇನ - ದುಃಖದಿಂದಲೂ, ಮದನೇನಚ - ವ್ಯಾಮೋಹದಿಂದಲೂ, ಚತುರ್ಭಿಃ - ಈ ನಾಲ್ಕು ಕಾರಣಗಳಿಂದ, ಪರಿತಪ್ಯತೇ - ಸಂತಾಪಪಡುತಲಿರುವನು ॥೪೫॥ ಸ್ತ್ರೀ - ಆಪತ್ಕಾಲದಲ್ಲಿ ಅಗತ್ಯವಾಗಿ ಕಾಪಾಡಬೇಕಾದ ಹೆಂಗಸು, (ಕಾಪಾಡಲಿಲ್ಲವೇ) ಪ್ರಣಷ್ಟಾ - ಕಾಣದಂತೆ ಹೋದಳಲ್ಲಾ, ಇತಿ - ಹೀಗೆಂದು, ಕಾರುಣ್ಯಾತ್ - ದಯೆಯಿಂದಲೂ, ಆಶ್ರಿತಾ - ಆಶ್ರಯಿಸಿದ್ದ ಅಬಲೆಯು (ರಕ್ಷಿಸಲ್ಪಡಲಿಲ್ಲ) ಇತಿ - ಹೀಗೆಂದು, ಆನೃಶಂಸ್ಯತಃ - ಪರಹಿಂಸೆಯನ್ನು ಸಹಿಸಲಾರದ ಸ್ವಭಾವದಿಂದಲೂ, ಪತ್ನೀ - ಅರ್ಧಶರೀರಕ್ಕೆ ಒಡತಿಯಾದವಳು, ಪ್ರಣಷ್ಟಾ - ಕಳೆದುಹೋದಳೇ, ಇತಿ - ಇಂತೆಂದು, ಶೋಕೇನ - ದುಃಖದಿಂದಲೂ,

---

ಬಂದೇ ಅಲ್ಲದೆ ಬೇರಲ್ಲ, ಈ ವಿಷಯದಲ್ಲಿ ಸಂಶಯವಿಲ್ಲ ॥೪೩॥ ಸುವರ್ಣಚ್ಛಾಯೆಯುಳ್ಳವಳೂ, ಶ್ರೀರಾಮನಿಗೆ ಪ್ರಾಣಪ್ರಿಯಳೂ, ಪಟ್ಟದರಸಿಯೂ, ಪತಿವ್ರತಾಶಿರೋಮಣಿಯೂ ಆಗಿರುವ ಈ ಸೀತಾದೇವಿಯು, ಆತನಿಗೆ ಕಣ್ಣಮರೆಯಾಗಿ ಬಂದಿದ್ದರೂ, ಖಂಡಿತವಾಗಿಯೂ ಅತನ ಮನಸ್ಸನ್ನು ಬಿಟ್ಟು ಬಂದಿಲ್ಲ ॥೪೪॥ ಮಹತ್ತರವಾದ ಧೈರ್ಯಬುದ್ಧಿಯುಳ್ಳ ಅನುಹಾನುಭಾವನಾದ ಶ್ರೀರಾಮನು- ಕರುಣೆ, ಅಘಾತುಕತನ, ಶೋಕ, ವ್ಯಾಮೋಹ ಎಂಬ ಈ ನಾಲ್ಕು ಕಾರಣಗಳಿಂದಲೂ ಯಾವಾಕೆಯನ್ನು ಕುರಿತು ಬಹಳವಾಗಿ ಸಂತಾಪಪಡುತಲಿದಾನೆಯೋ ಅಂತಹ ಸೀತೆಯೇ ಈಕೆ? ॥೪೫॥ "ಹೆಂಗಸೇ, ಇಂತಹಳನ್ನು ಕಾಪಾಡಬೇಕಾದುದು ಆವಶ್ಯಕವಲ್ಲವೇ, ತಪ್ಪಿಸಿಕೊಂಡು ಹೋದಳಲ್ಲಾ" ಎಂದು ಕರುಣೆಯಿಂದಲೂ, "ನನ್ನನ್ನೇ ನಂಬಿದ್ದವಳೇ? ಮಹಾರಾಜ ಭೋಗಗಳನ್ನೆಲ್ಲ ಹುಲ್ಲುಕಡ್ಡಿಗೆ ಕಡೆಯಾಗಿ ಎಣಿಸಿ, ಕಲ್ಲುಮುಳ್ಳುಗಳನ್ನು ತುಳಿಯುತ್ತಾ, ಹಳ್ಳ ಕೊಳ್ಳಗಳನ್ನು ಲಕ್ಷ್ಯಮಾಡದೆ, ಸಿಂಹ ಶಾರ್ದೂಲಾದಿ ಘೋರಜಂತುಗಳಿಂದ ಮಹಾಭಯಂಕರವಾದ ಅರಣ್ಯವನ್ನು ಕುರಿತು ನನ್ನನ್ನು ಹಿಂಬಾಲಿಸಿ ಹೊರಟು ಬಂದಳಲ್ಲಾ ಅಂಥವಳು ಕಾಣದೆ ಹೋದಳೇ? ರಕ್ಷಿಸಲಿಕ್ಕಿಲ್ಲವಾಯಿತೇ?" ಎಂದು ಅಘಾತುಕತನದಿಂದಲೂ, "ಅಯ್ಯೋ, ನನ್ನ ಶರೀರದಲ್ಲಿ ಅರ್ಧಭಾಗವೇ ಆಕೆಯಲ್ಲವೆ? ನನಗೆ ಮನೋವ್ಯಥೆಯುಂಟಾದಾಗ ಸಿದ್ಧೌಷಧಿಯಂತೆ ಹಿತವಾಗಿದ್ದಳು, ಸರಸಸಲ್ಲಾಪದಲ್ಲಿ ಒಡನಾಡಿಯಾಗಿ

ಪತ್ನೀ ನಷ್ಟೇತಿ ಶೋಕೇನ ಪ್ರಿಯೇತಿ ಮದನೇನಚ ||೫೦||
ಅಸ್ಯಾ ದೇವ್ಯಾ ಯಥಾರೂಪ ಮಂಗ ಪ್ರತ್ಯಂಗ ಸೌಷ್ಠವಂ ।
ರಾಮಸ್ಯ ಚ ಯಥಾರೂಪಂ ತಸ್ಯೇಯ ಮಸಿತೇಕ್ಷಣಾ ||೫೧||
ಅಸ್ಯಾ ದೇವ್ಯಾ ಮನ ಸ್ತಸ್ಮಿಂ ಸ್ತಸ್ಯ ಚಾಸ್ಯಾಂ ಪ್ರತಿಷ್ಠಿತಂ ।

ಪ್ರಿಯೇತಿ-ಪ್ರಾಣಪ್ರಿಯಳೆಂದು, ಮದನೇನಚ- ವ್ಯಾಮೋಹದಿಂದಲೂ, (ರಾಮಃ- ಶ್ರೀರಾಮನು), ಪರಿತಪ್ಯತೆ-ಸಂತಪಿಸುತ್ತಾನೆ) ||೫೦||

ಅಸ್ಯಾಃದೇವ್ಯಾಃ-ಈ ಸೀತಾದೇವಿಯ, ರೂಪಂ - ಆಕಾರವೂ, ಅಂಗಪ್ರತ್ಯಂಗಸೌಷ್ಠವಂ-ದೊಡ್ಡ ಮತ್ತು ಚಿಕ್ಕ ಅವಯವಗಳ ಅಂದವೂ, ಯಥಾ-ಎಂಥದೋ, ರಾಮಸ್ಯಚ- ಶ್ರೀರಾಮನಿಗೂ, ರೂಪಂ-ಆಕಾರವೂ, ಅಂಗಪ್ರತ್ಯಂಗಸೌಷ್ಠವಂ - ಸರ್ವಾಂಗಗಳ ಸೌಂದರ್ಯವೂ, ತಥಾ - ಆಪ್ರಕಾರವಾದುದಾಗಿಯೇ ಇವೆ, ರಾಮಸ್ಯಚ - ಶ್ರೀ ರಾಮನಿಗಾದರೆ, ರೂಪಂ - ಆಕಾರವೂ, ಅಂಗಪ್ರತ್ಯಂಗಸೌಷ್ಠವಂ - ಸರ್ವಾಂಗಸೌಂದರ್ಯವೂ, ಯಥಾ-ಯಾವಪ್ರಕಾರವಾದುದೋ, ಅಸ್ಯಾಃದೇವ್ಯಾಃ-ಈ ಸೀತಾದೇವಿಯ,ರೂಪಂ-ಆಕಾರವೂ, ಅಂಗಪ್ರತ್ಯಂಗಸೌಷ್ಠವಂ- ಚಿಕ್ಕದೊಡ್ಡವಯವಗಳ ಮಟ್ಟಸವೂ, ತಥಾ - ಆಪ್ರಕಾರವಾದುವಾಗಿಯೇ, ಅಸ್ತಿ-ಇವೆ (ಅತಃ - ಆದುದರಿಂದಲೇ, ಇಯಂ-ಈ, ಅಸಿತೇಕ್ಷಣಾ - ಕನ್ನೈದಿಲೆಯಂತೆ ಕಣ್ಣುಳ್ಳ ಈಕೆಯು, ತಸ್ಯ-ಆ ಶ್ರೀರಾಮಚಂದ್ರನಿಗೆ(ಯೋಗ್ಯಾ-ತಕ್ಕವಳು) ಅಸ್ಯಾಃ - ಈ ಸೀತಾದೇವಿಗೆ, ಅಯಂಚ - ಈ ಶ್ರೀರಾಮಚಂದ್ರನೂ.ಯೋಗ್ಯಃ-ತಕ್ಕವನು) ||೫೧| ಅಸ್ಯಾಃದೇವ್ಯಾಃ - ಈ ಸೀತಾದೇವಿಯ, ಮನಃ- ಮನಸ್ಸು, ತಸ್ಮಿನ್- ಆ ಶ್ರೀರಾಮಚಂದ್ರನಲ್ಲಿ, ಪ್ರತಿಷ್ಠಿತಂ - ನೆಲೆಗೊಂಡಿದೆ, ತೇನ- ಆ ಕಾರಣದಿಂದಲೇ, ಇಯಂ-ಈಕೆ, ಮುಹೂರ್ತಮಪಿ-ಸ್ವಲ್ಪಕಾಲವಾದರೂ, ಜೀವತಿ-ಜೀವಿಸುತಲಿದಾಳೆ,

ಇದ್ದಳು, ಆಹವನೀಯ,ಗಾರ್ಹಪತ್ಯ, ದಕ್ಷಿಣಾಗ್ನಿಗಳಲ್ಲಿ ಹವನವನ್ನು ಮಾಡುವಾಗ ಯಜ್ಞಸಂಬಂಧದಿಂದ ಪತ್ನಿ ಎನಿಸಿಕೊಂಡಿದ್ದಳು, ನಾನು ಎಲ್ಲಿಯಾದರೂ ಯುದ್ಧಕ್ಕೆ ಹೊರಟರೆ ಪ್ರಬಲವಾಗಿ ಪ್ರೋತ್ಸಾಹಗೊಳಿಸಿ ಶೌರ್ಯವೀರ್ಯಾದಿಗಳು ಇಮ್ಮಡಿಯಾಗುವಂತೆ ಉತ್ತೇಜನ ಕೊಡುತ ಮಹಾಕ್ಷತ್ರಿಯಾಣಿ ಎನಿಸಿದ್ದಳು.ದೇವತೆಗಳು, ಪಿತೃಗಳು, ಬ್ರಾಹ್ಮಣರು, ಈ ಮೊದಲಾದವರನ್ನು ಆರಾಧಿಸುವಾಗ ಪ್ರಿಯಶಿಷ್ಯನಿಗಿಂತಲೂ ಹೆಚ್ಚಾಗಿ ಇರುತ್ತಿದ್ದಳು, ಹೀಗೆ ಧರ್ಮ,ಅರ್ಥ, ಕಾಮ,ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಸಂಪಾದಿಸುವಾಗಲೂ ಭಾಗಿನಿಯಾಗಿ,ಸುಖ ದುಃಖಗಳಲ್ಲಿ ಪಾಲುಗಾರಳಾಗಿದ್ದ ಪತ್ನಿಯು ನಷ್ಟಳಾದಳಲ್ಲಾ? ಸಂರಕ್ಷಿಸದೆ ಹೋದೆನೇ? ಎಂದು ಶೋಕದಿಂದಲೂ, "ಸರ್ವಾಂಗ ಸುಂದರಿಯೇ, ಪ್ರಾಣಪ್ರಿಯಳೇ,ಎಲ್ಲಿಯೋ ಹೋದಳಲ್ಲಾ? ಕಾಯಲಾರದೆ ಹೋದೆನೇ" ಎಂದು ವ್ಯಾಮೋಹದಿಂದಲೂ ವ್ಯಥೆಪಡುತಲಿದಾನೆ||೫೦||ಈ ಮಹಾದೇವಿಯ ಅಂಗೋಪಾಂಗಗಳ ಸೌಂದರ್ಯವು ಯಾವಬಗೆಯಾದುದೋ ಆಮಹಾನುಭಾವನ ಅಂಗಪ್ರತ್ಯಂಗಗಳ ಚೆಲುವಿಕೆಯೂ ಅದಕ್ಕೆ ಅನುಗುಣವಾಗಿಯೇ ಇದೆ, ಆ ಮಹಾತ್ಮನ ಚಲುವಿಕೆಯು ಎಂಥದೋ ಅದಕ್ಕೆ ಅನುಗುಣವಾಗಿಯೇ ಈಮಹಾತ್ಮಳ ಅಂದವೂ ಶೋಭಿಸುತಲಿದೆ, ಆದುದರಿಂದಲೇ ಅನುರೂಪಘಟನೆಯಾಗಿರುವುದು ||೫೧|| ಈಮಹಾನುಭಾವಳ ಮನಸ್ಸು ಆತನಲ್ಲಿಯೂ ಆ ಮಹಾತ್ಮನ ಮನವು ಈಕೆಯಲ್ಲಿಯೂ ಚಲಿಸದೆ ನೆಲೆಗೊಂಡಿರುವುದು, ಆದುದರಿಂದಲೇ ಧರ್ಮಾತ್ಮನಾದ ಆತನು ಬಂದು

ತೇನೇಯಂ ಸ ಚ ಧರ್ಮಾತ್ಮಾ ಮುಹೂರ್ತಮಪಿ ಜೀವತಿ ॥ ೫೨ ॥
ದುಷ್ಕರಂ ಕೃತವಾನ್ರಾಮೋ ಹೀನೋ ಯದನಯಾ ಪ್ರಭುಃ ।
ಧಾರಯತ್ಯಾತ್ಮನೋ ದೇಹಂ ನ ಶೋಕೇನಾವಸೀದತಿ ॥೫೩॥

ತಸ್ಯ-ಆ ಶ್ರೀರಾಮನ, ಮನಶ್ಚ - ಮನಸ್ಸೂ, ಅಸ್ಯಾಂ - ಈಕೆಯಲ್ಲಿ, ಪ್ರತಿಷ್ಠಿತಂ - ನೆಲೆಗೊಂಡಿದೆ, ತೇನ - ಆ ಕಾರಣದಿಂದಲೇ, ಧರ್ಮಾತ್ಮಾ - ಧರ್ಮಬುದ್ಧಿಯುಳ್ಳ, ಸಚ-ಆ ಶ್ರೀರಾಮನೂ, ಮುಹೂರ್ತಮಪಿ-ಅಲ್ಪಕಾಲವಾದರೂ, ಜೀವತಿ-ಜೀವಿಸುತಲಿದ್ದಾನೆ॥ (ತಥಾಪಿ-ಹಾಗಾದರೂ,) *ಪ್ರಭುಃ-ಸ್ವಾಮಿಯಾದ, ರಾಮಃ-ಶ್ರೀರಾಮನು, ಅನಯಾ-ಸೀತೆಯಿಂದ, ಹೀನಃ-ಶೂನ್ಯನಾಗಿ, (ಸೀತೆಯನ್ನು ಬಿಟ್ಟವನಾಗಿ) ಆತ್ಮನಃ-ತನ್ನ, ದೇಹಂ-ಶರೀರವನ್ನು, ಧಾರಯತಿ - ಧರಿಸಿಕೊಂಡಿರುವನು, ಶೋಕೇನ-ದುಃಖದಿಂದ, ನಾವಸೀದತಿ - ನಾಶವಾಗದೆ ಇದ್ದಾನೆ, ಇತಿಯತ್ - ಹೀಗೆಂಬುದಾವುದುಂಟೋ, ದುಷ್ಕರಂ - ಮಾಡಲಶಕ್ಯವಾಗಿರುವ, ತತ್-ಅಂತಹ ಕೆಲಸವನ್ನು, ಕೃತವಾನ್ - ಮಾಡಿದವನಾಗಿದ್ದಾನೆ ॥೫೩॥ ಮಹಾಬಾಹುಃ- ಅಪರಿಮಿತಬಾಹುಬಲವುಳ್ಳ,

ಮುಹೂರ್ತಕಾಲವಾದರೂ ಅಗಲಿ ಜೀವಿಸಲಿಕ್ಕೆ ಶಕ್ತನಾಗದೆ ನರಳುತಲಿದ್ದಾನೆ॥೫೨॥ ಇಂತ ಪರಿಮಿತ ಸದ್ಗುಣ ಭರಿತೆಯಾದ ಸೀತೆಯನ್ನು ಅಗಲಿ ಮಹಾಸ್ವಾಮಿಯಾದ ಆತನು ಜೀವಿಸಿ ಇರುವ ಕಾರ್ಯವು ಬಹು ಅಸಾಧ್ಯವಾದುದು, ಶೋಕದಿಂದ ಕೃಶಿಸಿಹೋಗಿ ಇಲ್ಲವೆಂಬುದಿಲ್ಲ, ಆದರೂ ದೇಹವನ್ನು ಧರಿಸಿ ಇರುವುದು ಬಹುಕಷ್ಟ. ಅಡಿಗಡಿಗೂ ಈ ಮಾತನ್ನು ಹೇಳುತ್ತೇನೆ- ಖಂಡಿತವಾಗಿಯೂ ಇಂತಹ ಮಂಗಳಾಂಗಿಯಾದ ಈ ಸೀತಾದೇವಿಯನ್ನು ತೊರೆದು

* ಪ್ರಭುಃ - ಸರ್ವಲೋಕ ಸಂರಕ್ಷಕತ್ವಶಕ್ತಿಯನ್ನು ಪಡೆದಿರುವ, ರಾಮಃ - ಶ್ರೀರಾಮನು, ಅನಯಾ-ಇಂತಹ ಸಕಲ ಸಲ್ಲಕ್ಷಣಗಳಿಂದ ಸಂಪನ್ನಳಾದ ಜಾನಕಿಯಿಂದ, ಹೀನಃ ಇತಿಯತ್ - ಅಗಲಿದನು ಎಂಬುದಾವುದೋ, ತತ್-ಆ, ದುಷ್ಕರಂ - ಯಾರಿಂದಲೂ ಮಾಡಲಿಕ್ಕಾಗದಿರುವ ಕೆಲಸವನ್ನು, ಕೃತವಾನ್-ಮಾಡಿಯೇ ಬಿಟ್ಟನು (ಕಿಂಚ-ಇಷ್ಟುಮಾತ್ರವೇ ಅಲ್ಲ) ಆತ್ಮನಃ-ಇಂತಹ ಸಮಯದಲ್ಲಿಯೂ ತನ್ನ, ದೇಹಂ-ಶರೀರವನ್ನು, ಧಾರಯತಿ- ಧರಿಸಿರುವನಲ್ಲ ? ಶೋಕೇನ - ಅಪಾರವಾದ ವ್ಯಸನದಿಂದ, ನಾವಸೀದತಿ-ಪ್ರಾಣವನ್ನು ತೊರೆದುಕೊಳ್ಳಲಿಲ್ಲವಲ್ಲ ॥೫೩॥

ಎಂದರೆ—ಅಹಹ ! ಏನಿದನ್ಯಾಯ !! ಭೀಷ್ಮಾದಿಗಳಂತೆ ವೀರಬ್ರಹ್ಮಚರ್ಯದಲ್ಲಿ ಇರತಕ್ಕವರ ಮಾರ್ಗವು ಬೇರೆ. ಸಕಲ ಲೋಕಸಂರಕ್ಷಕತ್ವ ಸಾಮರ್ಥ್ಯವನ್ನು ಪಡೆದು, ಸಂಸಾರಧರ್ಮವನ್ನು ಆಶ್ರಯಿಸಿರುವ ಈ ಶ್ರೀರಾಮನು ಸಕಲ ರಾಜ್ಯಭೋಗಗಳನ್ನು ತೊರೆದು, ಪಿತೃವಾಕ್ಯಪರಿಪಾಲನೆಗಾಗಿ ಕಾಡಿಗೆ ಹೊರಡುವ ಸಮಯದಲ್ಲಿ-ಹುಟ್ಟಿದಂದಿನಿಂದಲೂ ಬಿಸಿಲಿನ ಮುಖವನ್ನೂ ಕಾಣದೆ, ರಾಜಭೋಗಗಳನ್ನನುಭವಿಸುತಲಿದ್ದು, ಪತಿಯು ಅರಣ್ಯವಾಸಕ್ಕೆ ಹೊರಟ ಕ್ಷಣದಲ್ಲಿ, ವಿಷದಂತೆ ಎಲ್ಲವನ್ನೂ ತ್ಯಜಿಸಿ, ಪ್ರಭೆಯು ಭಾಸ್ಕರನನ್ನು ಅಗಲಿರುವುದು ಹೇಗೆ ಧರ್ಮವಲ್ಲವೋ, ಹಾಗೆ ತಾನೂ ಪತಿಯನ್ನು ಅಗಲಿರುವುದು ಧರ್ಮವಲ್ಲ ಎಂದು ನಿರ್ಧರಿಸಿ, ಪತಿಯೊಡನಿರುವುದೇ ಸ್ವರ್ಗಸುಖ, ಅಗಲಿರುವುದೇ ಯಮಯಾತನೆ ಎಂದು ನಿಶ್ಚಯಿಸಿ, ಗಾಳಿ ಬಿಸಿಲುಗಳನ್ನು ಸಹಿಸಿ, ಕಲ್ಲುಮುಳ್ಳುಗಳನ್ನು ತುಳಿಯಲು ಒಪ್ಪಿ, ಘೋರ ಸಿಂಹವ್ಯಾಘ್ರಾದಿಗಳ ಕ್ರೌರ್ಯವನ್ನು ತಾಳಲು ಸಮ್ಮತಿಸಿ, ಮನದೊಳಗೆ ದುಃಖಲೇಶವಿಲ್ಲದೆ, ಸಂತೋಷದಿಂದ ಸಂಗಡಲೇ ಸಡಗರದಿಂದ ಹೊರಟು ಬಂದಳಲ್ಲಾ ? ಆ ಪತಿವ್ರತೆಯ ಪ್ರೀತ್ಯದ ಮಹಿಮೆಯು ಶ್ರೀರಾಮನ ಮನಸ್ಸಿಗೆ ಏಕೆ ಬರಲಿಲ್ಲ ? ಅಂತಹ ಸೀತೆಯನ್ನು ಅಗಲಿ ಎಂತಹ ಕಠಿನವಾದ ಕೆಲಸವನ್ನು ಮಾಡಿದನು ?

ದುಷ್ಕರಂ ಕುರುತೇ ರಾಮೋ ಯ ಇಮಾಂ ಮತ್ತಕಾಶಿನೀಂ ।
ಸೀತಾಂ ವಿನಾ ಮಹಾಬಾಹುಃ ಮುಹೂರ್ತಮಪಿ ಜೀವತಿ ॥೫೪॥
ಏವಂ ಸೀತಾಂ ತದಾ ದೃಷ್ಟ್ವಾ ಹೃಷ್ಟಃ ಪವನಸಂಭವಃ ।
ಜಗಾಮ ಮನಸಾ ರಾಮಂ ಪ್ರಶಶಂಸ ಚ ತಂ ಪ್ರಭುಂ ॥೫೫॥

— ಇತಿ ಶ್ರೀಮತ್ಸುಂದರಕಾಂಡೇ-ಪಂಚದಶಸ್ಸರ್ಗಃ —

ಯಃ - ಯಾವ ಶ್ರೀರಾಮನು, ಮತ್ತಕಾಶಿನೀಂ - ಉತ್ತಮಾಂಗನೆಯಾದ, ಇಮಾಂ-ಈ, ಸೀತಾಂ-ಸೀತಾದೇವಿಯನ್ನು, ವಿನಾ-ಬಿಟ್ಟು, ಮುಹೂರ್ತಮಪಿ - ಅಲ್ಪಕಾಲವಾದರೂ, ಜೀವತಿ-ಬದುಕಿ ಇರುವನಲ್ಲಾ, (ಸಃ-ಆ ಶ್ರೀರಾಮನು) ದುಷ್ಕರಂ - ಅಸಾಧ್ಯವಾದ ಕೆಲಸವನ್ನು, ಕುರುತೇ - ಮಾಡಿಕೊಳ್ಳುತಲಿದಾನೆ ॥೫೪॥ ಪವನಸಂಭವಃ - ವಾಯುನಂದನನು, ತದಾ - ಆಗ, ಸೀತಾಂ - ಸೀತಾದೇವಿಯನ್ನು, ಏವಂ-ಈ ಹಿಂದೆ ಹೇಳಿದ ರೀತಿ, ದೃಷ್ಟ್ವಾ - ನೋಡಿ, (ಅಪಾರವಾದ ಕಷ್ಟದ ಸಮಯದಲ್ಲಿಯೂ ಕ್ರೂರತರವಾದ ಪಾತಿವ್ರತ್ಯ [illegible] ಕಂಡು) ಹೃಷ್ಟಸ್ಸನ್ - ಸಂತೋಷಿಸಿದವನಾಗುತ್ತಾ, ಮನಸಾ-ಮನಸ್ಸಿನಿಂದ, ರಾಮಂ - ಶ್ರೀರಾಮನನ್ನು, ಜಗಾಮ - ನೆನೆದನು, ತಂ - ಅಪಾರಮಹಿಮನಾದ, (ಮನೋಗೋಚರನಾದ) ಪ್ರಭುಂ - [illegible], ರಾಮಂ - ಶ್ರೀರಾಮನನ್ನು, ಪ್ರಶಶಂಸಚ-ಮನಸಾರ ಕೊಂಡಾಡಿದನು ॥೫೫॥

— ಇಂತು ಹದಿನೈದನೆಯ ಸರ್ಗ —

ಕ್ಷಣಕಾಲಮಾತ್ರ [illegible] ಅಶಕ್ಯವಾದ ಕೆಲಸವೇ ಆಗಿದೆ. ಆದುದರಿಂದಲೇ ಶ್ರೀರಾಮನು [illegible] ಮಾಡುತಲಿದಾನೆ ॥೫೪॥ ಎಂದೀಪ್ರಕಾರ ಬಹುವಿಧವಾಗಿ [illegible] ಸಂದರ್ಶನದಿಂದ ಸಂತುಷ್ಟಾಂತರಂಗನಾಗಿ, ಮನಸ್ಸಿನಿಂದ [illegible] ಧ್ಯಾನಿಸುತ್ತಾ, ಅನೇಯಮಹಿಮನಾದ ಆ ಮಹಾಪ್ರಭುವನ್ನು [illegible] ಕೊಂಡಾಡತಲಿದ್ದನು ॥೫೫॥

— [illegible] ಮುಗಿದುದು —

ಆಗಲಿ, [illegible] ದೇಹವನ್ನು ಧರಿಸಿ ಇರಬಹುದೆ ? ಆ [illegible]? ಅಥವಾ ಒಂದು ವೇಳೆ ಸಂಸಾರದಲ್ಲಿ ಅತ್ಯಾಸಕ್ತರಾದವರ [illegible] ಎಂಬ ಲೋಕಮರ್ಯಾದೆಯನ್ನು ತೋರಲಿಕ್ಕೆ ಶ್ರೀರಾಮನು ಹೀಗೆ [illegible] ! ॥೫೩॥ ರಾಮಃ - ಶ್ರೀರಾಮರೂಪದಿಂದ ಮನುಜ ಲೀಲೆಯನ್ನು ತೋರಲಿಕ್ಕೆ ಅವತರಿಸಿರುವ ಭಗವಂತನು, ಮಹಾಬಾಹುಃ - ಅಪರಿಮಿತ ಪರಾಕ್ರಮಶಾಲಿಯಲ್ಲವೆ, ದುಷ್ಕರಂ - ಅಸಾಧ್ಯವಾದ ಕೆಲಸವನ್ನು, ಕುರುತೇ-ಮಾಡುತಲಿದಾನೆಯೋ? (ಇಲ್ಲ). ಇಮಾಂ-ಈ, ಮತ್ತಕಾಶಿನೀಂ - ಮಹಾಸೌಭಾಗ್ಯವತಿಯಾದ, ಸೀತಾಂವಿನಾ - ಸೀತೆಯನ್ನು ಬಿಟ್ಟು, ಮುಹೂರ್ತಮಪಿ - ಸ್ವಲ್ಪಕಾಲವಾದರೂ, ಜೀವತಿ - ಉಳಿದಿರುವನೆ ? (ಎಂದಿಗೂ ಇಲ್ಲ, ಆಕೆಯನ್ನು ಅಗಲಿಯೂ ಇಲ್ಲ) ॥೫೪॥

ಎಂದರೆ-ಲೀಲಾಮಾನುಷನಾದ ಶ್ರೀರಾಮನು ಅಂತಹ ಅಸಾಧ್ಯವಾದ ಕೆಲಸವನ್ನೇನೂ ಮಾಡಿ ಇಲ್ಲ. ಆತನು ಮಹಾಪ್ರಭು. ಸರ್ವಜ್ಞ, ಸರ್ವಶಕ್ತ, ಮುಂದಿನ ಆಗು ಹೋಗುಗಳನ್ನು ಬಲ್ಲವನು, ಧರ್ಮೋದ್ಧಾರವನ್ನು ಮಾಡಲೋಸುಗ ಸಹಿಸುತಲಿರುವನು, ಅನನ್ಯಳಾಗಿರುವ ಈಕೆಯನ್ನು ಹೀಗೆ ಅಗಲುವುದುಂಟೆ ? ಸರ್ವಥಾ ಇಲ್ಲ. ಮುಂದಿನ ಕಾರ್ಯಭಾರ ನಿರ್ವಾಹಕ್ಕಾಗಿ ಹೀಗೆ ಆಚರಿಸಿ ಇರಬಹುದು, ಆ ಮಹಾನುಭಾವನ ಅಂತರಂಗವನ್ನು ಅರಿಯಲು ನನ್ನಂಥ ಪಾಮರನಿಗೆ ಶಕ್ತಿಯುಂಟೆ ? ಎಂತಲೂ ಪವನಸಂಭವನು ಯೋಚಿಸಿದನು ಎಂದು ಸುಂ। ಮ। ಅ.

ಶ್ರೀಃ.

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ.

## — ಸುನ್ದರಕಾಣ್ಡೇ ಷೋಡಶಸ್ಸರ್ಗಃ —

ಪ್ರಶಸ್ಯ ತು ಪ್ರಶಸ್ತವ್ಯಾಂ ಸೀತಾಂ ತಾಂ ಹರಿಪುಂಗವಃ ।
ಗುಣಾಭಿ ರಾಮಂ ರಾಮಂ ಚ ಪುನ ಶ್ಚಿಂತಾಪರೋ ಭವತ್ ॥೧॥
ಸ ಮುಹೂರ್ತ ಮಿವ ಧ್ಯಾತ್ವಾ ಬಾಷ್ಪ ಪರ್ಯಾಕುಲೇಕ್ಷಣಃ ।
ಸೀತಾ ಮಾಶ್ರಿತ್ಯ ತೇಜಸ್ವೀ ಹನುಮಾ ನ್ವಿಲಲಾಪ ಹ ॥೨॥
ಮಾನ್ಯಾ ಗುರುವಿನೀತಸ್ಯ ಲಕ್ಷ್ಮಣಸ್ಯ ಗುರುಪ್ರಿಯಾ ।

---

### —ಹದಿನಾರನೆಯ ಸರ್ಗಂ—

ಕಂದ ॥ ನಗದೊಳ್ ಕುಳಿತಿಹ ಮಾರುತಿ ನಗದಡಿಯೊಳ್ ಕಂಡು ಪೂಜ್ಯ ರಾಘವಸತಿಯಂ ।
ಪೊಗಳುತೆ ಸೀತಾರಾಮರ ಸುಗುಣಂಗಳ ಮನದೊಳಿರ್ದ ಸಂತಸದಿಂದಂ ॥

ಹರಿಪುಂಗವಃ - ವಾನರೋತ್ತಮನಾದ ಹನುಮನು, ಪ್ರಶಸ್ತವ್ಯಾಂ - ಸ್ತೋತ್ರಾರ್ಹಳಾದ, -ತಾಂ ಆ, ಸೀತಾಂ - ಜಾನಕಿಯನ್ನು, (ಪ್ರಶಸ್ತವ್ಯಾ - ಸ್ತೋತ್ರಾರ್ಹನಾದ) ಗುಣಾಭಿರಾಮಂ - ಕಲ್ಯಾಣಗುಣಗಳಿಂದ ಮನೋಹರನಾದ, ರಾಮಂಚ - ಶ್ರೀರಾಮನನ್ನು, ಪ್ರಶಸ್ಯತು - ಕೊಂಡಾಡಿದಮೇಲೆ, ಪುನಃ-ಮರಳಿ, ಚಿಂತಾಪರಃ - ಆಲೋಚನೆಯಲ್ಲಿ ಆಸಕ್ತನು, ಅಭವತ್ - ಆದನು ॥೧॥ ತೇಜಸ್ವೀ- ಮಹಾತೇಜಸ್ಸುಳ್ಳ, ಸಃ - ಆ, ಹನುಮಾನ್ - ಆಂಜನೇಯನು, ಮುಹೂರ್ತಮಿವ -ಸ್ವಲ್ಪಕಾಲಮಾತ್ರವೇ, ಧ್ಯಾತ್ವಾ - ಚಿಂತಾಸಕ್ತನಾಗಿದ್ದು, ಬಾಷ್ಪಪರ್ಯಾಕುಲೇಕ್ಷಣಃ - ನೀರಿನಿಂದತುಂಬಿದಕಣ್ಣುಳ್ಳವನಾಗಿ, ಸೀತಾಮಾಶ್ರಿತ್ಯ - ಸೀತೆಯನ್ನು ಕುರಿತು, ವಿಲಲಾಪ - ಅಳತೊಡಗಿದನು, ಹ-ಬಹಳಕಷ್ಟವು ॥೨॥ ಗುರು - ವಸಿಷ್ಠಾದಿಗುರುಗಳಿಂದ, ವಿನೀತಸ್ಯ - ಚೆನ್ನಾಗಿ ಶಿಕ್ಷಿಸಲ್ಪಟ್ಟಿರುವ, ಲಕ್ಷ್ಮಣಸ್ಯ-ಲಕ್ಷ್ಮಣಸ್ವಾಮಿಗೆ, ಮಾನ್ಯಾ - ಪೂಜ್ಯಳೂ, ಗುರು - ಲೋಕಗುರುವಾದ ಶ್ರೀರಾಮನಿಗೆ, ಪ್ರಿಯಾ- ಪ್ರಾಣಪ್ರಿಯಳೂ ಆಗಿರುವ, ಸೀತಾಪಿ - ಸೀತಾದೇವಿಯೂ, ದುಃಖಾರ್ತಾಯದಿ - ದುಃಖದಪೀಡೆಗೆ ಒಳಗಾಗುವವಳೇ ಆದರೆ, ಕಾಲಃ-

---

### — ಹದಿನಾರನೆಯ ಸರ್ಗಂ —

ಮಾರುತಿಯು ಮನದೊಳಗೆ ಶ್ರೀರಾಮನನ್ನು ಕೊಂಡಾಡತೊಡಗಿದ್ದನಷ್ಟೆ; ಸಚ್ಚರಿತ್ರಯಿಂದ ಸ್ತೋತ್ರಾರ್ಹಳಾದ ಸೀತೆಯನ್ನೂ,ಸಕಲಕಲ್ಯಾಣಗುಣಾಭಿರಾಮನಾದ ಶ್ರೀರಾಮನನ್ನೂ ಮನಃ ಪೂರ್ವಕವಾಗಿ ಪ್ರಶಂಸಿಸಿ ಹರಿವರನು ಮರಳಿ ಚಿಂತಿಸತೊಡಗಿದನು. ಸ್ವಲ್ಪ ಹೊತ್ತು ಮರಳಿ ಧ್ಯಾನಿಸುತ ಸುಮ್ಮನಿದ್ದು ಅಂತರಂಗದಲ್ಲಿ ಉಂಟಾದ ವ್ಯಸನದಿಂದ ಕಣ್ಣೀರನ್ನು ತಂದುಕೊಂಡು, ಆಸೀತಾದೇವಿಯ ಸ್ಥಿತಿಯನ್ನು ನೆನದು ಹೀಗೆ ಹಂಬಲಿಸುತ ಅಳತೊಡಗಿದನು. ॥೨॥ ಈಕೆ ವಸಿಷ್ಠಾದಿ ಮುನಿಗಳಿಂದ ಚೆನ್ನಾಗಿ ಶಿಕ್ಷೆಯನ್ನು ಪಡೆದ ಲಕ್ಷ್ಮಣನಿಗೆ ಬಹು ಮಾನನೀಯಳೆನಿಸಿದ ಅತ್ತಿಗೆ. ಸರ್ವಲೋಕ ಶರಣ್ಯನಾದ ಶ್ರೀರಾಮಚಂದ್ರನಿಗೆ ಪ್ರಾಣಗಳಗಿಂತಲೂ ಪ್ರಿಯತರಳೆನಿಸಿದವಳು, ಇಂತಹ ಸೀತೆಯೂ ಮಹತ್ತರವಾದ

ಯದಿ ಸೀತಾಪಿ ದುಃಖಾರ್ತಾ ಕಾಲೋಹಿ ದುರತಿಕ್ರಮಃ ॥೩॥
ರಾಮಸ್ಯ ವ್ಯವಸಾಯಜ್ಞಾ ಲಕ್ಷ್ಮಣಸ್ಯ ಚ ಧೀಮತಃ ।
ನಾತ್ಯರ್ಥಂ ಕ್ಷುಭ್ಯತೇ ದೇವೀ ಗಂಗೇವ ಜಲದಾಗಮೇ ॥೪॥
ತುಲ್ಯಶೀಲ ವಯೋವೃತ್ತಾಂ ತುಲ್ಯಾಭಿ ಜನ ಲಕ್ಷಣಾಂ ।
ರಾಘವೋಽರ್ಹತಿ ವೈದೇಹೀಂ ತಂ ಚೇಯ ಮಸಿತೇಕ್ಷಣಾ ॥೫॥
ತಾಂ ದೃಷ್ಟ್ವಾ ನವ ಹೇಮಾಭಾಂ ಲೋಕಕಾಂತಾ ಮಿವ ಶ್ರಿಯಂ ।

---

ಸುಖದುಃಖಗಳನ್ನು ನೀಡುವಕಾಲವು, ದುರತಿಕ್ರಮಃ - ದಾಟಲಿಕ್ಕೆ ಅಸಾಧ್ಯವಾದದ್ದೇಸರಿ (ಅತಿಕ್ರಮಿಸಲಿಕ್ಕೆ ಅಸಾಧ್ಯವಾದದ್ದೇಸರಿ) ಹಿ - ನಿಶ್ಚಯ, ॥೩॥ ರಾಮಸ್ಯ - ಶ್ರೀರಾಮಚಂದ್ರನ, ಚ - ಮತ್ತು, ಧೀಮತಃ - ಪ್ರಶಸ್ತವಾದ ಬುದ್ಧಿಯುಳ್ಳ, ಲಕ್ಷ್ಮಣಸ್ಯ - ಸೌಮಿತ್ರಿಯ, ವ್ಯವಸಾಯಜ್ಞಾ-ಪ್ರಯತ್ನಪ್ರಕಾರವನ್ನು ಬಲ್ಲ, ದೇವೀ-ಸೀತಾದೇವಿಯು, ಜಲದಾಗಮೇ-ಮಳೆಗಾಲದಲ್ಲಿ, ಗಂಗೇವ - ಭಾಗೀರಥಿಯು ಹೇಗೋ ಹಾಗೆ, ಅತ್ಯರ್ಥಂ- ವಿಶೇಷವಾಗಿ, ನಕ್ಷುಭ್ಯತೇ-ಅಂತರಂಗದಲ್ಲಿ ವ್ಯಥೆಪಡದೆ ಇದಾಳೆ ॥೪॥ ರಾಘವಃ - ಶ್ರೀರಾಮನು, ತುಲ್ಯ -ತನಗೆಸಮಾನವಾದ, ಶೀಲ- ಸ್ವಭಾವವು, ವಯಃ- ವಯಸ್ಸು, ವೃತ್ತಾಂ- ನಡತೆಯೂಳುಳ್ಳ, ತುಲ್ಯ - ತನಗನುಗುಣವಾದ, ಅಭಿಜನ - ಸದ್ವಂಶವೂ, ಲಕ್ಷಣಾಂ - ಸಾಮುದ್ರಿಕ ಶಾಸ್ತ್ರೋಕ್ತವಾದ ಸಲ್ಲಕ್ಷಣವೂ ಉಳ್ಳ. ವೈದೇಹೀಂ - ಈ ಸೀತಾದೇವಿಯನ್ನು, ಅರ್ಹತಿ-ಪಡೆಯಲು ತಕ್ಕವನಾಗಿದಾನೆ, ಇಯಂ ಅಸಿತೇಕ್ಷಣಾಚ-ಕಪ್ಪುಕಣ್ಣುಳ್ಳ ಈಜಾನಕಿಯು, ತಂಚ-(ತನಗೆಸಮಾನವೆನಿಸಿದ, ಶೀಲ-ಪ್ರಾಯ, ಸಚ್ಚರಿತ್ರ, ಸದ್ವಂಶ, ಸಲ್ಲಕ್ಷಣ, ಇವುಗಳನ್ನೊಳಗೊಂಡಿರುವ) ಆ ಶ್ರೀರಾಮನನ್ನು ಪಡೆಯಲು,

---

ದುಃಖಕ್ಕೆ ಈಡಾಗಿರುವಳಲ್ಲಾ, ಅಯ್ಯೋ! ಸಕಲ ಪ್ರಾಣಿಗಳಿಗೂ, ಉಚಿತಾನುಚಿತಗಳನ್ನರಿಯದೆ ದುಃಖವನ್ನು ನೀಡುವ ಕಾಲವನ್ನು ಮೀರಲಿಕ್ಕೆ ಯಾರಿಂದಲೂ ಸಾಧ್ಯವಲ್ಲ ॥೩॥ ಆದರೆ- ಸರ್ವಜ್ಞಳಾದ ಈ ಸೀತೆಯು ತನ್ನನ್ನು ಈದುಃಖಸಾಗರದಿಂದ ದಾಟಿಸಲು ಶ್ರೀರಾಮನು ತಕ್ಕ ಪ್ರಯತ್ನವನ್ನು ಮಾಡದಿರನು ಎಂದು ಆತನ ಪ್ರಯತ್ನ ಪ್ರಕಾರವನ್ನು ಅರಿತಿದಾಳೆ. ಮತ್ತು-ಹಿಂದೆ ಶ್ರೀರಾಮನು ಚಿನ್ನದ ಜಿಂಕೆಯನ್ನು ಬೆನ್ನುಹತ್ತಿಹೋದಾಗ ಶ್ರೀರಾಮ ಬಾಣದ ಪೆಟ್ಟಿನಿಂದ ಆರಕ್ಕಸನಿಗೆ ಸಾಯುವ ಸಮಯವು ಒದಗಿ ಹಾ ! ಸೀತೆ ! ಹಾ ! ಲಕ್ಷ್ಮಣಾ ! ಎಂದು ಕೂಗಿದ ವಿಕಾರಧ್ವನಿಯನ್ನು ಕೇಳಿ ಹೆದರಿದ ತಾನು ರಾಮನ ಪ್ರಯೋಗ ಕ್ಷೇಮವನ್ನು ತಿಳಿದು ಬರುವಂತೆ ಬಲಾತ್ಕರಿಸಿದರೂ, ತನ್ನನ್ನು ಸಂರಕ್ಷಿಸುವುದೇ ಯೆಬಲವಾದ ಕಾರ್ಯವೆಂದು ಹಟವನ್ನು ಹಿಡಿದ ಮಹಾಬುದ್ಧಿಶಾಲಿಯಾದ ಲಕ್ಷ್ಮಣನ ಪ್ರಯತ್ನವನ್ನೂ ಬಲ್ಲವಳಾಗಿದಾಳೆ, ಆದುದರಿಂದಲೇ ಮಳೆಗಾಲದೊಳಗೆ ಅಂತರಂಗದಲ್ಲಿ (ಮಧ್ಯದೊಳಗೆ) ಕ್ಷೋಭೆಯನ್ನು ಹೊಂದದ (ಕದಡದ) ಭಾಗೀರಥಿಯು ಹೇಗೋಹಾಗೆ ಮನಸ್ಸಿನಲ್ಲಿ ವಿಶೇಷವಾಗಿ ಕ್ಷೋಭೆಯನ್ನು ಹೊಂದದೆ ಇದಾಳೆ. ॥ ೪ ॥ ಶ್ರೀರಾಮಚಂದ್ರನಲ್ಲಿ ಎಂತಹ ಶೀಲವೂ, ಪ್ರಾಯವೂ, ಸಚ್ಚರಿತ್ರೆಯೂ, ಸದ್ವಂಶ ಸಂಭವವೂ, ಸಾಮುದ್ರಿಕಶಾಸ್ತ್ರೋಕ್ತವಾದ ಸಲ್ಲಕ್ಷಣಗಳೂ ನೆಲೆಗೊಂಡಿವೆಯೋ, ಹಾಗೆಯೇ ಅವುಗಳೆಲ್ಲ ಈಕೆಯಲ್ಲಿಯೂ ನೆಲೆಗೊಂಡಿವೆ. ಆದುದರಿಂದಲೇ ರಾಘವನು ಈಕೆಗೆ ತಕ್ಕವನೆನಿಸಿರುವನು, ಕನ್ನೈದಿಲೆಯಂತೆ ಕಣ್ಣುಳ್ಳ ಈ ವೈದೇಹಿಯೂ, ಆ ಮಹಾನುಭಾವನಿಗೆ ತಕ್ಕ

ಜಗಾಮ ಮನಸಾ ರಾಮಂ ವಚನಂ ಚೇದಮಬ್ರವೀತ್ ॥೬॥
ಅಸ್ಯಾ ಹೇತೋರ್ವಿಶಾಲಾಕ್ಷ್ಯಾ ಹತೋ ವಾಲೀ ಮಹಾಬಲಃ ।
ರಾವಣಪ್ರತಿಮೋ ವೀರ್ಯೇ ಕಬಂಧಶ್ಚ ನಿಪಾತಿತಃ ॥೭॥
ವಿರಾಧಶ್ಚ ಹತಸ್ಸಂಖ್ಯೇ ರಾಕ್ಷಸೋ ಭೀಮವಿಕ್ರಮಃ ।
ವನೇ ರಾಮೇಣ ವಿಕ್ರಮ್ಯ ಮಹೇಂದ್ರೇಣೇವ ಶಂಬರಃ ॥೮॥
ಚತುರ್ದಶ ಸಹಸ್ರಾಣಿ ರಕ್ಷಸಾಂ ಭೀಮಕರ್ಮಣಾಂ ।
ನಿಹತಾನಿ ಜನಸ್ಥಾನೇ ಶರೈರಗ್ನಿಶಿಖೋಪಮೈಃ ॥೯॥

---

ಅರ್ಹತಿ - ತಕ್ಕವಳಾಗಿದಾಳೆ ॥ ೫ ॥ ಸಃ - ಆ ಮಾರುತಿಯು, ನವಹೇಮಾಭಾಂ - ಪುಟದಿಂದ ಶುದ್ಧವಾದ ಹೊಸಚಿನ್ನದಂತೆ ಬೆಳಗುವ ದೈಹಕಾಂತಿಯುಳ್ಳ, ಲೋಕಕಾಂತಾಂ - ಸರ್ವಜನಮಾನ್ಯಳೆನಿಸಿರುವ, ಶ್ರಿಯಮಿವ - ಲಕ್ಷ್ಮೀದೇವಿಯಂತಿರತಕ್ಕ, ತಾಂ - ಆ ಸೀತಾದೇವಿಯನ್ನು, ದೃಷ್ಟ್ವಾ - ನೋಡಿ, ಮನಸಾ - ಮನಸ್ಸಿನಿಂದ, ರಾಮಂ - ಶ್ರೀರಾಮನನ್ನು, ಜಗಾಮ - ಧ್ಯಾನಿಸಿದನು, ಇದಂ - ಈ ಮುಂದೆಹೇಳಹೋಗುವ, ವಚನಂಚ - ಮಾತನ್ನೂ, ಅಬ್ರವೀತ್ - ಎಂದುಕೊಂಡನು ॥೬॥ ವಿಶಾಲಾಕ್ಷ್ಯಾಃ - ಅಗಲವಾದ ಕಣ್ಣುಳ್ಳ, ಅಸ್ಯಾಃಹೇತೋಃ - ಈ ಸೀತಾದೇವಿಯನಿಮಿತ್ತದಿಂದಲೇ, ಮಹಾಬಲಃ - ಮಹಾಪರಾಕ್ರಮಶಾಲಿಯಾದ, ವಾಲೀ - ವಾಲಿಯು, (ರಾಮೇಣ - ರಾಮನಿಂದ) ಹತಃ - ನಿಪಾತಮಾಡಲ್ಪಟ್ಟನು, ವೀರ್ಯೇ - ಪರಾಕ್ರಮದಲ್ಲಿ, ರಾವಣಪ್ರತಿಮಃ - ರಾವಣನಿಗೆ ಎಣೆಯೆನ್ನಿಸಿಕೊಂಡಿದ್ದ, ಕಬಂಧಶ್ಚ - ಕಬಂಧನೆಂಬ ರಕ್ಕಸನೂ, ನಿಪಾತಿತಃ - ಕೊಲ್ಲಲ್ಪಟ್ಟನು ॥೭॥ ಭೀಮವಿಕ್ರಮಃ - ಭಯಂಕರವಾದ ಪರಾಕ್ರಮವುಳ್ಳ, ವಿರಾಧಃ - ವಿರಾಧನೆಂಬ, ರಾಕ್ಷಸಶ್ಚ - ದೈತ್ಯನೂ, ಸಂಖ್ಯೇ - ಕಾಳಗದಲ್ಲಿ, ರಾಮೇಣ - ದಾಶರಥಿಯಿಂದ, ವನೇ - ಕಾಡಿನಲ್ಲಿ, ಮಹೇಂದ್ರೇಣ - ದೇವೇಂದ್ರನಿಂದ, ವಿಕ್ರಮ್ಯ - ಪರಾಕ್ರಮಿಸಿ, ಶಂಬರಇವ - ಶಂಬರಾಸುರನು ಹೇಗೋ ಹಾಗೆ, ಹತಃ - ಹೊಡೆಯಲ್ಪಟ್ಟನು ॥೮॥ ಭೀಮಕರ್ಮಣಾಂ - ಭಯಂಕರವಾದ ನಡತೆಗಳುಳ್ಳ, ರಕ್ಷಸಾಂ - ರಾಕ್ಷಸರ, ಚತುರ್ದಶಸಹಸ್ರಾಣಿ - ಹದಿನಾಲ್ಕುಸಾವಿರಮಂದಿಯೂ, ಜನಸ್ಥಾನೇ - ಜನಸ್ಥಾನವೆಂಬ ರಕ್ಕಸರಗಣಿಯಲ್ಲಿ, ಅಗ್ನಿಶಿಖೋಪಮೈಃ - ಅಗ್ನಿಜ್ವಾಲೆಗೆಣೆ

---

ವಳೆನಿಸಿದಾಳೆ. ॥ ೫ ॥ ಇಂತುಯೋಚಿಸಿದ ಮಾರುತಿಯು ಪುಟಪಾಕದಿಂದ ಶುದ್ಧವಾದ ಸುವರ್ಣಚಿತ್ರಿಯಂತೆ ದೇಹಕಾಂತಿಯುಳ್ಳವಳಾಗಿ ಸರ್ವಲೋಕಮಾನ್ಯಳಾದ ಲಕ್ಷ್ಮೀದೇವಿಯಂತೆ ಬೆಳಗುತಲಿರುವ ಆ ಸೀತಾದೇವಿಯನ್ನು ನೋಡಿ ಮನದೊಳಗೆ ಶ್ರೀರಾಮನನ್ನು ನೆನದು ಮತ್ತೆ ಹೀಗೆಂದುಕೊಳ್ಳಲಿಕ್ಕೆ ಆರಂಭಿಸಿದನು ॥೬॥ ಅಹಹ, ಇಂತಪಾರಮಹಿಮಳಾಗಿರುವ ವಿಶಾಲನಯನೆಯಾದ ಈ ಸೀತಾದೇವಿಯ ನಿಮಿತ್ತದಿಂದಲೇ ಅಲ್ಲವೇ ಶ್ರೀರಾಮನು ಅಪರಿಮಿತ ಬಲಶಾಲಿ ಎನಿಸಿದ್ದ ವಾಲಿಯನ್ನು ಕೊಂದು ಬಿಟ್ಟನು, ಮತ್ತ ಪರಾಕ್ರಮದಲ್ಲಿ ರಾವಣನಿಗೆಣೆಯೆನಿಸಿಕೊಂಡಿದ್ದ ಕಬಂಧನೆಂಬ ರಕ್ಕಸನನ್ನು ನಿಪಾತಮಾಡಿದನು ॥ ೭ ॥ ಭಯಂಕರವಾದ ಪರಾಕ್ರಮವುಳ್ಳ ವಿರಾಧನೆಂಬ ರಾಕ್ಷಸನನ್ನು ದೇವೇಂದ್ರನು ತನ್ನ ಪರಾಕ್ರಮದಿಂದ ಶಂಬರಾಸುರನನ್ನು ಹೇಗೋ ಹಾಗೆ, ಕಾಳಗದಲ್ಲಿ ಕಡಿದನು ॥ ೮ ॥ ಇದಲ್ಲದೆ, ಜನಸ್ಥಾನದಲ್ಲಿ ಮನೆಮಾಡಿಕೊಂಡು ಭಯಂಕರವಾದ ಕರ್ಮದಿಂದ ಲೋಕಕಂಟಕರೆನಿಸಿಕೊಂಡಿದ್ದ ಹದಿನಾಲ್ಕು ಸಾವಿರಮಂದಿ ರಾಕ್ಷಸರನ್ನು

ಖರಶ್ಚ ನಿಹತ ಸ್ಸಂಖ್ಯೇ ತ್ರಿಶಿರಾಶ್ಚ ನಿಪಾತಿತಃ ।
ದೂಷಣಶ್ಚ ಮಹಾತೇಜಾ ರಾಮೇಣ ವಿದಿತಾತ್ಮನಾ ॥೧೦॥
ಐಶ್ವರ್ಯಂ ವಾನರಾಣಾಂ ಚ ದುರ್ಲಭಂ ವಾಲಿಪಾಲಿತಂ ।
ಅಸ್ಯಾ ನಿಮಿತ್ತೇ ಸುಗ್ರೀವಃ ಪ್ರಾಪ್ತವಾನ್ ಲೋಕಸತ್ಕೃತಂ ॥೧೧॥
ಸಾಗರಶ್ಚ ಮಯಾ ಕ್ರಾಂತ ಶ್ಶ್ರೀಮಾ ನ್ನದ ನದೀಪತಿಃ ।
ಅಸ್ಯಾ ಹೇತೋ ರ್ವಿಶಾಲಾಕ್ಷ್ಯಾ ಪುರೀ ಚೇಯಂ ನಿರೀಕ್ಷಿತಾ ॥೧೨॥
ಯದಿ ರಾಮ ಸ್ಸಮುದ್ರಾಂತಾಂ ಮೇದಿನೀಂ ಪರಿವರ್ತಯೇತ್ ।

ಎನಿಸಿದ, ಶರೈಃ- ಬಾಣಗಳಿಂದ, ನಿಹತಾನಿ - ಧ್ವಂಸಮಾಡಲ್ಪಟ್ಟರು ॥೯॥ ವಿದಿತಾತ್ಮನಾ - ಖರದೂಷಣಾದಿಗಳ ಸ್ವಭಾವವನ್ನು ಬಲ್ಲ, ರಾಮೇಣ - ಶ್ರೀರಾಮನಿಂದ, ಮಹಾತೇಜಾಃ - ಅಪರಿಮಿತಶೌರ್ಯವುಳ್ಳ, ಖರಶ್ಚ - ಖರಾಸುರನು, ಸಂಖ್ಯೇ - ಬವರದಲ್ಲಿ, ನಿಹತಃ - ಮಡಿದುಹೋದನು, ತ್ರಿಶಿರಾಶ್ಚ - ತ್ರಿಶಿರಸ್ಸೆಂಬ ನಿಶಾಚರನು, ನಿಹತಃ - ಕೊಲ್ಲಲ್ಪಟ್ಟನು, ದೂಷಣಶ್ಚ - ದೂಷಣನೆಂಬ ದೈತ್ಯನೂ, ನಿಪಾತಿತಃ- ಉರುಳಿಸಲ್ಪಟ್ಟನು ॥೧೦॥ ಅಸ್ಯಾಃನಿಮಿತ್ತೇ - ಈ ಸೀತೆಯು ಕಾರಣವಾಗುತ್ತಿರಲಾಗಿಯೇ, ಸುಗ್ರೀವಃ- ಕಪಿವರನಾದ ಸುಗ್ರೀವನು, ವಾಲಿಪಾಲಿತಂ -ಮಹಾಶೂರನಾದ ವಾಲಿಯು ಆಳುತಲಿದ್ದುದಾದ ಕಾರಣವೇ, ದುರ್ಲಭಂ - ಇತರರಿಗೆ ಅಸಾಧ್ಯವೆನಿಸಿಕೊಂಡಿದ್ದ, ಲೋಕಸತ್ಕೃತಂ-ಜನಗಳಿಂದಗೌರವಿಸಲ್ಪಟ್ಟುದಾದ, ವಾನರಾಣಾಂ - ಕಪಿಗಳ, ಐಶ್ವರ್ಯಂ - ಸಾಮ್ರಾಜ್ಯವನ್ನು, ಪ್ರಾಪ್ತವಾನ್ - ಪಡೆದನು ॥೧೧॥ ವಿಶಾಲಾಕ್ಷ್ಯಾಃ - ವಿಶಾಲನಯನೆಯಾದ, ಅಸ್ಯಾಃಹೇತೋಃ - ಈ ಸೀತೆಯು ಕಾರಣವಾದುದರಿಂದಲೇ, ಶ್ರೀಮಾನ್ - ಮಹದೈಶ್ವರ್ಯಶಾಲಿ ಎನಿಸಿರುವ, ನದನದೀಪತಿಃ-ಗಂಡು ಹೆಣ್ಣು ಹೊಳೆಗಳಿಗೆಲ್ಲ ಒಡೆಯನಾದ (ಮೂಡಲಿಗೆ ಹರಿಯುತಕ್ಕವು ನದಿಗಳು, ಪಡುವಲಿಗೆ ಹರಿಯುತಕ್ಕವುಗಳು ನದಗಳು) ಸಾಗರಶ್ಚ - ಸಮುದ್ರರಾಜನು, ಮಯಾ - ಅತ್ಯಲ್ಪನಾದ ನನ್ನಿಂದ, ಆಕ್ರಾಂತಃ - ದಾಟಲ್ಪಟ್ಟನು, ಇಯಂ - ಈ ಸರ್ವಾಭೇದ್ಯವಾದ, ಪುರೀಚ - ಲಂಕಾನಗರವು, ಮಯಾ - ನನ್ನಿಂದ, ಈಕ್ಷಿತಾ - ನೋಡಲ್ಪಟ್ಟಿತು, ॥೧೨॥ ರಾಮಃ- ಶ್ರೀ ರಾಮನು, ಸಮುದ್ರಾಂತಾಂ - ಕಡಲೇ ಎಲ್ಲೆಯಾಗಿ ಉಳ್ಳ, ಮೇದಿನೀಂ - ಈ ಭೂಮಂಡಲವನ್ನು,

ಅಗ್ನಿಜ್ವಾಲೆಯಂತಿದ್ದ ತೀಕ್ಷ್ಣವಾದ ಬಾಣಗಳಿಂದ ಸದೆಬಡಿದನು ॥೯॥ ಖರನೆಂಬನಿಶಾಚರನನ್ನೂ, ತ್ರಿಶಿರನೆಂಬ ದೈತ್ಯನನ್ನೂ, ಅಪರಿಮಿತ ಪರಾಕ್ರಮಶಾಲಿಯೆನಿಸಿದ್ದ ದೂಷಣನನ್ನೂ ಶ್ರೀರಾಮಚಂದ್ರನು ಲೋಕಹಿತಾರ್ಥವಾಗಿ ಯುದ್ಧದಲ್ಲಿ ಧ್ವಂಸಮಾಡಿದನು ॥೧೦॥ ತ್ರೈಲೋಕ್ಯವೀರನೆನಿಸಿದ್ದ ವಾಲಿಯು ಆಳುತಲಿದ್ದ ಕಿಷ್ಕಿಂಧಾಸಾಮ್ರಾಜ್ಯವು ಇತರ ವಾನರರಿಗೆ ಸುಲಭ ಸಾಧ್ಯವಾಗುವುದುಂಟೇ ? ಶ್ರೀರಾಮನು ಈ ಮಹಾದೇವಿಯನ್ನು ಪಡೆಯಬೇಕೆಂಬ ನಿಮಿತ್ತದಿಂದಲೇ ಅಲ್ಲವೇ, ಲೋಕೋತ್ತರವಾದ ಕಿಷ್ಕಿಂಧಾರಾಜ್ಯಭಾರವು ಸುಗ್ರೀವನಿಗೂ ದೊರೆಯಿತು!॥೧೧॥ ಈಕೆಯು ನಿಮಿತ್ತವಾಗಿರಲಿಕ್ಕಾಗಿಯೇ ನನ್ನಂತಹ ಸಾಧಾರಣವಾನರನೂ ನೂರುಯೋಜನದಗಲವಾಗಿ ನದನದಿಗಳಿಗೊಡೆಯನೆನಿಸಿದ ಈ ಮಹಾಸಮುದ್ರವನ್ನು ದಾಟಿ ಬಂದೆನು. ನನ್ನಂತಹ ಸಾಧಾರಣಪ್ರಾಣಿಗಳು ಕನಸಿನಲ್ಲಿಯಾದರೂ ಈ ಲಂಕಾನಗರಿಯನ್ನು ನೋಡಲಿಕ್ಕೆ ಸಾಧ್ಯವೇ ? ಆದರೂ ಈ ಮಹಾನುಭಾವಳ ಮಹಿಮೆಯಿಂದಲೇ ಅಲ್ಲವೇ ನಾನೂ ಈ ಪುರವನ್ನು ಕಣ್ಣಾರನೋಡಿದೆನು ॥೧೨॥

ಅಸ್ಯಾಃಕೃತೇ ಜಗಚ್ಚಾಪಿ ಯುಕ್ತ ಮಿತ್ಯೇವ ಮೇಮತಿಃ ||೧೩||
ರಾಜ್ಯಂ ವಾ ತ್ರಿಷು ಲೋಕೇಷು ಸೀತಾವಾ ಜನಕಾತ್ಮಜಾ ।
ತ್ರೈಲೋಕ್ಯ ರಾಜ್ಯಂ ಸಕಲಂ ಸೀತಾಯಾ ನಾಪ್ನುಯಾ ತ್ಕಲಾಂ ||೧೪||
ಇಯಂ ಸಾ ಧರ್ಮ ಶೀಲಸ್ಯ ಮೈಥಿಲಸ್ಯ ಮಹಾತ್ಮನಃ ।
ಸುತಾ ಜನಕರಾಜಸ್ಯ ಸೀತಾ ಭರ್ತೃ ದೃಢವ್ರತಾ ||೧೫||
ಉತ್ಥಿತಾ ಮೇದಿನೀಂ ಭಿತ್ವಾ ಕ್ಷೇತ್ರೇ ಹಲಮುಖಕ್ಷತೆ ।
ಪದ್ಮರೇಣು ನಿಭೈಃ ಕೀರ್ಣಾ ಶುಭ್ರೈಃ ಕೇದಾರ ಪಾಂಸುಭಿಃ ||೧೬||
ವಿಕ್ರಾಂತಸ್ಯಾರ್ಯ ಶೀಲಸ್ಯ ಸಂಯುಗೇ ಷ್ವನಿವರ್ತಿನಃ ।

---

ಜಗಚ್ಚಾಪಿ - ಸಕಲ ಪ್ರಪಂಚವನ್ನೂ, ಅಸ್ಯಾಃಕೃತೇ - ಈ ಜಾನಕಿಯ ನಿಮಿತ್ತವಾಗಿ, ಪರಿವರ್ತಯೇದ್ಯದಿ - ತಲೆ ಕೆಳಗಾಗುವಂತೆ ಮಾಡಿದರೂ, ಯುಕ್ತಂ - ಉಚಿತವೇ ಎನಿಸಿಕೊಳ್ಳುವುದು, ಇತ್ಯೇವ - ಈ ಪ್ರಕಾರವಾಗಿಯೇ, ಮೇ - ನನ್ನ, ಮತಿಃ - ಬುದ್ಧಿಯು, (ಅಭಿಪ್ರಾಯವು) ||೧೩|| ತ್ರಿಷುಲೋಕೇಷು - ಮೂರು ಲೋಕಗಳಲ್ಲಿಯೂ, ರಾಜ್ಯಂ - ಸಾಮ್ರಾಜ್ಯವು (ಉತ್ತಮಂ-ಶ್ರೇಷ್ಠವಾದುದೇ?) ವಾ-ಅಥವಾ, ಜನಕಾತ್ಮಜಾ -ಜನಕನಂದಿನಿಯಾದ ಸೀತೆಯು, ಉತ್ಕೃಷ್ಟಾ - ಶ್ರೇಷ್ಠಳಾದವಳೇ?(ಇತಿ – ಹೀಗೆಂದು, ವಿಚಾರ್ಯಮಾಣೆಸತಿ - ವಿಚಾರ ಮಾಡಿದುದೇ ಆದರೆ) ಸಕಲಂ - ಸಮಸ್ತವೆನಿಸಿದ,ತ್ರೈಲೋಕ್ಯರಾಜ್ಯಂ-ಮೂಲೋಕದ ಸಾಮ್ರಾಜ್ಯವೂ, ಸೀತಾಯಾಃ - ಸೀತಾದೇವಿಯ, ಕಲಾಂ – ಹದಿನಾರನೆಯ ಒಂದು ಭಾಗದ ಸಾಮ್ಯವನ್ನೂ, ನಾಪ್ನುಯಾತ್ – ಹೊಂದಲಾರದು,||೧೪||

ಸಾ - ಹೀಗೆ ಅಸಮಾನಳೆನಿಸಿದ, ಇಯಂಸೀತಾ - ಈ ಜಾನಕಿಯು, ಮಹಾತ್ಮನಃ - ಮಹಾನುಭಾವನೆನಿಸಿದ, ಮೈಥಿಲಸ್ಯ – ಮಿಥಿಲಾಧಿಪತಿಯಾದ, ಜನಕರಾಜಸ್ಯ-ಕರ್ಮಠನಾದ ಜನಕಮಹಾರಾಜನ, ಸುತಾ – ಮಗಳೆನಿಸಿದವಳು, ಭರ್ತೃ – ಪ್ರಿಯವಲ್ಲಭನಲ್ಲಿ, ದೃಢವ್ರತಾ – ಸ್ಥಿರಭಕ್ತಿರೂಪ ವ್ರತವುಳ್ಳವಳು, ||೧೫|| ಪದ್ಮರೇಣುಭಿಃ - ಕಮಲಗಳ ಪರಾಗಕ್ಕೆಣೆ ಎನಿಸಿದ, ಶುಭ್ರೈಃ – ಮಂಗಳ ಕರಗಳಾದ, ಕೇದಾರಪಾಂಸುಭಿಃ – ಗದ್ದೆಯಮಣ್ಣಿನ ಧೂಳಿಗಳಿಂದ, ಕೀರ್ಣಾ – ತುಂಬಿದವಳಾಗಿ, ಹಲಮುಖಕ್ಷತೇ –

---

ಸಮುದ್ರವೇ ಮೇರೆಯಾಗಿರುವ ಈಭೂಮಂಡಲವನ್ನಾಗಲೀ, ಸಮಸ್ತಪ್ರಪಂಚವನ್ನಾಗಲೀ, ಶ್ರೀರಾಮನು ಈಕೆಯ ನಿಮಿತ್ತದಿಂದ ತಲೆಕೆಳಗಾಗುವಂತೆಮಾಡಿದರೂ ಅದೇನೂ ಬಹುದೊಡ್ಡಕೆಲಸವಲ್ಲವೆಂದು ಭಾವಿಸುತ್ತೇನೆ. ಮೂರು ಲೋಕಗಳಲ್ಲಿನ ಸಾಮ್ರಾಜ್ಯಪದವಿಗಳು ಶ್ರೇಷ್ಠವೆನಿಸಿದವುಗಳೇ ? ಅಥವಾ ಜನಕರಾಜ ಪುತ್ರಿಯು ಶ್ರೇಷ್ಠಳೇ ? ಎಂದು ವಿಚಾರ ಮಾಡಲಿಕ್ಕೆ ಹೊರಟರೆ, ಮೂಲೋಕಸಾಮ್ರಾಜ್ಯವೂ ಸೀತಾದೇವಿಯ ಸೌಭಾಗ್ಯದ ಹದಿನಾರನೆಯ ಒಂದುಪಾಲಿಗೂ ಈಡೆನಿಸಿಕೊಳ್ಳಲಾರದು||೧೪|| ಮಹಾಧಾರ್ಮಿಕನೂ, ಮಿಥಿಲಾಧಿಪತಿಯೂ, ಕರ್ಮಠನೂ ಆಗಿರುವ ಜನಕರಾಜನ ಪುತ್ರಿ ಎನಿಸಿದ ಈ ಸೀತಾದೇವಿಯು ಪ್ರಾಣಪ್ರಿಯನಾದ ಶ್ರೀರಾಮಚಂದ್ರನಲ್ಲಿ ದೃಢತರವಾದ ಭಕ್ತಿಯನ್ನಿಟ್ಟು ಪತಿವ್ರತಾಗ್ರೇಸರಳೆನಿಸಿರುವಳು. ||೧೫|| ಜನಕಮಹಾರಾಜನು ಯಜ್ಞಾರ್ಥವಾಗಿ ಭೂಮಿಯನ್ನು ಶೋಧಿಸುತಿರುವಾಗ, ಕಮಲಪರಾಗಗಳಿಗೆಣೆಯೆನಿಸಿದ ಭೂಮಿಯ ಧೂಳಿಯಿಂದ ಆವರಿಸಲ್ಪಟ್ಟವಳಾಗಿ ನೇಗಲಿನ ಗುಳದ ಮೊನೆಯಿಂದ ಉಂಟಾದ ಉಳುಮೆಯುಗೆರೆಯಲ್ಲಿ ಭೂಮಿ

ಸ್ನುಷಾ ದಶರಥ ಸ್ಯೈಷಾ ಜ್ಯೇಷ್ಠಾ ರಾಜ್ಞೋ ಯಶಸ್ವಿನೀ ॥೧೩॥
ಧರ್ಮಜ್ಞಸ್ಯ ಕೃತಜ್ಞಸ್ಯ ರಾಮಸ್ಯ ವಿದಿತಾತ್ಮನಃ ।
ಇಯಂ ಸಾ ದಯಿತಾ ಭಾರ್ಯಾ ರಾಕ್ಷಸೀ ವಶ ಮಾಗತಾ ॥೧೪॥
ಸರ್ವಾನ್ ಭೋಗಾ ನ್ಪರಿತ್ಯಜ್ಯ ಭರ್ತೃಸ್ನೇಹ ಬಲಾತ್ಕೃತಾ ।
ಅಚಿಂತಯಿತ್ವಾ ದುಃಖಾನಿ ಪ್ರವಿಷ್ಟಾ ನಿರ್ಜನಂ ವನಂ ॥೧೫॥
ಸಂತುಷ್ಟಾ ಫಲಮೂಲೇನ ಭರ್ತೃ ಶುಶ್ರೂಷಣೇ ರತಾ ।

ನೇಗಲಿನಕೊನೆಯ ಗುಳದಿಂದ ಗಾಯಪಟ್ಟ (ಉಳಪಟ್ಟ) ಕ್ಷೇತ್ರೇ - ಶ್ರೇಷ್ಠಸ್ಥಾನದಲ್ಲಿ, ಮೇದಿನೀಂ - ಭೂಮಿಯನ್ನು, ಭಿತ್ವಾ - ಭೇದಿಸಿಕೊಂಡು, ಉತ್ಥಿತಾ - ಎದ್ದವಳು, ವಿಕ್ರಾಂತಸ್ಯ - ಮಹಾಪರಾಕ್ರಮಶಾಲಿಯೂ, ಆರ್ಯಶೀಲಸ್ಯ - ಶ್ರೇಷ್ಠಸ್ವಭಾವ ಉಳ್ಳವನೂ, ಸಂಯುಗೇಷು - ಕಾಳಗಗಳಲ್ಲಿ, ಅನಿವರ್ತಿನಃ - ಹಿಮ್ಮೆಟ್ಟದವನೂ ಆಗಿರುವ, ದಶರಥಸ್ಯ - ದಶರಥನೆಂಬ, ರಾಜ್ಞಃ-ಮಹಾರಾಜನಿಗೆ, ಏಷಾ-ಈಕೆಯು, ಯಶಸ್ವಿನೀ - ಪ್ರಶಸ್ತವಾದ ಹೆಸರುವಾಸಿಯನ್ನು ಪಡೆದಿರುವ, ಜ್ಯೇಷ್ಠಾ - ಹಿರಿಯವಳೆನಿಸಿದ, ಸ್ನುಷಾ - ಸೊಸೆಯಾಗಿದಾಳೆ ॥೧೩॥ ಸಾ - ಅಂತಹ, ಇಯಂ - ಈ ಮಹಾನುಭಾವಳು, ಧರ್ಮಜ್ಞಸ್ಯ-ಸಕಲ ಧರ್ಮಮಾರ್ಗಗಳನ್ನೂ ಬಲ್ಲ, ಕೃತಜ್ಞಸ್ಯ - ಹೆರರು ಮಾಡಿದ ಉಪಕಾರವನ್ನು ಮರೆಯದಿರುವ, ವಿದಿತಾತ್ಮನಃ - ಪರರ ಮನೋಗತವನ್ನು ಅರಿಯುತಕ್ಕ, ರಾಮಸ್ಯ - ಶ್ರೀರಾಮನಿಗೆ, ದಯಿತಾಭಾರ್ಯಾ - ಪ್ರಿಯವಲ್ಲಭೆಯಾಗಿದ್ದರೂ, ರಾಕ್ಷಸೀವಶಂ - ಕ್ರೂರರಾದ ರಾಕ್ಷಸಿಯರ ಸ್ವಾಧೀನತೆಯನ್ನು, ಆಗತಾ - ಹೊಂದಿದಾಳೆ ॥೧೪॥ ಭರ್ತೃ - ಪತಿಯಲ್ಲಿರುವ, ಸ್ನೇಹ - ಮಮತೆಯಿಂದ. ಬಲಾತ್ಕೃತಾ- ಬಲಾತ್ಕರಿಸಲ್ಪಟ್ಟವಳಾದ ಕಾರಣವೇ (ಪತಿಸ್ನೇಹ ಪರವಶಳಾದ ಕಾರಣವೇ) ಸರ್ವಾನ್-ಸಮಸ್ತವಾದ, ಭೋಗಾನ್- ರಾಜಭೋಗಗಳನ್ನೆಲ್ಲ, ಪರಿತ್ಯಜ್ಯ - ಮನಃಪೂರ್ವಕವಾಗಿ ತ್ಯಾಗಮಾಡಿ, ದುಃಖಾನಿ-ಅಪಾರವಾದ ಕಷ್ಟಗಳನ್ನು, ಅಚಿಂತಯಿತ್ವಾ- ಲೇಶವಾದರೂ ಲಕ್ಷ್ಯಮಾಡದೆ, ನಿರ್ಜನಂ - ಜನಶೂನ್ಯವಾದ, ವನಂ-ಅರಣ್ಯವನ್ನು; ಪ್ರವಿಷ್ಟಾ - ಹೊಕ್ಕವಳಾಗಿದಾಳೆ, ಫಲಮೂಲೇನ - ಹಣ್ಣುಗಳಿಂದಲೂ, ಗೆಡ್ಡೆಗೆಣಸುಗಳಿಂದಲೂ,ಸಂತುಷ್ಟಾ - ತೃಪ್ತಳಾಗುತ್ತಿರುವವಳಾಗಿಯೂ, ಭರ್ತೃಶುಶ್ರೂಷಣೇ ಪತಿಸೇವೆಯಲ್ಲಿಯೇ,ನಿರತಾ - ಪರಾಯಣಳಾಗಿರುವ, ಯಾ - ಯಾವ ಸೀತಾದೇವಿಯು, ಭವನೇಯಥಾ-ರಾಜಭವನದಲ್ಲಿ ಹೇಗೋ

ಯನ್ನು ಭೇ....... ಆವಿರ್ಭವಿಸಿದಳು ॥ ೧೬ ॥ ಮಹಾಪರಾಕ್ರಮಶಾಲಿಯೂ, ಸಚ್ಚರಿತ್ರನೂ, ಕಾಳಗಗಳಲ್ಲಿ ಹಿಮ್ಮೆಟ್ಟದವನೂ ಆಗಿರುವ ದಶರಥಮಹಾರಾಜನಿಗೆ ಸತ್ಕೀರ್ತಿಸಂಪನ್ನಳಾದ ಹಿರಿಯಸೊಸೆ ॥ ೧೩ ॥ ಸಕಲಧರ್ಮ ಮಾರ್ಗಗಳನ್ನರಿತು, ಪರೋಪಕಾರವನ್ನು ಮರೆಯದೆ, ಲೋಕಸ್ವಭಾವವನ್ನೆಲ್ಲ ಚೆನ್ನಾಗಿ ಬಲ್ಲವನಾಗಿರುವ ಶ್ರೀರಾಮಚಂದ್ರನಿಗೆ ಪ್ರಾಣಪ್ರಿಯಳೆನಿಸಿದ ಪಟ್ಟದರಸಿ. ಇಂತಪಾರಸೌಭಾಗ್ಯಸಂಪನ್ನೆಯಾಗಿದ್ದರೂ ಕ್ರೂರರಾದ ರಕ್ಕಸಿಯರಿಗೆ ವಶಳಾಗಿ ಹೋಗಿದಾಳೆ ॥ ೧೪ ॥ ಸರ್ವರಾಜ ಭೋಗಗಳನ್ನೂತೊರೆದು, ಪತಿಸ್ನೇಹ ಪರವಶಳಾಗಿ, ಮಹಾರಣ್ಯದಲ್ಲಿ ಸಂಭವಿಸುವ ಕಷ್ಟಗಳೊಂದನ್ನೂ ಮನಸ್ಸಿಗೆತಾರದೆ, ಪತಿಪರಾಯಣಳಾಗಿ, ನಿರ್ಜನವಾದ ಮಹಾರಣ್ಯವನ್ನು ಪ್ರವೇಶಿಸಿದಳು ॥ ೧೫ ॥ ಆ ಘೋರಕಾನನದಲ್ಲಿಯೂ, ಪತಿಸೇವೆಯಲ್ಲಿಯೇ ಪರಾಯಣಳಾಗಿ, ಹುಟ್ಟಿದಂದಿನಿಂದಲೂ; ಅಭ್ಯಾಸವಿಲ್ಲದ ಕಾಡುಬೇಡುಗಳಲ್ಲಿನ ಹಣ್ಣುಹಂಪಲುಗಳಿಂದಲೂ, ಗೆ

ಯಾ ಪರಾಂ ಭಜತೆ ಪ್ರೀತಿಂ ವನೇಪಿ ಭವನೇ ಯಥಾ ॥೨೦॥
ಸೇಯಂ ಕನಕವರ್ಣಾಂಗೀ ನಿತ್ಯಂಸುಸ್ಮಿತ ಭಾಷಿಣೀ ।
ಸಹತೇ ಯಾತನಾ ಮೇತಾ ಮನರ್ಥಾನಾ ಮಭಾಗಿನೀ ॥೨೧॥
ಇಮಾಂ ತು ಶೀಲಸಂಪನ್ನಾಂ ದ್ರಷ್ಟು ಮರ್ಹತಿ ರಾಘವಃ ।
ರಾವಣೇನ ಪ್ರಮಥಿತಾಂ ಪ್ರಪಾಮಿವ ಪಿಪಾಸಿತಃ ॥೨೨॥
ಅಸ್ಯಾ ನೂನಂ ಪುನ ರ್ಲಾಭಾ ದ್ರಾಘವಃ ಪ್ರೀತಿ ಮೇಷ್ಯತಿ ।
ರಾಜಾ ರಾಜ್ಯ ಪರಿಭ್ರಷ್ಟಃ ಪುನಃ ಪ್ರಾಪ್ಯೇವ ಮೇದಿನೀಂ ॥೨೩॥

ಹಾಗೆ, ವನೇಪಿ - ಮಹಾರಣ್ಯಮಧ್ಯದಲ್ಲಿಯೂ, ಪರಾಂ - ಅಪರಿಮಿತವಾದ, ಪ್ರೀತಿಂ - ಸಂತೋಷವನ್ನು, ಭಜತಿ - ಹೊಂದುತ್ತಿದ್ದಳೋ॥೨೦॥ ಕನಕವರ್ಣಾಂಗೀ - ಬಂಗಾರದ ಬಣ್ಣದಂತೆ ಮೈಕಾಂತಿಯುಳ್ಳವಳೂ, ನಿತ್ಯಂ - ಯಾವಾಗಲೂ, ಸುಸ್ಮಿತಭಾಷಿಣೀ- ನಗುನಗುತ ಮಾತನಾಡುತ್ತಿರುವವಳೂ ಆಗಿರುವ, ಸೇಯಂ- ಅಂತಹ ಈ ಸೀತೆಯೇ, ಅನರ್ಥಾನಾಂ - ಕೇಡುಗಳಿಗೆ, ಅಭಾಗಿನೀ - ಪಾಲುಗಾತಿಯಲ್ಲದೆ ಹೋದರೂ, ಏತಾಂ - ಈ ಹೇಳಲಾಗದ, (ತಾಳಲಾರದ) ಯಾತನಾಂ- ನೋವನ್ನು (ಬಾಧೆಯನ್ನು, ದುಃಖವನ್ನು) ಸಹತೆ- ಸಹಿಸುತಲಿದಾಳೆ ॥೨೧॥ ರಾಘವಃ - ಶ್ರೀರಾಮಚಂದ್ರನು, ಶೀಲಸಂಪನ್ನಾಂ - ಒಳ್ಳೆಯ ಸ್ವಭಾವದಿಂದೊಡಗೂಡಿದವಳೂ, ರಾವಣೇನ - ರಾವಣಾಸುರನಿಂದ, ಪ್ರಮಥಿತಾಂ - ಪೀಡಿಸಲ್ಪಟ್ಟಿರುವವಳೂ ಆಗಿರುವ, ಇಮಾಂತು - ಈ ಸೀತಾದೇವಿಯನ್ನಾದರೋ, ಪಿಪಾಸಿತಃ - ಹೆಚ್ಚಾಗಿ ದಾಹಗೊಂಡವನು, ಪ್ರಪಾಮಿವ - ಅರವಟ್ಟಿಗೆಯನ್ನು ಹೇಗೋ ಹಾಗೆ, ದ್ರಷ್ಟುಂ - ನೋಡಲಿಕ್ಕೆ, ಅರ್ಹತಿ - ತಕ್ಕವನಾಗಿದ್ದಾನೆ, ರಾಜ್ಯ ಪರಿಭ್ರಷ್ಟಃ - ದೊರೆತನವನ್ನು ಕಳೆದುಕೊಂಡಿರುವ, ರಾಜಾ - ಅರಸು, ಪುನಃ - ಮರಳಿ, ಮೇದಿನೀಂ - ತನ್ನ ಆಳ್ವಿಕೆಯ ಭೂಮಿಯನ್ನು, ಪ್ರಾಪ್ಯೇವ - ಪಡದು ಹೇಗೋ ಹಾಗೆ, ಪುನಃ - ಮರಳಿ, ಅಸ್ಯಾಃ - ಈ ಸೀತಾದೇವಿಯ, ಲಾಭಾತ್ - ಪ್ರಾಪ್ತಿಯ ದೆಸೆಯಿಂದ, ರಾಘವಃ-ಶ್ರೀ ರಾಮನು, ಪ್ರೀತಿಂ - ಅಪರಿಮಿತ

ಡ್ಡ ಗಣಸುಗಳಿಂದಲೂ ಹೊಟ್ಟೆಯನ್ನು ಹೊರೆಯುತ್ತಾ, ರಾಜಭೋಗಗಳಿಂದ ಹೇಗೋ ಹಾಗೆ ಆ ವನ್ಯಾಹಾರಗಳಿಂದ ತೃಪ್ತಳಾಗಿ, ರಾಜಭವನದಲ್ಲಿ ಹೇಗೋ ಹಾಗೆ ಮಹಾರಣ್ಯದಲ್ಲಿಯೂ ಮಹತ್ತರವಾದ ಪ್ರೀತಿಯನ್ನು ಪಡೆಯುತ್ತಿದ್ದಳು. ॥ ೨೦ ॥ ಸುವರ್ಣದಂತೆ ಬೆಳಗುವ ದೇಹಕಾಂತಿಯುಳ್ಳವಳೂ, ಹುಸಿನಗೆಯೊಡನೆ ಮೃದುಮಧುರವಾಗಿ ಮಾತನಾಡತಕ್ಕವಳೂ ಆಗಿರುವ ಈ ಮಹಾದೇವಿಯು ಕಷ್ಟಲೇಶವನ್ನು ಅನುಭವಿಸಲಿಕ್ಕೆ ತಕ್ಕವಳಲ್ಲದಿದ್ದರೂ, ಈ ಕ್ರೂರರಾದ ರಕ್ಕಸಿಯರ ನಡುವೆಸಿಲುಕಿ ಯಮಯಾತನೆಯನ್ನು ಅನುಭವಿಸುತಿದಾಳೆ.॥ ೨೧ ॥ ಬಾಯಾರಿಕೆಯಿಂದ ಬಹಳವಾಗಿ ಬಾಧೆಪಟ್ಟ ಮನುಜನು ಅರವಟ್ಟಿಗೆಯನ್ನು ಕಾಣಲೆಳಸುವಹಾಗೆ, ಕ್ರೂರನಾದ ರಾವಣನಿಂದ ಬಹಳವಾಗಿ ನೊಂದಿರುವ ಈ ಜಾನಕಿಯನ್ನು ಶ್ರೀರಾಮಚಂದಿರನು ನೋಡಲಿಕೆ ತವಕಿಸುತಲಿದಾನೆ. ॥ ೨೨ ॥ ಹಗೆಗಳ ಕೋಟಲೆಯಿಂದಲೋ ಅಥವಾ ಕಾರಣಾಂತರದಿಂದಲೋ ರಾಜ್ಯಭ್ರಷ್ಟನಾಗಿದ್ದ ಅರಸು ಬಹುವಿಧವಾದ ಕಷ್ಟನಿಷ್ಠೂರಗಳಿಗೊಳಗಾಗಿ ನೊಂದು, ಮರಳಿ ದೈವವಶದಿಂದ ರಾಜ್ಯವನ್ನು ಪಡೆದರೆ ಹೇಗೋಹಾಗೆ, ನಷ್ಟವಾಗಿರುವ ಈ ಸೀತೆಯನ್ನು ಪುನಃ ಪಡೆಯುವುದರಿಂದ ಶ್ರೀರಾಮನು ಅಪರಿಮಿತ ಸಂತೋಷವನ್ನು ಪಡೆಯುವನು ॥ ೨೩ ॥ಬಂಧು ಮಿತ್ರ

ಕಾಮ ಭೋಗೈಃ ಪರಿತ್ಯಕ್ತಾ ಹೀನಾ ಬಂಧುಜನೇನ ಚ ।
ಧಾರಯ ತ್ಯಾತ್ಮನೋ ದೇಹಂ ತತ್ಸಮಾಗಮ ಕಾಂಕ್ಷಿಣೀ ॥೨೪॥
ನೈಷಾ ಪಶ್ಯತಿ ರಾಕ್ಷಸ್ಯೋ ನೇಮಾ ನ್ಪುಷ್ಪ ಫಲ ದ್ರುಮಾನ್ ।
ಏಕಸ್ಥ ಹೃದಯಾ ನೂನಂ ರಾಮ ಮೇವಾ ನು ಪಶ್ಯತಿ ॥೨೫॥
ಭರ್ತಾ ನಾಮ ಪರಂ ನಾರ್ಯಾ ಭೂಷಣಂ ಭೂಷಣಾ ದಪಿ ।
ಏಷಾ ತು ರಹಿತಾ ತೇನ ಭೂಷಣಾರ್ಹಾ ನ ಶೋಭತೇ ॥೨೬॥
(ದುಷ್ಕರಂ ಕುರುತೇ ರಾಮೋ ಹೀನೋ ಯದನಯಾ ಪ್ರಭುಃ ।

---

ಸಂತೋಷವನ್ನು. ಏಷ್ಯತಿ – ಹೊಂದುವನು, ನೂನಂ – ನಿಶ್ಚಯ ||೨೩||

ಕಾಮಭೋಗೈಃ – ಇಷ್ಟವಾದಸುಖಸಾಧನಗಳಿಂದ, ಪರಿತ್ಯಕ್ತಾ – ಬಿಡಲ್ಪಟ್ಟವಳೂ, ಬಂಧುಜನೇನ – ಇಷ್ಟಜನದಿಂದ, ಹೀನಾಚ – ಶೂನ್ಯಳೂ ಆಗಿರುವ, (ಇಯಂ – ಈ ಜಾನಕಿಯು) ತತ್ – ಆ ಶ್ರೀರಾಮಚಂದ್ರನ, ಆಗಮ – ಬರುವಿಕೆಯನ್ನು, ಕಾಂಕ್ಷಿಣೀ-ಬಯಸುತಲಿರುವವಳಾದಕಾರಣವೇ, ಆತ್ಮನಃ – ತನ್ನ, ದೇಹಂ – ಶರೀರವನ್ನು, ಧಾರಯತಿ – ಧರಿಸಿದಾಳೆ, ॥ ೨೪ ॥ ಏಷಾ – ಈ ಸೀತಾದೇವಿಯು, ರಾಕ್ಷಸ್ಯಃ – ರಕ್ಕಸಿಯರನ್ನು, (ದ್ವಿತೀಯಾರ್ಧದಲ್ಲಿಪ್ರಥಮ) ಇಮಾನ್ – ಈ, ಪುಷ್ಪಫಲದ್ರುಮಾನ್ – ಹೂವುಹಣ್ಣಿನಮರಗಿಡಗಳನ್ನೂ, ನಪಶ್ಯತಿ – ನೋಡುವುದೇಇಲ್ಲ, (ಕಿಂತು – ಮತ್ತೇನೆಂದರೆ,) ಏಕಸ್ಥಹೃದಯಾ (ಸತೀ)- ರಾಮನೊಬ್ಬನಲ್ಲಿಯೇ ನೆಲೆಗೊಂಡ ಮನಸ್ಸುಳ್ಳವಳಾಗಿ, ರಾಮಮೇವ-ಆ ರಾಘವನನ್ನೇ, ಅನುಪಶ್ಯತಿ – ಧ್ಯಾನಿಸುತ್ತಲಿದಾಳೆ, ನೂನಂ – ನಿಶ್ಚಯ, ॥ ೨೫ ॥ ಭರ್ತಾನಾಮ – ಪ್ರಾಣನಾಥನೆಂದರೆ, ನಾರ್ಯಾಃ – ಗರತಿಯಾದಹೆಂಗಸಿಗೆ, ಭೂಷಣಾದಪಿ – ಉತ್ತಮವಾದ ಅಲಂಕಾರಕ್ಕಿಂತಲೂ, ಪರಂ – ಶ್ರೇಷ್ಠವೆನಿಸಿದ, ಭೂಷಣಂ – ಅಲಂಕಾರವು, (ಭವತಿ – ಆಗಿರುತ್ತಾನೆ, ತತ್ – ಆದಕಾರಣ,) ಭೂಷಣಾರ್ಹಾ-ರಾಮರೂಪಾಲಂಕಾರಕ್ಕೆ ತಕ್ಕವಳೆನಿಸಿದ, ಏಷಾತು-ಈಕೆಯಾದರೋ, ತೇನ-ರಾಮರೂಪಭೂಷಣದಿಂದ, ರಹಿತಾ – ಶೂನ್ಯಳಾಗಿ, ನಶೋಭತೇ – ಪ್ರಕಾಶಿಸುತಲಿಲ್ಲ ॥ ೨೬॥ (ಪ್ರಭುಃ – ಲೋಕನಾಥ

---

ರನ್ನೆಲ್ಲಾ ಅಗಲಿ, ಇಷ್ಟವಾದರಾಜಭೋಗಗಳನ್ನೆಲ್ಲಾ ತೊರೆದು, ಈ ಮಹಾರಾಕ್ಷಸಿಯರೊಳಗೆ ಸಿಲುಕಿರುವ ಜಾನಕಿಯು, ಶ್ರೀರಾಮಚಂದ್ರನ ಸಂದರ್ಶನವು ತನಗೆ ಮರಳಿದೊರೆವುದೆಂಬ ಆಶಾತಂತುವಿನಿಂದಲೇ ತನ್ನ ದೇಹವನ್ನು ಧರಿಸಿ ಇದಾಳೆ ॥೨೪॥ ಶ್ರೀರಾಮಚಂದ್ರನೊಬ್ಬನಲ್ಲಿಯೇ ನೆಲೆಗೊಂಡ ಮನಸ್ಸಿನಿಂದ ಏಕಾಗ್ರತೆಯನ್ನು ಪಡೆದಿರುವ ಈ ಜಾನಕಿಯು ತನ್ನ ಮನಸ್ಸಿಗೆ ಬೇರಾವುದೂ ಬೇಡದೆಯೇ ಇಲ್ಲಿ ನೆರದಿರುವ ರಾಕ್ಷಸಿಯರನ್ನಾಗಲಿ, ಹೂಗಳಿಂದಲೂ,ಹಣ್ಣುಗಳಿಂದಲೂ ತುಂಬಿರುವ ಮರಗಿಡಗಳನ್ನಾಗಲೀ ಕಣ್ಣೆತ್ತಿ ನೋಡದೆ ಇದಾಳೆ. ಈ ಮಹಾನುಭಾವಳ ಮನಸ್ಸಿಗೆ ರಘುನಂದನನೊಬ್ಬನೇ ಗುರಿಯಾಗಿದಾನೆ ॥೨೫॥ಪತಿಯೆಂಬ ಪದಾರ್ಥವು ಪತಿವ್ರತೆಯರಾದ ಗರತಿಯರಿಗೆ ಸರ್ವಾಲಂಕಾರಗಳನ್ನೂ ಮೀರಿಸಿದ ಅಲಂಕಾರ.ಸತಿಗೆ ಪತಿಗಿಂತದೊಡ್ಡದೆನಿಸಿದ ಆಭರಣವೇ ಇಲ್ಲ. ಅಂತಹ ಮಹಾಭರಣವು ಈಮಹಾನುಭಾವಳಿಗೆ ದೂರವಾಗಿರುವುದರಿಂದ ಈಕೆಯು ಅಷ್ಟು ಶೋಭಿಸುತಲಿಲ್ಲ॥೨೬॥ಅಹಹ, ಇಂತಹಮಹಾನುಭಾವಳನ್ನು ಅಗಲಿರುವಆಶ್ರೀರಾಮಚಂದಿರನುತನ್ನದೇಹವನ್ನು ಹೇಗೆ ಉಳಿಸಿಕೊಂಡಿರುವನೋ,ಉಸಿರನ್ನು ಹೇಗೆ ತಾಳಿರುವನೋ, ದುಃಖದವೇಗ

ಧಾರಯತ್ಯಾತ್ಮನೋ ದೇಹಂ ನ ದುಃಖೇ ನಾವಸೀದತಿ ॥೨೭॥ )
ಇಮಾಮಸಿತ ಕೇಶಾಂತಾಂ ಶತಪತ್ರ ನಿಭೇಕ್ಷಣಾಂ ।
ಸುಖಾರ್ಹಾಂ ದುಃಖಿತಾಂ ದೃಷ್ಟ್ವಾ ಮಮಾಪಿ ವ್ಯಥಿತಂ ಮನಃ ॥೨೮॥
ಕ್ಷಿತಿಕ್ಷಮಾ ಪುಷ್ಕರ ಸನ್ನಿಭಾಕ್ಷೀ ಯಾ ರಕ್ಷಿತಾ ರಾಘವ ಲಕ್ಷ್ಮಣಾಭ್ಯಾಂ ।
ಸಾ ರಾಕ್ಷಸೀಭಿರ್ವಿಕೃತೇಕ್ಷಣಾಭಿಸ್ಸಂರಕ್ಷ್ಯತೇ ಸಂಪ್ರತಿ ವೃಕ್ಷಮೂಲೇ॥೨೯

ನೆನಿಸಿದ, ರಾಮಃ - ಶ್ರೀರಾಮನು, ಅನಯಾ - ಈಕೆಯಿಂದ, ಹೀನಸ್ಸನ್ - ಶೂನ್ಯನಾಗಿ, ಆತ್ಮನಃ-ತನ್ನ, ಶರೀರಂ - ದೇಹವನ್ನು, ಧಾರಯತಿ - ಧರಿಸಿಇದಾನೆ, ದುಃಖೇನ - ವ್ಯಸನದಿಂದ, ನಾವಸೀದತಿ - ಕಳಲಿಹೋಗದೆ ಇದಾನೆ, ಇತಿಯತ್ - ಹೀಗೆಂಬುದು ಯಾವುದುಂಟೋ, ಏತತ್ - ಎಂತಹ ಈ, ದುಷ್ಕರಂ-ಮಾಡಲಶಕ್ಯವೆನಿಸಿದಕಾರ್ಯವನ್ನು, ಕುರುತೇ-ಮಾಡಿಕೊಳ್ಳುತಲಿದಾನೆ)॥೨೭॥ ಅಸಿತಕೇಶಾಂತಾಂ-ಕಪ್ಪಗಿರುವತಲೆಯ ಕೊನೆಗೂದಲುಳ್ಳವಳೂ, ಶತಪತ್ರನಿಭೇಕ್ಷಣಾಂ-ತಾವರೆಯರೇಕಿಗೆಣೆಯಾದ ಕಣ್ಣುಳ್ಳವಳೂ, ಸುಖಾರ್ಹಾಂ- ರಾಜಭೋಗಗಳಿಗೆ ತಕ್ಕವಳಾದರೂ, ದುಃಖಿತಾಂ-ದುಃಖವನ್ನನುಭವಿಸುತಲಿರುವವಳೂ ಆಗಿರುವ, ಇಮಾಂ-ಈ ಸೀತಾದೇವಿಯನ್ನು, ದೃಷ್ಟ್ವಾ-ನೋಡಿ, ಮಮಾಪಿ-ಕಾಡುಮನೆಯವನಾದ ನನಗೂ,ಮನಃ-ಮನಸ್ಸು,ವ್ಯಥಿತಂ-ವ್ಯಸನವುಳ್ಳದ್ದಾಗಿದೆ॥೨೮॥ ಕ್ಷಿತಿಕ್ಷಮಾ-ಭೂಮಿಯಂತೆ ಸಹನಗುಣವುಳ್ಳವಳೂ, ಪುಷ್ಕರಸನ್ನಿಭಾಕ್ಷೀ-ಪದ್ಮಪತ್ರಾಕ್ಷಿಯೂ ಆಗಿರುವ, ಯಾ-ಯಾವ ಸೀತಾದೇವಿಯು, ರಾಘವಲಕ್ಷ್ಮಣಾಭ್ಯಾಂ-ರಾಮಲಕ್ಷ್ಮಣರಿಂದ,ರಕ್ಷಿತಾ-ಸಂರಕ್ಷಿಸಲ್ಪಡುತಲಿದ್ದಳೋ, ಸಾ - ಆ ಸೀತಾದೇವಿಯು, ವಿಕೃತೇಕ್ಷಣಾಭಿಃ - ವಿಕಾರವಾದ ಕಣ್ಣುಳ್ಳ, ರಾಕ್ಷಸೀಭಿಃ-ಕ್ರೂರರಾದ ರಕ್ಕಸಿಯರಿಂದ, ಸಂಪ್ರತಿ- ಈಗ, ವೃಕ್ಷಮೂಲೇ - ಶಿಂಶುಪಾವೃಕ್ಷದ ಬುಡದಲ್ಲಿ, ಸಂರಕ್ಷ್ಯತೇ - ಕಾಪಾಡಲ್ಪಡುತಲಿದ್ದಾಳೆ ॥೨೯॥ ಹಿಮ -

ಯಿಂದ ಹೇಗೆ ನಶಿಸದೆ ಹೋಗದಿರುವನೋ ಅದು ನನ್ನಿಂದ ಹೇಳತೀರದು.ಅವನು ಹಾಗೆಉಳಿದಿರುವುದು ಅಸಾಧ್ಯವಾದ ಕೆಲಸವೇಸರಿ.॥೨೭॥ ॥) ಕೆಂದಾವರೆಯರೇಕಿನಂತೆ ಅಂದವಾದ ಕಣ್ಣುಳ್ಳವಳೂ, ಕಪ್ಪಗಿರುವ ತಲೆಗೂದಲಿನ ತುದಿಯುಳ್ಳವಳೂ,ಮಹಾರಾಜಭೋಗಗಳನ್ನು ಅನುಭವಿಸಲು ತಕ್ಕವಳೂ ಆಗಿರುವ ಈ ಜಾನಕಿಯು ಮಹಾರಾಜನಂದಿನಿಯೂ, ರಾಜಾಧಿರಾಜನ ಸೊಸೆಯೂ, ತ್ರೈಲೋಕ್ಯನಾಥನ ಪಟ್ಟದರಸಿಯೂ ಆಗಿದ್ದರೂ, ಇಲ್ಲಿ ಈವಿಧವಾದ ಸಂಕಟವನ್ನುಅನುಭವಿಸುವುದನ್ನು ನೋಡಿ ಮಾನವರಂತೆ ಸಂಸಾರಿ ಧರ್ಮವನ್ನರಿಯದೆ, ಬಗೆಬಗೆಯ ರಸವರ್ಗಗಳ ಆಹಾರವಿಲ್ಲದೆ,ಮರದಿಂದ ಮರಕ್ಕೆ ಹಾರಾಡಿಕೊಂಡು,ಕಾಡುಮನೆಯವನಾಗಿರುವ ನನಿಗೂ, ಮನದೊಳಗೆ ಅಪರಮಿತವಾದ ವ್ಯಥೆಯು ಉಂಟಾಗುತಲಿದೆ.ಲೌಕಿಕರ ಸಕಲ ಸುಖದುಃಖಗಳನ್ನರಿತು, ಕರುಣಾಸಮುದ್ರನೆನಿಸಿರುವ ಆ ಶ್ರೀರಾಮನಿಗೆಈಕೆಯ ಅವಸ್ಥೆಯು ಗೋಚರಿಸಿದರೆ ಆಗಿನ ಪರಿಣಾಮವು ಹೇಗಾಗುವದೋ ಅದನ್ನೂ ಊಹಿಸಿಹೇಳಲು ನನ್ನಿಂದ ಸಾಧ್ಯವಲ್ಲ ॥೨೮॥ ಅಯ್ಯೋ, ಭೂದೇವಿಗಣೆ ಎನಿಸಿದ ಕ್ಷಮಾಗುಣವುಳ್ಳವಳಾಗಿ, ಆಗತಾನೆ ಅರಳಿದ ತಾವರೆಯ ರೇಕಿನಂತೆ ಕಣ್ಣುಳ್ಳ ಈ ಸೀತಾದೇವಿಯು ಮಹಾನುಭಾವರಾದ ರಾಮಲಕ್ಷ್ಮಣರ ಕಾವಲಿಗೊಳಗಾಗಿದ್ದವಳು. ಅಂತಹ ಜಾನಕಿಯು ಈಗ ಈವಿಕಾರನಯನೆಯರಾಗಿರುವ ಕ್ರೂರರಾದ ರಕ್ಕಸಿಯರ ಕಾವಲಿಗೊಳಗಾಗಿ ಈಮರದ ಬುಡದಲ್ಲಿ ಕುಳಿತಿದಾಳೆ. ॥೨೯॥ ಮಂಜಿನಹೊಡತಕ್ಕೊಳಗಾಗಿರುವತಾವರೆಯು

ಹಿಮಹತ ನಳಿನೀವ ನಷ್ಟಶೋಭಾ ವ್ಯಸನ ಪರಂಪರಯಾ ನಿಪೀಡ್ಯಮಾನಾ ।
ಸಹಚರ ರಹಿತೇವ ಚಕ್ರವಾಕೀ ಜನಕಸುತಾ ಕೃಪಣಾಂ ದಶಾಂ ಪ್ರಪನ್ನಾ॥೩೦॥
ಅಸ್ಯಾಹಿ ಪುಷ್ಪಾವನತಾಗ್ರ ಶಾಖಾ ಶ್ಶೋಕಂ ದೃಢಂ ವೈ ಜನಯಂತ್ಯ ಶೋಕಾಃ।
ಹಿಮ ವ್ಯಪಾಯೇನ ಚ ಮಂದರಶ್ಮಿ ರಭ್ಯುತ್ಥಿತೋ ನೈಕ ಸಹಸ್ರರಶ್ಮಿಃ ॥೩೧॥

---

ಮಂಜಿನಿಂದ, ಹತ - ಪೆಟ್ಟುಬಿದ್ದ, ನಳಿನೀವ - ತಾವರೆಯ ಬಳ್ಳಿಯಂತೆ, ನಷ್ಟಶೋಭಾ - ಕಾಂತಿಹೀನಳೂ, ವ್ಯಸನಪರಂಪರಯಾ - ದುಃಖಗಳ ಸಾಲಿನಿಂದ, ನಿಪೀಡ್ಯಮಾನಾ- ಹೇರಳವಾಗಿ ಬಾಧಿಸಲ್ಪಡುತಲಿರುವವಳೂ ಆಗಿರುವ, ಜನಕಸುತಾ - ಜನಕರಾಜನಂದಿನಿಯೂ, ಸಹಚರರಹಿತಾ-ಜಡನಾಡಿಯಾದ ಪುರುಷಚಕ್ರವಾಕಪಕ್ಷಿಯಿಂದ ಶೂನ್ಯವಾಗಿರುವ, ಚಕ್ರವಾಕೀವ - ಹೆಣ್ಣುಚಕ್ರವಾಕಪಕ್ಷಿಯಂತೆ, ಕೃಪಣಾಂ- ಬಹುದೀನವಾದ, ದಶಾಂ - ಅವಸ್ಥೆಯನ್ನು, ಪ್ರಪನ್ನಾ - ಹೊಂದಿಇದಾಳೆ ॥೩೦॥ ಹಿಮವ್ಯಪಾಯೇನ - ವಸಂತರುತುವಿನಿಂದ ಉಂಟಾದ, ಪುಷ್ಪ - ಹೂಗಳ ಹೊರೆಯಿಂದ, ಅವನತಾ - ತಗ್ಗಿರುವ, ಅಗ್ರಶಾಖಾಃ - ರೆಂಬೆಗಳತುದಿಗಳುಳ್ಳ, ಅಶೋಕಾಃ - ಅಶೋಕವೃಕ್ಷಗಳು, ಅಸ್ಯಾಃ - ಈ ಸೀತಾದೇವಿಗೆ, ದೃಢ - ಪ್ರಬಲವಾದ, ಶೋಕಂ - ದುಃಖವನ್ನು, ಜನಯಂತಿ - ಉಂಟುಮಾಡುತಲಿವೆ, ಹಿಮವ್ಯಪಾಯೇನ - ಮಂಜುತೊಲಗುವದರಿಂದ, ನೈಕಸಹಸ್ರರಶ್ಮಿಃ - ಅನೇಕಸಾವಿರ ಕಿರಣಗಳುಳ್ಳವನಾಗಿ, ಅಭ್ಯುತ್ಥಿತಃ - ಉದಿಸಿದ, ಮಂದರಶ್ಮಿಶ್ಚ - ಚಂದ್ರನೂ, (ಅಸ್ಯಾಃ - ಪತಿಯನ್ನಗಲಿರುವ ಈಕೆಗೆ) ಶೋಕಂ -ದುಃಖವನ್ನು, ದೃಢಂ - ಪ್ರಬಲವಾಗಿ, ಜನಯತಿವೈ - ಉಂಟುಮಾಡುತಾನಲ್ಲವೆ? ॥೩೧॥ ಬಲೀ - ಬಲಶಾಲಿಯಾದ, ಹರೀಣಾಂ - ವಾನರರೊಳಗೆ, ಋಷಭಃ - ಶ್ರೇಷ್ಠನೆನಿಸಿದ, ತರಸ್ವೀ - ವೇಗಸಂಪನ್ನನಾದ, ಕಪಿಃ - ಮಾರುತಿಯು, ಇತ್ಯೇವಂ - ಈ ಪ್ರಕಾರವಾಗಿ, ಅರ್ಥಂ - ಶಿಂಶುಪಾವೃಕ್ಷದ ಬುಡದಲ್ಲಿರುವ ಸೀತಾರೂಪ ಧನವನ್ನು, ಅನ್ವವೇಕ್ಷ್ಯ - ಚೆನ್ನಾಗಿನೋಡಿ, ಇಯಂ - ಈಕೆಯು, ಸೀತೈವ - ಸೀತೆಯೇ ಸರಿ, ಇತಿ - ಹೀಗೆಂದು, ನಿವಿಷ್ಟಬುದ್ಧಿಃ - ನೆಲೆಗೆನಿಂತ ಬುದ್ಧಿಯುಳ್ಳವನಾಗಿ, (ತಾಮೇವ - ಅದೇಬುದ್ಧಿ

---

ಬಳ್ಳಿಯಂತೆ ಕಾಂತಿಹೀನಳಾಗಿ, ಕಷ್ಟಗಳ ಸಾಲಿಗೆ ಸಿಲುಕಿ, ದುಃಖಸಮುದ್ರದಲ್ಲಿಮುಳುಗಿಯೂ ಇರುವುದರಿಂದ ಜಡನಾಡಿಯಾದ ಪುರುಷಚಕ್ರವಾಕಪಕ್ಷಿಯನ್ನಗಲಿದ ಹೆಣ್ಣುಚಕ್ರವಾಕಿಯುಹೇಗೋ ಹಾಗೆ ಈ ವೈದೇಹಿಯು ಬಹುದೀನವಾದ ಅವಸ್ಥೆಯನ್ನು ಹೊಂದಿಇದಾಳೆ ॥೩೦॥ ಸುರಭಿಪುಷ್ಪಭಾರದಿಂದ ಬಾಗಿರುವ ಶಿಂಶುಪಾ ವೃಕ್ಷಗಳ ಶಾಖಾಗ್ರಗಳೂ ಪತಿಯನ್ನಗಲಿರುವ ಈ ಸೀತೆಗೆ ದುಃಖವನ್ನು ಹೆಚ್ಚಿಸುವ ಹಾಗೆ, ಹಿಮವು ತೊಲಗಿದ ಬಳಿಕ ಸಾವಿರಾರು ಬಗೆಯ ಕಿರಣಗಳಿಂದ ಲೋಕವನ್ನು ಬೆಳಗುತ ಉದಿಸುತಲಿರುವ ಚಂದ್ರನೂ ಅಪಾರವಾದ ದುಃಖವನ್ನು ಉಂಟುಮಾಡುತಲೇ ಇರುವನು ॥೩೧॥ ಎಂದೀಪ್ರಕಾರವಾಗಿ ಚಿಂತಿಸುತಲಿರುವ ಕಪಿವರನೆನಿಸಿದ ಮಹಾಬಲಶಾಲಿಯಾದ ಆಂಜನೇಯನು ಸೀತಾರೂಪದ್ರವ್ಯವನ್ನು ಆಯಾಕಾರಣಗಳಿಂದ ಚೆನ್ನಾಗಿ ಪರೀಕ್ಷಿಸಿ, ಈಕೆಯು ಸೀತೆಯೇ

ಇತ್ಯೇವ ಮರ್ಥಂ ಕಪಿ ರನ್ವವೇಕ್ಷ್ಯ ಸೀತೇಯ ಮಿತ್ಯೇವ ನಿವಿಷ್ಟಬುದ್ಧಿಃ ।
ಸಂಶ್ರಿತ್ಯ ತಸ್ಮಿ ನ್ನಿಷಸಾದ ವೃಕ್ಷೇ ಬಲೀ ಹರೀಣಾ ಮೃಷಭ ಸ್ತರಸ್ವೀ॥೩೨॥
ಇತಿ ಶ್ರೀ ಮತ್ಸುಂದರಕಾಂಡೆ ಷೋಡಶಸ್ಸರ್ಗಃ .

ಯನ್ನೇ) ಸಂಶ್ರಿತ್ಯ - ದೃಢಪಡಿಸಿಕೊಂಡು, ತಸ್ಮಿನ್ವೃಕ್ಷೆ - ಆ ಶಿಂಶುಪಾವೃಕ್ಷದಲ್ಲಿ, ನಿಷಸಾದ - ಕು ಳಿತಿದ್ದನು ॥೩೨॥

—ಇಂತು ಹದಿನಾರನೆಯ ಸರ್ಗಂ.—

ಸರಿ ಯೆಂದು ಬುದ್ಧಿಗೆ ದಾರ್ಢ್ಯವನ್ನುಂಟುಮಾಡಿಕೊಂಡು ಆಸಿಶ್ಚಿತಬುದ್ಧಿಯಿಂದಲೇ ಶಿಂಶು ಪಾವೃಕ್ಷದ ಎಲೆಗಳ ಪೊದೆಯಲ್ಲಿ ಅವಿತು ಕುಳಿತಿದ್ದನು ॥೩೨॥

—ಇಂತು ಹದಿನಾರನೆಯ ಸರ್ಗಂ—

ಶ್ರೀಃ.

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ.

## — ಸುನ್ದರಕಾಣ್ಡೇ ಸಪ್ತದಶಸ್ಸರ್ಗಃ —

ತತ�ః ಕುಮುದ ಷಂಡಾಭೋ ನಿರ್ಮಲೋ ನಿರ್ಮಲಂ ಸ್ವಯಂ ।
ಪ್ರಜಗಾಮ ನಭ ಶ್ಚಂದ್ರೋ ಹಂಸೋ ನೀಲ ಮಿವೋದಕಂ ॥೧॥
ಸಾಚಿವ್ಯ ಮಿವ ಕುರ್ವನ್ಸ ಪ್ರಭಯಾ ನಿರ್ಮಲಪ್ರಭಃ ।

ಶ್ರೀಃ

— ಹದಿನೇಳನೆಯ ಸರ್ಗಂ —

ಕಂದ॥ ಹರಿಗಾ ಸರಿಯಾಗಲ್ಬರ್ಕೆ ಮೊರೆಯೊಳ್ ಹರಿ ಮೂಡಲೆಂದು ಮಾರುತಿಮನದೊಳ್ ।
ಹರಿಸವ ತಾಳುತೆ ತವಕದೀ ಪರಿಪರಿಯಿಂ ಮಹಿಜೆಯನ್ನೆ ಪರಿಕಿಸುತಿರ್ದಂ ॥

ತತಃ - ತರುವಾಯ, ಕುಮುದಷಂಡಾಭಃ - ಬೆಳ್ದಾವರೆಯ ಗುಂಪಿನಂತೆ ಕಾಂತಿಯುಳ್ಳವನಾದಕಾ ರಣವೇ, ಸ್ವಯಂ - ಸ್ವತಃ, ನಿರ್ಮಲಃ - ಪರಿಶುದ್ಧನಾದ, ಚಂದ್ರಃ - ಚಂದ್ರನು, ಹಂಸಃ - ಹಂಸಪಕ್ಷಿ ಯು, ನೀಲಂ - ಕಪ್ಪಗಿರುವ, ಉದಕಮಿವ - ಜಲವನ್ನು ಹೊಂದುವ ಹಾಗೆ, ನಿರ್ಮಲಂ - ಮೋಡಗಳಿ ಲ್ಲದೆ ಸ್ವಚ್ಛವಾಗಿರುವ, ನೀಲಂ - ಕಪ್ಪಗೆ ಕಾಣಬರುವ, ನಭಃ - ಆಕಾಶವನ್ನು, ಪ್ರಜಗಾಮ - ಹೊಂ ದಿದನು (ಚಂದ್ರೋದಯವಾಯಿತು) ॥೧॥ ಶೀತೈಃ - ತಂಪಾಗಿರುವ, ರಶ್ಮಿಭಿಃ - ಕಿರಣಗಳಿಂದ ಕೂಡಿದ ವನೂ, ನಿರ್ಮಲಪ್ರಭಃ - ಪರಿಶುದ್ಧವಾದ ಕಾಂತಿಯುಳ್ಳವನೂ ಆಗಿರುವ, ಸಃ - ಆ, ಚಂದ್ರಮಾಃ - ಚಂ ದ್ರನು, ಪ್ರಭಯಾ - ಬೆಳ್ದಿಂಗಳಿನಿಂದ, (ಅಸ್ಯ - ಈ ಮಾರುತಿಗೆ) ಸಾಚಿವ್ಯಂ-ಸೀತಾದರ್ಶನಾದಿ ಕಾರ್ಯದಲ್ಲಿ

— ಹದಿನೇಳನೆಯ ಸರ್ಗವು —

ಆ ವೇಳೆಗೆ ಸರಿಯಾಗಿ ಅಂಚೆಯು ಕಪ್ಪಾದ ನೀರಿನಕೊಳದಲ್ಲಿ ಬೆಳಗುವ ಹಾಗೆ, ಬೆ ಳ್ದಾವರೆಗಳಂತೆ ತಳತಳಿಸುವ ನಿರ್ಮಲನಾದ ಚಂದ್ರನು ಕಪ್ಪಗೆ ಕಾಣಬರುವ ಮುಗಿಲ ಮಂಡಲದಲ್ಲಿ ಮೂಡುತಬೆಳಗತೊಡಗಿದನು ॥ ೧ ॥ ಆಗಲಾ ಚಂದ್ರಮನು ನಿರ್ಮಲವಾದ ಪ್ರಭೆಯಿಂದ ಹನುಮನಿಗೆ ಸಹಾಯಮಾಡಲೆಳಸಿದವನಂತೆ ತಂಪಾದ ತನ್ನ ಬೆಳ್ದಿಂಗಳನ್ನು

ಚಂದ್ರಮಾ ರಶ್ಮಿಭಿ ಶ್ಶೀತೈ ಸ್ಸಿಷೇವೇ ಪವನಾತ್ಮಜಮ್ ||೨||
ಸ ದದರ್ಶ ತತ ಸ್ಸೀತಾಂ ಪೂರ್ಣಚಂದ್ರ ನಿಭಾನನಾಂ |
ಶೋಕಭಾರೈ ರಿವನ್ಯಸ್ತಾಂ ಭಾರೈ ರ್ನಾವ ಮಿವಾಂಭಸಿ ||೩||
ದಿದೃಕ್ಷಮಾಣೋ ವೈದೇಹೀಂ ಹನೂಮಾ ನ್ಮಾರುತಾತ್ಮಜಃ |
ಸ ದದರ್ಶಾ ವಿದೂರಸ್ಥಾ ರಾಕ್ಷಸೀ ರ್ಘೋರ ದರ್ಶನಾಃ ||೪||
ಏಕಾಕ್ಷೀ ಮೇಕಕರ್ಣಾಂಚ ಕರ್ಣಪ್ರಾವರಣಾಂ ತಥಾ |
ಅಕರ್ಣಾಂ ಶಂಕುಕರ್ಣಾಂ ಚ ಮಸ್ತಕೋಚ್ಛ್ವಾಸ ನಾಸಿಕಾಂ ||೫||

---

ಸಹಾಯುವನ್ನು ಕುರ್ವನ್ನಿವ - ಮಾಡುತಲಿರುವನೋ ಎಂಬಂತೆ, ಪವನಾತ್ಮಜಂ - ವಾಯುಪುತ್ರನನ್ನು, ನಿಷೇವೆ - ಸೇವಿಸಿದನು ||೨|| ತತಃ - ಅನಂತರದಲ್ಲಿ, ಸಃ - ಆ ಆಂಜನೇಯನು, ಪೂರ್ಣಚಂದ್ರನಿಭಾನನಾಂ - ತುಂಬಿದಚಂದಿರನಿಗೆ ಸಮಾನವಾದ ಮುಖಕಾಂತಿಯುಳ್ಳವಳೂ, ಶೋಕಭಾರೈಃ - ದುಃಖಗಳ ಹೊರೆಗಳಿಂದ, ನ್ಯಸ್ತಾಂ - ಅಡಗಿಸಲ್ಪಟ್ಟವಳಾದಕಾರಣವೇ, ಭಾರೈಃ - ಪದಾರ್ಥಗಳ ಭಾರಗಳಿಂದ, ಅಂಭಸಿ - ನೀರಿನಲ್ಲಿ, ನ್ಯಸ್ತಾಂ - ಕೆಳಕ್ಕೆ ಕೊಂಡುಹೋಗಲ್ಪಟ್ಟ, (ಮುಳುಗಿಸಲ್ಪಟ್ಟ) ನಾವಮಿವಸ್ಥಿತಾಂ - ಹಡೆಯಂತಿರುವ, ಸೀತಾಂ - ಸೀತಾದೇವಿಯನ್ನು, ದದರ್ಶ - ನೋಡಿದನು ||೩|| ಮಾರುತಾತ್ಮಜಃ - ವಾಯುಪುತ್ರನಾದ, ಸಃಹನುಮಾನ್ - ಆ ಆಂಜನೇಯನು, ದಿದೃಕ್ಷಮಾಣಃ - ಚೆನ್ನಾಗಿನೋಡಬೇಕೆಂದು ಬಯಸಿದವನಾಗಿ, ಅವಿದೂರಸ್ಥಾಃ - ಸೀತೆಯಹತ್ತಿರದಲ್ಲಿರುವ, ಘೋರದರ್ಶನಾಃ - ಭಯಂಕರವಾದ ನೋಟಗಳುಳ್ಳ, ರಾಕ್ಷಸೀಃ - ರಕ್ಕಸಿಯರನ್ನು, ದದರ್ಶ - ನೋಡಿದನು ||೪|| ಏಕಾಕ್ಷೀಂ - ಒಕ್ಕಣ್ಣಿನವಳನ್ನೂ, ಏಕಕರ್ಣಾಂಚ - ಒಂದುಕಿವಿಯುವಳನ್ನೂ, ತಥಾ - ಹಾಗೆಯೇ, ಕರ್ಣಪ್ರಾವರಣಾಂಚ - ಹೊದಿಕೆಯಾಗುವಂತಹ ಕಿವಿಯುನ್ನುಳ್ಳವಳನ್ನೂ, ಅಕರ್ಣಾಂ - ಕಿವಿಗಳಿಲ್ಲದವಳನ್ನೂ, ಶಂಕುಕರ್ಣಾಂಚ- ಮೇಕೆಯಕಿವಿಯಂತೆ ಕಿವಿಯುಳ್ಳಳನ್ನೂ, ಮಸ್ತಕೋಚ್ಛ್ವಾಸನಾಸಿಕಾಂ- ತಲೆಯಮೇಲೆ ಉಸಿರುಬಿಡುವಂತಹ ಮೂಗುಳ್ಳವಳನ್ನೂ ||೫|| ಅತಿಕಾಯೋತ್ತಮಾಂಗೀಂಚ - ಶರೀರಪ್ರಮಾಣವನ್ನು ಮೀರಿದ ತಲೆಯುಳ್ಳವಳನ್ನೂ, ತನುದೀರ್ಘಶಿರೋಧರಾಂ - ಸಣ್ಣಗೂ, ನೀಳವಾಗಿಯೂಇರುವ ಕೊರಳುಳ್ಳವಳನ್ನೂ, ಧ್ವಸ್ತ

---

ಬೀರುತ ಮಾರುತಿಯನ್ನು ಸೇವಿಸುತಲಿದ್ದನು || ೨ || ಇಂತಹ ಸಮಯದಲ್ಲಿ ಆಂಜನೇಯನು ಕಡಲಿನ ನಡುವೆ ಹೊರೆಯ ಹೆಚ್ಚಿಗೆಯಿಂದ ಮುಳುಗುವ ನಾವೆಯನ್ನು ಹೇಗೋಹಾಗೆ ಮನೋವ್ಯಥೆಯ ಹೊರೆಯನ್ನು ತಾಳಲಾರದೆ ಶೋಕಸಾಗರದಲ್ಲಿ ಮುಳುಗುತಲಿರುವ ಚಂದ್ರವದನೆಯಾದ ಸೀತೆಯನ್ನು ನೋಡಿದನು ||೩|| ವೈದೇಹಿಯನ್ನು ಹಾಗೆ ನೋಡುತಲಿರುವ ಪವನನಂದನನು ಆಕೆಯಪಕ್ಕದಲ್ಲಿ ಕುಳಿತಿರುವ ಅತಿಭಯಂಕರಿಯರಾದ ರಕ್ಕಸಿಯರನ್ನು ಕಂಡನು ||೪|| ಆನಿಶಾಚರಿಯರೊಳಗೆ ಒಬ್ಬಳಿಗೆ ಒಂದೇಕಣ್ಣು. ಒಬ್ಬಳಿಗೆ ಒಂದೇ ಕಿವಿ. ಮತ್ತೊಬ್ಬಳಿಗೆ ಕಿವಿಯು ಹೊದಿಕೆಯಾಗುವಂತಿದ್ದಿತು. ಕಿವಿಯಿಲ್ಲದವಳೊಬ್ಬಳು, ಮೇಕೆಯ ಕಿವಿಯವಳೊಬ್ಬಳು. ಮತ್ತೊಬ್ಬಳಿಗೆ ಉಸಿರುಬಿಡುವ ಮೂಗು ತಲೆಯ ಮೇಲಿದ್ದಿತು. ||೫|| ಇನ್ನೊಬ್ಬಳಿಗೆ ಶರೀರದಪ್ರಮಾಣವನ್ನು ಮೀರಿ ಬಲುತೋರವಾದ ತಲೆಯಿದ್ದಿತು, ಬಲುಸಣ್ಣಗೂ ನೀಳವಾಗಿಯೂಇರುವ ಕೊರಳನ್ನುಂಟಾಗಿದ್ದವಳೊಬ್ಬಳು, ವೋಟುಕೂದಲ ತಲೆಯವಳೊಬ್ಬಳು. ಬೋಳುತಲೆಯವಳೊಬ್ಬಳು, ಕಂಬಳಿಯಂತೆ ದಟ್ಟವಾದ

ಅತಿಕಾಯೋತ್ತಮಾಂಗೀಂ ಚ ತನುದೀರ್ಘ ಶಿರೋಧರಾಂ ।
ಧ್ವಸ್ತಕೇಶೀಂ ತಥಾಕೇಶೀಂ ಕೇಶಕಂಬಳ ಧಾರಿಣೀಂ ॥೬॥
ಲಂಬಕರ್ಣ ಲಲಾಟಾಂ ಚ ಲಂಬೋದರ ಪಯೋಧರಾಂ ।
ಲಂಬೋಷ್ಠೀಂ ಚುಬುಕೋಷ್ಠೀಂ ಚ ಲಂಬಾಸ್ಯಾಂ ಲಂಬಜಾನುಕಾಂ
ಹ್ರಸ್ವಾಂ ದೀರ್ಘಾಂ ತಥಾ ಕುಬ್ಜಾಂ ವಿಕಟಾಂ ವಾಮನಾಂ ತಥಾ ।
ಕರಾಳಾಂ ಭುಗ್ನವಕ್ತ್ರಾಂ ಚ ಪಿಂಗಾಕ್ಷೀಂ ವಿಕೃತಾನನಾಂ ॥೮॥
ವಿಕೃತಾಃ ಪಿಂಗಳಾಃ ಕಾಳೀಃ ಕ್ರೋಧನಾಃ ಕಲಹಪ್ರಿಯಾಃ ॥

ಕೇಶೀಂ – ಉದುರಿಹೋದ ಕೂದಲುಳ್ಳವಳನ್ನೂ, ತಥಾ-ಹಾಗೆಯೇ, ಅಕೇಶೀಂ-ಬೋಳತಲೆಯುಳ್ಳವಳನೂ (ಮೋಟುಕೂದಲವಳನ್ನೂ) ಕೇಶಕಂಬಳಧಾರಿಣೀಂ- ಕಂಬಳಿಯಂತಿರುವ ತಲೆಗೂದಲುಳ್ಳವಳನ್ನೂ॥೬ ಲಂಬಕರ್ಣಲಲಾಟಾಂಚ - ಜೋಲಾಡುತ್ತಿರುವ ಕಿವಿ ಮತ್ತು ಹಣೆಯಂತೊಗಲಿನ ತಿರಿಗಳುಳ್ಳವಳನ್ನೂ, ಲ ಬೋದರಪಯೋಧರಾಂ - ಇಳಿಯಬಿದ್ದಿರುವ ಹೊಟ್ಟೆ ಮತ್ತು ಎದೆಯುಳ್ಳವಳನ್ನೂ, ಲಂಬೋಷ್ಠೀಂ ಜೋಲಾಡುವ ತುಟಿಗಳುಳ್ಳವಳನ್ನೂ, ಚುಬುಕೋಷ್ಠೀಂಚ - ಗಡ್ಡದಲ್ಲಿ ತುಟಿಯುಳ್ಳವಳನ್ನೂ, ಲಂಬಸ್ಯಾಂ - ಜೋಲಾಡುವ ಮೋರೆಯುಳ್ಳವಳನ್ನೂ, ಲಂಬಜಾನುಕಾಂ- ಇಳಿಯಬಿದ್ದಿರುವ ಮೊಣಕಾಲುಚರ್ಮದತಿರಿಯುಳ್ಳವಳನ್ನೂ, ॥೭॥ ಹ್ರಸ್ವಾಂ - ಗಿಡ್ಡಿಯನ್ನೂ, ದೀರ್ಘಾಂ - ನೀಣಿಯನ್ನೂ, ತಥಾ- ಹಾಗೆಯೇ ಕುಬ್ಜಾಂ – ಗುಜ್ಜಾರಿಯನ್ನೂ, ವಿಕಟಾಂ – ತೋರವಾದ ಪಕ್ಕೆಗಳುಳ್ಳವಳನ್ನೂ, ತಥಾ - ಹಾಗೆಯೇ ವಾಮನಾಂ - ಕುಳ್ಳಿಯನ್ನೂ, ಕರಾಳಾಂ – ಉಬ್ಬಿದಹಲ್ಲುಳ್ಳವಳನ್ನೂ, ಭುಗ್ನವಕ್ತ್ರಾಂಚ – ಗುಳಿಮೋರೆಯುವಳನ್ನೂ, (ಹಳ್ಳದ ಮುಖವುಳ್ಳವಳನ್ನೂ) ಪಿಂಗಾಕ್ಷೀಂ – ಹಸಿರು ಗಣ್ಣಿಯನ್ನೂ, ವಿಕೃತಾನನಾಂ ವಿಕಾರದ ಮುಖವುಳ್ಳವಳನ್ನೂ, ಸಃ – ಆಮಾರುತಿಯು, ದದರ್ಶ - ನೋಡಿದನು ॥೮॥ ವಿಕೃತಾಃ ವಿಕಾರವೇಷದವರನ್ನೂ, ಪಿಂಗಳಾಃ - ಹೊಂಬಣ್ಣದವರನ್ನೂ, ಕಾಳೀಃ - ಕರಿಗಿಯರನ್ನೂ, ಕ್ರೋಧನಾಃ – ಸಿಟ್ಟುಗಾತಿಯರನ್ನೂ, ಕಲಹಪ್ರಿಯಾಃ - ಜಗಳಗಂಟಿಯರನ್ನೂ, ಕಾಲಾಯಸ ಮಹಾಶೂಲಕೂಟಮುದ್ಗರಧಾರಿಣೀಃ- ಕಬ್ಬಿಣದಿಂದ ಮಾಡಿರುವ ತೋರವಾದ ಶೂಲ, ಕೂಟ, ಮುದ್ಗರ ಎಂಬ ಆಯುಧಗಳನ್ನು ಹಿಡಿದಿರುವವರನ್ನೂ, ॥೯॥

ಕೂದಲನ್ನೊಳಗೊಂಡಿದ್ದವಳೊಬ್ಬಳು ॥೬॥ ಒಬ್ಬಳಿಗೆ ಜೋಲಾಡುವ ಕಿವಿ, ಇನ್ನೊಬ್ಬಳಿ ಹಣೆಯಲ್ಲಿ ಜೋಲುಬಿದ್ದಿರುವ ಚರ್ಮದ ತಿರಿ, ಇನ್ನೊಬ್ಬಳಿಗೆ ಇಳಿಯಬಿದ್ದಿರುವ ಹೊಟ್ಟೆ ಬೇರೊಬ್ಬಳಿಗೆ ನೀಳವಾದ ಎದೆ, ಉದ್ದವಾದ ತುಟಿಯೊಬ್ಬಳಿಗೆ, ಗಡ್ಡದಲ್ಲಿನ ತುಟಿಯುಳ್ಳವಳೊಬ್ಬಳು, ಒಬ್ಬಳಿಗೆ ಬಲುಅಗಲವಾದ ಬಾಯಿ, ಈಜಾಡುವ ಮೊಣಕಾಲಿನವಳೊಬ್ಬಳು ॥೭॥ ಮತ್ತು-ಕಿರಿಯ ಹಟ್ಟಿನವಳೂ, ನೀಣಗಾಲಿನವಳೂ, ಗೂನಿಯೂ, ಅಡ್ಡಮಯ್ಯವಳೂ, ಗಿಡ್ಡಿಯೂ, ಉಬ್ಬುಹಲ್ಲಿನವಳೂ, ಗುಳಿಮೋರೆಯುವಳೂ, ಬೆಕ್ಕಿನ ಕಣ್ಣಿನವಳೂ ಬಹುವಿಕಾರದ ಮುಖವುಳ್ಳವಳೂ ಮಾರುತಿಗೆ ಕಂಡುಬಂದರು॥೮॥ ಇವರಲ್ಲದೆ ವಿಕಾರವೇಷದ, ಕಪ್ಪು ಹಸಿರು ಬಣ್ಣದ, ಸಿಡುಕುಸ್ವಭಾವದ, ಜಗಳಗಂಟಿಯರಾದ, ಕಬ್ಬಿಣದಿಂ ಮಾಡಿರುವ ತೋರವಾದ ಶೂಲ, ಕೂಟ,ಮುದ್ಗರ, ಎಂಬ ಆಯುಧಗಳನ್ನು ಹಿಡಿದಿರವವರನ್ನೂ ॥೯॥ ಕಾಡುಹಂದಿ, ಜಿಂಕೆ, ಹುಲಿ, ಕಾಡುಕೋಣ, ಹೋತ, ಗುಳ್ಳೆಯನರಿ

ಕಾಳಾಯಸ ಮಹಾಶೂಲ ಕೂಟಮುದ್ಗರ ಧಾರಿಣೀಃ ||೯||
ವರಾಹ ಮೃಗ ಶಾರ್ದೂಲ ಮಹಿಷಾಜ ಶಿವಾಮುಖೀಃ |
ಗಜೋಷ್ಟ್ರ ಹಯಪಾದೀಶ್ಚ ನಿಖಾತಶಿರಸೋಽಪರಾಃ ||೧೦||
ಏಕ ಹಸ್ತೈಕ ಪಾದಾಶ್ಚ ಖರಕರ್ಣ್ಯಶ್ವಕರ್ಣಿಕಾಃ |
ಗೋಕರ್ಣೀರ್ಹಸ್ತಿಕರ್ಣೀಶ್ಚ ಹರಿಕರ್ಣೀಸ್ತಥಾಪರಾಃ ||೧೧||
ಅನಾಸಾ ಅತಿನಾಸಾಶ್ಚ ತಿರ್ಯಙ್ನಾಸಾ ವಿನಾಸಿಕಾಃ |
ಗಜಸನ್ನಿಭ ನಾಸಾಶ್ಚ ಲಲಾಟೋಚ್ಛ್ವಾಸ ನಾಸಿಕಾಃ ||೧೨||
ಹಸ್ತಿಪಾದಾ ಮಹಾಪಾದಾ ಗೋಪಾದಾಃ ಪಾದಚೂಳಿಕಾಃ |

---

ವರಾಹ ಮೃಗ ಶಾರ್ದೂಲ ಮಹಿಷಾಜ ಶಿವಾಮುಖೀಃ-ವರಾಹ- ಕಾಡು ಹಂದಿಯು, ಮೃಗ- ಹುಲ್ಲೆಯು, ಶಾರ್ದೂಲ - ಹುಲಿಯು, ಮಹಿಷ - ಕಾಡುಕೋಣನ, ಅಜ - ಹೋತನ, ಶಿವಾ - ಗುಳ್ಳೇನರಿಯು, ಮುಖೀಃ - ಮೋರೆಯಂತೆ ಮೋರೆಗಳುಳ್ಳವರನ್ನೂ, ಗಜೋಷ್ಟ್ರಹಯಪಾದೀಶ್ಚ - ಆನೆ, ಒಂಟೆ, ಕುದುರೆ, ಇವುಗಳ ಹೆಜ್ಜೆಯಂತೆ ಹೆಜ್ಜೆಗಳುಳ್ಳವರನ್ನೂ, ನಿಖಾತ ಶಿರಸಃ - ಕೊರಳಿಲ್ಲದೆ ಎದೆಯ ಮೇಲೆ ನಿಂತಿರುವ ಶಿರಗಳುಳ್ಳ, ಅಪರಾಃ-ಮತ್ತೆ ಕೆಲವು ಮಂದಿ ರಕ್ಕಸಿಯರನ್ನೂ ||೧೦|| ಏಕಹಸ್ತೈಕಪಾದಾಶ್ಚ- ಒಂಟಿಗೈ, ಒಂಟಿಗಾಲಿನವರನ್ನೂ, ಖರಕರ್ಣ್ಯಶ್ವಕರ್ಣಿಕಾಃ - ಕತ್ತೆಯ ಮತ್ತು ಕುದುರೆಯ ಕಿವಿಯಂತೆ ಕಿವಿಗಳುಳ್ಳವರನ್ನೂ, ಗೋಕರ್ಣೀಃ - ಆಕಳಕಿವಿಯಂತೆ ಕಿವಿಗಳುಳ್ಳವರನ್ನೂ, ಹಸ್ತಿಕರ್ಣೀಶ್ಚ - ಆನೆಯ ಕಿವಿಯವರನ್ನೂ, ತಥಾ - ಹಾಗೆಯೇ, ಹರಿ ಕರ್ಣೀಃ - ಸಿಂಗದ ಕಿವಿಯ, ಅಥವಾ-ಕೋತಿಕಿವಿಯವರಾದ, ಅಪರಾಃ - ಮತ್ತೆ ಕೆಲವು ಮಂದಿ ರಕ್ಕಸಿಯರನ್ನೂ || ೧೧ || ಅನಾಸಾಃ-ಮೂಕ್ಕಡಿಯರನ್ನೂ, ಅತಿನಾಸಾಶ್ಚ-ಪರಿಮಾಣವನ್ನು ಮೀರಿದ ಮೂಗುಳ್ಳವರನ್ನೂ, ತಿರ್ಯಕ್ನಾಸಾಃ - ಅಡ್ಡಮೂಗಿನವರನ್ನೂ, ವಿನಾಸಿಕಾಃ - ಬುರುಡೆ ಮೂಗಿನವರನ್ನೂ, ಗಜನಾಸಾಶ್ಚ - ಆನೆಯ ಸೊಂಡಲಿನಂತಹ ಮೂಗಿನವರನ್ನೂ, ಲಲಾಟೋಚ್ಛ್ವಾಸನಾಸಿಕಾಃ - ಹಣೆಯಲ್ಲಿ ಉಸಿರಾಡುವ ಮೂಗುಳ್ಳವರನ್ನೂ ||೧೨|| ಹಸ್ತಿಪಾದಾಃ - ಆನೆಗಾಲಿನವರನ್ನೂ, ಮಹಾಪಾದಾಃ - ದೊಡ್ಡಕಾಲಿನವರನ್ನೂ, ಗೋಪಾದಾಃ - ಆಕಳಿನ ಕಾಲಿನಂತೆ ಗೊರಸು ಕಾಲಿನವರನ್ನೂ, ಪಾದಚೂಳಿಕಾಃ - ಕೂದಲು ತುಂಬಿದ ಪಾದದವರನ್ನೂ, ಅತಿಮಾತ್ರ ಶಿರೋಗ್ರೀವಾಃ-ಮಿತಿಮೀರಿದ ತಲೆ ಗೊರಳುಳ್ಳವರನ್ನೂ, ಅತಿ ಮಾತ್ರಕುಚೋದರೀಃ - ಉಬ್ಬಿದ

---

ಇವುಗಳ ಮೋರೆಗಳಂತೆ ಮೋರೆಯುಳ್ಳವರನ್ನೂ ಆನೆ, ಒಂಟೆ, ಕುದುರೆ, ಇವುಗಳ ಕಾಲುಗಳಂತೆ ಕಾಲುಳ್ಳವರನ್ನೂ, ಕೊರಳಿಲ್ಲದೆ ಎದೆಯಮೇಲೆ ನಟ್ಟಿರುವ ಶಿರವುಳ್ಳವರಂತೆ ಕಾಣಬರುವವರನ್ನೂ ||೧೦|| ಒಂದು ಕೈಯ್ಯ, ಒಂದು ಕಾಲಿನ, ಕತ್ತೆ ಕಿವಿಯ, ಕುದುರೆಯ ಕಿವಿಯ, ರಕ್ಕಸಿಯರನ್ನೂ, ಆಕಳು, ಆನೆ, ಕಪಿ, ಇವುಗಳ ಕಿವಿಯಂತೆ ಕಿವಿಯುಳ್ಳ ಮತ್ತೆ ಕೆಲವು ಮಂದಿ ನಿಶಾಚರಿಯರನ್ನೂ ಆಂಜನೇಯನು ಅವಲೋಕಿಸಿದನು||೧೧|| ಇವರಲ್ಲದೆ, ಇನ್ನು ಕೆಲವರಿಗೆ ಮೂಗೇ ಇಲ್ಲ. ಮತ್ತೆ ಕೆಲವರಿಗೆ ಬುರುಡೆ ಮೂಗು, ಇನ್ನು ಕೆಲವರಿಗೆ ಅಡ್ಡ ಮೂಗು, ಬೇರೆಕೆಲವರಿಗೆ ಅತಿಮೂಗು. ಆನೆಯ ಸೊಂಡಿಲನಂತೆ ಮೂಗುಳ್ಳವರು ಕೆಲವರು. ಹಣೆಮೂಗಿನವರೂ ಕೆಲವರಾಗಿದ್ದರು || ೧೨ || ಕೆಲವರಿಗೆ ಆನೆಯಂತೆ ಹೆಜ್ಜೆ, ಕೆಲವರಿಗೆ ಉದ್ದವಾದ ಪಾದ, ಆಕಳಿನ ಗೊರಸಿನಂತೆ ಕಾಲುಳ್ಳವರು ಕೆಲವರು, ಮುಂಗಾಲಿನ ತುಂಬ ಕೂದಲುಳ್ಳವರು ಕೆಲವರು, ಪ್ರಮಾಣವನ್ನತಿಕ್ರಮಿಸಿರುವ ತಲೆಕೊರಳು

ಅತಿಮಾತ್ರಶಿರೋಗ್ರೀವಾ ಅತಿಮಾತ್ರ ಕುಚೋದರೀಃ ||೧೩||
ಅತಿಮಾತ್ರಾಸ್ಯ ನೇತ್ರಾಶ್ಚ ದೀರ್ಘಜಿಹ್ವಾ ನಖಾ ಸ್ತಥಾ |
ಅಜಾಮುಖೀ ಹಸ್ತಿಮುಖೀ ಗೋಮುಖೀ ಸೂಕರೀಮುಖೀಃ ||೧೪||
ಹಯೋಷ್ಟ್ರ ಖರವಕ್ತ್ರಾಶ್ಚ ರಾಕ್ಷಸೀ ಘೋರದರ್ಶನಾಃ |
ಶೂಲ ಮುದ್ಗರ ಹಸ್ತಾಶ್ಚ ಕ್ರೋಧನಾಃ ಕಲಹಪ್ರಿಯಾಃ ||೧೫||
ಕರಾಳಾ ಧೂಮ್ರಕೇಶೀಶ್ಚ ರಾಕ್ಷಸೀ ರ್ವಿಕೃತಾನನಾಃ |
ಪಿಬಂತೀ ಸ್ಸತತಂ ಪಾನಂ ಸದಾ ಮಾಂಸ ಸುರಾಪ್ರಿಯಾಃ ||೧೬||
ಮಾಂಸಶೋಣಿತ ದಿಗ್ಧಾಂಗೀ ರ್ಮಾಂಸ ಶೋಣಿತ ಭೋಜನಾಃ |

---

ಎದೆ, ಮತ್ತು ಹೊಟ್ಟೆಗಳುಳ್ಳವರನ್ನೂ, || ೧೩ || ಅತಿಮಾತ್ರಾಸ್ಯನೇತ್ರಾಶ್ಚ - ಪ್ರಮಾಣಾಧಿಕವಾದ, ಕಣ್ಣುಮೋರೆಯುವರನ್ನೂ, ತಥಾ - ಹಾಗೆಯೇ, ದೀರ್ಘಜಿಹ್ವಾನಖಾಃ - ಉದ್ದನೆಯ ಉಗುರುನಾಲಿಗೆಯುವರನ್ನೂ, ಅಜಾಮುಖೀಃ - ಮೇಕೆಯ ಮೋರೆಯುವರನ್ನೂ, ಹಸ್ತಿಮುಖೀಃ - ಆನೆಯ ಮೊರೆಯುವರನ್ನೂ, ಗೋಮುಖೀಃ - ಆಕಳಿನ ಮುಖದಂತೆ ಮುಖವುಳ್ಳವರನ್ನೂ, ಸೂಕರೀಮುಖೀಃ - ಹೆಣ್ಣುಹಂದಿಯ ಮುಖದಂತೆ ಮುಖವುಳ್ಳವರನ್ನೂ, || ೧೪ || ಹಯೋಷ್ಟ್ರಖರವಕ್ತ್ರಾಶ್ಚ - ಕುದುರೆ, ಒಂಟೆ - ಕತ್ತೆ ಇವುಗಳ ಬಾಯಂತೆ ಬಾಯುಳ್ಳವರನ್ನೂ, ಘೋರದರ್ಶನಾಃ - ಭಯಂಕರವಾದ ದೃಷ್ಟಿಯುಳ್ಳ, ರಾಕ್ಷಸೀಃ - ರಕ್ಕಸಿಯರನ್ನೂ, ಶೂಲ ಮುದ್ಗರ ಹಸ್ತಾಶ್ಚ -ಶೂಲಮುದ್ಗರಗಳೆಂಬ ಆಯುಧಗಳನ್ನು ಕೈಯಲ್ಲಿ ಹಿಡಿದಿರುವವರನ್ನೂ, ಕ್ರೋಧನಾಃ - ಬಹುಕೋಪದ ಸ್ವಭಾವದವರನ್ನೂ, ಕಲಹಪ್ರಿಯಾಃ - ವಿವಾದದಲ್ಲಿ ಪ್ರೀತಿಯುಳ್ಳವರನ್ನೂ, ||೧೫ || ಕರಾಳೀಃ - ಹೆದರಿಸುವವರನ್ನೂ, ಧೂಮ್ರಕೇಶೀಶ್ಚ - ಹೊಗೆಯ ಬಣ್ಣದ ಕೂದಲಿನವರನ್ನೂ, ವಿಕೃತಾನನಾಃ - ಬಗೆಬಗೆಯ ವಿಕಾರವುಳ್ಳ ಮೋರೆಯುವರಾದ, ರಾಕ್ಷಸೀಃ - ರಕ್ಕಸಿಯರನ್ನೂ, ಪಾನಂ - ಕುಡಿಯತಕ್ಕ ಮದ್ಯ ಮೊದಲಾದುದನ್ನು, ಸತತಂ - ಯಾವಾಗಲೂ, ಪಿಬಂತೀಃ-ಕುಡಿಯುತ್ತಿರುವವರನ್ನೂ, ಸತತಂ-ನಿರಂತರವೂ, ಮಾಂಸಸುರಾಪ್ರಿಯಾಃ - ಮಾಂಸ, ಹೆಂಡ ಇವುಗಳಲ್ಲಿ ಪ್ರೀತಿಯುಳ್ಳವರನ್ನೂ, ||೧೬|| ಮಾಂಸ ಶೋಣಿತ ಭೋಜನಾಃ - ಮಾಂಸರಕ್ತಾಹಾರಗಳುಳ್ಳವರಾದ ಕಾರಣವೇ, ಮಾಂಸಶೋಣಿತ ದಿಗ್ಧಾಂಗೀಃ - ಮಾಂಸರಕ್ತ

---

ಳುಳ್ಳವರೂ, ಹೊಟ್ಟೆ ಮತ್ತು ಎದೆಗಳನ್ನುಳ್ಳವರೂ, ಅನೇಕರಿದ್ದರು || ೧೩ || ಮಿತಿಮಿಾರಿದ ಮೋರೆ ಮತ್ತು ಕಣ್ಣುಗಳುಳ್ಳವರೂ, ನೀಳವಾದ ನಾಲಗೆ ಮತ್ತು ಉಗುರುಗಳನ್ನುಳ್ಳವರೂ, ಮೇಕೆಯಮುಖದವರೂ, ಗಜವದನೆಯರೂ, ಆಕಳಿನ ಮುಖದಂತೆ ಮುಖವುಳ್ಳವರೂ, ಹಂದಿಯಮುಖದವರೂ, ಕಾಣಬರುತ್ತಿದ್ದರು ||೧೪|| ಕುದುರೆ ಒಂಟೆ, ಕತ್ತೆ ಇವುಗಳ ಬಾಯಿಯಂತೆ ಬಾಯಿ ಕೆಲವರಿಗೆ, ಕೆಲವುಮಂದಿ ನಿಶಾಚರಿಯರು ಬಹಳ ಭಯಂಕರಿಯರಾಗಿದ್ದರು, ಶೂಲ, ಮುದ್ಗರ, ಮುಂತಾದ ಆಯುಧಗಳನ್ನು ಹಿಡಿದು ಬಲು ಸಿಟ್ಟುಗಾತಿಯರೆನಿಸಿ, ಕಲಹಪ್ರಿಯರಾಗಿದ್ದ ಕೆಲವರನ್ನೂ ಕಪಿವರನು ನಿರುಕಿಸಿದನು||೧೫|| ಭಯಂಕರಿಯರಾದ,ಹೊಗೆಯಬಣ್ಣದ ಕೂದಲುಳ್ಳ, ವಕ್ರಮುಖಿಯರಾದ, ಯಾವಾಗಲೂ ಕುಡಿತದಲ್ಲಿರುವ, ಮಾಂಸಮದ್ಯಗಳಲ್ಲಿ ಪ್ರೀತಿಯುಳ್ಳ||೧೬||ಮಾಂಸವನ್ನು ತಿನ್ನುತ, ರಕ್ತವನ್ನು ಕುಡಿಯುತ್ತಲೂ ಇರುವುದರಿಂದಲೇ ಮೈಗೆಲ್ಲಾ ರಕ್ತಮಾಂಸಗಳನ್ನೂ ಬಳಿದು

ತಾ ದದರ್ಶ ಕಪಿಶ್ರೇಷ್ಠೋ ರೋಮಹರ್ಷಣ ದರ್ಶನಾಃ
ಸ್ಕಂಧವಂತ ಮುಪಾಸೀನಾಃ ಪರಿವಾರ್ಯ ವನಸ್ಪತಿಂ ॥೧೭॥
ತಸ್ಯಾಧಸ್ತಾ ಚ್ಚ ತಾಂ ದೇವೀಂ ರಾಜಪುತ್ರೀ ಮನಿಂದಿತಾಂ ॥
ಲಕ್ಷಯಾಮಾಸ ಲಕ್ಷ್ಮೀವಾನ್ ಹನೂಮಾ ಞ್ಜನಕಾತ್ಮಜಾಂ ।
ನಿಷ್ಪ್ರಭಾಂ ಶೋಕ ಸಂತಪ್ತಾಂ ಮಲಸಂಕುಲ ಮೂರ್ಧಜಾಂ॥
ಕ್ಷೀಣಪುಣ್ಯಾಂ ಚ್ಯುತಾಂ ಭೂಮೌ ತಾರಾಂ ನಿಪತಿತಾಮಿವ ।
ಚಾರಿತ್ರ ವ್ಯಪದೇಶಾಢ್ಯಾಂ ಭರ್ತೃದರ್ಶನ ದುರ್ಗತಾಂ ॥ ೨೦ ॥

---

ಗಳಲೇಪದಶರೀರವುಳ್ಳವರನ್ನೂ, ರೋಮಹರ್ಷಣದರ್ಶನಾಃ - ಭಯದಿಂದ ರೋಮಾಂಚವನ್ನುಂಟುಮಾಡುವ ನೋಟವುಳ್ಳ, ಸ್ಕಂಧವಂತಂ - ತೋರವಾದ ಕವರುಗಳುಳ್ಳ, ವನಸ್ಪತಿಂ - ಶಿಂಶುಪಾವೃಕ್ಷವನ್ನು, ಪರಿವಾರ್ಯ-ಸುತ್ತಿಕೊಂಡು, ಉಪಾಸೀನಾಃ - ಕುಳಿತುಕೊಂಡಿರುವ, ತಾಃ-ಆರಕ್ಕಸಿಯರನ್ನೂ, ದದರ್ಶ - ನೋಡಿದನು ॥೧೭॥ ॥ ಲಕ್ಷ್ಮೀವಾನ್-ಸೀತಾದರ್ಶನದಿಂದ ಹೆಚ್ಚಿದಕಾಂತಿಯುಳ್ಳ, ಸಃ- ಆ, ಹನುಮಾನ್ ಆಂಜನೇಯನು, ಅನಿಂದಿತಾಂ - ದೋಷಲೇಶವಿಲ್ಲದ, ಜನಕಾತ್ಮಜಾಂ - ಜನಕಮಹಾರಾಜನು ಬೆಳಸಿದ ಮಗಳಾದಕಾರಣವೇ, ರಾಜಪುತ್ರೀಂ - ರಾಜಕುಮಾರಿ ಎನಿಸಿಕೊಂಡಿರುವ, ಶೋಕಸಂತಪ್ತಾಂ - ದುಃಖದಿಂದ ಹೆಚ್ಚಾಗಿ ತಪಿಸುತ್ತಲಿರತಕ್ಕವಳಾದ ಕಾರಣವೇ, ನಿಷ್ಪ್ರಭಾಂ - ಕಾಂತಿಹೀನಳಾಗಿರುವ, ಮಲಸಂಕುಲಮೂರ್ಧಜಾಂ - ಕೊಳೆತುಂಬಿದ ಕೂದಲುಳ್ಳ ॥ ೧೮ - ೧೯ ॥ ಕ್ಷೀಣಪುಣ್ಯಾಂ—ಕ್ಷಯಿಸಿಹೋದ ಪುಣ್ಯವುಳ್ಳವಳಾದ ಕಾರಣವೇ, ದಿವಃ - ಸ್ವರ್ಗದದೆಸೆಯಿಂದ ಚ್ಯುತಾಂ - ಕೆಳಕ್ಕೆ ಉರುಳಿದವಳಾಗಿ, ಭೂಮೌ - ಭೂಮಿಯಲ್ಲಿ, ನಿಪತಿತಾಂ - ಬಿದ್ದ, ತಾರಾಮಿವ ( ಸ್ಥಿತಾಂ ) - ನಕ್ಷತ್ರದಂತಿರುವ, ಚಾರಿತ್ರವ್ಯಪದೇಶಾಢ್ಯಾಂ - ಪತಿವ್ರತಾಧರ್ಮವನ್ನು ನಡೆಸತಕ್ಕವಳೆಂಬ ಹೆಸರುವಾಸಿಯಿಂದ ಕೂಡಿರುವ, ಭರ್ತೃದರ್ಶನದುರ್ಗತಾಂ - ಪತಿಯಸಂದರ್ಶನದಲ್ಲಿ ದಾರಿದ್ರ್ಯವನ್ನು ಪಡೆದಿರುವ, (ಪತಿಯನ್ನು ಕಾಣದಿರುವ) ॥೨೦॥ ಉತ್ತಮೈಃ - ಶ್ರೇಷ್ಠಗಳೆನಿಸಿದ, ಭೂಷಣೈಃ - ಆಭರಣಗಳಿಂದ, ಹೀನಾಂ- ಶೂನ್ಯಳಾಗಿರುವ, ಭರ್ತೃವಾತ್ಸಲ್ಯಭೂಷಣಾಂ - ಪತಿಯಲ್ಲಿನ ಅನುರಾಗವೆಂಬ ದಿವ್ಯಾಭರಣವನ್ನು ಧರಿಸ

---

ಕೊಂಡಿರುವ,ನೋಡತಕ್ಕವರಿಗೆ ಬಹುಭಯವನ್ನುಂಟುಮಾಡುವುದರ ಮೂಲಕ ರೋಮಾಂಚವನ್ನುಂಟುಮಾಡತಕ್ಕ ದೃಷ್ಟಿಗಳುಳ್ಳವರಾಗಿ, ಬಹು ಶಾಖೆಗಳನ್ನೊಳಗೊಂಡಿರುವ ಶಿಂಶುಪಾವೃಕ್ಷದಸುತ್ತಲೂ ನೆರೆದಿರತಕ್ಕ ಆರಾಕ್ಷಸಿಯರನ್ನೆಲ್ಲ ಕಪಿವರನು ಕಂಡನು ॥ ೧೭ ॥ ಆ ಮರದ ಬುಡದಲ್ಲಿಯೇ ಆ ಘೋರರಕ್ಕಸಿಯರನಡುವೆ ಕುಳಿತಿರುವ, ದೋಷಲೇಶವಿಲ್ಲದ, ಜನಕರಾಜಪುತ್ರಿಯನ್ನು ತೇಜಸ್ವಿಯಾದ ಆಂಜನೇಯನು ನೋಡಿದನು. ಆ ವೈದೇಹಿಯಾದರೆ ಕಳೆಗುಂದಿದಾಳೆ, ಶೋಕದಿಂದ ಬಹು ತಪಿಸುತಲಿರುವಳು, ಎಣ್ಣೆನೀರುಗಳ ಸುದ್ದಿಯನ್ನೇ ಕಾಣದಿರುವದರಿಂದ ತಲೆಗೂದಲೆಲ್ಲ ಕೊಳೆಯಿಂದ ತುಂಬಿದೆ ॥೧೮-೧೯॥ ಸುಕೃತವಶದಿಂದ ನಕ್ಷತ್ರಲೋಕದಲ್ಲಿದ್ದು ಪುಣ್ಯಾವುಕ್ಷಯಿಸಿಹೋಗಲು, ಜಾರಿಬಂದು ಭೂಮಿಯಮೇಲೆ ಕಳುತಿರುವ ತಾರೆಯೋ ಎಂಬಂತೆ ಕಾಣಬರುತಲಿದಾಳೆ. ಮಹಾಪಾತಿವ್ರತ್ಯವೆಂಬ ಸಚ್ಚರಿತ್ರೆಯಿಂದ ಉಂಟಾದ ಒಳ್ಳೆಯಹೆಸರುವಾಸಿಯನ್ನು ಪಡೆದಿರುವಳು. ಗಂಡನನ್ನು ಆಗಲಿರುವಿಕೆಯೆಂಬ ದರಿದ್ರದೆಶೆಯಲ್ಲಿದಾಳೆ. ॥೨೦॥ ಉತ್ತಮವಾದ ಆಭರಣಗಳೊಂದೂ

ಭೂಷಣೈರುತ್ತಮೈರ್ಹೀನಾಂ ಭರ್ತೃವಾತ್ಸಲ್ಯಭೂಷಣಾಂ ।
ರಾಕ್ಷಸಾಧಿಪಸಂರುದ್ಧಾಂ ಬಂಧುಭಿಶ್ಚ ವಿನಾಕೃತಾಂ ॥೨೧॥
ವಿಯೂಥಾಂ ಸಿಂಹಸಂರುದ್ಧಾಂ ಬದ್ಧಾಂ ಗಜವಧೂಮಿವ ।
ಚಂದ್ರರೇಖಾಂ ಪಯೋದಾಂತೇ ಶಾರದಾಭ್ರೈರಿವಾವೃತಾಂ ॥
ಕ್ಲಿಷ್ಟರೂಪಾಮಸಂಸ್ಪರ್ಶಾದಯುಕ್ತಾಮಿವ ವಲ್ಲಕೀಂ ॥೨೨॥-॥
ಸೀತಾಂ ಭರ್ತೃವಶೇ ಯುಕ್ತಾಮಯುಕ್ತಾಂ ರಾಕ್ಷಸೀವಶೆ ॥
ಅಶೋಕವನಿಕಾಮಧ್ಯೇ ಶೋಕಸಾಗರಮಾಪ್ಲುತಾಂ ।
ತಾಭಿಃ ಪರಿವೃತಾಂ ತತ್ರ ಸಗ್ರಹಾಮಿವ ರೋಹಿಣೀಂ॥

ರುವ, ರಾಕ್ಷಸಾಧಿಪಸಂರುದ್ಧಾಂ - ರಕ್ಕಸರೊಡೆಯನಿಂದ ತಡೆಯಲ್ಪಟ್ಟಿರುವ, ಬಂಧುಭಿಶ್ಚ - ನೆಂಟರಿಂದ, ವಿನಾಕೃತಾಂ - ಅಗಲಿರುವಳಾದ ಕಾರಣವೇ ॥೨೧॥ ವಿಯೂಥಾಂ - ತನ್ನ ಜಾತಿಯ ಹಿಂಡಿಲ್ಲದುದೂ, ಸಿಂಹಸಂರುದ್ಧಾಂ - ಸಿಂಹದಿಂದ ಅಡ್ಡಗಟ್ಟಲ್ಪಟ್ಟಿರುವುದೂ, ಬದ್ಧಾಂ - ಕಟ್ಟಿಹಾಕಲ್ಪಟ್ಟುದುದೂ ಆಗಿರುವ, ಗಜವಧೂಮಿವ (ಸ್ಥಿತಾಂ) ಹೆಣ್ಣಾನೆಯಂತಿರತಕ್ಕವಳಾದ, ಪಯೋದಾಂತೆ - ಮಳೆಗಾಲದಕೊನೆಯಲ್ಲಿ, ಶಾರದಾಭ್ರೈಃ - ಶರದೃತುವಿನ ಮೋಡಗಳಿಂದ, ಆವೃತಾಂ - ಮುಚ್ಚಲ್ಪಟ್ಟಿರುವ, ಚಂದ್ರರೇಖಾಮಿವ (ಸ್ಥಿತಾಂ)- ಚಂದ್ರಕಳೆಯಂತಿರುವ, (ಹೊಳೆದು ಹೊಳೆಯದೆಯೂ ಇರುವ) ॥೨೨॥ ಅಸಂಸ್ಪರ್ಶಾತ್ - ಅಲಂಕಾರಸಂಬಂಧವಿಲ್ಲದಿರುವ ಕಾರಣವೇ ಕ್ಲಿಷ್ಟರೂಪಾಂ - ಬಾಡಿದ ಶರೀರವುಳ್ಳವಳಾಗಿ, ಅಯುಕ್ತಾಂ - ತಂತಿಗಳಿಂದೊಡಗೂಡದ, ವಲ್ಲಕೀಂಇವ (ಸ್ಥಿತಾಂ) - ವೀಣೆಯಂತಿರತಕ್ಕವಳೂ ಆದ, ತಾಂದೇವೀಂ - ಆ ಸೀತಾದೇವಿಯನ್ನು, ತಸ್ಯ - ಆ ಶಿಂಶುಪಾವೃಕ್ಷದ, ಅಧಸ್ತಾತ್ - ಕೆಳಗೆ, (ಬುಡದಲ್ಲಿ) ಲಕ್ಷಯಾಮಾಸ- ನೋಡಿದನು ॥೨೩॥ ॥ ಭರ್ತೃವಶೆ - ಪತಿಯ ಸ್ವಾಧೀನತೆಯಲ್ಲಿ, ಯುಕ್ತಾಂ- ಮನಸ್ಸಿನಿಂದ ನೆಲೆಯಾಗಿರುವ, ರಾಕ್ಷಸೀವಶೆ - ರಕ್ಕಸಿಯರ ಸ್ವಾಧೀನತೆಯಲ್ಲಿ, (ಅವರ ಇಷ್ಟಾನುಸಾರ ನಡೆಯುವ ವಿಚಾರದಲ್ಲಿ) ಅಯುಕ್ತಾಂ - ಮನಸ್ಸಿನಿಂದಲೂ ನಡತೆಯಿಂದಲೂ ನೆಲಗೊಳ್ಳದಿರುವ, ಅಶೋಕವನಿಕಾಮಧ್ಯೆ - ಅಶೋಕವನದ ನಡುವೆ, ಶೋಕಸಾಗರಂ - ದುಃಖಸಮುದ್ರದಲ್ಲಿ, ಆಪ್ಲುತಾಂ -ಮುಳುಗಿ

ಇಲ್ಲ, ಆದರೆ ನಿತ್ಯವೂ ಪತಿಯಲ್ಲಿ ನೆಲೆಗೊಂಡಿರುವ ಮಹತ್ತರವಾದ ಪ್ರೀತಿಯೆಂಬ ದಿವ್ಯಾಭರಣದಿಂದ ಅಲಂಕೃತಳಾಗಿರುವಳು. ರಕ್ಕಸರೊಡೆಯನ ಸೆರೆಗೆ ಒಳಬಿದ್ದಿದಾಳೆ. ನೆಂಟರಿಷ್ಟರಹೆಸರೇ ಇಲ್ಲ॥೨೧॥ ತನ್ನಜಾತಿಯ ಹಿಂಡನ್ನಗಲಿ,ಸಿಂಹದ ಎದುರಿಗೂ ಸಿಕ್ಕಿ, ಕಟ್ಟಿಹಾಕಲ್ಪಟ್ಟೂ ಇರುವ ಹೆಣ್ಣಾನೆಯಂತೆ ಕಾಣಬರುತ್ತಿರುವಳು.ಮಳೆಗಾಲವು ಕಳೆದೆ ಬಳಿಕ ಆಶ್ವಯುಜ ಕಾರ್ತಿಕಮಾಸಗಳಲ್ಲಿನ ಮೋಡಗಳು ಮುಸಿಕಿರುವಾಗ ಒಳಗೆ ಸಿಲುಕಿರುವ ಚಂದ್ರಕಲೆಯಂತೆ ಸ್ವಲ್ಪವಾಗಿ ಹೊಳೆಯುತಲೂ ಚೆನ್ನಾಗಿಹೊಳೆಯದೆಯೂ ಇರುವಳು. ಅಲಂಕಾರಗಳೊಂದೂ ಇಲ್ಲದೆ ರೂಪವೇಮಗ್ಗಿರುವದರಿಂದ ತಂತಿಗಳಿಲ್ಲದವೀಣೆಯಂತಿರುವಳು ॥೨೨॥ಪತಿಯ ಸನ್ನಿಧಾನದಲ್ಲಿಯೇ ಇರಲು ತಕ್ಕವಳಾಗಿದ್ದರೂ, ರಕ್ಕಸಿಯರ ಹತ್ತಿರದಲ್ಲಿ ವಾಸಿಸಲು ಅನರ್ಹಳಾಗಿದ್ದರೂ, ಅಶೋಕವನದೊಳಗೆ ಶೋಕಸಾಗರದಲ್ಲಿ ಮುಳುಗುತ್ತಾ ಕ್ರೂರಗ್ರಹಗಳಿಂದ ಸುತ್ತಲ್ಪಟ್ಟಿರುವ ರೋಹಿಣಿಯಂತೆ ಘೋರ ನಿಶಾಚರಿಯರಿಂದ ಆವರಿಸಲ್ಪಟ್ಟು ಹೂಗಳಿಲ್ಲದೆ ಬರಡಾಗಿರುವ ಬಳ್ಳಿಯಂತೆ ಬೆಳಗದಿರುವ ಆಸೀತಾದೇವಿಯನ್ನು

ದದರ್ಶ ಹನುಮಾನ್ ದೇವೀಂ ಲತಾ ಮಕುಸುಮಾ ಮಿವ ||೨೪||-||
ಸಾ ಮಲೇನ ಚ ದಿಗ್ಧಾಂಗೀ ವಪುಷಾ ಚಾಪ್ಯಲಂಕೃತಾ ||
ಮೃಣಾಳೀ ಪಂಕ ದಿಗ್ಧೇವ ವಿಭಾತಿ ನ ವಿಭಾತಿ ಚ ||೨೫||-||
ಮಲಿನೇನ ತು ವಸ್ತ್ರೇಣ ಪರಿಕ್ಲಿಷ್ಟೇನ ಭಾಮಿನೀಂ ||
ಸಂವೃತಾಂ ಮೃಗ ಶಾಬಾಕ್ಷೀಂ ದದರ್ಶ ಹನುಮಾನ್ ಕಪಿಃ |
ತಾಂ ದೇವೀಂ ದೀನವದನಾ ಮದೀನಾಂ ಭರ್ತೃತೇಜಸಾ ||೨೬||
ರಕ್ಷಿತಾಂ ಸ್ವೇನ ಶೀಲೇನ ಸೀತಾ ಮಸಿತಲೋಚನಾಂ |

ಇರುವ, ತತ್ರ - ಆ ವನದಲ್ಲಿ, ತಾಭಿಃ -ಅಲ್ಲಿನ ರಾಕ್ಷಸಿಯರಿಂದ, ಪರಿವೃತಾಂ - ಸುತ್ತಲ್ಪಟ್ಟಿರುವಳಾ ದಕಾರಣವೇ, ಸಗ್ರಹಾಂ - ಕ್ರೂರಗ್ರಹಗಳಿಂದ ಆವರಿಸಲ್ಪಟ, ರೋಹಿಣೀಮಿವಸ್ಥಿತಾಂ - ರೋಹಿಣೀ ನಕ್ಷತ್ರದಂತೆ ಇರುವ, ||೨೪|| (ಕಿಂಚ - ಮತ್ತು) ಅಪ್ರಸವಾಂ - ಹೂವಿಲ್ಲದಿರುವ, ಲತಾಮಿವ - ಬಳ್ಳಿ ಯೋಪಾದಿಯಲ್ಲಿರತಕ್ಕ, ತಾಂದೇವೀಂ - ಆ ಸೀತಾದೇವಿಯನ್ನು, ಹನುಮಾನ್ - ಆಂಜನೇಯನು, ದದರ್ಶ - ನೋಡಿದನು, ಸಾ - ಆಜಾನಕಿಯು, ಮಲೇನಚ - ಕೊಳೆಯಿಂದ, ದಿಗ್ಧಾಂಗೀ - ತುಂಬಿದ ಅವಯವಗಳುಳ್ಳವಳೂ, ವಪುಷಾ - ಶರೀರದಿಂದ, ಅನಲಂಕೃತಾ - ಅಲಂಕರಿಸಲ್ಪಡದವಳೂ ಆಗಿ, ||೨೫|| ಪಂಕದಿಗ್ಧಾ - ಕೆಸರಿನಿಂದ ತುಂಬಿದ, ಮೃಣಾಳೀವ - ತಾವರೆಯ ಬಳ್ಳಿಯಂತೆ, ವಿಭಾತಿ - ಸ್ವಲ್ಪವಾಗಿ ಪ್ರಕಾಶಿಸುತಲಿದ್ದಾಳೆ, ನವಿಭಾತಿಚ - ಚೆನ್ನಾಗಿ ಪ್ರಕಾಶಿಸುತಲಿಲ್ಲ, ಪರಿಕ್ಲಿಷ್ಟೇನ - ಮಾಸಿಯೂ ಜೀರ್ಣವಾಗಿಯೂ ಹೋಗಿರುವ, ವಸ್ತ್ರೇಣ - ಬಟ್ಟೆಯಿಂದ, ಸಂವೃತಾಂ - ಸುತ್ತಲ್ಪಟ್ಟಿರುವ, ಮೃಗಶಾಬಾಕ್ಷೀಂ- ಹುಲ್ಲೆಯ ಕಣ್ಣಿನಂತೆ ಕಣ್ಣುಳ್ಳ, ಭಾಮಿನೀಂ-ರಾವಣನ ವಿಷಯದಲ್ಲಿ ಸಿಟ್ಟುಗೊಂಡಿರುವ, ದೀನವದನಾಂ- ಸಂತೋಷ ಚಿಹ್ನೆಯಿಲ್ಲದ ಮುಖವುಳ್ಳ, ಭರ್ತೃತೇಜಸಾ-ಪತಿಯ ಪರಾಕ್ರಮದ ಸ್ಮರಣೆಯಿಂದ, ಅದೀನಾಂ- ಧೈರ್ಯವನ್ನು ತಾಳುತಲಿರುವ, ತಾಂದೇವೀಂ - ಆ ಸೀತಾದೇವಿಯನ್ನು, ಹನೂಮಾನ್‍ಕಪಿಃ - ಆಂಜನೇಯನು, ದದರ್ಶ-ನೋಡಿದನು, ||೨೬-೨೬|| ಸ್ವೇನಶೀಲೇನ-ತನ್ನ ಒಳ್ಳೆಯ ನಡತೆಯಿಂದ, ರಕ್ಷಿತಾಂ - ಸಂರಕ್ಷಿಸಲ್ಪಡುತಲಿರುವ, ಅಸಿತಲೋಚನಾಂ-ಕನ್ನೈದಿಲೆಯಂತೆ ಕಪ್ಪಾದ ಕಣ್ಣುಳ್ಳ, ಮೃಗಶಾಬಸಿಭೇಕ್ಷಣಾಂ- ಜಿಂಕೆಯ ಮರಿಯ ಕಣ್ಣಿನಂತೆ ಕಣ್ಣುಳ್ಳ, ತ್ರಸ್ತಾಂ - ಹೆದರಿದ, ಮೃಗಕನ್ಯಾಮಿವ - ಹೆಣ್ಣುಜಿಂಕೆಯ

ಆಂಜನೇಯನು ಕಂಡನು || ೨೩-೨೪ || ಕೊಳೆ ತುಂಬಿದ ಮೈಯುಳ್ಳವಳಾಗಿ, ಮೈಮೇಲೆ ಯಾವುದೊಂದು ಒಡವೆಯೂ ಇಲ್ಲದೆ ಇರುವ ಆ ದೇವಿಯು ಕೆಸರಿನಿಂದ ತುಂಬಿದ ತಾವರೇ ಬಳ್ಳಿಯಂತೆ ತುಸಬೆಳಗುತಲೂ ಚೆನ್ನಾಗಿ ಬೆಳಗದೆಯೂ ಇರುವಳು. ಜೀರ್ಣವಾಗಿರುವ ಮಲಿನವಾದ ವಸ್ತ್ರ, ನಿಶಾಚರನ ವಿಷಯದಲ್ಲಿಉಂಟಾಗಿರುವ ಸಿಟ್ಟು ಅಂತರಂಗದಲ್ಲಿ ಅಡಗಿದೆ ||೨೫-೨೬|| ಹುಲ್ಲೆಯಮರಿಯ ಕಣ್ಣಿನಂತೆ ತರಳಾಕ್ಷಿಯಾಗಿರುವಳು, ಬಹುದೀನವಾದದೆಶೆ, ಪತಿಯ ಅಪರಿಮಿತಪರಾಕ್ರಮದ ಸ್ಮರಣೆಯಿಂದ ಸ್ವಲ್ಪಮಟ್ಟಿಗೆ ಧೈರ್ಯವನ್ನು ತಾಳಿರುವಳು. ಕನ್ನೈದಿಲೆಯಂತೆ ಕಪ್ಪುಕಣ್ಣುಳ್ಳ ಆ ಮಹಾದೇವಿಗೆ ಆಕೆಯ ಮಹತ್ತರವಾದ ಶೀಲವೊಂದೇ ಬೆಂಗಾವಲಾಗಿರುವುದು || ೨೭ || || ಹೆಣ್ಣುಹುಲ್ಲೆಯ ಮರಿಯಂತೆ ಹೆದರಿ ಅತ್ತಿತ್ತ ಸುತ್ತಲೂ ನೋಡುತ್ತಿರುವಳು. ಅಂತರಂಗದಲ್ಲಿ ಅಡಗಿರುವ ಶೋಕಾಗ್ನಿಯ ಜ್ವಾಲೆಯಿಂದ ಬಲುಬಿಸಿಯಾಗಿ ಹೊರಗೆ ಹೊರಡುತಲಿರುವ ನಿಟ್ಟುಸಿರುಗಳಿಂದ ಪಕ್ಕದಲ್ಲಿ

ತಾಂ ದೃಷ್ಟ್ವಾ ಹನುಮಾನ್ ಸೀತಾಂ ಮೃಗಶಾಬನಿಭೇಕ್ಷಣಾಂ ॥
ಮೃಗಕನ್ಯಾಮಿವ ತ್ರಸ್ತಾಂ ವೀಕ್ಷಮಾಣಾಂ ಸಮಂತತಃ ।
ದಹಂತೀಮಿವ ನಿಶ್ವಾಸೈ ರ್ವೃಕ್ಷಾನ್ಪಲ್ಲವಧಾರಿಣಃ ॥೨೯॥
ಸಂಘಾತಮಿವ ಶೋಕಾನಾಂ ದುಃಖಸ್ಯೋರ್ಮಿಮಿವೋತ್ಥಿತಾಂ ।
ತಾಂ ಕ್ಷಮಾಂ ಸುವಿಭಕ್ತಾಂಗೀಂ ವಿನಾಭರಣಶೋಭಿನೀಂ ।
ಪ್ರಹರ್ಷ ಮತುಲಂ ಲೇಭೇ ಮಾರುತಿಃ ಪ್ರೇಕ್ಷ್ಯ ಮೈಥಿಲೀಂ ॥೩೦॥-॥
ಹರ್ಷಜಾನಿ ಚ ಸೋಶ್ರೂಣಿ ತಾಂ ದೃಷ್ಟ್ವಾ ಮದಿರೇಕ್ಷಣಾಂ ।
ಮುಮೋಚ ಹನುಮಾಂಸ್ತತ್ರ ನಮಶ್ಚಕ್ರೇ ಚ ರಾಘವಂ ॥೩೧॥-॥

---

ಮರಿಯಂತೆ, ಸಮಂತತಃ - ಸುತ್ತಲೂ, ವೀಕ್ಷಮಾಣಾಂ - ನೋಡುತಲಿರುವ, ನಿಶ್ವಾಸೈಃ - ನಿಟ್ಟುಸಿರುಗಳಿಂದ, ಪಲ್ಲವಧಾರಿಣಃ - ಚಿಗುರನ್ನು ತಳೆದಿರುವ, ವೃಕ್ಷಾನ್ - ಮರಗಳನ್ನು, ದಹಂತೀಮಿವಸ್ಥಿತಾಂ- ಸುಡುತಲಿರುವಳೋ ಎಂಬಂತಿರುವ, ತಾಂ - ಆ ಜಾನಕಿಯನ್ನು, ದೃಷ್ಟ್ವಾ - ನೋಡಿ, ಹನುಮಾನ್- ಆಂಜನೇಯನು, (ಹರ್ಷಂ - ಸಂತೋಷವನ್ನು) ಲೇಭೆ - ಹೊಂದಿದನು ॥೨೮-೨೯॥ ಶೋಕಾನಾಂ- ದುಃಖಗಳ, ಸಂಘಾತಮಿವ (ಸ್ಥಿತಾಂ) ರಾಶಿಯಂತಿರುವವಳೂ, ದುಃಖಸ್ಯ - ದುಃಖಸಮುದ್ರಕ್ಕೆ ಸಂಬಂಧಪಟ್ಟ, ಉತ್ಥಿತಾಂ-ಮೇಲಕ್ಕೆ ಉಕ್ಕಳಿಸುತಲಿರುವ, ಊರ್ಮಿಮಿವ-(ಸ್ಥಿತಾಂ) ಅಲೆಯಂತಿರುವ, ಕ್ಷಾಮಾಂ- ಕೃಶಿಸಿ ಹೋಗಿರುವ ಕಾರಣವೇ, ಸುವಿಭಕ್ತಾಂಗೀಂ - ಚೆನ್ನಾಗಿ ವಿಂಗಡವಾಗಿರುವ ಅವಯವಗಳುಳ್ಳ, ವಿನಾಭರಣ - ಆಭರಣಗಳಿಲ್ಲದಿದ್ದರೂ, ಶೋಭಿನೀಂ - ಹೊಳೆಯುತಲಿರುವ ॥೩೦॥ ಮೈಥಿಲೀಂ- ಆ ಸೀತಾದೇವಿಯನ್ನು, ಪ್ರೇಕ್ಷ್ಯ- ಚೆನ್ನಾಗಿ ನೋಡಿ, ಅತುಲಂ-ಅಪಾರವಾದ, ಪ್ರಹರ್ಷಂ - ಸಂತೋಷವನ್ನು, ಲೇಭೆ - ಹೊಂದಿದನು, ಸಃ-ಆ ಮಾರುತಿಯು, ಮದಿರೇಕ್ಷಣಾಂ - ವ್ಯಾಮೋಹಕರವಾದ ದೃಷ್ಟಿಯುಳ್ಳ, ತಾಂ-ಆಕೆಯನ್ನು, ದೃಷ್ಟ್ವಾ - ನೋಡಿ, ಹರ್ಷಜಾನಿಚ - ಸಂತೋಷದಿಂದಲೂ ದುಃಖದಿಂದಲೂ ಉಂಟಾದ, ಅಶ್ರೂಣಿ - ಕಣ್ಣೀರುಗಳನ್ನು, ಮುಮೋಚ-ಕರೆದನು, ಹನುಮಾನ್-ಆಂಜನೇಯನು, ತತ್ರ-ಆ ಸಮಯದಲ್ಲಿ, ರಾಘವಂ-ಶ್ರೀರಾಮನನ್ನು, ನಮಶ್ಚಕ್ರೇಚ-(ಮನದೊಳಗೆ ನೆನೆದು) ವಂದಿಸಿದನು ॥೩೧॥ ॥

---

ಚಿಗುರಿರುವ ಮರಗಳನ್ನುಸುಡುವಳೋ ಎಂಬಂತೆ ಕಾಣಬರುತ್ತಿರುವಳು. ಇಂತಹ ಮೃಗಾಕ್ಷಿಯಾದ ಸೀತೆಯನ್ನು ಆಂಜನೇಯನು ಅವಲೋಕಿಸಿದನು ॥ ೨೮-೨೯ ॥ ಶೋಕದ ರಾಶಿಯೋ, ಇಲ್ಲವೆ ದುಃಖಸಾಗರದಿಂದ ಮೇಲಕ್ಕೆ ಉಕ್ಕಳಿಸಿ ಬರುವ ಅಲೆಯೋ ಎಂಬಂತೆ ತೋರಿಬರುವಳು. ಮೈಯಬಡತನವೋ ಹೇಳಬೇಕಾಗಿಲ್ಲ. ರಕ್ತಮಾಂಸಗಳಿಲ್ಲದೆ ಅವಯವಗಳು ವಿರಳವಾಗಿ ಕಾಣಬರುತಲಿವೆ. ಆಭರಣಗಳಿಲ್ಲದಿದ್ದರೂ ಸ್ವಾಭಾವಿಕವಾದ ಕಾಂತಿ ವಿಶೇಷದಿಂದ ಶೋಭಿಸುತಲಿದಾಳೆ ॥೩೦॥ ಇಂತಹ ಮೈಥಿಲಿಯನ್ನು ನೋಡಿದ ಮಾರುತಿಯು, ಯದ್ಯಪಿ ಈಮಹಾದೇವಿಯನ್ನು ಕಂಡೆನಲ್ಲಾ ಎಂದು ಬಹಳವಾಗಿಯೇ ಹರುಷಗೊಂಡನು. ನಯನಗಳಲ್ಲಿ ಬಹುತಂಪಾದ ಆನಂದ ಭಾಷ್ಪವು ಉಕ್ಕತೊಡಗಿತು. ಆದರೇನು ! ಅಯ್ಯೋ ! ಆಕೆಯ ದುರ್ದಶೆಯನ್ನು ನೋಡನೋಡುತ, ಆ ಆನಂದಾಶ್ರುಗಳು ದುಃಖಾಶ್ರುಗಳಾಗಿಯೂ ಪರಿಣಮಿಸಿದುವು. ಆ ಭಾವಸಂಧಿಯು ಭಾವಜ್ಞರಿಗೆ ಬಹು ಸೂಕ್ಷ್ಮದರ್ಶನದಿಂದ ಭಾವಿಸಲು ತಕ್ಕುದಾಗಿದೆ ॥ ೩೧ ॥ ಹೀಗೆ ಕಣ್ಣಿನಿಂದ

ನಮಸ್ಕೃತ್ವಾ ಸ ರಾಮಾಯ ಲಕ್ಷ್ಮಣಾಯ ಚ ವೀರ್ಯವಾನ್ ।
ಸೀತಾದರ್ಶನ ಸಂಹೃಷ್ಟೋ ಹನುಮಾ ನ್ಸಂವೃತೋ ಭವತ್ ॥೩೨॥

— ಇತಿ ಶ್ರೀಮತ್ಸುಂದರಕಾಣ್ಡೇ ಸಪ್ತದಶಸ್ಸರ್ಗಃ —



ಸಃ-ಆ, ವೀರ್ಯವಾನ್-ಬಲಶಾಲಿಯಾದ ಹನುಮನು, ರಾಮಾಯ-ರಾಮನಿಗೂ, ಲಕ್ಷ್ಮಣಾಯಚ-ಲಕ್ಷ್ಮಣನಿಗೂ, ನಮಸ್ಕೃತ್ವಾಚ-ನಮಸ್ಕರಿಸಿ, ಸೀತಾದರ್ಶನಸಂಹೃಷ್ಟಃ - ಸೀತೆಯನ್ನು ನೋಡುವುದರಿಂದ ಉಂಟಾದ ಹೆಚ್ಚು ಸಂತೋಷವನ್ನುಳ್ಳವನಾದ, ಹನುಮಾನ್ - ಆಂಜನೇಯನು, ಸಂವೃತಃ- (ಮರದ ಪೊದೆಯಲ್ಲಿ,) ಚೆನ್ನಾಗಿ ತಲೆಮರೆಯಿಸಿಕೊಂಡವನಾಗಿ, ಅಭವತ್-ಇದ್ದನು. ॥೩೨॥ ॥

—ಇಂತು ಹದಿನೇಳನೆಯ ಸರ್ಗವು.—



ನೀರನ್ನು ಸುರಿಸುತ್ತ ಆಂಜನೇಯನು ತನ್ನಮನದೊಳಗೆ ಆವಾವ ಭಾವಗಳುಂಟಾದುವೋ ಆ ಸರ್ವಭಾವಗಳಿಂದಲೂ ಶ್ರೀರಾಮನನ್ನು ಮನದೊಳಗೆ ಅಭಿವಂದಿಸಿದನು. ಹೀಗೆ ಲಕ್ಷ್ಮಣನಿಂದೊಡಗೂಡಿದ ರಘುನಂದನನನ್ನು ವಂದಿಸಿದ ವೀರಹನುಮನು ಸೀತಾಸಂದರ್ಶನದಿಂದ ಸಂತುಷ್ಟಾಂತರಂಗನಾಗಿ ಮರದೆಲೆಯ ಪೊದೆಯೊಳಗೆ ತಲೆಯನ್ನು ಮರೆಯಿಸಿಕೊಂಡು ಕುಳಿತಿದ್ದನು ॥೩೨॥ ॥

—ಇಂತು ಹದಿನೇಳನೆಯ ಸರ್ಗ—



ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ.

## — ಸುನ್ದರಕಾಣ್ಡೇ ಸಪ್ತದಶಸ್ಸರ್ಗಃ —

ತಥಾ ವಿಪ್ರೇಕ್ಷಮಾಣಸ್ಯ ವನಂ ಪುಷ್ಪಿತ ಪಾದಪಂ ।
ವಿಚಿನ್ವತ ಶ್ಚ ವೈದೇಹೀಂ ಕಿಂಚಿ ಚ್ಛೇಷಾ ನಿಶಾ ಭವತ್ ॥೧॥
ಷಡಂಗವೇದ ವಿದುಷಾಂ ಕ್ರತುಪ್ರವರಯಾಜಿನಾಂ ।
ಶುಶ್ರಾವ ಬ್ರಹ್ಮಘೋಷಾಂಶ್ಚ ವಿರಾತ್ರೇ ಬ್ರಹ್ಮರಕ್ಷಸಾಮ್ ॥೨॥

---

## — ಹದಿನೆಂಟನೆಯ ಸರ್ಗಂ —

ಕಂದ॥ ಸೀತೆಯ ನಿರುಕಿಸಿ ಹರಿಸದಿ। ವಾತಾತ್ಮಜ ನಿರ್ದನಲ್ತೆ ವಿಟಪಿಯ ತುದಿಯೊಳ್।
ಸೀತೆಯ ಕಾಣಲ್‌ನಿಶಿಚರ । ನಾತುರದಿಂದ್ವೈದುತಿರ್ದನಾವನದೆಡೆಯೊಳ್ ॥

ತಸ್ಯ - ಆ ಆಂಜನೇಯನು, ಪುಷ್ಪಿತ - ಕುಸುಮಿಸಿರುವ, ಪಾದಪಂ - ಮರಗಳುಳ್ಳ, ವನಂ - ಅರಣ್ಯವನ್ನು, ತಥಾ - ಹಾಗೆ, ವಿಚಿನ್ವತಶ್ಚ - ಹುಡುಕುತಲಿರುವವನೂ ವೈದೇಹೀಂ - ಸೀತೆಯನ್ನು, ವಿಪ್ರೇಕ್ಷಮಾಣಸ್ಯ - ವಿಶೇಷವಾಗಿ ನೋಡುತಲಿರುವವನೂ ಆಗುತ್ತಿರಲಾಗಿ, ನಿಶಾ - ರಾತ್ರಿಯು, ಕಿಂಚಿಚ್ಛೇಷಾ - ಸ್ವಲ್ಪವಾಗಿ ಉಳಿದಿರುವುದು, ಅಭವತ್ - ಆಗಿತ್ತು. ॥೧॥ (ಸಃ - ಆ ಮಾರುತಿಯು) ಷಡಂಗವೇದವಿದುಷಾಂ - ಆರು ಅಂಗಗಳುಳ್ಳ ವೇದಗಳನ್ನು, ಬಲ್ಲವರೂ, ಕ್ರತುಪ್ರವರಯಾಜಿನಾಂ - ಶ್ರೇಷ್ಠವಾದ ಯಜ್ಞಗಳನ್ನು ಆಚರಿಸುವ ಸ್ವಭಾವ ವುಳ್ಳವರೂ ಆಗಿರುವ, ಬ್ರಹ್ಮರಕ್ಷಸಾಂ - ಬ್ರಾಹ್ಮಣಧರ್ಮದಿಂದ ಕೂಡಿರುವ ರಾಕ್ಷಸರ, ಬ್ರಹ್ಮಘೋಷಾಂಶ್ಚ - ವೇದಪಾಠಸ್ವರಗಳನ್ನು, ವಿರಾತ್ರೇ - ಬೆಳಗಿನಜಾವದ ಹೊತ್ತಿನಲ್ಲಿ, ಶುಶ್ರಾವ - ಕೇಳುತ್ತಿದ್ದನು ॥೨॥ ಅಥ - ಅನಂತರದಲ್ಲಿ, ಮಹಾಬಲಃ -

---

## —ಹದಿನೆಂಟನೆಯ ಸರ್ಗವು.—

ಚೆನ್ನಾಗಿ ಕುಸುಮಿಸಿರುವ ತರುಗಳುಳ್ಳ ಆ ಅಶೋಕವನದೊಳಗೆ ಮಾರುತಿಯು ಸುತ್ತಲೂ ನೋಡುತ ಜಾನಕಿಯನ್ನು ಹಾಗೆಯೇ ಭಾವಿಸಿನೋಡುತ್ತಿರಲಾಗಿ ಬೆಳಗಾಗಲಿಕ್ಕೆ ಸ್ವಲ್ಪಹೊತ್ತುಮಾತ್ರವೇ ಉಳಿದಿತ್ತು ॥೧॥ ಆ ಬೆಳಗಿನ ಜಾವದಹೊತ್ತಿನಲ್ಲಿ-ಶಿಕ್ಷೆ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ, ಎಂಬ ಆರು ಅಂಗಗಳಿಂದೊಡಗೂಡಿದ ವೇದಗಳನ್ನೆಲ್ಲ ಬಲ್ಲವರಾಗಿ, ವಾಜಪೇಯ, ಪೌಂಡರೀಕ ಮೊದಲಾದ ಉತ್ತಮಯಜ್ಞಗಳನ್ನು ಮಾಡುವಸ್ವಭಾವವುಳ್ಳ ಬ್ರಾಹ್ಮಣ ಧರ್ಮದಿಂದೊಡಗೂಡಿರುವ ರಾಕ್ಷಸರ ವೇದಘೋಷಗಳು ಮಾರುತಿಯ ಕಿವಿಗೆ ಬೀಳುತ್ತಿದ್ದುವು ॥೨॥ ಆಮೇಲೆ—ವೀಣೆ, ತಂಬೂರಿ, ಮದ್ದಲೆ,

ಅಥ ಮಂಗಳವಾದಿತ್ರೈಃ ಶಬ್ದೈಃ ಶ್ರೋತ್ರ ಮನೋಹರೈಃ ।
ಪ್ರಾಬುಧ್ಯತ ಮಹಾಬಾಹು ರ್ದಶಗ್ರೀವೋ ಮಹಾಬಲಃ ॥೩॥
ವಿಬುಧ್ಯತು ಯಥಾಕಾಲಂ ರಾಕ್ಷಸೇಂದ್ರಃ ಪ್ರತಾಪವಾನ್ ।
ಸ್ರಸ್ತಮಾಲ್ಯಾಂಬರಧರೋ ವೈದೇಹೀ ಮನ್ವಚಿಂತಯತ್ ॥೪॥

ಹೆಚ್ಚಿದ ಬಲವುಳ್ಳ, ಮಹಾಬಾಹುಃ - ನೀಳವಾದ ತೋಳುಳ್ಳ, ದಶಗ್ರೀವಃ - ದಶಕಂಠನು, ಮಂಗಳವಾದಿತ್ರೈಃ - ಮಂಗಳಕರಗಳಾದ ವಾದ್ಯಗಳಿಂದುಂಟಾದ, ಶ್ರೋತ್ರಮನೋಹರೈಃ-ಕಿವಿಗಿಂಪಾಗಿರುವ,ಶಬ್ದೈಃ-ಧ್ವನಿಗಳಿಂದ, ಅಥವಾ - ಮಂಗಳವಾದಿತ್ರೈಃ-ಮಂಗಳವಾದ್ಯಧ್ವನಿಗಳಿಂದಲೂ, ಶ್ರೋತ್ರಮನೋಹರೈಃ-ಕಿವಿಗಳಿಗೂ ಮನಸ್ಸಿಗೂ ಹಿತವಾಗಿರುವ, ಶಬ್ದೈಃ - ಸ್ತುತಿಪಾಠಕರ ಸ್ತೋತ್ರಧ್ವನಿಗಳಿಂದಲೂ, ಪ್ರಾಬುಧ್ಯತ - ಎಚ್ಚತ್ತನು, ॥೩॥ ಪ್ರತಾಪವಾನ್ - ಮಹಾಶೌರ್ಯವುಳ್ಳ, ರಾಕ್ಷಸೇಂದ್ರಸ್ತು - †ರಕ್ಕಸರೊಡೆಯನಾದರೋ, ಸ್ರಸ್ತ - ಜೋಲಾಡುತ್ತಿರುವ, ಮಾಲ್ಯ - ಪುಷ್ಪಮಾಲಿಕೆಗಳನ್ನೂ, ಅಂಬರ - ದಿವ್ಯವಸ್ತ್ರಗಳನ್ನೂ, ಧರಃ - ಧರಿಸಿರುವವನಾಗಿ, ಯಥಾಕಾಲಂ - ಕಾಲವನ್ನತಿಕ್ರಮಿಸದೆ, ವಿಬುಧ್ಯ-ಎಚ್ಚತ್ತು, ವೈದೇಹೀಂತು-ಸೀತಾದೇವಿಯನ್ನು, ಅನ್ವಚಿಂತಯತ್-ಜ್ಞಾಪಿಸಿಕೊಂಡನು, ॥೪॥ † ಮದೋತ್ಕಟಃ.

ಕೊಳಲು, ಶಂಖ, ತಾಳ ಮೊದಲಾದ ವಾದ್ಯಗಳಿಂದ ವಾದ್ಯಗಾರರು ಕಿವಿಗಿಂಪಾಗಿರುವಂತೆ ಶಬ್ದಗಳನ್ನು ನುಡಿಸುತ್ತಾ, ಹೊಗಳು ಭಟರು ರಾಕ್ಷಸ ಸಾರ್ವಭೌಮನ ಶೌರ್ಯೌದಾರ್ಯಾದಿಗುಣಗಳನ್ನು ಹೊಗಳುತ್ತಿರುವಲ್ಲಿ, ಮಹಾ ಬಾಹುಬಲವುಳ್ಳ ದಶಗಳನು ಸುಷುಪ್ತಿಗೆಯಿಂದ ಎಚ್ಚತ್ತನು. ॥೩॥ ಪ್ರತಾಪಸಂಪನ್ನನಾದ ರಾಕ್ಷಸೇಶ್ವರನು ಹೀಗೆ ಕಾಲವನ್ನತಿಕ್ರಮಿಸದೆ ಎಚ್ಚತ್ತು, ನಿದ್ರಾವಶದಿಂದ ಸಡಿಲವಾಗಿ ತಾವು ತಪ್ಪಿಹೋಗಿರುವ ಪುಷ್ಪಮಾಲಿಕೆಗಳನ್ನೂ, ದಿವ್ಯಾಂಬರಗಳನ್ನೂ, ಧರಿಸಿರುತ್ತಾ, ಹಾಗೆಯೇ ತನ್ನಮನದೊಳಗೆ ಜನಕರಾಜನಂದನಿಯನ್ನು ಜ್ಞಾಪಿಸಿಕೊಂಡನು. ॥೪॥ ಕಾಮಬಾಧೆಗೀಡಾಗಿ ಮದದಿಂದ ಕೊಬ್ಬಿರುವ ಆರಾಕ್ಷಸನ

† ಮದನೆ (ಸತಿ) ಕಾಮವಿಕಾರವುಂಟಾಗುತ್ತಿದ್ದರೂ, ಮದೋತ್ಕಟಃ - ಮದದಿಂದ ಕೊಬ್ಬಿದವನು, ನ-ಆಗಲಿಲ್ಲ. (ಆದುದರಿಂದಲೇ) ತಸ್ಯಾಂ-ಆ ಸೀತೆಯಲ್ಲಿ, ಭೃಶಂ - ಬಹಳವಾಗಿ, ನಿಯುಕ್ತಃ- ಭಕ್ತಿಯಿಂದೊಡಗೂಡಿದವನಾದಕಾರಣವೇ, ಸಃರಾಕ್ಷಸಃ - ಆ ರಾವಣನು, ತಂಕಾಮಂ- ಆ ಮನ್ಮಥವಿಕಾರವನ್ನು, ಆತ್ಮನಿ-ತನ್ನ ಮನಸೊಳಗೆ, ಗೂಹಿತುಂ - ಅಡಗಿಸಿಕೊಳ್ಳಲಿಕ್ಕೆ, ನಶಶಾಕ - ಶಕ್ತನಾಗದೆ ಹೋಗಲಿಲ್ಲ. (ಸಮರ್ಥನೇ ಆಗಿದ್ದನು) ಎಂದರೆ:—ವೈಕುಂಠಪುರ ದ್ವಾರಪಾಲಕರಾಗಿದ್ದ ಜಯವಿಜಯರು ಸನಕಸನಂದನ ಶಾಪದಿಂದ ಭಗವಂತನಿಗೆ ವಿರೋಧಿಗಳಾಗಿ ಮೊದಲಿನ ಜನ್ಮದಲ್ಲಿ ಹಿರಣ್ಯಕಶಿಪು, ಹಿರಣ್ಯಾಕ್ಷರಾಗಿಯೂ ಎರಡನೆಯ ಜನ್ಮದಲ್ಲಿ ರಾವಣ, ಕುಂಭಕರ್ಣರಾಗಿಯೂ, ಮೂರನೆಯ ಜನ್ಮದಲ್ಲಿ ಶಿಶುಪಾಲ, ದಂತವಕ್ತ್ರರಾಗಿಯೂ ಹುಟ್ಟಿ ತರುವಾಯ ಭಗವತ್ಸನ್ನಿಧಿಯನ್ನು ಸೇರುವರೆಂಬ ಕಥೆಯು ಲೋಕಪ್ರಸಿದ್ಧವಷ್ಟೆ? ತದನುಸಾರವಾಗಿ ರಾವಣನಿಗೆ ಪೂರ್ವಜನ್ಮಜ್ಞಾನವಿದ್ದಿತು. ಆದರೂ ರಾಕ್ಷಸ ಸ್ವಭಾವವನ್ನು ಅನುಸರಿಸಿ ಮದನವಿಕಾರವುಂಟಾಯಿತು. ಆದರೂ ಆ ಸೀತಾದೇವಿಯನ್ನು ನೆನೆದ ಮಾತ್ರದಲ್ಲಿಯೇ ಆಕೆಯ ವಿಷಯದಲ್ಲಿ ಭಕ್ತಿಯುಳ್ಳವನಾಗುತ್ತಿದ್ದನು. ಆದರೆ ಜನ್ಮಸ್ವಭಾವಾನುಗುಣವಾದ ಅಕೃತ್ಯವು ಅವನನ್ನು ಪಾಪಕ್ಕೆ ಈಡುಮಾಡಿತು ಎಂದು ಮ॥ ತೀ॥

ರಾವಣನು ಮೊದಲು ಜ್ಞಾನಿಯಾಗಿದ್ದರೂ, ಶಾಪವಶದಿಂದ ಭಗವನ್ಮಾಯಾಮೋಹಿತನಾಗಿ, ತಮೋಗುಣಾವಿಷ್ಟನೆನಿಸಿದುದರಿಂದ ಅಕೃತ್ಯಗಳಲ್ಲಿಯೇ ಪ್ರವೃತ್ತಿಯುಂಟಾಯಿತು. ಇದರಿಂದಲೇ ಕಾಮವನ್ನು

ಭೃಶಂ ನಿಯುಕ್ತ ಸ್ತಸ್ಯಾಂಚ ಮದನೇನ ಮದೋತ್ಕಟಃ ।
ನ ಸ ತಂ ರಾಕ್ಷಸಃ ಕಾಮಂ ಶಶಾಕಾತ್ಮನಿ ಗೂಹಿತುಂ ॥೫॥
ಸ ಸರ್ವಾಭರಣೈ ರ್ಯುಕ್ತೋ ಬಿಭ್ರ ಚ್ಛ್ರಿಯ ಮನುತ್ತಮಾಂ ।
ತಾಂ ನಗೈರ್ಬಹುಭಿ ರ್ಜುಷ್ಟಾಂ ಸರ್ವಪುಷ್ಪ ಫಲೋಪಗೈಃ ॥೬॥
ವೃತಾಂ ಪುಷ್ಕರಿಣೀಭಿ ಶ್ಚ ನಾನಾಪುಷ್ಪೋಪ ಶೋಭಿತಾಂ ।

---

ಮದದಿಂದ ಕೊಬ್ಬಿದವನಾದ ಕಾರಣವೇ, ಮದನೇನ - ಮನ್ಮಥನಿಂದ, ತಸ್ಯಾಂ - ಆ ಸೀತೆಯ ವಿಷಯದಲ್ಲಿ, ಭೃಶಂ - ವಿಶೇಷವಾಗಿ, ನಿಯುಕ್ತಃ - ಪ್ರೇರಿಸಲ್ಪಟ್ಟವನಾಗಿ, ಸಃ - ಆ ರಾಕ್ಷಸನು, ತಂ-ಆ, ಕಾಮಂ - ಮನ್ಮಥವಿಕಾರವನ್ನು (ವ್ಯಾಮೋಹವನ್ನು) ಆತ್ಮನಿ - ಮನಸ್ಸಿನಲ್ಲಿ, ಗೂಹಿತುಂ - ಮುಚ್ಚಿಟ್ಟುಕೊಳ್ಳಲಿಕ್ಕೆ, ನಶಶಾಕ - ಶಕ್ತನಾಗಲಿಲ್ಲ, ಅಥವಾ:- ಮದನೇ (ಸತಿ) - ಕಾಮವಿಕಾರವುಂಟಾಗುತ್ತಿದ್ದರೂ, ಮದೋತ್ಕಟಃ - ಮದದಿಂದ ಕೊಬ್ಬಿದವನು, ನ - ಆಗಲಿಲ್ಲ. (ಆದಕಾರಣವೇ) ತಸ್ಯಾಂ - ಆ ಸೀತಾದೇವಿಯ ವಿಷಯದಲ್ಲಿ ಭೃಶಂ - ಬಹಳವಾಗಿ, ನಿಯುಕ್ತಃ - (ಪೂರ್ವಜನ್ಮಸ್ಮರಣೆಯಿಂದ) ಭಕ್ತಿಯುಳ್ಳವನಾದ, ಸಃರಾಕ್ಷಸಃ - ಆ ರಾವಣನು, ತಂಕಾಮಂ - ಆ ಮನ್ಮಥವಿಕಾರವನ್ನು, ಆತ್ಮನಿ - ಮನಸ್ಸಿನಲ್ಲಿ, ಗೂಹಿತುಂ - ಅಡಗಿಸಿಕೊಳ್ಳಲಿಕ್ಕೆ, ನಶಶಾಕ - ಶಕ್ತನಾಗಲಿಲ್ಲವೇ? ॥೫॥ ಸಃ - ಆ ರಾವಣನು, ಸರ್ವಾಭರಣೈಃ - ಸಕಲಾಲಂಕಾರಗಳಿಂದ, ಯುಕ್ತಃ - ಕೂಡಿರುವವನಾದ, ಅನುತ್ತಮಾಂ- ಸರ್ವೋತ್ತಮವಾದ, ಶ್ರಿಯಂ - ಶೋಭಾವಿಶೇಷವನ್ನೇ, ಬಿಭ್ರತ್-ತಾಳಿದವನಾಗುತ್ತ, ಸರ್ವ-ಸಮಸ್ತವಾದ, ಪುಷ್ಪ-ಕುಸುಮಗಳನ್ನು, ಫಲ - ಹಣ್ಣುಗಳನ್ನೂ, ಉಪಗೈಃ ಹೊಂದಿರುವ, ಬಹುಭಿಃ - ಅನೇಕವಾದ, ನಗೈಃ-

---

ಮನವು ಆ ವೈದೇಹಿಯಲ್ಲಿಯೇ ಎಡಬಿಡದೆ ನೆಲಸಿದ್ದಿತು, ಅದರಿಂದಲೇ ಆ ಖೂಳನು ತನ್ನ ಅಂತರಂಗದಲ್ಲಿ ಉಂಟಾದ ಕಾಮವಿಕಾರವನ್ನು ಅಡಗಿಸಿ ಬಚ್ಚಿಟ್ಟುಕೊಳ್ಳಲಿಕ್ಕೆ ಶಕ್ತನಾಗದೆ ಹೋದನು ॥೫॥ ಆದುದರಿಂದಲೇ ಆ ಕೂಡಲೇ ಎದ್ದು, ಸರ್ವಾಲಂಕಾರಗಳಿಂದ ಅಲಂಕೃತನಾಗಿ, ಅಸಾಧಾರಣವಾದ ದೇಹಕಾಂತಿಯನ್ನು ತಳೆದು, ಸರ್ವಋತುಗಳಲ್ಲಿನ ಫಲಪುಷ್ಪಗಳ ಸಮೃದ್ಧಿಯಿಂದ ಒಡಗೂಡಿ ॥೬॥ ಕಮಲ ಕಲ್ಹಾರಾದಿ ಕುಸುಮಗಳಿಂದ ಶೋಭಿಸುತಲಿರುವ, ನಾನಾ ವಿಧವಾದ ಸರೋವರಗಳಿಂದ ಆವರಿಸಲ್ಪಟ್ಟುದಾಗಿ, ಮದದಿಂದ

---

ಅಣಗಿಸಲಾರದೆ ಸೀತೆಯ ವಿಷಯದಲ್ಲಿ ಕಾಮವಿಕಾರವುಳ್ಳವನಾದನು, ಹೀಗಿರುವುದೂ ಪಾಪಫಲಾನಂತರದಲ್ಲಿ ಉತ್ತಮಫಲಕ್ಕೆ ಕಾರಣವಾಗುವುದು. ಆದುದರಿಂದಲೇ ಈ ರಾವಣನಿಗೆ ಮುಂದೆ ಪಶುಪಕ್ಷ್ಯಾದಿಗಳ ನೀಚಜನ್ಮವು ಬಾರದೆ ಉತ್ತಮ ಕ್ಷತ್ರಿಯಜನ್ಮವು ಬಂದು ಚೇದಿದೇಶಕ್ಕೆ ಅರಸಾದ ಶಿಶುಪಾಲನಾದನು, "ನಯುಷ್ಮೆ ವಾಜಬಂಧವೊ ನಿನಿತ್ಸುಶ್ಚನಮರ್ತ್ಯಃ ಅವದ್ಯಮಧಿದೀಧರತ್" ಎಂದರೆ— ಅನ್ನದಾನದಿಂದ ಎಲ್ಲರಿಗೂ ಬಂಧುಗಳಾದ ಎಲೈ ಮಹಾತ್ಮರುಗಳಿರಾ ! ನಿಮ್ಮನ್ನು ನಿಂದಿಸುವ ಸ್ವಭಾವವುಳ್ಳ ಮನುಷ್ಯನಾದರೂ ಕೇಡನ್ನು ಹೊಂದುವುದಿಲ್ಲ, ಏಕೆಂದರೆ-- ದೂಷಿಸುವ ನಿಮಿತ್ತದಿಂದಲಾದರೂ ಯಾವಾಗಲೂ ನಿಮ್ಮನ್ನೇ ನೆನೆಯುತಲಿರುವುದರಿಂದ ಪಾಪರಹಿತನಾಗುವನು ಎಂಬ ಋಙ್ಮಂತ್ರವನ್ನು ಅನುಸರಿಸಿ ರಾವಣನು ಸಾಕ್ಷಾಲ್ಲಕ್ಷ್ಮೀಸ್ವರೂಪಳಾದ ಸೀತಾದೇವಿಯನ್ನು ದುಷ್ಟಸ್ವಭಾವದಿಂದ ಸ್ಮರಣೆ ಮಾಡುತಲಿದ್ದುದೂ ಪಾಪಪರಿಹಾರಕವಾಗಿ ಪರಿಣಮಿಸಿತು ಎಂದು ತಿಲಕ ವ್ಯಾಖ್ಯಾನ.

ಸದಾ ಮದೈಶ್ಚ ವಿಹಗೈ ರ್ವಿಚಿತ್ರಾಂ ಪರಮಾದ್ಭುತಾಂ ॥೭॥
ಈಹಾಮೃಗೈಶ್ಚ ವಿವಿಧೈ ರ್ಜುಷ್ಟಾಂ ದೃಷ್ಟಿಮನೋಹರೈಃ ॥
ವೀಥೀಃ ಸ್ಸಂಪ್ರೇಕ್ಷಮಾಣ ಶ್ಚ ಮಣಿಕಾಂಚನ ತೋರಣಾಃ ॥೮॥
ನಾನಾಮೃಗಗಣಾಕೀರ್ಣಾಂಫಲೈಃ ಪ್ರಪತಿತೈ ರ್ವೃತಾಂ ।
ಅಶೋಕವನಿಕಾ ಮೇವ ಪ್ರಾವಿಶ ತ್ಸಂತತ ದ್ರುಮಾಮ್ ॥೯॥
ಅಂಗನಾ ಶತಮಾತ್ರಂ ತು ತಂ ವ್ರಜಂತ ಮನುವ್ರಜತ್ ।
ಮಹೇಂದ್ರ ಮಿವ ಪೌಲಸ್ತ್ಯಂ ದೇವ ಗಂಧರ್ವ ಯೋಷಿತಃ ॥೧೦॥

---

ಮರಗಳಿಂದ, ಜುಷ್ಟಾಂ - ಕೂಡಿರುವುದೂ ॥೬॥ ಪುಷ್ಕರಿಣೀಭಿಶ್ಚ - ಸರೋವರಗಳಿಂದಲೂ ವೃತಾಂ- ಆವರಿಸಲ್ಪಟ್ಟುದೂ, ನಾನಾಪುಷ್ಪ - ಅನೇಕವಿಧವಾದ ಕುಸುಮಗಳಿಂದ, ಉಪಶೋಭಿತಾಂ - ಶೋಭಾಯಮಾನವಾದುದೂ, ಸದಾಮದೈಃ - ಯಾವಾಗಲೂ ಕೊಬ್ಬಿರುವ, ವಿಹಗೈಶ್ಚ - ಪಕ್ಷಿಗಳಿಂದಲೂ, ವಿಚಿತ್ರಾಂ - ನಾನಾವರ್ಣವುಳ್ಳುದೂ, ಪರಮಾದ್ಭುತಾಂ - ಅತ್ಯಾಶ್ಚರ್ಯಕರವೆನಿಸಿದುದೂ ॥೭॥

ವಿವಿಧೈಃ - ನಾನಾ ಪ್ರಕಾರಗಳಾದ, ದೃಷ್ಟಿಮನೋಹರೈಃ - ನೋಟಕರ ಕಣ್ಮನಗಳನ್ನು ಸಹರಿಸುವ, ಈಹಾಮೃಗೈಃ - ಕೈವಾಡದಿಂದ ಮಾಡಿಟ್ಟಿರುವ ತೋಳಗಳಿಂದ, ಜುಷ್ಟಾಂ - ಕೂಡಿರುವುದೂ ಆಗಿರುವ, ತಾಂ - ಆ ಅಶೋಕವನವನ್ನು, ಮಣಿಕಾಂಚನ-ರತ್ನಗಳನ್ನು ಕೆತ್ತಿರುವ ಬಂಗಾರದ ತಗಡುಗಳನ್ನು ತಗುಲಿಸಿರತಕ್ಕ, ತೋರಣಾಃ - ಹೊರಬಾಗಿಲುಗಳುಳ್ಳ, ವೀಥೀಃಶ್ಚ - ಬಿದಿಗಳನ್ನು, ಸಂಪ್ರೇಕ್ಷಮಾಣಃ - ನೋಡುತಲಿರುವವನಾಗಿ, ನಾನಾಮೃಗಗಣಾಕೀರ್ಣಾಂ - ಬಗೆಬಗೆಯ ಮೃಗಗಳಿಂದ ತುಂಬಿರುವುದೂ, ॥೮॥ ಪ್ರಪತಿತೈಃ - ಕೆಳಗಡೆ ಉದುರಿರುವ, ಫಲೈಃ - ಹಣ್ಣುಗಳಿಂದ, ವೃತಾಂ - ಆವರಿಸಲ್ಪಟ್ಟುದೂ, ಸಂತತದ್ರುಮಾಂ - ದಟ್ಟವಾದ ಮರಗಳುಳ್ಳುದೂ ಆಗಿರುವ, ಅಶೋಕವನಿಕಾಮೇವ - ಅಶೋಕವನವನ್ನೇ, ಪ್ರಾವಿಶತ್ - ಪ್ರವೇಶಿಸುತಲಿದ್ದನು ॥೯॥ ಅಂಗನಾಶತಮಾತ್ರಂತು - ನೂರು ಮಂದಿಯುಷ್ಟು ಹೆಂಗಸರಾದರೋ, ವ್ರಜನ್ತಂ - ವನವನ್ನು ಕುರಿತು ತೆರಳುತಲಿರುವ, ತಂ - ಆ, ಪೌಲಸ್ತ್ಯಂ - ಪುಲಸ್ತ್ಯನ ಮೊಮ್ಮಗನಾದ ರಾವಣನನ್ನು, ದೇವಗಂಧರ್ವಯೋಷಿತಃ- ದೇವಗಂಧರ್ವಾಂಗನೆಯರು, ಮಹೇಂದ್ರಮಿವ -ದೇವೇಂದ್ರನನ್ನು ಹೇಗೋಹಾಗೆ, ಅನುವ್ರಜ‌(ಅನ್ವವ್ರಜ‌)-ಹಿಂಬಾಲಿಸಿ ಹೊರಟರು ॥೧೦॥

---

ಕೊಬ್ಬಿ ಕಿವಿಗಿಂಪಾಗಿರುವಂತೆ ದನಿಮಾಡುತಲಿರುವ ನಾನಾವಿಧ ಪಕ್ಷಿಗಳಿಂದ ಮಹದಾಶ್ಚರ್ಯಕರವೆನಿಸಿ,॥೭॥ ಕಣ್ಮನಗಳಗಂದವಾಗಿರುವಂತೆ ಕೈವಾಡದಿಂದ ಅಲ್ಲಲ್ಲಿ ಮಾಡಿಟ್ಟಿರುವ ತೋಳವೇ ಮೊದಲಾದ ಬಗೆಬಗೆಯ ಕೃತ್ರಿಮಮೃಗಗಳಿಂದ ಒಡಗೂಡಿ, ನವರತ್ನಗಳನ್ನು ಕೆತ್ತಿರುವ ಚಿನ್ನದ ರೇಕುಗಳಿಂದ ಅಲಂಕರಿಸಿ ಇರತಕ್ಕ ದ್ವಾರ ಪ್ರದೇಶಗಳುಳ್ಳ ಮಾರ್ಗಗಳನ್ನು ನೋಡುತ್ತಾ, ॥೮॥ ಅಲ್ಲಲ್ಲಿ ಸಾಕಿರುವ ಬಗೆಬಗೆಯ ಚಿತ್ರಮೃಗಗಳಿಂದ ತುಂಬಿದುದೂ, ಮರಗಳಲ್ಲಿ ಮಾಗಿ ಕೆಳಗೆ ಉದುರಿ ಇರುವ ಹಣ್ಣುಗಳಿಂದೊಡಗೂಡಿದುದೂ, ಸಾಲುಮರಗಳಿಂದ ಸಂಶೋಭಿಸುತಲಿರುವುದೂ ಆಗಿರುವ, ಆ ಅಶೋಕವನವನ್ನು ನಿಶಾಚರೇಂದ್ರನು ಒಳಹೊಗುತಲಿದ್ದನು ॥೯॥ ಸುಮಾರು ನೂರುಮಂದಿಯುಷ್ಟು ರಾಕ್ಷಸವನಿತೆಯರು ಸುರಲೋಕದಲ್ಲಿ ದೇವೇಂದ್ರನನ್ನು ಹಿಂಬಾಲಿಸುವ ದೇವ ಗಂಧರ್ವಕನ್ಯೆಯರ ಹಾಗೆ ಮುಂದೆ ನಡೆಯುತಲಿರುವ ಆ ಪುಲಸ್ತ್ಯನಂದನನನ್ನು ಹಿಂಬಾಲಿಸಿ ನಡೆಯುತೊಡಗಿದರು ॥೧೦॥

ದೀಪಿಕಾಃ ಕಾಂಚನೀಃ ಕಾಶ್ಚಿ ಜ್ಜಗೃಹು ಸ್ತತ್ರಯೋಷಿತಃ ।
ವಾಲವ ಜನಹಸ್ತಾಶ್ಚ ತಾಲವೃಂತಾನಿ ಚಾಪರಾಃ ॥೧೧॥
ಕಾಂಚನೈ ರಪಿ ಭೃಂಗಾರೈ ರ್ಜಹ್ರು ಸ್ಸಲಿಲ ಮಗ್ರತಃ ।
ಮಂಡಲಾಗ್ರಾ ನ್ಬ್ರುಸೀಂಶ್ಚೈವ ಗೃಹ್ಯಾನ್ಯಾಃ ಪೃಷ್ಠತೋ ಯಯುಃ ॥೧೨॥
ಕಾಚಿ ದ್ರತ್ನಮಯೀಂ ಸ್ಥಾಲೀಂ ಪೂರ್ಣಾಂ ಪಾನಸ್ಯ ಭಾಮಿನೀ ।
ದಕ್ಷಿಣಾ ದಕ್ಷಿಣೇ ನೈವ ತದಾ ಜಗ್ರಾಹ ಪಾಣಿನಾ ॥೧೩॥
ರಾಜಹಂಸ ಪ್ರತೀಕಾಶಂ ಛತ್ರಂ ಪೂರ್ಣಶಶಿ ಪ್ರಭಂ।

---

ತತ್ರ - ಆ ರಾವಣನನ್ನು ಹಿಂಬಾಲಿಸಿದ ರಕ್ಕಸಿಯರೊಳಗೆ, ಕಾಶ್ಚಿತ್- ಕೆಲವರು, ಕಾಂಚನೀಃ - ಬಂಗಾರದ ಹಿಡಿಗಳುಳ್ಳ, ದೀಪಿಕಾಃ - ದೀವಿಗೆಗಳನ್ನು (ಪಂಜುಗಳನ್ನು) ಜಗೃಹುಃ - ಹಿಡಿದರು, ಕಾಶ್ಚಿತ್ - ಮತ್ತೆ ಕೆಲವರು, ವಾಲವ್ಯಜನಹಸ್ತಾಶ್ಚ - ಬೀಸುವ ಚಾಮರಗಳನ್ನು ಹಿಡಿದಿದ್ದತಕ್ಕವರು, ಅಭವನ್ - ಆಗಿದ್ದರು. ಅಪರಾಃ - ಮತ್ತೆ ಕೆಲವರು. ತಾಲವೃಂತಾನಿಚ - ಬೀಸಣಿಗೆಗಳನ್ನೂ, ಜಗೃಹುಃ - ಹಿಡಿದಿದ್ದರು. ॥೧೧॥ ಅನ್ಯಾಃ - ಬೇರೆ ಕೆಲವುಮಂದಿ ಹೆಂಗಸರು, ಕಾಂಚನೈಃ - ಚಿನ್ನದಿಂದ ಮಾಡಿದ, ಭೃಂಗಾರೈಃ - ಗಿಂಡಿಗಳಿಂದ, ಅಗ್ರತಃ - ಎದುರಿಗೆ, ಸಲಿಲಂ - ಜಲವನ್ನು, ಜಹ್ರುಃ - ಹಿಡಿದು ಹೊರಟರು. (ಅನ್ಯಾಃ - ಇನ್ನುಕೆಲವರು) ಮಂಡಲಾಗ್ರಾನ್ - ಕತ್ತಿಗಳನ್ನು, ಬ್ರುಸೀಂಶ್ಚೈವ- ಕೂಡುವ ಪೀಠಗಳನ್ನೂ (ದರ್ಭಾಸನ ಮುಂತಾದುದು) ಗೃಹ್ಯ (ಗೃಹೀತ್ವಾ)- ತೆಗೆದುಕೊಂಡು, ಪೃಷ್ಠತಃ-ಹಿಂಬಾಲಿಸಿ, ಯಯುಃ- ಹೋಗುತಲಿದ್ದರು. ॥೧೨॥ ದಕ್ಷಿಣಾ - ಸಮರ್ಥಳಾದ, ಕಾಚಿತ್ - ಒಬ್ಬಳೊಬ್ಬ, ಭಾಮಿನೀ - ರಮಣಿಯು, ಪಾನಸ್ಯ - ಮದ್ಯದಿಂದ, ಪೂರ್ಣಾಂ - ತುಂಬಿರುವ, ರತ್ನಮಯೀಂ - ರತ್ನದಿಂದ ಕೆತ್ತಿದ, ಸ್ಥಾಲೀಂ - ಪಾತ್ರೆಯನ್ನು, ದಕ್ಷಿಣೇನ - ಬಲಗಡೆಯದಾದ, ಪಾಣಿನೈವ - ಹಸ್ತದಿಂದಲೇ, ತಥಾ - ಹಿಂದಿನವರಂತೆ, ಜಗ್ರಾಹ - ಹಿಡಿದು ಹೊರಟಳು. ॥೧೩॥ ಅಪರಾ - ಮತ್ತೊಬ್ಬಸುಂದರಿಯು, ರಾಜಹಂಸ ಪ್ರತೀಕಾಶಂ - ಹಂಸಪಕ್ಷಿಗೆಣೆಯಾಗಿ ಬೆಳಗುತಲಿರುವ, ಪೂರ್ಣಶಶಿಪ್ರಭಂ - ಪೂರ್ಣಚಂದ್ರನಂತೆ ಕಾಂತಿಯುಳ್ಳ, ಸೌವರ್ಣದಂಡಂ - ಚಿನ್ನದ ಹಿಡಿಗೋಲಿನತಕ್ಕ, ಛತ್ರಂ - ಕೊಡೆಯನ್ನು, ಗೃಹೀತ್ವಾ - ಹಿಡಿದುಕೊಂಡು,

---

ಹಾಗೆ ಹೊರಟವರೊಳಗೆ, ಕೆಲವು ಮಂದಿ ಮಹಿಳೆಯರು ಚಿನ್ನದ ಹಿಡಿಗಳುಳ್ಳ ದೀವಿಗೆಗಳನ್ನು ಹಿಡಿದು ನಿಂತರು. ಮತ್ತೆ ಕೆಲಮಂದಿ ಮಾನಿನಿಯರು ಚಾಮರಧಾರಿಣಿಯರಾಗಿ ಸಿದ್ಧರಾದರು. ಇನ್ನು ಕೆಲವು ಮಂದಿ ಲಲನೆಯರು ಬೀಸಣಿಗೆಗಳನ್ನು ಹಿಡಿದು ಹೊರಟರು ॥೧೧॥ ಕೆಲವು ಮಂದಿ ವಾಮಲೋಚನೆಯರು ಪನ್ನೀರನ್ನು ತುಂಬಿದ ಹೂಜಿಗಳನ್ನು ಹಿಡಿದು ಮುಂದಾಳುಗಳಾದರು. ಕತ್ತಿಗಳನ್ನು ಹಿಡಿದು ಕೆಲವು ರಕ್ಕಸಿಯರೂ, ಪೀಠಗಳನ್ನು ಕೈಗೊಂಡು ಕೆಲಮಂದಿ ನಾರಿಯರೂ, ರಾವಣನನ್ನು ಅನುಸರಿಸಿ ಹೊರಡಲು ಅಣಿಯಾದರು ॥೧೨॥ ಒಬ್ಬಾನೊಬ್ಬ ಸುದತಿಯು ಮದ್ಯಪೂರ್ಣವಾದ ರತ್ನ ಖಚಿತವಾಗಿರುವ ಗಿಂಡಿಯನ್ನು ಹಿಡಿದೂ, ಸಮರ್ಥಳಾದ ಮತ್ತೊಬ್ಬ ಭಾಮಾಮಣಿಯು ಪಾನಪಾತ್ರೆಯನ್ನು ಸಡಗರದಿಂದ ಬಲಗೈಯೊಳಗೆ ತಳೆದೂ, ಸನ್ನದ್ಧಳಾದಳು ॥೧೩॥ ಬೇರೊಬ್ಬ ಮತ್ತಕಾಶಿನಿಯು ರಾಜಹಂಸಕ್ಕೆಣೆ ಎನಿಸಿ ಪೂರ್ಣಚಂದ್ರನಂತೆ ಬೆಳಗುತಲಿರುವ ಬಂಗಾರದ ಹಿಡಿಗೋಲುಳ್ಳ ಶ್ವೇತಛತ್ರವನ್ನು ಹಿಡಿದು ನಿಶಾಚರೇಶ್ವರನನ್ನು ಅನುಸರಿಸಲು ಉದ್ಯುಕ್ತಳಾದಳು ॥೧೪॥

ಸೌವರ್ಣದಂಡ ಮಪರಾ ಗೃಹಿತ್ವಾ ಪೃಷ್ಠತೋ ಯಯೌ ||೧೪||
ನಿದ್ರಾ ಮದ ಪರೀತಾಕ್ಷ್ಯೋ ರಾವಣಸ್ಯೋ ತ್ತಮಾಃ ಸ್ತ್ರಿಯಃ |
ಅನುಜಗ್ಮುಃ ಪತಿಂ ವೀರಂ ಘನಂವಿದ್ಯುಲ್ಲತಾ ಇವ ||೧೫||
ವ್ಯಾವಿದ್ಧ ಹಾರಕೇಯೂರಾ ಸ್ಸಮಾಮೃದಿತ ವರ್ಣಕಾಃ |
ಸಮಾಗಳಿತ ಕೇಶಾಂತಾ ಸ್ಸಸ್ವೇದವದನಾ ಸ್ತಥಾ ||೧೬||
ಘೂರ್ಣಂತ್ಯೋ ಮದಶೇಷೇಣ ನಿದ್ರಯಾ ಚ ಶುಭಾನನಾಃ |
ಸ್ವೇದಕ್ಲಿಷ್ಟಾಂಗ ಕುಸುಮಾ ಸ್ಸುಮಾಲ್ಯಾಕುಲ ಮೂರ್ಧಜಾಃ ||೧೭||

ಪೃಷ್ಠತಃ - ಹಿಂದುಗಡೆ. ಯಯೌ - ಹೊರಟಿತು ||೧೪|| ನಿದ್ರಾಮದ - ನಿದ್ರೆಯು ಮದದಿಂದ, ಪರೀತ - ಆಕ್ರಮಿಸಲ್ಪಟ್ಟ, ಅಕ್ಷ್ಯಃ - ಕಣ್ಣುಗಳುಳ್ಳ, ಉತ್ತಮಾಃ - ಶ್ರೇಷ್ಠರೆನಿಸಿದ, ರಾವಣಸ್ಯ - ದಶವದನನ, ಸ್ತ್ರಿಯಃ - ಲಲನೆಯರು, ವೀರಂ - ಪರಾಕ್ರಮಶಾಲಿಯಾದ, ಪತಿಂ - ವಲ್ಲಭನನ್ನು, ವಿದ್ಯುಲ್ಲತಾಃ - ಬಳ್ಳಿಮಿಂಚುಗಳು, ಘನಮಿವ - ಮೇಘವನ್ನು ಹೇಗೋ ಹಾಗೆ, ಅನುಜಗ್ಮುಃ - ಅನುಸರಿಸಿ ಹೋಗುತಲಿದ್ದರು, ||೧೫||

ವ್ಯಾವಿದ್ಧ - ಅತಿನಿದ್ರೆಯಿಂದ ವ್ಯತ್ಯಾಸವಾಗಿದ್ದ, ಹಾರಕೇಯೂರಾಃ - ಮುಕ್ತಾಹಾರಗಳೂ ಭುಜಕೀರ್ತಿಗಳೂ ಉಳ್ಳ, ಸಮಾಮೃದಿತ - ಚೆನ್ನಾಗಿ ಅಳಿಸಿಹೋಗಿರುವ, ವರ್ಣಕಾಃ - ಪರಿಮಳಗಳುಳ್ಳ, ಸಮಾಗಳಿತ - ಸಡಲಿಇಳಿಯುತ್ತಿದ್ದರುವ, ಕೇಶಾಂತಾಃ - ಕೊನೆಗೂದಲುಳ್ಳ, ತಥಾ - ಹಾಗೆಯೇ, ಸಸ್ವೇದವದನಾಃ - ಬೆವರಿದಮುಖವುಳ್ಳ, ||೧೬|| ಮದಶೇಷೇಣ - ಮದದ ಉಳುವಿನಿಂದಲೂ, ನಿದ್ರಯಾಚ - ನಿದ್ದೆಯಿಂದಲೂ, ಘೂರ್ಣಂತ್ಯಃ - ತೂಕಡಿಸಿಬೀಳುವಂತೆ ತಲೆಯನ್ನು ಸುತ್ತುತಲಿರುವ, ಶುಭಾನನಾಃ - ಮಂಗಳವದನೆಯರಾದ, ಸ್ವೇದಕ್ಲಿಷ್ಟಾಂಗಕುಸುಮಾಃ - ಬೆವರಿನಿಂದ ಬಾಡಿದ ಮೈಮೇಲಿನ ಹೂಗಳುಳ್ಳ, ಸುಮಾಲ್ಯಾಕುಲ - ಬಳ್ಳಿಯುಹೂವಿನ ಹಾರಗಳಿಂದೊಡಗೂಡಿ ಕೆದರಿರತಕ್ಕ, ಮೂರ್ಧಜಾಃ - ತಲೆಗೂದಲುಳ್ಳ || ೧೭ || ಮದಿರಲೋಚನಾಃ - ಮದವೇರಿ ಕೆಂಪಡರಿದ ಕಣ್ಣುಳ್ಳ, ಪ್ರಿಯಾಃ -

ಈ ಉತ್ತಮಾಂಗನೆಯರೆಲ್ಲರಿಗೂ ಆಹಿಂದಿನಿರುಳೊಳಗೆ ಕುಡಿತದ ಮದವು ತಲೆಗೇರಿ ಇದ್ದುದು ಇನ್ನೂ ಇಳಿದಿರಲಿಲ್ಲ. ಅರೆನಿದ್ದೆ, ತೂಕಳಿಸುತಲಿದ್ದರು, ಕಣ್ಣುಗಳು ಅರೆಮುಗಿಯುತಲಿದ್ದುವು. ತಲೆಯು ಸುತ್ತುತಲಿತ್ತು ಇಂಥವರೆಲ್ಲರೂ ಮಹಾಮೇಘಗಳನ್ನು ಬಳ್ಳಿಮಿಂಚುಗಳು ಹೇಗೋ ಹಾಗೆ ವೀರಪತಿಯಾದ ವಿಭಾವರೀಚರನನ್ನು ಹಿಂಬಾಲಿಸಿ ಹೋಗುತಲಿದ್ದರು ||೧೫|| ನಿದ್ರಾವಶದಿಂದ ತಾವು ತಪ್ಪಿ ಸರಿದುಹೋಗಿರುವ ಮುತ್ತಿನಹಾರ, ಬಾಪುರಿ ಇವುಗಳನ್ನುಳ್ಳವರೂ, ಚೆನ್ನಾಗಿ ಅಳಿಸಿ ಹೋಗಿರುವ ಪರಿಮಳಲೇಪವುಳ್ಳವರೂ, ಸಡಿಲವಾಗಿ ಜೋಲು ಬಿದ್ದಿರುವ ತಲೆಗೂದಲ ಗಂಟುಳ್ಳವರೂ, ಬೆವರಿದ ಮುಖವುಳ್ಳವರೂ, ಹಾಗೆಯೇ ||೧೬|| ಕುಡಿತದಿಂದ ತಲೆಗೇರಿದ್ದ ಮದವು ನಿದ್ರಾವಶದಿಂದ ಇಳಿಯದಿದ್ದ ಕಾರಣ ತಲೆಯನ್ನು ಸುತ್ತಿಸುತ್ತಾ ಬೆವರಿನಿಂದ ಬಾಡಿಹೋದ ಪುಷ್ಪಹಾರಗಳೂ, ಕೆದರಿಹೋದ ತಲೆಗೂದಲುಳ್ಳವರೂ ಆಗಿರುವ ಮದಾತಿರೇಕದಿಂದ ಕೆಂಪಡರಿದ ಕಣ್ಣುಳ್ಳ ಕಾಮಿನಿಯರನೇಕರು ರಾವಣನಿಗೆ ಪ್ರಿಯಭಾರ್ಯೆಯರೆನಿಸಿದ್ದ ಕಾರಣನೇ ಅವನಲ್ಲಿರುವ ಗೌರವದಿಂದಲೂ, ಕಾಮವಿಕಾರದಿಂದಲೂ, ಅವನನ್ನು ಹಿಂಬಾಲಿಸಿ ಹೊರಟರು ||೧೭||೧೮||

ಪ್ರಿಯಯಾಂತಂ ನೈರ್ಋತಪತಿಂ ನಾರ್ಯೋ ಮದಿರಲೋಚನಾಃ ।
ಬಹುಮಾನಾಚ್ಚ ಕಾಮಾಚ್ಚ ಪ್ರಿಯಾ ಭಾರ್ಯಾ ಸ್ತ ಮನ್ವಯುಃ ॥ ೧೮॥
ಸ ಚ ಕಾಮಪರಾಧೀನಃ ಪತಿ ಸ್ತಾಸಾಂ ಮಹಾಬಲಃ ।
ಸೀತಾಸಕ್ತಮನಾ ಮಂದೋ ಮದಾಂಚಿತಗತಿ ರ್ಬಭೌ ॥೧೯॥
ತತಃ ಕಾಂಚೀನಿನಾದಂಚ ನೂಪುರಾಣಾಂಚ ನಿಸ್ಸ್ವನಂ ।
ಶುಶ್ರಾವ ಪರಮಸ್ತ್ರೀಣಾಂ ಸ ಕಪಿ ರ್ಮಾರುತಾತ್ಮಜಃ ॥೨೦॥
ತಂಚಾ ಪ್ರತಿಮ ಕರ್ಮಾಣ ಮಚಿಂತ್ಯಬಲಪೌರುಷಂ ।
ದ್ವಾರದೇಶ ಮನುಪ್ರಾಪ್ತಂ ದದರ್ಶ ಹನುಮಾ ನ್ಕಪಿಃ ॥೨೧॥
ದೀಪಿಕಾಭಿ ರನೇಕಾಭಿ ಸ್ಸಮಂತಾ ದವಭಾಸಿತಂ ।
ಗಂಧತೈಲಾವಸಿಕ್ತಾಭಿ ರ್ಧ್ರಿಯಮಾಣಾಭಿ ರಗ್ರತಃ ॥೨೨॥
ಕಾಮ ದರ್ಪಮದೈ ರ್ಯುಕ್ತಂ ಜಿಂಹತಾಮ್ರಾಯತೇಕ್ಷಣಂ ।

ಪ್ರೀತಿಪಾತ್ರೆಯರಾದ, ಭಾರ್ಯಾಃ -ಹೆಂಡತಿಯರೆನಿಸಿದ, ನಾರ್ಯಃ - ಭಾಮಿನಿಯರು, ಬಹುಮಾನಾಚ್ಚ - ರಾವಣನಲ್ಲಿರುವ ಗೌರವದಿಂದಲೂ, ಕಾಮಾಚ್ಚ - ಕಾಮವಿಕಾರದಿಂದಲೂ, ಪ್ರಯಾಂತಂ - ಮುಂದೆ ಹೋಗುತಲಿರುವ, ತಂ - ಆ, ನೈಋತಪತಿಂ - ರಾಕ್ಷಸೇಶ್ವರನನ್ನು, ಅನ್ವಯುಃ - ಅನುಸರಿಸಿಹೆದೆ ಟರು ॥೧೮॥ ಮಹಾಬಲಃ - ಹೆಚ್ಚಿದಬಲವುಳ್ಳ, ತಾಸಾಂ - ಆ ರಾಕ್ಷಸರಮಣಿಯರಿಗೆ, ಪತಿಃ - ವಲ್ಲಭನೆನಿಸಿದ, ಸಚ- ಆ ರಾವಣನೂ, ಕಾಮಪರಾಧೀನಃ - ಕಾಮವಿಕಾರವಶನಾಗಿದ್ದನಾದಕಾರಣವೇ. ಮಂದಃ- ಕೆಟ್ಟಬುದ್ಧಿಯುಳ್ಳವನಾಗಿ, ಸೀತಾಸಕ್ತಮನಾಃ- ಸೀತೆಯಲ್ಲಿನೆಲೆಗೊಂಡ ಮನಸುಳ್ಳವನಾಗುತ್ತಾ, ಮದಾಂಚಿತಗತಿಃ - ಮದದಿಂದ ಮಂದಗಮನವುಳ್ಳವನಾಗಿ, ಬಭೌ - ಪ್ರಕಾಶಿಸುತಲಿದ್ದನು ॥೧೯॥ ತತಃ- ಅನಂತರದಲ್ಲಿ, ಸಃ - ಆ, ಮಾರುತಾತ್ಮಜಃ - ಮರದಮೊದೆಯಲ್ಲಡಗಿದ್ದ ವಾಯುಪುತ್ರನು, ಪರಮಸ್ತ್ರೀಣಾಂ- ಆ ಉತ್ತಮಾಂಗನೆಯರ, ಕಾಂಚೀನಿನಾದಂಚ - ಡಾಬಿನಕಿರುಗೆಜ್ಜೆಯ ದನಿಯನ್ನೂ, ನೂಪುರಾಣಾಂ - ಕಾಲುಕಡಗಗಳ, ನಿಸ್ವನಂಚ - ಸದ್ದನ್ನೂ, ಶುಶ್ರಾವ- ಕೇಳಿಸಿಕೊಂಡನು ॥೨೦॥ ಗಂಧತೈಲಾವಸಿಕ್ತಾಭಿಃ- ಸುವಾಸನೆಯ ಎಣ್ಣೆಯನ್ನು ಸುರಿದಿರುವ, ಅಗ್ರತಃ - ರಾವಣನ ಎದುರಿಗೆ, ಧ್ರಿಯಮಾಣಾಭಿಃ - ಹೆಂಗಸರಿಂದಹಿಡಿಯಲ್ಪಟ್ಟಿರುವ, ಅನೇಕಾಭಿಃ - ಬಹುವಿಧಗಳಾದ, ದೀಪಿಕಾಭಿಃ - ದೀವಿಗೆಗಳಿಂದ, ಅವಭಾಸಿತಂ- ಪ್ರಕಾಶಿಸುತಲಿರುವವನೂ ॥೨೨॥ ಕಾಮದರ್ಪಮದೈಃ - ಕಾಮವಿಕಾರ, ಪ್ರಭುತ್ವದಕೊಬ್ಬು ಪ್ರಾಯದ

ಅಂತಹ ವರವರ್ಣಿನಿಯರಿಗೆ ವಲ್ಲಭನಾದ ಮಹಾಬಲವುಳ್ಳ ರಾಕ್ಷಸಾಧಿಪತಿಯು ಕಾಮಪರವಶನಾಗಿ ಸೀತೆಯಲ್ಲಿ ನೆಲೆಗೊಂಡ ಮನಸ್ಸಿನಿಂದ ಸುಂದರವಾದ ಮಂದಗಮನವುಳ್ಳವನಾಗಿ ಬೆಳಗುತಿದ್ದನು ॥೧೯॥ ರಾಕ್ಷಸಸಾರ್ವಭೌಮನು ಇಂತು ಅಪರಿಮಿತ ಸಂಭ್ರಮದಿಂದ ಅಶೋಕವನಾಭಿಮುಖನಾಗಿ ಬರುತ್ತಿರಲು, ಅವನನ್ನು ಸುತ್ತ ಬಳಸಿ ಬರುತಲಿರುವ ಲಲನಾಶಿರೋಮಣಿಯರ ಡಾಬಿನಲ್ಲಿನ ಕಿರುಗೆಜ್ಜೆಗಳ ಕಿವಿಗಿಂಪಾದ ದನಿಯೂ, ಕಾಲುಕಡಗಗಳ ಮನೋಹರವಾದ ಶಬ್ದವೂ ಮರದ ಮೇಲಿರುವ ಮಾರುತಿಯ ಕಿವಿಯನ್ನು ಹೊಕ್ಕಿತು. ॥೨೦॥ ಅನಿಶಾಚರೇಶ್ವರನ ಸುತ್ತಲೂ ಹಿಡಿದಿರುವ ಪರಿಮಳದ ತೈಲವನ್ನು ಸುರಿದಿರತಕ್ಕ ದೀವಿಗೆಗಳ ಬೆಳಕಿನಿಂದ ಭಾಭಾಸಮಾನವಾಗಿದ್ದನು ॥೨೨॥ ಕಾಮವಿಕಾರದಿಂದಲೂ, ಪ್ರಭುತ್ವದ

ಸಮಕ್ಷ ಮಿವ ಕಂದರ್ಪ ಮಪವಿದ್ಧ ಶರಾಸನಂ ॥೨೪॥
ಮಥಿತಾ ಮೃತಫೇನಾಭ ಮರಜೋ ವಸ್ತ್ರಮುತ್ತಮಂ ।
ಸಲೀಲ ಮನುಕರ್ಷಂತಂ ವಿಮುಕ್ತಂ ಸಕ್ತಮಂಗದೆ ॥೨೫॥
ತಂ ಪತ್ರವಿಟಪೆ ಲೀನಃ ಪತ್ರಪುಷ್ಪಘನಾವೃತಃ ।
ಸಮೀಪ ಮಿವ ಸಂಕ್ರಾಂತಂ ನಿಧ್ಯಾತು ಮುಪಚಕ್ರಮೆ ॥೨೭॥

ಹೆಮ್ಮೆ, ಇವುಗಳಿಂದ, ಯುಕ್ತಂ - ಒಡಗೂಡಿದವನೂ, ಜಿಂಹ - ವಕ್ರವಾಗಿಯೂ, ತಾಮ್ರ - ಕೆಂಪಾಗಿಯೂ, ಆಯತ - ಅಗಲವಾಗಿಯೂ ಇರತಕ್ಕ, ಈಕ್ಷಣಂ - ಕಣ್ಣುಳ್ಳವನೂ, ಅಪವಿದ್ಧಶರಾಸನಂ - ತೆಗೆದಿಟ್ಟ ಬಿಲ್ಲುಳ್ಳವನೂ, ಸಮಕ್ಷಂ -ಕಣ್ಣುಗಳಿಗೆದುರಾಗಿ ಬಂದ (ದೃಷ್ಟಿಗೋಚರನಾದ) ಕಂದರ್ಪಮಿವ ಸ್ಥಿತಂ - ಮನ್ಮಥನಂತಿರುವವನೂ, ॥ ೨೩ ॥ ಮಥಿತಾಮೃತಫೇನಾಭಂ - ಮಥಿತ - ನೀರು ಕಲೆಯದೆ ಆಗ ತಾನೆ ಕಡೆದಿರುವ ಮಜ್ಜಿಗೆಯ, ಅಮೃತ - ಆಗತಾನೆ ಕರೆದ ಹಾಲಿನ, ಫೇನ - ನೊರೆಯು, ಆಭಂ- ಕಾಂತಿಯಂತೆ ಕಾಂತಿಯುಳ್ಳ, ಅಥವಾ - (ಕಡಲನ್ನು ಕಡೆದಾಗ ಹುಟ್ಟಿದ ಅಮೃತದ ನೊರೆಯಂತೆ ಕಾಂತಿಯುಳ್ಳ) ಅರಜಃ - ಧೂಳಿಯ ಲೇಶವಿಲ್ಲದ, ವಿಮುಕ್ತಂ - ತಾನಿರುವ ಸ್ಥಳವನ್ನು ಬಿಟ್ಟು ಜಾರಿಹೋದುದಾಗಿ, ಅಂಗದೆ - ಭುಜಕೀರ್ತಿಯಲ್ಲಿ (ಬಾಹುಪುರಿಯಲ್ಲಿ) ಸಕ್ತಂ - ತಗಲಿಕೊಂಡಿರುವ, ಉತ್ತಮಂ - ಮೇಲಾದ, ವಸ್ತ್ರಂ - ಉತ್ತರೀಯವನ್ನು, ಸಲೀಲಂ - ಒಯ್ಯಾರದೊಡನೆ, ಅನುಕರ್ಷಂತಂ - ಸೆಳೆದುಕೊಳ್ಳುತ್ತಲಿರುವವನೂ ॥೨೪॥ ಅಪ್ರತಿಮಕರ್ಮಾಣಂ - ಎಣೆ ಇಲ್ಲದ ಕೆಲಸಗಳನ್ನು ಮಾಡತಕ್ಕವನೂ, ಅಚಿಂತ್ಯಬಲಪೌರುಷಂ - ಚಿಂತಿಸಲಸದಳವೆನಿಸಿದ ದೇಹ ಬಲ ಪರಾಕ್ರಮ ಉಳ್ಳವನೂ, ದ್ವಾರದೇಶಂ - ಅಶೋಕವನ ಪ್ರಾಕಾರದ ಬಾಗಿಲನ್ನು ಕುರಿತು, ಅನುಪ್ರಾಪ್ತಂ- ಕ್ರಮವಾಗಿ ಬಂದು ಸೇರುತ್ತಿರುವವನೂ ಆಗಿರುವ, ತಂಚ - ಆ ರಾವಣಾಸುರನನ್ನು, ಹನೂಮಾನ್ ಕಪಿಃ - ಕಪಿಯಾದ ಆಂಜನೇಯನು, ದದರ್ಶ- ನೋಡಿದನು ॥೨೫॥ ಪತ್ರವಿಟಪೆ - ಈ ಎಲೆಗಳಿಂದ ತುಂಬಿದ ಕೊನೆಯಲ್ಲಿ, ಪತ್ರಪುಷ್ಪಘನಾವೃತಃ -

ಕೊಬ್ಬಿನಿಂದಲೂ, ಐಶ್ವರ್ಯದ ಮದದಿಂದಲೂ ಒಡಗೂಡಿ ಕುಟಿಲವಾಗಿಯೂ, ಕೆಂಪಾಗಿಯೂ ಅಗಲವಾಗಿಯೂ ಇರುವ ಕಣ್ಣುಳ್ಳವನಾಗಿ ರಾಕ್ಷಸೇಶ್ವರನು ಬರುತಲಿದ್ದರೆ ಬಿಲ್ಲನ್ನು ತೆಗೆದಿಟ್ಟ ಶರೀರವನ್ನಾಂತು ಕಣ್ಣೆದುರಿಗೆ ನಡೆದುಬರುತಲಿರುವ ಕಂದರ್ಪನಂತೆ ಕಂಗೊಳಿಸುತಲಿದ್ದನು ॥೨೩॥ ಮತ್ತು-ನೀರನ್ನು ಕಲೆಸದೆ ಅರೆಗಡೆದ ಮಜ್ಜಿಗೆಯ, ಆಗತಾನೆ ಕರೆದ ಹಾಲಿನ, ನೊರೆಯಂತೆ ಕಾಂತಿಯುಳ್ಳುದೂ ಅಥವಾ ಕಡಲನ್ನು ಕಡೆದಾಗ ಹುಟ್ಟಿದ ಅಮೃತದ ನೊರೆಯಂತೆ ಪ್ರಭೆಯುಳ್ಳುದೂ ಆಗಿರುವ ನಿರ್ಮಲವಾದ ದಿವ್ಯಾಂಬರವನ್ನು ಹೆಗಲ ಮೇಲೆ ಹೊದೆದಿದ್ದನು. ಅದುತಾವನ್ನು ತಪ್ಪಿ ಕೆಳಗೆ ಸರಿದು ಬಾಪುರಿಯಲ್ಲಿ ಸಿಕ್ಕಿಕೊಂಡಿದ್ದಿತು. ಒಲುಪಿನಿಂದಲೂ, ಒಯ್ಯಾರದಿಂದಲೂ, ಬಿನ್ನಾಣದಿಂದಲೂ ಹೆಗಲನ್ನು ಕುಣಿಸುತ ಅದನ್ನು ಸರಿಪಡಿಸಿಕೊಂಡು॥ಮುಂದೆ ನಡೆಯುತ ಅಸದೃಶ ಶೌರ್ಯವುಳ್ಳವನೆನಿಸಿ,ಚಿಂತಿಸಲಸದಳವೆನಿಸಿದ ಪೌರುಷವನ್ನೊಳಗೊಂಡಿರುವ ಆ ಕ್ಷಪಾಚರೇಶ್ವರನು ದ್ವಾರದ ಬಳಿಗೆ ಬರುತ್ತಿರುವಲ್ಲಿ ಆಂಜನೇಯನು ಅವಲೋಕಿಸಿದನು ॥೨೧॥ ಎಲೆಗಳಿಂದ ತುಂಬಿದ ಮರದ ಕೊಂಬೆಯಲ್ಲಿ ಕುಳಿತು, ದಟ್ಟವಾದ ಪತ್ರ ಪುಷ್ಪಗಳಿಂದ ಆವರಿಸಲ್ಪಟ್ಟವನಾಗಿ ಅಣಗಿರುವ ಆಂಜನೆಯನು ಮೆಲ್ಲ ಮೆಲ್ಲಗೆ ಹತ್ತಿರಕ್ಕೆ ಬರುತಲಿರುವ ರಾಕ್ಷಸೇಂದ್ರನನ್ನು ಚೆನ್ನಾಗಿ ನೋಡಲಿಕ್ಕೆ ಉಪಕ್ರಮಿ

ಅವೇಕ್ಷಮಾಣ ಸ್ತು ತತೋ ದದರ್ಶ ಕಪಿಕುಂಜರಃ ।
ರೂಪ ಯೌವನ ಸಂಪನ್ನಾ ರಾವಣಸ್ಯ ವರಸ್ತ್ರಿಯಃ ॥೨೬॥
ತಾಭಿಃ ಪರಿವೃತೋ ರಾಜಾ ಸುರೂಪಾಭಿ ರ್ಮಹಾಯಶಾಃ ।
ತನ್ಮೃಗ ದ್ವಿಜ ಸಂಘುಷ್ಟಂ ಪ್ರವಿಷ್ಟಃ ಪ್ರಮದಾವನಂ ॥೨೭॥
ಕ್ಷೀಬೋ ವಿಚಿತ್ರಾಭರಣ ಶ್ಶಂಕುಕರ್ಣೋ ಮಹಾಬಲಃ ।
ತೇನ ವಿಶ್ರವಸಃ ಪುತ್ರ ಸ್ಸದೃಷ್ಟೋ ರಾಕ್ಷಸಾಧಿಪಃ ॥
ವೃತಃ ಪರಮನಾರೀಭಿ ಸ್ತಾರಾಭಿ ರಿವ ಚಂದ್ರಮಾಃ ॥೨೮॥-॥

ದಟ್ಟವಾದ ಎಲೆಗಳಿಂದಲೂ ಹೂಗಳಿಂದಲೂ ಆವರಿಸಲ್ಪಟ್ಟವನಾಗಿ, ಲೀನಃ-ಅಡಗಿ ಇರತಕ್ಕ ಮಾರುತಿಯು ಸಮೀಪದಲ್ಲಿ - ಕೇವಲ ಹತ್ತಿರವನ್ನು ಕುರಿತು. ಸಂಕ್ರಾಂತಮಿವ- ಬರುವಂತಿರುವ, ತಂ-ಆ ರಾವಣನನ್ನು, ನಿಧ್ಯಾತುಂ - ನೋಡಲಿಕ್ಕೆ, ಉಪಚಕ್ರಮೇ - ಪ್ರಾರಂಭಿಸಿದನು ॥೧೧॥ ತತಃ - ಅನಂತರದಲ್ಲಿ, ಕಪಿಕುಂಜರಃ - ಕಪಿವರನು, ಅವೇಕ್ಷಮಾಣಸ್ತು - ರಾವಣನನ್ನು ನೋಡುತಿರುವವನಾಗಿಯೇ, ರೂಪ - ಸೌಂದರ್ಯದಿಂದಲೂ, ಯೌವನ - ಪ್ರಾಯದಿಂದಲೂ, ಸಂಪನ್ನಾಃ - ಒಡಗೂಡಿರುವ, ರಾವಣಸ್ಯ - ರಾವಣನ, ವರಸ್ತ್ರಿಯಃ - ಉತ್ತಮರಾದ ಪತ್ತ ಕಾಮಿನಿಯರನ್ನೂ, ದದರ್ಶ- ನೋಡಿದನು. ॥೨೬॥ ಸುರೂಪಾಭಿಃ- ಒಳ್ಳೆಯ ಸೌಂದರ್ಯವುಳ್ಳ, ತಾಭಿಃ - ಆ ಮಹಿಳೆಯರಿಂದ, ಪರಿವೃತಃ - ಆವರಿಸಲ್ಪಟ್ಟಿರುವ, ರಾಜಾ - ರಾಕ್ಷಸರೊಡನೆಯನಾದ, ಮಹಾಯಶಾಃ - ಮಹಾಕೀರ್ತಿ ಸಂಪನ್ನನೆನಿಸಿರುವ ರಾವಣನು, ಮೃಗದ್ವಿಜಸಂಘುಷ್ಟಂ - ಮೃಗಪಕ್ಷಿಗಳ ಧ್ವನಿಯಿಂದ ತುಂಬಿರುವ, ತತ್ - ಆ, ಪ್ರಮದಾವನಂ - ಹೆಂಗಳಾಟ, ತೋಟವನ್ನು, ಪ್ರವಿಷ್ಟಃ - ಪ್ರವೇಶಿಸಿದನು. ॥೨೭॥ ಕ್ಷೀಬಃ - ಕೊಬ್ಬಿದವನು, ವಿಚಿತ್ರಾಭರಣಃ -ಬಗೆಬಗೆಯ ಒಡವೆಗಳನ್ನು ಧರಿಸಿರತಕ್ಕವನು, ಶಂಕುಕರ್ಣಃ - ಮೇಕೆಯ ಕಿವಿಯಂತೆ ನಟ್ಟಗೆನಿಂತ ಕಿವಿಯುಳ್ಳವನೂ, ಮಹಾಬಲಃ - ಮಹತ್ತರವಾದ ಬಲವುಳ್ಳವನೂ, ವಿಶ್ರವಸಃ - ವಿಶ್ರವಸ್ಸಿನ, ಪುತ್ರಃ -ಕುಮಾರನೂ, ರಾಕ್ಷಸಾಧಿಪಃ - ರಾಕ್ಷಸ ಚಕ್ರವರ್ತಿಯೂ ॥೨೮॥ ತಾರಾಭಿಃ - ನಕ್ಷತ್ರಗಳಿಂದ (ಆವರಿಸಲ್ಪಟ್ಟ)- ಚಂದ್ರಮಾಇವ - ಚಂದ್ರನಂತೆ, ಪರಮನಾರೀಭಿಃ - ಉತ್ತಮರಾದವಾಮಲೋಚನೆಯರಿಂದ, ವೃತಃ - ಸುತ್ತುವರಿ ಬಳಸಲ್ಪಟ್ಟವನಾಗಿರುವ, ಸಃ - ಆ ರಾವಣನು, ತೇನ - ಆ ಮಾರುತಿಯಿಂದ, ದೃಷ್ಟಃ- ನೋಡಲ್ಪಟ್ಟನು

ಸಿದನು. ॥೨೫॥ ಮರದ ಸಂದಿನಲ್ಲಿ ಇಣಿಕಿನೋಡುತಲಿರುವ ಕಪಿವರಿನಿಗೆ ರಾವಣನ ಸುತ್ತಲೂ ಸಡಗರವನ್ನಾಂತು ಬೆಡಗಿನಿಂದ ಬರುತಲಿರುವ ರೂಪಯೌವನ ಸಂಪನ್ನೆಯರಾದ ಕಾಂತಾಮಣಿಯರು ಕಾಣಬಂದರು ॥೨೬॥ ಸೌಂದರ್ಯ ಸಂಪನ್ನೆಯರಾದ ಸುದತಿಯರಿಂದ ಆವರಿಸಲ್ಪಟ್ಟ ಮಹಾ ಯಶಸ್ವಿಯಾದ ರಾಕ್ಷಸ ರಾಜನು ನಾನಾವಿಧ ಮೃಗ ಪಕ್ಷಿಗಳ ಧ್ವನಿಯಿಂದ ನೋಟಕರ ಕಣ್ಮನಗಳನ್ನು ಸೆಳೆಯುತಲಿರುವ ಕಾಂತೆಯರ ಕ್ರೀಡಾವನವನ್ನು ಪ್ರವೇಶಿಸುತಲಿದ್ದನು ॥೨೭॥ ಆನಿಶಾಚರನಾಥನು ಮದೋನ್ಮತ್ತನಾಗಿ ವಿಚಿತ್ರ ವಸ್ತ್ರಾಭರಣಗಳನ್ನು ಧರಿಸಿ, ಮೇಕೆಯ ಕಿವಿಯಂತೆ ಬೆಳಗುವ ಕಿವಿಗಳನ್ನೊಳಗೊಂಡಿದ್ದನು. ಇವನೇ ವಿಶ್ರವಸ್ಸಿನ ಮಗ ॥೨೮॥ ಚಂದ್ರನ ಸುತ್ತಲೂ ನಕ್ಷತ್ರಗಳು ಆವರಿಸಿರುವ ಹಾಗೆ ಬಹುಮಂದಿವರವರ್ಣಿನಿಯರು ಇವನನ್ನು ಆವರಿಸಿ ಇದ್ದರು ವಿಚಿತ್ರವಾದ ತೇಜಸ್ಸು ಅವನ ಮುಖದಲ್ಲಿ ರಾರಾಜಿಸುತಲಿದ್ದಿತು. ಇಂತಹ ರಕ್ಕಸಗೊಡೆಯನನ್ನು ಮಹಾತೇಜಸ್ವಿಯಾದ

ತಂ ದದರ್ಶ ಮಹಾತೇಜಾ ಸ್ತೇಜೋವಂತಂ ಮಹಾಕಪಿಃ ||೨೯||
ರಾವಣೋ ಯಂ ಮಹಾಬಾಹು ರಿತಿ ಸಂಚಿಂತ್ಯ ವಾನರಃ |
ಅವಪ್ಲುತೋ ಮಹಾತೇಜಾ ಹನುಮಾ ನ್ಮಾರುತಾತ್ಮಜಃ ||೩೦||
ಸ ತಥಾ ಪ್ಯುಗ್ರತೇಜಾ ಸ್ಸನ್ನಿರ್ಧೂತ ಸ್ತಸ್ಯತೇಜಸಾ |
ಪತ್ರಗುಹ್ಯಾಂತರೇ ಸಕ್ತೋ ಹನುಮಾ ನ್ಸಂವೃತೋ ಭವತ್ ||೩೧||
ಸತಾ ಮಸಿತ ಕೇಶಾಂತಾಂ ಸುಶ್ರೋಣೀಂ ಸಂಹತಸ್ತನೀಂ |
ದಿದೃಕ್ಷು ರಸಿತಾಪಾಂಗಾ ಮುಪಾವರ್ತ ತ ರಾವಣಃ ||೩೨||
ಇತಿ ಶ್ರೀಮತ್ಸುಂದರಕಾಂಡೇ-ಅಷ್ಟಾದಶಸ್ಸರ್ಗಃ

---

ಮಹಾತೇಜಾಃ - ತೇಜಸ್ವಿಯಾದ, ಮಹಾಕಪಿಃ - ಕಪಿವರನು, ತೇಜೋವಂತಂ - ಮಹಾರಾಜತೇಜಸ್ಸುಳ್ಳ, ತಂ - ಆ ರಾವಣನನ್ನು, ದದರ್ಶ - ಪುನಃಪುನಃ ನೋಡಿದನು ||೨೯|| ಮಹಾತೇಜಾಃ - ಮಹಾತೇಜಸ್ವಿಯಾದ, ಮಾರುತಾತ್ಮಜಃ - ವಾಯುಕುಮಾರನು ಎನಿಸಿರುವ, ವಾನರಃ ಹನೂಮಾನ್- ಕಪಿವರನು, ಅಯಂ - ಈ, ರಾವಣಃ - ದಶಕಂಧರನು, ಮಹಾಬಾಹುಃ - ಬಹು ಬಾಹುಬಲವುಳ್ಳವನು. ಇತಿ - ಹೀಗೆಂದು, ಸಂಚಿಂತ್ಯ - ಯೋಚಿಸಿ, ಅವಪ್ಲುತಃ - ಮೇಲಿನ ಕೊಂಬೆಗೆ ಹಾರಿದನು ||೩೦|| ಸಃ - ಆ ಮಾರುತಿಯು, ತಥಾ - ಹಾಗೆ, (ವಿಶೇಷವಾಗಿ) ಉಗ್ರತೇಜಾಃ (ಸನ್ ಅಪಿ)- ಭಯಂಕರವಾದ ತೇಜಸ್ಸುಳ್ಳವನಾದರೂ, ತಸ್ಯ - ಆ ರಾವಣನ, ತೇಜಸಾ - ರಾಜತೇಜಸ್ಸಿನಿಂದ, ನಿರ್ಧೂತಃ - ತಿರಸ್ಕರಿಸಲ್ಪಟ್ಟವನಾಗಿ, ಪತ್ರಗುಹ್ಯಾಂತರೇ - ಎಲೆಗಳ ಮರೆಯಿಂದ ಗುಟ್ಟಾದ ಒಳಭಾಗದಲ್ಲಿ, ಸಕ್ತಃ - ಹೊಕ್ಕವನಾಗಿ, ಸಂವೃತಃ- ಅವಿತುಕೊಂಡವನು, ಅಭವತ್ - ಆಗಿದ್ದನು. ||೩೧|| ಸಃ ರಾವಣಃ - ಆ ರಾವಣನು, ಅಸಿತಕೇಶಾಂತಾಂ- ಕಪ್ಪಾದ ಕೊನೆಗೂದಲುಳ್ಳ, ಸುಶ್ರೋಣೀಂ- ಅಂದವಾದ ಟೊಂಕದ ಹಿಂಭಾಗವುಳ್ಳ, ಸಂಹತಸ್ತನೀಂ- ದಟ್ಟವಾದ ಎದೆಯುಳ್ಳ, ಅಸಿತಾಪಾಂಗಾಂ - ಕಪ್ಪಾದ ಕೊನೆಗಣ್ಣುಳ್ಳ, ತಾಂ - ಆ ಸೀತಾದೇವಿಯನ್ನು, ದಿದೃಕ್ಷು (ಸ್ಸನ್) - ನೋಡಲಿಕ್ಕೆ ಬಯಸಿದವನಾಗುತ್ತಾ, ಉಪಾವರ್ತತ - ಹತ್ತಿರಕ್ಕೆ ಬರುತ್ತಿದ್ದನು. ||೩೨||

—ಇಂತು ಹದಿನೆಂಟನೆಯ ಸರ್ಗವು—

---

ಮಾರುತಿಯು ಕಂಡು ||೨೯|| ಓಹೋ ! ಆಜಾನುಬಾಹುವಾಗಿ ಇಲ್ಲಿ ಬರುತಲಿರುವ ವ್ಯಕ್ತಿಯೇ ರಾವಣನು; ಈ ಸಮಯದಲ್ಲಿ ಇವನಿಗೆ ನಾನು ಕಾಣಿಸಿ ಕೊಳ್ಳತಕ್ಕದ್ದು ಉಚಿತವಲ್ಲ ಎಂದು ನೆನೆದ ಮಹಾತೇಜಸ್ವಿಯಾದ ಮಾರುತಿಯು ತಾನು ಕುಳಿತಿದ್ದ ಕೊಂಬೆಯಿಂದ ಮತ್ತೊಂದಕ್ಕೆ ಹಾರಿದನು ||೩೦|| ವಾಯು ಪುತ್ರನು ತೀಕ್ಷ್ಣವಾದ ತೇಜಸ್ಸುಳ್ಳವನೇ ಆದರೂ ರಾಕ್ಷಸರಾಜನ ರಾಜತೇಜಸ್ಸಿನಿಂದ ಇವನ ತೇಜಸ್ಸು ತಿರಸ್ಕಾರವನ್ನು ಪಡೆಯಿತು. ಕಪಿವರನು ದಟ್ಟವಾಗಿರುವ ಎಲೆಗಳ ಮರೆಯಲ್ಲಿ ಸೂಕ್ಷ್ಮರೂಪದಿಂದ ಗುಟ್ಟಾಗಿ ತಲೆಯನ್ನು ಮರೆಯಿಸಿಕೊಂಡು ಕುಳಿತಿದ್ದನು ||೩೧|| ಇತ್ತ ರಾಕ್ಷಸೇಂದ್ರನಾದರೆ ಕಪ್ಪಾದ ಕೊನೆಗೂದಲುಳ್ಳವಳೂ, ಅಂದವಾದ ಟೊಂಕದ ಹಿಂಭಾಗವುಳ್ಳವಳೂ, ದಟ್ಟವಾದ ಎದೆಯುಳ್ಳವಳೂ ಆಗಿರುವ ಕಪ್ಪಾದ ಕಡೆಗಣ್ಣಿನ ನೋಟವುಳ್ಳ ವೈದೇಹಿಯನ್ನುನೋಡಲೆಳಸಿದವನಾಗಿ ಮೆಲ್ಲ ಮೆಲ್ಲಗೆ ಆಕೆಯ ಬಳಿಗೆ ಬರುತಲಿದ್ದನು ||೩೨||

—ಇಂತು ಹದಿನೇಳನೆಯ ಸರ್ಗ—

श्रीः

श्रीरङ्गमहेन्द्रपरब्रह्मणे नमः

## —श्रीमत्सुन्दरकाण्डे एकोनविंशस्सर्गः—

ತಸ್ಮಿನ್ನೇವ ತತಃ ಕಾಲೇ ರಾಜಪುತ್ರೀತ್ವನಿಂದಿತಾ ।
ರೂಪಯೌವನಸಂಪನ್ನಂ ಭೂಷಣೋತ್ತಮ ಭೂಷಿತಂ ॥
ತತೋ ದೃಷ್ಟ್ವೈವ ವೈದೇಹೀ ರಾವಣಂ ರಾಕ್ಷಸಾಧಿಪಂ ।
ಪ್ರಾವೇಪತ ವರಾರೋಹಾ ಪ್ರವಾತೇ ಕದಳೀ ಯಥಾ ॥೨॥
ಆಚ್ಛಾದ್ಯೋದರ ಮೂರುಭ್ಯಾಂ ಬಾಹುಭ್ಯಾಂ ಚ ಪಯೋಧರೌ ।
ಉಪವಿಷ್ಟಾ ವಿಶಾಲಾಕ್ಷೀ ರುದಂತೀ ವರವರ್ಣಿನೀ ॥೩॥

---

### —ಹತ್ತೊಂಭತ್ತನೆಯ ಸರ್ಗಂ—

ಕಂ॥ ಶೋಕೇತರವನಕೈದಿದ । ಲೇಖಾರಿಯ ಕಾಣುತಂಜಿದವನಿಜೆಯಾಗಳ್ ।
ಶೋಕಾನತ ಮುಖಿಯಾಗಲ್। ಭೂಕನ್ಯೆಯ ಬಯಸಿ ಖೂಳಗಳಕಳ್ ಬಗೆದಂ ॥

ತತಃ - ರಾವಣನು ವನಪ್ರವೇಶಮಾಡಿದ ಮೇಲೆ, ತಸ್ಮಿನ್ನೇವಕಾಲೆ - ಅದೇ ಸಮಯದಲ್ಲಿ, ರಾಜಪುತ್ರೀ - ರಾಜಕುಮಾರಿಯೂ, ವರಾರೋಹಾ - ಉತ್ತಮಾಂಗನೆಯೂ ಆಗಿರುವ, ಸೀತಾ - ಸೀತಾದೇವಿಯು, ರೂಪಯೌವನ ಸಂಪನ್ನಂ - ಸೌಂದರ್ಯ, ಪ್ರಾಯ ಇವುಗಳಿಂದೊಡಗೂಡಿರುವ, ಭೂಷಣೋತ್ತಮ - ಉತ್ತಮಾಲಂಕಾರಗಳಿಂದ, ಭೂಷಿತಂ - ಅಲಂಕೃತನಾದ, ರಾಕ್ಷಸಾಧಿಪತಿಂ - ರಾಕ್ಷಸೇಶ್ವರನೆನಿಸಿರುವ, ರಾವಣಂ - ರಾವಣಾಸುರನನ್ನು, ದೃಷ್ಟ್ವಾ - ನೋಡಿ, ತತಏವ - ಅಲ್ಲಿಯೇ, ಪ್ರವಾತೆ - ಬಿರುಗಾಳಿಯಲ್ಲಿ, ಕದಳೀಯಥಾ - ಎಳೆಬಾಳೆಯ ಕಂಬವು ಹೇಗೋಹಾಗೆ, ಪ್ರಾವೇಪತ - ನಡುಗಿಬಿಟ್ಟಳು ॥೧॥೨॥ ವರವರ್ಣಿನೀ - ಉತ್ತಮಾಂಗನೆಯೂ, ವಿಶಾಲಾಕ್ಷೀ - ವಿಶಾಲನಯನೆಯೂ ಆಗಿರುವ ಜಾನಕಿಯು, ಊರುಭ್ಯಾಂ - ತೊಡೆಗಳಿಂದ, ಉದರಂ - ಹೊಟ್ಟೆಯನ್ನೂ, ಬಾಹುಭ್ಯಾಂ ತೋಳುಗಳಿಂದ, (ಕೈಗಳಿಂದ) ಪಯೋಧರೌಚ - ಎದೆಯನ್ನೂ, ಆಚ್ಛಾದ್ಯ - ಹೊದೆದುಕೊಂಡು, ರುದಂತೀ - ಅಳುತಲಿರುವವಳಾಗಿ ಉಪವಿಷ್ಟಾ - ಕುಳಿತಿದ್ದಳು ॥೩॥ ದಶಗ್ರೀವಸ್ತು - ದಶಗಳನಾದರೋ, ರಾಕ್ಷಸೀ ಗಣೈಃ - ರಕ್ಕಸಿಯರ

---

### ಹತ್ತೊಂಬತ್ತನೆಯ ಸರ್ಗಂ.

ದಶಕಂಧರನು ಅಶೋಕವನವನ್ನು ಹಾಗೆ ಪ್ರವೇಶಿಸುತಲಿರುವ ಸಮಯದಲ್ಲಿ ದೋಷಲೇಶವಿಲ್ಲದ ಜನಕರಾಜನಂದಿನಿಯು ಅದ್ಭುತವಾದ ಆಕಾರದಿಂದಲೂ ಉಕ್ಕುತಲಿರುವ ಪ್ರಾಯದಿಂದಲೂ ಒಡಗೂಡಿ, ಸರ್ವಾಲಂಕಾರಗಳಿಂದಲೂ ಅಲಂಕೃತನಾಗಿ ರಾಕ್ಷಸೇಶ್ವರನು ವನದ ಒಳಹೊಗುತ್ತಿರುವನೆಂಬುದನ್ನು ದೂರದಲ್ಲಿ ಕಂಡಕೂಡಲೇ ಮಹತ್ತರವಾದ ಬಿರುಗಾಳಿಯ ಪೆಟ್ಟಿನಿಂದ ಕಂಪಿಸುವ ಎಳೆಬಾಳೆಯ ಕಂಬದಂತೆ ಬಹುವಾಗಿ ನಡುಗಿಹೋಗಿ ॥೧-೨॥ ಆಕ್ಷಣದಲ್ಲಿಯೇ ವಿಶಾಲನಯನೆಯಾದ ಸೀತೆಯು ತನ್ನ ಎರಡುತೊಡೆಗಳಿಂದ ಹೊಟ್ಟೆಯನ್ನೂ ಹಾಗೆಯೇ ಎರಡುಕೈಗಳಿಂದಲೂ ಎದೆಯನ್ನೂ ಆಚ್ಛಾದನಮಾಡಿಕೊಂಡು ಅಡಗಿಕುಳಿತುಕೊಂಡಳು ॥ ೩ ॥ ಮತ್ತೆ ಜನಕನಂದಿನಿಯು ಹೇಗಿದ್ದಳೆಂದರೆ—ಬಹು ಮುಂದಿ

ದಶಗ್ರೀವಸ್ತು ವೈದೇಹೀಂ ರಕ್ಷಿತಾಂ ರಾಕ್ಷಸೀಗಣೈಃ ।
ದದರ್ಶ ಸೀತಾಂ ದುಃಖಾರ್ತಾಂ ನಾವಂ ಸನ್ನಾಮಿವಾರ್ಣವೇ ॥೪॥
ಅಸಂವೃತಾಯಾಮಾಸೀನಾಂ ಧರಣ್ಯಾಂ ಸಂಶಿತವ್ರತಾಂ ।
ಛಿನ್ನಾಂ ಪ್ರಪತಿತಾಂ ಭೂಮೌ ಶಾಖಾಮಿವ ವನಸ್ಪತೇಃ ॥೫॥
ಮಲಮಂಡನಚಿತ್ರಾಂಗೀಂ ಮಂಡನಾರ್ಹಾಮಮಂಡಿತಾಂ ।
ಮೃಣಾಳೀ ಪಂಕದಿಗ್ಧೇವ ವಿಭಾತಿ ನ ವಿಭಾತಿಚ ॥೬॥
ಸಮೀಪಂ ರಾಜಸಿಂಹಸ್ಯ ರಾಮಸ್ಯ ವಿದಿತಾತ್ಮನಃ ।

---

ಹಿಂಡುಗಳಿಂದ, ರಕ್ಷಿತಾಂ - ಕಾಪಾಡಲ್ಪಡುತಲಿರುವವಳಾಗಿಯೂ, ದುಃಖಾರ್ತಾಂ - ದುಃಖದಿಂದ ಪೀಡಿಸಲ್ಪಡುತ್ತಲಿರುವವಳಾಗಿಯೂ ಇರುವಳಾದ ಕಾರಣವೇ, ಸನ್ನಾಂ - ಒಡೆದುಹೋದ, ನಾವಮಿವಸ್ಥಿತಾಂ- ಒಡೆಯಂತಿರುವವಳೂ, ॥೪॥ ಅಸಂವೃತಾಯಾಂ - ಹೀಠವಿಲ್ಲದ, ಧರಣ್ಯಾಂ - ಭೂಮಿಯಲ್ಲಿ, ಆಸೀನಾಂ- ಕುಳಿತಿರುವವಳೂ, ಸಂಶಿತವ್ರತಾಂ - ತೀಕ್ಷ್ಣವಾದ ವ್ರತವುಳ್ಳವಳೂ, ಛಿನ್ನಾಂ - ಕತ್ತರಿಸಲ್ಪಟ್ಟ, ಭೂಮೌ - ನೆಲದಲ್ಲಿ, ಪ್ರಪತಿತಾಂ - ಉರುಳಿಕೊಂಡ, ವನಸ್ಪತೇಃ - ವೃಕ್ಷದ, ಶಾಖಾಮಿವ (ಸ್ಥಿತಾಂ)- ಕೊಂಬೆಯಂತಿರುವವಳೂ, ॥೫॥ ಮಲಮಂಡನ - ಕೊಳೆಯೆಂಬ ಒಡವೆಯಿಂದ, ಚಿತ್ರಾಂಗೀಂ - ವಿಚಿತ್ರವಾದ ಅವಯವಗಳುಳ್ಳವಳೂ, ಮಂಡನಾರ್ಹಾಂ - ದಿವ್ಯಾಲಂಕಾರಕ್ಕೆ ತಕ್ಕವಳಾದರೂ, ಅಮಂಡಿತಾಂ - ಅಲಂಕರಿಸಲ್ಪಡದಿರುವವಳೂ ಆಗಿರುವ ಯಾವ ಸೀತೆಯು, ಪಂಕದಿಗ್ಧಾ - ಕೆಸರಿನಿಂದ ಕಲೆತಿರುವ, ಮೃಣಾಳೀವ - ತಾವರೆಯ ಬಳ್ಳಿಯ ಹಾಗೆ, ವಿಭಾತಿ - ಹೊಳೆಯುತಲಿರುವಳೋ, ನವಿಭಾತಿ - ಪ್ರಕಾಶಿಸುವುದಿಲ್ಲವೋ, (ತಾಂ-ಅಂತಹ) ವೈದೇಹೀಂ - ಜಾನಕಿಯನ್ನು, ದದರ್ಶ - ನೋಡಿದನು ॥೬॥ ವಿದಿತಾತ್ಮನಃ - ತಿಳಿದಿರುವ ಸೀತೆಯ ಮನೋಗತವುಳ್ಳ, ರಾಜಸಿಂಹಸ್ಯ - ರಾಜಶ್ರೇಷ್ಠನೆನಿಸಿದ, ರಾಮಸ್ಯ - ಶ್ರೀರಾಮಚಂದ್ರನ, ಸಮೀಪಂ - ಸಾನ್ನಿಧ್ಯವನ್ನು, ಸಂಕಲ್ಪ ಹಯಸಂಯುಕ್ತೈಃ - ಹೀಗೆ ಮಾಡಬೇಕೆಂಬ ವಿಚಾರಗಳೆನ್ನುವ ಕುದುರೆಗಳಿಂದ ಕೂಡಿರುವ, ಮನೋರಥೈಃ - ಕೋರಿಕೆಗಳೆಂಬ ತೇರುಗಳಿಂದ,

---

ಯರು ಸುತ್ತಲೂ ಕುಳಿತು ಆಕೆಗೆ ಕಾವಲಾಗಿದ್ದರು, ಶೋಕಭಾರದಿಂದ ಆರ್ತಳಾಗಿದಾಳೆ. ಕಡಲಿನಲ್ಲಿ ವಸ್ತುಭಾರದಿಂದ ಒಡೆದುಹೋದ ನಾವೆಯಂತೆ ಕಾಣಬರುವಳು ॥೪॥ ಯಾವುದೊಂದು ಹಾಸಿಗೆಯೂ, ಪೀಠವೂ ಇಲ್ಲದ ಬರಿಯ ನೆಲದಮೇಲೆಯೇ ಕುಳಿತಿರುವಳು ಇದರಿಂದ ಯಾವುದೋ ಬಹು ತೀಕ್ಷ್ಣವ್ರತವನ್ನು ಸಂಕಲ್ಪಿಸಿ ಕುಳಿತಿರುವಂತಿದೆ ಚೆನ್ನಾಗಿ ಚಿಗುರಿದ್ದ ಮರದ ಕೊನೆಯನ್ನು ಕಡಿದರೆ ನೆಲದಲ್ಲಿ ಬಿದ್ದ ಆ ಕೊಂಬೆಯಂತೆ ತೋರಿಬರುತಲಿದಾಳೆ ॥೫॥ ಮೈಮೇಲೆ ತುಂಬಿರುವ ಕೊಳೆಯೇ ಆಕೆಗೆ ಅಲಂಕಾರವಾಗಿದೆ ಇದರಿಂದ ವಿಚಿತ್ರವಾಗಿ ಕಾಣಬರುವಳು, ಯತ್ನವೇನು ? ದಿವ್ಯಾಲಂಕಾರಗಳಿಗೆ ಅರ್ಹಳೇ ಹೌದು, ಆದರೆ ಯಾವುದೊಂದು ಅಲಂಕಾರವೂ ಇಲ್ಲ. ಕೇಸರಿನಿಂದ ತುಂಬಿರುವ ಉತ್ತಮವಾದ ತಾವರೆಯ ಬಳ್ಳಿಯಂತೆ ತುಸಬೆಳಗುತಲೂ, ಚೆನ್ನಾಗಿ ಬೆಳಗದೆಯೂ ಇದಾಳೆ ॥೬॥ ಶ್ರೀರಾಮಚಂದ್ರನ ಮನೋಗತವನ್ನೆಲ್ಲ ಬಲ್ಲ ಆ ಜಾನಕಿಯು ರಾಮನ ಸನ್ನಿಧಾನವನ್ನು ಸೇರಲು ಹೀಗೆಹೀಗೆ ಮಾಡಬೇಕೆಂಬ ವಿಚಾರಗಳನ್ನ ತಕ್ಕ ಕುದುರೆಗಳನ್ನು ಹೂಡಿ ಶ್ರೀ ರಾಮಲಾಭಾನಂತರದಲ್ಲಿ ಪಡೆಯಬೇಕೆಂದಿರುವ ಬಯಕೆಗಳೆಂಬ ರಥಗಳಲ್ಲಿ ಕುಳಿತು ಆ ಮಹಾನು

ಸಂಕಲ್ಪ ಹಯ ಸಂಯುಕ್ತೈ ರ್ಯ್ಯಾಂತೀ ಮಿವ ಮನೋರಥೈಃ ॥೭॥
ಶುಷ್ಯಂತೀಂ ರುದತೀ ಮೇಕಾಂ ಧ್ಯಾನ ಶೋಕ ಪರಾಯಣಾಂ ।
ದುಃಖಸ್ಯಾಂತ ಮಪಶ್ಯಂತೀಂ ರಾಮಾಂ ರಾಮ ಮನುವ್ರತಾಂ ॥೮॥
ವೇಷ್ಟಮಾನಾಂ ತಥಾ ಽ ವಿಷ್ಟಾಂ ಪನ್ನಗೇಂದ್ರ ವಧೂಮಿವ ।
ಧೂಪ್ಯಮಾನಾಂ ಗ್ರಹೇಣೇವ ರೋಹಿಣೀಂ ಧೂಮ ಕೇತುನಾ ॥೯॥
ವೃತ್ತ ಶೀಲ ಕುಲೇ ಜಾತಾ ಮಾಚಾರವತಿ ಧಾರ್ಮಿಕೇ ।
ಪುನ ಸ್ಸಂಸ್ಕಾರ ಮಾಪನ್ನಾಂ ಜಾತಾ ಮಿವ ಚ ದುಷ್ಕುಲೆ ॥೧೦॥

---

ಯಾಂತೀಮಿವಸ್ಥಿತಾಂ – ಪ್ರಯಾಣಮಾಡುತ್ತಿರುವಳೋ ಎಂಬಂತಿರುವ, ॥೭॥ ಶುಷ್ಯಂತೀಂ – ಬಣಗಿ ಹೋಗುತ್ತಿರುವವಳೂ, ರುದತೀಂ - ಅಳುತಲಿರುವವಳೂ, ಏಕಾಂ – ಒಂಟಿಯಾಗಿರುವವಳೂ, ಧ್ಯಾನ ಶೋಕಪರಾಯಣಾಂ- ಶ್ರೀರಾಮಚಂದ್ರನ ಧ್ಯಾನದಲ್ಲಿಯೂ, ಆತನ ದರ್ಶನವಿಲ್ಲದುದರಿಂದ ದುಃಖದಲ್ಲಿಯೂ ಆಸಕ್ತಳಾಗಿರುವ, ದುಃಖಸ್ಯ – ಶೋಕದ, ಅಂತಂ – ಕೊನೆಯನ್ನು, ಅಪಶ್ಯಂತೀಂ –ಕಾಣದಿರುವವಳೂ, ರಾಮಾಂ – ಶ್ರೀ ರಾಮಾನುರಕ್ತಳೂ, ರಾಮಂ – ಶ್ರೀ ರಾಮನನ್ನು, ಅನುವ್ರತಾಂ - ಅನುಸರಿಸಿದ ವ್ರತವುಳ್ಳವಳೂ ॥೮॥ ತಥಾ - ಹಾಗೆಯೇ, ವೇಷ್ಟಮಾನಾಂ – ಭ್ರಮಿಸುತಲಿರುವವಳೂ, ಪನ್ನಗೇಂದ್ರವಧೂಮಿವ – (ಮಣಿಮಂತ್ರೌಷಧದಿಂದ ಕಟ್ಟುಬಿದ್ದಿರುವ) ದೊಡ್ಡಹೆಣ್ಣುಹಾವಿನಂತೆ, ಆವಿಷ್ಟಾಂ-ರಕ್ಕಸಿಯರಿಂದ ತಿರಸ್ಕರಿಸಲ್ಪಟ್ಟಿರುವವಳೂ, ಧೂಮಕೇತುನಾ – ಧೂಮಕೇತುವೆಂಬ ಅನಿಷ್ಟಸೂಚಕಚಿಹ್ನೆಯಿಂದ, (ಗ್ರಹದಿಂದ)-ಧೂಪ್ಯಮಾನಾಂ - ತಪಿಸಲ್ಪಡುತಲಿರುವ, ರೋಹಿಣೀಮಿವ (ಸ್ಥಿತಾಂ) – ರೋಹಿಣೀ ನಕ್ಷತ್ರದಂತಿರುವವಳೂ, ॥೯॥ ಆಚಾರವತಿ – ಶಾಸ್ತ್ರೋಕ್ತವಾದ ಆಚಾರವುಳ್ಳುದಾಗಿಯೂ, ಧಾರ್ಮಿಕೇ-ಧರ್ಮವುಳ್ಳುದಾಗಿಯೂ ಇರುವ, ವೃತ್ತಶೀಲಕುಲೆ – ಸದ್ವೃತ್ತ ಸೌಶೀಲ್ಯಗಳಿಂದೊಡಗೂಡಿದ ಸದ್ವಂಶದಲ್ಲಿ, ಜಾತಾಂ – ಹುಟ್ಟಿದವಳಾಗಿಯೂ, ದುಷ್ಕುಲೆ – ಅಸದ್ವಂಶದಲ್ಲಿ, ಸಂಸ್ಕಾರಂ – ವಿವಾಹಸಂಸ್ಕಾರವನ್ನು, ಆಪನ್ನಾಂ – ಹೊಂದಿದವಳಾಗಿ, ಪುನಃ-ಮರಳಿ, ಜಾತಾಮಿವ(ಸ್ಥಿತಾಂ)-ಜನ್ಮಿಸಿದಂತಿರುವವಳೂ ॥೧೦॥

---

ಭಾವನ ಸಮೀಪವನ್ನು ಕುರಿತು ಪ್ರಯಾಣವನ್ನು ಬೆಳೆಸುವಂತಿರುವಳು ॥೭॥ ಪತಿಯನ್ನು ಅಗಲಿ ಇರುವುದರಿಂದ ಕಡ್ಡಿಯಂತೆ ದಿನ ದಿನಕ್ಕೆ ಬಣಗುತಲಿದಾಳೆ, ಅಳುವ್ರೋಸಂತತವಾಗಿದೆ, ಒಬ್ಬಳು, ನೀನೇ ಎಂಬುವರಿಲ್ಲ, ಅನವರತವೂಪತಿಯಧ್ಯಾನ, ಆತನ ಅಗಲಿಕೆಯಿಂದುಂಟಾದ ಶೋಕ ಇವೆರಡೇ ಈಕೆಯ ಹಗಲಿರುಳಿನಕೆಲಸವಾಗಿದೆ, ಶೋಕಸಾಗರದ ತೀರವನ್ನು ಕಾಣುವ ಕುರುಹೇಇಲ್ಲ. ಶ್ರೀರಾಮನ ಚಿಂತೆಯೊಳಗೆ ಮುಳುಗಿದಾಳೆ, ಈಕೆಯ ವ್ರತಗಳೆಲ್ಲವೂ ಶ್ರೀರಾಮನನ್ನು ಅನುಸರಿಸಿದವುಗಳೇ ಆಗಿವೆ ॥೮॥ ಮನದೊಳಗೆ ಯಾವುದೊಂದು ನೆಲೆಯೂ ಇಲ್ಲದೆ ಭ್ರಮಿಸುತಲಿದಾಳೆ, ಮಂತ್ರೌಷಧಗಳ ಕಟ್ಟಿಗೊಳಗಾದ ಹೆಣ್ಣುಹಾವಿನಂತೆ ಕ್ರೂರರಾದ ರಾಕ್ಷಸಿಯರ ನಿರ್ಬಂಧಕ್ಕೆ ಒಳಗಾಗಿದಾಳೆ, ಧೂಮಕೇತುವೆಂಬ ಉತ್ಪಾತಗ್ರಹದಿಂದ ಹಿಂಸಿಸಲ್ಪಡುತಲಿರುವ ರೋಹಿಣೀ ನಕ್ಷತ್ರದಂತೆ ತೋರುತ್ತಿರುವಳು ॥೯॥ ಒಳ್ಳೆಯಸ್ವಭಾವ, ಉತ್ತಮವಾದಶೀಲ, ಸದಾಚಾರಸಂಪತ್ತಿ, ಸದ್ಧರ್ಮ ಇತ್ಯಾದಿಗಳಿಂದ ಲೋಕಪ್ರಸಿದ್ಧವೆನಿಸಿ ಶೋಭಿಸುತಲಿರುವ ಸದ್ವಂಶದಲ್ಲಿ ಜನಿಸಿ, ಉತ್ತಮವಾದವಿವಾಹಾದಿ ಸಂಸ್ಕಾರವನ್ನು ಪಡೆದು, ಕರ್ಮವಶದಿಂದ ದುಷ್ಕುಲದಲ್ಲಿ ಹುಟ್ಟಿದ

ಅಭೂತೇ ನಾಪವಾದೇನ ಕೀರ್ತಿಂ ನಿಪತಿತಾಮಿವ ।
ಆಮ್ನಾಯಾನಾ ಮಯೋಗೇನ ವಿದ್ಯಾಂ ಪ್ರಶಿಥಿಲಾ ಮಿವ ॥೧೦॥
ಸನ್ನಾಮಿವ ಮಹಾಕೀರ್ತಿಂ ಶ್ರದ್ಧಾಮಿವ ವಿಮಾನಿತಾಂ ।
ಪೂಜಾಮಿವ ಪರಿಕ್ಷೀಣಾ ಮಾಶಾಂ ಪ್ರತಿಹತಾ ಮಿವ॥೧೨॥
ಆಯತೀ ಮಿವ ವಿಧ್ವಸ್ತಾ ಮಾಜ್ಞಾಂ ಪ್ರತಿಹತಾ ಮಿವ ।
ದೀಪ್ತಾಮಿವ ದಿಶಂ ಕಾಲೇ ಪೂಜಾ ಮಪಹೃತಾ ಮಿವ ॥೧೪॥

ಅಭೂತೇನ - ಅಸತ್ಯವಾದ, ಅಪವಾದೇನ - ದೂರಿನಿಂದ (ಲೋಕಾಪವಾದದಿಂದ) ನಿಪತಿತಾಂ - ಕೆಟ್ಟು ಹೋದ, ಕೀರ್ತ್ತಿಮಿವ (ಸ್ಥಿತಾಂ) - ಯಶಸ್ಸಿನಂತಿರುವವಳೂ, ಆಮ್ನಾಯಾನಾಂ - ವೇದಗಳ, ಅಯೋಗೇನ - ಅನಭ್ಯಾಸದಿಂದ, ಪ್ರಶಿಥಿಲಾಂ - ಮರೆತುಹೋದ, ವಿದ್ಯಾಮಿವಸ್ಥಿತಾಂ - ವಿದ್ಯೆಯಂತಿರುವವಳೂ ॥ ಸನ್ನಾಂ - ತಗ್ಗಿಹೋಗಿರುವ, ಮಹಾಕೀರ್ತ್ತಿಮಿವ (ಸ್ಥಿತಾಂ) - ಮಹತ್ತರವಾದ ಹೆಸರುವಾಸಿಯಂತಿರುವವಳೂ, ವಿಮಾನಿತಾಂ - ಆದರಿಸಲ್ಪಡದಿರುವ, ಶ್ರದ್ಧಾಮಿವ (ಸ್ಥಿತಾಂ) - ಆಸ್ತಿಕ್ಯಬುದ್ಧಿಯಂತಿರುವವಳೂ ಪರಿಕ್ಷೀಣಾಂ - ಹೆಚ್ಚಾಗಿ ಬಡತನವನ್ನು ಹೊಂದಿ ಇರುವ (ವಿಶೇಷ ಪೂಜಾಸಾಮಗ್ರಿಗಳೊಂದೂ ಇಲ್ಲದ ಪೂಜಾಮಿವ (ಸ್ಥಿತಾಂ)-ದೇವತಾರಾಧನೆಯಂತಿರುವವಳೂ, ಪ್ರತಿಹತಾಂ - ಭಂಗವನ್ನು ಹೊಂದಿದ, (ಉಪಯೋಗವಿಲ್ಲದೆ ಹೋದ) ಆಶಾಮಿವ (ಸ್ಥಿತಾಂ) ಕೋರಿಕೆಯಂತಿರುವವಳೂ ॥೧೨॥ ವಿಧ್ವಸ್ತಾಂ - ನಡುವೆ ಕುಂದಿಹೋದ (ನಡುಗಾಲದಲ್ಲಿ ಕಡಮೆಯಾದ) ಆಯತೀಮಿವ (ಸ್ಥಿತಾಂ)- ಧನಲಾಭದಂತಿರುವವಳೂ, ಪ್ರತಿಹತಾಂ - ಆಚರಿಸಲ್ಪಡದಿರುವ, ಆಜ್ಞಾಮಿವ (ಸ್ಥಿತಾಂ)- ಆಜ್ಞೆಯಂತಿರುವವಳೂ, ಕಾಲೇ - ಕೆಟ್ಟಕಾಲದಲ್ಲಿ, [ಕೇಡುಗಾಲದೊಳಗೆ] ದೀಪ್ತಾಂ - ಸುಡುತಲಿರುವ, ದಿಶಮಿವ [ಸ್ಥಿತಾಂ]- ದಿಕ್ಕಿನಂತಿರುವವಳೂ, ಅಪಹೃತಾಂ - ಅಪಹರಿಸಲ್ಪಟ್ಟ, ಪೂಜಾಮಿವಸ್ಥಿತಾಂ - ಪೂಜಾದ್ರವ್ಯದಂತಿರುವವಳೂ, ವಿಧ್ವಸ್ತಾಂ - ಮಂಜು ಮೊದಲಾದುದರಿಂದ ಶಿಥಿಲವಾದ, ಪದ್ಮಿನೀಮಿವ [ಸ್ಥಿತಾಂ] - ತಾವರೆಯ ಬಳ್ಳಿ

ಹೆಣ್ಣಿನಂತೆ ಕಾಣಬರುವಳು. ॥೧೦॥ ಅಸತ್ಯವಾದ ಲೋಕಾಪವಾದದಿಂದ ಕಳಂಕವನ್ನು ಹೊಂದಿರುವ ಸತ್ಕೀರ್ತಿಯಂತೆಯೂ, ನಿತ್ಯನಿಯಮಾಭ್ಯಾಸ ವಿಲ್ಲದುದರಿಂದ ಮರೆತುಹೋಗಿ ಮಲಿನವಾಗುತಬರುವ ಸದ್ವಿದ್ಯೆಯಂತೆಯೂ,ಆಪತ್ತಿಗೀಡಾಗಿ ಕೃಶಿಸಿಹೋಗುತಲಿರುವ ಮಹತ್ತರವಾದ ಕೀರ್ತಿಯಂತೆಯೂ, ॥೧೧॥ ಅಪಮಾನಕ್ಕೊಳಗಾದ ಆಸ್ತಿಕ್ಯ ಬುದ್ಧಿಯಂತೆಯೂ, ಉಚಿತವಾದ ಪೂಜಾಸಾಮಗ್ರಿಗಳಿಲ್ಲದಿರುವ ದೇವತಾರಾಧನೆಯಪ್ರಕ್ರಿಯೆಯಂತೆಯೂ,ಅಥವಾ ಬಲಗುಂದುತಲಿರುವ ಪ್ರಜ್ಞಾವಿಶೇಷದಂತೆಯೂ, ಪ್ರಯೋಜನದ ಭಂಗವನ್ನು ಪಡೆದ ಬಯಕೆಯಂತೆಯೂ, (ಕೋರಿಕೆ) ॥೧೨॥ ಮಧ್ಯಭಾಗದಲ್ಲಿ ಭಂಗವನ್ನು ಪಡೆದ,ಇಲ್ಲವೆ ಕಡಮೆಯಾದ ಮಹಾ ಲಾಭಕ್ರಮದಂತೆಯೂ, ಮೊದಲಿನಿಂದ ತಡೆಯಿಲ್ಲದೆ ನಡೆಯುತಲಿದು ಮಧ್ಯೆಭಂಗವನ್ನು ಹೊಂದಿದ ಮಹಾರಾಜಾಜ್ಞೆಯಂತೆಯೂ, ದೇಶಕ್ಕೆ ಇಲ್ಲವೆ ರಾಜನಿಗೆ ಮೃತ್ಯುವನ್ನು ಸೂಚಿಸುವ ವಿಪತ್ಕಾಲದಲ್ಲಿ ಅಕಸ್ಮಾತ್ತಾಗಿ ಹೊತ್ತಿಕೊಂಡು ಉರಿಯುವ ದಿಕ್ಕಿನಂತೆಯೂ, ದೇವತಾರಾಧನೆಗಾಗಿ ಅಣಿಮಾಡಿಇಟ್ಟಿದ್ದ ಪರಿಶುದ್ಧವಾದ ಪೂಜಾಸಾಮಗ್ರಿಯನ್ನು ಯಾರಾದರು ದುಷ್ಟರು ಅಪಹರಿಸಿದರೆ ಆಗಿನ ಆಪೂಜಾ ಪರಿಪಾಟಿಯಂತೆಯೂ ತೋರಿಬರುತ್ತಿರುವಳು॥೧೪॥ ಹಿಮಗಾಲದಲ್ಲಿ ಮಂಜಿನ ಪೆಟ್ಟನಿಂದ ಕಳೆಗುಂದಿದ ತಾವರೆಯ

ಪದ್ಮಿನೀಮಿವ ವಿಧ್ವಸ್ತಾಂ ಹತಶೂರಾಂ ಚಮೂಮಿವ ।
ಪ್ರಭಾಮಿವ ತಮೋ ಧ್ವಸ್ತಾ ಮುಪಕ್ಷೀಣಾ ಮಿವಾಪಗಾಂ ॥೧೪॥
ವೇದೀ ಮಿವ ಪರಾಮೃಷ್ಟಾಂ ಶಾಂತಾ ಮಗ್ನಿಶಿಖಾಮಿವ ।
ಪೌರ್ಣ ಮಾಸೀಮಿವ ನಿಶಾಂ ರಾಹು ಗ್ರಸ್ತೇಂದು ಮಂಡಲಾಂ ॥೧೫॥
ಉತ್ಕೃಷ್ಟ ಪರ್ಣ ಕಮಲಾಂ ವಿತ್ರಾಸಿತ ವಿಹಂಗಮಾಂ ।
ಹಸ್ತಿ ಹಸ್ತ ಪರಾಮೃಷ್ಟಾ ಮಾಕುಲಾಂ ಪದ್ಮಿನೀ ಮಿವ ॥೧೬॥
ಪತಿಶೋಕಾತುರಾಂ ಶುಷ್ಕಾಂ ನದೀಂ ವಿಸ್ರಾವಿತಾ ಮಿವ ।

---

ಯಂತಿರುವವಳೂ, ಹತಶೂರಾಂ-ಪೆಟ್ಟುಬಿದ್ದ ಮಹಾಪರಾಕ್ರಮಶಾಲಿಗಳುಳ್ಳ, ಚಮೂಮಿವ [ಸ್ಥಿತಾಂ]-ಸೇನೆಯಂತಿರುವವಳೂ, ತಮೋಧ್ವಸ್ತಾಂ - ಕಗ್ಗತ್ತಲಿನಿಂದ ಆವರಿಸಲ್ಪಟ್ಟ, ಪ್ರಭಾಮಿವಸ್ಥಿತಾಂ - ಮಂದಪ್ರಭೆಯಂತಿರುವವಳೂ, ಉಪಕ್ಷೀಣಾಂ - ಬತ್ತಿಹೋಗುತಬಂದಜಲವುಳ್ಳ, ಆಪಗಾಮಿವ [ಸ್ಥಿತಾಂ]-ಹೊಳೆಯಂತಿರುವವಳೂ,॥೧೪॥ ಪರಾಮೃಷ್ಟಾಂ-ಶೂದ್ರಾದಿಗಳಿಂದ ಮುಟ್ಟಲ್ಪಟ್ಟ, ವೇದೀಮಿವ(ಸ್ಥಿತಾಂ)-ವೈದಿಕಾಗ್ನಿವೇದಿಕೆಯಂತಿರುವವಳೂ, ಶಾಂತಾಂ-ಆರಿಹೋಗುತಲಿರುವ, ಅಗ್ನಿಶಿಖಾಮಿವಸ್ಥಿತಾಂ- ಅಗ್ನಿಜ್ವಾಲೆಯಂತಿರುವವಳೂ, ರಾಹು - ರಾಹುವೆಂಬ ಗ್ರಹದಿಂದ, ಗ್ರಸ್ತ - ನುಂಗಲ್ಪಟ್ಟ, ಇಂದುಮಂಡಲಾಂ - ಚಂದ್ರಮಂಡಲವುಳ್ಳ, ಪೌರ್ಣಮಾಸೀಂ -ಪೂರ್ಣಿಮೆಯ ಸಂಬಂಧವಾದ, ನಿಶಾಮಿವ [ಸ್ಥಿತಾಂ]- ರಾತ್ರಿಯಂತಿರುವವಳೂ ॥೧೫॥ ಉತ್ಕೃಷ್ಟಪರ್ಣಕಮಲಾಂ - ಕಿತ್ತು ಹಾಕಲ್ಪಟ್ಟ ಎಲೆಗಳೂ, ಹೂಗಳೂ ಉಳ್ಳುದೂ, ವಿತ್ರಾಸಿತ - ಭಯಗೊಳಿಸಲ್ಪಟ್ಟ, ವಿಹಂಗಮಾಂ - ಹಂಸಕಾರಂಡವಾದಿ ಪಕ್ಷಿಗಳುಳ್ಳುದೂ, ಹಸ್ತಿಹಸ್ತಪರಾಮೃಷ್ಟಾಂ - ಆನೆಯ ಸೊಂಡಿಲಿನಿಂದ ಹಿಡಿದು ಸೆಳೆಯಲ್ಪಟ್ಟುದೂ ಆದಕಾರಣವೇ, ಆಕುಲಾಂ - ಕಲಕಲವನ್ನು ಹೊಂದಿದ, ಪದ್ಮಿನೀಮಿವ [ಸ್ಥಿತಾಂ]- ತಾವರೆಯ ಬಳ್ಳಿಯಂತಿರುವವಳೂ ॥೧೬॥

ಪತಿಶೋಕಾತುರಾಂ - ಗಂಡನ ಅಗಲಿಕೆಯ ದುಃಖದಿಂದ ವ್ಯಥೆಪಡುತಿರುವವಳೂ, ವಿಸ್ರಾವಿತಾಂ-ಹೊರಗೆ ಹೊರಡಿಸಿದ ಜಲವುಳ್ಳುದಾದ ಕಾರಣವೇ, ಶುಷ್ಕಾಂ - ಬತ್ತಿಹೋದ, ನದೀಮಿವ (ಸ್ಥಿತಾಂ) -

---

ಬಳ್ಳಿಯಂತೆಯೂ, ಶೂರರೆಲ್ಲ ಮಡಿದು ಹೋದ ರಣರಂಗದಸೇನೆಯಂತೆಯೂ, ಎಡೆಬಿಡದೆ ಸುತ್ತು ಮುತ್ತು ಕವಿದಿರುವ ಕಗ್ಗತ್ತಲೆಯೊಳಗೆ ಸಿಲುಕಿದ ಮಂದದೀಪಪ್ರಭೆ ಯಂತೆಯೂ, ಬೇಸಗೆಯಲ್ಲಿ ಬಿಸಲಿನ ಬೇಗೆಯಿಂದ ಕೃಶವಾಗಿಹರಿಯುವ ನದೀಪ್ರವಾಹದಂತೆಯೂ, ॥೧೪॥ ಶೂದ್ರಾದಿಗಳ ಸ್ಪರ್ಶವನ್ನು ಪಡೆದ ಯಜ್ಞವಾಟದಲ್ಲಿನ ವೈದಿಕವೇದಿಕೆಯಂತೆಯೂ, ಶಾಂತಿಯನ್ನು ಪಡೆಯುತ ಒರುತಲಿರುವ (ಆರಿಹೋಗುತಲಿರುವ) ಅಗ್ನಿಜ್ವಾಲೆಯಂತೆಯೂ, ರಾಹುಗ್ರಹವು ಪೂರ್ಣಚಂದ್ರಮಂಡಲವನ್ನು ನುಂಗುತ್ತಿರುವಲ್ಲಿನ ಪೌರ್ಣಮಾಸ್ಯೆಯರಾತ್ರಿಯಂತೆಯೂ,॥ರಮಣೀಯವಾಗಿಬೆಳಗುತಲಿರುವದಿವ್ಯವಾದಸರೋವರದಲ್ಲಿ, ಮದದಾನೆಯು ನುಗ್ಗಿ ಹಂಸಕಾರಂಡವಾದಿ ಪಕ್ಷಿಗಳನ್ನೆಲ್ಲ ಭಯಗೊಳಿಸಿ, ಹಾರಿಸಿ, ಸೊಂಡಿಲಿನಿಂದ ಕೋಮಲವಾದ ತಾವರೆಯ ಬಳ್ಳಿಯನ್ನುಸೆಳೆದು, ಆದರಲ್ಲಿನ ಅಂದವಾದ ಎಲೆಗಳನ್ನೂ, ಹೂವನ್ನೂ,ಒದರಿ ಉದರಿಸುತ್ತಿರಲು,ಕಳಾಹೀನವಾದ ಆ ಕಮಲಲತೆಯಂತೆಯೂ ಶೋಚನೀಯಳಾಗಿರುವಳು ॥೧೬॥ ಮತ್ತು - ಪತಿಯ ಅಗಲಿಕೆಯಿಂದ ಶೋಕಗ್ರಸ್ತಳಾಗಿ, ಪಾತ್ರದಲ್ಲಿನ ಜಲವನ್ನೆಲ್ಲ ಹೊರ ಹೊರಡಿಸಲು ಬತ್ತಿಹೋಗುತಬಂದ ಹೊಳೆಯಂತೆಯೂ,

ಪರಯಾ ಮೃಜಯಾ ಹೀನಾಂ ಕೃಷ್ಣಪಕ್ಷೇ ನಿಶಾಮಿವ ॥೧೭॥
ಸುಕುಮಾರೀಂ ಸುಜಾತಾಂಗೀಂ ರತ್ನಗರ್ಭ ಗೃಹೋಚಿತಾಂ ।
ತಪ್ಯಮಾನಾ ಮಿವೋಷ್ಣೇನ ಮೃಣಾಳೀ ಮಚಿರೋದ್ಧೃತಾಂ ॥೧೮॥
ಗೃಹೀತಾ ಮಾಳಿತಾಂ ಸ್ತಂಭೇ ಯೂಥಪೇನ ವಿನಾಕೃತಾಂ ।
ನಿಶ್ಶ್ವಸಂತೀಂ ಸುದುಃಖಾರ್ತಾಂ ಗಜರಾಜ ವಧೂಮಿವ ॥೧೯॥
ಏಕಯಾ ದೀರ್ಘಯಾ ವೇಣ್ಯಾ ಶೋಭಮಾನಾ ಮಯತ್ನತಃ ।
ನೀಲಯಾ ನೀರದಾಪಾಯೇ ವನರಾಜ್ಯಾ ಮಹೀಮಿವ ॥೨೦॥

---

ನದಿಯಂತಿರುವವಳೂ, ಪರಯಾ - ಶ್ರೇಷ್ಠವಾದ, ಮೃಜಯಾ - ಪರಿಶುದ್ಧಿಯಿಂದ (ಸ್ನಾನಾದಿಗಳಿಂದುಂಟಾಗುವ ಶುಚಿತ್ವದಿಂದ), ಹೀನಾಂ-ಶೂನ್ಯಳಾದವಳೂ ಆದಕಾರಣವೇ, ಕೃಷ್ಣಪಕ್ಷನಿಶಾಮಿವಸ್ಥಿತಾಂ-ಕೃಷ್ಣಪಕ್ಷದಲ್ಲಿನ ರಾತ್ರಿವೇಳೆಯಂತಿರುವವಳೂ ॥೧೭॥ ಸುಕುಮಾರೀಂ - ಮೃದುತ್ವವುಳ್ಳವಳೂ, ಸುಜಾತಾಂಗೀಂ - (ಸಾಮುದ್ರಿಕ ಶಾಸ್ತ್ರೋಕ್ತಪ್ರಕಾರವಾಗಿ) ಅಂದವಾದ ಅವಯವಗಳುಳ್ಳವಳೂ, ರತ್ನಗರ್ಭಗೃಹೋಚಿತಾಂ - ರತ್ನಖಚಿತವಾದ ಮನೆಯೊಳಗೆ ಇರಲುತಕ್ಕವಳೂ, ಅಚಿರೋದ್ಧೃತಾಂ-ಆಗತಾನೆ ಕೀಳಲ್ಪಟ್ಟುದಾದಕಾರಣವೇ, ಉಷ್ಣೇನ - ಬಿಸಿಲಿನ ಬೇಗೆಯಿಂದ, ತಪ್ಯಮಾನಾಂ - ಸುಡಲ್ಪಡುತಲಿರುವ, ಮೃಣಾಳೀಮಿವ (ಸ್ಥಿತಾಂ) - ತಾವರೆಯ ಬಳ್ಳಿಯಂತಿರುವವಳೂ ॥ ೧೮ ॥ ಗೃಹೀತಾಂ - ಹಿಡಿಯಲ್ಪಟ್ಟುದಾಗಿ, ಸ್ತಂಭೇ - ಕಂಭದಲ್ಲಿ, ಆಳಿತಾಂ- ಕಟ್ಟಿಹಾಕಲ್ಪಟ್ಟುದಾಗಿಯೂ, ಯೂಥಪೇನ-ಗಜರಾಜನಿಂದ (ಸಲಗನಿಂದ) ವಿನಾಕೃತಾಂ - ಅಗಲಲ್ಪಟ್ಟುದೂ ಆದಕಾರಣವೇ, ನಿಶ್ಶ್ವಸಂತೀಂ - ನಿಟ್ಟುಸಿರನ್ನು ಬಿಡುತ್ತಿರುವ, ಸುದುಃಖಾರ್ತಾಂ -ಹೆಚ್ಚಿದ ದುಃಖದಿಂದ ಪೀಡಿಸಲ್ಪಡುತಿರುವ, ಗಜರಾಜ ವಧೂಮಿವಸ್ಥಿತಾಂ-ದೊಡ್ಡ ಹೆಣ್ಣಾನೆಯಂತಿರುವವಳೂ, ॥೧೯॥ ಏಕಯಾ - ಒಂದೇ ಎಳೆಯಾಗಿಯೂ, ದೀರ್ಘಯಾ - ನೀಳವಾಗಿಯೂ ಇರುವ, ವೇಣ್ಯಾ - ಜಡೆಯಿಂದ, ಅಯತ್ನತಃ - ಪ್ರಯತ್ನವಿಲ್ಲದೆಯೇ (ಸ್ವಭಾವದಿಂದಲೇ) ಶೋಭಮಾನಾಂ - ಪ್ರಕಾಶಿಸುತಲಿರುವವಳೂ, ನೀರದಾಪಾಯೆ - ಮಳೆಗಾಲವು ಕಳೆದಮೇಲೆ (ಶರದೃತುವಿನಲ್ಲಿ) ನೀಲಯಾ - ಕಪ್ಪಗಿರುವ, ವನರಾಜ್ಯಾ - ತೋಟಗಳ ಸಾಲಿನಿಂದ ಕೂಡಿರುವ, ಮಹೀಮಿವ (ಸ್ಥಿತಾಂ) - ಭೂಮಿಯಂತಿರುವವಳೂ ॥ ೨೦॥ ಉಪವಾಸೇನ - ಆಹಾರವಿಲ್ಲದುದರಿಂದಲೂ, ಶೋಕೇನ-

---

ಸ್ನಾನಾಲಂಕಾರಾದಿಗಳಿಂದುಂಟಾದ ಶುಚಿತೆಯಿಂದ ಶೂನ್ಯಳಾಗಿ, ಕೃಷ್ಣಪಕ್ಷದ ರಾತ್ರಿಯಂತೆಯೂ ಕಾಣಬರುತಲಿದಾಳೆ. ॥೧೭॥ ಸುಕುಮಾರವಾದ ಶರೀರವುಳ್ಳವಳು, ಅಂದವಾಗಿಯೂ ಹೊಂದಿಕೆಯಾಗಿಯೂ, ಮಟ್ಟಸವಾಗಿಯೂ, ಅಯಾಯ ಸ್ಥಾನೋಚಿತವಾಗಿಯೂ, ಇರುವ ಅವಯವಗಳುಳ್ಳವಳು. ರತ್ನಗಳಿಂದಕೆತ್ತಲ್ಪಟ್ಟ ಮಹಾರಾಜ ಭವನದಲ್ಲಿ ವಾಸಮಾಡಲು ತಕ್ಕವಳು, ಆದರೂ ಕೊಳದಿಂದ ಕಿತ್ತು ಎಸೆಯಲ್ಪಟ್ಟ ತೀಕ್ಷ್ಣವಾದ ಬಿಸಿಲಿನಬೇಗೆಯಿಂದ ತಪಿಸುತಲಿರುವ ತಾವರೆಯಬಳ್ಳಿಯಂತೆ ಇದಾಳೆ. ॥೧೮॥ ಹೊಸದಾಗಿ ಹಿಡಿದುತಂದು ಕಂಭಕ್ಕೆಕಟ್ಟಿ, ಹೆಗ್ಗಡೆ ಎನಿಸಿದ ಸಲಗನಿಂದ ಅಗಲಿಸಲು ಅಡಿಗಡಿಗೆ ಬಿರುಸಾಗಿ ನಿಟ್ಟುಸಿರನ್ನು ಬಿಡುತ್ತಾ, ಬಹಳವಾದ ದುಃಖಕ್ಕೆ ಒಳಗಾದ ದೊಡ್ಡ ಹೆಣ್ಣಾನೆಯಂತೆ ಇದಾಳೆ ॥೧೯॥ ನೀಳವಾಗಿಯೂ ಒಂದೇ ಎಳೆಯದಾಗಿಯೂ ಇರುವ ಜಡೆಯಿಂದೊಡಗೂಡಿ, ಆಶ್ವಯುಜ, ಕಾರ್ತಿಕ ಮಾಸದಲ್ಲಿ ಕಪ್ಪಗೆ ಕಾಣಬರುವ ವನಪಙ್ತಿಯಿಂದ ಒಡಗೂಡಿದ,

ಉಪವಾಸೇನ ಶೋಕೇನ ಧ್ಯಾನೇನ ಚ ಭಯೇನ ಚ ।
ಪರಿಕ್ಷೀಣಾಂ ಕೃಶಾಂ ದೀನಾ ಮಲ್ಪಾಹಾರಾಂ ತಪೋಧನಾಂ ॥೨೧॥
ಅಯಾಚಮಾನಾಂ ದುಃಖಾರ್ತಾಂ ಪ್ರಾಂಜಲಿಂ ದೇವತಾ ಮಿವ ।
ಭಾವೇನ ರಘುಮುಖ್ಯಸ್ಯ ದಶಗ್ರೀವ ಪರಾಭವಂ ॥೨೨॥
ಸಮೀಕ್ಷಮಾಣಾಂ ರುದತೀ ಮನಿಂದಿತಾಂ ಸುಪಕ್ಷ್ಮ ತಾಮ್ರಾಯತ ಶುಕ್ಲಲೋಚನಾಂ ।

ದುಃಖದಿಂದಲೂ, ಧ್ಯಾನೇನ - ಚಿಂತೆಯಿಂದಲೂ, ಪರಿಕ್ಷೀಣಾಂ - ಬಹುಕೃಶಿಸಿಹೋಗಿರುವವಳೂ, ಭಯೇನಚ - ಭಯದಿಂದಲೂ, ಕೃಶಾಂ - ಬಣಗುತಲಿರುವವಳೂ, ದೀನಾಂ - ಸಂತೋಷದ ಗುರುತಿಲ್ಲದವಳೂ, ಅಲ್ಪಾಹಾರಾಂ - ಜಲಾದ್ಯಲ್ಪಾಹಾರವುಳ್ಳವಳೂ, ( ಆದಕಾರಣವೇ ) ತಪೋಧನಾಂ - ತಪಸ್ಸೇಧನವಾಗಿ ಉಳ್ಳವಳೂ, ॥೨೧॥ ರಘುಮುಖ್ಯಸ್ಯ - ಶ್ರೀರಾಮನ ಸಂಬಂಧವಾದ (ರಾಮನ ಅಗಲಿಕೆಯಿಂದ ಸಂಭವಿಸಿದ) ದಶಗ್ರೀವ ಪರಾಭವಂ - ರಾವಣನಿಂದುಂಟಾದ ತಿರಸ್ಕಾರವನ್ನು ನೆನೆದು, ದುಃಖಾರ್ತಾಂ - ಶೋಕಪೀಡಿತಳಾಗಿ, ಪ್ರಾಂಜಲಿಂ - ಅಂಜಲಿಬದ್ಧಳಾಗಿ, ಭಾವೇನ - ಮನಸ್ಸಿನಿಂದ, ದೇವತಾಂ - ಇಷ್ಟದೇವತೆಯನ್ನು, ಆಯಾಚಮಾನಾಮಿವಸ್ಥಿತಾಂ- (ದುಃಖಪರಿಹಾರವನ್ನು) ಪ್ರಾರ್ಥಿಸುವಂತಿರುವವಳೂ, ॥೨೨॥ ಸಮೀಕ್ಷ್ಯಮಾಣಾಂ - (ತನ್ನಪಾಲಕನನ್ನು ಎದುರಿಗೆ) ನೋಡುವಂತಿರುವವಳೂ, ರುದತೀಂ - ಸರ್ವದಾ ಅಳುತಲಿರುವವಳೂ, ಅನಿಂದಿತಾಂ - ದೋಷಲೇಶವಿಲ್ಲದವಳೂ, ಸುಪಕ್ಷ್ಮ - ಒಳ್ಳೆಯ ರೆಪ್ಪೆಯಿಂದ ಕೂಡಿದ, ತಾಮ್ರ - ಕೆಂಪಾದ, ಆಯತ - ಅಗಲವಾದ, ಶುಕ್ಲ-ಬಿಳುಪಿನಿಂದೊಡಗೂಡಿದ, ಲೋಚನಾಂ - ಕಣ್ಣುಳ್ಳವಳೂ, ಅತೀವ - ಬಹಳವಾಗಿ, ರಾಮಂ - ಶ್ರೀರಾಮನನ್ನು, ಅನುವ್ರತಾಂ - ಅನುಸರಿಸಿದ ವ್ರತವುಳ್ಳವಳೂ ಆಗಿರುವ, ಮೈಥಿಲೀಂ - ಸೀತಾದೇವಿಯನ್ನು, ರಾವಣಃ-ರಾವಣಾಸುರನು, ವಧಾಯ-

ಭೂಮಿಯು ಹೇಗೋ ಹಾಗೆ ಸ್ವಾಭಾವಿಕವಾದ ಕಾಂತಿಯಿಂದ ಶೋಭಿಸುತಲಿದಾಳೆ ॥೨೦॥ ಅನಶನದಿಂದಲೂ, ಪತಿಯನ್ನಗಲಿದ ಶೋಕದಿಂದಲೂ, ಸಂತತಶ್ರೀರಾಮ ಚಿಂತನೆಯಿಂದಲೂ, ರಕ್ಕಸಿಯರ ಹಿಂಸೆಯಿಂದುಂಟಾದ ಭಯದಿಂದಲೂ,ಅವಯವಗಳ ಹೊರವಿಲ್ಲದೆ ಕೃಶಿಸುತ್ತಲೂ, ರಕ್ತಮಾಂಸಾದಿಗಳ ಪುಷ್ಟಿಯಿಲ್ಲದೆ ಶುಷ್ಕಿಸುತ್ತಲೂ, ಬಹುದೀನಳಾಗಿಯೂ, ಜಲಾದ್ಯಲ್ಪಾಹಾರ ವುಳ್ಳವಳಾಗಿಯೂ ಇರುತ್ತಾ, ಅರಣ್ಯವಾಸಿನಿಯಾದ ಮಹಾತಪೋಧನಳಂತೆ ಇದಾಳೆ ॥೨೧॥ ಶ್ರೀರಾಮಚಂದ್ರನಲ್ಲಿ ನೆಲೆಗೊಂಡ ಸಂತತ ಭಾವದಿಂದ ದುಃಖಾರ್ತಳಾಗಿದ್ದರೂ, ಅಂಜಲಿಬದ್ಧಳಾಗಿ, ತನ್ನ ಇಷ್ಟದೇವತೆಯನ್ನು ಕುರಿತು ಸಪುತ್ರಮಿತ್ರನಾದ ದಶಕಂಧರನಿಗೆ ಜಾಗ್ರತೆಯಲ್ಲಿ ಆಪತ್ತು ಉಂಟಾಗಲೆಂದು ಪ್ರಾರ್ಥಿಸುತಲಿದಾಳೆಯೋ ಎಂಬಂತೆ ಗೋಚರಿಸುತಲಿದಾಳೆ॥೨೨॥ಶ್ರೀರಾಮನಸಂದರ್ಶನವು ತನಗೆ ಇನ್ನೆಂದಿಗೆಲಭಿಸುವುದೋ ಎಂದು ಎದುರು ನೋಡುತ್ತಿರುವವಳಾಗಿಯೂ,ಅಥವಾ ಸಂತತಧ್ಯಾನದಿಂದ ಶ್ರೀರಾಮ ಚಂದ್ರನನ್ನು ಕಣ್ಣೆದುರಿಗೆ ಕಾಣುತಲಿದಾಳೆಯೋ ಎಂಬಂತೆ ಇರುವವಳಾಗಿಯೂ, ಅನವರತಕಣ್ಣೀರನ್ನು ಸುರಿಸುತಲಿರುವವಳಾಗಿಯೂ, ದೋಷ ಲೇಶವಿಲ್ಲದೆ ಪರಿಶುದ್ಧಳಾಗಿಯೂ, ಅಂದವಾದ ರೆಪ್ಪೆ, ಕರಿಯಗುಡ್ಡಿನ ಸುತ್ತಲೂ ಎಣೆಗೆಂಪು, ಕಡಿಯಲ್ಲಿ ಬಿಳುಪು, ವಿಸ್ತಾರ,ಈಕ್ರಮವನ್ನು ಹೊಂದಿರುವ ಸುಂದರವಾದ ನಯನಗಳುಳ್ಳವಳಾಗಿಯೂ, ಸಂತತ ಶ್ರೀರಾಮ ಚಿಂತನವೆಂಬ ಮಹಾವೀರ ವ್ರತವನ್ನವಲಂಬಿಸಿದವಳಾಗಿಯೂ ಇರು

ಅನುವ್ರತಾಂ ರಾಮ ಮತೀವ ಮೈಥಿಲೀಂ ಪ್ರಲೋಭಯಾಮಾಸ ವಧಾಯ ರಾವಣಃ ॥೨೩॥

ಇತಿ ಶ್ರೀಮತ್ಸುಂದರಕಾಂಡೆ ಏಕೋನವಿಂಶಸ್ಸರ್ಗಃ.



ತನ್ನ ಸಂಹಾರವನ್ನು ಪಡೆಯುವುದಕ್ಕೋಸ್ಕರ, (ಸೀತೆಯ ಸಂಹಾರಕ್ಕೆ ಎಂದು ಕೆಲವರು), ಪ್ರಲೋಭಯಾಮಾಸ - ವಂಚಿಸಲುಯತ್ನಿಸಿದನು. (ಭಯಪಡಿಸಲಾರಂಭಿಸಿದನು) ॥೨೩॥

ಇಂತು ಹತ್ತೊಂಭತ್ತನೆಯ ಸರ್ಗವು.



ವ ಜನಕರಾಜನಂದಿನಿಯಾದ ಸೀತಾದೇವಿಯ ಸಮೀಪಕ್ಕೆ ದಶಗಳನು ಬಂದು, ಜಾಗ್ರತೆಯಲ್ಲಿ ತನಗೆ ಪ್ರಾಣಾಪತ್ತನ್ನು ಸಂಪಾದಿಸಿಕೊಳ್ಳುವುದಕ್ಕೋಸ್ಕರ ಆಕೆಯನ್ನು ಆಶೆಗೊಳಿಸಲಿಕ್ಕೂ, ವಂಚಿಸಲಿಕ್ಕೂ, ಭಯಪಡಿಸಲಿಕ್ಕೂ ಆರಂಭಿಸಿದನು ॥೨೩॥

ಇಂತು ಹತ್ತೊಂಭತ್ತನೆಯ ಸರ್ಗವು.



ಶ್ರೀಃ

ಶ್ರೀರಾಮಚನ್ದ್ರಪರಬ್ರಹ್ಮಣೇನಮಃ

## ಶ್ರೀಮತ್ಸುನ್ದರಕಾಣ್ಡೇ-ವಿಂಶಸ್ಸರ್ಗಃ

ಸ ತಾಂ ಪತಿವ್ರತಾಂ ದೀನಾಂ ನಿರಾನಂದಾಂ ತಪಸ್ವಿನೀಂ ।
ಸಾಕಾರೈ ರ್ಮಧುರೈ ರ್ವಾಕ್ಯೈ ರ್ನ್ಯದರ್ಶಯತ ರಾವಣಃ ॥೧॥

ಕಂದ॥ ಪೋಗಳುತೆ ತನ್ನಯ ಸಿರಿಯಂ । ಮುಗುಳಾ ರಘುರಾಮನನ್ನೆ ಹೀಯಾಳಿಸುತಲ್ ।
ನೆಗಳಿದ ಕತಿಯಾಗೆನ್ನುತೆ । ಬೊಗಳಿದ ನಾ ಖೂಳ ಜಾನಕಿಗಾಗಳ್ ॥

ಸಃ - ಆ, ರಾವಣಃ - ರಾವಣನು, ಪತಿವ್ರತಾಂ - ಪತಿಭಕ್ತಿಯೇ ವ್ರತವಾಗಿ ಉಳ್ಳವಳೂ, ದೀನಾಂ - ಬಹುದೀನಳೂ, ನಿರಾನಂದಾಂ - ಸಂತೋಷಶೂನ್ಯಳೂ, ತಪಸ್ವಿನೀಂ - ಕ್ರೂರವಾದ ತಪಸ್ಸುಳ್ಳವಳೂ, [ಶೋಚನೀಯಳೂ] ಆಗಿರುವ, ತಾಂ - ಆ ಸೀತಾದೇವಿಯನ್ನು ಕಂಡು, ಸಾಕಾರೈಃ - ಭಾವಗರ್ಭಿತಗಳಾದ, ಮಧುರೈಃ - ಕಿವಿಗಿಂಪಾದವುಗಳೆಂತಿರುವ, ವಾಕ್ಯೈಃ - ಮಾತುಗಳಿಂದ, [ಸ್ವಾಶಯಂ - ತನ್ನ ಅಭಿಪ್ರಾಯವನ್ನು] ನ್ಯದರ್ಶಯತ - ತಿಳಿಯಪಡಿಸಿದನು ॥ ೧ ॥ ಹೇ ನಾಗನಾಸೋರು-ಆನೆಯ

—ಇಪ್ಪತ್ತನೆಯ ಸರ್ಗವು—

ಹಾಗೆ ವಂಚಿಸಲೆಳಸಿದ ರಾವಣನು- ಪತಿಭಕ್ತಿಪರಾಯಣಳೂ, ಬಹು ದೀನಳೂ, ಸಂತೋಷ ಶೂನ್ಯಳೂ ಆಗಿರುವಳಾದಕಾರಣವೇ ಬಹು ಶೋಚನೀಯಳೆನಿಸಿ, ತಪೋನಿರತಳಾಗಿರುವ ಆ ಸೀತಾದೇವಿಯನ್ನು ಕುರಿತು ನಾನಾಭಾವಗರ್ಭಿತಗಳಾದ ವಚನಗಳಿಂದ ಸ್ವಾಭಿಪ್ರಾಯವನ್ನು ಪ್ರಕಾಶಪಡಿಸಲು ಇಂತೆಂದನು:- ॥೧॥ ಆನೆಯ ಸೊಂಡಿಲಿನಂತೆ

ಮಾಂ ದೃಷ್ಟ್ವಾ ನಾಗನಾಸೋರು ಗೂಹಮಾನಾ ಸ್ತನೋದರಂ ।
ಅದರ್ಶನ ಮಿವಾತ್ಮಾನಂ ಭಯಾ ನ್ನೇತುಂ ತ್ವ ಮಿಚ್ಛಸಿ ॥೨॥
ಕಾಮಯೇ ತ್ವಾಂ ವಿಶಾಲಾಕ್ಷಿ ಬಹುಮನ್ಯಸ್ವ ಮಾಂ ಪ್ರಿಯೆ ।
ಸರ್ವಾಂಗ ಗುಣ ಸಂಪನ್ನೇ ಸರ್ವಲೋಕ ಮನೋಹರೇ ॥೩॥
ನೇಹ ಕೇಚಿ ನ್ಮನುಷ್ಯಾವಾ ರಾಕ್ಷಸಾಃ ಕಾಮರೂಪಿಣಃ ।
ವ್ಯಪಸರ್ಪತು ತೇ ಸೀತೆ ಭಯಂ ಮತ್ತ ಸ್ಸಮುತ್ಥಿತಂ ॥೪॥

---

ಸೊಂಡಿಲಿನಂತೆ ಅಂದವಾದ ತೊಡೆಗಳುಳ್ಳ ಓ ಜಾನಕೀ ! ಮಾಂ - ನನ್ನನ್ನು, ದೃಷ್ಟ್ವಾ-ನೋಡಿ, ತ್ವಂ-ನೀನು, ಭಯಾತ್ - ಭಯದ ದೆಸೆಯಿಂದ, ಸ್ತನೋದರಂ - ಎದೆ ಮತ್ತು ಹೊಟ್ಟೆಗಳನ್ನು, ಗೂಹಮಾನಾ - ಮುಚ್ಚಿಟ್ಟುಕೊಳ್ಳುವವಳಾಗಿ (ಹೊದೆದುಕೊಂಡವಳಾಗಿ), ಆತ್ಮಾನಂ - ನಿನ್ನ ಶರೀರವನ್ನು, ಅದರ್ಶನಂ - ಅಗೋಚರತೆಯನ್ನು, [ಕಾಣಿಸದಿರುವಿಕೆಯನ್ನು] ನೇತುಂ - ಹೊಂದಿಸಲಿಕ್ಕೆ, ಇಚ್ಛಸಿ - ಬಯಸುತಲಿದ್ದೀಯೆ ॥೨॥ (ರಾವಣನು ಸ್ವಾಭಿಪ್ರಾಯವನ್ನು ತಿಳಿಸಿದ ಬಗೆ) ಹೇ ವಿಶಾಲಾಕ್ಷಿ - ವಿಶಾಲನಯನೆಯಾದ ಓ ಸೀತೇ, ತ್ವಾಂ - ನಿನ್ನನ್ನು, ಕಾಮಯೇ-ಬಯಸುತಲಿದ್ದೇನೆ, ಪ್ರಿಯೇ - ಪ್ರೀತಿಪಾತ್ರಳೇ, ಸರ್ವಾಂಗ ಗುಣಸಂಪನ್ನೇ - ಸರ್ವಾವಯವಸುನ್ದರೀ - ಸರ್ವಲೋಕ ಮನೋಹರೇ - ಸರ್ವಜನರ ಮನಸ್ಸನ್ನು ಸೆಳೆಯುತಕ್ಕವಳೇ, ಮಾಂ - ನನ್ನನ್ನು, ಬಹುಮನ್ಯಸ್ವ - ಗೌರವಿಸು ॥೩॥ ಹೇಸೀತೆ - ಓ ಸೀತೆಯೇ, ಇಹತು - ಇಲ್ಲಿಯಾದರೋ, ಕೇಚಿತ್ - ಯಾರೊಬ್ಬ, ಮನುಷ್ಯಾವಾ - ಮನುಷ್ಯರಾಗಲೀ, ಕಾಮರೂಪಿಣಃ-ಇಷ್ಟವಾದ ರೂಪವನ್ನು ತಾಳತಕ್ಕ. ರಾಕ್ಷಸಾವಾ-ರಕ್ಕಸರಾಗಲೀ, ನ-ನಿನಗೆ ಭಯವನ್ನುಂಟು ಮಾಡತಕ್ಕವರಾಗಿಲ್ಲ, ತೇ - ನಿನಗೆ, ಮತ್ತಃ- ನನ್ನ ದೆಸೆಯಿಂದ, ಸಮುತ್ಥಿತಂ- ಉಂಟಾಗಿರುವ, ಭಯಂ-ಅಂಜಿಕೆಯು, ವ್ಯಪಸರ್ಪತು - ದೂರವಾಗಿ ತೊಲಗಲಿ,॥೪॥(ರಕ್ಕಸರಿಗೆಪರಸ್ತ್ರೀಯರನ್ನು ಅಪಹರಿಸುವುದು

---

ಬಲು ಅಂದವಾದ ತೊಡೆಯುಳ್ಳ ಓ ಸುಂದರೀ! ಇದೇನು ? ನೀನು ನನ್ನನ್ನು ನೋಡಿ ಹೆದರಿ, ಸ್ತನ, ಉದರ ಮೊದಲಾದ ಅವಯವಗಳನ್ನು ನಾನು ನೋಡದ ಹಾಗೆ ಮರೆಮಾಡಿಕೊಂಡು ನಿನ್ನ ಅವಯವಗಳನ್ನೇ ನನಗೆ ಕಾಣಿಸದಂತೆ ಹುದುಗಿ ಕೂಡಲು ಯತ್ನಿಸುತಲಿದ್ದೀಯೆ, ಇದು ತಕ್ಕುದಲ್ಲ ॥೨॥ ಓ ವಿಶಾಲ ನಯನೇ ! ನಾನು ನಿನ್ನನ್ನು ಕಾಮಿಸುತಲಿರುವೆನಲ್ಲಾ, ಸರ್ವಾವಯವ ಸುಂದರಿಯಾದ ಓ ಪ್ರಿಯಳೇ! ಸರ್ವಜನರ ಕಣ್ಮನಗಳನ್ನು ಸೆಳೆಯುತಕ್ಕವಳೇ! ನನ್ನನ್ನು ಪ್ರೀತಿಸು. ನನ್ನ ಇಷ್ಟವನ್ನು ನೆರವೇರಿಸು ॥೩॥ ಓ ಸೀತೇ!

---

ಲೋಕೋತ್ತರ ಸೌಂದರ್ಯ ಶಾಲಿನಿಯಾದ ಎಲೌ ಮಹಾದೇವಿಯೇ!ಮಕ್ಕಳು, ಶಿಷ್ಯರು,ಭೃತ್ಯರೂ ಸಮಾನರಲ್ಲವೇ ? ಹೀಗಿರುವಲ್ಲಿ ನಿನ್ನ ಚರಣಸೇವಕನಾದ ನನ್ನನ್ನು ನೋಡಿ ನೀನು ಅವಿತು ಕೂಡಲು ನಿಮಿತ್ತವಿಲ್ಲವಲ್ಲ ॥ ಎಲೌ ತಾಯೆ ! ನೀನು ಸರ್ವಲೋಕಮಾತೆ ಎಂದು ನಿನ್ನನ್ನುಸೇವಿಸಲುಬಯಸುತಲಿದ್ದೇನೆ,ಇಂತಹ ನನ್ನನ್ನು ನೀನು ಕಟಾಕ್ಷಿಸಿ ರಕ್ಷಿಸು॥ ಎಲೌ ಮಹಾದೇವಿ ! ನೀನು ಜಗನ್ಮಾತೆಯಲ್ಲವೇ ? ಇಂತಹ ನಿನಗೆ ಸುರನರೋರುಗರೇ ಮೊದಲಾದ ಯಾರಿಂದಲೂ ಭಯ ಲೇಶವುಂಟಾಗದಿರುವಲ್ಲಿ, ನನ್ನಿಂದ ಭಯವುಂಟಾಗುವುದುಂಟೇ ? ಸರ್ವಥಾ ಇಲ್ಲ ॥೪॥ ಎಲೌ ಮಾತೆ! ಪರಸ್ತ್ರೀ ಹರಣಾದಿಗಳನ್ನು ಆಚರಿಸುವ

ಸ್ವಧರ್ಮೋ ರಕ್ಷಸಾಂ ಭೀರು ಸರ್ವಥೈವ ನ ಸಂಶಯಃ ।
ಗಮನಂ ವಾ ಪರಸ್ತ್ರೀಣಾಂ ಹರಣಂ ಸಂಪ್ರಮಥ್ಯ ವಾ ॥೫॥
ಏವಂ ಚೈತ ದಕಾಮಾಂ ತು ನ ತ್ವಾಂ ಸ್ಪ್ರಕ್ಷ್ಯಾಮಿ ಮೈಥಿಲಿ ।

ಸ್ವಧರ್ಮವಾದರೂ ನಾನು ನಿನ್ನನ್ನು ಕಾಮಿಸಿದಬಳಿಕ ನೀನೂ ನನ್ನನ್ನು ಹಾಗೆಯೇ ಕಾಮಿಸಿ ಸ್ಪರ್ಶವಾಡದೆ ಇರುವುದರಿಂದ ನಾನೂ ನಿನ್ನನ್ನು ಸೋಕದೆ ಇದೇನೆ ಎಂದು ಹೇಳುತ್ತಾನೆ) ಹೇಭೀರು ಓ ಭಯಸ್ವಭಾವದ ಹೆಣ್ಣೇ, ಪರಸ್ತ್ರೀಣಾಂ - ಪರಾಂಗನೆಯರನ್ನು, ಗಮನಂವಾ - ಹೊಂದುವುದಾಗಲೀ, ಪ್ರಮಥ್ಯ - ಬಲಾತ್ಕರಿಸಿ, ಹರಣಂವಾ - ಎತ್ತಿ ತರುವುದಾಗಲೀ, ರಕ್ಷಸಾಂ - ರಕ್ಕಸರಿಗೆ, ಸ್ವಧರ್ಮಃ - ಮನೆತನಕ್ಕೆ ಬಂದ ಧರ್ಮವು, ಸರ್ವಥೈವ - ಸರ್ವಪ್ರಕಾರದಿಂದಲೂ, ನಸಂಶಯಃ - ಈ ವಿಷಯದ ಲ್ಲಿ ಸಂದೇಹವಿಲ್ಲ ॥೫॥ ಏತತ್ - ಪರಸ್ತ್ರೀಗಮನಹರಣರೂಪವಾದ ಈ ಕಾರ್ಯವು, ಏವಂಚ ಸತಿ- ಇಂತು ನಮಗೆ ಸ್ವಾಭಾವಿಕಧರ್ಮವಾಗಿ ಇರುವಲ್ಲಿ, ಮೇ - ನನ್ನ, ಶರೀರೆ - ದೇಹದಲ್ಲಿ, ತವ - ನಿನಗೆ, ಕಾಮಃ - ಇಚ್ಛೆಯು (ಆಶೆಯು) ಕಾಮಂ - ವಿಶೇಷವಾಗಿ, ಯಥಾಕಾಮಂ - ತಡೆಯಿಲ್ಲದೆ, ಪ್ರವರ್ತತಾಂ - ಪ್ರವೇಶಿಸಲಿ (ಹರಡಲಿ) ಹೇಮೈಥಿಲಿ - ಓ ಜಾನಕೀ, ಅಕಾಮಾಂ - ನನ್ನಲ್ಲಿ ಆಶೆಯಿಲ್ಲದಿರುವ, ತ್ವಾಂ - ನಿನ್ನನ್ನು, (ಅಹಂ - ನಾನು) ನಸ್ಪ್ರಕ್ಷ್ಯಾಮಿ - ಮುಟ್ಟಲಾರೆನು, ಮೇ - ನನ್ನ, ಶರೀರೆ - ದೇಹದಲ್ಲಿ, ಕಾಮಂ - ಹೇರಳವಾಗಿ, ಯಥಾಕಾಮಂ - ಅಡ್ಡಿಇಲ್ಲದೆ, ಕಾಮಃ - ಕಾಮವಿಕಾರವು, ಪ್ರವರ್ತತಾಂ - ಹೆಚ್ಚುಗಲಿದೆಯಲ್ಲಾ, ಏವಂಚ - ಹೀಗಿರಲಾಗಿ, ಏತತ್ - ಈ ಪರದಾರಗಮನಾದಿರೂಪಕಾರ್ಯವು,

ಸರ್ವಾಭೇದ್ಯವಾದ ಈ ಸ್ಥಾನದಲ್ಲಿ ಮನುಷ್ಯರಾಗಲೀ, ಕಾಮರೂಪಿಗಳಾದ ರಾಕ್ಷಸರಾಗಲೀ ಬಂದು ನಿನ್ನನ್ನು ಭಯಪಡಿಸುವರೆಂಬ ನೆನಹನ್ನೇ ಬಿಟ್ಟುಬಿಡು. ನಿನ್ನನ್ನು ಕಾಮಿಸುತಲಿರುವ ನನ್ನಿಂದ ನಿನಗೆ ಭಯವುಂಟಾಗುತದೆಯೇ ? ಆ ಹಂಬಲನ್ನು ತೊರೆ ॥೪॥ ಓ ಭಯಸ್ವಭಾವದ ನಾರೀಮಣಿ ! ಪರರ ಹೆಂಡಿರನ್ನು ಸೇರುವುದು, ಬಲಾತ್ಕಾರವಾಗಿ ಹಿಡಿದು ತರುವುದು, ಇಂಥವುಗಳೆಲ್ಲವೂ ನಮಗೆ ಕುಲಧರ್ಮವಾಗಿವೆ, ಈ ವಿಷಯದಲ್ಲಿ ಲೇಶವೂ ಸಂಶಯವಿಲ್ಲ ಹೀಗಿದ್ದರೂ, ನಾನು ನಿನ್ನನ್ನು ಹೇಗೆ ಕಾಮಿಸುವೆನೋ, ನೀನೂ ನನ್ನನ್ನು ಹಾಗೆಯೇ ಕಾಮಿಸಿದರೆ ಆಗ ಶೃಂಗಾರ ರಸೋದಯವು ಚೆನ್ನಾಗಿ ಶೋಭಿಸುವುದು. ಹಾಗಿಲ್ಲದೆ, ನಾನು ಮಾತ್ರ ನಿನ್ನನ್ನು ಕಾಮಿಸುತಲೂ, ನಿನಗೆ ನನ್ನಲ್ಲಿ ಕಾಮವು ಉಂಟಾಗದೆಯೂ ಇದ್ದರೆ ಆಗರಸಾಭಾಸವಾಗಿಪರಿಣಮಿಸುವುದು.ಆದುದರಿಂದಲೇನನ್ನನ್ನು

ಧರ್ಮವನ್ನೊಳಗೊಂಡಿರತಕ್ಕ ರಾಕ್ಷಸರಲ್ಲಿ ನನ್ನನ್ನೂ ಗಣನೆಮಾಡಿ ನೀನು ಭಯಪಡುವುದು ಚಿತವಲ್ಲ. ಲೋಕಕರ್ತನಾದ ಚತುರ್ಮುಖನಿಗೆ ಮುಮ್ಮಗನೆನಿಸಿದ ನಾನು ಸರ್ವಲೋಕೇಶ್ವರಿ ಯೆನಿಸಿದ ನಿನ್ನನ್ನು ಮನಃಪೂರ್ವಕವಾಗಿ ಪೂಜಿಸಬೇಕೆಂದು ಬಯಸುತ್ತೇನೆ. ಆದರೆ ನನ್ನಲ್ಲಿ ನಿನಗೆ ಅನುಗ್ರಹ ಬುದ್ಧಿಯು ಇನ್ನೂ ಉಂಟಾಗದಿರುವುದರಿಂದ ನಿನ್ನನ್ನು ಸ್ಪರ್ಶಮಾಡಿ ಪೂಜಿಸಲು ಅಂಜುತಲಿರುವೆನು. ನನ್ನ ವಿಷಯದಲ್ಲಿ ನಿನಗೆ ಪ್ರಸನ್ನತೆಯು ಬೇಗನೆ ಉಂಟಾಗಲಿ ॥೬॥ ಎಲೌ ಮಹಾದೇವಿ! ಭೃತ್ಯನಾದ ನನಗೆ ಭಯವನ್ನುಂಟುಮಾಡದೆ ಭೃತ್ಯನಲ್ಲಿ ಪ್ರೀತಿಯುಳ್ಳವಳಾಗಿ ಯಥಾರ್ಥವಾದ ಪ್ರಸನ್ನತೆಯನ್ನು ತೋರು.

ಕಾಮಂ ಕಾಮ ಶ್ಶರೀರೇ ಮೇ ಯಥಾಕಾಮಂ ಪ್ರವರ್ತತಾಂ ॥೬॥
ದೇವಿ ನೇಹ ಭಯಂ ಕಾರ್ಯಂ ಮಯಿ ವಿಶ್ವಸಿ ಹಿ ಪ್ರಿಯೇ ।
ಪ್ರಣಯಸ್ವ ಚ ತತ್ತ್ವೇನ ಮೈವಂ ಭೂ ಶ್ಶೋಕ ಲಾಲಸಾ ॥೭॥
ಏಕವೇಣೀ ಧರಾ ಶಯ್ಯಾ ಧ್ಯಾನಂ ಮಲಿನ ಮಂಬರಂ ।
ಅಸ್ಥಾನೇ ಪ್ಯುಪವಾಸ ಶ್ಚ ನೈತಾ ನ್ಯೌಪಯಿಕಾನಿ ತೇ ॥೮॥
ವಿಚಿತ್ರಾಣಿ ಚ ಮಾಲ್ಯಾನಿ ಚಂದನಾ ನ್ಯಗರೂಣಿ ಚ ।

(ಮಮ - ನನಗೆ, ಇಷ್ಟದೇವತಾಯಾಂ - ಪರದೇವತೆಎನಿಸಿದ, ತ್ವಯಿ - ನಿನ್ನಲ್ಲಿ, ನಯುಜ್ಯತೆ - ಘಟಿಸುವುದಿಲ್ಲ) ಮೇ - ನನ್ನ, ಶರೀರೆ - ದೇಹದಲ್ಲಿ, ತವ - ನಿನಗೆ, ಕಾಮಃ - ಭೃತ್ಯನೆಂಬ ಇಚ್ಛೆಯು, ಕಾಮಂ - ವಿಶೇಷವಾಗಿ, ಯಥಾಕಾಮಂ - ಯಥೇಚ್ಛವಾಗಿ, ಪ್ರವರ್ತತಾಂ-ಉಂಟಾಗಲಿ, ಅಕಾಮಾಂ - ಇವನು ಭೃತ್ಯನೆಂಬ ಅಭಿಪ್ರಾಯವಿಲ್ಲದಿರುವ, ಅಥವಾ - ವಿಷ್ಣುಸ್ವರೂಪನಾದ ಶ್ರೀ ರಾಮನಲ್ಲಿ, ಇಚ್ಛೆಯುಳ್ಳ, ತ್ವಾಂ - ನಿನ್ನನ್ನು, ನಸ್ಪೃಕ್ಷ್ಯಾಮಿ - ಮುಟ್ಟಲಾರೆನು) (ನಿನ್ನ ಅಪ್ಪಣೆಯಿಲ್ಲದೆ ಮುಟ್ಟಿ ಪೂಜೆ ಮಾಡಲಿಕ್ಕೂ ಭಯಪಡುತ್ತೇನೆ) ॥೬॥

ಹೇದೇವಿ - ಓ ಸೀತಾದೇವಿಯೇ, ಹೇಪ್ರಿಯೇ - ಓ ಪ್ರಿಯಳೇ, ಇಹ - ಇಲ್ಲಿ, ಭಯಂ - ಭಯವು, [ತ್ವಯಾ - ನಿನ್ನಿಂದ] ನಕಾರ್ಯಂ - ಮಾಡತಕ್ಕದ್ದಲ್ಲ, ಮಯಿ - ನನ್ನ ವಿಷಯವಾಗಿ, ತತ್ತ್ವೇನ - ಯಥಾರ್ಥದಿಂದ, ವಿಶ್ವಸಿಹಿ - ವಿಶ್ವಾಸವನ್ನು ತೋರು, ಪ್ರಣಯಸ್ವಚ - ಪ್ರಸನ್ನಳೂ ಆಗು [ಅನುಗ್ರಹಿಸು) ಏವಂ - ಹೀಗೆ, ಶೋಕಲಾಲಸಾ - ದುಃಖಪರಾಯಣಳೂ, ಮಾಭೂಃ - ಆಗಬೇಡ, ॥೭॥ ಹೇದೇವಿ- ಓ ಸೀತಾದೇವಿಯೇ, ಏಕವೇಣೀ - ಒಂದೆಳೆಯ ಜಡೆಯೂ, ಧರಾಶಯ್ಯಾ - ನೆಲದ ಹಾಸಿಗೆಯೂ, ಧ್ಯಾನಂ - ಸಂತತ ಚಿಂತೆಯೂ, ಮಲಿನಂ - ಮಾಸಿಹೋದ, ಅಂಬರಂ- ಬಟ್ಟೆಯೂ, ಅಸ್ಥಾನೇ - ಅಸಮಯದಲ್ಲಿ, ಉಪವಾಸಶ್ಚಾಪಿ - ನಿರಾಹಾರವೂ (ಇತಿ ಹೀಗೆಂಬ) ಏತಾನಿ - ಇವುಗಳು, ತೇ - ನಿನ್ನಂತಹ ಉತ್ತಮಸ್ತ್ರೀಗೆ, ಔಪಯಿಕಾನಿ - ಯುಕ್ತವೆನಿಸುವವುಗಳು, ನ - ಅಲ್ಲವು ॥೮॥ ಹೇಮೈಥಿಲಿ - ಓ ಜಾನಕೀ, ಮಾಂ - ನನ್ನನ್ನು, ಪ್ರಾಪ್ಯ - ಹೊಂದಿ, ವಿಚಿತ್ರಾಣಿ - ನಾನಾವರ್ಣಗಳುಳ್ಳ, ಮಾಲ್ಯಾನಿ - ಪುಷ್ಪಮಾಲಿಕೆಗಳನ್ನು, ಚಂದನಾನಿ - ಬಿಳಿಯಪರಿಮಳಗಳನ್ನು, ಅಗರೂಣಿಚ - ಅಗರು ಧೂಪಗಳನ್ನೂ, ವಿವಿಧಾನಿ-

ಕಾಮಿಸದಿರುವ ನಿನ್ನನ್ನು ಮುಟ್ಟದೆ ಇದೇನೆ. ಶೃಂಗಾರ ರಸೋದಯಕ್ಕಾಗಿ ನಿನಗೆ ನನ್ನಲ್ಲಿ ಕಾಮವು ಅಡ್ಡಿಯಿಲ್ಲದಂತೆ ಪ್ರವರ್ತಿಸಲಿ॥೪-೬॥ ಓ ಪ್ರಿಯಳಾದ ಸೀತೆ! ಇಲ್ಲಿ ನನ್ನಿಂದ ನಿನಗೆ ಭಯವು ಉಂಟಾಗುವುದೆಂಬ ಭಾವನೆಯನ್ನು ಬಿಡು. ನನ್ನಲ್ಲಿ ನಿಜವಾದ ವಿಶ್ವಾಸವನ್ನು ತೋರು. ನೀನು ಹೀಗೆ ಶೋಕಕ್ಕೆ ಈಡಾಗಬೇಡ, ಯಥಾರ್ಥವಾದ ನಿನ್ನ ಪ್ರಣಯವನ್ನು ನಿರೀಕ್ಷಿಸುತಲಿದೇನೆ ॥೭॥ ಓ ಭಾಮಾಮಣಿ ! ನೀಳವಾಗಿರುವ ಒಂದೆಳೆಯ ಜಡೆಯನ್ನು ಧರಿಸಿದ್ದೀಯೆ, ಸಂತತ ಚಿಂತೆ, ಮಲಿನವಾದ ವಸ್ತ್ರ, ನಿಮಿತ್ತವಿಲ್ಲದ ಉಪವಾಸ, ಇವುಗಳು ನಿನಗೆ ಪುರುಷಾರ್ಥ ಸಾಧಕಗಳಾಗಲಾರವು ॥೮॥ ಓ ಮೈಥಿಲೀ ! ನೀನು

ನನಗ ವ್ಯಥೆಯನ್ನುಂಟುಮಾಡುವುದರಲ್ಲಿ ಮನಸಗೊಡಬೇಡ ॥೮॥ ಪೂಜ್ಯಳೇ ! ಭೃತ್ಯಭಾವದಿಂದ ನಾನು ಸತ್ಕರಿಸಲು ಸಿದ್ಧನಾಗಿರುವಲ್ಲಿ ಅನ್ಯಥಾ ಭಾವನೆಯಿಂದ ಏಕವೇಣೀ ಧಾರಣ

ವಿವಿಧಾನಿ ಚ ವಾಸಾಂಸಿ ದಿವ್ಯಾನ್ಯಾಭರಣಾನಿ ಚ ॥೯॥
ಮಹಾರ್ಹಾಣಿ ಚ ಪಾನಾನಿ ಶಯನಾನ್ಯಾಸನಾನಿ ಚ ।
ಗೀತಂ ನೃತ್ತಂ ಚ ವಾದ್ಯಂ ಚ ಲಭ ಮಾಂ ಪ್ರಾಪ್ಯ ಮೈಥಿಲಿ ॥೧೦॥
ಸ್ತ್ರೀರತ್ನಮಸಿ ನೈವಂ ಭೋಃ ಕುರು ಗಾತ್ರೇಷು ಭೂಷಣಂ ।
ಮಾಂ ಪ್ರಾಪ್ಯ ಹಿ ಕಥನ್ನು ಸ್ಯಾಸ್ತ್ವಮನರ್ಹಾ ಸುವಿಗ್ರಹೇ ॥೧೧॥
ಇದಂ ತೇ ಚಾರು ಸಂಜಾತಂ ಯೌವನಂ ವ್ಯತಿವರ್ತತೇ ।

---

ನಾನಾ ಪ್ರಕಾರಗಳಾದ, ವಾಸಾಂಸಿಚ - ವಸ್ತ್ರಗಳನ್ನೂ. ದಿವ್ಯಾನಿ - ಶ್ರೇಷ್ಠಗಳೆನಿಸಿದ, ಆಭರಣಾನಿಚ-ರತ್ನಾಭರಣಗಳನ್ನೂ, ಮಹಾರ್ಹಾಣಿ - ಹೆಚ್ಚಿದ ಬೆಲೆಯುಳ್ಳವುಗಳಾದ (ಉತ್ತಮಗಳಾದ) ಪಾನಾನಿ-ಪಾನ ದ್ರವ್ಯಗಳನ್ನೂ, ಶಯನಾನಿ - ಸುಪ್ಪತ್ತಿಗೆಗಳನ್ನೂ, ಆಸನಾನಿಚ - ದಿವ್ಯ ಸಿಂಹಾಸನಗಳನ್ನು, ಗೀತಂ-ದಿವ್ಯಗಾನವನ್ನು, ನೃತ್ಯಂಚ - ವಿವಿಧ ನಾಟ್ಯವನ್ನು, ವಾದ್ಯಂಚ - ಮಂಗಳ ವಾದ್ಯನಾದವನ್ನೂ ಲಭ - (ಲಭಸ್ವ) - ಹೊಂದು [ಪಡೆ, ಅನುಭವಿಸು] ॥೯-೧೦॥ ಹೇಸುವಿಗ್ರಹೇ - ಅಂದವಾದ ಹುಟ್ಟುಳ್ಳ ಹೇನಾರೀಮಣಿ, ತ್ವಂ - ನೀನು, ಸ್ತ್ರೀರತ್ನಂ - ಉತ್ತಮಸ್ತ್ರೀಯು, ಅಸಿ - ಆಗಿದ್ದೀಯೆ ಗಾತ್ರೇಷು - ನಿನ್ನ ಅವಯವಗಳಲ್ಲಿ, ಏವಂ - ಏಕವೇಣೀ ಮೊದಲಾದ ರೂಪವಾಗಿರುವ, ಭೂಷಣಂ - ಅನುಚಿತಾಲಂಕಾರವನ್ನು, ಮಾಕುರು - ಮಾಡಿಕೊಳ್ಳಬೇಡ, ಮಾಂ - ನನ್ನನ್ನು, ಪ್ರಾಪ್ಯ - ಹೊಂದಿ, ಕಥಂ-ಹೇಗೆ, ಅನರ್ಹಾ - ಶ್ರೇಷ್ಠಾಲಂಕಾರಕ್ಕೆ, ಅಯೋಗ್ಯಳೆನಿಸಿದವಳು, ಸ್ಯಾಃ - ಆದೀಯೆ ? ॥೧೧॥ ಹೇಸುವಿಗ್ರಹೇ - ಓ ಸುಂದರಾಂಗೀ, ತೇ - ನಿನಗೆ, ಸಂಜಾತಂ - ಉಂಟಾಗಿರುವ, ಇದಂ - ಈ, ಚಾರು - ಸುಂದರವಾದ.

---

ಮನಃ ಪೂರ್ವಕವಾಗಿ ನನ್ನನ್ನು ಸೇರಿದವಳೇ ಆದರೆ, ಅಮೂಲ್ಯಗಳಾದ ದಿವ್ಯಾಂಬರಗಳೂ, ಅಸಾಧಾರಣವಾದ ಪುಷ್ಪಮಾಲೆಗಳೂ, ಅನ್ಯಾದೃಶಗಳಾದ ಪರಿಮಳಗಳೂ, ಅಸದೃಶಗಳಾದ ಅಗರು ಧೂಪಗಳೂ, ನಿರುಪಮ ದಿವ್ಯ ರತ್ನಾಭರಣಗಳೂ, ರಸವತ್ತರಗಳಾದ ಪಾನ ಪದಾರ್ಥಗಳೂ, ಅಪ್ರತೀಕಾಶವಾದ ಶಯನಗಳೂ, ಶ್ರೇಷ್ಠತರಗಳೆನಿಸಿದ ಸಿಂಹಾಸನಗಳೂ, ಕಿವಿಗಿಂಪಾಗಿರುವ ಗೀತವಾದ್ಯಗಳೂ, ನೋಟಕ್ಕೆ ಹಿತವಾಗಿರುವ ವಿವಿಧನೃತ್ಯವೂ ಸಿದ್ಧವಾಗಿವೆ. ಇವುಗಳನ್ನೆಲ್ಲ ಪಡೆದು ಸುಖಿಸಬಹುದು. ಅನ್ಯಾಯವಾಗಿ ಏಕೆ ಕಳೆದು ಕೊಳ್ಳುತ್ತೀಯೆ? ॥೯-೧೦॥ ದಿವ್ಯಮಂಗಳ ವಿಗ್ರಹವನ್ನೊಳಗೊಂಡಿರುವ ಓ ಮಂಗಳಾಂಗೀ! ನೀನು ಸ್ತ್ರೀರತ್ನವಾಗಿ ಶೋಭಿಸುತ್ತಲಿರುವೆ, ಇಂಥವಳು ಸರ್ವಾಲಂಕಾರಗಳನ್ನೂ ತೊರೆದು ಇರುವುದು ಉಚಿತವಲ್ಲ. ನೀನು ದಿವ್ಯಾವಯವಗಳಲ್ಲಿ ದಿವ್ಯವಸ್ತ್ರಾಭರಣಗಳನ್ನಿಟ್ಟು ತೊಟ್ಟುಕೋ, ನನ್ನನ್ನು ಪಡೆದೂ ನೀನು ವಸ್ತ್ರಾಭರಣಗಳಿಲ್ಲದಿರುವುದಕ್ಕೆ ಅರ್ಹಳಲ್ಲ॥೧೧॥ ಓ ಲಲನಾಮಣೀ ! ನಿನ್ನವಯವಗಳಲ್ಲಿ ಪ್ರತಿಕ್ಷಣವೂ ಉಕ್ಕುಳಿಸುತ ಶೋಭಿಸುತಲಿರುವ

---

ಮೊದಲಾದವುಗಳನ್ನು ನೀನು ಆಶ್ರಯಿಸಿರುವುದು ಯುಕ್ತವಲ್ಲ ॥೯-೧೧॥ ಓ ತಾಯಿ! ನನ್ನನ್ನು ನೋಡಿ « ಇವನು ರಾಕ್ಷಸನೆ, ದುಷ್ಟನೆ, ಇವನಿಂದ ಪೂಜಾಸತ್ಕಾರವನ್ನು ಪಡೆಯುವುದು ಉಚಿತವಲ್ಲ" ಎಂದುಭಾವಿಸದೆ ಭೃತ್ಯನನ್ನಾಗಿಭಾವಿಸಿ, ಭಕ್ತಿಪೂರ್ವಕವಾಗಿ ನಾನು ಸಮರ್ಪಿಸುವ ಧ್ಯಾನ, ಆವಾಹನ, ಪೀಠ, ಪುಷ್ಪ, ವಸ್ತ್ರ, ಚಂದನ, ಆಭರಣ, ಧೂಪ, ನೃತ್ತ, ಗೀತ, ವಾದ್ಯ, ಮೊದಲಾದ ಉಪಚಾರಗಳನ್ನು ಸ್ವೀಕರಿಸು ॥೧೨॥ ಸರ್ವಸ್ತ್ರೀಮಾನ್ಯ

ಯದತೀತಂ ಪುನರ್ನೈತಿ ಸ್ರೋತಃ ಶೀಘ್ರಮಪಾಮಿವ ॥೧೨॥
ತ್ವಾಂ ಕೃತ್ವೋಪರತೋ ಮನ್ಯೇ ರೂಪಕರ್ತಾ ಸ ವಿಶ್ವಸೃಟ್ ।
ನ ಹಿ ರೂಪೋಪಮಾ ತ್ವನ್ಯಾ ತವಾಸ್ತಿ ಶುಭದರ್ಶನೇ ॥೧೩॥
ತ್ವಾಂ ಸಮಾಸಾದ್ಯ ವೈದೇಹಿ ರೂಪಯೌವನಶಾಲಿನೀಂ ।

---

ಯೌವನಂ - ಪ್ರಾಯವು, ವ್ಯತಿವರ್ತತೆ - ಕಳೆದು ಹೋಗುತಲಿದೆ, ಯತ್ - ಯಾವ ನಿನ್ನ ತಾರುಣ್ಯವು, ಅಪಾಂ - ಜಲಗಳ, ಸ್ರೋತಃಇವ - ಪ್ರವಾಹದಹಾಗೆ, ಶೀಘ್ರಂ - ಜಾಗ್ರತೆಯಾಗಿ, ಅತೀತಂ - ಕಳೆದು ಹೋದುದಾಗಿ, ಪುನಃ - ಮರಳಿ, ನೈತಿ - ಬರಲಾರದೋ, (ತೇ - ನಿನ್ನ, ಭೃತ್ಯಸ್ಯ - ಸೇವಕನಾದ, ಮಮ - ನನಗೆ, ಸಂಜಾತಂ - ಉಂಟಾಗಿರುವ. ಇದಂ - ಈ, ಚಾರು - ಅಂದವಾದ, ಯೌವನಂ - ದೃಢಚಿತ್ತತೆಯು, ವ್ಯತಿವರ್ತತೆ - ಅನ್ಯಾಯವಾಗಿ ಕಳೆದು ಹೋಗುತ್ತಿದು, ಯತ್ - ಯಾವ ಮನೋದಾರ್ಢ್ಯವು, ಅಪಾಂಸ್ರೋತಃಇವ - ಜಲಪ್ರವಾಹದಂತೆ, ಶೀಘ್ರಂ - ಬೇಗನೆ, ಅತೀತಂ - ದಾಟಿಹೋದುದಾಗಿ, ಪುನಃ - ತಿರುಗಿ, ನೈತಿ - ಬರಲಾರದೋ, ತಸ್ಮಾತ್ - ಆ ಕಾರಣದಿಂದ, ತವ - ನಿನ್ನ, ಪೂಜಾರ್ಥಂ - ಪೂಜಾ ನಿಮಿತ್ತವಾಗಿ, ಮಮ - ನನಗೆ, ಅನುಜ್ಞಾಂ - ಅಪ್ಪಣೆಯನ್ನು, ದೇಹಿ - ಕೊಡು) ॥೧೨॥ ಹೇಶುಭದರ್ಶನೇ - ರೂಪವತಿಯಾದ ಓ ಸೀತೆಯೇ, ರೂಪಕರ್ತಾ - ದಿವ್ಯರೂಪ ಕರ್ತನಾದ, ವಿಶ್ವಸೃಟ್ - ಬ್ರಹ್ಮನು, ತ್ವಾಂ - ನಿನ್ನನ್ನು, ಕೃತ್ವಾ - ನಿರ್ಮಿಸಿ, ಉಪರತಃ - ಸೃಷ್ಟಿಕಾರ್ಯವನ್ನು ಮುಗಿಸಿದನು. (ಇತಿ ... ಹೀಗೆಂದು) ಮನ್ಯೇ - ಭಾವಿಸುತ್ತೇನೆ, ಹಿ - ಏತಕೆಂದರೆ, ತವ - ನಿನ್ನ, ರೂಪೋಪಮಾ - ರೂಪದಂತೆ ರೂಪವುಳ್ಳ, ಅನ್ಯಾ - ಮತ್ತೊಬ್ಬಸ್ತ್ರೀಯು, ನಹಿ - ಇಲ್ಲವೇ ಇಲ್ಲ ॥೧೩॥ ಹೇವೈದೇಹಿ - ಎಲೈ ಜಾನಕಿಯೇ, ರೂಪ

---

ಪ್ರಾಯವು ಅನ್ಯಾಯವಾಗಿ ಕಳೆದು ಹೋದಬಳಿಕ ಹೊಳೆಯನ್ನು ದಾಟಿಹೋದ ನೀರಿನ ಹಾಗೆ ಎಂದಿಗೂ ಹಿಂದಿರುಗಲಾರದು. ಆದಕಾರಣ ಉತ್ತಮವಾದ ತಾರುಣ್ಯವು ಕಳೆದು ಹೋಗುವುದರೊಳಗೆ ಶ್ರೇಷ್ಠವಾದ ಸುಖಗಳನ್ನು ಅನುಭವಿಸು ॥೧೨॥

ಓ ಸರ್ವಾಂಗಸುಂದರೀ! ಸೃಷ್ಟಿಕರ್ತನಾದ ಚತುರ್ಮುಖನು ತನ್ನ ಸೃಷ್ಟಿ ಕ್ರಮದಲ್ಲಿ ಅಪರಿಮಿತ ಸೌಂದರ್ಯದ ಸ್ತ್ರೀರತ್ನವನ್ನು ಸೃಷ್ಟಿಸಬೇಕೆಂದು ತಪಸ್ಸನ್ನು ಮಾಡಿ ನಿನ್ನನ್ನು ಸೃಷ್ಟಿಸಿಯೇ ಕೃತಕೃತ್ಯನಾದನೆಂದು ಭಾವಿಸುತ್ತೇನೆ. ಏತಕೆಂದರೆ—ಸ್ವರ್ಗ, ಮರ್ತ್ಯ, ಪಾತಾಳಗಳೊಳಗೆ ನಿನಗೆ ಸಮಾನಳಾಗಿರುವ ರೂಪವತಿಯಾದ ಸೀಮಂತಿನಿಯನ್ನು ನಾನು ನೋಡಿಇಲ್ಲ. ॥ ೧೩ ॥ ಓ ಜನಕನಂದನಿ ! ಅಪರಿಮಿತ ರೂಪಯೌವನ ಸಂಪನ್ನೆಯಾದ

---

ಳಾದ ಎಲೌ ದೇವಿಯೇ ! ಸರ್ವಸತ್ಕಾರಗಳನ್ನು ಮಾಡಲಿಕ್ಕೆ ಭೃತ್ಯನಾದ ನಾನು ಸನ್ನದ್ಧನಾಗಿರುವಲ್ಲಿ ನೀನು ಅದನ್ನು ಸ್ವೀಕರಿಸದಿರುವುದು ಧರ್ಮವಲ್ಲ ॥ ೧೨ ॥ ಎಲೌ ಜಗಜ್ಜನನೀ ! ನನ್ನ ಅಂತರಂಗದಲ್ಲಿ ನೆಲೆಗೊಂಡಿರುವ ಪರಮ ಶ್ರದ್ಧಾಭಕ್ತಿರೂಪವಾದ ದಾರ್ಢ್ಯವಸ್ಥೆಯು ಅನ್ಯಾಯವಾಗಿ ಮನುಷ್ಯಸ್ವಭಾವದಿಂದ ಹೊಳೆಯಲ್ಲಿನ ನೀರು ಹೇಗೋ ಹಾಗೆ ತ್ವರಿತವಾಗಿ ಚಲಿಸಿಹೋಗುತ್ತದೆ. ಪುನಃ ಅಂತಹಮನೋದಾರ್ಢ್ಯವನ್ನು ಸಂಪಾದಿಸುವುದು ಬಹುಕಷ್ಟ, ಆದಕಾರಣ ನಿನ್ನನ್ನು ಪೂಜಿಸಲು ನನಗೆ ಅನುಜ್ಞೆಯನ್ನು ಕೊಡು ॥ ೧೩ ॥ ಎಲೌ ಶುಭವದನೆಯಾದ ದೇವಿಯೇ ! ಪ್ರಪಂಚ ನಿರ್ಮಾಣಕರ್ತನಾದ ಶ್ರೀಹರಿಯು ಸರ್ವಜಗತ್ತಿನ ಸೃಷ್ಟಿಗಾಗಿ ಮೂಲಪ್ರಕೃತಿಸ್ವರೂಪಳಾದ ನಿನ್ನನ್ನು ಸಹಾಯವಾಗಿ ಪಡೆದು

ಕಃ ಪುಮಾ ನತಿ ವರ್ತೇತ ಸಾಕ್ಷಾ ದಪಿ ಪಿತಾಮಹಃ ॥ ೧೪ ॥
ಯದ್ಯ ತ್ಪಶ್ಯಾಮಿ ತೇ ಗಾತ್ರಂ ಶೀತಾಂಶು ಸದೃಶಾನನೇ ।
ತಸ್ಮಿಂ ಸ್ತಸ್ಮಿನ್ ಪೃಥುಶ್ರೋಣಿ ಚಕ್ಷು ರ್ಮಮ ನಿಬಧ್ಯತೇ ॥ ೧೫ ॥
ಭವ ಮೈಥಿಲಿ ಭಾರ್ಯಾ ಮೇ ಮೋಹ ಮೇನಂ ವಿಸರ್ಜಯ ।

---

ಯೌವನಶಾಲಿನೀಂ - ಸೌಂದರ್ಯ ಪ್ರಾಯಗಳಿಂದೊಡಗೂಡಿದ, ತ್ವಾಂ - ನಿನ್ನನ್ನು, ಸಮಾಸಾದ್ಯ - ಹೊಂದಿ, ಸಾಕ್ಷಾತ್ - ಪ್ರತ್ಯಕ್ಷವಾಗಿ, ಪಿತಾಮಹೋಪಿ - ಬ್ರಹ್ಮನೇ ಆಗಲೀ, ಕಃಪುಮಾನ್ - ಯಾವ ಪುರುಷನೇ ಆಗಲಿ, ಅತಿವರ್ತೇತ - ಅತಿಕ್ರಮಿಸಬಲ್ಲನು ? (ಬಿಡಲಿಕ್ಕೆ ಶಕ್ತನಾದಾನು) ॥೧೪॥ ಶೀತಾಂಶುಸದೃಶಾನನೇ - ಓ ಚಂದ್ರವದನೆಯಾದ ಜಾನಕಿಯೇ, ಪೃಥುಶ್ರೋಣಿ - ತೋರವಾದ ಟೊಂಕದ ಹಿಂಭಾಗವುಳ್ಳವಳೇ, - ತೇ-ನಿನ್ನ, ಯದ್ಯತ್ - ಯಾವಯಾವ, ಗಾತ್ರಂ - ಅವಯವವನ್ನು, ಪಶ್ಯಾಮಿ - ನೋಡುತ್ತಲಿರುವೆನೋ, ತಸ್ಮಿನ್ - ಆಯಾಯ ಅವಯವದಲ್ಲಿ, ಮಮ - ನನ್ನ, ಚಕ್ಷುಃ - ದೃಷ್ಟಿಯು, ನಿಬಧ್ಯತೇ- ಕಟ್ಟಲ್ಪಡುತಲಿದೆ (ನಡುತಲಿದೆ) ॥೧೫॥ ಹೇಮೈಥಿಲಿ - ಓ ಜಾನಕೀ, ಮೇ - ನನಗೆ, ಭಾರ್ಯಾ- ವಲ್ಲಭೆಯು ಭವ - ಆಗು, ಏನಂ - ಈ, ಮೋಹಂ - ಅಜ್ಞಾನವನ್ನು, (ಅಲಂಕಾರಗಳನ್ನು ತೊರೆದು ರಾಮನನ್ನೇ ನೆನೆಯುವ ಭ್ರಾಂತಿಯನ್ನು) ವಿಸರ್ಜಯ - ತೊರೆ, ಇತಸ್ತತಃ - ಅಲ್ಲಲ್ಲಿಂದ ( ಆಯಾಯಸ್ಥಳದಿಂದ,) ಆಹೃತಾನಾಂ - ತರಲ್ಪಟ್ಟಿರುವ, ಬಹ್ವೀನಾಂ - ಅನೇಕರಾದ, ಸರ್ವಾಸಾಂ - ಸಮಸ್ತರಾದ, ಉತ್ತಮಸ್ತ್ರೀಣಾಂ - ಉತ್ತಮಾಂಗನೆಯರೊಳಗೆ (ತ್ವಾ - ನೀನು,) ಮಮ - ನನಗೆ, ಅಗ್ರಮಹಿಷ್ಯೇವ - ಮೊಟ್ಟಮೊದಲನೆಯ ಪಟ್ಟದರಸಿಯು, ಭವ - ಆಗು, ತೆ - ನಿನಗೆ, ಭದ್ರಂ-ಸಮಸ್ತಮಂಗಳವೂ, ಅಸ್ತು- ಆಗಲಿ, (ಮೈಥಿಲಿ - ಓ ಸೀತೆ! ಭಾರ್ಯಾ - ಕಾಂತಿಯಿಂದ ಶ್ರೇಷ್ಠಳೆನಿಸಿದವಳು, ಭವ - ಆಗು, ಮೇ - ನನ್ನವಿಷಯವಾಗಿ, ಏನಂ - ಈ, ಮೋಹಂ - ಶತ್ರುತ್ವ ಶಂಕಾರೂಪವಾದ ಅಜ್ಞಾನವನ್ನು,ವಿಸರ್ಜಯ -

---

ನಿನ್ನನ್ನು ನೋಡಿದರೆ ಸಾಕ್ಷಾತ್ ಚತುರ್ಮುಖನೇ ಆದಾಗ್ಯೂ ಕಾಮವಿಕಾರಕ್ಕೆ ಒಳಗಾಗದೆ ಇರುವುದಿಲ್ಲ. ಹೀಗಿರಲು ಇತರ ಪುರುಷರು ಮನ್ಮಥವಿಕಾರಕ್ಕೆ ಈಡಾಗದಿರುವುದುಂಟೆ? ॥ ೧೪ ॥ ಪೂರ್ಣಚಂದ್ರವದನೆಯಾಗಿ ತೋರವಾದ ಟೊಂಕದ ಹಿಂಭಾಗವುಳ್ಳ ಓ ಲಲನಾರತ್ನವೇ! ನಿನ್ನ ಶರೀರದಲ್ಲಿ ಯಾವಯಾವ ಅವಯವವನ್ನು ನನ್ನ ದೃಷ್ಟಿಯು ಪ್ರವೇಶಿಸುವುದೋ ಆಯಾ ಅಂಗವನ್ನು ಬಿಟ್ಟು ಮತ್ತೆಲ್ಲಿಯೂ ಚಲಿಸದೆ ನೆಲಗೊಳ್ಳುತಲಿದೆ ॥೧೫॥ ಓ ಜನಕನಂದಿನೀ! ಹೀಗೆ ದೇಹಸೌಖ್ಯಗಳನ್ನೆಲ್ಲ ತೊರೆದು ಯಾವಾಗಲೂ ಆ ರಾಮನನ್ನೇ ಚಿಂತಿಸುತಲಿರುವ ಭ್ರಾಂತಿಯನ್ನು ತೊರೆ. ಇಂತಹ ಮೋಹವು ನಿನಗೆ ಏಕೆ ಕವಿಯಿತು.

---

ಸೃಷ್ಟಿಕಾರ್ಯವನ್ನೆಲ್ಲ ನಿನ್ನ ಮೂಲಕವಾಗಿ ನೆರವೇರಿಸುತ್ತಾ, ತಾನು ಶಾಂತನಾಗಿರುವನೆಂದು ತಿಳಿಯುತ್ತೇನೆ. ಜಗತ್ತಿನ ನಿರ್ಮಾಣ ಶಕ್ತಿಸ್ವರೂಪಳಾದ ನಿನಗೆ ಸಮಾನರೆನಿಸಿದವರು ಮತ್ತೆಯಾರಿರುವರು? ॥೧೪॥ ಎಲೌ ವೈದೇಹಿಯೇ! ಸಕಲಸೌಭಾಗ್ಯ ಸಂಪನ್ನೆಯಾಗಿ ಸಾಕ್ಷಾತ್ ಲಕ್ಷ್ಮೀಸ್ವರೂಪಳಾಗಿರುವ ನಿನ್ನ ದಿವ್ಯಮಂಗಳ ವಿಗ್ರಹವನ್ನು ನೋಡಿ ಸೃಷ್ಟಿಕರ್ತನಾದ ಚತುರ್ಮುಖನೇ ಸೇವಾಸಕ್ತನಾಗುತ್ತಿರುವಲ್ಲಿ ಇತರ ಮನುಜನು ಹಾಗಾಗದೆ ಹೋದರೆ ಭ್ರಷ್ಟನಾಗುವುದಿಲ್ಲವೇ ? ॥೧೫॥ ಎಲೌ ಮಹಾದೇವಿ ! ನಿನ್ನ ಸಂದರ್ಶನವು ಮೋಕ್ಷಕ್ಕೆ ಕಾರಣವಾಗಿರುವುದರಿಂದ ಎಡಬಿಡದೆ ನಿನ್ನನ್ನೇ ಧ್ಯಾನಿಸುತಲಿರುವ ನನ್ನ

ಬಹ್ವೀನಾ ಮುತ್ತಮ ಸ್ತ್ರೀಣಾ ಮಾಹೃತಾನಾ ಮಿತಸ್ತತಃ || ೧೬ ||
ಸರ್ವಾಸಾ ಮೇವ ಭದ್ರಂ ತೇ ಮಮಾಗ್ರ ಮಹಿಷೀ ಭವ || ೧೭ || ||
ಲೋಕೇಭ್ಯೋ ಯಾನಿ ರತ್ನಾನಿ ಸಂಪ್ರಮಥ್ಯಾ ಹೃತಾನಿ ವೈ |
ತಾನಿ ಮೇ ಭೀರು ಸರ್ವಾಣಿ ರಾಜ್ಯಂ ಚೈತ ದಹಂ ಚ ತೇ || ೧೮ || ||
ವಿಜಿತ್ಯ ಪೃಥಿವೀಂ ಸರ್ವಾಂ ನಾನಾ ನಗರ ಮಾಲಿನೀಂ |

ಬಿಡು, ಮಮ - ನನಗೆ, (ಯಾ - ಯಾವ) ಅಗ್ರಮಹಿಷೀ -ಪಟ್ಟದರಸಿಯಾದ ಮಂಡೋದರಿಯುಂಟೋ, ತಸ್ಯಾಃ - ಅವಳಿಗೂ, ಇತಸ್ತತಃ - ಇಲ್ಲಲ್ಲಿ, ಆಹೃತಾನಾಂ - ಅಪಹರಿಸಿ ತಂದಿರುವ, ಬಹ್ವೀನಾಂ- ಬಹು ಮಂದಿಯುರಾದ, ಸರ್ವಾಸಾಂ - ಸಮಸ್ತರಾದ, ಉತ್ತಮಸ್ತ್ರೀಣಾಂ - ಶ್ರೇಷ್ಠರಾದ ಸೀಮಂತಿನಿಯರಿಗೆ, (ಈಶ್ವರ್ಯೇವ - ನಿಯಾಮಕಳೇ) ಭವ - ಆಗು, ತೇ - ನಿನಗೆ, ಭದ್ರಂ - ನನ್ನಲ್ಲಿ ಕೋಪಪರಿಹಾರ ರೂಪ ವಾದ ಶುಭವು, ಭವತು - ಉಂಟಾಗಲಿ), ||೧೬-೧೭|| || ಹೇಭೀರು - ಹೆದರುವ ಸ್ವಭಾವದ ಲಲನೆಯೇ, ಲೋಕೇಭ್ಯಃ - ಭೂರಾದಿ ಲೋಕಗಳ ದೆಸೆಯಿಂದ, ಪ್ರಮಥ್ಯ - ಬಲಾತ್ಕರಿಸಿ (ಬಾಧಿಸಿ, ಮಯಾ- ನನ್ನಿಂದ,) ಆಹೃತಾನಿ - ತರಲ್ಪಟ್ಟಿರುವ, ಯಾನಿ - ಯಾವ, ರತ್ನಾನಿ - ರತ್ನಾಭರಣಾದಿ ಶ್ರೇಷ್ಠವಸ್ತುಗಳಿ ರುವುವೋ, ಮೇ - ನನ್ನ, ಸರ್ವಾಣಿ - ಸಮಸ್ತವಾದ, ತಾನಿ - ಅವೆಲ್ಲವೂ, ಏತತ್ - ಈ, ರಾಜ್ಯಂಚ- ಸಾಮ್ರಾಜ್ಯವೂ, ಅಹಂಚ - ನಾನೂ, ತೇ - ನಿನ್ನವರೇ ಆಗಿರುವೆವು. ||೧೮|| || ಹೇವಿಲಾಸಿನಿ - ಎಲೈ ವಿಲಾಸವತಿಯಾದ ಸೀತೆಯೇ, ನಾನಾನಗರಮಾಲಿನೀಂ - ಅನೇಕ ಪಟ್ಟಣಗಳ ಸಾಲನ್ನೊಳಗೊಂಡಿ ರುವ, ಸರ್ವಾಂ - ಸಮಸ್ತವಾದ, ಪೃಥಿವೀಂ - ಭೂಮಂಡಲವನ್ನು, ವಿಜಿತ್ಯ - ಗೆದ್ದು, ತವಹೇ ತೋಃ - ನಿನ್ನ ನಿಮಿತ್ತವಾಗಿಯೇ, (ನಿನ್ನನ್ನು ಪಡೆಯುವುದಕ್ಕೋಸ್ಕರವೇ, ನಿನಗೆ ಸಂತೋಷವನ್ನುಂಟು

ನೀನು ನನಗೆ ಒಡತಿಯಾದರೆ ನಾನು ನಾನಾದೇಶಗಳಿಂದ ತಂದಿರುವ ಉತ್ತಮ ಸ್ತ್ರೀಯ ರೊಳಗೆ ಶ್ರೇಷ್ಠಳೆನಿಸಿದ ಪಟ್ಟದರಸಿಯಾಗುವೆ. ಸಮಸ್ತ ಭೋಗಭಾಗ್ಯಗಳೂ ನಿನಗೆ ಬ ದಗುವುವು. ನಾನು ಹೇಳಿದಂತೆ ಒಪ್ಪು. ನಿನಗೆ ಶುಭವಾಗಲಿ || ೧೭ || ಓ ಭಯಶೀಲಳೆ! ನಾನು ನಾನಾದಿಗ್ದೇಶಗಳ ರಾಜಾಧಿರಾಜರನ್ನು ಸೋಲಿಸಿ ಬಾಚಿ ತಂದಿರುವ ರತ್ನಾಭರಣ ಗಳೇ ಮೊದಲಾದ ಶ್ರೇಷ್ಠವಾದ ವಸ್ತುಗಳೂ, ನನ್ನ ಸಾಮ್ರಾಜ್ಯವೂ, ನಾನೂ ನಿನ್ನವರೇ ಆಗಿದೇವೆ. ಆದ್ದರಿಂದ ಹೆದರದೆ ನನ್ನನ್ನು ಅಂಗೀಕರಿಸು || ೧೮ || || ಓ ವಿಲಾಸವತೀ! ನಾನಾ ದೇಶಕೋಶಗಳನ್ನೊಳಗೊಂಡಿರುವ ಸಮಸ್ತ ಭೂಮಂಡಲವನ್ನೂ ಜೈಸಿ ನಿನಗೆ ನ ನ್ನಲ್ಲಿ ಸಂತೋಷವುಂಟಾಗುವುದಕ್ಕೋಸ್ಕರ ನಿಮ್ಮ ತಂದೆಯಾದ ಜನಕ ಮಹಾರಾಜನಿಗೆ

ದೃಷ್ಟಿಯೂ ನಿನ್ನಲ್ಲಿಯೇ ಲೀನವಾಗಿದೆ ||೧೬-೧೭|| (ಭಾ + ಆರ್ಯಾ) ಲೋಕೋತ್ತರಸೌಂದ ರ್ಯದಿಂದ ಆರ್ಯಳೆನಿಸಿದ ಓ ತಾಯಿ! ನನ್ನಲ್ಲಿ ಶತ್ರುತ್ವ ಶಂಕಾರೂಪವಾದ ಭಾವನೆಯನ್ನು ಬಿಡು. ನನ್ನ ಪಟ್ಟದರಸಿಯಾದ ಮಂಡೋದರಿಗೂ, ನಾನಾ ದೇಶಗಳಿಂದ ನಾನು ಅಪಹರಿಸಿ ತಂದಿರುವ ಸಕಲ ಲಲನಾಮಣಿಯರಿಗೂ ನೀನೇ ಸ್ವಾಮಿನಿಯಾಗಿದ್ದೀಯೆ. ನನ್ನಲ್ಲಿ ಕೋ ಪವನ್ನು ತೋರೆಯುವ ಮಂಗಳವು ನಿನ್ನಲ್ಲಿ ನೆಲೆಗೊಳ್ಳಲಿ || ೧೮ || || ಎಲೌ ಲೋಕೇಶ್ವರೀ! ನನ್ನಲ್ಲಿ ಶತ್ರುತ್ವವನ್ನು ತೋರುತ್ತ ಭಯಪಡುವುದು ನ್ಯಾಯವಲ್ಲ. ಭಕ್ತನಾದ ನಾನು ಸಂ ಪಾದಿಸಿ ಇಟ್ಟಿರತಕ್ಕ ಮೇಲಾದ ಆಭರಣಾದಿ ವಸ್ತುಗಳನ್ನೂ, ಸಾಮ್ರಾಜ್ಯವನ್ನೂ ನನ್ನ ಶರೀರ

ಜನಕಾಯ ಪ್ರದಾಸ್ಯಾಮಿ ತವ ಹೇತೋರ್ವಿಲಾಸಿನಿ ॥ ೧೮ ॥ ॥
ನೇಹ ಪಶ್ಯಾಮಿ ಲೋಕೇಽನ್ಯಂ ಯೋ ಮೇ ಪ್ರತಿಬಲೋ ಭವೇತ್ ।
ಪಶ್ಯ ಮೇ ಸುಮಹದ್ವೀರ್ಯಮಪ್ರತಿದ್ವಂದ್ವಮಾಹವೇ ॥ ೧೯ ॥ ॥
ಅಸಕೃತ್ಸಂಯುಗೇ ಭಗ್ನಾ ಮಯಾ ವಿಮೃದಿತ ಧ್ವಜಾಃ ।
ಅಶಕ್ತಾಃ ಪ್ರತ್ಯನೀಕೇಷು ಸ್ಥಾತುಂ ಮಮ ಸುರಾಸುರಾಃ ॥ ೨೦॥॥

---

ಮಾಡಲಿಕ್ಕಾಗಿಯೇ) ಜನಕಾಯ - ಜನಕಮಹಾರಾಜನಿಗೋಸ್ಕರ, ಪ್ರದಾಸ್ಯಾಮಿ - ಕೊಟ್ಟು ಬಿಡುವೆನು ॥೧೮-೧೮॥॥ ಯಃ - ಯಾವನು, ಮೇ - ನನಗೆ, ಪ್ರತಿಬಲಃ - ಸಮಾನವಾದ ಬಲವುಳ್ಳವನು (ಕಾಳಗದೊಳಗೆ ನನ್ನನ್ನು ಗೆಲ್ಲತಕ್ಕವನು] ಭವೇತ್ - ಇರಬಹುದೋ, ತಂ - ಅಂತಹ, ಅನ್ಯಂ - ಬೇರೊಬ್ಬನನ್ನು, [ಯಾವನನ್ನೂ] ಇಹ-ಈ ಲೋಕದಲ್ಲಿ, ನಪಶ್ಯಾಮಿ - ಕಾಣೆನು, ಆಹವೇ - ಯುದ್ಧದಲ್ಲಿ, ಅಪ್ರತಿದ್ವಂದ್ವಂ - ಎದುರಿಲ್ಲದ, ಸುಮಹತ್ - ಅಪಾರವೆನಿಸಿರುವ, ಮೇ - ನನ್ನ, ವೀರ್ಯಂ - ಪರಾಕ್ರಮವನ್ನು, ಪಶ್ಯ - ನೋಡು, ॥೧೯-೧೯॥ ॥ ಸುರಾಸುರಾಃ - ದೇವಾಸುರರು, ಅಸಕೃತ್ - ಅನೇಕಾವೃತ್ತಿ, ಸಂಯುಗೇ - ಯುದ್ಧದಲ್ಲಿ, ಮಯಾ - ನನ್ನಿಂದ, ಭಗ್ನಾಃ - ಪೆಟ್ಟು ಬಿದ್ದವರೂ (ಅವಮಾನಿಸಲ್ಪಟ್ಟವರೂ,) ವಿಮೃದಿತಧ್ವಜಾಃ - ಮುರಿಯಲ್ಪಟ್ಟ ಧ್ವಜಗಳುಳ್ಳವರೂ ಆಗಿ, ಮಮ - ನನ್ನ, [ಪುರಃ - ಎದುರಿಗೆ] ಪ್ರತ್ಯನೀಕೇಷು - ಎದುರು ಸೇನೆಗಳೊಳಗೂ, ಸ್ಥಾತುಂ - ನಿಲ್ಲಲಿಕ್ಕೆ, ಅಶಕ್ತಾಃ - ಅಸಮರ್ಥರಾಗಿ ಹೋದರು ॥೨೦-೨೦॥ ॥ ಅದ್ಯ - ಇಂದು, ತವ - ನಿನಗೆ, ಉತ್ತಮಂ-ಶ್ರೇಷ್ಠವೆನಿಸಿದ,

---

ಮನಃಪೂರ್ವಕವಾಗಿ ಅರ್ಪಿಸುವೆನು. ನನ್ನನ್ನು ಸ್ವೀಕರಿಸು ॥ ೧೮॥ ॥ ಈ ಪ್ರಪಂಚದಲ್ಲಿ ಕಾಳಗದೊಳಗೆ ನನಗೆ ಎದುರಾಗಿ ನಿಲ್ಲುವ ಬೇರೊಬ್ಬ ವೀರನಿಲ್ಲ. ಯುದ್ಧದಲ್ಲಿ ಪ್ರತಿವೀರನನ್ನು ಪಡೆಯದಿರುವ ಅಪರಿಮಿತವಾದ ನನ್ನ ವೀರ್ಯವನ್ನು ನೋಡು. ಇಂತಹ ಶೌರ್ಯಸಂಪನ್ನನಾದ ನನಗೆ ನೀನು ಒಲಿಯಬಾರದೆ? ॥೧೯-೧೯॥ಓ ಭಾಮಾಮಣಿ! ಇದುವರೆಗೆ ನಾನು ಹೇಳಿದ ಮಾತುಗಳು ನೀನು ನನ್ನನ್ನು ಮೆಚ್ಚಬೇಕೆಂದಲ್ಲ. ವಾಸ್ತವವಾಗಿಯೂ ಅನೇಕ ಸಾರಿ ದೇವಾಸುರರೆಲ್ಲರೂ ನನ್ನೊಡನೆ ಹೋರಾಡಲೆಳಸಿ, ಕಾಳಗದಲ್ಲಿ ಸೋತು, ಅವಮಾನವನ್ನು ಹೊಂದಿ ನನ್ನ ಎದುರಿಗೆ ನಿಲ್ಲಲಾರದೆ ರಥ, ಅಶ್ವ, ಧ್ವಜ ಮೊದಲಾದವುಗಳನ್ನೆಲ್ಲ ಹಾಳುಮಾಡಿಕೊಂಡು ಓಡಿಹೋಗಿದಾರೆ. ಇದನ್ನು ನಂಬು. ಇಂತಹ ಶೂರನಲ್ಲಿ ದಯೆತೋರು ॥೨೦॥ ॥ ಎಲೆ ಭ್ರಾಂತಳೇ ! ರಾಮನನ್ನು ಪುನಃ ಪಡೆಯುವೆನೆಂಬ ಈ ಹುಚ್ಚು ನಿನಗೆ

---

ವನ್ನೂ ನಿನ್ನ ಕೈಂಕರ್ಯಕ್ಕಾಗಿ ಸಮರ್ಪಿಸಲು ಸಿದ್ಧನಾಗಿದ್ದೇನೆ. ತಾಯೀ! ಅನುಗ್ರಹದೃಷ್ಟಿಯಿಂದ ನನ್ನನ್ನು ರಕ್ಷಿಸು ॥೧೮॥ ॥ ಪ್ರಪಂಚಸೃಷ್ಟಿವಿಲಾಸವುಳ್ಳ ಓ ಮಾತೇ ! ನೀನು ಭೃತ್ಯನಾದ ನನ್ನಲ್ಲಿ ಅನುಗ್ರಹವನ್ನುತೋರಿ, ಸಮಸ್ತ ಭೂಮಂಡಲವನ್ನೂನನ್ನನ್ನು ಉದ್ಧರಿಸುವುದಕ್ಕೋಸ್ಕರ ನಿನ್ನ ಕೈಂಕರ್ಯಾರ್ಥವಾಗಿಯೇ ಸಮರ್ಪಿಸುತ್ತೇನೆ ॥ ೧೯ ॥ ॥ ಎಲೌ ಜನನೀ ! ಮೋಕ್ಷಕ್ಕೆ ವಿರೋಧಿಗಳೆನಿಸಿದ ಕಾಮ, ಕ್ರೋಧ, ಲೋಭ ।ಮೋಹ, ಮದ, ಮಾತ್ಸರ್ಯಗಳೆಂಬ ಶತ್ರುಗಳನ್ನು ಜಯಿಸುವುದರಲ್ಲಿ ನನಗೆ ಸಮಾನರಾದ ವೀರನಿಲ್ಲದ ಹಾಗೂ, ಅವುಗಳೊಡನೆ ಜಯಕ್ಕಾಗಿ ನಾನು ಹೋರಾಡುವಲ್ಲಿ ನನಗೆ ಅಂತಹ ಪರಾಕ್ರಮವು ಉಂಟಾಗುವಂತೆಯೂ ನಿನ್ನಯ ಅನುಗ್ರಹ ದೃಷ್ಟಿಯಿಂದ ನನ್ನನ್ನು ಕಟಾಕ್ಷಿಸು

ಇಚ್ಛಯಾ ಕ್ರಿಯತಾ ಮದ್ಯ ಪ್ರತಿಕರ್ಮ ತವೋತ್ತಮಮ್ ।
ಸಪ್ರಭಾಣ್ಯವಸಜ್ಜಂತಾಂ ತವಾಂಗೇ ಭೂಷಣಾನಿ ಚ ।
ಸಾಧು ಪಶ್ಯಾಮಿ ತೇ ರೂಪಂ ಸಂಯುಕ್ತಂ ಪ್ರತಿಕರ್ಮಣಾ ॥ ೨೨
ಪ್ರತಿಕರ್ಮಾಭಿಸಂಯುಕ್ತಾ ದಾಕ್ಷಿಣ್ಯೇನ ವರಾನನೇ ।
ಭುಂಜ್‌ಕ್ಷ್ವ ಭೋಗಾ ನ್ಯಥಾಕಾಮಂ ಪಿಬ ಭೀರು ರಮಸ್ವ ಚ ॥೨೩॥

ಪ್ರತಿಕರ್ಮ - ಅಲಂಕಾರವು, ಇಚ್ಛಯಾ - ಇಷ್ಟಾನುಸಾರದಿಂದ, ( ಸೈರಂಧ್ರೀಭಿಃ - ಅಲಂಕರಿಸುವ ದಾಸಿಯರಿಂದ) ಕ್ರಿಯತಾಂ - ನೆರವೇರಿಸಿಕೊಳ್ಳಲ್ಪಡಲಿ, ತವ - ನಿನ್ನ, ಅಂಗೇ - ಶರೀರದಲ್ಲಿ, ಭೂಷಣಾನಿಚ - ಆಭರಣಗಳೂ, ಸಪ್ರಭಾಣಿ - ಕಾಂತಿಯಿಂದೊಡಗೂಡಿದವುಗಳಾಗಿ, ಅವಸಜ್ಜಂತಾಂ - ತೊಡಲ್ಪಡಲಿ, (ಇಟ್ಟುಕೊಳ್ಳಲ್ಪಡಲಿ) ಪ್ರತಿಕರ್ಮಣಾ - ಅಲಂಕಾರದಿಂದ, ಸಂಯುಕ್ತಂ - ಒಡಗೂಡಿರುವ, ತೇ - ನಿನ್ನ, ರೂಪಂ - ಆಕಾರವು, ಸಾಧು - ಬಲು ಅಂದವಾಗಿರುವುದೆಂದು, ಪಶ್ಯಾಮಿ - ಭಾವಿಸುತ್ತೇನೆ. ॥೨೧-೨೨॥ ಹೇವರಾನನೆ - ಓ ಸುಂದರವದನೆಯೇ ! ಭೀರು - ಭಯಸ್ವಭಾವದವಳೇ, [ಮಯಿ-ನನ್ನಲ್ಲಿ,] ದಾಕ್ಷಿಣ್ಯೇನ-ಇಷ್ಟವನ್ನು ಅನುಸರಿಸುವಿಕೆಯಿಂದ, ಪ್ರತಿಕರ್ಮಾಭಿಸಂಯುಕ್ತಾ-ಅಲಂಕಾರದಿಂದೊಡಗೂಡಿದವಳಾಗಿ ಯಥಾಕಾಮಂ- ಯಥೇಚ್ಛವಾಗಿ, ಭೋಗಂ-ಸುಖಗಳನ್ನು, ಭುಂಕ್ಷ್ವ- ಅನುಭವಿಸು, ಪಿಬ-ವಿವಿಧಮದ್ಯಗಳನ್ನು ಪಾನಮಾಡು, ರಮಸ್ವ ಚ- ಆಟವನ್ನೂ ಆಡು ॥೨೩॥ ತ್ವಂ-

ಏಕ ಹಿಡಿಯಿತು. ಛೆ ! ಅದನ್ನು ಬಿಟ್ಟುಬಿಡು. ಲೋಕದಲ್ಲಿ ಹೆಂಗಸರು ಇಂತಹ ಉಲ್ಲವಾದ ವಸ್ತ್ರಾಭರಣಗಳನ್ನು ಕಂಡರೆ ಕೂಡಲೇ ಉಟ್ಟು, ತೊಟ್ಟು, ಅಲಂಕರಿಸಿಕೊಳ್ಳದೆ ಬಿಡುವರೇ ! ಏಳು, ಉತ್ತಮವಾದ ಅಲಂಕಾರವನ್ನು ನಿನ್ನ ಮನಬಂದಂತೆ ಅಲಂಕರಿಸಿಕೋ, ಮಹತ್ತರವಾದ ಥಳಥಳ್ಯದಿಂದೊಡಗೂಡಿದ ಈ ವಸ್ತ್ರಾಭರಣಗಳು ನಿನ್ನಯ ಅವಯವಗಳಲ್ಲಿ ನೆಲಗೊಂಡರೆ ಅವು ನಿನ್ನಯ ಸ್ವಾಭಾವಿಕವಾದ ಕಾಂತಿವಿಶೇಷದಿಂದ ಮತ್ತಷ್ಟು ತೇಜಸ್ಸನ್ನು ಪಡೆಯುತ್ತವೆ. ಇಂತಹ ವಸ್ತ್ರಾಭರಣಗಳಿಂದ ಅಲಂಕರಿಸಲ್ಪಟ್ಟ ನಿನ್ನ ಶರೀರ ಸೌಂದರ್ಯವು ಹೇಗಿರುವುದೋ ಅದನ್ನು ವಿನೋದದಿಂದ ನೋಡಬೇಕೆಂದು ಬಯಸುತ್ತಲಿರುವೆನು॥೨೨॥ ಸುಂದರವದನೆಯಾದ ಓ ಭಯಶೀಲಳೇ! ನನ್ನ ಇಷ್ಟವನ್ನು ಅನುಸರಿಸಿ ಅಲಂಕರಿಸಿಕೊಂಡು,ಮನವಾರ ಮದ್ಯಪಾನಾದಿಗಳನ್ನಾಚರಿಸಿ, ಪಂಚಭಕ್ಷ್ಯಗಳನ್ನು ಆರೋಗಣೆ ಮಾಡಿ,ಸಕಲ ಸುಖಗಳನ್ನೂ ಅನುಭವಿಸುತ್ತ ಕ್ರೀಡಿಸುತಲಿರು ॥೨೩॥ ವಸ್ತ್ರಾಭರಣ, ರಾಜ್ಯ

॥೨೦॥ ॥ಎಲೌ ಸರ್ವಶಕ್ತಳೇ ! ಕಾಮಾದಿ ಶತ್ರುಗಳನ್ನು ಜಯಿಸತಕ್ಕ ಪರಾಕ್ರಮವು ನನ್ನಲ್ಲಿ ನೆಲೆಗೊಳ್ಳುವ ಹಾಗೆ ನೀನು ಅನುಗ್ರಹಿಸಿದುದೇ ಆದರೆ, ಆ ಕಾಮಾದಿ ಶತ್ರುಗಳು ಎಷ್ಟುಸಾರಿ ನನ್ನೊಡನೆ ಹೋರಾಡಲಿಕ್ಕೆ ಬಂದರೂ, ನಿನ್ನಿಂದ ಅವಮಾನಿತರಾಗುವುದಲ್ಲದೆ ನನ್ನೆದುರಿಗೆನಿಲ್ಲಲಾರರು ॥೨೧-೨೨॥ ಎಲೌ ಪ್ರಭಾವತಿಯಾದ ದೇವಿಯೇ! ನಿನ್ನ ದಾಸನಾದ ನಾನು ಭಕ್ತಿಪೂರ್ವಕವಾಗಿ ಸಮರ್ಪಿಸುವ ಉತ್ತಮ ವಸ್ತ್ರಾಭರಣಗಳನ್ನು ನೀನು ಅನುಗ್ರಹಬುದ್ಧಿಯಿಂದ ಸ್ವೀಕರಿಸಿದರೂ ಸ್ವತಸ್ಸಿದ್ಧವಾದ ನಿನ್ನ ತೇಜೋವಿಶೇಷದಿಂದ ಅವುಗಳಿಗೇ ಪ್ರಭಾತಿಶಯವುಂಟಾಗುವುದೆಂಬುದು ಸತ್ಯ. ಆದರೂ ನನ್ನ ಭಕ್ತಿಸತ್ಕಾರವು ನಿನಗೆ ಹೃದಯಂಗಮವಾಯಿತೆಂದು ಬಹಳ ಸಂತೋಷಿಸುತ್ತೇನೆ ॥೨೩॥ ಎಲೌ ಮಹಾನುಭಾವಳೇ!

ಯಥೇಷ್ಟಂ ಚ ಪ್ರಯಚ್ಛ ತ್ವಂ ಪೃಥಿವೀಂ ವಾ ಧನಾನಿ ಚ ।
ಲಲಸ್ವ ಮಯಿ ವಿಸ್ರಬ್ಧಾ ಧೃಷ್ಟ ಮಾಜ್ಞಾಪಯಸ್ವ ಚ ॥
ಮತ್ಪ್ರಸಾದಾ ಲ್ಲಲಂತ್ಯಾಶ್ಚ ಲಲಂತಾಂ ಬಾಂಧವಾ ಸ್ತವ ॥೨೪॥ ॥
ಋದ್ಧಿಂ ಮಮಾ ನು ಪಶ್ಯ ತ್ವಂ ಶ್ರಿಯಂ ಭದ್ರೇ ಯಶ ಶ್ಚ ಮೇ ॥೨೫॥
ಕಿಂ ಕರಿಷ್ಯಸಿ ರಾಮೇಣ ಸುಭಗೇ ಚೀರವಾಸಸಾ ।
ನಿಕ್ಷಿಪ್ತ ವಿಜಯೋ ರಾಮೋ ಗತಶ್ರೀ ರ್ವನ ಗೋಚರಃ ॥೨೬॥

ನೀನು, ಯಥೇಷ್ಟಂ-ಇಷ್ಟಾನುಸಾರವಾಗಿ, ಪೃಥ್ವೀಂವಾ- ಭೂಮಿಯನ್ನಾಗಲಿ, ಧನಾನಿಚ-ಧನಗಳನ್ನಾಗಲೀ, ಪ್ರಯಚ್ಛ-ನಿನಗೆ ಬೇಕಾದವರಿಗೆ ಕೊಡು, ವಿಸ್ರಬ್ಧಾ-ನಂಬಿದವಳಾಗಿ, ಮಯಿ-ನನ್ನಲ್ಲಿ, ಲಲಸ್ವ-ಪ್ರೀತಿಯನ್ನು ಮಾಡು, [ಸಂತೋಷಿಸು] ಧೃಷ್ಟಂ-ದುಡುಕುತನದಿಂದ, [ಕೋಪದಿಂದ] ಆಜ್ಞಾಪಯಸ್ವಚ-ಅಪ್ಪಣೆಮಾಡು, ಲಲಂತ್ಯಾಃ-ನನ್ನ ವಿಷಯವಾಗಿ ಪ್ರೀತಿಸುತಲಿರುವ, ತವ-ನಿನ್ನ, ಬಾಂಧವಾಶ್ಚ-ನಂಟರಿಷ್ಟರೂ, ಮತ್ಪ್ರಸಾದಾತ್-ನನ್ನ ಅನುಗ್ರಹದ ದೆಸೆಯಿಂದ, ಲಲಂತಾಂ - ಸಂತೋಷಿಸುವವರಾಗಲಿ, ಮತ್ಪ್ರಸಾದಾತ್ - ನನ್ನಲ್ಲಿ ನೀನು ಅನುಗ್ರಹವನ್ನು ತೋರಿಸುವುದರ ದೆಸೆಯಿಂದ, ತವ- ನೀನು, ಲಲಂತ್ಯಾಃ - ಸಂತೋಷಿಸುತ್ತಿರಲಾಗಿ, ಬಾಂಧವಾಶ್ಚ - ನಂಟರಿಷ್ಟರೆಲ್ಲರೂ, ಲಲಂತಾಂ-ಸಂತೋಷಿಸತಕ್ಕವರಾಗಲಿ ॥೨೩-೨೪॥ ಭದ್ರೇ - ಓ ಮಂಗಳಮುಖಿ ! ತ್ವಂ-ನೀನು, ಮಾಂ-ನನ್ನನ್ನೂ, ಮೇ-ನನ್ನ, ಋದ್ಧಿಂ-ಸರ್ವವಸ್ತುಸಮೃದ್ಧಿಯನ್ನೂ, ಶ್ರಿಯಂ-ರಾಜ್ಯಲಕ್ಷ್ಮಿಯನ್ನೂ, ಯಶಶ್ಚ-ಕೀರ್ತಿಯನ್ನೂ, ಅನುಪಶ್ಯ- ಚೆನ್ನಾಗಿ ಭಾವಿಸಿನೋಡು ॥೨೫॥ ಹೇಸುಭಗೇ-ಓ ಸುಮಂಗಲಿ, (ಯತ್-ಯಾವ) ರಾಮಃ-ಶ್ರೀರಾಮನು, ನಿಕ್ಷಿಪ್ತವಿಜಯಃ - ಗೆಲುವನ್ನು ತೊರೆದವನಾಗಿದಾನೆಯೋ, ಗತಶ್ರೀಃ- ರಾಜ್ಯವನ್ನು ಕಳೆದುಕೊಂಡವನಾಗಿದಾನೆಯೋ, ವನಗೋಚರಃ-ಕಾಡಿನಲ್ಲಿವಾಸಮಾಡುತಲಿರುವನೋ॥೨೬॥ವೃತ್ತಿ-(ಆಹಾರಾದಿ

ಸ್ತ್ರೀಧನಾದಿಗಳನ್ನೂ, ನನ್ನನ್ನೂ ನಿನಗೆ ಒಪ್ಪಿಸುವೆನಾದಕಾರಣ ನನ್ನಲ್ಲಿ ವಿಶ್ವಾಸವನ್ನಿಟ್ಟು ವಿಹರಿಸು. ಇವಲ್ಲದೆ ನಿನ್ನವನಾದ ನನ್ನನ್ನು ನಿನಗೆ ಇಷ್ಟವಾದ ಕಾರ್ಯದಲ್ಲಿ ನಿಯಮಿಸು, ನನ್ನಲ್ಲಿನಪ್ರೀತಿಯದೆಸೆಯಿಂದ ನೀನು ಸಂತೋಷಿಸುತ್ತಿರಲಾಗಿ ನಿನ್ನನಂಟರಿಷ್ಟರೆಲ್ಲರೂ ಬೇಕಾದಹಾಗೆ ಸುಖಿಸಲಿ ॥ ೨೪ ॥ ॥ಎಲೆ ಸುಮುಖಿ! ನನ್ನನ್ನೂ, ನನ್ನ ಸಂಪತ್ಸಮೃದ್ಧಿಯನ್ನೂ, ನನ್ನ ಸಾಮ್ರಾಜ್ಯವನ್ನೂ, ಮೂರುಲೋಕದಲ್ಲಿ ಹರಡಿರುವ ನನ್ನ ಸತ್ಕೀರ್ತಿಯನ್ನೂ ಭಾವಿಸಿ ನೋಡು, ನನ್ನನ್ನು ಪರಿಗ್ರಹಿಸು ॥ ೨೫ ॥ ಎಲೆ ಸುಂದರಾಂಗಿಯಾದ ಜಾನಕೀ, ನಿರ್ಭಾಗ್ಯನಾದ ಆ ರಾಮನನ್ನು ಕಟ್ಟಿಕೊಂಡು ಏಕೆ ಗೋಳಾಡುತ್ತೀಯೆ ? ಅವನಿಂದ ಇನ್ನಾವ ಭೋಗಭಾಗ್ಯಗಳನ್ನು ಅನುಭವಿಸಬಲ್ಲೆ ? ನಾರುಬಟ್ಟೆಯನ್ನುಟ್ಟು,ಗೆಲುವಿನ ಆಸೆಯನ್ನೆಲ್ಲ ತೊರೆದು, ರಾಜ್ಯಕೋಶಗಳನ್ನೆಲ್ಲ ಕಳದುಕೊಂಡು, ದಟ್ಟದರಿದ್ರನಾಗಿ, ಕಾಡಿನಲ್ಲಿ

ನನ್ನಲ್ಲಿ ಅನುಗ್ರಹವನ್ನು ತೋರಿ ನಾನು ಶ್ರದ್ಧಾಭಕ್ತಿಗಳಿಂದ ಸಮರ್ಪಿಸುವ ವಸ್ತ್ರಾಭರಣಗಳನ್ನೂ,ಭಕ್ಷ್ಯಭೋಜ್ಯಾದಿಗಳನ್ನೂ ಸ್ವೀಕರಿಸಿ ವಾತ್ಸಲ್ಯವನ್ನು ತೋರು॥೨೪॥ ॥ ಎಲೌ ಸರ್ವವಂದ್ಯಳೇ! ನನ್ನಲ್ಲಿ ನೀನು ಪ್ರಸನ್ನತೆಯನ್ನುತೋರುವುದರಿಂದ ನೀನು ಸಂತೋಷಿಸುವುದಲ್ಲದೆ, ‹‹ಮಹಾತಾಯಿಯಾದ ನೀನು ನನ್ನಲ್ಲಿ ದಯತೋರಿದೆ,,ಎಂದು ನನ್ನಬಂಧುವರ್ಗದವರೆಲ್ಲರೂ, ಬಹಳ ಸಂತೋಷಿಸುವರಲ್ಲವೆ?॥೨೫॥ ಎಲೌ ಮಂಗಳಪ್ರದಳೇ ! ದಾಸ

ವ್ರತೀ ಸ್ಥಂಡಿಲ ಶಾಯೀಚ ಶಂಕೇ ಜೀವತಿ ವಾ ನ ವಾ ॥ ೨೬ ॥ ॥
ನಹಿ ವೈದೇಹಿ ರಾಮ ಸ್ತ್ವಾಂ ದ್ರಷ್ಟುಂ ವಾ ಪ್ಯುಪ ಲಪ್ಸ್ಯತೇ ।
ಪುರೋ ಬಲಾಕ್ಯೈ ರಸಿತ್ಯೈ ರ್ಮೇಘೈ ರ್ಜ್ಯೋತ್ಸ್ನೇವಾವೃತಾಂ॥೨೭॥
ನಚಾಪಿ ಮಮ ಹಸ್ತಾತ್ತ್ವಾಂ ಪ್ರಾಪ್ತು ಮರ್ಹತಿ ರಾಘವಃ ।

ಷಿಯುವುದಿಂದ) ತಪಸ್ವಿಯಾಗಿದ್ದಾನೆ, ಸ್ಥಂಡಿಲಶಾಯೀಚ - ನೆಲದಮೇಲೆ ಪವಳಿಸುತಲಿರುವನು, ಜೀವತಿ ವಾ - ಬದುಕಿ ಇದಾನೆಯೋ, ನವಾ - ಇಲ್ಲವೋ, (ಇತಿ - ಹೀಗೆಂದು) ಶಂಕೆ - ಸಂಶಯಪಡುತಲಿದೇನೆ, ತೇನ-ಅಂಥವನಾದ, ಚೀರವಾಸಸಾ-ನಾರುಬಟ್ಟೆಯನ್ನು ಧರಿಸಿರುವ, ರಾಮೇಣ-ರಾಮನಿಂದ, ಕಿಂಕರಿಷ್ಯಸಿ-ಯಾವಲಾಭವನ್ನು ಪಡೆದೀಯೆ, ಹೇವೈದೇಹಿ - ಓ ಜಾನಕೀ (ರಾಮಃ-ರಾಮನು) ತ್ವಾಂ-ನಿನ್ನನ್ನು ॥೨೬॥

ಪುರೋಬಲಾಕ್ಯೈಃ - ಮುಂದೆ ಬಿಳಿಯ ಕೊಕ್ಕರೆಗಳುಳ್ಳ, ಅಸಿತ್ಯೈಃ - ಮೇಲೆ ಕಪ್ಪುಬಣ್ಣದವುಗಳಾದ, ಮೇಘೈಃ-ಮೋಡಗಳಿಂದ, ಆವೃತಾಂ- ಆವರಿಸಲ್ಪಟ್ಟಿರುವ, ಜ್ಯೋತ್ಸ್ನಾಮಿವ-ಬೆಳ್ದಿಂಗಳನ್ನು ಹೇಗೋ ಹಾಗೆ, ದ್ರಷ್ಟುಮಪಿ - ನೋಡಲಿಕ್ಕೂ ಕೂಡ, ನೋಪಲಪ್ಸ್ಯತೆ -ಪಡೆಯಲಾರನು, [ಶಕ್ತನಾಗಲಾರನು] ಹಿ-ನಿಶ್ಚಯ, ಹಿರಣ್ಯಕಶಿಪುಃ - ಹಿರಣ್ಯಕಶಿಪುವೆಂಬ ರಾಕ್ಷಸನು, ಇಂದ್ರಹಸ್ತಗತಾಂ - ಇಂದ್ರನ ಕೈಸೇರಿದ, ಕೀರ್ತಿಮಿವ - ಯಶಸ್ಸನ್ನು ಹೇಗೋಹಾಗೂ, [ಕೀರ್ತಿ ಎಂಬ ತನ್ನ ಹೆಂಡತಿಯನ್ನು ಹೇಗೋ ಹಾಗೂ] (ಇದು ವೈಧರ್ಮ್ಯದೃಷ್ಟಾಂತ.) ರಾಘವಃ - ರಾಮನು, ತ್ವಾಂ-ನಿನ್ನನ್ನು, ಮಮ- ನನ್ನ, ಹಸ್ತಾತ್-ಕಯ್ಯ ದೆಸೆಯಿಂದ, ಪ್ರಾಪ್ತುಮಪಿ- ಹೊಂದಲಿಕ್ಕೂ, ನಚಾರ್ಹತಿ-ಶಕ್ತನಾಗಲಾರನು, "ಯದ್ಧಿಂವಮಾಮನು ಪಶ್ಯತ್ವಂ" ಎಂಬುದು ಮೊದಲ್ಗೊಂಡು ನಾಲ್ಕುಶ್ಲೋಕಗಳಲ್ಲಿ "ರಾಮನಿಂದೊಡಗೂಡಿ ನಿನಗೆ ಇಷ್ಟವಾದ ಸಂಪತ್ತುಗಳನ್ನು ಕೊಡುವೆನು. ನನ್ನನ್ನು ರಾಮನ ಸಾನ್ನಿಧ್ಯವನ್ನು ಸೇರಿಸು" ಎಂದು ಸೀತೆಯು

ಅಲೆಯುತ್ತಿರುವನಲ್ಲ ? ॥ ೨೫ ॥॥ ಅಯ್ಯೋ ! ಅವನ ಅವಸ್ಥೆಯನ್ನು ಎಷ್ಟೆಂದು ಬಣ್ಣಿಸಲಿ, ಗೆಡ್ಡೆಗೆಣಸುಗಳನ್ನು ತಿಂದುಕೊಂಡು, ಚಳಿ ಗಾಳಿ ಬಿಸಿಲುಗಳನ್ನು ಸಹಿಸಿ, ತರಗೆಲೆಯ ಮನೆಯಲ್ಲಿ ವ್ರತಪರನಾಗಿ, ನೆಲದಮೇಲೆ ಬಿದ್ದುಕೊಳ್ಳುತಲಿರುವ ಆ ನಿನ್ನ ರಾಮನು ಇದುವರೆಗೆ ಉಸಿರಿನೊಡನೆ ಇರುವನೋ? ಅಥವಾ ಗತಜೀವಿತನೇ ಆದನೋ ? ತಿಳಿಯದು. ಎಲೆ ಜಾನಕೀ! ನನ್ನ ಬಾಹುಪಂಜರದೊಳಗೆ ಸಿಲುಕಿರುವ ನಿನ್ನನ್ನು ಕನಸಿನಲ್ಲಿಯಾದರೂ ಪುನಃ ನೋಡುವನೆಂಬ ದುರಾಶೆಯನ್ನು ಬಿಟ್ಟುಬಿಡು ॥ ೨೬ ॥ ॥ ಮುಗಿಲ ಮಂಡಲದಲ್ಲಿ ಕೆಳಭಾಗದೊಳಗೆದಟ್ಟವಾಗಿ ಹರಡಿಹೋಗುತಲಿರುವ ಕೊಕ್ಕರೆಗಳೆಂಬ ಹಕ್ಕಿಗಳಿಂದಲೂ, ಅದರಮೇಲೆ ಒತ್ತಾಗಿ ಮುತ್ತಿರುವ ಕಾರ್ಮುಗಿಲುಗಳಿಂದಲೂ, ಮರೆಯಾಗಿಹೋಗಿರುವಬೆಳ್ದಿಂಗಳನ್ನು ಪಡೆಯುವುದು ಹೇಗೆ ದುರ್ಲಭವೋ, ಹಾಗೆಯೇ, ನನ್ನ ಕೈಸೇರಿರುವ ನಿನ್ನನ್ನು ರಾಮನು ಪಡೆಯುವುದೂ ದುರ್ಲಭವೆಂಬು ಖಂಡಿತವಾಗಿತಿಳಿ ॥೨೭॥॥ ಮತ್ತು:—ಪೂರ್ವದಲ್ಲಿ ಹಿರಣ್ಯಕಶಿಪುವು ತನಗೆ ಹಗೆಯಾದ ವಿಷ್ಣುವನ್ನು ಕಾಣಲಿಕ್ಕೆ ಬ್ರಹ್ಮನನ್ನು ಕುರಿತು ತಪಸ್ಸನ್ನು ಮಾಡಬೇಕೆಂದು ಹೋಗಿದ್ದನಷ್ಟೆ. ಆ ಸಮಯದಲ್ಲಿ ಅವನ ಅಂತಃಪುರವಾಸಿನಿಯಾಗಿದ್ದ ಹಿರಣ್ಯಕಶಿಪುವಿನ ಭಾರ್ಯೆಯಾದ ಕೀರ್ತಿ ಎಂಬುವಳನ್ನು ಇಂದ್ರನು ಕೊಂಡು

ನಾದ ನನ್ನನ್ನೂ ,ನಿನ್ನ ಕಿಂಕರನ ಭಕ್ತಿಸಮೃದ್ಧಿಯನ್ನೂ, ನಿನಗೊಪ್ಪಿಸುವ ವೈಭವವನ್ನೂ ನಿನ್ನಯ ಸೇವೆಯಲ್ಲಿ ಆಸಕ್ತನಾದೆನೆಂದು ನನಗುಂಟಾಗುವ ಕೀರ್ತಿಯನ್ನೂ ಕರಿಭಾವಿಸು.

ಹಿರಣ್ಯಕಶಿಪುಃ ಶ್ರೀರ್ತಿ ಮಿಂದ್ರಹಸ್ತ ಗತಾಮಿವ ॥ ೨೮ ॥
ಚಾರುಸ್ಮಿತೇ ಚಾರುದತಿ ಚಾರುನೇತ್ರೇ ವಿಲಾಸಿನಿ ।

ಹೇಳಿದಂತೆ ಆಶಂಕಿಸಿಕೊಂಡು "ನಾನು ಮೋಕ್ಷಾರ್ಥಿಯಲ್ಲದೆ ಸಂಪತ್ತನ್ನು ಬಯಸುವವನಲ್ಲ" ಆದಕಾರಣ ಮುಕ್ತಿಯನ್ನು ಕೊಡುವವರೆಗೂ ನಿನ್ನ ಪಾದಗಳನ್ನು ಬಿಡೆನು ಎಂಬ ಅಭಿಪ್ರಾಯವನ್ನು ಸೂಚಿಸುತಲಿದ್ದಾನೆ, - ಮಮ - ನನ್ನ, ಋದ್ಧ್ಯಾದಿಕಂ - ಸಮೃದ್ಧಿ ಮೊದಲಾದುದನ್ನು, ಪಶ್ಯ - ನೋಡು, ಸುಭಗೇ - ಎಲೈಸೌಭಾಗ್ಯ ದೇವತೆಯೇ, ಯಃ-ಯಾವ ರಾಮನು, ನಿಕ್ಷಿಪ್ತವಿಜಯಃ-ಸ್ವತಸ್ಸಿದ್ಧವಾದ ಜಯವುಳ್ಳವನೋ, ಗತಶ್ರೀಃ -ಸಾಕ್ಷಾತ್‌ಲಕ್ಷ್ಮೀಸ್ವರೂಪಳಾದ ನಿನ್ನನ್ನು ಅಗಲದಿರುವ ಭಾರ್ಯೆಯನ್ನಾಗಿ ಪಡೆದಿರುವನೋ, (ಆದುದರಿಂದಲೇ) ವನಗೋಚರಃ - ಕ್ಷೀರಸಮುದ್ರಮಧ್ಯಜಲವನ್ನು ವಾಸಸ್ಥಾನವನ್ನಾಗಿಪಡೆದಿರುವನೋ, (ಜೀವನಂ, ಭುವನಂ, ವನಂ, ಇವು ಜಲದಪರ್ಯಾಯಪದಗಳು) ಎಂದರೆ - ವಿಷ್ಣುಸ್ವರೂಪನಾದುದರಿಂದ ಪಾಲನಧರ್ಮವು ಆತನಿಗೆ ಸೇರಿರುವದಾದಕಾರಣವೇ, ವ್ರತೀ - ದುಷ್ಟನಿಗ್ರಹ, ಶಿಷ್ಟಪರಿಪಾಲನ ರೂಪವಾದ ವ್ರತವುಳ್ಳವನೋ, ಸ್ಥಂಡಿಲಶಾಯೀ - ಲೋಕವ್ಯವಹಾರವನ್ನನುಸರಿಸಿ ಪಿತೃವಾಕ್ಯಪರಿಪಾಲನೆಗೋಸ್ಕರ ಭೂಶಯನದಲ್ಲಿರುವನೋ, ಅಚೀರವಾಸಸಾ - ಪೀತಾಂಬರಧಾರಿಯಾದ, ತೇನ -ಅಂತಹ ಶ್ರೀರಾಮನಿಂದ, ಕಿಂವಾ - ಯಾವ ಕಾರ್ಯವನ್ನು, ನಕರಿಷ್ಯಸಿ - ಮಾಡದೆಹೋದೀಯೆ ? (ಸಮಸ್ತಭೋಗಭಾಗ್ಯಗಳನ್ನೂ ಅನುಭವಿಸಬಲ್ಲೆ) ಹೇವೈದೇಹಿ - ಓ ಸೀತೆಯೇ (ಮಯಿ - ನಾನು, ಜೀವತಿಸತಿ - ಬದುಕಿರಲಾಗಿ, ರಾಮಃ - ಶ್ರೀರಾಮನು) ತ್ವಾಂ - ನಿನ್ನನ್ನು, ದ್ರಷ್ಟುಂವಾಪಿ - ದರ್ಶನವನ್ನು ಕೂಡ, ನೋಪಲಪ್ಸ್ಯತೆ - ಹೊಂದಲಾರ, ಇತಿ - ಹೀಗೆಂದು, ಶಂಕೆ-ಊಹಿಸುತಲಿದ್ದೇನೆ, (ಉಳಿದಭಾಗವು ಮೇಲಿನಂತೆ) ॥೨೮-೨೮॥ ॥ ಚಾರುಸ್ಮಿತೆ - ಅಂದವಾದ ಹುಸಿನಗೆಯುಳ್ಳವಳೇ, ಚಾರುದತಿ - ಸುಂದರವಾದ ಹಲ್ಲುಳ್ಳವಳೇ, ಚಾರುನೇತ್ರ - ರಮಣೀಯವಾದ ನೇತ್ರಗಳುಳ್ಳವಳೇ, ವಿಲಾಸಿನಿ - ವಿಚಿತ್ರವಾದ ವಿಭ್ರಮ

ಹೋಗಿದ್ದನಲ್ಲವೇ ? ಆಗ ನಾರದಮುನಿಯು ಇಂದ್ರನಬಳಿಗೆ ಬಂದು-ಎಲೈ ದೇವರಾಜನೇ, "ಮಹಾ ಭಾಗವತಶಿರೋಮಣಿ ಎನಿಸಿದ ಸುಕುಮಾರನು ಈಕೆಯ ಗರ್ಭಾಂಬುಧಿಯಲ್ಲಿ ನೆಲಸಿ ಇದ್ದಾನೆ. ಇಂತಹ ಸಮಯದಲ್ಲಿ ಈಕೆಗೆ ನೀನು ತೊಂದರೆ ಪಡಿಸಿದರೆ ನಿನಗೆ ಮಹತ್ತರವಾದ ಹಾನಿಯುಂಟಾದೀತು"ಎಂದು ಬೋಧಿಸಿ; ಪುನಃ ಆಕೆಯನ್ನು ಕರೆದುಕೊಂಡು ಹೋಗಿ ಹಿರಣ್ಯಕಶಿಪುವಿನ ಅಂತಃಪುರವನ್ನು ಸೇರಿಸಿದನು. ಹಾಗೆಯೇ ಯಾರ ಮೂಲಕವಾಗಿಯಾದರೂ ನಿನ್ನ ರಾಮನು ನನಗೆ ಬೋಧಿಸುವಂತೆ ಸಂಚುಮಾಡಿ, ನನ್ನ ಕರಗತಳಾದ ನಿನ್ನನ್ನು ಪುನಃ ಪಡೆಯಬಲ್ಲನೆಂದು ಚಿಂತಿಸುತ್ತೀಯೋ? ಹಾಗೇನಾದರೂ ಇದ್ದರೆ ಆ ಹಂಬಲನ್ನು ಸಂಪೂರ್ಣವಾಗಿ ಬಿಟ್ಟು ಬಿಡು ॥ ೨೮ ॥ ॥ ವಿಚಿತ್ರವಿಲಾಸ ವುಳ್ಳವಳೂ, ವಿಶಾಲ ನಯನೆಯೂ, ಸುಂದರವಾದ ದಂತಗಳುಳ್ಳವಳೂ, ಅಂದವಾದ ಮಂದಹಾಸವುಳ್ಳವಳೂ ಆಗಿರುವ ಎಲೆ ಸೀತೇ! ಗರುಡನು ಸರ್ಪವನ್ನು ಸೆಳೆದುಕೊಂಡು ಹೋಗುವ ಹಾಗೆ ನೀನು

ನನ್ನನ್ನು ಉದ್ಧರಿಸು. ॥೨೬-೨೮॥ ॥ ಎಲೌ ಸರ್ವಶುಭಪ್ರದಳೇ ! "ನಾನು ಶ್ರೀರಾಮಚಂದ್ರನೊಡಗೂಡಿ ನಿನಗೆ ಇಷ್ಟವಾದ ಸಂಪತ್ತುಗಳನ್ನೆಲ್ಲ ನೀಡುವೆನು. ನನ್ನನ್ನು ರಾಮನ ಸಾನ್ನಿಧ್ಯವನ್ನು ಸೇರಿಸು" ಎಂದು ಭಾವಿಸುವೆಯೋ? ಹಾಗ ಭಾವಿಸಬೇಡ, ಏತಕೆಂದರೆ ನಾನು ಮೋಕ್ಷಾರ್ಥಿಯಲ್ಲದೆ ಕಾಮ್ಯಾರ್ಥಿಯಲ್ಲ, ನನಗೆ ಮೋಕ್ಷವನ್ನು ಅನುಗ್ರಹಿಸುವವರೆಗೂ

ಮನೋ ಹರಸಿ ಮೇ ಭೀರು ಸುಪರ್ಣಃ ಪನ್ನಗಂ ಯಥಾ ॥ ೨೯ ॥
ಕ್ಲಿಷ್ಟ ಕೌಶೇಯ ವಸನಾಂ ತನ್ವೀ ಮಪ್ಯನಲಂಕೃತಾಂ ।
ತ್ವಾಂ ದೃಷ್ಟ್ವಾ ಸ್ವೇಷು ದಾರೇಷು ರತಿಂ ನೋಪಲಭಾ ಮ್ಯಹಮ್ ॥೩೦॥

ವುಳ್ಳವಳೇ, ಭೀರು - ಭಯಸ್ವಭಾವದವಳೇ, ಸುಪರ್ಣಃ - ಗರುತ್ಮಂತನು, ಪನ್ನಗಂಯಥಾ - ಸರ್ಪವನ್ನು ಹೇಗೋ ಹಾಗೆ, ಮೇ - ನನ್ನ, ಮನಃ - ಮನಸ್ಸನ್ನು, ಹರಸಿ - ಸೆಳೆಯುತಲಿದ್ದೀಯೆ ॥೨೯-೨೯॥ ಕ್ಲಿಷ್ಟಕೌಶೇಯವಸನಾಂ - ಮಲಿನವಾದ ಪಟ್ಟೆಯ ಸೀರೆಯನ್ನುಟ್ಟಿರುವ, ತನ್ವೀಂ-ಕೃಶಾಂಗಿಯಾದ, ಅನಲಂಕೃತಾಮಪಿ - ಅಲಂಕರಿಸಿಕೊಳ್ಳದೆಯೂ ಇರುವ, ತ್ವಾಂ - ನಿನ್ನನ್ನು, ದೃಷ್ಟ್ವಾ-ನೋಡಿ, ಸ್ವೇಷು - ನನ್ನವರಾದ, ದಾರೇಷು - ಹೆಂಡತಿಯರಲ್ಲಿ, ರತಿಂ- ಪ್ರೀತಿಯನ್ನು (ಆಸಕ್ತಿಯನ್ನು, ಸುಖವನ್ನು) ಅಹಂ- ನಾನು, ನೋಪಲಭಾಮಿ - (ನೋಪಲಭೆ) ಹೊಂದಲಾರದವನಾಗಿದ್ದೇನೆ ॥೩೦॥ ಹೇಜಾನಕೀ ! ಅಂತಃಪುರ

ನನ್ನ ಮನಸ್ಸನ್ನು ಸೆಳೆಯುತಲಿದ್ದೀಯೆ ಹೀಗೆ ನಿನ್ನಲ್ಲಿಯೇ ನೆಲಗೊಂಡಿರುವ ಮನಸ್ಸುಳ್ಳ ನನ್ನನ್ನು ಪರಿಗ್ರಹಿಸು॥೨೯॥ ಓ ಸೀತೇ ! ಮಲಿನವಾದ ವಸ್ತ್ರವನ್ನು ಧರಿಸಿ,ದೇಹದಲ್ಲಿ ಕೃಶತೆಯನ್ನು ಪಡೆದು, ದಿವ್ಯಾಭರಣಗಳನ್ನು ಅಲಂಕರಿಸಿಕೊಳ್ಳದೆ ಇದ್ದರೂ, ಇಂತಹ ನಿನ್ನನ್ನು ನೋಡಿದಮಾತ್ರದಿಂದಲೇ ನನ್ನ ಭಾರ್ಯೆಯರಲ್ಲಿ ನನಗೆ ಆಶೆಯು ಲೇಶವೂ ಇಲ್ಲದೆ ಇದೆ. ನೀನು ದಿವ್ಯ ವಸ್ತ್ರಾಭರಣಗಳನ್ನು ಧರಿಸಿ, ದಿವ್ಯ ಸೌಂದರ್ಯ ಗುಣಸಂಪತ್ತಿನಿಂದ ರಾರಾಜಿಸುತ್ತಿರುವಲ್ಲಿ, ಸೂರ್ಯನ ಎದುರಿಗೆ ದೀಪದಲ್ಲಿ ಹೇಗೋ ಹಾಗೆ, ನನ್ನ ಭಾರ್ಯೆಯರಲ್ಲಿ ನನಗೆ ಆಶೆಯುಂಟಾಗುತದೆಯೆ ? ॥೩೦॥ ಎಲೆ ವೈದೇಹಿ ! ನನ್ನ ಅಂತಃಪುರದಲ್ಲಿರುವ ಸೀಮಂತಿನಿ

ನಿನ್ನ ಅಡಿದಾವರೆಗಳನ್ನು ಬಿಡೆನು. ನನಗೆ ಇಹಲೋಕದ ಸಂಪತ್ತಿನಲ್ಲಿ ಏನೂ ಕೊರತೆಯಿಲ್ಲ, ನನ್ನ ಸಂಪತ್ಸಮೃದ್ಧಿಯನ್ನು ನೋಡು. ಶ್ರೀರಾಮನು ಸಾಕ್ಷಾತ್ ಶ್ರೀಮನ್ನಾರಾಯಣನು ಎಂಬುದನ್ನೂ, ಅವನು ಲೋಕವ್ಯವಹಾರವನ್ನು ಅನುಸರಿಸಿ ಪ್ರಪಂಚಕ್ಕೆ ಸರ್ವಧರ್ಮನೀತಿಗಳನ್ನು ಆಚಾರ್ಯನಂತೆ ಬೋಧಿಸತಕ್ಕವನೆಂಬುದನ್ನೂ ನಾನು ಬಲ್ಲೆನು. ಅವನಿಗೆ ಸಮಸ್ತ ವಿಜಯವೂ ಸ್ವಾಧೀನವಾಗಿದೆ. ಸಕಲ ಸಂಪತ್ತುಗಳೂ ಅವನ ಕರಗತವಾಗಿವೆ, ಸಾಕ್ಷಾತ್ ಲಕ್ಷ್ಮೀಸ್ವರೂಪಳಾದ ನಿನ್ನನ್ನೇ ಭಾರ್ಯೆಯನ್ನಾಗಿ ಆತನು ಪಡೆದು ಇರುವಲ್ಲಿ ಆತನಿಗೇನು ಕಡಿಮೆ ? ಕ್ಷೀರಸಮುದ್ರ ಮಧ್ಯದಲ್ಲಿ ಪವಳಿಸಿರತಕ್ಕ ಮಹಾವಿಷ್ಣುವಲ್ಲವೇ ? ಸರ್ವಲೋಕಪರಿಪಾಲನ ಧರ್ಮವು ಆತನಿಗೆ ಸೇರಿದುದಲ್ಲವೇ ? ಈ ನಿಮಿತ್ತದಿಂದಲ್ಲವೇ ಲೋಕವ್ಯವಹಾರಾನುಸಾರವಾಗಿ ಪಿತೃವಾಕ್ಯಪರಿಪಾಲನ ಧರ್ಮವನ್ನು ನಿಮಿತ್ತಮಾಡಿಕೊಂಡು, ಮುನಿವ್ರತವುಳ್ಳವನಾಗಿ, ನೆಲದಮೇಲೆ ಪವಳಿಸುತ್ತಾ, ಪೀತಾಂಬರಧಾರಿಯಾದರೂ ನಾರುಬಟ್ಟೆಯನ್ನು ಧರಿಸಿ, ಉದ್ದೇಶವು ನೆರವೇರಲಿಕ್ಕಾಗಿ ಕಾಲವನ್ನು ಕಳೆಯುತ್ತಲಿರುವನು. ಸರ್ವಜ್ಞನೂ, ಸರ್ವಶಕ್ತನೂ ಆಗಿರುವ ಆ ಮಹಾನುಭಾವನಿಂದ ನೀನು ಯಾವಯಾವಕೆಲಸವನ್ನು ನಿರ್ವಹಿಸಲಾರೆ ? ಆದಕಾರಣವೇ ನನ್ನ ಕೋರಿಕೆಯು ನೆರವೇರಲಿಕ್ಕಾಗಿ ನಾನು ಜೀವಿಸಿರುವವರೆಗೂ ಆ ರಾಮನು ನಿನ್ನನ್ನು ನೋಡಲಾರ ಎಂದು ಭಾವಿಸುತ್ತೇನೆ ॥೨೯॥ ಸರ್ವಸೌಭಾಗ್ಯ ಸಂಪನ್ನೆಯಾದ ಎಲೌ ಮಹಾದೇವಿಯೇ ! ಪಕ್ಷಿರಾಜನು ಪನ್ನಗನನ್ನು ಸೆಳೆಯುವಂತೆ ನನ್ನ ಭಕ್ತಿಪ್ರವಾಹವನ್ನು ನೀನು ಸೆಳೆಯುತಲಿರುವು

ಅಂತಃ ಪುರ ನಿವಾಸಿನ್ಯಃ ಸ್ತ್ರಿಯ ಸ್ಸರ್ವ ಗುಣಾನ್ವಿತಾಃ ।
ಯಾವಂತ್ಯೋ ಮಮ ಸರ್ವಾಸಾ ಮೈಶ್ವರ್ಯಂ ಕುರು ಜಾನಕೀ ॥೨೧॥ ॥
ಮಮ ಹ್ಯಸಿತ ಕೇಶಾಂತೇ ತ್ರೈಲೋಕ್ಯ ಪ್ರವರಾ ಸ್ಸ್ತ್ರಿಯಃ ।
ತಾ ಸ್ತ್ವಾಂ ಪರಿಚರಿಷ್ಯಂತಿ ಶ್ರಿಯ ಮಪ್ಸರಸೋ ಯಥಾ ॥೨೨॥ ॥

ನಿವಾಸಿನ್ಯಃ - ರಾಣೀವಾಸದಲ್ಲಿ ವಾಸಮಾಡುತ್ತಿರುವ, ಸರ್ವಗುಣಾನ್ವಿತಾಃ- ಸಕಲಗುಣಸಂಪನ್ನೆಯರಾದ, ಸ್ತ್ರಿಯಃ - ಹೆಂಗಸರು, ಮಮ - ನನಗೆ, ಯಾವಂತ್ಯಃ - ಎಷ್ಟುಮಂದಿ, ಸಂತಿ - ಇರುವರೋ, ತಾವತೀನಾಂ - ಅಷ್ಟುಮಂದಿಯರಾದ, ಸರ್ವಾಸಾಂ - ಸಮಸ್ತ ಸ್ತ್ರೀಯರಿಗೂ, ತ್ವಂ - ನೀನು, ಐಶ್ವರ್ಯಂ - ಯಜಮಾನಿತನವನ್ನು, ಕುರು - ಮಾಡು ॥೨೧॥ ॥ ಹೇಅಸಿತಕೇಶಾಂತೇ-ಕಪ್ಪಗಿರುವ ತುದಿಗೂದಲುಳ್ಳವಳೇ, ತ್ರೈಲೋಕ್ಯಪ್ರವರಾಃ - ಮೂಲೋಕದಲ್ಲಿಯೂ ಶ್ರೇಷ್ಠರೆನಿಸಿದ, ಮಮ - ನನ್ನ, ತಾಃಸ್ತ್ರಿಯಃ - ಆ ಹೆಂಗಸರೆಲ್ಲರೂ, ಶ್ರಿಯಂ - ಲಕ್ಷ್ಮೀದೇವಿಯನ್ನು, ಅಪ್ಸರಸೋಯಥಾ - ದೇವಾಂಗನೆಯರು ಹೇಗೊ ಹಾಗೆ, ತ್ವಾಂ - ನಿನ್ನನ್ನು, ಪರಿಚರಿಷ್ಯಂತಿ-ಸೇವಿಸುತಲಿರುವರು ॥೨೨॥ ॥ ಹೇಸುಭ್ರು - ಅಂದವಾದ ಕಣ್ಣು

ಯರೆಲ್ಲ ಸೌಂದರ್ಯಾದಿ ಗುಣಸಂಪತ್ತಿಯಿಂದ ಶೋಭಿಸುತಲಿರುವರು. ಅಂಥವರೆಲ್ಲರೂ ನಿನ್ನ ಆಜ್ಞೆಗೆ ಕಿಂಕರಿಯರಾಗಿ ನಡೆದುಕೊಳ್ಳುತ್ತಾರೆ. ಅವರಿಗೆಲ್ಲ ನೀನು ಈಶ್ವರಿಯಾಗಿರು, ನನ್ನನ್ನು ಪರಿಗ್ರಹಿಸು॥ ೨೧ ॥ ॥ಓ ಸುಂದರಾಂಗೀ ! ಮೂಲೋಕದಲ್ಲಿಯೂ, ಸುಂದರಿಯರೆನಿಸಿದ ಮಂದಯಾನೆಯರನೇಕರು ನನ್ನ ಅಂತಃಪುರದಲ್ಲಿ ವಾಸಿಸುತಲಿರುವರು. ಅವರೆಲ್ಲರೂ ಮಹಾದೇವಿಯಾದ ಲಕ್ಷ್ಮಿಯನ್ನು ದೇವಾಂಗನೆಯರು ಹೇಗೋ ಹಾಗೆ ನನ್ನೊಡನೆ ನಿನ್ನನ್ನುಪರಿಚರಿಸಲು ಸಿದ್ಧರಾಗಿರುವರು. ಇಂತಹ ಸೇವೆಯನ್ನು ಕೈಗೊಳ್ಳುತ ನನಗೆ ಒಡತಿಯಾಗಬಾರದೆ? ॥ ೨೨ ॥ ॥ ಎಲೆ ಲೋಕೈಕಸುಂದರೀ! ನವನಿಧಿಗಳಗಧಿಪತಿಯಾದ ಕುಬೇರನನ್ನು ಜಯಿಸಿ ಅವನ ಬೊಕ್ಕಸದಲ್ಲಿನ ಸರ್ವಧನವನ್ನೂ ತಂದಿರುವೆನು, ಅಂತಹ ಅಪಾರ

ದರಿಂದ ನನ್ನನ್ನು ಉದ್ಧರಿಸು॥೨೦॥॥ ಎಲೌ ಇಷ್ಟದೇವತೆಯೇ! ತಪಸ್ವಿನಿಯಂತಿರುವ ನಿನ್ನನ್ನು ದರ್ಶನಮಾಡಿದ ಮಾತ್ರದಲ್ಲಿಯೇ ನನ್ನಧನಗಳಲ್ಲಿ ಆಶೆಯು ತೊಲಗಿತು.ಯಾವ ಆನಂದವನ್ನು ಹೊಂದಿದರೆ ಇತರ ಆನಂದಗಳೆಲ್ಲವೂ, ಬಹು ತುಚ್ಛವಾಗಿ ಕಾಣಬರುತವೆಯೋ ಅಂತಹ ಬ್ರಹ್ಮಾನಂದವನ್ನು ಅನುಗ್ರಹಿಸತಕ್ಕ ಶಕ್ತಳು ನೀನು ಎಂಬದಾಗಿ ತಿಳಿದ ಬಳಿಕ, ದುಃಖಪೂರ್ಣವಾದ ಸಾಂಸಾರಿಕ ಸುಖಗಳಲ್ಲಿ ಬಯಕೆಯುಂಟಾಗುತದೆಯೋ ? ಎಂದಿಗೂ ಉಂಟಾಗಲಾರದು. ಅರ್ಧಶರೀರಕ್ಕೆ ಭಾಗಿನಿಯರೆನಿಸಿಕೊಂಡಿರುವ ಭಾರ್ಯೆಯರಲ್ಲಿಯೂ, ನನಗೆ ಆಶೆಯಿಲ್ಲ, ದಿವ್ಯ ವಸ್ತ್ರಾಭರಣಾದಿಗಳಿಂದ ಭೂಷಿತಳಾದ ನಿನ್ನಯ ದಿವ್ಯಮಂಗಳವಿಗ್ರಹವನ್ನು ಸೇವಿಸಿ, ಕಿಂಕರನಾದ ನಾನು ಆನಂದಿಸಬೇಕೆಂದಿರುವೆನಾದಕಾರಣ ಓ ತಾಯಿ! ಭೃತ್ಯನಾದ ನನ್ನಲ್ಲಿ ಅನುಗ್ರಹದೃಷ್ಟಿಯನ್ನು ತೋರು ॥೨೧॥ ॥ ಎಲೌ ಇಷ್ಟದೇವತೆಯಾದ ಸೀತೆಯೇ! ನಾನೇ ನಿನಗೆ ದಾಸಾನುದಾಸನಾಗಿರುವಲ್ಲಿ ನನ್ನ ರಾಣೀವಾಸದ ಅರಸಿಯರೆಲ್ಲರೂ, ನಿನಗೆ ದಾಸಿಯರಾಗಿರುವ ವಿಷಯದಲ್ಲಿ ಸಂಶಯವೇನು? ಎಲೌ ಸರ್ವೇಶ್ವರೀ! ನನ್ನ ಮತ್ತು ನನ್ನವರ ಕೈಂಕರ್ಯವನ್ನು ಸ್ವೀಕರಿಸಿ ಅನುಗ್ರಹಿಸು ॥೨೨॥-॥ ಉಪಾಸ್ಯದೇವತೆಯಾದ ಎಲೌ ಸೀತೇ! ನನ್ನ ರಾಣಿವಾಸದಲ್ಲಿನ ರಮಣೀಯರೊಡನೆ ನಾನು ಸುರಾಂಗನೆ

ಯಾನಿ ವೈಶ್ರವಣೇ ಶುಭ್ರು ರತ್ನಾನಿ ಚ ಧನಾನಿ ಚ ।
ತಾನಿ ಲೋಕಾಂಶ್ಚ ಸುಶ್ರೋಣಿ ಮಾಂ ಚ ಭುಂಕ್ಷ್ವ ಯಥಾಸುಖಮ್ ॥೩೩॥
ನ ರಾಮ ಸ್ತಪಸಾ ದೇವಿ ನ ಬಲೇನ ನ ವಿಕ್ರಮೈಃ ।
ನ ಧನೇನ ಮಯಾ ತುಲ್ಯ ಸ್ತೇಜಸಾ ಯಶಸಾ ಪಿ ವಾ॥ ೩೪॥ ॥
ಪಿಬ ವಿಹರ ರಮಸ್ವ ಭುಂಕ್ಷ್ವ ಭೋಗಾನ್ ಧನನಿಚಯಂ ಪ್ರದಿಶಾಮಿ ಮೇದಿನೀಂ ಚ ।

ಶುಭ್ರುಳ್ಳ ಓ ಮಾನಿನೀ ! ಹೇಸುಶ್ರೋಣಿ-ಸುಂದರವಾದ ಟೊಂಕದ ಹಿಂಭಾಗವುಳ್ಳವಳೇ, ವೈಶ್ರವಣೇ- ಕುಬೇರನಲ್ಲಿ, ಯಾನಿ - ಯಾವ, ರತ್ನಾನಿಚ - ರತ್ನಗಳೂ (ಶ್ರೇಷ್ಠವಸ್ತುಗಳೂ) ಧನಾನಿಚ - ಧನಗಳೂ (ಸಂತಿ - ಇವೆಯೋ) ತಾನಿ - ಆ ರತ್ನಧನಗಳನ್ನು, ಲೋಕಾಂಶ್ಚ - ನನ್ನ ಆಳ್ವಿಕೆಗೆ ಒಳಪಟ್ಟ ಲೋಕಗಳನ್ನೂ, ಮಾಂಚ - ನನ್ನನ್ನೂ, ಯಥಾಸುಖಂ- ಸುಖವಾಗಿ, ಭುಂಕ್ಷ್ವ - ಅನುಭವಿಸು (ವಶಪಡಿಸಿಕೋ) ||೩೩|| ||ಹೇದೇವಿ - ಓ ಸುಂದರೀ, ರಾಮಃ - ರಾಮನು, ತಪಸಾ - ತಪಸ್ಸಿನಿಂದಲೂ, ಮಯಿ - ನನ್ನೊಡನೆ, ತುಲ್ಯಃ - ಸಮಾನನು, ನ - ಅಲ್ಲ, ಬಲೇನ - ಶಕ್ತಿಯಿಂದಲೂ, (ಮಯಾತುಲ್ಯಃ - ನನಗೆ ಸಮಾನನು) ನ - ಆಗಲಾರ, ವಿಕ್ರಮೈಃ - ಪರಾಕ್ರಮಗಳಿಂದಲೂ, ನ - ನನಗೆ ಸಮಾನನೆನಿಸಲಾರ, ಧನೇನ - ಧನದಿಂದಲೂ, ನ - ನನಗೆಣೆಯೆನಿಸಲಾರ, ತೇಜಸಾ - ಪ್ರತಾಪದಿಂದಲೂ, ಯಶಸಾಪಿವಾ- ಕೀರ್ತಿಯಿಂದಲೂ, ಮಯಾತುಲ್ಯಃನ - ನನಗೆ ಸಮಾನನಾಗಲಾರನು ||೩೪|| [*ಲಲನೆ ! ಓ ಶೋಭನಾಂಗಿ, ತ್ವಂ - ನೀನು, [ಮಧು - ಮದ್ಯವನ್ನು] ಪಿಬ - ಪಾನಮಾಡು, ವಿಹರ - ನನ್ನೊಡನೆ ಆಡು, ರಮಸ್ವ - ಪ್ರೀತಿದೋರು, ಭೋಗಾನ್ - ಪುಷ್ಪಚಂದನಾದಿ ಭೋಗಗಳನ್ನು, ಭುಂಕ್ಷ್ವ- ಅನುಭವಿಸು, ಧನನಿಚಯಂ - ಧನರಾಶಿಯನ್ನು, ಮೇದಿನೀಂಚ - ಭೂಮಂಡಲವನ್ನೂ, ತೇ - ನಿನಗೋಸ್ಕರ, ಪ್ರದಿಶಾಮಿ-

ವಾದ ಧನವನ್ನೂ, ನನ್ನ ಆಳ್ವಿಕೆಯಲ್ಲಿನ ಲೋಕಗಳನ್ನೂ ಸುಖವಾಗಿ ಅನುಭವಿಸುವುದಕ್ಕೋಸ್ಕರ ನನ್ನನ್ನು ಸ್ವೀಕರಿಸು. ಇಷ್ಟು ಭೋಗಭಾಗ್ಯಗಳನ್ನೂ ತೊರೆದು ಏಕೆ ಕಷ್ಟಪಡುತ್ತಲಿದ್ದೀಯೆ? !! ೩೩ !! ||ಎಲೆ ಸೀತೆ ! ತಪಸ್ಸು, ಬಲ, ವಿಕ್ರಮ, ಧನ, ತೇಜಸ್ಸು, ಯಶಸ್ಸು ಇವುಗಳೊಳಗೆ ಒಂದರಲ್ಲಿಯಾದರೂ ನಿನ್ನ ರಾಮನು ನನಗೆ ಸಾಟಿಯಲ್ಲ. ಆದಕಾರಣ ಅಂತಹ ರಾಮನನ್ನು ಕುರಿತು ಏಕೆ ಗೋಳಾಡುತ್ತೀಯೆ ? ಸರ್ವಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತಳಾಗಲು ಬೇಗ ನನ್ನನ್ನು ಸೇರು ॥೩೪॥ ॥ ಓ ಲಲನೇ ! ನನ್ನೊಡಗೂಡಿ ಸುಖಕರವಾದ ಮದ್ಯವನ್ನು ಪಾನಮಾಡು. ನನ್ನೊಡನೆ ಸಂಚರಿಸು, ನನ್ನ ಸಂಗಡ ಕ್ರೀಡಿಸು.

ಯರು ಮಂಗಳದೇವತೆಯಾದ ಇಂದಿರೆಯನ್ನು ಸೇವಿಸುವ ಹಾಗೆ ಆ ಮಂಗಳದೇವಿಯ ರೂಪಾಂತರವಾಗಿರುವ ನಿನ್ನನ್ನು ಸೇವಿಸಲು ಸಿದ್ಧನಾಗಿರುವೆನು॥೩೨॥ ॥ನನ್ನ ಇಷ್ಟದೇವತೆಯಾದ ಓ ಜಾನಕೀ! ನಾನು ಸಂಪಾದಿಸಿರುವ ನವರತ್ನಧನಾದಿ ಸಂಪತ್ತನ್ನೂ, ನನ್ನ ಶರೀರವನ್ನೂ, ನಿನ್ನ ಸೇವಾರ್ಥವಾಗಿ ಸಮರ್ಪಿಸತಕ್ಕವನಾಗಿದೇನೆ. ಆದನ್ನೂ, ನಿನ್ನ ಕೈಂಕರ್ಯಪರರಾದ ನನ್ನವರನ್ನೂ ನಿನ್ನ ಸೇವಕರನ್ನಾಗಿ ಸ್ವೀಕರಿಸು॥೩೩॥ ॥ನಿರವಧಿಕ ಸಕಲೈಶ್ವರ್ಯಸಂಪನ್ನನಾದ ಶ್ರೀರಾಮನು, ತಪೋಬಲಾದಿ ಗುಣಗಳಲ್ಲಿ ಅತ್ಯಲ್ಪನಾದ ನನ್ನೊಡನೆ ಸಮನಾಗಬಲ್ಲನೇ ? ಎಂದಿಗೂ ಆಗಲಾರ. ಅಂತಹ ಮಹಾನುಭಾವನ ಭಾರ್ಯೆಯಾದ ನೀನು

* ಈ ಶ್ಲೋಕವು ಅಧಿಕಪಾಠವೆಂದು ರಾಮಾಭಿರಾಮವೆಂಬ ತಿಲಕವ್ಯಾಖ್ಯಾನವು ತಿಳಿಸುತಲಿದೆ.

ಮಯಿ ಲಲ ಲಲನೆ ಯಥಾಸುಖಂ ತ್ವಂ ತ್ವಯಿ ಚ ಸಮೇತ್ಯ ಲಲಂತು ಬಾಂಧವಾ ಸ್ತೇ ॥
ಕುಸುಮಿತ ತರುಜಾಲ ಸಂತತಾನಿ ಭ್ರಮರ ಯುತಾನಿ ಸಮುದ್ರ ತೀರಜಾನಿ ।
ಕನಕವಿಮಲ ಹಾರ ಭೂಷಿತಾಂಗಿ ವಿಹರ ಮಯಾ ಸಹ ಭೀರು ಕಾನನಾನಿ ॥

ಇತಿ ಶ್ರೀಮತ್ಸುಂದರಕಾಂಡೆ- ವಿಂಶಸ್ಸರ್ಗಃ.

---

ಕೊಡುವೆನು, ಮಯಿ - ನನ್ನಲ್ಲಿ, ಯಥಾಸುಖಂ - ಸುಖವಾಗಿ, ಲಲ - ಕ್ರೀಡಿಸುತಲಿರು, ತೇ - ನಿನ್ನ ಬಾಂಧವಾಃ - ನಂಟರಿಷ್ಟರು, ಸಮೇತ್ಯ - ಬಂದುಸೇರಿ, ತ್ವಯಿಚ - ನಿನ್ನಲ್ಲಿಯೂ, ಲಲಂತು - ಅನುರಕ್ತರಾಗಲಿ, ॥೩೫॥ ॥ ಕನಕ - ಸುವರ್ಣತಂತ್ರಿಯಿಂದೊಡಗೂಡಿದ, ವಿಮಲ- ನಿರ್ಮಲವಾದ, ಹಾರ - ಮುತ್ತಿನ ಹಾರದಿಂದ, ಭೂಷಿತಾಂಗಿ - ಅಲಂಕರಿಸಲ್ಪಟ್ಟ ಶರೀರವುಳ್ಳವಳೇ, ಹೇಭೀರು - ಭಯಸ್ವಭಾವದವಳೆ, ಕುಸುಮಿತ - ಹೂ ಬಿಟ್ಟಿರುವ, ತರುಜಾತ - ಮರಗಳ ಸಾಲಿನಿಂದ, ಸಂತತಾನಿ - ದಟ್ಟವಾಗಿರುವ ಭ್ರಮರಯುತಾನಿ- ದುಂಬಿಗಳಿಂದೊಡಗೂಡಿರತಕ್ಕ, ಸಮುದ್ರತೀರಜಾನಿ-ಸಮುದ್ರತೀರದಲ್ಲಿ ಬೆಳೆದಿರುವ, ಕಾನನಾನಿ - ತೋಟಗಳಲ್ಲಿ, ಮಯಾಸಹ - ನನ್ನೊಡನೆ, ವಿಹರ-ಕ್ರೀಡಿಸುತಲಿರು ॥೩೬॥-॥

— ಇಂತು ಇಪ್ಪತ್ತನೆಯ ಸರ್ಗವು —

---

ಭೋಗಗಳನ್ನು ಅನುಭವಿಸು; ಧನರಾಶಿಯನ್ನೂ, ಭೂಮಂಡಲವನ್ನೂ ನಿನಗೆ ಒಪ್ಪಿಸಿದೇನೆ, ನನ್ನೊಡನೆ ಸುಖದಲ್ಲಿ ಲೋಲಳಾಗು. ನಿನ್ನ ಬಂಧುವರ್ಗದವರೂ ಇಲ್ಲಿ ಬಂದು ಸೇರಿ ಸುಖಲಾಲಿತರಾಗಲಿ ॥೩೫॥ ॥ ಸುವರ್ಣ ವರ್ಣೆಯಾದ ಎಲೆ ಸೀತೆ, ಮುಕ್ತಾಹಾರ ಭೂಷಿತೆಯಾಗಿ, ಕಡಲಿನ ದಡದಲ್ಲಿ ಚೆನ್ನಾಗಿ ಹೂತು ದುಂಬಿಗಳ ಝೇಂಕಾರದಿಂದೊಡಗೂಡಿ ಶೋಭಿಸುತಲಿರುವ ಸುಂದರವಾದ ಮರಗಳ ಸಾಲಿನಿಂದ ಅಂದವಾಗಿರುವ ತೋಟಗಳಲ್ಲಿ ನನ್ನೊಡನೆ ಸುಖವಾಗಿ ಸಂಚರಿಸುತ, ನಾನಾವಿಧ ಭೋಗಗಳನ್ನು ಅನುಭವಿಸುತಲಿರು, ಉಳಿದ ಚಿಂತೆಗಳನ್ನೆಲ್ಲ ಬಿಟ್ಟುಬಿಡು ॥ ೩೬ ॥ ॥

ಇಂತು ಇಪ್ಪತ್ತನೆಯ ಸರ್ಗವು.

---

ನನ್ನ ಸಂಪದವನ್ನು ಲಕ್ಷ್ಯಮಾಡದಿದ್ದರೂ, ಲೋಕಪ್ರಕಾಶಕರಾದ ಸೂರ್ಯ ಚಂದ್ರರು ತಮ್ಮ ಭಕ್ತರು ಸಮರ್ಪಿಸುವ ದೀಪೋಪಚಾರವನ್ನು ಸ್ವೀಕರಿಸಿ ತೃಪ್ತರಾಗುವ ಹಾಗೆ ಭೃತ್ಯನಾದ ನಾನು ಸಮರ್ಪಿಸುವ ಪರಿಚರ್ಯೆಯನ್ನು ದಯೆಮಾಡಿ ಸ್ವೀಕರಿಸು ॥೩೫॥ ॥ (ಅಧಿಕಪಾಠ)॥೩೬॥ ॥ಸಮುದ್ರತೀರದಲ್ಲಿ ನಾನು ಬೆಳೆಯಿಸಿ ಇರುವ ಮತ್ತು ಪುಷ್ಪಫಲ ಭರಿತಗಳಾಗಿಯೂ,ಭ್ರಮರ ಸಹಿತಗಳಾಗಿಯೂ ವಿರಾಜಿಸುತಲಿರುವ ದಿವ್ಯ ವನಗಳಲ್ಲಿ ನಾನು ಸಮರ್ಪಿಸುವಸೇವೆಯನ್ನು ಕೈಗೊಂಡು ಕಿಂಕರನಾದ ನನ್ನಲ್ಲಿ ಅನುಗ್ರಹವನ್ನು ತೋರು.

ಇಪ್ಪತ್ತನೆಯ ಸರ್ಗವು ಮುಗಿದುದು.



ಶ್ರೀಃ

# ಶ್ರೀಮತ್ಸುನ್ದರ ಕಾಣ್ಡೆ-ಏಕವಿಂಶಸ್ಸರ್ಗಃ.

ತಸ್ಯ ತದ್ವಚನಂ ಶ್ರುತ್ವಾ ಸೀತಾ ರೌದ್ರಸ್ಯ ರಕ್ಷಸಃ ।
ಆರ್ತಾ ದೀನಸ್ವರಾ ದೀನಂ ಪ್ರತ್ಯುವಾಚ ಶನೈ ರ್ವಚಃ ॥೧॥
ದುಃಖಾರ್ತಾ ರುದತೀ ಸೀತಾ ವೇಪಮಾನಾ ತಪಸ್ವಿನೀ ।

---

ಶ್ರೀಃ

ಇಪ್ಪತ್ತೊಂದನೆಯ ಸರ್ಗಂ

ಕಂ॥ ದುರುಳನ ನುಡಿಯಂ ಕೇಳುತೆ। ಧರಣಿಜೆ ತಾಂ ತೃಣವನಂದು ಕರದೊಳ್ ಪಿಡಿದು ।
ಸುರರಿಪುಹಿತವನೆ ಗೆಯ್ವಲ್ ಪರಿಪರಿಯಿಂ ಧರ್ಮವನ್ನೆ ಬೋಧಿಸುತಿರ್ದಳ್ ॥

ಸೀತಾ - ಜಾನಕಿಯು, ರೌದ್ರಸ್ಯ - ಭಯಂಕರನಾದ, (ಸಿಟ್ಟನ್ನುಂಟು ಮಾಡತಕ್ಕ), ತಸ್ಯ - ಆ, ರಕ್ಷಸಃ - ರಕ್ಕಸನ, ತತ್ - ಆ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಆರ್ತಾ - ವ್ಯಥೆಪಟ್ಟವಳಾಗಿ, ದೀನಸ್ವರಾ (ಸತೀ) - ಮಂದಧ್ವನಿಯುಳ್ಳವಳಾಗಿ, ದೀನಂ - ವ್ಯಸನವನ್ನು ಸೂಚಿಸತಕ್ಕ, ವಚಃ- ಮಾತನ್ನು, ಶನೈಃ - ಮೆಲ್ಲಗೆ, ಪ್ರತ್ಯುವಾಚ - ಹೇಳಲಿಕ್ಕೆ ಮೊದಲು ಮಾಡಿದಳು ॥ ೧ ॥ ದುಃಖಾರ್ತಾ - ಶೋಕಪೀಡಿತಳೂ, ರುದತೀ - ಅಳುತಲಿರುವವಳೂ, ವೇಪಮಾನಾ - ಕಂಪಿಸುತಲಿರುವವಳೂ, ತಪಸ್ವಿನೀ - ಶೋಚನೀಯಳೂ, (ತಪಸ್ಸುಳ್ಳವಳು) ಪತಿವ್ರತಾ - ಪತಿಭಕ್ತಿಪರಾಯಣಳೂ ಆದ ಕಾರಣವೇ, ಪತಿಮೇವ - ವಲ್ಲಭನನ್ನೇ, ಚಿಂತಯಂತೀ - ನೆನೆಯುತಲಿರುವ, ವರಾರೋಹಾ - ಉತ್ತಮಾಂಗನೆಯಾದ, ಸೀತಾ - ಜಾನಕಿಯು, ಶುಚಿಸ್ಮಿತಾ - ಕಿರುನಗೆಯುಳ್ಳವಳಾಗಿ, ತೃಣಂ - ಒಂದು

---

## —ಇಪ್ಪತ್ತೊಂದನೆಯ ಸರ್ಗ—

ಜನಕರಾಜ ನಂದಿನಿಯಾದ ಸೀತೆಯು ಆ ರಾವಣನಕಠಿನವಚನಗಳನ್ನು ಕೇಳಿ, ಇಂತಹ ಕಷ್ಟಸಮಯವು ಒದಗಿತಲ್ಲಾ ಎಂದು ಮನದೊಳಗೆ ಬಹಳವಾಗಿ ಸಂಕಟಪಟ್ಟು, ಬಹು ದೀನಳಾಗಿ, ಬಹು ಕ್ರೂರನಾದ ಆ ರಾವಣನನ್ನು ಕುರಿತು ಮೆಲ್ಲ ಮೆಲ್ಲಗೆ ಉತ್ತರವನ್ನು ಹೇಳತೊಡಗಿದಳು ॥೧॥ (ಪರಮಾರ್ಥದಲ್ಲಿ ಮಹಾದೇವಿಯಾದ ಸೀತೆಗೆ ದುಃಖಾದಿಗಳೊಂದೂ ಇಲ್ಲದಿದ್ದರೂ, ಲೋಕವ್ಯವಹಾರವನ್ನನುಸರಿಸಿ ಪ್ರಕೃತಸ್ಥಿತಿಯುತಿಳಿಸಲ್ಪಡುತಲಿದೆ) ಜನಕಮಹಾರಾಜಪುತ್ರಿಯಾದ ಸೀತೆಗೆ ರಾವಣನ ಉತ್ತರೋತ್ತರ ಕಠಿನೋಕ್ತಿಗಳನ್ನು ಕೇಳಿ ಅವನ ನುಡಿಗಳು ಕಾದ ಕಬ್ಬಿಣದ ಸಲಾಕಿಗಳಂತೆ ಕಿವಿಯನ್ನು ಹೊಕ್ಕು ಅಂತರಂಗದಲ್ಲಿ ತಪನಗೊಳಸಲು ದುಃಖವು ಉಕ್ಕಳಸುತಲಿತ್ತು. ಕಣ್ಣುಗಳಲ್ಲಿ ಜಲಧಾರೆಯು ಹರಿಯುತಲಿದೆ, ಅಸಮಯ, ಆಸರೆಯಾಗುವ ಆತ್ಮೀಯರಿಲ್ಲ. ಮೈಯ್ಯಲ್ಲಿ ನಡಕ ಹತ್ತಿದೆ. ಆಗ ಆಕೆಯನ್ನು ನೋಡತಕ್ಕ ಬಹು ಕಠಿನಸ್ವಭಾವದ ಮನುಷ್ಯರಿಗೂ, ಅಯ್ಯೋ! ಎಂಬ ದುಃಖಪಡುವ ಸ್ವಭಾವವು ಹೃದಯದಲ್ಲಿ ತಾನಾಗಿ ಉಂಟಾಗುತಲಿದೆ, ಅಂತಹ ಸ್ಥಿತಿಯಲ್ಲಿಯೂ, ಮಹಾನುಭಾವಳಾದ ಆಕೆಯು ಪತಿಭಕ್ತಿಪರಾಯಣಳಾಗಿ ಆ ಶ್ರೀರಾಮಚಂದ್ರನ ಅಡಿದಾವರೆಗಳನ್ನೇ ಸಂತತವೂ ಚಿಂತಿಸುತಲಿದಾಳೆ. ಆ ವೇಳೆಯಲ್ಲಿ ನಾನಾ

ಚಿಂತಯಂತೀ ವರಾರೋಹಾ ಪತಿಮೇವ ಪತಿವ್ರತಾ ।
ತೃಣ ಮಂತರತಃ ಕೃತ್ವಾ ಪ್ರತ್ಯುವಾಚ ಶುಚಿಸ್ಮಿತಾ ॥ ೨॥
ನಿವರ್ತಯ ಮನೋ ಮತ್ತ ಸ್ಸ್ವಜನೇ ಕ್ರಿಯತಾಂ ಮನಃ ।
ನ ಮಾಂ ಪ್ರಾರ್ಥಯಿತುಂ ಯುಕ್ತಂ ಸುಸಿದ್ಧಿಮಿವ ಪಾಪಕೃತ್ ॥೩॥
ಅಕಾರ್ಯಂ ನ ಮಯಾ ಕಾರ್ಯ ಮೇಕ ಪತ್ನ್ಯಾ ವಿಗರ್ಹಿತಂ ।

---

ಹುಲ್ಲಿನ ಕಡ್ಡಿಯನ್ನು, ಅಂತರತಃ - ನಡುವೆ, (ತನಗೂ ರಾವಣನಿಗೂ ಮಧ್ಯದಲ್ಲಿ) ಕೃತ್ವಾ- ಮಾಡಿ (ಹಾಕಿ), ಪ್ರತ್ಯುವಾಚ - ಬದಲು ಹೇಳತೊಡಗಿದಳು ॥೨॥ (ಹೇರಾವಣ - ಎಲವೋ ದಶಗಳಾ) ಮತ್ತಃ - ನನ್ನದೆಶೆಯಿಂದ, ಮನಃ - ಮನಸ್ಸನ್ನು, ನಿವರ್ತಯ - ಹಿಂದಿರುಗಿಸು, ಮನಃ - ಆ ಮನಸ್ಸು, ಸ್ವಜನೆ - ನಿನ್ನ ಸ್ವಂತವಾದ ಹೆಂಡಿರುಮಕ್ಕಳಲ್ಲಿ, ಕ್ರಿಯತಾಂ - ಇಡಲ್ಪಡಲಿ, ಪಾಪಕೃತ್-ಪಾಪವನ್ನು, ಮಾಡಿದವನು, ಸಿದ್ಧಿಮಿವ - ಮೋಕ್ಷವನ್ನು ಬಯಸುವ ಹಾಗೆ, ತ್ವಂ - ನೀನು, ಮಾಂ - ನನ್ನನ್ನು ಪ್ರಾರ್ಥಯಿತುಂ - ಪ್ರಾರ್ಥಿಸಲಿಕ್ಕೆ, ಯುಕ್ತಂ - ಯೋಗ್ಯವೆನಿಸಿದುದು, ನ- ಅಲ್ಲ ॥ ೩ ॥ ಮಹತಿ - ದೊಡ್ಡದಾದ, (ಲೋಕಮಾನ್ಯವಾದ) ಕುಲೇ - ಜನಕಮಹಾರಾಜನ ವಂಶದಲ್ಲಿ, ಜಾತಯಾ - ಹುಟ್ಟಿದವಳೂ, ಪುಣ್ಯಂ - ಪಾವನವಾದ, ಕುಲಂ - ರಘುಕುಲವನ್ನು, ಸಂಪ್ರಾಪ್ತಯಾ - ಹೊಂದಿದವಳೂ, ಏಕಪತ್ನ್ಯಾ - ಪತಿವ್ರತೆಯೂ ಆಗಿರುವ, ಮಯಾ - ನನ್ನಿಂದ, ಅಕಾರ್ಯಂ- ಮಾಡಬಾರದ, ವಿಗರ್ಹಿತಂ-

---

ಭಾವಗಳು ಅಂತರಂಗದಲ್ಲಿ ಮೊಳೆಯಲು ಕಿರುನಗೆಯುಳ್ಳವಳಾಗಿ,ತನ್ನೆದುರಿಗೆ ಕುಳಿತು ಇರು ವರಾವಣನಿಗೂ, ತನಗೂ, ನಡುವೆ ಒಂದು ಹುಲ್ಕಡ್ಡಿಯನ್ನು ಎಸೆದು, ಆ ಖಳನಿಗೆ ಪ್ರತ್ಯುತ್ತರವನ್ನು ಹೇಳಲಾರಂಭಿಸಿದಳು. ಭಾವಗಳ ಬಗೆ ಎಂತೆಂದರೆ :- (೧) ಅರಸಾಗಲಿ, ಅರಸಿಯಾಗಲಿ, ಇತರ ದೊಡ್ಡಮನುಷ್ಯರಾಗಲಿ, ಮನೆಗೆಬಂದರೆ ಪೀಠವನ್ನು ಕೊಡತಕ್ಕದು ಧರ್ಮ, ಪ್ರಕೃತದಲ್ಲಿ ದಶಗಳನು ನೀಚನಾದ ಅರಸನಾಗಿ ದುರಭಿಪ್ರಾಯದಿಂದ ಬಂದಿರುವನಾದಕಾರಣ ಒಂದು ಹುಲ್ಕಡ್ಡಿಯನ್ನು ಮುಂದೆ ಎಸೆದಳು, (೨) ಅಥವಾ- ನಿನ್ನ ಹರಟೆಗಳೆಲ್ಲ ಈ ಹುಲ್ಕಡ್ಡಿಯಂತೆ ಅಸಾರವಾದವುಗಳೆಂದು ಸೂಚಿಸಲು ಎಸೆದಳು, (೩) ಅಥವಾ-ನೀಚನ ಸಮಿಪದಲ್ಲಿ ಕೂಡುವುದು ಅನುಚಿತವಾದುದರಿಂದ "ಸ್ತಂಬೇನ ಸಲಿಲೇನವಾ ಪಙ್ತಿಭೇದೋಭಿಜಾಯತೆ" ಒಂದು ಹುಲ್ಕಡ್ಡಿಯನ್ನಾಗಲಿ,ಜಲಪಾತ್ರೆಯನ್ನಾಗಲಿ ನಡುವೆ ಇಟ್ಟರೆ ಪಙ್ತಿಯುಂಟಾಗುವುದು ಎಂಬ ಧರ್ಮಶಾಸ್ತ್ರವನ್ನನುಸರಿಸಿ ಪಙ್ತಿಭೇದವನ್ನು ಕಲ್ಪಿಸಲು ಕಡ್ಡಿಯನ್ನು ಎಸೆದಳು, (೪) ಅಥವಾ- "ಸಪರಮುಖನಿರೀಕ್ಷಣಂ ನಾಪಿಸಂಭಾಷಣಂ" ಎಂಬಂತೆ ಪತಿವ್ರತೆಯರು ಪರಪುರುಷನನ್ನು ಸಂಪೂರ್ಣವಾಗಿ ದೃಷ್ಟಿಸಿನೋಡೋಣವನ್ನೂ, ವಿಶೇಷ ಸಂಭಾಷಣವನ್ನೂ,ಮಾಡಕೂಡದು,ಎಂಬ ಧರ್ಮವನ್ನನುಸರಿಸಿ ಪರನೂ ನೀಚನೂ ಆಗಿರುವ ರಾವಣನ ದರ್ಶನವೂ, ಸಂಭಾಷಣವೂ, ಸಾಕ್ಷಾತ್ತಾಗಿ ನಿಷಿದ್ಧವೆಂದು ಭಾವಿಸಿ ಮಧ್ಯದಲ್ಲಿ ಹುಲ್ಕಡ್ಡಿಯನ್ನು ಹಾಕಿದಳು, (೫) ಅಥವಾ- ಎಲವೋ ನೀಚಾ! ಈ ಹುಲ್ಕಡ್ಡಿಯನ್ನು ನಾಶಪಡಿಸುವಂತೆ ನನ್ನ ಪ್ರಿಯವಲ್ಲಭನಾದ ರಾಮನು ಮೊದಲೇ ಮಾರೀಚ, ಖರ,ದೂಷಣ, ತ್ರಿಶಿರ,ವಿರಾಧ, ಮೊದಲಾದ ರಾಕ್ಷಸರನ್ನು ನಿಮಿಷಮಾತ್ರದಲ್ಲಿ ನಾಶಪಡಿಸಿರುವುದನ್ನುನೆನೆಸಿಕೋ.ನಿನ್ನ ಅವಸ್ಥೆಯನ್ನು ಹಾಗೆಯೇ ಮಾಡಿಕೊಳ್ಳಬೇಡ.

ಎಂಬ ಅರ್ಥವನ್ನು ಸೂಚಿಸಲಿಕ್ಕೆ ಹುಲ್ಲುಕಡ್ಡಿಯನ್ನು ಎಸೆದಳು (೬) ಅಥವಾ-ಎಲ ಕೀಳಾ ! ನಿನ್ನಯಶೌರ್ಯ, ಔದಾರ್ಯ, ಪರಾಕ್ರಮ, ಮೊದಲಾದವುಗಳೆಲ್ಲವೂ, ಈ ತೃಣಕ್ಕೆ ಸಮಾನವೆಂಬ ಅರ್ಥವನ್ನು ಅರುಹಲು ಎಸೆದಳು. (೭) ಅಥವಾ- ಎಲಪಾಪೀ ! ನನ್ನ ಪ್ರಾಣಗಳನ್ನು ತೃಣಕ್ಕೆ ಸಮಾನವಾಗಿ ಎಣಿಸಿ ಇದೇನೆ, ಆದಕಾರಣ ಈ ಉಸಿರನ್ನಾದರೂ ತೊರೆಯಬಲ್ಲೆನಲ್ಲದೆ, ನಿನ್ನ ಅನುಮತಿಯನ್ನು ಅನುಸರಿಸಲಾರೆ, ಎಂಬ ಭಾವವನ್ನು ಬೋಧಿಸಲು ಎಸೆದಳು. (೮) ಅಥವಾ-ಎಲವೋ ಅಧಮಾ ! ನಿನ್ನ ರಾಜ್ಯ, ಕೋಶ, ವೈಭವ, ಮೊದಲಾದವುಗಳೆಲ್ಲವೂ ಈ ಹುಲ್ಲುಕಡ್ಡಿಗೆ ಸಮಾನಗಳು. ನನ್ನ ಇಚ್ಛಾ ಮಾತ್ರದಲ್ಲಿ ಇಂತಹ ಸಾವಿರ ಸಾಮ್ರಾಜ್ಯಗಳನ್ನು ಸೃಷ್ಟಿಸಬಲ್ಲೆ. ಹೀಗಿರಲು ನಿನ್ನ ಅಧಮಾಧಮ ವಸ್ತುಗಳಿಗೆ ಮನವನ್ನು ಸೋಲತಕ್ಕವಳೇ ? ಖೂಳಾ ! ಆಚೆಗೆಸಡೆ, ಎಂಬ ತಾತ್ಪರ್ಯವನ್ನು ತಿಳಿಸಲು ಹಾಗೆ ಎಸೆದಳು. (೯) ಅಥವಾ:—ಎಲವೋ ನಿರ್ಭಾಗ್ಯ, ಜ್ಞಾನಹೀನನು ಪಶುವಿಗೆ ಸಮಾನ, ಅಂತಹ ಪಶುವಿಗೆ ತೃಣವು ಆಹಾರವೆನಿಸಿ ಇದೆ. ಅಂತಹ ತೃಣಕ್ಕೆ ಸಮಾನನೆನಿಸಿದ ನಿನ್ನಂತಹ ಹೀನನೊಡನೆ ಸಂಭಾಷಿಸುವುದು ಸಂಭಾವಿತವಲ್ಲ, ಎಂಬ ಮನೋಗತವನ್ನು ಪ್ರಕಾಶಪಡಿಸುತ ಎಸೆದಳು. (೧೦) ಅಥವಾ-ಎಲವೋ ಅಯೋಗ್ಯ ! ಅತ್ಯಲ್ಪಕಾಲದಲ್ಲಿಯೇ ನಿನ್ನ ವಿಭವವೆಲ್ಲ ಅಭಾವವಾಗುವುದು. ಆಗ ಇಂತಹ ಹುಲ್ಲಿನಮನೆಯೇ ನಿನಗೆಆಧಾರವಾಗುವುದು, ಎಂದು ಅರುಹಲು ಅಂತು ಎಸೆದಳು. (೧೧) ಅಥವಾ-ಓ ರಾವಣಾ! ಇಂತಹ ಒಂದು ಹುಲ್ಲಿನಗರಿಯನ್ನು ನನ್ನ ಪ್ರಾಣವಲ್ಲಭನಾದ ಶ್ರೀರಾಮಚಂದ್ರನು ಬ್ರಹ್ಮಾಸ್ತ್ರವನ್ನಾಗಿ ಕಲ್ಪಿಸಿ ಪ್ರಯೋಗಿಸಲು, ಅದರ ಜ್ವಾಲೆಯನ್ನು ತಾಳಲಾರದೆ ಶರಣಾರ್ಥಿಯಾಗಿ ಮೂಲೋಕದಲ್ಲಿಯೂ ಅಲೆದ ಕಾಕಾಸುರನನ್ನು ಯಾರೂ ರಕ್ಷಿಸಲಾರದೆ ಹೋದರು. ಅಂತಹ ಮಹಾವೀರನೆದುರಿಗೆ ನೀನು ನಿಲ್ಲಬಲ್ಲೆಯಾ ? ಎಂಬ ಭಾವದ ಬೋಧೆಗಾಗಿ ಎಸೆದಳು. ( ೧೨ ) ಅಥವಾ-ಎಲವೋ ಪಾತಕಿ ! ನೀನು ಇನ್ನೂ ಕೆಲವುಕಾಲ ಸುಖವಾಗಿ ಜೀವಿಸಬೇಕೆಂತಲಾಗಲೀ, ನಿನ್ನ ಬಂಧು ಬಳಗದವರು ಸುಖವಾಗಿ ಬಾಳಬೇಕೆಂತಲಾಗಲೀ, ನಿನ್ನ ರಾಜ್ಯಕೋಶಗಳು ನೆಲೆಯಾಗಿರಬೇಕೆಂತಲಾಗಲೀ ನಿನಗೆ ಆಶೆಯು ಇದ್ದರೆ, ನನ್ನನ್ನು ಕರೆದುಕೊಂಡು ಹೋಗಿ ಕರುಣಾಸಮುದ್ರನಾದ ಆ ಶ್ರೀರಾಮಚಂದ್ರನ ಸನ್ನಿಧಾನದಲ್ಲಿ ಬಿಟ್ಟು, ಆತನ ಅಡಿದಾವರೆಗಳಲ್ಲಿ ಈ ತೃಣವು ಬಿದ್ದಿರುವಂತೆ ಶರಣಾಗತನಾಗಿ ನೀನು ಉರುಳಿದರೆ, ನಿನ್ನ ವಿಷಯದಲ್ಲಿ ಕಾಲರುದ್ರನಂತೆ ಕೋಪವುಳ್ಳವನಾಗಿದ್ದರೂ, ದಯಾರ್ದ್ರ ಹೃದಯನೂ, ಸರ್ವಲೋಕಶರಣ್ಯನೂ ಆದ ಆ ಮಹಾನುಭಾವನು ಶರಣಾಗತಸಂರಕ್ಷಣ ಧರ್ಮದಲ್ಲಿ ಬದ್ಧಕಂಕಣನಾದುದರಿಂದ ಅಭಯದಾನವನ್ನು ಮಾಡಿ ಸಂರಕ್ಷಿಸುವನು, ಎಂಬ ಆಶಯವನ್ನು ಪ್ರಕಾಶಪಡಿಸುತ ಎಸೆದಳು (೧೩) ಅಥವಾ-ಎಲಕೀಳಾ ! ಜಾಜ್ವಲ್ಯಮಾನವಾಗಿ ಉರಿಯುತಲಿರುವ ಕಾಡ್ಗಿಚ್ಚಿನ ಬೇಗೆಗೆ ಈ ಹುಲ್ಲುಕಡ್ಡಿಯು ಹೇಗೆ ನಿಲ್ಲಲಾರದೋ, ಹಾಗೆಯೇ ತ್ರಿಲೋಕೈಕ ಧನ್ವಿಯಾದ ಆ ಶ್ರೀರಾಮನು ಬಿಡುವ ಬಾಣದ ಗರಿಯ ಗಾಳಿಗೆ ನೀನು ನಿಮಿಷಮಾತ್ರವಾದರೂ ಎದುರಿಗೆ ನಿಲ್ಲಲಾರೆ, ಎಂಬ ಅಭಿಪ್ರಾಯವನ್ನು ಗೋಚರಗೊಳಿಸಲು ಹಾಗೆ ಎಸೆದಳು (೧೪) ಅಥವಾ-ಎಲವೋ ಕಳ್ಳ ! ಶ್ರೀರಾಮನು ಸಿಂಹಸದೃಶನು, ನೀನು

ಆತನ ಎದುರಿಗೆ ಒಂದು ಮೊಲಕ್ಕೆ ಸಮಾನ, ಅಂತಹ ಮಹಾವೀರನೆದುರಿಗೆ ನಿಲ್ಲಲಾರದ ನನ್ನನ್ನು ಕದ್ದು ತಂದಿದ್ದೀಯೆ. ಆತನೆದುರಿಗೆ ನಿಂತಿದ್ದರೆ ಈ ಹುಲ್ಲುಕಡ್ಡಿಯನ್ನು ಕತ್ತರಿಸುವುದು ಎಷ್ಟು ಸುಲಭವೋ ಅದಕ್ಕಿಂತಲೂ ಸುಲಭವಾಗಿ ನಿನ್ನನ್ನು ಕತ್ತರಿಸುತಲಿದ್ದನು. ಎಂಬ ಹೃದಯಗತವನ್ನು ಪ್ರಕಟಗೊಳಿಸಲು ಹಾಗೆ ಎಸೆದಳು. (೧೫) ಅಥವಾ- ಎಲವೋ ಹೇಡಿ! ರಣಾಗ್ರದಲ್ಲಿ ರಾಮಲಕ್ಷ್ಮಣರಿಬ್ಬರೂ ಪ್ರಳಯಾಗ್ನಿ ಸೂರ್ಯರಂತೆ ನಿಂತರೆ, ಆಗ ನೀನು ಈ ಹುಲ್ಲುಕಡ್ಡಿಯನ್ನು ಬಾಯೊಳಗೆ ಕಚ್ಚಿಕೊಂಡು ಓಡಬೇಕಾಗುವುದಲ್ಲದೆ ಬೇರೆ ಗತಿಯಿಲ್ಲವೆಂದು ಖಂಡಿತವಾಗಿ ತಿಳಿ ಎಂಬ ಅಂತರಂಗವನ್ನು ವಿಶದಪಡಿಸಲು ಹಾಗೆ ಎಸೆದಳು. (೧೬) ಅಥವಾ-ಎಲವೋ ಮುಗ್ಧಾ! ಲೋಕಾಚಾರವನ್ನು ಅನುಸರಿಸಿ ಇಗೋ ನಿನ್ನ ಕೈಗೆ ಕಡ್ಡಿಯನ್ನು ಕೊಟ್ಟು ಹೇಳುತ್ತೇನೆ. ಚತುರ್ಮುಖನ ಸಂತತಿಯಲ್ಲಿ ಜನಿಸಿ, ಮಹಾ ಪರಾಕ್ರಮಶಾಲಿ ಎನಿಸಿಕೊಂಡು, ಸಕಲವಿದ್ಯಾ ಪಾರಂಗತನಾಗಿ, ಉತ್ತಮ ಸಾಮ್ರಾಜ್ಯವನ್ನು ಪಡೆದು, ಧರ್ಮಭ್ರಷ್ಟನಾಗಿರುವುದು ಶ್ರೇಯಸ್ಕರವಲ್ಲ, ಎಂಬ ನೀತಿಯನ್ನು ತಿಳುಹಲು ತೃಣವನ್ನು ಎಸೆದಳು. (ಹಾಕಿದಳು) (೧೭) ಅಥವಾ-ಎಲಮೂಢಾ! ಈ ಹುಲ್ಲುಕಡ್ಡಿಯು ಹಸಿರಾಗಿದ್ದಾಗ ಸೂರ್ಯಕಿರಣಗಳು ಇದರ ಸಾರವನ್ನು ಹೇಗೆ ಹೀರಿದುವೋ, ಶ್ರೀರಾಮ ಬಾಣಗಳೆಂಬ ಸರ್ಪಗಳೂ ನಿನ್ನ ಪ್ರಾಣವಾಯುಗಳನ್ನು ಹಾಗೆ ಸೂರೆಗೊಳ್ಳುವುವು ಎಂಬ ರಹಸ್ಯವನ್ನು ವಿವರಿಸಲು ಹಾಗೆ ಹಾಕಿದಳು. (೧೮) ಅಥವಾ - ಮಹಾ ಧಾರ್ಮಿಕನೆನಿಸಿ ಶೂರಾಗ್ರಗಣ್ಯನಾಗಿ ಭಾಗವತಶಿರೋಮಣಿಯೂ ಆಗಿದ್ದ ಬಲಿಚಕ್ರವರ್ತಿಯನ್ನು ಕೇಳಬಲ್ಲೆಯಷ್ಟೆ? ಆ ಮಹಾವೀರನು ಇಂದ್ರಾದಿ ದಿಕ್ಪಾಲಕರನ್ನು ಸದೆಬಡಿದು, ಅಮರಾವತಿಯನ್ನು ಆಕ್ರಮಿಸಿ, ತ್ರೈಲೋಕ್ಯಸಾಮ್ರಾಜ್ಯದಲ್ಲಿ ಚಕ್ರವರ್ತಿಯಾಗಿರುತ್ತಾ, ದೇವತೆಗಳನ್ನೆಲ್ಲ ಸ್ವರ್ಗದಿಂದ ಅಟ್ಟಿರುವ ವೇಳೆ, ಸರ್ವಜಗದ್ರಕ್ಷಕನಾದ ಶ್ರೀಹರಿಯು ವಾಮನಮೂರ್ತಿಯಾಗಿ ಇಂದ್ರನಿಗೆ ಸ್ವರ್ಗವನ್ನು ಪೂರ್ವದಂತೆ ಕೊಡಿಸಬೇಕೆಂಬ ಉದ್ದೇಶದಿಂದ ಬಲಿಯ ಯಜ್ಞವಾಟವನ್ನು ಹೊಕ್ಕು, ಮೂರು ಹೆಜ್ಜೆಯ ನೆಲವನ್ನು ಬೇಡಿ, ಕೊಡಲು ಒಪ್ಪಿದ ಬಲಿಚಕ್ರವರ್ತಿಯು ಉದಕ ಧಾರಾಪೂರ್ವಕವಾಗಿ ಭೂಮಿಯನ್ನು ಧಾರೆಯೆರೆಯುತಲಿರುವಾಗ, ವಾಮನಮೂರ್ತಿಯ ಗುಟ್ಟನ್ನು ತಿಳಿದಿದ್ದ ಶುಕ್ರಾಚಾರ್ಯನು ಜಲಧಾರೆಗೆ ಅಡ್ಡಿಯನ್ನು ಮಾಡಬೇಕೆಂದು ಬಲಿಭಾರ್ಯೆಯ ಕಯ್ಯೊಳಿದ್ದ ಗಿಂಡಿಯನ್ನು ಸೂಕ್ಷ್ಮರೂಪದಿಂದ ಒಳಹೊಕ್ಕು, ಧಾರಾಜಲವು ಹೊರಬೀಳದಂತೆ ಅಡ್ಡಿ ಮಾಡುತ್ತಿರಲು, ವಾಮನವಟುವು ತನ್ನ ಕರದಲ್ಲಿ ಪವಿತ್ರವಾಗಿದ್ದ ದರ್ಭೆಯಹುಲ್ಲಿನ ಕೊನೆಯನ್ನು ಗಿಂಡಿಯಮುಖದೊಳಿಟ್ಟು, ಶುಕ್ರಾಚಾರ್ಯನನ್ನು ಅಂಧನನ್ನಾಗಿ ಮಾಡಿದುದನ್ನು ನೀನುತಿಳಿದಿರಬಹುದು, ಹಾಗೆಯೇ ಈಹುಲ್ಲುಕಡ್ಡಿಯನ್ನು ನನ್ನ ಪಾತಿವ್ರತ್ಯಶಕ್ತಿಯಿಂದ ಬ್ರಹ್ಮಾಸ್ತ್ರವನ್ನಾಗಿಮಾಡಿ ನಿನ್ನನ್ನು ನಿಮಿಷಮಾತ್ರದಲ್ಲಿ ಭಸ್ಮವನ್ನಾಗಿಮಾಡಬಲ್ಲೆ, ಪತಿಯ ಆಜ್ಞೆಯಿಲ್ಲದೆ ಅತಿಕ್ರಮಿಸಬಾರದೆಂದು ಹಿಂಜರಿಯುತಲಿದೇನೆ, ಎಂಬ ಗುಟ್ಟನ್ನು ರಟ್ಟುಮಾಡುವುದಕ್ಕೋಸ್ಕರ ಹುಲ್ಲುಕಡ್ಡಿಯನ್ನು ನಡುವೆ ಎಸೆದಳು. (೧೯) ಅಥವಾ - ಅಗ್ನಿಯು ಈಹುಲ್ಲುಕಡ್ಡಿಯನ್ನು ದಹಿಸುವಂತೆ ನನ್ನ ಪಾತಿವ್ರತ್ಯಾಗ್ನಿಯಿಂದ ತೃಣಕ್ಕೆ ಸಮಾನನಾದ ನಿನ್ನನ್ನೂ, ನಿನ್ನ ಸಾಮ್ರಾಜ್ಯವನ್ನೂ, ಕ್ಷಣಮಾತ್ರದಲ್ಲಿ

ಕುಲಂ ಸಂಪ್ರಾಪ್ತಯಾ ಪುಣ್ಯಾಂ ಕುಲೇ ಮಹತಿ ಜಾತಯಾ ॥೪॥ ॥
ಏವ ಮುಕ್ತ್ವಾ ತು ವೈದೇಹೀ ರಾವಣಂ ತಂ ಯಶಸ್ವಿನೀ ॥
ರಾಕ್ಷಸಂ ಪೃಷ್ಠತಃ ಕೃತ್ವಾ ಭೂಯೋ ವಚನ ಮಬ್ರವೀತ್ ॥೫॥ ॥

ನಿಂದಿತವಾದ ಕಾರ್ಯವು, ನಕಾರ್ಯಂ - ಮಾಡಲ್ಪಡತಕ್ಕುದಲ್ಲ, ॥ ೪ ॥ ॥ ಯಶಸ್ವಿನೀ - ಪ್ರಶಸ್ತವಾದ ಕೀರ್ತಿಯುಳ್ಳ, ವೈದೇಹೀ - ಜಾನಕಿಯು, ಏವಂ - ಹೀಗೆ, ಉಕ್ತ್ವಾತು - ಹೇಳಿ, ತಂ - ಆ, ರಾವಣಂ- ರಾವಣನೆಂಬ, ರಾಕ್ಷಸಂ - ರಕ್ಕಸನನ್ನು, ಪೃಷ್ಠತಃ - ಬೆನ್ನಹಿಂದುಗಡೆಗೆ, ಕೃತ್ವಾ - ಮಾಡಿಕೊಂಡು ಭೂಯಃ - ಪುನಃ, ವಚನಂ - ಮಾತನ್ನು, ಅಬ್ರವೀತ್ - ಹೇಳಿದಳು ॥೫॥ ॥ ಪರಭಾರ್ಯಾ - ಪರಪುರುಷ

ದಹಿಸಬಲ್ಲನೆಂದೂ (೨೦) ಅಥವಾ-ನರನಾರಾಯಣರೊಳಗೆ ನಾರಾಯಣನು ಇಷೀಕಾಸ್ತ್ರ ದಿಂದ (ನೊಸೆಯಹುಲ್ಲು) ದಂಬೋದ್ಭವನನ್ನು ಸುಟ್ಟಂತೆ ಶ್ರೀಮನ್ನಾರಾಯಣನ ರೂಪಾಂ ತರವಾದ ಶ್ರೀರಾಮಚಂದ್ರನು ತೃಣಮಾತ್ರದಿಂದ ನಿನ್ನನ್ನು ಸಂಹರಿಸ ಬಲ್ಲನೆಂದೂ.(೨೧) ಅಥವಾ - ಅಂಗುಳ್ಯಗ್ರದಿಂದ ಈ ತೃಣವನ್ನು ಛೇದಿಸುವಂತೆ ಶ್ರೀರಾಮಬಾಣವು ನಿನ್ನ ಸಿರ ಗಳಸಾಲನ್ನು ಛೇದಿಸ ಬಲ್ಲುದೆಂದೂ, (೨೨) ಅಥವಾ-ಈ ತೃಣವನ್ನು ಬಾಯಿಂದಕಚ್ಚಿ ಕೊಂಡು ನಿನ್ನ ಅಪರಾಧವನ್ನು ಕ್ಷಮಿಸಬೇಕೆಂಬದಾಗಿ ಶರಣಾಗತನಾದರೆ, ನಿನ್ನ ತಪ್ಪನ್ನು ಮನ್ನಿಸಿ ಸಂರಕ್ಷಿಸುವಂತೆ ನನ್ನ ಪ್ರಾಣಕಾಂತನನ್ನು ಪ್ರಾರ್ಥಿಸುವೆನೆಂತಲೂ, ಭಾವಗಳ ನ್ನು ವ್ಯಕ್ತಪಡಿಸಲಿಕ್ಕೆ ಉದಾರಹೃದಯಳಾದ ಜಾನಕಿಯು ತನಗೂ ರಾವಣನಿಗೂ ಅಂತ ರದಲ್ಲಿ ತೃಣವನ್ನು ಇಟ್ಟಳೆಂದುತೋರುವುದು ॥೨॥ ॥ ಅನಂತರದಲ್ಲಿ —ಎಲವೋ ಮುಂ ದಾಲೋಚನೆಯಿಲ್ಲದ ಮೂಢ! ನನ್ನ ಕಡೆಗೆ ಹರಿಯುತಲಿರುವ ನಿನ್ನ ಮನಸ್ಸನ್ನು ಹಿಂದಕ್ಕೆ ಸೆಳೆ. ಮನಸ್ಸು ಯದ್ಯಪಿ ಬಹಳ ಚಂಚಲವಾದುದು, ಆದಕಾರಣ ಅದಕ್ಕೆ ಯಾವುದಾದ ರೊಂದು ಗುರಿಇಲ್ಲದಿದ್ದರೆ ನೆಲೆಗೆನಿಲ್ಲುವುದಿಲ್ಲ. ಆದುದರಿಂದ ಆಮನಸ್ಸನ್ನು ನಿನ್ನ ಹೆಂಡಿರು ಗಳಲ್ಲಿ ನೆಲೆಗೊಳಿಸು, ಅದುನಿನಗೆ ಶ್ರೇಯಸ್ಕರ. ಮಹಾಪಾಪಿಯಾದವನು ಮೋಕ್ಷಕ್ಕೆ ಮೊ ದಲನೆಯ ಸಾಧನವಾದ ಇಂದ್ರಿಯಜಯವನ್ನೇ ಪಡೆಯದೆ ಮುಕ್ತಿಯನ್ನು ಬಯಸಿದರೆ ಅದು ಹೇಗೆ ಕೈಸೇರುವುದಿಲ್ಲವೋ ಹಾಗೆಯೇ ನಾನು ಪಾಪಿಷ್ಠನಾದ ನಿನಗೆ ವಶವಾಗತಕ್ಕ ವಳಲ್ಲ ॥೩॥ ॥ ಕರ್ಮಮಾರ್ಗದಲ್ಲಿಯೂ, ಜ್ಞಾನಮಾರ್ಗದಲ್ಲಿಯೂ ಅಸಮಾನನೆನಿಸಿದ ಮಹಾ ರಾಜ ಜನಕಮಹಾರಾಜನ ಸದ್ವಂಶದಲ್ಲಿಜನಿಸಿ, ಪರಿಶುದ್ಧವಾದ ರಘುಕುಲದಲ್ಲಿ ಅವತರಿ ಸಿದ ಶ್ರೀರಾಮಚಂದ್ರನಿಗೆ ಧರ್ಮಭಾರ್ಯೆಯಾಗಿ, ಪತಿವ್ರತಾಶಿರೋಮಣಿಯಾದ ನಾನು ಬ ಹುಪಾಪಹೇತುವಾದ ನಿನ್ನ ಮಾತಿಗೆ ಮರುಳಾಗಿ ಸರ್ವಸಾಧು ಜನನಿಂದಿತವಾದ ಅನುಚಿ ತಕಾರ್ಯವನ್ನು ಮಾಡುವೆನೆ? ಎಂದಿಗೂ ಮಾಡತಕ್ಕವಳಲ್ಲವೆಂದು ತಿಳಿ ॥೪॥ ॥ ಎಂದು ಹೀಗೆ ಹೇಳಿದ ಮಹಾನುಭಾವಳಾದ ವೈದೇಹಿಯು ಯಾವದೋಷ ಲೇಶದಿಂದ ತನ್ನಯಶಸ್ಸಿಗೆ ಏ ನು ಕುಂದು ಬರುವುದೋ, ಮನದೊಳಾಗಲಿ, ಮಾತಿನಲ್ಲಾಗಲಿ, ಕ್ರಿಯೆಯಲ್ಲಾಗಲಿ, ಯಾ ವಸಂದರ್ಭದೊಳಗೆ ಏನು ಚ್ಯುತಿಯುಂಟಾಗುವುದೋ, ಆದಿತ್ಯ, ಚಂದ್ರ, ಅನಿಲ, ಅನಲ, ದ್ಯುಲೋಕ, ಭೂಮಿ, ಜಲ, ಹೃದಯ, ಯಮ, ಅಹಸ್ಸು, ರಾತ್ರಿ, ಉಭಯಸಂಧ್ಯೆಗಳೂ ಪ್ರಾಣಿಗಳ ಅಂತರಂಗವಾದ ಮತ್ತು ಬಹಿರಂಗವಾದ ನಡತೆಗೆ ಸಾಕ್ಷಿಗಳಾಗಿದ್ದಾರೆ, ಆದು

ನಾಹ ಮೌಪಯಿಕೀ ಭಾರ್ಯಾ ಪರಭಾರ್ಯಾ ಸತೀ ತವ ||
ಸಾಧು ಧರ್ಮ ಮವೇಕ್ಷಸ್ವ ಸಾಧು ಸಾಧು ವ್ರತಂ ಚರ ||೬|| ||
ಯಥಾ ತವ ತಥಾನ್ಯೇಷಾಂ ದಾರಾ ರಕ್ಷ್ಯಾ ನಿಶಾಚರ ||
ಆತ್ಮಾನ ಮುಪಮಾಂ ಕೃತ್ವಾ ಸ್ವೇಷು ದಾರೇಷು ರಮ್ಯತಾಮ್ ||೭|| ||

ನಿಗೆ ಪತ್ನಿಯೆನಿಸಿ, ಸತೀ - ಪತಿವ್ರತೆಯೂ ಆಗಿರುವ, ಅಹಂ - ನಾನು, ತವ - ನಿನಗೆ, ಔಪಯಿಕೀ-ತಕ್ಕವಳೆನಿಸಿದ, ಭಾರ್ಯಾ - ಹೆಂಡತಿಯು, ನ - ಆಗತಕ್ಕವಳಲ್ಲ, ಸಾಧುಧರ್ಮಂ-ಸತ್ಪುರುಷರ ಧರ್ಮವನ್ನು, ಅವೇಕ್ಷಸ್ವ - ನೋಡು, (ವಿಚಾರಿಸು) ಸಾಧುವ್ರತಂ - ಸಜ್ಜನರ ನಿಯಮವನ್ನು, ಸಾಧು - ಚೆನ್ನಾಗಿ, ಚರ - ಆಚರಿಸು ||೬|| || ನಿಶಾಚರ - ಎಲೈ ರಾಕ್ಷಸನೇ, ಆತ್ಮಾನಂ- ನಿನ್ನನ್ನು, ಉಪಮಾಂ ಹೋಲಿಕೆಯನ್ನಾಗಿ, ಕೃತ್ವಾ - ಮಾಡಿಕೊಂಡು, ತವ - ನಿನ್ನ, ದಾರಾಃ - ಹೆಂಡತಿಯರು, ಯಥಾ - ಹೇಗೆ, ರಕ್ಷ್ಯಾಃ - ಕಾಪಾಡಲ್ಪಡತಕ್ಕವರೋ, ತಥಾ - ಹಾಗೆಯೇ, ಅನ್ಯೇಷಾಂ - ಪರಪುರುಷರ, (ದಾರಾಃ - ಭಾರ್ಯೆಯರೂ, ರಕ್ಷ್ಯಾಃ - ರಕ್ಷಿಸಲ್ಪಡತಕ್ಕವರು, ಇತಿ - ಹೀಗೆಂದು, ಮತ್ವಾ - ಭಾವಿಸಿ) ಸ್ವೇಷು - ನಿನ್ನ ಸ್ವಕೀಯರಾದ, ದಾರೇಷು-ಪತ್ನಿಯರಲ್ಲಿ, (ತ್ವಯಾ - ನಿನ್ನಿಂದ) ರಮ್ಯತಾಂ - ಕ್ರೀಡಿಸೋಣವಾಗಲಿ ||೭|| || ಸ್ವೇಷು - ಸ್ವೀಯರಾದ, ದಾರೇಷು - ಪತ್ನಿಯರಲ್ಲಿ, ಅತುಷ್ಟಂ- ತೃಪ್ತಿಯನ್ನು ಪಡೆಯದಿರುವ, ಚಲಿತೇಂದ್ರಿಯಂ - ಚಂಚಲವಾದ ಇಂದ್ರಿಯಗಳುಳ್ಳ, ಚಪಲಂ - ಅಸ್ಥಿರಸ್ವಭಾವದವನಾದ, ನಿಕೃತಿಪ್ರಜ್ಞಂ - ತಿಳಿಯದ ಹಾಗೆ ಹೆರರಿಗೆ ಕೇಡನ್ನು ಮಾಡುವ ಬುದ್ಧಿಯುಳ್ಳವನನ್ನು, ಪರದಾರಾಃ -

ದರೀದ ಇವರೆಲ್ಲರೆದುರಿಗೂ ಪಾತಿವ್ರತ್ಯದ ಸುಪಥವನ್ನು ಸಂರಕ್ಷಿಸಿಕೊಳ್ಳಬೇಕು ಎಂದು ಭಾವಿಸಿ, ಆಪಾಪಿಷ್ಠನಾದ ರಾವಣನಿಗೆ ಎದುರಾಗಿ ಕುಳ್ಳಿರದೆ ಅವನನ್ನು ತನ್ನ ಹಿಂಭಾಗಕ್ಕೆಬಿಟ್ಟು, ತಿರುಗಿಕುಳಿತುಕೊಂಡು, ಪುನಃ ಇಂತೆಂದಿಳು ||೫|| || ಎಲ ಅನಾರ್ಯ! ಪರಪುರುಷನಿಗೆ ಧರ್ಮಭಾರ್ಯೆಯಾಗಿ ಅರ್ಹಳೆನಿಸಿದನಾನು, ನಿನಗೆ ಯೋಗ್ಯಳೆನಿಸಿದ ಭಾರ್ಯೆಯಾಗಲಾರೆನು. ಸಾಧುಪುರುಷರ ಸನ್ಮಾರ್ಗವನ್ನು ಚೆನ್ನಾಗಿ ಆಲೋಚಿಸು. ಅದನ್ನೇ ನೀನು ಆಚರಿಸು, ಅದರಿಂದ ನಿನಗೆ ಮೇಲುಂಟಾಗುವುದು, ಎಂದು ಜಾನಕಿಯು ಶತ್ರುವಾಗಿದ್ದರೂ ರಾವಣನು ಅನ್ಯಾಯವಾಗಿ ಕೆಟ್ಟುಹೋಗುತ್ತಾನಲ್ಲಾ ಎಂದು ದಯಾದ್ರ್ರಭಾವದಿಂದ ಅವನಲ್ಲಿ ಕನಿಕರವನ್ನು ತೋರುತ್ತಾ ಹುಲ್ಕಡ್ಡಿಯನ್ನುಕುರಿತು ಹೇಳುವಹಾಗೆ ಹೇಳಿದಳು ||೬|| ಅಷ್ಟುಮಾತ್ರವೇ ಅಲ್ಲದೆ — ಎಲ ರಾಕ್ಷಸಾ! ಪರರ ಹೆಂಡಿರನ್ನು ಕದ್ದುತರುವುದು ನಮಗೆ ಕುಲಧರ್ಮವೆಂದು ಹೇಳಿದೆ, ಈ ಸಂದರ್ಭದಲ್ಲಿ ಮತ್ತೊಂದು ಯೋಚನೆಯನ್ನೂಮಾಡು, ಅದೇನು ಎಂಬೆಯೋ? ಧರ್ಮಶಾಸ್ತ್ರವನ್ನು ಅನುಸರಿಸಿ ನೀನು ಕೈಹಿಡಿದಿರುವ ಹೆಂಡತಿಯರನ್ನು ಸಂರಕ್ಷಿಸಿಕೊಳ್ಳತಕ್ಕುದು ನಿನಗೆ ಹೇಗೆಧರ್ಮವೋ ಇತರರಿಗೂ ಹಾಗೆಯೇಅಲ್ಲವೆ ನಿನ್ನ ಹೆಂಡಿರನ್ನು ಮತ್ತೊಬ್ಬನು ಕದ್ದೊಯ್ದರೆ ನೀನು ಸುಮ್ಮನಿರುವೆಯಾ? ಆಗನಿನ್ನ ಮನದೊಳಗೆ ಖೇದ ಉಂಟಾಗುವುದಿಲ್ಲವೆ? ಆದಕಾರಣ ನಿನ್ನನ್ನೂ, ನಿನ್ನ ಹೆಂಡಿರನ್ನೂ ಉದಾಹರಣೆಯನ್ನು ಮಾಡಿಕೊಂಡು ನಿನ್ನಧರ್ಮಪತ್ನಿಯರಲ್ಲಿ ಸುಖವಾಗಿಬಾಳು ||೭|| || ಮತ್ತು - ಎಲಕೀಳಾ! ಈಲೋಕದಲ್ಲಿ ಯಾರೇ ಆಗಲಿ ತಮ್ಮ ಧರ್ಮಪತ್ನಿಯರಲ್ಲಿ ತಾವುತೃಪ್ತರಾಗದೆ ಪರಭಾರ್ಯೆಯರನ್ನು ಅಪೇಕ್ಷಿಸಿ, ವಂಚಿಸಲು ಯತ್ನಿಸಿದರೆ, ಜಿತೇಂದ್ರಿಯರಾಗದೆ

ಅತುಷ್ಟಂ ಸ್ವೇಷು ದಾರೇಷು ಚಪಲಂ ಚಲಿತೇಂದ್ರಿಯಂ ॥
ನಯಂತಿ ನಿಕೃತಿಪ್ರಜ್ಞಂ ಪರದಾರಾಃ ಪರಾಭವಂ ॥೮॥ ॥
ಇಹ ಸಂತೋ ನವಾ ಸಂತಿ ಸತೋ ವಾ ನಾನು ವರ್ತಸೆ ॥
ತಥಾಹಿ ವಿಪರೀತಾ ತೇ ಬುದ್ಧಿ ರಾಚಾರ ವರ್ಜಿತಾ ॥೯॥ ॥
ವಚೋ ಮಿಥ್ಯಾ ಪ್ರಣೀತಾತ್ಮಾ ಪಥ್ಯ ಮುಕ್ತಂ ವಿಚಕ್ಷಣೈಃ ॥
ರಾಕ್ಷಸಾನಾ ಮಭಾವಾಯ ತ್ವಂ ವಾ ನ ಪ್ರತಿಪದ್ಯಸೇ ॥೧೦॥ ॥

---

ಪರಪುರುಷರ ಪತ್ನಿಯರು, ಪರಾಭವಂ - (ಆಯುರೈಶ್ವರ್ಯಾದಿಕ್ಷಯ ರೂಪವಾಗಿರುವ) ಅಪಮಾನವನ್ನು, ನಯಂತಿ - ಹೊಂದಿಸುತ್ತಾರೆ. ॥ ೮ ॥ ॥

ಇಹ - ದುರ್ಜನರಿಂದ ತುಂಬಿರುವ ಈ ಪ್ರದೇಶದಲ್ಲಿ, ಸಂತಃ - ಸತ್ಪುರುಷರು, ಸಂತಿವಾ - ಇದಾರೆಯೋ ? ನವಾಸಂತಿ - ಇಲ್ಲವೋ ? ಸತೋವಾ - ಅಂತಹ ಸತ್ಪುರುಷರನ್ನಾದರೋ, (ತ್ವಂ - ನೀನು,) ನಾನುವರ್ತಸೇ - ಅನುಸರಿಸತಕ್ಕವನಾಗಿಲ್ಲ, ತಥಾಹಿ - ಹಾಗೆ ನೀನು ಸನ್ಮಾರ್ಗವನ್ನು ಅನುಸರಿಸದೆ ಇರುವುದುಯುಕ್ತವೇ ಸರಿ, ವಿಪರೀತಾ - ಲೋಕಾಚಾರವಿರುದ್ಧವಾದ, ತೇ - ನಿನ್ನ, ಬುದ್ಧಿಃ - ಬುದ್ಧಿಯು, ಆಚಾರವರ್ಜಿತಾ - ಸದಾಚಾರದಿಂದ ಭ್ರಷ್ಟವಾಗಿದೆ ॥೯॥ ॥ ವಾ - ಅಥವಾ, ಮಿಥ್ಯಾ ಪ್ರಣೀತಾತ್ಮಾ - ಕಪಟದಿಂದ ಕೂಡಿದ ಮನಸ್ಸುಳ್ಳ, ತ್ವಂ - ನೀನು, ವಿಚಕ್ಷಣೈಃ - ವಿದ್ಯಾವಂತರಿಂದ, ಉಕ್ತಂ - ಹೇಳಲ್ಪಡುವ, ಪಥ್ಯಂ - ಹಿತವಾದ, ವಚಃ - ಮಾತನ್ನು, ರಾಕ್ಷಸಾನಾಂ - ರಾಕ್ಷಸರ, ಅಭಾವಾಯ - (ಕಪಟಸ್ವಭಾವದವನಾದ ಕಾರಣವೇ) ವಿನಾಶಕ್ಕೋಸ್ಕರ, ನಪ್ರತಿಪದ್ಯಸೇ - ಕೇಳದೆ ಇರುವೆಯೋ

---

ಚಪಲಚಿತ್ತರಾದ ಅಂತಹನೀಚರನ್ನು ಪರಭಾರ್ಯೆಯರಾದ ಪತಿವ್ರತೆಯರು ತಮ್ಮ ಪಾತಿವ್ರತ್ಯ ಮಹಿಮೆಯಿಂದ ಯಾವುದೊಂದು ಶ್ರೀಯುಸ್ಸೂ ಅವರ ಕೈಸೇರದಹಾಗೆ ಶಪಿಸಿ ಹಾಳುಮಾಡುವರು ॥೮॥ ॥ ನೀನಾದರೆ ದುರ್ಮಾರ್ಗದಲ್ಲಿ ಪ್ರವರ್ತಿಸುತಲಿದ್ದೀಯೆ, ಇಂತಹ ನಿನಗೆ ಬುದ್ಧಿ ಕಲಿಸಿ ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಹಿತೋಪದೇಶವನ್ನು ಮಾಡತಕ್ಕ ಸತ್ಪುರುಷರು ದುರ್ಜನಪೂರ್ಣವಾದ ಈ ನಿನ್ನ ನಗರದೊಳಗೆ ಯಾರಾದರೂ ಇದ್ದಾರೆಯೋ ಅಥವಾ ಇಲ್ಲವೋ ತಿಳಿಯದು. ಒಂದು ವೇಳೆ ಇದ್ದರೂ ಇರಬಹುದು, ಹಾಗೆ ಇದ್ದರೂ ಅವರ ಸನ್ಮಾರ್ಗವನ್ನು ನೀನು ಅನುಸರಿತಕ್ಕವನಲ್ಲ. ಹಾಗೆ ನೀನು ಅನುವರ್ತಿಸದೆ ಇರುವುದೂ ಸಹಜವೇ ಸರಿ, ಏತಕೆಂದರೆ- ನಿನಗೆ ವಿನಾಶಕಾಲವು ಸಮೀಪಿಸುತಲಿದೆ, ಆದುದರಿಂದಲೇ ನಿನಗೆ ಬುದ್ಧಿಯೂ ವಿಪರೀತವಾಗಿದೆ ‘‘ ವಿನಾಶಕಾಲೇ ವಿಪರೀತಬುದ್ಧಿಃ ’’ ಎಂಬುದು ಸಟೆಯಲ್ಲ. ಇಂತು ಸದಾಚಾರ ಭ್ರಷ್ಟವಾದ ಬುದ್ಧಿಯಿಂದ ನಾಶವಾಗಿಹೋಗಬೇಡ. ಅಯ್ಯೋ, ಅನ್ಯಾಯವಾಗಿ ಕೆಟ್ಟುಹೋಗುತ್ತೀಯೆ, ಸನ್ಮಾರ್ಗದಲ್ಲಿ ಪ್ರವರ್ತಿಸಿ ಮೇಲ್ಮೆಯನ್ನು ಪಡೆ ॥ ೯ ॥-॥ ಒಂದುವೇಳೆ ನಿನ್ನನ್ನು ಚಿತ್ತ ಚೋರನೆಂದಾದರೂ ಹೇಳಬಹುದು, ಏತಕೆಂದರೆ ರಾಕ್ಷಸರ ಹುಟ್ಟನ್ನೇ ನಾಶಮಾಡುವುದಕ್ಕೋಸ್ಕರ ಅವರಲ್ಲಿ ಪ್ರೀತಿಯನ್ನು ತೋರುವವನಂತೆ ನಟಿಸುತ್ತಾ ಧರ್ಮನೀತಿಗಳನ್ನು ಬಲ್ಲ ಮಹಾತ್ಮರು ನಿನಗೆ ಹಿತವನ್ನು ಬೋಧಿಸಿದರೂ ಅದನ್ನು ಕೇಳದೆ ಹಟವನ್ನು ಹಿಡಿದು ದುರ್ಮಾರ್ಗದಲ್ಲಿ ಪ್ರವರ್ತಿಸಿ ಕಟ್ಟಕಡೆಗೆ ಅವರನ್ನೆಲ್ಲ

ಅಕೃತಾತ್ಮಾನ ಮಾಸಾದ್ಯ ರಾಜಾನ ಮನಯೇ ರತಂ ॥
ಸಮೃದ್ಧಾನಿ ವಿನಶ್ಯಂತಿ ರಾಷ್ಟ್ರಾಣಿ ನಗರಾಣಿ ಚ ॥೧೦॥
ತಥೇಯಂ ತ್ವಾಂ ಸಮಾಸಾದ್ಯ ಲಂಕಾ ರತ್ನೌಘ ಸಂಕುಲಾ ॥
ಅಪರಾಧಾ ತ್ತವೈಕಸ್ಯ ನ ಚಿರಾ ದ್ವಿನಶಿಷ್ಯತಿ ॥೧೧॥-॥
ಸ್ವಕೃತ್ಯೆ ರ್ಹನ್ಯ ಮಾನಸ್ಯ ರಾವಣಾ ದೀರ್ಘದರ್ಶಿನಃ ॥
ಅಭಿನಂದಂತಿ ಭೂತಾನಿ ವಿನಾಶೇ ಪಾಪಕರ್ಮಣಃ ॥೧೨॥ ॥

ಹೇಗೋ? ॥೧೦॥ ॥(ಸದುಪದೇಶವನ್ನು ಕೇಳದಿದ್ದರೆ ರಾಕ್ಷಸರು ಹೇಗೆ ನಾಶವನ್ನು ಪಡೆಯುವರು?ಎಂದರೆ) ಸಮೃದ್ಧಾನಿ - ಸಂಪತ್ತುಗಳೂ, ರಾಷ್ಟ್ರಾಣಿ- ದೇಶಗಳೂ, ನಗರಾಣಿ - ಪುರಗಳೂ, ಅನಯೇ - ಅನ್ಯಾಯದಲ್ಲಿ, ರತಂ - ಆಸಕ್ತನಾಗಿರುವನಾದ ಕಾರಣವೇ, ಅಕೃತಾತ್ಮಾನಂ - ಶಿಕ್ಷಿತಬುದ್ಧಿಯಿಲ್ಲದ (ಸದುಪದೇಶವನ್ನು ಗ್ರಹಿಸದ ಬುದ್ಧಿಯುಳ್ಳ) ರಾಜಾನಂ - ಅರಸನನ್ನು, ಆಸಾದ್ಯ - ಹೊಂದಿ (ಯಥಾ - ಹೇಗೆ) ವಿನಶ್ಯಂತಿ - ನಾಶವಾಗುತವೆಯೋ, ತಥಾ - ಹಾಗೆಯೇ, ತಾದೃಶಂ - ಅಂಥವನಾದ, (ಅನ್ಯಾಯಾಸಕ್ತನಾಗಿ ಉಪದೇಶವನ್ನು ಗ್ರಹಿಸದ) ತ್ವಾಂ - ನಿನ್ನನ್ನು, ಸಮಾಸಾದ್ಯ - ಹೊಂದಿ, ರತ್ನೌಘಸಂಕುಲಾ - ನವರತ್ನಗಳ ರಾಶಿಯಿಂದ ಪೂರ್ಣವಾದ, ಇಯಂ - ಈ, ಲಂಕಾ - ಲಂಕಾನಗರವು, ಏಕಸ್ಯ- ಒಬ್ಬನಾದ, ತವ- ನಿನ್ನ, ಅಪರಾಧಾತ್ - ತಪ್ಪಿನದೆಸೆಯಿಂದ, ನಚಿರಾತ್ - ಬಹುಬೇಗನೆ, ವಿನಶಿಷ್ಯತಿ - ಸಂಪೂರ್ಣವಾಗಿ ನಾಶವಾಗುವುದು ॥೧೦॥-೧೧॥ ॥ ಹೇರಾವಣ - ಎಲೈ ರಾವಣನೇ, ಸ್ವಕೃತ್ಯೈಃ - ತನ್ನಿಂದ ಮಾಡಲ್ಪಟ್ಟ ತಪ್ಪುಗಳಿಂದ, ಹನ್ಯಮಾನಸ್ಯ - ಹೊಡೆಯಲ್ಪಡುತಲಿರುವವನೂ, ಅದೀರ್ಘದರ್ಶಿನಃ - ದೂರದ ಯೋಚನೆಯಿಲ್ಲದವನೂ ಆದ, ಪಾಪಕರ್ಮಣಃ - ಪಾಪಾತ್ಮನ, ವಿನಾಶೇಸತಿ- ನಾಶಉಂಟಾಗುತ್ತಿರಲಾಗಿ, ಭೂತಾನಿ- ಸಮಸ್ತಪ್ರಾಣಿಗಳೂ, ಅಭಿನಂದಂತಿ - ಸರ್ವತ್ರಸಂತೋಷಿಸುತ್ತಾರೆ, ನಿಕೃತಾಃ- ನಿನ್ನಿಂದ ವಂಚಿಸಲ್ಪಟ್ಟರುವ. .ಜನಾಃ - ಜನಗಳು, ರೌದ್ರಃ - ಭಯಂಕರನಾದ ರಾವಣನು, ದಿಷ್ಟ್ಯೈವ - ದೈವವಶದಿಂದಲೇ, ಏತತ್ - ಈವಿಧವಾದ, ವ್ಯಸನಂ - ದುಃಖವನ್ನು, ಪ್ರಾಪ್ತಃ - ಹೊಂದಿದನು, ಇತ್ಯೇವಂ - ಹೀಗೆಂದು,

ಸಮೂಲವಾಗಿ ನಾಶಪಡಿಸುತ್ತೀಯೆ!॥೦॥-॥ ಲೋಕದಲ್ಲಿ ಅನ್ಯಾಯಾಸಕ್ತನಾಗಿ ಸಾಧುಗಳ ಹಿತೋಪದೇಶವನ್ನು ಕೇಳದ ಅರಸಿನ ಆಳ್ವಿಕೆಗೆ ಒಳಪಟ್ಟ ಪ್ರಜೆಗಳೆಲ್ಲರೂ ಅವನೊಬ್ಬನ ತಪ್ಪಿನಿಂದ ನಾಶವನ್ನು ಪಡೆಯುತ್ತಾರೆ. ಆ ಕೂಡಲೇ ರಾಜ್ಯ ಕೋಶಗಳೂ, ಸಮಸ್ತ ಸಂಪತ್ತುಗಳೂ ಹಾಳಾಗುತ್ತವೆ. ॥೧೦॥-॥ ಹಾಗೆಯೇ ಪ್ರಕೃತದಲ್ಲಿಯೂ ನಾನಾ ರತ್ನರಾಶಿಗಳಿಂದ ಪರಿಪೂರ್ಣವಾದ ನಿನ್ನ ಈ ಲಂಕಾನಗರಿಯೂ ನಿನ್ನೊಬ್ಬನ ಅಪರಾಧದಿಂದ ಸ್ವಲ್ಪಕಾಲದಲ್ಲಿಯೇ ಸಂಪೂರ್ಣವಾಗಿ ನಾಶವನ್ನು ಪಡೆಯುತ್ತದೆ ॥೧೧॥-॥ ಎಲವೋ ನೀಚ ರಾವಣಾ! ಲೋಕದಲ್ಲಿ ಯಾವನೇ ಆಗಲೀ ನಿನ್ನಂತೆ ಪರದಾರಹರಣವೇ ಮುಂತಾದ ಪಾಪ ಕರ್ಮವನ್ನು ಮಾಡಹಳಿಸಿದರೆ ಅಂಥವನು ತನ್ನ ಪಾಪದ ಪೆಟ್ಟಿನಿಂದ ಬೇಗನೆ ಹಾಳಾಗುವನಲ್ಲದೆ ಎಂದಿಗೂ ಮೇಲನ್ನು ಪಡೆಯುವುದಿಲ್ಲ, ಅಂತಹ ಸಮಯದಲ್ಲಿ ಸಮಸ್ತ ಭೂತಗಳೂ "ಇವನು ಮಹಾ ಪಾಪಿ, ಆ ಪಾಪಕ್ಕೆ ತಕ್ಕ ಫಲವಾದ ವಿನಾಶವನ್ನು ಪಡೆದನು, ಭೂಮಿಯ ಭಾರವು ಇಳಿಯಿತು, ನಮ್ಮಗಳ ದುಃಖವೆಲ್ಲ ಪರಿಹಾರವಾಯಿತು" ಎಂದು ಮಾತನಾಡಿಕೊಳ್ಳುತ್ತಾ ವಿಶೇಷವಾಗಿ ಸಂತೋಷಿಸುವರು॥೧೨॥-॥ ಹೀಗೆಯೇ ಪಾಪಾತ್ಮನಾದನಿನ್ನನ್ನು

ಏವಂ ತ್ವಾಂ ಪಾಪಕರ್ಮಾಣಂ ವಕ್ಷ್ಯಂತಿ ನಿಕೃತಾ ಜನಾಃ ।
ದಿಷ್ಟ್ಯೈತ ದ್ವ್ಯಸನಂ ಪ್ರಾಪ್ತೋ ರೌದ್ರ ಇತ್ಯೇವ ಹರ್ಷಿತಾಃ ॥೧೪॥-॥
ಶಕ್ಯಾ ಲೋಭಯಿತುಂ ನಾಹ ವೈಶ್ವರ್ಯೇಣ ಧನೇನವಾ ॥
ಅನನ್ಯಾ ರಾಘವೇ ಣಾಹಂ ಭಾಸ್ಕರೇಣ ಪ್ರಭಾ ಯಥಾ ॥೧೫॥-॥
ಉಪಧಾಯ ಭುಜಂ ತಸ್ಯ ಲೋಕನಾಥಸ್ಯ ಸತ್ಕೃತಂ ॥

ಪಾಪಕರ್ಮಾಣಂ - ಪಾಪಾತ್ಮನಾದ, ತ್ವಾಂ - ನಿನ್ನನ್ನು ಕುರಿತು, ಹರ್ಷಿತಾಃ(ಸಂತಃ)-ಸಂತೋಷಿಸುತಲಿರುವವರಾಗಿ, ವಕ್ಷ್ಯಂತಿ - ಹೇಳಿಕೊಳ್ಳುವರು ॥೧೩॥-೧೪॥ ॥ ಅಹಂ - ನಾನು. ಐಶ್ವರ್ಯೇಣ - ವೈಭವದಿಂದಲಾಗಲಿ, ಧನೇನವಾ - ನಿನ್ನ ಧನದಿಂದಲಾಗಲಿ, ಲೋಭಯಿತುಂ - ವಂಚಿಸಲಿಕ್ಕೆ, ನಶಕ್ಯಾ - ಸಾಧ್ಯಳಲ್ಲ (ಏಕೆಂದರೆ, ಭಾಸ್ಕರೇಣ - ಸೂರ್ಯನಿಂದ, ಪ್ರಭಾಯಥಾ - ಕಾಂತಿಯು ಹೇಗೋ ಹಾಗೆ, ಅಹಂ - ನಾನು, ರಾಘವೇಣ - ಶ್ರೀರಾಮನಿಂದ) ಅನನ್ಯಾ - ಬೇರಾಗಿರತಕ್ಕವಳಲ್ಲ ॥೧೫॥ ॥

ಆಶ್ರಯಿಸಿರುವ ಪ್ರಜೆಗಳೆಲ್ಲರೂ ನಿನ್ನಿಂದ ಬಹುತರವಾದ ಹಿಂಸೆಯನ್ನು ಪಡೆದಿರುವರಾದಕಾರಣ ನಿನಗೆ ವಿಪತ್ತು ಬಂದೊದಗಿದರೆ ಆಗ-"ಆಹಾ ! ದೈವವಶದಿಂದಲೇ ಈ ಕ್ರೂರಕರ್ಮಿಯು ಮೃತ್ಯುವಿಗೆ ಈಡಾದನು" ಎಂದು ವಿಶೇಷವಾಗಿ ಸಂತೋಷಿಸುತ್ತಾರೆ ॥೧೪॥-॥ ಎಲದುರುಳಾ! "ನನ್ನ ಸಂಪತ್ಸಮೃದ್ಧಿಯನ್ನು ನೋಡು" ಎಂದು ನನ್ನನ್ನು ವಂಚಿಸಲಿಕ್ಕೆ ಪ್ರಯತ್ನಿಸಿದೆ, ನಿನ್ನ ತುಚ್ಛವಾದ ಐಶ್ವರ್ಯದಿಂದಲಾಗಲೀ, ಧನದಿಂದಲಾಗಲೀ, ನನ್ನನ್ನು ಮೋಸಗೊಳಿಸಲಿಕ್ಕೆ ನಿನ್ನಿಂದ ಸಾಧ್ಯವಲ್ಲ, ಇದನ್ನು ಖಂಡಿತವಾಗಿ ತಿಳಿ, ಸೂರ್ಯನನ್ನು ಅಗಲಿ ಪ್ರಭೆಯು ಹೇಗೆ ಬೇರಾಗಿ ಇರುವುದಿಲ್ಲವೋ, ಹಾಗೆಯೇ ನಾನೂ ಶ್ರೀರಾಮಚಂದ್ರನನ್ನು ‡ ಅಗಲಿಕ್ಷಣ ಮಾತ್ರವಾದರೂ ಇರತಕ್ಕವಳಲ್ಲವೆಂದು ತಿಳಿ, ಆದರೆ ಶ್ರೀರಾಮಚಂದ್ರನನ್ನಗಲಿ ಇಲ್ಲಿ ಹೇಗೆ ಇದ್ದೀಯೆ ಎಂಬೆಯೋ? ಸೂರ್ಯಮಂಡಲಕ್ಕಿಂತ ಸಾವಿರಾರು ಗಾವುದಗಳ ದೂರದಲ್ಲಿ ಕಾಂತಿಯಿದ್ದರೂ ಸೂರ್ಯನ ಸಂಬಂಧವನ್ನು ಹೇಗೆ ಬಿಟ್ಟಿರುವುದಿಲ್ಲವೋ ಹಾಗೆಯೇ ನಾನೂ ನೂರಾರು ಯೋಜನಗಳ ದೂರದಲ್ಲಿದ್ದರೂ ಸಂತತ ಧ್ಯಾನದಿಂದ ಆ ಶ್ರೀರಾಮಚಂದ್ರನನ್ನು ತುಸವಾದರೂ ಅಗಲಿದವಳಾಗಿಲ್ಲ ॥೧೫॥-॥ ಬ್ರಹ್ಮಾದಿ ದೇವತೆಗಳು ಕೂಡ ತಂತಮ್ಮ ಪದವಿಗಳು ತಮಗೆನೆಲೆಯಾಗಿರುವಂತೆ ಅನವರತವೂ ಯಾವ ಮಹಾನುಭಾವನನ್ನು ಪ್ರಾರ್ಥಿಸುತಲಿರುವರೋ ಅಂತಹನನ್ನ ಪ್ರಾಣನಾಥನಾದ ಶ್ರೀರಾಮಚಂದ್ರನ ಸರ್ವಲೋಕ ಮಾನ್ಯವೆನಿಸಿದ ತೋಳನ್ನು ತಲೆದಿಂಬನ್ನಾಗಿ ಮಾಡಿಕೊಂಡು ಪವಳಿಸುತಲಿದ್ದ ನಾನು ಪರಪುರುಷನ ಬಾಹುವನ್ನು ತಲೆದಿಂಡನ್ನಾಗಿ ಹೇಗೆ ಮಾಡಿಕೊಳ್ಳ

‡ ಇದರಿಂದ ಹಿಂದೆಹೇಳಿದಂತೆ ರಾವಣನು ಸಾಕ್ಷಾತ್ ಸೀತೆಯನ್ನು ತರಲಿಲ್ಲ, ಆಕೆಯ ಪ್ರತಿಬಿಂಬವನ್ನೇ ತಂದಿರುವನು ಎಂಬುದು ಸ್ಪಷ್ಟವಾಗುತ್ತದೆ, ಮತ್ತು-ಹಿಂದೆ ರಾವಣನು ಭಕ್ತಿಭಾವದಿಂದ ಪ್ರಾರ್ಥಿಸಿದುದಕ್ಕೆ, ನಿನಗೆ ಜಾಗ್ರತೆಯಲ್ಲಿ ವಧೆಯುಂಟಾಗುವಂತೆ ಮಾಡಿ ಈ ಜನ್ಮದಿಂದ ಕಡೆಹಾಯಿಸಿ ಬೇಗನೆ ವೈಕುಂಠದಲ್ಲಿ ಜಯವಿಜಯರ ಸ್ಥಾನವನ್ನು ಸಂಪಾದಿಸಿಕೊಟ್ಟು ಉದ್ಧರಿಸಲಿಕ್ಕೇ ಇಲ್ಲಿಗೆಬಂದಿರುವೆನು ಎಂಬುದೂ ತೋರುವುದು.

ಕಥಂ ನಾಮೋಪಧಾಸ್ಯಾಮಿ ಭುಜಮನ್ಯಸ್ಯ ಕಸ್ಯಚಿತ್ ॥೧೬॥-॥
ಅಹಮೌಪಯಿಕೀ ಭಾರ್ಯಾ ತಸ್ಯೈವ ವಸುಧಾಪತೇಃ ॥
ವ್ರತಸ್ನಾತಸ್ಯ ವಿಪ್ರ (ಧೀರ) ಸ್ಯ ವಿದ್ಯೇವ ವಿದಿತಾತ್ಮನಃ ॥೧೭॥-॥
ಸಾಧು ರಾವಣ ರಾಮೇಣ ಮಾಂ ಸಮಾನಯ ದುಃಖಿತಾಮ್ ॥

---

[ಅಹಂ - ನಾನು] ಲೋಕನಾಥಸ್ಯ-ಸರ್ವಲೋಕೇಶ್ವರನಾದ, ತಸ್ಯ-ಆ ಶ್ರೀರಾಮಚಂದ್ರನ, ಸತ್ಕೃತಂ-ಪೂಜ್ಯವೆನಿಸಿದ, ಭುಜಂ - ತೋಳನ್ನು, ಉಪಧಾಯ - ತಲೆದಿಂಬನ್ನಾಗಿ ಮಾಡಿಕೊಂಡಿದ್ದು, (ಅಧುನಾ - ಈಗ) ಅನ್ಯಸ್ಯ - ಪರಪುರುಷನಾದ, ಕಸ್ಯಚಿತ್ - ಯಾವನೋ ಒಬ್ಬನ, ಭುಜಂ - ತೋಳನ್ನು, ಕಥಂ ನಾಮ- ಹೇಗೆ, ಉಪಧಾಸ್ಯಾಮಿ- ತಲೆದಿಂಬನ್ನಾಗಿ ಮಾಡಿಕೊಳ್ಳಲಿ (ಎಂದಿಗೂ ಮಾಡಿಕೊಳ್ಳಲಾರೆ)॥೧೬॥ ವ್ರತಸ್ನಾತಸ್ಯ - ವೇದಾಧ್ಯಯನ ವ್ರತದಿಂದ ಸ್ನಾನಮಾಡಿದವನೂ, (ಸಾಂಗವಾಗಿ ವೇದಾಧ್ಯಯನವನ್ನು ಮಾಡಿ ಮುಗಿಸಿದವನೂ) ಧೀರಸ್ಯ - ಬುದ್ಧಿವಂತನೂ ಆಗಿರುವ, (ಸದಾಚಾರಸಂಪನ್ನನೂ ಆಗಿರುವ) ವಿದಿತಾತ್ಮನಃ - ಆತ್ಮಜ್ಞಾನಸಂಪನ್ನನಾದವನಿಗೆ, ವಿದ್ಯೇವ - ಬ್ರಹ್ಮವಿದ್ಯೆಯು ಹೇಗೋಹಾಗೆ, ವಸುಧಾಪತೇಃ- ಸರ್ವಲೋಕನಾಥನಾದ, ತಸ್ಯೈವ - ಆ ಶ್ರೀರಾಮಚಂದ್ರನೊಬ್ಬನಿಗೇ, ಅಹಂ-ನಾನು, ಔಪಯಿಕೀ-ತಕ್ಕವಳಾದ, ಭಾರ್ಯಾ-ಪತ್ನಿಯಾಗಿದೇನೆ ॥೧೭॥ ॥ (೧) ಹೇರಾವಣ - ಎಲೈ ರಾವಣನೇ, ದುಃಖಿತಾಂ-ದುಃಖವನ್ನು ಹೊಂದಿರುವ, ಮಾಂ - ನನ್ನನ್ನು, ವನೇ - ಅರಣ್ಯದಲ್ಲಿ, ವಾಶಿತಾಂ - ಪ್ರಿಯವುಳ್ಳ, ಕರೇಣುಂ - ಹೆಣ್ಣಾನೆಯನ್ನು ,ಗಜಾಧಿಪೇನ - ಗಜರಾಜನೊಡನೆ ಹೇಗೋಹಾಗೆ, ರಾಮೇಣಸಾರ್ಧಂ - ರಾಮನೊಡನೆ, ಸಾಧು- ಚೆನ್ನಾಗಿ, ಸಮಾನಯ-ಸೇರಿಸು, (ಮತ್ತು-ಸಾಧುರಾವಣ-ಎಲೈ ಒಳ್ಳೆಯ ಸ್ವಭಾವದ

---

ಲಿ? ॥೧೬॥-॥ ಸಾಂಗೋಪಾಂಗವಾಗಿ ವೇದಾಧ್ಯಯನವನ್ನು ಮಾಡಿ, ವೇದೋಕ್ತ ಧರ್ಮಗಳನ್ನಾಚರಿಸುತ್ತ, ಆತ್ಮಜ್ಞಾನ ಸಂಪನ್ನನಾದ ಶ್ರೋತ್ರಿಯನಿಗೆ ಬ್ರಹ್ಮ ವಿದ್ಯೆಯು ಹೇಗೆ ತಕ್ಕುದೋ, ಹಾಗೆಯೇ ಶೀಲವೃತ್ತಾದಿಗಳಿಂದ ಸಂಪನ್ನಳಾದ ನಾನು ಸರ್ವಜಗನ್ನಾಯಕನಾದ ಆ ಶ್ರೀರಾಮಚಂದ್ರನಿಗೆ ಅನನ್ಯಳೆನಿಸಿದ ಧರ್ಮಭಾರ್ಯೆಯಾಗಿದೇನೆ, ಪರಪುರುಷನಿಗೆ ತಕ್ಕವಳಲ್ಲ, ಹೀಗಿರಲು ಎಲಭ್ರಾಂತಾ! ಏಕೆ ಹುಚ್ಚುತನದಿಂದ ಅಜ್ಞನಾಗಿ ದುರ್ಮಾರ್ಗದಲ್ಲಿ ಪ್ರವರ್ತಿಸುತಲಿದ್ದೀಯೆ? ಛೇ, ನಿನ್ನ ದುರ್ಬುದ್ಧಿಯನ್ನು ತೊರೆ ॥೧೭॥-॥ ಎಲೈ ರಾವಣಾ! ಅರಣ್ಯದೊಳಗೆ ಪುರುಷಗಜವನ್ನಗಲಿ, ಕಟ್ಟಿಗೊಳಗಾಗಿ ವ್ಯಥೆಪಡುತಲಿದ್ದ ಹೆಣ್ಣಾನೆಯನ್ನು ಪುನಃಪುರುಷ ಗಜವನ್ನು ಸೇರಿಸುವ ಹಾಗೆ, ಪತಿಯನ್ನು ಅಗಲಿ ಬಹಳವಾಗಿ ದುಃಖಪಡುತಲಿರುವ ನನ್ನನ್ನೂ ಆ ಶ್ರೀರಾಮಚಂದ್ರನೊಡನೆ ಜಾಗ್ರತೆಯಾಗಿ ಸೇರಿಸು, ಅಥವಾ:—ಎಲೈ ರಾವಣಾ! ಸಾಧು- ನಿನಗೆ ಬಹು ಮೇಲ್ಮೆಯುಂಟಾಗುವುದು. ಅಥವಾ-ಸಾಧು ರಾವಣಾ! ಬಲು ಒಳ್ಳೆಯ ಸ್ವಭಾವದ ರಾವಣನೇ! (ಎಂದರೆ ಬಹು ಕ್ರೂರಸ್ವಭಾವದ ರಾವಣನೇ! ದಾರಿಯಲ್ಲಿ ಹೋಗುತ್ತ ಕಳ್ಳನನ್ನು ನೋಡಿ ಜಲವನ್ನು ಬೇಡಿದಂತೆ ನಿನ್ನನ್ನು ಕುರಿತು ನನ್ನ ಯಾಚನೆಯು ಸಮಾನವಾಗಿರುವುದು) ವಲ್ಲಭನನ್ನಗಲಿ ದುಃಖಿಸು

---

(೧) ವಾಶಿತಯಾ, ಕರೇಣ್ವಾ ಎಂಬ ತೃತೀಯಾಂತಪದಗಳನ್ನು ದ್ವಿತೀಯಾಂತಗಳನ್ನಾಗಿಯೂ ಗಜಾಧಿಪಂ ಎಂಬ ದ್ವಿತೀಯಾಂತಪದವನ್ನು ತೃತೀಯಾಂತಪದವನ್ನಾಗಿಯೂ ಬದಲಾಯಿಸಿಕೊಂಡು ಅನ್ವಯಿಸಿಕೊಳ್ಳಬೇಕು "ವಾಶಿತಾಯುವತಿಃ ಪ್ರೋಕ್ತಾ ಕಲಭಃ ಕರಿಪೋತಕಃ" ಎಂದು ನಿಘಂಟು

ವನೇ ವಾಶಿತಯಾ ಸಾರ್ಧಂ ಕರೇಣ್ವೇವ ಗಜಾಧಿಪಂ ॥೧೮॥-॥
ಮಿತ್ರ ಮೌಪಯಿಕಂ ಕರ್ತುಂ ರಾಮ ಸ್ಥಾನಂ ಪರೀಪ್ಸತಾ ।
ವಧಂ ಚಾನಿಚ್ಛತಾ ಘೋರಂ ತ್ವಯಾಸೌ ಪುರುಷರ್ಷಭಃ ॥೧೯॥-॥

ರಾವಣನೇ, ವನೆ - ಅರಣ್ಯದಲ್ಲಿ, ವಾಸಿತಯಾ - ವಾಸವುಳ್ಳ, ಅಥವಾ ಸಿತಯಾ - ಕಟ್ಟಿಗೊಳಗಾದ, ಕರೇಣ್ವಾ - ಕಣ್ಣಾನೆಯಿಂದ, ಗಜಾಧಿಪಮಿವ - ಗಜರಾಜನನ್ನು ಹಾಗೆ, ದುಃಖಿತಾಂ-ರಾಮನನ್ನಗಲಿದ ದುಃಖವುಳ್ಳ, ಮಾಂ - ಲಕ್ಷ್ಮೀಸ್ವರೂಪಳಾದ ನನ್ನನ್ನು, ರಾಮೇಣ - ರಾಮನೊಡನೆ, ಸಮಾನಯ - ಸೇರಿಸು (೨) ॥೧೮॥ ॥ (ತಾಯಿ, ಮಗನಿಗೆ ಬುದ್ಧಿಯನ್ನು ಹೇಳುವಂತೆ ವೈದೇಹಿಯು ದಯೆಯಿಂದ ಸದುಪದೇಶವನ್ನು ಮಾಡುತ್ತಾಳೆ) ಸ್ಥಾನಂ - ಲಂಕೆಯಲ್ಲಿ ಸುಖನಿವಾಸವನ್ನು, ಪರೀಪ್ಸತಾ-ಬಯಸುತಲಿರುವ, ಘೋರಂ - ಭಯಂಕರವಾದ, ವಧಂಚ - ಚಿತ್ರವಧೆಯನ್ನು, ಅನಿಚ್ಛತಾ - ಕೋರದಿರುವ, ತ್ವಯಾ - ನಿನ್ನಿಂದ, ಪುರುಷರ್ಷಭಃ - ಪುರುಷೋತ್ತಮನೆನಿಸಿದ ಈ ಶ್ರೀರಾಮಚಂದ್ರನು, ತ್ವಯಾ - ನಿನ್ನಿಂದ ಮಿತ್ರಂ - ಸ್ನೇಹಿತನಾಗಿ, ಕರ್ತುಂ - ಮಾಡಿಕೊಳ್ಳಲಿಕ್ಕೆ, ಔಪಯಿಕಂ - ಉಚಿತವಾದದ್ದು, (ಅರ್ಹನು) ॥೧೯॥ ॥ ಸಃ - ಆ ರಾಮನು, ಧರ್ಮಜ್ಞಃ - ಸಕಲಧರ್ಮ ಮರ್ಮಗಳನ್ನೆಲ್ಲ ಬಲ್ಲವನು (ಆದ

ತಿರುವ ನನ್ನನ್ನು ನೋಡು, ತಡಮಾಡದೆ ಲಕ್ಷ್ಮೀಸ್ವರೂಪಳಾದ ನನ್ನನ್ನು ಕೊಂಡೊಯ್ದು ಶ್ರೀರಾಮನ ಸಾನ್ನಿಧ್ಯವನ್ನು ಸೇರಿಸಿ ಶ್ರೇಯಸ್ಸನ್ನು ಪಡೆ ॥೧೮॥-॥ ಓ ರಾವಣಾ ! ನೀನು ಇನ್ನೂ ಕೆಲವು ಕಾಲ ಲಂಕೆಯೊಳಗೆ ಪ್ರಭುತ್ವವನ್ನು ಮಾಡಿಕೊಂಡು ಹೆಂಡಿರು ಮಕ್ಕಳೊಡನೆ ಸುಖವಾಗಿ ಬಾಳಬೇಕೆಂಬ ಬಯಕೆಯು ನಿನಗೆ ಇರುವುದಾದರೆ, ಮತ್ತು ನೀನು ಬೇಗನೆ ಮೃತ್ಯುವಿನ ಬಾಯಿಗೆ ತುತ್ತಾಗಬಾರದೆಂಬ ಕೋರಿಕೆಯೂ ನಿನಗೆ ಇದ್ದರೆ, ನನ್ನನ್ನು ಕರೆದುಕೊಂಡು ಹೋಗಿ ಸರ್ವಲೋಕ ಶರಣ್ಯನಾದ ಆ ಶ್ರೀರಾಮಚಂದ್ರನ ಚರಣಾರವಿಂದಗಳಲ್ಲಿಸಮರ್ಪಿಸಿ, ಆತನನ್ನು ಮಿತ್ರನನ್ನಾಗಿ ಮಾಡಿಕೊಳ್ಳುವುದು ಲೇಸು, ‹‹ನಾನು ಅಪರಾಧವನ್ನು ಮಾಡಿದ್ದೇನೆ, ಆತನ ಎದುರಿಗೆ ಹೋದರೆ ರೌದ್ರಾವೇಶದಿಂದ ಕೂಡಲೇ ನನ್ನನ್ನು ಸಂಹರಿಸುವನಲ್ಲದೆ ಶಾಂತನಾಗಿ ಕರುಣೆಯನ್ನು ತೋರುವುದಿಲ್ಲ›› ಎಂದು ಖಂಡಿತವಾಗಿ ಭಾವಿಸಬೇಡ. ಏತಕೆಂದರೆ-ಆತನು ಸಾಮಾನ್ಯನಲ್ಲ, ಪುರುಷೋತ್ತಮನು, ಆದುದರಿಂದಲೇ ‹‹ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ›› ಹಗೆಯಾಗಲಿ, ಹಗೆಯ ಮಗನಾಗಲಿ, ತಮ್ಮನಾಗಲಿ, ಯಾರೇ ಆಗಲಿ ಸರ್ವಭಾವಗಳಿಂದಲೂ ಶರಣವನ್ನು ಹೊಂದಿದವನೇ ಆದರೆ, ಮಿತ್ರಭಾವದಿಂದ ಬಂದ ಅಂಥವನನ್ನು ಹೇಗೂ ಬಿಡದೆ ಸಂರಕ್ಷಿಸುವೆನು ಎಂಬದಾಗಿ ಆತನದೊಂದು ಮಹತ್ತರವಾದ ಪ್ರತಿಜ್ಞೆಯುಂಟು, ಆದುದರಿಂದ ನೀನು ಎಷ್ಟು ತಪ್ಪುಗಳನ್ನುಮಾಡಿ ಇದ್ದರೂ ಅವುಗಳನ್ನೆಲ್ಲ ಮನ್ನಿಸಿ, ವಾತ್ಸಲ್ಯವನ್ನು ತೋರಿ ನಿನ್ನನ್ನು ಉದ್ಧರಿಸುವನು, ಈ ವಿಷಯದಲ್ಲಿ ನೀನು ವಿಚಾರ ಮಾಡಿದರೆ ಉದಾಹರಣೆಯು ಸಿಕ್ಕದೆ ಹೋಗುವುದಿಲ್ಲ. ಶ್ರೀರಾಮ ಭಜನೆಯು ವಿನಾ ನಿನ್ನ ಸಂರಕ್ಷಣೆಗೆ ಬೇರೆ ಹಾದಿಯಿಲ್ಲವೆಂದು ಖಂಡಿತವಾಗಿ ತಿಳಿ ಎಂದು ಸರ್ವಲೋಕ ಮಾತೆಯಾದ ಸೀತೆಯು ಶತ್ರುವಿನಲ್ಲಿಯೂ ವಾತ್ಸಲ್ಯವನ್ನು ವ್ಯಕ್ತಗೊಳಿಸಿ ಕ್ಷಮಾಗುಣದಿಂದ ಹಿತೋಪದೇಶವನ್ನು ಮಾಡಿದಳು ॥೧೯॥-॥ ಮತ್ತು:—ಎಲ ರಾವಣಾ ! ಇಗೋ ನಿನ್ನ ಕೈಗೆ ಕಡ್ಡಿಯನ್ನು ಕೊಟ್ಟಂತೆ

ವಿದಿತ ಸ್ಸಹಿ ಧರ್ಮಜ್ಞ ಶ್ಶರಣಾಗತ ವತ್ಸಲಃ ।
ತೇನ ಮೈತ್ರೀ ಭವತು ತೇ ಯದಿ ಜೀವಿತು ಮಿಚ್ಛಸಿ ॥೨೦॥
ಪ್ರಸಾದಯಸ್ವ ತ್ವಂ ಚೈನಂ ಶರಣಾಗತ ವತ್ಸಲಂ ।
ಮಾಂ ಚಾಸ್ಮೈ ಪ್ರಯತೋ ಭೂತ್ವಾ ನಿರ್ಯಾತಯಿತು ಮರ್ಹಸಿ ॥೨೧॥
ಏವಂ ಹಿ ತೇ ಭವೇ ತ್ಸ್ವಸ್ತಿ ಸಂಪ್ರದಾಯ ರಘೂತ್ತಮೇ ।

---

ಕಾರಣವೇ) ಶರಣಾಗತವತ್ಸಲಃ - ಮರೆಹೊಕ್ಕವರನ್ನು ಕೈಬಿಡದೆ ಕಾಪಾಡತಕ್ಕವನು, (ಇತಿ - ಹೀಗೆಂದು, ಜನೈಃ - ಜನಗಳಿಂದ) ವಿದಿತಃ - ತಿಳಿಯಲ್ಪಟ್ಟಿದ್ದಾನೆ, ಹಿ - ನಿಶ್ಚಯ, (ತತಃ - ಆದಕಾರಣ) ತ್ವಂ - ನೀನು, ಜೀವಿತುಂ - ಬದುಕಲಿಕ್ಕೆ, ಇಚ್ಛಸಿಯದಿ-ಅಪೇಕ್ಷಿಸುವವನೇ ಆದರೆ, ತೆ - ನಿನಗೆ, ತೇನ- ಆ ರಾಮನೊಡನೆ, ಮೈತ್ರೀ - ಸ್ನೇಹವು, ಭವತು - ಉಂಟಾಗಲಿ, ॥೨೦॥ ॥ * ಶರಣಾಗತವತ್ಸಲಂ - ಮರೆಹೊಕ್ಕವರಲ್ಲಿ ವಾತ್ಸಲ್ಯವುಳ್ಳ, ಏನಂ - ಈ ರಾಮಚಂದ್ರನನ್ನು, ತ್ವಂಚ - ನೀನೂ, ಪ್ರಸಾದಯಸ್ವ - ಪ್ರಸನ್ನನನ್ನಾಗಿಮಾಡಿಕೊ, ಪ್ರಯತಃ - ನಿಯಮವುಳ್ಳವನೂ (ಸನ್ಮಾರ್ಗವನ್ನವಲಂಬಿಸಿದವನು) ಭೂತ್ವಾ - ಆಗಿ (ಮನಸ್ಸಿನ ಕಲ್ಮಷವನ್ನು ತೊರೆದು) ಮಾಂಚ - ನನ್ನನ್ನೂ, ಅಸ್ಮೈ - ಈ ಶ್ರೀರಾಮಚಂದ್ರನಿಗೆ, ನಿರ್ಯಾತಯಿತುಂ - ಸಮರ್ಪಿಸಲಿಕ್ಕೆ, ಅರ್ಹಸಿ-ಯೋಗ್ಯನಾಗಿದ್ದೀಯೆ ॥೨೧॥ ॥ ಹೇರಾವಣ - ಎಲೈ ರಾವಣನೇ ! (ಮಾಂ - ನನ್ನನ್ನು) ರಘೂತ್ತಮೇ - ಶ್ರೀರಾಮಚಂದ್ರನಲ್ಲಿ, ಸಂಪ್ರದಾಯ - ಸಮರ್ಪಿಸಿ, (ಶರಣಾಗತಾಯ - ಮರೆಹೊಕ್ಕ) ತೇ - ನಿನಗೆ, ಸ್ವಸ್ತಿ - ಶ್ರೇಯಸ್ಸು, ಭವೇತ್ - ಉಂಟಾಗುವುದು, ಹಿ - ನಿಶ್ಚಯ

---

ನಿನಗೆ ಹಿತವನ್ನು ಬಯಸಿ ಹೇಳುತ್ತೇನೆ, ಸಕಲ ಧರ್ಮ ಮರ್ಮಗಳನ್ನು ಬಲ್ಲವನಾಗಿ ಸರ್ವಲೋಕ ಶರಣ್ಯನೆಂದು ಆ ಶ್ರೀರಾಮಚಂದ್ರನು ಸರ್ವಲೋಕ ಪ್ರಸಿದ್ಧನಾಗಿದ್ದಾನೆ, ಈ ವಿಷಯದಲ್ಲಿ ಸ್ವಲ್ಪವೂ ಸಂಶಯವಿಲ್ಲ. ಆದಕಾರಣ ನಿನ್ನನ್ನು ಸಂರಕ್ಷಿಸುವನು. ನಿನಗೆ ಸುಖವಾಗಿ ಬದುಕಬೇಕೆಂಬ ಬಯಕೆ ಇದ್ದರೆ, ಆತನೊಡನೆ ನಿನಗೆ ಸಖ್ಯವು ಲಭಿಸಲಿ ॥೨೦॥ ಲಕ್ಷ್ಮೀ ಸ್ವರೂಪಳಾದ ನನ್ನನ್ನು ಪರಿಶುದ್ಧವಾದ ಮನಸ್ಸಿನಿಂದ ಕೊಂಡುಹೋಗಿ ಶರಣಾಗತ ವತ್ಸಲನಾದ ಆ ಶ್ರೀರಾಮಚಂದ್ರನಿಗೆ ಭಕ್ತಿಯಿಂದ ಸಮರ್ಪಿಸು. ಆತನ ಪ್ರಸನ್ನತೆಯನ್ನು ಸಂಪಾದಿಸು, ಕ್ಷೇಮವನ್ನು ಪಡೆ, ನಾನು ನಿನ್ನ ತಪ್ಪುಗಳನ್ನು ಮನ್ನಿಸಿ ನಿನ್ನಲ್ಲಿ ಅನುಗ್ರಹವನ್ನು ತೋರಿಸುವಂತೆ ದಯಾನಿಧಿಯಾದ ದಾಶರಥಿಗೆ ಸಹಾಯ ವಾಕ್ಯವನ್ನು ಹೇಳುವೆನು. ॥೨೧॥ ಓ ರಾವಣಾ ! ನನ್ನ ಈ ಹಿತೋಪದೇಶವನ್ನು ಕೇಳಿ, ನನ್ನನ್ನು ಶ್ರೀರಾಮನಿಗೆ ಸಮರ್ಪಿಸಿ, ಆತನೊಡನೆ ಮೈತ್ರಿಯನ್ನು ಸಂಪಾದಿಸಿದರೆ, ನಿನಗೆ ಶುಭವು ಲಭಿ

---

* ದೇವರಿಗೂ, ಗುರುಹಿರಿಯರಿಗೂ ಕಿರಿಯವರ ವಿಷಯದಲ್ಲಿರತಕ್ಕ ಪ್ರೀತಿಗೆ ವಾತ್ಸಲ್ಯವೆಂತಲೂ, ಗಂಡಹೆಂಡಿರಿಗೆ ಪರಸ್ಪರವಾಗಿ ಇರತಕ್ಕ ಪ್ರೀತಿಗೆ ಪ್ರೇಮ ಎಂತಲೂ, ತೊಂದರೆಯನ್ನು ಅನುಭವಿಸುವವರ ವಿಷಯದಲ್ಲಿ ಇತರರಿಗೆ ಇರತಕ್ಕ ಪ್ರೀತಿಗೆ ದಯೆ ಎಂತಲೂ, ಮಿತ್ರರಲ್ಲಿ ಇರತಕ್ಕ ಪ್ರೀತಿಗೆ ವಿಶ್ವಾಸ ಎಂತಲೂ, ಬಂಧುಗಳಲ್ಲಿ ಇರತಕ್ಕ ಪ್ರೀತಿಗೆ ಮಮತೆ ಎಂತಲೂ, ಸರ್ವಭೂತಗಳಲ್ಲಿಯೂ ತೋರಿಸತಕ್ಕ ವಿಶ್ವಾಸಕ್ಕೆ ಪ್ರೀತಿ ಎಂತಲೂ, ಅಗಲಿಕೆಯನ್ನು ಸಹಿಸಲಾರದ ಪ್ರೀತಿಗೆ ಸ್ನೇಹ ಎಂತಲೂ, ಬಂದೇ ಕೆಲಸವನ್ನು ಮಾಡತಕ್ಕವರೊಳಗೆ ಅನ್ಯೋನ್ಯವಾಗಿ ಇರತಕ್ಕ ಪ್ರೀತಿಗೆ ಸಖ್ಯ ಅಥವಾ ಮೈತ್ರಿ ಎಂತಲೂ ವ್ಯತ್ಯಾಸವನ್ನು ತಿಳಿಯಬೇಕು

ಅನ್ಯಥಾ ತ್ವಂ ಹಿ ಕುರ್ವಾಣೋ ವಧಂ ಪ್ರಾಪ್ಸ್ಯಸಿ ರಾವಣ ॥೨೨॥-॥
ವರ್ಜಯೇದ್ವಜ್ರ ಮುತ್ಸೃಷ್ಟಂ ವರ್ಜಯೇ ದಂತಕಶ್ಚಿರಂ ।
ತ್ವದ್ವಿಧಂ ತು ನ ಸಂಕ್ರುದ್ಧೋ ಲೋಕನಾಥ ಸ್ಸ ರಾಘವಃ ॥೨೩॥-॥
ರಾಮಸ್ಯ ಧನುಷ ಶ್ಶಬ್ದಂ ಶ್ರೋಷ್ಯಸಿ ತ್ವಂ ಮಹಾಸ್ವನಂ ।
ಶತಕ್ರತು ವಿಸೃಷ್ಟಸ್ಯ ನಿರ್ಘೋಷ ಮಶನೇರಿವ ॥೨೪॥-॥
ಇಹ ಶೀಘ್ರಂ ಸುಪರ್ವಾಣೋ ಜ್ವಲಿತಾಸ್ಯಾ ಇವೋರಗಾಃ ।

---

ಅನ್ಯಥಾ - ಬೇರೆವಿಧವಾದ ಉಪಾಯವನ್ನು, ಕುರ್ವಾಣಃ - ಮಾಡುತಲಿರುವ, ತ್ವಂಹಿ - ನೀನಾದರೊ, ವಧಂ - ಚಿತ್ರವಧೆಯನ್ನು, ಪ್ರಾಪ್ಸ್ಯಸಿ- ಹೊಂದುವುದೇ ದಿಟ ॥೨೨॥ ॥ ಉತ್ಸೃಷ್ಟಂ-ಇಂದ್ರನಕೈಯಿಂದ ಎಸೆಯಲ್ಪಟ್ಟ, ವಜ್ರಂ - ವಜ್ರಾಯುಧವು, ತ್ವದ್ವಿಧಂ - ನಿನ್ನಂಥವನನ್ನು, ವರ್ಜಯೇತ್ - ಬಿಟ್ಟುಬಿಡಬಹುದು, ಅಂತಕಃ - ಯಮನು, ತ್ವದ್ವಿಧಂ - ನಿನ್ನಂಥವನನ್ನು, ಚಿರಂ - ಬಹುಕಾಲದವರೆಗೂ, ವರ್ಜಯೇತ್ - ಕೊಂಡುಹೋಗದೆ ಬಿಡಬಹುದು, ಲೋಕನಾಥಃ - ಜಗನ್ನಾಥನೆನಿಸಿದ, ಸಃ - ಆ, ರಾಘವಸ್ತು - ಶ್ರೀರಾಮನಾದರೋ. ಸಂಕ್ರುದ್ಧಃ - ಕೋಪಿಸಿಕೊಂಡವನಾದರೆ, ತ್ವದ್ವಿಧಂ- ನಿನ್ನಂಥವನನ್ನು, ನವರ್ಜಯೇತ್ - ಎಂದಿಗೂ ಬಿಡುವುದಿಲ್ಲ ॥೨೩॥-॥ (ಹೇರಾವಣ - ಎಲವೋ ರಾವಣನೇ) ತ್ವಂ - ನೀನು, ಶತಕ್ರತುವಿಸೃಷ್ಟಸ್ಯ - ಇಂದ್ರನಿಂದ ಬಿಡಲ್ಪಟ್ಟ, ಅಶನೇಃ- ಸಿಡಿಲಿನ, (ವಜ್ರಾಯುಧದ) ನಿರ್ಘೋಷಮಿವ - ಶಬ್ದವನ್ನು ಹೇಗೋಹಾಗೆ, ಮಹಾಸ್ವನಂ - ಮಹತ್ತರವಾದ ಧ್ವನಿಯುಳ್ಳ, ರಾಮಸ್ಯ - ಶ್ರೀ ರಾಮನ, ಧನುಷಃ - ಬಿಲ್ಲಿನ, ಶಬ್ದಂ - ಟಂಕಾರಧ್ವನಿಯನ್ನು, ಶ್ರೋಷ್ಯಸಿ - ಕೇಳುತ್ತೀಯೆ ॥೨೪॥-॥(ಹೇರಾವಣ- ಓ ದುಷ್ಟರಾವಣನೇ) ಸುಪರ್ವಾಣಃ - ಶ್ರೇಷ್ಠವಾದ ಗೆಣ್ಣುಗಳುಳ್ಳ, ರಾಮಲಕ್ಷ್ಮಣಲಕ್ಷಣಾಃ - ರಾಮಲಕ್ಷ್ಮಣ ನಾಮಾಂಕಿತಗಳಾದ, ಇಷವಃ- ಬಾಣಗಳು, ಜ್ವಲಿತಾಸ್ಯಾಃ-ವಿಷಾಗ್ನಿಯಿಂದ ಉರಿಯುತಲಿರುವ

---

ಮುಖವುಳ್ಳ. ಹಾಗಿಲ್ಲದೆ ಸಮಾಲೋಚನೆಯನ್ನು ಬಿಟ್ಟು ಭ್ರಾಂತನಾಗಿ ದುರಾಲೋಚನೆಯಿಂದ ದುರ್ಮಾರ್ಗದಲ್ಲಿ ಅಡಿಯಿಡುವುದಾದರೆ, ಆತನಿಂದ ನೀನು ಚಿತ್ರವಧೆಯನ್ನು ಪಡೆಯುವುದೇ ನಿಶ್ಚಯ ॥೨೨॥-॥ ಮತ್ತೊಂದು ವಿಷಯವನ್ನು ಹೇಳುತ್ತೇನೆ ಕೇಳು. ಇಂದ್ರನು ತನ್ನ ಶತ್ರುವಿನಮೇಲೆ ವಜ್ರಾಯುಧವನ್ನು ಪ್ರಯೋಗಿಸಿದರೆ ಆ ವಜ್ರಾಯುಧವು ಹಗೆಯನ್ನು ಒಂದುವೇಳೆ ಬಿಟ್ಟರೂ ಬಿಡಬಹುದು. ಮೃತ್ಯುವು ಯಾವುದಾದರೊಂದು ಪ್ರಾಣಿಯನ್ನು ಕೊಂಡು ಹೋಗಬೇಕಾಗಿದ್ದರೂ ಕ್ಲುಪ್ತಕಾಲದಲ್ಲಿ ಕೊಂಡೊಯ್ಯದೆ ಕೆಲವು ಕಾಲದವರಿಗೆ ತಡೆದರೂ ತಡೆಯಬಹುದು. ಸರ್ವಲೋಕ ನಾಥನಾದ ಶ್ರೀರಾಮನು ಸಿಟ್ಟುಕೊಂಡವನೇ ಆದರೆ ನಿನ್ನಂಥ ಪರಮ ನೀಚನನ್ನು ಬಲಿ ಕೊಡದೆ ಎಂದಿಗೂ ಬಿಡಲಾರ, ॥೨೩॥-॥ (ಎಲಾ ಅಧಮಾ ! ನೀನು ದುರ್ಮಾರ್ಗದಿಂದ ಚಲಿಸದೆ ಹೋದರೆ ಇಂದ್ರನು ಬಿಡುವ ವಜ್ರಾಯುಧದ ಶಬ್ದವನ್ನು ಕೇಳುವ ಹಾಗೆ ಶ್ರೀರಾಮ ಧನುಸ್ಸಿನ ಟಂಕಾರಧ್ವನಿಯನ್ನು ಜಾಗ್ರತೆಯಲ್ಲಿಯೇ ಕೇಳುವೆ, ॥೨೪॥-॥) ರಾಮಲಕ್ಷ್ಮಣರ ನಾಮಗಳನ್ನೊಳಗೊಂಡು ಒಳ್ಳೆಯ ಗೆಣ್ಣುಗಳನ್ನು ಹೊಂದಿರುವ ತೀಕ್ಷ್ಣವಾದ ಬಾಣಗಳು ವಿಷಜ್ವಾಲೆಯಿಂದೊಡಗೂಡಿರುವ ಬಾಯಿಗಳುಳ್ಳ ಕ್ರೂರವಾದ ಸರ್ಪಗಳು ಹೇಗೋ ಹಾಗೆ ಈ ನಿನ್ನ ಪಟ್ಟಣದಲ್ಲಿ ಸುರಿಯುವುವು ॥೨೫॥-॥ ಇದಲ್ಲದೆ ವೇಗವನ್ನು ಸಂಪಾದಿಸಲಿಕ್ಕಾಗಿ ಹದ್ದಿನ ಗರಿಗಳ

ಇಷವೋ ನಿಪತಿಷ್ಯಂತಿ ರಾಮಲಕ್ಷ್ಮಣ ಲಕ್ಷಣಾಃ ॥೨೫॥-॥
ರಕ್ಷಾಂಸಿ ಪರಿನಿಘ್ನಂತಃ ಪುರ್ಯಾಮಸ್ಯಾಂ ಸಮಂತತಃ ।
ಅಸಂಪಾತಂ ಕರಿಷ್ಯಂತಿ ಪತಂತಃ ಕಂಕವಾಸಸಃ ॥೨೬॥-॥
ರಾಕ್ಷಸೇಂದ್ರ ಮಹಾಸರ್ಪಾನ್ ಸ ರಾಮ ಗರುಡೋ ಮಹಾನ್ ।
ಉದ್ಧರಿಷ್ಯತಿ ವೇಗೇನ ವೈನತೇಯ ಇವೋರಗಾನ್ ॥೨೭॥-॥
ಅಪನೇಷ್ಯತಿ ಮಾಂ ಭರ್ತಾ ತ್ವತ್ತಃ ಶೀಘ್ರಮರಿಂದಮಃ ।
ಅಸುರೇಭ್ಯಃ ಶ್ರಿಯಂ ದೀಪ್ತಾಂ ವಿಷ್ಣುಸ್ತ್ರಿಭಿರಿವಕ್ರಮೈಃ ॥೨೮॥ ॥

---

ಬಾಯಿಗಳುಳ್ಳ, ಉರಗಾಇವ - ಕ್ರೂರಸರ್ಪಗಳಂತೆ, ಇಹ - ಈ ಲಂಕಾಪಟ್ಟಣದಲ್ಲಿ, ಶೀಘ್ರಂ - ಬೇಗನೆ, ನಿಪತಿಷ್ಯಂತಿ - ಬೀಳುವುವು ॥೨೫॥-॥ ಕಿಂಚ - ಮತ್ತು, ಕಂಕವಾಸಸಃ - ವೇಗಕ್ಕೋಸ್ಕರ ಹದ್ದಿನ ಗರಿಗಳನ್ನೊಳಗೊಂಡಿರುವ ಬಾಣಗಳು, ಅಸ್ಯಾಂ - ಈ, ಪುರ್ಯಾಂ - ಪಟ್ಟಣದಲ್ಲಿ, ಸಮಂತತಃ - ಎಲ್ಲ ಕಡೆಗಳಲ್ಲಿಯೂ, ಪತಂತಃ - ಬೀಳುತ್ತಿರುವುವಾಗಿ, ರಕ್ಷಾಂಸಿ - ರಕ್ಕಸರನ್ನು, ಪರಿನಿಘ್ನಂತಃ - ಸರ್ವತ್ರ ಹಿಂಸಿಸತಕ್ಕವುಗಳಾಗಿ, ಅಸಂಪಾತಂ - ಅವಕಾಶವಿಲ್ಲದಂತೆ, ಕರಿಷ್ಯಂತಿ - ಮಾಡುವುವು ॥೨೬॥-॥ ಮಹಾನ್ - ಮಹಾತ್ಮನಾದ, ಸಃ - ಆ, ರಾಮಗರುಡಃ - ಶ್ರೀರಾಮನೆಂಬ ಗರುತ್ಮಂತನು, ಉರಗಾನಿವ-ಕ್ರೂರವಾದ ಸರ್ಪಗಳನ್ನು ಹೇಗೋ ಹಾಗೆ, ವೇಗೇನ - ವೇಗದಿಂದ, ರಾಕ್ಷಸೇಂದ್ರಮಹಾಸರ್ಪಾನ್ - ರಕ್ಕಸರೊಡೆಯನೆಂಬ ದೊಡ್ಡ ಹಾವುಗಳನ್ನು, ಉದ್ಧರಿಷ್ಯತಿ - ಎತ್ತಿ ಎಸೆಯುವನು ॥೨೭॥-॥ ವಿಷ್ಣುಃ - ವಾಮನಮೂರ್ತಿಯಾದ ನಾರಾಯಣನು, ತ್ರಿಭಿಃ - ಮೂರಾದ, ಕ್ರಮೈಃ - ಪಾದನ್ಯಾಸಗಳಿಂದ (ಹೆಜ್ಜೆಗಳಿಂದ) ಅಸುರೇಭ್ಯಃ - ರಾಕ್ಷಸರ ಬಳಿಯಿಂದ, ದೀಪ್ತಾಂ - ಪ್ರಕಾಶಿಸುತಲಿದ್ದ, ಶ್ರಿಯಮಿವ - ತ್ರೈಲೋಕ್ಯರಾಜ್ಯಲಕ್ಷ್ಮಿಯನ್ನು ಹೇಗೋಹಾಗೆ, ಅರಿಂದಮಃ - ಸರ್ವಶತ್ರುಸಂಹಾರಕನಾದ, ಭರ್ತಾ- ನನ್ನ ಪ್ರಾಣನಾಥನು, ಶೀಘ್ರಂ - ಬೇಗನೆ, ತ್ವತ್ತಃ - ನಿನ್ನ ಬಳಿಯಿಂದ, ಮಾಂ - ನನ್ನನ್ನು, ಅಪನೇಷ್ಯತಿ - ಕೊಂಡುಹೋಗುವನು ॥೨೮॥ ॥ ಜನಸ್ಥಾನೆ - ಖರದೂಷಣರ ವಾಸಸ್ಥಾನವು, ಹತಸ್ಥಾನೆ (ಸತಿ) ಹಾಳುಮಾ

---

ನ್ನು ಪಡೆದಿರುವ ಶ್ರೀರಾಮಲಕ್ಷ್ಮಣರ ಬಾಣಗಳು ಈ ನಿನ್ನ ಪಟ್ಟಣದೊಳಗೆ ಎಲ್ಲ ಕಡೆಗಳಲ್ಲಿಯೂ ಹರಡಿ, ರಕ್ಕಸರ ಹಿಂಡನ್ನೆಲ್ಲಾ ನಾಶಗೊಳಿಸುತ ಎಡೆಯಿಲ್ಲದಂತೆ ಮಾಡುವುವು॥೨೬॥ ॥ ಮತ್ತು-ಪಕ್ಷಿರಾಜನಾದ ಗರುಡನು ಕ್ರೂರವಾದ ಸರ್ಪಗಳನ್ನು ಸೆಳೆದೊಯ್ಯುವಂತೆ ಶ್ರೀರಾಮಚಂದ್ರನೆಂಬ ವೈನತೇಯನು ರಕ್ಕಸರ ಪಡೆಯೆಂಬ ಸರ್ಪವನ್ನು ಶೀಘ್ರದಲ್ಲಿ ಸೆಳೆದೊಯ್ಯುವನು ॥೨೭॥-॥ ಎಲವೋ ನೀಚಾ ! "ನನ್ನ ಶರಗತಳಾದ ನಿನ್ನನ್ನು ರಾಮನು ಪುನಃ ಪಡೆಯಲಾರ" ಎಂದು ನೀನು ಬೊಗುಳದೆ, ಪೂರ್ವದಲ್ಲಿ-ಶ್ರೀಮನ್ನಾರಾಯಣನು ವಾಮನ ಮೂರ್ತಿಯಾಗಿ ಅವತರಿಸಿ, ಬಲಿಮೊದಲಾದವರಿಂದ ಬೆಳಗುತಲಿದ್ದ ಮೂರುಲೋಕದ ಸಾಮ್ರಾಜ್ಯವನ್ನು ತ್ರಿವಿಕ್ರಮದ ಪರಾಕ್ರಮದಿಂದ ಸೆಳೆದಂತೆ, ಆತನ ರೂಪಾಂತರವಾಗಿ ದುಷ್ಟಸಂಹಾರಕನೆನಿಸಿದ ನನ್ನ ವಲ್ಲಭನೂ ನನ್ನನ್ನು ನಿನ್ನಿಂದ ಸೆಳೆದೊಯ್ಯುವನು ॥೨೮॥-॥ ಎಲವೋ ಹೇಡೀ ! ಖರದೂಷಣ ಮೊದಲಾದ ರಕ್ಕಸರ ಪಡೆಗೆ ಆವಾಸಸ್ಥಾನವೆನಿಸಿದ್ದ ಜನಸ್ಥಾನವು, ನನ್ನ ವಲ್ಲಭನು ಆಚರಿಸಿದ ರಾಕ್ಷಸ ಸಂಹಾರದಿಂದ ಬಯಲಾಗುತ್ತಿರಲಾಗಿ, ಆ ರಕ್ಕಸರಂತೆ ಶ್ರೀರಾಮನನ್ನು ಎದುರಿಸಲು ಅಶಕ್ತನಾಗಿ ನನ್ನನ್ನು ಕದ್ದೊಯ್ಯುವಿಕೆ ಎಂಬ ಅನುಚಿತ

ಜನಸ್ಥಾನೇ ಹತಸ್ಥಾನೇ ನಿಹತೇ ರಕ್ಷಸಾಂ ಬಲೇ ।
ಅಶಕ್ತೇನ ತ್ವಯಾ ರಕ್ಷಃ ಕೃತ ಮೇತ ದಸಾಧು ವೈ ॥೨೯॥-॥
ಆಶ್ರಮಂ ತು ತಯೋಃ ಶೂನ್ಯಂ ಪ್ರವಿಶ್ಯ ನರಸಿಂಹಯೋಃ ।
ಗೋಚರಂ ಗತಯೋ ರ್ಭ್ರಾತ್ರೋ ರಪನೀತಾ ತ್ವಯಾ ಧಮ ॥೩೦॥-॥
ನ ಹಿ ಗಂಧ ಮುಪಾಘ್ರಾಯ ರಾಮಲಕ್ಷ್ಮಣಯೋ ಸ್ತ್ವಯಾ ।
ಶಕ್ಯಂ ಸಂದರ್ಶನೇ ಸ್ಥಾತುಂ ಶುನಾ ಶಾರ್ದೂಲಯೋ ರಿವ ॥೩೧॥-॥
ತಸ್ಯ ತೆ ವಿಗ್ರಹೇ ತಾಭ್ಯಾಂ ಯುಗಗ್ರಹಣ ಮಸ್ಥಿರಂ ।

ಡಲ್ಪಡುತಿರಲಾಗಿ, ರಕ್ಷಸಾಂ - ರಕ್ಕಸರ, ಬಲೆ - ಸೇನೆಯು, ನಿಹತೆ(ಸತಿ) ಧ್ವಂಸವಾಡಲ್ಪಡುತ್ತಿರಲಾಗಿ, ಹೇರಕ್ಷಃ - ಎಲವೋ? ಘೋರರಾಕ್ಷಸನೇ, ಅಶಕ್ತೇನ - ರಾಮನೆದುರಿಗೆ ನಿಲ್ಲಲಾರದ, ತ್ವಯಾ -ನಿನ್ನಿಂದ, ಅಸಾಧು - ಅಯೋಗ್ಯವೆನಿಸಿದ, ಏತತ್ - ಈ ನನ್ನನ್ನು ಕದ್ದುತಂದ ಕೆಲಸವು, ಕೃತಂವೈ - ಮಾಡಲ್ಪಟ್ಟಿತಲ್ಲವೇ? ॥೨೯॥-॥ ಹೇ ಅಧಮ - ಎಲ ಕೀಳಾ, ನರಸಿಂಹಯೋಃ - ಪುರುಷಶ್ರೇಷ್ಠರಾದ, ತಯೋಃ- ಆ ರಾಮಲಕ್ಷ್ಮಣರಿಂದ, ಶೂನ್ಯಂ - ಬರಿದಾಗಿದ್ದ (ರಹಿತವಾಗಿದ್ದ) ಆಶ್ರಮಂ - ನಮ್ಮ ತಪೋವನವನ್ನು, ಪ್ರವಿಶ್ಯ - ಹೊಕ್ಕು, ಭ್ರಾತ್ರೋಃ - ಅಣ್ಣತಮ್ಮಂದಿರಾದ, ತಯೋಃ - ಆ ರಾಮಲಕ್ಷ್ಮಣರು, ಬೇರಸ್ಥಳದಲ್ಲಿ ಒಬ್ಬರೊಬ್ಬರ ನೋಟವನ್ನು, ಗತಯೋಃ (ಸತೋಃ) ಹೊಂದಿದವನಾಗುತಿರಲಾಗಿ, ತ್ವಯಾ - ನಿನ್ನಿಂದ, (ಅಹಂ - ನಾನು) ಅಪನೀತಾ - ತರಲ್ಪಟ್ಟೆನು ॥೩೦॥-॥ (ಹೇರಾವಣ - ಎಲ ರಾವಣನೇ) ಶುನಾ - ನಾಯಿಮರಿಯಿಂದ, ಶಾರ್ದೂಲಯೋರಿವ - ಎರಡು ಹುಲಿಗಳ ನಡುವೆ ನಿಲ್ಲಲಿಕ್ಕೆ ಹೇಗೆ ಸಾಧ್ಯವಲ್ಲವೋ ಹಾಗೆ, ತ್ವಯಾ - ನಿನ್ನಿಂದ, ರಾಮಲಕ್ಷ್ಮಣಯೋಃ - ರಾಮಲಕ್ಷ್ಮಣರ, ಸಂದರ್ಶನೆ - ಎದುರಿನಲ್ಲಿ, (ದೃಷ್ಟಿಮಾರ್ಗದಲ್ಲಿ) ಗಂಧಂ - ಅವರ ವಾಸನೆಯನ್ನು, ಉಪಾಘ್ರಾಯ - ಆಘ್ರಾಣಿಸಿ, ಸ್ಥಾತುಂ - ನಿಲ್ಲಲಿಕ್ಕೆ, ನಶಕ್ಯಂ - ಸಾಧ್ಯವೇ ಇಲ್ಲ, ಹಿ - ನಿಶ್ಚಯು ॥೩೧॥-॥ ತಸ್ಯ - ಹಾಗೆ ಕಳ್ಳತನದಿಂದ ನನ್ನನ್ನು ತಂದ, ತೇ - ನಿನಗೆ, ತಾಭ್ಯಾಂ - ಆ ರಾಮಲಕ್ಷ್ಮಣರೊಡನೆ, ವಿಗ್ರಹೆ (ಸತಿ) ಕಾಳಗವುಂಟಾಗುತ್ತಿರಲಾಗಿ, ಯುಗಗ್ರಹಣಂ - ಜಯವನ್ನು ಕೈಗೊಳ್ಳುವುದೆಂಬುದು, ವೃತ್ರಸ್ಯ - ವೃತ್ರಾಸುರನ, ಏಕಸ್ಯ - ಒಂದಾದ, ಬಾಹೋಃ - ತೋಳಿಗೆ, ಇಂದ್ರಬಾಹುಭ್ಯಾಂ-ಇಂದ್ರನ ಭುಜಗಳಿಂದ, ನಿಗ್ರಹೇ (ಸತಿ) ಯುದ್ಧವುಂಟಾಗುತ್ತಿರಲಾಗಿ, ನಿಗ್ರಹಇವ-ಜಯವು ಹೇಗೋ ಹಾಗೆ, ಅಸ್ಥಿರಂ- ನೆಲೆಯಾದು

ಕಾರ್ಯವನ್ನು ಮಾಡಿದ್ದೀಯೆ ॥೨೯॥ ॥ ಪುರುಷಸಿಂಹರೆನಿಸಿದ ಆ ರಾಮ ಲಕ್ಷ್ಮಣರ ಸಾನ್ನಿಧ್ಯವಿಲ್ಲದೆ ಆಶ್ರಮವು ಬರಿಯಲಾಗಿ, ಅವರಿಬ್ಬರೂ ದೇಶಾಂತರದಲ್ಲಿ ಒಬ್ಬರೊಡನೊಬ್ಬರು ಸೇರುತ್ತಿರುವಲ್ಲಿ, ಅಂತಹ ಸಮಯದೊಳಗೆ ಎಲ ಅಧಮಾ ! ನನ್ನನ್ನು ಕದ್ದು ತಂದಿದ್ದೀಯೆ ॥೩೦॥ ॥ ಎಲ ಕೀಳಾ ! ಹೊರವಾದ ಎರಡು ಹುಲಿಗಳ ನಡುವೆ ನಾಯಕುನ್ನಿಯು ಹೇಗೆ ನಿಲ್ಲಲರಿಯದೋ, ಹಾಗೆಯೇ ರಾಮಲಕ್ಷ್ಮಣರ ಮೇಲೆ ಬೀಸಿದ ಗಾಳಿಯ ಗಂಧವನ್ನು ಆಘ್ರಾಣಿಸಿ ಅವರೆದುರಿಗೆ ನಿಲ್ಲಲಿಕ್ಕೆ ನಿನಗೆ ಶಕ್ತಿ ಇಲ್ಲ ॥೩೧॥ ॥ ಎಲವೋ ಅಸಾರ ! ಇಂದ್ರನಿಗೂ, ವೃತ್ರಾಸುರನಿಗೂ ಬವರವು ತೊಡಗಿದಾಗ ಇಂದ್ರನ ಎರಡು ಬಾಹುಗಳ ನಡುವೆ ಸಿಲುಕಿದ ವೃತ್ರನ ಒಂದು ತೋಳಿಗೆ ಗೆಲುವು ಹೇಗೆ ಕೈಸೇರದೇ ಹೋಯಿತೋ ಹಾಗೆಯೇ ರಾಮಲಕ್ಷ್ಮಣರ ನಡುವೆ ನಿನಗೆ ಕಾಳಗವು ಮೂಡಿದಾಗ ಜಯವು ನಿನ್ನಕೈಸೇರು

ವೃತ್ರಸ್ಯೈವ ಮಹೇಂದ್ರಬಾಹುಭ್ಯಾಂ ಬಾಹೋರೇಕಸ್ಯ ನಿಗ್ರಹಃ ||೩೨||-||
ಕ್ಷಿಪ್ರಂ ತವ ಸ ನಾಥೋ ಮೇ ರಾಮಃ ಸೌಮಿತ್ರಿಣಾ ಸಹ |
ತೋಯಮಲ್ಪ ಮಿವಾದಿತ್ಯಃ ಪ್ರಾಣಾ ನಾದಾಸ್ಯತೇ ಶರೈಃ ||೩೩||-||
ಗಿರಿಂ ಕುಬೇರಸ್ಯ ಗತೋಽಥವಾಲಯಂ ಸಭಾಂ ಗತೋ ವಾ ವರುಣಸ್ಯ ರಾಜ್ಞಃ |
ಅಸಂಶಯಂ ದಾಶರಥೇರ್ನ ಮೋಕ್ಷ್ಯಸೇ ಮಹಾದ್ರುಮಃ ಕಾಲಹತೋಽಶನೇರಿವ||೩೪|||

— ಇತಿಶ್ರೀಮತ್ಸುಂದರಕಾಂಡೆ ಏಕವಿಂಶಸ್ಸರ್ಗಃ —

ದಲ್ಲ ||೩೨||-|| ಸಃ - ಆ, ಮೇ - ನನ್ನ, ನಾಥಃ - ವಲ್ಲಭನಾದ, ರಾಮಃ - ರಾಮನು, ಸೌಮಿತ್ರಿಣಾಸಹ ಲಕ್ಷ್ಮಣನೊಡನೆ (ಆಗತಃ - ಇಲ್ಲಿಗೆ ಬಂದವನಾಗಿ) ಆದಿತ್ಯಃ - ಸೂರ್ಯನು, ಅಲ್ಪಂ - ಸ್ವಲ್ಪವಾದ, ತೋಯಮಿವ - ಜಲವನ್ನು ಹೇಗೋಹಾಗೆ, ತವ - ನಿನ್ನ, ಪ್ರಾಣಾನ್ - ಉಸಿರುಗಳನ್ನು, ಶರೈಃ - ಬಾಣಗಳಿಂದ ಕ್ಷಿಪ್ರಂ - ಬೇಗನೆ, ಆದಾಸ್ಯತೆ - ಎತ್ತಿ ಹಾಕುವನು, ||೩೩||-|| (ತ್ವಂ - ನೀನು) ಕುಬೇರಸ್ಯ - ಕುಬೇರನ, ಗಿರಿಂ - ಪರ್ವತವನ್ನು, (ಕೈಲಾಸವನ್ನು) ಅಥವಾ (ಪುರೀಂ - ಅಲಕಾವತಿಯನ್ನು)ಗತೋವಾ- ಹೊಂದಿದವನಾದರೂ, ವರುಣಸ್ಯ - ಜಲಾಧಿಪತಿಯ, [ಅಥವಾ] ರಾಜ್ಞಃ - ಭೂಪಾಲನ, ಸಭಾಂ - ಓಲಗವನ್ನು, ಕುರಿತು, ಗತೋವಾ - ಹೋದಾಗ್ಯೂ, ಕಾಲಹತಃ - ಮೃತ್ಯುವಿನಿಂದ ಪೆಟ್ಟುಬಿದ್ದವನಾಗಿ, ಮಹಾದ್ರುಮಃ - ದೊಡ್ಡಮರವು, ಅಶನೇರಿವ-ಸಿಡಿಲಿನ ಪೆಟ್ಟಿನಿಂದ ಹೇಗೋಹಾಗೆ, ದಾಶರಥೇಃ - ಶ್ರೀರಾಮನ ದೆಸೆಯಿಂದ, ಅಪಧಾಯ - ತಪ್ಪಿಸಿಕೊಂಡು, ನಮೋಕ್ಷ್ಯಸೆ - ಬಿಡಲ್ಪಡಲಾರೆ, ಅಸಂಶಯಂ - ಸಂದೇಹವಿಲ್ಲವೆಂದು ತಿಳಿ ||೩೪||-||

— ಇಂತು ಇಪ್ಪತ್ತೊಂದನೆಯ ಸರ್ಗಂ —

ವುದಿಲ್ಲವೆಂದು ವ್ಯರ್ಥವಾಗಿ ತಿಳಿ ||೩೨|| ನೆಲದಮೇಲೆ ಯಾವುದಾದರೊಂದು ಸ್ಥಳದಲ್ಲಿ ಅತ್ಯಲ್ಪವಾಗಿ ಉಳಿದಿರುವ ಜಲವನ್ನು ಬೇಸಿಗೆಯಲ್ಲಿ ಪ್ರಜ್ವಲಿಸುತಲಿರುವ ಸೂರ್ಯನು ತನ್ನ ಕಿರಣಗಳಿಂದ ಸೆಳೆಯುವ ಹಾಗೆ, ನನ್ನ ಪ್ರಾಣನಾಥನಾದ ಶ್ರೀರಾಮನು ಲಕ್ಷ್ಮಣನೊಡಗೂಡಿ ನಿನ್ನ ಪ್ರಾಣವಾಯುಗಳನ್ನು ತೀಕ್ಷ್ಣವಾದ ಶರಗಳಿಂದ ಶೀಘ್ರವಾಗಿ ಸೆಳೆಯುವನು ||೩೩||| ಎಲ ಕಳ್ಳಾ ! ಮುಗುಪಿಯ ಮಾತನ್ನು ಹೇಳುತ್ತೇನೆ ಕೇಳು, ನೀನು ಉಸಿರುಗಳ್ಳನಾಗಿ ಇಲ್ಲಿಂದ ಓಡಿಹೋಗಿ ಕುಬೇರನಗೆಡೆಯಾದ ಕೈಲಾಸದಲ್ಲಿ ಹುದುಗಿದರೂ, ಅಥವಾ ಅವನ ಪುರವಾದ ಅಳಕಾನಗರದಲ್ಲಿ ಅಡಗಿದರೂ, ಜಲಾಧಿಪತಿಯಾದ ವರುಣನ ಸಭೆಯೇ ಮೊದಲಾದ ಊರ್ಧ್ವಲೋಕಗಳಲ್ಲಿ ಹೊಕ್ಕರೂ, ಭೂರಾದಿ ಲೋಕಗಳನ್ನು ಪ್ರವೇಶಿಸಿದರೂ ಮೃತ್ಯುವಿಗೀಡಾದ ಮಹಾವೃಕ್ಷವು ಸಿಡಿಲಿನ ಪೆಟ್ಟಿನಿಂದ ತಪ್ಪಿಸಿಕೊಳ್ಳಲಾರದ ಹಾಗೆ ದಾಶರಥಿಯಿಂದ ತಲೆಯನ್ನು ತಪ್ಪಿಸಿಕೊಂಡು ನೀನು ಬಿಡುಗಡೆಯನ್ನು ಹೊಂದಲಾರೆ ||೩೪|| ||

ಇಂತು ಇಪ್ಪತ್ತೊಂದನೆಯ ಸರ್ಗಂ.

ವಿಶೇಷ—ರಾವಣನು ಮೇಲೆ ಕಠಿನವಾಗಿಯೂ, ಅಂತರಂಗದಲ್ಲಿ ಭಕ್ತಿಯಿಂದ ಶಾಂತವಾಗಿಯೂ ಭಾಷಿಸಿದನು, ಸೀತೆಯೂ ಹಾಗೆಯೇ "ಸಾಧುರಾವಣ" ಇತ್ಯಾದಿಯಿಂದ ಅದಕ್ಕೆ ತಕ್ಕಂತೆ ಶ್ರೀ ರಾಮನಿಗೆ ಅನುಗ್ರಹವು ಉಂಟಾಗುವಂತೆ ಆತನ ಸೇವೆಯನ್ನು ಮಾಡು, ನಾನೂ ಪ್ರಾರ್ಥಿಸುವೆನು ಎಂದು ಸೂಚಿಸಿ, ಲೋಕವನ್ನನುಸರಿಸಿ ದುರಾಚಾರ ಪ್ರವೃತ್ತನಾದ ಆ ರಾವಣನಿಗೆ ಶಿಕ್ಷಾಪ್ರಕಾರವು ಇಂಥದು ಎಂದ ತಿಳಿಯಪಡಿಸಲಿಕ್ಕೆ ಕಠಿನವಾದ ಪ್ರತ್ಯುತ್ತರವನ್ನು ಹೇಳಿದಳೆಂದು ತಿಳಿಯಬೇಕು.

ಶ್ರೀಃ

ಶ್ರೀ ರಾಮಚಂದ್ರ ಪರಬ್ರಹ್ಮಣೇನಮಃ

# ಶ್ರೀಮತ್ಸುನ್ದರ ಕಾಣ್ಡೇ-ದ್ವಾವಿಂಶಸ್ಸರ್ಗಃ.

ಸೀತಾಯಾ ವಚನಂ ಶ್ರುತ್ವಾ ಪರುಷಂ ರಾಕ್ಷಸಾಧಿಪಃ |
ಪ್ರತ್ಯುವಾಚ ತತ ಸ್ಸೀತಾಂ ವಿಪ್ರಿಯಂ ಪ್ರಿಯ ದರ್ಶನಾಂ ||೧||
ಯಥಾ ಯಥಾ ಸಾಂತ್ವಯಿತಾ ವಶ್ಯಃ ಸ್ತ್ರೀಣಾಂ ತಥಾ ತಥಾ |

---

— ಇಪ್ಪತ್ತೆರಡನೆಯ ಸರ್ಗಂ —

ಕಂದ|| ಪ್ರೀತಿವಿಯ ತನುಜೆಯ ನುಡಿಯಿಂ | ಕಡುಮುಳಿದಾ ಪಙ್ತಿಕಂಠ ನಿಡಿಯಲ್ಪೋದಂ |
ತಡೆದಳ್ ಮಡದಿಯೊಡಂ ತ | ನ್ನೊಡಗೂಡಲ್ ಗಡುವನಿತ್ತು ಪೊಳಲಂ ಸಾರ್ದಂ ||

ತತಃ - ಸೀತಾಸಂಭಾಷಣಾನಂತರದಲ್ಲಿ, ರಾಕ್ಷಸಾಧಿಪಃ - ರಾಕ್ಷಸೇಶ್ವರನು, ಸೀತಾಯಾಃ - ಜಾನಕಿಯ, ಪರುಷಂ - ಕಠಿನವಾದ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಪ್ರಿಯದರ್ಶನಾಂ - ಹಿತವಾದ ದರ್ಶನವುಳ್ಳ, ಸೀತಾಂ - ವೈದೇಹಿಯನ್ನು ಕುರಿತು, ವಿಪ್ರಿಯಂ - ಅನಿಷ್ಟವಚನವನ್ನು, ಪ್ರತ್ಯುವಾಚ - ಹೇಳತೊಡಗಿದನು ||೧|| (ಪುಮಾನ್ - ಪುರುಷನು) ಯಥಾಯಥಾ - ಹೇಗೆಹೇಗೆ, (ಸ್ತ್ರಿಯಃ - ಹೆಂಗಸರನ್ನು) ಸಾಂತ್ವಯಿತಾ - ಸಮಾಧಾನಪಡಿಸುವಂಥವನಾಗುತ್ತಾನೆಯೋ, ತಥಾತಥಾ - ಹಾಗೆಹಾಗೆಲ್ಲ, ಸ್ತ್ರೀಣಾಂ-ಹೆಂಗಸರಿಗೆ, ವಶ್ಯಃ-ಅಡಿಯಾಳಾದವನು (ಸ್ವಾಧೀನನು) ಆಗುತ್ತಾನೆ, ಯಥಾಯಥಾ-ಎಂತೆಂತು, ಪ್ರಿಯಂ - ಹಿತವಚನವನ್ನು, ವಕ್ತಾ - ಹೇಳತಕ್ಕವನಾಗುತ್ತಾನೆಯೋ, ತಥಾತಥಾ-ಅಂತಂತು, ಪರಿಭೂತಃ-

---

ಇಪ್ಪತ್ತೆರಡನೆಯ ಸರ್ಗಂ.

ಸೀತೆಯ ಸಂಭಾಷಣೆಯಾದಮೇಲೆ ಆಕೆಯ ಕಠಿನೋಕ್ತಿಗಳನ್ನು ಕೇಳಿದ ರಾವಣನು ಶುಭದರ್ಶನೆಯಾದ ಆಜಾನಕಿಯನ್ನು ಕುರಿತು ಬಹು ಅಹಿತವಾದ ಮಾತನ್ನು ಆಡತೊಡಗಿದನು || ೧ || ಎಲೆಸೀತೆ! ಲೋಕದಲ್ಲಿ ಯಾವಮನುಷ್ಯನೇ ಆಗಲಿ ಹೆಂಗಸರನ್ನು ಎಷ್ಟೆಷ್ಟು ಬಗೆಯಾಗಿ ಮೃದುಮಧುರವಾದ ಮಾತುಗಳಿಂದ ಸಮಾಧಾನಪಡಿಸಲು ಪ್ರಯತ್ನಿಸುತ್ತಾನೆಯೋ, ಅಷ್ಟಷ್ಟು ಅವನು ಅವರಿಗೆ ಅಡಿಯಾಳಾಗಿ, ಅವರಿಷ್ಟಕ್ಕೆ ಒಳಗಾಗುವನಲ್ಲದೆ, ನಿಸ್ಸಾರನೆನಿಸಿ ಅವರಿಗೆ ವಶನಾಗುತ್ತಾನೆ, ಮತ್ತು - ಹೇಗೆಹೇಗೆ ಪ್ರಿಯಾಲಾಪಗಳನ್ನು ಆಡತೊಡಗುತ್ತಾನೆಯೋ, ಹಾಗ ಹಾಗೆಲ್ಲ ಬಹುಶಃವಾಗಿ ಅವರ ತಿರಸ್ಕಾರಕ್ಕೆ ಈಡಾ

---

(೧) ರಾವಣನು ಇದುವರೆಗೆ ಅರಿಕೆಮಾಡಿದ ಅಂತರಂಗಾಭಿಪ್ರಾಯವನ್ನು ಮನದೊಳಗೆ ಅಡಗಿಸಿಕೊಂಡು "ಸಾಧು ರಾವಣ, ಪ್ರಸಾದಯಸ್ವತ್ವಾಂ" ಈ ಮೊದಲಾದ ಮಾತುಗಳನ್ನು ಅವನ ವಾಕ್ಯವಾಭಿಪ್ರಾಯಕ್ಕೆ ಉತ್ತರವನ್ನು ಸಂಗ್ರಹವಾಗಿ ಸೂಚಿಸಿ, ಹೊರಭಾಗಕ್ಕೆ ತೋರಿದ ಕಠಿನ ವಾಕ್ಯಗಳಿಗೇ ವಿಶೇಷವಾಗಿ ಕಠಿನ ವಾಕ್ಯಗಳನ್ನು ಪ್ರತ್ಯುತ್ತರವನ್ನಾಗಿ ಹೇಳಿದುದನ್ನು ಆಲಿಸಿ, ತಾನೂ ಅವುಗಳಿಗೆ ತಕ್ಕಂತೆಯೇ ಕ್ರೂರವಾಗಿ ತೋರು

ಯಥಾ ಯಥಾ ಪ್ರಿಯಂ ವಕ್ತಾ ಪರಿಭೂತ ಸ್ತಥಾ ತಥಾ ॥೨॥
ಸನ್ನಿಯಚ್ಛತಿ ಮೇ ಕ್ರೋಧಂ ತ್ವಯಿ ಕಾಮ ಸ್ಸಮುತ್ಥಿತಃ ।
ದ್ರವತೋ ಮಾರ್ಗ ಮಾಸಾದ್ಯ ಹಯಾ ನಿವ ಸುಸಾರಥಿಃ ॥೩॥
ವಾಮಃ ಕಾಮೋ ಮನುಷ್ಯಾಣಾಂ ಯಸ್ಮಿನ್ ಕಿಲ ನಿಬಧ್ಯತೇ ।
ಜನೇ ತಸ್ಮಿಂ ಸ್ತ್ವನುಕ್ರೋಶಃ ಸ್ನೇಹ ಶ್ಚ ಕಿಲ ಜಾಯತೇ ॥೪॥

ಅವರಿಂದ ಅಪಮಾನಪಟ್ಟವನಾಗುತ್ತಾನೆ ॥೨॥ (ಹೇಸೀತೆ - ಓ ಜಾನಕಿ !) ತ್ವಯಿ - ನಿನ್ನ ವಿಷಯದಲ್ಲಿ, ಸಮುತ್ಥಿತಃ - ನನಗೆ ಉಂಟಾದ, ಕಾಮಃ - ಮನ್ಮಥವಿಕಾರವು, ಮೆ - ನನ್ನ, ಕ್ರೋಧಂ - ಸಿಟ್ಟನ್ನು, ಸುಸಾರಥಿಃ - ಜಾಣನಾದ ಬಂಡಿಕಾರನು, ಅಮಾರ್ಗಂ - ತಪ್ಪುದಾರಿಯನ್ನು, ಆಸಾದ್ಯ - ಹೊಂದಿ, ದ್ರವತಃ - ಓಡುತಲಿರುವ, ಹಯಾನಿವ - ಕುದುರೆಗಳನ್ನು ಹೇಗೋಹಾಗೆ, ಸನ್ನಿಯಚ್ಛತಿ - ಅಡಗಿಸುತ್ತಲಿದೆ ॥೩॥ ಮನುಷ್ಯಾಣಾಂ - ಮನುಷ್ಯರೊಳಗೆ, ವಾಮಃ - ಸುಂದರನಾದ (ವಕ್ರನಾದ) ಕಾಮಃ - ಕಾಮನು (ಸಂಭೋಗೇಚ್ಛೆಯು) ಯಸ್ಮಿನ್ ಕಿಲ - ಯಾವನಲ್ಲಿಯಾದರೆ, ನಿಬಧ್ಯತೆ - ನೆಲೆಗೊಳ್ಳುತ್ತಾನೊ - (ಉಂಟಾಗುತ್ತಾನೆಯೋ ಅಥವಾ - ಯಸ್ಮಿನ್ - ಯಾರಲ್ಲಿ ಕಾಮನು ನೆಲೆಗೊಳಿಸಲ್ಪಡುತದೆಯೋ) ತಸ್ಮಿನ್ - ಅಂಥ, ಜನೇ - ಜನದಲ್ಲಿಯೇ, ಅನುಕ್ರೋಶಃ - ದಯೆಯು, ಸ್ನೇಹಶ್ಚ - ಅನುರಾಗವು (ಪ್ರೇಮವು) ಜಾಯತೇಕಿಲ - ಉಂಟಾಗುತ್ತದೆಯಲ್ಲವೆ ॥೪॥ ಏತಸ್ಮಾತ್ ಕಾರಣಾತ್ - ಈ ಕಾರಣದಿಂದಲೇ,

ಗುತ್ತಾನೆ ॥ [illegible] ॥ [illegible]:—ಓ [illegible]! [illegible] ತಟ್ಟುರತಕ್ಕ ದುಷ್ಟಾಶ್ವಗಳು ದಾರಿಯನ್ನು ಬಿಟ್ಟು [illegible] ಆಕುದುರೆಗಳನ್ನು ಬಲಾತ್ಕಾರದಿಂದ [illegible], [illegible] ನನಿಗೆ ಉಂಟಾಗಿರುವ ಕಾಮವಿಕಾರವು ನೀನಾಡುತಲಿರುವ [illegible] ನನ್ನ ಅಂತರಂಗದಲ್ಲಿ [illegible] ಬರುವ ಕೋಪವನ್ನು [illegible] ಕಾರ್ಯವನ್ನು ಮಾಡದಹಾಗೆ ಅಡಗಿಸುತಲಿದೆ. ॥೩॥ [illegible] ಪ್ರಾಣಿಗಳಿಗೆ ಸಂತೋಷಕರವೆನಿಸಿದ ಮನ್ಮಥವಿಕಾರವು [illegible] ಅಂಥವನಲ್ಲಿ ದಯೆ, ದಾಕ್ಷಿಣ್ಯ, ಪ್ರೇಮ, ಮೊದಲಾದ ಗುಣಗಳು ಉಂಟಾಗುವವೆ. ಅಥವಾ- ಯಾವನು ಯಾವ ಸ್ತ್ರೀ ವಿಷಯವಾದ ಕಾಮ ವಿಕಾರವನ್ನು [illegible] ಅನುಭವಿಸುತ್ತಾನೆಯೋ ಆ ಕಾಮಿನಿಯು ಆಪುರುಷನಲ್ಲಿ ಪ್ರತಿಕೂಲಳಾಗಿ ತಿರಸ್ಕರಿಸಿದಳೇ ಆದರೆ, ಆ ಪುರುಷನ ಸುಖಾನುಭವದ ಕೋರಿಕೆಯು ಪ್ರತಿಕೂಲವಾಗುತದೆಯಲ್ಲವೆ?, ಹಾಗಾದರೂ ಆ ಪುರುಷನಿಗೆ ಆರಮಣಿಯಲ್ಲಿ ಬಹಳವಾದ ಆಶೆಯಿರುವುದರಿಂದ ಪ್ರೇಮಾತಿಶಯವನ್ನು ದಯೆ, ದಾಕ್ಷಿಣ್ಯಾದಿಗಳನ್ನೂ ತೋರುವನು. ಆದಕಾರಣವೇ ಹಾಗೆಯೇ ನನಗೂ ಲೋಕೋತ್ತರಳಾದ ಸೀಮಂತಿನಿಯೆನಿಸಿದ ನಿನ್ನ ಯ ಸುಂದರವಾದ ವದನವನ್ನು ನೋಡಿದರೆ ನಿನ್ನಲ್ಲಿ ನನಗೆ ಅತ್ಯಂತವಾದ ಆಶೆಯು ಪ್ರತಿಕ್ಷಣದಲ್ಲಿಯೂ ಹೆಚ್ಚುತಲಿರುವುದರಿಂದ ಮಹಾ ಪ್ರಭುತ್ವದಲ್ಲಿರುವ ನನ್ನನ್ನು ನೀನು

ವಂತೆ ಪರುಷ ವಚನಗಳನ್ನಾಡಲಾರಂಭಿಸಿದನು (೨) ಓ ಜಗಜ್ಜನನಿ ! ಇಷ್ಟದೇವತೆಯಾದ ನಿನ್ನಲ್ಲಿ ನನಗೆ ಉಂಟಾದ ಪೂಜ್ಯಾನುರಾಗವು ಎಂದರೆ ಪರಮಭಕ್ತಿಯು, ರಾಕ್ಷಸ ಜಾತಿ ಸ್ವಭಾವದಿಂದ ನನ್ನಲ್ಲಿ ಮೊಳೆಯುವ ಕಾಮ, ಕ್ರೋಧ, ಲೋಭ, ಮೋಹ, ಮದ,

ಏತಸ್ಮಾತ್ಕಾರಣಾನ್ನ ತ್ವಾಂ ಘಾತಯಾಮಿ ವರಾನನೇ ।
ವಧಾರ್ಹಾ ಮವ ಮಾನಾರ್ಹಾಂ ಮಿಥ್ಯಾ ಪ್ರವ್ರಜಿತೇ ರತಾಂ॥ ೫ ॥
ಪರುಷಾ ಣೀಹ ವಾಕ್ಯಾನಿ ಯಾನಿ ಯಾನಿ ಬ್ರವೀಷಿ ಮಾಂ ।
ತೇಷು ತೇಷು ವಧೋಯುಕ್ತ ಸ್ತವ ಮೈಥಿಲಿ ದಾರುಣಃ ॥೬॥

ಹೇವರಾನನೇ -ಓಸುಮುಖೀ ! ಮಿಥ್ಯಾಪ್ರವ್ರಜಿತೆ - ಸುಳ್ಳುಸನ್ಯಾಸಿಯಾಗಿರುವ ರಾಮನಲ್ಲಿ, ರತಾಂ - ಆಸಕ್ತಳಾಗಿರುವವಳಾದ ಕಾರಣವೇ, ಅವಮಾನಾರ್ಹಾಂ - ಅಪಮಾನಪಡಿಸಲಿಕ್ಕೆ ತಕ್ಕವಳಾಗಿದ್ದರೂ, ವಧಾರ್ಹಾಂ - ಸಂಹರಿಸಲಿಕ್ಕೆ ಯೋಗ್ಯಳಾಗಿದ್ದರೂ, ತ್ವಾಂ - ನಿನ್ನನ್ನು, ನಘಾತಯಾಮಿ - ಕೊಲ್ಲದೆ ಇದೇನೆ ॥ (ವಿಶೇಷಾರ್ಥ - ಮನುಷ್ಯಾಣಾಂ - ಮನುಷ್ಯರಿಗೆ, ಯಸ್ಮಿನ್ - ಯಾವ ದೈವದಲ್ಲಿ, ಕಾಮಃ - ಭಕ್ತಿರೂಪವಾದ ಮನೋರಥವು, ನಿಬಧ್ಯತೆ - ನೆಲೆಗೊಳ್ಳುತದೆಯೋ, ತಸ್ಮಿನ್ ಜನೇತು - ಆ ದೈವಜನದಲ್ಲಿಯೇ, ಅನುಕ್ರೋಶಃ - ದಯೆಯೂ, ಸ್ನೇಹಶ್ಚ ಪ್ರೇಮವೂ, ಜಾಯತೇಕಿಲ - ಉಂಟಾಗುತ್ತದೆಯಲ್ಲವೆ?, ಏತಸ್ಮಾತ್ ಕಾರಣಾತ್ - ಈ ಕಾರಣದಿಂದ, ಪ್ರವ್ರಜಿತೆ-ಧರ್ಮ ಸಂರಕ್ಷಣೆಗಾಗಿ ವನ್ಯವೃತ್ತಿಯಲ್ಲಿರುವ, ರಾಮೇ- ನನಗೆ ಸ್ವಾಮಿಯಾದ ಶ್ರೀ ರಾಮನಲ್ಲಿ, ರತಾಂ - ಆಸಕ್ತಳಾಗಿರುವ, ತ್ವಾಂ- ನಿನ್ನನ್ನು, ಹೇವರಾನನೇ, ಓ ಮಂಗಳವದನೆಯೇ, ನಘಾತಯಾಮಿ - ಹಿಂಸಿಸಲಾರೆನು, ವಧಾರ್ಹಾಂ - ಕೊಲ್ಲತಕ್ಕವಳನ್ನೂ, ಅವಮಾನಾರ್ಹಾಂ - ಅಪಮಾನ ಪಡಿಸಲು ಯೋಗ್ಯಳಾದವಳನ್ನೂ, ಘಾತಯಾಮಿ ಇತ್ಯೇತತ್ - ಹಿಂಸಿಸುವೆನೆಂಬುದು, ಮಿಥ್ಯಾ - ಅನೃತವಾದದ್ದು) ಹೇಮೈಥಿಲಿ - ಓ ಸೀತೆಯೇ, ಇಹ - ಇಲ್ಲಿ, ಮಾಂ - ನನ್ನನ್ನು ಕುರಿತು, ಯಾನಿಯಾನಿ - ಯಾವಯಾವ, ಪರುಷಾಣಿ - ಕಠಿನವಾದ, ವಾಕ್ಯಾನಿ - ಮಾತುಗಳನ್ನು, ಬ್ರವೀಷಿ - ಹೇಳುತಲಿದ್ದೀಯೋ, ತೇಷುತೇಷು - ಆಯಾಯ ಮಾತುಗಳಲ್ಲೆಲ್ಲ, ತವ- ನಿನಗೆ, ದಾರುಣಃ - ಭಯಂಕರವಾದ, ವಧಃ - ಸಂಹಾರವೇ, ಯುಕ್ತಃ - ತಕ್ಕುದಾಗಿದೆ, ॥೬॥

ಆಶಿಸದೆ ಕಾಡು ಮೇಡುಗಳಲ್ಲಿ ಅಲೆಯುವ ವನ್ಯವೃತ್ತಿಯಲ್ಲಿರುವ ದುರ್ಬಲನಾದ ರಾಮನಲ್ಲಿ ಆಶೆಯುಂಟಾಗಿ ನಾನು ಎಷ್ಟುವಿಧಗಳಲ್ಲಿ ನಿನಗೆ ಹಿತೋಕ್ತಿಗಳನ್ನು ಹೇಳಿದರೂ ಅವುಗಳನ್ನು ಲೇಶವಾದರೂ ಗಮನಿಸದೆ, ನನ್ನನ್ನು ಆಶಿಸದೆ, ಕಠಿಣವಾದ ಮಾತುಗಳನ್ನಾಡಿ ತಿರಸ್ಕರಿಸುತಲಿರುವ, ಶಿಕ್ಷಾರ್ಹಳಾದ ನಿನ್ನನ್ನು ಕ್ರೂರವಾಗಿ ಶಿಕ್ಷಿಸಬೇಕೆಂದು ಉದ್ಯುಕ್ತನಾದರೂ ನಿನ್ನ ವಿಷಯವಾಗಿ ಪ್ರೇಮಾತಿಶಯವೂ, ದಯಾದಾಕ್ಷಿಣ್ಯಾದಿಗಳೂ ಮೊಳೆಯುತಲಿವೆ. ಇದರಿಂದಲೇ ನಿನ್ನನ್ನು ಹಿಂಸಿಸದೆ ಇದ್ದೇನೆ. ॥೪-೫॥ ಎಲೆ ಸೀತೆ ! ಈಗ ನೀನು ನನ್ನನ್ನು ಕುರಿತು ಹೇಳುವ ಕರ್ಣಕಠೋರಗಳಾದ ಮಾತುಗಳೊಳಗೆ ಒಂದೊಂದಕ್ಕೂ

ಮಾತ್ಸರ್ಯಗಳೆಂಬ ಶತ್ರುಗಳನ್ನು, ಉತ್ತಮನಾದ ಸಾರಥಿಯು ದುಷ್ಟಾಶ್ವಗಳನ್ನು ಹೇಗೋ ಹಾಗೆ ತಡೆಯುತಲಿದೆ (೪-೫) ಎಲೌ ಲೋಕಮಾತೆ ! ಲೋಕದಲ್ಲಿ ಯಾವನಿಗೆ ಯಾವ ದೈವದಲ್ಲಿ ಭಕ್ತಿಯುಂಟಾಗುತದೆಯೋ ಆ ದೈವಕ್ಕೂ ಆ ಭಕ್ತನಲ್ಲಿ ದಯೆದಾಕ್ಷಿಣ್ಯ, ಪ್ರೇಮಾತಿಶಯಗಳು ಉಂಟಾಗುತವೆ. ಆದಕಾರಣ ಶ್ರೀಮನ್ನಾರಾಯಣ ಸ್ವರೂಪನಾದ ಶ್ರೀರಾಮನೇ ನನಗೆ ಉಪಾಸ್ಯದೈವವು. ಅಂತಹ ಶ್ರೀರಾಮನಲ್ಲಿ ಮನಸ್ಸನ್ನು ಲೀನಮಾಡಿರುವ ನಿನ್ನಲ್ಲಿನಾನು ಪ್ರತಿಕೂಲವಾಗಿ ವರ್ತಿಸಿ ನಿನಗೆ ಹಿಂಸೆಯನ್ನು ಮಾಡುವುದುಂಟೆ? ಎಂದಿಗೂ ಇಲ್ಲ ನಿನಗೆ ನನ್ನಲ್ಲಿ ಶತ್ರುತ್ವ ಬುದ್ಧಿಯು ಬೇಡ. ಹಿಂಸಾರ್ಹಳಾದ ಹೆಂಗಸನ್ನೂ,ಅಪಮಾನಾರ್ಹಳಾದ

ಏವ ಮುಕ್ತ್ವಾ ತು ವೈದೇಹೀಂ ರಾವಣೋ ರಾಕ್ಷಸಾಧಿಪಃ ।
ಕ್ರೋಧ ಸಂರಂಭ ಸಂಯುಕ್ತಸ್ಸೀತಾ ಮುತ್ತರ ಮಬ್ರವೀತ್ ॥೭॥
ದ್ವೌ ಮಾಸೌ ರಕ್ಷಿತವ್ಯೌ ಮೇ ಯೋವಧಿ ಸ್ತೇಮಯಾ ಕೃತಃ ।

ಏವಂ - ಹೀಗೆಂದು, ರಾಕ್ಷಸಾಧಿಪಃ - ರಾಕ್ಷಸರಾಜನಾದ, ರಾವಣಃ - ರಾವಣನು, ವೈದೇಹೀಂ - ಸೀತೆಯನ್ನು ಕುರಿತು, ಉಕ್ತ್ವಾ - ಹೇಳಿ, ಕ್ರೋಧಸಂರಂಭ - ಕೋಪಾಟೋಪದಿಂದ, ಸಂಯುಕ್ತಃ - ಕೂಡಿದವನಾಗಿ, ಸೀತಾಂ - ಆ ಸೀತೆಯನ್ನು ಕುರಿತು, ಉತ್ತರಂ -ಪುನಃ ಪ್ರತ್ಯುತ್ತರವನ್ನು (ಮತ್ತೊಂದು ಮಾತನ್ನು) ಅಬ್ರವೀತ್ - ಹೇಳಿದನು, (ವಿಶೇಷ) ತವ - ನಿನ್ನ, ಮಾಂ - ಸೇವಕನಾದ ನನ್ನನ್ನು ಕುರಿತು, ಯಾನಿಯಾನಿ ಪರುಷಾಣಿ ವಾಕ್ಯಾನಿ - ಯಾವಯಾವ ಕ್ರೂರವಚನಗಳನ್ನು ಹೇಳುತಲಿದ್ದೀಯೋ, ತೇಷು ತೇಷು - ಆಯಾಯಾ ವಚನಗಳಲ್ಲೆಲ್ಲ, (ಮಮ - ನನಗೆ) ದಾರುಣಃ - ಕ್ರೂರವಾದ, ವಧಃ - ಸಂಹಾರವೇ, ಯುಕ್ತಃ - ಉಚಿತವಾದದ್ದಾಗಿದೆ, (ಉಳಿದದ್ದು ಸಮಾನ) ॥೭॥ ಹೇ ವರವರ್ಣಿನಿ - ಓ ಸುಂದರಾಂಗಿಯೇ, ಮಯಾ - ನನ್ನಿಂದ, ಯಃ - ಯಾವ, ಅವಧಿಃ- ಒಂದು ಸಂವತ್ಸರದ ಗಡುವು, ಕೃತಃ-ಮಾಡಲ್ಪಟ್ಟಿದ್ದಾಗಿದ್ದಿತೋ, (ತತ್ರ - ಆ ಒಂದುವರುಷದಲ್ಲಿ) ದ್ವೌ - ಎರಡಾದ, ಮಾಸೌ - ತಿಂಗಳುಗಳು ಮೇ - ನನ್ನಿಂದ, ರಕ್ಷಿತವ್ಯೌ - ನಿರೀಕ್ಷಿಸಲ್ಪಡತಕ್ಕವುಗಳಾಗಿವೆ, ತತಃ-ತರುವಾಯು, ತ್ವಂ-ನೀನು, ಮಮ- ನನ್ನ, ಶಯನಂ - ಹಾಸಿಗೆಯನ್ನು, ಆರೋಹ - ಏರು, ದ್ವಾಭ್ಯಾಂ - ಎರಡಾದ, ಮಾಸಾಭ್ಯಾಂ ಊರ್ಧ್ವಂ - ತಿಂಗಳುಗಳಿಗಿಂತ ಮೇಲಾದರೋ, ಮಾಂ - ನನ್ನನ್ನು, ಭರ್ತಾರಂ - ಪತಿಯನ್ನಾಗಿ, ಅನಿಚ್ಛತೀಂ - ಕೋರದಿರುವ, (ಸ್ವೀಕರಿಸದಿರುವ) ತ್ವಾಂ - ನಿನ್ನನ್ನು, ಮಮ -ನನ್ನ, ಪ್ರಾತರಾಶಾರ್ಥಂ - ಬೆಳಗಿನ ಊಟಕ್ಕೆ, (ಕಿಂಕರಾಃ - ಸೇವಕರು) ಮಹಾನಸೇ- ಅಡಿಗೆಯ ಮನೆಯಲ್ಲಿ, ಆರಭಂತೆ (ಆಲಭಂತೆ)

ನಿನ್ನನ್ನು ಕ್ರೂರವಾಗಿ ಶಿಕ್ಷಿಸತಕ್ಕದ್ದೇ ಯುಕ್ತವಾಗಿದೆ ಎಂದು ವೈದೇಹಿಯನ್ನು ಕುರಿತು ಹೇಳಿದ ರಾವಣನು ರೋಷಾವೇಶವನ್ನು ತಾಳಿ ಮತ್ತೆ ಇಂತೆಂದನು ॥ ೬-೭ ॥ ಎಲೆಜಾನಕೀ ! ಒಂದು ಸಂವತ್ಸರದೊಳಗೆ ನೀನು ನನ್ನ ಸುಪ್ಪತ್ತಿಗೆಯನ್ನು ಏರಬೇಕೆಂದು ಮೊದಲೇ ನಾನು ನಿನಗೆ ಹೇಳಿ ಇರಲಿಲ್ಲವೆ ? ಆಗಡುವಿನೊಳಗೆ ಈಗ ಹತ್ತು ತಿಂಗಳುಗಳು ಕಳೆದು ಹೋಗಿವೆ, ಇನ್ನು ಉಳಿದಿರುವ ಎರಡು ತಿಂಗಳುಗಳನ್ನು ಕಳೆದತರುವಾಯ ನೀನು ನನ್ನ ಶಯನವನ್ನು ಆರೋಹಣಮಾಡಿ,ನನ್ನ ಇಷ್ಟವನ್ನು ನೆರವೇರಿಸಬೇಕು. ಹಾಗೆ ನೆರವೇರಿಸದೆ ಹೋಗುವ ಸಂದರ್ಭದಲ್ಲಿ ಆ ಕೂಡಲೆ ಒಂದೆರಡು ದಿನಗಳನ್ನೂ ಕೂಡ ನಿರೀಕ್ಷಿಸದೆ

ಅಂಗನೆಯನ್ನೂ ಹಿಂಸಿಸಿ ನಾನು ಅಪಮಾನಪಡಿಸುವೆನೆಂಬ ಮಾತುಕೂಡ ಅಸತ್ಯವಲ್ಲದೆ ಸತ್ಯವಲ್ಲ. ಹೀಗಿರಲಾಗಿ ಭಗವತ್ಕೈಂಕರ್ಯಪರಳಾದ ನಿನ್ನನ್ನು ಹಿಂಸಿಸುವೆನೇ? ಆ ಅಭಿಪ್ರಾಯವನ್ನು ಬಿಡು, ನನ್ನನ್ನು ಅನುಗ್ರಹಿಸು. (೬-೭) ಎಲೌ ಸೀತಾದೇವಿಯೇ ! ನಿನ್ನ ಕಿಂಕರನಾದ ನನ್ನನ್ನು ಕುರಿತು ನೀನು ಹೇಳುತಲಿರುವ ಕಠಿನೋಕ್ತಿಗಳನ್ನು ವಿಚಾರಿಸಿ ನೋಡಿದರೆ, ನನಗೆ ಶ್ರೀರಾಮನಿಂದ ದಾರುಣವಾದ ವಧೆಯು ಜಾಗ್ರತೆಯಾಗಿ ಉಂಟಾಗುತದೆ ಎಂದೇ ತೋರುತದೆ. ಆಹಾ! ಅದು ನನಗೆ ಅಲಂಕಾರವಲ್ಲವೆ? ಮೂರುಜನ್ಮಗಳನ್ನು ಕಳೆದ ಮೇಲಲ್ಲವೇ ನಾನು ಪುನಃ ಪೂರ್ವದಂತೆ ಪರಮಪದದಲ್ಲಿ ನಿಮಗೆ ಕಿಂಕರನಾಗಿ ನಿಲ್ಲತಕ್ಕದು, ಆದಕಾರಣ ನನಗೆ ಬೇಗನೆ ವಧೆಯನ್ನು ಸೂಚಿಸುವ ನಿನ್ನ ಮಾತಿನಿಂದ ಕಿಂಕರನಾದ

ತತ ಶ್ಶಯನ ಮಾರೋಹ ಮಮ ತ್ವಂ ವರ ವರ್ಣಿನಿ ॥ ೮ ॥
ಊರ್ಧ್ವಂ ದ್ವಾಭ್ಯಾಂ ತು ಮಾಸಾಭ್ಯಾಂ ಭರ್ತಾರಂ ಮಾ ಮನಿಚ್ಛತೀಂ ।
ಮಮ ತ್ವಾಂ ಪ್ರಾತ ರಾಶಾರ್ಥ ಮಾರಭಂತೆ ಮಹಾನಸೆ ॥ ೯ ॥
ತಾಂ ತರ್ಜ್ಯಮಾನಾಂ ಸಂಪ್ರೇಕ್ಷ್ಯ ರಾಕ್ಷಸೇಂ ದ್ರೇಣ ಜಾನಕೀಂ ।

ಹಿಂಸಿಸುತ್ತಾರೆ, [ವಿಶೇಷ] ಹೇಮೇ - ಎಲೌ ಲಕ್ಷ್ಮೀಸ್ವರೂಪಳಾದ ಸೀತೆಯೇ, ಮಯಾ - ನನ್ನಿಂದ, ಯಃಅವಧಿಃ ಕೃತಃ - ಹನ್ನೆರಡು ತಿಂಗಳ ಕಾಲವು ನಿರೀಕ್ಷಿಸಲ್ಪಡತಕ್ಕದೆಂದು ಪ್ರಾರ್ಥಿಸಲ್ಪಟಿ ತೋ, ತತಃ - ಆ ಅವಧಿಯಲ್ಲಿ, ದ್ವೌಮಾಸೌ - ಎರಡು ಮಾಸಗಳು ಮಾತ್ರವೇ, ರಕ್ಷಿತವ್ಯೌ - ನಿನ್ನಿಂದ ನಿರೀಕ್ಷಿಸಲ್ಪಡತಕ್ಕವುಗಳಾಗಿವೆ, ದ್ವಾಭ್ಯಾಂ ಮಾಸಾಭ್ಯಾಂ ಊರ್ಧ್ವಂ- ಎರಡುತಿಂಗಳುಗಳ ತರುವಾಯು ನ - ನಿರೀಕ್ಷಿಸಬೇಕಾದುದಿಲ್ಲ, ಹೇ ವರವರ್ಣಿನಿ - ಎಲೈ ವರಾಂಗನೆಯೇ [ತತಃ - ತರುವಾಯು] ತೇ- ನಿನ್ನ, ಭರ್ತಾರಂ - ಪತಿಯನ್ನು, ಅನಿ ಚ್ಛತೀಂ - ಬಯುಸದಿರುವ, ಮಮ - ನನ್ನ, ಮಾಂಚಿ-ರಾಜ್ಯಲ ಕ್ಷ್ಮಿಯನ್ನೂ, (ಪ್ರಾಪ್ಸ್ಯಸಿ, - ಹೊಂದತಕ್ಕವಳಾಗಿದ್ದೀಯೆ) ತ್ವಾಂ - ನಿನ್ನನ್ನು, (ಪ್ರಾರ್ಥಯೇ - ಪ್ರಾರ್ಥಿಸುತ್ತಲಿದೇನೆ) ಮಮ - ನನ್ನ, ಮಹಾನಸೇ - ಅಡಿಗೆಯ ಶಾಲೆಯಲ್ಲಿ, ಪ್ರಾತರಾಶಾರ್ಥಂ - ಪ್ರಾ ತಃಕಾಲದಲ್ಲಿನ ನಿನ್ನ ಭೋಜನಕ್ಕೋಸ್ಕರ, ಆರಭಂತೆ - ಯೋಗ್ಯವಾದ ಪಶುಗಳನ್ನು ಹಿಂಸಿಸುತ್ತಾರೆ, (ಅಡಿಗೆ ಮಾಡುತ್ತಾರೆ) ತಾಃ - ಆ ಅಟ್ಟಪಶುಮಾಂಸಗಳನ್ನು, ಭಕ್ಷಯ - ಭುಜಿಸು, ಶಯನಂ -ನಿನ್ನ ಪತಿಯುಶಯನವನ್ನು, ಆರೋಹ - ಏರು,) ॥೮-೯॥ ರಾಕ್ಷಸೇಂದ್ರೇಣ - ರಕ್ಕಸರೊಡೆಯನಿಂದ, ತರ್ಜ್ಯ ಮಾನಾಂ - ಬೆದರಿಸಲ್ಪಡುತಲಿರುವ, ತಾಂಜಾನಕೀಂ - ಆ ಜಾನಕಿಯನ್ನು, ಸಂಪ್ರೇಕ್ಷ್ಯ-ನೋಡಿ, ತಾಃ- ಅವನ ಹಿಂದೆ ಬಂದಿದ್ದ, (ಅಲ್ಲಿದ್ದ ಅಥವಾ ಆಕಾಶದಲ್ಲಿದ್ದ) ದೇವಗಂಧರ್ವಕನ್ಯಾಃ-ದೇವತೆಗಳ ಮತ್ತು

ಅವಧಿಯು ತೀರಿದ ಮರುದಿನ ಮುಂಜಾನೆಯೇ ನನ್ನ ಬೆಳಗಿನ ಊಟದ ಅಡಿಗೆಯ ಮನೆಯಲ್ಲಿ ನನ್ನಕಿಂಕರರು ಎಳದೊಯ್ದು ನಿನ್ನನ್ನು ಅಡಿಗೆಮಾಡಿ ಊಟಕ್ಕೆ ಅಣಿಮಾ ಡದೆ ಇರಲಾರರು. ॥ ೮-೯ ॥ ಎಂದೀ ಪ್ರಕಾರವಾಗಿ ರಾವಣನು ಜಾನಕಿಯನ್ನು ಕುರಿ ತು ಗರ್ಜಿಸಿ ಹೇಳುತಲಿರುವ ಕಠಿನೋಕ್ತಿಗಳನ್ನು ಕೇಳಿ ಅಲ್ಲಿದ್ದ ದೇವಗಂಧರ್ವ ಕನ್ಯೆ ಯರು ಸೀತಾದೇವಿಗುಂಟಾಗುತಲಿರುವ ಹಿಂಸೆಯನ್ನು ನೋಡಿ, ತಾಳಲಾರದೆ ಕಣ್ಣುಗಳಲ್ಲಿ

ನನ್ನಲ್ಲಿ ನಿನಗೆ ಅನುಗ್ರಹಬುದ್ಧಿಯುಂಟಾಯಿತೆಂದು ಭಾವಿಸುತ್ತೇನೆ.(೮-೯)ಎಲೈ ಲಕ್ಷ್ಮೀ ಸ್ವರೂಪಳಾದ ಸೀತೆಯೇ ! ಒಂದು ಸಂವತ್ಸರದವರೆಗೂ ನಿರೀಕ್ಷಿಸುತಲಿರಬೇಕೆಂದು ನಾನು ರಾಕ್ಷಸ ಸ್ವಭಾವದಿಂದ ಕೋಪಗೊಂಡು ನೇಮಿಸಿದ ಗಡುವಿನೊಳಗೆ ಇನ್ನು ಎರಡು ತಿಂಗ ಳಕಾಲ ಮಾತ್ರ ನಿರೀಕ್ಷಿಸಬೇಕಾಗಿದೆ, ತರುವಾಯು ನಿರೀಕ್ಷಿಸಬೇಕಾದುದಿಲ್ಲ. ಬಳಿಕ ನನ್ನನ್ನು ಬಯುಸದಿರುವ ಈ ರಾಜ್ಯಲಕ್ಷ್ಮಿಯನ್ನು ನಿನ್ನ ಪತಿಯೊಡನೆ ನೀನು ಹೊಂದಬ ಹುದು. ಆದರೆ ನನ್ನದೊಂದು ಪ್ರಾರ್ಥನೆ ಇದೆ. ಅದೇನೆಂದರೆ—ನನ್ನ ಕೈಂಕರ್ಯವನ್ನು ಸ್ವೀಕರಿಸಿ ನನ್ನ ಕೋರಿಕೆಯನ್ನು ನೆರವೇರಿಸು, ಇಲ್ಲಿಗೆ ಬಂದದು ಮೊದಲ್ಗೊಂಡು ನಿರಾ ಹಾರಗಳಲ್ಲದೆ ಇದ್ದೀಯೆ, ಪ್ರಾತಃಕಾಲ ಭೋಜನಾರ್ಥವಾಗಿ ನಾನಾವಿಧಗಳಾದ ಪಶು ಮಾಂಸಗಳನ್ನು ನನ್ನ ಕಿಂಕರರು ಪಕ್ವಮಾಡುವರು, ಆದುದರಿಂದ ಅವುಗಳನ್ನು ನೀನು ಆರೋಗಣೆಮಾಡಿ. ನಾನು ಭಕ್ತಿಪೂರ್ವಕವಾಗಿ ಸಮರ್ಪಿಸುವ ದಿವ್ಯ ಹಂಸತೂಲಿಕಾ

ದೇವ ಗಂಧರ್ವ ಕನ್ಯಾ ಸ್ತಾ ವಿಷೇದು ರ್ವಿಕೃತೇಕ್ಷಣಾಃ ॥ ೧೦ ॥
ಓಷ್ಠ ಪ್ರಕಾರೈ ರಪರಾ ವಕ್ತ್ರ ನೇತ್ರೈ ಸ್ತಥಾಪರಾಃ ।
ಸೀತಾ ಮಾಶ್ವಾಸಯಾಮಾಸು ಸ್ತರ್ಜಿತಾಂ ತೇನ ರಕ್ಷಸಾ ॥ ೧೧ ॥
ತಾಭಿ ರಾಶ್ವಾಸಿತಾ ಸೀತಾ ರಾವಣಂ ರಾಕ್ಷಸಾಧಿಪಂ ।
ಉವಾಚಾತ್ಮಹಿತಂ ವಾಕ್ಯಂ ವೃತ್ತ ಶೌಂಡೀರ್ಯ ಗರ್ವಿತಂ ॥ ೧೨ ॥
ನೂನಂ ನ ತೇ ಜನಃ ಕಶ್ಚಿ ದಸ್ತಿ ನಿಶ್ರೇಯಸೇ ಸ್ಥಿತಃ ।

ಗಂಧರ್ವರ ಕನ್ಯೆಯರೂ, ವಿಕೃತೇಕ್ಷಣಾಃ - (ಸತ್ಯಃ) - ವಿಕಾರವಾದ ದೃಷ್ಟಿಗಳುಳ್ಳವರಾಗಿ, ವಿಷೇದುಃ - ವ್ಯಥೆಪಟ್ಟರು (ಸೀತೆಗೆ ಇಂತಹ ದುಃಖವನ್ನುಂಟು ಮಾಡುತ್ತಾನಲ್ಲ ಎಂದು ದುಃಖಿಸಿದರು॥ ) ತೇನರಕ್ಷಸಾ - ಆ ರಾವಣನಿಂದ, ತರ್ಜಿತಾಂ - ಹೆದರಿಸಲ್ಪಟ್ಟ, ಸೀತಾಂ - ಸೀತಾದೇವಿಯನ್ನು, ಅಪರಾಃ - ಮತ್ತೆ ಕೆಲವು ಮಂದಿ ದೇವಗಂಧರ್ವ ಕನ್ಯೆಯರು, ಓಷ್ಠಪ್ರಕಾರೈಃ - ತುಟಿಗಳ ಅಲ್ಲಾಟಗಳ ಸಂಜ್ಞೆಗಳಿಂದಲೂ, ತಥಾ - ಹಾಗೆಯೇ, ಅಪರಾಃ - ಮತ್ತೆ ಕೆಲವುಮಂದಿ ಸ್ತ್ರೀಯರು, ವಕ್ತ್ರ ನೇತ್ರೈಃ - ಮೋರೆ ಮತ್ತು ಕಣ್ಣುಗಳ ಸನ್ನೆಗಳಿಂದಲೂ, ಆಶ್ವಾಸಯಾಮಾಸುಃ - ಸಮಾಧಾನಪಡಿಸಿದರು ॥೧೧॥ ತಾಭಿಃ- ಆ ಹೆಂಗಸರಿಂದ, ಆಶ್ವಾಸಿತಾ - ಸಮಾಧಾನಪಡಿಸಲ್ಪಟ್ಟ, ಸೀತಾ - ಜಾನಕಿಯು, ರಾಕ್ಷಸಾಧಿಪಂ - ರಕ್ಕಸರ ಅರಸಾದ, ರಾವಣಂ - ರಾವಣನನ್ನು, ಕುರಿತು, ಆತ್ಮಹಿತಂ - ತನಗೆ ಹಿತವೆನಿಸಿದ (ಅವನಿಗೆ ಮೇಲಾಗುವ) ವಾಕ್ಯಂ - ಮಾತನ್ನು, ವೃತ್ತಶೌಂಡೀರ್ಯಗರ್ವಿತಂ - ಪಾತಿವ್ರತ್ಯದ ಬಲದಿಂದ ಕೊಬ್ಬಿರುವ ಹಾಗೆ, ಉವಾಚ - ಹೇಳತೊಡಗಿದಳು ॥೧೨॥ ಹೇ ರಾವಣ - ಎಲೈ ರಾವಣನೇ, ತೇ - ನಿನಗೆ, ನಿಶ್ರೇಯಸೇ-ಶುಭವನ್ನುಂಟು ಮಾಡುವುದಕ್ಕೋಸ್ಕರ, ಸ್ಥಿತಃ-ಸಿದ್ಧನಾಗಿರುವ,(ಹಿತಚಿಂತಕನಾದ,) ಕಶ್ಚಿತ್ ಜನಃ- ಯಾವನೊಬ್ಬ ಮನುಷ್ಯನೂ, ನ - ಇಲ್ಲ, ನೂನಂ - ನಿಶ್ಚಯ, ಯಃ - ಯಾವನು, ಅಸ್ಮಾತ್ - ಈ

ತಮ್ಮ ಮನೋವ್ಯಥೆಯನ್ನು ಸೂಚಿಸುತ ವಿಶೇಷವಾಗಿ ವಿಷಾದಿಸುತಲಿದ್ದರು. ॥೧೦॥ ಹೀಗೆ ರಾವಣನು ಸೀತೆಯನ್ನು ಬೆದರಿಸುತ್ತಿರಲಾಗಿ ದೇವಗಂಧರ್ವ ಕನ್ಯೆಯರು ಮನಸ್ಸಿನೊಳಗೆ ಸಂಕಟ ಪಡುತ್ತಿದ್ದುದಲ್ಲದೆ, ಅವರೊಳಗೆ ಕೆಲವರು ಬಾಯನ್ನು ತೆರೆದು ಮಾತನಾಡಲು ಶಕ್ತಿರಹಿತರಾಗಿರುವ ರಾವಣನಿಂದ ಹೆದರಿ, ತುಟಿಗಳನ್ನು ಅದಿರಿಸುತ್ತಾ ಆ ಸಂಜ್ಞೆಗಳಿಂದಲೂ, ಮತ್ತೆ ಕೆಲವರು ಮುಖಭಾವಗಳ ಸಂಜ್ಞೆಯಿಂದಲೂ, ಇನ್ನು ಕೆಲವರು, ಕಣ್ಣುಗಳನ್ನು ತಿರುಗಿಸುವ ಸನ್ನೆಗಳಿಂದಲೂ, ತಾಯಿ ! ನೀನು ಹೆದರಬೇಡ, ಎಂದು ಸಮಾಧಾನಪಡಿಸುತಲಿದ್ದರು ॥ ೧೧ ॥ ಹಾಗೆ ಅವರಿಂದ ಆದರಿಸಿ ಸಮಾಧಾನಪಡಿಸಲ್ಪಡುತಲಿರುವ ಜಾನಕಿಯು ರಾಕ್ಷಸ ರಾಜನಾದ ರಾವಣನನ್ನು ಕುರಿತು ತನಗೂ ಅವನಿಗೂ ಹಿತವಾಗುವಂತೆಯೂ, ಪಾತಿವ್ರತ್ಯ ಬಲದಿಂದ ಗರ್ವಿಸಿರುವಂತೆಯೂ ಇರುವ ಮಾತನ್ನಾಡತೊಡಗಿದಳು ॥ ೧೨ ॥ ಎಲೈ ರಾವಣನೇ ! ನಿನ್ನ ಬುದ್ಧಿಯು ಒಳ್ಳೆಯ ದಾರಿಯಲ್ಲಿ ತಿರುಗುವಹಾಗೆ ನಿನ್ನ ಮೇಲ್ಮೆಗಾಗಿ ಹಿತೋಪದೇಶವನ್ನು ಮಾಡುವವರೊಬ್ಬರೂ ಇಲ್ಲಿಇಲ್ಲ. " ಇಂತಹ ಪಾಪಕರ್ಮವನ್ನು ನೀನು ಮಾಡಬಾರದು '' ಎಂದು ಈ ನೀಚ ಕೃತ್ಯದಿಂದ ನಿನ್ನನ್ನು

ತಲ್ಪದಲ್ಲಿ ಪವಳಿಸಿ ಸಿದ್ಧ್ಯದು, ನನ್ನನ್ನು ಕೃತಾರ್ಥನನ್ನಾಗಿ ಮಾಡು. (೧೦) ದೇವಗಂಧರ್ವಾದಿ ಕನ್ನೆಯರಿಗೆ ರಾವಣನ ಕಠಿನೋಕ್ತಿಗಳ ಒಳಗುಟ್ಟು ತಿಳಿಯಲಿಲ್ಲ.

ನಿವಾರಯತಿ ಯೋ ನ ತ್ವಾಂ ಕರ್ಮಣೋಽಸ್ಮಾದ್ವಿಗರ್ಹಿತಾತ್ ॥ ೧೩॥
ಮಾಂ ಹಿ ಧರ್ಮಾತ್ಮನಃ ಪತ್ನೀಂ ಶಚೀಮಿವ ಶಚೀಪತೇಃ ।
ತ್ವದನ್ಯಸ್ತ್ರಿಷು ಲೋಕೇಷು ಪ್ರಾರ್ಥಯೇನ್ಮನಸಾಪಿ ಕಃ ॥ ೧೪ ॥
ರಾಕ್ಷಸಾಧಮ ರಾಮಸ್ಯ ಭಾರ್ಯಾಮಮಿತತೇಜಸಃ ।
ಉಕ್ತವಾನಸಿ ಯತ್ಪಾಪಂ ಕ್ವ ಗತಸ್ತಸ್ಯ ಮೋಕ್ಷ್ಯಸೇ ॥ ೧೫ ॥
ಯಥಾ ದೃಪ್ತಶ್ಚ ಮಾತಂಗಃ ಶಶಶ್ಚ ಸಹಿತೋ ವನೇ ।
ತಥಾ ದ್ವಿರದವದ್ರಾಮಸ್ತ್ವಂ ನೀಚ ಶಶವತ್ ಸ್ಮೃತಃ ॥ ೧೬ ॥

ವಿಗರ್ಹಿತಾತ್ - ನಿಂದಿತವಾಗಿರುವ, ಕರ್ಮಣಃ - ಕೆಲಸದ ದೆಸೆಯಿಂದ, ತ್ವಾಂ - ನಿನ್ನನ್ನು, ನಿವಾರಯತಿ - ಹಿಂದಿರುಗಿಸಬಲ್ಲನೋ, ಸಃ - ಅಂಥವನೂ, ನ - ಇಲ್ಲ ॥೧೩॥ ಧರ್ಮಾತ್ಮನಃ - ಧರ್ಮಸ್ವರೂಪನಾದ ರಾಮನಿಗೆ, ಪತ್ನೀಂ - ಧರ್ಮಪತ್ನಿಯಾದ, ಮಾಂಹಿ - ನನ್ನನ್ನಾದರೋ, ಶಚೀಪತೇಃ - ಇಂದ್ರನ, ಶಚೀಮಿವ - ಪತ್ನಿಯಾದ ಶಚೀದೇವಿಯನ್ನು ಹೇಗೋ ಹಾಗೆ, ತ್ವತ್ - ನಿನಗಿಂತಲೂ, ಅನ್ಯಃ - ಬೇರಾದ, ಕಃ - ಯಾವ ಪುರುಷನು, ಮನಸಾಪಿ - ಮನಸ್ಸಿನಿಂದಲಾದರೂ, ಪ್ರಾರ್ಥಯೇತ್ - ಕೋರಬಲ್ಲನು ॥ ೧೪ ॥ ರಾಕ್ಷಸಾಧಮ - ಓ ನೀಚರಾಕ್ಷಸನೇ, ಅಮಿತತೇಜಸಃ - ಅಪರಿಮಿತ ಪರಾಕ್ರಮವುಳ್ಳ, ರಾಮಸ್ಯ - ಶ್ರೀರಾಮಚಂದ್ರನಿಗೆ, ಭಾರ್ಯಾಂ - ಧರ್ಮಭಾರ್ಯೆಯಾದ ನನ್ನನ್ನು ಕುರಿತು, ಯತ್ - ಯಾವ, ಪಾಪಂ - ಪಾಪವಾಕ್ಯವನ್ನು, ಉಕ್ತವಾನ್ - ಹೇಳಿದಂಥವನು, ಅಸಿ - ಆಗುತಲಿದ್ದೀಯೋ, ತಸ್ಯ - ಅದರಿಂದ, ಕ್ವ - ಎಲ್ಲಿಗೆ, ಗತಃ - ಹೋದವನಾಗಿ, ಮೋಕ್ಷ್ಯಸೇ - ಬಿಡುಗಡೆಯನ್ನು ಹೊಂದೀಯೆ ॥೧೫॥ ಹೇ ನೀಚ - ಎಲ ಅಧಮನೆ, ದೃಪ್ತಃ - ಮದಿಸಿದ, ಮಾತಂಗಃ - ಆನೆಯೂ, ಶಶಶ್ಚ - ಮೊಲವೂ, ವನೇ - ಅರಣ್ಯದಲ್ಲಿ, ಸಹಿತೌ - ಹೋರಾಡಲು, ಒಡಗೂಡಿದವುಗಳಾದರೆ, ಯಥಾ - ಹೇಗೋ, ತಥಾ - ಹಾಗೆಯೇ, ರಾಮಃ - ಶ್ರೀ ರಾಮನು, ದ್ವಿರದವತ್ - ಮದದಾನೆಯಂತೆ, ತ್ವಂ - ನೀನು, ಶಶವತ್ - ಮೊಲದಂತೆ, [ಭವಥಃ - ಆಗಿರುವಿರಿ] ಇತಿ - ಹೀಗೆಂದು, ಸ್ಮೃತಃ - ನೆನೆಯಲ್ಪಡುತ್ತದೆ ॥೧೬॥

---

ಹಿಂದಿರುಗಿಸುವವರೂ ಇಲ್ಲ, ಇದು ನಿಜ, ಮಾಡತಕ್ಕುದೇನು? ॥೧೩॥ ಎಲದುಷ್ಟ! ದೇವೇಂದ್ರನ ಭಾರ್ಯೆಯಾದ ಶಚೀದೇವಿಯನ್ನು ಕೋರುವಹಾಗೆ, ಸಾಕ್ಷಾತ್ ಧರ್ಮಸ್ವರೂಪನಾಗಿರುವ ಮಹಾನುಭಾವನಾದ ಶ್ರೀರಾಮಚಂದ್ರನ ಧರ್ಮಪತ್ನಿಯಾದ ನನ್ನನ್ನು ನೀಚನಾದ ನೀನುಹೊರತು ಮತ್ತಾವನಾದರೂ ಕೋರತಕ್ಕವನು ಈ ಮೂರುಲೋಕದಲ್ಲಿ ಎಲ್ಲಿಯಾದರೂ ಉಂಟೆ?

ಎಲ ಅಧಮ ರಾಕ್ಷಸ! ಅಪರಿಮಿತ ಪರಾಕ್ರಮಶಾಲಿಯಾದ ಶ್ರೀರಾಮಚಂದ್ರನಿಗೆ ಧರ್ಮಪತ್ನಿಯೆನಿಸಿದ ನನ್ನನ್ನು ಕುರಿತು ಹರಟಿದ ಪಾಪವಚನಗಳ ಫಲವನ್ನು ಅನುಭವಿಸದೆ ನೀನು ಈ ಪ್ರಪಂಚದಲ್ಲಿ ಎಲ್ಲಿಗೆಹೋಗಿ ಬಿಡುಗಡೆಯನ್ನು ಹೊಂದಬಲ್ಲೆ? ॥೧೫॥ ಮದವೇರಿದ ಆನೆಯೂ, ಮೊಲವೂ ಒಂದಾನೊಂದು ಅರಣ್ಯದಲ್ಲಿ ದೈವವಶದಿಂದ ಸೇರಿ ಯುದ್ಧಮಾಡ ತೊಡಗಿದರೆ ಹೇಗಿರುವುದೋ ಹಾಗೆಯೇ ಮದದಾನೆಯಂತೆ ಶ್ರೀರಾಮನು ಇರುವನು. ಕೀಳಾದ ಮೊಲದಂತೆ ನೀನೂ ಇರುವೆ, ಹಾಗೆ ಅವೆರಡರ ಹೋರಾಟದಂತೆ ನಿಮ್ಮಿಬ್ಬರ ಹೋರಾಟವೂ ಪರಿಣಮಿಸುವುದು ॥೧೬॥ ಓ ರಾವಣಾ! ಶ್ರೀರಾಮಚಂದ್ರನ

ಸತ್ವ ಮಿಕ್ಷ್ವಾಕು ನಾಥಂ ವೈ ಕ್ಷಿಪ ನ್ನಿಹ ನ ಲಜ್ಜಸೇ ।
ಚಕ್ಷುಷೋ ರ್ವಿಷಯಂ ತಸ್ಯ ನ ತಾವ ದುಪಗಚ್ಛಸಿ ॥ ೧೭ ॥
ಇಮೇ ತೇ ನಯನೇ ಕ್ರೂರೇ ವಿರೂಪೇ ಕೃಷ್ಣಪಿಂಗಳೇ ।
ಕ್ಷಿತೌ ನ ಪತಿತೇ ಕಸ್ಮಾ ನ್ಮಾ ಮನಾರ್ಯ ನಿರೀಕ್ಷತಃ ॥ ೧೮ ॥
ತಸ್ಯ ಧರ್ಮಾತ್ಮನಃ ಪತ್ನೀಂ ಸ್ನುಷಾಂ ದಶರಥಸ್ಯ ಚ ।
ಕಥಂ ವ್ಯಾಹರತೋ ಮಾಂ ತೇ ನ ಜಿಹ್ವಾ ವ್ಯವ ಶೀರ್ಯತೇ ॥ ೧೯ ॥

---

ಸಃತ್ವಂ - ಅಂತಹ ನೀಚನಾದ ನೀನು, ಇಕ್ಷ್ವಾಕುನಾಥಂ-ಇಕ್ಷ್ವಾಕು ಕುಲೋತ್ತಮನಾದ ರಾಮನ ನನ್ನು, ಕ್ಷಿಪನ್ - ಹಾಸ್ಯಮಾಡುತ್ತಿರುವವನಾಗಿ, ಇಹ - ಇಲ್ಲಿ, ನಲಜ್ಜಸೇ - ನಾಚಿಕೆಪಡದೆ ಇದ್ದೀಯೆ, ತಸ್ಯ - ರಾಮಚಂದ್ರನ, ಚಕ್ಷುಷೋಃ - ದೃಷ್ಟಿಗಳಿಗೆ, ವಿಷಯಂ - ಗೋಚರವನ್ನು, ನತಾವದುಪ ಗಚ್ಛಸಿ - ಹೊಂದದೆ ಇದ್ದೀಯೆ (ಗೋಚರಿಸದೆ ಹೋಗುವೆಯ) (೧೭) ಹೇ ಅನಾರ್ಯ - ಎಲವೋ ಅ ಯೋಗ್ಯನೆ, ಮಾಂ - ನನ್ನನ್ನು, ನಿರೀಕ್ಷತಃ(ನಿರೀಕ್ಷಮಾಣಸ್ಯ) ನೋಡುತಲಿರುವ, ತೆ - ನಿನ್ನ, ಕ್ರೂರೆ, ಭಯಂಕರಗಳಾದ, ಕೃಷ್ಣಪಿಂಗಳೆ - ಕಪ್ಪು ಮತ್ತು ಗೋರೋಚನದ ವರ್ಣದವುಗಳಾದ ಕಾರಣವೇ- ವಿರೂಪೆ - ವಿಕಾರಗಳಾಗಿರುವ, ಇಮೆ - ಈ, ನಯನೆ - ಕಣ್ಣುಗಳೂ, ಕಸ್ಮಾತ್ - ಯಾವಕಾರಣದಿಂದ, ಕ್ಷಿತೌ - ನೆಲದಲ್ಲಿ. ನಪತಿತೆ - ಬೀಳದೆ ಹೋಗಿವೆ ? ॥೧೮॥ ಧರ್ಮಾತ್ಮನಃ - ಮಹಾ ಧಾರ್ಮಿಕನಾದ ತಸ್ಯ - ಆ ಶ್ರೀ ರಾಮನಿಗೆ, ಪತ್ನೀಂ - ಧರ್ಮಭಾರ್ಯೆಯಾಗಿಯೂ, ದಶರಥಸ್ಯ - ದಶರಥಮಹಾರಾಜನಿಗೆ, ಸ್ನುಷಾಂಚ - ಸೊಸೆಯಾಗಿಯೂ ಇರುವ, ಮಾಂ - ನನ್ನನ್ನು ಕುರಿತು, ವ್ಯಾಹರತಃ - ಕೆಟ್ಟಮಾತುಗಳ ನ್ನಾಡುತಲಿರುವ, ತೇ - ನಿನ್ನ, ಜಿಹ್ವಾ - ನಾಲಿಗೆಯು, ಕಥಂ - ಹೇಗೆ, (ಏನುಕಾರಣ) ನವ್ಯವಶೀರ್ಯತೇ - ಸೀಳಿಹೋಗದೆ ಇದೆ ? ॥೧೯॥ ಹೇ ದಶಗ್ರೀವ - ಹತ್ತುತಲೆಗಳನೇ, ರಾಮಸ್ಯ- ಶ್ರೀ ರಾಮಚಂದ್ರನ, ಅಸಂದೇ ಶಾತ್ - ಅಪ್ಪಣೆ ಇಲ್ಲದಿರುವುದರಿಂದಲೂ, ತಪಸಃ - ಪಾತಿವ್ರತ್ಯರೂಪವಾದ ತಪಸ್ಸಿನ, ಅನುಪಾಲನಾಚ್ಚ -

---

ಸನ್ನಿಧಾನದಲ್ಲಿ ನಾನು ಇರುವಾಗ ನನ್ನನ್ನು ನೀನು ತರದೆ, ಅಸಮರ್ಥನಾಗಿ ಚಿನ್ನದಜಿಂಕೆ ಯನ್ನು ಮೋಸಕ್ಕೆ ನಿಮಿತ್ತವನ್ನಾಗಿ ಕಲ್ಪಿಸಿ,ರಾಮನು ನನ್ನ ಸಾಮಿಪ್ಯದಲ್ಲಿರದಂತೆ ಮಾಡಿ, ನನ್ನನ್ನು ಇಲ್ಲಿಗೆ ತಂದಿದ್ದೀಯೆ, ನಿನ್ನ ತೋಳು ಬಲದ ಬಾಳಿಗೆ ನಾಚಿಕೆಯಾಗದೆ ಇರುವುದು ಹೆಚ್ಚು. ಇದು ಪೌರುಷಶಾಲಿಯು ಮಾಡುವ ಕೆಲಸವೇ? ದುರಳಾ ! ಖೂಳಾ! ಕೀಳಾ! ಹೇ ಡಿಯೇ! ಆಗ ರಾಮನ ಕಣ್ಣಿಗೆ ಬೀಳದೆಹೋದೆ? ಅವನ ದೃಷ್ಟಿಗೆ ಸ್ವಲ್ಪಮಾತ್ರವಾದರೂ ಸುಳಿದಿದ್ದರೆ ಆತನ ಪರಾಕ್ರಮದ ಪರಿಪಾಟಿಯು ನಿನಗೂ ಸ್ವಲ್ಪಮಟ್ಟಿಗೆ ಗೋಚರಿಸುತಲಿ ದ್ದಿತು ॥೧೭॥ ಎಲ ಅಯೋಗ್ಯ ! ಪರಮಪವಿತ್ರಳಾದ ನನ್ನನ್ನು ಪಾಪಬುದ್ಧಿಯಿಂದ ದುರು ದುರನೆ ನೋಡುತಲಿರುವ ಕಪ್ಪು ಮತ್ತು ಅರಿಸಿನದ ಬಣ್ಣದವುಗಳಾಗಿ, ವಿಕಾರವಾಗಿ ರುವ ಈ ನಿನ್ನ ಕಣ್ಣುಗಳೆರಡೂ ಏಕೆ ಸಿಡಿದು ನೆಲದಮೇಲೆ ಬೀಳದೆ ಇವೆ ? ॥೧೮॥ ಎಲ ದುರಾ ತ್ಮಾ ! ಧರ್ಮಮಾರ್ಗವನ್ನೇ ಅವಲಂಬಿಸಿರುವ ಶ್ರೀರಾಮನಿಗೆ ಧರ್ಮಪತ್ನಿಯಾಗಿಯೂ,ದಶ ರಥಮಹಾರಾಜನಿಗೆ ಸೊಸೆಯೆನಿಸಿಯೂ ಇರುವ ನನ್ನನ್ನು ಉದ್ದೇಶಿಸಿ ದುರ್ವಚನಗಳನ್ನು ನು ಡಿಯುತಲಿರುವ ಈನಿನ್ನ ನಾಲಿಗೆಯು ಬಳಗಡೆ ಸೆಳೆದುಕೊಳ್ಳದೆಯೂ, ಅಥವಾ ಸೀಳಿ ಕೆಳಗೆ ಬೀಳದೆಯೂ ಇರುವುದೇಕೆ? ॥೧೯॥ ಎಲ ಪಾಪೀ! ಈ ಲೋಕದಲ್ಲಿ ಯಾರಾದರೂ ತಪಸ್ವಿ

ಅಸಂದೇಶಾತ್ತು ರಾಮಸ್ಯ ತಪಸಶ್ಚಾನುಪಾಲನಾತ್ ।
ನ ತ್ವಾಂ ಕುರ್ಮಿ ದಶಗ್ರೀವ ಭಸ್ಮ ಭಸ್ಮಾರ್ಹ ತೇಜಸಾ ॥ ೨೦ ॥
ನಾಪಹರ್ತುಮಹಂ ಶಕ್ಯಾ ತ್ವಯಾ ರಾಮಸ್ಯ ಧೀಮತಃ ।
ವಿಧಿಸ್ತವ ವಧಾ (ಹಾ) ರ್ಥಾಯ ವಿಹಿತೋ ನಾತ್ರ ಸಂಶಯಃ ॥ ೨೧ ॥
ಶೂರೇಣ ಧನದ ಭ್ರಾತ್ರಾ ಬಲೈಸ್ಸಮುದಿತೇನ ಚ ।

ಸಂರಕ್ಷಣೆಯ ನಿಮಿತ್ತದಿಂದಲೂ, ಭಸ್ಮಾರ್ಹತೇಜಸಾ - ನಿನ್ನನ್ನು ಬೂದಿಯನ್ನಾಗಿ ಮಾಡತಕ್ಕ ನನ್ನ ಪಾತಿವ್ರತ್ಯ ಪ್ರಭಾವದಿಂದ, ತ್ವಾಂ - ನಿನ್ನನ್ನು, ಭಸ್ಮ - ಬೂದಿಯನ್ನಾಗಿ, ನಕುರ್ಮಿ [ನಕರೋಮಿ] ಮಾಡದೆ ಇದೇನೆ ॥೨೦॥ ಧೀಮತಃ - ಮಹಾ ಬುದ್ಧಿಶಾಲಿಯಾದ, ರಾಮಸ್ಯ- ಶ್ರೀ ರಾಮಚಂದ್ರನ ಸಂಬಂಧಿನಿಯಾಗಿರುವ, ಅಹಂ - ನಾನು, ತ್ವಯಾ - ನಿನ್ನಿಂದ, ಅಪಹರ್ತುಂ - ಅಪಹರಿಸಲಿಕ್ಕೆ, ಶಕ್ಯಾ - ಸಾಧ್ಯಳಾದವಳು, ನ- ಆಗಲಾರೆ, [ಕಿಂತು- ಆದರೆ] ತವ - ನಿನ್ನ, ವಧಾರ್ಹಾಯ - ಸಂಹಾರ ರೂಪಕಾರ್ಯಕ್ಕೋಸ್ಕರ, ವಿಧಿಃ - ದೈವವು, ವಿಹಿತಃ - ನೆಲೆಗೊಂಡಿದೆ, ಅಥವಾ - ವಿಧಿಃ - ನನ್ನನ್ನು ಅಪಹರಿಸುವಿಕೆಯೆಂಬ ಕಾರ್ಯವು, ವಿಹಿತಃ - ನಿನ್ನಿಂದ ಮಾಡಲ್ಪಟ್ಟದೆ, ಅತ್ರ - ಈ ವಿಷಯದಲ್ಲಿ, ನಸಂಶಯಃ - ಸಂದೇಹವಿಲ್ಲವು ॥೨೧॥ ಶೂರೇಣ - ಪರಾಕ್ರಮಶಾಲಿ ಯೆನಿಸಿದ, ಧನದಭ್ರಾತ್ರಾ - ಕುಬೇರನಿಗೆ ಸಹೋದರನೂ ಆಗಿರುವ, ಬಲೈಃ - ಚತುರಂಗಸೇನೆಗಳಿಂದ, ಸಮುದಿತೇನಚ - ಸುಪ್ರಸಿದ್ಧನೂ ಆದ, ತ್ವಯಾ- ನಿನ್ನಿಂದರಾಮಂ-ರಾಮನನ್ನು, ಅಪೋಹ್ಯ -ಮೋಸಗೊಳಿಸಿ, ದಾರಚೌರ್ಯಂ-ಆತನ ಹೆಂಡತಿಯನ್ನು ಕದಿಯುವಿಕೆಯೆಂಬ

ಗಳು ಮತ್ತಾರಿಗಾದರೂ ಶಾಪವನ್ನಿತ್ತರೆ ಆ ತಪಸ್ವಿಗಳ ತಪಸ್ಸಿನ ಒಂದು ಭಾಗವು ತಗ್ಗಿಹೋಗುವುದು, ಹಾಗೆಯೇ ಪ್ರಕೃತದಲ್ಲಿ-ನೀನು ಭಸ್ಮವಾಗಿ ಹೋಗುವ ಹಾಗೆ ನಾನು ಶಾಪವನ್ನು ಕೊಡಬಲ್ಲೆನು. ಆದರೆ-ನನ್ನ ಪಾತಿವ್ರತ್ಯರೂಪವಾದ ತಪಸ್ಸು ತಗ್ಗಿಹೋಗುವುದೆಂದು ಬಗೆದು, ಕೊರತೆ ಇಲ್ಲದಂತೆ ಕಾಪಾಡಿಕೊಳ್ಳಬೇಕೆಂಬ ಬಯಕೆಯಿಂದಲೂ, ಅಪಕಾರಿಗಳನ್ನು ಶಪಿಸಬಹುದು ಎಂಬದಾಗಿ ಶ್ರೀರಾಮಚಂದ್ರನ ಆಜ್ಞೆ ಇಲ್ಲದುದರಿಂದಲೂ, ನಿನ್ನನ್ನು ಬೂದಿಯನ್ನಾಗಿ ಮಾಡತಕ್ಕ ಪಾತಿವ್ರತ್ಯ ಪ್ರಭಾವವು ನನಗೆ ಇದ್ದರೂ, ನಿನ್ನನ್ನು ಹಾಗೆ ಶಪಿಸದೆ ಇದೇನೆ ॥೨೦॥ ಓ ರಾವಣಾ ! ನಾನು ಮಹಾನುಭಾವನಾದ ಶ್ರೀರಾಮನ ಸ್ವತ್ತಾಗಿ ಇದೇನೆ. ಹಾಗೆ ಪರಸ್ವತ್ತಾದ ನನ್ನನ್ನು ಕದ್ದು ತರುವುದು ನಿನಗೆ ಶ್ರೇಯಸ್ಕರವಲ್ಲ ಆದರೆ ನಿನ್ನ ಪ್ರಾರಬ್ಧಕರ್ಮವಶದಿಂದ ಇಂತಹ ಅಕೃತ್ಯವನ್ನು ಮಾಡಿದ್ದೀಯೆ, ಆದಕಾರಣ ಇಂತು ದ್ರೋಹಿಯಾದ ನಿನಗೆ ನಿನ್ನ ದೈವವೇ ಮರಣವನ್ನು ತಂದೊದಗಿಸುವುದು ಈ ವಿಷಯದಲ್ಲಿ ಸಂದೇಹವಿಲ್ಲ ॥೨೧॥ ‡ "ಯಾರೂ ಇಲ್ಲದಿರುವ ಸಮಯದಲ್ಲಿ ನಿನ್ನನ್ನು ಕದ್ದು ತಂದ ಮಾತ್ರದಿಂದಲೇ ನಾನು ಶೂರನಲ್ಲವೆ" ಎಂಬೆಯೋ ? ಅಹುದು ! ನೀನು ಮಹಾಶೂರನು, ಅಣ್ಣನಾದ ಕುಬೇರನೊಡನೆ ಕಾದಿ ಅವನ ಸಂಪದವನ್ನೆಲ್ಲಾ ದೋಚಿತಂದಿರುವುದರಿಂದ ಸಂಪನ್ನನೂ ಹೌದು, ಚತುರಂಗ ಬಲಗಳಿಂದಲೂ ಒಡಗೂಡಿ ಇದ್ದೀಯೆ, ಇಂತಹ ಧೀರನು ರಾಮನೊಡನೆ ಕಾಳಗವನ್ನು ಮಾಡದೆ, ಕೈಲಾಗದ ಹೇಡಿಯಂತೆ ಆ ರಾಮನನ್ನು

‡ ರಾವಣನ ಹಿತಾರ್ಥವಾಗಿಯೇ ಹೀಗೆ ಕೋಪಗೊಂಡು ಸೀತೆಯು ರಾವಣನನ್ನು ದಂಡಿಸಿದಳೆಂದು ತೀರ್ಥೀಯಾಭಿಪ್ರಾಯ.

ಅಪ್ರೋಹ್ಯ ರಾಮಂ ಕಸ್ಮಾದ್ಧಿ ದಾರಚೌರ್ಯಂ ತ್ವಯಾ ಕೃತಂ ॥ ೨೨ ॥
ಸೀತಾಯಾ ವಚನಂ ಶ್ರುತ್ವಾ ರಾವಣೋ ರಾಕ್ಷಸಾಧಿಪಃ ।
ವಿವೃತ್ಯ ನಯನೇ ಕ್ರೂರೇ ಜಾನಕೀ ಮನ್ವವೈಕ್ಷತ ॥ ೨೩ ॥
ನೀಲ ಜೀಮೂತ ಸಂಕಾಶೋ ಮಹಾ ಭುಜಶಿರೋ ಧರಃ ।
ಸಿಂಹ ಸತ್ವಗತಿ ಶ್ರೀಮಾನ್ ದೀಪ್ತ ಜಿಹ್ವಾಗ್ರ ಲೋಚನಃ ॥ ೨೪ ॥
ಚಲಾಗ್ರ ಮಕುಟ ಪ್ರಾಂಶು ಶ್ಚಿತ್ರ ಮಾಲ್ಯಾನು ಲೇಪನಃ ।
ರಕ್ತ ಮಾಲ್ಯಾಂಬರಧರ ಸ್ತಪ್ತಾಂಗದ ವಿಭೂಷಣಃ ॥ ೨೫ ॥

ಕೆಲಸವು, ಕಸ್ಮಾತ್ - ಯಾವಕಾರಣದಿಂದ, ಕೃತಂಹಿ - ಮಾಡಲ್ಪಟ್ಟಿತು ? ॥ ೨೨ ॥ ರಾಕ್ಷಸಾಧಿಪಃ - ರಾಕ್ಷಸರಾಜನಾದ, ರಾವಣಃ - ರಾವಣನು, ಸೀತಾಯಾಃ - ಜಾನಕಿಯ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಕ್ರೂರೆ - ಭಯಂಕರಗಳಾದ, ನಯನೆ - ಕಣ್ಣುಗಳನ್ನು, ವಿವೃತ್ಯ - ಅಗಲವಾಗಿ ತೆರೆದು, ಜಾನಕೀಂ - ಸೀತೆಯನ್ನು, ಅನ್ವವೈಕ್ಷತ - ದುರುದುರನೆ ನೋಡಿದನು (ಹಜ್ಜೆಯಿಂದ ತಲೆಯುವರೆಗೂ ನೋಡಿದನು) ನೀಲಜೀಮೂತಸಂಕಾಶಃ - ಕಾರ್ಮುಗಿಲಿನೊಡನೆ ಸಮಾನನಾದ, ಮಹಾಭುಜಶಿರೋಧರ: - ನೀಳವಾದ ತೋಳುಗಳನ್ನೂ ತೋರವಾದ ಕೊರಳನ್ನೂ ಧರಿಸಿ ಇರುವ, ಸಿಂಹಸತ್ವಗತಿಃ - ಸಿಂಹದಂತೆ ಬಲವೂ ನಡಿಗೆಯೂ ಉಳ್ಳ, ಶ್ರೀಮಾನ್ - ರಾಜತೇಜಸ್ಸುಳ್ಳ, ದೀಪ್ತ - ಉರಿಯುತಲಿರುವ, ಜಿಹ್ವಾಗ್ರಲೋಚನಃ - ನಾಲಿಗೆಯ ಕೊನೆಯೂ ಕಣ್ಣಿನ ತುದಿಯೂ ಉಳ್ಳ ॥ ೨೪ ॥ ಚಲ - ಕದಲುತಲಿರುವ, ಮಕುಟ - ಕಿರೀಟದಿಂದ, ಪ್ರಾಂಶುಃ - ಉನ್ನತನಾಗಿರುವ, ಚಿತ್ರಮಾಲ್ಯಾನುಲೇಪನಃ - ನಾನಾವಿಧ ಪುಷ್ಪ ಹಾರಗಳನ್ನೂ ಚಂದನವನ್ನೂ ಧರಿಸಿ ಇರತಕ್ಕ, ರಕ್ತಮಾಲ್ಯಾಂಬರಧರಃ - ಕೆಂಬಣ್ಣದ ಬಟ್ಟೆಗಳನ್ನೂ ಹೂಗಳನ್ನೂ, ಅಲಂಕರಿಸಿಕೊಂಡಿರತಕ್ಕ, ತಪ್ತಾಂಗದ ವಿಭೂಷಣಃ - ಪುಟದಿಂದ ಶುದ್ಧವಾದ ಬಂಗಾರದ ಬಾಪುರಿಯುಳ್ಳ ॥ ೨೫ ॥ ಅಮೃತೋತ್ಪಾದನಸ್ಥೇನ - ಅಮೃತೋತ್ಪತ್ತಿಗೋಸ್ಕರ ಕಟ್ಟಿದ, ಭುಜಗೇನ-ವಾಸುಕಿಯೆಂಬ ಸರ್ಪದಿಂದ, ಮಂದರಇವ- ಮಂದರಪರ್ವತದಂತೆ, ಮೇಚಕೇನ - ಕಪ್ಪಗಿರುವ, ಮಹತಾ-

ಮೋಸಗೊಳಿಸಿ, ಅಥವಾ ದೂರವಾಗಿರುವಂತೆ ಮಾಡಿ, ಪರರ ಹೆಂಡಿರ ಕಳವನ್ನು ಏಕೆಮಾಡಿದೆ ? ಇದರಿಂದ ನಿನ್ನ ಶೌರ್ಯವೂ, ಪೌರುಷವೂ, ಪರಾಕ್ರಮವೂ ಸ್ಪಷ್ಟವಾಯಿತಲ್ಲವೆ? ॥ ೨೨ ॥ ಎಂದೀಪ್ರಕಾರ ಸೀತೆಯು ಬೆಂಕಿಯ ಕಿಡಿಗಳಂತಿರುವ ನುಡಿಗಳನ್ನು ನುಡಿಯಲು,ಅವುಗಳನ್ನು ಕೇಳಿದ ರಾವಣನು ಕಾಲಾಗ್ನಿರುದ್ರನಂತೆ ಸಿಟ್ಟುಗೊಂಡು, ಮಹಾಭಯಂಕರವಾಗಿರುವಂತೆ ಕಣ್ಣುಗಳನ್ನು ತೆರೆದು, ಕ್ರೂರತರವಾಗಿ ಸೀತೆಯನ್ನು ಬಿರುಬಿರನೆ ನೋಡುತಲಿದ್ದನು ॥ ೨೩ ॥ ಆಗ—ಕಾರ್ಮುಗಿಲಿನಂತೆ ಬಣ್ಣದ ಹೋಲಿಕೆ, ಬಲು ನೀಳವೂ ತೋರವೂ ಆಗಿರುವ ತೋಳುಗಳೂ, ಕೊರಳುಗಳೂ ಇದ್ದುವು, ಸಿಂಹದಂತೆ ಬಲವೂ ನಡಿಗೆಯೂ ಶೋಭಿಸುತಲಿದ್ದುವು, ಶೌರ್ಯದ ತೇಜವು ಉಕ್ಕುಳಿಸುತಲಿದ್ದಿತು, ಬಾಯೊಳಗೆ ಅದಿರುತಲಿರುವ ನಾಲಿಗೆಯ ತುದಿಯೂ, ಕಣ್ಣುಗಳೂ ಉರಿಯುತಲಿದ್ದುವು, ಶಿರದೊಳಗೆ ಅಳವಟ್ಟಿರುವ ಕಿರೀಟವು ಅಲುಗುತಲಿದ್ದಿತು, ಬಲು ಎತ್ತರವಾದ ಆಳು, ಬಗೆಯ ಬಗೆಯ ಬಣ್ಣದವುಗಳಾದ ಹೂಗಳನ್ನು ಮುಡಿದಿರುವುದಲ್ಲದೆ ಹಾರಗಳನ್ನಾಗಿಯೂ ಇಳಿಯಹಾಕಿಕೊಂಡಿದಾನೆ, ರಕ್ತಚಂದನದ ಲೇಪನ, ಕೆಂಬಣ್ಣದ ಉಡಿಗೆ, ಪುಟವಿಟ್ಟು ಶೋಧಿಸಿದ

ಶ್ರೋಣೀ ಸೂತ್ರೇಣ ಮ ಹತಾ ಮೇಚ ಕೇನ ಸುಸಂವೃತಃ ।
ಅಮೃತೋತ್ಪಾದ ನದ್ಧೇನ ಭುಜಗೇ ನೇವ ಮಂದರಃ ॥ ೨೬ ॥
ತಾಭ್ಯಾಂ ಸ ಪರಿಪೂರ್ಣಾಭ್ಯಾಂ ಭು ಜಾಭ್ಯಾಂ ರಾಕ್ಷಸೇಶ್ವರಃ ।
ಶುಶುಭೇ ಽ ಚಲ ಸಂಕಾಶ ಶ್ಶೃಂಗಾಭ್ಯಾ ಮಿವ ಮಂದರಃ ॥ ೨೭ ॥
ತರುಣಾದಿತ್ಯ ವರ್ಣಾಭ್ಯಾಂ ಕುಂಡಲಾಭ್ಯಾಂ ವಿಭೂಷಿತಃ ।
ರಕ್ತಪಲ್ಲವ ಪುಷ್ಪಾಭ್ಯಾ ಮಶೋಕಾಭ್ಯಾ ಮಿವಾಚಲಃ ॥ ೨೮ ॥
ಸ ಕಲ್ಪವೃಕ್ಷ ಪ್ರತಿಮೋ ವಸಂತ ಇವ ಮೂರ್ತಿಮಾನ್ ।
ಶ್ಮಶಾನ ಚೈತ್ಯಪ್ರತಿಮೋ ಭೂಷಿತೋಽಪಿ ಭಯಂಕರಃ ॥ ೨೯ ॥

---

ತೋರವಾದ, ಶ್ರೋಣೀಸೂತ್ರೇಣ - ಉಡಿದಾರದಿಂದ, ಸಂವೃತಃ - ಸುತ್ತಲ್ಪಟ್ಟಿರುವ ॥ ೨೬ ॥ ಅಚಲಸಂಕಾಶಃ - ಬೆಟ್ಟಕ್ಕೆ ಎಣೆ ಎನಿಸಿದ, ಸಃ - ಆ, ರಾಕ್ಷಸೇಶ್ವರಃ- ರಕ್ಕಸರೊಡೆಯನು, ಪರಿಪೂರ್ಣಾಭ್ಯಾಂ- ನೀಳವಾಗಿಯೂ ತೋರವಾಗಿಯೂ ಬಲವಾಗಿಯೂ ಇರುವ, ತಾಭ್ಯಾಂ-ಹೆಸರುವಾಸಿಯನ್ನು ಪಡೆದಿರತಕ್ಕ ಭುಜಾಭ್ಯಾಂ - ತೋಳುಗಳಿಂದ, ಶೃಂಗಾಭ್ಯಾಂ - ಶಿಖರಗಳಿಂದ, ಮಂದರಇವ - ಮಂದರ ಪರ್ವತದ ಹಾಗೆ, ಶುಶುಭೇ - ಶೋಭಿಸುತಲಿರ್ದನು ॥೨೭॥ ತರುಣ - ಪ್ರಾಯದಲ್ಲಿರುವ, (ಮಧ್ಯಾಹ್ನದಲ್ಲಿನ) ಆದಿತ್ಯವರ್ಣಾಭ್ಯಾಂ - ಸೂರ್ಯನಂತೆ ಬೆಳಗುತಲಿರುವ, ಕುಂಡಲಾಭ್ಯಾಂ - ಕರ್ಣಾಭರಣಗಳಿಂದಲೂ, ರಕ್ತಪಲ್ಲವಪುಷ್ಪಾಭ್ಯಾಂ - ಕೆಂಪಾದ ಚಿಗುರು ಮತ್ತು ಹೂಗಳುಳ್ಳ, ಅಶೋಕಾಭ್ಯಾಂ - ಎರಡು ಅಶೋಕದ ಮರಗಳಿಂದ, ಅಚಲಇವ - ದೊಡ್ಡ ಬೆಟ್ಟಗಳು ಹೇಗೋ ಹಾಗೇ, ವಿಭೂಷಿತಃ - ಅಲಂಕರಿಸಲ್ಪಟ್ಟ ॥೨೮ ಕಲ್ಪವೃಕ್ಷಪ್ರತಿಮಃ - ಕಲ್ಪವೃಕ್ಷಕ್ಕೆ ಸಮಾನನಾದ, ಮೂರ್ತಿಮಾನ್ - ಶರೀರವನ್ನು ತಾಳಿರುವ, ವಸಂತಇವ (ಸ್ಥಿತಃ) ವಸಂತನಂತಿರುವ, ಭೂಷಿತೋಽಪಿ - ಅಲಂಕರಿಸಲ್ಪಟ್ಟವನಾಗಿದ್ದರೂ, ಶ್ಮಶಾನ ಚೈತ್ಯಪ್ರತಿಮಃ - ಸುಡುಗಾಡಿನ ಮಂಟಪದಂತೆ, ಅಥವಾ ಮರದಂತೆ, ಭಯಂಕರಃ - ಅಂಜಿಕೆಯನ್ನುಂಟುಮಾಡುತ್ತಿರುವ, ॥೨೯॥ ಸಃ - ಆ, ರಾವಣಃ - ದಶಕಂಠನು, ಕೋಪ - ಸಿಟ್ಟಿನಿಂದ, ಸಂರಕ್ತ - ಕೆಂಪಡರಿದ,

---

ಬಂಗಾರದಿಂದ ಮಾಡಿರುವ ಬಾಪುರಿಯು ತೊಡಿಗೆ , ತೋರವಾಗಿಯೂ, ನೀಳವಾಗಿಯೂ ಕರಿಯಬಣ್ಣವುಳ್ಳುದುದಾಗಿಯೂ ಇರುವ ಉಡಿದಾರವನ್ನು ಅಳವಟ್ಟದ್ದರೆ, ಪೂರ್ವದಲ್ಲಿ ದೇವಾಸುರರು ಕಡಲನ್ನು ಕಡೆಯ ತೊಡಗಿದಾಗ ಕಡೆಗೋಲನ್ನಾಗಿ ಮಾಡಿಕೊಂಡಿದ್ದ ಮಂದರಪರ್ವತಕ್ಕೆ ವಾಸುಕಿಯೆಂಬ ಸರ್ಪವನ್ನು ಸುತ್ತಿ ಇದ್ದಂತೆ ಕಾಣಬರುತಲಿದೆ, ಇಂತಪ್ಪ ಅಲಂಕಾರದಿಂದ ಅಲಂಕೃತನಾದ ರಾಕ್ಷಸರಾಜನು ಮಹಾ ಬಾಹುಗಳಿಂದೊಡಗೂಡಿ, ದೀರ್ಘವಾದ ಶಿಖರಗಳಿಂದ ಕೂಡಿರುವ ಮಂದರಪರ್ವತದಂತೆ ರಾರಾಜಿಸುತಲಿದ್ದನು ॥೨೪, ೨೫, ೨೬, ೨೭॥ ಮತ್ತು-ಮಧ್ಯಾಹ್ನ ಮಾರ್ತಾಂಡ ಮಂಡಲದಂತೆ ಶೋಭಿಸುತಲಿರುವ ಕರ್ಣಕುಂಡಲಗಳಿಂದಲೂ ಅಲಂಕೃತನಾಗಿದ್ದರೆ ಕೆಂಪಾದ ಚಿಗುರಿಗಳಿಂದಲೂ, ಹೂಗಳಿಂದಲೂ ತುಂಬಿರುವ ಆಶೋಕ ವೃಕ್ಷಗಳಿಂದೊಡಗೂಡಿದ ಪರ್ವತದಂತೆ ಕಾಣಬರುತಲಿರುವನು ॥೨೮॥ಕಲ್ಪವೃಕ್ಷಕ್ಕೆ ಎಣೆಯೆನಿಸಿಯೂ, ಶರೀರವನಾಂತು ಬಂದಿರುವ ವಸಂತನಂತೆಯೂ,ಇರುತ್ತಾ ಸರ್ವಾಲಂಕಾರಗಳಿಂದ ಭೂಷಿಸಲ್ಪಟ್ಟವನಾಗಿದ್ದರೂ ಸುಡುಗಾಡಿನಲ್ಲಿರುವ ಮರದಂತೆ ಶ್ರೇಷ್ಠವಾದ ಕಳೆಯಿಲ್ಲದೆ ಮಹಾ ಭಯಂಕರನಾಗಿರುತಿದ್ದನು ॥೨೯॥

ಅವೇಕ್ಷಮಾಣೋ ವೈದೇಹೀಂ ಕೋಪಸಂರಕ್ತ ಲೋಚನಃ ।
ಉವಾಚ ರಾವಣ ಸ್ಸೀತಾಂ ಭುಜಂಗ ಇವ ನಿಶ್ವಸನ್ ॥ ೨೦ ॥
ಅನಯೇ ನಾಭಿಸಂಪನ್ನ ಮರ್ಥಹೀನ ಮನುವ್ರತೆ ।
ನಾಶಯಾಮ್ಯಹ ಮದ್ಯ ತ್ವಾಂ ಸೂರ್ಯ ಸ್ಸಂಧ್ಯಾ ಮಿವೌಜಸಾ ॥೨೧॥
ಇತ್ಯುಕ್ತ್ವಾ ಮೈಥಿಲೀಂ ರಾಜಾ ರಾವಣ ಶ್ಶತ್ರುರಾವಣಃ ।
ಸಂದಿದೇಶ ತತ ಸ್ಸರ್ವಾ ರಾಕ್ಷಸೀ ರ್ಘೋರ ದರ್ಶನಾಃ ॥ ೨೨ ॥
ಏಕಾಕ್ಷೀ ಮೇಕಕರ್ಣಾಂಚ ಕರ್ಣಪ್ರಾವರಣಾಂ ತಥಾ ।
ಗೋಕರ್ಣೀಂ ಹಸ್ತಿಕರ್ಣೀಂ ಚ ಲಂಬಕರ್ಣೀ ಮಕರ್ಣಿಕಾಂ ॥ ೨೩ ॥

---

ಲೋಚನಃ - ಕಣ್ಣುಗಳುಳ್ಳವನಾಗಿ, ವೈದೇಹೀಂ - ಜಾನಕಿಯನ್ನು, ಅವೇಕ್ಷಮಾಣಃ -ದುರುದುರನೆ ನೋಡುತ್ತಾ, ಭುಜಂಗ ಇವ - ಸರ್ಪದಂತೆ, ನಿಶ್ವಸನ್ - ನಿಟ್ಟುಸಿರನ್ನು ಬಿಡುತ್ತಿರುವವನಾಗಿ, ಸೀತಾಂ - ಜಾನಕಿಯನ್ನು ಕುರಿತು, ಉವಾಚ - ಇಂತೆಂದನು ॥೨೦॥

ಅನಯೇನ - ದುಷ್ಟನೀತಿಯಿಂದ, ಅಭಿಸಂಪನ್ನಂ - ಕೂಡಿರುವ, ಅರ್ಥಹೀನಂ - ನಿರ್ಭಾಗ್ಯನಾದ ರಾಮನನ್ನು, ಅನುವ್ರತೇ - ಅನುಸರಿಸಿದ ವ್ರತವುಳ್ಳ ಎಲೆ ಸೀತೆ ! ಓಜಸಾ - ತೇಜಸ್ಸಿನಿಂದ, ಸಂಧ್ಯಾಂ - ಪ್ರಾತಃಸಂಧ್ಯೆಯನ್ನು, ಸೂರ್ಯ ಇವ - ಸೂರ್ಯನು ಹೇಗೋ ಹಾಗೆ, ಅಹಂ - ನಾನು, ಓಜಸಾ - ಪರಾಕ್ರಮದಿಂದ, ತ್ವಾಂ - ನಿನ್ನನ್ನು, ಅದ್ಯ - ಈಗ, ನಾಶಯಾಮಿ- ಧ್ವಂಸಮಾಡುವೆನು, ॥೨೧॥ ತತಃ - ತರುವಾಯ, ಶತ್ರುರಾವಣಃ - ಹಗೆಗಳನ್ನು ಗೋಳಾಡಿಸುವ, ರಾಜಾ - ಅರಸಾದ, ರಾವಣಃ - ರಾವಣನು, ಮೈಥಿಲೀಂ ಸೀತೆಯನ್ನು ಕುರಿತು, ಇತಿ - ಈ ಮೇಲೆಹೇಳಿದಂತೆ, ಉಕ್ತ್ವಾ - ಹೇಳಿ ಘೋರದರ್ಶನಾಃ - ಭಯಂಕರವಾದ ನೋಟವುಳ್ಳ, ಸರ್ವಾಃ - ಸಕಲರಾದ, ರಾಕ್ಷಸೀಃ - ರಕ್ಕಸಿಯರನ್ನು ಕುರಿತು, ಸಂದಿದೇಶ - ನೇಮಿಸಿದನು ॥೨೨॥ ಏಕಾಕ್ಷೀಂ - ಒಕ್ಕಣ್ಣುಳ್ಳ, ಏಕಕರ್ಣಾಂಚ - ಒಂಟಿ ಕಿವಿಯುಳ್ಳ, ತಥಾ - ಹಾಗೆಯೇ, ಕರ್ಣಪ್ರಾವರಣಾಂ - ಹೊದಿಕೆಯಂತೆ ಇರುವ ಕಿವಿಗಳುಳ್ಳ, ಗೋಕರ್ಣೀಂ- ಆಕಳಿನ ಕಿವಿಯಂತೆ ಕಿವಿಯುಳ್ಳ, ಹಸ್ತಿಕರ್ಣೀಂಚ - ಆನೆಯಂತೆಯೂ ಕಿವಿಯುಳ್ಳ, ಲಂಬಕರ್ಣೀಂ - ಜೋಲಾಡುವ ಕಿವಿಗಳುಳ್ಳ, ಅಕರ್ಣಿಕಾಂ - ಕಿವಿಗಳೇ ಇಲ್ಲದಿರುವ ॥೨೩॥ ಹಸ್ತಿಪಾದ್ಯಶ್ವಪಾದ್ಯೌಚ -

---

ಇಂತಹ ಕ್ರೂರನಾದ ರಾವಣನು [illegible] ಕೋಪದಿಂದ ಕೆಂಪೇರಿದ ಕಣ್ಣುಗಳನ್ನು ತಾಳಿ, ವೈದೇಹಿಯನ್ನು ಪಾದದಿಂದ ಶಿರದವರೆಗೂ ದುರುದುರನೆ ನೋಡುತ್ತಾ,ಮಹಾ ಸರ್ಪದಂತೆ ಬುಸುಗುಟ್ಟುತಲಿರುವವನಾಗಿ, ಆಕೆಯನ್ನು ಕುರಿತು ಇಂತೆಂದನು ॥ ೨೦ ॥ ಎಲೆ ಸೀತೆ ? ನೀತಿಭ್ರಷ್ಟನೂ, ನಿರ್ಭಾಗ್ಯನೂ ಆಗಿರುವ ಮನುಷ್ಯ ಮಾತ್ರನಾದ ರಾಮನಲ್ಲಿ ವ್ರತಪರಾಯಣಳಾಗಿದ್ದೀಯೆ, ನನ್ನ ಅನುನಯದ ವಚನಗಳು ನಿನ್ನ ಕಿವಿಯನ್ನು ಹೊಗದೆ ಇವೆ, ಆದಕಾರಣ ಮುಂಜಾನೆಯಲ್ಲಿ ಮೂಡುತ ಬರುವ ಸೂರ್ಯನು ಕಗ್ಗತ್ತಲನ್ನು ನಾಶಪಡಿಸುವಂತೆ. ನಿನ್ನನ್ನು ನಾನು ನನ್ನ ಪರಾಕ್ರಮದಿಂದ ಈ ನಿಮಿಷದಲ್ಲಿ ಧ್ವಂಸ ಮಾಡುತ್ತೇನೆ॥೨೧॥ ಎಂದು ಹೇಳಿದುದಲ್ಲದೆ ಸರ್ವಲೋಕ ಕಂಟಕನಾದ ಆರಾವಣನು ಪಕ್ಕದಲ್ಲಿ ಮಹಾ ಭಯಂಕರಾ ಕಾರರಾಗಿದ್ದ ರಕ್ಕಸಿಯರನ್ನು ಕುರಿತು ಅಣತಿಯನಿತ್ತನು॥೨೨॥ (ಅವರೊಳಗೆ-ಒಕ್ಕಣ್ಣೆಯು,ಒಂದು ಕಿವಿಯುವಳು,ಹೊದಿಕೆಯಾಗುವಂತಹ ಕಿವಿಯುಳ್ಳವಳು,

ಹಸ್ತಿಪಾ ದ್ಯಶ್ವಪಾದ್ಯೌ ಚ ಗೋಪಾದೀಂ ಪಾದಚೂಳಿಕಾಂ ।
ಏಕಾಕ್ಷೀ ಮೇಕಪಾದೀಂ ಚ ಪೃಥುಪಾದೀ ಮಪಾದಿಕಾಂ ॥ ೩೪ ॥
ಅತಿಮಾತ್ರ ಶಿರೋಗ್ರೀವಾ ಮತಿಮಾತ್ರ ಕುಚೋದರೀಂ ।
ಅತಿಮಾತ್ರಾಸ್ಯ ನೇತ್ರಾಂಚ ದೀರ್ಘಜಿಹ್ವಾ ಮಜಿಹ್ವಿಕಾಂ ॥ ೩೫ ॥
ಅನಾಸಿಕಾಂ ಸಿಂಹಮುಖೀಂ ಗೋಮುಖೀಂ ಸೂಕರೀಮುಖೀಂ ।
ಯಥಾ ಮದ್ವಶಗಾ ಸೀತಾ ಕ್ಷಿಪ್ರಂ ಭವತಿ ಜಾನಕೀ ॥
ತಥಾ ಕುರುತ ರಾಕ್ಷಸ್ಯ ಸ್ಸರ್ವಾಃ ಕ್ಷಿಪ್ರಂ ಸಮೇತ್ಯ ಚ ॥ ೩೬ ॥
ಪ್ರತಿಲೋಮಾ ನುಲೋಮೈಶ್ಚ ಸಾಮ ದಾನಾದಿ ಭೇದನೈಃ ।

---

ಆನೆಯ ಮತ್ತು ಕುದುರೆಯಂತೆಯೂ ಕಾಲುಗಳುಳ್ಳ, ಗೋಪಾದೀಂ - ಆಕಳಿನ ಹೆಜ್ಜೆಯಂತೆ ಹೆಜ್ಜೆಯುಳ್ಳ, ಪಾದಚೂಳಿಕಾಂ - ಹೆಜ್ಜೆಯಮೇಲೆ ತುಂಬುಗೂದಲುಳ್ಳ, ಏಕಾಕ್ಷೀಂ - ಒಂದು ದೃಷ್ಟಿಯುಳ್ಳ, ಏಕಪಾದೀಂಚ - ಕುಂಟಿಯಾಗಿರುವ, ಪೃಥುಪಾದೀಂ - ತೋರವಾದ ಕಾಲುಳ್ಳ, ಅಪಾದಿಕಾಂ - ಹೆಜ್ಜೆಗಳೇ ಇಲ್ಲದಿರುವ ॥೩೪॥ ಅತಿಮಾತ್ರಶಿರೋಗ್ರೀವಾಂ - ಮಿತಿಮೀರಿದ ಶಿರವೂ ಕೊರಳೂ ಉಳ್ಳ, ಅತಿಮಾತ್ರಕುಚೋದರೀಂ - ಪ್ರಮಾಣಾಧಿಕವಾದ ಎದೆಯೂ, ಹೊಟ್ಟೆಯೂ ಉಳ್ಳ, ಅತಿಮಾತ್ರಾಸ್ಯ ನೇತ್ರಾಂಚ - ಮಿತಿಮೀರಿದ ಮುಖವೂ, ಕಣ್ಣುಗಳೂ ಉಳ್ಳ, ದೀರ್ಘಜಿಹ್ವಾಂ - ನೀಳವಾದ ನಾಲಿಗೆಯುಳ್ಳ, ಅಜಿಹ್ವಿಕಾಂ - ನಾಲಿಗೆ ಇಲ್ಲದಿರುವ, ॥೩೫॥ ಅನಾಸಿಕಾಂ - ಮೂಗಿಲ್ಲದ, ಸಿಂಹಮುಖೀಂ - ಸಿಂಗದಂತೆ ಮೋರೆಯುಳ್ಳ, ಸೂಕರೀಮುಖೀಂ - ಕತ್ತೆಯ ಮುಖದವಳನ್ನೂ (ರಾವಣಃ - ದಶಗಳನು, ಸಂದಿದೇಶ - ಆಜ್ಞಾಪಿಸಿದನು) ॥೩೫॥ ಸರ್ವಾಃ - ಸಕಲರಾದ, ರಾಕ್ಷಸ್ಯಃ - ರಕ್ಕಸಿಯರುಗಳಿರಾ, ಯೂಯಂ - ನೀವು, ಕ್ಷಿಪ್ರಂ - ಬೇಗನೆ, ಸಮೇತ್ಯಚ - ಒಗ್ಗಟ್ಟಾಗಿ, ಜಾನಕೀ-ಜನಕಪುತ್ರಿಯಾದ, ಸೀತಾ - ಸೀತೆಯು, ಯಥಾ - ಹೇಗೆ ಕ್ಷಿಪ್ರಂ - ಜಾಗ್ರತೆಯಾಗಿ, ಮದ್ವಶಗಾ - ನನ್ನ ವಶಳಾಗತಕ್ಕವಳು, ಭವತಿ - ಆಗುತಾಳೆಯೋ, ತಥಾ - ಹಾಗೆ, ಕುರುತ - ಮಾಡಿರಿ ॥೩೬॥-॥ ಪ್ರತಿಲೋಮಾನುಲೋಮೈಶ್ಚ - ಅನುಕೂಲ ಪ್ರತಿಕೂಲಗಳಾದ

---

ಆಕಳಿನಕಿವಿಯಂತೆ ಕಿವಿಯುಳ್ಳವಳು, ಆನೆಯ ಕಿವಿಯುವಳು, ಜೋಲಾಡುವ ಕಿವಿಯುವಳು, ಕಿವಿಯೇ ಇಲ್ಲದವಳು ॥ ೩೩ ॥ ಆನೆಗಾಲಿನವಳು, ಕುದುರೆಯಂತೆ ಕಾಲುಳ್ಳವಳು, ಆಕಳಿನ ಪಾದದಂತೆ ಪಾದವುಳ್ಳವಳು, ಮುಂಗಾಲಿನಲ್ಲಿ ತುಂಬುಗೂದಲುಳ್ಳವಳು, ಕುರುಡಿ, ಕುಂಟಿ, ತೋರಗಾಲಿ, ಹೆಳವಿ ॥ ೩೪ ॥ ಬಲು ತೋರವಾದ ಶಿರವೂ ಕೊರಳೂ ಉಳ್ಳವಳು, ಮಿತಿಮೀರಿದ ಎದೆಯನ್ನೂ ಹೊಟ್ಟೆಯನ್ನೂ ಉಳ್ಳವಳು, ಪ್ರಮಾಣಾಧಿಕವಾದ ಮುಖವನ್ನೂ ಕಣ್ಣುಗಳನ್ನೂ ಉಳ್ಳವಳು, ನೀಳವಾದ ನಾಲಗೆಯುವಳು, ನಾಲಗೆಯೇ ಇಲ್ಲದವಳು, ಮುಕ್ಕಡಿಯು, ಸಿಂಗದ ಮೋರೆಯುವಳು, ಆಕಳಿನಂತೆ ಮುಖವುಳ್ಳವಳು, ಹಂದಿಯ ಮುಖದವಳು ಈ ಪ್ರಕಾರ ಬಹುಮಂದಿ ಸುಂದರಿಯರೆಲ್ಲ ಸೀತೆಗೆ ಕಾವಲುಗಾತಿಯರಾಗಿ ಇದ್ದರಷ್ಟೆ ? ಇಂಥವರನ್ನೆಲ್ಲ ಕುರಿತು ಆ ರಾವಣನು ಹೇಳಿದುದೇನೆಂದರೆ:—) ॥ ೩೫ ॥ ॥ ಎಲೆ ರಕ್ಕಸಿಯರುಗಳಿರಾ ! ನೀವೆಲ್ಲರೂ ಒಗ್ಗಟ್ಟಾಗಿ ಸೇರಿ, ಈ ಜಾನಕಿಯು ಬಹುಬೇಗನೆ ನನ್ನ ವಶವಾಗುವಂತೆ ಮಾಡಬೇಕು ॥೩೬ ॥ ॥ ಮೃದುಮಧುರ ವಚನಗಳಿಂದಲೂ, ಏನನ್ನಾದರೂ ಕೊಡುವುದರಿಂದಲೂ, ಯಾವುದಾದರೊಂದು ತೆರನಾಗಿ ಹುರುಡನ್ನುಂಟುಮಾಡುವುದರಿಂದಲೂ

ಆವರ್ಜಯತ ವೈದೇಹೀಂ ದಂಡಸ್ಯೋದ್ಯಮನೇನ ಚ ||೪೬|| ||
ಇತಿ ಪ್ರತಿಸಮಾದಿಶ್ಯ ರಾಕ್ಷಸೇಂದ್ರಃ ಪುನಃಪುನಃ ||
ಕಾಮಮನ್ಯು ಪರೀತಾತ್ಮಾ ಜಾನಕೀಂ ಪರ್ಯತರ್ಜಯತ್ ||೪೭|| ||
ಉಪಗಮ್ಯ ತತಃ ಕ್ಷಿಪ್ರಂ ರಾಕ್ಷಸೀ ಧಾನ್ಯಮಾಲಿನೀ |
ಪರಿಷ್ವಜ್ಯ ದಶಗ್ರೀವ ಮಿದಂ ವಚನ ಮಬ್ರವೀತ್ ||೪೮|| ||

---

ಸಾಮದಾನಾದಿಭೇದನ್ಯೈಶ್ಚ - ಸಾಮ, ದಾನಭೇದಗಳನ್ನು ಸೂಚಿಸುವ ವಚನಗಳಿಂದ, ದಂಡಸ್ಯ - ಶಿಕ್ಷೆಯ, ಉದ್ಯಮನೇನಚ - ಪ್ರಯತ್ನದಿಂದಲೂ, ವೈದೇಹೀಂ - ಜಾನಕಿಯನ್ನು, ಆವರ್ಜಯತ - ನನಗೆ ವಶವಾಗುವಂತೆ ಮಾಡಿರಿ ||೪೬||-|| ರಾಕ್ಷಸೇಂದ್ರಃ - ರಾಕ್ಷಸರಾಜನು, ಇತಿ - ಮೇಲೆಹೇಳಿದಂತೆ, ಸಮಾದಿಶ್ಯ - ಅಪ್ಪಣೆಕೊಟ್ಟು, ಕಾಮಮನ್ಯು - ಕಾಮದಿಂದಲೂ, ಸಿಟ್ಟಿನಿಂದಲೂ, (ಕಾಮಭಂಗದ ಕೋಪದಿಂದ) ಪರಿತ - ತುಂಬಿದ, ಆತ್ಮಾ ಮನಸ್ಸುಳ್ಳವನಾಗಿ, ಜಾನಕೀಂ - ಸೀತೆಯನ್ನು, ಪುನಃ ಪುನಃ - ಮಡಿಗಡಿಗೂ, ಪರ್ಯತರ್ಜಯತ್ - ಹೆದರಿಸಿದನು, ||೪೭||-|| ತತಃ - ತರುವಾಯ, ಧಾನ್ಯಮಾಲಿನೀ - ಧಾನ್ಯಮಾಲಿನಿ ಯೆಂಬ, ರಾಕ್ಷಸೀ - ಒಬ್ಬ ರಕ್ಕಸಿಯು, (ರಾವಣನ ಕಿರಿಯ ಹೆಂಡಿರು) ಕ್ಷಿಪ್ರಂ - ಬೇಗನೆ, ಉಪಗಮ್ಯ - ಹತ್ತಿರಕ್ಕೆ ಬಂದು, ದಶಗ್ರೀವಂ- ರಾವಣನನ್ನು, ಪರಿಷ್ವಜ್ಯ-ಅಪ್ಪಿಕೊಂಡು ||೪೮|| || ಮಹಾರಾಜ ! - ನನ್ನ ದೊರೆಯೇ ! ಮಯಾ - ನನ್ನೊಡನೆ, ಕ್ರೀಡ - ವಿಹರಿಸು, ರಾಕ್ಷಸೇಶ್ವರ- ಓ ರಾಕ್ಷಸನಾಯಕನೇ, ವಿವರ್ಣಯಾ - ವರ್ಣಹೀನಳೂ, (ಕಳೆಗುಂದಿದವಳೂ, ಉತ್ತಮವರ್ಣದವಳೂ) ಕೃಪಣಯಾ - ದೀನಳೂ, (ಅಕೃಪಣಯಾ - ಪತಿವ್ರತೆಯೂ) ಆಗಿರುವ, ಮಾನುಷ್ಯಾ - ಮನುಷ್ಯಸ್ತ್ರೀಯೂ

---

ಶಿಕ್ಷಿಸುವ ಪ್ರಯತ್ನದಿಂದಲೂ, ಹೇಗಾದರೂ ಮಾಡಿ, ನಯಭಯಗಳನ್ನು ತೋರಿ, ಅನುಕೂಲ ಪ್ರತಿಕೂಲ ವಚನಗಳಿಂದ ಅವಳ ಮನಸ್ಸು ನನ್ನ ಕಡೆಗೆ ತಿರುಗುವಂತೆ ಮಾಡಬೇಕು || ೪೬|| || ಎಂದೀ ಪ್ರಕಾರ ರಾಕ್ಷಸರಾಜನು ರಕ್ಕಸಿಯರಿಗೆ ಸಾರಿಸಾರಿಗೂ ಒತ್ತಿಹೇಳಿ, ಸೀತಾ ವಿಷಯವಾದ ಕಾಮದಿಂದಲೂ, ಅವಳು ತಾನು ಹೇಳಿದಂತೆ ಕೇಳಿ ತನಗೆ ವಶಳಾಗಲಿಲ್ಲವಲ್ಲಾ ಎಂಬ ಕ್ರೋಧದಿಂದಲೂ ತುಂಬಿದ ಮನಸ್ಸುಳ್ಳವನಾಗಿ, ಪುನಃ ಸೀತೆಯನ್ನು ಕ್ರೂರವಾಗಿ ಬೆದರಿಸ ತೊಡಗಿದನು || ೪೭|| || ಹೀಗಿರುವ ಸಮಯದೊಳಗೆ ಎಲ್ಲಿ ಅತಿಕ್ರಮಿಸಿ ಯಾವ ಕ್ರೂರ ಕರ್ಮವನ್ನು ಮಾಡುವನೋ ಎಂದು ಭಾವಿಸಿ, ಧಾನ್ಯಮಾಲಿನಿ ಯೆಂಬ ರಾವಣನ ಕಿರಿಯ ಹೆಂಡತಿಯು ಬೇಗನೆ ರಾವಣನ ಬಳಿಗೆ ಓಡಿಬಂದು ಅವನನ್ನು ಎರಡು ತೋಳುಗಳಿಂದಲೂ ಅಪ್ಪಿಕೊಂಡು ಇಂತೆಂದಳು ||೪೮||||* ಓ ಪ್ರಿಯವಲ್ಲಭಾ! ಸಾರ್ವಭೌಮನೇ! ನಿನ್ನ ಪರಮಪ್ರೇಮವನ್ನು ನನ್ನಲ್ಲಿ ತೋರು, ನನ್ನೊಡನೆ ಕ್ರೀಡಿಸು, ಅನ್ನಾಹಾರಗಳಿಲ್ಲದೆ ಕೃಶಳಾಗಿ, ಬಲಗುಂದಿ, ಕಳಾಹೀನಳಾಗಿ, ಮನುಷ್ಯಮಾತ್ರದವಳಾಗಿರುವ

---

* ಓ ರಾವಣಾ ! ವೈದೇಹಿಯು ನಮ್ಮಂತೆ ರಕ್ಕಸಿಯಲ್ಲ. ವರ್ಣದಲ್ಲಿ ನಿನಗಿಂತ ಸರ್ವಶ್ರೇಷ್ಠಳು, ನಮ್ಮಂತೆ ದೀನಳಲ್ಲ, ಮಹಾಧೀರಳು, ಮಹಾ ಪತಿವ್ರತೆ, ಅಮಾನುಷಿ ಎಂದರೆ ಸಾಕ್ಷಾತ್ ಲಕ್ಷ್ಮೀಸ್ವರೂಪಳು, ಇಂತಹ ಮಹಾದೇವಿಯ ವಿಷಯದಲ್ಲಿ ನೀನು ಅತಿಕ್ರಮಿಸಿದರೆ ಎಂದಿಗೂ ಶ್ರೇಯಸ್ಸುಂಟಾಗುವುದಿಲ್ಲ, ಆದುದರಿಂದ ಧರ್ಮನೀತಿಗಳನ್ನು ಅನುಸರಿಸಿ ನಿನ್ನ ಪತ್ನಿಯರಾದ ನಮ್ಮಲ್ಲಿಯೇ ನೀನು ತೃಪ್ತನಾಗಿರುವುದು ಲೇಸು,

ಮಯಾ ಕ್ರೀಡ ಮಹಾರಾಜ ಸೀತಯಾ ಕಿಂ ತವಾನಯಾ ।
ವಿವರ್ಣಯಾ ಕೃಪಣಯಾ ಮಾನುಷ್ಯಾ ರಾಕ್ಷಸೇಶ್ವರ ॥೪೦॥
ನೂನ ಮಸ್ಯಾ ಮಹಾರಾಜ ನ ದಿವ್ಯಾನ್ ಭೋಗಸತ್ತಮಾನ್ ।
ವಿದಧಾತ್ಯಮರಶ್ರೇಷ್ಠ ಸ್ತವ ಬಾಹುಬಲಾರ್ಜಿತಾನ್ ॥೪೧॥
ಅಕಾಮಾಂ ಕಾಮಯಾನಸ್ಯ ಶರೀರ ಮುಪತಪ್ಯತೇ ।
ಇಚ್ಛನ್ತೀಂ ಕಾಮಯಾನಸ್ಯ ಪ್ರೀತಿ ರ್ಭವತಿ ಶೋಭನಾ ॥೪೨॥
ಏವ ಮುಕ್ತಸ್ತು ರಾಕ್ಷಸ್ಯಾ ಸಮುತ್ಕ್ಷಿಪ್ತ ಸ್ತತೋ ಬಲೀ ।
ಪ್ರಹಸ ನ್ಮೇಘಸಂಕಾಶೋ ರಾಕ್ಷಸ ಸ್ಸನ್ಯವರ್ತತ ॥೪೩॥

---

(ಅಮನುಷ್ಯಾ - ಲಕ್ಷ್ಮೀಸ್ವರೂಳೂ) ಆಗಿರುವ, ಅನಯಾ - ಈ, ಸೀತಯಾ- ಜಾನಕಿಯಿಂದ, ತವ - ನಿನಗೆ, ಕಿಂ - ಪ್ರಯೋಜನವೇನು ? ॥೪೦॥ ಮಹಾರಾಜ - ನನ್ನೊಡೆಯನೇ ! ಅಮರಶ್ರೇಷ್ಠಃ - ಬ್ರಹ್ಮನು, ತವ - ನಿನ್ನ, ಬಾಹುಬಲಾರ್ಜಿತಾನ್ - ಭುಜಬಲದಿಂದ ಸಂಪಾದಿಸಿದ, ದಿವ್ಯಾನ್ - ಸರ್ವೋತ್ತಮವಾಗಿರುವ, ಭೋಗಸತ್ತಮಾನ್ - ಸುಖಾತಿಶಯಗಳನ್ನು, ಅಸ್ಯಾಃ - ಈ ಸೀತೆಗೆ, ನವಿದಧಾತಿ - ಉಂಟುಮಾಡಲಾರನು, ನೂನಂ - ನಿಶ್ಚಯ ॥೪೧॥ ಅಕಾಮಾಂ - ತನ್ನನ್ನು ಕಾಮಿಸದಿರುವವಳನ್ನು, ಕಾಮಯಾನಸ್ಯ (ಕಾಮಯಮಾನಸ್ಯ) ಕಾಮಿಸುತ್ತಿರುವವನ, ಶರೀರಂ - ದೇಹವು, ಉಪತಪ್ಯತೇ - ಸಂತಾಪವನ್ನು ಹೊಂದುತ್ತದೆ, ಇಚ್ಛನ್ತೀಂ - ಕಾಮಿಸುತ್ತಿರುವವಳನ್ನು, ಕಾಮಯಾನಸ್ಯ - ಕೋರುತ್ತಿರುವವನಿಗೆ, ಶೋಭನಾ - ಮಂಗಳಕರವಾದ, ಪ್ರೀತಿಃ - ಪ್ರೇಮವು, ಭವತಿ - ಉಂಟಾಗುತ್ತದೆ, ॥೪೨॥ ತತಃ- ತರುವಾಯ, ಬಲೀ - ಮಹಾ ಬಲಶಾಲಿಯಾದ, ಮೇಘಸಂಕಾಶಃ - ಕಾರ್ಮುಗಿಲಿನಂತಿರುವ, ಸಃ ರಾಕ್ಷಸಃ - ಆ ರಾವಣನು, ರಾಕ್ಷಸ್ಯಾ - ಧಾನ್ಯಮಾಲಿನಿ ಯೆಂಬ ರಾಕ್ಷಸಿಯಿಂದ, ಏವಂ- ಈ ಮೇಲೆ ಹೇಳಿದಂತೆ, ಉಕ್ತಃ- ಹೇಳಲ್ಪಟ್ಟವನಾಗುತ್ತಾ, ಸಮುತ್ಕ್ಷಿಪ್ತಃ- ತಳ್ಳಲ್ಪಟ್ಟವನಾದಕಾರಣವೇ, ಪ್ರಹಸನ್ತು-ನಗುತಲಿರುವವನಾಗಿಯೇ, ನ್ಯವರ್ತತ ಹಿಂದಿರುಗಿದನು ॥೪೩॥ ಸಃ- ಆ, ದಶಗ್ರೀವಃ-ದಶಗಳನು, ಮೇದಿನೀಂ-ಭೂಮಿಯನ್ನು

---

ಈ ಸೀತೆಯಿಂದ ನಿನಗೇನುಫಲ ? ಮತ್ತು ನಿನ್ನಲ್ಲಿ ಅವಳಿಗೆ ಇಷ್ಟವೂ ಇಲ್ಲ, ಹಾಗೆ ಕಾಮಿಸದಿರುವ ಸ್ತ್ರೀಯಿಂದ ಸಂಕಟವುಂಟಾಗುವದಲ್ಲದೆ ಸುಖವುಂಟೆ ?, ನಿನ್ನೊಡನೆ ಭೋಗಭಾಗ್ಯಗಳನ್ನು ಅನುಭವಿಸುವ ಅದೃಷ್ಟವು ಈಸೀತೆಗೆ ಇಲ್ಲ, ಅವಳೇನ ಮಾಡಿಯಾಳು ? ವಿಧಿಯು ಅವಳಿಗೆ ಹಾಗೆ ವಿಧಿಸಲಿಲ್ಲ. ನಿನ್ನಲ್ಲಿ ಪ್ರೇಮಭರವುಳ್ಳ ಲಲನೆಯರೊಡನೆ ನೀನು ರಮಿಸಿದರೆ ಬ್ರಹ್ಮಾನಂದ ಸಮಾನವಾದ ಸುಖವನ್ನು ಪಡೆಯಬಹುದು. ತಾನಾಗಿ ಕಾಮಿಸದಿರುವವಳನ್ನು ಎಂದಿಗೂ ಕೂಡಬಾರದು, ಆದರಿಂದ ಮಹಾವ್ಯಥೆಯುಂಟಾಗುತ್ತದೆ, ಅಪಾರವಾಗಿ ಪ್ರೀತಿಸುತಲಿರುವ ನನ್ನೊಡನೆ ನೀನು ವಿಹರಿಸಿದರೆ ನೆಲೆಯಿಲ್ಲದ ಪ್ರೀತಿಯು ಮಂಗಳಕರವಾಗಿ ಪರಿಣಮಿಸುವುದು ॥ ೪೦॥, ೪೧॥, ೪೨॥ ॥ ಎಂದೀ ಪ್ರಕಾರವಾಗಿ ಹೇಳಿ ಧಾನ್ಯಮಾಲಿನಿಯು ತಡೆಯಲು, ಮಹಾ ಬಲಶಾಲಿಯಾಗಿ, ಮಹಾ ಮೇಘದಂತೆ ಬೆಳಗುವ ರಾವಣನು ಅವಳ ಮುಖವನ್ನು ನೋಡಿ, ಮಂದಹಾಸದಿಂದೊಡಗೂಡಿ, ತನ್ನ ನಗರದ ಕಡೆಗೆ ತಿರುಗಿದನು ॥ ೪೩॥ ॥ ಬಳಿಕ ದಶಗಳನು ಸೀತೆಯು ತನ್ನಲ್ಲಿ ಅನುರಾಗವುಳ್ಳವಳಾಗಲಿಲ್ಲವಲ್ಲಾ ಎಂಬ ಕೋಪಾವೇಶ ಪರವಶನಾಗಿ ಅಲ್ಲಿಂದ ಹೊರಟು ನೆಲದಮೇಲೆ

ಪ್ರಸ್ಥಿತ ಸ್ಸ ದಶಗ್ರೀವಃ ಕಂಪಯನ್ನಿವ ಮೇದಿನೀಂ ।
ಜ್ವಲ ದ್ಭಾಸ್ಕರ ವರ್ಣಾಭಂ ಪ್ರವಿವೇಶ ನಿವೇಶನಂ ॥೪೪॥
ದೇವ ಗಂಧರ್ವ ಕನ್ಯಾಶ್ಚ ನಾಗಕನ್ಯಾಶ್ಚ ಸರ್ವತಃ ।
ಪರಿವಾರ್ಯ ದಶಗ್ರೀವಂ ವಿವಿಶು ಸ್ತ ದ್ಗೃಹೋತ್ತಮಂ ॥೪೫॥
ಸ ಮೈಥಿಲೀಂ ಧರ್ಮಪರಾ ಮವಸ್ಥಿತಾಂ ಪ್ರವೇಪಮಾನಾಂ ಪರಿಭರ್ತ್ಸ್ಯ ರಾವಣಃ ।
ವಿಹಾಯ ಸೀತಾಂ ಮದನೇನ ಮೋಹಿತ ಸ್ಸ್ವಮೇವ ವೇಶ್ಮ ಪ್ರವಿವೇಶ ಭಾಸ್ವರಂ॥೪೬॥

— ಇತಿ ಶ್ರೀಮತ್ಸುಂದರಕಾಂಡೇ-ದ್ವಾವಿಂಶಸ್ಸರ್ಗಃ —

---

ಕಂಪಯನ್ನಿವ - ಕದಲಿಸುತ್ತಿರುವನೋ ಎಂಬಂತೆ, ಪ್ರಸ್ಥಿತಃ - ಹೊರಟವನಾಗಿ, ಜ್ವಲತ್ - ಉರಿಯುತಲಿರುವ, ಭಾಸ್ಕರ - ಸೂರ್ಯನ, ವರ್ಣಾಭಂ - ವರ್ಣದಂತೆ ಕಾಂತಿಯುಳ್ಳ, ನಿವೇಶನಂ - ತನ್ನ ಮನೆಯನ್ನು, ಪ್ರವಿವೇಶ - ಹೊಕ್ಕನು, ॥೪೪॥ ದೇವಗಂಧರ್ವಕನ್ಯಾಶ್ಚ - ದೇವ ಮತ್ತು ಗಂಧರ್ವಕನ್ಯೆಯರೂ, ನಾಗಕನ್ಯಾಶ್ಚ - ನಾಗಕನ್ಯೆಯರೂ, ದಶಗ್ರೀವಂ - ರಾವಣನನ್ನು, ಪರಿವಾರ್ಯ - ಸುತ್ತಿಕೊಂಡು, ತತ್ - ಆ, ಗೃಹೋತ್ತಮಂ - ಶ್ರೇಷ್ಠವಾದ ಮಂದಿರವನ್ನು, ವಿವಿಶುಃ- ಪ್ರವೇಶಿಸಿದರು ॥೪೫॥ ಸಃ - ಆ, ರಾವಣಃ - ದಶಕಂಠನು, ಧರ್ಮಪರಾಂ - ಧರ್ಮನಿರತಳಾದ, ಅವಸ್ಥಿತಾಂ - ಶ್ರೀ ರಾಮನನ್ನು ವಿನಾ ಬೇರೊಂದನ್ನು ಚಿಂತಿಸದಿರುವ, ಪ್ರವೇಪಮಾನಾಂ - ಧರ್ಮಭಂಗವುಂಟಾದೀತೆಂದು ವಿಶೇಷವಾಗಿ ಕಂಪಿಸುತಲಿರುವ, ಮೈಥಿಲೀಂ - ಸೀತಾದೇವಿಯನ್ನು, ವಿಹಾಯ - ಬಿಟ್ಟು, ಮದನೇನ - ಮನ್ಮಥನಿಂದ, ಮೋಹಿತಃ - ಮೋಹಗೊಳಿಸಲ್ಪಟ್ಟವನಾಗಿ, ಸ್ವಂ - ಸ್ವಂತವಾದ, ಭಾಸ್ವರಂ - ಬೆಳಗುತಲಿರುವ, ವೇಶ್ಮೈವ - ಮನೆಯನ್ನೇ, ಪ್ರವಿವೇಶ - ಪ್ರವೇಶಿಸಿದನು ॥೪೬॥

— ಇಂತು ಇಪ್ಪತ್ತೆರಡನೆಯ ಸರ್ಗಂ —

---

ಅಡಿಗಳನ್ನಿಡುವ ವೇಗದಿಂದ ನೆಲವನ್ನು ತಗ್ಗಿಸುತಲಿರುವನೋ ಎಂಬಂತೆ ಕಾಣಬರುತ್ತಾ, ಬೇಸಗೆಯ ನಡು ಹಗಲಿನೊಳಗೆ ಬೆಳಗುತಲಿರುವ ಸೂರ್ಯನಂತೆ ಹೊಳೆಯುತಲಿರುವ ತನ್ನ ಭವನವನ್ನು ಹೊಕ್ಕನು ॥೪೪॥ ದಶಕಂಠನು ಅಂತು ತನ್ನ ಅರಮನೆಯನ್ನು ಹೊಗುವಾಗ ಬಹುಮಂದಿ ದೇವಗಂಧರ್ವ ಕನ್ಯೆಯರೂ, ನಾಗಕನ್ಯೆಯರೂ ಅವನನ್ನು ಸುತ್ತಬಳಸಿ ಲೋಕೋತ್ತರವೆನಿಸಿದ ರಾಜಮಂದಿರವನ್ನು ಪ್ರವೇಶಿಸಿದರು ॥೪೫॥ ಪಾತಿವ್ರತ್ಯಧರ್ಮಕ್ಕೆ ಯಾವಾಗ, ಎಲ್ಲಿ, ಹೇಗೆ, ಏನು ಲೋಪ ಬರುವುದೋ ಎಂಬ ಭಯದಿಂದ ಅದಿರುತ ಅನವರತವೂ ಧರ್ಮಪರಾಯಣಳಾಗಿರುವ ವೈದೇಹಿಯನ್ನು ಆ ರಾವಣನು ಬಗೆಬಗೆಯಿಂದ ಬೆದರಿಸಿ, ಆಕೆಯನ್ನು ಬಹು ಬಲಾತ್ಕಾರದಿಂದ ಬಿಟ್ಟು, ಮಹತ್ತರವಾದ ಕಾಮಬಾಧೆಯಿಂದ ಪೀಡಿತನಾಗಿ, ಪುರಪ್ರವೇಶಮಂ ಗೈದು ತನ್ನ ದಿವ್ಯ ಭವನವನ್ನು ಹೊಕ್ಕನು॥೪೬॥

— ಇಂತು ಇಪ್ಪತ್ತೆರಡನೆಯ ಸರ್ಗಂ. —

ಶ್ರೀಃ

## ಶ್ರೀ ರಾಮಚನ್ದ್ರ ಪರಬ್ರಹ್ಮಣೇನಮಃ

# ಶ್ರೀಮತ್ಸುನ್ದರ ಕಾಣ್ಡೇ-ತ್ರಯೋವಿಂಶಸ್ಸರ್ಗಃ.

ಇತ್ಯುಕ್ತ್ವಾ ಮೈಥಿಲೀಂ ರಾಜಾ ರಾವಣ ಶ್ಶತ್ರುರಾವಣಃ ।
ಸಂದಿಶ್ಯ ಚ ತತ ಸ್ಸರ್ವಾ ರಾಕ್ಷಸೀ ರ್ನಿರ್ಜಗಾಮ ಹ ॥ ೧ ॥
ನಿಷ್ಕ್ರಾಂತೇ ರಾಕ್ಷಸೇಂದ್ರೇತು ಪುನ ರಂತಃಪುರಂ ಗತೇ ।
ರಾಕ್ಷಸ್ಯೋ ಭೀಮರೂಪಾ ಸ್ತಾ ಸ್ಸೀತಾಂ ಸಮಭಿ ದುದ್ರುವುಃ ॥ ೨ ॥
ತತ ಸ್ಸೀತಾ ಮುಪಾಗಮ್ಯ ರಾಕ್ಷಸ್ಯಃ ಕ್ರೋಧಮೂರ್ಛಿತಾಃ ।

---

## — ಇಪ್ಪತ್ತ ಮೂರನೆಯ ಸರ್ಗಂ —

ಕಂದ॥ ರಕ್ಕಸ ನಾಣತಿಯಿಂದಲ್ । ರಕ್ಕಸಿಯರ್ ಗಕ್ಕನೈದಿ ಸೀತೆಯ ಕಡೆಗೆ ।
ಪಕ್ಕಾಗರಸಂ ಗೆನ್ನುತ । ಲೆಕ್ಕರು ಮಿನಿಸಿಲ್ಲದಂದು ಹಿಂಸಿಸುತಿರ್ದರ್ ॥

ಶತ್ರುರಾವಣಃ - ಹಗೆಗಳನ್ನು ಗೋಳಾಡಿಸುವ, ರಾಜಾ - ಅರಸಾದ, ರಾವಣಃ - ದಶಕಂಠನು, ಮೈಥಿಲೀಂ - ಸೀತೆಯನ್ನು ಕುರಿತು, ಇತಿ - ಈ ಮೇಲೆ ಹೇಳಿದಂತೆ, ಉಕ್ತ್ವಾ - ಹೇಳಿ, ತತಃ - ಅನಂತರದಲ್ಲಿ, ಸರ್ವಾಃ - ಸಮಸ್ತರಾದ, ರಾಕ್ಷಸೀಃ - ರಕ್ಕಸಿಯರನ್ನು ಕುರಿತು, ಸಂದಿಶ್ಯಚ - (ಸೀತೆಯನ್ನು ತನ್ನ ವಶವಾಗುವಂತೆ ಮಾಡಬೇಕೆಂದು) ನೇಮಿಸಿಯೂ, ನಿರ್ಜಗಾಮಹಾ -ಹೊರಟುಹೋದನಷ್ಟೆ? ॥೧॥ ನಿಷ್ಕ್ರಾಂತೇ - ಅಲ್ಲಿಂದ ಹೊರಟ, ರಾಕ್ಷಸೇಂದ್ರೇತು - ರಾಕ್ಷಸರಾಜನಾದರೋ, ಅಂತಃಪುರಂಗತೇ (ಸತಿ)- ರಾಣಿವಾಸನ್ನ ಸೇರುತ್ತಿರಲಾಗಿ, ಭೀಮರೂಪಾಃ - ಭಯಂಕರಾಕಾರವುಳ್ಳ, ತಾಃ - ಆ, ರಾಕ್ಷಸ್ಯಃ - ರಾಕ್ಷಸಿಯರು, ಪುನಃ - ತಿರುಗಿ, ಸೀತಾಂ - ಜಾನಕಿಯನ್ನು, ಸಮಭಿದುದ್ರುವುಃ-ಬಂದು ಮುತ್ತಿದರು ॥೨॥ ತತಃ - ತರುವಾಯ, ರಾಕ್ಷಸ್ಯಃ - ರಕ್ಕಸಿಯರು, ಕ್ರೋಧಮೂರ್ಛಿತಾಃ - ಕೋಪದಿಂದ ಕೊಬ್ಬಿದವರಾಗಿ, ಸೀತಾಂ - ಜಾನಕಿಯನ್ನು ಕುರಿತು, ಉಪಾಗಮ್ಯ - ಹತ್ತಿರಕ್ಕೆ ಬಂದು, ಪರಂ - ವಿಶೇಷವಾಗಿ, ಪರುಷಯಾ - ಕ್ರೂರವಾದ, ವಾಚಾ - ವಾಕ್ಕಿನಿಂದ, ವೈದೇಹೀಂ - ಆ ಜಾನಕಿಯನ್ನು ಕುರಿತು, ಇದಂ -

---

## — ಇಪ್ಪತ್ತ ಮೂರನೆಯ ಸರ್ಗಂ —

ಹಗೆಗಳನ್ನು ಸದೆಬಡಿಯುವ ಅರಸಾದ ರಾವಣನು ಜನಕರಾಜನಂದಿನಿಯನ್ನು ಮೇಲೆಹೇಳಿದಂತೆ ನೇಮಿಸಿ, ನಯ ಭಯಗಳಿಂದ ಸೀತೆಯನ್ನು ತನ್ನ ವಶಪಡಿಸುವಂತೆ ರಕ್ಕಸಿಯರಿಗೆ ಆಣತಿಯನ್ನಿತ್ತು, ಅಶೋಕವನದಿಂದ ತೆರಳಿ ॥ ೧ ॥ ಲಂಕಾನಗರಮಂ ಪೊಕ್ಕು, ತನ್ನ ಅಂತಃಪುರವನ್ನು ಪ್ರವೇಶಿಸಿ, ಕಾಮಬಾಧೆಯಿಂದ ಪೀಡಿತನಾಗಿ ಕಳವಳಿಸುತಲಿದ್ದನು. ಇತ್ತ—ರಕ್ಕಸರೊಡೆಯನನ್ನು ಸಾಗಕಳುಹಿದ ಮಹಾ ಭಯಂಕರಾಕಾರರಾದ ರಾಕ್ಷಸಿಯರು, ರಾವಣನ ಅಪ್ಪಣೆಯನ್ನು ಶಿರದೊಳಾಂತು ಬೇಗನೆ ಅಶೋಕವನವನ್ನು ಹೊಕ್ಕು ಸೀತೆಯನ್ನು ಮುತ್ತಿಕೊಂಡರು ॥೨॥ ಬಳಿಕ ಸೀತೆಯ ಹತ್ತಿರಕ್ಕೆಬಂದು ಮುಖ ನೇತ್ರವಚನ ವಿಕಾರಗಳಿಂದ ಮಹತ್ತರವಾದ ಕೋಪಾಟೋಪವನ್ನು ತೋರುತ್ತ, ಕ್ರೂರವಾದ ವಚನ

ಪರಂ ಪುರುಷಯಾ ವಾಚಾ ವೈದೇಹೀ ಮಿದ ಮಬ್ರುವನ್ ॥ ೩ ॥
ಪೌಲಸ್ತ್ಯಸ್ಯ ವ ರಿಷ್ಠಸ್ಯ ರಾವಣಸ್ಯ ಮಹಾತ್ಮನಃ ।
ದಶಗ್ರೀವಸ್ಯ ಭಾರ್ಯಾ ತ್ವಂ ಸೀತೇ ನ ಬಹುಮನ್ಯಸೇ ॥ ೪ ॥
ತತ ಸ್ತ್ವೇಕಜಟಾ ನಾಮ ರಾಕ್ಷಸೀ ವಾಕ್ಯ ಮಬ್ರವೀತ್ ।
ಆಮಂತ್ರ್ಯ ಕ್ರೋಧ ತಾಮ್ರಾಕ್ಷೀ ಸೀತಾಂ ಕರತಲೋದರೀಂ ॥ ೫ ॥
ಪ್ರಜಾಪತೀನಾಂ ಷಣ್ಣಾಂ ತು ಚತುರ್ಥೋ ಯಃ ಪ್ರಜಾಪತಿಃ ।
ಮಾನಸೋ ಬ್ರಹ್ಮಣಃ ಪುತ್ರಃ ಪುಲಸ್ತ್ಯ ಇತಿ ವಿಶ್ರುತಃ ॥ ೬ ॥
ಪುಲಸ್ತ್ಯಸ್ಯ ತು ತೇಜಸ್ವೀ ಮಹರ್ಷಿ ರ್ಮಾನಸ ಸ್ಸುತಃ ।

ಈ ಮುಂದಿನ ವಿಷಯವನ್ನು, ಅಬ್ರುವನ್ - ಹೇಳತೊಡಗಿದರು ॥೩॥ ಹೇಸೀತೆ - ಎಲೆಜಾನಕಿ! ಪೌಲಸ್ತ್ಯಸ್ಯ - ಪುಲಸ್ತ್ಯಮುನಿಯ ವಂಶದಲ್ಲಿ ಜನಿಸಿರುವ, (ಅದರಿಂದಲೇ) ವರಿಷ್ಠಸ್ಯ - ಅತ್ಯುತ್ತಮನೆನಿಸಿದ, ಮಹಾತ್ಮನಃ - ಚಕ್ರವರ್ತಿಯೆನಿಸತಕ್ಕ, ದಶಗ್ರೀವಸ್ಯ - ಹತ್ತುಕೊರಳುಗಳುಳ್ಳ, ರಾವಣಸ್ಯ - ರಾವಣನಿಗೆ, ಭಾರ್ಯಾತ್ವಂ - ಒಡತಿಯಾಗಿರೋಣವನ್ನು, ನಬಹುಮನ್ಯಸೇ - ನಿನಗೆ ಗೌರವವೆಂದೆಣಿಸದೆ ಯಿರುವೆಯಲ್ಲ? ॥೪॥ ತತಸ್ತು - ಅಮೇಲೆಯಾದರೋ, ಏಕಜಟಾನಾಮ - ಏಕಜಟೆಯೆಂದು ಹೆಸರುವಾಸಿಯನ್ನು ಪಡೆದಿರುವ, ರಾಕ್ಷಸೀ - ನಿಶಾಚರಿಯು, ಕ್ರೋಧ - ಸಿಟ್ಟಿನಿಂದ, ತಾಮ್ರ - ಕೆಂಪಡರಿದ, ಅಕ್ಷೀ (ಸತೀ) - ಕಣ್ಣುಗಳುಳ್ಳವಳಾಗಿ, ಕರತಲೋದರೀಂ - ಹಿಡಿಯುಳ್ಳಡಗುವ ನಡುವುಳ್ಳ (ಬಡನಡುವಿನವಳಾದ) ಸೀತಾಂ - ಸೀತೆಯನ್ನು, ಆಮಂತ್ರ್ಯ - ಸಂಬೋಧಿಸಿ, ವಾಕ್ಯಂ- ಈ ಮುಂದಿನ ಮಾತನ್ನು, ಅಬ್ರವೀತ್- ಹೇಳತೊಡಗಿದಳು ॥೫॥ (ಹೇಸೀತೆ - ಎಲೆ ಜಾನಕಿ!) ಷಣ್ಣಾಂ - ಆರ್ವರಾದ, ಪ್ರಜಾಪತೀನಾಂ - ಪ್ರಜೇಶ್ವರರೊಳಗೆ, ಯಸ್ತು - ಯಾವನಾದರೆ, ಚತುರ್ಥಃ - ನಾಲ್ಕನೆಯವನಾದ, ಪ್ರಜಾಪತಿಃ-ಪ್ರಜೇಶ್ವರನೋ, ಸಃ - ಆತನು, ಬ್ರಹ್ಮಣಃ - ಸೃಷ್ಟಿಕರ್ತನಾದ ಚತುರ್ಮುಖನ, ಮಾನಸಃ - ಮನಸ್ಸಿನಿಂದುಂಟಾದ, ಪುತ್ರಃ - ಮಗನೆನಿಸಿರುವ, ಪುಲಸ್ತ್ಯಇತಿ -ಪುಲಸ್ತ್ಯನೆಂದು, ವಿಶ್ರುತಃ- ಲೋಕಪ್ರಸಿದ್ಧನಾಗಿರುವನು ॥೬॥ ಪುಲಸ್ತ್ಯಸ್ಯತು - ಆ ಪುಲಸ್ತ್ಯ ಬ್ರಹ್ಮನಿಗಾದರೋ, ತೇಜಸ್ವೀ - ನಿಗ್ರಹಾನುಗ್ರಹ ಸಾಮರ್ಥ್ಯವುಳ್ಳ,

ಗಳಿಂದ, ಸೀತೆಯನ್ನು ಕುರಿತು ಇಂತೆಂದರು ॥೩॥ ಎಲೆ ಸೀತೆ ! ರಾವಣನನ್ನು ಸಾಧಾರಣನೆಂದು ತಿಳಿಯಬೇಡ, ಪುಲಸ್ತ್ಯನ ಮೊಮ್ಮಗನಾಗಿ, ಮಹಾಶ್ರೇಷ್ಠನೆನಿಸಿ, ಮಹಾನುಭಾವನಾಗಿರುವ ಈದಶಕಂಠನಿಗೆ ನೀನು ಹೆಂಡತಿಯಾಗಿರಲು ಒಪ್ಪದಿರುವುದಕ್ಕೆನಿಮಿತ್ತವೇನು ? ಏಕೆ ಸಮ್ಮತಿಸೆ ? ನೀನು ಅನುಮತಿಸುವುದು ಒಳ್ಳೆಯದು ಎಂದಳು ॥೪॥ ಅಮೇಲೆ ಏಕಜಟೆಯೆಂಬ ರಾಕ್ಷಸಿಯು ಬಡನಡುವಿನ ಸೀತೆಯನ್ನು ಸಂಬೋಧಿಸಿ, ಬಲು ಸಿಟ್ಟಿನಿಂದ ಕಣ್ಣುಗಳನ್ನು ಕೆಂಪಗೆಮಾಡಿಕೊಂಡು ಹೀಗೆಂದಳು ॥೫॥ ಎಲೆ ಜಾನಕಿ ! ರಾವಣನು ಎಂದರೆ ಯಾರುಬಲ್ಲೆಯಾ? ತುಸ ಕೇಳು: —ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು ಎಂಬ ಆರುಮಂದಿ ಪ್ರಜೇಶ್ವರರನ್ನು ಕೇಳಿಬಲ್ಲೆಯಷ್ಟೆ? ಇವರೊಳಗೆ ನಾಲ್ಕನೆಯವನು ಎನಿಸಿದ ಪುಲಸ್ತ್ಯನು ಇತರರಂತೆ ಬ್ರಹ್ಮಸಮನಸ್ಸಿನಿಂದ ಉದ್ಭವಿಸಿದ ಮಗನಾಗಿದಾನೆ, ಮತ್ತು ಸರ್ವಲೋಕಪ್ರಸಿದ್ಧನು ॥೬॥ ನಿಗ್ರಹಾನುಗ್ರಹಸಮರ್ಥನಾಗಿಯೂ, ಭೂತಭವಿಷ್ಯದ್ವರ್ತಮಾನ ಜ್ಞಾನಸಂಪನ್ನನಾಗಿಯೂ, ಬ್ರಹ್ಮ ತೇಜಸ್ಸಿನಿಂದೊಡಗೂಡಿದವನಾಗಿಯೂ,

ನಾಮ್ನಾ ಸ ವಿಶ್ರವಾ ನಾಮ ಪ್ರಜಾಪತಿ ಸಮಪ್ರಭಃ ॥ ೭ ॥
ತಸ್ಯ ಪುತ್ರೋ ವಿಶಾಲಾಕ್ಷಿ ರಾವಣ ಶ್ಶತ್ರುರಾವಣಃ ।
ತಸ್ಯ ತ್ವಂ ರಾಕ್ಷಸೇಂದ್ರಸ್ಯ ಭಾರ್ಯಾ ಭವಿತು ಮರ್ಹಸಿ ॥ ೮ ॥
ಮಯೋಕ್ತಂ ಚಾರು ಸರ್ವಾಂಗಿ ವಾಕ್ಯಂ ಕಿ ನ್ನಾ ನುಮನ್ಯಸೇ ॥ ೮॥ ॥
ತತೋ ಹರಿಜಟಾ ನಾಮ ರಾಕ್ಷಸೀ ವಾಕ್ಯ ಮಬ್ರವೀತ್ ॥
ವಿವರ್ತ್ಯ ನಯನೇ ಕೋಪಾ ನ್ಮಾರ್ಜಾರ ಸದೃಶೇಕ್ಷಣಾ ॥ ೯॥ ॥
ಯೇನದೇವಾ ಸ್ತ್ರಯಸ್ತ್ರಿಂಶ ದ್ದೇವರಾಜಶ್ಚ ನಿರ್ಜಿತಾಃ ।

ಮಹರ್ಷಿಃ-ಬ್ರಹ್ಮರ್ಷಿಯಾದ (ಜ್ಞಾನ ಸಿಧಿಯಾದ,) ಮಾನಸಸುತಃ- ಮಾನಸ ಪುತ್ರನೆನಿಸಿರುವ, ನಾಮ್ನಾ - ಹೆಸರಿನಿಂದ, ಸಃ - ಆ, ವಿಶ್ರವಾನಾಮ - ವಿಶ್ರವಸ್ಸೆಂದು (ಬಳ್ಳಿಯ ಕೀರ್ತಿಯುಳ್ಳವನೆಂದು) ಹೆಸರುವಾಸಿಯನ್ನು ಪಡೆದಿರುವಾತನು, ಪ್ರಜಾಪತಿಸಮಪ್ರಭಃ - ಬ್ರಹ್ಮನಿಗೆ ಸಮಾನವಾದ ತೇಜಸ್ಸುಳ್ಳವನಾದನು ॥೭॥ ಹೇ ವಿಶಾಲಾಕ್ಷಿ - ಎಲೌ ವಿಶಾಲನಯನೆಯಾದ ಜಾನಕಿಯೇ, ಶತ್ರುರಾವಣಃ-ಹಗೆಗಳನ್ನು ಗೋಳಾಡಿಸುವ, ರಾವಣಃ - ರಾವಣನು, ತಸ್ಯ - ಆ ವಿಶ್ರವಸ್ಸಿಗೆ, ಪುತ್ರಃ - ಕುಮಾರನು, ತಸ್ಯ - ಅಂತಹ, ರಾಕ್ಷಸೇಂದ್ರಸ್ಯ - ರಾಕ್ಷಸ ಸಾರ್ವಭೌಮನಿಗೆ, ತ್ವಂ - ನೀನು, ಭಾರ್ಯಾ - ಪತ್ನಿಯು, ಭವಿತುಂ - ಆಗಲಿಕ್ಕೆ, ಅರ್ಹಸಿ - ತಕ್ಕವಳಾಗಿದ್ದೀಯೆ, ॥೮॥ ಚಾರು - ಮನೋಹರವಾದ, ಸರ್ವಾಂಗಿ - ಸಕಲಾವಯವಗಳುಳ್ಳ ಎಲೆ ಸೀತೆಯೇ, ಮಯಾ - ನನ್ನಿಂದ, ಉಕ್ತಂ - ಹೇಳಲ್ಪಟ್ಟುದನ್ನು, ಕಿಂ - ಏತಕ್ಕೋಸ್ಕರ, ನಾನುಮನ್ಯಸೆ - ಸಮ್ಮತಿಸದೆ ಇದ್ದೀಯೆ ? ॥೮॥ ತತಃ - ಅವಳು ಹೇಳಿದಮೇಲೆ, ಹರಿಜಟಾನಾಮ - ಹರಿಜಟೆಯೆಂಬ, ರಾಕ್ಷಸೀ - ರಾತ್ರಿಂಚರಿಯು, ವಾಕ್ಯಂ - ಮುಂದಿನ ಮಾತನ್ನು, ಅಬ್ರವೀತ್ - ಹೇಳತೊಡಗಿದಳು ॥೯॥ ಮಾರ್ಜಾರ - ಬೆಕ್ಕಿನೊಡನೆ, ಸದೃಶ - ಸಮಾನವಾದ, ಈಕ್ಷಣಾ - ದೃಷ್ಟಿಗಳುಳ್ಳ ಆ ರಾಕ್ಷಸಿಯು, ಕೋಪಾತ್ - ಸಿಟ್ಟಿನ ದೆಸೆಯಿಂದ, ನಯನೆ - ಕಣ್ಣುಗಳನ್ನು, ವಿವರ್ತ್ಯ - ತಿರುಗಿಸುತ್ತ - (ಹೇಸೀತೇ - ಎಲೆ ಜಾನಕಿ,) ತ್ರಯಸ್ತ್ರಿಂಶತ್ - ಮೂವತ್ತುಮೂರು ಕೋಟಿಯುಷ್ಟಾದ, ದೇವಾಃ, ದೇವತೆಗಳೂ, ದೇವರಾಜಶ್ಚ - ಇಂದ್ರನೂ, ಯೇನ - ಯಾವ ನಮ್ಮ ಪ್ರಭುವಿನಿಂದ, ನಿರ್ಜಿತಾಃ -

ಇರುವ ಲೋಕಪ್ರಸಿದ್ಧನಾದ ವಿಶ್ರವಸ್ಸೆಂಬ ಮಹಾಮುನಿಯು ತಾತನಿಗೆ ಸಮಾನವಾದ ತೇಜಸ್ವಿಯಾಗಿ ಆ ಪುಲಸ್ತ್ಯಮಹಾಮುನಿಗೆ ಮಾನಸಪುತ್ರನಾದರು ॥೭॥ ಎಲೌ ವಿಶಾಲನಯನೆಯಾದ ಸೀತೆ ! ಸಕಲ ಶತ್ರುಸಂಹಾರಕನಾದ ನಮ್ಮ ರಾವಣನು ಆ ವಿಶ್ರವಸ್ಸಿಗೆ ಕುಮಾರನೆನಿಸಿರುವನು, ಅಂತಹ ರಾಕ್ಷಸೇಶ್ವರನಿಗೆ ನೀನು ಭಾರ್ಯೆಯಾಗಿರಲು ತಕ್ಕವಳಾಗಿದ್ದೀಯೆ, ನನ್ನ ಮಾತನ್ನು ಕೇಳಿ ಹಾಗೆಮಾಡು, ಆದರೆ ನಿನ್ನನ್ನು ನೋಡಿದರೆ ನನ್ನ ನುಡಿಗೆ ಒಡಂಬಡುವ ಹಾಗೆ ಕಾಣಬರುವುದಿಲ್ಲ, ಎಲೆ ಸರ್ವಾಂಗಸುಂದರಿ ! ಅದೇಕೆ ಸಮ್ಮತಿಸದಿರುವೆಯೋ ಅದಕ್ಕೆ ತಕ್ಕ ಕಾರಣವನ್ನಾದರೂ ತಿಳಿಸು ಎಂದಳು ॥೮॥ ಅನಂತರದಲ್ಲಿ ಬೆಕ್ಕಿನಂತೆ ಕಣ್ಣುಳ್ಳ ಹರಿಜಟೆಯೆಂಬ ಕ್ಷಣದಾಚರಿಯು ಬಹುತರವಾಗಿ ಕೋಪಿಸಿ, ದೃಷ್ಟಿಗಳನ್ನು ವಿಕಾರವಾಗಿ ತಿರುಗಿಸುತ್ತಾ ಹತ್ತಿರಕ್ಕೆ ಬಂದು ॥೯॥ ॥ ಎಲೆ ವೈದೇಹಿ ! ಸ್ವರ್ಗಾದಿಲೋಕಗಳಲ್ಲಿರುವ ಮೂವತ್ತು ಮೂರುಕೋಟಿ ದೇವತೆಗಳೂ, ಮತ್ತು ಆ ದೇವರ್ಕಳಿಗೊಡೆಯನಾದ ಇಂದ್ರನೂ, ನಮ್ಮ ಮಹಾರಾಜನೊಡನೆ ಕಾಳಗಕ್ಕೆ ಕಲೆತು, ಸೋತು,

ತಸ್ಯ ತ್ವಂ ರಾಕ್ಷಸೇಂದ್ರಸ್ಯ ಭಾರ್ಯಾ ಭವಿತು ಮರ್ಹಸಿ ॥ ೧೦॥ ॥
ತತಸ್ತು ಪ್ರಘಸಾ ನಾಮ ರಾಕ್ಷಸೀ ಕ್ರೋಧಮೂರ್ಛಿತಾ ।
ಭರ್ತ್ಸಯಂತೀ ತದಾ ಘೋರ ಮಿದಂ ವಚನ ಮಬ್ರವೀತ್ ॥ ೧೧॥ ॥
ವೀರ್ಯೋತ್ಸಿಕ್ತಸ್ಯ ಶೂರಸ್ಯ ಸಂಗ್ರಾಮೇ ಷ್ವನಿವರ್ತಿನಃ ।
ಬಲಿನೋ ವೀರ್ಯ ಯುಕ್ತಸ್ಯ ಭಾರ್ಯಾ ತ್ವಂ ಕಿಂ ನ ಲಪ್ಸ್ಯಸೇ ॥೧೨॥ ॥

---

ಕಾಳಗದಲ್ಲಿ ಗೆಲ್ಲಲ್ಪಟ್ಟರೋ, ತಸ್ಯ - ಅಂತಹ, ರಾಕ್ಷಸೇಂದ್ರಸ್ಯ - ರಾಕ್ಷಸಚಕ್ರವರ್ತಿಗೆ, ತ್ವಂ - ನೀನು ಭಾರ್ಯಾ - ಹೆಂಡತಿಯು, ಭವಿತುಂ - ಆಗಲಿಕ್ಕೆ, ಅರ್ಹಸಿ - ಯೋಗ್ಯಳಾಗಿದ್ದೀಯೆ ॥೧೦॥-॥ ತತಸ್ತು - ಆ ಹಿಂದೆಯಾದರೋ, ಪ್ರಘಸಾನಾಮ - ಪ್ರಘಸೆಯೆಂಬ ಹೆಸರಿನ, ರಾಕ್ಷಸೀ - ಯಾಮಿನೀಚರಿಯು, ಕ್ರೋಧಮೂರ್ಛಿತಾ-ಕೋಪದಿಂದ ಉಬ್ಬುತಲಿರುವವಳಾಗಿ, ತದಾ-ಆಗ, ಭರ್ತ್ಸಯಂತೀ-ಸೀತೆಯನ್ನು ಗದರಿಸುತಲಿರುವವಳಾಗಿ, ಇದಂವಚನಂ-ಈ ಮುಂದಿನ ನುಡಿಯನ್ನು, ಅಬ್ರವೀತ್-ಹೇಳತೊಡಗಿದಳು॥೧೧॥-॥ (ಹೇಸೀತೆ-ಎಲೆ ಸೀತೆಯೇ) ವೀರ್ಯೋತ್ಸಿಕ್ತಸ್ಯ-ಪರಾಕ್ರಮದಿಂದ ಕೊಬ್ಬಿರುವ, ಶೂರಸ್ಯ-ಸಾಹಸಪರನಾದ, ಸಂಗ್ರಾಮೇಷು-ಯುದ್ಧರಂಗಗಳಲ್ಲಿ, ಅನಿವರ್ತಿನಃ-ಹಿಮ್ಮೆಟ್ಟದಿರುವ, ಬಲಿನಃ-ಮಹಾಬಲಶಾಲಿಯಾದ, ವೀರ್ಯಯುಕ್ತಸ್ಯ-ಮಹಾವೀರ್ಯದಿಂದ ಸಹಿತನಾಗಿಯೂ ಇರುವ, ಮಹಾರಾಜನಿಗೆ, ಭಾರ್ಯಾತ್ವಂ-ಹೆಂಡತಿಯಾಗೋಣವನ್ನು, ಕಿಂ-ಏತಕ್ಕೋಸ್ಕರ, ನಲಪ್ಸ್ಯಸೆ-ಪಡೆಯದೆ ಇದ್ದೀಯೆ?॥೧೨॥ ಮಹಾಬಲಃ-ಅಪರಿಮಿತಬಲವುಳ್ಳ, ರಾಜಾ-ದೊರೆಯಾದ, ರಾವಣಃ-ರಾವಣನು, ಬಹುಮತಾಂ-ಪರಮ ಪ್ರೀತಿಪಾತ್ರಳಾದ, ಸರ್ವಾಸಾಂ-ಸಮಸ್ತ

---

ಓಡಿಹೋಗಿದಾರೆ, ಅಂತಹ ವೀರಾಗ್ರಗಣ್ಯನಿಗೆ ನೀನು ವಲ್ಲಭೆಯಾಗಿರಲು ಯೋಗ್ಯಳಾಗಿದ್ದೀಯೆ ಎಂದಳು ॥೧೦॥ ॥ ತದನಂತರದಲ್ಲಿ—ಪ್ರಘಸೆಯೆಂಬ ಯಾಮಿನೀಚರಿಯು ಶರೀರವನ್ನಾಂತ ಕೋಪವೋ ಎಂಬಂತೆ ಉರಿಯುತ್ತ, ಸಮೀಪಕ್ಕೆ ತಂದು, ಕಠಿನತರವಾದ ವಚನಗಳಿಂದ ಗರ್ಜಿಸುತ್ತ, ಕ್ರೂರತರವಾಗಿ ಮಾತನಾಡತೊಡಗಿದಳು ॥೧೧॥ ॥ ಎಲೆ ಸೀತೆ! ನಮ್ಮ ಮಹಾಪ್ರಭುವಿಗೆ ಪರಾಕ್ರಮದಲ್ಲೇನೂ ಕೊರತೆಯಿಲ್ಲ, ಶೌರ್ಯದಲ್ಲಿ ನ್ಯೂನತೆಯಿಲ್ಲ, ಸುರನರೋರಗರೊಡನೆ ಕಾಳಗಗಳು ಸಂಭವಿಸಿದಾಗ ಯಾವುದೊಂದು ಬವರದಲ್ಲಿಯೂ ತುಸವಾದರೂ ಹಿಮ್ಮೆಟ್ಟಿದವನಲ್ಲ, ಹಿಂಜರಿಯುವವನೂ ಅಲ್ಲ, ದೇಹಶಕ್ತಿಯೊಳಗೆ ಯಾರಿಗೂ ಕಡಮೆಯಾದವನಲ್ಲ, ವೀರಾನುವೀರರಾದ ಸೈನಿಕರಿಂದೊಡಗೂಡಿದವನು, ಇಂತಹ ಮಹಾ ಪುರುಷನಿಗೆ ಪತ್ನಿಯಾಗಿರುವ ಮಹಾ ಪದವಿಯನ್ನು ನೀನು ಕೈಗೊಳ್ಳದಿರಲು ಕಾರಣವೇನು ? ॥೧೨॥ ॥ ಇದರಲ್ಲಿ ಮತ್ತೊಂದು ವಿಶೇಷವುಂಟು, ಅದನ್ನು ಕೇಳು—ಇಂತಪರಿಮಿತ ಪರಾಕ್ರಮ ಶಾಲಿಯಾಗಿದ್ದು, ತನಗಿರುವ ಸಾವಿರಾರು ಮಂದಿ ಅರಸಿಯರಿಗೆಲ್ಲಾ ನಾಯಕಿಯಾಗಿ, ಸಮಸ್ತ ಸೌಭಾಗ್ಯಸಂಪನ್ನಳೆನಿಸಿ, ಒಡೆಯನಿಗೆ ಪರಮ ಪ್ರೇಮಾಸ್ಪದಳೂ ಆಗಿರುವ ಪಟ್ಟದ ರಾಣಿಯಾದ ಮಂಡೋದರಿಯನ್ನೂ ಬಿಟ್ಟು, ನಿನ್ನನ್ನು ಪಟ್ಟದರಸಿಯನ್ನಾಗಿ ಮಾಡಿಕೊಳ್ಳಲು ಬಯಸುತ್ತಿರುವನಲ್ಲ? ಅಹಹ! ನಿನ್ನ ಭಾಗ್ಯವನ್ನು ನಾನು ಎಷ್ಟೆಂದು ಕೊಂಡಾಡಲಿ? ಈ ಮೂಲೋಕದ ಹೆಂಗಳೊಳಗೆ ಮತ್ತಾವಳಾದರೂ ಸಾವಿರಾರು ವರ್ಷಗಳು ತಪಸ್ಸು ಮಾಡಿದರೆ ತಾನೆ ಅವನು ಕಣ್ಣೆತ್ತಿ ನೋಡತಕ್ಕವನೇನೆ? ಅಯ್ಯೋ! ಸೀತೇ! ನಿನಿಗೇಕೆ ಈ ಹುಚ್ಚು? ಛೀ, ಬಿಡುಬಿಡು, ನೀನು ಇನ್ನೆಷ್ಟು ಜನ್ಮಗಳನ್ನೆತ್ತಿದರೆ

ಪ್ರಿಯಾಂ ಬಹುಮತಾಂ ಭಾರ್ಯಾಂ ತ್ಯಕ್ತ್ವಾ ರಾಜಾ ಮಹಾಬಲಃ ।
ಸರ್ವಾಸಾಂ ಚ ಮಹಾಭಾಗಾಂ ತ್ವಾ ಮುಪೈಷ್ಯತಿ ರಾವಣಃ ॥ ೧೩॥ ॥
ಸಮೃದ್ಧಂ ಸ್ತ್ರೀಸಹಸ್ರೇಣ ನಾನಾ ರತ್ನೋಪ ಶೋಭಿತಂ ।
ಅಂತಃಪುರಂ ಸಮುತ್ಸೃಜ್ಯ ತ್ವಾ ಮುಪೈಷ್ಯತಿ ರಾವಣಃ ॥ ೧೪॥ ॥
ಅನ್ಯಾ ತು ವಿಕಟಾ ನಾಮ ರಾಕ್ಷಸೀ ವಾಕ್ಯ ಮಬ್ರವೀತ್ ॥ ೧೫ ॥
ಅಸಕೃ ದ್ದೇವತಾಯುದ್ಧೇ ನಾಗ ಗಂಧರ್ವ ದಾನವಾಃ ।
ನಿರ್ಜಿತಾ ಸ್ಸಮರೇ ಯೇನ ಸ ತೇ ಪಾರ್ಶ್ವ ಮುಪಾಗತಃ ॥ ೧೬ ॥

ಸ್ತ್ರೀಯರೊಳಗೂ, ಮಹಾಭಾಗಾಂ-ಬಹು ಭಾಗ್ಯಸಂಪನ್ನೆಯಾದ, ಭಾರ್ಯಾಂಚ-ಪಟ್ಟದರಸಿಯಾಗಿರುವ ಮಂಡೋದರಿಯನ್ನೂ, ತ್ಯಕ್ತ್ವಾ - ಬಿಟ್ಟು, ತ್ವಾಂ - ನಿನ್ನನ್ನು, ಉಪೈಷ್ಯತಿ - ಹೊಂದುವವನಾಗಿರುವನು ॥೧೩॥-॥ (ಕಿಂಚ - ಮತ್ತು) ರಾವಣಃ - ದಶಕಂಠನು, ಸ್ತ್ರೀಸಹಸ್ರೇಣ - ಸಾವಿರಾರು ಮಂದಿ ಸೀಮಂತಿನಿಯರಿಂದ, ಸಮೃದ್ಧಂ - ಪರಿಪೂರ್ಣವಾಗಿರುವ, ನಾನಾ - ಅನೇಕವಿಧವಾದ, ರತ್ನ - ಶ್ರೇಷ್ಠ ವಸ್ತುಗಳ ರಾಶಿಯಿಂದ, ಉಪಶೋಭಿತಂ - ಪ್ರಕಾಶಮಾನವಾದ, ಅಂತಃಪುರಂ- ರಾಣಿವಾಸವನ್ನೇ, ಸಮುತ್ಸೃಜ್ಯ - ಬಿಟ್ಟುಬಿಟ್ಟು, ತ್ವಾಂ - ನಿನ್ನನ್ನು, ಉಪೈಷ್ಯತಿ - ಹೊಂದತಕ್ಕವನಾಗಿದ್ದಾನೆ ॥೧೪॥-॥ ವಿಕಟಾನಾಮ - ವಿಕಟೆಯೆಂಬ ಹೆಸರಿನವಳಾದ, ಅನ್ಯಾ - ಬೇರೊಬ್ಬ ರಾಕ್ಷಸೀತು - ರಾಕ್ಷಸಿಯಾದರೋ, ವಾಕ್ಯಂ - ಮಾತನ್ನು, ಅಬ್ರವೀತ್ - ಹೇಳತೊಡಗಿದಳು, ಅಸಕೃತ್ - ಅನೇಕಾವರ್ತಿ, ದೇವತಾಯುದ್ಧೇ- ದೇವತೆಗಳೊಡನೆ ನಡೆದ ಯುದ್ಧದಲ್ಲಿ, ನಾಗಗಂಧರ್ವದಾನವಾಃ - ನಾಗರು, ಗಂಧರ್ವರು, ದಾನವರು ಸಹ, ಸಮರೆ - ಹೋರಾಟದಲ್ಲಿ, ಯೇನ - ಯಾವ ರಾವಣನಿಂದ, ನಿರ್ಜಿತಾಃ - ಸೋಲಿಸಲ್ಪಟ್ಟರೋ, ಸಃ - ಅಂತಹ ವೀರನು, ತೆ - ನಿನ್ನ, ಪಾರ್ಶ್ವಂ - ಸಮೀಪವನ್ನು ಕುರಿತು, ಸಮಾಗತಃ - ಬಂದನಲ್ಲ! ॥೧೬॥ ಹೇ ಅಧಮೇ - ಎಲೆ ಕೀಳಹೆಂಗಸೇ!, ಸರ್ವಸಮೃದ್ಧಸ್ಯ - ಸರ್ವ ಸಾಮ್ರಾಜ್ಯಪರಿಪೂರ್ಣನಾದ, ಮಹಾತ್ಮನಃ-

ಇಂತಹ ಮಹಾತ್ಮನಾದ ನಿನಗೆ ಒದಗಿತು? ಅಬ್ಬ! ನೀನೆಷ್ಟು ಪುಣ್ಯವನ್ನು ಮಾಡಿದ್ದೆಯೋ? ಆ ಸುಕೃತರಾಶಿಯೆಲ್ಲ ಈಗ ಏಕಕಾಲದಲ್ಲಿ ಫಲವಾಗಿದೆ, ಓಹೋ! ಇದನ್ನು ನೋಡೆ, ಸಾವಿರಾರುಮಂದಿ ಸುಂದರಿಯರಿಂದ ಪರಿಪೂರ್ಣವಾಗಿ, ವಜ್ರವೈಡೂರ್ಯಾದಿ ರತ್ನರಾಶಿಗಳಿಂದಲೂ, ಸಮಸ್ತ ಶ್ರೇಷ್ಠವಸ್ತುಗಳಿಂದಲೂ ತುಂಬಿ ತುಳುಕುತಲಿರುವ ಅಂತಃಪುರವನ್ನೇ ಬಿಟ್ಟು, ನಿನ್ನ ಕೈ ಹಿಡಿಯಲು ನಮ್ಮೊಡೆಯನು ಮನ ಮಾಡಿರುವನಲ್ಲೆ? ಸೀತೇ! ನಿನ್ನದೇನು ಪುಣ್ಯವೇ? ಎಷ್ಟು ಪುಣ್ಯವೇ? ಎಂದಳು ॥೧೩, ೧೪॥ ॥ ಆಮೇಲೆ ವಿಕಟೆಯೆಂಬ ವಿಭಾರೀಚರಿಯು ಆಕೆಯ ಬಳಿಗೆ ಬಂದು ಎಲೌ ಸೀತೆ! ನಮ್ಮಮಹಾರಾಜನ ಮಹಿಮೆಯನ್ನು ನಾನು ಎಷ್ಟೆಂದು ಹೇಳಲಿ! ರಣರಂಗಗಳಲ್ಲಿ ದೇವತೆಗಳೊಡನೆ ಸಮರವು ಸಂಭವಿಸಿದಾಗ ನಮ್ಮ ಸ್ವಾಮಿಯೊಡನೆ ಹೋರಾಡಲಾರದೆ ದೇವತೆಗಳು, ಗಂಧರ್ವರು, ದಾನವರೂ ಅನೇಕವೇಳೆ ಸೋತು ಓಡಿಹೋಗಿದ್ದಾರೆ, ಅಂತಹಮಹಾಪ್ರಭುವು ನಿನ್ನ ಭಾಗ್ಯವಶದಿಂದ ನೀನಿದ್ದಲ್ಲಿಗೆ ಬಯಸಿ ಬಂದನಲ್ಲಾ! ಸಕಲ ಸಾಮ್ರಾಜ್ಯ ಲಕ್ಷ್ಮೀ ಸನಾಥನಾದ ನಕ್ತಂಚರಚಕ್ರವರ್ತಿಯ ಪಟ್ಟದರಸಿಯ ಪದವಿಯನ್ನು ಪಡೆಯಲು ಪಟ್ಟಾಡುತಿರುವೆಯಲ್ಲ? ಛೀ, ಛೀ, ನಿನಗಿಂತಲೂ ಅಧಮಳುಂಟೆ? ಬೇಗನೆ ಮನಗೊಡು, ಆತನ

ತಸ್ಯ ಸರ್ವಸಮೃದ್ಧಸ್ಯ ರಾವಣಸ್ಯ ಮಹಾತ್ಮನಃ ।
ಕಿಮದ್ಯ ರಾಕ್ಷಸೇಂದ್ರಸ್ಯ ಭಾರ್ಯಾತ್ವಂ ನೇಚ್ಛಸೇ ಧವೇ || ೧೭ ||
ತತಸ್ತು ದುರ್ಮುಖೀ ನಾಮ ರಾಕ್ಷಸೀ ವಾಕ್ಯ ಮಬ್ರವೀತ್ || ೧೭|| ||
ಯಸ್ಯ ಸೂರ್ಯೋ ನ ತಪತಿ ಭೀತೋ ಯಸ್ಯಚ ಮಾರುತಃ ||
ನ ವಾತಿಸ್ಮಾ ಯತಾಪಾಂಗೇ ಕಿಂ ತ್ವಂ ತಸ್ಯ ನ ತಿಷ್ಠಸಿ ||
ಪುಷ್ಪವೃಷ್ಟಿಂ ಚ ತರವೋ ಮುಮುಚುರ್ಯಸ್ಯ ವೈ ಭಯಾತ್ ||೧೯||
ಶೈಲಾಶ್ಚ ಸುಭ್ರೂ ಪಾನೀಯಂ ಜಲದಾಶ್ಚ ಯದೇಚ್ಛತಿ ।
ತಸ್ಯ ನೈರ್ಋತ ರಾಜಸ್ಯ ರಾಜರಾಜಸ್ಯ ಭಾಮಿನಿ ||೨೦||
ಕಿಂ ತ್ವಂ ನಕುರುಷೇ ಬುದ್ಧಿಂ ಭಾರ್ಯಾರ್ಥೇ ರಾವಣಸ್ಯ ಹಿ || ೨೦|| ||

---

ಮಹಾನುಭಾವನಾಗಿರುವ, ರಾಕ್ಷಸೇಂದ್ರಸ್ಯ - ರಾಕ್ಷಸಾಧಿಪತಿಗೆ, ಅದ್ಯ - ಈಗ, ಕಿಂ - ಏತಕ್ಕಾಗಿ, ಭಾರ್ಯಾತ್ವಂ - ಕುಟುಂಬಿನಿಯಾಗುವಿಕೆಯನ್ನು, ನೇಚ್ಛಸೆ (ನೇಚ್ಛಸಿ) ಬಯಸುವೆ ಇದೀಯೆ, ||೧೭|| ತತಸ್ತು - ಆ ಹಿಂದೆಯಾದರೋ, ದುರ್ಮುಖೀನಾಮ - ದುರ್ಮುಖಿಯೆಂದು ಪ್ರಸಿದ್ಧಳಾದ, ರಾಕ್ಷಸೀ - ರಕ್ಕಸಿಯು, ವಾಕ್ಯಂ - ಮುಂದಿನ ವಚನವನ್ನು, ಅಬ್ರವೀತ್ - ಹೇಳಿದಳು, ಯಸ್ಯ - ಯಾವ ಪ್ರಭುವಿನಿಂದ, ಸೂರ್ಯಃ - ಸೂರ್ಯನು, ಭೀತಃ - ಭಯಪಟ್ಟವನಾಗಿ, ನತಪತಿ - ಸುಡುವುದಿಲ್ಲವೋ, ಯಸ್ಯಚ - ಯಾವ ದೊರೆಯಿಂದ, ಭೀತಃ - ಅಂಜಿದವನಾಗಿ, ಮಾರುತಃ - ವಾಯುವು, ನವಾತಿಸ್ಮ - ಬಲವಾಗಿ ಬೀಸುತಲಿಲ್ಲವೋ, ಆಯತ - ವಿಶಾಲವಾದ, ಅಪಾಂಗೆ - ಕುಡಿಗಣ್ಣುಳ್ಳ ಜಾನಕಿಯೇ!, ತರವಶ್ಚ - ಮರಗಳೂ, ಯಸ್ಯ - ಯಾವನಿಂದುಂಟಾದ, ಭಯಾತ್ - ಭಯದ ದೆಸೆಯಿಂದ, ಪುಷ್ಪವೃಷ್ಟಿಂ - ಹೂವಿನ ಮಳೆಯನ್ನು, ಮುಮುಚುಃ - ತಕ್ಕಷ್ಟು ಮಳೆಗರೆಯುತ್ತವೆಯೋ ||೧೯|| ಹೇಸುಭ್ರೂಃ- ಅಂದವಾದ ಕಣ್ಣು ಹುಬ್ಬುಳ್ಳ ಸೀತೆಯೇ (ರಾವಣಃ - ರಾವಣನು) ಪಾನೀಯಂ - ಜಲವನ್ನು, ಯದಾ - ಯಾವಾಗ, ಇಚ್ಛತಿ-ಕೋರುತ್ತಾನೆಯೋ, (ತದಾ - ಆಗ) ಶೈಲಾಶ್ಚ - ಬೆಟ್ಟಗಳೂ, ಜಲದಾಶ್ಚ - ಮೋಡಗಳೂ, ತಸ್ಯ - ಆ, ನೈಋತರಾಜಸ್ಯ - ರಕ್ಕಸರೊಡೆಯನಾದ, ರಾಜರಾಜಸ್ಯ - ಸಾರ್ವಭೌಮನ, (ಭಯಾತ್- ಭಯದ ದೆಸೆಯಿಂದ) ಮುಂಚಂತಿ - ಕರೆಯುತ್ತವೆ ||೨೦|| ರಾವಣಸ್ಯ-ಅಂತಹ ರಾವಣನಿಗೆ, ಭಾರ್ಯಾರ್ಥೇ - ಹೆಂಡತಿಯಾಗುವ ವಿಷಯದಲ್ಲಿ ತ್ವಂ-ನೀನು, ಬುದ್ಧಿಂ - ಸಮ್ಮತಿಯನ್ನು, ಕಿಂನಕುರುಷೆ - ಏಕೆಮಾಡದೆ ಇದ್ದೀಯೆ ?, ಹೇ ಸಾಧುಭಾಮಿನಿ ಎಲೆ ಒಳ್ಳೆಯ ಹೆಂಗಸೇ ! ದೇವಿ-ಸುಂದರಿಯೇ, ತೆ-ನಿನಗೆ, ಸಾಧು-ಚೆನ್ನಾಗಿ(ಮೃದುವಾಗಿ)ತತ್ವತಃ-

---

ಕೈಹಿಡಿ, ಭೋಗಭಾಗ್ಯಗಳನ್ನನುಭವಿಸು ಎನ್ನುತ್ತಿರಲು ||೧೫,೧೬. ೧೭|| ಆಗ—ದುರ್ಮುಖಿಯೆಂಬ ರಾಕ್ಷಸಿಯು ಬಂದು ಓ ಸೀತೇ ? ನಮ್ಮ ಪ್ರಭುವಿನ ಪ್ರಭುಶಕ್ತಿಯನ್ನು ನೀನು ನೋಡಿರಲಾರೆ,ಮತ್ತು ಕೇಳಿಯೂ ಇರಲಾರೆ ಎಂದು ತೋರುತದೆ, ಇಗೋ, ಆತನಿಗೆ ಸೂರ್ಯನು ಹೆದರಿ ಹೆಚ್ಚಾಗಿ ಸುಡುವುದಿಲ್ಲ, ವಾಯುವು ಅಂಜಿ ಎಷ್ಟು ಆವಶ್ಯಕವೋ ಅಷ್ಟೇ ಬೀಸುತ್ತಾನೆ, ಹೂವಿನ ಮರಗಳೂ ಭಯಗೊಂಡಂತೆ ತಕ್ಕಷ್ಟು ಹೂಮಳೆಯನ್ನು ಸುರಿಸುತ್ತವೆ, ವಿಶಾಲನಯನೆಯಾದ ಎಲೆ ಸುಭ್ರು! ಅರಸು ಯಾವಾಗ ಕೋರುತ್ತಾನೆಯೋ ಆಗ ಬೆಟ್ಟಗಳು ಹೊಳೆಗಳನ್ನು ಹರಿಸುತ್ತವೆ, ಮೋಡಗಳು ಬಯಸಿದಷ್ಟು ಮಳೆಗರೆಯುತವೆ, ಎಲೆ ಭಾಮಿನೀ ! ನಿನಿಗೇಕೆ ಬುದ್ಧಿಯಿಲ್ಲ? ಇಂತಹ ಶುಭಸಮಯವು ದೊರೆಯುವುದೇ ?

ಸಾಧು ತೇ ತತ್ತ್ವತೋ ದೇವಿ ಕಥಿತಂ ಸಾಧು ಭಾಮಿನಿ ॥
ಗೃಹಾಣ ಸುಸ್ಮಿತೇ ವಾಕ್ಯ ಮನ್ಯಥಾ ನ ಭವಿಷ್ಯಸಿ ॥ ೨೧ ॥ ॥
ಇತಿ ಶ್ರೀಮತ್ಸುಂದರಕಾಂಡೆ - ತ್ರಯೋವಿಂಶಸ್ಸರ್ಗಃ.

ಯಥಾರ್ಥವಾಗಿ, ಕಥಿತಂ - ಹೇಳಲ್ಪಟ್ಟಿದೆ, ಹೇಸುಸ್ಮಿತೆ - ಎಲೌ ಕಿರುನಗೆಯು ಹೆಣ್ಣೇ, ವಾಕ್ಯಂ - ನನ್ನ ಈ ಹಿತವಾದ ಮಾತನ್ನು, ಗೃಹಾಣ - ಮನಸ್ಸಿಗೆ ತೆಗೆದುಕೊ, ಅನ್ಯಥಾ (ನನ್ನ ಹಿತೋಪದೇಶವನ್ನು ಸಮ್ಮತಿಸದ ಪಕ್ಷದಲ್ಲಿ) ಹಾಗಿಲ್ಲದಿದ್ದರೆ, (ತ್ವಂ - ನೀನು) ನಭವಿಷ್ಯಸಿ - ಉಳಿಯಲಾರೆ ॥೨೧-೨೨॥-॥

— ಇಂತು ಇಪ್ಪತ್ತುಮೂರನೆಯ ಸರ್ಗಂ —

ಖಂಡಿತವಾಗಿಯೂ ಇಲ್ಲ. ನಿನ್ನ ಭಾಗ್ಯೋದಯಕ್ಕೆ ಇದೇ ಒಳ್ಳೆಯ ಸಮಯ, ರಾವಣನಿಗೆ ರಮಣಿಯಾಗು, ನನ್ನ ಹಿತೋಪದೇಶವನ್ನು ಕೇಳು, ಎಲೆ ಕಿರುನಗೆಯ ಹೆಣ್ಣೇ! ನಾನು ಹೇಳಿದಂತೆ ಸಮ್ಮತಿಸು, ಹಾಗೆಮಾಡದೆ ತಿರಸ್ಕರಿಸುವವಳೇ ಆದರೆ, ಆಯಿತು, ನಿನ್ನ ಆಶೆಯು ಮುಗಿಯಿತು, ನಿನ್ನ ಮನದ ಕೋರಿಕೆಯೆಲ್ಲ ಈಡೇರಿತು.

— ಇಂತು ಇಪ್ಪತ್ತು ಮೂರನೆಯ ಸರ್ಗಂ —

ಶ್ರೀಃ

ಶ್ರೀ ರಾಮಚನ್ದ್ರಪರಬ್ರಹ್ಮಣೇ ನಮಃ

## ಚತುರ್ವಿಂಶಸ್ಸರ್ಗಃ

ತತ ಸ್ಸೀತಾ ಮುಪಾಗಮ್ಯ ರಾಕ್ಷಸ್ಯೋ ವಿಕೃತಾನನಾಃ ।
ಪರುಷಂ ಪರುಷಾ ನಾರ್ಯ ಊಚು ಸ್ತಾಂ ವಾಕ್ಯ ಮಪ್ರಿಯಂ ॥೧॥
ಕಿಂ ತ್ವ ಮಂತಃಪುರೆ ಸೀತೆ ಸರ್ವ ಭೂತ ಮನೋಹರೇ ।

ಕಂದ॥ ದಶಗಳ ಗರಸಿತಿ ಯಾಗೆಂ । ದುಸಿರಲ್ಕಿಗೆ ಗರ್ಜಿಸುತ್ತೆ ನಿಶಿಚರಿಯರ್ ತಾವ್ ।
ಪಶುವೋಲೆನ್ನಂ ಭಕ್ಷಿಸ । ಲಸುದೊರೆವೆಂ ನಿಮ್ಮನುಡಿಯುಸೊಗಸದದೆಂದಳ್ ॥

ತತಃ - ಅನಂತರದಲ್ಲಿ, ವಿಕೃತಾನನಾಃ - ವಿಕಾರವಾದ ಮುಖಗಳುಳ್ಳ, ಪರುಷಾಃ - ಬಹು ಕಠಿನ ಮನಸ್ಕರಾದ, ರಾಕ್ಷಸ್ಯಃನಾರ್ಯಃ - ರಾಕ್ಷಸಸ್ತ್ರೀಯರು, ಉಪಾಗಮ್ಯ - ಹತ್ತಿರಕ್ಕೆ ಬಂದು, ಸೀತಾಂ - ಸೀತೆಯನ್ನು ಕುರಿತು, ಪರುಷಂ - ಕಠಿನವಾಗಿಯೂ, ಅಪ್ರಿಯಂ - ಅಹಿತವಾಗಿಯೂ ಇರುವ, ವಾಕ್ಯಂ - ಮಾತನ್ನು, ಊಚುಃ - ಹೇಳತೊಡಗಿದರು ॥೧॥ ಹೇಸೀತೆ - - ಓ ಸೀತಾದೇವಿಯೇ ? ತ್ವಂ - ನೀನು,

ರಕ್ಕಸಿಯರು ಸೀತೆಯನ್ನು ಅಷ್ಟುಹಿಂಸಿಸಿದರೂ ಅಲ್ಲಿಗೇ ಸುಮ್ಮನಾಗಿ ಬಿಟ್ಟು ಬಿಟ್ಟರೆ ? ಇಲ್ಲ, ವಿಕಾರಮುಖಿಯರಾದ ಮತ್ತೆ ಕೆಲವು ಮಂದಿ ಕ್ರೂರಾಂಗನೆಯರು ಆಕೆಯಬಳಿಗೆ ಬಂದು ಬಗಬಗೆಯಾಗಿ ಬಹು ಕಾಠಿಣ್ಯದಿಂದ ಹೇಳತೊಡಗಿದರು ॥೧॥ ಅದೆಂತೆಂದರೆ - ಸರ್ವಪ್ರಾಣಿಗಳ ಕಣ್ಮನಗಳನ್ನು ಅಪಹರಿಸುವಸೌಂದರ್ಯವುಳ್ಳಎಲೆಸೀತೆ! ನಿನಗೆ ಈಮಂಕುತನವೇಕೆ ? , ಅಯ್ಯೋ, ಹುಚ್ಚೀ! ಅಮೂಲ್ಯಗಳೆನಿಸಿಹಂಸತೂಲಿಕಾತಲ್ಪವೇ ಮುಂತಾದ

ಮಹಾರ್ಹ ಶಯನೋಪೇತೇ ನ ವಾಸ ಮನುಮನ್ಯಸೇ ॥ ೨ ॥
ಮಾನುಷೀ ಮಾನುಷಸ್ಯೈವ ಭಾರ್ಯಾತ್ವಂ ಬಹುಮನ್ಯಸೇ ।
ಪ್ರತ್ಯಾಹರ ಮನೋ ರಾಮಾನ್ನ ತ್ವಂ ಜಾತು ಭವಿಷ್ಯಸಿ ॥೩॥
ತ್ರೈಲೋಕ್ಯ ವಸುಭೋಕ್ತಾರಂ ರಾವಣಂ ರಾಕ್ಷಸೇಶ್ವರಂ ।

---

ಸರ್ವಭೂತಮನೋಹರೆ - ಸರ್ವ ಪ್ರಾಣಿಗಳಿಗೂ ಸುಂದರವಾಗಿ ಕಾಣಬರುವ, ಮಹಾರ್ಹ - ಅಮೂಲ್ಯವಾದ, ಶಯನ - ಸುಪ್ಪತ್ತಿಗೆಗಳಿಂದ, ಉಪೇತೆ - ಸಂಪನ್ನವಾಗಿರುವ, ಅಂತಃಪುರೆ - ರಾವಣನ ರಾಣಿವಾಸದಲ್ಲಿ, ವಾಸಂ - ವಾಸಮಾಡುವಿಕೆಯನ್ನು, ಕಿಂ - ಏತಕ್ಕೋಸ್ಕರ, ನಾನುಮನ್ಯಸೆ-ಅಂಗೀಕರಸದೆ ಇದ್ದೀಯೆ ? ॥೨॥ ಮಾನುಷೀ - ಮನುಷ್ಯಸ್ತ್ರೀಯಾದ (ತ್ವಂ - ನೀನು) ಮಾನುಷಸ್ಯೈವ - ಮನುಷ್ಯನಿಗೇ, ಭಾರ್ಯಾತ್ವಂ - ಹೆಂಡತಿಯಾಗಿರೋಣವನ್ನು, ಬಹುಮನ್ಯಸೆ - ದೊಡ್ಡದಾಗಿ ಎಣಿಸಿ ಇದ್ದೀಯೆ, ರಾಮಾತ್ - ರಾಮನ ದೆಶೆಯಿಂದ, ಮನಃ - ಮನಸ್ಸನ್ನು, ಪ್ರತ್ಯಾಹರ - ಹಿಂದಿರುಗಿಸು (ತಸ್ಯ - ಆ ರಾಮನಿಗೆ, ಭಾರ್ಯಾ - ಹೆಂಡತಿಯಾಗಿ) ಜಾತು - ಒಂದುಕಾಲಕ್ಕೂ, ನಭವಿಷ್ಯಸಿ - ಆಗ ಹೋಗುವುದಿಲ್ಲ, (ವಿಶೇಷ- ರಾವಣನ ಇಂಗಿತವನ್ನು ತಿಳಿದಿರುವ ಕೆಲವರು ದೋಷವಿಲ್ಲದಂತೆ ಶ್ಲೇಷದಿಂದ(ಅರ್ಥಾಂತರದಿಂದಲೂ ಕೆಲವು ವಾಕ್ಯಗಳನ್ನು ಹೇಳುತ್ತಾರೆ, ಮಾನುಷೀ - ಮನುಷ್ಯಸ್ತ್ರೀಯಾದ ನೀನು, ಮಾನುಷಸ್ಯೈವ - ಮನುಷ್ಯನಿಗೇ, ಭಾರ್ಯಾತ್ವಂ - ಸತಿಯಾಗಿರೋಣವನ್ನು, ಬಹುಮನ್ಯಸೆ - ಅಂಗೀಕರಿಸುತಲಿದೀಯೆ, (ತತ್ - ಅದು, ಯುಕ್ತಂ - ಸಹಜವಾದುದು) ರಾಮಾತ್ - ರಾಮನ ದೆಶೆಯಿಂದ, ಮನಃ - ಚಿತ್ತವನ್ನು. ನಪ್ರತ್ಯಾಹರ - ಹಿಂದಿರುಗಿಸಬೇಡ, ಜಾತು - ಎಂದೆಂದಿಗೂ, (ರಾಮಸ್ಯೈವ - ಶ್ರೀ ರಾಮನಿಗೇ, ಭಾರ್ಯಾ - ಸತಿಯು) ಭವಿಷ್ಯಸಿ - ಆಗಿರುವಿ) ॥೩॥ ತ್ರೈಲೋಕ್ಯ - ಮೂಜಗದ, ವಸು - ಧನವನ್ನು, ಭೋಕ್ತಾರಂ - ಅನುಭವಿಸುತಲಿರುವ, ರಾಕ್ಷಸೇಶ್ವರಂ - ರಾಕ್ಷಸ ಸಾರ್ವಭೌಮನಾದ, ರಾವಣಂ - ರಾವಣನನ್ನು,

---

ಸುಪ್ಪತ್ತಿಗೆಗಳಿಂದೊಡಗೂಡಿ, ಸರ್ವಸಂಪತ್ಸಮೃದ್ಧವಾಗಿರುವ ಮಹಾರಾಜನ ಅಂತಃಪುರದೊಳಗೆ ವಾಸಮಾಡಲಿಕ್ಕೆ ನೀನು ಹಿಂಜರಿಯುತ ಇರುವೆಯಲ್ಲ, ಅದೇಕೆ? ಇಂತಹ ವೈಭವವನ್ನು ಒಪ್ಪದಿರಲು ಕಾರಣವೇನೆ ? ॥೨॥ * ಓಹೋ! ಮನುಷ್ಯಳಾಗಿರುವ ಹೆಂಗಸು ಮನುಷ್ಯನಿಗೇ ಹೆಂಡತಿಯಾಗಿರುವುದು ಮರ್ಯಾದೆ ಎಂದು ಭಾವಿಸಿರುವಿಯೋ? ಛೀ,ಛೀ,ಈ ಚಂಡಿತನವನ್ನು ಬಿಡು, ಆಯ್ಯೋ, ರಾವಣನ ಕೈಸೇರಿ, ಕಡಲನ್ನು ದಾಟಬಂದು, ಈ ಅಶೋಕವನದೊಳಗೆ ನಮ್ಮ ಆಳ್ವಿಕೆಯೆಂಬ ಸೆರೆಗೆ ಸೇರಿದಬಳಿಕ ನೀನು ಇನ್ನು ಹುಲ್ಲುಕಡ್ಡಿಗೆ ಸಮಾನವಾಗಿ ಮನುಷ್ಯಮಾತ್ರನೆನಿಸಿರುವ ಆರಾಮನಿಗೆ ಹೆಂಡತಿಯಾಗಿರುವುದುಂಟೆ ? ಆ ಭ್ರಾಂತಿ ಪಿಶಾಚಿಯನ್ನು ಮೊದಲು ತೊಲಗಿಸು, ರಾಮನಲ್ಲಿ ನೆಲೆಗೊಂಡಿರುವ ಮನಸ್ಸನ್ನು ಮೊದಲು ಹಿಂದಕ್ಕೆ ಸೆಳೆ, ಅದನ್ನು ನಮ್ಮ ಮಹಾರಾಜನಲ್ಲಿ ನೆಲೆಗೊಳಿಸು ॥೩॥ ಎಲೆ

---

* ರಾವಣನ ಮನದ ಗುಟ್ಟನ್ನು ತಿಳಿದ ಕೆಲವರು ನಿರ್ದೋಷವಾದ ಅರ್ಥವೊಸೀತೆಯ ಮನಸ್ಸಿಗೆ ಹೊಳೆಯುವಹಾಗೆ ಕೆಲವು ವಾಕ್ಯಗಳನ್ನು ಅಲ್ಲಲ್ಲಿ ಹೇಳುತ್ತಾರೆ:— ಎಲೌ ಪೂಜ್ಯಳೇ! ಮನುಷ್ಯಸ್ತ್ರೀಯು ಮನುಷ್ಯನಿಗೆ ಹೆಂಡತಿಯಾಗಿರತಕ್ಕುದು ಧರ್ಮ ಎಂದು ನೀನು ಬಹುಮಾನಿಸಿರುವುದು ಯುಕ್ತ. ನಿನ್ನ ಸ್ವಾಮಿಯಾದ ರಾಮನಿಂದ ಮನಸ್ಸನ್ನು ಎಂದಿಗೂ ಹಿಂದಿರುಗಿಸಬೇಡ. ನೀನು ಎಂದೆಂದಿಗೂ ರಾಮನಿಗೆ ರಾಣಿಯಾಗಿರತಕ್ಕವಳಲ್ಲದೆ ಈ ರಾಕ್ಷಸನಿಗೆ ಅರಸಿಯಾಗತಕ್ಕವಳಲ್ಲ.

ಭರ್ತಾರ ಮುಪಸಂಗಮ್ಯ ವಿಹರಸ್ವ ಯಥಾಸುಖಂ ॥೪॥
ಮಾನುಷೀ ಮಾನುಷಂ ತಂ ತು ರಾಮ ಮಿಚ್ಛಸಿ ಶೋಭನೇ ।
ರಾಜ್ಯಾ ದ್ಭ್ರಷ್ಟ ಮಸಿದ್ಧಾರ್ಥಂ ವಿಕ್ಲಬಂ ತ್ವ ಮನಿಂದಿತೆ ॥ ೫ ॥
ರಾಕ್ಷಸೀನಾಂ ವಚ ಶ್ಶ್ರುತ್ವಾ ಸೀತಾ ಪದ್ಮನಿಭೇಕ್ಷಣಾ ।
ನೇತ್ರಾಭ್ಯಾ ಮಶ್ರು ಪೂರ್ಣಾಭ್ಯಾ ಮಿದಂ ವಚನ ಮಬ್ರವೀತ್ ॥ ೬ ॥
ಯದಿದಂ ಲೋಕವಿದ್ವಿಷ್ಟ ಮುದಾಹರಥ ಸಂಗತಾಃ ।

ಭರ್ತಾರಂ - ವಲ್ಲಭನನ್ನಾಗಿ, ಉಪಸಂಗಮ್ಯ - ಪಡೆದು, ಯಥಾಸುಖಂ - ಹಾಯಾಗಿ, ವಿಹರಸ್ವ - ಕ್ರೀಡಿಸಿಕೊಂಡಿರು॥೪॥ ಅನಿಂದಿತೆ-ದೋಷ ಲೇಶವಿಲ್ಲದ, ಶೋಭನೆ-ಎಲೆ ಮಂಗಳಮುಖಿ ! ತ್ವಂ - ನೀನು, ರಾಜ್ಯಾತ್ - ಪ್ರಭುತ್ವದ ದೆಶೆಯಿಂದ, ಭ್ರಷ್ಟಂ - ಜಾರಿ ಹೋಗಿರುವ, ವಿಕ್ಲಬಂ - ತೊಂದರೆಗೊಳಗಾಗಿರುವ (ಬುದ್ಧಿ ಸ್ವಾಧೀನವಿಲ್ಲದ) ಅಸಿದ್ಧಾರ್ಥಂ - ಮುಂದೆ ಶುಭದ ಸಂಭವವೂ ಇಲ್ಲದಿರುವ, ಮಾನುಷಂ - ಮನುಷ್ಯಮಾತ್ರನಾದ, ತಂ - ಆ, ರಾಮಂ - ರಾಮನನ್ನಾದರೋ, ಇಚ್ಛಸಿ -ಕೋರುತಲಿದ್ದೀಯೆ ||೫|| ಪದ್ಮನಿಭೇಕ್ಷಣಾ - ಕಮಲ ಸದೃಶವಾದ ಕಣ್ಣುಳ್ಳ, ಸೀತಾ - ಜಾನಕಿಯು, ರಾಕ್ಷಸೀಣಾಂ- ರಕ್ಕಸಿಯರ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಅಶ್ರುಪೂರ್ಣಾಭ್ಯಾಂ - ಶೋಕಜಲದಿಂದ ತುಂಬಿರುವ, ನೇತ್ರಾಭ್ಯಾಂ - ಕಣ್ಣುಗಳಿಂದೊಡಗೂಡಿದವಳಾಗಿ, ಇದಂ- ಈ ಮುಂದೆ ಹೇಳುವ, ವಚನಂ - ಮಾತನ್ನು, ಅಬ್ರವೀತ್-ಹೇಳತೊಡಗಿದಳು ॥೬॥ ಹೇರಾಕ್ಷಸ್ಯಃ - ಎಲೈ ರಕ್ಕಸಿಯರುಗಳಿರಾ (ಯೂಯಂ - ನೀವುಗಳೆಲ್ಲರೂ) ಸಂಗತಾಃ - ಒಟ್ಟುಗೂಡಿದವರಾಗಿ, ಯತ್ - ಯಾವ, ಇದಂ - ಈ, ಲೋಕವಿದ್ವಿಷ್ಟಂ -

ಮಂಕೇ !ರಾವಣನೆಂಥವನು ? ಎಂಬುದನ್ನು ನಿನ್ನಮನದೊಳಗೆ ಸ್ವಲ್ಪಯೋಚಿಸು, ನಮ್ಮ ಮಹಾಸ್ವಾಮಿಯು ಮೂಲೋಕದಸಾಂಬ್ರಾಜ್ಯವನ್ನೆಲ್ಲ ಅನುಭವಿಸುತಲಿದಾನೆಯೇ? ಆತ್ರೈಲೋಕ್ಯನಾಥ ನನ್ನು ನಾಥನನ್ನಾಗಿ ಪಡೆದು, ಬಯಸಿದ ಭೋಗಗಳನ್ನೆಲ್ಲ ಬೇಕಾದಹಾಗೆ ಅನುಭವಿಸೆ. ॥ ೪ ॥ ಎಲೆಮಂಗಳಮುಖಿ, ಸೀತೇ ! ನೀನು ಬಲುಬುಳ್ಳವಳು, ನಿನ್ನಲ್ಲಿಯಾವ ತಪ್ಪೂ ಇಲ್ಲ, ನಾವು ಹೇಳುವಮಾತುಗಳನ್ನು ಕೇಳು, ನಿನಗೆಬಲುಮೇಲೇಆಗುತ್ತದೆ, ನೋಡು, ಆ ನಿನ್ನರಾಮನು ಮನುಷ್ಯ, ರಾಜ್ಯವಿಲ್ಲ, ಕೋಶವಿಲ್ಲ, ನಾರುಬಟ್ಟೆಯನ್ನುಟ್ಟು, ಹೊಟ್ಟೆಗಿಲ್ಲದೆ ಕಾಡಿನಲ್ಲಿ ಅಲೆಯುತ್ತ, ಮುಂದೆ ಮೇಲಾಗುವುದೆಂಬ ಹಂಬಲೂ ಇಲ್ಲದೆ, ಬುದ್ಧಿಯೂ ಸ್ವಾಧೀನವಿಲ್ಲದೆ, ಈಗಲೋ ಆಗಲೋ ಉಸಿರನ್ನು ಮರೆಯುವ ಸ್ಥಿತಿಯಲ್ಲಿರುವ ಆ ಮನುಷ್ಯನನ್ನೇ ಹಗಲಿರುಳೂ ಬಯಸುತಲಿರುವೆಯಲ್ಲಾ ! ಈ ಅನ್ಯಾಯವು ಸರಿಯೇನೇ ? ಎಂತಹ ಮರುಳು ಹೆಂಗಸಾದರೂ ಇಂತಹ ಸಾಮ್ರಾಜ್ಯ ಭೋಗವು ಕೈಸೇರುವುದೆಂದರೆ ಬಿಡುವಳೇನೆ ? ಹುರುಡಿಲ್ಲದ ನಿನ್ನ ಮನದ ಹಟವನ್ನು ಬಿಡು, ನಾವು ಹೇಳಿದಂತೆ ಕೇಳಿ ಸುಖವಾಗಿ ಬಾಳು ಎಂದರು ॥ ೫ ॥ ಕೆಂದಾವರೆಯಂತೆ ಬೆಳಗುವ ಕಣ್ಣುಗಳುಳ್ಳ ಜಾನಕಿಯು:—ಕ್ರೂರರಾದ ರಕ್ಕಸಿಯರೆಂದ ಮಾತುಗಳು ಕಾದ ಕಬ್ಬಿಣದ ಸಲಾಕಿಗಳಂತೆ ಎದೆಯನ್ನು ಚುಚ್ಚಲು, ಶೋಕವನ್ನು ತಾಳಲಾರದೆ, ಪತಿಯ ನಿಂದೆಯನ್ನು ಸಹಿಸಲಾರದೆ ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಬಿಕ್ಕಳಿಸುತ ಇಂತೆಂದಳು ॥ ೬ ॥ ಅಮ್ಮಾ ರಾಕ್ಷಸಿಯರುಗಳಿರಾ ! ನೀವೆಲ್ಲರು ಒಗ್ಗಟ್ಟಾಗಿ ಇಲ್ಲಿಸೇರಿ ಧರ್ಮಶಾಸ್ತ್ರಕ್ಕೂ, ಇಹ

ನೈತನ್ಮನಸಿ ವಾಕ್ಯಂ ಮೆ ಕಿಲ್ಬಿಷಂ ಪ್ರತಿಭಾತಿ ವಃ ॥೭॥

ನ ಮಾನುಷೀ ರಾಕ್ಷಸಸ್ಯ ಭಾರ್ಯಾ ಭವಿತು ಮರ್ಹತಿ ।

ಕಾಮಂ ಖಾದತ ಮಾಂ ಸರ್ವಾ ನ ಕರಿಷ್ಯಾಮಿ ವೋ ವಚಃ ॥೮॥

ದೀನೋ ವಾ ರಾಜ್ಯಹೀನೋ ವಾ ಯೋ ಮೇ ಭರ್ತಾ ಸ ಮೇ ಗುರುಃ ।

ತಂ ನಿತ್ಯ ಮನುರಕ್ತಾಸ್ಮಿ ಯಥಾ ಸೂರ್ಯಂ ಸುವರ್ಚಲಾ ॥ ೯ ॥

---

ಲೋಕನಿಂದ್ಯವಾದ ಮಾತನ್ನು, ಉದಾಹರತ - ಹೇಳುತಲಿದ್ದೀರೋ, ತದೇತತ್- ಇದೆಲ್ಲವೂ. ಮೆ - ನನ್ನ ಮನಸಿ - ಮನಸ್ಸಿನಲ್ಲಿ, ಕಿಲ್ಬಿಷಂ - ಪಾಪಕರವಾಗಿ, ಪ್ರತಿಭಾತಿ - ತೋರುತಲಿದೆ, ವಃ - ನಿಮ್ಮ, ಮ ನಸಿ - ಮನಸ್ಸಿನಲ್ಲಿ, ಕಿಲ್ಬಿಷಂ - ಪಾಪಕರವಾಗಿ, ನಪ್ರತಿಭಾತಿ - ತೋರುವದಿಲ್ಲವೆ ? ॥ ೭ ॥ ಮಾನುಷೀ ಮನುಷ್ಯಸ್ತ್ರೀಯು, ರಾಕ್ಷಸಸ್ಯ - ರಾಕ್ಷಸನಿಗೆ, ಭಾರ್ಯಾ - ಹೆಂಡತಿಯು, ಭವಿತುಂ - ಆಗಲಿಕ್ಕೆ, ನಾ ರ್ಹತಿ - ಯೋಗ್ಯಳಾಗುವುದಿಲ್ಲ, ಸರ್ವಾಃ - ನೀವೆಲ್ಲರೂ, ಮಾಂ - ನನ್ನನ್ನು, ಕಾಮಂ - ನಿಮ್ಮಿಷ್ಟಬಂ ದಂತೆ, ಖಾದತ - ತಿಂದುಬಿಡಿ, ವಃ - ನಿಮ್ಮ, ವಾಕ್ಯಂ - ಮಾತನ್ನು, ನಕರಿಷ್ಯಾಮಿ - ನೆರವೇರಿಸಲಾ ರೆನು ॥ ೮ ॥ ದೀನೋವಾ - ದಟ್ಟ ದರಿದ್ರನಾದರೂ, ರಾಜ್ಯಹೀನೋವಾ - ರಾಜ್ಯಭ್ರಷ್ಟನಾದರೂ, ಯಃ- ಯಾವ ಶ್ರೀರಾಮಚಂದ್ರನು, ಮೆ - ನನಿಗೆ, ಗುರುಃ-ಸರ್ವಸ್ವಾಮಿಯಾಗಿದ್ದಾನೆಯೋ, ತಂ- ಆತನನ್ನು ಕು ರಿತು, ಸೂರ್ಯಂ - ಸೂರ್ಯಭಗವಂತನನ್ನು, ಸುವರ್ಚಲಾಯಥಾ - ಸುವರ್ಚಲಾದೇವಿಯು ಹೇಗೋಹಾಗೆ, ನಿತ್ಯಂ - ಯಾವಾಗಲೂ, ಅನುರಕ್ತಾ - ಅನುರಾಗವುಳ್ಳವಳಾಗಿ, ಅಸ್ಮಿ - ಇದೇನೆ ॥ ೯ ॥ ಮಹಾಭಾಗಾ-

---

ಪರಲೋಕಗಳಿಗೂ ಅಹಿತವಾಗಿರುವ ಕರ್ಣಕಠೋರವಾಗಿರತಕ್ಕ ಮಾತುಗಳನ್ನು ಆಡುತ ಲಿದ್ದೀರಿ. ಈ ಮಾತುಗಳು ನಿಮ್ಮ ಮನದೊಳಗೆ ಮಹಾ ಪಾತಕಗಳೆಂದು ತೋರುತಿವೆ ಯೋ ಇಲ್ಲವೋ ನನಗೆ ಗೊತ್ತಿಲ್ಲ. ನನ್ನ ಮನಸ್ಸಿಗಾದರ ಮಹಾದೋಷವನ್ನು ಸೂಚಿ ಸುತಲಿವೆ ॥ ೭ ॥ ಮಾನವ ಸ್ತ್ರೀಯು ಮಾನವನಿಗೆ ಹೆಂಡತಿಯಾಗಿರತಕ್ಕದ್ದು ಧರ್ಮವಲ್ಲದೆ ರಾಕ್ಷಸನಿಗೆ ಹೆಂಡತಿಯಾಗತಕ್ಕದು ಎಂದಿಗೂ ಧರ್ಮವಲ್ಲ. ಆದಕಾರಣ ನಾನೊಂದು ಮಾ ತನ್ನು ಖಂಡಿತವಾಗಿ ಹೇಳುತ್ತೇನೆ, ನನ್ನ ಮೇಲೆ ಸಿಟ್ಟುಹತ್ತಿ ನೀವೆಲ್ಲರೂ ಸೇರಿ ನನ್ನನ್ನು ಈಗಲೇ ನಿಮ್ಮ ಮನಸ್ಸಿಗೆ ಹೇಗೆ ಹೇಗೆ ಬರುವುದೋ ಹಾಗಹಾಗೆಲ್ಲ ಹಿಂಸಿಸಿ, ಕೊಂದು, ನಿಮ್ಮ ಇಷ್ಟಾನುಸಾರ ಈಗಲೇ ತಿಂದರೂ ತಿಂದುಬಿಡಿ, ನಾನಂತೂ ನಿಮ್ಮ ಮಾತುಗಳನ್ನು ಖಂಡಿತವಾಗಿಯೂ ಎಂದೆಂದಿಗೂ ಕೇಳತಕ್ಕವಳಲ್ಲ. ಆದರಂತೆ ನಡೆಯತಕ್ಕವಳೂ ಅಲ್ಲ. ॥ ೮ ॥ ನನ್ನ ಪ್ರಾಣನಾಥನು ಯಾರೋ, ಆತನು ದಟ್ಟದರಿದ್ರನೇ ಆಗಿರಲಿ, ರಾಜ್ಯಕೋ ಶಗಳಿಲ್ಲದವನೇ ಆಗಿರಲಿ, ಆತನೇ ನನ್ನನ್ನು ಪಾಲಿಸತಕ್ಕವನು. ಆತನೇ ನನಗೆ ಸ್ವಾಮಿ, ಗುರು, ಮತ್ತು ಸರ್ವಸ್ವವೂ ಆತನೇ. ಸುವರ್ಚಲಾದೇವಿಯು ಎಡೆಬಿಡದೆ ತನ್ನ ಪತಿ ಯಾದ ಸೂರ್ಯನಲ್ಲಿ ಹೇಗೆ ಅನುರಕ್ತಳಾಗಿರುವಳೋ, ನಾನೂ ಹಾಗೆಯೇ ನನ್ನ ಪತಿಯಾದ ಶ್ರೀರಾಮಚಂದ್ರನಲ್ಲಿ ಅನುವರತವೂ ಅನುರಕ್ತಳಾಗಿದ್ದೇನೆ ॥ ೯ ॥ ಮತ್ತು—ಮಹಾನು

ಯಥಾ ಶಚೀ ಮಹಾಭಾಗಾ ಶಕ್ರಂ ಸಮುಪ ತಿಷ್ಠತಿ ।
ಅರುಂಧತೀ ವಸಿಷ್ಠಂ ಚ ರೋಹಿಣೀ ಶಶಿನಂ ಯಥಾ ॥ ೧೦ ॥
ಲೋಪಾಮುದ್ರಾ ಯಥಾ ಽ ಗಸ್ತ್ಯಂ ಸುಕನ್ಯಾ ಚ್ಯವನಂ ಯಥಾ ।
ಸಾವಿತ್ರೀ ಸತ್ಯವಂತಂ ಚ ಕಪಿಲಂ ಶ್ರೀಮತೀಯಥಾ ॥ ೧೧ ॥
ಸೌದಾಸಂ ಮದಯಂತೀವ ಕೇಶಿನೀ ಸಗರಂ ಯಥಾ ।

---

ಬಹುಭಾಗ್ಯಶಾಲಿನಿಯಾದ, ಶಚೀ - ಶಚೀದೇವಿಯು, ಯಥಾ-ಹೇಗೆ, ಶಕ್ರಂ-ಇಂದ್ರನನ್ನು, ಸಮುಪ ತಿಷ್ಠತಿ-ಸೇರಿರುವಳೋ, (ಸೇವಿಸುತಲಿರುವಳೋ) ಅರುಂಧತೀ - ಅರುಂಧತೀದೇವಿಯು, ಯಥಾ-ಹೇಗೆ ವಸಿಷ್ಠಂ-ವಸಿಷ್ಠಮಹಾಮುನಿಯನ್ನು, (ಸಮುಪತಿಷ್ಠತಿ-ಹೊಂದಿಕೊಂಡಿದ್ದಾಳೆಯೋ) ರೋಹಿಣೀ-ರೋಹಿಣೀದೇವಿಯು, ಶಶಿನಂ-ಚಂದ್ರನನ್ನು, ಯಥಾ-ಹೇಗೋ ॥೧೦॥ ಲೋಪಾಮುದ್ರಾ-ಲೋಪಾಮುದ್ರೆ ಯೆಂಬಾಕೆಯು, ಅಗಸ್ತ್ಯಂ - ಅಗಸ್ತ್ಯ ಮಹಾಮುನಿಯನ್ನು, ಯಥಾ-ಹೇಗೋ, ಸುಕನ್ಯಾ-ಸುಕನ್ಯೆ ಯೆಂಬಾಕೆಯು, ಚ್ಯವನಂ-ಚ್ಯವನಮಹರ್ಷಿಯನ್ನು, ಯಥಾಚ- ಹೇಗೋ, ಸಾವಿತ್ರೀ - ಸಾವಿತ್ರೀದೇವಿಯು, ಸತ್ಯವಂತಂ - ಸತ್ಯವಂತನೆಂಬಾತನನ್ನು, ಯಥಾ - ಹೇಗೋ, ಶ್ರೀಮತೀ-ಶ್ರೀಮತೀದೇವಿಯು, ಕಪಿಲಂ - ಕಪಿಲಮಹಾಮುನಿಯನ್ನು, ಯಥಾಚ - ಹೇಗೆ ಅನುವರ್ತಿಸಿ ಇರುತ್ತಾಳೆಯೋ ॥೧೧॥ ಮದಯಂತೀ-ಮದಯಂತಿಯೆಂಬಾಕೆಯು, ಸೌದಾಸಮಿವ - ಸೌದಾಸನನ್ನು ಹೇಗೋ, ಕೇಶಿನೀ - ಕೇಶಿನಿಯು, ಸಗರಂ-ಸಗರಚಕ್ರವರ್ತಿಯನ್ನು, ಯಥಾ - ಹೇಗೋ, ನೈಷಧಂ-ನಳನನ್ನು, ದಮಯಂತೀವ-ದಮಯಂತಿಯು ಹೇಗೋ, ಭೈಮೀ- ವಿದರ್ಭರಾಜಪುತ್ರಿಯಾದ ಇಂದುಮತಿಯು, ಪತಿಂ-ವಲ್ಲಭನಾದ ಅಜಮಹಾರಾಜನನ್ನು, ಯಥಾ-ಹೇಗೆ, ಅನುವ್ರತಾ - ಧರ್ಮದಿಂದ ಅನುರಕ್ತಳಾಗಿ, ಸಮುಪತಿಷ್ಠತಿ-ಹೊಂದಿಕೊಂಡಿರುವಳೋ ॥ ೧೨ ॥ ಅಹಂ-ನಾನೂ, ತಥಾ - ಅದರಹಾಗೆಯೇ, ಇಕ್ಷ್ವಾಕುವರಂ - ಇಕ್ಷ್ವಾಕು

---

ಭಾವಳಾದ ಶಚೀದೇವಿಯು ದೇವೇಂದ್ರನಲ್ಲಿ ಹೇಗೆ ಅನುರಕ್ತಳಾಗಿ ಆತನನ್ನು ಹೊಂದಿಕೊಂಡು ಸೇವಿಸುತಲಿರುವಳೋಹಾಗೂ ಪತಿವ್ರತಾಶಿರೋಮಣಿಯಾದ ಅರುಂಧತೀದೇವಿಯು, ಬ್ರಹ್ಮರ್ಷಿಗಳೊಳಗೆ ಅಗ್ರಗಣ್ಯನೆನಿಸಿ, ಬ್ರಹ್ಮನ ಮಾನಸ ಪುತ್ರನಾದ ವಶಿಷ್ಠಮಹಾಮುನಿಯನ್ನು ಹೇಗೋ ಹಾಗೂ, ರೋಹಿಣಿಯು ಚಂದ್ರನನ್ನು ಹೇಗೋ ಹಾಗೂ॥೧೦॥ ಸರ್ವಮಾನ್ಯಳಾದ ಲೋಪಾಮುದ್ರೆಯು ಅಗಸ್ತ್ಯ ಮಹರ್ಷಿಯನ್ನು ಹೇಗೋ ಹಾಗೂ, ಚ್ಯವನ ಮಹಾಮುನಿಯನ್ನು ಸುಕನ್ಯೆಯು ಹಾಗೂ, ಅಶ್ವಪತಿ ಮಹಾರಾಜಪುತ್ರಿಯಾಗಿ, ಸರ್ವಲೋಕ ಪ್ರಸಿದ್ಧಳಾದ ಸಾವಿತ್ರೀ ದೇವಿಯು ದ್ಯುಮತ್ಸೇನ ಪುತ್ರನಾದ ಸತ್ಯವಂತನನ್ನು ಹೇಗೋ ಹಾಗೂ, ಕಪಿಲ ಮಹಾಮುನಿಯನ್ನು ಶ್ರೀಮತೀದೇವಿಯು ಹಾಗೂ ॥೧೧॥ ಸೌದಾಸನನ್ನು ಮದಯಂತೀ ದೇವಿಯು ಹಾಗೂ, ಸಗರ ಚಕ್ರವರ್ತಿಯನ್ನು ಕೇಶಿನಿಯು ಹಾಗೂ, ನಿಷಧ ದೇಶಾಧಿಪತಿಯಾದ ನಳಮಹಾರಾಜನನ್ನು ಭೀಮ ಭೂಪಾಲನ ಪುತ್ರಿಯಾದ ದಮಯಂತಿಯು ಹಾಗೂ, ಅಯೋಧ್ಯಾಧಿಪತಿಯಾದ ಅಜ ಮಹಾರಾಜನನ್ನು ವಿದರ್ಭರಾಜ ಪುತ್ರಿಯಾದ ಇಂದುಮತೀ ದೇವಿಯು ಹೇಗೋ ಹಾಗೂ, ನಾನೂ ಇಕ್ಷ್ವಾಕುಮಹಾರಾಜನ ವಂಶಕ್ಕೆ ಧ್ವಜಪ್ರಾಯನಾಗಿ, ಸರ್ವಲೋಕ ಶರಣ್ಯನೆನಿಸಿ, ನನಗೆ ಪತಿಯೂಆಗಿರುವ ಸರ್ವಲೋಕಾಭಿರಾಮನಾದ ಶ್ರೀ ರಾಮನಲ್ಲಿ ಅನವರತವೂ ಅನುರಕ್ತಳಾಗಿ

ನೈಷಧಂ ದಮಯಂತೀವ ಭೈಮೀ ಪತಿ ಮನುವ್ರತಾ ।
ತಥಾಹ ಮಿಕ್ಷ್ವಾಕುವರಂ ರಾಮಂ ಪತಿ ಮನುವ್ರತಾ ॥೧೨॥-॥
ಸೀತಾಯಾ ವಚನಂ ಶ್ರುತ್ವಾ ರಾಕ್ಷಸ್ಯಃ ಕ್ರೋಧಮೂರ್ಛಿತಾಃ ॥
ಭರ್ತ್ಸಯಂತಿಸ್ಮ ಪರುಷೈ ರ್ವಾಕ್ಯೈ ರಾವಣ ಚೋದಿತಾಃ ॥೧೩॥-॥
ಅವಲೀನ ಸ್ಸ ನಿರ್ವಾಕ್ಯೋ ಹನುಮಾ ಶ್ಶಿಂಶುಪಾದ್ರುಮೆ ॥
ಸೀತಾಂ ಸಂತರ್ಜಯಂತೀ ಸ್ತಾ ರಾಕ್ಷಸೀ ರಶೃಣೋತ್ಕಪಿಃ ।
ತಾ ಮಭಿಕ್ರಮ್ಯ ಸಂಕ್ರುದ್ಧಾಂ ವೇಪಮಾನಾಂ ಸಮಂತತಃ ॥

---

ಕುಲೋತ್ತಮನಾಗಿ, ಪತಿಂ-ನನಗೆ ವಲ್ಲಭನಾಗಿರುವ,ರಾಮಂ-ಶ್ರೀರಾಮಚಂದ್ರನನ್ನು, ಅನುವ್ರತಾ-ಅನುಸರಿಸಿದ ವ್ರತವುಳ್ಳವಳಾಗಿ, ಸಮುಪತಿಷ್ಠಾಮಿ-ಹೊಂದಿಕೊಂಡಿರುವೆನು (ಸೇವಿಸುತಲಿರುವೆನು) ॥೧೨॥ ರಾವಣಚೋದಿತಾಃ-ರಾವಣನಿಂದ ಪ್ರೇರಿತರಾದ, ರಾಕ್ಷಸ್ಯಃ - ರಕ್ಕಸಿಯರು, ಸೀತಾಯಾಃ-ಜಾನಕಿಯ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಕ್ರೋಧಮೂರ್ಛಿತಾಃ - ಸಿಟ್ಟಿನಿಂದ ವೈಮರೆತವರಾಗಿ, ಪರುಷೈಃ-ಕಠಿನಗಳೆನಿಸಿದ, ವಾಕ್ಯೈಃ-ಮಾತುಗಳಿಂದ, (ತಾಂ-ಆಕೆಯನ್ನು) ಭರ್ತ್ಸಯಂತಿಸ್ಮ - ಬೆದರಿಸತೊಡಗಿದರು ॥೧೩॥ ಶಿಂಶುಪಾದ್ರುಮೆ- ಶಿಂಶುಪಾವೃಕ್ಷದಲ್ಲಿ, ನಿರ್ವಾಕ್ಯಃ-ಬಾಯಿ ಬಿಡದೆ, ಅವಲೀನಃ-ಮರೆಯಲ್ಲಿ ಅಣಗಿರುವ, ಸಃ-ಆ, ಹನುಮಾನ್ ಕಪಿಃ - ಆಂಜನೇಯನು, ಸೀತಾಂ - ಜಾನಕಿಯನ್ನು, ಸಂತರ್ಜಯಂತೀಃ - ಬಲವಾಗಿ ಬೆದರಿಸುತಲಿರುವ, ತಾಃ - ಆ, ರಾಕ್ಷಸೀಃ-ರಾಕ್ಷಸಿಯರ ಕಠಿನೋಕ್ತಿಗಳನ್ನು, ಅಶೃಣೋತ್-ಕೇಳುತಲಿದ್ದನು ॥೧೪॥ ಸಂಕ್ರುದ್ಧಾಃ-ಕೋಪಿಸಿರುವ ರಕ್ಕಸಿಯರು, ಸಮಂತತಃ-ದೇಹದಲ್ಲೆಲ್ಲಾ, ವೇಪಮಾನಾಂ-ಕಂಪಿಸುತಲಿರುವ, ತಾಂ-ಆ ಸೀತಾದೇವಿಯನ್ನು, ಅಭಿಕ್ರಮ್ಯ - ಸುತ್ತಲೂ ಮುತ್ತಿಕೊಂಡು, ಭೃಶಂ-ವಿಶೇಷವಾಗಿ, ದೀಪ್ತಾನ್- ಹೊಳೆಯುತಲಿರುವ, ಪ್ರಲಂಬಾನ್ - ಜೋಲಾಡುವ, ದಶನಚ್ಛದಾನ್-ತುಟಿಗಳನ್ನು, ಸಂಲಿಲಿಹುಃ- ನಾಲಿಗೆಗಳಿಂದ ಸವರುತಲಿದ್ದರು. (ಕಿಂಚ-ಮತ್ತು) ಪರಶ್ವಧಾನ್-ಗಂಡಗೊಡಲಿಗಳನ್ನು, ಪ್ರಗೃಹ್ಯ - ಎತ್ತಿಹಿಡಿದು, ಪರಮಸಂಕ್ರುದ್ಧಾಃ- ಬಲವಾಗಿ ಸಿಟ್ಟುಗೊಂಡವರಾಗಿ,

---

ಆತನನ್ನೇ ಸರ್ವಾತ್ಮನಾ ಸೇವಿಸಿಕೊಂಡಿರುವೆನಲ್ಲದೆ,ನೀಚವಾದ ರಾಕ್ಷಸಜಾತಿಯಲ್ಲಿ ಪ್ರವಿಷ್ಟನಾಗಿರುವ ಈ ರಾವಣನನ್ನು ಸೇವಿಸುವುದು ಹಾಗಿರಲಿ,ಮನಸ್ಸಿನಿಂದ ನಿಮಿಷಮಾತ್ರವೂ ಲೇಶವಾದರೂ ಸ್ಮರಿಸಲಾರೆನು ಎಂದು ಹೇಳಿ ಸುಮ್ಮನಾದಳು॥೧೨॥ ॥ ರಾವಣನ ಪ್ರೇರಣೆಗೊಳಗಾದ ಮತ್ತೆ ಕೆಲವು ಮಂದಿ ನಿಶಾಚರಿಯರು-ಸೀತೆಯ ನುಡಿಗಳನ್ನು ಕೇಳಿ ರೋಷಾವೇಶದಿಂದ ಮೈಮೇಲೆ ಪ್ರಜ್ಞೆಯಿಲ್ಲದೆ ಮನ ಬಂದಂತೆಲ್ಲ ಆಕೆಯನ್ನು ಬೆದರಿಸತೊಡಗಿದರು ॥೧೩॥ ॥ ಆ ಸಮಯದಲ್ಲಿ - ಶಿಂಶುಪಾವೃಕ್ಷದಮೇಲೆ ಮಾತನಾಡದೆ ಮೌನದಿಂದ ಮರೆಯಲ್ಲಿ ಕುಳಿತಿರುವ ಮಾರುತಿಯು ಸೀತೆಯನ್ನು ಬಗೆಬಗೆಯಾಗಿ ಹಿಂಸಿಸುತಲಿರುವ ರಾತ್ರಿಂಚರಿಯರ ಅಬ್ಬರವನ್ನೆಲ್ಲ ಕೇಳುತಲಿದ್ದನು ॥೧೪॥ ॥ ಬಹು ಭಯಂಕರಿಯರಾದ ರಾವಣನ ಕಿಂಕರಿಯರನ್ನೆಲ್ಲ ನೋಡಿ ನಡುಗುತಲಿರುವ ಸೀತೆಯನ್ನು ಸುತ್ತಲೂ ಮುತ್ತಿಕೊಂಡು,ಆ ಕ್ಷಪಾಚರಿಯರು ರೋಷಪರವಶರಾಗಿ, ಔಡುಗಳನ್ನು ಕಡಿಯುತ್ತಾ,ಮೋರೆಗಳಲ್ಲಿ ಇಳಿಯಬಿದ್ದಿರುವ ತುಟಿಗಳನ್ನು ನಾಲಗೆಗಳಿಂದ ಸವರುತ್ತಾ, ಕೈಗಳಲ್ಲಿ ಗಂಡಗೊಡಲಿಗಳನ್ನು ಎತ್ತಿಹಿಡಿದು 'ಓಹೋ! ಇವಳು ರಾವಣನನ್ನು ಒಡೆಯನನ್ನಾಗಿ ಪಡೆಯಲು ಒಪ್ಪುವುದಿಲ್ಲವೋ?

ಭೃಶಂ ಸಂಲಿಲಿಹು ರ್ದೀಪ್ತಾನ್ ಪ್ರಲಂಬಾನ್ ದಶನಚ್ಛದಾನ್ ||೧೫||
ಊಚುಶ್ಚ ಪರಮ ಕ್ರುದ್ಧಾಃ ಪ್ರಗೃಹ್ಯಾಶು ಪರಶ್ವಧಾನ್ ||
ನೇಯ ಮರ್ಹತಿ ಭರ್ತಾರಂ ರಾವಣಂ ರಾಕ್ಷಸಾಧಿಪಂ ||೧೬||
ಸಂಭರ್ತ್ಸ್ಯಮಾನಾ ಭೀಮಾಭೀ ರಾಕ್ಷಸೀಭಿ ರ್ವರಾನನಾ ||
ಸಾ ಬಾಷ್ಪ ಮಪಮಾರ್ಜಂತೀ ಶಿಂಶುಪಾಂ ತಾ ಮುಪಾಗಮತ್ ||೧೭||
ತತ ಸ್ತಾಂ ಶಿಂಶುಪಾಂ ಸೀತಾ ರಾಕ್ಷಸೀಭಿ ಸ್ಸಮಾವೃತಾ ||
ಅಭಿಗಮ್ಯ ವಿಶಾಲಾಕ್ಷೀ ತಸ್ಥೌ ಶೋಕ ಪರಿಪ್ಲುತಾ ||೧೮||
ತಾಂ ಕೃಶಾಂ ದೀನವದನಾಂ ಮಲಿನಾಂಬರ ಧಾರಿಣೀಂ ||
ಭರ್ತ್ಸಯಾಂ ಚಕ್ರಿರೆ ಸೀತಾಂ ರಾಕ್ಷಸ್ಯ ಸ್ತಾಂ ಸಮಂತತಃ ||೧೯||

---

ಇಯಂ-ಈ ಸೀತೆ, ರಾಕ್ಷಸಾಧಿಪಂ-ರಕ್ಕಸರೊಡೆಯನಾದ, ರಾವಣಂ-ರಾವಣನನ್ನು, ಭರ್ತಾರಂ- ಪತಿಯನ್ನಾಗಿ, (ಪ್ರಾಪ್ತುಂ-ಪಡೆಯಲಿಕ್ಕೆ) ನಾರ್ಹತಿ- ಯೋಗ್ಯಳಾಗಿಲ್ಲ. ಇತಿಚ- ಹೀಗೆಂದೂ, ಊಚುಃ-ಹೇಳುತಲಿದ್ದರು ||೧೫-೧೬|| ಭೀಮಾಭಿಃ - ಭಯಂಕರಿಯರಾದ, ರಾಕ್ಷಸೀಭಿಃ-ರಕ್ಕಸಿಯರಿಂದ, ಸಂಭರ್ತ್ಸ್ಯಮಾನಾ-ಬಲವಾಗಿ ಬೆದರಿಸಲ್ಪಡುತಲಿರುವ, ವರಾನನಾ - ಸುಂದರ ವದನೆಯಾದ, ಸಾ-ಆ ಸೀತೆಯು, ಬಾಷ್ಪಂ-ಕಣ್ಣೀರನ್ನು, ಅಪಮಾರ್ಜಂತೀ-ಒತ್ತಿಕೊಳ್ಳುತಲಿರುವವಳಾಗಿ (ಉಪಮಾರ್ಜಂತೀ-ಕರೆಯುತಲಿರುವವಳಾಗಿ) ತಾಂ - ಆ ಹನುಮಂತನು ಹತ್ತಿ ಕುಳಿತಿರುವ, ಶಿಂಶುಪಾಂ -ಶಿಂಶುಪಾವೃಕ್ಷವನ್ನು ಕುರಿತು, ಉಪಾಗಮತ್ - ಹತ್ತಿರಕ್ಕೆ ಬಂದಳು ||೧೭|| ತತಃ-ತರುವಾಯ, ವಿಶಾಲಾಕ್ಷೀ - ಅಗಲವಾದ ಕಣ್ಣುಳ್ಳ, ಸೀತಾ-ಸೀತಾದೇವಿಯು, ರಾಕ್ಷಸೀಭಿಃ- ರಕ್ಕಸಿಯರಿಂದ, ಸಮಾವೃತಾ - ಬಳಸಲ್ಪಟ್ಟವಳಾಗಿ, ತಾಂ-ಆ, ಶಿಂಶುಪಾಂ-ಶಿಂಶುಪಾವೃಕ್ಷವನ್ನು, ಅಭಿಗಮ್ಯ ಸೇರಿ, ಶೋಕಪರಿಪ್ಲುತಾ - ದುಃಖದಲ್ಲಿ ಮುಳುಗುತ್ತಿರುವವಳಾಗಿ, ತಸ್ಥೌ-ನಿಂತಿದ್ದಳು ||೧೮|| ತಾಃ-ಆ, ರಾಕ್ಷಸ್ಯಃ-ನಿಶಾಚರಿಯರು, ಕೃಶಾಂ-ಬಡವಾಗಿಯೂ, ದೀನವದನಾಂ-ಶೋಕದಿಂದ ಸಪ್ಪಗಾದ ಮುಖವುಳ್ಳವಳಾಗಿಯೂ, ಮಲಿನಾಂಬರಧಾರಿಣೀಂ-ಮಾಸಿದ ಬಟ್ಟೆಯನ್ನು ಉಟ್ಟವಳಾಗಿಯೂ ಇರುವ, ತಾಂ-ಆ ಸೀತಾಂ -ಸೀತಾದೇವಿಯನ್ನು, ಸಮಂತತಃ-ಸುತ್ತಲೂ, ಭರ್ತ್ಸಯಾಂಚಕ್ರಿರೆ-ಹೆದರಿಸಲಾರಂಭಿಸಿದರು ||೧೯|| ತತಃ-ಅನಂತರದಲ್ಲಿ, ಭೀಮದರ್ಶನಾಃ- ಭಯಂಕರವಾದ ನೋಟವುಳ್ಳ. ಕುಪಿತಾಕಾರಾ-ರೋಷಗೊಂಡ ಆಕಾರವುಳ್ಳ, ಕರಾಳಾ - ಬಹುಕ್ರೂರಸ್ವರೂಪಳೂ

---

**ಆಗಲಿ, ಈಗಲೆ ಇದಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸುವಳು ,, ಎಂದೀಪ್ರಕಾರವಾಗೆಲ್ಲ ಬೆದರಿಸುತ್ತಲೂ ಗರ್ಜಿಸುತ್ತಲೂ ಇದ್ದರು ||೧೫||, ೧೬|||ಹೀಗೆಲ್ಲ ಬೆದರಿಸಿ ಗದರಿಸುತ್ತಿರಲು,ಮಹಾಭಯಂಕರಿಯರಾದ ಆರಾಕ್ಷಸಿಯರ ಹಿಂಸೆಯನ್ನು ತಾಳಲಾರದೆ,ಸುಂದರವದನೆಯಾದ ಸೀತೆಯು ಕಣ್ಣುಗಳಿಂದ ಧಾರಾಳವಾಗಿ ನೀರನ್ನು ಸುರಿಸುತ್ತ, ಹನುಮನು ಏರಿಕುಳಿತಿದ್ದ ಶಿಂಶುಪಾವೃಕ್ಷದ ಹತ್ತಿರಕ್ಕೆ ಬಂದು, ಶೋಕಸಾಗರದಲ್ಲಿ ಮುಳುಗಿ,ಪ್ರಜ್ಞೆಯಿಲ್ಲದೆ ನಿಲ್ಲಲು ||೧೭|| || ಕೂಡಲೆ ಅವಳನ್ನೆಡೆಬಿಡದೆ, ರಕ್ಕಸಿಯರೂ ಹಿಂಬಾಲಿಸಿ ಬಂದು ಆವರಿಸಿ ಕೊಂಡು ನಿಂತರು || ೧೮|| || ನುತ್ತು-ಮಾಸಿದ ಬಟ್ಟೆಯನ್ನುಟ್ಟು, ಹಿಂಸೆಯನ್ನು ಸಹಿಸಲಾರದೆ, ಶರೀರದ ಒಡತನದಿಂದಲೂ, ಸಪ್ಪೆ ಮುಖದಿಂದಲೂ ಬೆಪ್ಪಾಗಿನಿಂತಿರುವ ಜಾನಕಿಯನ್ನು ತರತರವಾಗಿ ತೊಂದರೆ ಪಡಿಸತೊಡಗಿದರು ||೧೯||||ಬಳಿಕ ಅವರಲ್ಲಿ ವಿನತೆ**

ತತಸ್ತಾಂ ವಿನತಾ ನಾಮ ರಾಕ್ಷಸೀ ಭೀಮದರ್ಶನಾ ॥
ಅಬ್ರವೀ ತ್ಕುಪಿತಾಕಾರಾ ಕರಾಳಾ ನಿರ್ಣತೋದರೀ ॥ ೨೦॥
ಸೀತೇ ಪರ್ಯಾಪ್ತ ಮೇತಾವ ದ್ಭರ್ತುಃ ಸ್ನೇಹೋ ನಿದರ್ಶಿತಃ ॥
ಸರ್ವತ್ರಾತಿಕೃತಂ ಭದ್ರೇ ವ್ಯಸನಾಯೋಪಕಲ್ಪತೇ ॥ ೨೧॥
ಪರಿತುಷ್ಟಾಸ್ಮಿ ಭದ್ರಂ ತೇ ಮಾನುಷ ಸ್ತೇ ಕೃತಾ ವಿಧಿಃ॥
ಮಮಾಪಿತು ವಚಃ ಪಥ್ಯಂ ಬ್ರುವಂತ್ಯಾಃ ಕುರು ಮೈಥಿಲಿ ॥ ೨೨॥

---

ಆಗಿರುವ, ನಿರ್ಣತೋದರೀ-ತಗ್ಗಿದಹೊಟ್ಟೆಯುಳ್ಳ, (ಬಡನಡುವಿನ) ವಿನತಾನಾಮ - ವಿನತೆಯೆಂಬ ಹೆಸರಿನ, ರಾಕ್ಷಸೀ- ರಾತ್ರಿಂಚರಿಯು, ತಾಂ-ಆ ಸೀತೆಯನ್ನು ಕುರಿತು,ಅಬ್ರವೀತ್ - ಇಂತೆಂದಳು ॥೨೦॥
ಭದ್ರೇ - ಓ ಮಂಗಳಮುಖಿಯಾದ, ಸೀತೆ - ಸೀತೆಯೇ, (ತ್ವಯಾ - ನಿನ್ನಿಂದ) ಭರ್ತುಃ-ಪತಿಯ ವಿಷಯವಾದ, ಸ್ನೇಹಃ - ಪ್ರೇಮವು, ಏತಾವತ್-ಇಷ್ಟರವರೆಗೆ (ಇದುವರೆಗೂ) ಪರ್ಯಾಪ್ತಂ- ಸಂಪೂರ್ಣವಾಗಿ, ನಿದರ್ಶಿತಃ - ತೋರಿಸಲ್ಪಟ್ಟಿತು, ಅಥವಾ:- ಭದ್ರೇ - ಸೀತೆಯೇ, ತ್ವಯಾ - ನಿನ್ನಿಂದ, ನಿದರ್ಶಿತಃ - ತೋರಿಸಲ್ಪಟ್ಟ, ಭರ್ತೃಸ್ನೇಹಃ - ಪತಿಪ್ರೇಮವು, ಏತಾವತ್-ಇಷ್ಟೇ, ಪರ್ಯಾಪ್ತಂ ಸಾಕು, ಸರ್ವತ್ರ - ಎಲ್ಲವಿಷಯಗಳಲ್ಲಿಯೂ, ಅತಿಕೃತಂ - ಅತ್ಯಾಚರಣೆಯು, ವ್ಯಸನಾಯ - ದುಃಖಕ್ಕೋಸ್ಕರವೇ ಉಪಕಲ್ಪತೇ - ಸಾಧಕವಾಗುವುದು ॥೨೧॥ ತೇ - ನಿನ್ನಿಂದ, ಮಾನುಷಃ - ಮನುಷ್ಯರ ಸಂಬಂಧವಾದ, ವಿಧಿಃ - ಆಚರಣೆಯು, ಕೃತಃ - ಆಚರಿಸಲ್ಪಟ್ಟಿದೆ, ತೇ - ನಿನಗೆ, ಭದ್ರಂ - ಒಳ್ಳೆಯದಾಗಲಿ, ಪರಿತುಷ್ಟಾ - ಸಂತೋಷಪಟ್ಟವಳು, ಅಸ್ಮಿ - ಆಗಿದೇನೆ, ಮೈಥಿಲಿ - ಎಲೆ ಸೀತೆಯೇ, ಪಥ್ಯಂ - ಹಿತವಚನವನ್ನು, ಬ್ರುವಂತ್ಯಾಃ - ಹೇಳುತಲಿರುವ, ಮಮ - ನನ್ನ, ವಚಶ್ಚಾಪಿ - ಮಾತನ್ನಾದರೂ, ಕುರು - ನೆರವೇರಿಸು ॥೨೨॥ ಸರ್ವರಕ್ಷಸಾಂ - ರಕ್ಕಸರಿಗೆಲ್ಲ, ಭರ್ತಾರಂ - ಅರಸಾಗಿ, ವಿಕ್ರಾಂತಂ- ಪರಾಕ್ರಮಶಾಲಿಎನಿಸಿ, ರೂಪವಂತಂಚ - ಸೌಂದರ್ಯಸಂಪನ್ನನಾಗಿ, ದಕ್ಷಿಣಂ - ಸರ್ವಕಾರ್ಯ ಸಮರ್ಥನೂ, ತ್ಯಾಗಶೀಲಂ - ಉದಾರಸ್ವಭಾವದವನೂ, ಸರ್ವಸ್ಯ - ಸರ್ವಜನರಿಗೂ, ಪ್ರಿಯದರ್ಶನಂ - ಇಷ್ಟ ನೆನಿಸಿದವನೂ ಆಗಿ, ಸುರೇಶಂ - ದೇವರಾಜನಾದ, ವಾಸವಮಿವ (ಸ್ಥಿತಂ) ಇಂದ್ರನಂತಿರುವ, ರಾವಣಂ - ರಾವಣನನ್ನು

---

ಯೆಂಬ ಬಡನಡುವಿನ ರಾಕ್ಷಸಿಯೊಬ್ಬಳು ಮುಖವಿಕಾರದಿಂದ ಬೆದರಿಸುತ್ತಲೂ, ತನ್ನ ಕ್ರೌರ್ಯವನ್ನು ತೋರುತ್ತಲೂ ಸೀತೆಯನ್ನುಕುರಿತು ಇಂತೆಂದಳು ॥೨೦॥ ಎಲೆ ಮಂಗಳಮುಖಿಯಾದ ಸೀತೆ ! ಹು, ಇನ್ನುಸಾಕು, ಗಂಡನಲ್ಲಿ ಹೆಂಡತಿಯಾದವಳು ಎಷ್ಟು ಪ್ರೀತಿಯನ್ನು ತೋರಬೇಕೋ ನೀನು ಅಷ್ಟನ್ನೂ ತೋರಿ ಇದ್ದೀಯೆ, ಇನ್ನು ಹೆಚ್ಚಿಸಬಾರದು, ಏಕೆ ಎಂಬೆಯೊ ? ಯಾವ ಸಂದರ್ಭದಲ್ಲಿಯೂ ಅತಿಯಾಗಬಾರದು, ಮಿತಿಮೀರಿದರೆ ಅದು ಕೇಡನ್ನು ಉಂಟುಮಾಡುವುದಲ್ಲದೆ ಮೇಲನ್ನು ಉಂಟುಮಾಡುವುದಿಲ್ಲ ಚೆನ್ನಾಗಿ ತಿಳಿ ॥ ನಾನು ಒಂದು ಮಾತನ್ನು ಹೇಳುತ್ತೇನ ಕೇಳು:- ಎಲೆ ವೈದೇಹಿ ! ನೀನು ಮನುಷ್ಯಜಾತಿಗೆ ತಕ್ಕ ಹಾಗೆ ಪಾತಿವ್ರತ್ಯವನ್ನು ಚೆನ್ನಾಗಿ ಪ್ರಕಾಶಪಡಿಸಿದೆ, ಇದಕ್ಕೆ ನಾನು ವಿಶೇಷವಾಗಿ ಸಂತೋಷಿಸುತಲಿದ್ದೇನ. ಹೀಗೆ ನೀನು ಪ್ರವರ್ತಿಸುವದರಿಂದ ನಿನಗೆ ಮೇಲೇ ಹಾದು, ನಾನು ಹೇಳುವ ಹಿತವನ್ನು ಮನಮುಟ್ಟಿಲಾಲಿಸು ॥ ೨೨॥ ದೇವತೆಗಳಿಗೆಲ್ಲ ಒಡೆಯನಾದ ಇಂದ್ರನಂತೆ ಶೌರ್ಯ, ಧೈರ್ಯ, ಸೌಂದರ್ಯ, ದಾಕ್ಷಿಣ್ಯಾದಿ ಸಂಪನ್ನನಾಗಿ ಒಪ್ಪುತಲಿರುವ

ರಾವಣಂ ಭಜ ಭರ್ತಾರಂ ಭರ್ತಾರಂ ಸರ್ವ ರಕ್ಷಸಾಂ ||
ವಿಕ್ರಾಂತಂ ರೂಪವಂತಂ ಚ ಸುರೇಶಮಿವ ವಾಸವಂ ||೨೩||
ದಕ್ಷಿಣಾಂ ತ್ಯಾಗಶೀಲಂಚ ಸರ್ವಸ್ಯ ಪ್ರಿಯದರ್ಶನಂ || ೨೪ ||
ಮಾನುಷಂ ಕೃಪಣಂ ರಾಮಂ ತ್ಯಕ್ತ್ವಾ ರಾವಣ ಮಾಶ್ರಯ |
ದಿವ್ಯಾಂಗ ರಾಗಾ ವೈದೇಹಿ ದಿವ್ಯಾಭರಣ ಭೂಷಿತಾ || ೨೫ ||
ಅದ್ಯಪ್ರಭೃತಿ ಸರ್ವೇಷಾಂ ಲೋಕಾನಾ ಮೀಶ್ವರೀ ಭವ |
ಅಗ್ನೇ ಸ್ಸ್ವಾಹಾ ಯಥಾ ದೇವಿ ಶಚೀ ವೇಂದ್ರಸ್ಯ ಶೋಭನೇ ||೨೬||
ಕಿಂ ತೆ ರಾಮೇಣ ವೈದೇಹಿ ಕೃಪಣೇನ ಗತಾಯುಷಾ |

---

ಭರ್ತಾರಂ - ಪತಿಯನ್ನಾಗಿ, ಭಜ - ಸೇವಿಸು || ೨೩-೨೪ || ಹೇ ವೈಥಿಲಿ - ಎಲೇ ಸೀತೆ, ತ್ವಂ-ನೀನು, ದಿವ್ಯಾಂಗರಾಗಾ - ದಿವ್ಯಪರಿಮಳ ಲೇಪವುಳ್ಳವಳೂ, ದಿವ್ಯಾಭರಣ - ಅಮೂಲ್ಯಭೂಷಣದಿಂದ, ಭೂಷಿತಾ - ಅಲಂಕರಿಸಲ್ಪಟ್ಟವಳೂ ಆಗಿ, ಮಾನುಷಂ - ಮನುಷ್ಯಮಾತ್ರನೆನಿಸಿ, ಕೃಪಣಂ - ಬಹು ಹೀನನಾಗಿರುವ, ರಾಮಂ - ರಾಮನನ್ನು, ತ್ಯಕ್ತ್ವಾ - ಬಿಟ್ಟು, ರಾವಣಂ- ರಾವಣನನ್ನು, ಆಶ್ರಯ - ಸೇವಿಸು ||೨೫|| ಹೇಶೋಭನೇ- ಓ ಮಂಗಳಮುಖಿಯೇ ! ಅಗ್ನೇಃ-ಅಗ್ನಿದೇವನಿಗೆ, ಸ್ವಾಹಾದೇವೀ - ಸ್ವಾಹೆ ಎಂಬದೇವಿಯು ಹೇಗೋ,ತಥಾ - ಹಾಗೆಯೇ, ಇಂದ್ರಸ್ಯ-ಇಂದ್ರನಿಗೆ,ಶಚೀವ-ಶಚೀದೇವಿಯು ಹೇಗೋ, ತಥಾ-ಹಾಗೆಯೇ, ತ್ವಂ - ನೀನು, ರಾವಣಸ್ಯ-ರಾವಣನಿಗೆ, ಭಾರ್ಯಾ-ಹೆಂಡತಿಯು, ಭೂತ್ವಾ-ಆಗಿ, ಅದ್ಯ ಪ್ರಭೃತಿ - ಇಂದು ಮೊದಲುಗೊಂಡು, ಸರ್ವೇಷಾಂ - ಸಮಸ್ತವಾದ, ಲೋಕಾನಾಂ - ಲೋಕಗಳಿಗೆ, ಈಶ್ವರೀ - ನಿಯಾಮಕಳಾಗಿ (ಯಜಮಾನಿಯಾಗಿ) ಭವ - ಇರು ||೨೬|| ಕೃಪಣೇನ - ಬಹುದೀನನಾದ, ಗತಾಯುಷಾ - ಅಲ್ಪಾಯುಸ್ಸುಳ್ಳ, ರಾಮೇಣ - ರಾಮನಿಂದ, ತೇ - ನಿನಗೆ ಕಿಂ - ಪ್ರಯೋಜನವೇನು?, ಮೇ - ನನ್ನಿಂದ, ಉಕ್ತಂ - ಹೇಳಲ್ಪಟ್ಟ, ಏತತ್ - ಈ, ವಾಕ್ಯಂ - ಮಾತನ್ನು, ತ್ವಂ - ನೀನು, ನಕರಿಷ್ಯಸಿಯದಿ - ನೆರವೇರಿಸದೆ ಹೋದರೆ, ಅಸ್ಮಿನ್ಮುಹೂರ್ತೇ - ಈ ನಿಮಿಷದಲ್ಲಿಯೇ, ಸರ್ವಾವಯಂ - ನಾವೆಲ್ಲರೂ, ತ್ವಾಂ - ನಿನ್ನನ್ನು, ಭಕ್ಷಯಿಷ್ಯಾಮಹೆ - ತಿಂದುಬಿಡುವೆವು ||೨೭||

---

ರಾಕ್ಷಸ ಸಾರ್ವಭೌಮನಾಗಿರತಕ್ಕ ರಾವಣನನ್ನು ಭರ್ತೃನನ್ನಾಗಿ ಪಡೆ, || ೨೪ || ದಿವ್ಯಾಭರಣಗಳನ್ನೂ, ದಿವ್ಯ ಚಂದನಾದಿ ಪರಿಮಳ ದ್ರವ್ಯಗಳನ್ನೂ, ಧರಿಸಿಕೊಂಡು ಹಾಯಾಗಿ ರುವುದಕ್ಕೆ, ಮನುಷ್ಯ ಮಾತ್ರನೆನಿಸಿ ಬಲುಕೀಳನಾಗಿಯೂ ಇರುವ ಆರಾಮನನ್ನು ತೊರೆದು ಮಹಾಪ್ರಭುವಾದ ರಾವಣನನ್ನು ಆಶ್ರಯಿಸು ||೨೫|| ಅಗ್ನಿ ಭಗವಂತನಿಗೆ ಸ್ವಾಹಾದೇವಿಯು ಇರುವ ಹಾಗೂ, ದೇವರಾಜನಿಗೆ ಶಚೀದೇವಿಯು ಒಪ್ಪುತ್ತಿರುವಂತೆಯೂ, ನೀನು ರಾಕ್ಷಸರಾಜನಿಗೆ ರಾಣಿಯಾಗಿ, ಸರ್ವಲೋಕಗಳಿಗೂ ಒಡತಿ ಎನಿಸಿಕೊಂಡು ನಿಯಾಮಕಳಾಗಿರು, ||೨೬|| ಅಯ್ಯೋ ! ಎಲೇ ವೈದೇಹೀ ! ನಿನಗೆ ಇದು ಎಲ್ಲಿನ ಹುಚ್ಚು ! ಹೊಟ್ಟೆಗಿಲ್ಲದೆ ಕಾಡಿನಲ್ಲಿ ಅಲೆಯುತ್ತ, ಬಹುಹೀನನೂ, ಅಲ್ಪಾಯುಸ್ಸಿನವನೂ ಆಗಿರುವ ಆರಾಮನಿಂದ ನಿನಗೇನು ಪ್ರಯೋಜನವೆ ? ನಾನು ಹೇಳುವ ಮಾತನ್ನು ಕೇಳ್ಳೆ, ನಿನಗೆ ಒಳ್ಳೆಯದಾಗುವುದೆ, ಇಗೋ, ಇಷ್ಟು ವಿಧವಾಗಿ ನಾನು ಹೇಳಿದುದನ್ನೂ ನೀನು ಕೇಳದೆ ಹೋದೆಯೋ, ಆಗ ನಾವೆಲ್ಲರೂ ಏನಮಾಡುವೆವು ಬಲ್ಲೆಯ ? ಎರಡುಗಳಿಗೆಗಳಲ್ಲಿ ಒಟ್ಟಿಗೆ

ಏತದುಕ್ತಂ ಚ ಮೇ ವಾಕ್ಯಂ ಯದಿ ತ್ವಂ ನ ಕರಿಷ್ಯಸಿ ॥
ಅಸ್ಮಿನ್ಮುಹೂರ್ತೇ ಸರ್ವಾಸ್ತ್ವಾಂ ಭಕ್ಷಯಿಷ್ಯಾಮಹೇ ವಯಂ ॥೨೭॥
ಅನ್ಯಾತು ವಿಕಟಾ ನಾಮ ಲಂಬಮಾನ ಪಯೋಧರಾ ॥
ಅಬ್ರವೀತ್ಕುಪಿತಾ ಸೀತಾಂ ಮುಷ್ಟಿಮುದ್ಯಮ್ಯ ಗರ್ಜತೀ ॥ ೨೮ ॥
ಬಹೂನ್ಯಪ್ರಿಯ ರೂಪಾಣಿ ವಚನಾನಿ ಸುದುರ್ಮತೇ ॥

ವಿಶೇಷಾರ್ಥ—(ವೈದೇಹಿ - ಎಲೌ ಸೀತೆಯೇ, ತ್ವಯಾ - ನಿನ್ನಿಂದ, ಮಾನುಷಃ - ಮನುಷ್ಯ ಜಾತಿಗೆ ತಕ್ಕ, ವಿಧಿಃ - ಪಾತಿವ್ರತ್ಯವಿಧಾನಪ್ರಕಾರವು, ಕೃತಃ - ಮಾಡಲ್ಪಟ್ಟಿತು, ಪರಿತುಷ್ಟಾಸ್ಮಿ - ಸಂತೋಷಿಸಿದೇನೆ, ತೇ - ನಿನಗೆ, ಭದ್ರಂ - ಶುಭವಾಗಲಿ, ಕಿಂಚ - ಮತ್ತು, ಪಥ್ಯಂ - ಹಿತವಚನವನ್ನು, ಬ್ರುವಂತ್ಯಾಃ - ಹೇಳುತಲಿರುವ, ಮಮ - ನನ್ನ, ವಚಃ - ನುಡಿಯನ್ನು, ಕುರು - ನಡೆಯಿಸು, ಕೃಪಣಂ - ಅತ್ಯಲ್ಪವಾದ, ಮಾನುಷಂ - ಮನುಷ್ಯ ಸಂಬಂಧವಾದ ಭಯವನ್ನು, ತ್ಯಕ್ತ್ವಾ-ಬಿಟ್ಟು ರಾವಣಂ-ರಾವಣನನ್ನು, ಭರ್ತಾರಂ-ಭರ್ತೃವನ್ನಾಗಿ, ಆಶ್ರಯ - ಹೊಂದು, ವಿಕ್ರಾಂತಂ- ಪರಾಕ್ರಮಶಾಲಿಯೂ, ರೂಪವಂತಂಚ- ಸುಂದರನೂ, ದಕ್ಷಿಣಂ-ಸಮರ್ಥನೂ, ತ್ಯಾಗಶೀಲಂ - ದಾತನೂ, ಸರ್ವಸ್ಯ-ಎಲ್ಲರಿಗೂ, ಪ್ರಿಯದರ್ಶನಂ - ಇಷ್ಟವಾದ ನೋಟವುಳ್ಳವನೂ ಆಗಿರುವ, ಸುರೇಶಂ-ದೇವತೆಗಳಿಗೊಡೆಯನಾದ ವಾಸವಮಿವಸ್ಥಿತಂ-ಇಂದ್ರನಂತೆ ಪ್ರಕಾಶಿಸುತಲಿರುವ, ಮಾನುಷಂ-ಪ್ರಕೃತದಲ್ಲಿ ಮನುಷ್ಯನಾಗಿರತಕ್ಕ, ರಾಮಂ-ಶ್ರೀರಾಮನನ್ನೇ, ಭಜ - ಸೇವಿಸು, ಕೃಪಣೇನ- ದೈನ್ಯಾವಸ್ಥೆಯಿಂದ, ಕಿಂ-ಪ್ರಯೋಜನವೇನು ? ಗತಾಯುಷಾ - ಚಿರಾಯುಷ್ಯಂತನಾದ, ರಾಮೇಣ - ರಾಮನೊಡನೆ, (ತೇ-ನಿನಗೇ, ಸಂಗಮಃ-ಸೇರುವಿಕೆಯು, ಭವಿಷ್ಯತಿ-ಸಂಭವಿಸುವುದು.) ಅಗ್ನೇಃ-ಅಗ್ನಿಪುರುಷನಿಗೆ, ಸ್ವಾಹಾದೇವೀಯು ಥಾ-ಸ್ವಾಹಾದೇವಿಯುಹಾಗೂ, ಇಂದ್ರಸ್ಯ - ಇಂದ್ರನಿಗೆ, ಶಚೀವ-ಶಚೀದೇವಿಯುಹಾಗೂ, ರಾಮಸ್ಯ-ಶ್ರೀರಾಮನಿಗೆ, ಪ್ರಿಯಾ - ಇಷ್ಟಳಾದವಳು, ಭೂತ್ವಾ-ಆಗಿ, ದಿವ್ಯಾಂಗರಾಗಾ - ದಿವ್ಯಚಂದನಲೇಪವುಳ್ಳವಳೂ, ದಿವ್ಯಾಭರಣಭೂಷಿತಾ - ಶ್ರೇಷ್ಠಾಲಂಕಾರಾಲಂಕೃತಳೂ ಆಗುತ್ತಾ, ಅದ್ಯಪ್ರಭೃತಿ- ಈ ಕಾಲ ಮೊದಲುಗೊಂಡು, ಸರ್ವೇಷಾಂ ಲೋಕಾನಾಂ ಸಮಸ್ತ ಲೋಕಗಳಿಗೂ, ಈಶ್ವರೀ-ಸ್ವಾಮಿನಿಯು, ಭವ- ಆಗು,ಮೇ-ನನ್ನಿಂದ, ಉಕ್ತಂ-ಹೇಳಲ್ಪಟ್ಟ,ಏತತ್-ಈ, ವಾಕ್ಯಂ- ವಚನವನ್ನು, ತ್ವಂ-ನೀನು, ನಕರಿಷ್ಯಸಿಯದಿ-ಮಾಡದೆ ಹೋದರೆ, ಅಸ್ಮಿನ್ಮುಹೂರ್ತೇ - ಅತ್ಯಲ್ಪಕಾಲದಲ್ಲಿಯೇ, ತ್ವಾಂ-ನಿನ್ನನ್ನು ಉದ್ದೇಶಿಸಿ, ವಯಂಸರ್ವಾಃ-ನಾವೆಲ್ಲರೂ, (ವಿಷಂ- ವಿಷವನ್ನು) ಭಕ್ಷಯಿಷ್ಯಾಮಹೇ - ಭಕ್ಷಿಸುವೆವು ॥೨೭॥ ॥ ಲಂಬಮಾನಪಯೋಧರಾ - ಜೋಲಾಡುತಲಿರುವ ಎದೆಯುಳ್ಳ, ವಿಕಟಾನಾಮ - ವಿಕಟೆಯೆಂಬ ಹೆಸರಿನ, ಅನ್ಯಾತು-ಮತ್ತೊಬ್ಬ ರಕ್ಕಸಿಯಾದರೋ, ಕುಪಿತಾಸತೀ - ಕೋಪಗೊಂಡವಳಾಗಿ, ಮುಷ್ಟಿಂ - ಹಿಡಿಯನ್ನು, ಉದ್ಯಮ್ಯ - ಎತ್ತಿಹಿಡಿದು, ಗರ್ಜತೀ - ಅಬ್ಬರಿಸುತಲಿರುವವಳಾಗಿ, ಸೀತಾಂ - ಸೀತೆಯನ್ನು ಕುರಿತು, ಅಬ್ರವೀತ್ - ಇಂತೆಂದಳು ॥೨೮॥ ॥ ಸುದುರ್ಮತೇ - ಅತಿ ದುಷ್ಟಬುದ್ಧಿಯುಳ್ಳ, ಹೇಮೈಥಿಲಿ - ಬ

ಸೇರಿ ನಿನ್ನನ್ನು ತಿಂದು ಬಿಡುವೆವು, ಖಂಡಿತ,ಚೆನ್ನಾಗಿ ತಿಳಿದುಕೊ ಎಂದಳು॥೨೭॥ ॥ಅವಳು ಹೀಗೆಂದ ಬಳಿಕ ವಿಕಟೆಯೆಂಬ ಮತ್ತೊಬ್ಬ ರಾಕ್ಷಸಿಯು ಎದೆಯನ್ನು ಜೋಲಾಡಿಸುತ್ತಾ, ತನ್ನ ಮುಷ್ಟಿಯನ್ನು ಮೇಲಕ್ಕೆ ಎತ್ತಿ ಗುದ್ದಲಿಕ್ಕೆ ಸಿದ್ಧಳಾದವಳಂತೆ ಗರ್ಜಿಸುತ್ತಾ, ಬಹು ರೋಷಗೊಂಡು ಇಂತೆಂದಳು॥೨೮॥ ದುಷ್ಟಬುದ್ಧಿಯುಳ್ಳ ಎಲೆ ಸೀತೇ! ಇದುವರೆಗೆ ನೀನು ಮಿತಿಮೀರಿ ಕರ್ಣಕಠೋರವಾದ ಮಾತುಗನ್ನೆಲ್ಲ ಆಡಿದೆ. ಆದರೂ ಅವುಗಳನ್ನು ಕೇಳಿದ

ಅನುಕ್ರೋಶಾನ್ಮೃದುತ್ವಾಚ್ಚ ಸೋಢಾನಿ ತವ ಮೈಥಿಲಿ ॥ ೨೯ ॥
ನಚ ನಃ ಕುರುಷೆ ವಾಕ್ಯಂ ಹಿತಂ ಕಾಲಪುರಸ್ಸರಂ (ಸ್ಕೃತಂ) ॥
ಆನೀತಾಸಿ ಸಮುದ್ರಸ್ಯ ಪಾರ ಮನ್ಯೈರ್ದುರಾಸದಂ ।
ರಾವಣಾಂತಃಪುರಂ ಘೋರಂ ಪ್ರವಿಷ್ಟಾ ಚಾಸಿ ಮೈಥಿಲಿ ॥ ॥೩೧ ॥
ರಾವಣಸ್ಯ ಗೃಹೇ ರುದ್ಧಾ ಮಸ್ಮಾಭಿಸ್ತು ಸುರಕ್ಷಿತಾಂ ।
ನ ತ್ವಾಂ ಶಕ್ತಃ ಪರಿತ್ರಾತು ಮಪಿ ಸಾಕ್ಷಾತ್ಪುರಂದರಃ ॥
ಕುರುಷ್ವ ಹಿತವಾದಿನ್ಯಾ ವಚನಂ ಮಮ ಮೈಥಿಲಿ ।

---

ಸೀತೆ ! ಅಪ್ರಿಯರೂಪಾಣಿ - ಅನಿಷ್ಟಸ್ವರೂಪಗಳಾಗಿರುವ, ಬಹೂನಿ - ಅನೇಕಗಳಾದ, ತವ - ನಿನ್ನ, ವಚನಾನಿ-ಮಾತುಗಳು, (ರಾವಣೇನ-ರಾವಣನಿಂದ) ಅನುಕ್ರೋಶಾತ್- ದಯೆಯಿಂದಲೂ, ಮೃದುತ್ವಾಚ್ಚ-ನೀನು ಕೋಮಲೆ ಎಂಬ ಭಾವನೆಯಿಂದಲೂ, ಸೋಢಾನಿ - ಸಹಿಸಲ್ಪಟ್ಟವು ॥೨೯॥ ॥ ಕಾಲಪುರಸ್ಸರಂ-ಕಾಲೋಚಿತವಾಗಿರುವ, ಹಿತಂ-ಶ್ರೇಯಸ್ಕರವೆನಿಸಿದ, ನಃ-ನಮ್ಮ, ವಾಕ್ಯಂ-ನುಡಿಯನ್ನು, ನಕುರುಷೇಯದಿ ನೆರವೇರಿಸದೇ ಹೋದರೆ, (ತೇ-ನಿನಗೆ) ಹಿತಂ-ಮೇಲು, ನ- ಆಗಲಾರದು ॥೩೦॥ ॥ ಅನ್ಯೈಃ-ಇತರರಿಂದ, ದುರಾಸದಂ - ಹೊಂದಲಸದಳವೆನಿಸಿದ, ಸಮುದ್ರಸ್ಯ - ಕಡಲಿನ, ಪಾರಂ-ಹೊರಗಿನ ದಡವನ್ನು, ಆನೀತಾ- ಹೊಂದಿಸಲ್ಪಟ್ಟವಳು, ಅಸಿ-ಆಗಿದ್ದೀಯೆ, ಹೇಮೈಥಿಲಿ - ಎಲೆಜಾನಕೀ, ಘೋರಂ-ಭಯಂಕರವಾದ, ರಾವಣಾಂತಃಪುರಂ- ರಾವಣನ ರಾಣಿವಾಸವನ್ನು, ಪ್ರವಿಷ್ಟಾ- ಪ್ರವೇಶಿಸಿದವಳೂ, ಅಸಿ-ಆಗಿದ್ದೀಯೆ ॥೩೧॥ ರಾವಣಸ್ಯ-ರಾವಣನ, ಗೃಹೇ- ಮನೆಯೊಳಗೆ, ಅಸ್ಮಾಭಿಃ-ನಮ್ಮಗಳಿಂದ, ರುದ್ಧಾಂ-ತಡೆಯಲ್ಪಟ್ಟಿರುವ, ಸುರಕ್ಷಿತಾಂ - ಹೆರರಿಗೆ ಎಡೆಯಿಲ್ಲದಂತೆ ರಕ್ಷಿಸಲ್ಪಡುತಲಿರುವ, ತ್ವಾಂತು-ನಿನ್ನನ್ನಾದರೋ, ಪರಿತ್ರಾತುಂ - ಈ ಸ್ಥಳವನ್ನು ತಪ್ಪಿಸಿ ಕಾಪಾಡಲಿಕ್ಕೆ, ಸಾಕ್ಷಾತ್ - ಎದುರಿಗೆ ಬಂದ, ಪುರಂದರೋಪಿ ದೇವೇಂದ್ರನೂಕೂಡ, ನಶಕ್ತಃ-ಸಮರ್ಥನಾಗಲಾರ ॥೩೨॥ ಹೇಮೈಥಿಲಿ - ಓಸೀತೆ ! ಹಿತವಾದಿನ್ಯಾಃ-ಮೇಲನ್ನು ಹೇಳುತಲಿರುವ, ಮಮ-ನನ್ನ, ವಚನಂ - ಮಾತನ್ನು, ಕುರುಷ್ವ- ನಡೆಸು,

---

ಕೂಡಲೇ ನಿನ್ನನ್ನು ಕತ್ತರಿಸಬೇಕಾದರೂ, ನಮ್ಮೊಡೆಯನು ನೀನು ಬಹುಕೋಮಲಾಂಗಿ ಎಂತಲೂ, ಹೆಂಗಸನ್ನು ಹಿಂಸಿಸಬಾರದೆಂಬ ದಯೆಯಿಂದಲೂ ಸಹಿಸಿಕೊಂಡಿದಾನೆ ॥೨೯॥ ಇಗೋ, ಸಾರಿಸಾರಿ ಹೇಳುತ್ತೇನೆ. ನಮ್ಮ ಮಾತು ಕಾಲವನ್ನು ಅನುಸರಿಸಿದುದಾಗಿಯೂ, ನಿನಗೆ ಮೇಲನ್ನು ಉಂಟುಮಾಡತಕ್ಕದಾಗಿಯೂ ಇದೆ, ಚೆನ್ನಾಗಿ ಭಾವಿಸನೋಡು, ಆದರೂ ಈ ನಮ್ಮ ನುಡಿಯನ್ನು ಕೇಳಿ ಅದರಂತೆ ನಡೆಯದೆ ಹೋದರೆ ನಿನಗೆ ಖಂಡಿತವಾಗಿಯೂ ಮೇಲುಂಟಾಗಲಾರದು ॥೩೦॥ "ನನ್ನನ್ನು ನನ್ನ ಗಂಡನು ಕರೆದುಕೊಂಡುಹೋಗುವನು „ ಎಂದೇನಾದರೂ ನಿನಗೊಂದು ಕನಸೇನಾದರೂ ಇದೆಯೋ ಹೇಗೋ, ಅದರ ಹಂಬಲನ್ನು ಬಿಡು, ದೊಡ್ಡ ಕಡಲಿನ ಈಚೆಯದಡಕ್ಕೆ ತರಲ್ಪಟ್ಟದ್ದೀಯೆ, ಇಲ್ಲಿಗೆ ಯಾರಾದರೂ ಬರುವರೆಂಬ ಸುದ್ದಿಯನ್ನು ಸ್ವಪ್ನದಲ್ಲಿಯೂ ಬಿಟ್ಟುಬಿಡು. ಅದರಲ್ಲಿಯೂ ರಾವಣನ ರಾಣಿವಾಸದೊಳಗೆ ಇದ್ದೀಯ ॥೩೧॥ ರಾವಣನ ಮನೆಯಲ್ಲಿ ಈ ನಮ್ಮ ಸೆರೆಯಲ್ಲಿಯೂ ಸಿಕ್ಕಿ ಇರುವ ನಿನ್ನನ್ನು ಮೂರುಲೋಕದೊಡೆಯನಾದ ದೇವೇಂದ್ರನೇ ಆದರೂ ಈ ಬಂದೀಖಾನೆಯಿಂದ ಬಿಡಿಸಿ ಕಾಪಾಡಲು ಸಮರ್ಥನಾಗಲಾರ ॥೩೨॥ ಎಲೇ ಮೈಥಿಲೀ ! ನನ್ನನ್ನು

ಅಲಮಶ್ರುಪ್ರಪಾತೇನ ತ್ಯಜ ಶೋಕಮನರ್ಥಕಂ ॥೩೩॥
ಭಜ ಪ್ರೀತಿಂ ಪ್ರಹರ್ಷಂ ಚ ತ್ಯಜೈತಾಂ ನಿತ್ಯದೈನ್ಯತಾಂ ।
ಸೀತೇ ರಾಕ್ಷಸರಾಜೇನ ಸಹ ಕ್ರೀಡ ಯಥಾಸುಖಂ ॥೩೪॥
ಜಾನಾಸಿ ಹಿ ಯಥಾ ಭೀರು ಸ್ತ್ರೀಣಾಂ ಯೌವನಮಧ್ರುವಂ ।
ಯಾವನ್ನ ತೇ ವ್ಯತಿಕ್ರಾಮೇತ್ತಾವತ್ಸುಖಮವಾಪ್ನುಹಿ ॥೩೫॥

ಅಶ್ರುಪ್ರಪಾತೇನ-ಕಣ್ಣೀರನ್ನು ಸುರಿಸುವುದರಿಂದ, ಅಲಂ-ಸಾಕು, ಅನರ್ಥಕಂ-ಉಪಯೋಗವಿಲ್ಲದಿರುವ, ಶೋಕಂ-ದುಃಖವನ್ನು, ತ್ಯಜ-ಬಿಟ್ಟುಬಿಡು ॥೩೩॥ ಹೇಸೀತೇ - ಎಲೆ ವೈದೇಹಿ, (ತ್ವಂ-ನೀನು) ಪ್ರೀತಿಂ - ರಾವಣನ ವಿಷಯವಾದ ಸ್ನೇಹವನ್ನು, ಪ್ರಹರ್ಷಂಚ- ಸಂತೋಷವನ್ನೂ, ಭಜ-ಅನುಭವಿಸು, ಏತಾಂ ಈ, ನಿತ್ಯದೈನ್ಯತಾಂ - ಕೊನೆಯಿಲ್ಲದ ದೀನತನವನ್ನು, ತ್ಯಜ - ತೊರೆ, (ಬಿಟ್ಟುಬಿಡು) ರಾಕ್ಷಸರಾಜೇನ, ಸಹ-ರಾವಣನೊಡಗೂಡಿ, ಯಥಾ ಸುಖಂ-ಸುಖವಾಗಿ, ಕ್ರೀಡ-ವಿಹರಿಸು ॥೩೪॥ ಹೇಭೀರು-ಭಯ ಸ್ವಭಾವವುಳ್ಳವಳೇ, ತ್ವಂ-ನೀನು, ಸ್ತ್ರೀಣಾಂ - ಹೆಂಗಸರ, ಯೌವನಂ - ಪ್ರಾಯವು, ಅಧ್ರುವಂಹಿ - ಅಸ್ಥಿರವಷ್ಟೆ, (ಇತಿ-ಹೀಗೆಂದು) ಜಾನಾಸಿ-ಬಲ್ಲೆ, ಯಥಾ- ಹೇಗೆ, ತೇ-ನಿನ್ನ, ತತ್ - ಆ ಪ್ರಾಯವು, ಯಾವತ್-ಎಷ್ಟರೊಳಗೆ, ನವ್ಯತಿಕ್ರಾಮೇತ್ - ಮೀರಿಹೋಗುವುದಿಲ್ಲವೋ, ತಾವತ್ - ಅಷ್ಟುಕಾಲದೊಳಗೇ, ಸುಖಂ-ಸೌಖ್ಯವನ್ನು, ಅವಾಪ್ನುಹಿ-ಹೊಂದು ॥೩೫॥ ಹೇಮದಿರೇಕ್ಷಣೇ- ಮೋಹಜನಕವಾದ ಕಣ್ಣುಳ್ಳ,

ನಿನಗೆ ಹಿತವಾದಿನಿ ಎಂದು ಚೆನ್ನಾಗಿ ತಿಳಿ, ನನ್ನನುಡಿಯನ್ನು ಕೇಳು, ಸುಮ್ಮನೆ ಕಣ್ಣುಗಳ ದ ನೀರನ್ನು ಸುರಿಸಬೇಡ, ನಿಷ್ಪ್ರಯೋಜನವಾದ ಶೋಕವನ್ನು ಬಿಟ್ಟುಬಿಡು॥೩೩॥ * ರಾವಣನಲ್ಲಿ ಪ್ರೀತಿಯನ್ನು ತೋರು, ಸಂತೋಷದಿಂದಿರು, ನಿತ್ಯವೂ ನೀನು ಅನುಭವಿಸುತಲಿರುವ ಈ ದೀನದೆಶೆಯನ್ನು ತೊರೆ, ಎಲೆ ಸೀತೆ! ರಾಕ್ಷಸರಾಜನೊಡನೆ ಸೇರಿ ಹಾಯಾಗಿ ಬೇಕಾದ ಹಾಗೆ ಸುಖಗಳನ್ನು ಅನುಭವಿಸಿಕೊಂಡಿರು ॥೩೪॥ ಭಯಶೀಲಳಾದ ಎಲೆ ಸೀತೆ! ಹೆಂಗಸರಿಗೆ ಪ್ರಾಯವು ಬಹುದಿನಗಳವರೆಗೂ ನೆಲಯಾಗಿನಿಲ್ಲುವುದಿಲ್ಲವೆಂಬುದನ್ನು ನೀನು ಚೆನ್ನಾಗಿ ಬಲ್ಲೆ, ಅದು ನಿನಗೆ ಮೀರಿ ಹೋಗುವುದರೊಳಗಾಗಿ ರಾವಣನನ್ನು ರಮಣನನ್ನಾಗಿ ಪಡೆದು ಸುಖಗಳನ್ನು ಅನುಭವಿಸು ॥೩೫॥ ಮನೋಹರವಾದ ಉದ್ಯಾನವನಗಳಲ್ಲಿಯೂ

* ಎಲೌ ಸೀತಾದೇವಿಯೇ! ನೀನು ಮನಃಪೂರ್ವಕವಾಗಿ ಪತಿಭಕ್ತಿಯಿಂದ ಪಾತಿವ್ರತ್ಯವನ್ನು ಪ್ರಕಾಶಪಡಿಸಿದುದಕ್ಕೆ ನಾನು ಬಹಳವಾಗಿ ಹರ್ಷಿಸುತ್ತೇನೆ ನಿನಗೆ ಮಂಗಳವಾಗಲಿ, ಆದರೆ-ನಾನೊಂದು ಹಿತವಚನವನ್ನು ಹೇಳುತ್ತೇನೆ, ಅದನ್ನು ಲಾಲಿಸು, ಮನುಷ್ಯಜಾತಿಗೆ ಸ್ವಭಾವವಾಗಿರುವ ಅಲ್ಪವಾದ ಭಯವನ್ನು ತೊರೆ. ಶತ್ರುದುಃಖಕರನಾಗಿರುವ ರಾಕ್ಷಸರಾಜನಾದ ರಾವಣನನ್ನು ಭೃತ್ಯನನ್ನಾಗಿ ಸ್ವೀಕರಿಸು. ದೇವರಾಜನಾದ ಇಂದ್ರನಂತೆ ಶೌರ್ಯ, ಧೈರ್ಯ, ಸೌಂದರ್ಯಾದಿ ಗುಣಸಂಪನ್ನನಾಗಿ ಸರ್ವಜನ ಪ್ರಿಯನೆನಿಸಿರುವ ರಾಮನನ್ನು ಹೊಂದು. ವೃಥಾ ಕಾರ್ಪಣ್ಯವನ್ನು ಹೊಂದಬೇಡ, ದೀರ್ಘಾಯುಷ್ಮಂತನಾದ ಶ್ರೀರಾಮಚಂದ್ರನೊಡನೆ ನಿನಗೆ ಬೇಗನೆ ಸಂಗಮವು ಸಂಭವಿಸುವುದು. ಇದಕ್ಕಾಗಿ ನೀನು ಚಿಂತಿಸಬೇಡ, ಅಗ್ನಿಗೆ ಸ್ವಾಹಾದೇವಿಯಂತೆಯೂ, ಇಂದ್ರನಿಗೆ ಶಚೀದೇವಿಯಂತೆಯೂ ನೀನು ರಾಮನಿಗೆ ಪ್ರಿಯಳಾಗಿ ದಿವ್ಯಚಂದನಾಭರಣಾದಿಗಳನ್ನು ಧರಿಸಿ ಇಂದುಮೊದಲು ನಮ್ಮೆಲ್ಲರಿಗೂ ಈಶ್ವರಿಯಾಗಿರು, ನನ್ನ ಈ ವಿಜ್ಞಾಪನೆಯನ್ನು ನೀನು ಆದರದಿಂದಲಾಲಿಸದೆ ಹೋದರೆ, ನಿನ್ನ ಹೆಸರನ್ನು ಹೇಳಿಕೊಂಡು ನಾವೆಲ್ಲರೂ ವಿಷವನ್ನು ಕುಡಿದುಬಿಡುವೆವು ಎಂದಳು.

ಉದ್ಯಾನಾನಿ ಚ ರಮ್ಯಾಣಿ ಪರ್ವತೋಪವನಾನಿ ಚ ।
ಸಹ ರಾಕ್ಷಸ ರಾಜೇನ ಚರ ತ್ವಂ ಮದಿರೇಕ್ಷಣೇ॥೩೬॥
ಸ್ತ್ರೀಸಹಸ್ರಾಣಿ ತೇ ಸಪ್ತ ವಶೇ ಸ್ಥಾಸ್ಯಂತಿ ಸುಂದರಿ ।
ರಾವಣಂ ಭಜ ಭರ್ತಾರಂ ಭರ್ತಾರಂ ಸರ್ವ ರಕ್ಷಸಾಂ ॥೩೭॥
ಉತ್ಪಾಟ್ಯ ವಾ ತೇ ಹೃದಯಂ ಭಕ್ಷಯಿಷ್ಯಾಮಿ ಮೈಥಿಲಿ ।
ಯದಿ ಮೇ ವ್ಯಾಹೃತಂ ವಾಕ್ಯಂ ನ ಯಥಾವತ್ಕರಿಷ್ಯಸಿ ॥೩೮॥
ತತ ಶ್ಚಂಡೋದರೀ ನಾಮ ರಾಕ್ಷಸೀ ಕ್ರೋಧಮೂರ್ಛಿತಾ ।

ಮದಿರೇಕ್ಷಣೇ, ತ್ವಂ-ನೀನು, ರಮ್ಯಾಣಿ-ಸುಂದರಗಳಾಗಿರುವ, ಉದ್ಯಾನಾನಿಚ - ಉಪವನಗಳನ್ನೂ, ಪರ್ವತೋಪವನಾನಿಚ-ಆಟದ ಬೆಟ್ಟದ ತೋಟಗಳನ್ನೂ, ರಾಕ್ಷಸರಾಜೇನಸಹ-ರಾವಣನೊಡಗೂಡಿ, ಚರ-ಸಂಚರಿಸು ॥೩೬॥ ಹೇ ಸುಂದರಿ-ಓ ಅಂದವಾದ ಹೆಣ್ಣೇ, ಸಪ್ತಸಹಸ್ರಾಣಿ-ಏಳುಸಾವಿರಮಂದಿ ಹೆಂಗಸರು, ತೇ-ನಿನ್ನ, ವಶೇ-ಅಧೀನದಲ್ಲಿ, ಸ್ಥಾಸ್ಯಂತಿ-ನಿಲ್ಲುವರು, ಸರ್ವರಕ್ಷಸಾಂ - ರಕ್ಕಸರಿಗೆಲ್ಲಾ, ಭರ್ತಾರಂ-ಪ್ರಭುವಾಗಿರುವ, ರಾವಣಂ-ರಾವಣನನ್ನು, ಭರ್ತಾರಂ-ಪತಿಯನ್ನಾಗಿ, ಭಜ-ಪಡೆ ॥೩೭॥ ಹೇಮೈಥಿಲಿ-ಎಲೆಸೀತೆ, ಮೇ-ನನ್ನಿಂದ, ವ್ಯಾಹೃತಂ-ಹೇಳಲ್ಪಟ್ಟ, ವಾಕ್ಯಂ - ಮಾತನ್ನು, ಯಥಾವತ್-ಕ್ರಮವಾಗಿ, ನಕರಿಷ್ಯಸಿಯದಿ-ನೆರವೇರಿಸದೆ ಹೋದರೆ, ತೇ-ನಿನ್ನ, ಹೃದಯಂ - ಎದೆಯ ಮಾಂಸದ ಖಂಡವನ್ನು, ಉತ್ಪಾಟ್ಯವಾ-ಹೊರಗೆ ಸೆಳದೇ, ಭಕ್ಷಯಿಷ್ಯಾಮಿ - ತಿಂದುಬಿಡುವೆನು ॥ ೩೮ ॥ ತತಃ - ತರುವಾಯು,

ಬೆಟ್ಟದ ತೊಪ್ಪಲಲ್ಲಿನ ಕಿರು ದೋಟಗಳಲ್ಲಿಯೂ, ರಾಕ್ಷಸರಾಜನೊಡನೆ ಸೇರಿ ಸುಖವಾಗಿ ಸಂಚರಿಸುತಲಿರು ॥೩೬॥ * ಇದಲ್ಲದೆ, ಎಲೆ ಸುಂದರಿಯಾದ ಸೀತೆಯೇ ! ಏಳುಸಾವಿರ ಮಂದಿ ರಾವಣನ ರಾಣಿಯರು ನಿನಗೆ ದಾಸಿಯರಾಗಿರುವರು. ಇಂತಹ ರಾವಣನನ್ನು ಭರ್ತನನ್ನಾಗಿ ಪಡೆಯುವ ನಿನ್ನ ಭಾಗ್ಯಕ್ಕೆ ಎಣೆಯಾವುದುಂಟು ? ॥೩೭॥ ಎಲೆ ಮೈಥಿಲೀ ! ನಾವಿಷ್ಟುಮಂದಿ ಅಷ್ಟುಹೊತ್ತಿನಿಂದಲೂ ಇಷ್ಟುವಿಧವಾಗಿ ಹೇಳದುದನ್ನು ನೀನು ಕೇಳದೆ ಹೋಗುವ ಪಕ್ಷದಲ್ಲಿ, ನಿನ್ನ ಎದೆಯನ್ನು ಇರಿದು ಅಲ್ಲಿರುವ ಮಾಂಸ ಖಂಡವನ್ನು ಹಿರಿದು ನಾನು ಈಗಲೆ ಅದನ್ನು ತಿಂದುಬಿಡುವುದು ದಿಟ ಎಂದಳು ॥೩೮॥ ಆಮೇಲೆ ಚಂಡೋದರಿ ಎಂಬ

* ಎಲೌ ಸೀತಾದೇವಿಯೇ ! ರಾವಣನನ್ನು ಭೃತ್ಯನನ್ನಾಗಿ ಸ್ವೀಕರಿಸಿ ಈ ಉದ್ಯಾನಗಳಲ್ಲಿ ಆತನು ಭಕ್ತಿಯಿಂದ ನಿನಗೊಪ್ಪಿಸುವ ಸತ್ಕಾರಗಳನ್ನು ಆದರದಿಂದ ಅಂಗೀಕರಿಸಿ ಸಂತೋಷಿಸು. ಸರ್ವರಾಕ್ಷಸರಿಗೂ ಭರ್ತನೆನಿಸಿದ ರಾವಣನನ್ನು ಓ ಸೀತಾದೇವಿಯೇ! ನೀನು ಭೃತ್ಯನನ್ನಾಗಿ ಸ್ವೀಕರಿಸಿದರೆ, ಈ ರಾವಣನ ಅರಸಿಯರಾದ ಏಳುಸಾವಿರಮಂದಿ ಸ್ತ್ರೀಯರೂ ನಿನಗೆ ಕಿಂಕರಿಯರಾಗಿ ನಿಲ್ಲುವರು. ಈ ನನ್ನ ವಾಕ್ಯವನ್ನು ನೀನು ಅಂಗೀಕರಿಸದೆಹೋದರೆ, ನನ್ನ ಎದೆಯನ್ನು ಬಗೆದುಕೊಂಡು ಅಲ್ಲಿನ ಮಾಂಸವನ್ನು ನಾನೇ ಭಕ್ಷಿಸುವೆನು. ಹರಿಣಲೋಲಾಕ್ಷಿಯಾದ ಈ ಸೀತೆಯನ್ನು ನೋಡಿ ನನಗೆ ಈಕೆಯಲ್ಲಿ ತುಂಬಾ ಸ್ನೇಹಉಂಟಾಗಿದೆ, ಈ ರಕ್ಕಸಿಯರೊಳಗೆ ಕಠೋರವಾಕ್ಯಗಳನ್ನು ಹೇಳತಕ್ಕ ಈ ವಿಕಟೆ ಎಂಬ ರಾಕ್ಷಸಿಯು ಯಕೃತ್ ಪ್ಲೀಹಗಳನ್ನು ತಿಂದು ಬಿಡಬೇಕೆಂದು ನನಗೆ ಬುದ್ಧಿಯುಂಟಾಗುತಲಿದೆ. ಮತ್ತು ಘಾತಕಿಯಾದ ಈ ಸೀತೆಯು ಕೊರಳನ್ನು ಹಿಂಡಬೇಕೆಂದು ಹೇಳುತಲಿರುವ ಪ್ರಘಸೆಯನ್ನು ಹಿಂಸಿಸಬೇಕೆಂತಲೂ,ಹಾಗೆಯೇ ಈಸೀತೆಯನ್ನು ತೊಂದರೆಗೊಳಿಸತಕ್ಕ ಸರ್ವರನ್ನೂ ಶಿಕ್ಷಿಸಬೇಕೆಂದು ನನ್ನ ಬಪ್ಪಿತವು ಎಂದೂಹೇಳುತ್ತಿದ್ದಳು.

ಭ್ರಾಮಯಂತೀ ಮಹಚ್ಛೂಲ ಮಿದಂ ವಚನ ಮಬ್ರವೀತ್॥೩೯॥
ಇಮಾಂ ಹರಿಣ ಲೋಲಾಕ್ಷೀಂ ತ್ರಾಸೋತ್ಕಂಪಿ ಪಯೋಧರಾಂ ।
ರಾವಣೇನ ಹೃತಾಂ ದೃಷ್ಟ್ವಾ ದೌಹೃದೋ ಮೇ ಮಹಾ ನಭೂತ್ ॥೪೦॥
ಯಕೃತ್ ಪ್ಲೀಹ ಮಥೋತ್ಪೀಡಂ ಹೃದಯಂ ಚ ಸಬಂಧನಂ ।
ಆಂತ್ರಾಣ್ಯಪಿ ತಥಾ ಶೀರ್ಷಂ ಖಾದೇಯ ಮಿತಿ ಮೇ ಮತಿಃ॥೪೧॥
ತತಸ್ತು ಪ್ರಘಸಾ ನಾಮ ರಾಕ್ಷಸೀ ವಾಕ್ಯ ಮಬ್ರವೀತ್ ॥ ೪೨॥ ॥
ಕಂಠ ಮಸ್ಯಾ ನೃಶಂಸಾಯಾಃ ಪೀಡಯಾಮಃ ಕಿ ಮಾಸ್ಯತೇ ॥

---

ಚಂಡೋದರೀನಾಮ - ಚಂಡೋದರಿ ಎಂಬ ಹೆಸರಿನ, ರಾಕ್ಷಸೀ-ರಕ್ಕಸಿಯು, ಕ್ರೋಧಮೂರ್ಛಿತಾ-ಕೋಪ ಪರವಶಳಾಗಿ, ಮಹತ್ - ದೊಡ್ಡದಾದ, ಶೂಲಂ-ಶೂಲಾಯುಧವನ್ನು, ಭ್ರಾಮಯಂತೀ - ತಿರುಗಿಸುತಲಿರುವವಳಾಗಿ, ಇದಂವಚನಂ-ಈ ಮುಂದಿನಮಾತನ್ನು, ಅಬ್ರವೀತ್- ಹೇಳತೊಡಗಿದಳು ॥೩೯॥ ಹರಿಣ ಲೋಲಾಕ್ಷೀಂ - ಜಿಂಕೆಯಂತೆ ಚಪಲನಯನೆಯಾದ, ತ್ರಾಸ - ಭಯದಿಂದ, ಉತ್ಕಂಪಿ- ನಡುಗುತಲಿರುವ, ಪಯೋಧರಾಂ-ಎದೆಯುಳ್ಳ, ರಾವಣೇನ - ರಾವಣನಿಂದ, ಹೃತಾಂ - ಅಪಹರಿಸಲ್ಪಟ್ಟಿರುವ, ಇಮಾಂ-ಈ ಸೀತೆಯನ್ನು, ದೃಷ್ಟ್ವಾ-ನೋಡಿ, ಮೇ-ನನಗೆ, ಮಹಾನ್-ಹೆಚ್ಚಾದ, ದೌಹೃದಃ-ಬಯಕೆಯು, ಅಭೂತ್-ಉಂಟಾಯಿತು ॥೪೦॥ ಯಕೃತ್ - ಹೊಟ್ಟೆಯೊಳಗೆ ಬಲಗಡೆಯೊಳಗಿರುವ, ಯಕೃತ್ತೆಂಬ ಕಪ್ಪುಬಣ್ಣದ ಮಾಂಸಖಂಡವನ್ನು, ಪ್ಲೀಹಂ-ಹೊಟ್ಟೆಯಲ್ಲಿ ಎಡಗಡೆಯಲ್ಲಿರುವ ಹಸಿರುಬಣ್ಣದ ಮಾಂಸಖಂಡವನ್ನೂ, ಅಥ-ಆಮೇಲೆ, ಉತ್ಪೀಡಂ-ಪ್ಲೀಹದ ಮೇಲಣ ಮಾಂಸವನ್ನೂ, ಸಬಂಧನಂ - ನಾಡೀಬಂಧಗಳಿಂದೊಡಗೂಡಿದ, ಹೃದಯಂಚ- ತಾವರೆಯ ಮೊಗ್ಗಿನಂತಿರುವ ಹೃದಯಮಾಂಸವನ್ನೂ, ಆಂತ್ರಾಣ್ಯಪಿ-ಕರುಳುಗಳನ್ನೂ, ತಥಾ-ಹಾಗೆಯೇ, ಶೀರ್ಷಂ - ಶಿರದೊಳಗಣ ಮಿದುಳನ್ನೂ, ಖಾದೇಯಂ - ತಿಂದುಬಿಡಬೇಕು, ಇತಿ-ಹೀಗೆಂದು, ಮೇ-ನನಗೆ, ಮತಿಃ - ಕೋರಿಕೆಯು, (ಅಸ್ತಿ - ಉಂಟು) ॥೪೧॥ ತತಃ-

---

ರಾಕ್ಷಸಿಯು ತಲೆಗೇರಿದ ಕೋಪದಿಂದ ಉಬ್ಬಿ, ಕಟಕಟನೆ ಹಲ್ಲುಗಳನ್ನು ಕಡಿಯುತ್ತಾ, ಔಡುಗಳನ್ನು ಕಚ್ಚುತ್ತಾ, ಕೈಯಿಂದ ಶೂಲಾಯುಧವನ್ನು ತಿರಿಗಿಸುತ್ತಾ, ತಾನೊಂದು ಮಾತನ್ನು ಹೇಳತೊಡಗಿದಳು ॥೩೯॥ ಇಕ್ಕೆಲದಲ್ಲಿರುವ ಎಲೆ ಗೆಳತಿಯರುಗಳಿರಾ ! ನಮ್ಮ ಪ್ರಭುವು ಕೊಂಡುತಂದಿರತಕ್ಕ, ಜಿಂಕೆಯ ಕಣ್ಣಿನಂತೆ ಬಹು ಚಂಚಲವಾದ ನಯನಗಳನ್ನು ಪಡೆದು ಅಂಜಿಕೆಯಿಂದ ಇದಿರುತಲಿರುವ ಈ ಸೀತೆಯನ್ನು ನೋಡಿದಕೂಡಲೇ ನನ್ನ ಮನದೊಳಗೆ ಬಂದು ಬಗೆಯಾದ ಬಯಕೆಯು ಮೊಳೆಯುತಲಿದೆ ॥೪೦॥ ಅದೇನೆಂದರೆ--ಇವಳ ಹೊಟ್ಟೆಯೊಳಗೆ ಬಲಗಡೆಯಲ್ಲಿರುವ ಯಕೃತ್ ಎಂಬ ಬಂದು ವಿಧವಾದ ಮಾಂಸದ ಪಿಂಡವನ್ನೂ, ಉದರದ ಎಡಪಕ್ಕದಲ್ಲಿನ ಪ್ಲೀಹವೆಂಬ ಮಾಂಸಖಂಡವನ್ನೂ, ಆಮೇಲೆ ತಾವರೆಯ ಮೊಗ್ಗಿನಂತಿರುವ ಹೃದಯವನ್ನೂ ನಾಡೀ ಬಂಧದೊಡನೆ ಹೊರಗೆ ಸೆಳೆದು, ಹಾಗೆಯೇ ಕರುಳುಗಳನ್ನು ಹಿರಿದು ತಿನ್ನಬೇಕೆಂದಿರುವೆನು. ಈ ವಿಧವಾದ ಕೋರಿಕೆಯು ನನಗೆ ಹೆಚ್ಚುತಲಿದೆ ॥೪೧॥ ಅವಳು ಹೀಗೆನುವ ಬಳಿಕ ಪ್ರಘಸೆ ಎಂಬ ರಾಕ್ಷಸಿಯು ಅವರನ್ನು ನೋಡಿ, ನಿಮ್ಮ ಕೋರಿಕೆಯಲ್ಲ ಹಾಗಿರಲಿ, ಏಕೆ ತಡವನ್ನು ಮಾಡುತಲಿದ್ದೀರಿ, ಮೊಟ್ಟಮೊದಲು ಬಹುವಿಧವಾಗಿ ನಮಗೆ ತೊಂದರೆಯನ್ನುಕೊಡುತಲಿರುವ ಈ ಸೀತಳಕೊರಳನ್ನು

ನಿವೇದ್ಯತಾಂ ತತೋ ರಾಜ್ಞೋ ಮಾನುಷೀ ಸಾ ಮೃತೇತಿ ಹ ।
ನಾತ್ರ ಕಶ್ಚನ ಸಂದೇಹಃ ಖಾದತೇತಿ ಸ ವಕ್ಷ್ಯತಿ॥೪೩॥
ತತ ಸ್ತ್ವಜಾಮುಖೀ ನಾಮ ರಾಕ್ಷಸೀ ವಾಕ್ಯ ಮಬ್ರವೀತ್ ॥೪೩॥
ವಿಶಸ್ಯೇಮಾಂ ತತ ಸ್ಸರ್ವಾ ಸ್ಸಮಾ ನ್ಕುರುತ ಪಿಲುಕಾನ್ ॥
ವಿಭಜಾಮ ತತ ಸ್ಸರ್ವಾ ವಿವಾದೋ ಮೇ ನರೋಚತೇ ।
ಪೇಯ ಮಾನೀಯತಾಂ ಕ್ಷಿಪ್ರಂ ಲೇಹ್ಯ ಮುಚ್ಚಾವಚಂ ಬಹು ॥೪೫॥
ತತ ಶ್ಶೂರ್ಪನಖಾ ನಾಮ ರಾಕ್ಷಸೀ ವಾಕ್ಯ ಮಬ್ರವೀತ್ ॥೪೬॥

---

ಅಹಿಂದೆ, ಪ್ರಘಸಾ ನಾಮ - ಪ್ರಘಸೆಯೆಂಬ, ರಾಕ್ಷಸೀ-ರಾಕ್ಷಸಿಯು, ನೃಶಂಸಾಯಾಃ-ಕ್ರೂರಸ್ವಭಾವದ, (ಹೇಳಿದಂತೆ ಕೇಳದಿರುವ) ಅಸ್ಯಾಃ-ಈ ಸೀತೆಯ, ಕಂಠಂ-ಕೊರಳನ್ನು, ಪೀಡಯಾಮಃ-ಹಿಂಡೋಣ, ಕಿಂ-ಪಿಕೆ, ಆಸ್ಯತೇ-ಸುಮ್ಮನೆ ಸಾವಕಾಶಮಾಡಬೇಕು, ತತಃ - ಇಷ್ಟು ಕೆಲಸವನ್ನು ಮಾಡಿದಮೇಲೆ, ಮಾನುಷೀ- ಮನುಷ್ಯಸ್ತ್ರೀಯಾದ, ಸಾ-ನೀನು ತಂದಿದ್ದ ಆ ಸೀತೆಯು, ಮೃತಾ - ಸತ್ತು ಹೋದಳು, ಇತಿ-ಹೀಗೆಂದು, ರಾಜ್ಞೇ-ಮಹಾರಾಜನಾದ ರಾವಣನಿಗೆ, ಅಸ್ಮಾಭಿಃ - ನಮ್ಮಿಂದ, ನಿವೇದ್ಯತಾಂ - ತಿಳಿಸಲ್ಪಡಲಿ, ಸಃ-ಆ ರಾವಣನು, ಯೂಯಂ - ನೀವು, ತಾಂ-ಆ ಸತ್ತ ಸೀತೆಯನ್ನು, ಖಾದತ - ತಿಂದುಬಿಡಿ, ಇತಿ-ಹೀಗೆಂದು, ವಕ್ಷ್ಯತಿ-ಹೇಳುವನು, ತತ್ರ-ಈ ವಿಷಯದಲ್ಲಿ, ಕಶ್ಚನ-ಯಾವದೊಂದು, ಸಂದೇಹಃ-ಸಂಶಯವೂ ನ-ಇಲ್ಲ, ಹ-ನಿಶ್ಚಯ, ಅಥವಾ-(ಈ ಸಂಕಟದ ಸುದ್ದಿಯನ್ನು ಹೇಳಲಾರದ ವಾಲ್ಮೀಕಿಯ ಹೃದಯವ್ಯಥೆಯನ್ನು 'ಹ' ಎಂಬುದು ಸೂಚಿಸುತ್ತದೆ) ॥೪೨-೪೩॥ ತತಃ-ಆಮೇಲೆ, ಅಜಾಮುಖೀನಾಮ-ಅಜಾಮುಖಿಯೆಂದು ಹೆಸರು ಪಡೆದಿರುವ, ರಾಕ್ಷಸೀ- ರಕ್ಕಸಿಯು, ಇಮಾಂ-ಈ ಸೀತೆಯನ್ನು, ವಿಶಸ್ಯ - ಸಿಗಿದು, ಸರ್ವಾಃ-ನೀವೆಲ್ಲರೂ, ಪಿಲುಕಾನ್-ತುಂಡುಗಳನ್ನು, ಸಮಾನ್ - ಸಮವಾದವುಗಳನ್ನಾಗಿ, ಕುರುತ-ಪಾಲುಮಾಡಿರಿ, ತತಃ-ಆಮೇಲೆ, ಸರ್ವಾಃ-ನಾವೆಲ್ಲರೂ, ವಿಭಜಾಮ - ಹಂಚಿಕೊಳ್ಳೋಣ - ವಿವಾದಃ - ಈ ಹೋರಾಟವು, ಮೇ - ನನಗೆ, ನರೋಚತೇ - ರುಚಿಸುವುದಿಲ್ಲ, ಅಸ್ಮಾಭಿಃ - ನಮ್ಮಗಳಿಂದ, ಪೇಯಂ-ಕುಡಿಯತಕ್ಕ ಮದ್ಯ ಮೊದಲಾದುದು, ಕ್ಷಿಪ್ರಂ - ಬೇಗನೆ, ಆನೀಯತಾಂ - ತರಲ್ಪಡಬೇಕು, ಉಚ್ಚಾವಚಂ - ಬಗೆ ಬಗೆಯದಾದ, ಬಹು - ಬಹಳವಾಗಿರುವ, ಲೇಹ್ಯಂ - ನಂಚತಕ್ಕ ಪದಾರ್ಥವು, ಆನೀಯತಾಂ - ತರಲ್ಪಡತಕ್ಕುದು ||೪೪-೪೫॥ ತತಃ - ಅವಳು ಹಾಗೆ ಹೇಳಿದಮೇಲೆ, ಶೂರ್ಪನಖಾನಾಮ -

---

ಹಿಡಿದು ನುಲಿಚಿಬಿಡಿರಿ ॥೪೨॥ ಬಳಿಕ ಇಲ್ಲಿಂದ ಯಾರಾದರೂ ಅರಸಿನ ಬಳಿಗೆಹೋಗಿ 'ಎಲೈ ಪ್ರಭುವೇ ನೀನು ಅಪಹರಿಸಿ ತಂದು ಇಟ್ಟಿದ್ದ ಮನುಷ್ಯಸ್ತ್ರೀಯು ಸತ್ತುಹೋದಳು, ಎಂದು ಸುದ್ದಿಯನ್ನು ತಿಳಿಸಿದ್ದೇ ಆದರೆ, ಆ ನಮ್ಮೊಡೆಯನು-ಮೇಲಾಯಿತು, ನೀವೆಲ್ಲರೂ ತಿಂದುಬಿಡಿ ಎಂದು ಆಜ್ಞಾಪಿಸುವನು. ಈ ವಿಷಯದಲ್ಲಿ ತುಸವಾದರೂ ಸಂಶಯವಿಲ್ಲ ಎಂದು ನುಡಿದಳು ॥೪೩॥ ಅವಳು ಹಾಗೆ ಹರಟಿದ ಬಳಿಕ ಅಜಾಮುಖಿ ಎಂಬ ರಾತ್ರಿಂಚರಿಯು ತನ್ನ ಸಖಿಯರನ್ನು ನೋಡಿ ಈ ಸೀತೆಯನ್ನು ಸಿಗಿದು, ಸಣ್ಣ ಸಣ್ಣ ಚೂರುಗಳನ್ನು ಸಮವಾಗಿ ಗುಡ್ಡೆಗಳನ್ನಿಡಿರಿ ॥೪೪॥ ಬಳಿಕ ನಾವೆಲ್ಲರೂ ಪಾಲು ಹಂಚಿಕೊಳ್ಳೋಣ, ನಮ್ಮಲ್ಲಿ ಯೇ ಒಬ್ಬರೊಬ್ಬರಿಗೆ ಹೆಚ್ಚು ಕಡಿಮೆ ಎಂಬ ವಿವಾದ ಉಂಟಾಗಬಾರದು, ಇವಳ ಮಾಂಸವನ್ನು ಭಕ್ಷಿಸಿದಬಳಿಕಕುಡಿಯಲಿಕ್ಕೆತಕ್ಕ ಮದ್ಯಮುಂತಾದವುಗಳನ್ನುಬೇಗನೆತನ್ನಿರಿ,ಮತ್ತು-

ಅಜಾಮುಖ್ಯಾ ಯದುಕ್ತಂ ಹಿ ತದೇವ ಮಮ ರೋಚತೇ ॥೪೬॥
ಸುರಾ ಚಾನೀಯತಾಂ ಕ್ಷಿಪ್ರಂ ಸರ್ವ ಶೋಕ ವಿನಾಶಿನೀ ।
ಮಾನುಷಂ ಮಾಂಸಮಾಸ್ವಾದ್ಯ ನೃತ್ಯಾಮೋಽಥ ನಿಕುಂಭಿಲಾಂ॥೪೭॥
ಏವಂ ಸಂಭರ್ತ್ಸ್ಯಮಾನಾ ಸಾ ಸೀತಾ ಸುರ ಸುತೋಪಮಾ ।
ರಾಕ್ಷಸೀಭಿ ಸ್ಸುಘೋರಾಭಿ ರ್ಧೈರ್ಯ ಮುತ್ಸೃಜ್ಯ ರೋದಿತಿ॥೪೮॥

ಇತಿ ಶ್ರೀಮತ್ಸುಂದರ ಕಾಂಡೇ ಚತುರ್ವಿಂಶಸ್ಸರ್ಗಃ.

---

ಶೂರ್ಪನಖೆಯೆಂಬ ಹೆಸರಿನ, ರಾಕ್ಷಸೀ - ನಿಶಾಚರಿಯು, ಅಜಾಮುಖ್ಯಾ - ಅಜಾಮುಖಿಯಿಂದ, ಯತ್ - ಯಾವ ಮಾತು, ಉಕ್ತಂ - ಹೇಳಲ್ಪಟ್ಟಿತೋ, ತದೇವ - ಅದೇ, ಮಮ - ನನಗೂ, ರೋಚತೇ-ಇಷ್ಟವಾಗಿದೆ ॥೪೬॥ ಅಸ್ಮಾಭಿಃ-ನಮ್ಮುಗಳಿಂದ, ಸರ್ವಶೋಕವಿನಾಶಿನೀ- ದುಃಖವನ್ನೆಲ್ಲ ಪರಿಹರಿಸತಕ್ಕುದಾದ, ಸುರಾಚ-ಮದ್ಯವು, ಕ್ಷಿಪ್ರಂ-ಬೇಗನೆ ಆನೀಯತಾಂ - ತರಲ್ಪಡಲಿ, ಮಾನುಷಂ - ಮನುಷ್ಯಸ್ತ್ರೀ ಸಂಬಂಧವಾದ, ಮಾಂಸಂ-ಮಾಂಸವನ್ನು, ಆಸ್ವಾದ್ಯ-ಸವಿದು, ಅಥ - ಅನಂತರ, ನಿಕುಂಭಿಲಾಂ - ನಿಕುಂಭಿಲಾದೇವಿಯನ್ನು ಕುರಿತು, ನೃತ್ಯಾಮಃ - ಕುಣಿಯೋಣ ॥೪೭॥ ಸುರಸುತೋಪಮಾ-ದೇವಕನ್ಯೆಗೆ ಎಣೆಯಾಗಿರುವ, ಸಾ-ಆ ಸೀತಾದೇವಿಯು, ಸುಘೋರಾಭಿಃ-ಬಹುಭಯಂಕರಿಯರಾದ, ರಾಕ್ಷಸೀಭಿಃ-ರಕ್ಕಸರ ಹೆಂಗಸರಿಂದ, ಏವಂ- ಈ ಮೇಲೆಹೇಳಿದಂತೆ, ಸಂಭರ್ತ್ಸ್ಯಮಾನಾ-ಬಹಳ ಭಯಗೊಳಿಸಲ್ಪಡಿಸುತಲಿರುವವಳಾಗಿ, ಧೈರ್ಯಂ-ಧೀರತ್ವವನ್ನು, ಉತ್ಸೃಜ್ಯ-ಬಿಟ್ಟು, ರೋದಿತಿ-ಅಳುತ್ತಿದ್ದಳು ॥೪೮॥

—ಇಂತು ಇಪ್ಪತ್ತನಾಲ್ಕನೆಯ ಸರ್ಗವು—

---

ತಿಂದು ಕುಡಿಯುವಾಗ ನಂಚಲಿಕ್ಕೆ ತಕ್ಕ ಉಪ್ಪಿನಕಾಯಿ ಮೊದಲಾದವುಗಳನ್ನು ಅಣಿಮಾಡಿ ಎಂದಳು ॥೪೪ ೪೫॥ ಆ ಳ ನುಡಿಯನ್ನು ಕೇಳಿದ ಶೂರ್ಪನಖಿ ಎಂಬ ಘೋರ ರಾಕ್ಷಸಿಯು ಆಹಾ! ಅಜಾಮುಖಿಯು ಹೇಳಿದ ಮಾತು ನನಗೆ ಬಹು ಹಿತವಾಗಿ ತೋರುತಲಿದೆ ॥೪೬॥ ಬೇಗನೆ ನಮ್ಮೆಲ್ಲರ ಆಯಾಸವನ್ನೆಲ್ಲ ನಿಮಿಷಮಾತ್ರದಲ್ಲಿ ಪರಿಹರಿಸತಕ್ಕ ಸುರೆಯನ್ನು ತಂದು ಸಿದ್ಧಪಡಿಸಿ, ನಮಗಿಂದು ಅಪೂರ್ವವಾಗಿ ದೊರೆತ ಮನುಷ್ಯ ಮಾಂಸವನ್ನು ತಿಂದು ನಮಗೆ ಸಂತೋಷಪಡಿಸಿದ್ದಕ್ಕಾಗಿ ನಮ್ಮ ಸ್ವಾಮಿನಿಯಾದ ನಿಕುಂಭಿಲಾ ದೇವಿಯ ಆಲಯದಲ್ಲಿ ಎಲ್ಲರೂ ಒಗ್ಗಟ್ಟಾಗಿಸೇರಿ ನಾಟ್ಯವನ್ನು ತುಳಿಯೋಣ ಎಂದಳು ॥೪೭॥ ಹೀಗೆ ತಂಡೋಪತಂಡವಾಗಿ ಹೆದರಿಸಲ್ಪಡುತಲಿರುವ ಬಹು ಕೋಮಲಾಂಗಿಯಾದ ದೇವಕನ್ನೆಯಂತಿರತಕ್ಕ ಆ ಸೀತೆಯು ಅವರ ಕ್ರೂರವಾದ ಹಿಂಸೆಯನ್ನು ತಾಳಲಾರದೆ ಬಲು ಹೆದರಿ ಗಟ್ಟಿಯಾಗಿ ಅಳತೊಡಗಿದಳು ॥೪೮॥

— ಇಂತು ಇಪ್ಪತ್ತನಾಲ್ಕನೆಯ ಸರ್ಗವು —



ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ.

## —ಪಂಚವಿಂಶಸ್ಸರ್ಗಃ—

ತಥಾ ತಾಸಾಂ ವದಂತೀನಾಂ ಪರುಷಂ ದಾರುಣಂ ಬಹು ।
ರಾಕ್ಷಸೀನಾ ಮಸೌಮ್ಯಾನಾಂ ರುರೋದ ಜನಕಾತ್ಮಜಾ ॥೧॥
ಏವ ಮುಕ್ತಾ ತು ವೈದೇಹೀ ರಾಕ್ಷಸೀಭಿ ರ್ಮನಸ್ವಿನೀ ।
ಉವಾಚ ಪರಮತ್ರಸ್ತಾ ಬಾಷ್ಪಗದ್ಗದಯಾ ಗಿರಾ ॥೨॥
ನ ಮಾನುಷೀ ರಾಕ್ಷಸಸ್ಯ ಭಾರ್ಯಾ ಭವಿತು ಮರ್ಹತಿ ।

---

ಕಂದ॥ ಘೋರೆಯರಾರ್ಭಟದಿಂದಲ್ । ಭೀರುವುಬಲ್ಗೊಂದು ಶೋಕಭಾರಾಂಬುಧಿಯಾ ।
ತೀರವನರಿಯದೆ ರಾಮಾ । ಪಾಂಗಪ್ರದನತೋ ಶರಣೆನುತಿರ್ದಳ್ ॥

ಅಸೌಮ್ಯಾನಾಂ-ಕ್ರೂರಸ್ವಭಾವದವರಾದ, ತಾಸಾಂ-ಆ ರಕ್ಕಸಿಯರು, ದಾರುಣಂ - ಭಯಂಕರವಾಗಿಯೂ, ಬಹು-ಅಪಾರವಾಗಿಯೂ, ಪರುಷಂ - ಕಠಿನವಾಗಿಯೂ, ತಥಾ - ಉಚ್ಚನೀಚಗಳಿಲ್ಲದೆ, ವದಂತೀನಾಂ- (ಸತೀನಾಂ) ಹೇಳುತಲಿರಲಾಗಿ, ಜನಕಾತ್ಮಜಾ-ಜಾನಕಿಯು, ರುರೋದ-ಅಳತೊಡಗಿದಳು ॥೧॥ ರಾಕ್ಷಸೀಭಿಃ-ರಕ್ಕಸಿಯರಿಂದ, ಏವಂ-ಈ ಹಿಂದೆಹೇಳಿದವರೀರಿಗೆ, ಉಕ್ತಾ - ಹೇಳಲ್ಪಟ್ಟವಳಾದಕಾರಣವೇ, ಪರಮತ್ರಸ್ತಾ ತು-ಬಹಳ ಭಯಪಟ್ಟವಳಾದರೂ, ಮನಸ್ವಿನೀ - ಪಾತಿವ್ರತ್ಯದಲ್ಲಿ ದೃಢವ್ರತವುಳ್ಳ,ವೈದೇಹೀ ಸೀತೆಯು, ಬಾಷ್ಪಗದ್ಗದಯಾ - ಕಣ್ಣೀರು ಸುರಿಯುತಲಿರುವುದರಿಂದ ತೊದಲುತಲಿರುವ, ಗಿರಾ - ಮಾ, ನಿಂದ, (ಮಾತನ್ನು) ಉವಾಚ-ಹೇಳಿದಳು ॥೨॥ ಹೇರಾಕ್ಷಸ್ಯಃ - ಎಲೆ ರಕ್ಕಸಿಯರುಗಳಿರಾ ! ಮಾನುಷೀ-ಮನುಷ್ಯಳಾದ ಹೆಂಗಸು, ರಾಕ್ಷಸಸ್ಯ - ರಕ್ಕಸನಿಗೆ, ಭಾರ್ಯಾ ಹೆಂಡತಿಯು, ಭವಿತುಂ- ಆಗಲಿಕ್ಕೆ ನಾರ್ಹತಿ-ತಕ್ಕವಳಲ್ಲ, ಸರ್ವಾಃ-ನೀವೆಲ್ಲರೂ, ಮಾಂ-ನನ್ನನ್ನು, ಕಾಮಂ - ಯಥೇಚ್ಛವಾಗಿ, ಖಾದತ-

---

## — ಇಪ್ಪತ್ತೈದನೆಯ ಸರ್ಗವು —

ಭಯಂಕರಿಯರಾದ ರಾಕ್ಷಸ ಸ್ತ್ರೀಯರು ಹೀಗೆ ಕರ್ಣಕಠೋರವಾಗಿಯೂ, ಮನನೋಯುವಂತೆಯೂ, ನುಡಿಯುತ್ತಿರಲಾಗಿ, ಸೀತಾದೇವಿಯು ಬಗೆಬಗೆಯಾಗಿ ಹಂಬಲಿಸಿ ದುಃಖಿಸಲಾರಂಭಿಸಿದಳು. ॥೧॥ ಸೀತೆಯು, ವೀರಕ್ಷತ್ರಿಯ ಕುಮಾರಿಯೂ, ಮಹಾ ವೀರಧರ್ಮಭಾರ್ಯೆಯೂ ಹೌದು ಆ ಧೀರತೆಯನ್ನು ಕಾಪಾಡಿಕೊಳ್ಳಲಿಕ್ಕೆ ಅವಧಿಯೇ ಇಲ್ಲದೆ ಹೋದರೆ ಮಾಡತಕ್ಕದ್ದೇನು. ಆದುದರಿಂದಲೇ ವೈದೇಹಿಯು ಮಹಾ ಮನಸ್ವಿನಿಯಾದರೂ, ಅವರ ಕ್ರೂರವಚನಗಳನ್ನು ಕೇಳಿ ಧೈರ್ಯಗುಂದಿ ಕಣ್ಣುಗಳಲ್ಲಿ ನೀರುಹರಿಯುತ್ತಿರಲು, ನಡುಗುತ ತೊದಲುನುಡಿಗಳಿಂದ ಆ ನಿಶಾಚರಿಯರನ್ನು ಕುರಿತು ಇಂತೆಂದಳು॥೨॥ ಎಲೌ ರಾಕ್ಷಸಿಯರುಗಳಿರಾ ! ಈ ಲೋಕದಲ್ಲಿ ಮನುಷ್ಯಜಾತಿಯಲ್ಲಿ ಹುಟ್ಟಿದ ಹೆಣ್ಣು ರಾಕ್ಷಸನಿಗೆ ಹೆಂಡತಿಯಾಗುವುದು ಉಚಿತವಲ್ಲ. ನೀವುಗಳು ಹೇಳಿದುದನ್ನು ನಾನು

ಕಾಮಂ ಖಾದತ ಮಾಂ ಸರ್ವಾ ನ ಕರಿಷ್ಯಾಮಿ ವೋ ವಚಃ ॥೩॥
ಸಾ ರಾಕ್ಷಸೀಮಧ್ಯಗತಾ ಸೀತಾ ಸುರಸುತೋಪಮಾ ।
ನ ಶರ್ಮ ಲೇಭೆ ದುಃಖಾರ್ತಾ ರಾವಣೇನ ಚ ತರ್ಜಿತಾ॥೪॥
ವೇಪತೇಸ್ಮಾಧಿಕಂ ಸೀತಾ ವಿಶಂತೀ ವಾಂಗ ಮಾತ್ಮನಃ ।
ವನೇ ಯೂಥ ಪರಿಭ್ರಷ್ಟಾ ಮೃಗೀ ಕೋಕೈ ರಿವಾರ್ದಿತಾ ॥೫॥
ಸಾ ತ್ವಶೋಕಸ್ಯ ವಿಪುಲಾಂ ಶಾಖಾ ಮಾಲಂಬ್ಯ ಪುಷ್ಪಿತಾಂ ।
ಚಿಂತ ಯಾಮಾಸ ಶೋಕೇನ ಭರ್ತಾರಂ ಭಗ್ನಮಾನಸಾ ॥
ಸಾ ಸ್ನಾಪಯಂತೀ ವಿಪುಲೌ ಸ್ತನೌ ನೇತ್ರ ಜಲಸ್ರವೈಃ ।

---

ತಿಂದು ಬಿಡಿರಿ, ವಃ – ನಿಮ್ಮ, ವಚಃ – ಮಾತನ್ನು, ನಕರಿಷ್ಯಾಮಿ – ನೆರವೇರಿಸಲಾರೆನು) ॥೩॥ ರಾಕ್ಷಸೀಮಧ್ಯಗತಾ – ರಕ್ಕಸಿಯರ ನಡುವೆ ಸಿಕ್ಕಿರುವ. ಸುರಸುತೋಪಮಾ – ದೇವಕನ್ಯೆಗೆ ಸಮಾನಳಾಗಿರತಕ್ಕ, ಸಾ ಸೀತಾ – ಆ ಜಾನಕಿಯು, ರಾವಣೇನ – ರಾವಣನಿಂದ, ತರ್ಜಿತಾ – ಬೆದರಿಸಲ್ಪಟ್ಟವಳಾದಕಾರಣವೇ, ದುಃಖಾರ್ತಾ – ವ್ಯಸನದಿಂದ ಪೀಡಿತಳಾಗಿ, ಶರ್ಮ– ಸುಖವನ್ನು, ನಲೇಭೇಚ – ಪಡೆಯಲೇ ಇಲ್ಲ ॥೪॥ ಸೀತಾ- ಸೀತಾದೇವಿಯು, ಆತ್ಮನಃ – ತನ್ನ, ಅಂಗಂ – ಶರೀರವನ್ನೇ, ವಿಶಂತೀವ – ಪ್ರವೇಶಿಸುತಲಿರುವಳೋ ಎಂಬಂತೆ ಇರುತ್ತಾ, ವನೇ – ಅಡವಿಯಲ್ಲಿ, ಯೂಥಪರಿಭ್ರಷ್ಟಾ – ತನ್ನ ಗುಂಪಿನಿಂದ ಅಗಲಿದ, ಕೋಕೈಃ – ಚಕ್ರವಾಕಗಳಿಂದ, ಅರ್ದಿತಾ – ಪೀಡಿಸಲ್ಪಟ್ಟು ಇರುವ, ಮೃಗೀವ – ಹೆಣ್ಣು ಹುಲ್ಲೆಯ ಕರುವಿನಂತೆ ಅಧಿಕಂ – ಬಹಳವಾಗಿ, ವೇಪತೇಸ್ಮ – ನಡುಗುತಲಿದ್ದಳು ॥೫॥ ಸಾತು – ಆ ಜಾನಕಿಯಾದರೊ, ಅಶೋಕಸ್ಯ ಅಶೋಕವೃಕ್ಷದ, ವಿಪುಲಾಂ – ನೀಳವಾದ, ಪುಷ್ಪಿತಾಂ – ಹೂಬಿಟ್ಟಿರುವ, ಶಾಖಾಂ – ಕೊಂಬೆಯನ್ನು, ಆಲಂಬ್ಯ – ಹಿಡಿದುಕೊಂಡು, (ಊರುಮಾಡಿಕೊಂಡು) ಶೋಕೇನ – ಪತಿಯನ್ನಗಲಿದ ದುಃಖದಿಂದ, ಭಗ್ನಮಾನಸಾ – ಮುರಿದುಹೋದ ಮನಸ್ಸುಳ್ಳವಳಾಗಿ, ಭರ್ತಾರಂ – ಪತಿಯನ್ನು, ಚಿಂತಯಾಮಾಸ – ಸ್ಮರಿಸುತಲಿದ್ದಳು, ॥೬॥ ಸಾ – ಆ ಜನಕಪುತ್ರಿಯು, ವಿಪುಲೌ – ತೋರವಾದ, ಸ್ತನೌ – ಎದೆಯಭಾಗಗಳನ್ನು, ನೇತ್ರಜಲಸ್ರವೈಃ – ಕಣ್ಣೀರಿನ ಕಾಲುವೆಗಳಿಂದ, ಸ್ನಾಪಯಂತೀ (ಸಂಸ್ನಾಪಯಂತೀ) ಪುನಃ ಪುನಃ

---

ಕೇಳಲಾರೆ. ಮತ್ತು ಅದರಂತೆ ನಡೆ ಸಲಾರೆ. ಇದರಿಂದ ಬಾದುವೇಳೆ ನಿಮಗೆ ಸಿಟ್ಟು ಹತ್ತಿ ನನ್ನನ್ನು ತಿನ್ನಬೇಕಾದ್ದರೆ, ನಿಮ್ಮ ಇಷ್ಟಬಂದಂತೆ ಯಥೇಷ್ಟವಾಗಿ ಭಕ್ಷಿಸಿರಿ ॥೩॥ ಹೀಗೆಂದುದಲ್ಲದೆ, ಆ ರಾಕ್ಷಸಿಯರ ನಡುವೆ ಸಿಕ್ಕಿರುವ ದೇವತೆಗಳ ಕನ್ಯೆಗೆ ಸಮಾನಳಾದ ಸೀತೆಯು ಪತಿಯನ್ನಗಲಿರುವುದರಿಂದ ಸುಖಲೇಶವಿಲ್ಲದೆ ರಾವಣನ ಬೆದರಿಕೆಯಿಂದ ಅಪಾರವಾದ ದುಃಖಕ್ಕೆ ಈಡಾಗಿ ॥೪॥ ಮಹಾರಣ್ಯದಲ್ಲಿ ತನ್ನ ಹಿಂಡನ್ನು ಅಗಲಿ ಪಕ್ಷಿಗಳಿಂದ ಪೀಡಿಸಲ್ಪಡುತಲಿರುವ ಹೆಣ್ಣು ಜಿಂಕೆಯು ಮರಿಯಂತೆ ಹೆದರಿ, ದೇಹವು ತಗ್ಗಿಹೋಗಿರುವುದರಿಂದ ತನ್ನ ಒಡನ್ನೇ ತಾನು ಒಳಹೊಗುತಲಿರುವಳೋ ಎಂಬಂತೆ ಕಾಣಬರುತ್ತಾ, ಬಹಳವಾಗಿ ಕಂಪಿಸುತಲಿದ್ದಳು, ॥೫॥ ಅಲ್ಲದೆ ಆ ಜಾನಕಿಯು ಆ ಅಶೋಕವೃಕ್ಷದ ಬಂದಾನೊಂದು ನೀಳವಾದ ಪುಷ್ಪಿಸಿರುವ ಕೊಂಬೆಯನ್ನು ಕೈಗಳಿಂದ ಹಿಡಿದು ಊರುಮಾಡಿಕೊಂಡು ಪತಿಯನ್ನು ಪುನಃ ಪಡೆಯುವ ವಿಷಯದಲ್ಲಿ ದಾರಿತೋರದೆ, ಶೋಕವು ಉಕ್ಕುತ್ತಲಿರಲು ಪತಿಯನ್ನು ಧ್ಯಾನಿಸುತ್ತಾ ॥೬॥ ಕಣ್ಣುಗಳಿಂದ ಪುನಃ ಪುನಃ

ಚಿಂತಯಂತೀ ನ ಶೋಕಸ್ಯ ತದಾಂತ ಮಧಿಗಚ್ಛತಿ ॥೭॥
ಸಾ ವೇಪಮಾನಾ ಪತಿತಾ ಪ್ರವಾತೇ ಕದಳೀಯಥಾ ।
ರಾಕ್ಷಸೀನಾಂ ಭಯತ್ರಸ್ತಾ ವಿವರ್ಣವದನಾ ಽ ಭವತ್ ॥೮॥
ತಸ್ಯಾ ಸ್ಸಾ ದೀರ್ಘವಿಪುಲಾ ವೇಪಂತ್ಯಾ ಸ್ಸೀತಯಾ ತದಾ ।
ದದೃಶೇ ಕಂಪಿನೀ ವೇಣೀ ವ್ಯಾಳೀವ ಪರಿಸರ್ಪತೀ ॥೯॥
ಸಾ ನಿಶ್ವಸಂತೀ ದುಃಖಾರ್ತಾ ಶೋಕೋಪ ಹತಚೇತನಾ ।
ಆರ್ತಾ ವ್ಯಸೃಜ ದಶ್ರೂಣಿ ಮೈಥಿಲೀ ವಿಲಲಾಪ ಹ ॥೧೦॥
ಹಾ ರಾಮೇತಿ ಚ ದುಃಖಾರ್ತಾ ಹಾ ಪುನ ರ್ಲಕ್ಷ್ಮಣೇತಿ ಚ।

ತೋಯಿಸುತ್ತಾ, ಚಿಂತಯಿಂತೀ - ಮನದೊಳಗೆ ವಿಚಾರವಮಾಡುತ್ತಿರುವವಳಾದರೂ, ಶೋಕಸ್ಯ - ದುಃಖದ, ಅಂತಂ - ಪಾರವನ್ನು, ನಾಧಿಗಚ್ಛತಿ [ಅಧ್ಯಗಚ್ಛತ್] ತಿಳಿಯಲೇ ಇಲ್ಲ ॥೭॥ ರಾಕ್ಷಸೀನಾಂ - ರಕ್ಕಸಿಯರಿಂದುಂಟಾದ, ಭಯತ್ರಸ್ತಾ - ಭಯದಿಂದ ನಡುಗುತಲಿರುವವಳಾದ ಕಾರಣವೇ, ವಿವರ್ಣವದನಾ-ಕಳೆಗುಂದಿದ ಮುಖವುಳ್ಳ, ಸಾ - ಆ ಸೀತೆಯು, ಪ್ರವಾತೇ - ಬಿರುಗಾಳಿಯಲ್ಲಿ, ಪತಿತಾ-ಮುರಿದು ಉರುಳಿದ, ಕದಳೀಯಥಾ - ಎಳೆಬಾಳೆಯ ಗಿಡವು ಹೇಗೋಹಾಗೆ, ವೇಪಮಾನಾ - ಕಂಪಿಸುತಲಿರುವವಳಾಗಿ, ಅಭವತ್ - ಇದ್ದಳು ॥೮॥ ತದಾ - ಆಗ, ವೇಪಂತ್ಯಾಃ - ಅದುರುತಲಿರುವ, ತಸ್ಯಾಃ - ಆ ಸೀತಾದೇವಿಯ, ದೀರ್ಘವಿಪುಲಾ - ಉದ್ದವೂ ಅಗಲವೂ ಆಗಿರುವ, ಕಂಪಿನೀ - ಕದಲುತಲಿರತಕ್ಕ, ವೇಣೀ - ಜಡೆಯು, ಪರಿಸರ್ಪತೀ - ನೆಲದಮೇಲೆ ಹರಿದುಹೋಗುತಲಿರುವ, ವ್ಯಾಳೀವ - ಹೆಣ್ಣುಹಾವಿನಂತೆ ದದೃಶೇ - ಕಾಣಬರುತಲಿತ್ತು ॥೯॥ ನಿಶ್ವಸಂತೀ - ನಿಟ್ಟುಸಿರುಬಿಡುತಲಿರುವ, ದುಃಖಾರ್ತಾ - ವ್ಯಸನಪೀಡಿತಳಾದ, ಶೋಕೋಪಹತಚೇತನಾ - ದುಃಖದಿಂದ ಪೆಟ್ಟುಬಿದ್ದ ಮನಸ್ಸುಳ್ಳವಳಾಗಿರತಕ್ಕ, ಆರ್ತಾ-ರಾಮವಿರಹದಿಂದ ದೀನಳಾದ, ಸಾಮೈಥಿಲೀ - ಆ ಸೀತಾದೇವಿಯು, ಅಶ್ರೂಣಿ - ಕಣ್ಣೀರುಗಳನ್ನು, ವ್ಯಸೃಜತ್ - ಸುರಿಸುತಲಿದ್ದಳು, ವಿಲಲಾಪಹ - ಅಳುತಲೂ ಇದ್ದಳು ॥೧೦॥ [ಸೀತೆಯು ಶೋಕಿಸುವ ರೀತಿ] ಹಾರಾಮ ! ಇತಿ, ಚ - ಅಯ್ಯೋ ! ರಾಮನೇ ! ಎಂದೂ, ಪುನಃ - ಮರಳಿ, ಹಾ ಲಕ್ಷ್ಮಣ ಇತಿ, ಚ - ಓ ಲಕ್ಷ್ಮಣಾ ಎಂದೂ, ಮಮ - ನನ್ನ ಶ್ವಶ್ರು - ಅತ್ತೆಯಾದ, ಹಾ-ಕೌಸಲ್ಯೇ, ಓ ಕೌಸಲ್ಯೆಯೇ ! ಹಾ

ಉಕ್ಕಿ ಹರಿಯುತಲಿರುವ ಜಲಧಾರೆಗಳಿಂದ ಎದೆಯನ್ನು ತೋಯಿಸುತ್ತಾ, ಅಪಾರವಾದ ಚಿಂತೆಗೊಳಗಾಗಿ, ಶೋಕದ ಪಾರವನ್ನು ಕಾಣದೆ ಇದ್ದಳು. ॥೭॥ ಮತ್ತು-ಆಕೆಯು ಜೋರಾಗಿ ಬೀಸುವ ಬಿರುಗಾಳಿಯ ಪೆಟ್ಟಿನಿಂದ ಮುರಿದ ಎಳೆಬಾಳೆಯಂತೆಬಾಗಿ ಬಳುಕುತ,ಬಳಲುತಿರುವಳಾದಕಾರಣವೇ ಕಳೆಗುಂದಿದ ಮುಖವುಳ್ಳವಳಾಗಿ ಭಯದಲ್ಲಿ ಮುಳಗಿ ಇರಲು ॥೮॥ ಆಕೆಯ ಹಿಂಭಾಗದಲ್ಲಿ ಆಕೆಯುಂತಿಯೋ ನಡುಗುತಲಿರುವ ನೀಳವಾದ ಮತ್ತು ದಡಿರುವ ಬಂದಳೆಯ ಜಡೆಯು ನೆಲದಮೇಲೆ ಸರಸರನೆ ಹರಿದುಹೋಗುತಲಿರುವ ಮಹಾಸರ್ಪದಂತೆ ಕಾಣಬರುತಲಿತ್ತು. ॥ ೯ ॥ ಇಂತು ಶೋಕಭಾರದ ಪೆಟ್ಟಿನಿಂದ ಚೈತನ್ಯಹೀನಳಾಗಿ ದುಃಖದಿಂದ ದೈನ್ಯವನ್ನು ಪಡೆದು ನಿಟ್ಟುಸಿರನ್ನು ಬಿಡುತ್ತಾ, ಬಹು ಆರ್ತಳಾದ ಮೈಥಿಲಿಯು ಕಣ್ಣೀರುಗಳನ್ನು ಸುರಿಸುತ್ತಾ ಪ್ರಲಾಪಿಸ ತೊಡಗಿದಳು ॥೧೦॥ ಅಯ್ಯೋ ! ಹಾ ! ರಾಮಾ ! ಎಂತಲೂ, ಆತನ ನೆನಪಿನಿಂದ ದುಃಖವು ಹೆಚ್ಚಿ ಬಿಕ್ಕಳಿಸಿ

ಹಾ ಶ್ವಶ್ರು ಮಮ ಕೌಸಲ್ಯೇಹಾ ಸುಮಿತ್ರೇತಿ ಭಾಮಿನೀ ॥೧೧॥
ಲೋಕಪ್ರವಾದ ಸ್ಸತ್ಯೋಽಯಂಪಂಡಿತೈ ಸ್ಸಮುದಾಹೃತಃ।
ಅಕಾಲೇ ದುರ್ಲಭೋ ಮೃತ್ಯುಃ ಸ್ತ್ರಿಯಾ ವಾ ಪುರುಷಸ್ಯ ವಾ ।
ಯತ್ರಾಹ ಮೇವಂ ಕ್ರೂರಾಭೀ ರಾಕ್ಷಸೀಭಿ ರಿಹಾರ್ದಿತಾ ॥
ಜೀವಾಮಿ ಹೀನಾ ರಾಮೇಣ ಮುಹೂರ್ತ ಮಪಿ ದುಃಖಿತಾ ॥೧೩॥
ಏಷಾಽಲ್ಪಪುಣ್ಯಾ ಕೃಪಣಾ ವಿನಶಿಷ್ಯಾ ಮ್ಯನಾಥವತ್ ।
ಸಮುದ್ರಮಧ್ಯೇ ನೌಃ ಪೂರ್ಣಾ ವಾಯುವೇಗೈ ರಿವಾಹತಾ ॥೧೪॥

ಸುಮಿತ್ರಾ !-ಅಯ್ಯೋ ಸುಮಿತ್ರಾದೇವಿಯೇ ! ಇಂತೆಂದು, ದುಃಖಾರ್ತ- ವ್ಯಸನಪೀಡಿತಳಾಗಿರುವ, ಭಾಮಿನೀ - ಹೆಂಗಸಾದ, ಅಹಂ - ನಾನು ॥೧೧॥ ಯತ್ರ - ಯಾವ ಕಾರಣದಿಂದ, ಏವಂ - ಈ ಪ್ರಕಾರವಾಗಿ, ಕ್ರೂರಾಭಿಃ - ಭಯಂಕರಿಯರಾದ, ರಾಕ್ಷಸೀಭಿಃ - ರಕ್ಕಸಿಯರಿಂದ, ಇಹ - ಈ ಲಂಕೆಯಲ್ಲಿ, ಅರ್ದಿತಾ - ಬಾಧಿಸಲ್ಪಡುತಿರುವವಳಾಗಿ, ರಾಮೇಣ - ಶ್ರೀ ರಾಮನಿಂದ, ಹೀನಾ - ಶೂನ್ಯಳಾದ ಕಾರಣವೇ, ದುಃಖಿತಾ - ದುಃಖಪಡುತಲಿರುವಳಾಗಿ, ಮುಹೂರ್ತಮಪಿ - ಸ್ವಲ್ಪಕಾಲವಾದರೂ, ಜೀವಾಮಿ - ಬದುಕಿರುವೆನೋ (ತತಃ -ಆಕಾರಣದಿಂದಲೇ] ಸ್ತ್ರಿಯಾಃವಾ-ಹೆಂಗಸಿಗೇ ಆಗಲೀ, ಪುರುಷಸ್ಯವಾ- ಗಂಡಸಿಗೇ ಆಗಲಿ, ಮೃತ್ಯುಃ - ಸಾವು, ಅಕಾಲೆ - ಅಸಮಯದಲ್ಲಿ, ದುರ್ಲಭಃ - ಹೊಂದಲಿಕ್ಕೆ ಶಕ್ಯವಲ್ಲ, ಇತಿ - ಹೀಗೆಂದು ಪಂಡಿತೈಃ - ವಿದ್ವಾಂಸರಿಂದ, ಸಮುದಾಹೃತಃ - ಚೆನ್ನಾಗಿ ಉದಹರಿಸಲ್ಪಟ್ಟಿರುವ, ಅಯಂ - ಈ, ಲೋಕಪ್ರವಾದಃ - ಲೋಕದಲ್ಲಿ ವಾಡಿಕೆಯಾಗಿರುವ ನುಡಿಯು, ಸತ್ಯಃ-ನಿಜವಾದದ್ದು ॥೧೨-೧೩॥ ಅಲ್ಪಪುಣ್ಯಾ-ಹೀನಭಾಗ್ಯಳಾದ, ಅನಾಥವತ್ - ದಿಕ್ಕಿಲ್ಲದವಳಂತೆ, ಕೃಪಣಾ - ದೀನಳಾಗಿರುವ, ಏಷಾ - ಹೆಸರಹೇಳಬಾರದ, [ಅಹಂ - ನಾನು] ಸಮುದ್ರಮಧ್ಯೇ - ಕಡಲಿನ ನಡುವೆ, ಪೂರ್ಣಾ - ಅನೇಕ ಪದಾರ್ಥಗಳಿಂದ ತುಂಬಿರುವ, ವಾಯುವೇಗೈಃ - ಗಾಳಿಯ ವೇಗಗಳಿಂದ, ಆಹತಾ - ಪೆಟ್ಟುಬಿದ್ದ, ನೌರಿವ - ಹಡೆಯಹಾಗೆ ವಿನಶಿಷ್ಯಾಮಿ - ನಶಿಸಿಹೋಗುವೆನು ॥೧೪॥ (ಅಹಂ - ನಾನು) ತಂ - ಅಂತಹ, (ನನ್ನಲ್ಲಿಯೇ ಅಪರಿಮಿತ

ಬಿಕ್ಕಳಸಿ, ಹೋ ! ಲಕ್ಷ್ಮಣಾ ! ಎಂತಲೂ, ಅಯ್ಯೋ ! ನನ್ನ ಅತ್ತೆಯಾದ ಹಾ ! ಕೌಸಲ್ಯೇ! ಹಾ! ಸುಮಿತ್ರೇ! ಎಂದು ಹಂಬಲಿಸಿ ಆರ್ತಸ್ವರದಿಂದ ಕೂಗಿ ಕರೆಯುತ್ತಾ ॥೧೧॥ ಅಯ್ಯೋ ! ಈ ಅಪಾರವಾದ ಶೋಕಸಾಗರದಲ್ಲಿ ಮುಳುಗುತಲಿರುವ ನನಗೆ ಉಸಿರು ಹಾರಿ ಹೋಗದೆ ನೆಲೆಯಾಗಿ ನಿಂತಿರುವುದಲ್ಲಾ ? ‟ಹೆಂಗಸಿಗಾಗಲೀ ಗಂಡಸಿಗೇ ಆಗಲಿ ಅಕಾಲದಲ್ಲಿ ಸಾವು ಬರುವುದಿಲ್ಲ’’ ಎಂಬದಾಗಿ ಲೋಕಾನುಭವದಲ್ಲಿ ನಿಪುಣರಾದ ಪಂಡಿತರು ಹೇಳುವ ವಾಡಿಕೆಯಲ್ಲಿರತಕ್ಕ ಮಾತು ಸತ್ಯವಾಗಿದೆ ॥೧೨॥ ಈ ನಾನು ಇಲ್ಲಿ ಹೀಗೆ ಕ್ರೂರರಾದ ರಾಕ್ಷಸಿಯರಿಂದ ಹಿಂಸೆ ಪಡುತ್ತ ದುಃಖಕ್ಕೊಳಗಾಗಿ ಪ್ರಾಣವಲ್ಲಭನಾದ ರಾಮನನ್ನು ಅಗಲಿಸಾಯದೆ ಕ್ಷಣಕಾಲವಾದರೂ ಜೀವಿಸುತ್ತಿರುವೆನಲ್ಲಾ! ಅಯ್ಯೋ! ॥೧೩॥ ನಾನು ಎಷ್ಟು ನಿರ್ಭಾಗ್ಯಳು; ಕಡಲಿನ ನಡುವೆ ಸರ್ವವಸ್ತು ಸಂಪೂರ್ಣವಾಗಿ ಹಾಯ್ದು ಹೋಗುತಲಿರುವ ನಾವೆಯು ಪ್ರಬಲತರವಾದ ವಾಯುವಿನ ವೇಗದಿಂದ ಪೆಟ್ಟುತಿಂದು ತಲೆ ಕೆಳಗಾಗಿ ಉರುಳಿ ನಾಶಪಡುವ ಹಾಗೆ ದೀನಳಾದ ನಾನು ಅಪರಿಮಿತ ಸಹಾಯ ಸಂಪತ್ತಿಯಿದ್ದರೂ, ಅನಾಥರಂತೆ ಹಾಳಾಗಿ ಹೋಗುತಲಿರುವೆನಲ್ಲಾ ! ಅಕಟ, ಎಂತಹ ವಿಪತ್ತು!

ಭರ್ತಾರಂ ತ ಮಪಶ್ಯಂತೀ ರಾಕ್ಷಸೀವಶ ಮಾಗತಾ ।
ಸೀದಾಮಿ ಖಲು ಶೋಕೇನ ಕೂಲಂ ತೋಯಹತಂ ಯಥಾ ॥೧೫॥
ತಂ ಪದ್ಮದಳ ಪತ್ರಾಕ್ಷಂ ಸಿಂಹ ವಿಕ್ರಾಂತಗಾಮಿನಂ ।
ಧನ್ಯಾಃ ಪಶ್ಯಂತಿ ಮೇ ನಾಥಂ ಕೃತಜ್ಞಂ ಪ್ರಿಯವಾದಿನಂ ॥೧೬॥
ಸರ್ವಥಾ ತೇನ ಹೀನಾಯಾ ರಾಮೇಣ ವಿದಿತಾತ್ಮನಾ ।
ತೀಕ್ಷ್ಣಂ ವಿಷ ಮಿವಾ ಸ್ವಾದ್ಯ ದುರ್ಲಭಂ ಮಮ ಜೀವಿತಂ ॥೧೭॥
ಕೀದೃಶಂ ತು ಮಯಾ ಪಾಪಂ ಪುರಾ ಜನ್ಮಾಂತರೇ ಕೃತಂ ।

---

ಪ್ರೇಮವುಳ್ಳ) ಭರ್ತಾರಂ-ಪತಿಯನ್ನು, ಅಪಶ್ಯಂತೀ - ಕಾಣದಿರುವಳಾಗಿ, ರಾಕ್ಷಸೀವಶಂ - ರಕ್ಕಸಿಯರ ಸ್ವಾಧೀನತೆಯನ್ನು, ಆಗತಾ - ಹೊಂದಿದವಳಾಗುತ್ತ, ತೋಯಹತಂ - ನೀರಿನಿಂದ ಪೆಟ್ಟುಬಿದ್ದು ಕರಗಿದ, ಕೂಲಂಯಥಾ - ಹೊಳೆಯದಡವು ಹೇಗೋ ಹಾಗೆ, ಶೋಕೇನ - ದುಃಖದಿಂದ, ಸೀದಾಮಿಖಲು - ಕಳಲಿ ಹೋಗುತಲಿರುವೆನಲ್ಲ॥೧೫॥

ಪದ್ಮ - ತಾವರೆಯ, ದಳ - ಅರಳಿದ, ಪತ್ರ - ರೇಕಿನಂತೆ, ಅಕ್ಷಂ - ಕಣ್ಣುಳ್ಳ, ಸಿಂಹ - ಸಿಂಹದ (ಕೇಸರಿಯ) ವಿಕ್ರಾಂತ - ನಡಗೆಯಂತೆ, ಗಾಮಿನಂ - ಗಮನವುಳ್ಳ, ಕೃತಜ್ಞಂ - ಹೆರರ ಉಪಕಾರವನ್ನು ನೆನೆಯುತಕ್ಕ, ಪ್ರಿಯವಾದಿನಂ - ಹೆರರಿಗೆ ಹಿತವನ್ನೇ ಹೇಳುವ ಸ್ವಭಾವವುಳ್ಳ, ತಂ - ಆ, ಮೇ - ನನ್ನ, ನಾಥಂ - ಸ್ವಾಮಿಯಾದ ಶ್ರೀರಾಮನನ್ನು, ಧನ್ಯಾಃ - ಪುಣ್ಯರೂಪವಾದ ಧನವುಳ್ಳವರು, ಪಶ್ಯಂತಿ- ನೋಡುತ್ತಾರೆ, (ಅಹಂ - ನಾನು, ನಪಶ್ಯಾಮಿ - ನೋಡಲಾರೆನು) ॥೧೬॥ ತೀಕ್ಷ್ಣಂ - ಘೋರವಾದ, ವಿಷಂ - ಗರಳವನ್ನು, ಆಸ್ವಾದ್ಯ - ಸವಿದು, ಸ್ಥಿತಸ್ಯೇವ - ಇರುವವನಿಗೆ ಹೇಗೋ ಹಾಗೆ, ವಿದಿತಾತ್ಮನಾ - ತಿಳಿಯಲ್ಪಟ್ಟ ಆತ್ಮ ತತ್ವವುಳ್ಳ, (ನನ್ನ ಮನಸ್ಸನ್ನು ಅರಿತಿರುವ) ರಾಮೇಣ - ರಾಮನಿಂದ, ಹೀನಾಯಾಃ- ಶೂನ್ಯಳಾಗಿರುವ, ಮಮ - ನನ್ನ, ಜೀವಿತಂ - ಬದುಕು, ಸರ್ವಥಾ - ಸರ್ವಪ್ರಕಾರದಲ್ಲಿಯೂ, ದುರ್ಲಭಂ - ಅಶಕ್ಯವಾದುದು ॥೧೭॥ ಯೇನ - ಯಾವಕಾರಣದಿಂದ, ಮಯಾ - ನನ್ನಿಂದ, ಸುದಾರುಣಂ - ಬಹುಕ್ರೂರವಾದ, ಘೋರಂ-ಭಯಂಕರವೆನಿಸಿದ, (ಕಿವಿಯಲ್ಲಿ ಕೇಳಲಾಗದ) ದುಃಖಂ-ಶೋಕವು, ಪ್ರಾಪ್ಯತೇ-

---

ಬಂದು ಬದಗಿತು. ॥೧೪॥ ನನ್ನ ಸ್ವಾಮಿಯಾದ ಶ್ರೀರಾಮನ ಸುಳಿವೇ ಇಲ್ಲ. ರಾಕ್ಷಸಿಯರಿಗೆ ವಶಳಾಗಿದೇನೆ. ಹೊಳೆಯೊಳಗಣ ನೀರಿನ ಅಲೆಯ ಹೊಡೆತದಿಂದ ದಡವು ಕರಗಿ, ಕಳಲಿ, ಕುಸಿದು ಬೀಳುವ ಹಾಗೆ ಅಯ್ಯೋ ! ಅಪಾರವಾದ ಶೋಕದ ಪೆಟ್ಟಿನಿಂದ ನಶಿಸಿ ಹೋಗುತಲಿರುವೆನೇ? ॥೧೫॥ ಹಾ! ಅರಳಿದ ಕೆಂದಾವರೆಯ ರೇಕಿನಂತೆ ಕಂಗೊಳಿಸುವ ಕಣ್ಣುಳ್ಳ, ಸಿಂಹದಂತೆ ಗಂಭೀರವಾದ ಗಮನವುಳ್ಳ, ಸಂತತ ಸರ್ವಹಿತವಾದಿಯಾದ, ಮತ್ತು ಹೆರರ ಉಪಕಾರವನ್ನು ತುಸವಾದರೂ ಮರೆಯದಿರುವ ಆ ನನ್ನ ಪ್ರಾಣನಾಥನನ್ನು ಕಣ್ಣಾರನೋಡುತಲಿರುವವರು ಎಷ್ಟು ಪುಣ್ಯವಂತರೋ, ನನಗೆ ಅಂತಹ ಭಾಗ್ಯವಿಲ್ಲವಲ್ಲಾ? ॥೧೬॥ ಸರ್ವಪ್ರಕಾರದಿಂದಲೂ, ನನ್ನ ಮನೋಗತವನ್ನು ಬಲ್ಲ ಸರ್ವಗುಣಾಭಿರಾಮನಾದ ಆ ರಾಮನನ್ನು ಅಗಲಿರುವ ನಿರ್ಭಾಗ್ಯಳಾದ ನನ್ನ ಜೀವನವು ತೀಕ್ಷ್ಣವಾದ ವಿಷವನ್ನು ಕುಡಿದವನ ಜೀವತದ ಹಾಗೆ, ಬಹುದುರ್ಲಭವಾಗಿದೆ ॥೧೭॥ ಪೂರ್ವದಲ್ಲಿ ಯಾವ ಜನ್ಮದೊಳಗೆ ಎಂತಹ ಮಹಾಪಾಪವನ್ನು ಮಾಡಿದ್ದೆನೋ ? ಅಯ್ಯೋ ! ಅದರಿಂದಲೇ ಪಾರವಿಲ್ಲದ ಕ್ರೂರ

ಯೆನೇದಂ ಪ್ರಾಪ್ಯತೆ ದುಃಖಂ ಮಯಾ ಘೋರಂ ಸುದಾರುಣಂ ॥೧೮॥
ಜೀವಿತಂ ತ್ಯಕ್ತು ಮಿಚ್ಛಾಮಿ ಶೋಕೇನ ಮಹತಾಽವೃತಾ ।
ರಾಕ್ಷಸೀಭಿ ಶ್ಚ ರಕ್ಷಂತ್ಯಾ ರಾಮೊ ನಾಸಾದ್ಯತೇ ಮಯಾ ॥೧೯॥
ಧಿಗಸ್ತು ಖಲು ಮಾನುಷ್ಯಂ ಧಿಗಸ್ತು ಪರವಶ್ಯತಾಂ ।
ನಶಕ್ಯಂ ಯ ತ್ಪರಿತ್ಯಕ್ತು ಮಾತ್ಮಚ್ಛಂದೇನ ಜೀವಿತಂ ॥೨೦॥
ಇತಿ ಶ್ರೀಮತ್ಸುಂದರಕಾಂಡೆ-ಪಂಚವಿಂಶಸ್ಸರ್ಗಃ.



ಹೊಂದಲ್ಪಡುತ ಲಿದೆಯೋ (ಅನುಭವಿಸಲ್ಪಡುತಲಿದೆಯೋ?) ತೇನ-ಆ ಕಾರಣದಿಂದಲೇ, ಮಯಾ - ನನ್ನಿಂದ, ಪುರಾಜನ್ಮಾಂತರೇ - ಹಿಂದೆ ಯಾವುದೋ ಒಂದು ಜನ್ಮದಲ್ಲಿ, ಕೀದೃಶಂ - ಪ್ರಬಲತರವಾದ, ಪಾಪಂ - ಪಾಪವು, ಕೃತಂತು - ಮಾಡಲ್ಪಟ್ಟಿರಬೇಕು ॥೧೮॥ ಮಹತಾ - ದೊಡ್ಡದಾದ, ಶೋಕೇನ - ದುಃಖದಿಂದ, ವೃತಾ - ಆವರಿಸಲ್ಪಟ್ಟವಳಾಗಿ, ಜೀವಿತಂ - ಪ್ರಾಣವನ್ನು, ತ್ಯಕ್ತುಂ - ಬಿಡಲಿಕ್ಕೆ, ಇಚ್ಛಾಮಿ - ಬಯುಸುತಲಿದೇನೆ, ರಾಕ್ಷಸೀಭಿಶ್ಚ - ರಕ್ಕಸಿಯರಿಂದ, ರಕ್ಷಂತ್ಯಾ - (ರಕ್ಷ್ಯಮಾಣಯಾ,) ಕಾಯಲ್ಪಡುತಲಿರುವ, ಮಯಾ - ನನ್ನಿಂದ, ರಾಮಃ - ರಾಮನು, ನಾಸಾದ್ಯತೇ - ಹೊಂದಲ್ಪಡುವುದಿಲ್ಲ, ಮಾನುಷ್ಯಂ - ಮನುಷ್ಯಧರ್ಮವನ್ನು ಕುರಿತು, ಧಿಕ್ - ನಿಂದೆಯು, ಅಸ್ತು - ಆಗಲಿ, ಪರವಶ್ಯತಾಂ- ಪರಾಧೀನತೆಯನ್ನು ಕುರಿತು, ಧಿಕ್ - ನಿಂದೆಯು, ಅಸ್ತು - ಆಗಲಿ, ಆತ್ಮಚ್ಛಂದೇನ - ಸ್ವೇಚ್ಛೆಯಿಂದ (ಸ್ವಾತಂತ್ರ್ಯದಿಂದ) ಜೀವಿತಂ - ಪ್ರಾಣವನ್ನು, ಪರಿತ್ಯಕ್ತುಂ - ಬಿಡಲಿಕ್ಕೆ, ಯತ್ - ಯಾವಕಾರಣ, ನಶಕ್ಯಂ - ಸಾಧ್ಯವಲ್ಲವೋ ॥೧೯-೨೦॥

— ಇಂತು ಇಪ್ಪತ್ತೈದನೆಯ ಸರ್ಗವು—



ವಾದ, ಮತ್ತು ಸಹಿಸಲಾಗದ ಈ ದುಃಖವನ್ನು ಅನುಭವಿಸುತಲಿದೇನೆ ॥೧೮॥ ಏನಮಾಡಲಿ, ಮಹತ್ತರವಾದ ಶೋಕ, ಇದಕ್ಕೆ ಪಾರವಿಲ್ಲ. ಪ್ರಾಣವನ್ನು ಧರಿಸಲಾರೆ. ಉಸಿರನ್ನು ಈಗಲೇಬಿಡಲಿಕ್ಕೆ ಬಯುಸುತಲಿದೇನೆ, ಯತ್ನವಿಲ್ಲ, ರಾಕ್ಷಸಿಯರ ಸೆರೆ, ನನಗೆ ಇನ್ನು ಶ್ರೀರಾಮಚಂದ್ರನನ್ನು ಪಡೆಯುವ ಪುಣ್ಯವಿಲ್ಲ, ಅಯ್ಯೋ! ಛೀ! ಈ ಹಾಳು ಮನುಷ್ಯಜನ್ಮವೇತಕ್ಕೆ ? ಪರಾಧೀನತೆಯು ಪ್ರಾಣವನ್ನು ತೊರೆದುಕೊಳ್ಳಲಿಕ್ಕೂ ಅವಕಾಶವಿಲ್ಲದಂತೆ ಮಾಡಿದೆ. ಮನಃಪೂರ್ವಕವಾಗಿ ಉಸಿರನ್ನು ಬಿಡಲಾಗದ ಹೊತ್ತುಬಂದು ಒದಗಿತಲ್ಲಾ ಎಂದು ಸೀತೆಯು ಶೋಕಭಾರದಿಂದ ಪ್ರಲಾಪಿಸುತಲಿದ್ದಳು ॥೧೯-೨೦॥

ಇಂತು ಇಪ್ಪತ್ತೈದನೆಯ ಸರ್ಗವು ಮುಗಿದುದು.

ಶ್ರೀ.

ಶ್ರೀರಾಮಚಂದ್ರ ಪರಬ್ರಹ್ಮಣೇನಮಃ.

## ಶ್ರೀಮತ್ಸುನ್ದರಕಾಣ್ಡೇ ಷಡ್ವಿಂಶಸ್ಸರ್ಗಃ.

ಪ್ರಸಕ್ತಾಽ ಶ್ರುಮುಖೀ ತ್ಯೇವಂ ಬ್ರುವಂತೀ ಜನಕಾತ್ಮಜಾ ।
ಅಧೋಮುಖ ಮುಖೀ ಬಾಲಾ ವಿಲಪ್ತು ಮುಪಚಕ್ರಮೇ ॥೧॥
ಉನ್ಮತ್ತೇವ ಪ್ರಮತ್ತೇವ ಭ್ರಾಂತ ಚಿತ್ತೇವ ಶೋಚತೀ ।
ಉಪಾವೃತಾ ಕಿಶೋರೀವ ವಿವೇಷ್ಟಂತೀ ಮಹೀತಲೇ ॥೨॥

---

ಶ್ರೀ.

— ಇಪ್ಪತ್ತಾರನೆಯ ಸರ್ಗ —

ಕಂದ—ಶೋಕಾವೇಶದಿ ಜಾನಕಿ । ಕಾಕುತ್‌ಸ್ಥನ ನೆನೆಯುತಂತು ಹಲುಬುತ್ತಿರ್ದಳ್ ॥
ಹಾ! ಕಷ್ಟಂ! ವಾಲ್ಮೀಕಿಯು ಮಾ ಕಷ್ಟವ ತಾ ನನೆಂತು ಪೇಳ್ದನೊಕಾಣೆಂ ॥

ಇತಿ - ಹಿಂದೆಹೇಳಿದ ಮೇರೆಗೂ, ಏವಂ -ಮುಂದೆ ಹೇಳುವಮೇರೆಗೂ, ಕುರ್ವಂತೀ - ಹಂಬಲಿಸುತ ಲಿರುವ, ಬಾಲಾ - ಚಿಕ್ಕವಯಸ್ಸಿನ, ಜನಕಾತ್ಮಜಾ - ಜಾನಕಿಯು, ಪ್ರಸಕ್ತಾ- ಹರಿಯುತಲಿರುವ, ಅಶ್ರು- ಕಣ್ಣೀರಿನಿಂದ ಕೂಡಿದ, ಮುಖೀ - ಮುಖವುಳ್ಳವಳೂ, ಅಧೋಮುಖಮುಖೀ - ಕೆಳಮುಖವಾಗಿ ತಗ್ಗಿ ಸಿದ ಮುಖವುಳ್ಳವಳೂ ಆಗಿ, ವಿಲಪ್ತುಂ - (ವಿಲಪಿತುಂ) ಪ್ರಲಾಪಿಸಲಿಕ್ಕೆ, ಉಪಚಕ್ರಮೇ - ಉಪಕ್ರಮಿಸಿ ದಳು ॥೧॥ ಉನ್ಮತ್ತೇವ - ಹುಚ್ಚು ಹಿಡಿದವಳ ಹಾಗೂ, ಪ್ರಮತ್ತೇವ - ಮದ್ಯಪಾನದಿಂದ ಮದವೇರಿದ ವಳ ಹಾಗೂ, ಭ್ರಾಂತಚಿತ್ತೇವ - ಚಿತ್ತವೈಕಲ್ಯವನ್ನು ಪಡೆದವಳಹಾಗೂ, ಉಪಾವೃತ್ತಾ - ಶ್ರಮಪರಿಹಾರ ಕ್ಕಾಗಿ ನೆಲದಮೇಲೆ ಉರುಳಿದ, ಮಹೀತಲೇ - ನೆಲದಲ್ಲಿ, ವಿವೇಷ್ಟಂತೀ- ಹೊರಳಾಡುತಲಿರುವ, ಕಿಶೋರೀ ವ - ಹೆಣ್ಣುಕುದುರೆಯ ಹಾಗೂ, ಶೋಚತೀ - (ಶೋಚಂತೀ) ದುಃಖಿಸುತ್ತಿರುವವಳಾಗಿ, ರಾಘವಸ್ಯ-ಶ್ರೀ ರಾಮನು, ಪ್ರಮತ್ತಸ್ಯ (ಸತಃ) ಎಚ್ಚರತಪ್ಪಿದವನಾಗಿತ್ತಿರಲಾಗಿ, ಕಾಮರೂಪಿಣಾ - ಇಚ್ಛಾನುಸಾರವಾದ

---

— ಇಪ್ಪತ್ತಾರನೆಯ ಅಧ್ಯಾಯವು ಪ್ರಾರಂಭ —

ಯಾವಾಗಲೂ ಕಷ್ಟವನ್ನು ಅನುಭವಿಸುತ್ತಿರುವವರಿಗೆ ಬೇರೊಂದು ಕಷ್ಟವು ಬಂ ದು ಒದಗಿದರೆ ಅದು ಅಷ್ಟು ಕಠಿನವಾಗಿ ತೋರುವುದಿಲ್ಲ. ಎಂದೂಕಷ್ಟದ ಸುದ್ದಿಯನ್ನೇ ಅರಿಯದವರಿಗೆ ಅಕಸ್ಮಾತ್ತಾಗಿ ಘೋರವಾದ ಕಷ್ಟವು ಪ್ರಾಪ್ತವಾದರೆ, ಅದನ್ನು ಸಹಿಸುವು ದೂ, ಅಂಥವರನ್ನು ಕಣ್ಣಿನಿಂದ ನೋಡುವುದೂ, ಆದೆಶೆಯನ್ನು ಬಣ್ಣಿಸುವುದೂ ಮತ್ತಷ್ಟು ಕಷ್ಟವಾಗಿರುವುದು. ಜಾನಕಿಯು ಶೋಕಭಾರದಿಂದ ಪೀಡಿತಳಾಗಿ, ಕಣ್ಣೀರಿನ ಕಾ ಲುವೆಯನ್ನು ಹರಿಸುತ್ತಾ, ತಲೆಯನ್ನು ತಗ್ಗಿಸಿಕೊಂಡು, ದಿಕ್ಕು ತೋರದೆ ಪುನರಪಿ ಪ್ರ ಲಾಪಿಸತೊಡಗಿದಳು ॥೧॥ ಹುಚ್ಚು ಹಿಡಿದವಳ ಹಾಗೂ, ಮದ್ಯಪಾನಾದಿಗಳಿಂದ ಮದವೇರಿ ದವಳಹಾಗೂ ಮೈಮರೆತಿರುವವಳ ಹಾಗೂ, ಆಯಾಸದ ಪರಿಹಾರಕ್ಕಾಗಿ ನೆಲದ ಮೇ ಲೆ ಬಿದ್ದು ಹೊರಳಾಡುತ್ತಿರುವ ಹೆಣ್ಣು ಕುದುರೆಯ ಹಾಗೂ ಭ್ರಾಂತಳಾಗಿ, ಗೋಳೋ ಎಂದು ಅಳುತ್ತಾ ॥೨॥ ಅಯ್ಯೋ! ನನ್ನ ಪ್ರಾಣಕಾಂತನಾದ ಶ್ರೀರಾಮನು ಸ್ವಲ್ಪ ಎಚ್ಚರ

ರಾಘವಸ್ಯ ಪ್ರಮತ್ತಸ್ಯ ರಕ್ಷಸಾ ಕಾಮರೂಪಿಣಾ ।
ರಾವಣೇನ ಪ್ರಮಥ್ಯಾಹ ಮಾನೀತಾ ಕ್ರೋಶತೀ ಬಲಾತ್ ॥೩॥
ರಾಕ್ಷಸೀವಶ ಮಾಪನ್ನಾ ಭರ್ತ್ಸ್ಯಮಾನಾ ಸುದಾರುಣಂ ।
ಚಿಂತಯಂತೀ ಸುದುಃಖಾರ್ತಾ ನಾಹಂ ಜೀವಿತು ಮುತ್ಸಹೇ ॥೪॥
ನಹಿ ಮೇ ಜೀವಿತೈ ರರ್ಥೋ ನೈವಾರ್ಥೈರ್ನ ಚ ಭೂಷಣೈಃ ।
ವಸಂತ್ಯಾ ರಾಕ್ಷಸೀಮಧ್ಯೇ ವಿನಾ ರಾಮಂ ಮಹಾರಥಂ ॥೫॥
ಅಶ್ಮಸಾರ ಮಿದಂ ನೂನ ಮಥವಾ ಪ್ಯಜರಾಮರಂ ।

ರೂಪವನ್ನು ತಾಳಿದ, ರಕ್ಷಸಾ - ರಾಕ್ಷಸನಾದ, ರಾವಣೇನ - ರಾವಣನಿಂದ, ಪ್ರಮಥ್ಯ - ಮೋಸ ಪಡಿಸಿ, ಬಲಾತ್ - ಬಲಾತ್ಕಾರದಿಂದ, ಕ್ರೋಶತೀ - ದುಃಖಿಸುತಲಿರುವ, ಅಹಂ - ಈನಾನು, ಆನೀತಾ- ತರಲ್ಪಟ್ಟಿದ್ದೇನೆ ॥೦-೩॥ ಸುದಾರುಣಂ - ಬಹುಭಯಂಕರವಾಗಿ, ಭರ್ತ್ಸ್ಯಮಾನಾ - ಬೆದರಿಸಲ್ಪಡುತಲಿರುವ, ರಾಕ್ಷಸೀವಶಂ - ರಕ್ಕಸಿಯರ ಅಧೀನತೆಯನ್ನು, ಆಪನ್ನಾ - ಹೊಂದಿರತಕ್ಕ, ಸುದುಃಖಾರ್ತಾ-ಕಡು ಶೋಕದಿಂದ ಪೀಡಿತಳಾದ, ಚಿಂತಯಂತೀ - ಚಿಂತೆಯಲ್ಲಿ ಮುಳುಗಿರುವ, ಅಹಂ - ನಾನು, ಜೀವಿತುಂ - ಬದುಕಲಿಕ್ಕೆ, ನೋತ್ಸಹೇ - ಸಂತೋಷಿಸುವುದಿಲ್ಲ, ॥೪॥ ರಾಕ್ಷಸೀಮಧ್ಯೇ - ಈ ರಕ್ಕಸಿಯರ ನಡುವೆ, ಮಹಾರಥಂ - ಮಹಾ ರಥಿಕನಾದ, ರಾಮಂವಿನಾ - ರಾಮನನ್ನು ಬಿಟ್ಟು, ವಸಂತ್ಯಾಃ - ವಾಸಮಾಡುತ ಲಿರುವ, ಮೇ - ನನಗೆ, ಜೀವಿತೈಃ - ಪ್ರಾಣಗಳಿಂದ, ಅರ್ಥಃ - ಪ್ರಯೋಜನವು, ನ - ಇಲ್ಲ, ಭೂಷಣೈಃ - ಅಲಂಕಾರಗಳಿಂದಲೂ, ಅರ್ಥೈಃ - ಧನಗಳಿಂದಲೂ, ನೈವಚಾಸ್ತಿ - ಉಪಯೋಗವೇ ಇಲ್ಲ ॥೫॥ ಇದಂ - ಈ, ಮಮ - ನನ್ನ, ಹೃದಯಂ - ಎದೆಯೂ, ಅಶ್ಮಸಾರಂ - ಕಲ್ಲಿನಂತೆ ಬಲವುಳ್ಳುದಾಗಿಯೂ, ಅಥವಾ-ಹಾಗಿಲ್ಲದಿದ್ದರೆ, ಅಜರಾಮರಂ-ಮುಪ್ಪುಸಾವುಗಳಿಲ್ಲದುದಾಗಿಯೂ, (ಭವೇತ್ - ಇರಬೇಕು) ನೂನಂ-ನಿಶ್ಚಯ, ಯೇನ-ಯಾವ ಮೇಲೆಹೇಳಿದ ಕಾರಣದಿಂದ, ದುಃಖೇನ- ಈ ಅಪಾರವಾದ ದುಃಖದಿಂದಲೂ,

ತಪ್ಪಿ ಇರಲಾಗಿ, ಮನಬಂದರೂಪವನ್ನು ತಾಳತಕ್ಕ ರಾಕ್ಷಸನಾದ ಈ ರಾವಣನು ಮೋಸಪಡಿಸಿ ಬಲಾತ್ಕಾರದಿಂದ ನನ್ನನ್ನು ತಂದನಲ್ಲಾ ! ಹಾ ದೈವವೇ, ನನಗೆ ಎಂತಹ ಹೊತ್ತನ್ನು ತಂದೆ ? ॥೩॥ ಈ ಕ್ರೂರರಾದ ರಾಕ್ಷಸಿಯರ ಸೆರೆಗೆ ಸಿಕ್ಕಿರುವೆನೇ, ಬಹುಕ್ರೂರವಾಗಿ ಬೆದರಿಸುತಲಿರುವರಲ್ಲಾ, ನನ್ನ ಕೊರಗಿಗೆ ಪಾರವಿಲ್ಲವೇ, ನನ್ನ ದೈನ್ಯವನ್ನು ಕೇಳುವರಾರು ? ಸರ್ವಾತ್ಮನಾ ನನಗೆ ಪ್ರಾಣಗಳ ಮೇಲೆ ಆಶೆಯಿಲ್ಲ. ಈಗಲೇ ಪ್ರಾಣಗಳನ್ನು ತೊರೆಯಲು ಸಿದ್ಧಳಾಗಿದ್ದೇನೆ, ॥೪॥ ಅಯ್ಯೋ! ಒಂದು ವೇಳೆ ನಾನು ಬದುಕಿಇದ್ದರೂ ಈ ಹಾಳುಪ್ರಾಣಗಳಿಂದ ಪ್ರಯೋಜನವೇನು ? ಮಹಾನುಭಾವನಾದ ಆರಾಮನನ್ನಗಲಿ, ಈಕಟುಕಿಯರಾದ ರಕ್ಕಸಿಯರ ನಡುವೆ ಸಿಕ್ಕಿ ಸಂಕಟಪಡುತಲಿರುವ ನನಗೆ ಹಣಕಾಸುಗಳಿಂದಲಾಗಲಿ, ಒಡವೆ ವಸ್ತುಗಳಿಂದಲಾಗಲೀ ಉಪಯೋಗವೇನು ? ಆ ರಾಮನೊಬ್ಬನನ್ನುಳಿದು ಈಪ್ರಪಂಚದಲ್ಲಿ ಮತ್ತಾವುದೂ ನನಗೆ ಸುಖಸಾಧನವೆನಿಸಲಾರದು ॥೫॥ ಅಹಹ ! ಇಂತಹ ವಿಪತ್ಕಾಲದಲ್ಲಿಯೂ ನನ್ನ ಹೃದಯದಿಂದ ಪ್ರಾಣವು ಹಾರಿಹೋಗದಿರುವುದನ್ನು ನೋಡಿದರೆ ನನ್ನ ಎದೆಯನ್ನು ವಿಧಿಯು ಕಲ್ಲಿನ ಬಂಡೆಯಿಂದ ಕಲ್ಪಿಸಿ ಇರುವನೆಂದು ತೋರುವುದು, ಈ ವಿಷಯದಲ್ಲಿ ಸಂಶಯವಿಲ್ಲ. ಅಥವಾ-ಈ ಅಪಾರವಾದ ದುಃಖ

ಹೃದಯಂ ಮಮ ಯೇನೇದಂ ನ ದುಃಖೇ ನಾವಶೀರ್ಯತೇ ॥೬॥
ಧಿಗಸ್ತು ಮಾಮನಾರ್ಯಾಮಸತೀಂ ಯಾಽಹಂ ತೇನ ವಿನಾಕೃತಾ ।
ಮುಹೂರ್ತಮಪಿ ರಕ್ಷಾಮಿ ಜೀವಿತಂ ಪಾಪಜೀವಿತಾ ॥೭॥
ಕಾ ಚ ಮೇ ಜೀವಿತೇ ಶ್ರದ್ಧಾ ಸುಖೇ ವಾ ತಂ ಪ್ರಿಯಂ ವಿನಾ ।
ಭರ್ತಾರಂ ಸಾಗರಾಂತಾಯಾ ವಸುಧಾಯಾಃ ಪ್ರಿಯಂವದಂ ॥೮॥
ಭಿದ್ಯತಾಂ ಭಕ್ಷ್ಯತಾಂ ವಾಪಿ ಶರೀರಂ ವಿಸೃಜಾಮ್ಯಹಂ ।
ನಚಾಪ್ಯಹಂ ಚಿರಂ ದುಃಖಂ ಸಹೇಯಂ ಪ್ರಿಯವರ್ಜಿತಾ ॥೯॥

---

(ಇದಂ - ಈ ಹೃದಯವು) ನಾವಶೀರ್ಯತೇ - ನಶಿಸಿ ಹೋಗದೆ ಇದೆಯೋ ॥ ೬ ॥ ಯಾ - ಯಾವ, ಅಹಂ - ನಾನು, ತೇನ - ಆ ರಾಮನಿಂದ, ವಿನಾಕೃತಾ - ಅಗಲಿದವಳಾಗಿ, ಪಾಪಜೀವಿತಾ - ಪಾಪಕರವಾದ ಜೀವನವುಳ್ಳವಳಾದ ಕಾರಣವೇ, ಮುಹೂರ್ತಮಪಿ-ಅಲ್ಪಕಾಲವಾದರೂ, ಜೀವಿತಂ-ಪ್ರಾಣವನ್ನು, ರಕ್ಷಾಮಿ - ಕಾಪಾಡಿಕೊಳ್ಳುತಲಿರುವೆನೋ, ಅಸತೀಂ - ಪಾತಿವ್ರತ್ಯದಿಂದ ಭ್ರಷ್ಟಳಾದ, ಅನಾರ್ಯಾಂ - ಅಯೋಗ್ಯಳೆನಿಸಿರುವ, ತಾಂ - ಅಂತಹ, ಮಾಂ - ನನ್ನನ್ನು, ಧಿಗಸ್ತು - ಛೀ ಎಂದು ನಿಂದಿಸಬೇಕು ॥ ೭ ॥ ಸಾಗರಾಂತಾಯಾಃ - ಕಡಲೇ ಎಲ್ಲೆಯಾಗಿರುವ, ವಸುಧಾಯಾಃ - ಭೂಮಂಡಲಕ್ಕೆ, ಪ್ರಿಯಂವದಂ-ಹಿತವಾದಿಯೂ, ಪ್ರಿಯಂ - ಇಷ್ಟನೂ ಆಗಿರುವ, ತಂ - ಆ, ಭರ್ತಾರಂ ವಿನಾ - ಪತಿಯನ್ನು ಬಿಟ್ಟು, ಮೇ - ನನಗೆ, ಜೀವಿತೇ ಚ - ಪ್ರಾಣದಲ್ಲಿಯಾಗಲೀ, ಸುಖೇ ವಾ - ಸುಖದಲ್ಲಿ ಯಾಗಲೀ, ಕಾ ಶ್ರದ್ಧಾ - ಅಕ್ಕರೆಯೆಲ್ಲಿಯದು ? ॥ ೮ ॥

ಶರೀರಂ - ಈ ನನ್ನ ದೇಹವು, ಆಭಿಃ - ಈ ರಕ್ಕಸಿಯರಿಂದ, ಭಿದ್ಯತಾಂ - ಸೀಳಲ್ಪಡಲಿ, ಅಥವಾ - ಅಥವಾ, ಭಕ್ಷ್ಯತಾಂ - ತಿನ್ನಲ್ಪಡಲಿ, ಅಹಂ - ನಾನು, ಶರೀರಂ - ದೇಹವನ್ನು ವಿಸೃಜಾಮಿ - ಬಿಟ್ಟುಬಿಡುವೆನು, ಅಪಿ ಚ - ಮತ್ತು, ಅಹಂ - ನಾನು, ಪ್ರಿಯವರ್ಜಿತಾ - ಪತಿಯಿಂದ ಬಿಡಲ್ಪಟ್ಟವಳಾಗಿ, ದುಃಖಂ - ವ್ಯಸನವನ್ನು ನ ಸಹೇಯಂ - ತಾಳಲಾರೆ, (ಸಹೇಯ) ॥೯॥ ಅಹಂ - ನಾನು, ವಿಗರ್ಹಿತಂ -

---

ವನ್ನು ಅನುಭವಿಸಲಿಕ್ಕಾಗಿ ದೈವವು ನನ್ನನ್ನು ಮುಪ್ಪುಸಾವುಗಳಿಲ್ಲದಂತೆ ನಿರ್ಮಿಸಿ ಇರುವುದೋ ಹೇಗೋ ತಿಳಿಯದು. ಈ ಕಾರಣದಿಂದಲೇ ದುಃಖಭಾರದಿಂದ ನನ್ನ ಎದೆಯು ಸಿಡಿದು ಛಿನ್ನಭಿನ್ನವಾಗಿ ಹಾರಿಹೋಗದೆ ಇದೆ ॥೬॥ ಅಯ್ಯೋ ! ಛಿ, ನನ್ನ ಬಾಳನ್ನು ನಿಂದಿಸಬೇಕು. ನಾನು ಯೋಗ್ಯಳೇ? ನಾನು ಪತಿಭಕ್ತಿಯುಳ್ಳವಳೇ? ಅಂಥವಳಾಗಿದ್ದರೆ, ಆ ರಾಮನನ್ನು ಅಗಲಿದ ಬಳಿಕ ನಿಮಿಷಮಾತ್ರವಾದರೂ, ಜೀವಿಸಿ ಇರಬಹುದೇ ? ಪಾಪಿಜೀವನವನ್ನು ತಾಳಿರುವೆನಲ್ಲಾ ? ॥೭॥ ಇನ್ನು ನನಗೆ ಈ ಜೀವನದಲ್ಲಿ ಆಶೆ ಏಕೆ ? ನಾಲ್ಕು ಕಡಲುಗಳಿಂದ ಬಳಸಲ್ಪಟ್ಟಿರುವ ಸಮಸ್ತ ಭೂಮಂಡಲಕ್ಕೂ ಒಡೆಯನಾಗಿ, ಹಿತವಾದಿ ಎನಿಸಿ ಇರುವ ಆ ನನ್ನ ಪ್ರಾಣಪ್ರಿಯನನ್ನು ಬಿಟ ಬಳಿಕ ನನಗೆ ಸುಖದಲ್ಲಿಯೂ ಆಶೆಯುಂಟಾಗಬಹುದೇ ? ॥೮॥ ಆ ಮಹಾನುಭಾವನ ಅಗಲಿಕೆಯಿಂದುಂಟಾಗಿರುವ ಈ ಅಪಾರದುಃಖವನ್ನು ನಾನು ತಾಳಲಾರೆ, ಹೇಗಾದರೂ ಮಾಡಿ ಈ ಒಡಲನ್ನು ತೊರೆಯುವೆನು. ಇದು ಸಿಡಿದಾದರೂ ಹೋಗಲಿ, ಅಥವಾ ಈ ರಕ್ಕಸಿಯರಾಗಲೀ, ಇತರ ಪ್ರಾಣಿಗಳಾಗಲಿ ತಿಂದಾದರೂ ಬಿಡಲಿ ॥೯॥ ಈ ನೀಚನಾದ ರಾವಣನನ್ನು ನನ್ನ ಎಡಗಾಲಿನ ತುದಿಯಿಂದಲೂ

ಚರಣೇ ನಾಪಿ ಸವ್ಯೇನ ನ ಸ್ಪೃಶೇಯಂ ನಿಶಾಚರಮ್ ।
ರಾವಣಂ ಕಿಂ ಪುನರಹಂ ಕಾಮಯೇಯಂ ವಿಗರ್ಹಿತಂ ॥೧೦॥
ಪ್ರತ್ಯಾಖ್ಯಾತಂ ನ ಜಾನಾತಿ ನಾತ್ಮಾನಂ ನಾತ್ಮನಃ ಕುಲಂ ।
ಯೋ ನೃಶಂಸಸ್ವಭಾವೇನ ಮಾಂ ಪ್ರಾರ್ಥಯಿತು ಮಿಚ್ಛತಿ ॥೧೧॥
ಛಿನ್ನಾ ಭಿನ್ನಾ ವಿಭಕ್ತಾ ವಾ ದೀಪ್ತೇ ವಾಗ್ನೌ ಪ್ರದೀಪಿತಾ ।
ರಾವಣಂ ನೋಪತಿಷ್ಠೇಯಂ ಕಿಂ ಪ್ರಲಾಪೇನವಶ್ಚಿರಂ ॥೧೨॥
ಖ್ಯಾತಃ ಪ್ರಾಜ್ಞಃ ಕೃತಜ್ಞಶ್ಚ ಸಾನುಕ್ರೋಶಶ್ಚ ರಾಘವಃ ।

---

ಬಹುನಿಂದಿತನಾಗಿರುವ, ರಾವಣಂ - ಈ ರಾವಣನೆಂಬ, ನಿಶಾಚರಂ - ರಕ್ಕಸನನ್ನು, ಸವ್ಯೇನ - ಎಡಗಡೆಯದಾದ, ಚರಣೇನಾಪಿ - ಕಾಲಿನಿಂದಲಾದರೂ, ನಸ್ಪೃಶೇಯಂ - ಮುಟ್ಟತಕ್ಕವಳಲ್ಲ, ಪುನಃ - ಹೀಗಿರಲಾಗಿ, ಕಿಂಕಾಮಯೇಯಂ - ಕಾಮಿಸತಕ್ಕವಳಾಗುವೆನೇ ? ॥೧೦॥ ಯಃ - ಯಾವನು, ನೃಶಂಸಸ್ವಭಾವೇನ - ಕ್ರೂರಸ್ವಭಾವದಿಂದ, ಮಾಂ - ನನ್ನನ್ನು, ಪ್ರಾರ್ಥಯಿತುಂ - ಪ್ರಾರ್ಥಿಸಲಿಕ್ಕೆ, ಇಚ್ಛತಿ - ಕೋರುತಲಿರುವನೋ, (ಸಃ - ಆ ರಾವಣನು) ಪ್ರತ್ಯಾಖ್ಯಾತಂ-ನನ್ನಿಂದ ತಿರಸ್ಕರಿಸಲ್ಪಟ್ಟ, ಆತ್ಮಾನಂ-ತನ್ನನ್ನು, ನಜಾನಾತಿ - ಅರಿಯನು, (ಪ್ರತ್ಯಾಖ್ಯಾತಂ - ಹಾಗೆಯೇ ತಿರಸ್ಕರಿಸಲ್ಪಟ್ಟ) ಆತ್ಮನಃ - ತನ್ನ, ಕುಲಂ - ವಂಶವನ್ನೂ, ನಜಾನಾತಿ - ಅರಿಯದೆ ಇದಾನೆ ॥೧೧॥ (ಹೇ ರಾಕ್ಷಸ್ಯಃ - ಎಲೆ ರಕ್ಕಸಿಯರುಗಳಿರಾ) ಅಹಂ - ನಾನು, ಛಿನ್ನಾ - ನಿಮ್ಮಿಂದ ಎರಡುಪಾಲಾಗಿ ಸೀಳಲ್ಪಟ್ಟರೂ, ಭಿನ್ನಾ - ತುಂಡುತುಂಡಾಗಿ ಕತ್ತರಿಸಲ್ಪಟ್ಟರೂ, ವಿಭಕ್ತಾವಾ - ಚೂರುಚೂರಾಗಿ ಪಾಲುಮಾಡಲ್ಪಟ್ಟರೂ, ದೀಪ್ತೇ - ಉರಿಯುತಲಿರುವ, ಅಗ್ನೌ - ಬೆಂಕಿಯಲ್ಲಿ, ಪ್ರದೀಪಿತಾವಾ - ಸುಡಲ್ಪಟ್ಟವಳೇ ಆದಾಗ್ಯೂ, ರಾವಣಂ - ರಾವಣನನ್ನು, ನೋಪತಿಷ್ಠೇಯಂ - ಸೇವಿಸಲಾರೆ (ಹೊಂದಲಾರೆ) ಚಿರಂ - ಬಹಳಹೊತ್ತು, ವಃ - ನಿಮ್ಮ, ಪ್ರಲಾಪೇನ - ಹರಟೆಯಿಂದ. ಕಿಂ - ಪ್ರಯೋಜನವೇನು? ॥೧೨॥ (ಹೀಗೆ ಸೀತೆಯು ತನ್ನ ಪಾತಿವ್ರತ್ಯದಸ್ಥೈರ್ಯವನ್ನು ವ್ಯಕ್ತಗೊಳಿಸಿ ರಾಮನು ತನ್ನನ್ನು ಹುಡುಕಲಿಕ್ಕೆ ಬಾರದಿರಲು ಕಾರಣವನ್ನು ಊಹಿಸುತ್ತಾಳೆ) ರಾಘವಃ - ಶ್ರೀ ರಾಮನು, ಪ್ರಾಜ್ಞಃ - ವಿಶೇಷವಾಗಿ ತಿಳಿದವನು, ಕೃತಜ್ಞಶ್ಚ - ಹೆರರು ಮಾಡಿದ

---

ಮುಟ್ಟಲಾರೆ. ಹೀಗಿರಲಾಗಿ ಈ ಪಾಪಾತ್ಮನನ್ನು ನಾನು ಕಾಮಿಸುವೆನೇ ? ಎಂದಿಗೂ ಇಲ್ಲ. ॥ ೧೦ ॥ ಈ ಕೀಳನಾದ ರಾವಣನು ಕಟುಕತನದಿಂದ ನನ್ನನ್ನು ಪ್ರಾರ್ಥಿಸುತಲಿದ ನೆ. ಪರಮ ನೀಚನಾದುದರಿಂದ ನಾನು ಮಾಡಿದ ತಿರಸ್ಕಾರವು ಅವನ ಮನಸ್ಸಿಗೆ ಅಂಟಲಿಲ್ಲ. ತನ್ನನ್ನು ತಿರಸ್ಕರಿಸಲ್ಪಟ್ಟವನನ್ನಾಗಿ ತಿಳಿಯಲಿಲ್ಲ, ತನ್ನ ಕುಲವು ಹಿಯ್ಯಾಳಿಸಲ್ಪಟ್ಟತೆಂದು ಭಾವಿಸಲಿಲ್ಲ. ಎಲೈ ರಕ್ಕಸಿಯರುಗಳಿರಾ ! ನೀವೆಲ್ಲರೂ ಬಗೆಬಗೆಯಾಗಿ ಹರಟೆ ವೃಥಾ ನನ್ನನ್ನು ಏಕೆ ಸಂಕಟ ಪಡಿಸುತ್ತೀರಿ. ನನ್ನನ್ನು ಗರಗಸದಿಂದ ಕುಯ್ದರೂ, ಬಾಚಿಯಿಂದ ಕೆತ್ತಿದರೂ, ಅಥವಾ ತುಂಡು ತುಂಡು ಮಾಡಿ ಪಾಲಿಟ್ಟರೂ, ಧಗಧಗನೆ ಉರಿಯುತಲಿರುವ ಬೆಂಕಿಯಲ್ಲಿ ಸುಟ್ಟರೂ ನಾನು ಬೇರೆ ರಾವಣನನ್ನು ಸೇವಿಸಲಾರೆ ॥೧೧-೧೨॥ ಎಂದು ಆರಾಕ್ಷಸಿಯರಿಗೆ ಹೇಳಿ, ಅಯ್ಯೋ! ಶ್ರೀರಾಮನಿಗೆ ನನ್ನ ವಿಷಯದಲ್ಲಿ ಕನಿಕರವುಂಟಾಗದಿರಲು ಕಾರಣವೇನು, ಅನಾಮಧೇಯನೇ ? ಅಲ್ಲವಲ್ಲ, ಸರ್ವಲೋಕ ಪ್ರಸಿದ್ಧನು. ಅಥವಾ ಅರಿಯದವನೇ ? ಅಲ್ಲ, ಸರ್ವಜ್ಞ. ಹಾಗಿಲ್ಲದಿದ್ದರೆ ಕೃತಘ್ನನೇ ? ಸರ್ವಾತ್ಮನಾ

ಸದ್ವೃತ್ತೋ ನಿರನುಕ್ರೋಶ ಶ್ಶಂಕೇ ಮದ್ಭಾಗ್ಯ ಸಂಕ್ಷಯಾತ್ ||೧೩||
ರಾಕ್ಷಸಾನಾಂ ಸಹಸ್ರಾಣಿ ಜನಸ್ಥಾನೇ ಚತುರ್ದಶ |
ಯೇನೈಕೇನ ನಿರಸ್ತಾನಿ ಸ ಮಾಂ ಕಿನ್ನಾಭಿಪದ್ಯತೇ ||೧೪||
ನಿರುದ್ಧಾ ರಾವಣೇನಾಹ ಮಲ್ಪವೀರ್ಯೇಣ ರಕ್ಷಸಾ |
ಸಮರ್ಥಃ ಖಲು ಮೇ ಭರ್ತಾ ರಾವಣಂ ಹಂತು ಮಾಹವೇ ||೧೫||
ವಿರಾಧೋ ದಂಡಕಾರಣ್ಯೇ ಯೇನ ರಾಕ್ಷಸ ಪುಂಗವಃ |

---

ಉಪಕಾರವನ್ನು ನೆನೆಯತಕ್ಕವನು, ಸಾನುಕ್ರೋಶಶ್ಚ-ದಯೆಯಿಂದಕೂಡಿದವನೂ ಹೌದು, ಸದ್ವೃತ್ತಃ-ಒಳ್ಳೆಯ ನಡತೆಯುಳ್ಳವನು (ಇತಿ - ಹೀಗೆಯೇ, ಜನೈಃ - ಜನಗಳಿಂದ) ಖ್ಯಾತಃ - ಹೊಗಳಲ್ಪಡುತಲಿದಾನೆ, ಮದ್ಭಾಗ್ಯಸಂಕ್ಷಯಾತ್ - ನನ್ನ ದುರದೃಷ್ಟದ ದೆಸೆಯಿಂದ, ನಿರನುಕ್ರೋಶಃ - ದಯಾಶೂನ್ಯನಾದನೆಂದು, ಶಂಕೆ - ಊಹಿಸುತ್ತೇನೆ ||೧೩|| ಏಕೇನ - ಒಬ್ಬನಾದ, ಯೇನ - ಯಾವ ರಾಮನಿಂದ, ಜನಸ್ಥಾನೆ - ಜನಸ್ಥಾನವೆಂಬ ಅರಣ್ಯದಲ್ಲಿ, ರಾಕ್ಷಸಾನಾಂ-ರಕ್ಕಸರ, ಚತುರ್ದಶ - ಹದಿನಾಲ್ಕುದ, ಸಹಸ್ರಾಣಿ - ಸಾವಿರಗಳು, ನಿರಸ್ತಾನಿ - ನಾಶಗೊಳಿಸಲ್ಪಟ್ಟವೋ, ಸಃ - ಅಂತಹ ಶ್ರೀ ರಾಮನು, ಕಿಂ - ಯಾವ ಕಾರಣದಿಂದ, ಮಾಂ - ನನ್ನನ್ನು, ನಾಭಿಪದ್ಯತೆ - ಕೊಂದದೆ ಇದಾನೆ? (ಅರಿಯದೆ ಇದಾನೆ) ||೧೪||

ಅಲ್ಪವೀರ್ಯೇಣ-ಮಿತವಾದ ಪರಾಕ್ರಮವುಳ್ಳ, ರಾವಣೇನ-ರಾವಣನೆಂಬ, ರಕ್ಷಸಾ- ಈ ರಾಕ್ಷಸನಿಂದ, ಅಹಂ-ನಾನು, ನಿರುದ್ಧಾ-ನಿರ್ಬಂಧಿಸಲ್ಪಟ್ಟದೇನೆ, ಮೇ-ನನ್ನ, ಭರ್ತಾ-ಪತಿಯಾದ ಶ್ರೀರಾಮನು, ಆಹವೆ-ಯುದ್ಧದಲ್ಲಿ, ರಾವಣಾ-ಕೀಳನಾದ ಈ ರಾವಣನನ್ನು, ಹಂತುಂ - ಕೊಲ್ಲಲಿಕ್ಕೆ, ಸಮರ್ಥಃ-ಶಕ್ತನು, ಖಲು-ನಿಶ್ಚಯ, ||೧೫|| ಯೇನ-ಯಾವ, ರಾಮೇಣ- ಶ್ರೀರಾಮನಿಂದ, ದಂಡಕಾರಣ್ಯೇ-ದಂಡಕಾವನದಲ್ಲಿ ರಾಕ್ಷಸಪುಂಗವಃ-ರಾಕ್ಷಸ ಶ್ರೇಷ್ಠನಾದ, ವಿರಾಧಃ - ವಿರಾಧನೆಂಬುವವನು, ರಣೇ-ಯುದ್ಧದಲ್ಲಿ, ನಿಹತಃ, ಕೊಲ್ಲಲ್ಪಟ್ಟನೋ, ಸಃ-ಅಂತಹ ರಾಮನು, ಮಾಂ-ನನ್ನನ್ನು, ಕಿಂ - ಏತಕ್ಕೋಸ್ಕರ, ನಾಭಿಪದ್ಯತೇ-

---

ಅಲ್ಲ. ಹೆರರುಮಾಡಿದ ಅತ್ಯಲ್ಪವಾದ ಉಪಕಾರವನ್ನುಕೂಡ ಎಂದಿಗೂ ಮರೆಯತಕ್ಕವನಲ್ಲ. ಅಥವಾ ನಿರ್ದಯನೇ ? ರಾಮ ರಾಮ, ಸರ್ವಭೂತ ದಯಾಪರನಲ್ಲನೇ ? ಒಳ್ಳೆಯನಡತೆಯಲ್ಲಿಯೋ ಅಗ್ರಗಣ್ಯ, ಆದರೂ ನನ್ನ ನಿರ್ಭಾಗ್ಯತನದಿಂದ ಅಂತಹ ಮಹಾನುಭಾವನಿಗೂ ನನ್ನ ವಿಷಯದಲ್ಲಿ ನಿರ್ದಯೆಯುಂಟಾಯಿತೆಂದು ಭಾವಿಸುತ್ತೇನೆ ||೧೩|| ಅಹಹ ! ತ್ರಿಲೋಕೈಕ ವೀರನಾದ ಆರಾಮನಲ್ಲಿ ಪರಾಕ್ರಮಕ್ಕೆ ಕೊರತೆಯೇ ? ಹಾಗಿದ್ದ ಪಕ್ಷದಲ್ಲಿ ಜನಸ್ಥಾನವೆಂಬ ಮಹಾರಣ್ಯದಲ್ಲಿ ಇದಿರು ಬಿದ್ದ ಹದಿನಾಲ್ಕು ಸಾವಿರ ಮಂದಿ ರಾಕ್ಷಸರನ್ನು ಒಂದೇ ಬಾಣದಿಂದ ಸದೆಬಡಿಯುತ್ತಿದ್ದನೇ ? ಏನ ಹೇಳಲಿ, ಅಂತಹ ರಾಮನು ನನ್ನನ್ನು ನೆನೆಯದಿರಲು ಕಾರಣವೇನು ? ಪಡೆಯದಿರಲು ನಿಮಿತ್ತವೇನು? ಮೂಲೋಕದಲ್ಲಿಯೂ, ಮೊದಲನೆಯ ಬಿಲ್ಲಾಳೆನಿಸಿದ ಆರಾಮನ ಶೌರ್ಯವೆಲ್ಲಿ ? ಕೀಳನಾದ ಈ ರಾವಣನ ವೀರ್ಯವೆಲ್ಲಿ ? ಈ ಹೀನಬಲನಾದ ರಾವಣನ ಸೆರೆಗೆ ಸಿಕ್ಕಿರುವೆನಲ್ಲಾ ? ಈ ಅಲ್ಪ ಸತ್ವನಾದ ರಾವಣನನ್ನು ನನ್ನ ಪ್ರಾಣವಲ್ಲಭನುನಿಮಿಷಮಾತ್ರದಲ್ಲಿ ಸಂಹರಿಸಲು ಸಮರ್ಥನಾಗಿದಾನೆ, ||೧೫|| ದಂಡಕಾರಣ್ಯದಲ್ಲಿ ಮಹಾ ಶೂರನೆನಿಸಿದ್ದ ವಿರಾಧನೆಂಬ ಮಹಾರಾಕ್ಷಸನನ್ನುಕೂಡ ರಾಮನು ರಣರಂಗದಲ್ಲಿ ಇರಿದನಲ್ಲಾ ? ಅಂತಹ ರಾಮನು ನನ್ನನ್ನು

ರಣೇ ರಾಮೇಣ ನಿಹತಸ್ತ್ವಮಾಂ ಕಿನ್ನಾಭಿಪದ್ಯತೇ ॥೧೬॥
ಕಾಮಂ ಮಧ್ಯೇ ಸಮುದ್ರಸ್ಯ ಲಂಕೇಯಂ ದುಷ್ಪ್ರಧರ್ಷಣಾ ।
ನತು ರಾಘವಬಾಣಾನಾಂ ಗತಿರೋಧೀಹ ವಿದ್ಯತೇ ॥೧೭॥
ಕಿಂತು ತತ್ಕಾರಣಂ ಯೇನ ರಾಮೋ ದೃಢಪರಾಕ್ರಮಃ ।
ರಾಕ್ಷಸಾಪಹೃತಾಂ ಭಾರ್ಯಾಮಿಷ್ಟಾಂ ನಾಽಭ್ಯವಪದ್ಯತೇ ॥೧೮॥
ಇಹಸ್ಥಾಂ ಮಾಂ ನ ಜಾನೀತೇ ಶಂಕೇ ಲಕ್ಷ್ಮಣಪೂರ್ವಜಃ ।
ಜಾನನ್ನಪಿ ಹಿ ತೇಜಸ್ವೀ ಧರ್ಷಣಂ ಮರ್ಷಯಿಷ್ಯತಿ ॥೧೯॥
ಹೃತೇತಿ ಯೋಽಧಿಗತ್ವಾ ಮಾಂ ರಾಘವಾಯ ನಿವೇದಯೇತ್ ।

---

ಪಡೆಯದೆ ಇದನೆ? ॥೧೬॥ ಸಮುದ್ರಸ್ಯ-ಕಡಲಿನ, ಮಧ್ಯೇ-ನಡುವೆ ಇರುವ, ಇಯಂ-ಈ, ಲಂಕಾ-ಲಂಕೆಯು, ಕಾಮಂ-ವಿಶೇಷವಾಗಿ, ದುಷ್ಪ್ರಧರ್ಷಣಾ-ಹೆರರಿಂದ ತಿರಸ್ಕರಿಸಲಿಕ್ಕೆ ಅಶಕ್ಯವಾದುದೇ ಹೌದು, (ತಥಾಪಿ-ಹಾಗಾದಾಗ್ಯೂ,) ಇಹ-ಈ ಲಂಕೆಯಲ್ಲಿ, ರಾಘವಬಾಣಾನಾಂ-ಶ್ರೀರಾಮಬಾಣಗಳ, ಗತಿರೋಧೀತು-ದಾರಿಯನ್ನು ತಡೆಯತಕ್ಕ ಪದಾರ್ಥವಾದರೋ, ನವಿದ್ಯತೇ-ಇಲ್ಲವೇ ಇಲ್ಲ, ಹ-ಆಶ್ಚರ್ಯವಾಗಿದೆ ॥೧೭॥ ಕಿಂತು-ಮತ್ತೇನೆಂದರೆ, ಯೇನ-ಯಾವ, ರಕ್ಷಸಾ-ರಾಕ್ಷಸನಿಂದ, ಅಪಹೃತಾಂ-ಅಪಹರಿಸಲ್ಪಟ್ಟಿರುವ, ಇಷ್ಟಾಂ-ಅತ್ಯಂತ ಪ್ರಿಯಳಾದ, ಭಾರ್ಯಾಂ-ಹೆಂಡತಿಯಾದ ನನ್ನನ್ನು, ದೃಢಪರಾಕ್ರಮಃ-ಮಹಾಶೌರ್ಯವುಳ್ಳ, ರಾಮಃ-ರಾಮನು, ನಾಭ್ಯವಪದ್ಯತೆ-ತಿಳಿದುಕೊಳ್ಳಲಿಲ್ಲವೋ? ಲಕ್ಷ್ಮಣಪೂರ್ವಜಃ-ಲಕ್ಷ್ಮಣಾಗ್ರಜನಾದ ರಾಮನು, ಮಾಂ-ನನ್ನನ್ನು, ಇಹಸ್ಥಾಂ-ಇಲ್ಲಿರುವವಳನ್ನಾಗಿ, ನಜಾನೀತೇ-ಅರಿಯದೆ ಇದಾನೆಯೋ? ತತ್-ಇಲ್ಲಿರುವವಳನ್ನಾಗಿ ನನ್ನನ್ನು ಅವನು ಅರಿಯದಿರೋಣವು, ಕಾರಣಮಿತಿ-ನನ್ನನ್ನು ಅವನು ಪಡೆಯದಿರಲು ಕಾರಣವೆಂದು, ಶಂಕೆ-ಊಹಿಸುತಲಿದೇನೆ, ತೇಜಸ್ವೀ-ಮಹಾಪರಾಕ್ರಮಶಾಲಿಯಾದ ಶ್ರೀರಾಮನು, ಜಾನನ್ನಪಿ-ಇಲ್ಲಿ ಹೀಗಿರುವ ನನ್ನನ್ನು ತಿಳಿದವನೇ ಆಗಿದ್ದರೆ, ಧರ್ಷಣಂ-ನನಗುಂಟಾಗಿರುವ ಈ ಅಪಮಾನವನ್ನು, ಮರ್ಷಯಿಷ್ಯತಿ-ಸಹಿಸುವವನೆ? (ಎಂದಿಗೂ ಸಹಿಸನು) ॥೧೮-೧೯॥

---

ಪಡೆಯದಿರಲು ಕಾರಣವೇನು? ॥೧೬॥ ಬಾದು ವೇಳೆ ಈ ಲಂಕೆಯು ಕಡಲಿನ ನಡುವೆ ಇರುವುದೆಂದೂ, ಇಲ್ಲಿಗೆ ಇತರರು ಬರಲು ಅಶಕ್ಯವಾಗಿರುವುದೆಂದೂ ಗೊತ್ತಾಗಿದ್ದರೂ, ಶೂರಾಗ್ರೇಸರನಾದ ಶ್ರೀರಾಮನ ಬಾಣಗಳ ವೇಗವನ್ನು ತಡೆಯತಕ್ಕ ಪದಾರ್ಥವು ಇಲ್ಲಿ ಯಾವುದೊಂದೂ ಇಲ್ಲ. ॥೧೭॥ ಆದರೆ-ನಾನು ಅತನಿಗೆ ಧರ್ಮಭಾರ್ಯೆಯಾಗಿ ಪ್ರಾಣಪ್ರಿಯಳೆನಿಸಿದ್ದರೂ, ಮಹಾಶೂರನಾದ ಲಕ್ಷ್ಮಣನಿಗೆ ಅಗ್ರಜನೆನಿಸಿ ದೃಢಪರಾಕ್ರಮಿಯಾಗಿರುವ ಆ ಶ್ರೀರಾಮನು, ಈ ದುರುಳನಾದ ರಕ್ಕಸನು ನನ್ನನ್ನು ಅಪಹರಿಸಿರುವನೆಂತಲೂ, ನಾನಿಲ್ಲಿ ಸೆರೆಗೆ ಸಿಕ್ಕಿರುವೆನೆಂತಲೂ, ಬಹುಶಃ ಅವನು ತಿಳಿದಿರಲಾರ. ಹಾಗೆ ತಿಳಿಯದಿರೋಣವೇ ಇದುವರೆಗೂ ನನ್ನನ್ನು ಪಡೆಯದಿರುವುದಕ್ಕೆ ಕಾರಣವಾಗಿದೆ. ನಾನು ಇಲ್ಲಿ ಇರುವ ಸಂಗತಿಯು ಆತನ ಮನಸ್ಸಿಗೆ ಗೋಚರವಾಗಿದ್ದುದೇ ಆದರೆ, ಅಯ್ಯೋ! ನನಗುಂಟಾಗಿರುವ ಈ ತೊಂದರೆಯನ್ನು ಸಹಿಸುತಲಿದ್ದನೇ? ಎಂದಿಗೂ ಸಹಿಸಲಾರ ॥೧೮-೧೯॥ ಹಾ! ಏನುಮಾಡಲಿ! ಅನಾಥಳಾಗಿದೇನೆ, ದಿಕ್ಕಿಲ್ಲ. ಯಾರ ಸಂಗಡ ಹೇಳಿಕೊಳ್ಳಲಿ ಹೀನವಾದ ಈ ನನ್ನ ದುರವಸ್ಥೆಯನ್ನು ಇಲ್ಲಿಂದ ತಿಳಿದುಕೊಂಡು ಹೋಗಿ

ಗೃಧ್ರರಾಜೋಽಪಿ ಸ ರಣೇ ರಾವಣೇನ ನಿಪಾತಿತಃ ॥೨೦॥
ಕೃತಂ ಕರ್ಮ ಮಹತ್ತೇನ ಮಾಂ ತಥಾಽಭ್ಯವಪದ್ಯತಾ ।
ತಿಷ್ಠತಾ ರಾವಣದ್ವಂದ್ವೇ ವೃದ್ಧೇನಾಪಿ ಜಟಾಯುಷಾ ॥೨೧॥
ಯದಿ ಮಾ ಮಿಹ ಜಾನೀಯಾ ದ್ವರ್ತಮಾನಾಂ ಸ ರಾಘವಃ ।
ಅದ್ಯ ಬಾಣೈ ರಭಿಕ್ರುದ್ಧಃ ಕುರ್ಯಾ ಲ್ಲೋಕ ಮರಾಕ್ಷಸಂ ॥೨೨॥
ವಿಧಮೇಚ್ಚ ಪುರೀಂ ಲಂಕಾಂ ಶೋಷಯೇಚ್ಚ ಮಹೋದಧಿಂ ।

---

ಯಃ-ಯಾವ ಪುರುಷನು, ಅಧಿಗತ್ಯ- (ಅಧಿಗತ್ಯ) ಇಲ್ಲಿಂದಹೋಗಿ, ಹೃತೇತಿ-ನಿನ್ನ ಹೆಂಡತಿಯು ಅಪಹರಿಸಲ್ಪಟ್ಟಿರುವಳೆಂದು, ಮಾಂ-ನನ್ನನ್ನು, ರಾಘವಾಯ-ಶ್ರೀರಾಮನಿಗೆ, ನಿವೇದಯೇತ್- ತಿಳಿಸಬಲ್ಲನೋ ಸಃ-ಅಂತಹ, ಗೃಧ್ರರಾಜೋಽಪಿ-ಜಟಾಯುವುಕೂಡ, ರಾವಣೇನ-ರಾವಣಾಸುರನಿಂದ, ರಣೇ-ಯುದ್ಧದಲ್ಲಿ ನಿಪಾತಿತಃ-ಉರುಳಿಸಲ್ಪಟ್ಟನು ॥೨೦॥ ಮಾಂ-ನನ್ನನ್ನು, ತಥಾ-ರಾಮನ ಹೆಂಡತಿಯೆಂದು (ಹಾಗೆ) ಅಭ್ಯವಪದ್ಯತಾ-ತಿಳಿದಿದ್ದವನಾದಕಾರಣವೇ, [ಅಭ್ಯವಪದ್ಯಮಾನೇನ] ವೃದ್ಧೇನಾಪಿ-ಮುಪ್ಪಿನ ಮುದುಕನಾದ್ದರೂ, ರಾವಣದ್ವಂದ್ವೇ - ರಾವಣನ ಬಾಹುಯುದ್ಧದಲ್ಲಿ, ತಿಷ್ಠತಾ- ಇದಿರುಬಿದ್ದ, ತೇನ - ಆ ಜಟಾಯುವಿನಿಂದ, ಮಹತ್-ಅಸಾಧ್ಯವಾದ, ಕರ್ಮ-ಕೆಲಸವು (ನನಗಾಗಿ ಉಪಕಾರವು) ಕೃತಂ - ಮಾಡಲ್ಪಟ್ಟಿತು ॥೨೧॥ ಸಃ - ಆ, ರಾಘವಃ - ಶ್ರೀರಾಮಚಂದ್ರನು, ಮಾಂ - ನನ್ನನ್ನು, ಇಹ - ಈ ಲಂಕೆಯಲ್ಲಿ, ವರ್ತಮಾನಾಂ - ಇರತಕ್ಕವಳನ್ನಾಗಿ, ಜಾನೀಯಾದ್ಯದಿ - ತಿಳಿದಪನೇ ಆದರೆ, ಅಭಿಕ್ರುದ್ಧಃ- ಬಹುಕೋಪಿಸಿದವನಾಗಿ, ಅದ್ಯ - ಈ ದಿನವೇ, ಲೋಕಂ - ಪ್ರಪಂಚವನ್ನು, ಬಾಣೈಃ - ಶರಗಳಿಂದ, ಅರಾಕ್ಷಸಂ- ರಾಕ್ಷಸರೇ ಹುಟ್ಟಿಲ್ಲದುದನ್ನಾಗಿ, ಕುರ್ಯಾತ್ - ಮಾಡಬಲ್ಲನು ॥೨೨॥ ಲಂಕಾಂ - ಲಂಕೆಯೆಂಬ, ಪುರೀಂಚ - ಪಟ್ಟಣವನ್ನೂ, ವಿಧಮೇತ್ - ಗಾಳಿಗೆತ್ತಬಲ್ಲನು (ಊದಿಬಿಡಬಲ್ಲನು) ಮಹೋದಧಿಂಚ-ಮಹಾಸಮುದ್ರ

---

ಆ ನನ್ನಸ್ವಾಮಿಯಾದರಾಘವನಿಗೆ "ನಿನ್ನಹೆಂಡತಿಯನ್ನು ರಾವಣನು ಅಪಹರಿಸಿ ಇದ್ದಾನೆ. ಅವಳ ಸಂಕಟವು ಹೇಳತೀರದು ಎಂದು ತಿಳಿಸ ತಕ್ಕವರಾರು ? ಒಂದು ವೇಳೆ ಈ ಪಾಪಾತ್ಮನಾದ ರಾವಣನು ನನ್ನನ್ನು ಇಲ್ಲಿಗೆ ತರುವ ಮಾರ್ಗದ ಮಧ್ಯದಲ್ಲಿ ನನ್ನನ್ನು ಕಂಡ ಜಟಾಯುವೆಂಬ ಗೃಧ್ರರಾಜನಾದರೂ ಬದುಕಿಯಿದ್ದರೆ ದಯಾನಿಧಿಯಾದ ದಾಶರಥಿಗೆ ತಿಳಿಸಬಹುದಾಗಿತ್ತು. ನನಗುಂಟಾಗಿದ್ದ ಹಿಂಸೆಯನ್ನು ನೋಡಿ ಸಹಿಸಲಾರದೆ, ರಾವಣನೊಡನೆ ಕಾಳಗಕ್ಕೆ ತೊಡಗಿ ಬಹಳವಾಗಿ ಹೋರಾಡಿ ಆಜಟಾಯುವು ಈ ನೀಚನಾದ ರಾವಣನಿಂದ ಕೊಲ್ಲಲ್ಪಟ್ಟನು ॥೨೦॥ ಆಜಟಾಯುವಾದರೋ ಬಹಳ ಮುದುಕ, ಏನಮಾಡಬಲ್ಲನು. ನನ್ನ ಸಂಕಟವನ್ನು ನೋಡಿ ಹೇಗಾದರೂ ನನ್ನನ್ನು ಬಿಡಿಸಿಕೊಳ್ಳಬೇಕೆಂದು ಬಹುಪ್ರಯಾಸ ಪಟ್ಟು, ಬಹಳ ಹೊತ್ತಿನವರೆಗೂ ಈ ರಾವಣನೊಡನೆ ಕಾದಿದರೂ, ಸಾರ್ಥಕವಾಗದೆ ಹೋಯಿತು. ನನ್ನ ದುರದೃಷ್ಟಕ್ಕೆ ಯಾರು ಏನಮಾಡಬಲ್ಲರು ? ॥೨೧॥ ನಾನು ಇಲ್ಲಿರುವೆನೆಂಬ ಸುದ್ದಿಯು ಹೇಗಾದರೂ ರಾಮನಿಗೆ ಮುಟ್ಟಿದುದೇ ಆದರೆ ಆಕ್ಷಣದಲ್ಲಿಯೇ ಕಾಲರುದ್ರನಂತೆ ಕೋಪಿಸಿಕೊಂಡ ಶ್ರೀರಾಮನು ತನ್ನ ಅಮೋಘವಾದ ಬಾಣಗಳಿಂದ ಈ ಪ್ರಪಂಚದಲ್ಲಿ ರಾಕ್ಷಸರ ಸುಳಿವೇ ಇಲ್ಲದಂತೆ ಮಾಡಬಲ್ಲನು. ॥೨೨॥ ಮತ್ತು ಈ ಲಂಕಾಪುರಿಯನ್ನು ಧ್ವಂಸಮಾಡ ಬಲ್ಲನು. ಈ ನಗರಿಯನ್ನು ಬಳಸಿರುವ ಕಡಲನ್ನು ಇಂಗಿಸಬಲ್ಲ

ರಾವಣಸ್ಯ ಚ ನೀಚಸ್ಯ ಕೀರ್ತಿಂ ನಾಮ ಚ ನಾಶಯೇತ್ ॥೨೩॥
ತತೋ ನಿಹತನಾಥಾನಾಂ ರಾಕ್ಷಸೀನಾಂ ಗೃಹೇಗೃಹೇ ।
ಯಥಾಹ ಮೇವಂ ರುದತೀ ತಥಾ ಭೂಯೋ ನ ಸಂಶಯಃ ॥೨೪॥
ಅನ್ವಿಷ್ಯ ರಕ್ಷಸಾಂ ಲಂಕಾಂ ಕುರ್ಯಾ ದ್ರಾಮ ಸ್ಸಲಕ್ಷ್ಮಣಃ ।
ನ ಹಿ ತಾಭ್ಯಾಂ ರಿಪು ರ್ದೃಷ್ಟೋ ಮುಹೂರ್ತ ಮಪಿ ಜೀವತಿ ॥೨೫॥
ಚಿತಾಧೂಮಾ ಕುಲಪಥಾ ಗೃಧ್ರಮಣ್ಡಲ ಸಂಕುಲಾ ।
ಅಚಿರೇಣ ತು ಲಂಕೇಯಂ ಶ್ಮಶಾನ ಸದೃಶೀ ಭವೇತ್ ॥೨೬॥

---

ವನ್ನಾದರೂ, ಶೋಷಯೇಚ್ಛ - ಬತ್ತಿಸಬಲ್ಲನು, (ಇಂಗಿಸಬಲ್ಲನು) ನೀಚಸ್ಯ - ಅತ್ಯಲ್ಪನಾದ, ರಾವಣಸ್ಯ - ರಾವಣನ, ಕೀರ್ತಿಂ - ಹೆಸರುವಾಸಿಯನ್ನು, ನಾಮಚ - ಹೆಸರನ್ನೂ, ನಾಶಯೇತ್ - ಅಳಿಸಬಲ್ಲನು ॥೨೩॥ ತತಃ - ಆಮೇಲೆ, ಅಹಂ - ನಾನು, ಯಥಾ - ಹೇಗೆ, ಭೂಯಃ- ಅಡಿಗಡಿಗೂ, ರುದತೀ - ಅಳುತಲಿರುವೆನೋ, ತಥಾ - ಹಾಗೆಯೇ, ನಿಹತ - ಧ್ವಂಸಮಾಡಲ್ಪಟ್ಟ, ನಾಥಾನಾಂ - ಪತಿಯರುಳ್ಳ, ರಾಕ್ಷಸೀನಾಂ - ರಕ್ಕಸಿಯರ, ಗೃಹೇಗೃಹೇ - ಮನೆಮನೆಯಲ್ಲಿಯೂ (ರುದಂತ್ಯಃ - ಅಳುತಲಿರುವ ಹೆಂಗಸರು, ಭವಿಷ್ಯಂತಿ - ಇರಹೋಗುವರು) ನಸಂಶಯಃ - ಸಂದೇಹವಿಲ್ಲ ॥೨೪॥ ಸಲಕ್ಷ್ಮಣಃ - ಲಕ್ಷ್ಮಣನಿಂದೊಡಗೂಡಿದ, ರಾಮಃ - ಶ್ರೀರಾಮನು, ರಕ್ಷಸಾಂ - ರಾಕ್ಷಸರ, ಲಂಕಾಂ - ಲಂಕೆಯನ್ನು, ಅನ್ವಿಷ್ಯ - ಹುಡುಕಿ, (ರಿಪುನಾಶನಂ - ಶತ್ರುಸಂಹಾರವನ್ನು) ಕುರ್ಯಾತ್ -ಮಾಡುವನು, ತಾಭ್ಯಾಂ - ಆ ರಾಮಲಕ್ಷ್ಮಣರಿಂದ, ದೃಷ್ಟಃ - ನೋಡಲ್ಪಟ್ಟ, ರಿಪುಃ - ಹಗೆಯಾದ ಈ ರಾವಣನು, ಮುಹೂರ್ತಮಪಿ- ಅಲ್ಪಕಾಲವು ಕೂಡ, ನಜೀವತಿ - ಬದುಕಲಾರ, ॥೨೫॥

ಇಯಂ - ಈ, ಲಂಕಾ - ಲಂಕಾನಗರವು, ಚಿತಾ - ಶ್ಮಶಾನಭೂಮಿಯು, ಧೂಮ - ಹೊಗೆಯಿಂದ, ಆಕುಲ - ತುಂಬಿದ, ಪಥಾ - ಮಾರ್ಗಗಳುಳ್ಳುದಾಗಿಯೂ, ಗೃಧ್ರಮಂಡಲ ಸಂಕುಲಾ - ಹದ್ದುಗಳ ಹಿಂಡಿನಿಂದ ಒಡಗೂಡಿದುದಾಗಿಯೂ, ಅಚಿರೇಣತು - ಶೀಘ್ರದಲ್ಲಿಯೇ, ಶ್ಮಶಾನಸದೃಶೀ - ಸುಡುಗಾಡಿಗೆ ಸಮಾನವಾದುದು, ಭವೇತ್ - ಆಗುವುದು ॥೨೬॥ ಅಚಿರೇಣ- ಶೀಘ್ರವಾದ, ಕಾಲೇನೈವ- ಸಮಯದೊಳಗೆ,

---

ಪರಮನೀಚನಾದ ಈ ರಾವಣನ ಕೀರ್ತಿಯೂ ನಾಮವೂ ನಿರ್ನಾಮವಾಗುವಂತೆ ಮಾಡಲೂಬಲ್ಲನು ॥ ೨೩ ॥ ನನ್ನ ಪ್ರಾಣನಾಥನು ಹಾಗೆಮಾಡಿದುದೇ ಆದರೆ, ಬಳಿಕ ಈ ಲಂಕೆಯೊಳಗೆ ನಾನು ಹೇಗೆ ದುಃಖಪಡುತಲಿರುವೆನೋ ಆಪ್ರಕಾರವಾಗಿ ಪ್ರತಿಯೊಂದು ಮನೆಯಲ್ಲಿಯೂ ಗಂಡಂದಿರನ್ನು ಕಳೆದುಕೊಂಡ ರಕ್ಕಸಿಯರ ಗೋಳು ಅಖಂಡವಾಗಿ ಉಂಟಾಗದೆ ಹೋಗುವುದಿಲ್ಲ ॥೨೪॥ ಲಕ್ಷ್ಮಣನಿಂದ ಸಹಿತನಾದ ಶ್ರೀರಾಮಚಂದ್ರನು ಸಮುದ್ರಮಧ್ಯದಲ್ಲಿರುವ ಈ ರಾಕ್ಷಸರ ಲಂಕೆಯನ್ನು ಹೇಗಾದರೂ ಹುಡುಕಿ ಇಲ್ಲಿಗೆ ಬರದೆ ಇರುವುದಿಲ್ಲ. ಆ ರಾಮಲಕ್ಷ್ಮಣರಿಗೆ ಈ ರಾವಣನು ಗೋಚರಿಸಿದುದೇ ಆದರೆ ಒಂದು ನಿಮಿಷಮಾತ್ರವಾದರೂ ಜೀವಿಸಲಾರ ॥೨೫॥ ಅತ್ಯಲ್ಪಕಾಲದಲ್ಲಿಯೇ ಈ ಲಂಕೆಯು ಸುಡುಗಾಡಿನಂತಾಗಿ ಅಲ್ಲಲ್ಲಿ ಚಿತೆಯ ಮೇಲಿಟ್ಟು ಸುಡಲ್ಪಡುತಲಿರುವ ರಕ್ಕಸರ ಹೆಣಗಳ ಹೊಗೆಯು ಮಾರ್ಗಗಳಲ್ಲೆಲ್ಲ ಮುತ್ತಿಕೊಂಡು, ಮತ್ತೆ ಕೆಲವು ಹೆಣಗಳನ್ನು ತಿನ್ನಲಿಕ್ಕೆ ಮುತ್ತಿದ ಹದ್ದುಗಳಿಂದ ಪೂರ್ಣವಾಗಿ, ದೊಡ್ಡ ಶ್ಮಶಾನದಂತೆ ಆಗದೆ ಇರುವುದಿಲ್ಲ ॥೨೬॥

ಅಚಿರೇಣೈವ ಕಾಲೇನ ಪ್ರಾಪ್ಸ್ಯಾಮ್ಯೇವ ಮನೋರಥಂ ।
ದುಷ್ಪ್ರಸ್ಥಾನೋಽಯಮಾಖ್ಯಾತಿ ಸರ್ವೇಷಾಂ ವೋ ವಿಪರ್ಯಯಂ ॥೨೭॥
ಯಾದೃಶಾನೀಹ ದೃಶ್ಯಂತೇ ಲಂಕಾಯಾಮಶುಭಾನಿ ವೈ ।
ಅಚಿರೇಣ ತು ಕಾಲೇನ ಭವಿಷ್ಯತಿ ಹತಪ್ರಭಾ ॥೨೮॥
ನೂನಂ ಲಂಕಾ ಹತೇ ಪಾಪೇ ರಾವಣೇ ರಾಕ್ಷಸಾಧಮೇ ।
ಶೋಷಂ ಯಾಸ್ಯತಿ ದುರ್ಧರ್ಷಾ ಪ್ರಮದಾ ವಿಧವಾ ಯಥಾ ॥೨೯॥
ಪುಣ್ಯೋತ್ಸವಸಮುತ್ಥಾ ಚ ನಷ್ಟಭರ್ತ್ರೀ ಸರಾಕ್ಷಸೀ ।
ಭವಿಷ್ಯತಿ ಪುರೀ ಲಂಕಾ ನಷ್ಟಭರ್ತ್ರೀ ಯಥಾಂಗನಾ ॥೩೦॥

---

ಮನೋರಥಂ - ನನ್ನ ಕೋರಿಕೆಯನ್ನು, ಪ್ರಾಪ್ಸ್ಯಾಮ್ಯೇವ - ಹೊಂದಲೇ ಹೊಂದುವೆನು, ಅಯಂ, ಈ, ದುಷ್ಪ್ರಸ್ಥಾನಃ - ಕೆಟ್ಟನಡತೆಯು, ಸರ್ವೇಷಾಂವಃ - ನಿಮ್ಮೆಲ್ಲರಿಗೂ, ವಿಪರ್ಯಯಂ - ಕೇಡನ್ನು, ಆಖ್ಯಾತಿ - ಹೇಳುತಲಿದೆ ॥೨೭॥ ಇಹ - ಈ, ಲಂಕಾಯಾಂ - ಲಂಕೆಯಲ್ಲಿ, ಯಾದೃಶಾನಿ - ಎಂತಹ, ಅಶುಭಾನಿ - ಅಮಂಗಳಗಳು (ಅಪಶಕುನಗಳು) ದೃಶ್ಯಂತೇ - ಕಾಣಬರುತ್ತವೆಯೋ, ತಾದೃಶೈಃ - ಅಂತಹ ದುಶ್ಶಕುನಗಳಿಂದ, (ಲಂಕಾ - ಲಂಕೆಯು) ಅಚಿರೇಣಕಾಲೇನ - ಅಲ್ಪಕಾಲದಲ್ಲಿಯೇ, ಹತಪ್ರಭಾ-ನಷ್ಟವಾದ ಕಾಂತಿಯುಳ್ಳುದು, ಭವಿಷ್ಯತಿವೈ - ಆಗುವುದು ॥೨೮॥ ರಾಕ್ಷಸಾಧಮೇ - ನೀಚರಾಕ್ಷಸನಾದ-ಪಾಪೇ - ಪಾಪಾತ್ಮನಾಗಿರುವ, ರಾವಣೇ - ರಾವಣಾಸುರನು, ಹತೇ (ಸತಿ)-ಕೊಲ್ಲಲ್ಪಡುತಿರಲಾಗಿ, ದುರ್ಧರ್ಷಾ - ತಿರಸ್ಕರಿಸಲಶಕ್ಯವಾದ, ಲಂಕಾ - ಲಂಕಾಪುರವಾದರೋ, ಪ್ರಮದಾ - ಉಕ್ಕುತಲಿರುವ ಪ್ರಾಯವುಳ್ಳ, ವಿಧವಾಯಥಾ - ಪೂರ್ವಸುಮಂಗಲಿಯು ಹೇಗೋಹಾಗೆ, ಶೋಷಂ-ನಾಶವನ್ನು, ಯಾಸ್ಯತಿ-ಹೊಂದುವುದು, ನೂನಂ - ನಿಶ್ಚಯ ॥೨೯॥ ಪುಣ್ಯೋತ್ಸವಸಮುತ್ಥಾ - ಮಹೋತ್ಸವಗಳಿಂದ ಬಿಡಲ್ಪಟ್ಟವಳಾಗಿಯೂ, ನಷ್ಟಭರ್ತ್ರೀ - ಪತಿಹೀನಳಾಗಿಯೂ, ಸರಾಕ್ಷಸೀ - ತನಗೆಸಮಾನರಾದ ರಾಕ್ಷಸಿಯರಿಂದೊಡಗೂಡಿದವಳಾಗಿಯೂ ಇರುವ, ಲಂಕಾಪುರೀ - ಲಂಕಾನಗರಿಯೆಂಬ ನಾರಿಯು, ನಷ್ಟಭರ್ತ್ರೀ - ಸತ್ತಗಂಡನುಳ್ಳ, ಅಂಗನಾಯಥಾ - ಹೆಂಗಸಿನಂತೆ, ಭವಿಷ್ಯತಿ-ಆಗುವಳು ॥೩೦॥ ಶೂರೋನಾಮ-ಪರಾಕ್ರಮಶಾಲಿಯೆಂದು

---

ಎಲೆ ರಕ್ಕಸಿಯರುಗಳಿರಾ ! ಅತ್ಯಲ್ಪಕಾಲದಲ್ಲಿಯೇ ನನ್ನ ಕೋರಿಕೆಯಂತೆ ನನ್ನ ಪ್ರಾಣಪ್ರಿಯನನ್ನು ನಿಶ್ಚಯವಾಗಿಯೂ ಪಡೆಯುವೆನು. ನಿಮ್ಮಗಳ ದುರ್ನಡತೆಯು ನಿಮ್ಮಗಳಗೆಲ್ಲರಿಗೂ ಮಹಾವಿಪತ್ತನ್ನು ತಂದು ಒಡ್ಡುತ್ತದೆ. ॥ ೨೭ ॥ ಈಗ ಈ ನಿಮ್ಮ ಲಂಕೆಯೊಳಗೆ ಕಾಣಬರುವ ಅಪಶಕುನಗಳಿಂದ ಅತ್ಯಲ್ಪ ಕಾಲದಲ್ಲಿಯೇ ನಾಥನಾದ ರಾವಣನು ನಾಶವನ್ನು ಪಡೆಯುವುದರಿಂದ ಈ ಲಂಕೆಯು ವಿಧವೆಯಂತೆ ಕಾಂತಿ ಹೀನವಾಗುವುದು. ರಾಕ್ಷಸಾಧಮನೂ, ಮಹಾ ಪಾಪಿಯೂ ಆಗಿರುವ ಈ ರಾವಣನು ನಶಿಸಿಹೋದ ಬಳಿಕ ಮಹತ್ತರವಾದ ತಾರುಣ್ಯದಲ್ಲಿರುವ ಮಾನಿನಿಯು ವಿಧವೆಯಾದರೆ ಹೇಗೋಹಾಗೆ, ಈ ಲಂಕಾನಾರಿಯು ಹಾಳಾಗಿ ಹೋಗದೆ ಇರುವುದಿಲ್ಲ. ಪತಿಹೀನಳಾದ ಹೆಂಗಸು ಹಬ್ಬಹುಣ್ಣಿಮೆಗಳನ್ನೂ, ಸುಖಸಾಮ್ರಾಜ್ಯಗಳನ್ನೂ ಶುಭೋದಯಗಳನ್ನೂ ಕಳೆದುಕೊಂಡು ದುಃಖಿಸುವಹಾಗೆ ಭರ್ತನಾದ ರಾವಣನು ನಾಶವಾದ ಬಳಿಕ ಈ ಲಂಕಾನಾರಿಯು ಸಕಲೋತ್ಸವಗಳನ್ನೂ ಕಳೆದು ಕೊಂಡು ಕಾಂತಿಹೀನಳಾಗಿ, ದುಃಖಕ್ಕೆ ಈಡಾಗುವುದು ದಿಟ ॥೨೮-೨೯-೩೦॥

ನೂನಂ ರಾಕ್ಷಸಕನ್ಯಾನಾಂ ರುದತೀನಾಂ ಗೃಹೇಗೃಹೇ ।
ಶ್ರೋಷ್ಯಾಮಿ ನಚಿರಾದೇವ ದುಃಖಾರ್ತಾನಾಮಿಹ ಧ್ವನಿಂ ॥೩೧॥
ಸಾಂಧಕಾರಾ ಹತದ್ಯೋತಾ ಹತರಾಕ್ಷಸಪುಂಗವಾ ।
ಭವಿಷ್ಯತಿ ಪುರೀ ಲಂಕಾ ನಿರ್ದಗ್ಧಾ ರಾಮಸಾಯಕೈಃ ॥೩೨॥
ಯದಿ ನಾಮ ಸ ಶೂರೋ ಮಾಂ ರಾಮೋ ರಕ್ತಾಂತಲೋಚನಃ ।
ಜಾನೀಯಾದ್ವರ್ತಮಾನಾಂ ಹಿ ರಾವಣಸ್ಯ ನಿವೇಶನೇ ॥೩೩॥
ಅನೇನ ತು ನೃಶಂಸೇನ ರಾವಣೇನಾಧಮೇನ ಮೇ ।
ಸಮಯೋ ಯಸ್ತು ನಿರ್ದಿಷ್ಟಸ್ತಸ್ಯ ಕಾಲೋಽಯಮಾಗತಃ ॥೩೪॥

ಪ್ರಸಿದ್ಧನಾದ, ರಕ್ತಾಂತಲೋಚನಃ - ಕೆಂಪುಬಣ್ಣದ ಕುಡಿಗಣ್ಣುಳ್ಳ, ಸಃ - ಆ, ರಾಮಃ - ಶ್ರೀ ರಾಮನು, ಮಾಂ - ನನ್ನನ್ನು, ರಾವಣಸ್ಯ - ರಾವಣನ, ನಿವೇಶನೇ - ಮನೆಯಲ್ಲಿ, ವರ್ತಮಾನಾಂ - ಇರುವವಳನ್ನಾಗಿ, ಜಾನೀಯಾದ್ಯದಿ - ತಿಳಿದವನೇ ಆದರೆ, ಹಿ - ನಿಶ್ಚಯವಾಗಿಯೂ, ॥೩೧॥ ರಾಮಸಾಯಕೈಃ - ಆ ರಾಮಬಾಣಗಳಿಂದ, ಲಂಕಾ-ಲಂಕೆಯೆಂಬ, ಪುರೀ-ಪಟ್ಟಣವು, ನಿರ್ದಗ್ಧಾ - ಸಂಪೂರ್ಣವಾಗಿ ಸುಡಲ್ಪಟ್ಟುದಾಗಿಯೂ, ಹತ - ಕೊಲ್ಲಲ್ಪಟ್ಟ, ರಾಕ್ಷಸಪುಂಗವಾ - ರಾಕ್ಷಸ ಶ್ರೇಷ್ಠರುಳ್ಳುದಾಗಿಯೂ ಹತದ್ಯೋತಾ- ನಷ್ಟಪ್ರಭೆಯುಳ್ಳುದಾಗಿಯೂ ಇದ್ದು, ಸಾಂಧಕಾರಾ - ಗಾಢಾಂಧಕಾರದಿಂದೊಡಗೂಡಿದುದೂ, ಭವಿಷ್ಯತಿ - ಆಗುವುದು ॥೩೨॥ ಇಹ - ಈ ಲಂಕೆಯಲ್ಲಿ, ಗೃಹೇಗೃಹೇ - ಪ್ರತಿಯೊಂದು ಮನೆಯಲ್ಲಿಯೂ, ರುದತೀನಾಂ - ಗೋಳಾಡುತಲಿರುವ, ದುಃಖಾರ್ತಾನಾಂ - ವ್ಯಸನಪೀಡಿತರಾದ, ರಾಕ್ಷಸಕನ್ಯಾನಾಂ - ರಾಕ್ಷಸನಾರಿಯರ, ಧ್ವನಿಂ - ರೋದನ ಧ್ವನಿಯನ್ನು, ಅಚಿರಾದೇವ - ಸ್ವಲ್ಪ ಕಾಲದಲ್ಲಿಯೇ, ಶ್ರೋಷ್ಯಾಮಿ - ಕೇಳುವೆನು ॥೩೩॥ (ಈ ಮಧ್ಯೆ ಏನು ಅನರ್ಥವು ಸಂಭವಿಸುವುದೋ ಎಂದುಕೊಳ್ಳುತ್ತಾಳೆ) ನೃಶಂಸೇನ - ಘಾತುಕನಾದ, ಅಧಮೇನ - ನೀಚನಾಗಿರುವ, ಅನೇನ - ಈ, ರಾವಣೇನ - ರಾವಣನಿಂದ, ಮೇ - ನನಗೆ, ಯಃ - ಯಾವ, ಸಮಯಸ್ತು - ಕಾಲವಾದರೆ (ಗಡುವಾದರೆ) ನಿರ್ದಿಷ್ಟಃ -

ಈ ರಾವಣನ ಮನೆಯಲ್ಲಿರುವ ಸಮಾಚಾರವನ್ನು ಶೌರ್ಯ ಧೈರ್ಯಾದಿಗುಣಸಂಪನ್ನನಾಗಿರುವ ಕಮಲಪತ್ರಾಕ್ಷನಾದ ಶ್ರೀರಾಮನು ಯಾರ ಮೂಲಕವಾಗಿಯಾದರೂ ತಿಳಿದವನೇ ಆದರೆ ॥೩೧॥ ತತ್‌ಕ್ಷಣದಲ್ಲಿಯೇ ತನ್ನ ಕ್ರೂರವಾದ ಬಾಣಗಳಿಂದ ಈ ಲಂಕೆಯನ್ನು ಸಮೂಲವಾಗಿ ಸುಟ್ಟೇ ಬಿಡುವನು, ಆಗ ಈಲಂಕೆಗೆ ರಕ್ಕಸರ ಹಿಂಡೆಲ್ಲ ಮಡಿದು ಹೋಗುವುದರಿಂದ ಕಳೆಯೇ ಇಲ್ಲದೆ ಹೋಗುವುದು, ಕಗ್ಗತ್ತಲೆಯು ಕವಿಯುವುದು ॥೩೨॥ ರಕ್ಕಸಿಯರೆಲ್ಲ ತಮ್ಮ ರಮಣರನ್ನು ತೊರೆದುಕೊಳ್ಳುವುದರಿಂದ ಬೀದಿಬೀದಿಗಳಲ್ಲಿಯೂ, ಮನೆ ಮನೆಗಳೊಳಗೂ ಗೋಳಿಡುವರು, ಆ ಹೆಂಗಸರ ಶೋಕದಿಂದ ಉಂಟಾದ ಆರ್ತಧ್ವನಿಯನ್ನು ನಾನು ಖಂಡಿತವಾಗಿಯೂ ಕೇಳುವೆನು, ಇದು ನಿಶ್ಚಯ ॥೩೩॥ ಎಂದು ಹೇಳಿ, ಬಳಿಕ ತನ್ನ ಮನದೊಳಗೆ:-ಮೊದಲೇ ಅನೀಚನೂ ಕಟುಕನೂ ಆದ ರಾವಣನು ತನ್ನ ಇಷ್ಟದಂತೆ ನಾನು ನಡೆದುಕೊಳ್ಳುವ ವಿಷಯದಲ್ಲಿ ಒಂದು ವರ್ಷದ ಕಾಲವು ಅವಧಿ ಎಂದು ಹೇಳಿ ಇದ್ದು ಅದರಲ್ಲಿ ಹತ್ತು ತಿಂಗಳು ಕಳೆದು ಹೋಗಲು ಪುನಃ ಇನ್ನು ಎರಡುತಿಂಗಳು ಮಾತ್ರ ಗಡುವು ಉಳಿದಿರುವುದೆಂದು ತಿಳಿಸಿರುವನು.ಆ ಗೊತ್ತಾದಕಾಲವು ಸಮೀಪಿಸಿ ಬರುತಲಿದೆ

ಅಕಾರ್ಯಂ ಯೇ ನ ಜಾನಂತಿ ನೈರ್ಋತಾಃ ಪಾಪಕಾರಿಣಃ ।
ಅಧರ್ಮಾತ್ತು ಮಹೋತ್ಪಾತೋ ಭವಿಷ್ಯತಿ ಹಿ ಸಾಂಪ್ರತಂ ॥೧೫॥
ನೈತೇ ಧರ್ಮಂ ವಿಜಾನಂತಿ ರಾಕ್ಷಸಾಃ ಪಿಶಿತಾಶನಾಃ ।
ಧ್ರುವಂ ಮಾಂ ಪ್ರಾತರಾಶಾರ್ಥೇ ರಾಕ್ಷಸಃ ಕಲ್ಪಯಿಷ್ಯತಿ ॥೧೬॥
ಸಾಽಹಂ ಕಥಂ ಕರಿಷ್ಯಾಮಿ ತಂ ವಿನಾ ಪ್ರಿಯದರ್ಶನಂ ।
ರಾಮಂ ರಕ್ತಾಂತನಯನಮಪಶ್ಯಂತೀ ಸುದುಃಖಿತಾ ॥೧೭॥
ಯದಿ ಕಶ್ಚಿತ್ಪ್ರದಾತಾ ಮೇ ವಿಷಸ್ಯಾದ್ಯ ಭವೇದಿಹ ।

ಗೊತ್ತುಮಾಡಲ್ಪಟ್ಟಿರುವುದೋ, (ಗಡುವುಮಾಡಲ್ಪಟ್ಟದೆಯೋ) ತಸ್ಯ- ಆ ಅವಧಿಯು, ಅಯಂ-ಈ, ಕಾಲಃ - ಕ್ಲುಪ್ತಕಾಲವು, ಆಗತಃ - ಸಮೀಪಿಸುತಲಿದೆ ॥೧೪॥ ಪಾಪಕಾರಿಣಃ - ಪಾಪದ ಕೆಲಸವನ್ನು ಮಾಡತಕ್ಕ, ಯೇ - ಯಾವ. ನೈರ್ಋತಾಃ - ಈ ರಾಕ್ಷಸರು, ಅಕಾರ್ಯಂ - ಅಕೃತ್ಯವನ್ನು, ನಜಾನಂತಿ - ಅರಿಯರೋ, ತೇಷಾಂ - ಅಂತಹ ರಾಕ್ಷಸರ, ಅಧರ್ಮಾತ್ - ಅನ್ಯಾಯದ ದೆಸೆಯಿಂದ, ಸಾಂಪ್ರತಂ - ಈಗ, ಮಹೋತ್ಪಾತಸ್ತು - ದೊಡ್ಡ ಕೇಡು, ಭವಿಷ್ಯತಿ - ಉಂಟಾಗಬಹುದು ॥೧೫॥ ಪಿಶಿತಾಶನಾಃ - ಮಾಂಸಭಕ್ಷಕರಾದ, ಏತೇ - ಈ, ರಾಕ್ಷಸಾಃ - ನಿಶಾಚರರು, ಧರ್ಮಂ - ನ್ಯಾಯವನ್ನು, ನಜಾನಂತಿ - ತಿಳಿಯುವವರಲ್ಲ, ರಾಕ್ಷಸಃ - ರಾವಣನು, ಮಾಂ - ನನ್ನನ್ನು, ಪ್ರಾತರಾಶಾರ್ಥೇ - ಬೆಳಗಿನ ಊಟದ ನಿಮಿತ್ತವಾಗಿ, ಕಲ್ಪಯಿಷ್ಯತಿ - ಅಣಿಮಾಡಿಕೊಳ್ಳುವನು, ಧ್ರುವಂ - ನಿಶ್ಚಯ ॥೧೬॥ ಸಾ-ಅಂತಹ, ಅಹಂ - ನಾನು, ರಕ್ತಾಂತನಯನಂ - ಕೆಂಪುಬಣ್ಣದ ಕಣ್ಣುಳ್ಳ, ರಾಮಂ - ಶ್ರೀರಾಮನನ್ನು, ಅಪಶ್ಯಂತೀ - ಕಾಣದಿರುವವಳಾಗಿ, ಸುದುಃಖಿತಾ - ಬಹುಶೋಕವುಳ್ಳವಳಾಗುತ್ತಾ, ಪ್ರಿಯದರ್ಶನಂ- ಇಷ್ಟವಾದ ದರ್ಶನವುಳ್ಳ, ತಂ ವಿನಾ - ಆ ಪ್ರಾಣಕಾಂತನನ್ನು ಬಿಟ್ಟು, ಕಿಂವಾ - ಯಾವ ಕೆಲಸವನ್ನಾಗಲಿ, ಕಥಂ - ಹೇಗೆ, ಕರಿಷ್ಯಾಮಿ - ಮಾಡಬಲ್ಲೆನು (ಮಾಡಹೋಗುವೆನು) ॥೧೭॥ ಅದ್ಯ - ಈಗ, ಕಶ್ಚಿತ್ - ಯಾವನಾದರೂ. ಮೇ -

॥೧೪॥ ಬಂದು ವೇಳೆ ಆ ಸಮಯವು ಕಳೆದುಹೋಗಲು ಪೂರ್ವದಂತೆಯೇ ನಾನು ಹಟವಾದಿನಿಯಾಗಿರುವುದೇನೋ ದಿಟ. ಆಗ ಇವರು ನನ್ನನ್ನು, ಹೆಂಗಸು, ಕೊಲ್ಲಬಾರದು, ಸ್ತ್ರೀಹತ್ಯೆ ಮಹಾಪಾತಕಕರವಾಗಿ ಮಹಾನರಕ ಪ್ರಾಪ್ತಿಹೇತುವು, ಸರ್ವಥಾ ಅಕಾರ್ಯ, ಎಂದು ನನ್ನನ್ನು ಇವರು ಬಿಟ್ಟುಬಿಡುವರೇ ? ಸರ್ವದಾ ಪಾಪಾಚರಣೆಯಲ್ಲಿರುವ ರಾಕ್ಷಸರು ಕಾರ್ಯಾಕಾರ್ಯಗಳ ವಿವೇಚನೆಯನ್ನು ಬಲ್ಲರೇ ? ಅವರ ಅಧರ್ಮ ಪ್ರವೃತ್ತಿಯಿಂದ ನನಗೆ ಮಹಾ ವಿಪತ್ತು ಸಂಭವಿಸುವುದು ದಿಟ ॥೧೫॥ ಸರ್ವದಾ ಮಾಂಸಭಕ್ಷಕರಾಗಿರುವ ಕಟುಕರಾದ ರಾಕ್ಷಸರು ಧರ್ಮದ ಮರ್ಮವನ್ನು ಏನಬಲ್ಲರು. ಯಾರಾದರೆ ಬಲ್ಲರೋ ಅಂಥವರಾರೂ ಈ ನೀಚನಿಗೆ ಧರ್ಮವನ್ನು ಬೋಧಿಸತಕ್ಕವರಿಲ್ಲ. ಆದಕಾರಣ ಈ ನೀಚನು ಹೇಳಿದ್ದಂತೆ ನನ್ನನ್ನು ತನ್ನ ಬೆಳಗಿನ ಊಟಕ್ಕೋಸ್ಕರ ಕೊಂದು ತಿನ್ನುವುದೇನೋ ದಿಟ, ॥೧೬॥ ಹೀಗಿ ಎವಲ್ಲಿ ಕಮಲಪತ್ರದಂತೆ ಕೆಂಪಾದ ಕುಡಿಗಣ್ಣುಳ್ಳ, ಪರಮಸೌಂದರ್ಯಸಂಪನ್ನನಾದ ಆ ನನ್ನ ಪ್ರಾಣನಾಥನನ್ನು ಅಗಲಿ ಈ ಅಪಾರವಾದ ದುಃಖಸಮುದ್ರದಲ್ಲಿ ಮುಳುಗಿರುವ ಅಬಲೆಯಾದ ನಾನು ಏನಮಾಡಲಿಕ್ಕೆ ಆದೀತು ? ॥೧೭॥ ಅಯ್ಯೋ ! ಇಂತಹ ದುಃಖಸಮಯದಲ್ಲಿ ಯಾರಾದರೂ ನನ್ನಲ್ಲಿ ದಯತೋರಿ ವಿಷವನ್ನುಕೊಟ್ಟುದೇ ಆದರೆ

ಕ್ಷಿಪ್ರಂ ವೈವಸ್ವತಂ ದೇವಂ ಪಶ್ಯೇಯಂ ಪತಿನಾ ವಿನಾ ॥೩೮॥
ನಾಜಾನಾ ಜ್ಜೀವತೀಂ ರಾಮ ಸ್ಸ ಮಾಂ ಲಕ್ಷ್ಮಣ ಪೂರ್ವಜಃ ।
ಜಾನಂತೌ ತೌ ನ ಕುರ್ಯಾತಾಂ ನೋರ್ವ್ಯಾಂ ಹಿ ಮಮ ಮಾರ್ಗಣಂ ॥೩೯॥
ನೂನಂ ಮಮೈವ ಶೋಕೇನ ಸ ವೀರೋ ಲಕ್ಷ್ಮಣಾಗ್ರಜಃ ।
ದೇವಲೋಕ ಮಿತೋ ಯಾತ ಸ್ತ್ಯಕ್ತ್ವಾ ದೇಹಂ ಮಹೀತಲೇ ॥೪೦॥
*ಧನ್ಯಾ ದೇವಾ ಸ್ಸಗಂಧರ್ವಾ ಸಿದ್ಧಾಶ್ಚ ಪರಮರ್ಷಯಃ ।

ನನಗೆ, ವಿಷಸ್ಯ – ವಿಷವನ್ನು, ಪ್ರದಾತಾ – ಕೊಡತಕ್ಕವನು, ಇಹ – ಇಲ್ಲಿ, ಭವೇದ್ಯದಿ – ಇದ್ದದ್ದೇ ಆದರೆ ವೈವಸ್ವತಂ – ಸೂರ್ಯಪುತ್ರನಾದ, ದೇವಂ – ದೇವನನ್ನು, (ಯಮನನ್ನು) ಪತಿನಾವಿನಾ – ಪ್ರಾಣಕಾಂತ ನಿಲ್ಲದೆಯೇ, ಕ್ಷಿಪ್ರಂ – ಬೇಗನೆ, ಪಶ್ಯೇಯಂ – ದರ್ಶನಮಾಡುವೆನು ॥೩೮॥ (ರಾಮನು ತನ್ನನ್ನು ಹುಡುಕ ದಿರಲು ಕಾರಣಗಳನ್ನು ಹುಡುಕುತ್ತಾಳೆ) ಲಕ್ಷ್ಮಣಪೂರ್ವಜಃ – ಲಕ್ಷ್ಮಣನಿಗಣ್ಣನಾದ, ಸಃರಾಮಃ – ಶ್ರೀ ರಾಮನು, ಮಾಂ – ನನ್ನನ್ನು, ಜೀವತೀಂ (ಜೀವಂತೀಂ) ಬದುಕಿಯಿರುವವಳನ್ನಾಗಿ, ನಾಜಾನಾತ್ – ತಿಳಿ ದುಇರಲಾರ, ತೌ – ಆ ರಾಮಲಕ್ಷ್ಮಣರು, ಜಾನಂತೌಯದಿ – ತಿಳಿದವರೇ ಆಗಿದ್ದರೆ, ಉರ್ವ್ಯಾಂ – ಭೂ ಮಿಯಲ್ಲಿ, ಮಮಮಾರ್ಗಣಂ – ನನ್ನನ್ನು ಹುಡುಕೋಣವನ್ನು, ನಕುರ್ಯಾತಾಮಿತಿನಹಿ – ಮಾಡುತಿರಲಿ ಲ್ಲ ಎಂಬುದಿಲ್ಲ, (ಹುಡುಕದೇ ಇರುತಿರಲಿಲ್ಲ) ॥೩೯॥ ಲಕ್ಷ್ಮಣಾಗ್ರಜಃ – ಲಕ್ಷ್ಮಣನಿಗೆ ಅಣ್ಣನಾದ, ವೀ ರಃ – ಶೂರನೆನಿಸಿರುವ, ಸಃ – ಆ ಶ್ರೀರಾಮನು, ಮಮ – ನನ್ನ, ಶೋಕೇನೈವ – ದುಃಖದಿಂದಲೇ, ಮ ಹೀತಲೇ – ಭೂಮಿಯಲ್ಲಿ, ದೇಹಂ – ಶರೀರವನ್ನು, ತ್ಯಕ್ತ್ವಾ – ಬಿಟ್ಟು, ಇತಃ – ಈ ಭೂಲೋಕದಿಂದ, ದೇವಲೋಕಂ – ಸ್ವರ್ಗವನ್ನು ಕುರಿತು, ಯಾತಃ – ಹೋಗಿರುವ ರೀ ಮಿಯೋ, ನೂನಂ–ನಿಶ್ಚಯ ॥೪೦॥ *ಸಗಂಧರ್ವಾಃ – ಗಂಧರ್ವರಿಂದೊಡಗೂಡಿದ, ಸಿದ್ಧಾಶ – ಸಿದ್ಧಪುರುಷರು, ಮಹರ್ಷಯಃ – ಮಹಾಮು ನಿಗಳು, ಯೇದೇವಾಃ – ಮತ್ತೆ ಯಾವದೇವತೆಗಳೂ, ರಾಜೀವಲೋಚನಂ – ಪದ್ಮಪತ್ರಾಕ್ಷನಾದ, ಮಮ-

ಆ ವಿಷವನ್ನು ಪಾನಮಾಡಿ ನನ್ನ ಪತಿಯನ್ನು ಅಗಲಿ ಇದ್ದರೂ ಆತನನ್ನು ಬಿಟ್ಟೇ ಇ ಲ್ಲಿಂದ ತೆರಳಿ ಯಮಲೋಕಕ್ಕೆ ಹೋಗಿ ಮೃತ್ಯುವಿನ ದರ್ಶನವನ್ನು ಬೇಗನೆ ಪಡೆಯು ವೆನು ॥೩೮॥ ಆದರೆ–ಶೂರಾಗ್ರೇಸರನೆನಿಸಿ ನನ್ನಲ್ಲಿ ಮನಃ ಪೂರ್ವಕವಾದ ಪರಮ ಪ್ರೀ ಮವನ್ನಿಟ್ಟು ಇರುವ ಲಕ್ಷ್ಮಣಾಗ್ರಜನಾದ ರಾಮನು, ನಾನು ಬದುಕಿರುವಳೆಂಬ ಸಂಗತಿ ಯನ್ನು ಅರಿಯನು. ಆದರೂ ಆರಾಮಲಕ್ಷ್ಮಣರಿಬ್ಬರೂ ಈ ಭೂಮಂಡಲದಲ್ಲಿ ನನ್ನನ್ನು ಹುಡುಕದೆ ಇರುವುದಿಲ್ಲ. ॥೩೯॥ ಮತ್ತು–ಆ ಶ್ರೀರಾಮಚಂದ್ರನಿಗೆ ನನ್ನಲ್ಲಿ ಎಷ್ಟು ಪ್ರೀ ಮವಿದೆ ಎಂಬುದನ್ನು ನಾನು ಬಲ್ಲೆ. ಆದಕಾರಣ ಆನನ್ನ ಪ್ರಾಣಪ್ರಿಯನು ನನ್ನನ್ನು ಅ ಗಲಿ ಜೀವಿಸಿ ಇರಲಾರದೆ ದುಃಖಾವೇಶದಿಂದ ತನ್ನ ದೇಹವನ್ನು ಈ ಭೂತದಲ್ಲಿ ಬಿಟ್ಟು ಸ್ವರ್ಗಲೋಕಕ್ಕೆ ನಿಜವಾಗಿಯೂ ತೆರಳಿರಬಹುದು ಎಂತಲೂ ಭಾವಿಸುತ್ತೇನೆ ॥೪೦॥ ಅಹ ಹ ! ಹಾಗೆ ನನ್ನ ಪ್ರಾಣಕಾಂತನು ದೇವಲೋಕವನ್ನಲಂಕರಿಸಿದ್ದರೆ ಅಲ್ಲಿರುವ ದೇವತೆಗ ಳೂ, ಗಂಧರ್ವರೂ, ಸಿದ್ಧರೂ, ಮಹರ್ಷಿಗಳೂ, ಆತನ ದಿವ್ಯದರ್ಶನವನ್ನು ಪಡೆಯುವರು

* ನಾರದರು ವಾಲ್ಮೀಕಿಮುನಿಗೆ ಉಪದೇಶಿಸಿದ ಗಾಯತ್ರೀ ರಾಮಾಯಣದಲ್ಲಿನ ಶ್ಲೋಕ

ಮಮ ಪಶ್ಯಂತಿ ಯೇ ನಾಥಂ ರಾಮಂ ರಾಜೀವ ಲೋಚನಂ ॥೪೧॥
ಅಥವಾ ನ ಹಿ ತಸ್ಯಾರ್ಥೋ ಧರ್ಮಕಾಮಸ್ಯ ಧೀಮತಃ ।
ಮಯಾ ರಾಮಸ್ಯ ರಾಜರ್ಷೇ ರ್ಭಾರ್ಯಯಾ ಪರಮಾತ್ಮನಃ ॥೪೨॥
ದೃಶ್ಯಮಾನೇ ಭವೇ ತ್ಪ್ರೀತಿ ಸ್ಸೌಹೃದಂ ನಾಸ್ತ್ಯಪಶ್ಯತಃ ।
ನಾಶಯಂತಿ ಕೃತಘ್ನಾಸ್ತು ನ ರಾಮೋ ನಾಶಯಿಷ್ಯತಿ ॥೪೩॥
ಕಿನ್ನು ಮೇ ನ ಗುಣಾಃ ಕೇಚಿತ್ ಕಿಂವಾ ಭಾಗ್ಯಕ್ಷಯೋ ಮಮ ।

---

ನನ್ನ, ನಾಥಂ - ಸ್ವಾಮಿಯಾದ, ರಾಮಂ - ಶ್ರೀರಾಮನನ್ನು, ಪಶ್ಯಂತಿ - ನೋಡುತ್ತಾರೆಯೋ, ತೇ - ಅವರು, ಧನ್ಯಾಃ - ಪುಣ್ಯಂತರಲ್ಲವೇ, ॥೪೧॥ ಅಥವಾ - ಹಾಗಿಲ್ಲದಿದ್ದರೆ, ಧೀಮತಃ - ಪ್ರಶಸ್ತಬುದ್ಧಿಯುಳ್ಳವನಾದಕಾರಣವೇ, ಧರ್ಮಕಾಮಸ್ಯ - ಧರ್ಮಕಾರ್ಯದಲ್ಲಿಯೇ ಆಸಕ್ತಿಯುಳ್ಳ, ರಾಜರ್ಷೇಃ - ರಾಜನೂ ರುಷಿಯೂ ಆಗಿರತಕ್ಕ, ಪರಮಾತ್ಮನಃ-ಉತ್ತಮಸ್ವಭಾವವುಳ್ಳ(ಪರಬ್ರಹ್ಮಸ್ವರೂಪನಾದ) ತಸ್ಯ ರಾಮಸ್ಯ - ಆ ರಾಮನಿಗೆ, ಭಾರ್ಯಯಾ - ಹೆಂಡತಿಯಾದ, ಮಯಾ - ನನ್ನಿಂದ, ಅರ್ಥಃ - ಪ್ರಯೋಜನವು, ನಹಿ - ಇಲ್ಲವಷ್ಟೇ ? ॥೪೨॥ ದೃಶ್ಯಮಾನೇ - ನೋಡಲ್ಪಡುತಲಿರುವ ವಸ್ತುವಿನಲ್ಲಿ, ಪ್ರೀತಿಃ- ಪ್ರೇಮವು, ಭವೇತ್- ಉಂಟಾಗುವುದು, ಅಪಶ್ಯತಃ - ನೋಡದವನಿಗೆ, ಸೌಹೃದಂ - ಸ್ನೇಹವು, ನಾಸ್ತಿ - ಇಲ್ಲ, ಕೃತಘ್ನಾಃ - ಮಾಡಿದುಪಕಾರವನ್ನು ಮರೆಯುತಕ್ಕವರು, (ಪ್ರೀತಿಂ - ಸ್ನೇಹವನ್ನು) ನಾಶಯಂತಿ - ನಾಶಪಡಿಸುತ್ತಾರೆ ರಾಮಸ್ತು - ಶ್ರೀರಾಮನಾದರೋ, ನನಾಶಯಿಷ್ಯತಿ- ನಾಶಪಡಿಸತಕ್ಕವನಲ್ಲ (ತೊರೆದೇಇರುವವನಲ್ಲ)॥೪೩॥ ಯಾ - ಯಾವ, ಅಹಂ - ನಾನು, ಮುಖ್ಯೇನ - ಪ್ರಾಣನಾಥನಾದ, ರಾಮೇಣ - ರಾಮನಿಂದ, ಹೀನಾ - ಶೂನ್ಯಳಾಗಿ - ಭಾಮಿನೀ - ಹೆಂಗಸಾದಕಾರಣವೇ, ಸೀದಾಮಿ - ದುಃಖಿಸುತಲಿರುವೆನೋ, ಆಸ್ವಾಃ -

---

ಕೆಂದಾವರೆಯಂತೆ ಕಣ್ಣುಳ್ಳ ಸರ್ವಗುಣಾಭಿರಾಮನಾದ ಆ ಶ್ರೀರಾಮನ ಸಂದರ್ಶನವನ್ನು ಪಡೆಯುತಕ್ಕ ಆನಂದಾನುಭಾವರು ಎಷ್ಟು ಭಾಗ್ಯಶಾಲಿಗಳೋ ಅದನ್ನು ಹೇಳತೀರದು. ಅಥವಾ ಈ ಲೋಕದಲ್ಲಿರುವ ಇತರಪುರುಷರಂತೆ ಕಾಮಪರಾಧೀನನಾಗಿ ಸ್ತ್ರೀಲೋಲನಾಗದೆ ಧರ್ಮದಲ್ಲಿಯೇ ಪ್ರಶಸ್ತವಾದ ಆಸಕ್ತಿಯುಳ್ಳವನಾಗಿರುವ ರಾಜನೂ ರುಷಿಯೂ ಆದ ಆಶ್ರೀರಾಮನು ಈ ಹೆಂಡತಿಯಿಂದ ನನಗೆ ಏನುಪ್ರಯೋಜನ ಎಂದು ವಿರಕ್ತಿಯನ್ನು॥೪೨॥ ಪಡೆದನೋ ಹೇಗೋ? ಯಾರಲ್ಲಿ ಯಾರಿಗೆ ಎಷ್ಟು ಪ್ರೀತಿಯಿದ್ದರೂ, ಪ್ರೀತಿಪಾತ್ರರಾದವರು ಹತ್ತಿರದಲ್ಲಿದ್ದು ಆಗಾಗ ಅವರನ್ನು ನೋಡುತಲಿದ್ದರೆ, ನೋಡತಕ್ಕವರಿಗೆ ಪ್ರೀತಿಯು ಬೆಳೆದು ಹೆಚ್ಚುತಲಿರುವದಲ್ಲದೆ, ಪ್ರೀತಿವಿಷಯರು ದೂರದಲ್ಲಿ ತೆರಳಿದುದೇ ಆದರೆ ಅಂಥವರ ವಿಷಯದಲ್ಲಿ ಪ್ರೇಮವುಂಟಾಗುವುದಿಲ್ಲ, ಆದ ಕಾರಣ ನಾನು ಆತನಿಗೆ ಕಣ್ಮರೆಯಾಗಿ ಬಹು ದೂರದಲ್ಲಿ ಸೇರಿರುವೆನಾದುದರಿಂದ ನನ್ನಲ್ಲಿ ಪ್ರೀತಿಯು ತಪ್ಪಿರಬಹುದೇ ? ಅಹಹಾ ! ಹಾಗೆ ಹೇಳಲಿಕ್ಕೆ ಆಗುವದಿಲ್ಲ. ಆರಾಮನು ಸಾಧಾರಣ ಜನರಂತೆ ಕೃತಘ್ನನಲ್ಲ. ಒಂದು ಸಾರಿ ಒಂದು ಕಡೆಯಲ್ಲಿಟ್ಟ ಪ್ರಿತಿಯನ್ನು ಎಂದಿಗೂ ಮರೆಯುತಕ್ಕವನಲ್ಲ. ಕೃತಘ್ನರಾದವರು ಬೆಳೆದಿದ್ದ ಪ್ರೀತಿಯನ್ನೂ ನಾಶಪಡಿಸುವರು. ॥೪೩॥ ಪ್ರಕೃತ ಸಂದರ್ಭದಲ್ಲಿಯೋಚಿಸಿದರೆ ನನ್ನ ದುರದೃಷ್ಟದ ದೆಸೆಯಿಂದಲೋ,ಅಥವಾ ದುಃಖಾನುಭವನಿಮಿತ್ತವಾದ ದುರ್ಗುಣಗಳು ನನ್ನಲ್ಲಿ ನೆಲೆಗೊಂಡಿರುವುದರಿಂದಲೋ, ಇಲ್ಲವೇ ಸುಗುಣಗಳ ಲೋಪದಿಂದಲೋ

ಯಾಹಂ ಸೀದಾಮಿ ರಾಮೇಣ ಹೀನಾ ಮುಖ್ಯೇನ ಭಾಮಿನಿ ॥೪೪॥
ಶ್ರೇಯೋ ಮೇ ಜೀವಿತಾನ್ಮರ್ತುಂ ವಿಹೀನಾಯಾ ಮಹಾತ್ಮನಃ ।
ರಾಮಾದಕ್ಲಿಷ್ಟಚಾರಿತ್ರಾಚ್ಛೂರಾಚ್ಛತ್ರುನಿಬರ್ಹಣಾತ್ ॥೪೫॥
ಅಥವಾ ನ್ಯಸ್ತಶಸ್ತ್ರೌ ತೌ ವನೇ ಮೂಲಫಲಾಶಿನೌ ।
ಭ್ರಾತರೌ ಹಿ ನರಶ್ರೇಷ್ಠೌ ಸಂವೃತ್ತೌ ವನಗೋಚರೌ ॥೪೬॥
ಅಥವಾ ರಾಕ್ಷಸೇಂದ್ರೇಣ ರಾವಣೇನ ದುರಾತ್ಮನಾ ।
ಛದ್ಮನಾ ಘಾತಿತೌ ಶೂರೌ ಭ್ರಾತರೌ ರಾಮಲಕ್ಷ್ಮಣೌ ॥೪೭॥

---

ಇಂತಹ, ಮಮ - ನನಗೆ, ಭಾಗ್ಯಕ್ಷಯಃ- ಮೇಲನ್ನುಂಟುಮಾಡುವ ಭಾಗ್ಯದಹಾನಿಯು, ಅಭೂತ್ ಕಿಂವಾ - ಆಯಿತೋ ಏನೋ? ಮೇ - ನನಗೆ, ಕೇಚಿತ್ - ಕೆಲವು, ಗುಣಾಃ - ಪತಿಯನ್ನು ಪಡೆಯುವ ಸುಗುಣಗಳು, ನಸಂತಿಕಿಂ - ಇಲ್ಲವೋ ಏನೋ! ॥೪೪॥ ಮಹಾತ್ಮನಃ - ಮಹಾನುಭಾವನಾದ, ಅಕ್ಲಿಷ್ಟಚಾರಿತ್ರಾತ್- ದೋಷವಿಲ್ಲದ ನಡತೆಯುಳ್ಳ, ಶೂರಾತ್- ಶೌರ್ಯವಂತನಾಗಿರತಕ್ಕ, ಶತ್ರುನಿಬರ್ಹಣಾತ್ - ಶತ್ರುಸಂಹಾರಕನೂ ಆಗಿರುವ, ರಾಮಾತ್ - ಶ್ರೀರಾಮನಿಂದ, ವಿಹೀನಾಯಾಃ- ಅಗಲಿರುವ, ಮೇ - ನನಗೆ, ಜೀವಿತಾತ್- ಬದುಕಿರುವುದಕ್ಕಿಂತಲೂ, ಮರ್ತುಂ - ಸಾಯುವುದೇ, ಶ್ರೇಯಃ - ಮೇಲು ॥೪೫॥ ಅಥವಾ - ಬಾದುವೇಳೆ, ನರಶ್ರೇಷ್ಠೌ - ಪುರುಷೋತ್ತಮರಾಗಿರುವ, ಭ್ರಾತರೌ - ಸೋದರರಾಗಿರತಕ್ಕ, ತೌ- ಆ ರಾಮಲಕ್ಷ್ಮಣರು, ವನಗೋಚರೌ - ವನಸಂಚಾರಿಗಳೂ, ವನೇ - ಅರಣ್ಯದಲ್ಲಿ, ಮೂಲಫಲಾಶಿನೌ - ಬೇರುಗಳನ್ನೂ ಹಣ್ಣುಗಳನ್ನೂ ತಿನ್ನುತಲಿರುವವರೂ, ನ್ಯಸ್ತಶಸ್ತ್ರೌ - ದೂರವಾಗಿಬಿಸುಟ ಬಿಲ್ಲುಬಾಣಗಳುಳ್ಳವರೂ, ಸಂವೃತ್ತೌಕಿಂ - ಆಗಿಹೋದರೋ ಹೇಗೋ ? ॥೪೬॥ ಅಥವಾ - ಹಾಗಿಲ್ಲದಿದ್ದರೆ, ಶೂರೌ - ಪರಾಕ್ರಮಶಾಲಿಗಳಾಗಿದ್ದರೂ, ಭ್ರಾತರೌ - ಅಣ್ಣತಮ್ಮಂದಿರುಗಳಾದ, ರಾಮಲಕ್ಷ್ಮಣೌ - ರಾಮಲಕ್ಷ್ಮಣರು, ದುರಾತ್ಮನಾ - ದುಷ್ಟಸ್ವಭಾವದ, ರಾಕ್ಷಸೇಂದ್ರೇಣ - ರಾಕ್ಷಸರಾಜನಾದ, ರಾವಣೇನ - ರಾವಣನಿಂದ, ಛದ್ಮನಾ- ಕಪಟವೃತ್ತಿಯಿಂದ, ಘಾತಿತೌ - ಕೊಲ್ಲಲ್ಪಟ್ಟರೋ ಹೇಗೋ ? ॥೪೭॥ ಸಾ-ಇಷ್ಟುಕಷ್ಟದಲ್ಲಿ ಸಿಕ್ಕಿರುವ,

---

ಈ ನಾನು ಈರಾಕ್ಷಸಿಯರ ಮಧ್ಯದಲ್ಲಿ ಆ ನನ್ನ ಪ್ರಾಣನಾಥನನ್ನು ಅಗಲಿ ಇಂತಪಾರವಾದ ಶೋಕವನ್ನು ಅನುಭವಿಸುತಲಿದ್ದೇನೆ ॥೪೪॥ ಎಷ್ಟು ಬಗೆಯಿಂದ ಕಳವಳಿಸಿದರೂ ಉಪಯೋಗವಿಲ್ಲ. ಸಚ್ಚರಿತ್ರನೂ ಮಹಾ ಶೂರನೂ ಶತ್ರುಸಂಹಾರಕನೂ, ಮಹಾನುಭಾವನೂ ಆಗಿರುವ ಆ ನನ್ನ ನಾಥನನ್ನು ಅಗಲಿರುವ ನನಗೆ ಸಾವೇ ಶ್ರೇಯಸ್ಸಲ್ಲದೆ ಬದುಕಿರುವುದು ಮೇಲಲ್ಲ. ಏಕೆಂದರೆ- ॥೪೫॥ ಬಾದು ವೇಳೆ ನನ್ನನ್ನು ಅಗಲಿ ಕಾಡಿನಲ್ಲಿ ಅಲೆಯುತ್ತಾ, ಕಂದ ಮೂಲಫಲಗಳನ್ನು ತಿಂದುಕೊಂಡು, ಕಾಲವನ್ನು ಕಳೆಯುತಲಿದ್ದ ಪುರುಷೋತ್ತಮರೆನಿಸಿದ ಸೋದರರಾದ ಆ ರಾಮ ಲಕ್ಷ್ಮಣರು ಸೀತೆಯನ್ನು ಅಗಲಿದ ಬಳಿಕ ನಾವು ಉಳಿದಿದ್ದು ಪ್ರಯೋಜನವೇನು? ಎಂದುಕೊಂಡು ನನ್ನಲ್ಲಿಟ್ಟಿದ್ದ ಪ್ರೇಮಭರದಿಂದ ತಮ್ಮ ಜೀವಿತದಲ್ಲಿ ಆಸೆಯನ್ನು ತೊರೆದು ತಮ್ಮ ಕೈಗಳಲ್ಲಿದ್ದ ಶಾಸ್ತ್ರಗಳನ್ನು ಬಿಸುಟು ಪ್ರಾಣಗಳನ್ನು ತೊರೆದುಕೊಂಡರೋ. ಇಲ್ಲವೇ ಹಾಗೆಯೇ ವನಸಂಚಾರದಿಂದ ಇಲ್ಲಿಗೆ ಬರುವರೋ ಗೊತ್ತಿಲ್ಲ॥೪೬॥ ಹಾಗೂ ಇಲ್ಲದಿದ್ದರೆ ಯಾವ ನೀಚಕೆಲಸವನ್ನು ಮಾಡಲಿಕ್ಕೂ ಹಿಂಜರಿಯದಿರುವ ಪಾಪಾತ್ಮನಾದ ಈ ರಾವಣನು ಮೋಸಗೊಳಿಸಿ ನನ್ನನ್ನು ತಂದಹಾಗೆ ಬೇರಾವುದಾದರೊಂದು

ಸಾಹಮೇವಂ ಗತೇ ಕಾಲೇ ಮರ್ತುಮಿಚ್ಛಾಮಿ ಸರ್ವಥಾ ।
ನ ಚ ಮೇ ವಿಹಿತೋ ಮೃತ್ಯುರಸ್ಮಿನ್ ದುಃಖೇಽಪಿ ವರ್ತತಿ ॥೪೮॥
ಧನ್ಯಾಃ ಖಲು ಮಹಾತ್ಮಾನೋ ಮುನಯಸ್ತ್ಯಕ್ತಕಿಲ್ಬಿಷಾಃ ।
ಜಿತಾತ್ಮಾನೋ ಮಹಾಭಾಗಾ ಯೇಷಾಂ ನಸ್ತಃ ಪ್ರಿಯಾಪ್ರಿಯೇ ॥೪೯॥
ಪ್ರಿಯಾನ್ನಸಂಭವೇದ್ದುಃಖಮಪ್ರಿಯಾದಧಿಕಂ ಭಯಂ ।
ತಾಭ್ಯಾಂ ಹಿ ಯೇ ವಿಯುಜ್ಯಂತೆ ನಮಸ್ತೇಷಾಂ ಮಹಾತ್ಮನಾಂ ॥೫೦॥
ಸಾಽಹಂ ತ್ಯಕ್ತಾ ಪ್ರಿಯಾರ್ಹೇಣ ರಾಮೇಣ ವಿದಿತಾತ್ಮನಾ ।

---

ಅಹಂ - ನಾನು, ಏವಂ - ಹೀಗೆ, ಕಾಲೇ - ದುಃಖಕರವಾದ ಕಾಲವು, ಗತೇಸತಿ - ಕಳೆಯುತಲಿರಲಾಗಿ ಸರ್ವಥಾ - ಸರ್ವಪ್ರಕಾರದಲ್ಲಿಯೂ, ಮರ್ತುಂ - ಸಾಯಲಿಕ್ಕೆ, ಇಚ್ಛಾಮಿ - ಅಪೇಕ್ಷಿಸುತಲಿದೇನೆ, ಅಸ್ಮಿನ್ - ಈ, ದುಃಖೇಪಿ - ಮಹಾ ದುಃಖಸಮಯದಲ್ಲಿಯೂ, ಮೇ - ನನಗೆ, ಮೃತ್ಯುಃ - ಮರಣವು, ವಿಹಿತಃ - ಗೊತ್ತುಮಾಡಲ್ಪಟ್ಟದಾಗಿ, ನಚವರ್ತ್ತತಿ (ವರ್ತತೆ) ಇಲ್ಲವಲ್ಲಾ ॥೪೮॥ ಏಷಾಂ - ಯಾರಿಗೆ, ಪ್ರಿಯಾಪ್ರಿಯೇ - ಇಷ್ಟಾನಿಷ್ಟಗಳು, ನಸ್ತಃ - ಇಲ್ಲವೋ, ತೇ - ಅಂತಹ, ಮುನಯಃ - ಮಹರ್ಷಿಗಳು, ಧನ್ಯಾಃಖಲು - ಪುಣ್ಯವಂತರಲ್ಲವೇ ? ಮಹಾತ್ಮಾನಃ - ಮಹಾನುಭಾವರಾದ, ತ್ಯಕ್ತಕಿಲ್ಬಿಷಾಃ - ಪಾಪಲೇಶವಿಲ್ಲದ, ಜಿತಾತ್ಮಾನಃ - ಜಿತೇಂದ್ರಿಯರಾಗಿರತಕ್ಕ, ಮಹಾಭಾಗಾಃ - ಭಾಗ್ಯವಂತರಾಗಿ, (ತೇ - ಅವರು) ಭವಂತಿಖಲು - ಆಗುತ್ತಾರಲ್ಲವೇ? ॥೪೯॥ ಪ್ರಿಯಾತ್ - ಇಷ್ಟವಸ್ತುವಿನ ದೆಸೆಯಿಂದ, ದುಃಖಂ - ವ್ಯಸನವು, ನಸಂಭವೇತ್ - ಉಂಟಾಗಲಾರದು, (ಸುಖವೇ ಉಂಟಾಗಬೇಕು) ಅಪ್ರಿಯಾತ್ - ಅನಿಷ್ಟವಸ್ತುವಿನ ದೆಸೆಯಿಂದ, ಅಧಿಕಂ - ಹೆಚ್ಚಾದ, ಭಯಂ - ಭೀತಿಯು, ಸಂಭವೇತ್ - ಉಂಟಾಗುವುದು, (ನಸಂಭವೇತ್ - ಉಂಟಾಗಬಾರದು) ತಾಭ್ಯಾಂ - ಆ ಪ್ರಿಯಾಪ್ರಿಯಗಳದೆಸೆಯಿಂದ, ಯೇ - ಯಾರು, ವಿಯುಜ್ಯಂತೇ - ಬಿಡಲ್ಪಟ್ಟಿರುವರೋ, (ಪ್ರಿಯಾಪ್ರಿಯಗಳು ಯಾರನ್ನು ಸೋಕುವುದಿಲ್ಲವೋ) ತೇಷಾಂ - ಅಂತಹ, ಮಹಾತ್ಮನಾಂ - ಮಹಾನುಭಾವರಿಗೆ, ನಮಃ - ನಮಸ್ಕಾರವು, (ಅಸ್ತು - ಆಗಲಿ) ॥೫೦॥ ಸಾಹಂ - ಸುಖದುಃಖಗಳಿಂದ ಬಿಡಲ್ಪಡದಿರುವ ನಾನು, ಪ್ರಿಯಾರ್ಹೇಣ-ಪ್ರಿಯನೂ ಪೂಜ್ಯನೂ ಆಗಿರುವ, ವಿದಿತಾತ್ಮನಾ -ಪರೇಂಗಿತಜ್ಞ

---

ಕಪಟವೃತ್ತಿಯಿಂದ ಘೋರರಾದ ಆರಾವ. ಲಕ್ಷ್ಮಣರನ್ನು ಕೊಂದು ಬಿಟ್ಟನೋ? ಹೇಗೋ? ಅದೂತಿಳಿಯದು ॥೪೭॥ ಇಂತಹ ದೀನದೆಸೆಯನ್ನು ಅನುಭವಿಸುತಲಿರುವ ನನಗೆ ಮೇಲೆಮೇಲೆ ಬಹುತರದುಃಖವನ್ನು ಕಲ್ಪಿಸುತಲಿರುವ ಈಘೋರವಾದ ಕಾಲವು ಕಳೆಯುತಿರುವಲ್ಲಿ ಸರ್ವಾತ್ಮನಾ ನಾನು ಉಸಿರಿನೊಡನೆ ಇರತಕ್ಕುದು ಸರಿಯಲ್ಲ. ನಾನು ಈಗಲೇ ಸಾಯಲಿಕ್ಕೆ ಸಿದ್ಧಳಾಗಿದ್ದೇನೆ, ಇಂತಹಕ್ರೂರವಾದ ಸಮಯದಲ್ಲಿಯೂ ನನಗೆದೈವವು ಮರಣವನ್ನು ಕಲ್ಪಿಸದೆ ಇರುವುದಲ್ಲಾ. ಏನಮಾಡಲಿ ॥೪೮॥ ಇಷ್ಟಾನಿಷ್ಟಗಳೆನಿಸಿ ಸುಖದುಃಖಗಳೂ, ಶೀತೋಷ್ಣಗಳೂ, ಪುಣ್ಯಪಾಪ ಮೊದಲಾದಿದ್ವಂದ್ವದುಃಖಗಳೂ ಸಮಗಳೆಂದು, ಇಷ್ಟಪ್ರಾಪ್ತಿಯಲ್ಲಿ ಹಿಗ್ಗದೆಯೂ, ಅನಿಷ್ಟಲಾಭದಲ್ಲಿ ತಗ್ಗದೆಯೂ, ಜಿತೇಂದ್ರಿಯರಾಗಿರುವ ಮಹಾತ್ಮರಾದ ಮಹರ್ಷಿಗಳೇಧನ್ಯರು. ಅಂಥವರ ಭಾಗ್ಯವೇ ಸೌಭಾಗ್ಯವಲ್ಲದೆ, ಸುಖದುಃಖಾದಿ ದ್ವಂದ್ವ ಪದಾರ್ಥಗಳನ್ನು ಅತಿಕ್ರಮಿಸದ ನನ್ನಂಥ ಅಲ್ಪಜನರ ಭಾಗ್ಯವು ನಿರ್ಭಾಗ್ಯವೇ ಸರಿ. ಜಿತಾತ್ಮರಾದ ಆಮಹಾತ್ಮರನ್ನು ವಂದಿಸುತ್ತೇನೆ ॥೪೯-೫೦॥ ಪ್ರಿಯಾಪ್ರಿಯಗಳನ್ನು ಸಮವಾಗಿ ಭಾವಿಸಿ

ಪ್ರಾಣಾಂ ಸ್ತ್ಯಕ್ಷ್ಯಾಮಿ ಪಾಪಸ್ಯ ರಾವಣಸ್ಯ ಗತಾ ವಶಮ್ ॥೫೧॥

*ಇತಿ ಶ್ರೀಮತ್ಸುಂದರಕಾಂಡೇ-ಷಡ್ವಿಂಶಸ್ಸರ್ಗಃ.*

ಶ್ರೀ

ಶ್ರೀರಾಮಚಂದ್ರ ಪರಬ್ರಹ್ಮಣೇನಮಃ.

## ಶ್ರೀಮತ್ಸುನ್ದರಕಾಣ್ಡೇ-ಸಪ್ತವಿಂಶಸ್ಸರ್ಗಃ.

ಇತ್ಯುಕ್ತಾ ಸ್ಸೀತಯಾ ಘೋರಾ ರಾಕ್ಷಸ್ಯಃ ಕ್ರೋಧಮೂರ್ಛಿತಾಃ ।
ಕಾಶ್ಚಿ ಜ್ಜಗ್ಮು ಸ್ತದಾಖ್ಯಾತುಂ ರಾವಣಸ್ಯ ತರಸ್ವಿನಃ ॥೧॥

ನಾದ, ರಾಮೇಣ - ಶ್ರೀರಾಮನಿಂದ, ತ್ಯಕ್ತಾ - ಅಗಲಿದವಳಾಗಿ, ಪಾಪಸ್ಯ - ಪಾಪಿಷ್ಠನಾದ, ರಾವಣಸ್ಯ - ರಾವಣನಿಗೆ, ವಶಂ - ಅಧೀನತೆಯನ್ನು, ಗತಾ - ಹೊಂದಿರುವೆನಾದಕಾರಣವೇ, ಪ್ರಾಣಾನ್-ಪ್ರಾಣಗಳನ್ನು, ತ್ಯಕ್ಷ್ಯಾಮಿ-ಬಿಡುವೆನು ॥೫೧॥

—ಇಂತು ಇಪ್ಪತ್ತಾರನೆಯ ಸರ್ಗವು—



ಶ್ರೀಃ.

—ಇಪ್ಪತ್ತೇಳನೆಯ ಸರ್ಗ—

ಕಂದ॥ ಸೀತಾಲಾಪವ ಕೆಲಬರ್ । ಯಾತುಧನಂ ಗರುಹಪ್ರೋದ ರಾ ತ್ರಿಜಟೆಯು ಮಾ ।
ಸೀತೆಗೆ ಮೇಲಹ ಕನಸಂ । ಕೌತುಕದಿಂ ಪೇಳೆ ಪಕ್ಕಿ ದನಿಗೈದತ್ತು ॥

ಸೀತಯಾ - ಆ ಸೀತಾದೇವಿಯಿಂದ, ಇತಿ - ಈ ಪ್ರಕಾರವಾಗಿ, ಉಕ್ತಾಃ-ಹೇಳಲ್ಪಟ್ಟ, ಘೋರಾಃ-ಭಯಂಕರಿಯರಾದ, ಕಾಶ್ಚಿತ್ - ಕೆಲವು ಮಂದಿ, ರಾಕ್ಷಸ್ಯಃ - ರಕ್ಕಸಿಯರು, ಕ್ರೋಧಮೂರ್ಛಿತಾಃ - ಕೋಪದಿಂದ ಉಬ್ಬಿದವರಾಗಿ, ತದಾ-ಆಗ, ತರಸ್ವಿನಃ - ಮಹಾ ಬಲಶಾಲಿಯಾದ, ರಾವಣಸ್ಯ-ರಾವಣನಿಗೆ (ತತ್ - ಆ ಸಮಾಚಾರವನ್ನು) ಆಖ್ಯಾತುಂ - ಹೇಳಲಿಕ್ಕೆ. ಜಗ್ಮುಃ-ಹೊರಟುಹೋದರು ॥೧॥ ತತಃ -

ಇರುವ ಮಹಾತ್ಮರಂತೆ ಇರದೆ,ಹಿತಾಹಿತಗಳಿಗೆ ಒಳಗಾಗಿರುವ ನಾನು ಹಿತತಮನಾಗಿ ನನ್ನ ಇಂಗಿತವನ್ನು ಬಲ್ಲ ನಾಥನಾದ ಶ್ರೀರಾಮಚಂದ್ರನನ್ನು ಅಗಲಿ,ಈ ಪಾಪಾತ್ಮನಾದ ರಾವಣನ ಸೆರೆಗೆ ಸಿಕ್ಕಿ,ಬದುಕಿ ಇರುವುದು ಇನ್ನು ಸಾಕು. ಹೇಗಾದರೂ ಮಾಡಿ ಪ್ರಾಣಗಳನ್ನು ತೊರೆದುಕೊಳ್ಳುವೆನು ಎಂದು ನಿಶ್ಚಯಿಸಿಕೊಂಡಳು.॥೫೧॥

— ಇಂತು ಇಪ್ಪತ್ತಾರನೆಯ ಸರ್ಗವು ಮುಗಿದುದು —



—ಇಪ್ಪತ್ತೇಳನೆಯ ಸರ್ಗ.—

ಇಂತು ಬಗೆಬಗೆಯಾಗಿ ಹಂಬಲಿಸುತಲಿದ್ದ ಸೀತೆಯ ವಚನಗಳನ್ನು ಆಲಿಸಿದ ಭಯಂಕರಿಯರಾದ ರಕ್ಕಸಿಯರು ಕ್ರೋಧಪರವಶರಾದರು. ಅವರಲ್ಲಿ ಕೆಲವರು ಸೀತೆಯ ಮನೋಗತವನ್ನು ಮಹಾ ಪರಾಕ್ರಮ ಶಾಲಿಯಾದರಾವಣನಿಗೆ ತಿಳಿಸಬೇಕೆಂದು ಹೊರಟರು. ॥೧॥

ತತ ಸ್ಸೀತಾ ಮುಪಾಗಮ್ಯ ರಾಕ್ಷಸ್ಯೋ ಘೋರ ದರ್ಶನಾಃ ।
ಪುನಃ ಪರುಷ ಮೇಕಾರ್ಥ ಮನರ್ಥಾರ್ಥ ಮಥಾಬ್ರುವನ್ ॥೨॥
ಅದ್ಯೇದಾನೀಂ ತವಾನಾರ್ಯೇ ಸೀತೇ ಪಾಪವಿನಿಶ್ಚಯೇ।
ರಾಕ್ಷಸ್ಯೋ ಭಕ್ಷಯಿಷ್ಯಂತಿ ಮಾಂಸ ಮೇತ ದ್ಯಥಾಸುಖಮ್ ॥೩॥
ಸೀತಾಂ ತಾಭಿ ರನಾರ್ಯಾಭಿ ರ್ದೃಷ್ಟ್ವಾ ಸಂತರ್ಜಿತಾಂ ತದಾ ।
ರಾಕ್ಷಸೀ ತ್ರಿಜಟಾ ವೃದ್ಧಾ ಶಯಾನಾ ವಾಕ್ಯ ಮಬ್ರವೀತ್ ॥೪॥
ಆತ್ಮಾನಂ ಖಾದತಾ ऽ ನಾರ್ಯಾ ನ ಸೀತಾಂ ಭಕ್ಷ್ಯಯಿಷ್ಯಥ ।
ಜನಕಸ್ಯ ಸುತಾ ಮಿಷ್ಟಾಂ ಸ್ನುಷಾಂ ದಶರಥಸ್ಯ ಚ ॥೫॥

ತರುವಾಯ, ಘೋರದರ್ಶನಾಃ - ಭಯಂಕರವಾದ ನೋಟವುಳ್ಳ, ರಾಕ್ಷಸ್ಯಃ-ಮತ್ತೆ ಕೆಲವು ಮಂದಿ ರಾಕ್ಷಸಿಯರು, ಸೀತಾಂ - ಸೀತಾದೇವಿಯುನ್ನು, ಉಪಾಗಮ್ಯ - ಹೊಂದಿ, ಅಥ - ಆಮೇಲೆ, ಪಾಪವಿನಿಶ್ಚಯೇ-ಕೆಟ್ಟ ಕೆಲಸದಲ್ಲಿ ಆಶೆಯುಳ್ಳ, ಅನಾರ್ಯೇ- ಅಯೋಗ್ಯಳೆನಿಸಿದ, ಹೇಸೀತೇ! -ಎಲೆ ಸೀತೆಯೇ! ಅದ್ಯ - ಇಂದು, ಏತತ್ - ಈ, ತವ - ನಿನ್ನ, ಮಾಂಸಂ - ಮಾಂಸವನ್ನು, ರಾಕ್ಷಸ್ಯಃ - ರಕ್ಕಸಿಯರು, ಯಥಾಸುಖಂ - ಸುಖವಾಗಿ, ಭಕ್ಷಯಿಷ್ಯಂತಿ - ತಿಂದುಬಿಡುವರು, (ಇತಿ - ಹೀಗೆಂಬ) ಏಕಾರ್ಥಂ - ಒಂದೇ ಅಭಿಪ್ರಾಯವುಳ್ಳ, ಅನರ್ಥಾರ್ಥಂ - ಕೇಡನ್ನು ತಿಳಿಸತಕ್ಕ, ಪರುಷಂ - ಕಠಿನವಾಕ್ಯವನ್ನು, ಪುನಃಪುನಃ - ಅಡಿಗಡಿಗೂ, ಅಬ್ರುವನ್ - ಹೇಳುತಲಿದ್ದರು ॥೨-೩॥ ಶಯಾನಾ - ನಿದ್ರಿಸುತಲಿದ್ದ, ತ್ರಿಜಟಾ - ತ್ರಿಜಟೆಎಂಬ, ವೃದ್ಧಾ - ಮುದುಕಿಯಾಗಿರುವ, ರಾಕ್ಷಸೀ - ರಾಕ್ಷಸಿಯು, ಅನಾರ್ಯಾಭಿಃ - ಅಯೋಗ್ಯರಾದ, ತಾಭಿಃ - ಆ ನಿಶಾಚರಿಯರಿಂದ, ಸಂತರ್ಜಿತಾಂ - ಹೆಚ್ಚಾಗಿ ಹೆದರಿಸಲ್ಪಡುತಲಿರುವ, ಸೀತಾಂ - ಸೀತಾದೇವಿಯನ್ನು ದೃಷ್ಟ್ವಾ - ನೋಡಿ, ತದಾ-ಆಗ॥೪॥ಹೇ ಅನಾರ್ಯಾಃ-ಅಯೋಗ್ಯರಾದ ಎಲೆ ರಕ್ಕಸಿಯರುಗಳಿರಾ! ಆತ್ಮಾನಂ - ನನ್ನನ್ನು, ಖಾದತ - ತಿನ್ನಿರಿ, ಜನಕಸ್ಯ - ಜನಕಮಹಾರಾಜನ, ಸುತಾಂ - ಮಗಳೆಂಗಿಯೂ, ದಶರಥಸ್ಯ - ದಶರಥಮಹಾರಾಜನಿಗೆ, ಇಷ್ಟಾಂ - ಪ್ರಿಯಳೆನಿಸಿದ, ಸ್ನುಷಾಂಚ - ಸೊಸೆಯಾಗಿಯೂ ಇರತಕ್ಕ, ಸೀತಾಂ - ಸೀತಾದೇವಿಯನ್ನು, ನಭಕ್ಷಯಿಷ್ಯಥ - ತಿನ್ನಬೇಡಿರಿ, ॥೫॥ ರಕ್ಷಸಾಂ - ರಾಕ್ಷಸರ,

ಮತ್ತೆ ಕೆಲವರು ಘೋರವಾದ ರೂಪವನ್ನು ತಾಳಿ ಸೀತೆಯ ಬಳಿಗೆ ಬಂದು, ಪುನಃಪುನಃ ನೀನು ರಾವಣನನ್ನು ವರಿಸಬೇಕೆಂಬ ತಾತ್ಪರ್ಯವನ್ನೊಳಗೊಂಡಿರುವ ನುಡಿಗಳನ್ನು ಕಠಿನವಾಗಿ ಹೇಳತೊಡಗಿದರು ॥೨॥ ಎಲೆ ಅಯೋಗ್ಯಳೇ ! ಸೀತೆ ! ಏಕೆ ಕೆಟ್ಟಹಟವನ್ನು ಹಿಡಿದಿದ್ದೀಯೆ?, ಈ ರಕ್ಕಸಿಯರೆಲ್ಲ ನಿನ್ನನ್ನು ಸಿಗಿದು ಮಾಂಸವನ್ನು ತಿಂದುಬಿಡುವರಲ್ಲ, ಏನಮಾಡುವಿ ? ॥೩॥ ಎಂದೀಪ್ರಕಾರವಾಗಿ ರಕ್ಕಸಿಯರಿಂದ ಹೇಳಲಾರದಷ್ಟು ಹಿಂಸಿಸಲ್ಪಡುತಲಿರುವ ಸೀತೆಯನ್ನು ನೋಡಿ, ಮಲಗಿ ನಿದ್ರಿಸುತಲಿದ್ದು ಆಗತಾನೆ ಎದ್ದ ವೃದ್ಧಳಾದ ತ್ರಿಜಟೆಯೆಂಬ ರಾಕ್ಷಸಿಯೋರ್ವಳು ಆಗಲಾರಕ್ಕಸಿಯರನ್ನು ಕುರಿತು ಇಂತೆಂದಳು ॥೪॥ ಬುದ್ಧಿಹೀನರಾದ ಎಲೆ ರಾಕ್ಷಸಿಯರುಗಳಿರಾ ! ನಿಮಗೆ ಮಾಂಸಭಕ್ಷಣೆಯಲ್ಲಿ ಬಹಳವಾಗಿ ಇಷ್ಟವಿದ್ದುದೇ ಆದರೆ, ಮನಸಾರ ನನ್ನನ್ನು ತಿನ್ನಿರಿ. ಜನಕಮಹಾರಾಯನಿಗೆ ಪ್ರಿಯಪುತ್ರಿಯಾಗಿಯೂ,ದಶರಥಮಹಾರಾಯನಸೊಸೆಯಾಗಿಯೂ ಇರುವ ಸತೀಶಿರೋಮಣಿಯಾದ ಈ ಸೀತೆಯ ಗೊಡವೆಗೆ ಹೋಗಬೇಡಿರಿ ॥೫॥ ಮತ್ತೊಂದು ವಿಶೇಷ ಸಮಾಚಾರವನು

ಸ್ವಪ್ನೋ ಹ್ಯದ್ಯ ಮಯಾ ದೃಷ್ಟೋ ದಾರುಣೋ ರೋಮಹರ್ಷಣಃ ।
ರಾಕ್ಷಸಾನಾಮಭಾವಾಯ ಭರ್ತುರಸ್ಯಾ ಜಯಾಯ ಚ ॥೬॥
ಏವಮುಕ್ತಾಸ್ತ್ರಿಜಟಯಾ ರಾಕ್ಷಸ್ಯಃ ಕ್ರೋಧಮೂರ್ಛಿತಾಃ ।
ಸರ್ವಾ ಏವಾಬ್ರುವನ್ ಭೀತಾಸ್ತ್ರಿಜಟಾಂ ತಾಮಿದಂ ವಚಃ ॥
ಕಥಯಸ್ವ ತ್ವಯಾ ದೃಷ್ಟಃ ಸ್ವಪ್ನೋಽಯಂ ಕೀದೃಶೋ ನಿಶಿ ॥೭॥-॥
ತಾಸಾಂ ಶ್ರುತ್ವಾ ತು ವಚನಂ ರಾಕ್ಷಸೀನಾಂ ಮುಖಾಚ್ಚ್ಯುತಮ್ ॥
ಉವಾಚ ವಚನಂ ಕಾಲೇ ತ್ರಿಜಟಾ ಸ್ವಪ್ನಸಂಶ್ರಿತಮ್ ।

ಅಭಾವಾಯ - ವಿನಾಶಕ್ಕೂ, ಅಸ್ಯಾಃ - ಈ ಸೀತಾದೇವಿಯ, ಭರ್ತುಃ - ಪತಿಯಾದ ಶ್ರೀ ರಾಮಚಂದ್ರನ, ಜಯಾಯ ಚ - ಗೆಲುವಿಗೂ, ದಾರುಣಃ - ಭಯಂಕರವಾಗಿಯೂ, ರೋಮಹರ್ಷಣಃ - ರೋಮಾಂಚವನ್ನುಂಟುಮಾಡತಕ್ಕದಾಗಿಯೂ ಇರುವ (ಸಂತೋಷಕರವೆನಿಸಿದ) ಸ್ವಪ್ನಃ - ಕನಸು, ಅದ್ಯ - ಈಗ, ಮಯಾ - ನನ್ನಿಂದ, ದೃಷ್ಟಃ - ನೋಡಲ್ಪಟ್ಟಿತು, ಹಿ - ನಿಶ್ಚಯ, ಇತಿ - ಹೀಗೆಂಬ. ವಾಕ್ಯಂ ಮಾತನ್ನು, ಅಬ್ರವೀತ್ - ಹೇಳಿದಳು.॥೬॥

ಕ್ರೋಧಮೂರ್ಛಿತಾಃ - ಸಿಟ್ಟಿನಿಂದ ಮೈಮರೆತಿದ್ದ, ಸರ್ವಾಃ ರಾಕ್ಷಸ್ಯ ಏವ - ರಕ್ಕಸಿಯರೆಲ್ಲರೂ, ತ್ರಿಜಟಯಾ - ತ್ರಿಜಟೆಯಿಂದ, ಏವಂ - ಮೇಲೆ ಹೇಳಿದಂತೆ, ಉಕ್ತಾಃ - ಹೇಳಲ್ಪಟ್ಟವರಾದ ಕಾರಣವೇ, ಭೀತಾಃ ಭಯಪಟ್ಟವರಾಗಿ, ತ್ವಯಾ - ನಿನ್ನಿಂದ, ನಿಶಿ - ರಾತ್ರಿಯಲ್ಲಿ, ಕೀದೃಶಃ - ಎಂತಹ, ಅಯಂ - ಈ, ಸ್ವಪ್ನಃ - ಕನಸು, ದೃಷ್ಟಃ - ನೋಡಲ್ಪಟ್ಟಿತು? (ತಂ - ಅದನ್ನು) ಕಥಯಸ್ವ - ಹೇಳು, ಇತಿ - ಹೀಗೆಂದು, ಇದಂ - ಈ, ವಚಃ - ಮಾತನ್ನು, ತಾಂ - ಆ ತ್ರಿಜಟೆಯನ್ನು ಕುರಿತು, ಅಬ್ರುವನ್ - ಹೇಳಿದರು ॥೭-೩॥-॥ ತಾಸಾಂ - ಆ, ರಾಕ್ಷಸೀನಾಂ - ರಕ್ಕಸಿಯರ, ಮುಖಾತ್ - ಮುಖದೆಸೆಯಿಂದ, ಚ್ಯುತಂ - ಹೊರಟು ಬಂದ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ತ್ರಿಜಟಾ ತು - ತ್ರಿಜಟೆಯಾದರೋ, ಸ್ವಪ್ನಸಂಶ್ರಿತಂ - ಕನಸಿನಲ್ಲಿನ (ಕನಸಿನ ವಿಷಯವಾದ) ವಚನಂ - ಮಾತನ್ನು, (ಸಮಾಚಾರವನ್ನು) ಕಾಲೇ - ಆ ಸಮಯದಲ್ಲಿ,

ನಿಮಗಾಗಿ ವಿವರಿಸುವೆನು. ಅದನ್ನು ಮನಸ್ಸಿಟ್ಟು ಕೇಳಿರಿ. ನಾನು ಈಗತಾನೆ ಬಂದು ಕನಸನ್ನು ಕಂಡೆನು. ಅದು ಬಹು ಕ್ರೂರವಾಗಿಯೂ, ಮತ್ತು ರೋಮಾಂಚನವನ್ನುಂಟು ಮಾಡತಕ್ಕದಾಗಿಯೂ ಇದೆ. ಮತ್ತು ರಾಕ್ಷಸರಿಗೆಲ್ಲ ನಾಶವನ್ನು ಸೂಚಿಸತಕ್ಕದಾಗಿಯೂ, ಶ್ರೀರಾಮಭದ್ರನಿಗೆ ಜಯವನ್ನು ತಿಳಿಸತಕ್ಕದಾಗಿಯೂ ಇರುವುದರಿಂದ ಆ ಮಹಾನುಭಾವನ ಧರ್ಮಭಾರ್ಯೆಯಾದ ಈಕೆಯನ್ನು ತಿನ್ನಬೇಕೆಂಬ ಬಯಕೆಯನ್ನು ಬಿಟ್ಟುಬಿಡಿರಿ. ॥೬॥ ಕ್ರೋಧಪರವಶರಾಗಿ ಸೀತೆಯನ್ನು ಹಿಂಸಿಸುವುದರಲ್ಲಿ ಬಗ್ಗಟ್ಟಾಗಿದ್ದ ರಕ್ಕಸಿಯರೆಲ್ಲ ಬಟ್ಟಾಗಿ ಮೇಲೆ ಹೇಳಿದ ತ್ರಿಜಟೆಯ ನುಡಿಯನ್ನು ಕೇಳಿದಕೂಡಲೇ ಬಹಳವಾಗಿ ಹೆದರಿ, ಎಲೆ ತ್ರಿಜಟೆ! ನಿನ್ನ ಕನಸಿನ ಬಗೆಯೇನು ? ಅದನ್ನು ನಮಗೆ ವಿವರವಾಗಿ ತಿಳಿಸು ಎಂದು ಕೇಳಿಕೊಂಡರು ॥೭-೩॥ ॥ ಆ ರಕ್ಕಸಿಯರ ಮುಖದಿಂದ ಹೊರಟ ನುಡಿಯನ್ನು ಕೇಳಿದ ಆ ತ್ರಿಜಟೆಯು ಸ್ವಪ್ನಪ್ರಕಾರವನ್ನು ಅವರಿಗೆ ತಿಳಿಸತೊಡಗಿದಳು ॥೮॥ ॥ ಬಿಳಿಯ ಹೂವಿನ ಹಾರಗಳನ್ನೂ, ಧವಳವಸ್ತ್ರಗಳನ್ನೂ ಧರಿಸಿದ್ದ ಶ್ರೀರಾಮಚಂದ್ರನು ಲಕ್ಷ್ಮಣನಿಂದೊಡಗೂಡಿ, ಆನೆಯ ದಂತದಿಂದ ರಚಿಸಿ ಇದ್ದ ಪಲ್ಲಕ್ಕಿಯಲ್ಲಿ ಕುಳಿತಿದ್ದನು.

ಗಜದಂತ ಮಯೀಂ ದಿವ್ಯಾಂ ಶಿಬಿಕಾ ಮಂತರಿಕ್ಷಗಾಮ್॥
ಯುಕ್ತಾಂ ಹಂಸ ಸಹಸ್ರೇಣ ಸ್ವಯ ಮಾಸ್ಥಾಯ ರಾಘವಃ।
ಶುಕ್ಲ ಮಾಲ್ಯಾಂಬರ ಧರೋ ಲಕ್ಷ್ಮಣೇನ ಸಮಾಗತಃ ॥೧೦॥
ಸ್ವಪ್ನೇ ಚಾದ್ಯ ಮಯಾ ದೃಷ್ಟಾ ಸೀತಾ ಶುಕ್ಲಾಂಬರಾವೃತಾ।
ಸಾಗರೇಣ ಪರಿಕ್ಷಿಪ್ತಂ ಶ್ವೇತಂ ಪರ್ವತ ಮಾಸ್ಥಿತಾ॥
ರಾಮೇಣ ಸಂಗತಾ ಸೀತಾ ಭಾಸ್ಕರೇಣ ಪ್ರಭಾ ಯಥಾ ॥೧೧॥ ॥

ಉವಾಚ - ಹೇಳತೊಡಗಿದಳು ॥ ೮ ॥ - ॥ * ಶುಕ್ಲಮಾಲ್ಯಾಂಬರಧರಃ-ಧವಳಪುಷ್ಪವಸ್ತ್ರಗಳನ್ನು ಧರಿಸಿರುವ, ರಾಘವಃ - ಶ್ರೀ ರಾಮನು, ಗಜದಂತಮಯೀಂ- ಆನೆಯ ದಂತದಿಂದ ರಚಿಸಿರುವ, ದಿವ್ಯಾಂ - ಉತ್ತಮವಾದ, ಅಂತರಿಕ್ಷಗಾಂ - ಆಕಾಶದಲ್ಲಿ ಪ್ರಯಾಣಮಾಡತಕ್ಕ ॥೯॥ ಹಂಸಸಹಸ್ರೇಣ - ಸಾವಿರಾರು ಹಂಸಪಕ್ಷಿಗಳಿಂದ, ಯುಕ್ತಾಂ - ಒಡಗೂಡಿದ್ದ, ಶಿಬಿಕಾಂ - ಅಂದಣವನ್ನು, (ಮೇನವನ್ನು) ಸ್ವಯಂ - ತಾನು, ಆಸ್ಥಾಯ -ಏರಿ, ಲಕ್ಷ್ಮಣೇನಸಹ - ಲಕ್ಷ್ಮಣನೊಡನೆ, ಆಗತಃ - ಬರುತಲಿದ್ದನು, ಅದ್ಯ - ಈಗ, ಮಯಾ - ನನ್ನಿಂದ, ಶುಕ್ಲಾಂಬರಾವೃತಾ-ಶುಭ್ರವಸ್ತ್ರವನ್ನುಟ್ಟಿದ್ದ, ಸಾಗರೇಣ- ಸಮುದ್ರನಿಂದ, ಪರಿಕ್ಷಿಪ್ತಂ - ಆವರಿಸಲ್ಪಟ್ಟುದಾಗಿಯೂ, ಶ್ವೇತಂ - ಬಿಳುಪು ದುದಾಗಿಯೂ ಇರುವ, ಪರ್ವತಂ - ಬೆಟ್ಟವನ್ನು, ಆಸ್ಥಿತಾ - ಏರಿದ್ದ, ಸೀತಾಚ - ಜಾನಕಿಯೂ ಭಾಸ್ಕರೇಣ - ಸೂರ್ಯನೊಡನೆ, ಪ್ರಭಾಯಥಾ-ಕಾಂತಿಯು ಹೇಗೋಹಾಗೆ, ರಾಮೇಣ - ರಾಮನೊಡನೆ, ಸಂಗತಾ - ಒಡಗೂಡಿದ್ದಳು ॥೧೦-೧೧॥-॥ ಚತು

ಆ ಅಂದಳವನ್ನು ಆಕಾಶದಲ್ಲಿ ಅನೇಕ ಹಂಸಪಕ್ಷಿಗಳು ಒಯ್ಯುತಲಿದ್ದುವು ॥ ೯-೧೦ ॥ ಮತ್ತು-ಪಾಲ್ಗಡಲನಡುವೆ ಕಂಗೊಳಿಸುತಲಿದ್ದ ಬಂದಾನೊಂದು ಬೆಳ್ಳಿಯ ಬೆಟ್ಟದ ಮೇಲಿನಿಂದ ಸೀತೆಯು, ಆ ಅಂದವಾದ ಅಂದಳವನ್ನು ಏರಿ ದುಕೂಲಾಲಂಕೃತಳಾಗಿ, ರಾಮನ ಸನ್ನಿಧಿಯಲ್ಲಿ ಸೂರ್ಯನೊಡಗೂಡಿರುವ ಪ್ರಭೆಯು ಹೇಗೋ ಹಾಗೆ ಶೋಭಿಸುತಲಿದ್ದಳು. (ಇದರಿಂದ ಶ್ರೀರಾಮನು ಲಂಕೆಗೆ ಬಂದು ಸೀತೆಯನ್ನು ಕಾಣುವನೆಂಬ ಅರ್ಥವು ಸೂಚಿತ

* "ಆರೋಹಣಂ ಗೋವೃಷಕುಂಜರಾಣಾಂ ಪ್ರಾಸಾದ ಶೈಲಾಗ್ರವನಸ್ಪತೀನಾಂ । ವಿಷ್ಟಾನುಲೇಪೋರುದಿತಂ ಮೃತಂಚ ಸ್ವಪ್ನೇಷ್ವ ಗಮ್ಯಾ ಗಮನಂ ಚಧನ್ಯಂ ॥೧॥ ಆದಿತ್ಯ ಮಂಡಲಂವಾಪಿ ಚಂದ್ರಮಂಡಲಮೇವವಾ । ಸ್ವಪ್ನೇ ಗೃಹ್ಣಾತಿ ಹಸ್ತಾಭ್ಯಾಂ ರಾಜ್ಯಂ ಸಂಪ್ರಾಪ್ನುಯಾತ್ ಮಹತ್" ಎಂದರೆ ಕನಸಿನಲ್ಲಿ ಆಕಳು, ಗೂಳಿ, ಆನೆ, ಉಪ್ಪರಿಗೆ,ಬೆಟ್ಟದ ತುದಿ ಮರ ಇವುಗಳನ್ನು ಏರೋಣವೂ, ಅಮೇಧ್ಯವನ್ನು ಮೈಗೆ ಬಳಿದುಕೊಳ್ಳೋಣವೂ, ಅಗಮ್ಯಾಗಮನವೂ, ಶುಭಪ್ರದಗಳು. ಮತ್ತು-ಸೂರ್ಯ ಚಂದ್ರಮಂಡಲಗಳನ್ನು ಕೈಗಳಿಂದ ಹಿಡಿದಂತೆ ಸ್ವಪ್ನವಾದರೆ ರಾಜ್ಯಲಾಭವಾಗುವದು. ದೇಹಾರೋಗ್ಯವಿದ್ದು, ಅರಣ್ಯ, ನದೀತೀರ, ಹಿಮಾಂತಯತು ಇವುಗಳನ್ನು ಬಿಟ್ಟು ಉಳಿದ ವೇಳೆ ಬೆಳಗಿನ ಜಾವದಲ್ಲಿ ಉಂಟಾಗುವ ಸ್ವಪ್ನವು ಶೀಘ್ರಫಲಕಾರಿ. ಮತ್ತು-ಮೊದಲು ಪಲ್ಲಕ್ಕಿಯಲ್ಲಿದ್ದಹಾಗೂ, ಸೀತೆಯು ಶ್ವೇತಪರ್ವತದ ಮೇಲೆ ಇದ್ದಂತೆಯೂ, ಆಮೇಲೆ ರಾಮನು ಸಿಬಿಕೆಯಿಂದ ಆನೆಯನ್ನು ಹತ್ತಿ ಲಕ್ಷ್ಮಣನೊಡನೆ ಪರ್ವತವನ್ನು ಹೊಂದಿ ತರುವಾಯ ಸೀತೆಯನ್ನು ಆನೆಯ ಬೆನ್ನಿನ ಮೇಲೆ ಕೂಡಿಸಿಕೊಂಡು ಲಂಕೆಯ ಮೇಲ್ಗಡೆ ನಿಂತು ಇದ್ದು ಬಳಿಕ ಸೀತಾಲಕ್ಷ್ಮಣರೊಡನೆ ೮ ಎತ್ತುಗಳನ್ನು ಕಟ್ಟಿದರಥದ ಮೇಲೆ ಬಂದು ಆಹಿಂದ ಪುಷ್ಪಕವನ್ನೇರಿ ಬರುತ್ತಿದ್ದನೆಂಬುದು ಸ್ವಪ್ನಕ್ರಮ.

ರಾಘವಶ್ಚ ಮಯಾ ದೃಷ್ಟ ಶ್ಚತುರ್ದಂತಂ ಮಹಾಗಜಂ ।
ಆರೂಢ ಶ್ಶೈಲ ಸಂಕಾಶಂ ಚಚಾರ ಸಹಲಕ್ಷ್ಮಣಃ ॥೧೨॥ ॥
ತತ ಸ್ತೌ ನರಶಾರ್ದೂಲೌ ದೀಪ್ಯಮಾನೌ ಸ್ವತೇಜಸಾ ॥
ಶುಕ್ಲಮಾಲ್ಯಾಂಬರ ಧರೌ ಜಾನಕೀಂ ಪರ್ಯುಪಸ್ಥಿತೌ ॥೧೩॥ ॥
‡ತತ ಸ್ತಸ್ಯ ನಗಸ್ಯಾಗ್ರೇ ಹ್ಯಾಕಾಶಸ್ಥಸ್ಯ ದಂತಿನಃ ॥
ಭರ್ತ್ರಾ ಪರಿಗೃಹೀತಸ್ಯ ಜಾನಕೀ ಸ್ಕಂಧಮಾಶ್ರಿತಾ ॥೧೪॥-॥

ದಂತಂ - ನಾಲ್ಕು ಕೊಂಬುಗಳುಳ್ಳ, ಶೈಲಸಂಕಾಶಂ - ಬೆಟ್ಟಕ್ಕೆ ಸಮಾನವಾದ, ಮಹಾಗಜಂ - ದೊಡ್ಡ ಆನೆಯನ್ನು (ಶಿಬಿಕಾತಃ - ಪಲ್ಲಕ್ಕಿಯ ಮೇಲಿನಿಂದ) ಆರೂಢಃ - ಏರಿದ, ರಾಘವಶ್ಚ - ಶ್ರೀ ರಾಮನೂ, ಮಯಾ- ನನ್ನಿಂದ, ದೃಷ್ಟಃ - ನೋಡಲ್ಪಟ್ಟನು, ಸಹಲಕ್ಷ್ಮಣಃ - ಲಕ್ಷ್ಮಣನಿಂದೊಡಗೂಡಿದವನಾಗಿ, ಚಚಾರಚ - ಸಂಚರಿಸುತಲೂ ಇದ್ದನು ॥೧೨॥-॥ ‡ ತತಃ - ತರುವಾಯ, ನರಶಾರ್ದೂಲೌ - ಪುರುಷಶ್ರೇಷ್ಠರೆನಿಸಿದ, ಸ್ವತೇಜಸಾ - ತಮ್ಮ ದೇಹಪ್ರಭೆಯಿಂದ, ದೀಪ್ಯಮಾನೌ - ಪ್ರಕಾಶಿಸುತಲಿರುವ, ಶುಕ್ಲಮಾಲ್ಯಾಂಬರಧರೌ - ಧವಳ ಪುಷ್ಪವಸ್ತ್ರಗಳನ್ನು ಧಾರಣೆಮಾಡಿದ್ದ, ತೌ - ಆ ರಾಮಲಕ್ಷ್ಮಣರು, ಜಾನಕೀಂ - ಸೀತಾದೇವಿಯನ್ನು, ಪರ್ಯುಪಸ್ಥಿತೌ - ಆವರಿಸಿಕೊಂಡಿದ್ದರು ॥ ೧೩ ॥-॥ ‡ ತತಃ - ಆ ಹಿಂದೆ, ತಸ್ಯ - ಆ, ನಗಸ್ಯ-ಶ್ವೇತಪರ್ವತದ, ಅಗ್ರೇ - ತುದಿಯಲ್ಲಿ, ಭರ್ತ್ರಾ - ತನ್ನ ಪತಿಯಿಂದ, ಪರಿಗೃಹೀತಸ್ಯ - ಏರಲ್ಪಟ್ಟಿದ್ದ, ಆಕಾಶಸ್ಥಸ್ಯ - ಮುಗಿಲಿನಲ್ಲಿದ್ದ, ದಂತಿನಃ - ಆನೆಯ, ಸ್ಕಂಧಂ - ಹೆಗಲನ್ನು, ಆಶ್ರಿತಾ - ಹೊಂದಿದವಳಾಗಿಯೂ, ಕಮಲಲೋಚನಾ - ತಾವರೆಯಂತೆ ಅಂದವಾದ ಕಣ್ಣುಳ್ಳವಳಾಗಿಯೂ ಇರುವ, ಜಾನಕೀ - ಸೀತಾದೇವಿಯು, ತತಃ - ಆಮೇಲೆ, ಭರ್ತುಃ - ಪತಿಯ, ಅಂಕಾತ್-ತೊಡೆಯ ದೆಸೆಯಿಂದ, ಸಮುತ್ಪತ್ಯ - ಎದ್ದು ನಿಂತು, ಚಂದ್ರಸೂರ್ಯೌ - ಚಂದ್ರಸೂರ್ಯರನ್ನು, ಪಾಣಿನಾ - ಹಸ್ತದಿಂದ, ಪರಿಮಾರ್ಜತೀ (ಸತೀ) ಸವರುತಲಿರುತವಳಾಗಿಯೂ, (ಮಯಾ- ನನ್ನಿಂದ) ದೃಷ್ಟಾ-

ವಾಗುತದೆ). ॥೧೦॥ ಇದಲ್ಲದೆ:— ಆ ನನ್ನ ಸ್ವಪ್ನದಲ್ಲಿ ಶ್ರೀರಾಮನು, ದೊಡ್ಡ ಬೆಟ್ಟದಂತೆ ಬೆಳಗುತ ನಾಲ್ಕುಕೊಂಬುಗಳುಳ್ಳ ಆನೆಯನ್ನು ಏರಿ ಇದ್ದ ಹಾಗೂ, ಲಕ್ಷ್ಮಣನು ಆ ಶ್ರೀರಾಮನಿಂದೊಡಗೂಡಿ ಸೀತೆಯನ್ನು ಹುಡುಕಲಿಕ್ಕೆ ಅಲ್ಲಲ್ಲಿ ಸಂಚರಿಸುತಲಿದ್ದಹಾಗೂ ಕಾಣಬಂದಿತು. ಇದು ಶ್ರೀರಾಮನಿಗೆ ಶುಭಸೂಚಕವಲ್ಲವೇ ? ॥ ೧೨॥ ॥ ಮತ್ತು ರಾಮಲಕ್ಷ್ಮಣರಿಬ್ಬರೂ, ತಮ್ಮ ದೇಹ ಪ್ರಭೆಯಿಂದ ವಿರಾಜಿಸುತಲಿರುವವರಾಗಿ ಶುಭ್ರ ಪುಷ್ಪವಸ್ತ್ರಗಳನ್ನು ಧರಿಸಿ, ಇಕ್ಕೆಲದಲ್ಲಿಯೂ ನಿಂತು, ಸೀತೆಯನ್ನು ಸಂರಕ್ಷಿಸುತಲಿರುವಂತೆ ಕಾಣಬರುತ್ತಿದ್ದರು ॥೧೩॥ ॥ ಮತ್ತು- ಆಕ್ಷೀರಸಾಗರದ ನಡುವೆ ಶ್ವೇತ ಪರ್ವತಾಗ್ರದಲ್ಲಿ ನಿಂತಿದ್ದ ಜಾನಕಿಯು ಆಕಾಶದಲ್ಲಿ ಪ್ರಯಾಣಮಾಡುತಲಿದ್ದ ಮಹಾ ಗಜದ ಮೇಲಕ್ಕೆ ರಾಮನ ಮೂಲಕ ಏರುತಲಿರುವಂತೆ ಕಾಣಬಂದಳು॥೧೪॥ ಅಷ್ಟುಮಾತ್ರವಲ್ಲದೆ

‡ ಇಲ್ಲಿ---೧೩॥ ಶ್ಲೋಕದವರೆಗೆ ಹನ್ನೆರಡುಸಾವಿರ ಶ್ಲೋಕಗಳು ಕಳೆದವೆಂತಲೂ, ಹದಿನಾಲ್ಕನೆಯ ಶ್ಲೋಕದಲ್ಲಿ " ತತಸ್ತಸ್ಯ ನಗಸ್ಯಾಗ್ರೇ " ಎಂಬ ಉತ್ತರಾರ್ಧದೊಳಗೆ ನಾಲ್ಕನೆಯ ಅಕ್ಷರವಾದ 'ಸ್ಯ'ಎಂಬುದು ಪ್ರಣವ ಸಹಿತವಾದ ಗಾಯತ್ರೀ ಮಂತ್ರದ ಹದಿಮೂರನೆಯ ಅಕ್ಷರವು ಹದಿಮೂರನೆಯ ಸಾವಿರದ ಆರಂಭವನ್ನು ಸೂಚಿಸುತ್ತದೆ ಎಂತಲೂ ಹೇಳುವರು.

ಭರ್ತುರಙ್ಕಾತ್ಸಮುತ್ಪತ್ಯ ತತಃ ಕಮಲಲೋಚನಾ ||
ಚನ್ದ್ರಸೂರ್ಯೌ ಮಯಾ ದೃಷ್ಟ್ವಾ ಪಾಣಿನಾ ಪರಿಮಾರ್ಜತೀ ||೧೫|| ||
ತತಸ್ತಾಭ್ಯಾಂ ಕುಮಾರಾಭ್ಯಾ ಮಾಸ್ಥಿತಸ್ಸ ಗಜೋತ್ತಮಃ ||
ಸೀತಯಾ ಚ ವಿಶಾಲಾಕ್ಷ್ಯಾ ಲಂಕಾಯಾ ಉಪರಿ ಸ್ಥಿತಃ ||೧೬||-||
ಪಾಣ್ಡುರರ್ಷಭ ಯುಕ್ತೇನ ರಥೇನಾಷ್ಟಯುಜಾ ಸ್ವಯಂ ||
ಇಹೋಪಯಾತಃ ಕಾಕುತ್ಸ್ಥ ಸ್ಸೀತಯಾ ಸಹ ಭಾರ್ಯಯಾ ||೧೭||-||
ಲಕ್ಷ್ಮಣೇನ ಸಹ ಭ್ರಾತ್ರಾ ಸೀತಯಾ ಸಹ ವೀರ್ಯವಾನ್ ||

ನೋಡಲ್ಪಟ್ಟೆಳು, ಹಿ - ನಿಶ್ಚಯ ||೧೪||-೧೫||-|| ತತಃ - ಆಮೇಲೆ, ತಾಭ್ಯಾಂ - ಆ, ಕುಮಾರಾಭ್ಯಾಂ ರಾಜಕುಮಾರರಿಂದ, ಆಸ್ಥಿತಃ - ಏರಲ್ಪಟ್ಟ, ಸಃ - ಆ, ಗಜೋತ್ತಮಃ - ಮೇಲಾದ ಆನೆಯು, ವಿಶಾಲಾಕ್ಷ್ಯಾ - ಅಗಲವಾದ ಕಣ್ಣುಳ್ಳ, ಸೀತಯಾಚ - ಸೀತೆಯೊಡನೆಯೂ, ಲಂಕಾಯಾಃ - ಲಂಕಾನಗರದ, ಉಪರಿ - ಮೇಲುಭಾಗದಲ್ಲಿ, ಸ್ಥಿತಃ - ಇದ್ದಿತು ||೧೬||-|| ವೀರ್ಯವಾನ್ - ಪರಾಕ್ರಮಶಾಲಿಯಾದ, ಪುರುಷೋತ್ತಮಃ - ಪುರುಷಶ್ರೇಷ್ಠನೆನಿಸಿದ, ಕಾಕುತ್ಸ್ಥಃ - ಶ್ರೀರಾಮನು, ಭಾರ್ಯಯಾ- ಹೆಂಡತಿಯಾದ, ಸೀತಯಾಸಹ - ಸೀತೆಯೊಡಗೂಡಿ, ಅಷ್ಟಯುಜಾ - ಎಂಟು ಗೂಳಿಗಳನ್ನು ಹೂಡಿರುವ, ಪಾಂಡುರರ್ಷಭಯುಕ್ತೇನ - ಬಿಳಿಯ ಎತ್ತುಗಳಿಂದಕೂಡಿ ಇರತಕ್ಕ, (ಈ ಎರಡು ಪದಗಳಿಗೂ ಎಂಟು ಎತ್ತುಗಳಿಂದ ಕೂಡಿರುವುದು ಎಂದೇ ಅರ್ಥ) ಅಥವಾ ಅಷ್ಟಯುಜಾ - ಎಂಟುಮೂಲೆಗಳಿಂದ ಕೂಡಿರುವ, ಪಾಂಡುರ ರ್ಷಭಯುಕ್ತೇನ - ಎಂಟು ಬಿಳಿಯ ಎತ್ತುಗಳನ್ನುಕಟ್ಟಿರತಕ್ಕ, ರಥೇನ - ತೇರಿನಿಂದ, ಸ್ವಯಂ - ತಾನು, ಇಹ - ಇಲ್ಲಿಗೆ, ಉಪಯಾತಃ - ಬಂದವನಾಗಿಯೂ, ||೧೭|| ⚹ ಭ್ರಾತ್ರಾ - ಸೋದರನಾದ, ಲಕ್ಷ್ಮಣೇನಸಹ - ಲಕ್ಷ್ಮಣನೊಡನೆಯೂ, ಸೀತಯಾಚ - ಸೀತೆಯೊಡನೆಯೂ, ಸೂರ್ಯಸನ್ನಿಭಂ - ಸೂರ್ಯನಿಗೆ ಸಮಾನವಾದ, ದಿವ್ಯಂ ದೇವಯೋಗ್ಯವೆನಿಸಿದ, ಪುಷ್ಪಕಂ - ಪುಷ್ಪಕವೆಂಬ,ವಿಮಾನು - ತೇರನ್ನು, ಆರುಹ್ಯ - ಏರಿ, ಉತ್ತರಾಂದಿಶಂ - ಉತ್ತರದಿಕ್ಕನ್ನೇ, ಆಲೋಕ್ಯ - ನೋಡಿ, ಜಗಾಮ -

ಪದ್ಮಪತ್ರಾಕ್ಷಿಯಾದ ಸೀತೆಯು ಗಂಡನ ತೊಡೆಯ ಮೇಲಿನಿಂದ ಎದ್ದು ನಿಂತು,ಸೂರ್ಯಚಂದ್ರರನ್ನು ಮೈದಡವುತಲಿದ್ದಂತೆಯೂ, ಕಾಣಬಂದಿತು ||೧೫|| || ಆ ಶ್ರೇಷ್ಠವಾದ ಗಜವು ಸೀತಾಲಕ್ಷ್ಮಣರಿಂದೊಡಗೂಡಿದ ಶ್ರೀರಾಮ ಚಂದ್ರನಿಂದ ಅಲಂಕೃತವಾಗಿ ಈ ಲಂಕಾನಗರದ ಮೇಲ್ಭಾಗದಲ್ಲಿ ಬರುತಲಿದ್ದಿತು. ಹೀಗೆ ಮತ್ತೊಂದು ಸ್ವಪ್ನ ಪರ್ಯಾಯದಲ್ಲಿ- ಮಹಾಪರಾಕ್ರಮಶಾಲಿಯಾದ ಶ್ರೀರಾಮನು ಎಂಟು ಬಿಳಿಯ ಗೂಳಿಗಳನ್ನು ಕಟ್ಟಿರುವ ರಥದ ಮೇಲೆ ಸೀತಾ ಲಕ್ಷ್ಮಣರೊಡನೆ ಕುಳಿತು ಈ ಲಂಕೆಯ ಬಳಿಯಲ್ಲಿ ಬರುತಲಿದ್ದ ಹಾಗೂ, ಮತ್ತೊಂದು ಸಂದರ್ಭದಲ್ಲಿ-ಸೂರ್ಯ-ಮಂಡಲದಂತೆ ಸಂಶೋಭಿಸುತಲಿರುವ ದಿವ್ಯ ಪುಷ್ಪಕ

⚹ “ ಲಕ್ಷ್ಮಣೇನ ಸಹಭ್ರಾತ್ರಾವಿಮಾನೇ ಪುಷ್ಪಕೇ ಸ್ಥಿತಃ ” ಎಂಬುದು ಮೊದಲ್ಗೊಂಡು “ ತತೋನ್ಯತ್ರಮಯಾದೃಷ್ಟೋ ರಾಮಃಸತ್ಯಪರಾಕ್ರಮಃ ” ಇಲ್ಲಿನವರೆಗೂ ೧೨॥ ಶ್ಲೋಕಗಳು ಪ್ರಕೃತಕ್ಕೆ ಅಸಂಗತಗಳಾಗಿಯೂ, ಪರಸ್ಪರ ವಿರುದ್ಧಗಳಾಗಿಯೂ, ಕವಿತಾ ರಚನಾಕ್ರಮವು ಬೇರಾಗಿಯೂ ಇರುವುದರಿಂದ ಪ್ರಕ್ಷಿಪ್ತ (ಹೊಸದಾಗಿ ಸೇರಲ್ಪಟ್ಟವು) ಗಳೆಂದು ಗೋವಿಂದರಾಜೀಯ ವ್ಯಾಖ್ಯಾನಕಾರರು ಉದಹರಿಸಿ ಇದಾರೆ ಮತ್ತು ಅವುಗಳಿಗೆ ವ್ಯಾಖ್ಯಾನಮಾಡಿ ಇಲ್ಲ.

ಆರುಹ್ಯ ಪುಷ್ಪಕಂ ದಿವ್ಯಂ ವಿಮಾನಂ ಸೂರ್ಯಸನ್ನಿಭಮ್ ।
ಉತ್ತರಾಂ ದಿಶಮಾಲೋಕ್ಯ ಜಗಾಮ ಪುರುಷೋತ್ತಮಃ ॥೧೯॥
ಏವಂ ಸ್ವಪ್ನೇ ಮಯಾ ದೃಷ್ಟೋ ರಾಮೋ ವಿಷ್ಣುಪರಾಕ್ರಮಃ ।
ಲಕ್ಷ್ಮಣೇನ ಸಹ ಭ್ರಾತ್ರಾ ಸೀತಯಾ ಸಹ ರಾಘವಃ ॥೨೦॥
ನ ಹಿ ರಾಮೋ ಮಹಾತೇಜಾಃ ಶಕ್ಯೋ ಜೇತುಂ ಸುರಾಸುರೈಃ ।
ರಾಕ್ಷಸೈರ್ವಾಪಿ ಚಾನ್ಯೈರ್ವಾ ಸ್ವರ್ಗಃ ಪಾಪಜನೈರಿವ ॥೨೧॥
ರಾವಣಶ್ಚ ಮಯಾ ದೃಷ್ಟಃ ಕ್ಷಿತೌ ತೈಲಸಮುಕ್ಷಿತಃ ।
ರಕ್ತವಾಸಾಃ ಪಿಬನ್ಮತ್ತಃ ಕರವೀರಕೃತಸ್ರಜಃ ॥೨೨॥

---

ಪ್ರಯಾಣಮಾಡುತ್ತಿದ್ದನು ॥೧೯॥ ವಿಷ್ಣುಪರಾಕ್ರಮಃ - ವಿಷ್ಣುವಿನಂತೆ ಪರಾಕ್ರಮವುಳ್ಳ, ರಾಮಃ - ಶ್ರೀರಾಮನು, ಭ್ರಾತ್ರಾ - ತಮ್ಮನಾದ, ಲಕ್ಷ್ಮಣೇನಸಹ - ಲಕ್ಷ್ಮಣನೊಡನೆಯೂ, ಭಾರ್ಯಯಾ - ಹೆಂಡತಿಯಾದ, ಸೀತಯಾಸಹ - ಸೀತೆಯೊಡನೆಯೂ, ಸ್ವಪ್ನೇ - ಕನಸಿನಲ್ಲಿ, ಮಯಾ - ನನ್ನಿಂದ, ಏವಂ - ಹೀಗೆ, ದೃಷ್ಟಃ - ನೋಡಲ್ಪಟ್ಟನು, ಮಹಾತೇಜಾಃ - ಹೆಚ್ಚಿದ ಪ್ರತಾಪವುಳ್ಳ, ರಾಮಃ - ಶ್ರೀ ರಾಮನು, ಸುರಾಸುರೈಃ - ದೇವಗಂಧರ್ವಾದಿಗಳಿಂದಲೂ, ರಾಕ್ಷಸೈರ್ವಾಪಿ - ರಾಕ್ಷಸರಿಂದಲೂ, ಅನ್ಯೈರ್ವಾ - ಇತರರಿಂದಲೂ, ಸ್ವರ್ಗಃ - ಸ್ವರ್ಗವು, ಪಾಪಜನೈರಿವ - ಪಾಪಪುರುಷರಿಂದ ಹೇಗೋಹಾಗೆ, ಜೇತುಂ- ಜಯಿಸಲಿಕ್ಕೆ ಶಕ್ಯಃ - ಸಾಧ್ಯನಾದವನು, ನಹಿ - ಆಗುವುದಿಲ್ಲ॥೨೦॥-೨೧॥ ತೈಲಸಮುಕ್ಷಿತಃ - ಎಣ್ಣೆಯಿಂದ ತೋಯಿಸಲ್ಪಟ್ಟವನೂ, ರಕ್ತವಾಸಾಃ-ಕೆಂಬಟ್ಟೆಯನ್ನುಟ್ಟವನೂ,ಪಿಬನ್-ಹೆಂಡಕುಡಿಯುತ್ತಿರುವವನೂ, ಉನ್ಮತ್ತಃ-ಮದವೇರಿದವನೂ,ಕರವೀರಕೃತಸ್ರಜಃ-ಕಣಿಗಿಲಹೂವಿನ ಹಾರವನ್ನು ತಳೆದವನೂ ಆಗಿದ್ದ, ರಾವಣಶ್ಚ - ರಾವಣನೂ, ಮಯಾ - ನನ್ನಿಂದ, ಕ್ಷಿತೌ - ಭೂಮಿಯಲ್ಲಿ, ದೃಷ್ಟಃ - ನೋಡಲ್ಪಟ್ಟನು ॥೨೨॥ ಅದ್ಯ - ಇಂದು, ಪುಷ್ಪಕಾತ್ - ಪುಷ್ಪಕವೆಂಬ ವಿಮಾನದಿಂದ, ಭುವಿ - ನೆಲದಲ್ಲಿ, ಪತಿತಃ - ಉರುಳಿಕೊಂಡನು,

---

ವಿಮಾನವನ್ನೇರಿ ಉತ್ತರಾಭಿಮುಖವಾಗಿ ಆ ಪುರುಷೋತ್ತಮನು ತೆರಳುತಲಿದ್ದಂತೆಯೂ, ಶ್ರೀಮಹಾವಿಷ್ಣು ಸದೃಶವಾದ ಪರಾಕ್ರಮವುಳ್ಳ ಶ್ರೀರಾಮಚಂದ್ರನು ಧರ್ಮ ಪತ್ನಿಯಾದ ಸೀತೆಯಿಂದಲೂ, ಸೋದರನಾದ ಲಕ್ಷ್ಮಣನೊಡನೆಯೂ, ಸ್ವಪ್ನದೊಳಗೆ ನನಗೆ ಸಂದರ್ಶನವಿತ್ತನು॥೧೯॥-॥೨೦॥ಮಂಕುತನದ ಎಲೈ ರಕ್ಕಸಿಯರುಗಳಿರಾ ! ಹೀಗೆ ಶ್ರೀರಾಮಚಂದ್ರನಿಗೆ ಜಯಸೂಚಕಗಳಾದ ಚಿಹ್ನೆಗಳು ನನಗೆ ಸ್ವಪ್ನದಲ್ಲಿ ಕಾಣಬರುವುದರಿಂದಲೂ, ಆ ಮಹಾನುಭಾವನು ಮಹಾಪರಾಕ್ರಮಶಾಲಿಯಾಗಿರುವುದರಿಂದಲೂ, ಪಾಪಾತ್ಮರಾದ ಮನುಜರು ಸ್ವರ್ಗವನ್ನು ಹೇಗೆ ಗೆಲ್ಲಲಾರರೋ, ಹಾಗೆಯೇ ದೇವತೆಗಳಾಗಲೀ, ರಾಕ್ಷಸರಾಗಲೀ ಇತರರಾಗಲೀ ಮಹಾತ್ಮನಾದ ರಾಮನನ್ನು ಗೆಲ್ಲಲಾರರು ॥೨೧॥ ಮತ್ತೆ -ಆ ಕನಸಿನೊಳಗೆ ರಾವಣನನ್ನು ಕಂಡಪರಿಯನ್ನು ವಿವರಿಸುವೆನು ಲಾಲಿಸಿರಿ. ಎಣ್ಣೆಯಲ್ಲಿ ಮುಳುಗಿ, ಕೆಂಬಟ್ಟೆಯನ್ನುಟ್ಟು, ಹೆಂಡವನ್ನು ಕುಡಿಯುತ, ಹುಚ್ಚು ಹಿಡಿದವನಂತೆ ಮದಿಸಿ, ಕಣಿಗಿಲೆ ಹೂವಿನ ಹಾರವನ್ನು ಇಳಿಯಹಾಕಿಕೊಂಡು, ನೆಲದಮೇಲೆ ನಡೆದು ಬರುತಲಿರುವ ಈ ಲಂಕಾರಮಣನನ್ನು ಕಂಡೆನು. ಮತ್ತು-ಸ್ವಲ್ಪಹೊತ್ತಿಗೆ ಮೊದಲು ಕಂಡ ಕನಸಿನಲ್ಲಿ ದಿವ್ಯಪುಷ್ಪಕವಿಮಾನದಿಂದ ನೆಲದಲ್ಲಿ ಉರುಳಿದನು. ಬಬ್ಬ ಹೆಂಗಸು ಮುಂಡಿತ

ವಿಮಾನಾತ್ಪುಷ್ಪಕಾದದ್ಯ ರಾವಣಃ ಪತಿತೋ ಭುವಿ ।
ಕೃಷ್ಯಮಾಣಃ ಸ್ತ್ರಿಯಾ ದೃಷ್ಟೋ ಮುಂಡಃ ಕೃಷ್ಣಾಂಬರಃ ಪುನಃ ॥೨೩॥
ರಥೇನ ಖರಯುಕ್ತೇನ ರಕ್ತಮಾಲ್ಯಾನುಲೇಪನಃ ।
ಪಿಬಂಸ್ತೈಲಂ ಹಸನ್ನೃತ್ಯನ್ ಭ್ರಾಂತಚಿತ್ತಾಕುಲೇಂದ್ರಿಯಃ ॥೨೪॥
ಗರ್ದಭೇನ ಯಯೌ ಶೀಘ್ರಂ ದಕ್ಷಿಣಾಂ ದಿಶಮಾಸ್ಥಿತಃ ॥೨೪॥-॥
ಪುನರೇವ ಮಯಾ ದೃಷ್ಟೋ ರಾವಣೋ ರಾಕ್ಷಸೇಶ್ವರಃ ।
ಪತಿತೋಽವಾಕ್ಛಿರಾ ಭೂಮೌ ಗರ್ದಭಾದ್ಭಯಮೋಹಿತಃ ॥೨೫॥
ಸಹಸೋತ್ಥಾಯ ಸಂಭ್ರಾಂತೋ ಭಯಾರ್ತೋ ಮದವಿಹ್ವಲಃ ॥೨೬॥

ಸ್ತ್ರಿಯಾ - ಹೆಂಗಸಿನಿಂದ, ಕೃಷ್ಯಮಾಣಃ - ಸೆಳೆಯಲ್ಪಡುತಲಿರುವವನೂ, ಮುಂಡಃ - ಬೋಡತಲೆಯುವನೂ, ಕೃಷ್ಣಾಂಬರಃ - ಕರಿಯಬಟ್ಟೆಯನ್ನುಟ್ಟವನೂ ಆಗಿ, ರಾವಣಃ - ರಾವಣನು, ಪುನಃ ಮರಳಿ, (ಮಯಾ - ನನ್ನಿಂದ) ದೃಷ್ಟಃ - ನೋಡಲ್ಪಟ್ಟನು ॥೨೩॥

ರಕ್ತಮಾಲ್ಯಾನುಲೇಪನಃ - ಕೆಂಪುಬಣ್ಣದ ಪುಷ್ಪಚಂದನಗಳುಳ್ಳ, ತೈಲಂ - ಎಣ್ಣೆಯನ್ನು ಪಿಬನ್ - ಕುಡಿಯುತಲಿರುವ, ಹಸನ್ - ಕೇಕೆ ಹಾಕುತಲಿರತಕ್ಕ, ನೃತ್ಯನ್-ಕುಣಿಯುತಲಿದ್ದ, ಭ್ರಾಂತಚಿತ್ತ - ಭ್ರಮೆಗೊಂಡ (ಚಿತ್ತವೈಕಲ್ಯದ) ಮನಸ್ಸಿನಿಂದ, ಆಕುಲೇಂದ್ರಿಯಃ - ಕಲಕಲವಾದ ಇಂದ್ರಿಯಗಳುಳ್ಳ, (ರಾವಣಃ - ರಾವಣನು) ಖರಯುಕ್ತೇನ - ಕತ್ತೆಗಳನ್ನು ಕಟ್ಟಿದ್ದ, ರಥೇನ - ಬಂಡಿಯಿಂದ, ಯಯೌ - ಹೊರಟನು, (ತತಃ - ಆ ಮೇಲೆ) ದಕ್ಷಿಣಾಂದಿಶಂ - ದಕ್ಷಿಣದಿಕ್ಕನ್ನು, ಆಸ್ಥಿತಃ- ಆಶ್ರಯಿಸಿದವನಾಗಿ, ಗರ್ದಭೇನ - ಕತ್ತೆಯಿಂದ, ಶೀಘ್ರಂ - ಬೇಗನೆ, ಯಯೌ - ಪ್ರಯಾಣಮಾಡಿದನು ॥೨೪॥ ರಾಕ್ಷಸೇಶ್ವರಃ - ರಾಕ್ಷಸೇಂದ್ರನಾದ, ರಾವಣಃ - ರಾವಣನು, ಅವಾಕ್ಛಿರಾಃ - ಕೆಳಮುಖವಾದ ತಲೆಯುಳ್ಳವನೂ, ಭಯಮೋಹಿತಃ - ಅಂಜಿಕೆಯಿಂದ ಮೈಮರೆತವನೂ, ಗರ್ದಭಾತ್ - ಕತ್ತೆಯದೆಸೆಯಿಂದ, ಭೂಮೌ - ನೆಲದಲ್ಲಿ, ಪತಿತಃ - ಉರುಳಿದವನೂ ಆಗಿ, ಸಹಸಾ - ಬೇಗನೆ, ಉತ್ಥಾಯ - ಎದ್ದು, ಸಂಭ್ರಾಂತಃ - ತಡಬಡೆಗೊಂಡವನಾಗಿ, ಭಯಾರ್ತಃ - ಭಯದಿಂದ ಪೀಡಿತನೂ, ಮದವಿಹ್ವಲಃ- ಮದದಿಂದ ಮೈಮರೆತವನೂ ಆಗುತ್ತಿರುವವನಾಗಿ, ಮಯಾ-ನನ್ನಿಂದ, ಪುನರೇವ - ತಿರುಗಿ, ದೃಷ್ಟಃ - ನೋಡಲ್ಪಟ್ಟನು ॥೨೫-೨೬॥ ಸಃ ರಾವಣಃ - ಆ ಅವಸ್ಥೆಯಲ್ಲಿದ್ದ ರಾವಣನು, ದಿಗ್ವಾಸಾಃ -

ಮುಂಡನಾಗಿಯೂ, ಕೃಷ್ಣವಸ್ತ್ರಧರನಾಗಿಯೂ, ಇರುವ ಈ ರಾವಣನನ್ನು ಹಿಡಿದು ಸೆಳೆಯುತಲಿದ್ದಳು ॥೨೩॥ ಇದಲ್ಲದೆ, ಮತ್ತೊಂದು ಪರ್ಯಾಯದಲ್ಲಿ-ಕೆಂಬಟ್ಟೆಯನ್ನುಟ್ಟು, ರಕ್ತಚಂದನವನ್ನು ಬಳಿದುಕೊಂಡು, ಕೆಂಪು ಹೂವನ್ನು ಮುಡಿದುಕೊಂಡು, ಎಣ್ಣೆಯನ್ನು ಕುಡಿಯುತ್ತ, ಕೇಕೆ ಹಾಕಿ ನಗುತ್ತಲೂ ಕುಣಿಯುತಲಿದ್ದು, ಇಂದ್ರಿಯಗಳ ಸ್ವಾಧೀನತೆಯಿಲ್ಲದೆ, ಹುಚ್ಚುಹಿಡಿದವನಾಗಿ, ಕತ್ತೆಗಳನ್ನು ಹೂಡಿದ ಬಂಡಿಯ ಮೇಲೆ ಕುಳಿತು ತೆಂಕಣದೆಸೆಗೆ ಅಭಿಮುಖನಾಗಿ ಪ್ರಯಾಣಮಾಡುತಲಿದ್ದನು ॥೨೪-೨೪॥ ಮತ್ತೊಂದು ವೇಳೆ-ಕತ್ತೆಯ ಮೇಲೆ ಕುಳಿತು ಪಯಣಮಾಡುತಲಿದ್ದು, ತಲೆಕೆಳಕಾಗಿ ನೆಲಕ್ಕೆ ಉರುಳಿ, ಥಟ್ಟನೆ ಎದ್ದು, ಭ್ರಾಂತನಾಗಿ ಭಯದಿಂದ ಹೆದರಿ, ಮದವೇರಿ, ಮೈಮರೆತ ಅವಸ್ಥೆಯಲ್ಲಿದ್ದ ಈ ರಾಕ್ಷಸೇಶ್ವರನನ್ನು ಸ್ವಪ್ನದಲ್ಲಿ ಕಂಡೆನು ॥೨೫-೨೬॥ ಇನ್ನೊಂದು ಸಂದರ್ಭದಲ್ಲಿ-ದಿಗಂಬರನಾಗಿ, ಕೆಟ್ಟ

ಉನ್ಮತ್ತ ಇವ ದಿಗ್ವಾಸಾ ದುರ್ವಾಕ್ಯಂ ಪ್ರಲಪನ್ಬಹು ।
ದುರ್ಗಂಧಂ ದುಸ್ಸಹಂ ಘೋರಂ ತಿಮಿರಂ ನರಕೋಪಮಮ್ ॥೨೩॥
ಮಲಪಂಕಂ ಪ್ರವಿಶ್ಯಾಶು ಮಗ್ನಸ್ತತ್ರ ಸ ರಾವಣಃ॥೨೪॥
ಕಂಠೇ ಬಧ್ವಾ ದಶಗ್ರೀವಂ ಪ್ರಮದಾ ರಕ್ತವಾಸಿನೀ ॥
ಕಾಳೀ ಕರ್ದಮಲಿಪ್ತಾಂಗೀ ದಿಶಂ ಯಾಮ್ಯಾಂ ಪ್ರಕರ್ಷತಿ ॥೨೫॥
ಏವಂ ತತ್ರ ಮಯಾ ದೃಷ್ಟಃ ಕುಂಭಕರ್ಣೋ ನಿಶಾಚರಃ ॥೨೬॥
ರಾವಣಸ್ಯ ಸುತಾಸ್ಸರ್ವೇ ದೃಷ್ಟಾಸ್ತೈಲ ಸಮುತ್ಕ್ಷಿತಾಃ ।
ವರಾಹೇಣ ದಶಗ್ರೀವ ಶ್ಶಿಂಶುಮಾರೇಣ ಚೇಂದ್ರಜಿತ್ ॥೨೭॥

ದಿಗಂಬರನೂ, ಉನ್ಮತ್ತ ಇವ - ಹುಚ್ಚನಂತೆ, ಬಹು - ಅನೇಕವಾದ, ದುರ್ವಾಕ್ಯಂ - ಕೆಟ್ಟನುಡಿಯನ್ನು, ಪ್ರಲಪನ್ - ಹರಟುತಲಿರುವವನೂ ಆಗಿ, ದುರ್ಗಂಧಂ - ದುರ್ವಾಸನೆಯುಳ್ಳ, ದುಸ್ಸಹಂ - ಸಹಿಸಲಶಕ್ಯವೆನಿಸಿರುವ, ಘೋರಂ - ಭಯಂಕರವಾದ, ನರಕೋಪಮಂ - ನರಕಕ್ಕೆ ಎಣೆಯೆನಿಸಿರತಕ್ಕ, ಮಲಪಂಕಂ - ಮಲದಿಂದ ನಿಬಿಡವಾದ, ತಿಮಿರಂ - ಕಗ್ಗತ್ತಲನ್ನು, ಆಶು - ಬೇಗನೆ, ಪ್ರವಿಶ್ಯ - ಹೊಕ್ಕು, ತತ್ರ - ಆಕತ್ತಲೊಳಗೆ, ಮಗ್ನಃ - ಮುಳುಗಿದನು, ॥೨೩-೨೪॥ ರಕ್ತವಾಸಿನೀ - ಕೆಂಬಟ್ಟೆಯನ್ನುಟ್ಟಿರುವ, ಕಾಳೀ - ಕಪ್ಪಿನಬಣ್ಣದ, ಕರ್ದಮಲಿಪ್ತಾಂಗೀ - ಮೈಗೆ ಕೆಸರನ್ನು ಬಳಿದುಕೊಂಡಿದ್ದ, ಪ್ರಮದಾ - ಒಬ್ಬ ಹೆಂಗಸು, ದಶಗ್ರೀವಂ - ರಾವಣನನ್ನು, ಕಂಠೆ - ಕೊರಳಿನಲ್ಲಿ, ಬಧ್ವಾ - ನೇಣಿನಿಂದ ಕಟ್ಟಿ - ಯಾಮ್ಯಾಂದಿಶಂ - ದಕ್ಷಿಣದಿಕ್ಕನ್ನು ಕುರಿತು, ಪ್ರಕರ್ಷತಿ - ಸೆಳೆಯುತಲಿದ್ದಳು, ಏವಂ - ಈರಾವಣನ ಅವಸ್ಥೆಯಲ್ಲಿಯೇ, ಕುಂಭಕರ್ಣಃ - ಕುಂಭಕರ್ಣನೆಂಬ, ನಿಶಾಚರಃ - ರಕ್ಕಸನೂ, ಮಯಾ - ನನ್ನಿಂದ, ತತ್ರ - ಆ ಕನಸಿನಲ್ಲಿ, ದೃಷ್ಟಃ - ನೋಡಲ್ಪಟ್ಟನು ॥೨೫-೨೬॥ ರಾವಣಸ್ಯ - ರಾವಣನ, ಸರ್ವೇಸುತಾಃ - ಮಕ್ಕಳೆಲ್ಲರೂ, ತೈಲಸಮುತ್ಕ್ಷಿತಾಃ - ಎಣ್ಣೆಯಲ್ಲಿ ಮುಳುಗಿದವರಾಗಿ, ದೃಷ್ಟಾಃ - ನೋಡಲ್ಪಟ್ಟರು, ದಶಗ್ರೀವಃ - ರಾವಣನು, ವರಾಹೇಣ - ಕಾಡುಹಂದಿಯಿಂದ, ದಕ್ಷಿಣಾಂದಿಶಂ - ದಕ್ಷಿಣದಿಕ್ಕನ್ನು ಕುರಿತು, ಪ್ರಯಾತಃ-ಪ್ರಯಾಣಮಾಡುತಿದ್ದನು, ಇಂದ್ರಜಿತ್-ರಾವಣನ ಕುಮಾರನು, ಶಿಂಶುಮಾರೇಣ-ಮೊಸಳೆಯಿಂದ, ಪ್ರಯಾತಃ-ಹೋಗುತಲಿದ್ದನು, ಕುಂಭಕರ್ಣಶ್ಚ-ಕುಂಭಕರ್ಣನೂ,

ನುಡಿಗಳನ್ನು ಮನಬಂದಂತೆಬಹಳವಾಗಿಹರಟುತ,ದುರ್ವಾಸನೆಯಿಂದೊಡಗೂಡಿ,ಸಹಿಸಲಸದಳವಾಗಿ,ಭಯಂಕರವೆನಿಸಿ,ರೌರವಾದಿ ನರಕಕ್ಕೆ ಎಣೆಯೂ ಆಗಿರುವಮಲದಕೆಸರಿನಿಂದೊಡಗೂಡಿದ ಕಗ್ಗತ್ತಲಿನಲ್ಲಿವೇಗದಿಂದ ಮುಳುಗುತಲಿದ್ದ ಈ ರಾವಣನನ್ನುಕಂಡೆನು॥೨೩-೨೪॥ ಇನ್ನೊಂದು ಸಮಯ-ರಕ್ತವಸ್ತ್ರವನ್ನು ಧರಿಸಿ ಮೈಗೆಲ್ಲ ಕೆಸರನ್ನುಬಳಿದುಕೊಂಡಿದ್ದ ಒಬ್ಬ ಕರಿಗಿಯೂ ಈ ರಾವಣನ ಕೊರಳನ್ನು ನೇಣಿನಿಂದ ಬಿಗಿದು,ದಕ್ಷಿಣ ದಿಕ್ಕಿನಕಡೆಗೆಸೆಳೆದೊಯ್ಯುತಲಿದ್ದಳು. ಅಣ್ಣನಿಗೆ ಸಮಾನವಾದ ಅವಸ್ಥೆಯಲ್ಲಿಯೇ ಇದ್ದ ಕುಂಭಕರ್ಣನನ್ನೂ ಈಕನಸಿನೊಳಗೆ ಕಂಡೆನು ॥೨೫-೨೬॥ ಇಷ್ಟು ಮಾತ್ರವೇ ಅಲ್ಲ. ರಾವಣನಮಕ್ಕಳೆಲ್ಲರೂ ಎಣ್ಣೆಯಲ್ಲಿ ಮುಳುಗಿದ್ದರು. ಸ್ವಲ್ಪ ಹೊತ್ತಿನಲ್ಲಿ ರಾವಣನು ಕಾಡುಹಂದಿಯಮೇಲೆಯೂ, ಇಂದ್ರಜಿತುವು ಮೊಸಳೆಯನ್ನು ಏರಿಯೂ, ಕುಂಭಕರ್ಣನು ಒಂಟೆಯನ್ನು ಹತ್ತಿಯೂ, ಟೆಂಕಣದೆಸೆಗೆ ಪ್ರಯಾಣಮಾಡುತಲಿದ್ದರು. ಆದರೆ-ಒಬ್ಬ ವಿಭೀಷಣನು

ಉಷ್ಟ್ರೇಣ ಕುಂಭಕರ್ಣಶ್ಚ ಪ್ರಯಾತೋ ದಕ್ಷಿಣಾಂದಿಶಂ ।
ಏಕಸ್ತತ್ರ ಮಯಾ ದೃಷ್ಟಶ್ಶ್ವೇತಚ್ಛತ್ರೋ ವಿಭೀಷಣಃ ॥೨೧॥
ಶುಕ್ಲಮಾಲ್ಯಾಂಬರ ಧರ ಶ್ಶುಕ್ಲ ಗಂಧಾನು ಲೇಪನಃ ।
ಶಂಖದುಂದುಭಿ ನಿರ್ಘೋಷೈ ರ್ನೃತ್ತಗೀತೈ ರಲಂಕೃತಃ॥೨೨॥
ಆರುಹ್ಯ ಶೈಲಸಂಕಾಶಂ ಮೇಘಸ್ತನಿತ ನಿಸ್ಸ್ವನಂ ।
ಚತುರ್ದಂತಂ ಗಜಂ ದಿವ್ಯ ಮಾಸ್ತೇ ತತ್ರ ವಿಭೀಷಣಃ ॥ ೨೩॥
ಚತುರ್ಭಿ ಸ್ಸಚಿವೈ ಸ್ಸಾರ್ಧಂ ವೈಹಾಯಸ ಮುಪಸ್ಥಿತಃ ॥೨೪॥॥
ಸಮಾಜಶ್ಚ ಮಯಾ ದೃಷ್ಟೋ ಗೀತ ವಾದಿತ್ರ ನಿಸ್ಸ್ವನಃ ।

---

ಉಷ್ಟ್ರೇಣ - ಒಂಟೆಯಮೇಲಿನಿಂದ, ಪ್ರಯಾತಃ - ನಡೆಯುತಿದ್ದನು, ತತ್ರ- ಆ ಸ್ವಪ್ನದೊಳಗೆ, ಏಕಃ- ಒಬ್ಬನಾದ, ವಿಭೀಷಣಃ - ನಮ್ಮ ತಂದೆಯಾದ ವಿಭೀಷಣನುಮಾತ್ರವೇ, ಶ್ವೇತಚ್ಛತ್ರಃ- ಬೆಳ್ಗೊಡೆಯುಳ್ಳವನಾಗಿ, ಮಯಾ - ನನ್ನಿಂದ, ದೃಷ್ಟಃ - ನೋಡಲ್ಪಟ್ಟನು ॥೨೦-೨೧॥ ಕಿಂಚ - ಮತ್ತು, ಶುಕ್ಲಮಾಲ್ಯಾಂಬರಧರಃ - ಧವಳ ಪುಷ್ಪವಸ್ತ್ರಗಳನ್ನು ಧರಿಸಿದ, ಶುಕ್ಲಗಂಧಾನುಲೇಪನಃ - ಶುಭ್ರಚಂದನಲೇಪವುಳ್ಳ, ಶಂಖದುಂದುಭಿ ನಿರ್ಘೋಷೈಃ - ಶಂಖ ಮತ್ತು ಭೇರಿವಾದ್ಯಗಳ ಧ್ವನಿಗಳಿಂದಲೂ, ನೃತ್ತಗೀತೈಃ - ನಾಟ್ಯಗಾನಗಳಿಂದಲೂ, ಅಲಂಕೃತಃ - ಅಲಂಕರಿಸಲ್ಪಟ್ಟ, ವಿಭೀಷಣಃ- ವಿಭೀಷಣನು, ಮೇಘಸಂಕಾಶಂ- ಮೋಡಕ್ಕೆ ಸಮಾನವಾದ, ಮೇಘಸ್ತನಿತನಿಸ್ಸ್ವನಂ - ಗುಡುಗಿನಂತೆ ಸದ್ದುಳ್ಳ, ಚತುರ್ದಂತಂ - ನಾಲ್ಕು ಕೊಂಬಿನದಾದ, ದಿವ್ಯಂ - ದೇವಯೋಗ್ಯವೆನಿಸಿರುವ, ಗಜಂ - ಆನೆಯನ್ನು, ಆರುಹ್ಯ - ಏರಿ ಚತುರ್ಭಿಃ - ನಾಲ್ವರಾದ, ಸಚಿವೈಸ್ಸಾರ್ಧಂ- ಮಂತ್ರಿಗಳಿಂದೊಡಗೂಡಿ, ವೈಹಾಯಸಂ- ಆಕಾಶಗಮನವನ್ನು, ಉಪಸ್ಥಿತಃ - ಆಶ್ರಯಿಸಿದವನಾಗಿ, ಆಸ್ತೆ - ಇರುತ್ತಿದ್ದನು, ॥೨೨-೨೩॥ ॥ ಗೀತ - ಗಾನದ, ವಾದಿತ್ರ - ತತ, ಆನದ್ಧ, ಸುಷಿರ, ಘನವೆಂಬ ನಾಲ್ಕುಬಗೆಗಳಾದ ವಾದ್ಯಗಳ, ನಿಸ್ವನಃ- ಧ್ವನಿಯುಳ್ಳ, ಪಿಬತಾಂ - ಮದ್ಯಪಾನ ಮಾಡುತಲಿರುವ, ರಕ್ತಮಾಲ್ಯಾನಾಂ - ರಕ್ತಪುಷ್ಪಮಾಲೆಗಳನ್ನು ತಾಳಿರುವ, ರಕ್ತವಾಸಸಾಂ - ಕೆಂಪುಬಟ್ಟೆಯನ್ನುಟ್ಟಿರುವ, ರಕ್ಷಸಾಂ - ರಕ್ಕಸರ, ಸಮಾಜಶ್ಚ - ಸಮೂಹವೂ, (ದೃಷ್ಟಃ - ನೋಡಲ್ಪಟ್ಟಿತು) ॥೨೪ ॥ ॥ ರಮ್ಯಾ - ರಮಣೀಯವೆನಿಸಿದ, ಸವಾಜಿರಥಕುಂಜರಾ- ಕುದುರೆಗಳಿಂದಲೂ ಆನೆಗಳಿಂದಲೂ ಸಹಿತವಾದ, ಇಯಂ - ಈ, ಲಂಕಾಚ - ಲಂಕಾನಗರವೂ, ಭಗ್ನ - ಮುರಿದುಹೋದ,

---

ಮಾತ್ರ ಬಿಳಿಯ ಕೊಡೆಯನ್ನು ಹಿಡಿದು ಸಂಚರಿಸುತಲಿದ್ದನು. ಹೀಗೆ ಇವರೆಲ್ಲರೂ ನನಗೆ ಆ ಸ್ವಪ್ನದೊಳಗೆ ಗೋಚರಿಸಿದರು. ॥೨೦-೨೧॥ ವಿಭೀಷಣನ ವಿಷಯದಲ್ಲಿ ಮತ್ತೊಂದು ವಿಶೇಷವುಂಟು. ಅದೇನೆಂದರೆ-ಶುಭ್ರವಸ್ತ್ರವನ್ನು ಧರಿಸಿದ್ದನು. ಬಿಳಿಯ ಗಂಧವನ್ನು ಬಳಿದುಕೊಂಡಿದ್ದನು. ಶಂಖ, ಭೇರಿ, ಮೊದಲಾದ ವಾದ್ಯಘೋಷಗಳು ಮೊರೆಯುತಲಿದ್ದವು. ನೃತ್ತಗೀತಗಳು ಮನೋಹರಗಳಾಗಿದ್ದವು ॥೨೨॥ ಇಂತಹ ಸಂದರ್ಭದಲ್ಲಿ ವಿಭೀಷಣನು ಮೇಘಧ್ವನಿಯಂತೆ ಗರ್ಜಿಸುತಲಿದ್ದ ಪರ್ವತಕ್ಕೆಣೆಯಾದ ನಾಲ್ಕು ಕೊಂಬುಗಳುಳ್ಳ ದಿವ್ಯಗಜವನ್ನು ತನ್ನ ನಾಲ್ವರು ಮಂತ್ರಿಗಳೊಂದಿಗೆ ಏರಿ,ಆಕಾಶದಲ್ಲಿ ಪ್ರಯಾಣಮಾಡುತಲಿದ್ದನು॥೨೩-೨೪॥ ಮತ್ತು-ನನ್ನ ಆ ಸ್ವಪ್ನದಲ್ಲಿ-ರಕ್ತ ಪುಷ್ಪಮಾಲಿಕೆಗಳನ್ನೂ, ರಕ್ತವಸ್ತ್ರಗಳನ್ನೂಧರಿಸಿ,ಮದ್ಯಪಾನಮಾಡಿ,ಮನಬಂದಂತೆಹಾಡುತ್ತಾ,ವಾದ್ಯಗಳನ್ನುಬಾರಿಸುತ್ತಾ,

ಪಿಬತಾಂ ರಕ್ತ ಮಾಲ್ಯಾನಾಂ ರಕ್ಷಸಾಂ ರಕ್ತವಾಸಸಾಂ ॥೩೪॥

ಲಂಕಾ ಚೇಯಂ ಪುರೀ ರಮ್ಯಾ ಸವಾಜಿ ರಥಕುಂಜರಾ ।

ಸಾಗರೇ ಪತಿತಾ ದೃಷ್ಟಾ ಭಗ್ನಗೋಪುರ ತೋರಣಾ ॥೩೫॥

ಲಂಕಾ ದೃಷ್ಟಾ ಮಯಾ ಸ್ವಪ್ನೇ ರಾವಣೇನಾಭಿರಕ್ಷಿತಾ ।

ದಗ್ಧಾ ರಾಮಸ್ಯ ದೂತೇನ ವಾನರೇಣ ತರಸ್ವಿನಾ ॥೩೬॥

ಪೀತ್ವಾ ತೈಲಂ ಪ್ರನೃತ್ತಾಶ್ಚ ಪ್ರಹಸಂತ್ಯೋ ಮಹಾಸ್ವನಾಃ ।

ಲಂಕಾಯಾಂ ಭಸ್ಮರೂಕ್ಷಾಯಾಂ ಪ್ರವಿಷ್ಟಾ ರಾಕ್ಷಸಸ್ತ್ರಿಯಃ ॥೩೭॥

ಕುಂಭಕರ್ಣಾದಯ ಶ್ಚೇಮೇ ಸರ್ವೇ ರಾಕ್ಷಸಪುಂಗವಾಃ ।

ರಕ್ತಂ ನಿವಸನಂ ಗೃಹ್ಯ ಪ್ರವಿಷ್ಟಾ ಗೋಮಯಹ್ರದೇ ॥೩೮॥

---

ಗೋಪುರತೋರಣಾ - ಊರುಬಾಗಿಲು ಮತ್ತು ಹೊರಬಾಗಿಲುಗಳುಳ್ಳುದಾಗಿ, ಸಾಗರೇ - ಕಡಲಿನೊಳಗೆ, ಪತಿತಾ - ಬಿದ್ದಂತೆ, ಮಯಾ - ನನ್ನಿಂದ, ದೃಷ್ಟಾ - ನೋಡಲ್ಪಟ್ಟಿತು॥೩೫॥ ಕಿಂಚ - ಮತ್ತು, ರಾವಣೇನ - ರಾವಣನಿಂದ, ಅಭಿರಕ್ಷಿತಾ - ಚೆನ್ನಾಗಿ ಪಾಲಿಸಲ್ಪಡುತ್ತಲಿದ್ದ, ಇಯಂಲಂಕಾಚ-ಲಂಕೆಯೂ, ರಾಮಸ್ಯ - ಶ್ರೀರಾಮನ, ದೂತೇನ - ಪತ್ರಾಹರನಾದ, ತರಸ್ವಿನಾ - ಮಹಾಬಲಶಾಲಿಯಾಗಿರುವ, ವಾನರೇಣ - ಒಬ್ಬ ಕಪಿಯಿಂದ, ದಗ್ಧಾ - ಸುಡಲ್ಪಟ್ಟುದಾಗಿಯೂ, ಮಯಾ - ನನ್ನಿಂದ, ಸ್ವಪ್ನೇ - ಕನಸಿನಲ್ಲಿ, ದೃಷ್ಟಾ - ನೋಡಲ್ಪಟ್ಟಿತು ॥೩೬॥ ತೈಲಂ - ಎಣ್ಣೆಯನ್ನು, ಪೀತ್ವಾ - ಕುಡಿದು, ಪ್ರನೃತ್ತಾಶ್ಚ - ಕುಣಿಯುತಲಿರುವ, ಪ್ರಹಸಂತ್ಯಃ - ಕೇಕೆಹಾಕುತಲಿರುತ್ತ, ಮಹಾಸ್ವನಾಃ - ಮಹತ್ತರವಾದ ಧ್ವನಿಯುಳ್ಳವರೂ ಆದ, ರಾಕ್ಷಸಸ್ತ್ರಿಯಃ - ರಕ್ಕಸಿಯರೂ, ಭಸ್ಮರೂಕ್ಷಾಯಾಂ - ಬೂದಿಯಿಂದ ಬಿಸಿಯಾಗಿದ್ದ, ಲಂಕಾಯಾಂ - ಲಂಕಾನಗರಿಯಲ್ಲಿ, ಪ್ರವಿಷ್ಟಾಃ - ಪ್ರವೇಶಿಸುತಲಿದ್ದರು, ಕುಂಭಕರ್ಣಾದಯಃ - ಕುಂಭಕರ್ಣನೇ ಮೊದಲಾಗಿರುವ, ಇಮೇ - ಈ, ರಾಕ್ಷಸಪುಂಗವಾಃ- ರಾಕ್ಷಸಶ್ರೇಷ್ಠರು, ಸರ್ವೇಚ - ಎಲ್ಲರೂ, ರಕ್ತಂ - ಕೆಂಪಗಿರುವ, ನಿವಸನಂ - ವಸ್ತ್ರವನ್ನು, ಗೃಹ್ಯ (ಪರಿಗೃಹ್ಯ) ಧರಿಸಿ, ಗೋಮಯ

---

ಕುಣಿಯುತಲಿರುವ ರಾಕ್ಷಸರ ಗುಂಪನ್ನು ಕಂಡೆನು ॥ ೩೪ - ೩೫ ॥ ಇನ್ನು ಸ್ವಪ್ನಹೊತ್ತಿನಲ್ಲಿ-ಆನೆ, ಕುದುರೆ, ತೇರು, ಕಾಲಾಳು ಗಳಿಂದೊಡಗೂಡಿ, ರಮಣೀಯವಾಗಿ ರಾವಣನ ಆಳ್ವಿಕೆಗೆ ಒಳಪಟ್ಟ ಈ ಲಂಕಾನಗರವು, ಉರುಳಿದ ಗೋಪುರಗಳಿಂದಲೂ, ಮುರಿದ ತೋರಣಗಳಿಂದಲೂ, ಕಡಲಿನಲ್ಲಿ ಮುಳುಗಿದಂತೆ ಸ್ವಪ್ನವಾಯಿತು. ಅಹಹ ! ಏನಹೇಳಲಿ? ಯಾವನೋ ಒಬ್ಬ ಶ್ರೀರಾಮಸೇವಕನಾದ ಮಹಾ ಬಲಶಾಲಿಯೆನಿಸಿದ ಕಪಿಯು ಈ ಲಂಕಾನಗರವನ್ನು ಸುಟ್ಟುಬಿಟ್ಟಂತೆಯೂ ಕನಸಾಯಿತು ॥ ೩೬-೩೬ ॥ ॥ ಮತ್ತೊಂದು ವಿಷಯವನ್ನು ಕೇಳಿರಿ--ಲಂಕೆಯು ಹೀಗೆ ಸುಟ್ಟುಹೋಗುತಿರಲಾಗಿ ಈ ನಗರದಲ್ಲಿನ ರಕ್ಕಸಿಯರೆಲ್ಲ ಎಣ್ಣೆಯನ್ನು ಕುಡಿದು ಅಬ್ಬರಿಸಿ ಕೇಕೆಹಾಕಿ ಕುಣಿಯುತಲಿರುವವರಾಗಿ ಬೆಂಬೂದಿಯಿಂದ ತುಂಬಿದ ಈ ನಗರದೊಳಗೆ ಪ್ರವೇಶಿಸುತಲಿರುವಂತೆಯೂ ಕಂಡೆನು. ಕಟ್ಟಕಡೆಯಲ್ಲಿ ಕುಂಭಕರ್ಣನೇ ಮೊದಲಾದ ರಾಕ್ಷಸರೆಲ್ಲರೂ ರಕ್ತ ವಸ್ತ್ರಗಳನ್ನು ಧರಿಸಿ ಸಗಣಿಯ ಬಗ್ಗಡದಿಂದ ತುಂಬಿದ ದೊಡ್ಡ ಮಡುವಿನೊಳಗೆ ಇಳಿಯ ಬಿದ್ದುದನ್ನು ನೋಡಿದೆನು ॥೩೭-೩೮॥ ॥ ಎಲೆ ! ನೀಚ ರಕ್ಕಸಿಯರುಗಳಿರಾ ! ದೂರದಲ್ಲಿ ಸರಿಯಿರಿ,

ಅಪಗಚ್ಛತ ನಶ್ಯಧ್ವಂ ಸೀತಾಮಾಪ ಸ ರಾಘವಃ ।
ಘಾತಯೇತ್ಪರಮಾಮರ್ಷೀ ಸರ್ವೈಸ್ಸಾರ್ಧಂ ಹಿ ರಾಕ್ಷಸೈಃ ॥೩೯॥
ಪ್ರಿಯಾಂ ಬಹುಮತಾಂ ಭಾರ್ಯಾಂ ವನವಾಸಮನುವ್ರತಾಂ ॥೪೦॥
ಭರ್ತ್ಸಿತಾಂ ತರ್ಜಿತಾಂ ವಾಪಿ ನಾಽನುಮಂಸ್ಯತಿ ರಾಘವಃ ।
ತದಲಂ ಕ್ರೂರವಾಕ್ಯೈರ್ವಸ್ಸಾಂತ್ವಮೇವಾಽಭಿಧೀಯತಾಂ ॥೪೧॥
ಅಭಿಯಾಚಾಮ ವೈದೇಹೀಮೇತದ್ಧಿ ಮಮ ರೋಚತೇ ॥೪೧॥ ॥
ಯಸ್ಯಾಮೇವಂವಿಧಸ್ಸ್ವಪ್ನೋ ದುಃಖಿತಾಯಾಂ ಪ್ರದೃಶ್ಯತೇ ।

ಹ್ರದೆ - ಸಗಣಿಯ ಬಗ್ಗಡದ ಮಡುವಿನಲ್ಲಿ, ಪ್ರವಿಷ್ಟಾಃ - ಹೊಕ್ಕರು ॥೩೭-೩೮॥ ಅಪಗಚ್ಛತ - ದೂರಸರಿಯಿರಿ, ನಶ್ಯಧ್ವಂ - ಹಾಳಾಗಿಹೋಗಿರಿ, (ಮರೆಯಾಗಿ ಹೋಗಿರಿ) ಸಃ - ಆ, ರಾಘವಃ - ರಾಮನು, ಸೀತಾಂ - ಸೀತೆಯನ್ನು, ಆಪ - ಹೊಂದಿದನು, (ಆಪ್ಸ್ಯತಿ - ಹೊಂದುವನು) ಪರಮಾಮರ್ಷೀ - ಹೆಚ್ಚಿದ ಕೋಪವುಳ್ಳವನಾಗಿ, ಸರ್ವೈಃ - ಸಮಸ್ತವಾದ, ರಾಕ್ಷಸೈಸ್ಸಾರ್ಧಂ - ರಕ್ಕಸರೊಡನೆ, ವಃ - ನಿಮ್ಮನ್ನು ಅಥವಾ - ರಾವಣಂ - ರಾವಣನನ್ನು, ಘಾತಯೇತ್ - ಧ್ವಂಸಮಾಡುವನು ॥೩೯॥ ॥ ರಾಘವಃ - ಶ್ರೀರಾಮನು, ಪ್ರಿಯಾಂ - ತನಗೆ ಇಷ್ಟಳಾಗಿರುವ, ಬಹುಮತಾಂ - ಬಹುಜನರಿಂದ ಗೌರವಿಸಲ್ಪಡುವ, ವನವಾಸಂ - (ಪತಿಯ) ಅರಣ್ಯವಾಸವನ್ನು ಕುರಿತು, ಅನುವ್ರತಾಂ - ಅನುಸರಿಸಿದ ವ್ರತವುಳ್ಳ, ಭರ್ತ್ಸಿತಾಂ - ನಿಮ್ಮಿಂದ ಭಯಪಡಿಸಲ್ಪಟ್ಟ, ತರ್ಜಿತಾಂವಾಪಿ - ಬೆದರಿಸಲ್ಪಟ್ಟೂ ಇರುವ, ಭಾರ್ಯಾಂ - ತನ್ನ ಧರ್ಮಪತ್ನಿಯನ್ನು, ನಾನುಮಂಸ್ಯತಿ - (ನಾ - ತೆ) ಸಹಿಸಲಾರ, ॥೪೦॥ ॥ ತತ್ - ಆದಕಾರಣ, ವಃ - ನಿಮ್ಮ, ಕ್ರೂರವಾಕ್ಯೈಃ - ಘಾತುಕವಚನಗಳಿಂದ, ಅಲಂ - ಸಾಕು, (ಯುಷ್ಮಾಭಿಃ - ನಿಮ್ಮಗಳಿಂದ,) ಸಾಂತ್ವಮೇವ - ಮೃದುಮಧುರವಾದ ನುಡಿಯೇ, ಅಭಿಧೀಯತಾಂ - ಹೇಳಲ್ಪಡಲಿ, ವೈದೇಹೀಂ - ಸೀತೆಯನ್ನು, ಅಭಿಯಾಚಾಮ - ನಾವೆಲ್ಲರೂ ಪ್ರಾರ್ಥಿಸೋಣ, ಮಮ - ನನಗೆ, ಏತತ್ - ಇದು, ರೋಚತೇ - ಇಷ್ಟವಾಗಿದೆ, ಹಿ - ನಿಶ್ಚಯ, ದುಃಖಿತಾಯಾಂ - ದುಃಖವನ್ನುಂಟುಮಾಡಿರುವ, ಯಸ್ಯಾಂ - ಯಾವ ಸೀತೆಯು ವಿಷಯವಾಗಿ, ಏವಂವಿಧಃ - ಈ ಪ್ರಕಾರವಾದ, ಸ್ವಪ್ನಃ - ಕನಸು, ಪ್ರದೃಶ್ಯತೇ - ನನ್ನಿಂದ ನೋಡಲ್ಪಡುತಲಿದೆಯೋ, ಸಾ - ಅಂತಹ ಸೀತೆಯು, ವಿವಿಧೈಃ - ಅನೇಕವಿಧಗಳಾದ, ದುಃಖೈಃ - ದುಃಖಗಳಿಂದ, ಮುಕ್ತಾ - ಬಿಡಲ್ಪಟ್ಟವಳಾಗಿ, ಅನುತ್ತಮಂ - ಸರ್ವೋತ್ತಮನೆನಿಸಿದ, ಪ್ರಿಯಂ - ವಲ್ಲಭನನ್ನು, ಪ್ರಾಪ್ನೋತಿ-

ನೀವೆಲ್ಲರೂ ಹಾಳಾದಿರೆಂದು ನಿಶ್ಚಯಿಸಿರಿ. ಶ್ರೀರಾಮಚಂದ್ರನು ಸೀತೆಯನ್ನು ಪಡೆದನೆಂದೇ ಭಾವಿಸಿರಿ. ಪ್ರೀತಿಪಾತ್ರಳಾಗಿಯೂ, ಮಾನನೀಯಳಾಗಿಯೂ, ಧರ್ಮಪತ್ನಿಯಾಗಿಯೂ, ಸರ್ವಸಾಮ್ರಾಜ್ಯವನ್ನೂ ತೊರೆದು ಕಾಲುನಡಗೆಯಿಂದ ಕಾಡಿಗೆ ಹೊರಟಾಗ, ರಾಜಭೋಗಗಳನ್ನೆಲ್ಲ ತೃಣೀಕರಿಸಿ, ಪತಿಯೊಡನೆ ಅರಣ್ಯವಾಸವೇ ಸ್ವರ್ಗಸುಖವೆಂದು ಭಾವಿಸಿ, ಭಕ್ತಿಯಿಂದ ತನ್ನನ್ನು ಹಿಂಬಾಲಿಸಿದ ಸೀತೆಯನ್ನು ನೀವು ಹಿಂಸಿಸುತಲಿರುವ ಸುದ್ದಿಯು ಆತನಿಗೆ ಸ್ವಲ್ಪಮಾತ್ರವಾದರೂ ಗೋಚರಿಸಿದುದೇ ಆದರೆ, ಕೂಡಲೇ ಕೋಪಾವೇಶವನ್ನು ತಾಳಿ, ಆಬಾಲವೃದ್ಧರು ಮೊದಲ್ಗೊಂಡು, ರಾಕ್ಷಸರ ಸಂತತಿಯನ್ನೇ ನಾಶಮಾಡಿಬಿಡುವನು ॥೩೯-೪೦॥ ಆದ್ದರಿಂದ ಇನ್ನು ಸಾಕು. ಕ್ರೂರವಾಕ್ಯಗಳನ್ನೆಲ್ಲ ನಿಲ್ಲಿಸಿರಿ, ಮೃದುಮಧುರವಾದ ಮಾತುಗಳನ್ನಾಡಿರಿ, ನಾವೆಲ್ಲರೂ ಒಟ್ಟಿಗೆ ಕಲೆತು ಮಹಾನುಭಾವಳಾದ ಈ

ಸಾ ದುಃಖೈ ರ್ವಿವಿಧೈ ರ್ಮುಕ್ತಾ ಪ್ರಿಯಂ ಪ್ರಾಪ್ನೋ ತ್ಯನುತ್ತಮಂ ॥೪೨॥
ಭರ್ತ್ಸಿತಾ ಮಪಿ ಯಾಚಧ್ವಂ ರಾಕ್ಷಸ್ಯಃ ಕಿಂ ವಿವಕ್ಷಯಾ ।
ರಾಘವಾದ್ಧಿ ಭಯಂ ಘೋರಂ ರಾಕ್ಷಸಾನಾ ಮುಪಸ್ಥಿತಂ ॥೪೩॥
ಪ್ರಣಿಪಾತ ಪ್ರಸನ್ನಾ ಹಿ ಮೈಥಿಲೀ ಜನಕಾತ್ಮಜಾ ।
ಅಲ ಮೇಷಾ ಪರಿತ್ರಾತುಂ ರಾಕ್ಷಸ್ಯೋ ಮಹತೋ ಭಯಾತ್ ॥೪೪॥
ಅಪಿಚಾಸ್ಯಾ ವಿಶಾಲಾಕ್ಷ್ಯಾ ನ ಕಿಂಚಿ ದುಪಲಕ್ಷಯೇ ।

---

ಹೊಂದುತ್ತಾಳೆ ॥೪೧-೪೨॥ ॥ ಹೇರಾಕ್ಷಸ್ಯಃ - ಓ ರಾಕ್ಷಸ ಸ್ತ್ರೀಯರುಗಳಿರಾ ! ಯೂಯಂ - ನೀವು, ಭರ್ತ್ಸಿತಾಮಪಿ - ಬೆದರಿಸಲ್ಪಟ್ಟವಳಾದಾಗ್ಯೂ, (ಸೀತಾಂ - ಸೀತೆಯನ್ನು ಕುರಿತು) ಅಭಯಂ - ಭಯರಾಹಿತ್ಯವನ್ನು, ಯಾಚಧ್ವಂ - ಬೇಡಿಕೊಳ್ಳಿರಿ, ವಿವಕ್ಷಯಾ (ನಮ್ಮಿಂದಬೆದರಿಸಲ್ಪಟ್ಟವಳು ನಮ್ಮ ವಿಷಯದಲ್ಲಿಯೇ ಪ್ರಸನ್ನಳಾಗುವಳೇ ಎಂಬ) ಹೇಳಲಿಚ್ಛೆಯಿಂದ, ಕಿಂ - ಪ್ರಯೋಜನವೇನು?, ಹಿ - ಏತಕ್ಕೆಂದರೆ, ರಾಕ್ಷಸಾನಾಂ - ರಾಕ್ಷಸರಿಗೆ, ಘೋರಂ - ಭಯಂಕರವೆನಿಸಿದ, ಭಯಂ - ವಿಪತ್ತು, ರಾಘವಾತ್ - ರಾಮನದೆಸೆಯಿಂದ, ಉಪಸ್ಥಿತಂ - ಪ್ರತ್ತಿರಕ್ಕೆ ಬಂದಿದೆ (ತತ್ - ಆದಕಾರಣ) ಜನಕಾತ್ಮಜಾ - ಜನಕಪುತ್ರಿಯಾದ, ಮೈಥಿಲೀ - ಸೀತೆಯು, ಪ್ರಣಿಪಾತ - ಅಡಬಿದ್ದು ಬೇಡುವುದರಿಂದ, ಪ್ರಸನ್ನಾ - ಪ್ರಸನ್ನಳಾಗುವಳು (ಅನುಗ್ರಹಾಭಿಮುಖಳಾಗುವಳು) ಹಿ - ನಿಶ್ಚಯ, ಹೇರಾಕ್ಷಸ್ಯಃ - ಎಲೆ ರಕ್ಕಸಿಯರುಗಳಿರಾ ! ಏಷಾ - ಈಕೆ, ಮಹತಃ - ದೊಡ್ಡದಾದ, ಭಯಾತ್ - ಆಪತ್ತಿನ ದೆಸೆಯಿಂದ, ಪರಿತ್ರಾತುಂ - ನಮ್ಮನ್ನು ಸಂರಕ್ಷಿಸಲಿಕ್ಕೆ, ಅಲಂ - ಸಮರ್ಥಳು ॥೪೩-೪೪॥ ॥

(ಸ್ವಪ್ನವೃತ್ತಾಂತದಿಂದ ಶುಭವು ತೋರುತ್ತದೆ ಎಂದು ಹೇಳಲ್ಪಡುತ್ತದೆ)

ಅಪಿಚ - ಮತ್ತು, ವಿಶಾಲಾಕ್ಷ್ಯಾಃ - ವಿಸ್ತಾರವಾದ ನೇತ್ರಗಳುಳ್ಳ, ಅಸ್ಯಾಃ - ಈ ಸೀತೆಯ,

---

ವೈದೇಹಿಯನ್ನು ಬೇಡಿಕೊಳ್ಳೋಣ, ಈಕೆಯು ಇಂತಹ ಕಷ್ಟತರವಾದ ಅವಸ್ಥೆಯಲ್ಲಿರುವಾಗ ಈಕೆಯ ವಿಷಯದಲ್ಲಿ ನನಗೆ ಸುಸ್ವಪ್ನವು ಕಾಣಬರುತಲಿದೆ. ದೈವಯೋಗದಿಂದ ಮಹಾನುಭಾವಳಾದ ಸೀತೆಯು ತನಗೆ ಪ್ರಾಪ್ತವಾಗಿದ್ದ ಸಮಸ್ತ ಕಷ್ಟಗಳನ್ನೂ ದಾಟಿ, ಪ್ರಿಯವಲ್ಲಭನನ್ನು ಪಡೆದು,ಸಕಲಸುಖಸಾಮ್ರಾಜ್ಯಗಳನ್ನೂ ಅನುಭವಿಸುವಳು॥೪೧-೪೨॥ ಒಂದುವೇಳೆ "ಅಯ್ಯೋ ! ನಾವೆಲ್ಲರೂ ಮುಂದರಿಯದೆ, ಸೀತೆಯನ್ನು ಬಹಳವಾಗಿ ಹಿಂಸಿಸಿದೆವಲ್ಲಾ ? ಬಿರುನುಡಿಗಳನ್ನಾಡಿದೆವಲ್ಲಾ ? ಗೋಳಾಡಿಸಿದೆವಲ್ಲಾ ? ಹೀಗಿರಲು ನಮ್ಮ ವಿಷಯದಲ್ಲಿ ಆಕೆಗೆ ತಾಳ್ಮೆಯುಂಟಾಗುವುದೇ?,, ಎಂದರೆ-ಎಂದಿಗೂ ಹಾಗೆ ಭಾವಿಸಬೇಡಿರಿ. ಇನ್ನು ಆ ವಿಷಯವನ್ನು ಬೆಳಸಿ ಮೇಲೆ ಮೇಲೆ ಮಾತನಾಡುವುದು ಸಾಕು.ಮುಗುವಳಿಯ ಮಾತನ್ನಾಡುತ್ತೇನೆ ಕೇಳಿರಿ.ಮುಖ್ಯವಾಗಿ ರಾಕ್ಷಸರಿಗೆಲ್ಲ ಭಯಂಕರವಾದ ವಿನಾಶಕಾಲವು ರಾಮನಿಂದಲೇ ಸಮೀಪಿಸಿತು. ಆದರೂ ಜನಕನಂದಿನಿಯಾದ ವೈದೇಹಿಯು ನಾವು ಶರಣುವನ್ನು ಹೊಂದಿದುದೇ ಆದರೆ ಶಾಂತಳಾಗಿ, ಪ್ರಸನ್ನತೆಯಿಂದ ನಮಗೆ ಅಭಯದಾನವನ್ನು ಮಾಡದೆ ಇರುವುದಿಲ್ಲ. ಎಲೈ ರಾಕ್ಷಸಿಯರುಗಳಿರಾ! ಮಹಾಭಯದಿಂದ ನಮ್ಮನ್ನು ಮಾತ್ರವಲ್ಲದೆ, ಸಕಲ ಜಗತ್ತನ್ನೂ ಸಂರಕ್ಷಿಸಲಿಕ್ಕೆ ಸೀತೆಯು ಸಮರ್ಥಳು ॥೪೩-೪೪॥ ಇದೆಲ್ಲ ಹಾಗಿರಲಿ, ಬೇರೊಂದು ವಿಷಯವನ್ನು ಸೂಚಿಸುತ್ತೇನೆ ಕೇಳಿರಿ. ವಿಶಾಲನಯನೆ

ವಿರೂಪಮಪಿ ಚಾಂಗೇಷು ಸುಸೂಕ್ಷ್ಮಮಪಿ ಲಕ್ಷಣಂ ॥೪೫॥
ಛಾಯಾ ವೈಗುಣ್ಯ ಮಾತ್ರಂ ತು ಶಂಕೇ ದುಃಖ ಮುಪಸ್ಥಿತಂ ।
ಅದುಃಖಾರ್ಹಾ ಮಿಮಾಂ ದೇವೀಂ ವೈಹಾಯಸ ಮುಪಸ್ಥಿತಾಂ ॥೪೬॥
ಅರ್ಥಸಿದ್ಧಿಂ ತು ವೈದೇಹ್ಯಾಃ ಪಶ್ಯಾ ಮ್ಯಹ ಮುಪಸ್ಥಿತಾಂ॥
ರಾಕ್ಷಸೇಂದ್ರ ವಿನಾಶಂ ಚ ವಿಜಯಂ ರಾಘವಸ್ಯ ಚ ॥೪೭॥
ನಿಮಿತ್ತಭೂತ ಮೇತತ್ತು ಶ್ರೋತು ಮಸ್ಯಾ ಮಹತ್ಪ್ರಿಯಂ ॥ ೪೮॥
ದೃಶ್ಯತೇ ಚ ಸ್ಫುರಚ್ಚಕ್ಷುಃ ಪದ್ಮಪತ್ರ ಮಿವಾಯತಂ ।
ಈಷಚ್ಚ ಹೃಷಿತೋ ವಾಽಸ್ಯಾ ದಕ್ಷಿಣಾಯಾ ಹ್ಯದಕ್ಷಿಣಃ ॥೪೯॥

---

ಅಂಗೇಷು - ಕರಚರಣಮೊದಲಾದ ಅವಯವಗಳಲ್ಲಿ, ಸುಸೂಕ್ಷ್ಮಮಪಿ - ಅತ್ಯಲ್ಪವಾದರೂ, ವಿರೂಪಂ- ವಿಕಾರವಾದ, ಲಕ್ಷಣಮಪಿ - ಚಿಹ್ನೆಯನ್ನ (ಗುರುತು) ಕಿಂಚಿತ್ - ಎಷ್ಟು ಮಾತ್ರವೂ, ನೋಪಲಕ್ಷಯೇ - ಕಾಣೆನು ॥೪೫॥ ॥ ಅದುಃಖಾರ್ಹಾಂ - ದುಃಖಕ್ಕೆ ತಕ್ಕವಳಾಗಿರುವ, ವೈಹಾಯಸಂ - ದೇವತೇಜಸ್ಸನ್ನು, ಉಪಸ್ಥಿತಾಂ - ಪಡೆದಿರತಕ್ಕ, ಇಮಾಂ - ಈ, ದೇವೀಂ - ಸೀತಾದೇವಿಯನ್ನು, ಛಾಯಾವೈಗುಣ್ಯಮಾತ್ರಂ - ಸ್ವಲ್ಪಕಳೆಗುಂದಿದೆ ಎಂಬುದು ಮಾತ್ರವೇ, ಉಪಸ್ಥಿತಂ - ಆಶ್ರಯಿಸಿ ಇದೆ, (ಇತಿ-ಹೀಗೆಂದು) ಶಂಕೆ - ಊಹಿಸುತಲಿದೇನೆ ॥೪೬॥ ॥ ಅಹಂ -ನಾನು, ವೈದೇಹ್ಯಾಃ - ಜಾನಕಿಗೆ, ಅರ್ಥಸಿದ್ಧಿಂ - ಕಾರ್ಯಸಿದ್ಧಿಯನ್ನು, ಉಪಸ್ಥಿತಾಂ - ಪ್ರಾಪ್ತವಾದುದನ್ನಾಗಿ, ಪಶ್ಯಾಮಿ - ತಿಳಿಯುತಲಿದೇನೆ, (ಊಹಿಸುತ್ತೇನೆ) ಕಿಂಚ-ಮತ್ತು. ರಾಕ್ಷಸೇಂದ್ರವಿನಾಶನಂ - ರಾವಣನ ನಾಶವನ್ನು, ರಾಘವಸ್ಯ-ಶ್ರೀರಾಮನಿಗೆ, ವಿಜಯಂಚ - ಗೆಲುವನ್ನೂ, ಪಶ್ಯಾಮಿ - ಊಹಿಸುತ್ತೇನೆ ॥೪೭॥ ॥ ಅಸ್ಯಾಃ - ಈ ಸೀತಾದೇವಿಗೆ, ಮಹತ್ - ಬಹುದೊಡ್ಡದಾದ, ಪ್ರಿಯಂ - ಹಿತವನ್ನು, ಶ್ರೋತುಂ - ಕೇಳಲಿಕ್ಕೆ, ನಿಮಿತ್ತ ಭೂತಂ - ಕಾರಣವಾಗಿರುವ, ಏತತ್ - ಈ, ಆಯತಂ - ನೀಳವಾದ, ಅದಕ್ಷಿಣಂ - ಎಡಗಡೆಯುದೆನಿಸಿರುವ, ಚಕ್ಷುಃ- ಕಣ್ಣು, ಪದ್ಮಪತ್ರಮಿವ - ತಾವರೆಯ ರೇಕಿನಂತೆ, ಸ್ಫುರತ್ - ಅದಿರುತಲಿರುವುದಾಗಿ, ದೃಶ್ಯತೇ - ಕಾಣಬರುತಲಿದೆ, ಕಿಂಚ- ಮತ್ತು, ಈಷತ್ - ಸ್ವಲ್ಪವಾಗಿ, ಹೃಷಿತೋವಾ- ರೋಮಾಂಚಉಳ್ಳುದಾಗಿರುವ, (ಸಂತೋಷಿಸಿದ) ಅದಕ್ಷಿಣಃ - ಎಡಗಡೆಯುದಾದ, ದಕ್ಷಿಣಾಯಾಃ - ಪತಿಯ ಚಿತ್ತವೃತ್ತಿಯನ್ನನುಸರಿಸಿರೆತಕ್ಕ, ಅಸ್ಯಾಃ - ಈ, ವೈದೇಹ್ಯಾಃ - ಸೀತೆಯ ಸಂಬಂಧವಾದ, ಏಕಃ - ಒಂದು, ಬಾಹುಃ - ಭುಜವು ಅಕಸ್ಮಾತ್ - ಅರಿವಿಲ್ಲದೆಯೇ, ಪ್ರಕಂಪತೇಹಿ-ಕದಲುತಲಿದೆ, ॥೪೮-೪೯॥ ಕರೇಣುಹಸ್ತಪ್ರತಿಮಃ -

---

ಯಾದ ಈ ಸೀತೆಯ ಮುಖದಲ್ಲಿಯಾಗಲೀ, ಇತರ ಅವಯವಗಳಲ್ಲಿಯಾಗಲೀ ಈಗ ತುಸವಾದರೂ ವೈರೂಪ್ಯವು ಕಾಣಬರುವುದಿಲ್ಲ. ಆದರೆ ಸ್ವಲ್ಪಮಾತ್ರ ಕಳೆಗುಂದಿರೋಣವೇ ಕಷ್ಟವೆಂದು ಭಾವಿಸುತ್ತೇನೆ. ಈ ಮಹಾನುಭಾವಳು ದುಃಖಕ್ಕೆ ಈಡಾಗತಕ್ಕವಳಲ್ಲ ಶ್ಲಾಘ್ಯವಾದ ಸುಖವು ಈಕೆಯ ಕರಗತವಾಯಿತೆಂದು ಭಾವಿಸುತ್ತೇನೆ ॥೪೫-೪೬॥ ॥ ವೈದೇಹಿಗೆ ಮನೋರಥ ಸಿದ್ಧಿಯೂ, ರಾಕ್ಷಸರಾಜನಿಗೆ ವಿನಾಶವೂ, ಶ್ರೀರಾಮಚಂದ್ರನಿಗೆ ವಿಜಯವೂ, ಈಕೆಗೆ ಹಿತಶ್ರವಣವೂ, ಉಂಟಾದುವು ಎನ್ನಲಿಕ್ಕೆ ನಿಮಿತ್ತವುಂಟು. ಅದೇನೆಂದರೆ: --ತಾವರೆಯ ಹೂವಿನ ರೇಕಿನಂತೆ ವಿಸ್ತಾರವಾಗಿರುವ ಮಹಾನುಭಾವಳಾದ ಈಕೆಯ ಅಂದವಾದ ಎಡಕಣ್ಣು ಹರ್ಷಗೊಂಡಂತೆ ಅದುರುತಲಿರುವುದು ಕಾಣಬರುತ್ತಲಿದೆ,

ಅಕಸ್ಮಾದೇವ ವೈದೇಹ್ಯಾ ಬಾಹು ರೇಕಃ ಪ್ರಕಂಪತೇ ।
ಕರೇಣುಹಸ್ತ ಪ್ರತಿಮ ಸ್ಸವ್ಯ ಶ್ಚೋರು ರನುತ್ತಮಃ ॥
ವೇಪಮಾನ ಸ್ಸೂಚಯತಿ ರಾಘವಂ ಪುರತಃ ಸ್ಥಿತಂ ॥೫೦॥
‡ ಪಕ್ಷೀಚ ಶಾಖಾನಿಲಯಂ ಪ್ರವಿಷ್ಟಃ ಪುನಃಪುನ ಶ್ಚೋತ್ತಮಸಾಂತ್ವವಾದೀ ।

ಹೆಣ್ಣಾನೆಯ ಸೊಂಡಿಲಂತಿರುವ, ಸವ್ಯಃ - ಎಡಗಡೆಯದಾದ, ಅನುತ್ತಮಃ - ಸರ್ವೋತ್ತಮವೆನಿಸಿರತಕ್ಕ, ಊರುಶ್ಚ - ತೊಡೆಯೂ, ವೇಪಮಾನಃ - ಕಂಪಿಸುತಲಿರುವುದಾಗಿ, ರಾಘವಂ - ಶ್ರೀರಾಮನನ್ನು ಪುರತಃ - ಸೀತೆಯ ಎದುರಿಗೆ, ಸ್ಥಿತಂ - ಇರತಕ್ಕವನನ್ನಾಗಿ, ಸೂಚಯತಿ - ಸೂಚಿಸುತಲಿದೆ ॥೫೦॥ (ಅವಯವಕಂಪದಶುಭನಿಮಿತ್ತವನ್ನು ಸೂಚಿಸಿದ ಬಳಿಕ ಪಕ್ಷಿಯಿಂದುಂಟಾದ ಶುಭನಿಮಿತ್ತವು ಸೂಚಿಸಲ್ಪಡುತಲಿದೆ) ಶಾಖಾನಿಲಯಂ- ಮರದ ಕೊಂಬೆಯೆಂಬ ಸ್ಥಾನವನ್ನು, ಪ್ರವಿಷ್ಟಃ - ಪ್ರವೇಶಿಸಿದ, ಪುನಃಪುನಃ - ಅಡಿಗಡಿಗೂ, ಉತ್ತಮ - ಶ್ರೇಷ್ಠವಾದ, ಸಾಂತ್ವ - ಮಧುರಧ್ವನಿಯನ್ನು, ವಾದೀ - ಹೇಳುತಲಿರುವ, ಸುಸ್ವಾಗತಾಂ - ಉತ್ತಮಬಂಧು ಸಮಾಗಮವನ್ನು ಸೂಚಿಸುವ, ವಾಚಂ- ವಾಕ್ಯವನ್ನು, (ಸ್ವರವನ್ನು) ಉದೀರಯಾನಃ (ಉದಿರಯಮಾಣಃ) ಹೇಳುತಲಿರುವುದಾಗಿರುವ, ಪಕ್ಷೀಚ - ಬಂದಾನೊಂದು ಪಕ್ಷಿಯೂ, ಹೃಷ್ಟಃ - ಫಲಫಕ್ಷಣೆಯಿಂದ ಸಂತೋಷಿಸಿದುದಾಗಿ, (ರಾಘವಂ - ಶ್ರೀರಾಮಾಗಮನವನ್ನು) ಪುನಃ ಪುನಃ-ಪದೇಪದೇ, ಚೋದಯತೀವ - ಹೇಳುತಲಿದೆಯೋ ಎಂಬಂತಿರುವುದು (ಪ್ರೇರಿಸುತ್ತದೆಯೋ ಎಂಬಂತಿರುವುದು)

॥೪೭- ೪೮- ೪೯॥ ಹೆಣ್ಣಾನೆಯ ಸೊಂಡಿಲಿನಂತೆ ದುಂಡಾಗಿಯೂ, ನೀಳವಾಗಿಯೂ, ಇರುವ ಈ ವೈದೇಹಿಯ ಉತ್ತಮವಾದ ಎಡ ತೊಡೆಯೂ, ಎಡದೋಳೂ, ಅಕಸ್ಮಾತ್ತಾಗಿ ಕಂಪಿಸುತ್ತ ಶುಭವನ್ನು ಸೂಚಿಸುತಲಿದೆ. ಮತ್ತು ಶ್ರೀರಾಮಚಂದ್ರನು ಈಕೆಯ ಎದುರಿನಲ್ಲಿ ಬಂದು ನಿಂತವನನ್ನಾಗಿ ಸೂಚಿಸುತಲಿದೆ ॥೫೦॥‡ ಇನ್ನು ಈ ಸೀತೆಗೆ ಅಪರಿಮಿತ ಸಂತೋಷವು ಸಂಭವಿಸುವದರಲ್ಲಿ ಅಡ್ಡಿ ಏನು ? ಇಗೋ:—ವೇದಶಾಖೆಗಳಿಗೆ ತುದಿ ಎನಿಸಿದ ಉಪನಿಷತ್ತುಗಳನ್ನು ಅಧ್ಯಯನಮಾಡಿ ಅನುಷ್ಠಾನಪರನಾದ ಆಚಾರ್ಯನು ಶಮಾದಿಗುಣಸಂಪನ್ನನಾದ ಪ್ರಿಯಶಿಷ್ಯನಲ್ಲಿ ಪ್ರೀತಿಯನ್ನಿಟ್ಟು, ರಸವತ್ತರಗಳಾದ ಉಪನಿಷನ್ಮಹಾವಾಕ್ಯಗಳನ್ನು ಉಪದೇಶಿಸುತಲಿರಲು ಅಭ್ಯಾಸಪರನಾದ ಆ ಶಿಷ್ಯನಿಗೆಧನ್ಯವಾದವನ್ನು ಪುನಃಪುನಃಸಂತೋಷಿಸಿ ಹೇಳುವಹಾಗೂ,ಜಿತೇಂದ್ರಿಯನಾಗಿ,ವಿರಕ್ತನೆನಿಸಿ, ವೇದಾಂತ ವಿಚಾರಪರನಾಗಿ, ಸಾಧನ ಸಂಪತ್ತಿ ಎಂಬ ಸಹಾಯವನ್ನು ಪಡೆದಿರುವ ಉತ್ತಮಬ್ರಹ್ಮಚಾರಿಯು, ಸದ್ಗುರೂಪದಿಷ್ಟವಾದ ಮಹಾವಾಕ್ಯಶ್ರವಣಾನುಷ್ಠಾನಗಳುಳ್ಳವನಾಗಿ, ಸಮಾಧಿಯಲ್ಲಿ ಸ್ವರೂಪಸಾಕ್ಷಾತ್ಕಾರವುಂಟಾಗಿರುವುದರಿಂದ ಆನಂದಭರಿತನಾಗಿ ಬಂಧನಿವೃತ್ತಿಯಮೂಲಕ ಕೃತಾರ್ಥತೆಯು ಸ್ವಾಚಾರ್ಯನಮೂಲಕ ಸಂಭವಿಸಿತೆಂದು ವಿಜ್ಞಾಪಿಸುವಹಾಗೂ, ಈ ಎದುರಿಗೆ ಕಾಣಬರುತಲಿರುವಮರದಕೊನೆಯಲ್ಲಿ ತನ್ನ ಗೂಡನ್ನು ಹೊಕ್ಕಪಕ್ಷಿಯೂ, ಕಿವಿಗೆ

‡ ವಿಶೇಷ:—ಈ ರಾಮಾಯಣವು ಉತ್ತಮಕಾವ್ಯವು. ಉತ್ತಮ, ಮಧ್ಯಮ. ಅಧಮ ಎಂದು ಕಾವ್ಯವು ಮೂರುಬಗೆ, ಎಲ್ಲಿಯಾದರೆ—ಶಬ್ದ ಮತ್ತು ಶಬ್ದಾರ್ಥಗಳಿಗಿಂತಲೂ ಮೇಲೆಮೇಲೆ, ಬೇರೆಬೇರೆ, ಅರ್ಥಾಂತರವು ತೋರುತ್ತಿರುವುದೋ, ಅದಕ್ಕೆ ವ್ಯಂಗ್ಯವೆಂತಲೂ, ಧ್ವನಿ ಎಂತಲೂ, ಹೆಸರು.ಹೀಗಿರುವುದೇ

ಸುಸ್ವಾಗತಾಂ ವಾಚ ಮುದೀರಯಾನಃ ಪುನಃಪುನಶ್ಚೋದಯತೀವಹೃಷ್ಟಃ॥
ಇತಿ ಶ್ರೀಮತ್ಸುಂದರಕಾಂಡೆ _ ಸಪ್ತವಿಂಶಸ್ಸರ್ಗಃ.

ಅರ್ಥಾಂತರ.- ಶಾಖಾನಿಲಯಂ - ಕೊಂಬೆಯಲ್ಲಿರುವ ಗೂಡನ್ನು, ಪ್ರವಿಷ್ಟಃ - ಪ್ರವೇಶಿಸುತಲಿರುವ, ಪಕ್ಷೀಚ - ಪ್ರಶಸ್ತವಾದ ಪಕ್ಷವುಳ್ಳ ಗರುಡನೂ, ಪುನಃ ಪುನಃ - ಬಾರಿಬಾರಿಗೂ, ಉತ್ತಮ - ಕೇಳುವದಕ್ಕಿಂಪಾದ, ಸಾಂತ್ವ - ಸಮಾಧಾನಕರವಾದ, ವಾದೀ - ಧ್ವನಿಯುಳ್ಳ, ಸುಸ್ವಾಗತಾಂ - ಸು_ಶ್ರೇಷ್ಠವಾದ, ಸ್ವ - ರಾಮರೂಪದಿಂದಿರುವ ತನ್ನ ಸ್ವಾಮಿಯಾದ ಶ್ರೀಮನ್ನಾರಾಯಣನ, ಆಗತಾಂ - ಬರುವಿಕೆಯುಳ್ಳ, ವಾಚಂ - ಶುಭವಚನವನ್ನು, ಉದೀರಯಾನಃ - ಹೇಳುತಲಿರುವುದಾಗಿ, ಪುನಃ ಪುನಃ- ಅಡಿಗಡಿಗೂ, ಹೃಷ್ಟಃ - ರೆಕ್ಕೆಗಳನ್ನು ಅಲುಗಿಸುವ (ಬದರುವ) ಹರ್ಷವುಳ್ಳದಾಗಿಯೂ, ಚೋದಯತೀವ- ಸಮಾಧಾನವನ್ನು ಹೊಂದುವಂತೆ ಸೀತೆಯನ್ನು ಪ್ರೇರಿಸುತಲಿದೆಯೋ ಎಂಬಂತಿದ್ದಿತು(೧)ಮತ್ತು ಶಾಖಾನಿಲಯಂ - ಶಾಖಾ - ವೇದಶಾಖೆಗಳ, ನಿಲಯಂ - ಕಡೆಯಸ್ಥಾನವಾದ ಉಪನಿಷತ್ತುಗಳನ್ನು, ಪ್ರವಿಷ್ಟಃ - ಪ್ರವೇಶಿಸಿದ, (ವೇದಾಂತಾಧ್ಯಯನವನ್ನು ಮಾಡಿದ) ಪಕ್ಷೀಚ - ಪ್ರಿಯಶಿಷ್ಯಪಕ್ಷಪಾತವುಳ್ಳ ಗುರುವು, ಪುನಃ ಪುನಃ - ಪದೇಪದೆ, ಉತ್ತಮ - ಶ್ಲಾಘ್ಯವಾದ, ಸಾಂತ್ವ - ಹಿತವಾದ ಉಪನಿಷನ್ಮಹಾವಾಕ್ಯಗಳನ್ನು ಉಪದೇಶಿಸುತಲಿರುವನಾದಕಾರಣವೇ, ಸುಸ್ವಾಗತಾಂ, ಸು - ಶ್ರೇಷ್ಠವಾದ, ಸ್ವ- ಸ್ವಾತ್ಮನ, ಆಗತಾಂ - ಲಾಭವುಳ್ಳ, ವಾಚಂ - ವಾಕ್ಯನ್ನು, ಉದೀರಯಾನಃ - ಉಪದೇಶಿಸುತಲಿರುವನಾಗಿ, ಹೃಷ್ಟಃ - ಶಿಷ್ಯನಿಗೆ, ಸ್ವಾತ್ಮಲಾಭವಾಯಿತೆಂದು ಸಂತೋಷಿಸುತಲಿರುವನಾದಕಾರಣವೇ, ಪುನಃ

ಇಂಪಾಗಿರುವಂತೆ ಮೃದುಮಧುರವಾಗಿ ಪದೇಪದೇ ಧ್ವನಿಗೈಯುತ್ತಾ, ಸಂತೋಷದಿಂದ ತನ್ನ ಒಡಲನ್ನು ಒದರಿಉಬ್ಬಿಸಿಕೊಳ್ಳುತಲಿರುವುದಾಗಿ, ಶ್ರೀರಾಮಚಂದ್ರನಸುಖಾಗಮನವನ್ನೂ, ಸೀತೆಗೆಸುಖಪ್ರಾಪ್ತಿಯನ್ನೂ ಬಾರಿಬಾರಿಗೂ ಸೂಚಿಸುವಂತಿದೆ. ಮತ್ತು - ಪ್ರಶಸ್ತವಾದ ಇಲ್ಲವೇ ವಿಸ್ತಾರವಾದ ಗರುಡ ಪಕ್ಷಿಯು ತನ್ನ ರೆಕ್ಕೆಗಳನ್ನು ಹರಡಿ, ಪ್ರದಕ್ಷಿಣಾಕಾರವಾಗಿ ಸಂಚರಿಸುತ, ಚೆನ್ನಾಗಿ ಚಿಗುರಿ ಹೂತಿರುವ ಮರದ ಕೊಂಬೆಯಲ್ಲಿ ಕುಳಿತು, ಅಲ್ಲಿರುವ ಹಣ್ಣನ್ನು ತಿಂದು, ಹೇರಳವಾಗಿ ಸಂತೋಷಿಸಿ, ಓ ಸೀತೇ ! ನೀನು ದುಃಖಿಸಬೇಡ, ನಿನ್ನ ಭರ್ತನು ಬೇಗಬರುವವನಾಗಿದಾನೆ, ಇದು ವ್ಯಸನಪಡಲಿಕ್ಕೆ ತಕ್ಕ ಸಮಯವಲ್ಲ, ಎಂಬ ಸಾಮವಾದಗಳಿಂದ ಸೀತೆಯನ್ನು ಸಮದಾಯಿಸುವಂತಿದೆ. ಸಮಾಧಾನ ಪ್ರಕಾರವೆಂತೆಂದರೆ : ಓಸೀತೇ! ನಿನಗಿಂತಲೂ ರಾಮನಿಗೆ ಅಧಿಕವಾಗಿ ಸಂತಾಪವುಂಟು. ಆದರೂ, ಅದನ್ನು ಅಡಗಿಸಿಕೊಂಡು ನೀನಿರುವ ಸ್ಥಳಕ್ಕೆ ಬರುತಲಿರುವನು ಓಕ್ಯಶಾಂಗಿಯೇ! ಕಾಮವು ನಿನಗೆಸಂತಾಪವನ್ನುಂಟುಮಾಡುತಲಿದ್ದರೂ, ಆತನನ್ನು ಸುಡುತಲೇ ಇರುವುದು, ಹಗಲು, ಚಂದ್ರನನ್ನು ಹೇಗೆ

ಉತ್ತಮಕಾವ್ಯ. ಎಲ್ಲಿ— ಪದ ಪದಾರ್ಥಗಳಿಗಿಂತಲೂ, ವ್ಯಂಗ್ಯಾರ್ಥವು ಕಡಮೆಯಾಗಿರುವುದೋ ಅಂತಹ ಕಾವ್ಯಕ್ಕೆ ಮಧ್ಯಮಕಾವ್ಯವೆಂದು ನಾಮ. ಇದನ್ನೇ ಗುಣೀಭೂತವ್ಯಂಗ್ಯವೆನ್ನುವರು ಇನ್ನೆಲ್ಲಿಯಾದರೆ—ಶಬ್ದ ಶಬ್ದಾರ್ಥಗಳನ್ನು ಬಿಟ್ಟು ಬೇರೆ ಅರ್ಥವೇ ತೋರುವುದಿಲ್ಲವೋ, ಅದನ್ನು ಅಧಮಕಾವ್ಯವೆನ್ನುವರು. ಇದಕ್ಕೆ ಚಿತ್ರವೆಂತಲೂ ಹೆಸರು. ವ್ಯಂಗ್ಯಾರ್ಥವಾದರೆ—ಪದಗತ, ವಾಕ್ಯಗತ, ಪ್ರಬಂಧಗತವೆಂತಲೂ ಮೂರುವಿಧ. ಈ ಸುಂದರಕಾಣ್ಡವೆಂಬ ಪ್ರಬಂಧದಿಂದ ಅನಾದಿಯಾದ ಭಗವತ್ಸಂಬಂಧವುಳ್ಳ ಚೇತನನನ್ನು ಉಜ್ಜೀವಗೊಳಿಸಲು ಪ್ರವರ್ತಿಸಿದ ಆಚಾರ್ಯನ ಪ್ರವೃತ್ತಿಯು ಸೂಚಿತವಾಗಿದೆ.-

ಪುನಃ - ಪದೇಪದೆ, ಚೋದಯತೀವ - ಕೃತಾರ್ಥನಾದೆನೆಂದು ಶಿಷ್ಯನನ್ನು ಪ್ರೇರಿಸುತಲಿರುವ ಹಾಗೆ ||೨|| ಮತ್ತು - ಶಾಖಾನಿಲಯಂ- ವೇದಾಂತವಿಚಾರವನ್ನು, ಪ್ರವಿಷ್ಟಃ - ಪ್ರವೇಶಿಸಿದ (ವಿಚಾರಮಾಡತೊಡಗಿದ) ಪಕ್ಷೀಚ - ಶಮದಮಾದಿ ಸಂಪತ್ತಿಯೆಂಬ ಪಕ್ಷದಂತಿರುವ ಸಾಧನವುಳ್ಳ ಜೀವನು, ಪುನಃಪುನಃ - ಪದೇಪದೆ ಉತ್ತಮ - ಅಜ್ಞಾನಾಂಧಕಾರ ನಿವರ್ತಕವಾದ (ಉದ್ಗತಂ ತಮಃ, ಯಸ್ಮಾತ್, ತತ್ ಉತ್ತಮಂ) ಸಾಂತ್ವ-ಮುಕ್ತಿಸಾಧಕವಾದ ಮಹಾವಾಕ್ಯಗಳ, ವಾದೀ - ಆಚಾರ್ಯೋಪದಿಷ್ಟವಚನವುಳ್ಳವನಾಗಿ, ಸುಸ್ವಾಗತಾಂ, ಸು-ಉತ್ತಮವಾದ, ಸ್ವ-ಜ್ಞಾನಾನಂದ ಸ್ವರೂಪನಾದ ಸ್ವಾತ್ಮನ, ಆಗತಾಂ - ಉಪಾಸನೆಯಿಂದ ಪ್ರಾಪ್ತಿಯುಳ್ಳ, ವಾಚಂ-ಬ್ರಹ್ಮಸ್ವರೂಪನಾದೆನೆಂಬ ವಚನವನ್ನು, ಉದೀರಯಾನಃ-ಸ್ಪಷ್ಟವಾಗಿ ಹೇಳುತಲಿರುವನಾದಕಾರಣವೇ, ಪುನಃಪುನಃ-ಮರಳಿಮರಳಿ, ಹೃಷ್ಟಃ-ಬಂಧನಿವೃತ್ತಿಯಿಂದ ಸಂತೋಷಿಸುವವನಾಗಿ, ಚೋದಯತೀವ - "ತ್ವಂಹಿನಃ ಪಿತಾಯೋ ಽ ವಿದ್ಯಾಯಾಃ ಪರಂ ಪಾರಂ ತಾರಯಸಿ" ಅಜ್ಞಾನಪ್ರವಾಹದ ದಡವನ್ನು ದಾಟಿಸಿದನೀನೇ ನಮಗೆ ತ-ದೆ. ತಮ್ಮಿಂದ ಕೃತಾರ್ಥನಾದೆನೆಂದು ಆಚಾರ್ಯನನ್ನು ಕುರಿತು ವಿಜ್ಞಾಪಿಸುವಹಾಗೆ || ೩ ||

—ಇಂತು ಇಪ್ಪತ್ತೇಳನೆಯ ಸರ್ಗಂ.—



---

ಕಳೆಗುಂದಿಸುವುದೋ, ಹಾಗೆ ಕುಮುದಲತೆಯನ್ನು ಕಳೆಗುಂದಿಸುವುದಿಲ್ಲವಷ್ಟೆ ! ಆದಕಾರಣ ನಿನಗಿಂತಲೂ ರಾಮನಿಗೆ ಅಧಿಕತಾಪವುಂಟೆಂದು ಭಾವಿಸು. ನೀನು ಸ್ನಾನಪಾನಾದಿಗಳನ್ನು, ಅಲಂಕಾರಾದಿಗಳನ್ನೂ ತೊರೆಯಬೇಡ ಎಂದು ಹೇಳಿ ಪ್ರೇರಿಸುವಂತಿದೆ.

— ಇಂತುಇಪತ್ತೇಳನೆಯ ಸರ್ಗವು —



---

ಇದೇ ವ್ಯಂಗ್ಯ, ಈ ಅರ್ಥವೇ ಸುಂದರಕಾಂಡದ ಆದಿಯಲ್ಲಿ "ತತೋರಾವಣನೀತಾಯಾಃ" ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿದೆ. ಈ ಕಾಣ್ಡದೊಳಗೆ ಲಂಕಾ ಎಂಬ ಪದಕ್ಕೆ ಶರೀರವು ವ್ಯಂಗ್ಯವು. ಏಕಾಕ್ಷೀ ಮೊದಲಾದವರು ಇಂದ್ರಿಯಗಳು, ರಾವಣಕುಂಭಕರ್ಣರು ಅಹಂಕಾರಮಮಕಾರಗಳು, ಇಂದ್ರಜಿತ್ತು ಮೊದಲಾದವರು ಕಾಮ, ಕ್ರೋಧ, ಲೋಭ, ಮೋಹ, ಮದ ಮಾತ್ಸರ್ಯಾದಿಗಳು, ಚೇತನನು (ಜೀವನು) ಲಂಕೆಯಲ್ಲಿ ತಡೆಯಲ್ಪಟ್ಟಿರುವ ಸೀತೆಗೆ ಸಮಾನನು. ಆ ಚೇತನನಿಗೆ ಭಗವದ್ಧ್ಯಾನವನ್ನು ಉಪದೇಶಿಸುವ ಆಚಾರ್ಯನಿಗೆ ಆಂಜನೇಯನು ಸದೃಶನು. ಆ ಆಚಾರ್ಯಲಕ್ಷಣವು ಈ ಶ್ಲೋಕದಿಂದ ಸೂಚಿತವಾಗುತಲಿದೆ. ಅದೆಂತೆಂದರೆ — ಪಕ್ಷೀ-ಈ ಶಬ್ದದಿಂದ ರೆಕ್ಕೆಗಳು ಗಮನಸಾಧಕವಾದಕಾರಣ ಪರಮಪದಗಮನವನ್ನು ಕುರಿತು ಜ್ಞಾನಕರ್ಮಗಳು ಸಾಧನಗಳೆಂದು ಸೂಚಿತವಾಗುತ್ತದೆ. "ಉಭಾಭ್ಯಾಮೇವ ಪಕ್ಷಾಭ್ಯಾಂ ಯಥಾಖೇಪಕ್ಷಿಣಾಂಗತಿಃ | ತಥೈವಜ್ಞಾನಕರ್ಮಭ್ಯಾಂ ನೃಣಾಂತು ಪರಮಾಗತಿಃ |" ಹಕ್ಕಿಗಳಿಗೆ ರೆಕ್ಕೆಗಳು ಹಾರಿ ಹೋಗಲು ಸಾಧನವಾಗಿರುವಂತೆ, ಜ್ಞಾನಕರ್ಮಗಳು ಮೋಕ್ಷಪ್ರಾಪ್ತಿ ಸಾಧನಗಳೆಂದು ಈ ಶ್ಲೋಕವು ತಿಳಿಸುತಲಿದೆ. "ಬ್ರಾಹ್ಮಣಾವಿವಿದಿಷಂತಿಯಜ್ಞೇನ ದಾನೇನ ತಪಸಾಽನಾಶಕೇನ" ಎಂಬ ಶ್ರುತಿಯು ಬ್ರಾಹ್ಮಣರು

ನಿತ್ಯಯಜ್ಞ, ದಾನ, ತಪಸ್ಸು, ಇವುಗಳಿಂದ ಪರಮಾತ್ಮನನ್ನು ತಿಳಿಯಲು ಬಯಸುತ್ತಾರೆ ಎಂಬದಾಗಿ ಆಚಾರ್ಯಶಬ್ದಾರ್ಥವನ್ನು ನಿರೂಪಿಸುತಲಿದೆ. "ಆಚಿನೋತಿಹಿ ಶಾಸ್ತ್ರಾರ್ಥಮಾಚಾರೇ ಸ್ಥಾಪಯತ್ಯಪಿ ಸ್ವಯಮಾಚರತೇಯಸ್ಮಾತ್ತಸ್ಮಾದಾಚಾರ್ಯಉಚ್ಯತೇ॥" ಶಾಸ್ತ್ರಾರ್ಥಗಳನ್ನು ಸಂಗ್ರಹಿಸಿ, ತಾನೂ ಆಯಾಧರ್ಮಗಳನ್ನು ಆಚರಿಸುತ್ತ, ಇತರರಿಂದಲೂ ಆಚರಣೆಗೆ ತರಿಸತಕ್ಕವನು ಆಚಾರ್ಯ ಎಂಬುದು ಈ ಶ್ಲೋಕಾರ್ಥ. ಶಾಖಾ ಶಬ್ದಕ್ಕೆ ವೇದಶಾಖೆಗಳೆಂದು ಅರ್ಥ. ನಿಲಯ ಶಬ್ದಕ್ಕೆ ವೇದಶಾಖಾಧ್ಯಯನದಲ್ಲಿ ಆಸಕ್ತನಾದವನು ಎಂದರ್ಥವು. ವೇದಶಾಖೆಗಳನ್ನು ಬಿಟ್ಟರೆ, ದೋಷವನ್ನು ಹೇಳಿದೆ "ಅಧೀತಮಪಿಯೋ ವೇದಂ ವಿಮುಂಚತಿ ನರಾಧಮಃ। ಭ್ರೂಣಹಾಸತು ವಿಜ್ಞೇಯೋ ಏಯೋ ನಿಮಧಿಗಚ್ಛತಿ"॥ ಓದಿದ ವೇದವನ್ನು ಮರೆತುಬಿಟ್ಟ ನರಾಧಮನು ಶಿಶುಹತ್ಯೆಮಾಡಿದವನ ಪಾಪವನ್ನು ಹೊಂದಿ ತಿರ್ಯಕ್ ಜಂತುಜನ್ಮವನ್ನು ಪಡೆಯುವನು ಎಂಬುದು ಈ ಶ್ಲೋಕಾರ್ಥ. ಮತ್ತು - ನಿಲಯ ಶಬ್ದದಿಂದ ವೇದಶಾಖಾರ್ಥ ವಿಷಯವಾದ, ಶ್ರವಣ ಮನನ, ನಿದಿಧ್ಯಾಸರೂಪವಾದ ಅನುಷ್ಠಾನಗಳು ಹೇಳಲ್ಪಡುತ್ತವೆ. ಇದರಿಂದಲೂ ಆಚಾರ್ಯಲಕ್ಷಣವು ಸೂಚಿತವಾಗುವುದು. "ಆಚಾರ್ಯೋ ವೇದಸಂಪನ್ನಃ ವಿಷ್ಣುಭಕ್ತೋ ವಿಮತ್ಸರಃ। ಮಂತ್ರಜ್ಞೋ ಮಂತ್ರಭಕ್ತಶ್ಚ ಸದಾ ಮಂತ್ರಾಶ್ರಯಶ್ಶುಚಿಃ। ಗುರುಭಕ್ತಿ ಸಮಾಯುಕ್ತಃ ಪುರಾಣಜ್ಞೋ ವಿಶೇಷತಃ। ಏವಂ ಲಕ್ಷಣ ಸಂಪನ್ನಃ ಗುರುರಿತ್ಯಭಿಧೀಯತೇ॥" ವೇದಜ್ಞನೂ, ವಿಷ್ಣುಭಕ್ತನೂ, ಮಾತ್ಸರ್ಯರಹಿತನೂ, ಮಂತ್ರವಿದನೂ ಮಂತ್ರಭಕ್ತನೂ, ಮಂತ್ರಾನುಷ್ಠಾನ ಪರನೂ, ಪರಿಶುದ್ಧನೂ, ಗುರುಭಕ್ತಿಯಿಂದೊಡಗೂಡಿ ಪುರಾಣಜ್ಞನೂ ಆಗಿರುವಾತನೇ ಗುರುವೆಂದು ಅರ್ಥ. ಪ್ರಹೃಷ್ಟಃ-ಯಾವಾಗಲೂ ಸಂತುಷ್ಟವಾದ ಮನಸ್ಸುಳ್ಳವನು, ಇದರಿಂದ ಗುರುವು ಯಾವಾಗಲೂ ಸೇವ್ಯನೆಂದು ಹೇಳಲ್ಪಡುತದೆ "ಆಹ್ಲಾದಶೀತನೇತ್ರಾಂಬುಃ ಪುಲಕೀಕೃತಗಾತ್ರವಾನ್। ಸದಾಪರಗುಣಾಃ ವಿಷ್ಟೋದ್ರಷ್ಟವ್ಯಃಸ್ವ ದ್ವದೇಹಿಭಿಃ॥" ಸಂತೋಷಚಿತ್ತನಾಗಿ ಆನಂದಬಾಷ್ಪ ರೋಮಾಂಚಗಳುಳ್ಳವನಾಗಿ, ಸದಾ ಪರಗುಣಗಳಿಂದ ಸಂತೋಷಿಸುವ ಗುರುವನ್ನು ಸೇವಿಸಬೇಕು ಎಂದರ್ಥವು. "ಪುನಃಪುನಃ ಶ್ಚೋತ್ತಮಸಾಂತ್ವವಾದೀ"-ಉತ್ತಮ ಶಬ್ದದಿಂದ ಹೇಳಲ್ಪಡುವ ಪರಮಾತ್ಮವಿಷಯಕವಾದ ‡ ಸಾಂತ್ವವಾಕ್ಯಗಳನ್ನು ಅನೇಕಾವರ್ತಿ ಶಿಷ್ಯರಿಗೆ ಉಪದೇಶಿಸತಕ್ಕವನು. ಅಶ್ರದ್ಧೆಯಿಂದ ಕೇಳದೆ ಹೋದಲ್ಲಿ ತಿಳಿಯದೆಂದು ಪುನಃಪುನಃ ಪ್ರತಿದಿನವೂ ಅನುಭವಸಿದ್ಧವಾಗುವದಕ್ಕಾಗಿ ವೇದಾಂತ ಗೂಢಾರ್ಥವನ್ನು ಚೆನ್ನಾಗಿ ತಿಳಿಸತಕ್ಕವನು ಎಂದು "ಪುನಃಪುನಃ" ಎಂಬದಾಗಿ ಹೇಳಿದೆ. "ಸುಸ್ವಾಗತಾಂ ವಾಚ ಮುದೀರಯಾನಃ"—ಸಂಪ್ರದಾಯವು ತಪ್ಪಿಹೋಗದೆ ಆಚಾರ್ಯ ಪರಂಪರೆಯಿಂದ ತನಗೆ ಲಭಿಸಿದ ಅಷ್ಟಾಕ್ಷರೀ ಮುಂತಾದ ಮಂತ್ರರೂಪವಾಗಿರುವ ವಾಕ್ಯಗಳನ್ನು ಪ್ರತಿಫಲಾಪೇಕ್ಷೆಯಿಲ್ಲದೆ ದಯೆಯಿಂದ ಹೇಳತಕ್ಕವನು. ಹೀಗೆ ಈ ಕಾಣ್ಡದಲ್ಲಿ-ಶಿಷ್ಯೋಜ್ಜೀವನಾರ್ಥವಾಗಿ ಅಹಂಕಾರ ಮಮಕಾರ, ಕಾಮಕ್ರೋಧಾದಿಗಳನ್ನು ನಿವಾರಿಸುವ ಜ್ಞಾನೋಪದೇಶರೂಪವಾದ ಆಚಾರ್ಯನ ಪ್ರವೃತ್ತಿ ಎಂಬ ವ್ಯಂಗ್ಯಾರ್ಥವು ಆಯಾ ಶಬ್ದಗಳ ಶಕ್ತಿಯಿಂದ ಹೇಳಲ್ಪಡುವುದು. ಇದರಿಂದ ಇದು ಉತ್ತಮ ಕಾವ್ಯವೆಂದು ಕೊಂಡಾಡಲ್ಪಡುತಲಿದೆ.

---

‡ ಸಾಂತ್ವವಾಕ್ಯವೆಂದರೆ —ತ್ವಂಮೇಽಹಂಮೇಕುತಸ್ತತ್ತದಪಿಕುತ ಇದಂ ವೇದಮೂಲ ಪ್ರಮಾಣಾಚ್ಚೈತತ್ ಜ್ಞಾನಾದಿ ಸಿದ್ಧಾದನುಭವವಿಭವಾತ್ತರ್ಹಿಸಾ ಕ್ರೋಶಏವ॥ ಕ್ವಾಕ್ರೋಶಃ ಕಸ್ಯಗೀತಾದಿಷು ಮಮವಿದಿತಃ ಕೋತ್ರಸಾಕ್ಷೀಸುಧೀಸ್ಸ್ಯಾದ್ಧಂತತ್ವತ್ಪಕ್ಷಪಾತೀಸ ಇತಿ ನೃಕಲಹೇ ಮೃಗ್ಯಮಧ್ಯಸ್ಥವತ್ತ್ವಂ॥" ಜೀವೇಶ್ವರಸಂವಾದ—ಈಶ್ವರನು--ಎಲೈ ಜೀವನೇ! ತ್ವಂಮೇ = ನೀನು ನನಗೆ ಸೇರಿದವನು. (ಶೇಷಭೂತನು ಎಂದರೆ ಸ್ವಸ್ವಾತಂತ್ರ್ಯವಿಲ್ಲದೆ, ದಾಸನಾಗಿ ನನ್ನ ಆಜ್ಞೆಯ ಪ್ರಕಾರ ನಡೆದುಕೊಂಡು ನನ್ನನ್ನು ಅತಿಶಯನೆಂದು ಭಾವಿಸುತಲಿರುವವನು.) ಜೀವನು--ಅಹಂಮೇ = ಹಾಗಲ್ಲ, ನನಗೆ ನಾನೆ ಸ್ವತಂತ್ರನು. ಈ-ಏತತ್‌ಕುತಃ = ಅದು ಹೇಗೆ? ಅಥವಾ ಯಾವ ಕಾರಣದಿಂದ? ಜೀ—ತದಪಿಕುತಃ-

ಮೊದಲು "ನೀನು ನನ್ನವನು ಎಂದು ಹೇಳಿದೆಯಲ್ಲಾ" ಅದು ಯಾವ ಕಾರಣದಿಂದ?, ಈ ಇದಂ = ಈ ನಾನು ಹೇಳಿದ ವಾಕ್ಯವು 'ವೇದಮೂಲ ಪ್ರಮಾಣಾತ್'' ಸಕಲ ವೇದಗಳಿಗೂ ಪ್ರಣವವು. (ಓಂಕಾರ) ಮೂಲವೆನಿಸಿದೆ. ಈ ಓಂಕಾರಪ್ರಮಾಣದಿಂದಲೇ ಎಂದು ತಿಳಿ. ಜೇ—ಏತಚ್ಚ ಈ ವಾಕ್ಯವು "ಅನಾದಿ ಸಿದ್ಧತ್'' ಪೂರ್ವಕಾಲದಿಂದಲೂ ಇರುವ "ಅನುಭವವಿಭವಾತ್'' - ಅನುಭವಾತಿಶಯದಿಂದಲ್ಲವೇ ? ತರ್ಹಿ - ಹಾಗಾದರೆ, "ಸಾಕ್ರೋಶವಿದ'' - ನಾನು ಮೊರೆಯಿಡುವ ಸಂದರ್ಭವೋ ? ಎಂದರೆ ಹೀಗೆ ನಿನಗೆ ಸ್ವಾತಂತ್ರ್ಯವಿಲ್ಲವೆಂದು ಹಳಬನಾದ ನಾನು ಮೊರೆಯಿಡುತಲಿರುವೆನು ಎಂದು ತಾತ್ಪರ್ಯವೋ? ಜೇ—ಆಕ್ರೋಶಃ-ಹಾಗೆ ನೀನು ಮೊರೆಯಿಡುವುದೂ, ಕ್ವ-ಎಲ್ಲಿ ? ಮತ್ತು ಕಸ್ಯ-ಯಾರವಿಷಯವಾಗಿ ? ಮಮ-ನನ್ನ, ಗೀತಾದಿಷು- ಗೀತೆ ಮೊದಲಾದವುಗಳಲ್ಲಿ, ವಿದಿತಃ - ತಿಳಿಯಲ್ಪಟ್ಟಿದೆ. ಜೇ--ಅತ್ರ - ಈ ವಿಷಯವಾಗಿ, ಸಾಕ್ಷೀ -ಸಾಕ್ಷ್ಯವನ್ನು ಹೇಳತಕ್ಕವರು, ಕಃ-ಯಾರು ?. ಈ—ಸುಧೀಃ -ಜ್ಞಾನಿಯು, ಸ್ಯಾತ್-ಸಾಕ್ಷಿಯಾಗುವನು. ಜೇ—ಸಃ-ಅಂತಜ್ಞಾನಿಯು, ತ್ವತ್ಪಕ್ಷಪಾತೀ-ನಿನ್ನ ಪಕ್ಷವನ್ನೇ ಅವಲಂಬಿಸಿ ದವನು. ಹಂತ-ಅಯ್ಯೋ ಇದು ಬಹಳ ಆಶ್ಚರ್ಯವಾಗಿದೆ. "ಆರ್ತೋಜಿಜ್ಞಾಸುರರ್ಥಾರ್ಥೀ ಜ್ಞಾನೀಚಭ ರತರ್ಷಭ । ಉದಾರಾಸ್ಸರ್ವಏವೈತೇ ಜ್ಞಾನೀತ್ವಾತ್ಮೈವ ಮೇ ಮತಃ॥ಪ್ರಿಯೋಹಿ ಜ್ಞಾನಿನೋತ್ಯರ್ಥಮಹಂ ಸಚ ಮಮಪ್ರಿಯಃ ॥ '' ಎಂದು ನೀನು ಹೇಳಿಕೊಂಡಿರುವ ಗೀತೆಯಲ್ಲಿಯೇ ಕಳೆದುಕೊಂಡ ದ್ರವ್ಯವನ್ನು ಪುನಃ ಹೊಂದಬೇಕೆಂದು ಬಯಸಿ ನಿನ್ನನ್ನು ಸೇವಿಸುವ ಆರ್ತನು (೧) ಕೈವಲ್ಯವನ್ನು ಕೋರುವ ಜಿಜ್ಞಾಸುವು, (೨)ಪೂರ್ವದ್ರವ್ಯಕ್ಕಿಂತಲೂ ಅಧಿಕದ್ರವ್ಯವನ್ನು ಅಪೇಕ್ಷಿಸಿ, ನಿನ್ನನ್ನು ಭಜಿಸುವ ಅರ್ಥಾರ್ಥಿಯು, (೩)ಯಾವುದನ್ನೂ ಬಯಸದೆ ಸರ್ವವಿಷಯಗಳನ್ನೂ ಪರಿತ್ಯಜಿಸಿ ಪ್ರಪತ್ತಿಯಿಂದೊಡಗೂಡಿ (ಶರಣಾಗತಿಯನ್ನುಹೊಂದಿ ಸರ್ವಸ್ವದೊಡನೆ ಆತ್ಮಸಮರ್ಪಣವನ್ನು ಮಾಡಿ, ನ್ಯಸ್ತಭರನಾಗಿ) ನಿರ್ಹೇತುಕವಾಗಿ ಉಂಟಾಗುವ ನಿನ್ನ ಕಟಾಕ್ಷಕ್ಕೆ ಪಾತ್ರನಾದ ಜ್ಞಾನಿಯು (೪)ಈ ನಾಲ್ವರೂ ಉದಾರರೆಂತಲೂ, ಅವರೊಳಗೆ ಜ್ಞಾನಿಯು ನಿನಗೆ ಅತ್ಯಂತ ಪ್ರಿಯನೆಂತಲೂ, ಆ ಜ್ಞಾನಿಗೆ ನೀನೂ ಅತ್ಯಂತಪ್ರಿಯನೆಂತಲೂ ಕಟ್ಟಕಡೆಗೆ ನೀನೇ ಅವನೆಂತಲೂ, ನೀನೇ ಹೇಳಿರುವೆಯಲ್ಲಾ ? ಹಾಗೆ ನಿನಗೆ ಪ್ರಿಯನಾದ ಜ್ಞಾನಿಯು, ಈ ನಾನು ಅಸ್ವಾತಂತ್ರನೆಂಬ ವಿಷಯದಲ್ಲಿ ನಿನ್ನ ಪಕ್ಷದ ಸಾಕ್ಷಿಯನ್ನಾಗಿ ತೋರಿಸುತ್ತೀಯೆ. ಇತಿ-ಹೀಗೆಂಬ, ನೃಕಲಹೆ-ವಾದಿ ಪ್ರತಿವಾದಿಗಳ ಕಲಹದಲ್ಲಿ, ತ್ವಂ-ನೀನು, ವ್ಯಾಜ್ಯಮಧ್ಯಸ್ಥವತ್-ಹುಡಕಲ್ಪಡತಕ್ಕ ಮಧ್ಯಸ್ಥಗಾರನಂತೆ ಇದ್ದೀಯೆ, ಎಂದರೆ ಪ್ರಮಾಣವನ್ನು ಮಾಡುವವನಂತೆ ಇರುತ್ತಿ. ಇತ್ಯಾದಿಗಳು—

ಮತ್ತು—"ಯಮೋವೈವಸ್ವತೋರಾಜಾಯಸ್ತ್ವೈಷಹೃದಿಸ್ಥಿತಃ। ತೇನಚೇದವಿವಾದಸ್ತೇಮಾಗಂಗಾಂ ಮಾಕುರೂನ್ಗಮಃ ॥ '' ಎಂದು ಮನುಸ್ಮೃತಿ, ಎಲೈ ಮನುಷ್ಯನೇ, ನಿರುಪಾಧಿಕನಿಯಾಮಕನೂ ಅವತಾರಭೇದದಲ್ಲಿ ಸೂರ್ಯವಂಶೋತ್ಪನ್ನನೂ,ಜನರನ್ನು ರಕ್ಷಿಸತಕ್ಕವನೂ ಆಗಿರುವ ಭಗವಂತನು ನಿನ್ನ ಹೃದಯದಲ್ಲಿದಾನೆ. ನಿನ್ನಲ್ಲಿರುವಭಗವಂತನೊಡನೆ ನಿನಗೆಅನುಕೂಲ್ಯವು ಇದ್ದುದೇ ಆದರೆ,ಆಗನೀನು ಗಂಗಾಸ್ನಾನಾರ್ಥವಾಗಿಯೂ,ಕುರುಕ್ಷೇತ್ರಯಾತ್ರಾರ್ಥಿಯಾಗಿಯೂ ಹೋಗಬೇಕಾದುದಿಲ್ಲ.(ಎಲೈ ಜೀವನೇ!ಸರ್ವನಿಯಾಮಕನಾದ ಪರಮಾತ್ಮನು ನಿನ್ನ ಹೃದಯಾಕಾಶದಲ್ಲಿ ಬೆಳಗುತಲಿರುವನು ಅಂತಹ ಚಿದಾನಂದಾತ್ಮನೊಡನೆ ಅವಿದ್ಯೋಪಾಧಿಯಿಂದ ನಿನಗುಂಟಾಗಿರುವ ಭೇದಬುದ್ಧಿಯು ತೊಲಗಿ, ಪರಮಾರ್ಥದಲ್ಲಿ ನಾನೇ ಆತನು ಎಂಬ ಅಭೇದಭಾವನಾರೂಪವಾದ ಅವಿವಾದವು ಉಂಟಾದರೆ ಆಗನೀನು ಆತನನ್ನು ಪಡೆಯಬೇಕೆಂದು ಕುರುಕ್ಷೇತ್ರಕ್ಕಾಗಲೀ,ವಾರಣಾಸೀಕ್ಷೇತ್ರಕ್ಕಾಗಲೀ ಹುಡುಕಿಕೊಂಡು ಓಡಬೇಕಾದುದಿಲ್ಲ ಎಂತಲೂ ಹೇಳುವರು)ಇತ್ಯಾದಿಗಳೇ ಸಾಂತ್ವವಾಕ್ಯಗಳು. ಇಂತಹ ವಾಕ್ಯಗಳನ್ನು ಆಚಾರ್ಯನು ಶಿಷ್ಯನಿಗೆ ಉಪಯೋಗಿಸುವುದುಂಟು.



ಶ್ರೀಃ

— ಶ್ರೀಮತ್ಸುನ್ದರಕಾಣ್ಡೇ - ಅಷ್ಟಾವಿಂಶಸ್ಸರ್ಗಃ —

ಸಾ ರಾಕ್ಷಸೇಂದ್ರಸ್ಯ ವಚೋ ನಿಶಮ್ಯ ತದ್ರಾವಣಸ್ಯಾಪ್ರಿಯ ಮಪ್ರಿಯಾರ್ತಾ ।

---

ಶ್ರೀಃ.

ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ.

ಇಪ್ಪತ್ತೆಂಟನೆಯ ಸರ್ಗ.

ಕಂ॥ ಉಕ್ಕುವ ದುಃಖದಿ ಜನಕಜೆ । ನಿಕ್ಕುವದಿಂ ಹರಣವನ್ನೆ ತೊರೆಯಲ್ ಗಳವಂ ।
ಪಕ್ಕದ ಶೋಕದ ಶಾಖೆಯೊ । ಳಿಕ್ಕೆಲದಿ ವೇಣಿಯಿಂದೆ ಬಿಗಿ ದಣಿಯಾದಳ್ ॥

ಸಾ-ಆ, ಸೀತಾ-ಜಾನಕಿಯು, ರಾಕ್ಷಸೇಂದ್ರಸ್ಯ-ರಾಕ್ಷಸರಾಜನಾದ, ರಾವಣಸ್ಯ-ದಶಕಂಠನ, ಅಪ್ರಿಯಂ-ಅಹಿತವಾದ, ತತ್ ವಚಃ - ರಾಕ್ಷಸಿಯರಿಂದ ಹೇಳಿಸಿದ ಮಾತನ್ನು, (ಇನ್ನು ಎರಡು ತಿಂಗಳೊಳಗೆ

---

—ಇಪ್ಪತ್ತೆಂಟನೆಯ ಸರ್ಗವು—

ಇದುವರೆಗೆ ರಕ್ಕಸರೊಡೆಯನಾದ ರಾವಣನೂ, ಅವನಿಂದ ಪ್ರೇರಿತರಾದ ರಕ್ಕಸಿಯರೂ ಬಗೆಬಗೆಯಾಗಿ ಹೇಳಿದ ಕಠಿನತರವಾದ ಅಹಿತವಚನಗಳನ್ನು ಕೇಳಿ ಕೇಳಿ ಸಂಕಟ

---

ಟಿಪ್ಪಣಿ. "ಲಕ್ಷ್ಮಣೇನ ಸಹ ಭ್ರಾತ್ರಾ ವಿಮಾನೇ ಪುಷ್ಪಕೇ ಸ್ಥಿತಃ । ಸಮಂತಾತ್ ತ್ರಿಭುವನಂ ಭೀಮಂ ಸರ್ವತಸ್ಸಚರಾಚರಂ ॥ ೧ ॥ ಸರ್ವಂ ಗ್ರಸ್ತಂ ಮಯಾದೃಷ್ಟಂ ರಾವೇಣಾಽತ್ರಿಶ್ಚ ಕರ್ಮಣಾ । ಕ್ಷೀರೋದಧಿ ಜಲೇ ಮಧ್ಯೇ ಶ್ವೇತಶ್ಶೈಲ ಸ್ಸಮುತ್ಥಿತಃ ॥ ೨ ॥ ತಸ್ಯ ಮೂರ್ಧ್ನಿ ತತಶ್ಶ್ವೇತ ಶ್ಚತುರ್ದಂತೋ ಮಹಾಗಜಃ । ತಸ್ಯ ಪೃಷ್ಠೇ ಸ್ಥಿತಶ್ಶ್ರೀಮಾನ್ ರಾಮೋ ರಾಜೀವಲೋಚನಃ ॥ ೩ ॥ ಆಸೀನಃ ಪ್ರಾಙ್ಮುಖಃ ಶ್ರೀಮಾನ್ ಆಸನೇ ಪರಮೇ ಶುಭೇ । ಅಭಿಷಿಕ್ತ ಸ್ತು ಕಾಕುತ್ಸ್ಥಃ ಸರ್ವದೇವೈರ್ಮಹರ್ಷಿಭಿಃ ॥ ೪ ॥ ಸಬ್ರಹ್ಮರ್ಷಿ ಗಣೈಸ್ಸರ್ವೈಸ್ಸರ್ವತೀರ್ಥ ಜಲೇನ ಚ । ಶುಕ್ಲ ಮಾಲ್ಯಾಂಬರಧರಾ ಶುಕ್ಲ ಗಂಧಾನುಲೇಪನಾ॥ ಸೀತಾ ತತ್ರ ಪೃಥುಶ್ರೋಣೀ ರರಾಜ ಜನಕಾತ್ಮಜಾ ।ತತೋ ದೇವಾಸ್ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ॥ ೬ ॥ ಬ್ರಹ್ಮಾಣಂ ಪುರತಃ ಕೃತ್ವಾ ರಾಮಂ ತತ್ರಾಭ್ಯವಂದಿರೇ । ಪುನರನ್ಯ ನ್ಮಯಾದೃಷ್ಟೋ ರಾಮೋ ರಮಯುತಾಂಬರಃ ॥ ೭ ॥ ವಿಷ್ಣುರೇವ ಸ್ವಯಂಭೂತ್ವಾ ತಸ್ಮಿನ್ನಾಸ್ತೇ ವರಾಸನೇ । ಪರಂ ಬ್ರಹ್ಮ ಪರಂ ಸತ್ಯಂ ಪರಂ ಜ್ಞಾನಂ ಪರಂತಪಃ ॥ ೮ ॥ ಪರಂ ಬೀಜಂ ಪರಂ ಕ್ಷೇತ್ರಂ ಪರಂ ಕಾರಣ ಕಾರಣಂ । ಶಂಖ ಚಕ್ರ ಧರಶ್ಶ್ರೀಮಾನ್ ಪುಂಡರೀಕಾಯತೇ ಕ್ಷಣಃ ॥ ೯ ॥ ಶ್ರೀವತ್ಸಾಂಕ ಸ್ಸನಿತ್ಯ ಶ್ರೀರಜಯ್ಯಶ್ಶಾಶ್ವತೋ ಧ್ರುವಃ ।.ಏವಂ ಭೂತೋ ಮಹಾತೇಜಾ ರಾಮಃ ಕಮಲಲೋಚನಃ ॥ ೧೦ ॥ ಸರ್ವಲೋಕೇಶ್ವರ ಶ್ಶ್ರೀಮಾನ್ ರರಾಜ ರಘುನಂದನಃ । ತತೋ ಮಹೇಂದ್ರ ಪ್ರಮುಖಾ ಪಿತರೋ ಮುನಿಸತ್ತಮಾ ಗಂಧರ್ವ ವಿದ್ಯಾಧರ ಪನ್ನಗೇಶ್ವರಾಃ । ಕೃತಾಭಿಷೇಕಂ ಪರಿವಾರ್ಯ ರಾಮಂ ಪ್ರಕುಷ್ಟಚಿತ್ತಾಃ ಪ್ರಣಮಂತಿ ಹೃಷ್ಟಾಃ ॥ ೧೨ ॥ ನೃತ್ಯಂತಿಗಾಯಂತಿ ಸಮೇತ್ಯ ತತ್ರ ವಾದ್ಯಂ ಪ್ರಕುರ್ವಂತಿ ಸುರೇಂದ್ರ ನಾರ್ಯಃ । ವಂಶಾಶ್ಚ ವೀಣಾ ಮುರಜಾಶ್ಚ ಭೇರ್ಯೋ ನದಂತಿ ಶಂಖಾಃ ಪ್ರಣವಾಶ್ಚ ಸರ್ವೇ।ತತೋಽನ್ಯತ್ರ ಮಯಾದೃಷ್ಟೋ ರಾಮಸ್ಸತ್ಯ ಪರಾಕ್ರಮಃ ॥"

ಇವೇ ಹಿಂದಿನ ಸರ್ಗದಲ್ಲಿ ಹೇಳಿರುವ ಪ್ರಕ್ಷಿಪ್ತ ಶ್ಲೋಕಗಳು. ಒಂದು ಸಾರಿ ವಿಷ್ಣುವೇ ತಾನೆಂತಲೂ,ಮತ್ತೊಂದು ವೇಳೆ ವಿಷ್ಣು ಸದೃಶ ಪರಾಕ್ರಮನೆಂತಲೂ ಹೇಳಿರುವುದು ಮೊದಲೂದುದೇವಿರೋಧ.

ಸೀತಾ ವಿತತ್ರಾಸ ಯಥಾ ವನಾಂತೇ ಸಿಂಹಾಭಿಪನ್ನಾ ಗಜರಾಜಕನ್ಯಾ||೧||
ಸಾ ರಾಕ್ಷಸೀಮಧ್ಯಗತಾಚ ಭೀರು ರ್ವಾಗ್ಭಿ ರ್ಭೃಶಂ ರಾವಣತರ್ಜಿತಾಚ |
ಕಾಂತಾರಮಧ್ಯೇ ವಿಜನೇ ವಿಸೃಷ್ಟಾ ಬಾಲೇವ ಕನ್ಯಾ ವಿಲಲಾಪ ಸೀತಾ ||೨||
ಸತ್ಯಂ ಬತೇದಂ ಪ್ರವದಂತಿ ಲೋಕೇ ನಾಕಾಲಮೃತ್ಯು ರ್ಭವತೀತಿ ಸಂತಃ|
ಯತ್ರಾಹ ಮೇವಂ ಪರಿಭರ್ತ್ಸ್ಯಮಾನಾ ಜೀವಾಮಿ ಕಿಂಚಿತ್ ಕ್ಷಣ ಮಪ್ಯ ಪುಣ್ಯಾ ||೩||

---

ನನ್ನ ವಶವಾಗಬೇಕೆಂದು ಹೇಳಿದ ಮಾತನ್ನು) ನಿಶಮ್ಯ-ಕೇಳಿ, ಅಪ್ರಿಯ- ತನಗುಂಟಾಗಬಹುದಾದ ಕೇಡಿನಿಂದ, ಆರ್ತಾ-ದೀನಳಾದಕಾರಣವೇ, ವನಾಂತೆ - ವನಮಧ್ಯದಲ್ಲಿ, ಸಿಂಹ-ಸಿಂಹದಿಂದ, ಅಭಿಪನ್ನಾ-ಆಕ್ರಮಿಸಿ ಹಿಡಿಯಲ್ಪಟ್ಟ, ಗಜರಾಜ - ಮಹಾಗಜದ, ಕನ್ಯಾಯಥಾ - ಹೆಣ್ಣು ಮರಿಯು ಹೇಗೋ ಹಾಗೆ, ವಿತತ್ರಾಸ-ವಿಶೇಷವಾಗಿ ಹೆದರುತಲಿದ್ದಳು ||೧|| ರಾಕ್ಷಸೀಮಧ್ಯಗತಾ - ರಕ್ಕಸಿಯರ ನಡುವೆ ಸಿಕ್ಕಿರುವ, ವಾಗ್ಭಿಃ-ಅವರ ಕಠಿನವಚನಗಳಿಂದ, ಭೃಶಂ - ಹೆಚ್ಚಾಗಿ, ಭೀರುಃ-ಹೆದರಿರುವ, ರಾವಣತರ್ಜಿತಾಚ-ರಾವಣನಿಂದ ಬೆದರಿಸಲ್ಪಟ್ಟುದು ಇರತಕ್ಕ, ಸಾ-ಆ, ಸೀತಾ - ಸೀತಾದೇವಿಯು, ವಿಜನೇ - ಜನರ ಸುಳಿವಿಲ್ಲದ ಕಾಂತಾರಮಧ್ಯೇ-ಅಡವಿಯ ನಡುವೆ, ವಿಸೃಷ್ಟಾ - ತಾಯಿತಂದೆಗಳಿಂದ ತೊರೆಯಲ್ಪಟ್ಟ, ಬಾಲಾ-ಹಸುಳೆಯಾದ, ಕನ್ಯೇವ- ಹುಡುಗಿಯಂತೆ, ವಿಲಲಾಪ - ಅಳತೊಡಗಿದಳು ||೨|| ಯತ್ರ-ಯಾವಕಾರಣದಿಂದ, ಅಪುಣ್ಯಾ - ನಿರ್ಭಾಗ್ಯಳಾದ ಕಾರಣವೇ, ಅಹಂ - ನಾನು, ಏವಂ - ಹೀಗೆ, ಪರಿಭರ್ತ್ಸ್ಯಮಾನಾ - ಬೆದರಿಸಲ್ಪಡುತ್ತಲೇ ಇರುವವಳಾಗಿ, ಕ್ಷಣಮಪಿ - ಸ್ವಲ್ಪಕಾಲವಾದರೂ, ಕಿಂಚಿತ್ - ಬಹುಹೀನವಾಗಿ, ಜೀವಾಮಿ - ಬದುಕುತಲಿರುವೆನೋ, ತತ - ಆ ಕಾರಣದಿಂದಲೇ, ಸಂತಃ - ಸತ್ಪುರುಷರು, ಲೋಕೇ - ಪ್ರಪಂಚದಲ್ಲಿ, ಅಕಾಲಮೃತ್ಯುಃ - ಅಸಮಯದಲ್ಲಿ ಸಾವು, ನಭವತಿ - ಉಂಟಾಗುವುದಿಲ್ಲ, ಇತಿ - ಹೀಗೆಂದು, ಪ್ರವದಂತಿ - ಹೇಳುತ್ತಾರೆ. ಇದಂ - ಹೀಗೆ ಹೇಳೋಣವು, ಸತ್ಯಂ-ನಿಜವಾದುದು, ಬತ-ಅಕಟಾ ! || ೩ || ಯತ್ - ಯಾವ ಕಾರಣದಿಂದ, ಇದಂ - ಈ, ಮೇ - ನನ್ನ, ಹೃದಯಂತು - ಮನ

---

ಪಟ್ಟು, ಬಹು ದೀನಳಾದ ಜಾನಕಿಯು ಮಹಾರಣ್ಯದೊಳಗೆ ಸುತ್ತಲೂ ಮುತ್ತಿಕೊಂಡ ಸಿಂಹಗಳ ನಡುವೆ ಸಿಕ್ಕು ಬಿದ್ದ ಹೆಣ್ಣಾನೆಯ ಮರಿಯಂತೆ ಹೇಳಲಾರದಷ್ಟು ಭಯಕ್ಕೆ ಒಳಗಾಗಿದ್ದಳು ||೧|| ಆದರೂ ಕ್ರೂರಸ್ವಭಾವದ ರಕ್ಕಸಿಯರು ಲೇಶವಾದರೂ ಕರುಣೆಯಿಲ್ಲದೆ ಸೀತೆಯನ್ನು ನಡುವೆ ಸಿಕ್ಕಿಸಿಕೊಂಡು ಬಿರುನುಡಿಗಳಿಂದ ಗದರಿಸಿ ಬೆದರಿಸುತ್ತಿರಲು, ಜನಗಳ ಸುಳಿವೇ ಇಲ್ಲದ ಕಗ್ಗಾಡಿನ ನಡುವೆ ತಾಯಿತಂದೆಗಳು ತೊರೆದ ಹೆಣ್ಣುಮಗಳು ಗೋಳಾಡುವಂತೆ ಸೀತೆಯು ಹೋ ! ಎಂದು ಪ್ರಲಾಪಿಸ ತೊಡಗಿ ||೨|| ಅಯ್ಯೋ, ಲೋಕದಲ್ಲಿ ಯಾವ ಪ್ರಾಣಿಯೇ ಆಗಲಿ ದೈವವಶದಿಂದ ಗೊತ್ತಾಗಿರುವ ಆಯುಸ್ಸಿನ ಪರಿಮಿತಿಯನ್ನು ಪೂರ್ಣವಾಗಿ ಅನುಭವಿಸಿಯೇ ಮುಗಿಸಬೇಕಲ್ಲದೆ,ಅಕಾಲದಲ್ಲಿ ಎಷ್ಟೇ ತೊಂದರೆಗೊಳಗಾದರೂ ಮೃತಿಯನ್ನು ಹೊಂದುವುದಿಲ್ಲ ಎಂದು ಸತ್ಪುರುಷರು ಹೇಳುವ ಮಾತು ದಿಟವಲ್ಲದೆ ಸಟೆಯಾಗುವುದಿಲ್ಲ. ಈ ವಿಷಯದಲ್ಲಿ- ಇಷ್ಟು ವಿಧವಾಗಿ ಇಲ್ಲಿ ಈ ನೀಚೆಯರಿಂದ ಹೀಗೆ ಹಿಂಸಿಸಲ್ಪಡುತಲಿದ್ದರೂ, ಮನಃಪೂರ್ವಕವಾಗಿ ಸಾವನ್ನು ಬಯಸುತಲಿದ್ದರೂ ಸಾಯದೆ ಜೀವಸಹಿತಳಾಗಿರುವ ನಾನೇ ಸಾಕ್ಷಿಯಾಗಿದೇನೆ.ನನಗಿಂತಲೂ ಭಾಗ್ಯಹೀನಳು ಪ್ರಪಂಚದಲ್ಲಿಯೇ ಇಲ್ಲ||೩|| ಸುಖದ ಲೇಶವೂ ಇಲ್ಲದೆ, ದುಃಖದಿಂದ ಪರಿಪೂರ್ಣವೂ ಆಗಿರುವ

ಸುಖಾದ್ವಿಹೀನಂ ಬಹುದುಃಖಪೂರ್ಣ ಮಿದಂ ತು ನೂನಂ ಹೃದಯಂ ಸ್ಥಿರಂ ಮೇ।
ವಿಶೀರ್ಯತೇ ಯನ್ನ ಸಹಸ್ರಧಾಽದ್ಯ ವಜ್ರಾಹತಂ ಶೃಂಗ ಮಿವಾಚಲಸ್ಯ ॥೪॥
ನೈವಾಸ್ತಿ ದೋಷಂ ಮಮ ನೂನ ಮತ್ರ ವಧ್ಯಾಹ ಮಸ್ಯಾಪ್ರಿಯ ದರ್ಶನಸ್ಯ।
ಭಾವಂ ನ ಚಾಸ್ಯಾಹ ಮನುಪ್ರದಾತು ಮಲಂ ದ್ವಿಜೋ ಮಂತ್ರ ಮಿವಾದ್ವಿಜಾಯ ॥೫॥
ನೂನಂ ಮಮಾಂಗಾನ್ಯಚಿರಾ ದನಾರ್ಯಃ ಶಸ್ತ್ರೈಃ ಶಿತೈಶ್ಛೇತ್ಸ್ಯತಿ ರಾಕ್ಷಸೇಂದ್ರಃ।

---

ಸ್ಸಾದರೆ, ಅಚಲಸ್ಯ - ಬೆಟ್ಟದ, ಶೃಂಗಮಿವ - ಕೋಡಿನಂತೆ, ಅದ್ಯ - ಈಗ, ಸಹಸ್ರಧಾ - ಸಾವಿರಪಾಲಾಗಿ, ನವಿಶೀರ್ಯತೇ - ಸಿಡಿದುಹೋಗದಿರುವುದೋ, ತತ್ - ಆ ಕಾರಣದಿಂದಲೇ, ಬಹುದುಃಖಪೂರ್ಣಂ- ಅಪರಿಮಿತ ದುಃಖದಿಂದ ತುಂಬಿದುದಾಗಿ, ಸುಖಾತ್ - ಸುಖದದೆಸೆಯಿಂದ, ವಿಹೀನಂ - ಶೂನ್ಯವಾದುದೂ ಆಗಿ, ಸ್ಥಿರಂ - ಚಲಿಸದೆ ನೆಲಗೊಂಡಿದೆ ॥೪॥ (ಈ ಸಂದರ್ಭದಲ್ಲಿ ಆತ್ಮವಧೆಯು ದೋಷಕರವಲ್ಲವೆಂದು ಸೂಚಿಸಲ್ಪಡುತಲಿದೆ) ಅತ್ರ - ಈ ಸಂದರ್ಭದಲ್ಲಿ (ಈ ಆತ್ಮವಧೆಯಲ್ಲಿ) ದೋಷಃ - ತಪ್ಪು, ನೈವಾಸ್ತಿ - ಇಲ್ಲವೇ ಇಲ್ಲ, ಯತ್ - ಯಾವಕಾರಣ, ಅಹಂ - ನಾನು, ಅಪ್ರಿಯದರ್ಶನಸ್ಯ - ಅನಿಷ್ಟವಾದ ನೋಟವುಳ್ಳ, ಅಸ್ಯ- ಈ ರಾವಣನಿಂದ, ನೂನಂ- ನಿಶ್ಚಯವಾಗಿ, ವಧ್ಯಾ- ಸಂಹರಿಸಲ್ಪಡತಕ್ಕವಳಾಗಿರುವೆನೋ, ಕಿಂಚ- ಮತ್ತು, ಅಹಂ- ನಾನು, ಅಸ್ಯ- ಈ ರಾವಣನಿಗೆ, ಭಾವಂ - ಅಭಿಪ್ರಾಯವನ್ನು, (ನನ್ನ ಮನಸ್ಸನ್ನು) ದ್ವಿಜಃ- ಬ್ರಾಹ್ಮಣನು, ಅದ್ವಿಜಾಯ- ಅಬ್ರಾಹ್ಮಣನಿಗೆ, ಮಂತ್ರಮಿವ- ವೇದಮಂತ್ರವನ್ನು ಹೇಗೋಹಾಗೆ, ಪ್ರದಾತುಂ- ಕೊಡಲಿಕ್ಕೆ, ನಾಲಂ - ಸಮರ್ಥಳಾಗಲಾರೆನೋ ॥೫॥ ಲೋಕನಾಥೇ- ಲೋಕದೊಡೆಯನಾದ, ತಸ್ಮಿನ್ - ಆ ಶ್ರೀರಾಮಚಂದ್ರನು, ಅನಾಗಚ್ಛತಿ - (ಸತಿ) ಎರಡುತಿಂಗಳೊಳಗೆ ಇಲ್ಲಿಗೆ

---

ನನ್ನ ಈ ಹೃದಯವು ಬರಸಿಡಿಲಿನ ಹೊಡೆತದಿಂದ ಬೆಟ್ಟದ ಕೋಡಿನಂತೆ ಚೆದಿರ ಚೆದಿರವಾಗಿ ಸಿಡಿದುಹೋಗದೆ ಇರುವುದನ್ನು ನೋಡಿದರೆ, ನಾನು ಮಹತ್ತರವಾದ ಪಾಪವನ್ನು ಮಾಡಿದವಳೇ ಆಗಿರಬೇಕೆಂದು ಸಿದ್ಧವಾಗುವುದು ॥೪॥ ಆದರೆ-ಈಗ ಈ ನನಗೆ ಪಾಪಾತ್ಮನಾದ ರಾವಣನಿಂದ ಮರಣವಾದರೂ ದುರ್ಮರಣವೆನಿಸುವುದು, ಅಥವಾ ನನ್ನಿಂದ ನಾನೇ ಮೃತಿಯನ್ನು ಕಲ್ಪಿಸಿಕೊಂಡರೂ ದುರ್ಮರಣವೇ ಆಗುವುದು. ಆದರೂ ಈ ನೀಚೆಯರಿಂದ ಸಾಯುವುದಕ್ಕಿಂತಲೂ ನನ್ನಷ್ಟಕ್ಕೆ ನಾನೇ ಸತ್ತರೆ ಈ ಸಂಕಟಸಮಯದಲ್ಲಿ ಆತ್ಮಹತ್ಯೆಯ ದೋಷಕ್ಕೆ ನಾನು ಪಾತ್ರಳಾಗುವುದಿಲ್ಲ, ಯದ್ಯಪಿ "ಸರ್ವತಃ ಆತ್ಮಾನಂ ಗೋಪಾಯ" ಎಂಬ ವೇದವಚನದಿಂದ ಸರ್ವಪ್ರಕಾರದಿಂದಲೂ ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕೆಂದು ಸಿದ್ಧವಾಗುವುದು, ಹಾಗೆ ನಾನು ಆತ್ಮನನ್ನು ಉಳಿಸಿಕೊಳ್ಳಬೇಕಾದರೆ ರಾವಣನ ಇಷ್ಟವನ್ನು ಅನುಸರಿಸಬೇಕಾಗುವುದು, ಹಾಗೆ ಅವನ ಚಿತ್ತವೃತ್ತಿಯನ್ನು ಅನುಸರಿಸಿ, ವ್ಯಭಿಚಾರಿಣಿಯೆನಿಸಿ, ಅಪಕೀರ್ತಿಗೊಳಗಾಗಿ, ಪತಿಯ ಕುಲದವರನ್ನೂ, ಪಿತನ ಸಂತತಿಯವರನ್ನೂ ನರಕಕ್ಕೆ ಈಡುಮಾಡಿ, ಬಾಳುವುದಕ್ಕಿಂತಲೂ ಈ ಹಾಳುದೇಹವನ್ನು ಈಗಲೇ ತೊರೆಯುವುದು ಸರ್ವಾತ್ಮನಾ ಶ್ರೇಯಸ್ಕರವಾಗಿರುವುದು. ಇದರಿಂದ ನನಗೆ ಎಂದಿಗೂ ದೋಷವು ಬರುವುದಿಲ್ಲ. ಯೋಗ್ಯನಾದ ಬ್ರಾಹ್ಮಣನು ಶ್ರೇಷ್ಠತರವಾದ ವೇದಮಂತ್ರವನ್ನು ಅಬ್ರಾಹ್ಮಣನಿಗೆ ಹೇಗೆ ಕೊಡಲಾರನೋ, ಹಾಗೆಯೇ ನಾನೂ ನನ್ನ ಮನವನ್ನು ಈ ರಾವಣನಿಗೆ ಎಂದಿಗೂ ಕೊಡಲಾರೆನು ॥೫॥ ಲೋಕನಾಥನೂ ನನ್ನ ಪ್ರಾಣನಾಥನೂ ಆಗಿರುವ

ತಸ್ಮಿನ್ನ ನಾಗಚ್ಛತಿ ಲೋಕನಾಥೇ ಗರ್ಭಸ್ಥಜಂತೋರಿವ ಶಲ್ಯಕೃಂತಃ ||೬||
ದುಃಖಂ ಬತೇದಂ ಮಮ ದುಃಖಿತಾಯಾ ಮಾಸೌ ಚಿರಾಯಾಧಿಗಮಿಷ್ಯತೋ ದ್ವೌ |
ಬದ್ಧಸ್ಯ ವಧ್ಯಸ್ಯ ತಥಾ ನಿಶಾಂತೇ ರಾಜಾಪರಾಧಾದಿವ ತಸ್ಕರಸ್ಯ ||೭||
ಹಾ ರಾಮ ಹಾ ಲಕ್ಷ್ಮಣ ಹಾ ಸುಮಿತ್ರೇ ಹಾ ರಾಮಮಾತಃ ಸಹ ಮೇ ಜನನ್ಯಾ |
ಏಷಾ ವಿಪದ್ಯಾಮ್ಯಹಮಲ್ಪಭಾಗ್ಯಾ ಮಹಾರ್ಣವೇ ನೌರಿವ ಮೂಢವಾತಾ ||೮||

ಬರದಿದ್ದಲ್ಲಿ, ಗರ್ಭಸ್ಥಜಂತೋಃ-ಗರ್ಭದೊಳಗೆ ಇರುವ ಪ್ರಾಣಿಯ, ಅಂಗಾನಿ-ಅವಯವ-ಗಳನ್ನು, ಶಲ್ಯಕೃಂತ ಇವ- ಬಾಣದ ಅಲಗಿನ ವೇಧೆಯು ಹೇಗೋಹಾಗೆ, ಮಮ-ನನ್ನ, ಅಂಗಾನಿ - ಅವಯವಗಳನ್ನೂ, ಅನಾರ್ಯಃ-ನೀಚನಾದ, ರಾಕ್ಷಸೇಂದ್ರಃ-ರಾವಣನು, ಶಿತೈಃ-ತೀಕ್ಷ್ಣವಾದ, ಶಸ್ತ್ರೈಃ-ಬಾಣಗಳಿಂದ, ಅಚಿರಾತ್-ಬೇಗನೆ, ಛೇತ್ಸ್ಯತಿ-ಛೇದಿಸುವನು ||೬|| ಚಿರಾಯ - ಬಹುಕಾಲದಿಂದ, ದುಃಖಿತಾಯಾಃ-ವ್ಯಸನವನ್ನು ಹೊಂದಿರುವ, ಮಮ-ನನಗೆ, ದ್ವೌ-ಎರಡಾದ, ಮಾಸೌ-(ಕೊಲ್ಲಲಿಕ್ಕೆ ಅವಧಿಯಾಗಿ ಉಳಿದಿರುವ) ತಿಂಗಳುಗಳು, ಅಧಿಗಮಿಷ್ಯತಃ-ದಾಟಿಹೋಗುವವುಗಳಾಗಿವೆ, ಇತೀದಂ- ಹೀಗೆಂಬುದು, ರಾಜಾಪರಾಧಾತ್-ರಾಜದ್ರೋಹವೆಂಬ ತಪ್ಪಿತದ ನೆಸೆಯಿಂದ, ಬದ್ಧಸ್ಯ- ಸೆರೆಹಿಡಿಯಲ್ಪಟ್ಟ, ತಥಾ-ಹಾಗೆಯೇ, ನಿಶಾಂತೇ-ಪ್ರಾತಃಕಾಲದಲ್ಲಿ, ವಧ್ಯಸ್ಯ - ಕೊಲ್ಲಲ್ಪಡತಕ್ಕವನಾಗಿಯೂ ಇರುವ, ತಸ್ಕರಸ್ಯೇವ- ಕಳ್ಳನಿಗೆ ಹೇಗೋ ಹಾಗೆ, (ಮಮ-ನನಗೂ) ದುಃಖಂ-ವ್ಯಸನವು, (ಸಂಪ್ರಾಪ್ತಂ - ಸಂಭವಿಸಿತಲ್ಲ) ಬತ-ಅಯ್ಯೋ ||೭|| (ತನ್ನವರನ್ನು ನೆನೆದು ಹಂಬಲಿಸುತ್ತಾಳೆ). ಹಾ ರಾಮ - ಅಯ್ಯೋ ಎಲೈ ರಾಮಚಂದ್ರ,! ಹಾಲಕ್ಷ್ಮಣ-ಅಯ್ಯೋ ಲಕ್ಷ್ಮಣಾ ! ಹಾ ಸುಮಿತ್ರೇ- ತಾಯಿಗಿಂತಲೂ ಪ್ರೀತಿಪಾತ್ರಳಾದ ಎಲೌ ಸುಮಿತ್ರೆಯೇ, ಮೇ-ನನ್ನ, ಜನನ್ಯಾಸಹ-ತಾಯಿಯಿಂದೊಡಗೂಡಿ, ಹೇ ರಾಮಮಾತಃ-ಶ್ರೀರಾಮಜನನಿ ಎನಿಸಿ ನನಗೆ ಅತ್ತೆಯಾಗಿರುವ ಕೌಸಲ್ಯೆಯೇ ! ಏಷಾ [illegible]ನ್ಯಳಾದ, ಅಹಂ-ಈ ಹೀನಳಾದ ನಾನು, ಮಹಾರ್ಣವೇ-ದೊಡ್ಡ ಕಡಲಿನಲ್ಲಿ, ಮೂಢವಾತಾ-ಸುಂಟರಗಾಳಿಗೆ ಸಿಕ್ಕಿದ, ನೌರಿವ - ನಾವೆಯಹಾಗೆ, ವಿಪದ್ಯಾಮಿ (ವಿಪದ್ಯೆ) ಆಪತ್ತನ್ನ ಹೊಂದುತಲಿದ್ದೇನೆ ||೮|| ಮೃಗಸ್ಯ - ಜಿಂಕೆಯ, ರೂಪಂ - ಆಕಾರವನ್ನು, ಧಾರಯತಾ-

ಶ್ರೀರಾಮನು ಇನ್ನು ಎರಡು ತಿಂಗಳೊಳಗೆ ಇಲ್ಲಿಗೆ ಬಾರದೆಹೋದರೆ ಗರ್ಭದಲ್ಲಿರುವ ಪ್ರಾಣಿಗೆ ಬಾಣದ ಅಲಗು ಬಡಿದರೆ ಹೇಗೋಹಾಗೆ, ಈ ನೀಚನಾದ ರಾಕ್ಷಸರಾಜನು ನನ್ನ ಅವಯವಗಳನ್ನು ತೀಕ್ಷ್ಣವಾದ ಶಸ್ತ್ರಗಳಿಂದ ತುಂಡುತುಂಡಾಗಿ ಕತ್ತರಿಸದೆ ಬಿಡುವುದೇ ಇಲ್ಲ ||೬|| ಅಯ್ಯೋ ! ಹಾ ದೈವವೇ! ಮರಣದಂಡನೆಗೆ ತಕ್ಕ ತಪ್ಪನ್ನು ಮಾಡಿದ ಕಳ್ಳನನ್ನು ರಾಜಭಟರು ಹಿಡಿದು ತರಲು, ಅರಸು "ನಾಳೆಯ ಸೂರ್ಯೋದಯದಲ್ಲ ಈ ಚೋರನಿಗೆ ನೇಣುಹಾಕುವುದು" ಎಂದು ಅಪ್ಪಣೆಮಾಡಿದ ಬಳಿಕ ವಧ್ಯನಾದ ಆ ಚೋರನಿಗೆ ಸೂರ್ಯೋದಯ ಸಮಯವು ಸಮೀಪಿಸುತ ಬರುವುದು ಹೇಗೋಹಾಗೆ, ಅಪಾರವಾದ ದುಃಖದಲ್ಲಿ ಮುಳುಗುತಲಿರುವ ನನಗೆ ಎರಡು ತಿಂಗಳ ಕಾಲವು ಕಾಳರಾತ್ರಿಯಂತೆ ಬಹು ಬೇಗಬೇಗನೆ ಹತ್ತಿರಕ್ಕೆ ಬರುತಲಿದೆ ||೭|| ಹಾ ! ನನ್ನ ಪ್ರಾಣನಾಥನಾದ ರಾಮಚಂದ್ರಾ ! ಅಯ್ಯೋ ಧರ್ಮಪರಾಯಣನಾದ ಓ ಲಕ್ಷ್ಮಣಾ ! ಹಡೆದ ತಾಯಿಗಿಂತ ಹೆಚ್ಚಾದ ಪ್ರೀತಿಯನ್ನಿಟ್ಟಿದ್ದ ಹಾ ಸುಮಿತ್ರೆಯೇ! ಜನನಿಗಿಮ್ಮಡಿಯಾಗಿ ಸಾಕುತಲಿದ್ದ ಅತ್ತೆಯಾದ ಓ ಕೌಸಲ್ಯೆಯೇ! ನಿಮ್ಮೆಲ್ಲರನ್ನೂ ಬಿಟ್ಟು, ಸಾಯುವ ಸಮಯದಲ್ಲಿ ನಿಮ್ಮ ಮುಖಗಳನ್ನು ನೋಡಲಿಕ್ಕೂ

ತರಸ್ವಿನೌ ಧಾರಯತಾ ಮೃಗಸ್ಯ ಸತ್ತ್ವೇನ ರೂಪಂ ಮನುಜೇಂದ್ರಪುತ್ರೌ।
ನೂನಂ ವಿಶಸ್ತೌ ಮಮ ಕಾರಣಾತ್ತೌ ಸಿಂಹರ್ಷಭೌ ದ್ವಾವಿವ ವೈದ್ಯುತೇನ ॥೯॥
ನೂನಂ ಸ ಕಾಲೋ ಮೃಗರೂಪಧಾರೀ ಮಾಮಲ್ಪಭಾಗ್ಯಾಂ ಲುಲುಭೆ ತದಾನೀಂ।
ಯತ್ರಾರ್ಯಪುತ್ರಂ ವಿಸಸರ್ಜ ಮೂಢಾ ರಾಮಾನುಜಂ ಲಕ್ಷ್ಮಣಪೂರ್ವಜಂ ಚ॥೧೦॥

ಧರಿಸುತಲಿದ್ದ, ಸತ್ತ್ವೇನ-ನೀಚವಾರೀಚನೆಂಬ ಜಂತುವಿನಿಂದ, ತರಸ್ವಿನೌ-ಮಹಾಬಲವುಳ್ಳ, ತೌ-ಆ, ಮನುಜೇಂದ್ರಪುತ್ರೌ-ರಾಜಕುಮಾರರಾದ ರಾಮಲಕ್ಷ್ಮಣರು, ವೈದ್ಯುತೇನ-ಸಿಡಿಲಿನಿಂದ, ದ್ವೌ-ಎರಡಾದ, ಸಿಂಹರ್ಷಭಾವಿವ-ಉತ್ತಮಸಿಂಹಗಳಂತೆ, ಅಥವಾ ವೃಷಭಶ್ರೇಷ್ಠಗಳಂತೆ, ಮಮ-ನನ್ನ, ಕಾರಣಾತ್-ನಿಮಿತ್ತದದೆಸೆಯಿಂದ, ನೂನಂ-ನಿಜವಾಗಿಯೂ, ವಿಶಸ್ತೌ-ಕೊಲ್ಲಲ್ಪಟ್ಟಿರಬೇಕು ॥೯॥ ಯತ್ರ - ಯಾವಕಾಲದಲ್ಲಿ, ಮೂಢಾ-ತಿಳುವಳಿಕೆಯಿಲ್ಲದ, (ವಿವೇಕಶೂನ್ಯಳಾದ ನಾನು) ಆರ್ಯಪುತ್ರಂ-ದಶರಥಚಕ್ರವರ್ತಿ ಪುತ್ರನಾಗಿ, ಲಕ್ಷ್ಮಣಪೂರ್ವಜಂಚ - ಲಕ್ಷ್ಮಣಾಗ್ರಜನೆನಿಸಿದ ರಾಮನನ್ನೂ, ರಾಮಾನುಜಂ - ಸೌಭಾಗ್ಯಶಾಲಿಯಾದ ಲಕ್ಷ್ಮಣನನ್ನೂ, ವಿಸಸರ್ಜ - ಬಿಟ್ಟುಬಿಟ್ಟೆನೋ, ಸಃ - ಆ, ಕಾಲಃ - ಮೃತ್ಯುವೇ ನೂನಂ-ನಿಜವಾಗಿ, ತದಾನೀಂ-ಆಗ, ಮೃಗರೂಪಧಾರೀ - ಜಿಂಕೆಯ ರೂಪವನ್ನು ತಾಳಿದವನಾಗಿ, ಅಲ್ಪಭಾಗ್ಯಾಂ - ಮಂದಭಾಗ್ಯಳಾದ, ಮಾಂ - ನನ್ನನ್ನು, ಲುಲುಭೆ - ಆಶೆಪಡಿಸಿದನು ॥ ೧೦ ॥

ದಾರಿಯಿಲ್ಲದೆ, ನಿರ್ಭಾಗ್ಯಳಾದ ಈ ನಾನು ದೊಡ್ಡಕಡಲಿನೊಳಗೆ ಬಿರುಗಾಳಿಯ ಪೆಟ್ಟನಿಂದ ತಲೆಕೆಳಗಾಗಿ ಮುಳುಗುವ ನಾವೆಯಂತೆ ಮೃತ್ಯುವಿಗೀಡಾಗುತಲಿರುವೆನಲ್ಲಾ? ಅಯ್ಯೋ ನೀನೇ ಎಂಬುವವರು ದಿಕ್ಕಿಲ್ಲವೇ, ಯಾರನ್ನಗಲಿಸಿದ್ದೆನೋ, ಯಾರಿಗೆ ಕೇಡನ್ನು ಕೋರಿದೆನೋ, ಮತ್ತಾರಿಗೆ ದ್ರೋಹಚಿಂತೆಯನ್ನೆಣಿಸಿದೆನೋ, ಅದರಿಂದಲೇ ಈ ನನಗೆ ಇಂತಹ ವಿಪತ್ತು ಬಂದೊದಗಿತು. ॥೮॥ ಅಯ್ಯೋ ! ಈ ಆಪದವನ್ನು ನಾನಾಗಿಯೇ ನನಗೆ ಅಣಿಮಾಡಿಕೊಂಡೆನು. ಅದರಿಂದ ನಾನು ಮಾಡಿದುದನ್ನು ನಾನೇ ಅನುಭವಿಸದೆ ಮತ್ತಾರು ಅನುಭವಿಸುವರು ? ಮಾಯಾಮಯವಾಗಿ ಬಂದ ಬಂಗಾರದ ಜಿಂಕೆಯನ್ನು ನೋಡಿ ಮನಸೋತು, ಪ್ರಿಯನೇ ! ಚೆನ್ನದ ಹುಲ್ಲೆಯಕರುವನ್ನು ತಂದುಕೊಡು, ಎಂದು ಪುನಃ ಪುನಃ ಮುಂದಾಲೋಚನೆಯಿಲ್ಲದೆ ಪೀಡಿಸಿದುದರಿಂದಲ್ಲವೇ ಆರ್ಯಪುತ್ರನು ಅದನ್ನು ಬೆಂಬತ್ತಿನಡೆದನು. ಆ ಹಿಂದೆ ನನ್ನಿಂದ ಪೀಡಿತನಾಗಿಯೇ ಅಲ್ಲವೇ ಲಕ್ಷ್ಮಣನೂ ಅವನನ್ನು ಹಿಂಬಾಲಿಸಿದುದು ಹೀಗೆ ಮಹಾಶೂರರಾದ ಅವರಿಬ್ಬರೂ ಪ್ರಮಾದವಶದಿಂದ ಮೃಗದ ಮೂಲಕ ಸ್ವಲ್ಪ ಎಚ್ಚರ ತಪ್ಪಿ, ಸಿಡಿಲಿನ ಪೆಟ್ಟಿಗೆ ಈಡಾದ ಮೇಲಾಗಿರುವ ಎರಡು ಗೂಳಿಗಳ ಹಾಗೆ ನನ್ನ ನಿಮಿತ್ತದಿಂದ ಹೇರಳವಾದ ತೊಂದರೆ ಗೀಡಾಗಬೇಕಾಗಿ ಬಂದಿತು॥ ಅಹಹ ! ನೆನೆದರೆ ಎದೆಯೊಳಗೆ ಧುಗಿಲ್ ಎಂದು ದುಃಖವು ಉಕ್ಕಳಿಸಿ ಬರುತಲಿದೆ, ನಾನು ಮೃಗವನ್ನು ಬಯಸಿದ ಕಾಲವು ಸಾಧಾರಣವಾದ ಕಾಲವಲ್ಲ. ನಿರ್ಭಾಗ್ಯಳಾದ ನನ್ನಭಾಗದ (ಕಾಲನೇ) ಮೃತ್ಯುವೇ ಮೃಗದ ರೂಪವನ್ನು ತಾಳಿ ಕಾಲರೂಪದಿಂದ ನನ್ನನ್ನು ವಂಚಿಸಿದನು. ಹಾಗಿಲ್ಲದಿದ್ದರೆ ಪ್ರಾಣನಾಥನಾದ ದಾಶರಥಿಯನ್ನೂ, ಸುಗುಣನಿಧಾನನಾದ ಮೈದುನನನ್ನೂ ಅಗಲಿ, ಈ ರಕ್ಕಸಿಯರ ಚಿತ್ರಹಿಂಸೆಗೆ ಒಳಗಾಗಿ ದಿಕ್ಕುತೋರದೆ ಮೂಢಳಾಗಿ ನರಳುತಲಿದ್ದೆನೇ? ಎಂದಿಗೂ ಇಲ್ಲ ॥೧೦॥ ಸತ್ಯಸಂಧನೂ, ಆಜಾನುಬಾಹುವೂ, ಪೂರ್ಣಿಮಾ

ಹಾ ರಾಮ ಸತ್ಯವ್ರತ ದೀರ್ಘಬಾಹೋ ಹಾ ಪೂರ್ಣಚಂದ್ರಪ್ರತಿಮಾನ ವಕ್ತ್ರ ।
ಹಾ ಜೀವಲೋಕಸ್ಯ ಹಿತಃ ಪ್ರಿಯಶ್ಚ ವಧ್ಯಾಂ ನ ಮಾಂ ವೇತ್ಸಿಹಿ ರಾಕ್ಷಸಾನಾಂ ॥೧೧॥
ಅನನ್ಯ ದೈವತ್ವ ಮಿಯಂ ಕ್ಷಮಾ ಚ ಭೂಮೌ ಚ ಶಯ್ಯಾ ನಿಯಮಶ್ಚ ಧರ್ಮೇ ।

ಹಾರಾಮ - ಎಲೈ ರಾಮಚಂದ್ರನೇ ! ಸತ್ಯವ್ರತ-ಸತ್ಯಸಂಧನೇ ! ದೀರ್ಘಬಾಹೋ - ಅಜಾನುಬಾಹುವೇ ! ಪೂರ್ಣಚಂದ್ರಪ್ರತಿಮಾನವಕ್ತ್ರ-ಹುಣ್ಣಿಮೆಯ ಚಂದ್ರನಿಗೆಣೆಯಾದ ಮುಖವುಳ್ಳವನೇ ! ಹಾ-ಬಹು ಕಷ್ಟ ವನ್ನನುಭವಿಸುತಲಿರುವೆನು, ಜೀವಲೋಕಸ್ಯ - ಪ್ರಾಣಿವರ್ಗಕ್ಕೆ, ಹಿತಃ - ಮೇಲನ್ನು ಕೋರುತಲಿರುವ, ಪ್ರಿಯಶ್ಚ - ಇಷ್ಟನೂ ಆಗಿರತಕ್ಕ ನೀನು, ಮಾಂ - ನನ್ನನ್ನು, ರಾಕ್ಷಸಾನಾಂ - ರಕ್ಕಸರಿಂದ, ವಧ್ಯಾಂ- ಕೊಲ್ಲಲ್ಪಡತಕ್ಕವಳನ್ನಾಗಿ, ನವೇತ್ಸಿ - ತಿಳಿಯೆಯಾ ? ॥ ೧೧ ॥ (ಹಾ - ಅಯ್ಯೋ) ಅನನ್ಯ ದೈವ ತ್ವಂ-ಪತಿಯೊಬ್ಬನನ್ನು ಬಿಟ್ಟು ಬೇರೆ ದೈವವಿಲ್ಲವೆಂಬ ಭಾವನೆಯೂ, ಇಯಂ-ಈ, ಕ್ಷಮಾಚ-ತಾಳ್ಮೆಯೂ, ಭೂಮೌ - ನೆಲದಲ್ಲಿ, ಶಯ್ಯಾಚ - ಮಲಗೋಣವೂ, ಧರ್ಮೇ - ನ್ಯಾಯದಲ್ಲಿ ನಿಯಮಶ್ಚ - ನೇಮ ವೂ, (ಧರ್ಮವನ್ನತಿಕ್ರಮಿಸದಿರೋಣವು) ಪತಿವ್ರತಾತ್ವಂ - ಭರ್ತನಲ್ಲಿಯೇ ಭಕ್ತಿಯನ್ನಿಟ್ಟರೋಣವು, ಮೇ - ನನ್ನ ವಿಷಯದಲ್ಲಿ, ಇತಿ ಇದಂ-ಈ ಮೊದಲಾದುದೆಲ್ಲವೂ, ಕೃತಘ್ನೇಚ - ಮಾಡಿದುಪಕಾರವ ನ್ನು ಮರೆಯುವ ದ್ರೋಹಿಯ ವಿಷಯದಲ್ಲಿ, ಕೃತಂ - ಮಾಡಲ್ಪಟ್ಟ, ಮಾನುಷಾಣಾಂ - ಸಜ್ಜನರ

ಪೂರ್ಣಚಂದ್ರಮುಖನೂ ಆಗಿರುವ ಓರಾಮಚಂದ್ರಾ ! ಸರ್ವಲೋಕಹಿತನೂ, ಸರ್ವ ಭೂತದಯಾಪರನೂ ಆಗಿರುವ ನಿನಗೆ, ನಾನು ಈ ಮಾಂಸಾಶನರ ಸೆರೆಗೆ ಸಿಲುಕಿ, ಹಿಂಸೆಪಟ್ಟು, ನರಳಿ, ಬಾಡಿ, ಬಸವಳಿದು, ಸಾಯುತ್ತಿರುವ ಸುದ್ದಿಯು ಕಿವಿಗೆ ಬೀ ಳಲಿಲ್ಲವೇ, ಅಯ್ಯೋ ಹಾ ! ಹಾ ! ಎಂತಹ ಹೊತ್ತು ಬಂದಿತು ? ॥೧೧॥ ಛೇ ! ಛೇ ! ಬೇರೆಯಾವ ದೈವವನ್ನೂ ಭಜಿಸಬಾರದು, ಪತಿಯೇ ಸಮಸ್ತ ದೇವತಾಸ್ವರೂಪನು, ಎಂದು ಮನೋವಾಕ್ಕಾಯಗಳಿಂದಲೂ ಭಾವಿಸಿದ್ದೆನಲ್ಲ ; ಮುಂದೆ ಹೇಗಾದರೂ ರಾಮ ನೊಡನೆ ಮಧುರಾಲಾಪ ಶ್ರವಣಸುಖವು ಸಂಭವಿಸುವುದೆಂದು ನೆನೆದು, ರಾವಣನೂ, ರಕ್ಕಸಿಯರೂ ನುಡಿದ ಬಿರುನುಡಿಗಳನ್ನೆಲ್ಲ ಇದುವರೆಗೂ ತಾಳಿದೆನಲ್ಲ, ಆ ಶ್ರೀರಾಮ ಚಂದ್ರನ ಕೋಮಲವಾದ ತೊಡೆಯ ಮೇಲೆ ಪುನಃ ಕೂಡುವೆನು ಎಂಬ ಭರವಸೆಯಿಂದ ಇಂದಿನವರೆಗೂ ನೆಲದಮೇಲೆಯೇ ಪವಳಿಸುತಿದ್ದೆನಲ್ಲ, ಅಯ್ಯೋ! ಸುಖದ ಆಶೆಯೇ ಪ್ರಾ ಣಿಗಳ ಕಷ್ಟಸಹನಕ್ಕೆ ಕಾರಣವಲ್ಲವೆ ? ನನ್ನ ಪಾತಿವ್ರತ್ಯದ ಮಹಿಮೆಯಿಂದ ರಾವಣನ ನ್ನು ನಿಮಿಷಮಾತ್ರದಲ್ಲಿ ಬೂದಿಯನ್ನು ಮಾಡುವ ಶಕ್ತಿಯು ನನಗೆ ಇದ್ದರೂ ನನ್ನ ವಲ್ಲ ಭನೇ ಈ ರಾವಣನನ್ನು ಸಮೂಲವಾಗಿ ನಾಶನಡಿಸಿ, ನನ್ನನ್ನು ಸಂರಕ್ಷಿಸುವುದು ಯು ಕ್ತವೆಂದು ಭಾವಿಸಿ, ಧರ್ಮವನ್ನು ಅತಿಕ್ರಮಿಸಬಾರದೆಂಬ ಕಟ್ಟಿಗೊಳಗಾಗಿ, ನೇಮದಿಂದ ಇದ್ದೆನ್ನಲ್ಲ, ಪತಿಸೇವಾರೂಪವಾದ ವ್ರತಕ್ಕಿಂತಲೂ ಮಿಗಿಲಾದ ಬೇರೆ ವ್ರತವೇ ಇಲ್ಲವೆಂ ದು ನಂಬಿದ್ದೆನಲ್ಲ, ಇಂತಹ ಕ್ರೂರವಾದ ನನ್ನ ನಿಯಮಾಚರಣೆಗಳೆಲ್ಲವೂ, ಮಾಡಿದು ಪಕಾರವನ್ನು ನೆನೆಯದ ನೀಚರಿಗೆ ಸತ್ಪುರುಷರು ಮಾಡಿದ ಉಪಕಾರದಂತೆ ವ್ಯರ್ಥವಾ ಗುವ ಕಾಲವು ಬಂದೊದಗಿತಲ್ಲಾ, ಅಯ್ಯೋ, ನಾನಿನ್ನೆಂತಹ ಘೋರಪಾಪವನ್ನು ಮಾ ಡ್ದೆನೋ ಅರಿಯೆನು ॥ ೧೨ ॥ ಹಾ ರಾಮಚಂದ್ರಾ ! ಅನ್ನಾಹಾರಗಳಿಲ್ಲದೆ ಕೃಶಿಸಿ

ಪತಿವ್ರತಾತ್ವಂ ವಿಫಲಂ ಮಮೇದಂ ಕೃತಂ ಕೃತಘ್ನೇಷ್ವಿವ ಮಾನುಷಾಣಾಂ॥೧೨॥
ಮೋಘೋ ಹಿ ಧರ್ಮಶ್ಚರಿತೋ ಮಯಾಽಯಂ ತಥೈಕಪತ್ನೀತ್ವಮಿದಂ ನಿರರ್ಥಂ ।
ಯಾ ತ್ವಾಂ ನ ಪಶ್ಯಾಮಿ ಕೃಶಾ ವಿವರ್ಣಾ ಹೀನಾ ತ್ವಯಾ ಸಂಗಮನೇ ನಿರಾಶಾ॥೧೩॥
ಪಿತುರ್ನಿದೇಶಂ ನಿಯಮೇನ ಕೃತ್ವಾ ವನಾನ್ನಿವೃತ್ತಶ್ಚರಿತವ್ರತಶ್ಚ ।

---

ಕರ್ಮೇವ - ಉಪಕಾರಕರ್ಮವು ಹೇಗೋ ಹಾಗೆ, ವಿಫಲಂ- ವ್ಯರ್ಥವಾಗುತಿದೆಯಲ್ಲಾ ? ॥೧೨॥

(ಹೇರಾಮ - ಓ ರಾಮಚಂದ್ರನೇ,) ಕೃಶಾ - ಬಡತನವನ್ನು ಹೊಂದಿರುವ, (ಸಣ್ಣಗಾಗಿರುವ) ವಿವರ್ಣಾ - ಕಾಂತಿಹೀನಳೂ ಆಗಿರತಕ್ಕ, ಯಾ - ಯಾವ ನಾನು, ತ್ವಯಾ - ನಿನ್ನಿಂದ, ಹೀನಾ- ಶೂನ್ಯಳಾಗಿ, ಸಂಗಮನೇ - ಪುನಃ ನಿನ್ನನ್ನು ಬಡಗೂಡುವೆನೆಂಬ ವಿಷಯದಲ್ಲಿ, ನಿರಾಶಾ - ಆಶೆಯಿಲ್ಲದವಳಾಗಿದೇನೆಯೋ, ತ್ವಾಂ - ನಿನ್ನನ್ನು, ನಪಶ್ಯಾಮಿ - ನೋಡದಿರುವೆನೋ, (ತಯಾ - ಅಂತಹ) ಮಯಾ- ನನ್ನಿಂದ, ಚರಿತಃ - ಆಚರಿಸಲ್ಪಟ್ಟ, ಧರ್ಮಃ - ಬಗೆಬಗೆಯಾದ ಧರ್ಮವೂ, ವ್ಯರ್ಥೋಹಿ - ಪ್ರಯೋಜನವಿಲ್ಲದಂತಾಯ್ತಲ್ಲವೇ ? ತಥಾ - ಹಾಗೆಯೇ, ಇದಂ - ಈ, ಏಕಪತ್ನೀತ್ವಂ - ಒಬ್ಬನೇ ಪತಿಯೆಂದು ನಂಬಿರೋಣವೂ, ನಿರರ್ಥಕಂ - ಪ್ರಯೋಜನವಿಲ್ಲದುದೇ?, (ಎಂದಿಗೂ ಹಾಗಾಗತಕ್ಕದ್ದಲ್ಲ) ॥೧೩॥ (ಹೇರಾಮ - ಎಲೈ ರಾಘವನೇ) ತ್ವಂ - ನೀನು, ಪಿತುಃ - ತಂದೆಯ, ನಿದೇಶಂ - ಅಪ್ಪಣೆಯನ್ನು, ನಿಯಮೇನ - ಅಡ್ಡಿಯಿಲ್ಲದೆ, ಕೃತ್ವಾ - ಮಾಡಿ, (ನೆರವೇರಿಸಿ) ವನಾತ್ - ಅರಣ್ಯದ ದೆಸೆಯಿಂದ, ನಿವೃತ್ತಃ - ಹಿಂದಿರುಗಿದವನಾಗಿ, ವೀತಭಯಃ - ಅರಣ್ಯದ ಸಂಚಾರದ ಭಯದಿಂದ ಶೂನ್ಯನೆನಿಸಿ, ಕೃತಾರ್ಥಃ - ಮಾಡಬೇಕಾದ ಕೆಲಸವನ್ನು ಮಾಡಿ ಮುಗಿಸಿದವನಾದ ಕಾರಣವೇ, (ನಿಶ್ಚಿಂತಸ್ಸರ್ವ-ಸರ್ವ ಚಿಂತೆಗಳನ್ನು ತೊರೆದವನಾಗಿ)

---

ಹೋಗಿದೇನೆ,ಶಕ್ತಿಯೋ ತಗ್ಗಿಹೋಗಿದೆ,ಕಳೆಗುಂದಿದೇನೆ, ಇಂತಹ ದುರವಸ್ಥೆಯಲ್ಲಿದ್ದರೂ ಧರ್ಮವನ್ನು ಒಂದು ರೇಖಾಮಾತ್ರವೂಕೂಡ ಅತಿಕ್ರಮಿಸದೆ, ಸರ್ವದಾ ನಿನ್ನನ್ನೇ ಭಜಿಸಿ ಧ್ಯಾನಿಸುತಲಿರುವುದಕ್ಕೂ, ಇನ್ನು ಸ್ವಲ್ಪ ಕಾಲದೊಳಗಾದರೂ ನಿನ್ನೊಡಗೂಡಿ ಸುಖವನ್ನು ಅನುಭವಿಸಬೆನು ಎಂಬ ಪ್ರತ್ಯಾಶೆಯೇ ಅಲ್ಲವೇ, ಪ್ರಾಣಧಾರಣೆಗೂ ಕಾರಣವಾಗಿದ್ದೀತು ? ಇನ್ನು ಮೇಲೆ ನಿರ್ಭಾಗ್ಯಳಾದ ನನಗೆ ಅಂತಹ ಸುಖವು ಒದಗುವುದೆಂಬ ಆಶಾಲೇಶವು ಅಡಗಿತು. ಅದನ್ನು ಬಿಟ್ಟೆನು, ಅದರಿಂದಲೇ ಸತಿಯು ಒಬ್ಬಪತಿಯನ್ನೇ ಪಡೆದವಳಾಗಿರಬೇಕು ಎಂಬ ನಿಯಮಕ್ಕೊಳಗಾದ ನನ್ನ ಧರ್ಮಾಚರಣೆಯು ವ್ಯರ್ಥವಾಯಿತಲ್ಲವೆ? ಅಹಹ ! ಧರ್ಮವೂ, ಧರ್ಮವನ್ನು ಬೋಧಿಸುವ ಶಾಸ್ತ್ರವೂ, ಶಾಸ್ತ್ರಜ್ಞರ ನುಡಿಗಳೂ ವಿಫಲಗಳೆಂದೇ ಭಾವಿಸುತ್ತೇನೆ ॥ ೧೩ ॥ ನನ್ನ ಬಾಳುಹೀಗಾದರೂ ನೀನು ಮಹಾರಾಜ, ನಿನಗೇನು ಕಡಮೆ ? ಸರ್ವಗುಣಾಭಿರಾಮನಾದ ಓ ರಾಮಾ ! ನೀನು ನಿಮ್ಮತಂದೆ ಗೊತ್ತುಮಾಡಿದ್ದ ಹದಿನಾಲ್ಕು ಸಂವತ್ಸರಗಳ ಕಾಲವನ್ನು ವನವಾಸದಲ್ಲಿ ಕಳೆದು, ನೇಮವನ್ನು ನೆರವೇರಿಸಿ, ವ್ರತಸಮಾಪ್ತಿಯಿಂದ ನಿಶ್ಚಿಂತನಾಗಿ, ಕೃತಕೃತ್ಯನೆನಿಸಿ, ಸಾಮ್ರಾಜ್ಯವನ್ನು ಸೇರಿದ ಬಳಿಕ, ಆ ಮಹಾಸೌಭಾಗ್ಯದಲ್ಲಿರುವ ನಿನಗೆ ನನ್ನನ್ನು ಹುಡುಕಬೇಕೆಂಬ ನೆನಪುಬರಲು ನಿಮಿತ್ತವೇನು ? ಓ ರಾಮಭದ್ರಾ ! ದೊರೆತನಕ್ಕೆ ಬಡತನವೆ ? ಸಾರ್ವಭೌಮನಾದ ನಿನಗೆ ವಿಶಾಲನಯನೆಯರಾದ ಸುಂದರಿಯರು ದೊರೆಯಲು ಕಡಿಮೆಯೆ ? ಅವರೊಡನೆ ಹಾಯಾಗಿ ನಿನ್ನ ಮನವಾರ ವಿಹರಿಸುತ್ತಿರುವಿ, ನೀನು ಮಹಾ ಭಾಗ್ಯಶಾಲಿಯು, ನಿನ್ನ

ಸ್ತ್ರೀಭಿ ಸ್ತ್ವಂ ಮನ್ಯೇ ವಿಪುಲೇಕ್ಷಣಾಭಿ ಸ್ತ್ವಂ ರಂಸ್ಯಸೇ ವೀತಭಯಃ ಕೃತಾರ್ಥಃ ||೧೪||
ಅಹಂತು ರಾಮ ತ್ವಯಿ ಜಾತಕಾಮಾ ಚಿರಂ ವಿನಾಶಾಯ ನಿಬದ್ಧ ಭಾವಾ|
ಮೋಘಂ ಚರಿತ್ವಾಥ ತಪೋವ್ರತಂ ಚ ತ್ಯಕ್ಷ್ಯಾಮಿ ಧಿಗ್ಜೀವಿತ ಮಲ್ಪಭಾಗ್ಯಾ||೧೫||
ಸಾ ಜೀವಿತಂ ಕ್ಷಿಪ್ರ ಮಹಂ ತ್ಯಜೇಯಂ ವಿಷೇಣ ಶಸ್ತ್ರೇಣ ಶಿತೇನ ವಾಪಿ |
ವಿಷಸ್ಯ ದಾತಾ ನ ಹಿ ಮೇ ಸ್ತಿ ಕಶ್ಚಿ ಚ್ಛಸ್ತ್ರಸ್ಯ ವಾ ವೇಶ್ಮನಿ ರಾಕ್ಷಸಸ್ಯ ||೧೬||
ಇತೀವ ದೇವೀ ಬಹುಧಾ ವಿಲಪ್ಯ ಸರ್ವಾತ್ಮನಾ ರಾಮ ಮನು ಸ್ಮರಂತೀ |

ವಿಪುಲೇಕ್ಷಣಾಭಿಃ (ನನ್ನನ್ನು ಬಿಟ್ಟರೂ)-ವಿಶಾಲನಯನೆಯರಾದ ಇತರ ಹೆಂಗಸರೊಡನೆ, (ಭಾರ್ಯೆಯರೊಡನೆ) ರಂಸ್ಯಸೆ - ವಿಹರಿಸುವಿ, (ಇತಿ - ಹೀಗೆಂದು) ಮನ್ಯೆ - ಭಾವಿಸುತ್ತೇನೆ ||೧೪|| ಹೇರಾಮ - ಓ! ದಾಶರಥಿಯೇ! ಅಲ್ಪಭಾಗ್ಯಾ - ಅದೃಷ್ಟಹೀನಳಾದ, ಅಹಂತು - ನಾನಾದರೋ, ತ್ವಯಾ - ನಿನ್ನಲ್ಲಿಯೇ, ಚಿರಂ-ಬಹುಕಾಲದಿಂದಲೂ, ಜಾತಕಾಮಾ - ನೆಲಗೊಂಡಿರುವ ಪ್ರೇಮವುಳ್ಳವಳಾಗಿ, ಅಥ - ಆಮೇಲೆ ಮೋಘಂ-ಫಲವಿಲ್ಲದ, ತಪೋವ್ರತಂಚ - ಆಹಾರವಿಲ್ಲದ ನಿನ್ನ ನಾಮಸ್ಮರಣವೇ ಮೊದಲಾದ ನೋಂಪಿಯನ್ನು, ಚರಿತ್ವಾ - ಆಚರಿಸಿ, ಏನ ಶಾಯ - ನನ್ನ ನಾಶಕ್ಕೋಸ್ಕರ, ನಿಬದ್ಧಭಾವಾ - ಕಟ್ಟಿಗೊಳಗಾದ ಅಭಿಪ್ರಾಯವುಳ್ಳವಳಾಗುತ್ತಾ, ಧಿಕ್ - ನಿಂದಾರ್ಹವಾದ, ಜೀವಿತಂ - ಈ ನನ್ನ ಪ್ರಾಣವನ್ನು, ತ್ಯಕ್ಷ್ಯಾಮಿ-ತೊರೆದುಬಿಡುವೆನು ||೧೫|| ಅಹಂ - ನಾನು, ವಿಷೇಣ - ಗರಳದಿಂದಲಾಗಲೀ, ಶಿತೇನ - ತೀಕ್ಷ್ಣವಾದ, ಶಸ್ತ್ರೇಣವಾಪಿ - ಆಯುಧದಿಂದಲಾಗಲೀ, ಜೀವಿತಂ - ಪ್ರಾಣವನ್ನು, ಕ್ಷಿಪ್ರಂ - ಬೇಗನೆ, ತ್ಯಜೇಯಂ - ಬಿಡತಕ್ಕವಳಾಗಿದ್ದೇನೆ, ರಾಕ್ಷಸಸ್ಯ - ಈ ರಾವಣನ, ವೇಶ್ಮನಿ-ಮನೆಯಾದ ಈಸ್ಥಳದಲ್ಲಿ, ಮೇ-ನನಗೆ, ವಿಷಸ್ಯ - ವಿಷವನ್ನಾಗಲಿ, ಶಸ್ತ್ರಸ್ಯವಾ - ಆಯುಧವನ್ನಾಗಲೀ, ದಾತಾ - ಕೊಡತಕ್ಕವನು, ಕಶ್ಚಿತ್ - ಒಬ್ಬನಾದರೂ, ನಾಸ್ತಿ - ಇಲ್ಲವಲ್ಲಾ ||೧೬|| ಪ್ರವೇಪಮಾನಾ - ರಕ್ಕಸಿಯರ ಘರ್ಜನ, ಭರ್ಜನ (ಹೆದರಿಸುವಿಕೆ, ಬೆದರಿಸುವಿಕೆ) ಗಳಿಂದ ಕಂಪಿಸುತಲಿರುವ, ಪರಿಶುಷ್ಕವಕ್ತ್ರಾ-ಬಾಡಿದ ಮುಖವುಳ್ಳವಳೂ ಆದ,ದೇವೀ

ಕೋರಿಕೆಗಳೆಲ್ಲವೂ ನಿನ್ನ ಪ್ರಯತ್ನ ವಿಲ್ಲದೆಯೇ ಕೈಗೂಡುವುವು ಎಂದುಭಾವಿಸುತ್ತೇನೆ. || ೧೪ || ರಘುಕುಲಲಲಾಮನಾದ ಓ ರಾಮಾ! ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ನಿನ್ನನ್ನೇ ನೆನೆಯುತಲಿದ್ದರೂ ನಾನು ನಿರ್ಭಾಗ್ಯಳಾದುದರಿಂದ ನನ್ನ ಕೋರಿಕೆಗಳಲ್ಲೊಂದೂ ಕೈಗೂಡತಕ್ಕುದಲ್ಲ. ಈ ಕಾರಣದಿಂದಲೇ ನಾನು ನಿಯಮದಿಂದಲೂ, ಅನ್ನಾಹಾರಗಳಿಲ್ಲದೆ ಕಾಯಶೋಷಣೆಯಿಂದಲೂ ಆಚರಿಸಿದ ತಪಸ್ಸು, ದೇವತಾರಾಧನ, ದಾನ, ಧರ್ಮ, ಮೊದಲಾದವುಗಳೆಲ್ಲವೂ ವ್ಯರ್ಥಗಳಾಗಿ ನನ್ನ ವಿನಾಶಕ್ಕಾಗಿಯೇ ಪರಿಣಮಿಸಿದುವು, ಛೀ! ನನ್ನ ಬಾಳನ್ನು ಎಷ್ಟು ಹೀಯಾಳಿಸಿದರೂ ಸಾಲದು. ಇನ್ನು ನನ್ನ ಬದುಕು ಸಾಕು. ಈ ಪ್ರಾಣಗಳನ್ನು ತೊರೆಯುವೆನು ||೧೫|| ಇಂತಹ ಕೀಳಾದ ಹೆಂಗಸು ಈ ನೆಲದಲ್ಲಿ ಉಳಿದಿದ್ದು ಫಲವೇನು?ವಿಷಪ್ರಾಶನದಿಂದಲಾಗಲೀ,ಶಸ್ತ್ರಚ್ಛೇದದಿಂದಾಗಲೀ ಜೀವಿತವನ್ನು ಬೇಗನೆ ತೊರೆಯಲು ಸಿದ್ಧಳಾಗಿದ್ದೇನೆ. ಏನಮಾಡಲಿ, ಈ ರಾಕ್ಷಸಮಂಡಲದಲ್ಲಿ ಅಂತಹ ವಿಷವನ್ನಾಗಲೀ,ಆಯುಧವನ್ನಾಗಲೀ ದಯೆಮಾಡಿಕೊಡತಕ್ಕ ಪುಣ್ಯಾತ್ಮನೊಬ್ಬನೂ ಇಲ್ಲವಲ್ಲಾ? ಅಯ್ಯೋ ! ||೧೬|| ಬೇಗನೆ ಮೃತ್ಯುವಿನ ಬಾಯಿಗೆ ತುತ್ತಾಗಲು ಮತ್ತಾವ ಉಪಾಯವನ್ನು ಹುಡುಕಲಿ ? ಎಂದೀಪ್ರಕಾರ ಸೀತೆಯು ನಾನಾವಿಧವಾಗಿ ಪ್ರಲಾಪಿಸುತ್ತಾ ಅಂತಹ

ಪ್ರವೇಪಮಾನಾ ಪರಿಶುಷ್ಕವಕ್ತ್ರಾ ನಗೋತ್ತಮಂ ಪುಷ್ಪಿತಮಾಸಸಾದ ||೧೭||
ಶೋಕಾಭಿತಪ್ತಾ ಬಹುಧಾ ವಿಚಿಂತ್ಯ ಸೀತಾಽಥ ವೇಣ್ಯುದ್ಗ್ರಥನಂ ಗೃಹೀತ್ವಾ |
ಉದ್ಬಧ್ಯ ವೇಣ್ಯುದ್ಗ್ರಥನೇನ ಶೀಘ್ರಂ ಅಹಂ ಗಮಿಷ್ಯಾಮಿ ಯಮಸ್ಯ ಮೂಲಂ ||೧೮||
ಉಪಸ್ಥಿತಾ ಸಾ ಮೃದುಸರ್ವಗಾತ್ರೀ ಶಾಖಾಂ ಗೃಹೀತ್ವಾಽಥನಗಸ್ಯ ತಸ್ಯ ||೧೮||-||
ತಸ್ಯಾಸ್ತು ರಾಮಂ ಪ್ರವಿಚಿಂತಯಂತ್ಯಾ ರಾಮಾನುಜಂ ಸ್ವಂಚಕುಲಂ ಶುಭಾಂಗ್ಯಾಃ||

---

ಸೀತಾದೇವಿಯು, ಇತೀವ - ಈ ಹಿಂದೆ ಹೇಳಿದ ಕ್ರಮವಾಗಿಯೇ, ಬಹುಧಾ ಅನೇಕವಿಧವಾಗಿ, ವಿಲಪ್ಯ - ಪ್ರಲಾಪಿಸಿ, ಸರ್ವಾತ್ಮನಾ - ಸರ್ವಭಾವದಿಂದಲೂ, ರಾಮಂ - ಶ್ರೀ ರಾಮನನ್ನೇ, ಅನುಸ್ಮರಂತೀ - ನೆನೆಯುತ್ತಾ, ಪುಷ್ಪಿತಂ - ಚೆನ್ನಾಗಿ ಪುಷ್ಪಿಸಿರುವ, ನಗೋತ್ತಮಂ - ಉತ್ತಮವಾದ ಶಿಂಶುಪಾ ವೃಕ್ಷವನ್ನು ಕುರಿತು, ಆಸಸಾದ - ಕೇವಲ ಸಮೀಪಕ್ಕೆ ಬಂದಳು ||೧೭|| ಅಥ - ಅನಂತರದಲ್ಲಿ, ಶೋಕಾಭಿತಪ್ತಾ - ದುಃಖಭಾರದಿಂದ ಕುದಿಯುತಲಿರುವ, ಮೃದು ಸರ್ವ ಗಾತ್ರೀ - ಕೋಮಲವಾದ ಸಕಲಾವಯವಗಳನ್ನೊಳಗೊಂಡಿರುವ, ಸಾ ಸೀತಾ - ಆ ಸೀತಾ ದೇವಿಯು, ಬಹುಧಾ- ಅನೇಕ ಪ್ರಕಾರವಾಗಿ, ವಿಚಿಂತ್ಯ - ಚಿಂತಿಸಿ, ವೇಣ್ಯುದ್ಗ್ರಥನಂ - ಜಡೆಯ ಗಂಟನ್ನು, ಗೃಹೀತ್ವಾ - ಕೈಲಿ ಹಿಡಿದು, ವೇಣ್ಯುದ್ಗ್ರಥನೇನ-ಜಡೆಯ ಎರಡು ಕಾಲುಗಳಿಂದ ಕೊರಳಿಗೆ ಕತ್ತರಿಯ ಸುತ್ತನ್ನು ಹಾಕುವುದರ ಮೂಲಕ (ಕತ್ತಿಗೆ ಮಲುಕುಹಾಕುವ ವಿಧದಿಂದ) ಉದ್ಬಧ್ಯ - ನೇಣುಹಾಕಿಕೊಂಡು, ಶೀಘ್ರಂ-ಬೇಗನೆ, ಯಮಸ್ಯ - ಮೃತ್ಯುವಿನ, ಮೂಲಂ ಮನೆಯನ್ನು ಕುರಿತು, ಗಮಿಷ್ಯಾಮಿ ಹೋಗುವೆನು (ಇತಿ-ಹೀಗೆಂದುಕೊಂಡು) ಅಥ- ಆಮೇಲೆ, ತಸ್ಯ - ಆ, ನಗಸ್ಯ - ಶಿಂಶುಪಾವೃಕ್ಷದ, ಶಾಖಾಂ - ಕೊಂಬೆಯನ್ನು, ಗೃಹೀತ್ವಾ - ಹಿಡಿದುಕೊಂಡು, ಉಪಸ್ಥಿತಾ - ಅಣಿಯಾಗುತ್ತಿದ್ದಳು ||೧೮-೧೮||-|| ರಾಮಂ - ಶ್ರೀ ರಾಮನನ್ನೂ, ರಾಮಾನುಜಂ - ಲಕ್ಷ್ಮಣನನ್ನೂ, ಸ್ವಂ - ತನಗೆ ಸಂಬಂಧಪಟ್ಟ, ಕುಲಂ - ವಂಶದ ಜನವನ್ನೂ, ಪ್ರವಿಚಿಂತಯಂತ್ಯಾಃ - ಅಡಿಗಡಿಗೂ ನೆನೆದು ಹಂಬಲಿಸುತಲಿರುವ, ಶುಭಾಂಗ್ಯಾಃ-ಮಂಗಳಗಾತ್ರಿಯಾದ,ತಸ್ಯಾಃ-ಆ

---

ದುರವಸ್ಥೆಯಲ್ಲಿಯೂ ರಾಮಾ ! ರಾಮಾ ! ಎಂದು ಶ್ರೀ ರಾಮನ ನಾಮವನ್ನು ಮಾತ್ರ ಬಿಡದೆ ಪ್ರಲಾಪಿಸಿ ಭಯದಿಂದ ನಡುಗುತ್ತಾ, ಬಾಗಿದ ಮೋರೆಯುಳ್ಳವಳಾಗಿ, ಚೆನ್ನಾಗಿ ಕುಸುಮಿಸಿರುವ ಅಶೋಕವೃಕ್ಷದ ಕೇವಲ ಸಮೀಪಕ್ಕೆ ಬಂದು ನಿಂತು ||೧೭|| ಬಹುವಿಧವಾದ ಶೋಕಗಳಿಂದ ಮರುಗುತ್ತು,ತಪಿಸಿ ತಪಿಸಿ,ವಿವಿಧವಾದ ಚಿಂತೆಗಳೊಂದಕ್ಕೂ ಪಾರಗಾಣದೆ, ಜಡೆಯನ್ನು ಹಿಡಿದು ಎರಡು ಕಾಲುಗಳನ್ನು ಮಾಡಿ,ತಾರುಮಾರಾಗಿ ಕೊರಳಿಗೆ ಎರಡುಸುತ್ತನ್ನು ಸುತ್ತಿ ಆಯ್ತೋ, ಆಕೋಮಲಾಂಗಿಯಾದ ಸೀತಾದೇವಿಯು ಅಶೋಕತರುವಿನ ಶಾಖೆಯನ್ನು ಹಿಡಿದು, ಅದರಲ್ಲಿ ಆ ಜಡೆಯ ಎರಡು ಕಾಲುಗಳ ತುದಿಯನ್ನೂ ಬಿಗಿದು ಕಟ್ಟಿ, ರಾಮಾ! ರಾಮಾ!! ರಾಮಾ!!! ಇನ್ನು ಯಮನ ಮನೆಗೆತೆರಳುವೆನು ಎಂದುಗೋಳಿಡುತ ನೇಣಿನಿಂದ ಪ್ರಾಣಗಳನ್ನು ತೊರೆಯಲು ಅಣಿಯಾಗುತಿದ್ದಳು ||೧೮-೧೮||-|| ಪ್ರಪಂಚದಲ್ಲಿ ಶಾಸ್ತ್ರವನ್ನು ಓದತಕ್ಕವರು, ಕೇಳತಕ್ಕವರು, ಅದರಲ್ಲಿ ಹೇಳಿದಂತೆ ಆಚರಿಸತಕ್ಕವರೂ ಎಷ್ಟೋಮಂದಿ ಇದಾರೆ. ಆದರೆ ದೈವದ ತತ್ತ್ವವನ್ನು ಮಾತ್ರ ಕಂಡವರಿಲ್ಲ. ಉತ್ತರಕ್ಷಣದಲ್ಲಿ ಏನಾಗುವದೆಂಬುದು ಯಾರಿಗೂ ತಿಳಿಯದು, ಹೇಳಲಾಗದ ದುರವಸ್ಥೆಯಲ್ಲಿರುತ್ತಾ ಮಂಗಳಾಂಗಿಯಾದ ಜಾನಕಿಯು ಶ್ರೀ ರಾಮನನ್ನೂ ಲಕ್ಷ್ಮಣನನ್ನೂ ನೆನೆಯುತ್ತ

ಶೋಕಾನಿಮಿತ್ತಾನಿ ತಥಾ ಬಹೂನಿ ಧೈರ್ಯಾರ್ಜಿತಾನಿ ಪ್ರವರಾಣಿ ಲೋಕೇ ।
ಪ್ರಾದುರ್ನಿಮಿತ್ತಾನಿ ತದಾ ಬಭೂವುಃ ಪುರಾಪಿ ಸಿದ್ಧಾನ್ಯುಪಲಕ್ಷಿತಾನಿ ॥೨೦॥

ಇತಿ ಶ್ರೀಮತ್ಸುಂದರಕಾಂಡೆ-ಅಷ್ಟಾವಿಂಶಸ್ಸರ್ಗಃ

ಶ್ರೀಃ.

ಶ್ರೀ ರಾಮಚನ್ದ್ರ ಪರಬ್ರಹ್ಮಣೇನಮಃ

## ಶ್ರೀಮತ್ಸುಂದರಕಾಣ್ಡೆ ಏಕೋನತ್ರಿಂಶಸ್ಸರ್ಗಃ

ತಥಾಗತಾಂ ತಾಂ ವ್ಯಥಿತಾ ಮನಿಂದಿತಾಂ ವ್ಯಪೇತಹರ್ಷಾಂ ಪರಿದೀನ ಮಾನಸಾಂ ।

---

ಸೀತಾದೇವಿಗೆ, ಶೋಕಾನಿಮಿತ್ತಾನಿ - ದುಃಖಕ್ಕೆ ಕಾರಣಗಳಾಗದಿರುವ, (ಶುಭಸೂಚಕಗಳಾದ) ತಥಾ-ಹಾಗೆಯೇ, ಬಹೂನಿ - ಅನೇಕಗಳಾದ, ಧೈರ್ಯಾರ್ಜಿತಾನಿ - ಧೈರ್ಯವನ್ನು ಸಂಪಾದಿಸಿಕೊಡತಕ್ಕ, ಲೋಕೇ - ಲೋಕದಲ್ಲಿ, ಪ್ರವರಾಣಿ - ಶ್ರೇಷ್ಠಗಳೂ ಆಗಿರುವ, ಪುರಾಪಿ - ಇದಕ್ಕಿಂತ ಮೊದಲೂ, ಸಿದ್ಧಾನಿ-(ಆಯಾಯ ಸಮಯಗಳಲ್ಲಿ) ಫಲಗಳನ್ನು ತೋರಿದವುಗಳಾಗಿ, ಉಪಲಕ್ಷಿತಾನಿ - ಸ್ವಾನುಭವಕ್ಕೆ ಬಂದವುಗಳೂ ಆದ, ನಿಮಿತ್ತಾನಿ-ಶುಭಶಕುನಗಳು, ಪ್ರಾದುರ್ಬಭೂವುಃ-ಮೇಲೆಮೇಲೆ ಉಂಟಾದುವು ॥೧೯ ೨೦॥

--- ಇಂತು ಇಪ್ಪತ್ತೆಂಟನೆಯ ಸರ್ಗವು ---

ಶ್ರೀಃ.

--- ಇಪ್ಪತ್ತೊಂಭತ್ತನೆಯ ಸರ್ಗ ---

ಕಂದ॥ ಉಸಿರಂ ತೊರೆಯಲ್ ಸೀತೆಯು । ಮನಸವಸದಿಂ ಸಜ್ಜುಗೊಳಲು ಸುಶಕುನವಾಯ್ತು ॥
ಬಿಸಿಲೆಲರಿಂದಲ್ ತವಿಸಿದ । ಸಸಿ ವರ್ಷದಿ ಹರ್ಷಿಪಂತೆ ಹರಿಸವ ನಡೆದಳ್ ॥

ತಥಾಗತಾಂ - (ಅಂತು ಅಪಾರ ಶೋಕಸಾಗರದಲ್ಲಿ ಮುಳುಗಿರುವಳಾದ ಕಾರಣವೇ) ಆ ಅವಸ್ಥೆಯಲ್ಲಿರುವ, (ಇಲ್ಲಿ ವಾಲ್ಮೀಕಿಮುನಿಗೂ ಕೂಡ ಸೀತೆಯ ದುಃಖದ ಇಯತ್ತೆಯನ್ನು ಹೇಳಲಾಗದೆ, ಕೋರಳು ಕಟ್ಟಿತೆಂದು ತೋರುವುದು) ವ್ಯಥಿತಾ - ಮನೋವ್ಯಥೆಯನ್ನು ಹೊಂದಿರುವ, ಅನಿಂದಿತಾಂ -

---

ಇರುವಾಗ, ದುಃಖಕ್ಕೆ ಕಾರಣಗಳೆನಿಸದೆ, ಧೈರ್ಯವನ್ನು ಸಂಪಾದಿಸಿ ಕೊಡತಕ್ಕವುಗಳಾಗಿ ಪೂರ್ವದಲ್ಲಿಯೂ ಶುಭಪ್ರದಗಳೆಂದು ಅನುಭವಸಿದ್ಧಗಳಾಗಿದ್ದ ಶ್ರೇಷ್ಠತರಗಳೆನಿಸಿರುವ ಅನೇಕ ಶುಭಶಕುನಗಳು ಒಂದರಮೇಲೊಂದರಂತೆ ಉಂಟಾಗುತಬಂದುವು ॥೧೯-೨೦॥

--- ಇಂತು ಇಪ್ಪತ್ತೆಂಟನೆಯ ಸರ್ಗಂ ---

ಇಪ್ಪತ್ತೊಂಬತ್ತನೆಯ ಸರ್ಗ.

ಸರ್ವಜ್ಞನಾದ ವಾಲ್ಮೀಕಿಮುನಿಯು ಪೂರ್ವದಲ್ಲಿ "ರಹಸ್ಯಂ ವಾಪ್ರಕಾಶಂವಾ" ಇತ್ಯಾದಿಯಿಂದ ರಹಸ್ಯವಾಗಿರಲೀ ಪ್ರಕಾಶವಾಗಿರಲಿ ಶ್ರೀ ರಾಮಚರಿತ್ರೆಯನ್ನೆಲ್ಲ ಸವಿಸ್ತರವಾಗಿ ವಿವರಿಸುವೆನು ಎಂದು ಪ್ರತಿಜ್ಞೆ ಮಾಡಿ, ಈಗ "ತಥಾಗತಾಂತಾಂ" ಅಂತಹ ದುಃಖವನ್ನು ಹೊಂದಿದವಳನ್ನು ಎಂಬದಾಗಿ ಹೇಳಿದನಲ್ಲದೆ ದುಃಖಸ್ವರೂಪವು ಇಂಥದೆಂದುವಿವರಿಸಿ ಹೇಳಲಾರದೆಹೋದನು. ಇದರಿಂದ ಷಡ್ರಸೋಪೇತವಾದ ಭಕ್ಷ್ಯಭೋಜ್ಯಾದಿ ಆಹಾರ

ಶುಭಾಂ ನಿಮಿತ್ತಾನಿ ಶುಭಾನಿ ಭೇಜಿರೆ ನರಂ ಶ್ರಿಯಾಜುಷ್ಟ ಮಿವೋಪಜೀವಿನಃ ||೧||
ತಸ್ಯಾಶ್ಶುಭಂ ವಾಮ ಮರಾಳಪಕ್ಷ್ಮ ರಾಜೀವೃತಂ ಶುಕ್ಲ ವಿಶಾಲಕೃಷ್ಣಂ |

ದೋಷಲೇಶವಿಲ್ಲದ,(ರಾಮನನ್ನಗಲಿರುವಾಗ ಹೇಗಿರಬೇಕೋ ಹಾಗೆಯೇ ಇರುವವಳಾದ ಕಾರಣವೇ) ವ್ಯಪೇತಹರ್ಷಾಂ - ಹರ್ಷಶೂನ್ಯಳಾಗಿರತಕ್ಕ, ಪರಿದೀನಮಾನಸಾಂ - ಸಂತೋಷಕಾರಣವಿದ್ದರೂ ಸಂತೋಷವಿಲ್ಲದ ಮನಸ್ಸುಳ್ಳ, ಶುಭಾಂ - ಮಂಗಳ ಸ್ವರೂಪಳಾದ, ತಾಂ - ಆ ಸೀತಾದೇವಿಯನ್ನು, ಶುಭಾನಿ-ಮೇಲನ್ನು ಸೂಚಿಸುವ, ನಿಮಿತ್ತಾನಿ - ಲಕ್ಷಣಗಳು (ಶಕುನಗಳು) ಶ್ರಿಯಾ - ಲಕ್ಷ್ಮಿಯಿಂದ (ಸಂಪತ್ತಿನಿಂದ) ಜುಷ್ಟಂ - ಒಡಗೂಡಿರುವ, ನರಂ - ಮನುಷ್ಯನನ್ನು, ಉಪಜೀವಿನಃಇವ - ಅನುಸರಿಸಿ ಜೀವಿಸಿರುವ ಜನರಂತೆ, ಭೇಜಿರೆ - ಹೊಂದಿದುವು ||೧|| ಅರಾಳ - ಡೊಂಕಾದ, ಪಕ್ಷ್ಮ - ರೆಪ್ಪೆ ಕೂದಲಿನ, ರಾಜೀ - ಸಾಲಿನಿಂದ, ವೃತಂ - ಸುತ್ತಲ್ಪಟ್ಟಿರುವ, ಶುಕ್ಲ - ದೃಷ್ಟಿಯ ತುದಿಯಲ್ಲಿ ಸುತ್ತಲೂ ಬೆಳ್ಳಗಿರುವ, ವಿಶಾಲ - ಅಗಲವಾದ, ಕೃಷ್ಣಂ - ನಟ್ಟನಡುವೆ ಕಪ್ಪಗಿರುವ, ಭಿತಾಮ್ರಂ - ತುಟ್ಟ ತುದಿಯಲ್ಲಿ ಕೆಂಪಗಿರುವ, ಏಕಂ - ಒಂದಾದ, (ಅಸಮಾನವಾದ) ವಾಮಂ - ಎಡಗಡೆಯದಾಗಿರತಕ್ಕ, ಸುಕೇಶ್ಯಾಃ - ಮೇಲಾದ ಕೂದಲುಳ್ಳ ಸೀತಾದೇವಿಯ, ನಯನಂ - ಕಣ್ಣು, ಮೀನಾಹತಂ - ಮೀನಿನ ಬಾಲದಿಂದ

ಗಳನ್ನು ತೊರೆದು, ಗೆಡ್ಡೆ ಗೆಣಸುಗಳನ್ನು ತಿನ್ನುತ್ತಾ, ಬಿಸಿಲು ಚಳಿಗಾಳಿಗಳನ್ನು ಸಹಿಸಿ ಕಾಡಿನಲ್ಲಿ ವಾಸಮಾಡಿಕೊಂಡು, ಸಂಸಾರಿ ಧರ್ಮವಿಲ್ಲದೆ, ದೇಹವನ್ನು ಶೋಷಗೊಳಿಸುತ, ಜಿತೇಂದ್ರಿಯನಾಗಿ, ವೈರಾಗ್ಯ ಸಂಪತ್ತಿಯಿಂದ ವಿಷಯಾಭಿಮಾನವನ್ನು ತೊರೆದು, ಸೀತೆಗೂ ತನಗೂ, ಪುತ್ರೀತ್ವವೇ ಮೊದಲಾದ ಯಾವ ಬಾಂಧವ್ಯವೂ ಇಲ್ಲದೆ ಇದ್ದರೂ, ಇನ್ನೇನು ಈಗಲೋ ಆಗಲೋ ನೇಣುಹಾಕಿಕೊಂಡು ಸಾಯುತ್ತಾಳೆ ಎಂಬ ಸ್ಥಿತಿಗೆ ಬಂದಿರುವ ಆಕೆಯ ದುಃಖಾವಸ್ಥೆಯನ್ನು ನೆನೆದು ಆತನಿಗೆ ಅಪರಿಮಿತ ಶೋಕವು ಉಕ್ಕಿ, ಅದನ್ನು ಸಂಪೂರ್ಣವಾಗಿ ವಿವರಿಸಲು ಬಾಯಿಬರದೆ ಹೋಯಿತು. ಹೀಗಿರುವಲ್ಲಿ, ಆಕೆಯು ಇನ್ನೆಂತಹ ಶೋಕಸಾಗರದಲ್ಲಿ ಮುಳುಗುತಲಿದ್ದಳೋ ಅದು ಹೇಳತೀರದು. ಇದಲ್ಲದೆ-ಸೀತೆಯ ಮನಸ್ಸಿಗೆ ಇನ್ನುಮೇಲೆ ಬರಬಹುದಾದ ದುಃಖಗಳೇ ಪ್ರಬಲವಾದವುಗಳೆಂತಲೂ, ಇದುವರೆಗೆ ಅನುಭವಿಸಿದವುಗಳು ದುಃಖಗಳಾಗಿ ತೋರಲೇ ಇಲ್ಲವೆಂತಲೂ, ಮತ್ತು ಅಯೋಧ್ಯೆಯಲ್ಲಿಯೂ ಶ್ರೀ ರಾಮನಿಂದೊಡಗೂಡಿ ಅನುಭವಿಸಿದ ಮಾನುಷಸುಖಗಳು ಕೂಡ ಸುಖಗಳಾಗಿ ತೋರಲಿಲ್ಲವೆಂತಲೂ, ಇದರಿಂದ ಆಕೆಯನ್ನು ನೋಡುವವರಿಗೆ ಸಾಧಾರಣವಾಗಿ ಈಕೆ ಇದುವರೆಗೆ ಸ್ವಲ್ಪಕಾಲವಾದರೂ ಸುಖವನ್ನು ಅನುಭವಿಸದ ಹಾಗೆಯೇ ತೋರುತಲಿದ್ದಿತು. ಈ ಕಾರಣಗಳಿಂದ ಮನಸ್ಸಂತೋಷವಿಲ್ಲದೆ ಮರಣದಲ್ಲಿಯೇ ಮನಸ್ಸನ್ನಿಟ್ಟದ್ದ ಸೀತಾದೇವಿಗೆ, ಲಕ್ಷ್ಮೀಕಟಾಕ್ಷದಿಂದ ಪರಿಪೂರ್ಣವಾದ ಸಂಪತ್ತುಗಳನ್ನು ಪಡೆದಿರುವ ಮನುಷ್ಯನನ್ನು ಅನುಜೀವಿಜನರು ಹತ್ತಿರಕ್ಕೆ ಹೋಗಿ ಮೇಲೆಮೇಲೆ ಸೇವಿಸುವ ಹಾಗೆ ಮೇಲನ್ನು ಸೂಚಿಸುವ ಶಕುನಗಳು ಪುನಃಪುನಃ ಉಂಟಾಗುತ್ತಿದ್ದುವು ||೧|| ಅದೆಂತೆಂದರೆ--ಕಪ್ಪಾಗಿಯೂ ನೀಳವಾಗಿಯೂ ಗುಂಪಾಗಿಯೂ ಇರುವ ತಲೆಗೂದಲುಳ್ಳ ಆವೈದೇಹಿಯ ಅತಿವಿಶಾಲವೂ, ತುಟ್ಟತುದಿಯಲ್ಲಿ ಸುತ್ತಲೂ ಕೆಂಪು, ಅದರ ಪಕ್ಕದಲ್ಲಿ ಬಿಳುಪು, ಅದರ ಪಾರ್ಶ್ವದಲ್ಲಿ ಅಂದರೆ ನಟ್ಟನಡುವೆ ಕಪ್ಪೂ ಆಗಿ, ಡೊಂಕಾದ ಕಿರುಗೂದಲಸಾಲಿನ ರೆಪ್ಪೆಯನ್ನು

ಪ್ರಾಸ್ಪಂದತೈಕಂ ನಯನಂ ಸುಕೇಶ್ಯಾ ಮೀನಾಹತಂ ಪದ್ಮ ಮಿವಾಭಿ ತಾಮ್ರಮ್ ||೨||
ಭುಜಶ್ಚ ಚಾರ್ವಂಚಿತ ಪೀನವೃತ್ತಃ ಪರಾರ್ಧ್ಯ ಕಾಲಾಗರು ಚಂದನಾರ್ಹಃ |
ಅನುತ್ತಮೇ ನಾಧ್ಯುಷಿತಃ ಪ್ರಿಯೇಣ ಚಿರೇಣ ವಾಮ ಸ್ಸಮ ವೇಪತಾಶು ||೩||
ಗಜೇಂದ್ರಹಸ್ತ ಪ್ರತಿಮಶ್ಚ ಪೀನ ಸ್ತಯೋ ರ್ದ್ವಯೋ ಸ್ಸಂಹತಯೋ ಸ್ಸುಜಾತಃ |
ಪ್ರಸ್ಪಂದಮಾನಃ ಪುನ ರೂರು ರಸ್ಯಾ ರಾಮಂ ಪುರಸ್ತಾತ್ ಸ್ಥಿತ ಮಾಚಚಕ್ಷೇ ||೪||
ಶುಭಂ ಪುನ ರ್ಹೇಮಸಮಾನ ವರ್ಣ ಮೀಷ ದ್ರಜೋಧ್ವಸ್ತ ಮಿವಾಮಲಾಕ್ಷ್ಯಾಃ |

---

ಹೊಡೆಯಲ್ಪಟ್ಟ, ಪದ್ಮಮಿವ-ತಾವರೆಯ ಹೂವಿನಂತೆ, ಪ್ರಾಸ್ಪಂದತ - ಪಟಪಟನೆ ಅದಿರಿತು (ಪುನಃಪುನಃ ಕದಲಿತು) ||೨|| ಚಾರು - ಅಂದವಾದ, ಅಂಚಿತ - ಶ್ರೇಷ್ಠವೆನಿಸಿದ, ಪೀನ - ಬಲಿತಿರುವ, ವೃತ್ತಃ - ದುಂಡಗೂ ಇರತಕ್ಕ, ಪರಾರ್ಧ್ಯ - ಅತ್ಯುತ್ತಮವಾದ, ಕಾಲಾಗರು - ಕೃಷ್ಣಾಗರುವಿನ, ಚಂದನ - ಪರಿಮಳಲೇಪನಕ್ಕೆ, ಅರ್ಹಃ - ಯೋಗ್ಯವೂ ಆದ, ಅನುತ್ತಮೇನ - ಸರ್ವೋತ್ತಮನೆನಿಸಿರುವ, ಪ್ರಿಯೇಣ-ವಲ್ಲಭನಾದ ರಾಮನಿಂದ, ಅಧ್ಯುಷಿತಃ - ಮಲಗುವಾಗ ತಲೆಗೆ ಊರಾಗಿ ಮಾಡಲ್ಪಡುತಲಿದ್ದ, ವಾಮಃ-ಎಡಗಡೆಯದಾದ, ಭುಜಶ್ಚ - ತೋಳೂ, ಚಿರೇಣ - ಬಹಳ ಹೊತ್ತಿನ ವರೆಗೂ, ಆಶು - ಬೇಗಬೇಗನೆ, ಸಮವೇಪತ - ಚೆನ್ನಾಗಿ ಕಂಪಿಸುತಲಿದ್ದಿತು ||೩|| ಗಜೇಂದ್ರ - ಗಜರಾಜನ, ಹಸ್ತ - ಸೊಂಡಿಲಿನೊಡನೆ, ಪ್ರತಿಮಃ - ಸಮಾನವೆನಿಸಿದ, ಪೀನಃ - ಹೊರವಾದ, ಸುಜಾತಃ - ಸುಂದರವಾಗಿರುವ, ಸಂಹತಯೋಃ - ಪರಸ್ಪರವಾಗಿ ಹೊಂದಿಕೊಂಡಿರತಕ್ಕ (ಕಲೆತಿರುವ. ಸೇರಿರತಕ್ಕ) ದ್ವಯೋಃ - ಎರಡಾದ, ತಯೋಃ - ಉತ್ತಮಲಕ್ಷಣವುಳ್ಳ ಆ ತೊಡೆಗಳೊಳಗೆ, ವಾಮಃ - ಎಡಗಡೆಯದಾದ, ಅಸ್ಯಾಃ - ಈ ಸೀತಾದೇವಿಯ, ಊರುಃ - ತೊಡೆಯು, ಪ್ರಸ್ಪಂದಮಾನಃ - ಅದಿರುತಲಿರುವುದಾಗಿ, ರಾಮಂ - ಶ್ರೀ ರಾಮನನ್ನು, ಪುರಸ್ತಾತ್ - ಇದಿರಿನಲ್ಲಿ, ಸ್ಥಿತಂ - ಇರುವವನನ್ನಾಗಿ, ಪುನಃ - ಪದೇಪದೇ, ಆಚಚಕ್ಷೇ - ಹೇಳುತಲಿದ್ದಿತು ||೪||

ಶುಭಂ - ಮೇಲಾದ, ಹೇಮಸಮಾನವರ್ಣಂ - ಬಂಗಾರಕ್ಕೆ ಸಮನಾದ ಬಣ್ಣವುಳ್ಳ, ಈಷದ್ರಜಃ - ಸ್ವಲ್ಪ ಧೂಳಿಯನ್ನು ಬಳಗೊಂಡಿರುವ, ಶಿಖರಾಗ್ರದಂತ್ಯಾಃ-ಬೆಟ್ಟದ ಕೋಡಿನತುದಿಯಂತೆ ಮೊನೆಯಾದ ಹಲ್ಲಿನ

---

ಬಡಗೊಂಡಿರುವ ಎಡಗಣ್ಣು, ಕೊಳದೊಳಗೆ ಮೀನಿನಿಂದಅಲುಗಿಸಲ್ಪಟ್ಟ ಕೆಂದಾವರೆಯಹೂವಿನಂತೆ ಆಡಿಗಡಿಗೂ ಶುಭಕರವಾಗಿ ಅದಿರುತಲಿದ್ದಿತು ||೨|| ಮತ್ತು-ಆ ಜಾನಕಿಯ ಎಡದ ಹೆಗಲು ಅಥವಾ ತೋಳು ಬಹಳ ಹೊತ್ತಿನ ವರೆಗೂ ಅದಿರಿತು. ಈ ತೋಳು ಹೊರವಾಗಿಯೂ ದುಂಡಾಗಿಯೂ, ಬಲು ಅಂದವಾಗಿಯೂ ಇರುತ್ತಾ ಪೂರ್ವದಲ್ಲಿ ಅಗರು ಚಂದನ ಮೊದಲಾದ ಪರಿಮಳ ದ್ರವ್ಯದ ಲೇಪನವನ್ನು ಪಡೆದು ಶ್ರೀ ರಾಮನ ತಲೆದಿಂಬಿಗೆ ಅನುಕೂಲವಾಗುತಲಿದ್ದು ಸೀತೆಗೆ ಸ್ಪರ್ಶಸುಖವನ್ನು ಉಂಟುಮಾಡುತ್ತಲಿದ್ದುದು||೩|| ಇದಲ್ಲದೆ-ದೊಡ್ಡ ಆನೆಯ ನೀಳವೂ ದುಂಡೂ ಆಗಿರುವ ಹೊರವಾದ ಸೊಂಡಿಲಿಗೆ ಎಣೆಯಾಗಿ ಬಂದ ಕ್ಕೊಂದು ಸೇರಿರುವ ಎಂದರೆ ಬಿತ್ತಾಗಿರುವ ಎರಡು ತೊಡೆಗಳಲ್ಲಿ ಬಂದಾದ ಎಡಗಡೆಯದು ಶ್ರೀ ರಾಮಚಂದ್ರನನ್ನು ಎದುರಿಗೆ ಬಂದು ನಿಂತವನನ್ನಾಗಿ ಸೂಚಿಸುತಲಿರುವಂತೆ ಅದಿರುತಲಿದ್ದಿತು|| ೪|| ಇದೂ ಅಲ್ಲದೆ ಸಾಮುದ್ರಿಕಶಾಸ್ತ್ರದಲ್ಲಿ ಹೇಳಿರುವಹಾಗೆ ಬೆಟ್ಟದ ಕೋಡಿನ ತುದಿಯಂತೆ ಸ್ವಲ್ಪ ನೀಳವಾಗಿಯೂ ಸಾಲಾಗಿಯೂ ಇರುವ ಹಲ್ಲುಗಳುಳ್ಳ ನಿರ್ಮಲ

ವಾಸ ಸ್ಥಿತಾಯಾಶ್ಶಿಖರಾಗ್ರದಂತ್ಯಾಃ ಕಿಂಚಿತ್ಪರಿಸ್ರಂಸತ ಚಾರುಗಾತ್ರ್ಯಾಃ ||
ಏತೈರ್ನಿಮಿತ್ತೈರಪರೈಶ್ಚ ಸುಭ್ರೂಸ್ಸಂಬೋಧಿತಾ ಪ್ರಾಗಪಿ ಸಾಧುಸಿದ್ಧೈಃ |
ವಾತಾತಪಕ್ಲಾಂತ ಮಿವ ಪ್ರಣಷ್ಟಂ ವರ್ಷೇಣ ಬೀಜಂ ಪ್ರತಿಸಂಜಹರ್ಷ ||೬||
ತಸ್ಯಾಃ ಪುನರ್ಬಿಂಬ ಫಲಾಧರೋಷ್ಠಂ ಸ್ವಕ್ಷಿಭ್ರುಕೇಶಾಂತ ಮರಾಳಪಕ್ಷ್ಮ |

---

ಸಾಲುಳ್ಳ, ಕಮಲಾಕ್ಷ್ಯಾಃ - ಅಂದವಾದಕಣ್ಣುಗಳುಳ್ಳವಳೂ ಆಗಿ, ಸ್ಥಿತಾಯಾಃ- ನಿಂತಿರುವ, ಚಾರುಗಾತ್ರ್ಯಾಃ - ಸುಂದರವಾದ ಶರೀರವುಳ್ಳ ಸೀತೆಯು ಉಟ್ಟಿದ್ದ, ವಾಸಃ - ವಸ್ತ್ರವು, ಧ್ವಸ್ತಮಿವ- ಕೆಳಗೆ ಜಾರಿ ಬಿದ್ದಂತೆ, ಪುನಃ - ತಿರುತಿರುಗಿ, ಕಿಂಚಿತ್ - ಸ್ವಲ್ಪವಾಗಿ, ಪರಿಸ್ರಂಸತ- (ಪರ್ಯಸ್ರಂಸತ) ಜಾರುತಲಿದ್ದಿತು ||೫|| ಏತೈಃ - ಈ ಮೇಲೆಹೇಳಿದ, ನಿಮಿತ್ತೈಃ - ಶಕುನಗಳಿಂದಲೂ, ಪ್ರಾಕ್ - ಪೂರ್ವದಲ್ಲಿ, ಸಾಧು- ಚೆನ್ನಾಗಿ, ಸಿದ್ಧೈಃ - ಅನುಭವಕ್ಕೆ ಬಂದ, ಅಪರೈಃ - ಬೇರಾದ, (ನಿಮಿತ್ತೈರಪಿ-|ಶಕುನಗಳಿಂದಲೂ) ಸಂಬೋಧಿತಾ - ಚೆನ್ನಾಗಿ ತಿಳಿಸಲ್ಪಟ್ಟ, (ಬೇಗನೆ ನಿನ್ನ ಕೋರಿಕೆಯು ಕೈಗೂಡುವುದೆಂದು ಸೂಚನೆಯುಳ್ಳ) ಸುಭ್ರೂಃ - ಸುಂದರವಾದ ಕಣ್ಣುಹುಬ್ಬುಳ್ಳ ಸೀತೆಯು, ವಾತಾತಪಕ್ಲಾಂತಂ - ಗಾಳಿಬಿಸಿಲುಗಳಿಂದ ಬಲವಾಗಿ ಬಾಡಿರುವುದಾದಕಾರಣವೇ, ಪ್ರಣಷ್ಟಂ - ನಾಶವನ್ನು ಪಡೆಯುತಲಿರತಕ್ಕ, ಬೀಜಂ - ಬಿತ್ತವು (ಎಳೆಯ ಮೊಳಕೆಯು) ವರ್ಷೇಣೇವ-ಮಳೆಗರವುದರಿಂದ ಹೇಗೋಹಾಗೆ, ಪ್ರತಿಸಂಜಹರ್ಷ - ಅಡಿಗಡಿಗೆ ಸಂತೋಷಿಸುತಲಿದ್ದಳು ||೬|| ಬಿಂಬಫಲಾಧರೋಷ್ಠಂ - ತೊಂಡೆಯ ಹಣ್ಣಿನಂತಿರುವ ಕೆಳತುಟಿಯುಳ್ಳ, ಸ್ವಕ್ಷಿಭ್ರು - ಮೇಲಾದ ಕಣ್ಣು ಮತ್ತು ಕಣ್ಣಿನ ಗೊಂಬೆಗಳುಳ್ಳ, ಕೇಶಾಂತಂ- ಆರಂಭದಲ್ಲಿ ಉಂಗುರದಂತೆಯೂ, ತುದಿಯಲ್ಲಿ ನೀಳವಾಗಿಯೂ ಇರುವ ಅಂದವಾದ ತಲೆಗೂದಲುಳ್ಳ, ಅರಾಳ ಪಕ್ಷ್ಮ - ಡೊಂಕಾದ ರೆಪ್ಪೆಗಳನ್ನೊಳಗೊಂಡಿರುವ, ಸಿತ ಶುಕ್ಲದಂಷ್ಟ್ರಂ-ಬಲುಬೆಳ್ಳಗಿರುವ ಹಲ್ಲುಗಳುಳ್ಳ (ಬೆಳ್ಳಗಿರುವ ಹಲ್ಲುಗಳ ಸಾಲುಳ್ಳ) ತಸ್ಯಾಃ - ಆ ಸೀತಾದೇವಿಯ, ವಕ್ತ್ರಂ-ಮುಖವು, ರಾಹೋಃ- ರಾಹುಗ್ರಹದ, ಮುಖಾತ್-ಬಾಯಿಯಿಂದ, ಮುಕ್ತಃ -ಬಿಡಲ್ಪಟ್ಟ, ಚಂದ್ರ ಇವ - ಚಂದ್ರನಂತೆ, ಪುನಃ-

---

ನೇತ್ರೆಯೂ, ಸುಂದರಗಾತ್ರೆಯೂ ಆದ ಆ ಸೀತಾದೇವಿಯು, ಬಂಗಾರದ ಬಣ್ಣವುಳ್ಳುದಾಗಿ, ಸ್ವಲ್ಪಧೂಳಿಯಿಂದೊಡಗೂಡಿರತಕ್ಕ ಧರಿಸಿದ್ದ ವಸ್ತ್ರವು ಸ್ವಲ್ಪಸಡಿಲವಾದಂತಿದ್ದಿತು|| ಇಂತಹ ಅತ್ಯುತ್ತಮವಾದ ಅನೇಕ ಶುಭಶಕುನಗಳು ಆ ವೈದೇಹಿಗೆ ಉಂಟಾಗುತಲಿರಲು, ಅವುಗಳಿಂದ ತನಗೆ ಇನ್ನು ಸ್ವಲ್ಪ ಕಾಲದಲ್ಲಿಯೇ ಪತಿಸಂದರ್ಶನದ ಮೂಲಕ ಸುಖಪರಂಪರೆಗಳು ಒದಗುವುವೆಂಬ ಪರಮಾನಂದವು, ನೆಲದಲ್ಲಿ ನಟ್ಟಿದ್ದ ಬಿತ್ತವು ಮೊಳೆಯುವ ಸಮಯವು ಬರಲು ಮಳೆಯು ಬಾರದೆ ಒಣಗುವ ಸಂದರ್ಭವು ಒದಗುವಾಗ ಹಿತವಾಗಿ ಮಳೆಗರೆದರೆ ಆ ಬಿತ್ತದ ಸ್ಥಿತಿಯು ಹೇಗಿರುವುದೋ ಅದರಂತಿದ್ದಿತು. ||೬|| ಇಂತು ಆ ಸೀತಾದೇವಿಗೆ ಆಗ ಕಾಂತಾಗಮನವನ್ನು ಸೂಚಿಸತಕ್ಕ ಶುಭನಿಮಿತ್ತಗಳು ಆವಿರ್ಭವಿಸಿದ ಕೂಡಲೇ, ಆಕೆಯ ಚಂದ್ರನಂತಿರುವ ಮುಖವುಅಧಿಕೋಲ್ಲಾಸವನ್ನು ಪಡೆದು, ಅತ್ಯಂತಧವಳವಾದ ದಂತಪಙ್ಕ್ತಿಯಿಂದೊಡಗೂಡಿ, ಸ್ವಾಭಾವಿಕವಾಗಿಯೇ ತೊಂಡೆಯ ಹಣ್ಣಿನಂತೆ ಕೆಂಪಾಗಿ ಬೆಳಗುತಲಿರುವ ಕೆಳತುಟಿಯಿಂದಲೂ, ಸುಂದರವಾದನೇತ್ರ, ಅಂದವಾದ ಕಣ್ಣುಹುಬ್ಬು, ಮನೋಹರವಾದ ತುದಿಗೂದಲು, ಸುಂದರವಾದ ರೆಪ್ಪೆ, ಇವುಗಳಿಂದೊಡಗೂಡಿಯೂ ಇರುವುದಾಗಿ, ರಾಹುಗ್ರಹದ ಮುಖದಿಂದ ಆಕ್ರಮಿಸಲ್ಪಟ್ಟು ಪುನಃ ಬಿಡಲ್ಪಟ್ಟ

ವಕ್ತ್ರಂ ಬಭಾಸೆ ಸಿತಶುಕ್ಲ ದಂಷ್ಟ್ರಂ ರಾಹೋರ್ಮುಖಾಚ್ಚಂದ್ರ ಇವ ಪ್ರಮುಕ್ತಃ ॥
ಸಾ ವೀತಶೋಕಾ ವ್ಯಪನೀತ ತಂದ್ರೀ ಶಾಂತಜ್ವರಾ ಹರ್ಷವಿವೃದ್ಧ ಸತ್ವಾ ।
ಅಶೋಭತಾರ್ಯಾ ವದನೇನ ಶುಕ್ಲೇ ಶೀತಾಂಶುನಾ ರಾತ್ರಿ ರಿವೋದಿತೇನ ॥೪॥
ಇತಿ ಶ್ರೀಮತ್ಸುಂದರಕಾಂಡೆ ಏಕೋನತ್ರಿಂಶಸ್ಸರ್ಗಃ.

ಬಾರಿಬಾರಿಗೂ, ಬಭಾಸೆ - ತಳತಳಿಸುತಲಿದ್ದಿತು ॥೩॥ ವೀತಶೋಕಾ - ತೊಲಗಿದ ದುಃಖವುಳ್ಳ, ವ್ಯಪನೀತ ತಂದ್ರೀ - ದೂರವಾಗಿ ಸರಿದ ಮಂದತನವುಳ್ಳ, ಶಾಂತಜ್ವರಾ - ಅಡಗಿದ ಸಂತಾಪವುಳ್ಳ, ಹರ್ಷ ವಿವೃದ್ಧ ಸತ್ವಾ - ಸಂತೋಷದಿಂದ ಅರಳಿದ ಮನವುಳ್ಳ, ಆರ್ಯಾ - ಪೂಜ್ಯಳಾದ, ಸಾ - ಆಸೀತಾದೇವಿಯು, ವದನೇನ-ಮುಖದಿಂದ, ಶುಕ್ಲೇ - ಶುಕ್ಲಪಕ್ಷದ ಹುಣ್ಣಿಮೆಯಲ್ಲಿ, ಉದಿತೇನ - ಅಲೆ ದೋರಿದ, ಶೀತಾಂಶುನಾ - ಪೂರ್ಣಚಂದ್ರಮಂಡಲದಿಂದ, ರಾತ್ರಿರಿವ - ಶರತ್ಕಾಲದ ರಾತ್ರಿಯು ಹೇಗೋ ಹಾಗೆ, ಅಶೋಭತ - ಪ್ರಕಾಶಿಸುತಲಿದ್ದಿತು, ॥೪॥

ಇಂತು- ಇಪ್ಪತ್ತೊಂಬತ್ತನೆಯ ಸರ್ಗವು.

ಪೂರ್ಣಚಂದ್ರಮಂಡಲದಂತೆ, ಆನಂದರೋಚಕವಾಗಿ ಬೆಳಗುತಲಿದ್ದಿತು ॥ ೩ ॥ ಆಗಲಾ ಜನಕರಾಜನಂದಿನಿಯು ಮನದೊಳಗೆ ಶೋಕವನ್ನು ತೊರೆದು, ಬುದ್ಧಿಮಾಂದ್ಯವನ್ನು ದೂರಗೊಳಿಸಿ, ಸಂತಾಪದ ಸಂಬಂಧವನ್ನು ಬಿಟ್ಟು, ಹರ್ಷಾತಿಶಯದಿಂದ ದೇಹಶಕ್ತಿಯು ಸ್ವಲ್ಪಸ್ವಲ್ಪವಾಗಿ ಹೆಚ್ಚುತಬರಲು, (ಎಂದರೆ ಸಂತೋಷದಿಂದ ಮೆಯುಬ್ಬುತಿರಲು) ಆಕೆಯು ಷೋಡಶಕಳೆಗಳಿಂದ ಪೂರ್ಣನಾಗಿ ಉದಿಸಿದ ಚಂದ್ರನಿಂದ ಶುಕ್ಲಪಕ್ಷದ ಹುಣ್ಣಿಮೆಯ ಇರುಳಿನಂತೆ, ರಾರಾಜಿಸುತಲಿದ್ದಳು ॥೪॥

— ಇಂತು ಇಪ್ಪತ್ತೊಂಭತ್ತನೆಯ ಸರ್ಗವು —

ಶ್ರೀಃ.

ಶ್ರೀರಾಮಚಂದ್ರ ಪರಬ್ರಹ್ಮಣೇನಮಃ

## ಶ್ರೀಮತ್ಸುನ್ದರಕಾಣ್ಡೆ ತ್ರಿಂಶಸ್ಸರ್ಗಃ.

ಮೂ॥ ಹನುಮಾನಪಿ ವಿಕ್ರಾಂತ ಸ್ಸರ್ವಂ ಶುಶ್ರಾವ ತತ್ತ್ವತಃ।

### ಮೂವತ್ತನೆಯ ಸರ್ಗ.

ಕಂದ॥ ಇರದೆಲ್ಲವ ಮರದೊಳ್ ತಾಂ । ನಿರುಕಿಸಿದಾ ಹನುಮನಂದುತವಿ ಸುತೆ ಭರದಿಂ ।
ದುರುವರೆಯುಣುಗಿಗೆ ಶುಭವ । ನ್ನರುಹಲ್ ವ್ಯದುಪದವಿಯನ್ನೆ ಬಗೆದಂ ಮನದೊಳ್॥

ವಿಕ್ರಾಂತಃ - ಪರಾಕ್ರಮಶಾಲಿಯಾದ, ಹನುಮಾನಪಿ -ಆಂಜನೇಯನೂ, ಸೀತಾಯಾಃ - ಸೀತಾ

— ಮೂವತ್ತನೆಯ ಸರ್ಗವು —

ಬಳಿಕ ಮಹಾಶೂರನಾದ ಆಂಜನೇಯನು ಶಿಂಶುಪಾವೃಕ್ಷದ ಎಲೆಗಳ ಪೊದೆಯಲ್ಲಿ ಅವಿತುಕೊಂಡು ಇಣಿಕಿನೋಡುತ್ತಾ ಇದ್ದು, ಸೀತೆಯು ಅಪಾರವಾದ ಶೋಕಪ್ರಲಾಪಗಳನ್ನೂ, ರಕ್ಕಸಿಯರ ಗದರಿಕೆ ಬೆದರಿಕೆಗಳನ್ನೂ, ಅಂತಹ ಸಮಯದಲ್ಲಿಯೂ ಜಾನಕಿಯು

ಸೀತಾಯಾ ಸ್ತ್ರಿಜಟಾಯಾ ಶ್ಚ ರಾಕ್ಷಸೀನಾಂ ಚ ತರ್ಜನಮ್ ॥೧॥
ಅವೇಕ್ಷಮಾಣ ಸ್ತಾಂ ದೇವೀಂ ದೇವತಾ ಮಿವ ನಂದನೇ।
ತತೋ ಬಹುವಿಧಾಂ ಚಿಂತಾಂ ಚಿಂತಯಾಮಾಸ ವಾನರಃ ॥೨॥
ಯಾಂ ಕಪೀನಾಂ ಸಹಸ್ರಾಣಿ ಸುಬಹೂ ನ್ಯಯುತಾನಿ ಚ ।
ದಿಕ್ಷು ಸರ್ವಾಸು ಮಾರ್ಗಂತೇ ಸೇಯ ಮಾಸಾದಿತಾ ಮಯಾ ॥೩॥
ಚಾರೇಣ ತು ಸುಯುಕ್ತೇನ ಶತ್ರೋ ಶ್ಶಕ್ತಿ ಮವೇಕ್ಷತಾ ।
ಗೂಢೇನ ಚರತಾ ತಾವ ದವೇಕ್ಷಿತ ಮಿದಂ ಮಯಾ ॥೪॥

---

ದೇವಿಯ, ತ್ರಿಜಟಾಯಾಶ್ಚ - ತ್ರಿಜಟೆ ಎಂಬುವವಳ, ತತ್ತ್ವತಃ - ಯಥಾರ್ಥವಾದ (ಅನುಕೂಲಾಗ್ರವಾದ) ಸರ್ವಂ - ಸಕಲ ವೃತ್ತಾಂತವನ್ನೂ, ರಾಕ್ಷಸೀನಾಂ- ರಕ್ಕಸಿಯರ, ತರ್ಜನಂ - (ತ್ರಿಜಟೆಯ ನುಡಿಗಿಂತಲೂ ಮೊದಲು ನಡೆಸಿದ) ಬೆದರಿಕೆಯನ್ನೂ, ಶುಶ್ರಾವ - ಕೇಳಿದನು ॥೧॥ ವಾನರಃ - ಹನುಮನು, ತಾಂ - ಆ, ದೇವೀಂ - ಸೀತಾದೇವಿಯನ್ನು, ನಂದನೇ - ಇಂದ್ರೋದ್ಯಾನದಲ್ಲಿ, ದೇವತಾಮಿವ - ದೇವಕನ್ಯೆಯನ್ನು ಹೇಗೋಹಾಗೆ, ಅವೇಕ್ಷಮಾಣಃ - ನೋಡುತಲಿರುವವನಾಗಿ, ತತಃ - ಹಾಗೆ ನೋಡಿದಮೇಲೆ, ಬಹುವಿಧಾಂ - ಬಗೆಬಗೆಯಾಗಿರುವ, ಚಿಂತಾಂ - ವಿಚಾರವನ್ನು, ಚಿಂತಯಾಮಾಸ - ಯೋಚಿಸಿದನು ॥೨॥ ಸುಬಹೂನಿ - ಅತ್ಯಧಿಕವಾದ, ಕಪೀನಾಂ - ವಾನರರ, ಸಹಸ್ರಾಣಿ - ಸಾವಿರಗಳು, ಅಯುತಾನಿಚ - ಹತ್ತು ಸಾವಿರಗಳೂ, ಯಾಂ - ಯಾವ ಸೀತಾದೇವಿಯನ್ನು, ದಿಕ್ಷು - ಎಲ್ಲ ದೆಸೆಗಳಲ್ಲಿಯೂ, ಮಾರ್ಗಂತೆ - ಹುಡುಕುತಲಿವೆಯೋ, ಸಾ - ಅಂತಹ, ಇಯಂ - ಈ ಸೀತಾದೇವಿಯು, ಮಯಾ- ನನ್ನಿಂದ, ಆಸಾದಿತಾ - ಹೊಂದಲ್ಪಟ್ಟಳು (ನೋಡಲ್ಪಟ್ಟಳು), ॥೩॥ ಸುಯುಕ್ತೇನ - ಬಹು ಯೋಗ್ಯವಾದ, ಚಾರೇಣ - ಗೂಢಚಾರನಿಂದ, (ಉಚಿತವಾದ ಸಂಚಾರದಿಂದ ಕೂಡಿರುವ) ಶತ್ರೋಃ - ಹಗೆಯಾದ ಆ ರಾವಣನ, ಶಕ್ತಿಂ - ಸಾಮರ್ಥ್ಯವನ್ನು, ಅವೇಕ್ಷತಾ - [ಅವೇಕ್ಷಮಾಣೇನ] ಪರೀಕ್ಷಿಸುತಲಿರುವ, ಗೂಢೇನ - ಹೇರಿಗೆ ಕಾಣಿಸಿಕೊಳ್ಳದವನಾಗಿ, ಚರತಾ - ಸಂಚರಿಸುತಲೂ ಇದ್ದ, ಮಯಾ - ನನ್ನಿಂದ, ಇದಂ - ಮುಂದೆ ಹೇಳಹೋಗುವ ಸಂಗತಿಯೆಲ್ಲವೂ, ತಾವತ್ - ಸಂಪೂರ್ಣವಾಗಿ, ಅವೇಕ್ಷಿತಂ - ಪರೀಕ್ಷಿಸ

---

ತನ್ನ ಪಾತಿವ್ರತ್ಯಮಹಿಮೆಗೆ ಕೊರತೆ ಇಲ್ಲದಂತೆ ಅವರೊಡನೆ ಹೇಳಿದ ನುಡಿಗಳನ್ನೂ, ಅನಂತರದಲ್ಲಿ ಅವರೊಳಗೆ ತ್ರಿಜಟೆಯೆಂಬುವವಳೊಬ್ಬಳು ನಿದ್ರೆಯಿಂದೆದ್ದು ತನಗೆ ಕನಸಿನೊಳಗೆ ನಡೆದ ಶ್ರೀರಾಮನಿಗೆ ಶುಭಸೂಚಕವಾಗಿದ್ದ ಇತರ ರಕ್ಕಸಿಯರಿಗೆ ತಿಳಿಸಿದ ವೃತ್ತಾಂತವನ್ನೂ ಕ್ರಮವಾಗಿ ನೋಡಿ ಕೇಳಲೂ ಕೇಳಿದನು ॥ ೧ ॥ ಅಲ್ಲದೆ ಇಂದ್ರೋದ್ಯಾನದಲ್ಲಿ ಬೆಳಗುತಲಿರುವ ದೇವಕನ್ಯೆಯಂತೆ ಪ್ರಕಾಶಿಸುತಕ್ಕ ಸೀತಾದೇವಿಯನ್ನು ನೋಡುತ್ತಾ ತನ್ನ ಮನದೊಳಗೆ ಬಹುತರವಾಗಿ ಚಿಂತಿಸಿ ॥ ೨ ॥ ಅಹಹ ! ಹತ್ತಾರು ಸಾವಿರಕಪಿಗಳು ಯಾವ ಮಹಾದೇವಿಯನ್ನು ಸಮಸ್ತ ದಿಕ್ಕುಗಳಲ್ಲಿಯೂ ಎಡೆಬಿಡದೆ ಹುಡುಕುತಲಿರುವರೋ ಅಂತಹ ಸೀತಾದೇವಿಯನ್ನು ಇದಕೋ ನಾನು ಕಂಡೆನು॥ ಹೆರರ ಅರಿವಿಗೆ ಬಾರದಂತೆ ಬಹುವಿಧವಾದ ನಿಯಮಕ್ಕೊಳಗಾಗಿ ಬಲುಗುಟ್ಟಾಗಿ ಸಂಚರಿಸುತ್ತಾ ರಾವಣನ ಸಾಮರ್ಥ್ಯವೇ ಮೊದಲಾದ ಇಲ್ಲಿನ ಸಮಸ್ತ ವೃತ್ತಾಂತವನ್ನೂ ಚೆನ್ನಾಗಿ ತಿಳಿದೆನು॥೪॥ ರಾಕ್ಷಸರ ಭೇದಗಳನ್ನೆಲ್ಲ ಅರಿತೆನು,ಲಂಕಾನಗರವನ್ನೆಲ್ಲ ನೋಡಿದೆನು,

ರಾಕ್ಷಸಾನಾಂ ವಿಶೇಷ ಶ್ಚ ಪುರೀ ಚೇಯ ಮವೇಕ್ಷಿತಾ ।
ರಾಕ್ಷಸಾಧಿಪತೇ ರಸ್ಯ ಪ್ರಭಾವೋ ರಾವಣಸ್ಯ ಚ ॥೫॥
ಯುಕ್ತಂ ತಸ್ಯಾಪ್ರಮೇಯಸ್ಯ ಸರ್ವಸತ್ವದಯಾವತಃ ।
ಸಮಾಶ್ವಾಸಯಿತುಂ ಭಾರ್ಯಾಂ ಪತಿದರ್ಶನಕಾಂಕ್ಷಿಣೀಮ್ ॥೬॥
ಅಹ ಮಾಶ್ವಾಸಯಾ ಮ್ಯೇನಾಂ ಪೂರ್ಣಚಂದ್ರನಿಭಾನನಾಂ ।
ಅದೃಷ್ಟದುಃಖಾಂದುಃಖಾರ್ತಾಂ ದುಃಖಸ್ಯಾಂತ ಮಗಚ್ಛತೀಮ್ ॥೭॥
ಯದ್ಯ ಪ್ಯಹ ಮಿಮಾಂ ದೇವೀಂ ಶೋಕೋ ಪಹತ ಚೇತನಾಮ್ ।

ಲ್ಪಟ್ಟಿತು ॥೪॥ (ಅದೇನೆಂದರೆ)—(ಮಯಾ - ನನ್ನಿಂದ) ರಾಕ್ಷಸಾನಾಂ- ರಕ್ಕಸರ, ವಿಶೇಷಶ್ಚ- ಭೇದವೂ, ಅವೇಕ್ಷಿತಃ - ನೋಡಲ್ಪಟ್ಟಿತು, ಇಯಂ - ಈ, ಪುರೀಚ - ಲಂಕೆಯೂ, ಅವೇಕ್ಷಿತಾ - ನೋಡಲ್ಪಟ್ಟಿತು, ರಾಕ್ಷಸಾಧಿಪತೇಃ-ರಾಕ್ಷಸರರಾಜನಾದ, ಅಸ್ಯ - ಈ, ರಾವಣಸ್ಯ - ರಾವಣನ, ಪ್ರಭಾವಶ್ಚ - ಮಹಿಮೆಯೂ- ಅವೇಕ್ಷಿತಃ - ನೋಡಲ್ಪಟ್ಟಿತು ॥೫॥ ಅಪ್ರಮೇಯಸ್ಯ - ಎಣಿಸಲಸದಳವೆನಿಸಿದ ಗುಣಸಮೂಹವುಳ್ಳ, ಸರ್ವಸತ್ವದಯಾವತಃ - ಸರ್ವಭೂತ ದಯಾಪರನೂ ಆದ, ತಸ್ಯ - ಆ ಶ್ರೀರಾಮಚಂದ್ರನ ಸಂಬಂಧಿನಿಯಾದ, ಪತಿದರ್ಶನ ಕಾಂಕ್ಷಿಣೀಂ - ಪತಿಯ ಸಂದರ್ಶನವನ್ನೇ ಕೋರುತಲಿರುವ, ಭಾರ್ಯಾಂ-ಹೆಂಡತಿಯನ್ನು, ಸಮಾಶ್ವಾಸಯಿತುಂ - ಸಮಾಧಾಯಿಸೋಣವು, ಯುಕ್ತಂ - ಉಚಿತವಾದುದಲ್ಲವೇ ? ॥ ೬ ॥ ಅಹಂ - ನಾನು, ಪೂರ್ಣಚಂದ್ರನಿಭಾನನಾಂ-ಹುಣ್ಣಿಮೆಯ ಚಂದಿರನಿಗೆಣೆಯಾದ ಮುಖವುಳ್ಳ, ಅದೃಷ್ಟದುಃಖಾಂ, ಎಂದಿಗೂ ದುಃಖವನ್ನರಿಯದ, ದುಃಖಾರ್ತಾಂ- ಪ್ರಕೃತದಲ್ಲಿ ದುಃಖದಿಂದ ದೀನಳಾಗಿರುವ, ದುಃಖಸ್ಯ- ಶೋಕದ, ಅಂತಂ - ಪಾರವನ್ನು, ಅಗಚ್ಛತೀಂ (ಅಗಚ್ಛಂತೀಂ) ಹೊಂದದಿರುವ, ಏನಾಂ-ಈ ಸೀತಾದೇವಿಯನ್ನು, ಆಶ್ವಾಸಯಾಮಿ - ಸಮಾಧಾಯಿಸುತ್ತೇನೆ ॥೭॥ ಅಹಂ - ಈ ನಾನು, ಶೋಕೋಪಹತಚೇತನಾಂ - ದುಃಖದಿಂದ ಪೆಟ್ಟುಬಿದ್ದ ಮನಸ್ಸುಳ್ಳ, ಇಮಾಂದೇವೀಂ - ಈ ಸೀತಾದೇವಿಯನ್ನು, ಅನಾಶ್ವಾಸ್ಯ - ಸಮಾಧಾನಗೊಳಿಸದೆ, ಗಮಿಷ್ಯಾಮಿಯದ್ಯಪಿ - ಹಿಂತಿರುಗಿ ಹೊರಟುಹೋದವನೇ ಆದರೆ, ಗಮನಂ -

ರಾಕ್ಷಸರಾಜನಾದ ರಾವಣನ ಮಹಿಮೆಯನ್ನೆಲ್ಲ ಪರೀಕ್ಷಿಸಿದೆನು ॥ ೫ ॥ ಮನೋವಾಕ್ಕುಗಳಿಗೆ ಅಗೋಚರವಾದ ಪ್ರಭಾವವುಳ್ಳವನಾಗಿ, ಸರ್ವಭೂತದಯಾಪರನಾಗಿಯೂ ಇರುವ ಶ್ರೀರಾಮಚಂದ್ರನ ಧರ್ಮಭಾರ್ಯೆಯಾದ ಈ ಸೀತಾದೇವಿಯ ಎದುರಿಗೆ ನಿಂತು "ಓ ತಾಯಿ! ನಾನು ಶ್ರೀರಾಮದೂತನು, ಆ ಶ್ರೀರಾಮಚಂದ್ರನು ಕ್ಷೇಮದಿಂದಿದಾನೆ, ಬೇಗನೆ ಈ ರಾವಣನನ್ನು ಸಮೂಲವಾಗಿ ನಾಶಮಾಡುತ್ತಾನೆ, ನೀನು ಭಯಪಡಬೇಡ" ಎಂದು ದುಃಖವು ಶಮನವಾಗುವ ಹಾಗೆ ಮೃದುಮಧುರವಾದ ಮಾತುಗಳನ್ನು ಹೇಳಿ ಸಮಾಧಾಯಿಸಬಲ್ಲೆನು, ಈಕೆಯು ತನ್ನ ಪ್ರಾಣನಾಥನನ್ನು ಎಂದಿಗೆ ನೋಡುವೆನೋ ಎಂಬ ತೊಳಲಿಕೆಯಿಂದ ಒಂದು ಕ್ಷಣವನ್ನು ಒಂದು ಯುಗವನ್ನಾಗಿ ಕಳೆಯುತ್ತಲಿದಾಳೆ, ಇದುವರೆಗೆ ಎಂದಿಗೂ ದುಃಖದ ಸ್ವರೂಪವೆಂಥದೋ ಅದನ್ನು ಅರಿತವಳೇ ಅಲ್ಲ, ಆ ಗರ್ಭಶ್ರೀಮಂತಳಾದರೂ ಈಗ ಅಪಾರವಾದ ಶೋಕವನ್ನು ಅನುಭವಿಸುತಲಿದಾಳೆ, ಸುಂದರಾಂಗಿಯೂ, ಪೂರ್ಣಚಂದ್ರ ಸಮಾನವದನೆಯೂಆಗಿ ಇರುವ ಈ ಸೀತಾದೇವಿಯನ್ನು ಈಗ ಸಮಾಧಾನ ಗೊಳಿಸದೆ ಇಲ್ಲಿಂದಹೊರಟುಹೋದರೆ ಆಗ ನಾನು ಇಲ್ಲಿಗೆ

ಅನಾಶ್ವಾಸ್ಯ ಗಮಿಷ್ಯಾಮಿ ದೋಷವದ್ಗಮನಂ ಭವೇತ್ ॥೮॥
ಗತೇ ಹಿ ಮಯಿ ತತ್ರೇಯಂ ರಾಜಪುತ್ರೀ ಯಶಸ್ವಿನೀ ।
ಪರಿತ್ರಾಣಮವಿಂದಂತೀ ಜಾನಕೀ ಜೀವಿತಂ ತ್ಯಜೇತ್ ॥೯॥
ಮಯಾಚ ಸ ಮಹಾಬಾಹುಃ ಪೂರ್ಣಚಂದ್ರನಿಭಾನನಃ ।
ಸಮಾಶ್ವಾಸಯಿತುಂ ನ್ಯಾಯ್ಯಃ ಸೀತಾದರ್ಶನ ಲಾಲಸಃ ॥೧೦॥
ನಿಶಾಚರೀಣಾಂ ಪ್ರತ್ಯಕ್ಷ ಮನರ್ಹಂ ಚಾಪಿ ಭಾಷಣಂ ।
ಕಥನ್ನು ಖಲು ಕರ್ತವ್ಯ ಮಿದಂ ಕೃಛ್ರಗತೋ ಹ್ಯಹಮ್ ॥೧೧॥

---

ಇಲ್ಲಿಗೆ ನನ್ನ ಬರವು (ಇಲ್ಲಿಗೆ ನನ್ನ ಪ್ರಯಾಣವು) ದೋಷವತ್-ದೋಷವುಳ್ಳುದು, (ವ್ಯರ್ಥವಾದುದು) ಭವೇತ್-ಆಗುವುದು ॥೮॥

(ದೋಷವೇನೆಂದರೆ) ಮಯಿ-ನಾನು, ತತ್ರ-ಅಲ್ಲಿಗೆ (ಜಾಂಬವಾದಿಗಳಿರುವ ಸ್ಥಳಕ್ಕೆ) ಗತೇಸತಿ - ಹೊರಟುಹೋಗುತ್ತಿರಲಾಗಿ, ರಾಜಪುತ್ರೀ - ಜನಕ ಮಹಾರಾಜನಮದಿನಿಯೂ, ಯಶಸ್ವಿನೀ - ಕೀರ್ತಿ ಮತಿಯೂ ಆಗಿರುವ, ಇಯಂ ಜಾನಕೀ - ಈ ಸೀತಾದೇವಿಯು, ಪರಿತ್ರಾಣಂ - ಆತ್ಮ ಸಂರಕ್ಷಣೆಯ ನ್ನು, ಅವಿಂದಂತೀ - ಪಡೆಯದಿರುವವಳಾಗಿ, ಜೀವಿತಂ -ಪ್ರಾಣವನ್ನು, ತ್ಯಜೇತ್ - ಬಿಡುವಳು, ಹಿ - ನಿ ಶ್ಚಯ ॥೯॥ ಮಹಾ ಬಾಹುಃ - ಹೆಚ್ಚಿದ ತೋಳುಬಲವುಳ್ಳ, ಪೂರ್ಣಚಂದ್ರ ನಿಭಾನನಃ - ಪೂರ್ಣಿಮಾ ಚಂದ್ರ ಸದೃಶಮುಖವುಳ್ಳ, ಸೀತಾದರ್ಶನ ಲಾಲಸಃ- ಸೀತೆಯನ್ನು ನೋಡಬೇಕೆಂಬುದರಲ್ಲಿ ಆಸಕ್ತನಾದ, ಸಚ - ಆ ಶ್ರೀರಾಮಚಂದ್ರನೂ, ಮಯಾ - ನನ್ನಿಂದ, ಸಮಾಶ್ವಾಸಯಿತುಂ - ಸೀತಾವೃತ್ತಾಂತ ನಿವೇ ದನದಿಂದ ಸಮದಾಯಿಸಲಿಕ್ಕೆ, ನ್ಯಾಯೀಯ್ಯಃ - ತಕ್ಕವನಾಗಿದಾನೆ ॥೧೦॥ ನಿಶಾಚರೀಣಾಂ - ರಕ್ಕಸಿ ಯರ, ಪ್ರತ್ಯಕ್ಷಂ - ಇದಿರಿಗೆ, ಭಾಷಣಂಚಾಪಿ - ಸೀತೆಯ ಸಂಗಡ ಮಾತನಾಡೋಣವೂ, ಅನರ್ಹಂ- ತಕ್ಕುದಲ್ಲ, ಇದಂ - ಈ ಸಂಭಾಷಣವು, ಕಥಂಖಲು - ಯಾವಹಾದಿಯಿಂದ, ಕರ್ತವ್ಯಂ - ಮಾಡ

---

ಬಂದದ್ದೂ, ಇಲ್ಲಿಂದ ಹೊರಟುಹೋದದ್ದೂ ವ್ಯರ್ಥವೇ ಆಗುವುದು ॥೬-೭-೮॥ ನಾನು ಏನೊಂದು ಕೆಲಸವನ್ನೂ ಮಾಡದೆ ಇಲ್ಲಿಂದ ಅಲ್ಲಿಗೆ ಹೊರಟು ಹೋದರೆ ಮಹಾರಾಜ ಪುತ್ರಿಯೂ, ಪತಿವ್ರತೆಯರಲ್ಲಿ ಅಗ್ರಗಣ್ಯಳೆಂದು ಪ್ರಖ್ಯಾತಿಯನ್ನು ಪಡೆದವಳೂ ಆಗಿರುವ ಈ ಜಾನಕಿಯು ಇಲ್ಲಿ ಮಹತ್ತರವಾದ ಸಂಕಟದಲ್ಲಿ ಸಿಕ್ಕಿ, ತನ್ನನ್ನು ಸಂರಕ್ಷಿಸುವರಾರೂ ದಿಕ್ಕಿಲ್ಲವೆಂದು ಗೊತ್ತುಮಾಡಿಕೊಂಡು, ಕಟ್ಟಕಡೆಗೆ ತನ್ನ ಪ್ರಾಣಗಳನ್ನು ತೊರೆಮಕೊಳ್ಳು ವುದೇನೋ ದಿಟ, ಆದರೆ ಆಗ ಆ ಸ್ತ್ರೀಹತ್ಯಾದೋಷವು ನನಗೇ ಬರುವುದು, ಆದಕಾರ ಣ ಈಗ ಈಕೆಯನ್ನು ಸಮದಾಯಿಸಲೇಬೇಕು ॥೯॥ ಜಾನಕಿಯು ಶ್ರೀರಾಮ ಸಂದ ರ್ಶನದಲ್ಲಿ ಎಷ್ಟು ತಹತಹ ಪಡುತಲಿದಾಳೆಯೋ ಶ್ರೀರಾಮನೂ ಹಾಗೆಯೇ ಈ ಸೀತಾ ದರ್ಶನದಲ್ಲಿ ಕುತೂಹಲವುಳ್ಳವನಾಗಿದಾನೆ. ಆದಕಾರಣ ಮಹಾಬಾಹುಬಲಶಾಲಿಯಾಗಿ ಹುಣ್ಣಿಮೆಯ ಚಂದಿರನಂತೆಸೆವ ಮುಖವುಳ್ಳ ಆ ಶ್ರೀರಾಮಚಂದ್ರನನ್ನು ನಾನು ಸಮ ದಾಯಿಸಲೇಬೇಕಾಗಿದೆ ॥೧೦॥ ಆದರೆ- ಅಯ್ಯೋ ! ಏನಮಾಡಲಿ ? ಇಲ್ಲಿನೋಡಿದರೆ ಕೈ ಕೈಹಿಸಿಕೊಳ್ಳುವ ಸಂದರ್ಭವು ಒದಗಿದೆ, ಈ ಘೋರರೂಪರಾದ ರಕ್ಕಸಿಯರ ಇದಿರಿಗೆ ಮಾತನಾಡತಕ್ಕುದು ಖಂಡಿತವಾಗಿಯೂನ್ಯಾಯವಲ್ಲ, ಇದಕ್ಕೆ ಏನಮಾಡಬೇಕೋ

ಅನೇನ ರಾತ್ರಿಶೇಷೇಣ ಯದಿ ನಾಶ್ವಾಸ್ಯತೇ ಮಯಾ ।
ಸರ್ವಥಾ ನಾಸ್ತಿ ಸಂದೇಹಃ ಪರಿತ್ಯಕ್ಷ್ಯತಿ ಜೀವಿತಮ್ ॥೧೨॥
ರಾಮಶ್ಚ ಯದಿ ಪೃಚ್ಛೇನ್ಮಾಂ ಕಿಂ ಮಾಂ ಸೀತಾಽಬ್ರವೀದ್ವಚಃ ।
ಕಿಮಹಂ ತಂ ಪ್ರತಿಬ್ರೂಯಾಮಸಂಭಾಷ್ಯ ಸುಮಧ್ಯಮಾಮ್ ॥೧೩॥
ಸೀತಾಸಂದೇಶರಹಿತಂ ಮಾಮಿತಸ್ತ್ವರಯಾ ಗತಮ್ ।
ನಿರ್ದಹೇದಪಿ ಕಾಕುತ್ಸ್ಥಃ ಕ್ರುದ್ಧಸ್ತೀವ್ರೇಣ ಚಕ್ಷುಷಾ ॥೧೪॥

ತಕ್ಕುದು ? ಅಹಂ – ನಾನು, ಕೃಚ್ಛ್ರಗತೋಹಿ- ಬಹುಕಷ್ಟಕ್ಕೊಳಗಾಗಿರುವೆನಲ್ಲಾ ? ॥೧೧॥ ಅನೇನ- ಈ, ರಾತ್ರಿ ಶೇಷೇಣ – ಮುಂಜಾನೆಯಲ್ಲಿ, ಮಯಾ–ನನ್ನಿಂದ, ಇಯಂ – ಈ ಸೀತಾದೇವಿಯು, ನಾಶ್ವಾಸ್ಯತೇಯದಿ - ಸಮಾಧಾನಪಡಿಸಲ್ಪಡದೆಹೋದ ಪಕ್ಷದಲ್ಲಿ, ಸರ್ವಥಾ – ಸರ್ವಪ್ರಕಾರದಿಂದಲೂ, ಜೀವಿತಂ – ಪ್ರಾಣವನ್ನು, ತ್ಯಕ್ಷ್ಯತಿ – ತೊರೆಯುವಳು, ಸಂದೇಹಃ-ಸಂಶಯವೇ, ನಾಸ್ತಿ – ಇಲ್ಲ ॥೧೨॥ ರಾಮಶ್ಚ- ಶ್ರೀ ರಾಮಚಂದ್ರನು, ಮಾಂ - ನನ್ನನ್ನು ಕುರಿತು, ಸೀತಾ – ಸೀತೆಯು, ಕಿಂ - ಯಾವ, ವಚಃ - ಮಾತನ್ನು, ಅಬ್ರವೀತ್ – ಹೇಳಿದಳು ? ಇತಿ – ಹೀಗೆಂದು, ಪೃಚ್ಛೇದ್ಯದಿ – ಪ್ರಶ್ನೆಮಾಡಿದನೇ ಆದರೆ, ಅಹಂ – ನಾನು, ಸುಮಧ್ಯಮಾಂ – ಚಿಕ್ಕನಡುವುಳ್ಳ ಸೀತೆಯನ್ನು ಕುರಿತು, ಅಸಂಭಾಷ್ಯ - ಮಾತನಾಡದೆಯೇ, ತಂ – ಆ ರಾಮನನ್ನು ಕುರಿತು, ಕಿಂ – ಏನನ್ನು, ಪ್ರತಿಬ್ರೂಯಾಂ-ಪ್ರತ್ಯುತ್ತರ ಕೊಡಲಿ? ॥ ಸೀತಾಸಂದೇಶರಹಿತಂ – ಸೀತಾ ಕುಶಲವೃತ್ತಾಂತಶೂನ್ಯನಾಗಿ, ಇತಃ – ಇಲ್ಲಿಂದ, ತ್ವರಯಾ – ವೇಗದಿಂದ, ಗತಂ – ಹೊರಟುಹೋದ. ಮಾಂ – ನನ್ನನ್ನು, ಕಾಕುತ್ಸ್ಥಃ-ಶ್ರೀ ರಾಮನು, ಕ್ರುದ್ಧಃ – ಕೋಪಿಸಿಕೊಂಡವನಾಗಿ, ತೀವ್ರೇಣ – ತೀಕ್ಷ್ಣವಾದ, ಚಕ್ಷುಷಾ – ದೃಷ್ಟಿಯಿಂದ, ನಿರ್ದಹೇದಪಿ – ಸುಡುವನೋ ಹೇಗೋ ? ॥೧೪॥ ಕಿಂಚ - ಮತ್ತು, ರಾಮಕಾರಣಾತ್ - ರಾಮನ ನಿಮಿತ್ತದಿಂದ, (ಅಹಂ – ನಾನು) ಭರ್ತಾರಂ – ನಮ್ಮ ಪ್ರಭುವಾದ ಸುಗ್ರೀವನನ್ನು, ಉದ್ಯೋಜಯಿಷ್ಯಾಮಿಯದಿ – ರಾವಣ

ನನಗೆ ಒಂದೂ ತೋರದು. ಬಹುಕಷ್ಟಕ್ಕೆ ಸಿಕ್ಕಿ ಬಿದ್ದಿದೇನೆ ॥೧೧॥ ಇದಲ್ಲದೆ ಈರಾತ್ರಿಯು ಕಳೆದು ಚೆನ್ನಾಗಿ ಬೆಳಗಾಗುವುದರೊಳಗಾಗಿ ನಾನು ಈ ಜಾನಕಿಯನ್ನು ಸಮಾಧಾನಗೊಳಿಸಿದರೇ ಸರಿ, ಹಾಗಿಲ್ಲದೆ ಇದಕ್ಕೆ ನಾನು ತಪ್ಪಿದುದೇ ಆದರೆ ಮತ್ತೇನೂ ಸಂಶಯವೇ ಇಲ್ಲ, ವೈದೇಹಿಯು ತನ್ನ ದೇಹವನ್ನು ತೊರೆಯುವುದೇ ಸಿದ್ಧ ॥೧೨॥ ಹೀಗೆ ಸುತ್ತಲೂ ಮುತ್ತಿರುವ ರಕ್ಕಸಿಯರ ನಡುವೆ ಸಿಲುಕಿರುವ ಸೀತೆಯೊಡನೆ ಮಾತನಾಡಲಾಗದಿರುವುದು ನನಗೆ ಧರ್ಮಸಂಕಟವಾಗಿದೆ, ನಾನು ಮಾತನಾಡದೆಯೇ ಇಲ್ಲಿಂದ ಹೊರಟು ಹೋದರೆ, ಶ್ರೀರಾಮನು ನನ್ನ ಮುಖವನ್ನು ನೋಡಿದ ಕೂಡಲೇ ಅರಳಿದ ಮುಖವುಳ್ಳವನಾಗಿ ಅಪ್ಪಾ, ಆಂಜನೇಯಾ! ಸೀತೆಯನ್ನು ಕಂಡೆಯಾ? ನನಗೆ ಏನ ಹೇಳಹೇಳಿದಳು ? ಎಂದು ಕೇಳಿದರೆ, ಇಲ್ಲಿ ಏನೊಂದನ್ನೂ ಮಾತನಾಡದೆ ಇದ್ದ ನಾನು ಆಗ ಆತನೊಡನೆ ಏನಹೇಳಲಿ ? ॥೧೩॥ ಸೀತೆಯ ಮನೋಗತವನ್ನು ತಿಳಿದುಕೊಳ್ಳದೆ ಇಲ್ಲಿಂದ ಬುಡಬುಡನೆ ಓಡಿಹೋಗಿ ರಾಮನಿದಿರಿಗೆ ಸುಮ್ಮನೆ ನಿಂತು ಸೀತೆಯನ್ನು ಕಂಡೆ, ಆದರೆ ಏನನ್ನೂ ಮಾತನಾಡಲಿಲ್ಲ, ಎಂದ ನನ್ನನ್ನು ಸಂಶಯವಿಲ್ಲದೆ ವಂಚಕನೆಂದು ತಿಳಿದು ಕೋಪಾವೇಶಪರನಾಗಿ, ಕಣ್ಣುಗಳಿಂದ ಕಿಡಿಗಳನ್ನು ಉದುರಿಸುತ್ತಾ, ನನ್ನನ್ನು ಸುಟ್ಟೇಬಿಡಬಹುದು ॥೧೪॥

ಯದಿ ಚೋದಯಿಷ್ಯಾಮಿ ಭರ್ತಾರಂ ರಾಮಕಾರಣಾತ್ ।
ವ್ಯರ್ಥಮಾಗಮನಂ ತಸ್ಯ ಸಸೈನ್ಯಸ್ಯ ಭವಿಷ್ಯತಿ ॥೧೫॥
ಅಂತರಂ ತ್ವಹಮಾಸಾದ್ಯ ರಾಕ್ಷಸೀನಾಮಿಹ ಸ್ಥಿತಃ ।
ಶನೈರಾಶ್ವಾಸಯಿಷ್ಯಾಮಿ ಸಂತಾಪಬಹುಳಾಮಿಮಾಮ್ ॥೧೬॥
ಅಹಂ ತ್ವತಿತನುಶ್ಚೈವ ವಾನರಶ್ಚ ವಿಶೇಷತಃ ।
ವಾಚಂ ಚೋದಾಹರಿಷ್ಯಾಮಿ ಮಾನುಷೀಮಿಹ ಸಂಸ್ಕೃತಾಮ್ ॥೧೭॥

---

ನೊಡನೆ ಯುದ್ಧಮಾಡಲಿಕ್ಕೆ ಪ್ರೇರಿಸಿದವನೇ ಆದರೆ, (ತತಃ - ಬಳಿಕ) ಸಸೈನ್ಯಸ್ಯ - ಸೇನೆಯಿಂದೊಡಗೂಡಿದ, ತಸ್ಯ - ಆ ಸುಗ್ರೀವನ, ಆಗಮನಂ - ಇಲ್ಲಿಗೆ ಬರುವಿಕೆಯು, ವ್ಯರ್ಥಂ - ಪ್ರಯೋಜನವಿಲ್ಲದುದು, ಭವಿಷ್ಯತಿ - ಆಗಹೋಗುವುದು ॥೧೫॥ ಅಹಂ - ನಾನು, (ಅತಃ - ಆದಕಾರಣದಿಂದಲೇ) ಇಹ - ಈ ಮರದಮೇಲೆಯೇ, ಸ್ಥಿತಃ - ಇರತಕ್ಕವನಾಗಿ, ರಾಕ್ಷಸೀನಾಂ - ರಕ್ಕಸಿಯರ, ಅಂತರಂ- ಸಮಯವನ್ನು, (ಎಂದರೆ ತುಸಮಂಪೆಯಿಂದಿರುವ ಕಾಲದಲ್ಲಿ ಅಥವಾ ಅವರು ಸ್ವಲ್ಪ ಮರೆಯಲ್ಲಿರುವಾಗ) ಆಸಾದ್ಯ - ಹೊಂದಿ, ಸಂತಾಪಬಹುಳಾಂ - ಸಂಕಟದಿಂದ ತುಂಬಿರುವ, ಇಮಾಂ - ಈ ಸೀತೆಯನ್ನು, ಶನೈಃ - ಮೆಲ್ಲಗೆ, ಆಶ್ವಾಸಯಿಷ್ಯಾಮಿ - ಸಮಾಧಾನಿಸುವೆನು ॥೧೬॥ ವಾನರಃ - ಕಪಿಯಾದ, ಅಹಂ - ನಾನು, ಅತಿತನುಶ್ಚೈವ - ಬಹು ಸೂಕ್ಷ್ಮರೂಪವುಳ್ಳವನಾಗಿ, ಇಹ - ಇಲ್ಲಿ, (ಈ ಸೀತೆಯ ಸಮೀಪದಲ್ಲಿ) ಮಾನುಷೀಂ - ಮನುಷ್ಯಸಂಬಂಧವಾದ, ವಾಚಂ - ವಾಕ್ಯಗಳನ್ನು, ಸಂಸ್ಕೃತಾಂ - ದೇವಸಂಬಂಧವಾದ, ವಾಚಂಚ - ವಾಕ್ಯಗಳನ್ನು, ವಿಶೇಷತಃ - ಹೆಚ್ಚಾಗಿ, ಉದಾಹರಿಷ್ಯಾಮಿ - ಹೇಳಹೋಗುವೆನು ॥೧೭॥ ದ್ವಿಜಾತಿರಿವ - ಬ್ರಾಹ್ಮಣನಹಾಗೆ, ಸಂಸ್ಕೃತಾಂವಾಚಂ - ಸಂಸ್ಕೃತವಾಣಿಯನ್ನು,

---

ಹಾಗೂ ಇಲ್ಲದೆ ಸುಗ್ರೀವನನ್ನು ಕಂಡು, ಪ್ರಭುವೇ! ಸೀತೆಯನ್ನು ಕಂಡೆನು, ಆದರೆ ಆಗ ಅಲ್ಲಿ ರಕ್ಕಸಿಯರ ಹಿಂಡು ಬಲವಾಗಿದ್ದಿತು. ಆದಕಾರಣ ಮಾತನಾಡಲು ಸರಿಯಾದಸಂದರ್ಭವು ಒದಗಲಿಲ್ಲ, ಆದುದರಿಂದಲೇ ಮಾತನಾಡಲಾಗಲಿಲ್ಲ, ನೀನು ದಂಡನ್ನೆತ್ತಿ ಯುದ್ಧಕ್ಕೆ ಹೊರಡು, ನಾವೆಲ್ಲರೂಸೇರಿ ರಾವಣನನ್ನು ಸಮೂಲವಾಗಿ ಬಲಿಕೊಡೋಣ ಎಂದು ಉತ್ತೇಜನವನ್ನು ಕೊಟ್ಟು, ಸೇನಾಸಹಿತನಾದ ಸುಗ್ರೀವನನ್ನು ರಾಮಕಾರ್ಯಾರ್ಥವಾಗಿ ಇಲ್ಲಿಗೆ ಯುದ್ಧಕ್ಕಾಗಿ ಕರೆತರೋಣವೆಂದರೆ, ಇನ್ನು ಅರೆಗಳಗೆಯೊಳಗಾಗಿ ಸೀತೆಯು ಪ್ರಾಣಗಳನ್ನು ತೊರೆದುಕೊಂಬಳು, ಆಮೇಲೆ ದಂಡುಬಂದರೇನು! ದಾಳಿಬಂದರೇನು? ಸೇನಾಸಹಿತನಾದ ಸುಗ್ರೀವನಬರವೂ ವ್ಯರ್ಥವೇ ಆಗುವುದು ॥೧೫॥ ಆದಕಾರಣ ನಾನುಈಗಲೇ ತುಸಹೊಂಚುಹಾಕಿ ಸಂಚುನೋಡಿ ಈರಕ್ಕಸಿಯರು ಸ್ವಲ್ಪ ಮರವೆಯಿಂದಿರುವಾಗಲಾಗಲೀ, ಅಥವಾ ಅಲ್ಲಲ್ಲಿ ಹೋಗಿರುವಾಗಲಾಗಲೀ ಸಮಯವನ್ನು ಸಂಪಾದಿಸಿಕೊಂಡು ಅಪಾರವಾದ ಸಂಕಟಕ್ಕೀಡಾಗಿರುವ ಈಸೀತೆಯ ಸನ್ನಿಧಾನಕ್ಕೆ ಮೆಲ್ಲಗೈದಿ ಶ್ರೀರಾಮನ ಕುಶಲವೃತ್ತಾಂತವನ್ನು ಮೃದುವಾಗಿ ಅರಿಕೆಮಾಡಿ ಹೇಗಾದರೂ ದುಃಖೋಪಶಮನವನ್ನುಮಾಡಬೇಕಾಗಿದೆ ॥೧೬॥ ನಾನು ಆಕೆಯೊಂದಿಗೆ ಮಾತನಾಡುವಾಗ ಸೂಕ್ಷ್ಮಕಪಿರೂಪವನ್ನು ತಾಳಿದವನಾಗಿ ಸಾಧಾರಣ ಮನುಷ್ಯರ ಮಾತಿನಿಂದಾಗಲಿ, ಸಂಸ್ಕೃತವಾಕ್ಕಿನಿಂದಲಾಗಲೀ ಮೆಲ್ಲಗೆ ಮಾತನಾಡಬೇಕು, ಒಂದುವೇಳೆ ಬ್ರಾಹ್ಮಣನಂತೆ ಸಂಸ್ಕೃತ

ಯದಿ ವಾಚಂ ಪ್ರದಾಸ್ಯಾಮಿ ದ್ವಿಜಾತಿ ರಿವ ಸಂಸ್ಕೃತಾಮ್ ।
ರಾವಣಂ ಮನ್ಯಮಾನಾ ಮಾಂ ಸೀತಾ ಭೀತಾ ಭವಿಷ್ಯತಿ ॥೧೮॥
ವಾನರಸ್ಯ ವಿಶೇಷೇಣ ಕಥಂ ಸ್ಯಾ ದಭಿಭಾಷಣಮ್ ॥೧೮॥ ॥
ಅವಶ್ಯಮೇವ ವಕ್ತವ್ಯಂ ಮಾನುಷಂ ವಾಕ್ಯ ಮರ್ಥವತ್ ।
ಮಯಾ ಸಾಂತ್ವಯಿತುಂ ಶಕ್ಯಾ ನಾ ನ್ಯಥೇಯ ಮನಿಂದಿತಾ ॥೧೯॥ ॥
ಸೇಯ ಮಾಲೋಕ್ಯ ಮೇ ರೂಪಂ ಜಾನಕೀ ಭಾಷಿತಂ ತಥಾ ।
ರಕ್ಷೋಭಿ ಸ್ತ್ರಾಸಿತಾ ಪೂರ್ವಂ ಭೂಯ ಸ್ತ್ರಾಸಂ ಗಮಿಷ್ಯತಿ ॥೨೦॥

---

ಪ್ರದಾಸ್ಯಾಮಿಯದಿ - ಉಚ್ಚರಿಸುವವನೇ ಆದರೆ, ಸೀತಾಂ - ಸೀತಾದೇವಿಯು, ಮಾಂ - ನನ್ನನ್ನು, ರಾವಣಂ - ರಾವಣನನ್ನಾಗಿ, ಮನ್ಯಮಾನಾ - ತಿಳಿಯುತಿರುವವಳಾಗಿ, ಭೀತಾ- ಭಯಪಟ್ಟವಳು, ಭವಿಷ್ಯತಿ - ಆಗುವಳು ॥೧೮॥ ವಾನರಸ್ಯ - ಮರ್ಕಟಕ್ಕೆ, ವಿಶೇಷೇಣ - ಅಧಿಕವಾಗಿ, ಅಭಿಭಾಷಣಂ - ಇತರರೊಡನೆ ಮಾತನಾಡೋಣವು, ಕಥಂಸ್ಯಾತ್ - ಹೇಗೆ ಉಚಿತವಾಗುವದು (ಮಯಾ - ನನ್ನಿಂದ) ಮಾನುಷಂ - ಮನುಷ್ಯಸಂಬಂಧವಾಗಿಯೂ, ಅರ್ಥವತ್ - ಸ್ಪಷ್ಟಾರ್ಥವುಳ್ಳುದಾಗಿಯೂ ಇರುವ, ವಾಕ್ಯಂ - ವಚನವು, ಅವಶ್ಯಮೇವ-ಮುಖ್ಯವಾಗಿಯೇ, ವಕ್ತವ್ಯಂ-ಹೇಳಲ್ಪಡಬೇಕಾಗಿದೆ ॥೧೯॥ ಮಯಾ - ನನ್ನಿಂದ, ಅನಿಂದಿತಾ - ದೋಷಸಂಬಂಧವಿಲ್ಲದ, ಇಯಂ - ಈ ಸೀತೆಯು, ಅನ್ಯಥಾ - ಮನುಷ್ಯವಚನವನ್ನು ಬಿಟ್ಟು ಬೇರೆ ಮಾರ್ಗದಿಂದ, ಸಾಂತ್ವಯಿತುಂ-ಸಮಾಧಾನ ಪಡಿಸಲಿಕ್ಕೆ, ನಶಕ್ಯಾ-ಸಾಧ್ಯಳೇ ಅಲ್ಲ॥೧೯॥ ॥ (ಕಪಿರೂಪನಾಗಿ ಮನುಷ್ಯರ ಮಾತನ್ನಾಡುವುದು ದೋಷಕರವಾಗಿ ಕಾಣುತ್ತದೆ) ಪೂರ್ವಂ - ಮೊದಲು, ರಕ್ಷೋಭಿಃ - ರಕ್ಕಸರಿಂದ, ತ್ರಾಸಿತಾ - ಭಯಪಡಿಸಲ್ಪಟ್ಟ, ಸೇಯಂ - ಆ ಈ, ಜಾನಕೀ - ಸೀತೆಯು, ಮೇ - ನನ್ನ, ರೂಪಂ - ಶರೀರವನ್ನು, ತಥಾ - ಹಾಗೆಯೇ, ಭಾಷಿತಂ - ಸಂಭಾಷಣೆಯನ್ನು, ಆಲೋಕ್ಯ - ನೋಡಿ, ಭೂಯಃ - ತಿರುಗಿ (ಬಹಳವಾಗಿ) ತ್ರಾಸಂ - ಭಯವನ್ನು, ಗಮಿಷ್ಯತಿ-ಹೊಂದ ಹೋಗುವಳು, ತತಃ - ತರುವಾಯ, ಮನಸ್ವಿನೀ - ಒಳ್ಳೆಯ ಮನಸ್ಸುಳ್ಳ, ವಿಶಾಲಾಕ್ಷೀ - ವಿಶಾಲ

---

ವಾಣಿಯನ್ನು ಉದಹರಿಸಿದರೆ, ರಾವಣನು ಹಿಂದೆ ಸನ್ಯಾಸಿಯ ವೇಷವನ್ನು ತಾಳಿದ್ದ ಹಾಗೆಯೇ ಈಗಲೂ ಈ ಕಪಿರೂಪವನ್ನು ತಾಳಿ ಬಂದಿರುವನು, ನನಗೆ ಈಗ ಮತ್ತಾವ ಕೇಡನ್ನು ಮಾಡಬೇಕೆಂದು ಬಗೆದು ಹೀಗೆ ದೇವವಾಕ್ಕಿನಿಂದ ಮಾತನಾಡುತ್ತಿರುವನೋ ತಿಳಿಯದು ಎಂದು ಭಯಪಡುವಳು, ಈಕೆ ಮನುಷ್ಯಳಾಗಿರುವುದರಿಂದ ಮನುಷ್ಯರ ಮಾತಿನಿಂದಲೇ ಸಂಭಾಷಿಸಬೇಕೆಂದು ತೋರುತ್ತದೆ ॥೧೭ - ೧೮॥ ಹಾಗಾದರೂ ಒಂದು ದೊಡ್ಡ ತೊಂದರೆ ಇದೆ, ಕಪಿಯು ಮನುಷ್ಯರಂತೆ ಮಾತನಾಡುವುದು ಅಸಂಭವ, ಸ್ಪಷ್ಟವಾಗಿ ಅರ್ಥವಾಗುವಂತೆಯೇ ಮಾತನಾಡಿ ಈಕೆಯನ್ನು ಸಮಾಧಾಯಿಸಬೇಕಾಗಿದೆಯಲ್ಲದೆ ಬೇರೆ ದಾರಿಯೇ ಇಲ್ಲ. ॥೧೮-೧೯॥ ॥ ಇದರಮೇಲೆ ಮತ್ತೊಂದು ಸಂಕಟವು ತೋರುತ್ತದೆ, ಬಹು ವನವತಿಯಾದ ಈ ಜಾನಕಿಯು ಮೊದಲೇ ರಕ್ಕಸಿಯರ ಗದರಿಕೆ ಬೆದರಿಕೆಗಳಿಂದ ಬಹಳವಾಗಿ ಭಯಪಟ್ಟದಾಳೆ, ಈಗ ಈ ನನ್ನ ಕಪಿರೂಪವನ್ನೂ, ಮನುಷ್ಯ ವಚನವನ್ನೂ ನೋಡಿ ಮತ್ತಷ್ಟು ಹೆದರಬಹುದು, ಹಾಗೆ ಅಂಜಿದಬಳಿಕ, ಕಾಮರೂಪಿಯಾದ ರಾವಣನು ಬಂದನೆಂದು ಭಾವಿಸಿ ಬೆದರಿ,ನಡುಗುತ,ಗಟ್ಟಿಯಾಗಿ ಅಳುತ ಕೂಗಿಕೊಳ್ಳಲೂಬಹುದು

ತತೋ ಜಾತಪರಿತ್ರಾಸಾ ಶಬ್ದಂ ಕುರ್ಯಾನ್ಮನಸ್ವಿನೀ ।
ಜಾನಮಾನಾ ವಿಶಾಲಾಕ್ಷೀ ರಾವಣಂ ಕಾಮರೂಪಿಣಮ್ ॥೨೧॥
ಸೀತಯಾ ಚ ಕೃತೇ ಶಬ್ದೇ ಸಹಸಾ ರಾಕ್ಷಸೀಗಣಃ ।
ನಾನಾ ಪ್ರಹರಣೋ ಘೋರ ಸ್ಸಮೇಯಾ ದಂತಕೋಪಮಃ ॥೨೨॥
ತತೋ ಮಾಂ ಸಂಪರಿಕ್ಷಿಪ್ಯ ಸರ್ವತೋ ವಿಕೃತಾನನಾಃ ।
ವಧೇ ಚ ಗ್ರಹಣೇ ಚೈವ ಕುರ್ಯುರ್ಯತ್ನಂ ಯಥಾಬಲಮ್ ॥೨೩॥
ಗೃಹ್ಯ ಶಾಖಾಃ ಪ್ರಶಾಖಾಶ್ಚ ಸ್ಕಂಧಾಂಶ್ಚೋತ್ತಮಶಾಖಿನಾಮ್ ।
ದೃಷ್ಟ್ವಾ ವಿಪರಿಧಾವಂತಂ ಭವೇಯುರ್ಭಯಶಂಕಿತಾಃ ॥೨೪॥

ನಯನೆಯಾದ ಸೀತೆಯು, ಜಾತಪರಿತ್ರಾಸಾ - ಭಯವನ್ನುಳ್ಳವಳಾಗಿ (ಮಾಂ - ನನ್ನನ್ನು) ಕಾಮರೂಪಿಣಂ - ಇಚ್ಛಾರೂಪವಾದ ಶರೀರವುಳ್ಳ, ರಾವಣಂ - ರಾವಣನನ್ನಾಗಿ, ಜಾನಮಾನಾ - (ಜಾನಾನಾ) ತಿಳಿಯುತಲಿರುವವಳಾಗಿ, ಶಬ್ದಂ - ಬೊಬ್ಬರದ ಅಬ್ಬರವನ್ನು, ಕುರ್ಯಾತ್ - ಮಾಡುವಳು ॥೨೦-೨೧॥ ಸೀತಯಾ - ಸೀತೆಯಿಂದ, ಶಬ್ದೇ - ಆರ್ತಧ್ವನಿಯು, ಕೃತೇ (ಸತಿ) ಮಾಡಲ್ಪಡುತಿರಲಾಗಿ, ಅಂತಕೋಪಮಃ - ಮೃತ್ಯುವಿಗೆಣೆಯಾಬುದಾದ ಕಾರಣವೇ, ಘೋರಃ - ಭಯಂಕರವಾದ, ರಾಕ್ಷಸೀಗಣಃ - ರಕ್ಕಸಿಯರ ಹಿಂಡು, ನಾನಾಪ್ರಹರಣೋಪೇತಃ - ಬಗೆಬಗೆಯ ಆಯುಧಗಳಿಂದೊಡಗೂಡಿದುದಾಗಿ, ಸಮೇಯಾತ್ - ನನ್ನಮೇಲೆ ಬೀಳಲಿಕ್ಕೆ ಬರುವುದು, ತತಃ - ಆಮೇಲೆ, ವಿಕೃತಾನನಾಃ - ವಿಕಾರವಾದ ಮುಖವುಳ್ಳ ಈ ರಕ್ಕಸಿಯರು, ಮಹಾಬಲಂ - ಹೆಚ್ಚಿದ ಬಲವುಳ್ಳ, ಮಾಂ - ನನ್ನನ್ನು, ಸರ್ವತಃ - ಸುತ್ತಲೂ, ಸಂಪರಿಕ್ಷಿಪ್ಯ - ಹಿಡಿದುತಳ್ಳಿ, ವಧೇಚ - ಕೊಲ್ಲುವುದರಲ್ಲಿಯೂ, ಗ್ರಹಣೇಚ - ಹಿಡಿಯುವುದರಲ್ಲಿಯೂ, ಯತ್ನಂ - ಪ್ರಯತ್ನವನ್ನು, ಕುರ್ಯುರೇವ-ಮಾಡಲೇ ಮಾಡುವರು ॥೨೨-೨೩॥ (ಕಿಂಚ-ಮತ್ತು) ರಾಕ್ಷಸ್ಯಃ - ರಾಕ್ಷಸಿಯರು, ಉತ್ತಮಶಾಖಿನಾಂ - ಮೇಲಾದ ಮರಗಳ, ಶಾಖಾಃ-ತೋರವಾದ ಕೊಂಬೆಗಳನ್ನೂ, ಪ್ರಶಾಖಾಶ್ಚ ಸಣ್ಣಕೊನೆಗಳನ್ನೂ, ಸ್ಕಂಧಾಂಶ್ಚ - ಮರದ ಹೆಗಲುಗಳನ್ನೂ, ಗೃಹ್ಯ [ಪರಿಗೃಹ್ಯ, ಗೃಹೀತ್ವಾ) ಹಿಡಿದು, ಪರಿಧಾವಂತಂ - ಹಾರಿಹೋಗುತಲಿರುವ, (ಮಾಂ - ನನ್ನನ್ನು) ದೃಷ್ಟ್ವಾ-ನೋಡಿ, ವನೇ - ಅರಣ್ಯದಲ್ಲಿ, ವಿಚರತಃ - ಸಂಚರಿಸುತಲಿದ್ದ, ಮಮ -ನನ್ನ, ಮಹತ್ -ದೊಡ್ಡದಾದ,

ಆದಕಾರಣ ವಾನರನಾಗಿಯೇ ಇದ್ದು ವಾನರಭಾಷೆಯಿಂದಲೇ ಮಾತನಾಡಲೆ ? ॥ ಆಯತ ನಯನೆಯಾದ ಸೀತೆಯು ಹಾಗೆ ಅಬ್ಬರಿಸಿದುದೇ ಆದರೆ, ರಕ್ಕಸಿಯರಹಿಂಡೆಲ್ಲ ಬಗ್ಗಟ್ಟಾಗಿ, ಮೃತ್ಯುವಿನಂತೆ ಸಿಟ್ಟುಗೊಂಡು, ಬಗೆಬಗೆಯ ಆಯುಧಗಳನ್ನು ಹಿಡಿದು, ಬೇಗನೆ ಓಡಿಬಂದು, ಸುತ್ತಿಕೊಂಡು, ವಿಕಾರವಾದ ಮೋರೆಗಳನ್ನು ತೋರುತ್ತಾ, ಅಟ್ಟಿಯಾಡಿ ನನ್ನ ಮೇಲೆ ಬೀಳದೆ ಇರುವುದಿಲ್ಲ, ಮತ್ತು-ನಾನು ಮಹಾಬಲಶಾಲಿಯೇ ಆಗಿದ್ದರೂ ನನ್ನನ್ನು ಹಿಡಿಯಲಿಕ್ಕೂ, ಹಾಗೆಯೇ ಕೊಲ್ಲಲಿಕ್ಕೂ ಪ್ರಯತ್ನಿಸದೆ ಇರುವುದೂ ಇಲ್ಲ. ಏನ ಮಾಡಲಿ ? ದಿಕ್ಕೇತೋರದೆ ಇದೆ ॥೨೨-೨೩॥ ಹಾಗೆ ಈ ನಿಶಾಚರಿಯರು ನನ್ನನ್ನು ಬೆನ್ನಟ್ಟಬಂದರೆ, ಆಗನಾನು ಒಂದು ಕೊಂಬೆಯಿಂದ ಮತ್ತೊಂದು ಕೊಂಬೆಯನ್ನು ಹಿಡಿಯುತ್ತಾ ಇವರ ಕೈಗೆ ಸಿಕ್ಕದ ಹಾಗೆ ಮರದಿಂದಮರಕ್ಕೆ ಓಡುತ್ತಿರಬೇಕಾಗುವುದು. ಅಂತಹ ಸಂದರ್ಭದಲ್ಲಿ ವನದೊಳಗೆ ಸಂಚರಿಸುವ ನನ್ನ ಘೋರವಾದರೂಪವನ್ನು ನೋಡಿ, ಈ ರಾತ್ರಿಂ

ಶಕ್ನುಯಾ ನ್ನತು ಸಂಪ್ರಾಪ್ತುಂ ಪರಂ ಪಾರಂ ಮಹೋದಧೇಃ ॥೨೮॥
ಮಾಂ ವಾ ಗೃಹ್ಣೀಯು ರಾಪ್ಲುತ್ಯ ಬಹವ ಶ್ಶೀಘ್ರ ಕಾರಿಣಃ ।
ಸ್ಯಾ ದಿಯಂ ಚಾಗೃಹೀತಾರ್ಥಾ ಮಮ ಚ ಗ್ರಹಣಂ ಭವೇತ್ ॥೨೯॥
ಹಿಂಸಾಭಿ ರುಚಯೋ ಹಿಂಸ್ಯು ರಿಮಾಂ ವಾ ಜನಕಾತ್ಮಜಾಮ್ ।
ವಿಪನ್ನಂ ಸ್ಯಾ ತ್ತತಃ ಕಾರ್ಯಂ ರಾಮಸುಗ್ರೀವಯೋ ರಿದಂ ॥೩೦॥
ಉದ್ದೇಶೇ ನಷ್ಟಮಾರ್ಗೇ ಽ ಸ್ಮಿ ನ್ರಾಕ್ಷಸೈಃ ಪರಿವಾರಿತೇ ।
ಸಾಗರೇಣ ಪರಿಕ್ಷಿಪ್ತೇ ಗುಪ್ತೇ ವಸತಿ ಜಾನಕೀ ॥೩೧॥

---

ಕಾರಿಣಃ – ತ್ವರೆಪಡುವವರಾಗಿ, ಆಪ್ಲುತ್ಯ - ಹಾರಿಬಂದು, ಮಾಂ - ನನ್ನನ್ನು, ಗೃಹ್ಣೀಯುವಾರ್ - ಹಿಡಿದುಕೊಳ್ಳುವರೋ ಹೇಗೋ ? ॥೨೯॥ ಮಮ - ನನ್ನ, ಗ್ರಹಣಂಚ - ಹಿಡಿಯೋಣವೂ, ಭವೇತ್ ಆಗಬಹುದು, (ಮದಿ - ಹೀಗಾದರೆ) ಇಯಂಚ - ಈ ಸೀತೆಯೂ, ಅಗೃಹೀತಾರ್ಥಾ - ರಾಮವೃತ್ತಾಂತವನ್ನು ತಿಳಿಯದವಳು, ಸ್ಯಾತ್ - ಆಗುವಳು ॥೨೯॥ ಹಿಂಸಾಭಿರುಚಯಃ - ಹಿಂಸೆಪಡಿಸುವುದರಲ್ಲಿ ಆಶೆಯುಳ್ಳ ರಾಕ್ಷಸರು, ಇಮಾಂ - ಈ ಜನಕಾತ್ಮಜಾಂವಾ - ಸೀತೆಯನ್ನಾದರೂ, ಹಿಂಸ್ಯುಃ ಹಿಂಸಿಸುವರು, ತತಃ – ಆಮೇಲೆ, (ಈ ಸೀತೆಯ ಹಿಂಸೆಯಿಂದ) ಇದಂ - ಈ, ರಾಮಸುಗ್ರೀವಯೋಃ– ರಾಮಸುಗ್ರೀವರ, ಕಾರ್ಯಂ – ಕೆಲಸವು, ವಿಪನ್ನಂ-ಕೆಟ್ಟುಹೋದುದು, ಸ್ಯಾತ್-ಆಗುವುದು ॥೩೦ ೩೦॥-। ನಷ್ಟಮಾರ್ಗೇ - ಕಾಣದಿರುವ ದಾರಿಯುಳ್ಳುದೂ, ರಾಕ್ಷಸೈಃ - ರಕ್ಕಸರಿಂದ, ಪರಿವಾರಿತೇ - ಸುತ್ತಲ್ಪಟ್ಟುದಾಗಿ, ಗುಪ್ತೇ - ರಕ್ಷಿಸಲ್ಪಟ್ಟುದೂ, ಅಥವಾ, ರಾಕ್ಷಸೈಃ - ರಕ್ಕಸರಿಂದ, ಪರಿವಾರಿತೇ – ಆವರಿಸಲ್ಪಟ್ಟುದೂ, ಗುಪ್ತೇ - ಗೂಢವಾದುದೂ, ಸಾಗರೇಣ - ಸಮುದ್ರದಿಂದ, ಪರಿಕ್ಷಿಪ್ತೇ - ಬಳಸಲ್ಪಟ್ಟುದೂ ಆಗಿರುವ, ಅಸ್ಮಿನ್ - ಈ, ಉದ್ದೇಶೇ – ಲಂಕಾಪ್ರದೇಶದಲ್ಲಿ, ಜಾನಕೀ – ಸೀತಾದೇವಿಯು, ವಸತಿ – ವಾಸಮಾಡುತಲಿದ್ದಾಳೆ ॥೩೧॥ ಮಯಿ - ನಾನು, ಸಂಯುಗೇ - ಯುದ್ಧದಲ್ಲಿ, ವಿಶಸ್ತೇವಾ - ಕೊಲ್ಲಲ್ಪಡುತ

---

ರಾಮನ ಕ್ಷೇಮ ಸಮಾಚಾರವು ಸೀತೆಗೆ ತಿಳಿಯಲಿಕ್ಕೆ ಸ್ವಲ್ಪವೂ ಅವಕಾಶವೇ ತಪ್ಪಿ ಅನರ್ಥವಾಗುವುದು. ಮತ್ತು-ನನಗೆ ಮೃತಿಯು ಸಂಭವಿಸುವುದು, ಇಂತಹ ಧರ್ಮ ಸಂಕಟವು ಒದಗಿರಲಾಗಿ ನಾನು ಏನುಮಾಡಲಿ ? ॥೨೮-೨೯॥ ಈ ಸಂದರ್ಭದಲ್ಲಿ ರಾವಣನೇ ಮೊದಲಾದವರೆಲ್ಲ ಏನೋ ರಾಜತಂತ್ರವು ನಡೆದಿರಬಹುದೆಂದು ಸಂಶಯಪಡುವರು, ಹಿಂಸಕರಾದ ಈ ನಿಶಾಚರರು, ಈ ಸೀತೆಯು ಇದ್ದುದರಿಂದಲೇ ಈ ತೊಂದರೆಗಳು, ಇವಳೇ ಇಲ್ಲದಿದ್ದರೆ ಈ ಅವಸ್ಥೆಯೊಂದೂ ಇರುವುದಿಲ್ಲವೆಂದು ಸಿಟ್ಟಿನಿಂದ ಜಾನಕಿಯನ್ನು ಕೊಂದೇಹಾಕುವರು. ಆಮೇಲೆ ರಾಮಸುಗ್ರೀವರ ಕೋರಿಕೆಯೆಲ್ಲ ಹಾಳಾಗಿ ಹೋಗುವುದು. ಇದುವರೆಗೆ ನಡೆಸಿದ ಸಾಹಸ ಕಾರ್ಯವೆಲ್ಲವೂ ಅಲ್ಲೋಲಕಲ್ಲೋಲವಾಗುವುದು. ಅಯ್ಯೋ! ಎಂತಹ ಅನರ್ಥದಸಂದರ್ಭವೊದಗಿತು ? ॥ ೨೦-೩೦॥ ಹೀಗೆ ನನ್ನ ವಿಚಾರಕ್ಕೆ ಅಂದವೇ ಹರಿಯದೆ ಕೋರಿಕೆಯು ಕೈಗೂಡಲಿಕ್ಕೆ ಅವಕಾಶವೇ ಇಲ್ಲದೆ, ಈ ಮಾಂಸಾಶನರು ನನ್ನನ್ನು ಸೆರೆಯಲ್ಲಿ ಹಾಕಿದರೆ ಅಥವಾ ಕೊಂದುಬಿಟ್ಟರೆ ಆಮೇಲೆ ಮಾಡತಕ್ಕುದೇನು ? ಸೀತೆಯು ಸಾಧಾರಣವಾಗಿ ಜನರು ಹೋಗಿಬರುವ ಮಾರ್ಗದಲ್ಲಿ ಇದ್ದಾಳೆಯೋ? ಇಲ್ಲ ,ವಲ್ಲ; ಹಾಗಿದ್ದರೆ ನಮ್ಮವರು ಯಾರಾದರೂ ಬಂದು ಜಾನಕಿಯನ್ನುಕಂಡು ಈಕೆಯ ಕುಶಲ

ವಿಶಸ್ತೇ ವಾ ಗೃಹೀತೇ ವಾ ರಕ್ಷೋಭಿರ್ಮಯಿ ಸಂಯುಗೇ ।
ನಾನ್ಯಂ ಪಶ್ಯಾಮಿ ರಾಮಸ್ಯ ಸಹಾಯಂ ಕಾರ್ಯಸಾಧನೇ ॥೩೨॥
ವಿಮೃಶಂಶ್ಚ ನ ಪಶ್ಯಾಮಿ ಯೋ ಹತೇ ಮಯಿ ವಾನರಃ ।
ಶತಯೋಜನವಿಸ್ತೀರ್ಣಂ ಲಂಘಯೇತ ಮಹೋದಧಿಂ ॥೩೩॥
ಕಾಮಂ ಹಂತುಂ ಸಮರ್ಥೋಽಸ್ಮಿ ಸಹಸ್ರಾಣ್ಯಪಿ ರಕ್ಷಸಾಮ್ ।
ನತು ಶಕ್ಷ್ಯಾಮಿ ಸಂಪ್ರಾಪ್ತುಂ ಪರಂ ಪಾರಂ ಮಹೋದಧೇಃ ॥೩೪॥
ಅಸತ್ಯಾನಿ ಚ ಯುದ್ಧಾನಿ ಸಂಶಯೋ ಮೇ ನ ರೋಚತೇ ।
ಕಶ್ಚ ನಿಸ್ಸಂಶಯಂ ಕಾರ್ಯಂ ಕುರ್ಯಾತ್ಪ್ರಾಜ್ಞಃ ಸಸಂಶಯಮ್ ॥೩೫॥

---

ಇರುವವನಾದರೂ, ಗೃಹೀತೇ ವಾ - ಸೆರೆಹಿಡಿಯಲ್ಪಡುತ್ತಿರುವವನಾದರೂ, ಕಾರ್ಯಸಾಧನೇ - ಕೆಲಸವನ್ನು ಕೈಗೂಡಿಸುವುದರಲ್ಲಿ, ರಾಮಸ್ಯ - ಶ್ರೀರಾಮನಿಗೆ, ಸಹಾಯಂ - ಕೂಡಾಗತಕ್ಕ, ಅನ್ಯಂ - ನನ್ನನ್ನು ಹೊರತು ಬೇರೊಬ್ಬನನ್ನು, ನ ಪಶ್ಯಾಮಿ - ಅರಿಯೆನು, ಮಯಿ - ನಾನು, ಹತೇ (ಸತಿ) ಕೊಲ್ಲಲ್ಪಡುತ್ತಿರಲಾಗಿ, ಯಃ - ಯಾವ, ವಾನರಃ - ಕಪಿಯು, ವಿಮೃಶನ್ - ಕಾರ್ಯವನ್ನು ಚೆನ್ನಾಗಿ ವಿಚಾರಿಸುವವನಾಗಿ, ಶತಯೋಜನವಿಸ್ತೀರ್ಣಂ - ನೂರುಗಾವುದಗಳ ಅಗಲವಾದ, ಮಹೋದಧಿಂ - ಮಹಾಸಮುದ್ರವನ್ನು, ಲಂಘಯೇತ - ದಾಟಬಲ್ಲನೋ, (ತಂ - ಅಂತಹ ವಾನರನನ್ನು) ನ ಪಶ್ಯಾಮಿ - ಕಾಣೆನು ॥೩೩॥-॥ (ಅಹಂ - ನಾನು) ರಕ್ಷಸಾಂ - ರಾಕ್ಷಸರ, ಸಹಸ್ರಾಣ್ಯಪಿ - ಸಾವಿರಗಳನ್ನಾದರೂ, ಹಂತುಂ - ಕೊಲ್ಲಲಿಕ್ಕೆ, ಕಾಮಂ - ವಿಶೇಷವಾಗಿ, ಸಮರ್ಥಃ - ಶಕ್ತನಾಗಿ, ಅಸ್ಮಿ - ಇದ್ದೇನೆ ॥೩೪॥ ಮಹೋದಧೇಃ - ದೊಡ್ಡ ಕಡಲಿನ, ಪರಂ - ದೂರವಾದ, ಪಾರಂ - ಆಚೆಯ ದಡವನ್ನು ಸಂಪ್ರಾಪ್ತುಂ - ಹೊಂದಲಿಕ್ಕೆ, ನತು ಶಕ್ಷ್ಯಾಮಿ - ಸಮರ್ಥನಾಗಲಾರೆ, ಯುದ್ಧಾನಿ - ಕಾಳಗಗಳು, ಅಸತ್ಯಾನಿ - ನಿಜವಾದವುಗಳಲ್ಲ (ಗೊತ್ತಿಲ್ಲದ ಜಯಾಪಜಯಗಳುಳ್ಳವು) ಸಂಶಯಃ - ಗೆಲುವು ಗೊತ್ತಿಲ್ಲದ ಯುದ್ಧವು, ಮೇ - ನನಗೆ, ನ ರೋಚತೇ - ಒಪ್ಪಿತವಾಗುವುದಿಲ್ಲ ॥೩೫॥

---

ವೃತ್ತಾಂತವನ್ನು ರಾಮಸುಗ್ರೀವರಿಗೆ ಅರುಹಬಹುದಾಗಿದ್ದಿತು, ಯಾರಿಗೂ ದಾರಿಯೇ ದೊರೆಯದೆ, ನೂರಾರು ಗಾವುದಗಳ ಅಗಲವುಳ್ಳ ಕಡಲಿನ ಹೊರಭಾಗದಲ್ಲಿ ಗುಟ್ಟಾಗಿ ವಾಸಮಾಡುತಲಿದ್ದಾಳೆ, ಯಾರ ಅರಿವಿಗೂ ಅವಕಾಶವೇ ಇಲ್ಲ, ನನ್ನ ಪಾಡು ಹಾಗಾದಮೇಲೆ ಹಿಂದುಮುಂದು ಚೆನ್ನಾಗಿ ಯೋಚಿಸಿ, ಇಷ್ಟುದೂರದ ಸಾಗರವನ್ನು ದಾಟಿಬಂದು, ಕಾರ್ಯವನ್ನು ಸಾಧಿಸಿ, ರಾಮನಿಗೆ ಸಹಾಯವನ್ನು ಮಾಡತಕ್ಕ ವಾನರನನ್ನೇ ಕಾಣೆನು. ಆದಕಾರಣ ನನಗೆ ಇತಿಕರ್ತವ್ಯವೇನೂ ತೋರದೇ ಇದೆ ॥೩೧,೩೨,೩೩॥ ಯದ್ಯಪಿ, ಸಾವಿರಾರು ಮಂದಿ ರಕ್ಕಸರು ಕಾಳಗದಲ್ಲಿ ಇದಿರಾದರೂ ಕಡಿದುರುಳಿಸಬಲ್ಲೆನು, ಅಷ್ಟು ಸಾಮರ್ಥ್ಯವು ನನಗೆ ಇದೆ, ಆದರೆ ಅಷ್ಟು ಕಾದಾಡಿದ ತರುವಾಯ ಮಹಾಸಮುದ್ರವನ್ನು ದಾಟಿ ಹೋಗಲಾರೆ, ಇದೂ ಅಲ್ಲದೆ ಈ ಪಿಶಿತಾಶನರೊಡನೆ ನಾನು ಬವರಕ್ಕೆ ನಿಂತರೆ ನನಗೇ ಜಯವಾಗುವುದು, ಒಂದುವೇಳೆ ಅವರೇ ಗೆದ್ದರೂ ಗೆಲ್ಲಬಹುದು, ಹೀಗೆಯೇ ಪರಿಣಮಿಸುವುದೆಂದು ಹೇಗೆ ಹೇಳಲಿಕ್ಕಾದೀತು ? ಕೆಲಸವು ಸಂಶಯಾಸ್ಪದವಾಗಿರುವಾಗ ಜಾಣನಾದವನು ಸಂದೇಹವಿಲ್ಲದೆ ನುಗ್ಗಿ ಕೆಲಸವನ್ನು ಮಾಡಹೋಗುವನೆ ? ಹಾಗೆ ಎಂದಿಗೂ ಹೋಗಲಾರ ॥೩೪,೩೫,೩೫॥ ಅಯ್ಯೋ, ಮುಂದಾಲೋಚನೆಯು ಹಾಯದೆ ಇದೆಯಲ್ಲ

ಪ್ರಾಣತ್ಯಾಗಶ್ಚ ವೈದೇಹ್ಯಾ ಭವೇ ದನಭಿ ಭಾಷಣೆ ॥೩೬॥
ಏಷದೋಷೋ ಮಹಾನ್ ಹಿ ಸ್ಯಾನ್ಮಮ ಸೀತಾಽನಭಿ ಭಾಷಣೆ ।
ಭೂತಾ ಶ್ಚಾರ್ಥಾ ವಿಪದ್ಯಂತೆ ದೇಶ ಕಾಲ ವಿರೋಧಿತಾಃ ॥೩೭॥
ವಿಕ್ಲಬಂ ದೂತ ಮಾಸಾದ್ಯ ತಮಃ ಸೂರ್ಯೋದಯೇಯಥಾ । ॥೩೮॥ ॥

ಪ್ರಾಜ್ಞಃ - ಬುದ್ಧಿಶಾಲಿಯಾದ, ಕಶ್ಚ - ಯಾವನು, ಸಸಂಶಯಂ – ಸಂದೇಹದಿಂದೊಡಗೂಡಿದ, ಕಾರ್ಯಂ- ಕೆಲಸವನ್ನು, ನಿಸ್ಸಂಶಯಂ - ವಿಚಾರವಮಾಡದೆಯೇ, ಕುರ್ಯಾತ್ - ಮಾಡುವನು? ॥ ೩೫ ॥ ॥ ಅನಭಿಭಾಷಣೆ - ಸೀತೆಯೊಡನೆ ನಾನು ಮಾತನಾಡದೆ ಹೋದರೆ, ವೈದೇಹ್ಯಾಃ - ಜಾನಕಿಗೆ, ಪ್ರಾಣತ್ಯಾಗಶ್ಚ - ಪ್ರಾಣನಾಶವೂ, ಭವೇತ್ - ಉಂಟಾಗುವುದು ॥೩೬॥ ಸೀತಾಭಿಭಾಷಣೆ – ವಾನರರೂಪನಾಗಿ ಸೀತೆಯೊಡನೆ ಮಾತನಾಡುವ ಸಂದರ್ಭದಲ್ಲಿ, ಮಹಾನ್ - ದೊಡ್ಡದಾದ, ಏಷಃ - ಈ ಹಿಂದೆಹೇಳಿದ, ದೋಷಃ – ತಪ್ಪು, (ಸೀತೆಯ ಬೆದರಿಕೆಯೇ ಮೊದಲಾದ ಅನರ್ಥವು) ಸ್ಯಾದ್ಧಿ - ಆಗುವುದೇನಿಜ, ಭೂತಾಃ - ಸಿದ್ಧವಾದ (ಕೈಗೂಡುತಬಂದ) ಅರ್ಥಾಃ - ಪ್ರಯೋಜನಗಳೂ, ವಿಕ್ಲಬಂ - ವಿವೇಕಹೀನನಾದ, ದೂತಂ - ಸೇವಕನನ್ನು, ಆಸಾದ್ಯ - ಹೊಂದಿ, ಸೂರ್ಯೋದಯೆ – ಹೊತ್ತುಹುಟ್ಟುವ ಸಮಯದಲ್ಲಿ, ತಮಃ- ಕತ್ತಲು, ಯಥಾ - ಹೇಗೆ, ವಿಪದ್ಯತೆ - ನಾಶವಾಗುತದೆಯೋ, ತಥಾ - ಹಾಗೆಯೇ, ದೇಶಕಾಲವಿರೋಧಿತಾಃ – ಆಯಾ ದೇಶಕಾಲಗಳಿಗೆ ವಿರುದ್ಧಗಳಾಗಿ, ವಿಪದ್ಯಂತೆ - ನಾಶವನ್ನು ಪಡೆಯುತ್ತವೆ ॥೩೭॥ ಅರ್ಥಾನರ್ಥಾಂತರೆ- ಕಾರ್ಯಾಕಾರ್ಯಗಳ ವಿಷಯಗಳಲ್ಲಿ, ನಿಶ್ಚಿತಾಪಿ - ನಿಶ್ಚಯವನ್ನು ಹೊಂದಿದ್ದರೂ, (ಇದುಹೀಗೆಯೇಮಾಡತಕ್ಕದೆಂದು ಗೊತ್ತಾಗಿದ್ದರೂ) ಬುದ್ಧಿಃ - ಬುದ್ಧಿಯು, ವಿಕ್ಲಬದೂತಂ – ಅವಿವೇಕಿಯಾದ ಭಂಟನನ್ನು,

ನಾನೀಗ ಸೀತೆಯೊಡನೆಮಾತನಾಡದೆ, ಶ್ರೀರಾಮನಕುಶಲವನ್ನುತಿಳಿಸದೆ, ಹೊರಟುಹೋದರೆ ಸೀತೆಯು ಬದುಕುವುದಿಲ್ಲ, ಈವಾನರಾಕಾರದಿಂದ ಮನುಷ್ಯರಂತೆ ಮಾತನಾಡಿದರೆ, ನಾನು ವೇಷಧಾರಿಯಾದರಾವಣ ಎಂದು ಸೀತೆಗೆ ಅಭಿಪ್ರಾಯ ವುಂಟಾಗುವುದು, ಮಾತನಾಡಿದರೂಕಷ್ಟ, ಮಾತನಾಡದಿದ್ದರೂಕಷ್ಟ, ರಾಕ್ಷಸರೂ ರಾವಣನಿಂದ ಪ್ರೇರಿತರಾಗಿ ಯುದ್ಧಕ್ಕೂ ಬರುವರು, ಆಮೇಲೆ ಅನರ್ಥ ಪರಂಪರೆಯೇ ಉಂಟಾಗುವುದು, ಯಾವದಾರಿಯನ್ನು ಕುರಿತು ವಿಚಾರವಮಾಡತೊಡಗಿದರೂ ತೊಂದರೆಯೇ ತಲೆದೋರುತಲಿದೆ, ಮತ್ತು - ಯಾವ ಕೆಲಸವನ್ನು ಯಾವಹೊತ್ತಿನಲ್ಲಿ ಹೇಗೆಮಾಡಬೇಕೋ, ಅಲ್ಲದೆ ಯಾವಸ್ಥಳದಲ್ಲಿ ಯಾವ ಸಂದರ್ಭದೊಳಗೆ ಹಿಂದುಮುಂದನ್ನು ಚೆನ್ನಾಗಿಯೋಚಿಸಿ ಮಾಡಬೇಕೋ ಅದನ್ನುಹಾಗೆ ಜ್ಞಾನನು ಮಾಡಬೇಕು, ಹಾಗಿಲ್ಲದೆ ಅವಿಚಾರದಿಂದ ಪ್ರವರ್ತಿಸಿದರೆ ಪ್ರವರ್ತಿಸಿದವನೂ ಅಯೋಗ್ಯನಾಗುವನು, ಮತ್ತು ಕೈಗೂಡುತ ಬಂದಕೆಲಸಗಳೂ ಬುದ್ಧಿಹೀನನಾದ ದೂತನ ಕೈಗೆಸಿಕ್ಕಿ ಹೊತ್ತುಹುಟ್ಟುವಾಗ ಕತ್ತಲು ನಾಶವಾಗುವಹಾಗೆ ಹಾಳಾಗಿಹೊಗುವುದೂ ಉಂಟು. ಲೋಕದಲ್ಲಿ ಕಾರ್ಯವನ್ನು ಸಾಧಿಸುವ ವಿಷಯದೊಳಗೆ ನನಗಿಂತಲೂ ಸಮರ್ಥಲ್ಲ ಎಂಬದಾಗಿ ಯಾವನು ದುರಭಿಮಾನವನ್ನು ಇಟ್ಟುಕೊಂಡಿರುವನೋ ಅಂಥ ದೂತನ ಕೆಲಸವನ್ನು ಹಾಳುಮಾಡುವನು. ಪ್ರಭುವೂ ಮಂತ್ರಿಗಳೂ ಸೇರಿ, ಅನುಕೂಲ ಪ್ರತಿಕೂಲಗಳನ್ನು ಚೆನ್ನಾಗಿ ವಿಚಾರಿಸಿ,ಹೀಗೆಯೇ ಸಿದ್ಧಿಸುವುದೆಂದು ನಿಶ್ಚಯಿಸಿದ ಕೆಲಸಗಳನ್ನು ಸಹ ಅವಿವೇಕಿಗಳಾದ ದೂತರು ಹಾಳುಮಾಡುತ್ತಾರೆ, ಆದಕಾರಣ ಕೈಗೊಂಡಕೆಲಸವು

ಅರ್ಥಾನರ್ಥಾಂತರೇ ಬುದ್ಧಿರ್ನಿಶ್ಚಿತಾಽಪಿ ನ ಶೋಭತೇ ॥೩೮॥
ಘಾತಯಂತಿ ಹಿ ಕಾರ್ಯಾಣಿ ದೂತಾಃ ಪಂಡಿತಮಾನಿನಃ ।
ನ ವಿನಶ್ಯೇತ್ಕಥಂ ಕಾರ್ಯಂ ವೈಕ್ಲಬ್ಯಂ ನ ಕಥಂ ಭವೇತ್ ॥೩೯॥
ಲಂಘನಂ ಚ ಸಮುದ್ರಸ್ಯ ಕಥಂ ನು ನ ವೃಥಾ ಭವೇತ್ ।
ಕಥಂ ನು ಖಲು ವಾಕ್ಯಂ ಮೇ ಶೃಣುಯಾನ್ನೋದ್ವಿಜೇತ ವಾ ॥೪೦॥
ಇತಿ ಸಂಚಿಂತ್ಯ ಹನುಮಾಂಶ್ಚಕಾರ ಮತಿಮಾನ್ಮತಿಂ ।
ರಾಮಮಕ್ಲಿಷ್ಟಕರ್ಮಾಣಂ ಸ್ವಬಂಧುಮನುಕೀರ್ತಯನ್ ॥೪೧॥
ನೈನಾಮುದ್ವೇಜಯಿಷ್ಯಾಮಿ ತದ್ಬಂಧುಗತಮಾನಸಾಮ್ ।

---

ಆಸಾದ್ಯ - ಹೊಂದಿ, ನಶೋಭತೆ - ಪ್ರಕಾಶಿಸವುದಿಲ್ಲ ॥೩೮॥ ಪಂಡಿತಮಾನಿನಃ - ನಾವು ಎಲ್ಲವನ್ನೂ ಬಲ್ಲೆವು ಎಂದು ಹೆಮ್ಮೆಪಡುವ, ದೂತಾಃ - ಬಂಟರು, ಕಾರ್ಯಾಣಿ - ಕೆಲಸಗಳನ್ನು, ಘಾತಯಂತಿ - ಹಾಳು ಮಾಡುತ್ತಾರೆ, ಹಿ - ನಿಶ್ಚಯ, ಕಾರ್ಯಂ - ಕೆಲಸವು, ಕಥಂ - ಯಾವಪ್ರಕಾರವಾಗಿ, ನವಿನಶ್ಯೇತ್ - ಕೆಟ್ಟು ಹೋಗದಿರುವುದೋ, ವೈಕ್ಲಬ್ಯಂ - ಅಜ್ಞಾನವು ಕಥಂ - ಹೇಗೆ, ನಭವೇತ್ - ನನಗೆ ಉಂಟಾಗುವುದಿಲ್ಲವೋ ॥೩೯॥ ಸಮುದ್ರಸ್ಯ - ಸಾಗರದ, ಲಂಘನಂಚ - ದಾಟುವಿಕೆಯೂ, ಕಥನ್ನು - ಯಾವರೀತಿಯಾಗಿ, ವೃಥಾ - ವ್ಯರ್ಥವಾದುದು, ನಭವೇತ್ - ಆಗದೆಹೋಗುವುದೊ, [ಸೀತಾ - ಜಾನಕಿಯೂ] ಮೇ - ನನ್ನ, ವಾಕ್ಯಂ - ಮಾತನ್ನು, ಕಥನ್ನುಖಲು - ಮತ್ತೆ ಯಾವಪ್ರಕಾರದಿಂದ, ಶೃಣುಯಾತ್ - ಕೇಳುವಳೊ, ನೋದ್ವಿಜೇತವಾ - ಭಯಪಡದೆ ಇರುವಳೋ ॥೪೦॥ ಇತಿ - ಹೀಗೆಂದು, ಸಂಚಿಂತ್ಯ - ಚೆನ್ನಾಗಿ ವಿಚಾರಮಾಡಿ, ಮತಿಮಾನ್ - ಪ್ರಶಸ್ತಬುದ್ಧಿಯುಳ್ಳ, ಹನುಮಾನ್ - ಆಂಜನೇಯನು, ಮತಿಂ - ತತ್ಕಾಲೋಚಿತವಾದಬುದ್ಧಿಯನ್ನು, ಚಕಾರ - ಮಾಡಿದನು ॥೪೦॥ [illegible] - ಕ್ಲೇಶವಿಲ್ಲದೆ ಕೆಲಸವನ್ನು ಮಾಡುವ (ಸಾಹಸ ಪರನಾದ) ಸ್ವಬಂಧುಂ - ಜಾನಕಿಗೆ ಬಂಧುವಾದ, ರಾಮಂ - ಶ್ರೀರಾಮನನ್ನು, ಅನುಕೀರ್ತಯನ್ - ಸಂಕೀರ್ತಿಸುವವನಾಗಿ ॥೪೧॥ ತದ್ಬಂಧುಗತಮಾನಸಾಂ - ಆ ಬಂಧುವಾದ ರಾಮನನ್ನೇ ಹೊಂದಿರುವ ಮನಸ್ಸುಳ್ಳ, ಏನಾಂ - ಈ ಸೀತಾದೇವಿಯನ್ನು, ನೋದ್ವೇಜಯಿಷ್ಯಾಮಿ - ಭಯಪಡಿಸುವುದಿಲ್ಲ, ಇಕ್ಷ್ವಾಕೂಣಾಂ - ಇಕ್ಷ್ವಾಕುಕುಲದ

---

ಹೇಗೆ ಪ್ರವರ್ತಿಸಿದರೆ ಕೆಡದೆಹೋದೀತು, ಮತ್ತು ಜನರು, ಇವನು ತಿಳಿವಳಿಕೆ ಯುಂಟಾದವನಲ್ಲ ಎಂದು ಹೇಗಾದರೆ ಹೀಯಾಳಿಸದೆ ಇದ್ದಾರು? ಕಾರ್ಯವನ್ನು ಸಾಧಿಸಬಲ್ಲೆನೆಂದು ಹೇಳಿ, ಬಹು ಪ್ರಯಾಸದಿಂದ ಇಷ್ಟುದೂರವಾದ ಕಡಲನ್ನು ದಾಟಿಬಂದುದು ಹೇಗಾದರೆ ವ್ಯರ್ಥವಾಗದೆ ಇದ್ದೀತು? ಯಾವವಿಧವಾಗಿ ಮಾತನಾಡಿದರೆ ಸೀತಾದೇವಿಯು ನನ್ನ ಮಾತುಗಳನ್ನು ಕೇಳಿ ಭಯಪಡದೆ ಇದ್ದಾಳು? ಎಂದೀಪ್ರಕಾರ ಮಹಾ ಬುದ್ಧಿಶಾಲಿಯಾದ ಆಂಜನೇಯನು ಚಿಂತಿಸುವುದಕ್ಕೆ ಉಪಕ್ರಮಿಸಿ, ಆಲೋಚನೆಗೆ ತೊಡಗಿದನು ॥೩೮-೩೯-೪೦॥

ಬಳ್ಳಿಯದು, ಹೀಗೆಮಾಡೋಣ:- ಶ್ರೀರಾಮಚಂದ್ರನು ಸೀತಾದೇವಿಯ ಮನೋಗತವನ್ನು ಚೆನ್ನಾಗಿ ಬಲ್ಲವನು, ಜಾನಕಿಯೂ ಆರಾಘವನ ಮನೋಽಭಿಪ್ರಾಯವನ್ನು ಅರಿತವಳು. ಮತ್ತು ಆತನಲ್ಲಿ ನೆಲೆಗೊಂಡ ಮನಸ್ಸುಳ್ಳವಳಾಗಿದ್ದಾಳೆ, ಆದಕಾರಣ ಇವರಿಬ್ಬರೊಳಗೆ ಯಾರಬಳಿಯಲ್ಲಿ ಪರಸ್ಪರ ನಾಮಸಂಕೀರ್ತನವನ್ನು ಮಾಡಿದರೂ ಇಬ್ಬರಿಗೂ ಆನಂದವುಂಟಾಗುತ್ತದೆ. ಆದಕಾರಣ ಈಗ ನನ್ನ ವಾನರ ರೂಪವನ್ನು ತೋರ್ಪಡಿಸದೆಯೇ ಶ್ರೀರಾಮಕಥಾ ಸಂಕೀರ್ತನವನ್ನು ಮಾಡಿ, ಆಕೆಯ ಮನಸ್ಸಿಗೆ ಉಲ್ಲಾಸವುಂಟಾಗುವಂತೆ, ಎಸಗಿ

ಇಕ್ಷ್ವಾಕೂಣಾಂ ವರಿಷ್ಠಸ್ಯ ರಾಮಸ್ಯ ವಿದಿತಾತ್ಮನಃ ॥೪೩॥
ಶುಭಾನಿ ಧರ್ಮಯುಕ್ತಾನಿ ವಚನಾನಿ ಸಮರ್ಪಯನ್ ।
ಶ್ರಾವಯಿಷ್ಯಾಮಿ ಸರ್ವಾಣಿ ಮಧುರಾಂ ಪ್ರಬ್ರುವನ್ಗಿರಂ ॥೪೪॥
ಶ್ರದ್ಧಾಸ್ಯತಿ ಯಥಾ ಹೀಯಂ ತಥಾ ಸರ್ವಂ ಸಮಾದಧೇ ।

---

ಅರಸರೊಳಗೆ, ವರಿಷ್ಠಸ್ಯ-ಶ್ರೇಷ್ಠನಾದ, ವಿದಿತಾತ್ಮನಃ-ಸೀತೆಯು ಮನಸ್ಸೋಗತವನ್ನು ತಿಳಿದಿರುವ,(ಸೀತೆಯಿಂದ ರಿಯಪ್ಪಟ್ಟರುವ ಮನಸ್ಸುಳ್ಳ) ರಾಮಸ್ಯ- ಶ್ರೀರಾಮನ ಸಂಬಂಧಗಳಾದ ॥೪೩॥ ಶುಭಾನಿ - ಮಂಗಳಕರಗಳಾದ, ಧರ್ಮಯುಕ್ತಾನಿ - ನೀತಿಯಿಂದೊಡಗೂಡಿದವುಗಳೂ ಆಗಿರುವ, ಸರ್ವಾಣಿ - ಸಮಸ್ತಗಳಾದ, ವಚನಾನಿ - ಮಾತುಗಳನ್ನು, ಸಮರ್ಪಯನ್ - ಸೇರಿಸುವವನಾಗಿ, ಮಧುರಾಂ - ಕೇಳಲು ಇಂಪಾಗಿರುವ, ಗಿರಂ - ಮಾತನ್ನು, ಪ್ರಬ್ರುವನ್ - ಸ್ಪಷ್ಟವಾಗಿ ಹೇಳುತಲಿರುವವನಾಗಿ, ಶ್ರಾವಯಿಷ್ಯಾಮಿ - ಕೇಳಿಸುವೆನು ॥೪೪॥ ಇಯಂ - ಈ ಸೀತಾದೇವಿಯು, ಯಥಾ - ಹೇಗೆ, ಶ್ರದ್ಧಾಸ್ಯತಿ - ನಂಬುವಳೋ, ತಥಾ-ಹಾಗೆಯೇ ಸಮಾದಧೇಹಿ-ಸಮಾಧಾನಗೊಳಿಸುತ್ತೇನೆ ॥೪೫॥ ಮಹಾನುಭಾವಃ-ಮಹತ್ತರವಾದ ಸಾಮರ್ಥ್ಯವುಳ್ಳ, ಸಃ - ಆ, ಹನುಮಾನ್-ಆಂಜನೇಯನು, ಜಗತಿಪತೇಃ (ಜಗತೀಪತೇಃ) ಲೋಕನಾಥನಾದ ಶ್ರೀರಾಮನ, ಪ್ರಮದಾಂ - ವಲ್ಲಭೆಯಾದ ಸೀತೆಯನ್ನು ಕುರಿತು, ಇತಿ - ಈ ಪ್ರಕಾರವಾಗಿ, ಬಹುವಿಧಂ-ಅನೇಕಪ್ರಕಾರವಾಗಿ, ಅವೇಕ್ಷಮಾಣಃ - ವಿಚಾರಮಾಡುವವನಾಗುತ್ತಾ, ದ್ರುಮವಿಟಪಾಂತರಂ - ಮರದಕೊಂಬೆಯ ಮಧ್ಯಭಾಗವನ್ನು, ಆಸ್ಥಿತಃ - ಆಶ್ರಯಿಸಿದವನಾಗಿ, ಮಧುರಂ - ಕೇಳಲಿಕ್ಕೆ

---

ಭಯಪಡದ ಹಾಗೆ ಮಾಡಬೇಕು. ಮತ್ತು-ಶ್ರೀರಾಮನು ಸೀತೆಯೊಡನೆ ಹೇಳತಕ್ಕುದೆಂದು ನನ್ನ ಸಂಗಡ ಹೇಳಿದ ಮಾತುಗಳು ಸೀತೆಯು ಕಿವಿಯನ್ನು ಹೊಕ್ಕರೆ ಆಗ ಆಕೆ ನಿಜವಾಗಿಯೂ ಆನಂದಭರಿತಳಾಗುವಳು. ಆದಕಾರಣ ಅಂತಹ ಮಾತುಗಳನ್ನೇ ಹೇಳಿ ವೈದೇಹಿಗೆ ಮುಖೋಲ್ಲಾಸವನ್ನುಂಟುಮಾಡುವೆನು, ದೇಶಕಾಲಗಳಿಗೆ ವಿರೋಧವಿಲ್ಲದಂತೆ ಎಂತಹ ನುಡಿಗಳನ್ನು ಹೇಳಿದರೆ ಜಾನಕಿಯು ಮನದೊಳಾನಂದಿಸುತ, ಇವನು ಶ್ರೀರಾಮದೂತನೇ ಸರಿ ಎಂದು ಹೇಗೆ ಮನದೊಳಗೆ ನಂಬಿಕೆಯನ್ನು ಪಡೆಯಬಲ್ಲಳೋ, ಅಂತಹ ಮಾತುಗಳನ್ನೇ ಇಂಪಾಗಿಯೂ ಹಿತವಾಗಿಯೂ ಇರುವಂತೆ ಹೇಳಹೋಗುವೆನು. ಒಳ್ಳೆಯ ನಡತೆಯುಳ್ಳವನೂ, ಇಕ್ಷ್ವಾಕು ಕುಲತಿಲಕನೂ, ಸರ್ವಜ್ಞನೂ ಆಗಿ ಇರುವ ಶ್ರೀರಾಮನ ವಿಷಯವಾದ ಶುಭಗಳೂ, ಮಂಗಳಕರಗಳೂ ಆದ ಮಧುರವಚನಗಳನ್ನು ಕೇಳಿದರೆ ಆಗ ಈಕೆಗೆ ವಿಶ್ವಾಸವುಂಟಾಗುವುದು ॥೪೧-೪೨-೪೩-೪೪॥ ಎಂದಿಂತು ಅನೇಕ ವಿಧವಾದ ಯೋಚನೆಗಳನ್ನೆಲ್ಲ ಮಾಡಿ, ಶಿಂಶುಪಾ ವೃಕ್ಷದ ಕೊನೆಯ ಎಲೆಗಳ ಪೊದೆಯಲ್ಲಿ ತನ್ನ ಆಕಾರವು ತೋರದ ಹಾಗೆ ಕುಳಿತಿರುವ ಮಹಾನುಭಾವನಾದ ಆಂಜನೇಯನು ಲೋಕನಾಥನಾದ ಶ್ರೀರಾಮಚಂದ್ರನ

ಇತಿ ಸ ಬಹುವಿಧಂ ಮಹಾನುಭಾವೊ ಜಗತಿಪತೇಃ ಪ್ರಮದಾ ಮವೇಕ್ಷಮಾಣಃ ॥
ಮಧುರ ಮವಿತಥಂ ಜಗಾದ ವಾಕ್ಯಂ ದ್ರುಮ ವಿಟಪಾಂತರ ಮಾಸ್ಥಿತೊಹನೂಮಾನ್ ।
— ಇತಿ ಶ್ರೀಮತ್ಸುಂದರಕಾಂಡೆ-ತ್ರಿಂಶಸ್ಸರ್ಗಃ —

ಹಿತವಾಗಿರುವ, ಅವಿತಥಂ - ವ್ಯರ್ಥವಾಗದೆ ಇರತಕ್ಕ, ವಾಕ್ಯಂ- ಮಾತನ್ನು, ಜಗಾದ - ಹೇಳತೊಡಗಿದನು ॥೪೪॥ ॥

—ಇಂತು ಮೂವತ್ತನೆಯ ಸರ್ಗಂ—

ಧರ್ಮಭಾರ್ಯೆಯಾದಸೀತಾದೇವಿಯನ್ನುನೋಡುತ್ತಾ,ಮೃದುಮಧುರಗಳಾಗಿಯೂ,ಸುರಸವಾದ ಅರ್ಥ ದಿಂದೊಡಗೂಡಿದವುಗಳಾಗಿಯೂ ಇರುವ ಮಾತುಗಳನ್ನಾಡತೊಡಗಿದನು ॥೪೩-೪೪॥
ಇಂತು ಮೂವತ್ತನೆಯ ಸರ್ಗವು ಮುಗಿದುದು.

ಶ್ರೀಃ.
ಶ್ರೀರಾಮಚಂದ್ರ ಪರಬ್ರಹ್ಮಣೆ ನಮಃ
## ಶ್ರೀಮತ್ಸುನ್ದರಕಾಣ್ಡೆ ಏಕತ್ರಿಂಶಸ್ಸರ್ಗಃ.

ಮೂ॥ಏವಂ ಬಹುವಿಧಾಂ ಚಿಂತಾಂ ಚಿಂತಯಿತ್ವಾ ಮಹಾಕಪಿಃ।
ಸಂಶ್ರವೇ ಮಧುರಂ ವಾಕ್ಯಂ ವೈದೇಹ್ಯಾ ವ್ಯಾಜಹಾರಹ ॥೧॥

ಮೂವತ್ತೊಂದನೆಯ ಸರ್ಗಂ.
ಕಂದ॥ ವಾನರಪುಂಗವ ನಾಗಳ್ । ಜಾನಕಿಗಾ ರಾಘವೇಶ ಕುಶಲದ ಪರಿಯಂ ।
ಮಾನವ ಭೂಷಣದಿಂದಲ್ । ಸಾನುನಯಂ ಪೇಳುತಂತು ಹಿತಮಂ ಗೈದಂ ॥

ಮಹಾಕಪಿಃ - ಆಂಜನೇಯನು, ಏವಂ - ಈ ಪ್ರಕಾರವಾಗಿ, ಬಹುವಿಧಾಂ - ಅನೇಕಪ್ರಕಾರ ಹಿತವಾದ, ಚಿಂತಾಂ - ವಿಚಾರವನ್ನು, ಚಿಂತಯಿತ್ವಾ ಯೋಚಿಸಿ, ಸಂಶ್ರವೆ ಕೇಳುವ ವಿಷಯದಲ್ಲಿ, ಮಧುರಂ - ಇಂಪಾಗಿರುವ, ವಾಕ್ಯಂ - ವಚನವನ್ನು, ವೈದೇಹ್ಯಾಃ - ಜಾನಕಿಗೆ, ವ್ಯಾಜಹಾರ - ಹೇಳತೊಡಗಿದನು, ಹಾ - ಆಶ್ಚರ್ಯವು! ॥೧॥ ರಥಕುಂಜರವಾಜಿನಾಂ - ತೇರು, ಆನೆ, ಕುದುರೆಗಳುಳ್ಳ, ಪುಣ್ಯಶೀಲಃ - ಪುಣ್ಯಕರವಾದ ಕಾರ್ಯವನ್ನು ಮಾಡುವ ಸ್ವಭಾವವುಳ್ಳ, ಮಹಾಕೀರ್ತಿಃ - ಔದಾರ್ಯದಿಂದ ಹೆಚ್ಚಿದ

— ಮೂವತ್ತೊಂದನೆಯ ಸರ್ಗಂ —

ಬಲಜ್ಞಾನಾದ ವಾಯುನಂದನನು ಹೀಗೆಲ್ಲ ಬಗೆಬಗೆಯಾಗಿ ಚಿಂತಿಸಿ, ಕಟ್ಟಕಡೆಗೆ ಮನಸ್ಸನ್ನು ಧೃಢಪಡಿಸಿಕೊಂಡು, ಸೀತೆಯು ತನ್ನ ನುಡಿಗಳನ್ನು ಕೇಳುವ ಹಾಗೆ ಮರದಮೇಲಣ ಹತ್ತಿರದ ಕೊಂಬೆಗೆ ಮೆಲ್ಲಗೆ ಇಳಿದು, ಆಕೆಯ ಕಿವಿಗಳಿಗೂ, ಮನಸ್ಸಿಗೂ ಇಂಪಾಗಿಯೂ, ಹಿತವಾಗಿಯೂ ಇರುವಂತೆ ಮಾತನಾಡತೊಡಗಿದನು ॥೧॥ ಎಲೌತಾಯೆ ! ಈ ಭೂಮಂಡಲದಲ್ಲಿ ಆನೆ ಕುದುರೆ ತೇರು ಕಾಲಾಳುಗಳೆಂಬ ಚತುರಂಗಸೇನೆಯಿಂದೊಡಗೂಡಿ, ದಶರಥನೆಂಬ ಲೋಕಪ್ರಸಿದ್ಧನಾದ ಒಬ್ಬ ಮಹಾರಾಜನುಂಟು, ಆತನು-

ರಾಜಾ ದಶರಥೋ ನಾಮ ರಥಕುಂಜರ ವಾಜಿಮಾನ್ ।
ಪುಣ್ಯಶೀಲೋ ಮಹಾಕೀರ್ತಿ ಋಜು ರಾಸೀ ನ್ಮಹಾಯಶಾಃ ॥೨॥
ರಾಜರ್ಷೀಣಾಂ ಗುಣಶ್ರೇಷ್ಠ ಸ್ತಪಸಾ ಚರ್ಷಿಭಿ ಸ್ಸಮಃ ।
ಚಕ್ರವರ್ತಿ ಕುಲೇ ಜಾತಃ ಪುರಂದರ ಸಮೋ ಬಲೇ ॥೩॥
ಅಹಿಂಸಾರತಿ ರಕ್ಷುದ್ರೋ ಘೃಣೀ ಸತ್ಯಪರಾಕ್ರಮಃ ।
ಮುಖ್ಯ ಶ್ಚೇಕ್ಷ್ವಾಕು ವಂಶಸ್ಯ ಲಕ್ಷ್ಮೀವಾನ್ ಲಕ್ಷ್ಮಿವರ್ಧನಃ ॥೪॥
ಪಾರ್ಥಿವವ್ಯಂಜನೈ ರ್ಯುಕ್ತಃ ಪೃಥುಶ್ರೀಃ ಪಾರ್ಥಿವರ್ಷಭಃ ।

ಹೆಸರುವಾಸಿಯುಳ್ಳ, ಋಜುಃ - ಸನ್ಮಾರ್ಗ ಪ್ರವೃತ್ತಿಯುಳ್ಳ, ಮಹಾಯಶಾಃ - ವಿಜಯಸಂಪತ್ತಿಯಿಂದುಂಟಾದ ಕೀರ್ತಿಯುಳ್ಳ ॥೨॥ ರಾಜರ್ಷೀಣಾಂ - ರಾಜರೂ ಋಷಿಗಳೂ ಆಗಿ ಇರುವವರೊಳಗೆ, ಗುಣಶ್ರೇಷ್ಠಃ - ಸುಗುಣಗಳಿಂದ ಉತ್ತಮನಾದ, ತಪಸಾ - ತಪಸ್ಸಿನಿಂದ, ಋಷಿಭಿಃ - ಋಷಿಗಳೊಡನೆ, ಸಮಃ - ಸಮಾನನಾದ, ಚಕ್ರವರ್ತಿಕುಲೆ - ಸಾರ್ವಭೌಮನ ಸಂತತಿಯಲ್ಲಿ, ಜಾತಃ - ಉದಿಸಿರುವ, ಬಲೆ- ದೇಹಶಕ್ತಿಯಲ್ಲಿ, ಪುರಂದರಸಮಃ - ಇಂದ್ರನಿಗೆಣೆಯಾದ ॥ ೩ ॥ ಅಹಿಂಸಾರತಿಃ - ಹೆರರಿಗೆ ತೊಂದರೆ ಪಡಿಸದಿರುವುದರಲ್ಲಿ ಆಶೆಯುಳ್ಳ, ಅಕ್ಷುದ್ರಃ - ಕೀಳ ಎದಿಯಲ್ಲಿ ಅಡಿಯಿಡದಿರುವ (ದೊಡ್ಡ ತರಹೆಯುವನಾದ) ಘೃಣೀ - ಬಹು ದಯಾಳುವಾದ, ಸತ್ಯಪರಾಕ್ರಮಃ - ನಿಜವಾದ ಶೌರ್ಯವುಳ್ಳ, ಇಕ್ಷ್ವಾಕುವಂಶಸ್ಯ - ಇಕ್ಷ್ವಾಕುಮಹಾರಾಜನ ಕುಲಕ್ಕೆ, ಮುಖ್ಯಶ್ಚ - ಪ್ರಧಾನನೆನಿಸಿದ, ಲಕ್ಷ್ಮೀವಾನ್ - ಪ್ರಶಸ್ತವಾದ ರಾಜ್ಯಲಕ್ಷ್ಮಿಯುಳ್ಳ, ಲಕ್ಷ್ಮಿವರ್ಧನಃ - (ಲಕ್ಷ್ಮೀವರ್ಧನಃ) ಅನುಸರಿಸಿದವರಿಗೆಲ್ಲ ಸಂಪತ್ತನ್ನು ಹೆಚ್ಚಿಸತಕ್ಕ ॥೪॥ ಪಾರ್ಥಿವವ್ಯಂಜನೈಃ - ಸಕಲ ರಾಜಲಕ್ಷಣಗಳಿಂದ, ಯುಕ್ತಃ - ಕೂಡಿರುವ, ಪೃಥುಶ್ರೀಃ- ವಿಶೇಷವಾದ ದೇಹಕಾಂತಿಯುಳ್ಳ, ಪಾರ್ಥಿವರ್ಷಭಃ-ಅರಸರೊಳಗೆಲ್ಲ ಉತ್ತಮನೆನಿಸಿದ, ಚತುರಂತಾಯಾಂ-

ಬಹುಪುಣ್ಯಕರವಾದ ಸತ್ಕರ್ಮಗಳನ್ನು ಮಾಡತಕ್ಕವನು, ಅನ್ನದಾನಾದಿಗಳಿಂದ ಆತನ ಹೆಸರುವಾಸಿಯು ಲೋಕದಲ್ಲಿ ಹರಡಿಕೊಂಡಿದೆ, ಮನದಲ್ಲಿಯೂ, ಮಾತಿನಲ್ಲಿಯೂ, ನಡತೆಯಲ್ಲಿಯೂ ವಕ್ರವಿಲ್ಲದೆ ಋಜುಮಾರ್ಗದಲ್ಲಿರತಕ್ಕವನು, ಕಾಳಗಗಳೊಳಗೆ ಹಗೆಗಳನ್ನೆಲ್ಲ ಸದೆಬಡಿದಿರುವುದರಿಂದುಂಟಾದ ಯಶಸ್ಸು ಮೂಲೋಕದಲ್ಲಿಯೂ ವ್ಯಾಪಿಸಿ ಇದೆ ॥೨॥ ರಾಜ್ಯಗಳನ್ನಾಳತಕ್ಕ ಅರಸರೆ ಮತ್ತು ತಪಸ್ಸನ್ನಾಚರಿಸುವ ಮಹರ್ಷಿಗಳ ಸುಗುಣಗಳಿಂದ ಅತ್ಯುತ್ತಮನೆನಿಸಿರುವನು, ಸರ್ವಭೂಮಂಡಲಾಧೀಶ್ವರನೆನಿಸಿದ ಇಕ್ಷ್ವಾಕುವೇ ಮೊದಲಾದ ಚಕ್ರವರ್ತಿಗಳ ಕುಲದಲ್ಲಿ ಜನಿಸಿದಾನೆ, ದೇಹಬಲವಲ್ಲಿಯಾದರೋ ಮೂಲೋಕದೊಡೆಯನಾದ ದೇವೇಂದ್ರನಿಗೆಣೆಯೆನಿಸಿರುವನು ॥೩॥ ಸರ್ವಪ್ರಾಣಿಗಳ ಹಿಂಸೆಯನ್ನು ತೊರೆವುದರಲ್ಲಿಯೇ ಆತನಿಗೆ ಅತ್ಯಂತಾಸಕ್ತಿ, ಬಹುದೊಡ್ಡಮನುಷ್ಯ, ದಯಾಳುತೆಯಲ್ಲಿ ಅಗ್ರಗಣ್ಯ, ತಪ್ಪುದಾರಿಯನ್ನು ಹಿಡಿಯದೆ ನಿಜವಾದ ಪರಾಕ್ರಮವುಳ್ಳವನು, ಇಕ್ಷ್ವಾಕು ವಂಶದ ಮಹಾರಾಜರೊಳಗೆ ಬಹಳ ಪ್ರಧಾನನೆನಿಸಿದಾನೆ, ಅಸಮಾನವಾದ ರಾಜ್ಯಲಕ್ಷ್ಮಿಯಿಂದೊಡಗೂಡಿದವನು, ಅಲ್ಲದೆ ತನ್ನನ್ನು ನಂಬಿದವರಿಗೆ ಅಪರಿಮಿತವಾದ ಐಶ್ವರ್ಯವನ್ನು ಕಲ್ಪಿಸತಕ್ಕವನು ॥೪॥ ಸಕಲರಾಜಲಕ್ಷಣ ಸಂಪನ್ನ, ಅಸಮಾನವಾದ ದೇಹಪ್ರಭೆಯುಳ್ಳವ, ಅರಸರೊಳಗೆ ಅಗ್ರಗಣ್ಯ, ಚತುಸ್ಸಮುದ್ರಗಳಿಂದ ಸುತ್ತಲ್ಪಟ್ಟ ಭೂಲೋಕದಲ್ಲೆಲ್ಲ ಹೆಸರುವಾಸಿಯನ್ನು

ಪೃಥಿವ್ಯಾಂ ಚತುರಂತಾಯಾಂ ವಿಶ್ರುತಸ್ಸುಖದಸ್ಸುಖೀ ||೫||
ತಸ್ಯ ಪುತ್ರಃ ಪ್ರಿಯೋ ಜ್ಯೇಷ್ಠಸ್ತಾರಾಧಿಪನಿಭಾನನಃ|
ರಾಮೋ ನಾಮ ವಿಶೇಷಜ್ಞಃ ಶ್ರೇಷ್ಠಸ್ಸರ್ವಧನುಷ್ಮತಾಂ ||೬||
ರಕ್ಷಿತಾ ಸ್ವಸ್ಯ ಧರ್ಮಸ್ಯ ಸ್ವಜನಸ್ಯ ಚ ರಕ್ಷಿತಾ |
ರಕ್ಷಿತಾ ಜೀವಲೋಕಸ್ಯ ಧರ್ಮಸ್ಯ ಚ ಪರಂತಪಃ ||೭||
ತಸ್ಯ ಸತ್ಯಾಭಿಸಂಧಸ್ಯ ವೃದ್ಧಸ್ಯ ವಚನಾತ್ಪಿತುಃ |
ಸಭಾರ್ಯಸ್ಸಹ ಚ ಭ್ರಾತ್ರಾ ವೀರಃ ಪ್ರವ್ರಾಜಿತೋ ವನಮ್ ||೮||

---

ನಾಲ್ಕು ಕಡಲುಗಳ ಕೊನೆಯವರೆಗೂ ಉಳ್ಳ, ಪೃಥಿವ್ಯಾಂ - ಭೂಮಿಯಲ್ಲಿ ವಿಶ್ರುತಃ - ಪ್ರಸಿದ್ಧನಾದ, ಸುಖದಃ - ಆಶ್ರಿತರಿಗೆ ಸುಖವನ್ನು ಕಲ್ಪಿಸುವ, ಸುಖೀ - ಆತ್ಮಸುಖವುಳ್ಳ ||೫|| ದಶರಥೋನಾಮ - ದಶರಥನೆಂದು ಹೇಳಲ್ಪಡುವ ರಾಜಾ - ಅರಸು, ಆಸೀತ್ - ಇದ್ದನು ||೫||-|| ತಸ್ಯ - ಆ ದಶರಥಚಕ್ರವರ್ತಿಗೆ, ಪ್ರಿಯಃ - ಇಷ್ಟನಾದ, ತಾರಾಧಿಪನಿಭಾನನಃ - ಪೂರ್ಣಚಂದ್ರಮುಖನಾಗಿರುವ, ವಿಶೇಷಜ್ಞಃ - ಧರ್ಮವಿಶೇಷಗಳನ್ನೆಲ್ಲ ತಿಳಿದಿರುವ, ಸರ್ವಧನುಷ್ಮತಾಂ - ಎಲ್ಲಾ ಬಿಲ್ಲಾಳುಗಳೊಳಗೂ, ಶ್ರೇಷ್ಠಃ - ಉತ್ತಮನಾಗಿರುವ ||೬|| ಸ್ವಸ್ಯ - ತನ್ನ, ಧರ್ಮಸ್ಯ - ಕುಲಧರ್ಮವನ್ನು, ರಕ್ಷಿತಾ - ಪಾಲಿಸತಕ್ಕ, ಸ್ವಜನಸ್ಯಚ - ಆತ್ಮಬಂಧುಜನವನ್ನೂ, ರಕ್ಷಿತಾ- ಸಂರಕ್ಷಿಸತಕ್ಕ, ಜೀವಲೋಕಸ್ಯ - ಸಕಲ ಪ್ರಾಣಿವರ್ಗವನ್ನೂ, ಧರ್ಮಸ್ಯಚ - ರಾಜಧರ್ಮವನ್ನೂ, ರಕ್ಷಿತಾ - ಪರಿಪಾಲಿಸತಕ್ಕ, ಪರಂತಪಃ - ಶತ್ರುಸಂಹಾರಕನಾದ, ರಾಮೋನಾಮ - ರಾಮನೆಂದು ಪ್ರಸಿದ್ಧಿಯನ್ನು ಪಡೆದಿರುವ, ಜ್ಯೇಷ್ಠಃಪುತ್ರಃ - ಹಿರಿಯಮಗನು||೭||ಸತ್ಯಾಭಿಸಂಧಸ್ಯ-ಸತ್ಯಪ್ರತಿಜ್ಞನಾಗ(ಸತ್ಯಸಂಕಲ್ಪನಾದ)ವೃದ್ಧಸ್ಯ ಜ್ಞಾನದಿಂದಹಿರಿಯವನೆನಿಸಿದ, ತಸ್ಯ-ಆ, ಪಿತುಃ - ತಂದೆಯ, ವಚನಾತ್ - ಮಾತಿನ ದೆಸೆಯಿಂದ, ಸಭಾರ್ಯಃ-ಹೆಂಡತಿಯಿಂದೊಡಗೂಡಿ, ಭ್ರಾತ್ರಾಸಹ - ತಮ್ಮನಿಂದ ಸಹಿತನಾಗಿಯೂ, ವನಂ - ಅರಣ್ಯವನ್ನು ಕುರಿತು, ಪ್ರವ್ರಾಜಿತಃ (ಪ್ರವ್ರಜಿತಃ) ಹೊರಡಿಸಲ್ಪಟ್ಟನು (ಹೊರಟುಹೋದನು) ||೮|| ತತ್ರ - ಆ, ಮಹಾರಣ್ಯೇ - ದೊಡ್ಡಕಾಡಿನಲ್ಲಿ,

---

ಪಡೆದವನು, ಸರ್ವ ಸುಖಪ್ರದಾತ, ಅನ್ಯಾದೃಶವಾದ ಆತ್ಮಸುಖವುಳ್ಳವನಾಗಿದಾನೆ ||೫|| ಇಂತಹ ದಶರಥ ಸಾರ್ವಭೌಮನಿಗೆ ಪೂರ್ಣಚಂದ್ರ ಸದೃಶ ಮುಖನಾಗಿಯೂ, ಮೂಲೋಕದ ಬಿಲ್ಲಾಳುಗಳೊಳಗೆಲ್ಲ ಮೊದಲನೆಯವನಾಗಿಯೂ, ಸಕಲ ಕಲ್ಯಾಣ ಗುಣಾಭಿರಾಮನಾಗಿಯೂ ಇರುವ ರಾಮನೆಂಬೊಬ್ಬ ಹಿರಿಯಮಗನುಂಟು. ಈತನು ಸಕಲಧರ್ಮಗಳನ್ನೂ ಅರಿತವನು, ಆ ತಂದೆಗೆ ಅತ್ಯಂತ ಪ್ರೀತಿಪಾತ್ರ ||೬|| ಮತ್ತು-ತನ್ನ ಕುಲಧರ್ಮಗಳನ್ನೆಲ್ಲ ಲೇಶವಾದರೂ ಬಿಡದೆ ಆಚರಿಸತಕ್ಕವನು, ತನ್ನವರನ್ನು ಎಡೆಬಿಡದೆ ಸಂರಕ್ಷಿಸತಕ್ಕವನು, ಸಕಲಪ್ರಾಣಿವರ್ಗವನ್ನೂ ಕರುಣೆಯಿಂದ ಕಾಪಾಡತಕ್ಕವನು, ರಾಜ ಧರ್ಮಗಳನ್ನು ತುಸವಾದರೂ ತಪ್ಪಿಹೋಗಗೊಡತಕ್ಕನಲ್ಲ, ಇದೂ ಅಲ್ಲದೆ ಶತ್ರುಗಳನ್ನು ಧ್ವಂಸಮಾಡತಕ್ಕವನು ||೭|| ಇಂತಹ ಶ್ರೀರಾಮನು ಜ್ಞಾನದಿಂದಲೇ ವಿಶೇಷವಾಗಿ ಮುದುಕನೆನಿಸಿ, ಆಡಿದಂತೆ ನಡೆಯುವುದನ್ನು ಸ್ವಲ್ಪವಾದರೂ ತಪ್ಪದೆ, ಸತ್ಯಸಂಕಲ್ಪನೂ ಆಗಿರುವ ತಂದೆಯ ಮಾತನ್ನು ನಡೆಸುವುದಕ್ಕಾಗಿ ತನ್ನ ಧರ್ಮಪತ್ನಿಯನ್ನೂ, ಸೋದರನನ್ನೂ ಸಂಗಡ ಕರೆದುಕೊಂಡು ಅರಣ್ಯವನ್ನು ಕುರಿತು ಪ್ರಯಾಣಮಾಡಿದನು ||೮|| ಬಳಿಕ ಬಂದಾನೊಂದು ಸಮಯ ಆ

ತೇನ ತತ್ರ ಮಹಾರಣ್ಯೇ ಮೃಗಯಾಂ ಪರಿಧಾವತಾ ।
ರಾಕ್ಷಸಾ ನಿಹತಾ ಶ್ಶೂರಾ ಬಹವಃ ಕಾಮರೂಪಿಣಃ ॥೯॥
ಜನಸ್ಥಾನ ವಧಂ ಶ್ರುತ್ವಾ ಹತೌ ಚ ಖರದೂಷಣೌ ।
ತತ ಸ್ತ್ವಮರ್ಷಾಽಪಹೃತಾ ಜಾನಕೀ ರಾವಣೇನ ತು ॥
ವಂಚಯಿತ್ವಾ ವನೇ ರಾಮಂ ಮೃಗರೂಪೇಣ ಮಾಯಯಾ ॥೧೦॥
ಸ ಮಾರ್ಗಮಾಣ ಸ್ತಾಂ ದೇವೀಂ ರಾಮ ಸ್ಸೀತಾ ಮನಿಂದಿತಾಮ್ ।
ಆಸಸಾದ ವನೇ ಮಿತ್ರಂ ಸುಗ್ರೀವಂ ನಾಮ ವಾನರಮ್ ॥೧೧॥
ತತ ಸ್ಸವಾಲಿನಂ ಹತ್ವಾ ರಾಮಃ ಪರಪುರಂಜಯಃ ।

---

ಮೃಗಯಾಂ - ಬೇಟೆಯನ್ನು ಕುರಿತು, ಪರಿಧಾವತಾ-ಎಲ್ಲೆಲ್ಲಿಯೂ ಸಂಚರಿಸುತಲಿದ್ದ, ತೇನ - ಆ ರಾಮ ನಿಂದ, ಶೂರಾಃ - ಪರಾಕ್ರಮಶಾಲಿಗಳಾದ, ಬಹವಃ - ಅನೇಕಮಂದಿ, ಕಾಮರೂಪಿಣಃ - ಇಚ್ಛಾನುಸಾ ರರೂಪವನ್ನು ತಾಳತಕ್ಕ, ರಾಕ್ಷಸಾಃ - ನಿಶಾಚರರು, ನಿಹತಾಃ - ಕೊಲ್ಲಲ್ಪಟ್ಟರು ॥೯॥ ತತಃ - ತರು ವಾಯ, ರಾವಣೇನತು - ರಾವಣನಿಂದಲಾದರೋ, ಜನಸ್ಥಾನವಧಂ - ಜನಸ್ಥಾನದಲ್ಲಿನ ರಾಕ್ಷಸಸಂಹಾರ ವನ್ನೂ, ಹತೌ - ಕೊಲ್ಲಲ್ಪಟ್ಟ, ಖರದೂಷಣೌಚ - ಖರದೂಷಣರನ್ನೂ, ಶ್ರುತ್ವಾ - ಕೇಳಿ, ಮಾಯಯಾ- ಮೋಸದಿಂದ, ಮೃಗರೂಪೇಣ - ಜಿಂಕೆಯ ಆಕಾರದಿಂದ, ವನೆ - ಅರಣ್ಯದಲ್ಲಿ, ರಾಮಂ-ಶ್ರೀ ರಾಮನನ್ನು- ವಂಚಯಿತ್ವಾ - ಮೋಸಗೊಳಿಸಿ, ಜಾನಕೀ - ಸೀತಾದೇವಿಯು, ಅಮರ್ಷಾಪಹೃತಾ - ಕೋಪದಿಂದ ಅಪ ಹರಿಸಲ್ಪಟ್ಟಳು ॥೧೦-೧೦॥-॥

ಸಃ- ಆ ಶ್ರೀರಾಮನು, ಅನಿಂದಿತಾಂ - ದೋಷಶೂನ್ಯಳಾದ, ತಾಂ - ಆ, ದೇವೀಂ - ಸೀತಾದೇವಿ ಯನ್ನು, ಮಾರ್ಗಮಾಣಃ - ಹುಡುಕುತ್ತಿರುವವನಾಗಿ, ॥೧೧॥ ವನೆ - ಅರಣ್ಯದಲ್ಲಿ, ಸುಗ್ರೀವಂನಾಮ - ಸುಗ್ರೀವನೆಂದು ಪ್ರಸಿದ್ಧನಾದ ವಾನರಂ ಕಪಿರಾಜನನ್ನು, ಮಿತ್ರಂ - ಸ್ನೇಹಿತನನ್ನಾಗಿ, ಆಸಸಾದ- ಹೊಂದಿದನು ॥೧೨॥ ತತಃ - ಅನಂತರದಲ್ಲಿ, ಪರಪುರಂಜಯಃ - ಹಗೆಗಳ ಪುರಗಳನ್ನು ಗೆಲ್ಲುವ, ಮಹಾ

---

ಕಗ್ಗಾಡಿನಲ್ಲಿ ಬೇಟೆಗಾಗಿ ಸಂಚರಿಸುತಿರುವಲ್ಲಿ, ಇದಿರುಬಿದ್ದ ಬಹು ಶೂರರಾಗಿ ಕಾಮರೂಪಿ ಗಳೂ ಆಗಿದ್ದ ಅನೇಕಮಂದಿ ರಕ್ಕಸರನ್ನು ಕಾಳಗದೊಳಗೆ ಇರಿದನು ॥೯॥ ಜನಸ್ಥಾನವೆಂಬ ಮಹಾರಣ್ಯದೊಳಗೆ ರಾಮನು ರಕ್ಕಸರ ಹಿಂಡನ್ನು ಸದೆಬಡಿದನೆಂತಲೂ, ಖರದೂಷಣರೇ ಮೊದಲಾದ ನಿಶಾಚರರನ್ನು ಯಮನ ಮನೆಗೆ ಕಳುಹಿದನೆಂತಲೂ ಸುದ್ದಿಯನ್ನು ಕೇಳಿದ ರಾವಣನು ಸ್ವಜಾತಿ ವಾತ್ಸಲ್ಯದಿಂದಲೂ, ಬಂಧುಪ್ರೀತಿಯಿಂದಲೂ ರಾಕ್ಷಸರ ವಿನಾಶವನ್ನು ತಾಳಲಾರದೆ ರೋಷಗೊಂಡು ಜನಸ್ಥಾನಕ್ಕೆಹೋಗಿ, ಮಹಾಮಾಯಾವಿಯಾದ ಕಾರಣವೇ ಮೃಗರೂಪವನ್ನು ತಾಳಿದ ಬಬ್ಬನೊಬ್ಬ ನಿಶಾಚರನ ಮೂಲಕ ರಾಮನನ್ನು ಮೋಸಗೊಳಿಸಿ, ಆತನ ಧರ್ಮಪತ್ನಿಯಾದ ಜಾನಕಿಯನ್ನು ಅಪಹರಿಸಿದನು ॥೧೦॥ ಹೀಗಾದ ಬಳಿಕ ಮಹಾಬಲಶಾಲಿಯಾದ ಶ್ರೀರಾಮನು ತನ್ನಧರ್ಮಭಾರ್ಯೆಯಾದ ಆ ಸೀತಾದೇವಿಯನ್ನು ಅಲ್ಲಲ್ಲಿ ಹುಡುಕುತ್ತಾ, ಕಾಡಿನಲ್ಲಿ ಹೊರಟು, ಬಂದಾನೊಂದು ವನದಲ್ಲಿ ಸುಗ್ರೀವನೆಂಬ ವಾನರೋತ್ತಮನೊಡನೆ ಸ್ನೇಹವನ್ನು ಬೆಳಸಿದುದಲ್ಲದೆ ಶರಣಾಗತನ ಸಂರಕ್ಷಣಾರ್ಥವಾಗಿ ಸುಗ್ರೀವನಿಗೆ ಅಣ್ಣನಾದ ವಾಲಿಯೆಂಬ ವಾನರನನ್ನು ಕೊಂದು ಆತನಾಳುತಲಿದ್ದ ಕಿಷ್ಕಿಂಧ

ಪ್ರಾಯಚ್ಛ ತ್ಕಪಿರಾಜ್ಯಂ ತ ತ್ಸುಗ್ರೀವಾಯ ಮಹಾಬಲಃ ॥೧೨॥ ॥
ಸುಗ್ರೀವೇ ಣಾಪಿ ಸಂದಿಷ್ಟಾ ಹರಯಃ ಕಾಮರೂಪಿಣಃ ।
ದಿಕ್ಷು ಸರ್ವಾಸು ತಾಂ ದೇವೀಂ ವಿಚಿನ್ವಂತಿ ಸಹಸ್ರಶಃ ॥೧೩॥॥
ಅಹಂ ಸಂಪಾತಿವಚನಾ ಚ್ಛತಯೋಜನ ಮಾಯತಮ್ ।
ಅಸ್ಯಾ ಹೇತೋರ್ ವಿಶಾಲಾಕ್ಷ್ಯಾ ಸ್ಸಾಗರಂ ವೇಗವಾನ್ ಪ್ಲುತಃ ॥೧೪॥॥
ಯಥಾರೂಪಾಂ ಯಥಾವರ್ಣಾಂ ಯಥಾಲಕ್ಷ್ಮೀಂ ಚ ನಿಶ್ಚಿತಾಮ್ ॥

---

ಬಲಃ - ಹೆಚ್ಚಿದ ಪರಾಕ್ರಮವುಳ್ಳ, ಸಃ - ಆ ರಾಮನು, ವಾಲಿನಂ - ವಾಲಿಯೆಂಬ ಸುಗ್ರೀವನ ಅಣ್ಣನನ್ನು, ಹತ್ವಾ - ಕೊಂದು, ತತ್ - ಆ ಕಪಿರಾಜ್ಯವನ್ನು, (ವಾಲಿರಾಜ್ಯವನ್ನು,) ಸುಗ್ರೀವಾಯ - ಸುಗ್ರೀವನಿಗೋಸ್ಕರ, ಪ್ರಾಯಚ್ಛತ್ - ಕೊಟ್ಟನು ॥೧೨॥-॥ ಕಾಮರೂಪಿಣಃ - ಮನಬಂದ ರೂಪವನು ತಾಳುವ, ಸಹಸ್ರಶಃ - ಸಾವಿರಾರುಮಂದಿ, ಹರಯೋಪಿ - ಕಪಿಗಳೂ, ಸುಗ್ರೀವೇಣ - ಸುಗ್ರೀವನಿಂದ್ನ ಸಂದಿಷ್ಟಾಃ - ಆಜ್ಞಾಪಿಸಲ್ಪಟ್ಟವರಾಗಿ ॥೧೩॥ ಸರ್ವಾಸುದಿಕ್ಷು - ಎಲ್ಲ ದೆಸೆಗಳಲ್ಲಿಯೂ, ತಾಂದೇವೀಂ - ಆ ಸೀತಾದೇವಿಯನ್ನು, ವಿಚಿನ್ವಂತಿ - ಹುಡುಕುತಲಿದ್ದಾರೆ;॥೧೩॥-॥ ಅಹಂ - ನಾನು, ಸಂಪಾತಿವಚನಾತ್ - ಜಟಾಯುವಿನ ಅಣ್ಣನಾದ ಸಂಪಾತಿಯ ಮಾತಿನ ದೆಶೆಯಿಂದ, ಶತಯೋಜನಂ - ನೂರುಗಾವುದದಷ್ಟು, ಆಯತಂ - ಅಗಲವಾದ, ಸಾಗರಂ - ಸಮುದ್ರವನ್ನು, ವಿಶಾಲಾಕ್ಷ್ಯಾಃ - ವಿಶಾಲನಯನೆಯಾದ, ಅಸ್ಯಾಃ - ಈ ಸೀತಾದೇವಿಯ, ಹೇತೋಃ - ನಿಮಿತ್ತದ ದೆಸೆಯಿಂದ, ವೇಗವಾನ್ - ಬಹು ವೇಗವುಳ್ಳವನಾಗಿ, ಪ್ಲುತಃ - ದಾಟಿದವನಾದೆನು ॥೧೪॥-॥ ಅಹಂ - ನಾನು, ರಾಘವಸ್ಯ - ಶ್ರೀ ರಾಮನಿಂದ, ನಿಶ್ಚಿತಾಂ - ನಿಶ್ಚಯಿಸಲ್ಪಟ್ಟ, (ಯಾಂ - ಯಾವಸೀತಾದೇವಿಯನ್ನು) ಯಥಾರೂಪಾಂ - ಯಾವ ವಿಧವಾದ ಆಕಾರವುಳ್ಳವಳನ್ನಾಗಿಯೂ, ಯಥಾವರ್ಣಾಂ - ಯಾವ ಬಗೆಯ ಬಣ್ಣವುಳ್ಳವಳನ್ನಾಗಿಯೂ, ಯಥಾಲಕ್ಷ್ಮೀಂ - ಯಾವತೆರನಾದ ಕಾಂತಿಯುಳ್ಳವಳನ್ನಾಗಿಯೂ, ಅಶ್ರೌಷಂ-ಕೇಳಿ ಇದ್ದೆನೋ, ಸಾ - ಅಂತಹ, ಇಯಂ-

---

ರಾಜ್ಯಭಾರವನ್ನು ಸುಗ್ರೀವನಿಗೆ ಒಪ್ಪಿಸಿದನು ॥೧೧-೧೨॥ ॥ ಅನಂತರದಲ್ಲಿ ಕೃತಜ್ಞನಾದ ಸುಗ್ರೀವನು ಜಾನಕಿಯನ್ನು ಹುಡುಕಿ ಆಕೆಯ ಕುಶಲವೃತ್ತಾಂತವನ್ನು ತರಬೇಕೆಂದು ಸಾವಿರಾರುಮಂದಿ ವಾನರರಿಗೆ ಆಜ್ಞಾಪಿಸಿದನು. ಆತನ ಅಪ್ಪಣೆಯನ್ನು ಶಿರದೊಳಾಂತು ಅನೇಕಮಂದಿ ವಾನರವೀರರು ನಾನಾ ದಿಕ್ಕುಗಳಲ್ಲಿಯೂ ವೈದೇಹಿಯನ್ನು ಹುಡುಕತಲಿದಾರೆ ॥೧೩, ೧೩॥ ॥ ಇಂಥವರೊಳಗೊಬ್ಬನಾದ ನಾನು ಕೆಲವುಮಂದಿ ವಾನರರೊಡನೆ ಹೊರಟು, ತೆಂಕಣಕಡಲ ದಡಕ್ಕೆ ಬಂದು, ಅಲ್ಲಿದ್ದ ಜಟಾಯುವಿನ ಅಣ್ಣನಾದ ಸಂಪಾತಿಯ ಮೂಲಕ ವಿದೇಹರಾಜನಂದಿನಿಯು ಈ ಲಂಕೆಯೊಳಗೆ ಇರುವಳೆಂಬ ಸಮಾಚಾರವನ್ನು ಕೇಳಿ, ನೂರಾರುಗಾವುದಗಳ ದೂರದಷ್ಟು ಅಗಲವಾದ ಕಡಲನ್ನು ಈ ಜಾನಕಿಯ ಸಂದರ್ಶನಾರ್ಥವಾಗಿಯೇ ಬಹುವೇಗದಿಂದ ದಾಟಿಬಂದೆನು ॥ ೧೪ ॥ ॥ ನಾನು ಶ್ರೀರಾಮನಿಂದ ಅಪ್ಪಣೆಯನ್ನು ಪಡೆದು ಹೊರಡುವಾಗ ಶ್ರೀರಾಮನು ಜಾನಕಿಯನ್ನು, ಯಾವಬಗೆಯಾದ ಆಕಾರವುಳ್ಳವಳನ್ನಾಗಿಯೂ, ಮತ್ತಾವವಿಧವಾದ ವರ್ಣವುಳ್ಳವಳನ್ನಾಗಿಯೂ, ಇನ್ನಾವ ಪ್ರಕಾರವಾದ ದೇಹಕಾಂತಿಯುಳ್ಳವಳನ್ನಾಗಿಯೂ ನನ್ನೊಡನೆ ಹೇಳಿ ಇದ್ದನೋ, ಅವುಗಳನ್ನೆಲ್ಲ ಕೇಳಿದ್ದ ಈ ನಾನು ಈಗ ಇಲ್ಲಿ ಅಂತಹನಿಜವಾದ ರೂಪಲಕ್ಷಣ ಲಾವಣ್ಯಾದಿಗಳಿಂದ

ಅಶ್ರೌಷಂ ರಾಘವ ಸ್ಯಾಹಂ ಸೇಯ ಮಾಸಾದಿತಾ ಮಯಾ ॥೧೫॥
ವಿರರಾ ಮೈವ ಮುಕ್ತ್ವಾ ಸೌ ವಾಚಂ ವಾನರಪುಂಗವಃ ।
ಜಾನಕೀ ಚಾಪಿ ತಚ್ಛ್ರುತ್ವಾ ವಿಸ್ಮಯಂ ಪರಮಂ ಗತಾ ॥೧೬॥
ತತ ಸ್ಸಾ ವಕ್ರಕೇಶಾಂತಾ ಸುಕೇಶೀ ಕೇಶಸಂವೃತಮ್।
ಉನ್ನಮ್ಯ ವದನಂ ಭೀರು ಶ್ಶಿಂಶುಪಾವೃಕ್ಷ ಮೈಕ್ಷತ ॥೧೭॥
ನಿಶಮ್ಯ ಸೀತಾವಚನಂ ಕಪೇಶ್ಚ ದಿಶಶ್ಚ ಸರ್ವಾಃ ಪ್ರದಿಶಶ್ಚ ವೀಕ್ಷ್ಯ ।
ಸ್ವಯಂ ಪ್ರಹರ್ಷಂ ಪರಮಂ ಜಗಾಮ ಸರ್ವಾತ್ಮನಾ ರಾಮ ಮನುಸ್ಮರಂತೀ॥೧೮॥

ಈ ಸೀತಾದೇವಿಯು, ಮಯಾ - ನನ್ನಿಂದ, ಆಸಾದಿತಾ - ನೋಡಲ್ಪಟ್ಟಳು ॥೧೫॥-॥ ವಾನರಪುಂಗವಃ - ಕಪಿಶ್ರೇಷ್ಠನಾದ, ಅಸೌ - ಈ ಆಂಜನೇಯನು, ಏವಂ - ಈ ಪ್ರಕಾರವಾಗಿ, ವಾಚಂ - ಮಾತನ್ನು, ಉಕ್ತ್ವಾ - ಹೇಳಿ, ವಿರರಾಮ - ಸುಮ್ಮನಾದನು ॥೧೬॥ ಜಾನಕೀಚಾಪಿ - ಸೀತೆಯೂ, ತತ್ - ಆ ಮಾತನ್ನು, ಶ್ರುತ್ವಾ - ಕೇಳಿ, ಪರಂ - ಉತ್ತಮವಾದ, ವಿಸ್ಮಯಂ - ಆಶ್ಚರ್ಯವನ್ನು, ಗತಾ - ಹೊಂದಿದಳು ॥೧೬॥-॥ ತತಃ - ಅನಂತರದಲ್ಲಿ, ವಕ್ರಕೇಶಾಂತಾ - ಡೊಂಕಾದ ತುದಿಗೂದಲುಳ್ಳ, (ಗುಂಗುರುಗೂದಲುಳ್ಳ) ಸುಕೇಶೀ - ಉತ್ತಮವಾದ ಮುಂಗುರುದಲುಳ್ಳ, ಸಾ - ಆ ಸೀತೆಯು, ಕೇಶಸಂವೃತಂ - ಮುಂಗೂದಲಿನಿಂದ ಮುಚ್ಚಲ್ಪಟ್ಟಿದ್ದ, ವದನಂ - ಮುಖವನ್ನು, ಉನ್ನಮಯ್ಯ - ಮೇಲಕ್ಕೆತ್ತಿ, ಭೀರುಃ - ಭಯಶೀಲಳಾಗಿ, ಶಿಂಶುಪಾವೃಕ್ಷಂ - ಶಿಂಶುಪತರುವನ್ನು, ಐಕ್ಷತ - ನೋಡಿದಳು ॥೧೭॥-॥ ಸೀತಾ - ಜಾನಕಿಯು, ಕಪೇಃ - ಆಂಜನೇಯನ, ವಚನಂಚ - ಮಾತನ್ನೂ, ನಿಶಮ್ಯ - ಕೇಳಿ, ಸರ್ವಾಃ - ಸಮಸ್ತವಾದ, ದಿಶಶ್ಚ - ದಿಕ್ಕುಗಳನ್ನೂ, ಪ್ರದಿಶಶ್ಚ - ವಿದಿಕ್ಕುಗಳನ್ನೂ, ವೀಕ್ಷ್ಯ - ನೋಡಿ ॥ ೧೮ ॥ ಸರ್ವಾತ್ಮನಾ - ಸರ್ವಪ್ರಕಾರದಿಂದಲೂ, ರಾಮಂ - ಶ್ರೀ ರಾಮನನ್ನು, ಅನುಸ್ಮರಂತೀ - ನೆನೆಯುತ್ತಿರುವವಳಾಗಿ, ಸ್ವಯಂ - ತಾನು, ಪರಮಂ - ಉತ್ಕೃಷ್ಟವಾದ, ಪ್ರಹರ್ಷಂ - ಸಂತೋಷವನ್ನು, ಜಗಾಮ - ಹೊಂದಿದಳು ॥೧೮॥-॥ ಸಾ - ಆ ಜಾನಕಿಯು, ತಿರ್ಯಕ್ - ಅಡ್ಡವಾಗಿಯೂ, ತಥಾಪಿ-

ಬಿಡಗೂಡಿರುವ ರಾಘವನ ಧರ್ಮಪತ್ನಿಯನ್ನು ನನ್ನ ಭಾಗ್ಯವಶದಿಂದ ನೋಡುತಲಿದೇನೆ. ॥ ಎಂದೀಪ್ರಕಾರವಾಗಿ ತನ್ನಷ್ಟಕ್ಕೆ ತಾನೇ ಹೇಳಿಕೊಂಡು ವಾನರೋತ್ತಮನಾದ ಮಾರುತಿಯು ಆ ಮಾತುಗಳೆಲ್ಲ ಪೂರ್ತಿಯಾದ ಬಳಿಕ ಸುಮ್ಮನಾದನು ॥೧೬॥ ಆ ಸಮಯದಲ್ಲಿ ನೇಣು ಹಾಕಿಕೊಂಡು ಪ್ರಾಣಗಳನ್ನು ತೊರೆಯಲು ಸಿದ್ಧಳಾಗಿದ್ದ ಸೀತಾದೇವಿಯು "ಇದೇನು ? ಇಂತಹ ಮಹಾವಿಪತ್ತಿನ ಸಮಯದಲ್ಲಿಯೂ ಶ್ರವಣಾನಂದಕರವಾಗಿಅಮೃತಕ್ಕೆಣೆಯೆನಿಸಿರುವ ನುಡಿಗಳು ಶ್ರೀರಾಮನಾಮಾಂಕಿತಗಳಾಗಿ ಬಲುಇಂಪಿನಿಂದ ಕೇಳಬರುತಲಿವೆ" ಎಂದು ಬಹಳವಾಗಿ ಆಶ್ಚರ್ಯಪಟ್ಟುದಲ್ಲದೆ ॥ ೧೬॥ ॥ ಬಲುನೀಳವಾಗಿಯೂ ಅಂದವಾಗಿಯೂ ಇದ್ದು ಮುಖದಮೇಲೆಲ್ಲ ಮುಚ್ಚಿಕೊಂಡಿದ್ದ ಕೂದಲನ್ನು ಮೇಲಕ್ಕೂ, ಓರೆಯಾಗಿಯೂ ಸರಿದು, ರಾವಣನೇನಾದರೂ ಇಲ್ಲಿಗೆ ಬಂದಿರುವನೋ ? ಎಂದುಕೊಂಡು ಭಯಪಡುತ್ತಾ ಮುಖವನ್ನು ಮೇಲಕ್ಕೆತ್ತಿ ಶಿಂಶುಪಾವೃಕ್ಷದ ಮೇಲ್ಭಾಗವನ್ನು ನೋಡಿದಳು ॥ ೧೭॥ ॥ ಮತ್ತು-ಜಾನಕಿಯು ಆ ಆಂಜನೇಯನ ವಚನಗಳನ್ನು ಲಾಲಿಸಿ ಅಂತರಂಗದಲ್ಲಿ ಆನಂದಭರಿತಳಾದುದಲ್ಲದೆ ಈ ನುಡಿಗಳು ಎಲ್ಲಿಂದ ಕೇಳಬಂದುವು? ಎಂದು ನಾಲು ದಿಕ್ಕುಗಳನ್ನೂ

ಸಾ ತಿರ್ಯ ಗೂರ್ಧ್ವಂ ಚ ತಥಾ ಪ್ಯಧಸ್ತಾ ನ್ನಿರೀಕ್ಷಮಾಣಾ ತ ಮಚಿಂತ್ಯ ಬುದ್ಧಿಮ್ ।
ದದರ್ಶ ಪಿಂಗಾಧಿಪತೇ ರಮಾತ್ಯಂ ವಾತಾತ್ಮಜಂ ಸೂರ್ಯಮಿವೋದಯಸ್ಥಮ್ ॥೧೯॥

ಇತಿ ಶ್ರೀಮತ್ಸುಂದರಕಾಂಡೇ-ಏಕತ್ರಿಂಶಸ್ಸರ್ಗಃ

ಹಾಗೆಯೇ, ಊರ್ಧ್ವಂ - ಮೇಲ್ಗಡೆಯೂ, ಅಧಸ್ತ - ಕೆಳಗಡೆಯೂ, ನಿರೀಕ್ಷಮಾಣಾ - ನೋಡುತ್ತಲಿರುವವಳಾಗಿ, ಅಚಿಂತ್ಯಬುದ್ಧಿಂ - ಚಿಂತಿಸಲಸದಳವಾದ ಬುದ್ಧಿಯುಳ್ಳ, ಪಿಂಗಾಧಿಪತೇಃ - ಕಪಿರಾಜನಾದ ಸುಗ್ರೀವನಿಗೆ, ಅಮಾತ್ಯಂ - ಮಂತ್ರಿಯಾಗಿರುವ, ವಾತಾತ್ಮಜಂ - ವಾಯುಪುತ್ರನಾದ, ತಂ - ಆ ಆಂಜನೇಯನನ್ನು, ಉದಯಸ್ಥಂ ಉದಯಪರ್ವತವನ್ನು ಹೊಂದಿರುವ (ಹುಟ್ಟುತಲಿರುವ) ಸೂರ್ಯಮಿವ- ಸೂರ್ಯನನ್ನು ಹೇಗೋಹಾಗೆ, ದದರ್ಶ - ನೋಡಿದಳು ॥೧೯॥

— ಇಂತು ಮೂವತ್ತೊಂದನೆಯ ಸರ್ಗಂ —

ಹಾಗೆಯೇ ವಿದಿಕ್ಕುಗಳನ್ನೂ ನೋಡುತ್ತಾ, ಶ್ರೀರಾಮಚಂದ್ರನನ್ನೇ ಮನದೊಳಗೆ ಸರ್ವಾವಸ್ಥೆಗಳಲ್ಲಿಯೂ ಸ್ಮರಿಸುತ್ತಲೂ, ಕೆಳಗಡೆಯಲ್ಲೆಲ್ಲ ಈಕ್ಷಿಸಿ ಏನೊಂದನ್ನೂ ಕಾಣದೆ, ಪುನಃ ಮೇಲ್ದೆಸೆಗೆ ನೋಡಿ ಶ್ರೀರಾಮಚಂದ್ರಚರಿತ್ರರೂಪವಾದ ಅಮೃತರಸವನ್ನು ನನ್ನ ಕಿವಿಗಳೊಳಗೆ ಕರೆದವರಾರು ? ಎಂದು ಭಾವಿಸುತ್ತಾ, ಯಾರು ಬಂದು ಹೋಗಲಿಕ್ಕೂ ಅಶಕ್ಯವಾಗಿರುವ ರಾವಣನ ಅಂತಃಪುರವನ್ನು ಪ್ರವೇಶಿಸಿರುವುದರಿಂದ ನಿಪುಣತರವಾದ ಬುದ್ಧಿಯುಳ್ಳವನಾಗಿಯೂ, ತನಗೆ ಶ್ರೀರಾಮಕಥಾಮೃತವನ್ನು ಕೇಳಿಸುವ ಮೃದುತರವಾದ ಮಾರ್ಗವನ್ನು ಹುಡುಕಿರುವುದರಿಂದ ಕಪಿಸಾರ್ವಭೌಮನಾದ ಸುಗ್ರೀವನ ಮಂತ್ರಿಯಾಗಿಯೂ, ತನ್ನ ಪ್ರಾಣಗಳೂ, ಶ್ರೀರಾಮಚಂದ್ರನ ಪ್ರಾಣಗಳೂ, ಉಳಿಯುವಂತೆ ಮಾಡುವ ಶಕ್ತಿಯನ್ನು ಪಡೆದಿರುವುದರಿಂದ ಜಗತ್ಪ್ರಾಣನಂದನನಾಗಿಯೂ ಇರುತ ಮರದ ಪೊದೆರೊಳಗೆ ಅವಿತು ಕುಳಿತಿರುವ ಆಂಜನೇಯನನ್ನು, ಆಗತಾನೆ ಉದಯ ಪರ್ವತದಲ್ಲಿ ಉದಿಸುತಪ್ರಕಾಶಿಸುತಲಿರುವ ಸೂರ್ಯಮಂಡಲವನ್ನು ಹೇಗೋಹಾಗೆ ಕಂಡಳು ॥೧೯॥

— ಇಂತು ಮೂವತ್ತೊಂದನೆಯ ಸರ್ಗಂ —



ಶ್ರೀರಾಮಚಂದ್ರ ಪರಬ್ರಹ್ಮಣೇನಮಃ

## ಶ್ರೀಮತ್ಸುನ್ದರಕಾಣ್ಡೇ ದ್ವಾತ್ರಿಂಶಸ್ಸರ್ಗಃ

ಮೂ॥ ತತ ಶ್ಯಾಖಾಂತರೇ ಲೀನಂ ದೃಷ್ಟ್ವಾ ಚಲಿತಮಾನಸಾ ।

— ಮೂವತ್ತೆರಡನೆಯ ಸರ್ಗಂ —

ಕಂದ॥ ರಾಮಕಥಾಶ್ರವಣದೊಳು । ಕೋಮಲೆ ತಾಂ ಶಿರವನೆತ್ತಿ ಮರದೊಳ್ ಕಪಿಯಂ ।
ಭೀಮಾಕೃತಿಯುಂ ಕಾಣುತೆ । ಭೂಮಿಸುತೆ ಬೆದರಿ ದೇವ ನುತಿಯಂ ಗೈದಳ್ ॥

ತತಃ - ತರುವಾಯ, ಸಾ-ಆ ಸೀತಾದೇವಿಯು, ಶಾಖಾಂತರೇ- ಕೊಂಬೆಯ ಪೊದೆಯೊಳಗೆ, ಲೀನಂ_

— ಮೂವತ್ತೆರಡನೆಯ ಸರ್ಗಂ —

ಬಾಲಸೂರ್ಯನಂತೆಸೆವ ಸಮೀರನಂದನನನ್ನು ಆ ಮರದ ಕೊನೆಯ ಪೊದೆಯೊಳಗೆ

ವೇಷ್ಟಿತಾ ರ್ಜುನವಸ್ತ್ರಂ ತಂ ವಿದ್ಯುತ್ಸಂಘಾತ ಪಿಂಗಳಮ್ ॥೧॥
ಸಾ ದದರ್ಶ ಕಪಿಂ ತತ್ರ ಪ್ರಶ್ರಿತಂ ಪ್ರಿಯವಾದಿನಂ ।
ಫುಲ್ಲಾ ಶೋಕೋತ್ಕರಾ ಭಾಸಂ ತಪ್ತ ಚಾಮೀಕರೇಕ್ಷಣಮ್ ॥೨॥
ಮೈಥಿಲೀ ಚಿಂತಯಾಮಾಸ ವಿಸ್ಮಯಂ ಪರಮಂ ಗತಾ ॥೨॥-॥
ಅಹೋ ಭೀಮ ಮಿದಂ ರೂಪಂ ವಾನರಸ್ಯ ದುರಾಸದಮ್ ।
ದುರ್ನಿರೀಕ್ಷ ಮಿತಿ ಜ್ಞಾತ್ವಾ ಪುನರೇವ ಮುಮೋಹ ಸಾ ॥೩॥-॥
ವಿಲಲಾಪ ಭೃಶಂ ಸೀತಾ ಕರುಣಂ ಭಯಮೋಹಿತಾ ।

---

ಅಡಗಿಕೊಂಡಿರುವವನನ್ನು, ದೃಷ್ಟ್ವಾ - ಸಾಮಾನ್ಯವಾಗಿ ನೋಡಿ, (ತತಃ - ಆಮೇಲೆ) ವೇಷ್ಟಿತ-ಸುತ್ತಿಕೊಳ್ಳಲ್ಪಟ್ಟ, ಅರ್ಜುನವಸ್ತ್ರಂ - ಬಿಳಿಯ ಬಟ್ಟೆಯುಳ್ಳ, ವಿದ್ಯುತ್ಸಂಘಾತ - ಮಿಂಚುಗಳ ಹಿಂಡಿನೊಡನೆ ಸಮಾನನಾದ, ತತ್ರ - ಆ ಮರದಲ್ಲಿ, ಪ್ರಶ್ರಿತಂ - ವಿನೀತನಾಗಿರುವ (ವಿನಯ ಸಂಪನ್ನನಾಗಿ ಕಾಣುತಿರುವ) ಪ್ರಿಯವಾದಿನಂ-ಹಿತವಚನವನ್ನು ಹೇಳುತಲಿರತಕ್ಕ, ಫುಲ್ಲ-ಅರಳಿದ, ಅಶೋಕೋತ್ಕರ-ಅಶೋಕ ಕುಸುಮ ಸಮೂಹದ ಹಾಗೆ, ಆಭಾಸಂ - ಹೊಳೆಯುತ್ತಲಿರುವ, ತಪ್ತಚಾಮೀಕರ - ಪುಟದಿಂದ ಶುದ್ಧನಾದ ಚಿನ್ನದಂತೆ, ಈಕ್ಷಣಂ - ನೇತ್ರಗಳುಳ್ಳ, ತಂಕಪಿಂ - ಆ ಆಂಜನೇಯನನ್ನು, ಚಲಿತಮಾನಸಾ - ಭಯದಿಂದ ಅದಿರುತಲಿರುವ ಮನಸ್ಸುಳ್ಳವಳಾಗಿ, ದದರ್ಶ - ಚೆನ್ನಾಗಿ ನೋಡಿದಳು ॥೧-೨॥ ಮೈಥಿಲೀ - ಜನಕಾತ್ಮಜೆಯು, ಪರಮಂ - ಅತಿಶಯವಾದ, ವಿಸ್ಮಯಂ - ಆಶ್ಚರ್ಯವನ್ನು, ಗತಾ - ಹೊಂದಿದವಳಾಗಿ ಚಿಂತಯಾಮಾಸ - ಯೋಚಿಸತೊಡಗಿದಳು, ವಾನರಸ್ಯ - ಕಪಿಗೆ, ಇದಂ - ಇಂತಹ, ಭೀಮಂ - ಭಯಂಕರವಾದ, ರೂಪಂ - ಆಕಾರವು, ಅಹೋ - ಆಶ್ಚರ್ಯಕರವಾಗಿದೆ, ದುರಾಸದಂ - ಬಹು ಕಷ್ಟದಿಂದ ಹೊಂದತಕ್ಕದೆನಿಸಿದೆ, ದುರ್ನಿರೀಕ್ಷ್ಯಂ - ನೋಡಲಿಕ್ಕೆ ಅಶಕ್ಯವಾಗಿರುವುದು, ಇತಿ-ಹೀಗೆಂದು, ಜ್ಞಾತ್ವಾ - ತಿಳಿದು, ಸಾ - ಆ ಸೀತೆಯು, ಪುನರೇವ - ಮರಳಿ, ಮುಮೋಹ - ಮೂರ್ಛೆಯನ್ನು ಹೊಂದಿದಳು (ಮೈಮರೆತಳು) ॥೩.೩॥-॥ (ತತಃ-ಅನಂತರ) ಸೀತಾ - ಸೀತೆಯು, ಭಯಮೋಹಿತಾ - ಭಯದಿಂದ ಮೈಮರೆತವಳಾದ ಕಾರಣವೇ, ಕರುಣಂ - ದೀನವಾಗಿ, ಭೃಶಂ - ಪಾರವಿಲ್ಲವೆ, ವಿಲಲಾಪ - ಮೊರೆಯಿಟ್ಟಳು, ಭಾಮಿನೀ - ಪ್ರಕಾಶವಾನಳಾದ, ಸೀತಾ - ಜಾನಕಿಯು, ದುಃಖಾರ್ತಾ - ವ್ಯಸನಪೀಡಿತಳಾಗಿ, ರಾಮ

---

ಸೀತೆಯು ನೋಡಿದ ಕೂಡಲೇ ಚಪಲ ಚಿತ್ತಳಾದಳು, ಆದರೂ ಇದೇನಿರಬಹುದೆಂದು ಪುನರಪಿ ಮನವಿಟ್ಟು ನೋಡಿದಳು, ತನಗೆ ಕಾಣಬಂದ ವಾನರನು ಬಿಳಿಯ ಬಟ್ಟೆಯನ್ನುಳವಟ್ಟದಾನೆ. ಮಿಂಚಿನರಾಶಿಯಂತೆ ಹೊಂಬಣ್ಣದಿಂದ ಬೆಳಗುತಲಿರುವನು, ಬಹುವಿನಯದಿಂದೊಡಗೂಡಿರುವನು,ಆಗತಾನೆ ಅರಳಿದ ಅಶೋಕ ಕುಸುಮದಂತೆ ತಳತಳಿಸುತಲಿದಾನೆ, ಪುಟವಿಟ್ಟು ಶೋಧಿಸಿದ ಬಂಗಾರದಂತೆ ಕಣ್ಣುಗಳು ಹೊಳೆಯುತಲಿವೆ, ಕೇಳಲಿಕ್ಕೆ ಇಂಪಾಗಿಯೂ, ಮನಸ್ಸಿಗೆ ಹಿತವಾಗಿಯೂ ಇರುವಂತೆ ಶ್ರೀರಾಮ ಕಥಾಸಂಕೀರ್ತನವನ್ನು ಮಾಡುತಲಿದಾನೆ ॥೧, ೨॥ ಎಂದು ಯೋಚಿಸುತ್ತಾ, ಅತ್ಯಾಶ್ಚರ್ಯದಿಂದೊಡಗೂಡಿದವಳಾಗಿ ಅಹಹ ! ಕಪಿಗಳಿಗೆ ಇಂತಹ ಭಯಂಕರವಾದ ಆಕಾರವೂ ಉಂಟೆ ? ಇಂತೀವೇಷವನ್ನು ತಾಳುವುದು ದುಸ್ತರವಲ್ಲವೆ ? ಇದನ್ನು ನೋಡತಕ್ಕದೂ ಬಹುಕಷ್ಟವಲ್ಲವೆ? ಎಂದು ಅಂದುಕೊಳ್ಳುತ್ತಾ ಹಾಗೆಯೇ ಭಯದಿಂದ ಮೂರ್ಛಿತಳಾದಳು ॥ ೩, ೩॥ ॥ ಮತ್ತೆ ಭಯದಿಂದ

ರಾಮ ರಾಮೇತಿ ದುಃಖಾರ್ತಾ ಲಕ್ಷ್ಮಣೇತಿ ಚ ಭಾಮಿನೀ ||೪||
ರುರೋದ ಬಹುಧಾ ಸೀತಾ ಮಂದಂ ಮಂದ ಸ್ವರಾ ಸತೀ ||೫||
ಸಾ ತಂ ದೃಷ್ಟ್ವಾ ಹರಿಶ್ರೇಷ್ಠಂ ವಿನೀತವ ದುಪಸ್ಥಿತಮ್ |
ಮೈಥಿಲೀ ಚಿಂತಯಾಮಾಸ ಸ್ವಪ್ನೋಽಯ ಮಿತಿ ಭಾಮಿನೀ ||೬||
ಸಾ ವೀಕ್ಷಮಾಣಾ ಪೃಥುಭುಗ್ನವಕ್ತ್ರಂ ಶಾಖಾಮೃಗೇಂದ್ರಸ್ಯ ಯಥೋಕ್ತಕಾರಂ|
ದದರ್ಶ ಪಿಂಗಾಧಿಪತೇರಮಾತ್ಯಂ ವಾತಾತ್ಮಜಂ ಬುದ್ಧಿಮತಾಂ ವರಿಷ್ಠಂ ||೭||
ಸಾ ತಂ ಸಮೀಕ್ಷ್ಯೈವ ಭೃಶಂ ವಿಸಂಜ್ಞಾ ಗತಾಸುಕಲ್ಪೇವ ಬಭೂವ ಸೀತಾ |

ರಾಮೇತಿ - ರಾಮರಾಮ ಎಂಬದಾಗಿಯೂ, ಲಕ್ಷ್ಮಣೇತಿಚ - ಓ ಲಕ್ಷ್ಮಣಾ ಎಂಬದಾಗಿಯೂ, ಮಂದಸ್ವರಾಸತೀ - ತಗ್ಗಿದ ಕಂಠಧ್ವನಿಯುಳ್ಳವಳಾಗಿ, ಮಂದಂ - ಮೆಲ್ಲಗೆ, ಮಧುರಂ - ಇಂಪಾಗಿ, ಬಹುಧಾ - ಅನೇಕಪ್ರಕಾರವಾಗಿಯೂ, ರುರೋದ - ಅಳತೊಡಗಿದನು ||೪-೫|| ಭಾಮಿನೀ - ಹೊಳೆಯುತಲಿರುವ. ಸಾ - ಆ ಜಾನಕಿಯು, ವಿನೀತವತ್ - ವಿನಯಸಂಪನ್ನನಂತೆ, ಉಪಸ್ಥಿತಂ - ಸನ್ನಿಧಾನಕ್ಕೆ ಬಂದಿರುವ, ಹರಿಶ್ರೇಷ್ಠಂ - ಕಪಿವರನಾದ, ತಂ - ಆ ಆಂಜನೇಯನನ್ನು, ದೃಷ್ಟ್ವಾ - ನೋಡಿ, ಅಯಂ - ಇದು (ಈ ಕಪಿಯನ್ನು ನೋಡುವಿಕೆಯೆಂಬುದು) ಸ್ವಪ್ನಇತಿ - ಕನಸಾಗಿರಬಹುದು ಎಂದು, ಚಿಂತಯಾಮಾಸ - (ತನ್ನ ಮನದೊಳಗೆ) ವಿಚಾರಮಾಡಿದಳು ||೬|| ಸಾ - ಆ ಸೀತಾದೇವಿಯು, ಪೃಥುಭುಗ್ನವಕ್ತ್ರಂ - ತೋರವಾಗಿಯೂ ಪಳ್ಳದಿಣ್ಣೆಯಾಗಿಯೂ ಇರುವ ಮುಖವುಳ್ಳ, ಶಾಖಾಮೃಗೇಂದ್ರಸ್ಯ - ಕಪಿರಾಜನಾದ ಸುಗ್ರೀವನ, ಯಥೋಕ್ತಕಾರಂ - ಅಪ್ಪಣೆಯಂತೆ ನಡೆದುಕೊಳ್ಳತಕ್ಕ, ಪಿಂಗಾಧಿಪತೇಃ - ವಾನರ ರಾಜನಿಗೆ, ಅಮಾತ್ಯಂ - ಮಂತ್ರಿಯಾಗಿರುವ, ಬುದ್ಧಿಮತಾಂ - ಬುದ್ಧಿಶಾಲಿಗಳೊಳಗೆ, ವರಿಷ್ಠಂ - ಶ್ರೇಷ್ಠನೆನಿಸಿರುವ, ವಾತಾತ್ಮಜಂ - ಮಾರುತಿಯನ್ನು, ವೀಕ್ಷಮಾಣಾ - ನೋಡುತ್ತಿರುವವಳಾಗಿ, (ಈ ವಾನರನು ಹೇಳಿದುದನ್ನು ರಕ್ಕಸಿಯರು ಕೇಳಿದರೋ ಹೇಗೋ ಎಂದು ಇತ್ತತ್ತ ನೋಡುತ್ತಿರುವವಳಾಗಿ) ದದರ್ಶ - ಪುನಃ ನೋಡಿದಳು ||೭||

ಅದಿರುತ್ತಾ ಬಹುದೈನ್ಯದಿಂದ ಬಹಳವಾಗಿ ಪ್ರಲಾಪಿಸುತ್ತಲೂ ಇದ್ದು, ಆ ಮಹತ್ತರವಾದ ದುಃಖದಲ್ಲಿಯೂ ಹಾ ರಾಮಾ, ಹಾ ಲಕ್ಷ್ಮಣಾ ! ಎಂದು ಹಂಬಲಿಸಿ, ದುಃಖಾವೇಶದಿಂದ ಕಂಠಸ್ವರವು ತಗ್ಗಿ, ಮತ್ತೇನು ಅನರ್ಥವು ಸಂಭವಿಸುವುದೋ ಎಂಬ ಭಯದಿಂದ ಮೆಲ್ಲಗೆ ಅಳುತಲಿದ್ದಳು, ಆದರೆ ಆಜಾನಕಿ ಯ ರೋದನ ಧ್ವನಿಯೂ ಇಂಪಾಗಿಯೇ ಇದ್ದಿತು ||೪,೫|| ಸೂಕ್ಷ್ಮತರವಾದ ಸಾಮ್ರಾಜ್ಯಲಕ್ಷ್ಮಿಯಿಂದಲೂ, ದೇಹಪ್ರಭೆಯಿಂದಲೂ ಸಹಿತಳಾದ ಜಾನಕಿಯು ಮರದಮೇಲೆ ಕೇವಲ ಸಮೀಪದಲ್ಲಿರುವ ರೆಂಬೆಯಮೇಲೆ ವಿಶೇಷವಿನಯಸಂಪತ್ತಿಯಿಂದ ಕುಳಿತಿರುವ ಆಂಜನೇಯನನ್ನು ನೋಡಿ ಇದೇನು ನನಗೆ ಕನಸೇನಾದರೂ ಉಂಟಾಯಿತೋ ಏನೋ ಎಂದುಕೊಳ್ಳುತ್ತಾ ||೬|| ತೋರವಾಗಿಯೂ ತುಸುಹಳ್ಳದಿಣ್ಣೆಯಾಗಿಯೂ ಇರುವ ಮೋರೆಯುಳ್ಳವನಾಗಿ, ಕಪಿಸಾರ್ವಭೌಮನಾದ ಸುಗ್ರೀವನಿಗೆ ಕಿಂಕರನೆನಿಸಿ, ಮಹಾ ಬುದ್ಧಿಶಾಲಿಗಳೊಳಗೆ ಉತ್ತಮನಾಗಿ, ಸುಗ್ರೀವನಿಗೆ ಮಂತ್ರಿಯೂ ಆಗಿರುವ ವಾಯುನಂದನನಾದ ಆಂಜನೇಯನನ್ನು ಪುನರಪಿ ವೀಕ್ಷಿಸಿ ||೭|| ಆಕೂಡಲೆ ಬೆದರಿ, ಪ್ರಾಣವೇಹಾರಿ ಹೋದವಳಂತೆ ಮೈಮೇಲೆ ಪ್ರಜ್ಞೆಯಿಲ್ಲದೆ ಬಹಳ ಹೊತ್ತಿನ ಮೇಲೆ

ಚಿರೇಣ ಸಂಜ್ಞಾಂ ಪ್ರತಿಲಭ್ಯ ಭೂಯೋ ವಿಚಿಂತಯಾಮಾಸ ವಿಶಾಲನೇತ್ರಾ
ಸ್ವಪ್ನೇ ಮಯಾಽಯಂ ವಿಕೃತೋಽದ್ಯ ದೃಷ್ಟಃ ಶಾಖಾಮೃಗ ಶ್ಶಾಸ್ತ್ರಗಣೈ ರ್ನಿಷಿದ್ಧಃ ।
ಸ್ವಸ್ತ್ಯಸ್ತು ರಾಮಾಯ ಸಲಕ್ಷ್ಮಣಾಯ ತಥಾ ಪಿತುರ್ಮೇ ಜನಕಸ್ಯ ರಾಜ್ಞಃ ।
ಸ್ವಪ್ನೋಪಿ ನಾಯಂ ನಹಿ ಮೇಽಸ್ತಿ ನಿದ್ರಾ ಶೋಕೇನ ದುಃಖೇನ ಚ ಪೀಡಿತಾಯಾಃ ।
ಸುಖಂ ಹಿ ಮೇ ನಾಸ್ತಿ ಯತೋಽಸ್ಮಿ ಹೀನಾ ತೇನೇಂದು ಪೂರ್ಣ ಪ್ರತಿಮಾನ ನೇನ ॥

---

ಸಾ-ಆ ಜಾನಕಿಯು, ತಂ - ವಿಕೃತರೂಪನಾದ ಆಂಜನೇಯನನ್ನು, ಸಮೀಕ್ಷ್ಯೈವ - ನೋಡಿದ ಮಾತ್ರವೇ, ಭೃಶಂ-ವಿಶೇಷವಾಗಿ, ವಿಸಂಜ್ಞಾ - ಎಚ್ಚರ ತಪ್ಪಿದವಳಾಗಿ, ಗತಾಸುಕಲ್ಪೇವ - ಮೃತಿಯನ್ನು ಹೊಂದಿದವಳಂತೆ, ಬಭೂವ - ಆಗಿದ್ದಳು, ವಿಶಾಲನೇತ್ರಾ - ಅಗಲವಾದ ಕಣ್ಣುಳ್ಳ, ಸೀತಾ - ಜಾನಕಿಯು, ಚಿರೇಣ - ಬಹಳಹೊತ್ತಿಗೆ, ಸಂಜ್ಞಾಂ - ಎಚ್ಚರಿಕೆಯನ್ನು, ಪ್ರತಿಲಭ್ಯ - ಹೊಂದಿ, ಭೂಯಃ - ಪುನಃ, ವಿಚಿನ್ತಯಾಮಾಸ - ಯೋಚಿಸತೊಡಗಿದಳು ॥ ೮ ॥ ಮಯಾ - ನನ್ನಿಂದ, ಅದ್ಯ - ಈಗ, ವಿಕೃತಃ - ವಿಕಾರರೂಪವನ್ನು ಹೊಂದಿರುವ, ಶಾಸ್ತ್ರಗಣೈಃ - ಶಾಸ್ತ್ರಸಮೂಹಗಳಿಂದ, ನಿಷಿದ್ಧಃ- ನಿಷೇಧಿಸಲ್ಪಟ್ಟಿರುವ, ಅಯಂ - ಈ, ಶಾಖಾಮೃಗಃ - ಕಪಿಯು, ಸ್ವಪ್ನೇ - ಕನಸಿನಲ್ಲಿ, ದೃಷ್ಟಃ- ನೋಡಲ್ಪಟ್ಟಿತು, ಸಲಕ್ಷ್ಮಣಾಯ - ಲಕ್ಷ್ಮಣನೊಡಗೂಡಿದ, ರಾಮಾಯ - ಶ್ರೀರಾಮನಿಗೆ, ತಥಾ - ಹಾಗೆಯೇ ನನ್ನ, ಪಿತುಃ - ತಂದೆಯಾದ, ಜನಕಸ್ಯರಾಜ್ಞಃ(ಜ್ಞೇ)-ಜನಕರಾಜನಿಗೂ, ಸ್ವಸ್ತಿ - ಶುಭವು, ಅಸ್ತು - ಆಗಲಿ ॥೯॥ ಅಯಂ - ಈ ಕಪಿಸಂದರ್ಶನವು, ಸ್ವಪ್ನೋಪಿ - ಕನಸೂ, ನ - ಅಲ್ಲವು, ಹಿ - ಏತಕ್ಕೆಂದರೆ, ಮೇ - ನನಗೆ, ನಿದ್ರಾ - ನಿದ್ದೆಯು, ನಾಸ್ತಿ- ಇಲ್ಲ, ಯತಃ - ಏತಕ್ಕೆಂದರೆ, ಇನ್ದು ಪೂರ್ಣಪ್ರತಿಮಾನನೇನ- ಪೂರ್ಣಚಂದ್ರನಿಗೆಣೆಯಾದ ಮುಖವುಳ್ಳ, ತೇನ - ಆ ಶ್ರೀರಾಮಚಂದ್ರನಿಂದ, ಹೀನಾ -ಶೂನ್ಯಳಾದವಳಾಗಿ, ಅಸ್ಮಿ - ಇದೇನೆ, ತತಃ - ಆದುದರಿಂದಲೇ, ಶೋಕೇನ - ಮನೋವ್ಯಥೆಯಿಂದಲೂ, ದುಃಖೇನಚ ರೋದನದಿಂದಲೂ, ಪೀಡಿತಾಯಾಃ - ಬಾಧಿಸಲ್ಪಡುತಲಿರುವ, ಮೇ - ನನಗೆ, ಸುಖಂ - ಸ್ವಪ್ನಸೌಖ್ಯವು (ನಿದ್ರಾಸುಖವು) ನಾಸ್ತಿಹಿ - ಇಲ್ಲವಲ್ಲ ? ॥೧೦॥ ಅಹಂ - ನಾನು, ಸದಾ- ಯಾವಾಗಲೂ, ರಾಮೇತಿ ರಾಮೇತಿ - ರಾಮ ರಾಮ ಎನ್ನುತಲೇ, ವಿಚಿನ್ತ್ಯ - ಮನಸ್ಸಿನಿಂದ ಸ್ಮರಿಸುತ್ತ, ವಾಚಾ - ವಾಕ್ಕಿನಿಂದಲೂ

---

ಸ್ವಲ್ಪ ಎಚ್ಚರವನ್ನು ತಾಳಿ ವಿಶಾಲನಯನೆಯಾದ ಸೀತೆಯು ॥ ೮ ॥ ಆಹಾ ! ಇಂತಹ ವಿಕಾರರೂಪವನ್ನು ತಾಳಿರುವ ಕಪಿಯನ್ನು ಕನಸಿನಲ್ಲಿ ಕಾಣೋಣವು ಶಾಸ್ತ್ರದಲ್ಲಿ ನಿಷೇಧಿಸಲ್ಪಟ್ಟದೆ. ನಾನಾದರೆ ಕನಸಿನೊಳಗೆ ಕಪಿಯನ್ನು ಕಂಡೆನು, ಯಾರಿಗೇನು ಅನರ್ಥವು ಸಂಭವಿಸುವುದೋ ತಿಳಿಯದಲ್ಲಾ, ಹೇಗಾದರೂ ಆಗಲಿ, ನನ್ನ ಸ್ವಾಮಿಯಾದ ಶ್ರೀರಾಮನಿಗೂ, ಮೈದುನನಾದ ಲಕ್ಷ್ಮಣನಿಗೂ, ಹಾಗೆಯೇ ನನ್ನ ತಂದೆಯಾದ ಜನಕಮಹಾರಾಜನಿಗೂ, ಶುಭಸಂಪದಗಳು ಒದಗುತ್ತಿರಲಿ. ॥೯॥ ಎಂದು ಹರಸುತ್ತಾ, ಹಾಗೆಯೇ ಇದೇ ನಾಶ್ಚರ್ಯ! ಈಗ ನಾನು ಈ ಕಪಿಯನ್ನು ಕಂಡದ್ದು ಕನಸು ಎಂತಲೂ ಹೇಳಲಾರೆ, ಏಕೆಂದರೆ-ಅಯ್ಯೋ ನನ್ನ ಈ ಅವಸ್ಥೆಯಲ್ಲಿ ನನಗೆ ನಿದ್ರೆಯೆಲ್ಲಿ ಬಂದೀತು ? ಇಲ್ಲವಲ್ಲ, ಹಗಲಿರುಳೂ ತುಸವಾದರೂ ಬಿಡುವಿಲ್ಲದೆ ಮನೋವ್ಯಥೆಯಿಂದಲೂ, ಹೊರಗೆ ರೋದನದಿಂದಲೂ ಪೀಡಿಸಲ್ಪಡುತಲಿದೇನೆ. ಹಾ ! ಆ ಪೂರ್ಣಚಂದ್ರಮುಖನಾದ ಶ್ರೀರಾಮನನ್ನು ಅಗಲಿರುವ ಈ ನನಗೆ ನಿದ್ರಾಸುಖವೆಲ್ಲಿಯದು ? ॥ ೧೦ ॥ ಅನವರತವೂ ಮನಸ್ಸಿನೊಳಗೆ ರಾಮಾ ! ರಾಮಾ ! ಎಂದು ಚಿಂತಿಸುತ್ತಾ, ವಾಕ್ಕಿನಿಂದ ಆ ದಿವ್ಯವಾದ ರಾಮ

ರಾಮೇತಿ ರಾಮೇತಿ ಸದೈವಬುದ್ಧ್ಯಾ ವಿಚಿಂತ್ಯ ವಾಚಾಬ್ರುವತೀತಮೇವ ॥
ತಸ್ಯಾನುರೂಪಾಂಚ ಕಥಾಂ ತಮರ್ಥಮೇವಂ ಪ್ರಪಶ್ಯಾಮಿ ತಥಾ ಶೃಣೋಮಿ ॥
ಅಹಂ ಹಿ ತಸ್ಯಾದ್ಯ ಮನೋಭವೇನ ಸಂಪೀಡಿತಾ ತದ್ಗತ ಸರ್ವಭಾವಾ ।
ವಿಚಿಂತಯಂತೀ ಸತತಂ ತಮೇವ ತಥೈವ ಪಶ್ಯಾಮಿ ತಥಾ ಶೃಣೋಮಿ ॥೧೨॥
ಮನೋರಥ ಸ್ಸ್ಯಾದಿತಿ ಚಿಂತಯಾಮಿ ತಥಾಪಿ ಬುದ್ಧ್ಯಾ ಚ ವಿತರ್ಕಯಾಮಿ ।

---

ತಮೇವ - ಆ ರಾಮನಾಮವನ್ನೇ, ಬ್ರುವತೀ - ಉಚ್ಚರಿಸುತಲಿರುವವಳೂ ಆಗಿ, ತಸ್ಯ - ಆ ಶ್ರೀರಾಮ ಚಿಂತೆಗೆ, ಅನುರೂಪಾಂ - ಅನುಗುಣವಾದ (ತಕ್ಕ) ಕಥಾಂ - ಕಥೆಯನ್ನೂ, ತಂ - ಆ ಕಥೆಗೆ ಸಂಬಂಧ ಪಟ್ಟ, ಅರ್ಥಂ - ಅರ್ಥವನ್ನೂ, ಏವಂ - ಈ ಪ್ರಕಾರವಾಗಿ, ಪ್ರಪಶ್ಯಾಮಿ - ವಿಶೇಷವಾಗಿ ತಿಳಿಯುತಲಿ ದೇನೆ ॥೧೧॥ ತಥಾ - ಹಾಗೆಯೇ, ಶೃಣೋಮಿ - ಕೇಳುತಲೂ ಇದೇನೆ. ಅಹಂ - ನಾನು, ತಸ್ಯ -ಆ ಶ್ರೀ ರಾಮನ ಸಂಬಂಧವಾದ ವಿಷಯವನ್ನು ಕುರಿತೇ, ತದ್ಗತಸರ್ವಭಾವಾ - ಆ ರಾಮವಿಷಯವಾದ ಸಾತ್ವಿಕಾ ದಿಭಾವಗಳುಳ್ಳವಳಾಗಿ, (ರಾಮನನ್ನೇ ಹೊಂದಿರುವ ಮನಸ್ಸುಳ್ಳವಳಾಗಿ) ಮನೋಭವೇನ - ಮನ್ಮಥನಿಂ ದ, ಸಂಪೀಡಿತಾ - ಬಾಧಿಸಲ್ಪಡುತಲಿರುವವಳಾಗಿ, ಸತತಂ - ಯಾವಾಗಲೂ, ತಮೇವ - ಆ ರಾಮಚಂದ್ರನ ನ್ನೇ ಚಿಂತಯಂತೀ - ನೆನೆಯುತಲಿರುವವಳಾಗಿ, ತಥೈವ-ಹಾಗೆಯೇ, ಪಶ್ಯಾಮಿ- ನೋಡುತಲಿದೇನೆ, ಶೃ ಣೋಮಿ-ಕೇಳುತಲಿದೇನೆ ॥೧೨॥ (ಇದಂ-ಈ ರಾಮಕಥೆಯನ್ನು ಹೇಳುವವನ ನೋಟವು) ಮನೋರಥಃ- ಮನಸ್ಸಿನ ಹಂಬಲಿಕೆಯು, ಸ್ಯಾತ್ - ಆಗಿರಬೇಕು, ಇತಿ-ಹೀಗೆಂದು, ಚಿಂತಯಾಮಿ-ಯೋಚಿಸುತ್ತೇನೆ,ತ ಥಾಪಿ-ಹಾಗಾದಾಗ್ಯೂ,ಬುದ್ಧ್ಯಾ-ಬುದ್ಧಿಯಿಂದ,ವಿತರ್ಕಯಾಮಿಚ-ಊಹಿಸಿಯೂ ನೋಡುತ್ತೇನೆ,ಕಾರಣಂ;

---

ನಾಮವನ್ನೇ ಉಚ್ಚರಿಸುತ್ತಾ, ಅವನ ಚರಿತ್ರೆಯನ್ನೇ ಅಡಿಗಡಿಗೂ ಬಾಯಿಂದ ಹೇಳುವು ದಲ್ಲದೆ ಅದರ ಅರ್ಥವನ್ನೂ ಮನಃ ಪೂರ್ವಕವಾಗಿ ಭಾವಿಸುತ್ತಾ, ಆ ಶಬ್ದಾರ್ಥಗಳನ್ನು ಕಿವಿಗಳಿಂದ ಕೇಳುತ್ತಾ ॥೧೧॥ ಆ ಮಹಾನುಭಾವನನ್ನು ಅಗಲಿರುವ ಕಾರಣವೇ ಕಾ ಮಬಾಧೆಗೀಡಾದವಳೂ ಆಗಿ, ಹೀಗೆ ಸರ್ವಪ್ರಕಾರದಲ್ಲಿಯೂ, ಸರ್ವಾವಸ್ಥೆಯಲ್ಲಿಯೂ, ಸರ್ವಕಾಲದಲ್ಲಿಯೂ, ಸರ್ವಭಾವಗಳಿಂದಲೂ ಆ ಶ್ರೀರಾಮಚಂದ್ರನಲ್ಲಿ ನೆಲೆಗೊಂಡ ಮ ನಸ್ಸುಳ್ಳವಳಾಗಿ, ನೆನವು, ಮನವು, ಸಂಕೀರ್ತನವು, ಶ್ರವಣವೂ ಆತನ ವಿಷಯದವುಗಳೇ ಆಗಿರುವಲ್ಲಿ ನನಗೆ ನಿದ್ರೆಬರಲು ಅವಕಾಶವೆಲ್ಲಿ? ॥೧೨॥ ಒಂದು ವೇಳೆ ಮನಸ್ಸಿನಲ್ಲಿನ ಸಂತ ತವಾದ ಹಂಬಲು ಈ ಕಪಿರೂಪವೇ ಮೊದಲಾದ ಆಕಾರವನ್ನು ಹೊಂದಿರ ಬಹುದು ಎಂದು ಯೋಚಿಸುತ್ತೇನೆ, ಆದರೂ ಅದರಮೇಲೆ ಬುದ್ಧಿಯಿಂದ ಆಕ್ಷೇಪವನ್ನೂ ತರ್ಕಿ ಸುತ್ತೇನೆ, ಅದೇನೆಂದರೆ—ಆ ನನ್ನ ಮನದ ಹಂಬಲು ಈ ಕಪಿರೂಪ, ರಾಮಚರಿತ್ರ ಸಂ ಕೀರ್ತನ ಮೊದಲಾದ ಆಕಾರವನ್ನು ಪಡೆಯಲಿಕ್ಕೆ ಕಾರಣವಿಲ್ಲ, ಮನಸ್ಸಿನ ಕಳವಳಕ್ಕೆ ಇಂತಹ ಆಕಾರವೆಲ್ಲಿ ಬಂದೀತು? ಕಪಿಯರೂಪವು ಪ್ರತ್ಯಕ್ಷದಲ್ಲಿ ಸ್ಪಷ್ಟವಾಗಿ ಕಂಡು ಬರುತಲಿದೆ, ಮತ್ತು ಈ ವಾನರನು ನನ್ನನ್ನೇ ಉದ್ದೇಶಿಸಿ ವ್ಯಕ್ತವಾಗಿ ಶ್ರೀರಾಮ

ಕಿಂ ಕಾರಣಂ ತಸ್ಯ ಹಿ ನಾಸ್ತಿ ರೂಪಂ ಸುವ್ಯಕ್ತ ರೂಪಶ್ಚ ವದತ್ಯಯಂ ಮಾಮ್ ॥೧೩॥
ನಮೋಽಸ್ತು ವಾಚಸ್ಪತಯೇ ಸವಜ್ರಿಣೇ ಸ್ವಯಂಭುವೇ ಚೈವ ಹುತಾಶಯನಾಯ ।
ಅನೇನ ಚೋಕ್ತಂ ಯದಿದಂ ಮಮಾಗ್ರತೋ ವನೌಕಸಾ ತಚ್ಚ ತಥಾಽಸ್ತು ನಾಽನ್ಯಥಾ ॥

— ಇತಿ ಶ್ರೀಮತ್ಸುಂದರಕಾಂಡೇ-ದ್ವಾತ್ರಿಂಶಸ್ಸರ್ಗಃ. —

---

ಮನೋರಥವು ಈರೂಪವಾಗಿ ಕಂಡುಬರಲು ನಿಮಿತ್ತವು, ಕಿಂ - ಏನಾಗಿರಬಹುದು? ತಸ್ಯ-ಆಮನೋರಥಕ್ಕೆ, ರೂಪಂ-ಆಕಾರವು, ನಾಸ್ತಿ-ಇಲ್ಲ, ಅಯಂಹಿ-ಈಕಪಿಯಾದರೋ, ಸುವ್ಯಕ್ತರೂಪಶ್ಚ-ಸ್ಪಷ್ಟವಾದ ರೂಪವುಳ್ಳವನಾಗಿಯೇ, ಮಾಂ-ನನ್ನನ್ನು ಕುರಿತು, ವದತಿ-ಸ್ಪಷ್ಟವಾಗಿಹೇಳುತಲಿದಾನೆ ॥೧೩॥ಸವಜ್ರಿಣೇ-ಇಂದ್ರನಿಂದ ಸಹಿತನಾದ: ವಾಚಸ್ಪತಯೇ, ಬೃಹಸ್ಪತಿಗೂ, ಸ್ವಯಂಭುವೇಚೈವ - ಬ್ರಹ್ಮನಿಗೂ, ಹುತಾಶನಾಯಚ - ಅಗ್ನಿಗೂ, ನಮಃ - ನಮಸ್ಕಾರವು, ಅಸ್ತು - ಆಗಲಿ, ಅನೇನ - ಈ, ವನೌಕಸಾ - ವಾನರನಿಂದ, ಯತ್ - ಯಾವ, ಇದಂಚ - ಈ ರಾಮಚರಿತ್ರೆಯು, ಮಮ - ನನ್ನ, ಅಗ್ರತಃ - ಎದುರಿಗೆ, ಉಕ್ತಂ - ಹೇಳಲ್ಪಟ್ಟಿತೋ, ತಚ್ಚ - ಅದೂ, ತಥಾ - ಹಾಗೆ ಸತ್ಯವಾಗಿಯೇ, ಅಸ್ತು - ಆಗಲಿ ॥೧೪॥

—ಇಂತು ಮೂವತ್ತೆರಡನೆಯ ಸರ್ಗಂ—

---

ಚರಿತ್ರೆಯನ್ನು ಹೇಳುತಲಿದಾನೆ ॥ ೩॥ ಈ ವಿಕಾರದಿಂದ ಯಾರಿಗೂ ಯಾವುದೊಂದು ಅಪಾಯವೂ ಉಂಟಾಗದೆ ಇರಲಿ ಎಂದು ವಜ್ರಹಸ್ತನಾದ ಪುರಂದರನಿಗೂ, ದೇವಗುರುವಾದ ಬೃಹಸ್ಪತಿಗೂ, ಜಗತ್ಕರ್ತನಾದ ಚತುರ್ಮುಖನಿಗೂ, ಯಜ್ಞೇಶ್ವರನೆನಿಸಿದ ಅಗ್ನಿಗೂ ವಂದನೆಯನ್ನು ಒಪ್ಪಿಸುತ್ತೇನೆ, ಈ ವಾನರನು ನನ್ನ ಇದಿರಿಗೆ ಶ್ರೀರಾಮನ ಯಾವ ವಿಧವಾದ ಕುಶಲ ವೃತ್ತಾಂತವನ್ನು ಉದಹರಿಸಿದನೋ ಅದು ಹಾಗೆಯೇ ಸತ್ಯವಾಗಿ ಪರಿಣಮಿಸಲಿ ಎಂದು ಪುನಃ ಪುನಃ ಪ್ರಾರ್ಥಿಸುತ್ತೇನೆ ಎಂದೀಪ್ರಕಾರವಾಗಿ ಹೇಳುತ್ತಿದ್ದಳು ॥ ೧೪ ॥

— ಇಂತು ಮೂವತ್ತೆರಡನೆಯ ಸರ್ಗಂ —



ಶ್ರೀಃ.

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ.

## ಅಥ ತ್ರಯಸ್ತ್ರಿಂಶಸ್ಸರ್ಗಃ.



ಸೋಽವತೀರ್ಯ ದ್ರುಮಾತ್ತಸ್ಮಾ ದ್ವಿದ್ರುಮ ಪ್ರತಿಮಾನನಃ ।
ವಿನೀತವೇಷಃ ಕೃಪಣಃ ಪ್ರಣಿಪ ತ್ಯೋಪ ಸೃತ್ಯಚ ॥
ತಾ ಮಬ್ರವೀ ನ್ಮಹಾತೇಜಾ ಹನುಮಾ ನ್ಮಾರುತಾತ್ಮಜಃ ।
ಶಿರ ಸ್ಯಂಜಲಿ ಮಾಧಾಯ ಸೀತಾಂ ಮಧುರಯಾ ಗಿರಾ ॥೨॥

---

ಕಂದ॥ ಮರದಿಂ ದಿಳಿದಾಮಾರುತಿ । ಮರುಗುತೆ ಭೂಪುತ್ರಿಯನ್ನೆ ನೀನಾರೆಂದಂ ॥
ತಿರೆಯಣುಗಿಯು ತಾಂ ತನ್ನಯ । ಚರಿತವ ನಾ ಕಪಿವರಂಗೆ ಪೇಳ್ದಳ್ ಕ್ರಮದಿಂ ॥

ವಿದ್ರುಮಪ್ರತಿಮಾನನಃ - ಹವಳಕ್ಕೆಣೆಯಾದ ಮುಖವುಳ್ಳವನಾದಕಾರಣವೇ, ಮಹಾತೇಜಾಃ - ಮಹತ್ತರವಾದ ಕಾಂತಿಯುಳ್ಳ, ಮಾರುತಾತ್ಮಜಃ - ವಾಯುಪುತ್ರನಾದ, ಸಃ - ಆ, ಹನುಮಾನ್- ಹನುಮಂತನು, ತಸ್ಮಾತ್‌ದ್ರುಮಾತ್ - ಆ ಮರದ ದೆಶೆಯಿಂದ, ಅವತೀರ್ಯ - ಇಳಿದು, ವಿನೀತವೇಷಃ- ಮೃದುವಾದ ವೇಷವುಳ್ಳವನೂ (ವಿನಯಸಂಪನ್ನನೂ) ಕೃಪಣಃ - ಸೀತೆಯಂತೆ ತಾನೂ ದೀನನಾದವನೂ ಆಗಿ, ಉಪಸೃತ್ಯಚ - ಜಾನಕಿಯ ಸನ್ನಿಧಾನಕ್ಕೆ ಬರುತ್ತಾ, ಶಿರಸಿ - ತಲೆಯಮೇಲೆ, ಅಂಜಲಿಂ-ಜೋಡಿಸಿದ ಹಸ್ತಯುಗ್ಮವನ್ನು, ಆಧಾಯ - ಇಟ್ಟುಕೊಂಡು, ಪ್ರಣಿಪತ್ಯಚ - ನಮಸ್ಕರಿಸುತ್ತಾ - ಮಧುರಯಾ - ಕೇಳಲಿಕ್ಕೆ ಇಂಪಾದ, ಗಿರಾ - ಮಾತಿನಿಂದ, (ಮಾತನ್ನು) ತಾಂ - ಆ ಜಾನಕಿಯನ್ನು ಕುರಿತು, ಅಬ್ರವೀತ್-ಸಂಭಾಷಿಸತೊಡಗಿದನು ॥೧, ೨॥ ಹೇಮಪದ್ಮಪಲಾಶಾಕ್ಷಿ - ಚಿನ್ನದತಾವರೆಯ ರೇಕಿನಂತೆಸೆವ ಕಣ್ಣುಳ್ಳ, ಕ್ಲಿಷ್ಟಕೌಶೇಯವಾಸಿನಿ - ಮಾಸಿದ ಪೀತಾಂಬರವನ್ನುಟ್ಟಿರುವ, ಅನಿಂದಿತೆ - ನಿರ್ದುಷ್ಟಸಾಧ್ವಿಯೆ !, ತ್ವಂ - ನೀನು, ದ್ರುಮಸ್ಯ - ಈ ಮರದ, ಶಾಖಾಂ - ಕೊಂಬೆಯನ್ನು, ಅಲಂಬ್ಯ - ಹಿಡಿದುಕೊಂಡು,

---

— ಮೂವತ್ತಮೂರನೆಯ ಸರ್ಗಂ —

ಅದುವರೆಗೆ ಸ್ವಲ್ಪ ಮೊದಲು ರಕ್ಕಸಿಯರೆಲ್ಲ ಸೀತೆಯನ್ನು ಬಗೆಬಗೆಯಾಗಿ ಹಿಂಸಿಸುತಲಿದ್ದರಷ್ಟೆ? ಆಗ ತ್ರಿಜಟೆಯು ತನ್ನ ಸ್ವಪ್ನ ವೃತ್ತಾಂತವನ್ನು ಹೇಳಲು, ಅದನ್ನು ಕೇಳಿ ಅವರು ರಾಕ್ಷಸರಿಗೆ ವಿನಾಶಕಾಲವು ಸಂಭವಿಸಿತೆಂದು ಬೆದರಿ, ಹಿಂಸೆಯಿಂದ ಹಿಮ್ಮೆಟ್ಟಿ, ಸ್ವಲ್ಪಮಟ್ಟಿಗೆ ನಿದ್ರಾಪರವಶರಾಗುತ್ತಿರಲು, ಇದೇ ಸಮಯವೆಂದು ಭಾವಿಸಿ, ಹವಳದಂತೆ ಬೆಳಗುತಲಿರುವ ಮುಖವುಳ್ಳ ಮಹಾತೇಜಸ್ವಿಯಾದ ಮಾರುತಿಯು ಅಶೋಕ ವೃಕ್ಷದಿಂದ ಮೆಲ್ಲಗೆ ಆಕೆಯ ಸಮೀಪದಲ್ಲಿ ಇಳಿದು, ಆಕೆಯಸಮೀಪದಮರದ ಬುಡದಲ್ಲಿ ನಿಂತು, ಬಹುನಮ್ರಭಾವವನ್ನಾಂತು, ಆಕೆಯ ಕಷ್ಟದೆಶೆಯನ್ನೆಲ್ಲ ನೋಡುತಲಿದ್ದವನಾದಕಾರಣ,ತಾನೂ ಅತಿದೈನ್ಯವನ್ನು ಹೊಂದಿ, ಕೈಜೋಡಿಸಿ ತಲೆಯಮೇಲಿಟ್ಟು ನಮಸ್ಕರಿಸಿ, ಆ ಜನಕನಂದಿನಿಯನ್ನು ಕುರಿತು, ಮೃದುಮಧುರವಾದ ವಾಣಿಯಿಂದ ಮಾತನಾಡತೊಡಗಿದನು ॥೧, ೨॥ ಪದ್ಮಪತ್ರ ನೇತ್ರೆಯಾದ ಓ ತಾಯೀ ! ನೀನು ಯಾರಮ್ಮ ? ಮಲಿನವಾದ ಪಟ್ಟೆಯ

ಕಾನು (ಹೇವು) ಪದ್ಮಪಲಾಶಾಕ್ಷಿ ಕ್ಲಿಷ್ಟ ಕೌಶೇಯ ವಾಸಿನಿ ।
ದ್ರುಮಸ್ಯ ಶಾಖಾ ಮಾಲಂಬ್ಯ ತಿಷ್ಠಸಿ ತ್ವ ಮನಿಂದಿತೇ ॥೩॥
ಕಿಮರ್ಥಂ ತವ ನೇತ್ರಾಭ್ಯಾಂ ವಾರಿ ಸ್ರವತಿ ಶೋಕಜಂ ।
ಪುಂಡರೀಕ ಪಲಾಶಾಭ್ಯಾಂ ವಿಪ್ರಕೀರ್ಣ ಮಿವೋದಕಂ ॥೪॥
ಸುರಾಣಾ ಮಸುರಾಣಾಂ ವಾ ನಾಗ ಗಂಧರ್ವ ರಕ್ಷಸಾಮ್ ।
ಯಕ್ಷಾಣಾಂ ಕಿನ್ನರಾಣಾಂ ವಾ ಕಾ ತ್ವಂ ಭವಸಿ ಶೋಭನೇ ॥೫॥
ಕಾ ತ್ವಂ ಭವಸಿ ರುದ್ರಾಣಾಂ ಮರುತಾಂ ವಾ ವರಾನನೇ ।
ವಸೂನಾಂ ವಾ ವರಾರೋಹೇ ದೇವತಾ ಪ್ರತಿಭಾಸಿ ಮೇ ॥೬॥

---

ತಿಷ್ಠಸಿ - ನಿಂತುಇದ್ದೀಯೆ, (ತ್ವಂ - ಇಂತಹನೀನು) ಕಾ - ಯಾರು ? ಪುಂಡರೀಕಪಲಾಶಾಭ್ಯಾಂ- ತಾವರೆಯ ರೇಕುಗಳಿಂದ, ವಿಪ್ರಕೀರ್ಣಂ - ಚೆಲಕಲ್ಪಟ್ಟ, ಉದಕಮಿವ - ಜಲದಹಾಗೆ, (ಪುಂಡರೀಕಪಲಾಶಾಭ್ಯಾಂ - ತಾವರೆಯ ಎಸಳಿನಂತಿರುವ] ತವ - ನಿನ್ನ, ನೇತ್ರಾಭ್ಯಾಂ - ಕಣ್ಣುಗಳಿಂದ, ಶೋಕಜಂ - ದುಃಖದಿಂದುಂಟಾದ, ವಾರಿ - ನೀರು, ಕಿಮರ್ಥಂ - ಏತಕ್ಕೋಸ್ಕರ, ಸ್ರವತಿ- ಹರಿಯುತಲಿದೆ? ॥೩, ೪॥ ಹೇ ಶೋಭನೆ - ಎಲೌ ಮಂಗಳಾಂಗಿಯೇ! ತ್ವಂ - ನೀನು, ಸುರಾಣಾಂವಾ- ದೇವತೆಗಳೊಳಗಾಗಲಿ, ಅಸುರಾಣಾಂವಾ - ರಾಕ್ಷಸರೊಳಗಾಗಲಿ, ನಾಗಗಂಧರ್ವರಕ್ಷಸಾಂವಾ- ನಾಗರು, ಗಂಧರ್ವರು, ರಾಕ್ಷಸರು ಇವರುಗಳೊಳಗಾಗಲಿ, ಯಕ್ಷಾಣಾಂ - ಯಕ್ಷರೊಳಗಾಗಲಿ, ಕಿನ್ನರಾಣಾಂವಾ - ಕಿನ್ನರರೊಳಗಾಗಲಿ, ಕಾವಾ - ಯಾರಾಗಿ, ಭವಸಿ - ಇದ್ದೀಯೇ ? ॥ ೫ ॥ ಹೇವರಾನನೆ- ಓ ಮಂಗಳಮುಖಿ ! ಹೇವರಾರೋಹೇ - ಎಲೌ ಸ್ತ್ರೀಶಿರೋಮಣಿಯೇ ! ತ್ವಂ - ನೀನು. ರುದ್ರಾಣಾಂವಾ - ಏಕಾದಶರುದ್ರರೊಳಗಾಗಲಿ, ಮರುತಾಂವಾ- ಸಪ್ತಮರುತ್ತುಗಳೊಳಗಾಗಲಿ, ವಸೂನಾಂವಾ - ಅಷ್ಟವಸು ಗಳೊಳಗಾಗಲಿ, ಕಾವಾ - ಯಾರಾಗಿ, ಭವಸಿ - ಇದ್ದೀಯೆ, ಮೇ - ನನಗಾದರೆ, ದೇವತಾ ಪರದೇವತೆಯಾಗಿ, ಪ್ರತಿಭಾಸಿ- ತೋರುತಲಿದ್ದೀಯೆ ॥೬॥ ಚಂದ್ರಮಸಾ - ಚಂದ್ರನಿಂದ, ಹೀನಾ ಅಗಲಿರುವ, ವಿಬುಧಾಲಯಾತ್ . ಸ್ವರ್ಗಲೋಕದ ದೆಶೆಯಿಂದ ಅಪತಿತಾ - ಬಂದಿರುವ, ಜ್ಯೋತಿಷಾಂ- ನಕ್ಷತ್ರಗಳೊಳಗೆ, ಶ್ರೇಷ್ಠಾ - ಉತ್ತಮಳೆನಿಸಿದ, ಶ್ರೇಷ್ಠ -

---

ಸೀರೆಯನ್ನು ಉಟ್ಟು ಇದ್ದೀಯೆ ? ಮತ್ತು ಈ ಮರದ ಕೊಂಬೆಯನ್ನು ಹಿಡಿದುನಿಂತಿರುವೆ? ನಿನ್ನಲ್ಲಿ ಯಾವದೋಷವೂ ಕಂಡು ಬರುವುದಿಲ್ಲ, ಆದರೆ ತಾವರೆಯ ಎಸಳುಗಳಿಂದ ಜಲಧಾರೆಯು ಹರಿಯುವ ಹಾಗೆ ಕಮಲ ದಳಗಳಂತಿರುವ ನಿನ್ನ ಕಣ್ಣುಗಳಿಂದ ಆನಂದಬಾಷ್ಪವು ಹರಿವುದು ತಪ್ಪಿ ದುಃಖ ಜಲಧಾರೆಯು ಹರಿಯುತಲಿದೆ ಇದಕ್ಕೆ ಕಾರಣವೇನು ? ಈ ನಿನ್ನ ಕಣ್ಣೀರು ಯಾರಿಗೋ ಮಹಾ ವಿಪತ್ತನ್ನು ಸೂಚಿಸುತಲಿದೆಯಲ್ಲ ? ॥೩, ೪॥ ಎಲೌ ಮಂಗಳಾಂಗಿಯಾದ ಮಾತೆ । ಸುರ, ಅಸುರ, ನಾಗ, ಗಂಧರ್ವ, ಯಕ್ಷ, ರಾಕ್ಷಸ, ಕಿನ್ನರ, ಕಿಂಪುರುಷ, ಮೊದಲಾದವರೊಳಗೆ ನೀನು ಯಾವ ಕುಲಕನ್ಯೆಯೋ ಅದನ್ನು ದಯೆಮಾಡಿ ತಿಳಿಸು ॥೫॥ ಅಥವಾ ಕಲ್ಯಾಣಿಯಾದ ಎಲೌಜನನೀ। ಏಕಾದಶ ರುದ್ರರೊಳಗೆ, ಸಪ್ತಮರುತ್ತುಗಳೊಳಗೆ, ಅಷ್ಟವಸುಗಳೊಳಗೆ ಯಾವ ದೇವಾಂಗನೆಯಾಗಿರುವೆಯೋ ದಯೆಮಾಡಿ ಅರುಹು ೬॥ ಹಾಗಿಲ್ಲದಿದ್ದರೆ ಅಮ್ಮಾ । ಚಂದ್ರನನ್ನು ಬಿಟ್ಟು ಸ್ವರ್ಗಲೋಕದಿಂದ ಇಳಿದುಬಂದಿರುವ ಸಕಲ ಸದ್ಗುಣ ಸಂಪನ್ನೆ ಯೆನಿಸಿ ನಕ್ಷತ್ರಮಂಡಲದಲ್ಲಿ

ಕಿನ್ನು ಚಂದ್ರಮಸಾ ಹೀನಾ ಪತಿತಾ ವಿಬುಧಾಲಯಾತ್ ।
ರೋಹಿಣೀ ಜ್ಯೋತಿಷಾಂ ಶ್ರೇಷ್ಠಾ ಶ್ರೇಷ್ಠ ಸರ್ವ ಗುಣಾನ್ವಿತಾ ॥೨॥
ಕಾ ತ್ವಂ ಭವಸಿ ಕಲ್ಯಾಣಿ ತ್ವ ಮನಿಂದಿತ ಲೋಚನೇ ॥೩॥ ॥
ಕೋಪಾದ್ವಾ ಯದಿವಾ ಮೋಹಾ ದ್ಭರ್ತಾರ ಮಸಿತೇಕ್ಷಣೇ ।
ವಸಿಷ್ಠಂ ಕೋಪಯಿತ್ವಾ ತ್ವಂ ನಾಸಿ ಕಲ್ಯಾ ಣ್ಯರುಂಧತೀ ॥ ೪॥ ॥
ಕೋನು ಪುತ್ರಃ ಪಿತಾ ಭ್ರಾತಾ ಭರ್ತಾ ವಾ ತೇ ಸುಮಧ್ಯಮೇ ।
ಅಸ್ಮಾ ಲ್ಲೋಕಾ ದಮುಂ ಲೋಕಂ ಗತಂ ತ್ವ ಮನುಶೋಚಸಿ ॥ ೫॥ ॥

---

ಮೇಲಾದ, ಸರ್ವ - ಸಕಲವಾದ, ಗುಣ - ಗುಣಗಳಿಂದ, ಅನ್ವಿತಾ- ಕೂಡಿಕೊಂಡಿರುವ, ರೋಹಿಣೀಕಿನ್ನು- ರೋಹಿಣೀದೇವಿಯಾಗಿರುವೆಯಾ ಹೇಗೆ ? ಹೇಕಲ್ಯಾಣಿ - ಓ ಮಂಗಳಸ್ವರೂಪಳೇ ! ತ್ವಂ - ನೀನು, ಕಾ_ ಯಾರು? ಅನಿಂದಿತಲೋಚನೇ - ನಿರ್ದುಷ್ಟವಾದ ನೇತ್ರವುಳ್ಳ ಸೀಮಂತಿನಿಯೇ ! ತ್ವಂ - ನೀನು, ಕಾಭವಸಿ – ಯಾರಾಗಿದ್ದೀಯೇ ? ॥೨, ೩॥ ॥ ಹೇಅಸಿತೇಕ್ಷಣೇ - ಕಪ್ಪಾದಕನೀನಿಕೆ [ಕಣ್ಣಗುಡ್ಡೆ] ಯುಳ್ಳ, ಕಲ್ಯಾಣಿ - ಮಂಗಳಾಂಗಿಯೇ! ತ್ವಂ - ನೀನು, ಕೋಪಾದ್ವಾ – ಸಿಟ್ಟಿನ ದೆಸೆಯಿಂದಲೋ, ಯದಿವಾ – ಅಥವಾ, ಮೋಹಾದ್ವಾ - ಅಜ್ಞಾನದದೆಸೆಯಿಂದಲೋ, ಭರ್ತಾರಂ - ಪತಿಯಾದ, ವಸಿಷ್ಠಂ - ವಸಿಷ್ಠಮಹರ್ಷಿಯನ್ನು, ಕೋಪಯಿತ್ವಾ - ಸಿಟ್ಟುಗೊಳಿಸಿ, ವಿಬುಧಾಲಯಾತ್ - ಸ್ವರ್ಗಲೋಕದ ದೆಸೆಯಿಂದ, ಆಪತಿತಾ - ಬಂದಿರುವ, ಅರುಂಧತೀ - ಅರುಂಧತೀದೇವಿಯು, ನಾಸಿ - ಆಗಿಲ್ಲವೆ ? ॥೪, ೪॥ ॥

ಹೇಸುಮಧ್ಯಮೇ - ಎಲೌ ಬಡನಡುವಿನ ಮಾನಿನಿಯೇ ! ತೇ - ನಿನ್ನ, ಪುತ್ರಃ - ಮಗನು, ಕೋನು - ಯಾರು ? ಭ್ರಾತಾ - ಸಹೋದರನು, ಕೋನು - ಯಾವನಾಗಿದಾನೆ ? ಭರ್ತಾವಾ - ಪತಿಯಾದರೂ, ಕಃ – ಯಾರು ? ಅಸ್ಮಾತ್ - ಈ, ಲೋಕಾತ್ - ಲೋಕದ ದೆಸೆಯಿಂದ, ಅಮುಂ ಲೋಕಂ - ಪರಲೋಕವನ್ನು ಕುರಿತು, ಗತಂ - ಹೊರಟುಹೋದ, ಯಂಕಂಚನ ಬಂಧುಂ – ಯಾವಬಂಧುವನ್ನು ಉದ್ದೇಶಿಸಿ, ಅನುಶೋಚಸಿ - ದುಃಖಿಸುತಲಿದ್ದೀಯೆ ? (ವಾ-ಅಥವಾ, ಪುತ್ರಂ – ಮಗನನ್ನು ಕುರಿತು, ಭ್ರಾತರಂ! ಸಹೋದರನನ್ನು ಕುರಿತು, ಪಿತರಂ - ತಂದೆಯನ್ನು ಕುರಿತು, ಅನುಶೋಚಸಿ - ವ್ಯಸನಪಡುತಲಿರುವೆಯೋ) ಸಃ ಕಃ – ಅಂಥವನಾರು ? ॥ ೫,೫ ॥॥ (ಕಿಂತು – ಆದರೆ) ರೋದನಾತ್ -

---

ಉತ್ತಮೋತ್ತಮಳಾದ ರೋಹಿಣೀ ದೇವಿಯೋ ಹೇಗೆ ? ಹಾಗೂ ಇಲ್ಲದಿದ್ದರೆ ಎಲೌ ಸುಮಂಗಲಿಯೇ ! ನೀನು ಮತ್ತಾರಾಗಿರುವೆ? ॥೨,೩॥ ಅಂತಲ್ಲದೊಡೆ ಸಿಟ್ಟಿನಿಂದಲಾಗಲಿ, ಇಲ್ಲವೆ ತಿಳವಳಿಕೆ ಯಿಲ್ಲದೆಯಾಗಲಿ, ಗಂಡನಾದ ವಶಿಷ್ಠ ಮುನಿಯನ್ನು ಕೋಪಗೊಳಿಸಿ ಬಂದಿರುವ ಅರುಂಧತೀ ದೇವಿಯೇ ನೀನಾಗಿರಬಹುದೆ ? ಎಂದುಯೋಚಿಸಿದರೆ ನನಗೆ ಹಾಗೂ ತೋರುವುದಿಲ್ಲ, ಹೀಗಿರಲು ನೀನು ಇನ್ನು ಯಾರಾಗಿರಬಹುದು ? ॥೪, ೪॥॥ ಬಳ್ಳಿಯುದು, ನಿನ್ನ ಪುತ್ರನು ಯಾರಮ್ಮ ? ನಿನಗೆ ತಂದೆ ಯಾರು ತಾಯಿ ? ಸಹೋದರನಾರಮ್ಮ ? ನಿನ್ನ ಪತಿಯಾರು ಮಾತೆ ? ಎಲೌ ಬಡನಡುವಿನ ಭಾಮಾಮಣೀ : ನಿನ್ನ ಬಂಧುಗಳೊಳಗೆ ಯಾರಾದರೂ ಈ ಲೋಕವನ್ನು ಬಿಟ್ಟು ಪರಲೋಕಕ್ಕೆ ಹೋಗಿದ್ದರೆ ಅಂಥವರನ್ನು ಕುರಿತು ದುಃಖಪಡುತ್ತಿರುವೆಯಾ ಹೇಗೆ ? ಹಾಗಿದ್ದರೆ ಅದನ್ನಾದರೂ ತಿಳಸು॥ ಎಲೌ ತಾಯಿ ! ಹಾಗೆಯೇ ನಿನ್ನನ್ನು ಭಾವಿಸಿ ನೋಡಿದರೆ ನೀನು ದೇವತಾ ಸ್ತ್ರೀಯಾಗಿ

ರೋದನಾ ದತಿನಿಶ್ವಾಸಾ ದ್ಭೂಮಿ ಸಂಸ್ಪರ್ಶನಾದಪಿ ।
ನ ತ್ವಾಂ ದೇವೀ ಮಹಂ ಮನ್ಯೆ ರಾಜ್ಞ ಸ್ಸಂಜ್ಞಾವಧಾರಣಾತ್ ॥ ೧೦॥ ॥
ವ್ಯಂಜನಾನಿ ಚ ತೇಯಾನಿ ಲಕ್ಷಣಾನಿಚ ಲಕ್ಷಯೇ।
ಮಹಿಷೀ ಭೂಮಿಪಾಲಸ್ಯ ರಾಜಕನ್ಯಾಸಿ ಮೇ ಮತಾ ॥ ೧೧॥
ರಾವಣೇನ ಜನಸ್ಥಾನಾ ದ್ಬಲಾ ದಪಹೃತಾ ಯದಿ ।
ಸೀತಾ ತ್ವಮಸಿ ಭದ್ರಂತೇ ತನ್ಮಮಾಽಽಚಕ್ಷ್ವ ಪೃಚ್ಛತಃ ॥೧೨॥

ಪ್ರಲಾಪಿಸುವುದರ ದೆಸೆಯಿಂದಲೂ, ಅತಿನಿಶ್ವಾಸಾತ್-ಹೇರಳವಾಗಿ ನಿಟ್ಟುಸಿರನ್ನು ಬಿಡುವುದರ ದೆಸೆಯಿಂದಲೂ, ಭೂಮಿ ಸಂಸ್ಪರ್ಶನಾದಪಿ - ನೆಲವನ್ನು ಮುಟ್ಟಿಕುಳಿತಿರುವ ನಿಮಿತ್ತದಿಂದಲೂ, ರಾಜ್ಞಃ - ರಾಜನ, ಸಂಜ್ಞಾವಧಾರಣಾತ್ - ಲಕ್ಷಣಗಳು ತಿಳಿದು ಬರುವಕಾರಣದಿಂದಲೂ, ತ್ವಾಂ - ನಿನ್ನನ್ನು, ಅಹಂ - ನಾನು, ದೇವೀಂ - ದೇವತಾ ಸ್ತ್ರೀಯನ್ನಾಗಿ, ನಮನ್ಯೇ - ಎಣಿಸಲಾರೆನು ॥ ೧೦, ೧೦॥ ॥ ತೇ- ನಿನ್ನ, ಯಾನಿ - ಯಾವ, ವ್ಯಂಜನಾನಿ - ಉತ್ತಮ ಸ್ತ್ರೀಲಕ್ಷಣವುಳ್ಳ ಅವಯವಗಳನ್ನೂ, ಲಕ್ಷಣಾನಿಚ- ಸಾಮುದ್ರಿಕ ಶಾಸ್ತ್ರೋಕ್ತವಾದ ರಾಜಲಕ್ಷಣಗಳನ್ನೂ, ಲಕ್ಷಯೆ - ನೋಡುತ್ತಿರುವೆನೋ, ತೈಃ- ಆಗು ರುತುಗಳಿಂದ, ತ್ವಂ-ನೀನು) ಭೂಮಿಪಾಲಸ್ಯ - ಯಾವನೋ ಒಬ್ಬ ಮಹಾರಾಜನಿಗೆ, ಮಹಿಷೀ - ಪಟ್ಟದರಸಿಯಾದ, ರಾಜಕನ್ಯಾ - ರಾಜಪುತ್ರಿಯಾಗಿ, ಅಸಿ - ಇದ್ದೀಯೆ (ಇತಿ-ಹೀಗೆಂದು) ಮೇ - ನನ್ನ, ಮತಾ- ಒಪ್ಪಿತವಾಗಿದೆ ॥೧೧,೧೧॥ ತ್ವಂ - ನೀನು, ರಾವಣೇನ - ದಶಕಂಠನಿಂದ, ಜನಸ್ಥಾನಾತ್ - ಜನಸ್ಥಾನ ವೆಂಬ ಅರಣ್ಯದ ದೆಸೆಯಿಂದ, ಬಲಾತ್ - ಬಲಾತ್ಕಾರವಾಗಿ, ಅಪಹೃತಾ ಅಪಹರಿಸಿತರಲ್ಪಟ್ಟ, ಸೀತಾ- ಸೀತಾದೇವಿಯು, ಅಸಿಯದಿ - ಆಗಿಇದ್ದರೆ, ತೇ - ನಿನಗೆ, ಭದ್ರಂ - ಶುಭವು, (ಅಸ್ತು-ಆಗಲಿ) ತತ್ - ಆವೃತ್ತಾಂತವನ್ನು, ಪೃಚ್ಛತಃ - ಕೇಳುತಲಿರುವ, ಮಮ - ನನಗೆ, ಆಚಕ್ಷ್ವ - ಹೇಳು ॥೧೨, ೧೨॥

ನನಗೆ ಕಂಡು ಬರುವುದಿಲ್ಲ. ಏತಕೆಂದರೆ--ಬಿಡಬಿಡದೆ ಅಳುತಲಿದ್ದೀಯೆ, ನಿನ್ನ ಮುಖದಿಂದ ಮಿತಿಮಿಾರಿದ ನಿಟ್ಟುಸಿರು ಹೊರಡುತಲಿದೆ. ಮತ್ತು ಭೂಮಿಯನ್ನು ಮುಟ್ಟಿಸಿಂತು ಇದ್ದೀಯೆ ಇದೂ ಅಲ್ಲದೆ ಮಹಾರಾಜನ ಪಟ್ಟದರಾಣಿಯ ಲಕ್ಷಣಗಳು ನಿನ್ನಲ್ಲಿ ಕಂಡು ಬರುತಲಿವೆ ॥೧೦-೧೦॥-॥ ಎಲೌ ಧರ್ಮಮಾತೆಯೇ।ನಿನ್ನ ಅವಯವಗಳನ್ನೂ, ಅವುಗಳೊಳಗೆ ಸಾಮುದ್ರಿಕ ಶಾಸ್ತ್ರೋಕ್ತ ಪ್ರಕಾರವಾಗಿ ಕಾಣಬರುವ ದಿವ್ಯರಾಜ ಲಕ್ಷಣಗಳನ್ನೂ ಸಂಭಾವಿಸಿದರೆ ನೀನು ಖಂಡಿತವಾಗಿಯೂ ಯಾವನೋ ಒಬ್ಬ ಮಹಾರಾಜನ ಪುತ್ರಿಯಾಗಿಯೂ, ಒಬ್ಬಾನೊಬ್ಬ ಸಾರ್ವಭೌಮನ ಪಟ್ಟಮಹಿಷಿಯಾಗಿಯೂ ಇರಬೇಕೆಂದೇ ನನಗೆ ತೋರುತಲಿದೆ. ಹಾಗಿದ್ದರೆ ಅದನ್ನಾದರೂ ತಿಳಿಸು ॥೧೧, ೧೧॥ ಏನು ತಾಯೀ ? ಇನ್ನೊಂದು ವಿಷಯವನ್ನು ಕೇಳುತ್ತೇನೆ. ಜನಸ್ಥಾನವೆಂಬ ಮಹಾರಣ್ಯದಲ್ಲಿ ರಾವಣನೆಂಬ ರಾಕ್ಷಸನು ಸೀತೆಯೆಂಬ ಸೀಮಂತಿನೀ ಮಣಿಯನ್ನು ಬಲಾತ್ಕಾರದಿಂದ ಅಪಹರಿಸಿ ತಂದಿರುವನೆಂದು ಕೇಳಿ ಇದ್ದೇನೆ. ಹಾಗೇನಾದರೂ ಇದ್ದು ಆ ಸೀತೆಯೇ ನೀನಾಗಿದ್ದರೆ ಪ್ರಶ್ನೆ ಮಾಡುತಲಿರುವ ನನಗೆ ಆ ಸಂಗತಿಯನ್ನು ತಿಳಿಸು, ಇದರಿಂದ ನಿನಗೆ ಶುಭವಾಗುವುದು, ನಿನ್ನ ತತ್ವವು ತಿಳಿಯದೆ ನಾನು ಬಹಳವಾಗಿ ಸಂಶಯಪಡುತಲಿದೇನೆ. ಯಥಾರ್ಥವಾದ ಸಂಗತಿಯನ್ನು ದಯೆಮಾಡಿ ನನಗೆ ತಿಳಿಸು ॥೧೨, ॥೧ ॥ ॥ ನೀನು ಅನು

ಯಥಾಹಿ ತವ ವೈ ದೈನ್ಯಂ ರೂಪಂ ಚಾಪ್ಯತಿ ಮಾನುಷಂ ॥
ತಪಸಾ ಚಾನ್ವಿತೋ ವೇಷ ಸ್ತ್ವಂ ರಾಮಮಹಿಷೀ ಧ್ರುವಂ ॥೧೩॥॥
ಸಾ ತಸ್ಯ ವಚನಂ ಶ್ರುತ್ವಾ ರಾಮಕೀರ್ತನ ಹರ್ಷಿತಾ ।
ಉವಾಚ ವಾಕ್ಯಂ ವೈದೇಹೀ ಹನುಮಂತಂ ದ್ರುಮಾಶ್ರಿತಂ ॥ ೧೪॥ ॥
ಪೃಥಿವ್ಯಾಂ ರಾಜಸಿಂಹಾನಾಂ ಮುಖ್ಯಸ್ಯ ವಿದಿತಾತ್ಮನಃ ।
ಸ್ನುಷಾ ದಶರಥಸ್ಯಾಹಂ ಶತ್ರುಸೈನ್ಯ ಪ್ರತಾಪಿನಃ ॥೧೫॥॥

ತವ - ನಿನ್ನ, ದೈನ್ಯಂ - ದೀನದಶೆಯು, ಯಥಾ - ಹೇಗೆ ಇರುವುದೋ, ತಥಾ - ಹಾಗೆಯೇ, ರೂಪಂಚ- ಆಕಾರವೂ, (ಸೌಂದರ್ಯವೂ) ಅತಿಮಾನುಷಂ - ಮನುಷ್ಯ ಸ್ಥಿತಿಯನ್ನು ಅತಿ ಕ್ರಮಿಸಿ ಇದೆ, ವೇಷಶ್ಚ - ವೇಷವೂ, ತಪಸಾ - ತಪಸ್ಸಿನಿಂದ, ಅನ್ವಿತಃಹಿ - ಕೂಡಿ ಇದೆಯಲ್ಲ: ತಸ್ಮಾದ್ವೈ - ಆ ಕಾರಣದ ದೆಶೆ ಯಿಂದಲೇ, ತ್ವಂ - ನೀನು, ರಾಮಮಹಿಷೀ - ಶ್ರೀರಾಮನ ಪಟ್ಟಮಹಿಷಿಯೇ, ಧ್ರುವಂ -ನಿಶ್ಚಯ, ॥೧೩॥॥ ಸಾ - ಆ, ವೈದೇಹೀ - ಜಾನಕಿಯು, ತಸ್ಯ - ಆ ಆಂಜನೇಯನ, ವಚನಂ - ಮಾತನ್ನು, ಶ್ರುತ್ವಾ-ಕೇಳಿ ರಾಮ-ಕೀರ್ತನಹರ್ಷಿತಾ - ಶ್ರೀರಾಮ ಕಥಾ ಸಂಕೀರ್ತನದಿಂದ ಸಂತೋಷಿಸಿದವಳಾಗಿ, ದ್ರುಮಾಶ್ರಿತಂ - ಮರದ ಬುಡವನ್ನು ಹೊಂದಿರುವ, ಹನುಮಂತಂ - ಆಂಜನೇಯನನ್ನು ಕುರಿತು, ವಾಕ್ಯಂ - ಮುಂದಿನ ಮಾತನ್ನು, ಉವಾಚ - ಹೇಳತೊಡಗಿದಳು ॥೧೪॥ ಅಹಂ - ನಾನು, ಪೃಥಿವ್ಯಾಂ - ಭೂಮಂಡಲದಲ್ಲಿ, ರಾಜಸಿಂಹಾನಾಂ - ರಾಜಶ್ರೇಷ್ಠರೊಳಗೆ, ಮುಖ್ಯಸ್ಯ - ಪ್ರಧಾನನೆನಿಸಿದ, ವಿದಿತಾತ್ಮನಃ - ಸರ್ವರಿಂದಲೂ ತಿಳಿಯಲ್ಪಟ್ಟರುವ (ಲೋಕವಿಖ್ಯಾತನಾದ) ಶತ್ರುಸೈನ್ಯಪ್ರತಾಪಿನಃ - ಹಗೆಗಳ ಹಿಂಡನ್ನು ಸದೆಬಡೆಯುವ ವನೂ ಆಗಿರುವ, ದಶರಥಸ್ಯ - ದಶರಥಮಹಾರಾಜನಿಗೆ, ಸ್ನುಷಾ - ಸೊಸೆಯಾಗಿದೇನೆ, ॥೧೫॥ ॥ ಅಹಂ- ಈ ನಾನು, ವೈದೇಹಸ್ಯ - ವಿದೇಹದೇಶಾಧಿಪತಿಯಾಗಿರುವ, ಮಹಾತ್ಮನಃ - ಉದಾರಹೃದಯನಾದ, ಜನ ಕಸ್ಯ - ಜನಕಮಹಾರಾಜನಿಗೆ, ದುಹಿತಾ-ಪುತ್ರಿಯೆನಿಸಿದೇನೆ, ಅಹಂ-ಈ ನಾನು, ನಾಮ್ನಾ - ಹೆಸರಿನಿಂದ

ಭವಿಸುತಲಿರುವ ಬಹು ಕಷ್ಟತರವಾದ ದೀನದಶೆಯನ್ನೂ, ನಿನ್ನಲ್ಲಿ ಕಾಣಬರುವ ಸಾಧಾರಣ ಮನುಷ್ಯರಲ್ಲಿ ಇಲ್ಲದ ರೂಪರೇಖಾಲಾವಣ್ಯ ಮೊದಲಾದ ದಿವ್ಯಲಕ್ಷಣಗಳನ್ನೂ, ಅನ್ನಾಹಾರಗಳಿಲ್ಲದೆ ಶೋಷಿಸಿ ಹೋಗಿರುವ ಈ ನಿನ್ನ ವೇಷವನ್ನೂ ನೋಡಿದರೆ ನಿಜವಾಗಿಯೂ ನೀನು ಶ್ರೀರಾಮನ ಪಟ್ಟದರಸಿಯೇ ಆಗಿ ಇರಬೇಕು ಎಂದು ನನಗೆ ತೋರುತ್ತಿದೆ ॥೧೩॥ ಎಂದೀ ಪ್ರಕಾರವಾಗಿ ಹೇಳುತಲಿರುವ ಆಂಜನೇಯನ ಮುಖದಿಂದ ಹೊರಟ ಶ್ರೀರಾಮನಾಮ ಸಂಕೀರ್ತನವನ್ನು ಕೇಳಿ ಪರಮಾನಂದ ಭರಿತಳಾಗಿ, ಮರದ ಬುಡದಲ್ಲಿ ನಿಂತಿರುವ ವಿನಯಸಂಪನ್ನನಾದ ಆತನೊಡನೆ ಮಾತನಾಡಲಾರಂಭಿಸಿದಳು ॥೧೪॥ ಎಲೈ ವಾನರೋತ್ತಮನೇ । ಈ ನನ್ನ ಯಥಾರ್ಥವಾದ ವೃತ್ತಾಂತವನ್ನು ವಿವರಿಸುತ್ತೇನೆ ಕೇಳು ! ಈ ಭೂಮಂಡಲದಲ್ಲಿ ಬೆಳಗುವ ರಾಜಶ್ರೇಷ್ಠರೊಳಗೆ ಪ್ರಧಾನನೆನಿಸಿ ಹಗೆಗಳ ಹುಟ್ಟನ್ನೇ ಅಡಗಿಸುತಲಿದ್ದ ಮಹಾನುಭಾವನಾದ ದಶರಥ ಮಹಾರಾಜನಿಗೆ ನಾನು ಹಿರಿಯಸೊಸೆ, ವಿದೇಹದೇಶಾಧಿಪತಿಯಾಗಿರುವ ಮಹಾತ್ಮನಾದ ಜನಕ ಚಕ್ರವರ್ತಿಯ ಮಗಳು, ಹೆಸರಿನಲ್ಲಿ ನನ್ನನ್ನು ಸೀತೆ ಎಂದು ಕರೆಯುತ್ತಾರೆ. ನೀನು ಹೇಳಿದ ಶ್ರೀರಾಮ ಚಂದ್ರನಿಗೆ ನಾನು ಧರ್ಮಪತ್ನಿಯಾಗಿದ್ದೇನೆ. ॥೧೫, ೧೬॥ ॥ ಇಂತಹ ಈ ನಾನು ನನ್ನ- ಮಾವನ ಮನೆಯಾದ

ದುಹಿತಾ ಜನಕಸ್ಯಾಹಂ ವೈದೇಹಸ್ಯ ಮಹಾತ್ಮನಃ
ಸೀತಾಚ ನಾಮ ನಾಮ್ನಾ ಽ ಹಂ ಭಾರ್ಯಾ ರಾಮಸ್ಯ ಧೀಮತಃ ॥೧೬॥
ಸಮಾ ದ್ವಾದಶ ತತ್ರಾಹಂ ರಾಘವಸ್ಯ ನಿವೇಶನೇ ।
ಭುಂಜಾನಾ ಮಾನುಷಾ ನ್ಭೋಗಾ ನ್ಸರ್ವಕಾಮ ಸಮೃದ್ಧಿನೀ ॥೧೭॥
ತತ್ರ ತ್ರಯೋದಶೇ ವರ್ಷೇ ರಾಜ್ಯೇ ನೇಕ್ಷ್ವಾಕು ನಂದನಂ ।
ಅಭಿಷೇಚಯಿತುಂ ರಾಜಾ ಸೋಪಾಧ್ಯಾಯಃ ಪ್ರಚಕ್ರಮೇ ॥೧೮॥ ॥
ತಸ್ಮಿ೯ ಸಂಭ್ರಿಯಮಾಣೇ ತು ರಾಘವಸ್ಯಾ ಭಿಷೇಚನೇ ।
ಕೈಕೇಯೀ ನಾಮ ಭರ್ತಾರಂ ದೇವೀ ವಚನ ಮಬ್ರವೀತ್ ॥೧೯॥ ॥

---

ಸೀತಾನಾಮ - ಸೀತೆಯೆಂಬ ಹೆಸರನ್ನು ಪಡೆದವಳಾಗಿ, ಧೀಮತಃ - ಪ್ರಶಸ್ತ ಬುದ್ಧಿಯುಳ್ಳ, ರಾಮಸ್ಯ- ಶ್ರೀರಾಮನಿಗೆ, ಭಾರ್ಯಾಚ - ಧರ್ಮಪತ್ನಿಯೆನಿಸಿರುವೆನು ॥ ೧೬-೧೬ ॥ ॥ ತತ್ರ - ಆ ಮಾವನ ಮನೆಯಲ್ಲಿ, ರಾಘವಸ್ಯ - ಶ್ರೀರಾಮಚಂದ್ರನ, ನಿವೇಶನೆ - ಮನೆಯೊಳಗೆ, ಅಹಂ - ನಾನು, ಸರ್ವಕಾಮ ಸಮೃದ್ಧಿನೀ - ಕೈಗೂಡಿದ ಎಲ್ಲ ಕೋರಿಕೆಗಳೂ ಉಳ್ಳವಳಾಗಿ, ದ್ವಾದಶ - ಹನ್ನೆರಡಾದ, ಸಮಾಃ - ಸಂವತ್ಸರಗಳನ್ನು, ಮಾನುಷಾ೯- ಮನುಷ್ಯರ ಸಂಬಂಧವಾದ, ಭೋಗಾ೯- ಸಮಸ್ತ ಸುಖಗಳನ್ನೂ, ಭುಂಜಾನಾ- ಅನುಭವಿಸುತಲಿದ್ದೆನು ॥೧೭॥ ॥ ತತ್ರ - ಅಲ್ಲಿಯೇ, ತ್ರಯೋದಶೆ - ಹದಿಮೂರನೆಯದಾದ, ವರ್ಷೆ - ಸಂವತ್ಸರದಲ್ಲಿ, ರಾಜಾ - ಮಾವನಾದ ದಶರಥ ಮಹಾರಾಜನು, ಸೋಪಾಧ್ಯಾಯಃ - ಪುರೋಹಿತರಿಂದೊಡಗೂಡಿದವನಾಗಿ, ಇಕ್ಷ್ವಾಕುನಂದನಂ - ಇಕ್ಷ್ವಾಕು ವಂಶಾನಂದಕರನಾದ ಶ್ರೀರಾಮನನ್ನು, ರಾಜ್ಯೇನ - ಪ್ರಭುತ್ವದಿಂದ, ಅಭಿಷೇಚಯಿತುಂ - ಪಟ್ಟಾಭಿಷೇಕ ಮಾಡಲಿಕ್ಕೆ, ಪ್ರಚಕ್ರಮೆ - ಪ್ರಾರಂಭಿಸಿದನು ॥೧೮॥ ॥ ತಸ್ಮಿ೯ - ಆ ದಶರಥನು, ರಾಘವಸ್ಯ - ಶ್ರೀರಾಮನ, ಅಭಿಷೇಚನೆ - ಪಟ್ಟಾಭಿಷೇಕ ವಿಷಯವಾದ, ಸಂಭ್ರಿಯಮಾಣೇ(ಸತಿ) ಸಾಮಗ್ರಿಯನ್ನು ಅಣಿಮಾಡುತಲಿರಲಾಗಿ, ಕೈಕೇಯೀನಾಮ - ಕೇಕಯ ರಾಜಪುತ್ರಿಯೆಂದು ಪ್ರಸಿದ್ಧಳಾದ, ದೇವೀ - ಪಟ್ಟದರಸಿಯು, ರಾಮಃ - ಶ್ರೀರಾಮನು, ಅಭಿಷಿಕ್ಷ್ಯತೇಯದಿ - ಪಟ್ಟಾಭಿಷೇಕಿಸಲ್ಪಟ್ಟವನೇ ಆದರೆ, ಪ್ರತ್ಯಹಂ - ಪ್ರತಿದಿನದಲ್ಲಿಯೂ, ಮಮ - ನನ್ನ, ಭೋಜನಂ - ಅನ್ನಪಾನ

---

ಅಯೋಧ್ಯಾ ಪಟ್ಟಣದೊಳಗೆ ನನ್ನ ಪ್ರಾಣನಾಥನಾದ ಶ್ರೀ ರಾಮಚಂದ್ರನ ಮನೆಯಲ್ಲಿ ಸಕಲ ಸಂಪತ್ಸಮೃದ್ಧಿಗಳಿಂದೊಡಗೂಡಿ, ಮನುಷ್ಯರು ಅನುಭವಿಸಬೇಕಾದ ಸಕಲ ರಾಜಭೋಗಗಳನ್ನೂ ಹನ್ನೆರಡು ವರ್ಷಗಳ ಕಾಲ ಅಖಂಡವಾಗಿ ಅನುಭವಿಸುತಲಿದ್ದೆನು ॥೧೭॥ ಅಲ್ಲಿ ಹೀಗೆ ಇರುವಾಗ ಹದಿಮೂರನೆಯ ವರ್ಷದೊಳಗೆ ಇಕ್ಷ್ವಾಕು ವಂಶಕ್ಕೆ ತಿಲಕಪ್ರಾಯನಾಗಿ ಸಕಲ ಕಲ್ಯಾಣ ಗುಣಾಭಿರಾಮನಾದ ಶ್ರೀ ರಾಮನಿಗೆ ದಶರಥ ಮಹಾರಾಜನು ತನ್ನ ಕುಲಪುರೋಹಿತರಾದ ವಸಿಷ್ಠರೇ ಮೊದಲಾದವರೊಂದಿಗೆ ಯೋಚಿಸಿ, ಸಾಮ್ರಾಜ್ಯಾಭಿಷೇಕವನ್ನು ಮಾಡಬೇಕೆಂದು ಉದ್ಯೋಗಿಸಿ ॥ ೧೮ ॥ ಪಟ್ಟಾಭಿಷೇಕಕ್ಕೆ ಬೇಕಾದ ಸಲಕರಣೆಗಳನ್ನೆಲ್ಲ ಸಿದ್ಧಪಡಿಸುತ್ತಿರುವಲ್ಲಿ ಅದನ್ನು ತಿಳಿದು ಆತನ ಕಿರಿಯ ಹೆಂಡತಿಯಾದ ಕೈಕೇಯಿ ಎಂಬಾಕೆಯು ತನ್ನ ಪತಿಯೊಡನೆ ಇಂತೆಂದಳು ॥೧೯॥ ॥ ಎಲೈ ಮಹಾರಾಜನೇ ! ನೀನು ರಾಮನನ್ನು ರಾಜ್ಯಾಭಿಷಿಕ್ತನನ್ನಾಗಿ ಮಾಡುವುದಾದರೆ ನಾನು ಇಂದು ಮೊದಲು ಅನ್ನವನ್ನು ತಿನ್ನಲೊಲ್ಲೆ, ನೀರನ್ನು ಕುಡಿಯಲೊಲ್ಲೆ, ಇದೇ ನನ್ನ ಜೀವನಕ್ಕೆ

ನ ಪಿಬೇಯಂ ನ ಖಾದೇಯಂ ಪ್ರತ್ಯಹಂ ಮಮ ಭೋಜನಂ ।
ಏಷ ಮೇ ಜೀವಿತ ಸ್ಯಾಂತೋ ರಾಮೋ ಯದ್ಯಭಿಷಿಚ್ಯತೆ ॥೩೦॥ ॥
ಯತ್ತದುಕ್ತಂ ತ್ವಯಾ ವಾಕ್ಯಂ ಪ್ರೀತ್ಯಾ ನೃಪತಿ ಸತ್ತಮ ।
ತಚ್ಚೇ ನ್ನವಿತಥಂ ಕಾರ್ಯಂ ವನಂ ಗಚ್ಛತು ರಾಘವಃ ॥೩೧॥ ॥
ಸ ರಾಜಾ ಸತ್ಯವಾ ಗ್ದೇವ್ಯಾ ವರದಾನ ಮನುಸ್ಮರ‌ನ್ ।
ಮುಮೋಹ ವಚನಂ ಶ್ರುತ್ವಾ ಕೈಕೇಯ್ಯಾಃ ಕ್ರೂರ ಮಪ್ರಿಯಂ ॥೩೨॥॥
ತತಸ್ತು ಸ್ಥವಿರೋ ರಾಜಾ ಸತ್ಯೇ ಧರ್ಮೇ ವ್ಯವಸ್ಥಿತಃ ।

ಮೊದಲಾದ ಆಹಾರವನ್ನು, ನಪಿಬೇಯಂ - ಪಾನಮಾಡೆನು, ನಖಾದೇಯಂ - ಭಕ್ಷಿಸೆನು, ಏಷಃ - ಈ ಪಟ್ಟಾಭಿಷೇಕವು, ಮೇ - ನನ್ನ, ಜೀವಿತಸ್ಯ - ಬಾಳಿಕೆಗೆ, ಅಂತಃ - ಕೊನೆಗಾಣಿಸತಕ್ಕುದಾಗಿದೆ, ॥೧೯,೩೦॥॥ ನೃಪತಿಸತ್ತಮ - ಎಲೈ ರಾಜಶ್ರೇಷ್ಠನೇ! ಪ್ರೀತ್ಯಾ - ಪ್ರೀತಿಯೊಡನೆ, ತ್ವಯಾ - ನಿನ್ನಿಂದ, ಯತ್ - ಯಾವ, ವಾಕ್ಯಂ - ವರದ್ವಯವನ್ನು ಕೊಡುವೆನೆಂದು ಹೇಳಿದ್ದ ಮಾತು ಉಂಟೋ, ತತ್ - ಅದು, ವಿತಥಂ - ವ್ಯರ್ಥವಾದುದಾಗಿ, ನಕಾರ್ಯಂಚೇತ್ - ಮಾಡಲ್ಪಡದೆ (ನೆರವೇರಿಸಲ್ಪಡದೆ) ಹೋದರೆ, (ಸತ್ಯವಾದುದನ್ನಾಗಿ ಮಾಡುವುದಾದರೆ) ರಾಘವಃ - ಶ್ರೀರಾಮನು, ವನಂ - ಅರಣ್ಯವನ್ನು ಕುರಿತು, ಗಚ್ಛತು - ಹೋಗಲಿ, (ಇತಿ - ಹೀಗೆಂಬ) ವಚನಂ - ಮಾತನ್ನು, ಭರ್ತಾರಂ - ಪತಿಯನ್ನು ಕುರಿತು, ಅಬ್ರವೀತ್ - ಹೇಳಿದಳು. ॥೩೧॥ ॥ ಸತ್ಯವಾಕ್ - ಸತ್ಯವಚನನಾದ, ಸಃ - ಆ, ರಾಜಾ - ದಶರಥನು, ದೇವ್ಯಾಃ - ಕೈಕೇಯಿಯಾದೇವಿಗೆ, ವರದಾನಂ - ವರಕೊಟ್ಟಿದ್ದುದನ್ನು, ಅನುಸ್ಮರ‌ನ್ - ನೆನೆಯುತ್ತಿರುವವನಾಗಿ, ಕ್ರೂರಂ - ಭಯಂಕರವಾಗಿಯೂ, ಅಪ್ರಿಯಂ - ಅಹಿತವಾದುದಾಗಿಯೂ ಇರುವ, ಕೈಕೇಯ್ಯಾಃ - ಕೈಕೇಯಿಯಾದೇವಿಯ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಮುಮೋಹ - ಮೂರ್ಛೆ ಹೊಂದಿದನು ॥೩೨॥ ॥ ತತಃ - ತರುವಾಯ, ಸ್ಥವಿರಃ - ಮುದುಕನಾದ, ರಾಜಾ - ದಶರಥಮಹಾರಾಜನು, ಸತ್ಯೇ - ಸತ್ಯದಲ್ಲಿಯೂ ಧರ್ಮೇ - ಧರ್ಮದಲ್ಲಿಯೂ, ವ್ಯವಸ್ಥಿತಃ - ನೆಲೆಗೊಂಡಿರುವವನಾದಕಾರಣವೇ, ರುದನ್ - ದುಃಖಿಸುತ್ತಿರುವವನಾಗಿ, ಜ್ಯೇಷ್ಠಂ - ಹಿರಿಯುವನಾದ; ಯಶಸ್ವಿನಂ - ಕೀರ್ತಿವಂತನಾಗಿರತಕ್ಕ, ಪುತ್ರಂ - ಕುಮಾರನನ್ನು

ಕಡೆಗಾಲ, ನಾನು ಇನ್ನು ಈ ಪ್ರಾಣಗಳನ್ನು ಇಟ್ಟುಕೊಂಡು ಹೊಟ್ಟೆಯನ್ನು ಹೊರೆಯುವುದಿಲ್ಲ. ॥೩೦॥ ॥ ನೀನು ಹಿಂದೆ ನನಗೆ ವರಕೊಟ್ಟು ಇದ್ದುದನ್ನು ಜ್ಞಾಪಿಸಿಕೋ, ಎಲೈ ಮಹಾರಾಜನೇ । ನೀನು ಪ್ರೀತಿಪೂರ್ವಕವಾಗಿ ನನಗೆ ಎರಡು ವರಗಳನ್ನು ಕೊಡುತ್ತೇನೆಂದು ಹೇಳಿ ಇರಲಿಲ್ಲವೇ ? ಆ ನಿನ್ನ ವಾಕ್ಯವನ್ನು ನೀನು ಸತ್ಯವಾದುದನ್ನಾಗಿ ಮಾಡುವುದಾದರೆ ರಾಮನು ರಾಜ್ಯವನ್ನು ಬಿಟ್ಟು ಈಗಲೇ ಕಾಡಿಗೆ ಪ್ರಯಾಣಮಾಡಲಿ. ॥೩೧॥ ॥ ಎಂದ ದೇವಿಯ ವಚನವನ್ನು ಆಲಿಸಿ ಸತ್ಯಸಂಧನಾದ ದಶರಥಮಹಾರಾಜನು ತಾನು ಪೂರ್ವದಲ್ಲಿ ಆಕೆಗೆ ಕೊಟ್ಟು ಇದ್ದ ವರದ್ವಯವನ್ನೂ, ಅವಳು ಈ ಸಮಯದಲ್ಲಿ ತಂದು ಒಡ್ಡಿದುದನ್ನೂ ಕಂಡು, ಬಹು ಕ್ರೂರವಾಗಿಯೂ ಅನಿಷ್ಟವಾಗಿಯೂ ಇರುವ ಆ ವಚನ ಶಲ್ಯದಿಂದ ಬಾಧಿತನಾಗಿ, ದುಃಖವನ್ನು ತಾಳಲಾರದೆ ಕೂಡಲೇ ಮೂರ್ಛಿತನಾದನು. ॥ ೩೨॥ ॥ ಏನ ಮಾಡಲಿಕ್ಕಾದೀತು; ವಯಸ್ಸೋ ಆಗಿದೆ, ಬಹಳಮುದುಕ, ಸತ್ಯವನ್ನೂ, ಧರ್ಮವನ್ನೂ, ಮೀರಿ ಹೋಗಲಾರ, ಪ್ರಿಯಪುತ್ರನಾದ ಶ್ರೀರಾಮನನ್ನು ಅಗಲಿ ಕ್ಷಣಮಾತ್ರವಾದರೂ

ಜ್ಯೇಷ್ಠಂ ಯಶಸ್ವಿನಂ ಪುತ್ರಂ ರುದನ್ರಾಜ್ಯ ಮಯಾಚತ ॥೨೩॥ ॥
ಸ ಪಿತು ರ್ವಚನಂ ಶ್ರೀಮಾನಭಿಷೇಕಾ ತ್ಪರಂ ಪ್ರಿಯಂ ।
ಮನಸಾ ಪೂರ್ವ ಮಾಸಾದ್ಯ ವಾಚಾ ಪ್ರತಿಗೃಹೀತವಾನ್ ॥೨೪॥॥
ದದ್ಯಾ ನ್ನ ಪ್ರತಿಗೃಹ್ಣೀ ಯಾ ನ್ನ ಬ್ರೂಯಾ ತ್ಕಿಂಚಿ ದಪ್ರಿಯಂ ।
ಅಪಿ ಜೀವಿತ ಹೇತೋ ರ್ವಾ ರಾಮ ಸ್ಸತ್ಯಪರಾಕ್ರಮಃ ॥ ೨೫॥ ॥

ಕುರಿತು, ರಾಜ್ಯಂ - ಪ್ರಭುತ್ವವನ್ನು, ಅಯಾಚತ - ಬೇಡಿದನು, ॥೨೩॥ ॥ ಶ್ರೀಮಾನ್ - ಮಹಾಕಾಂತಿ ಸಂಪನ್ನನಾದ, ಸಃ - ಆ ಶ್ರೀರಾಮನು, ಅಭಿಷೇಕಾತ್ - ಪಟ್ಟಾಭಿಷೇಕಕ್ಕಿಂತಲೂ, ಪರಂ - ವಿಶೇಷವಾಗಿ, ಪ್ರಿಯಂ - ಇಷ್ಟವಾಗಿರುವ, ಪಿತುಃ - ತಂದೆಯ, ವಚನಂ - ಮಾತನ್ನು, ಪೂರ್ವಂ - ಮೊದಲು, ಮನಸಾ - ಮನಸ್ಸಿನಿಂದ, ಆಸಾದ್ಯ - ಹೊಂದಿ, (ಸ್ವೀಕರಿಸಿ) ವಾಚಾ - ಮಾತಿನಿಂದ, ಪ್ರತಿಗೃಹೀತವಾನ್ - ಅಂಗೀಕರಿಸಿದನು (ಒಪ್ಪಿಕೊಂಡನು) ॥೨೪॥ ॥ ಸತ್ಯಪರಾಕ್ರಮಃ-ನಿಜವಾದ ಶೌರ್ಯವುಳ್ಳ, ಮಹಾಯಶಾಃ-ಹೆಚ್ಚಿದ ಕೀರ್ತಿಯುಳ್ಳ, ಸಃ ರಾಮಃ - ಆ ಶ್ರೀರಾಮನು, (ರಾಜ್ಯಂ - ರಾಜ್ಯವನ್ನು) ದದ್ಯಾತ್ - ಕೊಡತಕ್ಕದೇಸರಿ, ನಪ್ರತಿಗೃಹ್ಣೀಯಾತ್ - ಮರಳಿ ತೆಗೆದುಕೊಳ್ಳತಕ್ಕುದಲ್ಲ, ಜೀವಿತಹೇತೋರ್ವಾ - ಪ್ರಾಣಧಾರಣನಿಮಿತ್ತವಾಗಿಯಾದರೂ, ಕಿಂಚಿತ್ - ಸ್ವಲ್ಪವಾದರೂ, ಅಪ್ರಿಯಮಪಿ - ಅಹಿತವನ್ನೂ, ನಬ್ರೂಯಾತ್ - ಹೇಳಬಾರದು, (ಇತಿ - ಹೀಗೆಂದು, ಆಲೋಚ್ಯ- ಆಲೋಚಿಸಿ) ಮಹಾರ್ಹಾಣಿ - ಅತ್ಯುತ್ತಮಗಳಾದ, ಉತ್ತರೀಯಾಣಿ - ಬಹಿರ್ವಾಸಗಳನ್ನು, ವಿಹಾಯ - ತೆಗೆದಿಟ್ಟು, ಮನಸಾ - ಮನಸ್ಸಿನಿಂದ,

ಜೀವಿಸಿ ಇರಲಾರ, ಅದುವರೆಗೆ ಮಗನಿಗೆ ರಾಜ್ಯವನ್ನು ವಾಚಾ ದಾನಮಾಡಿ ಇದಾನೆ, ಯತ್ನವಿಲ್ಲ. ಸತ್ಯಧರ್ಮಗಳೆಂಬ ಇಕ್ಕಳದ ಬಾಯಿಗೆ ಸಿಕ್ಕಿದ, ತಪ್ಪಿಸಿ ಕೊಳ್ಳಲು ಬೇರಾವುದೂ ದಾರಿಯೇ ಇಲ್ಲ. ಅಂತಹ ಇಕ್ಕಟ್ಟಿನ ಸಮಯದಲ್ಲಿ ಗತಿಕಾಣದೆ ಮಹಾ ಯಶಸ್ವಿಯಾದ ಮಗನನ್ನು ಕುರಿತು ರಾಜ್ಯವನ್ನು ಹಿಂದಿರುಗಿಸಿ ಕೊಡುವಂತೆ ಬೇಡಿಕೊಂಡನು ॥ ಲೋಕದಲ್ಲಿ ಎಂತಹ ಮಕ್ಕಳಾದರೂ ತಮ್ಮ ತಾಯಿ ತಂದೆಗಳು ಹೇಳುವ ಮಾತು ತಮಗೆ ಹಿತವಾಗಿದ್ದರೆ ಅಂಗೀಕರಿಸುವರಲ್ಲದೆ ಅಪ್ರಿಯವಾಗಿದ್ದಲ್ಲಿ ಎಂದಿಗೂ ಒಪ್ಪರು, ಆದರೆ ಶ್ರೀರಾಮನು ಹಾಗೆ ಮಾಡಲಿಲ್ಲ. ತಂದೆಯಾದ ದಶರಥನು ತನಗೆ ಮಾಡಬೇಕೆಂದಿದ್ದ ಪಟ್ಟಾಭಿಷೇಕ ಮಹೋತ್ಸವವು ತನಗೆ ಎಷ್ಟು ಪ್ರಿಯವಾಗಿದ್ದಿತೋ, ಆತನ ವಚನವನ್ನು ಎಂದರೆ-ರಾಜ್ಯವನ್ನು ಒಪ್ಪಿಸಿ ಅರಣ್ಯಯಾತ್ರೆ ಮಾಡೆಂಬ ದುಷ್ಟನಿಗ್ರಹ ಶಿಷ್ಟ ಪರಿಪಾಲನಾನುಕೂಲವಾದ ವಾಕ್ಯವನ್ನು ಆ ಪಟ್ಟಾಭಿಷೇಕಕ್ಕಿಂತಲೂ ಪ್ರಿಯತಮವಾದುದನ್ನಾಗಿ ಮನಃಪೂರ್ವಕವಾಗಿ ಮೊದಲು ಮನದೊಳೊಪ್ಪಿ, ತರುವಾಯ ವಾಕ್ಕಿನಿಂದಲೂ ನಿನ್ನ ಇಷ್ಟವಿದ್ದಂತೆ ಆಗಲಿ ಎಂದು ಉದಹರಿಸಿದನು ॥೨೪॥ ॥ ಮತ್ತು-ಸತ್ಯಪರಾಕ್ರಮನಾದ ಶ್ರೀರಾಮನು ಭರತನಿಗಾಗಲಿ ಮತ್ತೊಬ್ಬರಿಗಾಗಲಿ ಕೊಡತಕ್ಕುದೇ ಸರಿ, ಹಿಂದಕ್ಕೆ ತೆಗೆದುಕೊಳ್ಳತಕ್ಕುದು ಸರ್ವಥಾ ಸರಿಯಾದುದಲ್ಲ. ನನ್ನ ಜೀವನಕ್ಕಾಗಿ ಸ್ವಲ್ಪ ರಾಜ್ಯವನ್ನುಕೊಡು ಎಂದು ಕೇಳಿಕೊಳ್ಳುವುದು ಕೂಡ ಅನುಚಿತವೇ ಸರಿ, ಪಿತೃವಾಕ್ಯ ಪರಿಪಾಲನವು ಅವಶ್ಯ ಕರ್ತವ್ಯವಾದುದು, ಇದಕ್ಕೆ ಪ್ರತಿಯಾಗಿ ಸ್ವಲ್ಪವಾದರೂ ಅಹಿತವನ್ನು ಹೇಳುವುದು ಸರಿಯಲ್ಲ. ಎಂದು ಮನದೊಳಗೆ ನಿರ್ಧರಿಸಿ ॥೨೫॥ ॥ ಮಹಾರಾಜ ಯೋಗ್ಯವಾಗಿ ಅತ್ಯುತ್ತಮಗಳೆನಿಸಿ

ಸ ವಿಹಾ ಯೋತ್ತ ರೀಯಾಣಿ ಮಹಾರ್ಹಾಣಿ ಮಹಾಯಶಾಃ ।
ವಿಸೃಜ್ಯ ಮನಸಾ ರಾಜ್ಯಂ ಜನನ್ಯೈ ಮಾಂ ಸಮಾದಿಶತ್॥೨೬॥
ಸಾಽಹಂ ತಸ್ಯಾಗ್ರತ ಸ್ತೂರ್ಣಂ ಪ್ರಸ್ಥಿತಾ ವನಚಾರಿಣೀ ।
ನಹಿ ಮೇ ತೇನ ಹೀನಾಯಾ ವಾಸ ಸ್ಸ್ವರ್ಗೇಽಪಿ ರೋಚತೇ ॥೨೭॥
ಪ್ರಾಗೇವ ತು ಮಹಾಭಾಗ ಸ್ಸೌಮಿತ್ರಿ ರ್ಮಿತ್ರನಂದನಃ ।
ಪೂರ್ವಜಸ್ಯಾ ನುಯಾತ್ರಾರ್ಥೇ ದ್ರುಮಚೀರೈ ರಲಂಕೃತಃ ॥೨೮॥
ತೇವಯಂ ಭರ್ತು ರಾದೇಶಂ ಬಹುಮಾನ್ಯ ದೃಢವ್ರತಾಃ ।

ರಾಜ್ಯಂ - ರಾಜ್ಯವನ್ನು, ವಿಸೃಜ್ಯ - ತೊರೆದು, ಜನನ್ಯೈ-ತನ್ನತಾಯಿಯಾದ ಕೌಸಲ್ಯಾದೇವಿಗೆ, ಮಾಂ ನನ್ನನ್ನು ಕುರಿತು, ಸಮಾದಿಶತ್ - ಹೇಳಿದನು ॥೨೫,೨೬॥ ॥ ಸಾ - ಆ (ಕಾಸಲ್ಯೆಯ ಬಳಿಯಲ್ಲಿ ಇರಬೇಕೆಂದು ಶ್ರೀರಾಮನಿಂದ ಹೇಳಿಸಿಕೊಂಡ) ಅಹಂ - ನಾನು, ತೇನ - ಆರಾಮನಿಂದ, ಹೀನಾಯಾಃ- ಶೂನ್ಯಳಾಗಿರುವ, ಮೆ - ನನಗೆ, ಸ್ವರ್ಗೇಽಪಿ - ಸ್ವರ್ಗದಲ್ಲಿಕೂಡ, ವಾಸಃ - ನಿವಾಸವು, ನರೋಚತೇಹಿ - ರುಚಿಸುವುದಿಲ್ಲವಲ್ಲ, (ಇತಿ - ಇಂತೆಂದು, ಆಲೋಚ್ಯ - ಚಿಂತಿಸಿ) ತಸ್ಯ - ಆ ಶ್ರೀರಾಮನ, ಅಗ್ರತಃ - ಎದುರಿಗೆ (ಮುಂದುಗಡೆ) ತೂರ್ಣಂ - ಜಾಗ್ರತೆಯಾಗಿ, ಪ್ರಸ್ಥಿತಾ - ಹೊರಟವಳಾಗಿ, ವನಚಾರಿಣೀ - ಅರಣ್ಯಸಂಚಾರವುಳ್ಳವಳಾದೆನು ॥೨೭॥ ॥ ಮಹಾಭಾಗಃ -ಭ್ರಾತೃಸೇವಾರೂಪವಾದ ಸೌಭಾಗ್ಯವುಳ್ಳ, ಮಿತ್ರನಂದನಃ - ಜಡನಾಡಿಗಳಿಗೆ ಸಂತೋಷಕರನಾದ, ಸೌಮಿತ್ರಿಸ್ತು - ಲಕ್ಷ್ಮಣನಾದರೋ, ಪೂರ್ವಜಸ್ಯ - ಅಗ್ರಜನ, ಅನುಯಾತ್ರಾರ್ಥೇ-ಜೊತೆಯಲ್ಲಿ ಹೊರಡುವ ವಿಷಯದಲ್ಲಿ, ಪ್ರಾಗೇವ - ಮೊದಲೇ, (ರಾಮನು ನಾರುಸೀರೆಯನ್ನುಡುವುದಕ್ಕೆ ಮೊದಲೇ) ದ್ರುಮಚೀರೈಃ - ನಾರುಬಟ್ಟೆಗಳಿಂದ, ಅಲಂಕೃತಃ - ಸಿಂಗರಿಸಲ್ಪಟ್ಟನು ॥೨೮॥ ॥ ತೆ - ಆ, (ಹಾಗೆಪ್ರಯಾಣಾಭಿಮುಖರಾದ] ವಯಂ - ನಾವು, ಭರ್ತುಃ - ದಶರಥಮಹಾರಾಜನ, ಆದೇಶಂ - ಅಪ್ಪಣೆಯನ್ನು, ಬಹುಮಾನ್ಯ - ಗೌರವಿಸಿ, ದೃಢವ್ರತಾಃ - ಅರಣ್ಯವಾಸವೆಂಬ ದೃಢವ್ರತವುಳ್ಳವರಾಗಿ, ಪುರಾ - ಪೂರ್ವದಲ್ಲಿ, ಅದೃಷ್ಟಂ - ಕಾಣದಿರುವ, ಗಂಭೀರದರ್ಶನಂ-ಪ್ರವೇಶಿಸಲು

ಇರುವ ಉಟ್ಟು ಹೊದೆಯತಕ್ಕ ದಿವ್ಯ ಪೀತಾಂಬರಗಳನ್ನು ತೆಗೆದಿಟ್ಟು, ಮನಃ ಪೂರ್ವಕವಾಗಿ ಸಾಮ್ರಾಜ್ಯವನ್ನು ತೊರೆದು, ಅರಣ್ಯಯಾತ್ರೆಗನುಗುಣವಾದ ನಾರುಬಟ್ಟೆಗಳನ್ನು ಧರಿಸಿ, ಅರಣ್ಯಪ್ರಯಾಣಕ್ಕೆ ಸಿದ್ಧನಾಗಿ ನನ್ನನ್ನು ತನ್ನ ತಾಯಿಯಾದ ಕೌಸಲ್ಯೆಯ ಬಳಿಯೊಳಿರುವಂತೆ ಆಜ್ಞಾಪಿಸಿದನು ॥೨೬॥ ಹಾಗೆ ಆಜ್ಞಾಪಿಸಲ್ಪಟ್ಟ ನಾನು ಪ್ರಾಣಪ್ರಿಯನಾದ ಆ ಶ್ರೀರಾಮನ ಸನ್ನಿಧಾನದಲ್ಲಿರೋಣವೇ ನನಗೆ ಸ್ವರ್ಗನಿವಾಸ ಸೌಖ್ಯವೆಂತಲೂ, ಆತನ್ನಗಲಿದ ಪಟ್ಟಣವಾಸವು ನರಕವಾಸಕ್ಕಿಂತಲೂ ಕೀಳಾದುದೆಂತಲೂ ಭಾವಿಸಿ, ಆತನು ಅರಣ್ಯಕ್ಕೆ ಹೊರಡುವುದಕ್ಕಿಂತ ಮೊದಲೇ ಅರಣ್ಯಯಾತ್ರೆಗೆ ಸಿದ್ಧಳಾಗಿ ಹೊರಟೆನು ॥೨೭॥ ನನಗಿಂತಲೂ ಮೊದಲೇ ಅಣ್ಣನ ಸೇವೆಯನ್ನು ಮಹಾಭಾಗ್ಯವೆಂದು ಭಾವಿಸಿದ ಪುಣ್ಯಾತ್ಮನಾದ ಲಕ್ಷ್ಮಣನು ಪಟ್ಟೆಪೀತಾಂಬರಗಳನ್ನು ಕಳೆದು, ವಲ್ಕಲಗಳನ್ನು ಧರಿಸಿ, ಪ್ರಯಾಣಕ್ಕೆ ಮುಂದಾಳಾಗಿದ್ದನು. ॥೨೮॥ ಈ ಪ್ರಕಾರವಾಗಿ ಪ್ರಯಾಣೋನ್ಮುಖರಾದ ನಾವು ಮೂವರೂ ಮಹಾರಾಜನ ಅಪ್ಪಣೆಯನ್ನು ಶಿರದೊಳಾಂತು, ಅರಣ್ಯವಾಸದಲ್ಲಿ ನೆಲೆಗೊಂಡ ಮನಸ್ಸುಳ್ಳವರಾಗಿ, ಹಿಂದೆ ಎಂದೂ ಕಾಣದೆಯೂ, ಪ್ರವೇಶಿಸಲಿಕ್ಕೆ ಅಸದಳ

ಪ್ರವಿಷ್ಟಾಸ್ಸ್ತತ್ರ ಘೋರಾ ದೃಷ್ಟ್ವಂ ವನಂ ಗಂಭೀರ ದರ್ಶನಂ॥೨೯॥
ವಸತೋ ದಂಡಕಾರಣ್ಯೇ ತಸ್ಯಾಹ ಮಮಿತೌಜಸಃ ।
ರಕ್ಷಸಾಽಪಹೃತಾ ಭಾರ್ಯಾ ರಾವಣೇನ ದುರಾತ್ಮನಾ ॥೩೦॥
ದ್ವೌ ಮಾಸೌ ತೇನ ಮೇ ಕಾಲೋ ಜೀವಿತಾ ನುಗ್ರಹಃ ಕೃತಃ ।
ಊರ್ಧ್ವಂ ದ್ವಾಭ್ಯಾಂ ತು ಮಾಸಾಭ್ಯಾಂ ತತ ಸ್ತ್ಯಕ್ಷ್ಯಾಮಿ ಜೀವಿತಂ ॥

— ಇತಿ ಶ್ರೀಮತ್ಸುಂದರಕಾಂಡೇ-ತ್ರಯಸ್ತ್ರಿಂಶಸ್ಸರ್ಗಃ. —

ಅಶಕ್ಯವಾಗಿರುವ, ವನಂ - ಅರಣ್ಯವನ್ನು, ಪ್ರವಿಷ್ಟಾಃಸ್ಮ - ಹೊಕ್ಕೆವು ॥೨೯॥ ॥ ದಂಡಕಾರಣ್ಯೇ - ದಂಡಕಾವನದಲ್ಲಿ, ವಸತಃ - ವಾಸಮಾಡುತಲಿರುವ, ಅಮಿತೌಜಸಃ - ಅಪರಿಮಿತ ತೇಜಸ್ಸುಳ್ಳ, ತಸ್ಯ- ಆ ಶ್ರೀರಾಮನ, ಭಾರ್ಯಾ - ಧರ್ಮಪತ್ನಿಯಾದ. ಅಹಂ-ನಾನು, ದುರಾತ್ಮನಾ-ದುಷ್ಟಸ್ವಭಾವವುಳ್ಳ, ರಾವಣೇನ-ರಾವಣನೆಂಬ, ರಕ್ಷಸಾ - ರಾಕ್ಷಸನಿಂದ, ಅಪಹೃತಾ - ಅಪಹರಿಸಲ್ಪಟ್ಟೆನು ॥೩೦॥ ॥ ತೇನ - ಆ ರಾವಣನಿಂದ, ದ್ವೌ - ಎರಡಾದ, ಮಾಸೌ - ತಿಂಗಳುಗಳ ಪರಿಮಾಣವಾಗಿರುವ, ಕಾಲಃ - ಸಮಯವು, ಮೇ - ನನಗೆ, ಜೀವಿತಾನುಗ್ರಹಃ - ಪ್ರಾಣಧಾರಣೆಗೆ ಅನುಗ್ರಹವಾಗಿ, ಕೃತಃ - ಮಾಡಲ್ಪಟ್ಟಿತು, ತತಃ - ಆದಕಾರಣ, ದ್ವಾಭ್ಯಾಂ - ಎರಡಾದ, ಮಾಸಾಭ್ಯಾಂ - ತಿಂಗಳುಗಳಿಗಿಂತ. ಊರ್ಧ್ವಂತು - ಅನಂತರದಲ್ಲಿಯಾದರೋ, ಜೀವಿತಂ - ಪ್ರಾಣವನ್ನು, ತ್ಯಕ್ಷ್ಯಾಮಿ - ಬಿಡನೆನು ॥೩೧॥ ॥

—ಇಂತು ಮೂವತ್ತುಮೂರನೆಯ ಸರ್ಗಂ—

ವಾಗಿಯೂ, ನೋಡಲಿಕ್ಕೆ ಭಯಂಕರವಾಗಿಯೂ ಇರುವ ಮಹಾರಣ್ಯವನ್ನು ಪ್ರವೇಶಿಸಿದೆವು ॥೨೯॥ ಆ ಬಳಿಕ ಅಲ್ಲಲ್ಲಿ ಸಂಚರಿಸುತ್ತಾ ದಂಡಕಾರಣ್ಯದಲ್ಲಿ ನೆಲೆಯಾಗಿ ಪರ್ಣಶಾಲೆಯೊಳಗೆ ವಾಸಮಾಡುತ್ತಿರುವಲ್ಲಿ ಕೆಲವು ಕಾಲದಮೇಲೆ ಆ ಮಹಾಪರಾಕ್ರಮಶಾಲಿಯಾದ ಶ್ರೀ ರಾಮಚಂದ್ರನ ಧರ್ಮಪತ್ನಿಯಾದ ಈ ನಾನು ದುರಾತ್ಮನಾದ ರಾವಣನೆಂಬ ರಾಕ್ಷಸನಿಂದ ಅಪಹರಿಸಿ ತರಲ್ಪಟ್ಟೆನು ॥೩೦॥ ಇಲ್ಲಿ ಈಗ ನನಗೆ ಪ್ರಾಣಗಳನ್ನು ಧರಿಸಿ ಇರುವುದಕ್ಕೆ ಮಹಾಪಾಪಾತ್ಮನಾದ ಆ ದಶಕಂಧರನು ಎರಡು ತಿಂಗಳುಗಳ ಕಾಲವನ್ನು ಪರಮಾನುಗ್ರಹವಾಗಿ ಗಡುವುಮಾಡಿ ಕೊಟ್ಟಿದಾನೆ, ಆ ಎರಡು ಮಾಸಗಳು ಕಳೆದ ತರುವಾಯ ಪ್ರಾಣಗಳನ್ನು ತೊರೆಯಲಿಕ್ಕೆ ನಿಶ್ಚಯಿಸಿ ಇದೇನೆ. ಇದೇ ಇದುವರೆಗಿನ ನನ್ನ ಯಥಾರ್ಥವಾದ ಪೂರ್ವ ವೃತ್ತಾಂತವೆಂದು ಹೇಳಿ ವಿರಮಿಸಿದಳು ॥೩೧॥

— ಇಂತು ಮೂವತ್ತುಮೂರನೆಯಸರ್ಗಂ. —



ಶ್ರೀ

ಶ್ರೀರಾಮಚಂದ್ರ ಪರಬ್ರಹ್ಮಣೇನಮಃ.

## — ಶ್ರೀಮತ್ಸುಂದರಕಾಂಡೆ ಚತುಸ್ತ್ರಿಂಶಸ್ಸರ್ಗಃ —



ತಸ್ಯಾಸ್ತದ್ವಚನಂ ಶ್ರುತ್ವಾ ಹನುಮಾನ್ ಹರಿ ಯೂಥಪಃ ।
ದುಃಖಾದ್ದುಃಖಾಽಭಿಭೂತಾಯಾ ಸ್ಸಾಂತ್ವ ಮುತ್ತರ ಮಬ್ರವೀತ್ ॥೧॥
ಅಹಂ ರಾಮಸ್ಯ ಸಂದೇಶಾ ದ್ದೇವಿ ದೂತ ಸ್ತವಾಗತಃ ।

---

ಕಂದ॥ ಸೀತಾವೃತ್ತಾಂತವನಾ । ವಾತಾತ್ಮಜ ನರಿದು ರಾಮ ಕುಶಲವನರುಹಿ ।
ಮಾತೆಯ ಮಾಥಂ ತುರಿಹದೊ । ಳ್ಪ್ರೀತಂದುರೆ ಹಿತವ ಗ್ಯೆವ ಪದುಳದಿರೆಂದಂ ॥

ಹರಿಯೂಥಪಃ - ಕಪಿಕುಲನಾಥನಾದ, ಹನುಮಾನ್ - ಆಂಜನೇಯನು, ದುಃಖಾದ್ದುಃಖಾಭಿಭೂತಾಯಾಃ - ಉಕ್ಕಳಿಸಿ ಬರುವ ದುಃಖದಿಂದ ವ್ಯಥೆಪಡುತಲಿರುವ, ತಸ್ಯಾಃ - ಆಸೀತೆಯ, ತತ್ - ಆ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಸಾಂತ್ವಂ - ಶಾಂತವಾದ (ಸಮಾಧಾನಕರವಾದ) ಉತ್ತರಂ- ಪ್ರತಿವಚನವನ್ನು, ಅಬ್ರವೀತ್ - ಹೇಳತೊಡಗಿದನು ॥೧॥ ವೈದೇಹಿ - ಜನಕರಾಜಪುತ್ರಿಯಾದ, ಹೇ ದೇವಿ - ಎಲೌ ಮಾತೆಯೆ !, ರಾಮಃ - ಶ್ರೀರಾಮಚಂದ್ರನು, ಕುಶಲೀ - ಕ್ಷೇಮವುಳ್ಳವನಾಗಿದಾನೆ, ಅಹಂ - ನಾನು, ರಾಮಸ್ಯ - ಶ್ರೀರಾಮಚನ್ದ್ರನ, ದೂತಃ - ಬಂಟನಾಗಿದೇನೆ, ಸಂದೇಶಾತ್ - ಆತನ ಅಪ್ಪಣೆಯ ದೆಸೆಯಿಂದ, ಸಮೀಪಂ - ನಿನ್ನ ಸಾನ್ನಿಧ್ಯವನ್ನು ಕುರಿತು, ಆಗತಃ - ಬಂದವನಾಗಿದೇನೆ, ತ್ವಾಂಚ - ನಿನ್ನನ್ನು ಕುರಿತು, ಕೌಶಲಂ - ಕುಶಲಪ್ರಶ್ನೆಯನ್ನು ಅಬ್ರವೀತ್-ಹೇಳಿದನು ॥

---

—ಮೂವತ್ತನಾಲ್ಕನೆಯ ಸರ್ಗಂ—

ಜನಕ ಮಹಾರಾಜನಂದಿನಿಯು ಮಾರುತಿಯೊಡನೆ ಮಾತನಾಡತೊಡಗಿದಾಗ, ತಾನು ಅನುಭವಿಸುತಲಿರುವ ಕಷ್ಟಗಳೊಳಗೆ ಒಂದರ ಮೇಲೆ ಒಂದರಂತೆ ನೆನಪಿಗೆಬರಲು, ದುಃಖವು ಉಕ್ಕಳಿಸಿ, ಕೊರಳು ತೀರವಾಗಿ, ನರಗಳು ಉಬ್ಬಿ, ಹೊಟ್ಟೆಯೊಳಗೆ ಸಂಕಟವು ಕುದಿಯುತ್ತ, ಕಣ್ಣಿನಲ್ಲಿ ನೀರು ಬಟ್ಟುಡುತಲೂ, ಮೈಮೇಲೆ ಸ್ಮರಣೆಯೇ ತಪ್ಪುವಂತಾಗಿ, ಬಿಕ್ಕಳಿಸಿ ಬಿಕ್ಕಳಿಸಿ, ತೊದಲಿತೊದಲಿ, ತನ್ನ ಚರಿತ್ರೆಯನ್ನೆಲ್ಲ ತಿಳಿಸಲು, ಕಪಿಕುಲನಾಥನಾದ ಆ ಮಾರುತಿಯು ದುಃಖ ಸಾಗರದಲ್ಲಿ ತೇಲಿಮುಳುಗುತಲಿರುವ ವೈದೇಹಿಯ ವಚನವನ್ನು ಆಲಿಸಿ, ಮನದೊಳಗೆ ಮಹತ್ತರವಾಗಿ ಮರುಗಿ, ಈಕೆಯನ್ನು ಈ ಸಮಯದಲ್ಲಿ ಹೇಗಾದರೂ ಸಮಾಧಾನಿಸಬೇಕೆಂದು ನೆನೆದು, ಮೃದುಮಧುರವಾದ ಮಾತುಗಳಿಂದ ಇಂತೆಂದನು ॥೧॥ ಓತಾಯೇ ! ಶ್ರೀರಾಮಚಂದ್ರನು ಕುಶಲದಿಂದಿದಾನೆ, ನಿನ್ನ ಕುಶಲವನ್ನು ತಿಳಿದುಕೊಂಡು ಬರುವಂತೆ ಹೇಳಿದನು, ನಾನು ಆರಾಮನ ದೂತನು, ಆತನ ಅಪ್ಪಣೆಯ ಪ್ರಕಾರ

ವೈದೇಹಿ ಕುಶಲೀ ರಾಮ ಸ್ತ್ವಾಂಚ ಕೌಶಲ ಮಬ್ರವೀತ್ ‖೨‖
ಯೋ ಬ್ರಾಹ್ಮ ಮಸ್ತ್ರಂ ವೇದಾಂಶ್ಚ ವೇದ ವೇದವಿದಾಂ ವರಃ ।
ಸ ತ್ವಾಂ ದಾಶರಥೀ ರಾಮೋ ದೇವಿ ಕೌಶಲವ ಬ್ರವೀತ್ ‖೩‖
ಲಕ್ಷ್ಮಣಶ್ಚ ಮಹಾತೇಜಾ ಭರ್ತು ಸ್ತೇಽನುಚರಃ ಪ್ರಿಯಃ ।
ಕೃತವಾಂ ಚ್ಛೋಕಸಂತಪ್ತ ಶ್ಶಿರಸಾ ತೇಽಭಿವಾದನಂ ‖೪‖
ಸಾ ತಯೋಃ ಕುಶಲಂ ದೇವೀ ನಿಶಮ್ಯ ನರಸಿಂಹಯೋಃ ।
ಪ್ರೀತಿ ಸಂಹೃಷ್ಟ ಸರ್ವಾಂಗೀ ಹನುಮಂತ ಮಥಾ ಬ್ರವೀತ್ ‖೫‖

ಹೇದೇವಿ - ಎಲೌ ಜನನಿ !, ಯಃ - ಯಾವ ಶ್ರೀ ರಾಮನು, ಬ್ರಾಹ್ಮಂ - ಬ್ರಹ್ಮನೇ ದೇವತೆಯಾಗಿ ಉಳ್ಳ, ಅಸ್ತ್ರಂ - ಅಸ್ತ್ರವನ್ನೂ, ವೇದಾಂಶ್ಚ - ಋಗಾದಿ ವೇದಗಳನ್ನೂ, ವೇದ - ಬಲ್ಲವನಾಗಿ ಇದ್ದಾನೆಯೋ, ವೇದವಿದಾಂ - ವೇದಗಳನ್ನು ಬಲ್ಲವರೊಳಗೆ, ವರಃ - ಶ್ರೇಷ್ಠನೆನಿಸಿರುವನೋ, ಸಃ - ಅಂತಹ, ದಾಶರಥಿಃ - ದಶರಥನಂದನನಾದ, ರಾಮಃ - ಶ್ರೀರಾಮನು, ತ್ವಾಂ ನಿನ್ನನ್ನು ಕುರಿತು, ಕೌಶಲಂ - ಕ್ಷೇಮವನ್ನು, ಅಬ್ರವೀತ್ - ಹೇಳಿದನು, ‖೩‖ ಮಹಾತೇಜಾಃ - ಮಹಾಪರಾಕ್ರಮಶಾಲಿಯಾದ, ತೇ-ನಿನ್ನ, ಭರ್ತುಃ - ಪತಿಯಾದ ಶ್ರೀರಾಮನಿಗೆ, ಅನುಚರಃ - ದಾಸನಾಗಿರುವ, ಪ್ರಿಯಃ - ಇಷ್ಟನೂ ಆದ, ಲಕ್ಷ್ಮಣಶ್ಚ - ಸೌಮಿತ್ರಿಯೂ, ಶೋಕ ಸಂತಪ್ತಃ - ದುಃಖದಿಂದ ಸಂಕಟಪಡುತ್ತಲಿರುವವನಾಗಿ, ತೆ-ನಿನಗೆ, ಶಿರಸಾ - ಶಿರಸ್ಸಿನಿಂದ, ಅಭಿವಾದನಂ - ನಮಸ್ಕಾರವನ್ನು, ಕೃತವಾನ್ - ಮಾಡಿದನು (ಹೇಳಿದನು) ‖೪‖ ಸಾ - ಆ, ದೇವೀ - ಸೀತಾದೇವಿಯು, ನರಸಿಂಹಯೋಃ - ಪುರುಷಶ್ರೇಷ್ಠರೆನಿಸಿದ, ತಯೋಃ - ಆ ರಾಮಲಕ್ಷ್ಮಣರ, ಕುಶಲಂ - ಕ್ಷೇಮವನ್ನು, ನಿಶಮ್ಯ - ಕೇಳಿ, ಪ್ರೀತಿ - ವಿಶ್ವಾಸದಿಂದ, ಸಂಹೃಷ್ಟ - ಅರಳಿದ, ಸರ್ವಾಂಗೀ - ಸರ್ವಾವಯವಗಳುಳ್ಳವಳಾಗಿ, ಅಥ-ಆ ಮೇಲೆ, ಅಬ್ರವೀತ್ - ಹೇಳತೊಡಗಿದಳು ‖೫‖ * ಜೀವನ್ತಂ - ಬದುಕುತಲಿರುವ, ನರಂ - ಮನುಷ್ಯನನ್ನು, ವರ್ಷಶತಾದಪಿ - ನೂರುವರ್ಷಗಳೊಳಗೆಂದಾದರೂ, ಆನಂದಃ - ಸಂತೋಷವು, ಏತಿ-ಬಂದು ಸೇರುವುದು, ಇತಿ - ಹೀಗೆಂಬ,

ನಿನ್ನ ಕ್ಷೇಮ ಸಮಾಚಾರವನ್ನು ತಿಳಿದುಕೊಂಡು ಹೋಗಲು ಬಂದಿದೇನೆ ‖೨‖ ಎಲೌ ತಾಯೇ ! ಯಾವ ರಾಮನು ಬ್ರಹ್ಮಾಸ್ತ್ರವೇ ಮೊದಲಾದ ಅಸ್ತ್ರಗಳನ್ನೂ, ಋಗಾದಿವೇದಗಳನ್ನೂ, ಧನುರ್ವೇದಾದಿ ಉಪವೇದಗಳನ್ನೂ, ಆಮೂಲಾಗ್ರವಾಗಿ ಬಲ್ಲವನಾದುದರಿಂದಲೇ ವೇದವಿದರೊಳಗೆ ಮೊದಲನೆಯವನೆನಿಸಿ ಪ್ರಖ್ಯಾತನಾಗಿದಾನೆಯೋ, ಅಂತಹ ಶ್ರೀರಾಮಚಂದ್ರನು ನಿನ್ನಯ ಕುಶಲವನ್ನು ತಿಳಿದುಬರಹೇಳಿದನು ‖೩‖ ಮತ್ತು-ನಿನ್ನ ಪ್ರಿಯವಲ್ಲಭನಿಗೆ ಹಗಲಿರುಳೂ ಸೇವೆಯನ್ನು ಮಾಡುತ್ತಾ ಬಹುಕೃತಜ್ಞನೆನಿಸಿರುವ ಮಹಾತೇಜಸ್ವಿಯಾದ ಲಕ್ಷ್ಮಣನು ನಿನ್ನ ಅಗಲಿಕೆಯಿಂದುಂಟಾದ ಶೋಕಭಾರದಿಂದ ಬಹಳವಾಗಿ ನೋಯುತ್ತಾ, ತನ್ನ ಶಿರಸ್ಸಿನಿಂದ ನಿನಗೆ ಅಭಿವಾದನವನ್ನು ಹೇಳಿ, ನಿನ್ನ ಕುಶಲವೃತ್ತಾಂತವನ್ನು ತಿಳಿದು ಬರುವಂತೆ ಕಳುಹಿಸಿಇದಾನೆ ‖ ೪ ‖ ಎಂದು ಹೇಳುತಲಿರುವ ಆಂಜನೇಯನಮುಖದಿಂದ ಮಹಾಪುರುಷರೆನಿಸಿದ ರಾಮಲಕ್ಷ್ಮಣರ ಕುಶಲವೃತ್ತಾಂತವನ್ನು ಕೇಳಿದ ಕೂಡಲೇ ಹರ್ಷವು ಉಕ್ಕಿ,ಪ್ರೀತಿಪೂರ್ಣವಾದ ಅವಯವಗಳೆಲ್ಲ ಉಬ್ಬಿ ಅರಳುತ್ತಿರಲು, ವೈದೇಹಿಯು ಮಾರುತಿಯನ್ನು ಕುರಿತು ಹೀಗೆಂದಳು ‖೫‖ ಆಹಾ ! ಲೋಕದಲ್ಲಿ ಯಾವನಾದರೂ ಎಷ್ಟು

*ಕಲ್ಯಾಣೀ ಬತ ಗಾಥೇಯಂ ಲೌಕಿಕೀ ಪ್ರತಿಭಾತಿ ಮಾ ।
ಏತಿ ಜೀವಂತ ಮಾನಂದೊ ನರಂ ವರ್ಷಶತಾ ದಪಿ ॥೬॥
ತಯಾ ಸಮಾಗತೇ ತಸ್ಮಿನ್ ಪ್ರೀತಿ ರುತ್ಪಾದಿತಾ ದ್ಭುತಾ ।
ಪರಸ್ಪರೇಣ ಚಾಲಾಪಂ ವಿಶ್ವಸ್ತೌ ತೌ ಪ್ರಚಕ್ರತುಃ ॥೭॥
ತಸ್ಯಾ ಸ್ತದ್ವಚನಂ ಶ್ರುತ್ವಾ ಹನುಮಾನ್ ಹರಿಯೂಥಪಃ ।
ಸೀತಾಯಾ ಶ್ಶೋಕದೀನಾಯಾ ಸ್ಸಮೀಪ ಮುಪಚಕ್ರಮೇ ॥೮॥
ಯಥಾ ಯಥಾ ಸಮೀಪಂ ಸ ಹನುಮಾ ನುಪಸರ್ಪತಿ ।

ಲೌಕಿಕೀ - ಲೋಕದಲ್ಲಿ ವಾಡಿಕೆಯಾಗಿರುವ, ಗಾಥಾ - ಗಾದೆಯು, (ನಾಣ್ನುಡಿಯು) ಮಾಂ-ನನ್ನನ್ನು ಕುರಿತು, ಕಲ್ಯಾಣೀ - ಯಥಾರ್ಥವಾದುದಾಗಿ, ಪ್ರತಿಭಾತಿ - ತೋರುತಲಿದೆ, ಬತ - ಬಹಳ ಸಂತೋಷವಾಗುತ್ತಲಿದೆ ॥೬॥ ಸಮಾಗತೆ - ಪ್ರಿಯವಚನವನ್ನು ಹೇಳಲಿಕ್ಕೆ ಬಂದಿರುವ, ತಸ್ಮಿನ್ - ಬಹುವಿವೇಕ ಸಂಪನ್ನನಾದ ಆ ಆಂಜನೇಯನ ವಿಷಯವಾಗಿ, ತಯಾ - ಆ ಸೀತಾದೇವಿಯಿಂದ, ಅದ್ಭುತಾ - ಅತ್ಯಾಶ್ಚರ್ಯಕರವಾದ, ಪ್ರೀತಿಃ - ಸಂತೋಷವು, ಉತ್ಪಾದಿತಾ - ಉಂಟುಮಾಡಲ್ಪಟ್ಟಿತು, ತೌ - ಆ ಸೀತಾಹನುಮಂತರು, ಪರಸ್ಪರೇಣ - ಅನ್ಯೋನ್ಯವಾಗಿ, ವಿಶ್ವಸ್ತೌ - ನಂಬಿಕೆಯುಳ್ಳವರಾಗಿ (ಪ್ರೀತಿಸುವವರಾಗಿ) ಆಲಾಪಂಚ - ಸಂಭಾಷಣೆಯನ್ನೂ, ಪ್ರಚಕ್ರತುಃ - ನಡೆಸುತಲಿದ್ದರು ॥೭॥ ಹರಿಯೂಥಪಃ - ಕಪಿಕುಲನಾಥನಾದ, ಹನುಮಾನ್ - ಆಂಜನೇಯನು, ಶೋಕದೀನಾಯಾಃ - ದುಃಖದಿಂದ ದೀನಳಾದ, ತಸ್ಯಾಃ - ಆ, ಸೀತಾಯಾಃ - ಸೀತಾದೇವಿಯ, ತತ್ - ಆ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಸಮೀಪಂ - ಸೀತೆಯ ಸಮೀಪವನ್ನು ಕುರಿತು, ಉಪಚಕ್ರಮೆ - ಹೆಜ್ಜೆಯನ್ನಿಡುತ ಬರತೊಡಗಿದನು ॥೮॥ ಸಃ ಹನುಮಾನ್ - ಆ ಆಂಜನೇಯನು, ಯಥಾಯಥಾ - ಹೇಗೆಹೇಗೆ, ಸಮೀಪಂ - ಹತ್ತಿರವನ್ನು ಕುರಿತು

ಕಷ್ಟಗಳು ಬಂದೊದಗಿದರೂ ಪ್ರಾಣಗಳನ್ನು ಬಿಡದೆ ನೂರುವರ್ಷಗಳ ಕಾಲದವರೆಗೂ ಬದುಕಿ ಇದ್ದುದೇ ಆದರೆ, ಅಷ್ಟು ಕಾಲದೊಳಗೆ ಎಂದಾದರೊಂದು ದಿವಸ ಅವನಿಗೆ ಸಂತೋಷವು ಸಂಭವಿಸದೆ ಇರುವುದಿಲ್ಲ,, ಎಂಬೀಲೋಕವಾರ್ತೆಯು ಸಟೆಯಲ್ಲ, ಏಕೆಂದರೆ-ಈ ನಾಣ್ನುಡಿಯು ನನ್ನ ವಿಷಯದಲ್ಲಿಯೇ ಅನುಭವ ಪೂರ್ವಕವಾಗಿ ಸತ್ಯವಾಗಿದೆ, ಆಲೋಕವಾದವನ್ನು ನಂಬದೆಯೆ ಅಲ್ಲವೇ ನಾನು ಸಾಯಲಿಕ್ಕೆ ಸಿದ್ಧಳಾಗಿದ್ದೆನು, ಅಯ್ಯೋ ! ನಾನೀಗ ಪ್ರಾಣಗಳನ್ನು ತೊರೆದು ಕೊಂಡಿದ್ದರೆ ಈ ಕುಶಲವೃತ್ತಾಂತವನ್ನು ಕೇಳಿ ಆನಂದಿಸುವ ಸಂಭವವೇ ಇಲ್ಲದೆ ಹೋಗುತಲಿದ್ದಿತಲ್ಲಾ ? ದೈವಯೋಗವು ಇಷ್ಟು ಮಟ್ಟಿಗೆ ಶುಭೋದಯವನ್ನು ಒದಗಿಸಿತಲ್ಲಾ ! ॥೬॥ ಎಂದು ಅಂದುಕೊಂಡು,ಆ ಮಾರುತಿಯ ಮೂಲಕ ಪ್ರಿಯವೃತ್ತಾಂತವನ್ನು ಕೇಳಿದ ಬಳಿಕ ಆರಾಮ ಕಥಾಶ್ರಾವಕನ ವಿಷಯದಲ್ಲಿ ಬಹಳವಾದ ಪ್ರೀತಿಯನ್ನು ಪಡೆದುದಲ್ಲದೆ ಪರಸ್ಪರ ಪ್ರೀತಿ ಸಂಪನ್ನರಾಗಿ ಅನ್ಯೋನ್ಯ ಸಂಭಾಷಣೆಯನ್ನು ಮಾಡತೊಡಗಿದರು ॥೭॥ ಆದರೆ-ಆಂಜನೇಯನು ಹಾಗೆ ಸೀತೆಯು ಶ್ರೀರಾಮನಾಮಶ್ರವಣದಿಂದ ಸ್ವಲ್ಪ ಮಟ್ಟಿಗೆ ಸಂತುಷ್ಟಚಿತ್ತಳಾದಳೆಂಬ ಸಂದರ್ಭವನ್ನು ಅರಿತು ಇದೇ ಒಳ್ಳೆಯ ಸಮಯವೆಂದು ಭಾವಿಸಿ ಮೆಲ್ಲಮೆಲ್ಲಗೆ ಆಕೆಯ ಹತ್ತಿರಕ್ಕೆ ಬರಲು ಪ್ರಯತ್ನಿಸ ತೊಡಗಿದನು ॥೮॥ ಹನುಮಂತನು ಹೇಗೆ ಹೇಗೆ ಒಂದೊಂದೇ ಹೆಜ್ಜೆಯನ್ನು

* ಈ ಶ್ಲೋಕವು ವಾಲ್ಮೀಕಿ ಮುನಿಯದಲ್ಲ.

ತಥಾ ತಥಾ ರಾವಣಂ ಸಾ ತಂ ಸೀತಾ ಪರಿಶಂಕತೆ ||೯||
ಅಹೋ ಧಿಗ್ದುಷ್ಕೃತ ಮಿದಂ ಕಥಿತಂ ಹಿ ಯದಸ್ಯ ಮೇ |
ರೂಪಾಂತರ ಮುಪಾಗಮ್ಯ ಸಏವಾಯಂ ಹಿ ರಾವಣಃ ||೧೦||
ತಾ ಮಶೋಕಸ್ಯ ಶಾಖಾಂ ಸಾ ವಿಮುಕ್ತ್ವಾ ಶೋಕಕರ್ಶಿತಾ |
ತಸ್ಯಾ ಮೇವಾನವದ್ಯಾಂಗೀ ಧರಣ್ಯಾಂ ಸಮುಪಾವಿಶತ್ ||೧೧||
ಹನುಮಾ ನಪಿ ದುಃಖಾರ್ತಾಂ ತಾಂ ದೃಷ್ಟ್ವಾ ಭಯಮೋಹಿತಾಂ|

ಉಪಸರ್ಪತಿ - ಬರುತಲಿದ್ದನೋ, ತಥಾತಥಾ - ಹಾಗೆಹಾಗೆಲ್ಲ, ಸೀತಾ - ಜಾನಕಿಯು, ತಂ - ಆ ಹನುಮಂತನನ್ನು, ರಾವಣಂ - ರಾವಣನನ್ನಾಗಿ, ಪರಿಶಂಕತೆ - ಭಾವಿಸತೊಡಗಿದಳು ||೯|| ಯಃ-ಯಾವರಾವಣನು, ಮಾಯಯಾ - ಮೋಸದಿಂದ, ಮಾಂ - ನನ್ನನ್ನು, ಅಪಜಹಾರ - ಅಪಹರಿಸಿತಂದನೋ, ಸಏವ - ಆ ರಾವಣನೇ, ಅಯಂ - ಈ ರೂಪದವನಾಗಿ ಕಾಣಬರುತ್ತಾನೆ, ರಾವಣಃ-ರಾವಣನು, ರೂಪಾಂತರಂ - ಬೇರೆರೂಪವನ್ನು, (ವಾನರರೂಪವನ್ನು) ಉಪಾಗಮ್ಯ - ಹೊಂದಿ, (ತಾಳಿ) (ವರ್ತತೆ - ಇದ್ದಾನೆ) ಮೆ - ನನ್ನಿಂದ, ಅಸ್ಯ - ಇವನ, ಪುರತಃ - ಇದಿರಿಗೆ, ಯತ್ - ಯಾವಮಾತು, ಕಥಿತಂ - ಹೇಳಲ್ಪಟ್ಟಿತೋ, ತತ್ - ಅದು, ದುಷ್ಕೃತಂ - ಕೆಟ್ಟಕೆಲಸವಾಗಿ ಮಾಡಲ್ಪಟ್ಟಿತು, ಇದಂ - ಈ ನನ್ನ ಅನುಚಿತಕಾರ್ಯವನ್ನು, ಧಿಕ್ - ನಿಂದಿಸಬೇಕಾಗಿದೆ ||೧೦|| ಅನವದ್ಯಾಂಗೀ - ನಿರ್ದುಷ್ಟವಾದ ಅವಯವಗಳುಳ್ಳ, ಸಾ - ಆ ಸೀತಾದೇವಿಯು, ಶೋಕಕರ್ಶಿತಾ - ವ್ಯಥೆಯಿಂದ ಕೃಶಳಾಗಿ, ಅಶೋಕಸ್ಯ - ಅಶೋಕವನದಲ್ಲಿನ ಶಿಂಶುಪಾವೃಕ್ಷದ, ತಾಂಶಾಖಾಂ - ತಾನುಮೊದಲು ಹಿಡಿದಿದ್ದ ಕೊಂಬೆಯನ್ನು, ವಿಮುಕ್ತ್ವಾ - ಬಿಟ್ಟು, ತಸ್ಯಾಂ - ಆ, (ತಾನುನಿಂತಿದ್ದ) ಧರಣ್ಯಾಮೇವ - ನೆಲದಲ್ಲಿಯೇ, ಸಮುಪಾವಿಶತ್ - ಕುಳಿತುಕೊಂಡಳು ||೧೧|| ತತಃ - ಅಹಿಂದೆ, ಮಹಾಬಾಹುಃ - ಹೆಚ್ಚಿದತೋಳು ಬಲವುಳ್ಳ, ಹನುಮಾನಪಿ - ಆಂಜನೇಯನೂ, ದುಃಖಾರ್ತಾಂ - ವ್ಯಸನದಿಂದ ಪೀಡಿತಳಾಗಿರುವ, ತಾಂ - ಆ ನೆಲದಮೇಲೆಕುಳಿತಿರುವ, ಭಯ

ಮುಂದ ಮುಂದಕ್ಕೆ ಇಡುತ್ತಾ ತನ್ನ ಬಳಿಗೆ ಬರಲು ಯತ್ನಿಸುತಲಿದ್ದನೋ, ಹಾಗಹಾಗೆಲ್ಲ ಜಾನಕಿಯು ಬೆದರಿ, ಅವನನ್ನು ವಂಚಕನಾದ ರಾವಣನನ್ನಾಗಿ ಊಹಿಸುತ, ||೯|| ಹಾಗೆಯೇ ಇದಿರಿ, ಅಹಹ ! ಕೆಲಸ ಕೆಟ್ಟಿತು, ಅಜ್ಞಾನದಿಂದ ಮಾಡಬಾರದ ಕೆಲಸವನ್ನು ಮಾಡಿದೆನಲ್ಲ ? ಇವನು ಮೊದಲು ರಾಮನಾಮ ಸಂಕೀರ್ತನ ಪೂರ್ವಕವಾಗಿ ಮಾತನಾಡಿದ್ದುದರಿಂದ ಮಾಯಾವಿಯಾದ ರಾವಣನಲ್ಲವೆಂದು ಭಾವಿಸಿ ಪ್ರತ್ಯುತ್ತರವನ್ನ ಹೇಳಿದೆನು, ಈಗ ನೋಡಿದರೆ ಮೆಲ್ಲಮೆಲ್ಲಗೆ ಹೆಜ್ಜೆಯಮೇಲೆ ಹೆಜ್ಜೆಯನ್ನಿಡುತ್ತಾ ನನ್ನ ಬಳಿಗೆ ಬರುತಲಿದಾನೆ, ಆದುದರಿಂದ ಪೂರ್ವದಲ್ಲಿ ಯಾವ ರಾವಣನು ಸನ್ಯಾಸಿ ವೇಷವನ್ನು ತಾಳಿದ್ದು ನನ್ನನ್ನು ಅಪಹರಿಸಿತಂದನೋ, ಆ ವಂಚಕನೇ ಈಗ ಈ ಕಪಿರೂಪವನ್ನು ಧರಿಸಿ, ಪುನಃ ಯಾವುದೋ ಮತ್ತೊಂದು ಮೋಸವನ್ನು ಮಾಡಲು ಬಂದಿದಾನೆ ಎಂದು ಬಹಳವಾಗಿ ಕಳವಳಗೊಂಡು ||೧೦|| ಆ ಅಶೋಕವನದಲ್ಲಿನ ಶಿಂಶುಪಾವೃಕ್ಷದ ಕೊನೆಗೆ ನೇಣುಹಾಕಿಕೊಳ್ಳಲು ಕಟ್ಟಿದ್ದ ತಲೆ ಕೂದಲನ್ನು ಬಿಚ್ಚಿ, ಆ ಸ್ಥಲವನ್ನು ಬಿಟ್ಟು ಸ್ವಲ್ಪದೂರ ಸರಿದು, ದುಃಖದಿಂದ ಪ್ರಬಲವಾಗಿ ಪೀಡಿತಳಾಗಿ, ನೆಲದ ಮೇಲೆ ಮೌನದಿಂದ ಕುಳಿತುಕೊಂಡಳು || ೧೧ || ಆದರೆ-ಮಹಾನುಭಾವನಾದ ಆಂಜನೇಯನು ಸಾಮಾನ್ಯನಲ್ಲ,

ಅವಂದತ ಮಹಾಬಾಹು ಸ್ತತ ಸ್ತಾಂ ಜನ ಕಾತ್ಮಜಾಂ ॥೧೨॥
ಸಾ ಚೈನಂ ಭಯವಿತ್ರಸ್ತಾ ಭೂಯೋ ನೈವಾ ಭ್ಯುದೈಕ್ಷತ ।
ತಂ ದೃಷ್ಟ್ವಾ ವಂದಮಾನಂ ತು ಸೀತಾ ಶಶಿನಿಭಾನನಾ ॥
ಅಬ್ರವೀ ದ್ದೀರ್ಘ ಮುಚ್ಛ್ವಸ್ಯ ವಾನರಂ ಮಧುರಸ್ವರಾ ॥೧೩॥
ಮಾಯಾಂ ಪ್ರವಿಷ್ಟೋ ಮಾಯಾವೀ ಯದಿ ತ್ವಂ ರಾವಣಸ್ಸ್ವಯಂ ।

---

ಮೋಹಿತಾಂ-ಭಯದಿಂದ ಭ್ರಾಂತಳಾದ, ಜನಕಾತ್ಮಜಾಂ - ಜನಕಪುತ್ರಿಯಾಗಿರುವ, ತಾಂ- ಆ ಸೀತಾದೇವಿಯನ್ನು, ಅವಂದತ - ನಮಸ್ಕರಿಸಿದನು, ಸಾಚ - ಆ ಸೀತಾದೇವಿಯಾದರೋ, ಭಯವಿತ್ರಸ್ತಾ - ರಾವಣನೆಂಬಭಯದಿಂದ ಅದಿರುತಲಿರುವವಳಾಗಿ, ಭೂಯಃ - ಮರಳಿ, ಏನಂ - ಈ ಹನುಮಂತನನ್ನು, ನೈವಾಭ್ಯುದೈಕ್ಷತ - ಕಣ್ಣೆತ್ತಿನೋಡಲೇಇಲ್ಲ ॥೧೨॥ ॥ ಶಶಿನಿಭಾನನಾ - ಚಂದ್ರನಿಗೆಣೆಯಾದಮುಖವುಳ್ಳ, ಸೀತಾ - ಸೀತಾದೇವಿಯು, ವಂದಮಾನಂ - ನಮಸ್ಕರಿಸುತಲಿರುವ, ತಂ-ಆ ಆಂಜನೇಯನನ್ನು, ದೃಷ್ಟ್ವಾ ನೋಡಿ, ದೀರ್ಘಂ - ನೀಳವಾಗಿ, ಉಚ್ಛ್ವಸ್ಯ - ಊರ್ಧ್ವಶ್ವಾಸವನ್ನು ಬಿಟ್ಟು, ಮಧುರಸ್ವರಾ - ಕೇಳಲಿಂಪಾದ ಧ್ವನಿಯುಳ್ಳವಳಾಗಿ, ವಾನರಂ - ಹನುಮಂತನನ್ನು ಕುರಿತು, ಅಬ್ರವೀತ್ - ಹೇಳತೊಡಗಿದಳು ॥೧೩॥ ॥ ತ್ವಂ - ನೀನು, ಮಾಯಾವೀ - ಇಂದ್ರಜಾಲವಿದ್ಯೆಯುಳ್ಳವನಾದಕಾರಣವೇ, ಮಾಯಾಂ - ಕಪಟೋಪಾಯವನ್ನು, ಪ್ರವಿಷ್ಟಃ - ಹೊಕ್ಕ (ತಾಳಿದ) ಸ್ವಯಂ - ಸ್ವತಃ (ನಿಜವಾದ) ರಾವಣಃಅಸಿ ಯದಿ - ರಾವಣನೇ ಆಗಿದ್ದರೆ, ಮೇ - ನನಗೆ, ಭೂಯಃ - ಮರಳಿ, ಸಂತಾಪಂ - ಸಂಕಟವನ್ನು, ಉತ್ಪಾದಯಸಿ - ಉಂಟುಮಾಡುತ್ತೀಯೆ, ತತ್ - ಹಾಗೆ ಸಂತಾಪಪಡಿಸುವುದು, ನಶೋಭನಂ - ನಿನಗೆಒಳ್ಳೆಯದಲ್ಲ ॥೧೪॥ ॥ ಯಃ-ಯಾವರಾವಣನು, ಸ್ವಂ - ಸ್ವಂತವಾದ, ರೂಪಂ-ರಾಕ್ಷಸಾಕಾರವನ್ನು, ಪರಿತ್ಯಜ್ಯ-

---

ಸಮಯೋಚಿತವಾದ ಬುದ್ಧಿಸ್ಫೂರ್ತಿಯಲ್ಲಿ ಬೃಹಸ್ಪತಿಯನ್ನು ಮೀರಿದವನು, ಆದುದರಿಂದಲೇ ತನ್ನ ಬುದ್ಧಿ ನೀತಿಗಳ ಯಾವಚ್ಛಕ್ತಿಯನ್ನೂ ವಿನಿಯೋಗಿಸಿ, ಸೀತೆಯು ನೇಣನ್ನು ಹಾಕಿಕೊಳ್ಳದಂತೆ ತಪ್ಪಿಸಿದನು, ಆದರೂ ತಟ್ಟನೆ ತನ್ನನ್ನು ರಾವಣನನ್ನಾಗಿ ಭಾವಿಸಿ ಭಯಭ್ರಾಂತಳಾಗಿ ಅಸಮಾಧಾನವನ್ನು ಹೊಂದಿದಳಲ್ಲಾ ಎಂದು ವ್ಯಸನಪಟ್ಟು, ಮನದೊಳಗೆ ಪೇಚಾಟಪಡುತ್ತ, ವಿಚಾರಪರನಾಗಿ ಕುಳಿತಿರುವ ವೈದೇಹಿಗೆ ಭಕ್ತಿಪೂರ್ವಕವಾಗಿ ವಂದಿಸಲು, ಮಹಾಭಯದಿಂದ ಅದಿರುತಲಿರುವ ಆ ಜನಕ ನಂದಿನಿಯು ಅವನನ್ನು ಕಣ್ಣೆತ್ತಿ ನೋಡದೆಯೂ, ಮಾರುತ್ತರವನ್ನು ಹೇಳದೆಯೂ, ಸ್ವಲ್ಪ ಹೊತ್ತು ಸುಮ್ಮನಿದ್ದಳು ॥೧೨॥ ಆ ಬಳಿಕ ಉಸ್ಸೆಂದು ನೀಳವಾಗಿ ನಿಟ್ಟುಸಿರನ್ನು ಬಿಟ್ಟು, ಪೂರ್ಣಚಂದ್ರಮುಖಿಯಾದ ಆ ಸೀತೆಯು, ನಮಸ್ಕರಿಸುತಲಿರುವ ಆ ವಾನರನನ್ನು ಕುರಿತು ಮಧುರವಾಣಿಯಿಂದ ಇಂತೆಂದಳು, ॥೧೩॥ ॥ ಎಲೈ ವಾನರನೇ ! ನೀನು ಮಾಯೆಯಿಂದ ಕಪಿರೂಪವನ್ನು ಧರಿಸಿ ಬಂದಿರುವ ರಾವಣನೇ ಸರಿ ಎಂದು ನನಗೆ ತೋರುತಲಿದೆ, ಹಾಗಾಗುವ ಪಕ್ಷದಲ್ಲಿ, ಇದುವರೆಗೆ ನೀನು ನನ್ನನ್ನು ಸಂಕಟ ಪಡಿಸಿದುದು ಸಾಲದೆ ? ಇಷ್ಟರಿಂದ ನಿನಗೆ ತೃಪ್ತಿಯಾಗಲಿಲ್ಲವೆ ? ನಿನ್ನ ಮನದೊಳಗೆ ಕನಿಕರವುಂಟಾಗಲಿಲ್ಲವೆ ? ಪಾಪಕ್ಕೆ ಹೆದರದೆ ಹೋದೆಯ ನರಕಯಾತನೆಯ ಭೀತಿಯು ನಿನಗೆ ಉಂಟಾಗದೆ ಹೋಯಿತೆ ? ಮರಳಿ ನನಗೆ ಸಂತಾಪವನ್ನುಂಟು ಮಾಡಬೇಕೆಂದು ಬಯಸಿದೆಯ ? ಹಾಗಾದರೆ ನಿನಗೆ ಎಂದಿಗೂ ಮೇಲು

ಉತ್ಪಾದ ಯಸಿ ಮೇ ಭೂಯು ಸ್ಸಂತಾಪಂ ತನ್ನ ಶೋಭನಂ॥೧೪॥
ಸ್ವಂ ಪರಿತ್ಯಜ್ಯ ರೂಪಂ ಯಃ ಪರಿ ವ್ರಾಜಕ ರೂಪಧೃತ್ ।
ಜನಸ್ಥಾನೇ ಮಯಾ ದೃಷ್ಟ ಸ್ತ್ವಂ ಸಏವಾಸಿ ರಾವಣಃ ॥೧೫॥
ಉಪವಾಸ ಕೃಶಾಂ ದೀನಾಂ ಕಾಮರೂಪ ನಿಶಾಚರ ।
ಸಂತಾಪಯಸಿ ಮಾಂ ಭೂಯ ಸ್ಸಂತಪ್ತಾಂ ತನ್ನ ಶೋಭನಂ ॥೧೬॥
ಅಥವಾ ನೈತ ದೇವಂಹಿ ಯನ್ಮಯಾ ಪರಿಶಂಕಿತಂ ।
ಮನಸೋ ಹಿ ಮಮ ಪ್ರೀತಿ ರುತ್ಪನ್ನಾ ತವದರ್ಶನಾತ್ ॥೧೭॥
ಯದಿ ರಾಮಸ್ಯ ದೂತ ಸ್ತ್ವ ಮಾಗತೋ ಭದ್ರ ಮಸ್ತು ತೇ ।

ಬಿಟ್ಟು, ಪರಿವ್ರಾಜಕರೂಪಧೃತ್ - ಸನ್ಯಾಸಿವೇಷವನ್ನು ತಾಳಿದವನಾಗಿ, ಜನಸ್ಥಾನೆ - ಜನಸ್ಥಾನವೆಂಬ ಮಹಾರಣ್ಯದಲ್ಲಿ, ಮಯಾ-ನನ್ನಿಂದ, ದೃಷ್ಟಃ-ನೋಡಲ್ಪಟ್ಟನೋ, ಸಃ-ಆ, ರಾವಣಏವ - ರಾವಣನೇ, ತ್ವಂ - ನೀನು, ಅಸಿ - ಆಗಿದ್ದೀಯೋ ? ॥೧೫॥ ಕಾಮರೂಪ - ಕೋರಿದರೂಪವನ್ನು ತಾಳುವ, ನಿಶಾಚರ - ಓ ರಾಕ್ಷಸಾ! ಉಪವಾಸಕೃಶಾಂ - ಆಹಾರವಿಲ್ಲದೆ ಕೃಶಳಾಗಿರುವ, ದೀನಾಂ - ಸಂತೋಷವೇ ಇಲ್ಲದಿರತಕ್ಕವಳಾದಕಾರಣವೇ, ಸಂತಪ್ತಾಂ - ಸಂಕಟಪಡುತ್ತಲಿರುವ, ಮಾಂ - ನನ್ನನ್ನು, ಭೂಯಃ - ಪುನಃ, ಸಂತಾಪಯಸಿ - ಸಂಕಟಪಡಿಸುತಲಿದ್ದೀಯೆ, ತತ್ - ಹಾಗೆ ಪುನಃ ಪುನಃ ಗೋಳಾಡಿಸುವುದು, ನಶೋಭನಂ - ನಿನಗೆ ಮೇಲನ್ನು ಮಾಡುವುದಿಲ್ಲ ॥೧೬॥ ಅಥವಾ - ಹಾಗಿಲ್ಲದಿದ್ದರೆ, ತವ - ನಿನ್ನನ್ನು, ದರ್ಶನಾತ್ - ನೋಡುವುದರ ದೆಸೆಯಿಂದ, ಹಿ - ಏಕೆ, ಮಮ - ನನಗೆ, ಪ್ರೀತಿಃ - ಸಂತೋಷವು, ಉತ್ಪನ್ನಾ - ಉಂಟಾಯಿತೋ, (ತತ್ - ಆ ಕಾರಣ) ಮಯಾ - ನನ್ನಿಂದ, ಯತ್ - ನೀನು ರಾವಣನೆಂಬ ಯಾವಬಗೆಯು, ಪರಿಶಂಕಿತಂ-ಊಹಿಸಲ್ಪಟ್ಟಿತೋ, ಏತತ್-ಇದು, ಏವಂ - ಹೀಗೆ, ನ - ಇರಲಾರದು ॥೧೭॥ ಹರಿಶ್ರೇಷ್ಠ - ಎಲೈ ವಾನರೋತ್ತಮನೇ, ತ್ವಂ - ನೀನು, ರಾಮಸ್ಯ - ಶ್ರೀರಾಮನಿಗೆ, ದೂತಃ - ವಾರ್ತಾಹರನಾದ ಭಂಟನಾಗಿ, ಆಗತೋಯದಿ - ಬಂದಿರುವನಾಗಿದ್ದರೆ, ತೇ - ನಿನಗೆ,

ಉಂಟಾಗಲಾರದು ॥೧೪॥ ನೀನು ಸತ್ಯವಾದ ವಾನರನಾಗಿ ನನಗ ಕಾಣಬರುವುದಿಲ್ಲ, ಯಾವ ರಾವಣನು ತನ್ನ ನಿಜವಾದ ರಾಕ್ಷಸರೂಪವನ್ನು ಬಿಟ್ಟು, ಸನ್ಯಾಸಿಯ ರೂಪವನ್ನು ಧರಿಸಿ, ಜನಸ್ಥಾನವೆಂಬ ಮಹಾರಣ್ಯದಲ್ಲಿ ನನ್ನನ್ನು ವಂಚಿಸಿದನೋ, ಈಗ ನಿನ್ನನ್ನು ಆ ರಾವಣನನ್ನಾಗಿಯೇ ಭಾವಿಸುತ್ತೇನೆ ॥೧೫॥ ಅನ್ನಾಹಾರಗಳಿಲ್ಲ, ಕೃಶಿಸಿಹೋಗಿದೇನೆ. ನನ್ನ ದುರ್ದಶೆಯೋ ಹೇಳತೀರದು. ಅಯ್ಯೋ ! ಎಲಕಾಮರೂಪನಾದ ನಿಶಿಚರನೇ ! ಮೊದಲೇ ಸಂತಾಪದಿಂದ ತಪಿಸಿಹೋಗಿರುವ ನನ್ನನ್ನು ಮರಳಿ ಏಕೆ ಸಂಕಟಪಡಿಸುತಲಿದ್ದೀಯೆ ? ಬೇಡ, ಇದರಿಂದ ನಿನಗೆ ಒಳ್ಳೆಯದಾಗುವುದಿಲ್ಲ, ॥೧೬॥ ಆದರೆ-ನಿನ್ನನ್ನು ಖಂಡಿತವಾಗಿ ರಾವಣನೇ ಎಂದೂ ಹೇಳಲಾರೆ, ನನ್ನ ಪೂರ್ವಾನುಭವದಿಂದ ಉಂಟಾದ ಊಹೆಯು ಒಂದು ವೇಳೆ ತಪ್ಪಾಗಿಯೂ ಇರಬಹುದು, ಏತಕೆಂದರೆ ನಿನ್ನನ್ನು ನೋಡಿದ ಬಳಿಕ ನನ್ನ ಮನಸೊಳಗೆ ಯಾವುದೋ ಒಂದು ವಿಧವಾಗಿರುವ ಮಹತ್ತರವಾದ ಪ್ರೀತಿಯು ಉಂಟಾಯಿತು ॥೧೭॥ ಎಲೈ ಕಪಿವರನೇ ! ನನ್ನ ಪ್ರಾಣನಾಥನಾದ ಶ್ರೀರಾಮಚಂದ್ರನಿಗೆ ನೀನು ವಾರ್ತಾಹರನಾದ ದೂತನಾಗಿ, ಆತನ ಕುಶಲವನ್ನು ನನಗೆ ತಿಳಿಸುವ

ಪೃಚ್ಛಾಮಿ ತ್ವಾಂ ಹರಿಶ್ರೇಷ್ಠ ಪ್ರಿಯಾ ರಾಮಕಥಾ ಹಿ ಮೇ ||೧೮||
ಗುಣಾನ್ ರಾಮಸ್ಯ ಕಥಯ ಪ್ರಿಯಸ್ಯ ಮಮ ವಾನರ |
ಚಿತ್ತಂ ಹರಸಿ ಮೇ ಸೌಮ್ಯ ನದೀ ಕೂಲಂ ಯಥಾ ರಯಃ ||೧೯||
ಅಹೋ ಸ್ವಪ್ನಸ್ಯ ಸುಖತಾ ಯಾ ಹ ಮೇವಂ ಚಿರಾಹೃತಾ |
ಪ್ರೇಷಿತಂ ನಾಮ ಪಶ್ಯಾಮಿ ರಾಘವೇಣ ವನೌಕಸಂ ||೨೦||
ಸ್ವಪ್ನೇಪಿ ಯದ್ಯಹಂ ವೀರಂ ರಾಘವಂ ಸಹಲಕ್ಷ್ಮಣಂ |

---

ಭದ್ರಂ - ಶುಭವು, ಅಸ್ತು - ಆಗಲಿ, ತ್ವಾಂ - ನಿನ್ನನ್ನು, ಪೃಚ್ಛಾಮಿ-ಒಂದುಸಂಗತಿಯನ್ನು ಪ್ರಶ್ನಿಸುಾ ಡುತ್ತೇನೆ, ಮೇ - ನನಗೆ, ರಾಮಕಥಾ - ಶ್ರೀರಾಮವೃತ್ತಾಂತವು, ಪ್ರಿಯಾಹಿ - ಇಷ್ಟವಾದುದಲ್ಲ ವೆ ? ||೧೮||-|| ಹೇವಾನರ - ಎಲೈ ಕಪಿವರನೇ, ಮಮ - ನನಗೆ- ಪ್ರಿಯಸ್ಯ - ಇಷ್ಟನಾದ, ರಾಮಸ್ಯ- ಶ್ರೀರಾಮನ, ಗುಣಾನ್ - ಕಲ್ಯಾಣಗುಣಗಳನ್ನು, ಕಥಯ - ಹೇಳು, ಹೇಸೌಮ್ಯ - ಎಲೈ ಶಾಂತನೇ, ರ ಯಃ - ಹೊಳೆಯವೇಗವು, ನದೀಕೂಲಂ - ಹೊಳೆಯ ದಡದಂತೆ, ಮೆ - ನನ್ನ, ಚಿತ್ತಂ - ಮನಸ್ಸನ್ನ ಹರಸಿ - ಅಪಹರಿಸುತಲಿದ್ದೀಯೆ ||೧೯||-|| ಏವಂ - ಈ ವಿಧವಾಗಿ, ಆಹೃತಾ - ರಾವಣನಿಂದ ಅಪಹರಿ ಸಲ್ಪಟ್ಟ, ಯಾ - ಯಾವ, ಅಹಂ - ನಾನು, ಚಿರಾ - ಬಹುಕಾಲಕ್ಕೆ, ರಾಘವೇಣ - ಶ್ರೀರಾಮನಿಂದ, ಪ್ರೇಷಿತಂ - ಕಳುಹಿಸಲ್ಪಟ್ಟ, ವನೌಕಸಂನಾಮ - ವಾನರನೆಂದು ಹೆಸರುವಾಸಿಯನ್ನು ಪಡೆದಿರುವ ಈತನ ನ್ನು, ಪಶ್ಯಾಮಿ - ನೋಡುತಲಿರುವೆನೊ, (ತಸ್ಯಾಃ - ಅಂತಹ ನನಗೆ) ಸ್ವಪ್ನಸ್ಯ - ಕನಸಿನ, ಸುಖತಾ - ಸೌಖ್ಯಪ್ರಾಪ್ತಿಯು, ಅಹೋ - ಆಶ್ಚರ್ಯಕರವಾಗಿದೆ ||೨೦||-|| ಅಹಂ-ನಾನು, ವೀರಂ - ಶೂರನಾದ, ಸಹ ಲಕ್ಷ್ಮಣಂ - ಲಕ್ಷ್ಮಣನಿಂದೊಡಗೂಡಿದ, ರಾಘವಂ - ಶ್ರೀರಾಮನನ್ನು, ಸ್ವಪ್ನೇಪಿ - ಕನಸಿನಲ್ಲಿಯಾದ ರೂ, ಪಶ್ಯೇಯಂಯದಿ - ನೋಡಿದವಳೇ ಆದರೆ, ನಾವಸೀದೇಯಂ - ದುಃಖಿಸದೆ ಇದ್ದೇನು, ಸ್ವಪ್ನೋಪಿ-

---

ನಿಮಿತ್ತದಿಂದಲೇ ಇಲ್ಲಿಗೆ ಬಂದಿರುವುದೇ ಸತ್ಯವಾಗಿದ್ದರೆ ನಿನಗೆ ಶುಭವಾಗಲಿ, ನೀನು ಶ್ರೀ ರಾಮವೃತ್ತಾಂತವನ್ನು ಹೇಳುತಲಿರುವುದರಿಂದ ನನ್ನ ಮನಸ್ಸು ಕರಗಿ ಹೋಗುತಲಿದೆ, ಶ್ರೀ ರಾಮ ಕಥೆಯನ್ನು ಕೇಳುವುದರಲ್ಲಿ ನಾನು ಬಹಳ ಉತ್ಸಾಹಪರಳಾಗಿದ್ದೇನೆ, ಎಲೈ ಶಾಂತ ಸ್ವಭಾವದವನಾದ ವಾನರೋತ್ತಮನೇ! ನದೀಪ್ರವಾಹದ ವೇಗವು ಹೊಳೆಯ ದಡವನ್ನು ಕರಗಿಸಿ ಸೆಳೆಯುವ ಹಾಗೆ ನನ್ನ ಮನವನ್ನು ಅಪಹರಿಸುತಲಿದ್ದೀಯೆ, ನನ್ನ ಪ್ರಾಣಪ್ರಿಯ ನಾದ ಶ್ರೀರಾಮನ ಕಲ್ಯಾಣಗುಣಗಳನ್ನು ವಿಸ್ತಾರವಾಗಿ ವಿವರಿಸು ಎಂದು, ||೧೮||,೧೯|| || ಬಳಿಕ ತನ್ನ ಮನದೊಳಗೆ-ಓಹೋ! ಇದು ಏನೋ ಒಂದು ಬಗೆಯಾದ ವಿನೋದವಾಗಿದೆ, ಇಂತಹ ಮಹಾವಿಪತ್ತಿನ ಸಮಯದಲ್ಲಿಯೂ ಶ್ರೀರಾಮಚಂದ್ರನ ಸನ್ನಿಧಾನದಿಂದ ಯಾವ ನೋ ಒಬ್ಬ ವಾನರನು ಬಹುಕಾಲದ ಮೇಲೆ ಆತನ ಕುಶಲ ವೃತ್ತಾಂತವನ್ನು ನನಗೆ ತಿಳಿಸ ಲಿಕ್ಕೆ ಆತನಿಂದ ಆಜ್ಞಪ್ತನಾಗಿ ಬಂದಿರುವಂತೆ ಕನಸಾಗುತಿದೆಯಲ್ಲ! ಇದೇನಾಶ್ಚರ್ಯ! ಎಂಬದಾಗಿ ಯಥಾರ್ಥವಾದ ಸಮಾಚಾರವನ್ನೂ ಮನಸ್ಸಿನ ಕಳವಳದಿಂದ ಸ್ವಪ್ನ ಪ್ರಾಯವ ನ್ನಾಗಿ ಭಾವಿಸಿದಳು ||೨೦|| || ಅಯ್ಯೋ! ಕನಸಿನಲ್ಲಿಯಾದರೂ ಆ ಮಹಾ ಪರಾಕ್ರಮಶಾ ಲಿಗಳಾದ ರಾಮಲಕ್ಷ್ಮಣರನ್ನು ಕಂಡೆನಾದರೆ ನನ್ನ ಈ ಮಹಾ ವಿಪತ್ತು ಪರಿಹಾರವಾದೀ ತು, ನನ್ನ ದೀನದಶೆಯನ್ನು ಪರಿಹರಿಸಲು ಅವರು ಅಸಡ್ಡೆ ಮಾಡಿರುವ ಹಾಗೆ ಸ್ವಪ್ನವು ಸಹ

ಪಶ್ಯೇಯಂ ನಾವಸೀದೇಯಂ ಸ್ವಪ್ನೇಪಿ ಮಮ ಮತ್ಸರೀ ॥೨೦॥
ನಾಹಂ ಸ್ವಪ್ನ ಮಿಮಂ ಮನ್ಯೇ ಸ್ವಪ್ನೇ ದೃಷ್ಟ್ವಾ ಹಿ ವಾನರಂ ।
ನ ಶಕ್ಯೋಭ್ಯುದಯಃ ಪ್ರಾಪ್ತುಂ ಪ್ರಾಪ್ತ ಶ್ಚಾಭ್ಯುದಯೋ ಮಯಾ ॥೨೨॥
ಕಿನ್ನು ಸ್ಯಾ ಚ್ಚಿತ್ತ ಮೋಹೋಽಯಂಭವೇ ದ್ವಾತಗತಿ ಸ್ತ್ವಿಯಂ ।
ಉನ್ಮಾದಜೋ ವಿಕಾರೋ ವಾ ಸ್ಯಾದಿಯಂ ಮೃಗತೃಷ್ಣಿಕಾ ॥೨೩॥

---

ಕನಸುಕೂಡ, ಮಮ - ನನ್ನವಿಷಯವಾಗಿ, ಮತ್ಸರೀ - ದ್ವೇಷವುಳ್ಳುದಾಗಿದೆ ॥೨೦॥ ॥ (ಅಯ್ಯೋ ನನ್ನ ಭ್ರಾಂತಿಗೆ ಪಾರವೇಇಲ್ಲವಾಗಿದೆ) ಅಹಂ - ನಾನು, ಇಮಂ - ಈ ವೃತ್ತಾಂತವನ್ನು, ಸ್ವಪ್ನಂ - ಕನಸನ್ನಾಗಿ, ನಮನ್ಯೆ - ಭಾವಿಸಲಾರೆನು, ಸ್ವಪ್ನೆ - ಕನಸಿನಲ್ಲಿ (ಮಯಾ - ನನ್ನಿಂದ) ವಾನರಂ - ಕಪಿಯನ್ನು ದೃಷ್ಟ್ವಾ- ನೋಡಿ, ಅಭ್ಯುದಯಃ - ಅಭಿವೃದ್ಧಿಯು (ಶ್ರೇಯಸ್ಸು) ಪ್ರಾಪ್ತುಂ-ಪಡೆಯಲಿಕ್ಕೆ, ನಶಕ್ಯಃ- ಸಾಧ್ಯವಲ್ಲ. ಅಭ್ಯುದಯಶ್ಚ-ರಾಮಕುಶಲ ಶ್ರವಣ ರೂಪವಾದ ಶ್ರೇಯಸ್ಸು, ಮಯಾ-ನನ್ನಿಂದ,ಪ್ರಾಪ್ತಃ- ಹೊಂದಲ್ಪಟ್ಟಿದೆ ॥ ೨೨॥ ॥ ಅಯಂ - ಈ ವಾನರವೃತ್ತಾಂತವು, ಚಿತ್ತವಿಭ್ರಮಃ - ಮನಸ್ಸಿನ ವೈಕಲ್ಯವೇ, ಸ್ಯಾತ್ಕಿನ್ನು - ಆಗಿರಬಹುದೆ ? ಇಯಂ - ಈ ವಾನರವೃತ್ತಾಂತವು. ವಾತಗತಿಃ - ಧಾತುವೈಷಮ್ಯದ ವಾಯುವಿಕಾರವಾಗಿ, ಭವೇದ್ವಾ - ಆಗಿರಬಹುದೆ ? ಅಯಂ - ಇದು, ಉನ್ಮಾದಜಃ - ಹುಚ್ಚಿನಿಂದುಂಟಾದ, ವಿಕಾರಃ - ರೂಪಾಂತರವು, ಭವೇದ್ವಾ - ಆಗಿರಬಹುದೆ ?, ಇಯಂ - ಇದು, ಮೃಗತೃಷ್ಣಿಕಾ - ಬಿಸಿಲ್ಗುದುರೆಯಂತೆ ಕಾಣಬಂದ ಭ್ರಮೆಯೇ, ಭವೇದ್ವಾ - ಆಗಿರಬಹುದೆ ? ॥೨೩॥ ಅಥವಾ-

---

ನನಗೆ ಬಾರದೆ ನನ್ನ ವಿಷಯದಲ್ಲಿ ದ್ವೇಷವನ್ನು ತೋರುತಲಿದೆಯಲ್ಲಾ ? ಹಾ ! ನನ್ನ ದುರದೃಷ್ಟವು ಇನ್ನೆಷ್ಟು ಹೀನವಾದುದೋ ತಿಳಿಯದು, ಅಥವಾ ಜನಸ್ಥಾನದಲ್ಲಿ ಹುಲ್ಲೆಯನ್ನು ಹಿಂಬಾಲಿಸಿ ಹೋಗಿದ್ದ ರಾಮನನ್ನು ಕರೆತರಲು ಹೋಗಿದ್ದ ಲಕ್ಷ್ಮಣನು ರಾಮನೊಡನೆ ಕಲೆತನೋ ಇಲ್ಲವೋ ಅದೂ ನನಗೆ ಗೊತ್ತಿಲ್ಲ, ॥೨೦॥ ॥ ನಾನು ಈಗ ಈ ವಾನರ ವೃತ್ತಾಂತವನ್ನು ಖಂಡಿತವಾಗಿ ಕನಸನ್ನಾಗಿ ಭಾವಿಸಲಾರೆ, ಏಕೆಂದರೆ"ಕನಸಿನೊಳಗೆ ಕಪಿಯನ್ನು ಕಂಡರೆ ಮನಸ್ಸಿನಲ್ಲಿಯೂ ಮೇಲುಂಟಾಗುವುದಿಲ್ಲ, ಎಂದು ಸ್ವಪ್ನ ಶಾಸ್ತ್ರವು ಮೊರೆಯಿಡುತಲಿದೆ, ಈಗಲಾದರೆ ಶ್ರೀರಾಮ ವೃತ್ತಾಂತ ಶ್ರವಣರೂಪವಾದ ಮೇಲನ್ನು ಪಡೆದಿದೇನೆ, ಆದುದರಿಂದ ಇದೇನೋ ಪರಸ್ಪರ ವಿರೋಧವಾಗಿದೆ, ॥೨೦॥ ॥ ಅಥವಾ-ಇದುವರೆಗೆ ನಡೆದ ಸಮಾಚಾರವೆಲ್ಲ ನನ್ನ ಮನಸ್ಸಿನ ಭ್ರಾಂತಿಯಿಂದ ಉಂಟಾಗಿರಬಹುದೆ ? ಇಲ್ಲದಿದ್ದರೆ ಉಪವಾಸ ಮೊದಲಾದವುಗಳಿಂದ ದೇಹದೊಳಗೆ ಧಾತುಸಾಮ್ಯವು ತಪ್ಪಿ ಉಂಟಾದ ವಾತವಿಕಾರವು ಹೀಗೆ ಮಾಡಿತೊ ; ಹಾಗೂ ಇಲ್ಲದಿದ್ದರೆ-ನನಗೇನಾದರೂ ಹುಚ್ಚು ಹಿಡಿದು ಚಿತ್ತವಿಕಾರವು ಹೀಗೆಲ್ಲ ಪರಿಣಮಿಸಿತೋ ; ಅಂತಿಲ್ಲದಿದ್ದರೆ ಕಾಡಿನೊಳಗೆ ಹರಡಿರುವ ಬೇಸಿಗೆಯ ಬಿಸಿಲಿನ ಝಳದ ಹೊಯಿಲಿನಿಂದ ಮೃಗಗಳಿಗೆ ಜಲತೃಷ್ಣೆಯನ್ನುಂಟು ಮಾಡುವ ಬಿಸಿಲ್ಗುದುರೆಯಂತೆ ಇದು ಇಂಥದೆಂದು ಗೊತ್ತುಮಾಡಿ ಹೇಳಲಿಕ್ಕೆ ಬಾರದ ಮತಿಭ್ರಮೆಯೋ ? ಅದೂ ಅಲ್ಲದಿದ್ದರೆ-ಪ್ರಾಣಪ್ರಿಯನಾದ ಶ್ರೀರಾಮನನ್ನು ಅಗಲಿ ಇರುವುದರಿಂದ ದೃಷ್ಟಿಸಂಗ, ಮನಸ್ಸಂಗ, ಸಂಕಲ್ಪ, ಜಾಗರ, ಕೃಶತೆ, ಅರತಿ, ಲಜ್ಜಾತ್ಯಾಗ, ಉನ್ಮಾದ, ಮೂರ್ಛೆ, ಮರಣ ಎಂಬದು ಹತ್ತುಬಗೆಯಾಗಿರುವ ಮನ್ಮಥಾವಸ್ಥೆಗಳೊಳಗೆ ಮೈಮೇಲೆ ಪ್ರಜ್ಞೆ

ಅಥವಾ ನಾಯ ಮುನ್ಮಾದೋ ಮೋಹೋಽಪ್ಯುನ್ಮಾದಲಕ್ಷಣಃ ।
ಸಂಬುಧ್ಯೇ ಚಾಹ ಮಾತ್ಮಾನ ಮಿಮಂ ಚಾಪಿ ವನೌಕಸಂ ॥೨೪॥
ಇತ್ಯೇವಂ ಬಹುಧಾ ಸೀತಾ ಸಂಪ್ರಧಾರ್ಯ ಬಲಾಬಲಂ ।
ರಕ್ಷಸಾಂ ಕಾಮರೂಪತ್ವಾನ್ಮೇನೆ ತಂ ರಾಕ್ಷಸಾಧಿಪಂ ॥೨೫॥
ಏತಾಂ ಬುದ್ಧಿಂ ತದಾ ಕೃತ್ವಾ ಸೀತಾ ಸಾ ತನುಮಧ್ಯಮಾ।
ನ ಪ್ರತಿ ವ್ಯಾಜಹಾರಾಥ ವಾನರಂ ಜನಕಾತ್ಮಜಾ॥೨೬॥
ಸೀತಾಯಾ ಶ್ಚಿಂತಿತಂ ಬುದ್ಧ್ವಾ ಹನುಮಾನ್ಮಾರುತಾತ್ಮಜಃ ।

---

ಹಾಗಿಲ್ಲದಿದ್ದರೆ, ಇಯಂ - ಇದುವರೆಗೆ ನಡೆದ ವೃತ್ತಾಂತವು, ಉನ್ಮಾದಃ - ಚಿತ್ತವೈಕಲ್ಯವು, ನ-ಆಗಿರಲಾರದು, (ಕಿಮರ್ಥಂ - ಏತಕೆಂದರೆ) ಮೋಹೋಪಿ - ಆ ಭ್ರಾಂತಿಯೂ, ಉನ್ಮಾದಲಕ್ಷಣಃ - ಉನ್ಮಾದಾವಸ್ಥೆಯಂತಹ ಸ್ವರೂಪವುಳ್ಳುದು, ಅಹಂ - ನಾನಾದರೆ, ಆತ್ಮಾನಂಚ - ನನ್ನನ್ನೂ. ಇಮಂ - ಈ, ವನೌಕಸಂಚಾಪಿ - ವಾನರನನ್ನೂ, ಸಂಬುಧ್ಯೇ - ಚೆನ್ನಾಗಿ ತಿಳಿಯುತಲಿದ್ದೇನೆ, ॥೨೪॥ ॥ಸೀತಾ - ಸೀತಾದೇವಿಯು, ಇತ್ಯೇವಂ - ಈ ಪ್ರಕಾರವಾಗಿ, ಬಹುಧಾ - ಅನೇಕ ಪ್ರಕಾರವಾಗಿ, ಬಲಾಬಲಂ - ಆ ವೃತ್ತಾಂತದ ಸಾರಾಸಾರಗಳನ್ನು (ರಕ್ಕಸರ ಪ್ರಾಬಲ್ಯ ದೌರ್ಬಲ್ಯಗಳನ್ನು) ಸಂಪ್ರಧಾರ್ಯ - ಚೆನ್ನಾಗಿ ನಿಶಯಿಸಿ, ರಕ್ಷಸಾಂ - ರಾಕ್ಷಸರಿಗೆ, ಕಾಮರೂಪತ್ವಾತ್ - ಕೋರಿದರೂಪವನ್ನು ತಾಳುವ ಬಲವಿರುವುದ್ದರಿಂದ, ತಂ - ಆ ವಾನರನನ್ನು, ರಾಕ್ಷಸಾಧಿಪಂ - ರಾವಣನನ್ನಾಗಿ, ಮೇನೆ - ಭಾವಿಸಿದಳು ॥೨೫॥ ತನುಮಧ್ಯಮಾ - ಬಡನಡುವುಳ್ಳ, ಜನಕಾತ್ಮಜಾ - ಜನಕಪುತ್ರಿಯಾದ, ಸಾಸೀತಾ- ಆಸೀತಾದೇವಿಯು, ತದಾ - ಆಗ, ಏತಾಂಬುದ್ಧಿಂ - ಈ ವಿಧವಾದ ಬುದ್ಧಿಯನ್ನು, ಕೃತ್ವಾ-ಮಾಡಿ, ಅಥ - ಅನಂತರದಲ್ಲಿ, ವಾನರಂ - ಆ ವಾನರನನ್ನು ಕುರಿತು, ನಪ್ರತಿವ್ಯಾಜಹಾರ - ಯಾವುದೊಂದು ಮಾತನ್ನೂ ಆಡಲಿಲ್ಲ ॥೨೬॥ ಮಾರುತಾತ್ಮಜಃ - ವಾಯುಕುಮಾರನಾದ, ಹನುಮಾನ್ - ಆಂಜನೇಯನು, ಸೀತಾಯಾಃ-

---

ಯಿಲ್ಲದಿರುವಾಗ ಉಂಟಾಗುವ ಚಿತ್ತವೈಕಲ್ಯ, ಉನ್ಮಾದ ಎಂಬ ಅವಸ್ಥೆಗಳೋ ಹೇಳಲಳವಲ್ಲವಾಗಿದೆ ॥೨೩॥-॥ ಬಾನುಪಕ್ಷದಲ್ಲಿ-ಉನ್ಮಾದಾವಸ್ಥೆಯೆಂದು ಹೇಳಲಿಕ್ಕೆ ಸಾಧ್ಯವಲ್ಲ, ಏಕೆಂದರೆ-ಆ ವಿಧವಾದ ಚಿತ್ತವೈಕಲ್ಯವು ಮೈಮೇಲೆ ಸ್ಮೃತಿಯೇ ಇಲ್ಲದಿರುವಾಗ ಉಂಟಾಗತಕ್ಕದು, ಹಾಗಾದರೆ ಸಂತತ ಶ್ರೀರಾಮಚಿಂತೆಯಲ್ಲಿಯೇ ಮುಳುಗಿರುವಾಗ ನನ್ನ ಪ್ರಬಲತರವಾದ ಪರಮಪ್ರೇಮ ಮೋಹಪಾಶವೇ ಇರಬಹುದು, ಎಲ ಎಲಾ ! ನನಗೆ ಮೈಮೇಲೆ ಪ್ರಜ್ಞೆ ತಪ್ಪಿ ಇಲ್ಲ, ನಾನು ಭ್ರಾಂತಳಾಗಿಲ್ಲ, ಎಲ್ಲ ಪದಾರ್ಥಗಳನ್ನೂ ಚೆನ್ನಾಗಿ ತಿಳಿಯುತಲಿದ್ದೇನ. ಸಂದೇಹವಿಲ್ಲದೆ ಈ ವಾನರನನ್ನು ಅರಿಯುತಲಿದ್ದೇನೆ. ಬಂದನ್ನು ಮತ್ತೊಂದನ್ನಾಗಿ ತಿಳಿಯುವ ಸ್ಥಿತಿಯಲ್ಲಿಲ್ಲ ॥೨೪॥-॥ ಎಂದೀ ಪ್ರಕಾರ ವೈದೇಹಿಯು ಬಗೆಬಗೆಯಾಗಿ ಬಂದೊಂದು ಊಹೆಯನ್ನೂ ಅದರದರ ಉಪಾಯಾಪಾಯಗಳೊಂದಿಗೆ ಚೆನ್ನಾಗಿ ಚಿಂತಿಸಿ ಕಟ್ಟಕಡೆಗೆ ರಕ್ಕಸರೆಲ್ಲರೂ ಸ್ವೇಚ್ಛಾನುರೂಪವಾದ ವೇಷಗಳನ್ನು ತಾಳತಕ್ಕ ಶಕ್ತಿಯುಳ್ಳವರಾದ ಕಾರಣ ಮಾರುತಾತ್ಮಜನನ್ನು ನೈಋತಾತ್ಮಜನನ್ನಾಗಿ ತಿಳಿದು, ॥೨೫॥ ಆಗ ಅದೇ ಭಾವನೆಯನ್ನೇ ದೃಢತರವಾಗಿ ನಂಬಿ, ಆ ಕಪಿಪುಂಗವನನ್ನು ಕುರಿತು ಏನೊಂದುಮಾತನ್ನೂ ಆಡದೆ ಕಟ್ಟಕಡೆದಲದಂತೆ ಕುಳಿತಿದ್ದಳು ॥೨೬॥-॥ ಆದರೆ-ಮಾರುತಿಯು

ಶ್ರೋತ್ರಾನು ಕೂಲೈ ರ್ವಚನೈ ಸ್ತದಾ ತಂ ಸಂಪ್ರಹರ್ಷಯತ್ ॥೨೭॥
ಆದಿತ್ಯ ಇವ ತೇಜಸ್ವೀ ಲೋಕಕಾಂತ ಶ್ಶಶೀ ಯಥಾ ।
ರಾಜಾ ಸರ್ವಸ್ಯ ಲೋಕಸ್ಯ ದೇವೋ ವೈಶ್ರವಣೋ ಯಥಾ ॥೨೮॥
ವಿಕ್ರಮೇ ಣೋಪಪನ್ನಶ್ಚ ಯಥಾ ವಿಷ್ಣು ರ್ಮಹಾಯಶಾಃ ।
ಸತ್ಯವಾದೀ ಮಧುರವಾ ಗ್ದೇವೋ ವಾಚಸ್ಪತಿ ರ್ಯಥಾ ॥೨೯॥

ಜಾನಕಿಯು, ಚಿಂತಿತಂ - ಮನೋವಿಚಾರವನ್ನು, ಬುದ್ಧ್ವಾ - ತಿಳಿದುಕೊಂಡು, ತದಾ - ಆಗ, ಶ್ರೋತ್ರಾನುಕೂಲೈಃ - ಕಿವಿಗಳಿಗಿಂಪಾಗಿರುವ, ವಚನೈಃ - ಮಾತುಗಳಿಂದ, ತಾಂ - ಆ ಸೀತಾದೇವಿಯನ್ನು, ಸಂಪ್ರಹರ್ಷಯತ್ (ಸಂಪ್ರಾಹರ್ಷಯತ್) - ಸಂತೋಷಗೊಳಿಸತೊಡಗಿದನು ॥೨೭॥ ಆದಿತ್ಯ ಇವ - ಸೂರ್ಯನಂತೆ, ತೇಜಸ್ವೀ - ಪ್ರಶಸ್ತವಾದ ತೇಜಸ್ಸುಳ್ಳವನು, ಶಶೀಯಥಾ - ಚಂದ್ರನು ಹೇಗೋ ಹಾಗೆ, ಲೋಕಕಾಂತಃ - ಜನರಿಗೆ ಇಷ್ಟನಾದವನು, (ಮನೋಹರನು) ದೇವಃ -ಪ್ರಕಾಶವಾನನಾದ, ವೈಶ್ರವಣೋಯಥಾ - ಕುಬೇರನು ಹೇಗೋಹಾಗೆ, ಸರ್ವಸ್ಯ - ಸಮಸ್ತವಾದ, ಲೋಕಸ್ಯ - ಜನಕ್ಕೆ, ರಾಜಾ - ಪ್ರಭುವಾದವನು ॥೨೮॥ ವಿಷ್ಣುರ್ಯಥಾ - ಶ್ರೀಮಹಾವಿಷ್ಣುವು ಹೇಗೋಹಾಗೆ, ಮಹಾಯಶಾಃ- ಮಹತ್ತರವಾದ ಕೀರ್ತಿಯುಳ್ಳವನು, ವಿಕ್ರಮೇಣ - ಪ್ರಬಲವಾದ ಶೌರ್ಯದಿಂದ, ಉಪಪನ್ನಶ್ಚ - ಸಂಪನ್ನನಾದವನು, ದೇವಃ - ಪ್ರಕಾಶವಾನನಾದ, ವಾಚಸ್ಪತಿರ್ಯಥಾ - ದೇವಗುರುವಾದ ಬೃಹಸ್ಪತಿಯು ಹೇಗೋ ಹಾಗೆ, ಸತ್ಯವಾದೀ - ನಿಜವನ್ನೇ ಆಡತಕ್ಕವನು, ಮಧುರವಾಕ್ - ಇಂಪಾಗಿ ಮಾತನಾಡತಕ್ಕವನು, ಮೂರ್ತಿಮಾನ್ - ಪ್ರಶಸ್ತ ಶರೀರವನ್ನು ತಾಳಿರುವ, ಕಂದರ್ಪಇವ - ಮನ್ಮಥನಂತೆ, ರೂಪವಾನ್ - ಸೌಂದರ್ಯವುಳ್ಳವನು, ಸುಭಗಃ - ಸೌಭಾಗ್ಯಶಾಲಿಯು, ಶ್ರೀಮಾನ್ - ಉತ್ತಮವಾದ ಕಾಂತಿಯುಳ್ಳವನು, ಸ್ಥಾನಕ್ರೋಧಃ - ಕೋಪಿಸತಕ್ಕಸ್ಥಳದಲ್ಲಿ ಕೋಪಗೊಳ್ಳುವವನು, ಪ್ರಹರ್ತಾಚ - ಶತ್ರುಸಂಹಾರಕನು ಲೋಕೇ - ಲೋಕದಲ್ಲಿ, ಶ್ರೇಷ್ಠಃ - ಉತ್ತಮನೂ ಆಗಿರುವ, ಮಹಾರಥಃ - ಮಹಾರಥಿಕನಾದ ಬಬು ಬ

ಮಹಾಬುದ್ಧಿವಿಶಾರದ, ಜನಕನಂದಿನಿಯು ಮನದೊಳಾಲೋಚಿಸಿದ ಸಂಗತಿಗಳನ್ನೆಲ್ಲ ತನ್ನ ಬುದ್ಧಿಶಕ್ತಿಯಿಂದ ತಿಳಿದುಕೊಂಡು, ಓಹೋ ! ಈಕೆಯು ಮನದೊಳಗೆ ನನ್ನ ವಿಷಯದಲ್ಲಿ ತರಂಗತರಂಗಗಳಾಗಿ ಸಂಶಯಗಳು ಹೊಳೆಯುತಲಿವೆ, ಬಳ್ಳಿಯದು, ಆಗಲಿ,ಬುದ್ಧಿವಂತನು ಸಮಯೋಚಿತವಾದ ಕೆಲಸವನ್ನು ಮಾಡಬೇಕು ಎಂದು ನಿಶ್ಚಯಿಸಿಕೊಂಡು, ಆಕೆಯು ಕಿವಿಗಳಿಗೆ ಬಹು ಹಿತವಾಗಿರುವಂತೆ ಮಾತುಗಳನ್ನಾಡಿ ಹರ್ಷಗೊಳಿಸತೊಡಗಿದನು ॥೨೭॥-॥ ಎಲೌ ತಾಯೇ ! ಈ ಭೂಮಂಡಲದಲ್ಲಿ ಮಹಾರಥಿಕನಾದ ಬಬ್ಬ ಮಹಾತ್ಮನುಂಟು ಆತನು ದುಷ್ಟರನ್ನು ಶಿಕ್ಷಿಸುವ ವಿಷಯದಲ್ಲಿ ಪ್ರಳಯಕಾಲದಲ್ಲಿನ ಸೂರ್ಯನಂತೆ ತೀಕ್ಷ್ಣವಾದ ತೇಜಸ್ಸಿನಿಂದೊಡಗೂಡಿದವನು, ಶಿಷ್ಟಲೋಕಾನುಗ್ರಹದಲ್ಲಿ ಶರತ್ಕಾಲದ ಪೂರ್ಣಚಂದ್ರನಂತೆ ಬಹು ಶಾಂತಿಗುಣಸಂಪನ್ನನು, ನವನಿಧಿಗಳಿಗಧಿಪತಿಯಾದ ಕುಬೇರನಂತೆ ಸರ್ವಲೋಕಾಧಿಪತಿಯೆನಿಸಿರುವನು ॥೨೮॥-॥ ಪರಾಕ್ರಮದಲ್ಲಿಯೂ, ಯಶಸ್ಸಿನಲ್ಲಿಯೂ ಸರ್ವಲೋಕೇಶ್ವರನಾದ ಶ್ರೀಮಹಾವಿಷ್ಣುವಿಗೆ ಸಮಾನನು, ಸತ್ಯಸಂಧತೆಯಲ್ಲಿ ಅಗ್ರಗಣ್ಯ, ಮೃದುಮಧುರವಾಗಿ ಮಾತನಾಡತಕ್ಕವ, ಬುದ್ಧಿಯಲ್ಲಿಬೃಹಸ್ಪತಿಯನ್ನು ಅತಿಕ್ರಮಿಸಿ ಇದಾನೆ ॥೨೯॥ ಸೌಂದರ್ಯದಲ್ಲಿ ಅದ್ವಿತೀಯು, ಸೌಭಾಗ್ಯಸೌಕುಮಾರ್ಯಗಳಲ್ಲಿಯೂಅಶದೃಶಲಾವಣ್ಯದಲ್ಲಿಯೂ

ರೂಪವಾ ನ್ಸುಭಗ ಶ್ರೀಮಾ ನ್ಕಂದರ್ಪಇವ ಮೂರ್ತಿಮಾನ್ ।
ಸ್ಥಾನಕ್ರೋಧಃ ಪ್ರಹರ್ತಾ ಚ ಶ್ರೇಷ್ಠೋ ಲೋಕೇ ಮಹಾರಥಃ ॥೩೦॥
ಬಾಹುಚ್ಛಾಯಾ ಮವಷ್ಟಬ್ಧೋ ಯಸ್ಯ ಲೋಕೋ ಮಹಾತ್ಮನಃ ।
ಅಪಕೃಷ್ಯಾ ಶ್ರಮಪದಾ ನ್ಮೃಗರೂಪೇಣ ರಾಘವಂ ॥೩೧॥
ಶೂನ್ಯೇ ಯೇನಾಪ ನೀತಾಸಿ ತಸ್ಯ ದ್ರಕ್ಷ್ಯಸಿ ಯತ್ಫಲಂ ॥೩೨॥
ನಚಿರಾ ದ್ರಾವಣಂ ಸಂಖ್ಯೇ ಯೋ ವಧಿಷ್ಯತಿ ವೀರ್ಯವಾನ್ ।
ರೋಷ ಪ್ರಮುಕ್ತೈ ರಿಷುಭಿ ರ್ಜ್ವಲದ್ಭಿರಿವ ಪಾವಕೈಃ ॥೩೩॥

ಮಹಾಪುರುಷನುಊಂ ಟ ॥೨೯, ೩೦॥ ಲೋಕಃ - ಪ್ರಪಂಚವು, ಮಹಾತ್ಮನಃ - ಮಹಾನುಭಾವನಾದ, ಯಸ್ಯ - ಯಾವಾತನ, ಬಾಹುಚ್ಛಾಯಾಂ - ತೋಳಿನನೆರಳನ್ನು (ಬಾಹುಬಲವನ್ನು) ಅವಷ್ಟಬ್ಧಃ - ಅವಲಂಬಿಸಿಕೊಂಡಿರುವುದೋ, ತಂ - ಅಂತಹ, ರಾಘವಂ - ರಘುಕುಲೋತ್ಪನ್ನನಾದ ಮಹಾಪುರುಷನನ್ನು. ಮೃಗರೂಪೇಣ - ಜಿಂಕೆಯ ವೇಷದಿಂದ, ಶೂನ್ಯೇ - ನಿರ್ಜನವಾದ ಅರಣ್ಯದಲ್ಲಿ, ಅಪಕೃಷ್ಯ - ಮೋಸಗೊಳಿಸಿ ಸೆಳೆದು, ಆಶ್ರಮಪದಾತ್ - ತಪೋವನಪ್ರದೇಶದ ದೆಶೆಯಿಂದ, ಯೇನ - ಯಾವ ರಾವಣನಿಂದ, (ತ್ವಂ - ನೀನು) ಅಪನೀತಾ - ಅಪಹರಿಸಲ್ಪಟ್ಟವಳು, ಅಸಿ - ಆದೆಯೋ, ತಸ್ಯ - ಅಂತಹ ರಾವಣನಿಗೆ, ಯತ್ - ಯಾವ, ಫಲಂ - ಮರಣರೂಪವಾದ ಫಲವು, (ಭವಿಷ್ಯತಿ - ಆಗುವುದೋ) ತತ್ - ಅದನ್ನು, ದ್ರಕ್ಷ್ಯಸಿ - ನೋಡಹೋಗುವೆ ॥೩೧, ೩೨॥ ವೀರ್ಯವಾನ್ - ಪರಾಕ್ರಮಶಾಲಿಯಾದ, ಯಃ - ಯಾವ ರಾಮನು, ರೋಷಪ್ರಮುಕ್ತೈಃ - ರೋಷದಿದ ಬಿಟ್ಟವುಗಳಾದ ಕಾರಣವೇ, ಪಾವಕೈರಿವ - ಅಗ್ನಿಜ್ವಾಲೆಗಳಂತೆ, ಜ್ವಲದ್ಭಿಃ - ಉರಿಯುತಲಿರುವ, ಇಷುಭಿಃ - ಬಾಣಗಳಿಂದ, ರಾವಣಂ - ರಾವಣನನ್ನು, ಸಂಖ್ಯೇ - ಯುದ್ಧದಲ್ಲಿ, ನಚಿರಾತ್ - ಸ್ವಲ್ಪಕಾಲದಲ್ಲಿಯೇ, ವಧಿಷ್ಯತಿ - ಕೊಂದುಬಿಡುವನೋ, ತೇನ- ಅಂತಹ ಶ್ರೀರಾಮನಿಂದ, ಪ್ರೇಷಿತಂ - ಕಳುಹಿಸಲ್ಪಟ್ಟ, ದೂತಂ ಕ್ಷೇಮಸಮಾಚಾರವನ್ನು ತಿಳಿಸತಕ್ಕ ಸೇವಕನೆನಿಸಿದ ಅಹಂ-ನಾನು ಇಹ-ಈ ಲಂಕೆಯಲ್ಲಿ, ತ್ವತ್ಸಕಾಶಂ-ನಿನ್ನ ಸನ್ನಿಧಾನವನ್ನು ಕುರಿತು, ಆಗತಃ-ಬಂದಿನೇನೆ ॥೩೩॥ ತ್ವದ್ವಿಯೋಗೇನ-ನಿನ್ನಅಗಲಿಕೆಯಿಂದ, ದುಃಖಾರ್ತಃ-

ಶರೀರವನ್ನಾಂತು ಬಂದಿರುವ ಮನ್ಮಥನೇ ಆಗಿರುವನು, ಅಪರಾಧವಿರುವ ಸ್ಥಲವನ್ನೇ ಕಂಡುಹಿಡಿದು ಅಲ್ಲಿಯೇ ತನ್ನ ಕೋಪವನ್ನೂ ಶಿಕ್ಷಾಪ್ರಕಾರವನ್ನೂ ವಿನಿಯೋಗಿಸತಕ್ಕವನುಆದುದರಿಂದಲೇ ಈಲೋಕದಲ್ಲಿ ಈತನಿಗೆಸಮಾನರಿಲ್ಲ ಎಂದುಪ್ರಖ್ಯಾತನಾಗಿದಾನೆ ॥೩೦॥ ಮಹಾನುಭಾವನಾದ ಆಮಹಾಪುರುಷನ ತೋಳುಬಲದ ಆಸರೆಯಿಂದಲೇ ಈ ಪ್ರಪಂಚದ ಪ್ರಾಣಿಗಳೆಲ್ಲ ಜೀವಿಸುತಲಿರುವರು. ಆ ಮಹಾತ್ಮನೇ ರಘುಕುಲತಿಲಕನಾದ ರಾಘವನು. ನಿರ್ಜನವಾಗಿದ್ದ ಜನಸ್ಥಾನವೆಂಬ ಮಹಾರಣ್ಯದಲ್ಲಿ ಆ ಪುರುಷ ಸಿಂಹನನ್ನು ವಂಚಿಸಿಯೇ ರಾವಣನೆಂಬ ನೀಚನಾದ ರಕ್ಕಸನು ನಿನ್ನನ್ನು ಅಪಹರಿಸಿತಂದುದು, ಆದುರಾತ್ಮನಿಗೆ ಮುಂದೆ ಏನುಫಲವಾಗುವುದು ಎಂಬುದನ್ನು ನೀನು ಜಾಗ್ರತೆಯಾಗಿ ತಿಳಿಯುವೆ ॥ ೩೨ ॥ ಯಾವ ಮಹಾವೀರಪುರುಷನಿಂದ ಬಿಡಲ್ಪಟ್ಟ ಬಾಣಗಳು ಇನ್ನು ಸ್ವಲ್ಪಕಾಲದಲ್ಲಿಯೇ ಕಾಲಾಗ್ನಿಜ್ವಾಲೆಗಳಂತೆ ಜಾಜ್ವಲ್ಯಮಾನಗಳಾಗಿ ರಣರಂಗದಲ್ಲಿ ರಾವಣನನ್ನು ಇರಿಯುತ್ತವೆಯೋ ಆ ಪುರುಷಸಿಂಹನೇ ನಿನ್ನಯ ಕುಶಲವೃತ್ತಾಂತವನ್ನು ತಿಳಿದುಬರುವಂತೆ ನಿನ್ನ ಸನ್ನಿಧಾನಕ್ಕೆ

ತೇನಾಹಂ ಪ್ರೇಷಿತೋ ದೂತ ಸ್ತ್ವತ್ಸಕಾಶ ಮಿಹಾಗತಃ ॥೩೩॥
ತ್ವದ್ವಿಯೋಗೇನ ದುಃಖಾರ್ತ ಸ್ಸ ತ್ವಾಂ ಕೌಶಲ ಮಬ್ರವೀತ್ ॥೩೪॥
ಲಕ್ಷ್ಮಣಶ್ಚ ಮಹಾತೇಜಾ ಸ್ಸುಮಿತ್ರಾನಂದ ವರ್ಧನಃ ।
ಅಭಿವಾದ್ಯ ಮಹಾಬಾಹು ಸ್ಸ ತ್ವಾಂ ಕೌಶಲ ಮಬ್ರವೀತ್ ॥೩೫॥
ರಾಮಸ್ಯ ಚ ಸಖಾ ದೇವಿ ಸುಗ್ರೀವೋ ನಾಮ ವಾನರಃ ।
ರಾಜಾ ವಾನರ ಮುಖ್ಯಾನಾಂ ಸ ತ್ವಾಂ ಕೌಶಲ ಮಬ್ರವೀತ್ ॥೩೬॥
ನಿತ್ಯಂ ಸ್ಮರತಿ ರಾಮ ಸ್ತ್ವಾಂ ಸಸುಗ್ರೀವ ಸ್ಸಲಕ್ಷ್ಮಣಃ ।
ದಿಷ್ಟ್ಯಾ ಜೀವಸಿ ವೈದೇಹಿ ರಾಕ್ಷಸೀ ವಶಮಾಗತಾ ॥೩೭॥

---

ವ್ಯಸನಪೀಡಿತನಾದ, ಸಃ-ಅಂತಹರಾಮನು ತ್ವಾಂ - ನಿನ್ನನ್ನು ಕುರಿತು, ಕೌಶಲಂ - ಕುಶಲವಾರ್ತೆಯನ್ನು, ಅಬ್ರವೀತ್-ಹೇಳಿದನು, ಮಹಾತೇಜಾಃ- ಮಹತ್ತರವಾದ ತೇಜಸ್ಸುಳ್ಳ, ಸುಮಿತ್ರಾನಂದವರ್ಧನಃ-ಸುಮಿತ್ರಾದೇವಿಗಾನಂದವನ್ನುಂಟುಮಾಡುವ, ಮಹಾಬಾಹುಃ - ಹೆಚ್ಚಿದ ತೋಳ್ಬಲವುಳ್ಳ, ಸಃ-ಆ ಪ್ರಸಿದ್ಧನಾದ, ಲಕ್ಷ್ಮಣಶ್ಚ - ಲಕ್ಷ್ಮಣನೂ, ಅಭಿವಾದ್ಯ- ನಮಸ್ಕರಿಸಿ, ತ್ವಾಂ-ನಿನ್ನನ್ನು ಕುರಿತು, ಕೌಶಲಂ-ಕ್ಷೇಮಸಮಾಚಾರವನ್ನು, ಅಬ್ರವೀತ್ - ಹೇಳಿದನು, ದೇವಿ-ಎಲೌ ಜಾನಕಿಯೇ, ರಾಮಸ್ಯ-ಶ್ರೀರಾಮನಿಗೆ, ಸಖಾ-ಸ್ನೇಹಿತನಾಗಿರುವ, ವಾನರಮುಖ್ಯಾನಾಂ-ಕಪಿವೀರರಿಗೆ, ರಾಜಾ-ಪ್ರಭುವಾಗಿರತಕ್ಕ, ಸುಗ್ರೀವೋನಾಮ-ಸುಗ್ರೀವನೆಂದು ಪ್ರಸಿದ್ಧನಾಗಿರತಕ್ಕ, ಸಃ -ಆ, ವಾನರಶ್ಚ -ಕಪಿನಾಯಕನೂ, ತ್ವಾಂ ನಿನ್ನನ್ನು ಕುರಿತು, ಕೌಶಲಂ- ಕುಶಲಸಮಾಚಾರವನ್ನು, ಅಬ್ರವೀತ್- ಹೇಳಿದನು ॥೩೪, ೩೫, ೩೬॥ ರಾಮಃ-ಶ್ರೀರಾಮನು, ಸಸುಗ್ರೀವಃ-ಸುಗ್ರೀವನಿಂದೊಡಗೂಡಿದವನೂ, ಸಲಕ್ಷ್ಮಣಃ-ಲಕ್ಷ್ಮಣನಿಂದೊಡಗೂಡಿದವನೂ ಆಗಿ ತ್ವಾಂ-ನಿನ್ನನ್ನು, ನಿತ್ಯಂ - ಯಾವಾಗಲೂ, ಸ್ಮರತಿ - ನೆನೆಯುತಲಿದಾನೆ, ವೈದೇಹಿ - ಎಲೌ ಜಾನಕಿಯೇ, (ತ್ವಂ ನೀನು) ರಾಕ್ಷಸೀವಶಂ - ನಿಶಾಚರಿಯರ ಅಧೀನತೆಯನ್ನು, ಆಗತಾ-ಹೊಂದಿದವಳಾಗಿ, ದಿಷ್ಟ್ಯಾ ಅದೃಷ್ಟವಶದಿಂದ, ಜೀವಸಿ ಬದುಕಿರುತ್ತೀಯೆ ॥೩೭॥ ತ್ವಾಂ-ನೀನು, ಮಹಾಬಲಂ - ಹೆಚ್ಚಿದ ಬಲವುಳ್ಳ, ರಾಮಂ-ಶ್ರೀರಾಮನನ್ನೂ, ಲಕ್ಷ್ಮಣಂಚ-ಲಕ್ಷ್ಮಣನನ್ನೂ, ಅಮಿತೌಜಸಂ- ಮಹಾಪರಾಕ್ರಮಶಾಲಿಯಾದ,

---

ದೂತನನ್ನಾಗಿ ಕಳುಹಿಸಿ ಇದಾನೆ. ಆಕಾರಣದಿಂದಲೇ ಇಲ್ಲಿ ಬಂದಿರುವೆನು ॥೩೩॥ ಎಲೌ ಸೀತಾದೇವಿಯೇ ! ನಿನ್ನವಲ್ಲಭನ ಅಗಲಿಕೆಯಿಂದ ನೀನು ಹೇಗೆ ವ್ಯಥೆಪಡುತಲಿರುವೆಯೋ, ನಿನ್ನ ವಿಯೋಗದಿಂದ ಆದಾಶರಥಿಯು ಅದಕ್ಕಿಂತಲೂ ಅತಿಶಯವಾಗಿ ವ್ಯಸನಾಕ್ರಾಂತನಾಗಿದಾನೆ. ಆತನು ನಿನ್ನ ಕ್ಷೇಮವನ್ನು ತಿಳಿದುಬರುವಂತೆ ಹೇಳಿದನು ॥೩೪॥ ಮತ್ತು-ಮಹಾಭುಜಬಲಸಂಪನ್ನನಾಗಿರುವ ಸುಮಿತ್ರಾ ನಂದನನು ನಿನ್ನ ಚರಣಗಳಿಗೆ ಅಭಿವಂದಿಸಿ, ನಿನ್ನ ಕುಶಲವೃತ್ತಾಂತವನ್ನು ತರುವಂತೆ ಆಜ್ಞಾಪಿಸಿರುವನು ॥೩೫॥ ಇದಲ್ಲದೆ ಶ್ರೀರಾಮನಿಗೆ ಪರಮಾಪ್ತಮಿತ್ರನೆನಿಸಿರುವ ಸುಗ್ರೀವನೆಂಬ ಕಪಿಸಾರ್ವಭೌಮನೂ ಪ್ರಣಾಮವಂ ಗೈದು ನಿನ್ನಯ ಪದಗಳವನ್ನರಿತು ಬರುವಂತೆ ಅಪ್ಪಣೆಕೊಡಿಸಿದಾನೆ ॥೩೬॥ ಓ ಜನನೀ ! ರಾಮಲಕ್ಷ್ಮಣ ಸುಗ್ರೀವರುಸೀಸಿಲ್ಲಿರುವೆ ಎಂಬ ಸುದ್ದಿಯನ್ನೇ ತಿಳಿಯದೆ ಹಗಲಿರುಳೂ ಕೊರಗುತಲಿದಾರೆ, ನೀನಾದರೆ ಇಂತಹ ನಿರ್ಬಂಧದಲ್ಲಿ ಸಿಲುಕಿ ಇದುವರೆಗೂ ಜೀವಿಸಿರುವುದನ್ನು ನೋಡಿದರೆ ಅವರ ಭಾಗ್ಯೋದಯವೆಂದೇ ಹೇಳಬೇಕು ॥೩೭॥ ಎಲೌ

ನ ಚಿರಾದ್ದ್ರಕ್ಷ್ಯಸೇ ರಾಮಂ ಲಕ್ಷ್ಮಣಂ ಚ ಮಹಾಬಲಂ |
ಮಧ್ಯೇ ವಾನರಕೋಟೀನಾಂ ಸುಗ್ರೀವಂ ಚಾಽಮಿತೌಜಸಂ ||೩೮||
ಅಹಂ ಸುಗ್ರೀವ ಸಚಿವೋ ಹನುಮಾ ನ್ನಾಮ ವಾನರಃ |
ಪ್ರವಿಷ್ಟೋ ನಗರೀಂ ಲಂಕಾಂ ಲಂಘಯಿತ್ವಾ ಮಹೋದಧಿಂ ||೩೯||
ಕೃತ್ವಾ ಮೂರ್ಧ್ನಿ ಪದನ್ಯಾಸಂ ರಾವಣಸ್ಯ ದುರಾತ್ಮನಃ|
ತ್ವಾಂ ದ್ರಷ್ಟು ಮುಪಯಾತೋಽಹಂ ಸಮಾಶ್ರಿತ್ಯ ಪರಾಕ್ರಮಂ ||೪೦||
ನಾಹ ಮಸ್ಮಿ ತಥಾ ದೇವಿ ಯಥಾ ಮಾ ಮವಗಚ್ಛಸಿ |
ವಿಶಂಕಾ ತ್ಯಜ್ಯತಾ ಮೇಷಾ ಶ್ರದ್ಧತ್ಸ್ವ ವದತೋ ಮಮ ||೪೧||

—ಇತಿ ಶ್ರೀಮತ್ಸುಂದರಕಾಂಡೇ ಚತುಸ್ತ್ರಿಂಶಸ್ಸರ್ಗಃ—

ಸುಗ್ರೀವಂಚ-ಸುಗ್ರೀವನನ್ನೂ, ವಾನರಕೋಟೀನಾಂ-ಕಪಿಕೋಟಿಗಳ, ಮಧ್ಯೇ-ನಡುವೆ, ನಚಿರಾತ್-ಬೇಗನೆ, ದ್ರಕ್ಷ್ಯಸೆ (ದ್ರಕ್ಷ್ಯಸಿ) ನೋಡುವೆ ||೩೮|| ಅಹಂ - ನಾನು, ಸುಗ್ರೀವಸಚಿವಃ-ಸುಗ್ರೀವನಿಗೆ ಮಂತ್ರಿಯಾಗಿದೇನೆ, ಹನುಮಾನ್ನಾಮ-ಹನುಮಂತನೆಂದು ಹೆಸರನ್ನು ಪಡೆದಿರುವ, ವಾನರಃ - ಕಪಿಯು, ಮಹೋದಧಿಂ - ದೊಡ್ಡಕಡಲನ್ನು, ಲಂಘಯಿತ್ವಾ - ದಾಟಿ, ಲಂಕಾಂ - ಲಂಕೆಯೆಂಬ, ನಗರೀಂ - ಪಟ್ಟಣವನ್ನು, ಪ್ರವಿಷ್ಟಃ - ಹೊಕ್ಕೆನು ||೩೯|| ದುರಾತ್ಮನಃ - ಪಾಪಾತ್ಮನಾದ, ರಾವಣಸ್ಯ - ರಾವಣನ, ಮೂರ್ಧ್ನಿ - ತಲೆಯಮೇಲೆ, ಪದನ್ಯಾಸಂ - ಹೆಜ್ಜೆಯೂರೋಣವನ್ನು, ಕೃತ್ವಾ - ಮಾಡಿ, ತ್ವಾಂ - ನಿನ್ನನ್ನು ದ್ರಷ್ಟುಂ - ನೋಡಲಿಕ್ಕೆ, ಅಹಂ - ನಾನು, ಪರಾಕ್ರಮಂ - ಶೌರ್ಯವನ್ನು, ಸಮಾಶ್ರಿತ್ಯ - ಆಶ್ರಯಿಸಿ, ಉಪಯಾತಃ - ಇಲ್ಲಿಗೆ ಬಂದವನಾಗಿದೇನೆ ||೪೦|| ದೇವಿ - ಎಲೌ ಜಾನಕಿಯೇ, ಯಥಾ - ಹಾಗೆ, ಅಹಂ - ನಾನು, ನಾಸ್ಮಿ - ಆಗಿ ಇಲ್ಲ, ಏಷಾ - ಈ, ಶಂಕಾ - (ನಾನು ರಾವಣನೆಂಬ) ವಿರುದ್ಧವಾದ ಊಹೆಯೇ, (ತ್ವಯಾ - ನಿನ್ನಿಂದ) ತ್ಯಜ್ಯತಾಂ - ಬಿಡಲ್ಪಡಲಿ, ವದತಃ - ಶ್ರೀರಾಮ ಕುಶಲ ವೃತ್ತಾಂತವನ್ನು ಹೇಳುತಲಿರುವ, ಮಮ - ನನ್ನ, (ವಚನಂ - ಮಾತನ್ನು) ಶ್ರದ್ಧತ್ಸ್ವ - ನಂಬು, ||೪೧||

—ಇಂತು ಮೂವತ್ತನಾಲ್ಕನೆಯ ಸರ್ಗಂ—

ಮಹಾತಾಯಿ! ನೀನು ಇನ್ನು ಭಯಪಡಬೇಡ, ಶೂರರಾದ ರಾಮಲಕ್ಷ್ಮಣರು ಅನೇಕ ಕೋಟಿ ವಾನರ ವೀರರಿಂದೊಡಗೂಡಿ, ಧೀರನಾದ ಸುಗ್ರೀವನನ್ನೂ ಕರೆದುಕೊಂಡು, ಇಲ್ಲಿಗೆ ಬಂದು, ಲಂಕೆಯನ್ನು ನೆಲಮಟ್ಟಮಾಡಿ, ರಕ್ಕಸರ ಹಿಂಡನ್ನು ಸದೆಬಡಿಯುವರು. ಆ ಕಪಿಕೋಟಿಗಳ ನಡುವೆ ರಾಮಲಕ್ಷ್ಮಣ ಸುಗ್ರೀವರನ್ನು ಸ್ವಲ್ಪಕಾಲದಲ್ಲಿಯೇ ನೋಡಹೋಗುವೆ, ||೩೮|| ಈ ನಾನು ಸುಗ್ರೀವನಿಗೆ ಪ್ರಧಾನಮಂತ್ರಿಯಾಗಿದೇನೆ, ಹೆಸರಿನಲ್ಲಿ ನನ್ನನ್ನು ಹನುಮಂತನೆಂದು ಕರೆಯುತ್ತಾರೆ. ಆರಾಮಲಕ್ಷ್ಮಣ ಸುಗ್ರೀವರ ಅಪ್ಪಣೆಯನ್ನು ಶಿರದೊಳಾಂತು, ವಿಕ್ರಮವನ್ನಳವಟ್ಟು, ಸಾಗರವನ್ನು ದಾಟಿ, ಮಹಾ ಪಾಪಾತ್ಮನೆನಿಸಿದ ದಶಕಂಧರನ ಶಿರದಮೇಲೆ ಅಡಿಯನ್ನಿಟ್ಟು, ನಿನ್ನ ಸಂದರ್ಶನಾರ್ಥವಾಗಿ ಇಲ್ಲಿಗೆ ಬಂದಿರುವೆನು ||೩೯, ೪೦|| ಎಲೌ ಮಹಾದೇವಿಯೇ! ನೀನು ನನ್ನನ್ನು ಯಾವ ಕೀಳರಕ್ಕಸನನ್ನಾಗಿ ಭಾವಿಸಿದೆಯೋ? ಆ ಭ್ರಾಂತಿಯನ್ನು ಬೇಗನೆ ತೊರೆ. ಈ ನಾನು ಆ ಕೀಳನಲ್ಲ, ಶ್ರೀರಾಮಚಂದ್ರನ ಕುಶಲವೃತ್ತಾಂತವನ್ನು ಉದಹರಿಸುತಲಿರುವ ನನ್ನ ವಚನದಲ್ಲಿ ಪ್ರಾಮಾಣ್ಯ ಬುದ್ಧಿಯನ್ನಿಡು ಎಂದು ಹೇಳಿ ವಿರಮಿಸಿದನು ||೪೧||

—ಇಂತು ಮೂವತ್ತನಾಲ್ಕನೆಯ ಸರ್ಗಂ—

श्रीः

श्री रामचन्द्र परब्रह्मणे नमः

# श्रीमत्सुंदरकांडे-पंचत्रिंशस्सर्गः



ತಾಂ ತು ರಾಮಕಥಾಂ ಶ್ರುತ್ವಾ ವೈದೇಹೀ ವಾನರರ್ಷಭಾತ್ ।
ಉವಾಚ ವಚನಂ ಸಾಂತ್ವಮಿದಂ ಮಧುರಯಾ ಗಿರಾ ॥೧॥
ಕ್ವ ತೇ ರಾಮೇಣ ಸಂಸರ್ಗಃ ಕಥಂ ಜಾನಾಸಿ ಲಕ್ಷ್ಮಣಮ್।
ವಾನರಾಣಾಂ ನರಾಣಾಂ ಚ ಕಥಮಾಸೀತ್ಸಮಾಗಮಃ ॥೨॥
ಯಾನಿ ರಾಮಸ್ಯ ಲಿಂಗಾನಿ ಲಕ್ಷ್ಮಣಸ್ಯ ಚ ವಾನರ ।

---

ಕಂದ॥ ಸಾಮುದ್ರಿಕ ಶಾಸ್ತ್ರೋಕ್ತ । ಶ್ರೀಮದ್ರಾಮಾಂಗ ಚಿಹ್ನೆಯೆಲ್ಲವ ನರುಹಿ ।
ರಾಮಾಂಗನೆ ಗಾನಂದವ । ನಾಮಾರುತಿ ಗೈದನೆಂಬು ದಮಮಾ! ಚೋದ್ಯಂ ॥

ವೈದೇಹೀ- ಜಾನಕಿಯು, ತಾಂ – ಆ, ರಾಮಕಥಾಂ- ಶ್ರೀರಾಮಚರಿತ್ರೆಯನ್ನು, ವಾನರರ್ಷಭಾತ್- ಮಾರುತಿಯ ಮೂಲಕವಾಗಿ, ಶ್ರುತ್ವಾ – ಕೇಳಿ, ಮಧುರಯಾ – ಕೇಳಲಿಕ್ಕೆ ಇಂಪಾಗಿರುವ, ಗಿರಾ - ಮಾತಿನಿಂದ, ಇದಂ - ಈ ಮುಂದೆಹೇಳುವ, ಸಾಂತ್ವಂ - ಸಮಾಧಾನಕರವಾದ, ವಚನಂ - ಮಾತನ್ನು, ಉವಾಚ- ಹೇಳತೊಡಗಿದಳು, ॥೧॥ (ಹನುಮನ್ - ಎಲೈ ಆಂಜನೇಯನೇ !) ರಾಮೇಣ - ಶ್ರೀರಾಮನೊಡನೆ, ತೇ ನಿನಗೆ, ಸಂಸರ್ಗಃ - ಸಂಬಂಧವು (ಪರಿಚಯವು) ಕ್ವ-ಎಲ್ಲಿಉಂಟಾಯಿತು ? ಲಕ್ಷ್ಮಣಂ- ಲಕ್ಷ್ಮಣನನ್ನು, ಕಥಂ – ಹೇಗೆ, ಜಾನಾಸಿ-ಬಲ್ಲೆ ? ವಾನರಾಣಾಂ – ಕಪಿಗಳಿಗೂ, ನರಾಣಾಂಚ – ಮನುಷ್ಯರಿಗೂ, ಸಮಾಗಮಃ - ಸೇರಿಕೆಯು (ಹೊಂದಿಕೆಯು) ಕಥಂ - ಹೇಗೆ, ಆಸೀತ್ - ಉಂಟಾಯಿತು ? ॥೨॥ ವಾನರ – ಎಲೈ ವಾನರನೇ ! ರಾಮಸ್ಯ - ಶ್ರೀರಾಮನಿಗೂ, ಲಕ್ಷ್ಮಣಸ್ಯಚ-ಲಕ್ಷ್ಮಣನಿಗೂ ಯಾನಿ - ಯಾವ, ಲಿಂಗಾನಿ - ಚಿಹ್ನೆ (ಗುರುತು, ಚಹರೆ) ಗಳಿವೆಯೋ, ತಾನಿ - ಅವುಗಳನ್ನು, ಭೂಯಃ-ಮರಳಿ (ವಿಶೇಷವಾಗಿ) ಸಮಾಚಕ್ಷ್ವ - ಚೆನ್ನಾಗಿ ವಿವರಿಸಿ ಹೇಳು, ಮಾಂ - ನನ್ನನ್ನು, ಶೋಕಃ -

---

## —ಮೂವತ್ತೈದನೆಯ ಸರ್ಗಂ—

ಇಂತು ಜನಕರಾಜನಂದಿನಿಯು-ಕಪಿಪುಂಗವನಾದ ಆಂಜನೇಯನ ಮುಖದಿಂದ ರಾಮಕಥೆಯನ್ನು ಕೇಳಿ, ಮರಳಿ ಮೃದುಮಧುರವಾದ ಮಾತುಗಳಿಂದ ಇಂಪಾಗಿರುವಂತೆ ಉತ್ತರವನ್ನು ಹೇಳತೊಡಗಿದಳು ॥೧॥ ಎಲೈ ವಾನರವೀರನೇ ! ರಾಮಲಕ್ಷ್ಮಣರೊಡನೆ ನಿನಗೆ ಸ್ನೇಹವು ಎಲ್ಲಿ ಕಲೆಯಿತು ? ಅವರನ್ನು ನೀನು ಹೇಗೆಬಲ್ಲೆ ? ವಿಜಾತೀಯರಾಗಿಯೂ ಗುರುಕುಲ ವಾಸಕ್ಕೆ ಅಯೋಗ್ಯರಾಗಿಯೂ ಇರುವ ಕಪಿಗೂ, ಶಾಸ್ತ್ರಬದ್ಧರಾಗಿ ವಶಿಷ್ಠಮುನಿಶಿಷ್ಯರಾಗಿಯೂ ಇರುವ ರಾಮಲಕ್ಷ್ಮಣರಿಗೂ ಹೊಂದಿಕೆಯು ಹೇಗೆಬೆಳೆಯಿತು ? ಲೋಕದಲ್ಲಿ ಸಜಾತೀಯರಾಗಿಯೂ ಸಮಾನಸ್ವಭಾವದವರಾಗಿಯೂ ಇರುವವರಿಗೇ ಅಲ್ಲವೇ ಸ್ನೇಹಭಾವವು ಸಂಗತವಾಗುವುದು ? ॥೨॥ ಎಲೈ ವಾನರನೇ ! ಹಾಗೆ ಒಂದುವೇಳೆ ಇದೆಲ್ಲ ದಿಟವಾಗಿರುವ ಪಕ್ಷದಲ್ಲಿ, ಶ್ರೀರಾಮನ ರೂಪರೇಖಾಲಾವಣ್ಯ ಮೊದಲಾದ

ತಾನಿ ಭೂಯ ಸ್ಸಮಾಚಕ್ಷ್ವ ನ ಮಾಂ ಶೋಕ ಸ್ಸಮಾವಿಶೇತ್ ॥೩॥
ಕೀದೃಶಂ ತಸ್ಯ ಸಂಸ್ಥಾನಂ ರೂಪಂ ರಾಮಸ್ಯ ಕೀದೃಶಮ್ ।
ಕಥ ಮೂರೂ ಕಥಂ ಬಾಹೂ ಲಕ್ಷ್ಮಣಸ್ಯ ಚ ಶಂಸ ಮೇ ॥೪॥
ಏವ ಮುಕ್ತ ಸ್ತು ವೈದೇಹ್ಯಾ ಹನುಮಾ ನ್ಮಾರುತಾತ್ಮಜಃ ।
ತತೋ ರಾಮಂ ಯಥಾ ತತ್ವಮಾಖ್ಯಾತು ಮುಪಚಕ್ರಮೇ ॥೫॥
ಜಾನಂತೀ ಬತ ದಿಷ್ಟ್ಯಾ ಮಾಂ ವೈದೇಹಿ ಪರಿಪೃಚ್ಛಸಿ ।
ಭರ್ತುಃ ಕಮಲಪತ್ರಾಕ್ಷಿ ಸಂಸ್ಥಾನಂ ಲಕ್ಷ್ಮಣಸ್ಯ ಚ ॥೬॥
ಯಾನಿ ರಾಮಸ್ಯ ಚಿಹ್ನಾನಿ ಲಕ್ಷ್ಮಣಸ್ಯ ಚ ಯಾನಿ ವೈ ।
ಲಕ್ಷಿತಾನಿ ವಿಶಾಲಾಕ್ಷಿ ವದತ ಶ್ಶೃಣು ತಾನಿ ಮೇ ॥೭॥

---

ದುಃಖವು, ನಸಮಾವಿಶೇತ್ - ಪ್ರವೇಶಿಸಬಾರದು, ॥೩॥ ತಸ್ಯ - ಆ, ರಾಮಸ್ಯ - ಶ್ರೀರಾಮನ, ಲಕ್ಷ್ಮಣಸ್ಯಚ - ಮತ್ತು ಲಕ್ಷ್ಮಣನ, ಸಂಸ್ಥಾನಂ - ಅವಯವಗಳ ಇರುವಿಕೆಯು, ಕೀದೃಶಂ - ಎಂಥದು ?- ರೂಪಂ - ಆಕಾರವು (ಸೌಂದರ್ಯವು) ಕೀದೃಶಂ - ಎಂಥದು ?, ಊರೂ-ತೊಡೆಗಳು, ಕಥಂ - ಹೇಗೆ ಇವೆ ?, ಬಾಹೂ - ತೋಳುಗಳು, ಕಥಂ - ಹೇಗಿವೆ ? ಮೇ - ನನಗೆ, ಶಂಸ - ಹೇಳು ॥೪॥ ತತಃ ಆಕೆ ಹಾಗೆ ಹೇಳಿದ ಮೇಲೆ, ಮಾರುತಾತ್ಮಜಃ - ವಾಯುನಂದನನಾದ, ಹನುಮಾನ್ - ಆಂಜನೇಯನು, ವೈದೇಹ್ಯಾ - ಸೀತೆಯಿಂದ, ಏವಂ - ಈಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟವನಾಗಿ, ರಾಮಂ - ಶ್ರೀರಾಮನನ್ನು, ಯಥಾತತ್ವಂ - ಯಥಾರ್ಥವಾಗಿ, ಆಖ್ಯಾತುಂ - ಹೇಳಲಿಕ್ಕೆ, ಉಪಚಕ್ರಮೇ - ಆರಂಭಿಸಿದನು ॥೫॥ ಕಮಲಪತ್ರಾಕ್ಷಿ - ತಾವರೆಯ ಎಸಳಿನಂತೆ ಸೆಳೆವ ಕಣ್ಣುಳ್ಳ, ಬತವೈದೇಹಿ - ಎಲೌ ಸೀತಾದೇವಿಯೇ !, ಮಾಂ - ನನ್ನನ್ನು, ಜಾನಂತೀ - ರಾಮದೂತನನ್ನಾಗಿ ತಿಳಿಯುತಲಿರುವವಳಾದರೂ, ಭರ್ತುಃ - ನಿನ್ನವಲ್ಲಭನ, ಲಕ್ಷ್ಮಣಸ್ಯಚ ಮತ್ತು ಲಕ್ಷ್ಮಣನ, ಸಂಸ್ಥಾನಂ-ಅವಯವಗಳ ಸ್ಥಿತಿಯನ್ನು, ದಿಷ್ಟ್ಯಾ-ನನ್ನ ಅದೃಷ್ಟವಶದಿಂದ (ಭಾಗ್ಯೋದಯದಿಂದ) ಪರಿಪೃಚ್ಛಸಿ- ಕೇಳುತಲಿದ್ದೀಯೆ ॥೬॥ ವಿಶಾಲಾಕ್ಷಿ-ವಿಶಾಲನಯನೆಯಾದ ಜಾನಕಿಯೇ ! ರಾಮಸ್ಯ- ಶ್ರೀರಾಮಚಂದ್ರನ, ಯಾನಿ - ಯಾವ, ಚಿಹ್ನಾನಿ-ಗುರುತುಗಳು,

---

ಲಕ್ಷಣಗಳು ಹೇಗೆಇವೆ ? ಲಕ್ಷ್ಮಣನ ಲಕ್ಷಣಗಳು ಹೇಗೆಇವೆ ? ಅವುಗಳನ್ನೆಲ್ಲ ನೀನು ವಿಸ್ತಾರವಾಗಿ ವಿವರಿಸಿದೆಯಾದರೆ ಆ ಶೋಕವು ನನ್ನ ಹೃದಯವನ್ನು ಪ್ರವೇಶಿಸದೆ ಇದ್ದೀತು ; ॥೩॥ ರಾಮಲಕ್ಷ್ಮಣರ ಇರುವಿಕೆಯು ಹೇಗೆಇದೆ ? ಆಕಾರದರೀತಿಯು ಹೇಗಿದೆ, ತೊಡೆಗಳು ಹೇಗೆ ಇವೆ ? ತೋಳುಗಳು ಹೇಗಿವೆ? ಇದನ್ನೆಲ್ಲ ನನಗೆ ವಿವರಿಸಿಹೇಳು ॥೪॥ ಎಂದೀಪ್ರಕಾರವಾಗಿ ಕೇಳಲು, ತರುವಾಯ-ವಾಯುನಂದನನಾದ ಆಂಜನೇಯನು-ರಾಮಲಕ್ಷ್ಮಣರ ಯಥಾರ್ಥವಾದ ಸ್ಥಿತಿಯನ್ನು ಕ್ರಮವಾಗಿ ಹೇಳತೊಡಗಿದನು ॥೫॥ ಎಲೌ ತಾಯೇ ! ಮೊದಲು ನನ್ನನ್ನು ರಾವಣನೆಂದು ಸಂದೇಹಪಟ್ಟುದರಿಂದ ಆರೀತಿಯನ್ನು ನೋಡಿದರೆ ನೀನು ಪುನಃ ನನ್ನೊಡನೆ ಮಾತನಾಡುವುದಿಲ್ಲವೆಂದೇ ಭಾವಿಸಿದ್ದೆನು, ಈಗ ನನ್ನಭಾಗ್ಯೋದಯದಿಂದ ಸ್ವಲ್ಪಮಟ್ಟಿಗಾದರೂ ನನ್ನನ್ನು ರಾಮದೂತನನ್ನಾಗಿ ಭಾವಿಸಿ, ರಾಮಲಕ್ಷ್ಮಣರ ಅವಯವ ಸಂಸ್ಥಾನಗಳನ್ನು ಕೇಳುತಲಿದ್ದೀಯೆ. ಆ ರಾಮಲಕ್ಷ್ಮಣರ ರೂಪರೇಖಾ ಲಾವಣ್ಯಲಕ್ಷಣಗಳನ್ನು ವಿಶೇಷವಾಗಿ ವಿಜ್ಞಾಪಿಸುತ್ತೇನೆ ಮನಮುಟ್ಟಲಾಲಿಸು ॥೬॥೭॥

ರಾಮಃ ಕಮಲಪತ್ರಾಕ್ಷಃ ಸ್ಸರ್ವ ಸತ್ವಮನೋಹರಃ ।
ರೂಪದಾಕ್ಷಿಣ್ಯ ಸಂಪನ್ನಃ ಪ್ರಸೂತೊ ಜನಕಾತ್ಮಜೆ ॥೮॥
ತೇಜಸಾऽದಿತ್ಯಸಂಕಾಶಃ ಕ್ಷಮಯಾ ಪೃಥಿವೀಸಮಃ ।
ಬೃಹಸ್ಪತಿ ಸಮೊ ಬುದ್ಧ್ಯಾ ಯಶಸಾ ವಾಸವೋಪಮಃ ॥೯॥
(ರಕ್ಷಿತಾ ಜೀವಲೋಕಸ್ಯ ಸ್ವಜನಸ್ಯಾಪಿ ರಕ್ಷಿತಾ।
ರಕ್ಷಿತಾ ಸ್ವಸ್ಯ ವೃತ್ತಸ್ಯ ಧರ್ಮಸ್ಯ ಚ ಪರಂತಪಃ॥೧೦॥)
ರಾಮೋ ಭಾಮಿನಿ ಲೋಕಸ್ಯ ಚಾತುರ್ವರ್ಣ್ಯಸ್ಯ ರಕ್ಷಿತಾ ।

---

ಲಕ್ಷ್ಮಣಸ್ಯಚ-ಮತ್ತು ಲಕ್ಷ್ಮಣನ, ಯಾನಿ-ಯಾವ ಚಿಹ್ನೆಗಳು, (ತ್ವಯಾ-ನಿನ್ನಿಂದ), ಲಕ್ಷಿತಾನಿ-ನೋಡಲ್ಪಟ್ಟವೆಯೋ, ತಾನಿ - ಆ ಚಿಹ್ನೆಗಳನ್ನು, ವದತಃ-ಹೇಳುತಲಿರುವ, ಮೆ-ನನ್ನಿಂದ, ಶೃಣು-ಕೇಳು ॥೭॥ ರಾಮಃ (ರಮಂತೆ, ಯೋಗಿನಃ ಅಸ್ಮಿನ್ ಇತಿ-ರಾಮಃ) - ಮಹಾಯೋಗಿಗಳಿಗೆಲ್ಲ ಆನಂದಕರನಾದ ಶ್ರೀರಾಮಚಂದ್ರನು, ಕಮಲಪತ್ರಾಕ್ಷಃ-ತಾವರೆಯ ರೇಕಿನಂತೆ ಕಣ್ಣುಗಳುಳ್ಳವನು, ಸರ್ವಸತ್ವಮನೋಹರಃ-ಎಲ್ಲ ಪ್ರಾಣಿಗಳ ಮನಸ್ಸನ್ನೂ ಸೆಳೆಯತಕ್ಕವನು, ರೂಪಸೌಂದರ್ಯದಿಂದಲೂ, ದಾಕ್ಷಿಣ್ಯ-ಹೆರರ ಚಿತ್ತವೃತ್ತಿಯನ್ನು ಅನುಸರಿಸುವುದರಿಂದಲೂ, ಸಂಪನ್ನಃ-ಕೂಡಿದವನಾಗಿ, ಹೇಜನಕಾತ್ಮಜೆ-ಎಲೌ ಜನಕನಂದಿನಿಯೇ !, ಪ್ರಸೂತಃ-ಅವತರಿಸಿ ಇದಾನೆ, ॥೮॥ ತೇಜಸಾ-ಪ್ರತಾಪದಿಂದ, ಆದಿತ್ಯ ಸಂಕಾಶಃ - ಸೂರ್ಯನೊಡನೆ ಸಮಾನನು, ಕ್ಷಮಯಾ- ಸಹನಗುಣದಿಂದ, ಪೃಥಿವೀ ಸಮಃ- ಭೂಮಿಯೊಡನೆ ಸಮಾನನು, ಬುದ್ಧ್ಯಾ-ಬುದ್ಧಿಯಿಂದ, ಬೃಹಸ್ಪತಿ ಸಮಃ - ದೇವಗುರು ಸದೃಶನು, ಯಶಸಾ- ಕೀರ್ತಿಯಿಂದ, ವಾಸವೋಪಮಃ - ದೇವರಾಜನಿಗೆಣೆಯಾದವನು, ॥೯॥ ಪರಂತಪಃ - ಶತ್ರುಸಂಹಾರಕನಾದ ಆ ರಾಮನು, ಜೀವಲೋಕಸ್ಯ-ಪ್ರಾಣಿವರ್ಗಕ್ಕೆ, ರಕ್ಷಿತಾ - ಪಾಲಕನು, ಸ್ವಜನಸ್ಯಾಪಿ - ತನ್ನಜನರನ್ನೂ, ರಕ್ಷಿತಾ - ಸಲಹತಕ್ಕವನು, ಸ್ವಸ್ಯ - ತನ್ನ, ವೃತ್ತಸ್ಯ - ನಡತೆಯನ್ನೂ, ರಕ್ಷಿತಾ - ಕಾಪಾಡಿಕೊಳ್ಳತಕ್ಕವನು, ಧರ್ಮಸ್ಯಚ - ಕುಲಧರ್ಮರಾಜಧರ್ಮಗಳನ್ನೂ, ರಕ್ಷಿತಾ - ಸಂರಕ್ಷಿಸುವವನು ॥೧೦॥

---

ಶ್ರೀರಾಮಚಂದ್ರನು ಮಹಾಯೋಗಿಗಳ ಮನವನ್ನು ಕೂಡ ಸೆಳೆಯತಕ್ಕ ದಿವ್ಯಮಂಗಳ ವಿಗ್ರಹನಾಗಿದಾನೆ, ಸಕಲಪ್ರಾಣಿಗಳಿಗೂ ಮನೋಹರನು, ಉಡಿಗೆ ತೊಡಿಗೆಗಳಿಲ್ಲದಿದ್ದರೂ ಉಟ್ಟು ತೊಟ್ಟದಕ್ಕಿಮ್ಮಡಿಯಾದ ಕಾಂತಿಯನ್ನು ಹರಡುತಲಿರುವ ರೂಪವಂತನಾಗಿದಾನೆ, ಕೆಂದಾವರೆಯ ಎಸಳಿನಂತಿರುವ ಕಣ್ಣುಗಳಕಾಂತಿ ಪ್ರವಾಹವು ಹೊಳೆಯುದಡವನ್ನು ನದೀಪ್ರವಾಹವು ಹೇಗೋ ಹಾಗೆ ನೋಟಕರ ಮನವನ್ನು ಕರಗಿಸುತ್ತದೆ. ಹೆರರಚಿತ್ತವೃತ್ತಿಯನ್ನು ಅನುಸರಿಸಿ ನಡೆಯುವ ಉತ್ತಮಸ್ವಭಾವದವನು, ಹೀಗೆದೇಹದ ಸದ್ಗುಣಗಳಿಂದಲೂ, ಮನಸ್ಸಿನ ಸುಗುಣಗಳಿಂದಲೂ ಒಪ್ಪುತಲಿದಾನೆ ॥೮॥ ಆತನ ರಾಜತೇಜಸ್ಸನ್ನು ನೋಡಿದರೆ ನಡುಹಗಲಿನ ಸೂರ್ಯನಿಗೆಣೆಯಾಗುವುದು, ಭೂದೇವಿಗಿಮ್ಮಡಿಯಾದ ತಾಳ್ಮೆಯನ್ನುಳ್ಳವನು, ಬುದ್ಧಿಯನ್ನು ವಿಚಾರಿಸುವದಕ್ಕೆ ಹೊರಟರೆ ದೇವಗುರುವನ್ನು ಮೀರಿಇದಾನೆ, ಕೀರ್ತಿಯಲ್ಲಿ ತ್ರಿಲೋಕಾಧಿಪತಿಯಾದ ದೇವೇಂದ್ರನನ್ನು ಅತಿಕ್ರಮಿಸಿ ಇದಾನೆ ॥೯॥ ಶತ್ರುಸಂಹಾರಕನಾದ ಆ ರಾಮನು ಸಕಲ ಪ್ರಾಣಿವರ್ಗವನ್ನೂ, ಸ್ವಜನವನ್ನೂ ತನ್ನ ಒಳ್ಳೆನಡೆಯನ್ನೂ, ಕುಲಧರ್ಮ ರಾಜಧರ್ಮಗಳನ್ನೂ ಸಂರಕ್ಷಿಸತಕ್ಕವನಾಗಿದಾನೆ ॥೧೦॥

ಮರ್ಯಾದಾನಾಂ ಚ ಲೋಕಸ್ಯ ಕರ್ತಾ ಕಾರಯಿತಾ ಚ ಸಃ ॥೧೧॥
ಅರ್ಚಿಷ್ಮಾನರ್ಚಿತೋಽತ್ಯರ್ಥಂ ಬ್ರಹ್ಮಚರ್ಯವ್ರತೇಸ್ಥಿತಃ ।
ಸಾಧೂನಾಮುಪಕಾರಜ್ಞಃ ಪ್ರಚಾರಜ್ಞಶ್ಚ ಕರ್ಮಣಾಂ ॥೧೨॥
ರಾಜವಿದ್ಯಾವಿನೀತಶ್ಚ ಬ್ರಾಹ್ಮಣಾನಾಮುಪಾಸಿತಾ ।
ಶ್ರುತವಾನ್ ಶೀಲಸಂಪನ್ನೋ ವಿನೀತಶ್ಚ ಪರಂತಪಃ ॥೧೩॥
ಯಜುರ್ವೇದ ವಿನೀತಶ್ಚ ವೇದವಿದ್ಭಿಸ್ಸುಪೂಜಿತಃ ।

ಹೇ ಭಾಮಿನಿ - ಲಾವಣ್ಯವತಿಯಾದ ಎಲೌ ದೇವಿಯೇ ! ಸಃ ರಾಮಃ - ಆ ರಾಮಚಂದ್ರನು, ಚಾತುರ್ವರ್ಣ್ಯಸ್ಯ - ಬ್ರಾಹ್ಮಣಾದಿ ನಾಲ್ಕು ವರ್ಣಗಳ ಸಂಬಂಧವಾದ, ಜನಸ್ಯ - ಜನರನ್ನು, ರಕ್ಷಿತಾ - ರಕ್ಷಿಸುವವನು, ಲೋಕಸ್ಯ - ಜನದ, ಮರ್ಯಾದಾನಾಂ - ನಡತೆಗಳ ನೆಲೆಗಳನ್ನೂ, ಕರ್ತಾ - ಗೊತ್ತುಮಾಡತಕ್ಕವನು, ಕಾರಯಿತಾಚ - ಸದಾಚಾರಗಳಲ್ಲಿ ನಡೆಸತಕ್ಕವನು ॥೧೧॥ ಅರ್ಚಿಷ್ಮಾನ್ - ತೇಜೋವಂತನು, ಅರ್ಚಿತಃ - ಸಜ್ಜನರಿಂದ ಪೂಜಿಸಲ್ಪಡತಕ್ಕವನು, ಬ್ರಹ್ಮಚರ್ಯವ್ರತೆ - ಬ್ರಹ್ಮಚಾರಿಧರ್ಮದಲ್ಲಿ, ಅತ್ಯರ್ಥಂ - ವಿಶೇಷವಾಗಿ, ಸ್ಥಿತಃ - ನೆಲೆಗೊಂಡಿದಾನೆ, ಸಾಧೂನಾಂ - ಸಜ್ಜನರ, ಉಪಕಾರಜ್ಞಃ - ಉಪಕಾರವನ್ನು ನೆನೆಯತಕ್ಕವನು, ಕರ್ಮಣಾಂ - ಸತ್ಕರ್ಮಗಳ, ಪ್ರಚಾರಜ್ಞಶ್ಚ - ಪ್ರಯೋಗಪ್ರಕಾರವನ್ನು ಬಲ್ಲವನು ॥೧೨॥ ರಾಜವಿದ್ಯಾ - ಆನ್ವೀಕ್ಷಕಿಮೊದಲಾದ ರಾಜವಿದ್ಯೆಗಳಲ್ಲಿ, ವಿನೀತಶ್ಚ - ಶಿಕ್ಷಿತನಾದವನು, ಬ್ರಾಹ್ಮಣಾನಾಂ - ಬ್ರಾಹ್ಮಣರನ್ನು, ಉಪಾಸಿತಾ - ಸೇವಿಸತಕ್ಕವನು, ಶ್ರುತವಾನ್ - ಶಾಸ್ತ್ರಶ್ರವಣಮಾಡಿದವನು, ಶೀಲಸಂಪನ್ನಃ - ಒಳ್ಳೆಯ ಸ್ವಭಾವದಿಂದ ಕೂಡಿದವನು, ವಿನೀತಶ್ಚ - ತಗ್ಗಿ ನಡೆಯುತಕ್ಕವನು (ವಿಧೇಯತೆಯಿಂದ ಕೂಡಿದವನು) ಪರಂತಪಃ - ಹಗೆಗಳನ್ನು ತಪಿಸುವಂತೆ ಮಾಡುವವನು ॥೧೩॥ ಯಜುರ್ವೇದ ವಿನೀತಶ್ಚ-ಯಜುರ್ವೇದವನ್ನು ಅಧ್ಯಯನಮಾಡಿದವನು

ಸೌಭಾಗ್ಯ ಸೌಂದರ್ಯಗಳನ್ನೊಳಗೊಂಡಿರುವ ಎಲೌ ಜಾನಕಿಯೆ ! ರಾಮನು-ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣದವರನ್ನು ರಕ್ಷಿಸತಕ್ಕವನು, ಸಕಲಸದಾಚಾರಗಳನ್ನೂ ಬಲ್ಲವನಾಗಿ ತಾನುಆಚರಿಸುತ್ತಾ, ಲೋಕಮರ್ಯಾದೆಯು ಯಥಾಕ್ರಮವಾಗಿ ನೆಲೆಗೊಂಡಿರುವುದಕ್ಕಾಗಿ ಸವಸ್ತರಿಗೂ ಸದ್ಧರ್ಮಗಳನ್ನು ಬೋಧಿಸಿ, ಅವರು ಆಯಾಧರ್ಮಗಳನ್ನು ಆಚರಿಸುವಂತೆ ನಿಯಮಿಸತಕ್ಕವನು ॥೧೧॥ ಮಹಾತೇಜಸ್ವಿಯಾಗಿದಾನೆ, ಸತ್ಪುರುಷರೆಲ್ಲರೂ ಆತನನ್ನು ಮನಃಪೂರ್ವಕವಾಗಿ ಗೌರವಿಸುತ್ತಾರೆ, ಏಕಪತ್ನೀತ್ವ, ಪಿತೃವಾಕ್ಯಪರಿಪಾಲನೆ ಮೊದಲಾದಸದ್ಧರ್ಮಗಳಲ್ಲಿ ನೆಲೆಗೊಂಡಿದಾನೆ, ಇಂದ್ರಿಯನಿಗ್ರಹತತ್ಪರನು, ಸಾಧುಜನರು ಸ್ವಲ್ಪ ಉಪಕಾರವನ್ನು ಮಾಡಿದ್ದರೂ ಅದನ್ನು ಎಂದಿಗೂಮರೆಯತಕ್ಕವನಲ್ಲ, ಸಕಲಸತ್ಕರ್ಮಗಳೂ ಸರ್ವರಿಂದಲೂ ನಡೆಯುವಹಾಗೆ ಮಾಡತಕ್ಕವನು ॥ ೧೨ ॥ ಆನ್ವೀಕ್ಷಕಿ, ದಂಡನೀತಿ ಮೊದಲಾದ ಸಕಲ ನೀತಿಶಾಸ್ತ್ರಗಳಲ್ಲಿಯೂ ಪಾರಂಗತನಾಗಿದಾನೆ, ಬಹು ವಿನಯಗುಣ ಸಂಪನ್ನನು, ಶಾಸ್ತ್ರಜ್ಞರಾದ ಬ್ರಾಹ್ಮಣರನ್ನು ಸೇವಿಸತಕ್ಕವನು, ಅನೇಕ ಸಕಲನೀತಿಶಾಸ್ತ್ರಗಳನ್ನು ಓದಿಯೂ, ಕೇಳಿಯೂ, ಕೇಳಿಸಿಯೂ ಇದಾನೆ, ಬಹು ಒಳ್ಳೆಯಸ್ವಭಾವದವನು, ತಗ್ಗಿನಡೆಯುತಕ್ಕವನು, ಹಗೆಗಳ ಹುಟ್ಟನ್ನೇ ಅಡಗಿಸತಕ್ಕವನು ॥೧೩॥ ಮುಖ್ಯವಾಗಿ ತನ್ನಶಾಖೆಯಾದ ಯಜುರ್ವೇದದಲ್ಲಿನ ರಹಸ್ಯ

ಧನುರ್ವೇದೇ ಚ ವೇದೇಷು ವೇದಾಙ್ಗೇಷು ಚ ನಿಷ್ಠಿತಃ ||೧೪||
ವಿಪುಲಾಂಸೋ ಮಹಾಬಾಹುಃ ಕಮ್ಬುಗ್ರೀವಶ್ಶುಭಾನನಃ |
ಗೂಢಜತ್ರುಸ್ಸುತಾಮ್ರಾಕ್ಷೋ ರಾಮೋ ದೇವಿ ಜನೈಶ್ಶ್ರುತಃ ||೧೫||
ದುನ್ದುಭಿಸ್ವನನಿರ್ಘೋಷಸ್ಸ್ನಿಗ್ಧವರ್ಣಃ ಪ್ರತಾಪವಾನ್ |

---

ವೇದವಿದ್ಭಿಃ - ವೇದವಿದರಿಂದ, ಸುಪೂಜಿತಃ - ಚೆನ್ನಾಗಿ ಗೌರವಿಸಲ್ಪಟ್ಟವನು, ಧನುರ್ವೇದೇಚ - ಬಿಲ್ಲಿನ ವಿದ್ಯೆಯಲ್ಲಿಯೂ, ವೇದೇಷುಚ - ಸ್ವಶಾಖೆಯನ್ನುಳಿದ ಋಗಾದಿ ವೇದಗಳಲ್ಲಿಯೂ, ವೇದಾಂಗೇಷುಚ - ಶಿಕ್ಷಾ ವ್ಯಾಕರಣಾದಿ ವೇದಾಂಗಗಳಲ್ಲಿಯೂ, ನಿಷ್ಠಿತಃ - ಪಾರಂಗತನಾದವನು ||೧೪|| ವಿಪುಲಾಂಸಃ - ಎತ್ತರವಾದ ಹೆಗಲುಳ್ಳವನು, ಮಹಾಬಾಹುಃ - ತೋರವಾಗಿಯೂ ನೀಳವಾಗಿಯೂ ಇರುವ ತೋಳುಗಳುಳ್ಳವನು, ಕಂಬುಗ್ರೀವಃ - ಶಂಖದಂತಿರುವ ಕೊರಳುಳ್ಳವನು, ಶುಭಾನನಃ - ಮಂಗಳಕರವಾದ ಮುಖವುಳ್ಳವನು, ಗೂಢ - ಹೊರಗೆ ಕಾಣಬರದ, ಜತ್ರುಃ - ಹೆಗಲ ಮೇಲಣ ಮೂಳೆಯುಳ್ಳವನು (ಹೊರವಾದ ಸಂಧಿಬಂಧಗಳುಳ್ಳವನು, ಸುತಾಮ್ರ - ಪಾರ್ಶ್ವಗಳಲ್ಲಿ ಸುತ್ತಲೂ ಹೆಚ್ಚಾಗಿ ಕೆಂಪಾಗಿರುವ, ಅಕ್ಷಃ- ಕಣ್ಣುಗಳುಳ್ಳವನು ||೧೫||

ದುಂದುಭಿ - ದುಂದುಭಿಯೆಂಬ ವಾದ್ಯದ, ಸ್ವನ - ಶಬ್ದದಂತೆ, ನಿರ್ಘೋಷಃ - ಗಂಭೀರವಾದ ಕಂಠಧ್ವನಿಯುಳ್ಳವನು, ಸ್ನಿಗ್ಧವರ್ಣಃ - ಮಿಂಚುತಲಿರುವ ಮೈಬಣ್ಣವುಳ್ಳವನು (ಲಾವಣ್ಯಶಾಲಿ) ಪ್ರತಾಪವಾನ್ - ತೇಜೋವಂತನು, ಸಮಃ - ಅವಯವಗಳಲ್ಲಿ ಏರುಪೇರು (ವ್ಯತ್ಯಾಸ) ಗಳಿಲ್ಲದವನು, ಸಮ - ಹೆಚ್ಚುಕಡಮೆಯಿಲ್ಲದಂತೆ, ವಿಭಕ್ತ - ವಿರಚಿಸಲ್ಪಟ್ಟಿರುವ, ಅಂಗಃ- ಕರಚರಣಾದಿ ಅವಯವಗಳುಳ್ಳವನು, ಶ್ಯಾಮಂ - ಕಪ್ಪಾದ (ಎಲೆ ಹಸಿರಿನ) ವರ್ಣಂ - ಮೈಬಣ್ಣವನ್ನು, ಸಮಾಶ್ರಿತಃ ಹೊಂದಿದವನು, ದೇವಿ - ಎಲೌ ಸೀತಾದೇವಿಯೇ ! ರಾಮಃ - ಇಂತಹ ಶ್ರೀರಾಮನು, ಜನೈಃ-ಜನರಿಂದ. ಶ್ರುತಃ - ಸುಪ್ರಸಿದ್ಧನಾಗಿ ಕೇಳಲ್ಪಟ್ಟಿದಾನೆ ||೧೬|| ಕಿಂಚ - ಮತ್ತು, ತ್ರಿಸ್ಥಿರಃ - ಎದೆಮು

---

ಗಳನ್ನೆಲ್ಲ ಬಲ್ಲವನಾಗಿದಾನೆ, ವೇದವಿದರೆಲ್ಲರೂ ಆತನನ್ನು ಚೆನ್ನಾಗಿಪೂಜಿಸುತ್ತಾರೆ ಬಿಲ್ಲಿನವಿದ್ಯೆಯಲ್ಲಿಯೂ,ತನ್ನ ಶಾಖೆಗಿಂತ ಬೇರಾದ ಋಗಾದಿವೇದಗಳಲ್ಲಿಯೂ,ಶಿಕ್ಷೆ. ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎಂಬವೇದಾಂಗಗಳಲ್ಲಿಯೂ, ವಿಶಾರದನಾಗಿದಾನೆ ||೧೪|| ಬಹುಅಗಲವಾದಎದೆ, ತೋರವಾಗಿಯೂ, ನೀಳವಾಗಿಯೂ, ದುಂಡಾಗಿಯೂ ಇರುವ ತೋಳುಗಳುಳ್ಳವನು, ಶಂಖಕ್ಕೆಣೆಯಾದ ಕಂಠವುಳ್ಳವನು, ನೋಡುತಲೇ ಮಹಾಪ್ರೀತಿಯನ್ನುಂಟುಮಾಡುವ ಶುಭಕರವಾದ ಮುಖವುಳ್ಳವನು, ಹೊರಗೆ ಕಾಣಬರದಿರುವ ಹೆಗ್ಗತ್ತಿನ ಮೂಳೆಗಳುಳ್ಳವನು, ಕೆಂದಾವರೆಯಂತೆ ಕೆಂಪಾದ ಕೊನೆಗಣ್ಣುಳ್ಳವನು, ಎಲೌದೇವಿಯೇ ! ಲೋಕದಲ್ಲಿ ಅತನಹೆಸರುಮಾತ್ರಯನ್ನು ಅರಿಯದ ಪ್ರಾಣಿಗಳೇ ಇಲ್ಲ||೧೫||ದುಂದುಭಿ ಯೆಂಬ ವಾದ್ಯದಧ್ವನಿಯಂತೆಬಹುಗಂಭೀರವಾದ ಕಂಠಧ್ವನಿಯುಳ್ಳವನು, ಮಿಂಚುತಲೂ ನುಣುಪಾಗಿಯೂ ಇರುವ ಮೈಬಣ್ಣವುಳ್ಳವನು. ಬಹುಶೌರ್ಯಸಂಪನ್ನ, ಏರುಪೇರುಗಳಿಲ್ಲದೆ ಸಮವಾಗಿರುವ ಸಕಲಾವಯವಗಳುಳ್ಳವನು, ಹೆಚ್ಚುಕಡಮೆ ಇಲ್ಲದೆ ಯೋಗ್ಯವಾಗಿ ಏರ್ಪಟ್ಟಿರುವ ಕರಚರಣಾದಿ ಅವಯವಗಳ ವಿಭಾಗವುಳ್ಳವನು, ಕಪ್ಪಾದ ಇಲ್ಲವೆ ಎಲೆ ಹಸುರಿನಂತೆ ದೇಹಕಾಂತಿಯನ್ನುಳ್ಳವನಾಗಿದಾನೆ ||೧೬|| (೧) ಎದೆ, ಮಣಿಕಟ್ಟು, ಹಿಡಿಂಬೀ

ಸಮಸ್ಸಮವಿಭಕ್ತಾಂಗೋ ವರ್ಣಂ ಶ್ಯಾಮಂ ಸಮಾಶ್ರಿತಃ ॥೧೬॥
ತ್ರಿಸ್ಥಿರಸ್ತ್ರಿಪ್ರಲಂಬಶ್ಚ ತ್ರಿಸಮಸ್ತ್ರಿಷು ಚೋನ್ನತಃ ।

ಣಿಕಟ್ಟು, ಹಿಡಿ ಎಂಬ ಈ ಮೂರು ಸ್ಥಾನಗಳಲ್ಲಿ ಗಟ್ಟಿತನವುಳ್ಳವನು, ತ್ರಿಪ್ರಲಂಬಶ್ಚ - ನೀಳವಾದ ಕಣ್ಣುಗೊಂಬೆ, ತೋಳು, ಅಂಡ ಎಂಬ ಅವಯವಗಳುಳ್ಳವನು, ತ್ರಿಸಮಃ-ತಲೆಗೂದಲಿನತುದಿ, ಅಂಡ, ಮೊ

ಮೂರು ಅವಯವಗಳಲ್ಲಿ, ಸ್ಥೈರ್ಯವುಳ್ಳವನು,(೨) ಕಣ್ಣು ಹುಬ್ಬು, ತೋಳುಗಳು, ಅಂಡಗಳು ಎಂಬೀಮೂರು ಅವಯವಗಳಲ್ಲಿಯೂ ದೈರ್ಘ್ಯ (ಉದ್ದ) ವುಳ್ಳವನು, (೩) ಸಮವಾಗಿರುವ ತಲೆಗೂದಲಿನ ಕೊನೆ, ಅಂಡ, ಮೊಣಕಾಲುಗಳುಳ್ಳವನು (೪) ಹೊಕ್ಕಳ ಒಳಭಾಗ, ಹೊಟ್ಟೆ, ಎದೆ ಇವುಗಳಲ್ಲಿ ಔನ್ನತ್ಯ (ಎತ್ತರ) ವುಳ್ಳವನು (೫) ಕೊನೆಗಣ್ಣು, ಉಗುರು, ಕೈಕಾಲುಗಳು ಇವುಗಳಲ್ಲಿ ರಕ್ತವರ್ಣದ ರೇಖೆಗಳುಳ್ಳವನು, (೬) ಪಾದರೇಖೆಗಳಲ್ಲಿಯೂ, ತಲೆಕೂದಲಿನಲ್ಲಿಯೂ, ರಹಸ್ಯಾವಯವದಲ್ಲಿಯೂ ನುಣುಪುಳ್ಳವನು, (೭) ಕಂಠಸ್ವರ, ಅಂತಸ್ಸ್ವರ, ನಾಭಿ ಇವುಗಳಲ್ಲಿ ನಿತ್ಯವೂ ಗಾಂಭೀರ್ಯವುಳ್ಳವನು ॥೧೭॥ (೮) ಹೊಟ್ಟೆ, ಕೊರಳು ಇವುಗಳಲ್ಲಿ ಮೂರು ಗೆರೆಗಳು ಅಥವಾ ಚರ್ಮದ ತಿರಿಗಳುಳ್ಳವನು (೯) ಸ್ತನಗಳಲ್ಲಿಯೂ, ಸ್ತನಾಗ್ರಗಳಲ್ಲಿಯೂ ಕುಳ್ಳವಾಗಿರುವ ಮೂರು ರೇಖೆಗಳುಳ್ಳವನು, (೧೦) ನಾಲ್ಕು ಹುಟ್ಟುಮಚ್ಚೆಗಳುಳ್ಳವನು ಅಥವಾ ಬೆವರದೆ ಸರಗಳುಬ್ಬಿ ಹೊರಗೆ ಕಾಣದ ಹೆಜ್ಜೆ, ಎರಡು ರೋಮಗಳು ಕಲೆತಿರುವ ರೋಮಕೂಪ, ನೀಳವಲ್ಲದ ರಹಸ್ಯಾವಯವ, ಹೆಚ್ಚಾಗಿ ಉಬ್ಬಿ ಇಲ್ಲದೆ, ಸ್ವಲ್ಪ ಎತ್ತರವಾಗಿರುವ ಹೊಟ್ಟೆ ಎಂದೀಪ್ರಕಾರ ನಾಲ್ಕು ಅವಯವಗಳವ್ಯತ್ಯಾಸವುಳ್ಳವನು (೧೧) ಆತನಿಗೆ ತಲೆಯಲ್ಲಿ ಮೂರು ಉತ್ತಮಗಳಾದ ಸುಳಿಗಳಿವೆ. (೧೨) ಹೆಬ್ಬೆರಳಿನ ಬುಡದಲ್ಲಿ ನಾಲ್ಕುವೇದಗಳ ಪ್ರಾಪ್ತಿಯನ್ನು ಸೂಚಿಸುವ ದೀರ್ಘಾಕಾರವಾದ

(೧) "ಉರಶ್ಚ ಮಣಿಬಂಧಶ್ಚ ಮುಷ್ಟಿಶ್ಚ ನೃಪತೇಃ ಸ್ಥಿರಾಃ" ಎಂದು ಸಾಮುದ್ರಿಕೆ. (೨) ದೀರ್ಘಭ್ರೂಬಾಹುಮುಷ್ಕಸ್ತು ಚಿರಜೀವೀ ಧನೀ ನರಃ" ಎಂದು ಸಾಮುದ್ರಿಕ (೩) "ಕೇಶಾಗ್ರಂ ವೃಷಣಂ ಜಾನು ಸಮಂ ಯಸ್ಯ ಸಭೂಪತಿಃ" ಎಂದು ಸಾ. (೪) "ನಾಭ್ಯಂತಃ ಕುಕ್ಷಿವಕ್ಷೋಭಿರುನ್ನತಃ ಕ್ಷಿತಿಪೋ ಭವೇತ್" (೫) "ಶ್ಲಿಷ್ಟಾಂಗುಳೀ ರುಚಿರತಾಮ್ರನಖೌ ಸುಪಾರ್ಷ್ಣೀ ಪಾದೌ ಕರಾವಪಿ ಸುರಕ್ತನಖಾತ್ಮರೇಖೌ" (೬) "ಸ್ನಿಗ್ಧಾ ಭವಂತಿ ಯೇಷಾಂ ಪಾದರೇಖಾಶ್ಶಿರೋರುಹಾಃ । ತಥಾ ಲಿಂಗಮಣಿಸ್ತೇಷಾಂ ಮಹಾಭಾಗ್ಯಂ ವಿನಿರ್ದಿಶೇತ್" (೭) ಸ್ವರಸ್ಸತ್ತ್ವಂ ಚ ನಾಭಿಶ್ಚ ಗಂಭೀರಶ್ಶಸ್ಯತೇ ಬುಧೈಃ" ಎಂದು ವರರುಚಿ. "ಸ್ವರೇ ಗತೌ ಚ ನಾಭೌ ಚ ಗಂಭೀರಂ ತ್ರಿಷು ಶಸ್ಯತೇ" ಎಂದು ಬ್ರಹ್ಮಪುರಾಣ. (೮) "ಸ್ಥಿರಾ ತ್ರಿರೇಖಾ ಸುಭಗೋಪಪನ್ನಾ ಸ್ನಿಗ್ಧಾ ಸುಮಾಂಸೋಪಚಿತಾ ಸುವೃತ್ತಾ । ನ ಚಾತಿದೀರ್ಘಾ ಚತುರಂಗುಳಾ ಚ ಗ್ರೀವಾ ಸುದೀರ್ಘಾ ಭವತೀಹ ಧನ್ಯಾ" (೯) "ಪೀನೋಪಚಿತ್ತೈರ್ನಿಮ್ನೈಃ ಕ್ಷಿತಿಪತಯಶ್ಚೂಚುಕೈಃ ಸ್ತನೈಸ್ಸುಖಿನಃ । ಸ್ನಿಗ್ಧಾ ನಿಮ್ನಾ ರೇಖಾ ಧನಿನಾಂ ತದ್ವ್ಯತ್ಯಯೇನ ನಿಸ್ಸ್ವಾನಾಂ ॥" (೧೦) "ಪಾದೈಃ ಪ್ರಸ್ವೇದರಹಿತೈಃ ಸಿರಾಹೀನೈಶ್ಚ ಪಾರ್ಥಿವಃ । ಏಕರೋಮಾ ಭವೇದ್ರಾಜಾ ದ್ವಿರೋಮಾ ಪಂಡಿತೋ ಭವೇತ್ ॥ ತ್ರಿರೋಮಾ ಚ ಚತೂರೋಮಾ ಭವೇದ್ಭಾಗ್ಯವಿವರ್ಜಿತಃ । ಸಮಪಾದೋಪವಿಷ್ಟಸ್ಯ ಗುಲ್ಫಂ ಸ್ಪೃಶತಿ ಮೇಹನಂ । ಯಸ್ಯೇಶ್ವರಾಂ ತಂ ಜಾನೀಯಾತ್ ಸುಖಿನಂ ಚೈವ ಮಾನವಂ । ನಿರ್ಮಾಂಸಸ್ಸಂಹತೋ ಮಸ್ತಃ ಯೇಷಾಂ ತೇ ಸುಖಭಾಗಿನಃ ॥" (೧೧) "ಆವರ್ತತ್ರಯರುಚಿರಂ

ತ್ರಿತಾಮ್ರಸ್ತ್ರಿಷು ಚ ಸ್ನಿಗ್ಧೋ ಗಂಭೀರಸ್ತ್ರಿಷು ನಿತ್ಯಶಃ ॥೧೭॥
ತ್ರಿವಲೀವಾಂ ಸ್ತ್ರ್ಯವನತ ಶ್ಚತುರ್ವ್ಯಂಗ ಸ್ತ್ರಿಶೀರ್ಷವಾನ್ ।
ಚತುಷ್ಕಲ ಶ್ಚತುರ್ಲೇಖ ಶ್ಚತುಷ್ಕಿಷ್ಕು ಶ್ಚತುಸ್ಸಮಃ ॥೧೮॥

ಳಕಾಲು ಇವುಗಳಲ್ಲಿ ಸಮತೆಯುಳ್ಳತನು, (ಹಳ್ಳದಿಣ್ಣೆಯಿಲ್ಲದಾತಿರುವುದು) ತ್ರಿಷುಚ - ಹೊಕ್ಕುಳು, ಹೊಟ್ಟೆ ಎದೆ ಎಂಬ ಮೂರು ಅವಯವಗಳಲ್ಲಿ, ಉನ್ನತಃ ಎತ್ತರ [ಉಬ್ಬು] ವುಳ್ಳವನು, ತ್ರಿತಾಮ್ರಃ - ಬಳಗಣ್ಣಿನ ತುದಿ, ಉಗುರು, ಅಂಗೈ ಮತ್ತು ಅಂಗಾಲು ಎಂಬ ಮೂರು ಅವಯವಗಳಲ್ಲಿ ಕೆಂಪುಗೆರೆಗಳುಳ್ಳವನು, ತ್ರಿಷುಚ - ಅಂಗಾಲಿನಗೆರೆ, ತಲೆಗೂದಲು, ಲಿಂಗಮಣಿ ಎಂಬಿವುಗಳಲ್ಲಿ, ಸ್ನಿಗ್ಧಃ - ನುಣುಪುಳ್ಳವನು, ತ್ರಿಷುಚ - ಕೊರಳದನಿ, ಬಳಗಿನ ಹುರುಡು, ಕಿಬ್ಬೊಟ್ಟೆ ಇವುಗಳಲ್ಲಿ, ನಿತ್ಯಶಃ - ಯಾವಾಗಲೂ, ಗಂಭೀರಃ - ಗಾಂಭೀರ್ಯವುಳ್ಳವನು, ಅಥವಾ [ಸ್ವರ, ಗಮನ, ನಾಭಿ ಇವುಗಳಲ್ಲಿ ಗಾಂಭೀರ್ಯವುಳ್ಳವನು] ॥ ೧೭ ॥ ತ್ರಿವಲೀವಾನ್ - ಹೊಟ್ಟೆ, ಕೊರಳು ಇವುಗಳಲ್ಲಿ ಮೂರುಗೆರೆ ಅಥವಾ ಚರ್ಮದ ತಿರಿ [ಮಡಿಕೆ] ಗಳುಳ್ಳವನು, ತ್ರ್ಯವನತಃ - ಸ್ತನಾಗ್ರಗಳಲ್ಲಿ ತಗ್ಗಿರುವ ಮೂರು ಗೆರೆಗಳುಳ್ಳವನು,

ನಾಲ್ಕು ರೇಖೆಗಳುಂಟು, (೧೩) ಹಣೆ, ಅಂಗೈ, ಅಂಗಾಲು ಇವುಗಳೊಳಗೆ ನಾಲ್ಕು ದೀರ್ಘರೇಖೆಗಳುಳ್ಳವನಾಗಿದಾನೆ (೧೪) ಆತನ ದೇಹವು ನಾಲ್ಕು ಮೊಳಗಳ ಪ್ರಮಾಣವುಳ್ಳುದಾಗಿದೆ (ಮೊಳವೆಂದರೆ ಇಪ್ಪತ್ತು ನಾಲ್ಕು ಅಂಗುಳ) ತೊಂಭತ್ತಾರು ಅಂಗುಳಗಳಷ್ಟು ಎತ್ತರವಾಗಿರುವಾತನು ಸಾಕ್ಷಾದ್ದೇವತೆಯೆಂಬುದು ಶಾಸ್ತ್ರಸಿದ್ಧವಾಗಿದೆ (೧೫) ತೋಳು, ಮೊಳಕಾಲು, ತೊಡೆ, ಕೆನ್ನೆ ಈನಾಲ್ಕು ಆತನಿಗೆ ಸಮಾನಗಳಾಗಿವೆ ॥೧೮॥ (೧೬) ಕಣ್ಣು ಹುಬ್ಬುಮೂಗಿನ ಹೊಳ್ಳೆ, ಕಣ್ಣು ಕಿವಿ, ತುಟಿ, ಸ್ತನಾಗ್ರ, ಮೊಳಕೈ, ಮಣಿಕಟ್ಟು, ಮೊಳಕಾಲು, ಅಂಡ, ಟೊಂಕದ ಎರಡು ಪಕ್ಕೆಗಳು, (ಬೆನ್ನಿನ ಕೆಳಭಾಗಗಳು) ಕೈಕಾಲುಗಳು, ಕುಳಿತುಕೊಳ್ಳುವ ಭಾಗಗಳೆರಡು, ಎಂಬ ಈ ಹದಿನಾಲ್ಕೂ ಆತನಿಗೆ ಸಮವಾಗಿರುವುದರಿಂದ ಮಹಾ ಪ್ರಭುವೆನಿಸಿ ಇದಾನೆ (೧೭) ಬಾಯೊಳಗೆ ಮೇಲಿನ ಹಲ್ಲಿನ ಸಾಲಿನಲ್ಲಿ ಎರಡು ಪಕ್ಕಗಳಲ್ಲಿಯೂ ಎರಡು ಕೋರೆಹಲ್ಲುಗಳಿವೆ. ಬತ್ತಾಗಿಯೂ ಮೊನೆಯಾಗಿಯೂ

ಯಸ್ಯಶಿರಃ ಕ್ಷಿತಿಭೃತಾಂ ಭವೇನ್ನಾಥಃ ।,, ಅಥವಾ - 'ಸಮವೃತ್ತಶಿರಾಶ್ಚೈವ ಛತ್ರಾಕಾರಶಿರಾಸ್ತಥಾ । ಏಕಛತ್ರಾಂ ಮಹೀಂ ಭುಂಕ್ತೇದೀರ್ಘಮಾಯುಶ್ಚವಿಂದತಿ ॥,, ಎಂದು ನಾರದ. (೧೨) 'ಮೂಲೇಂಗುಷ್ಠಸ್ಯವೇದಾನಾಂ ಚತಸ್ರಸ್ತಿಸ್ರವಾ । ಏಕಾದ್ವೇವಾಯಥಾಯೋಗಂ ರೇಖಾಜ್ಞೇಯಾ ವ್ಯಜನ್ಮನಾಂ ॥ (೧೩) 'ಲಲಾಟೆಯಸ್ಯದೃಶ್ಯಂತೆ ಚತುಸ್ತ್ರಿದ್ವ್ಯೇಕರೇಖಕಾಃ । ಶತದ್ವಯಂ ಶತಂ ಷಷ್ಟಿಸ್ತಸ್ಯಾಯುರ್ವಿಂಶತಿ ಸ್ತಥಾ ॥,, ಎಂದು ಕಾತ್ಯಾಯನ. 'ಯಸ್ಯಪಾದತಲೆ ವಜ್ರಧ್ವಜ ಶಂಖಾಂಕುಶೋಪಮಾಃ । ರೇಖಾಸ್ಸಮ್ಯಕ್ ಪ್ರಕಾಶಂತೆ ಮನುಜೇಂದ್ರಂತಮಾ ದಿಶೇತ್॥,, 'ಬ್ರಹ್ಮಾಪಾಣೌ ಚತಸ್ರೋರೇಖಾಶ್ಚಯಸ್ಯ ತಿಷ್ಠಂತ್ಯಭಂಗುರಾಃ ॥,, (೧೪) 'ಷಣ್ಣವತ್ಯಂಗುಳೋತ್ಸೇಧೋಯಃ ಪುಮಾನ್ ಸದಿವಾಕಸಃ ॥,, (೧೫) 'ಬಾಹೂಜಾನೂರು ಗಂಡಾಶ್ಚ ಚತ್ವಾರ್ಯಥ ಸಮಾನಿಚ ॥,, ಎಂದು ಬ್ರಹ್ಮಾಂಡಪುರಾಣ (೧೬) 'ಭ್ರುವೌ ನಾಸಾಪುಟೆನೇತ್ರೆ ಕರ್ಣಾವೋಷ್ಠೌಚ ಚೂಚುಕೆ । ಕೂರ್ಪರೌ ಮಣಿಬಂಧೌಚ ಜಾನುನೀವೃಷಣೌಕಟೀ । ಕರೌಪಾದೌ ಸ್ಫಿಚೌಯಸ್ಯ ಸಮೌಜ್ಞೇಯಸ್ಸಭೂಪತಿಃ ।,, ಎಂದು ಸಾಮುದ್ರಿಕ (೧೭) 'ಸ್ನಿಗ್ಧಾಘನಾಶ್ಚದಶನಾಸುತೀಕ್ಷ್ಣ ದಂಷ್ಟ್ರಾಶ್ಚ ಸಮಾಶ್ಚಶುಭಾಃ ॥,,

ಚತುರ್ದಶ ಸಮ ದ್ವಂದ್ವ ಶ್ಚತುರ್ದಂಷ್ಟ್ರ ಶ್ಚತುರ್ಗತಿಃ।

ಚತುರ್ವ್ಯಂಗಃ - ನಾಲ್ಕು ಸುಟ್ಟು ಮಚ್ಚೆಯುಳ್ಳವನು, ಅಥವಾ - (ನರಗಳು ಉಬ್ಬದಿರುವ ಹೆಜ್ಜೆ, ಎರಡು ಕೂದಲು ಜೋಡಿಯಾಗಿಲ್ಲದ ರೋಮಕೂಪ (ಕೂದಲಗುಳಿ) ನೀಳವಾಗಿಲ್ಲದ ಮೇಢ್ರ, ಎತ್ತರವಿಲ್ಲದ ಹೊಟ್ಟೆ ಇವುಗಳುಳ್ಳವನು) ತ್ರಿಶೀರ್ಷವಾನ್ - ಮೂರುಸುಳಿಗಳನ್ನೊಳಗೊಂಡಿರುವ ತಲೆಯುಳ್ಳವನು, ಚತುಷ್ಕಲಃ - ನಾಲ್ಕುವೇದಗಳ ಪರಿಜ್ಞಾನವನ್ನು ಸೂಚಿಸುವ ಹೆಬ್ಬೆರಳಿನ ಬುಡದಲ್ಲಿ ಮೂರು ರೇಖೆಗಳುಳ್ಳವನು, ಚತುರ್ಲೇಖಃ - ಹಣೆ, ಹಸ್ತ, ಹೆಜ್ಜೆ ಇವುಗಳಲ್ಲಿ ನಾಲ್ಕುರೇಖೆಗಳುಳ್ಳವನು, ಚತುಷ್ಕಿಷ್ಕುಃ- ನಾಲ್ಕುಮೊಳಗಳ (ತೊಂಭತ್ತಾರು ಅಂಗುಲ) ಪ್ರಮಾಣದಿಂದ ಶರೀರದ ಎತ್ತರವುಳ್ಳವನು, ಚತುಸ್ಸಮಃ- ಬಂದೇ ಸಮವಾಗಿರುವ ತೋಳು, ಮೊಳಕಾಲು, ತೊಡೆ, ಕಣಕಾಲುಗಳುಳ್ಳವನು ॥೧೮॥ ಚತುರ್ದಶಸಮದ್ವಂದ್ವಃ - ಸಮಾನವಾದ ಹದಿನಾಲ್ಕು ಅವಯವಗಳ ಜೋಡಿಯುಳ್ಳವನು, (ಕಣ್ಣು ಹುಬ್ಬು

ಹಲ್ಲುಗಳ ಸಾಲಿದ್ದು ಮುಂಭಾಗದ ಮೇಲಿನ ಸಾಲಿನ ಉಭಯ ಪಾರ್ಶ್ವಗಳಲ್ಲಿ ಕಿರಿದಾದ ಎರಡು ಕೋರೆಹಲ್ಲುಗಳಿದ್ದರೆ ಸಿಂಹಕ್ಕೆ ಮೀರಿದ ಶೌರ್ಯಸಂಪನ್ನನೆಂದು ಶಾಸ್ತ್ರಜ್ಞರು ಹೇಳುತ್ತಾರೆ (೧೮) ಸಿಂಹ, ಹುಲಿ, ಆನೆ, ಗೂಳಿ, ಇವುಗಳಂತೆ ಗಂಭೀರವಾದ ನಡಗೆಯುಳ್ಳವನಾಗಿದ್ದಾನೆ. (೧೯) ತೊಂಡೆಯ ಹಣ್ಣಿನಂತೆ ತುಸತೋರವಾಗಿಯೂ, ಬಣ್ಣವಾಗಿಯೂ, ಅಂದವಾಗಿಯೂ ತುಟಿಗಳು ಇವೆ. ಕಣ್ಣುಗಳ ಕೆಳಗೆ ಕೆನ್ನೆಗಳ ಮೇಲ್ಭಾಗದಲ್ಲಿ ಕೆಂಪು ಬಣ್ಣದ ಕಂಡಗಳು ಬೆಳಗುತಲಿವೆ. ಮೂಗು ಸ್ವಲ್ಪನೀಳವಾಗಿಯೂ, ತುಸ ಉಬ್ಬಾಗಿಯೂ ಇದೆ (೨೦) ಮೃದುಮಧುರವಾದವಾಕ್ಕು, ಮಿಂಚುತಲಿರುವ ಮುಖ, ತಳತಳಿಸುತಲಿರುವ ಉಗುರು, ನವುರಾಗಿಯೂ ನುಣ್ಣಗೂ ಅರುವ ರೋಮ, ಮೃದುವಾದ ಚರ್ಮ ಇವುಗಳನ್ನೊಳಗೊಂಡಿದಾನೆ. ಅಥವಾ ನುಣುಪಾದ ಕೂದಲು, ಮಿಂಚುವ ಕಣ್ಣು, ಹೊಳೆವ ಹಲ್ಲು, ಕೋಮಲವಾದ ಚರ್ಮ ಮೃದುವಾದ ಅಂಗಾಲು ಇವು ಆತನಿಗೆ ಉಂಟು (೨೧) ಬೆನ್ನಿನ ಮೂಳೆ, ಶರೀರ, ಕರಗಳು, ಪಾದಗಳು, ಬೆರಳು, ಹಸ್ತಗಳು, ಮೂಗು, ಕಣ್ಣು, ಕಿವಿ, ರಹಸ್ಯಾವಯವ ಈ ಎಂಟೂ ನೀಳವಾಗಿರುವುವು ॥೧೮॥ (೨೨) ಮುಖವು, ಕಣ್ಣುಗಳು, ಬಾಯಿ, ನಾಲಗೆ, ದವಡೆ, ತುಟಿ, ಸ್ತನ, ಉಗುರು, ಹಸ್ತ, ಪಾದ, ಈ ಹತ್ತೂ ಕೆಂದಾವರೆಯಂತೆ ಬೆಳಗುತಲಿವೆ. (೨೩) ಎದೆ, ಶಿರ, ಹಣೆ, ಹೆಗ್ಗತ್ತು, ಭುಜ, ತೋಳಿನ ಮೇಲಣ ನಡುಭಾಗ, ನಾಭಿಯ ಪಾರ್ಶ್ವ, ಬೆನ್ನು, ಕಂಠಸ್ವರ, ಕೊರಳು ಎಂಬೀ

(೧೮) ‟ಗಜಸಿಂಹಗತಿಃ ವೀರೌಶಾರ್ದೂಲ ವೃಷಭೋಪಮೌ ॥„ ಎಂದು ಬಾಲಕಾಂಡದಲ್ಲಿ ಹೇಳಿದೆ, (೧೯) ‟ಬಂಧು ಜೀವಕುಸುಮೋಪಮೋಧರೋ ಮಾಂಸಳೌ ರುಚಿರಬಿಂಬ ರೂಪಧೃತ್। ಪೂರ್ಣಮಾಂಸಲ ಹನುಸ್ತು ಭೂಮಿಪಸ್ತುಂತುಂದ ರುಚಿರಾಕೃತಿಸ್ತಥಾ ॥„ (೨೦) ‟ಚಕ್ಷುಸ್ನೇಹೇನ ಸೌಭಾಗ್ಯಂ ದಂತ ಸ್ನೇಹೇನ ಭೋಜನಂ। ತ್ವಚಸ್ನೇಹೇನ ಶಯನಂ ಪಾದಸ್ನೇಹೇನವಾಹನಂ ॥„ ಮತ್ತು ‟ಸ್ನಿಗ್ಧನೀಲ ಮೃದುಕುಂಚಿತಾಸ್ತಥಾ ಮೂರ್ಧಜಾಸುಖಕರಾ ಸ್ಸಮಂಶಿ...ಃ ॥„ ಎಂದು ವರಾಹಮಿಹಿರ (೨೧) ‟ಪೃಷ್ಠಂ ವಃ ಶರೀರಂಚ ಹಸ್ತಪಾದಾಂಗುಳೀಕರಾ। ನಾಸಿಕಾಚಕ್ಷುಷಿಃ ಕರ್ಣೌ ಪ್ರಜನೋಯಸ್ಯಚಾಯತಾಃ ॥„ (೨೨) ‟ಮುಖನೇತ್ರಾಸ್ಯಜಿಹ್ವೋಷ್ಠತಾಲುಸ್ತನನಖಾಃ ಕರಾ। ಪಾದೌಚ ದಶಪದ್ಮಾನಿ ಪದ್ಮಾಕಾರಾಣಿ ಯಸ್ಯಚ ॥ ಎಂದು ಸಾಮುದ್ರಿಕ (೨೩) ‟ಉರಶ್ಶಿರೋ ಲಲಾಟಂಚ

ಮಹೋಷ್ಠೋ ಹನುನಾಸಶ್ಚ ಪಂಚಸ್ನಿಗ್ಧೋಽಷ್ಟವಂಶವಾನ್ ॥೧೯॥
ದಶಪದ್ಮೋ ದಶಬೃಹತ್ ತ್ರಿಭಿರ್ವ್ಯಾಪ್ತೋ ದ್ವಿಶುಕ್ಲವಾನ್ ।

ಮೂಗಿನ ಹೊಳ್ಳೆ, ಕಣ್ಣು, ಕಿವಿ, ತುಟಿ, ಸ್ತನಾಗ್ರ, ಮೊಳಕೈ, ಮಣಿಕಟ್ಟು, ಮೊಣಕಾಲು, ಅಂಡ, ಇಕ್ಕೆಲದಟೊಂಕ, ಕೈಕಾಲು, ಬೆನ್ನಿನ ಕೆಳಭಾಗಗಳೆರಡು) ಚತುರ್ದಂಷ್ಟ್ರಃ - ಎರಡು ಹಲ್ಲುಗಳ ಸಾಲಿನಲ್ಲಿಯೂ ಮತ್ತೆರಡು ಸಮಾನಾಕಾರವಾದ ಕೋರೆಹಲ್ಲುಳ್ಳವನು, ಚತುರ್ಗತಿಃ - ಸಿಂಹ, ಹುಲಿ, ಆನೆ, ಗೂಳಿ ಇವುಗಳ ನಡಿಗೆಯಂತೆ ನಡಗೆಯುಳ್ಳವನು, ಮಹೋಷ್ಠಹನುನಾಸಶ್ಚ - ತುಸತೋರವಾದ ತುಟಿ, ಕೆನ್ನೆ, ಮೂಗು ಇವುಗಳೂ ಉಳ್ಳವನು, ಪಂಚಸ್ನಿಗ್ಧಃ - ಮೃದುವಾದ ವಾಕ್ಕು, ಮುಖ, ಉಗುರು, ಕೂದಲು, ಚರ್ಮ ಇವುಗಳುಳ್ಳವನು, ಅಥವಾ- ನುಣಪಾದ ಕೂದಲು, ಕಣ್ಣು, ಹಲ್ಲು, ಚರ್ಮ, ಅಂಗಾಲು ಇವುಗಳುಳ್ಳವನು, ಅಷ್ಟವಂಶವಾನ್ - ಬೆನ್ನಿನಮೂಳೆ, ಶರೀರ, ಹಸ್ತಗಳು, ಪಾದಗಳು, ಬೆರಳು, ಕೈಗಳು, ಮೂಗು, ಕಣ್ಣು (ಕಿವಿ, ಅಂಡ) ಎಂಬ ಎಂಟು ನೀಳವಾದ ಅವಯವಗಳುಳ್ಳವನು. ॥೧೯॥ ದಶಪದ್ಮಃ - ಮುಖ, ಕಣ್ಣು, ಬಾಯಿ, ನಾಲಗೆ, ತುಟಿ, ದವಡೆ, ಸ್ತನ, ಉಗುರು ಹಸ್ತ, ಪಾದ, ಇವುಗಳಲ್ಲಿ, ಪದ್ಮಾಕಾರವುಳ್ಳವನು, ದಶಬೃಹತ್ - ಎದೆ, ತಲೆ, ಹಣೆ, ಹೆಗ್ಗತ್ತು, ಹೆಗಲು, ಭುಜ ಮತ್ತು ಕೊರಳಿನ ನಡುಭಾಗ, ಹೊಕ್ಕಳ ಇಕ್ಕೆಲ, ಬೆನ್ನು, ಕಂಠಧ್ವನಿ ಎಂಬ ಹತ್ತು ಸ್ಥಾನಗಳಲ್ಲಿ ದೈರ್ಘ್ಯ (ವಿಸ್ತಾರ) ವುಳ್ಳವನು, ತ್ರಿಭಿಃ-ತೇಜಸ್ಸು, ಯಶಸ್ಸು, ಲಕ್ಷ್ಮಿ ಈ ಮೂರರಿಂದ, ವ್ಯಾಪ್ತಃ-

ಹತ್ತು ಆತನಿಗೆ ಉಬ್ಬಾಗಿ ಅಥವಾ ಎತ್ತರವಾಗಿರುವುವು. (೨೪) ಆ ಮಹಾನುಭಾವನ ತೇಜಸ್ಸು, ಯಶಸ್ಸು, ವೈಭವ ಈ ಮೂರೂ ಲೋಕದಲ್ಲೆಲ್ಲ ಹರಡಿರುವುವು (೨೫) ಆ ಪರಿಶುದ್ಧಾತ್ಮನ ಮಾತಾಪಿತೃಕುಲಗಳೆರಡೂ ಪವಿತ್ರತರಗಳೆನಿಸಿ ಲೋಕಪ್ರಸಿದ್ಧವಾಗಿವೆ (೨೬) ಕಂಕುಳು, ಎದೆ, ಮೂಗು ಹೆಗ್ಗತ್ತಿನ ಇಕ್ಕೆಲ, ಹಣೆ, ಬೈತಲೆ ಈ ಆರರಲ್ಲಿಯೂ ಔನ್ನತ್ಯವನ್ನು ಪಡೆದಿದ್ದಾನೆ, (೨೭) ತಲೆಯ ಕೂದಲು, ಮೀಸೆ, ಉಗುರು, ರೋಮ ಚರ್ಮ, ಬೆರಳಗೆಣ್ಣು, ಗುಹ್ಯಾವಯವ, ಬುದ್ಧಿ, ನೋಟ, ಈ ಹತ್ತೂ ಆತನಿಗೆ ಬಹುಸೂಕ್ಷ್ಮವಾಗಿರುವುವು. (೨೮) ಮತ್ತು-ಆ ಮಹಾಪುರುಷನು-ಪೂರ್ವಾಹ್ಣ, ಮಧ್ಯಾಹ್ನ, ಅಪರಾಹ್ಣಗಳೆಂಬ ಮೂರು ಕಾಲಗಳಲ್ಲಿಯೂ ಧರ್ಮಾರ್ಥಕಾಮಗಳ ಸಂಗ್ರಹದಲ್ಲಿ ತತ್ಪರನಾಗಿರತಕ್ಕವನು, ॥೧೯॥ ಎಲೌ ಮಹಾದೇವಿಯೇ! ಆ ಮಹಾನುಭಾವನ ಅಮಾನುಷಗಳೆನಿಸಿದ ಮಹಾಭಾಗ್ಯಲಕ್ಷಣಗಳನ್ನೆಲ್ಲ ವಿವರಿಸಲು ನನ್ನಂಥ ಅಲ್ಪನಿಗೆ ಸಾಧ್ಯವೆ? ಆ ಶ್ರೀರಾಮಚಂದ್ರನು-ಸಾಮಾನ್ಯನೆ? ಸತ್ಯವನ್ನು ಸಂರಕ್ಷಿಸುವುದರಲ್ಲಿಯೂ, ಧರ್ಮಕಾರ್ಯಗಳನ್ನು

ಗ್ರೀವಾಬಾಹ್ವಂಸನಾಭಯಃ । ಪಾರ್ಶ್ವಪೃಷ್ಠಂ ಸ್ವರಾಶ್ಚೇತಿ ವಿಶಾಲಾಸ್ತೇ ಶುಭಪ್ರದಾಃ ॥,, ಎಂದು ಸಾ ,,ಶಿರೋಲಲಾಟೇ ಶ್ರವಣೇ ಗ್ರೀವಾವಕ್ಷಶ್ಚ ಹೃತ್ತಥಾ । ಉದರಂ ಪಾಣಿಪಾದೌ ಚ ಪೃಷ್ಠಂ ದಶಬೃಹಂತಿ ಚ ॥ ಎಂದು ಬ್ರಹ್ಮಪುರಾಣ (೨೪) ,,ತ್ರಿಭಿರ್ವ್ಯಾಪ್ತಿಶ್ಚ ಯಸ್ಯೈಸ್ಯಾತ್ತೇಜಸಾ ಯಶಸಾಶ್ರಿಯಾ ॥,, ಎಂದು ಬ್ರಹ್ಮ ಪುರಾಣ (೨೫) (೨೬) ,,ಕಕ್ಷಃ ಕುಕ್ಷಿಶ್ಚ ವಕ್ಷಶ್ಚ ಘ್ರಾಣಃ ಸ್ಕಂಧೋ ಲಲಾಟಿಕಾ । ಸರ್ವಭೂತೇಷು ನಿರ್ದಿಷ್ಟಾ ಉನ್ನತಾಂಗಾಶ್ಶುಭಪ್ರದಾಃ ॥,, ಎಂದು ವರರುಚಿ. (೨೭) ,,ಸೂಕ್ಷ್ಮಾಣ್ಯಂಗುಳಿಪರ್ವಾಣಿ ಕೇಶಲೋಮ ನಖತ್ವಚಃ । ಶೇಫಾಶ್ಚ ಯೇಷಾಂ ಸೂಕ್ಷ್ಮಾಣಿ ತೇ ನರಾ ದೀರ್ಘಜೀವಿನಃ ॥ ಎಂದು ವರರುಚಿ.

ಷಡುನ್ನತೋ ನವತನು ಸ್ತ್ರಿಭಿ ರ್ವ್ಯಾಪ್ನೋತಿ ರಾಘವಃ ॥೨೦॥
ಸತ್ಯಧರ್ಮಪರ ಶ್ಶ್ರೀಮಾ ನ್ಸಂಗ್ರಹಾನುಗ್ರಹೇ ರತಃ ।
ದೇಶಕಾಲ ವಿಭಾಗಜ್ಞ ಸ್ಸರ್ವಲೋಕ ಪ್ರಿಯಂವದಃ ॥೨೧॥
ಭ್ರಾತಾ ಚ ತಸ್ಯ ದ್ವೈಮಾತ್ರ ಸ್ಸೌಮಿತ್ರಿ ರಪರಾಜಿತಃ ।
ಅನುರಾಗೇಣ ರೂಪೇಣ ಗುಣೈ ಶ್ಚೈವ ತಥಾವಿಧಃ ॥೨೨॥

ತುಂಬಿದವನು, (ಪೂರ್ಣನು) ದ್ವಿಶುಕ್ಲವಾನ್ - ಪರಿಶುದ್ಧವಾದ ಮಾತಾಪಿತೃ ಕುಲವುಳ್ಳವನು, ಷಡುನ್ನತಃ - ಹೊಟ್ಟೆ, ಎದೆ, ಮೂಗು, ಹೆಗಲು, ಹಣೆ, ಬೈತಲೆ, ಎಂಬೀ ಆರರಲ್ಲಿ ಉಬ್ಬನ್ನುಳ್ಳವನು, ನವತನುಃ- ತಲೆಗೂದಲು, ಮೀಸೆ, ಉಗುರು, ಮೈಗೂದಲು, ಚರ್ಮ, ಬೆರಳಗೆಣ್ಣು, ರಹಸ್ಯಾವಯವ, ಬುದ್ಧಿ ಇವುಗಳಲ್ಲಿ ಸೂಕ್ಷ್ಮತೆಯುಳ್ಳವನು, ತ್ರಿಭಿಃ - ಪೂರ್ವಾಹ್ಣ, ಮಧ್ಯಾಹ್ನ, ಅಪರಾಹ್ಣಗಳೆಂಬ ಮೂರು ಕಾಲಗಳಿಂದಲೂ, ರಾಘವಃ - ಶ್ರೀರಾಮನು, ವ್ಯಾಪ್ನೋತಿ - ಧರ್ಮಾರ್ಥಕಾಮಗಳಲ್ಲಿ ವ್ಯಾಪಿಸಿರುವನು ॥೨೦॥ ರಾಮಃ - ಶ್ರೀ ರಾಮನು, ಸತ್ಯ - ಸತ್ಯವಚನದಲ್ಲಿಯೂ, ಧರ್ಮ - ಧರ್ಮಕಾರ್ಯಗಳಲ್ಲಿಯೂ, ಪರಃ - ಆಸಕ್ತನು, ಶ್ರೀಮಾನ್ - ಮಹಾ ಕಾಂತಿಸಂಪನ್ನನು, ಸಂಗ್ರಹ - ಧನಾರ್ಜನೆಯಲ್ಲಿಯೂ, ಅನುಗ್ರಹೆ - ಸಂಪಾದಿಸಿದ ಧನವನ್ನು ಸತ್ಪಾತ್ರದಲ್ಲಿ ವಿನಿಯೋಗಿಸುವುದರಲ್ಲಿಯೂ, ರತಃ - ಆಸಕ್ತನು, ದೇಶ - ಸ್ಥಾನವಿಶೇಷದ, ಕಾಲ - ಸಮಯ ವಿಶೇಷದ, ವಿಭಾಗ - ಹಂಚಿಕೆಯನ್ನು, ಜ್ಞಃ - ಬಲ್ಲವನು, ಸರ್ವಲೋಕ - ಸಮಸ್ತ ಜನರಿಗೂ, ಪ್ರಿಯಂವದಃ - ಹಿತವನ್ನು ಹೇಳತಕ್ಕವನು ॥೨೧॥

ತಸ್ಯ - ಆ ರಾಮನಿಗೆ, ದ್ವೈಮಾತ್ರಃ - ಸವತಿ ತಾಯಿಯ ಮಗನಾದ, ಸೌಮಿತ್ರಿಶ್ಚ - ಲಕ್ಷ್ಮಣನೂ- ಅಪರಾಜಿತಃ - ಹೆರರಿಂದ ಗೆಲ್ಲಲ್ಪಡತಕ್ಕವನಲ್ಲ, ಅನುರಾಗೇಣ - ಹೆರರಲ್ಲಿ ಪ್ರೀತಿತೋರುವುಧರಲ್ಲಿಯೂ, ರೂಪೇಣ - ಸೌಂದರ್ಯದಿಂದಲೂ, ಗುಣೈಶ್ಚೈವ - ಸುಗುಣಗಳಿಂದಲೂ, ತಥಾವಿಧಃ - ಆ ರಾಮನಂತೆಯೇ ಇರುವವನು ॥೨೨॥ ನರಶಾರ್ದೂಲೌ - ಪುರುಷಶ್ರೇಷ್ಠರಾದ, ತೌಉಭೌ - ಆ ಇಬ್ಬರೂ,

ನೆರವೇರಿಸುವುದರಲ್ಲಿಯೂ ಆಸಕ್ತನಾಗಿದಾನೆ. ಅದರಿಂದಲೇ ಶ್ರೀಮಂತನೆನಿಸಿರುವನು ಧನಧರ್ಮಗಳನ್ನು ಆರ್ಜಿಸುವುದರಲ್ಲಿಯೂ, ಹಾಗೆ ಸಂಪಾದಿಸಿದುದನ್ನು ಸತ್ಪಾತ್ರದಲ್ಲಿ ವಿನಿಯೋಗಿಸುವುದರಲ್ಲಿಯೂ ನಿರತನಾಗಿರುವುದರಿಂದ ಸಂಗ್ರಹಾನುಗ್ರಹಗಳಲ್ಲಿ ಧೀರನೆನಿಸಿಕೊಂಡಿರುವನು, ಯಾವದೇಶದಲ್ಲಿ, ಮತ್ತು ಯಾವಕಾಲದಲ್ಲಿ, ಯಾವ ಉಚಿತಕಾರ್ಯಗಳನ್ನು ಮಾಡಬೇಕೆಂಬುದರ ವಿಭಾಗವನ್ನೆಲ್ಲ ಬಲ್ಲವನಾಗಿದಾನೆ. ಸರ್ವದಾ ಸರ್ವ ಪ್ರಾಣಿಗಳಿಗೂ ಹಿತವನ್ನು ಬಯಸಿ ಪ್ರಿಯವನ್ನು ಹೇಳುತಲಿರುವನು ॥೨೧॥ ಎಲೌ ತಾಯೇ ! ಆತನಿಗೆ ಸವತಿ ತಾಯಿ ಮಗನೊಬ್ಬನಿದಾನೆ, ಅತನ ಹೆಸರೇ ಲಕ್ಷ್ಮಣ, ಆತನು ಮಹಾಬಲ ಪರಾಕ್ರಮಸಂಪನ್ನನು, ತನ್ನ ಇಷ್ಟಮಿತ್ರರಲ್ಲಿ ಬಹುಪ್ರೀತಿಯುಳ್ಳವನು, ಇನ್ನು ಹೆಚ್ಚಿಗೆಯಿಂದೇನು ? ಇದುವರೆಗೆ ಹೇಳಿದ ಶ್ರೀರಾಮಚಂದ್ರನ ಸಕಲ ರಾಜರ್ಷಿಲಕ್ಷಣಗಳೂ ಆತನಲ್ಲಿ ನೆಲೆಗೊಂಡಿವೆ. ಯಾವುದೊಂದರ ಕೊರತೆಯೂ ಇಲ್ಲ. ಹೀಗೆ-ರೂಪ, ಅನುರಾಗ, ಗುಣ ಇವುಗಳು ಸಮವಾಗಿ ಒಪ್ಪುತಲಿವೆ ॥೨೨॥ ಇಂತು ಪುರುಷೋತ್ತಮರೆನಿಸಿದ ರಾಮಲಕ್ಷ್ಮಣರಿಬ್ಬರೂ ನಿನ್ನನ್ನು ನೋಡಬೇಕೆಂದು ಅತ್ಯಂತ ಕುತೂಹಲವುಳ್ಳವರಾಗಿದಾರೆ. ಮತ್ತು-ನಿನ್ನನ್ನು ಹುಡುಕುತ ಬಂದವರಾಗಿಯೇ ಋಶ್ಯಮೂಕ ಪರ್ವತದ ಬಳಿ ನಮ್ಮೊಡನೆ

ತಾವುಭೌ ನರಶಾರ್ದೂಲೌ ತ್ವದ್ದರ್ಶನ ಸಮುತ್ಸುಕೌ ।
ವಿಚಿನ್ವಂತೌ ಮಹೀಂ ಕೃತ್ಸ್ನಾಂ ಮಸ್ಮಾಭಿ ರಭಿಸಂಗತೌ ॥೨೩॥
ತ್ವಾಮೇವ ಮಾರ್ಗಮಾಣೌ ತೌ ವಿಚರಂತೌ ವಸುಂಧರಾಮ್ ।
ದದರ್ಶತು ರ್ಮೃಗಪತಿಂ ಪೂರ್ವಜೇ ನಾವರೋಪಿತಮ್ ॥೨೪॥
ಋಶ್ಯಮೂಕಸ್ಯ ಪೃಷ್ಠೇ ತು ಬಹುಪಾದಪ ಸಂಕುಲೇ ।
ಭ್ರಾತು ರ್ಭಯಾರ್ತ ಮಾಸೀನಂ ಸುಗ್ರೀವಂ ಪ್ರಿಯದರ್ಶನಮ್ ॥೨೫॥
ವಯಂತು ಹರಿರಾಜಂ ತಂ ಸುಗ್ರೀವಂ ಸತ್ಯಸಂಗರಂ ।
ಪರಿಚರ್ಯಾಮಹೇ ರಾಜ್ಯಾ ತ್ಪೂರ್ವಜೇನಾವರೋಪಿತಮ್ ॥೨೬॥

ತ್ವದ್ದರ್ಶನ - ನಿನ್ನನ್ನು ನೋಡುವಿಕೆಯಲ್ಲಿ, ಸಮುತ್ಸುಕೌ-ಕುತೂಹಲಿಗಳಾದುದರಿಂದಲೇ, ಕೃತ್ಸ್ನಾಂ-ಸಮಸ್ತವಾದ, ಮಹೀಂ - ಭೂಮಿಯನ್ನು, ವಿಚಿನ್ವನ್ತೌ - ಹುಡುಕುತಲಿರುವವರಾಗಿ, ಅಸ್ಮಾಭಿಃ - ನಮ್ಮಗಳೊಡನೆ, ಅಭಿಸಂಗತೌ - ಸೇರಿದವರಾದರು, ॥೨೩॥ ತ್ವಾಮೇವ - ನಿನ್ನನ್ನೇ, ಮಾರ್ಗಮಾಣೌ - ಹುಡುಕುತಲಿದ್ದ, ತೌ - ಆ ರಾಮಲಕ್ಷ್ಮಣರು, ವಸುಂಧರಾಂ - ಭೂಮಿಯನ್ನು, ವಿಚರನ್ತೌ - ಸಂಚರಿಸುತಲಿರುವವರಾಗಿ, ಪೂರ್ವಜೇನ - ಅಣ್ಣನಾದ ವಾಲಿಯಿಂದ, ಅವರೋಪಿತಂ - ಸಿಂಹಾಸನದಿಂದ ಇಳಿಸಲ್ಪಟ್ಟಿರುವ, ಮೃಗಪತಿಂ- ಕಪಿರಾಜನಾದ ಸುಗ್ರೀವನನ್ನು, ದದರ್ಶತುಃ (ದದೃಶತುಃ) ನೋಡಿದರು ॥ ಪೂರ್ವಜೇನ - ಅಣ್ಣನಾದ ವಾಲಿಯಿಂದ, ರಾಜ್ಯಾತ್ - ಪ್ರಭುತ್ವದ ದೆಸೆಯಿಂದ, ಅವರೋಪಿತಂ - ತಪ್ಪಿಸಲ್ಪಟ್ಟವನಾದ ಕಾರಣವೇ, ಭ್ರಾತುಃ - ಅಣ್ಣನಾದ ವಾಲಿಯು, ಭಯಾರ್ತಂ -ಭಯದಿಂದ ಪೀಡಿತನಾದ, (ಅದರಿಂದಲೇ) ಬಹುಪಾದಪಸಂಕುಲೇ - ಅನೇಕ ವೃಕ್ಷಗಳಿಂದ ತುಂಬಿರುವ, ಋಶ್ಯಮೂಕಸ್ಯ - ಋಶ್ಯಮೂಕಪರ್ವತದ, ಪೃಷ್ಠೇ - ಹಿಂಭಾಗದಲ್ಲಿ, ಆಸೀನಂ - ವಾಸಮಾಡುತಲಿರುವ, ಪ್ರಿಯದರ್ಶಂ - ಇಷ್ಟವಾದ ದರ್ಶನವುಳ್ಳ, ಸತ್ಯಸಂಗರಂ - ಸತ್ಯ ಪ್ರತಿಜ್ಞನಾದ, ಹರಿರಾಜಂ - ಕಪಿಗಳಿಗೆಲ್ಲ ದೊರೆಯಾಗಿರುವ, ತಂಸುಗ್ರೀವಂ - ಆ ಸುಗ್ರೀವನನ್ನು, ವಯಂತು - ನಾವುಗಳಾದರೋ, ಪರಿಚರ್ಯಾಮಹೆ - ಸೇವಿಸುತ್ತ ಇರುತ್ತಿದ್ದೆವು ॥೨೫-೨೬॥ ತತಃ - ಆಮೇಲೆ, ಚೀರವಸನೌ - ನಾರು ಬಟ್ಟೆಗಳನ್ನುಟ್ಟಿದ್ದ,

ಕಲೆತರು ॥೨೨॥ ಅದು ಹೇಗೆ ಎಂಬೆಯೊ? ನಿನ್ನನ್ನು ಹುಡುಕಿಕೊಂಡು ಭೂಮಿಯಲ್ಲೆಲ್ಲ ಅಲೆದು, ಅಣ್ಣನಾದ ವಾಲಿಯಿಂದ ರಾಜ್ಯ ಭ್ರಷ್ಟತೆಯನ್ನು ಹೊಂದಿದ್ದ ಕಪಿರಾಜನಾದ ಸುಗ್ರೀವನನ್ನು ನೋಡಿದರು ॥೨೩॥ ಅದರ ವಿವರವನ್ನೂ ತಿಳಿಸುತ್ತೇನೆ ಕೇಳು.-ಸುಗ್ರೀವನ ಅಣ್ಣನಾದ ವಾಲಿಯು ಪೂರ್ವದಲ್ಲಿ ತನ್ನ ತಮ್ಮನನ್ನು ರಾಜ್ಯದಿಂದ ಅಟ್ಟಿಬಿಟ್ಟನು, ಬಳಿಕ ಸುಗ್ರೀವನು-ತನ್ನನ್ನು ಅಣ್ಣನು ಕೊಂದುಹಾಕುವನೆಂಬ ಭಯದಿಂದ ಬಗೆಬಗೆಯಾದ ಮರಗಿಡ ಬಳ್ಳಿಗಳಿಂದ ನಿಬಿಡವಾಗಿರುವ ಋಶ್ಯಮೂಕ ಪರ್ವತದ ಮೇಲ್ಭಾಗದಲ್ಲಿ ಬಂದು ನಿಂತನು, ಈತನು ಇಷ್ಟ ಮಿತ್ರರಿಗೆಲ್ಲ ಬಹುಬೇಕಾದವನು. ಸತ್ಯಪ್ರತಿಜ್ಞನಾದವನು, ಕಪಿಗಳಿಗೆಲ್ಲ ಒಡೆಯನಾದ ಆತನನ್ನು, ನಾನು ಮೊದಲಾದವರೆಲ್ಲರೂ ಸೇವಿಸುತಲಿದ್ದೇವೆ ॥೨೪,೨೫॥ ನಾರುಬಟ್ಟೆಗಳನ್ನುಟ್ಟು, ಬಿಲ್ಲುಗಳನ್ನು ಕಯ್ಯಲ್ಲಿ ಹಿಡಿದವರಾಗಿ, ನಿನ್ನನ್ನು ಹುಡುಕುತ ಬರುತಲಿದ್ದ ರಾಮಲಕ್ಷ್ಮಣರು ಋಶ್ಯಮೂಕ ಪರ್ವತದ ಹತ್ತಿರದಲ್ಲಿ ರಮಣೀಯವಾದ ಬಂದು ಪ್ರದೇಶಕ್ಕೆ ಬಂದರು॥೨೬॥ ಆಗ-ಕಪಿಪುಂಗವನಾದ ಸುಗ್ರೀವನು ಧನುರ್ಧಾರಿಗಳಾಗಿಯೂ

ತತ ಸ್ತೌ ಚೀರವಸನೌ ಧನುಃಪ್ರವರ ಪಾಣಿನೌ ।
ಋಶ್ಯಮೂಕಸ್ಯ ಶೈಲಸ್ಯ ರಮ್ಯಂ ದೇಶ ಮುಪಾಗತೌ ॥೨೭॥
ಸ ತೌ ದೃಷ್ಟ್ವಾ ನರವ್ಯಾಘ್ರೌ ಧನ್ವಿನೌ ವಾನರರ್ಷಭಃ ।
ಅವಪ್ಲುತೋ ಗಿರೇ ಸ್ತಸ್ಯ ಶಿಖರಂ ಭಯಮೋಹಿತಃ ॥೨೮॥
ತತ ಸ್ಸ ಶಿಖರೇ ತಸ್ಮಿನ್ ವಾನರೇಂದ್ರೋ ವ್ಯವಸ್ಥಿತಃ ।
ತಯೋಃ ಸ್ಸಮೀಪಂ ಮಾಮೇವ ಪ್ರೇಷಯಾಮಾಸ ಸತ್ವರಮ್ ॥೨೯॥
ತಾವಹಂ ಪುರುಷವ್ಯಾಘ್ರೌ ಸುಗ್ರೀವ ವಚನಾ ತ್ಪ್ರಭೂ ।
ರೂಪಲಕ್ಷಣ ಸಂಪನ್ನೌ ಕೃತಾಂಜಲಿ ರುಪಸ್ಥಿತಃ ॥೩೦॥

ಧನುಃಪ್ರವರ ಪಾಣಿನೌ - (ಧನುಃಪ್ರವರಧಾರಿಣೌ) ಉತ್ತಮವಾದ ಬಿಲ್ಲುಗಳನ್ನು ಕಯ್ಯಲ್ಲಿ ಹಿಡಿದಿರುವ, ತೌ - ಆ ರಾಮಲಕ್ಷ್ಮಣರು, ಋಶ್ಯಮೂಕಸ್ಯ - ಋಶ್ಯಮೂಕವೆಂಬ, ಶೈಲಸ್ಯ - ಪರ್ವತದ, ರಮ್ಯಂ - ಮನೋಹರವಾದ, ದೇಶಂ - ಪ್ರದೇಶವನ್ನು ಕುರಿತು, ಉಪಾಗತೌ - ಬಂದರು ॥೨೭॥ ಸಃ - ಆ, ವಾನರರ್ಷಭಃ - ಕಪಿಶ್ರೇಷ್ಠನಾದ ಸುಗ್ರೀವನು, ಧನ್ವಿನೌ - ಬಿಲ್ಲಾಳುಗಳಾಗಿರುವ, ತೌ - ಆ, ನರವ್ಯಾಘ್ರೌ- ಪುರುಷಶ್ರೇಷ್ಠರನ್ನು, ದೃಷ್ಟ್ವಾ - ನೋಡಿ, ಭಯಮೋಹಿತಃ - ಭಯದಿಂದ ಮೈಮರೆತವನಾಗಿ, ತಸ್ಯ- ಆ, ಗಿರೇಃ - ಋಶ್ಯಮೂಕಪರ್ವತದ, ಶಿಖರಂ - ಕೋಡನ್ನು ಕುರಿತು, ಅವಪ್ಲುತಃ - ಹಾರಿದನು ॥ ತತಃ - ಆಮೇಲೆ, ವಾನರೇಂದ್ರಃ - ಕಪಿಶ್ರೇಷ್ಠನಾದ, ಸಃ - ಆ ಸುಗ್ರೀವನು, ತಸ್ಮಿನ್ - ಆ, ಶಿಖರೆ - ಬೆಟ್ಟದ ಕೋಡಿನಲ್ಲಿ, ವ್ಯವಸ್ಥಿತಃ - ನೆಲೆಗೊಂಡವನಾಗಿ, ತಯೋಃ - ಆ ರಾಮಲಕ್ಷ್ಮಣರ, ಸಮೀಪಂ-ಸಮೀಪವನ್ನು ಕುರಿತು, ಮಾಮೇವ - ನನ್ನನ್ನೇ, ಸತ್ವರಂ - ಬೇಗನೆ, ಪ್ರೇಷಯಾಮಾಸ - ಕಳುಹಿದನು ॥೨೯॥ ಅಹಂ - ನಾನು, ಸುಗ್ರೀವವಚನಾತ್ - ಸುಗ್ರೀವನ ಆಜ್ಞೆಯದೆಸೆಯಿಂದ, ಪ್ರಭೂ - ನಿಗ್ರಹಾನುಗ್ರಹಸಮರ್ಥರೂ, ರೂಪ - ಸೌಂದರ್ಯದಿಂದಲೂ, ಲಕ್ಷಣ - ಸಾಮುದ್ರಿಕಲಕ್ಷಣಗಳಿಂದಲೂ, ಸಂಪನ್ನೌ - ಕೂಡಿರುವ, ಪುರುಷವ್ಯಾಘ್ರೌ - ಪುರುಷಶ್ರೇಷ್ಠರೆನಿಸಿದ, ತೌ- ಆ ರಾಮಲಕ್ಷ್ಮಣರನ್ನು, ಉಪಸ್ಥಿತಃ - ಹೊಂದಿದವನಾಗಿ, ಕೃತಾಂಜಲಿಃ ವಂದನೆಯನ್ನೊಪ್ಪಿಸಿದೆನು ॥೩೦॥ ಮಯಾ - ನನ್ನಿಂದ,

ಮಹಾ ವೀರಪುರುಷರಾಗಿಯೂ, ಇರುವ ರಾಮಲಕ್ಷ್ಮಣರನ್ನು ದೂರದಲ್ಲಿ ಕಂಡನು.ಬಳಿಕ ಬಹಳವಾಗಿ ಭಯಪಟ್ಟು ಇತಿಕರ್ತವ್ಯವನ್ನರಿಯದೆ ತಾನಿದ್ದ ಸ್ಥಲವನ್ನು ಬಿಟ್ಟು ಆಬೆಟ್ಟದ ತುದಿಯ ಕೋಡಿನ ಬಳಿಗೆ ಹೊರಟುಹೋದನು ॥೨೭॥ ಮತ್ತು-ತಾನು ಅಲ್ಲಿಯೇ ನಿಂತು, ತಾನು ಅವರಬಳಿಗೆ ಹೋಗಲಾರದೆ, ಅವರ ಕುಲ ಶೀಲ ಮೊದಲಾದವುಗಳನ್ನು ತಿಳಿದು ಬರುವಂತೆ ನನ್ನನ್ನು ಕಳುಹಿಸಿಕೊಟ್ಟನು. ತನ್ನನ್ನು ಕೊಲ್ಲಲಿಕ್ಕಾಗಿ ವಾಲಿಯ ಕಡೆಯಿಂದ ವೇಷಧಾರಿಗಳಾಗಿ ಬಂದಿರುವ ವೀರರಿರ ಬಹುದೆಂದು ಸುಗ್ರೀವನ ಮನದೊಳಗೆ ಭಯವು ಅಂಕುರಿಸಿದ್ದಿತು ॥೨೮॥ ಸುಗ್ರೀವನ ಅಪ್ಪಣೆಯ ಪ್ರಕಾರ ನಾನು ಸದ್ರೂಪಲಕ್ಷಣ ಸಂಪನ್ನರಾಗಿರುವ ಮಹಾಪ್ರಭುಗಳಾದ ಅವರ ಬಳಿಗೆ ಹೋಗಿ ಕೈಜೋಡಿಸಿಕೊಂಡು ನಿಂತೆನು ॥೨೯॥ ಆಮೇಲೆ-ಸುಗ್ರೀವನ ಪೂರ್ವೋತ್ತರ ವೃತ್ತಾಂತಗಳನ್ನೆಲ್ಲ ಅವರಿಗೆ ವಿಜ್ಞಾಪಿಸಿದೆನು. ಇದರಿಂದ ಅವರು ಬಹುಸಂತೋಷ ಚಿತ್ತರಾದರು, ಆ ಹಿಂದೆ ಅವರಿಬ್ಬರನ್ನೂ ನನ್ನ ಬೆನ್ನಿನಮೇಲೆ ಕೂಡಿಸಿಕೊಂಡು ಸುಗ್ರೀವನಿದ್ದ ಸ್ಥಲಕ್ಕೆ ತೆರಳಿ ॥ ೩೦ ॥ ಮಹಾತ್ಮನಾದ

ತೌ ಪರಿಜ್ಞಾತ ತತ್ತ್ವಾರ್ಥೌ ಮಯಾ ಪ್ರೀತಿ ಸಮನ್ವಿತೌ ।
ಪೃಷ್ಠ ಮಾರೋಪ್ಯ ತಂ ದೇಶಂ ಪ್ರಾಪಿತೌ ಪುರುಷರ್ಷಭೌ ॥೩೧॥
ನಿವೇದಿತೌ ಚ ತತ್ತ್ವೇನ ಸುಗ್ರೀವಾಯ ಮಹಾತ್ಮನೇ ।
ತಯೋ ರನ್ಯೋನ್ಯ ಸಲ್ಲಾಪಾ ದ್ಭೃಶಂ ಪ್ರೀತಿ ರಜಾಯತ ॥೩೨॥
ತತ ಸ್ತೌ ಪ್ರೀತಿಸಂಪನ್ನೌ ಹರೀಶ್ವರ ನರೇಶ್ವರೌ ।
ಪರಸ್ಪರ ಕೃತಾಶ್ವಾಸೌ ಕಥಯಾ ಪೂರ್ವವೃತ್ತಯಾ ॥೩೩॥
ತತ ಸ್ಸ ಸಾಂತ್ವಯಾಮಾಸ ಸುಗ್ರೀವಂ ಲಕ್ಷ್ಮಣಾಗ್ರಜಃ ।
ಸ್ತ್ರೀಹೇತೋ ರ್ವಾಲಿನಾ ಭ್ರಾತ್ರಾ ನಿರಸ್ತ ಮುರುತೇಜಸಾ ॥೩೪॥

---

ಪರಿಜ್ಞಾತ - ತಿಳಿಯಲ್ಪಟ್ಟ, ತತ್ತ್ವಾರ್ಥೌ - ವಾಸ್ತವವಾದ ಸಂಗತಿಯುಳ್ಳವರೂ, ಪ್ರೀತಿಸಮನ್ವಿತೌ - ಸಂತೋಷದಿಂದೊಡಗೂಡಿದವರೂ ಆದ, ಪುರುಷರ್ಷಭೌ - ಪುರುಷಶ್ರೇಷ್ಠರೆನಿಸಿರುವ, ತೌ - ಆ ರಾಮಲಕ್ಷ್ಮಣರು, ಪೃಷ್ಠಂ - ನನ್ನ ಬೆನ್ನನ್ನು, ಆರೋಪ್ಯ - ಏರಿಸಿಕೊಂಡು, ತಂ - ಆ ಸುಗ್ರೀವನಿರುವ, ದೇಶಂ - ಸ್ಥಲವನ್ನು, ಪ್ರಾಪಿತೌ - ಹೊಂದಿಸಲ್ಪಟ್ಟರು ॥೩೧॥ (ಮಯಾ - ನನ್ನಿಂದ) ತೌ - ಆ ರಾಮಲಕ್ಷ್ಮಣರು, ಮಹಾತ್ಮನೆ - ಮಹಾನುಭಾವನಾದ, ಸುಗ್ರೀವಾಯ - ಸುಗ್ರೀವನಿಗೆ, ತತ್ತ್ವೇನ - ಯಥಾರ್ಥವಾದ ರೀತಿಯಿಂದ, ನಿವೇದಿತೌ - ತಿಳಿಸಲ್ಪಟ್ಟರು, (ತತಃ - ಆಮೇಲೆ) ಅನ್ಯೋನ್ಯ ಸಲ್ಲಾಪಾತ್ - ಪರಸ್ಪರ ಸಂಭಾಷಣೆಯಿಂದ, ತಯೋಃ - ಆ ರಾಮಲಕ್ಷ್ಮಣರಿಗೆ, ಭೃಶಂ - ವಿಶೇಷವಾಗಿ, ಪ್ರೀತಿಃ - ವಿಶ್ವಾಸವು, (ಸಂತೋಷವು) ಅಜಾಯತ - ಉಂಟಾಯಿತು, ॥೩೨॥ ತತಃ - ಆ ಹಿಂದೆ, ಪ್ರೀತಿಸಂಪನ್ನೌ - ಸಂತೋಷದಿಂದೊಡಗೂಡಿದ, ಹರೀಶ್ವರನರೇಶ್ವರೌ - ಸುಗ್ರೀವರಾಮಚಂದ್ರರು, ಪೂರ್ವವೃತ್ತಯಾ - ಹಿಂದೆನಡೆದ, ಕಥಯಾ - ಕಥೆಯಿಂದ, ಪರಸ್ಪರ - ಅನ್ಯೋನ್ಯವಾಗಿ, ಕೃತಾಶ್ವಾಸೌ - ಸಮಾಧಾನಮಾಡಲ್ಪಟ್ಟವರಾದರು ॥೩೩॥ ತತಃ - ಅನಂತರದಲ್ಲಿ, ಲಕ್ಷ್ಮಣಾಗ್ರಜಃ - ಶ್ರೀ ರಾಮನು, ಸ್ತ್ರೀಹೇತೋಃ - ಸ್ತ್ರೀನಿಮಿತ್ತದಿಂದ, ಉರುತೇಜಸಾ - ಹೆಚ್ಚಿದ ಪ್ರತಾಪವುಳ್ಳ, ಭ್ರಾತ್ರಾ - ಅಣ್ಣನಾದ, ವಾಲಿನಾ - ವಾಲಿಯಿಂದ, ನಿರಸ್ತಂ - ತಿರಸ್ಕರಿಸಲ್ಪಟ್ಟ, (ಓಡಿಸಲ್ಪಟ್ಟ) ಸುಗ್ರೀವಂ - ಸುಗ್ರೀವನನ್ನು, ಸಾಂತ್ವಯಾಮಾಸ - ಸಮಾಧಾನಪಡಿಸಿದನು ॥ ೩೪ ॥

---

ಸುಗ್ರೀವನಿಗೆ ರಾಮಲಕ್ಷ್ಮಣರ ವೃತ್ತಾಂತವನ್ನೆಲ್ಲ ಯಥಾರ್ಥವಾಗಿ ವಿಜ್ಞಾಪಿಸಲು, ಅವರವರಿಗೆ ಸಂಭಾಷಣೆಯು ನಡೆದು, ಪರಸ್ಪರವಾಗಿ ಪ್ರೀತಿಯು ಹೆಚ್ಚಿತು ॥೩೧॥ ಹರಿಗಳಿಗೂ ನರರಿಗೂ ಒಡೆಯರೆನಿಸಿದ ಆ ರಾಮ ಸುಗ್ರೀವರು ಸಂತುಷ್ಟ ಚಿತ್ತರಾಗಿ, ಒಬ್ಬರೊಡನೊಬ್ಬರು ತಂತಮ್ಮ ಪೂರ್ವ ವೃತ್ತಾಂತಗಳನ್ನು ಹೇಳಿಕೊಂಡು, ವಿಶ್ವಾಸ ಸಮಾಧಾನಗಳನ್ನು ಹೊಂದುತಲಿದ್ದರು ॥೩೨॥ ಬಳಿಕ- ಶ್ರೀರಾಮಚಂದ್ರನು- ಸುಗ್ರೀವನನ್ನು ಅಣ್ಣನಾದ ವಾಲಿಯು ಸ್ತ್ರೀನಿಮಿತ್ತದಿಂದ ರಾಜ್ಯಭ್ರಷ್ಟನನ್ನಾಗಿ ಮಾಡಿ ಓಡಿಸಿದನೆಂಬ ಸಂಗತಿಯನ್ನು ತಿಳಿದು, ಸುಗ್ರೀವನನ್ನು ಬಹಳವಾಗಿ ಸಮುದಾಯಿಸಿದನು ॥೩೩॥ ತದನಂತರದಲ್ಲಿ-ಕ್ಲೇಶವಿಲ್ಲದ ಕೆಲಸವನ್ನು ಮಾಡುವ ಧರ್ಮಾತ್ಮನೂ, ಶೂರನೂ ಆದ ಲಕ್ಷ್ಮಣನು-ನಿನ್ನನ್ನು ಕಾಣದೆ ಹೋಗಿರುವುದರಿಂದ ರಾಮನಿಗುಂಟಾಗಿರುವ ಶೋಕವನ್ನೆಲ್ಲ ಕಪಿನಾಯಕನಾದ ಸುಗ್ರೀವನಿಗೆ ಅರುಹಿದನು ॥೩೪॥ ಲಕ್ಷ್ಮಣನು ಹೇಳಿದ ವಚನವನ್ನಾಲಿಸಿದ ವಾನರೇಂದ್ರನು, ರಾಹುವಿನ ಬಾಯಿಗೆ ಸಿಲುಕಿದ ಸೂರ್ಯನಂತೆ ಕಳೆಗುಂದಿದವನಾಗಿ, ಬಹುತರವಾದ ವ್ಯಸನಕ್ಕೆ ಈಡಾದನು.

ತತ ಸ್ತ್ವನ್ನಾಶಜಂ ಶೋಕಂ ರಾಮಸ್ಯಾ ಕ್ಲಿಷ್ಟಕರ್ಮಣಃ ।
ಲಕ್ಷ್ಮಣೋ ವಾನರೇಂದ್ರಾಯ ಸುಗ್ರೀವಾಯ ನ್ಯವೇದಯತ್ ॥೪೫॥
ಸ ಶ್ರುತ್ವಾ ವಾನರೇಂದ್ರ ಸ್ತು ಲಕ್ಷ್ಮಣೇ ನೇರಿತಂ ವಚಃ ।
ತದಾಸೀ ನ್ನಿಷ್ಪ್ರಭೋಽತ್ಯರ್ಥಂ ಗ್ರಹಗ್ರಸ್ತ ಇವಾಂಶುಮಾನ್ ॥೪೬॥
ತತ ಸ್ತ್ವದ್ಗಾತ್ರ ಶೋಭೀನಿ ರಕ್ಷಸಾ ಹ್ರಿಯಮಾಣಯಾ ।
ಯಾ ನ್ಯಾಭರಣ ಜಾಲಾನಿ ಪಾತಿತಾನಿ ಮಹೀತಲೇ ॥೪೭॥
ತಾನಿ ಸರ್ವಾಣಿ ರಾಮಾಯ ಆನೀಯ ಹರಿಯೂಥಪಾಃ ।
ಸಂಹೃಷ್ಟಾ ದರ್ಶಯಾಮಾಸು ರ್ಗತಿಂ ತು ನ ವಿದು ಸ್ತವ ॥೪೮॥

---

ತತಃ - ತರುವಾಯ, ಲಕ್ಷ್ಮಣಃ - ಸೌಮಿತ್ರಿಯು, ತ್ವನ್ನಾಶಜಂ - ನೀನು ಕಾಣದೆ ಹೋದ ನಿಮಿತ್ತದಿಂದುಂಟಾದ, ಅಕ್ಲಿಷ್ಟಕರ್ಮಣಃ - ಕ್ಲೇಶವಿಲ್ಲದ ಕೆಲಸವಮಾಡುವ, (ಪರಾಕ್ರಮಶಾಲಿಯಾದ) ರಾಮಸ್ಯ - ಶ್ರೀ ರಾಮನ, ಶೋಕಂ - ದುಃಖವನ್ನು, ವಾನರೇಂದ್ರಾಯ - ಕಪಿರಾಜನಾದ ಸುಗ್ರೀವನಿಗೆ, ನ್ಯವೇದಯತ್ - ತಿಳಿಸಿದನು ॥೪೫॥ ವಾನರೇಂದ್ರಃ - ಕಪಿರಾಜನಾದ, ಸಃ - ಆ ಸುಗ್ರೀವನು, ಲಕ್ಷ್ಮಣೇನ - ಸೌಮಿತ್ರಿಯಿಂದ, ಈರಿತಂ - ಹೇಳಲ್ಪಟ್ಟ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ತದಾ - ಆಗ, ಗ್ರಹಗ್ರಸ್ತಃ - ರಾಹುಗ್ರಹದಿಂದ ಹಿಡಿಯಲ್ಪಟ್ಟ, ಅಂಶುಮಾನಿವ - ಸೂರ್ಯನಂತೆ, ಅತ್ಯರ್ಥಂ - ವಿಶೇಷವಾಗಿ ನಿಷ್ಪ್ರಭಃ - ಕಳೆಗುಂದಿದವನಾಗಿ, ಆಸೀತ್ - ಆದನು ॥೪೬॥

ತತಃ - ಅನಂತರದಲ್ಲಿ, ರಕ್ಷಸಾ - ರಾವಣನಿಂದ, ಹ್ರಿಯಮಾಣಯಾ - ಒಯ್ಯಲ್ಪಡುತಲಿರುವ, (ತ್ವಯಾ ನಿನ್ನಿಂದ) ತ್ವದ್ಗಾತ್ರಶೋಭೀನಿ - ನಿನ್ನ ಮೈಮೇಲೆ ಬೆಳಗುತಲಿದ್ದ, ಯಾನಿ - ಯಾವ, ಆಭರಣಜಾಲಾನಿ - ಒಡವೆಗಳ ಸಮೂಹಗಳು, ಮಹೀತಲೆ - ನೆಲದಲ್ಲಿ, ಪಾತಿತಾನಿ - ಕೆಡಹಲ್ಪಟ್ಟವೋ, ಸರ್ವಾಣಿ - ಸಮಸ್ತವಾದ, ತಾನಿ - ಆ ಒಡವೆಗಳೆಲ್ಲವನ್ನೂ, ಆನೀಯ - ತಂದು, ಸಂಹೃಷ್ಟಾಃ - ಸಂತೋಷಪಟ್ಟ, ಹರಿಯೂಥಪಾಃ - ಕಪಿಪುಂಗವರು, ರಾಮಾಯ - ಶ್ರೀ ರಾಮನಿಗೆ, ದರ್ಶಯಾಮಾಸುಃ-ತೋರಿಸಿದರು, ತವ - ನಿನ್ನ, ಗತಿಂತು - ಸ್ಥಾನವನ್ನಾದರೋ, ನವಿದುಃ - ತಿಳಿದವರಾಗಿರಲಿಲ್ಲ, ॥೪೭-೪೮॥

---

॥ ೪೫ ॥ ಆದೇಶವಾಯಲ್ಲಿ - ಹಿಂದೆ ರಾವಣನು ನಿನ್ನನ್ನು ಕೊಂಡೊಯ್ಯುತಲಿರುವಾಗ, ನೀನು ನಿನ್ನ ಮೈಮೇಲೆ ಧರಿಸಿ ಶೋಭಿಸುತಲಿದ್ದ ಯಾವ ಯಾವ ಒಡವೆಗಳನ್ನು ತೆಗೆದು ಕೆಳಗೆ ಕೆಡಹಿ ಇದ್ದೆಯೋ, ಅವುಗಳನ್ನೆಲ್ಲ ತಂದು ಸಂತುಷ್ಟರಾದ ಕಪಿಗಳು ಶ್ರೀರಾಮಚಂದ್ರನಿಗೆ ಒಪ್ಪಿಸಿ ತೋರಿಸಿದರು ಆದರೆ ನೀನು ಎಲ್ಲಿಗೆ ತೆರಳಿದೆ ? ಮತ್ತು ಎಲ್ಲಿ ಇದ್ದೀಯೆ ? ಎಂಬ ಸಂಗತಿಯನ್ನು ಅವರೊಬ್ಬರೂ ಅರಿತವರಾಗಿರಲಿಲ್ಲ ॥೪೬,೪೭॥ ಎಲೌ ಮಾತೆಯೇ ! ನೀನು ಆಭರಣಗಳನ್ನು ಬಿಸುಟಕಾಲದಲ್ಲಿ ಗಲಗಲವೆಂಬ ಸದ್ದಿನಿಂದ ಬಿದ್ದ ಆ ಒಡವೆಗಳನ್ನೆಲ್ಲ ಮೊಟ್ಟಮೊದಲು ನಾನೇ ಕಂಡು ತಂದವನು, ಅವುಗಳನ್ನು ಸುಗ್ರೀವನು ಜೋಪಾನವಾಗಿ ಇಡಿಸಿ ಇದ್ದು ಆಗ ಅವುಗಳನ್ನು ತರಿಸಿಕೊಟ್ಟನು, ಶ್ರೀರಾಮನುಅವುಗಳನ್ನು ನೋಡುತ್ತಿರುವಾಗಲೇ ನಿನ್ನ ನೆನಪುಂಟಾಗಿ ಅಪಾರವಾದ ಚಿಂತೆಗೀಡಾದನು॥೪೮॥ಆದರೆ-ಸುಗ್ರೀವನೊಪ್ಪಿಸಿದ ಮೇಲಾದ ಆಭರಣಗಳು ನಿನ್ನ ಮೈಮೇಲಿದ್ದು, ರಾಮನು ನೋಡಿದ್ದರೆ, ಅಥವಾ ನೀನು ಸಮೀಪದಲ್ಲಿರುವಾಗ ನೋಡಿದ್ದರೆಶ್ರೀರಾಮನು ಆನಂದಭರಿತನಾಗುತಲಿದ್ದನು.

ತಾನಿ ರಾಮಾಯ ದತ್ತಾನಿ ಮಯೈವೋಪಹೃತಾನಿ ಚ।
ಸ್ವನವನ್ತ್ಯವಕೀರ್ಣಾನಿ ತಸ್ಮಿನ್ವಿಗತಚೇತಸಿ ॥೩೯॥
ತಾನ್ಯಂಕೇ ದರ್ಶನೀಯಾನಿ ಕೃತ್ವಾ ಬಹುವಿಧಂ ತವ।
ತೇನ ದೇವಪ್ರಕಾಶೇನ ದೇವೇನ ಪರಿದೇವಿತಂ ॥೪೦॥
ಪಶ್ಯತಸ್ತಾನಿ ರುದತಸ್ತಾಮ್ಯತಶ್ಚ ಪುನಃಪುನಃ।
ಪ್ರಾದೀಪಯನ್ದಾಶರಥೇಸ್ತಾನಿ ಶೋಕಹುತಾಶನಂ ॥೪೧॥
ಶಯಿತಂ ಚ ಚಿರಂ ತೇನ ದುಃಖಾರ್ತೇನ ಮಹಾತ್ಮನಾ।
ಮಯಾಪಿ ವಿವಿಧೈರ್ವಾಕ್ಯೈಃ ಕೃಚ್ಛ್ರಾದುತ್ಥಾಪಿತಃ ಪುನಃ॥೪೨॥

---

(ಪೂರ್ವಂ - ಆಭರಣಗಳು ಕೆಳಗೆ ಬೀಳುವಾಗ) ಮಯೈವ - ನನ್ನಿಂದಲೇ, ಉಪಹೃತಾನಿ - ತರಲ್ಪಟ್ಟ, ಸ್ವನವನ್ತಿ - ಬೀಳುವಾಗ ದನಿಗೆಯ್ಯುತಲಿದ್ದ, ಅವಕೀರ್ಣಾನಿ - ನಿನ್ನಿಂದ ಬೀಸಾಡಲ್ಪಟ್ಟ, ತಾನಿ - ಆ ಆಭರಣಗಳು, ತಸ್ಮಿನ್ - ಆ ರಾಮನು, ವಿಗತಚೇತಸಿ (ಸತಿ) ಒಡವೆಗಳನ್ನು ನೋಡಿ ವ್ಯಾಮೋಹಿತನಾಗುತ್ತಿರಲಾಗಿ, (ಸುಗ್ರೀವೇಣ - ಸುಗ್ರೀವನಿಂದ) ರಾಮಾಯ- ರಾಮನಿಗೆ, ದತ್ತಾನಿ - ಕೊಡಲ್ಪಟ್ಟುವು॥೩೯॥ ದೇವಪ್ರಕಾಶೇನ - ದೇವತೆಗಳಂತೆ ಹೊಳೆಯುತಲಿರುವ, ದೇವೇನ - ಪ್ರಭುವಾದ, ತೇನ - ಆ ರಾಮನಿಂದ, ತಾನಿ - ಆ ಆಭರಣಗಳನ್ನು, ತವ - ನಿನ್ನ, ಅಂಕೇ - ಸಮೀಪದಲ್ಲಿ, ದರ್ಶನೀಯಾನಿ - ನೋಡಲ್ಪಡತಕ್ಕವುಗಳನ್ನಾಗಿ, ಕೃತ್ವಾ - ಭಾವಿಸಿ, ಬಹುವಿಧಂ - ಅನೇಕ ಪ್ರಕಾರವಾಗಿ, ಪರಿದೇವಿತಂ - ದುಃಖಿಸೋಣವಾಯಿತು ॥೪೦॥ ತಾನಿ - ಆ ಆಭರಣಗಳನ್ನೂ, ಪಶ್ಯತಃ - ನೋಡುತಲಿರುವನಾದ, ಕಾರಣವೇ ರುದತಃ - ಅಳುತಲಿರುವ, ತಾಮ್ಯತಶ್ಚ - ಬಳಲುತಲೂ ಇರತಕ್ಕ, ದಾಶರಥೇಃ - ಶ್ರೀ ರಾಮನ, ಶೋಕಹುತಾಶನಂ - ದುಃಖಾಗ್ನಿಯನ್ನು, ತಾನಿ - ಆ ಆಭರಣಗಳು, ಪುನಃಪುನಃ - ಬಾರಿಬಾರಿಗೂ, ಪ್ರಾದೀಪಯನ್ - ಹೊಟ್ಟೆಯನ್ನುರಿಸುತಲಿದ್ದುವು ॥೪೧॥ ದುಃಖಾರ್ತೇನ - ಶೋಕದಿಂದ ಪೀಡಿತನಾದ, ಮಹಾತ್ಮನಾ - ಧೀರನಾದ, ತೇನ - ಆ ರಾಮನಿಂದ, ಚಿರಂ - ಬಹಳಹೊತ್ತಿನವರೆಗೂ, ಶಯಿತಂ - ಮೈಮರೆತು ಮಲಗೋಣವಾಯಿತು, ಮಯಾಪಿ - ನನ್ನಿಂದಲೂ, ವಿವಿಧೈಃ - ನಾನಾವಿಧಗಳಾದ, ವಾಕ್ಯೈಃ - ಸಮಾಧಾನವಚನಗಳಿಂದ, ಕೃಚ್ಛ್ರಾತ್ - ಬಹುಕಷ್ಟದಿಂದ, ಪುನಃ - ಮರಳಿ, ಉತ್ಥಾಪಿತಃ - ಎಚ್ಚರಗೊಳಿಸಲ್ಪಟ್ಟನು ॥೪೨॥ ಮಹಾಬಾಹುಃ-ಹೇರಳವಾದ ತೋಳು ಬಲವುಳ್ಳ, ಸಃರಾಘವಃ- ಆ ಶ್ರೀರಾಮನು,

---

ಹಾಗಿಲ್ಲಗುದರಿಂದಲೇ ಮಹಾಧೀರನಾದ ದೇವನಾದರೂ ಧೈರ್ಯಗುಂದಿ ನಿನ್ನನ್ನು ನೆನಪುಕೊಂಡು ದುಃಖಕ್ಕೀಡಾದನು ॥೩೯॥ ಅಡಿಗಡಿಗೆ ನೋಡುತಲೂ, ನಿನ್ನನ್ನು ನೆನೆಯುತಲೂ, ಪುನಃ ಪುನಃ ಅಳುತ್ತಲೂ, ಮರಮರಳಿ ಬಳಲುತಲೂ ಇರುವ ರಾಮನಿಗೆ ಆ ಆಭರಣಗಳು ಹೃದಯದಲ್ಲಿ ಶೋಕಾಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿದುವು ॥೪೦॥ ಎಲೌ ತಾಯೇ ! ಹೀಗೆ ಮಹಾತ್ಮನಾದ ಆ ರಾಮನು ಬಹುವಿಧವಾಗಿ ದುಃಖಿಸಿದುಃಖಿಸಿ ಹಾಗೆಯೇ ಮೈಮರೆತು ಮೂರ್ಛೆಬಿದ್ದನು, ಆಗ-ನಾನೂ ಸುಗ್ರೀವಮೊದಲಾದವರೂ ಆತನ ದೀನದೆಸೆಯನ್ನು ನೋಡಲಾರದೆ ಬಹಳವಾಗಿ ವ್ಯಥೆಪಟ್ಟು ದುಃಖೋಪಶಮನವನ್ನುಂಟುಮಾಡುವ ಮೃದುಮಧುರವಾದ ಮಾತುಗಳಿಂದ ಸ್ವಲ್ಪಮಟ್ಟಿಗೆ ಸಮಾಧಾನಿಸಿದೆವು ॥೪೧॥ ಬಳಿಕ ರಾಮಲಕ್ಷ್ಮಣರಿಬ್ಬರೂ ಆ ಆಭರಣಗಳನ್ನು ನೋಡಿ, ಒಂದೊಂದನ್ನೂ ಸುಗ್ರೀವನಿಗೆ ತೋರಿಸಿ,

ತಾನಿ ದೃಷ್ಟ್ವಾ ಮಹಾಬಾಹು ರ್ದರ್ಶಯಿತ್ವಾ ಮುಹುರ್ಮುಹುಃ ।
ರಾಘವ ಸ್ಸಹಸೌಮಿತ್ರಿಃ ಸುಗ್ರೀವೇ ಸ ನ್ಯವೇದಯತ್ ॥೪೨॥
ನ ತವಾದರ್ಶನಾ ದಾರ್ಯೇ ರಾಘವಃ ಪರಿತಪ್ಯತೇ ।
ಮಹತಾ ಜ್ವಲತಾ ನಿತ್ಯ ಮಗ್ನಿನೇ ವಾಗ್ನಿಪರ್ವತಃ ॥೪೩॥
ತ್ವತ್ಕೃತೇ ತ ಮನಿದ್ರಾ ಚ ಶೋಕ ಶ್ಚಿಂತಾ ಚ ರಾಘವಂ ।
ತಾಪಯಂತಿ ಮಹಾತ್ಮಾನ ಮಗ್ನ್ಯಗಾರ ಮಿವಾಗ್ನಯಃ ॥೪೪॥
ತವಾದರ್ಶನ ಶೋಕೇನ ರಾಘವಃ ಪ್ರವಿಚಾಲ್ಯತೇ ।

ಸಹಸೌಮಿತ್ರಿಃ - ಲಕ್ಷ್ಮಣ ನಂದೊಡಗೂಡಿದವನಾಗಿ ; ತಾನಿ - ಆ ಆಭರಣಗಳನ್ನು, ದೃಷ್ಟ್ವಾ- ನೋಡಿ, ಮುಹುರ್ಮುಹುಃ - ಅಡಿಗಡಿಗೂ, ದರ್ಶಯಿತ್ವಾ - ತೋರುತ್ತಾ, ಸುಗ್ರೀವೆ - ಸುಗ್ರೀವನಹಸ್ತ ದಲ್ಲಿ, ನ್ಯವೇದಯತ್ - ಇಟ್ಟನು ॥೪೨॥ ಆರ್ಯೇ - ಎಲೌ ಪೂಜ್ಯಳೇ! ಸಃರಾಘವಃ - ಆಶ್ರೀರಾಮನು, ತವ- ನಿನ್ನ, ಅದರ್ಶನಾತ್ - ದರ್ಶನವಿಲ್ಲದಿರುವುದರ ದೆಸೆಯಿಂದ, ನಿತ್ಯಂ - ಯಾವಾಗಲೂ, ಜ್ವಲತಾ - ಉರಿ ಯುತಲಿರುವ, ಮಹತಾ - ಅಪಾರವಾದ, ಅಗ್ನಿನಾ - ದುಃಖಾಗ್ನಿಯಿಂದ, ಅಗ್ನಿಪರ್ವತಇವ - ಬೆಂಕಿಯ ಬೆಟ್ಟದಹಾಗೆ, ಪರಿತಪ್ಯತೇ - ಸಂತಪಿಸುತಲಿದಾನೆ ॥೪೩॥ ತ್ವತ್ಕೃತೇ - ನಿನ್ನನಿಮಿತ್ತವಾಗಿ, ಅನಿದ್ರಾಚ - ಜಾಗರವೂ, ಶೋಕಃ - ರೋದನವು, ಚಿನ್ತಾ ಚ - ಮನೋವ್ಯಥೆಯೂ, ಮಹಾತ್ಮಾನಂ - ಮಹಾಧೈ ರ್ಯವುಳ್ಳ, ತಂ - ಆ, ರಾಘವಂ - ಶ್ರೀರಾಮನನ್ನು, ಅಗ್ನಯಃ - ಆಹವನೀಯ ಮೊದಲಾದ ಮೂರುಅಗ್ನಿ ಗಳು, ಅಗ್ನ್ಯಗಾರಮಿವ - ಅಗ್ನಿಹೋತ್ರಗೃಹವನ್ನು ಹೇಗೋಹಾಗೆ, ತಾಪಯನ್ತಿ - ತಾಪಗೊಳಿಸುತ ಲಿವೆ ॥೪೪॥ ರಾಘವಃ - ಶ್ರೀರಾಮನು, ತವ - ನಿನ್ನನ್ನು, ಅದರ್ಶನಶೋಕೇನ -ನೋಡದಿರುವ ದುಃಖದಿಂದ,

ಅವುಗಳ ಕುರುಹುಗಳನ್ನೆಲ್ಲ ತಿಳಿಸಿ ಉಕ್ಕಳಿಸಿ ಬರುವ ದುಃಖದಿಂದ ಅವುಗಳನ್ನು ಸುಗ್ರೀವನ ವಶಕ್ಕೆ ಕೊಟ್ಟರು ॥೪೨॥ ಎಲೌ ಪೂಜ್ಯಳೇ ! ಆ ಶ್ರೀರಾಮನು-ನಿನ್ನನ್ನು ಕಾಣದಿರುವುದರಿಂ ದ ಉರಿಯುತಲಿರುವ *ಅಗ್ನಿ ಪರ್ವತವು ಹೇಗೋಹಾಗೆ ನಿತ್ಯವೂ ಕುದಿಯುತಲಿರುವ ದುಃ ಖಾಗ್ನಿಯಿಂದ ಬಹಳವಾಗಿ ಸಂತಾಪಪಡುತಲಿದಾನೆ ॥೪೩॥ ನಿನ್ನ ನಿಮಿತ್ತದಿಂದಲೇ ಆಮ ಹಾತ್ಮನಿಗೆ ನಿದ್ರೆಯೇ ಇಲ್ಲ ಶೋಕವು ಹೆಚ್ಚಿ,ಮನಸ್ಸಿನ ಸಂಕಟವೂ ಹೆಚ್ಚುತಲಿದೆ,ಆದಕಾ ರಣ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ ಅಗ್ನಿಗಳು ಅಗ್ನಿಹೋತ್ರ ಗೃಹಕ್ಕೆ ತಾಪವನ್ನುಂಟುಮಾಡುವ ಹಾಗೆ, ಅಗ್ನಿಗೆ ಸಮಾನವಾದ ಜಾಗರ, ಶೋಕ, ಚಿಂತೆ ಇವು ಗಳು ಆತನಿಗೆ ಅಪರಿಮಿತ ಪರಿತಾಪವನ್ನುಂಟುಮಾಡುತಲಿವೆ ॥೪೪॥ ಎಲೌ ದೇವಿಯೇ ! ಆ ರಾಮಚಂದ್ರನು ಮಹಾಧೈರ್ಯಗುಣ ಸಂಪನ್ನನು, ಆದರೂ ನಿನ್ನನ್ನು ಕಾಣದಿರುವುದರಿಂದ ಭೂಕಂಪದಮೂಲಕ ದೊಡ್ಡಬೆಟ್ಟವು ಹೇಗೋ ಹಾಗೆ ಚಿಂತಾಶೋಕದಿಂದ ಚಲಿಸುತಲಿ ದಾನೆ ॥೪೫॥ ಎಲೌ ರಾಜಪುತ್ರಿಯೇ ! ರಾಮನು ನಿನ್ನನ್ನು ಕಾಣದಿರುವ ದುಃಖವನ್ನು ತಾಳಲಾರದೆ ಅಲ್ಲಲ್ಲಿರುವ ಅಂದವಾದ ಕಾಡುಗಳೊಳಗೂ, ನದಿಗಳ ಹತ್ತಿರದಲ್ಲಿಯೂ,

* ಇದು ಮೇರುಪರ್ವತದ ಶಿಖರದಲ್ಲಿದೆ "ಅತ್ರಮಾಲ್ಯವಶಶೃಂಗೆ ದೃಶ್ಯತೆ ಹವ್ಯವಾಟ್ಸದಾ। ನಾಮ್ನಾ ಸಂವರ್ತಕೋನಾಮ ಕಾಲಾಗ್ನಿರ್ಭರತರ್ಷಭ ॥" ಎಂದು ಮಹಾಭಾರತ.

ಮಹತಾ ಭೂಮಿಕಂಪೇನ ಮಹಾನಿವ ಶಿಲೋಚ್ಚಯಃ ॥೪೬॥
ಕಾನನಾನಿ ಸುರಮ್ಯಾಣಿ ನದೀಃ ಪ್ರಸ್ರವಣಾನಿ ಚ ।
ಚರನ್ನ ರತಿ ಮಾಪ್ನೋತಿ ತ್ವಾ ಮಪಶ್ಯನ್ನೃಪಾತ್ಮಜೇ ॥೪೭॥
ಸ ತ್ವಾಂ ಮನುಜ ಶಾರ್ದೂಲಃ ಕ್ಷಿಪ್ರಂ ಪ್ರಾಪ್ಸ್ಯತಿ ರಾಘವಃ ।
ಸಮಿತ್ರ ಬಾಂಧವಂ ಹತ್ವಾ ರಾವಣಂ ಜನಕಾತ್ಮಜೇ ॥೪೮॥
ಸಹಿತೌ ರಾಮಸುಗ್ರೀವಾ ವುಭಾ ವಕುರುತಾಂ ತದಾ ।
ಸಮಯಂ ವಾಲಿನಂ ಹಂತುಂ ತವ ಚಾನ್ವೇಷಣಂ ತದಾ ॥೪೯॥
ತತ ಸ್ತಾಭ್ಯಾಂ ಕುಮಾರಾಭ್ಯಾಂ ವೀರಾಭ್ಯಾಂ ಸ ಹರೀಶ್ವರಃ ।

---

ಮಹತಾ - ದೊಡ್ಡದಾದ, (ಪ್ರಬಲವಾದ) ಭೂಮಿಕಂಪೇನ - ನೆಲದ ಅದಿರುವಿಕೆಯಿಂದ, ಮಹಾನ್ - ಎತ್ತರವಾದ, ಶಿಲೋಚ್ಚಯಇವ - ಬೆಟ್ಟದಹಾಗೆ, ಪ್ರವಿಚಾಲ್ಯತೆ - ಕದಲಿಸಲ್ಪಡುತಲಿದಾನೆ ॥೪೬॥ ಹೇನೃಪಾತ್ಮಜೇ - ಎಲೌ ರಾಜಪುತ್ರಿಯೇ, (ಸಃ - ಆ ಶ್ರೀರಾಮನು) ತ್ವಾಂ - ನಿನ್ನನ್ನು, ಅಪಶ್ಯನ್-ಕಾಣದಿರುವವನಾಗಿ, ಸುರಮ್ಯಾಣಿ - ಬಹುಸುಂದರಗಳಾಗಿರುವ, ಕಾನನಾನಿ - ಅರಣ್ಯಗಳನ್ನು, ನದೀಃ-ಹೊಳೆಗಳನ್ನು, ಪ್ರಸ್ರವಣಾನಿಚ - ಬೆಟ್ಟದ ಜರಿಗಳನ್ನೂ ಕುರಿತು, ಚರನ್ - ಸಂಚರಿಸುವವನಾಗುತ್ತಾ, ಅರತಿಂ - ಅಸೌಖ್ಯವನ್ನು (ವ್ಯಥೆಯನ್ನು) ಆಪ್ನೋತಿ- ಹೊಂದುತಲಿದಾನೆ ॥೪೭॥ ಹೇಜನಕಾತ್ಮಜೆ- ಎಲೌ ಜನಕ. ಪುತ್ರಿಯೇ ! ಮನುಜಶಾರ್ದೂಲಃ - ಪುರುಷೋತ್ತಮನೆನಿಸಿದ, ಸಃರಾಘವಃ - ಆ ಶ್ರೀ ರಾಮನು, ಸಮಿತ್ರಬಾಂಧವಂ - ನಂಟರಿಷ್ಟರೊಡಗೂಡಿದ, ರಾವಣಂ - ದಶಕಂಠನನ್ನು, ಹತ್ವಾ - ಕೊಂದು, ಕ್ಷಿಪ್ರಂ- ಬೇಗನೆ, ತ್ವಾಂ - ನಿನ್ನನ್ನು, ಪ್ರಾಪ್ಸ್ಯತಿ - ಪಡೆಯುವನು ॥೪೮॥ ಸಹಿತೌ - ಸ್ನೇಹದಿಂದೊಡಗೂಡಿರುವ, ರಾಮಸುಗ್ರೀವೌ - ರಾಮಸುಗ್ರೀವರು. ಉಭೌ - ಇಬ್ಬರೂ, ತದಾ - ಆಗ, ತವ - ನಿನ್ನ, ಅನ್ವೇಷಣಂ ಹುಡುಕೋಣವನ್ನು ಕುರಿತೂ, ವಾಲಿನಂ - ವಾಲಿಯನ್ನು. ಹನ್ತುಂ - ಕೊಲ್ಲಲಿಕ್ಕೂ, ಸಮಯಂ - ಪ್ರತಿಜ್ಞೆಯನ್ನು, ಅಕುರುತಾಂ - ಮಾಡಿಕೊಂಡರು ॥೪೯॥ ತತಃ-ಆಮೇಲೆ, ವೀರಾಭ್ಯಾಂ - ಶೂರರಾದ,

---

ಬೆಟ್ಟಗಳ ಕಾಲುವೆಗಳ ಬಳಿಯಲ್ಲಿಯೂ ಹುಡುಕಲಿಕ್ಕೆಂದು ಅಲೆಯುತ್ತಾ ಸುಖಲೇಶವನ್ನೂ ಪಡೆಯದೆಯೂ ಇದಾನೆ॥೪೭॥ ಎಲೌ ಜನಕರಾಜನಂದಿನೀ ! ಇದುವರೆಗೆ ನಿನ್ನ ನೆಲೆಯು ತಿಳಿಯದಿದ್ದುದರಿಂದ ಇಷ್ಟು ಕಾಲವಿಳಂಬವಾಗಲು ಕಾರಣವಾಯಿತು, ಇನ್ನು ಮೇಲೆ ನಿನ್ನ ಕ್ಷೇಮಸಮಾಚಾರವು ನನ್ನ ಮೂಲಕ ತಿಳಿದು ಹೋಗುವುದರಿಂದ ರಾಮಚಂದ್ರನು ಬಹು ಜಾಗ್ರತೆಯಲ್ಲಿಯೇ ಇಲ್ಲಿಗೆ ಬಂದು ರಾವಣನನ್ನೂ, ಅವನ ಮಿತ್ರ ಬಾಂಧವರನ್ನೂ, ಚತುರಂಗಬಲವನ್ನೂ ನಾಶಮಾಡಿ, ನಿನ್ನನ್ನು ಪಡೆಯುತ್ತಾನೆ, ನೀನಿನ್ನು ಭಯಪಡದಿರು ॥೪೮॥ ಎಲೌ ಸೀತಾದೇವಿಯೇ ! ನಿನ್ನನ್ನು ಹುಡುಕಿ ಸುದ್ದಿಯನ್ನು ತರುವುದೇ ಮೊದಲಾದ ವಿಷಯದಲ್ಲಿ ಸಹಾಯಮಾಡಬೇಕೆಂದು ಶ್ರೀರಾಮನು ಸುಗ್ರೀವನನ್ನು ಕೇಳಿದನು. ತನಗೆ ಶತ್ರುವಾಗಿರುವ ವಾಲಿಯನ್ನು ಕೊಲ್ಲಬೇಕೆಂದು ಸುಗ್ರೀವನು ಶ್ರೀರಾಮನನ್ನು ಪ್ರಾರ್ಥಿಸಿದನು, ಹೀಗೆ ಪರಸ್ಪರ ಸಹಾಯಮಾಡುವ ವಿಷಯದಲ್ಲಿ ಒಬ್ಬರಿಗೊಬ್ಬರು ಪ್ರತಿಜ್ಞೆಮಾಡಿಕೊಂಡರು. ॥೪೯॥

ಬಳಿಕ ಆ ಪ್ರತಿಜ್ಞೆಯ ಪ್ರಕಾರವೇ ಸುಗ್ರೀವನು ರಾಮ ಲಕ್ಷ್ಮಣರೊಡನೆ ಕಿಷ್ಕಿಂಧೆಗೆ

ಕಿಷ್ಕಿಂಧಾಂ ಸಮುಪಾಗಮ್ಯ ವಾಲೀಯುದ್ಧೇ ನಿಪಾತಿತಃ ||೫೦||
ತತೋ ನಿಹತ್ಯ ತರಸಾ ರಾಮೋ ವಾಲಿನ ಮಾಹವೇ |
ಸರ್ವರ್ಕ್ಷ ಹರಿ ಸಂಘಾನಾಂ ಸುಗ್ರೀವ ಮಕರೋ ತ್ಪತಿಮ್ ||೫೧||
ರಾಮಸುಗ್ರೀವಯೋ ರೈಕ್ಯಂ ದೇವ್ಯೇವಂ ಸಮಜಾಯತ |
ಹನುಮಂತಂ ಚ ಮಾಂ ವಿದ್ಧಿ ತಯೋ ದೂತ ಮಿಹಾಗತಮ್ ||೫೨||
ಸ್ವರಾಜ್ಯಂ ಪ್ರಾಪ್ಯ ಸುಗ್ರೀವ ಸ್ಸಮಾನೀಯ ಹರೀಶ್ವರಾನ್ |
ತ್ವದರ್ಥಂ ಪ್ರೇಷಯಾಮಾಸ ದಿಶೋ ದಶ ಮಹಾಬಲಾನ್ ||೫೩||
ಆದಿಷ್ಟಾ ವಾನರೇಂದ್ರೇಣ ಸುಗ್ರೀವೇಣ ಮಹೌಜಸಾ |

---

ಕುಮಾರಾಭ್ಯಾಂ - ದಶರಥ ಸಾರ್ವಭೌಮನಂದನರಾದ, ತಾಭ್ಯಾಂ - ಆ ರಾಮಸುಗ್ರೀವರಿಂದ, ಕಿಷ್ಕಿಂಧಾಂ - ಕಿಷ್ಕಿಂಧಾನಗರವನ್ನು ಕುರಿತು, ಸಮುಪಾಗಮ್ಯ - ಹೋಗಿ, ವಾಲೀ - ವಾಲಿಯು, ಯುದ್ಧೇ - ಕಾಳಗದಲ್ಲಿ, ನಿಪಾತಿತಃ - ಉರುಳಿಸಲ್ಪಟ್ಟನು (ಕೊಲ್ಲಲ್ಪಟ್ಟನು) ||೫೦|| ತತಃ - ಆ ಮೇಲೆ, ರಾಮಃ - ಶ್ರೀ ರಾಮನು, ಆಹವೇ - ಯುದ್ಧದಲ್ಲಿ, ತರಸಾ - ಬಲದಿಂದ, ವಾಲಿನಂ - ವಾಲಿಯನ್ನು, ನಿಹತ್ಯ - ಕೊಂದು, ಸುಗ್ರೀವಂ - ಸುಗ್ರೀವನನ್ನು, ಸರ್ವರ್ಕ್ಷಹರಿಸಂಘಾನಾಂ - ಕರಡಿಗಳ ಮತ್ತು ಕಪಿಗಳ ಗುಂಪುಗೆಲ್ಲ, ಪತಿಂ - ಒಡೆಯನನ್ನಾಗಿ, ಅಕರೋತ್ - ಮಾಡಿದನು || ೫೧ || ಹೇದೇವಿ - ಎಲೌ ಸೀತಾದೇವಿಯೇ ! ರಾಮಸುಗ್ರೀವಯೋಃ - ರಾಮಸುಗ್ರೀವರಿಗೆ, ಏವಂ - ಈ ಪ್ರಕಾರವಾಗಿ, ಐಕ್ಯಂ - ಸ್ನೇಹಭಾವವು, ಸಮಜಾಯತ - ಉಂಟಾಯಿತು, ಇಹ - ಇಲ್ಲಿಗೆ, ಆಗತಂ - ಬಂದಿರುವ, ಮಾಂ - ನನ್ನನ್ನು, ತಯೋಃ - ಆ ರಾಮಸುಗ್ರೀವರ, ದೂತಂ - ವಾರ್ತಾಹರನಾದ, ಹನುಮಂತಂ - ಹನುಮಂತನೆಂಬುವನನ್ನಾಗಿ, ವಿದ್ಧಿ - ತಿಳಿ ||೫೨|| ಸುಗ್ರೀವಃ - ಸುಗ್ರೀವನು, ಸ್ವರಾಜ್ಯಂ - ತನ್ನ ಪ್ರಭುತ್ವವನ್ನು, ಪ್ರಾಪ್ಯ - ಹೊಂದಿ, ಮಹಾಬಲಾನ್ - ಬಹು ಬಲಶಾಲಿಗಳಾದ, ಹರೀಶ್ವರಾನ್ - ವಾನರೋತ್ತಮರನ್ನು, ಸಮಾನೀಯ - ಕರೆತರಿಸಿ, ತ್ವದರ್ಥಂ - ನಿನಗೋಸ್ಕರ, (ನಿನ್ನನ್ನು ಹುಡುಕಲು) ದಶ - ಹತ್ತಾದ, ದಿಶಃ - ದಿಕ್ಕುಗಳನ್ನು ಕುರಿತು, ಪ್ರೇಷಯಾಮಾಸ - ಕಳುಹಿಸಿದನು ||

---

ತೆರಳಿದನು. ಅಲ್ಲಿ ಶ್ರೀ ರಾಮನು ಕಾಳಗದೊಳಗೆ ವಾಲಿಯನ್ನು ಕೊಂದನು || ೫೦ || ಶ್ರೀ ರಾಮನು ಹಾಗೆ ಕಾಳಗದಲ್ಲಿ ವಾಲಿಯನ್ನು ಪರಾಕ್ರಮದಿಂದ ಕೊಂದಬಳಿಕ ಕಿಷ್ಕಿಂಧಾ ರಾಜ್ಯಾಧಿಪತ್ಯದಲ್ಲಿ ಸುಗ್ರೀವನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡಿ, ಸಕಲ ಕಪಿಕುಲ ಸಾರ್ವಭೌಮನೆನ್ನಿಸಿದನು ||೫೧|| ಎಲೌ ಮಾತೆಯೆ ! ರಾಮ ಸುಗ್ರೀವರಿಗೆ ಈ ಪ್ರಕಾರವಾಗಿ ಏಕೀ ಭಾವ ರೂಪವಾದ ಸ್ನೇಹವು ಸಮನಿಸಿತು. ನನ್ನನ್ನು ಅವರ ದೂತನನ್ನಾಗಿಯೂ,ಅವರ ಅಪ್ಪಣೆಯಿಂದಲೇ ನಿನ್ನ ಕ್ಷೇಮವನ್ನು ತಿಳಿಯಲು ಇಲ್ಲಿಗೆ ಬಂದವನನ್ನಾಗಿಯೂ ತಿಳಿ. || ೫೨ || ಮೊಟ್ಟಮೊದಲು ಸುಗ್ರೀವನು ಶ್ರೀರಾಮನ ಅನುಗ್ರಹದಿಂದ ಕಿಷ್ಕಿಂಧೆಯ ಸಾಮ್ರಾಜ್ಯವನ್ನು ಪಡೆದು, ಮಹಾಪರಾಕ್ರಮ ಶಾಲಿಗಳಾದ ವಾನರ ವೀರರನ್ನೆಲ್ಲ ಕರೆಸಿ, ದಿಕ್ಕು ದಿಕ್ಕುಗಳಲ್ಲಿಯೂ ನಿನ್ನನ್ನು ಹುಡುಕಲಿಕ್ಕೆ ಕಳುಹಿಸಿಕೊಟ್ಟನು. || ೫೩ || ಬೆಟ್ಟಗಳಂತಿರುವ ಕಪಿವೀರರೆಲ್ಲ ಮಹತ್ತರವಾದ ಬಾಹುಬಲ ಸಂಪನ್ನನಾದ ಸುಗ್ರೀವನ ಅಪ್ಪಣೆಯನ್ನು ಶಿರದೊಳಾಂತು ಎಲ್ಲಕಡೆಗಳಿಗೂ ಹೊರಟರು. || ೫೪ || ನಾನೂ, ನನ್ನಂತೆ ಇತರ

ಅದ್ರಿರಾಜ ಪ್ರತೀಕಾಶಾ ಸ್ಸರ್ವತಃ ಪ್ರಸ್ಥಿತಾಃ ಮಹೀಮ್ ॥೫೪॥
ತತ ಸ್ತೇ ಮಾರ್ಗಮಾಣಾ ವೈ ಸುಗ್ರೀವ ವಚನಾತುರಾಃ ।
ಚರಂತಿ ವಸುಧಾಂ ಕೃತ್ಸ್ನಾಂ ವಯ ಮನ್ಯೇಚ ವಾನರಾಃ॥೫೫॥
ಅಂಗದೋ ನಾಮ ಲಕ್ಷ್ಮೀವಾನ್ ವಾಲಿಸೂನು ರ್ಮಹಾಬಲಃ ।
ಪ್ರಸ್ಥಿತಃ ಕಪಿಶಾರ್ದೂಲ ಸ್ತ್ರಿಭಾಗ ಬಲಸಂವೃತಃ ॥೫೬॥
ತೇಷಾಂ ನೋ ವಿಪ್ರಣಷ್ಟಾನಾಂ ವಿಂಧ್ಯೇ ಪರ್ವತ ಸತ್ತಮೇ ।
ಭೃಶಂ ಶೋಕ ಪರೀತಾನಾ ಮಹೋರಾತ್ರಗಣಾ ಗತಾಃ ॥೫೭॥
ತೇ ವಯಂ ಕಾರ್ಯನೈರಾಶ್ಯಾ ತ್ಕಾಲಸ್ಯಾ ಽ ತಿಕ್ರಮೇಣ ಚ ।

**ಅದ್ರಿರಾಜಪ್ರತೀಕಾಶಾಃ** - ದೊಡ್ಡಬೆಟ್ಟಗಳಿಗೆಣೆಯಾದ ವಾನರರು, **ಮಹೌಜಸಃ** - ಮಹಾ ಪ್ರತಾಪವುಳ್ಳ, **ವಾನರೇಂದ್ರೇಣ** - ಕಪಿಸಾರ್ವಭೌಮನಾದ, **ಸುಗ್ರೀವೇಣ** - ಸುಗ್ರೀವನಿಂದ, **ಆದಿಷ್ಟಾಃ** - ಆಜ್ಞಾಪಿಸಲ್ಪಟ್ಟವರಾಗಿ, **ಮಹೀಂ** - ಭೂಮಿಯನ್ನು ಕುರಿತು, **ಸರ್ವತಃ** - ಎಲ್ಲ ಕಡೆಗಳಲ್ಲಿಯೂ, **ಪ್ರಸ್ಥಿತಾಃ** - ಪ್ರಯಾಣಮಾಡಿದರು ॥೫೪॥ **ತತಃ** - ತರುವಾಯ, **ತೆ** - ಆ ವಾನರರು, **ಸುಗ್ರೀವವಚನಾತುರಾಃ** - ಸುಗ್ರೀವನಾಣತಿಯಿಂದ ಹೆದರಿದವರಾಗಿ, **ತ್ವಾಂ** - ನಿನ್ನನ್ನು, **ಮಾರ್ಗಮಾಣಾಃ**-ಹುಡುಕುತಲಿರುವವರಾಗಿಯೂ, **ಕೃತ್ಸ್ನಾಂ** - ಸಮಸ್ತವಾದ, **ವಸುಧಾಂ** - ಭೂಮಿಯನ್ನು ಕುರಿತು, **ಚರಂತಿ** - ಸುತ್ತುತಲಿದಾರೆ, **ಅನ್ಯೇ** - ಮತ್ತೆ ಕೆಲವರು, **ವಯಂಚ** - ನಾವುಗಳೂ, (ಚರಾಮಃ - ಸಂಚರಿಸುತಲಿದೇವೆ) ॥೫೫॥ **ಅಂಗದೋನಾಮ** - ಅಂಗದನೆಂದು ಪ್ರಸಿದ್ಧನಾದ, **ಲಕ್ಷ್ಮೀವಾನ್**-ಬಹಳವಾದ ತೇಜಸ್ಸುಳ್ಳ, **ಮಹಾಬಲಃ** - ಹೆಚ್ಚಿದ ಪರಾಕ್ರಮವುಳ್ಳ, **ಕಪಿಶಾರ್ದೂಲಃ** - ಕಪಿವರನೆನಿಸಿದ, **ವಾಲಿಸೂನುಃ**- ವಾಲಿಪುತ್ರನು, **ತ್ರಿಭಾಗಬಲಸಂಯುತಃ**- ಮೂರನೆಯ ಬಾಂದುಪಾಲು ಸೈನ್ಯದಿಂದೊಡಗೂಡಿದವನಾಗಿ, **ಪ್ರಸ್ಥಿತಃ** - ಪ್ರಯಾಣಮಾಡಿದನು॥ **ಪರ್ವತಸತ್ತಮೆ** - ಪರ್ವತೋತ್ತಮವೆನಿಸಿದ, **ವಿಂಧ್ಯೇ** - ವಿಂಧ್ಯಪರ್ವತದಲ್ಲಿ **ವಿಪ್ರಣಷ್ಟಾನಾಂ** - ಕಾಣದೆ ಹೋದ, **ತೇಷಾಂ** - ಆ ಅಂಗದನೊಡನೆ ಬಂದ, **ಭೃಶಂ** - ವಿಶೇಷವಾಗಿ, **ಶೋಕಪರೀತಾನಾಂ** - ನೀನು ಕಾಣದೆ ಹೋದದರಿಂದ ದುಃಖಿಸುತಲಿರುವ, **ನಃ**- ನಮಗೆ, **ಅಹೋರಾತ್ರಿಗಣಾಃ** - ಅನೇಕ ಹಗಲು ರಾತ್ರಿಗಳ ಸಮೂಹಗಳು, **ಗತಾಃ** - ಕಳೆದು ಹೋದುವು ॥೫೭॥

ವಾನರರೂ ಸಹ ಕ್ರೂರವಾದ ಸುಗ್ರೀವಾಜ್ಞೆಯಿಂದ ಭಯಪಡುತ್ತ ಸಮಸ್ತ ಭೂಮಂಡಲದಲ್ಲಿಯೂ ಸಂಚರಿಸುತ ಬಂದೆವು, ॥ ೫೫ ॥ ಆದರೆ-ವಾಲಿ ಕುಮಾರನೆನಿಸಿ ಮಹಾಬಾಹು ಬಲ ಸಂಪನ್ನನಾದ ಅಂಗದನು-ಅಲ್ಲಿದ್ದ ಕಪಿಸೇನೆಯೊಳಗೆ ಮೂರರಲ್ಲೊಂದು ಪಾಲನ್ನು ಸಂಗಡ ಕರೆದುಕೊಂಡು ಹೊರಟನು ॥ ೫೬ ॥ ಆಮೇಲೆ ನಾವೆಲ್ಲರೂ ಅಂಗದನೊಡನೆ ವಿಂಧ್ಯಪರ್ವತದ ಬಳಿಗೆ ಬಂದು ನೀನು ನಮಗೆ ಎಲ್ಲಿಯೂ ಕಣ್ಣಿಗೆಬೀಳದೆ ಹೋದುದರಿಂದ ಅಲ್ಲಿಯಾರಿಗೂ ಕಾಣಿಸಿಕೊಳ್ಳದೆ ಮರೆಯಲ್ಲಿದ್ದು ಬಹಳವಾಗಿ ದುಃಖಿಸುತಲಿದ್ದೆವು, ಹಾಗಿರುವಾಗ ಅನೇಕದಿವಸಗಳು ಕಳೆದು ಹೋದುವು. ॥ ೫೭ ॥ ಬಂದು ತಿಂಗಳೊಳಗೆ ಸೀತೆಯಸುದ್ದಿಯನ್ನು ತೆಗದುಕೊಂಡು ಹಿಂದಿರುಗಿ ಬರಬೇಕೆಂಬುದು ಸುಗ್ರೀವನ ಆಜ್ಞೆಯಾಗಿದ್ದಿತು, ಆಕ್ಲುಪ್ತಕಾಲವು ಕಳೆದು ಹೋಯಿತು, ನೀನಾದರೆ ದೊರೆಯಲಿಲ್ಲ, ನಮಗೋ ನಿರಾಶೆಯುಂಟಾಯಿತು, ಮನದೊಳಗೆ ಭಯದ ಕಳವಳವ್ರೋ ಹೆಚ್ಚುತಬಂದಿತು. ಆಮೇಲೆ ಏನ ಮಾಡೋಣ ? ಪ್ರಾಣಗಳನ್ನು ತೊರೆಯಬೇಕೆಂದು ಎಲ್ಲರೂ ಯೋಚಿಸಿದೆವು ॥ ೫೮ ॥

ಭಯಾಚ್ಚ ಕಪಿರಾಜಸ್ಯ ಪ್ರಾಣಾಂ ಸ್ತ್ಯಕ್ತುಂ ವ್ಯವಸ್ಥಿತಾಃ ||೫೮||
ವಿಚಿತ್ಯ ವನದುರ್ಗಾಣಿ ಗಿರಿ ಪ್ರಸ್ರವಣಾನಿ ಚ |
ಅನಾಸಾದ್ಯ ಪದಂ ದೇವ್ಯಾಃ ಪ್ರಾಣಾಂ ಸ್ತ್ಯಕ್ತುಂ ಸಮುದ್ಯತಾಃ ||೫೯||
ದೃಷ್ಟ್ವಾ ಪ್ರಾಯೋಪ ವಿಷ್ಟಾಂಶ್ಚ ಸರ್ವಾ ನ್ವಾನರ ಪುಂಗವಾನ್ |
ಭೃಶಂ ಶೋಕಾರ್ಣವೇ ಮಗ್ನಃ ಪರ್ಯದೇವಯ ದಂಗದಃ ||೬೦||
ತವ ನಾಶಂ ಚ ವೈದೇಹಿ ವಾಲಿನಶ್ಚ ವಧಂ ತಥಾ |

---

ತೇ - ಅನೇಕದಿವಸಗಳು ವಿಂಧ್ಯದ ಗುಹೆಯೊಳಿದ್ದ, ವಯಂ - ನಾವು, ಕಾರ್ಯನೈರಾಶ್ಯಾತ್ - ಪ್ರಕೃತಕಾರ್ಯದಲ್ಲಿ ಆಶೆಯಿಲ್ಲದುದರಿಂದಲೂ, ಕಾಲಸ್ಯ-ಸುಗ್ರೀವನು ಗೊತ್ತುಮಾಡಿದ್ದ ಕಾಲದ, ಅತಿಕ್ರಮಣೇನಚ - ಕಳೆಯುವಿಕೆಯಿಂದಲೂ, ಕಪಿರಾಜಸ್ಯ - ವಾನರಾಧಿಪನಾದ ಸುಗ್ರೀವನ, ಭಯಾಚ್ಚ - ಭಯದದೆಶೆಯಿಂದಲೂ, ಪ್ರಾಣಾನ್ - ಪ್ರಾಣಗಳನ್ನು, ತ್ಯಕ್ತುಂ - ಬಿಡಲಿಕ್ಕೆ, ವ್ಯವಸ್ಥಿತಾಃ - ಪ್ರಯತ್ನವುಳ್ಳವರಾದೆವು ||೫೮|| (ತೇ - ಆ ನಾವು) ವನದುರ್ಗಾಣಿ- ಹೊಗಲಸದಳವೆನಿಸಿದ ಅರಣ್ಯಗಳನ್ನೂ, ಗಿರಿಪ್ರಸ್ರವಣಾನಿಚ - ಬೆಟ್ಟದ ಜರಿಗಳನ್ನೂ, ವಿಚಿತ್ಯ - ಹುಡುಕಿ, ದೇವ್ಯಾಃ - ಸೀತಾದೇವಿಯ, ಪದಂ - ಸ್ಥಾನವನ್ನು (ಇರುವ ನೆಲೆಯನ್ನು) ಅನಾಸಾದ್ಯ - ಹೊಂದದೆ, ಪ್ರಾಣಾನ್ - ಪ್ರಾಣಗಳನ್ನು, ತ್ಯಕ್ತುಂ - ಬಿಡಲಿಕ್ಕೆ, ಉದ್ಯತಾಃ - ಪ್ರಯತ್ನಪಟ್ಟೆವು ||೫೯|| ಹೇವೈದೇಹಿ - ಎಲೈ ಜಾನಕಿಯೆ ! ಅಂಗದಃ - ಅಂಗದನು, ಪ್ರಾಯೋಪವಿಷ್ಟಾನ್ - ಸಾಯುವ ಸಂಕಟದಿಂದ ಕುಳಿತ, ಸರ್ವಾನ್ - ಸಮಸ್ತರಾದ, ವಾನರಪುಂಗವಾನ್ - ಕಪಿವರರನ್ನೂ, ತವ - ನಿನ್ನ, ನಾಶಂಚ - ಅದರ್ಶನವನ್ನೂ, ವಾಲಿನಶ್ಚ - ವಾಲಿಯ, ವಧಂಚ- ಸಂಹಾರವನ್ನೂ, ತಥಾ - ಹಾಗೆಯೇ, ಅಸ್ಮಾಕಂ- ನಮ್ಮ, ಪ್ರಾಯೋಪವೇಶಂ - ಮರಣಸಂಕಲ್ಪವನ್ನೂ, ಜಟಾಯುಷಃ - ಜಟಾಯುವಿನ, ಮರಣಂಚ - ಸಾವನ್ನೂ, ದೃಷ್ಟ್ವಾ- ನೋಡಿ, ಭೃಶಂ- ಬಹಳವಾಗಿ, ಶೋಕಾರ್ಣವೇ- ದುಃಖಸಾಗರದಲ್ಲಿ, ಮಗ್ನಃ - ಮುಳುಗಿದವನಾಗಿ, ಪರ್ಯದೇವಯತ್ - ಗೋಳಾಡುತಲಿದ್ದನು.

---

ಬೆಟ್ಟಗಳಲ್ಲಿ, ಹೊಗಲಸದಳವೆನಿಸಿದ ಗುಟ್ಟೆಗಳಲ್ಲಿ, ಗವಿಗಳಲ್ಲಿ, ಹೊಳೆಗಳಲ್ಲಿ, ಎಲ್ಲೆಲ್ಲಿಯೂ ಹುಡುಕಿದುದಾಯಿತು, ನಿನ್ನ ಸುಳಿವೇ ತಿಳಿಯಲಿಲ್ಲ, ಹೀಗಾದಮೇಲೆ ಇನ್ನು ಮಾಡತಕ್ಕದೇನು ? ಸಾಯುವುದೇಸರಿಎಂದು ಉದ್ಯುಕ್ತರಾದೆವು. | ೫೯ || ಅನ್ನನೀರುಗಳಲ್ಲಿ ಆಶೆಯನ್ನು ತೊರೆದೆವು, ಸಾಯುವ ಸಂಕಲ್ಪದಿಂದ ನೆಲದಮೇಲೆ ಮಲಗಿದೆವು, ನಮ್ಮೆಲ್ಲರನ್ನೂ ನೋಡಿ ಅಂಗದನಿಗೆ ಬಹಳ ದುಃಖ ವುಂಟಾಯಿತು, ಆಗ ಹಿಂದೆನಡೆದ ಅನರ್ಥಗಳೆಲ್ಲ ನೆನಪಿಗೆ ಬಂದುವು, ನೀನು ದೊರೆಯದೆ ಹೋದುದನ್ನೂ, ವಾಲಿಯ ಸಂಹಾರವನ್ನೂ, ಗೃಧ್ರರಾಜನಾದ ಜಟಾಯುವಿನ ಮರಣವನ್ನೂ, ನಾವುಗಳೆಲ್ಲ ಪ್ರಾಯೋಪವೇಶಮಾಡಿರುವುದನ್ನೂ ಕ್ರಮವಾಗಿ ಹಂಬಲಿಸಿಕೊಳ್ಳುತ್ತಾ ಗೋಳಾಡ ತೊಡಗಿದನು || ೬೦ || ೬೧ || ಜಟಾಯುವಿಗೆ ಅಣ್ಣನಾದ ಸಂಪಾತಿಯೆಂಬ ಮಹಾಬಲ ಪರಾಕ್ರಮ ಶಾಲಿಯಾದ ಪಕ್ಷಿರಾಜನೊಬ್ಬನುಂಟು, ಆತನು ಅಲ್ಲೆಲ್ಲಿಯೋ ದೂರದಲ್ಲಿ ವಾಸ ಮಾಡುತಲಿದ್ದನು, ಅಂಗದ ನಾಡಿಕೊಳ್ಳುತಲಿದ್ದ ಮಾತುಗಳೆಲ್ಲ ಅವನಕಿವಿಯಲ್ಲಿ ಬಿದ್ದುವು, ಅವುಗಳೊಳಗೆ ತನ್ನ ತಮ್ಮನಾದ ಜಟಾಯುವಿನ ವಧೆಯನ್ನು ಕೇಳಿ ಸಿಟ್ಟುಗೊಂಡು, ನಮ್ಮಕೆಲಸವನ್ನು ದೈವಯೋಗದಿಂದ ಮುಂದಕ್ಕೆ ಸರಿಪಡಿಸಲಿಕ್ಕೆಬಂದಂತೆ, ಸುಗ್ರೀವನಪ್ಪಣೆಯನ್ನು ನೆನೆದು ಸಾಯಲುದ್ಯುಕ್ತರಾಗಿದ್ದ ನಾವಿದ್ದ ಬಳಿಗೆ

ಪ್ರಾಯೋಪವೇಶ ಮಸ್ಮಾಕಂ ಮರಣಂ ಚ ಜಟಾಯುಷಃ ॥೬೧॥
ತೇಷಾಂ ನ ಸ್ಸ್ವಾಮಿ ಸಂದೇಶಾ ನ್ನಿರಾಶಾನಾಂ ಮುಮೂರ್ಷತಾಂ ।
ಕಾರ್ಯಹೇತೋ ರಿವಾಯಾತ ಶ್ಶಕುನಿ ರ್ವೀರ್ಯವಾನ್ ಮಹಾನ್ ॥೬೨॥
ಗೃಧ್ರ ರಾಜಸ್ಯ ಸೋದರ್ಯ ಸ್ಸಂಪಾತಿ ರ್ನಾಮ ಗೃಧ್ರರಾಟ್ ।
ಶ್ರುತ್ವಾ ಭ್ರಾತೃವಧಂ ಕೋಪಾ ದಿದಂ ವಚನ ಮಬ್ರವೀತ್ ॥೬೩॥
ಯವೀಯಾ ನ್ಕೇನ ಮೇ ಭ್ರಾತಾ ಹತಃ ಕ್ವಚ ನಿಪಾತಿತಃ ।
ಏತ ದಾಖ್ಯಾತು ಮಿಚ್ಛಾಮಿ ಭವದ್ಭಿ ರ್ವಾನರೋತ್ತಮಾಃ ॥೬೪॥
ಅಂಗದೋಽಕಥಯ ತ್ತಸ್ಯ ಜನಸ್ಥಾನೇ ಮಹದ್ವಧಂ ।

॥೬೦, ೬೧॥ ಸ್ವಾಮಿಸಂದೇಶಾತ್ - (ತಿಂಗಳನ್ನು ಕಳೆದು ಬಂದವರಿಗೆ ಮರಣದಂಡನೆಯೆಂಬ) ಪ್ರಭುವಿನ ಅಪ್ಪಣೆಯ ದೆಶೆಯಿಂದ. ಮುಮೂರ್ಷತಾಂ - ಸಾವನ್ನು ಕೋರುತಲಿರುವ, ನಿರಾಶಾನಾಂ - ನಿನ್ನ ದರ್ಶನದಲ್ಲಿ ಆಶೆಯನ್ನು ತೊರೆದಿರುವ, ತೇಷಾಂ - ಆ, ನಃ - ನಮಗೆ, ಕಾರ್ಯಹೇತೋರಿವ - ಕಾರ್ಯನಿಮಿತ್ತದಿಂದಲೋ ಎಂಬಂತೆ ವೀರ್ಯವಾನ್ - ಪರಾಕ್ರಮಶಾಲಿಯಾಗಿರುವ, ಮಹಾನ್ - ಮಹಾತ್ಮನೆನಿಸಿದ, ಗೃಧ್ರರಾಜಸ್ಯ - ಜಟಾಯುವಿನ, ಸೋದರ್ಯಃ-ಸಹೋದರನಾಗಿರುವ. ಸಂಪಾತಿರ್ನಾಮ - ಸಂಪಾತಿಯೆಂದು ಪ್ರಸಿದ್ಧನಾದ, ಗೃಧ್ರರಾಟ್ - ಹದ್ದುಗಳೊಡೆಯನಾದ, ಶಕುನಿಃ - ಪಕ್ಷಿಯು. ಆಯಾತಃ - ಬಂದವನಾಗಿ, ಭ್ರಾತೃವಧಂ - ಸಹೋದರನ ಕೊಲೆಯನ್ನು, ಶ್ರುತ್ವಾ- ಕೇಳಿ, ಕೋಪಾತ್ - ಸಿಟ್ಟಿನದೆಶೆಯಿಂದ, ಇದಂ - ಈ, ವಚನಂ - ಮಾತನ್ನು, ಅಬ್ರವೀತ್ - ನಮ್ಮೊಡನೆ ಹೇಳಿದನು ॥೬೨॥೬೩॥ ವಾನರೋತ್ತಮಾಃ - ಎಲೈ ಕಪಿವೀರರೇ ! ಯವೀಯಾನ್ - ನನಗಿಂತಲೂ ಚಿಕ್ಕವನಾದ, ಮೇ - ನನ್ನ - ಭ್ರಾತಾ - ಸಹೋದರನು, ಕೇನ - ಯಾರಿಂದ, ಹತಃ - ಕೊಲ್ಲಲ್ಪಟ್ಟವನಾಗಿ, ಕ್ವಚ- ಎಲ್ಲಿ, ನಿಪಾತಿತಃ ಕೆಡಹಲ್ಪಟ್ಟನು ? ಏತತ್ - ಈ ಸಂಗತಿಯು, ಭವದ್ಭಿಃ - ನಿಮ್ಮಗಳಿಂದ, ಆಖ್ಯಾತುಂ - ಹೇಳುವುದಕ್ಕೆ (ಕೇಳಲಿಕ್ಕೆ) ಇಚ್ಛಾಮಿ - ಅಪೇಕ್ಷಿಸುತ್ತೇನೆ ॥೬೪॥ (ತತಃ- ಆಮೇಲೆ) ಅಂಗದಃ- ಅಂಗದನು, ಜನಸ್ಥಾನೆ - ಜನಸ್ಥಾನವೆಂಬ ಅರಣ್ಯದಲ್ಲಿ, ಮಹತ್ - ದೊಡ್ಡದಾದ, ವಧಂ - ರಾಕ್ಷಸರ ಸಂಹಾರವನ್ನೂ, ಭೀಮರೂಪೇಣ - ಭಯಂಕರಾಕಾರವುಳ್ಳ, ರಕ್ಷಸಾ - ರಾವಣನಿಂದ, ತ್ವಾಂ - ನಿನ್ನನ್ನು. ಉದ್ದಿಶ್ಯ - ಕುರಿತು, [ಕೃತಂ - ಮಾಡಲ್ಪಟ್ಟ] ಯಥಾತಥಂ - ನಿಜಸ್ಥಿತಿಯನ್ನೂ, ತಸ್ಯ - ಆಸಂಪಾತಿಗೆ, ಅಕಥಯತ್ -

ಬಂದು ॥ ೬೨ - ೬೩ ॥ ಎಲೈವಾನರ ವೀರರುಗಳಿರಾ ! ನನ್ನ ತಮ್ಮನಾದ ಜಟಾಯುವನ್ನು ಕೊಂದವರಾರು ? ಅವನು ಎಲ್ಲಿ ಬಿದ್ದಿದಾನೆ ? ಆಸಂಗತಿಯನ್ನು ತಿಳಿಸಿರಿ ಎಂದನು ॥ ೬೪ ॥ ಆಮಾತನ್ನು ಕೇಳಿದಬಳಿಕ ಅಂಗದನು—ಜನಸ್ಥಾನವೆಂಬ ಮಹಾರಣ್ಯದಲ್ಲಿ ಖರದೂಷಣರೇ ಮೊದಲಾದ ಘೋರರಾಕ್ಷಸರ ವಧೆಯನ್ನೂ, ಕ್ರೂರನಾದ ರಾಕ್ಷಸನು ನಿನ್ನನ್ನು ಕರೆದೊಯ್ಯುವಾಗ ಜಟಾಯುವನ್ನು ಕೆಡಹಿದುದನ್ನೂ ಯಥಾರ್ಥವಾಗಿ ತಿಳಿಸಿದನು ॥೬೫॥ ಕಶ್ಯಪಮುನಿಗೆ ಪತ್ನಿಯಾದ ವಿನತೆಗೆ ಅರುಣನೆಂತಲೂ, ಗರುಡನೆಂತಲೂ ಇಬ್ಬರು ಮಕ್ಕಳು, ಆ ಅರುಣನೇ ಸೂರ್ಯ ಸಾರಥಿ, ಇವನೇ ಅನೂರು, ಈತನ ಹೆಂಡತಿಯಾದ ಶ್ಯೇನಿಯೆಂಬುವವಳ ಹೊಟ್ಟೆಯಲ್ಲಿ ಹುಟ್ಟಿದವರೇ ಸಂಪಾತಿ ಜಟಾಯುಗಳು, ಈಸಂಪಾತಿಯು-ತನ್ನತಮ್ಮನು ಸತ್ತುಹೋದುದನ್ನು ಕೇಳಿ ಬಹಳವಾಗಿ ದುಃಖಪಟ್ಟು, ತನಗೆ ಬಹುದೂರದವರೆಗೂ ದೃಷ್ಟಿ

ರಕ್ಷಸಾ ಭೀಮರೂಪೇಣ ತ್ವಾ ಮ ದ್ದಿಶ್ಯ ಯಥಾತಥಂ ॥೬೫॥
ಜಟಾಯುಷೋ ವಧಂ ಶ್ರುತ್ವಾ ದುಃಖಿತ ಸ್ಸೋ ಽ ರುಣಾತ್ಮಜಃ ।
ತ್ವಾಂ ಶಶಂಸ ವರಾರೋಹೇ ವಸಂತೀಂ ರಾವಣಾಲಯೇ ॥೬೬॥
ತಸ್ಯ ತದ್ವಚನಂ ಶ್ರುತ್ವಾ ಸಂಪಾತೇಃ ಪ್ರೀತಿವರ್ಧನಂ ।
ಅಂಗದ ಪ್ರಮುಖಾ ಸ್ತೂರ್ಣಂ ತತ ಸ್ಸಂಪ್ರಸ್ಥಿತಾ ವಯಂ ॥೬೭॥
ವಿಂಧ್ಯಾ ದುತ್ಥಾಯ ಸಂಪ್ರಾಪ್ತಾ ಸ್ಸಾಗರ ಸ್ಯಾಂತ ಮುತ್ತರಂ ।
ತ್ವದ್ದರ್ಶನ ಕೃತೋತ್ಸಾಹಾ ಹೃಷ್ಟಾ ಸ್ತುಷ್ಟಾಃ ಪ್ಲವಂಗಮಾಃ ॥೬೮॥
ಅಂಗದ ಪ್ರಮುಖಾ ಸ್ಸರ್ವೇ ವೇಲೋಪಾಂತ ಮುಪಸ್ಥಿತಾಃ ।

---

ಹೇಳಿದನು ॥೬೫॥ ಅರುಣಾತ್ಮಜಃ-ಸೂರ್ಯಸಾರಥಿಯಾದ ಅರುಣನಿಗೆ ತನ್ಮನಾದ ಸಃ - ಆ ಸಂಪಾತಿಯು, ಜಟಾಯುಷಃ - ಜಟಾಯುವಿನ, ವಧಂ - ಸಂಹಾರವನ್ನು, ಶ್ರುತ್ವಾ - ಕೇಳಿ, ದುಃಖಿತಃ - ವ್ಯಸನವುಳ್ಳವನಾಗಿ, ವರಾರೋಹೆ - ಎಲೌ ಸಾಧ್ವಿಯೇ! ತ್ವಾಂ- ನಿನ್ನನ್ನು, ರಾವಣಾಲಯೆ - ರಾವಣನ ಗೃಹದಲ್ಲಿ, ವಸಂತೀಂ - ವಾಸಮಾಡುತ್ತಿರುವವಳನ್ನಾಗಿ, ಶಶಂಸ - ಹೇಳಿದನು ॥೬೬॥ ಅಂಗದಪ್ರಮುಖಾಃ - ಅಂಗದನೇ ಮೊದಲಾಗಿರುವ, ವಯಂ - ನಾವು, ಪ್ರೀತಿವರ್ಧನಂ - ಸಂತೋಷವನ್ನು ಹೆಚ್ಚಿಸುವ, ತಸ್ಯ - ಆ ಸಂಪಾತಿಯು, ತತ್ - ಈ ಹಿಂದೆಹೇಳಿದ, ವಚನಂ - ಮಾತನ್ನು, ಸಂಪಾತೇಃ - ಸಂಪಾತಿಯ ದೆಶೆಯಿಂದ, ಶ್ರುತ್ವಾ - ಕೇಳಿ, ತತಃ - ಆ ನಾವಿದ್ದ ಸ್ಥಲದಿಂದ, ತೂರ್ಣಂ - ಬೇಗನೆ, ಪ್ರಸ್ಥಿತಾಃ - ಹೊರಟೆವು ॥೬೭॥ ಪ್ಲವಂಗಮಾಃ - ಕುಪ್ಪಳಿಸುತಲಿರುವ ಈ ನಾವು, ವಿಂಧ್ಯಾತ್ - ವಿಂಧ್ಯಪರ್ವತದಿಂದ, ಉತ್ಥಾಯ - ಎದ್ದು (ಹೊರಟು) ತ್ವದ್ದರ್ಶನಕೃತೋತ್ಸಾಹಾಃ - ನಿನ್ನ ಸಂದರ್ಶನದಲ್ಲಿ ಮಹೋತ್ಸಾಹವುಳ್ಳವರಾಗಿ, ಹೃಷ್ಟಾಃ - ಹಿಗ್ಗಿದವರಾಗುತ್ತಲೂ, ತುಷ್ಟಾಃ - ತೃಪ್ತಿಪಡುವವರಾಗುತ್ತಲೂ, ಸಾಗರಸ್ಯ - ಸಮುದ್ರದ, ಉತ್ತರಂ - ಬಡಗಲು ಕಡೆಯದಾದ, ಅಂತಂ - ತೀರವನ್ನು, ಸಂಪ್ರಾಪ್ತಾಃ - ಹೊಂದಿದೆವು ॥೬೮॥ ಅಂಗದಪ್ರಮುಖಾಃ - ಅಂಗದನೇ ಮೊದಲಾಗಿರುವ, ಸರ್ವೆ - ನಾವೆಲ್ಲರೂ, ತ್ವದ್ದರ್ಶನ ಸಮುತ್ಸುಕಾಃ-

---

ಕಾಣುವುದೆಂತಲೂ, ನೀನು ರಾವಣನ ಮನೆಯಲ್ಲಿ ಇರುತ್ತೀಯೆ ಎಂತಲೂ ನಮ್ಮೊಂದಿಗೆ ತಿಳಿಸಿದನು॥ ೬೬ ॥ ನೀನು ಇಲ್ಲಿ ಇರುತ್ತೀಯೆ,-ಎಂಬ ನುಡಿಯನ್ನು ಕೇಳಿದಕೂಡಲೆ ನಮಗೆ ಸಂತೋಷವು ಹೆಚ್ಚಿತು, ಆಮೇಲೆ ಅಂಗದನೇ ಮೊದಲಾದ ನಾವೆಲ್ಲರೂ ಬೇಗನೆ ಅಲ್ಲಿಂದ ಹೊರಟೆವು ॥ ೬೭ ॥ ನಿನ್ನನ್ನು ನೋಡುವೆವೆಂಬ ಕುತೂಹಲದಿಂದ ಮನಸ್ಸಿನಲ್ಲಿ ಸಂತೋಷಿಸುತ್ತಲೂ, ದೇಹದಲ್ಲಿ ಹಿಗ್ಗುತ್ತಲೂ, ಕುಪ್ಪಳಿಸುತ್ತಲೂ, ವಿಂಧ್ಯ ಪರ್ವತದಿಂದ ಹೊರಟು ದಕ್ಷಿಣ ಸಮುದ್ರದ ಉತ್ತರ ತೀರದಬಳಿಗೆ ಬಂದು ॥ ೬೮ ॥ ಅಂಗದಮುಂತಾದ ನಾವೆಲ್ಲರೂ ಕಡಲಿನ ದಡದಲ್ಲಿ ಇಳಿದು ಇಾತಪಾರವಾದ ಸಾಗರವನ್ನು ದಾಟುವುದು ಹೇಗೆ? ಎಂಬ ಭಯದಿಂದ ಅಪಾರವಾದ ಚಿಂತಾಸಾಗರದಲ್ಲಿ ಮುಳುಗಿದೆವು ॥ ೬೯ ॥ ಕಪಿಸೇನೆಯೆಲ್ಲ ಕಳವಳಿಸಿ ಪೇಚಾಡುತಲಿದ್ದಿತು, ನಾನು ಅದನ್ನೆಲ್ಲ ನೋಡಿದೆನು, ಮನಸ್ಸಿಗೆ ಬಹಳ ವ್ಯಥೆ ಯುಂಟಾಯಿತು, ಆಮೇಲೆ-ಛೀ, ಇದು ತಕ್ಕದಲ್ಲ ಎಂದು ಆ ಬುದ್ಧಿಯನ್ನು ತೊರೆದು, ನೂರು ಗಾವುದಗಳ ವಿಸ್ತಾರವಾದ ಸಮುದ್ರವನ್ನು ಬಹು ಬೇಗನೆ ದಾಟಿಬಂದೆನು ॥೭೦ ॥ ನಿನ್ನೆಯರಾತ್ರಿ ಲಂಕೆಯನ್ನೂ ನೋಡಿದೆನು, ರಾಕ್ಷಸರ

ಚಿಂತಾಂ ಜಗ್ಮುಃ ಪುನ ರ್ಭೀತಾ ಸ್ತ್ವದ್ದರ್ಶನ ಕಮುತ್ಸುಕಾಃ ॥೬೯॥
ಅಥಾಹಂ ಹರಿಸೈನ್ಯಸ್ಯ ಸಾಗರಂ ಪ್ರೇಕ್ಷ್ಯ ಸೀದತಃ ।
ವ್ಯವಧೂಯ ಭಯಂ ತೀವ್ರಂ ಯೋಜನಾನಾಂ ಶತಂ ಪ್ಲುತಃ ॥೭೦॥
ಲಂಕಾ ಚಾಪಿ ಮಯಾ ರಾತ್ರೌ ಪ್ರವಿಷ್ಟಾ ರಾಕ್ಷಸಾಕುಲಾ ।
ರಾವಣಶ್ಚ ಮಯಾ ದೃಷ್ಟ ಸ್ತ್ವಂಚ ಶೋಕ ಪರಿಪ್ಲುತಾ ॥೭೧॥
ಏತತ್ತೇ ಸರ್ವ ಮಾಖ್ಯಾತಂ ಯಥಾವೃತ್ತ ಮನಿಂದಿತೇ ।
ಅಭಿಭಾಷಸ್ವ ಮಾಂ ದೇವಿ ದೂತೋ ದಾಶರಥೇ ರಹಂ ॥೭೨॥
ತಂ ಮಾಂ ರಾಮಕೃತೋದ್ಯೋಗಂ ತ್ವನ್ನಿಮಿತ್ತ ಮಿಹಾಗತಂ !

ನಿನ್ನ ದರ್ಶನದಲ್ಲಿ ಆಶೆಯುಳ್ಳವರಾಗಿ, ವೇಲೋಪಾನ್ತಂ-ಸಮುದ್ರತೀರವನ್ನು, ಉಪಸ್ಥಿತಾ -ಸೇರಿದವರಾಗಿ ಯೂ, ಪುನಃ- ಮರಳಿ, ಭೀತಾಃ- ಭಯಪಡುವವರಾಗುತ್ತಾ, ಚಿಂತಾಂ ಮನೋವ್ಯಥೆಯನ್ನು, ಜಗ್ಮುಃ- ಹೊಂದಿದೆವು॥೬೯॥ಅಥ-ಅನಂತರದಲ್ಲಿ, ಅಹಂ-ನಾನು, ಸೀದತಃ-ದುಃಖಿಸುತ್ತಲಿರುವ, ಹರಿಸೈನ್ಯಸ್ಯ-ವಾನರ ಸೇನೆಯು, ತೀವ್ರಂ - ತೀಕ್ಷ್ಣವಾದ, ಭಯಂ - ಭಯವನ್ನು, ಸಾದರಂ - ಆದರದೊಡನೆ, ಪ್ರೇಕ್ಷ್ಯ - ನೋಡಿ, ವ್ಯವಧೂಯಚ - ಆ ಭಯವನ್ನು ತಿರಸ್ಕರಿಸಿ, ಯೋಜನಾನಾಂ- ಗಾವುದಗಳ, ಶತಂ-ನೂರನ್ನು ಪ್ಲುತಃ - ಹಾರಿದವನಾದೆನು ॥೭೦॥ ಮಯಾ - ನನ್ನಿಂದ, ರಾತ್ರೌ - ನಿನ್ನೆಯ ಇರುಳಿನಲ್ಲಿ, ರಾಕ್ಷಸಾಕು ಲಾ - ರಕ್ಕಸರಿಂದ ನಿಬಿಡವಾದ, ಲಂಕಾಚಾಪಿ - ಲಂಕಾನಗರಿಯೂ, ಪ್ರವಿಷ್ಟಾ - ಪ್ರವೇಶಿಸಲ್ಪಟ್ಟಿತು, ಮಯಾ - ನನ್ನಿಂದ, ರಾವಣಶ್ಚ - ರಾವಣನೂ, ದೃಷ್ಟಃ - ನೋಡಲ್ಪಟ್ಟನು, ಶೋಕಪರಿಪ್ಲುತಾ - ದುಃ ಖದಲ್ಲಿ ಮುಳುಗಿರುವ, ತ್ವಂಚ - ನೀನೂ, ದೃಷ್ಟಾ - ನೋಡಲ್ಪಟ್ಟವಳಾದೆ, ॥೭೧॥ ಅನಿನ್ದಿತೆ - ದೋ ಷಲೇಶವಿಲ್ಲದ, ದೇವಿ - ಎಲೌ ಪೂಜ್ಯಳೇ ! ಏತತ್ - ಈ, ಸರ್ವಂ - ಸಮಸ್ತವೂ, ತೆ - ನಿನಗೆ, ಯ ಥಾವೃತ್ತಂ - ನಡೆದ ಸಂಗತಿಯ ಮಿಾರದಹಾಗೆ, ಆಖ್ಯಾತಂ - ನನ್ನಿಂದ ಹೇಳಲ್ಪಟ್ಟಿತು, ಅಹಂ - ನಾ ನು, ದಾಶರಥೇಃ - ಶ್ರೀ ರಾಮಚಂದ್ರನ, ದೂತಃ - ವಾರ್ತಾಹರನು. ಮಾಂ - ನನ್ನನ್ನು ಕುರಿತು, ಅಭಿಭಾ ಷಸ್ವ - ಮಾತನಾಡು ॥೭೨॥ ಹೇದೇವಿ - ಎಲೌ ಸೀತಾದೇವಿಯೇ ! ರಾಮಕೃತೋದ್ಯೋಗಂ-ರಾಮನಿಂದ

ಹಿಂಡಿನಿಂದ ನಿಬಿಡವಾಗಿರುವ ಪುರವನ್ನೂ ಪ್ರವೇಶಿಸಿ, ಒಳಭಾಗವನ್ನೂ ಅವಲೋಕಿಸಿದೆ ನು, ರಾವಣನನ್ನೂ ಕಂಡೆನು, ದುಃಖದಲ್ಲಿ ತೇಲಿ ಮುಳುಗುತಲಿರುವ ನಿನ್ನಯ ಸಂದರ್ಶ ನವನ್ನೂ ಪಡೆದೆನು ॥ ೭೧ ॥ ಎಲೌ ಪತಿವ್ರತಾ ಶಿರೋಮಣಿಯಾದ ಜಾನಕಿಯೇ ! ಮೊ ದಲಿನಿಂದಲೂ ನಡೆದ ವೃತ್ತಾಂತವನ್ನೆಲ್ಲ ಸ್ವಲ್ಪವೂ ಬಿಡದಂತೆ ಯಥಾರ್ಥವಾಗಿ ನಿನಗೆ ವಿಜ್ಞಾ ಪಿಸಿ ಇದೇನೆ. ಎಲೌ ಮಾತೆಯೇ ! ನಿಜವಾಗಿಯೂ ನಾನು ದಶರಥನಂದನನಾದ ಶ್ರೀರಾಮ ಚಂದ್ರನಿಗೆ ದೂತನಾಗಿದೇನೆ; ಇನ್ನಾದರೂ ನನ್ನೊಡನೆ ಪ್ರೀತಿಪೂರ್ವಕವಾಗಿ ಮಾತ ನಾಡು ॥ ೭೨ ॥ ಮತ್ತು -ಶ್ರೀರಾಮ ಕಾರ್ಯಾರ್ಥವಾಗಿ ನಿನ್ನ ಸಂದರ್ಶನ ಕ್ಕೋಸ್ಕರವೇ ಇಲ್ಲಿಗೆ ಬಂದಿರುವ ಈ ನನ್ನನ್ನು ದಾಶರಥಿಗೆ ಪ್ರಿಯ ಮಿತ್ರನಾಗಿರುವ ಸುಗ್ರೀವನಿಗೆ ಮು ಖ್ಯಮಂತ್ರಿಯನ್ನಾಗಿಯೂತಿಳಿ ॥ ೭೩ ॥ ಈ ಲೋಕದಲ್ಲಿ ಬಿಲ್ಲಾಳುಗಳೆನಿಸಿದವರೊಳಗೆ ಮೊದಲನೆಯವನೆನಿಸಿರುವ ನಿನ್ನವಲ್ಲಭನಾದ ಶ್ರೀರಾಮನು ಕುಶಲದಿಂದಿರುವನು, ಜ್ಯೇಷ್ಠ ಭ್ರಾತೃವು ಪಿತೃಸಮನು ಎಂಬ ಶಾಸ್ತ್ರವನ್ನನುಸರಿಸಿ, ಗುರುವಾದ ಅಣ್ಣನ ಸೇವೆಯಲ್ಲಿಯೇ

ಸುಗ್ರೀವ ಸಚಿವಂ ದೇವಿ ಬುಧ್ಯಸ್ವ ಪವನಾತ್ಮಜಂ ॥೭೪॥
ಕುಶಲೀ ತವ ಕಾಕುತ್ಸ್ಥ ಸ್ಸರ್ವಶಸ್ತ್ರ ಭೃತಾಂವರಃ ।
ಗುರೋ ರಾರಾಧನೇ ಯುಕ್ತೋ ಲಕ್ಷ್ಮಣಶ್ಚ ಸುಲಕ್ಷಣಃ ॥೭೪॥
ತಸ್ಯ ವೀರ್ಯವತೋ ದೇವಿ ಭರ್ತು ಸ್ತವ ಹಿತೇ ರತಃ ।
ಅಹ ಮೇಕ ಸ್ತು ಸಂಪ್ರಾಪ್ತ ಸ್ಸುಗ್ರೀವ ವಚನಾ ದಿಹ ॥೭೫॥
ಮಯೇಯ ಮಸಹಾಯೇನ ಚರತಾ ಕಾಮರೂಪಿಣಾ ।
ದಕ್ಷಿಣಾ ದಿಗನು ಕ್ರಾಂತಾ ತ್ವ ನ್ಮಾರ್ಗ ವಿಚಯೈಷಿಣಾ ॥೭೬॥
ದಿಷ್ಟ್ಯಾಽಹಂ ಹರಿಸೈನ್ಯಾನಾಂ ತ್ವನ್ನಾಶ ಮನು ಶೋಚತಾಮ್ ।

ಮಾಡಿಸಲ್ಪಟ್ಟ ಉತ್ಸಾಹೋದ್ಯೋಗವುಳ್ಳ, ತಂ - ಆ, ಮಾಂ - ನನ್ನನ್ನು, ತ್ವನ್ನಿಮಿತ್ತಂ - ನಿನ್ನ ನಿಮಿತ್ತವಾಗಿ, ಇಹ - ಇಲ್ಲಿ, ಆಗತಂ - ಬಂದಿರುವ, ಸುಗ್ರೀವ ಸಚಿವಂ - ಸುಗ್ರೀವನ ಮಂತ್ರಿಯು ನ್ನಾಗಿಯೂ, ಬುಧ್ಯಸ್ವ - ತಿಳಿ ॥೭೪॥ ಸರ್ವ ಶಸ್ತ್ರಭೃತಾಂ - ಬಿಲ್ಲಾಳುಗಳೊಳಗೆಲ್ಲ, ವರಃ-ಉತ್ತಮನೆನಿಸಿದ, ತೇ-ನಿನ್ನ, ಕಾಕುತ್ಸ್ಥಃ - ಶ್ರೀ ರಾಮನು, ಕುಶಲೀ - ಕ್ಷೇಮವಾಗಿದ್ದಾನೆ, ಸುಲಕ್ಷಣಃ - ಸ್ವಾಮಿಭಕ್ತಿ ಲಕ್ಷಣವುಳ್ಳ, ಲಕ್ಷ್ಮಣಶ್ಚ - ಲಕ್ಷ್ಮಣನೂ ಗುರೋಃ -ತಂದೆಗೆಸಮಾನನೆನಿಸಿದ ಶ್ರೀ ರಾಮನ, ಆರಾಧನೇ-ಸೇವೆಯಿಂದ ಯುಕ್ತಃ - ಕೂಡಿದವನಾಗಿದ್ದಾನೆ ॥೭೪॥ ಏಕಃ- ಒಬ್ಬನಾದ, ಅಹಂತು-ನಾನಾದರೋ, ಸುಗ್ರೀವವಚನಾತ್ - ಸುಗ್ರೀವನ ಅಪ್ಪಣೆಯ ದೆಶೆಯಿಂದ, ವೀರ್ಯವತಃ -ಪರಾಕ್ರಮಶಾಲಿಯಾದ, ತವ - ನಿನ್ನ, ಭರ್ತುಃ - ಪತಿಯ, ಹಿತೆ - ಮೇಲಿನಲ್ಲಿ, ರತಃ - ಆಸಕ್ತನಾಗಿ, ಇಹ-ಇಲ್ಲಿಗೆ, ಸಂಪ್ರಾಪ್ತಃ- ಬಂದವನಾಗಿದ್ದೇನೆ ॥೭೫॥ ಅಸಹಾಯೇನ - ಸಹಾಯವಿಲ್ಲದವನಾಗಿ, ಚರತಾ-ಸಂಚರಿಸುತಲಿದ್ದ, ಕಾಮರೂಪಿಣಾ - ಕೋರಿದ ರೂಪವನ್ನು ತಾಳುವ, ತ್ವನ್ಮಾರ್ಗವಿಚಯೈಷಿಣಾ - ನಿನ್ನ ಹಾದಿಯನ್ನು ಹುಡುಕುವುದರಲ್ಲಿ ಆಶೆಯುಳ್ಳ, ಮಯಾ - ನನ್ನಿಂದ, ದಕ್ಷಿಣಾ - ತೆಂಕಲಾದ, ಇಯಂ - ಈ, ದಿಕ್ - ದೆಸೆಯು, ಅನುಪ್ರಾಪ್ತಾ - ಆಶ್ರಯಿಸಲ್ಪಟ್ಟಿತು ॥೭೬॥ ತ್ವನ್ನಾಶಂ - ನಿನ್ನ ಕಾಣದಿರುವಿಕೆಯನ್ನುಕುರಿತು, ಅನುಶೋಚತಾಂ - ದುಃಖಿಸುತಲಿದ್ದ, ಹರಿಸೈನ್ಯಾನಾಂ - ಕಪಿಸೇನೆಗಳೊಳಗೆ, ಅಹಂ - ನಾನು, ದಿಷ್ಟ್ಯಾ - ನನ್ನ ಭಾಗ್ಯದಿಂದ, ತವ - ನಿನ್ನ, ಅಭಿಗಮಶಂಸನಾತ್ - ಲಾಭವನ್ನು ತಿಳಿಸುವುದರ ದೆಶೆಯಿಂದ, ಸಂತಾಪಂ-

ಸಿರತನಾಗಿರುವ ಲಕ್ಷ್ಮಣನೂ ಕ್ಷೇಮದಿಂದಿದ್ದಾನೆ, ॥ ೭೪ ॥ ಸುಗ್ರೀವನ ಆಜ್ಞಾನುಸಾರವಾಗಿ ಶೂರನಾದ ನಿನ್ನವಲ್ಲಭನಿಗೆ ಮೇಲನ್ನು ಬಯಸಿ ನಾನೊಬ್ಬನು ಮಾತ್ರವೇ ಇಲ್ಲಿಗೆ ಬಂದಿದ್ದೇನೆ. ॥ ೭೫ ॥

ಬೇರೊಬ್ಬರ ಸಹಾಯವಿಲ್ಲದೆ ಬೇಕಾದ ರೂಪವನ್ನು ತಾಳಬಲ್ಲ ನಾನು ಅಲ್ಲಲ್ಲಿ ಸಂಚರಿಸುತ್ತಾ, ನಿನ್ನನ್ನು ಹುಡುಕಿಕೊಂಡು ಈ ದಿಕ್ಕನ್ನು ಕುರಿತು ಬಂದೆನು ॥೭೬॥ ಎಲೆ ದೇವಿಯೇ ! ನಿನ್ನನ್ನು ಹುಡುಕುತ್ತಾ, ನೀನು ಸಿಕ್ಕದೆಯಿರುವುದರಿಂದ ಬಹಳವಾಗಿ ವ್ಯಸನವನ್ನು ಅನುಭವಿಸುತಲಿರುವ ವಾನರ ವೀರರೊಳಗೆ ಒಬ್ಬನಾದ ನಾನು ಇಲ್ಲಿಗೆ ಬಂದು, ನಿನ್ನದರ್ಶನವನ್ನು ಪಡೆದುದರಿಂದ, ಇಲ್ಲಿಂದ ತೆರಳಿ, ನಿನ್ನಯ ಕುಶಲವೃತ್ತಾಂತವನ್ನು ಅವರಿಗೆ ತಿಳುಹಿ ಸಂಕಟವನ್ನು ಪರಿಹರಿಸುವೆನು ॥೭೭॥ ಎಲೆ ಮಾತೆಯೇ ! ಇಷ್ಟು ದೂರದ ಸಾಗರವನ್ನು ನಾನು ದಾಟಬಂದುದು ದೈವಯೋಗದಿಂದ ವ್ಯರ್ಥವಾಗಲಿಲ್ಲ. ಇದು ನನ್ನ

ಅಪನೇಷ್ಯಾಮಿ ಸಂತಾಪಂ ತವಾಭಿಗಮ ಶಂಸನಾತ್ ॥೭೭॥
ದಿಷ್ಟ್ಯಾಹಿ ಮಮ ನ ವ್ಯರ್ಥಂ ದೇವಿ ಸಾಗರ ಲಂಘನಮ್ ।
ಪ್ರಾಪ್ಸ್ಯಾ ವ್ಯಹ ಮಿದಂ ದಿಷ್ಟ್ಯಾ ತ್ವದ್ದರ್ಶನ ಕೃತಂ ಯಶಃ ॥೭೮॥
ರಾಘವಶ್ಚ ಮಹಾವೀರ್ಯಃ ಕ್ಷಿಪ್ರಂ ತ್ವಾ ಮಭಿಪತ್ಸ್ಯತೇ ।
ಸಮಿತ್ರ ಬಾಂಧವಂ ಹತ್ವಾ ರಾವಣಂ ರಾಕ್ಷಸಾಧಿಪಮ್ ॥೭೯॥
ಮಾಲ್ಯವಾ ನ್ನಾಮ ವೈದೇಹಿ ಗಿರೀಣಾ ಮುತ್ತಮೊ ಗಿರಿಃ ।
ತತೊ ಗಚ್ಛತಿ ಗೋಕರ್ಣಂ ಪರ್ವತಂ ಕೇಸರೀ ಹರಿಃ ॥೮೦॥
ಸಚ ದೇವರ್ಷಿಭಿ ರ್ದಿಷ್ಟಃ ಪಿತಾ ಮಮ ಮಹಾಕಪಿಃ ।

ಅವರ ಮನೋವ್ಯಥೆಯನ್ನು, ಅಪನೇಷ್ಯಾಮಿ - ಪರಿಹರಿಸುವೆನು ॥೭೭॥ ದೇವಿ - ಎಲೌ ಸೀತಾದೇವಿಯೇ ! ಮಮ - ನನ್ನ, ಸಾಗರಲಂಘನಂ - ಸಮುದ್ರತರಣವು, ದಿಷ್ಟ್ಯಾ - ನನ್ನ ಭಾಗ್ಯೋದಯದಿಂದ, ವ್ಯರ್ಥಂ-ಪ್ರಯೋಜನವಿಲ್ಲದುದು, ನಾಸೀತ್ - ಆಗಲಿಲ್ಲ, ತ್ವದ್ದರ್ಶನಕೃತಂ - ನಿನ್ನ ದರ್ಶನದಿಂದುಂಟಾದ, ಇದಂ-ಈ, ಯಶಃ - ಕೀರ್ತಿಯನ್ನು, ದಿಷ್ಟ್ಯಾ - ನನ್ನ ಭಾಗ್ಯವಶದಿಂದ, ಪ್ರಾಪ್ಸ್ಯಾಮಿ - ಹೊಂದುವೆನು ॥೭೮॥ ಮಹಾವೀರ್ಯಃ - ಬಹು ಪರಾಕ್ರಮಶಾಲಿಯಾದ, ರಾಘವಶ್ಚ - ಶ್ರೀರಾಮನು, ಸಮಿತ್ರಬಾಂಧವಂ - ನಂಟರಿಷ್ಟರೊಡನೆ ಸಹಿತನಾದ. ರಾಕ್ಷಸಾಧಿಪಂ - ರಾಕ್ಷಸರಾಜನಾಗಿರುವ, ರಾವಣಂ - ರಾವಣನನ್ನು, ಹತ್ವಾ-ಕೊಂದು, ಕ್ಷಿಪ್ರಂ - ಬೇಗನೆ, ತ್ವಾಂ - ನಿನ್ನನ್ನು, ಅಭಿಪತ್ಸ್ಯತೇ - ಹೊಂದುವನು ॥೭೯॥ ಹೇವೈದೇಹಿ-ಎಲೌ ಜನಕನಂದನಿಯೇ! ಗಿರೀಣಾಂ - ಪರ್ವತಗಳೊಳಗೆ, ಉತ್ತಮಃ-ಶ್ರೇಷ್ಠವೆನಿಸಿದ ಮಾಲ್ಯವಾನ್ನಾಮ - ಮಾಲ್ಯವಂತವೆಂದು ಪ್ರಸಿದ್ಧವಾದ, ಗಿರಿಃ - ಬೆಟ್ಟವು, ಅಸ್ತಿ - ಉಂಟು, ತತಃ - ಆ ಪರ್ವತದಿಂದ, ಕೇಸರೀ - ಕೇಸರಿಯೆಂಬ, ಹರಿಃ - ವಾನರನು, ಗೋಕರ್ಣಂ - ಗೋಕರ್ಣವೆಂಬ, ಪರ್ವತಂ - ಬೆಟ್ಟವನ್ನು ಕುರಿತು, ಗಚ್ಛತಿ - (ಅಗಚ್ಛತ್)ಹೋಗಿದ್ದದು ॥೮೦॥ ಮಹಾಕಪಿಃ - ವಾನರಪುಂಗವನಾಗಿರುವ, ಮಮ - ನನಗೆ, ಪಿತಾ ತಂದೆಯಾದ, ಸಚ - ಆ ಕೇಸರಿಯು, ಪುಣ್ಯೇ - ಪಾವನವಾದ ನದೀಪತೇಃ -

ಭಾಗ್ಯೋದಯವೇ ಸರಿ, "ವೀರಮಾರುತಿಯು ಸಾಗರವನ್ನು ದಾಟಿ ಸೀತೆಯನ್ನು ಕಂಡು ಬಂದನು" ಎಂದು ಲೋಕದಲ್ಲಿ ಕೀರ್ತಿಯನ್ನು ದೈವಾನುಗ್ರಹದಿಂದ ಪಡೆಯುವೆನು ॥೭೮॥ ಮಹಾಬಾಹುಬಲ ಸಂಪನ್ನನಾದ ಶ್ರೀರಾಮಚಂದ್ರನು ಇನ್ನು ಸ್ವಲ್ಪಕಾಲದಲ್ಲಿಯೇ ಇಲ್ಲಿಗೆ ಬಂದು ಪುತ್ರಪೌತ್ರಮಿತ್ರಬಾಂಧವರೊಡನೆ ಸಹಿತನಾದ ರಾವಣನನ್ನು ಧ್ವಂಸಮಾಡಿ,ನಿನ್ನನ್ನು ಪಡೆಯುವನು ॥೭೯॥ ಎಲೌ ಮಾತೆಯೇ ! ಲೋಕದಲ್ಲಿ ಕಾಣಬರುವ ಪರ್ವತಗಳೊಳಗೆ ಮಾಲ್ಯವಂತವೆಂಬುದೊಂದು ದೊಡ್ಡ ಬೆಟ್ಟವುಂಟು, ಕೇಸರಿಯೆಂಬೊಬ್ಬ ವಾನರವೀರನು-ಅದರ ಬಳಿಯೊಳಿರುವ ಗೋಕರ್ಣವೆಂಬ ಪರ್ವತವನ್ನು ಕುರಿತು ತೆರಳಿದ್ದನು ॥೮೦॥ ಆತನೇ ನನಗೆ ತಂದೆ,ಆಗೋಕರ್ಣದ ಸಮೀಪದಲ್ಲಿನ ಮಹರ್ಷಿಗಳು-ಅಲ್ಲಿದ್ದ ಪುಣ್ಯಕ್ಷೇತ್ರಕ್ಕೆ ತೊಂದರೆಯನ್ನುಂಟುಮಾಡುತಲಿದ್ದ ಶಂಬಸಾದನನೆಂಬ ರಕ್ಕಸನನ್ನು ಕೊಲ್ಲುವಂತೆ ಕೇಸರಿಗೆ ಆಜ್ಞಾಪಿಸಿದರು, ಬಳಿಕ ಸಮುದ್ರತೀರದ ತೀರ್ಥದ ಹತ್ತಿರದಲ್ಲಿ ಕೇಸರಿಯು ಆರಕ್ಕಸನನ್ನು ಕೊಂದನು ॥೮೧॥ ಆ ಕೇಸರಿಯೆಂಬ ವಾನರನಿಗೆ ಭಾರ್ಯೆಯಾದ ಅಂಜನಾದೇವಿಯಲ್ಲಿ ವಾಯುದೇವನ ಅನುಗ್ರಹದಿಂದ ನಾನು ಜನಿಸಿದವನು, ಅದರಿಂದ ವಾಯು

ತೀರ್ಥೇ ನದೀಪತೇಃ ಪುಣ್ಯೇ ಶಂಬಸಾದನ ಮುದ್ಧರತ್ ||೮೧||
ತಸ್ಯಾಹಂ ಹರಿಣಃ ಕ್ಷೇತ್ರೇ ಜಾತೋ ವಾತೇನ ಮೈಥಿಲಿ ।
ಹನುಮಾ ನಿತಿ ವಿಖ್ಯಾತೋ ಲೋಕೇ ಸ್ವೇನೈವ ಕರ್ಮಣಾ ||೮೨||
ವಿಶ್ವಾಸಾರ್ಥಂ ತು ವೈದೇಹಿ ಭರ್ತುರುಕ್ತಾ ಮಯಾ ಗುಣಾಃ ।
ಅಚಿರಾ ದ್ರಾಘವೋ ದೇವಿ ತ್ವಾ ಮಿತೋ ನಯಿತಾನಘೇ ||೮೩||
ಏವಂ ವಿಶ್ವಾಸಿತಾ ಸೀತಾ ಹೇತುಭಿ ಶ್ಶೋಕ ಕರ್ಶಿತಾ ।
ಉಪಪನ್ನೈ ರಭಿಜ್ಞಾನೈ ರ್ದೂತಂ ತ ಮವಗಚ್ಛತಿ ||೮೪||

ಸಮುದ್ರದ, ತೀರ್ಥೇ - ಪುಣ್ಯಕ್ಷೇತ್ರದಲ್ಲಿ. ದೇವರ್ಷಿಭಿಃ - ದೇವಮುನಿಗಳಿಂದ, ದಿಷ್ಟಃ - ಆಜ್ಞಾಪಿಸಲ್ಪಟ್ಟವನಾಗಿ, ಶಂಬಸಾದನಂ- (ಆ ತೀರ್ಥಕ್ಕೆ ತೊಂದರೆಯನ್ನುಂಟುಮಾಡುತಲಿದ್ದ) ಶಂಬಸಾದನನೆಂಬ ರಾಕ್ಷಸನನ್ನು, ಉದ್ಧರತ್ (ಉದಹರತ್) ಸಂಹರಿಸಿದನು ||೮೧|| ಹೇ ಮೈಥಿಲಿ-ಓ ಜಾನಕಿಯೇ! ಅಹಂ-ನಾನು. ತಸ್ಯ-ಆ, ಹರಿಣಃ (ಹರೇಃ)-ಕೇಸರಿಯೆಂಬ ವಾನರನ, ಕ್ಷೇತ್ರೇ - ಪತ್ನಿಯಾದ ಅಂಜನಾದೇವಿಯಲ್ಲಿ, ವಾತೇನ - ವಾಯುವಿನಿಂದ, ಜಾತಃ - ಉತ್ಪನ್ನನಾಗಿ, ಸ್ವೇನೈವ - ನನ್ನ ಸ್ವಂತವಾದ, ಕರ್ಮಣಾ - ವ್ಯವಸಾಯದಿಂದಲೇ, ಹನುಮಾನಿತಿ - ಹನುಮಂತನೆಂದು, ಲೋಕೇ - ಲೋಕದಲ್ಲಿ, ವಿಖ್ಯಾತಃ - ಪ್ರಸಿದ್ಧನಾದೆನು ||೮೨|| ಹೇವೈದೇಹಿ-ಎಲೌಸೀತಾದೇವಿಯೇ, ಮಯಾ -ನನ್ನಿಂದ, ಭರ್ತುಃ-ನಿನ್ನವಲ್ಲಭನ, ಗುಣಾಃ - ಕಲ್ಯಾಣಗುಣಗಳು, ವಿಶ್ವಾಸಾರ್ಥಂ - ನಿನ್ನ ನಂಬುಗೆಗೋಸ್ಕರ, ಉಕ್ತಾಃ - ಹೇಳಲ್ಪಟ್ಟುವು, ಹೇಅನಘೇ - ಎಲೌ ದೋಷರಹಿತಳೇ, ರಾಘವಃ - ಶ್ರೀರಾಮಚಂದ್ರನು, ತ್ವಾಂ - ನಿನ್ನನ್ನು, ಇತಃ - ಇಲ್ಲಿಂದ, ಅಚಿರಾತ್ - ಬೇಗನೆ, ನಯಿತಾ - (ನೇತಾ) ಕರೆದೊಯ್ಯುವನು, ||೮೩|| ಶೋಕಕರ್ಶಿತಾ - ದುಃಖದಿಂದ ನವೆದು ಹೋಗಿದ್ದ, ಸೀತಾ - ಜಾನಕಿಯು, ಏವಂ - ಈ ಪ್ರಕಾರವಾಗಿ, ಹೇತುಭಿಃ - ನಂಬಲಿಕ್ಕೆ ತಕ್ಕವುಗಳಾದ ಕಾರಣಗಳಿಂದಲೂ, ಉಪಪನ್ನೈಃ - ಯೋಗ್ಯಗಳಾದ, ಅಭಿಜ್ಞಾನೈಃ-ಗುರುತುಗಳಿಂದಲೂ, ವಿಶ್ವಾಸಿತಾ - ನಂಬಿಕೆಯನ್ನು ಪಡೆದವಳಾಗಿ, ತಂ - ಆ ವಾನರನನ್ನು, ದೂತಂ - ಶ್ರೀರಾಮದೂತನನ್ನಾಗಿ, ಅವಗಚ್ಛತಿ (ಅವಾಗಚ್ಛತ್) - ತಿಳಿದುಕೊಂಡಳು ||೮೪|| ಜಾನಕೀ - ಸೀತಾದೇಯು, ಪ್ರಹರ್ಷೇಣ -

ಪುತ್ರನೆನಿಸಿ, ಬಾಲ್ಯದಲ್ಲಿ ಸೂರ್ಯನನ್ನು ನುಂಗ ಹೋದ ನಿಮಿತ್ತದಿಂದಲೂ (ಐರಾವತನನ್ನು ನುಂಗಹೋದ ಕಾರಣದಿಂದಲೂ) ಇಂದ್ರನು ನನ್ನದೊಂದು ಹನು (ಕೆನ್ನೆ) ವನ್ನು ವಜ್ರಾಯುಧದಿಂದ ಹೊಡೆದನು. ಈ ನನ್ನ ವ್ಯಾಪಾರದಿಂದಲೇ ಲೋಕದಲ್ಲಿ ಹನುಮಂತನೆಂಬ ಹೆಸರನ್ನು ಪಡೆದಿದ್ದೇನೆ ||೮೨|| ಎಲೌ ಪುಣ್ಯಾತ್ಮಳೇ! ನಿನ್ನ ನಂಬುಗೆ ಗೋಸ್ಕರ ನಿನ್ನ ವಲ್ಲಭನಾದ ಶ್ರೀರಾಮಚಂದ್ರನ ಮತ್ತು ಸೌಮಿತ್ರಿಯ ಸುಗುಣಗಳನ್ನು ಬಿನ್ನವಿಸಿದೆನು ಬಹುಸ್ವಲ್ಪಕಾಲದಲ್ಲಿಯೇ ರಾಮನು ನಿನ್ನನ್ನು ಇಲ್ಲಿಂದ ಕರೆದೊಯ್ಯುವನು ||೮೩|| ಎಂದೀಪ್ರಕಾರವಾಗಿ ಆಂಜನೇಯನು ಹೇಳಿದ ಯುಕ್ತಿಯುಕ್ತಗಳಾದ ವಚನಗಳಿಂದಲೂ, ಅನುಭವ ಸಿದ್ಧವಾದ ಮತ್ತು ಉಚಿತಗಳಾದ ಗುರುತುಗಳಿಂದಲೂ ಆವಾನರವೀರನನು ಶೋಕದಿಂದ ನವೆದು ಹೋಗಿದ್ದ ಜಾನಕಿಯು ಇವನು ಶ್ರೀರಾಮದೂತನೇ ಸರಿ ಎಂದ್ನ ತಿಳಿದುಕೊಂಡಳು ||೮೪|| ಇಂತು ಹನುಮಂತನ ಮುಖದಿಂದ ಶ್ರೀರಾಮನ ಸಕಲ ಕಲ್ಯಾಣಗುಣಗಳನ್ನು ಕೇಳಿ, ಮನಸ್ಸಿನ ಸಂತೋಷವನ್ನೂ, ರೋಮಾಂಚವೇ ಮೊದಲಾದ ದೇಹದ

ಅತುಲಂ ಚ ಗತಾ ಹರ್ಷಂ ಪ್ರಹರ್ಷೇಣ ಚ ಜಾನಕೀ ।
ನೇತ್ರಾಭ್ಯಾಂ ವಕ್ರಪಕ್ಷ್ಮಾಭ್ಯಾಂ ಮುಮೋಚಾನಂದಜಂ ಜಲಂ ॥೮೫॥
ಚಾರು ತದ್ವದನಂ ತಸ್ಯಾಸ್ತಾಮ್ರಶುಕ್ಲಾಯತೇಕ್ಷಣಂ ।
ಅಶೋಭತ ವಿಶಾಲಾಕ್ಷ್ಯಾ ರಾಹುಮುಕ್ತ ಇವೋಡುರಾಟ್ ॥೮೬॥
ಹನುಮಂತಂ ಕಪಿಂ ವ್ಯಕ್ತಂ ಮನ್ಯತೇ ನಾನ್ಯಥೇತಿ ಸಾ ॥
ಅಥೋವಾಚ ಹನೂಮಾಂಸ್ತಾಮುತ್ತರಂ ಪ್ರಿಯದರ್ಶನಾಂ ॥೮೭॥

---

ಸಂತೋಷಕಾರಣವಾದ ಹನುಮದ್ವಚನದಿಂದ, ಅತುಲಂ-ಅಸದೃಶವಾದ, ಹರ್ಷಂ - ಸಂತೋಷವನ್ನು ಗತಾ - ಹೊಂದಿದವಳಾಗಿ, ವಕ್ರಪಕ್ಷ್ಮಾಭ್ಯಾಂ - ಡೊಂಕಾದ ರೆಪ್ಪೆಗಳುಳ್ಳ, ನೇತ್ರಾಭ್ಯಾಂ - ಕಣ್ಣುಗಳಿಂದ, ಆನಂದಜಂ - ಆನಂದದಿಂದುಂಟಾದ, ಜಲಂ - ಜಲವನ್ನು, ಮುಮೋಚ - ಕರೆದಳು ॥೮೫॥

ತಾಮ್ರಶುಕ್ಲಾಯತೇಕ್ಷಣಂ - ಕುಡಿಯಲ್ಲಿ ಕೆಂಪಗೂ, ಅದರ ಪಕ್ಕದಲ್ಲಿ ಬೆಳ್ಳಗೂ ವಿಶಾಲವೂ, ಆಗಿರುವ ಕಣ್ಣುಳ್ಳ, ಚಾರು - ಸುಂದರವಾದ, ತಸ್ಯಾಃ ವಿಶಾಲಾಕ್ಷ್ಯಾಃ - ವಿಶಾಲನೇತ್ರೆಯಾದ ಸೀತೆಯ ತತ್ - ಆ, ವದನಂ - ಮುಖವು, ರಾಹುಮುಕ್ತಃ - ರಾಹುವಿನಿಂದ ಬಿಡಲ್ಪಟ್ಟ, ಉಡುರಾಡಿವ - ಚಂದ್ರನಂತೆ, ಅಶೋಭತ - ಹೊಳೆಯುತಲಿದ್ದಿತು ॥೮೬॥ ಸಾ - ಆ ಜಾನಕಿಯು, ಹನೂಮಂತಂ - ಹನುಮಂತನನ್ನು, ಕಪಿಂ - ವಾನರನನ್ನಾಗಿ, ವ್ಯಕ್ತಂ - ಸ್ಪಷ್ಟವಾಗಿ, ಮನ್ಯತೆ- ತಿಳಿದುಕೊಂಡಳು, ಅನ್ಯಥಾ - ಬೇರೆ ವಿಧವಾಗಿ (ಮಾಯಾವಿಯಾದ ರಾವಣನೆಂದು) ನಮನ್ಯತೆ - ತಿಳಿಯಲಿಲ್ಲ, ಅಥ - ಆ ಮೇಲೆ, ಹನುಮಾನ್ - ಆಂಜನೇಯನು, ಪ್ರಿಯದರ್ಶನಾಂ - ಸರ್ವರಿಗೂ ಇಷ್ಟವಾದ ದರ್ಶನವುಳ್ಳ, ತಾಂ - ಆ ಸೀತಾದೇವಿಯನ್ನು ಕುರಿತು, ಉತ್ತರಂ - ಮತ್ತೊಂದು ಮಾತನ್ನು, ಉವಾಚ - ಹೇಳತೊಡಗಿದನು ॥ ೮೭ ॥ ಹೇಮೈಥಿಲಿ - ಎಲೌ ಜಾನಕಿಯೇ, ಸರ್ವಂ - ಸಕಲವಾದ, ಏತತ್ - ಇದುವರೆಗಿನ ಪೂರ್ವಚರಿತ್ರೆಯು

---

ಹರ್ಷವನ್ನೂ ಪಡೆದು, ಡೊಂಕಾದ ರೆಪ್ಪೆಗಳಿಂದೊಡಗೂಡಿರುವ ಬಲು ಅಂದವಾದ ನಯನಗಳಿಂದ ಆನಂದ ಭಾಷ್ಪವನ್ನು ಕರೆದಳು ॥೮೫॥ ಆಗ-ತುದಿಯಲ್ಲಿ ಕೆಂಪಾಗಿಯೂ, ಅದರ ಪಕ್ಕದಲ್ಲಿ ಬಿಳುಪಾಗಿಯೂ ಇರುವ ಸುಂದರವಾದ ವಿಶಾಲ ನೇತ್ರಗಳನ್ನೊಳಗೊಂಡಿರುವ ಆಕೆಯ ದಿವ್ಯಮುಖವು ರಾಹುವಿನ ಮುಖದೊಳಗೆ ಸಿಲುಕಿದ್ದ ಚಂದ್ರನು ಹೊರಗೆ ಬಂದ ಬಳಿಕ ಬೆಳಗುವ ಹಾಗೆ ಪ್ರಕಾಶಿಸುತಲಿದ್ದಿತು ॥೮೬॥ ವೈದೇಹಿಯು-ಆ ವಾನರನನ್ನು ನಿಜವಾದ ಹನುಮಂತನೆಂಬ ಕಪಿಯನ್ನಾಗಿ ಭಾವಿಸಿದಳಲ್ಲದೆ ಮೊದಲು ತಾನು ಊಹಿಸಿಇದ್ದಂತೆ ಕಪಿರೂಪದಿಂದ ಬಂದಿರುವ ರಾವಣನನ್ನಾಗಿ ಎಣಿಸಲಿಲ್ಲ. ಆಗ ಆಂಜನೇಯನು ಸೀತೆಗೆ ತನ್ನ ವಿಷಯದಲ್ಲಿ ಉಂಟಾಗಿದ್ದ ಅನ್ಯಥಾಭಾವನೆಯು ಪರಿಹಾರವಾಯಿತೆಂತಲೂ, ತಾನುಶ್ರೀರಾಮದೂತನಾದಹನುಮಂತನೇದಿಟ ಎಂಬದಾಗಿ ನಂಬುಗೆಉಂಟಾಯಿತೆಂತಲೂ, ಇಂಗಿತದಿಂದ ಮತ್ತು-ಕಾಣಬರುವ ಭಾವಗಳಿಂದಲೂ ತಿಳಿದುಕೊಂಡು, ಆ ಪ್ರಿಯದರ್ಶನಳನ್ನು ಕುರಿತು ಇಂತೆಂದನು- ॥೮೭॥ ಎಲೌ ಮಾತೆಯೇ ! ಇದುವರೆಗೆ ಯಾವದ್ವಿಷಯವನ್ನೂ ಯಥಾರ್ಥವಾಗಿ ನಿನ್ನ ಸನ್ನಿಧಾನದಲ್ಲಿ ವಿಜ್ಞಾಪಿಸಿ ಇದೇನೆ, ಇನ್ನು ಮೇಲೆ ನಿನ್ನ ಚಿತ್ತಕ್ಕೆ ಹೇಗೆ ರುಚಿಸುವುದೋ ಹಾಗೆ ನನಗೆ ಆಜ್ಞಾಪಿಸಿದರೆ ಕಿಂಕರನಾದ ನಾನು ಅದರಂತೆ ನಡೆದುಕೊಳ್ಳುತ್ತೇನೆ॥೮೮॥ಓಜಾನಕೀ ನನ್ನ ! ತಂದೆಯಾದ ಕೇಸರಿಯೆಂಬವಾನರೋತ್ತಮನು

ಏತತ್ತೇ ಸರ್ವ ಮಾಖ್ಯಾತಂ ಸಮಾಶ್ವಸಿ ಹಿ ಮೈಥಿಲಿ ।
ಕಿಂ ಕರೋಮಿ ಕಥಂ ವಾತೇ ರೋಚತೇ ಪ್ರತಿಯಾ ಮ್ಯಹಂ ॥೮೯॥
ಹತೇ ಸುರೇ ಸಂಯತಿ ಶಂಬಸಾದನೇ ಕಪಿ ಪ್ರವೀರೇಣ ಮಹರ್ಷಿಚೋದನಾತ್।
ತತೋಽಸ್ಮಿ ವಾಯು ಪ್ರಭವೋ ಹಿ ಮೈಥಿಲಿ ಪ್ರಭಾವತ ಸ್ತ ತ್ಪ್ರತಿಮಶ್ಚ ವಾನರಃ

— ಇತಿ ಶ್ರೀಮತ್ಸುನ್ದರ ಕಾಣ್ಡೇ ಪಂಚತ್ರಿಂಶ ಸ್ಸರ್ಗಃ —

ಶ್ರೀ

ಶ್ರೀರಾಮ ಚನ್ದ್ರ ಪರಬ್ರಹ್ಮಣೇ ನಮಃ

## —ಶ್ರೀಮತ್ಸುನ್ದರಕಾಣ್ಡೇ ಷಟ್ತ್ರಿಂಶ ಸ್ಸರ್ಗಃ—

ಭೂಯ ಏವ ಮಹಾತೇಜಾ ಹನುಮಾ ನ್ಮಾರುತಾತ್ಮಜಃ ।

---

ತೇ - ನಿನಗೆ, ಆಖ್ಯಾತಂ - ನನ್ನಿಂದ ಹೇಳಲ್ಪಟ್ಟಿತು, ಸಮಾಶ್ವಸಿಹಿ - ಸಮಾಧಾನಹೊಂದಿರು, ತೇ - ನಿನಗೆ, ಕಿಂ - ಯಾವುದು, ಕಥಂವಾ - ಹೇಗೆ, ರೋಚತೇ-ಇಷ್ಟವಾಗಿದೆಯೋ, (ತತ್ - ಅದನ್ನು) ಕರೋಮಿ ಮಾಡುತ್ತೇನೆ, ಅಹಂ - ನಾನು, ಪ್ರತಿಯಾಮಿ - ರಾಮಸನ್ನಿಧಿಯನ್ನು ಕುರಿತು ಹಿಂದಿರುಗುವೆನು ॥೮೯॥ (ತನ್ನ ಶೌರ್ಯವನ್ನು ತಿಳಿಸುತ್ತಾನೆ) ಹೇಮೈಥಿಲಿ - ಎಲೌ ಜಾನಕಿ, ಕಪಿಪ್ರವೀರೇಣ - ವಾನರ ವೀರನಾದ ಕೇಸರಿಯಿಂದ, ಮಹರ್ಷಿಚೋದನಾತ್ - ಮುನಿಪ್ರೇರಣೆಯಿಂದ, ಸಂಯತಿ - ಯುದ್ಧದಲ್ಲಿ, ಶಂಬಸಾದನೇ ಶಂಬ ಸಾದನನೆಂಬ ರಕ್ಕಸನು, ಹತೇ (ಸತಿ) ಕೊಲ್ಲಲ್ಪಡುತ್ತಿರಲಾಗಿ, ತತಃ - ಆ ಹಿಂದೆ, (ಅಹಂ-ನಾನು) ವಾಯುಪ್ರಭವಃ - ವಾಯುವಿನಿಂದ ಜನಿಸಿದವನಾಗಿದೇನೆ, ಪ್ರಭಾವತಃ - ಮಹಿಮೆಯಿಂದಲೂ, ತತ್ಪ್ರತಿಮಶ್ಚ-ಆ ವಾಯುವಿಗೆಣೆಯೆನಿಸಿದ, ವಾನರಃ-ಕಪಿಯೂ, ಅಸ್ಮಿಹಿ-ಆಗಿಇದೇನೆ ॥೯೦॥

— ಇಂತು ಮೂವತ್ತೈದನೆಯ ಸರ್ಗಂ —

— ಮೂವತ್ತಾರನೆಯ ಸರ್ಗಂ —

ಕಂದ॥ ಶಿರವುಂ ಬಾಗುತೆ ಸೀತೆಗೆ । ವರವಾರುತಿ ರಾಮನಾಮ ದುಂಗುರ ವೀಯಲ್ ।
ಪರಮಾದರದಿಂ ಗ್ರಹಿಸುತೆ । ಕರಿಸದಿ ವೈದೇಹಿ ರಾಮ ಕುಶಲವಕೇಳ್ದಳ್ ॥

ಮಹಾತೇಜಾಃ - ಹೆಚ್ಚಿದ ಪ್ರತಾಪವುಳ್ಳ, ಮಾರುತಾತ್ಮಜಃ - ವಾಯುನಂದನನೆನಿಸಿದ, ಹನುಮಾನ್

---

ಮಹರ್ಷಿಗಳ ಆಜ್ಞಾನುಸಾರವಾಗಿ ಅವರ ತಪೋವನದಲ್ಲಿ ಹಿಂಸಿಸುತಲಿದ್ದ ಶಂಬಸಾದನೆಂಬ ರಕ್ಕಸನನ್ನು ಕೊಂದನು. ತರುವಾಯ ನನ್ನ ತಾಯಿತಂದೆಗಳ ಪ್ರಾರ್ಥನಾನುಸಾರವಾಗಿ ವಾಯುದೇವನ ಅನುಗ್ರಹದಿಂದ ಜನಿಸಿದವನಾಗಿದೇನೆ ಬಲಪರಾಕ್ರಮಗಳಲ್ಲಿಯೂ ಆತನಿಗೆಣೆಯೆನಿಸಿರುವೆನು. ಈ ವಾನರನಾದ ನನ್ನನ್ನು ಸಾಧಾರಣನನ್ನಾಗಿ ತಿಳಿಯಬೇಡ. ನಿನ್ನ ಅಪ್ಪಣೆಯಂತೆ ಯಾವಕೆಲಸವನ್ನಾದರೂ ಮಾಡಬಲ್ಲೆನು. ಕರ್ತವ್ಯವನ್ನು ಅನುಗ್ರಹಿಸಬೇಕು ಎಂದು ಬಿನ್ನವಿಸಿವಿರಮಿಸಿದನು. ॥೯೦॥

— ಇಂತು ಮೂವತ್ತೈದನೆಯ ಸರ್ಗಂ —

ಮುವತ್ತಾರನೆಯ ಸರ್ಗಂ

ತದನಂತರದಲ್ಲಿ ಪ್ರಭಂಜನಾತ್ಮಜನು —ವೈದೇಹಿಯ ಮನದೊಳಗೆ ಇನಿತಾದರು ಸಂಶಯಲೇಶವಿರುವುದೋ, ಏನೋ, ಎಂದುಕೊಂಡು, ಅದನ್ನೂ ನಿಶ್ಶೇಷವಾಗಿ ನಿವಾರಣೆ

ಅಬ್ರುವೀ ತ್ಪ್ರಶ್ರಿತಂ ವಾಕ್ಯಂ ಸೀತಾ ಪ್ರತ್ಯಯ ಕಾರಣಾತ್ ॥೧॥
ವಾನರೋಽಹಂ ಮಹಾಭಾಗೆ ದೂತೋ ರಾಮಸ್ಯ ಧೀಮತಃ ।

ಆಂಜನೇಯನು, ಸೀತಾಪ್ರತ್ಯಯ ಕಾರಣಾತ್ - ಸೀತೆಗೆ ನಂಬುಗೆಯನ್ನುಂಟುಮಾಡುವ ನಿಮಿತ್ತದಿಂದ, ಪ್ರಶ್ರಿತಂ - ವಿನಯದಿಂದೊಡಗೂಡಿರುವ, ವಾಕ್ಯಂ - ವಚನವನ್ನು, ಭೂಯಏವ - ಮರಳಿಯೂ, (ಬಹಳ ಅರ್ಥಗರ್ಭಿತವಾಗಿಯೇ) ಅಬ್ರವೀತ್ - ಹೇಳತೊಡಗಿದನು ॥೧॥ ಹೇ ಮಹಾಭಾಗೆ - ಎಲೌ ಭಾಗ್ಯವತಿಯಾದ ಸೀತೆಯೇ, ಅಹಂ - ನಾನು, ಧೀಮತಃ-ಪ್ರಶಸ್ತವಾದ ಬುದ್ಧಿಯುಳ್ಳ, ರಾಮಸ್ಯ - ಶ್ರೀರಾಮನಿಗೆ, ದೂತಃ - ವಾರ್ತಾಹರನಾದ, ವಾನರಃ ಕಪಿಯು, ಹೇದೇವಿ-ಎಲೌ ದೇವಿಯೇ, ರಾಮನಾಮಾಂಕಿತಂ-ರಾಮನ ಹೆಸರಿನಿಂದೊಡಗೂಡಿರುವ, ಇದಂ - ಈ, ಅಂಗುಳೀಯಕಂ - ಉಂಗುರವನ್ನು, ಪಶ್ಯ - ನೋಡು, ಅಥವಾ-ಹೇ ಮಹಾಭಾಗೆ - ಎಲೌ - ಮಹಾಮಹಿಮೆಯುಳ್ಳ ಜಾನಕಿಯೇ, ಅಹಂ - ನಾನು, ನರಃ ವಾ - ಮನುಷ್ಯನೇ ಆಗಿ ಇರುವೆನು, ಧೀಮತಃ - ಮುಂದಾಲೋಚನೆಯುಳ್ಳ, ರಾಮಸ್ಯ - ಶ್ರೀ ರಾಮನಿಗೆ, ದೂತಃ - ಸೇವಕನಾಗಿದೇನೆ, ಹೇದೇವಿ - ಎಲೌ ಸತೀಶಿರೋಮಣಿಯೇ, ರಾಮನಾಮಾಂಕಿತಂ - ರಾಮನಾಮಾಕ್ಷರಗಳಿಂದ ಬೆಳಗುವ, ಇದಂ - ನೀನು ಹಿಂದೆನೋಡಿಯೇ ಇದ್ದ, ಅಂಗುಳೀಯಕಂ - ಉಂಗುರವನ್ನು ಪಶ್ಯ - ನೋಡು, ಅಥವಾ - ಹೇ ಮಹಾಭಾಗೆ - ಸಾಕ್ಷಾತ್ ಲಕ್ಷ್ಮೀಸ್ವರೂಪಳಾದ ಎಲೌ ಸೀತೆಯೇ, ಅಹಂ - ನಾನು, ನರೋವಾ - ಮನುಷ್ಯನೆ ! (ದೇವಾಂಶ ಸಂಭೂತನಲ್ಲವೆ ? ) ಧೀಮತಃ - ಧರ್ಮೋದ್ಧಾರವನ್ನು ಮಾಡಬೇಕೆಂಬ ಬುದ್ಧಿಯುಳ್ಳ, ರಾಮಸ್ಯ - ಶ್ರೀ ರಾಮರೂಪದಿಂದವತರಿಸಿರುವ ಶ್ರೀಹರಿಗೆ, ದೂತಃ - ದಾಸನಾಗಿದೇನೆ, ಹೇದೇವಿ -ರಾಮನನ್ನನುಸರಿಸಿ ಅವತರಿಸಿರುವ ಎಲೌ ದೇವಿಯೇ, ರಾಮನಾಮಾಂಕಿತಂ - ಯೋಗಿಗಳ ಮನೋನಿಲಯನಾದ ರಾಮನ ನಾಮಾಕ್ಷರಗಳ ಗುರುತುಳ್ಳ, ಇದಂ - ನಿಮ್ಮ ತಂದೆಯು ಅಳಿಯನೆಂದು ಶ್ರೀ ರಾಮನಿಗೆ ಕೊಡುವಾಗ ನೀನು ನೋಡಿ

---

ಮಾಡಬೇಕೆಂದು ನೆನೆದು,ಬಹು ತಾತ್ಪರ್ಯ ಗರ್ಭಿತವಾಗಿ ನಂಬಿಕೆಗೆ ಅರ್ಹವಾಗಿಯೂ, ವಿನಯಪೂರ್ವಕವಾಗಿಯೂ ಇರುವ ಮಾತನ್ನು ಆಡತೊಡಗಿದನು ॥ ೧ ॥ ಭಾಗ್ಯಸಂಪನ್ನೆಯಾದ ಎಲೌ ಮಾತೆಯೆ ! ನಾನು ಕಪಿರೂಪದಿಂದ ಬಂದಿರುವ ರಾವಣನಲ್ಲವಮ್ಮ, ನಿಜವಾದ ವಾನರನೂ ಹೌದು, ಮಹಾ ಬುದ್ಧಿಸಂಪನ್ನನೆನಿಸಿದ ಶ್ರೀರಾಮಚಂದ್ರನ ದೂತನೂ ಹೌದು, ಎಲೌ ದೇವಿಯೆ ! ಇದಕೊ, ಶ್ರೀರಾಮನ ನಾಮಾಕ್ಷರಗಳಿಂದ ಬೆಳಗುತಲಿರುವ ಆತನ ಬೆರಳಲ್ಲಿ ಇಟ್ಟುಕೊಳ್ಳುತಲಿದ್ದ ಈ ಉಂಗುರವನ್ನು ನೋಡು! ಮತ್ತು— ಎಲೌ ಜನನಿ ! ನಾನಾರು ಎಂಬುದನ್ನು ನಿನ್ನ ಮನದೊಳಾಲೋಚಿಸು, ನೀನು ಮಹಾ ಮಹಿಮೆಯುಳ್ಳವಳಲ್ಲವೆ ?ರಾಮನು ರಕ್ಕಸರ ಪಡೆಯಿಂದ ಬಹು ಭಯಂಕರವಾಗಿರುವ ಈ ಗಂಡಾಂತರದ ಸ್ಥಳಕ್ಕೆ ತಕ್ಕವನನ್ನು ಕಳುಹಬೇಕೆಂಬ ಮುಂದಾಲೋಚನೆಯುಳ್ಳವನಲ್ಲವೆ?ಅಂತಹಮಹಾ ಬುದ್ಧಿಸಂಪನ್ನನಾದ ಶ್ರೀರಾಮನಿಗೆ ದೂತನಾಗಿಬಂದಿರುವ ನಾನು ನರನೋ ? ವಾನರನೋ ? ನಿನ್ನ ಮನದೊಳಗೆ ಚಿಂತಿಸಿ ನೋಡು. ಇದಲ್ಲದೆ ಎಲೌ ಜಗಜ್ಜನನಿ ! ನೀನು ಎಲ್ಲರಂತೆ ಸಾಧಾರಣಳಾದ ಮನುಷ್ಯಸ್ತ್ರೀಯಲ್ಲ. ಪ್ರಪಂಚದ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣಭೂತಳಾಗಿರುವ ಮಹತ್ವಸಂಪನ್ನೆಯಲ್ಲವೆ ! ಮಹಾಲಕ್ಷ್ಮಿಯು ನೀನೇ ಅಲ್ಲವೆ ? ಪ್ರಪಂಚದ ಧರ್ಮಮರ್ಯಾದೆಯನ್ನು ನೆಲೆಗೊಳಿಸುವದಕ್ಕೋಸ್ಕರ ಮನುಷ್ಯರೂಪದಿಂದ

ರಾಮ ನಾಮಾಂಕಿತಂ ಚೇದಂ ಪಶ್ಯ ದೇ ವ್ಯಂಗುಳೀಯಕಂ ॥೨॥
ಪ್ರತ್ಯಯಾರ್ಥಂ ತವಾನೀತಂ ತೇನ ದತ್ತಂ ಮಹಾತ್ಮನಾ ।
ಸಮಾಶ್ವಸಿ ಹಿ ಭದ್ರಂ ತೇ ಕ್ಷೀಣದುಃಖ ಫಲಾ ಹ್ಯಸಿ ॥೩॥
ಗೃಹೀತ್ವಾ ಪ್ರೇಕ್ಷಮಾಣಾ ಸಾ ಭರ್ತುಃ ಕರ ವಿಭೂಷಣಂ।

ಇರುವ ಈ, ಅಂಗುಳೀಯಕಂ - ಯಾವಾಗಲೂ ರಾಮನ ಕಯ್ಯೊಳಿದ್ದ ಉಂಗುರವನ್ನು, ಪಶ್ಯ-ನೋಡು ॥೨॥ ಮಹಾತ್ಮನಾ - ಮಹಾನುಭಾವನಾದ, ತೇನ-ಆ ರಾಮನಿಂದ, ತವ - ನಿನ್ನ, ಪ್ರತ್ಯಯಾರ್ಥಂ - ನಂಬಿಕೆಗೋಸ್ಕರ, ದತ್ತಂ - ಶ್ರೀ ರಾಮನಿಂದ ಕೊಡಲ್ಪಟ್ಟ ಉಂಗುರವು, ಆನೀತಂ - ನನ್ನಿಂದ ತರಲ್ಪಟ್ಟಿತು, ತೆ - ನಿನಗೆ, ಭದ್ರಂ - ಶುಭವಾಗಲಿ, ಸಮಾಶ್ವಸಿಹಿ - ಸಮಾಧಾನವನ್ನು ಪಡೆದಿರು, ಹಿ - ಏತಕೆಂದರೆ, ಕ್ಷೀಣದುಃಖ ಫಲಾ - ತೊಲಗಿಹೋದ ದುಃಖದ ಫಲವುಳ್ಳವಳಾಗಿ, ಅಸಿ - ಇದ್ದೀಯ ॥ ೩ ॥ ಸಾ - (ಮಾಯತಿಯನ್ನು ರಾವಣನನ್ನಾಗಿ ಭಾವಿಸಿ ಇದ್ದ ) ಆ ಸೀತೆಯು, ಭರ್ತುಃ - ಪ್ರಿಯನ, ಕರವಿಭೂಷಣಂ - ಹಸ್ತಾಲಂಕಾರವಾಗಿದ್ದ ಉಂಗುರವನ್ನು, ಗೃಹೀತ್ವಾ - ತೆಗೆದುಕೊಂಡು, ಪ್ರೇಕ್ಷಮಾಣಾ-ರೆಪ್ಪೆ ಬಡಿಯದೆ ನೋಡುತಲಿರುವವಳಾಗಿ, ಭರ್ತಾರಂ-ಪತಿಯನ್ನು, ಸಂಪ್ರಾಪ್ತೇವ - ಹೊಂದಿದವಳಂತಾಗಿ,

ಅವತರಿಸಿದವಳಲ್ಲವೆ ? ಆದರೂ ಲೋಕವನ್ನು ವಿಡಂಬಿಸಲಿಕ್ಕೆ ಮೊದಲು - "ಮರದಮೇಲೆ ಹಾರಾಡುವ ಕೋಡಗಗಳೆಲ್ಲಿ? ಮಹಾ ರಾಜಾಧಿರಾಜರಾದ ಮನುಷ್ಯರೆಲ್ಲಿ? ಗುಣವೊಂದಲ್ಲ, ಧರ್ಮವೊಂದಲ್ಲ, ಉದ್ಯೋಗವೊಂದಲ್ಲ, ಜಾತಿಯೊಂದಲ್ಲ, ಹೀಗಿರುವಲ್ಲಿ ವಾನರರಿಗೂ ನರರಿಗೂ ಸ್ವಾಮಿಭೃತ್ಯನ್ಯಾಯವೆಲ್ಲಿ ಬಂದಿತು ? ಎಂಬದಾಗಿ ನನ್ನನ್ನು ಹೇಳನಮಾಡಿದೆ. ಈಗಲಾದರೂ ನಿನ್ನ ದಿವ್ಯ ದೃಷ್ಟಿಯಿಂದ ಯೋಚಿಸು, ರಾಮನು ಸಾಮಾನ್ಯಮನುಷ್ಯನೆ ? ದುಷ್ಟನಿಗ್ರಹವನ್ನು ಮಾಡಿ ಶಿಷ್ಟರನ್ನು ಪರಿಪಾಲಿಸಿ, ಧರ್ಮಸಂಸ್ಥಾಪನೆಯನ್ನು ಮಾಡುವ ಬುದ್ಧಿಯಿಂದ ಶ್ರೀರಾಮರೂಪನಾಗಿ ಅವತರಿಸಿರುವ ಶ್ರೀಮಹಾವಿಷ್ಣುವಲ್ಲವೆ? ಹೀಗಿರುವಲ್ಲಿ ನಾನು ಮಾತ್ರ ವಾನರನೋ ? ನರನೋ? ವಾಯುದೇವನ ಅಂಶದಿಂದ ಶ್ರೀರಾಮನ ಭಂಟನಾಗಿ ಜನಿಸಿದವನಲ್ಲವೊ ? ಇದಕೊ. ನೋಡು, ಇದುವಾನರನು ಮಾಡುವ ಕೆಲಸವೊ ? ಯೋಗಿಗಳ ಮನೋನಿಲಯನಾದ ಶ್ರೀರಾಮನ ದಿವ್ಯನಾಮಾಕ್ಷರಗಳಿಂದ ಕಂಗೊಳಿಸುವ ಈ ಸುವರ್ಣಾಂಗುಳೀಯಕವನ್ನು ಕಟಾಕ್ಷಿಸು, ತರುವಾಯ ನಿನ್ನ ಚಿತ್ತವೊಪ್ಪಿದಂತೆ ನಡೆಸು ॥೨॥ ನನ್ನಲ್ಲಿ ನಿನಗೆ ಕಪಿತ್ವ ಬುದ್ಧಿಯುಂಟಾಗದಿರಲಿಕ್ಕೂ, ಮಾಯಾವಿಯೆಂಬ ಊಹೆಯುಂಟಾಗದಿರುವುದಕ್ಕೂ, ಶ್ರೀರಾಮದೂತನೇ ಹೌದು ಎಂಬ ನಂಬುಗೆಯುಂಟಾಗುವುದಕ್ಕೂ ಮಹಾನುಭಾವನಾದ ಶ್ರೀರಾಮನು ಇದನ್ನು ಕಳುಹಿಸಿಇದಾನೆ, ಇನ್ನಾದರೂ ಸಮಾಧಾನವನ್ನು ಪಡೆ, ನಿನಗೆ ಶುಭವಿಭವವು ಒದಗಿದೆ, ದುಃಖದ ದುರ್ವ್ಯಾಪಾರವೆಲ್ಲ ತೊಲಗಿತು ಎಂದು ಹೇಳಿ ಸುಮ್ಮನಾದನು ॥೩॥ ಆಗಲಾ ಜಾನಕಿಯು-ತನ್ನ ಪ್ರಿಯವಲ್ಲಭನು ಕರದಲ್ಲಿ ಧರಿಸಿದ್ದ ಉಂಗುರವನ್ನು ತೆಗೆದುಕೊಂಡಳು. ಅದರಲ್ಲಿಯೇ ನಟ್ಟ ದೃಷ್ಟಿಯುಳ್ಳವಳಾಗಿ ನೋಡಿದಳು !, ಆಗ-ಪಾಣಿಗ್ರಹಣ ಸಮಯದಲ್ಲಿ ತನ್ನ ತಂದೆಯಾದ ಜನಕನು ಅಳಿಯನಿಗೆ ಕೊಟ್ಟುದೆಂದೂ, ಅಂದಿನಿಂದ ಪ್ರಾಣವಲ್ಲಭನ ಹಸ್ತಾಭರಣವಾಗಿದ್ದುದೆಂದೂ, ಆಪದ್ಬಂಧುವಿನಂತೆ ಈ ವಿಪತ್ತಿನ ಸಮಯದಲ್ಲಿ ನನ್ನನ್ನು ಆದರಿಸಲು ಇಲ್ಲಿಗೆ ಬಂದಿರುವುದೆಂದೂ,

ಭರ್ತಾರ ಮಿವ ಸಂಪ್ರಾಪ್ತಾ ಜಾನಕೀ ಮುದಿತಾಽಭವತ್ ॥೪॥
ಚಾರು ತದ್ವದನಂ ತಸ್ಯಾ ಸ್ತಾಮ್ರ ಶುಕ್ಲಾಯತೇಕ್ಷಣಂ ।
ಅಶೋಭತ ವಿಶಾಲಾಕ್ಷ್ಯಾ ರಾಹುಮುಕ್ತ ಇವೋಡು ರಾಟ್ ॥೫॥
ತತ ಸ್ಸಾ ಹ್ರೀಮತೀ ಬಾಲಾ ಭರ್ತುಃ ಸಂದೇಶ ಹರ್ಷಿತಾ ।
ಪರಿತುಷ್ಟಾ ಪ್ರಿಯಂ ಕೃತ್ವಾ ಪ್ರಶಶಂಸ ಮಹಾಕಪಿಂ ॥೬॥
ವಿಕ್ರಾಂತ ಸ್ತ್ವಂ ಸಮರ್ಥ ಸ್ತ್ವಂ ಪ್ರಾಜ್ಞ ಸ್ತ್ವಂ ವಾನರೋತ್ತಮ ।

ಮುದಿತಾ - ಆನಂದವುಳ್ಳವಳು, ಅಭವತ್ - ಆದಳು ॥೪॥ ತಾಮ್ರಶುಕ್ಲಾಯತೇಕ್ಷಣಂ-ಕೆಂಪಾಗಿಯೂ ಬೆಳ್ಳಗೂ ವಿಶಾಲವಾಗಿಯೂ ಇರುವ ಕಣ್ಣುಗಳುಳ್ಳ, ಚಾರು ಬಹುಸುಂದರವಾದ, ತತ್ - ಆ ರಾಮನಾ ಮಾಂಗುಳೀಯಕದರ್ಶನಕಾಲದಲ್ಲಿನ, ತಸ್ಯಾಃ ವಿಶಾಲಾಕ್ಷ್ಯಾಃ - ಆ ಜಾನಕಿಯ, ವದನಂ - ಮುಖವು, ರಾಹುಮುಕ್ತಃ - ರಾಹುವಿನಿಂದ ಬಿಡಲ್ಪಟ್ಟ, ಉಡುರಾಡಿವ, ತಾರಾಧಿಪನಂತೆ, ಅಶೋಭತ - ಬೆಳಗುತಲಿದ್ದಿತು ॥೫॥ ತತಃ - ತರುವಾಯ. ಸಾಬಾಲಾ - ಆ ಜಾನಕಿಯು, ಹ್ರೀಮತೀ - (ಉಂಗುರವನ್ನು ವಲ್ಲಭನನ್ನಾಗಿ ಭಾವಿಸಿದುದರಿಂದ) ಲಜ್ಜೆಯುಳ್ಳವಳಾಗಿ, ಭರ್ತುಃ - ಪತಿಯ, ಸಂದೇಶ - ಕುಶಲವೃತ್ತಾಂತದಿಂದ, ಹರ್ಷಿತಾ - ಸಂತೋಷವುಳ್ಳವಳಾಗಿ, ಪ್ರಿಯಂ - ಗೌರವವನ್ನು, ಕೃತ್ವಾ - ತೋರಿಸಿ, ಮಹಾಕಪಿಂ - ಹನುಮಂತನನ್ನು, ಪ್ರಶಶಂಸ - ಹೊಗಳಿದಳು ॥೬॥ ವಾನರೋತ್ತಮ - ಎಲೈ ಕಪಿವೀರನೆ! ಯೇನ-ಯಾವಕಾರಣದಿಂದ, ವಿಕೇನ - ಬುಷ್ಟನಾದ, ತ್ವಯಾ - ನಿನ್ನಿಂದ, ಇದಂ - ಈ, ರಾಕ್ಷಸಪದಂ - ರಾಕ್ಷಸ

ತಿಳಿದುಕೊಂಡುದೇ ಅಲ್ಲದೆ, ತಾನು ಶ್ರೀರಾಮನೊಡನೆ ಇರುವ ವೇಳೆಯೊಳಗೆ ವಿಹಾರವೇ ಮೊದಲಾದ ಸಂತೋಷ ಸಮಯಗಳಲ್ಲಿನ ಸಮಸ್ತ ವ್ಯಾಪಾರಗಳೂ ಏಕಕಾಲದಲ್ಲಿ ಸ್ಮರಣೆಗೆ ಬಂದುವು, ತನ್ನ ಪತಿಯೇ ಸಾಕ್ಷಾತ್ತಾಗಿ ಇದಿರಿಗೆ ಬಂದು ನಿಂತಂತೆ ಭಾವಿಸಿದಳು, ಅಂತರಂಗದಲ್ಲಿ ಆನಂದವು ಉಕ್ಕಿತು. ರೋಮಾಂಚವುಂಟಾಯಿತು, ನಯನಗಳಲ್ಲಿ ಆನಂದ ಬಾಷ್ಪವು ತುಂಬಿತು. ಮೈಮೇಲೆ ಸ್ಮರಣೆಯೇ ತಪ್ಪಿತು. ಆನಂದಾಮೃತಸಾಗರದಲ್ಲಿ ಮುಳುಗಿಯೇ ಹೋದಳು. ಸೀತಾದೇವಿಗೆ ಆಗ ಉಂಟಾದ ಸ್ಥಿತಿಯು ಅನುಭವದಿಂದ ತಿಳಿಯುತಕ್ಕುದೇ ಹೊರತು ಹೇಳಲಳವಲ್ಲ, ॥೪॥ ಆಗತಾನೆ ಅರಳಿದ ಕೆಂದಾವರೆಯಂತೆ ಕಂಗೊಳಿಸುವ ಅಗಲವಾದ ಕಣ್ಣುಗಳನ್ನೊಳಗೊಂಡ ಆಕೆಯ ಅಂದವಾದ ವದನವು ರಾಹುವಿನ ವದನದಿಂದ ಹೊರಗೆ ಬಂದ ಪೂರ್ಣಚಂದ್ರನಂತೆ ಪ್ರಕಾಶಿಸುತಲಿದ್ದಿತು. ॥೫॥ ತರುವಾಯ ತಾನು ಮೊದಲು ಆಂಜನೇಯನನ್ನು ಕುರಿತು ಆಡಿದ ಮಾತುಗಳೆಲ್ಲ ನೆನೆಪಿಗೆ ಬಂದುದರಿಂದಲೂ, ಲೋಕೋತ್ತರ ಸಾಮುದ್ರಿಕ ಶಾಸ್ತ್ರೋಕ್ತಪ್ರಕಾರ ಶ್ರೀರಾಮಲಕ್ಷ್ಮಣರ ವಿಚಿತ್ರ ಲಕ್ಷಣಗಳನ್ನೆಲ್ಲಾ ಉದಹರಿಸಿದುದರಿಂದಲೂ, ಮಾರುತಿಯು ಮೂದಲಿಸಿದುದರಿಂದಲೂ ಬಲು ನಾಚಿಗೆಗೊಂಡಳು. ಪತಿಯ ಕುಶಲವೃತ್ತಾಂತಶ್ರವಣದಿಂದ ಹರ್ಷಪರವಶಳಾಗಿ ಆಂಜನೇಯನನ್ನು ಮನಃ ಪೂರ್ವಕವಾಗಿ ಗೌರವಿಸಿ, ಆತನನ್ನು ಹೇರಳವಾಗಿ ಕೊಂಡಾಡಿದಳು ॥೬॥ ಎಲೈ ವಾನರೋತ್ತಮನೇ ! ನಿನ್ನ ನಿಜವನ್ನು ತಿಳಿಯಬೇಕೆಂದು ನರರಿಗೂ, ವಾನರರಿಗೂ ಪರಿಚಯವೆತ್ತಣದು ? ರಾಮಲಕ್ಷ್ಮಣರು ಹೇಗೆ ಇದ್ದಾರೆ ? ಇತ್ಯಾದಿ ಪ್ರಶ್ನೆಗಳನ್ನು ಕೇಳಿದೆನಲ್ಲದೆ ನಿನ್ನನ್ನು ಹೀಯಾಳಿಸಬೇಕೆಂದಲ್ಲ. ಮಹಾ ಮಾಯಾವಿಗಳಾದ ರಾಕ್ಷಸರಿರುವ

ಯೇನೇದಂ ರಾಕ್ಷಸಪದಂ ತ್ವಯೈಕೇನ ಪ್ರಧರ್ಷಿತಂ ॥೭॥
ಶತಯೋಜನ ವಿಸ್ತೀರ್ಣ ಸ್ಸಾಗರೋ ಮಕರಾಲಯಃ ।
ವಿಕ್ರಮ ಶ್ಲಾಘನೀಯೇನ ಕ್ರಮತಾ ಗೋಷ್ಪದೀಕೃತಃ ॥೮॥
ನ ಹಿ ತ್ವಾಂ ಪ್ರಾಕೃತಂ ಮನ್ಯೇ ವಾನರಂ ವಾನರರ್ಷಭ ।
ಯಸ್ಯ ತೇ ನಾಸ್ತಿ ಸಂತ್ರಾಸೋ ರಾವಣಾ ನ್ನಾಪಿ ಸಂಭ್ರಮಃ ॥೯॥
ಅರ್ಹಸೇ ಚ ಕಪಿಶ್ರೇಷ್ಠ ಮಯಾ ಸಮಭಿ ಭಾಷಿತುಂ ।
ಯದ್ಯಪಿ ಪ್ರೇಷಿತಸ್ತೇನ ರಾಮೇಣ ವಿದಿತಾತ್ಮನಾ ॥೧೦॥

---

ಸ್ಥಾನವು, ಪ್ರಧರ್ಷಿತಂ - ಗೆಲ್ಲಲ್ಪಟ್ಟಿತೋ, (ತಿರಸ್ಕರಿಸಲ್ಪಟ್ಟಿತೋ) ತೇನ - ಆ ಕಾರಣದಿಂದ, ತ್ವಂ - ನೀನು, ವಿಕ್ರಾಂತಃ - ಪರಾಕ್ರಮಶಾಲಿಯು, ತ್ವಂ - ನೀನೇ, ಸಮರ್ಥಃ - ಕಾರ್ಯನಿರ್ವಾಹದಕ್ಷನು, ತ್ವಂ - ನೀನೇ, ಪ್ರಾಜ್ಞಃ - ಸಮಯೋಚಿತವಾದ ಪ್ರತಿಭೆಯುಳ್ಳವನು ॥೭॥ ವಿಕ್ರಮಶ್ಲಾಘನೀಯೇನ - ಪರಾಕ್ರಮದಿಂದ ಕೊಂಡಾಡಲ್ಪಡತಕ್ಕವನಾಗಿರುವ, ಕ್ರಮತಾ - ಕಡಲನ್ನು ದಾಟಿಬರುತಲಿರುವ ನಿನ್ನಿಂದ, ಶತಯೋಜನವಿಸ್ತೀರ್ಣಃ - ನೂರುಗಾವುದಗಳಷ್ಟು ವಿಸ್ತಾರವಾದ, ಮಕರಾಲಯಃ - ಮೊಸಳೆ ಮೊದಲಾದ ಕ್ರೂರಜಂತುಗಳಿಗೆ ಮನೆಯಾದ, ಸಾಗರಃ - ಸಮುದ್ರವು, ಗೋಷ್ಪದೀಕೃತಃ - ಆಕಳಿನ ಹೆಜ್ಜೆಯಷ್ಟಾಗಿ ಮಾಡಲ್ಪಟ್ಟಿತು ॥೮॥ ವಾನರರ್ಷಭ - ಎಲೈ ವಾನರೋತ್ತಮನೆ! ತ್ವಾಂ - ನಿನ್ನನ್ನು, ಪ್ರಾಕೃತಂ - ಸಾಧಾರಣನಾದ, ವಾನರಂ - ಕಪಿಯನ್ನಾಗಿ, ನಮನ್ಯೇ - ತಿಳಿಯುವುದಿಲ್ಲ, ಯಸ್ಯ - ಯಾವ, ತೇ - ನಿನಗೆ, ರಾವಣಾತ್ - ರಾವಣನ ದೆಸೆಯಿಂದ, ಸಂತ್ರಾಸಃ - ಭಯವು, ನಾಸ್ತಿ - ಇಲ್ಲವೋ, ಸಂಭ್ರಮೋಪಿ - ಬುದ್ಧಿಭ್ರಮೆಯೂ, ನಾಸ್ತಿ - ಇಲ್ಲವೋ ॥೯॥ ಯದ್ಯಪಿ - ಮತ್ತಾವ ಕಾರಣದಿಂದ, ವಿದಿತಾತ್ಮನಾ - ಪರರ ಇಂಗಿತವನ್ನು ಬಲ್ಲವನಾಗಿರುವ, ತೇನರಾಮೇಣ - ಆ ರಾಮನಿಂದ, ಪ್ರೇಷಿತಃ - ಕಳುಹಿಸಲ್ಪಟ್ಟಿರುವೆಯೋ, (ತತ್- ಆ ಕಾರಣದಿಂದಲೇ) ಮಯಾ - ನನ್ನಿಂದ, ಸಮಭಿಭಾಷಿತುಂ - ಸಂಭಾಷಿಸಲಿಕ್ಕೆ,

---

ಬಹು ಕ್ರೂರವಾದ ಸ್ಥಲಕ್ಕೆ ಮಹಾ ಸಂಧಾನದಿಂದ ಪ್ರವೇಶಿಸಿರುವ ನೀನು ಬಹು ಪರಾಕ್ರಮಶಾಲಿ. ಅಸಹಾಯಶೂರ, ಕಾಲದೇಶಗಳನ್ನರಿತು ಕಾರ್ಯನಿರ್ವಾಹಮಾಡುವುದರಲ್ಲಿ ನೀನೇ ದಕ್ಷ. ಇವರ ಮೋಸಗಳಿಗೆಲ್ಲ ಒಳಗಾಗದಿರುವುದರಿಂದ ನೀನು ಬಹು ಪ್ರಜ್ಞಾಶಾಲಿ, ನೀನೊಬ್ಬನೇ ಬಂದು ಇಷ್ಟು ಕೆಲಸವನ್ನು ನೆರವೇರಿಸಿರುವುದರಿಂದ ನಿನಗೆ ಎಣೆಯೇ ಇಲ್ಲ ಎಂದು ಹೇಳಬೇಕು ॥೭॥ ಮಹಾ ಪರಾಕ್ರಮದಿಂದ ಶ್ಲಾಘನೀಯನಾದ ನೀನು ಹಾರಿಬರುವ ವೇಗದಲ್ಲಿ ನೂರುಗಾವುದಗಳ ವಿಸ್ತಾರವಾಗಿ ಮೊಸಳೆಯೇ ಮುಂತಾದ ಕ್ರೂರಜಂತುಗಳಿಗೆ ತವರ್ಮನೆಯಾಗಿರುವ ಮಹಾ ಸಮುದ್ರವನ್ನು ಒಂದು ಆಕಳಿನ ಹೆಜ್ಜೆಯಷ್ಟು ನೆಲಕ್ಕಿಂತಲೂ ಕಡೆಯಾಗಿ ಎಣಿಸಿದೆಯಲ್ಲ ! ನಿನ್ನ ಶೌರ್ಯವನ್ನು ಎಷ್ಟೆಂದು ಹೇಳಬೇಕು ॥ ೮ ॥ ಎಲೈ ಪ್ಲವಂಗ ಪುಂಗವನೇ ! ನೀನು ಸಾಧಾರಣನಾದ ಕಪಿಯಲ್ಲ, ನಿನ್ನನ್ನು ವಾನರ ಮಾತ್ರವನ್ನಾಗಿ ನಾನು ಭಾವಿಸುವುದಿಲ್ಲ ಏಕೆಂದರೆ — ಮಹಾ ಭಯಂಕರನಾದ ದಶಕಂಠನಿಂದ ನಿನಗೆ ಲೇಶವಾದರೂ ಭಯವಿಲ್ಲ ಮತ್ತು ಬುದ್ಧಿಭ್ರಮವೂ ಇಲ್ಲ ಇಂತಹ ನೀನು ಅಸದೃಶವೀರನಲ್ಲವೆ ? ॥೯॥ ಎಲೈ ಕಪಿಶ್ರೇಷ್ಠನೇ ನನ್ನ ಮನಸ್ಸನ್ನರಿತು ಶ್ರೀ ರಾಮಚಂದ್ರನು-ತಕ್ಕ ವೀರನನ್ನು ಕಳುಹಿಸಿರುವುದರಿಂದ ನನ್ನೊಡನೆ ಸಂಭಾಷಿಸಲಿಕ್ಕೆ ನೀನು ಅರ್ಹನಾಗಿ

ಪ್ರೇಷಯಿಷ್ಯತಿ ದುರ್ಧರ್ಷೋ ರಾಮೋ ನ ಹ್ಯಪರೀಕ್ಷಿತಂ ।
ಪರಾಕ್ರಮ ಮವಿಜ್ಞಾಯ ಮತ್ಸ್ರಕಾಶಂ ವಿಶೇಷತಃ ॥೧೧॥
ದಿಷ್ಟ್ಯಾ ಚ ಕುಶಲೀ ರಾಮೋ ಧರ್ಮಾತ್ಮಾ ಸತ್ಯಸಂಗರಃ ।
ಲಕ್ಷ್ಮಣಶ್ಚ ಮಹಾತೇಜಾ ಸ್ಸುಮಿತ್ರಾ ಽ ನಂದ ವರ್ಧನಃ ॥೧೨॥
ಕುಶಲೀ ಯದಿ ಕಾಕುತ್‌ಸ್ಥಃ ಕಿನ್ನು ಸಾಗರ ಮೇಖಲಾಂ ।

ಅರ್ಹನೆ - ತಕ್ಕವನಾಗಿದ್ದೀಯೆ ॥೧೦॥ ದುರ್ಧರ್ಷಃ - ಹೆರರಿಂದ ತಿರಸ್ಕರಿಸಲಶಕ್ಯನಾದ, ರಾಮಃ - ಶ್ರೀರಾಮನು, ವಿಶೇಷತಃ - ಸಂಪೂರ್ಣವಾಗಿ, ಪರಾಕ್ರಮಂ - ಶೌರ್ಯವನ್ನು, ಅವಿಜ್ಞಾಯ - ಅರಿಯದೆ, ಅಪರೀಕ್ಷಿತಂ - ಪರೀಕ್ಷಿಸಲ್ಪಡದಿರುವವನನ್ನು, ಮತ್ಸ್ರಕಾಶಂ - ನನ್ನ ಸಮೀಪವನ್ನು ಕುರಿತು, ನಪ್ರೇಷಯಿಷ್ಯತಿ - ಕಳುಹಿಸಲಾರನು ॥೧೧॥ ಧರ್ಮಾತ್ಮಾ - ಧರ್ಮಬುದ್ಧಿಯುಳ್ಳ, ಸತ್ಯಸಂಗರಃ - ಸತ್ಯಪ್ರತಿಜ್ಞನಾದ, ರಾಮಃ - ಶ್ರೀ ರಾಮನು, ದಿಷ್ಟ್ಯಾ - ನನ್ನ ಭಾಗ್ಯವಶದಿಂದ, ಕುಶಲೀ - ಕ್ಷೇಮವುಳ್ಳವನಾಗಿದಾನೆ, ಮಹಾತೇಜಾಃ - ಮಹಾ ತೇಜಸ್ವಿಯಾದ, ಸುಮಿತ್ರಾನಂದವರ್ಧನಃ - ಸುಮಿತ್ರೆಗೆ ಸಂತೋಷವನ್ನು ಹೆಚ್ಚಿಸುವ, ಲಕ್ಷ್ಮಣಶ್ಚ - ಲಕ್ಷ್ಮಣನೂ, ಕುಶಲೀ - ಕ್ಷೇಮವುಳ್ಳವನಾಗಿದಾನೆ ॥೧೨॥ ಕಾಕುತ್‌ಸ್ಥಃ-ಶ್ರೀರಾಮನು

ಇದ್ದೀಯೆ ॥೧೦॥ ಎಲೈ ಪವಮಾನನಂದನನೇ ! ನೀನು ಸರ್ವಕಾರ್ಯಗಳನ್ನೂ ಸಾಧಿಸುವುದರಲ್ಲಿ ಸಮರ್ಥನೆಂದು ಚೆನ್ನಾಗಿ ಪರೀಕ್ಷಿಸಿ ನಿನ್ನನ್ನು ಇಲ್ಲಿಗೆ ಕಳುಹಿಸಿ ಇದಾನೆ. ಸರ್ವಜ್ಞನಾದ ಆ ಮಹಾನುಭಾವನು ಇಷ್ಟು ಸಾಹಸಕಾರ್ಯಗಳನ್ನು ನಡೆಸತಕ್ಕ ಶಕ್ತಿಯನ್ನು ಪರೀಕ್ಷಿಸದೆ ಅನರ್ಹನನ್ನು ಎಂದಿಗೂ ಕಳುಹಿಸಲಾರ ॥೧೧॥ ಮಹಾಧರ್ಮಾತ್ಮರೂ ಸತ್ಯಪ್ರತಿಜ್ಞರೂ ಆಗಿ ಮಹಾ ಬಾಹುಬಲಸಂಪನ್ನರಾದ ರಾಮಲಕ್ಷ್ಮಣರು ಕುಶಲದಿಂದಿರುವುದು ನನ್ನ ಭಾಗ್ಯೋದಯವೇ ಸರಿ. ಈ ವಿಷಯದಲ್ಲಿ ಸಂದೇಹವೇ ಇಲ್ಲ. ॥೧೨॥ ಬಳಿಕ ಯದು ? ಶ್ರೀ ರಾಮಚಂದ್ರನು ಕುಶಲಿಯಾಗಿರುವ ಪಕ್ಷದಲ್ಲಿ ಪ್ರಾಣಪ್ರಿಯಳಾದ ನನ್ನ ನಿಮಿತ್ತದಿಂದ ಪ್ರಳಯಕಾಲದಲ್ಲಿ ಜಾಜ್ವಲ್ಯಮಾನವಾಗಿ ಉರಿಯುವ ಅಗ್ನಿಯಂತೆ ಕೋಪದಿಂದ ಭೂಮಂಡಲದ ಜನರನ್ನೆಲ್ಲ ಏಕೆ ಸುಡದೆ ಇದಾನೆ ! ಹಾಗೆ ಎಂದಿಗೂ ಮಾಡಲಾರ, ನನ್ನಲ್ಲಿ ಅಪಾರವಾದ ಅಕ್ಕರೆಯಿದ್ದರೂ ಒಬ್ಬಳಿಗೋಸ್ಕರ ಭೂಮಂಡಲವನ್ನು ಸುಡುವುದು ನ್ಯಾಯವೆ? ಪೂರ್ವದಲ್ಲಿ ಆ ಕಕುತ್‌ಸ್ಥನು ವೃಷಭರೂಪನಾಗಿದ್ದ ಇಂದ್ರನ ಬೆನ್ನಿನಮೇಲೆ ಕುಳಿತುಕೊಂಡು ರಕ್ಕಸರನ್ನೆಲ್ಲ ಜಯಿಸಿ,ಅದುವರೆಗೆ ರಾಕ್ಷಸರಿಂದಇಂದ್ರನಿಗೆ ಉಂಟಾಗಿದ್ದ ಅಪಮಾನವನ್ನು ಪರಿಹರಿಸಿ ರಕ್ಷಿಸಲಿಲ್ಲವೆ ? ಹಾಗೆಯೇ ಈ ಶ್ರೀರಾಮನೂ ಪರರಿಗೆ ಅಪ ಮಾನವೇನಾದರೂ ಉಂಟಾಗಿದ್ದರೆ ಅದನ್ನು ಪರಿಹರಿಸಬಲ್ಲನಲ್ಲದೆ ಸ್ವಜನರಿಗೆ ಉಂಟಾಗಿರುವ ಅಪಮಾನವನ್ನು ಪರಿಹರಿಸತಕ್ಕುದೇನೂ ಅತಿಶಯವಲ್ಲ ಎಂಬ ನಿಯಮವನ್ನೇನಾದರೂ ಇಟ್ಟುಕೊಂಡಿರುವನೋ ಹೇಗೋ ? ಅವನಿಗೇನು ಸಾಮರ್ಥ್ಯವಿಲ್ಲವೆ? ನನ್ನಲ್ಲಿ ಪ್ರೇಮವಿಲ್ಲವೆ ? ಉಪೇಕ್ಷೆಮಾಡತಕ್ಕವನೆ ? ಅದೊಂದೂ ಇಲ್ಲ. ನನ್ನ ನಿಮಿತ್ತದಿಂದಲೇ ಜನಸ್ಥಾನದಲ್ಲಿ ಖರ ಮೊದಲಾದ ರಾಕ್ಷಸರನ್ನು ನಿಮಿಷಮಾತ್ರದಲ್ಲಿ ಸಂಹರಿಸಲಿಲ್ಲವೆ? ಆದರೆ-ಆಗ ನಾನು ಇದಿರಿಗಿದ್ದೆನು, ಈಗ ದೇಶಾಂತರದಲ್ಲಿದೇನೆ, ಆದುದರಿಂದ ನನಗೊಬ್ಬಳಿಗಾಗಿ ಲೋಕವನ್ನು ಸುಡುವುದು ನ್ಯಾಯವಲ್ಲವೆಂದು ಭಾವಿಸಿರಬಹುದು, ಹಾಗಿಲ್ಲದಿದ್ದರೆ-

ಮಹೀಂ ದಹತಿ ಕೋಪೇನ ಯುಗಾಂತಾಗ್ನಿ ರಿವೋತ್ಥಿತಃ ॥೨೩॥
ಅಥವಾ ಶಕ್ತಿಮಂತೌ ತೌ ಸುರಾಣಾ ಮಪಿನಿಗ್ರಹೆ ।
ಮಮೈವ ತು ನ ದುಃಖಾನಾ ಮಸ್ತಿ ಮನ್ಯೇ ವಿಪರ್ಯಯಃ ॥೧೪॥
ಕಚ್ಚಿ ನ್ನವ್ಯಥತೆ ರಾಮಃ ಕಚ್ಚಿ ನ್ನ ಪರಿತಪ್ಯತೆ ।
ಉತ್ತರಾಣಿ ಚ ಕಾರ್ಯಾಣಿ ಕುರುತೆ ಪುರುಷೋತ್ತಮಃ ॥೧೫॥

ಕುಶಲೀಯದಿ - ಕ್ಷೇಮವುಳ್ಳವನಾಗಿದ್ದರೆ, ಸಾಗರಮೇಖಲಾಂ - ಕಡಲನ್ನು ಡಾಬನ್ನಾಗಿ ಪಡೆದಿರುವ, ಮಹೀಂ - ಭೂಮಿಯನ್ನು, ಯುಗಾಂತಾಗ್ನಿರಿವ - ಪ್ರಳಯಕಾಲದ ಅಗ್ನಿಯಂತೆ, ಉತ್ಥಿತಃ - ಪ್ರಜ್ವಾಲಿಸುತ್ತಿರುವವನಾಗಿ, ಕೋಪೇನ - ಸಿಟ್ಟಿನಿಂದ, ಮಹೀಂ - ಭೂಮಿಯನ್ನು, ದಹತಿಕಿನ್ನು-ಸುಡುವನೇನು? (ಎಂದಿಗೂ ಸುಡಲಾರ) ॥೧೩॥ (ಅಥವಾ - ಹಾಗಿಲ್ಲದಿದ್ದರೆ) ತೌ - ಆ ರಾಮಲಕ್ಷ್ಮಣರು, ಸುರಾಣಾಂ - ದೇವತೆಗಳ, ನಿಗ್ರಹೇಪಿ - ಶಿಕ್ಷಿಸುವುದರಲ್ಲಿಯೂ ಶಕ್ತಿಮಂತೌ - ಸಾಮರ್ಥ್ಯವುಳ್ಳವರು, ಕಿಂತು - ಆದರೆ, ಮಮೈವ - ನನ್ನದೇ ಆಗಿರುವ, ದುಃಖಾನಾಂ ವ್ಯಸನಗಳಿಗೆ, ವಿಪರ್ಯಯಃ - ನಾಶವು, ನಾಸ್ತಿ - ಇಲ್ಲವು (ಇತಿ - ಹೀಗೆಂದು) ಮನ್ಯೆ - ತಿಳಿಯುತ್ತೇನೆ ॥೧೪॥ ಪುರುಷೋತ್ತಮಃ - ಪುರುಷ ಶ್ರೇಷ್ಠನೆನಿಸಿದ, ರಾಮಃ - ಶ್ರೀ ರಾಮನು, ನವ್ಯಥಿತಃ - ವ್ಯಥೆಯುಳ್ಳವನಾಗುವುದಿಲ್ಲವೆ? ನಪರಿತಪ್ಯತೆ ಕಚ್ಚಿತ್ - ಸಂತಾಪಪಡುವುದಿಲ್ಲವೆ ? ಉತ್ತರಾಣಿ - ಮುಂದೆ ಮಾಡಬೇಕಾಗಿರುವ, ಕಾರ್ಯಾಣಿ - ನನ್ನನ್ನು ಪಡೆಯಬೇಕಾದ ಕೆಲಸಗಳನ್ನು, ಕುರುತೆಕಚ್ಚಿತ್ - ಮಾಡುತಲಿದಾನೆಯೆ ? ॥೧೫॥ ನೃಪತೇಃ - ದಶರಥ

ಜಲಮಯವಾಗಿರುವ ಸಮುದ್ರವನ್ನು ಸುಡುವುದಕ್ಕೊಂದು ಬಾಣವೂ, ಕಠಿಣವಾಗಿರುವ ಭೂಮಿಯನ್ನು ದಹಿಸುವುದಕ್ಕೊಂದು ಬಾಣವೂ ಆಗಬೇಕಲ್ಲಾ ಎಂದು ಬೇಸರಗೊಂಡಿರಬಹುದೋ? ಎಂದರೆ—ಜಲಧಿಯನ್ನು ತೈಲವನನ್ನಾಗಿ ಮಾಡಿಕೊಂಡು, ಭೂಮಿಯನ್ನು ಸುಡಲು ಶಕ್ತನೇ ಹೌದು, ಆದರೆ-ಆತನು ಭೂಪತಿಯಾದುದರಿಂದ ಭೂಮಿಯು ಆತನಿಗೆ ಭಾರ್ಯೆಯಾಗಿರುವಳು, ಆ ಭಾರ್ಯೆಯಾದ ಭೂಮಿಗೆ ಸಾಗರವು ಅಂದವಾದ ಅಲಂಕಾರ ವಾಗಿರುವ ಡಾಬಾಗಿದೆ, ಹೀಗಿರುವಲ್ಲಿ ತನ್ನ ಭಾರ್ಯೆಯನ್ನೂ ಆ ಭಾರ್ಯೆಯನ್ನು ರಕ್ಷಿಸತಕ್ಕ ಅಲಂಕಾರವನ್ನೂ ಹೇಗೆ ಸುಟ್ಟಾನು ? ಆತನು ಲೋಕ ಮರ್ಯಾದೆಯನ್ನು ಬಲ್ಲವನಾಗಿ ಮರ್ಯಾದೆಯನ್ನು ಅತಿಕ್ರಮಿಸುವುದುಂಟೆ ? ಎಂದೀ ಪ್ರಕಾರ ಜಾನಕಿಯು ಅಂತರ್ದುಃಖದಿಂದ ಶ್ರೀರಾಮನನ್ನು ಭಾವ ಗರ್ಭಿತವಾಗಿ ಸ್ವಲ್ಪ ಹೀಯಾಳಿಸಿದಂತೆ ಮಾತನಾಡಿ ॥

ಅಯ್ಯೋ, ರಾಮರಾಮ ! ಅವರಲ್ಲಿ ಲೇಶವಾದರೂ ತಪ್ಪಿಲ್ಲ. ಅಸುರರನ್ನಾಗಲಿ, ಸುರರನ್ನಾಗಲಿ ನಿಗ್ರಹಿಸುವ ವಿಷಯದಲ್ಲಿ ಅವರ ಶಕ್ತಿಗೇನೂ ಕೊರತೆಯಿಲ್ಲ. ನಾನು ಅನುಭವಿಸಬೇಕಾದ ದುಃಖಕ್ಕೆ ಇನ್ನೂ ಕೊನೆಗಾಲವು ಬರಲಿಲ್ಲ, ಆದುದರಿಂದಲೇ ಇನ್ನೂ ಒಳ್ಳೆಯ ಸಮಯವು ಬರಲಿಲ್ಲವೆಂದು ಭಾವಿಸುತ್ತೇನೆ ॥೧೪॥ ಎಲೈ ಹನುಮಂತನೇ ! ನನ್ನನ್ನು ಅಗಲಿರುವುದರಿಂದ ನನ್ನನ್ನೇ ಸ್ಮರಿಸುತ್ತಾ ಅನ್ನಾಹಾರಗಳನ್ನು ಬಿಟ್ಟು ರಾಮನು ನವೆದುಹೋಗಿಲ್ಲವಷ್ಟೆ ? ಅಯ್ಯೋ ಸೀತೆಯಿಲ್ಲವೇ ಎಂದು ಸಂತಾಪ ಪಡುವುದಿಲ್ಲವಷ್ಟೆ ?ಅಥವಾ ಆಪುರುಷೋತ್ತಮನು ಮುಂದೆ ನನ್ನನ್ನು ಕರೆದೊಯ್ಯುವ ವಿಷಯದಲ್ಲಿ ಏನಾದರೂ ಪ್ರಯತ್ನಗಳನ್ನು ಮಾಡುತಲಿದಾನೆಯೊ ? ॥ ೫॥ ಅಥವಾ ನನ್ನನ್ನುಬಿಟ್ಟು ಇರುವುದರಿಂದ

ಕಚ್ಚಿನ್ನದೀನ ಸ್ಸಂಭ್ರಾಂತಃ ಕಾರ್ಯೇಷು ಚ ನ ಮುಹ್ಯತಿ ।
ಕಚ್ಚಿತ್ಪುರುಷ ಕಾರ್ಯಾಣಿ ಕುರುತೇ ನೃಪತೇಃ ಸ್ಸುತಃ ॥೧೬॥
ದ್ವಿವಿಧಂ ತ್ರಿವಿಧೋಪಾಯ ಮುಪಾಯ ಮಪಿ ಸೇವತೇ ।
ವಿಜಿಗೀಷು ಸ್ಸುಹೃ ತ್ಕಚ್ಚಿ ನ್ಮಿತ್ರೇಷು ಚ ಪರಂತಪಃ ॥೧೭॥
ಕಚ್ಚಿ ನ್ಮಿತ್ರಾಣಿ ಲಭತೇ ಮಿತ್ರೈ ಶ್ಚಾ ಪ್ಯಭಿಗಮ್ಯತೇ ।
ಕಚ್ಚಿ ತ್ಕಲ್ಯಾಣ ಮಿತ್ರಶ್ಚ ಮಿತ್ರೈ ಶ್ಚಾಪಿ ಪುರಸ್ಕೃತಃ ॥೧೮॥

---

ಮಹಾರಾಜನಿಗೆ, ಸುತಃ - ಮಗನಾದ ಶ್ರೀ ರಾಮನು, ದೀನೋನಕಚ್ಚಿತ್ ಸಂತೋಷವಿಲ್ಲದೆಹೋಗಿಲ್ಲವಷ್ಟೆ ? ಕಾರ್ಯೇಷುಚ - ಮಾಡಬೇಕಾದ ಕೆಲಸಗಳಲ್ಲಿಯೂ, ಸಂಭ್ರಾಂತಃ - ತೊಂದರೆ ಪಟ್ಟುಕೊಂಡವನಾಗಿ, ನಮುಹ್ಯತಿ ಕಚ್ಚಿತ - ಮೈಮರೆತಿರುವುದಿಲ್ಲವೇ, ? ಪುರುಷಕಾರ್ಯಾಣಿ- ಸಾಹಸ ಕಾರ್ಯಗಳನ್ನು, ಕುರುತೆಕಚ್ಚಿತ್ - ಮಾಡುತಲಿದಾನೆಯೆ ? ॥೧೬॥ ಪರಂತಪಃ - ಶತ್ರುಸಂಹಾರಕನಾಗಿ, ವಿಜಿಗೀಷುಃ - ಜಯಶಾಲಿಯಾಗಿರುವ ಶ್ರೀರಾಮನು, ಸುಹೃತ್ - ನನ್ನ ವಿಷಯದಲ್ಲಿ ಒಳ್ಳೆಯ ಮನಸ್ಸುಳ್ಳವನಾಗಿ, ತ್ರಿವಿಧೋಪಾಯಂ-ಸಾಮಾದಿಮೂರು ಉಪಾಯಗಳನ್ನು, ಉಪಾಯಮಪಿ-ನಾಲ್ಕನೆಯದಾದ ದಂಡೋಪಾಯವನ್ನೂ, ಮಿತ್ರೇಷು - ಸ್ನೇಹಿತರಲ್ಲಿಯೂ (ಶತ್ರುಗಳಲ್ಲಿಯೂ) ದ್ವಿವಿಧಂ - ಎರಡು ಬಗೆಯದಾಗಿರುವ ಉಪಾಯಗಳನ್ನೂ ಕ್ರಮವಾಗಿ, ಸೇವತೆಕಚ್ಚಿತ್ - ಅನುಸರಿಸುತಲಿದಾನೆಯೇ ? ॥೧೭॥ ಮಿತ್ರಾಣಿ - ಸ್ನೇಹಿತರನ್ನು, ಲಭತೆ ಕಚ್ಚಿತ್ - ಹೊಂದುತಲಿದಾನೆಯೆ ? ಮಿತ್ರೈಶ್ಚಾಪಿ - ಗೆಳೆಯರೊಡನೆಯೂ, ಅಭಿಗಮ್ಯತೆ ಕಚ್ಚಿತ್ - ಹೊಂದಿಕೊಂಡಿರುವನೆ ? ಕಲ್ಯಾಣ ಮಿತ್ರಶ್ಚ ಕಚ್ಚಿತ್ - ಶಾಂತರಾದ ಮಿತ್ರರುಳ್ಳವನಾಗಿದಾನೆಯೆ ? ಮಿತ್ರೈಶ್ಚಾಪಿ - ಸ್ನೇಹಿತರೊಡನೆಯೂ, ಪುರಸ್ಕೃತಃ ಕಚ್ಚಿತ್- ಗೌರವಿಸಲ್ಪಡುತಲಿದಾನೆಯೆ ? ॥೧೮॥ ಪಾರ್ಥಿವಾತ್ಮಜಃ - ರಾಜಪುತ್ರನಾದ ರಾಮನು, ದೇವಾನಾಂ - ದೇವತೆಗಳ, ಪ್ರಸಾದಂ - ಅನುಗ್ರಹವನ್ನು, ಆಶಾಸ್ತೆ ಕಚ್ಚಿತ್ - ಪ್ರಾರ್ಥಿಸುತಲಿದಾನೆಯೆ ? ಪುರುಷಕಾರಂಚ -

---

ದೀನನಾಗಿ ಬುದ್ಧಿಸ್ವಾಧೀನವಿಲ್ಲದ ಕೆಲಸಗಳನ್ನು ಮಾಡುವಾಗ ಹುಚ್ಚುಹಿಡಿದವನಂತೆ ಸ್ತಬ್ಧನಾಗುವದಿಲ್ಲವಷ್ಟೆ ? ಆರಾಜಕುಮಾರನು ಆಯಾಯಾಸಮಯಗಳಲ್ಲಿ ಮಾಡಬೇಕಾದ ಕೆಲಸಗಳನ್ನೆಲ್ಲ ಸರಿಯಾಗಿ ಮಾಡುತ್ತಾನೆಯೆ ? ಮತ್ತು ಸಾಹಸಕಾರ್ಯಗಳನ್ನೂ ಆಚರಿಸುತ್ತಾನೆಯೊ ? ॥೧೬॥ ಶತ್ರು ಸಂಹಾರಕನಾದ ಆ ಶ್ರೀರಾಮನು-ನನಲ್ಲಿ ಒಳ್ಳೆಯ ಮನಸ್ಸುಳ್ಳವನಾಗಿ, ಹಗೆಗಳನ್ನು ಗೆಲ್ಲಬೇಕೆಂದು ಬಗೆದು, ಮಿತ್ರರಲ್ಲಿ ವಿನಿಯೋಗಿಸಬೇಕಾದ ಸಾಮದಾನೋಪಾಯಗಳನ್ನು ಶತ್ರುಗಳಲ್ಲಿಯೂ, ಶತ್ರುಗಳಲ್ಲಿ ಪ್ರಯೋಗಿಸಬೇಕಾದ ಭೇದದಂಡೋಪಾಯ ಗಳನ್ನು ಮಿತ್ರರಲ್ಲಿಯೂ ಪ್ರಯೋಗಿಸದೆ, ಶತ್ರುಮಿತ್ರರೆಂಬ ಎರಡು ವಿಭಾಗವನ್ನೂ ಅರಿತು, ಕ್ರಮಪ್ರಕಾರ ಉಪಾಯಗಳನ್ನು ಪ್ರಯೋಗಿಸುತಲಿರುವನೆ ? ॥೧೭॥ ಯೋಗ್ಯರಾದ ಮಿತ್ರರನ್ನು ಸಂಪಾದಿಸಿ ಇದಾನೆಯೆ ? ಮತ್ತು ಅವರೊಡನೆ ಕಲೆತು ಸಹಕಾರಿಯಾಗಿದಾನೆಯೆ ? ಆ ಮಿತ್ರರೂ ಆತನಿಗೆ ಮೇಲನ್ನು ಮಾಡತಕ್ಕವರಾಗಿದಾರೆಯೆ ? ಆತನಲ್ಲಿ ಗೌರವನ್ನು ಇಟ್ಟದಾರೆಯೆ ? ॥೧೮॥ ಅಲ್ಲದೆ-ನನ್ನನ್ನು ಪಡೆಯಬೇಕೆಂದು ತನ್ನ ಇಷ್ಟದೇತೆಗಳನ್ನು ಆರಾಧಿಸಿ, ಅವರನ್ನು ಅನುಗ್ರಹಿಸುವಂತೆ ಪ್ರಾರ್ಥಿಸುತಲಿದಾನೆಯೆ ? ಪುರುಷರಪ್ರಯತ್ನವಿಲ್ಲದೆ ಕೇವಲ ದೈವವೇ ಸಹಾಯಮಾಡುವುದಿಲ್ಲವಾದುದರಿಂದಪುರುಷ

ಕಚ್ಚಿ ದಾಶಾಸ್ತಿ ದೇವಾನಾಂ ಪ್ರಸಾದಂ ಪಾರ್ಥಿವಾತ್ಮಜಃ ।
ಕಚ್ಚಿ ತ್ಪುರುಷಕಾರಂ ಚ ದೈವಂ ಚ ಪ್ರತಿಪದ್ಯತೇ ॥೧೯॥
ಕಚ್ಚಿ ನ್ನ ವಿಗತಸ್ನೇಹಃ ಪ್ರವಾಸಾ ನ್ಮಯಿ ರಾಘವಃ ।
ಕಚ್ಚಿ ನ್ಮಾಂ ವ್ಯಸನಾ ದಸ್ಮಾ ನ್ಮೋಕ್ಷಯಿಷ್ಯತಿ ವಾನರ ॥೨೦॥
ಸುಖಾನಾ ಮುಚಿತೋ ನಿತ್ಯ ಮಸುಖಾನಾ ಮನೌಚಿತಃ ।
ದುಃಖ ಮುತ್ತರ ಮಾಸಾದ್ಯ ಕಚ್ಚಿ ದ್ರಾಮೋ ನ ಸೀದತಿ ॥೨೧॥
ಕೌಸಲ್ಯಾಯಾ ಸ್ತಥಾ ಕಚ್ಚಿ ತ್ಸುಮಿತ್ರಾಯಾ ಸ್ತಥೈವಚ ।
ಅಭೀಕ್ಷ್ಣಂ ಶ್ರೂಯತೇ ಕಚ್ಚಿ ತ್ಕುಶಲಂ ಭರತಸ್ಯ ಚ ॥೨೨॥

ಪುರುಷ ಪ್ರಯತ್ನವನ್ನೂ, ದೈವಂಚ-ಅನುಕೂಲವಾದ ದೈವವನ್ನೂ, ಪ್ರತಿಪದ್ಯತೇ ಕಚ್ಚಿತ್ - ಹೊಂದುತಲಿದಾನೆಯೆ ? ॥೧೯॥ ಹೇವಾನರ - ಎಲೈ ಕಪಿವೀರನೆ ? ರಾಘವಃ - ಶ್ರೀರಾಮನು, ಪ್ರವಾಸಾತ್ - ಪರದೇಶವಾಸದ ದೆಶೆಯಿಂದ, ಮಯಿ - ನನ್ನಲ್ಲಿ, ವಿಗತಸ್ನೇಹಃ - ಗತಿಸಿಹೋದ ಪ್ರೀತಿಯುಳ್ಳವನಾಗಿ, ನ ಕಚ್ಚಿತ್ - ಇಲ್ಲವಷ್ಟೆ ? ಅಸ್ಮಾತ್ - ಹೀಗೆ ಸಂಭವಿಸಿರುವ, ವ್ಯಸನಾತ್- ದುಃಖದ ದೆಶೆಯಿಂದ, ಮಾಂ - ನನ್ನನ್ನು, ಮೋಕ್ಷಯಿಷ್ಯತಿ ಕಚ್ಚಿತ್ - ಬಿಡಿಸುವನೆ ? ॥೨೦॥ ನಿತ್ಯಂ - ಯಾವಾಗಲೂ, ಸುಖಾನಾಂ - ಸೌಖ್ಯಗಳಿಗೆ, ಉಚಿತಃ - ತಕ್ಕವನಾಗಿಯೂ, ಅಸುಖಾನಾಂ - ವ್ಯಸನಗಳಿಗೆ, ಅನೌಚಿತಃ - ಅನರ್ಹನಾಗಿಯೂ ಇರುವ, ರಾಮಃ - ಶ್ರೀರಾಮನು, ಉತ್ತರಂ - ಅಧಿಕವಾದ, ದುಃಖಂ - ವ್ಯಸನವನ್ನು, ಆಸಾದ್ಯ - ಹೊಂದಿ, ನಸೀದತಿ ಕಚ್ಚಿತ್ - ವ್ಯಥೆಪಡದೆ ಇದಾನೆಯೆ ? ॥೨೧॥ ಕೌಸಲ್ಯಾಯಾಃ - ಕೌಸಲ್ಯೆಯ, ತಥಾ - ಹಾಗೆಯೇ, ಸುಮಿತ್ರಾಯಾಃ - ಸುಮಿತ್ರೆಯ (ಕುಶಲಂ - ಕ್ಷೇಮವು) ಅಭೀಕ್ಷ್ಣಂ-ವಿಶೇಷವಾಗಿ (ಅಡಿಗಡಿಗೆ) ಶ್ರೂಯತೇ ಕಚ್ಚಿತ್ - ನಿಮ್ಮಿಂದ ಕೇಳಲ್ಪಡುತಲಿದೆಯೆ ? ತಥೈವಚ - ಹಾಗೆಯೇ, ಭರತಸ್ಯಚ - ಭರತನ, ( ಕುಶಲಂ - ಕ್ಷೇಮವು ) ಶ್ರೂಯತೇ ಕಚ್ಚಿತ್ - ನಿಮ್ಮಿಂದ ಕೇಳಲ್ಪಡುತಲಿದೆಯೆ ? ॥೨೨॥ ಮಾನಾರ್ಹಃ - ಪೂಜಾರ್ಹನಾದ, ರಾಘವಃ - ಶ್ರೀರಾಮನು, ಮನ್ನಿಮಿತ್ತೇನ - ನಾನೇ

ಪ್ರಯತ್ನವನ್ನೂ ಮಾಡುತ್ತಾ ದೈವಸಹಾಯವನ್ನು ಬಯಸುತಲಿದಾನೆಯೆ ? ॥೧೯॥ ಎಲೈ ಮಾರುತಿಯೇ ! ಮಿತ್ರರು ದೂರದೇಶವನ್ನು ಕುರಿತುತೆರಳಿ, ಕಾಲವೂ ಅತಿಕ್ರಮಿಸಿಹೋದರೆ, ಸ್ನೇಹವು ಕೊರತೆಯನ್ನು ಪಡೆಯುವುದು ಎಂದು ಲೋಕದಮರ್ಯಾದೆ ಯಾಗಿರುವದರಿಂದ, ನಾನು ಸಮೀಪದಲ್ಲಿ ಇಲ್ಲದೆ ದೂರದಲ್ಲಿರುತ್ತಾ, ಕಾಲವೂ ಕಳೆದು ಹೋಗುತ ಬಂದಿರುವುದರಿಂದ ನನ್ನಲ್ಲಿ ಪ್ರೇಮವನ್ನು ತೊರೆದು ತಟಸ್ಥನಾಗಿರುವನೋ ಹೇಗೆ ? ಹಾಗಿಲ್ಲದೆ, ಓ ಮಾರುತಾತ್ಮಜಾ ! ಆರಾಮನು-ನನ್ನನ್ನು ಈ ದುಃಖ ಸಾಗರದಿಂದ ದಿಟವಾಗಿಯೂ ದಾಟಿಸುತ್ತಾನೆಯೆ ? ನಿಜವನ್ನು ಹೇಳು ॥೨೦॥ ಅಯ್ಯೋ, ಹುಟ್ಟಿದ್ದು ಮೊದಲ್ಗೊಂಡು ಒಂದು ದಿವಸವಾದರೂ ಕಷ್ಟವನ್ನು ಅನುಭವಿಸಿದವನಲ್ಲವಲ್ಲ ? ನಿತ್ಯ ಸುಖಿಯಾಗಿದ್ದವನೇ ? ಈಗ ಹೇಳಲಳವಲ್ಲದಷ್ಟು ಕಷ್ಟವು ಬಂದು ಒದಗಿದೆಯಲ್ಲ, ಇಂತಹ ಸಮಯದಲ್ಲಿ ಚಿಂತೆಯಿಂದ ಕೃಶಿಸಿಹೋಗಿ ವ್ಯಥೆಪಡದೆ ಇದಾನೆಯೆ ? ॥೨೧॥ ನಮ್ಮ ಅತ್ತೆಯಾದ ಕೌಸಲ್ಯಾದೇವಿಯು, ಮತ್ತು-ಚಿಕ್ಕ ಅತ್ತೆಯಾದ ಸುಮಿತ್ರಾ ದೇವಿಯು, ಹಾಗೆಯೇ ನನ್ನ ಮೈದುನನಾದ ಭರತನ, ಕುಶಲ ವೃತ್ತಾಂತವು ಆಗಾಗ ತಿಳಿಯುತಲಿರುವುದೆ ? ॥ ೨೨ ॥ ಬಹು

ಮನ್ನಿಮಿತ್ತೇನ ಮಾನಾರ್ಹಃ ಕಚ್ಚಿ ಚ್ಛೋಕೇನ ರಾಘವಃ ।
ಕಚ್ಚಿ ನ್ನಾನ್ಯ ಮನಾ ರಾಮಃ ಕಚ್ಚಿ ನ್ಮಾಂತಾರಯಿಷ್ಯತಿ ॥೨೩॥
ಕಚ್ಚಿ ದಕ್ಷೌಹಿಣೀಂ ಭೀಮಾಂ ಭರತೋ ಭ್ರಾತೃವತ್ಸಲಃ ।
ಧ್ವಜಿನೀಂ ಮಂತ್ರಿಭಿ ರ್ಗುಪ್ತಾಂ ಪ್ರೇಷಯಿಷ್ಯತಿ ಮತ್ಕೃತೇ ॥೨೪॥
ವಾನರಾಧಿಪತಿ ಶ್ಶ್ರೀಮಾ ಸುಗ್ರೀವಃ ಕಚ್ಚಿ ದೇಷ್ಯತಿ ।
ಮತ್ಕೃತೇ ಹರಿಭಿ ರ್ವೀರೈ ರ್ವೃತೋ ದಂತ ನಖಾಯುಧೈಃ ॥೨೫॥
ಕಚ್ಚಿಚ್ಚ ಲಕ್ಷ್ಮಣ ಶ್ಶೂರ ಸ್ಸುಮಿತ್ರಾ ನಂದವರ್ಧನಃ ।

---

ಕಾರಣವಾಗಿ ಉಳ್ಳ, ಶೋಕೇನ - ದುಃಖದಿಂದ, ನಪರಿತಪ್ಯತೆ ಕಚ್ಚಿತ್ - ಸಂತಾಪ ಪಡುವು ಲ್ಲವೆ ? ರಾಮಃ - ಶ್ರೀರಾಮನು, ಅನ್ಯ ಕಾರ್ಯಮನಾಃ - ಬೇರೆಕೆಲಸದಲ್ಲಿ ಮನಸ್ಸುಳ್ಳವನಾಗಿ, ನಕಚ್ಚಿತ್ - ಇಲ್ಲವೆ ? ಮಾಂ - ನನ್ನನ್ನು, ತಾರಯಿಷ್ಯತಿ ಕಚ್ಚಿತ್ - ಈ ದುಃಖಸಾಗರದಿಂದ ದಾಟಿಸುವನೆ ?॥೨೩॥ ಭ್ರಾತೃವತ್ಸಲಃ - ಅಣ್ಣನಲ್ಲಿ ಭಕ್ತಿರೂಪವಾದ ಪ್ರೀತಿಯುಳ್ಳ, ಭರತಃ - ಭರತನು ಅಕ್ಷೌಹಿಣೀಂ - ಅಕ್ಷೌಹಿಣಿ ಸಂಖ್ಯೆಯು, ಭೀಮಾಂ - ಭಯಂಕರವಾದ, ಮಂತ್ರಿಭಿಃ - ಮಂತ್ರಿಗಳಿಂದ, ಗುಪ್ತಾಂ - ರಕ್ಷಿಸಲ್ಪಡುತಲಿರುವ, ಧ್ವಜಿನೀಂ - ಸೇನೆಯನ್ನು, ಮತ್ಕೃತೆ - ನನಗೋಸ್ಕರ, ಪ್ರೇಷಯಿಷ್ಯತಿ ಕಚ್ಚಿತ್ - ಕಳುಹಿಸುವನೆ ? ॥ ೨೪ ॥ ಶ್ರೀಮಾ - ಸಂಪನ್ನನಾದ, ವಾನರಾಧಿಪತಿಃ - ಕಪಿರಾಜನಾಗಿರುವ, ಸುಗ್ರೀವಃ - ಸುಗ್ರೀವನು, ದಂತನಖಾಯುಧೈಃ - ಹಲ್ಲು, ಉಗುರು ಇವುಗಳೇ ಆಯುಧಗಳಾಗಿರುವ, ವೀರೈಃ - ಪರಾಕ್ರಮ ಶಾಲಿಗಳಾದ, ಹರಿಭಿಃ - ವಾನರರಿಂದ, ವೃತಃ- ಬಳಸಲ್ಪಟ್ಟವನಾಗಿ, ಮತ್ಕೃತೆ - ನನ್ನ ನಿಮಿತ್ತವಾಗಿ, ಏಷ್ಯತಿಕಚ್ಚಿತ್ - ಬರುವನೆ? ॥೨೫॥ ಶೂರಃ - ಪರಾಕ್ರಮಶಾಲಿಯಾಗಿರುವ, ಸುಮಿತ್ರಾನಂದವರ್ಧನಃ -ಸುಮಿತ್ರೆಗೆ ಆನಂದವನ್ನುಂಟುಮಾಡತಕ್ಕ, ಅಸ್ತ್ರವಿತ್-

---

ಮಾನಾರ್ಹನಾದ ಶ್ರೀರಾಮನು-ನನ್ನ ನಿಮಿತ್ತವಾಗಿ ಉಂಟಾದ ಅಪಾರವಾದ ದುಃಖದಿಂದ ಮಂಕಾಗದೆ ಇದಾನೆಯೆ ? ಮತ್ತೆಲ್ಲಿಯೂ ಮನಸ್ಸನ್ನಿಡದೆ ಇದಾನೆಯೆ ? ಓ ಆಂಜನೇಯಾ ! ಮರಳಿಕೇಳುತ್ತೇನೆ, ರಾಮನು ನನ್ನನ್ನು ಈ ಶೋಕಸಾಗರದಿಂದ ದಾಟಿಸುತ್ತಾನೆಯೆ ? ॥೨೩॥ ಅಣ್ಣನನ್ನು ಪಿತೃಸಮನೆಂದು ಭಾವಿಸಿ, ಆತನಲ್ಲಿ ಪರಿಪೂರ್ಣವಾದ ಭಕ್ತಿಯನ್ನಿಟ್ಟಿರುವ ಭರತನು - ನನ್ನನ್ನು ಪಡೆಯುವ ನಿಮಿತ್ತದಿಂದ ರಾವಣನೊಡನೆ ಯುದ್ಧಮಾಡಲು ಮಂತ್ರಿಗಳಿಂದ ಸಂರಕ್ಷಿಸಲ್ಪಡುತಲಿರುವ * ಅಕ್ಷೌಹಿಣೀ ಸೇನೆಯನ್ನು ಇಲ್ಲಿಗೆ ಕಳುಹಿಸುವನೆ ? ॥೨೪॥ ಹಲ್ಲುಗಳನ್ನೂ, ಉಗುರುಗಳನ್ನೂ ಆಯುಧಗಳನ್ನಾಗಿ ಮಾಡಿಕೊಂಡಿರುವ ಮಹಾವೀರರಾದ ವಾನರರಿಂದೊಡ ಗೂಡಿರುವ ಸುಗ್ರೀವನೆಂಬ ಕಪಿಸಾರ್ವ ಭೌಮನೊಬ್ಬನು ನನ್ನ ನಿಮಿತ್ತವಾಗಿ ಇಲ್ಲಿಗೆ ಬರುವನೆ ?॥೨೫॥ಮಹಾತ್ಮಳಾದಸುಮಿತ್ರೆಗೆ ಸತ್ಪುತ್ರನೆನಿಸಿ, ಆಕೆಗೆ ಸಂತೋಷಕರನಾಗಿ, ಸಮಂತ್ರಕವಾದ ಅಸ್ತ್ರಶಸ್ತ್ರಗಳನ್ನೆಲ್ಲ

---

* ಇಪ್ಪತ್ತೊಂದು ಸಾವಿರದ ಎಂಟನೂರ ಎಪ್ಪತ್ತು ರಥಗಳು, ಅಷ್ಟೇ ಆನೆಗಳು, ಅರವತ್ತೈದುಸಾವಿರದ ಆರನೂರಹತ್ತು ಕುದುರೆಗಳು, ಒಂದುಲಕ್ಷದ ತೊಂಭತ್ತುಸಾವಿರದ ಮುನ್ನೂರಐವತ್ತು ಕಾಲಾಳುಗಳೂ ಉಳ್ಳ ಸೇನೆಗೆ ಅಕ್ಷೌಹಿಣಿ ಎಂದು ಸಂಜ್ಞೆ.

ಅಸ್ತ್ರವಿ ಚ್ಛರಜಾಲೇನ ರಾಕ್ಷಸಾ ನ್ವಿಧಮಿಷ್ಯತಿ ॥ ೨೬॥
ರೌದ್ರೇಣ ಕಚ್ಚಿ ದಸ್ತ್ರೇಣ ಜ್ವಲತಾ ನಿಹತಂ ರಣೇ ।
ದ್ರಕ್ಷ್ಯಾ ವ್ಯಲ್ಪೇನ ಕಾಲೇನ ರಾವಣಂ ಸಸುಹೃ ಜ್ಜನಮ್ ॥ ೨೭॥
ಕಚ್ಚಿ ನ್ನ ತದ್ಧೇಮ ಸಮಾನ ವರ್ಣಂ ತಸ್ಯಾನನಂ ಪದ್ಮ ಸಮಾನಗಂಧಿ ।
ಮಯಾ ವಿನಾ ಶುಷ್ಯತಿ ಶೋಕದೀನಂ ಜಲಕ್ಷಯೇ ಪದ್ಮ ಮಿವಾತಪೇನ ॥
ಧರ್ಮಾಪದೇಶಾ ತ್ತ್ಯಜತಶ್ಚ ರಾಜ್ಯಂ ಮಾಂ ಚಾಪ್ಯರಣ್ಯಂ ನಯತಃ ಪದಾತಿಂ।

ಸಮಾಂತ್ರಕವಾಗಿ ಅಸ್ತ್ರಗಳನ್ನೆಲ್ಲ ತಿಳಿದಿರುವ, ಲಕ್ಷ್ಮಣಶ್ಚ - ಲಕ್ಷ್ಮಣನೂ, ಶರಜಾಲೇನ - ಬಾಣಸಮೂಹ ದಿಂದ, ರಾಕ್ಷಸಾನ್ - ರಕ್ಕಸರನ್ನು, ವಿಧಮಿಷ್ಯತಿಕಚ್ಚಿತ್ - ಧ್ವಂಸಮಾಡುವನೆ? ॥೨೬॥ ರೌದ್ರೇಣ - ರುದ್ರನೇ ದೇವತೆಯಾಗಿರುವ, (ಭಯಂಕರವಾದ) ಜ್ವಲತಾ - ಉರಿಯುತಲಿರುವ, ಅಸ್ತ್ರೇಣ - ಬಾಣದಿಂದ ರಣೇ - ಯುದ್ಧದಲ್ಲಿ ಸಸುಹೃಜ್ಜನಂ - ಮಿತ್ರ ಬಾಂಧವರೊಡನೆ, ಹತಂ - ರಾಮನಿಂದ ಕೊಲ್ಲಲ್ಪಟ್ಟ, ರಾ ವಣಂ - ರಾವಣನನ್ನು, ಅಲ್ಪೇನ - ಸ್ವಲ್ಪವಾದ, ಕಾಲೇನ - ಸಮಯದಿಂದಲೇ, ದ್ರಕ್ಷ್ಯಾಮಿಕಚ್ಚಿತ್- ನೋಡುವೆನೆ? ॥೨೭॥ ಹೇಮಸಮಾನವರ್ಣಂ - ಚಿನ್ನಕ್ಕೆಣೆಯಾದ ಬಣ್ಣವುಳ್ಳ, ಪದ್ಮಸಮಾನಗಂಧಿ - ತಾವ ರೆಗೆ ಸಮಾನವಾದ ಸುವಾಸನೆಯುಳ್ಳೊಳಗೊಂಡಿರುವ, ತಸ್ಯ - ಆ ಶ್ರೀರಾಮಚಂದ್ರನ, ಆನನಂ - ಮುಖವು, ಮಯಾವಿನಾ - ನಾನಿಲ್ಲದೆ, (ನನ್ನನ್ನು ಬಿಟ್ಟು) ಶೋಕದೀನಂ - ದುಃಖದಿಂದ ಖಿನ್ನವಾಗಿ, ಜಲಕ್ಷಯೇ- ನೀ ರು ಬತ್ತಿಹೋದಾಗ, ಆತಪೇನ - ಬಿಸಿಲಿನಿಂದ, ತತ್ - ಆ, ಪದ್ಮಮಿವ - ಕಮಲದಹಾಗೆ, ನಶುಷ್ಯತಿಕ ಚ್ಚಿತ್ - ಒಣಗದೆ ಇದೆಯೇ? ॥೨೮॥ ಧರ್ಮಾಪದೇಶಾತ್ - ಧರ್ಮವೆಂಬ ನೆಪದಿಂದ, (ಧರ್ಮೋದ್ದೇಶದಿಂದ, ಪಿ ತೃವಾಕ್ಯ ಪರಿಪಾಲನವನ್ನು ನಿಮಿತ್ತದಿಂದ) ರಾಜ್ಯಂ - ರಾಜ್ಯವನ್ನು, ತ್ಯಜತಶ್ಚ - ಬಿಡುತಲಿದ್ದ) ಮಾಂಚ- ನನ್ನನ್ನೂ, ಪದಾತಿಂ - ಪಾದಚಾರಿಣಿಯನ್ನಾಗಿ. ಅರಣ್ಯಂ - ಅಡವಿಯನ್ನು ಕುರಿತು, ನಯತಃ - ಕರೆದು

ಅರಿತು, ಮಹಾಶೂರ ನೆನಿಸಿಕೊಂಡಿರುವ ನನ್ನ ಮೈದುನನಾದ ಲಕ್ಷ್ಮಣನು ಧನು ರ್ಬಾಣಗಳಿಂದ ಸಹಿತನಾಗಿ ಇಲ್ಲಿಗೆ ಬಂದು ಈ ನೀಚರಾದ ರಾಕ್ಷಸರನ್ನೆಲ್ಲ ಧ್ವಂಸಮಾಡು ವನೆ? ॥ ೨೬॥ ಮಹಾಭಯಂಕರವಾದ, ಇಲ್ಲವೆ ರುದ್ರದೇವ ತಾಕವಾಗಿರುವ ಅಗ್ನಿಯಂತೆ ಜ್ವಲಿಸತಕ್ಕ ಅಸ್ತ್ರದಿಂದ ಮಿತ್ರ ಬಾಂಧವರೊಡನೆ ಸಹಿತನಾಗಿರುವ ಈ ಪಾಪಾತ್ಮನಾದ ರಾವಣನನ್ನು ಶ್ರೀರಾಮನು ಜಾಗ್ರತೆಯಲ್ಲಿ ಕಾಳಗದೊಳಗೆ ಧ್ವಂಸಮಾಡುವನೆ? ಇದ ನ್ನು ನಾನು ಕಣ್ಣಿನಿಂದ ನೋಡುತ್ತೇನೆಯೆ? ॥ ೨೭॥ ಎಲೈ ವಾನರೋತ್ತಮನೆ! ಬಂಗಾ ರದಂತೆ ಬಣ್ಣವುಳ್ಳುದಾಗಿ, ಸರ್ವ ಜನಾನಂದ ಕರವಾಗಿರುವ, ತಾವರೆಗೆಣೆಯಾದ ಸುವಾ ಸನೆಯುನ್ನೊಳಗೊಂಡಿರತಕ್ಕ ಶ್ರೀರಾಮಚಂದ್ರನ ದಿವ್ಯವದನವು, ಸಮೀಪದಲ್ಲಿ ನಾನು ಇ ಲ್ಲದಿರುವುದರಿಂದ ಶೋಕದೀನವಾಗಿ, ಕೊಳದಲ್ಲಿರುವ ನೀರು ಬತ್ತಿಹೋದಬಳಿಕ ಬಿಸಿಲಿ ನ ಝಳದಿಂದ ತಾವರೆಯು ಹೇಗೋ ಹಾಗೆ ಬಾಡಿ ಹೋಗುತಲಿದೆಯೆ? ॥ ೨೮॥ ಓವಾ ನರವೀರನೇ! ಪಿತೃವಾಕ್ಯ ಪರಿಪಾಲನವನ್ನು ಮಾಡಬೇಕೆಂಬ ಧರ್ಮವನ್ನು ಪಾಲಿಸಮಾ ಡುವನೆಪದಿಂದಲೂ, ಭೂಭಾರವಾಗಿರುವ ದುಷ್ಟರನ್ನೆಲ್ಲ ಶಿಕ್ಷಿಸಬೇಕೆಂಬ ನಿಮಿತ್ತದಿಂದ ಲೂ, ಶಿಷ್ಟಪರಿಪಾಲನವನ್ನು ಮಾಡಬೇಕೆಂಬ ಕಾರಣದಿಂದಲೂ, ಸಕಲರಾಜ ಭೋಗ ಗಳಿಗೆ ಆಶ್ರಯವೆನಿಸಿ ಕೈಗೆದೊರೆತಿದ್ದ ಸಾಮ್ರಾಜ್ಯವನ್ನೂ ತೃಣದಂತೆ ತೊರೆದು,

ನಾಸೀದ್ವ್ಯಥಾ ಯಸ್ಯ ನ ಭೀ ರ್ನಶೋಕಃ ಕಚ್ಚಿತ್ಸ ಧೈರ್ಯಂ ಹೃದಯೇ ಕರೋತಿ॥
ನಚಾಸ್ಯ ಮಾತಾ ನ ಪಿತಾ ಚ ನಾನ್ಯಃ ಸ್ನೇಹಾ ದ್ವಿಶಿಷ್ಟೋಽಸ್ತಿ ಮಯಾಸಮೋವಾ॥
ತಾವ ತ್ತ್ವಹಂ ದೂತ ಜಿಜೀವಿಷೇಯಂ ಯಾವ ತ್ಪ್ರವೃತ್ತಿಂ ಶೃಣುಯಾಂ ಪ್ರಿಯಸ್ಯ।
ಇತೀವ ದೇವೀ ವಚನಂ ಮಹಾರ್ಥಂ ತಂ ವಾನರೇಂದ್ರಂ ಮಧುರಾರ್ಥ ಮುಕ್ತ್ವಾ।
ಶ್ರೋತುಂ ಪುನ ಸ್ತಸ್ಯ ವಚೋಭಿರಾಮಂ ರಾಮಾರ್ಥಯುಕ್ತಂ ವಿರರಾಮ ರಾಮಾ।
ಸೀತಾಯಾಃ ವಚನಂ ಶ್ರುತ್ವಾ ಮಾರುತಿ ರ್ಭೀಮ ವಿಕ್ರಮಃ।

ಕೊಂಡು ಹೋಗುತಲಿದ್ದ, ಯಸ್ಯ - ಯಾವನಿಗೆ, ಭೀರಪಿ - ಭಯವೂ, ನ - ಇಲ್ಲದೆಹೋಯಿತೋ, ಶೋಕಶ್ಚ - ದುಃಖವೂ, ನ - ಇರಲಿಲ್ಲವೋ, (ಸಃ - ಆ ಶ್ರೀರಾಮನು) ಹೃದಯೇ - ಮನಸ್ಸಿನಲ್ಲಿ, ಧೈರ್ಯಂ-ಧೀರತನವನ್ನು, ಕರೋತಿಕಚ್ಚಿತ್ - ಮಾಡುತಲಿದಾನೆಯೇ? (ಧರಿಸುತಲಿದಾನೆಯೇ?) ॥೨೯॥ ಹೇದೂತ - ಎಲೈ ವಾರ್ತಾಹರನೆ! - ಸ್ನೇಹಾತ್ - ಪ್ರೇಮಗುಣದಿಂದ, ವಿಶಿಷ್ಟಃ - ಅಧಿಕಳೆನಿಸಿದ, ಅಸ್ಯ - ಈ ರಾಮನ, ಮಾತಾಚ - ತಾಯಿಯೂ, ಮಯಾ - ನನ್ನೊಡನೆ, ಸಮಾ - ಸಮನೆನಿಸಿದವಳು, ನ - ಅಲ್ಲವು, ಪಿತಾಚ-ತಂದೆಯೂ, (ಮಯಾ - ನನ್ನೊಡನೆ, ಸಮಃ - ಸಮನೆನಿಸಿದವನು) ನಚ - ಅಲ್ಲವು, ಅನ್ಯಶ್ಚ - ಇತರಬಂಧವೂ, ನಚ - ಅಲ್ಲವು, ಯಾವತ್ - ಎಲ್ಲಿಯವರಗೆ, ಪ್ರಿಯಸ್ಯ - ವಲ್ಲಭನ, ಪ್ರವೃತ್ತಿಂ- (ನನ್ನನ್ನು ಇಲ್ಲಿಂದ ಕರೆದೊಯ್ಯುವ ಪ್ರಯತ್ನದ) ವೃತ್ತಾಂತವನ್ನು, ಶೃಣುಯಾಂ - ಕೇಳುವೆನೋ, ತಾವತ್ - ಅಲ್ಲಿಯವರೆಗೂ, ಅಹಂ - ನಾನು, ಜಿಜೀವಿಷೇಯಂ - ಬದುಕಿರಲಿಕ್ಕೆ ಬಯಸುತ್ತೇನೆ ॥೩೦॥ ದೇವೀ - ಪ್ರಕಾಶಮಾನಳಾದ, ರಾಮಾ - ಜಾನಕಿಯು, ಇತೀವ - ಈ ಪ್ರಕಾರವಾಗಿ, ಮಹಾರ್ಥಂ -ಬಹು ಅರ್ಥಗರ್ಭಿತವಾಗಿಯೂ, ಮಧುರಾರ್ಥಂ - ಇಂಪಾದ ಅರ್ಥವುಳ್ಳುದಾಗಿಯೂ ಇರುವ, ವಚನಂ-ಮಾತನ್ನು, ವಾನರೇಂದ್ರಂ - ಕಪಿವರನನ್ನು ಕುರಿತು, ಉಕ್ತ್ವಾ - ಹೇಳಿ, ರಾಮಾರ್ಥಯುಕ್ತಂ -ರಾಮ ವೃತ್ತಾಂತವನ್ನೊಳಗೊಂಡಿರುವ, (ಅದರಿಂದಲೇ) ಅಭಿರಾಮಂ - ಮನೋಹರವಾದ, ತಸ್ಯ - ಆಂಜನೇಯನ, ವಚಃ- ಮಾತನ್ನು, ಪುನಃ - ಮರಳಿ, ಶ್ರೋತುಂ - ಕೇಳಲಿಕ್ಕೆ, ವಿರರಾಮ - ಸುಮ್ಮನಾದಳು, ॥೩೧॥ ಭೀಮ

ಮಹಾರಾಜ ಪುತ್ರಿಯೆನಿಸಿ, ಮಹಾರಾಜನಿಗೆ ಸೊಸೆಯಾಗಿ, ವೀರನೂ, ಲೋಕನಾಥನೂ ಆಗಿರುವ ತನಗೆ ಧರ್ಮ ಪತ್ನಿಯಾಗಿದ್ದ ನನ್ನನ್ನೂ ಕಲ್ಲು ಮುಳ್ಳುಗಳಿಂದಲೂ, ಸಿಂಹವ್ಯಾಘ್ರಾದಿ ಕ್ರೂರ ಜಂತುಗಳಿಂದಲೂ ಆಕ್ರಮಿಸಲ್ಪಟ್ಟಿರುವ ಮಹಾರಣ್ಯಕ್ಕೆ ಪಾದಚಾರಿಣಿಯನ್ನಾಗಿ ಕರೆದುಕೊಂಡು ಹೊರಟ ಯಾವ ಧೀರನಾದ ರಾಮನಿಗೆ ಭಯ ಲೇಶವಾಗಲಿ, ಈ ಷದ್ವ್ಯಥೆಯಾಗಲೀ, ಶೋಕಲವವಾಗಲೀ ಉಂಟಾಗಲಿಲ್ಲವೋ, ಅಂತಹ ಶ್ರೀರಾಮಚಂದ್ರನು ನನ್ನನ್ನು ಅಗಲಿ ಈಗ ಮನದೊಳಗೆ ಧೈರ್ಯವನ್ನು ತಾಳಿ ಇದಾನೆಯೆ? ॥೨೯॥ ಎಲೈ ಸಮೀರಕುಮಾರನೇ! ರಾಮನು ನನ್ನನ್ನು ಬಿಟ್ಟು ಧೈರ್ಯದಿಂದ ಇರಲಾರನು, ಆತನಿಗೆ ಮಾತಾಪಿತೃಗಳಲ್ಲಿ ಪರಿಪೂರ್ಣವಾದ ಭಕ್ತಿಯೂ, ಬಂಧುಜನಗಳಲ್ಲಿ ಪ್ರೀತಿಯೂ, ಮಿತ್ರರಲ್ಲಿ ಸ್ನೇಹವೂ ಇದ್ದರೂ, ನನ್ನಲ್ಲಿ ಪ್ರೇಮ ಭರವೆಂಬುದು ನಿರತಿಶಯ ವಾಗಿರುವುದರಿಂದ ತಾಯಿಯಾಗಲೀ, ತಂದೆಯಾಗಲೀ, ಬಂಧುಮಿತ್ರರಾಗಲೀ, ನನಗೆ ಸಮಾನ ರಾಗುವುದಿಲ್ಲ, ನನಗಿಂತಲೂ ಅಧಿಕ ರಾಗುವುದುಂಟೇ? ಆದುದರಿಂದಲೇ ನನ್ನ ಪ್ರಿಯ ವಲ್ಲಭನು ಇಲ್ಲಿಗೆ ಬರುವವರೆಗೂ,ಆವೃತ್ತಾಂತವು ನನಿಗೆತಿಳಿಯುವವರೆಗೂ, ನಾನು

ಶಿರ ಸ್ಯಂಜಲಿ ಮಾಧಾಯ ವ್ಯಾಕ್ಯ ಮುತ್ತರ ಮಬ್ರವೀತ್ ॥೩೨॥
ಸ ತ್ವಾ ಮಿಹಸ್ಥಾಂ ಜಾನೀತೆ ರಾಮಃ ಕಮಲಲೋಚನೆ ।
ತೇನ ತ್ವಾ ಮಾನಯ ತ್ಯಾಶು ಶಚೀಮಿವ ಪುರಂದರಃ ॥೩೩॥
ಶ್ರುತ್ವೈವ ತು ವಚೋ ಮಹ್ಯಂ ಕ್ಷಿಪ್ರ ಮೇಷ್ಯತಿ ರಾಘವಃ ।
ಚಮೂಂ ಪ್ರಕರ್ಷ ನ್ಮಹತೀಂ ಹರ್ಯ್ಯೃಕ್ಷ ಗಣಸಂಕುಲಾಂ ॥೩೪॥

ವಿಕ್ರಮಃ - ಭಯಂಕರವಾದ ಶೌರ್ಯವುಳ್ಳ, ಮಾರುತಿಃ - ಆಂಜನೇಯನು, ಸೀತಾಯಾಃ-ಜಾನಕಿಯ, ವಚನಂ - ಮಾತನ್ನು, ಶ್ರುತ್ವಾ ಕೇಳಿ, ಶಿರಸಿ - ತಲೆಯಲ್ಲಿ, ಅಂಜಲಿಂ- ಜೋಡಿಸಿದ ಕೈಯ್ಯನ್ನು, ಆಧಾಯ-ಇಟ್ಟು, ಉತ್ತರಂವಾಕ್ಯಂ - ಮುಂದಿನಮಾತನ್ನು, ಅಬ್ರವೀತ್-ಹೇಳತೊಡಗಿದನು॥೩೨॥ ಹೇ ಕಮಲಲೋಚನೆ - ಪದ್ಮನಯನೆಯಾದ ಸೀತೆಯೇ !, ರಾಮಃ - ಶ್ರೀರಾಮನು, ತ್ವಾಂ-ನಿನ್ನನ್ನು, ಇಹಸ್ಥಾಂ - ಇಲ್ಲಿರುವವಳನ್ನಾಗಿ, ನಜಾನೀತೆ - ಅರಿಯನು, ತೇನ - ಆಕಾರಣದಿಂದಲೇ, ತ್ವಾಂ - ನಿನ್ನನ್ನು, ಪುರಂದರಃ - ಇಂದ್ರನು, ಶಚೀಮಿವ - ಶಚೀದೇವಿಯನ್ನು ಹೇಗೋಹಾಗೆ, ಆಶು - ಬೇಗನೆ, ನಾನಯತಿ - ಕರೆದೊಯ್ಯದೆ ಇದಾನೆ, ॥೩೩॥ ರಾಘವಃ - ಶ್ರೀರಾಮನು, ಮಹ್ಯಂ (ಮಮ) ನನ್ನ, ವಚಃ - ಮಾತನ್ನು ಶ್ರುತ್ವಾ - ಕೇಳಿ, ಹರ್ಯೃಕ್ಷಗಣ ಸಂಕುಲಾಂ - ಕಪಿಗಳ ಹಿಂಡಿನಿಂದ ನಿಬಿಡವಾದ, (ಹರ್ಯೃಕ್ಷಗಣ ಸಂಕುಲಾಂ - ಕಪಿಗಳ ಮತ್ತು ಕರಡಿಗಳ ಗುಂಪಿನಿಂದ ಸಹಿತವಾದ) ಮಹತೀಂ ಅಪಾರವಾಗಿರುವ, ಚಮೂಂ - ಸೇನೆಯನ್ನು, ಪ್ರಕರ್ಷನ್ - ಕರೆದುಕೊಂಡವನಾಗಿ, ಕ್ಷಿಪ್ರಮೇವ - ಜಾಗ್ರತೆಯಾಗಿಯೇ, ಏಷ್ಯತಿ - ಬರುವನು ॥೩೪॥ ಕಾಕುತ್ಸ್ಥಃ - ಶ್ರೀರಾಮನು, ಅಕ್ಷೋಭ್ಯಂ- ತಿರಸ್ಕರಿಸಲಸದಳವೆನಿಸಿದ

ಪ್ರಾಣಧಾರಣೆಯನ್ನು ಮಾಡಿಕೊಂಡಿರಬೇಕೆಂದು ಎಣಿಸಿ ಇದೇನೆ ॥೩೦॥ ಎಂದೀಪ್ರಕಾರ ಜಾನಕಿಯು ಶ್ರೀರಾಮನಿಗೆ ತನ್ನಲ್ಲಿರುವ ಪ್ರೇಮಾತಿಶಯವನ್ನು ಮಧುರ ವಾಗಿರುವ ಅರ್ಥವು ಗರ್ಭಿತವಾಗಿರುವಂತೆ ಸೂಕ್ಷ್ಮವಾಗಿ ಹೇಳಿ,ಮರಳಿ ಶ್ರೀರಾಮವೃತ್ತಾಂತದಿಂ ಕೂಡಗೂಡಿರುವ ಬಹು ಇಂಪಾಗಿರತಕ್ಕ ಆ ಆಂಜನೇಯನ ಮಾತನ್ನು ಕೇಳಬೇಕೆಂದು ಬಯಸಿ ಸುಮ್ಮನಾದಳು ೩೧ ॥ ಬಹುಗಂಭೀರವಾಗಿರುವ ಸೀತೆಯ ವಚನ ಜಾತವನ್ನೆಲ್ಲ ಕೇಳಿ, ಮಹಾ ಬಾಹು ಬಲ ಸಂಪನ್ನನಾದ ಮಾರುತಿಯು-ಕೈಗಳನ್ನು ಜೋಡಿಸಿ ತಲೆಯ ಮೇಲಿಟ್ಟು ಮರಳಿ ಇಂತೆಂದನು. ಕಮಲನಯನೆಯಾದ ಜಾನಕಿಯೇ ! ಶ್ರೀರಾಮನಿಗೆ ನೀನು ಇಲ್ಲಿ ಇರುವ ಸಮಾಚಾರವು ಸತ್ಯವಾಗಿಯೂ ತಿಳಿಯದು. ‹‹ಆ ವಿಶಾಲಾಕ್ಷಿಯಾದ ಸೀತೆಯನ್ನು ಅಗಲಿ ನಿಮಿಷಮಾತ್ರವಾದರೂ ಜೀವಿಸಿ ಇರಲಾರೆನಲ್ಲಾ,, ಎಂದು ಹಗಲಿರಳೂ ವ್ಯಥೆಪಡುತಲಿದಾನೆ. ನೀನಿಲ್ಲಿರುವ ಸುದ್ದಿಯು ತಿಳಿದಿದ್ದುದೇ ಆದರೆ ಇದುವರೆಗೆ ತಕ್ಕ ಪ್ರಯತ್ನವನ್ನು ಮಾಡಿಕರೆದೊಯ್ಯುತಲಿದ್ದನು. ಈಗಲೂ ಪೂರ್ವದಲ್ಲಿ-ಇಂದ್ರನು ತನ್ನ ಭಾರ್ಯೆಯಾದ ಶಚೀದೇವಿಯನ್ನು ಅನುಹ್ಲಾದನೆಂಬ ರಕ್ಕಸನು ಎತ್ತಿಕೊಂಡು ಹೋಗಲು, ತನ್ನ ಭಾರ್ಯೆಯು ಇಂತಹ ಸ್ಥಳದಲ್ಲಿರುವಳೆಂಬ ಸುದ್ದಿಯು ತಿಳಿಯದೆ ಕೆಲವು ಕಾಲ ತೊಳಲುತಲಿದ್ದು, ಬಳಿಕ ಉಪಾಯಾಂತರದಿಂದ ತಿಳಿದುಕೊಂಡು ಮರಳಿ ಕರೆದೊಯ್ದಂತೆ ನಿನ್ನ ಸುದ್ದಿಯು ತಿಳಿದ ಕಡಲೇ ಇಲ್ಲಿಂದ ಕರದೊಯ್ಯುವನು. ಭಯಪಡದೆ ಸಮಾಧಾನದಿಂದಿರು ॥೩೩॥ ರಾಘವನು ನನ್ನ ಮೂಲಕ ಇಲ್ಲಿನ ಸಮಾಚಾರವನ್ನು ಕೇಳಿದ ಕೂಡಲೇ ಕಪಿ

ವಿಷ್ಟಂಭಯಿತ್ವಾ ಬಾಣೌಘೈ ರಕ್ಷೋಭ್ಯಾಂ ವರುಣಾಲಯಂ ।
ಕರಿಷ್ಯತಿ ಪುರೀಂ ಲಂಕಾಂ ಕಾಕುತ್ಸ್ಥ ಶ್ಶಾಂತರಾಕ್ಷಸಾಂ ॥೩೫॥
ತತ್ರ ಯದ್ಯಂತರಾ ಮೃತ್ಯು ರ್ಯದಿ ದೇವಾ ಸ್ಸಹಾಽಸುರಾಃ ।
ಸ್ಥಾಸ್ಯಂತಿ ಪಥಿ ರಾಮಸ್ಯ ಸ ತಾನಪಿ ವಧಿಷ್ಯತಿ ॥೩೬॥
ತವಾದರ್ಶನ ಜೇನಾರ್ಯೆ ಶೋಕೇನ ಸ ಪರಿಪ್ಲುತಃ ।
ನ ಶರ್ಮ ಲಭತೆ ರಾಮ ಸ್ಸಿಂಹಾರ್ದಿತ ಇವ ದ್ವಿಪಃ ॥೩೭॥
ಮಲಯೇನ ಚ ವಿಂಧ್ಯೇನ ಮೇರುಣಾ ಮಂದರೇಣ ಚ ।
ದರ್ದುರೇಣ ಚ ತೇದೇವಿ ಶಪೇ ಮೂಲ ಫಲೇನ ಚ ॥೩೮॥

---

ವರುಣಾಲಯಂ - ಸಮುದ್ರವನ್ನು, ಬಾಣೌಘೈಃ - ಬಾಣಸಮೂಹಗಳಿಂದ, ವಿಷ್ಟಂಭಯಿತ್ವಾ - ಕದಲದಂತೆ ಕಟ್ಟಿ, ಲಂಕಾಂನಗರೀಂ - ಲಂಕಾನಗರವನ್ನು, ಶಾಂತರಾಕ್ಷಸಾಂ - ಅಡಗಿಹೋದ ರಕ್ಕಸರುಳ್ಳುದನ್ನಾಗಿ, ಕರಿಷ್ಯತಿ - ಮಾಡುವನು, ॥೩೫॥ ತತ್ರ - ನಿನ್ನನ್ನು ಕರೆದೊಯ್ಯುವ ಕೆಲಸದಲ್ಲಿ, ಮೃತ್ಯುಃ - ಮೃತ್ಯುದೇವತೆಯೇ, ಪಥಿ - ಮಾರ್ಗದಲ್ಲಿ, ಅಂತರಾ - ನಡುವೆ, ಸ್ಥಾಸ್ಯತಿಯದಿ - ವಿಘ್ನಮಾಡತನಿಂತರೂ, ದೇವಾಃ - ದೇವತೆಗಳು, ಸಹಾಸುರಾಃ - ರಕ್ಕಸರಿಂದ ಸಹಿತರಾದವರಾಗಿ, (ಸ್ಥಾಸ್ಯಂತಿಯದಿ-ವಿಘ್ನಕಾರಿಗಳಾಗಿ ನಿಂತರೂ) ಸಃ - ಆ ಶ್ರೀರಾಮನು, ತಾನಪಿ - ಅವರನ್ನೂ, ವಿಧಮಿಷ್ಯತಿ - ಧ್ವಂಸಮಾಡುತ್ತಾನೆ ॥೩೬॥ ಹೇ ಆರ್ಯೆ-ಎಲೌಪೂಜ್ಯಳೇ !, ಸಃ- ಆ,ರಾಮಃ - ಶ್ರೀರಾಮನು, ತವ-ನಿನ್ನ, ಅದರ್ಶನಜೇನ - ನೋಟವಿಲ್ಲದುದರಿಂದುಂಟಾದ, ಶೋಕೇನ - ದುಃಖದಿಂದ, ಪರಿಪ್ಲುತಃ - ತುಂಬಿದವನಾಗಿ, ಸಿಂಹಾರ್ದಿತಃ - ಸಿಂಹದಿಂದ ಪೀಡಿಸಲ್ಪಟ್ಟ, ದ್ವಿಪಇವ-ಆನೆಯಹಾಗೆ, ಶರ್ಮ - ಸುಖವನ್ನು, ನಲಭತೆ-ಪಡೆಯುತಲಿಲ್ಲ ॥೩೭॥ ಹೇದೇವಿ - ಎಲೌ ಜಾನಕಿಯೇ! (ಅಹಂ-ನಾನು,) ಮಲಯೇನಚ-ಮಲಯಪರ್ವತದಿಂದಲೂ, ವಿಂಧ್ಯೇನ-ವಿಂಧ್ಯಪರ್ವತದಿಂದಲೂ, ಮೇರುಣಾ-ಮೇರುಪರ್ವತದಿಂದಲೂ, ಮಂದರೇಣಚ ಮಂದರ ಪರ್ವತದಿಂದಲೂ ದರ್ದುರೇಣಚ - ದರ್ದುರಪರ್ವತದಿಂದಲೂ, ಮೂಲಫಲೇನಚ - ಕಂದಮೂಲ ಫಲಗಳಿಂದಲೂ, ತೆ - ನಿನಗೆ, ಶಪೆ - ಆಣೆಯನ್ನಿಟ್ಟುಕೊಳ್ಳುತ್ತೇನೆ (ಶಪಥಮಾಡುತ್ತೇನೆ) ॥೩೮

---

ಸಮೂಹಗಳಿಂದಲೂ, ಕರಡಿಗಳಿಂದಲೂ ಒಡಗೂಡಿರುವ ಮಹತ್ತರವಾದ ಸೇನೆಯಿಂದೊಡಗೂಡಿ ಇಲ್ಲಿಗೆ ಶೀಘ್ರದಲ್ಲಿಯೇ ಬರಹೋಗುವನು॥ ೪ ॥ಎಲಾ ಸೀತಾದೇವಿಯೇ!ಹೆರರಿಂದ ಕಳವಳಗೊಳಿಸಲಸದಳವೆನಿಸಿ, ಮೊಸಳೆ ಮುಂತಾದ ಘಾತುಕ ಜಂತುಗಳಿಗೆ ಆಕಾರವಾಗಿರುವ ಕಡಲನ್ನು ಬಾಣದ ಮಳೆಗಳಿಂದ ಚಲಿಸದಂತೆ ಕಟ್ಟಿ, ಇಲ್ಲಿಗೂ ಬಂದು, ಈಲಂಕಾನಗರಿಯನ್ನು ರಕ್ಕಸರ ಹುಟ್ಟಿಲ್ಲದಂತೆ ಮಾಡಹೋಗುವನು ॥೩೫॥ ಬಂದು ವೇಳೆ ನಿನ್ನನ್ನು ಕರೆದೊಯ್ಯಲು ಬರುವ ವೇಳೆಯಲ್ಲಿ-ದೇವತೆಗಳಾಗಲೀ ರಾಕ್ಷಸರೇ ಆಗಲಿ ಅಥವಾ ಸಾಕ್ಷಾತ್ ಮೃತ್ಯುವೇ ಆಗಲಿ ನಡುವೆ ಅಡ್ಡಿಮಾಡಲಿಕ್ಕೆ ಬಂದುದೇ ಆದರೆ,ಅವರೆಲ್ಲರನ್ನೂ ನಾಶಪಡಿಸಿಯೇ ಇಲ್ಲಿಗೆ ಬರಹೋಗುವನು ॥ ೩೬ ॥ ಎಲೌ ಪೂಜ್ಯಳೇ ! ಶ್ರೀರಾಮಚಂದ್ರನು ನಿನ್ನನ್ನು ಅಗಲಿ,ಕಾಣದಿರುವುದರಿಂದುಂಟಾದ ಶೋಕದಿಂದ ಬಾಧಿತನಾಗಿ, ಸಿಂಹದಿಂದ ಹಿಂಸಿಸಲ್ಪಡುತಲಿರುವ ಆನೆಯ ಹಾಗೆ ಹಗಲಿರಳೂ ಸುಖಲೇಶವಿಲ್ಲದೆ ತಪಿಸುತಲಿದಾನೆ ॥೩೭॥ ಈ ವಿಷಯದಲ್ಲಿ ನಿನ್ನ ಸಮಾಧಾನಕ್ಕೋಸ್ಕರ ನಾನು ಅಸತ್ಯವನ್ನು ಹೇಳಿದುದೇ ಆದರೆ ನನ್ನ

ಯಥಾ ಸುನಯನಂ ವಲ್ಗು ಬಿಂಬೋಷ್ಠಂ ಚಾರುಕುಂಡಲಂ ।
ಮುಖಂ ದ್ರಕ್ಷ್ಯಸಿ ರಾಮಸ್ಯ ಪೂರ್ಣಚಂದ್ರ ಮಿವೋದಿತಂ ॥೩೯॥
ಕ್ಷಿಪ್ರಂ ದ್ರಕ್ಷ್ಯಸಿ ವೈದೇಹಿ ರಾಮಂ ಪ್ರಸ್ರವಣೇ ಗಿರೌ ।
ಶತಕ್ರತು ಮಿವಾಸೀನಂ ನಾಕಪೃಷ್ಠಸ್ಯ ಮೂರ್ಧನಿ ॥೪೦॥
ನ ಮಾಂಸಂ ರಾಘವೋ ಭುಂಕ್ತೆ ನಚಾಪಿ ಮಧುಸೇವತೆ ।
ವನ್ಯಂ ಸುವಿಹಿತಂ ನಿತ್ಯಂ ಭಕ್ತ ಮಶ್ನಾತಿ ಪಂಚಮಮ್ ॥೪೧॥

---

ಸುನಯನಂ – ಸುಂದರವಾದ ಕಣ್ಣುಳ್ಳ, ಬಿಂಬೋಷ್ಠಂ – ತೊಂಡೆಯ ಹಣ್ಣಿನಂತಿರುವ ತುಟಿಯುಳ್ಳ ಚಾರುಕುಂಡಲಂ – ಅಂದವಾದ ಕರ್ಣಾಭರಣವುಳ್ಳ, ರಾಮಸ್ಯ – ಶ್ರೀರಾಮನ, ಮುಖಂ – ಮುಖವನ್ನು ಉದಿತಂ – ಉದಿಸಿದ, ಪೂರ್ಣಚಂದ್ರಂಯಥೇವ – ಪೂರ್ಣಚಂದ್ರನನ್ನು ಹೇಗೋ ಹಾಗೆ, ದ್ರಕ್ಷ್ಯಸಿ – ನೋಡುವೆಯೋ, ತಥಾ – ಹಾಗೆ, ಶಪೆ – ಪ್ರತಿಜ್ಞೆಮಾಡುತ್ತೇನೆ ॥೩೯॥ ಹೇವೈದೇಹಿ – ಎಲೌ ಜಾನಕಿಯೇ, ನಾಕಪೃಷ್ಠಸ್ಯ–ನಾಕಪೃಷ್ಠವೆಂಬಸ್ವರ್ಗದಲ್ಲಿನಇಂದ್ರಸ್ಥಾನದ, ಮೂರ್ಧನಿ–ಮೇಲುಭಾಗದಲ್ಲಿ,(ಆಸಿನಂ – ಕುಳಿತಿರುವ) ಶತಕ್ರತುಮಿವ – ಇಂದ್ರನನ್ನು ಹೇಗೋ ಹಾಗೆ, ಪ್ರಸ್ರವಣೇ – ಪ್ರಸ್ರವಣವೆಂಬ, ಗಿರೌ – ಬೆಟ್ಟದಲ್ಲಿ, ಆಸೀನಂ – ಕುಳಿತಿರುವ, ರಾಮಂ – ಶ್ರೀರಾಮನನ್ನು, ದ್ರಕ್ಷ್ಯಸಿ–ನೋಡುವೆ ॥೪೦॥

ಹೇದೇವಿ – ಎಲೌ ತಾಯೇ ! ರಾಘವಃ – ಶ್ರೀ ರಾಮನು, ಮಾಂಸಂ – ಮಾಂಸವನ್ನು, ನಭುಂಕ್ತೆ ಭುಜಿಸದೆ ಇದಾನೆ, ಮಧುಚ – ಮದ್ಯವನ್ನೂ, ನಸೇವತೆ – ಸೇವಿಸದೆ ಇದಾನೆ, ವನ್ಯಂ – ವನದಲ್ಲಿ ಹುಟ್ಟಿದ ಕಂದಮೂಲ ಫಲಾದಿಗಳನ್ನು, ಸುವಿಹಿತಂ – ವಾನಪ್ರಸ್ಥಾಶ್ರಮದಲ್ಲಿರುವವನಿಗೆ ವಿಧಿಸಲ್ಪಟ್ಟಿರುವ, ಭಕ್ತಂ (ಇವ) ಆಹಾರವನ್ನು ಹೇಗೋ ಹಾಗೆ, ನಿತ್ಯಂ – ಪ್ರತಿದಿನದಲ್ಲಿಯೂ, ಪಂಚಮಂ – ಐದನೆಯ ಕಾಲದ ಆಹಾರವನ್ನಾಗಿ ಭುಂಕ್ತೆ – ಭೋಜನಮಾಡುತ್ತಾನೆ ॥೪೧॥ ರಾಘವಃ – ಶ್ರೀ ರಾಮನು

---

ಜಾತಿಯವರಾದ ಕಪಿಗಳಿಗೆಲ್ಲ ವಾಸಮಾಡಲಿಕ್ಕೆ ಆಸರೆ ಎನಿಸಿ, ಆಹಾರವೆನಿಸಿದ ಕಂದಮೂಲ ಫಲಾದಿಗಳನ್ನು ಸಂಪಾದಿಸಿ ಕೊಡುವ ಮತ್ತು ಬಹು ಮಂದಿ ದೇವತೆಗಳಿಗೆ ಆಶ್ರಯವಾದ ಮಲಯ, ವಿಂಧ್ಯ, ಮೇರು, ಮಂದರ ದರ್ದುರ, ಈ ಮೊದಲಾದ ಪರ್ವತಗಳಿಗೆಲ್ಲದ್ರೋಹಮಾಡಿದಂತಾಗಲೆಂದು ಆಣೆಯನ್ನಿಟ್ಟುಕೊಳ್ಳುತ್ತೇನೆ. ಮತ್ತು ಸುಂದರವಾದ ನಯನವನ್ನೊಳಗೊಂಡು ತೊಂಡೆಯ ಹಣ್ಣಿಗೆಣೆಯಾದ ತುಟಿಯುಳ್ಳುದಾಗಿ, ರಮಣೀಯವಾದ ಕರ್ಣಕುಂಡಲಗಳಿಂದ ಅಲಂಕೃತವಾಗಿರುವ ಶ್ರೀರಾಮಚಂದ್ರನ ಮುಖವನ್ನು, ಹೊಸದಾಗಿ ಉದಯಿಸುತಲಿರುವ ಪೂರ್ಣಚಂದ್ರನನ್ನು ನೋಡುವ ಹಾಗೆ ಜಾಗ್ರತೆಯಲ್ಲಿಯೇ ಸತ್ಯವಾಗಿಯೂ ನೋಡುತ್ತೀಯೆ ಎಂದು ಆಣೆಯಿಟ್ಟು ಹೇಳುವೆನು ॥೩೯॥

ಎಲೌ ವೈದೇಹಿಯೇ ! ಆ ಸ್ವರ್ಗಲೋಕದಲ್ಲಿ ಇಂದ್ರನಿಗೆ ಮುಖ್ಯಸ್ಥಾನವೆನಿಸಿದ ನಾಕಪೃಷ್ಠವೆಂಬ ಸ್ಥಳದಲ್ಲಿ ಕುಳಿತಿರುವ ಶತಮುಖನನ್ನು ಹೇಗೋ ಹಾಗೆ, ಪ್ರಸ್ರಣವೆಂಬ ಗಿರಿಯಮೇಲೆ ಸುಖಾಸೀನನಾಗಿರುವ ಶ್ರೀರಾಮನನ್ನು ಜಾಗ್ರತೆಯಲ್ಲಿಯೇ ನೋಡುವೆ ॥ ಎಲೌ ತಾಯೇ ! ಶ್ರೀ ರಾಮನು ಮಾಂಸವನ್ನು ಮನಃಪೂರ್ವಕವಾದ ಪ್ರೀತಿಯಿಂದಲಾಗಲೀ, ಅನಾದರದಿಂದಲಾಗಲೀ, ಸ್ವಲ್ಪವಾದರೂ ಭುಜಿಸತಕ್ಕವನಾಗಿಲ್ಲ. ಮದ್ಯರಸವನ್ನು ಸ್ಪರ್ಶವೇ ಮಾಡನು. ವಾನಪ್ರಸ್ಥಾಶ್ರಮದಲ್ಲಿರುವ ಮುನಿಗಳಂತೆ ಕಾಡಿನಲ್ಲಿ ಬೆಳೆದ ಕಂದ

ನೈವ ದಂಶಾ ನ್ನ ಮಶಕಾ ನ್ನ ಕೀಟಾ ನ್ನ ಸರೀಸೃಪಾನ್ ।
ರಾಘವೋ ಽ ಪನಯೇದ್ಗಾತ್ರಾ ತ್ವದ್ಗತೇ ನಾಂತರಾತ್ಮನಾ ॥೪೨॥
ನಿತ್ಯಂ ಧ್ಯಾನಪರೋ ರಾಮೋ ನಿತ್ಯಂ ಶೋಕ ಪರಾಯಣಃ ।
ನಾನ್ಯ ಚ್ಚಿಂತಯತೇ ಕಿಂಚಿ ತ್ಸತು ಕಾಮ ವಶಂಗತಃ ॥೪೩॥
ಅನಿದ್ರ ಸ್ಸತತಂ ರಾಮಃ ಸುಪ್ತೋ ಽಪಿಚ ನರೋತ್ತಮಃ ।
ಸೀತೇತಿ ಮಧುರಾಂ ವಾಣೀಂ ವ್ಯಾಹರ ನ್ಪ್ರತಿಬುಧ್ಯತೇ ॥೪೪॥

ತ್ವದ್ಗತೇನ - ನಿನ್ನನ್ನು ಹೊಂದಿರುವ, ಅಂತರಾತ್ಮನಾ - ಮನಸ್ಸಿನಿಂದ, ದಂಶಾನ್ - ಕಾಡುನೊಣಗಳ ನ್ನು, ಗಾತ್ರಾತ್ - ಶರೀರದ ದೆಶೆಯಿಂದ, ನೈವಾಪನಯೇತ್ - ಹಾರಿಸುವುದೇ ಇಲ್ಲ, ಮಶಕಾನ್ - ಸೊಳ್ಳೆಗಳನ್ನೂ, ನಾಪನಯೇತ್ - ತೊಲಗಿಸುವುದಿಲ್ಲ, ಕೀಟಾನ್- ಹುಳಗಳನ್ನೂ, ನಾಪನಯೇತ್ - ಪರಿಹರಿಸಿಕೊಳ್ಳನು, ಸರೀಸೃಪಾನ್ - ಸರ್ಪಗಳನ್ನೂ, (ಹರಿದು ಮೇಲೆ ಹತ್ತುವ ಜಂತುಗಳನ್ನೂ) ನಾಪನಯೇತ್ - ತೆಗೆದು ಹಾಕುವುದಿಲ್ಲ ॥೪೨॥ ಸಃರಾಮಃ - ಆ ರಾಮನು, ಕಾಮವಶಂ - ಮನ್ಮಥನಿಗಧೀನತೆಯನ್ನು, ಗತಃ - ಹೊಂದಿದವನಾದ ಕಾರಣವೇ, ನಿತ್ಯಂ - ಯಾವಾಗಲೂ, ಧ್ಯಾನಪರಃ - ನಿನ್ನ ಚಿಂತೆಯಲ್ಲಿ ಮುಳುಗಿದಾನೆ, ನಿತ್ಯಂ - ಯಾವಾಗಲೂ, ಶೋಕಪರಾಯಣಃ - ದುಃಖದಲ್ಲಿ ಮಗ್ನನಾಗಿದಾನೆ, ಅನ್ಯತ್ - ಬೇರಾವುದನ್ನೂ, ಕಿಂಚಿತ್ - ಸ್ವಲ್ಪವಾದರೂ, ನಚಿಂತಯತೆ - ನೆನೆಯುವುದೇ ಇಲ್ಲ ॥೪೩॥ ನರೋತ್ತಮಃ - ಪುರುಷಶ್ರೇಷ್ಠನೆನಿಸಿದ, ರಾಮಃ - ಶ್ರೀ ರಾಮನು, ಸತತಂ - ಯಾವಾಗಲೂ, ಅನಿದ್ರಃ-ನಿದ್ದೆಯಿಲ್ಲದವನಾಗಿದಾನೆ, ಸುಪ್ತೋಪಿ - ಮಲಗಿಕೊಂಡವನಾದರೂ, ಸೀತೇತಿ - ಹಾ ಸೀತೆಯೇ ಎಂದು, ಮಧುರಾಂ - ಕೇಳಲಿಂಪಾದ. ವಾಣೀಂ - ವಾಕ್ಯವನ್ನು, ವ್ಯಾಹರನ್ - ಹೇಳುತಲಿರುವವನಾಗಿ, ಪ್ರತಿಬುಧ್ಯತೇಚ - ಎಚ್ಚರಗೊಳ್ಳುತಾನೆ ॥೪೪॥ (ರಾಮಃ - ಶ್ರೀ ರಾಮನು) ಫಲಂ - ಹಣ್ಣನ್ನಾಗಲಿ, ಪುಷ್ಪಂವಾ

ಮೂಲ ಫಲಗಳನ್ನು ಪ್ರಾತಃ, ಸಂಗವ, ಮಧ್ಯಾಹ್ನ, ಅಪರಾಹ್ಣ, ಸಾಯಂಕಾಲವೆಂಬ ಕಾಲಭೇದಗಳೊಳಗೆ ಐದನೆಯ ಕಾಲದಲ್ಲಿ ಬಹು ಬಲಾತ್ಕಾರವಾಗಿಯೂ, ಮನೋವ್ಯಥೆಯಿಂದಲೂ, ಮಿತವಾಗಿ ಭುಜಿಸುತ್ತಾ ನಿನ್ನ ದರ್ಶನದ ಕಳವಳ ವುಳ್ಳವನಾಗಿ,ಬಹು ಕ್ಲೇಶಪಡುತ ಜೀವಿಸುತಲಿದಾನೆ ॥೪೧॥ ಹೀಗೆ ನಿನ್ನಲ್ಲಿಯೇ ನಟ್ಟ ಮನಸ್ಸುಳ್ಳವನಾದುದರಿಂದಲೇ ಪರಕಾಯ ಪ್ರವೇಶವನ್ನು ಮಾಡಿದವನ ಹಾಗೆ ದೇಹಾಭಿಮಾನವಿಲ್ಲದೆ ತನ್ನಮೈಮೇಲೆ ಕಾಡುನೊಣಗಳು ಕೂಡಲಿ, ಸೊಳ್ಳೆಗಳು ಕಡಿಯಲಿ, ಹುಳಗಳು ಹೊಗಲಿ, ಹರಿಯುವ ಪ್ರಾಣಿಗಳು ಏರಲಿ, ಹಾರಿಸದೆಯೂ, ತೊಲಗಿಸದೆಯೂ, ಹೊಡೆಸುದೆಯೂ, ತೆಗೆದು ಹಾಕದೆಯೂ ಇರುವನು. ಇದರಿಂದ ಆತನಿಗೆ ನಿನ್ನಲ್ಲಿ ಎಷ್ಟು ಮಮತೆ ಇರುವುದೆಂಬುದನ್ನು ಯೋಚಿಸು ॥೪೨॥ ಎಲೆ ಮಾನ್ಯಳೇ! ರಾಮನು ಹಗಲಿರುಳುಗಳೊಳಗೆ ನಿಮಿಷಮಾತ್ರವೂ ಬಿಡುವಿಲ್ಲದೆ ನಿನ್ನ ಚಿಂತೆಯಲ್ಲಿದಾನೆ, ಅನವರತವೂ ನಿನ್ನಯ ಶೋಕದಿಂದ ಪೀಡಿತನಾಗಿರುವನು ಕಾಮ ಪರವಶನಾಗಿ ನಿನ್ನನ್ನು ಹೊರತು ಬೇರಾವುದನ್ನೂ ನೆನೆಯುವುದೇ ಇಲ್ಲ. ಇದರಿಂದ ಆತನ ಪ್ರೇಮಭರವನ್ನು ಚಿಂತಿಸು ॥೪೩॥ ನಿರಂತರವೂ ಆತನಿಗೆ ಜಾಗರವಲ್ಲದೆ ನಿದ್ರೆ ಯೆಂಬುದಿಲ್ಲ. ಒಂದುವೇಳೆ ಆ ಪುರುಷಶ್ರೇಷ್ಠನು ಮಲಗಿಕೊಂಡವನೇ ಆದರೆ ನಿಮಿಷಮಾತ್ರದಲ್ಲಿ ಪುನಃ ಸೀತೆ ! ಸೀತೇ ! ಎಂಬ ಮಧುರವಾದ ವಾಕ್ಯವನ್ನು ಉದಹರಿಸುತಲೇ ಎಚ್ಚರಗೊಳ್ಳುವನು. ಕಾಡಿನಲ್ಲಿ ಯಾಗಲಿ, ಬೆಟ್ಟಗುಟ್ಟಗಳಲ್ಲಿಯಾಗಲಿ,

ದೃಷ್ಟ್ವಾ ಫಲಂ ವಾ ಪುಷ್ಪಂ ವಾ ಯದ್ವಾನ್ಯ ತ್ಸುಮನೋಹರಮ್ ।
ಬಹುಶೋ ಹಾ ಪ್ರಿಯೇತ್ಯೇವಂ ಶ್ವಸಂ ಸ್ತ್ವಾಮಭಿಭಾಷತೇ ॥೪೫॥
ಸ ದೇವಿ ನಿತ್ಯಂ ಪರಿತಪ್ಯಮಾನ ಸ್ತ್ವಾಮೇವ ಸೀತೇ ತ್ಯಭಿ ಭಾಷಮಾಣಃ ।
ಧೃತವ್ರತೋ ರಾಜಸುತೋ ಮಹಾತ್ಮಾ ತವೈವ ಲಾಭಾಯ ಕೃತಪ್ರಯತ್ನಃ॥
ಸಾ ರಾಮ ಸಂಕೀರ್ತನ ವೀತಶೋಕಾ ರಾಮಸ್ಯ ಶೋಕೇನ ಸಮಾನಶೋಕಾ।
ಶರನ್ಮುಖೇ ಸಾಂಬುದ ಶೇಷಚಂದ್ರಾ ನಿಶೇವ ವೈದೇಹಸುತಾ ಬಭೂವ॥೪೭॥
ಇತಿ ಶ್ರೀಮತ್ಸುಂದರಕಾಂಡೇ - ಷಟ್ತ್ರಿಂಶಸ್ಸರ್ಗಃ

ಹೂವನ್ನಾಗಲಿ, ಅನ್ಯತ್ - ಬೇರೊಂದಾದ, ಸುಮನೋಹರಂ - ಅತ್ಯಂತ ಸುಂದರವಾದುದು, ಯತ್ - ಯಾವುದುಂಟೋ, ತದ್ವಾ - ಅದನ್ನಾಗಲಿ, ದೃಷ್ಟ್ವಾ - ನೋಡಿ, ಬಹುಶಃ - ಅನೇಕಾವರ್ತಿ, ಹಾ ಪ್ರಿಯೇತಿ - ಹಾ ಪ್ರಿಯಳೇ ಎಂದು, ಏವಂ - ಈ ಪ್ರಕಾರವಾಗಿ, ಶ್ವಸನ್ - ನಿಟ್ಟುಸಿರನ್ನು ಬಿಡುತಲಿರುವವನಾಗಿ, ತ್ವಾಂ - ನಿನ್ನನ್ನು ಕುರಿತು, ಅಭಿಭಾಷತೇ - ಮಾತನಾಡುತ್ತಾನೆ, ॥೪೫॥ ಹೇದೇವಿ - ಎಲೌ ಸೀತಾದೇವಿಯೇ ! ಮಹಾತ್ಮಾ - ಮಹಾನುಭಾವನಾದ, ಧೃತವ್ರತಃ - ಅರಣ್ಯವ್ರತವನ್ನು ಧರಿಸರುವ, ಸಃ - ಆ, ರಾಜಸುತಃ - ದಶರಥಪುತ್ರನು, ತವ - ನಿನ್ನ, ಲಾಭಾಯೈವ-ಪ್ರಾಪ್ತಿಗೋಸ್ಕರವೇ, ಕೃತಪ್ರಯತ್ನಃ-ಮಾಡಲ್ಪಟ್ಟ ಪ್ರಯತ್ನವುಳ್ಳವನಾಗಿ, ಸೀತೇತಿ - ಓ ಸೀತೇ ಎಂದು, ತ್ವಾಮೇವ - ನಿನ್ನನ್ನು ಕುರಿತೇ, ಅಭಿಭಾಷಮಾಣಃ - ಇದಿರಿಗೆ ಮಾತನಾಡುತಲಿರುವವನಾಗಿ, ನಿತ್ಯಂ - ಯಾವಾಗಲೂ, ಪರಿತಪ್ಯಮಾನಃ - ಸಂತಾಪಪಡುತ್ತಾ, ಅಸ್ತಿ - ಇದ್ದಾನೆ ॥೪೬॥ ರಾಮಸ್ಯ - ಶ್ರೀ ರಾಮನ, ಶೋಕೇನ - ದುಃಖದಿಂದ, ಸಮಾನ ಶೋಕಾ - ಸಮಾನವಾದ ದುಃಖವುಳ್ಳವಳಾಗಿಯೂ, ರಾಮ - ಶ್ರೀ ರಾಮನ, ಸಂಕೀರ್ತನ - ಚರಿತ್ರೆಯನ್ನು ವಿವರಿಸುವುದರಿಂದ, ವೀತಶೋಕಾ - ತೊಲಗಿದ ದುಃಖವುಳ್ಳವಳಾಗಿಯೂ ಇರುವ, ಸಾ - ಆ, ವೈದೇಹಸುತಾ - ಜಾನಕಿಯು, ಶರನ್ಮುಖೇ - ಶರದೃತುವಿನ ಆರಂಭದಲ್ಲಿ, ಸಾಂಬುದಶೇಷಚಂದ್ರಾ-ಮೋಡದ ಉಳಿವಿನಿಂದೊಡಗೂಡಿದ ಚಂದ್ರನುಳ್ಳ, ನಿಶೇವ - ರಾತ್ರಿಯಹಾಗೆ, ಬಭೂವ -ಇದ್ದಳು ॥೪೭॥
ಇಂತು ಮೂವತ್ತಾರನೆಯ ಸರ್ಗಂ.

ಮಧುರವಾದ ಫಲವನ್ನು, ಸುಂದರವಾದ ಪುಷ್ಪವನ್ನು, ಅಥವಾ ಅಂದವಾದ ಬೇರೊಂದು ಪದಾರ್ಥವನ್ನು ನೋಡಿದುದೇ ಆದರೆ ಅಡಿಗಡಿಗೂ ಹಾ ಪ್ರಿಯಳೇ! ಎಂದು ಗಟ್ಟಿಯಾಗಿ ಹಂಬಲಿಸುತ್ತಾ, ನಿಟ್ಟುಸಿರನ್ನು ಬಿಡುತ್ತಾ, ಎದುರಿಗೆ ನಿಂತಿರುವ ನಿನ್ನೊಡನೆ ಮಾತನಾಡುವನಹಾಗೆ ಭಾಷಿಸುವನು ॥೪೫॥ ಎಲೌ ಮಾತೆಯೇ ! ಸಕಲ ಕಲ್ಯಾಣ ಗುಣಾಭಿರಾಮನಾದ ಆ ರಾಮನು ನಿನ್ನನ್ನು ಪಡೆಯಬೇಕೆಂಬ ಉದ್ಯೋಗದಲ್ಲಿಯೇ ನಿತ್ಯಪರಾಯಣನಾಗಿ,ನಿನ್ನಹೆಸರನ್ನೇ ಹಂಬಲಿಸುತ್ತಾ,ವ್ರತಧರನಾಗಿ,ಪ್ರತಿಕ್ಷಣದಲ್ಲಿಯೂ ಸಂತಪಿಸುತ್ತಾ, ನಿನ್ನಲಾಭಕ್ಕೋಸ್ಕರ ಪ್ರಯತ್ನಿಸುತ್ತಲಿರುವನು ಎಂದು ಹೇಳಲು, ಸಕಲಸದ್ಗುಣಸಮನ್ವಿತೆಯಾದ ಸೀತೆಯು ಶ್ರೀ ರಾಮನ ದುಃಖದ ಪ್ರಕಾರವನ್ನು ಕೇಳಿ ಸಮಾನವಾದ ದುಃಖವನ್ನನುಭವಿಸಿ, ಅವನ ಜೀವಿಕೆಯರೂಪವಾದ ಕ್ಷೇಮ ಸಮಾಚಾರ ಶ್ರವಣದಿಂದ ಶೋಕವನ್ನು ತೊರೆದು, ಮಳೆಗಾಲವು ಕಳೆದುಹೋಗುತ್ತಾ, ಶರತ್ಕಾಲವು ಬರುತಲಿರುವ ಸಮಯದಲ್ಲಿ ಸ್ವಲ್ಪವಾಗಿ ಉಳಿದಿರುವ ಮೋಡದಲ್ಲಿ ಸಿಲುಕಿರತಕ್ಕ ಚಂದ್ರನುಳ್ಳ ರಾತ್ರಿಯಂತೆ ಕಾಣಬರುತ್ತಿದ್ದಳು. ॥೪೬-೪೭॥

— ಇಂತು ಮೂವತ್ತಾರನೆಯ ಸರ್ಗಂ —

ಶ್ರೀ

ಶ್ರೀರಾಮ ಚನ್ದ್ರಪರಬ್ರಹ್ಮಣೇ ನಮಃ

## —ಶ್ರೀಮತ್ಸುನ್ದರಕಾಣ್ಡೇ ಸಪ್ತತ್ರಿಂಶ ಸ್ಸರ್ಗಃ—

ಸೀತಾ ತದ್ವಚನಂ ಶ್ರುತ್ವಾ ಪೂರ್ಣಚಂದ್ರ ನಿಭಾನನಾ ।
ಹನೂಮಂತ ಮುವಾಚೇದಂ ಧರ್ಮಾರ್ಥ ಸಹಿತಂ ವಚಃ ॥೧॥
ಅಮೃತಂ ವಿಷಸಂಸೃಷ್ಟಂ ತ್ವಯಾವಾನರ ಭಾಷಿತಂ ।
ಯಚ್ಚ ನಾನ್ಯ ಮನಾ ರಾಮೋ ಯಚ್ಚ ಶೋಕ ಪರಾಯಣಃ ॥೨॥

---

ಮೂವತ್ತೇಳನೆಯ ಸರ್ಗಂ

ಕಂದ--ವಾತಾತ್ಮಜ ನೊಡವೋಗಲ್ । ಸೀತೆಯು ತಾಂ ಶಂಕಿಸಲ್ಕೆ ಮಾರುತಿ ಭರದಿಂ ॥
ಭೀತಿ ಕರಾಕೃತಿಯಿಂದಲ್ । ಕಾತರಮಂ ಕಳೆದು ಸಾಂತ್ವವಾದವ ನೊರೆದಂ॥

**ಪೂರ್ಣಚಂದ್ರನಿಭಾನನಾ** - ಚಂದ್ರನಿಗೆಣೆಯಾದ ಮುಖವುಳ್ಳ, ಸೀತಾ - ಜಾನಕಿಯು, ತತ್ - ಆ ವಚನವನ್ನು, ಶ್ರುತ್ವಾ - ಕೇಳಿ, ಹನುಮಂತಂ - ಆಂಜನೇಯನನ್ನು ಕುರಿತು, ಧರ್ಮಾರ್ಥಸಹಿತಂ - ಧರ್ಮರೂಪ ಪ್ರಯೋಜನದಿಂದೊಡಗೂಡಿದ, ಇದಂ - ಈ ಮುಂದಿನ, ವಚಃ - ಮಾತನ್ನು, ಉವಾಚ - ಹೇಳತೊಡಗಿದಳು ॥೧॥ ವಾನರ - ಎಲೈ ಆಂಜನೇಯನೇ !, ರಾಮಃ - ಶ್ರೀರಾಮನು, ಅನ್ಯಮನಾಃ - ಇತರವಸ್ತುವಿನಲ್ಲಿ ಮನಸ್ಸುಳ್ಳವನು, ನ-ಆಗಿಇಲ್ಲ, ( ಇತಿ - ಹೀಗೆಂಬ) ಯತ್ - ಯಾವ ವಾಕ್ಯವು, ತ್ವಯಾ - ನಿನ್ನಿಂದ, ಭಾಷಿತಂ - ಹೇಳಲ್ಪಟ್ಟಿತೋ, (ತತ್ - ಆವಾಕ್ಯವು) ಅಮೃತಂ_ ಅಮೃತ ಸದೃಶವಾಗಿದೆ, ರಾಮಃ - ಶ್ರೀರಾಮನು) ಶೋಕಪರಾಯಣಃ - ಶೋಕದಲ್ಲಿ ಮುಳುಗಿ ಇದ್ದಾನೆ (ಇತಿ - ಹೀಗೆಂಬ, ಯತ್ - ಯಾವ ಮಾತುಉಂಟೋ, ತತ್ - ಆವಚನವು) ವಿಷಸಂಸೃಷ್ಟಂ - ವಿಷದಿಂದೊಡಗೂಡಿದುದಾಗಿದೆ (ಕರ್ಣಕಠೋರವಾಗಿದೆ) ॥೨॥ ಕೃತಾಂತಃ - ದೈವವು, ಸುವಿಸ್ತೀರ್ಣೇ -

---

## — ಮೂವತ್ತೇಳನೆಯ ಸರ್ಗಂ —

**ಪೂರ್ಣಚಂದ್ರವದನೆಯಾದ** ವೈದೇಹಿಯು - ಮಾರುತಿಯ ಮೂಲಕ ಶ್ರೀರಾಮನ ದುಃಖಸ್ಥಿತಿಯನ್ನೆಲ್ಲ ಕೇಳಿ, ಧರ್ಮರೂಪವಾದಪ್ರಯೋಜನವನ್ನು ಮೀರಿಹೋಗದಿರುವ ಮಾತುಗಳನ್ನು ಹನುಮನೊಡನೆ ಹೇಳಲಿಕ್ಕೆ ಆರಂಭಿಸಿದಳು ॥೧॥ ಎಲೈ ಆಂಜನೇಯನೇ! ರಾಮನು ಅನವರತವೂ,ಮತ್ತಾವುದರಲ್ಲಿಯೂ ಮನಸ್ಸುಳ್ಳವನಾಗಿಲ್ಲವೆಂದು ಹೇಳಿದುದರಿಂದ ನನ್ನಲ್ಲಿ ನಿರತಿಶಯ ಪ್ರೇಮವನ್ನು ಸೂಚಿಸುವ ಆ ನಿನ್ನನುಡಿಯು,ಅಮೃತದಂತೆ ಆನಂದಕರವಾಗಿದೆ, ನಿರಂತರವೂ ದುಃಖ ಪಡುತಲಿದಾನೆಂದು ಹೇಳಿದ ನುಡಿಯು, ನನ್ನಮನಸ್ಸಿಗೆ ಬಹುತರವಾದ ವ್ಯಥೆಯನ್ನುಂಟುಮಾಡುತ,ವಿಷದಂತೆ ಕ್ರೂರವಾಗಿರುವುದು. ಓ ಮಾರುತೀ! ಪೂರ್ವಜನ್ಮದಲ್ಲಿ ಆಚರಿಸಿದ ದುಷ್ಕೃತವೆಂಬ ದುರ್ದೈವವೂ, ಸುಕೃತರೂಪವಾದಅದೃಷ್ಟವೂ, ಮಹಾವೈಭವದಲ್ಲಿರುವ ಪ್ರಾಣಿಯನ್ನಾಗಲೀ, ಅಪಾರವಾದವ್ಯಸನದಲ್ಲಿರುವಪ್ರಾಣಿಯನ್ನಾಗಲೀ, ಹಗ್ಗದಿಂದಕಟ್ಟಿದಂತೆಬಂಧಿಸಿ,ಸುಖದಿಂದದುಃಖಕ್ಕೂ,ದುಃಖದಿಂದ

ಐಶ್ವರ್ಯೇ ವಾ ಸು ವಿಸ್ತೀರ್ಣೇ ವ್ಯಸನೇ ವಾ ಸುದಾರುಣೇ ।
ರಜ್ಜ್ವೇವ ಪುರುಷಂ ಬದ್ಧ್ವಾ ಕೃತಾಂತಃ ಪರಿಕರ್ಷತಿ ॥೩॥
ವಿಧಿ ರ್ನೂನ ಮಸಂಹಾರ್ಯಃ ಪ್ರಾಣಿನಾಂ ಪ್ಲವಗೋತ್ತಮ ।
ಸೌಮಿತ್ರಿಂ ಮಾಂ ಚ ರಾಮಂ ಚ ವ್ಯಸನೈಃ ಪಶ್ಯಮೋಹಿತಾನ್ ॥೪॥
ಶೋಕಸ್ಯಾಸ್ಯ ಕದಾ ಪಾರಂ ರಾಘವೋಽಧಿಗಮಿಷ್ಯತಿ ।
ಪ್ಲವಮಾನಃ ಪರಿಶ್ರಾಂತೋ ಹತನೌ ಸ್ಸಾಗರೇಯಥಾ ॥೫॥
ರಾಕ್ಷಸಾನಾಂ ವಧಂ ಕೃತ್ವಾ ಸೂದಯಿತ್ವಾ ಚ ರಾವಣಮ್ ।
ಲಂಕಾ ಮುನ್ಮೂಲಿತಾಂ ಕೃತ್ವಾ ಕದಾ ದ್ರಕ್ಷ್ಯತಿ ಮಾಂ ಪತಿಃ ॥೬॥

---

ವಿಸ್ತೀರ್ಣವಾದ, ಐಶ್ವರ್ಯೇವಾ - ಪ್ರಭುತ್ವದಲ್ಲಿಯಾಗಲಿ, ಸುದಾರಣೇ - ಅತ್ಯಂತ ಭಯಂಕರವಾದ, ವ್ಯಸನೇವಾ - ದುಃಖದಲ್ಲಿಯಾಗಲಿ, ಪುರುಷಂ - ಮನುಷ್ಯನನ್ನು, ರಜ್ಜ್ವೇವ - ಹಗ್ಗದಿಂದ ಹೇಗೋ ಹಾಗೆ, ಬದ್ಧ್ವಾ-ಕಟ್ಟಿ, ಪರಿಕರ್ಷತಿ - ಸೆಳೆಯುತ್ತದೆ (ಹಿಂಸಿಸುತ್ತದೆ) ॥೩॥ ಪ್ಲವಗೋತ್ತಮ - ಎಲೈ ವಾನರ ಪುಂಗವನೇ!, ವಿಧಿಃ - ದೈವವು, ಪ್ರಾಣಿನಾಂ - ಪ್ರಾಣಿಗಳಿಂದ, ನೂನಂ - ನಿಶ್ಚಯವಾಗಿ, ಅಸಂಹಾರ್ಯಃ - ತಿರಸ್ಕರಿಲಶಕ್ಯವು, ವ್ಯಸನೈಃ - ದುಃಖಗಳಿಂದ, ಮೋಹಿತಾನ್- ಸ್ಮೃತಿಯಿಲ್ಲದಂತಾಗಿರುವ, ಸೌಮಿತ್ರಿಂ - ಲಕ್ಷ್ಮಣನನ್ನೂ, ಮಾಂಚ - ನನ್ನನ್ನೂ, ರಾಮಂಚ - ರಾಮನನ್ನೂ, ಪಶ್ಯ - ನೋಡು ॥ ೪ ॥ ಪರಿಶ್ರಾಂತಃ - ಹೇರಳವಾಗಿ ಬಳಲುತಲಿರುವ, ರಾಘವಃ - ಶ್ರೀರಾಮನು, ಸಾಗರೆ - ಸಮುದ್ರದಲ್ಲಿ, ಪ್ಲವಮಾನಃ - ತೇಲಿಹೋಗುತಲಿರುವ, ಹತನೌಃ ಯಥಾ - ಗಾಳಿಯ ಪೆಟ್ಟಿನಿಂದ ಒಡೆಯುಹಾಗೆ, ಅಸ್ಯ ಶೋಕಸ್ಯ - ಈ ಅಪಾರವಾದ ದುಃಖದ, ಪಾರಂ - ಕೊನೆಯನ್ನು, ಕದಾ - ಯಾವಾಗ, ಅಧಿಗಮಿಷ್ಯತಿ - ಹೊಂದುವನು ? ॥೫॥ ಪತಿಃ-ವಲ್ಲಭನಾದ ರಾಮನು, ರಾಕ್ಷಸಾನಾಂ - ರಕ್ಕಸರ, ವಧಂ - ಸಂಹಾರವನ್ನು, ಕೃತ್ವಾ - ಮಾಡಿ, ರಾವಣಂ - ದಶಕಂಠನನ್ನೂ, ಸೂದಯಿತ್ವಾ - ಧ್ವಂಸಮಾಡಿ, ಲಂಕಾಂ - ಲಂಕಾನಗರವನ್ನು, ಉನ್ಮೂಲಿತಾಂ - ನಾಶವಾಗಿ ಹೋದುದನ್ನಾಗಿ ಕೃತ್ವಾ - ಮಾಡಿ ಮಾಂ - ನನ್ನನ್ನು, ಕದಾ - ಯಾವಾಗ, ದ್ರಕ್ಷ್ಯತಿ - ನೋಡುವನು ? ॥೬॥

---

ಸುಖಕ್ಕೂ ಸೆಳೆಯುತ್ತದೆ!॥೩॥ ಎಲೈ ವಾನರೋತ್ತಮನೇ! ಯಾವ ಪ್ರಾಣಿಯೂ ದೈವವನ್ನು ಅತಿಕ್ರಮಿಸಲಾರ. ರಾಮನು ರಾಜಲಕ್ಷಣಗಳಲ್ಲಿ ಕಡಮೆಯೋ? ಪೌರುಷದಲ್ಲಿ ಹೀನನೇ? ಬುದ್ಧಿಯಲ್ಲಿ ನಿಕೃಷ್ಟನೇ ? ಗುಣಗಳಲ್ಲಿ ಕೀಳನೇ ? ಸೌಮಿತ್ರಿಯೂ, ಅವನಂತೆಯೇ ಇರತಕ್ಕವನಲ್ಲವೇ ? ನಾನು ಪತಿಭಕ್ತಿಯಿಲ್ಲದವಳೇ ? ಆದರೂ ನಾನೂ, ರಾಮನೂ, ಲಕ್ಷ್ಮಣನೂ ಶೋಕಸಾಗರದಲ್ಲಿ ಮುಳುಗಿ ದಡವನ್ನು ಕಾಣದಿರುವುದನ್ನು ನೋಡು ॥೪॥ ಕಡಲಿನಲ್ಲಿ ಪ್ರಯಾಣಮಾಡುತಲಿರುವ ಹಡಗು ಬಿರುಗಾಳಿಯ ಪೆಟ್ಟಿನಿಂದ ತೊಂದರೆಗೊಳ್ಳುವ ಹಾಗೆ, ಶ್ರೀರಾಮನು ಅಪಾರವಾದ ದುಃಖಕ್ಕೆ ಈಡಾಗಿ ದುಃಖಸಾಗರದಲ್ಲಿ ಮುಳುಗುತಲಿದಾನೆ. ಆತನು ಇನ್ನೆಂದಿಗೆ ಪಾರಗಾಣುವುದು?॥೫॥ ರಾಕ್ಷಸರನ್ನು ಕೊಂದು, ರಾವಣನನ್ನು ಸೀಳಿ, ಲಂಕೆಯನ್ನು ಹಾಳುಮಾಡಿ, ನನ್ನ ಪ್ರಿಯವಲ್ಲಭನು ನನ್ನನ್ನು ನೋಡುವುದೆಂದು ? ॥೬॥ ಎಲೈ ವಾನರಾಧಿಪ ! ನೀನು ರಾಮನನ್ನು ಕಂಡು, ನನಗೆ ಗೊತ್ತಾಗಿರುವ ಸಂವತ್ಸರದ ಕಾಲವು ಪೂರ್ತಿಯಾಗುವುದರೊಳಗೆ, ನನ್ನ ಪ್ರಾಪ್ತಿಗಾಗಿ ಜಾಗ್ರತೆಯಾಗಿ ಪ್ರಯತ್ನಿಸುವಂತೆ ರಾಮನಿಗೆ

ಸ ವಾಚ್ಯ ಸ್ಸಂತ್ವರಸ್ವೇತಿ ಯಾವದೇವ ನ ಪೂರ್ಯತೆ ।
ಅಯಂ ಸಂವತ್ಸರಃ ಕಾಲ ಸ್ತಾವದ್ಧಿ ಮಮಜೀವಿತಂ ॥೭॥
ವರ್ತತೇ ದಶಮೋ ಮಾಸೋ ದ್ವೌತು ಶೇಷೌ ಪ್ಲವಂಗಮ ।
ರಾವಣೇನ ನೃಶಂಸೇನ ಸಮಯೋ ಯಃ ಕೃತೋ ಮಮ ॥೮॥
ವಿಭೀಷಣೇನ ಚ ಭ್ರಾತ್ರಾ ಮಮ ನಿರ್ಯಾತನಂ ಪ್ರತಿ ।
ಅನುನೀತಃ ಪ್ರಯತ್ನೇನ ನ ಚ ತತ್ಕುರುತೇ ಮತಿಂ ॥೯॥
ಮಮ ಪ್ರತಿಪ್ರದಾನಂ ಹಿ ರಾವಣಸ್ಯ ನ ರೋಚತೆ ।
ರಾವಣಂ ಮಾರ್ಗತೆ ಸಂಖ್ಯೇ ಮೃತ್ಯುಃ ಕಾಲವಶಂ ಗತಂ ॥೧೦॥

---

ಯಾವತ್ - ಎಷ್ಟರೊಳಗೆ, ಅಯಂ - ಈ, ಸಂವತ್ಸರಃ - ವರ್ಷ ಪರಿಮಿತವಾದ, ಕಾಲಃ - ಸಮಯವು, ನಪೂರ್ಯತೆ - ಪೂರ್ತಿಯಾಗುವುದಿಲ್ಲವೋ, ತಾವದೇವ- ಅಷ್ಟರವರೆಗೇ, ಮಮ - ನನ್ನ, ಜೀವಿತಂ - ಜೀವನವು ಹಿ - ನಿಶ್ಚಯ, (ತತ್ - ಆದಕಾರಣ) ಸಂತ್ವರಸ್ವೇತಿ - ಜಾಗ್ರತೆ ಪಡು, ಎಂದು (ತ್ವಯಾ-ನಿನ್ನಿಂದ) ಸಃ - ಆ ರಾಮನು, ವಾಚ್ಯಃ - ಹೇಳಲ್ಪಡತಕ್ಕವನು ॥ ೭ ಪ್ಲವಂಗಮ - ಎಲೈ ಮಾರುತಿಯೆ !, ದಶಮಃ - ಹತ್ತನೆಯದಾದ, ಮಾಸಃ - ತಿಂಗಳು, ವರ್ತತೆ - ನಡೆಯುತಲಿದೆ, ನೃಶಂಸೇನ - ಕ್ರೂರನಾದ, ರಾವಣೇನ - ರಾವಣನಿಂದ, ಯಃ - ಯಾವ, ಸಮಯಃ - ಗಡುವು, ಮಮ - ನನಗೆ, ಕೃತಃ - ಮಾಡಲ್ಪಟ್ಟದೆಯೋ, (ತಸ್ಯತು - ಆ ಕಾಲಕ್ಕಾದರೋ) ದ್ವೌತು - ಎರಡು ತಿಂಗಳುಗಳುಮಾತ್ರವೇ, ಶೇಷೌ - ಉಳಿದವುಗಳಾಗಿವೆ ॥೮॥ ಸಃ - ಆರಾವಣನು, ಭ್ರಾತ್ರಾ - ಸಹೋದರನಾದ, ವಿಭೀಷಣೇನ- ವಿಭೀಷಣನಿಂದಲೂ, ಮಮ - ನನ್ನ, ನಿರ್ಯಾತನಂ ಪ್ರತಿ - ಶ್ರೀರಾಮನಿಗೆ ಸಮರ್ಪಿಸೋಣವನ್ನು ಕುರಿತು, ಪ್ರಯತ್ನೇನ - ಬಹುಪ್ರಯಾಸದಿಂದ, ಅನುನೀತಶ್ಚ - ಕೇಳಲ್ಪಟ್ಟನು, ತತ್-ನನ್ನನ್ನು ರಾಮನಿಗೆ ಒಪ್ಪಿಸೋಣವೆಂಬುದನ್ನು ಕುರಿತು, ಮತಿಂ - ಸಮ್ಮತಿಯನ್ನು, ನಕುರುತೆ - ಮಾಡುವುದಿಲ್ಲ ॥೯॥ ಮಮ - ನನ್ನ ಪ್ರತಿಪ್ರದಾನಂಹಿ - ಮರಳಿ ಒಪ್ಪಿಸೋಣವೆಂಬುದಾದರೋ, ರಾವಣಸ್ಯ - ರಾವಣನಿಗೆ, ನರೋಚತೆ - ಒಪ್ಪಿಗಿಲ್ಲ, ತತ್ - ಆದಕಾರಣ, ಮೃತ್ಯುಃ - ಮೃತ್ಯುದೇವತೆಯು, ಕಾಲವಶಂ - ಯಮನ ಅಧೀನತೆಯನ್ನು, ಗತಂ - ಹೊಂದಿರುವ, ತಂ - ಆರಾವಣನನ್ನು, ಸಂಖ್ಯೆ - ಕಾಳಗದಲ್ಲಿ, ಮಾರ್ಗತೆ - ಹುಡುಕುತಲಿದೆ. ॥೧೦॥ ಹೇಕಪೇ ಎಲೈ ವಾನರನೇ ! ಜ್ಯೇಷ್ಠ -

---

ತಿಳಿಸು. ಈ ಸಂವತ್ಸರದ ಕಾಲವು ಪೂರ್ತಿಯಾಗುವವರೆಗೆ ನನ್ನ ಪ್ರಾಣಧಾರಣೆಗೂ ಅವಧಿಯನ್ನು ತಿಳಿ. ॥೭॥ ಎಲೈ ಪ್ಲವಂಗಪುಂಗವನೇ । ಪಾಪಾತ್ಮನಾದ ರಾವಣನು ನನ್ನ ಜೀವನಕ್ಕೆ ಗೊತ್ತುಮಾಡಿರುವ ಸಂವತ್ಸರದ ಗಡುವಿನೊಳಗೆ ಈಗ ಹತ್ತನೆಯ ತಿಂಗಳು ನಡೆಯುತಿದೆ. ಇನ್ನು ಎರಡುತಿಂಗಳುಗಳು ಮಾತ್ರವೇ ಉಳಿದಿರುವುವು ॥೮॥ ಇದಲ್ಲದೆ- ರಾವಣನಿಗೆ ವಿಭೀಷಣನೆಂಬ ಒಬ್ಬಧರ್ಮಾತ್ಮನಾದ ಸೋದರನುಂಟು, ಆತನು ಈ ನೀಚನಾದ ರಾವಣನನ್ನು ಕುರಿತು,ನನ್ನನ್ನು ಕರೆದುಕೊಂಡು ಹೋಗಿ ಶ್ರೀರಾಮನಿಗೆ ಒಪ್ಪಿಸುವಂತೆ ಬಹುವಿಧವಾದ ಪ್ರಯತ್ನಗಳಿಂದ ವಿನಯ ಪೂರ್ವಕವಾಗಿ ವಿಜ್ಞಾಪಿಸಿದನಂತೆ, ಆದರೂ ಆ ಪಾಪಿಷ್ಠನು ಅವನ ಸಾಂತ್ವವಚನವನ್ನು ಸಮ್ಮತಿಸಲಿಲ್ಲ ॥೯॥ ನನ್ನನ್ನು ಶ್ರೀರಾಮನಿಗೆ ಸಮರ್ಪಿಸೋಣವು ದುರಾತ್ಮನಾದ ರಾವಣನ ಮನಸ್ಸಿಗೆ ರುಚಿಸದು, ಅವನು ಮೃತ್ಯು

ಜ್ಯೇಷ್ಠಾ ಕನ್ಯಾ ನಲಾನಾಮ ವಿಭೀಷಣಸುತಾ ಕಪೇ ।
ತಯಾ ಮಮೇದ ಮಾಖ್ಯಾತಂ ಮಾತ್ರಾ ಪ್ರಹಿತಯಾ ಸ್ವಯಂ ॥೧೧॥
ಅಸಂಶಯಂ ಹರಿಶ್ರೇಷ್ಠ ಕ್ಷಿಪ್ರಂ ಮಾಂ ಪ್ರಾಪ್ಸ್ಯತೆ ಪತಿಃ ।
ಅಂತರಾತ್ಮಾ ಹಿ ಮೇ ಶುದ್ಧ ಸ್ತಸ್ಮಿಂಶ್ಚ ಬಹವೋ ಗುಣಾಃ ॥೧೨॥
ಉತ್ಸಾಹಃ ಪೌರುಷಂ ಸತ್ವ ಮಾನೃಶಂಸ್ಯಂ ಕೃತಜ್ಞತಾ ।
ವಿಕ್ರಮಶ್ಚ ಪ್ರಭಾವಶ್ಚ ಸಂತಿ ವಾನರ ರಾಘವೆ ॥೧೩॥
ಚತುರ್ದಶ ಸಹಸ್ರಾಣಿ ರಾಕ್ಷಸಾನಾಂ ಜಘಾನಯಃ ।
ಜನಸ್ಥಾನೇ ವಿನಾ ಭ್ರಾತ್ರಾ ಶತ್ರುಃ ಕಸ್ತಸ್ಯ ನೋದ್ವಿಜೇತ್ ॥ ೧೪॥

ಹಿರಿಯವಳಾದ, ವಿಭೀಷಣಸುತಾ-ವಿಭೀಷಣನ ಮಗಳಾಗಿರುವ, ನಲಾನಾಮ-ನಲೆಯೆಂಬ ಹೆಸರಿನ, ಕನ್ಯಾ-ಹೆಣ್ಣುಮಗಳು, (ಅಸ್ತಿ - ಉಂಟು) ಮಾತ್ರಾ - ತಾಯಿಯಾದ ಸರಮೆಯೆಂಬುವವಳಿಂದ, ಪ್ರಹಿತಯಾ-ಕಳುಹಿಸಲ್ಪಟ್ಟ, ತಯಾ - ಆ ನಲೆಯಿಂದ, ಸ್ವಯಂ - ಸ್ವತಃ, ಮಮ - ನನಗೆ, ಇದಂ - ಈ ಮುಂದಿನ ಮಾತು, ಆಖ್ಯಾತಂ - ಹೇಳಲ್ಪಟ್ಟಿತು. ॥೧೧॥ ಹರಿಶ್ರೇಷ್ಠ - ಎಲೈ ಕಪಿವರನೇ ? ಪತಿಃ - ನನ್ನ ಪ್ರಿಯನು, ಮಾಂ - ನನ್ನನ್ನು, ಕ್ಷಿಪ್ರಂ - ಬೇಗನೆ, ಪ್ರಾಪ್ಸ್ಯತೆ - ಹೊಂದುವನು, ಅಸಂಶಯಂ - ಸಂದೇಹವಿಲ್ಲ. ಮೆ-ನನ್ನ, ಅಂತರಾತ್ಮಾಹಿ - ಮನಸ್ಸಾದರೋ, ಶುದ್ಧಃ - ನಿರ್ಮಲವಾಗಿದೆ, ವಾನರ - ಎಲೈ ಹನುಮಂತನೇ !, ತಸ್ಮಿನ್ - ಆ, ರಾಘವೇಚ - ಶ್ರೀರಾಮನಲ್ಲಿಯಾದರೋ, ಉತ್ಸಾಹಃ - ಸ್ಥಿರಪ್ರಯತ್ನವೂ, ಪೌರುಷಂ - ಪ್ರಯತ್ನಾನುಗುಣವಾದ ಶೌರ್ಯವೂ, ಸತ್ವಂ - ಆಶೌರ್ಯಾನುಸಾರವಾದ ಅಂತಸ್ಸಾರವೂ, ಆನೃಶಂಸ್ಯಂ - ಕಪಟರಾಹಿತ್ಯವೂ, ಕೃತಜ್ಞತಾ - ಹೆರರುಮಾಡಿದ ಉಪಕೃತಿಯ ಸ್ಮರಣೆಯೂ, ವಿಕ್ರಮಶ್ಚ - ಬಲಪ್ರಕಾಶವೂ, ಪ್ರಭಾವಶ್ಚ - ಮಹಿಮೆಯೂ, (ಇತಿ-ಎಂಗೆಂಬ) ಬಹವಃ - ಅನೇಕಗಳಾದ, ಗುಣಾಃ - ಸುಗುಣಗಳು, (ಸಂತಿ - ಇವೆ) ॥೧೨-೧೩॥ ಯಃ - ಯಾವ ಶ್ರೀರಾಮನು, ಜನಸ್ಥಾನೆ - ಜನಸ್ಥಾನವೆಂಬ ಮಹಾರಣ್ಯದಲ್ಲಿ, ಚತುರ್ದಶ - ಹದಿನಾಲ್ಕಾದ, ಸಹಸ್ರಾಣಿ - ರಕ್ಕಸರ ಸಾವಿರಗಳು,

ದೇವತೆಗೆ ವಶನಾಗಿದಾನೆ. ಕಾಳಗದಲ್ಲಿ ಅವನನ್ನು ಹಿಡಿದು ಸೆಳೆಯಲು ಮೃತ್ಯುವು ನಿರೀಕ್ಷಿಸುತಲಿದೆ ॥೧೦॥ ಎಲೈ ಕಪಿವರನೇ! ವಿಭೀಷಣನ ಸುದ್ದಿಯನ್ನು ಹೇಳಿದುದರಿಂದ ಅನ್ಯಥಾ ಭಾವಿಸಬೇಡ. ವಿಭೀಷಣನ ಪತ್ನಿಯಾದ ಸರಮೆ ಎಂಬುವವಳು ತನ್ನ ಹಿರಿಯಮಗಳಾದ ನಲೆ ಎಂಬುವವಳಿಂದ ತಾನಾಗಿಯೇ ಈ ಸುದ್ದಿಯನ್ನು ನನಗೆ ಹೇಳಿಕಳುಹಿಸಿ ಇದ್ದಳು. ॥೧೧॥ ಎಲೈ ಸೌಮ್ಯನೇ! ನನ್ನ ಪ್ರಿಯವಲ್ಲಭನು ಬಹುಜಾಗ್ರತೆಯಲ್ಲಿಯೇ ನನ್ನನ್ನುಪಡೆಯುವನು. ನನ್ನ ಮನಸ್ಸು ಬಹುನೈರ್ಮಲ್ಯವನ್ನು ಪಡೆಯುತಲಿದೆ. ಶುದ್ಧವಾದ ಅಥವಾ ಮಲಿನವಾದವು ನಸ್ಸೇ ಮುಂದಣ ಶುಭಾಶುಭಗಳನ್ನು ಸೂಚಿಸುತದೆ ಯಲ್ಲವೇ? ಆ ಶ್ರೀರಾಮ ಚಂದ್ರನಲ್ಲಿ ಮಹಾಕಾರ್ಯವನ್ನು ಸಾಧಿಸುವ ಸ್ಥಿರಪ್ರಯತ್ನವೂ, ಅದಕ್ಕೆ ತಕ್ಕ ಸಲಕರಣೆಯನ್ನು ಕಲ್ಪಿಸುವುದೂ, ಅಂತಸ್ಸಾರವೂ, ಮನೋವಾಕ್ಕರ್ಮಗಳಲ್ಲಿ ಕಪಟವಿಲ್ಲದಿರೋಣವೂ, ಹೆರರು ಮಾಡಿದಉಪಕಾರವನ್ನು ನೆನೆಯೋಣವೂ, ದೇಹಬಲಪ್ರಕಾಶರೂಪವಾದವಿಕ್ರಮವೂ, ಮಹತ್ತರವಾದಮಹಿಮೆಯೂ ಎಂಬಿವೇ ಮೊದಲಾದಅನೇಕ ಸುಗುಣಗಳು ನೆಲಗೊಂಡಿವೆ॥೧೨-೧೩॥ ಜನಸ್ಥಾನವೆಂಬ ಮಹಾರಣ್ಯದಲ್ಲಿ ಸೋದರನಾದ ಲಕ್ಷ್ಮಣನ ಸಹಾಯವನ್ನೂ ಅಪೇಕ್ಷಿ

ಸ ನ ಶಕ್ಯಸ್ತುಲಯಿತುಂ ವ್ಯಸನೈಃ ಪುರುಷರ್ಷಭಃ ।
ಅಹಂ ತಸ್ಯ ಪ್ರಭಾವಜ್ಞಾ ಶಕ್ರಸ್ಯೇವ ಪುಲೋಮಜಾ ॥೧೫॥
ಶರ ಜಾಲಾಂಶುಮಾಂ ಚ್ಛೂರಃ ಕಪೇ ರಾಮದಿವಾಕರಃ ।
ಶತ್ರು ರಕ್ಷೋಮಯಂ ತೋಯ ಮುಪಶೋಷಂ ನಯಿಷ್ಯತಿ ॥೧೬॥
ಇತಿ ಸಂಜಲ್ಪಮಾನಾಂ ತಾಂ ರಾಮಾರ್ಥೇ ಶೋಕ ಕರ್ಶಿತಾಂ ।
ಅಶ್ರು ಸಂಪೂರ್ಣ ನಯನಾ ಮುವಾಚ ವಚನಂ ಕಪಿಃ ॥೧೭॥
ಶ್ರುತ್ವೈ ವ ತು ವಚೋ ಮಹ್ಯಂ ಕ್ಷಿಪ್ರ ಮೇಷ್ಯತಿ ರಾಘವಃ ।

ಭ್ರಾತ್ರಾವಿನಾ - ತಮ್ಮನಾದ ಲಕ್ಷ್ಮಣನಿಲ್ಲದೆಯೇ, ಜಘಾನ - ಕೊಂದನೋ, ತಸ್ಯ - ಆ ಶ್ರೀರಾಮನಿಗೆ ಕಃ - ಯಾವ, ಶತ್ರುಃ - ಹಗೆಯು, ನೋದ್ವಿಜೇತ್ - ಭಯಪಡದೆ ಇದ್ದಾನು ? ॥೧೪॥ ಪುರುಷರ್ಷಭಃ- ಪುರುಷೋತ್ತಮನಾದ, ಸಃ - ಶ್ರೀರಾಮನು, ವ್ಯಸನೈಃ - ಕಷ್ಟಗಳಿಂದ ತುಲಯಿತುಂ -ಕದಲಿಸಲಿಕ್ಕೆ, ನಶಕ್ಯಃ - ತಕ್ಕವನಾಗಿಲ್ಲ, ಅಹಂ - ನಾನು, ಪುಲೋಮಜಾ - ಶಚೀದೇವಿಯು, ಶಕ್ರಸ್ಯೇವ - ಇಂದ್ರನಿಗೆ ಹೇಗೋ ಹಾಗೆ, ತಸ್ಯ - ಆ ಶ್ರೀರಾಮನ, ಪ್ರಭಾವಜ್ಞಾ - ಮಹಿಮೆಯನ್ನರಿತವಳು ॥೧೫॥ ಕಪೇ- ಎಲೈ ವಾನರನೇ !, ಶರಜಾಲಾಂಶುಮಾನ್ - ಬಾಣಸಮೂಹವೆಂಬ ಕಿರಣವುಳ್ಳ, ರಾಮದಿವಾಕರಃ - ಶ್ರೀರಾಮನೆಂಬ ಸೂರ್ಯನು, ಶತ್ರುರಕ್ಷೋಮಯಂ - ಹಗೆಗಳಾದ ರಕ್ಕಸರ ರೂಪವಾಗಿರುವ, ತೋಯಂ - ಜಲವನ್ನು, ಉಪಶೋಷಂ - ಬತ್ತಿಸೋಣವನ್ನು, ನಯಿಷ್ಯತಿ (ನೇಷ್ಯತಿ) - ಹೊಂದಿಸುವನು ॥೧೬॥ ಇತಿ-ಈ ಪ್ರಕಾರವಾಗಿ, ರಾಮಾರ್ಥೇ - ರಾಮಪ್ರಯೋಜನದಲ್ಲಿ, ಸಂಜಲ್ಪಮಾನಾಂ - ಸಂಭಾಷಿಸುತಲಿರುವ, ಶೋಕಕರ್ಶಿತಾಂ - ದುಃಖದಿಂದ ಕೃಶಿಸಿಹೋಗಿರುವ, ಅಶ್ರುಸಂಪೂರ್ಣನಯನಾಂ - ನೀರಿನಿಂದ ತುಂಬಿದ ಕಣ್ಣುಳ್ಳ, ತಾಂ - ಆ ಜಾನಕಿಯನ್ನು ಕುರಿತು, ಕಪಿಃ - ಆಂಜನೇಯನು, ವಚನಂ - ಮುಂದಿನಮಾತನ್ನು, ಉವಾಚ - ಹೇಳತೊಡಗಿದನು ॥೧೭॥ ರಾಘವಃ - ಶ್ರೀರಾಮನು, ಮಹ್ಯಂ - (ಮಮ) ನನ್ನ, ವಚಃ - ನಿನ್ನ ಕುಶಲದ ಮಾತನ್ನು, ಶ್ರುತ್ವೈವ - ಕೇಳಿದ ಕೂಡಲೇ, ಹರ್ಯೃಕ್ಷಗಣ ಸಂಕುಲಾಂ - ಕಪಿಗಳ ಮತ್ತು ಕರಡಿಗಳ ಹಿಂಡಿನಿಂದ ಕೂಡಿರುವ, ಮಹತೀಂ - ದೊಡ್ಡದಾದ, ಚಮೂಂ-

ಸದೆ ಖರದೂಷಣರೇ ಮೊದಲಾದ ಹದಿನಾಲ್ಕುಸಾವಿರಮಂದಿ ರಕ್ಕಸರನ್ನು ಅಸಹಾಯಶೂರನೆನಿಸಿದ ಯಾವರಾಮನು ಬಕ್ಕಲಿಕ್ಕಿದನೋ, ಅಂತಹ ರಾಮನಿಗೆ ಯಾವ ಶತ್ರುವು ಭಯಪಡದಿರುವನು? ಎಲೈ ಕಪಿಪ್ರವರನೇ! ಎಂತಹ ಮಹಾವ್ಯಸನಗಳು ಬಂದೊದಗಿದರೂ ಮೇರುವಿನಂತೆ ಮಹಾಸ್ಥಿರ ಸ್ವಭಾವದವನಾದ ಆ ರಾಮನನ್ನು ಸ್ವಲ್ಪ ಮಾತ್ರವಾದರೂ ಕದಲಿಸಲಾರವು. ಶಚೀದೇವಿಯು ಇಂದ್ರನ ಮನೋಗತವನ್ನು ಅರಿತಿರುವ ಹಾಗೆ, ನಾನೂ, ನನ್ನ ಪ್ರಿಯವಲ್ಲಭನ ಮನೋಭಾವವನ್ನು ಬಲ್ಲವಳಾಗಿದೇನೆ ॥೧೫॥ ಎಲೈ ಪವನ ನಂದನನೇ ! ಕ್ರೂರವಾದ ಬಾಣಗಳೆಂಬ ತೀಕ್ಷ್ಣವಾದ ತೇಜಸ್ಸನ್ನೊಳಗೊಂಡಿರುವ ಶ್ರೀ ರಾಮನೆಂಬ ಭಾಸ್ಕರನು-ಶತ್ರುರೂಪವಾದ ಜಲವನ್ನು ಯಾವಾಗ ಶೋಷಿಸುವನು?॥೧೬॥ ಎಂದೀ ಪ್ರಕಾರವಾಗಿ ಹೇಳುತಲಿರುವ, ರಾಮವಿರಹ ದುಃಖದಿಂದ ಕೃಶಿಸಿ ಹೋಗಿರತಕ್ಕ, ಅಖಂಡವಾಗಿ ಕಣ್ಣೀರನ್ನು ಸುರಿಸುತಲಿರುವ ಸೀತೆಯನ್ನು ಕುರಿತು ಆಂಜನೇಯನಿಂತೆಂದನು॥೧೭॥ ಎಲೌ ಮಾತೆಯೇ ! ನೀನು ಇಲ್ಲಿರುವ ಸಮಾಚಾರವನ್ನು ನನ್ನಿಂದ ಕೇಳಿದ ಕೂಡಲೇ ರಾಘವನು

ಚಮೂಂ ಪ್ರಕರ್ಷ ನ್ಮಹತೀಂ ಹರ್ಯೃಕ್ಷ ಗಣಸಂಕುಲಾಂ ||೧೮||
ಅಥವಾ ಮೋಚಯಿಷ್ಯಾಮಿ ತ್ವಾ ಮದ್ಯೈವ ವರಾನನೇ |
ಅಸ್ಮಾ ದ್ದುಃಖಾ ದುಪಾರೋಹ ಮಮ ಪೃಷ್ಠ ಮನಿಂದಿತೇ ||೧೯||
ತ್ವಾಂ ತು ಪೃಷ್ಠ ಗತಾಂ ಕೃತ್ವಾ ಸಂತರಿಷ್ಯಾಮಿ ಸಾಗರಂ |
ಶಕ್ತಿ ರಸ್ತಿಹಿ ಮೇ ವೋಢುಂ ಲಂಕಾಮಪಿ ಸರಾವಣಾಂ ||೨೦||
ಅಹಂ ಪ್ರಸ್ರವಣಸ್ಥಾಯ ರಾಘವಾ ಯಾದ್ಯ ಮೈಥಿಲಿ |
ಪ್ರಾಪಯಿಷ್ಯಾಮಿ ಶಕ್ರಾಯ ಹವ್ಯಂ ಹುತ ಮಿವಾನಲಃ ||೨೧||
ದ್ರಕ್ಷ್ಯ ಸ್ಯದ್ಯೈವ ವೈದೇಹಿ ರಾಘವಂ ಸಹಲಕ್ಷ್ಮಣಂ !

---

ಸೇನೆಯನ್ನು, ಪ್ರಕರ್ಷನ್ - ಕರೆದುಕೊಂಡವನಾಗಿ, ಕ್ಷಿಪ್ರಂ - ಬೇಗನೆ, ಏಷ್ಯತಿ - ಬರುವನು, ||೧೮|| ಅಥವಾ - ಹಾಗಿಲ್ಲದಿದ್ದರೆ, (ಹಾಗೆ ರಾಮನು ಜಾಗ್ರತೆಯಲ್ಲಿ ಬಾರನು ಎಂಬ ಪಕ್ಷದಲ್ಲಿ) ಅನಿಂದಿತೆ - ದೋಷಲೇಶವಿಲ್ಲದ, ವರಾನನೆ - ಸುಂದರವದನೆಯಾದ ಎಲೌ ಜಾನಕಿಯೇ | (ತ್ವಂ - ನೀನು) ಮಮ-ನನ್ನ, ಪೃಷ್ಠಂ - ಬೆನ್ನನ್ನು, ಆರೋಹ - ಏರು, ಅದ್ಯೈವ - ಈ ದಿನವೇ, ತ್ವಾಂ - ನಿನ್ನನ್ನು, ಅಸ್ಮಾತ್ - ಈ, ದುಃಖಾತ್-ವ್ಯಸನದ ದೆಶೆಯಿಂದ, ಮೋಚಯಿಷ್ಯಾಮಿ - ಬಿಡಿಸುವೆನು ||೧೯|| (ನಿನಗಷ್ಟು ಶಕ್ತಿಯುಂಟೆ ? ಎಂಬೆಯೊ -) ಅಹಂ - ನಾನು, ತ್ವಾಂ - ನಿನ್ನನ್ನು, ಪೃಷ್ಠಗತಾಂ - ಬೆನ್ನಿನ ಮೇಲಿರುವವಳನ್ನಾಗಿ, ಕೃತ್ವಾ - ಮಾಡಿಕೊಂಡು, ಸಾಗರಂ - ಸಮುದ್ರವನ್ನು, ಸಂತರಿಷ್ಯಾಮಿ - ದಾಟುವೆನು, ಸರಾವಣಾಂ - ರಾವಣನಿಂದ ಸಹಿತವಾದ, ಲಂಕಾಮಪಿ - ಲಂಕಾನಗರವನ್ನಾದರೂ, ವೋಢುಂ-ಹೊರಲಿಕ್ಕೆ, ಮೇ-ನನಗೆ, ಶಕ್ತಿಃ-ಸಾಮರ್ಥ್ಯವು, ಅಸ್ತಿ-ಉಂಟು||೨೦|| ಹೇವೈದೇಹಿ-ಎಲೌಜಾನಕಿಯೆ!, ಅಹಂ-ನಾನು, ಶಕ್ರಾಯ - ಇಂದ್ರನಿಗೆ, ಅನಲಃ - ಅಗ್ನಿಯು, ಹುತಂ - ಹವನಮಾಡಲ್ಪಟ್ಟ, ಹವ್ಯಮಿವ - ಹೋಮದ್ರವ್ಯವನ್ನು ಹೇಗೋಹಾಗೆ, ಪ್ರಸ್ರವಣಸ್ಥಾಯ - ಪ್ರಸ್ರವಣಪರ್ವತದಲ್ಲಿರುವ, ರಾಘವಾಯ-ಶ್ರೀರಾಮನಿಗೆ, ಅದ್ಯ - ಈ ದಿವಸ, (ತ್ವಾಂ - ನಿನ್ನನ್ನು) ಪ್ರಾಪಯಿಷ್ಯಾಮಿ - ಹೊಂದಿಸುವೆನು ||೨೧|| ಹೇವೈದೇಹಿ - ಎಲೌ ಜಾನಕಿಯೆ !, ದೈತ್ಯವಧೆ - ರಾಕ್ಷಸ ಸಂಹಾರದಲ್ಲಿ, ವಿಷ್ಣುಂಯಥಾ - ವಿಷ್ಣುವನ್ನು

---

ಅಪಾರವಾದ ಕಪಿಗಳಿಂದಲೂ, ಕರಡಿಗಳಿಂದಲೂ, ಬಡಗೂಡಿರುವ ಮಹತ್ತರವಾದ ಸೇನೆಯಿಂದ ಸಹಿತನಾಗಿ ಅತ್ಯಲ್ಪಕಾಲದಲ್ಲಿಯೇ ಇಲ್ಲಿಗೆ ಬರುವನು ||೧೮|| ಎಲೌ ಪತಿವ್ರತಾಶಿರೋಮಣಿಯೇ! ಬಂದುವೇಳೆ ಆ ಶ್ರೀ ರಾಮನು ಇಲ್ಲಿಗೆ ಬರಲಿಕ್ಕೆ ಆಲಸ್ಯವಾಗುವುದೆಂದು, ಅಷ್ಟುಕಾಲವು ಕೂಡ ನೀನು ಸಹಿಸಲಾರದೆ ಹೋದರೆ, ಇಗೋ ಸಿದ್ಧನಾಗಿದೇನೆ, ನನ್ನ ಬೆನ್ನಿನಮೇಲೆ ಕೂಡು, ಇಂದೇ ನಿನ್ನನ್ನು ಈ ದುಃಖಸಾಗರದಿಂದ ದಾಟಿಸುವೆನು. ಈ ಮನೋವ್ಯಥೆಯ ಸಿಕ್ಕನ್ನು ಬಿಡಿಸುವೆನು ||೧೯|| ಎಲೌ ಜನನೀ ! ನಿನ್ನನ್ನು ಈ ನನ್ನ ಬೆನ್ನಿನಮೇಲೆ ಕೂಡಿಸಿಕೊಂಡು ಸಮುದ್ರವನ್ನು ದಾಟುವೆನು. ನನ್ನನ್ನು ಅಶಕ್ತನೆಂದು ತಿಳಿಯಬೇಡ. ಅನೇಕ ರಕ್ಕಸರಿಂದಲೂ, ರಾವಣನಿಂದಲೂ, ಸಹಿತವಾದ ಈ ಲಂಕೆಯನ್ನೇ ಹೊತ್ತುಕೊಂಡು ಹೋಗಲಿಕ್ಕೂ ನನಗೆ ಶಕ್ತಿಯುಂಟು|| ೨೦|| ದೇವತೆಗಳಿಗೆ ಆಳಾಗಿರುವ ಅಗ್ನಿಯು ತನ್ನಲ್ಲಿ ಮಂತ್ರಪೂರ್ವಕವಾಗಿ ಕೊಡುವ ಹವಿಸ್ಸನ್ನು ಇಂದ್ರನಿಗೆ ಕೊಂಡುಹೋಗಿ ಕೊಡುವ ಹಾಗೆ, ಎಲೈ ಮೈಥಿಲಿಯೇ! ಇಂದೇ ನಿನ್ನನ್ನು ಕರೆದುಕೊಂಡು ಹೋಗಿ ಪ್ರಸ್ರವಣಗಿರಿಯಲ್ಲಿ

ವ್ಯವಸಾಯ ಸಮಾಯುಕ್ತಂ ವಿಷ್ಣುಂ ದೈತ್ಯವಧೇ ಯಥಾ ॥೨೨॥
ತ್ವದ್ದರ್ಶನ ಕೃತೋತ್ಸಾಹ ಮಾಶ್ರಮಸ್ಥಂ ಮಹಾಬಲಂ ।
ಪುರಂದರ ಮಿವಾಸೀನಂ ನಾಕರಾಜಸ್ಯ ಮೂರ್ಧನಿ ॥೨೩॥
ಪೃಷ್ಠ ಮಾರೋಹ ಮೇ ದೇವಿ ಮಾ ವಿಕಾಂಕ್ಷಸ್ವ ಶೋಭನೇ ।
ಯೋಗ ಮನ್ವಿಚ್ಛ ರಾಮೇಣ ಶಶಾಂಕೇ ನೇವ ರೋಹಿಣೀ ॥೨೪॥
ಕಥಯಂತೀವ ಚಂದ್ರೇಣ ಸೂರ್ಯೇಣ ಚ ಮಹಾರ್ಚಿಷಾ ।
ಮತ್ಪೃಷ್ಠ ಮಧಿರುಹ್ಯ ತ್ವಂ ತರಾಕಾಶ ಮಹಾರ್ಣವೌ ॥೨೫॥

---

ಹೇಗೋಹಾಗೆ, ವ್ಯವಸಾಯ ಸಮಾಯುಕ್ತಂ - ನಿನ್ನನ್ನು ಹುಡುಕುವುದರಲ್ಲಿ ತಕ್ಕ ಪ್ರಯತ್ನದಿಂದೊಡಗೂಡಿರುವ, ಸಹಲಕ್ಷ್ಮಣಂ - ಲಕ್ಷ್ಮಣನಿಂದ ಸಹಿತನಾಗಿರುವ, ರಾಘವಂ ಶ್ರೀರಾಮನನ್ನು, ಅದ್ಯೈವ-ಈ ದಿವಸವೇ, ದ್ರಕ್ಷ್ಯಸಿ - ನೋಡುವೆ ॥೨೨॥

ನಾಕರಾಜಸ್ಯ - ಸ್ವರ್ಗದಲ್ಲಿನ ನಾಕರಾಜವೆಂಬ ಇಂದ್ರಸ್ಥಾನದ, ಮೂರ್ಧನಿ - ಅಗ್ರಭಾಗದಲ್ಲಿ, ಆಸೀನಂ - ಕುಳಿತಿರುವ, ಪುರಂದರಮಿವ - ಇಂದ್ರನನ್ನು ಹೇಗೋಹಾಗೆ, ಆಶ್ರಮಸ್ಥಂ - ಪ್ರಸ್ರವಣಗಿರಿಯ ಆಶ್ರಮದಲ್ಲಿರುವ, ತ್ವದ್ದರ್ಶನಕೃತೋತ್ಸಾಹಂ - ನಿನ್ನನ್ನು ನೋಡುವುದರಲ್ಲಿ ಕುತೂಹಲಪಡುತಲಿರುವ, ಮಹಾಬಲಂ - ಹೇರಳವಾದ ಪರಾಕ್ರಮವುಳ್ಳ, (ರಾಘವಂ - ಶ್ರೀ ರಾಮನನ್ನು, ದ್ರಕ್ಷ್ಯಸಿ - ನೋಡುವೆ) ॥೨೩॥ ಹೇಶೋಭನೆ - ಎಲೌ ಸುಮಂಗಲಿಯಾದ ದೇವಿ - ಸೀತಾದೇವಿಯೇ!, ಮೆ - ನನ್ನ, ಪೃಷ್ಠಂ ಬೆನ್ನನ್ನು, ಆರೋಹ - ಏರು, ಮಾವಿಕಾಂಕ್ಷಸ್ವ - ಅಸಡ್ಡೆಮಾಡಬೇಡ, ಶಶಾಂಕೇನ - ಚಂದ್ರನೊಡನೆ, ರೋಹಿಣೀವ - ರೋಹಿಣೀದೇವಿಯಹಾಗೆ, ರಾಮೇಣ - ರಾಮನೊಡನೆ, ಯೋಗಂ - ಸೇರುವಿಕೆಯನ್ನು, ಅನ್ವಿಚ್ಛ - ಕೋರು, ॥೨೪॥ ತ್ವಂ - ನೀನು, ಮತ್ಪೃಷ್ಠಂ- ನನ್ನ ಬೆನ್ನನ್ನು, ಅಧಿರುಹ್ಯ - ಹತ್ತಿ, ಮಹಾರ್ಚಿಷಾ - ಹೆಚ್ಚಾದ ಕಾಂತಿಯುಳ್ಳ, ಚಂದ್ರೇಣ - ಚಂದ್ರನೊಡನೆ, ಸೂರ್ಯೇಣಚ-ಸೂರ್ಯನೊಡನೆಯೂ ಕಥಯಂತೀವ - ಸಂಭಾಷಿಸುವವಳ ಹಾಗೆ, ಆಕಾಶಮಹಾರ್ಣವೌ - ಗಗನ ಸಾಗರಗಳನ್ನು, ತರ- ದಾಟು॥ ಅಂಗನೆ - ಎಲೌ ಮಂಗಳಾಂಗಿಯೇ ! ಇತಃ - ಇಲ್ಲಿಂದ, ಪ್ರಯಾತಸ್ಯ-ಪ್ರಯಾಣಮಾಡುತಲಿರುವ, ತ್ವಾಂ-

---

ಕುಳಿತಿರುವ ಶ್ರೀ ರಾಮನಿಗೆ ಸಮರ್ಪಿಸುವೆನು. ರಾಕ್ಷಸರ ಸಂಹಾರದಲ್ಲಿ ಉದ್ಯುಕ್ತನಾಗಿರುವ ಶ್ರೀ ಮಹಾವಿಷ್ಣುವನ್ನು ದೇವತೆಗಳು ದರ್ಶನಮಾಡುವ ಹಾಗೆ, ಈ ರಕ್ಕಸರನ್ನು ಸಂಹರಿಸಲು ಪ್ರಯತ್ನಿಸುತ್ತಲಿರುವ ಲಕ್ಷ್ಮಣನಿಂದ ಸಹಿತನಾದ ರಾಘವನನ್ನು ನೀನು ಇಂದೇ ನೋಡಬಹುದು॥೨೨॥ ಸ್ವರ್ಗಲೋಕದೊಳಗೆ ನಾಕಪೃಷ್ಠವೆಂಬ ಶ್ರೇಷ್ಠ ಸ್ಥಾನದಲ್ಲಿ ಕುಳಿತಿರುವ ದೇವೇಂದ್ರನನ್ನು ಹೇಗೋ ಹಾಗೆ ನಿನ್ನ ದರ್ಶನದಲ್ಲಿಯೇ ಕುತೂಹಲಿಯಾಗಿ ಪ್ರಸ್ರವಣಗಿರಿಯ ತಪೋವನದಲ್ಲಿ ಕುಳಿತಿರುವ ಮಹಾ ಬಲಸಂಪನ್ನನಾದ ಶ್ರೀ ರಾಮನನ್ನು ನೀನು ಇಂದೇ ನೋಡಬಹುದು॥೨೩॥ ಎಲೌ ದೇವಿಯೇ! ನನ್ನ ಬೆನ್ನಿನಮೇಲೆ ಕೂಡು, ಅಸಡ್ಡೆ ಮಾಡಬೇಡ, ರೋಹಿಣೀದೇವಿಯು ಚಂದ್ರನೊಡಗೂಡುವಂತೆ ಶ್ರೀ ರಾಮನ ಸಾನ್ನಿಧ್ಯವನ್ನು ಸೇರಿ ಸಂತೋಷವನ್ನನುಭವಿಸು ॥೨೪॥ ಎಲೌ ಮಂಗಳಾಂಗಿಯೇ? ನೀನು ನನ್ನ ಬೆನ್ನಿನಮೇಲೆ ಕುಳಿತು ಪ್ರಯಾಣಮಾಡುತ್ತ ಮಹಾತೇಜಸ್ವಿಗಳಾದ ಸೂರ್ಯಚಂದ್ರರೊಡನೆ ಸಂಭಾಷಿಸುತ್ತಿರುವವಳಾಗಿ ಆಕಾಶವನ್ನೂ ಅರ್ಣವವನ್ನೂ ದಾಟು ॥ ೨೫ ॥ ಎಲೌ

ದರ್ಶಯಾಮಾಸ ವೈದೇಹ್ಯಾ ಸ್ಸ್ವರೂಪ ಮರಿಮರ್ದನಃ ॥೪೩॥
ಸ ತಸ್ಮಾ ತ್ಪಾದಪಾ ದ್ಧೀಮಾ ನಾಪ್ಲುತ್ಯ ಪ್ಲವಗರ್ಷಭಃ ।
ತತೋ ವರ್ಧಿತು ಮಾರೇಭೇ ಸೀತಾಪ್ರತ್ಯಯಕಾರಣಾತ್ ॥೪೪॥
ಮೇರುಮಂದರ ಸಂಕಾಶೋ ಬಭೌ ದೀಪ್ತಾನಲಪ್ರಭಃ ।
ಅಗ್ರತೋ ವ್ಯವತಸ್ಥೇ ಚ ಸೀತಾಯಾ ವಾನರೋತ್ತಮಃ ॥೪೫॥
ಹರಿಃ ಪರ್ವತಸಂಕಾಶ ಸ್ತಾಮ್ರವಕ್ತ್ರೋ ಮಹಾಬಲಃ ।
ವಜ್ರದಂಷ್ಟ್ರನಖೋ ಭೀಮೋ ವೈದೇಹೀ ಮಿದ ಮಬ್ರವೀತ್ ॥೪೬॥
ಸಪರ್ವತ ವನೋದ್ದೇಶಾಂ ಸಾಟ್ಟಪ್ರಾಕಾರ ತೋರಣಾಂ ।

---

ಸಂಚಿಂತ್ಯ - ವಿಚಾರಮಾಡಿ, ಸ್ವರೂಪಂ - ತನ್ನ ಇಚ್ಛೆಯಿಂದ ಕಲ್ಪಿಸಿದ ಉನ್ನತಾಕಾರವನ್ನು, ವೈದೇಹ್ಯಾಃ - ಜಾನಕಿಗೆ, ದರ್ಶಯಾಮಾಸ - ತೋರಿದನು ॥೪೩॥ ತತಃ - ಅನಂತರದಲ್ಲಿ, ಧೀಮಾನ್ - ಬುದ್ಧಿವಂತನಾದ; ಪ್ಲವಗರ್ಷಭಃ - ವಾನರೋತ್ತಮನೆನಿಸಿದ, ಸಃ - ಆ ಆಂಜನೇಯನು, ತಸ್ಮಾತ್ - ಆ, ಪಾದಪಾತ್ - ಶಿಂಶುಪಾವೃಕ್ಷದ ದೆಸೆಯಿಂದ, ಆಪ್ಲುತ್ಯ- ಕೆಳಕ್ಕೆ ಕುಪ್ಪಳಿಸಿ (ಹಾರಿ, ಹತ್ತಿರಕ್ಕೆ ಬಂದು) ಸೀತಾಪ್ರತ್ಯಯಕಾರಣಾತ್ - ಸೀತೆಗೆ ನಂಬಿಕೆಯುನ್ನುಂಟುಮಾಡುವ ನಿಮಿತ್ತದಿಂದ ವರ್ಧಿತುಂ - ಬೆಳೆಯುಲಿಕ್ಕೆ. ಆರೇಭೆ - ಪ್ರಾರಂಭಿಸಿದನು ॥೪೪॥

ವಾನರೋತ್ತಮಃ - ವಾನರ ವೀರನಾದ ಆಂಜನೇಯನು, ಮೇರು ಮಂದರಸಂಕಾಶಃ - ಮೇರುಮಂದರ ಪರ್ವತಗಳಿಗೆಣೆಯೆನಿಸಿದವನಾಗಿಯೂ, ದೀಪ್ತಾನಲ ಪ್ರಭಃ - ಜಾಜ್ವಲ್ಯಮಾನವಾದ ಅಗ್ನಿಯಂತೆ ಬೆಳಗುತಲಿರುವವನಾಗಿಯೂ, ಬಭೌ - ಕಂಗೊಳಿಸುತ್ತಿದ್ದನು (ಕಿಂಚ.ಮತ್ತು) ಸೀತಾಯಾಃ - ಜಾನಕಿಯು, ಅಗ್ರತಃ - ಇದಿರಿಗೆ, ವ್ಯವತಸ್ಥೇಚ - ನಿಂತಿದ್ದನು ॥೪೫॥ ಪರ್ವತಸಂಕಾಶಃ - ಬೆಟ್ಟಕ್ಕೆಣೆಯಾಗಿರುವ, ತಾಮ್ರವಕ್ತ್ರಃ - ಕೆಂಪಾದ ಮುಖವುಳ್ಳ, ಮಹಾಬಲಃ - ಹೆಚ್ಚಾದ ಪರಾಕ್ರಮವುಳ್ಳ, ವಜ್ರದಂಷ್ಟ್ರಃ - ವಜ್ರಾಯುಧದಂತೆ ಕೋರೆಹಲ್ಲುಗಳುಳ್ಳ, ಭೀಮಃ - ಭಯಂಕರನನಿಸಿದ, ಹರಿಃ - ಆಂಜನೇಯನು, ವೈದೇಹೀಂ - ಸೀತೆಯನ್ನು ಕುರಿತು, ಇದಂ ಈ ಮುಂದಿನ ಮಾತನ್ನು, ಅಬ್ರವೀತ್ - ಹೇಳತೊಡಗಿದನು ॥೪೬॥ ಸಪರ್ವತ ವನೋದ್ದೇಶಾಂ - ಪರ್ವತಾರಣ್ಯಪ್ರದೇಶಗಳಿಂದೊಡಗೂಡಿದ, ಸಾಟ್ಟ

---

ಆರಂಭಿಸಿದನು. ॥೪೩॥ ತಾನು ನಿಂತಿದ್ದ ಶಿಂಶುಪಾವೃಕ್ಷದ ಬುಡವನ್ನು ಬಿಟ್ಟು ಸ್ವಲ್ಪ ಮುಂದಕ್ಕೆ ಕುಪ್ಪಳಿಸಿ ತನುವಾಯು ಸೀತೆಗೆ ನಂಬಿಕೆಯುನ್ನುಂಟು ಮಾಡುವ ನಿಮಿತ್ತದಿಂದ ಭೂಮ್ಯಂತರಿಕ್ಷಗಳಿಗೆ ಏಕವಾಗುವಂತೆ ಬೆಳೆಯು ತೊಡಗಿದನು. ॥೪೪॥ ಆಗ ಆತನ ಶರೀರವು ಮೇರುಮಂದರ ಪರ್ವತಗಳಿಗೆಣೆಯಾಯ್ತು. ಆತನ ತೇಜಸ್ಸು ಕಾಲಾಗ್ನಿಯಂತೆ ಬೆಳಗುತಲಿದ್ದಿತು. ಸೀತೆಯು ಇದಿರಿಗೆ ಘೋರಾಕಾರದಿಂದ ನಿಂತನು. ॥೪೫॥ ಮಹಾಬಲನಾದಹರಿಯು ಪರ್ವತಾಕಾರನಾಗಿ ವಜ್ರದಂತೆ ಕಂಗೊಳಿಸುವ ಕೋರೆದಾಡೆಗಳನ್ನೂ, ನಖಗಳನ್ನೂ, ಒಳಗೊಂಡವನಾಗಿ, ವೈದೇಹಿಯನ್ನು ಕುರಿತು ಇಂತೆಂದನು. ॥೪೬॥ ಎಲೌ ಮಾತೆಯೇ ! ನನ್ನ ಈ ಆಕಾರವನ್ನು ನೋಡು. ಮಹಾದ್ರಿಗಳಿಂದಲೂ, ಪರ್ವತ ಪ್ರಾಂತಗಳಿಂದಲೂ, ಕೋಟೆ ಕೊತ್ತಲು ಳಿಂದಲೂ, ಪ್ರಾಕಾರಗಳಿಂದಲೂ, ಪುರದ್ವಾರಗಳಿಂದಲೂ, ರಾಕ್ಷಸ ಚಕ್ರವರ್ತಿಯಿಂದಲೂ ಸಹಿತವಾಗಿರುವ ಈ ಲಂಕಾನಗರವನ್ನೇ ಬುಡಮುಟ್ಟ

ಲಂಕಾ ಮಿಮಾಂ ಸನಾಥಾಂ ವಾ ನಯಿತುಂ ಶಕ್ತಿ ರಸ್ತಿ ಮೇ ॥೩೩॥
ತದವ ಸ್ಥಾಪ್ಯತಾಂ ಬುದ್ಧಿ ರಲಂ ದೇವಿ ವಿಕಾಂಕ್ಷಯಾ ।
ವಿಶೋಕಂ ಕುರು ವೈದೇಹಿ ರಾಘವಂ ಸಹಲಕ್ಷ್ಮಣಮ್ ॥೩೪॥
ತಂ ದೃಷ್ಟ್ವಾ ಭೀಮಸಂಕಾಶ ಮುವಾಚ ಜನಕಾತ್ಮಜಾ ।
ಪದ್ಮಪತ್ರ ವಿಶಾಲಾಕ್ಷೀ ಮಾರುತ ಸ್ಯೌರಸಂ ಸುತಂ ॥೩೯॥
ತವ ಸತ್ವಂ ಬಲಂ ಚೈವ ವಿಜಾನಾಮಿ ಮಹಾಕಪೇ ।
ವಾಯೋರಿವ ಗತಿಂ ಚಾಪಿ ತೇಜಶ್ಚಾಗ್ನೇ ರಿವಾದ್ಭುತಂ ॥೪೦॥

---

ಪ್ರಾಕಾರತೋರಣಾಂ - ಬುರುಜುಗಳಿಂದಲೂ, ಬಾಗಿಳಿಗಳಿಂದಲೂ ಕೂಡಿ ಇರುವ, ಇಮಾಂ - ಈ ಲಂಕಾಂ - ಲಂಕಾಪಟ್ಟಣವನ್ನು, ಸನಾಥಾಂವಾ - ರಾಜನೊಡನೆ ಕೂಡಿರುವುದನ್ನಾದರೂ, ನಯಿತುಂ (ನೇತುಂ) - ಕೊಂಡುಹೋಗಲಿಕ್ಕೆ, ಮೇ - ನನಗೆ, ಶಕ್ತಿಃ - ಸಾಮರ್ಥ್ಯವು, ಅಸ್ತಿ - ಉಂಟು ॥೩೩॥ ವೈದೇಹಿ - ಜನಕಪುತ್ರಿಯಾದ, ದೇವಿ - ಎಲೌ ಸೀತಾದೇವಿಯೆ !. ತತ್ - ಆದಕಾರಣ, (ತ್ವಯಾ-ನಿನ್ನಿಂದ) ಬುದ್ಧಿಃ - ಮನಸ್ಸು, ಅವಸ್ಥಾಪ್ಯತಾಂ - ನಿಶ್ಚಲನಾದುದಾಗಿ ಮಾಡಲ್ಪಡಲಿ, ವಿಕಾಂಕ್ಷಯಾ - ಉಪೇಕ್ಷೆಯಿಂದ, ಅಲಂ - ಸಾಕು, ಸಲಕ್ಷ್ಮಣಂ - ಲಕ್ಷ್ಮಣನಿಂದ ಸಹಿತನಾದ, ರಾಘವಂ - ಶ್ರೀರಾಮನನ್ನು, ವಿಶೋಕಂ - ಶೋಕವಿಲ್ಲದವನನ್ನಾಗಿ, ಕುರು - ಮಾಡು ॥೩೪॥ ಪದ್ಮಪತ್ರವಿಶಾಲಾಕ್ಷೀ - ತಾವರೆಯ ಎಸಳಿನಂತೆ ಅಗಲವಾದ ಕಣ್ಣುಳ್ಳ, ಜನಕಾತ್ಮಜಾ - ಜಾನಕಿಯು, ಭೀಮಸಂಕಾಶಂ - ಕಾಲರುದ್ರನಿಗೆಣೆಯಾಗಿರುವ, ಮಾರುತಸ್ಯ - ವಾಯುವಿಗೆ, ಔರಸಂಸುತಂ - ಆತ್ಮಸಂಭವನಾದ, ತಂ - ಆ ಆಂಜನೇಯನನ್ನು, ದೃಷ್ಟ್ವಾ - ನೋಡಿ, ಉವಾಚ - ಇಂತೆಂದಳು ॥೩೯॥ ಮಹಾಕಪೇ- ಎಲೈ ಆಂಜನೇಯನೇ ! ತವ - ನಿನ್ನ, ಸತ್ವಂ - ಅಂತಸ್ಸಾರವನ್ನೂ, ಬಲಂಚೈವ - ಬುದ್ಧಿಬಲವನ್ನೂ, ವಾಯೋರಿವ - ವಾಯುವಿನಂತೆ, ಗತಿಂಚಾಪಿ - ಗಮನಶಕ್ತಿಯನ್ನೂ, ಅಗ್ನೇರಿವ - ನಿನ್ನ ತಂದೆಯ ಮಿತ್ರನಾದ ಅಗ್ನಿಯಹಾಗೆ,

---

ಕಿತ್ತು, ಹೊತ್ತುಕೊಂಡು ಹೋಗಲಿಕ್ಕೂ ನನಗೆ ಶಕ್ತಿಯುಂಟು. ॥ ೩॥ ಆದಕಾರಣ ನಿನ್ನ ಮನಸ್ಸಿನ ಚಾಂಚಲ್ಯವನ್ನು ತೊರೆ. ನನ್ನಲ್ಲಿ ತೋರಿದ ಅಸಡ್ಡೆಯನ್ನು ಬಿಡು. ನಿನ್ನ ಮನಸ್ಸಿನಲ್ಲಿ ಸ್ಥೈರ್ಯವನ್ನು ಪಡೆ. ವ್ಯಥೆಯನ್ನು ಕಳೆ. ರಾಮಲಕ್ಷ್ಮಣರ ದುಃಖವನ್ನು ಪರಿಹರಿಸು. ಏಳು, ವೈಮನಸ್ಯವನ್ನು ಬಿಡು. ದಯೆಮಾಡು. ನನ್ನ ಬೆನ್ನಿನಮೇಲೆ ಕೂಡು. ಹೊರಡು — ಎಂದು ಸುಮ್ಮನಾದನು ॥೩೪॥ ಆಗ - ಕಮಲ ಪತ್ರಾಕ್ಷಿಯಾದ ಜಾನಕಿಯು ಕಾಲಾಗ್ನಿ ರುದ್ರನಂತೆಸೆವ ಭಯಂಕರಾಕಾರನಾದ ವಾಯುವಿನ ಆತ್ಮಸಂಭವನನ್ನು ನೋಡಿ ಇಂತೆಂದಳು. ॥೩೯॥ ಎಲೈ ಮಹಾನು ಭಾವನಾದ ಆಂಜನೇಯನೇ ! ನಿನ್ನ ದೇಹಬಲವನ್ನೂ, ಬುದ್ಧಿ ಶಕ್ತಿಯನ್ನೂ, ವಾಯುವೇಗಕ್ಕೆ ಸಮಾನವಾದ ಗಮನ ಶಕ್ತಿಯನ್ನೂ, ಅಗ್ನಿಸದೃಶವಾದ ತೇಜಶ್ಶಕ್ತಿಯನ್ನೂ, ಅದ್ಭುತ ತರಗಳನ್ನಾಗಿ ತಿಳಿಯುತಲಿದೇನೆ. ನೀನು ಅಸಾಧಾರಣನಾದ ವೀರನಾಗಿದ್ದೀಯೆ, ನಿನ್ನನ್ನು ಬಿಟ್ಟು ಸಾಧಾರಣನಾದ ಇತರನು ಇಂತಪಾರವಾದ ಸಾಗರವನ್ನು ದಾಟಲಿಕ್ಕೂ, ಭಯಂಕರರಾದ ರಕ್ಕಸರ ಕಾವಲಿಗೊಳಗಾಗಿರುವ ಈ ಭೂಮಿಯನ್ನು ಹೊಗಲಿಕ್ಕೂ ಶಕ್ತನಾಗಬಲ್ಲನೇ ? ಎಂದಿಗೂ ಇಲ್ಲ. ॥೪೦॥೪೧॥ ನನ್ನನ್ನು ಬೆನ್ನಿನಮೇಲೆ ಕೂಡಿಸಿಕೊಂಡು ಶ್ರೀರಾಮನ ಸನ್ನಿಧಾನಕ್ಕೆ ತೆರಳಲು

ಪ್ರಾಕೃತೋಽನ್ಯಃ ಕಥಂ ಚೇಮಾಂ ಭೂಮಿ ಮಾಗಂತು ಮರ್ಹತಿ ।
ಉದಧೇ ರಪ್ರಮೇಯಸ್ಯ ಪಾರಂ ವಾನರಪುಂಗವ ॥೪೧॥
ಜಾನಾಮಿ ಗಮನೇ ಶಕ್ತಿಂ ನಯನೆ ಚಾಪಿ ತೇ ಮಮ ।
ಅವಶ್ಯಂ ಸಂಪ್ರಧಾರ್ಯಾಶು ಕಾರ್ಯಸಿದ್ಧಿ ರ್ಮಹಾತ್ಮನಃ ॥೪೨॥
ಅಯುಕ್ತಂ ತು ಕಪಿಶ್ರೇಷ್ಠ ಮಮ ಗಂತುಂ ತ್ವಯಾಽನಘ ।
ವಾಯುವೇಗ ಸವೇಗಸ್ಯ ವೇಗೋ ಮಾಂ ಮೋಹಯೇ ತ್ತವ ॥೪೩॥
ಅಹ ಮಾಕಾಶ ಮಾಪನ್ನಾ ಹ್ಯುಪರ್ಯುಪರಿ ಸಾಗರಂ ।

ಅದ್ಭುತಂ - ಆಶ್ಚರ್ಯಕರವಾದ ತೇಜಃ - ತೇಜಸ್ಸನ್ನೂ, ವಿಜಾನಾಮಿ - ವಿಶೇಷವಾಗಿ ತಿಳಿದುಕೊಳ್ಳು ತಲಿದೇನೆ ॥೪೦॥ ವಾನರಪುಂಗವ - ಎಲೈ ಕಪಿಪ್ರವರನೇ, ಪ್ರಾಕೃತಃ - ಸಾಮಾನ್ಯನಾದ, ಅನ್ಯಃ - ಇತರನು, ಅಪ್ರಮೇಯಸ್ಯ - ಅಳೆಯಲಸದಳವೆನಿಸಿದ, ಉದಧೇಃ - ಸಮುದ್ರದ, ಪಾರಂ - ತೀರವನ್ನು, (ಪ್ರಾಪ್ಯ - ಹೊಂದಿ) ಇಮಾಂ- ಈ, ಭೂಮಿಂ ಚ-ಲಂಕಾಭೂಮಿಯನ್ನು ಕುರಿತು, ಆಗಂತುಂ- ಬರಲಿಕ್ಕೆ, ಕಥಂ - ಹೇಗೆ, ಅರ್ಹತಿ - ಶಕ್ತನಾಗುವನು ? ॥ ೪೧ ॥ ಗಮನೆ - ಆಕಾಶಗಮನ ದಲ್ಲಿಯೂ, ಮಮ - ನನ್ನನ್ನು, ನಯನೆಚಾಪಿ - ಕರೆದೊಯ್ಯುವುದರಲ್ಲಿಯೂ, ತೆ - ನಿನ್ನ, ಶಕ್ತಿಂ- ಸಾಮರ್ಥ್ಯವನ್ನು, ಜಾನಾಮಿ - ತಿಳಿಯುತಲಿದೇನೆ, ಮಹಾತ್ಮನಃ - ಮಹಾನುಭಾವನಾದ ರಾಮನ, ಕಾರ್ಯಸಿದ್ಧಿಃ - ಕೆಲಸವು ಸರಿಪಡುವುದು, ಅವಶ್ಯಂ - ಮುಖ್ಯವಾಗಿ, ಆಶು - ಬೇಗನೆ, ಸಂಪ್ರಧಾರ್ಯಾ - ನಿಶ್ಚಯಿಸಲ್ಪಡತಕ್ಕದು ॥೪೨॥ ಅನಘ - ಪಾಪರಹಿತನಾದ, ಕಪಿಶ್ರೇಷ್ಠ - ಎಲೈ ಕಪಿವರನೇ, ತ್ವಯಾ- ನಿನ್ನೊಡನೆ, ಗಂತುಂ - ಹೋಗೋಣವು, ಅಯುಕ್ತಂ - ಉಚಿತವಾದುದಲ್ಲ, ವಾಯುವೇಗ ಸವೇಗಸ್ಯ-ವಾಯುವೇಗದೊಡನೆ ಸಮಾನವಾದ ವೇಗವುಳ್ಳ, ತವ - ನಿನ್ನ, ವೇಗಃ - ಗಮನವೇಗವು, ಮಾಂ - ನನ್ನನ್ನು ಮೋಹಯೇತ್ - ಮೂರ್ಛೆಗೊಳಿಸೀತು ॥೪೩॥

ಅಹಂಚ - ನಾನಾದರೋ, ಸಾಗರಮುಪರ್ಯುಪರಿ - ಕಡಲಿನ ಮೇಲೆ ಮೇಲೆ, ಆಕಾಶಂ - ಅಂತರಿಕ್ಷವನ್ನು, ಆಪನ್ನಾ - ಹೊಂದಿದವಳಾಗಿ, ವೇಗೇನ - ಬಹುವೇಗದಿಂದ, ಗಚ್ಛತಃ - ಹೋಗುತಲಿರುವ,

ನಿನಗೆ ಶಕ್ತಿಯುಂಟೆಂದು ನಾನು ಖಂಡಿತವಾಗಿಯೂ ನಂಬುತ್ತೇನೆ. ಆದರೆ ಮಹಾನುಭಾವನಾದ ಶ್ರೀರಾಮನಿಗೆ ನನ್ನ ಪ್ರಾಪ್ತಿ ರೂಪವಾದ ಕಾರ್ಯಸಿದ್ಧಿಯು ಆಗಬೇಕೆಂಬುದನ್ನು ಮೊಟ್ಟಮೊದಲು ಚಿಂತಿಸಬೇಕಲ್ಲವೇ ? ॥೪೨॥ ಅದರಿಂದಲೇ ಎಲೈ ಕಪಿಸತ್ತಮಾ ! ನಿನ್ನೊಡನೆ ನಾನು ಬರತಕ್ಕದು ಅಯುಕ್ತವೆಂದು ಭಾವಿಸುತ್ತೇನೆ. ಏಕೆಂದರೆ ನೀನು ವಾಯುವೇಗಕ್ಕೆ ಸಮಾನವಾದ ವೇಗವುಳ್ಳವನಾಗಿ ನಡೆಯುತಲಿರುವಾಗ, ನನಗೆ ಸ್ಮೃತಿತಪ್ಪದೆ ಹೋಗುವುದೇ? ನಾನೊಂದುವೇಳೆ ಮೈಮರೆತು ಉರುಳಿದರೆ ರಾಮನ ಕಾರ್ಯಸಿದ್ಧಿಯು ಆದಂತಾಯಿತೇ ? ॥೪೩॥ ನೀನು ವಿಸ್ತಾರವಾದ ಸಾಗರದ ಮೇಲೆಮೇಲೆ ಆಕಾಶದೊಳಗೆ ವೇಗದಿಂದ ದಾಟುತಲಿರುವಲ್ಲಿ ಆವೇಗವು ನನಗೆ ಭಯ ಭ್ರಾಂತಿಗಳನ್ನು ಉಂಟು ಮಾಡದಿರುವುದೇ ? ನಿನ್ನ ಬೆನ್ನಿನಿಂದ ನಾನು ಕಡಲಿಗುರುಳುವುದೇ ದಿಟ. ॥೪೪॥ ತಿಮಿ, ತಿಮಿಂಗಲ, ರಾಘವಗಳೆಂಬ ಮಹಾ ಮತ್ಸ್ಯಗಳಿಂದಲೂ, ಘೋರವಾದ ಮೊಸಳೆಗಳಿಂದಲೂ, ಇತರ ಕ್ರೂರ ಜಂತುಗಳಿಂದಲೂ, ಪೂರ್ಣವಾಗಿರುವ ಸಾಗರದಲ್ಲಿ

ಪ್ರಪತೇಯಂ ಹಿ ತೇ ಪೃಷ್ಠಾ ದ್ಭಯಾ ದ್ವೇಗೇನ ಗಚ್ಛತಃ ॥೪೪॥
ಪತಿತಾ ಸಾಗರೇ ಚಾಹಂ ತಿಮಿನಕ್ರ ಝಷಾಕುಲೇ ।
ಭವೇಯ ಮಾಶು ವಿವಶಾ ಯಾದಸಾ ಮನ್ನ ಮುತ್ತಮಮ್ ॥೪೫॥
ನಚ ಶಕ್ಷ್ಯೇ ತ್ವಯಾ ಸಾರ್ಧಂ ಗಂತುಂ ಶತ್ರುವಿನಾಶನ ।
ಕಳತ್ರವತಿ ಸಂದೇಹ ಸ್ತ್ವಯ್ಯಪಿ ಸ್ಯಾ ದಸಂಶಯಃ ॥೪೬॥
ಹ್ರಿಯಮಾಣಾಂ ತು ಮಾಂ ದೃಷ್ಟ್ವಾ ರಾಕ್ಷಸಾ ಭೀಮವಿಕ್ರಮಾಃ ।
ಅನುಗಚ್ಛೇಯು ರಾದಿಷ್ಟಾ ರಾವಣೇನ ದುರಾತ್ಮನಾ ॥೪೭॥
ತೈ ಸ್ತ್ವಂ ಪರಿವೃತ ಶ್ಶೂರೈ ಶ್ಶೂಲ ಮುದ್ಗರ ಪಾಣಿಭಿಃ ।

---

ನಿನ್ನ, ಪೃಷ್ಠಾತ್ - ಬೆನ್ನಿನದೆಶೆಯಿಂದ, ಭಯಾತ್ - ಭಯದಿಂದ, ಪ್ರಪತೇಯಂಹಿ - ಬಿದ್ದುಹೋಗುವೆನಲ್ಲವೆ? ॥೪೪॥ (ಕಿಂಚ - ಮತ್ತು) ಅಹಂ - ನಾನು, ತಿಮಿನಕ್ರಝಷಾಕುಲೆ - ದೊಡ್ಡ ತಿಮಿ ಎಂಬ ಮೀನು, ಮೊಸಳೆ, ನೀಳವಾದ ರೆಕ್ಕೆಯುಳ್ಳೊಳಗೊಂಡಿರುವ ಮೀನು ಇವುಗಳಿಂದ ನಿಬಿಡವಾದ, ಸಾಗರೆ-ಸಮುದ್ರದಲ್ಲಿ, ಪತಿತಾ - ಬಿದ್ದನಾನು, ವಿವಶಾ - ದಿಕ್ಕಿಲ್ಲದವಳಾಗಿ, ಯಾದಸಾಂ - ಜಲಜಂತುಗಳಿಗೆ, ಆಶು - ಬೇಗನೆ, ಉತ್ತಮಂ - ಶ್ರೇಷ್ಠವಾದ, ಅನ್ನಂ - ಆಹಾರವು, ಭವೇಯಂ - ಆಗುವೆನು ॥೪೫॥ ಶತ್ರುವಿನಾಶನ - ಹಗೆಗಳನ್ನಡಗಿಸುವ ಎಲೈ ಹನುಮನೇ! ತ್ವಯಾಸಾರ್ಧಂ-ನಿನ್ನೊಡನೆ, ಗಂತುಂ - ಹೋಗಲಿಕ್ಕೆ, ನಚಶಕ್ಷ್ಯೇ - ಶಕ್ತಳಾಗಲಾರೆ, ಕಳತ್ರವತಿ - ರಕ್ಷಿಸಬೇಕಾದ ವಸ್ತುವನ್ನು ಪಡೆದಿರುವ, ತ್ವಯ್ಯಪಿ - ನಿನ್ನಲ್ಲಿಯೂ, ಸಂದೇಹಃ - ಪ್ರಾಣಸಂಶಯವು, ಸ್ಯಾತ್ - ಉಂಟಾಗುವುದು, ಅಸಂಶಯಃ-ಸಂದೇಹವಿಲ್ಲ ॥೪೬॥ ಭೀಮವಿಕ್ರಮಾಃ - ಭಯಂಕರವಾದ ಪರಾಕ್ರಮವುಳ್ಳ, ರಾಕ್ಷಸಾಃ - ರಕ್ಕಸರು, ದುರಾತ್ಮನಾ - ಪಾಪಾತ್ಮನಾದ, ರಾವಣೇನ - ರಾವಣನಿಂದ, ಆದಿಷ್ಟಾಃ-ಆಜ್ಞಾಪಿಸಲ್ಪಟ್ಟವರಾಗಿ, ಹ್ರಿಯಮಾಣಾಂ - ಒಯ್ಯಲ್ಪಡುತಲಿರುವ, ಮಾಂ - ನನ್ನನ್ನು, ದೃಷ್ಟ್ವಾ- ನೋಡಿ, ಅನುಗಚ್ಛೇಯುಃ - ಹಿಂದಟ್ಟಿ ಬರುವರು ॥೪೭॥ ವೀರ - ಎಲೈ ಶೂರನೇ! ತ್ವಂ - ನೀನು, ಶೂಲಮುದ್ಗರಪಾಣಿಭಿಃ - ಶೂಲಮುದ್ಗರ ಮೊದಲಾದ ಆಯುಧಗಳನ್ನು ಹಿಡಿದಿರುವ, ಶೂರೈಃ - ಪರಾಕ್ರಮಶಾಲಿಗಳಾದ, ತೈಃ-ಆ ರಾಕ್ಷಸರಿಂದ, ಪರಿವೃತಃ - ಆವರಿಸಲ್ಪಟ್ಟವನು, ಭವೇಃ - ಆಗುತ್ತೀಯೆ, ತ್ವಂ - ನೀನು, ಮಯಾ - ನನ್ನಿಂದ, ಕಳತ್ರವಾನ್ - ರಕ್ಷಿಸಲ್ಪಡತಕ್ಕ ವಸ್ತುವುಳ್ಳವನಾಗಿ, ಸಂಶಯಂ - ಪ್ರಾಣಸಂದೇಹವನ್ನು, ಪ್ರಾಪ್ತಃ - ಹೊಂದಿ

---

ಬಿದ್ದುದೇ ಆದರೆ ನಿಮಿಷಮಾತ್ರದೊಳಗೆ ಆಜಲ ಜಂತುಗಳಿಗೆ ಅನಾಥಳಾದ ನಾನು ಆಹಾರವಾಗಿ ಪರಿಣಮಿಸುವೆನು. ॥೪೫॥ ಎಲೈ ಶತ್ರುಸಂಹಾರಕನೇ ! ಸಮುದ್ರದಮೇಲೆ ಇಷ್ಟು ದೂರದ ದಾರಿಯನ್ನು ನಿನ್ನೊಡನೆ ಬರಲಿಕ್ಕೆ ನಾನು ಶಕ್ತಳಾಗಲಾರೆನು. ಮತ್ತು ರಕ್ಷಿಸಬೇಕಾದ ವಸ್ತುವಾಗಿರುವ ನನ್ನನ್ನು ಬೆನ್ನಿನಮೇಲೆ ಕೂಡಿಸಿಕೊಂಡು ಪ್ರಯಾಣಮಾಡುವ ಸಂದರ್ಭದಲ್ಲಿ ನಿನಗೂ, ಪ್ರಾಣಸಂದೇಹವು ಉಂಟಾಗುವುದು, ಈ ವಿಷಯದಲ್ಲಿ ಸಂಶಯವಿಲ್ಲ ॥೪೬॥ ಇದಲ್ಲದೆ ನೀನು ನನ್ನನ್ನು ಇಲ್ಲಿಂದ ಹೀಗೆ ಕೊಂಡು ಹೋಗುತಲಿರುವಾಗ, ಪಾಪಾತ್ಮನಾದ ರಾವಣನಿಂದ ಆಜ್ಞಪ್ತರಾಗಿ ಮಹಾ ಭಯಂಕರರಾದ ರಾಕ್ಷಸರು ನಿನ್ನನ್ನು ಬೆನ್ನಟ್ಟಿ ಬರದೆ ಇರುವುದಿಲ್ಲ. ॥೪೭॥ ಶೂಲ,ಮುದ್ಗರ, ಮೊದಲಾದ ಘೋರವಾದ ಆಯುಧಗಳನ್ನು ಹಿಡಿದು ಕ್ರೂರರಾದ ರಕ್ಕಸರು ಬೆನ್ನಟ್ಟಿ ಬಂದು ನಿನ್ನನ್ನು ಸುತ್ತಿಕೊಂಡರೆ

ಭವೇ ಸ್ತ್ವಂ ಸಂಶಯಂ ಪ್ರಾಪ್ತೋ ಮಯಾ ವೀರ ಕಳತ್ರವಾನ್ ॥೪೮॥
ಸಾಯುಧಾ ಬಹವೋ ವ್ಯೋಮ್ನಿ ರಾಕ್ಷಸಾ ಸ್ತ್ವಂ ನಿರಾಯುಧಃ ।
ಕಥಂ ಶಕ್ಷ್ಯಸಿ ಸಂಯಾತುಂ ಮಾಂ ಚೈವ ಪರಿರಕ್ಷಿತುಂ ॥೪೯॥
ಯುಧ್ಯಮಾನಸ್ಯ ರಕ್ಷೋಭಿ ಸ್ತವ ತೈಃ ಕ್ರೂರಕರ್ಮಭಿಃ ।
ಪ್ರಪತೇಯಂ ಹಿ ತೇ ಪೃಷ್ಠಾ ದ್ಭಯಾರ್ತಾ ಕಪಿಸತ್ತಮ ॥೫೦॥
ಅಥ ರಕ್ಷಾಂಸಿ ಭೀಮಾನಿ ಮಹಾಂತಿ ಬಲವಂತಿಚ ।
ಕಥಂ ಚಿತ್ಸಾಂಪರಾಯೇ ತ್ವಾಂ ಜಯೇಯುಃ ಕಪಿಸತ್ತಮ ॥೫೧॥
ಅಥವಾ ಯುದ್ಧ್ಯಮಾನಸ್ಯ ಪತೇಯಂ ವಿಮುಖಸ್ಯ ತೇ ।

ದವನೂ, ಭವೇಃ - ಆಗುವೆ ॥೪೮॥ ರಾಕ್ಷಸಾಃ - ರಕ್ಕಸರು, ಸಾಯುಧಾಃ - ಆಯುಧಗಳಿಂದೊಡಗೂಡಿದವರಾಗಿ, ಬಹವಃ - ಅನೇಕನ ಂದಿ, (ಸಂತಿ - ಇದಾರೆ) ತ್ವಂ - ನೀನು, ನಿರಾಯುಧಃ - ಆಯುಧಶೂನ್ಯನು, ವ್ಯೋಮ್ನಿ - ಆಕಾಶದಲ್ಲಿ, ಮಾಂ - ನನ್ನನ್ನು, ಸಂಯಾತುಂ - ಕೊಂಡುಹೋಗಲಿಕ್ಕೂ, ಪರಿರಕ್ಷಿತುಂಚ - ಕಾಪಾಡಲಿಕ್ಕೂ, ಕಥಂ - ಹೇಗೆ, ಶಕ್ಷ್ಯಸಿ - ಸಮರ್ಥನಾಗುತ್ತೀಯೆ, ॥೪೯॥ ಕಪಿಸತ್ತಮ ಎಲೈ ಕಪಿವರನೆ, (ಅಹಂ - ನಾನು) ಕ್ರೂರಕರ್ಮಭಿಃ - ಘಾತುಕತನವುಳ್ಳ, ತೈಃ - ಆ, ರಕ್ಷೋಭಿಃ - ರಾಕ್ಷಸರಿಂದ, ತವ - ನೀನು, ಯುಧ್ಯಮಾನಸ್ಯ - (ಸತಃ) ಯುದ್ಧಮಾಡುತ್ತಿರಲಾಗಿ, ಭಯಾರ್ತಾ - ಭಯದಿಂದ ಪೀಡಿತಳಾಗಿ, ತೇ - ನಿನ್ನ, ಪೃಷ್ಠಾತ್ - ಬೆನ್ನಿನದೆಶೆಯಿಂದ, ಪ್ರಪತೇಯಂಹಿ - ಕೆಳಗೆಬೀಳುವೆನಲ್ಲವೆ? ॥೫೦॥ ಅಥ - ಆಮೇಲೆ, ಹೇಕಪಿಸತ್ತಮ - ಎಲೈ ವಾನರೋತ್ತಮನೆ, ಭೀಮಾನಿ - ಭಯಂಕರವಾದ, ಮಹಾಂತಿ - ಬಹುಮಂದಿ, ಬಲವಂತಿ - ಬಲಿಷ್ಠರಾದ, ರಕ್ಷಾಂಸಿ - ರಾಕ್ಷಸರು, ಸಾಂಪರಾಯೆ-ಕಾಳಗದಲ್ಲಿ, ತ್ವಾಂ - ನಿನ್ನನ್ನು, ಕಥಂಚಿತ್ - ಹೇಗಾದರೂ, ಜಯೇಯುಃ - ಗೆಲ್ಲುವರು ॥೫೧॥ ಅಥವಾ - ಹಾಗಿಲ್ಲದಿದ್ದರೆ, ಪಾಪರಾಕ್ಷಸಾಃ - ಪಾಪಾತ್ಮರಾದ ರಕ್ಕಸರು, ಯುಧ್ಯಮಾನಸ್ಯ - ಹೋರಾಡುತಲಿರುವವನಾದ ಕಾರಣವೇ, ವಿಮುಖಸ್ಯ-ನಗೆಮುಖನಾಗಿರುವ, ತೆ ನಿನ್ನ, ಪೃಷ್ಠಾತ್-ಬೆನ್ನಿನ ದೆಶೆಯಿಂದ, ಪತಿತಾಂ - ಬಿದ್ದ, ಮಾಂಚ-ನನ್ನನ್ನೂ, ಗೃಹೀತ್ವಾ- ಹಿಡಿದುಕೊಂಡು, ನಯೇಯುಃ- ಕೊಂಡುಹೋಗುವ

ಪಾಲಿಸಬೇಕಾದ ಪದಾರ್ಥವಾದ ನನ್ನನ್ನು ಬೆನ್ನಿನ ಮೇಲಿಟ್ಟುಕೊಂಡಿರುವ ನಿನಗೆ ಪ್ರಾಣಸಂಶಯ ವುಂಟಾಗದಿರುವುದೇ ? ॥೪೮॥ ಎಲೈ ವೀರನೇ ! ನಿನ್ನಪ್ರಯಾಣವೋ ಆಕಾಶದಲ್ಲಿ, ನೀನೋ ನಿರಾಯುಧ, ನಿನ್ನ ಬೆನ್ನಿನಮೇಲೆನಾನೊಬ್ಬಳು, ನಿನಗಾದರೆ ಬೇರೆ ಸಹಾಯವಿಲ್ಲ. ರಾಕ್ಷಸರಾದರೆ ಬಹುಮಂದಿ, ಎಲ್ಲರೂ ಆಯುಧಪಾಣಿಗಳು, ಇಂತಹ ಕಷ್ಟ ಸಮಯದಲ್ಲಿ ಪ್ರಯಾಣಮಾಡಲಿಕ್ಕೂ. ನನ್ನನ್ನು ಸಂರಕ್ಷಿಸಿಕೊಳ್ಳಲಿಕ್ಕೂ ನೀನು ಹೇಗೆ ಶಕ್ತನಾಗಬಲ್ಲೆ ? ॥೪೯॥ ಮತ್ತು ಕ್ರೂರಕರ್ಮಿಗಳಾದ ರಾಕ್ಷಸರೊಡನೆ ನೀನು ಕಾಳಗಕ್ಕೆ ನಿಂತು ಹೋರಾಡುತ್ತಿರುವಲ್ಲಿ, ಭಯಭ್ರಾಂತಳಾದ ನಾನುನೆಲದಲ್ಲಿ ಉರುಳದೆ ಇರಲಾರೆನು॥ ಆ ಹಿಂದೆ ಬಲವಂತರೂ, ಬಹುಮಂದಿಯೂ, ಭಯಂಕರರೂ, ಆಯುಧಪಾಣಿಗಳೂ ಆಗಿರುವ ರಾಕ್ಷಸರು ನಿನ್ನ ಕಾರ್ಯದಿಂದ ಕುಪಿತರಾಗಿ ಬಟ್ಟೆಗೆಸುತ್ತಿಕೊಂಡು ನಿನ್ನನ್ನು ಕಾಳಗದಲ್ಲಿ ಹೇಗಾದರೂ ಕೊಲ್ಲದೆ ಬಿಡುವುದಿಲ್ಲ ॥೫೦॥ ಅಥವಾ ನೀನು ಯುದ್ಧಮಾಡುತಿರುವಲ್ಲಿ ನಿನಗೆ ನನ್ನನ್ನು ರಕ್ಷಿಸುವ ಜ್ಞಾಪ್ತಿಯು ತಪ್ಪಿಹೋಗಬಹುದು. ಆಗ ಕೆಳಗೆ ಉರುಳಿದ

ಪತಿತಾಂ ಚ ಗೃಹೀತ್ವಾ ಮಾಂ ನಯೇಯುಃ ಪಾಪರಾಕ್ಷಸಾಃ ||೫೨||
ಮಾಂ ವಾ ಹರೇಯುಸ್ತ್ವದ್ಧಸ್ತಾದ್ವಿಶಸೇಯುರಥಾಪಿವಾ |
ಅವ್ಯವಸ್ಥೌ ಹಿ ದೃಶ್ಯೇತೇ ಯುದ್ಧೇ ಜಯಪರಾಜಯೌ ||೫೩||
ಅಹಂ ವಾಪಿ ವಿಪದ್ಯೇಯಂ ರಕ್ಷೋಭಿ ರಭಿತರ್ಜಿತಾ |
ತ್ವತ್ಪ್ರಯತ್ನೋ ಹರಿಶ್ರೇಷ್ಠ ಭವೇನ್ನಿಷ್ಫಲ ಏವತು ||೫೪||
ಕಾಮಂ ತ್ವಮಸಿ ಪರ್ಯಾಪ್ತೋ ನಿಹಂತುಂ ಸರ್ವರಾಕ್ಷಸಾನ್ |
ರಾಘವಸ್ಯ ಯಶೋ ಹೀಯೇತ ತ್ವಯಾ ಶಸ್ತೈಸ್ತು ರಾಕ್ಷಸೈಃ ||೫೫||

ರು ||೫೨|| (ಅಥವಾ ಹಾಗೂ ಇಲ್ಲದಿದ್ದರೆ, ಪಾಪಾಃ - ದುರಾತ್ಮರಾದ ರಾಕ್ಷಸರು) ತ್ವದ್ಧಸ್ತಾತ್ - ನಿನ್ನ ಕಯ್ಯಿಂದ, ಮಾಂ - ನನ್ನನ್ನು, ಹರೇಯುಃ - ಕೊಂಡಾದರೂ ಹೋಗುವರು, ವಿಶಸೇಯುರಪಿ- ಸೀಳಿಯಾದರೂ ಬಿಡುವರು, ಯುದ್ಧೇ - ಕಾಳಗದಲ್ಲಿ, ಜಯಪರಾಜಯೌ - ಸೋಲುಗೆಲುವುಗಳು, ಅವ್ಯವಸ್ಥೌಹಿ - ಗೊತ್ತಿಲ್ಲದವುಗಳಲ್ಲವೆ ? ||೫೩|| ಹೇ ಹರಿಶ್ರೇಷ್ಠ -ಎಲೈ ಕಪಿಸತ್ತಮನೆ ! ಅಹಂವಾಪಿ - ನಾನಾದರೂ, ರಕ್ಷೋಭಿಃ - ರಕ್ಕಸರಿಂದ, ಅಭಿತರ್ಜಿತಾ - ಭಯಪಡಿಸಲ್ಪಟ್ಟವಳಾಗಿ, ವಿಪದ್ಯೇಯಂ- ಆಪತ್ತನ್ನು ಹೊಂದುವೆನು (ಸಾಯುವೆನು) ತ್ವತ್ಪ್ರಯತ್ನಸ್ತು - ನಿನ್ನ ಹೆಚ್ಚಿದ ಯತ್ನವೆಲ್ಲವೂ, ನಿಷ್ಫಲಏವ- ವ್ಯರ್ಥವೇ ಆಗುವುದು ||೫೪|| ತ್ವಂ - ನೀನು, ಸರ್ವರಾಕ್ಷಸಾನ್ - ರಕ್ಕಸರನ್ನೆಲ್ಲ, ನಿಹನ್ತುಂ - ಕೊಲ್ಲಲಿಕ್ಕೆ, ಕಾಮಂ - ವಿಶೇಷವಾಗಿ, ಪರ್ಯಾಪ್ತಃ - ಶಕ್ತನೇ ಆಗಿ ಇದ್ದೀಯೆ, ತ್ವಯಾ - ನಿನ್ನಿಂದ, ಶಸ್ತೈಃ- ಹೊಡೆಯಲ್ಪಟ್ಟ, ರಾಕ್ಷಸೈಃ - ರಕ್ಕಸರಿಂದ, ರಾಘವಸ್ಯ - ಶ್ರೀ ರಾಮನ, ಯಶಃ - ಕೀರ್ತಿಯು, ಹೀಯೇತ್ - ಹೀನವಾಗುವುದು (ಹಿನುಯಾತ್ - ನಷ್ಟವಾಗುವುದು) ||೫೫|| ಅಥವಾ - ಹಾಗಿಲ್ಲದಿದ್ದರೆ, ಯತ್ರ - ಎಲ್ಲಿಯಾದರೆ, ತೆ - ಆ, ಹರಯಃ - ಕಪಿಗಳು, ನಾಭಿಜಾನೀಯುಃ - ಅರಿಯದೆ ಹೋಗುವರೋ, ರಾಘವಾವಪಿ - ರಾಮಲಕ್ಷ್ಮಣರೂ, (ನಾಭಿಜಾನೀಯಾತಾಂ- ತಿಳಿಯದೆಹೋಗುತ್ತಾರೆಯೋ) ತತ್ರ- ಅಂ

ನನ್ನನ್ನು ಪಾಪಾತ್ಮರಾದ ರಾಕ್ಷಸರು ಹಿಡಿದೆಳೆಯದೆ ಇರುವುದಿಲ್ಲ. ಕೊಂಡೊಯ್ಯದೆ ಬಿಡುವುದಿಲ್ಲ. ||೫೨|| ನಿನ್ನ ಕಡೆಯಿದ್ದ ನನ್ನನ್ನು ಸೆಳೆದುಕೊಂಡೇ ಹೋಗುವರು. ಅಥವಾ ಸಿಟ್ಟಿನಿಂದ ಸೀಳಿಬಿಡುವರು. ಓ ಮಾರುತೀ ! ಯುದ್ಧದಲ್ಲಿ ಜಯಪರಾಜಯಗಳೆಂಬುವು ನೆಲೆಯಿಲ್ಲದವುಗಳಲ್ಲವೇ ? ||೫೩|| ಅಂತಹ ಕಷ್ಟಸಮಯದಲ್ಲಿ ರಕ್ಕಸರಿಂದ ಬೆದರಿಸಲ್ಪಟ್ಟ ನಾನಾದರೂ ವಿಪತ್ತನ್ನು ಹೊಂದುವೆನು, ಎಲೈ ಹರಿವರನೇ ! ನೀನು ಎಷ್ಟೋಶ್ರಮಪಟ್ಟು ಮಾಡಿದ ಪ್ರಯತ್ನವೂ ನಿಮಿಷಮಾತ್ರದಲ್ಲಿ ನಾಶವನ್ನು ಪಡೆಯುವುದು ||೫೪||ಮಾನ್ಯನಾದ ಎಲೈ ವೀರಹನುಮನೇ ! ಮುಗುವಳಿಯಲ್ಲಿ ಇನ್ನೊಂದು ಮಾತನ್ನು ಹೇಳುತ್ತೇನೆ ಕೇಳು-ಯದ್ಯಪಿ ಎಷ್ಟುಮಂದಿ ರಾಕ್ಷಸ ವೀರರು ನಿನ್ನನ್ನು ಇದಿರಿಸಿಬಂದರೂ ಅವರೆಲ್ಲರನ್ನೂ ನೀನು ಸಂಹರಿಸಬಲ್ಲೆ, ಆದರೆ- ಈ ರಾಕ್ಷಸರನ್ನೆಲ್ಲ ನೀನೇ ಕೊಂದೆಯಾದರೆ, ಆಗ ಶ್ರೀರಾಮಚಂದ್ರನ ಯಶಸ್ಸಿಗೆ ಕೊರತೆಯುಂಟಾಗುವುದು, ಮತ್ತು ಇದುವರೆಗೆ ಆತನು ಸಂಪಾದಿಸಿರುವ ಯಶಸ್ಸಿಗೂ ಲೋಪಬಂದೀತು, ಆದುದರಿಂದ ನಿನ್ನೊಡನೆ ನಾನು ಬರತಕ್ಕದು ಉಚಿತವಲ್ಲ ||೫೫|| ಹಾಗಿಲ್ಲದಿದ್ದರೆ- ನೀನು ರಕ್ಕಸರೊಡನೆ ಹೋರಾಡುವಾಗ ನನ್ನನು ಅಪಹರಿಸಿ ಎಲ್ಲಿಯಾದರೂ ಗುಟ್ಟಾಗಿರುವ ಸ್ಥಳದಲ್ಲಿ ರಾಮಲಕ್ಷ್ಮಣರಿಗೂ, ಇತರ

ಅಥವಾ ದಾಯ ರಕ್ಷಾಂಸಿ ನ್ಯಸೇಯುಸ್ಸಂವೃತೆ ಹಿ ಮಾಂ ।
ಯತ್ರ ತೇ ನಾಭಿಜಾನೀಯುಃ ಹರಯೋ ನಾಪಿ ರಾಘವಾ ॥
ಆರಂಭಸ್ತು ಮದರ್ಥೋಯಂ ತತ ಸ್ತವ ನಿರರ್ಥಕಃ ॥೫೬-೫೭॥
ತ್ವಯಾ ಹಿ ಸಹರಾಮಸ್ಯ ಮಹಾ ನಾಗಮನೇ ಗುಣಃ ॥೫೭॥
ಮಯಿ ಜೀವಿತ ಮಾಯತ್ತಂ ರಾಘವಸ್ಯ ಮಹಾತ್ಮನಃ ।
ಭ್ರಾತೄಣಾಂ ಚ ಮಹಾಬಾಹೋ ತವ ರಾಜಕುಲಸ್ಯಚ ॥೫೮॥
ತೌ ನಿರಾಶೌ ಮದರ್ಥಂ ತು ಶೋಕ ಸಂತಾಪಕರ್ಶಿತೌ ।
ಸಹ ಸರ್ವರ್ಕ್ಷ ಹರಿಭಿ ಸ್ತ್ಯಕ್ಷತಃ ಪ್ರಾಣಸಂಗ್ರಹಂ ॥೫೯॥

**ತಹ**, ಸಂವೃತೇ - ಗುಪ್ತವಾದ ಸ್ಥಳದಲ್ಲಿ, ರಕ್ಷಾಂಸಿ - ರಾಕ್ಷಸರು, **ಮಾಂ** - ನನ್ನನ್ನು, **ಆದಾಯ** - **ಕೊಂಡುಹೋಗಿ**, ನ್ಯಸೇಯುಃ - ಇಟ್ಟುಬಿಡುವರು, ತತಃ - ಆಮೇಲೆ, (ಅದರಿಂದ) ಮದರ್ಥಃ-ನನಗೋಸ್ಕರವಾಗಿ ನಡೆಸಿದತವ-ನಿನ್ನ, ಆರಂಭಃ-ಕಾರ್ಯಾರಂಭವು, ನಿರರ್ಥಕಃ-ಪ್ರಯೋಜನವಿಲ್ಲದುದು, (ಭವೇತ್-ಆಗುವುದು) ಹಿ - ನಿಶ್ಚಯ ॥೫೬-೫೭॥-॥ (ಅತಃ - ಆದಕಾರಣ) ತ್ವಯಾಸಹ - ನಿನ್ನೊಡನೆ, ಆಗಮನೆ - ಬರುವಿಕೆಯಲ್ಲಿ, ರಾಮಸ್ಯ - ಶ್ರೀ ರಾಮನಿಗೆ, ಮಹಾನ್ - ಅಪಾರವಾದ, ಗುಣಃ - ಗುಣವುಂಟು ॥ ಮಹಾಬಾಹೋ - ಹೆಚ್ಚಿದ ತೋಳುಬಲವುಳ್ಳ ಹನುಮನೇ ! ಮಹಾತ್ಮನಃ - ಮಹಾನುಭಾವನಾದ, ರಾಘವಸ್ಯ - ಶ್ರೀ ರಾಮನ, ಭ್ರಾತೄಣಾಂ - ಆತನ ಸೋದರರಾದ ಲಕ್ಷ್ಮಣ ಮೊದಲಾದವರ, ತವ - ನಿನ್ನ, ರಾಜಕುಲಸ್ಯಚ - ಕಪಿರಾಜವಂಶದ, ಜೀವಿತಂ - ಬದುಕು, ಮಯಿ - ನನ್ನಲ್ಲಿ, ಆಯತ್ತಂಹಿ - ಅಧೀನವಾಗಿದೆಯಲ್ಲವೆ? ॥೫೮॥ ತೌ - ಆ ರಾಮಲಕ್ಷ್ಮಣರು, ನಿರಾಶೌ - ನಾನು ದೊರೆಯದಿರುವುದರಿಂದ ಹತಾಶರಾಗಿ, ಮದರ್ಥಂ - ನನ್ನ ನಿಮಿತ್ತವಾಗಿ, ಶೋಕ - ದುಃಖದಿಂದಲೂ, ಸಂತಾಪ-ವ್ಯಥೆಯಿಂದಲೂ, ಕರ್ಶಿತೌ-ನವೆದು ಹೋದವರಾಗುತ್ತಾ, ಸರ್ವರ್ಕ್ಷಹರಿಭಿಸ್ಸಹ-ಎಲ್ಲ ಕಪಿಗಳಿಂದಲೂ, ಕರಡಿಗಳಿಂದಲೂ ಸಹಿತರಾಗಿ, ಪ್ರಾಣಸಂಗ್ರಹಂ - ಪ್ರಾಣಧಾರಣವನ್ನು, ತ್ಯಕ್ಷ್ಯತಃ - ತ್ಯಜಿಸುವರು ॥೫೯॥ ವಾನರಪುಂಗವ - ಎಲೈ ಕಪಿವೀರನೇ ! (ಅಹಂ-ನಾನು) ಭರ್ತೃಭಕ್ತಿಂ - ಪತಿಯಲ್ಲಿ ಪೂಜ್ಯಾನುರಾಗವನ್ನು, ಪುರಸ್ಕೃ

ವಾನರರಿಗೂ ಗೋಚರವಿಲ್ಲದಂತೆ ನಿರ್ಬಂಧದಲ್ಲಿ ಇಟ್ಟರೆ,ಆಗ ಯಾರುಮಾಡತಕ್ಕದು ಏನು? ಆಗ ನಿನ್ನ ಆರಂಭವೆಲ್ಲವೂ ನಿರರ್ಥಕವಾಗುವುದಿಲ್ಲವೆ ? ॥ ೫೬-೫೬॥ ॥ ಎಲೈ ವಾನರೋತ್ತಮನೇ ! ನೀನು ಇಲ್ಲಿಂದ ಹೋಗಿ ನನ್ನ ಯೋಗಕ್ಷೇಮವನ್ನು ಅಲ್ಲಿರುವವರಿಗೆಲ್ಲ ತಿಳಿಸಿ, ರಾಮಲಕ್ಷ್ಮಣರೊಡನೆ ಸಹಿತನಾಗಿ ಇಲ್ಲಿಗೆ ಬಂದು, ಈ ರಕ್ಕಸರನ್ನೆಲ್ಲಕೊಂದು, ನನ್ನನ್ನು ಸಂಗಡ ಕರೆದುಕೊಂಡುಹೋದರೆ ಆಗ ಅದರಿಂದ ಮಹತ್ತರವಾದ ಗುಣವುಂಟು, ನನ್ನ ಪ್ರಾಣಪ್ರಿಯನ, ಹಾಗೆಯೇ ಲಕ್ಷ್ಮಣನ ಮತ್ತು ಭರತನೇ ಮೊದಲಾದವರ, ಅಲ್ಲದೆ ನಿಮ್ಮ ರಾಜನಾದ ಸುಗ್ರೀವಮುಂತಾದವರ ಪ್ರಾಣಧಾರಣವೆಂಬುದು ನನ್ನ ನಿಮಿತ್ತವಾದುದಾಗಿದೆ, ॥೫೭-೫೮॥, ಹೀಗಿರುವಲ್ಲಿ-ಈ ರಕ್ಕಸರು ನನ್ನನ್ನು ಮರೆಯಲ್ಲಿಟ್ಟುದೇ ಆದರೆ, ಆಗ ನನ್ನನ್ನು ಕಾಣದೆ ಸುಗ್ರೀವಾದಿ ಕಪಿಗಳೊಡನೆ, ನನ್ನನ್ನುಕಳೆದುಕೊಂಡ ಶೋಕದಿಂದ ಪೀಡಿತರಾಗಿ ಪ್ರಾಣಗಳನ್ನು ತೊರೆವರು ॥೫೯॥ ಇದೆಲ್ಲಹಾಗಿರಲಿ, ಇನ್ನೊಂದು ಸಂಗತಿಯುಂಟು-ಎಲೈ ವಾನರೋತ್ತಮನೆ ! ಪತಿಯುಳ್ಳ ಗರತಿಯರಿಗೆ ಪತಿಯನ್ನು ಬಿಟ್ಟು ಇತರ

ಭರ್ತೃರ್ಭಕ್ತಿಂ ಪುರಸ್ಕೃತ್ಯ ರಾಮಾ ದನ್ಯಸ್ಯ ವಾನರ ।
ನ ಸ್ಪೃಶಾಮಿ ಶರೀರಂ ತು ಪುಂಸೋ ವಾನರಪುಂಗವ ॥೬೦॥
ಯದಹಂ ಗಾತ್ರಸಂಸ್ಪರ್ಶಂ ರಾವಣಸ್ಯ ಬಲಾ ದ್ಗತಾ ।
ಅನೀಶಾ ಕಿಂ ಕರಿಷ್ಯಾಮಿ ವಿನಾಥಾ ವಿವಶಾ ಸತೀ ॥೬೧॥
ಯದಿ ರಾಮೋ ದಶಗ್ರೀವ ಮಿಹ ಹತ್ವಾ ಸಬಾಂಧವಂ ।
ಮಾ ಮಿತೋ ಗೃಹ್ಯ ಗಚ್ಛೇತ ತತ್ತಸ್ಯ ಸದೃಶಂ ಭವೇತ್ ॥೬೨॥
ಶ್ರುತಾ ಹಿ ದೃಷ್ಟಾಶ್ಚ ಮಯಾ ಪರಾಕ್ರಮಾ ಮಹಾತ್ಮನಸ್ತಸ್ಯ ರಣಾವಮರ್ದಿನಃ।

---

ತ್ಯ - ಮುಂದುಮಾಡಿಕೊಂಡು, ರಾಮಾತ್- ಶ್ರೀ ರಾಮನಿಗಿಂತಲೂ, ಅನ್ಯಸ್ಯ- ಬೇರೊಬ್ಬನಾದ, ಪುಂಸಃ ಪುರುಷನ, ಶರೀರಂತು - ದೇಹವನ್ನಾದರೋ, ನಸ್ಪೃಶಾಮಿ - ಮುಟ್ಟಲಾರನು ॥೬೦॥ (ಕಿಂತು - ಆದರೆ) ಅಹಂ - ನಾನು, ಯತ್ -ಯಾವಕಾರಣದಿಂದ, ರಾವಣಸ್ಯ - ದಶಕಂಧರನ, ಗಾತ್ರಸಂಸ್ಪರ್ಶಂ - ಶರೀರವನ್ನು ತಾಕೋಣವನ್ನು, ಬಲಾತ್ - ಬಲಾತ್ಕಾರದಿಂದ, ಗತಾ - ಹೊಂದಿದೆನೋ (ತತ್ - ಆ ವಿಷಯದಲ್ಲಿ) ವಿನಾಥಾ - ಸಮೀಪದಲ್ಲಿ ಪತಿಯಿಲ್ಲದವಳಾದ ಕಾರಣವೇ, ಅನೀಶಾಸತೀ-ಅಸಮರ್ಥಳಾಗಿ, ವಿವಶಾ-ಪರಾಧೀನಳಾಗುತ್ತಾ, ಕಿಂಕರಿಷ್ಯಾಮಿ - ಏನಮಾಡಬಲ್ಲೆನು ? ॥೬೧॥ ರಾಮಃ - ಶ್ರೀ ರಾಮನು, ಇಹ - ಇಲ್ಲಿ, ಸಬಾಂಧವಂ - ಬಂಧುಜನಗಳಿಂದೊಡಗೂಡಿದ, ದಶಗ್ರೀವಂ - ರಾವಣನನ್ನು, ಹತ್ವಾ-ಕೊಂದು, ಇತಃ - ಇಲ್ಲಿಂದ, ಮಾಂ - ನನ್ನನ್ನು, ಗೃಹ್ಯ (ಗೃಹೀತ್ವಾ)-ಕರೆದುಕೊಂಡು, ಗಚ್ಛೇತಯದಿ - (ಗಚ್ಛೇತ್) ಹೋದುದೇ ಆದರೆ, ತತ್ - ಅದು, (ಹಾಗೆ ನನ್ನನ್ನು ಕರೆದೊಯ್ಯುವುದು) ತಸ್ಯ - ಆ ರಾಮನಿಗೆ, ಸದೃಶಂ - ಘನತೆಗೆತಕ್ಕುದು, ಭವೇತ್ - ಆಗವುದು ॥೬೨॥ ಮಯಾ - ನನ್ನಿಂದ, ಮಹಾತ್ಮನಃ - ಮಹಾಧೈರ್ಯಗುಣಸಂಪನ್ನನಾದ, ರಣಾವಮರ್ದಿನಃ - ರಣರಂಗದಲ್ಲಿ ಹಗೆಗಳ ಸೊಕ್ಕನ್ನು ಅಡಗಿಸುವ, ತಸ್ಯ - ಆ ರಾಮನ, ಪರಾಕ್ರಮಾಃ - ಶೌರ್ಯಾದಿಗುಣಗಳು, ಶ್ರುತಾಃಹಿ- ಲೋಕಪ್ರಸಿದ್ಧಗಳಾಗಿವೆಯಲ್ಲವೆ ? ದೃಷ್ಟಾಶ್ಚ - ನೋಡಲ್ಪಟ್ಟವುಗಳೂ ಆಗಿವೆ, ಸಂಯುಗೇ ಯುದ್ಧದಲ್ಲಿ, ದೇವಗಂಧರ್ವಭುಜಂಗರಾಕ್ಷಸಾಃ - ದೇವತೆಗಳು, ಗಂಧರ್ವರು, ನಾಗರು, ರಾಕ್ಷಸರು ಸಹ, ರಾಮೇಣ - ರಾಮನೊಡನೆ,

---

ಪುರುಷನನ್ನು ಸ್ಪರ್ಶಮಾಡುವುದು ಧರ್ಮವಲ್ಲ. ॥೬೦॥ ಆದರೆ - ರಾವಣನೊಡನೆ ಬರುವಾಗ ಹೇಗೆ ಮಾಡಿದೆ ಎಂಬೆಯೊ ? ನಾನು ಬುದ್ಧಿಪೂರ್ವಕವಾಗಿ ಆಪಾಪಾತ್ಮನ ಸ್ಪರ್ಶವನ್ನು ಮಾಡಿದವಳಲ್ಲ, ಮಹಾ ವೀರನಾದ ನನ್ನ ಪತಿಯು ಸಮೀಪದಲ್ಲಿ ಇಲ್ಲದಿರುವಾಗ ಆನೀಚನು ಬಲಾತ್ಕಾರದಿಂದ ನನ್ನನ್ನು ತಂದನು. ಆಗ ಅನಾಥಳಾದ ನಾನು ಮಾಡತಕ್ಕುದೇನು ? ನಿಶ್ಚೇಷ್ಟಳಾಗಿದ್ದೆನು ॥೬೧॥ ಎಲೈ ಪವನಾತ್ಮಜನೇ ! ಶ್ರೀರಾಮನು ಸಮಸ್ತವಾನರ ಸೇನಾಸಮೇತನಾಗಿ ಇಲ್ಲಿಗೆ ಬಂದು, ಬಂಧುಮಿತ್ರರಿಂದ ಸಹಿತನಾದ ದಶಕಂಧರನನ್ನು ನಾಶಗೊಳಿಸಿ, ನನ್ನನ್ನು ಇಲ್ಲಿಂದ ಕರೆದುಕೊಂಡು ಹೋದರೆ, ಆಗ ಅದು ಅವನ ಶೌರ್ಯಖ್ಯಾತಿಗೆ ತಕ್ಕುದಾಗಿರುವುದು ॥೬೨॥ ಎಲೈ ವಾನರನೇ ! ರಾಮನು ರಾವಣಾದಿ ದನುಜರನ್ನು ಧ್ವಂಸಮಾಡಲು ಶಕ್ತನಾಗಿರುವನೋ, ಇಲ್ಲವೋ, ಎಂದು ನೀನು ಸಂದೇಹಪಡಬೇಕಾದುದಿಲ್ಲ, ನಾನು ಆ ಮಹಾನುಭಾವನ ಶೌರ್ಯ, ಧೈರ್ಯ, ಪರಾಕ್ರಮಾದಿ ಗುಣಗಳನ್ನೆಲ್ಲ ಬಲ್ಲೆನು, ಮತ್ತು ಖರನೇಮುಂತಾದ ರಾಕ್ಷಸರನ್ನೆಲ್ಲ ಹೊಡೆದು ಕೆಡಹುವಾಗ ಪ್ರತ್ಯಕ್ಷದಲ್ಲಿ

ನ ದೇವ ಗಂಧರ್ವ ಭುಜಂಗ ರಾಕ್ಷಸಾ ಭವಂತಿ ರಾಮೇಣ ಸಮಾ ಹಿ ಸಂಯುಗೇ॥೬೩॥
ಸಮೀಕ್ಷ್ಯ ತಂ ಸಂಯತಿ ಚಿತ್ರಕಾರ್ಮುಕಂಮಹಾಬಲಂ ವಾಸವ ತುಲ್ಯವಿಕ್ರಮಮ್।
ಸಲಕ್ಷ್ಮಣಂ ಕೋ ವಿಷಹೇತ ರಾಘವಂಹುತಾಶನಂ ದೀಪ್ತಮಿವಾನಿಲೇರಿತಂ ॥೬೪॥
ಸಲಕ್ಷ್ಮಣಂ ರಾಘವ ಮಾಜಿಮರ್ದನಂ ದಿಶಾಗಜಂ ಮತ್ತ ಮಿವ ವ್ಯವಸ್ಥಿತಂ ।
ಸಹೇತ ಕೋವಾನರ ಮುಖ್ಯಸಂಯುಗೇ ಯುಗಾಂತ ಸೂರ್ಯಪ್ರತಿಮಂ ಶರಾರ್ಚಿಷಂ॥
ಸ ಮೇ ಹರಿಶ್ರೇಷ್ಠ ಸಲಕ್ಷ್ಮಣಂ ಪತಿಂಸಯೂಥಪಂ ಕ್ಷಿಪ್ರಮಿಹೋಪ ಪಾದಯ ।

---

**ಸಮಾಃ** - ಎಣೆಎನಿಸಿದವರು, **ನಭವಂತಿಹಿ** - ಆಗುವುದೇ ಇಲ್ಲ ॥೬೩॥ **ಚಿತ್ರಕಾರ್ಮುಕಂ** - ಅದ್ಭುತವಾದ ಬಿಲ್ಲನ್ನು ಹಿಡಿದಿರುವ, **ಮಹಾಬಲಂ**- ಹೇರಳವಾದ ಸತ್ವವುಳ್ಳ, **ವಾಸವತುಲ್ಯವಿಕ್ರಮಂ**-ಇಂದ್ರನಿಗೆಣೆಯಾದ ಶೌರ್ಯವುಳ್ಳ, **ಸಲಕ್ಷ್ಮಣಂ** - ಲಕ್ಷ್ಮಣನಿಂದ ಸಹಿತನಾದ, **ತಂರಾಘವಂ** - ಆ ರಾಮನನ್ನು, **ದೀಪ್ತಂ** - ಜ್ವಲಿಸುತಲಿರುವ, **ಅನಿಲೇರಿತಂ** - ಗಾಳಿಯಿಂದ ಹರಡಲ್ಪಟ್ಟ, **ಹುತಾಶನಮಿವ** - ಅಗ್ನಿಯನ್ನು ಹೇಗೋ ಹಾಗೆ, **ಸಂಯತಿ** - ಯುದ್ಧರಂಗದಲ್ಲಿ, **ಸಮೀಕ್ಷ್ಯ** - ನೋಡಿ, **ಕಃ** - ಯಾವನು, **ವಿಷಹೇತ** - ಸಹಿಸಬಲ್ಲನು ॥೬೪॥ **ವಾನರಮುಖ್ಯ** - ಎಲೈ ಕಪಿ ಪ್ರವರನೆ ! **ಸಲಕ್ಷ್ಮಣಂ** - ಲಕ್ಷ್ಮಣನಿಂದ ಸಹಿತನಾದ, **ಆಜಿಮರ್ದನಂ** - ರಣದಲ್ಲಿ ಹಗೆಗಳನ್ನು ಇರಿಯುವ, **ಮತ್ತಂ** - ಕೊಬ್ಬಿರುವ, **ದಿಶಾಗಜಮಿವ** - ದಿಗ್ಗಜದಂತೆ, **ವ್ಯವಸ್ಥಿತಂ** - ಇದಿರುಬೀಳುವ, **ಸಂಯುಗೆ** - ಬವರದಲ್ಲಿ, **ಯುಗಾಂತ** - ಪ್ರಳಯಕಾಲದಲ್ಲಿನ, **ಸೂರ್ಯಪ್ರತಿಮಂ** - ಸೂರ್ಯನಿಗೆಣೆಯೆನಿಸಿದ, **ಶರಾರ್ಚಿಷಂ** - ಬಾಣಗಳ ಜ್ವಾಲೆಯುಳ್ಳ, **ರಾಘವಂ** - ಶ್ರೀ ರಾಮನನ್ನು, **ಕಃ** - ಯಾವನು, **ಸಹೇತ** - ಸಹಿಸಬಲ್ಲನು ? ॥೬೫॥ **ಹೇಹರಿಶ್ರೇಷ್ಠ** - ಎಲೈ ವಾನರೋತ್ತಮನೆ ! **ಸಃ** - ಹಿತಾಹಿತವನ್ನೆಲ್ಲ ಅರಿಯುವ ವಿಚಕ್ಷಣನಾಗಿರುವ, (**ತ್ವಂ** - ನೀನು) **ಸಲಕ್ಷ್ಮಣಂ**-ಲಕ್ಷ್ಮಣನಿಂದೊಡಗೂಡಿದ, **ಸಯೂಥಪಂ** - ವಾನರ ಸೇನಾಪತಿಗಳಿಂದ ಸಹಿತನಾಗಿರುವ, **ಮೇ** - ನನ್ನ, **ಪತಿಂ**-ವಲ್ಲಭನನ್ನು

---

ನೋಡಿದವಳಲ್ಲವೆ ? ಆದಕಾರಣ ದೇವತೆಗಳು, ಗಂಧರ್ವರು, ಭುಜಂಗಮರು, ಯಕ್ಷರಾಕ್ಷಸರೇ ಮೊದಲಾದವರೂ ಯುದ್ಧರಂಗದಲ್ಲಿ ಶ್ರೀರಾಮನಿಗೆ ಎಣೆಯೆನಿಸಲಾರರು, ಈ ವಿಷಯದಲ್ಲಿ ಸಂದೇಹವೇ ಇಲ್ಲ ॥೬೩॥ ಅಸಹಾಯ ಶೂರನೆನಿಸಿದ ಶ್ರೀರಾಮನು ಒಬ್ಬನು ಮಾತ್ರವೇ ಕಯ್ಯಲ್ಲಿ ಬಿಲ್ಲನ್ನುಹಿಡಿದು ನಿಂತವನೇ ಆದರೆ, ಆತನಿದಿರಿಗೆ ನಿಲ್ಲುವವನೇ ಇಲ್ಲ, ಹೀಗಿರುವಲ್ಲಿ - ಮಹಾಬಾಹುಬಲ ಸಂಪನ್ನನೆನಿಸಿ, ಮಹೇಂದ್ರನೊಡನೆ ಸಮಾನವಾದ ವಿಕ್ರಮವುಳ್ಳವನಾಗಿರುವ ಆರಾಮನು ತನಗೆಸಮಾನವಾದ ಶೌರ್‍ಯದಿಂದ ಸಂಪನ್ನನಾದ ಲಕ್ಷ್ಮಣನಿಂದೊಡಗೂಡಿಯೂ ನಿಂತರೆ, ಮಹಾವಾಯುವಿನಿಂದ ಜಾಜ್ವಲ್ಯಮಾನನಾದ ಅಗ್ನಿಯಂತೆ ಮಹಾಕ್ರೂರನಾದ ಆರಾಮನನ್ನು ಇದಿರಿಸುವಂಥವನು ಈ ಜಗತ್ತಿನಲ್ಲಿ ಉಂಟೆ ? ಸರ್ವಥಾ ಇಲ್ಲವು ॥೬೪॥ ಮತ್ತು - ಎಲೈ ಹರಿವರನೆ ! ಮದವೇರಿದ ಆನೆಯಂತೆ ಹೆರರಿಗೆ ಸಹಿಸಲಸದಳನೆನಿಸಿ, ಯುದ್ಧರಂಗದಲ್ಲಿ ಬಾಣ ಜ್ವಾಲೆಗಳಿಂದ ಪ್ರಳಯಕಾಲದ ಸೂರ್ಯನಂತೆ ಪ್ರಕಾಶಿಸುತ, ಕಾಳಗದಲ್ಲಿ ಹಗೆಗಳ ಹುಟ್ಟನ್ನು ಅಡಗಿಸತಕ್ಕವನಾಗಿ, ಲಕ್ಷ್ಮಣನಿಂದೊಡಗೂಡಿದ ಶ್ರೀರಾಮನನ್ನು ಇದಿರಿಸುವ ಪ್ರಾಣಿಯು ಮೂರುಲೋಕದಲ್ಲಿಯೂ ಇಲ್ಲವೆಂದು ದೃಢವಾಗಿ ತಿಳಿ ॥೬೫॥ ಎಲೈ ಪ್ಲವಂಗ ಪುಂಗವನೇ ! ಸಕಲವಾದ ಸಾಧಕ ಬಾಧಕಗಳನ್ನೆಲ್ಲ ಚೆನ್ನಾಗಿ ಅರಿತಿರುವ ನೀನು - ನಾನು ಹೇಳಿದ

ಚಿರಾಯ ರಾಮಂ ಪ್ರತಿ ಶೋಕಕರ್ಶಿತಾಂ
ಕುರುಷ್ವ ಮಾಂ ವಾನರಮುಖ್ಯ ಹರ್ಷಿತಾಮ್ ॥೬೬॥
—ಇತಿ ಶ್ರೀಮತ್ಸುನ್ದರಕಾಣ್ಡೇ ಸಪ್ತತ್ರಿಂಶಸ್ಸರ್ಗಃ—

ಕ್ಷಿಪ್ರಂ - ಬೇಗನೆ, ಇಹ - ಇಲ್ಲಿಗೆ, ಉಪಪಾದಯ - ಕರೆದುಕೊಂಡು ಬಾ, ವಾನರಮುಖ್ಯ - ಎಲೈ ಕಪಿಶ್ರೇಷ್ಟನೆ! ಚಿರಾಯ - ಬಹುಕಾಲದಿಂದಲೂ, ರಾಮಂಪ್ರತಿ - ಶ್ರೀ ರಾಮನನ್ನು ಕುರಿತು, ಶೋಕಕರ್ಶಿತಾಂ - ದುಃಖದಿಂದ ನವೆದು ಹೋಗಿರುವ, ಮಾಂ - ನನ್ನನ್ನು, ಹರ್ಷಿತಾಂ - ಸಂತೋಷವುಳ್ಳವಳನ್ನಾಗಿ, ಕುರುಷ್ವ - ಮಾಡು ॥೬೬॥

— ಇಂತು ಮೂವತ್ತೇಳನೆಯ ಸರ್ಗಂ —

ಮಾತುಗಳನ್ನೆಲ್ಲ ಉಪಾಯಾಪಾಯಗಳ ಮೂಲಕ ಚೆನ್ನಾಗಿ ವಿಚಾರಮಾಡಿ, ಶ್ರೀರಾಮ ಲಕ್ಷ್ಮಣರನ್ನೂ, ಸುಗ್ರೀವಾದಿ ವಾನರ ವೀರರನ್ನೂ, ಕಪಿಸೇನಾ ನಾಯಕರನ್ನೂ ಇಲ್ಲಿಗೆ ಬೇಗನೆ ಬರುವಂತೆಮಾಡಿ, ಬಹು ಕಾಲದಿಂದಲೂ ರಾಮನ ಅಗಲಿಕೆಯಿಂದ ಪತಿಯನ್ನು ಕುರಿತುಶೋಕಿಸುತಲಿರುವ ನನ್ನ ಅಪಾರವಾದ ದುಃಖವನ್ನು ಪರಿಹರಿಸಿ,ನನಗೆ ಸಂತೋಷವನ್ನು ಕಲ್ಪಿಸು ಎಂದಳು.

— ಇಂತು ಮೂವತ್ತೇಳನೆಯ ಸರ್ಗಂ —

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ

## ಶ್ರೀಮತ್ಸುನ್ದರಕಾಣ್ಡೇ-ಅಷ್ಟತ್ರಿಂಶಸ್ಸರ್ಗಃ

ತತ ಸ್ಸ ಕಪಿಶಾರ್ದೂಲ ಸ್ತೇನ ವಾಕ್ಯೇನ ಹರ್ಷಿತಃ ।
ಸೀತಾ ಮುವಾಚ ತಚ್ಛ್ರುತ್ವಾ ವಾಕ್ಯಂ ವಾಕ್ಯವಿಶಾರದಃ ॥೧॥

— ಮೂವತ್ತೆಂಟನೆಯ ಸರ್ಗಂ —

ಕಂದ॥ ರುಕ್ಕೇಂದು ವದನ ಜಾನಕಿ । ಕಾಕಾಸುರ ಕಥೆಯ ನಂದು ಮಾರುತಿಗರುಪಿ ।
ಕಾಕುತ್ಸ್ಥನ ಮನದಳಲಂ । ತಾಂಕೆಳೆಯುಲ್ ಮಣಿಯನಿತ್ತ ಳಾದರದಿಂದಲ್ ॥

ತತಃ - ಅನಂತರದಲ್ಲಿ, ಕಪಿಶಾರ್ದೂಲಃ - ಕಪಿವರನಾದ, ವಾಕ್ಯವಿಶಾರದಃ- ಮಾತನಾಡುವುದರಲ್ಲಿ ಜಾಣನಾಗಿರುವ, ಸಃ - ಆ ಆಂಜನೇಯನು, ತತ್ - ಆ ಸೀತಾವಾಕ್ಯವನ್ನು, ಶ್ರುತ್ವಾ - ಕೇಳಿ, ತೇನ - ಆ ಸೀತೆಯ ಮಾತಿನಿಂದ, ಹರ್ಷಿತಃ - ಸಂತೋಷವುಳ್ಳವನಾಗಿ, ಸೀತಾಂ - ಜಾನಕಿಯನ್ನು ಕುರಿತು, ಉವಾಚ - ಹೇಳತೊಡಗಿದನು ॥೧॥ ಶುಭದರ್ಶನೆ-ಮಂಗಳ ಮುಖಿಯಾಗಿರುವ, ದೇವಿ-ಎಲೌ ಸೀತಾದೇವಿಯೇ

—ಮೂವತ್ತೆಂಟನೆಯ ಸರ್ಗಂ—

ತದನಂತರದಲ್ಲಿ - ಮಾತನಾಡುವುದರೊಳಗೆ ಬಲುಜಾಣನಾದ ಆಂಜನೇಯನು - ಪತಿವ್ರತಾ ಶಿರೋಮಣಿಯಾದ ವೈದೇಹಿಯು ಉದಹರಿಸಿದ ಮಾತುಗಳನ್ನೆಲ್ಲ ಕೇಳಿ, ಹರ್ಷಿತನಾಗಿ, ಮರಳಿ ಆಕೆಯನ್ನು ಕುರಿತು ಹೇಳತೊಡಗಿದನು॥೧॥ ಮಂಗಳಾಂಗಿಯೆನಿಸಿದ

ಯುಕ್ತರೂಪಂ ತ್ವಯಾ ದೇವಿ ಭಾಷಿತಂ ಶುಭದರ್ಶನೇ ।
ಸದೃಶಂ ಸ್ತ್ರೀಸ್ವಭಾವಸ್ಯ ಸಾಧ್ವೀನಾಂ ವಿನಯಸ್ಯ ಚ ॥೨॥
ಸ್ತ್ರೀತ್ವಂ ನತು ಸಮರ್ಥಂ ಹಿ ಸಾಗರಂ ವ್ಯತಿ ವರ್ತಿತುಮ್ ।
ಮಾ ಮಧಿಷ್ಠಾಯ ವಿಸ್ತೀರ್ಣಂ ಶತಯೋಜನ ಮಾಯತಮ್ ॥೩॥
ದ್ವಿತೀಯಂ ಕಾರಣಂ ಯಚ್ಚ ಬ್ರವೀಷಿ ವಿನಯಾನ್ವಿತೇ ।
ರಾಮಾ ದನ್ಯಸ್ಯ ನಾರ್ಹಾಮಿ ಸಂಸ್ಪರ್ಶ ಮಿತಿಜಾನಕೀ ॥೪॥
ಏತತ್ತೇ ದೇವಿ ಸದೃಶಂ ಪತ್ನ್ಯಾ ಸ್ತಸ್ಯ ಮಹಾತ್ಮನಃ ।
ಕಾ ಹ್ಯನ್ಯಾ ತ್ವಾ ಮೃತೇ ದೇವಿ ಬ್ರೂಯಾ ದ್ವಚನ ಮೀದೃಶಂ ॥೫॥

ತ್ವಯಾ - ನಿನ್ನಿಂದ, ಯುಕ್ತರೂಪಂ - ಅತ್ಯಂತ ಉಚಿತವಾಗಿರುವ, (ಯತ್ - ಯಾವಮಾತು) ಭಾಷಿತಂ - ಹೇಳಲ್ಪಟ್ಟಿತೋ, (ತತ್ - ಅದು) ಸ್ತ್ರೀಸ್ವಭಾವಸ್ಯ - ಒಳ್ಳೆಯ ಗರತಿ ತನಕ್ಕೂ, ಸಾಧ್ವೀನಾಂ - ನಿನ್ನಂತಹ ಪತಿವ್ರತೆಯರ, ವಿನಯಸ್ಯ - ನಮ್ರ ಭಾವಕ್ಕೂ (ವಿಧೇಯತೆಗೂ) ಸದೃಶಂ - ಸಮಾನವಾದುದಾಗಿದೆ ॥೨॥ ವಿಸ್ತೀರ್ಣಂ - ಎತ್ತರವೂ ಅಗಲವೂ ಆಗಿದ್ದಾಗ್ಯೂ, ಮಾಂ - ನನ್ನನ್ನು, ಅಧಿಷ್ಠಾಯ - ಏರಿ, ಶತಯೋಜನಂ - ನೂರುಗಾವುದಗಳಷ್ಟು, ಆಯತಂ - ನೀಳವಾದ (ದೂರವಾದ) ಸಾಗರಂ - ಕಡಲನ್ನು, ವ್ಯತಿವರ್ತಿತುಂ - ದಾಟಲಿಕ್ಕೆ, ಸ್ತ್ರೀತ್ವಂ - ಹೆಂಗಸರ ಸ್ವಭಾವವೇ, ಭೀರುತ್ವಂ - ಭಯಪಡತಕ್ಕದು, ನಸಮರ್ಥಂಹಿ - ಶಕ್ತವಾದುದಲ್ಲ, ಅಥವಾ, ಸ್ತ್ರೀ - ಹೆಂಗಸಾದ, ತ್ವಂ - ನೀನು, ನಸಮರ್ಥಂಹಿ - ಶಕ್ತಳಲ್ಲ ॥ ೩ ॥ ವಿನಯಾನ್ವಿತೇ - ವಿನಯಸಂಪನ್ನೆಯಾದ, ಜಾನಕಿ - ಎಲೌ ಸೀತೆಯೆ ! ರಾಮಾತ್ - ರಾಮನಿಗಿಂತಲೂ, ಅನ್ಯಸ್ಯ - ಇತರ ಮನುಷ್ಯನ, ಸಂಸ್ಪರ್ಶಂ - ಮುಟ್ಟೋಣವನ್ನು ಕುರಿತು, ನಾರ್ಹಾಮಿ - ತಕ್ಕವಳಾಗುವುದಿಲ್ಲ, (ಇತಿ - ಹೀಗೆಂದು) ಬ್ರವೀಷಿ - ಹೇಳುತ್ತಿರುವೆಯಲ್ಲ, ಏತತ್ - ಈ ಮಾತು, ಹೇದೇವಿ - ಎಲೌ ಸೀತಾದೇವಿಯೇ, ಮಹಾತ್ಮನಃ - ಮಹಾನುಭಾವನಾದ, ತಸ್ಯ - ಆ ಶ್ರೀ ರಾಮನಿಗೆ, ಪತ್ನ್ಯಾಃ - ಧರ್ಮಭಾರ್ಯೆಯಾದ, (ತವ - ನಿನಗೆ) ಸದೃಶಂ - ತಕ್ಕುದಾಗಿದೆ, ದೇವಿ - ಎಲೌ ಜಾನಕಿಯೆ ! ತ್ವಾಮೃತೆ - ನಿನ್ನನ್ನು ಬಿಟ್ಟು, ಅನ್ಯಾ - ಬೇರಾದ, ಕಾ - ಯಾವ ಹೆಂಗಸು, ಈದೃಶಂ - ಇಂತಹ, ವಚನಂ - ಮಾತನ್ನು, ಬ್ರೂಯಾತ್-ಹೇಳಬಲ್ಲಳು ? ॥೫॥ದೇವಿ-ಎಲೌ ಸೀತಾದೇವಿಯೆ !

ಎಲೌ ಮಹಾದೇವಿಯೆ ! ನಿನ್ನ ಮಾತುಗಳು ಬಹು ಯುಕ್ತವಾಗಿವೆ, ಅಮೃತದಂತೆ ಸೊಗಯಿಸುತಲಿವೆ, ಹೆಂಗಸರನಡತೆಗೂ, ಗರತಿತನಕ್ಕೂ, ವಿನಯಕ್ಕೂ ಒಪ್ಪತಕ್ಕದಾಗಿದೆ, ॥೨॥ ನಿನ್ನ ಹೇಳಿಕೆಯಂತೆ ಹೆಂಗಸಾದ ನೀನು ನನ್ನ ಬೆನ್ನಿನಮೇಲೆ ಕುಳಿತು ನೂರು ಗಾವುದಗಳ ಅಪಾರವಾದ ಸಾಗರವನ್ನು ದಾಟುವುದು ಸಾಧ್ಯವಲ್ಲ, ಈ ಮೊದಲನೆಯ ಕಾರಣವು ಬಹು ನ್ಯಾಯವಾಗಿದೆ ॥೩॥ ಎಲೌ ವಿನಯಸಂಪನ್ನೆಯೆ ! ಎರಡನೆಯದಾಗಿ, ನಾನು ರಾಮನಿಗಿಂತ ಅನ್ಯನಾದ ಪುರುಷನ ಸ್ಪರ್ಶವನ್ನು ಮಾಡಲಾರೆ, ಬಲತ್ಕಾರದಿಂದ ಪಾಪಾತ್ಮನಾದ ರಾವಣನೊಡನೆ ಬರುವಾಗ ಅನಾಥಳಾಗಿದ್ದೆನಾದುದರಿಂದ ಏನ ಮಾಡಲಿ ಎಂದು ಹೇಳಿದೆಯಲ್ಲ ? ॥೪॥ ಈ ಮಾತು - ಮಹಾನುಭಾವನೆನಿಸಿದ ಶ್ರೀ ರಾಮಚಂದ್ರನ ಧರ್ಮ ಭಾರ್ಯೆಯಾದ ನಿನಗೊಬ್ಬಳಿಗೇ ಸಲ್ಲತಕ್ಕದು, ಮಹಾದೇವಿಯಾದ ನಿನ್ನ ಹೊರತು ಲೋಕದಲ್ಲಿ ಮತ್ತಾವ ಹೆಂಗಸಾದರೂ ಇಂತಹ ಮಾತನ್ನು ಆಡಬಲ್ಲಳ?

ಶ್ರೋಷ್ಯತೇ ಚೈವ ಕಾಕುತ್ಸ ಸ್ಸರ್ವಂ ನಿರವಶೇಷತಃ।
ಚೇಷ್ಟಿತಂ ಯ ತ್ತ್ವಯಾ ದೇವಿ ಭಾಷಿತಂ ಮಮಚಾಗ್ರತಃ ॥೬॥
ಕಾರಣೈ ರ್ಬಹುಭಿ ರ್ದೇವಿ ರಾಮಪ್ರಿಯ ಚಿಕೀರ್ಷಯಾ ।
ಸ್ನೇಹ ಪ್ರಸನ್ನ ಮನಸಾ ಮಯ್ಯೈತ ತ್ಸಮುದೀರಿತಮ್ ॥೭॥
ಲಂಕಾಯಾ ದುಷ್ಪ್ರವೇಶತ್ವಾ ದ್ದುಸ್ತರತ್ವಾ ನ್ಮಹೋದಧೇಃ ।
ಸಾಮರ್ಥ್ಯಾ ದಾತ್ಮನಶ್ಚೈವ ಮಯ್ಯೈತ ತ್ಸಮುದೀರಿತಮ್ ॥೮॥
ಇಚ್ಛಾಮಿ ತ್ವಾಂ ಸಮಾನೇತು ಮದ್ಯೈವ ರಘುಬಂಧುನಾ ।

---

ತ್ವಯಾ - ನಿನ್ನಿಂದ, ಮಮ - ನನ್ನ, ಅಗ್ರತಃ - ಇದಿರಿಗೆ, ಯತ್ - ಯಾವಮಾತು, ಭಾಷಿತಂ - ಹೇಳಲ್ಪಟ್ಟಿತೋ, (ತತ್ - ಆ) ಸರ್ವಂ - ಸಮಸ್ತ, ಚೇಷ್ಟಿತಂಚ - ಚರಿತ್ರೆಯೆಲ್ಲವೂ, ಕಾಕುತ್ಸ್ಥಶ್ಚ - ಶ್ರೀರಾಮನೂ, ನಿರವಶೇಷತಃ - ಸ್ವಲ್ಪವೂ ಶೇಷವಿಲ್ಲದಂತೆ, ಶ್ರೋಷ್ಯತಏವ - ಕೇಳಲೇ ಕೇಳುವನು, (ಶ್ರೋಷ್ಯತಿ) ॥೬॥ ಹೇದೇವಿ - ಎಲೌ ಜಾನಕಿಯೇ! ಬಹುಭಿಃ - ಅನೇಕಗಳಾದ, ಕಾರಣೈಃ- ನಿನ್ನ ದುಃಖಕಾರಣಗಳಿಂದ, ರಾಮಪ್ರಿಯಚಿಕೀರ್ಷಯಾ - ರಾಮನಿಗೆ ಹಿತವನ್ನು ಕಲ್ಪಿಸುವ ಬಯಕೆಯಿಂದ, ಸ್ನೇಹಪ್ರಸನ್ನಮನಸಾ - ಪ್ರೀತಿಯಿಂದ ನಿರ್ಮಲವಾದ ಮನಸ್ಸುಳ್ಳ, ಮಯಾ- ನನ್ನಿಂದ, ಏತತ್ - ಈ ಮಾತು, ಸಮುದೀರಿತಂ - ಹೇಳಲ್ಪಟ್ಟಿತು ॥೭॥ ಲಂಕಾಯಾಃ - ಲಂಕೆಯೊಳಗೆ, ದುಷ್ಪ್ರವೇಶತ್ವಾತ್- ಪ್ರವೇಶಿಸಲಶಕ್ಯವಾಗಿರುವುದರಿಂದಲೂ, ಮಹೋದಧೇಃ- ಮಹಾಸಮುದ್ರವನ್ನು, ದುಸ್ತರತ್ವಾತ್ - ದಾಟಲಸಾಧ್ಯವಾದುದರಿಂದಲೂ, ಆತ್ಮನಃ - ನನ್ನ, ಸಾಮರ್ಥ್ಯಾಚ್ಚ - ಶಕ್ತಿವಿಶೇಷದಿಂದಲೂ, ಏತತ್ - ನಿನ್ನನ್ನು ಕರೆದೊಯ್ಯುವೆನೆಂಬ ನುಡಿಯು, ಸಮುದೀರಿತಂ - ನನ್ನಿಂದ ಹೇಳಲ್ಪಟ್ಟಿತು ॥೮॥ ಗುರುಸ್ನೇಹೇನ - ಪೂಜ್ಯನಾದ ರಾಮನಲ್ಲಿನ ಪ್ರಿತಿಯಿಂದಲೂ, ಭಕ್ತ್ಯಾಚ - ನಿನ್ನಲ್ಲಿರುವ ಭಕ್ತಿಯಿಂದಲೂ,

---

ಎಂದಿಗೂ ಆಡಲಾರಳು ! ॥೫॥ ಎಲೌ ಮಾತೆ ! ನೀನು ನನ್ನಿದಿರಿಗೆ ಆಡಿದ ಮಾತುಗಳನ್ನೂ, ತೋರಿದ ಒಳ್ಳೆನಡೆಗಳನ್ನೂ ಸ್ವಲ್ಪವೂ ಬಿಡದಂತೆ ಶ್ರೀರಾಮಚಂದ್ರನಿಗೆ ನಾನು ಎಲ್ಲವನ್ನೂ ತಿಳಿಸುತ್ತೇನೆ, ಈವಿಷಯದಲ್ಲಿ ನಿನಗೆ ಲೇಶವೂ ಸಂಶಯಬೇಡ ॥೬॥ ನಾನು ಇಷ್ಟು ದೂರದದಾರಿಯನ್ನು ದಾಟಬಂದುದು ಸಾರ್ಥಕವಾಗಬೇಕೆಂದೂ, ನಿನ್ನನ್ನುಅಗಲಿಶ್ರೀರಾಮನು ದುಃಖಿಸುತ್ತಿರುವುದನ್ನು ನೋಡಿ ಸಹಿಸಲಾರದೆಯೂ, ಆತನ ವಿರಹದಿಂದ ನೀನು ಶೋಕಿಸುವುದನ್ನು ತಾಳಲಾರದೆಯೂ, ಕಾಲ ವಿಳಂಬವಾಗಬಾರದೆಂದೂ,ನನಗಿರುವ ಸ್ವಾಮಿಭಕ್ತಿಯಿಂದ ಶ್ರೀರಾಮಚಂದ್ರನಿಗೆ ಹಿತವನ್ನು ಆಚರಿಸಬೇಕೆಂದೂ, ನಿನ್ನಲ್ಲಿರುವ ಕನಿಕರದಿಂದಲೂ, ನೀನು ನನ್ನಬೆನ್ನಿನಮೇಲೆ ಕುಳಿತುಕೊಂಡರೆ, ಇಂದೇ ಕರೆದುಕೊಂಡು ಹೋಗಿ, ಶ್ರೀರಾಮನ ಸನ್ನಿಧಾನದಲ್ಲಿ ಬಿಡುವೆನು ಎಂದು ಮನಃ ಪೂರ್ವಕವಾಗಿ ಬಿನ್ನವಿಸಿದೆನು ॥೭॥ ಮತ್ತು - ನೀನೀಗ ಈರಕ್ಕಸರ ಹಿಂಸೆಯನ್ನು ತಾಳುವುದು ಬಲುಕಷ್ಟವಾಗಿದೆ, ರಾಮಲಕ್ಷ್ಮಣರೂ, ವಾನರರೂ ಈಲಂಕೆಗೆ ಬರಬೇಕಾದರೆ ಬಹುಕಷ್ಟವಾಗುವುದು, ಕಡಲನ್ನು ದಾಟುವುದೂ ಸುಲಭವಲ್ಲ, ನಿನ್ನನ್ನು ಕರೆದೊಯ್ಯಲು ನನಗೆ ಸಾಮರ್ಥ್ಯವೂ ಉಂಟು, ನಿರ್ವಿಘ್ನವಾಗಿ ಕಾರ್ಯವು ಈಡೇರುವುದು ಎಂದು ಬಗೆದು, ಆಮಾತನ್ನು ಹೇಳಿದೆನಲ್ಲದೆ ಮತ್ತಾವ ಕಾರಣದಿಂದಲೂ ಅಲ್ಲ, ರಾಮನ ಯಶಸ್ಸಿಗೆ ಕೊರತೆ ಮಾಡಬೇಕೆಂದಲ್ಲ,

ಗುರುಸ್ನೇಹೇನ ಭಕ್ತ್ಯಾಚ ನಾನ್ಯಥೈತ ದುದಾಹೃತಮ್ ॥೯॥
ಯದಿ ನೋತ್ಸಹಸೇ ಯಾತುಂ ಮಯಾ ಸಾರ್ಧ ಮನಿಂದಿತೇ ।
ಅಭಿಜ್ಞಾನಂ ಪ್ರಯಚ್ಛ ತ್ವಂ ಜಾನೀಯಾ ದ್ರಾಘವೋ ಹಿ ತತ್॥೧೦॥
ಏವಮುಕ್ತಾ ಹನುಮತಾ ಸೀತಾ ಸುರಸುತೋಪಮಾ ।
ಉವಾಚ ವಚನಂ ಮಂದಂ ಬಾಷ್ಪಪ್ರಗ್ರಥಿತಾಕ್ಷರಮ್ ॥೧೧॥
ಇದಂ ಶ್ರೇಷ್ಠ ಮಭಿಜ್ಞಾನಂ ಬ್ರೂಯಾ ಸ್ತ್ವಂ ತು ಮಮ ಪ್ರಿಯಂ ।

ರಘುಬಂಧುನಾ - ರಘುಕುಲದರಸರಬಂಧುವಾದ ರಾಮನೊಡನೆ, ತ್ವಾಂ - ನಿನ್ನನ್ನು, ಅದ್ಯೈವ - ಇಂದೇ, ಸಮಾನೇತುಂ - ಸೇರಿಸಲಿಕ್ಕೆ, ಇಚ್ಛಾಮಿ - ಬಯಸಿದೆನು, (ಇಚಂ) ಅನ್ಯಥಾ - ಹಾಗಿಲ್ಲದೆ ಬೇರೆ ನಿಮಿತ್ತದಿಂದ, ಏತತ್ - ಈ ಮಾತು, ನೋದಾಹೃತಾ - ಹೇಳಲ್ಪಟ್ಟದ್ದಲ್ಲ ॥೯॥ ಹೇಅನಿಂದಿತೆ - ದೋಷಲೇಶವಿಲ್ಲದ ಎಲೌ ಜಾನಕಿಯೆ !, ಮಯಾ ಸಾರ್ಧಂ - ನನ್ನೊಡನೆ, ಯಾತುಂ - ಶ್ರೀರಾಮನ ಸನ್ನಿಧಾನಕ್ಕೆ ಬರಲು, ನೋತ್ಸಹಸೇಯದಿ - ಉತ್ಸಾಹಪಡದಿದ್ದರೆ, (ಒಪ್ಪದಿದ್ದರೆ) ಅಬಿಜ್ಞಾನಂ - ಜ್ಞಾಪಕವನ್ನು (ಗುರುತನ್ನು) ತ್ವಂ - ನೀನು, ಪ್ರಯಚ್ಛ - ಕೊಡು, ತತ್ - ಆ ಗುರುತನ್ನು, ರಾಘವಃ - ಶ್ರೀರಾಮನು, ಜಾನೀಯಾದ್ಧಿ - ತಿಳಿದುಕೊಳ್ಳಬಲ್ಲನಷ್ಟೆ ? ॥೧೦॥ ಸುರಸುತೋಪಮಾ - ದೇವಕನ್ಯೆಗೆಣೆಯೆನಿಸಿದ, ಸೀತಾ - ಜಾನಕಿಯು, ಹನುಮತಾ - ಆಂಜನೇಯನಿಂದ, ಏವಂ - ಈ ಪ್ರಕಾರವಾಗಿ, ಉಕ್ತಾ - ಹೇಳಲ್ಪಟ್ಟವಳಾಗಿ, ಬಾಷ್ಪಪ್ರಗ್ರಥಿತಾಕ್ಷರಂ - ಕಣ್ಣಿನಲ್ಲಿ ನೀರು ತುಂಬಿತೊದಲುತಲಿರುವ, ವಚನಂ - ಮಾತನ್ನು, ಮಂದಂ - ಮೆಲ್ಲಗೆ, ಉವಾಚ - ಹೇಳತೊಡಗಿದಳು ॥೧೧॥ ಪುರಾ - ಪೂರ್ವದಲ್ಲಿ, ಚಿತ್ರಕೂಟಸ್ಯ - ಚಿತ್ರಕೂಟಪರ್ವತದ, ಪಾದೆ - ಬುಡದಲ್ಲಿರುವ ಚಿಕ್ಕಗುಡದಲ್ಲಿ, ಪೂರ್ವೋತ್ತರೆ - ಈಶಾನ್ಯಮೂಲೆಯೊಳಗೆ, ಮಂದಾಕಿನ್ಯಾಃ - ಗಂಗಾನದಿಯು, ಅವಿದೂರತಃ - ಹತ್ತಿರದಲ್ಲಿ, ಪ್ರಾಜ್ಯ-ಪರಿಪೂರ್ಣವಾದ, ಮೂಲಫಲೋದಕೆ - ಗೆಡ್ಡೆಗೆಣಸುಗಳೂ ಹಣ್ಣುಗಳೂ ಉಳ್ಳ, ತಸ್ಮಿನ್ ಸಿದ್ಧಾಶ್ರಮೆ - ಆ ತಪಸ್ವಿಗಳ ತಪೋವನದಲ್ಲಿ, ವೃತ್ತಂ - ನಡೆದುದಾಗಿಯೂ, ತಾಪಸಾಶ್ರಮವಾಸಿನ್ಯಾಃ - ಪುಣ್ಯಾಶ್ರಮದಲ್ಲಿ

ನನ್ನ ಪೌರುಷವನ್ನೆ ಹೆಚ್ಚಿಸಿಕೊಳ್ಳಬೇಕೆಂದಲ್ಲ, ರಾಮಲಕ್ಷ್ಮಣರು ಕೈಲಾಗದವರೆಂದಲ್ಲ, ಒಂದುವೇಳೆ ಅಜ್ಞಾನದಿಂದ ಅತಿಕ್ರಮಿಸಿ ಮಾತನಾಡಿದ್ದರೆ ಅದನ್ನು ನೀನು ಮನ್ನಿಸಬೇಕೆಂದು ಪ್ರಾರ್ಥಿಸುತ್ತೇನೆ ॥೮॥ ಮುಖ್ಯವಾಗಿ ಶ್ರೀರಾಮಚಂದ್ರನಲ್ಲಿಯೂ ನಿನ್ನಲ್ಲಿಯೂ ಇರುವ ಪರಮಭಕ್ತಿಯೇ ನನ್ನಿಂದ ಆಮಾತನ್ನಾಡಿಸಿತು. ಪ್ರೇಮಭರಭರಿತರಾದ ನಿಮ್ಮಿಬ್ಬರಿಗೂ ಜಾಗ್ರತೆಯಲ್ಲಿ ಅಗಲಿಕೆಯನ್ನು ತಪ್ಪಿಸಬೇಕೆಂಬುದೇ ನನ್ನ ಪ್ರಥಮೋದ್ದೇಶವು ॥೯॥ ಎಲೌ ಜನನಿ ! ದೋಷಲೇಶವಿಲ್ಲದ ಸರ್ವಮಂಗಳೆಯೆ ! ನನ್ನೊಡನೆ ಬರುವುದನ್ನು ನೀನು ಒಪ್ಪದೆ ಹೋದರೆ, ಯಾವಗುರುತನ್ನು ನೋಡುವುದರಿಂದ, ಇಲ್ಲವೆ ಕೇಳುವುದರಿಂದ, ನಾನಿಲ್ಲಿಗೆ ಬಂದು ನಿನ್ನಸಂದರ್ಶನ ಮಾಡಿದುದನ್ನು ಶ್ರೀರಾಮನು ನಂಬಬಲ್ಲನೋ ಮತ್ತು, ನನ್ನಲ್ಲಿ ಪ್ರೀತಿದೋರುವನೋ, ಅಂತಹ ಆವುದಾದರೊಂದು ಗುರುತನ್ನು ಕೊಡು, ಅಥವಾ ಹೇಳು. ॥೧೦॥ ಎಂದಮಾರುತಿಯು ವಚನಗಳನ್ನು ಕೇಳಿ, ದೇವಾಂಗನೆ ಗೆಣೆಯೆನಿಸಿದ ವೈದೇಹಿಗೆ ಮನದಲ್ಲಿ ಹರ್ಷದೊಡನೆ ಶೋಕವೂ ಕಲೆಯಿತು; ಹಿಂದಿನ ಸಂಗತಿಗಳೆಲ್ಲ ನೆನಪಿಗೆಬಂದುವು. ಕಣ್ಣುಗಳಲ್ಲಿ ನೀರುತುಂಬಿತು, ನುಡಿಯೂ ತೊದಲಹತ್ತಿತು,

ಶೈಲಸ್ಯ ಚಿತ್ರಕೂಟಸ್ಯ ಪಾದೇ ಪೂರ್ವೋತ್ತರೇ ಪುರಾ ॥೧೨॥
ತಾಪಸಾಶ್ರಮ ವಾಸಿನ್ಯಾಃ ಪ್ರಾಜ್ಯಮೂಲ ಫಲೋದಕೇ ।
ತಸ್ಮಿನ್ ಸಿದ್ಧಾಶ್ರಮೇ ದೇಶೇ ಮಂದಾಕಿನ್ಯಾ ಹ್ಯದೂರತಃ ॥೧೩॥
ತಸ್ಯೋಪ ವನಷಂಡೇಷು ನಾನಾ ಪುಷ್ಪಸುಗಂಧಿಷು ।
ವಿಹೃತ್ಯ ಸಲಿಲ ಕ್ಲಿನ್ನಾ ತವಾಂಕೇ ಸಮುಪಾವಿಶಮ್ ॥೧೪॥
ತತೋ ಮಾಂಸ ಸಮಾಯುಕ್ತೋ ವಾಯಸಃ ಪರ್ಯತುಂಡಯತ್।
ತ ಮಹಂ ಲೋಷ್ಟ ಮುದ್ಯಮ್ಯ ವಾರಯಾಮಿ ಸ್ಮ ವಾಯಸಮ್ ॥೧೫॥

---

ವಾಸವಮಾಡುತಲಿದ್ದ, ಮಮ - ನನ್ನ, ಇದಂ - ಈ ಮುಂದೆ ಹೇಳಹೋಗುವ, ಶ್ರೇಷ್ಠಂ - ನಂಬಲಿಕ್ಕೆ ತಕ್ಕುದಾದ, ಅಭಿಜ್ಞಾನಂ - ಗುರುತನ್ನು, ತ್ವಂತು - ನೀನಾದರೂ, ಪ್ರಿಯಂಪ್ರತಿ - ನನ್ನ ವಲ್ಲಭನನ್ನು ಕುರಿತು, ಬ್ರೂಯಾಃ - ಹೇಳು, ॥೧೨,೧೩॥ ತಸ್ಯ - ಆ ಚಿಕ್ಕಗುಡ್ಡದ, ನಾನಾ ಪುಷ್ಪಸುಗಂಧಿಷು, ಬಗೆಬಗೆಯ ಹೂಗಳ ಸುವಾಸನೆಯುಳ್ಳ, ಉಪವನಷಂಡೇಷು - ತೋಟಗಳ ಗುಂಪುಗಳಲ್ಲಿ, ವಿಹೃತ್ಯ - ವಿಹರಿಸಿ, ಸಲಿಲಕ್ಲಿನ್ನಾ - ಬೆವರಿಂದ ನೆನೆದವಳಾಗಿ, (ಪ್ರಿಯ- ಎಲೈವಲ್ಲಭನೆ) ತವ - ನಿನ್ನ, ಅಂಕೇ - ಸಮೀಪದಲ್ಲಿ, ಸಮುಪಾವಿಶಂ - ಕುಳಿತುಕೊಂಡೆನು (ಮಲಗಿಕೊಂಡೆನು) ॥೧೪॥ ತತಃ - ತರುವಾಯ ವಾಯಸಃ - ಬಂದಾನೊಂದು ಕಾಗೆಯು, ಮಾಂಸಸಮಾಯುಕ್ತಃ- ಮಾಂಸಾಶೆಯುಳ್ಳದಾಗಿ, (ಸ್ತನಾಂತರ - ಸ್ತನ ಮಧ್ಯದಲ್ಲಿ) ಪರ್ಯತುಂಡಯತ್- ಕೊಕ್ಕಿನಿಂದ ಕುಕ್ಕಿತು, ಅಹಂ - ನಾನು, ತಂವಾಯಸಂ- ಆ ಕಾಗೆಯನ್ನು, ಲೋಷ್ಟಂ - ಹಂಟೆಯನ್ನು, ಉದ್ಯಮ್ಯ- ಎತ್ತಿ, ವಾರಯಾಮಿಸ್ಮ - ಹಾರಿಸಿ ತೊಲಗಿಸಿದೆನು ॥೧೫॥ ಬಲಿಭೋಜನಃ - ಬಲಿಯನ್ನವನ್ನು ಭುಜಿಸುವ, ಸಃಕಾಕಶ್ಚ - ಆ ವಾಯಸವೂ, ಭಕ್ಷ್ಯಾರ್ಥೀ - ಮಾಂಸಭೋಜನವನ್ನು ಬಯಸುತಲಿರುವುದಾದ ಕಾರಣವೇ, ಮಾಂ - ನನ್ನನ್ನು, ದಾರಯನ್ - ಕೊಕ್ಕಿನಿಂದ ಸೀಳುತಲಿರುವುದಾಗಿ, ಮಾಂಸಾತ್-ಮಾಂಸಸ್ಥಾನವನ್ನು ಬಿಟ್ಟು, ನಚಾಪ್ಯುಪಾರಮತ್ -

---

ಮೆಲ್ಲಮೆಲ್ಲಗೆ ಮಾರುತಿಯೊಡನೆ ಮಾತನಾಡತೊಡಗಿದಳು ॥೧೧॥ ಎಲೈ ಹನುಮಂತನೇ ! ಆ ಶ್ರೀರಾಮನ ಸಂಗಡ ಹೀಗೆ ಹೇಳು;- ಚಿತ್ರಕೂಟ ಪರ್ವತದಬಳಿ, ಚಿಕ್ಕದೊಂದು ಗುಡ್ಡವುಂಟು. ಅದರ ಈಶಾನ್ಯಭಾಗದಲ್ಲಿ ಗೆಡ್ಡೆಗೆಣಸುಗಳಿಂದಲೂ, ಹಣ್ಣು ಹಂಪಲುಗಳಿಂದಲೂ ತುಂಬಿರುವ ಸಿದ್ಧಾಶ್ರಮವೊಂದಿದೆ. ಅದುಗಂಗಾನದಿಯ ಸಮೀಪದಲ್ಲಿರುವುದು, ಆಸ್ಥಳದಲ್ಲಿ ಹಿಂದೆ ಬಂದುಸಾರಿ—ರಾಮಾ ! ನಿನ್ನೊಡನೆ ನಾನು ಸಂಚರಿಸುತಲಿದ್ದಾಗ ನಡೆದ ಬಂದು ರಹಸ್ಯವನ್ನು ವಿಜ್ಞಾಪಿಸುತ್ತೇನೆ - ಇದು ಬಹುಮುಖ್ಯವಾದ ಗುರುತಾಗಿದೆ ॥೧೨॥ ॥೧೩॥ ಬಗೆಬಗೆಯಾದ ಹೂಗಳ ಸುವಾಸನೆಯಿಂದ ತುಂಬಿರುವ ಆ ಆಶ್ರಮದ ತೋಟಗಳೊಳಗೆ ಅಲ್ಲಲ್ಲಿ ಸಂಚರಿಸಿ ಬಳಲಿದೆನು, ಮೆಯ್ಯೆಲ್ಲ ಬೆವರಿತು, ಆಗ ನಿನ್ನಬಳಿಯಲ್ಲಿ ಬಂದುಕುಳಿತೆನು ॥೧೪॥ ಆಮೇಲೆ ಮಾಂಸವನ್ನು ತಿನ್ನಬೇಕೆಂಬ ಆಸೆಯಿಂದ ಬಂದಾನೊಂದು ಕಾಗೆಯು ಅಲ್ಲಿಗೆ ಬಂದು ನನ್ನ ಎದೆಯನ್ನು ತನ್ನಕೊಕ್ಕಿನಿಂದ ಕುಕ್ಕಿತು, ಆಗ ನಾನು ಬಂದು ಹಂಟೆಯನ್ನೆತ್ತಿ ಎಸೆದು ಅದನ್ನು ದೂರಸರಿಯುವಂತೆ ವಾರಿಸಿದೆನು ॥೧೫॥ ಬಲಿಯನ್ನು ಭುಜಿಸುವ ಆಕಾಗೆಯು ನನ್ನ ಎದೆಯನ್ನು ಗಾಯಮಾಡಿ, ಮಾಂಸವು ದೊರೆಯುವುದೆಂಬ ಆಸೆಯಿಂದ ಆಸ ಳವನ್ನು ಬಿಟ್ಟುಹೋಗದೆ ಅಲ್ಲಲ್ಲಿಯೇ ಸಂಚರಿಸುತಲಿದ್ದಿತು.

ದಾರಯನ್ ಸಚ ಮಾಂ ಕಾಕ ಸ್ತತ್ರೈವ ಪರಿಲೀಯತೇ ।
ನಚಾ ಪ್ಯುಪಾರಮ ನ್ಮಾಂಸಾ ದ್ಭಕ್ಷಾರ್ಥೀ ಬಲಿಭೋಜನಃ ॥೧೬॥
ಉತ್ಕರ್ಷಂತ್ಯಾಂ ಚ ರಶನಾಂ ಕ್ರುದ್ಧಾಯಾಂ ಮಯಿ ಪಕ್ಷಿಣಿ ।
ಸ್ರಸ್ಯಮಾನೇ ಚ ವಸನೇ ತತೋ ದೃಷ್ಟಾ ತ್ವಯಾಽಪ್ಯಹಂ ॥೧೭॥
ತ್ವಯಾಽಪಹಸಿತಾ ಚಾಹಂ ಕ್ರುದ್ಧಾ ಸಂಲಜ್ಜಿತಾ ತದಾ ।
ಭಕ್ಷ ಗೃಧ್ನೇನ ಕಾಕೇನ ದಾರಿತಾ ತ್ವಾ ಮುಪಾಗತಾ ॥೧೮॥
ಆಸೀನಸ್ಯ ಚ ತೇ ಶ್ರಾಂತಾ ಪುನರುತ್ಸಂಗ ಮಾವಿಶಂ ।
ಕ್ರುಧ್ಯಂತೀ ಚ ಪ್ರಹೃಷ್ಟೇನ ತ್ವಯಾಽಹಂ ಪರಿ ಸಾಂತ್ವಿತಾ ॥೧೯॥
ಬಾಷ್ಪ ಪೂರ್ಣ ಮುಖೀ ಮಂದಂ ಚಕ್ಷುಷೀ ಪರಿಮಾರ್ಜತೀ ।

ಸುಮ್ಮನಾಗಲಿಲ್ಲ (ದೂರಸರಿಯಲಿಲ್ಲ) ತತ್ರೈವ- ಅಲ್ಲಿಯೇ, ಪರಿಲೀಯತೇ - ಅಡಗಿ ಇದ್ದಿತು ॥೧೬॥
ತತಃ - ಆಮೇಲೆ, ವಸನೇ - ವಸ್ತ್ರವು, ಸ್ರಸ್ಯಮಾನೇ - (ಸ್ರಸ್ಯತಿಸತಿ) ಸಡಿಲವಾಗುತ್ತಿರಲಾಗಿ ರ
ಶನಾಂ - ಒಡ್ಡಿಯಾಣವನ್ನು, (ಡಾಬಿನ ದಾರವನ್ನು) ಉತ್ಕರ್ಷಂತ್ಯಾಂ - ಸೆಳೆಯುತಲಿರುವ, ಮಯಿ
ನಾನು, ಪಕ್ಷಿಣಿ - ಆ ಕಾಗೆಯ ವಿಷಯವಾಗಿ, ಕ್ರುದ್ಧಾಯಾಂ (ಸತ್ಯಾಂ) ಸಿಟ್ಟುಗೊಂಡವಳಾಗುತ್ತಿರಲಾ
ಗಿ, ತ್ವಯಾ - ನಿನ್ನಿಂದ, ಅಹಂ - ನಾನು, ದೃಷ್ಟಾ - ನೋಡಲ್ಪಟ್ಟೆನು ॥೧೭॥ ಭಕ್ಷಗೃಧ್ನೇನ - ತಿನು
ವುದರಲ್ಲಿ ಆಶೆಯುಳ್ಳ ಕಾಗೆಯಿಂದ, ದಾರಿತಾ - ಕೊಕ್ಕಿನಿಂದ ಸೀಳಲ್ಪಟ್ಟವಳಾದ ಕಾರಣವೇ, ಕ್ರುದ್ಧಾ -
ರೋಷಗೊಂಡ, ಅಹಂ-ನಾನು, ತದಾ - ಆಗ, ತ್ವಯಾ - ನಿನ್ನಿಂದ, ಅಪಹಸಿತಾ-ಹೇಳನ ಮಾಡಲ್ಪಟ್ಟ
ಳಾಗಿ, ಸಂಲಜ್ಜಿತಾ - ನಾಚಿಕೆಯುಳ್ಳವಳಾಗುತ್ತಾ, ತ್ವಾಂ - ನಿನ್ನನ್ನು ಕುರಿತು, ಉಪಾಗತಾ - ಸಮೀಪ
ಕ್ಕೆ ಬಂದೆನು ॥೧೮॥ ಕ್ರುಧ್ಯಂತೀ - ಕೋಪಿಸಿಕೊಳ್ಳುತಲಿರುವ, (ಅಹಂ - ನಾನು) ಪ್ರಹೃಷ್ಟೇನ - ನ
ಗುತಲಿರುವ, ತ್ವಯಾ - ನಿನ್ನಿಂದ, ಪರಿಸಾಂತ್ವಿತಾ - ಸಮಾಧಾನಪಡಿಸಲ್ಪಡುವವಳಾಗಿ, ಶ್ರಾಂತಾ - ಬಳಲಿದ
ವಳಾಗುತ್ತಾ, ಆಸೀನಸ್ಯ - ಕುಳಿತಿದ್ದ, ತೇ - ನಿನ್ನ, ಉತ್ಸಂಗಂ- ಸಮೀಪ (ದಲ್ಲಿ) ವನ್ನು, ಪುನಃ - ಮ
ರಳಿ, ಆವಿಶಂ - (ಕುಳಿತೆನು) ಹೊಕ್ಕೆನು ॥೧೯॥ ಅಹಂ - ನಾನು, ಬಾಷ್ಪಪೂರ್ಣಮುಖೀ- ಕಣ್ಣೀ
ರಿನಿಂದ ತುಂಬಿದ ಮುಖವುಳ್ಳವಳಾಗಿ, ಚಕ್ಷುಷೀ - ಕಣ್ಣುಗಳನ್ನು, ಮಂದಂ- ಮೆಲ್ಲಗೆ, ಪರಿಮಾರ್ಜತೀ-
ತಡವಿಕೊಳ್ಳುತಲಿರುವವಳಾಗಿ, ನಾಥ-ಎಲೈ ಪ್ರಾಣವಲ್ಲಭನೇ! ವಾಯಸೇನ-ಕಾಗೆಯಿಂದ, ಪ್ರಕೋಪಿತಾ-

॥೧೬॥ ಆಗ ನನಗೆ ಆ ಕಾಗೆಯ ಮೇಲೆ ಹೇರಳವಾಗಿ ಸಿಟ್ಟು ಹತ್ತಿತು. ಅದನ್ನು ಹೊಡೆಯ
ಬೇಕೆಂದು ತೋರಿತು, ಟೊಂಕಕ್ಕೆ ಕಟ್ಟಿದ್ದ ಎಳೆಗಳ ರೂಪವಾಗಿದ್ದ ಒಡ್ಡಿಯಾಣವನ್ನು ತೆಗೆ
ದೆನು, ನಿರಿಮುಡಿಯು ಸಡಿಲವಾಗುತಲಿದ್ದಿತು ರಾಮಾ! ಆಗ ನೀನು ನನ್ನನ್ನು ನೋಡಿದೆ
ಯಲ್ಲವೆ? ॥೧೭॥ ನನ್ನನ್ನು ಪರಿಹಾಸಮಾಡಿದೆಯಲ್ಲವೆ? ಆಗ ಸಿಟ್ಟುಗೊಂಡಿದ್ದ ನಾನು ಬ
ಹು ನಾಚಿಕೆಯುಳ್ಳವಳಾದೆನಲ್ಲವೆ! ಮಾಂಸದಾಸೆಯ ಕಾಗೆಯಿಂದ ಗಾಯಪಟ್ಟಿದ್ದ ನಾ
ನು ನಿನ್ನ ಬಳಿಗೆ ಬಂದೆನು ॥೧೮॥ ಆಮೇಲೆ-ಬಹಳವಾಗಿ ಬಳಲಿದ್ದ ನಾನು ನಿನ್ನಯ
ಕೇವಲ ಸಮೀಪದಲ್ಲಿ ಬಂದು ಕುಳಿತೆನು, ಹೇರಳವಾಗಿ ಸಿಟ್ಟುಗೊಂಡಿದ್ದ ನನ್ನನ್ನು ನೀನು
ಮೃದುಮಧುರವಾದ ಮಾತುಗಳಿಂದ ಸಮಾಧಾನ ಪಡಿಸಿದೆಯಲ್ಲವೆ? ॥೧೯॥ ಎಲೈ ನಾಥ
ನೇ! ವಾಯಸವು ಮಾಡಿದ ಕೆಲಸಕ್ಕೆ ಬಲವಾಗಿ ರೋಷಗೊಂಡಿದ್ದ ನಾನು ಬಾಧೆಯಿಂದ

ಲಕ್ಷಿತಾಽಹಂ ತ್ವಯಾ ನಾಥ ವಾಯಸೇನ ಪ್ರಕೋಪಿತಾ ॥೨೦॥
ಪರಿಶ್ರಮಾ ತ್ಪ್ರಸುಪ್ತಾ ಚ ರಾಘವಾಂಕೇ ಽ ಪ್ಯಹಂ ಚಿರಂ ।
ಪರ್ಯಾಯೇಣ ಪ್ರಸುಪ್ತಶ್ಚ ಮಮಾಂಕೇ ಭರತಾಗ್ರಜಃ ॥೨೧॥
ಸ ತತ್ರ ಪುನರೇವಾಥ ವಾಯಸ ಸ್ಸಮುಪಾಗಮತ್ ॥೨೧॥ ॥
ತತ ಸ್ಸುಪ್ತ ಪ್ರಬುದ್ಧಾಂ ಮಾಂ ರಾಮಸ್ಯಾಂಕಾ ತ್ಸಮುತ್ಥಿತಾಂ ।
ವಾಯಸ ಸ್ಸಹಸಾಽಽಗಮ್ಯ ವಿದದಾರ ಸ್ತನಾಂತರೇ ॥೨೨॥
ಪುನಃ ಪುನರಥೋತ್ಪತ್ಯ ವಿದದಾರ ಸ ಮಾಂ ಭೃಶಂ ।
ತತ ಸ್ಸಮುತ್ಕ್ಷಿತೋ ರಾಮೋ ಮುಕ್ತೈ ಶ್ಶೋಣಿತ ಬಿಂದುಭಿಃ ॥೨೩॥ ॥

ಕೋಪಗೊಳಿಸಲ್ಪಟ್ಟವಳಾಗಿ, ತ್ವಯಾ - ನಿನ್ನಿಂದ, ಲಕ್ಷಿತಾ - ನೋಡಲ್ಪಟ್ಟೆನು, ॥೨೦॥ ಅಹಂ ಚ - ನಾನೂ, ಪರಿಶ್ರಮಾತ್ - ಬಳಲಿಕೆಯಿಂದ, ರಾಘವಾಂಕೇ - ರಾಮನ ತೊಡೆಯಲ್ಲಿ, ಪ್ರಸುಪ್ತಾ - ನಿದ್ರಿಸತೊಡಗಿದೆನು, ಚಿರಂ - ಬಹಳ ಹೊತ್ತಿನಮೇಲೆ ಭರತಾಗ್ರಜೋಪಿ - ರಾಮನೂ, ಪರ್ಯಾಯೇಣ-ಕ್ರಮದಿಂದ (ನಾನು ಮಲಗಿದ್ದು ಎಚ್ಚತ್ತಮೇಲೆ) ಪ್ರಸುಪ್ತಶ್ಚ - ನಿದ್ರಿಸುವವನಾಗಿ, ಮಮ - ನನ್ನ, ಅಂಕೇ - ತೊಡೆಯಮೇಲೆ, ಉಪಾವಿಶತ್ - ಮಲಗಿದನು, ಅಥ - ಆ ಮೇಲೆ, ಸಃ - ಆ, ವಾಯಸಃ- ಕಾಗೆಯು. ತತ್ರೈವ - ಅಲ್ಲಿಯೇ, ಪುನಃ ಮರಳಿ, ಸಮುಪಾಗಮತ್ - ಹತ್ತಿರಕ್ಕೆ ಬಂದಿತು ॥೨೧॥ ತತಃ - ಆ ಹಿಂದೆ, ಸುಪ್ತಪ್ರಬುದ್ಧಾಂ - ಮಲಗಿದ್ದು ಎಚ್ಚತ್ತ, ರಾಮಸ್ಯ - ಶ್ರೀ ರಾಮನ, ಅಂಕಾತ್ - ತೊಡೆಯಿಂದ, ಸಮುತ್ಥಿತಾಂ - ಎದ್ದು ಕುಳಿತ, ಮಾಂ - ನನ್ನನ್ನು, ವಾಯಸಃ - ಕಾಗೆಯು, ಸಹಸಾ - ಬೇಗನೆ, ಆಗಮ್ಯ - ಸಮೀಪಕ್ಕೆ ಬಂದು, ಸ್ತನಾಂತರೇ - ಸ್ತನಮಧ್ಯದಲ್ಲಿ, ವಿದದಾರ - ಕೊಕ್ಕಿನಿಂದ ಸೀಳಿತು ॥೨೨॥

ತತಃ - ಮರಳಿ, ಸಃ - ಆ ಕಾಗೆಯು. ಉತ್ಪತ್ಯ - ಮೇಲಕ್ಕೆ ಹಾರಿ. (ಹಾರಿಬಂದು) ಮಾಂ - ನನ್ನನ್ನು, ಪುನಃ ಪುನಃ - ಅಡಿಗಡಿಗೂ, ಭೃಶಂ - ಬಹಳವಾಗಿ, ವಿದದಾರ - ಕೊಕ್ಕಿನಿಂದ ಕುಕ್ಕಿತು, ತತಃ - ಬಳಿಕ, ರಾಮಃ - ಶ್ರೀರಾಮನು. ಮುಕ್ತೈಃ - ಕಾಗೆಯ ಕೊಕ್ಕಿನಿಂದ ಹೊರಗಾಣಿಸಿದ, ಶೋಣಿತಬಿಂದುಭಿಃ - ರಕ್ತದ ತೊಟ್ಟುಗಳಿಂದ, ಸಮುತ್ಕ್ಷಿತಃ-ತೋಯಿಸಲ್ಪಟ್ಟನು, ॥೨೩॥ ॥ ತತಃ-

ನೊಂದುಕೊಳ್ಳುತ, ಕಣ್ಣಿಂದ ನೀರು ಹರಿಯುವುದನ್ನು ಸೀರೆಯಸೆರಗಿನಿಂದ ಮೆಲ್ಲಗೆ ಒತ್ತಿಕೊಳ್ಳುತಲಿರುವಾಗ, ನನ್ನನ್ನು ನೋಡಿ ನೀನು ಬಹಳವಾಗಿ ಸಮದಾಯಿಸಿದೆಯಲ್ಲವೆ ? ॥೨೦॥ ತರುವಾಯ ಎಲೈ ರಾಘವಾ ! ಬಹು ಶ್ರಮವನ್ನನುಭವಿಸುತಲಿದ್ದ ನಾನು-ಬಹಳ ಹೊತ್ತಿನವರೆಗೂ ನಿನ್ನತೊಡೆಯಮೇಲೆ ಮಲಗಿದ್ದೆನು. ನಾನು ಎಚ್ಚತ್ತು ಕುಳಿತ ಬಳಿಕ, ನೀನು ನನ್ನ ತೊಡೆಯಮೇಲೆ ಮಲಗಿಸಿದ್ರಿಸಿದೆಯಲ್ಲವೆ ? ಆಗಲಾಕಾಗೆಯು ಮರಳಿ ಮಾಂಸದ ಆಸೆಯಿಂದ ನಾನು ಕುಳಿತಿದ್ದ ಬಳಿಗೆ ಬಂದಿತು ।೨೧॥೨ ॥॥ ರಾಮಾ ? ಮಲಗಿದ್ದು ಎದ್ದು ಕುಳಿತುಕೊಂಡು, ನಿನ್ನನ್ನು ನನ್ನ ತೊಡೆಯಮೇಲೆ ಮಲಗಿಸಿಕೊಂಡಿರುವಾಗ ಆಕಾಗೆಯು ಕೇವಲ ಹತ್ತಿರಕ್ಕೆ ಬಂದು ನನ್ನಸ್ತನದ ಮಧ್ಯಭಾಗವನ್ನು ಕೊಕ್ಕಿನಿಂದ ಕುಟುಕಿತು ॥೨೨॥ ॥ ಮತ್ತು-ಅದುಅಲ್ಲಿಗೆ ಸುಮ್ಮನಾಗಲಿಲ್ಲ, ಮರಳಿಮರಳಿ ಹಾರಿ, ಕುಕ್ಕಿ ಗಾಯಪಡಿಸಿತು, ಬಳಿಕ ಕೊಕ್ಕಿನಿಂದ ಹೊರಡಿಸಿದರಕ್ತಬಿಂದುಗಳು ನಿನ್ನನ್ನುಮೇಲೆ ಬಿದ್ದು

ವಾಯುಸೇನ ತತ ಸ್ತೇನ ಬಲವತ್ ಕ್ಲಿಶ್ಯಮಾನಯಾ ।
ಸ ಮಯಾ ಬೋಧಿತ ಶ್ಶ್ರೀಮಾ ನ್ಸುಖ ಸುಪ್ತಃ ಪರಂತಪಃ ॥೨೪॥ ॥
ಸ ಮಾಂ ದೃಷ್ಟ್ವಾ ಮಹಾಬಾಹು ರ್ವಿತುನ್ನಾಂ ಸ್ತನಯೋಸ್ತದಾ ।
ಆಶೀವಿಷ ಇವ ಕ್ರುದ್ಧ ಶ್ಶ್ವಸ ನ್ವಾಕ್ಯ ಮಭಾಷತ ॥೨೫॥॥
ಕೇನ ತೇ ನಾಗ ನಾಸೋರು ವಿಕ್ಷತಂ ವೈ ಸ್ತನಾಂತರಮ್ ।
ಕಃ ಕ್ರೀಡತಿ ಸರೋಷೇಣ ಪಂಚವಕ್ತ್ರೇಣ ಭೋಗಿನಾ ॥೨೬॥॥
ವೀಕ್ಷಮಾಣ ಸ್ತತ ಸ್ತಂ ವೈ ವಾಯಸಂ ಸಮುದೈಕ್ಷತ ।
ನಖೈ ಸ್ಸರುಧಿರೈ ಸ್ತೀಕ್ಷ್ಣೈರ್ಮಾ ಮೇವಾಭಿ ಮುಖಂ ಸ್ಥಿತಂ ॥೨೭॥॥

---

ತದನಂತರದಲ್ಲಿ, ತೇನ-ಆ, ವಾಯಸೇನ-ಕಾಗೆಯಿಂದ, ಬಲವತ್ - ಬಲಾತ್ಕಾರವಾಗಿ, ಕ್ಲಿಶ್ಯಮಾನಯಾ ಬಾಧೆಗೊಳಿಸಲ್ಪಡುತಲಿರುವ, ಮಯಾ - ನನ್ನಿಂದ, ಸುಖಸುಪ್ತಃ - ಸುಖವಾಗಿ ಪವಳಿಸಿದ್ದ, ಪರಂತಪಃ - ಶತ್ರುಸಂಹಾರಕನಾದ, ಶ್ರೀಮಾನ್ - ಪ್ರಶಸ್ತಕಾಂತಿಯುಳ್ಳ, ಸಃ - ಆಶ್ರೀರಾಮನನು, ಬೋಧಿತಃ- ಎಚ್ಚರಗೊಳಿಸಲ್ಪಟ್ಟನು ॥೨೪॥ ॥ ಮಹಾಬಾಹುಃ - ಹೇರಳವಾದ ತೋಳುಬಲವುಳ್ಳ, ಸಃ - ಆಶ್ರೀರಾಮನು, ತದಾ - ಆಗ, ಸ್ತನಯೋಃ- ಸ್ತನಗಳ (ಅಂತರೆ-ನಡುವೆ) ವಿತುನ್ನಾಂ - ಸೀಳಲ್ಪಟ್ಟಿರುವ, ಮಾಂ - ನನ್ನನ್ನು, ದೃಷ್ಟ್ವಾ - ನೋಡಿ, ಕ್ರುದ್ಧಃ - ಕೋಪಗೊಂಡ, ಆಶೀವಿಷಇವ - ಘೋರ ಸರ್ಪದಹಾಗೆ, ಶ್ವಸನ್ - ನಿಟ್ಟುಸಿರನ್ನು ಬಿಡುತಲಿರುವವನಾಗಿ, ವಾಕ್ಯಂ - ಈ ಮುಂದಿನ ಮಾತನ್ನು, ಅಭಾಷತ - ಹೇಳಿದನು ॥೨೫॥॥ ಹೇನಾಗನಾಸೋರು- ಆನೆಯ ಸೊಂಡಿಲಿನಂತೆ ತೊಡೆಯುಳ್ಳ ಎಲೈ ಸೀತೆಯೆ ! ತೆ-ನಿನ್ನ, ಸ್ತನಾಂತರಂ - ಸ್ತನಮಧ್ಯಭಾಗವು, ಕೇನ - ಯಾರಿಂದ, ವಿಕ್ಷತಂವೈ-ಗಾಯಮಾಡಲ್ಪಟ್ಟಿತು ? ಕಃ- ಯಾವನು, ಸರೋಷೇಣ - ರೋಷದಿಂದ ಕೂಡಿದ, ಪಂಚವಕ್ತ್ರೇಣ -ಐದು ಮುಖಗಳುಳ್ಳ, (ಹರಡಿದ ಹೆಡೆಯುಳ್ಳ) ಭೋಗಿನಾ - ಸರ್ಪದೊಡನೆ, ಕ್ರೀಡತಿ - ಆಡುತ್ತಾನೆ ? ॥೨೬॥॥ ತತಃ - ತರುವಾಯ (ರಾಮಃ - ಶ್ರೀರಾಮನು) ವೀಕ್ಷಮಾಣಃ - ನೋಡುತಲಿರುವವನಾಗಿ, ಸರುಧಿರೈಃ - ರಕ್ತದಿಂದ ಕೂಡಿರುವ, ತೀಕ್ಷ್ಣೈಃ - ಕ್ರೂರವಾದ, (ಮೊನೆಯಾದ) ನಖೈಃ - ಉಗುರುಗಳಿಂದ, ಮಾಮೇವ - ನನ್ನನ್ನೇಕುರಿತು, ಅಭಿಮುಖಂ - ಇದಿರಾಗಿ, ಸ್ಥಿತಂ - ಇದ್ದ, ತಂ - ಆ, ವಾಯಸಂ - ಕಾಗೆಯನ್ನು- ಸಮುದೈಕ್ಷತ - ನೋಡಿದನು ॥ ೨೭ ॥ ॥ ಪತತಾಂ - ಪಕ್ಷಿಗಳೊಳಗೆ, ವರಃ -ಉತ್ತಮವೆನಿಸಿದ,

---

ನನೆಯಿಸಿದುವು ॥೨೩॥ ಆಮೇಲೆ ಬಹಳವಾಗಿ ಬಾಧೆಪಟ್ಟನಾನು, ನಿದ್ದೆಯ ಹೊತ್ತಿನಲ್ಲಿಯೂ ಕಳಕಳನೆ ಹೊಳೆಯುತಲಿರುವ ಮುಖದಿಂದ ಒಪ್ಪುತ, ಹಾಯಾಗಿ ಮಲಗಿದ್ದ ನಿನ್ನನ್ನು ಎಚ್ಚರಗೊಳಿಸಿದೆನು ॥೨೪॥ ಎಲೈ ಮಹಾಬಾಹುಬಲ ಸಂಪನ್ನನೇ ! ಬಳಿಕನೀನು ಎಚ್ಚರಗೊಂಡು ಸ್ತನಮಧ್ಯದಲ್ಲಿ ಬಹಳವಾಗಿ ಗಾಯಪಟ್ಟಿದ್ದ ನನ್ನನ್ನು ನೋಡಿ, ಮಹಾಸರ್ಪದಂತೆ ರೋಷಗೊಂಡು ನಿಟ್ಟುಸಿರನ್ನು ಬಿಡುತ್ತಾ ಹೀಗೆಂದೆಯಲ್ಲವೆ ? ॥೨೫॥ ॥ಎಲೌ ಸುಂದರಾಂಗಿಯೇ ! ನಿನ್ನಯ ಸ್ತನಮಧ್ಯದಲ್ಲಿ ಗಾಯಮಾಡಿದವರಾರು ? ರೋಷದಿಂದೊಡಗೂಡಿರುವ ಐದುಹೆಡೆಗಳುಳ್ಳ ಮಹಾಸರ್ಪದೊಡನೆ ಆಟವಾಡುವನಾರು ? ಅವನಿಗೆ ಸಂಭವಿಸುವ ದೆಸೆಯನ್ನು, ನಿನಗೆ ಅಪರಾಧವನ್ನು ಮಾಡಿರುವವನಿಗೆ ಉಂಟುಮಾಡುತ್ತೇನೆ, ಆಖೂಳನನ್ನು ನನಗೆತೋರು ಎಂದೆಯಲ್ಲವೆ ? ॥೨೬॥ ॥ಬಳಿಕ ಅತ್ತಿತ್ತನೋಡಿ ಹುಡುಕುವಲ್ಲಿ - ರಕ್ತದಿಂದ ನನೆದಿರುವ ಮೊನೆಯಾದ ಉಗುರುಗಳನ್ನೊಳಗೊಂಡು, ನನ್ನ ಇದಿರಿಗೆನಿಂತಿರುವ

ಪುತ್ರಃ ಕಿಲ ಸ ಶಕ್ರಸ್ಯ ವಾಯಸಃ ಪತತಾಂ ವರಃ ।
ಧರಾಂತರ ಗತ ಶ್ಶೀಘ್ರಂ ಪವನಸ್ಯ ಗತೌ ಸಮಃ ॥ ೨೮॥ ॥
ತತ ಸ್ತಸ್ಮಿನ್ಮಹಾಬಾಹುಃ ಕೋಪ ಸಂವರ್ತಿತೇಕ್ಷಣಃ।
ವಾಯಸೇ ಕೃತವಾನ್ ಕ್ರೂರಾಂ ಮತಿಂ ಮತಿಮತಾಂ ವರಃ ॥೨೯॥ ॥
ಸ ದರ್ಭಂ ಸಂಸ್ತರಾ ದ್ಗೃಹ್ಯ ಬ್ರಾಹ್ಮೇಣಾಸ್ತ್ರೇಣಯೋಜಯತ್ ।
ಸ ದೀಪ್ತ ಇವ ಕಾಲಾಗ್ನಿ ರ್ಜಜ್ವಾಲಾಭಿ ಮುಖೋ ದ್ವಿಜಮ್ ॥೩೦॥
ಸ ತಂ ಪ್ರದೀಪ್ತಂ ಚಿಕ್ಷೇಪ ದರ್ಭಂ ತಂ ವಾಯಸಂ ಪ್ರತಿ ।
ತತ ಸ್ತಂ ವಾಯಸಂ ದರ್ಭ ಸ್ಸೋಽಂಬರೇಽನುಜಗಾಮ ಹ ॥೩೧॥

---

ವಾಯಸಃ - ಕಾಗೆಯು, ಶಕ್ರಸ್ಯ - ಇಂದ್ರನ, ಪುತ್ರಃಕಿಲ - ಮಗನಾಗಿದ್ದನಷ್ಟೆ ? ಪವನಸ್ಯ ಗತೌಸಮಃ - ವಾಯುವಿನಂತೆ ಗಮನವುಳ್ಳುದು, (ಅದರಿಂದಲೇ) ಶೀಘ್ರಂ - ಬೇಗನೆ, ಧರಾಂತರಗತಃ - ಭುವಿಯಯಲ್ಲಿ ಸಂಚರಿಸುತಲಿದ್ದನು ॥ ೨೮॥ ॥ ತತಃ-ತರುವಾಯ, ಮಹಾಬಾಹುಃ- ನೀಳವಾದ ತೋಳುಗಳುಳ್ಳ, ಮತಿಮತಾಂ - ಬುದ್ಧಿವಂತರೊಳಗೆ, ವರಃ - ಉತ್ತಮನೆನಿಸಿದ ಶ್ರೀರಾಮನು, ಕೋಪಸಂವರ್ತಿತೇಕ್ಷಣಃ - ಸಿಟ್ಟಿನಿಂದ ತಿರುಗುತಲಿರುವ ದೃಷ್ಟಿಯುಳ್ಳವನಾಗಿ, ತಸ್ಮಿನ್ - ಆ, ವಾಯಸೆ - ಕಾಗೆಯಲ್ಲಿ, ಕ್ರೂರಾಂ - ಕ್ರೂರವಾಗಿರುವ, ಮತಿಂ - ಬುದ್ಧಿಯನ್ನು, ಕೃತವಾನ್ - ಮಾಡಿದನು ॥ ೨೯ ॥ ॥ ಸಃ-ಅಂತಹ ಶ್ರೀರಾಮನು, ದರ್ಭಂ - ದರ್ಭೆಯನ್ನು, ಸಂಸ್ತರಾತ್- ಚಾಪೆ (ಮಂದಲಿಗೆ) ಯುದೆಸೆಯಿಂದಲೇ, ಗೃಹ್ಯ - (ಗೃಹೀತ್ವಾ) ತೆಗೆದುಕೊಂಡು, ಬ್ರಾಹ್ಮೇಣ - ಬ್ರಹ್ಮನೇದೇವತೆಯಾಗಿರುವ, ಅಸ್ತ್ರೇಣ - ಬಾಣದಿಂದ, ಯೋಜಯತ್ - ಸಂಧಾನವಮಾಡಿದನು. (ಅಯೋಜಯತ್) ದೀಪ್ತಃ - ಉರಿಯುತಲಿರುವ ಸಃ - ಆ ಬ್ರಹ್ಮಾಸ್ತ್ರದ ಉರಿಯು, ದ್ವಿಜಂ ಆ ಕಾಗೆಯನ್ನು ಕುರಿತು, ಅಭಿಮುಖಃ - ಇದಿರಿಸಿದುದಾಗಿ, ಕಾಲಾಗ್ನಿರಿವ - ಪ್ರಳಯಾಗ್ನಿಯಂತೆ, ಜಜ್ವಾಲ - ಉರಿಯಿತು, ॥ ೩೦॥ ॥ ಸಃ-ಆರಾಮನು, ಪ್ರದೀಪ್ತಂ - ಮಂತ್ರದ ಮಹಿಮೆಯಿಂದ ಉರಿಯುತಲಿರುವ, ದರ್ಭಂ- ದರ್ಭೆಯನ್ನು, ತಂ - ಆ, ವಾಯುಸಂಪ್ರತಿ - ಕಾಗೆಯನ್ನು ಕುರಿತು, ಚಿಕ್ಷೇಪ - ಎಸೆದನು, ತತಃ - ಅಹಿಂದೆ, ಸಃ-ಆ, ದರ್ಭಃ-ದರ್ಭೆಯು, ತಂ - ಆ, ವಾಯಸಂ - ಕಾಗೆಯನ್ನು, ಅಂಬರ - ಆಕಾಶದಲ್ಲಿ ಅನುಜಗಾಮ-ಹಿಂದಟ್ಟಿತು

---

ವಾಯಸವನ್ನು ನೋಡಿದೆಯಲ್ಲವೆ ? ॥೨೭॥ ॥ ಆದೊಡ್ಡಹಕ್ಕಿಯು-ಸಾಧಾರಣವಾದ ಕಾಗೆಯಲ್ಲ, ಇಂದ್ರನ ಕುಮಾರನಾದ ಜಯಂತನೆಂಬುವನು (ಕಾಕರೂಪದಿಂದಲೇ ಇದ್ದ ಇಂದ್ರನ ಮಗನೊಬ್ಬನೆಂದು ಕೆಲವರು) ಕಾಗೆಯರೂಪದಿಂದ ಭೂಮಿಯಲ್ಲಿ ವೇಗದಿಂದ ಸಂಚರಿಸುತಲಿದ್ದವನು ॥ ೨೮ ॥ ತರುವಾಯ ಮಹಾಬಾಹುಬಲಸಂಪನ್ನನೆನಿಸಿದ ನೀನು ಕಾಲಾಗ್ನಿಯಂತೆ ಸಿಟ್ಟುಗೊಂಡು, ಕಣ್ಣುಗಳಿಂದ ಕಿಡಿಗಳನ್ನು ಉದರಿಸುತ್ತ, ಅದನ್ನು ದಂಡಿಸಲೇಬೇಕೆಂದು ಕ್ರೂರವಾದ ಭಾವವನ್ನು ತಾಳಿದೆ॥ ೨೯॥॥ಅದರಿಂದಲೇ ದರ್ಭಾಸನದಿಂದ ಒಂದು ದರ್ಭೆಯನ್ನೆತ್ತಿ ಅದರಲ್ಲಿ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಪ್ರಯೋಗಿಸಿದೆ. ಆ ದರ್ಭೆಮಯವಾದ ಬ್ರಹ್ಮಾಸ್ತ್ರವು-ಪ್ರಳಯಕಾಲದ ಅಗ್ನಿಯಂತೆ ಜ್ವಾಲೆಗಳಿಂದೊಡಗೂಡಿದ ಮುಖವುಳ್ಳದಾಯಿತು ॥೩೦॥ ಆ ಮೇಲೆ-ಜ್ವಲಿಸುತ್ತಿರುವ ಆದರ್ಭೆಯನ್ನು ವಾಯಸದಮೇಲೆ ಪ್ರಯೋಗಿಸಿದೆ, ಅದನ್ನು ನೋಡಿದ ಕಾಗೆಯು ಆಗಸದಲ್ಲಿ ಹಾರಿಹೋಗತೊಡಗಿತು, ಕೂಡಲೇ

ಅನುಸೃಷ್ಟ ಸ್ತದಾ ಕಾಕೋ ಜಗಾಮ ವಿವಿಧಾಂ ಗತಿಂ।
ಲೋಕಕಾಮ ಇಮಂ ಲೋಕಂ ಸರ್ವಂ ವೈ ವಿಚಚಾರಹ ॥೩೨॥
ಸ ಪಿತ್ರಾ ಚ ಪರಿತ್ಯಕ್ತ, ಸ್ಸುರೈಶ್ಚ ಸಮಹರ್ಷಿಭಿಃ ।
ತ್ರೀನ್ ಲೋಕಾ ನ್ಸಂ ಪರಿಕ್ರಮ್ಯ ತಮೇವ ಶರಣಂಗತಃ ॥೩೩॥
ಸ ತಂ ನಿಪತಿತಂ ಭೂಮೌ ಶರಣ್ಯ ಶ್ಶರಣಾಗತಮ್ ।
ವಧಾರ್ಹ ಮಪಿ ಕಾಕುತ್ಸ ಃ ಕೃಪಯಾ ಪರ್ಯ್ಯಪಾಲಯತ್॥೩೪॥
ನ ಶರ್ಮ ಲಬ್ಧ್ವಾ ಲೋಕೇಷು ತಮೇವ ಶರಣಂ ಗತಃ ।

---

॥೩೧॥ ತದಾ - ಆಗ, ಕಾಕಃ - ವಾಯಸವು, ಅನುಸೃಷ್ಟಃ - ಬ್ರಹ್ಮಾಸ್ತ್ರದಿಂದ ಹಿಂಬಾಲಿಸಲ್ಪಟ್ಟದಾಗಿ, ವಿವಿಧಾಂ - ಬಗೆಬಗೆಯಾದ, ಗತಿಂ - ಗಮನವನ್ನು, (ಆಶ್ರಯಿಸಿ) ಜಗಾಮ - ಹೊರಟಿತು, ಲೋಕಕಾಮಃ - ರಕ್ಷಕಜನವನ್ನು ಕೋರುತಲಿರುವುದಾಗಿ, ಇಮಂ - ಈ ಮುಂದೆ ಹೇಳುವ, ಸರ್ವಂ - ಸಮಸ್ತವಾದ, ಲೋಕಂ - ಲೋಕವನ್ನು, ವಿಚಚಾರ - ಸಂಚರಿಸಿತು, ಹಾ - ಆಶ್ಚರ್ಯವು (ಕಷ್ಟವು) ॥೩೨॥ ಸಃ - ಆಕಾಗೆಯು, ಪಿತ್ರಾಚ - ತಂದೆಯಾದ ಇಂದ್ರನಿಂದಲೂ, (ತಾಯಿಯಿಂದಲೂ) ಸಮಹರ್ಷಿಭಿಃ - ಮಹರ್ಷಿಗಳಿಂದೊಡಗೂಡಿದ, ಸುರೈಶ್ಚ - ದೇವತೆಗಳಿಂದಲೂ, ಪರಿತ್ಯಕ್ತಃ ಬಿಡಲ್ಪಟ್ಟುದಾಗಿ, ತ್ರೀನ್ - ಮೂರಾದ, ಲೋಕಾನ್-ಸ್ವರ್ಗಮರ್ತ್ಯಪಾತಾಳಗಳನ್ನು, ಸಂಪರಿಕ್ರಮ್ಯ-ಸುತ್ತಿ, ತಮೇವ - ಆರಾಮನನ್ನೇ, ಶರಣಂ - ರಕ್ಷಕನನ್ನಾಗಿ, ಗತಃ - ಹೊಂದಿತು, ॥ ೩೩ ॥ ಕಾಕುತ್ಸ್ಥಃ - ಕಕುತ್ಸ್ಥನಸಂತತಿಯಲ್ಲಿ ಜನಿಸಿದ, ಶರಣ್ಯಃ - ಮರೆಹೊಕ್ಕವರನ್ನು ಕಾಪಾಡುವ, ಸಃ-ಆಶ್ರೀರಾಮನು, ವಧಾರ್ಹಮಪಿ - ಸಂಹಾರಕ್ಕೆ ತಕ್ಕುದಾಗಿದ್ದರೂ, ಭೂಮೌ - ಭೂಮಿಯಲ್ಲಿ, ನಿಪತಿತಂ - ಅಡ್ಡಬಿದ್ದ, ಶರಣಾಗತಂ - ಮರೆಹೊಕ್ಕ, ತಂ - ಆಕಾಗೆಯನ್ನು, ಕೃಪಯಾ - ದಯೆಯಿಂದ, ಪರ್ಯ್ಯಪಾಲಯತ್ - ಕಾಪಾಡಿದನು ॥ ೩೪॥ ॥ ಸಃ - ಆ ಕಾಗೆಯು, ಶರ್ಮ-ರಕ್ಷಣಸುಖವನ್ನು, ನಲಬ್ಧ್ವಾ ಪಡೆಯದೆ, ತಮೇವ - ಆ ರಾಮನನ್ನೇ, ಶರಣಂ - ರಕ್ಷಕನನ್ನಾಗಿ, ಗತಃ - ಹೊಂದಿತು, ಪರಿದ್ಯೂನಂ - ಪರಿತಾಪವನ್ನು ಹೊಂದಿರುವ, ವಿಷಣ್ಣಂ - ದುಃಖದಿಂದ ಖಿನ್ನವಾಗಿರುವ, ಆಯಾಂತಂ -

---

ಆ ಅಸ್ತ್ರವೂ ಆ ವಾಯಸವನ್ನು ಹಿಂದಟ್ಟಿನಡೆಯಿತು ॥೩೧॥ ॥ ಬ್ರಹ್ಮಾಸ್ತ್ರದಿಂದ ಅನುಸರಿಸಲ್ಪಟ್ಟ ವಾಯಸವು ರಕ್ಷಕರಾದ ಜನರನ್ನು ಅರಸುತ್ತ, ತಪ್ಪಿಸಿಕೊಳ್ಳಲು ಬಗೆಬಗೆಯಾದ ಗಮನವನ್ನು ಆಶ್ರಯಿಸಿ, ಸಮಸ್ತಲೋಕಗಳಲ್ಲಿಯೂ ಅಲೆಯುತ್ತಾ॥೩೨॥ ದಿಕ್ಕುಕಾಣದೆ, ತಂದೆಯಾದ ಇಂದ್ರನನ್ನು ಮರೆಹೊಗಲು, ರಾಮಬಾಣಕ್ಕೆ ಗುರಿಯಾದನಿನ್ನನ್ನು ಕಾಪಾಡಲು ನಾನು ಶಕ್ತನಲ್ಲ, ಎಂದ ಮಾತನ್ನುಕೇಳಿ ಬಳಿಕ ಸ್ವರ್ಗ ಮರ್ತ್ಯ ಪಾತಾಳ ಲೋಕಗಳೊಳಗೆ ದೇವತೆಗಳನ್ನೂ, ಮಹಾ ಮುನಿಗಳನ್ನೂ ಶರಣುಹೊಂದಿ,ಎಲ್ಲಿಯೂ ರಕ್ಷಕರನ್ನು ಕಾಣದೆ ಶ್ರೀರಾಮನನ್ನೇ ಶರಣುಹೊಂದಿತು ॥೩೩॥ಶರಣಾಗತ ಸಂರಕ್ಷಕನೆಂಬ ಬಿರುದನ್ನು ಪಡೆದ ಶ್ರೀರಾಮನು "ಅಶರಣ್ಯಶರಣ್ಯನೇ! ಸಂರಕ್ಷಿಸು" ಎಂದು ಇದಿರಿಗೆ ಭೂಮಿಯಲ್ಲಿ ಬಿದ್ದಿರುವ ವಾಯಸವನ್ನು ನೋಡಿ, ಮಹಾಪರಾಧಿಯಾಗಿ ಸಂಹಾರಕ್ಕೆ ಅರ್ಹವಾಗಿದ್ದರೂ ಅದನ್ನು ಕೊಲ್ಲದೆ ಕೃಪೆಯಿಂದ ಕಾಪಾಡಿದನು ॥೩೪॥ ಅದು ಹೇಗೆಎಂಬೆಯೋ? ಕೇಳು—ಆ ವಾಯಸವು ಯಾವಲೋಕಕ್ಕೆ ಹೋದರೂ, ಯಾರನ್ನು ಮರೆಬಿದ್ದು, ದೈನ್ಯವನ್ನು ತಾಳಿ,

ಪರಿದ್ಯೂನಂ ವಿಷಣ್ಣಂ ಚ ಸ ತ ಮಾಯಾಂತ ಮಬ್ರವೀತ್ ॥೩೫॥
ಮೋಘಂ ಕರ್ತುಂ ನ ಶಕ್ಯಂ ತು ಬ್ರಾಹ್ಮ ಮಸ್ತ್ರಂ ತದುಚ್ಯತಾಂ ।
ಹಿನಸ್ತು ದಕ್ಷಿಣಾಕ್ಷಿ ತ್ವ ಚ್ಛರ ಇತ್ಯಥ ಸೋಽಬ್ರವೀತ್ ॥೩೬॥
ತತ ಸ್ತಸ್ಯಾಕ್ಷಿ ಕಾಕಸ್ಯ ಹಿನಸ್ತಿ ಸ್ಮ ಸ ದಕ್ಷಿಣಮ್ ।
ದತ್ವಾ ಸ ದಕ್ಷಿಣಂ ನೇತ್ರಂ ಪ್ರಾಣೇಭ್ಯಃ ಪರಿರಕ್ಷಿತಃ ॥೩೭॥
ಸ ರಾಮಾಯ ನಮಸ್ಕೃತ್ವಾ ರಾಜ್ಞೇ ದಶರಥಾಯ ಚ ।
ವಿಸೃಷ್ಟ ಸ್ತೇನ ವೀರೇಣ ಪ್ರತಿಪೇದೆ ಸ್ವ ಮಾಲಯಮ್ ॥೩೮॥

ಬರುತಲಿರುವ, ತಂ - ಆಕಾಗೆಯನ್ನು ಕುರಿತು, ಅಬ್ರವೀತ್ - ಹೇಳತೊಡಗಿದನು॥ ೩೫॥ ಬ್ರಾಹ್ಮಂ - ಬ್ರಹ್ಮನೇದೇವತೆಯಾಗಿರುವ, ಅಸ್ತ್ರಂ - ಸಮಂತ್ರಕವಾದ ಆಯುಧವನ್ನು, ಮೋಘಂ - ವ್ಯರ್ಥವಾದುದನ್ನಾಗಿ, ಕರ್ತುಂ - ಮಾಡಲಿಕ್ಕೆ, ನಶಕ್ಯಂ - ಸಾಧ್ಯವಲ್ಲ, ತ್ವಚ್ಛರಃ - ನಿನ್ನ ಬಾಣವು, ದಕ್ಷಿಣಾಕ್ಷಿ- ಬಲದ ಕಣ್ಣನ್ನು, ಹಿನಸ್ತು - ಹಿಂಸಿಸಲಿ, (ತ್ವಯಾ-ನಿನ್ನಿಂದ) ಉಚ್ಯತಾಂ - ಹೇಳಲ್ಪಡಲಿ, ಅಥ-ಆ ಮೇಲೆ, ಸಃ - ಆ ಕಾಗೆಯು, ಇತಿ - ಈ ಹಿಂದೆ ಹೇಳಿದಂತೆ, ಅಬ್ರವೀತ್ - ಹೇಳಿತು ॥೩೬॥ ॥ ತತಃ- ಅನಂತರದಲ್ಲಿ, ಸಃ - ಆಶರವು, ತಸ್ಯ - ಆ, ಕಾಕಸ್ಯ - ಕಾಗೆಯ, ದಕ್ಷಿಣಂ - ಬಲಗಡೆಯದಾದ, ಅಕ್ಷಿ - ಕಣ್ಣನ್ನು, ಹಿನಸ್ತಿಸ್ಮ - ಹಿಂಸಿಸಿತು, ಸಃ - ಆ ವಾಯಸವು, ದಕ್ಷಿಣಂ - ಬಲಗಡೆಯದಾದ, ನೇತ್ರಂ - ಕಣ್ಣನ್ನು, (ಅಸ್ತ್ರಾಯ-ಬ್ರಹ್ಮಾಸ್ತ್ರಕ್ಕೋಸ್ಕರ) ದತ್ವಾ - ಕೊಟ್ಟು, ಪ್ರಾಣೇಭ್ಯಃ- ಪ್ರಾಣಗಳದೆಸೆಯಿಂದ, ಪರಿರಕ್ಷಿತಃ - ಸಂರಕ್ಷಿಸಲ್ಪಟ್ಟಿತು ॥ ೩೭ ॥ ॥ ಸಃ - ಆ ಕಾಗೆಯು, ರಾಮಾಯ-ರಾಮನಿಗೆ, ರಾಜ್ಞೇ - ದೊರೆಯಾದ ದಶರಥಾಯ - ದಶರಥನಿಗೂ, ನಮಃ - ನಮಸ್ಕಾರವನ್ನು, ಕೃತ್ವಾ - ಮಾಡಿ, ತೇನ-ಆ, ವೀರೇಣ - ಶೂರನಾದ ರಾಮನಿಂದ, ವಿಸೃಷ್ಟಃ - ಬಿಡಲ್ಪಟ್ಟುದಾಗಿ, ಸ್ವಂ - ಸ್ವಂತವಾದ, ಆಲಯಂ - ಸ್ಥಾನವನ್ನು, ಪ್ರತಿಪೇದೆ - ಹೊಂದಿತು ॥ ೩೮ ॥ ॥ (ರಾಮನನ್ನು

ರಕ್ಷಿಸೆಂದು ಕೈಯೊಡ್ಡಿದರೂ ರಕ್ಷಕರು ದೊರೆಯದೆ ಹೋದುದರಿಂದ, ಮರಳಿರಾಮನಿದಿರಿಗೆ ಬಂದು ತಪ್ತನಾಗಿ ಶರಣಹೊಂದಲು, ಅದನ್ನು ನೋಡಿ ರಾಮನಿಂತೆಂದನು॥೩೫॥ಎಲೈ ವಾಯಸವೇ ! ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ ಬಳಿಕ ಅದನ್ನು ಹಿಂದಿರುಗಿಸಲಿಕ್ಕಾಗಲಿ, ವ್ಯರ್ಥವಾಗಿ ಮಾಡಲಿಕ್ಕಾಗಲಿ ಸಾಧ್ಯವಲ್ಲ. ಅದರಿಂದ ಹೇಗೆ ಮಾಡಬೇಕೆಂಬುದನ್ನು ತಿಳಿಸು ಎಂದನು, ಆಗಲಾವಾಯಸವು ಎಲೈ ಆಪದ್ಬಂಧುವೇ ! ವ್ಯರ್ಥವಾಗದಿರುವ ನಿನ್ನ ಶರವು ನನ್ನ ಬಲಗಡೆಯ ಕಣ್ಣನ್ನು ಹಿಂಸಿಸಿ ಸಾರ್ಥಕವಾದುದಾಗಲಿ ಎಂದು ಬಿನ್ನವಿಸಿತು ॥೩೬॥ ॥ ತರುವಾಯ ಶ್ರೀರಾಮನು—ಬ್ರಹ್ಮಾಸ್ತ್ರದಿಂದ ಆ ವಾಯಸದ ಬಲಗಣ್ಣನ್ನುಹೊಡೆದು, ಪ್ರಾಣಗಳನ್ನುಳಿಸಿ ಸಂರಕ್ಷಿಸಿದನು॥೩೭॥ ॥ ಆಹಿಂದೆ ವಾಯಸರೂಪದ ಇಂದ್ರಪುತ್ರನು-ಶ್ರೀರಾಮನಿಗೂ, ತಾನು ಪೂರ್ವದಲ್ಲಿ ಸ್ವರ್ಗಲೋಕದಲ್ಲಿ ನೋಡಿದ ರಾಮನ ತಂದೆಯಾದ ದಶರಥನಿಗೂ ನಮಸ್ಕಾರವನ್ನು ಮಾಡಿ, ರಾಮನಿಂದ ಬಿಡುಗಡೆಯನ್ನು ಹೊಂದಿ ತನ್ನ ಸ್ಥಲಕ್ಕೆ ಹೊರಟು ಹೋದನು॥೩೮॥ಎಲೈ ರಾಮಚಂದ್ರನೇ!ಬಹುಶಕ್ತವಾಗಿರುವಪದಾರ್ಥದಮೇಲೆ ಪ್ರಯೋಗಿಸತಕ್ಕ ಬ್ರಹ್ಮಾಸ್ತ್ರವನ್ನು ಬಂದುಸಣ್ಣ ಕಾಗೆಯ ಮೇಲೆ ಕೋಪದಿಂದ ನನಗಾಗಿಪ್ರಯೋಗಿಸಿದೆಯಲ್ಲಾ ? ನನ್ನಲ್ಲಿ ಅಷ್ಟು ಪ್ರೇಮಭರವನ್ನಿಟ್ಟ ನಿನಗೆ ಈಗ ಇಷ್ಟು ಅಸಡ್ಡೆಯುಂಟಾಗಲು

ಮತ್ಕೃತೇ ಕಾಕಮಾತ್ರೇತು ಬ್ರಹ್ಮಾಸ್ತ್ರಂ ಸಮುದೀರಿತಮ್ ।
ಕಸ್ಮಾದ್ಯೋ ಮಾಂ ಹರತ್ತ್ವತ್ತಃ ಕ್ಷಮಸೇ ತಂ ಮಹೀಪತೇ ॥೩೯॥
ಸ ಕುರುಷ್ವ ಮಹೋತ್ಸಾಹಃ ಕೃಪಾಂ ಮಯಿ ನರರ್ಷಭ ।
ತ್ವಯಾ ನಾಥವತೀ ನಾಥ ಹ್ಯನಾಥೇವ ಹಿ ದೃಶ್ಯತೆ ॥೪೦॥
ಆನೃಶಂಸ್ಯಂ ಪರೋ ಧರ್ಮ ಸ್ತ್ವತ್ತ ಏವ ಮಯಾ ಶ್ರುತಃ ।
ಜಾನಾಮಿ ತ್ವಾಂ ಮಹಾವೀರ್ಯಂ ಮಹೋತ್ಸಾಹಂ ಮಹಾಬಲಂ ೪೧॥
ಅಪಾರ ಪಾರ ಮಕ್ಷೋಭ್ಯಂ ಗಾಂಭೀರ್ಯಾ ತ್ಸಾಗರೋಪಮಮ್ ।

ಇದಿರಿಗೆ ಸಂಬೋಧಿಸಿದಂತೆ ಹೇಳುತ್ತಾಳೆ ) ಹೇಮಹೀಪತೇ - ಎಲೈದೊರೆಯೇ !, ಮತ್ಕೃತೇ - ನನಗೋಸ್ಕರ, ಕಾಕಮಾತ್ರೆ - ಅಲ್ಪವಾದ ಕಾಗೆಯಲ್ಲಿಯೇ, ಬ್ರಹ್ಮಾಸ್ತ್ರಂ - ಕ್ರೂರವಾದ ಬ್ರಹ್ಮಾಸ್ತ್ರವು, (ತ್ವಯಾ - ನಿನ್ನಿಂದ) ಸಮುದೀರಿತಂ - ಪ್ರಯೋಗಿಸಲ್ಪಟ್ಟಿತು, ಯಃ- ಯಾವನು, ಮಾಂ - ನನ್ನನ್ನು, ತ್ವತ್ತಃ - ನಿನ್ನ ದೆಶೆಯಿಂದ, ಹರತ್ (ಅಹರತ್) ಎತ್ತಿಕೊಂಡು ಹೋದನೋ, ತಂ - ಅವನನ್ನು, ಕಸ್ಮಾತ್ - ಯಾವಕಾರಣದಿಂದ, (ತ್ವಂ-ನೀನು) ಕ್ಷಮಸೆ - ಸಹಿಸಿಇದ್ದೀಯೆ?, ॥೩೯॥ ನರರ್ಷಭ - ಎಲೈ ಪುರುಷೋತ್ತಮನೇ !, ಮಹೋತ್ಸಾಹಃ - ಹೆಚ್ಚಾದ ಹರ್ಷವುಳ್ಳ, ಸಃ - ಅಂತಹ ಮಹಾನುಭಾವನಾದ, (ತ್ವಂ - ನೀನು) ಮಯಿ - ನನ್ನಲ್ಲಿ, ಕೃಪಾಂ - ದಯೆಯನ್ನು, ಕುರುಷ್ವ - ಮಾಡು, ನಾಥ - ಎಲೈ ಪ್ರಾಣನಾಥನೇ !, ತ್ವಯಾ - ನಿನ್ನಿಂದ, ನಾಥವತೀ- ಸಂರಕ್ಷಕಪತಿಯುಳ್ಳ ಸೀತೆಯಲ್ಲವೆ ?, ಅನಾಥೇವ - ದಿಕ್ಕಿಲ್ಲದವಳಂತೆ, (ಜನೈಃ - ಜನಗಳಿಂದ) ದೃಶ್ಯತೇಹಿ - ಹೀಗೆ ಕೋ ತಿಳಿಯಲ್ಪಡುತ ಇದೆಯಲ್ಲ ? ॥೪೦॥ ಮಯಾ - ನನ್ನಿಂದ, ಆನೃಶಂಸ್ಯಂ - ಪರಹಿಂಸೆ ಮಾಡಬಾರದೆಂಬ, ಪರಃ - ಉತ್ತಮವಾದ, ಧರ್ಮಃ - ಧರ್ಮವು, ತ್ವತ್ತ ಏವ - ನಿನ್ನಿಂದಲೇ, ಶ್ರುತಃ - ಕೇಳಲ್ಪಟ್ಟದೆ, ತ್ವಾಂ - ನಿನ್ನನ್ನು, ಮಹಾವೀರ್ಯಂ - ಬಹುಪರಾಕ್ರಮಶಾಲಿಯನ್ನಾಗಿಯೂ, ॥೪೧॥ ಅಪಾರಪಾರಂ - ಕೊನೆಗಾಣದ ಗುಣಗಳಮೇರೆಯುಳ್ಳವನನ್ನಾಗಿಯೂ, ಅಕ್ಷೋಭ್ಯಂ - ಹೆರರಿಂದ ತಿರಸ್ಕರಿಲಶಕ್ಯನನ್ನಾಗಿಯೂ, ಗಾಂಭೀರ್ಯಾತ್ - ಗಾಂಭೀರ್ಯಗುಣದಿಂದ, ಸಾಗರೋಪಮಂ - ಸಮುದ್ರಕ್ಕೆಣೆಯಾದವ ನನ್ನಾಗಿಯೂ,

ಕಾರಣವೇನು? ಈ ದುಷ್ಟ ರಾಕ್ಷಸರನ್ನು ಧ್ವಂಸಮಾಡದಿರಲು ನಿಮಿತ್ತವೇನು? ಘೋರವಾದ ದುಃಖಕ್ಕೆ ಈಡಾಗಿರುವ ನನ್ನಲ್ಲಿ ದಯೆತೋರಿ ಸಂರಕ್ಷಿಸಬಾರದೆ ? ಇಂತಪರಿಮಿತ ಬಾಹುಬಲ ಸಂಪನ್ನನಾದ ನೀನು ನನಗೆ ನಾಥನಾಗಿರುವಲ್ಲಿ, ಅನಾಥಳಂತೆ ನಾನು ಹೆರರ ಹಿಂಸೆಗೆ ಒಳಗಾಗಿರುವೆನಲ್ಲ ॥೪೦॥ ॥ „ಪರರನ್ನು ಹಿಂಸಿಸದಿರೋಣವೇ ಅತ್ಯುತ್ತಮವಾದ ಧರ್ಮವು„ ಎಂದು ನೀನೇ ನನ್ನೊಡನೆ ಹೇಳ ಇವಲಿಲ್ಲವೆ? ನೀನು ಸಮರ್ಥನಾಗಿದ್ದರೂ ನನಗೆ ಇಂತಹ ಆಪತ್ತು ಸಂಭವಿಸಿರುವಲ್ಲಿ, ಉಪೇಕ್ಷೆಮಾಡುವುದರಿಂದ ನೀನೇ ನನ್ನನ್ನು ಹಿಂಸಿಸಿದಂತೆ ಆಗಲಿಲ್ಲವೆ? ನಾನು ಶಕ್ತನೆಂಬುದನ್ನು ನೀನು ಹೇಗೆಬಲ್ಲೆ ಎಂಬೆಯೋ? ನಿನ್ನಯ ವೀರ್ಯ, ಉತ್ಸಾಹ, ಬಲ, ಗಾಂಭೀರ್ಯ, ಮುಂತಾದ ಅಪಾರ ಗುಣರಾಶಿಯನ್ನು ಹೆರರಿಂದ ಕೇಳಿರುವುದಲ್ಲದೆ, ಖರಾಸುರನೇ ಮೊದಲಾದವರನ್ನು ಸಂಹರಿಸುವಾಗ ಪ್ರತ್ಯಕ್ಷದಲ್ಲಿಯೇ ನೋಡಿ ಇಲ್ಲವೆ?॥೪೧॥ ನಿನ್ನ ಆಳವೇ ಮತ್ತೊಬ್ಬರಿಗೆ ತಿಳಿಯದು, ನಿನ್ನನ್ನು ತಿರಸ್ಕರಿಸಲು ಯಾವನೂ ಶಕ್ತನಲ್ಲ, ನಿನ್ನ ಗಾಂಭೀರ್ಯವು ಸಾಗರದಂತೆ ಶೋಭಿಸುವುದಲ್ಲ, ? ಕಡಲಿನಿಂದ

ಭರ್ತಾರಂ ಸ ಸಮುದ್ರಾಯಾ ಧರಣ್ಯಾ ವಾಸವೋಪಮಮ್ ॥೪೦॥
ಏವ ಮಸ್ತ್ರ ವಿದಾಂ ಶ್ರೇಷ್ಠ ಸ್ಸತ್ಯವಾ ನ್ಬಲವಾ ನಪಿ ।
ಕಿಮರ್ಥ ಮಸ್ತ್ರಂ ರಕ್ಷಸ್ಸು ನ ಯೋಜಯತಿ ರಾಘವಃ ॥೪೧॥
ನ ನಾಗಾ ನಾಪಿ ಗಂಧರ್ವಾ ನಾಸುರಾ ನ ಮರುದ್ಗಣಾಃ ।
ರಾಮಸ್ಯ ಸಮರೇ ವೇಗಂ ಶಕ್ತಾಃ ಪ್ರತಿ ಸಮಾಧಿತುಮ್ ॥೪೨॥
ತಸ್ಯ ವೀರ್ಯವತಃ ಕಶ್ಚಿ ದ್ಯದ್ಯಸ್ತಿ ಮಯಿ ಸಂಭ್ರಮಃ ।
ಕಿಮರ್ಥಂ ನ ಶರೈ ಸ್ತೀಕ್ಷ್ಣೈಃ ಕ್ಷಯಂ ನಯತಿ ರಾಕ್ಷಸಾನ್ ॥೪೩॥

ಸಸಮುದ್ರಾಯಾಃ - ಸಮುದ್ರದಿಂದೊಡಗೂಡಿರುವ, ಧರಣ್ಯಾಃ - ಭೂಮಿಗೆ, ಭರ್ತಾರಂ - ಸ್ವಾಮಿಯು ನ್ನಾಗಿಯೂ, ಜಾನಾಮಿ - ತಿಳಿದವಳಾಗಿದೇನೆ ॥೪೦॥

ರಾಘವಃ - ಶ್ರೀರಾಮನು, ಏವಂ - ಈ ಪ್ರಕಾರವಾಗಿ, ಅಸ್ತ್ರವಿದಾಂ - ಅಸ್ತ್ರವಿದ್ಯೆಯ ನ್ನು ಬಲ್ಲವರೊಳಗೆ, ಶ್ರೇಷ್ಠಃ - ಉತ್ತಮನೆನಿಸಿ, ಸತ್ಯವಾಕ್ - ಸತ್ಯವಚನನಾಗಿ, ಬಲವಾನಪಿ - ಬಲಿಷ್ಠನೂ ಆಗಿದ್ದಾಗ್ಯೂ, ರಕ್ಷಸ್ಸು - ರಾಕ್ಷಸರಲ್ಲಿ, ಅಸ್ತ್ರಂ - ಬಾಣವನ್ನು, ಕಿಮರ್ಥಂ - ಏತಕ್ಕೋಸ್ಕರ, ನಯೋಜಯತಿ - ಸಂಧಾನಮಾಡದಿರುವನು ?, ॥೪೧॥ ನಾಗಾಃ - ನಾಗರೆಂಬ ದೇವತಾ ಭೇದವರು, ಸಮರೆ - ಯುದ್ಧದಲ್ಲಿ ರಾಮಸ್ಯ - ಶ್ರೀರಾಮನ, ವೇಗಂ - ಬಾಣವೇಗವನ್ನು, ಪ್ರತಿ ಸಮಾಧಿತುಂ - ತಡೆಯಲಿಕ್ಕೆ, ಶಕ್ತಾಃ - ಸಮರ್ಥರೆನಿಸಿದವರು, ನ [ಭವಂತಿ] - ಆಗಲಾರರು, ಗಂಧರ್ವಾ ಅಪಿ - ಗಂಧರ್ವರೂ, ನ - ಆಗಲರಿಯರು, ಅಸುರಾಃ - ರಾಕ್ಷಸರೂ, ನ - ಸಮರ್ಥರಲ್ಲ, ಮರುದ್ಗಣಾಃ - ದೇವತಾ ಸಮೂಹಗಳೂ, ನ - ಶಕ್ತಗಳಲ್ಲ ॥೪೨॥ ವೀರ್ಯವತಃ - ಪರಾಕ್ರಮಶಾಲಿಯಾಗಿರುವ, ತಸ್ಯ ಆ ಶ್ರೀರಾಮನಿಗೆ, ಮಯಿ - ನನ್ನಲ್ಲಿ, ಕಶ್ಚಿತ್ - ಸ್ವಲ್ಪವಾದರೂ, ಸಂಭ್ರಮಃ - ಪ್ರೇಮವು, ಅಸ್ತಿ ಯದಿ - ಇದ್ದದೇ ಆದರೆ, ರಾಕ್ಷಸಾನ್ - ರಕ್ಕಸರನ್ನು, ತೀಕ್ಷ್ಣೈಃ - ಮೊನೆಯುಳ್ಳ, ಶರೈಃ - ಬಾಣಗಳಿಂದ, ಕಿಮರ್ಥಂ - ಏತಕ್ಕೋಸ್ಕರ, ಕ್ಷಯಂ - ನಾಶವನ್ನು, ನನಯತಿ - ಹೊಂದಿಸದೆ ಇದಾನೆ ? ॥೪೩॥ ವಾ - ಅಥವಾ, ವೀರಃ - ಶೂರನಾದ ಕಾರಣವೇ, ಪರಂತಪಃ-ಶತ್ರುಸಂಹಾರಕನಾಗಿರುವ

ಬಳಸಲ್ಪಟ್ಟ ಪೊಡವಿಗೆಲ್ಲ ನೀನೇ ಒಡೆಯು. ಹೀಗಿದ್ದರೂ ನನ್ನನ್ನು ಉಪೇಕ್ಷಮಾಡತಕ್ಕುವುದು ಧರ್ಮವಲ್ಲ ॥೪೦॥ ॥ ಎಲೈ ಮಾರುತಿಯೇ! ರಾಮನು ನನ್ನಲ್ಲಿ ಪ್ರೇಮವುಳ್ಳವನಾದರೂ ಸಕಲ ಶಸ್ತ್ರಾಸ್ತ್ರಗಳನ್ನು ಬಲ್ಲವನಾಗಿದ್ದರೂ, ಸತ್ಯವಂತನೂ ಬಲಶಾಲಿಯೂ ಆಗಿದ್ದರೂ, ಆ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿ ರಕ್ಕಸರ ಹುಟ್ಟನ್ನು ಅಡಗಿಸಲಿಲ್ಲವೇಕೆ ? ೪೧॥ ॥ ನಾಗರು, ಗಂಧರ್ವರು, ಸುರರು, ಅಸುರರು, ಮರುತ್ತುಗಳೂ ರಣಾಂಗಣದಲ್ಲಿ ರಾಮನ ಬಾಣವೇಗವನ್ನು ನಿಮಿಷಮಾತ್ರವಾದರೂ ತಾಳಲಾರರು ॥೪೨॥ ॥ ರಾಮನಿಗೆ ನನ್ನಲ್ಲಿ ಪ್ರೇಮವಿಲ್ಲವೆಂದಾಗಲಿ, ಅಥವಾ ರಕ್ಕಸರನ್ನು ಕೊಲ್ಲಲು ಶಕ್ತಿಯಿಲ್ಲವೆಂತಲಾಗಲಿ ಹೇಳಬೇಕು, ಆದರೆ ಪೂರ್ವೋಕ್ತಪ್ರಕಾರದಿಂದ ಶಕ್ತಿಯಿಲ್ಲದವನೆಂದು ಹೇಳಲಳವಲ್ಲ, ನನ್ನಲ್ಲಿ ಪ್ರೇಮವಿಲ್ಲವೆಂದೇ ಹೇಳಬೇಕು, ಏತಕೆಂದರೆ- ನನ್ನಲ್ಲಿ ಪ್ರೇಮವಿರುವುದೇ ದಿಟವಾಗಿದ್ದ ಪಕ್ಷದಲ್ಲಿ ರಾಕ್ಷಸರ ಮೇಲೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸದಿರಲು ಕಾರಣವೇನು ? ನನ್ನನ್ನು ಸಲಹದಿರಲು ಇದೇ ಕಾರಣವಾಗಿದೆ ॥೪೩॥ ॥ ಅಥವಾ- ರಾಮನೇ ಬರಬೇಕೆಂಬ

ಭ್ರಾತು ರಾದೇಶ ಮಾದಾಯ ಲಕ್ಷ್ಮಣೋ ವಾ ಪರಂತಪಃ ।
ಕಸ್ಯ ಹೇತೋ ರ್ನ ಮಾಂ ವೀರಃ ಪರಿತ್ರಾತಿ ಮಹಾಬಲಃ ॥೪೬॥
ಯದಿ ತೌ ಪುರುಷವ್ಯಾಘ್ರೌ ವಾಯ್ವಗ್ನಿ ಸಮತೇಜಸೌ ।
ಸುರಾಣಾ ಮಪಿ ದುರ್ಧರ್ಷೌ ಕಿಮರ್ಥಂ ಮಾ ಮುಪೇಕ್ಷತಃ ॥೪೭॥
ಮಮೈವ ದುಷ್ಕೃತಂ ಕಿಂಚಿ ನ್ಮಹದಸ್ತಿ ನ ಸಂಶಯಃ ।
ಸಮರ್ಥಾ ವಪಿ ತೌ ಯನ್ಮಾಂ ನಾವೇಕ್ಷೇತೇ ಪರಂತಪೌ॥೪೮॥
ವೈದೇಹ್ಯಾ ವಚನಂ ಶ್ರುತ್ವಾ ಕರುಣಂ ಸಾಶ್ರುಭಾಷಿತಂ ।

---

ಲಕ್ಷ್ಮಣೋವಾ - ಸೌಮಿತ್ರಿಯಾದರೂ, ಭ್ರಾತುಃ - ಅಣ್ಣನ, ಆದೇಶಂ - ಅಪ್ಪಣೆಯನ್ನು, ಆದಾಯ - ತೆಗೆದುಕೊಂಡು, ಕಸ್ಯ - ಯಾವ, ಹೇತೋಃ - ನಿಮಿತ್ತದಿಂದ, ಮಾಂ - ನನ್ನನ್ನು, ನಪರಿತ್ರಾತಿ (ಪರಿತ್ರಾಯತೆ) - ಕಾಪಾಡದಿರುವನು ? ॥೪೬॥ ಪುರುಷವ್ಯಾಘ್ರೌ - ಪುರುಷ ಶ್ರೇಷ್ಠರೆನಿಸಿದ, ವಾಯ್ವಗ್ನಿಸಮತೇಜಸೌ - ವಾಯುಮತ್ತು ಅಗ್ನಿಗಳೊಡನೆ ಸಮಾನವಾದ ಬಲತೇಜಗಳುಳ್ಳ, ಸುರಾಣಾಮಪಿ - ದೇವತೆಗಳಿಗೂ, ದುರ್ಧರ್ಷೌ - ಅತಿಕ್ರಮಿಸಲಸದಳರೆನಿಸಿದ, ತೌ - ಆರಾಮಲಕ್ಷ್ಮಣರು, ಸಂಗತೌಯದಿ - ನನ್ನಲ್ಲಿ ಸಮಾನವಾದ ಪ್ರೀತಿಯುಳ್ಳವರಾಗಿದ್ದರೆ, ಮಾಂ - ನನ್ನನ್ನು, ಕಿಮರ್ಥಂ - ಏತಕ್ಕೋಸ್ಕರ, ಉಪೇಕ್ಷತಃ (ಉಪೇಕ್ಷೇತೆ) ಅಸಡ್ಡೆಮಾಡಿದಾರೆ ? ॥೪೭॥ ಯತ್ - ಯಾವಕಾರಣ, ಪರಂತಪೌ - ಶತ್ರುಸಂಹಾರಕರಾಗಿರುವ, ತೌ - ಆರಾಮ ಲಕ್ಷ್ಮಣರು, ಸಮರ್ಥಾವಪಿ - ಶಕ್ತರಾಗಿದ್ದಾಗ್ಯೂ, ಮಾಂ - ನನ್ನನ್ನು, ನಾವೇಕ್ಷೇತೆ - ಉಪೇಕ್ಷೆಮಾಡಿರುವರೋ, ತತ್ - ಆಕಾರಣದಿಂದಲೇ, ಕಿಂಚಿತ್-ಯಾವುದೋಒಂದು, ಮಮ - ನನ್ನ, ಮಹತ್-ದೊಡ್ಡದಾದ, ದುಷ್ಕೃತಮೇವ - ಪಾಪವೇ, ಅಸ್ತಿ-ಉಂಟು, ಸಂಶಯಃ - ಸಂದೇಹವು, ನ - ಇಲ್ಲ, ॥೪೮॥ ಮಾರುತಾತ್ಮಜಃ - ವಾಯುಪುತ್ರನಾದ, ಮಹಾತೇಜಾಃ - ಬಹುಪ್ರತಾಪವುಳ್ಳ, ಹನುಮಾನ್ - ಆಂಜನೇಯನು, ವೈದೇಹ್ಯಾಃ - ಜಾನಕಿಯ, ಸಾಶ್ರುಭಾಷಿತಂ - ಕಣ್ಣೀರಿನಿಂದೊಡಗೂಡಿ ನುಡಿಯುತಲಿರುವ, ಕರುಣಾ- ದೀನವಾದ, ವಚನಂ-ಮಾತನ್ನು

---

ನಿಯಮವೇನೂ ಇಲ್ಲ, ಮಹಾಬಲಶಾಲಿಯಾಗಿ,ಶತ್ರುಸಂಹಾರಕನೆನಿಸಿದ ಲಕ್ಷ್ಮಣನಾದರೂ ಅಣ್ಣನ ಅನುಜ್ಞೆಯನ್ನು ಪಡೆದು ಬಂದು, ರಕ್ಕಸರನ್ನು ಸೀಳಿ, ನನ್ನನ್ನು ರಕ್ಷಿಸಬಾರದೆ? ಇದಕ್ಕೆಲ್ಲ ಏನೋ ಒಂದು ಕಾರಣವಿರಬೇಕು. ಆದರೆ-ಅದು ಇಂಥದೆಂದು ನಾನು ನಿರ್ಧರಿಸಿ ಹೇಳಲಾರೆನು ॥೪೬॥ ॥ ವಾಯುವಿನ ಸಹಾಯದಿಂದ ಅಗ್ನಿಯು ಪ್ರಪಂಚವನ್ನು ಸುಡುವ ಹಾಗೆ, ಲಕ್ಷ್ಮಣನ ಸಹಾಯವನ್ನು ಪಡೆದಿರುವ ರಾಮನು ಶತ್ರು ಸಮೂಹವನ್ನೆಲ್ಲ ಸುಡಬಲ್ಲನು. ಇಂದ್ರಾದಿ ದೇವತೆಗಳೂ ಕೂಡ ರಾಮಲಕ್ಷ್ಮಣರ ಇದಿರಿನಲ್ಲಿ ನಿಲ್ಲಲಾರರು. ಇಂತಹ ಸಾಮರ್ಥ್ಯವುಳ್ಳವರಾದರೂ ನನ್ನನ್ನು ಉಪೇಕ್ಷಿಸಿ ಇದಾರೆ, ಇದರಿಂದ ವಿಚಾರಿಸಿ ನೋಡಿದರೆ,ಇಂತಹ ಆಪದವನ್ನು ಹೊಂದಲಿಕ್ಕೆ ನಾನು ಜನ್ಮಾಂತರದಲ್ಲಿ ಯಾವುದೋ ಒಂದು ಪ್ರಬಲವಾದ ಪಾಪಕಾರ್ಯವನ್ನು ಮಾಡಿ ಇರಬೇಕೆಂದು ಖಂಡಿತವಾಗಿಯೂ ಗೊತ್ತಾಗುತಲಿದೆ, ಈ ವಿಷಯದಲ್ಲಿ ಸಂಶಯವೇ ಇಲ್ಲವು ॥೪೭॥ ॥೪೮॥ ॥ ಹೀಗೆ ಪಾರವೇ ಇಲ್ಲದೆ ಪರಂಪರೆಯಾಗಿ ಹಂಬಲಿಸುತ್ತಾ, ಕಣ್ಣೀರನ್ನು ಧಾರಾಳವಾಗಿ ಕರೆಯುತ್ತಾ, ಬಹು ದೈನ್ಯವನ್ನು ತೋರುತ್ತಾ, ಗದ್ಗದ ಕಂಠಿಯಾಗಿ, ತೊದಲಿ ತೊದಲಿ, ಬಿಕ್ಕಿ ಬಿಕ್ಕಿ, ಗೋಳಾಡುತ

ಅಥಾಬ್ರವೀನ್ಮಹಾತೇಜಾ ಹನುಮಾನ್ಮಾರುತಾತ್ಮಜಃ ॥೩೬॥
ತ್ವಚ್ಛೋಕವಿಮುಖೋ ರಾಮೋ ದೇವಿ ಸತ್ಯೇನ ಮೇ ಶಪೇ ।
ರಾಮೇ ದುಃಖಾಭಿಪನ್ನೇ ಚ ಲಕ್ಷ್ಮಣಃ ಪರಿತಪ್ಯತೇ ॥೫೦॥
ಕಥಂಚಿದ್ಭವತೀ ದೃಷ್ಟಾ ನ ಕಾಲಃ ಪರಿಶೋಚಿತುಂ ।
ಇಮಂ ಮುಹೂರ್ತಂ ದುಃಖಾನಾಂ ದ್ರಕ್ಷ್ಯಸ್ಯಂತಮನಿಂದಿತೇ ॥೫೧॥
ತಾವುಭೌ ಪುರುಷವ್ಯಾಘ್ರೌ ರಾಜಪುತ್ರೌ ಮಹಾಬಲೌ ।

ಶ್ರುತ್ವಾ - ಕೇಳಿ, ಅಥ-ಅನಂತರದಲ್ಲಿ, ಅಬ್ರವೀತ್ - ಹೇಳತೊಡಗಿದನು ॥ ೪೯ ॥ ॥ ದೇವಿ-ಎಲೌ ಜಾನಕಿಯೆ !, ರಾಮಃ - ಶ್ರೀರಾಮನು, ತ್ವಚ್ಛೋಕವಿಮುಖಃ - ನಿನ್ನ ಅಗಲಿಕೆಯ ದುಃಖದಿಂದ ಕಳೆಗುಂದಿದಾನೆ, ರಾಮೇ - ಶ್ರೀರಾಮನು, ದುಃಖಾಭಿಪನ್ನೇ (ಸತಿ) ಶೋಕದಿಂದೊಡಗೂಡಿರಲಾಗಿ, ಲಕ್ಷ್ಮಣಶ್ಚ - ಸೌಮಿತ್ರಿಯೂ, ಪರಿತಪ್ಯತೇ - ಸಂತಪಿಸುತಲಿರುವನು, ಸತ್ಯೇನ - ಸತ್ಯದಿಂದ, ಮೇ - ನನ್ನಮೇಲೆ, - ಶಪೇ - ಆಣೆಯನ್ನಿಟ್ಟುಕೊಳ್ಳುತ್ತೇನೆ, ॥೫೦॥ ॥ಅನಿಂದಿತೇ- ದೋಷಲೇಶವಿಲ್ಲದ ಓದೇವಿಯೆ !(ಇತಃಪರಂ - ಇನ್ನುಮೇಲೆ) ಪರಿಶೋಚಿತುಂ - ದುಃಖಿಸಲಿಕ್ಕೆ, ಕಾಲಃ - ಸಮಯವು, ನ - ಇಲ್ಲವು, ಕಥಂಚಿತ್ - ಬಹುಪ್ರಯಾಸದಿಂದ, ಭವತೀ - ಪೂಜ್ಯಳಾದ, ತ್ವಂ - ನೀನು, ದೃಷ್ಟಾ - (ನನ್ನ ಮೂಲಕ ಇಲ್ಲಿರುವೆ ಎಂದು) ತಿಳಿಯಲ್ಪಟ್ಟವಳಾಗಿ, ಇಮಂಮುಹೂರ್ತಂ - ಇನ್ನು ಸ್ವಲ್ಪ ಕಾಲದಲ್ಲಿಯೇ, ದುಃಖಾನಾಂ - ಶೋಕಗಳ, ಅಂತಂ - ಪಾರವನ್ನು, ದ್ರಕ್ಷ್ಯಸಿ - ಕಾಣುವೆ, ॥೫೧॥ ಪುರುಷವ್ಯಾಘ್ರೌ- ಪುರುಷಶ್ರೇಷ್ಠರೆನಿಸಿದ, ಮಹಾಬಲೌ - ಬಹು ಪರಾಕ್ರಮಶಾಲಿಗಳಾಗಿರತಕ್ಕ, ರಾಜಪುತ್ರೌ - ರಾಜಕುಮಾರರಾದ, ತೌ -

ರುವುದನ್ನು ನೋಡಿ, ಕೇಳಿ, ಆಂಜನೇಯನು ಬಲುಮನನೊಂದು, ಕಳವಳಿಸಿ, ತಾನೂ ಆಕೆಯ ಜೊತೆಗೆ ದುಃಖಿಸತೊಡಗಿದರೆ ಶೋಕಕ್ಕೆ ಪಾರವೇ ಇಲ್ಲದಂತಾಗುವುದು, ಅಯ್ಯೋ! ಲೋಕದಲ್ಲಿ-ಸ್ವಾಮಿ, ಬಂಧು, ಮಿತ್ರರಿಗೆ ಆಪತ್ತು ಬಂದಾಗ ಸಮಾಧಾನವನ್ನುಂಟುಮಾಡುವ ಬಗೆಯಾವುದೋ ನನಗೆ ಗೊತ್ತಿಲ್ಲವಲ್ಲಾ, ದುಃಖಿಸಬೇಡವೆಂದರೆ, ಕಠಿನವಾಗುವುದು, ಮತ್ತಷ್ಟು ದುಃಖಿಸುವಂತೆ ಹೇಳಿದರೆ ಜನರು ನಿಂದಿಸುವರು, ಸಂಗಡ ನಾವೂ ದುಃಖಿಸತೊಡಗಿದರೆ ದುಃಖವು ಮತ್ತಷ್ಟು ಹೆಚ್ಚುವುದು, ಸುಮ್ಮನಿದ್ದರೆ ಕಠಿನಹೃದಯನೆಂಬರು, ಆದುದರಿಂದ ದಾರಿಯೇ ತೋರುವುದಿಲ್ಲ ಎಂದುಕೊಂಡು ಮರಳಿ ಇಂತೆಂದನು ॥೪೯॥ ॥ ಎಲೌ ಮಾತೆಯೇ ! ನನ್ನ ಮೇಲೆ ಆಣೆಯನ್ನಿಟ್ಟುಕೊಂಡು ಹೇಳುತ್ತೇನೆ, ರಾಮನು ನಿನ್ನನ್ನು ಅಗಲಿ ಇರುವುದರಿಂದ ಅಪಾರವಾದ ದುಃಖಕ್ಕೆ ಈಡಾಗಿ, ತನ್ನ ಶರೀರ ಸಂರಕ್ಷಣೆಯಲ್ಲಿಯೂ ಜ್ಞಾನವಿಲ್ಲದವನಾಗಿದಾನೆ ಆತನ ದುಃಖವನ್ನು ನೋಡಿ ಲಕ್ಷ್ಮಣನ ಸಂತಾಪಕ್ಕೆ ಪಾರವೇ ಇಲ್ಲ ॥೫೦॥ ॥ ಎಲೌ ತಾಯೇ! ನಾನು ಬಹು ಕಷ್ಟಪಟ್ಟು ನಿನ್ನ ದರ್ಶನವನ್ನು ಮಾಡಿಇದೇನೆ, ಇನ್ನು ನೀನು ದುಃಖಪಡಬೇಕಾದ ಕಾರಣವಿಲ್ಲ, ಆ ಕಾಲವು ತೊಲಗಿತು, ಇನ್ನು ಬಹು ಸ್ವಲ್ಪಕಾಲದಲ್ಲಿಯೇ ರಾಮಲಕ್ಷ್ಮಣರು ಬಂದು ರಕ್ಕಸರನ್ನೆಲ್ಲ ಬಲಿಕೊಟ್ಟು ನಿನ್ನನ್ನು ಕರೆದುಕೊಂಡು ಹೋಗುವರು. ಆಗ್ಯೆ ನಿನ್ನ ದುಃಖಗಳೆಲ್ಲವೂ ಸಂಪೂರ್ಣವಾಗಿ ಪರಿಹಾರವಾಗುವುವು, ಅದುವರೆಗೂ ಸ್ವಲ್ಪ ತಾಳ್ಮೆಯಿಂದಿರು ॥೫೧॥ ॥ ದಶರಥನಂದನರಾದ ರಾಮಲಕ್ಷ್ಮಣರು-ಅಪರಿಮಿತ ಬಾಹುಬಲ ಸಂಪನ್ನರು,ಪುರುಷೋತ್ತಮರೆನಿಸಿ

ತ್ವದ್ದರ್ಶನ ಕೃತೋತ್ಸಾಹೌ ಲಂಕಾಂ ಭಸ್ಮೀಕರಿಷ್ಯತಃ ||೫೨||
ಹತ್ವಾ ಚ ಸಮರೇ ಕ್ರೂರಂ ರಾವಣಂ ಸಹ ಬಾಂಧವಂ |
ರಾಘವ ಸ್ತ್ವಾಂ ವಿಶಾಲಾಕ್ಷಿ ನೇಷ್ಯತಿ ಸ್ವಾಂ ಪುರೀಂ ಪ್ರತಿ||೫೩||
ಬ್ರೂಹಿ ಯದ್ರಾಘವೋ ವಾಚ್ಯೋ ಲಕ್ಷ್ಮಣಶ್ಚ ಮಹಾಬಲಃ |
ಸುಗ್ರೀವೋ ವಾಽಪಿ ತೇಜಸ್ವೀ ಹರಯೋಽಪಿ ಸಮಾಗತಾಃ ||೫೪||
ಇತ್ಯುಕ್ತವತಿ ತಸ್ಮಿಂಶ್ಚ ಸೀತಾ ಸುರ ಸುತೋಪಮಾ |
ಉವಾಚ ಶೋಕ ಸಂತಪ್ತಾ ಹನುಮಂತಂ ಪ್ಲವಂಗಮಂ ||೫೫||

---

ಆರಾಮಲಕ್ಷ್ಮಣರು, ತ್ವದ್ದರ್ಶನ ಕೃತೋತ್ಸಾಹೌ - ನಿನ್ನನ್ನು ನೋಡುವುದರಲ್ಲಿ ಕುತೂಹಲವುಳ್ಳವರಾಗಿ, ಲಂಕಾಂ - ಲಂಕಾಪಟ್ಟಣವನ್ನು, ಭಸ್ಮೀಕರಿಷ್ಯತಃ - ಬೂದಿಯನ್ನಾಗಿಮಾಡುವರು ||೫೨|| ವಿಶಾಲಾಕ್ಷಿ - ಎಲೌ ವಿಶಾಲನಯನೆಯೆ !, ರಾಘವಃ - ಶ್ರೀರಾಮನು, ಕ್ರೂರಂ - ಪಾಪಾತ್ಮನಾಗಿರುವ, ಸಹ ಬಾಂಧವಂ - ಬಂಧುಗಳಿಂದ ಸಹಿತನಾದ, ರಾವಣಂ - ದಶಕಂಠನನ್ನು, ಸಮರೆ - ಯುದ್ಧದಲ್ಲಿ, ಹತ್ವಾ - ಕೊಂದು, ತ್ವಾಂ - ನಿನ್ನನ್ನು, ಸ್ವಾಂ - ತನ್ನದಾದ, ಪುರೀಂ - ಪಟ್ಟಣವನ್ನು ಕುರಿತು, ನೇಷ್ಯತಿ - ಕರೆದುಕೊಂಡು ಹೋಗುವನು, ||೫೩|| ||ಯತ್ - ಯಾವಸಮಾಚಾರವನ್ನು ಕುರಿತು, ರಾಘವಃ - ಶ್ರೀರಾಮನು, ವಾಚ್ಯಃ - ಹೇಳಲ್ಪಡತಕ್ಕವನೋ, ಮಹಾಬಲಃ - ಅಪಾರವಾದ ಶಕ್ತಿಯುಳ್ಳ, ಲಕ್ಷ್ಮಣಶ್ಚ - ಸೌಮಿತ್ರಿಯೂ, (ವಾಚ್ಯಃ - ಹೇಳಲ್ಪಡತಕ್ಕವನೋ) ತೇಜಸ್ವೀ - ಶೌರ್ಯಸಂಪನ್ನನಾದ ಸುಗ್ರೀವೋವಾಪಿ ಸುಗ್ರೀವನೂ, (ವಾಚ್ಯಃ - ಹೇಳಲ್ಪಡತಕ್ಕವನೋ) ಸಮಾಗತಾಃ - ಒಟ್ಟುಗೂಡಿರುವ, ಹರಯೋಪಿ - ಕಪಿಗಳೂ, ವಾಚ್ಯಾಃ - ಹೇಳಲ್ಪಡತಕ್ಕವರೋ, ತತ್ - ಆಸಮಾಚಾರವನ್ನು, ಬ್ರೂಹಿ - ಹೇಳು. ||೫೪|| ತಸ್ಮಿನ್ - ಆ ಆಂಜನೇಯನು, ಇತಿ - ಈ ಪ್ರಕಾರವಾಗಿ, ಉಕ್ತವತಿ (ಸತಿ) ಹೇಳುತ್ತಿರಲಾಗಿ, ಸುರಸುತೋಪಮಾ - ದೇವಕನ್ಯೆಗೆಣೆಯಾದ, ಸೀತಾ - ಜಾನಕಿಯು, ಶೋಕಸಂತಪ್ತಾ - ದುಃಖದಿಂದ ತಪಿಸುತಲಿರುವವಳಾಗಿ, ಪ್ಲವಂಗಮಂ-ಕಪಿವರನಾದ, ಹನುಮಂತಂ - ಆಂಜನೇಯನನ್ನು ಕುರಿತು, ಉವಾಚ - ಹೇಳಿದಳು. ||೫೫||

---

ಇದಾರೆ, ನಿನ್ನನ್ನು ನೋಡಬೇಕೆಂದು ಬಹು ಕುತೂಹಲದಿಂದೊಡಗೂಡಿರುವರು, ಬೇಗನೆ ಇಲ್ಲಿಗೆಬಂದು ಈ ಲಂಕೆಯನ್ನು ಭಸ್ಮೀ ಭೂತವನ್ನಾಗಿ ಮಾಡುವರು, ಅದನ್ನೂ ನೀನು ಜಾಗ್ರತೆಯಲ್ಲಿಯೇ ಕಣ್ಣಿನಿಂದ ನೋಡುತ್ತೀಯೆ ||೫೨|| || ಎಲೌ ವಿಶಾಲಾಕ್ಷಿಯಾದ ಸೀತೆಯೇ ! ರಾಘವನು ಇಲ್ಲಿಗೆಬಂದು ಯುದ್ಧರಂಗದಲ್ಲಿ ಬಂಧು ಮಿತ್ರರಿಂದೊಡಗೂಡಿದ ಕ್ರೂರನಾದ ರಾವಣನನ್ನು ಕೊಂದು, ನಿನ್ನನ್ನು ಅಯೋಧ್ಯೆಗೆ ಕರೆದುಕೊಂಡು ಹೋಗುವನು, ನಿನಗೆ ಸಂಶಯಬೇಡ, ಸಮಾಧಾನದಿಂದಿರು || ೫೩ || || ಎಲೌ ಮಾತೆ ! ರಾಘವನಿಗೂ, ಮಹಾಬಲನಾದ ಲಕ್ಷ್ಮಣನಿಗೂ, ಮಹಾ ತೇಜಸ್ವಿಯಾದ ಸುಗ್ರೀವನಿಗೂ, ನಿನ್ನ ದರ್ಶನಾರ್ಥಿಗಳಾಗಿ ಬಂದು ಕಡಲಿನ ದಡದಲ್ಲಿ ನಿರೀಕ್ಷಿಸುತಲಿರುವ ಕಪಿವರರಿಗೂ ಏನೇನನ್ನು ಹೇಳಿಕಳುಹಿಸಬೇಕೆಂದಿರುವೆಯೋ ಅದನ್ನೆಲ್ಲ ಅನುಗ್ರಹಿಸು ||೫೪|| || ಹೀಗೆಂದು ಹೇಳಿ, ಆಂಜನೇಯನು ಸುಮ್ಮನಾಗುತಿರಲು, ದೇವಕನ್ನೆಗೆಣೆಯಾದ ಸೀತೆಯು-ಬಹು ಶೋಕಭಾರದಿಂದ ಪೀಡಿತಳಾಗಿ, ಸಂಕಟಪಟ್ಟುನರಳುತ್ತಾ ಹನುಮಂತನನ್ನು ಕುರಿತು ಇಂತೆಂದಳು-

ಕೌಸಲ್ಯಾ ಲೋಕಭರ್ತಾರಂ ಸುಷುವೆ ಯಂ ಮನಸ್ವಿನೀ ।
ತಂ ಮಮಾರ್ಥೆ ಸುಖಂ ಪೃಚ್ಛ ಶಿರಸಾ ಚಾಭಿವಾದಯ ॥೫೬॥
ಸ್ರಜಶ್ಚ ಸರ್ವರತ್ನಾನಿ ಪ್ರಿಯಾ ಯಾಶ್ಚ ವರಾಂಗನಾಃ ।
ಐಶ್ವರ್ಯಂ ಚ ವಿಶಾಲಾಯಾಂ ಪೃಥಿವ್ಯಾಮಪಿ ದುರ್ಲಭಂ ॥೫೭॥
ಪಿತರಂ ಮಾತರಂ ಚೈವ ಸಂಮಾನ್ಯಾಭಿ ಪ್ರಸಾದ್ಯ ಚ ।
ಅನು ಪ್ರವ್ರಜಿತೋ ರಾಮಂ ಸುಮಿತ್ರಾ ಯೇನ ಸುಪ್ರಜಾಃ ॥೫೮॥

---

ಮನಸ್ವಿನೀ - ಪ್ರಶಸ್ತವಾದ ಮನಸ್ಸುಳ್ಳ, ಕೌಸಲ್ಯಾ - ಕೌಸಲ್ಯಾದೇವಿಯು, ಯಂ- ಯಾವನೊಬ್ಬ ಕುಮಾರನನ್ನು, ಲೋಕಭರ್ತಾರಂ - ಲೋಕನಾಥನನ್ನಾಗಿ, ಸುಷುವೆ - ಪಡೆದಳೋ, ತಂ- ಅಂತಹ ರಾಮನನ್ನು ಕುರಿತು, ಮಮಾರ್ಥೆ - ನನಗೋಸ್ಕರ, ಸುಖಂ - ಸೌಖ್ಯವನ್ನು, ಪೃಚ್ಛ - ಕೇಳು, ಮಮಾರ್ಥೆ - ನನ್ನ ಪ್ರಯೋಜನಕ್ಕಾಗಿಯೇ, ಶಿರಸಾ - ಶಿರಸ್ಸಿನಿಂದ, ಅಭಿವಾದಯ - ನಮಸ್ಕಾರವನ್ನೊಪ್ಪಿಸು ॥೫೬॥ ॥ ಯೇನ - ಯಾವ ಪುತ್ರನಿಂದ, ಸುಮಿತ್ರಾ - ಸುಮಿತ್ರೆಯು, ಸುಪ್ರಜಾಃ - ಸತ್ಪುತ್ರನನ್ನುಳ್ಳವಳೋ, (ಸಃ - ಅಂತಹ ಲಕ್ಷ್ಮಣನು) ಸ್ರಜಶ್ಚ - ಪುಷ್ಪಮಾಲೆಗಳನ್ನೂ, ಸರ್ವರತ್ನಾನಿ - ಸಕಲ ರತ್ನಾಭರಣಗಳನ್ನೂ, ಪ್ರಿಯಾಃ - ಪ್ರೀತಿಪಾತ್ರರಾದ, ಯಾಃ - ಯಾವ, ವರಾಂಗನಾಃ - ಉತ್ತಮಸ್ತ್ರೀಯರನ್ನೂ, ಅಥವಾ - ಪ್ರಿಯಾಯಾಃ - ಭಾರ್ಯೆಯಾದ ಊರ್ಮಿಳೆಯ, ವರಾಂಗನಾಃ - ಗೆಳತಿಯರನ್ನೂ, ವಿಶಾಲಾಯಾಂ - ವಿಸ್ತಾರವಾದ, ಪೃಥಿವ್ಯಾಂ - ಭೂಮಂಡಲದಲ್ಲಿ, ದುರ್ಲಭಂ - ಹೊಂದಲಶಕ್ಯವಾಗಿರುವ, ಐಶ್ವರ್ಯಮಪಿ - ವೈಭವವನ್ನೂ, (ತ್ಯಕ್ತ್ವಾ - ತ್ಯಜಿಸಿ) ಪಿತರಂ - ತಂದೆಯನ್ನೂ, ಮಾತರಂಚೈವ - ಹೆತ್ತತಾಯಿಯನ್ನೂ ಸಮ್ಮಾನ್ಯ - ಗೌರವಿಸಿ, ಅಭಿಪ್ರಸಾದ್ಯ ಚ - ಅನುಗ್ರಹವನ್ನೂ ಪಡೆದು, ರಾಮಂ ಅನು - ರಾಮನನ್ನು ಅನುಸರಿಸಿ, ಪ್ರವ್ರಜಿತಃ - ಅರಣ್ಯವಾಸಿಯಾದನು (ಮುನಿವೃತ್ತಿಯನ್ನವಲಂಬಿಸಿದನು) ॥ ೫೭,೫೮ ॥ ॥

---

॥೫೫॥ ॥ ಓ ಆಂಜನೇಯಾ ! ಲೋಕದಲ್ಲಿ ಗರತಿಯರು- ಇಹಪರಲೋಕಗಳಲ್ಲಿ ಆತ್ಮಸಂರಕ್ಷಣೆಯನ್ನು ಮಾಡಿಕೊಳ್ಳಲು ಮಕ್ಕಳನ್ನು ಪಡೆಯುವುದು ಸ್ವಭಾವ, ನನ್ನ ಅತ್ತೆಯಾದ ಕೌಸಲ್ಯೆಯು ಹಾಗಲ್ಲ. ಬಲು ಬಳ್ಳಿಡೆಯುಳ್ಳ ಪುಣ್ಯಾಂಗನೆಯಾದ ಆ ಮಹಾದೇವಿಯು ಸುಕೃತವಶದಿಂದ ಲೋಕವನ್ನೆಲ್ಲ ಕಾಪಾಡತಕ್ಕ ಸತ್ಪುತ್ರನನ್ನು ಪಡೆದಳು. ನಾನಾದರೆ ಲೋಕದಲ್ಲಿ ಸೇರಿದವಳೇ ಅಲ್ಲದೆ ಹೊರಗಿನವಳಲ್ಲ. ಆದಕಾರಣ ಲೋಕವನ್ನೆಲ್ಲ ರಕ್ಷಿಸುವಂತೆಯೇ ನನ್ನನ್ನೂ ರಕ್ಷಿಸಬೇಕೆಂಬ ಆತ್ಕರೆಯು ರಾಮನಿಗೆ ಆವಶ್ಯಕವಾಗಿರುವುದರಿಂದ ನನ್ನನ್ನು ರಕ್ಷಿಸಬೇಕೆಂದು ಪ್ರಾರ್ಥಿಸಬೇಕಾದ ಅಗತ್ಯವಿಲ್ಲ. ಆದರಿಂದ ನನಗಾಗಿ ಮತ್ತೇನನ್ನು ಹೇಳಬೇಕೆಂದರೆ-ಎಲೈ ಲೋಕನಾಥನೆ ! ನಿನ್ನ ಸೋದರನಿಂದ ನಿನಗೆ ಸುಖವು ಸಂಪೂರ್ಣವಾಗಿ ಒದಗುತಲಿರಲಿ. ಇದಕೋ-ನಿನಗೆ ಶಿರಸ್ಸಿನಿಂದ ವಂದನೆಯನ್ನು ಸಮರ್ಪಿಸುವೆನು. ನಿನ್ನ ಸಂರಕ್ಷಣೆಯು ಚೆನ್ನಾಗಿ ನಡೆದರ ವಿಶೇಷವಾಗಿಯಾಗಲಿ, ಲೋಕಸಾಮ್ಯದಿಂದಲಾಗಲಿ ನನ್ನ ಸಂರಕ್ಷಣೆಯು ನಡೆಯುವುದು ಎಂದು ನನ್ನ ವಲ್ಲಭನಿಗೆ ವಿಜ್ಞಾಪಿಸು ॥೫೬॥-॥ ಎಲೈ ಸೌಮ್ಯನಾದ ಮಾರುತಿಯೇ ! ಇದೆಲ್ಲವೂ ಹಾಗಿರಲಿ. ಮಹಾತ್ಮನಾದ ಲಕ್ಷ್ಮಣನನ್ನು ನೆನೆದರ ಅವನ ಸುಗುಣಗಳು ನನ್ನ ಉದರದಲ್ಲಿ ಅಥವಾ ಈ ಬ್ರಹ್ಮಾಂಡದ ಉದರದಲ್ಲಿಯೂ ಅಡಗಲಾರದಷ್ಟಾಗಿವೆ. ಅವುಗಳಲ್ಲಿ ಕೆಲವನ್ನುಮಾತ್ರ ವಿವರಿಸುವೆನು-

ಕೇಳು—ಅಪ್ಪಾ ! ದಿವ್ಯ ಪುಷ್ಪಮಾಲ್ಯಗಳನ್ನೂ, ಶ್ರೇಷ್ಠವಾದ ರತ್ನಾಭರಣಗಳನ್ನೂ, ಧರ್ಮಪತ್ನಿಯನ್ನೂ ಆಕೆಯ ಉತ್ತಮರಾದ ಗೆಳತಿಯರನ್ನೂ ಈ ಭೂಮಂಡಲದಲ್ಲಿ ಬಹು ದುರ್ಲಭವೆನಿಸಿದ ಅಪಾರವಾದ ಐಶ್ವರ್ಯವನ್ನೂ, ನಿಮಿಷಮಾತ್ರದಲ್ಲಿ ಹುಲ್ಲುಕಡ್ಡಿಗಿಂತ ಕಡೆಯಾಗಿ ಭಾವಿಸಿ ಮನಃಪೂರ್ವಕವಾಗಿ ತೊರೆದು, ತಾಯಿತಂದೆಗಳನ್ನೊಪ್ಪಿಸಿ ಅವರ ಅಪ್ಪಣೆಯನ್ನೂ ಪಡೆದು, ಮಲದಾಯಿಯ ಮಗನಾದ ರಾಮನು ಕಾಡಿಗೆ ಹೊರಡುವಾಗ ಒಡಹುಟ್ಟಿದವನನ್ನೂ ಗಣಿಸದೆ, ಪಟ್ಟೆ ಪೀತಾಂಬರಗಳನ್ನು ಕಳೆದು, ನಾರುಬಟ್ಟೆಯನ್ನುಟ್ಟು, ಮುನಿವೃತ್ತಿಯನ್ನನುಸರಿಸಿ, ಗೆಡ್ಡೆಗೆಣಸುಗಳಿಗಾಗಿ ಗುದ್ದಲಿ ಮುಂಕರಿಗಳನ್ನೂ ಕಾವಲಿಗಾಗಿ ಬಿಲ್ಲುಬಾಣಗಳನ್ನೂ ಕೈಗೊಂಡು, ರಾಮನಿಗಿಂತ ಮೊದಲೇ ಅರಣ್ಯಯಾತ್ರೆಗೆ ಮುಂದಾಳಾಗಿ ಹೊರಟನಲ್ಲಾ! ಆ ಪುಣ್ಯಾತ್ಮನ ಗುಣಗಳನ್ನು ನಾನೆಷ್ಟೆಂದು ಕೊಂಡಾಡಲಿ, ಈ ಸುಕುಮಾರನಿಂದಲ್ಲವೇ? ಸುಕೃತಶಾಲಿನಿಯಾದ ಸುಮಿತ್ರೆಯು ಸುಪುತ್ರವತಿಯೆಂದು ಲೋಕವಿಖ್ಯಾತವಾದ ಹೆಸರನ್ನು ಪಡೆದಳು. ಆತನ ಮತ್ತೊಂದು ಅಮೋಘವಾದ ಗುಣವನ್ನು ಲಾಲಿಸು- ಹಿಂದೆ ಅಣ್ಣತಮ್ಮಂದಿರಿಗೊಂದು ಸಂವಾದವು ನಡೆಯಿತು, ಅದೇನು ಎಂಬೆಯೊ ? ನಾವುಗಳೆಲ್ಲರೂ ಜನಸ್ಥಾನದೊಳಗೆ ಪರ್ಣಶಾಲೆಯಲ್ಲಿ ವಾಸ ಮಾಡುತ್ತಿರುವಾಗ ಶೂರ್ಪಣಖಿಯೆಂಬ ರಕ್ಕಸಿಯು ಬಂದು, ರಾಮನನ್ನು ಬಯಸಿ, ಆತನು ತಿರಸ್ಕರಿಸಿದುದರಿಂದ ನನ್ನನ್ನು ತಿನ್ನಲು ಯತ್ನಿಸಿದಳು, ಆಗ ಲಕ್ಷ್ಮಣನು-ಆಕೆಗೆ ಕಿವಿ ಮೂಗುಗಳಿಲ್ಲದಂತೆ ಮಾಡಿದನು. ಬಳಿಕ ಸೋದರರಾದ ಖರದೂಷಣಾದಿಗಳೊಡನೆ ದೂರನ್ನು ಹೇಳಿಕೊಂಡು, ಅವರನ್ನು ಕಾಳಗಕ್ಕೆ ಕಳುಹಿದಳು. ಖರದೂಷಣ ಮುಂತಾದವರು ಹದಿನಾಲ್ಕು ಸಾವಿರಮಂದಿ ರಕ್ಕಸರ ಪಡೆಯನ್ನು ಕಟ್ಟಿಕೊಂಡು ಬವರಕ್ಕೆ ಬಂದರು. ಕಾಳಗಕ್ಕೆ ಹೊರಡಬೇಕಾಯಿತು. ಆಗ ರಾಮನು-ಲಕ್ಷ್ಮಣನನ್ನು ಕುರಿತು ಇಂತೆಂದನು:-ಲಕ್ಷ್ಮಣಾ! ಬಿಲ್ಲು ಬತ್ತಳಿಕೆಗಳನ್ನಿತ್ತು ಕೊಡು, ಎಲೆಮನೆಯೊಳಗೆ ಸೀತೆಯ ಕಾವಲಿಗೆ ನೀನು ಇರು, ನಾನು ಹೋಗಿ ರಕ್ಕಸರನೆಲ್ಲ ಸದೆಬಡಿದು ನಿಮಿಷಮಾತ್ರದಲ್ಲಿ ಹಿಂದಿರುಗಿ ಬರುವೆನು ಎಂದನು. ಆ ನುಡಿಯನ್ನು ಕೇಳುತಲೇ ಲಕ್ಷ್ಮಣನಿಗೆ ಸೈರಿಸಲಿಲ್ಲ, ಹೀಗೆಂದನು:—ಅಣ್ಣಾ! ನನ್ನನ್ನು ಪುರುಷಾಕಾರದ ಹೆಂಗಸನ್ನಾಗಿ ಭಾವಿಸಿದೆಯೋ? ಪೌರುಷದ ಕಾರ್ಯವು ನಿನ್ನದೊ? ಅಬಲೆಯ ಕೆಲಸವು ನನ್ನದೋ? ಕೌಸಲ್ಯೆಯ ಮಗನು ಶೂರನೊ ? ಸುಮಿತ್ರೆಯ ಮಗನು ಹೇಡಿಯೊ ? ನೀನೇ ನಿನ್ನ ಧರ್ಮಪತ್ನಿಯನ್ನು ಕಾದುಕೊಂಡಿರು. ನಾನೇ ರಾಕ್ಷಸರೊಡನೆ ಹೋರಾಡಿ ಕೈಲಾದರೆ ಕೊಂದುಬರುವೆನು. ಹಾಗಿಲ್ಲದಿದ್ದರೆ ವೀರಸ್ವರ್ಗವಾದರೂ ಹೊಂದುವೆನು ಎಂದನು. ಅದಕ್ಕೆ ರಾಮನು—ಲಕ್ಷ್ಮಣಾ ! ಸಿಟ್ಟುಗೊಳ್ಳಬೇಡ ನಿನ್ನನ್ನು ನಾನು ಕೈಲಾಗದವನೆಂದು ಭಾವಿಸಿ ಹಾಗೆ ಹೇಳಲಿಲ್ಲ, ರಕ್ಕಸರೊಡನೆ ಕಾದುವ ಕೆಲಸಕ್ಕಿಂತಲೂ ಜಾನಕಿಯನ್ನು ಕಾಯುವ ಕೆಲಸವು ದೊಡ್ಡದು, ಆದುದರಿಂದ ನಿನ್ನನ್ನು ಆ ಕೆಲಸದಲ್ಲಿ ಇರಹೇಳಿದೆನು, ತುಸು ಸೈರಿಸಿ, ಅನ್ಯಥಾ ಭಾವಿಸದೆ ಬೇಗನೆ ಧನುರ್ಬಾಣಗಳನ್ನು ಕೊಡು ಎಂದನು. ಆಗ ಲಕ್ಷ್ಮಣನು—ಓಹೋ ಹಾಗೊ ? ನನಗೆ ಮೊದಲು ತಿಳಿಯಲಿಲ್ಲ, ಕಾಳಗಕ್ಕಿಂತಲೂ ಕಾಯುವ ಕೆಲಸವು ದೊಡ್ಡದಾದರೆ ಅಣ್ಣಾ! ಈ

ಜ್ಯೇಷ್ಠಾಂಶವು ನಿನಗೆ ಇರತಕ್ಕುದು ನಮ್ಮ ತಂದೆಗೆ ನೀನು ಹಿರಿಯಮಗನಲ್ಲವೆ? ನನ್ನನ್ನು ಪಾತಿತ್ಯಕ್ಕೆ ಒಳಗುಮಾಡಬೇಡ ನೀನೀ ಕೆಲಸವನ್ನು ಕೈಕೊಂಡು ಕಾಳಗಕ್ಕೆ ನನಗೆ ಅಪ್ಪಣೆಕೊಡು ಎಂದನು ರಾಮನು ಮನದೊಳಗೆ ತುಸತಕ್ಕ ಲಕ್ಷ್ಮಣಾ ಹಾಗಲ್ಲ ಕಷ್ಟಕಾಲವು ಬಂದೊದಗಿದಾಗ ತನ್ನ ಹೆಂಡತಿಯನ್ನು ಮಾತ್ರ ಕಾಪಾಡಿಕೊಳ್ಳಲಿಕ್ಕೆ ತಾನು ನಿಂತು, ದಾಯಾದ ದ್ವೇಷದಿಂದ ಬಾಲದಾಯಾದನನ್ನು ರಾಕ್ಷಸರೊಡನೆ ಕಾಳಗಕ್ಕೆ ಅಟ್ಟಿಬಿಟ್ಟನು ಎಂದು ಲೋಕದಲ್ಲಿ ಮಹತ್ತರವಾದ ಅಪವಾದವು ಬರುವುದು. ಅದರಿಂದ ನನ್ನನ್ನು ಆ ದೂರಿಗೆ ಗುರಿಮಾಡಬೇಡ, ನೀನು ಸೀತೆಯ ಕಾವಲಿಗಿರು, ನಾನು ಹೋಗಿ ಬರುವೆನು ಎಂದನು, ಅದನ್ನು ಕೇಳಿ ಲಕ್ಷ್ಮಣನು— ಅಣ್ಣಾ! ನಾನು ಮಂದ ಬುದ್ಧಿಯುಳ್ಳವನು, ಈಗ ನನಗೆ ನೀನೇ ಜ್ಞಾಪಿಸಿಕೊಟ್ಟಂತಾಯಿತು. ಪ್ರಪಂಚದಲ್ಲಿ ಅಪಖ್ಯಾತಿಯು ನನಗೆ ಬರುವುದಲ್ಲದೆ ನಿನಗಿಲ್ಲ. ಅಶು[illegible] ಸಂಗ್ರಾಮವು ಒದಗಿ ಬಂದಾಗ ಕೈಲಿಹರಿಯದೆ ಹೆಂಗಸಿನ ಬಳಿಯಲ್ಲಿ ಕುಳಿತನು. ದಾಯಾದಿಯು ಮನುಜರೊಡನೆ ಕಾದಿ ಲೋಕಾಂತರವನ್ನೈದಿದರೆ ಭರತನಿಗೆ ರಾಜ್ಯಭಾರವು ಸುಸಾಧಿತವಾಗಿ ದೊರೆಯುವುದು, ತನಗೆ ಯೌವರಾಜ್ಯವು ಸಿದ್ಧವಾಗಿಯೇ ಇದೆ, ತನ್ನ ತಮ್ಮನಾದ ಶತ್ರುಘ್ನ ಸೇನಾಪತ್ಯವನ್ನು ತಪ್ಪಿಸುವರಾರು? ರಾಜ್ಯವು ನಿಷ್ಕಂಟಕವಾಗುವುದು, ಎಂಬಿಷ್ಟು ದುರಭಿಪ್ರಾಯವು ಲಕ್ಷ್ಮಣನ ಎದೆಯೊಳಗೆ ಅಡಗಿ ಇದ್ದಿತು ಎಂಬ ದುರ್ವಾರ್ತೆಗೆ ನಾನು ಈಡಾಗಲಾರೆ, ಒಂದು ವೇಳೆ ನಾನೇ ಇಲ್ಲಿದ್ದು ಅಣ್ಣನೇನಾದರೂ ಅಪಾಯ ನಡೆದರೆ ಆಗಲೂ ನನಗೆ ಕೆಟ್ಟಹೆಸರು ತಪ್ಪದುದಲ್ಲ, ಆದಕಾರಣ ನೀನುಂಟು, ನಿನ್ನ ಹೆಂಡತಿಯುಂಟು, ಮೊದಲು ನನ್ನನ್ನು ಬಿಟ್ಟು ಕಳುಹು ಎಂದನು. ಆ ಮಾತನ್ನು ಕೇಳಿದ ರಾಮನು ಮುಂದೆ ಏನಹೇಳಲಿಕ್ಕೂ ತೋರದೆ ಸ್ವಲ್ಪ ಹೊತ್ತು ಸುಮ್ಮನಿದ್ದು, ತರುವಾಯ— ಲಕ್ಷ್ಮಣಾ! ನಾನು ಮೊದಲು ಹೇಳಿದ ಮಾತು ಸರಿಯಲ್ಲ. ಮಾಯಾವಿಗಳಾದ ರಾಕ್ಷಸರ ಹಾವಳಿಯಲ್ಲಿ ಸೀತೆಯ ಕಾವಲು ಬಲು ಕಷ್ಟವಾದುದು. ನೀನು ಬಲು ಎಚ್ಚರದಿಂದ ಕಾಯಬಲ್ಲೆ ಈ ಹುಡಿರಕ್ಕಸರನ್ನು ಧ್ವಂಸಮಾಡುವುದೇನೂ ಹೆಚ್ಚಿದ ಕೆಲಸವಲ್ಲ. ನೀನಿಲ್ಲಿರು, ನಾನು ಹೋಗಿಬರುವೆನು ಎನಲು, ಆಗ ಲಕ್ಷ್ಮಣನು— ಅಣ್ಣಾ! ನನ್ನನ್ನು ಹೀಗೆ ಮರುಳುಮಾಡಿದರೆ ಹೇಗೆ? ನಾನು ಬಲ್ಲೆ, ನೀನೇನು ಸಾಧಾರಣನೆ? ನಾನು ಹೊರಡುವಾಗ ನಮ್ಮ ತಾಯಿಗೆ ನಮಸ್ಕರಿಸುವ ಸಮಯದಲ್ಲಿ— “ಮಗು, ಲಕ್ಷ್ಮಣಾ! ಅಣ್ಣನ ಹಿಂದೆ ಅರಣ್ಯಕ್ಕೆ ಹೋಗಿಬಾ, ರಾಮನನ್ನು ದಶರಥನಂತೆ ಭಾವಿಸು, ಜನಕಾತ್ಮಜೆಯನ್ನು ನನ್ನಂತೆ ತಿಳಿದಿರು, ಅಡವಿಯನ್ನೇ ಅಯೋಧ್ಯೆಯನ್ನಾಗಿ ತಿಳಿ, ಸುಖ ಪ್ರಯಾಣ ಮಾಡು, ಮತ್ತೊಂದು ಇಲ್ಲಿನ ಗುಟ್ಟನ್ನು ಕೇಳು— ದಾಶರಥಿಯು ಅರಣ್ಯಕ್ಕೆ ಹೋದ ಬಳಿಕ ದಶರಥನನ್ನು ರಾಮನನ್ನಾಗಿ ಅಂದರೆ-(ರಂ-ಅಗ್ನಿಯನ್ನು, ಅಮತಿ-ಗಚ್ಛತಿ-ಹೊಂದುತ್ತಾನೆ) ರಾಮನನ್ನು ಅಗಲಿ ಇರಲಾರದೆ ಅಗ್ನಿವಶನಾಗುವನು, ತರುವಾಯ ನನಗೆ ಬೇರೆ ದಿಕ್ಕಿಲ್ಲವಾಗುವುದು ಅದರಿಂದ ಆ ನನ್ನನ್ನು ಜನಕನ ಆತ್ಮಜೆಯನ್ನಾಗಿ ಎಂದರೆ- ತಂದೆಯ ಮನೆಯೇ ನನಗೆ ಗತಿ ಎಂಬದಾಗಿ ತಿಳಿ, ಎಲ್ಲರೂ ಹೀಗಾದ ಮೇಲೆ ಅಯೋಧ್ಯೆಯು ಅಡವಿಯೇ ಆಗುವುದೆಂದು ಅರಿ. ಸುಖವಾಗಿ

ಆನುಕೂಲ್ಯೇನ ಧರ್ಮಾತ್ಮಾ ತ್ಯಕ್ತ್ವಾ ಸುಖ ಮನುತ್ತಮಮ್ ।
ಅನುಗಚ್ಛತಿ ಕಾಕುತ್ಸ್ಥಂ ಭ್ರಾತರಂ ಪಾಲಯ ನ್ವನೇ॥೫೯॥
ಸಿಂಹಸ್ಕಂಧೋ ಮಹಾಬಾಹು ರ್ಮನಸ್ವೀ ಪ್ರಿಯ ದರ್ಶನಃ ।

ಧರ್ಮಾತ್ಮಾ - ಧರ್ಮದಲ್ಲಿ ಆಸಕ್ತನಾಗಿರುವ, ಲಕ್ಷ್ಮಣನು, ಆನುಕೂಲ್ಯೇನ - ಭಕ್ತಿಯಿಂದ, ಅನುತ್ತಮಂ-ಸರ್ವೋತ್ತಮವೆನಿಸಿದ, ಸುಖಂ - ಸೌಖ್ಯವನ್ನು, ತ್ಯಕ್ತ್ವಾ - ತೊರೆದು, ಭ್ರಾತರಂ - ಅಣ್ಣನಾದ, ಕಾಕುತ್ಸ್ಥಂ - ಶ್ರೀರಾಮನನ್ನು, ವನೆ - ಅರಣ್ಯದಲ್ಲಿ, ಪಾಲಯನ್-ರಕ್ಷಿಸುತ್ತಿರುವವನಾಗಿ, ಅನುಗಚ್ಛತಿ, ಅನುಸರಿಸುತಲಿದಾನೆ ॥೫೯॥ ॥ ಸಿಂಹಸ್ಕನ್ಧಃ - ಸಿಂಹದಂತೆ ಹೆಗಲುಳ್ಳ, ಮಹಾಬಾಹುಃ - ನೀಳವಾದತೋಳುಗಳುಳ್ಳವನಾಗಿಯೂ, ಮನಸ್ವೀ - ಧೀರನಾಗಿಯೂ, ಪ್ರಿಯದರ್ಶನಃ - ಸುಂದರನಾಗಿಯೂ ಇರುವ (ಲಕ್ಷ್ಮಣಃ - ಲಕ್ಷ್ಮಣನು) ಮಾಂ - ನನ್ನನ್ನು, ಮಾತೃವತ್ - ತಾಯಿಯೊಡನೆ ಸಮಾನವಾದವಳನ್ನಾಗಿ ಭಾವಿಸಿ, ಸಮಾಚರನ್ - ಸೇವಿಸುತಲಿರುವವನಾಗಿ, ರಾಮೆ - ಶ್ರೀರಾಮನಲ್ಲಿ, ಪಿತೃವತ್- ತಂದೆಯಲ್ಲಿ ಹೇಗೋಹಾಗೆ, ವರ್ತತೆ - ಇದಾನೆ,॥೬೦॥ ॥ ವೀರಃ-ಮಹಾಪರಾಕ್ರಮಶಾಲಿಯಾದ, ಲಕ್ಷ್ಮಣಃ-ಸೌಮಿತ್ರಿಯು,

ತೆರಳು. ಮತ್ತೊಂದು ರಹಸ್ಯವನ್ನು ಕೇಳು---ರಾಮನನ್ನು ಸಾಧಾರಣ ಮನುಷ್ಯನನ್ನಾಗಿ ತಿಳಿಯಬೇಡ, ಸಾಕ್ಷಾತ್ ದಶರಥನನ್ನಾಗಿ (ದಶ-ಪಕ್ಷಿ-ಗರುಡ, ರಥ-ವಾಹನ-ಗರುಡ) ಎಂದರೆ-ಗರುಡವಾಹನನನ್ನಾಗಿ ನೆನೆ. ಜಾನಕಿಯನ್ನು ರಮಾದೇವಿಯನ್ನಾಗಿಭಾವಿಸು.ಆಸೀತಾ ರಾಮರಿರುವ ಅಡವಿಯನ್ನು ವೈಕುಂಠವನ್ನಾಗಿ ಗಮನಿಸು ,, ಎಂದು ಹೇಳಿ ಇದಾಳೆ. ಆದಕಾರಣ ನಿನ್ನ ವಲ್ಲಭೆಯೊಡನೆ ನೀನು ಇಲ್ಲಿ ಇರು. ನಿನ್ನ ಕಿಂಕರನಾದ ನಾನು ಹೋಗಿಬರುವೆನು ಎಂದನು. ಇದನ್ನೆಲ್ಲ ಕೇಳಿದ ರಾಮನು- ಓಹೋ!ಇವನು ಯುಕ್ತಿವಾದದಿಂದಲಾಗಲಿ, ಶಕ್ತಿವಾದದಿಂದಲಾಗಲಿ ನನಗೆ ವಶವಾಗುವಹಾಗಿಲ್ಲ. ನೀತಿವಾದವನ್ನು ಅವಲಂಬಿಸಬೇಕು ಎಂದುಕೊಂಡು, ಸೌಮಿತ್ರಿಯನ್ನು ಕುರಿತು---ಲಕ್ಷ್ಮಣ ! ನಿಮ್ಮ ತಾಯಿ ಹೇಳಿದಂತೆ ಕೇಳಬೇಕಾದದ್ದು ಧರ್ಮವಷ್ಟೆ ? ಮತ್ತು ಆಕೆಯ ಮಾತಿನಂತೆ ನನ್ನಲ್ಲಿ ಧಶರಥನಲ್ಲಿ ಹೇಗೋ ಹಾಗೆ ಭಕ್ತಿಯನ್ನಿಟ್ಟಿರಬೇಕಷ್ಟೆ ? ಅದರಿಂದಲೇ ನಾನು ಹೇಳಿದಂತೆ ಕೇಳು ಹಟವನ್ನು ಮಾಡಬೇಡ, ಜಾನಕಿಯನ್ನು ಸಲಹು. ಶರ ಚಾಪಗಳನ್ನು ಕೊಡು ಎನ್ನಲು ಲಕ್ಷ್ಮಣನು--- ಅಣ್ಣಾ ! ನನ್ನನ್ನು ನಿರುತ್ತರನನ್ನಾಗಿ ಮಾಡಿದೆ. ನಿನ್ನ ಅಪ್ಪಣೆಯಂತೆ ನಡೆದುಕೊಳ್ಳುತ್ತೇನೆ ಎಂದು ಹೇಳಿ ಅಂಬನ್ನೂ ಬತ್ತಳಿಕೆಯನ್ನೂ ಆತನವಶಕ್ಕೆ ಒಪ್ಪಿಸಿದನು. ಹೀಗೆ ತಮ್ಮನಲ್ಲಿರುವ ವಾತ್ಸಲ್ಯದಿಂದ ಅವನೊಬ್ಬನನ್ನೇ ಕಾಳಗಕ್ಕೆ ಕಳುಹಲಾರದೆ ದಯಾಸಮುದ್ರನಾದ ದಾಶರಥಿಯು ಲಕ್ಷ್ಮಣನನ್ನು ಹಿಂದಿರುಗಿಸಿ ತಾನು ತೆರಳಿದನು. ಇಂತಹ ಲಕ್ಷ್ಮಣನಿಂದ ಸುಮಿತ್ರೆಯು ಸುಪುತ್ರವತಿಯಲ್ಲವೆ ? ॥ ೫೭ ॥, ॥ ೫೮ ॥ ॥ ಧರ್ಮಾತ್ಮನಾದ ಆ ಲಕ್ಷ್ಮಣನು ಸಮಸ್ತ ರಾಜಭೋಗಗಳನ್ನೂ ತೊರೆದು,ಅರಣ್ಯದಲ್ಲಿ ಅಣ್ಣನನ್ನು ಹಿಂಬಾಲಿಸುತ್ತಾ, ಆತನಲ್ಲಿ ಅಸಮಾನವಾದ ಭಕ್ತಿಯನ್ನಿಟ್ಟು, ಆತನ ಸೇವೆಯಲ್ಲಿಯೇ ನಿರತನಾಗಿದಾನೆ ॥ ೫೯ ॥ ॥ ಸಿಂಹದಂತೆ ಭುಜವುಳ್ಳವನೂ, ಆಜಾನು ಬಾಹುವೂ, ಮಹಾಧೀರನೂ, ಸುಂದರನೂ ಆಗಿರುವ ಸೌಮಿತ್ರಿಯು- ರಾಮನಲ್ಲಿ ಪಿತೃಭಕ್ತಿಯುಳ್ಳವನಾಗಿಯೂ, ನನ್ನಲ್ಲಿ ಮಾತೃ ಭಕ್ತಿಯುಳ್ಳವನಾಗಿಯೂ ಇದಾನೆ, ಇಂತಹವೀರನಾದ ಲಕ್ಷ್ಮಣನು-ನನ್ನನ್ನು ಈ

ಪಿತೃವದ್ವರ್ತತೇ ರಾಮೋ ಮಾತೃವನ್ಮಾಂ ಸಮಾಚರನ್ ॥೬೦॥
ಹ್ರಿಯಮಾಣಾಂ ತದಾ ವೀರೋ ನ ತು ಮಾಂ ವೇದ ಲಕ್ಷ್ಮಣಃ ।
ವೃದ್ಧೋಪಸೇವೀ ಲಕ್ಷ್ಮೀವಾನ್ ಶಕ್ತೋ ನ ಬಹುಭಾಷಿತಾ ।
ರಾಜ್ಞಃ ಪುತ್ರಃ ಪ್ರಿಯಃ ಶ್ರೇಷ್ಠಸ್ಸದೃಶಶ್ಶ್ವಶುರಸ್ಯ ಮೇ ॥೬೨॥
ಮಮ ಪ್ರಿಯಕರೋ ನಿತ್ಯಂ ಭ್ರಾತಾ ರಾಮಸ್ಯ ಲಕ್ಷ್ಮಣಃ ।
ನಿಯುಕ್ತೋ ಧುರಿ ಯಸ್ಯಾಂ ತು ತಮುದ್ವಹತಿ ವೀರ್ಯವಾನ್ ॥೬೩॥
ಯಂ ದೃಷ್ಟ್ವಾ ರಾಘವೋ ನೈವ ವೃತ್ತಮಾರ್ಯಮನುಸ್ಮರೇತ್ ।
ಸ ಮಮಾರ್ಥಾಯ ಕುಶಲಂ ವಕ್ತವ್ಯೋ ವಚನಾನ್ಮಮ ॥೬೪॥

---

ಹ್ರಿಯಮಾಣಾಂ - ರಾವಣನಿಂದ ಅಪಹರಿಸಲ್ಪಡುತಲಿರುವ, ಮಾಂತು - ನನ್ನನ್ನಾದರೋ, ತದಾ - ಆಗ, ನವೇದ - ತಿಳಿಯಲಿಲ್ಲ, ॥೬೧॥ ವೃದ್ಧೋಪಸೇವೀ - ಹಿರಿಯರನ್ನು ಸೇವಿಸತಕ್ಕ, ಲಕ್ಷ್ಮೀವಾನ್ - ಶ್ರೀರಾಮನಲ್ಲಿ ಭಕ್ತಿಸಂಪದವುಳ್ಳ, ಶಕ್ತಃ - ನಿರ್ವಾಹಶಾಲಿಯಾದ, ನಬಹುಭಾಷಿತಾ - ಮಿತಭಾಷಿಯಾಗಿರುವ, ಮೇ - ನನ್ನ, ಶ್ವಶುರಸ್ಯ - ಮಾವನಾದ, ರಾಜ್ಞಃ - ದಶರಥರಾಜನಿಗೆ, ಶ್ರೇಷ್ಠಃ - ಉತ್ತಮನೆನಿಸಿದವನೂ, ಸದೃಶಃ - ತಕ್ಕವನೂ ಆಗಿರುವ, ಪ್ರಿಯಃಪುತ್ರಃ - ಇಷ್ಟಪುತ್ರನೆನಿಸಿ, ಮಮ -ನನಗೆ, ನಿತ್ಯಂ- ಯಾವಾಗಲೂ, ಪ್ರಿಯತರಃ - ಬಹು ಇಷ್ಟನಾಗಿ, ರಾಮಸ್ಯ - ರಾಮನಿಗೆ, ಪ್ರಿಯಕರಃ - ಅತ್ಯಂತಪ್ರಿಯನೆನಿಸಿರುವ, ಭ್ರಾತಾ - ಸಹೋದರನೂ, ವೀರ್ಯವಾನ್ - ಪರಾಕ್ರಮಶಾಲಿಯೂ, ಆಗಿರುವ, ಲಕ್ಷ್ಮಣಃ- ಸೌಮಿತ್ರಿಯು, ಯಸ್ಯಾಂ - ಯಾವ, ಧುರಿ - ಯುದ್ಧವೇ ಮೊದಲಾದ ಕೆಲಸದಲ್ಲಿ, ನಿಯುಕ್ತಃ - ರಾಮನಿಂದ ನಿಯಮಿಸಲ್ಪಡುವನೋ, ತಾಂ- ಅಂತಹ ಕೆಲಸವನ್ನು, ಉದ್ವಹತಿ-ನಿರ್ವಹಿಸುತಲಿದಾನೆ ॥೬೨,೬೩॥ ರಾಘವಃ - ಶ್ರೀರಾಮನು, ಯಂ - ಯಾವ ಲಕ್ಷ್ಮಣನನ್ನು, ದೃಷ್ಟ್ವಾ - ನೋಡಿ, ವೃತ್ತಂ - ದಿವಂಗತನಾದ, ಆರ್ಯಂ - ಪೂಜ್ಯನಾದ ತಂದೆಯನ್ನು, ನೈವಾನುಸ್ಮರೇತ್ - ಸರ್ವಥಾ ನೆನೆಯುವುದಿಲ್ಲವೋ, ಸಃ - ಅಂತಹ ಲಕ್ಷ್ಮಣನು, ಮಮ - ನನ್ನ, ಅರ್ಥಾಯ - ಪ್ರಯೋಜನಕ್ಕೋಸ್ಕರ, ಮಮ - ನನ್ನ, ವಚನಾತ್ - ಮಾತಿನ ದೆಶೆಯಿಂದ, ಕುಶಲಂ - ಕ್ಷೇಮವನ್ನು, ವಕ್ತವ್ಯಃ - ಹೇಳಲ್ಪಡತಕ್ಕವನು, ಲಕ್ಷ್ಮಣಃ -

---

ಪಾಪಾತ್ಮನಾದ ರಾವಣನು ಕೊಂಡೊಯ್ಯುವಾಗ ಕಾಣದೆ ಹೋದನು. ಓ ಮಾರುತೀ ! ಆ ಶೂರ ಸೌಮಿತ್ರಿಯ ದೃಷ್ಟಿಗೆ ಈದುರಾತ್ಮನು ಗೋಚರನಾಗಿದ್ದರೆ, ನನಗೆ ಈ ಅವಸ್ಥೆಯು ಬರುತಲಿದ್ದಿತೆ? ಸರ್ವಾತ್ಮನಾ ಬರಲಾರದು ॥ ೬೦, ೬೧ ॥ ಲಕ್ಷ್ಮಣನ ಗುಣಗಳನ್ನೆಲ್ಲ ನಾನು ಹೇಳಿ ಮುಗಿಸಲಾರೆ. ಹಿರಿಯರನ್ನು ಸೇವಿಸುವುದರಲ್ಲಿ ನಿಪುಣನು, ಬಹು ತೇಜಸ್ವಿಯು, ಕಾರ್ಯ ನಿರ್ವಾಹ ಸಮರ್ಥನು, ಸತ್ಯ ಸಂರಕ್ಷಣೆಗಾಗಿ ಮಿತ ಭಾಷಿಯು, ಗುಣರಾಶಿಯಾಗಿನನಗೆ ಮಾವನೆನಿಸಿದ ದಶರಥಚಕ್ರವರ್ತಿಗೆ ಪ್ರಿಯತಮನಾದ ಆತ್ಮಾನುರೂಪ ಪುತ್ರನಾಗಿದಾನೆ ॥ ೬೨ ॥ ನನಗೂ ಅಣ್ಣನಾದ ರಾಮನಿಗೂ ಅನವರತವೂ ಹಿತವನ್ನಾಚರಿಸತಕ್ಕವನು, ಎಂತಹ ಮಹತ್ತರವಾದ ಕಾರ್ಯದಲ್ಲಿ ಅಣ್ಣನು ನಿಯಮಿಸಿದರೂ ಬಾಹುಬಲ ಸಂಪನ್ನನಾದ ಆ ಲಕ್ಷ್ಮಣನು ಸಾಧಿಸಬಲ್ಲನು. ॥ ೬೩ ॥ ಇಂತಹ ಲಕ್ಷ್ಮಣನು ಬಹು ದಯಾಳು, ಪರಿಶುದ್ಧವಾದ ಅಂತಃಕರಣವುಳ್ಳವನು, ಸರ್ವ ಕಾರ್ಯ ಸಮರ್ಥನು. ರಾಮನಿಗೆ ಅತ್ಯಂತ ಪ್ರಿಯನು, ಈತನು ತಂದೆಗಿಮ್ಮಡಿಯಾಗಿ ಕಾಡಿನಲ್ಲಿ ಸಂರಕ್ಷಿಸುತಲಿರುವುದರಿಂಲೇ ರಾಮನು

ಮೃದು ರ್ನಿತ್ಯಂ ಶುಚಿ ರ್ದಕ್ಷಃ ಪ್ರಿಯೋ ರಾಮಸ್ಯ ಲಕ್ಷ್ಮಣಃ ॥೬೪॥-॥
ಯಥಾಹಿ ವಾನರ ಶ್ರೇಷ್ಠ ದುಃಖಕ್ಷಯ ಕರೋ ಭವೇತ್ ॥೬೫॥
ತ್ವ ಮಸ್ಮಿ ನ್ಕಾರ್ಯ ನಿರ್ಯೋಗೇ ಪ್ರಮಾಣಂ ಹರಿಸತ್ತಮ।
ರಾಘವ ಸ್ತ್ವ ತ್ಸಮಾರಂಭಾ ನ್ಮಯಿ ಯತ್ನ ಪರೋ ಭವೇತ್ ॥೬೬॥
ಇದಂ ಬ್ರೂಯಾಶ್ಚ ಮೇ ನಾಥಂ ಶೂರಂ ರಾಮಂ ಪುನಃ ಪುನಃ ।

ಲಕ್ಷ್ಮಣನು, ಮೃದುಃ - ಕನಿಕರದಿಂದೊಡಗೂಡಿದವನೂ, ನಿತ್ಯಂ - ಯಾವಾಗಲೂ, ಶುಚಿಃ - (ಮನೋ ವಾಕ್ಕಾಯಗಳಲ್ಲಿ) ಪರಿಶುದ್ಧನೂ, ದಕ್ಷಃ - ಸಮರ್ಥನೂ, ರಾಮಸ್ಯ - ಶ್ರೀರಾಮನಿಗೆ, ಪ್ರಿಯಃ - ಇಷ್ಟನೆನಿಸಿದವನೂ ಆಗಿ, ಅಸ್ತಿ - ಇದ್ದಾನೆ ॥೬೪,೬೪॥ ॥ ಹೇವಾನರಶ್ರೇಷ್ಠ - ಎಲೈ ಕಪಿವರನೇ! (ರಾಮಃ - ಶ್ರೀರಾಮನು) ಯಥಾ - ಹೇಗೆ, ದುಃಖಕ್ಷಯಕರಃ - ನನ್ನಶೋಕವನ್ನು ಪರಿಹರಿಸುವವನು, ಭವೇತ್ - ಆಗುವನೋ, (ತಥಾ - ಹಾಗೆ, ತ್ವಯಾ - ನಿನ್ನಿಂದ, ಕರ್ತವ್ಯಂಹಿ - ಮಾಡತಕ್ಕುದಾಗಿದೆಯಲ್ಲವೆ?) ಹರಿಸತ್ತಮ - ಎಲೈವಾನರೋತ್ತಮನೆ!, ತ್ವಂ - ನೀನು, ಅಸ್ಮಿನ್ - ಈ, ಕಾರ್ಯನಿರ್ಯೋಗೆ, ಕೆಲಸವನ್ನು ಘಟನಮಾಡುವುದರಲ್ಲಿ, ಪ್ರಮಾಣಂ - ಸ್ವತಂತ್ರನಾಗಿದ್ದೀಯೆ, ರಾಘವಃ - ಶ್ರೀರಾಮನು, ತ್ವತ್ಸಮಾರಂಭಾತ್ - ನಿನ್ನ ಉತ್ಸಾಹದಿಂದ, ಮಯಿ - ನನ್ನ ವಿಷಯದಲ್ಲಿ, ಯತ್ನಪರಃ - ಪ್ರಯತ್ನದಲ್ಲಾಸಕ್ತನು ಭವೇತ್ - ಆಗಬೇಕು ॥೬೫,೬೬॥ ದಶರಥಾತ್ಮಜ - ಎಲೈ ದಶರಥನಂದನನೆ!, ಮಾಸಂ - ಒಂದು ತಿಂಗಳುಮಾತ್ರವೇ, ಜೀವಿತಂ - ಪ್ರಾಣವನ್ನು, ಧಾರಯಿಷ್ಯಾಮಿ - ಧರಿಸಿಕೊಂಡಿರುವೆನು, ಮಾಸಾದೂರ್ಧ್ವಂ- ತಿಂಗಳಮೇಲೆಯಾದರೋ, ನಜೀವೇಯಂ - ಬದುಕಲಾರೆನು, ಸತ್ಯೇನ - ಸತ್ಯದಿಂದ, ತೇ - ನಿನಗೋಸ್ಕರ, ಅಹಂ - ನಾನು, ಬ್ರವೀಮಿ - ಹೇಳುತ್ತೇನೆ, ವೀರ - ಎಲೈ ಶೂರನೇ! ಪಾಪಕರ್ಮಣಾ - ಪಾಪಾತ್ಮನಾಗಿರುವ, ರಾವಣೇನ - ದಶಕಂಠನಿಂದುಂಟಾದ ನಿಕೃತ್ಯಾ - ಮೋಸದಿಂದ, ರುದ್ಧಾಂ- ತಡೆಯಲ್ಪಟ್ಟಿರುವ, ಮಾಂ - ನನ್ನನ್ನು, ಪಾತಾಳಾತ್-ನಾಗಲೋಕದ ದೆಸೆಯಿಂದ, (ವಿಷ್ಣುಃ-ನಾರಾಯಣನು) ಕೌಶಿಕೀಮಿವ-

ಸತ್ತು ಹೋದತಂದೆಯನ್ನು ಸ್ವಲ್ಪವಾದರೂ ಸ್ಮರಿಸದೆ ಸುಖವಾಗಿದ್ದಾನೆ, ಅಂತಹ ಲಕ್ಷ್ಮಣನನ್ನು ಕುರಿತು ನಾನು ಕುಶಲ ಪ್ರಶ್ನೆಯಮಾಡಿದೆನೆಂದು ತಿಳಿಸು ॥ ೬೩, ೬೪ ॥ ॥ ಎಲೈ ವಾನರೋತ್ತಮನೇ! ನನ್ನ ಅಪಾರವಾದ ಈ ದುಃಖವನ್ನು ಯಾವನೆ ಪರಿಹರಿಸುವ ಹಾಗೆ ಕಾರ್ಯವನ್ನು ಸರಿಪಡಿಸುವುದು ನಿನ್ನ ಭಾರವಾಗಿದೆ, ರಾಮನಿಗೆ ಸ್ವಭಾವಿಕವಾಗಿ ನನ್ನಲ್ಲಿ ಪ್ರೇಮವಿದ್ದು, ಆತನು ನನ್ನನ್ನು ಕರೆದೊಯ್ಯುವವಿಷಯದಲ್ಲಿ ಪ್ರಯತ್ನ ಮಾಡತಕ್ಕವನಾದರೂ, ನಿನ್ನ ಪ್ರೋತ್ಸಾಹದಿಂದಲೇ ಜಾಗ್ರತೆಯಲ್ಲಿ ಆ ಪ್ರಯತ್ನವು ಫಲಕಾರಿಯಾಗುವುದು. ॥೬೫ ॥ ॥ ೬೬ ॥ ದಾಶರಥಿಯೇ! ರಾವಣನು ಗೊತ್ತುಮಾಡಿರುವ ಎರಡು ತಿಂಗಳ ಗಡುವಿನ ವರೆಗೆ ಕೂಡ ನಿನ್ನನ್ನು ಅಗಲಿ ಜೀವಿಸಿ ಇರಲಾರೆನು. ಒಂದು ತಿಂಗಳು ಮಾತ್ರ ಹೇಗಾದರೂ ಪ್ರಾಣ ಧಾರಣೆಯನ್ನು ಮಾಡಿಕೊಂಡಿರುವೆನು. ಈ ಮಾತನ್ನು ಪ್ರಮಾಣ ಪೂರ್ವಕವಾಗಿ ಹೇಳುತ್ತೇನೆ ಇದು ಸತ್ಯವೆಂದು ತಿಳಿ. ಮತ್ತು- ಪೂರ್ವದಲ್ಲಿ- ಇಂದ್ರನಿಗೆ ಬ್ರಹ್ಮಹತ್ಯಾ ದೋಷವು ಬರಲು, ಆತನ ರಾಜ್ಯ ಲಕ್ಷ್ಮಿಯು ಸ್ವರ್ಗವನ್ನು ಬಿಟ್ಟು ಹೊರಟುಹೋದಳು, ಇಂದ್ರನು ಕಳಾ ಹೀನನಾಗಿ ಶೋಭಿಸದೆ ಹೋದನು ಆಗ ವಿಷ್ಣುವು-ಅಶ್ವಮೇಧ ಯಾಗವನ್ನು ಮಾಡಿಸಿ ಇಂದ್ರನನ್ನು ಪಾಪರಹಿತನನ್ನಾಗಿ ಮಾಡಿ, ರಾಜ್ಯ ಲಕ್ಷ್ಮಿಯನ್ನು

ಜೀವಿತಂ ಧಾರಯಿಷ್ಯಾಮಿ ಮಾಸಂ ದಶರಥಾತ್ಮಜ ॥೬೭॥
ಊರ್ಧ್ವಂ ಮಾಸಾನ್ನ ಜೀವೇಯಂ ಸತ್ಯೇನಾಹಂ ಬ್ರವೀಮಿ ತೇ ।
ರಾವಣೇನೋಪರುದ್ಧಾಂ ಮಾಂ ನಿಕೃತ್ಯಾ ಪಾಪಕರ್ಮಣಾ ।
ತ್ರಾತುಮರ್ಹಸಿ ವೀರ ತ್ವಂ ಪಾತಾಳಾದಿವ ಕೌಶಿಕೀಮ್ ॥೬೮॥
ತತೋ ವಸ್ತ್ರಗತಂ ಮುಕ್ತ್ವಾ ದಿವ್ಯಂ ಚೂಡಾಮಣಿಂ ಶುಭಂ ।
ಪ್ರದೇಯೋ ರಾಘವಾಯೇತಿ ಸೀತಾ ಹನುಮತೇ ದದೌ ॥೬೯॥
ಪ್ರತಿಗೃಹ್ಯ ತತೋ ವೀರೋ ಮಣಿರತ್ನಮನುತ್ತಮಮ್ ॥

---

ಲಕ್ಷ್ಮಿಯನ್ನು ಹೇಗೋ ಹಾಗೆ, ತ್ರಾತುಂ-ರಕ್ಷಿಸಲಿಕ್ಕೆ, ಅರ್ಹಸಿ-ತಕ್ಕವನಾಗಿದ್ದೀಯೆ, (ಇತಿ-ಹೀಗೆಂಬ) ಇದಂ-ಈ ಮಾತನ್ನು, ಶೂರಂ - ಪರಾಕ್ರಮಶಾಲಿಯಾಗಿರುವ, ಮೇ - ನನ್ನ, ನಾಥಂ - ಸ್ವಾಮಿಯಾದ, ರಾಮಂ - ಶ್ರೀರಾಮನನ್ನು ಕುರಿತು, (ತ್ವಂ - ನೀನು) ಪುನಃಪುನಃ - ಅಡಿಗಡಿಗೂ, ಬ್ರೂಯಾಃ - ಹೇಳಬೇಕು, ||೬೭,೬೮,೬೮|| ತತಃ - ಹಾಗೆ ಹೇಳಿದ ಮೇಲೆ, ಸೀತಾ - ಜಾನಕಿಯು, ವಸ್ತ್ರಗತಂ - ವಸ್ತ್ರವನ್ನು ಹೊಂದಿರುವ, (ಸೀರೆಯ ಸೆರಗಿನಲ್ಲಿ ಕಟ್ಟಿದ್ದ) ದಿವ್ಯಂ - ಶ್ರೇಷ್ಠವೆನಿಸಿದ, ಶುಭಂ - ಮಂಗಳಕರವಾದ, ಚೂಡಾಮಣಿಂ - ಶಿರೋರತ್ನವನ್ನು, ಮುಕ್ತ್ವಾ - ಬಿಚ್ಚಿ. (ಅಯಂ-ಇದು, ತ್ವಯಾ-ನಿನ್ನಿಂದ) ರಾಘವಾಯ - ಶ್ರೀರಾಮನಿಗೆ, ಪ್ರದೇಯಃ - ಕೊಡಲ್ಪಡತಕ್ಕದು. ಇತಿ - ಹೀಗೆಂದು ಹೇಳಿ, ಹನುಮತೇ - ಹನುಮಂತನಿಗೆ, ದದೌ - ಕೊಟ್ಟಳು, ||೬೯|| ತತಃ - ತರುವಾಯ, ವೀರಃ - ಶೂರನಾದ ಆಂಜನೇಯನು, ಅನುತ್ತಮಂ - ಸರ್ವೋತ್ತಮವೆನಿಸಿದ, ಮಣಿರತ್ನಂ-ಶ್ರೇಷ್ಠವಾದ ರತ್ನವನ್ನು, ಪ್ರತಿಗೃಹ್ಯ-ಪರಿಗ್ರಹಿಸಿ, ಅಂಗುಳ್ಯಾ - ಬೆರಳಿನಿಂದ, ಯೋಜಯಾಮಾಸ - ಸೇರಿಸಿಕೊಂಡನು, ಅಸ್ಯ-ಈ ಮಾರುತಿಯ

---

ಕರೆಯಲು ಆಕೆ ಗವಾಕ್ಷತೀರ್ಥದಿಂದ ... ಬಂದು ನಿಂತಳು, ಬಳಿಕ ಅಶರೀರವಾಣಿಯಿಂದ ಆಕೆ ಅಲ್ಲಿರುವುದನ್ನು ತಿಳಿದು, ವಿಷ್ಣುವೂ, ದೇವತೆಗಳೂ, ಅಲ್ಲಿಗೆ ಹೋದರು, ಅವರನ್ನು ಕಂಡು ಲಕ್ಷ್ಮಿಯು ಪಾತಾಳಕ್ಕೆ ಹೊರಟುಹೋದಳು, ಬಳಿಕ ದೇವತೆಗಳು ಅಲ್ಲಿಗೆ ಹೋಗಲು ಅಸಮರ್ಥರಾದರು, ಆಗ ನಿಮ್ಮಲ್ಲಿ ಯಾರು ಸರ್ವಲಕ್ಷಣಸಂಪನ್ನರೋ ಅಂಥವರು ಆ ಲಕ್ಷ್ಮಿಯನ್ನು ಕರೆತರಬಹುದು, ಎಂದು ಮಾಗಳಿ ಆಕಾಶವಾಣಿಯು ಕೇಳಬಂದಿತು, ಆ ಸಮಯದಲ್ಲಿ ದೇವತೆಗಳೆಲ್ಲರೂ ಪುರುಷೋತ್ತಮನನ್ನು ಪ್ರಾರ್ಥಿಸಿದರು, ಆಗ ಶ್ರೀಮಹಾವಿಷ್ಣುವು ಪಾತಾಳಕ್ಕೆ ಹೋಗಿ ಆ ಲಕ್ಷ್ಮಿಯನ್ನು ಕರೆತಂದು ಇಂದ್ರನಿಗೆ ಒಪ್ಪಿಸಿದನು. ನನ್ನನ್ನು ಈ ಪಾಪಾತ್ಮನಾದ ರಾವಣನು ತಂದಿರುವನು, ಆದಕಾರಣ ಪಾತಾಳದಿಂದ ಇಂದ್ರಲಕ್ಷ್ಮಿಯನ್ನು ವಿಷ್ಣುವು ತಂದ ಪ್ರಕಾರ ನೀನೂ ನನ್ನನ್ನು ಕರೆದುಕೊಂಡು ಹೋಗಿ ಸಂರಕ್ಷಿಸು ಎಂದು ರಾಮನೊಡನೆ ಪುನಃ ಪುನಃ ತಿಳಿಸು. || ೬೭, ೬೮||-|| ಎಂಬದಾಗಿ ಹೇಳಿ ಜಾನಕಿಯು ತನ್ನ ಸೀರೆಯ ಸೆರಗಿನಲ್ಲಿ ಕಟ್ಟಿದ್ದ ಗಂಟನ್ನು, ಬಿಚ್ಚಿ ಅದರೊಳಿದ್ದ ಸರ್ವೋತ್ತಮವೆನಿಸಿದ ಚೂಡಾಮಣಿಯನ್ನು ರಾಮನಿಗೆ ಕೊಡು ಎಂದು ಆಂಜನೇಯನ ಕೈಗೆ ಕೊಟ್ಟಳು || ೬೯ || ತರುವಾಯ ಶೂರನಾದ ಆಂಜನೇಯನು- ಆ ಸೀತಾದೇವಿಯು ತನ್ನ ಕೈಗೆ ಕೊಟ್ಟ ದಿವ್ಯವಾದ ಶಿರೋರತ್ನವನ್ನು ತೆಗೆದುಕೊಂಡು, ತಲೆಗೆ ಅಲಂಕರಿಸಿಕೊಳ್ಳುವಾಗ ತಲೆಗೂದಲನ್ನು ಸೇರಿಸಲಿಕ್ಕಾಗಿ ಅದರ ಹಿಂಭಾಗದಲ್ಲಿ ಮಾಡಿರುವ

ಅಂಗುಲ್ಯಾ ಯೋಜಯಾಮಾಸ ನ ಹ್ಯಸ್ಯ ಪ್ರಾಭವ ದ್ಭುಜಃ ||೨೦||-||
ಮಣಿರತ್ನಂ ಕಪಿವರಃ ಪ್ರತಿಗೃಹ್ಯಾಽಭಿವಾದ್ಯ ಚ |
ಸೀತಾಂ ಪ್ರದಕ್ಷಿಣಂ ಕೃತ್ವಾ ಪ್ರಣತಃ ಪಾರ್ಶ್ವತಸ್ಸ್ಥಿತಃ ||೨೧||-||
ಹರ್ಷೇಣ ಮಹತಾ ಯುಕ್ತ ಸ್ಸೀತಾ ದರ್ಶನ ಜೇನ ಸಃ ||
ಹೃದಯೇನ ಗತೋ ರಾಮಂ ಶರೀರೇಣ ತು ವಿಷ್ಠಿತಃ ||೨೨||-||
ಮಣಿವರ ಮುಪಗೃಹ್ಯ ತಂ ಮಹಾರ್ಹಂ ಜನಕ ನೃಪಾತ್ಮಜಯಾ ಧೃತಂ ಪ್ರಭಾವಾತ್ |
ಗಿರಿ ರಿವ ಪವನಾವ ಧೂತ ಮುಕ್ತಃ ಸುಖಿತ ಮನಾಃ ಪ್ರತಿ ಸಂಕ್ರಮಂ ಪ್ರಪೇದೆ ||

— ಇತಿಶ್ರೀಮತ್ಸುನ್ದರಕಾಣ್ಡೇ ಅಷ್ಟತ್ರಿಂಶಸ್ಸರ್ಗಃ —

ಭುಜಃ - ತೋಳು, ನಪ್ರಾಭವದ್ಧಿ - (ಸೂಕ್ಷ್ಮರೂಪದಿಂದ ಇದ್ದ ನಾದಕಾರಣ) ತಾಳಲಾಗದೆ ಹೋಯಿತು, ಅಥವಾ - ಹೊಂದದೆ ಹೋಯಿತು, ಇಲ್ಲವೆ - ವಿಶೇಷವಾಗಿ ಪ್ರಕಾಶಿಸಿತು. ||೨೦|| || ಕಪಿವರಃ - ಮಾರುತಿಯು, ಮಣಿರತ್ನಂ - ಶ್ರೇಷ್ಠವಾದ ಮಣಿಯುನ್ನು, ಪ್ರತಿಗೃಹ್ಯ - ತೆಗೆದು ಕೊಂಡು, ಸೀತಾಂ - ಜಾನಕಿಯನ್ನು, ಅಭಿವಂದ್ಯ - ನಮಸ್ಕರಿಸಿ, ಪ್ರದಕ್ಷಿಣಾ - ಪ್ರದಕ್ಷಿಣೆಯನ್ನು, ಕೃತ್ವಾ - ಮಾಡಿ ಯೂ, ಪ್ರಣತಃ - ಬಾಗಿದ ತಲೆಯುಳ್ಳವನಾಗಿಯೂ, ಪಾರ್ಶ್ವತಃ - ಪಕ್ಕದಲ್ಲಿ, ಸ್ಥಿತಃ - ನಿಂತು ಕೊಂಡನು ||೨೧|| || ಸಃ - ಆ ಆಂಜನೇಯನು, ಸೀತಾದರ್ಶನಜೇನ - ಜಾನಕಿಯ ಸಂದರ್ಶನದಿಂದುಂಟಾದ, ಮಹತಾ - ಹೇರಳವಾಗಿರುವ, ಹರ್ಷೇಣ - ಸಂತೋಷದಿಂದ, ಯುಕ್ತಃ - ಕೂಡಿದವನಾಗಿ, ಹೃದಯೇನ- ಮನಸ್ಸಿನಿಂದ, ರಾಮಂ - ಶ್ರೀರಾಮನನ್ನು, ಗತಃ - ಹೊಂದಿದನು, ಶರೀರೇಣತು - ದೇಹದಿಂದಲಾದರೋ, ವಿಷ್ಠಿತಃ - ತನ್ನಸ್ಥಳದಲ್ಲಿ ನಿಂತಿದ್ದನು ||೨೨|| || ಸಃ - ಆ ಆಂಜನೇಯನು, ಜನಕನೃಪಾತ್ಮಜಯಾ - ಜಾನಕಿಯಿಂದ, ಧೃತಂ - ಧರಿಸಲ್ಪಟ್ಟಿದ್ದ, ಮಹಾರ್ಹಂ - ಬಹು ಬೆಲೆಯಾದ, ತಂ - ಆ, ಮಣಿವರಂ ಶ್ರೇಷ್ಠವಾದ ರತ್ನವನ್ನು, ಪ್ರಭಾವಾತ್ - ತನ್ನಸಾಮರ್ಥ್ಯದಿಂದ, ಉಪಗೃಹ್ಯ - ತೆಗೆದುಕೊಂಡು, ಪವನಾವಧೂತಮುಕ್ತಃ - ಗಾಳಿಯಿಂದ ಅಲ್ಲಾಡಿಸಲ್ಪಟ್ಟು ನಿಂತ, ಗಿರಿರಿವ - ಬೆಟ್ಟದಹಾಗೆ, ಸುಖಿತಮನಾಃ - ಹಾಯಾದ ಮನಸ್ಸುಳ್ಳವನಾಗಿ, ಪ್ರತಿಸಂಕ್ರಮಂ-ಪುನಃ ಪ್ರಯಾಣವನ್ನು, ಪ್ರಪೇದೆ-ಆರಂಭಿಸಿದನು||೨೩||

—ಇಂತು ಮೂವತ್ತೆಂಟನೆಯ ಸರ್ಗಂ—

ರಂಧ್ರದಿಂದ ತನ್ನ ಬೆರಳಿನಲ್ಲಿ ಸೇರಿಸಿಕೊಳ್ಳತೊಡಗಿದನು, ಆದರೆ ಸೂಕ್ಷ್ಮ ರೂಪದಿಂದಿದ್ದನಾದುದರಿಂದ ಅದನ್ನು ಧರಿಸಲು ಶಕ್ತನು ಸಮರ್ಥವಾಗದೆ ಹೋಯಿತು. || ೨೦ || ಇಂತಾ ಕಪಿವರನು ಆ ಮಣಿ ಶ್ರೇಷ್ಠವನ್ನು ತೆಗೆದುಕೊಂಡು, ಆಕೆಗೆ ಬಲವಂದು, ಶಿರಬಾಗಿ, ನಮಸ್ಕಾರವನ್ನೊಪ್ಪಿಸಿ, ನಮ್ರಭಾವದಿಂದ ಪಕ್ಕದಲ್ಲಿ ನಿಂತಿದ್ದನು || ೨೧ ||| ಆಗಲಾ ಆಂಜನೇಯನು- ಸೀತಾ ಸಂದರ್ಶನವು ಸಂಭವಿಸಿತಲ್ಲಾ ಎಂದು ಹರ್ಷ ಪರವಶನಾಗಿ, ಈ ಸೀತೆಯ ಕುಶಲ ವೃತ್ತಾಂತವನ್ನು ಶ್ರೀರಾಮನಿಗೆ ಯಾವಾಗ ಹೇಳುವೆನೋ ಎಂದು ತವಕಿಸುತ್ತಾ, ಮನಸ್ಸಿನಿಂದ ಶ್ರೀರಾಮನ ಸನ್ನಿಧಾನವನ್ನುಸೇರಿ, ಶರೀರದಿಂದ ಮಾತ್ರವೇ ಅಲ್ಲಿನಿಂತಿದ್ದನು || ೨೨ || ಮಾರುತಿಯು ಸೀತೆ ಧರಿಸಿದ್ದ ಅಮೂಲ್ಯವಾದ ಶಿರೋ ರತ್ನವನ್ನು ತೆಗೆದುಕೊಂಡು, ಶ್ರೀ ರಾಮ ಸನ್ನಿಧಾನವನ್ನು ಕುರಿತು ತೆರಳಲು ಉದ್ಯುಕ್ತನಾಗಿ, ತಾನು ಇದುವರೆಗೂ ಪಟ್ಟ ಶ್ರಮವೆಲ್ಲ ಸಾರ್ಥಕವಾಯಿತೆಂದು ಆನಂದವನ್ನುಹೊಂದಿ ಗಾಳಿಯಿಂದ ಅಲುಗಿಸಲಾಗದ ಪರ್ವತದಂತೆ ನಿಶ್ಚಲನಾಗಿದ್ದು, ಮರಳಿ ತೆರಳಲು ಸನ್ನದ್ಧನಾಗುತ್ತಿದ್ದನು.೨೩||-

- ಇಂತು ಮೂವತ್ತೆಂಟನೆಯ ಸರ್ಗಂ -

ಶ್ರೀಃ

# ಶ್ರೀ ರಾಮಚಂದ್ರ ಪರಬ್ರಹ್ಮಣೇನಮಃ.

## — ಏಕೋನ ಚತ್ವಾರಿಂಶಸ್ಸರ್ಗಃ —



ಮಣಿಂ ದತ್ವಾ ತತ ಸ್ಸೀತಾ ಹನುಮಂತ ಮಥಾಬ್ರವೀತ್ ।
ಅಭಿಜ್ಞಾನ ಮಜ್ಞಾಭಿಜ್ಞಾತ ಮೇತ ದ್ರಾಮಸ್ಯ ತತ್ವತಃ ॥೧॥
ಮಣಿಂ ತು ದೃಷ್ಟ್ವಾ ರಾಮೋ ವೈ ತ್ರಯಾಣಾಂ ಸಂ ಸ್ಮರಿಷ್ಯತಿ ।
ವೀರೋ ಜನನ್ಯಾ ಮಮ ಚ ರಾಜ್ಞೋ ದಶರಥಸ್ಯಚ ॥೨॥
ಸ ಭೂಯ ಸ್ತ್ವಂ ಸಮುತ್ಸಾಹೇ ಚೋದಿತೋ ಹರಿಸತ್ತಮ।

---

### -- ಮೂವತ್ತೊಂಭತ್ತನೆಯ ಸರ್ಗಂ —

ಕಂದ॥ ಗುಣನಿಧಿ ಮಾರುತಿ ಚೂಡಾ ಮಣಿಯಂ ವೈದೇಹಿಯಿಂದೆ ಪಡೆದಂ ಮುದದಿಂ ।
ಮಣಿದಾಕೆಗೆ ಪೊರಮಡೆ ತಾ । ನಣಿಯಾಗುತ ಲಿರ್ದನಾದು ಸಾಂತ್ವವ ನೊರೆದಂ ।

ಅಥ - ಅನಂತರದಲ್ಲಿ, ಸೀತಾ - ಜಾನಕಿಯು, ಮಣಿಂ - ಶಿರೋರತ್ನವನ್ನು, ದತ್ವಾ - ಕೊಟ್ಟು, ತತಃ - ಪ್ರಯಾಣಕೆತೊಡಗಿದ ಮೇಲೆ, ಏತತ್-ಈ, ಅಭಿಜ್ಞಾನಂ - ಗುರುತು, ರಾಮಸ್ಯ-ಶ್ರೀರಾಮನಿಗೆ ತತ್ವತಃ - ಯಥಾರ್ಥವಾಗಿ, ಅಭಿಜ್ಞಾತಂ - ತಿಳಿಯಬಂದಿದೆ, ಇತಿ - ಹೀಗೆಂದು, ಹನುಮಂತಂ - ಆಂಜನೇಯನನ್ನು ಕುರಿತು, ಅಬ್ರವೀತ್ - ಹೇಳತೊಡಗಿದಳು ॥೧॥ ವೀರಃ - ಶೂರನಾದ, ರಾಮಃ - ಶ್ರೀರಾಮನು, ಮಣಿಂ - ಶಿರೋರತ್ನವನ್ನು, ದೃಷ್ಟ್ವಾ - ನೋಡಿ, ಜನನ್ಯಾಃ - ತಾಯಿಯನ್ನೂ, ದಶರಥಸ್ಯಚ - ದಶರಥನೆಂಬ, ರಾಜ್ಞಃ - ರಾಜನನ್ನೂ, ಮಮಚ- ನನ್ನನ್ನೂ, ತ್ರಯಾಣಾಂ-ಈ ಮೂವರನ್ನೂ, ಸಂಸ್ಮರಿಷ್ಯತಿ-ನೆನೆಯುವನು.॥೨॥ಹರಿಸತ್ತಮ-ಎಲೈವಾನರೋತ್ತಮನೇ?, ಸಃ-ಇಲ್ಲಿಂದ ಪ್ರಯಾಣಮಾಡಿದ, ತ್ವಂ- ನೀನು, ಭೂಯಃ-ಮರಳಿ, ಸಮುತ್ಸಾಹೆ-ಮುಂದಿನಕೆಲಸಮಾಡುವಸಂತೋಷದಲ್ಲಿ, ಚೋದಿತಃ.

---

### - ಮೂವತ್ತೊಂಭತ್ತನೆಯ ಸರ್ಗಂ -

ಬಳಿಕ ವೈದೇಹಿಯು- ಶ್ರೀರಾಮಚಂದ್ರನು ಚೆನ್ನಾಗಿ ತಿಳಿದಿರುವ ಶ್ರೇಷ್ಠವಾದ ಕುರುಹೆನಿಸಿರುವ ಚೂಡಾಮಣಿಯನ್ನು ಆಂಜನೇಯನ ಕಯ್ಯಲ್ಲಿ ಕೊಟ್ಟು ಆ ಮೇಲೆ ಆತನನ್ನು ಕುರಿತು ಇಂತೆಂದಳು. ॥ ೧ ॥ ಎಲೈ ಮಾರುತಿಯೆ । ರಾಘವನು ಈ ದಿವ್ಯರತ್ನವನ್ನು ನೋಡಿದುದೇ ಆದರೆ- ಆ ಕೂಡಲೆ, ಈ ಶಿರೋರತುನವನ್ನು ಧರಿಸಿದ್ದ ನನ್ನನ್ನೂ, ವಿವಾಹ ಕಾಲದಲ್ಲಿ ನಮ್ಮ ತಂದೆಯ ಕೈಲಿದ್ದುದನ್ನು ತೆಗೆದುಕೊಂಡು, ನಮ್ಮ ತಾಯಿ ದಶರಥಮಹಾರಾಜನ ಮೂಲಕ ನನಗೆ ಕೊಡಿಸಿದುದರಿಂದ ನಮ್ಮ ತಾಯಿಯನ್ನೂ, ದಶರಥ ಚಕ್ರವರ್ತಿಯನ್ನೂ ನೆನೆಸಿಕೊಳ್ಳುವನು ॥ ೨ ॥ ಎಲೈ ಆಂಜನೇಯನೇ । ನನಗೆ ಮೇಲನ್ನು ಉಂಟುಮಾಡುವ ವಿಷಯದಲ್ಲಿ ನೀನು ಸ್ವತಃ ಪ್ರವರ್ತಿಸಿದವನಾಗಿದ್ದೀಯೆ. ಅಂತಹ ನಿನ್ನನ್ನು

ಅಸ್ಮಿನ್ಕಾರ್ಯ ಸಮಾರಂಭೇ ಪ್ರಚಿಂತಯ ಯದುತ್ತರಂ ॥೩॥
ತ್ವಮಸ್ಮಿನ್ ಕಾರ್ಯನಿರ್ಯೋಗೇ ಪ್ರಮಾಣಂ ಹರಿಸತ್ತಮ ।
ಹನುಮನ್ಯತ್ನ ಮಾಸ್ಥಾಯ ದುಃಖಕ್ಷಯ ಕರೋಭವ ॥೪॥
ತಸ್ಯ ಚಿಂತಯತೋ ಯತ್ನೋ ದುಃಖಕ್ಷಯ ಕರೋ ಭವೇತ್ ॥೪॥-॥
ಸ ತಥೇತಿ ಪ್ರತಿಜ್ಞಾಯ ಮಾರುತಿ ರ್ಭೀಮ ವಿಕ್ರಮಃ ॥
ಶಿರಸಾ ವಂದ್ಯ ವೈದೇಹೀಂ ಗಮನಾ ಯೋಪಚಕ್ರಮೆ ॥೫॥-॥
ಜ್ಞಾತ್ವಾ ಸಂ ಪ್ರಸ್ಥಿತಂ ದೇವೀ ವಾನರಂ ಮಾರುತಾತ್ಮಜಮ್ ॥

---

ನನ್ನಿಂದ ಪ್ರೇರಿಸಲ್ಪಟ್ಟವನಾಗಿ, ಅಸ್ಮಿನ್ - ಈ,ಕಾರ್ಯ ಸಮಾರಂಭೆ - ಕೆಲಸವನ್ನು ಅರಂಭಿಸುವ ವಿಷಯದಲ್ಲಿ, ಯತ್ - ಯಾವ, ಉತ್ತರಂ - ಮರುಮಾತು, ಅಸ್ತಿ - ಉಂಟೊ, ತತ್ - ಅದನ್ನು, ಪ್ರಚಿಂತಯ-ಚೆನ್ನಾಗಿ ಆಲೋಚಿಸು ॥೩॥ ಹರಿಸತ್ತಮ - ಎಲೈ ಕಪಿವರನೆ ! ತ್ವಂ - ನೀನು, ಅಸ್ಮಿನ್-ಈ,ಕಾರ್ಯ ನಿರ್ಯೋಗೆ- ಕೆಲಸವನ್ನು ಕೈಗೂಡಿಸುವ ವಿಷಯದಲ್ಲಿ, ಪ್ರಮಾಣಂ - ನಿಯಾಮಕನು, ಹನುಮನ್ - ಎಲೈ ಆಂಜನೇಯನೆ !, ಯತ್ನಂ - ಪ್ರಯತ್ನವನ್ನು, ಆಸ್ಥಾಯ - ಆಶ್ರಯಿಸಿ, ದುಃಖಕ್ಷಯಕರಃ - ವ್ಯಸನವನ್ನುಪಹರಿಸತಕ್ಕವನು, ಭವ - ಆಗು, ತಸ್ಯ - ಆ ಕಾರ್ಯಸಿದ್ಧಿಯನ್ನು, ಚಿಂತಯತಃ - ಯೋಚಿಸುತಲಿರುವ, ತವ - ನಿನ್ನ, ಯತ್ನಃ - ಪ್ರಯತ್ನವು, ದುಃಖಕ್ಷಯಕರಃ - ನನ್ನ ದುಃಖವನ್ನ ಪರಿಹರಿಸತಕ್ಕದು, ಭವೇತ್ - ಆಗಬೇಕು ॥೪, ೪॥॥ ಭೀಮವಿಕ್ರಮಃ - ಭಯಂಕರವಾದ ಪರಾಕ್ರಮವುಳ್ಳ, ಮಾರುತಿಃ - ವಾಯುಪುತ್ರನಾದ, ಸಃ - ಆ ಆಂಜನೇಯನು, ತಥೇತಿ - ಹಾಗೆಯೇ ಆಗಲೆಂದು, ಪ್ರತಿಜ್ಞಾಯ - ಪ್ರತಿಜ್ಞೆಯನ್ನುಮಾಡಿ, ವೈದೇಹೀಂ - ಜಾನಕಿಯನ್ನು, ಶಿರಸಾ - ತಲೆಯಿಂದ, ಆವಂದ್ಯ - ನಮಸ್ಕರಿಸಿ, ಗಮನಾಯ - ಪ್ರಯಾಣಕ್ಕೆ, ಉಪಚಕ್ರಮೆ - ಪ್ರಾರಂಭಿಸಿದನು ॥೫॥ ಮೈಥಿಲೀ - ಜನಕಪುತ್ರಿಯಾದ, ದೇವೀ-ಸೀತಾದೇವಿಯು, ಮಾರುತಾತ್ಮಜಂ - ವಾಯುನಂದನನಾದ, ವಾನರಂ - ಹನುಮಂತನನ್ನು, ಸಂಪ್ರಸ್ಥಿತಂ - ಪ್ರಯಾಣಸನ್ನದ್ಧನನ್ನಾಗಿ, ಜ್ಞಾತ್ವಾ - ಅರಿತು, ಭಾಷ್ಪಗದ್ಗದಯಾ -

---

ನಾನು ಪುನಃ ಪ್ರೇರಿಸುತಲಿದೇನೆ. ಆದಕಾರಣ ಈ ಕಾರ್ಯ ಸಂದರ್ಭದಲ್ಲಿ- ಮುಂದೆ ಯಾವ ಯಾವುದನ್ನು ಹೇಗೆ ಹೇಗೆ ಮಾಡಬೇಕೆಂಬ, ಎಲ್ಲವನ್ನೂ ನೀನೇ ಚೆನ್ನಾಗಿ ಯೋಚಿಸಿ ನೆರವೇರಿಸಬೇಕಾಗಿದೆ ॥ ೩ ॥ ನಾನು ಈ ದುಃಖ ಸಾಗರವನ್ನು ದಾಟಿ ಸಮೃದ್ಧಿಯನ್ನು ಹೊಂದುವ ವಿಷಯದಲ್ಲಿ ಸಕಲ ಕಾರ್ಯಸಿದ್ಧಾಂತ ಶಾಲಿಯಾದ ನೀನೇ ಸ್ವತಂತ್ರನಾಗಿದ್ದೀಯ, ಆದಕಾರಣ ಸರ್ವ ಪ್ರಕಾರದಿಂದಲೂ ಪ್ರಯತ್ನವನ್ನು ಮಾಡಿ ನನ್ನ ದುಃಖವನ್ನು ಪರಿಹರಿಸು, ನೀನು ಪ್ರಯತ್ನಿಸಿದರೆ ನನ್ನ ಶೋಕವು ಪರಿಹಾರವಾಗುವುದು ॥ ೪, ೪ ॥ ॥ ಎಂದು ಹೇಳಲು- ಆ ಮಾತನ್ನು ಕೇಳಿ, ಭೀಮ ಪರಾಕ್ರಮನಾದ ಮಾರುತಿಯು- ಎಲೌ ತಾಯೇ ! ಹಾಗೆಯೇ ಆಗಲಿ ಎಂದು ಒಪ್ಪಿಕೊಂಡು, ತಲೆಯನ್ನು ತಗ್ಗಿಸಿ ಆಕೆಗೆ ನಮಸ್ಕಾರವನ್ನು ಒಪ್ಪಿಸಿ, ಪ್ರಯಾಣಕ್ಕೆ ಸನ್ನದ್ಧನಾಗುತ್ತಿದ್ದನು ॥೫॥ ॥ ಕಪಿವರನು ಪ್ರಯಾಣಾಭಿಮುಖನಾದನೆಂಬುದು ಜಾನಕಿಗೆ ತಿಳಿಯಿತು. ಮಹಾ ಸಾಹಸವನ್ನು ಮಾಡಿ ಇಷ್ಟುದೂರಬಂದು ಬಹು ಕ್ರೂರವಾದ ಸ್ಥಾನವನ್ನು ಹೊಕ್ಕು, ತನ್ನ ಪ್ರಾಣ ಪ್ರಿಯನ ಕುಶಲವೃತ್ತಾಂತವನ್ನು ತಿಳಿಸಿ, ಪ್ರಾಣಗಳನ್ನು ತೊರೆಯಲು ಸಿದ್ಧಳಾಗಿದ್ದ ತನ್ನ ಕಿವಿಗಳಲ್ಲಿ ಅಮೃತ

ಬಾಷ್ಪಗದ್ಗದಯಾ ವಾಚಾ ಮೈಥಿಲೀ ವಾಕ್ಯಮಬ್ರವೀತ್ ||೬||-||
ಕುಶಲಂ ಹನುಮನ್ ಬ್ರೂಯಾಃ ಸಹಿತೌ ರಾಮಲಕ್ಷ್ಮಣೌ ||
ಸುಗ್ರೀವಂ ಚ ಸಹಾಮಾತ್ಯಂ ವೃದ್ಧಾನ್ ಸರ್ವಾಂಶ್ಚ ವಾನರಾನ್ ||೭||-||
ಬ್ರೂಯಾಸ್ತ್ವಂ ವಾನರಶ್ರೇಷ್ಠ ಕುಶಲಂ ಧರ್ಮಸಂಹಿತಮ್ ||೮||
ಯಥಾ ಸ ಚ ಮಹಾಬಾಹುರ್ಮಾಂ ತಾರಯತಿ ರಾಘವಃ |
ಅಸ್ಮಾದ್ದುಃಖಾಂಬುಸಂರೋಧಾತ್ತ್ವಂ ಸಮಾಧಾತುಮರ್ಹಸಿ ||೯||
ಜೀವಂತೀಂ ಮಾಂ ಯಥಾ ರಾಮಃ ಸಂಭಾವಯತಿ ಕೀರ್ತಿಮಾನ್ |

---

ಕಣ್ಣೀರುಹೊರಡುತಲಿರುವುದರಿಂದ ತೊದಲುತಲಿರುವ, ವಾಚಾ - ಮಾತಿನಿಂದ, ವಾಕ್ಯಂ - ಮುಂದಿನ ವಿಷಯವನ್ನು, ಅಬ್ರವೀತ್ - ಹೇಳತೊಡಗಿದಳು ||೬|| ಹನುಮನ್- ಎಲೈ ಆಂಜನೇಯನೇ !, ಸಹಿತೌ- ಒಡಗೂಡಿರುವ, ರಾಮಲಕ್ಷ್ಮಣೌ - ರಾಮಲಕ್ಷ್ಮಣರನ್ನು ಕುರಿತೂ, ಸಹಾಮಾತ್ಯಂ - ಮಂತ್ರಿಗಳಿಂದ ಕೂಡಿರುವ, ಸುಗ್ರೀವಂ - ಸುಗ್ರೀವನನ್ನು ಕುರಿತೂ, ವೃದ್ಧಾನ್ - ಹಿರಿಯರಾಗಿರುವ, ಸರ್ವಾನ್ - ಸಮಸ್ತರಾದ, ವಾನರಾನ್ - ಕಪಿಗಳನ್ನು ಕುರಿತೂ, ವಾನರಶ್ರೇಷ್ಠ-ಕಪಿವರನಾದ ಆಂಜನೇಯನೇ !, ತ್ವಂ - ನೀನು, ಕುಶಲಂ ಕ್ಷೇಮವನ್ನು, ಧರ್ಮಸಂಹಿತಂ - ಧರ್ಮದಿಂದೊಡಗೂಡಿರುವ ಹಾಗೆ, ಬ್ರೂಯಾಃ - ಹೇಳಬೇಕು ||೭||,೮|| ಮಹಾಬಾಹುಃ - ಹೇರಳವಾದ ತೋಳುಬಲವುಳ್ಳ, ಸಃ ರಾಘವಃ -ಆ ರಾಮಚಂದ್ರನು, ಮಾಂ - ನನ್ನನ್ನು, ಅಸ್ಮಾತ್ - ಈ, ದುಃಖಾಂಬುಸಂರೋಧಾತ್ - ಶೋಕಸಾಗರದಿಂದ, ಯಥಾ - ಹೇಗೆ, ತಾರಯತಿ - ದಾಟಿಸಬಲ್ಲನೋ, (ತಥಾ-ಹಾಗೆ) ತ್ವಂ - ನೀನು, ಸಮಾಧಾತುಂ -ಅನುಕೂಲಪಡಿಸಲಿಕ್ಕೆ, ಅರ್ಹಸಿ-ತಕ್ಕವನಾಗಿದ್ದೀಯೆ ||೯|| ಹನುಮನ್ ಎಲೈ ಆಂಜನೇಯನೆ !, ಕೀರ್ತಿಮಾನ್ - ಯಶೋವಂತನಾಗಿರುವ, ರಾಮಃ - ಶ್ರೀರಾಮನು, ಜೀವಂತೀಂ - ಪ್ರಾಣಸಹಿತಳಾಗಿರುವ, ಮಾಂ - ನನ್ನನ್ನು, ಯಥಾ - ಹೇಗೆ, ಸಂಭಾವತಿ - ಬಹುಮಾನಿಸಬಲ್ಲನೋ, ತಥಾ - ಆ ಪ್ರಕಾರವಾಗಿ, ತತ್ - ಆದುಃಖಪರಿಹಾರಕವಾದ ಮಾತು, ತ್ವಯಾ - ನಿನ್ನಿಂದ

---

ಧಾರೆಗಳನ್ನು ಕರೆದು, ಜೀವಿತವನ್ನುಳುಹಿದ ಜೀವನೌಷಧವೆನಿಸಿದ ಮಹಾತ್ಮನು ಹೊರಟು ಹೋಗುವನಲ್ಲಾ ಎಂದು ಕಣ್ಣುಗಳಲ್ಲಿ ನೀರಿನ ಕಾಲುವೆಯು ತಾನಾಗಿ ಹರಿಯತೊಡಗಿತು. ಮಾತುಗಳು ತೊದಲುತಲಿದ್ದುವು, ಕಪಿವರನನ್ನು ಕುರಿತು ಇಂತೆಂದಳು || ೬ || ಎಲೈ ವೀರ ಹನುಮನೇ ! ರಾಮ ಲಕ್ಷ್ಮಣರನ್ನೂ, ಮಂತ್ರಿಗಳಿಂದೊಡಗೂಡಿರುವ ಸುಗ್ರೀವನನ್ನೂ, ಹಿರಿಯರಾದ ಕಪಿಗಳೆಲ್ಲರನ್ನೂ ಕುರಿತು ಸೀತೆಯು ಧರ್ಮಯುಕ್ತವಾಗಿ ಕುಶಲಪ್ರಶ್ನೆಮಾಡಿದಳೆಂದು ಹೇಳು || ೭, ೮ || ಆಜಾನುಬಾಹುವಾದ ಶ್ರೀರಾಮಚಂದ್ರನು-ಈ ಅಪಾರವಾದ ದುಃಖಸಾಗರದಿಂದ ಬಲು ಬೇಗನೆ ಹೇಗೆ ದಾಟಿಸಬಲ್ಲನೋ, ಹಾಗೆ ಎಲ್ಲ ಕೆಲಸಗಳನ್ನೂ ಅಣಿಮಾಡಲು ನೀನೇ ತಕ್ಕವನು || ೯ || ಎಲೈ ಹನುಮಂತನೇ ! ನಾನು ಪ್ರಾಣಗಳನ್ನು ತೊರೆದುಕೊಳ್ಳುವುದಕಿಂತ ಮೊದಲೇ ನನ್ನನ್ನು ಕರೆದೊಯ್ಯಲು ರಾಘವನು ತನ್ನ ಮನದೊಳಗೆ ಹೇಗೆ ಉತ್ಸಾಹ ಸಂಪನ್ನನಾಗಬಲ್ಲನೋ ಅದರಂತೆ ಮಾಡತಕ್ಕುದು ನಿನ್ನ ಕರ್ತವ್ಯವಾಗಿದೆ, ಇದಕೊ, ರಾಮಚಂದ್ರನನ್ನು ಕಂಡು ನೀನು ಮಾತನಾಡುವ ಸಂದರ್ಭದೊಳಗೆ ಕಾರುಣ್ಯಸಿಂಧುವೆನಿಸಿದ ಆ ಅನಾಥಬಂಧುವಿನ ಮನವು ಹೇಗೆ ಬಲು ಬೇಗನೆ

ತತ್ತಥಾ ಹನುಮನ್ವಾಚ್ಯಂ ವಾಚಾ ಧರ್ಮ ಮವಾಪ್ನುಹಿ ॥೧೦॥
ನಿತ್ಯ ಮುತ್ಸಾಹ ಯುಕ್ತಾಶ್ಚ ವಾಚ ಶ್ರುತ್ವಾ ತ್ವಯೇರಿತಾಃ ।
ವರ್ಧಿಷ್ಯತೇ ದಾಶರಥೇಃ ಪೌರುಷಂ ಮದವಾಪ್ತಯೆ ॥೧೧॥
ಮತ್ಸಂದೇಶ ಯುತಾ ವಾಚ ಸ್ತ್ವತ್ತ ಶ್ರುತ್ವೈವ ರಾಘವಃ ।
ಪರಾಕ್ರಮ ವಿಧಿಂ ವೀರೋ ವಿಧಿವ ತ್ಸಂ ವಿಧಾಸ್ಯತಿ ॥೧೨॥
ಸೀತಾಯಾ ವಚನಂ ಶ್ರುತ್ವಾ ಹನುಮಾ ನ್ಮಾರುತಾತ್ಮಜಃ ।
ಶಿರಸ್ಯಂಜಲಿ ಮಾಧಾಯ ವಾಕ್ಯ ಮುತ್ತರ ಮಬ್ರವೀತ್ ॥೧೩॥
ಕ್ಷಿಪ್ರ ಮೇಷ್ಯತಿ ಕಾಕುತ್ಸ್ಥೋ ಹರ್ಯೃಕ್ಷ ಪ್ರವರೈ ರ್ವೃತಃ ।

ವಾಚ್ಯಂ - ಹೇಳಲ್ಪಡತಕ್ಕದು, ವಾಚಾ - ಸಮಯೋಚಿತವಾಗಿ ಹೇಳುವ ಮಾತಿನಿಂದ, ಧರ್ಮಂ-ಧರ್ಮವನ್ನು, ಅವಾಪ್ನುಹಿ - ಹೊಂದು ॥೧೦॥ ತ್ವಯಾ - ನಿನ್ನಿಂದ, ಈರಿತಾಃ - ಹೇಳಲ್ಪಟ್ಟ ನಿತ್ಯಂ-ಯಾವಗಲೂ, ಉತ್ಸಾಹಯುಕ್ತಾಶ್ಚ - ಉತ್ಸಾಹದಿಂದ ಕೂಡಿರುವ, (ಪ್ರೋತ್ಸಾಹವನ್ನುಂಟುಮಾಡುವ) ವಾಚಃ-ಮಾತುಗಳನ್ನು; ಶ್ರುತ್ವಾ - ಕೇಳಿ, ದಾಶರಥೇಃ - ಶ್ರೀರಾಮನ, ಪೌರುಷಂ - ಪರಾಕ್ರಮವು, ಮದವಾಪ್ತಯೆ - ನನ್ನನ್ನು ಪಡೆಯಲಿಕ್ಕೆ, ವರ್ಧಿಷ್ಯತೆ - ವೃದ್ಧಿಯನ್ನು ಹೊಂದುವುದು, ॥೧೧॥ ವೀರಃ - ಶೂರನಾದ, ರಾಘವಃ - ಶ್ರೀರಾಮನು, ಮತ್ಸಂದೇಶಯುತಾಃ - ನನ್ನ ವೃತ್ತಾಂತ ದಿಂದೊಡಗೂಡಿರುವ, ವಾಚಃ - ಮಾತುಗಳನ್ನು, ತ್ವತ್ತಃ - ನಿನ್ನಿಂದ, ಶ್ರುತ್ವೈವ - ಕೇಳಿಯೇ, ಪರಾಕ್ರಮವಿಧಿಂ- ಶೌರ್ಯಪದ್ಧತಿಯನ್ನು, ವಿಧಿವತ್ - ಕ್ರಮಪ್ರಕಾರವಾಗಿ, ಸಂವಿಧಾಸ್ಯತಿ - ಚೆನ್ನಾಗಿಮಾಡುವನು ॥೧೨॥ ಮಾರುತಾತ್ಮಜಃ-ವಾಯುನಂದನನಾದ, ಹನುಮಾನ್ - ಆಂಜನೇಯನು, ಸೀತಾಯಾಃ - ಜಾನಕಿಯ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಶಿರಸಿ - ತಲೆಯಮೇಲೆ, ಅಂಜಲಿಂ - ಜೋಡಿಸಿದ ಕರವನ್ನು, ಆಧಾಯ - ಇಟ್ಟುಕೊಂಡು, ಉತ್ತರಂ - ಮುಂದಿನಮಾತನ್ನು, ಅಬ್ರವೀತ್ - ಹೇಳತೊಡಗಿದನು ॥೧೩॥ ಯಃ - ಯಾವನು, ಯುಧಿ - ರಣದಲ್ಲಿ, ಅರೀನ್ - ಶತ್ರುಗಳನ್ನು, ವಿಜಿತ್ಯ - ಜಯಿಸಿ, ತೆ - ನಿನ್ನ, ಶೋಕಂ-ದುಃಖವನ್ನು, ವ್ಯಪನಯಿಷ್ಯತಿ - ಪರಿಹರಿಸುವನೊ, ಸಃ - ಅಂತಹ, ಕಾಕುತ್ಸ್ಥಃ - ಶ್ರೀರಾಮನು,

ಕರಗಬಲ್ಲುದೋ ಹಾಗೆ ಒಳ್ಳೆಯ ಮಾತುಗಳನ್ನು ಹೇಳಿ ಧರ್ಮವನ್ನು ಸಂಪಾದಿಸಿಕೊಂಬುದು ನಿನ್ನ ಭಾರವಾಗಿದೆ ॥೧೦॥ ಉತ್ಸಾಹವನ್ನು ಹೆಚ್ಚಿಸುವ, ಮತ್ತು ನನ್ನ ವಿಷಯದಲ್ಲಿ ಕನಿಕರವನ್ನು ತೋರುವ ನಿನ್ನಯ ಮೃದುವಾದ ಮಾತುಗಳನ್ನು ಕೇಳಿದ ಕೂಡಲೇ, ನನ್ನನ್ನು ಜಾಗ್ರತೆಯಲ್ಲಿ ಪಡೆಯುವಂತೆ ದಾಶರಥಿಯ ಶೌರ್ಯವು ಹೆಚ್ಚಬೇಕು, ಅದರಂತೆ ನೀನು ಪ್ರಯತ್ನಿಸಬೇಕು. ॥ ೧೧ ॥ ನನ್ನ ಕ್ಷೇಮ ಸಮಾಚಾರವನ್ನು ಕೇಳಿದ ಕ್ಷಣದಲ್ಲಿಯೇ ನನ್ನನ್ನು ಇಲ್ಲಿಂದ ಕರೆದೊಯ್ಯುವ ವಿಷಯದಲ್ಲಿ ಶ್ರೀರಾಮನು ಮೊದಲಿಗಿಂತ ಮಿಗಿಲೆನಿಸಿದ ಪ್ರಯತ್ನವನ್ನು ಕ್ರಮವಾಗಿ ಮಾಡಬೇಕು. ಅದರಂತೆ ಆತನೊಡನೆ ನೀನು ಸಂಚಿನಿಂದಮಾತನಾಡಬೇಕು, ನೀನು ಹೇಳಿದರೆ ಆತನು ಹಾಗೆಯೇ ಮಾಡುವನು ॥ ೧೨ ॥ ಎಂದ ಜಾನಕಿಯ ವಚನವನ್ನಾಲಿಸಿದ ಆಂಜನೇಯನು- ಕರಗಳನ್ನು ಜೋಡಿಸಿ, ಶಿರದಮೇಲಿಟ್ಟು, ಆಕೆಯನ್ನು ಕುರಿತು ಇಂತೆಂದನು- ॥ ೧೩ ॥ ಓ ತಾಯಿ! ನೀನು ಕಣ್ಣೀರನ್ನು ಕರೆಯಬೇಡ, ನಿನ್ನನ್ನು ನೋಡಿದರೆ ನನಗೂ ಸಂಕಟವು ಹೆಚ್ಚುವುದು, ಶ್ರೀರಾಮನು ಕಪಿಗಳ

ಯಸ್ತೇ ಯುಧಿ ವಿಜಿತ್ಯಾರೀನ್ ಶೋಕಂ ವ್ಯಪನಯಿಷ್ಯತಿ ॥೧೪॥
ನ ಹಿ ಪಶ್ಯಾಮಿ ಮರ್ತ್ಯೇಷು ನಾಸುರೇಷು ಸುರೇಷು ವಾ ।
ಯಸ್ತಸ್ಯ ಕ್ಷಿಪತೋ ಬಾಣಾನ್ ಸ್ಥಾತುಮುತ್ಸಹತೇಽಗ್ರತಃ ॥೧೫॥
ಅಪ್ಯರ್ಕಮಪಿ ಪರ್ಜನ್ಯಮಪಿ ವೈವಸ್ವತಂ ಯಮಂ ।
ಸ ಹಿ ಸೋಢುಂ ರಣೇ ಶಕ್ತಸ್ತವ ಹೇತೋರ್ವಿಶೇಷತಃ ॥೧೬॥
ಸ ಹಿ ಸಾಗರಪರ್ಯಂತಾಂ ಮಹೀಂ ಶಾಸಿತುಮೀಹತೇ ।
ತ್ವನ್ನಿಮಿತ್ತೋ ಹಿ ರಾಮಸ್ಯ ಜಯೋ ಜನಕನಂದಿನಿ ॥೧೭॥
ತಸ್ಯ ತದ್ವಚನಂ ಶ್ರುತ್ವಾ ಸಮ್ಯಕ್ಸತ್ಯಂ ಸುಭಾಷಿತಂ ।

---

ಹರ್ಯೃಕ್ಷಪ್ರವರೈಃ - ಕಪಿಗಳಿಂದಲೂ ಕರಡಿಗಳಿಂದಲೂ, ವೃತಃ - ಆವರಿಸಲ್ಪಟ್ಟವನಾಗಿ, ಕ್ಷಿಪ್ರಂ-ಬೇಗನೆ, ಏಷ್ಯತಿ - ಬರುವನು ॥೧೪॥ ಯಃ - ಯಾವನು, ಬಾಣಾನ್ - ಬಾಣಗಳನ್ನು, ಕ್ಷಿಪತಃ - ಪ್ರಯೋಗಿಸುತಲಿರುವ, ತಸ್ಯ - ಆ ಶ್ರೀರಾಮನ, ಅಗ್ರತಃ - ಇದಿರಿಗೆ, ಸ್ಥಾತುಂ - ನಿಲ್ಲಲಿಕ್ಕೆ, ಉತ್ಸಹತೆ - ಸಹಿಸಬಲ್ಲನೋ, (ತಂ - ಅಂಥವನನ್ನು) ಮರ್ತ್ಯೇಷು - ಮನುಷ್ಯರಲ್ಲಿ, ನಪಶ್ಯಾಮಿ - ಕಾಣೆನು, ಅಸುರೇಷು - ರಾಕ್ಷಸರಲ್ಲಿಯಾಗಲಿ, ಸುರೇಷುವಾ - ದೇವತೆಗಳಲ್ಲಿಯಾಗಲಿ, ನಹಿಪಶ್ಯಾಮಿ - ಅರಿಯೆನು, ॥೧೫॥ ಸಹಿ - ಆ ಶ್ರೀರಾಮನಾದರೋ, ರಣೇ - ಯುದ್ಧದಲ್ಲಿ, ಅರ್ಕಮಪಿ - ಸೂರ್ಯನನ್ನಾಗಲಿ, ಪರ್ಜನ್ಯಮಪಿ - ಮೇಘಾಧಿಪತಿಯನ್ನಾಗಲಿ, ವೈವಸ್ವತಂ - ಸೂರ್ಯಪುತ್ರನಾದ, ಯಮಮಪಿ ಯಮನನ್ನೇ ಆದರೂ, ತವ - ನಿನ್ನ, ಹೇತೋಃ - ನಿಮಿತ್ತದಿಂದ, ವಿಶೇಷತಃ - ವಿಶೇಷವಾಗಿ, ಸೋಢುಂ - ಇದಿರಿಸಿ ತಡೆಯಲಿಕ್ಕೆ, ಶಕ್ತಃ - ಸಮರ್ಥನು, ॥೧೬॥

ಸಹಿ - ಆ ಶ್ರೀರಾಮನಾದರೋ, ಸಾಗರಪರ್ಯಂತಾಂ - ಕಡಲುಗಳೇ ಕಡೆಯಲ್ಲಿರುವ, ಮಹೀಂ - ಭೂಮಿಯನ್ನು, ಶಾಸಿತುಂ - ಪಾಲಿಸಲಿಕ್ಕೆ, ಈಹತೆ - ಸಮರ್ಥನಾಗಿದಾನೆ, ಜನಕನಂದಿನಿ - ಎಲೌಜಾನಕಿಯೆ ! ರಾಮಸ್ಯ - ಶ್ರೀರಾಮನಿಗೆ, ಜಯಃ - ಗೆಲುವು, ತ್ವನ್ನಿಮಿತ್ತಃ - ನೀನೇಕಾರಣವಾಗಿ ಉಳ್ಳುದು, (ಭವಿಷ್ಯತಿ - ಆಗುವುದು) ॥೧೭॥ ಅಥ - ಅನಂತರದಲ್ಲಿ, ಜಾನಕೀ - ಸೀತೆಯು, ಸಮ್ಯಕ್ - ಚೆನ್ನಾಗಿ,

---

ಮತ್ತು ಕರಡಿಗಳ ಪಡೆಗಳಿಂದೊಡಗೂಡಿ ಸ್ವಲ್ಪ ಕಾಲದಲ್ಲಿಯೇ ಇಲ್ಲಿಗೆ ಬರುವನು, ಕಾಳಗದಲ್ಲಿ ಹಗೆಗಳನ್ನೆಲ್ಲ ಬಲಿಹೊಡೆದು ನಿನ್ನ ಶೋಕವನ್ನೆಲ್ಲ ಪರಿಹರಿಸುವನು ॥ ೧೪ ॥ ಎಲೌ ಮಾತೆ! ರಾಘವನು ರಣರಂಗದಲ್ಲಿ ಬಾಣಗಳನ್ನು ಬಿಡುತ ನಿಂತರೆ, ಮನುಷ್ಯರೊಳಗಾಗಲಿ, ರಕ್ಕಸರಲ್ಲಿಯಾಗಲಿ, ಸುರರೊಳಗಾಗಲೀ ಯಾವನೊಬ್ಬ ವೀರನೂ ಆತನ ಇದಿರಿಗೆ ನಿಲ್ಲಲಾರನು ॥ ೧೫ ॥ ಎಲೌ ದೇವಿಯೆ ! ಸಮರ ಭೂಮಿಯಲ್ಲಿ ನಿಂತ ರಘುವರನು-ರವಿಯೇ ಬರಲಿ, ಮೇಘಾಧಿಪತಿಯಾದ ವರುಣನೇ ಬರಲಿ, ಸೂರ್ಯನಂದನನಾದ ಯಮನೇ ಬರಲಿ,ಅವರಲ್ಲೊಬ್ಬನನ್ನೂ ಗಣನೆ ಮಾಡದೆ ನಿಮಿಷ ಮಾತ್ರದಲ್ಲಿ ನಿನ್ನ ನಿಮಿತ್ತದಿಂದ ಧ್ವಂಸಮಾಡಬಲ್ಲನು ॥ ॥೧೬॥ ಎಲೌ ಜಾನಕಿ ! ಆ ರಘುಕುಲ ಲಲಾಮನು- ನಾಲ್ಕು ಕಡಲುಗಳ ನಡುವೆ ಇರುವ ಸಮಸ್ತ ಭೂಮಂಡಲವನ್ನೂ ಆಳಲಿಕ್ಕೆ ಸಮರ್ಥನಾದವನು, ಓ ತಾಯೇ ! ಆತನಿಗೆ ಜಯವೆಂಬುದು ನಿನ್ನ ನಿಮಿತ್ತದಿಂದ ತಪ್ಪದೆ ಕರಗತವಾಗುವುದು; ಈವಿಷಯದಲ್ಲಿ ನೀನು ಸಂಶಯಪಡಬೇಡ॥೧೭। ಪೂರ್ವೋತ್ತರ ವಿರೋಧವಿಲ್ಲದೆಯೂ, ಯುಕ್ತಿ ಯುಕ್ತವಾಗಿಯೂ

ಜಾನಕೀ ಬಹುಮೇನೇಽಥ ವಚನಂ ಚೇದ ಮಬ್ರವೀತ್ ॥೧೮॥
ತತ ಸ್ತಂ ಪ್ರಸ್ಥಿತಂ ಸೀತಾ ವೀಕ್ಷಮಾಣಾ ಪುನಃ ಪುಃ ।
ಭರ್ತೃ ಸ್ನೇಹಾನ್ವಿತಂ ವಾಕ್ಯಂ ಸೌಹಾರ್ದಾ ದನುಮಾನಯತ್ ॥೧೯॥
ಯದಿ ವಾ ಮನ್ಯಸೇ ವೀರ ವಸ್ಯೈಕಾಹ ಮರಿಂದಮ ।
ಕಸ್ಮಿಂ ಶ್ಚಿ ತ್ಸಂವೃತೇ ದೇಶೇ ವಿಶ್ರಾಂತ ಶ್ಶ್ವೋ ಗಮಿಷ್ಯಸಿ ॥೨೦॥
ಮಮ ಚೇ ದಲ್ಪಭಾಗ್ಯಾಯಾ ಸ್ಸಾನ್ನಿಧ್ಯಾ ತ್ತವ ವಾನರ ।
ಅಸ್ಯ ಶೋಕಸ್ಯ ಮಹತೋ ಮುಹೂರ್ತಂ ಮೋಕ್ಷಣಂ ಭವೇತ್ ॥೨೧॥

(ಯುಕ್ತಿಯುಕ್ತವಾದ) ಸತ್ಯಂ - ಯಥಾರ್ಥವಾಗಿರುವ, ಸುಭಾಷಿತಂ - ಹೇಳಲ್ಪಟ್ಟ, ತತ್ - ಈ ಹಿಂದೆ ಹೇಳಿದ, ತಸ್ಯ - ಆ ಮಾರುತಿಯ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಬಹುಮೇನೇ - ಗೌರವಿಸಿದಳು, ಇದಂ - ಈ ಮುಂದೆ ಹೇಳುವ, ವಚನಂಚ - ಮಾತನ್ನೂ, ಅಬ್ರವೀತ್-ಹೇಳತೊಡಗಿದಳು ॥೧೮॥ ತತಃ - ಆಮೇಲೆ, ಸೀತಾ - ಜಾನಕಿಯು, ಪ್ರಸ್ಥಿತಂ - ಪ್ರಯಾಣಸನ್ನದ್ಧನಾದ, ತಂ - ಆ ಆಂಜನೇಯನನ್ನು, ಪುನಃಪುನಃ - ಬಾರಿಬಾರಿಗೂ, ವೀಕ್ಷಮಾಣಾ - ನೋಡುತಲಿರುವವಳಾಗಿ, ಭರ್ತೃಸ್ನೇಹಾನ್ವಿತಂ - ಪತಿಪ್ರೀತಿಯಿಂದೊಡಗೂಡಿರುವ, ವಾಕ್ಯಂ - ಮಾತನ್ನು, ಸೌಹಾರ್ದಾತ್ - ಒಳ್ಳೆಯ ಸ್ವಭಾವದಿಂದ, ಅನುಮಾನಯತ್ - (ಅನ್ವಮಾನಯತ್) ಸಮ್ಮಾನಿಸಿದಳು (ಊಹಿಸಿ ಹೇಳತೊಡಗಿದಳು) ॥೧೯॥ ಹೇವೀರ - ಎಲೈ ಕಪಿವರನೇ ! ಅರಿಂದಮ - ಶತ್ರುಸಂಹಾರಕನೇ ! ಮನ್ಯಸೇಯದಿವಾ - ನೀನು ಒಪ್ಪುವುದಾದರೆ (ಬಳಲಿಕೆಯನ್ನು ಕಳೆಯಲು ಇಷ್ಟಪಟ್ಟರೆ) ಕಸ್ಮಿಂಶ್ಚಿತ್ - ಯಾವುದಾದರೊಂದು, ಸಂವೃತೇ - ಮರಮೊದಲಾದವುಗಳಿಂದ ಮರೆಯಾಗಿರುವ, ದೇಶೇ - ತಾವಿನಲ್ಲಿ, ಏಕಾಹಂ - ಒಂದು ದಿವಸಮಾತ್ರ, ವಸ - ವಾಸಮಾಡು, ವಿಶ್ರಾಂತಃ - ವಿಶ್ರಮಿಸಿಕೊಂಡವನಾಗಿ, ಶ್ವಃ - ನಾಳೆಯ ದಿವಸ, ಗಮಿಷ್ಯಸಿ - ಹೋಗುವಿಯಂತೆ? ॥೨೦॥ ಹೇವಾನರ - ಎಲೈಹನುಮಂತನೇ !, ಅಲ್ಪಭಾಗ್ಯಾಯಾಃ - ಮಂದಭಾಗ್ಯಳಾದ, ಮಮ - ನನ್ನ, ಮಹತಃ - ಹೇರಳವಾದ, ಅಸ್ಯ-ಈ, ಶೋಕಸ್ಯ - ದುಃಖದ, ಮೋಕ್ಷಣಂಚೇತ್ - ಬಿಡುಗಡೆಯಾದರೂ, ತವ-ನಿನ್ನ, ಸಾನ್ನಿಧ್ಯಾತ್-ಸಮೀಪ್ಯದ ದೆಸೆಯಿಂದ, ಮುಹೂರ್ತಂ- ಸ್ವಲ್ಪಕಾಲವಾದರೂ,

ಕೇಳಲಿಕ್ಕೆ ಹಿತಕರವಾಗಿಯೂ ಇರುವ ಆ ಮಾರುತಿಯ ಮಾತನ್ನು ಕೇಳಿದ ಜಾನಕಿಯು-ಆತನಲ್ಲಿ ಬಹಳವಾದ ಗೌರವವನ್ನು ಇಟ್ಟು ಮುಂದೆ ಹೇಳ ತೊಡಗಿದಳು ॥ ೧೮ ॥ ಹನುಮಂತನು ಹೊರಡಲಣಿಯಾದನು. ಅಡಿಗಡಿಗೂ ಆತನನ್ನು ನೋಡುತ್ತ, ಅವನಿಜೆಯು ತನಗೆ ಪತಿಯೊಳಿರುವ ಪರಮ ಪ್ರೇಮ ಭರವನ್ನು ತೋರತಕ್ಕದಾಗಿಯೂ, ಸ್ನೇಹಭರ ಭರಿತವಾಗಿಯೂ ಇರುವಂತೆ- ॥ ೧೯ ॥ ಓ ಆಂಜನೇಯಾ ! ನಾನು ಹೇಳಿದಂತೆ ನೀನು ಕೇಳಿ ಸಮ್ಮತಿಸುವುದಾದರೆ ಒಂದು ಕೆಲಸವನ್ನು ಮಾಡು, ಈ ತೋಟದೊಳಗೆ ಮರ ಗಿಡ ಬಳ್ಳಿಗಳಿಂದ ಪೊದೆಯಾಗಿರುವ ಯಾವುದಾದರೊಂದು ಪೊದರಿನಲ್ಲಿ ಈ ದಿವಸ ವಾಸಮಾಡಿ, ಬಹು ದೂರದ ದಾರಿಯನ್ನು ದಾಟಿ ಬಂದಿರುವ ಬಳಲಿಕೆಯನ್ನು ಸ್ವಲ್ಪಮಟ್ಟಿಗೆ ಕಳೆದುಕೊಂಡು, ನಾಳೆಯ ದಿವಸ ಸುಖ ಪ್ರಯಾಣವನ್ನು ಬೆಳೆಸಬಹುದು,ಹಾಗೆ ಮಾಡಲಾರೆಯ?॥೨೦॥ ಎಲೈ ವಾನರೋತ್ತಮನೇ ! ಸ್ವಲ್ಪ ಹೊತ್ತು ನೀನು ಇಲ್ಲಿ ಉಳಿದಿದ್ದು ಆ ನಿನ್ನನ್ನು ನೋಡುತಲಿದ್ದರೂ, ಮಂದಭಾಗ್ಯಳಾದ ನನ್ನ ಅಪಾರವಾದ ದುಃಖವು ಸ್ವಲ್ಪ ಕಾಲದ ಮಟ್ಟಿಗೆ

ಗತೇ ಹಿ ಹರಿಶಾರ್ದೂಲ ಪುನರಾಗಮನಾಯ ತು ।
ಪ್ರಾಣಾನಾಮಪಿ ಸಂದೇಹೋ ಮಮ ಸ್ಯಾನ್ನಾತ್ರ ಸಂಶಯಃ ॥೨೨॥
ತವಾದರ್ಶನಜಃ ಶೋಕೋ ಭೂಯೋ ಮಾಂ ಪರಿತಾಪಯೇತ್ ।
ದುಃಖಾದ್ದುಃಖಪರಾಮೃಷ್ಟಾಂ ದೀಪಯನ್ನಿವ ವಾನರ ॥೨೩॥
ಅಯಂ ಚ ವೀರ ಸಂದೇಹಸ್ತಿಷ್ಠತೀವ ಮಮಾಗ್ರತಃ ।
ಸುಮಹಾಂಸ್ತ್ವತ್ಸಹಾಯೇಷು ಹರ್ಯೃಕ್ಷೇಷು ಹರೀಶ್ವರ ॥೨೪॥
ಕಥಂ ನು ಖಲು ದುಷ್ಪಾರಂ ತರಿಷ್ಯಂತಿ ಮಹೋದಧಿಂ ।

---

ಭವೇತ್ - ಆಗುವುದು ॥೨೧॥ ನರಶಾರ್ದೂಲ - ಎಲೈ ಪುರುಷಶ್ರೇಷ್ಠನೇ ! ಪುನಃ ಆಗಮನಾಯ - ಪುನಃ ಬರಲಿಕ್ಕಾಗಿ, ತ್ವಯಿ - ನೀನು, ಗತೆ (ಸತಿ) ಪಯಣಮಾಡುತ್ತಿರಲಾಗಿ, ಮಮ - ನನ್ನ ಪ್ರಾಣಾನಾಮಪಿ - ಉಸಿರುಗಳಿಗೂ, ಸಂದೇಹಃ - ಸಂಶಯವು, ಸ್ಯಾತ್ - ಆಗುವುದು, ಅತ್ರ - ಈ ವಿಷಯದಲ್ಲಿ, ಸಂಶಯಃ - ಸಂದೇಹವು, ನ-ಇಲ್ಲವು॥೨೨॥ ವಾನರ - ಎಲೈ ಮಾರುತಿಯೇ ! ತವ - ನಿನ್ನನ್ನು ಅದರ್ಶನಜಃ - ನೋಡದಿರುವುದರಿಂದುಂಟಾದ, ಶೋಕಃ - ದುಃಖವು, ದುಃಖಾತ್ - ಹಿಂದಿನ ದುಃಖಕ್ಕಿಂತಲೂ, ದುಃಖಪರಾಮೃಷ್ಟಾಂ - ಅಧಿಕ ದುಃಖದಿಂದ ಆವರಿಸಲ್ಪಟ್ಟ, ಮಾಂ - ನನ್ನನ್ನು, ದೀಪಯನ್ನಿವ-ಸುಡುತ್ತಿರುವಂತೆ, ಭೂಯಃ - ಮರಳಿ, ಪರಿತಾಪಯೇತ್ ಸಂಕಟಪಡಿಸುವುದು ॥೨೩॥ ವೀರ - ಎಲೆ ಶೂರನೇ, ಅಯಂ - ಈ ಮುಂದೆಹೇಳುವ, ಸಂದೇಹಶ್ಚ - ಸಂಶಯವಾದರೋ, ಮಮ - ನನ್ನ, ಅಗ್ರತಃ ಇದಿರಿಗೆ (ಮೂರ್ತೀಭೂತಃ - ಶರೀರವನ್ನು ಧರಿಸಿರುವುದಾಗಿ) ತಿಷ್ಠತೀವ-ನಿಂತಿರುವಂತಿದೆ, ಹರೀಶ್ವರ - ಎಲೈ ವಾನರೋತ್ತಮನೇ ! ತ್ವತ್ಸಹಾಯೇಷು - ನಿನಗೆ ಊಡಾಗಿರುವ, ಹರ್ಯೃಕ್ಷೇಷು - ಕಪಿಗಳು ಮತ್ತು ಕರಡಿಗಳಲ್ಲಿ, ಅಯಂ - ಈ ಸಂದೇಹವು, ಸುಮಹಾನ್-ಬಹಳ ದೊಡ್ಡದಾಗಿದೆ, ॥೨೪॥ (ಅದೇನೆಂದರೆ) ತಾನಿ-ಆ, ಹರ್ಯೃಕ್ಷಸೈನ್ಯಾನಿ - ಕಪಿಗಳ ಮತ್ತು ಕರಡಿಗಳ ಸಮೂಹಗಳು, ದುಷ್ಪಾರಂ -

---

ತಗ್ಗಿರುವುದು, ಅದರಿಂದ ಹೀಗೆ ಹೇಳುತ್ತೇನೆ ॥ ೨೧ ॥ ಎಲೈ ವಾನರೋತ್ತಮನೆ ! ನೀನು ಇಲ್ಲಿಂದ ತೆರಳಿ, ರಾಮನಿಗೆ ನನ್ನ ಯೋಗಕ್ಷೇಮವನ್ನು ತಿಳಿಸಿ; ಅವರೆಲ್ಲರನ್ನೂ ಇಲ್ಲಿಗೆ ಕರೆತರುವವರೆಗೂ ನನ್ನ ಪ್ರಾಣಗಳು ಉಳಿದಿರುವುವೋ? ಇಲ್ಲವೋ? ನನಗೆ ಸಂದೇಹವಾಗಿಯೇ ಇದೆ. ಆದಕಾರಣ ನಾನಿನ್ನೂ ಜೀವಸಹಿತ ಬದುಕಿ ಇರುವಾಗಲೇ ಬಲು ಬೇಗನೆ ಹಿಂದಿರುಗಿ ಬರಬೇಕು ॥ ೨೨ ॥ ಹಾಗೆ ನೀನು ತ್ವರೆಯಿಂದ ಬಾರದೆ ಹೋದರೆ, ಇಗೋ, ಮೊದಲಿಗಿಂತಲೂ ಮತ್ತಷ್ಟು ದುಃಖವು ಹೆಚ್ಚಿ, ಜ್ವಲಿಸುತಲಿರುವ ಅಗ್ನಿಯಲ್ಲಿ ಬಿದ್ದು ಬೇಯುತಲಿದ್ದರೆ ಹೇಗೋ ಹಾಗೆ, ನನಗೆ ಸಂತಾಪವು ಹೇರಳವಾಗುವುದು, ಅದರಿಂದ ನೀನು ಬಲು ಬೇಗನೆ ಬರಬೇಕು ॥೨೩॥ ಎಲೈ ವೀರಾಂಜನೇಯನೇ ! ನಾನು ಏನ ಹೇಳಲಿ ? ಅಪ್ಪಾ ! ಮತ್ತೊಂದು ಪ್ರಬಲವಾದ ಸಂದೇಹವು ನನ್ನಿದಿರಿಗೆ ಬೆಟ್ಟದಂತೆ ನಿಂತಿದೆ, ಆ ಸಂಶಯವು ನಿನಗೆ ಸಹಾಯಕರಾಗಿರುವ ಕಪಿವರರನ್ನು ಗುರಿಮಾಕೊಂಡಿದೆ, ಅದು ಪರಿಹಾರವಾಗುವ ದಾರಿಯೇ ತೋರದು, ನನ್ನಮನದೊಳಗೆ ಬೈರಿಗೆಯಂತೆ ಕೊರೆಯುತಲಿದೆ॥೨೪॥ ಅದೇನು ಎಂಬೆಯೋ? ಕೇಳು- ಲೆಕ್ಕವಿಲ್ಲದಷ್ಟು ಕಪಿಗಳ ಪಡೆಯಿರುವುದೆಂದು ಹೇಳುತಲಿದ್ದೀಯೆ, ಅವರೆಲ್ಲರೂ ಅಳೆಯಲಳವಲ್ಲದ ಕಡಲನ್ನು ಹೇಗೆ ದಾಟಬಲ್ಲರು ? ಆ ರಾಮಲಕ್ಷ್ಮಣರಾದರೂ

ತಾನಿ ಹರ್ಯೃಕ್ಷ ಸೈನ್ಯಾನಿ ತೌವಾ ನರ ವರಾತ್ಮಜೌ ||೨೫||
ತ್ರಯಾಣಾ ಮೇವ ಭೂತಾನಾಂ ಸಾಗರಸ್ಯಾಸ್ಯ ಲಂಘನೆ |
ಶಕ್ತಿ ಸ್ಸ್ಯಾ ದ್ವೈನತೇಯಸ್ಯ ತವ ವಾ ಮಾರುತಸ್ಯ ವಾ ||೨೬||
ತದಸ್ಮಿ೯ ಕಾರ್ಯ ನಿರ್ಯೋಗೆ ವೀರೈವಂ ದುರತಿಕ್ರಮೆ |
ಕಿಂ ಪಶ್ಯಸಿ ಸಮಾಧಾನಂ ತ್ವಂ ಹಿ ಕಾರ್ಯವಿದಾಂ ವರಃ ||೨೭||
ಕಾಮ ಮಸ್ಯ ತ್ವಮೇವೈಕಃ ಕಾರ್ಯಸ್ಯ ಪರಿಸಾಧನೆ |
ಪರ್ಯಾಪ್ತಃ ಪರ ವೀರಘ್ನ ಯಶಸ್ಯ ಸ್ತೇ ಬಲೋದಯಃ ||೨೮||

---

ಕೊನೆಗಾಣದಿರುವ, ಮಹೋದಧಿಂ-ದೊಡ್ಡ ಕಡಲನ್ನು, ಕಥಂನುಖಲು-ಯಾವ ಪ್ರಕಾರವಾಗಿ, ತರಿಷ್ಯಂತಿ - ದಾಟುವರು, ನರವರಾತ್ಮಜೌ - ದಶರಥ ಪುತ್ರರಾದ, ತೌವಾ - ಆ ರಾಮಲಕ್ಷ್ಮಣರಾದರೂ, ಕಥಂವಾ ತರಿಷ್ಯತಃ - ಹೇಗೆ ದಾಟುವರು ||೨೫|| ಅಸ್ಯ - ಈ, ಸಾಗರಸ್ಯ - ಸಮುದ್ರದ, ಲಂಘನೆ-ದಾಟುವಿಕೆಯಲ್ಲಿ, ವೈನತೇಯಸ್ಯ - ಗರುಡನಿಗೂ, ತವವಾ-ನಿನಗೂ, ಮಾರುತಸ್ಯವಾ .. ವಾಯುವಿಗೂ, ತ್ರಯಾಣಾಂ-ಮೂವರಾದ, ಭೂತಾನಾಮೇವ - ಈ ಪ್ರಾಣಿಗಳಿಗೆ ಮಾತ್ರವೇ, ಶಕ್ತಿಃ - ಸಾಮರ್ಥ್ಯವು, ಸ್ಯಾತ್ - ಉಂಟಾಗುವುದು ||೨೬|| ತತ್ - ಆದಕಾರಣ, ವೀರ - ಎಲೈಶೂರನೇ ! ಕಾರ್ಯವಿದಾಂ-ಕಾರ್ಯವನ್ನು ಬಲ್ಲವರೊಳಗೆ, ಪರಃ -ಶ್ರೇಷ್ಠನೆನಿಸಿದ, ತ್ವಂಹಿ - ನೀನಾದರೋ, ಏವಂ - ಈ ಪ್ರಕಾರವಾಗಿ, ದುರತಿಕ್ರಮೆ - ಅಸಾಧ್ಯವಾಗಿರುವ, ಅಸ್ಮಿ೯ - ಈ, ಕಾರ್ಯನಿರ್ಯೋಗೆ, ಕಾರ್ಯಸಂಘಟನ ಮಾಡುವುದರಲ್ಲಿ, ಕಿಂ - ಯಾವುದು, ಸಮಾಧಾನಂ - ಉಪಾಯವನ್ನು, ಪಶ್ಯಸಿ - ಯೋಚಿಸುತ್ತೀಯೆ? ||೨೭|| ಪರವೀರಘ್ನ - ಶತ್ರುವೀರ ಸಂಹಾರಕನಾದ ಮಾರುತಿಯೇ! ಅಸ್ಯ - ಈ, ಕಾರ್ಯಸ್ಯ - ಕೆಲಸದ, (ಇಲ್ಲಿಂದ ನನ್ನನ್ನು ಕರೆದೊಯ್ಯುವ ಕೆಲಸದ) ಪರಿಸಾಧನೆ - ಸಾಧಿಸುವಿಕೆಯಲ್ಲಿ, ತ್ವಂ - ನೀನುಏಕಏವ - ಒಬ್ಬನೇ, ಕಾಮಂ - ವಿಶೇಷವಾಗಿ, ಪರ್ಯಾಪ್ತಃ - ಸಮರ್ಥನು, (ಏವಂಚೇತ್ - ಹೀಗಾಗುವಪಕ್ಷದಲ್ಲಿ) ಬಲೋದಯಃ - ಶಕ್ತಿ ಸಮೃದ್ಧಿಯು, ತೆ - ನಿನಗೆ, ಯಶಸ್ಯಃ - ಕೀರ್ತಿಯನ್ನುಂಟು ಮಾಡಲು

---

ಹೇಗೆ ದಾಟಿ ಬರಲು ಶಕ್ತರಾದಾರು? ಇದು ಬಹು ಕಷ್ಟಸಾಧ್ಯವೆನಿಸಿದೆ || ೨೫ || ಚೆನ್ನಾಗಿ ಯೋಚಿಸಿನೋಡಿದರೆ- ಮಹಾ ವೇಗಶಾಲಿಯಾದ ಗರುಡನೊಬ್ಬ, ಆಶುಗವೆನನೆನಿಸಿರುವ ನಿಮ್ಮ ತಂದೆಯಾದ ವಾಯುವೊಬ್ಬ, ತಂದೆಗೆಣೆಯೆನಿಸಿರುವ ಶೌರ್ಯದಿಂದೊಡಗೂಡಿದ ನೀನೊಬ್ಬ, ಈ ಮೂವರಿಗೆ ಮಾತ್ರವೇ ಈ ಅಪಾರವಾದ ಸಾಗರವನ್ನು ದಾಟುವ ಸಾಮರ್ಥ್ಯವುಂಟಲ್ಲದೆ ಇತರರಿಗಾರಿಗೂ ಶಕ್ತಿಯಿಲ್ಲ || ೨೬ || ಎಲೈ ಶೂರನೇ | ಕರ್ತವ್ಯಾಕರ್ತವ್ಯಗಳನ್ನು ಚೆನ್ನಾಗಿ ಬಲ್ಲ ನೀನು- ಈ ಕಾರ್ಯ ಸಂದರ್ಭವು ಇಷ್ಟು ಕಠಿನವಾಗಿ ಪರಿಣಮಿಸಿ ಇರುವಲ್ಲಿ, ಈ ಸಮುದ್ರ ತರಣ ಕಾರ್ಯವು ಹೇಗೆ ಸುಲಭವಾಗುವುದೋ ಹಾಗೆ ನೀನೇ ಮಾಡಬೇಕಾಗಿದೆ. ಕೆಲಸದ ಸಲುವಳಿಯನು ನೀನೇ ಬಲ್ಲೆಯಲ್ಲದೆ ಹೆರರು ಅರಿಯರು ||೨೭|| ಹಗೆಗಳನ್ನೊಕ್ಕಲಿಕ್ಕಲು ನೀನೇ ಶಕ್ತ, ನಿನ್ನಯ ಬಲ ಸಮೃದ್ಧಿಯೇ ಶ್ಲಾಘ್ಯವಾದುದು, ಈ ಕೆಲಸವನ್ನೆಲ್ಲಾ ಕೊನೆಮುಟ್ಟಿಸಿ ಕುಂದಿಲ್ಲದಂತೆ ಸರಿಪಡಿಸಲು ನೀನೊಬ್ಬನೇ ಸಮರ್ಥ, ‹‹ ಆಂಜನೇಯನು ಅಸಾಧ್ಯವಾದ ಕಾರ್ಯವನ್ನು ಸಾಧಿಸಿದನು,, ಎಂಬ ಲೋಕವಿಖ್ಯಾತವಾಗುವ ಕೀರ್ತಿಗೆ ನೀನೇ ಭಾಗಿಯಾಗಬೇಕು.ಅದರಂತೆ ಎಲ್ಲವನ್ನೂ ಅಣಿಮಾಡು

ಬಲೈ ಸ್ಸಮಗ್ರೈ ರ್ಯದಿ ಮಾಂ ರಾವಣಂ ಜಿತ್ವಾ ಸಂಯುಗೆ ।
ವಿಜಯೀ ಸ್ವಪುರೀಂ ಯಾಯಾ ತ್ತತ್ತು ಮೆ ಸ್ಯಾ ದ್ಯಶಸ್ಕರಂ ॥೨೯॥
ಶರೈ ಸ್ತು ಸಂಕುಲಾಂ ಕೃತ್ವಾ ಲಂಕಾಂ ಪರಬಲಾರ್ದನಃ ।
ಮಾಂ ನಯೇ ದ್ಯದಿ ಕಾಕುತ್‍ಸ್ಥ ಸ್ತತ್ತಸ್ಯ ಸದೃಶಂ ಭವೇತ್ ॥೩೦॥
ತದ್ಯಥಾ ತಸ್ಯ ವಿಕ್ರಾಂತ ಮನುರೂಪಂ ಮಹಾತ್ಮನಃ ।
ಭವೇ ದಾಹವ ಶೂರಸ್ಯ ತಥಾ ತ್ವ ಮುಪಪಾದಯ ॥೩೧॥
ತದರ್ಥೋಪ ಹಿತಂ ವಾಕ್ಯಂ ಪ್ರಶ್ರಿತಂ ಹೇತುಸಂಹಿತಂ ।

ತಕ್ಕುದಾಗುವುದು ॥೨೮॥ (ಕಿಂಚ - ಮತ್ತು) ವಿಜಯೀ - ಜಯಶಾಲಿಯಾದ, (ರಾಮಃ-ಶ್ರೀ ರಾಮನು) ಸಮಗ್ರೈಃ - ಸಂಪೂರ್ಣವಾದ, ಬಲೈಃ - ಸೇನೆಗಳಿಂದ, ರಾವಣಂ - ದಶಕಂಠನನ್ನು, ಸಂಯುಗೆ- ಯುದ್ಧದಲ್ಲಿ, ಜಿತ್ವ (ವಿಜಿತ್ಯ) ಜಯಿಸಿ, ಮಾಂ - ನನ್ನನ್ನು, ಗೃಹೀತ್ವಾ - ಕರೆದುಕೊಂಡು, ಸ್ವಪುರೀಂ - ತನ್ನ ಪಟ್ಟಣವನ್ನು ಕುರಿತು, ಯಾಯಾದ್ಯದಿ-ಹೋಗುವವನೇ ಆದರೆ, ತತ್ತು -ಅದಾದರೋ, ಮೆ- ನನಗೆ ಯಶಸ್ಕರಂ - ಕೀರ್ತಿಸಂಪಾದಕವಾದುದು, ಭವೇತ್ - ಆಗುವುದು ॥೨೯॥ (ಅಪಿ - ಮತ್ತು) ಪರಬಲಾರ್ದನಃ - ಹಗೆಗಳ ಪಡೆಯನ್ನು ಸದೆಬಡಿಯುವ, ಕಾಕುತ್‍ಸ್ಥಃ - ಶ್ರೀ ರಾಮನು, ಲಂಕಾಂ- - ಲಂಕಾ ನಗರವನ್ನು, ಶರೈಃ - ಬಾಣಗಳಿಂದ, ಸಂಕುಲಾಂ - ತುಂಬಿದುದನ್ನಾಗಿ, ಕೃತ್ವಾ - ಮಾಡಿ, ಮಾಂ - ನನ್ನನ್ನು, ನಯೇದ್ಯದಿ -ಕರೆದೊಯ್ಯುವವನೇ ಆದರೆ, ತತ್- ಹಾಗೆ ಕರೆದುಕೊಂಡು ಹೋಗೋಣವು ತಸ್ಯ - ಆ ಶ್ರೀ ರಾಮನಿಗೆ, ಸದೃಶಂ- ತಕ್ಕುದೆನಿಸಿದುದು, ಭವೇತ್ - ಆಗುವುದು॥೩೦॥ ತತ್- ಆದಕಾರಣ, ಮಹಾತ್ಮನಃ - ಮಹಾನುಭಾವನಾದ, ಆಹವಶೂರಸ್ಯ - ಯುದ್ಧದಲ್ಲಿ ಶೂರನಾಗಿರುವ, ತಸ್ಯ - ಆ ಶ್ರೀರಾಮನಿಗೆ, ಅನುರೂಪಂ - ತಕ್ಕ, ವಿಕ್ರಾಂತಂ - ಪರಾಕ್ರಮವು, ಯಥಾ - ಯಾವ ಪ್ರಕಾರ, ಭವೇತ್ - ಹೆಚ್ಚಬಲ್ಲುದೋ, ತಥಾ - ಹಾಗೆ, ತ್ವಂ - ನೀನು, ಉಪಪಾದಯ - ಕಲ್ಪಿಸು ॥೩೧॥

ಹನುಮಾನ್ - ಆಂಜನೇಯನು, ಅರ್ಥೋಪಹಿತಂ - ಅರ್ಥ-ಯುಕ್ತವಾದುದಾಗಿಯೂ, ಸಂಹಿ ತಂ- ಹೊಂದಿಕೆಯಾಗಿಯೂ, (ಪರಸ್ಪರ ವಿರುದ್ಧವಿಲ್ಲದೆಯೂ) ಹೇತುಸಂಹಿತಂ - ಯುಕ್ತಿಯುಕ್ತವಾಗಿಯೂ

॥೨೮॥ ಶ್ರೀರಾಮನು ಅನೇಕ ವಾನರ ವೀರರಿಂದೊಡಗೂಡಿ ಇಲ್ಲಿಗೆ ಬಂದು, ರಣರಂಗದಲ್ಲಿ ರಾವಣನನ್ನು ಸೀಳಿ, ನನ್ನನ್ನು ಪಡೆದು, ತನ್ನ ಪಟ್ಟಣವನ್ನು ಕುರಿತು ತೆರಳಿದುದೇ ಆದರೆ- ಆಗಲದು ನನಗೆ ಕೀರ್ತಿಯನ್ನು ಸಂಪಾದಿಸಿಕೊಡತಕ್ಕುದಾಗುವುದು ॥ ೨೯ ॥ ಮತ್ತು-ಶ್ರೀ ರಾಮನು- ತನ್ನ ಬಾಣ ಪರಂಪರೆಗಳನ್ನು ಲಂಕೆಯೊಳಗೆ ತುಂಬಿ, ಹಗೆಗಳ ಹುಟ್ಟನ್ನು ಅಡಗಿಸಿ, ನನ್ನನ್ನು ಕರೆದೊಯ್ದರೆ ಆಗಲದು- ಕಕುತ್‍ಸ್ಥ ಕುಲ ಪ್ರದೀಪನಾದ ಶ್ರೀರಾಮಚಂದ್ರನ ಶೌರ್ಯ ಸಂಪದಕ್ಕೆತಕ್ಕುದೆನಿಸುವುದು ॥ ೩೦ ॥ ಎಲೈ ಹನುಮಂತನೇ ! ಮಹಾ ಬಲಪರಾಕ್ರಮ ಸಂಪನ್ನನೆನಿಸಿರುವ ಮಹಾತ್ಮನಾದ ಶ್ರೀರಾಮನೇ ರಾವಣಾದಿ ಶತ್ರುಗಳನ್ನೆಲ್ಲಸಂಹರಿಸಿ, ವಿಜಯ ಲಕ್ಷ್ಮಿಯಿಂದೊಡಗೂಡಿ, ಕೀರ್ತಿಭಾಗಿಯಾಗುವ ಹಾಗೆ ನೀನೇ ಸಕಲ ಸಂವಿಧಾನಗಳನ್ನೂ ಸರಿಪಡಿಸಬೇಕು ॥೩೧॥ ಎಂದ ಜಾನಕಿಯ ನುಡಿಯನ್ನು ಕೇಳಿದ ಮಾರುತಿಯು- ಆಹಾ ! ಈ ವೈದೇಹಿಗೆ ಎಷ್ಟು ದೂರ ದೃಷ್ಟಿಯಿದೆ ? ಈಕೆಯ ಮಾತು ಎಷ್ಟು ಗಂಭೀರವಾಗಿಯೂ, ಅರ್ಥಗರ್ಭಿತವಾಗಿಯೂ, ಊಹಾ ಪೋಹಗಳನ್ನೊಳಗೊಂಡು

ನಿಶಮ್ಯ ಹನುಮಾನ್ ಶೇಷಂ ವಾಕ್ಯ ಮುತ್ತರ ಮಬ್ರವೀತ್ ॥೨೨॥
ದೇವಿ ಹರ್ಯೃಕ್ಷ ಸೈನ್ಯಾನಾ ಮೀಶ್ವರಃ ಪ್ಲವತಾಂವರಃ ।
ಸುಗ್ರೀವ ಸ್ಸತ್ವ ಸಂಪನ್ನ ಸ್ತವಾರ್ಥೇ ಕೃತನಿಶ್ಚಯಃ ॥೨೩॥
ಸ ವಾನರ ಸಹಸ್ರಾ ಣಾಂ ಕೋಟೀಭಿ ರಭಿಸಂವೃತಃ ।
ಕ್ಷಿಪ್ರ ಮೇಷ್ಯತಿ ವೈದೇಹಿ ರಾಕ್ಷಸಾನಾಂ ನಿಬರ್ಹಣಃ ॥೨೪॥
ತಸ್ಯ ವಿಕ್ರಮಸಂಪನ್ನಾ ಸ್ಸತ್ವವಂತೋ ಮಹಾಬಲಾಃ ।
ಮನಸ್ಸಂಕಲ್ಪ ಸಂಪಾತಾ ನಿದೇಶೆ ಹರಯ ಸ್ಸ್ಥಿತಾಃ ॥೨೫॥

---

ಇರುವ, ತತ್ - ಆ ಸೀತೆಯು ಹೇಳಿದ, ವಾಕ್ಯಂ - ಮಾತನ್ನು, ನಿಶಮ್ಯ - ಕೇಳಿ, ಶೇಷಂ-ಉಳಿದಿರುವ, ಉತ್ತರಂವಾಕ್ಯಂ - ಪ್ರತ್ಯುತ್ತರವನ್ನು, ಅಬ್ರವೀತ್ - ಹೇಳತೊಡಗಿದನು ॥೨೨॥ ದೇವಿ - ಎಲೌ ಜಾನಕಿಯೆ, ಹರ್ಯವಕ್ಷಸೈನ್ಯಾನಾಂ - ಕಪಿಗಳ ಮತ್ತು ಕರಡಿಗಳ ಸಮೂಹಗಳಿಗೆ, ಈಶ್ವರಃ - ಪ್ರಭುವಾದ, ಪ್ಲವತಾಂ - ವಾನರರೊಳಗೆ, ವರಃ - ಶ್ರೇಷ್ಠನೆನಿಸಿದ, ಸತ್ವಸಂಪನ್ನಃ - ಮಹಾ ಬಲದಿಂದೊಡಗೂಡಿರುವ, ಸುಗ್ರೀವಃ - ಸುಗ್ರೀವನು, ತವ - ನಿನ್ನ, ಅರ್ಥೆ - ಪ್ರಯೋಜನದ ವಿಷಯದಲ್ಲಿ, ಕೃತನಿಶ್ಚಯಃ - ನಿಶ್ಚಯುವನ್ನು ಮಾಡಿರುವನು, ॥೨೩॥ ವೈದೇಹಿ - ಎಲೌ ಜಾನಕಿಯೆ ! ಸಃ - ಆ ಸುಗ್ರೀವನು, ವಾನರ ಸಹಸ್ರಾಣಾಂ - ಸಾವಿರಾರು ಕಪಿಗಳ, ಕೋಟೀಭಿಃ - ಕೋಟಿಗಳಿಂದ, ಅಭಿಸಂವೃತಃ - ಆವರಿಸಲ್ಪಟ್ಟವನಾಗಿ, ರಾಕ್ಷಸಾನಾಂ - ರಕ್ಕಸರನ್ನು, ನಿಬರ್ಹಣಃ - ಧ್ವಂಸಮಾಡುವವನಾಗಿ, ಕ್ಷಿಪ್ರಂ - ಬೇಗನೆ, ಏಷ್ಯತಿ - ಬರುವನು ॥೨೪॥ ವಿಕ್ರಮಸಂಪನ್ನಾಃ- ಪರಾಕ್ರಮದಿಂದೊಡಗೂಡಿರುವ, ಸತ್ವವನ್ತಃ ಅಂತಸ್ಸಾರವುಳ್ಳ, ಮಹಾಬಲಾಃ - ಬಹು ಬುದ್ಧಿಶಕ್ತಿಯನ್ನೊಳಗೊಂಡಿರುವ, ಮನಸ್ಸಂಕಲ್ಪಸಂಪಾತಾಃ - ಮನೋವೇಗಕ್ಕೆ ಸಮಾನವಾದ ವೇಗವುಳ್ಳ, ಹರಯಃ - ಕಪಿಗಳು, ತಸ್ಯ - ಆ ಸುಗ್ರೀವನ, ನಿದೇಶೆ - ಆಜ್ಞೆಯಲ್ಲಿ, ಸ್ಥಿತಾಃ - ಸಿದ್ಧರಾಗಿದಾರೆ, ಯೇಷಾಂ - ನಾನು ಹೇಳಿದ ಈ ಕಪಿಗಳ, ಗತಿಃ - ಗಮನವು, ಉಪರಿ - ಮೇಲ್ಭಾಗದಲ್ಲಿಯೂ, ನಸಜ್ಜತೆ - ಅಡ್ಡಿಯಿಲ್ಲದಿರುವುದು, ಅಧಸ್ತಾತ್ - ಕೆಳಭಾಗದಲ್ಲಿಯೂ (ಪಾತಾಳದಕಡೆಗೂ) ತಿರ್ಯಕ್-ಅಡ್ಡವಾಗಿಯೂ, (ವಿದಿಕ್ಕುಗಳೊಳಗೂ) ನಸಜ್ಜತೆ-ತಡೆಯಿಲ್ಲದಿರುವುದು,

---

ಇರುವುದಾಗಿಯೂ, ಸಕಾರಣವಾಗಿಯೂ ಇದೆ, ಎಂದುಕೊಂಡು,ಆಕೆಯ ಮನದ ಸಂಶಯುವೆಲ್ಲ ಸಮೂಲವಾಗಿ ತೊಲಗುವಂತೆ ಮಾತನಾಡತೊಡಗಿದನು॥೨೨॥ಏನು ತಾಯೇ!ಹೀಗೆ ಸಂಶಯಪಡುತ್ತೀಯೆ ? ಅನೇಕ ಋಕ್ಷ ವಾನರ ವೀರರ ಸೇನೆಗಳಿಗೆ ಪ್ರಭುವೆನಿಸಿರುವ ಮಹಾ ಬಲಾನುಭಾವನಾದ ಸುಗ್ರೀವನು- ಇಲ್ಲಿಗೆ ಬಂದು ವೈರಿಗಳನ್ನೆಲ್ಲ ಇರಿದು, ನಿನ್ನನ್ನು ಕರೆದೊಯ್ಯುವ ವಿಷಯದಲ್ಲಿ ದೃಢ ಸಂಕಲ್ಪನ್ನು ಮಾಡಿರುವನು ॥ ೨೩ ॥ ಅಂತಹ ಬಲ ಪರಾಕ್ರಮ ಸಂಪನ್ನನಾದ ಸುಗ್ರೀವನು- ಈ ರಾವಣನನ್ನು ಧ್ವಂಸಮಾಡಲು ಅನೇಕ ಕೋಟಿ ವಾನರ ವೀರರ ಸೇನಗಳಿಂದೊಡಗೂಡಿ ಇಲ್ಲಿಗೆ ಬಹು ಬೇಗನೆ ಬರುವನು, ಸಂಶಯಪಡಬೇಡ ॥೨೪ ॥ ಶೌರ್ಯ ಪ್ರಕಾಶದಿಂದಲೂ, ಅಂತಸ್ಸಾರದಿಂದಲೂ, ಬುದ್ಧಿ ಬಲದಿಂದಲೂ ಸಂಪನ್ನರಾಗಿ, ಸುಗ್ರೀವನಾಜ್ಞೆಯನ್ನು ಲೇಶಮಾತ್ರವಾದರೂ ಅತಿಕ್ರಮಿಸದೆಯೂ ಇರುವ ಮಹಾ ಶೂರರಾದ ವಾನರರು- ಮನೋವೇಗದೊಡನೆ ಸಮಾನವಾದ ವೇಗವುಳ್ಳವರಾಗಿಯೂ ಆಕಾಶಕ್ಕೆ ಹಾರಬೇಕಾಗಲೀ, ದಿಕ್ಕುಗಳಿಗೂ ವಿದಿಕ್ಕುಗಳಿಗೂ ತೂರಬೇಕಾಗಲಿ, ಪಾತಾಳಕ್ಕೆ

ಯೇಷಾಂ ನೋಽಪರಿ ನಾಽಧಸ್ತಾನ್ನತಿರ್ಯಕ್ಸಜ್ಜತೇ ಗತಿಃ ।
ನ ಚ ಕರ್ಮಸು ಸೀದಂತಿ ಮಹತ್ಸ್ವಮಿತತೇಜಸಃ ॥೩೬॥
ಅಸಕೃತ್ತೈರ್ಮಹೋತ್ಸಾಹೈಃ ಸಸಾಗರಧರಾಧರಾ ।
ಪ್ರದಕ್ಷಿಣೀಕೃತಾ ಭೂಮಿರ್ವಾಯುಮಾರ್ಗಾನುಸಾರಿಭಿಃ ॥೩೭॥
ಮದ್ವಿಶಿಷ್ಟಾಶ್ಚ ತುಲ್ಯಾಶ್ಚ ಸಂತಿ ತತ್ರ ವನೌಕಸಃ ।
ಮತ್ತಃ ಪ್ರತ್ಯವರಃ ಕಶ್ಚಿನ್ನಾಸ್ತಿ ಸುಗ್ರೀವಸನ್ನಿಧೌ ॥೩೮॥
ಅಹಂ ತಾವದಿಹ ಪ್ರಾಪ್ತಃ ಕಿಂ ಪುನಸ್ತೇ ಮಹಾಬಲಾಃ ।

---

ತೇ - ಅಂತಹ, ಮಹಾತೇಜಸಃ - ಮಹಾವೀರರು, ಮಹತ್ಸು - ಅತಿಶಯಗಳೆನಿಸಿದ, ಕರ್ಮಸುಚ - ಕೆಲಸಗಳಲ್ಲಿಯೂ, ನಸೀದಂತಿ - ಶ್ರಮಪಡತಕ್ಕವರಾಗಿಲ್ಲ ॥೩೫,೩೬॥ ಮಹೋತ್ಸಾಹೈಃ - ಮಹಾ ಪ್ರತಾಪವುಳ್ಳ, ವಾಯುಮಾರ್ಗಾನುಸಾರಿಭಿಃ - ವಾಯು ಸಂಚಾರದ ಸ್ಥಲದಲ್ಲೆಲ್ಲ ಸಂಚಾರವುಳ್ಳ, ತೈಃ - ಆ ವಾನರರಿಂದ, ಸಸಾಗರಧರಾಧರಾ - ಸಮುದ್ರ ಪರ್ವತಗಳಿಂದೊಡಗೂಡಿರುವ, ಭೂಮಿಃ - ಧರೆಯು, ಅಸಕೃತ್ - ಅನೇಕಾವರ್ತಿ, ಪ್ರದಕ್ಷಿಣೀಕೃತಾ - ಸಂಚರಿಸಲ್ಪಟ್ಟಿದೆ, (ಸುತ್ತಲ್ಪಟ್ಟಿತು) ॥೩೭॥ ಮದ್ವಿಶಿಷ್ಟಾಶ್ಚ - ನನಗಿಂತ ಅಧಿಕ ಬಲರೂ, ತುಲ್ಯಾಶ್ಚ - ಸಮಬಲರೂ ಆಗಿರುವ, ವನೌಕಸಃ - ಅರಣ್ಯವಾಸಿಗಳಾದ ಕಪಿಗಳು, ತತ್ರ - ಆ ಕಿಷ್ಕಿಂಧಾನಗರದಲ್ಲಿ, ಸಂತಿ - ಇದ್ದಾರೆ, ಸುಗ್ರೀವಸನ್ನಿಧೌ - ಸುಗ್ರೀವನ ಸಮೀಪದಲ್ಲಿ, ಮತ್ತಃ - ನನಗಿಂತಲೂ, ಪ್ರತ್ಯವರಃ - ಹೀನಬಲನು, ಕಶ್ಚಿತ್ - ಒಬ್ಬನಾದರೂ, ನಾಸ್ತಿ - ಇಲ್ಲವು ॥೩೮॥ ಅಹಂತಾವತ್ - ನಾನೊಬ್ಬನು ಮಾತ್ರವೇ, ಇಹ - ಇಲ್ಲಿಗೆ, ಪ್ರಾಪ್ತಃ - ಬಂದಿರುವೆನು, ಮಹಾಬಲಾಃ - ಬಹು ಪರಾಕ್ರಮವುಳ್ಳ, ತೇ - ಆ ವಾನರರು, ಕಿಂಪುನಃ - ಹೇಳತಕ್ಕುದೇನು ? (ಅವರಿಲ್ಲಿಗೆ ಬರಲು ಅಡ್ಡಿಯೇನು ?) ಪ್ರಕೃಷ್ಟಾಃ - ಮಹಾ ಬಲಶಾಲಿಗಳೆನಿಸಿದವರು, ನಪ್ರೇಷ್ಯಂತೇಹಿ - ಮುಂದಾಳುಗಳಾಗಿ

---

ಇಳಿಯಬೇಕಾಗಲೀ ಅವರ ದಾರಿಗೆ ಅಡ್ಡಿಯೇ ಇಲ್ಲ. ಎಂತಹ ಅಸಾಧ್ಯವಾದ ಕಾರ್ಯವನ್ನು ಮಾಡಿದರೂ ಸ್ವಲ್ಪವಾದರೂ ಬಳಲತಕ್ಕವರಲ್ಲ. ಮತ್ತು-ಜಯವನ್ನು ಪಡೆಯದೆ ಹಿಂದಿರುಗತಕ್ಕವರೂ ಅಲ್ಲ. ಅಂತಹ ಮಹಾ ತೇಜಸ್ವಿಗಳೆನಿಸಿರುವರು ॥ ೩೫, ೩೬ ॥ ಅನೇಕ ವೇಳೆ- ಮಹೋತ್ಸಾಹ ಸಂಪನ್ನರಾಗಿ, ವಾಯುವೇಗ ಸಮಾನ ವೇಗಶಾಲಿಗಳಾಗಿ, ಆಕಾಶದಲ್ಲಿ ಸಂಚರಿಸುತ್ತ, ಪರ್ವತಗಳಿಂದಲೂ, ಸಾಗರಗಳಿಂದಲೂ ಆವರಿಸಲ್ಪಟ್ಟಿರುವ ಈ ಭೂಮಂಡಲವನ್ನೆಲ್ಲ ಸುತ್ತಿ ಕಾರ್ಯಗಳನ್ನು ಸಾಧಿಸಿರುವರು ॥ ೩೭ ॥ ಎಲೌ ತಾಯೆ ! ನೀನು ಮತ್ತೊಂದು ಮಾತನ್ನು ಹೇಳಿದೆ, ಅದಕ್ಕೆ ಉತ್ತರವನ್ನು ಹೇಳುತ್ತೇನೆ- ಕಪಿ ಸಾರ್ವಭೌಮನಾದ ಸುಗ್ರೀವನ ಸನ್ನಿಧಾನದಲ್ಲಿ ಹುಡುಕಿನೋಡಿದರೂ, ನನಗಿಂತ ಅಧಿಕ ಬಲರೆನಿಸಿದ ಕಪಿವೀರರೂ, ಸಮಾನ ಬಲಶಾಲಿಗಳಾದ ಶೂರರೂ ಇರುವರಲ್ಲದೆ, ನನಗಿಂತಲೂ * ಹೀನ ಬಲನೆನಿಸಿದ ಕಪಿಯು ಒಬ್ಬನಾದರೂ ಇಲ್ಲ. ॥ ೩೮ ॥ ಎಲೌ ಜಾನಕೀ ! ಲೋಕೋತ್ತರ

---

* ಬಲಶಾಲಿಗಳಾದ ಕಪಿವೀರರೊಳಗೆ ಅಗ್ರಗಣ್ಯನೆನಿಸಿದ ಮಾರುತಿಯು-ತಾನು ಹೀನಬಲನೆಂದು ಅಸತ್ಯವನ್ನು ನುಡಿಯ ಬಹುದೆ ? ಎಂದರೆ-ರಾಮಾದಿಗಳಿಲ್ಲಿಗೆ ಬರುವವರೆಗೂ ಸೀತೆಯು ಧೈರ್ಯಗುಂದದೆ ಇರಲಿ ಎಂತಲೂ, ತನ್ನ ಹೆಮ್ಮೆಯನ್ನು ಹೇಳಿಕೊಳ್ಳುವುದು ಉಚಿತವಲ್ಲವೆಂತಲೂ ಹೀಗೆ ಹೇಳಿದನೆಂದು ತಿಳಿಯಬೇಕು.

ನ ಹಿ ಪ್ರಕೃಷ್ಟಾಃ ಪ್ರೇಷ್ಯಂತೇ ಪ್ರೇಷ್ಯಂತೇ ಹೀ ತರೇ ಜನಾಃ ॥೩೯॥
ತದಲಂ ಪರಿತಾಪೇನ ದೇವಿ ಶೋಕೋ ವ್ಯಪೈತು ತೇ ।
ಏಕೋತ್ಪಾತೇನ ತೇ ಲಂಕಾ ಮೇಷ್ಯಂತಿ ಹರಿ ಯೂಥಪಾಃ॥೪೦॥
ಮಮ ಪೃಷ್ಠ ಗತೌ ತೌ ಚ ಚಂದ್ರಸೂರ್ಯಾ ವಿವೋದಿತೌ ।
ತ್ವತ್ಸಕಾಶಂ ಮಹಾಸತ್ತ್ವೌ ನೃಸಿಂಹಾ ವಾಗಮಿಷ್ಯತಃ ॥೪೧॥
ತೌ ಹಿ ವೀರೌ ನರವರೌ ಸಹಿತೌ ರಾಮಲಕ್ಷ್ಮಣೌ ।
ಆಗಮ್ಯ ನಗರೀಂ ಲಂಕಾಂ ಸಾಯಕೈ ರ್ವಿಧಮಿಷ್ಯತಃ ॥೪೨॥

ಕಳುಹಿಸಲ್ಪಡುವುದಿಲ್ಲವಷ್ಟೆ ?, ಇತರೇಜನಾಃ - ಸಾಧಾರಣರಾದ ಮನುಷ್ಯರೇ, ಪ್ರೇಷ್ಯಂತೇಹಿ - ಕಳುಹಿಸಲ್ಪಡುತ್ತಾರಲ್ಲವೆ ? ॥೩೯॥ ತತ್ - ಆದಕಾರಣ, ದೇವಿ - ಎಲೌ ಜಾನಕಿಯೆ ! ಪರಿತಾಪೇನ - ವ್ಯಸನಪಡುವುದರಿಂದ, ಅಲಂ - ಸಾಕು, ತೆ - ನಿನ್ನ, ಶೋಕಃ - ವ್ಯಥೆಯು, ವ್ಯಪೈತು - ದೂರತೊಲಗಲಿ, ತೆ - ಆ, ಹರಿಯೂಥಪಾಃ - ವಾನರ ಸೇನಾಧಿಪತಿಗಳು, ಏಕೋತ್ಪಾತೇನ - ಒಂದೇ ಕುಪ್ಪಳಿನಿಂದ, ಲಂಕಾಂ - ಲಂಕಾಪಟ್ಟಣವನ್ನು ಕುರಿತು, ಏಷ್ಯಂತಿ - ಬರುವರು, ॥೪೦॥ ಉದಿತೌ - ಉತ್ಪನ್ನರಾದ, ಚಂದ್ರಸೂರ್ಯಾವಿವ - ಚಂದ್ರಸೂರ್ಯರಂತಿರುವ, ಮಹಾಸತ್ತ್ವೌ - ಮಹಾ ಬಲ ಸಂಪನ್ನರಾದ, ನೃಸಿಂಹೌ - ಪುರುಷಶ್ರೇಷ್ಠರೆನಿಸಿದ, ತೌ - ಆ ರಾಮಲಕ್ಷ್ಮಣರು, ಮಮ - ನನ್ನ, ಪೃಷ್ಠಗತೌ - ಬೆನ್ನಿನಮೇಲೆ ಕುಳಿತವರಾಗಿ, ತ್ವತ್ಸಕಾಶಂ - ನಿನ್ನ ಸಮೀಪವನ್ನು ಕುರಿತು, ಆಗಮಿಷ್ಯತಃ - ಬರುವರು ॥೪೧॥ ವೀರೌ ಮಹಾಬಲ ಸಂಪನ್ನರಾದ, ನರವರೌ - ಪುರುಷಶ್ರೇಷ್ಠರೆನಿಸಿದ, ತೌ - ಆ, ರಾಮಲಕ್ಷ್ಮಣೌ - ರಾಮಲಕ್ಷ್ಮಣರು, ಸಹಿತೌ - ಒಡಗೂಡಿದವರಾಗಿ, ಲಂಕಾಂನಗರೀಂ - ಲಂಕಾನಗರವನ್ನು ಕುರಿತು, ಆಗಮ್ಯ - ಬಂದು, ಸಾಯಕೈಃ - ಬಾಣಗಳಿಂದ, ವಿಧಮಿಷ್ಯತಃ - ಧ್ವಂಸಮಾಡುವರು. ॥೪೨॥ ವರಾತೋಹೆ -

ಬಲ ಪರಾಕ್ರಮಶಾಲಿಗಳೆನಿಸಿ, ಶ್ರೀರಾಮಚಂದ್ರನಿಗೆ ದೂತರಾಗಿರುವ ವಾನರ ವೀರರೊಳಗೆ ಕೀಳು ಬಲನಾದ ನನ್ನಂತಹ ಸಾಮಾನ್ಯನು- ಇಂತಹ ಅಸಾಧ್ಯವಾದ ಸಮುದ್ರವನ್ನು ದಾಟಿ, ನಿನ್ನ ಸಂದರ್ಶನವನ್ನು ಮಾಡಿರುವೆನು. ಮಹಾ ಬಲರಾದ ಆ ವೀರರಿಗೆ ಇಲ್ಲಿಗೆ ಬರುವುದೆಂಬುದು ಎಷ್ಟರ ಕೆಲಸ ? ಹೀಗಿರುವಲ್ಲಿ ಅವರು ಇಲ್ಲಿಗೆ ಬರುವುದು ಹೇಗೆ? ಎಂದು ನೀನು ಸಂಶಯಪಡಬೇಕಾದ ನಿಮಿತ್ತವಿಲ್ಲ. ಪ್ರಭುಗಳಾದವರು-ಕಾರ್ಯವನ್ನು ಸಾಧಿಸಲಿಕ್ಕೆ ಮೊದಲು ಸಾಧಾರಣರಾದ ದೂತರನ್ನು ಕಳುಹಿಸಿ ಸಂಗತಿಗಳನ್ನೆಲ್ಲ ಅರಿತು, ತರುವಾಯ ಮಹಾ ಬಲದಿಂದೊಡಗೂಡಿ ಕಾರ್ಯ ಸಾಧನೆಗೆ ಬರುವುದು ಸ್ವಾಭಾವಿಕವಾಗಿರುವುದಲ್ಲವೆ ಅದರಿಂದಲೇ ಮೊದಲು ನಾನು ಇಲ್ಲಿಗೆ ಬಂದಿರುವೆನು ॥ ೩೯ ॥ ಎಲೌ ತಾಯೆ ! ನೀನಿನ್ನು ಶೋಕವನ್ನು ತೊರೆ. ವೃಥಾ ಸಂಶಯಪಟ್ಟುಕೊಂಡು ವ್ಯಸನಪಡಬೇಡ. ನೀನು ಹೀಗೆ ದುಃಖಿಸುವುದರಿಂದ ಕೆಸಲವು ಸರಿಹೋಗುವುದೆಂದು ನೆನೆಯಬೇಡ, ನನ್ನ ಮೂಲಕ ನಿನ್ನ ಯೋಗ ಕ್ಷೇಮವನ್ನು ತಿಳಿದ ಕೂಡಲೆ, ಆವಾನರ ವೀರರೆಲ್ಲರೂ ಒಂದೇ ಒಂದು ಕುಪ್ಪಳಿನಲ್ಲಿ ಹಾರಿ, ಈಲಂಕೆಗೆ ಬಂದಿಳಿಯುವರು, ಆಗ ನಿನ್ನ ದುಃಖವೆಲ್ಲವೂ ಶಮನವಾಗುವುದು ॥ ೪೦ ॥ ರಾಮ ಲಕ್ಷ್ಮಣರು ಹೇಗೆ ಬರುವರು ಎಂದು ಸಂಶಯಪಟ್ಟೆಯಲ್ಲ ? ಇದು ಎಂತಹ ಅನ್ಯಾಯ, ಮಹಾಬಲ ಪರಾಕ್ರಮಗಳಿಂದೊಡಗೂಡಿ, ಪುರುಷ ಸಿಂಹರೆನಿಸಿರುವ

ಸಗಣಂ ರಾವಣಂ ಹತ್ವಾ ರಾಘವೋ ರಘುನಂದನಃ ।
ತ್ವಾ ಮಾದಾಯ ವರಾರೋಹೆ ಸ್ವಪುರಂ ಪ್ರತಿಯಾಸ್ಯತಿ ॥೪೩॥
ತದಾಽಶ್ವಸಿಹಿ ಭದ್ರಂ ತೇ ಭವ ತ್ವಂ ಕಾಲಕಾಂಕ್ಷಿಣೀ ।
ನಚಿರಾದ್ದ್ರಕ್ಷ್ಯಸೇ ರಾಮಂ ಪ್ರಜ್ವಲಂತಮಿವಾನಲಮ್ ॥೪೪॥
ನಿಹತೇ ರಾಕ್ಷಸೇಂದ್ರೇಽಸ್ಮಿನ್ ಸಪುತ್ರಾಮಾತ್ಯ ಬಾಂಧವೇ ।
ತ್ವಂ ಸಮೇಷ್ಯಸಿ ರಾಮೇಣ ಶಶಾಂಕೇನೇವ ರೋಹಿಣೀ ॥೪೫॥

---

ಎಲೌ ಸತೀಶಿರೋಮಣಿಯೆ, ರಘುನಂದನಃ - ರಘುಕುಲ ಲಲಾಮನಾದ, ರಾಘವಃ - ಶ್ರೀರಾಮನು, ಸಗಣಂ - ರಕ್ಕಸರ ಹಿಂಡಿನಿಂದೊಡಗೂಡಿದ, ರಾವಣಂ - ದಶಕಂಠನನ್ನು, ಹತ್ವಾ- ಕೊಂದು, ತ್ವಾಂ-ನಿನ್ನನ್ನು, ಆದಾಯ - ಕರೆದುಕೊಂಡು, ಸ್ವಪುರಂ - ತನ್ನ ಪಟ್ಟಣವನ್ನು ಕುರಿತು, ಪ್ರತಿಯಾಸ್ಯತಿ- ಪ್ರಯಾಣಮಾಡುವನು ॥೪೩॥ ತತ್- ಆದಕಾರಣ, ಸಮಾಶ್ವಸಿಹಿ-ಸಮಾಧಾನವನ್ನು ಪಡೆ, ತೇ-ನಿನಗೆ,ಭದ್ರಂ -ಶುಭವಾಗಲಿ, ತ್ವಂ - ನೀನು, ಕಾಲಕಾಂಕ್ಷಿಣೀ -ಉಚಿತ ಸಮಯವನ್ನು ನಿರೀಕ್ಷಿಸತಕ್ಕವಳಾಗಿ, ಭವ-ಇರು ಪ್ರಜ್ವಲಂತಂ - ಜ್ವಲಿಸುತಲಿರುವ, ಅನಲಮಿವ - ಅಗ್ನಿಯನ್ನು ಹೇಗೋ ಹಾಗೆ, ರಾಮಂ - ಶ್ರೀರಾಮನನ್ನು, ನಚಿರಾತ್ - ಸ್ವಲ್ಪಕಾಲದಲ್ಲಿಯೇ, ದ್ರಕ್ಷ್ಯಸೆ - ನೋಡುವೆ (ದ್ರಕ್ಷ್ಯಸಿ) ॥೪೪॥ ಸಪುತ್ರಾಮಾತ್ಯಬಾಂಧವೆ - ಮಕ್ಕಳಿಂದಲೂ, ಮಂತ್ರಿಗಳಿಂದಲೂ, ನಂಟರಿಂದಲೂ ಸಹಿತನಾದ, ಅಸ್ಮಿನ್ - ಈ, ರಾಕ್ಷಸೇಂದ್ರೆ - ರಾವಣನು, ನಿಹತೆ (ಸತಿ) ಕೊಲ್ಲಲ್ಪಡುತಲಿರಲಾಗಿ, ಶಶಾಂಕೇನ - ಚಂದ್ರನೊಡನೆ, ರೋಹಿಣೀವ - ರೋಹಿಣೀದೇವಿಯಂತೆ, ತ್ವಂ - ನೀನು, ರಾಮೇಣ - ಶ್ರೀರಾಮನೊಡನೆ, ಸಮೇಷ್ಯಸಿ - ಸೇರುವೆ ॥೪೫॥ ದೇವಿ - ಎಲೌ ಜಾನಕಿಯೇ, ತ್ವಂ - ನೀನು, ಶೋಕಸ್ಯ - ದುಃಖದ, ಪಾರಂ - ಕೊನೆಯನ್ನು

---

ಆ ದಶರಥಾತ್ಮಜರು- ನನ್ನ ಬೆನ್ನಿನ ಮೇಲೆ ಕುಳಿತು ನಿಮಿಷ ಮಾತ್ರದಲ್ಲಿ ಇಲ್ಲಿಗೆ ಬಂದು, ಆಗತಾನೆ ಉದಿಸಿದ ಸೂರ್ಯ ಚಂದ್ರರಂತೆ ಬೆಳಗುತ, ನಿನಗೆ ದರ್ಶನವನ್ನು ದಯೆಪಾಲಿಸುವರು. ॥ ೧೪ ॥ ಮಹಾ ವೀರರೂ, ನರವರರೂ ಆಗಿರುವ ರಘುನಂದನರೀರ್ವರೂ ಸ್ವಲ್ಪ ಕಾಲದಲ್ಲಿಯೇ ಇಲ್ಲಿಗೆ ಬಂದು ಈ ಲಂಕಾನಗರಿಯನ್ನು ಧ್ವಂಸಮಾಡುವುದನ್ನು ನೀನು ಕಣ್ಣಾರನೋಡುವೆ, ಸಂಶಯವನ್ನು ತೊರೆ ॥ ೪೨ ॥ ರಘುನಂದನನೆನಿಸಿದ ಶ್ರೀರಾಮನು- ಬಂಧುಮಿತ್ರಾದಿಗಳಿಂದೊಡಗೂಡಿದ ಈ ದಶಕಂಧರನನ್ನು ನಾಶಗೊಳಿಸಿ, ಎಲೌ ತಾಯೇ ! ನಿನ್ನನ್ನು ಕರೆದುಕೊಂಡು ತನ್ನ ನಗರವಾದ ಅಯೋಧ್ಯೆಯನ್ನು ಸೇರುವನು, ಮನದ ಕಳವಳವನ್ನು ಬಿಡು ॥ ೪೩ ॥ ಇದನ್ನೆಲ್ಲ ಚೆನ್ನಾಗಿ ಯೋಚಿಸಿ, ಮನಸ್ಸಿಗೆ ಸಮಾಧಾನವನ್ನು ತಂದುಕೊಂಡು, ಜಾಗ್ರತೆಯಲ್ಲಿ ಒದಗುವ ಶುಭ ಸಮಯವನ್ನು ನಿರೀಕ್ಷಿಸುತಲಿರು, ಮೋಕ್ಷವೂ ನಿನ್ನ ಕರಗತವಾಗುವುದು, ಇನ್ನೆಲ್ಲ ಸ್ವಲ್ಪ ಕಾಲದೊಳಗೇ ಜ್ವಲಿಸುತಲಿರುವ ಅಗ್ನಿ ಪುರುಷನನ್ನು ಹೇಗೋ ಹಾಗೆ, ನಿನ್ನ ಪ್ರಾಣಪ್ರಿಯನಾದ ಶ್ರೀರಾಮಚಂದ್ರನನ್ನು ಸಂದರ್ಶನಮಾಡಿ, ಆನಂದಿಸುವೆ ॥ ೪೪ ॥ ಮಂತ್ರಿ ಪುತ್ರ ಮಿತ್ರಾದಿಗಳಿಂದೊಡಗೂಡಿರುವ ಈ ಪಾಪಾತ್ಮನಾದ ರಾವಣನನ್ನು ಧೀರನಾದ ರಾಘವನು ಸ್ವಲ್ಪ ಕಾಲದಲ್ಲಿಯೇ ಇರಿಯುವನು, ನೀನು ಕಣ್ಣಾರ ನೋಡುವೆ, ರೋಹಿಣೀದೇವಿಯು- ಚಂದ್ರನೊಡನೆ ಹೇಗೋ ಹಾಗೆ, ನೀನೂ ನಿನ್ನ ಪ್ರಾಣನಾಥನಾದ ಶ್ರೀರಾಮನೊಡನೆ ಬೇಗನೆ ಸೇರಿ ಆನಂದವನ್ನು ಅನುಭವಿಸುವೆ ॥೪೫

ಕ್ಷಿಪ್ರಂ ತ್ವಂ ದೇವಿ ಶೋಕಸ್ಯ ಪಾರಂ ಯಾಸ್ಯಸಿ ಮೈಥಿಲಿ ।
ರಾವಣಂ ಚೈವ ರಾಮೇಣ ನಿಹತಂ ದ್ರಕ್ಷ್ಯಸೇಽಚಿರಾತ್ ॥೪೬॥
ಏವ ಮಾಶ್ವಾಸ್ಯ ವೈದೇಹೀಂ ಹನುಮಾ ನ್ಮಾರುತಾತ್ಮಜಃ ।
ಗಮನಾಯ ಮತಿಂ ಕೃತ್ವಾ ವೈದೇಹೀಂ ಪುನ ರಬ್ರವೀತ್ ॥೪೭॥
ತ ಮರಿಘ್ನಂ ಕೃತಾತ್ಮಾನಂ ಕ್ಷಿಪ್ರಂ ದ್ರಕ್ಷ್ಯಸಿ ರಾಘವಮ್ ।
ಲಕ್ಷ್ಮಣಂ ಚ ಧನುಷ್ಪಾಣಿಂ ಲಂಕಾದ್ವಾರ ಮುಪಸ್ಥಿತಮ್ ॥೪೮॥
ನಖ ದಂಷ್ಟ್ರಾಯುಧಾ ನ್ವೀರಾನ್ ಸಿಂಹ ಶಾರ್ದೂಲ ವಿಕ್ರಮಾನ್ ।

---

ಕ್ಷಿಪ್ರಂ - ಬೇಗನೆ, ಯಾಸ್ಯಸಿ - ಹೊಂದುವೆ, ಮೈಥಿಲಿ - ಓ ಜಾನಕಿ, ರಾಮೇಣ - ಶ್ರೀರಾಮನಿಂದ, ನಿಹತಂ - ಕೊಲ್ಲಲ್ಪಟ್ಟ, ರಾವಣಂಚೈವ - ರಾವಣನನ್ನೂ, ಅಚಿರಾತ್ - ಜಾಗ್ರತೆಯಲ್ಲಿಯೇ, ದ್ರಕ್ಷ್ಯಸೇ - ನೋಡುತ್ತೀಯೆ ॥೪೬॥ ಮಾರುತಾತ್ಮಜಃ - ವಾಯುಪುತ್ರನಾದ, ಹನುಮಾನ್ - ಆಂಜನೇಯನು, ವೈದೇಹೀಂ - ಜಾನಕಿಯನ್ನು, ಏವಂ - ಈ ಪ್ರಕಾರವಾಗಿ, ಸಮಾಶ್ವಾಸ್ಯ- ಸಮಾಧಾನಗೊಳಿಸಿ, ಗಮನಾಯ ಪ್ರಯಾಣಕ್ಕೆ, ಮತಿಂ - ಬುದ್ಧಿಯನ್ನು, ಕೃತ್ವಾ - ಮಾಡಿ, ವೈದೇಹೀಂ - ಜಾನಕಿಯನ್ನು ಕುರಿತು, ಪುನಃ - ಮರಳಿ, ಅಬ್ರವೀತ್ - ಹೇಳತೊಡಗಿದನು ॥೪೭॥ ಕೃತಾತ್ಮಾನಂ - ಮಾಡಬೇಕಾದ ಕೆಲಸವನ್ನು ಮಾಡಿದ, ಅರಿಘ್ನಂ - ಶತ್ರುಸಂಹಾರಕನಾದ, ಲಂಕಾದ್ವಾರಂ - ಲಂಕೆಯ ಬಾಗಿಲನ್ನು ಕುರಿತು, ಉಪಸ್ಥಿತಂ - ಬಂದಿರುವ, ಧನುಷ್ಪಾಣಿಂ - ಬಿಲ್ಲನ್ನು ಕೈಯ್ಯಲ್ಲಿ ಹಿಡಿದಿರುವ, ರಾಘವಂ - ಶ್ರೀರಾಮನನ್ನು, ಲಕ್ಷ್ಮಣಂಚ - ಸೌಮಿತ್ರಿಯನ್ನೂ, ಕ್ಷಿಪ್ರಂ- ಬೇಗನೆ, ದ್ರಕ್ಷ್ಯಸಿ - ನೋಡುತ್ತೀಯೆ ॥೪೮॥ ನಖದಂಷ್ಟ್ರಾಯುಧಾನ್ - ಉಗುರು ಹಲ್ಲುಗಳೇ ಆಯುಧಗಳಾಗಿ ಉಳ್ಳ, ವೀರಾನ್ - ಬಹು ಶೂರರಾದ, ಸಿಂಹಶಾರ್ದೂಲ ವಿಕ್ರಮಾನ್ - ಸಿಂಹಗಳಂತೆಯೂ ಹುಲಿಗಳಂತೆಯೂ ಶೌರ್ಯವುಳ್ಳ, ವಾರಣೇಂದ್ರಾಭಾನ್ - ದೊಡ್ಡ ಆನೆಗಳಂತೆ ಕಂಗೊಳಿಸುತಲಿರುವ, ಸಂಗತಾನ್ - ಒಟ್ಟಿಗೆ ಸೇರಿದ, ವಾನರಾನ್ - ಕಪಿಗಳನ್ನು, ಕ್ಷಿಪ್ರಂ -

---

ಎಲೌ ವೈದೇಹಿಯೇ ! ರಾಘವನಿಂದ ಕೊಲ್ಲಲ್ಪಟ್ಟು, ರಣ ಭೂಮಿಯಲ್ಲಿ ದೀರ್ಘ ನಿದ್ರೆಯಿಂದ ಪವಳಿಸಿರುವ ರಾವಣನನ್ನು ಕ್ಷಿಪ್ರದಲ್ಲಿಯೇ ನೋಡುತ್ತೀಯೆ. ಈ ಶೋಕದ ಪಾರವನ್ನು ಕಾಣುತ್ತೀಯೆ, ಈ ವಿಷಯದಲ್ಲಿ ಲೇಶವಾದರೂ ಸಂಶಯವಿಲ್ಲ ॥ ೪೬ ॥ ಎಂದೀ ಪ್ರಕಾರ ಮರುನ್ನಂದನನಾದ ಆಂಜನೇಯನು- ವೈದೇಹಿಗೆ ಬಗೆ ಬಗೆಯಾಗಿ ಚಿತ್ತವು ಸಮಾಧಾನವನ್ನು ಹೊಂದಿ ದುಃಖೋಪಶಮನವಾಗುವಂತೆ ಮಾಡಿ, ಇನ್ನು ಪ್ರಯಾಣವನ್ನು ಬೆಳಸಬೇಕೆಂದೆಣಿಸಿ, ಜಾನಕಿಯಂ ಕುರಿತು ಮರಳಿಂತೆಂದನು-॥ ೪೭ ॥ ಎಲೌ ಮಹಾಮಾತೆಯೆ ! ಮಹಾಶೂರನೂ, ಶತ್ರುಸಂಹಾರಕನೂ ಆಗಿರುವ ರಾಘವನು- ಧನುರ್ಧಾರಿಯಾಗಿ ಈ ಲಂಕಾನಗರದ ದ್ವಾರದೇಶದಲ್ಲಿ ಬಂದುನಿಲ್ಲುವುದನ್ನು ಬಹುಕ್ಷಿಪ್ರದಲ್ಲಿಯೇ ಕಾಣುತ್ತೀಯೆ, ಆತನ ಹಾಗೆಯೇ ನಿಂತಸೌಮಿತ್ರಿಯನ್ನೂ ನೋಡುತ್ತೀಯೆ. ಇಷ್ಟುಮಾತ್ರವೇ ಅಲ್ಲ ॥೪೮॥ ಮಹಾಪರಾಕ್ರಮಶಾಲಿಗಳೆನಿಸಿ, ಸಿಂಹಶಾರ್ದೂಲಗಳ ಹಾಗೆ ಶೌರ್ಯಸಂಪನ್ನರಾಗಿ, ಮದದಾನೆಗಳಂತೆ ಕಂಗೊಳಿಸುವ ಕಪಿವೀರರೆಲ್ಲರೂ ಈ ಲಂಕಾದ್ವಾರಕ್ಕೆ ಬಂದುಸೇರಿ, ತಮ್ಮ ಕ್ರೂರ ಹಲ್ಲುಗಳನ್ನೂ, ಕ್ರೂರವಾದ ಉಗುರುಗಳನ್ನೂ ಆಯುಧಗಳನ್ನಾಗಿ ಉಪಯೋಗಿಸುತ್ತಿರುವುದನ್ನು ಜಾಗ್ರತೆಯಲ್ಲಿಯೇ ನೋಡುತ್ತೀಯೆ॥೪೯॥ಎಲೌ ಪೂಜ್ಯಳೆ! ಪರ್ವತಗಳ

ವಾನರಾ ನ್ವಾರಣೇಂದ್ರಾಭಾ ಕ್ಷಿಪ್ರಂ ದ್ರಕ್ಷ್ಯಸಿ ಸಂಗತಾ ॥೪೯॥
ಶೈಲಾಂಬುದ ನಿಕಾಶಾನಾಂ ಲಂಕಾ ಮಲಯ ಸಾನುಷು ।
ನರ್ದತಾಂ ಕಪಿಮುಖ್ಯಾನಾ ಮಾರ್ಯೇ ಯೂಥ ನ್ಯ ನೇಕಶಃ ॥೫೦॥
ಸ ತು ಮರ್ಮ್ಮಣಿ ಘೋರೇಣ ತಾಡಿತೋ ಮನ್ಮಥೇಷುಣಾ ।
ನ ಶರ್ಮ ಲಭತೇ ರಾಮಃ ಸಿಂಹಾರ್ದಿತ ಇವ ದ್ವಿಪಃ ॥೫೧॥
ಮಾ ರುದೋ ದೇವಿ ಶೋಕೇನ ಮಾಭೂ ತ್ತೆ ಮನಸೋಽಪ್ರಿಯಂ ।
ಶಚೀವ ಪತ್ಯಾ ಶಕ್ರೇಣ ಭರ್ತ್ರಾ ನಾಥವತೀ ಹ್ಯಸಿ ॥೫೨॥
ರಾಮಾ ದ್ವಿಶಿಷ್ಟಃ ಕೋಽನ್ಯೋಽಸ್ತಿ ಕಶ್ಚಿ ತ್ಸೌಮಿತ್ರಿಣಾ ಸಮಃ ।

---

ಬೇಗನೆ, (ತ್ವಂ - ನೀನು) ದ್ರಕ್ಷ್ಯಸಿ - ನೋಡುತ್ತೀಯೆ ॥೪೯॥ ಆರ್ಯೇ - ಎಲೌ ಪೂಜ್ಯಳೆ, ಶೈಲಾಂಬುದನಿಕಾಶಾನಾಂ -ಬೆಟ್ಟಗಳೊಡನೆಯೂ, ಮೇಘಗಳೊಡನೆಯೂ ಸಮಾನರಾದ, ಲಂಕಾಮಲಯ ಸಾನುಷು - ಲಂಕೆಯ ಹತ್ತಿರದಲ್ಲಿಯೂ, ಮಲಯಪರ್ವತದ ತಪ್ಪಲಿನಲ್ಲಿಯೂ, ನರ್ದತಾಂ - ಗರ್ಜಿಸುತಲಿರುವ, ಕಪಿಮುಖ್ಯಾನಾಂ - ವಾನರವೀರರ, ಅನೇಕಶಃ - ಬಹುಪ್ರಕಾರವಾದ, ಯೂಥಾನಿ - ಗುಂಪುಗಳನ್ನು, ಕ್ಷಿಪ್ರಂ - ಬೇಗನೆ (ದ್ರಕ್ಷ್ಯಸಿ - ನೋಡುತ್ತೀಯೆ) ॥೫೦॥ ಸಃ - ಆ, ರಾಮಸ್ತು - ಶ್ರೀರಾಮನಾದರೋ, ಘೋರೇಣ -ಭಯಂಕರವಾದ, ಮನ್ಮಥೇಷುಣಾ - ಕಾಮಬಾಣದಿಂದ, ಮರ್ಮ್ಮಣಿ - ಅಂತರಂಗದಲ್ಲಿ, ತಾಡಿತಃ - ಹೊಡೆಯಲ್ಪಟ್ಟವನಾಗಿ, ಸಿಂಹಾರ್ದಿತಃ - ಸಿಂಹದಿಂದ ಹಿಂಸಿಸಲ್ಪಟ್ಟ, ದ್ವಿಪಇವ - ಆನೆಯಂತೆ, ಶರ್ಮ - ಸೌಖ್ಯವನ್ನು, ನಲಭತೆ - ಹೊಂದದೆ ಇದಾನೆ ॥೫೧॥ ದೇವಿ - ಎಲೌ ಸೀತಾದೇವಿಯೆ ! ಶೋಕೇನ - ದುಃಖದಿಂದ, ಮಾರುದಃ - ಅಳಬೇಡ, ತೆ - ನಿನ್ನ, ಮನಸಃ-ಮನಸ್ಸಿಗೆ, ಅಪ್ರಿಯಂ - ಅಹಿತವು, ಮಾಭೂತ್ - ಆಗಬೇಡ, ಪತ್ಯಾ - ವಲ್ಲಭನಾದ, ಶಕ್ರೇಣ - ಇಂದ್ರನೊಡನೆ, ಶಚೀವ - ಶಚೀದೇವಿಯಂತೆ, (ತ್ವಾ - ನೀನು,) ಭರ್ತ್ರಾ - ಪತಿಯಾದ ರಾಮಚಂದ್ರನಿಂದ, ನಾಥವತೀ - ಪ್ರಶಸ್ತನಾದ ಪತಿಯುಳ್ಳವಳಾಗಿ, ಅಸಿಹಿ - ಇದ್ದೀಯಲ್ಲವೆ!, ॥೫೨॥ ರಾಮಾತ್ - ರಾಮನಿಗಿಂತಲೂ, ವಿಶಿಷ್ಟಃ - ಅಧಿಕನು

---

ಹಾಗೂ ಮೇಘಗಳಹಾಗೂ ಮೆರೆಯುತ್ತ, ಲಂಕಾದ್ವಾರದಲ್ಲಿಯೂ,ಮಲಯ ಪರ್ವತದ ತಪ್ಪಲಲ್ಲಿಯೂ ವಿನೋದದಿಂದ ಸಿಂಹಗರ್ಜನೆಯನ್ನು ಮಾಡುತಲಿರುವ ಮಹಾವೀರರಾದ ಕಪಿಗಳ ತಂಡೋಪತಂಡಗಳಾದ ಹಿಂಡುಗಳನ್ನು ಸ್ವಲ್ಪಕಾಲದಲ್ಲಿಯೇ ನೋಡಹೋಗುವೆ॥೫೦॥ಎಲೌ ಮಾನ್ಯಳೆ!ಆದಾಶರಥಿಯು-ಮಹಾಧೀರನೇ ಆಗಿದ್ದರೂನಿನ್ನನ್ನು ಅಗಲಿ ಇರುವುದರಿಂದ ಅಂತರಂಗದಲ್ಲಿ ಅನಂಗನ ಅಂಬಿನ ಪೆಟ್ಟಿನಿಂದ ನೊಂದು,ಬಹಳವಾಗಿ ಬಳಲುತಲಿದಾನೆ,ಸಿಂಹದಿಂದ ಪೆಟ್ಟುತಿಂದ ಆನೆಯಹಾಗೆ ಸೌಖ್ಯವನ್ನು ಅನುಭವಿಸದೆ ಇದಾನೆ, ಆದುದರಿಂದ ಬಹುತ್ವರೆಯಲ್ಲಿಯೇ ಇಲ್ಲಿಗೆ ಬಂದು ಸೇರುವನು॥೫೧॥ಎಲೌ ಪೂಜ್ಯಳಾದ ಜನನಿ ! ಕೈಗಳನ್ನು ಜೋಡಿಸಿ, ಇಗೋ ನಿನ್ನನ್ನು ಬೇಡಿಕೊಳ್ಳುವೆನು, ನೀನು ಇನ್ನು ಅಳಬೇಡ, ಇನ್ನು ಮೇಲೆ ನಿನ್ನ ಮನಸ್ಸಿಗೆ ಲೇಶವಾದರೂ ಅಹಿತವು ಉಂಟಾಗುವುದಿಲ್ಲ. ಸುರನಾಯಕನಾದ ಶಕ್ರನಿಂದ ಶಚೀದೇವಿಯು ಹೇಗೋ ಹಾಗೆ,ಸಕಲ ಕಲ್ಯಾಣಾಭಿರಾಮನಾಗಿ ಪ್ರಶಸ್ತತರನೆನಿಸಿದ ಪ್ರಾಣನಾಥನನ್ನು ಪಡೆದಿದ್ದೀಯೆ, ಚಿಂತಿಸದೆ ಸ್ವಲ್ಪಕಾಲ ಮಾತ್ರ ತಾಳ್ಮೆಯಿಂದಿರು ॥೫೨॥ ಈ ಪ್ರಪಂಚದಲ್ಲಿ ಹುಡುಕಿ ನೋಡಿದರೆ-ಗುಣಗಳಲ್ಲಿ ಯಾಗಲಿ,ಶೌರ್ಯದಲ್ಲಿಯಾಗಲಿ ಶ್ರೀರಾಮನಿಗೆ

ಅಗ್ನಿಮಾರುತ ಕಲ್ಪೌ ತೌ ಭ್ರಾತರೌ ತವ ಸಂಶ್ರಯೌ ॥೫೩॥
ನಾಸ್ಮಿಂ ಶ್ಚಿರಂ ವತ್ಸ್ಯಸಿ ದೇವಿ ದೇಶೇ ರಕ್ಷೋಗಣೈ ರಧ್ಯುಷಿತೇऽತಿರೌದ್ರೇ।
ನ ತೇ ಚಿರಾ ದಾಗಮನಂ ಪ್ರಿಯಸ್ಯ ಕ್ಷಮಸ್ವ ಮತ್ಸಂಗಮ ಕಾಲಮಾತ್ರಂ ॥
—ಇತಿ ಶ್ರೀಮತ್ಸುಂದರಕಾಣ್ಡೇ - ಏಕೋನ ಚತ್ವಾರಿಂಶ ಸ್ಸರ್ಗಃ—

ಎನಿಸಿದ, ಅನ್ಯಃ - ಬೇರೊಬ್ಬನು, ಕಃ - ಯಾವನು, ಅಸ್ತಿ - ಇದಾನೆ !, ಸೌಮಿತ್ರಿಣಾ - ಲಕ್ಷ್ಮಣನೊಡನೆ, ಸಮಃ - ಸಮನಾದವನು, (ಕಃಅಸ್ತಿ - ಯಾವನಿದಾನೆ?) ಅಗ್ನಿಮಾರುತಕಲ್ಪೌ - ಅಗ್ನಿವಾಯುಗಳಿಗೆಣೆಯೆನಿಸಿದ, ತೌ - ಆ, ಭ್ರಾತರೌ - ಸೋದರರಾದ ರಾಮಲಕ್ಷ್ಮಣರು, ತವ - ನಿನಗೆ, ಸಂಶ್ರಯೌ - ಆಶ್ರಯರಾಗಿದಾರೆ ॥೫೩॥ ಹೇದೇವಿ - ಎಲೌ ಸೀತಾದೇವಿಯೆ, ರಕ್ಷೋಗಣೈಃ - ರಾಕ್ಷಸ ಸಮೂಹಗಳಿಂದ, ಅಧ್ಯುಷಿತೆ - ಆಶ್ರಯಿಸಲ್ಪಟ್ಟಿರುವುದಾದಕಾರಣವೇ, ಅತಿರೌದ್ರೇ - ಮಹಾ ಭಯಂಕರವೆನಿಸಿದ, ಅಸ್ಮಿನ್ - ಈ, ದೇಶೆ - ಸ್ಥಾನದಲ್ಲಿ, (ಲಂಕೆಯಲ್ಲಿ, ತ್ವಂ - ನೀನು) ಚಿರಂ - ಬಹುಕಾಲ, ನವತ್ಸ್ಯಸಿ - ವಾಸಮಾಡುವುದಿಲ್ಲ, ತೆ - ನಿನ್ನ, ಪ್ರಿಯಸ್ಯ - ವಲ್ಲಭನ, ಆಗಮನಂ - ಬರುವಿಕೆಯು, ಚಿರಾತ್ - ಬಹುಕಾಲ, ನ (ಭವಿಷ್ಯತಿ) - ಆಗುವುದಿಲ್ಲ, ಮತ್ಸಂಗಮಕಾಲಮಾತ್ರಂ - ನಾನು ಅಲ್ಲಿಸೇರುವಷ್ಟು ಕಾಲಮಾತ್ರವೇ, ಕ್ಷಮಸ್ವ - ಸೈರಣೆಯಿಂದಿರು, ॥೫೪॥

—ಇಂತು ಮೂವತ್ತೊಂಭತ್ತನೆಯ ಸರ್ಗಂ—

ಎಣೆಯೆನಿಸಿದ ಮತ್ತು ಸೌಮಿತ್ರಿಗೆ ಸಮಾನನೆನಿಸಿದ ಪುರುಷನಾವನಿರುವನು ? ಅಗ್ನಿಯಂತೆ ತೇಜಸ್ವಿಗಳಾಗಿಯೂ, ವಾಯುವಿನಂತೆ ಬಲಪರಾಕ್ರಮಗಳಿಂದೊಡಗೂಡಿದವರಾಗಿಯೂ ಇರುವ ರಾಮಲಕ್ಷ್ಮಣರೀರ್ವರೂ ನಿನ್ನನ್ನು ನೋಡಬೇಕೆಂದು ಹಗಲಿರುಳೂ ಕಳವಳಸುತಲಿದಾರೆ ॥ ೫೩ ॥ ಆದಕಾರಣ ಎಲೌ ಮಹಾ ದೇವಿಯೆ ! ಕ್ರೂರರಾದ ರಾಕ್ಷಸರಿಂದ ನಿಬಿಡವಾಗಿ, ಭಯಂಕರವೆನಿಸಿರುವ ಈ ಸ್ಥಲದಲ್ಲಿ ನೀನು ಇನ್ನು ಬಹುಕಾಲ ವಿರುವುದಿಲ್ಲ. ನಿನ್ನ ಪ್ರಾಣವಲ್ಲಭನಾದ ಶ್ರೀರಾಮಚಂದ್ರನು ಇಲ್ಲಿಗೆ ಬರಲಿಕ್ಕೂ ಬಹುಕಾಲವು ಹಿಡಿಯುವುದಿಲ್ಲ. ಎಲೌ ತಾಯೆ ! ನಾನು ಇಲ್ಲಿಂದ ತೆರಳಿ, ಅಲ್ಲಿ ನಿನ್ನ ಸುದ್ದಿಯನ್ನು ತಿಳಿಯಬೇಕೆಂದು ತವಕಿಸುತಲಿರುವ ಶ್ರೀರಾಮನೇ ಮೊದಲಾದವರಿಗೆ ನಿನ್ನ ಕುಶಲವೃತಾಂತವನ್ನು ತಿಳಿಯಪಡಿಸುವಷ್ಟು ಕಾಲ ಮಾತ್ರ ನೀನು ಶಾಂತಚಿತ್ತಳಾಗಿ ತಾಳ್ಮೆಯಿಂದಿರಬೇಕೆಂದು ನಿನ್ನನ್ನು ಪ್ರಾರ್ಥಿಸುತ್ತೇನೆ ಎಂದು ಹೇಳಿ ಸುಮ್ಮನಾದನು ॥೫೪॥

— ಇಂತು ಮೂವತ್ತೊಂಭತ್ತನೆಯ ಸರ್ಗಂ—

ಶ್ರೀ

ಶ್ರೀ ರಾಮಚಂದ್ರ ಪರಬ್ರಹ್ಮಣೇ ನಮಃ

# ಚತ್ವಾರಿಂಶ ಸ್ಸರ್ಗಃ

---

ಶ್ರುತ್ವಾ ತು ವಚನಂ ತಸ್ಯ ವಾಯುಸೂನೋ ರ್ಮಹಾತ್ಮನಃ ।
ಉವಾಚಾತ್ಮ ಹಿತಂ ವಾಕ್ಯಂ ಸೀತಾ ಸುರ ಸುತೋಪಮಾ ॥೧॥
ತ್ವಾಂ ದೃಷ್ಟ್ವಾ ಪ್ರಿಯವಕ್ತಾರಂ ಸಂಪ್ರಹೃಷ್ಯಾಮಿ ವಾನರ ।
ಅರ್ಧ ಸಂಜಾತ ಸಸ್ಯೇವ ವೃಷ್ಟಿಂ ಪ್ರಾಪ್ಯ ವಸುಂಧರಾ ॥೨॥
ಯಥಾ ತಂ ಪುರುಷವ್ಯಾಘ್ರಂ ಗಾತ್ರೈ ಶ್ಶೋಕಾಭಿ ಕರ್ಶಿತೈಃ ।

---

—ನಲವತ್ತನೆಯ ಸರ್ಗಂ—

ಕಂದ॥ ನಗರಿಗೆ ಪೊರಮಡೆವಾರುತಿ । ರಘುನಂದನ ಗರುಹ ವೇಳ್ದ ಳವನಿಜೆ ಕುರುಹಂ ।
ಮಗುಳದ ನಾಲಿಸುತೆ ಹರಿ ಸ । ಡಗರದೆ ತಾಂ ಕಾರ್ಯ ಶೇಷವಂ ಚಿಂತಿಸಿದಂ ॥

ಸುರಸುತೋಪಮಾ - ದೇವಕನ್ಯೆಗೆಣೆಯಾದ, ಸೀತಾ - ಜಾನಕಿಯು, ಮಹಾತ್ಮನಃ - ಮಹತ್ತರ ವಾದ ಬುದ್ಧಿಯುಳ್ಳ, ವಾಯುಸೂನೋಃ - ವಾಯುನಂದನನಾದ, ತಸ್ಯ - ಆ ಮಾರುತಿಯ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಆತ್ಮಹಿತಂ - ತನಗೆ ಹಿತಕರವಾಗಿರುವ, ವಾಕ್ಯಂ - ಮಾತನ್ನು, ಉವಾಚ - ಹೇಳತೊಡಗಿದಳು ॥೧॥ ವಾನರ - ಎಲೈ ಕಪಿವರನೆ!, ಪ್ರಿಯವಕ್ತಾರಂ - ಹಿತವಾದ ಮಾತನ್ನು ಹೇಳುತಲಿರುವ, ತ್ವಾಂ - ನಿನ್ನನ್ನು, ದೃಷ್ಟ್ವಾ - ನೋಡಿ, ಅಹಂ - ನಾನು, ವೃಷ್ಟಿಂ - ಮಳೆಯನ್ನು, ಪ್ರಾಪ್ಯ - ಹೊಂದಿ, ಅರ್ಧಸಂಜಾತಸಸ್ಯಾ - ಅರೆಮೊಳೆತ ಪೈರುಳ್ಳ, ವಸುಂಧರೇವ - ಭೂಮಿಯಂತೆ, ಸಂಪ್ರಹೃಷ್ಯಾಮಿ - ಹರ್ಷದಿಂದ ಹಿಗ್ಗುತಲಿದೇನೆ ॥೨॥ ಸಕಾಮಾ - ಶ್ರೀರಾಮ ಸಂದರ್ಶನದ ಬಯಕೆಯುಳ್ಳ, ಅಹಂ - ನಾನು, ಶೋಕಾಭಿಕರ್ಶಿತೈಃ - ದುಃಖದಿಂದ ನವೆದುಹೋಗಿರುವ, ಗಾತ್ರೈಃ - ಕರಗಳಿಂದ,

---

— ನಲವತ್ತನೆಯಸರ್ಗಂ —

ದೇವಕನ್ಯೆಗೆಣೆಯೆನಿಸಿದ ವೈದೇಹಿಯು - ಮನಸ್ಸಮಾಧಾನ ಕರವೆನಿಸಿದ ಮಹಾತ್ಮನಾದ ಮಾರುತಿಯ ಮಧುರ ವಚನಗಳನ್ನಾಲಿಸಿ, ಮುಂದೆ ತನಗೆ ಬಲು ಬೇಗನೆ ಮೇಲಾಗುವ ಮಾತುಗಳನ್ನು ಆತನೊಡನೆ ಹೇಳತೊಡಗಿದಳು. ॥೧॥ ಎಲೈ ವಾನರೋತ್ತಮನೇ ! ಅರೆವಾಸಿ ಮೊಳೆಯುತಲಿರುವಾಗ ಮಳೆಯಿಲ್ಲದೆ ಅರಳಿ ಬಾಡುತಲಿರುವ ಪೈರುನ್ನೊಳಗೊಂಡಿರುವನೆಲವು-ಮಳೆಯನ್ನು ಪಡೆಯುವುದರಿಂದ ಕಳಕಳನೆಉಬ್ಬಿ ಹೊಳೆಯುವಹಾಗೆ, ಶೋಕದೀನಳಾದ ನಾನು-ಹಿತವಾದಿಯಾದ ನಿನ್ನ ಪ್ರಿಯವಚನಗಳನ್ನಾಲಿಸಿ ಹರುಷದಿಂದ ಹಿಗ್ಗುತಲಿದೇನೆ ॥೨॥ ಎಲೈ ಹನುಮಂತನೇ ! ಪ್ರಾಣಪ್ರಿಯನನ್ನಗಲಿ ಕೃಶಿಸಿ ಹೋಗಿರುವ ಈ ನಾನು-ಆ ನನ್ನ ಸ್ವಾಮಿಯನ್ನು ಕಣ್ಣಾರ ಕಂಡು, ಕರತಲದಿಂದ ಅಡಿದಾವರೆಗಳನ್ನೊತ್ತಿ

ಸಂಸ್ಪೃಶೇಯಂ ಸಕಾಮಾಹಂ ತಥಾಕುರು ದಯಾಂ ಮಯಿ ॥೩॥
ಅಭಿಜ್ಞಾನಂ ಚ ರಾಮಸ್ಯ ದದ್ಯಾ ಹರಿ ಗಣೋತ್ತಮ ।
ಕ್ಷಿಪ್ತಾಮಿಷೀಕಾಂ ಕಾಕಸ್ಯ ಕೋಪಾ ದೇಕಾಕ್ಷಿ ಶಾತನೀಮ್ ॥೪॥
ಮನ ಶ್ಶಿಲಾಯಾ ಸ್ತಿಲಕೋ ಗಂಡ ಪಾರ್ಶ್ವೇ ನಿವೇಶಿತಃ ।

---

ಪುರುಷವ್ಯಾಘ್ರಂ - ಪುರುಷಶ್ರೇಷ್ಠನೆನಿಸಿದ, ತಂ-ಆ ಶ್ರೀರಾಮನನ್ನು, ಯಥಾ - ಯಾವ ಪ್ರಕಾರವಾಗಿ, ಸಂಸ್ಪೃಶೇಯಂ - ಪಾದಗಳನ್ನು ಸ್ಪರ್ಶಮಾಡಬಲ್ಲೆನೋ, ತಥಾ - ಹಾಗೆ, ಮಯಿ - ನನ್ನಲ್ಲಿ, ದಯಾಂ - ಕರುಣೆಯನ್ನು, ಕುರು - ಮಾಡು, ॥೩॥ ಹರಿಗಣೋತ್ತಮ- ಎಲೈ ಕಪಿ ಕುಲಲಲಾಮನೆ ! ಕೋಪಾತ್- ಸಿಟ್ಟಿನಿಂದ, ಕ್ಷಿಪ್ತಾಂ - ಪ್ರಯೋಗಿಸಲ್ಪಟ್ಟ, ಕಾಕಸ್ಯ - ಕಾಗೆಯ, ಏಕಾಕ್ಷಿಶಾತನೀಂ - ಒಂದು ಕಣ್ಣನ್ನು ಕಳೆದ, ಇಷೀಕಾಂ - ಮಂತ್ರಿಸಿದ ಹುಲ್ಲಿನ ರೂಪವಾದ ಬ್ರಹ್ಮಾಸ್ತ್ರವೆಂಬ, ಅಭಿಜ್ಞಾನಂಚ - ಗುರುತನ್ನು, ದದ್ಯಾಃ - ಕೊಡು (ತಿಳಿಸು) ॥೪॥ (ಕಿಂಚ - ಮತ್ತು) ತಿಲಕೇ - ಹಣೆಯ ಬೊಟ್ಟು, ಪ್ರಣಷ್ಟೇ (ಸತಿ) ಅಳಿಸಿ ಹೋದಲ್ಲಿ, ಮನಶ್ಶಿಲಾಯಾಃ - ಮಣಿಶಿಲೆಯೆಂಬ ಕೆಂಗಲ್ಲಿನ, (ಗಂಧವು) ತಿಲಕಃ - ಬೊಟ್ಟು, ಗಂಡ ಪಾರ್ಶ್ವೇ - ಕೆನ್ನೆಯಲ್ಲಿ, ತ್ವಯಾ - ನಿನ್ನಿಂದ, ನಿವೇಶಿತಃ - ಇಡಲ್ಪಟ್ಟಿತು, ಅಥವಾ- ತಿಲಕೇ - ಬೊಟ್ಟು, ಪ್ರಣಷ್ಟೇಸತಿ - ಅಳಿಸಿಹೋಗುತ್ತಿರಲಾಗಿ, ಗಂಡಪಾರ್ಶ್ವೇ -ದೊಡ್ಡ ಬಂಡೆಯ ಪಕ್ಕದಲ್ಲಿದ್ದ, ಮನಶ್ಶಿಲಾಯಾಃ - ಮಣಿಶಿಲೆಯ ಸಂಬಂಧವಾದ, ತಿಲಕಃ - ಬೊಟ್ಟು, ತ್ವಯಾ - ನಿನ್ನಿಂದ, ನಿವೇಶಿತಃ - ಇಡಲ್ಪಟ್ಟಿತು, ತಂ - ಅದನ್ನು, ಸ್ಮರ್ತುಂ - ನೆನೆಯಲಿಕ್ಕೆ, ಅರ್ಹಸಿಕಿಲ - ಯೋಗ್ಯನಾಗಿದ್ದೀಯಲ್ಲವೆ ? (ಇತಿ

---

ಅಪ್ಪಿ, ಹೇಗೆ ಆನಂದಿಸ ಬಲ್ಲೆನೋ, ಹಾಗೆ ನನ್ನಲ್ಲಿ ದಯೆಯನ್ನುತೋರುವುದು ನಿನ್ನವಶವಾಗಿದೆ ॥೩॥ ನನಗೆ ಸ್ವಲ್ಪ ಅಪರಾಧವನ್ನು ಮಾಡಿದ ಒಂದು ಸಣ್ಣ ಕಾಗೆಯ ಮೇಲೆ ಸಿಟ್ಟುಗೊಂಡು ಒಂದು ಹುಲ್ಲುಕಡ್ಡಿಯನ್ನು ಮಹತ್ತರವಾದ ಬ್ರಹ್ಮಾಸ್ತ್ರವನ್ನಾಗಿ ಪ್ರಯೋಗಿಸಿ, ಶರಣುಹೊಂದಿದ ಆವಾಯಸವನ್ನು ಕಾರುಣ್ಯನಿಧಿಯಾದ ನೀನು ಒಂದು ಕಣ್ಣನ್ನು ಮಾತ್ರ ಕಳೆದು ಕಾಪಾಡಿದೆ, ಎಂಬದಾಗಿ ನಾನು ಹೇಳಿದ ಈ ಗುರುತನ್ನು ಆ ಶ್ರೀರಾಮಚಂದ್ರನಿಗೆ ಎಲೈ ವಾನರೋತ್ತಮನೇ ! ನೀನು ಮರೆಯದೆ ಅರುಹು ॥೪॥ ಒಂದುವೇಳೆ - ಅರಣ್ಯದಲ್ಲಿ ನಡೆದ ಈ ಸಮಾಚಾರವು ಎಲ್ಲರಿಗೂ ಗೊತ್ತಾಗಿರಬಹುದು, ಅದರಿಂದ ಇದು ಅಷ್ಟು ಮೇಲಾದ ಕುರುಹು ಆಗಲರಿಯದು ಎಂದು ಆತನಿಗೇನಾದರು ಸಂಶಯವುಂಟಾದರೆ - ಪುರದೊಳಗೆ ನಡೆದ ಮತ್ತೊಂದು ಸಂಗತಿಯನ್ನು ಆತನಿಗೆ ಜ್ಞಾಪಿಸು, ಅದೇನು ಎಂಬೆಯೋ ? "ಎಲೈ ಪ್ರಾಣಕಾಂತನೆ ! ಅಯೋಧ್ಯಾನಗರದಲ್ಲಿ ವಾಸಮಾಡುತಲಿರುವಾಗ-ಅರಮನೆಯೊಳಗೆ ಅಂತರಂಗದಲ್ಲಿ, ತೂಗುಮಣೆಯಮೇಲೆ ನಿನ್ನೊಡನೆ ಕುಳಿತು ಸಂತೋಷದಿಂದ ತೂಗಿಕೊಳ್ಳುತಲಿರುವಾಗ, ನನ್ನ ಹಣೆಯಲ್ಲಿನ ತಿಲಕವು ಅಳಿಸಿಹೋಗುತಲಿದ್ದಿತು. ನೀನು ತಗ, ನಾನು ತೂಗುತ್ತೇನೆಂದು ಹೇಳಿ ಇಳಿದು, ಹಿಂದಿನಿಂದ ತೂಗಲಿಕ್ಕೆ ತೊಡಗಿ, ಮಣಿಶಿಲೆಯ ಗಂಧವನ್ನು ಬೆರಳಿನ ತುದಿಯಿಂದ ನಾನು ಅರಿಯದ ಹಾಗೆ ನನ್ನ ಕೆನ್ನೆಯಮೇಲೆ ಬಟ್ಟನ್ನು ಇಟ್ಟು, ಹಾಗೆಯೇ ನನ್ನ ಮುಖವನ್ನು ನೋಡಿನಕ್ಕು ಹಾಸ್ಯಮಾಡುತಲಿರಲಿಲ್ಲವೆ ? ಅದನ್ನು ಜ್ಞಾಪಕದಲ್ಲಿ ತಂದುಕೋ ಎಂದು ಹೇಳು. ಮತ್ತು-ಕಾಡಿನಲ್ಲಿರುವಾಗಲೂ, ನನ್ನ ಹಣೆಯ ತಿಲಕವು ಅಳಿಸಿ ಹೋದಾಗ, ಮಣಿಶಿಲೆಯೆಂಬ ಬೆಟ್ಟದಕೆಂಗಲ್ಲಿನ ಪುಡಿಯನ್ನು

ತ್ವಯಾ ಪ್ರಣಷ್ಟೇ ತಿಲಕೇ ತಂ ಕಿಲ ಸ್ಮರ್ತು ಮರ್ಹಸಿ ॥೫॥
ಸ ವೀರ್ಯವಾ ನ್ಕಥಂ ಸೀತಾಂ ಹೃತಾಂ ಸಮನು ಮನ್ಯಸೇ ।
ವಸಂತೀಂ ರಕ್ಷಸಾಂ ಮಧ್ಯೇ ಮಹೇಂದ್ರ ವರುಣೋಪಮಃ ॥೬॥
ಏಷ ಚೂಡಾಮಣಿ ರ್ದಿವ್ಯೋ ಮಯಾ ಸುಪರಿರಕ್ಷಿತಃ ।
ಏತಂ ದೃಷ್ಟ್ವಾ ಪ್ರಹೃಷ್ಯಾಮಿ ವ್ಯಸನೇ ತ್ವಾ ಮಿವಾನಘ ॥೭॥
ಏಷ ನಿರ್ಯಾತಿತ ಶ್ಶ್ರೀಮಾ ನ್ಮಯಾ ತೇ ವಾರಿಸಂಭವಃ ।
ಅತಃ ಪರಂ ನ ಶಕ್ಷ್ಯಾಮಿ ಜೀವಿತುಂ ಶೋಕ ಲಾಲಸಾ ॥೮॥

ಹೀಗೆಂದು, ವದ-ಹೇಳು) ॥೫॥ ಮಹೇಂದ್ರವರುಣೋಪಮಃ-ಇಂದ್ರವರುಣರಿಗೆಣೆಯೆನಿಸಿದ, ವೀರ್ಯವಾನ್-ಪರಾಕ್ರಮಶಾಲಿಯಾದ, ಸಃ - ನನ್ನಲ್ಲಷ್ಟು ಪ್ರೇಮವಿರುವ, (ತ್ವಂ - ನೀನು) ಹೃತಾಂ - ರಾವಣನಿಂದ ಅಪಹರಿಸಲ್ಪಟ್ಟಿರುವ, ರಕ್ಷಸಾಂ - ರಾಕ್ಷಸರ, ಮಧ್ಯೇ - ನಡುವೆ, ವಸನ್ತೀಂ - ವಾಸಮಾಡುತಲಿರತಕ್ಕ (ಮಾಂ - ನನ್ನನ್ನು) ಕಥಂ - ಹೇಗೆ, ಸಮನುಮನ್ಯಸೇ-ಸಮ್ಮತಿಸಿ ಇದ್ದೀಯೆ ? (ಉಪೇಕ್ಷಿಸಬಹುದೆ?)॥೬॥ ಹೇಅನಘ - ಎಲೈ ದೋಷಶೂನ್ಯನೆ!, ದಿವ್ಯಃ - ಶ್ರೇಷ್ಠವೆನಿಸಿದ, ಏಷಃ - ಈ, ಚೂಡಾಮಣಿಃ-ಶಿರೋರತ್ನವು, ಮಯಾ - ನನ್ನಿಂದ, ಸುಪರಿರಕ್ಷಿತಃ - ಚೆನ್ನಾಗಿ ಕಾಪಾಡಲ್ಪಟ್ಟಿರುವುದು, ವ್ಯಸನೆ - ಇಂತಹ ದುಃಖಸಮಯದಲ್ಲಿ, ತ್ವಾಮಿವ - ನಿನ್ನನ್ನು ಹೇಗೋಹಾಗೆ, ಏತಂ - ಈ ಶಿರೋರತ್ನವನ್ನು, ದೃಷ್ಟ್ವಾ-ನೋಡಿ, ಸಂಪ್ರಹೃಷ್ಯಾಮಿ - ಹೇರಳವಾಗಿ ಸಂತೋಷಿಸುತ್ತಿರುವೆನು ॥೭॥ ಶ್ರೀಮಾನ್ - ಪ್ರಶಸ್ತವಾದ ಕಾಂತಿಯುಳ್ಳ, ವಾರಿಶಂಭವಃ - ಸಮುದ್ರಜಲದಲ್ಲಿ ಹುಟ್ಟಿದ, ಏಷಃ - ಈ ಚೂಡಾರತ್ನವು, ಮಯಾ - ನನ್ನಿಂದ, ನಿರ್ಯಾತಿತಃ - ಗುರುತಾಗಿ ನಿನಗೆ ಕಳುಹಲ್ಪಟ್ಟಿದೆ, ಅತಃ - ಆದಕಾರಣದಿಂದ, ಶೋಕಲಾಲಸಾ ದುಃಖದಲ್ಲಿ ಮುಳುಗಿರುವನಾನು, ಪರಂ - ಒಂದು ತಿಂಗಳಿಗಿಂತ ಹೆಚ್ಚಾಗಿ, ಜೀವಿತುಂ ಬದುಕಿರಲಿಕ್ಕೆ,

ದ್ರವವನ್ನಾಗಿ ಮಾಡಿ, ದೊಡ್ಡ ಬಂಡೆಯ ಪಕ್ಕದಲ್ಲಿ ಕುಳಿತಿರುವ ನನ್ನ ಕೆನ್ನೆಯ ಮೇಲೆ ತಿಲಕವನ್ನು ಹಚ್ಚುತಲಿರಲಿಲ್ಲವೆ ? ಅದನ್ನೂ ಸ್ಮರಿಸು ಎಂದು ಹೇಳು ॥೫॥ ಬಲಪರಾಕ್ರಮಾದಿಗುಣಗಳಿಂದ ಇಂದ್ರವರುಣರಿಗೆಣೆಯೆನಿಸಿದ ನೀನು-ನನ್ನಲ್ಲಿ ಅಷ್ಟು ಅಪಾರವಾದ ಪ್ರೇಮಭರವನ್ನಿಟ್ಟಿದ್ದರೂ, ಮಹಾಪಾಪಾತ್ಮನಾದ ಈ ನೀಚರಾಕ್ಷಸನಿಂದ ಅಪಹರಿಸಲ್ಪಟ್ಟು, ರಕ್ಕಸರ ನಡುವೆ ಸಿಲುಕಿ,ನರಳುತ್ತಿರುವ ನನ್ನನ್ನು ಉಪೇಕ್ಷೆಮಾಡಿರುವುದು ನ್ಯಾಯವೆ? ಎಂದು ಕೇಳಿದಳು ಎಂಬದಾಗಿ ತಿಳಿಸು ॥೬॥ ಎಲೈ ಶ್ರೀರಾಮಚಂದ್ರಾ ! ನನ್ನ ಈ ಚೂಡಾಮಣಿಯನ್ನು ನೀನು-ಆಗಾಗ ಕೈಗೆತೆಗೆದುಕೊಂಡು ಶ್ಲಾಘಿಸುತಲೂ,ಲಾಲಿಸುತಲೂ, ನನ್ನಲ್ಲಿ ಹೇಗೋ ಹಾಗೆ, ಅದರಲ್ಲಿಯೂ ಪ್ರೀತಿಯನ್ನು ತೋರುತಲಿದ್ದೆಯಷ್ಟೆ ? ಎಲೈ ದೋಷಶೂನ್ಯನೇ ! ಆದರಿಂದಲೇ ನಾನು ಇದನ್ನು ಬಲು ಎಚ್ಚರಿಕೆಯಿಂದ ಕಾಪಾಡಿಕೊಂಡು, ಅದನ್ನು ನೋಡಿದಾಗಲೆಲ್ಲ, ನಿನ್ನನ್ನು ನೋಡಿದಂತೆಯೇ ದುಃಖದ ಸಮಯದಲ್ಲಿಯೂ ಸಂತೋಷಿಸುತಲಿರುವೆನು ಎಂದು ತಿಳಿಸು॥೭॥ಸಮುದ್ರಜಲದಲ್ಲಿ ಉದ್ಭವಿಸಿದುದಾದ ಕಾರಣ ಶ್ರೇಷ್ಠವಾದ ಕಾಂತಿಯನ್ನೊಳಗೊಂಡು, ನಿನ್ನ ಪರಮಪ್ರೀತಿಗೊಳಗಾಗಿದ್ದ ಈ ದಿವ್ಯರತ್ನವನ್ನೂ ಗುರುತಿಗಾಗಿ ನಿನ್ನ ಬಳಿಗೆ ಕಳುಹಿಸಿದೇನೆ. ಮೊದಲೇ ಶೋಕದೀನಳಾದ ಈ ನಾನು - ಇನ್ನು ಮೇಲೆ ಖಂಡಿತವಾಗಿಯೂ ಪ್ರಾಣಗಳನ್ನು ಧರಿಸಿ ಇರಲಾರೆನು ಎಂದೂ ಬಿನ್ನವಿಸು॥

ಅಸಹ್ಯಾನಿ ಚ ದುಃಖಾನಿ ವಾಚಶ್ಚ ಹೃದಯಚ್ಛಿದಃ ।
ರಾಕ್ಷಸೀನಾಂ ಸುಘೋರಾಣಾಂ ತ್ವತ್ಕೃತೇ ಮರ್ಷಯಾ ಮ್ಯಹಂ ॥೯॥
ಧಾರಯಿಷ್ಯಾಮಿ ಮಾಸಂ ತು ಜೀವಿತಂ ಶತ್ರುಸೂದನ ।
ಮಾಸಾ ದೂರ್ಧ್ವಂ ನ ಜೀವಿಷ್ಯೇ ತ್ವಯಾ ಹೀನಾ ನೃಪಾತ್ಮಜ ॥೧೦॥
ಘೋರೋ ರಾಕ್ಷಸ ರಾಜೋಽಯಂ ದೃಷ್ಟಿಶ್ಚ ನ ಸುಖಾ ಮಯಿ ।
ತ್ವಾಂ ಚ ಶ್ರುತ್ವಾ ವಿಷಜ್ಜಂತಂ ನ ಜೀವೇಯ ಮಹಂ ಕ್ಷಣಮ್ ॥೧೧॥
ವೈದೇಹ್ಯಾ ವಚನಂ ಶ್ರುತ್ವಾ ಕರುಣಂ ಸಾಶ್ರು ಭಾಷಿತಂ ।

ನಶಕ್ಷ್ಯಾಮಿ - ಶಕ್ತಳಾಗಲಾರೆನು, ॥೮॥ ಅಹಂ - ನಾನು, ಅಸಹ್ಯಾನಿ - ತಾಳಲಾಗದ, ದುಃಖಾನಿಚ - ದುಃಖಗಳನ್ನೂ, ಸುಘೋರಾಣಾಂ - ಮಹಾಕ್ರೂರರಾದ, ರಾಕ್ಷಸೀನಾಂ - ರಕ್ಕಸಿಯರ, ಹೃದಯಚ್ಛಿದಃ - ಎದೆಯನ್ನು ಸೀಳುತಲಿರುವ, ವಾಚಶ್ಚ - ವಾಕ್ಕುಗಳನ್ನೂ, ತ್ವತ್ಕೃತೇ - ನಿನಗೋಸ್ಕರವೇ, ಮರ್ಷಯಾಮಿ - ಸಹಿಸುತಲಿದೇನೆ ॥೯॥ ಶತ್ರುಸೂದನ - ಶತ್ರುಸಂಹಾರಕನಾದ ಸ್ವಾಮಿಯೇ !, ಮಾಸಂತು - ಮಾಸಮಾತ್ರವಾದರೋ, ಜೀವಿತಂ - ಪ್ರಾಣವನ್ನು, ಧಾರಯಿಷ್ಯಾಮಿ - ಧರಿಸಿರಬಲ್ಲೆನು, ನೃಪಾತ್ಮಜ - ಎಲೈ ದೊರೆಮಗನೆ !, (ಅಹಂ - ನಾನು) ತ್ವಯಾ - ನಿನ್ನಿಂದ, ಹೀನಾ - ಶೂನ್ಯಳಾಗಿ, ಮಾಸಾತ್ - ತಿಂಗಳಿಗಿಂತಲೂ, ಊರ್ಧ್ವಂ - ಮೇಲೆ, ನಜೀವಿಷ್ಯೇ (ನಜೀವಿಷ್ಯಾಮಿ) - ಬದುಕಲಾರೆನು ॥೧೦॥ ಅಯಂ - ಈ, ರಾಕ್ಷಸರಾಜಃ - ರಾವಣನು, ಘೋರಃ - ಮಹಾ ಭಯಂಕರನು, ಮಯಿ - ನನ್ನಲ್ಲಿ, ದೃಷ್ಟಿಶ್ಚ - ಅವನ ನೋಟವೂ, ಸುಖಾ - ಸುಖಕರವಾದುದಾಗಿ, ನ - ಇಲ್ಲವು, ಅಹಂ - ನಾನು, ತ್ವಾಂ - ನಿನ್ನನ್ನು, ವಿಷಜ್ಜಂತಂ - ಆಲಸ್ಯಮಾಡುವವನನ್ನಾಗಿ, ಶ್ರುತ್ವಾ - ಕೇಳಿ, ಕ್ಷಣಂ - ನಿಮಿಷಮಾತ್ರವಾದರೂ, ನಜೀವೇಯಂ - ಬದುಕಲಾರೆನು, ॥೧೧॥ ಅಥ - ಆಮೇಲೆ, ಮಹಾತೇಜಾಃ - ಮಹಾಪರಾಕ್ರಮವುಳ್ಳ, ಮಾರುತಾತ್ಮಜಃ - ವಾಯುಪುತ್ರನಾದ, ಹನುಮಾನ್ - ಆಂಜನೇಯನು, ಕರುಣಂ - ದೀನವಾಗಿಯೂ, ಸಾಶ್ರು -

ತಾಳಲಾರದ ದುಃಖಗಳನ್ನೂ, ಹೃದಯವನ್ನು ಭೇದಿಸುತಲಿರುವ ಈ ದುರಾತ್ಮರಾದ ರಕ್ಕಸಿಯರ ಕ್ರೂರವಾದ ಬಿರುನುಡಿಗಳನ್ನೂ, ಓರಾಮಾ ! ನಿನ್ನನ್ನು ಪಡೆಯುವೆನೆಂಬ ಆಶಾಪಾಶದಿಂದಲೇ ಸೈರಿಸುತಲಿದೇನೆ ॥೯॥ ಹಗೆಗಳನ್ನಿರಿಯಬಲ್ಲ ಓರಾಘವಾ ! ಎಂತಹ ಕಷ್ಟವನ್ನಾದರೂ ಅನುಭವಿಸುತ, ಒಂದು ತಿಂಗಳ ಮಟ್ಟಿಗೆ ಪ್ರಾಣಗಳನ್ನು ಗಟ್ಟಿಯಾಗಿ ಹಿಡಿದು ಜೀವಿಸಿರುವೆನು. ಆ ಒಂದು ತಿಂಗಳ ಮೇಲಾದರೆ ನಿನ್ನನ್ನು ಅಗಲಿ ನಿಮಿಷಮಾತ್ರವೂ ಖಂಡಿತವಾಗಿ ಜೀವಿಸಲಾರೆನು. ॥೧೦॥ ರಾಕ್ಷಸಾಧಮನೆನಿಸಿದ ಈ ರಾವಣನಾದರೋ ಮಹಾಕ್ರೂರಾತ್ಮನು, ನನ್ನನ್ನು ಬಹು ಕ್ರೂರವಾದ ನೋಟದಿಂದ ನೋಡುವನು, ಅದನ್ನು ನಾನು ಕ್ಷಣಕಾಲವಾದರೂ ಸಹಿಸಲಾರೆನು, ಇದರ ಮೇಲೆ ನೀನು ಬರುವುದು ತಡವೂ ಆದರೆ, ಕ್ಷಣಮಾತ್ರವೂ ನಾನು ಬದುಕಿರಲಾರೆನು ಎಂದು ಮೊರೆ ಯಿಟ್ಟಳೆಂಬದಾಗಿಯೂ ವಿಜ್ಞಾಪಿಸು ಎಂದು, ಶೋಕಸಾಗರದಲ್ಲಿ ಮುಳುಗಿರುವ ಸೀತೆಯು -ಕಣ್ಣುಗಳಲ್ಲಿ ನೀರಿನ ಕಾಲುವೆಯನ್ನು ಹರಿಯಿಸುತ, ಗದ್ಗದಸ್ವರದಿಂದ ಬಿಕ್ಕಿಬಿಕ್ಕಿ ಅಳುತ್ತಾ ಹೇಳಿ ಸುಮ್ಮನಾದಳು ॥ ೧೧ ॥ ಶೋಕಪರವಶಳಾಗಿ ಅತಿದೈನ್ಯವನಾಂತು, ತೊದಲು ನುಡಿಗಳಿಂದ ತನ್ನ ಮನದಳಲನ್ನು ಹೊಳೆಯಂತೆ ಹೊರಗೆ ತಳ್ಳಿದ ವೈದೇಹಿಯು

ಅಥಾಬ್ರವೀ ನ್ಮಹಾತೇಜಾ ಹನುಮಾ ನ್ಮಾರುತಾತ್ಮಜಃ ॥೧೨॥
ತ್ವಚ್ಛೋಕ ವಿಮುಖೋ ರಾಮೋ ದೇವಿ ಸತ್ಯೇನ ತೇ ಶಪೇ ।
ರಾಮೇ ದುಃಖಾಭಿಭೂತೇ ತು ಲಕ್ಷ್ಮಣಃ ಪರಿತಪ್ಯತೆ ॥೧೩॥
ಕಥಂಚಿ ದ್ಭವತೀ ದೃಷ್ಟ್ವಾ ನ ಕಾಲಃ ಪರಿಶೋಚಿತುಂ ।
ಇಮಂ ಮುಹೂರ್ತಂ ದುಃಖಾನಾ ಮಂತಂ ದ್ರಕ್ಷ್ಯಸಿ ಭಾಮಿನಿ ॥೧೪॥
ತಾ ವುಭೌ ಪುರುಷ ವ್ಯಾಘ್ರೌ ರಾಜಪುತ್ರಾ ವರಿಂದಮೌ ।
ತ್ವದ್ದರ್ಶನ ಕೃತೋತ್ಸಾಹೌ ಲಂಕಾಂ ಭಸ್ಮೀಕರಿಷ್ಯತಃ ॥೧೫॥

ಕಣ್ಣೀರಿನಿಂದೊಡಗೂಡಿದುದಾಗಿಯೂ ಇರುವಂತೆ, ಭಾಷಿತಂ - ಹೇಳಿದ, ವೈದೇಹ್ಯಾಃ - ಜಾನಕಿಯ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಅಬ್ರವೀತ್ -ಹೇಳತೊಡಗಿದನು, ॥೧೨॥ ದೇವಿ-ಎಲೌ ಜಾನಕಿಯೇ! ರಾಮಃ - ಶ್ರೀರಾಮನು, ತ್ವಚ್ಛೋಕವಿಮುಖಃ - ನಿನ್ನ ದುಃಖದಿಂದ ತಲೆಯನ್ನು ತಗ್ಗಿಸಿರುವನು, ತೆ - ನಿನಗೆ, ಸತ್ಯೇನ - ಸತ್ಯವಾಗಿ, ಶಪೆ - ಆಣೆಯಿಟ್ಟು ಹೇಳುತ್ತೇನೆ, ರಾಮೆ - ಶ್ರೀರಾಮನು, ದುಃಖಾಭಿಭೂತೇ (ಸತಿ) ದುಃಖದಿಂದ ಪೆಟ್ಟುಬಿದ್ದವನಾಗುತ್ತಿರಲಾಗಿ, ಲಕ್ಷ್ಮಣಃ - ಸೌಮಿತ್ರಿಯು. ಪರಿತಪ್ಯತೆ - ಸಂತಾಪ ಪಡುತ್ತಾನೆ, ॥೧೩॥ ಭಾಮಿನಿ - ಕಾಂತಿಸಂಪದಗಳನ್ನೊಳಗೊಂಡಿರುವ ದೇವಿಯೆ!, (ಮಯಾ - ನನ್ನಿಂದ) ಭವತೀ - ಪೂಜ್ಯಳಾದ ನೀನು, ಕಥಂಚಿತ್ - ಬಹು ಕಷ್ಟದಿಂದ, ದೃಷ್ಟ್ವಾ - ನೋಡಲ್ಪಟ್ಟಿದ್ದೀಯೆ, (ಇತಃ - ಇನ್ನುಮೇಲೆ) ಪರಿಶೋಚಿತುಂ - ದುಃಖಿಸಲಿಕ್ಕೆ, ಕಾಲಃ - ಸಮಯವು, ನ - ಇಲ್ಲವು, ಇಮಂ - ಈ, ಮುಹೂರ್ತಂ - ಅಲ್ಪಕಾಲದಲ್ಲಿಯೇ, ದುಃಖಾನಾಂ - ದುಃಖಗಳ, ಅಂತಂ - ಕೊನೆಯನ್ನು, ದ್ರಕ್ಷ್ಯಸಿ - ನೋಡುವೆ, ॥೧೪॥ ಪುರುಷವ್ಯಾಘ್ರೌ - ಪುರುಷಶ್ರೇಷ್ಠರೆನಿಸಿದ, ಅರಿಂದಮೌ - ಶತ್ರುಸಂಹಾರಕರಾಗಿರುವ, ರಾಜಪುತ್ರೌ - ದಶರಥನಂದನರಾದ, ತೌ- ಆರಾಮ ಲಕ್ಷ್ಮಣರು, ಉಭೌ-ಇಬ್ಬರೂ, ತ್ವದ್ದರ್ಶನ ಕೃತೋತ್ಸಾಹೌ - ನಿನ್ನನ್ನು ನೋಡಬೇಕೆಂಬ ಕುತೂಹಲವುಳ್ಳವರಾಗಿ, ಲಂಕಾಂ - ಲಂಕಾನಗರವನ್ನು, ಭಸ್ಮೀಕರಿಷ್ಯತಃ-ಬೂದಿಯನ್ನಾಗಿ ಮಾಡುವರು, ॥೧೫॥ ವಿಶಾಲಾಕ್ಷಿ - ವಿಶಾಲನಯನೆಯಾದ,

ಗೋಳಾಟವನ್ನು ಕೇಳಿ, ಮಹಾ ತೇಜಸ್ವಿಯಾದ ಮಾರುತಾತ್ಮಜನು ಮನಮರುಗಿ, ಬಳಿಕ ಇಂತೆಂದನು-॥೧೨॥ ಅಮ್ಮಾ ಜಾನಕೀ! ನನ್ನಾಣೆಗೂ ನಾನು ದಿಟವನ್ನು ಹೇಳುತ್ತೇನೆ, ಸಟೆಯನ್ನಾಡುವುದಿಲ್ಲ. ನಂಬು, ನಿನ್ನನ್ನು ಅಗಲಿ ಶೋಕಸಾಗರದಲ್ಲಿ ಮುಳುಗಿರುವ ರಾಮನ ಮೋರೆಯ ಮೇಲೆ ಕಳೆಯೇ ಇಲ್ಲ. ಯಾವಾಗಲೂ ಬಾಡಿದ ಮುಖದಿಂದ ಚಿಂತೆಯಲ್ಲಿ ಕೊರಗುತಲಿರುವನು, ರಾಮನಿಗೆ ದುಃಖವು ಉಕ್ಕಳಿಸಿ ಬಂದಾಗಲೆಲ್ಲ ಸೌಮಿತ್ರಿಯ ಸಂಕಟಕ್ಕೆ ಪಾರವೇ ಇಲ್ಲ. ॥೧೩॥ ಎಲೌ ತಾಯೇ! ನಾನು ಬಹುಶ್ರಮಪಟ್ಟು ಅದು ಹೇಗೋ, ದೈವಯೋಗದಿಂದ ನಿನ್ನನ್ನು ಕಂಡೆನು, ಅದರಿಂದಲೇ ಇನ್ನು ಮೇಲೆ ನೀನು ಖಂಡಿತವಾಗಿಯೂ ಅಳಬೇಕಾದುದಿಲ್ಲ, ಬಹು ಸ್ವಲ್ಪ ಕಾಲದಲ್ಲಿಯೇ ಸಕಲ ದುಃಖಗಳನ್ನೂ ನೀಗಿ ಈಡುಸೌಖ್ಯವನ್ನು ಪಡೆಯುತ್ತೀಯೆ, ಈ ಮಾತಿನಲ್ಲಿ ಸ್ವಲ್ಪವೂ ಸಂದೇಹವಿಲ್ಲ ॥೧೪॥ ಮಹಾ ಪರಾಕ್ರಮಶಾಲಿಗಳಾಗಿ, ಶತ್ರುಸಂಹಾರಕರೆನಿಸಿರುವ ಪುರುಷಸಿಂಹರಾದ ಆ ದಶರಥರಾಜ ನಂದನರೀರ್ವರೂ ನಿನ್ನನ್ನು ನೋಡಬೇಕೆಂದು ಹಗಲಿರುಳೂ ತವಕಿಸುತಲಿದಾರೆ, ಅವರೀ ಲಂಕಾನಗರಿಯನ್ನು ಭಸ್ಮಾವಶೇಷವನ್ನಾಗಿ ಮಾಡುವರು, ಅದನ್ನು

ಹತ್ವಾ ತು ಸಮರೇ ಕ್ರೂರಂ ರಾವಣಂ ಸಹ ಬಾಂಧವಂ ।
ರಾಘವೌ ತ್ವಾಂ ವಿಶಾಲಾಕ್ಷಿ ಸ್ವಾಂ ಪುರೀಂ ಪ್ರಾಪಯಿಷ್ಯತಃ ॥೧೬॥
ಯತ್ತು ರಾಮೋ ವಿಜಾನೀಯಾ ದಭಿಜ್ಞಾನ ಮನಿಂದಿತೇ ।
ಪ್ರೀತಿ ಸಂಜನನಂ ತಸ್ಯ ಭೂಯ ಸ್ತ್ವಂ ದಾತು ಮರ್ಹಸಿ ॥೧೭॥
ಸಾ ಬ್ರವೀ ದ್ದತ್ತ ಮೇವೇತಿ ಮಯಾಽಭಿಜ್ಞಾನ ಮುತ್ತಮಂ ।
ಏತದೇವ ಹಿ ರಾಮಸ್ಯ ದೃಷ್ಟ್ವಾ ಮತ್ಕೇಶ ಭೂಷಣಂ ॥೧೮॥ ॥

---

ಜಾನಕಿಯೇ ! ರಾಘವೌ-ರಾಮಲಕ್ಷ್ಮಣರು, ಕ್ರೂರಂ-ದುರಾತ್ಮನಾದ, ಸಹಬಾಂಧವಂ -ಬಂಧುಗಳೊಡನೆ ಸಹಿತನಾಗಿರುವ, ರಾವಣಂ-ರಾವಣನನ್ನು, ಸಮರೆ-ಯುದ್ಧದಲ್ಲಿ, ಹತ್ವಾ-ಸಂಹರಿಸಿ, ತ್ವಾಂ - ನಿನ್ನನ್ನು, ಸ್ವಾಂ - ತನ್ನದಾದ, ಪುರೀಂ-ಅಯೋಧ್ಯೆಯನ್ನು, ಪ್ರಾಪಯಿಷ್ಯತಿ - ಹೊಂದಿಸುವವನು ॥೧೬॥ ಅನಿನ್ದಿತೆ-ದೋಷಲೇಶವಿಲ್ಲದ ದೇವಿಯೇ !, ರಾಮಃ - ಶ್ರೀರಾಮನು, ಯತ್ - ಯಾವ, ಅಭಿಜ್ಞಾನಂ - ಗುರುತನ್ನು, ವಿಜಾನೀಯಾತ್ - ಚೆನ್ನಾಗಿ ತಿಳಿದುಕೊಳ್ಳಬಲ್ಲನೋ, ಪ್ರೀತಿಸಂಜನನಂ - ಆತನಿಗೆ ಪ್ರೀತಿಯನ್ನುಂಟುಮಾಡತಕ್ಕ, ತತ್ - ಅಂತಹ ಉತ್ತಮವಾದ ಗುರುತನ್ನು, ತಸ್ಯ ಆ ರಾಮಚಂದ್ರನಿಗೆ, ಭೂಯಃ - ಪುನಃ (ಮರಳಿ) ದಾತುಂ - ಕೊಡಲಿಕ್ಕೆ, ಅರ್ಹಸಿ - ಯೋಗ್ಯಳಾಗಿದ್ದೀಯೆ ॥೧೭॥ ಹನುಮನ್ - ಎಲೈ ಆಂಜನೇಯನೆ !, ಮಯಾ - ನನ್ನಿಂದ, ಉತ್ತಮಂ - ಶ್ರೇಷ್ಠವೆನಿಸಿದ, ಅಭಿಜ್ಞಾನಂ - ಗುರುತಿನ ಪದಾರ್ಥವು, ದತ್ತಮೇವ - ಕೊಡಲ್ಪಟ್ಟೇ ಇದೆ, ರಾಮಸ್ಯ - ಶ್ರೀರಾಮನೂ, [ರಾಮಃ] ಏತತ್ - ಈ ಮತ್ಕೇಶಭೂಷಣಮೇವ - ನನ್ನ ತಲೆಯ ಅಲಂಕಾರವಾದ ರತ್ನವನ್ನೇ, ದೃಷ್ಟ್ವಾ - ನೋಡಿ, ಶ್ರದ್ಧಧ್ಯಾತ್ - ನಂಬುವನು, ಹಿ - ನಿಶ್ಚಯ, ವೀರ - ಎಲೈ ಶೂರನೇ ! ವಾಕ್ಯಂ - ಈ ಮಾತು, ತವ - ನಿನಗೆ, ಶ್ರದ್ಧೇಯಂ - ನಂಬತಕ್ಕದು, ಭವಿಷ್ಯತಿ - ಆಗುವುದು, (ಇತ್ಯೇತತ್ - ಹೀಗೆಂಬ ಈಮಾತನ್ನು) ಸಾ - ಆ ಜಾನಕಿಯು, ಅಬ್ರವೀತ್ - ಹೇಳಿದಳು, ॥೧೭,೧೮॥ ಶ್ರೀಮಾನ್ - ಪ್ರಶಸ್ತಕಾಂತಿಯುಳ್ಳ,

---

ನೀನು ಕಣ್ಣಾರ ನೋಡುತ್ತೀಯೆ ॥೧೫॥ ಎಲೌ ವಿಶಾಲನಯನೆಯಾದ ವೈದೇಹಿಯೆ ! ಆ ರಾಘವರಿಬ್ಬರೂ ಕಾಳಗದೊಳಗೆ, ಪರಮ ಪಾಪಿಯಾದ ಈ ರಾವಣನನ್ನು ಪುತ್ರಮಿತ್ರ ಬಾಂಧವರೊಡನೆ ಧ್ವಂಸಮಾಡಿ, ನಿನ್ನನ್ನು ಅಯೋಧ್ಯಾನಗರಿಗೆ ಕರೆದೊಯ್ಯುವರು, ನೀನಿದಕ್ಕೆ ತುಸಮಾದರೂ ಸಂದೇಹ ಪಡಬೇಡ॥೧೬॥ ದೋಷಲೇಶವಿಲ್ಲದ ಓ ದೇವಿಯೇ ! ಮತ್ತಾವ ಗುರುತನ್ನು ಕೊಟ್ಟರೆ ಶ್ರೀರಾಮನು—ಚೆನ್ನಾಗಿ ತಿಳಿದುಕೊಳ್ಳಬಲ್ಲನೋ, ಅಂತಹ ಮತ್ತೊಂದು ಕುರುಹೇನಾದರೂ ಇದ್ದರೆ, ಆತನಿಗೆ ಪ್ರೀತಿಯನ್ನುಂಟುಮಾಡುವ ಹಾಗೆ ಹೇಳು, ಅದನ್ನೂ ಬಿನ್ನವಿಸುವೆನು ॥೧೭॥ ಎನಲು, ಅದನ್ನು ಕೇಳಿ ಭೂಪುತ್ರಿಯು ಇಂತೆಂದಳು:—ಎಲೈ ವೀರಹನುಮಂತನೆ ! ನೀನು ಸಂಶಯ ಪಡಬೇಕಾದುದಿಲ್ಲ, ಏತಕೆಂದರೆ—ಈಗ ನಾನು ಕೊಟ್ಟಿರುವ ಉತ್ತಮವಾದ ಗುರುತನ್ನು ನೋಡಿದಕೂಡಲೆ ಶ್ರೀರಾಮನು ನಿನ್ನ ಮಾತುಗಳಲ್ಲಿ ಪೂರ್ಣವಾದ ಪ್ರಾಮಾಣ್ಯವನ್ನು ಗ್ರಹಿಸುವನು, ಈ ನನ್ನ ಶಿರೋರತ್ನವನ್ನು ಸಾಮಾನ್ಯವಾದುದೆಂದು ಭಾವಿಸಬೇಡ ಎಂದಳು ॥ ೧೮ ॥ ಬಳಿಕ ಹಸನ್ಮುಖನಾದ ಹನುಮಂತನು ಆ

ಶ್ರದ್ಧೇಯಂ ಹನುಮನ್ವಾಕ್ಯಂ ತವ ವೀರ ಭವಿಷ್ಯತಿ ।
ಸ ತಂ ಮಣಿವರಂ ಗೃಹ್ಯ ಶ್ರೀಮಾನ್ ಪ್ಲವಗ ಸತ್ತಮಃ ॥೧೯॥ ॥
ಪ್ರಣಮ್ಯ ಶಿರಸಾ ದೇವೀಂ ಗಮನಾಯೋಪಚಕ್ರಮೇ ।
ತಮುತ್ಪಾತಕೃತೋತ್ಸಾಹಮವೇಕ್ಷ್ಯ ಹರಿಪುಂಗವಮ್ ॥೨೦॥
ವರ್ಧಮಾನಂ ಮಹಾವೇಗಮುವಾಚ ಜನಕಾತ್ಮಜಾ ।
ಅಶ್ರುಪೂರ್ಣ ಮುಖೀ ದೀನಾ ಬಾಷ್ಪ ಗದ್ಗದಯಾ ಗಿರಾ ॥೨೧॥
ಹನುಮನ್ಸಿಂಹ ಸಂಕಾಶೌ ಭ್ರಾತರೌ ರಾಮಲಕ್ಷ್ಮಣೌ ।
ಸುಗ್ರೀವಂ ಚ ಸಹಾಮಾತ್ಯಂ ಸರ್ವಾನ್ಬ್ರೂಯಾ ಹ್ಯನಾಮಯಂ ॥೨೨॥

---

[ನಗೆ ಮೊಗವುಳ್ಳ] ಪ್ಲವಗ ಸತ್ತಮಃ - ವಾನರ ಶ್ರೇಷ್ಠನೆನಿಸಿದ, ಸಃ-ಆ ಮಾರುತಿಯು, ತಂ - ಆ, ಮಣಿವರಂ - ಉತ್ತಮವಾದ ರತ್ನವನ್ನು, ಗೃಹ್ಯ [ಗೃಹೀತ್ವಾ] ತೆಗೆದುಕೊಂಡು, ದೇವೀಂ - ಸೀತಾದೇವಿಯನ್ನು, ಶಿರಸಾ - ಶಿರಸ್ಸಿನಿಂದ, ಪ್ರಣಮ್ಯ - ನಮಸ್ಕರಿಸಿ, ಗಮನಾಯ - ಪ್ರಯಾಣಕ್ಕೆ, ಉಪಚಕ್ರಮೆ - ಪ್ರಾರಂಭಿಸಿದನು ॥೧೯॥ ಜನಕಾತ್ಮಜಾ - ಜನಕಪುತ್ರಿಯು, ಉತ್ಪಾತಕೃತೋತ್ಸಾಹಂ - ಮೇಲಕ್ಕೆ ಹಾರುವ ಸಡಗರದಿಂದ ಸಂತೋಷಿಸುತಲಿರುವ, ಹರಿಪುಂಗವಂ - ವಾನರೋತ್ತಮನೆನಿಸಿದ, ವರ್ಧಮಾನಂ - ಬೆಳೆಯುತಲಿರುವ, ಮಹಾವೇಗಂ - ಬಹುವೇಗವನ್ನು ಸೂಚಿಸುತಲಿರುವ, ತಂ - ಆ ಆಂಜನೇಯನನ್ನು, ಅವೇಕ್ಷ್ಯ-ನೋಡಿ; ಅಶ್ರುಪೂರ್ಣಮುಖೀ-ಕಣ್ಣೀರಿನಿಂದ ತುಂಬಿದ ಮುಖವುಳ್ಳವಳೂ, ದೀನಾ - ದೀನಳೂ ಆಗಿ, ಬಾಷ್ಪಗದ್ಗದಯಾ - ಕಣ್ಣೀರಿನಿಂದ ತೊದಲುತಲಿರುವ, ಗಿರಾ-ಮಾತಿನಿಂದ, ಉವಾಚ - ಹೇಳತೊಡಗಿದಳು ॥೨೦-೨೧॥ ಹನುಮನ್ - ಎಲೈ ಆಂಜನೇಯನೇ !, ಸಿಂಹಸಂಕಾಶೌ - ಸಿಂಹಕ್ಕೆಣೆಯೆನಿಸಿದ, ಭ್ರಾತರೌ - ಒಡಹುಟ್ಟಿದವರಾದ, ರಾಮಲಕ್ಷ್ಮಣೌ - ರಾಮಲಕ್ಷ್ಮಣರನ್ನೂ, ಸಹಾಮಾತ್ಯಂ - ಮಂತ್ರಿಗಳೊಂದೊಡಗೂಡಿರುವ, ಸುಗ್ರೀವಂಚ - ಸುಗ್ರೀವನನ್ನೂ, ಸರ್ವಾನ್ - ಸಮಸ್ತ ವಾನರರನ್ನೂ ಕುರಿತು, ಅನಾಮಯಂ - ಆರೋಗ್ಯವನ್ನು [ಕುಶಲವನ್ನು] ಬ್ರೂಯಾಃ-ಕೇಳಿದಳೆಂದು

---

ಚೂಡಾಮಣಿಯನ್ನು ಪರಿಗ್ರಹಿಸಿದವನಾಗಿ, ಸೀತಾದೇವಿಗೆ ಶಿರವನ್ನು ತಗ್ಗಿಸಿ, ನಮಸ್ಕಾರವನ್ನು ಒಪ್ಪಿಸಿ, ಶ್ರೀರಾಮನ ಸನ್ನಿಧಾನವನ್ನು ಕುರಿತು ತೆರಳಲು ಸಿದ್ಧನಾದನು॥೧೯॥ ಜಾನಕಿಯು-ನೋಡಿದಳು, ಕಪಿವರನು ಈಗಾಗ ಆಕಾಶಕ್ಕೆ ಹಾರಲು ಅಣಿಯಾಗುತಲಿದಾನೆ, ಮಹಾ ವೇಗಶಾಲಿಯಾಗುವುದಕ್ಕೆ ತಕ್ಕಂತೆ ಬೆಳೆಯುತಲಿರುವನು, ಅಯ್ಯೋ ! ಇದುವರೆಗೂ ತನ್ನ ಪ್ರಾಣನಾಥನ ಕುಶಲವೃತ್ತಾಂತವನ್ನು ಹೇಳುತ್ತಾ, ಹೇರಳವಾದ ನನ್ನ ಶೋಕವನ್ನು ತಗ್ಗಿಸುತಲಿದ್ದನಲ್ಲ, ಈತನು ಹೊರಟು ಹೋದಬಳಿಕ ನಾನು ದುಃಖವನ್ನು ಹೇಗೆ ತಾಳಲಿ ಎಂದು ಹೃದಯದಲ್ಲಿ ಸಂತಾಪವು ಹೆಚ್ಚಿತು, ಕಣ್ಣುಗಳಲ್ಲಿ ನೀರು ಹೊರಟಿತು, ಬಹು ಖಿನ್ನಳಾದಳು, ಕೊರಳದನಿಯು ಗದ್ಗದವಾಯಿತು, ಆಂಜನೇಯನನ್ನು ಕುರಿತು ಇಂತೆಂದಳು ॥೨೦॥ ಎಲೈ ಪವಮಾನ ನಂದನನೇ ! ಪುರುಷಸಿಂಹರೆನಿಸಿರುವ ಸೋದರರಾದ ರಾಮಲಕ್ಷ್ಮಣರನ್ನು ಕುರಿತೂ, ಮಂತ್ರಿಗಳಿಂದ ಸಹಿತನಾದ ಸುಗ್ರೀವನನ್ನು ಕುರಿತೂ, ಉಳಿದ ಎಲ್ಲಾ ವಾನರರನ್ನು ಕುರಿತೂ, ಸೀತೆಯು—ಆರೋಗ್ಯ ಸುಖವನ್ನು ಬಯಸಿದಳೆಂದು ಮರೆಯದೆ ಹೇಳು ॥೨೨॥ ಅಪ್ಪಾ ಆಂಜನೇಯಾ ! ಇಗೋ, ಬೇಸರಪಡಬೇಡ, ಮತ್ತು ತಡ

ಯಥಾ ಚ ಸ ಮಹಾಬಾಹು ರ್ಮಾಂ ತಾರಯತಿ ರಾಘವಃ ।
ಅಸ್ಮಾ ದ್ದುಃಖಾಂಬು ಸಂರೋಧಾ ತ್ತ್ವಂ ಸಮಾಧಾತು ಮರ್ಹಸಿ ॥೨೩॥
ಇಮಂ ಚ ತೀವ್ರಂ ಮಮ ಶೋಕವೇಗಂ ರಕ್ಷೋಭಿ ರೇಭಿಃ ಪರಿಭರ್ತ್ಸನಂಚ ।
ಬ್ರೂಯಾ ಸ್ತು ರಾಮಸ್ಯ ಗತ ಸ್ಸಮೀಪಂ ಶಿವಶ್ಚ ತೇಽಧ್ವಾಸ್ತು ಹರಿಪ್ರವೀರ ॥
ಸ ರಾಜಪುತ್ರ್ಯಾ ಪ್ರತಿವೇದಿತಾರ್ಥಃ ಕಪಿಃ ಕೃತಾರ್ಥಃ ಪರಿಹೃಷ್ಟ ಚೇತಾಃ ।।

ಹೇಳು ॥೨೨॥ ಮಹಾಬಾಹುಃ - ಮಹಾಪರಾಕ್ರಮಶಾಲಿಯಾದ, ಸಃ ರಾಘವಃ - ಆ ಶ್ರೀರಾಮನು, ಅಸ್ಮಾತ್ - ಈ, ದುಃಖ ಸಂರೋಧಾತ್ - ಶೋಕಸಾಗರದಿಂದ, ಮಾಂ - ನನ್ನನ್ನು, ಯಥಾ - ಯಾವ ಪ್ರಕಾರವಾಗಿ, ತಾರಯತಿ-ದಾಟಿಸಬಲ್ಲನೋ, ತಥಾ - ಆ ಪ್ರಕಾರವಾಗಿ, ತ್ವಂ-ನೀನು, ಸಮಾಧಾತುಂ-ಸರಿಸಪಡಿಸಲಿಕ್ಕೆ, ಅರ್ಹಸಿ-ಯೋಗ್ಯನಾಗಿದ್ದೀಯೆ ॥೨೩॥ ಹೇ ಹರಿಪ್ರವೀರ-ಎಲೈ ಶೂರನಾದ ಮಾರುತಿಯೆ! ತೀವ್ರಂ - ಬಹುತೀಕ್ಷ್ಣವಾಗಿರುವ, [ತಾಳಲಾಗದ] ಇಮಂ - ಈ,ಮಮ - ನನ್ನ, ಶೋಕವೇಗಂ - ದುಃಖಾತಿಶಯವನ್ನೂ, ಏಭಿಃ - ಈ, ರಕ್ಷೋಭಿಃ - ರಕ್ಕಸರಿಂದುಂಟಾಗುತಲಿರುವ, ಪರಿಭರ್ತ್ಸನಂಚ - ಬೆದರಿಕೆಯನ್ನೂ, ತ್ವಂತು-ನೀನಾದರೋ, ರಾಮಸ್ಯ - ಶ್ರೀರಾಮನ, ಸಮೀಪಂ - ಹತ್ತಿರವನ್ನು, ಗತಃ - ಹೊಂದಿದವನಾಗಿ, ಬ್ರೂಯಾಃ - ಹೇಳು, ತೆ-ನಿನ್ನ, ಅಧ್ವ - ಪ್ರಯಾಣದ ಮಾರ್ಗವು, ಶಿವಃ - ಮಂಗಳಕರವೆನಿಸಿದುದು, ಅಸ್ತುಚ - ಆಗಿಯೇ ಇರಲಿ, ॥೨೪॥ ಸಃ - ಆ, ಕಪಿಃ - ಆಂಜನೇಯನು, ರಾಜಪುತ್ರ್ಯಾ - ಜಾನಕಿಯಿಂದ, ಪ್ರತಿವೇದಿತಾರ್ಥಃ - ತಿಳಿಸಲ್ಪಟ್ಟ ಸಂಗತಿಯುಳ್ಳವನಾಗಿ ಕಾರಣವೇ, ಕೃತಾರ್ಥಃ - ಮಾಡಬೇಕಾದ ಕೆಲಸವನ್ನು ಮಾಡಿದವನಾಗಿ, ಪರಿಹೃಷ್ಟ ಚೇತಾಃ - ಬಲು ಸಂತಸಗೊಂಡ ಮನಸ್ಸುಳ್ಳವನಾಗುತ್ತಾ, ಕಾರ್ಯಂ-ತಾನುಮಾಡಬೇಕಾದ ಕೆಲಸವನ್ನು, ಅಲ್ಪಾವಶೇಷಂ-ಸ್ವಲ್ಪಮಾತ್ರವೇ

ಮಾಡಬೇಡ, ಕಾರುಣ್ಯನಿಧಿಯಾದ ದಾಶರಥಿಯು ನನ್ನನ್ನು ಈದುಃಖಸಮುದ್ರದಿಂದ ಬಲು ಬೇಗನೆ ಹೇಗೆ ದಾಟಿಸಬಲ್ಲನೋ,ಅದಕ್ಕೆ ತಕ್ಕಂತೆ ಏನೇನಹೇಳಬೇಕೋ ,ಅದನ್ನೆಲ್ಲಾ ಹಾಗೆ ಸಜ್ಜುಗೊಳಿಸುವುದು ನಿನ್ನ ಕೆಲಸವಾಗಿದೆ ॥೨೩॥ ಎಲೈ ವಾನರೋತ್ತಮನೇ ! ನನಗೆ ಉಂಟಾಗಿರುವ ತೀಕ್ಷ್ಣವಾದ ಶೋಕವೇಗವನ್ನೂ, ಕ್ರೂರಾತ್ಮರಾದ ಈ ರಕ್ಕಸರು ಪಡಿಸುತಲಿರುವ ಹಿಂಸೆಯನ್ನೂ, ಶ್ರೀರಾಮಚಂದ್ರನ ಸನ್ನಿಧಾನದಲ್ಲಿ ಚೆನ್ನಾಗಿ ಬಿನ್ನವಿಸು, ಇನ್ನು ಹೊರಡು, ನಿನ್ನ ಪಯಣದಹಾದಿಯು ನಿನಗೆ ಮೇಲನ್ನುಂಟುಮಾಡುತ ಸುಖಕರನೆನಿಸಿರಲಿ, ಬೇಗನೆ ಹಿಂದಿರುಗಿ ಬರುವವನಾಗು ಎಂದು ಹರಸಿದಳು ॥೨೪॥ ಬಳಿಕ ಶ್ರೀಮಂತನಾದ ಆಂಜನೇಯನು-ಸೀತಾ ಸಂದರ್ಶನವನ್ನು ಮಾಡಿದುದಾಯಿತು, ಶ್ರೀರಾಮನ ಕುಶಲ ವೃತ್ತಾಂತವನ್ನು ಆಕೆಗೆ ಅರುಹಿ ಅಂಗುಳೀಯಕವನ್ನು ಕೊಟ್ಟುದಾಯಿತು, ಶ್ರೀ ರಾಮನಿಗೆ ತಿಳಿಸಬೇಕಾದ ಸಮಾಚಾರವನ್ನೂ ಆಕೆಯಿಂದ ಅರಿತು ಚೂಡಾಮಣಿಯನ್ನೂ ಪಡೆದು ಊಳಗದವನಾಗಿ ಬಂದು ಮಾಡಬೇಕಾದ ಕೆಲಸವನ್ನೆಲ್ಲ ಮಾಡಿದೆನು ಎಂದು,ಮನದೊಳಗೆ

ಅಲ್ಪಾವಶೇಷಂ ಪ್ರಸಮೀಕ್ಷ್ಯ ಕಾರ್ಯಂ ದಿಶಂ ಹ್ಯುದೀಚೀಂ ಮನಸಾ ಜಗಾಮ॥

—ಇತಿ ಶ್ರೀಮತ್ಸುಂದರಕಾಣ್ಡೇ ಚತ್ವಾರಿಂಶಸ್ಸರ್ಗಃ—

ಉಳಿದಿರುವುದನ್ನಾಗಿ, ಪ್ರಸಮೀಕ್ಷ್ಯ - ವಿಚಾರಮಾಡಿ, ಉದೀಚೀಂದಿಶಂ - ಉತ್ತರದಿಕ್ಕನ್ನು, ಮನಸಾ - ಮನಸ್ಸಿನಿಂದ, ಜಗಾಮ - ಹೊಂದಿದನು ॥೨೫॥ — ಇಂತು ನಲವತ್ತನೆಯ ಸರ್ಗಂ —

ಹರ್ಷಪಟ್ಟನು. ಶ್ರೀ ರಾಮಚಂದ್ರನ ಚರಣ ಸನ್ನಿಧಿಯನ್ನು ಕುರಿತು ತೆರಳಬೇಕಾಗಿರುವ ಕೆಲಸವು ಮಾತ್ರವುಳಿದಿದೆಯೆಂದು ಬಗೆದು, ಬಡಗ ದೆಸೆಯನ್ನು ಕುರಿತು ಹೊರಡಲು ಮನ ಮಾಡಿದನು. — ಇಂತು ನಲವತ್ತನೆಯ ಸರ್ಗಂ —

ಶ್ರೀಃ

ಶ್ರೀ ರಾಮ ಚಂದ್ರ ಪರಬ್ರಹ್ಮಣೇ ನಮಃ

## ಶ್ರೀಮತ್ಸುನ್ದರಕಾಣ್ಡೇ ಏಕ ಚತ್ವಾರಿಂಶ ಸ್ಸರ್ಗಃ

ಸ ಚ ವಾಗ್ಭಿಃ ಪ್ರಶಸ್ತಾಭಿ ರ್ಗಮಿಷ್ಯ ನ್ಪೂಜಿತ ಸ್ತಯಾ ।
ತಸ್ಮಾ ದ್ದೇಶಾ ದಪಕ್ರಮ್ಯ ಚಿಂತಯಾಮಾಸ ವಾನರಃ ॥೧॥

— ನಲವತ್ತೊಂದನೆಯ ಸರ್ಗಂ —

ಕಂದ॥ ಮಾರುತಿ ಮೃದುವಚನಂಗಳ । ನಾ ರಘುವರ ಸತಿಗೆ ಪೇಳ್ದು ತನ್ನಯ ಬಲಮಂ।
ತೋರಲ್ ರಕ್ಕಸರರಸಗೆ । ಪೌರುಷದಿಂ ಮುರಿದನಂದು ಬನವಂ ಮುದದಿಂ ॥

ಸಃ - ಆ, ವಾನರಶ್ಚ - ಆಂಜನೇಯನೂ, ತಯಾ - ಆ ಸೀತಾದೇವಿಯಿಂದ, ಪ್ರಶಸ್ತಾಭಿಃ - ಸ್ತುತಿಯಿಂದೊಡಗೂಡಿರುವ, ವಾಗ್ಭಿಃ- ವಚನಗಳಿಂದ, ಪೂಜಿತಃ-ಗೌರವಿಸಲ್ಪಟ್ಟವನಾಗಿ,ಗಮಿಷ್ಯನ್-ಹೊರಡಲುದ್ಯುಕ್ತನಾಗುತ,ತಸ್ಮಾತ್‌ದೇಶಾತ್-ಆಪ್ರದೇಶದಿಂದ, ಅಪಕ್ರಮ್ಯ-ಸ್ವಲ್ಪದೂರಹೋಗಿ, ಚಿಂತಯಾಮಾಸ -ಮನದೊಳಾಲೋಚಿಸತೊಡಗಿದನು ॥೧॥ (ಅದೆಂತೆಂದರೆ-)ಇದಂ-ಈ, (ನಾನಾಲೋಚಿಸುವ)

—ನಲವತ್ತೊಂದನೆಯ ಸರ್ಗಂ—

ಆಂಜನೇಯನು:—ತಾನು ಮಾಡಿದ ಉಪಕಾರಕ್ಕೆ ಜಾನಕಿಯು ಬಹಳವಾಗಿ ಸಂತೋಷಿಸಿ, ತನ್ನನ್ನು ಹೇರಳವಾಗಿ ಹೊಗಳಲು, ಆಕೆಯ ನುಡಿಗಳಿಂದ ತಾನೂ ವಿಶೇಷವಾಗಿ ಆನಂದಿಸಿ, ಶ್ರೀರಾಮನ ಸನ್ನಿಧಾನವನ್ನು ಕುರಿತು ತೆರಳಲುದ್ಯುಕ್ತನಾಗಿ, ಸೀತೆಯಿದ್ದ ಸ್ಥಳದಿಂದ ಸ್ವಲ್ಪದೂರಬಂದು, ಮುಂದೆ ಮಾಡಬೇಕಾದ ಕೆಲಸವನ್ನು ತನ್ನ ಮನದೊಳಗೆ ವಿಚಾರಮಾಡ ತೊಡಗಿದನು ॥೧॥ ನಾನು ಇಲ್ಲಿಗೆ ಬಂದುದಕ್ಕೆ ಸೀತಾ ಸಂದರ್ಶನವನ್ನು

ಅಲ್ಪಶೇಷ ಮಿದಂ ಕಾರ್ಯಂ ದೃಷ್ಟೇಯ ಮಸಿತೇಕ್ಷಣಾ ।
ತ್ರೀ ನುಪಾಯಾ ನತಿಕ್ರಮ್ಯ ಚತುರ್ಥ ಇಹ ದೃಶ್ಯತೆ ॥೨॥
ನ ಸಾಮ ರಕ್ಷಸ್ಸು ಗುಣಾಯ ಕಲ್ಪತೇ ನ ದಾನ ಮರ್ಥೋಪ ಚಿತೇಷು ಯುಜ್ಯತೆ ।

ಕಾರ್ಯಂ - ಕೆಲಸವು, ಅಲ್ಪಶೇಷಂ - ಸ್ವಲ್ಪಮಾತ್ರವೇ ಉಳಿದಿದೆ, ಅಸಿತೇಕ್ಷಣಾ - ಕಪ್ಪಾದ ಕಣ್ಣುಳ್ಳ, ಇಯಂ . ಈ ಸೀತಾದೇವಿಯು, ದೃಷ್ಟಾ -ನೋಡಲ್ಪಟ್ಟಳು, ಇಹ-ಇಲ್ಲಿ (ರಾವಣನ ಮನೋಗತವನ್ನು ಪರೀಕ್ಷಿಸುವ ಕಾರ್ಯದಲ್ಲಿ) ತ್ರೀನ್ - ಮೂರಾದ, ಉಪಾಯಾನ್ - ಉಪಾಯಗಳನ್ನು, ಅತಿಕ್ರಮ್ಯ - ಅತಿಕ್ರಮಿಸಿ, ಚತುರ್ಥಃ-ನಾಲ್ಕನೆಯದಾದ ಉಪಾಯವು, ದೃಶ್ಯತೆ- ಕಾಣಬರುತಲಿದೆ ॥೨॥ ಸಾಮ – ಸಾಮೋಪಾಯವು, ರಕ್ಷಃಸ್ಸು - ರಾಕ್ಷಸರಲ್ಲಿ, ಗುಣಾಯ - ಸುಗುಣಕಾರ್ಯಕ್ಕೆ, ನಕಲ್ಪತೆ - ಸಮರ್ಥವಾಗುವುದಿಲ್ಲ, ದಾನಂ - ದಾನೋಪಾಯವು, ಅರ್ಥೋಪಚಿತೇಷು – ಧನದಿಂದ ಪೂರ್ಣರಾಗಿರುವವರಲ್ಲಿ, ನೋಪಯುಜ್ಯತೆ – ಉಪಯೋಗಕ್ಕೆ ಬರುವುದಿಲ್ಲ, ಬಲದರ್ಪಿತಾಃ - ಬಲದಿಂದ ಕೊಬ್ಬಿರುವ, ಜನಾಃ – ರಾಕ್ಷಸ ಜನಗಳು, ಭೇದಸಾಧ್ಯಾಃ-ಭೇದೋಪಾಯದಿಂದ ಸಾಧಿಸಲು ತಕ್ಕವರು, ನ-ಆಗುವುದಿಲ್ಲ.

ಮಾಡಬೇಕಾದುದೊಂದು ಕೆಲಸ, ರಾವಣನ ಮನೋಗತವು ಇಂಥದು, ಅವನ ಕಡೆಯ ಬಲಾಬಲಗಳು ಇಷ್ಟರವು ಎಂದು ತಿಳಿಯುವುದೊಂದು ಕಾರ್ಯ, ಇವುಗಳೊಳಗೆ ಪ್ರಧಾನವೆನಿಸಿದ ಮೊದಲನೆಯ ಕೆಲಸವು ಸರಿಪಟ್ಟಿದು, ಇದರಿಂದ ಎರಡನೆಯದು ಅಷ್ಟುಮುಖ್ಯವಾದುದಲ್ಲದಿದ್ದರೂ, ಇನ್ನುಮೇಲೆ ಇಲ್ಲಿಮಾಡಬೇಕಾದುದು ಸ್ವಲ್ಪಮಾತ್ರವೇ ಉಳಿದಿದೆ ಅಲ್ಪಾವಶೇಷವಾಗಿರುವ ಕಾರ್ಯದವಿಷಯದಲ್ಲಿ ಸಾಮ,ದಾನ,ಭೇದಗಳೆಂಬ ಮೂರು ಉಪಾಯಗಳೂ ಉಪಯೋಗಕರಗಳೆನಿಸುವುದಿಲ್ಲ, ಮಾಯಾವಿಗಳಾದ ಈ ದನುಜರು- ಆ ಮೂರುಉಪಾಯಗಳನ್ನೂ ಮೀರಿ ಇರುವುದರಿಂದ ನಾಲ್ಕನೆಯದಾದ ದಂಡೋಪಾಯವೇ ಇವರಲ್ಲಿ ವಿನಿಯೋಗಿಸಲು ತಕ್ಕದೆನಿಸಿದೆ ॥೨॥ ಅದು ಹೇಗೆ ಎಂದರೆ—ಧರ್ಮಮಾರ್ಗದಲ್ಲಿ ನಡೆಯತಕ್ಕವರು ಒಂದು ವೇಳೆ ಆಕಸ್ಮಾತ್ತಾಗಿ ತಪ್ಪುದಾರಿಯಲ್ಲಿ ಹೋದರೆ ಅಂಥವರಿಗೆ ಮೃದು ಮಧುರವಾಗಿ ಅವರ ದೋಷವನ್ನು ತಿಳಿಸದರೆ, ಅವರದನ್ನು ತಿಳಿದು ಸನ್ಮಾರ್ಗಕ್ಕೆ ತಿರುಗುತ್ತಾರೆ, ಆದುದರಿಂದ ಅಂಥವರಲ್ಲಿ ಸಾಮೋಪಾಯವು ಉಪಯೋಗವಾಗುವುದು, ಈ ರಾಕ್ಷಸರಾದರೆ ಮಹಾ ಮೂರ್ಖರು, ಕ್ರೂರಾತ್ಮರು, ಮಾಯಾವಿಗಳು, ಆದುದರಿಂದ ಸಾಮೋಪಾಯಕ್ಕೆ ಇವರಲ್ಲಿ ಅವಕಾಶವಿಲ್ಲ, ದಾನೋಪಾಯವನ್ನು ವಿನಿಯೋಗಿಸೋಣವೆಂದರೆ, ಇವರು ಮಹತ್ತರವಾದ ಧನದಿಂದ ಮದಾಂಧರಾಗಿದಾರೆ, ಈ ರಕ್ಕಸರ ಹೆಮ್ಮೆಗೆ ಪಾರವೇ ಇಲ್ಲ, ಏನಾದರೂ ಕೊಟ್ಟು ಸ್ವಾಧೀನ ಪಡಿಸಿಕೊಳ್ಳಲು ಸಾಧ್ಯವಿಲ್ಲ. ಇದರಿಂದ ದಾನೋಪಾಯವು ವ್ಯರ್ಥವು, ಈ ದಾನವರೆಲ್ಲರೂ ಹಿಂಸಾಪರರಾಗಿ ಒಗ್ಗಟ್ಟಾಗಿಯೂ ಇರುವುದರಿಂದ ರಾಜ ಮಂತ್ರಿಗಳಿಗಾಗಲಿ, ಅಥವಾ ರಾಜ ಪ್ರಜೆಗಳಿಗಾಗಲಿ, ಭೇದವನ್ನು ಕಲ್ಪಿಸೋಣವೆಂದರೆ ಅನುಕೂಲವಿಲ್ಲ. ಆದಕಾರಣ ನನ್ನ ಪರಾಕ್ರಮವನ್ನೇ ವ್ಯಕ್ತಗೊಳಿಸಿ ರಾಕ್ಷಸರೊಡನೆ ಯುದ್ಧವನ್ನು ಮಾಡಿ, ದಾನವರ ಮತ್ತು ದಶಕಂಠನ ಬಲಾಬಲಗಳ ಇಯತ್ತೆಯನ್ನು ತಿಳಿದು, ಇಲ್ಲಿಂದ ಶ್ರೀರಾಮಸನ್ನಿಧಿಗೆ ಹೋಗಿ, ಈ ಸಂಗತಿಯನ್ನು ಬಿನ್ನವಿಸಬೇಕು, ಜಯ ಪರಾಜಯಗಳು ಬಬ್ಬನಿಗೇ ಸಂಭವಿಸುವುವೆಂದು ನಿಶ್ಚಯಿಸಿ ಹೇಳಲು

ನ ಭೇದಸಾಧ್ಯಾ ಬಲದರ್ಪಿತಾ ಜನಾಃ ಪರಾಕ್ರಮಸ್ತ್ವೇವ ಮಮೇಹ ರೋಚತೇ ||೩||
ನ ಚಾಸ್ಯ ಕಾರ್ಯಸ್ಯ ಪರಾಕ್ರಮಾದೃತೇ ವಿನಿಶ್ಚಯಃ ಕಶ್ಚಿದಿಹೋಪಪದ್ಯತೇ ।
ಹತ ಪ್ರವೀರಾ ಹಿ ರಣೇ ಹಿ ರಾಕ್ಷಸಾಃ ಕಥಂಚಿದೀಯುರ್ಯದಿಹಾದ್ಯ ಮಾರ್ದವಂ ||

ಕಾರ್ಯೇ ಕರ್ಮಣಿ ನಿರ್ದಿಷ್ಟೇ ಯೋ ಬಹೂನ್ಯಪಿ ಸಾಧಯೇತ್ ।
ಪೂರ್ವ ಕಾರ್ಯಾವಿರೋಧೇನ ಸ ಕಾರ್ಯಂ ಕರ್ತುಮರ್ಹತಿ ||೫||
ನ ಹ್ಯೇಕ ಸ್ಸಾಧಕೋ ಹೇತುಃ ಸ್ವಲ್ಪಸ್ಯಾಪೀಹ ಕರ್ಮಣಃ ।

---

ಇಹ - ಇನ್ನುಳಿದ ಕಾರ್ಯದಲ್ಲಿ, ಮಮ - ನನಗೆ, ಪರಾಕ್ರಮಸ್ತ್ವೇವ - ಶೌರ್ಯವೇ, ರೋಚತೇ - ಸರಿಯೆಂದು ತೋರುತ್ತದೆ || ೩ || ಅಸ್ಯ - ಈ, ಕಾರ್ಯಸ್ಯ - ಕೆಲಸಕ್ಕೆ, (ಕಾರ್ಯಸಿದ್ಧಿಗೆ) ಪರಾಕ್ರಮಾದೃತೇ - ಪರಾಕ್ರಮವನ್ನು ಬಿಟ್ಟು, ಕಶ್ಚಿತ್ - ಬೇರಾವುದೊಂದು, ವಿನಿಶ್ಚಯಃ - ಉಪಾಯವೂ, ಇಹ - ಈ ರಾಕ್ಷಸರ ಪಡೆಯಲ್ಲಿ, ನೋಪಪದ್ಯತೇ - ಹೊಂದಿಕೆಯಾಗುವುದಿಲ್ಲ, ರಣೇ - ಯುದ್ಧದಲ್ಲಿ, ಹತ ಪ್ರವೀರಾಃ - ಮಡಿದುಹೋದ ವೀರರುಳ್ಳ, ರಾಕ್ಷಸಾಃ - ರಕ್ಕಸರು, ಕಥಂಚಿತ್ - ಹೇಗಾದರೂ, ಅದ್ಯ- ಇಂದು, ಮಾರ್ದವಂ - ಮೃದುತ್ವವನ್ನು, (ಸ್ವಾಧೀನತೆಯನ್ನು) ಈಯುಃ - ಹೊಂದುವರು || ೪ || ನಿರ್ದಿಷ್ಟೇ - ಪ್ರಭುವಿನಿಂದ ಆಜ್ಞಾಪಿಸಲ್ಪಟ್ಟ, ಕಾರ್ಯೇ - ಅವಶ್ಯಕವಾಗಿ ಮಾಡಬೇಕಾಗಿರುವ, ಕರ್ಮಣಿ - ಕೆಲಸದಲ್ಲಿ, ಯಃ - ಯಾವನು, ಬಹೂನ್ಯಪಿ - ಅನೇಕ ಕಾರ್ಯಗಳನ್ನೂ, ಸಾಧಯೇತ್ - ಸಾಧಿಸುವವನಾಗುತ್ತಾನೆಯೋ, ಸಃ - ಅಂಥವನು, ಪೂರ್ವ ಕಾರ್ಯಾವಿರೋಧೇನ - ಮೊದಲಿನ ಕೆಲಸಕ್ಕೆ ಕುಂದು ಬಾರದ ರೀತಿಯಿಂದ, ಕಾರ್ಯಂ - ಕೆಲಸವನ್ನು, ಕರ್ತುಂ - ಮಾಡಲಿಕ್ಕೆ, ಅರ್ಹತಿ- ಯೋಗ್ಯನಾಗುತ್ತಾನೆ, || ೫ || ಸ್ವಲ್ಪಸ್ಯ - ಅಲ್ಪವಾದ (ಮಿತವಾದ) ಕರ್ಮಣೋಪಿ - ಕೆಲಸಕ್ಕಾದರೂ, ಏಕಃ-ಒಂದಾದ, ಹೇತುಃ - ಕಾರಣವು, ಸಾಧಕಃ - ಕೆಲಸವನ್ನು ಸಾಧಿಸತಕ್ಕದು, ನಹಿ - ಆಗುವುದಿಲ್ಲ, ಯಃ -

---

ಸಾಧ್ಯವಲ್ಲ, ಅದರೂ ಶ್ರೀರಾಮಚಂದ್ರನ ಪರಮಾನುಗ್ರಹದಿಂದ ನನಗೆ ಮಾತ್ರ ಜಯವೇ ಸಂಭವಿಸುವುದೆಂದ ನಿಶ್ಚಯವಾಗಿ ಹೇಳಬಲ್ಲೆ. ಅಪಜಯವೆಂಬ ಮಾತು ಉಂಟಾಗುವುದೇ ಇಲ್ಲ. ಆದಕಾರಣ ಸಾಧಾರಣವಾಗಿ ಇವರ ತತ್ತ್ವವನ್ನು ಅರಿತು ಮುಂದಿನ ಕೆಲಸವನ್ನು ಮಾಡುವುದೇ ಸರಿಯೆಂದು ಕೊಂಡನು||೩|| ಆಮೇಲೆ-ಈ ರಾಕ್ಷಸರ ಬಲಾಬಲಗಳ ರಹಸ್ಯವನ್ನು ತಿಳಿಯಬೇಕಾದರೆ, ಇವರೊಡನೆ ಹೋರಾಡುವುದನ್ನು ಬಿಟ್ಟರೆ ಬೇರೆ ದಾರಿಯೇ ಇಲ್ಲ, ಕಾಳಗವು ಒದಗಿ ರಣದಲ್ಲಿ ಕೆಲವುಮಂದಿ ವೀರಭಟರು ಮಡಿದು ಹೋದರೆ, ಆಗ ಬಲವು ತಗ್ಗುವುದರಿಂದ ಕಳೆಗುಂದಿ, ರಕ್ಕಸರು ಮೃದುತ್ವವನ್ನು ಹೊಂದಿ, ಹೇಗಾದರೂ ಒಳ್ಳೆಯ ದಾರಿಗೆ ಬರಬಹುದು ||೪|| ಲೋಕದಲ್ಲಿ- ಯಜಮಾನನು ಊಳಿಗದವನನ್ನು ಯಾವುದಾದರೊಂದು ಕೆಲಸದಲ್ಲಿ ನೇಮಿಸಿದರೆ, ಆತನ ಭೃತ್ಯನು-ತನಗೆ ಗೊತ್ತುಮಾಡಿರುವ ಕೆಲಸದ ಜೊತೆಗೆ ಅದಕ್ಕೆ ಅನುಕೂಲಿಸತಕ್ಕ ಅನೇಕ ಕೆಲಸಗಳನ್ನೂ ಕುದುರಿಸಿ ಸಾಧಿಸುವರೆ, ಆಗ ಹಿಂದಿನ ಕೆಲಸಕ್ಕೆ ಕುಂದಿಲ್ಲದಂತೆಸಗಿದ ಆ ಸೇವಕನ ಆಳುತನವು ಹೊಗಳಿಕೆ ಗೀಡಾಗುವುದು, ಮತ್ತು ಅಂಥವನೇ ನಿರ್ವಾಹಶಾಲಿಯೆನಿಸುವನು ||೫|| ಒಂದು ಸಣ್ಣ ಕೆಲಸವಾದರೂ ಅದನ್ನು ಸಾಧಿಸಲಿಕ್ಕೆ ಅನೇಕ ಸಲಕರಣೆಗಳು ಬೇಕು, ಒಂದೇ ಸಾಧನೆಯಿಂದ ಕಾರ್ಯವು ಸಿದ್ಧಿಸುವುದಿಲ್ಲ. ಪ್ರಕೃತಕಾರ್ಯೋಚಿತವಾದ ಸಂದರ್ಭಗಳನ್ನೆಲ್ಲ ಚೆನ್ನಾಗಿ ಅರಿತಿರಬೇಕು,

ಯೋ ಹ್ಯರ್ಥಂ ಬಹುಧಾ ವೇದ ಸ ಸಮರ್ಥೋಽರ್ಥ ಸಾಧನೆ ॥೬॥
ಇಹೈವ ತಾವತ್ಕೃತನಿಶ್ಚಯೋ ಹ್ಯಹಂ ಯದಿ ವ್ರಜೇಯಂ ಪ್ಲವಗೇಶ್ವರಾಲಯಮ್ ।
ಪರಾತ್ಮ ಸಂಮರ್ದ ವಿಶೇಷ ತತ್ವವಿತ್ತತಃ ಕೃತಂ ಸ್ಯಾನ್ಮಮ ಭರ್ತೃಶಾಸನಮ್ ॥೭॥
ಕಥಂ ನು ಖಲ್ವದ್ಯ ಭವೇತ್ಸುಖಾಗತಂ ಪ್ರಸಹ್ಯ ಯುದ್ಧಂ ಮಮ ರಾಕ್ಷಸೈಸ್ಸಹ ।

---

ಯಾವನು, ಅರ್ಥಂ - ಕಾರ್ಯಸಂದರ್ಭವನ್ನು, ಬಹುಧಾ - ಅನೇಕ ಪ್ರಕಾರವಾಗಿ, (ಅನೇಕೋಪಾಯಗಳಿಂದ) ವೇದ - (ಊಹಾಪೋಹಗಳ ಮೂಲಕ) ತಿಳಿಯಬಲ್ಲನೋ, ಸಃ - ಅಂಥವನೇ, ಅರ್ಥಸಾಧನೆ-ಕೆಲಸವನ್ನು ಸಾಧಿಸುವ ವಿಷಯದಲ್ಲಿ, ಸಮರ್ಥಃ - ಶಕ್ತನಾದವನು, ಭವೇತ್ - ಆಗುವನು ॥ ೬ ॥ ಅಹಂ ನಾನು, ಇಹೈವ - ಇಲ್ಲಿಯೇ, ಪರ...ವಿತ್, ಪರ - ಹೆರರ, ಆತ್ಮ - ತನ್ನ, ಸಮ್ಮರ್ದ - ಯುದ್ಧದ, ವಿಶೇಷ - ತಾರತಮ್ಯವನ್ನು, ವಿತ್ - ತಿಳಿದವನಾಗಿ, 'ವಿಶೇಷತಃ - ಅಧಿಕವಾಗಿ, ಕೃತನಿಶ್ಚಯಃ - ತತ್ತ್ವ ನಿಶ್ಚಯವುಳ್ಳವನಾಗುತ್ತಾ, ಪ್ಲವಗೇಶ್ವರಾಲಯಂ-ಸುಗ್ರೀವನ ಸ್ಥಾನವನ್ನು ಕುರಿತು, ವ್ರಜೇಯಂಯದಿ, ಹೋಗುವವನೇ ಆದರೆ, ಭರ್ತೃಶಾಸನಂ - ಪ್ರಭುವಾದ ಸುಗ್ರೀವನ ಆಜ್ಞೆಯನ್ನು ತಾವತ್ - ಸಂಪೂರ್ಣವಾಗಿ, ಕೃತಂ - ಮಾಡಲ್ಪಟ್ಟುದು, ಸ್ಯಾತ್ - ಆಗುವುದು ॥ ೭ ॥

ಯುದ್ಧಂ - ಕಾಳಗವು, ಮಮ - ನನಗೆ, ರಾಕ್ಷಸೈಸ್ಸಹ - ರಕ್ಕಸರೊಡನೆ, ಪ್ರಸಹ್ಯ - ಬಲಾತ್ಕಾರವಾಗಿ, ಅದ್ಯ - ಇಂದು, ಕಥಂನುಖಲು - ಹೇಗೆ, ಸುಖಾಗತಂ - ಸುಖವಾಗಿ ಒದಗುವುದು, ಭವೇತ್ - ಆಗುವುದೋ, (ತಥಾ - ಹಾಗೆ, ಬಲಾತ್ಕಾರವಾಗಿ ಯುದ್ಧವು ಒದಗುವ ಹಾಗೆ) ಉಚಿತಂ-ತಕ್ಕ ಕೆಲಸವು, ಕರ್ತ್ತವ್ಯಂ - ಮಾಡತಕ್ಕುದಾಗಿದೆ) ತಥೈವಖಲು - ಆ ಪ್ರಕಾರ ಯುದ್ಧವು ಸಂಭವಿಸುತ್ತಿರಲಾಗಿಯೇ, ದಶಾನನಃ - ರಾವಣನು, ಆತ್ಮಬಲಂಚ - ತನ್ನ ಪಕ್ಷದ ಬಲವನ್ನೂ, ಮಾಂಚ -

---

ಅಂತಹ ಸಾಮರ್ಥ್ಯವು ನನಗುಂಟು, ಆದಕಾರಣ ಸಕಲೋಪಾಯಗಳನ್ನೂ ಸಮಯೋಚಿತವಾಗಿ ವಿನಿಯೋಗಿಸಿ, ಯುದ್ಧವನ್ನು ಮಾಡಿ, ರಕ್ಕಸರ ಗುಟ್ಟನ್ನೆಲ್ಲ ತಿಳಿದುಕೊಳ್ಳಲೇಬೇಕು ॥೬॥ ನಾನೀಗ ಇಲ್ಲಿಯೇ ರಕ್ಕಸರೊಡನೆ ಯುದ್ಧವನ್ನು ಮಾಡಿ, ಪರರ ಬಲವಿಷ್ಟು, ನನ್ನ ಬಲವಿಷ್ಟು, ಎಂದು ಬಲಾಬಲಗಳನ್ನು ನಿಶ್ಚಯಿಸಿ, ಕಿಷ್ಕಿಂಧೆಗೆ ಹೋದರೆ ಆಗನಮ್ಮ ಪ್ರಭುವಾದ ಸುಗ್ರೀವನು-ಏನಯ್ಯಾ ಆಂಜನೇಯ! ನೀನು ಲಂಕೆಗೆ ಹೋಗಿ ಜಾನಕಿಯನ್ನು ಮಾತ್ರ ಕಂಡುಬಂದೆಯಲ್ಲದೆ, ರಕ್ಕಸರ ಒಳಗುಟ್ಟನ್ನೊಂದನ್ನೂ ತಿಳಿದು ಬರಲಿಲ್ಲ, ಮತ್ತು- ಅವರ ಬಲಾಬಲಗಳನ್ನೂ ಅರಿತು ಬರಲಿಲ್ಲ ಎಂದು ಕೇಳಿದುದೇ ಆದರೆ, ಆ ಸಮಯದಲ್ಲಿ ಅಲ್ಲಿನ ವೃತ್ತಾಂತವನ್ನೆಲ್ಲ ವಿಶದವಾಗಿ ನಾನು ತಿಳಿಸಿದರೆ, ಅತನಿಗೆ ವಿಶೇಷವಾಗಿ ಸಂತೋಷವನ್ನುಂಟುಮಾಡಿದಂತಾಗುವುದಲ್ಲದೆ, ರಾಜಾಜ್ಞೆಯಿಂದ ನಾನು ಪೂರ್ಣವಾದ ಕೆಲಸವನ್ನು ಮಾಡಿದವನೂ ಆಗುವೆನು, ಹಾಗಲ್ಲದಿದ್ದರೆ ನಿರುತ್ತರನಾಗಿ ನಿಲ್ಲಬೇಕಾಗುವುದು. ಆದಕಾರಣ ರಕ್ಕಸರ ಸೊಕ್ಕನ್ನಡಗಿಸುವುದೇ ಸರಿ ॥೭॥ ಆದರೆ- ಇಲ್ಲಿರುವ ರಾಕ್ಷಸರೊಡನೆ ಈ ದಿವಸವೇ ಬಲಾತ್ಕಾರವಾಗಿ ಯುದ್ಧವು ತಾನಾಗಿಯೇ ನನಗೆ ದೊರೆಯುವುದು ಹೇಗೆ? ರಕ್ಕಸರ ಪಡೆಯೊಡನೆ ನಾನು ಹೋರಾಡಿದುದನ್ನು ಕೇಳಿ, ರಾವಣನು-ನನ್ನ ಪೌರುಷವನ್ನು ಕೊಂಡಾಡುವ ಬಗೆಯೆಂತು ? ನನ್ನಂಥ ಶೂರನೊಡನೆ ಕಾದಿದ ತನ್ನ ಸೇನೆಯನ್ನು ಅವನು ಹೊಗಳುವ ಬಗೆಹೇಗೆ ? ಏನಂಚ, ಹೇಗಾದರು ಮಾಡಿ, ದಾನವರ ಸಂಗಡ

ತಥೈವ ಖಲ್ವಾತ್ಮ ಬಲಂ ಚ ಸಾರವ ತ್ಸಮ್ಮಾನಯೇ ನ್ಮಾಂ ಚ ರಣೇ ದಶಾನನಃ ॥೮॥
ತತ ಸ್ಸಮಾಸಾದ್ಯ ರಣೇ ದಶಾನನಂ ಸಮಂತ್ರಿವರ್ಗಂ ಸ ಬಲಪ್ರಯಾಯಿನಮ್ ।
ಹೃದಿ ಸ್ಥಿತಂ ತಸ್ಯ ಮತಂ ಬಲಂ ಚ ವೈ ಸುಖೇನ ಮತ್ವಾ ಽ ಹ ಮಿತಃ ಪುನರ್ವ್ರಜೇ ॥೯॥
ಇದ ಮಸ್ಯ ನೃಶಂಸಸ್ಯ ನಂದನೋಪಮ ಮುತ್ತಮಮ್ ।
ವನಂ ನೇತ್ರಮನಃಕಾಂತಂ ನಾನಾ ದ್ರುಮ ಲತಾಯುತಮ್ ॥೧೦॥
ಇದಂ ವಿಧ್ವಂಸಯಿಷ್ಯಾಮಿ ಶುಷ್ಕಂ ವನ ಮಿವಾನಲಃ ।

---

ನನ್ನ ಬಲವನ್ನೂ, ರಣೇ - ಯುದ್ಧದಲ್ಲಿ, ಸಾರವತ್- ಸಾರವುಳ್ಳುದನ್ನಾಗಿ, ಸಮ್ಮಾನಯೇತ್-ಗೌರವಿಸು ವನು ॥೮॥ ತತಃ - ತರುವಾಯ, ಸಮಂತ್ರಿವರ್ಗಂ - ಸಚಿವಸಮೂಹದಿಂದೊಡಗೂಡಿದ, ಸಬಲ ಪ್ರಯಾಯಿನಂ - ಸೇನಾನಾಯಕರಿಂದ ಸಹಿತನಾಗಿಯೂ ಇರುವ, ದಶಾನನಂ - ರಾವಣನನ್ನು, ರಣೇ - ಯುದ್ಧರಂಗದಲ್ಲಿ, ಆ ಸಾದ್ಯ - ಹೊಂದಿ, ತಸ್ಯ - ಆ ರಾವಣನ, ಹೃದಿ - ಹೃದಯದಲ್ಲಿ, ಸ್ಥಿತಂ - ಇರುವ, ಮತಂ - ಅಭಿಪ್ರಾಯವನ್ನೂ, ಬಲಂಚ - ಅಂತಸ್ಸಾರವನ್ನೂ, ಮತ್ವಾ - ಅರಿತು, ಇತಃ - ಇಲ್ಲಿಂದ, ಸುಖೇನ - ಸುಖವಾಗಿ, ಪುನಃ - ತಿರುಗಿ, ವ್ರಜೇ (ವ್ರಜಾಮಿ) ಹೋಗುವೆನು ॥೯॥ (ಬಲಾತ್ಕಾರವಾಗಿ ಯುದ್ಧವು ಒದಗಲು ಉಪಾಯವೇನೆಂದರೆ-) ನೃಶಂಸಸ್ಯ - ಘಾತುಕನಾದ, ಅಸ್ಯ - ಈ ರಾವಣನ, ವನಂ - ಉದ್ಯಾನವು, ನಂದನೋಪಮಂ - ಇಂದ್ರನ ವನಕ್ಕೆಣೆಯೆನಿಸಿದುದೂ, ನೇತ್ರಮನಃ ಕಾಂತಂ - ಕಣ್ಮನಗಳಿಗಾನಂದಕರವೆನಿಸಿದುದೂ ನಾನಾ ದ್ರುಮಲತಾಯುತಂ - ಬಗೆಬಗೆಯ ಮರಗಿಡ ಬಳ್ಳಿಗಳಿಂದೊಡಗೂಡಿರುದೂ ಆಗಿ (ಅಸ್ತಿ-ಇದೆ) ಇದಂ - ಈ ತೋಟವನ್ನು, ಶುಷ್ಕಂ - ಒಣಗಿ ಹೋದ, ವನಂ - ಕಾಡನ್ನು, ಅನಲಇವ - ಅಗ್ನಿಯು ಹೇಗೋಹಾಗೆ, ವಿಧ್ವಂಸಯಿಷ್ಯಾಮಿ- ನಾಶಮಾಡುವೆನು, ಅಸ್ಮಿನ್ - ಈ ವನವು, ಭಗ್ನೇಸತಿ - ನಾಶವನ್ನು ಪಡೆಯುತಲಿರಲಾಗಿ, ತತಃ - ಆ ಮೇಲೆ, (ಅದರಿಂದ)

---

ಸಂಗ್ರಾಮವನ್ನೆಸಗಿ, ಲಂಕಾಧಿಪತಿಗೆ ನನ್ನ ಕಾರ್ಯವನ್ನು ತಿಳಿಸತಕ್ಕುದೇ ಮುಖ್ಯವಾದ ಕೆಲಸವಾಗಿದೆ ॥೮॥ ಕಾಳಗವು ಕೈಗೂಡಿದ ವೇಳೆಯೊಳಗೆ ರಣಾಂಗಣದಲ್ಲಿ- ಮಂತ್ರಿಗಳಿಂದಲೂ, ಸೇನೆಗಳಿಂದಲೂ ಆವರಿಸ್ಪಟ್ಟವನಾಗಿ ದಶಕಂಧರನು ಬಂದುದೇ ಆದರೆ, ಅವನನ್ನು ಇದಿರ್ಗೊಂಡು, ಅವನ ಹೃದಯಗತವಾದ ಅಭಿಪ್ರಾಯವನ್ನೂ, ಅವನ ಬಲದ ಇಯತ್ತೆಯನ್ನೂ ತಿಳಿದು, ಸುಖವಾಗಿಇಲ್ಲಿಂದ ತೆರಳಬೇಕಾಗಿದೆ॥೯॥ ಇಷ್ಟು ಕೆಲಸವೂ ಅನುಕೂಲಿಸುವುದಕ್ಕೆ ಮೊಟ್ಟಮೊದಲು ಏನುಮಾಡಬೇಕೆಂದರೆ - ಇಗೋ, ಪಾಪಾತ್ಮನಾದ ರಾವಣನ ಈ ಉದ್ಯಾನವು ಇಂದ್ರನ ನಂದನ ವನಕ್ಕೆಣೆಯೆನಿಸಿ ಇದೆ, ಇದರೊಳಗೆ ಕಲ್ಪವೃಕ್ಷಕ್ಕೆ ಸಮಾನವಾದ ಬಗೆಬಗೆಯ ತರುಗಳು, ದಿವ್ಯಲತೆಗಳೂ ನೋಟಕರ ಕಣ್ಮನಗಳನ್ನು ಸೆಳೆಯುತ ಕಂಗೊಳಿಸುತಲಿರುವುವು ॥೧೦॥ ಇಷ್ಟು ರಮ್ಯವಾಗಿರುವ ಈ ವನವು ರಾವಣನಿಗೆ ಅಂತ್ಯಂತ ಪ್ರೀತ್ಯಾಸ್ಪದವೆನಿಸಿರುವುದು, ಇದನ್ನೀಗ- ಒಣಗಿದ ಗಿಡಗಳಿಂದೊಡಗೂಡಿರುವ ದೊಡ್ಡಕಾಡನ್ನು ಕಾಡ್ಗಿಚ್ಚು ಸುಟ್ಟು ಹಾಳು ಮಾಡುವಹಾಗೆ ಧ್ವಂಸಮಾಡಿದುದೇ ಆದರೆ, ಇಲ್ಲಿರುವ ರಕ್ಕಸರ ಮೂಲಕ ರಾವಣನಿಗೆ ಸುದ್ದಿಯು ಮುಟ್ಟುವುದು, ಅದರಿಂದ ದಾನವೇಶ್ವರನಿಗೆ ಸಿಟ್ಟುಹತ್ತುವುದು, ಬಳಿಕ ಸಮರವು ತಾನಾಗಿಯೇ ಸಂಘಟಿಸುವುದು, ಇದೇ ಸರಿಯಾದ ಹಾದಿ ಎಂದು ನಿಶ್ಚೈಸಿದನು. ॥೧೧॥ ಆಹಾ! ನಾನು ಈ ವನವನ್ನು

ಅಸ್ಮಿನ್ನಗ್ನೌ ತತಃ ಕೋಪಂ ಕರಿಷ್ಯತಿ ದಶಾನನಃ ॥೧೧॥
ತತೋ ಮಹ ತ್ಸಾಶ್ವ ಮಹಾರಥದ್ವಿಪಂ ಬಲಂ ಸಮಾದೇಕ್ಷ್ಯತಿ ರಾಕ್ಷಸಾಧಿಪಃ ।
ತ್ರಿಶೂಲ ಕಾಳಾಯಸ ಪಟ್ಟಿಸಾಯುಧಂ ತತೋ ಮಹ ದ್ಯುದ್ಧ ಮಿದಂ ಭವಿಷ್ಯತಿ ॥೧೨॥
ಅಹಂ ತು ತೈ ಸ್ಸಂಯತಿ ಚಂಡ ವಿಕ್ರಮೈ ಸ್ಸಮೇತ್ಯ ರಕ್ಷೋಭಿ ರಸಹ್ಯವಿಕ್ರಮಃ ।
ನಿಹತ್ಯ ತದ್ರಾವಣ ಚೋದಿತಂ ಬಲಂ ಸುಖಂ ಗಮಿಷ್ಯಾಮಿ ಕಪೀಶ್ವರಾಲಯಮ್ ॥೧೩॥
ತತೋ ಮಾರುತವ ತ್ಕ್ರುದ್ಧೋ ಮಾರುತಿ ರ್ಭೀಮ ವಿಕ್ರಮಃ ।
ಊರುವೇಗೇನ ಮಹತಾ ದ್ರುಮಾ ಕ್ಷೇಪ್ತು ಮಥಾರಭತ್ ॥೧೪॥

ದಶಾನನಃ - ರಾವಣನು, ಕೋಪಂ - ಸಿಟ್ಟನ್ನು, ಕರಿಷ್ಯತಿ - ಮಾಡುವನು ॥೧೦, ೧೧॥ ತತಃ - ತರು ವಾಯ, ರಾಕ್ಷಸಾಧಿಪಃ - ರಾಕ್ಷಸೇಶ್ವರನು, ಸಾಶ್ವಮಹಾರಥದ್ವಿಪಂ - ಕುದುರೆ, ತೇರು, ಆನೆ ಇವುಗ ಳಿಂದೊಡಗೂಡಿದ, ತ್ರಿಶೂಲಕಾಳಾಯಸ ಪಟ್ಟಿಸಾಯುಧಂ - ತ್ರಿಶೂಲ, ಕಾಳಾಯಸ, ಪಟ್ಟಿಸ ಎಂಬ ಆಯುಧಗಳುಳ್ಳ, ಮಹತ್ - ವಿಸ್ತಾರವಾದ, ಬಲಂ - ಸೈನ್ಯವನ್ನು, ಸಮಾದೇಕ್ಷ್ಯತಿ - ಆಜ್ಞಾಪಿಸುವ ನು, ತತಃ - ಅನಂತರದಲ್ಲಿ, ಮಹತ್ - ದೊಡ್ಡದಾದ, ಇದಂ - ಈ ಹಾದೆ ನಾನು ಯೋಚಿಸಿದ, ಯು ದ್ಧಂ - ಕಾಳಗವು, ಭವಿಷ್ಯತಿ - ಉಂಟಾಗುವುದು, ॥೧೨॥ ಅಸಹ್ಯ ವಿಕ್ರಮಃ - ಸಹಿಸಲಸದಳವೆನಿಸಿ ದಪರಾಕ್ರಮವುಳ್ಳ, ಅಹಂತು - ನಾನಾದರೋ, ಸಂಯತಿ - ಯುದ್ಧದಲ್ಲಿ, ಚಂಡವಿಕ್ರಮೈಃ - ತೀಕ್ಷ್ಣ ವಾದ ಪರಾಕ್ರಮವುಳ್ಳ, ತೈಃ - ಮೇಲೆ ಹೇಳಿದ, ರಕ್ಷೋಭಿಃ - ರಕ್ಕಸರೊಡನೆ, ಸಮೇತ್ಯ - ಕಲೆತು, ರಾವಣಚೋದಿತಂ - ರಾವಣನಿಂದ ಪ್ರೇರಿಸಲ್ಪಟ್ಟ, ತತ್ - ಆ, ಬಲಂ - ಸೇನೆಯನ್ನು, ನಿಹತ್ಯ - ಧ್ವಂಸ ಮಾಡಿ, ಸುಖಂ - ಸುಖವಾಗಿ, ಕಪೀಶ್ವರಾಲಯಂ - ಕಿಷ್ಕಿಂಧಾನಗರವನ್ನು ಕುರಿತು, ಗಮಿಷ್ಯಾಮಿ - ಹೋಗುವೆನು (ಇತಿ-ಹೀಗೆಂದು, ಚಿಂತಯಾಮಾಸ - ಯೋಚಿಸಿದನು) ॥೧೩॥

ತತಃ - ಹಾಗೆಚಿಂತಿಸಿದಬಳಿಕ, ಭೀಮವಿಕ್ರಮಃ - ಭಯಂಕರವಾದ ಶೌರ್ಯವುಳ್ಳ (ಭೀಮನಂತೆ ಪ ರಾಕ್ರಮವುಳ್ಳ) ಮಾರುತಿಃ - ಆಂಜನೇಯನು, ಮಾರುತವತ್ - ತನ್ನ ತಂದೆಯಾದ ವಾಯುವಿನಂತೆ, ಕ್ರು ದ್ಧಃ - ರೋಷಗೊಂಡವನಾಗಿ, ಅಥ - ಆಮೇಲೆ, ಮಹತಾ- ಹೆಚ್ಚಾದ, ಊರುವೇಗೇನ - ತೊಡೆಗಳ ವೇಗ ದಿಂದ, ದ್ರುಮಾ- ಮರಗಳನ್ನು, ಕ್ಷೇಪ್ತುಂ-ಕಿತ್ತೆಸೆಯುಲಿಕ್ಕೆ, ಆರಭತ್ (ಆರಭತ) ಪ್ರಾರಂಭಿಸಿದನು॥೧೪॥

ಬಾಳುಗೆಡಿದರೆ ಯುದ್ಧವು ಸಾವಕಾಶವಾಗುವುದಿಲ್ಲ, ಸಮಾಚಾರವು ತಿಳಿದಕೂಡಲೇ ರೋಷಗೊಂಡ ರಾವಣನು-ತನ್ನ ಚತುರಂಗಬಲವನ್ನು ಆಜ್ಞಾಪಿಸುವನು,ಆತನ ಅಣತಿಯನಾಂ ತವೀರರು-ತ್ರಿಶೂಲ, ಕಾಳಾಯುಸ, ಪಟ್ಟಿಸ,ಮೊದಲಾದ ಆಯುಧಗಳನ್ನು ಹಿಡಿದು ಹೋರಾ ಡಲಿಕ್ಕೆ ಅಣಿಯಾಗಿ ಬರುವರು, ಆಮೇಲೆ ಮೇಲಾದ ಬವರವು ಬರಹೋಗುವುದು ॥ ೧೨ ॥ ಆ ಬಳಿಕ ಈ ನಾನು-ಸಮರಾಂಗಣದಲ್ಲಿ ಮಹಾಪರಾಕ್ರಮಶಾಲಿಗಳಾದ ರಾಕ್ಷಸವೀರರೊಡ ನೆ ನನ್ನ ಶೌರ್ಯವನ್ನು ತೋರಿ ಪ್ರತಿಭಟಿಸುವೆನು. ನನ್ನ ಪರಾಕ್ರಮವನ್ನು ಈ ಪುಡಿರಕ್ಕಸ ರುತಾಳಲಾರರು ಅಸುರಾಧಿಪನಟ್ಟಿದ ಅಸುರರ ಅಸುಗಳನ್ನೆಲ್ಲ ಬಸಿದು,ತರುವಾಯ ಕಿಷ್ಕಿಂ ಧೆಗೆ ಸುಖಪ್ರಯಾಣವನ್ನು ಬೆಳೆಸುವೆನು ॥೧೩॥ ಎಂದೀಪ್ರಕಾರ ಗೊತ್ತುಮಾಡಿಕೊಂಡು, ಭೀಮನಂತೆಸಮ ಪರಾಕ್ರಮವುಳ್ಳ ಮಾರುತಿಯು—ತನ್ನ ತಂದೆಯಾದ ಮಾರುತನಂತೆ ಸಿಟ್ಟು ಗೊಂಡು, ತನ್ನ ತೊಡೆಗಳ ವೇಗದಿಂದ ವನವನ್ನೆಲ್ಲ ತರಿದೊಟ್ಟಲಿಕ್ಕೆ ಮೊದಲಿಟ್ಟನು ॥೧೪॥

ತತಸ್ತು ಹನುಮಾನ್ವೀರೋ ಬಭಂಜ ಪ್ರಮದಾ ವನಮ್ ।
ಮತ್ತದ್ವಿಜ ಸಮಾಘುಷ್ಟಂ ನಾನಾದ್ರುಮ ಲತಾಯುತಮ್ ॥೧೫॥
ತದ್ವನಂ ಮಥಿತೈರ್ವೃಕ್ಷೈ ರ್ಭಿನ್ನೈಶ್ಚ ಸಲಿಲಾಶಯೈಃ ।
ಚೂರ್ಣಿತೈಃ ಪರ್ವತಾಗ್ರೈಶ್ಚ ಬಭೂವಾಪ್ರಿಯ ದರ್ಶನಮ್ ॥೧೬
ನಾನಾ ಶಕುಂತ ವಿರುತೈಃ ಪ್ರಭಿನ್ನೈ ಸ್ಸಲಿಲಾಶಯೈಃ ।
ತಾಮ್ರೈಃ ಕಿಸಲಯೈಃ ಕ್ಲಾಂತೈಃ ಕ್ಲಾಂತ ದ್ರುಮ ಲತಾಯುತಮ್ ॥೧೭॥
ನ ಬಭೌ ತದ್ವನಂ ತತ್ರ ದಾವಾನಲ ಹತಂ ಯಥಾ ।

ತತಃ - ತರುವಾಯ, ವೀರಃ - ಶೂರನಾದ, ಹನುಮಾಂಸ್ತು - ಆಂಜನೇಯನಾದರೋ, ಮತ್ತದ್ವಿಜಸಮಾಘುಷ್ಟಂ - ಸುದಿಸಿದ ಹಕ್ಕಿಗಳ ದನಿಯಿಂದ ತುಂಬಿದ, ನಾನಾದ್ರುಮಲತಾಯುತಂ - ಬಗೆಬಗೆಯ ಮರಗಿಡ ಬಳ್ಳಿಗಳಿಂದ ನಿಬಿಡವಾದ, ಪ್ರಮದಾವನಂ - ಹೆಂಗಳತೋಟವನ್ನು, ಬಭಂಜ - ಮುರಿದನು॥ ತತ್ - ಆ, ವನಂ - ಉದ್ಯಾನವು, ಮಥಿತೈಃ - ಪುಡಿಮಾಡಲ್ಪಟ್ಟ, ವೃಕ್ಷೈಃ - ಮರಗಳಿಂದಲೂ, ಭಿನ್ನೈಃ - ಒಡೆದುಹಾಕಿದ, ಸಲಿಲಾಶಯೈಶ್ಚ - ಕೊಳಮೊದಲಾದ ಜಲಾಧಾರಗಳಿಂದಲೂ, ಚೂರ್ಣಿತೈಃ - ಪುಡಿಮಾಡಲ್ಪಟ್ಟ, ಪರ್ವತಾಗ್ರೈಶ್ಚ - ಆಟದ ಬೆಟ್ಟಗಳಕೋಡುಗಳಿಂದಲೂ, ಅಪ್ರಿಯದರ್ಶನಂ - ನೋಡಲಿಕ್ಕೆ ಅಸಹ್ಯವೆನಿಸಿದುದು, ಬಭೂವ - ಆಗಿತ್ತು ॥೧೬॥ ಕ್ಲಾನ್ತದ್ರುಮಲತಾಯುತಂ - ಬಾಡಿದ ಮರಗಿಡಬಳ್ಳಿಗಳಿಂದೊಡಗೂಡಿದ, ತತ್ - ಆ, ವನಂ - ಕ್ರೀಡೋದ್ಯಾನವು, ತತ್ರ - ಆಲಂಕೆಯೊಳಗೆ ನಾನಾಶಕುಂತವಿರುತೈಃ - ಬಗೆಬಗೆಯ ಹಕ್ಕಿಗಳ ವಿಕಾರವಾದ ಧ್ವನಿಗಳಿಂದಲೂ, ಪ್ರಭಿನ್ನೈಃ - ಒಡೆಯಲ್ಪಟ್ಟ, ಸಲಿಲಾಶಯೈಃ - ಕೊಳಗಳಿಂದಲೂ, ಕ್ಲಾಂತೈಃ - ಬಾಡಿಹೋದ, ತಾಮ್ರೈಃ - ಕೆಂಪಗಿರುವ, ಕಿಸಲಯೈಃ - ಚಿಗುರುಗಳಿಂದಲೂ, ದಾವಾನಲಹತಂಯಥಾ - ಕಾಡ್ಗಿಚ್ಚಿನಿಂದ ನಾಶಗೊಳಿಸಲಟ್ಟುದು ಹೇಗೋ ಹಾಗೆ, ನಬಭೌ - ಪ್ರಕಾಶಿಸುತಲಿರಲಿಲ್ಲ, ॥೧೭, ೧೭॥ ವ್ಯಾಕುಲಾ ವರಣಾಃ - ಆಸರೆಯಾಗಿದ್ದ ಮುರಿದುಹೋದ ಮರಗಿಡಗಳುಳ್ಳುವಾದಕಾರಣವೇ, ಲತಾಃ - ಬಳ್ಳಿಗಳು, ವಿಹ್ವಲಾಇವ -

ಆ ಹಿಂದೆ ಶೂರನಾದ ಮಾರುತಿಯು - ಕೊಬ್ಬಿ ಕೂಗ ತಲಿಗುವ ಹಕ್ಕಿಗಳಿಂದಲೂ, ತರ ತರವಾದ ತರುಗಳಿಂದಲೂ, ಬಗೆಬಗೆಯಾದ ಬಳ್ಳಿಗಳಿಂದಲೂ, ರಮಣೀಯವಾಗಿರುವ ರಾವಣನ ಕ್ರೀಡಾವನವನ್ನು ಧ್ವಂಸಮಾಡ ತೊಡಗಿದನು ॥ ೧೫ ॥ ಹನುಮನ ಬಲುಮೆಯಿಂದ ಮುರಿಯಲ್ಪಟ್ಟ ಮರಗಳಿಂದಲೂ ಒಡೆಯಲ್ಪಟ್ಟ ಕೊಳಗಳಿಂದಲೂ, ಪುಡಿಪುಡಿಯಾದ ಬೆಟ್ಟಗಳ ಕೋಡುಗಳಿಂದಲೂ, ಆ ಕ್ರೀಡಾವನವು ನೋಟಕರಿಗೆ ಬಹಳ ಅಸಹ್ಯತೆಯನ್ನುಂಟುಮಾಡುತಲಿದ್ದಿತು ॥೧೬॥ ಮರಗಳನ್ನು ಮುರಿಯಲಿಕ್ಕೆ ಮೊದಲುಮಾಡಿದ ಮಾರುತಿಯ ಹಾವಳಿಯನ್ನು ತಾಳಲಾರದೆ ಭಯಪಟ್ಟು, ಹಕ್ಕಿಗಳೆಲ್ಲ ವಿಕಾರವಾಗಿ ಕೂಗಲಾರಂಭಿಸಿದುವು ಆ ಸವಿಹಾರನಂದನನ-ಸರೋವರಗಳನ್ನೆಲ್ಲ ಒಡೆದು, ಹಾಳುಮಾಡಿದನು ಗಿಡ ಮರ ಬಳ್ಳಿಗಳೆಲ್ಲ ಮುರಿದು ರಾಶಿಯಾಗಿ ಬಿದ್ದವು. ಮನೋಹರಗಳಾಗಿ ವಿರಾಜಿಸುತಲಿದ್ದ ತಳಿರುಗಳೆಲ್ಲ ಬಾಡಿ ಕಂಗೆಟ್ಟುವು. ಕಾಡ್ಗಿಚ್ಚಿನಿಂದ ಬೆಂದುಹೋದ ಮಹಾವನದಂತೆ, ಆ ಪ್ರಮದಾವನವು ಸ್ವಲ್ಪವಾದರೂ ಶೋಭಿಸದೆ ಹಾಳಾಗುತಲಿದ್ದಿತು ॥೧೭-೧೭॥-॥ ಆ ದಿವ್ಯವಾದ ಉದ್ಯಾನದೊಳಗೆ ಬೆಳೆದಿದ ಬಳ್ಳಿಗಳಿಗೆ ಆಸರೆಯಾಗಿದ್ದ ಮರಗಳೆಲ್ಲ ಮುರಿದು

ವ್ಯಾಕುಲಾಽವರಣಾ ರೇಜುರ್ವಿಹ್ವಲಾ ಇವ ತಾ ಲತಾಃ ॥೧೮॥
ಲತಾಗೃಹೈಶ್ಚಿತ್ರಗೃಹೈಶ್ಚ ನಾಶಿತೈರ್ಮಹೋರಗೈರ್ವ್ಯಾಳಮೃಗೈಶ್ಚ ನಿರ್ಧುತೈಃ।
ಶಿಲಾಗೃಹೈರುನ್ಮಥಿತೈಸ್ತಥಾ ಗೃಹೈಃ ಪ್ರಣಷ್ಟರೂಪಂ ತದಭೂನ್ಮಹದ್ವನಮ್ ॥೧೯॥
ಸಾಽವಿಹ್ವಲಾಽಶೋಕಲತಾಪ್ರತಾನಾ ವನಸ್ಥಲೀ ಶೋಕಲತಾಪ್ರತಾನಾ ।
ಜಾತಾ ದಶಾಸ್ಯಪ್ರಮದಾವನಸ್ಯ ಕಪೇರ್ಬಲಾದ್ಧಿ ಪ್ರಮದಾವನಸ್ಯ ॥೨೦॥
ಸ ತಸ್ಯ ಕೃತ್ವಾರ್ಥಪತೇರ್ಮಹಾಕಪಿರ್ಮಹದ್ವ್ಯಲೀಕಂ ಮನಸೋ ಮಹಾತ್ಮನಃ।

ಭಯದಿಂದ ನಿಶ್ಚೇಷ್ಟಿತರಾದ ಹೆಂಗಸರಂತೆ, ನರೇಜುಃ - ಬೆಳಗುತಲಿರಲಿಲ್ಲ. ॥೧೮॥ ಮಹತ್ - ದೊಡ್ಡದಾದ, ತತ್ - ಆ, ವನಂ - ಉದ್ಯಾನವನವು, ನಾಶಿತೈಃ - ನಾಶಗೊಳಿಸಲ್ಪಟ್ಟ, ಲತಾಗೃಹೈಃ - ಬಳ್ಳಿಗಳ ಮನೆಗಳಿಂದಲೂ, ಚಿತ್ರಗೃಹೈಃ - ಚಿತ್ರದಮನೆಗಳಿಂದಲೂ, ನಿರ್ಧುತೈಃ - ಹಿಂಸಿಸಲ್ಪಟ್ಟ, ಮಹೋರಗೈಃ - ಹೆಬ್ಬಾವುಗಳಿಂದಲೂ, ವ್ಯಾಳಮೃಗೈಶ್ಚ ಕ್ರೂರವಾದ, ಹುಲಿ ಮೊದಲಾದವುಗಳಿಂದಲೂ, ಉನ್ಮಥಿತೈಃ - ಕಿತ್ತೊಗೆಯಲ್ಪಟ್ಟ, ಶಿಲಾಗೃಹೈಃ - ಕಲ್ಲಿನ ಮಂಡಪಗಳಿಂದಲೂ, ತಥಾ - ಹಾಗೆಯೇ, ಗೃಹೈಃ - ಇತರ ಮನೆಗಳಿಂದಲೂ, ಪ್ರಣಷ್ಟರೂಪಂ-ಹಾಳಾಗಿಹೋದ ಆಕಾರವುಳ್ಳುದು, ಅಭೂತ್-ಆಯಿತು ॥೧೯॥ ಅವಿಹ್ವಲಾ - ರಕ್ಕಸರ ಆಟಪಾಟುಗಳಿಗೆ ಅನುಕೂಲವೆನಿಸಿದುದೂ, ಅಶೋಕಲತಾಪ್ರತಾನಾ - ಸುಖಕರವೆನಿಸಿದ ಬಳ್ಳಿಗಳ ಸಮೂಹವುಳ್ಳುದೂ ಆಗಿದ್ದ, ದಶಾಸ್ಯಪ್ರಮದಾವನಸ್ಯ - ರಾವಣ ಸ್ತ್ರೀಯರ ಸುಖಕ್ಕೆ ಆಕರವಾಗಿದ್ದ, ಪ್ರಮದಾವನಸ್ಯ - ಹೆಂಗಸರ ಆಟದ ತೋಟದ, ಸಾ - ಆ, ವನಸ್ಥಲೀ - ಹಸಿರು ಹುಲ್ಲು ಮೊದಲಾದುದರಿಂದ ತುಂಬಿದ ಬೈಲುನೆಲವು, ಕಪೇಃ ಆಂಜನೇಯನ, ಬಲಾತ್ - ಬಲದಿಂದ, (ವಿಹ್ವಲಾ- ಹೆರರಿಗೆ ವಶವಾಗಿ ಬಳಲಿದುದು, ಶೋಕಲತಾಪ್ರತಾನಾ - ಶೋಚನೀಯವಾದ ಬಳ್ಳಿಗಳ ಸಮೂಹವುಳ್ಳುದೂ,) ಜಾತಾ - ಆಯಿತು ॥೨೦॥ ಏಕಃ - ಒಬ್ಬನಾದ, ಸಃ - ಆ, ಮಹಾಕಪಿಃ - ಕಪಿವೀರನೆನಿಸಿದ,

ಬೀಳಲು ಆಶ್ರಯರಾಗಿದ್ದ ಪುರುಷರು ತೊಲಗಲು ಅಂಜಿದ ಅಬಲೆಯರು-ನಿಶ್ಚೇಷ್ಟಿತರಾಗುವಹಾಗ ಲತೆಗಳೆಲ್ಲ ಪೊಗರಡಗಿ ಸೊರಗಿಬಿದ್ದುವು ಬಳ್ಳಿಗಳ ಆವರಣದಿಂದ ಅಂದವಾಗಿದ್ದ ಮನೆಗಳೆಲ್ಲ ಹಾಳಾದುವು. ಚಿತ್ರಶಾಲೆಗಳೆಲ್ಲ ನಶಿಸಿ ಹೋದುವು. ಇವುಗಳೊಡನೆ ಇತರ ಗೃಹಗಳೂ ನೆಲಮಟ್ಟವಾದುವು. ಅಲ್ಲಲ್ಲಿ ಮರ ಮುಂತಾದವುಗಳೊಳಗೆ ಅಡಗಿದ್ದ ಹೆಬ್ಬಾವುಗಳ ಹುಟ್ಟಿಲ್ಲದಂತಾಯಿತು, ಅಲಂಕಾರಾರ್ಥವಾಗಿಯೂ, ವಿನೋದಾರ್ಥವಾಗಿಯೂ ಆ ತೋಟದೊಳಿಟ್ಟಿದ್ದ ಹುಲಿ, ಸಿಂಹ ಮೊದಲಾದ ಮೃಗಗಳೆಲ್ಲವೂ ನಾಶವನ್ನು ಹೊಂದಿದುವು. ಕಲ್ಲಿನ ಮಂಟಪಗಳೆಲ್ಲವೂ ನೆಲಕ್ಕೆ ಅಂಟಿದುವು. ಆ ದಿವ್ಯವನವೆಲ್ಲ ಕುಂದಗೆಟ್ಟು ಅದರ ಸುಂದರವಾದ ಆಕಾರವೇ ಅಳಿಸಿ ಹೋಯಿತು ॥೧೮-೧೯॥ ಅದುವರೆಗೆ ಆ ವನಕ್ಕೆ ಎಂದೂ ಆ ವಿಧವಾದ ಆಪತ್ತು ಒದಗಿದುದೇ ಇಲ್ಲ. ರಾವಣನೇ ಮೊದಲಾದ ಅಸುರರು-ಮರಗಳು ಮುರಿದುದನ್ನಾಗಲಿ, ಬಳ್ಳಿಗಳು ಹರಿದುದನ್ನಾಗಲಿ, ಸಸಿಗಳು ಬಾಡಿದುದನ್ನಾಗಲಿ, ತಳಿರುಗಳು ಕಳೆಗುಂದಿದುದನ್ನಾಗಲೀ ಕಂಡವರೇ ಅಲ್ಲ. ಅನವರತವೂ ರಾರಾಜಿಸುತಲಿದ್ದ ತರುಲತೆಗಳಿಂದ ಅಂದವಾಗಿದ್ದ ಆ ಪ್ರಮದಾವನವು ಪ್ರಮದೆಯರಾದ ರಾಕ್ಷಸ ಸುದತಿಯರಿಗೂ, ರಾಕ್ಷಸರಿಗೂ ಆಶ್ರಯವೆನಿಸಿ, ಭೋಗ್ಯಸ್ಥಾನವಾಗಿದ್ದು, ಈಗ ಹನುಮನ ಬಲಾತ್ಕಾರವಾದ ಹಾವಳಿಯಿಂದ ಬಹು ಶೋಚನೀಯವಾಗಿ ಪರಿಣಮಿಸಿತು ॥ ೨೦ ॥ ಸುಗ್ರೀವನ ಭಂಟನಾಗಿ ಬಂದ ಆ

ಯುಯುತ್ಸುರೇಕೋ ಬಹುಭಿರ್ಮಹಾಬಲೈಃ ಶ್ರಿಯಾ ಜ್ವಲನ್ ತೋರಣಮಾಸ್ಥಿತಃ ಕಪಿಃ

ಇತಿ ಶ್ರೀಮತ್ಸುಂದರಕಾಂಡೆ - ಏಕಚತ್ವಾರಿಂಶಸ್ಸರ್ಗಃ

ಕಪಿಃ - ಆಂಜನೇಯನು, ಮಹಾತ್ಮನಃ - ಮಹಾಧೈರ್ಯಶಾಲಿಯಾದ, ತಸ್ಯ - ಆ, ಅರ್ಥಪತೇಃ - ಲಂಕಾ ರಾಜ್ಯಾಧಿಪತಿಯಾದ ರಾವಣನ, ಮನಸಃ - ಮನಸ್ಸಿಗೆ, ಮಹತ್ - ಅಪಾರವಾದ, ವ್ಯಳೀಕಂ - ಅಹಿತವನ್ನು, (ಪೀಡೆಯನ್ನು) ಕೃತ್ವಾ - ಉಂಟುಮಾಡಿ, ಮಹಾಬಲೈಃ - ಹೇರಳವಾದ ಬಲವುಳ್ಳ, ಬಹುಭಿಃ - ಅನೇಕ ರಾಕ್ಷಸರೊಡನೆ, ಯುಯುತ್ಸುಃ - ಯುದ್ಧಮಾಡಲೆಳಸಿದವನಾಗಿ, ಶ್ರಿಯಾ - ಪರಾಕ್ರಮಸಂಪದಿಂದ, ಜ್ವಲನ್ - ಪ್ರಕಾಶಿಸುತಲಿರುವವನಾಗಿ, ತೋರಣಂ - ತೋಟದ ಹೆರಬಾಗಿಲನ್ನು, ಆಸ್ಥಿತಃ - ಆಶ್ರಯಿಸಿದನು ॥೨೧॥

—ಇಂತು ನಲವತ್ತೊಂದನೆಯ ಸರ್ಗಂ—

ಮಾರುತಿಯೊಬ್ಬನೇ ಮಹಾಧೀರನೆನಿಸಿ ಲಂಕಾಸಾರ್ವಭೌಮನ ಮನಸ್ಸಿಗೆ ಉದ್ಯಾನಭಂಗದಿಂದ ಮಹತ್ತರವಾದ ವ್ಯಥೆಯನ್ನುಂಟುಮಾಡಿ, ಮಹಾಪರಾಕ್ರಮಶಾಲಿಗಳಾದ ರಕ್ಕಸರೊಡನೆ ಕಾಳಗದೆ ಕಳಗೆ ಹೋರಾಡಲು ಅಣಿಯಾಗಿ, ಉಕ್ಕಿಳಿಸುವ ಶೌರ್ಯತೇಜಸ್ಸಂಪತ್ತಿನಿಂದ ಶೋಭಿಸುತ, ಉದ್ಯಾನದ ಹೊರಬಾಗಿಲಿನಲ್ಲಿ ಬಂದು ನಿಂತನು ॥೨೧॥

— ಇಂತು ನಲವತ್ತೊಂದನೆಯ ಸರ್ಗಂ —

ಶ್ರೀಃ

ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ

## ದ್ವಿಚತ್ವಾರಿಂಶಸ್ಸರ್ಗಃ

ತತಃ ಪಕ್ಷಿನಿನಾದೇನ ವೃಕ್ಷಭಂಗಸ್ವನೇನ ಚ ।
ಬಭೂವು ಸ್ತ್ರಾಸಸಂಭ್ರಾಂತಾಸ್ಸರ್ವೇ ಲಂಕಾನಿವಾಸಿನಃ ॥೧॥

—ನಲವತ್ತೆರಡನೆಯ ಸರ್ಗಂ—

ಕಂದ॥ ಮುರಿದಂ ಮಾರುತಿ ವನಮಂ । ಚರರಿಂ ರಾವಣಗೆ ಸುದ್ದಿ ಮುಟ್ಟಿತು ಭರದಿಂ ।
ಧುರಕಟ್ಟಿದ ನುರುವೀರರ । ನಿರಿದವರನು ಮಾಪವಕ್ಕೆ ಹರಿ ಯಟ್ಟಿಯೂದಂ ॥

ತತಃ - ಅನಂತರದಲ್ಲಿ, ಪಕ್ಷಿನಿನಾದೇನ - ಹಕ್ಕಿಗಳ ದನಿಯಿಂದಲೂ, ವೃಕ್ಷಭಂಗ - ಮರಗಳ ಮುರಿಯುವಿಕೆಯಿಂದುಂಟಾದ, ಸ್ವನೇನಚ - ಧ್ವನಿಯಿಂದಲೂ, ಸರ್ವೇ - ಸಮಸ್ತ, ಲಂಕಾನಿವಾಸಿನಃ - ಲಂಕಾವಾಸಿಗಳಾದ ರಕ್ಕಸರೆಲ್ಲರೂ, ತ್ರಾಸಸಂಭ್ರಾಂತಾಃ - ಭಯದಿಂದ ನಡುಗುತ್ತಿರುವವರು, ಬಭೂವುಃ- ಆಗಿದ್ದರು ॥೧॥ ಮೃಗಪಕ್ಷಿಣಶ್ಚ - ಮೃಗಪಕ್ಷಿಗಳೂ, ಭಯತ್ರಸ್ತಾಃ - ಭಯದಿಂದ ಅದಿರುತ್ತಿರುವವುಗಳಾಗಿ,

—ನಲವತ್ತೆರಡನೆಯ ಸರ್ಗಂ—

ಆಮೇಲೆ - ಹಕ್ಕಿಗಳ ಕಲಕಲದಿಂದಲೂ, ಹರಿಯು ಮುರಿದ ಮರಗಳು ಧರೆಗುರುಳುವ ಚಟಪಟ ಶಬ್ದಗಳಿಂದಲೂ, ಆ ಲಂಕೆಯೊಳಿರುವ ರಕ್ಕಸರೆಲ್ಲರೂ ಹೆದರಿ ಅದಿರುತ್ತಾ, ಮನಬಂದ ಕಡೆಗಳಿಗೆ ಓಡುತಲಿದ್ದರು ॥ ೧ ॥ ಆ ವನದೊಳಗೆ ಮರಗಳೊಳಗೂ,

ವಿದ್ರುತಾಶ್ಚ ಭಯತ್ರಸ್ತಾ ವಿನೇದು ರ್ಮೃಗಪಕ್ಷಿಣಃ ।
ರಕ್ಷಸಾಂ ಚ ನಿಮಿತ್ತಾನಿ ಕ್ರೂರಾಣಿ ಪ್ರತಿಪೇದಿರೆ ॥೨॥
ತತೋ ಗತಾಯಾಂ ನಿದ್ರಾಯಾಂ ರಾಕ್ಷಸ್ಯೋ ವಿಕೃತಾನನಾಃ ।
ತದ್ವನಂ ದದೃಶು ರ್ಭಗ್ನಂ ತಂ ಚ ವೀರಂ ಮಹಾಕಪಿಂ ॥೩॥
ಸ ತಾ ದೃಷ್ಟ್ವಾ ಮಹಾಬಾಹು ರ್ಮಹಾಸತ್ತ್ವೋ ಮಹಾಬಲಃ ।
ಚಕಾರ ಸುಮಹ ದ್ರೂಪಂ ರಾಕ್ಷಸೀನಾಂ ಭಯಾವಹಂ ॥೪॥
ತತ ಸ್ತಂ ಗಿರಿಸಂಕಾಶ ಮತಿಕಾಯಂ ಮಹಾಬಲಂ ।

ವಿದ್ರುತಾಃ - ಓಡುತ್ತಿರುವವುಗಳಾಗಿ ವಿನೇದುಃ - ವಿಕಾರವಾಗಿ ದನಿಗೆಯ್ಯುತಲಿದ್ದುವು, ರಕ್ಷಸಾಂಚ - ರಕ್ಕಸರಿಂದಲೂ, ಕ್ರೂರಾಣಿ - ಭಯಂಕರಗಳಾದ, ನಿಮಿತ್ತಾನಿ - ಅಪಶಕುನಗಳು, ಪ್ರತಿಪೇದಿರೆ-ಹೊಂದಲ್ಪಟ್ಟುವು ॥೨॥ ತತಃ - ಆ ಮೇಲೆ, ನಿದ್ರಾಯಾಂ - ನಿದ್ದೆಯು, ಗತಾಯಾಂ (ಸತ್ಯಾಂ) ಕಳೆಯುತ್ತಿರಲಾಗಿ, ವಿಕೃತಾನನಾಃ - ವಿಕಾರವಾದ ಮುಖವುಳ್ಳ, ರಾಕ್ಷಸ್ಯಃ - ರಕ್ಕಸಿಯರು, ಭಗ್ನಂ - ಮುರಿಯಲ್ಪಟ್ಟ, ತತ್ - ಆ, ವನಂ - ಉದ್ಯಾನವನವನ್ನೂ, ವೀರಂ - ಶೂರನಾದ, ತಂ-ಆ, ಮಹಾಕಪಿಂ - ಆಂಜನೇಯನನ್ನೂ, ದದೃಶುಃ - ನೋಡುತ್ತಿದ್ದರು ॥೩॥ ಮಹಾಬಾಹುಃ - ಆ ಜಾನುಬಾಹುವಾದ, ಮಹಾಸತ್ವಃ - ಹೇರಳವಾದ ಅಂತಸ್ಸಾರವುಳ್ಳ, ಮಹಾಬಲಃ - ಪ್ರಬಲತರ ಪರಾಕ್ರಮವುಳ್ಳ, ಸಃ - ಆ ಆಂಜನೇಯನು, ತಾಃ - ಆ ವಿಕಾರದ ಮುಖಗಳುಳ್ಳ ರಕ್ಕಸಿಯರನ್ನು, ದೃಷ್ಟ್ವಾ - ನೋಡಿ, ರಾಕ್ಷಸೀನಾಂ - ನಿಶಾಚರಿಯರಿಗೆ, ಭಯಾವಹಂ - ಭಯಂಕರವೆನಿಸಿದ, ಸುಮಹತ್ - ಅತ್ಯುನ್ನತವಾದ, ರೂಪಂ - ಆಕಾರವನ್ನು, ಚಕಾರ - ಮಾಡಿದನು (ತಾಳ್ದನು) ॥೪॥ ತತಃ - ಆ ಮೇಲೆ, ರಾಕ್ಷಸ್ಯಃ - ರಾತ್ರಿಂಚರಿಯರು, ಗಿರಿಸಂಕಾಶಂ - ಬೆಟ್ಟದಂತೆ ತೋರವಾದ, ಅತಿಕಾಯಂ - ಮಿತಿಮೀರಿದ ಶರೀರ ಸ್ವರೂಪವುಳ್ಳ, ಮಹಾಬಲಂ - ಮಹಾಶಕ್ತಿಯುಳ್ಳವನೂ ಆಗಿರುವ, ವಾನರಂ - ಆಂಜನೇಯನನ್ನು, ದೃಷ್ಟ್ವಾ - ನೋಡಿ,

ಗಿಡಗಳೊಳಗೂ, ಬಳ್ಳಿಗಳ ಪೊದೆಗಳಲ್ಲಿಯೂ ಹದುಗಿದ್ದ ಮೃಗಗಳೂ, ಪಕ್ಷಿಗಳೂ, ಹನುಮನ ಹಾವಳಿಯನ್ನು ತಾಳಲಾರದೆ, ಭಯಪಟ್ಟು ವಿಕಾರವಾದ ಧ್ವನಿಗಳನ್ನು ಮಾಡತೊಡಗಿದುವು, ರಾಕ್ಷಸರಿಗೆಲ್ಲ ಮುಂದಿನ ಆಪದಗಳನ್ನು ಸೂಚಿಸುವ ದುರ್ನಿಮಿತ್ತಗಳು ಕಾಣ ಬರುತಲಿದ್ದುವು ॥೨॥ ಆಮೇಲೆ - ನಿದ್ದೆಯೊಳಗೆ ಬಿದ್ದಿದ್ದ ರಕ್ಕಸಿಯರು ಆವನದ ವಿಪರೀತ ವೃತ್ತಿಯಿಂದ ನಿದ್ದೆಯು ಕಳೆಯಲು, ವಿಕಾರವಾದ ಮೋರೆಗಳುಳ್ಳವರಾಗುತ್ತಾ, ಸುತ್ತಲೂ ಮುರಿದು ಹಾಳಾಗಿ ಹೋಗಿರುವ ತೋಟವನ್ನೂ, ಮಹಾಶೌರ್ಯದಿಂದಿರುವ ವೀರ ಮಾರುತಿಯನ್ನೂ ನೋಡಿದರು ॥೩॥ ಮಹಾಬಾಹು ಬಲಸಂಪನ್ನನೂ, ಬುದ್ಧಿ ಶಕ್ತಿ ಸಮನ್ವಿತನೂ ಆಗಿರುವ ಪವಮಾನ ನಂದನನು - ಆ ವನದೊಳಗೆ ಬೆಪ್ಪರದಿಂದ ಬಿರುಬಿರನೆ ಕಣ್ಣುಗಳನ್ನು ಬಿಟ್ಟು ನೋಡುತಲಿರುವ ರಕ್ಕಸಿಯರನ್ನು ಕಂಡು ಅವರಿಗೆ ಮತ್ತಿಷ್ಟು ಭಯವನ್ನುಂಟು ಮಾಡುವುದಕ್ಕಾಗಿ ಭಯಂಕರವೆನಿಸಿದ ಉನ್ನತವಾದ ಆಕಾರವನ್ನು ತಾಳ್ದು ಕಾಣಿಸಿಕೊಂಡನು ॥೪॥ ದೊಡ್ಡ ಬೆಟ್ಟದಂತೆ ಎತ್ತರವಾಗಿ ಬೆಳೆದು, ತೋರವಾದ ಮೈಯುಳ್ಳನ್ನಾಂತು, ಮಹಾಬಲದಿಂದೊಡಗೂಡಿ, ದೊಡ್ಡ ಭೂತದಂತೆ ಕಾಣಬರುವ ಮಾರುತಿಯನ್ನು ನೋಡಿದ ರಾಕ್ಷಸಿಯರು - ಭಯದಿಂದ ಗಡಗಡನೆ ನಡುಗುತ್ತಾ, ಸೀತೆಯ

ರಾಕ್ಷಸ್ಯೋ ವಾನರಂ ದೃಷ್ಟ್ವಾ ಪಪ್ರಚ್ಛುರ್ಜನಕಾತ್ಮಜಾಂ ॥೫॥
ಕೋಽಯಂ ಕಸ್ಯ ಕುತೋ ವಾಽಯಂ ಕಿನ್ನಿಮಿತ್ತ ಮಿಹಾಗತಃ ।
ಕಥಂ ತ್ವಯಾ ಸಹಾನೇನ ಸಂವಾದಃ ಕೃತ ಇತ್ಯುತ ॥೬॥
ಆಚಕ್ಷ್ವ ನೋ ವಿಶಾಲಾಕ್ಷಿ ಮಾಭೂತ್ತೇ ಸುಭಗೇ ಭಯಂ ।
ಸಂವಾದ ಮಸಿತಾಪಾಂಗೇ ತ್ವಯಾ ಕಿಂ ಕೃತವಾನಯಂ ॥೭॥
ಅಥಾಬ್ರವೀ ತ್ತದಾ ಸಾಧ್ವೀ ಸೀತಾ ಸರ್ವಾಂಗ ಸುಂದರೀ ।
ರಕ್ಷಸಾಂ ಭೀಮ ರೂಪಾಣಾಂ ವಿಜ್ಞಾನೇ ಮಮ ಕಾ ಗತಿಃ ॥೮॥
ಯೂಯ ಮೇವಾಭಿ ಜಾನೀತ ಯೋಽಯಂ ಯದ್ವಾ ಕರಿಷ್ಯತಿ ।

---

ಜನಕಾತ್ಮಜಾಂ - ಜಾನಕಿಯನ್ನು ಕುರಿತು, ಪಪ್ರಚ್ಛುಃ- ಪ್ರಶ್ನೆಮಾಡತೊಡಗಿದರು ॥೫॥ (ಹೇಸೀತೆ- ಎಲೌ ಜಾನಕಿ ! ) ಅಯಂ - ಈತನು, ಕಃ - ಯಾರು, ಅಯಂ - ಇವನು, ಕಸ್ಯವಾ - ಯಾರಕಡೆಯವನು, (ಅಯಂ - ಇವನು) ಕಸ್ಮಾತ್- ಯಾವ ಕಾರಣದಿಂದ, ಕಿಂನಿಮಿತ್ತಂ - ಏತಕ್ಕೋಸ್ಕರ, ಇಹ - ಇಲ್ಲಿಗೆ ಆಗತಃ - ಬಂದವನಾಗಿದಾನೆ, ತ್ವಯಾಸಹ - ನಿನ್ನೊಡನೆ, ಅನೇನ - ಇವನಿಂದ, ಸಂವಾದಃ ಉತ- ಸಂಭಾಷಣೆಯಾದರೂ, ಕಥಂ - ಹೇಗೆ, ಕೃತಃ - ಮಾಡಲ್ಪಟ್ಟಿತು ॥೬॥ ಹೇ ವಿಶಾಲಾಕ್ಷಿ - ಎಲೌ ವಿಶಾಲನಯನೆಯಾದಸೀತೆಯೆ ! ಸುಭಗೆ - ಎಲೌ ಸುಂದರಿ ! ಅಸಿತಾಪಾಂಗೆ - ಕಪ್ಪನೆಯ ಕುಡಿಗಣ್ಣುಳ್ಳವಳೇ ! (ಅಯಂ - ಇವನು) ತ್ವಯಾ - ನಿನ್ನೊಡನೆ, ಕಿಂ - ಯಾವ ವಿಷಯವನ್ನು ಕುರಿತು, ಸಂವಾದಂ - ಸಲ್ಲಾಪವನ್ನು, ಕೃತವಾನ್ - ಮಾಡಿದನು, ನಃ - ನಮಗೆ, ಆಚಕ್ಷ್ವ - ಹೇಳು, ತೆ - ನಿನಗೆ, ಭಯಂ - ಅಂಜಿಕೆಯು, ಮಾಭೂತ್ - ಉಂಟಾಗಬೇಡ ॥೭॥ ಅಥ- ಹಾಗೆ ಅವರು ಕೇಳಿದಮೇಲೆ, ಸರ್ವಾಂಗಸುಂದರೀ- ಸರ್ವಾವಯವ ಸೌಂದರ್ಯವುಳ್ಳ, ಸಾಧ್ವೀ - ಪತಿವ್ರತೆಯೆನಿಸಿದ, ಸೀತಾ - ಜಾನಕಿಯು, ತದಾ - ಆಗ, ಭೀಮರೂಪಾಣಾಂ - ಭಯಂಕರವಾದ ಆಕಾರವುಳ್ಳ, ರಕ್ಷಸಾಂ - ರಕ್ಕಸರನ್ನು, ವಿಜ್ಞಾನೆ - ತಿಳಿಯುವ ವಿಷಯದಲ್ಲಿ, ಮಮ - ನನಗೆ, ಗತಿಃ - ಶಕ್ತಿಯು, ಕಾ - ಎಲ್ಲಿಯದು ॥೮॥ ಅಯಂ - ಇವನು, ಯಃ - ಯಾವನೋ, ಯತ್ - ಯಾವ ಕೆಲಸವನ್ನು, ಕರಿಷ್ಯತಿವಾ - ಮಾಡುವನೋ (ತಂ - ಅವನನ್ನೂ) ತತ್ -

---

ಬಳಿಗೆ ಓಡಿಬಂದು ಇಂತೆಂದರು ॥೫॥ ವಿಶಾಲನಯನೆ ಯಾದ ಓಸೀತೆ ! ಅದ್ಭುತಾಕಾರದಿಂದ ಕಾಣಬರುವವ ನಿವನಾರು ? ಯಾರಕಡೆಯವನು ? ಮತ್ತು - ಯಾವಪ್ರಯೋಜನವನ್ನು ಕುರಿತು ಇಲ್ಲಿಗೆಬಂದಿದಾನೆ? ಇಂಥವನೊಡನೆ ನೀನು ಸಂಭಾಷಿಸಲು ಕಾರಣವೇನು? ಎಲೆಸುಂದರಿ ! ನಮಗೆ ಈ ಸಂಗತಿಯನ್ನು ಮಾಚದೆತಿಳಿಸು. ಹಾಗೆ ತಿಳಿಸಿದರೆ ನನಗೇನು ತೊಂದರೆ ಬರುವುದೋ ಎಂದು ನೀನು ಭಯಪಡಬೇಕಾದ ನಿಮಿತ್ತವಿಲ್ಲ. ಇದಲ್ಲದೆ, ನಿನ್ನಸಂಗಡ ಇವನು ಮಾತನಾಡಿದನಷ್ಟೆ ? ಯಾವವಿಷಯವನ್ನು ನಿನ್ನೊಡನೆ ಹೇಳಿದನು ? ಅದನ್ನೂ ತಿಳಿಸು ॥೬॥ ॥೭॥ ಎಂದ ನಿಶಾಚರಿಯರ ಮಾತನ್ನು ಕೇಳಿ, ಸರ್ವಾಂಗ ಸುಂದರಿಯಾಗಿ, ಪತಿವ್ರತಾ ಶಿರೋಮಣಿಯೆನಿಸಿರುವ ಜಾನಕಿಯು- ಎಲೌ ರಾಕ್ಷಸಸ್ತ್ರೀಯರುಗಳಿರಾ ! ನಿಶಾಚರರು ಸ್ವಭಾವದಿಂದಲೇ ಘೋರತರವಾದ ಆಕಾರವನ್ನು ಪಡೆದವರು, ಮಹಾ ಮಾಯಾವಿಗಳಾದ ಅವರಗುಟ್ಟನ್ನು ತಿಳಿಯಲು ನನಗೆಶಕ್ತಿಯಿಲ್ಲ.॥೮॥ ಇವನಾರೋ, ಯಾರಕಡೆಯವನೋ, ಯಾವನಿಮಿತ್ತದಿಂದ ಇಲ್ಲಿಗೆ ಬಂದನೋ, ಏನನ್ನು ಮಾಡುವನೋ,

ಅಹಿರೇವ ಹ್ಯಹೇಃ ಪಾದಾ ನ್ವಿಜಾನಾತಿ ನ ಸಂಶಯಃ ॥೯॥
ಅಹ ಮಪ್ಯಸ್ಯ ಭೀತಾಽಸ್ಮಿ ನೈನಂ ಜಾನಾಮಿ ಕೋ ನ್ವಯಂ ।
ವೇದ್ಮಿ ರಾಕ್ಷಸ ಮೇವೈನಂ ಕಾಮರೂಪಿಣ ಮಾಗತಂ ॥೧೦॥
ವೈದೇಹ್ಯಾ ವಚನಂ ಶ್ರುತ್ವಾ ರಾಕ್ಷಸ್ಯೋ ವಿದ್ರುತಾ ದಿಶಃ ।
ಸ್ಥಿತಾಃ ಕಾಶ್ಚಿ ದ್ಗತಾಃ ಕಾಶ್ಚಿ ದ್ರಾವಣಾಯ ನಿವೇದಿತುಂ ॥೧೧॥
ರಾವಣಸ್ಯ ಸಮೀಪೇ ತು ರಾಕ್ಷಸ್ಯೋ ವಿಕೃತಾನನಾಃ ।
ವಿರೂಪಂ ವಾನರಂ ಭೀಮ ಮಾಖ್ಯಾತು ಮುಪಚಕ್ರಮುಃ ॥೧೨॥

---

ಆ ಕೆಲಸವನ್ನೂ, ಯೂಯಮೇವ - ನೀವೇ, ಅಭಿಜಾನೀತ - ತಿಳಿಯಬಲ್ಲಿರಿ, ಅಹಿರೇವ - ಸರ್ಪವೇ, ಅ ಹೇಃ - ಸರ್ಪದ, ಪಾದಾನ್ - ಕಾಲುಗಳನ್ನು, ಜಾನಾತಿ - ತಿಳಿಯಬಲ್ಲುದು, ನಸಂಶಯಃ - ಸಂದೇಹವಿಲ್ಲ. ಅಹಮಪಿ - ನಾನೂ, ಅಸ್ಯ - ಇವನಿಗೆ, ಭೀತಾ - ಭಯಪಟ್ಟವಳು, ಅಸ್ಮಿ - ಆಗಿದೇನೆ, ಅಯಂ - ಇವ ನು, ಕೋನು - ಯಾವನೋ, ಏನಂ - ಇವನನ್ನು, ನಜಾನಾಮಿ - ಅರಿಯೆನು, ಏನಂ - ಇವನನ್ನು, ಕಾ ಮರೂಪಿಣಂ ಆಗತಂ - ಮನಬಂದ ರೂಪವನ್ನು ತಾಳಿ ಬಂದು ಇರತಕ್ಕ, ರಾಕ್ಷಸಮೇವ - ರಾವಣನ ನ್ನಾಗಿಯೇ, ವೇದ್ಮಿ - ತಿಳಿಯುತಲಿದೇನೆ ॥೯॥ ॥೧೦॥

ವೈದೇಹ್ಯಾಃ - ಜಾನಕಿಯ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ರಾಕ್ಷಸ್ಯಃ - ರಕ್ಕಸಿಯ ರು, ಕಾಶ್ಚಿತ್ - ಕೆಲವರು, ದಿಶಃ - ದಿಕ್ಕುಗಳನ್ನು ಕುರಿತು, ವಿದ್ರುತಾಃ - ಓಡಿಹೋದರು. ಕಾಶ್ಚಿತ್- ಮತ್ತೆ ಕೆಲವರು, ಸ್ಥಿತಾಃ - ಅಲ್ಲಿಯೇ ನಿಂತರು, ಕಾಶ್ಚಿತ್ - ಇನ್ನು ಕೆಲವರು, ರಾವಣಾಯ - ರಾವಣ ನಿಗೆ, ನಿವೇದಿತುಂ - ಆ ಸಂಗತಿಯನ್ನು ತಿಳಿಸಲಿಕ್ಕೆ, ಗತಾಃ - ಹೊರಟುಹೋದರು. ॥೧೧॥

ವಿಕೃತಾನನಾಃ - ವಿಕಾರವಾದ ಮುಖಗಳುಳ್ಳ, ರಾಕ್ಷಸ್ಯಃ-ರಾಕ್ಷಸಿಯರು, ರಾವಣಸ್ಯ - ರಾವಣನ, ಸಮೀಪೇತು - ಹತ್ತಿರದಲ್ಲಿ ಯಾದರೋ, ವಿರೂಪಂ - ವಿಶ್ವರೂಪಧಾರಿಯಾಗಿಯೂ, ಭೀಮಂ - ಮಹಾ ಭಯಂಕರನಾಗಿಯೂ ಇರುವ, ವಾನರಂ - ಕಪಿಯ ವಿಷಯವನ್ನು, ಆಖ್ಯಾತುಂ - ಹೇಳ ಲಿಕ್ಕೆ, ಉಪಚಕ್ರಮುಃ - ಪ್ರಾರಂಭಿಸಿದರು ॥೧೨॥ ರಾಜನ್ - ಎಲೈಪ್ರಭುವೇ ! ಅಮಿತವಿಕ್ರಮಃ -

---

ಅವನತತ್ವವನ್ನು ತಿಳಿಯಲು ನೀವೇ ಸಮರ್ಥರು, ಏಕೆಂದರೆ - ಹಾವಿನ ಕಾಲುಗಳನ್ನು ಹಾವೇಬಲ್ಲುದಲ್ಲದೆ ಹೆರರು ಅರಿಯಬಲ್ಲರೆ ? ಎಂದಿಗೂ ಅರಿಯರು, ಈ ವಿಷಯದಲ್ಲಿ ಸಂಶ ಯವೇ ಇಲ್ಲ. ನಾನೂ ಇವನನ್ನು ಕಂಡು ಹೆದರಿಇದೇನೆ, ಇವನಾರೋ ನನಗೆ ಗೊತ್ತಿ ಲ್ಲ. ಮಹಾ ಮಾಯಾವಿಗಳೊಳಗೆ ಅಗ್ರಗಣ್ಯನೆನಿಸಿ, ಮನಬಂದ ರೂಪವನ್ನು ತಾಳತಕ್ಕವ ನಾಗಿರುವ ರಾವಣನೇ ಈ ರೂಪವನ್ನೂತಾಳಿ ಇಲ್ಲಿಗೆ ಬಂದಿರುವನೆಂದು ಭಾವಿಸುತ್ತೇನೆ ॥೯॥॥೧೦॥ ಎನಲು,ಆ ಜಾನಕಿಯ ಮಾತನ್ನು ಕೇಳಿದಕೂಡಲೇ ಕೆಲವುಮಂದಿ ರಕ್ಕಸಿಯ ರು ಅಲ್ಲಿ ನಿಲ್ಲಲಾರದೆ ದಿಕ್ಕಾಪಾಲಾಗಿ ಓಡಿಹೋದರು, ಮತ್ತೆ ಕೆಲವುಮಂದಿ ಅಲ್ಲಿಯೇ ಅವಿ ತುಕೊಂಡರು, ಇನ್ನು ಕೆಲವುಮಂದಿ ಹೆಂಗಸರು ಅಂಜಿ, ಆ ಸುದ್ದಿಯನ್ನು ರಾವಣನಿಗೆ ತಿ ಳಿಸಬೇಕೆಂದು ಹೊರಟು ಹೋದರು ॥೧೧॥ ಆ ರೀತಿಯಾಗಿ ಓಡಿಬಂದವರೊಳಗೆ ಕೆಲವ ರು ಭಯದಿಂದ ವಿಕಾರವಾದ ಮುಖವುಳ್ಳವರಾಗಿ ರಾವಣನಸಮೀಪದಲ್ಲಿ ಬಂದು ನಿಂತು, ಭ ಯಂಕರಾಕಾರದಿಂದ ವಿಶ್ವರೂಪಧರನಾದ ವಾನರನ ವಿಷಯವನ್ನು ರಾಕ್ಷಸಚಕ್ರವರ್ತಿಗೆ

ಅಶೋಕ ವನಿಕಾ ಮಧ್ಯೇ ರಾಜ ನ್ಭೀಮವಪುಃ ಕಪಿಃ ।
ಸೀತಯಾ ಕೃತಸಂವಾದ ಸ್ತಿಷ್ಠ ತ್ಯಮಿತ ವಿಕ್ರಮಃ ॥೧೩॥
ನ ಚ ತಂ ಜಾನಕೀ ಸೀತಾ ಹರಿಂ ಹರಿಣಲೋಚನಾ ।
ಅಸ್ಮಾಭಿ ರ್ಬಹುಧಾ ಪೃಷ್ಟಾ ನಿವೇದಯಿತು ಮಿಚ್ಛತಿ ॥೧೪॥
ವಾಸವಸ್ಯ ಭವೇ ದ್ದೂತೋ ದೂತೋ ವೈಶ್ರವಣಸ್ಯ ವಾ ।
ಪ್ರೇಷಿತೋ ವಾಽಪಿ ರಾಮೇಣ ಸೀತಾಽನ್ವೇಷಣ ಕಾಂಕ್ಷಯಾ ॥೧೫॥
ತೇನ ತ್ವದ್ಭುತ ರೂಪೇಣ ಯತ್ತ ತ್ತವ ಮನೋಹರಂ।
ನಾನಾ ಮೃಗ ಗಣಾಕೀರ್ಣಂ ಪ್ರಮೃಷ್ಟಂ ಪ್ರಮದಾವನಂ ॥೧೬॥

---

ಅಮಿತವಿಕ್ರಮಃ - ಅಪಾರವಾದ ಪರಾಕ್ರಮವುಳ್ಳ, ಭೀಮವಪುಃ - ಭಯಂಕರವಾದ ಶರೀರವುಳ್ಳ, ಕಪಿಃ - ಒಬ್ಬಾನೊಬ್ಬ ವಾನರನು, ಅಶೋಕವನಿಕಾಮಧ್ಯೆ - ಅಶೋಕವನದ ನಡುವೆ, ಸೀತಯಾ- ಜಾನಕಿಯೊಡನೆ, ಕೃತಸಂವಾದಃ - ಸಂಭಾಷಣೆಯನ್ನು ಮಾಡುತ್ತಿರುವವನಾಗಿ, ತಿಷ್ಠತಿ - ಇದಾನೆ, ॥೧೩॥ ಹರಿಣಲೋಚನಾ- ಹುಲ್ಲೆಯ ಕಣ್ಣಿನಂತೆ ಕಣ್ಣುಗಳುಳ್ಳ, ಜಾನಕೀ-ಜನಕಪುತ್ರಿಯಾದ, ಸೀತಾ - ಸೀತೆಯು, ಅಸ್ಮಾಭಿಃ ನಮ್ಮಗಳಿಂದ, ಬಹುಧಾ - ಅನೇಕ ಪ್ರಕಾರವಾಗಿ, ಪೃಷ್ಟಾ - ಕೇಳಲ್ಪಟ್ಟವಳಾದರೂ, ತಂ - ಆ, ಹರಿಂ- ಕಪಿಯನ್ನು, ನಿವೇದಿಯಿತುಂ - ತಿಳಿಸಲಿಕ್ಕೆ, ನೇಚ್ಛತಿ - ಒಪ್ಪುವುದಿಲ್ಲ, ॥೧೪॥ ಸಃ - ಆ ವಾನರನು, ವಾಸವಸ್ಯ - ಇಂದ್ರನ, ದೂತೋವಾ - ಊಳಿಗದವನೋ, ವೈಶ್ರವಣಸ್ಯ - ಕುಬೇರನ, ದೂತೋವಾ - ದಾಸನೋ, ರಾಮೇಣ - ರಾಮನಿಂದ, ಸೀತಾನ್ವೇಷಣಕಾಂಕ್ಷಯಾ - ಜಾನಕಿಯನ್ನು ಹುಡುಕುವ ಆಶೆಯಿಂದ, ಪ್ರೇಷಿತಃ - ಕಳುಹಿಸಲ್ಪಟ್ಟ, ದೂತೋವಾ - ಸೇವಕನೋ, ಭವೇತ್ - ಆಗಿ ಇರಬೇಕು ॥೧೫॥ ಅದ್ಭುತರೂಪೇಣ - ಆಶ್ಚರ್ಯಕರವಾದ ಆಕಾರವುಳ್ಳ, ತೇನ-ಆ ವಾನರನಿಂದ, ನಾನಾಮೃಗಗಣಾಕೀರ್ಣಂ- ಬಗೆಬಗೆಯ ಜಂತುಗಳ ಹಿಂಡಿನಿಂದ ತುಂಬಿರುವ, ಮನೋಹರಂ - ರಮಣೀಯವೆನಿಸಿದ, ಯತ್ - ಯಾವ, ತೆ - ನಿನ್ನ, ಪ್ರಮದಾವನಂ - ಕ್ರೀಡೋದ್ಯಾನವುಂಟೋ, ತತ್- ಆ ವನವಾದರೆ, ಪ್ರಮೃಷ್ಟಂ- ತೊಡೆಯಲ್ಪಟ್ಟಿತು ॥೧೬॥ ತೇನ - ಆ ವಾನರನಿಂದ, ತತ್ರ-ಆ ಉಪವನದಲ್ಲಿ, ಯಃಕಶ್ಚಿತ್ - ಯಾವುದೊಂದು,

---

ಬಿನ್ನವಿಸ ತೊಡಗಿದರು ॥೧೨॥ ಎಲೈ ಮಹಾಪ್ರಭುವೇ ! ಯಾವನೋ ಒಬ್ಬ ವಾನರನು ಅದ್ಭುತಾಕಾರವನ್ನು ತಾಳ್ದು, ಮಹಾಪರಾಕ್ರಮವನ್ನು ತೋರುತ್ತಾ ಬಂದು, ಅಶೋಕವನಮಧ್ಯದಲ್ಲಿ ಜಾನಕಿಯೊಡನೆ ಮಾತನಾಡುತಲಿದಾನೆ ॥೧೩॥ ಇವನಾರು ? ಏತಕ್ಕೆ ಬಂದಿದಾನೆ? ಯಾರಕಡೆಯವನು ? ಎಂದು ಹರಿಣಾಕ್ಷಿಯಾದ ಸೀತೆಯನ್ನು ಕುರಿತು ನಾವು ಬಹುವಿಧದಿಂದ ಕೇಳದೆವು, ಎಷ್ಟುಬಗೆಯಾಗಿ ಪ್ರಶ್ನೆಮಾಡಿದರೂ ಆಕೆ ತಿಳಿಸಲಿಕ್ಕೆ ಇಷ್ಟಪಡುವುದಿಲ್ಲ ॥ ೧೪ ॥ ಆ ವಾನರನು- ದೇವೇಂದ್ರನ ದೂತನಾಗಿ ಬಂದಿರುವನೋ, ಇಲ್ಲದೆ ಕುಬೇರನ ಭೃತ್ಯನೋ, ಅಥವಾ ರಾಮನು ತನ್ನ ಹೆಂಡಿರನ್ನು ಹುಡಿಕಿಸಬೇಕೆಂಬ ಕೋರಿಕೆಯಿಂದ ಈ ಕಪಿರೂಪದ ಊಳಿಗದವನನ್ನೇನಾದರೂ ಕಳುಹಿಸಿ ಇರುವನೋ ತಿಳಿಯದಾಗಿದೆ, ॥ ೧೫ ॥ ಆ ಕಪಿಯು ಸಾಧಾರಣವಾದುದಲ್ಲ, ಅತ್ಯದ್ಭುತರೂಪವನ್ನಾಂತಿರುವುದು, ಅಯ್ಯೋ ! ನಾವು ಏನಹೇಳೋಣ, ನಾನಾವಿಧವಾದ ಮೃಗಗಳಿಂದೊಡಗೂಡಿ, ಮನೋಹರವಾದ ತರುಗಳಿಂದಲೂ,ರಮ್ಯವಾದ ಲತೆಗಳಿಂದಲೂ, ರಮಣೀಯವಾದ ಪುಷ್ಪ

ನ ತತ್ರ ಕಶ್ಚಿ ದುದ್ದೇಶೋ ಯಸ್ತೇನ ನ ವಿನಾಶಿತಃ ।
ಯತ್ರ ಸಾ ಜಾನಕೀ ಸೀತಾ ಸ ತೇನ ನ ವಿನಾಶಿತಃ ॥೧೩॥
ಜಾನಕೀ ರಕ್ಷಣಾರ್ಥಂ ವಾ ಶ್ರಮಾದ್ವಾ ನೋಪಲಭ್ಯತೇ ।
ಅಥವಾ ಕಶ್ಶ್ರಮ ಸ್ತಸ್ಯ ಸ್ಸೈವ ತೇನಾಭಿ ರಕ್ಷಿತಾ ॥೧೪॥
ಚಾರು ಪಲ್ಲವ ಪುಷ್ಪಾಢ್ಯಂ ಯಂ ಸೀತಾ ಸ್ವಯ ಮಾಸ್ಥಿತಾ ।
ಪ್ರವೃದ್ಧ ಶ್ಶಿಂಶುಪಾವೃಕ್ಷ ಸ್ಸ ಚ ತೇನಾಭಿರಕ್ಷಿತಃ ॥೧೫॥
ತಸ್ಯೋಗ್ರ ರೂಪಸ್ಯೋಗ್ರತ್ವಂ ದಂಡ ಮಾಜ್ಞಾತು ಮರ್ಹಸಿ ।

ಉದ್ದೇಶಃ - ಪ್ರದೇಶವೂ, ನವಿನಾಶಿತಃ (ಇತಿ) ನ -ಹಾಳುಮಾಡಲ್ಪಡದೆ ಇರುವುದು ಇಲ್ಲ, ಸಾ - ಆ ಜಾನಕಿಯು, ಯತ್ರ - ಯಾವ ಸ್ಥಲದಲ್ಲಿ (ಅಸ್ತಿ - ಇದ್ದಾಳೆಯೋ) ಸಃ - ಆ ಪ್ರದೇಶವು ಮಾತ್ರವೇ, ತೇನ - ಅವನಿಂದ, ನವಿನಾಶಿತಃ - ಹಾಳುಮಾಡಲ್ಪಟ್ಟಿಲ್ಲ ॥ ೧೩ ॥ ಜಾನಕೀ ರಕ್ಷಣಾರ್ಥಂವಾ-ಸೀತೆಯನ್ನು ರಕ್ಷಿಸಲಿಕ್ಕೋಸ್ಕರವೋ, ಶ್ರಮಾದ್ವಾ - ಆಯಾಸದ ದೆಸೆಯಿಂದಲೋ, ನವಿನಾಶಿತಃ - ಹಾಳುಮಾಡಲ್ಪಟ್ಟಿಲ್ಲವು (ಕಾರಣಂ - ನಿಮಿತ್ತವು) ನೋಪಲಭ್ಯತೆ - ತಿಳಿದು ಬರುವುದಿಲ್ಲ, ಅಥವಾ - ಹಾಗಿಲ್ಲದಿದ್ದರೆ, ತಸ್ಯ- ಆ ವಾನರನಿಗೆ, ಶ್ರಮಃ - ಆಯಾಸವು, ಕಃ - ಎಲ್ಲಿಯದು ? ತೇನ - ಆ ವಾನರನಿಂದ, ಸೈವ - ಆ ಜಾನಕಿಯು ಮಾತ್ರವೇ, ಅಭಿರಕ್ಷಿತಾ - ಸಂರಕ್ಷಿಸಲ್ಪಟ್ಟಿದ್ದಾಳೆ, ॥೧೪॥ ಸೀತಾ - ಜಾನಕಿಯು, ಚಾರುಪಲ್ಲವಪುಷ್ಪಾಢ್ಯಂ - ಅಂದವಾದ ತಳಿರುಗಳಿಂದಲೂ ಹೂಗಳಿಂದಲೂ ಒಡಗೂಡಿರುವ, ಯಂ - ಯಾವ ವೃಕ್ಷವನ್ನು, ಸ್ವಯಂ - ತಾನು, ಆಸ್ಥಿತಾ - ಆಶ್ರಯಿಸಿರುವಳೋ, ಸಃ - ಅಂತಹ, ಪ್ರವೃದ್ಧಃ - ಕೋಮಲವಾಗಿ ಬೆಳೆದಿರುವ, ಶಿಂಶುಪಾವೃಕ್ಷಶ್ಚ - ಶಿಂಶುಪಾವೃಕ್ಷವೂ, ತೇನ - ಆ ವಾನರನಿಂದ, ಅಭಿರಕ್ಷಿತಃ - ಸಂರಕ್ಷಿಸಲ್ಪಟ್ಟಿದೆ ॥ ೧೫ ॥ ಯೇನ - ಯಾವ ವಾನರನಿಂದ, ಸೀತಾ - ಜಾನಕಿಯು, ಸಂಭಾಷಿತಾ-ಮಾತನಾಡಿಸಲ್ಪಟ್ಟಳೋ, (ಯೇನ-ಯಾವ ವಾನರನಿಂದ) ತದ್ವನಂಚ- ಆ ವನವೂ, ವಿನಾಶಿತಂ-ಸಂಪೂರ್ಣವಾಗಿ

ಫಲಗಳಿಂದಲೂ, ಬಲು ಅಂದವಾದ ಸರೋವರಗಳಿಂದಲೂ ದಿವ್ಯವೆನಿಸಿ ನಿನಗೆ ಅತ್ಯಂತ ಪ್ರೀತಿ ಪಾತ್ರವೆನಿಸಿದ್ದ ಅಶೋಕವನವನ್ನು ನೆಲಸಮಮಾಡಿದಾನೆ ॥ ೧೬ ॥ ಆ ದಿವ್ಯ ವನದೊಳಗೆ ಆ ಕಪಿಯು ಹಾಳುಮಾಡದಿರುವ ಸ್ಥಳವು ಸ್ವಲ್ಪವಾದರೂ ಇಲ್ಲ, ಆದರೆ- ಜನಕನಂದಿನಿಯಾದ ಸೀತೆಯು ಯಾವ ಪ್ರದೇಶದಲ್ಲಿ ಕುಳಿತಿದ್ದಳೋ ಆ ಸ್ಥಳವನ್ನು ಮಾತ್ರ ನಾಶಗೊಳಿಸಲಿಲ್ಲ ॥ ೧೩ ॥ ಸೀತೆಗೆ ತೊಂದರೆಯುನ್ನುಂಟು ಮಾಡಬಾರದೆಂಬ ಸಂಕಲ್ಪದಿಂದ ಹಾಗೆ ಮಾಡಿದನೋ, ಅಥವಾ ವನವನ್ನೆಲ್ಲ ಹಾಳುಮಾಡಿದ ಶ್ರಮದಿಂದ ಬಿಟ್ಟುಬಿಟ್ಟನೋ ತಿಳಿಯದು, ಆದರೆ - ಆಯಾಸದಿಂದ ಸೀತೆಯುವಾಸಸ್ಥಳವನ್ನು ಬಿಟ್ಟನೆಂದು ಹೇಳಲಾಗುವುದಿಲ್ಲ, ಅಷ್ಟುವಿಸ್ತಾರವಾದ ಉದ್ಯಾನವನ್ನೆಲ್ಲ ಬುಡಮುಟ್ಟ ಹಾಳುಮಾಡಿದವನಿಗೆ ಬಳಲಿಕೆಯೇನು ? ಎಂತೂ ಆ ಸ್ಥಲವನ್ನು ಮಾತ್ರ ರಕ್ಷಿಸಿ ಇದಾನೆ ॥೧೪॥ ರಮ್ಯವೆನಿಸಿದ ಪಲ್ಲವ ಪುಷ್ಪಫಲಗಳಿಂದ ಅಲಂಕೃತವಾಗಿ ಬೆಳಗುತಲಿರುವ ಕೋಮಲವಾಗಿ ಬೆಳೆದಿದ್ದ ಶಿಂಶುಪಾವೃಕ್ಷದ ಬುಡದಲ್ಲಿ ಸೀತೆಯು ಸುಖವಾಗಿ ಕುಳಿತು ಇದಾಳೆ, ಆ ಮರವೊಂದು, ಆಕೆಯೊಬ್ಬಳು, ಆ ಸಲವೊಂದು, ಇಷ್ಟುಮಾತ್ರ ಸುರಕ್ಷಿತವಾಗಿರುವುದಲ್ಲದೆ ಮತ್ತಾವುದೂ ಹಾಳಾಗದೆ ಇಲ್ಲ ॥೧೫॥ ಸೀತೆಯೊಡನೆ ಸಂಭಾಷಿಸಿ, ವನವನ್ನು ಹಾಳುಮಾಡಿ

ಸೀತಾ ಸಂಭಾಷಿತಾ ಯೇನ ತದ್ವನಂ ಚ ವಿನಾಶಿತಂ ॥ ೨೦॥
ಮನಃ ಪರಿಗೃಹೀತಾಂ ತಾಂ ತವ ರಕ್ಷೋಗಣೇಶ್ವರ ।
ಕಃ ಸೀತಾ ಮಭಿಭಾಷೇತ ಯೋ ನಸ್ಯಾ ತ್ತ್ಯಕ್ತ ಜೀವಿತಃ ॥ ೨೧॥
ರಾಕ್ಷಸೀನಾಂ ವಚಃ ಶ್ರುತ್ವಾ ರಾವಣೋ ರಾಕ್ಷಸೇಶ್ವರಃ ।
ಹುತಾಗ್ನಿ ರಿವ ಜಜ್ವಾಲ ಕೋಪ ಸಂವರ್ತಿ ತೇಕ್ಷಣಃ ॥ ೨೨॥
ತಸ್ಯ ಕ್ರುದ್ಧಸ್ಯ ನೇತ್ರಾಭ್ಯಾಂ ಪ್ರಾಪತ ನ್ನಸ್ರ ಬಿಂದವಃ ।
ದೀಪ್ತಾಭ್ಯಾ ಮಿವ ದೀಪಾಭ್ಯಾಂ ಸಾರ್ಚಿಷ ಸ್ಸ್ನೇಹ ಬಿಂದವಃ ॥ ೨೩॥

---

ನಾಶಗೊಳಿಸಲ್ಪಟ್ಟಿತೋ, ಉಗ್ರರೂಪಸ್ಯ - ರೌದ್ರಾಕಾರವುಳ್ಳ, ತಸ್ಯ - ಆ ವಾನರನ,ಉಗ್ರತ್ವಂ- ಕ್ರೂರತನವನ್ನು ಕುರಿತು, ದಂಡಂ - ಶಿಕ್ಷೆಯನ್ನು, ಆಜ್ಞಾತುಂ - ಆಜ್ಞಾಪಿಸಲಿಕ್ಕೆ (ಆಜ್ಞಾಪಯಿತುಂ) ಅರ್ಹಸಿ - ಯೋಗ್ಯನಾಗಿದ್ದೀಯೆ ॥೨೦॥

ರಕ್ಷೋಗಣೇಶ್ವರ - ಎಲೈ ರಾಕ್ಷಸ ಸಾರ್ವಭೌಮನೇ!, ತವ - ನಿನ್ನ, ಮನಃಪರಿಗೃಹೀತಾಂ - ಮನಃಪೂರ್ವಕವಾಗಿ ಪರಿಗ್ರಹಿಸಿರುವ, ತಾಂ - ಆ, ಸೀತಾಂ - ಜಾನಕಿಯನ್ನು, ಯಃ - ಯಾವನು, ತ್ಯಕ್ತ ಜೀವಿತಃ - ಜೀವಿತವನ್ನು ತೊರೆದು ಕೊಳ್ಳಲಾಶಿಸುವವನು, ನಸ್ಯಾತ್ - ಆಗಿರುವುದಿಲ್ಲವೋ, ಸಃ - ಅಂಥವನು, ಅಭಿಭಾಷೇತ - ಮಾತನಾಡಬೇಕು, ॥೨೧॥ ರಾಕ್ಷಸೇಶ್ವರಃ - ರಾಕ್ಷಸರಾಜನಾದ, ರಾವಣಃ ರಾವಣಾಸುರನು, ರಾಕ್ಷಸೀನಾಂ - ರಕ್ಕಸಿಯರ, ವಚಃ - ಮಾತನ್ನು, ಶ್ರುತ್ವಾ ಕೇಳಿ, ಕೋಪಸಂವರ್ತಿತೇಕ್ಷಣಃ - ಸಿಟ್ಟಿನಿಂದ ತಿರುಗುತಲಿರುವ ದೃಷ್ಟಿಯುಳ್ಳವನಾಗಿ, ಹುತಾಗ್ನಿರಿವ - ಜ್ವಲಿಸುತ್ತಲಿರುವ ಅಗ್ನಿಯಂತೆ, ಜಜ್ವಾಲ - ಉರಿದನು (ಕ್ರುದ್ಧನಾಗಿ ರೋಷಗೊಂಡನು) ॥೨೨॥ ಕ್ರುದ್ಧಸ್ಯ -ಕೋಪಗೊಂಡಿರುವ, ತಸ್ಯ- ಆ ರಾವಣನ, ನೇತ್ರಾಭ್ಯಾಂ - ಕಣ್ಣುಗಳಿಂದ, ದೀಪ್ತಾಭ್ಯಾಂ-ಉರಿಯುತ್ತಲಿರುವ, ದೀಪಾಭ್ಯಾಂ - ದೀಪಗಳಿಂದ, ಸಾರ್ಚಿಷಃ - ಜ್ವಾಲೆಯಿಂದೊಡಗೂಡಿದ, ಸ್ನೇಹಬಿಂದವಃ - ಎಣ್ಣೆಯ ತೊಟ್ಟುಗಳಹಾಗೆ, ಅಸ್ರಬಿಂದವಃ - ರಕ್ತದ ತೊಟ್ಟುಗಳು, ಪ್ರಾಪತನ್ - ಉದುರಿದವು ॥ ೨೩ ॥ ಮಹಾತೇಜಾಃ -

---

ಕ್ರೂರಾಕಾರವನ್ನು ತಾಳಿರುವ ಆ ದುಷ್ಟಕಪಿಯು ದುಷ್ಕೃತ್ಯವನ್ನು ಅಡಗಿಸುವಂತೆ ಆಜ್ಞಾಪಿಸಬೇಕು ॥ ೨೦ ॥

ಎಲೈ ದೇವನೇ ! ಸಾರ್ವಭೌಮನಾದ ನೀನು ಮನಃಪೂರ್ವಕವಾಗಿ ಪ್ರೀತಿಸಿ ತಂದಿಟ್ಟಿರುವ ಸೀತೆಯೊಡನೆ ಪ್ರಾಣಗಳ ಮೇಲೆ ಆಶೆಯುಳ್ಳವನಾವನಾದರೂ ಮಾತನಾಡಲು ಶಕ್ಯನೆ ? ಅಂಥವಳೊಡನೆ ಮಾತನಾಡಿದನಲ್ಲ ? ಅಂಥವನನ್ನು ಶಿಕ್ಷಿಸದೆ ಇರುವುದು ತರವೆ ? ಆ ದುಷ್ಟಕಪಿಯನ್ನು ಬೇಗನೆ ದಂಡಿಸುವಂತೆ ಅಪ್ಪಣೆಯಾಗಬೇಕುದೊರೆಯೇ ಎಂದು ಎಲ್ಲರೂ ಮೊರೆಯಿಟ್ಟರು ॥ ೨೧ ॥ ರಾಕ್ಷಸ ರಾಜನಾದ ರಾವಣನು- ಆ ರಕ್ಕಸಿಯರ ನುಡಿಗಳನ್ನು ಕೇಳಿದನು, ಅಪಾರವಾದ ರೋಷವು ತಲೆಗೇರಿತು, ಕಣ್ಣುಗಳು ಕೆಂಡದಂತೆ ಕೆಂಪಡರಿ ತಾರಕೆಗಳು ತಿರುಗಲಾರಂಭಿಸಿದುವು, ಕಾಲಾಗ್ನಿಯಂತೆ ಜ್ವಲಿಸುತ್ತಿದ್ದನು ॥೨೨॥ ಹಾಗೆ ಸಿಟ್ಟುಗೊಂಡ ದಶಕಂಠನ ಕಣ್ಣುಗಳಿಂದ ಉದಿರುತ್ತಿದ್ದ ರಕ್ತಬಿಂದುಗಳು, ಜ್ವಲಿಸುತ್ತಿರುವ ದೀಪದಿಂದ ತೊಟ್ಟಿಡುವ ಜ್ವಾಲೆಯಿಂದ ಸಹಿತವಾದ ಎಣ್ಣೆಯ ಬೊಟ್ಟುಗಳಂತೆ ಕಾಣಬಂದುವು, ॥೨೩॥ ರಾಕ್ಷಸನಿಗೆ ಸೈರಿಸಲಿಲ್ಲ, ಮಹಾತೇಜಸ್ವಿಯಲ್ಲವೆ ?

ಆತ್ಮನ ಸ್ಸದೃಶಾಂ ಚ್ಛೂರಾ ನ್ಕಿಂಕರಾ ನ್ನಾಮ ರಾಕ್ಷಸಾನ್ ।
ವ್ಯಾದಿದೇಶ ಮಹಾತೇಜಾ ನಿಗ್ರಹಾರ್ಥಂ ಹನೂಮತಃ ॥೨೪॥
ತೇಷಾ ಮಶೀತಿ ಸಾಹಸ್ರಂ ಕಿಂಕರಾಣಾಂ ತರಸ್ವಿನಾಮ್ ।
ನಿರ್ಯಯು ರ್ಭವನಾ ತ್ತಸ್ಮಾ ತ್ಕೂಟ ಮುದ್ಗರ ಪಾಣಯಃ ॥೨೫॥
ಮಹೋದರಾ ಮಹಾದಂಷ್ಟ್ರಾ ಘೋರರೂಪಾ ಮಹಾಬಲಾಃ ।
ಯುದ್ಧಾಭಿ ಮನಸ ಸ್ಸರ್ವೇ ಹನುಮ ದ್ಗ್ರಹಣೋನ್ಮುಖಾಃ ॥೨೬॥
ತೇ ಕಪೀಂದ್ರಂ ಸಮಾಸಾದ್ಯ ತೋರಣಸ್ಥ ಮವಸ್ಥಿತಮ್।

---

ಮಹಾ ಪರಾಕ್ರಮವುಳ್ಳ ರಾವಣನು, ಆತ್ಮನಃ - ತನಗೆ, ಸದೃಶಾನ್ - ಸಮಾನರಾದ, ಶೂರಾನ್ - ವೀರರಾಗಿರುವ, ಕಿಂಕರಾನ್ನಾಮ - ಕಿಂಕರರೆಂದು ಪ್ರಸಿದ್ಧರಾದ, ರಾಕ್ಷಸಾನ್ - ರಕ್ಕಸರನ್ನು, ಹನೂಮತಃ ಆಂಜನೇಯನ, ನಿಗ್ರಹಾರ್ಥಂ - ಶಿಕ್ಷೆಗೋಸ್ಕರ, ವ್ಯಾದಿದೇಶ - ಅಪ್ಪಣೆ ಮಾಡಿದನು ॥೨೪॥ ತರಸ್ವಿನಾಂ-ಬಲವಂತರಾದ, ತೇಷಾಂ - ಆ, ಕಿಂಕರಾಣಾಂ - ಕಿಂಕರರೆಂಬ ಹೆಸರಿನ ರಾಕ್ಷಸರ, ಅಶೀತಿಸಾಹಸ್ರಂ, (ಅಶೀತಿಸಹಸ್ರಾಣಿ) ಎಂಬತ್ತು ಸಾವಿರಮಂದಿ, ಮಹೋದರಾಃ - ದೊಡ್ಡ ಹೊಟ್ಟೆಗಳುಳ್ಳ, ಮಹಾದಂಷ್ಟ್ರಾಃ - ತೋರವಾದ ಮತ್ತು ಉದ್ದವಾದ ಕೋರೆ ಹಲ್ಲುಗಳುಳ್ಳ, ಘೋರರೂಪಾಃ - ಭಯಂಕರಾಕಾರವುಳ್ಳ, ಮಹಾಬಲಾಃ- ಮಹಾಶಕ್ತಿಯುಳ್ಳವರೂ ಆಗಿರುವ, ಸರ್ವೇ - ಎಲ್ಲರಾಕ್ಷಸರೂ, ಯುದ್ಧಮನಸಃ-ಯುದ್ಧದಲ್ಲಿ ಆಶೆಯುಳ್ಳವರಾದ ಕಾರಣವೇ, ಕೂಟಮುದ್ಗರಪಾಣಯಃ - ಕೂಟ, ಮುದ್ಗರಗಳೆಂಬ ಆಯುಧಗಳನ್ನು ಕಯ್ಯಲ್ಲಿ ಹಿಡಿದವರಾಗಿ, ಹನೂಮದ್ಗ್ರಹಣೋನ್ಮುಖಾಃ - ಮಾರುತಿಯನ್ನು ಹಿಡಿಯುವುದರಲ್ಲಿ ಅಭಿರುಚಿಯುಳ್ಳವರಾಗುತ್ತಾ, ತಸ್ಮಾತ್-ಆ, ಭವನಾತ್- ಮನೆಯ ದೆಸೆಯಿಂದ, ನಿರ್ಯಯುಃ - ಹೊರಟರು ॥೨೫-೨೬॥ ತೇ-ಆರಾಕ್ಷಸರು, ಮಹಾವೇಗಾಃ - ಬಹುವೇಗವುಳ್ಳವರಾಗಿ, ತೋರಣಸ್ಥಂ - ಹೊರಬಾಗಿಲಿನಲ್ಲಿರುವ, ಕಪೀಂದ್ರಂ - ಹನುಮಂತನನ್ನು, ಆ ಸಾದ್ಯ - ಹೊಂದಿ, ಅವಸ್ಥಿತಂ - ಯುದ್ಧಸನ್ನದ್ಧನಾಗಿ ನಿಂತಿರುವ ಹನುಮಂತನನ್ನು, ಪಾವಕಂ - ಅಗ್ನಿಯನ್ನು, ಪತಂಗಾಇವ-

---

ಕೂಡಲೆ-ಪರಾಕ್ರಮದಲ್ಲಿ ತನಗೆ ಎಣೆಯೆನಿಸಿ ಪ್ರಖ್ಯಾತರಾದ ಕಿಂಕರರೆಂಬ ಹೆಸರನ್ನು ಪಡೆದಿರುವ ರಾಕ್ಷಸವೀರರನ್ನು ಕರೆಸಿ ,,ನೀವೆಲ್ಲರೂ ಈ ಕ್ಷಣದಲ್ಲಿ ಹೋಗಿ ಆ ದುರುಳ ಕೋಡಗನನ್ನು ದಂಡಿಸಿ ಜೀವಸಹಿತ ಹಿಡಿದು ತರಬೇಕು,, ಎಂದು ಕ್ರೂರವಾಗಿ ಆಜ್ಞಾಪಿಸಿದನು ॥ ೨೪ ॥ ಮಹಾರಾಜನ ಅಪ್ಪಣೆಯಾದ ಕೂಡಲೆ ಎಂಭತ್ತು ಸಾವಿರಮಂದಿ, ಮಹಾಬಾಹುಬಲ ಸಂಪನ್ನರೆನಿಸಿದ ಕಿಂಕರರೆಂಬ ರಾಕ್ಷಸ ವೀರಭಟರು - ಕೂಟ, ಮುದ್ಗರ ಮುಂತಾದ ಆಯುಧಗಳನ್ನು ಹಿಡಿದು, ಮಹತ್ತರವಾದ ಶೌರ್‍ಯವನ್ನು ಪ್ರಕಾಶಪಡಿಸುತ್ತಾ ರಾವಣನ ಮನೆಯಿಂದ ಹೊರಟರು ॥೨೫॥ ಬಲುದೊಡ್ಡ ಹೊಟ್ಟೆಯುವರು, ತೋರವೂ, ನೀಳವೂ, ಮೊನೆಯೂ ಆಗಿರುವ ಕೋರೆದಾಡೆಗಳಿಂದೊಡಗೂಡಿದಾರೆ, ಅಪರಿಮಿತ ಬಾಹು ಬಲಸಂಪನ್ನರು, ನಾನುಮುಂದು ತಾನು ಮುಂದು ಎಂದು ಯುದ್ಧದಲ್ಲಿ ಅಭಿರುಚಿಯುಳ್ಳವರಾಗಿ, ಆ ದುರುಳ ಕಪಿಯನ್ನು ನಾನು ಹಿಡಿಯುತ್ತೇನೆ, ತಾನು ಹಿಡಿಯುತ್ತೇನೆ ಎಂದು ಭಯಂಕರಾಕಾರದಿಂದ ಶೌರ್‍ಯವನ್ನು ಬೀರುತ್ತಾ ಬರುತ್ತಿದ್ದರು ॥ ೨೬ ॥ ಅಶೋಕವನದ ಬಳಿಗೆ ಬಂದರು, ಅದುವರೆಗೆ ಆಂಜನೇಯನು- ಕಾಳಗವನ್ನು ಇದಿರು

ಅಭಿಪೇತು ರ್ಮಹಾವೇಗಾಃ ಪತಂಗಾ ಇವ ಪಾವಕಂ ॥೨೭॥
ತೆ ಗದಾಭಿ ರ್ವಿಚಿತ್ರಾಭಿಃ ಪರಿಘ್ಯೈಃ ಕಾಂಚನಾಂಗದೈಃ ।
ಆಜಘ್ನು ರ್ವಾನರ ಶ್ರೇಷ್ಠಂ ಶರ್ಯೈ ಶ್ಚಾದಿತ್ಯ ಸನ್ನಿಭೈಃ॥೨೮॥
ಮುದ್ಗರೈಃ ಪಟ್ಟಸೈ ಶ್ಶೂಲೈಃ ಪ್ರಾಸ ತೋಮರ ಶಕ್ತಿಭಿಃ ।
ಪರಿವಾರ್ಯ ಹನೂ ಮಂತಂ ಸಹಸಾ ತಸ್ಥು ರಗ್ರತಃ ॥೨೯॥
ಹನೂಮಾನಪಿ ತೇಜಸ್ವೀ ಶ್ರೀಮಾ ನ್ಪರ್ವತಸನ್ನಿಭಃ ।
ಕ್ಷಿತಾ ವಾವಿಧ್ಯ ಲಾಂಗೂಲಂ ನನಾದ ಚ ಮಹಾಸ್ವನಮ್ ॥೩೦॥
ಸ ಭೂತ್ವಾ ಸುಮಹಾಕಾಯೋ ಹನೂಮಾ ನ್ಮಾರುತಾತ್ಮಜಃ ।

ಮಿಡತೆಗಳಂತೆ, ಅಭಿಪೇತುಃ - ಇದಿರ್ಗೊಂಡರು ॥೨೭॥ ತೆ-ಆರಾಕ್ಷಸರು, ವಿಚಿತ್ರಾಭಿಃ - ನಾನಾವಿಧಗಳಾದ, ಗದಾಭಿಃ – ಗದೆಗಳಿಂದಲೂ, ಕಾಂಚನಾಂಗದೈಃ - ಚಿನ್ನದ ಆವರಣವುಳ್ಳ, ಪರಿಘ್ಯೈಃ - ಪರಿಘಾಯುಧಗಳಿಂದಲೂ, ಆದಿತ್ಯಸನ್ನಿಭೈಃ - ಸೂರ್ಯನಂತೆ ಜ್ವಲಿಸುತಲಿರುವ, ಶರ್ಯೈಃ - ಬಾಣಗಳಿಂದಲೂ, ವಾನರ ಶ್ರೇಷ್ಠಂ - ಕಪಿವರರನನ್ನು, ಆಜಘ್ನುಃ - ಹೊಡೆದರು ॥೨೮॥ (ತೆ-ಆರಾಕ್ಷಸರು,) ಮುದ್ಗರೈಃ - ಮುದ್ಗರಗಳೆಂಬ ಆಯುಧಗಳಿಂದಲೂ, ಪಟ್ಟಸೈಃ - ಪಟ್ಟಸಾಯುಧಗಳಿಂದಲೂ, ಶೂಲೈಃ-ಶೂಲಾಯುಧಗಳಿಂದಲೂ, ಪ್ರಾಸತೋಮರಶಕ್ತಿಭಿಃ - ಪ್ರಾಸ, ತೋಮರ, ಶಕ್ತಿ ಎಂಬ ಆಯುಧಗಳಿಂದಲೂ, ಹನೂಮಂತಂ - ಆಂಜನೇಯನನ್ನು, ಸಹಸಾ – ಬೇಗನೆ, ಪರಿವಾರ್ಯ - ಸುತ್ತಿಕೊಂಡು, (ತಡೆದು) ಅಗ್ರತಃ-ಇದಿರಿಗೆ, ತಸ್ಥುಃ - ನಿಂತರು, ॥೨೯॥ ತೇಜಸ್ವೀ - ಪ್ರಶಸ್ತವಾದ ತೇಜಸ್ಸುಳ್ಳ, ಶ್ರೀಮಾನ್ - ಉತ್ಸಾಹಸಂಪದವನ್ನೊಳಗೊಂಡಿರುವ, ಪರ್ವತಸನ್ನಿಭಃ - ಗಿರಿಸದೃಶನೆನಿಸಿದ, ಹನೂಮಾನಪಿ - ಆಂಜನೇಯನೂ, ಕ್ಷಿತೌ - ಭೂಮಿಯಲ್ಲಿ, ಲಾಂಗೂಲಂ - ಬಾಲವನ್ನು, ಆವಿಧ್ಯ - ನೆಲದ ಮೇಲೆ ಬಡಿದು, ಮಹಾಸ್ವನಂಚ - ಸಿಂಹನಾದವನ್ನೂ, ನನಾದ – (ಧ್ವನಿ) ಮಾಡಿದನು ॥೩೦॥ ಮಾರುತಾತ್ಮಜಃ – ವಾಯುನಂದನನಾದ, ಸಃ ಹನುಮಾನ್ - ಆ ಆಂಜನೆಯನು, ಸುಮಹಾಕಾಯಃ - ಉನ್ನತವಾದ ಶರೀರವುಳ್ಳವನು,

ನೋಡುತ್ತಾ ತೋಟದ ಹೊರಬಾಗಿಲಿನಲ್ಲಿ ನಿಂತಿದಾನೆ, ಆತನನ್ನು ಕಂಡರು, ಉರಿಯುತಲಿರುವ ಬೆಂಕಿಯನ್ನು ಮುತ್ತುವ ಮಿಡತೆಗಳ ಹಾಗೆ, ಎಲ್ಲರೂ ಒಟ್ಟಾಗಿ, ಮಹಾವೇಗದಿಂದ ಮಾರುತಿಯನ್ನು ಅಡರಿದರು ॥ ೨೭ ॥ ಕೆಲವರು ಗದೆಗಳನ್ನಿಟ್ಟರು, ಮತ್ತೆ ಕೆಲವರು ಚಿನ್ನದ ಅಲಂಕಾರದಿಂದ ತಳತಳಿಸುತಲಿರುವ ಪರಿಘಾಯುಧಗಳನ್ನು ಎಸೆದರು, ಸೂರ್ಯನಂತೆ ಬೆಳಗುತಲಿರುವ ಶರಗಳಿಂದ ವಾನರನನ್ನು ಹೊಡೆದರು, ॥ ೨೮ ॥ ಮುದ್ಗರಗಳನ್ನು ಬೀರಿದರು, ಶೂಲಗಳಿಂದ ತಿವಿದರು, ಪ್ರಾಸ, ತೋಮರ, ಶಕ್ತಿ ಮುಂತಾದ ಆಯುಧಗಳನ್ನು ಪ್ರಯೋಗಿಸಿದರು, ತಡಮಾಡದೆ ಎಲ್ಲರೂ ಆ ಮಾರುತಿಯನ್ನು ಬಳಸಿ ಇದಿರಿಸಿ ನಿಂತರು ॥ ೨೯ ॥ ಆಗ ಮಹಾ ತೇಜಸ್ಸಂಪನ್ನನಾಗಿ ಬೆಳಗುತಲಿರುವ ಆಂಜನೇಯನು ರಕ್ಕಸರ ಉಬ್ಬಟೆಗಳನ್ನೆಲ್ಲ ನೋಡಿದನು, ದೊಡ್ಡ ಬೆಟ್ಟದಂತಾದನು, ನೀಳವಾಗಿ ಬೆಳೆದಿರುವ ಬಾಲವನ್ನು ಹಿಡಿದು ಅಲ್ಲಾಡಿಸಿ, ತಿರುಹಿ, ನೆಲದಲ್ಲಿ ಅಪ್ಪಳಿಸಿ, ಗುಡುಗುಡನೆ ಸಿಂಹದಂತೆ ಗರ್ಜಿಸಿದನು ॥ ೩೦ ॥ ಪರ್ವತದಂತೆ ಮಹಾ ಕಾಯನಾದ ಮಾರುತಿಯು-ಲಂಕೆಯೆಲ್ಲ ಅಲ್ಲೋಲ ಕಲ್ಲೋಲವಾಗುವಂತೆ ಮತ್ತೊಂದು ವೇಳೆ ಗಟ್ಟಿಯಾಗಿ ಸಿಂಹ

ಧೃಷ್ಟ ಮಾಸ್ಫೋಟಯಾಮಾಸ ಲಂಕಾಂ ಶಬ್ದೇನ ಪೂರಯನ್ ॥೩೧॥
ತಸ್ಯಾಸ್ಫೋಟಿತ ಶಬ್ದೇನ ಮಹತಾ ಸಾಽನುನಾದಿನಾ ।
ಪೇತು ರ್ವಿಹಂಗಾ ಗಗನಾ ದುಚ್ಚೈ ಶ್ಚೇದ ಮಘೋಷಯತ್ ॥೩೨॥
ಜಯ ತ್ಯತಿಬಲೋ ರಾಮೋ ಲಕ್ಷ್ಮಣಶ್ಚ ಮಹಾಬಲಃ ।
ರಾಜಾ ಜಯತಿ ಸುಗ್ರೀವೋ ರಾಘವೇ ಣಾಭಿಪಾಲಿತಃ ॥೩೩॥
ದಾಸೋಽಹಂ ಕೋಸಲೇಂದ್ರಸ್ಯ ರಾಮಸ್ಯಾ ಕ್ಲಿಷ್ಟಕರ್ಮಣಃ ।
ಹನುಮಾಂ ಚ್ಛತ್ರು ಸೈನ್ಯಾನಾಂ ನಿಹಂತಾ ಮಾರುತಾತ್ಮಜಃ ॥೩೪॥
ನ ರಾವಣಸಹಸ್ರಂ ಮೇ ಯುದ್ಧೇ ಪ್ರತಿಬಲಂ ಭವೇತ್ ।

---

ಭೂತ್ವಾ - ಆಗಿ, ಲಂಕಾಂ - ಲಂಕಾಪಟ್ಟಣವನ್ನು, ಶಬ್ದೇನ - ಧ್ವನಿಯಿಂದ, ಪೂರಯನ್ - ತುಂಬುವವನಾಗಿ, ಧೃಷ್ಟಂ - ಪ್ರೌಢವಾಗಿ, (ದುಡುಕಿನಿಂದ) ಆ ಸ್ಫೋಟಯಾಮಾಸ - ಸಿಂಹಗರ್ಜನೆಯನ್ನು ಮಾಡಿದನು ॥೩೧॥ ಸಾನುನಾದಿನಾ - ಪ್ರತಿಧ್ವನಿಗಳಿಂದೊಡಗೂಡಿದ, ಮಹತಾ - ವಿಸ್ತಾರವಾದ, ತಸ್ಯ- ಆ ಆಂಜನೇಯನ, ಆಸ್ಫೋಟಿತ ಶಬ್ದೇನ - ಸಿಂಹಧ್ವನಿಯಿಂದ, ವಿಹಂಗಾಃ - ಪಕ್ಷಿಗಳು, ಗಗನಾತ್ - ಆಕಾಶದ ದೆಶೆಯಿಂದ, ಪೇತುಃ- ಬಿದ್ದುವು, (ಸಃ-ಆಂಜನೇಯನು) ಇದಂ - ಈ ಮುಂದಿನ ಮಾತನ್ನು, ಉಚ್ಚೈಶ್ಚ - ಗಟ್ಟಿಯಾಗಿ, ಅ ಘೋಷಯತ್ - ಉದ್ಘೋಷಿಸಿದನು ॥೩೨॥ ಅತಿಬಲಃ - ಮಹಾಪರಾಕ್ರಮಶಾಲಿಯಾದ, ರಾಮಃ - ಶ್ರೀರಾಮನು, ಜಯತಿ - ಸರ್ವೋತ್ತಮನಾಗಿರುವನು, ಮಹಾಬಲಃ - ಹೇರಳವಾದ ಶಕ್ತಿಯುಳ್ಳ, ಲಕ್ಷ್ಮಣಶ್ಚ - ಸೌಮಿತ್ರಿಯೂ, (ಜಯತಿ-ಸರ್ವೋತ್ಕರ್ಷದಿಂದಿರುವನು) ಸುಗ್ರೀವಃ - ಸುಗ್ರೀವನೆಂಬ, ರಾಜಾ - ಕಪಿಸಾರ್ವಭೌಮನೂ, ರಾಘವೇಣ - ಶ್ರೀರಾಮನಿಂದ, ಅಭಿಪಾಲಿತಃ- ಪಾಲಿಸಲ್ಪಡುತಲಿರುವವನಾಗಿ, ಜಯತಿ-ಜಯಶಾಲಿಯಾಗಿರುವನು ॥೩೩॥ ಅಹಂ - ನಾನು, ಕೋಸಲೇಂದ್ರಸ್ಯ - ಉತ್ತರಕೋಸಲಾಧೀಶ್ವರನಾದ, ಅಕ್ಲಿಷ್ಟಕರ್ಮಣಃ - ಕ್ಲೇಶವಿಲ್ಲದ ಕೆಲಸವನ್ನು ಮಾಡುವ, ರಾಮಸ್ಯ - ಶ್ರೀರಾಮಚಂದ್ರನಿಗೆ, ದಾಸಃ - ಸೇವಕನಾಗಿದೇನೆ, ಹನುಮಾನ್ - ಹೆಸರಿನಲ್ಲಿ ಹನುಮಂತನೆಂಬುವವನು, ಶತ್ರುಸೈನ್ಯಾನಾಂ-ಹಗೆಗಳ ಪಡೆಗಳನ್ನು, ನಿಹನ್ತಾ - ಇರಿಯುತಕ್ಕ, ಮಾರುತಾತ್ಮಜಃ- ವಾಯುಪುತ್ರನಾಗಿದೇನೆ ॥೩೪॥

---

ನಾದವನ್ನು ಮಾಡಿದನು ॥ ೩೧ ॥ ದಿಕ್ಕುಗಳೊಳಗೆಲ್ಲ ಅದಿರುತಲಿರುವ ಆತನ ಆ ಸ್ಫೋಟನ ಶಬ್ದದಿಂದಲೂ, ಅದನ್ನು ಅನುಸರಿಸಿ ಬೆಟ್ಟದ ಗವಿ ಮೊದಲಾದವುಗಳಿಂದ ಹೊರಡುವ ಸೆಲೆಗಳಿಂದಲೂ, ಆಕಾಶ ಚಾರಿಗಳಾದ ಬಗೆಬಗೆಯ ಪಕ್ಷಿಗಳು ಹೆದರಿ ತಟಪಟನೆ ನೆಲದ ಮೇಲೆ ಬೀಳುತಲಿದ್ದುವು, ಆ ಸಮಯದಲ್ಲಿ ಮಹಾವೀರನಾದ ಆಂಜನೇಯನು- ॥ ೩೨ ॥ ಮಹಾ ಬಾಹು ಬಲ ಸಂಪನ್ನನಾಗಿರುವ ಶ್ರೀರಾಮಚಂದ್ರನೂ, ಮಹಾ ಪರಾಕ್ರಮಶಾಲಿಯಾದ ಲಕ್ಷ್ಮಣನೂ, ಕಪಿಸಾರ್ವಭೌಮನೆನಿಸಿ ಶ್ರೀರಾಮನಿಂದ ಪಾಲಿಸಲ್ಪಡುತಲಿರುವ ಸುಗ್ರೀವನೂ ಸರ್ವೋತ್ತಮರೆನಿಸಿ ಬೆಳಗುತಲಿದಾರೆ ॥ ೩೩ ॥ ಈ ನಾನು- ಮಹಾಶೂರನೆನಿಸಿ ಸತ್ಯಸಂಧನಾಗಿರುವ ಉತ್ತರ ಕೋಶಲದೇಶಾಧಿ ಪತಿಯಾದ ಶ್ರೀರಾಮಚಂದ್ರನ ದಾಸನು, ನನ್ನ ಹೆಸರು ಹನುಮಂತನು, ಹಗೆಗಳ ಪಡೆಗಳ ಹುಟ್ಟನ್ನು ಅಡಗಿಸುವ ಮಾರುತಾತ್ಮಜನು ನಾನೇ ಎಂದು ಉದ್ಘೋಷಿಸಿ ॥೩೪॥ ರಣಾಂಗಣದಲ್ಲಿ ನಾನು ಕಾಳಗಕ್ಕೆ

ಶಿಲಾಭಿಸ್ತು ಪ್ರಹರತಃ ಪಾದಪೈಶ್ಚ ಸಹಸ್ರಶಃ ॥೩೫॥
ಅರ್ದಯಿತ್ವಾ ಪುರೀಂ ಲಂಕಾ ಮಭಿವಾದ್ಯ ಚ ಮೈಥಿಲೀಂ ।
ಸಮೃದ್ಧಾರ್ಥೋ ಗಮಿಷ್ಯಾಮಿ ಮಿಷತಾಂ ಸರ್ವ ರಕ್ಷಸಾಂ॥೩೬॥
ತಸ್ಯ ಸನ್ನಾದ ಶಬ್ದೇನ ತೇಽ ಭವನ್ ಭಯಶಂಕಿತಾಃ ।
ದದೃಶುಶ್ಚ ಹನೂಮಂತಂ ಸಂಧ್ಯಾ ಮೇಘ ಮಿವೋನ್ನತಂ ॥೩೭॥
ಸ್ವಾಮಿ ಸಂದೇಶ ನಿಶ್ಶಂಕಾ ಸ್ತತ ಸ್ತೇ ರಾಕ್ಷಸಾಃ ಕಪಿಂ ।
ಚಿತ್ರೈ ರ್ಃ ಪ್ರಹರಣೈ ರ್ಭೀಮೈ ರಭಿಪೇತು ಸ್ತತಸ್ತತಃ ॥೩೮॥

---

ಯುದ್ಧೇ - ಕಾಳಗದಲ್ಲಿ, ಶಿಲಾಭಿಃ-ಕಲ್ಲುಗಳಿಂದಲೂ, ಪಾದಪೈಶ್ಚ - ಮರಗಳಿಂದಲೂ, ಸಹಸ್ರಶಃ-ಸಾವಿರಾರುಮಂದಿ, (ರಾಕ್ಷಸಾನ್ - ರಕ್ಕಸರನ್ನು) ಪ್ರಹರತಃ - ಹೊಡೆಯುತಲಿರುವ, ಮೇ - ನನಗೆ, ರಾವಣಸಹಸ್ರಂತು - ದಶಕಂಠರ ಸಾವಿರವಾದರೂ, ಪ್ರತಿಬಲಂ - ಸಮಾನವಾದ ಬಲವುಳ್ಳುದು, ನಭವೇತ್-ಆಗುವುದಿಲ್ಲ, ಅಹಂ - ನಾನು, ಲಂಕಾಂ - ಲಂಕೆಯೆಂಬ, ಪುರೀಂ - ನಗರವನ್ನು, ಅರ್ದಯಿತ್ವಾ - ಧ್ವಂಸಮಾಡಿ, ಮೈಥಿಲೀಂ - ಜಾನಕಿಯನ್ನು, ಅಭಿವಾದ್ಯಚ - ನಮಸ್ಕರಿಸಿಯೂ, ಸರ್ವರಕ್ಷಸಾಂ - ಎಲ್ಲರಕ್ಕಸರು, ಮಿಷತಾಂ - ಇದಿರಿಗೆ ನೋಡುತ್ತಿರುವ ಹಾಗೆಯೇ, ಸಮೃದ್ಧಾರ್ಥಃ - ಸಂಪೂರ್ಣವಾದ ಕಾರ್ಯಸಿದ್ಧಿಯುಳ್ಳವನಾಗಿಯೇ, ಗಮಿಷ್ಯಾಮಿ - ಹೋಗುವೆನು ॥೩೫-೩೬॥ ತೇ - ಆ ರಾಕ್ಷಸರು, ತಸ್ಯ - ಆ ಹನುಮಂತನ, ಸನ್ನಾದಶಬ್ದೇನ - ಸಿಂಹಗರ್ಜನೆಯ ಪ್ರತಿಧ್ವನಿಯಿಂದ, ಭಯಶಂಕಿತಾಃ - ಭಯದಿಂದ ನೊಂದವರು, ಅಭವನ್ - ಆದರು, ಉನ್ನತಂ - ಬಲು ಎತ್ತರವಾಗಿರುವ, ಹನೂಮನ್ತಂ - ಆಂಜನೇಯನನ್ನು ಸನ್ಧ್ಯಾಮೇಘಮಿವ - ಸನ್ಧ್ಯಾಕಾಲದ ಮೇಘದ ಹಾಗೆ, ದದೃಶುಶ್ಚ - ನೋಡಲೂ ನೋಡಿದರು ॥ ೩೭ ॥ ತತಃ - ಆಮೇಲೆ, ತೆ - ಆ, ರಾಕ್ಷಸಾಃ - ದಾನವರು, ಸ್ವಾಮಿಸಂದೇಶನಿಶ್ಶಂಕಾಃ - ಪ್ರಭುವಿನಾಜ್ಞೆಯಿಂದ ನಿರ್ಭಯರಾಗಿ, ಚಿತ್ರೈಃ - ನಾನಾವಿಧಗಳಾದ, ಭೀಮೈಃ - ಭಯಂಕರಗಳೆನಿಸಿದ, ಪ್ರಹರಣೈಃ - ಆಯುಧಗಳಿಂದ, ತತಸ್ತತಃ - ಅಲ್ಲಲ್ಲಿ, ಕಪಿಂ - ಆಂಜನೇಯನನ್ನು, ಅಭಿಪೇತುಃ - ಇದಿರಿಸಿದರು (ಅಥವಾ - ಹೊಡೆದರು) ॥೩೮॥ ತೈಃ - ಆ, ಶೂರೈಃ - ಪರಾಕ್ರಮಶಾಲಿಗಳಾದ ರಾಕ್ಷಸರಿಂದ, ಸಃ -

---

ಅಣಿಯಾಗಿ ಕಲ್ಲುಗಳನ್ನು ಎಸೆಯುತ್ತಾ, ಮರಗಳನ್ನು ಬೀರುತ್ತಲೂ ನಿಂತರೆ-ಈಪರಿ ರಾವಣರಂತಹ ಸಾವಿರ ಮಂದಿಯಾದರೂ ನನ್ನನ್ನು ಇದಿರಿಸಲಾರರು ॥೩೫॥ ರಕ್ಕಸರ ಹಿಂಡಿನಿಂದೊಡಗೂಡಿರುವ ಈ ಲಂಕೆಯನ್ನು ಅರೆದು, ಮಹಾನುಭಾವಳಾದ ಮೈಥಿಲಿಗೆ ಅಭಿವಂದಿಸಿ, ಸಂಪೂರ್ಣವಾದ ಕಾರ್ಯಸಿದ್ಧಿಯನ್ನು ಪಡೆದು, ಕಳೆದುಳಿದ ರಕ್ಕಸರು ನೋಡುತ್ತಿರುವಾಗಲೇ ಇಲ್ಲಿಂದ ತೆರಳುವೆನು ಎಂದು ಗರ್ಜಿಸುತ್ತಿದ್ದನು ॥೩೬॥ ಆಗಲಾರಕ್ಕಸರೆಲ್ಲರೂ-ಆ ಹನುಮಂತನ ಮಹತ್ತರವಾದ ಸಿಂಹನಾದವನ್ನೂ, ಆದನ್ನು ಅನುಸರಿಸಿಬರುವ ಪ್ರತಿಧ್ವನಿಯನ್ನೂ ಕೇಳಿದರು, ಮಹಾ ಭಯದಿಂದ ಎದೆಯು ಅದಿರಿತು, ಆ ಸಮಯದೊಳಗೆ ಸಂಧ್ಯಾಕಾಲದಲ್ಲಿರುವ ಮೇಘದಂತೆ ಮಹೋನ್ನತನಾಗಿರುವ ಮಾರುತಿಯನ್ನು ನೋಡಿದರು ॥೩೭॥ ಆ ಹಿಂದೆ-ಮಹಾ ವೀರರಾದ ಆ ಅಸುರರು ತಮ್ಮ ಪ್ರಭುವಿನಾಜ್ಞೆಯನ್ನು ನೆನೆದರು, ಭಯವನ್ನು ತೊರೆದರು, ಮಹಾಭಯಂಕರಗಳೆನಿಸಿದ ಬಗೆ ಬಗೆಯ ಆಯುಧಗಳನ್ನು ಆಂಜನೇಯನ ಮೇಲೆ ಎಸೆಯತೊಡಗಿದರು ॥೩೮॥ ಆಗ ಮಹಾಬಲನಾದ ಹನುಮನು

ಸ ತೈಃ ಪರಿವೃತ ಶ್ಶೂರೈ ಸ್ಸರ್ವತ ಸ್ಸ ಮಹಾಬಲಃ।
ಆಸಸಾ ದಾಯಸಂ ಭೀಮಂ ಪರಿಘಂ ತೋರಣಾಶ್ರಿತಮ್ ॥೩೯॥
ಸ ತಂ ಪರಿಘ ಮಾದಾಯ ಜಘಾನ ರಜನೀಚರಾನ್ ॥೩೯॥ ॥
ಸ ಪನ್ನಗ ಮಿವಾದಾಯ ಸ್ಫುರಂತಂ ವಿನತಾಸುತಃ ॥
ವಿಚಚಾ ರಾಂಬರೆ ವೀರಃ ಪರಿಗೃಹ್ಯ ಚ ಮಾರುತಿಃ ॥೪೦॥-॥
ಸ ಹತ್ವಾ ರಾಕ್ಷಸಾ ನ್ವೀರಾ ನ್ಕಿಂಕರಾ ನ್ಮಾರುತಾತ್ಮಜಃ ।
ಯುದ್ಧಕಾಂಕ್ಷೀ ಪುನ ರ್ವೀರ ಸ್ತೋರಣಂ ಸಮುಪಾಶ್ರಿತಃ ॥೪೧॥ ॥
ತತ ಸ್ತಸ್ಮಾ ದ್ಭಯಾ ನ್ಮುಕ್ತಾಃ ಕತಿಚಿ ತ್ತತ್ರ ರಾಕ್ಷಸಾಃ ।

ಆ ಆಂಜನೇಯನು ಸರ್ವತಃ - ಎಲ್ಲಾ ಕಡೆಗಳಲ್ಲಿಯೂ, ಪರಿವೃತಃ - ಸುತ್ತಲ್ಪಟ್ಟವನಾದನು, ಮಹಾಬಲಃ - ಹೆಚ್ಚಿದ ಬಲವುಳ್ಳ, ಸಃ - ಆ ಆಂಜನೇಯನು, ಆಯಸಂ - ಕಬ್ಬಿಣದಿಂದ ಮಾಡಿರುವ, ಭೀಮಂ-ಭಯಂಕರವೆನಿಸಿದ, ತೋರಣಾಶ್ರಿತಂ - ಹೊರಬಾಗಿಲಿನಲ್ಲಿದ್ದ, ಪರಿಘಂ -ಪರಿಘಾಯುಧವನ್ನು, (ದೊಡ್ಡ ಲಾಳಮಂಡಿಗೆಯನ್ನು) ಆಸಸಾದ-ಹೊಂದಿದನು (ಕೈಲಿ ಹಿಡಿದನು) ॥೩೯॥-॥ ಸಃ - ಆ ಹನುಮಂತನು ಪರಿಘಂ - ಪರಿಘಾಯುಧವನ್ನು, ಆದಾಯ - ತೆಗೆದುಕೊಂಡು, ರಜನೀಚರಾನ್ - ರಾಕ್ಷಸರನ್ನು, ಜಘಾನ - ಹೊಡೆದನು, ವೀರಃ- ಶೂರನಾದ, ಸಃ - ಆ, ಮಾರುತಿಃ - ಆಂಜನೇಯನು, ಸ್ಫುರಂತಂ - ಪ್ರಕಾಶಿಸುತಲಿರುವ, ಪರಿಘಂ - ಲಾಳಮಂಡಿಗೆಯನ್ನು, ಪರಿಗೃಹ್ಯ - ಹಿಡಿದು, ಪನ್ನಗಂ - ಸರ್ಪವನ್ನು, ಆದಾಯ - ತೆಗೆದುಕೊಂಡು, ವಿನತಾಸುತಇವ - ಗರುಡನು ಹೇಗೋ ಹಾಗೆ, ಅಂಬರೆ- ಆಕಾಶದಲ್ಲಿ, ವಿಚಚಾರಚ - ಸಂಚರಿಸಿದನು ॥೪೦-೪೦॥-॥

ಮಾರುತಾತ್ಮಜಃ - ವಾಯುನಂದನನಾದ, ವೀರಃ - ಶೂರನಾಗಿರುವ, ಸಃ - ಆ ಹನುಮಂತನು, ವೀರಾನ್ - ಶೂರರೆನಿಸಿದ, ಕಿಂಕರಾನ್ - ಕಿಂಕರರೆಂಬ, ಸರ್ವಾನ್ - ಸಮಸ್ತರಾದ, ರಾಕ್ಷಸಾನ್ - ನಿಶಾಚರರನ್ನು, ಹತ್ವಾ - ಕೊಂದು, ಪುನಃ - ಮರಳಿ, ಯುದ್ಧಕಾಂಕ್ಷೀ - ಬವರವನ್ನು ಬಯಸುತಲಿರುವವನಾಗಿ, ತೋರಣಂ - ಹೊರಬಾಗಿಲನ್ನು, ಸಮುಪಾಶ್ರಿತಃ - ಆಶ್ರಯಿಸಿದನು ॥೪೧॥ ತತಃ - ಆ ಹಿಂದೆ, ತತ್ರ - ಆ ಹೊರಬಾಗಿಲಿನ ಹತ್ತಿರದಲ್ಲಿ, ಕತಿಚಿತ್ - ಕೆಲವರಾದ, ರಾಕ್ಷಸಾಃ - ರಕ್ಕಸರು, ಭಯಾತ್-ಭಯದ ದೆಸೆಯಿಂದ, ತಸ್ಮಾತ್ - ಆ ಹೊರಬಾಗಿಲಿನ ತಾವಿನಿಂದ, ಮುಕ್ತಾಃ - ಬಿಡಲ್ಪಟ್ಟವರಾಗಿ,

ಆ ರಜನೀಚರರಿಂದ ಆವರಿಸಲ್ಪಟ್ಟವನಾಗಿ, ಹೊಡೆಯಲ್ಪಡುತ್ತಾ, ಆ ಉದ್ಯಾನದ ಹೊರಬಾಗಿಲಿನಲ್ಲಿದ್ದ ಕಬ್ಬಿಣದ ಲಾಳಮಂಡಿಗೆಯನ್ನು ಹಿಡಿದು ಎತ್ತಿ ॥೩೯॥ ಸಾಲಾಗಿರುವ ರಕ್ಕಸರನ್ನು ಬಡಿದು,ಮರಳಿ ಆ ಆಯುಧವನ್ನು ಕೈಗೆ ತೆಗೆದುಕೊಂಡು, ಆಕಾಶಕ್ಕೆ ಹಾರಿ,ಮಹಾಸರ್ಪವನ್ನು ಹಿಡಿದು ಅಂಬರದಲ್ಲಿ ಹಾರುತ್ತಿರುವ ಗರುಡನಂತೆ ಮೆರೆಯುತ್ತಿದ್ದನು ॥೪೦-೪೦॥ ॥ ಇಂತು ಮಹಾ ವೀರನೆನಿಸಿದ ಮಾರುತಾತ್ಮಜನು- ಕಿಂಕರರೆಂಬ ಅಸುರರನ್ನು ಇರಿದು, ಮರಳಿ ಕಾಳಗವನ್ನು ಬಯಸುವವನಾಗಿ, ಪೂರ್ವದಂತೆ ಉದ್ಯಾನದ ಹೊರಬಾಗಿಲಿನಲ್ಲಿ ಬಂದು ನಿಂತನು ॥೪೧॥॥ ಅನಂತರದಲ್ಲಿ ಆ ಯುದ್ಧಕ್ಕೆ ಸಿಲುಕದೆ ಅಳುಕಿ ದೂರದಲ್ಲಿದ್ದ ಕೆಲವು ಮಂದಿ ರಕ್ಕಸರು-ರಾವಣನ ಬಳಿಗೆ ಓಡಿಬಂದು ರಾವಣನನ್ನು ಕುರಿತು, ಎಲೈ ಪ್ರಭುವೇ! ನೀನು ಕಾಳಗಕ್ಕೆ ಕಳುಹಿ ಇದ್ದ ಕಿಂಕರರೆಂಬ ರಾಕ್ಷಸ ವೀರರನ್ನೆಲ್ಲ ಬಂದು

ನಿಹತಾ ನ್ಕಿಂಕರಾ ನ್ಸರ್ವಾ ನ್ರಾವಣಾಯ ನ್ಯವೇದಯನ್ ॥೪೨॥ ॥
ಸ ರಾಕ್ಷಸಾನಾಂ ನಿಹತಂ ಮಹದ್ಬಲಂ ನಿಶಮ್ಯ ರಾಜಾ ಪರಿವೃತ್ತ ಲೋಚನಃ ।
ಸಮಾದಿ ದೇಶಾಪ್ರತಿಮಂ ಪರಾಕ್ರಮೆಪ್ರಹಸ್ತಪುತ್ರಂ ಸಮರೆ ಸುದುರ್ಜಯಮ್॥

—ಇತಿ ಶ್ರೀಮತ್ಸುಂದರಕಾಂಡೆ ದ್ವಿಚತ್ವಾರಿಂಶಸ್ಸರ್ಗಃ—

(ತಟಸ್ಥರಾಗಿ, ದೂರ ಸರಿದವರಾಗಿ) ನಿಹತಾನ್ - ಹನುಮಂತನಿಂದ ಕೊಲ್ಲಲ್ಪಟ್ಟ, ಸರ್ವಾನ್- ಸಮಸ್ತ ರಾದ, ಕಿಂಕರಾನ್ - ಕಿಂಕರರೆಂಬ ರಾಕ್ಷಸರನ್ನು, ರಾವಣಾಯ - ದಶಕಂಠನಿಗೆ, ನ್ಯವೇದಯನ್ - ತಿಳಿಸಿದರು ॥೪೨॥ ರಾಕ್ಷಸಾನಾಂ - ರಕ್ಕಸರಿಗೆ, ರಾಜಾ - ಅರಸಾದ, ಸಃ - ಆ ರಾವಣನು, ಮಹತ್ - ದೊಡ್ಡದಾದ, ಬಲಂ - ಸೈನ್ಯವನ್ನು, ನಿಹತಂ - ಮಾರುತಿಯಿಂದ ಕೊಲ್ಲಲ್ಪಟ್ಟದನ್ನಾಗಿ, ನಿಶಮ್ಯ - ಕೇಳಿ, ಪರಿವೃತ್ತಲೋಚನಃ - ತಿರುಗಿಸುತ್ತಿರುವ ದೃಷ್ಟಿಯುಳ್ಳವನಾಗಿ, ಪರಾಕ್ರಮೆ - ಶೌರ್ಯದಲ್ಲಿ, ಅಪ್ರತಿಮಂ- ಅಸಮಾನನೆನಿಸಿದವನೂ, ಸಮರೆ - ಯುದ್ಧದಲ್ಲಿ, ಸುದುರ್ಜಯಂ - ಬಹು ಕಷ್ಟದಿಂದ ಜಯಿಸಲು ಸಾಧ್ಯನಾದವನೂ ಆಗಿರುವ, ಪ್ರಹಸ್ತಪುತ್ರಂ - ಪ್ರಹಸ್ತನೆಂಬ ಮಂತ್ರಿಯ ಮಗನನ್ನು, ಸಮಾದಿದೇಶ - ಆಜ್ಞಾಪಿಸಿದನು ॥೪೩॥

— ಇಂತು ನಲವತ್ತೆರಡನೆಯ ಸರ್ಗಂ —



ಪೆಟ್ಟನಲ್ಲಿ ರಣಭೂಮಿಗೆ ಬಲಿಕೊಟ್ಟನು ಎಂದು ಬಿನ್ನವಿಸಿದರು ॥೪೨॥ ಬಳಿಕ ರಾಕ್ಷಸರಾಜನಾದ ರಾವಣನು- ಯುದ್ಧಾರ್ಥವಾಗಿ ಹೋಗಿದ್ದ ಕಿಂಕರರೆಂಬ ರಕ್ಕಸರೆಲ್ಲರೂ ವಾನರನಿಂದ ಮಡಿದುಹೋದರೆಂಬ ಸುದ್ದಿಯನ್ನು ಕೇಳಿದನು, ಕೋಪಾಗ್ನಿಯಿಂದುರಿಯುತ್ತಾ ಕಣ್ಣುಗಳಿಂದ ಕಿಡಿಗಳನ್ನುದುರಿಸಿ ತನಗೆ ಪ್ರಧಾನ ಮಂತ್ರಿಯಾಗಿರುವ ಪ್ರಹಸ್ತನ ಪುತ್ರನಾದ ದುರ್ಜಯನೆನಿಸಿದ ಅಸಹಾಯ ಶೂರನಾದ ಮಹಾಸುರನನ್ನು ಯುದ್ಧಕ್ಕೆ ತೆರಳುವಂತೆ ಆಜ್ಞಾಪಿಸಿದನು ॥೪೩॥ ॥

—ಇಂತು ನಲವತ್ತೆರಡನೆಯ ಸರ್ಗಂ—



—ಶ್ರೀರಾಮಚಂದ್ರಪರಬ್ರಹ್ಮಣೇನಮಃ—

## ಶ್ರೀಮತ್ಸುಂದರಕಾಂಡೆ ತ್ರಿಚತ್ವಾರಿಂಶಸ್ಸರ್ಗಃ

ತತ ಸ್ಸ ಕಿಂಕರಾ ನ್ಹತ್ವಾ ಹನುಮಾ ನ್ಧ್ಯಾನ ಮಾಸ್ಥಿತಃ ।
ವನಂ ಭಗ್ನಂ ಮಯಾ ಚೈತ್ಯ ಪ್ರಾಸಾದೊ ನ ವಿನಾಶಿತಃ ॥೧॥
ತಸ್ಮಾ ತ್ಪ್ರಾಸಾದ ಮಪ್ಯೇವಂ ಭೀಮಂ ವಿಧ್ವಂಸಯಾ ಮ್ಯಹಮ್ ।
ಇತಿ ಸಂಚಿಂತ್ಯ ಮನಸಾ ಹನುಮಾ ನ್ದರ್ಶಯ ನ್ಬಲಮ್ ॥೨॥
ಚೈತ್ಯ ಪ್ರಾಸಾದ ಮಾಪ್ಲುತ್ಯ ಮೇರುಶೃಂಗ ಮಿವೋನ್ನತಮ್ ।

---

ಕಂದ—ಬಿಂಕದಿ ಬನದೊಳ್ ಮಾರುತಿ। ಕಿಂಕರರಂ ಕೊಂದು ಚೈತ್ಯಹ ರ್ಮ್ಯವ ನುರುಹಲ್ ॥
ಲಂಕೆಯೊ ಳಸುರಂ ಮುಳಿದಾ । ತಂಕದಿ ಕಳುಹಿದ ನಮಾತ್ಯಪುತ್ರನ ನಾಗಳ್

ತತಃ - ಅನಂತರದಲ್ಲಿ, ಸಃ - ಆ, ಹನುಮಾನ್ - ಆಂಜನೇಯನು, ಕಿಂಕರಾನ್ - ಕಿಂಕರರೆಂಬ, ರಾಕ್ಷಸರನ್ನು, ಹತ್ವಾ - ಕೊಂದು, ಧ್ಯಾನಂ - ಆಲೋಚನೆಯನ್ನು, ಆಸ್ಥಿತಃ - ಹೊಂದಿದವನಾದನು, (ಅದೆಂತೆಂದರೆ) ಮಯಾ - ನನ್ನಿಂದ, ವನಂ - ಅಶೋಕವನವು, ಭಗ್ನಂ - ಮುರಿಯಲ್ಪಟ್ಟಿತು, ಚೈತ್ಯ ಪ್ರಾಸಾದಃ-ಉಪ್ಪರಿಗೆಯ ಮನೆಯು (ದೇವಾಯತನರೂಪ ವಾದಮಹಡಿಯು)ನವಿನಾಶಿತಃ- ನಾಶಮಾಡಲ್ಪಡಲಿಲ್ಲ ॥೧॥ ತಸ್ಮಾತ್ - ಆದಕಾರಣದಿಂದ, ಭೀಮಂ - ಬಹಳ ದೊಡ್ಡದಾಗಿರುವ, ಪ್ರಾಸಾದಮಪಿ - ಈ ಮಹಡಿಯನ್ನು, ಅಹಂ - ನಾನು, ಬಲಂ - ಸಾಮರ್ಥ್ಯವನ್ನು, ದರ್ಶಯನ್ - ತೋರಿಸುವವನಾಗಿ, ಏವಂ - ಈ ಅಶೋಕವನವನ್ನು ಧ್ವಂಸಮಾಡಿದ ಹಾಗೆ, ವಿಧ್ವಂಸಯಾಮಿ - ನಾಶಪಡಿಸುವೆನು, ಇತಿ - ಹೀಗೆಂದು, ಹನುಮಾನ್ - ಆಂಜನೇಯನು, ಮನಸಾ - ಮನಸ್ಸಿನಿಂದ, ಸಂಚಿತ್ಯ - ಚೆನ್ನಾಗಿ ಯೋಚಿಸಿ, ತಸ್ಥೌ - ಇದ್ದನು, ॥೨॥ ಹರಿಶ್ರೇಷ್ಠಃ - ಕಪಿವರನಾದ, ಮಾರುತಾತ್ಮಜಃ - ವಾಯುನಂದನನಾದ-

---

—ನಲವತ್ತ ಮೂರನೆಯ ಸರ್ಗ—

ಧೀರನಾದ ಮಾರುತಿಯು—ಕಿಂಕರರೆಂಬ ರಕ್ಕಸರನ್ನು ಬಿಕ್ಕಲಿಕ್ಕಿದ ಮೇಲೆ, ವನವನ್ನು ಮುರಿದು ನೆಲಸಮನಾಗಿ ಮಾಡಿದೆನು, ಆದರೆ- ಇಲ್ಲಿ ಇದಿರಿಗೆ ಕಾಣಬರುವುದೊಂದು ರಕ್ಕಸರ ದೇವಾಲಯವು ಉಳಿದಿದೆ, ಇದು ಬಹಳ ಉನ್ನತವಾದುದು, ರಾವಣನಿಗೆ ಬಹು ಪ್ರಿಯವಾಗಿರಬಹುದು, ಇದನ್ನು ಸಂಪೂರ್ಣವಾಗಿ ಧ್ವಂಸಮಾಡಿದರೆ ಯುದ್ಧವು ಬೇಗನೆ ಕೈಗೂಡಬಹುದು ಎಂದು ಸ್ವಲ್ಪಹೊತ್ತಿನ ವರೆಗೂ ಯೋಚಿಸಿ ॥೧॥ ಬಳಿಕ ಮಹೋನ್ನತವಾದ ಈ ಪ್ರಾಸಾದವನ್ನು ನಾಶಪಡಿಸುವುದೇ ಸರಿ ಎಂದು ಮನದೊಳಗೆ ಗೊತ್ತು ಮಾಡಿಕೊಂಡು, ತನ್ನ ಪರಾಕ್ರಮವನ್ನು ಪ್ರಕಾಶಪಡಿಸುವವನಾಗಿ ॥೨॥ ತಾನು

ಆರುರೋಹ ಕಪಿಶ್ರೇಷ್ಠೋ ಹನುಮಾನ್ಮಾರುತಾತ್ಮಜಃ ॥೩॥
ಆರುಹ್ಯ ಗಿರಿ ಸಂಕಾಶಂ ಪ್ರಾಸಾದಂ ಹರಿಯೂಥಪಃ ।
ಬಭೌ ಸ ಸುಮಹಾತೇಜಾಃ ಪ್ರತಿಸೂರ್ಯ ಇವೋದಿತಃ॥೪॥
ಸಂಪ್ರಧೃಷ್ಯ ಚ ದುರ್ಧರ್ಷಂ ಚೈತ್ಯ ಪ್ರಾಸಾದ ಮುತ್ತಮಂ ।
ಹನುಮಾನ್ಪ್ರಜ್ವಲನ್ಲಕ್ಷ್ಮ್ಯಾ ಪಾರಿಯಾತ್ರೋಪಮೋಽಭವತ್ ॥೫॥
ಸ ಭೂತ್ವಾ ಸುಮಹಾಕಾಯಃ ಪ್ರಭಾವಾನ್ಮಾರುತಾತ್ಮಜಃ ।
ಧೃಷ್ಟ ಮಾಸ್ಫೋಟಯಾಮಾಸ ಲಂಕಾಂ ಶಬ್ದೇನ ಪೂರಯನ್ ॥೬॥
ತಸ್ಯಾಸ್ಫೋಟಿತ ಶಬ್ದೇನ ಮಹತಾ ಶ್ರೋತ್ರ ಘಾತಿನಾ ।

ಹನುಮಾನ್ - ಆಂಜನೇಯನು, ಮೇರುಶೃಂಗಮಿವ-ಮೇರು ಪರ್ವತದ ಶಿಖರದಂತೆ, ಉನ್ನತಂ -ಎತ್ತರವಾದ, ಚೈತ್ಯಪ್ರಾಸಾದಂ - ರಾಕ್ಷಸದೇವಾಲಯವನ್ನು ಕುರಿತು, ಆಪ್ಲುತ್ಯ - ಹಾರಿ, ಆರುರೋಹ - ಹತ್ತಿದನು, ॥೩॥ ಮಹಾತೇಜಾಃ - ಹೆಚ್ಚಾದ ತೇಜಸ್ಸುಳ್ಳ, ಸಃ - ಆ, ಹರಿಯೂಥಪಃ- ಕಪಿವರನು, ಗಿರಿಸಂಕಾಶಂ - ಬೆಟ್ಟಕ್ಕೆಣೆಯಾದ, ಪ್ರಾಸಾದಂ - ಉಪ್ಪರಿಗೆಯನ್ನು, ಆರುಹ್ಯ - ಏರಿ, ಪ್ರತಿ - ಇದಿರಾಗಿ ಉದಿತಃ - ಉತ್ಪನ್ನನಾದ, ಸೂರ್ಯ ಇವ - ಸೂರ್ಯನಹಾಗೆ, ಬಭೌ - ಪ್ರಕಾಶಿಸಿದನು ॥೪॥ ಹನುಮಾನ್- ಆಂಜನೇಯನು, ಲಕ್ಷ್ಮ್ಯಾ-ಪರಾಕ್ರಮ ಸಂಪತ್ತಿನಿಂದ, ಪ್ರಜ್ವಲನ್ - ಪ್ರಕಾಶಿಸುತಲಿರುವವನಾದ ಕಾರಣವೇ, ಉತ್ತಮಂ - ಶ್ರೇಷ್ಠವೆನಿಸಿದ, ದುರ್ಧರ್ಷಂ - ಹತ್ತಲಸದಳವಾದ, ಚೈತ್ಯಪ್ರಾಸಾದಂ - ರಾಕ್ಷಸ ದೇವಾಲಯವನ್ನು, ಸಂಪ್ರಧೃಷ್ಯ - ಆಕ್ರಮಿಸಿ, ಪಾರಿಯಾತ್ರೋಪಮಃ - ಪಾರಿಯಾತ್ರವೆಂಬ ಕುಲಪರ್ವತಕ್ಕೆಣೆಯಾದವನು, ಅಭವತ್ - ಆದನು ॥೫॥ ಮಾರುತಾತ್ಮಜಃ - ವಾಯುಪುತ್ರನಾದ, ಸಃ - ಆ ಹನುಮಂತನು, ಪ್ರಭಾವಾತ್ - ಸಾಮರ್ಥ್ಯದಿಂದ, ಸುಮಹಾಕಾಯಃ- ಅತ್ಯುನ್ನತ ಶರೀರವುಳ್ಳವನಾಗಿ, ಲಂಕಾಂ - ಲಂಕಾನಗರವನ್ನು, ಶಬ್ದೇನ - ಪ್ರತಿ ಧ್ವನಿಯಿಂದ, ಪೂರಯನ್ - ತುಂಬುವವನಾಗುತ್ತಾ, ಧೃಷ್ಟಂ - ಬಹು ಗಂಭೀರವಾಗಿ, ಆಸ್ಫೋಟಯಾಮಾಸ - ಸಿಂಹನಾದವನ್ನು ಮಾಡಿದನು ॥೬॥ ಮಹತಾ - ದೊಡ್ಡದಾದ, ಶ್ರೋತ್ರಘಾತಿನಾ - ಕಿವಿಗಳನ್ನು ಚುಚ್ಚುತಲಿರುವ, ತಸ್ಯ - ಆ ಹನುಮಂತನ, ಆಸ್ಫೋಟಿತ ಶಬ್ದೇನ - ಸಿಂಹನಾದದ ಸೆಲೆಯಿಂದ, ತತ್ರ - ಅಲ್ಲಿ, ವಿಹಂಗಮಾಃ-

ನಿಂತಿದ್ದ ಉದ್ಯಾನದ ದ್ವಾರದಿಂದ ಆ ಉಪ್ಪರಿಗೆಯ ಮೇಲಕ್ಕೆ ಚಿಮ್ಮಿ, ಮೇರುಪರ್ವತದ ಕೋಡಿನಂತೆ ಉನ್ನತವಾಗಿ ಬೆಳಗುತಲಿರುವ ಚೈತ್ಯಪ್ರಾಸಾದವನ್ನು ಅಡರಿದನು ॥೩॥ ಹರಿವರನು-ಗಿರಿವರದಂತಿಸೆವ ರಾಕ್ಷಸ ದೇವಾಲಯವನ್ನು ಏರಿ, ಮಹಾ ತೇಜಸ್ವಿಯಾಗಿ, ಉದಯಪರ್ವತದ ಮೇಲೆ ಹೊಳೆಯುವ ಬಾಲ ಸೂರ್ಯನಂತೆ ಕಂಗೊಳಿಸುತಲಿದ್ದನು ॥೪॥ ಮಾರುತಾತ್ಮಜನು-ತನ್ನ ಶಕ್ತಿಯಿಂದ ಮಹೋನ್ನತ ಶರೀರನಾಗಿ, ಹೆರರು ಏರಲು ಅಸದಳವೆನಿಸಿದ ಆ ಚೈತ್ಯಪ್ರಾಸಾದವನ್ನು ಆಕ್ರಮಿಸಿ,ಏರಿ,ಪಾರಿಯಾತ್ರವೆಂಬ ಕುಲಪರ್ವತದಂತೆ ಪ್ರಕಾಶಿಸುತಿದ್ದನು ॥೫॥ ಆ ಹನುಮಂತನು—ಅಂತು ಏರಿದ ಬಳಿಕ, ತನ್ನ ಶರೀರವನ್ನು ಪರ್ವತಾಕಾರವಾಗಿ ಬೆಳಸಿ,ಬಹು ಗಂಭೀರವಾದ ಸಿಂಹನಾದವನ್ನು ಮಾಡಿದನು, ಆ ಮಹಾಶಬ್ದದ ಪ್ರತಿಧ್ವನಿಯಿಂದ ಲಂಕೆಯೆಲ್ಲ ತುಂಬಿತು ॥೬॥ ಮತ್ತು-ಆ ಸಿಂಹ ಗರ್ಜನೆಯ ಹೊಯ್ಲಿನಿಂದ ಮೊಳೆತ ಪ್ರತಿಧ್ವನಿಗಳು ಎಲ್ಲೆಲ್ಲಿಯೂ ವ್ಯಾಪಿಸಿದುವು, ಕಿವಿಗಳನ್ನು

ಪೇತು ರ್ವಿಹಂಗಮಾ ಸ್ತತ್ರ ಚೈತ್ಯ ಪಾಲಾಶ್ಚ ಮೋಹಿತಾಃ ॥೭॥
ಅಸ್ತ್ರವಿ ಜ್ಜಯತಾಂ ರಾಮೋ ಲಕ್ಷ್ಮಣಶ್ಚ ಮಹಾಬಲಃ ।
ರಾಜಾ ಜಯತಿ ಸುಗ್ರೀವೋ ರಾಘವೇ ಣಾಭಿಪಾಲಿತಃ ॥೮॥
ದಾಸೋಽಹಂ ಕೋಸಲೇಂದ್ರಸ್ಯ ರಾಮಸ್ಯಾ ಕ್ಲಿಷ್ಟ ಕರ್ಮಣಃ ।
ಹನುಮಾಂ ಚ್ಛತ್ರು ಸೈನ್ಯಾನಾಂ ನಿಹಂತಾ ಮಾರುತಾತ್ಮಜಃ ॥೯॥
ನ ರಾವಣ ಸಹಸ್ರಂ ಮೇ ಯುದ್ಧೆ ಪ್ರತಿಬಲಂ ಭವೇತ್ ।
ಶಿಲಾಭಿ ಸ್ತು ಪ್ರಹರತಃ ಪಾದಪೈಶ್ಚ ಸಹಸ್ರಶಃ ॥೧೦॥
ಅರ್ದಯಿತ್ವಾ ಪುರೀಂ ಲಂಕಾ ಮಭಿವಾದ್ಯ ಚ ಮೈಥಿಲೀಂ ।
ಸಮೃದ್ಧಾರ್ಥೋ ಗಮಿಷ್ಯಾಮಿ ಮಿಷತಾಂ ಸರ್ವ ರಕ್ಷಸಾಂ ॥೧೧॥
ಏವ ಮುಕ್ತ್ವಾ ವಿಮಾನಸ್ಥ ಶ್ಚೈತ್ಯ ಸ್ಥಾ ಹರಿಯೂಥಪಃ ।

ಆಕಾಶದಲ್ಲಿ ಹಾರಿಹೋಗುವ ಪಕ್ಷಿಗಳು, ಪೇತುಃ - ಕೆಳಗೆ ಉರುಳಿದುವು, ಚೈತ್ಯಪಾಲಾಶ್ಚ - ರಾಕ್ಷಸಾಲಯದ ಕಾವಲುಗಾರರು, ಮೋಹಿತಾಃ- ಮೂರ್ಛೆ ಹೊಂದಿದವರಾಗಿ, ಪೇತುಃ - ಉರುಳಿದರು ॥೭॥ ಅಸ್ತ್ರವಿತ್ - ಅಸ್ತ್ರವಿದ್ಯಾ ಪಾರಂಗತನಾದ, ರಾಮಃ - ಶ್ರೀರಾಮನು, ಜಯತಾಂ - ಜಯಶಾಲಿಯಾಗಿರಲಿ, (ಜಯತು) ಮಹಾಬಲಃ - ಮಹಾಬಲ ಸಂಪನ್ನನಾದ, ಲಕ್ಷ್ಮಣಶ್ಚ - ಸೌಮಿತ್ರಿಯೂ, (ಜಯತು - ಸರ್ವೋತ್ಕರ್ಷದಿಂದಿರಲಿ,) ರಾಘವೇಣ - ರಾಮಚಂದ್ರನಿಂದ, ಅಭಿಪಾಲಿತಃ - ಸಂರಕ್ಷಿಸಲ್ಪಡುತಲಿರುವ, ರಾಜಾ - ಕಪಿರಾಜನಾದ, ಸುಗ್ರೀವಃ - ಸುಗ್ರೀವನೂ, ಜಯತಿ - ಸರ್ವೋತ್ತಮನಾಗಿದಾನೆ ) ॥೮॥ ( ೯, ೧೦, ೧೧ ಈ ಮೂರು ಶ್ಲೋಕಗಳೂ ೪೨ನೆಯ ಸರ್ಗದ—೩೪, ೩೫, ೩ ನೆಯ

ಚುಚ್ಚಿದುವು,ಅಂಬರದಲ್ಲಿ ಹಾರಿಹೋಗುತಲಿರುವ ಹಕ್ಕಿಗಳೆಲ್ಲ ನೆಲಕ್ಕೆ ಉರುಳಿಸಿದುವು, ಚೈತ್ಯ ಪ್ರಾಸಾದದ ಕಾವಲುಗಾರರೆಲ್ಲ ಮೂರ್ಛಿತರಾದರು ॥೭॥ ಮಹತ್ತರವಾದ ಧೀರತೆಯಿಂದ ಆ ಪ್ರಾಸಾದದ ಮೇಲೆ ಕುಳಿತು, ಸಮಸ್ತವಾದ ಅಸ್ತ್ರವಿದ್ಯೆಯಲ್ಲಿ ಪಾರಂಗತನಾದ ಶ್ರೀರಾಮನು ಸಕಲಕಲ್ಯಾಣಗುಣಾಭಿರಾಮನಾಗಿ ಮಹಾ ಜಯಶಾಲಿಯಾಗಿರುವನು, ಮಹಾ ಬಲಶಾಲಿಯಾದ ಲಕ್ಷ್ಮಣನೂ ಸರ್ವೋತ್ಕರ್ಷದಿಂದಾನೆ, ಕಪಿ ಸಾರ್ವಭೌಮನೆನಿಸಿದ ಸುಗ್ರೀವನೂ ಶ್ರೀರಾಮನಿಂದ ಸುರಕ್ಷಿತನಾಗಿ ವಿಜಯಸಂಪನ್ನನಾಗಿರುವನು ॥೮॥ ಈ ನಾನು_ ಆ ಕೋಸಲಾಧಿಪತಿಯಾದ ಶ್ರೀ ರಾಮಚಂದ್ರನಿಗೆ ದಾಸನು, ಆ ಮಹಾನುಭಾವನು ಸುಖಕರವಾಗಿ ಸಕಲ ಕಾರ್ಯಗಳನ್ನು ಸಾಧಿಸತಕ್ಕವನು, ವಾಯುನಂದನನೆನಿಸಿದ ಈ ಹನುಮಂತನು- ಶತ್ರು ಸೇನೆಗಳನ್ನೆಲ್ಲ ಧ್ವಂಸಮಾಡತಕ್ಕವನು ॥೯॥ ಈ ರಾವಣನಂತಹ ಸಾವಿರ ಮಂದಿಯಾದರೂ, ರಣಾಂಗಣದಲ್ಲಿ ಕಲ್ಲುಗಳನ್ನು ಬೀರುತ್ತಲೂ, ಮರಗಳನ್ನೆಸೆಯುತಲೂ ನಿಂತರೆ-ನನ್ನಿದಿರಿಗೆ ನಿಂತು ಕಾಳಗವನ್ನು ಕೊಡಲಾರರು ॥೧೦॥ ಈ ನಾನು-ಕಾಣಬರುವ ಈ ಲಂಕಾನಗರಿಯನ್ನು ನೆಲಸಮವಾಗುವಂತೆ ಹಾಳುಮಾಡಿ, ಜನಕರಾಜನಂದಿನಿಯಾದ ಸೀತೆಯನ್ನು ವಂದಿಸಿ, ಸಂಪೂರ್ಣವಾದ ಮನೋರಥವುಳ್ಳವನಾಗಿ, ಇಲ್ಲಿರುವರಕ್ಕಸರನ್ನು ಸಡ್ಡೆಮಾಡದೆ,ನನ್ನ ಸ್ಥಾನವನ್ನು ಕುರಿತು ತೆರಳುವೆನು ॥೧೧॥ ಆ ವಿಮಾನದ

ನನಾದ ಭೀಮನಿರ್ಹ್ರಾದೋ ರಕ್ಷಸಾಂ ಜನಯನ್ಭಯಂ ॥೧೧॥
ತೇನ ಶಬ್ದೇನ ಮಹತಾ ಚೈತ್ಯಪಾಲಾಶ್ಶತಂ ಯಯುಃ ।
ಗೃಹೀತ್ವಾ ವಿವಿಧಾನಸ್ತ್ರಾನ್ ಪ್ರಾಸಾನ್ ಖಡ್ಗಾನ್ಪರಶ್ವಧಾನ್ ॥೧೨॥
ವಿಸೃಜಂತೋ ಮಹಾಕಾಯಾ ಮಾರುತಿಂ ಪರ್ಯವಾರಯನ್ ॥೧೩॥
ತೇ ಗದಾಭಿರ್ವಿಚಿತ್ರಾಭಿಃ ಪರಿಘೈಃ ಕಾಂಚನಾಂಗದೈಃ ।
ಆಜಘ್ನುರ್ವಾನರಶ್ರೇಷ್ಠಂ ಬಾಣೈಶ್ಚಾದಿತ್ಯಸನ್ನಿಭೈಃ ॥೧೪॥
ಆವರ್ತ ಇವ ಗಂಗಾಯಾಸ್ತೋಯಸ್ಯ ವಿಪುಲೋ ಮಹಾನ್ ।

ಶ್ಲೋಕಗಳಾಗಿವೆ ) ಹರಿಯೂಥಪಃ - ಕಪಿವರನು, ವಿತಾನಸ್ಥಃ - ಆಕಾಶಚರನಾಗಿ (ವ್ಯೋಮಯಾನದಲ್ಲಿರುವವನಾಗಿ) ಚೈತ್ಯಸ್ಥಾನ್ - ರಾಕ್ಷಸ ದೇವಾಲಯದಲ್ಲಿರುವ ದಾನವರನ್ನು ಕುರಿತು. ಏವಂ - ಈ ಪ್ರಕಾರವಾಗಿ ಉಕ್ತ್ವಾ - ಹೇಳಿ, ರಕ್ಷಸಾಂ - ರಾಕ್ಷಸರಿಗೆ, ಭಯಂ - ಅಂಜಿಕೆಯನ್ನು, ಜನಯನ್ - ಉಂಟುಮಾಡುವವನಾಗಿ, ಭೀಮನಿರ್ಹ್ರಾದಃ - ಭಯಂಕರ ಪ್ರತಿಧ್ವನಿಯುಳ್ಳವನಾಗುತ್ತ. ನನಾದ - ಗರ್ಜಿಸಿದನು, ॥೧೧॥ ಶತಂ - ನೂರಾರುಮಂದಿ, ಚೈತ್ಯಪಾಲಾಃ, ದೇವಾಲಯರಕ್ಷಕರಾದ ರಾಕ್ಷಸರು, ಮಹತಾ - ದೊಡ್ಡದಾದ, ತೇನ - ಆ, ಶಬ್ದೇನ - ಸಿಂಹನಾದದಿಂದ, ಯಯುಃ - ಓಡಿದರು, ಮಹಾಕಾಯಾಃ - ಉನ್ನತ ಶರೀರವುಳ್ಳ ರಾಕ್ಷಸರು, ವಿವಿಧಾನ್ - ಬಗೆಬಗೆಯದಾದ, ಅಸ್ತ್ರಾನ್ (ವಿವಿಧಾನಿ ಅಸ್ತ್ರಾಣಿ) ನಾನಾ ಮಂತ್ರಾಸ್ತ್ರಗಳನ್ನೂ, ಪ್ರಾಸಾನ್ - ಪ್ರಾಸಾಯುಧಗಳನ್ನೂ, ಖಡ್ಗಾನ್ - ಕತ್ತಿಗಳನ್ನೂ, ಪರಶ್ವಧಾನ್ - ಕೊಡಲಿಗಳನ್ನೂ, ಗೃಹೀತ್ವಾ - ಹಿಡಿದು, ವಿಸೃಜನ್ತಃ - ಬೀಸಿ ಎಸೆಯುತಲಿರುವವರಾಗಿ, ಮಾರುತಿಂ - ಆಂಜನೇಯನನ್ನು, ಪರ್ಯವಾರಯನ್ - ಬಳಸಿ ನಿಂತರು ॥೧೨, ೧೩॥ ॥ ತೇ - ಆ ರಾಕ್ಷಸರು, ವಿಚಿತ್ರಾಭಿಃ - ನಾನಾ ವಿಧವಾದ, ಗದಾಭಿಃ - ಗದೆಗಳಿಂದಲೂ, ಕಾಂಚನಾಂಗದೈಃ - ಬಂಗಾರದ ಬರೆಗಳುಳ್ಳ, ಪರಿಘೈಃ - ಲಾಳಮಂಡಿಗೆಗಳಿಂದಲೂ, ಆದಿತ್ಯಸನ್ನಿಭೈಃ - ಸೂರ್ಯನಂತೆ ಬೆಳಗುವ, ಬಾಣೈಶ್ಚ - ಶರಗಳಿಂದಲೂ, ವಾನರಶ್ರೇಷ್ಠಂ - ಕಪಿವರನನ್ನು, ಆಜಘ್ನುಃ - ಹೊಡೆಯುತಲಿದ್ದರು ॥೧೪॥ ॥ ವಿಪುಲಃ - ದೊಡ್ಡದಾದ, ಗಂಗಾಯಾಃ - ಗಂಗೆಯ, ತೋಯಸ್ಯ - ಜಲದ, ಆವರ್ತಃ - ಸುಳಿಯು, (ಯತ್ಕಿಂಚಿದಿವ - ಯಾವುದಾದರೊಂದು ವಸ್ತುವನ್ನು ಹೇಗೋ ಹಾಗೆ ) ಸಃ - ಆ, ಗಣಃ - ರಾಕ್ಷಸ ಸಮೂಹವು, ಹರಿಶ್ರೇಷ್ಠಂ -

ಮೇಲೆ ಕುಳಿತಿರುವ ಪವಮಾನ ನಂದನನು- ಸಿಂಹಗರ್ಜನೆಯಿಂದ ಆ ಪ್ರಾಸಾದದೊಳಿರುವ ರಕ್ಕಸರನ್ನು ಬೆದರಿಸಿ, ಮೇಲೆ ಹೇಳಿದಂತೆ ಅವರನ್ನು ಕುರಿತು ಹೇಳುತ್ತ, ಅವರಿಗೆ ಮಹಾ ಭಯವನ್ನುಂಟುಮಾಡಿ,ಅವರ ಎದೆಗಳು ಅದುರುವಂತೆ ಮರಳಿ ಗರ್ಜಿಸಿದನು ॥೧೧॥ ಹನುಮನ ಸಿಂಹಗರ್ಜನೆಯನ್ನು ಕೇಳಿದ ಕೂಡಲೆ, ಚೈತ್ಯ ಪಾಲಕರಾಗಿರುವ ಮಹಾಕ್ರೂರರಾದ ರಕ್ಕಸರೊಳಗೆ ಕೆಲವರು- ಧೈರ್ಯವನ್ನು ತಾಳಿ, ಅಸ್ತ್ರ, ಪ್ರಾಸ, ಖಡ್ಗ, ಪರಶ್ವಧ ಎಂಬ ಹೆಸರಿನ ಆಯುಧಗಳನ್ನು ಹಿಡಿದು, ಆಂಜನೇಯನ ಮೇಲೆ ಪ್ರಯೋಗಿಸುತ, ಅವನನ್ನು ಸುತ್ತಲೂ ಮುತ್ತಿದರು ॥೧೩॥ ॥ ಮತ್ತು-ಆ ರಾಕ್ಷಸರು—ಬಗೆಬಗೆಯಾದ ಗದೆಗಳಿಂದಲೂ, ಸುವರ್ಣಾಲಂಕಾರದಿಂದ ಶೋಭಿಸುವ ಪರಿಘಾಯುಧಗಳಿಂದಲೂ, ಹದವಾದ ಬಾಣಗಳಿಂದಲೂ ಹನುಮಂತನನ್ನು ಹೊಡೆಯುತೊಡಗಿದರು ॥೧೪॥ ಇದಲ್ಲದೆ ರಾಕ್ಷಸರೆಲ್ಲ ಒಟ್ಟುಗೂಡಿ, ಗಂಗಾ ಪ್ರವಾಹದಲ್ಲಿನ ದೊಡ್ಡ ಸುಳಿಯು-ತನ್ನೊಳಗೆ ಸಿಲುಕಿದ ಯಾವುದಾದರೊಂದು

ಪರಿಕ್ಷಿಪ್ಯ ಹರಿಶ್ರೇಷ್ಠಂ ಸ ಬಭೌ ರಕ್ಷಸಾಂ ಗಣಃ ॥೧೫॥-॥
ತತೋ ವಾತಾತ್ಮಜಃ ಕ್ರುದ್ಧೋ ಭೀಮರೂಪಂ ಸಮಾಸ್ಥಿತಃ ॥೧೬॥
ಪ್ರಾಸಾದಸ್ಯ ಮಹಾರ್ಹಸ್ಯ ಸ್ತಂಭಂ ಹೇಮ ಪರಿಷ್ಕೃತಂ ।
ಉತ್ಪಾಟಯಿತ್ವಾ ವೇಗೇನ ಹನುಮಾನ್ ಪವನಾತ್ಮಜಃ॥೧೭॥
ತತಸ್ತಂ ಭ್ರಾಮಯಾಮಾಸ ಶತಧಾರಂ ಮಹಾಬಲಃ ॥೧೬॥-॥
ತತ್ರ ಚಾಗ್ನಿ ಸ್ಸಮಭವ ತ್ಪ್ರಾಸಾದ ಶ್ಚಾಪ್ಯದಹ್ಯತ ॥೧೮॥
ದಹ್ಯಮಾನಂ ತತೋ ದೃಷ್ಟ್ವಾ ಪ್ರಾಸಾದಂ ಹರಿಯೂಥಪಃ ।
ಸ ರಾಕ್ಷಸ ಶತಂಹತ್ವಾ ವಜ್ರೇ ಣೇಂದ್ರ ಇವಾಸುರಾನ್ ॥

ಕಪಿವರನನ್ನು, ಪರಿಕ್ಷಿಪ್ಯ- ಗಿರ್ರನೆ ತಿರುಗಿಸಿ, (ದೂರವಾಗಿ ಎಸೆದು) ಬಭೌ - ಪ್ರಕಾಶಿಸುತಲಿದ್ದಿತು ॥೧೫॥ ತತಃ - ಆ ಮೇಲೆ, ವಾತಾತ್ಮಜಃ - ವಾಯುಪುತ್ರನು, ಕ್ರುದ್ಧಃ - ಸಿಟ್ಟುಗೊಂಡವನಾಗಿ, ಭೀಮರೂಪಂ ಭಯಂಕರಾಕಾರವನ್ನು, ಸಮಾಸ್ಥಿತಃ - ಆಶ್ರಯಿಸಿದನು ॥೧೬॥ ಮಹಾಬಲಃ - ಬಹು ಬಲಶಾಲಿಯಾದ, ಪವನಾತ್ಮಜಃ - ವಾಯುಪುತ್ರನಾದ, ಹನುಮಾನ್ -ಆಂಜನೇಯನು, ಹೇಮಪರಿಷ್ಕೃತಂ- ಚಿನ್ನದಿಂದ ಅಲಂಕರಿಸಲ್ಪಟ್ಟಿರುವ, ಮಹಾಂತಸ್ಯ - ದೊಡ್ಡದಾದ ತುದಿಯುಳ್ಳ, ತಸ್ಯ - ಆ, ಪ್ರಾಸಾದಸ್ಯ - ಉಪ್ಪರಿಗೆಯ, ಸ್ತಂಭಂ - ಕಂಭವನ್ನು, ವೇಗೇನ - ವೇಗದಿಂದ, ಉತ್ಪಾಟಯಿತ್ವಾ - ಎಬ್ಬಿಕೊಂಡು (ಕಿತ್ತು) ತತಃ - ಆಮೇಲೆ, ತಂ- ಆ ಧ್ವಜಸ್ತಂಭವನ್ನು, ಅರಂ - ಬೇಗನೆ - ಶತಧಾ - ನೂರಾರು ವಿಧವಾಗಿ, ಭ್ರಾಮಯಾಮಾಸ - ತಿರುಗಿಸಿದನು ॥೧೭॥ ೧೭॥ ॥ ತತ್ರ-ಆ, ಚೈತ್ಯ ಪ್ರಾಸಾದದಲ್ಲಿ (ಆ ತಿರುಗಿಸುವ ವೇಗದಲ್ಲಿ) ಅಗ್ನಿಃ - ಬೆಂಕಿಯು, ಸಮಭವತ್ - ಹುಟ್ಟಿತು, (ತೇನ - ಆ ಅಗ್ನಿಯಿಂದ) ಪ್ರಾಸಾದಶ್ಚ - ಚೈತ್ರ ಪ್ರಸಾದವೂ, ಅದಹ್ಯತ - ಸುಡಲ್ಪಟ್ಟಿತು ॥೧೮॥ ತತಃ - ತರುವಾಯ, ಶ್ರೀಮಾನ್- ಶೌರ್ಯಸಂಪನ್ನನಾದ, ಹರಿಯೂಥಪಃ - ವಾನರಾಧಿಪತಿಯಾಗಿರುವ, ಸಃ - ಆ ಮಾರುತಿಯು, ದಹ್ಯಮಾನಂ - ಸುಡಲ್ಪಡುತಲಿರುವ, ಪ್ರಾಸಾದಂ-ರಾಕ್ಷಸ ದೇವಾಲಯವನ್ನು, ದೃಷ್ಟ್ವಾ - ನೋಡಿ, ವಜ್ರೇಣ - ವಜ್ರಾಯುಧದಿಂದ, ಅಸುರಾನ್ - ರಾಕ್ಷಸರನ್ನು, ಇಂದ್ರಇವ - ಇಂದ್ರನಂತೆ, (ಸ್ತಂಭೇನ - ಕಂಭದಿಂದ)

ಪದಾರ್ಥವನ್ನು ಗಿರ್ರನೆ ತಿರುಗಿಸುವ ಹಾಗೆ ಆಂಜನೇಯನನ್ನು ತಿರುಗಿಸಿ ಬೊಬ್ಬಿರಿದರು ॥೧೫॥ ॥ ಅದರಿಂದ ಮಹಾ ಬಲನಾದ ಆಂಜನೇಯನಿಗೆ ಬಲವಾಗಿ ಸಿಟ್ಟುಹತ್ತಿತ್ತು, ಮಹಾ ಭಯಂಕರವಾದ ಆಕಾರವನ್ನು ತಾಳಿ ನಿಂತು ॥೧೬॥ ಮಹೋನ್ನತವಾದ ಶಿಖರವುಳ್ಳ ಆ ದೇವಾಲಯದಲ್ಲಿ ಬಗೆ ಬಗೆಯ ಬಂಗಾರದ ಸಿಂಗರವನ್ನು ಪಡೆದಿರುವ ಎತ್ತರವಾದ ಧ್ವಜಸ್ತಂಭವನ್ನು ಬಲಾತ್ಕಾರದಿಂದ ಕಿತ್ತು,ಕಯ್ಯಲ್ಲಿ ಹಿಡಿದು, ಸಾವಿರಾರು ಬಗೆಯಿಂದ ತಿರುಹಿದನು ॥೧೭॥ ಆತಿರುಹುವ ವೇಗದಿಂದ ಕಯ್ಯ ಕಂಬವು ಬೇರೆ ಕಂಬಗಳಿಗೆ ತಗಲಿ, ಘೋರವಾದ ಅಗ್ನಿಯು ಹುಟ್ಟಿ, ಅದರ ಜ್ವಾಲೆಯಿಂದ ಆ ಪ್ರಾಸಾದವೆಲ್ಲ ಸುಟ್ಟುಹೋಯಿತು ॥೧೮॥ ಆಮೇಲೆ- ಶೌರ್ಯ ಧೈರ್ಯಾದಿ ಗುಣಸಂಪನ್ನನಾದ ಮಾರುತಿಯು—ಅಗ್ನಿಜ್ವಾಲೆಯಿಂದ ಸುಡುತಲಿರುವ ಉಪ್ಪರಿಗೆಯನ್ನು ನೋಡಿ ಸಂತೋಷಿಸಿ, ಇಂದ್ರನು ವಜ್ರಾಯುಧದಿಂದ ರಕ್ಕಸರನ್ನು ಸದೆ ಬಡಿಯುವ ಹಾಗೆ, ಅಲ್ಲಿದ್ದ ನೂರಾರು ಮಂದಿ ರಾಕ್ಷಸರನ್ನು ಹೊಡೆದು ಕೆಡಹಿ, ಆಕಾಶಕ್ಕೆ ಹಾರಿ, ಶೌರ್ಯ ಸಂಪದದಿಂದ ಬೆಳಗುತ್ತಾ ಇಂತೆಂದನು॥೧೯॥

ಅಂತರಿಕ್ಷೇ ಸ್ಥಿತ ಶ್ರ್ರೀಮಾ ನಿದಂ ವಚನಮಬ್ರವೀತ್ ॥೧೯॥-॥
ಮಾದೃಶಾನಾಂ ಸಹಸ್ರಾಣಿ ವಿಸೃಷ್ಟಾನಿ ಮಹಾತ್ಮನಾಂ ।
ಬಲಿನಾಂ ವಾನರೇಂದ್ರಾಣಾಂ ಸುಗ್ರೀವ ವಶವರ್ತಿನಾಂ ॥೨೦॥
ಅಟಂತಿ ವಸುಧಾಂ ಕೃತ್ಸ್ನಾಂ ವಯ ಮನ್ಯೇ ಚ ವಾನರಾಃ ॥೨೧॥
ದಶನಾಗ ಬಲಾಃ ಕೇಚಿ ತ್ಕೇಚಿ ದ್ದಶ ಗುಣೋತ್ತರಾಃ ।
ಕೇಚಿ ನ್ನಾಗಸಹಸ್ರಸ್ಯ ಬಭೂವು ಸ್ತುಲ್ಯ ವಿಕ್ರಮಾಃ ॥೨೨॥
ಸಂತಿ ಚೌಘಬಲಾಃ ಕೇಚಿ ತ್ಕೇಚಿದ್ವಾಯು ಬಲೋಪಮಾಃ ।
ಅಪ್ರಮೇಯ ಬಲಾಶ್ಚಾನ್ಯೇ ತತ್ರಾಸ ನ್ಹರಿಯೂಥಪಾಃ ॥೨೩॥

---

ರಾಕ್ಷಸಶತಂ - ನೂರಾರುಮಂದಿ ರಾಕ್ಷಸರನ್ನು, ಹತ್ವಾ- ಕೊಂದು, ಅಂತರಿಕ್ಷೇ-ಅಂತರಗಲ್ಲಿ, ಸ್ಥಿತಃ-ನಿಂತಿರುವವನಾಗಿ, ಇದಂ - ಈ ಮುಂದಿನ, ವಚನಂ— ಮಾತನ್ನು, ಅಬ್ರವೀತ್ - ಹೇಳಿದನು ॥೧೯, ೧೯॥ ॥ ಮಾದೃಶಾನಾಂ - ನನ್ನಂಥವರಾದ, ಮಹಾತ್ಮನಾಂ - ಮಹಾ ಧೈರ್ಯಶಾಲಿಗಳಾಗಿರುವ, ಬಲಿನಾಂ - ಮಹಾಬಲವುಳ್ಳ, ಸುಗ್ರೀವ ವಶವರ್ತಿನಾಂ-ಸುಗ್ರೀವನ ಸ್ವಾಧೀನದಲ್ಲಿರತಕ್ಕ, ವಾನರೇಂದ್ರಾಣಾಂ - ಕಪಿವೀರರ, ಸಹಸ್ರಾಣಿ - ಸಾವಿರಗಳು, ವಿಸೃಷ್ಟಾನಿ-ಸುಗ್ರೀವನಿಂದ ಕಳುಹಿಸಲ್ಪಟ್ಟವುಗಳಾಗಿ, ಕೃತ್ಸ್ನಾಂ ಸಮಸ್ತವಾದ, ವಸುಧಾಂ - ಭೂಮಿಯನ್ನು, ಅಟಂತಿ- ಸಂಚರಿಸುತ್ತಲಿವೆ, ವಯಂಚ. ನಾವೂ, ಅನ್ಯೇ- ಇತರರಾದ, ವಾನರಾಶ್ಚ - ವಾನರರೂ ಆಗಿರುವ, ಕೇಚಿತ್ - ಕೆಲವರು, ದಶನಾಗಬಲಾಃ - ಹತ್ತು ಆನೆಗಳಷ್ಟು ಬಲವುಳ್ಳವರು, ಕೇಚಿತ್- ಮತ್ತೆ ಕೆಲವು ವಾನರರು, ದಶಗುಣೋತ್ತರಾಃ- ಅದರ ಹತ್ತು ಪಾಲಿನಷ್ಟು ಹೆಚ್ಚಿದ ಬಲವುಳ್ಳವರು (ನೂರಾನೆಗಳ ಬಲವುಳ್ಳವರು) ಕೇಚಿತ್-ಇನ್ನು ಕೆಲವರು, ನಾಗಸಹಸ್ರಸ್ಯ- ಸಾವಿರಾನೆಗಳಿಗೆ, ತುಲ್ಯವಿಕ್ರಮಾಃ - ಸಮಾನವಾದ ಬಲವುಳ್ಳವರಾಗಿ, ಬಭೂವುಃ - ಇದಾರೆ (ಭವಂತಿ) ೨೦, ೨೧, ೨೨ ॥ ಕೇಚಿತ್ - ಇನ್ನು ಕೆಲವುಮಂದಿ ವಾನರವೀರರು, ಓಘಬಲಾಃ-ಓಘ ಎಂಬ ಸಂಖ್ಯೆಯ ಆನೆಗಳ ಬಲವುಳ್ಳವರಾಗಿ, ಸಂತಿ-ಇದ್ದಾರೆ, ಕೇಚಿತ್-ಬೇರೆ ಕೆಲವರು, ವಾಯುಬಲೋಪಮಾಃ- ವಾಯುವಿನೊಡನೆ ಸಮಾನವಾದ ಬಲವುಳ್ಳವರು, ಅನ್ಯೇ-ಇತರರಾದ, ಹರಿಯೂಥಪಾಃ - ವಾನರ ಸೇನಾನಾಯಕರು, ಅಪ್ರಮೇಯಬಲಾಃ - ಅಳೆಯಲಳವಲ್ಲದ ಬಲವುಳ್ಳವರು, ತತ್ರ-ಅಲ್ಲಿ, ಆಸನ್- (ಸಂತಿ) ಆಗಿದ್ದಾರೆ ॥೨೩॥

---

ನನ್ನಂತೆ ಮಹಾಬಲಶಾಲಿಗಳಾದ ಸಾವಿರಾರು ಮಂದಿ ವಾನರವೀರರು ಸುಗ್ರೀವನ ಆಜ್ಞಾನುಸಾರವಾಗಿ ನಡೆಯತಕ್ಕ ಕಿಂಕರರಾಗಿ ಇರುವರು, ಅವರೆಲ್ಲರೂ ಸುಗ್ರೀವನ ಅಪ್ಪಣೆಯನ್ನು ಶಿರದೊಳಾಂತು, ಸೀತೆಯನ್ನು ಹುಡುಕಲಿಕ್ಕೆ ಸಮಸ್ತ ಭೂಮಂಡಲದಲ್ಲಿಯೂ, ನಮ್ಮಂತೆ ಸಂಚರಿಸುತಲಿದಾರೆ ॥೨೦॥ ॥೨೧॥ ಆ ಮಹಾವೀರರೊಳಗೆ ಕೆಲವರು ಹತ್ತಾನೆಯ ಬಲವುಳ್ಳವರು, ಮತ್ತೆ ಕೆಲವರು ನೂರಾನೆಯ ಬಲವುಳ್ಳವರು ಇನ್ನುಕೆಲವರು ಸಾವಿರಾನೆಗಳಗೆ ಸಮವೆನಿಸಿದ ಬಲಪರಾಕ್ರಮವನ್ನುಳ್ಳವರಾಗಿದಾರೆ ॥ ೨೨ ॥ ಬೇರೆಕೆಲ ಮಂದಿ ವಾನರಧೀರರು ಓಘವೆಂಬ ಸಂಖ್ಯೆಯುಷ್ಟು ಆನೆಗಳಶಕ್ತಿ ಯುಳ್ಳವರು. ತದಿತರರು ವಾಯುವಿಗೆಣೆಯೆನಿಸಿದ ಬಲದಿಂದ ಮೆರೆಯುತಲಿದಾರೆ. ಅವರೆನ್ನು ಬಿಟ್ಟುಳಿದವರ ಬಲವು ಇಷ್ಟೆಂದು ಹೇಳಲಿಕ್ಕೆ ಸಾಧ್ಯವೇ ಇಲ್ಲದೆಇರುವುದು ॥೨೩॥ ಎಲೈ ಪಾಪಾತ್ಮರಾದ

ಈದೃಗ್ವಿಧೈಸ್ತು ಹರಿಭಿ ರ್ವೃತೋ ದಂತ ನಖಾಯುಧೈಃ ।
ಶತೈ ಶ್ಶತ ಸಹಸ್ರೈ ಶ್ಚ ಕೋಟೀಭಿ ರಯುತೈ ರಪಿ ॥೨೪॥
ಆಗಮಿಷ್ಯತಿ ಸುಗ್ರೀವ ಸ್ಸರ್ವೇಷಾಂ ವೋ ನಿಷೂದನಃ ।
ನೇಯ ಮಸ್ತಿ ಪುರೀ ಲಂಕಾ ನ ಯೂಯಂ ನಚ ರಾವಣಃ ॥
ಯಸ್ಮಾ ದಿಕ್ಷ್ವಾಕು ನಾಥೇನ ಬದ್ಧಂ ವೈರಂ ಮಹಾತ್ಮನಾ॥೨೫॥

—ಇತಿ ಶ್ರೀಮತ್ಸುಂದರಕಾಂಡೆ ತ್ರಿಚತ್ವಾರಿಂಶಸ್ಸರ್ಗಃ—

---

ದಂತನಖಾಯುಧೈಃ - ಹಲ್ಲು ಉಗುರುಗಳೇ ಆಯುಧಗಳಾಗಿ ಉಳ್ಳ, ಶತೈಃ - ನೂರಾರು ಗುಂಪುಗಳಾಗಿ ರತಕ್ಕ, ಶತಸಹಸ್ರೈಃ - ನೂರು ಸಹಸ್ರಗಳಾದ, ಕೋಟೀಭಿಃ - ಅನೇಕ ಕೋಟಿಗಳಾಗಿರುವ, ಅಯು ತೈರಪಿ - ಹತ್ತು ಸಾವಿರ ಕೋಟಿಗಳಾದ, ಈ ದೃಗ್ವಿಧೈಃ - ಇದೇ ರೀತಿಯಾಗಿರುವ (ಮೇಲೆ ಹೇಳಿದಷ್ಟು ಬಲವುಳ್ಳ) ಹರಿಭಿಃ - ವಾನರರಿಂದ, ವೃತಃ - ಸುತ್ತಲ್ಪಟ್ಟವನಾಗಿ, ಸರ್ವೇಷಾಂ - ಸಮಸ್ತರಾದ, ವಃ - ನಿಮ್ಮನ್ನು, ನಿಷೂದನಃ - ಧ್ವಂಸಮಾಡತಕ್ಕ, ಸುಗ್ರೀವಃ - ಸುಗ್ರೀವನೆಂಬ ಕಪಿ ಸಾರ್ವಭೌಮನು ಆಗಮಿಷ್ಯತಿ - ಬರುವನು ॥೨೪,೨೪॥ ಯಸ್ಮಾತ್ - ಯಾವ ಕಾರಣದಿಂದ, ಮಹಾತ್ಮನಾ - ಮಹಾನು ಭಾವನಾದ, ಇಕ್ಷ್ವಾಕುನಾಥೇನ - ಇಕ್ಷ್ವಾಕು ಕುಲೋತ್ತಮನಾದ ಶ್ರೀರಾಮನೊಡನೆ, ವೈರಂ- ವಿರೋ ಧವು (ಯುಷ್ಮಾಭಿಃ - ನಿಮ್ಮಿಂದ ) ಬದ್ಧಂ - ಕಟ್ಟಲ್ಪಟ್ಟಿತೋ, (ತಸ್ಮಾತ್ - ಆ ಕಾರಣದಿಂದಲೇ) ಇಯಂ - ಈ ಲಂಕೆಯೆಂಬ, ಪುರೀ - ನಗರವೂ, ನಾಸ್ತಿ - ಉಳಿಯುವುದಿಲ್ಲ, ಯೂಯಂ - ನೀವುಗಳೂ, ನ - ಉಳಿಯುವುದಿಲ್ಲ,ರಾವಣಶ್ಚ - ದಶಕಂಠನೂ, ನ - ಉಳಿಯುವುದಿಲ್ಲ ॥೨೫॥ ॥

—ಇಂತು ನಲವತ್ತಮೂರನೆಯ ಸರ್ಗಂ—

---

ರಾಕ್ಷಸರುಗಳಿರಾ ! ನಾವೆಲ್ಲಉಳಿದಿರುವೆವೆಂಬ ಯೋಚನೆಯನ್ನು ಬಿಡಿರಿ, ನಾನು ಹೇಳಿ ದಂತೆ ಅಪಾರವಾದ ಪರಾಕ್ರಮವನ್ನೊಳಗೊಂಡು, ಹಲ್ಲು, ಉಗುರುಗಳನ್ನೇ ಆಯು ಧಗಳನ್ನಾಗಿ ಅಳವಟ್ಟಿರುವ ಸಾವಿರಾರುಕೋಟಿ ವಾನರವೀರರಿಂದೊಡಗೂಡಿರುವ ಕಪಿಸಾ ರ್ವಭೌಮನೆನಿಸಿದ ಸುಗ್ರೀವನೊಬ್ಬನು ನಿಮ್ಮ ಹುಟ್ಟನ್ನೇ ಅಡಗಿಸತಕ್ಕವನಾಗಿ ಇಲ್ಲಿಗೆ ಸ್ವಲ್ಪ ಕಾಲದಲ್ಲಿಯೇ ಬರಹೋಗುವನು ॥೨೪॥ ॥೨೪॥ ಎಲೈ ದುರಾತ್ಮರುಗಳಿರಾ ! ಇ ಕ್ಷ್ವಾಕುನಾಥನೆನಿಸಿದ ಮಹಾನು ಭಾವನಾಗಿರುವ ಶ್ರೀರಾಮಚಂದ್ರನೊಡನೆ ಅನ್ಯಾಯ ವಾಗಿ ವೈರವನ್ನು ಬೆಳೆಸಿದಿರಿ, ಅದರಿಂದ ನೀವೂ ಉಳಿಯುವುದಿಲ್ಲ, ನಿಮ್ಮೊಡೆಯನಾದ ರಾವಣನೂ ನಾಶವನ್ನು ಪಡೆಯುವನು. ಮತ್ತು-ನಿಮ್ಮ ವಾಸಸ್ಥಾನವಾದ ಈ ಲಂಕೆಯೂ ಹಾಳಾಗಿಹೋಗುವುದು, ಆದರಿಂದ ನೀವೆಲ್ಲರೂ ಮೇಲನ್ನು ಪಡೆಯುವ ದಾರಿಯನ್ನು ಹು ಡುಕುವುದು ಒಳ್ಳೆಯದು ಎಂದು ಹೇಳುತಲಿದ್ದನು ॥೨೫॥

—ನಲವತ್ತ ಮೂರನೆಯಸರ್ಗಂ—



ಶ್ರೀ

ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ

# ಚತುಶ್ಚತ್ವಾರಿಂಶಸ್ಸರ್ಗಃ

ಸಂದಿಷ್ಟೋ ರಾಕ್ಷಸೇಂದ್ರೇಣ ಪ್ರಹಸ್ತಸ್ಯ ಸುತೋ ಬಲೀ ।
ಜಂಬುಮಾಲೀ ಮಹಾದಂಷ್ಟ್ರೋ ನಿರ್ಜಗಾಮ ಧನುರ್ಧರಃ ॥೧॥
ರಕ್ತಮಾಲ್ಯಾಂಬರಧರಃ ಸ್ರಗ್ವೀ ರುಚಿರಕುಂಡಲಃ ।
ಮಹಾನ್ವಿವೃತ್ತನಯನ ಶ್ಚಂಡ ಸ್ಸಮರ ದುರ್ಜಯಃ ॥೨॥
ಧನು ಶ್ಶಕ್ರಧನುಃಪ್ರಖ್ಯಂ ಮಹ ದ್ರುಚಿರ ಸಾಯಕಂ ।

—ನಲವತ್ತನಾಲ್ಕನೆಯ ಸರ್ಗಂ—

ಕಂದ ಆಣತಿಗೊಂಡಸುರೇಶನ । ಬಾಣಗಳಿಂ ಜಂಬುಮಾಲಿಯ್ಯತರೆ ಧುರದೊಳ್ ।
ಜಾಣಿಂದವನಂ ಹರಿ ಯಮ । ತಾಣಕೆ ಕಳುಹಲ್ಕೆ ಬಂದರೇಳ್ವರ್ ಭರದಿಂ ॥

ಬಲೀ - ಬಲಶಾಲಿಯಾದ, ಮಹಾದಂಷ್ಟ್ರಃ - ಘೋರವಾದ ಕೋರೆದಾಡೆಯುಳ್ಳ, ಪ್ರಹಸ್ತಸ್ಯ - ಪ್ರಹಸ್ತನೆಂಬ ಮಂತ್ರಿಯ, ಸುತಃ - ಮಗನಾದ, ಜಂಬುಮಾಲೀ-ಜಂಬುಮಾಲಿಯೆಂಬುವವನು, ರಾಕ್ಷಸೇಂದ್ರೇಣ-ರಾಕ್ಷಸರಾಜನಿಂದ, ಸಂದಿಷ್ಟಃ-ಆಜ್ಞಾಪಿಸಲ್ಪಟ್ಟವನಾಗಿ, ಧನುರ್ಧರಃ - ಬಿಲ್ಲನ್ನು ಹಿಡಿದವನಾಗಿ, ನಿರ್ಜಗಾಮ - ಹೊರಟು ಬಂದನು ॥೧॥ ರಕ್ತ - ಕೆಂಪಾದ, ಮಾಲ್ಯ-ಕುಸುಮಮಾಲೆಗಳನ್ನೂ, ಅಂಬರ-ವಸ್ತ್ರಗಳನ್ನೂ, ಧರಃ - ಧರಿಸಿದವನಾಗಿ, ಸ್ರಗ್ವೀ - ಪುಷ್ಪಹಾರಗಳನ್ನು ಧರಿಸಿದವನಾಗಿಯೂ, ರುಚಿರಕುಂಡಲಃ - ಸುಂದರವಾದ ಕುಂಡಲಗಳನ್ನು ಅಳವಟ್ಟವನಾಗಿಯೂ ಇರುವ, ಮಹಾನ್-ಉನ್ನತನಾದ, ವಿವೃತ್ತನಯನಃ - ತಿರುಗಿಸುತಲಿರುವ ಕಣ್ಣುಗಳುಳ್ಳ, ಚಂಡಃ - ಬಹುಕ್ರೂರನಾದ, ಸಮದುರ್ಜಯಃ - ಜಯಿಸಶಕ್ಯನೆನಿಸಿರುವ ಜಂಬುಮಾಲಿಯು ॥೨॥ ಮಹತ್ - ಬಹಳ ದೊಡ್ಡದಾದ, ರುಚಿರಸಾಯಕಂ - ಉತ್ತಮವಾದ ಬಾಣವನ್ನೊಳಗೊಂಡಿರುವ, ಶಕ್ರಧನುಃ ಪ್ರಖ್ಯಂ - ಇಂದ್ರಧನುಸ್ಸಿಗೆಣೆಯೆನಿಸಿದ, ಧನುಃ - ಬಿಲ್ಲನ್ನು, ವೇಗೇನ - ವೇಗದಿಂದ, ವಜ್ರಾಶನಿ ಸಮಸ್ವನಂ - ವಜ್ರಾಯುಧ ಧ್ವನಿ

—ನಲವತ್ತನಾಲ್ಕನೆಯ ಸರ್ಗಂ—

ಹನುಮಂತನಂತು ಪುರೋದ್ಯಾನದಲ್ಲಿ ರಕ್ಕಸರಂ ಕುರಿತು ಹೇಳುತಲಿರಲಾಗಿ, ಇತ್ತ ಪುರದೊಳಗೆ-ರಾಕ್ಷಸರಾಜನು ಆಣತಿಯನ್ನಿತ್ತೊಡನೆ- ಮಹಾಬಲಶಾಲಿಯಾಗಿ, ಪ್ರಹಸ್ತಪುತ್ರನೆನಿಸಿದ ಜಂಬುಮಾಲಿಯು, ಘೋರವಾದ ಕೋರೆದಾಡೆಗಳಿಂದ ಕಂಗೊಳಿಸುತ, ಕಯ್ಯೊಳಗೆ ಬಿಲ್ಲನ್ನಾಂತು, ಯುದ್ಧಾರ್ಥವಾಗಿ ಹೊರಟನು ॥೧॥ ಕೆಂಬಣ್ಣದ ಹೂಗಳನ್ನೂ ಬಟ್ಟೆಗಳನ್ನೂ ಅಳವಟ್ಟಿದಾನೆ, ಶ್ರೇಷ್ಠವಾದ ಕುಸುಮಹಾರಗಳನ್ನು ಧರಿಸಿದಾನೆ, ಅಂದವಾದ ಕರ್ಣಕುಂಡಲಗಳಿಂದ ಅಲಂಕೃತನಾಗಿದಾನೆ, ಉನ್ನತಶರೀರನಾಗಿ, ಕಪಿಯಮೇಲಣಕೋಪದಿಂದ ಕಣ್ಣುಗಳನ್ನು ತಿರುಗಿಸುತ್ತಾ, ಮಹಾಕ್ರೂರನಾಗಿ ಕಾಣಬರುತಲಿದ್ದನು ಇವನು ಸಮರಭೂಮಿಯಲ್ಲಿ ಯಾರಿಂದಲೂ ಜಯಿಸಲ್ಪಡತಕ್ಕವನಲ್ಲ ॥೨॥ ಮಹತ್ತರಗಳಾಗಿಯೂ, ನೋಡಲಿಕ್ಕೆ ಅಂದವಾಗಿಯೂ, ಇಂದ್ರನ ಬಿಲ್ಲಿಗೆಣೆಯಾದುದಾಗಿಯೂ ಇರುವ ಬಿಲ್ಲನ್ನೂ, ಬಾಣಗಳನ್ನೂ ಕೈಗೊಂಡು, ವಜ್ರಾಯುಧದ ಧ್ವನಿಗೂ, ಸಿಡಿಲಿನ ಶಬ್ದಕ್ಕೂ

ವಿಷ್ಫಾರಯಾಣೋ ವೇಗೇನ ವಜ್ರಾಶನಿ ಸಮಸ್ವನಂ ॥೩॥
ತಸ್ಯ ವಿಷ್ಫಾರ ಘೋಷೇಣ ಧನುಷೋ ಮಹತಾ ದಿಶಃ ।
ಪ್ರದಿಶಶ್ಚ ನಭಶ್ಚೈವ ಸಹಸಾ ಸಮಪೂರ್ಯತ ॥೪॥
ರಥೇನ ಖರಯುಕ್ತೇನ ತಮಾಗತ ಮುದೀಕ್ಷ್ಯ ಸಃ ।
ಹನುಮಾನ್ವೇಗಸಂಪನ್ನೋ ಜಹರ್ಷ ಚ ನನಾದ ಚ ॥೫॥
ತಂ ತೋರಣ ವಿಟಂಕಸ್ಥಂ ಹನುಮಂತಂ ಮಹಾಕಪಿಂ ।
ಜಂಬುಮಾಲೀ ಮಹಾಬಾಹು ರ್ವಿವ್ಯಾಧ ನಿಶಿತೈ ಶ್ಶರೈಃ ॥೬॥
ಅರ್ಧಚಂದ್ರೇಣ ವದನೇ ಶಿರಸ್ಯೇಕೇನ ಕರ್ಣಿನಾ ।

---

ಯೊಡನೆಯೂ ಸಿಡಿಲಿನ ಧ್ವನಿಯೊಡನೆಯೂ ಸಮಾನವಾದ ಧ್ವನಿಯುಳ್ಳ ಹಾಗೆ, ವಿಷ್ಫಾರಯಾಣಃ - ಬಿಲ್ಲಿನ ಹೆದೆಯ ಟಂಕಾರಗೊಳಿಸುತ್ತಾ, ನಿರ್ಜಗಾಮ - ಹೊರಹೊರಟನು ॥೩॥ ತಸ್ಯ - ಆ ಧನುಷಃ - ಧನುಸ್ಸಿನ, ಮಹತಾ - ದೊಡ್ಡದಾದ, ವಿಷ್ಫಾರಘೋಷೇಣ - ಧನುಷ್ಟಂಕಾರ ಧ್ವನಿಯಿಂದ, ದಿಶಃ - ದಿಕ್ಕುಗಳು ಪ್ರದಿಶಶ್ಚ - ವಿದಿಕ್ಕುಗಳೂ, ನಭಶ್ಚೈವ-ಆಕಾಶವೂ, ಸಹಸಾ - ಜಾಗ್ರತೆಯಾಗಿ, ಸಮಪೂರ್ಯತ (ಸಮಪೂರ್ಯಂತ) ತುಂಬಲ್ಪಟ್ಟವು ॥೪॥ ಸಃ - ಆ, ಹನುಮಾನ್ - ಆಂಜನೇಯನು, ಖರಯುಕ್ತೇನ - ಕತ್ತೆಗಳಿಂದೊಡಗೂಡಿರುವ, ರಥೇನ - ತೇರಿನಿಂದ, ಆಗತಂ - ಬಂದ, ತಂ - ಆ ಜಂಬುಮಾಲಿಯನ್ನು, ಉದೀಕ್ಷ್ಯ - ನೋಡಿ, ವೇಗಸಂಪನ್ನಃ - ವೇಗದಿಂದೊಡಗೂಡಿದವನಾಗಿ, ಜಹರ್ಷ ಚ - ಸಂತೋಷಿಸಿದನು ನನಾದ ಚ - ಸಿಂಹನಾದವನ್ನೂ ಮಾಡಿದನು ॥೫॥ ಮಹಾಬಾಹುಃ - ಹೇರಳವಾದ ತೋಳ್ಬಲವುಳ್ಳ, ಜಂಬುಮಾಲೀ - ಪ್ರಹಸ್ತಪುತ್ರನು, ತೋರಣ ವಿಟಂಕಸ್ಥಂ ಹೊರಬಾಗಿಲಿನ ಮುಂಜೂರಿನ ಮೇಲೆ ಕುಳಿತಿರುವ, ತಂ - ಆ, ಮಹಾಕಪಿಂ - ಉನ್ನತನಾದ, ಹನುಮಂತಂ - ವಾನರನನ್ನು, ನಿಶಿತೈಃ - ತೀಕ್ಷ್ಣಗಳಾದ, ಶರೈಃ - ಬಾಣಗಳಿಂದ, ವಿವ್ಯಾಧ - ಹೊಡೆದನು ॥೬॥ (ಸಃ - ಆ ಜಂಬುಮಾಲಿಯು) ವದನೆ- ಮುಖದಲ್ಲಿ, ಏಕೇನ - ಒಂದಾದ, ಅರ್ಧಚಂದ್ರೇಣ - ಅರ್ಧಚಂದ್ರಾಕಾರವಾದ ಬಾಣದಿಂದಲೂ, ಶಿರಸಿ- ತಲೆಯಲ್ಲಿ, ಕರ್ಣಿನಾ - ಅಂಕುಶಾಕಾರವಾದ ಬಾಣದಿಂದಲೂ, (ರೆಕ್ಕೆಗಳ ಅಂಬಿನಿಂದಲೂ) ಬಾಹ್ವೋಃ-

---

ಸರಿಯಾಗಿರುವ ಹಾಗೆ ಧನುಷ್ಟಂಕಾರವನ್ನು ಮಾಡುತ್ತಾ, ಬಹುವೇಗದಿಂದ ಹೊರಟನು ॥೩॥ ಆ ಜಂಬುಮಾಲಿಯ ಪ್ರಬಲವಾದ ಧನುಷ್ಟಂಕಾರದ ಘೋಷದಿಂದ ನಾಲ್ದೆಶೆಗಳೂ, ಮೂಲೆಗಳೂ, ಅಂಬರವೂ ಬಲುಬೇಗನೆ ತುಂಬಿದ್ದುವು ॥೪॥ ಹೇಸರಗತ್ತೆಗಳನ್ನು ಹೂಡಿರುವ ತೇರನ್ನು ಏರಿ, ಯುದ್ಧಾಭಿಲಾಷೆಯಿಂದ ಬರುತಲಿದ್ದಾನೆ, ಧೀರನಾದ ಆಂಜನೇಯನು ದೂರದಿಂದ ತಲೆಯುನ್ನೆತ್ತಿ ನೋಡಿದನು, ಕಾಳಗದ ಲವಲವಿಕೆಯುಳ್ಳವನಾಗಿ ಹೋರಾಟಕ್ಕೆ ತಕ್ಕ ವೀರನು ಬರುವನೆಂದು ಹರ್ಷಗೊಂಡನು, ಹಾಗೆಯೇ ವೇಗದಿಂದ ಸಿಂಹಗರ್ಜನೆಯನ್ನು ಮಾಡಿದನು ॥೫॥ ಜಂಬು ಮಾಲಿಯು ಸ್ವಲ್ಪಹೊತ್ತಿನಲ್ಲಿಯೇ ಹತ್ತಿರಕ್ಕೆ ಬಂದು, ತೋಟದ ಹೊರಬಾಗಿಲಿನ ಮುಂಜೂರಿನಮೇಲೆ ಧೀರನಾಗಿ ಕುಳಿತಿರುವ ಉನ್ನತಶರೀರನಾದ ಹನುಮಂತನನ್ನು ಕಂಡನು, ಹೇರಳವಾದ ತೋಳ್ಬಲವುಳ್ಳನಾದ ಕಾರಣವೇ ಕೂಡಲೇ ಮಾರುತಿಯಮೇಲೆ ತೀಕ್ಷ್ಣವಾದ ಬಾಣಪ್ರಯೋಗಗಳನ್ನು ಮಾಡಿದನು ॥ ೬ ॥ ಅರ್ಧಚಂದ್ರಾಕಾರವಾದ ಒಂದು ಬಾಣವನ್ನು ಮೋರೆಗೆ ಹೊಡೆದನು,

ಬಾಹ್ವೋರ್ವ್ಯಿವ್ಯಾಧ ನಾರಾಚೈ ರ್ದಶಭಿ ಸ್ತಂ ಕಪೀಶ್ವರಮ್ ॥೭॥
ತಸ್ಯ ತಚ್ಛುಶುಭೆ ತಾಮ್ರಂ ಶರೇಣಾ ಭಿಹತಂ ಮುಖಂ ।
ಶರದೀವಾಂಬುಜಂ ಫುಲ್ಲಂ ವಿದ್ಧಂ ಭಾಸ್ಕರರಶ್ಮಿನಾ ॥೮॥
ತತ್ತಸ್ಯ ರಕ್ತಂ ರಕ್ತೇನ ರಂಜಿತಂ ಶುಶುಭೆ ಮುಖಂ ।
ಯಥಾಽಕಾಶೆ ಮಹಾ ಪದ್ಮಂ ಸಿಕ್ತಂ ಚಂದನ ಬಿಂದುಭಿಃ ॥೯॥
ಚುಕೋಪ ಬಾಣಾಭಿಹತೋ ರಾಕ್ಷಸಸ್ಯ ಮಹಾಕಪಿಃ ॥೯॥-॥
ತತಃ ಪಾರ್ಶ್ವೇಽತಿ ವಿಪುಲಾಂ ದದರ್ಶ ಮಹತೀಂ ಶಿಲಾಂ ॥
ತರಸಾ ತಾಂ ಸಮುತ್ಪಾಟ್ಯ ಚಿಕ್ಷೇಪ ಬಲವದ್ಬಲೀ ॥೧೦॥-॥

---

ತೋಳುಗಳಲ್ಲಿ, ದಶಭಿಃ - ಹತ್ತಾದ, ನಾರಾಚೈಃ - ಮತ್ತೆ ಬೇರೆ ಬಾಣವಿಶೇಷಗಳಿಂದಲೂ, ತಂ - ಆ, ಕಪೀಶ್ವರಂ - ಕಪಿವರನನ್ನು, ವಿವ್ಯಾಧ - ಹೊಡೆದನು ॥೭॥ ಶರೇಣ - ಬಾಣದಿಂದ, ಅಭಿಹತಂ - ಸುತ್ತಲೂ ಹೊಡೆಯಲ್ಪಟ್ಟುದಾದಕಾರಣವೇ, ತಾಮ್ರಂ - ಕೆಂಪಾದ, ತಸ್ಯ - ಆ ಆಂಜನೇಯನ, ತತ್ - ಆ ಪೆಟ್ಟುತಿಂದ, ಮುಖಂ - ಮುಖವು, ಶರದಿ - ಶರತ್ಕಾಲದಲ್ಲಿ, ಭಾಸ್ಕರರಶ್ಮಿನಾ- ಸೂರ್ಯಕಿರಣದಿಂದ, ವಿದ್ಧಂ - ಹೊಡೆಯಲ್ಪಟ್ಟುದಾದಕಾರಣವೇ, ಫುಲ್ಲಂ-ಅರಳಿರುವ, ಅಂಬುಜಮಿವ - ಕೆಂದಾವರೆಯ ಹಾಗೆ, ಶುಶುಭೆ - ಪ್ರಕಾಶಿಸುತಲಿದ್ದಿತು ॥೮॥ ರಕ್ತಂ - ಸ್ವಭಾವದಿಂದ ಕೆಂಪಾದ, ರಕ್ತೇನ - ನೆತ್ತರಿನಿಂದ, ರಂಜಿತಂ - ಮತ್ತಷ್ಟು ಕೆಂಪಾಗಿ ಮಾಡಲ್ಪಟ್ಟ, ತಸ್ಯ - ಆ ಆಂಜನೇಯನ, ತತ್ - ಆ, ಮುಖಂ- ಮುಖವು, ಆಕಾಶೆ - ಅಂತರಿಕ್ಷದಲ್ಲಿ, ಚಂದನ ಬಿಂದುಭಿಃ - ರಕ್ತಚಂದನದ ಬೊಟ್ಟುಗಳಿಂದ, ಸಿಕ್ತಂ - ತೋಯಿಸಲ್ಪಟ್ಟ, ಮಹಾಪದ್ಮಂ ಯಥಾ - ತೋರವಾದ ಕೆಂದಾವರೆಯು ಹೇಗೋ ಹಾಗೆ, ಶುಶುಭೆ-ಹೊಳೆಯುತಲಿದ್ದಿತು ॥೯॥ ಮಹಾಕಪಿಃ - ಕಪಿವರನು, ಬಾಣಾಭಿಹತಃ - ಬಾಣಗಳಿಂದ ಹೊಡೆಯಲ್ಪಟ್ಟವನಾಗಿ, ರಾಕ್ಷಸಸ್ಯ - ರಾವಣನವಿಷಯವಾಗಿ, ಚುಕೋಪ ಕೋಪಿಸಿಕೊಂಡನು, ತತಃ - ಆಮೇಲೆ, ಪಾರ್ಶ್ವೆ - ಪಕ್ಕದಲ್ಲಿ, ಅತಿವಿಪುಲಾಂ - ಬಲುಅಗಲವಾದ, ಮಹತೀಂ- ದೊಡ್ಡದಾಗಿರುವ, ಶಿಲಾಂ - ಬಂಡೆಯನ್ನು, ದದರ್ಶ - ನೋಡಿದನು ॥ ೧೦ ॥ ಬಲವದ್ಬಲೀ - ಬಲವಂತರೊಳಗೆಲ್ಲ ಮಹಾಬಲನೆನಿಸಿದ

---

ತಲೆಗೊಂದು ಅಂಬನ್ನು ಬಿಟ್ಟನು, ಮತ್ತೆ ಕೆಲವು ಶರಗಳಿಂದ ತೋಳುಗಳನ್ನು ಅಪ್ಪಳಿಸಿದನು, ಮರಳಿಹತ್ತು ಕೋಲುಗಳನ್ನು ಮೈಮೇಲೆ ಎಸೆದನು ॥೭॥ ಸ್ವಭಾವದಿಂದಲೇ ಹನುಮನಮುಖವು ಕೆಂಪಾದುದು, ಇದರಮೇಲೆ ಬಾಣದಪೆಟ್ಟು ಬೀಳಲು ಮತ್ತಷ್ಟು ಕೆಂಪಾಗಿ, ಶರತ್ಕಾಲದೊಳಗೆ ರವಿಯ ಕಿರಣಗಳಿಂದ ಅರಳಿ ಕಂಗೊಳಿಸುವ ಕೆಂದಾವರೆಯಂತೆ ಬೆಳಗುತಲಿದ್ದಿತು ॥೮॥ ಬಾಣದ ಬಲವಾದ ಪೆಟ್ಟಿನಿಂದ ಹೊರಟ ರಕ್ತಧಾರೆಗಳಿಂದನನದು, ರಕ್ತಮಯವಾಗಿ, ಆಕಾಶದಲ್ಲಿ ತಳತಳಿಸುತಲಿರುವ ಮಾರುತಿಯ ಮುಖವು-ರಕ್ತಚಂದನ ಬಿಂದುಗಳಿಂದ ನನದಿರುವ ರಕ್ತಾಂಬುಜದಂತೆ ಹೊಳೆಯುತ ಕಾಣಬಂದಿತು ॥೯॥ ಹೀಗೆ ಬಾಣದ ಹೊಡೆತವು ಮುಖಕ್ಕೆ ತಗಲಿ ಕೆನ್ನೀರು ಹರಿಯಲು, ಹರಿಗೆ ಆಜಂಬುಮಾಲಿಯೆಂಬ ರಕ್ಕಸನ ಮೇಲೆ ಬಲವಾಗಿ ಸಿಟ್ಟು ಹತ್ತಿತು. ಕೂಡಲೆ ಇಕ್ಕೆಲಗಳಲ್ಲಿ ನೋಡಿದನು, ನೀಳವೂ, ಅಗಲವೂ, ತೋರವೂ ಆಗಿರುವ ಶಿಲೆಯನೊಂದನ್ನು ಕಂಡನು ॥೧೦॥ ಮಹಾಬಲಶಾಲಿಯಾದ ಮಾರುತಿಯು ಕೂಡಲೆ ತನ್ನ ತೋಳ್ಬಲದಿಂದ ಆ ಬಂಡೆಯನ್ನು ಕಿತ್ತು

ತಾಂ ಶರೈ ರ್ದಶಭಿಃ ಕ್ರುದ್ಧ ಸ್ತಾಡಯಾಮಾಸ ರಾಕ್ಷಸಃ ॥ ೧೧ ॥
ವಿಪನ್ನಂ ಕರ್ಮ ತದ್ದೃಷ್ಟ್ವಾ ಹನುಮಾಂ ಶ್ಚಂಡವಿಕ್ರಮಃ ।
ಸಾಲಂ ವಿಪುಲ ಮುತ್ಪಾಟ್ಯ ಭ್ರಾಮಯಾಮಾಸ ವೀರ್ಯವಾನ್ ॥೧೨॥
ಭ್ರಾಮಯಂತಂ ಕಪಿಂ ದೃಷ್ಟ್ವಾ ಸಾಲವೃಕ್ಷಂ ಮಹಾಬಲಂ ।
ಚಿಕ್ಷೇಪ ಸುಬಹೂ ನ್ಬಾಣಾನ್ ಜಂಬುಮಾಲೀ ಮಹಾಬಲಃ ॥೧೩॥
ಸಾಲಂ ಚತುರ್ಭಿ ಶ್ಚಿಚ್ಛೇದ ವಾನರಂ ಪಂಚಭಿ ರ್ಭುಜೆ ।

ಮಾರುತಿಯು, ತರಸಾ - ಬಲಾತ್ಕಾರದಿಂದ, ತಾಂ - ಆ ಶಿಲೆಯನ್ನು, ಸಮುತ್ಪಾಟ್ಯ-ಕಿತ್ತು, ಚಿಕ್ಷೇಪ - ಬೀಸಿ ಎಸೆದನು, ರಾಕ್ಷಸಃ - ಜಂಬುಮಾಲಿಯು, ಕ್ರುದ್ಧಃ - ಕೋಪಗೊಂಡವನಾಗಿ, ತಾಂ - ಆ ಶಿಲೆಯನ್ನು, ದಶಭಿಃ - ಹತ್ತಾದ ಶರೈಃ - ಬಾಣಗಳಿಂದ, ತಾಡಯಾಮಾಸ - ಹೊಡೆದನು (ಕತ್ತರಿಸಿದನು) ॥೧೧॥ ಚಂಡವಿಕ್ರಮಃ - ಕ್ರೂರವಾದ ಪರಾಕ್ರಮವುಳ್ಳ, ವೀರ್ಯವಾನ್ - ಶಕ್ತಿಪ್ರಕಾಶವುಳ್ಳವನೂ ಆದ, ಹನುಮಾನ್ - ಆಂಜನೇಯನು, ತತ್ - ಆ, ಕರ್ಮ - ಕೆಲಸವನ್ನು, ವಿಪನ್ನಂ - ವಿಪತ್ತನ್ನು ಹೊಂದಿದುದನ್ನಾಗಿ, (ಕೆಟ್ಟುಹೋದುದನ್ನಾಗಿ) ದೃಷ್ಟ್ವಾ - ನೋಡಿ, ವಿಪುಲಂ - ವಿಸ್ತಾರವಾಗಿ ಬೆಳೆದಿರುವ, ಸಾಲಂ - ಮರವನ್ನು, ಉತ್ಪಾಟ್ಯ - ಬೇರು ಸಹಿತ ಕಿತ್ತು, ಭ್ರಾಮಯಾಮಾಸ-ತಿರುಗಿಸಿದನು ॥ ಮಹಾಬಲಃ - ಹೇರಳವಾದ ಬಲವುಳ್ಳ, ಜಂಬುಮಾಲೀ - ಜಂಬುಮಾಲಿಯೆಂಬ ರಾಕ್ಷಸನು, ಸಾಲವೃಕ್ಷಂ - ಸಜ್ಜರಸದ ಮರವನ್ನು, ಭ್ರಾಮಯಂತಂ - ಸುತ್ತಿಸುತಲಿರುವ, ಮಹಾಬಲಂ - ಬಹು ಬಲಶಾಲಿಯಾದ, ಕಪಿಂ - ಹನುಮಂತನನ್ನು, ದೃಷ್ಟ್ವಾ-ನೋಡಿ, ಸುಬಹೂನ್ - ಅನೇಕಗಳಾದ, ಬಾಣಾನ್-ಶರಗಳನ್ನು, ಚಿಕ್ಷೇಪ - ಪ್ರಯೋಗಿಸಿದನು ॥೧೩॥ ಜಂಬುಮಾಲೀ - ಜಂಬುಮಾಲಿಯು, ಚತುರ್ಭಿಃ - ನಾಲ್ಕುಬಾಣಗಳಿಂದ, ಸಾಲಂ - ಆ ಮರವನ್ನು, ಚಿಚ್ಛೇದ - ಕತ್ತರಿಸಿದನು, ಪಂಚಭಿಃ - ಐದು ಬಾಣಗಳಿಂದ, ವಾನರಂ - ಹನುಮಂತನನ್ನು, ಭುಜೆ - ತೋಳಿನಲ್ಲಿಯೂ, ಏಕೇನ - ಒಂದಾದ, ಬಾಣೇನ - ಶರದಿಂದ, ಉರಸಿ - ಎದೆಯಲ್ಲಿಯೂ, ದಶಭಿಃ - ಹತ್ತುಬಾಣಗಳಿಂದ, ಸ್ತನಮಧ್ಯೇ - ಸ್ತನಗಳ

ಎತ್ತಿ, ರೋಷದಿಂದ ರಾಕ್ಷಸನಮೇಲೆ ಬಲವಾಗಿ ಇಟ್ಟನು. ಒಡನೆ ಜಂಬುಮಾಲಿಯು ಹತ್ತು ಬಾಣಗಳನ್ನೆಸೆದು ಆ ಶಿಲೆಯನ್ನು ತುಂಡಾಗುವಂತೆ ಕತ್ತರಿಸಿದನು ॥೧೧॥ ಚಂಡ ವಿಕ್ರಮನಾದ ಮಾರುತಿಗೆ ತನ್ನ ಉದ್ಯೋಗವು ವ್ಯರ್ಥವಾಯಿತೆಂದು ಮುಖ ಕೆಟ್ಟಿತು. ರೋಷವು ಬಲವಾಯಿತು. ಅತ್ತಿತ್ತ ಹಾಯನೋಡಿದನು, ಮಹೋನ್ನತವಾದ ಸಜ್ಜರಸದ ತರುವೊಂದು ಕಾಣಬಂದಿತು, ಕೂಡಲೆ ತನ್ನ ಬಾಹುಬಲದಿಂದದನ್ನು ಪೆಳ್ಳಗಿಸಿ ಬುಡ ಸಹಿತ ಕಿತ್ತುಕಯ್ಯಲ್ಲಿ ಹಿಡಿದು ಎಸೆಯಲಣಿಯಾಗಲು ಬಲವಾಗಿ ತಿರುಗಿಸಿದನು ॥೧೨॥ ಹಾಗೆ ತಿರುಹುತಲಿರುವ ಮಹಾಬಲನಾದ ಆಂಜನೇಯನನ್ನು ಕಂಡು ಜಂಬುಮಾಲಿಯು-ತನ್ನ ಪರಾಕ್ರಮವನ್ನೆಲ್ಲ ವೆಚ್ಚಮಾಡಿ, ಅನೇಕ ಬಾಣಗಳನ್ನು ಬಹು ವೇಗದಿಂದ ಪ್ರಯೋಗಿಸಿದನು. ಆ ಹನುಮನ ಕರದೊಳಿದ್ದ ಸಾಲವೃಕ್ಷವನ್ನು ತುಂಡುತುಂಡಾಗುವಂತೆ ಮಾಡಿದನು ॥೧೩॥ ನಾಲ್ಕುಶರಗಳಿಂದ ಮಾರುತಿಯ ಕರಗತವಾಗಿದ್ದ ಸಾಲತರುವು ಚೂರ್ಣಿತವಾಯಿತು. ಐದು ಬಾಣಗಳು ಮೈಗೆ ತಗಲಿದುವು. ಮತ್ತೊಂದು ಬಾಣವು ತೋಳಿಗೂ, ಇನ್ನೊಂದು ಅಂಬು ಎದೆಗೂ ಬಡಿಯಿತು. ಬೇರೆ ಹತ್ತು ಶರಗಳು ಸ್ತನಗಳ ಮಧ್ಯಭಾಗವನ್ನು ಅಡರಿದುವು ॥೧೪॥

ಉರ ಸ್ಯೇಕೇನ ಬಾಣೇನ ದಶಭಿ ಸ್ತು ಸ್ತನಾಂತರೆ ॥೧೪॥
ಸಶರೈಃ ಪೂರಿತ ತನುಃ ಕ್ರೋಧೇನ ಮಹತಾ ವೃತಃ ।
ತಮೇವ ಪರಿಘಂ ಗೃಹ್ಯ ಭ್ರಾಮಯಾಮಾಸ ವೇಗಿತಃ ॥೧೫॥
ಅತಿವೇಗೋಽತಿವೇಗೇನ ಭ್ರಾಮಯಿತ್ವಾ ಬಲೋತ್ಕಟಃ ।
ಪರಿಘಂ ಪಾತಯಾಮಾಸ ಜಂಬುಮಾಲೇ ರ್ಮಹೋರಸಿ ॥೧೬॥
ತಸ್ಯ ಚೈವ ಶಿರೋನಾಸ್ತಿ ನ ಬಾಹೂ ನ ಚ ಜಾನುನೀ ।
ನ ಧನು ರ್ನರಥೋ ನಾಽಶ್ವಾ ಸ್ತತ್ರಾದೃಶ್ಯಂತ ನೇಷವಃ ॥೧೭॥
ಸ ಹತ ಸ್ತರಸಾ ತೇನ ಜಂಬುಮಾಲೀ ಮಹಾಬಲಃ।

---

ಮಧ್ಯಭಾಗದಲ್ಲಿಯೂ, (ವಿವ್ಯಾಧ-ಹೊಡೆದನು) ॥ ೧೪ ॥ ಸಃ . ಆ ಆಂಜನೇಯನು, ಶರೈಃ - ಬಾಣಗಳಿಂದ, ಪೂರಿತತನುಃ - ತುಂಬಿದ ಶರೀರವುಳ್ಳವನಾದಕಾರಣವೇ, ಮಹತಾ - ಹೆಚ್ಚಾದ, ಕ್ರೋಧೇನ - ಕೋಪದಿಂದ, ಆವೃತಃ - ಒಡಗೂಡಿದವನಾಗಿ, ತಂ - ಆ, ಪರಿಘಮೇವ - ಪರಿಘಾಯುಧವನ್ನೇ, ಗೃಹ್ಯ - ತೆಗೆದುಕೊಂಡು, ವೇಗಿತಃ - ವೇಗವುಳ್ಳವನಾಗಿ, ಭ್ರಾಮಯಾಮಾಸ - ತಿರುಗಿಸಿದನು ॥೧೫॥ ಅತಿವೇಗಃ - ಮಹಾವೇಗವುಳ್ಳ, ಬಲೋತ್ಕಟಃ - ಬಲದಿಂದ ಕೊಬ್ಬಿದ ಹನುಮಂತನು, ಪರಿಘಂ - ಪರಿಘಾಯುಧವನ್ನು, ವೇಗೇನ - ವೇಗದಿಂದ, ಭ್ರಾಮಯಿತ್ವಾ - ಸುತ್ತಿಸಿ, ಜಂಬುಮಾಲೇಃ - ಜಂಬುಮಾಲಿಯು, (ಜಂಬುಮಾಲಿನಃ) ಮಹೋರಸಿ - ಅಗಲವಾದ ಎದೆಯಲ್ಲಿ, ಪಾತಯಾಮಾಸ - ಕೆಡಹಿದನು ॥೧೬॥ ತಸ್ಯಚೈವ - ಆಜಂಬುಮಾಲಿಗಾದರೋ, ಶಿರಃ - ತಲೆಯು, ನಾಸ್ತಿ - ಇರಲಿಲ್ಲ, ಬಾಹೂಚ-ತೋಳುಗಳೂ, ನ (ಸ್ತಃ) ಇಲ್ಲವಾದುವು, ಜಾನುನೀಚ - ಮೊಳಕಾಲುಗಳೂ, ನ (ಸ್ತಃ) ಇಲ್ಲವಾದುವು, ಧನುಃ-ಬಿಲ್ಲು, ನ-ಇರಲಿಲ್ಲ, ರಥಃ - ತೇರೂ, ನ- ಇಲ್ಲವಾಯಿತು, ಅಶ್ವಾಃ - ಕುದುರೆಗಳೂ - ನ (ಸಂತಿ) ಇರಲಿಲ್ಲ, ತತ್ರ ಆಬಿಲ್ಲಿನಲ್ಲಿ, ಇಷವಃ - ಬಾಣಗಳೂ, ನಾದೃಶ್ಯನ್ತ - ಕಾಣಲಿಲ್ಲ ॥೧೭॥ ಮಹಾಬಲಃ - ಹೆಚ್ಚಿದ ಬಲವುಳ್ಳ, ಸಃ - ಆ, ಜಂಬುಮಾಲೀ - ಜಂಬುಮಾಲಿಯೆಂಬ ರಕ್ಕಸನು, ತೇನ - ಆ ಆಂಜನೇಯನಿಂದ, ತರಸಾ - ಬಲದಿಂದ, ಹತಃ-ಹೊಡೆಯಲ್ಪಟ್ಟವನಾಗಿ, ಚೂರ್ಣಿತಾಂಗವಿಭೂಷಣಃ- ಪುಡಿಯಾದ

---

ಇಂತು ಮಾರುತಿಯು ಮೈತುಂಬ ಅಂಬುಗಳು ನಟ್ಟುವು. ಹನುಮನ ರೋಷಕ್ಕೆ ಪಾರವಿಲ್ಲದಂತಾಯಿತು. ತತ್‌ಕ್ಷಣದಲ್ಲಿಯೇ ಜಂಬುಮಾಲಿಯು ಕರದೊಳದ್ದ ಪರಿಘಾಯುಧವನ್ನು ಬಲಾತ್ಕಾರದಿಂದ ಸೆಳೆದು ಕಿತ್ತುಕೊಂಡು, ತನ್ನ ಕಯ್ಯೊಳಗೆ ಹಿಡಿದು, ಗರಗರನೆ ತಿರುಗಿಸಿದನು ॥೧೫॥ ಬಾಹುಬಲ ವೇಗದಿಂದಲೂ, ರೋಷಾವೇಶದಿಂದಲೂ ಪರಿಘಾಯುಧವನ್ನು ತಿರುಗಿಸಿ, ಜಂಬುಮಾಲಿಯು ವಿಸ್ತಾರವಾದ ಎದೆಯನ್ನು ಗುರಿನೋಡಿ ವೇಗದಿಂದ ಕೆಡಹಿದನು ॥೧೬॥ ಆ ಘೋರವಾದ ಪರಿಘಾಯುಧದಪೆಟ್ಟು ಬಲವಾಗಿ ಒಡಿದ ಕೂಡಲೆ, ಜಂಬುಮಾಲಿಯು ಶರೀರವು ಕತ್ತರಿಸಲ್ಪಟ್ಟಿತು. ತೋಳುಗಳು ತುಂಡಾದುವು. ಮೊಳಕಾಲುಗಳು ಮುರಿದು ಬಿದ್ದುವು. ಬಿಲ್ಲು ನಿಲ್ಲದೆಹೋಯಿತು. ತೇರುದೂರಸರಿದು ಚೂರಾಯಿತು. ಹಯುಗಳು ಗಾಯುಪಟ್ಟುವು. ಕೋಲುಗಳು ಕಾಣದೆ ಹೋದುವು ॥೧೭॥ ಮಹಾಬಲನಾದ ಮಾರುತಿಯು ಬಾಹುಬಲದಿಂದಪ್ಪಳಿಸಿದ ಪರಿಘಾಯುಧದ ಪೆಟ್ಟಿನಿಂದ ಜಂಬುಮಾಲಿಯು ಹತನಾದನು. ಮೈಮೇಲೆ ಇಟ್ಟುತೊಟ್ಟದ್ದ ಒಡವೆ ವಸ್ತುಗಳೆಲ್ಲ ಪುಡಿಪುಡಿ ಯಾದುವು. ಸತ್ತು ನೆಲದ

ಪಪಾತ ನಿಹತೋ ಭೂಮೌ ಚೂರ್ಣಿತಾಂಗ ವಿಭೂಷಣಃ ॥೧೯॥
ಜಂಬುಮಾಲಿಂಚ ನಿಹತಂ ಕಿಂಕರಾಂಶ್ಚ ಮಹಾಬಲಾನ್ ।
ಚುಕ್ರೋಧ ರಾವಣ ಶ್ರುತ್ವಾ ಕೋಪ ಸಂರಕ್ತ ಲೋಚನಃ ॥೧೯॥
ಸರೋಷ ಸಂವರ್ತಿತ ತಾಮ್ರಲೋಚನಃ ಪ್ರಹಸ್ತ ಪುತ್ರೇನಿಹತೇಮಹಾಬಲೆ।
ಅಮಾತ್ಯ ಪುತ್ರಾ ನತಿ ವೀರ್ಯವಿಕ್ರಮಾ ನ್ಸಮಾದಿದೇಶಾಶು ನಿಶಾಚರೇಶ್ವರಃ ॥೨೦॥
ಇತಿ ಶ್ರೀಮತ್ಸುಂದರಕಾಂಡೆ - ಚತುಶ್ಚತ್ವಾರಿಂಶ ಸ್ಸರ್ಗಃ.

ಮೆಯ್ತೊಡವೆಯುಳ್ಳವನಾಗುತ್ತಾ, ನಿಹತಃ - ಬಲವಾದ ಪೆಟ್ಟುಬಿದ್ದವನಾಗಿ, ಭೂಮೌ - ನೆಲದಲ್ಲಿ, ಪಪಾತ - ಉರುಳಿದನು ॥೧೯॥ ರಾವಣಃ - ದಶಕಂಠನು, ಜಂಬುಮಾಲಿಂ (ಜಂಬುಮಾಲಿನಂ) ಜಂಬುಮಾಲಿಯನ್ನು, ನಿಹತಂ-ಸಂಹರಿಸಲ್ಪಟ್ಟವನನ್ನಾಗಿಯೂ, ಮಹಾಬಲಾನ್-ಹೇರಳವಾದ ಬಲವುಳ್ಳ, ಕಿಂಕರಾಂಶ್ಚ - ಕಿಂಕರರೆಂಬ ರಕ್ಕಸರನ್ನೂ, ನಿಹತಾಂಶ್ಚರ- ಕೊಲ್ಲಲ್ಪಟ್ಟವರನ್ನಾಗಿಯೂ, ಶ್ರುತ್ವಾ-ಕೇಳಿ, ಕೋಪಸಂರಕ್ತಲೋಚನಃ - ಸಿಟ್ಟಿನಿಂದ ಕೆಂಪಾದ ಕಣ್ಣುಗಳುಳ್ಳವನಾಗಿ, ಚುಕ್ರೋಧ - ರೋಷಗೊಂಡನು ॥ ನಿಶಾಚರೇಶ್ವರಃ - ರಕ್ಷಸಚಕ್ರವರ್ತಿಯಾದ, ಸಃ - ಆ ರಾವಣನು, ಮಹಾಬಲೆ - ಮಹತ್ತರವಾದ ಶಕ್ತಿಯುಳ್ಳ, ಪ್ರಹಸ್ತಪುತ್ರೆ - ಮಂತ್ರಿಕುಮಾರನು, ನಿಹತೇ ಸತಿ - ಕೊಲ್ಲಲ್ಪಟ್ಟವನಾಗುತ್ತಿರಲಾಗಿ, ರೋಷಸಂವರ್ತಿತ ತಾಮ್ರಲೋಚನಃ - ಸಿಟ್ಟಿನಿಂದ ತಿರುಗುತ್ತಲಿರುವ ಕೆಂಗಣ್ಣುಳ್ಳವನಾಗುತ್ತಾ, ಅತಿವೀರ್ಯ ವಿಕ್ರಮಾನ್-ಅಧಿಕತರವಾದ ಶೌರ್ಯಪರಾಕ್ರಮಗಳುಳ್ಳ, ಅಮಾತ್ಯಪುತ್ರಾನ್ - ಮಂತ್ರಿಪುತ್ರರನ್ನು, ಆಶು - ಬೇಗನೆ, ಸಮಾದಿದೇಶ - (ಕಾಳಗಕ್ಕೆ ತೆರಳುವಂತೆ) ಆಜ್ಞೆ ಮಾಡಿದನು ॥೨೦॥

ಇಂತು ನಲವತ್ತು ನಾಲ್ಕನೆಯ ಸರ್ಗಂ

ಮೇಲೆ ಮಲಗಿದನು ॥೧೯॥ ಜಂಬುಮಾಲಿಯು ಮಡಿದನು. ಮಹಾಬಲರಾಗಿದ್ದ ಕಿಂಕರರೆಂಬ ಅಸುರರು ಅಸುಗಳನ್ನು ಕಳೆದುಕೊಂಡರು ಎಂಬ ಸುದ್ದಿಯು ರಾವಣನಿಗೆ ಮುಟ್ಟಿತು. ವರ್ತಮಾನವನ್ನು ಕೇಳದ ಕೂಡಲೇ ದಶಕಂಧರನಿಗೆ ರೋಷವು ತಲೆಗೇರಿತು. ಕಂಗಳುಕೆಂಪಡರಿದುವು ॥೧೯॥ ಮಹಾರೋಷದಿಂದ ರೌದ್ರಾವೇಶವನ್ನು ತಾಳಿದನು. ರಕ್ತವರ್ಣವಾದ ನಯನಗಳನ್ನು ತಿರುಹುತಲಿದ್ದನು. ಮಹಾಬಲನಾದ ಪ್ರಹಸ್ತಪುತ್ರನೂ ಅಳಿದುದರಿಂದ ಮಹಾವೀರ್ಯಶೌರ್ಯದಿಂದ ಮೆರೆವ ಮಂತ್ರಿಕುಮಾರರಾದ ಮತ್ತೇಳುಮಂದಿಯನ್ನು ಬೇಗನೆ ಬವರಕ್ಕೆ ತೆರಳುವಂತೆ ಆಣತಿಯನ್ನಿತ್ತನು ॥೨೦॥

— ಇಂತು ನಲವತ್ತನಾಲ್ಕನೆಯ ಸರ್ಗಂ —

## ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ

## ಪಂಚಚತ್ವಾರಿಂಶಸ್ಸರ್ಗಃ

---

ತತ ಸ್ತೇ ರಾಕ್ಷಸೇಂದ್ರೇಣ ಚೋದಿತಾ ಮಂತ್ರಿಣ ಸ್ಸುತಾಃ ।
ನಿರ್ಯಯು ರ್ಭವನಾ ತ್ತಸ್ಮಾ ತ್ಸಪ್ತಸಪ್ತಾರ್ಚಿ ವರ್ಚಸಃ ॥೧॥
ಮಹಾಬಲ ಪರೀವಾರಾ ಧನುಷ್ಮಂತೋ ಮಹಾಬಲಾಃ ।
ಕೃತಾಽಸ್ತ್ರಾಽಸ್ತ್ರವಿದಾಂ ಶ್ರೇಷ್ಠಾಃ ಪರಸ್ಪರ ಜಯೈಷಿಣಃ ॥೨॥
ಹೇಮಜಾಲ ಪರಿಕ್ಷಿಪ್ತೈ ರ್ಧ್ವಜವದ್ಭಿಃ ಪತಾಕಿಭಿಃ ।

---

—ನಲವತ್ತೈದನೆಯ ಸರ್ಗ—

ಕಂದ॥ಬಿಂಕದಿ ಬೆಳಗುವ ಹನುಮಂ । ಕಿಂಕರರಂ ಕೊಂದು ಮಂತ್ರಿ ಪುತ್ರರ ನಿರಿದುಂ ।
ಶಂಕಾವಿರಹಿತನಾಗುತೆ । ಲಂಕೆಯೊಳಾ ರಕ್ಕಸರ್ಗೆಕಿಂಕೃತಿಗೈದಂ ॥

ತತಃ - ಅನಂತರದಲ್ಲಿ, ಸಪ್ತಾರ್ಚಿರ್ವರ್ಚಸಃ - ಅಗ್ನಿಯ ತೇಜಸ್ಸಿನಂತೆ ತೇಜಸ್ಸುಳ್ಳ (ಪ್ರಕಾಶಕಾಲಿಗಳಾದ) ತೆ - ಆ, ಮಂತ್ರಿಣಃ ಸುತಾಃ - ಮಂತ್ರಿಪುತ್ರರು, ರಾಕ್ಷಸೇಂದ್ರೇಣ - ರಾಕ್ಷಸರಾಜನಿಂದ, ಚೋದಿತಾಃ - ಪ್ರೇರಿಸಲ್ಪಟ್ಟವರಾಗಿ, ತಸ್ಮಾತ್ - ಆ, ಭವನಾತ್ - ರಾವಣನ ಮನೆಯಿಂದ, ನಿರ್ಯಯುಃ- ಹೊರಟರು, ॥೧॥ ಮಹಾಬಲ ಪರೀವಾರಾಃ - ಮಹಾಶೌರ್ಯದ ಪರಿಜನವುಳ್ಳ, ಧನುಷ್ಮಂತಃ - ಧನುರ್ಧಾರಿಗಳಾಗಿರುವ, ಮಹಾಬಲಾಃ - ಹೇರಳವಾದ ದೇಹಶಕ್ತಿಯುಳ್ಳ, ಕೃತಾಸ್ತ್ರ - ಅಸ್ತ್ರವಿದ್ಯಾಭ್ಯಾಸಮಾಡಿದವರೊಳಗೂ, ಅಸ್ತ್ರವಿದಾಂ - ಬಗೆಬಗೆಯ ಅಸ್ತ್ರಗಳನ್ನು ಬಲ್ಲವರೊಳಗೂ, ಶ್ರೇಷ್ಠಾಃ - ಉತ್ತಮರೆನಿಸಿದ, ಪರಸ್ಪರ ಜಯೈಷಿಣಃ - (ನಾನು ಹನುಮಂತನನ್ನು ಜೈಸಬೇಕು, ತಾನುಹನುಮನನ್ನು ಗೆಲ್ಲಬೇಕು ಎಂಬ) ಅನ್ಯೋನ್ಯವಾಗಿ ಜಯದ ಆಶೆಯುಳ್ಳ, ॥ ೨ ॥ ಹೇಮಜಾಲ ಪರಿಕ್ಷಿಪ್ತೈಃ - ಬಂಗಾರದ ಸರಿಗೆಗಳ ಜಾಲರಿಗಳಿಂದಲಂಕರಿಸಲ್ಪಟ್ಟ, ಧ್ವಜವದ್ಭಿಃ-ದಾಳಗಳುಳ್ಳ, ಪತಾಕಿಭಿಃ-ಮಹಾಧ್ವಜಪಟಗಳುಳ್ಳ,

---

- ನಲವತ್ತೈದನೆಯ ಸರ್ಗಂ -

ತರುವಾಯ ರಾಕ್ಷಸ ರಾಜನು ಕಳುಹಿದ ಏಳು ಮಂದಿ ಮಂತ್ರಿ ಪುತ್ರರಾದ ರಾಕ್ಷಸ ವೀರರು-ಜ್ವಲಿಸುತಲಿರುವ ಅಗ್ನಿಯಂತೆ ಮಹಾ ತೇಜಸ್ಸಂಪನ್ನರಾಗಿ ರಾವಣನ ಮನೆಯಿಂದ ರಣಾಂಗಣವನ್ನು ಕುರಿತು ಹೊರಟರು ॥ ೧ ॥ ಅವರೆಲ್ಲರೂ ಮಹಾ ಬಲ ಸಂಪನ್ನರು, ಧನುರ್ಧಾರಿಗಳು, ಅಂತಸ್ಸಾರವುಳ್ಳವರು, ಶಸ್ತ್ರಾಸ್ತ್ರಪಾರಂಗತರಾದವರೊಳಗೆಲ್ಲ ಬಲು ಹೆಸರುವಾಸಿಯನ್ನು ಪಡೆದವರು, ಪ್ರತಿಯೊಬ್ಬರೂ ಹನುಮನನ್ನು ನಾನು ಗೆಲ್ಲಬೇಕು, ತಾನು ಗೆಲ್ಲಬೇಕು ಎಂಬ ಹುರುಡಿನಿಂದೊಡಗೂಡಿದವರು ॥೨॥ ಬಂಗಾರದ ಸರಿಗೆಗಳ ಬಗೆ ಬಗೆಯ ಅಲಂಕಾರಗಳನ್ನೊಳಗೊಂಡಿರುವ ಚಿಕ್ಕ ಮತ್ತು ದೊಡ್ಡ ಧ್ವಜಗಳಿಂದ

ತೋಯದಸ್ವನ ನಿರ್ಘೋಷೈ ರ್ವಾಜಿಯುಕ್ತೈ ರ್ಮಹಾರಥೈಃ ॥೩॥
ತಪ್ತಕಾಂಚನ ಚಿತ್ರಾಣಿ ಚಾಪಾ ನ್ಯಮಿತವಿಕ್ರಮಾಃ ।
ವಿಷ್ಫಾರಯಂತ ಸ್ಸಂಹೃಷ್ಟಾ ಸ್ತಟಿತ್ವಂತ ಇವಾಂಬುದಾಃ ॥೪॥
ಜನನ್ಯಸ್ತು ತತ ಸ್ತೇಷಾಂ ವಿದಿತ್ವಾ ಕಿಂಕರಾ ನ್ಹತಾನ್ ।
ಬಭೂವು ಶ್ಶೋಕಸಂಭ್ರಾಂತಾ ಸ್ಸಬಾಂಧವ ಸುಹೃಜ್ಜನಾಃ ॥೫॥
ತೇ ಪರಸ್ಪರ ಸಂಘರ್ಷಾ ತ್ತಪ್ತಕಾಂಚನ ಭೂಷಣಾಃ ।
ಅಭಿಪೇತು ರ್ಹನೂಮಂತಂ ತೋರಣಸ್ಥ ಮವಸ್ಥಿತಂ ॥೬॥

ತೋಯದಸ್ವನ ನಿರ್ಘೋಷೈಃ - ಗುಡುಗಿನಂತೆ ಧ್ವನಿಯುಳ್ಳ, ವಾಜಿಯುಕ್ತೈಃ - ಕುದುರೆಗಳಿಂ ದೊಡಗೂಡಿದ, ಮಹಾರಥೈಃ - ಅತ್ಯುನ್ನತವಾದ ರಥಗಳಿಂದೊಡಗೂಡಿದ ॥೩॥ ಅಮಿತವಿಕ್ರಮಾಃ - ಅಳವಿಲ್ಲದ ಶೌರ್ಯವುಳ್ಳ, ತಪ್ತಕಾಂಚನ ಚಿತ್ರಾಣಿ - ಪುಟವಿಟ್ಟ ಚಿನ್ನದಿಂದ ಚಿತ್ರಗಳನಿಸಿದ, ಚಾಪಾನಿ- ಬಿಲ್ಲುಗಳನ್ನು, ವಿಷ್ಫಾರಯಂತಃ, - ಟಂಕಾರಗೊಳಿಸುತಲಿರುವವರಾದ ಕಾರಣವೇ, ತಟಿತ್ವಂತಃ- ಮಿಂ ಚುಗಳನ್ನೊಳಗೊಂಡಿರುವ, ಅಂಬುದಾ ಇವ-ಮೇಘಗಳಂತೆ ಇರುವ ಆ ಮಂತ್ರಿಪುತ್ರರು, ಸಂಹೃಷ್ಟಾಃ- ಸಂತೋಷಪಡುವವರಾಗಿ, ತಸ್ಮಾತ್ ಭವನಾತ್ - ಆ ಮನೆಯ ದೆಸೆಯಿಂದ, ನಿರ್ಯಯುಃ-ಹೊರಟರು॥೪॥ ತತಃ - ಅತ್ತಕಡೆ, ತೇಷಾಂ - ಆ ಕಿಂಕರರೆಂಬ ರಕ್ಕಸರ, ಜನನ್ಯಸ್ತು-ತಾಯಿಯರಾದರೋ, ಹತಾನ್ ಹನುಮನಿಂದ ಹತರಾದ, ಕಿಂಕರಾನ್ - ಕಿಂಕರರೆಂಬ ರಕ್ಕಸರನ್ನು, ವಿದಿತ್ವಾ - ತಿಳಿದು, ಸಬಾಂಧವ ಸು ಹೃಜ್ಜನಾಃ - ಬಂಧುಮಿತ್ರರಿಂದೊಡಗೂಡಿದವರಾಗಿ, ಶೋಕ ಸಂಭ್ರಾಂತಾಃ - ದುಃಖದಿಂದ ಮೂರ್ಛಿತ ರಾದವರು, ಬಭೂವುಃ - ಆದರು ॥೫॥ ತಪ್ತಕಾಂಚನ ಭೂಷಣಾಃ - ಉತ್ತಮವಾದ ಚಿನ್ನದೊಡವೆಗಳ ನ್ನಳವಟ್ಟಿರುವ, ತೇ - ಆ ಮಂತ್ರಿಪುತ್ರರು, ಅವಸ್ಥಿತಂ-ಯುದ್ಧಸನ್ನದ್ಧನಾಗಿ,ತೋರಣಸ್ಥಂ - ವನದಹೊ ರಬಾಗಿಲಿನಲ್ಲಿನಿಂತಿರುವ, ಹನುಮಂತಂ - ಆಂಜನೇಯನನ್ನು, ಪರಸ್ಪರಸಂಘರ್ಷಾತ್ - ಬಲುಬಿರ್ರಾದ ನಡೆಗೆಯಿಂದ, (ಒಬ್ಬರಮೇಲೊಬ್ಬರುಬೀಳುವುದರಿಂದ) ಅಭಿಪೇತುಃ-ಇದಿರ್ಗೊಂಡರು. ॥೬॥ಬಾಣವೃಷ್ಟಿಂ-

ಸಹಿತವಾಗಿಯೂ, ಮಹಾ ಮೇಘಗಳಂತೆ ಧ್ವನಿ ಮಾಡುತಲಿರುವವುಗಳಾಗಿಯೂ,ದಿವ್ಯವಾದ ಹಯಗಳಿಂದೊಡಗೂಡಿದವುಗಳಾಗಿಯೂ ಇರುವ ಮಹಾ ರಥಗಳನ್ನೇರಿದವರಾಗಿ, ॥ ೩ ॥ ಶೌರ್ಯವನ್ನು ಬೀರುತ್ತಾ, ಬಂಗಾರದ ಶೃಂಗಾರದಿಂದ ಬೆಳಗುತಲಿರುವ ವಿಚಿತ್ರವಾದ ಧನು ಸ್ಸುಗಳನ್ನು ಹಿಡಿದು, ಧನುಷ್ಟಂಕಾರವನ್ನುಂಟು ಮಾಡುತ್ತಾ, ಸಿಂಹ ಗರ್ಜನೆಯನ್ನು ಮಾಡುವುದರಿಂದ ಮಹಾ ಹರ್ಷ ಸಂಪನ್ನರಾಗಿ, ಮಿಂಚುಗಳನ್ನೊಳಗೊಂಡಿರುವ ಮಹಾ ಮೇಘಗಳಂತೆ ಮೆರೆಯುತ ಬಂದರು ॥ ೪ ॥ ಅದುವರೆಗೆ ಲಂಕಾ ನಗರದಲ್ಲಿ- ಕಿಂಕ ರರು ಮಡಿದು ಹೋದ ಸುದ್ದಿಯು- ಅವರ ತಾಯಿಯರಿಗೆಲ್ಲ ತಿಳಿಯಿತು, ಅವರೆಲ್ಲರೂ ತಂ ತಮ್ಮ ಬಂಧು ಮಿತ್ರ ವರ್ಗದವರಿಂದೊಡಗೂಡಿ, ಶೋಕ ಪೀಡಿತರಾಗುತ್ತಾ ಮೂರ್ಛೆ ಬೀ ಳುತಲಿದ್ದರು. ॥ ೫ ॥ ಇತ್ತಲೀ ಮಂತ್ರಿ ಪುತ್ರರು- ನಾನಾ ವಿಧಗಳಾಗಿರುವ ಸುವರ್ಣ ಮಯವಾದ ಉಡಿಗೆ ತೊಡಿಗೆಗಳನ್ನಳವಟ್ಟವರಾಗಿ, ಉದ್ಯಾನದ ಹೊರಬಾಗಿಲಿನಲ್ಲಿ ಯುದ್ಧ ಸನ್ನದ್ಧನಾಗಿ ನಿಂತಿರುವ ಹನುಮಂತನಿದಿರಿಗೆ ಬಲು ಹುರುಡಿನಿಂದ ಬಂದು ಸೇರಿದರು ॥೬॥ ಸಿಂಹದಂತೆ ಗರ್ಜಿಸುತ್ತಲೂ, ಬಾಣದ ಮಳೆಗಳನ್ನು ಸುರಿಸುತಲೂ, ಆಭರಣಗಳಿಂದ

ಸೃಜಂತೋ ಬಾಣವೃಷ್ಟಿಂ ತೇ ರಥಗರ್ಜಿತನಿಸ್ವನಾಃ ।
ವೃಷ್ಟಿಮಂತ ಇವಾಂಭೋದಾ ವಿಚೇರು ರ್ನೈರ್ಋತಾಂಬುದಾಃ ॥೭॥
ಅವಕೀರ್ಣ ಸ್ತತ ಸ್ತಾಭಿ ರ್ಹನುಮಾಂ ಚ್ಛರವೃಷ್ಟಿಭಿಃ ।
ಅಭವ ತ್ಸಂವೃತಾಕಾರ ಶ್ಶೈಲರಾಡಿವ ವೃಷ್ಟಿಭಿಃ ॥೮॥
ಸಶರಾ ನ್ಮೋಘಯಾಮಾಸ ತೇಷಾ ಮಾಶುಚರಃ ಕಪಿಃ ।
ರಥವೇಗಂಚ ವೀರಾಣಾಂ ವಿಚರ ನ್ವಿಮಲೇ ऽ ಂಬರೇ ॥೯॥
ಸ ತೈಃ ಕ್ರೀಡ ನ್ಧನುಷ್ಮದ್ಭಿ ರ್ವ್ಯೋಮ್ನಿ ವೀರಃ ಪ್ರಕಾಶತೇ ।
ಧನುಷ್ಮದ್ಭಿ ರ್ಯಥಾ ಮೇಘೈ ರ್ಮಾರುತಃ ಪ್ರಭು ರಂಬರೇ ॥೧೦॥

---

ಬಾಣದ ಮಳೆಯನ್ನು, ಸೃಜಂತಃ - ಸುರಿಸುತಲಿರುವ, ರಥಗರ್ಜಿತನಿಸ್ವನಾಃ - ರಥಧ್ವನಿಯೆಂಬ ಗುಡುಗನ್ನೊಳಗೊಂಡಿರುವ, ನೈರ್ಋತಾಂಬುದಾಃ - ಮೇಘಗಳಂತೆ ಕಾಣಬರುವ ರಕ್ಕಸರು, ವೃಷ್ಟಿಮಂತಃ - ಮಳೆಗರೆಯುತ್ತಿರುವ, ಅಂಭೋದಾಇವ - ಮೋಡಗಳ ಹಾಗೆ, ವಿಚೇರುಃ - ಸಂಚರಿಸುತಲಿದ್ದರು, ॥೭॥ ತತಃ - ತರುವಾಯು, ಹನುಮಾನ್ - ಆಂಜನೇಯನು, ತಾಭಿಃ - ಆ, ಶರವೃಷ್ಟಿಭಿಃ - ಬಾಣಗಳ ಮಳೆಗಳಿಂದ, ಅವಕೀರ್ಣಃ - ಮುಚ್ಚಲ್ಪಟ್ಟವನಾಗಿ, ವೃಷ್ಟಿಭಿಃ - ಮಳೆಗಳಿಂದ, ಸಂವೃತಾಕಾರಃ - ಮುಚ್ಚಿಹೋದ ಆಕೃತಿಯುಳ್ಳ, ಶೈಲರಾಡಿವ - ದೊಡ್ಡಬೆಟ್ಟದಂತೆ, ಅಭವತ್ - ಇದ್ದನು ॥೮॥ ಸಃ - ಆ, ಕಪಿಃ - ಆಂಜನೇಯನು, ಆಶುಚರಃ - ಶೀಘ್ರಗಮನವುಳ್ಳವನಾಗುತ್ತಾ, ವೀರಾಣಾಂ - ಮಹಾಶೂರರಾದ, ತೇಷಾಂ - ಆ ಮಂತ್ರಿಪುತ್ರರ, ಶರಾನ್ - ಬಾಣಗಳನ್ನು, ಮೋಘಯಾಮಾಸ - ವ್ಯರ್ಥವಾಗುವಂತೆ ಮಾಡಿದನು, ವಿಮಲೆ - ನಿರ್ಮಲವಾದ, ಅಂಬರೆ - ಆಕಾಶದಲ್ಲಿ, ವಿಚರನ್ - ಸಂಚರಿಸುತ್ತಿರುವವನಾಗಿ, ರಥವೇಗಂಚ - ರಥಗಳವೇಗವನ್ನೂ, (ಮೋಘಯಾಮಾಸ-ವ್ಯರ್ಥಗೊಳಿಸಿದನು) ॥೯॥ ಪ್ರಭುಃ - ಸಮರ್ಥನಾದ, ಮಾರುತಃ - ವಾಯುವು, ಅಂಬರೆ - ಆಕಾಶದಲ್ಲಿ, ಧನುಷ್ಮದ್ಭಿಃ - ಇಂದ್ರಧನುಸ್ಸನ್ನು ಧರಿಸಿರುವ, ಮೇಘೈಃ- ಮೇಘಗಳೊಡನೆ, ಕ್ರೀಡನ್ - ವಿಹರಿಸುತ್ತಿರುವವನಾಗಿ, ಯಥಾ - ಹೇಗೆ, ಪ್ರಕಾಶತೆ- ಬೆಳಗುತಲಿರುವನೋ, (ತಥಾ - ಹಾಗೆ) ವೀರಃ - ಶೂರನೆನಿಸಿದ, ಸಃ - ಆ ಆಂಜನೇಯನು, ವ್ಯೋಮ್ನಿ-ಅಂತರಿಕ್ಷದಲ್ಲಿ, ಧನುಷ್ಮದ್ಭಿಃ - ಬಿಲ್ಲಾಳುಗಳಾಗಿರುವ, ತೈಃ - ಆರಾಕ್ಷಸರೊಡನೆ,

---

ಬೆಳಗುತಲೂ ಇರುವ ಆಮಂತ್ರಿ ಪುತ್ರರು- ಗುಡುಗಿನಿಂದಲೂ, ಮಿಂಚಿನಿಂದಲೂ ಸಹಿತವಾಗಿ ಮಳೆಗರೆಯುತಲಿರುವ ಮಳೆಗಾಲದ ಮೇಘಗಳಂತೆ ಸಂಚರಿಸುತಲಿದ್ದರು. ॥೭॥ ಆಗಲಾ ಆಂಜನೇಯನು- ರಕ್ಕಸರು ಕರೆಯುತಲಿರುವ ಬಾಣಗಳ ಮಳೆಗಳಿಂದ ಮುಚ್ಚಲ್ಪಟ್ಟವನಾಗಿ, ತನ್ನ ಆಕಾರವೇ ಹೊರಗೆ ಕಾಣಬರದಂತಿರುತ್ತಾ ಮಹಾ ಪರ್ವತದಂತಿದ್ದನು. ॥೮॥ ಬಳಿಕ ಶೂರನಾದ ಮಾರುತಿಗೆ ಬಲು ಸಿಟ್ಟು ಹತ್ತಿತು. ಆಶರರ ಶರಗಳನ್ನೆಲ್ಲ ಧ್ವಂಸಮಾಡಿದನು. ರಥಗಳನ್ನೆಲ್ಲಾ ಪುಡಿಪುಡಿಮಾಡಿದನು. ಆ ವೀರರನ್ನೆಲ್ಲಸಡ್ಡೆ ಮಾಡದೆ ಆಗಸಕ್ಕೆ ಹಾರಿ ಬೊಬ್ಬಿರಿದನು. ॥ ೯ ॥ ಚಾಪ ಪಾಣಿಗಳಾದ ನಿಶಾಚರರೊಡನೆ ಹೋರಾಡುತ್ತಾ, ಆಕಾಶದಲ್ಲಿ ಕಂಗೊಳಿಸುತಲಿರುವ ಕಪಿವೀರನು- ಆಕಾಶದಲ್ಲಿ ಮೂಡುವ ಇಂದ್ರ ಧನುಸ್ಸಿನಿಂದೊಡಗೂಡಿದ ಮೇಘಗಳೊಡನೆ ಸಂಚರಿಸುವ ವಾಯುವಿನಂತೆ ಕಾಣಬರುತ್ತಿದ್ದನು. ॥ ೧೦ ॥ ಬಳಿಕ ವೀರ ಮಾರುತಿಯು -ಮಹಾ

ಸ ಕೃತ್ವಾ ನಿನದಂ ಘೋರಂ ತ್ರಾಸಯಂ ಸ್ತಾಂ ಮಹಾಚಮೂಂ ।
ಚಕಾರ ಹನುಮಾ ನ್ವೇಗಂ ತೇಷು ರಕ್ಷಸ್ಸು ವೀರ್ಯವಾನ್ ॥೧೧॥
ತಲೇ ನಾಽಭ್ಯಹನ ತ್ಕಾಂಶ್ಚಿ ತ್ಪಾದೈಃ ಕಾಂಶ್ಚಿ ತ್ಪರಂತಪಃ।
ಮುಷ್ಟಿನಾಽಭ್ಯಹನ ತ್ಕಾಂಶ್ಚಿತ್ ನಖೈಃ ಕಾಂಶ್ಚಿ ದ್ವ್ಯದಾರಯತ್ ॥೧೨॥
ಪ್ರಮಮಾ ಥೋರಸಾ ಕಾಂಶ್ಚಿ ದೂರುಭ್ಯಾ ಮಪರಾ ನ್ಕಪಿಃ ।
ಕೇಚಿ ತ್ತಸ್ಯ ನಿನಾದೇನ ತತ್ರೈ ವ ಪತಿತಾ ಭುವಿ ॥೧೩॥
ತತಸ್ತೇ ಷ್ವವಸನ್ನೇಷು ಭೂಮೌ ನಿಪತಿತೇಷು ಚ ।

---

ಕ್ರೀಡನ್ - ಯುದ್ಧಕ್ರೀಡೆಯನ್ನು ನಡೆಸುತ್ತಿರುವವನಾಗಿ, ಪ್ರಕಾಶತೇ - ಪ್ರಕಾಶಿಸುತಲಿದ್ದನು, ವೀರ್ಯವಾನ್- ಪರಾಕ್ರಮಶಾಲಿಯಾದ, ಸಃ - ಆ, ಹನುಮಾನ್ - ಆಂಜನೇಯನು, ಘೋರಂ - ಭಯಂಕರವೆನಿಸಿದ, ನಿನದಂ - ಸಿಂಹನಾದವನ್ನು, ಕೃತ್ವಾ - ಮಾಡಿ, ತಾಂ - ಆ, ಮಹಾಚಮೂಂ - ದೊಡ್ಡ ಸೇನೆಯನ್ನು, ತ್ರಾಸಯನ್ - ಭಯಪಡಿಸುವವನಾಗಿ, ತೇಷು - ಆ, ರಕ್ಷಸ್ಸು - ರಾಕ್ಷಸರಲ್ಲಿ, ವೇಗಂ - ಸಂಹಾರ ಪ್ರಯತ್ನವನ್ನು, ಚಕಾರ - ಮಾಡಿದನು ॥೧೧॥ ಪರಂತಪಃ-ಶತ್ರುಸಂತಾಪಕರನಾದ, ಕಪಿಃ - ಆಂಜನೇಯನು, ತಲೇನ - ಕರತಲದಿಂದೆ, ಕಾಂಶ್ಚಿತ್ - ಕೆಲವರನ್ನು, ಅಭ್ಯಹನತ್ - ಹೊಡೆದನು ಪಾದೈಃ-ಕಾಲುಗಳಿಂದ, ಕಾಂಶ್ಚಿತ್-ಮತ್ತೆ ಕೆಲವರನ್ನು, (ಅಭ್ಯಹನತ್ - ಒದೆದನು) ನಖೈಃ-ಉಗುರುಗಳಿಂದ, ಕಾಂಶ್ಚಿತ್ - ಇನ್ನು ಕೆಲವರನ್ನು, ವ್ಯದಾರಯತ್ - ಸೀಳಿದನು, ॥೧೨॥ ಕಪಿಃ - ಆಹನುಮನು ಉರಸಾ - ಎದೆಯಿಂದ, ಕಾಂಶ್ಚಿತ್ - ಕೆಲಮಂದಿಯನ್ನು, ಪ್ರಮಮಾಥ - ಮಥಿಸಿದನು, (ಹೊಡೆದನು) ಊರುಭ್ಯಾಂ - ತೊಡೆಗಳಿಂದ, ಅಪರಾನ್ - ಬೇರೆ ಕೆಲವರನ್ನು, (ಪ್ರಮಮಾಥ - ಇರುಕಿಸಿಹಿಂಡಿದನು, ಕೇಚಿತ್-ಕೆಲವರುಂದಿರಾಕ್ಷಸರು, ತಸ್ಯ - ಆ ಹನುಮಂತನ, ನಿನಾದೇನ- ಸಿಂಹನಾದದಿಂದ, ತತ್ರೈವಭುವಿ-ಆ ರಣಭೂಮಿಯಲ್ಲಿಯೇ, ಪತಿತಾಃ - ಉರುಳಿದರು ॥೧೩॥ ತತಃ-ಆಹಿಂದೆ, ತೇಷು-ಆಮಂತ್ರಿಪುತ್ರರು, ಅವಸನ್ನೇಷು - ಪ್ರಾಣಾಂತವನ್ನು ಹೊಂದಿದವರಾಗಿ, ಭೂಮೌ-ಭೂಮಿಯಲ್ಲಿ, ನಿಪತಿತೇಷುಸತ್ಸು ಚ - ಉರುಳಿದವರಾಗುತ್ತಿರಲಾಗಿ, ಸರ್ವಂ - ಸಮಸ್ತವಾದ, ತತ್ಸೈನ್ಯಂ- ಆಮಂತ್ರಿಪುತ್ರರ ಸೇನೆಯು, ಭಯಾರ್ದಿತಂ-ಭಯದಿಂದ ಹಿಂಸಿಸಲ್ಪಟ್ಟದಾಗಿ, ದಶದಿಶಃ-ಹತ್ತುದಿಕ್ಕುಗಳನ್ನು ಕುರಿತೂ, ಅಗಮತ್-

---

ಘೋರವಾದ ಸಿಂಹನಾದವನ್ನು ಮಾಡಿ, ರಾಕ್ಷಸ ಸೇನೆಯನ್ನೆಲ್ಲ ಚದರಿಸಿ, ಭಯಗೊಳಿಸಿ, ಅವರಲ್ಲಿ ತನ್ನ ಶೌರ್ಯ ವೇಗದ ರೀತಿಯನ್ನು ತೋರಿಸಲಿಕ್ಕೆ ಆರಂಭಿಸಿದನು. ॥ ॥೧೧॥ ಅಂಗೈಯಿಂದ ಕೆಲವರನ್ನು ಅಪ್ಪಳಿಸಿದನು, ಕಾಲುಗಳಿಂದ ಕೆಲವರನ್ನು ಒದೆದನು. ಹಗೆಗಳನ್ನು ಸಂತಾಪ ಗೊಳಿಸುತ್ತಾ ಮತ್ತೆ ಕೆಲವರನ್ನು ಮುಷ್ಟಿಯಿಂದ ತಗಲಿಸಿದನು. ಇನ್ನು ಕೆಲವರನ್ನು ಉಗುರುಗಳಿಂದ ಛಿನ್ನಾ ಭಿನ್ನವಾಗಿ ಸೀಳಿ ಕೆಡಹಿದನು. ॥ ೧೨ ॥ ಬೇರೆ ಕೆಲವರ ಮೇಲೆ ಬಿದ್ದು ಎದೆಯ ಉರುಬಿನಿಂದ ಅರೆದನು, ತೊಡೆಗಳ ಸಂದಿನಲ್ಲಿ ಇರುಕಿಸಿ ಬಹು ಮಂದಿಯನ್ನು ಕೊಂದನು, ಅವನ ಸಿಂಹ ಗರ್ಜನೆಯಿಂದ ಅನೇಕರು ನೆಲದ ಮೇಲೆ ಬಿದ್ದು ಒರಗಿದರು, ಇಂತಾ ರಣದಲ್ಲಿ ಆ ಮಹಾ ವೀರನ ಹಾವಳಿಯು ಹೇಳಲಾರದಾಗಿದ್ದಿತು.॥೧೩॥ ಬಳಿಕ ಆ ಮಂತ್ರಿ ಪುತ್ರರೂ ಅವರ ಅನುಚರರೂ ಸಹ ಹತರಾಗಿ ನೆಲದಲ್ಲಿ ಬಿದ್ದುರುಳುತಿರಲಾಗಿ, ಹತ ಶೇಷರಾದ ನಿಶಾಚರರ ಹಿಂಡು ಹನುಮನ ಉರುಬನ್ನು

ತತ್ತೈಸ್ಸ್ಯ ಮಗವು ತ್ಸರ್ವಂ ದಿಶೋ ದಶ ಭಯಾರ್ದಿತಂ ॥೧೪॥
ವಿನೇದು ರ್ವಿಸ್ವರಂ ನಾಗಾ ನಿಪೇತು ರ್ಭುವಿ ವಾಜಿನಃ ।
ಭಗ್ನ ನೀಡ ಧ್ವಜ ಚ್ಛತ್ರೈ ರ್ಭೂಶ್ಚ ಕೀರ್ಣಾ ಽ ಭವ ದ್ರಥೈಃ ॥೧೫॥
ಸ್ರವತಾ ರುಧಿರೇಣಾಽಥ ಸ್ರವಂತ್ಯೋ ದರ್ಶಿತಾಃ ಪಥಿ।
ವಿವಿಧೈಶ್ಚ ಸ್ವರೈ ರ್ಲಂಕಾ ನನಾದ ವಿಕೃತಂ ತದಾ ॥ ೧೬ ॥
ಸ ತಾ ನ್ಪ್ರವೃದ್ಧಾ ನ್ವಿನಿಹತ್ಯ ರಾಕ್ಷಸಾನ್ ಮಹಾಬಲ ಶ್ಚಂಡ ಪರಾಕ್ರಮಃ ಕಪಿಃ।
ಯುಯುತ್ಸು ರನ್ಯೈಃ ಪುನರೇವ ರಾಕ್ಷಸೈ ಸ್ತಮೇವ ವೀರೋ ಽಭಿಜಗಾಮ ತೋರಣಂ॥

– ಇತಿ ಶ್ರೀಮತ್ಸುಂದರಕಾಂಡೆ ಪಂಚ ಚತ್ವಾರಿಂಶಸ್ಸರ್ಗಃ –

---

ಓಡಿತು ॥೧೪॥ ನಾಗಾಃ-ಆನೆಗಳು, ವಿಸ್ವರಂ- ವಿಕಾರಧ್ವನಿಯುಂಟಾಗುವಹಾಗೆ. ವಿನೇದುಃ-ಅಬ್ಬರಿಸಿದುವು, ವಾಜಿನಃ-ಕುದುರೆಗಳು, ಭುವಿ - ಭೂಮಿಯಲ್ಲಿ, ನಿಪೇತುಃ - ಉರುಳಿದುವು, ಭೂಶ್ಚ-ಭೂಮಿಯೂ, ಭಗ್ನನೀಡಧ್ವಜಚ್ಛತ್ರೈಃ - ಮುರಿದುಹೋದ ಗೂಡು, ದಾಳ, ಕೊಡೆ, ಇವುಗಳನ್ನೊಳಗೊಂಡಿರುವ, ರಥೈಃ-ತೇರುಗಳಿಂದ, ಅವಕೀರ್ಣಾ - ಹೊದಿಸಲ್ಪಟ್ಟುದು, ಅಭವತ್-ಆಗಿದ್ದಿತು ॥೧೫॥ ಅಥ-ಅನಂತರದಲ್ಲಿ, ಸ್ರವಂತ್ಯಃ-ಹೊಳೆಗಳು, ಪಥಿ-ಮಾರ್ಗದಲ್ಲಿ, ಸ್ರವತಾ- ಹರಿಯುತಲಿರುವ, ರುಧಿರೇಣ-ರಕ್ತದಿಂದ, (ಯುತಾಃ - ಕೂಡಿದವುಗಳಾಗಿ,) ಜನೈಃ-ಜನರಿಂದ, ದರ್ಶಿತಾಃ- (ದೃಷ್ಟಾಃ) ನೋಡಲ್ಪಟ್ಟವು, ತದಾ-ಆಗ, ಲಂಕಾ - ಲಂಕಾನಗರವು, ವಿವಿಧೈಃ-ನಾನಾವಿಧಗಳಾದ, ಸ್ವರೈಶ್ಚ-ರಕ್ಕಸರ ಧ್ವನಿಗಳಿಂದ, ವಿಕೃತಂ-ವಿಕಾರವಾಗಿ, ನನಾದ-ಕೂಗುವಂತಿದ್ದಿತು ॥೧೬॥ ಮಹಾಬಲಃ-ಬಹುಬಲಶಾಲಿಯಾದ, ಚಂಡಪರಾಕ್ರಮಃ - ಕ್ರೂರವಾದ ಪರಾಕ್ರಮವುಳ್ಳ, ವೀರಃ-ಶೂರನಾದ, ಸಃಕಪಿಃ-ಆ ಆಂಜನೇಯನು, ಪ್ರವೃದ್ಧಾನ್ - ಶೌರ್ಯದಿಂದ ಪ್ರಬಲರಾಗಿದ್ದ, ತಾನ್-ಆ, ರಾಕ್ಷಸಾನ್-ರಕ್ಕಸರನ್ನು, ವಿನಿಹತ್ಯ-ಕೊಂದು, ಪುನಃ-ಮರಳಿ, ಅನ್ಯೈಃ-ಇತರರಾದ, ರಾಕ್ಷಸೈಃ-ರಕ್ಕಸರೊಡನೆ, ಯುಯುತ್ಸುಃ-ಯುದ್ಧ ಮಾಡಲೆಳಸಿದವನಾಗಿ, ತಮೇವತೋರಣಂ-ಆ ವನದ ಹೊರಬಾಗಿಲನ್ನೇ, ಅಭಿಜಗಾಮ-ಆಶ್ರಯಿಸಿದನು ॥೧೭॥

—ಇಂತು ನಲವತ್ತೈದನೆಯ ಸರ್ಗಂ—

---

ತಾಳಲಾರದೆ ಹೆದರಿ ದಿಕ್ಕಾಪಾಲಾಗಿ ಓಡಿ ಹೋದರು. ॥ ೧೪ ॥ ಪಡೆಯೊಳಿದ್ದ ಆನೆಗಳು ಬಹು ವಿಕಾರವಾಗಿ ಕೂಗಿಕೊಂಡುವು, ಕುದುರೆಗಳು ಹತಗಳಾಗಿ ಭೂಮಿಯಲ್ಲಿ ಬಿದ್ದುವು, ಕಿಟಕಿಗಳು, ಅಂತಸ್ತುಗಳು, ಧ್ವಜಗಳು ಛತ್ರಗಳು ಮುಂತಾದವುಗಳೆಲ್ಲವೂ ಮುರಿದು ಹರಿದುಹೋಗಲು, ತೇರುಗಳೆಲ್ಲ ತುಂಡು ತುಂಡಾಗಿ ಬಿದ್ದು ಕೆಡುದುವು ॥ ೧೫ ॥ ಬವರದಲ್ಲಿ ಸತ್ತ ರಕ್ಕಸರ ಮೈಗಳ ಗಾಯಗಳಿಂದ ಹರಿದ ರಕ್ತದ ಹೊಳೆಗಳು-ಭಯಂಕರಗಳಾಗಿ ಕಾಣಬರುತ್ತಿದ್ದುವು, ರಕ್ಕಸರ ಗೋಳು ಹೇಳಲಾರದಾಗಿದ್ದಿತು. ಇದರಿಂದ ಲಂಕಾನಗರವೇ ವಿಕಾರವಾದ ಧ್ವನಿಯಿಂದ ಮೊರೆಯಿಡುವಂತಿದ್ದಿತು. ॥ ೧೬ ॥ ಮಹಾ ಬಲ ಪರಾಕ್ರಮ ಶಾಲಿಯಾದ ಆಂಜನೇಯನು- ಬಲ ಪರಾಕ್ರಮದಿಂದ ಕೊಬ್ಬಿದ್ದ ಪ್ರಚಂಡ ರಾಕ್ಷಸರನ್ನೆಲ್ಲ ಸದೆಬಡಿದು, ಮುಂದೆ ಬರಬಹುದಾದ ಯಾಮಿನೀಚರರೊಡನೆ ಯುದ್ಧಮಾಡಲು ಸಿದ್ಧನಾಗಿ ಪೂರ್ವದಂತೆ ಉದ್ಯಾನದ ಹೊರಬಾಗಿಲಿನಲ್ಲಿ ಬಂದು ನಿಂತನು॥೧೭॥

– ಇಂತು ನಲವತ್ತೈದನೆಯ ಸರ್ಗಂ.–

ಶ್ರೀ ರಾಮಚಂದ್ರ ಪರಬ್ರಹ್ಮಣೇನಮಃ.

## ಷಟ್ಚತ್ವಾರಿಂಶ ಸ್ಸರ್ಗಃ

---

ಹತಾನ್ ಮಂತ್ರಿ ಸುತಾನ್ ಬುದ್ಧ್ವಾ ವಾನರೇಣ ಮಹಾತ್ಮನಾ ।
ರಾವಣ ಸ್ಸಂವೃತಾಕಾರ ಶ್ಚಕಾರ ಮತಿ ಮುತ್ತಮಾಂ ॥೧॥
ಸ ವಿರೂಪಾಕ್ಷ ಯೂಪಾಕ್ಷೌ ದುರ್ಧರಂ ಚೈವ ರಾಕ್ಷಸಂ ।
ಪ್ರಘಸಂ ಭಾಸಕರ್ಣಂ ಚ ಪಂಚ ಸೇನಾಗ್ರನಾಯಕಾನ್॥೨॥
ಸಂದಿದೇಶ ದಶಗ್ರೀವೋ ವೀರಾ ನ್ನಯ ವಿಶಾರದಾನ್ ।

---

—ನಲವತ್ತಾರನೆಯ ಸರ್ಗ—

ಕಂದ॥ ಪಂಚಾನನ ಶೌರ್ಯದಿಮಿಗೆ । ಚಂಚತ್ಕರ ಖಡ್ಗರಾಗಿ ರಣಕ್ಕೈತಂದಾ ।
ಪಂಚಾಸುರ ನಾಯಕರಂ । ಸಂಚಿನೊಳಾ ವಾಯುನಂದನ ನಿರಿದಂ ॥

ರಾವಣಃ-ದಶಕಂಧರನು, ಮಂತ್ರಿಸುತಾನ್ - ಮಂತ್ರಿಪುತ್ರರನ್ನು, ಮಹಾತ್ಮನಾ-ಮಹಾಧೈರ್ಯಶಾಲಿಯಾದ, ವಾನರೇಣ-ಕಪಿಯಿಂದ, ಹತಾನ್- ಕೊಲ್ಲಲ್ಪಟ್ಟವರನ್ನಾಗಿ, ಬುದ್ಧ್ವಾ-ತಿಳಿದು, ಸಂವೃತಾಕಾರಃ-ಅಡಗಿಸಿಕೊಂಡ ಮನೋಗತವುಳ್ಳವನಾಗಿ, ಉತ್ತಮಾಂ-ಶ್ರೇಷ್ಠವಾದ, ಮತಿಂ-ಬುದ್ಧಿಯನ್ನು (ಧೈರ್ಯವನ್ನು) ಚಕಾರ-ಮಾಡಿದನು ॥೧॥ ಸಃ-ಆ, ದಶಗ್ರೀವಃ- ದಶಗಳನು, ವೀರಾನ್-ಶೂರರೆನಿಸಿದ, ನಯವಿಶಾರದಾನ್ - ನೀತಿಶಾಸ್ತ್ರ ಕುಶಲರಾಗಿರುವ, ಯುಧಿ - ಯುದ್ಧದಲ್ಲಿ, ಹನುಮದ್ಗ್ರಹಣವ್ಯಗ್ರಾನ್ - ಹನುಮನನ್ನು ಹಿಡಿಯುವುದರಲ್ಲಿ ತ್ವರಪಡುತಲಿರತಕ್ಕ, ವಾಯುವೇಗಸಮಾನ್ - ವಾಯುವಿಗೆ ಸಮಾನವಾದ ವೇಗವುಳ್ಳ, ವಿರೂಪಾಕ್ಷಯೂಪಾಕ್ಷೌ - ವಿರೂಪಾಕ್ಷಯೂಪಾಕ್ಷರನ್ನೂ, ದುರ್ಧರಂ - ದುರ್ಧರನೆಂಬ

---

- ನಲವತ್ತಾರನೆಯ ಸರ್ಗಂ -

ಮಂತ್ರಿಪುತ್ರರಾದ ಏಳು ಮಂದಿಯೂ ವೀರ ಹನುಮನಿಂದ ಒಮ್ಮೊಗರಾದರೆಂದು ದಶಕಂಧರನಿಗೆ ಸುದ್ದಿಬಂದಿತು, ರಾವಣನು ಅಳುಕಿದನು. ಮನದೊಳಗೆ ಭಯವು ಎಡೆಗೊಂಡಿತು. ಕಾಮ ಬಾಧೆಯೊಂದು ಕಡೆ, ಅನರ್ಥವೊಂದು ಕಡೆ, ಇರುಕಿನಲ್ಲಿ ಸಿಲುಕಿದನು, ಆದರೆ ರಣ ವೀರನಾಗಿ ರಾಕ್ಷಸ ಚಕ್ರವರ್ತಿಯೆನಿಸಿರುವ ತಾನೇ ತನ್ನ ಮನದ ಹುಳುಕನ್ನು ತೋರಿದರೆ, ತನ್ನವರೆಲ್ಲ ಹೆದರುವರೆಂದು ಯೋಚಿಸಿದನು, ಅದರ ಮೇಲೆ ಒಳಗುಟ್ಟನ್ನು ಹೊರಗೆ ತೋರಲಿಲ್ಲ. ಧೈರ್ಯವನ್ನು ಅವಲಂಬಿಸಿ, ವಿಚಾರಮಾಡಿ ನಿಶ್ಚೈಸಿದನು॥ ॥೧॥ ಬಳಿಕಲಾ ದಶಗಳನು- ಮಹಾವೀರರು, ನೀತಿ ವಿಶಾರದರು, ಹನುಮಂತನನ್ನು ಹಿಡಿಯುವುದರಲ್ಲಿ ಅತ್ಯಂತ ಕುತೂಹಲಿಗಳು, ವಾಯು ವೇಗಕ್ಕೆ ಸಮಾನವಾದ ವೇಗವುಳ್ಳವರು, ರಣ ಧೀರರೂ ಆಗಿರುವ ವಿರೂಪಾಕ್ಷ, ಯೂಪಾಕ್ಷ, ದುರ್ಧರ, ಪ್ರಘಸ, ಭಾಸಕರ್ಣ

ಹನುಮದ್ಗ್ರಹಣ ವ್ಯಗ್ರಾನ್ವಾಯು ವೇಗ ಸಮಾನ್ಯಧಿ ॥೩॥
ಯಾತ ಸೇನಾಗ್ರಗಾಸ್ಸರ್ವ್ವೆ ಮಹಾಬಲ ಪರಿಗ್ರಹಾಃ ।
ಸವಾಜಿ ರಥ ಮಾತಂಗಾಸ್ಸಕಪಿ ಶ್ಶಾಸ್ಯತಾ ಮಿತಿ ॥೪॥
ಯತ್ತೈಶ್ಚ ಖಲು ಭಾವ್ಯಂ ಸ್ಯಾತ್ತಮಾಸಾದ್ಯ ವನಾಲಯಂ।
ಕರ್ಮ ಚಾಪಿ ಸಮಾಧೇಯಂ ದೇಶಕಾಲ ವಿರೋಧಿನಂ ॥೫॥
ನ ಹ್ಯಹಂ ತಂ ಕಪಿಂ ಮನ್ಯೇ ಕರ್ಮಣಾ ಪ್ರತಿ ತರ್ಕಯನ್ ।
ಸರ್ವ್ವಥಾ ತನ್ಮಹದ್ಭೂತಂ ಮಹಾಬಲ ಪರಿಗ್ರಹಂ ॥

ರಾಕ್ಷಸಂಚೈವ - ರಾಕ್ಷಸನನ್ನೂ, ಪ್ರಘಸಂ - ಪ್ರಘಸನನು, ಭಾಸಕರ್ಣಂ - ಭಾಸಕರ್ಣನು ಎಂಬ ಪಂಚ-ಐದು ಮಂದಿ, ಸೇನಾಗ್ರನಾಯಕಾನ್ - ಸೇನಾನಾಯಕರನ್ನೂ, ಆದಿದೇಶ - ಅಪ್ಪಣೆಮಾಡಿದನು ॥ ೨ ॥ ೩ ॥ ಹೇಸೇನಾಗ್ರಗಾಃ - ಎಲೈ ಸೇನಾಧಿಪತಿಗಳಿರಾ ! ಯೂಯಂ - ನೀವು, ಸರ್ವೆ - ಸಮಸ್ತರೂ, ಮಹಾ ಬಲಪರಿಗ್ರಹಾಃ-ದೊಡ್ಡ ಪಡೆಯನ್ನೊಡಗೊಂಡವರಾಗಿ, ಸವಾಜಿರಥಮಾತಂಗಾಃ - ಕುದುರೆ, ತೇರು, ಆನೆಗಳಿಂದ ಸಹಿತರಾಗುತ್ತಾ, ಯಾತ - ಹೊರಡಿರಿ, ತಂ-ಆ, ವನಾಲಯಂ - ಕಾಡು ಮನೆಯುವನಾದ ಕಪಿಯನ್ನು, ಆಸಾದ್ಯ-ಸೇರಿ, (ಯುಷ್ಮಾಭಿಃ - ನೀವು) ಯತ್ತೈಃ - ಪ್ರಯತ್ನಶೀಲರಾಗಿ, ಭಾವ್ಯಂ - ಇರತಕ್ಕದ್ದು, ದೇಶಕಾಲವಿರೋಧಿನಂಚ - (ದೇಶಕಾಲಾವಿರೋಧಿ) ದೇಶಕಾಲಗಳಿಗೆ ವಿರೋಧವಾಗಿಲ್ಲದ, ಕರ್ಮಚಾಪಿ - ನೀವುಮಾಡುವ ಕೆಲಸವೂ, ಸಮಾಧೇಯಂ-ಪ್ರತಿಕ್ರಿಯೆಯಿಂದ ಸಮಾಧಾನಗೊಳಿಸಲಿಕ್ಕೆ ತಕ್ಕುದಾಗಿಯೂ, ಸ್ಯಾತ್-ಆಗಿರಬೇಕು ॥೪-೫॥ ಅಹಂ-ನಾನು, ಸರ್ವಥಾ-ಸರ್ವಪ್ರಕಾರದಿಂದಲೂ, ಪ್ರತಿತರ್ಕಯನ್-ಊಹಿಸುತಲಿರುವವನಾದರೂ, ತಂ-ಆ ವಾನರನನ್ನು, ಕರ್ಮಣಾ-ಅವನು ಮಾಡುತ್ತಲಿರುವ ಕೆಲಸದಿಂದ, ಕಪಿಂ-ಕೋಡಗನನ್ನಾಗಿ, ನಮನ್ಯೇ-ತಿಳಿಯುವುದಿಲ್ಲ,(ಕಿಂತು-ಮತ್ತೇನೆಂದರೆ)

ಎಂಬ ಐದು ಮಂದಿ ಸೇನಾ ನಾಯಕರನ್ನು ನೋಡಿ ಇಂತೆಂದನು ॥ ೨, ೩ ॥ ಎಲೈ ಸೇನಾಧಿಪತಿಗಳಿರಾ ! ನೀವು-ಆನೆ, ಕುದುರೆ, ತೇರುಗಳನ್ನೂ, ಬಹು ಬಲ ಸಂಪನ್ನವಾಗಿರುವ ಹೇರಳವಾದ ಕಾಲು ಬಲವನ್ನೂ, ಸಂಗಡ ತೆಗೆದುಕೊಂಡು, ರಣಾಂಗಣಕ್ಕೆ ತೆರಳಿರಿ. ಆದರೆ- ಆ ಕಪಿಯನ್ನು ಇದಿರಿಸಿದ ಬಳಿಕ ನೀವುಗಳು ಬಲು ಎಚ್ಚರದಿಂದ ಇರಬೇಕು, ಇನ್ನು ಮೇಲಾದರೂ ಆ ಕಪಿಯಿಂದ ನಮಗೇನೂ ತೊಂದರೆಯುಂಟಾಗದ ಹಾಗೆ ಈ ಕಾಲಕ್ಕೂ, ಸ್ಥಲಕ್ಕೂ ವಿರೋಧವಿಲ್ಲದಂತೆ ಮುಂದಿನ ಕೆಲಸವನ್ನು ನಡೆಸಬೇಕು. ॥ ೪, ೫ ॥ ನಾನು ಇದುವರೆಗೂ ಬಹು ಪ್ರಕಾರವಾಗಿ ಯೋಚಿಸುತಲಿದೇನೆ, ಆದರೂ ನನಗೆ ಅಂದ ಹರಿಯಲಿಲ್ಲ. ಆ ವ್ಯಕ್ತಿಯನ್ನು ಸಾಧಾರಣವಾದ ಕೋಡಗನೆಂದು ನಾನು ಭಾವಿಸಲಾರೆ, ಸಾಮಾನ್ಯವಾದ ಕಪಿಗೆ ಇಷ್ಟು ಕೆಲಸವನ್ನು ಮಾಡತಕ್ಕ ಸಾಮರ್ಥ್ಯವೆಲ್ಲಿ ಬಂದಿತು ? ಕಾಡಿನಲ್ಲಿ ಮರದಿಂದ ಮರಕ್ಕೆ ಹಾರಾಡುವ ಕೋಡಗನು-ಮಹಾ ವನ ಭಂಗವನ್ನೂ, ಬಾಹು ಬಲ ಸಂಪನ್ನರಾದ ರಾಕ್ಷಸ ವೀರರೊಡನೆ ಕಾದಿರುವುದನ್ನೂ ನೋಡಿದರೆ- ಬಹು ವೀರ್ಯ ಶೌರ್ಯದಿಂದೊಡಗೂಡಿರುವ ಯಾವುದೋ ಒಂದು ಬಗೆಯ ದೊಡ್ಡ ಭೂತವಾಗಿರಬೇಕು. ಮತ್ತು- ಇಂದ್ರಾದಿ ದೇವತೆಗಳೂ, ಇತರರೂ ನಮ್ಮಿಂದ ಅನೇಕ ವೇಳೆ ಬಹಳವಾಗಿ ಭಂಗವನ್ನು ಪಡೆದಿದ್ದಾರೆ,ಅದರಿಂದ ಅವರಲ್ಲಿ ಯಾರೋ ತಪವನ್ನಾಚರಿಸಿ, ಇಂತಹ ಘೋರವಾದ

ಭವೇ ದಿಂದ್ರೇಣ ವಾ ಸೃಷ್ಟ ಮಸ್ಮದರ್ಥಂ ತಪೋಬಲಾತ್॥೬॥
ಸನಾಗ ಯಕ್ಷ ಗಂಧರ್ವಾ ದೇವಾಸುರ ಮಹರ್ಷಯಃ ॥೭॥
ಯುಷ್ಮಾಭಿ ಸ್ಸಹಿತೈ ಸ್ಸರ್ವೈ ರ್ಮಯಾ ಸಹ ವಿನಿರ್ಜಿತಾಃ ।
ತೈ ರವಶ್ಯಂ ವಿಧಾತವ್ಯಂ ವ್ಯಳೀಕಂ ಕಿಂಚಿದೇವ ನಃ ॥
ತದೇವ ನಾತ್ರ ಸಂದೇಹಃ ಪ್ರಸಹ್ಯ ಪರಿಗೃಹ್ಯತಾಂ ॥೮॥
ನಾಽವಮಾನ್ಯೋ ಭವದ್ಭಿಶ್ಚ ಹರಿ ರ್ಧೀರ ಪರಾಕ್ರಮಃ ॥
ದೃಷ್ಟಾ ಹಿ ಹರಯಃ ಪೂರ್ವಂ ಮಯಾ ವಿಪುಲ ವಿಕ್ರಮಾಃ ।

---

ತತ್-ಆ, ಮಹತ್ - ದೊಡ್ಡದಾದ, ಭೂತಂ-ಪ್ರಾಣಿಯನ್ನು, ಮಹಾಬಲಪರಿಗ್ರಹಂ - ಅಪಾರ ಸತ್ವವನ್ನೊಳಗೊಂಡಿರುವುದನ್ನಾಗಿ (ಮನ್ಯೇ - ತಿಳಿಯುತಲಿದೇನೆ) ತಪೋಬಲಾತ್ - ತಪಸ್ಸಿನ ಬಲದಿತ ಇಂದ್ರೇಣವಾ-ಇಂದ್ರನಿಂದಲೋ, ಇತರೇಣವಾ - ಅನ್ಯನಿಂದಲೋ, ಅಸ್ಮದರ್ಥಂ-ನಮ್ಮನ್ನು ಉದ್ದೇಶಿಸಿ, ಸೃಷ್ಟಂ -ನಿರ್ಮಿಸಲ್ಪಟ್ಟದಾಗಿ, ಭವೇತ್-ಇರಬೇಕು, ಇತಿ-ಹೀಗೆಂದು ತಿಳಿದು, ಯುಷ್ಮಾಭಿಃ-ನಿಮ್ಮಗಳಿಂದ ಸಃ-ಆ ಕಪಿಯು, ಶಾಸ್ಯತಾಂ- ಶಿಕ್ಷಿಸಲ್ಪಡಲಿ, ಖಲು-ನಿಶ್ಚಯ ॥ ೬ ॥ ಮಯಾಸಹ-ನನ್ನೊಡನೆ, ಸಹಿತೈಃ-ಒಟ್ಟುಗೂಡಿದ್ದ, ಸರ್ವೈಃ - ಸಮಸ್ತರಾದ, ಯುಷ್ಮಾಭಿಃ-ನಿಮ್ಮಗಳಿಂದ, ಸನಾಗಯಕ್ಷಗಂಧರ್ವಾಃ ನಾಗರು, ಯಕ್ಷರು, ಗಂಧರ್ವರು ಇವರುಗಳಿಂದೊಡಗೂಡಿರುವ, ದೇವಾಸುರಮಹರ್ಷಯಃ-ದೇವತೆಗಳು, ಅಸುರರು, ಮಹರ್ಷಿಗಳು, ಇವರೆಲ್ಲರೂ, ನಿರ್ಜಿತಾಃ - ಜಯಿಸಲ್ಪಟ್ಟದಾರೆ, ತೈರೇವ - ಅವರಿಂದಲೇ, ನಃ - ನಮಗೆ, ಕಿಂಚಿತ್ - ಸ್ವಲ್ಪವಾಗಿ (ಯಾವುದಾದರೊಂದು) ವ್ಯಳೀಕಂ - ಅಪ್ರಿಯವು, ಅವಶ್ಯಂ -, ಮುಖ್ಯವಾಗಿ, ವಿಧಾತವ್ಯಂ - ಮಾಡಬೇಕಾಗಿರುವುದು, ಅತ್ರ - ಈ ವಿಷಯದಲ್ಲಿ, ಸಂದೇಹಏವ - ಸಂಶಯವೇ, ನ - ಇಲ್ಲವು, ತತ್ - ಆದಕಾರಣ, (ಅಯಂ - ಈ ವಾನರನು, ಯುಷ್ಮಾಭಿಃ - ನಿಮ್ಮಿಂದ) ಪ್ರಸಹ್ಯ - ಬಲಾತ್ಕಾರವಾಗಿ, ಪರಿಗೃಹ್ಯತಾಂ - ಹಿಡಿಯಲ್ಪಡಲಿ, ॥೭॥ ॥೮॥ ॥ ಭವದ್ಭಿಶ್ಚ-ನಿಮ್ಮಿಂದಲೂ, ಧೀರಪರಾಕ್ರಮಃ - ಗಂಭೀರವಾದ ಶೌರ್ಯವುಳ್ಳ, ಹರಿಃ - ವಾನರನು, ನಾವಮಾನ್ಯಃ - ಅವಮಾನಿಸಲ್ಪಡತಕ್ಕವನಲ್ಲ, ॥೯॥ ಪೂರ್ವಂ - ಹಿಂದೆ, ಮಯಾ- ನನ್ನಿಂದ, ವಿಪುಲವಿಕ್ರಮಾಃ - ವಿಸ್ತಾರವಾದ ಶೌರ್ಯವುಳ್ಳ

---

ಭೂತವನ್ನು ಕಲ್ಪಿಸಿ ಕಳುಹಿ ಇರಬಹುದೆಂತಲೂ ನೆನೆಯುತ್ತೇನೆ. ಆದಕಾರಣ ನೀವು ಎಚ್ಚರದಿಂದ ಆ ಕಪಿಯನ್ನು ದಂಡಿಸಬೇಕು- ॥ ೬, ೬ ॥ ॥ ಹಿಂದೆ ನಾನು- ಮಹಾ ಸತ್ವ ಸಂಪನ್ನರಾದ ನಿಮ್ಮಿಂದೊಡಗೂಡಿ, ನಾಗರು, ಯಕ್ಷರು, ಗಂಧರ್ವರು, ದೇವತೆಗಳು ಮಹಾ ಮುನಿಗಳು, ಈ ಮೊದಲಾದವರನ್ನೆಲ್ಲ ಜೈಸಿದೇನೆ. ॥ ೭ ॥ ॥ ಆದಕಾರಣ ನಮ್ಮಿಂದ ಹಿಂಸೆಯನ್ನು ಅನುಭವಿಸಿದ ಅವರು ನಮಗೆ ಪ್ರತಿಯಾಗಿ ಯಾವುದಾದರೊಂದ ಕೆಡಿಡನ್ನು ಮಾಡಬೇಕೆಂದು ಬಯಸಬೇಕಾದುದು ಸಹಜ. ಅದರಿಂದ ಅವರು ಈ ವಿಧವಾದ ತಂತ್ರವನ್ನು ಮಾಡಿ ಇರಬೇಕು. ಈ ವಿಷಯದಲ್ಲಿ ಸಂಶಯವಿಲ್ಲ, ಆ ದಕಾರಣ ಆ ಕಪಿಯನ್ನು ಕೊಲ್ಲಲಿಕ್ಕೇ ಪ್ರಯತ್ನಿಸದೆ, ದಂಡಿಸಿ, ಜೀವ ಸಹಿತ ಹಿಡಿದು ತನ್ನಿರಿ॥ ೮॥ ಇದಲ್ಲದೆ ಪೂರ್ವದಲ್ಲಿ ನಾನು ದಿಗ್ವಿಜಯಾರ್ಥವಾಗಿ ಹೋಗಿದ್ದ ವೇಳೆ- ಮಹಾ ಬಾಹು ಬಲ ಸಂಪನ್ನರೆನಿಸಿದ ವಾಲಿ, ಸುಗ್ರೀವ, ಜಾಂಬವಂತ; ಕಪಿಸೇನಾನಾಯಕನಾದ ನೀಲ, ಮತ್ತು ದ್ವಿವಿದ, ಮುಂತಾದ ಬಹು ಮಂದಿ ಕಪಿಗಳನ್ನು ನೋಡಿದೇನೆ, ಆದರೂ, ದೇಹ, ಬಲ

ವಾಲೀ ಚ ಸಹ ಸುಗ್ರೀವೋ ಜಾಂಬವಾಂಶ್ಚ ಮಹಾಬಲಃ ॥೧೦॥
ನೀಲ ಸ್ಸೇನಾಪತಿ ಶ್ಚೈವ ಯೇಚಾನ್ಯೇ ದ್ವಿವಿದಾದಯಃ ।
ನೈವಂ ತೇಷಾಂ ಗತಿ ರ್ಭೀಮಾ ನ ತೇಜೋ ನ ಪರಾಕ್ರಮಃ ॥೧೧॥
ನ ಮತಿ ರ್ನ ಬಲೋತ್ಸಾಹೌ ನ ರೂಪ ಪರಿಕಲ್ಪನಂ ।
ಮಹತ್ಸತ್ತ್ವ ಮಿದಂ ಜ್ಞೇಯಂ ಕಪಿರೂಪಂ ವ್ಯವಸ್ಥಿತಂ ॥೧೨॥
ಪ್ರಯತ್ನಂ ಮಹ ದಾಸ್ಥಾಯ ಕ್ರಿಯತಾ ಮಸ್ಯ ನಿಗ್ರಹಃ ।

---

ಸಹ ಸುಗ್ರೀವಃ - ಸುಗ್ರೀವನಿಂದ ಸಹಿತನಾದ, ವಾಲೀಚ - ವಾಲಿಯೆಂಬ ಕಪಿಯೂ, ಮಹಾ ಬಲಃ - ಹೇರಳವಾದ ಬಲವುಳ್ಳ, ಜಾಂಬವಾಂಶ್ಚ - ಜಾಂಬವಂತನೆಂಬುವವನೂ, ಸೇನಾಪತಿಃ - ಸೇನಾನಾಯಕನೆನಿಸಿದ, ನೀಲಃ - ನೀಲನೆಂಬುವವನೂ, ಹರಯಃ - ಕಪಿಗಳಾದ, ಯೇಚಾನ್ಯೇ - ಮತ್ತೆ ಕೆಲವರಾದ, ದ್ವಿವಿದಾದಯಃ - ದ್ವಿವಿದನೇ ಮೊದಲಾದವರು ಕೂಡ, ದೃಷ್ಟಾಃಹಿ - ನೋಡಲ್ಪಟ್ಟದಾರೆ, ತೇಷಾಂ - ಅವರುಗಳ, ಗತಿಃ - ಗಮನ ವೇಗವೂ, ಏವಂ - ಹೀಗೆ, ಭೀಮಾ - ಭಯಂಕರವೆನಿಸಿದುದಾಗಿ, ನ-ಇಲ್ಲ, ತೇಜಃ - ತೇಜಸ್ಸು, (ಏವಂ - ಹೀಗೆ, ನ - ಇಲ್ಲವು) ಪರಾಕ್ರಮಶ್ಚ - ವೀರ್ಯವು ಕೂಡ (ಏವಂ - ಇಂಥದಾಗಿ, ನ - ಇಲ್ಲ) ॥ ೧೦-೧೧॥ ಮತಿಃ - ಬುದ್ಧಿ ಶಕ್ತಿಯೂ, (ಏವಂ ನ - ಹೀಗೆ ಇಲ್ಲ) ಬಲೋತ್ಸಾಹೌ - ಸತ್ವಪೌರುಷಗಳೂ, ಏವಂ - ಈ ರೀತಿಯಾಗಿ, ನ - ಇಲ್ಲವು, ರೂಪಪರಿಕಲ್ಪನಂ - ಆ ಕಾರನಿರ್ಮಾಣವೂ (ಕಾಮರೂಪವೂ) ನಚ - ಇಲ್ಲವು, ಇದಂ - ಈ, ಮಹತ್ - ದೊಡ್ಡದಾದ, (ಕಿಮಪಿ -ಯಾವುದೋ ಒಂದು) ಸತ್ವಂ - ಭೂತವು, ಕಪಿರೂಪಂ - ವಾನರಾಕಾರವನ್ನು ತಾಳಿದುದಾಗಿ, ವ್ಯವಸ್ಥಿತಂ-ಬಂದಿದೆ, ಇತಿ - ಹೀಗೆಂದು, ಜ್ಞೇಯಂ - ತಿಳಿಯಬೇಕು, ॥ ೧೨ ॥ ಯುಷ್ಮಾಭಿಃ - ನಿಮ್ಮಗಳಿಂದ, ಮಹತ್ - ದೊಡ್ಡದಾದ, (ಮಹಾಂತಂ) ಪ್ರಯತ್ನಂ - ಪ್ರಯತ್ನವನ್ನು, ಆಸ್ಥಾಯ - ಆಶ್ರಯಿಸಿ,

---

ತೇಜಸ್ಸು, ಧೈರ್ಯ, ಶೌರ್ಯ, ಇತ್ಯಾದಿಗಳು ಈ ಕಪಿಯಲ್ಲಿ ಅವರಿಗಿಂತಲೂ ಅಧಿಕವಾಗಿ ನಲೆಗೊಂಡಿರುವಂತೆ ಕಾಣಬರುತಲಿದೆ, ಆದಕಾರಣ ಆ ಕಪಿಗೆ ಮರಣವನ್ನು ವಿಧಿಸುವ ಸಾಹಸದಲ್ಲಿ ಪ್ರವರ್ತಿಸಿ, ಅದಕ್ಕೆ ಅಪಮಾನವನ್ನಸಗುವುದಕ್ಕೆ ಪ್ರವರ್ತಿಸದೆ,ಶಿಕ್ಷಿಸಿ ಹಿಡಿದು ತರಬೇಕು॥೯,೧೦,೧೧ ॥ಆ ವಾಲಿಯೇ ಮೊದಲಾದವರಿಗೆ- ಹೀಗೆ ತತ್ಕಾಲೋಚಿತವಾದ ಸಂಗತಿಯನ್ನು ಅರಿಯುವ ಬುದ್ಧಿಯೂ, ಮುಂದಿನ ಆಗುಹೋಗುಗಳನ್ನುತಿಳಿಯುವ ಮತಿಯೂ, ಮೇಲು ಮೇಲಣ ಊಹಾಪೋಹಗಳ ವಿಚಾರದ ಮೂಲಕ ವಿಷಯ ಪರಿಜ್ಞಾನವುಳ್ಳ ಪ್ರಜ್ಞೆಯೂ ಈ ಕಪಿಗಿಂತ ಅಧಿಕವಾಗಿರಲಿಲ್ಲ, ಬಲೋತ್ಸಾಹಗಳೂ ಈ ಕಪಿಗೆ ಹೆಚ್ಚು. ಮನಬಂದರೂಪವನ್ನು ತಾಳುವ ಸಾಮರ್ಥ್ಯವೂ ಈ ಕಪಿಗೆ ಹೇರಳವಾಗಿದೆ, ಆದುದರಿಂದ ಯಾವುದೋ ಬಂದು ಮಹಾಭೂತವು- ಈ ಕಪಿಯ ರೂಪವನ್ನು ತಾಳಿ ಬಂದಿರಬೇಕು. ನಿಮ್ಮ ಸರ್ವ ಪ್ರಯತ್ನವನ್ನೂ ವಿನಿಯೋಗಿಸಿ, ಆ ಕಪಿಯನ್ನು ಹಿಡಿದು ತರಬೇಕು. ॥ ೧೨, ೧೨ ॥ ॥ ಇದಲ್ಲದೆ- ರಣದಿಶಾಪಟ್ಟುಮಲ್ಲರಾದ ನೀವು ರಣಭೂಮಿಯಲ್ಲಿ ಕಾಳಗಕ್ಕೆ ಅಣಿಯಾಗಿ ನಿಂತರೆ- ಇಂದ್ರನೇ ಮೊದಲಾದ ದೇವತೆಗಳಾಗಲಿ, ಅಸುರರಾಗಲಿ, ಮಾನವರಾಗಲೀ ನಿಮ್ಮ ಇದಿರಿಗೆ ನಿಲ್ಲಲಾರರು. ಆದರೂ ಯುದ್ಧದಲ್ಲಿ ಜಯವೇ ಸಿದ್ಧಿಸುವುದೆಂದಾಗಲಿ, ಅಪಜಯವೇ ಉಂಟಾಗುವುದೆಂತಲಾಗಲಿ, ನಿಶ್ಚಯಿಸಿ

ಕಾಮಂ ಲೋಕಾ ಸ್ತ್ರಯ ಸ್ಸೇಂದ್ರಾ ಸ್ಸಸುರಾಸುರ ಮಾನವಾಃ ॥೧೩॥
ಭವತಾ ಮಗ್ರತ ಸ್ಸ್ಥಾತುಂ ನ ಪರ್ಯ್ಯಾಪ್ತಾ ರಣಾಜಿರೆ ।
ತಥಾಪಿ ತು ನಯಜ್ಞೇನ ಜಯ ಮಾಕಾಂಕ್ಷತಾ ರಣೆ ॥
ಆತ್ಮಾ ರಕ್ಷ್ಯಃ ಪ್ರಯತ್ನೇನ ಯುದ್ಧ ಸಿದ್ಧಿ ರ್ಹಿ ಚಂಚಲಾ ॥೧೪॥ ॥
ತೇ ಸ್ವಾಮಿ ವಚನಂ ಸರ್ವೆ ಪ್ರತಿಗೃಹ್ಯ ಮಹೌಜಸಃ ॥
ಸಮುತ್ಪೇತು ರ್ಮಹಾ ವೇಗಾ ಹುತಾಶ ಸಮತೇಜಸಃ ॥೧೫॥ ॥
ರಥೈ ರ್ಮತ್ತೈಶ್ಚ ಮಾತಂಗೈ ರ್ವಾಜಿಭಿಶ್ಚ ಮಹಾಜವೈಃ ॥
ಶಸ್ತ್ರೈಶ್ಚ ವಿವಿಧೈ ಸ್ತೀಕ್ಷ್ಣೈಃ ಸರ್ವೈ ಶ್ಚೋಪಚಿತಾ ಬಲೈಃ ॥೧೬॥ ॥

ಅಸ್ಯ - ಈ ವಾನರನ, ನಿಗ್ರಹಃ - ದಂಡವು, ಕ್ರಿಯತಾಂ - ಮಾಡಲ್ಪಡಲಿ, ॥ ೧೨ ॥ ಸೇಂದ್ರಾಃ - ಇಂದ್ರನಿಂದೊಡಗೂಡಿದ, ಸಸುರಾಸುರ ಮಾನವಾಃ - ದೇವತೆಗಳು, ಅಸುರರು, ಮನುಷ್ಯರು ಇವರಿಂದ ಸಹಿತರಾದ, ತ್ರಯಃ - ಮೂರಾದ, ಲೋಕಾಃ - ಲೋಕಗಳೂ, ರಣಾಜಿರೆ - ರಣಾಂಗಣದಲ್ಲಿ ಭವತಾಂ - ನಿಮ್ಮಗಳ, ಅಗ್ರತಃ - ಇದಿರಿಗೆ, ಸ್ಥಾತುಂ - ನಿಲ್ಲಲಿಕ್ಕೆ, ಕಾಮಂ - ವಿಶೇಷವಾಗಿ, ನಪರ್ಯ್ಯಾಪ್ತಾಃ - ಶಕ್ತರಲ್ಲ, ತಥಾಪಿ - ಹಾಗಾದಾಗ್ಯೂ, ಹಿ - ಯಾವ ಕಾರಣದಿಂದ, ಯುದ್ಧಸಿದ್ಧಿಃ - ಕಾಳಗದಲ್ಲಿಗೆಲುವಾಗುವುದೆಂಬುದು, ಚಂಚಲಾ - ನೆಲೆಯಾದುದಲ್ಲವೋ, (ತತ್ - ಆದಕಾರಣ) ರಣೆ - ಯುದ್ಧದಲ್ಲಿ, ಜಯಂ - ಗೆಲುವನ್ನು, ಆ ಕಾಂಕ್ಷತಾ - ಬಯಸುತಲಿರುವ, ನಯಜ್ಞೇನ - ನೀತಿಶಾಸ್ತ್ರವನ್ನು ಬಲ್ಲವನಿಂದ, ಆತ್ಮಾ - ಶರೀರವು, ಪ್ರಯತ್ನೇನ - ಹೆಚ್ಚಾದ ಪ್ರಯತ್ನದಿಂದ, ರಕ್ಷ್ಯಃ - ಸಂರಕ್ಷಿಸಲ್ಪಡತಕ್ಕದು ॥ ೧೪ ॥ ಹುತಾಶಸಮತೇಜಸಃ - ಅಗ್ನಿಗೆಣೆಯೆನಿಸಿದ ತೇಜಸ್ಸುಳ್ಳವರಾದ ಕಾರಣವೇ, ಮಹೌಜಸಃ - ಮಹಾ ಪ್ರತಾಪವುಳ್ಳ, ತೇ - ಆ ಸೇನಾಪತಿಗಳು, ಸರ್ವೆ - ಎಲ್ಲರೂ, ಸ್ವಾಮಿವಚನಂ - ಪ್ರಭುವಿನಾಜ್ಞೆಯನ್ನು, ಪ್ರಗೃಹ್ಯ - ಪಡೆದುಕೊಂಡು, ರಥೈಃ - ತೇರುಗಳಿಂದಲೂ, ಮತ್ತೈಃ -ಕೊಬ್ಬಿರುವ, ಮತಂಗೈಶ್ಚ - ಆನೆಗಳಿಂದಲೂ, ಮಹಾಜವೈಃ - ಬಹುವೇಗವುಳ್ಳ. ವಾಜಿಭಿಶ್ಚ - ಕುದುರೆಗಳಿಂದಲೂ, ತೀಕ್ಷ್ಣೈಃ - ಹದದಿಂದ ಮೊನೆಯಾಗಿರುವ, ವಿವಿಧೈಃ - ಬಗೆಬಗೆಯಾಗಿರುವ, ಶಸ್ತ್ರೈಃ - ಆಯುಧಗಳಿಂದಲೂ, ಸರ್ವೈಃ - ಸಮಸ್ತವಾದ ಬಲೈಶ್ಚ - ಸೈನ್ಯಗಳಿಂದಲೂ, ಉಪಚಿತಾಃ - ಹೆಚ್ಚಿದವರಾಗಿ, ಮಹಾ ವೇಗಾಃ - ಬಹು ವೇಗವುಳ್ಳವರಾಗುತ್ತಾ, ಸಮುತ್ಪೇತುಃ - ಕುಪ್ಪಳಿಸುತ ಬಂದರು ॥ ೧೫, ೧೬, ೧೭॥ ॥ ತತಃ - ಅನಂತರದಲ್ಲಿ, ವೀರಾಃ - ಶೂರರಾದ ಸೇನಾಪತಿಗಳು, ಸ್ವೇತೇಜೋ

ಹೇಳಲಾಗುವುದಿಲ್ಲ. ಆದುದರಿಂದ ನೀತಿ ಕುಶಲನಾದ ವೀರನು-ಯುದ್ಧದಲ್ಲಿ ಪ್ರತಿ ವೀರನಿಂದ ಹೇಗಾದರೂ ಮಾಡಿ ತನ್ನಾತ್ಮವನ್ನು ರಕ್ಷಿಸಿಕೊಳ್ಳಬೇಕು, ಹಾಗೆಯೇ ನೀವೂ ನಿಮಗೆ ಹಾನಿಯನ್ನುಂಟುಮಾಡಿಕೊಳ್ಳದ ಸರ್ವ ಪ್ರಯತ್ನದಿಂದಲೂ ಕಪಿಯನ್ನು ನಿಗ್ರಹಿಸಬೇಕು॥ ॥ ೧೩, ೧೪; ೧೪ ॥ ॥ ಎಂದೀ ಪ್ರಕಾರ ರಾಕ್ಷಸ ರಾಜನು-ಬುದ್ಧಿವಾದಗಳನ್ನು ಅಪ್ಪಣೆ ಕೊಡಿಸಲು, ಅಗ್ನಿಯಂತೆ ಜ್ವಲಿಸುವ ತೇಜಸ್ಸನ್ನೊಳಗೊಂಡು, ವೀರ್ಯ ಶೌರ್ಯಗಳಿಂದೊಡಗೂಡಿದ ಆ ಸೇನಾನಾಯಕರು- ಆನೆ ಕುದುರೆ ತೇರು ಕಾಲಾಳುಗಳನ್ನೂ, ಬಹು ಕ್ರೂರವಾದ ಆಯುಧಗಳನ್ನೂ, ಅಣಿಮಾಡಿಕೊಂಡು, ಮಹೋತ್ಸಾಹದಿಂದೊಡಗೂಡಿ, ಶೌರ್ಯವನ್ನು ಬೀರುತ್ತಾ, ರಾಜಾಜ್ಞೆಯನ್ನು ಶಿರದೊಳಾಂತು, ಯುದ್ಧಾಭಿಲಾಷೆಯಿಂದ ಹೊರಟರು. ॥ ೧೫, ೧೬ ॥ ॥ ಬಳಿಕ ಸರ್ವರೂ ರಣಭೂಮಿಯ ತಡಿಗೈತಂದರು, ವೀರಾಂಜ

ತತ ಸ್ತಂ ದದೃಶು ರ್ವೀರಾ ದೀಪ್ಯಮಾನಂ ಮಹಾಕಪಿಂ ||
ರಶ್ಮಿಮಂತ ಮಿವೋದ್ಯಂತಂ ಸ್ವತೇಜೋ ರಶ್ಮಿಮಾಲಿನಂ |
ತೋರಣಸ್ಥಂ ಮಹೋತ್ಸಾಹಂ ಮಹಾಸತ್ವಂ ಮಹಾಬಲಂ ||
ಮಹಾಮತಿಂ ಮಹಾವೇಗಂ ಮಹಾಕಾಯಂ ಮಹಾಬಲಂ ||೧೮|||
ತಂ ಸಮೀಕ್ಷ್ಯೈವ ತೇಸರ್ವೆ ದಿಕ್ಷು ಸರ್ವಾ ಸ್ವವಸ್ಥಿತಾಃ ||
ತೈ ಸ್ತೈಃ ಪ್ರಹರಣೈ ರ್ಭೀಮೈ ರಭಿಪೇತು ಸ್ತತ ಸ್ತತಃ ||೧೯|| ||
ತಸ್ಯ ಪಂಚಾಯಸಾ ಸ್ತೀಕ್ಷ್ಣಾ ಶ್ಶಿತಾಃ ಪೀತಮುಖಾ ಶ್ಶರಾಃ ||

---

ರಶ್ಮಿಮಾಲಿನಂ - ತನ್ನ ತೇಜಸ್ಸಿನ ಕಿರಣಗಳ ಪಂಕ್ತಿಯುಳ್ಳವನಾದ ಕಾರಣವೇ, ಉದ್ಯಂತಂ - ಉದಿಸುತ ಲಿರುವ, ರಶ್ಮಿಮಂತಮಿವ - ಸೂರ್ಯನ ಹಾಗೆ, ದೀಪ್ಯಮಾನಂ - ಹೊಳೆಯುತಲಿರುವ, ತೋರಣಸ್ಥಂ - ವನದ ಹೊರಬಾಗಿಲಿನಲ್ಲಿರತಕ್ಕ, ಮಹೋತ್ಸಾಹಂ - ಮಹತ್ತರವಾದ ಉತ್ಸಾಹಶಕ್ತಿಯನ್ನೊಳಗೊಂಡಿ ರುವ, ಮಹಾಸತ್ತ್ವಂ - ಹೇರಳವಾದ ಅಂತಸ್ಸಾರವುಳ್ಳ, ಮಹಾಬಲಂ - ಹೆಚ್ಚಿದ ದೇಹಶಕ್ತಿಯುಳ್ಳ, ಮ ಹಾಮತಿಂ - ಅಪರಿಮಿತಬುದ್ಧಿ ಶಕ್ತಿಯುಳ್ಳವನಾದ, ಮಹಾವೇಗಂ - ಬಹು ಗಮನವೇಗವುಳ್ಳ, ಮಹಾ ಕಾಯಂ - ಉನ್ನತ ಶರೀರನಾದ, ಮಹಾಬಲಂ - ಅಧಿಕವಾದ ಅವಯವ ಬಲವುಳ್ಳವನೂ ಆಗಿರುವ, ತಂ- ಆ, ಮಹಾ ಕಪಿಂ - ಆ ವೀರಹನುಮನನ್ನು, ದದೃಶುಃ - ನೋಡಿದರು || ೧೭, ೧೮, ೧೮|| ||

ತೆ - ಆ, ಸರ್ವೆ - ಸೇನಾಸಮೇತರಾದ ಪಂಚಸೇನಾಪತಿಗಳೂ, ತಂ - ಆ ಹನುಮಂತನನ್ನು, ದೃ ಷ್ಟ್ವೈವ - ನೋಡಿದ ಮಾತ್ರವೇ, ಸರ್ವಾಸು - ಸಮಸ್ತವಾದ, ದಿಕ್ಷು - ದಿಕ್ಕುಗಳಲ್ಲಿಯೂ, ಅವಸ್ಥಿ ತಾಃ - ನಿಂತವರಾಗಿ, ತೈಸ್ತೈಃ - ಆಯಾಯ, ಭೀಮೈಃ - ಭಯಂಕರವೆನಿಸಿದ, ಪ್ರಹರಣೈಃ - ಆಯುಧ ಗಳಿಂದ, ತತಸ್ತತಃ - ಆಯಾಯ ಸ್ಥಲದಿಂದಲೇ, ಅಭಿಪೇತುಃ- ಇದಿರಿಸಿದರು ||೧೯||-೧೯|| ದುರ್ಧರೇಣ - ದುರ್ಧರನೆಂಬ ಸೇನಾನಾಯಕನಿಂದ, ಆಯಸಾಃ - ಉಕ್ಕಿನಿಂದ ಮಾಡಿದ, ತೀಕ್ಷ್ಣಾಃ - ಕ್ರೂರಗಳಾದ, ಶಿತಾಃ - ಮೊನೆಯಾಗಿರುವ, ಪೀತಮುಖಾಃ - ಹೊಂಬಣ್ಣದ ತುದಿಯುಳ್ಳ, ಉತ್ಪಲಪತ್ರಾಭಾಃ -

---

ನೇಯನನ್ನು ಕಂಡರು, ತೇಜೋಮಂಡಲದಿಂದ ಬಾಲ ಸೂರ್ಯನಂತೆ ಬೆಳಗುತಲಿದಾನೆ, ಹೊ ರಬಾಗಿಲಿನಲ್ಲಿ ಕಾಳಗಕ್ಕೆ ಕಯ್ಸೆತ್ತಿ ನಿಂತಿದಾನೆ, ಬಲು ಉತ್ಸಾಹ ಸಂಪನ್ನನಾಗಿದಾನೆ ಅವನ ಅಂತಸ್ಸಾರವೂ, ದೇಹ, ಬುದ್ಧಿ, ಅವಯವಗಳ ಬಲವೂ ಹೇರಳವಾಗಿ ಕಾಣಬರುತ ಲಿವೆ, ಯುದ್ಧ ವೇಗವು ಅತಿಶಯವಾಗಿದೆ, ಇಂತಹ ವೀರ ಪುರುಷನ ಬಳಿಗೆ ಬಂದರು. || || ೧೭, ೧೮ || || ಕೇವಲ ಸಮೀಪಕ್ಕೈತಂದು ಕಂಡ ಕೂಡಲೆ, ಸುತ್ತಲೂ ಬಳಸಿ ನಿಂತರು, ಅಡರಿದರು, ಕೈಗಳಲ್ಲಿದ್ದ ಆಯಾಯ ಭಯಂಕರಾಯುಧಗಳಿಂದಲೂ ಹನುಮನನ್ನು ಇಡ ತೊಡಗಿದರು || ೧೯|| || ಮತ್ತು- ಮಹಾ ವೀರನೆನಿಸಿದ ದುರ್ಧರನೆಂಬ ಪಡೆಯೊಡೆಯ ನೊಬ್ಬನು-ಇದಿರಿಸಿ ನಿಂತನು, ಉಕ್ಕಿನಿಂದ ಮಾಡಿ, ಹದವನ್ನು ಕೊಟ್ಟುದರಿಂದ ಬಹು ತೀ ಕ್ಷ್ಣವಾಗಿ, ಕನ್ನೈದಿಲೆಯ ಎಸಳನಂತೆ ಬಲು ತೆಳುವಾಗಿ, ಹೊಂಬಣ್ಣದಿಂದ ತಳ ತಳಸು ಲೂ ಇರುವ ಐದು ಬಾಣಗಳಿಂದ ಮಾರುತಿಯ ಶಿರವನ್ನು ಗುರಿನೋಡಿ ಹೊಡೆದನು, ಆ ಐ ದಂಬುಗಳೂ ಬಂದು ತಲೆಗೆ ಬಡಿಯಲು, ಹನುಮನು ನೊಂದು, ಸಿಂಹದಂತೆ ಗರ್ಜಿಸುತ್ತಾ ಎಲ್ಲ ದೆಸೆಗಳಲ್ಲಿಯೂ ಸಲೆಯನ್ನುಂಟುಮಾಡುತಲೂ ಇರುವವನಾಗಿ,ಆಕಾಶಕ್ಕೆ ಹಾರಿದನು

ಶಿರ ಸ್ಯುತ್ಪಲ ಪತ್ರಾಭಾ ದುರ್ಧರೇಣ ನಿಪಾತಿತಾಃ ॥೨೦॥
ಸ ತೈಃ ಪಂಚಭಿ ರಾವಿದ್ಧ ಶ್ಶರೈಶ್ಶಿರಸಿ ವಾನರಃ ।
ಉತ್ಪಪಾತ ನದನ್ವ್ಯೋಮ್ನಿ ದಿಶೋ ದಶ ವಿನಾದಯನ್ ॥೨೧॥
ತತಸ್ತು ದುರ್ಧರೋ ವೀರಃ ಸರಥ ಸ್ಸಜ್ಯ ಕಾರ್ಮುಕಃ ।
ಕಿರನ್ ಶರಶತೈ ಸ್ತೀಕ್ಷ್ಣೈ ರಭಿಪೇದೆ ಮಹಾಬಲಃ ॥೨೨॥
ಸ ಕಪಿ ರ್ವಾರಯಾಮಾಸ ತಂ ವ್ಯೋಮ್ನಿ ಶರವರ್ಷಿಣಂ ।
ವೃಷ್ಟಿಮಂತಂ ಪಯೋದಾಂತೆ ಪಯೋದಮಿವ ಮಾರುತಃ ॥೨೩॥
ಅರ್ದ್ಯಮಾನ ಸ್ತತ ಸ್ತೇನ ದುರ್ಧರೇಣಾಽನಿಲಾತ್ಮಜಃ ।
ಚಕಾರ ಕದನಂ ಭೂಯೋ ವ್ಯವರ್ಧತ ಚ ವೇಗವಾನ್ ॥೨೪॥

ಕನ್ನೈದಿಲೆಯ ರೇಕಿನಂತೆ ತೆಳುವಾದ, ಪಂಚ-ಐದಾಗಿರುವ, ಶರಾಃ-ಬಾಣಗಳು, ತಸ್ಯ - ಆ ಆಂಜನೇಯನ ಶಿರಸಿ - ತಲೆಯಮೇಲೆ, ನಿಪಾತಿತಾಃ - ಕೆಡಹಲ್ಪಟ್ಟವು, ಸಃವಾನರಃ - ಆ ಆಂಜನೇಯನು, ಪಂಚಭಿಃ ಐದಾದ, ತೈಃ - ಆ, ಶರೈಃ - ಅಂಬುಗಳಿಂದ, ಶಿರಸಿ - ತಲೆಯಲ್ಲಿ, ವಿದ್ಧಃ- ಹೊಡೆಯಲ್ಪಟ್ಟವನಾಗಿ, ನರ್ದನ್-ಧ್ವನಿಮಾಡುತ್ತಾ, ದಶ - ಹತ್ತಾದ, ದಿಶಃ - ದಿಕ್ಕುಗಳನ್ನು, ವಿನಾದಯನ್- ಪ್ರತಿಧ್ವನಿಗೊಳಿಸುವವನಾಗಿ, ವ್ಯೋಮ್ನಿ - ಅಂತರಿಕ್ಷದಲ್ಲಿ, ಉತ್ಪಪಾತ - ಹಾರಿದನು ॥೨೦, ೨೧, ೨೧॥-॥ ತತಃ-ಆ ಹಿಂದೆ, ವೀರಃ - ಶೂರನಾದ, ಮಹಾಬಲಃ - ಹೆಚ್ಚಿದ ಬಲವುಳ್ಳ, ದುರ್ಧರಃ - ದುರ್ಧರನೆಂಬ ರಾಕ್ಷಸನು, ಸರಥಃ - ರಥದಿಂದ ಸಹಿತನಾದವನೂ, ಸಜ್ಯಕಾರ್ಮುಕಃ - ಸಿದ್ಧಪಡಿಸಿದ ಬಿಲ್ಲುಳ್ಳವನೂ ಆಗಿ, ತೀಕ್ಷ್ಣೈಃ - ಕ್ರೂರವಾದ, ಶರಶತೈಃ - ನೂರಾರುಬಾಣಗಳಿಂದ, ಕಿರನ್ -ಹೊಡೆಯುವವನಾಗಿ, ಅಭಿಪೇದೆ-ಇದಿರಿಸಿದನು ॥೨೨॥-॥ ಸಃ - ಆ, ಕಪಿಃ - ಆಂಜನೇಯನು, ವ್ಯೋಮ್ನಿ - ಆಕಾಶದಲ್ಲಿ, ಶರವರ್ಷಿಣಂ - ಬಾಣಗಳ ಮಳೆಗರೆಯುತಲಿರುವ, ತಂ - ಆ ದುರ್ಧರನನ್ನು, ಪಯೋದಾಂತೆ-ವರ್ಷಾಕಾಲದ ಕಡೆಯಲ್ಲಿ, ವೃಷ್ಟಿಮಂತಂ - ವೃಷ್ಟಿಯನ್ನು ಸುರಿಸುವ, ಪಯೋದಂ - ಮೇಘವನ್ನು, ಮಾರುತಇವ - ವಾಯುವು ಹೇಗೋಹಾಗೆ, ವಾರಯಾಮಾಸ - ತಡೆದನು ॥೨೩॥ ತತಃ - ತರುವಾಯ, ಅನಿಲಾತ್ಮಜಃ - ವಾಯುನಂದನನು, ತೇನ - ಆ ದುರ್ಧರನಿಂದ, ಅರ್ದ್ಯಮಾನಃ - ಪೀಡಿಸಲ್ಪಡುತ್ತಿರುವವನಾಗಿ, ಭೂಯಃ-ಮರಳಿ, ಕದನಂ - ಯುದ್ಧವನ್ನು, ಚಕಾರ - ಮಾಡತೊಡಗಿದನು, ವೇಗವಾನ್ - ವೇಗವುಳ್ಳವನಾಗಿ, ವ್ಯವರ್ಧತ-ಬೆಳೆದನು ॥೨೪॥ ಮಹಾವೇಗಃ - ಬಹು ವೇಗವುಳ್ಳ, ಸಃಹರಿಃ - ಆ ಆಂಜನೇಯನು, ಸಹಸಾ - ಬೇಗನೆ, ದೂರಂ -

॥ ೨೦, ೨೧ ॥ ॥ ಮತ್ತೆ ದುರ್ಧರನೆನಿಸಿದ ದುರ್ಧರ ವೀರಾಸುರ ಸೇನಾನಾಯಕನು- ರಥವನ್ನೇರಿ, ಬಿಲ್ಲಿನಲ್ಲಿ ಹೆದೆಯನ್ನೇರಿಸಿ, ಅಂಬನ್ನು ತೊಟ್ಟು, ವೀರನಾದ ಕಪಿವರನ ಶರೀರವನ್ನು ಸಾವಿರಾರು ಬಾಣಗಳಿಂದ ಮುಚ್ಚಿದನು, ॥ ೨೨ ॥ ॥ ಮುಗಿಲಿನಲ್ಲಿ ಕಂಗೊಳಿಸುವ ಹನುಮನು- ಮಳೆಗಾಲದ ಕಡೆಯಲ್ಲಿನ ಮೋಡಗಳನ್ನು ಬಿರು ಗಾಳಿಯು ಹೇಗೋ ಹಾಗೆ, ದುರ್ಧರನ ಬಾಣಗಳ ಮಳೆಯನ್ನೆಲ್ಲ ದೂರಗೊಳಿಸಿ ॥ ೨೩ ॥ ॥ ಮಹಾವೇಗ ಸಂಪನ್ನನಾಗಿ, ಮರಳಿ ಆ ದುರ್ಧರನಿಂದ ಹೊಡೆಯಲ್ಪಡುತಲಿದ್ದರೂ ಅದನ್ನು ಸಡ್ಡೆಮಾಡದೆ, ಅವನನ್ನು ಇದಿರಿಸಿ ಕದನಕ್ಕೆ ನಿಂತನು. ॥ ೨೪॥ ॥ ಹಾಗೆಯೇ ಮುಗಿಲಿಗೆ ಹಾರಿ, ಮಳೆಗಾಲದಲ್ಲಿನ ಸಿಡಿಲು ಬೆಟ್ಟದ ಮೇಲೆ ಎರಗುವಂತೆ ಬಹು ವೇಗದಿಂದ ಅವನ ತೇರಿಗೆ

ಸ ದೂರಂ ಸಹಸೋತ್ಪತ್ಯ ದುರ್ಧರಸ್ಯ ರಥೇ ಹರಿಃ ॥
ನಿಪಪಾತ ಮಹಾವೇಗೋ ವಿದ್ಯುದ್ರಾಶಿ ರ್ಗಿರಾವಿವ ॥೧೫॥
ತತ ಸ್ಸಮಥಿತಾಷ್ಟಾಶ್ವಂ ರಥಂ ಭಗ್ನಾಕ್ಷ ಕೂಬರಂ ॥
ವಿಹಾಯ ನ್ಯಪತ ದ್ಭೂಮೌ ದುರ್ಧರ ಸ್ತ್ಯಕ್ತ ಜೀವಿತಃ ॥೧೬॥
ತಂ ವಿರೂಪಾಕ್ಷ ಯೂಪಾಕ್ಷೌ ದೃಷ್ಟ್ವಾ ನಿಪತಿತಂ ಭುವಿ ॥
ಸಂಜಾತ ರೋಷೌ ದುರ್ಧರ್ಷಾ ವುತ್ಪೇತತು ರರಿಂದಮೌ ॥ ೧೭॥
ಸ ತಾಭ್ಯಾಂ ಸಹಿತೋ ತ್ಪತ್ಯ ವಿಷ್ಠಿತೋ ವಿಮಲೇಽಂಬರೇ ॥
ಮುದ್ಗರಾಭ್ಯಾಂ ಮಹಾಬಾಹು ರ್ವಕ್ಷ ಸ್ಯಭಿಹತಃ ಕಪಿಃ ॥೧೮॥
ತಯೋ ರ್ವೇಗವತೋ ರ್ವೇಗಂ ವಿನಿಹತ್ಯ ಮಹಾಬಲಃ ॥

---

ದೂರದಲ್ಲಿ, ಉತ್ಪತ್ಯ - ಕುಪ್ಪಳಿಸಿ, ವಿದ್ಯುದ್ರಾಶಿಃ - ಮಿಂಚುಗಳಗುಂಪು (ಸಿಡಿಲು) ಗಿರಾವಿವ - ಬೆಟ್ಟದಲ್ಲಿ ಹೇಗೋ ಹಾಗೆ, ದುರ್ಧರಸ್ಯ - ದುರ್ಧರನೆಂಬ ರಕ್ಕಸನ, ರಥೇ - ತೇರಿನಲ್ಲಿ. ನಿಪಪಾತ-ಬಿದ್ದನು ॥೧೫॥ ತತಃ - ಬಳಿಕ, ಸಃ - ಆ, ದುರ್ಧರಃ - ದುರ್ಧರನು, ಮಥಿತಾಷ್ಟಾಶ್ವಂ - ನಾಶಪಟ್ಟ ಎಂಟು ಕುದುರೆಗಳುಳ್ಳುದೂ, ಭಗ್ನಾಕ್ಷಕೂಬರಂ - ಮುರಿದುಹೋದ ಅಚ್ಚು ಮತ್ತು ಕಂಬದ ಮರವುಳ್ಳದೂ ಆಗಿರುವ, ರಥಂ - ತೇರನ್ನು, ವಿಹಾಯ - ಬಿಟ್ಟು, ತ್ಯಕ್ತಜೀವಿತಃ - ತೊರೆದ ಪ್ರಾಣವುಳ್ಳವನಾಗಿ, ಭೂಮೌ - ಭೂಮಿಯಲ್ಲಿ, ನ್ಯಪತತ್ - ಬಿದ್ದನು ॥೧೬॥ ದುರ್ಧರ್ಷೌ - ತಿರಸ್ಕರಿಸಶಕ್ಯರಾದ, ಅರಿಂದಮೌ - ಹಗೆಗಳನ್ನಡಗಿಸತಕ್ಕ, ವಿರೂಪಾಕ್ಷಯೂಪಾಕ್ಷೌ - ವಿರೂಪಾಕ್ಷಯೂಪಾಕ್ಷರು, ಭುವಿ - ಭೂಮಿಯಲ್ಲಿ, ನಿಪತಿತಂ - ಬಿದ್ದ, ತಂ - ಆ ದುರ್ಧರನನ್ನು, ದೃಷ್ಟ್ವಾ - ನೋಡಿ, ಸಂಜಾತರೋಷೌ - ರೋಷವುಳ್ಳವರಾಗಿ, ಉತ್ಪೇತತುಃ - ಹಾರಿಬಂದರು ॥೧೭॥ ವಿಮಲೆ - ನಿರ್ಮಲವಾಗಿರುವ, ಅಂಬರೆ - ಆಕಾಶದಲ್ಲಿ, ವಿಷ್ಠಿತಃ- ನೆಲೆಗೊಂಡಿರುವ, ಮಹಾಬಾಹುಃ - ಪರಾಕ್ರಮವುಳ್ಳ, ಸಃ - ಆ, ಕಪಿಃ - ಆಂಜನೇಯನು, ತಾಭ್ಯಾಂ - ಆ ಇಬ್ಬರು ರಕ್ಕಸರಿಂದ, ಸಹಸಾ - ಬೇಗನೆ, ಉತ್ಪತ್ಯ - ಹಾರಿ, ಮುದ್ಗರಾಭ್ಯಾಂ - ಮುದ್ಗರವೆಂಬ ಆಯುಧಗಳಿಂದ, ವಕ್ಷಸಿ - ಎದೆಯಲ್ಲಿ, ಅಭಿಹತಃ - ಹೊಡೆಯಲ್ಪಟ್ಟನು ॥೧೮॥ ಮಹಾಬಲಃ-ಹೆಚ್ಚಿದ ಬಲವುಳ್ಳವನಾದ ಕಾರಣವೇ, ಸುಪರ್ಣಸಮವಿಕ್ರಮಃ-ಗರುಡನಿಗೆಣೆಯಾದ ಪರಾಕ್ರಮವುಳ್ಳ, [ಕಪಿಃ-ಆಂಜನೇಯನು] ವೇಗವತೋಃ-ಮಹಾ ವೇಗವುಳ್ಳ,ತಯೋಃ-ಆ ವಿರೂಪಾಕ್ಷಯೂಪಾಕ್ಷರ,ವೇಗಂ-ಗಮನವೇಗವನ್ನು

---

ಕುಪ್ಪಳಿಸಿ, ದುರ್ಧರನ ಮೇಲೆ ಬಿದ್ದು ಅಡರಿ, ಕಾಲಿನಿಂದ ಒದೆದು, ಕುದುರೆಗಳನ್ನು ಅಪ್ಪಳಿಸಿ, ಚಕ್ರಗಳನ್ನು ಪುಡಿ ಪುಡಿಮಾಡಿ, ತೇರನ್ನು ತರಿದೊಟ್ಟಿ, ರಕ್ಕಸನನ್ನು ಕೆಳಗೆ ಕೆಡಹಿದನು, ಕೂಡಲೆ ದುರ್ಧರನು ಹರಣಗಳನ್ನು ಕಳೆದುಕೊಂಡು ನೆಲದಮೇಲೆ ಉರುಳಿದನು. ॥ ೧೬ ॥ ॥ ಹಗೆಗಳನ್ನಿರಿಯುವ ಶೂರರಾದ ವಿರೂಪಾಕ್ಷ ಯೂಪಾಕ್ಷರಿಬ್ಬರೂ ದುರ್ಧರನು ಸತ್ತು ಬಿದ್ದುದನ್ನು ಕಂಡರು, ರೋಷಾವೇಶಪರವಶರಾದರು, ಒಡನೆ ಮಾರುತಿಯನ್ನಿದಿರಿಸಿದರು. ॥ ೧೭ ॥ ॥ ಅಂಬರದಲ್ಲಿ ಹಾರಿದರು, ಮುದ್ಗರವೆಂಬ ಮಹಾಯುಧಗಳಿಂದ, ಮಹಾ ಬಾಹುವಾದ ಹನುಮನ ಎದೆಯಲ್ಲಿ ಬಲವಾಗಿ ಹೊಡೆದರು ॥ ೧೮ ॥ ॥ ಬಳಿಕ ಮಹಾ ಬಾಹು ಬಲ ಸಂಪನ್ನನಾದ ಮಾರುತಿಯು- ತನ್ನ ಚಾತುರ್ಯದಿಂದ ಆ ಮುದ್ಗರಗಳ ಪೆಟ್ಟನ್ನು ತಪ್ಪಿಸಿಕೊಂಡು,ಗರುಡನಂತೆ ಬಹು ವೇಗ ಸಂಪನ್ನನಾಗಿ ನೆಲಕ್ಕೆ ಇಳಿದು,ಅವರ

ನಿಪಪಾತ ಪುನರ್ಭೂಮೌ ಸುಪರ್ಣ ಸಮವಿಕ್ರಮಃ ॥ ೨೯ ॥
ಸ ಸಾಲವೃಕ್ಷ ಮಾಸಾದ್ಯ ತ ಮುತ್ಪಾಟ್ಯ ಚ ವಾನರಂ ॥
ತಾ ವುಭೌ ರಾಕ್ಷಸೌ ವೀರೌ ಜಘಾನ ಪವನಾತ್ಮಜಃ ॥ ೩೦ ॥
ತತ ಸ್ತ್ರೀಂ ಸ್ತ್ರೀನ್ ಹತಾನ್ ಜ್ಞಾತ್ವಾ ವಾನರೇಣ ತರಸ್ವಿನಾ ॥
ಅಭಿಪೇದೇ ಮಹಾವೇಗಃ ಪ್ರಸಹ್ಯ ಪ್ರಘಸೋ ಹರಿಂ ॥ ೩೧ ॥
ಭಾಸಕರ್ಣಶ್ಚ ಸಂಕ್ರುದ್ಧ ಶ್ಶೂಲ ಮಾದಾಯ ವೀರ್ಯವಾನ್ ॥
ಏಕತಃ ಕಪಿಶಾರ್ದೂಲಂ ಯಶಸ್ವಿನ ಮವಸ್ಥಿತಮ್ ॥ ೩೨ ॥

ವಿನಿಹತ್ಯ - ಹೊಡೆದು, ಪುನಃ-ಮರಳಿ, ಭೂಮೌ-ಭೂಮಿಯಲ್ಲಿ, ನಿಪಪಾತ-ಧುಮುಕಿದನು ॥ ೨೯ ॥ ಪವನಾತ್ಮಜಃ - ವಾಯುಪುತ್ರನಾದ, ಸಃ - ಆ, ವಾನರಃ - ಹನುಮಂತನು, ಸಾಲವೃಕ್ಷಂ - ಹೆಜ್ಜರಸದ ಮರವನ್ನು, ಆಸಾದ್ಯ - ಹೊಂದಿ, ತಂ - ಆ ಮರವನ್ನು, ಉತ್ಪಾಟ್ಯಚ - ಕಿತ್ತು, ವೀರೌ - ಶೂರರಾದ, ತೌ - ಆ, ಉಭೌ - ಇಬ್ಬರಾದ, ರಾಕ್ಷಸೌ - ರಾಕ್ಷಸರನ್ನು, ಜಘಾನ - ಹೊಡೆದನು ॥ ೩೦ ॥ ತತಃ-ಆ ಹಿಂದೆ, ಮಹಾವೇಗಃ - ಬಹುವೇಗವುಳ್ಳ, ಪ್ರಘಸಃ - ಪ್ರಘಸನೆಂಬ ಸೇನಾಪತಿಯು, ತ್ರೀನ್ - ಮೂವರಾದ, ತಾನ್ - ದುರ್ಧರ ವಿರೂಪಾಕ್ಷಯೂಪಾಕ್ಷರನ್ನು, ತರಸ್ವಿನಾ - ಬಲವಂತನಾದ, ವಾನರೇಣ -ಹನುಮಂತನಿಂದ, ಹತಾನ್ - ಕೊಲ್ಲಲ್ಪಟ್ಟವರನ್ನಾಗಿ, ಜ್ಞಾತ್ವಾ - ತಿಳಿದು, ಪ್ರಸಹ್ಯ - ಬಲಾತ್ಕಾರವಾಗಿ, ಹರಿಂ - ಆಂಜನೇಯನನ್ನು, ಅಭಿಪೇದೆ - ಇದಿರ್ಗೊಂಡನು ॥ ೩೧ ॥ ವೀರ್ಯವಾನ್- ಪರಾಕ್ರಮಶಾಲಿಯಾದ, ಭಾಸಕರ್ಣಶ್ಚ - ಭಾಸಕರ್ಣನೆಂಬುವವನೂ, ಸಂಕ್ರುದ್ಧಃ - ಬಲು ಸಿಟ್ಟುಗೊಂಡವನಾಗುತ್ತಾ, ಶೂಲಂ - ಶೂಲಾಯುಧವನ್ನು, ಆದಾಯ - ತೆಗೆದುಕೊಂಡು, ಏಕತಃ - ಒಂದುಕಡೆ, ಅವಸ್ಥಿತಂ - ನಿಂತಿರುವ, ಯಶಸ್ವಿನಂ - ಮೂವರನ್ನುರುಳಿಸಿದನೆಂದು ಹೆಸರುವಾಸಿಯನ್ನು ಪಡೆದಿರುವ, ಕಪಿಶಾರ್ದೂಲಂ - ಕಪಿಪುಂಗವನನ್ನು, (ಅಭಿಪೇದೆ - ಇದಿರ್ಗೊಂಡನು) ॥ ೩೨ ॥ ಪ್ರಘಸಃ - ಪ್ರಘಸನು, ಶಿತಾಗ್ರೇಣ - ಮೊನೆಯಾದ ತುದಿಯುಳ್ಳ, ಪಟ್ಟಸೇನ - ಪಟ್ಟಸವೆಂಬ ಆಯುಧದಿಂದ, ಪ್ರತ್ಯಯೋಧಯತ್- ಇದಿರಿಸಿ ಯುದ್ಧ

ಉಬ್ಬಟೆಯನ್ನು ತಡೆದು, ॥ ೨೯ ॥ ಪಕ್ಕದೊಳಿದ್ದ ಸಾಲವೃಕ್ಷವನ್ನು ಬುಡ ಸಹಿತ ಕಿತ್ತು, ಬಿರು ಬಿರನೆ ತಿರುಹಿ, ವಿರೂಪಾಕ್ಷಯೂಪಾಕ್ಷರಿಬ್ಬರನ್ನೂ ಬಲವಾಗಿ ಅಪ್ಪಳಿಸಿ, ಧರೆಯಲ್ಲಿ ಉರುಳಿಸಿದನು. ॥ ೩೦ ॥ ವೀರ ಶಿರೋಮಣಿಯಾದ ಮಾರುತಿಯಿಂದ ದುರ್ಧರ, ವಿರೂಪಾಕ್ಷ, ಯೂಪಾಕ್ಷರೆಂಬ ಮೂವರು ಸೇನಾ ನಾಯಕರೂ ಹತರಾಗಿ ಭೂಮಿಯಲ್ಲಿ ಉರುಳಿದರು, ಅದನ್ನು ಕಂಡು, ಬಾಹುಬಲ ಸಂಪನ್ನನಾದ ಪ್ರಘಸನೆಂಬ ಸೇನಾಧಿಪತಿಯು-ಬಹು ವೇಗದಿಂದ ಹಾರಿ ಬಂದು ಹನುಮನನ್ನು ಇದಿರಿಸಿದನು. ॥ ೩೧ ॥ ಮತ್ತೊಂದು ಕಡೆ ಭಾಸಕರ್ಣನೆಂಬ ರಾಕ್ಷಸ ಸೇನಾನಿಯೂ ರೋಷಾವೇಶ ಪರವಶನಾಗಿ, ಶೌರ್ಯವನ್ನು ತೋರಿಸುತ್ತಾ, ಶೂಲಾಯುಧದಿಂದ ತಿವಿದನು, ಮಾರುತಿಯು ಮೂರು ಮಂದಿ ರಾಕ್ಷಸ ಸೇನಾಧಿಪತಿಗಳನ್ನು ಕೊಂದು ಕೆಡಹಿದನೆಂದು ಪಡೆದ ಕೀರ್ತಿಯನ್ನು ಇವನು ತಾಳಲಾರದೆ ಹೋದನು. ॥ ೩೨ ॥ ಪ್ರಘಸನು ತೀಕ್ಷ್ಣವಾದ ಮೊನೆಯುಳ್ಳ ಪಟ್ಟಸಾಯುಧದಿಂದ ಮಾರುತಿಯನ್ನು ಇರಿದನು. ಭಾಸಕರ್ಣನೂ ಮರಳಿ ಹನುಮನನ್ನು ಇಟ್ಟನು

ಪಟ್ಟಿಸೇನ ಶಿತಾಗ್ರೇಣ ಪ್ರಘಸಃ ಪ್ರತ್ಯ ಯೋಧಯತ್ ॥
ಭಾಸಕರ್ಣಶ್ಚ ಶೂಲೇನ ರಾಕ್ಷಸಃ ಕಪಿ ಸತ್ತಮಮ್ ॥೩೩॥ ॥
ಸ ತಾಭ್ಯಾಂ ವಿಕ್ಷತೈ ರ್ಗಾತ್ರೈ ರಸೃಗ್ದಿಗ್ಧ ತನೂರುಹಃ ।
ಅಭವ ದ್ವಾನರಃ ಕ್ರುದ್ಧೋ ಬಾಲಸೂರ್ಯ ಸಮಪ್ರಭಃ ॥೩೪॥ ॥
ಸಮುತ್ಪಾಟ್ಯ ಗಿರೇ ಶ್ಶೃಂಗಂ ಸಮೃಗ ವ್ಯಾಳ ಪಾದಪಮ್ ॥
ಜಘಾನ ಹನುಮಾನ್ವೀರೋ ರಾಕ್ಷಸೌ ಕಪಿ ಕುಂಜರಃ ॥೩೫॥॥
ತತ ಸ್ತೇಷ್ವವಸನ್ನೇಷು ಸೇನಾಪತಿಷು ಪಂಚಸು ।
ಬಲಂ ತದವ ಶೇಷಂ ಚ ನಾಶಯಾಮಾಸ ವಾನರಃ ॥೩೬॥ ॥
ಅಶ್ವೈ ರಶ್ವಾನ್ಗಜೈ ರ್ನಾಗಾನ್ ಯೋಧೈ ರ್ಯೋಧಾ ನ್ರಥೈರಥಾನ್ ।

ಮಾಡಿದನು, ಭಾಸಕರ್ಣಃ-ಭಾಸಕರ್ಣನೆಂಬ, ರಾಕ್ಷಸಶ್ಚ - ರಕ್ಕಸನೂ, ಶೂಲೇನ - ಶೂಲಾಯುಧದಿಂದ, ಕಪಿಸತ್ತಮಂ - ಹನುಮಂತನನ್ನು ಕುರಿತು ಪ್ರತ್ಯಯೋಧಯತ್ -ಯುದ್ಧ ಮಾಡತೊಡಗಿದನು ॥ ೩೩ ॥ - ॥ ತಾಭ್ಯಾಂ - ಆಪ್ರಘಸಭಾಸಕರ್ಣರಿಂದ, ವಿಕ್ಷತ-ಗಾಯಮಾಡಲ್ಪಟ್ಟ, ಗಾತ್ರೈಃ-ಅವಯವಗಳಿಂದ (ಉಪಲಕ್ಷಿತಃ - ಕೂಡಿದವನಾದ ಕಾರಣವೇ ) ಅಸೃಗ್ದಿಗ್ಧ ತನೂರುಹಃ - ರಕ್ತದಿಂದ ನನೆದ ರೋಮಗಳುಳ್ಳವನಾಗಿ, ಕ್ರುದ್ಧಃ - ಸಿಟ್ಟುಗೊಂಡ, ವಾನರಃ - ಹನುಮಂತನು, ಬಾಲಸೂರ್ಯ ಸಮಪ್ರಭಃ - ಎಳೆಯ ರವಿಯ ತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳವನು, ಅಭವತ್ - ಆದನು ॥ ೩೪ ॥ - ॥ ವೀರಃ - ಶೂರನೂ, ಕಪಿಕುಂಜರಃ - ವಾನರೋತ್ತಮನೂ ಆಗಿರುವ, ಹನುಮಾನ್ - ಆಂಜನೇಯನು, ಸಮೃಗವ್ಯಾಳಪಾದಪಂ - ಮೃಗ, ಘಾತುಕಜಂತು, ವೃಕ್ಷ ಇವುಗಳಿಂದ ಸಹಿತವಾದ, ಗಿರೇಃ - ಬೆಟ್ಟದ, ಶೃಂಗಂ - ಶಿಖರವನ್ನು, ಸಮುತ್ಪಾಟ್ಯ ಕಿತ್ತುಕೊಂಡು, ರಾಕ್ಷಸೌ - ವಿರೂಪಾಕ್ಷಯೂಪಾಕ್ಷರನ್ನು, ಜಘಾನ - ಹೊಡೆದನು ॥೩೫॥-॥ ತತಃ - ಆ ಹಿಂದೆ, ಸಃ - ಆ, ವಾನರಃ - ಹನುಮನು, ಪಂಚಸು - ಐದುಮಂದಿಯಾದ, ತೇಷು - ಆ, ಸೇನಾಪತಿಷು - ಸೇನಾನಾಯಕರು, ಅವಸನ್ನೇಷು (ಸತ್ಸು) ಮೃತರಾಗುತ್ತಿರಲಾಗಿ, ಅವಶೇಷಂ - ಉಳಿದ, ತತ್ - ಆ, ಬಲಂಚ - ಸೈನ್ಯವನ್ನೂ, ನಾಶಯಾಮಾಸ - ಹಾಳುಮಾಡಿದನು ॥೩೬॥-॥ ಸಃ - ಆ, ಕಪಿಃ - ಆಂಜನೇಯನು, ಅಶ್ವೈಃ - ಕುದುರೆ

॥ ೩೩ ॥ ॥ ಹೀಗೆ ಅವರಿಬ್ಬರೂ ಹೊಡೆದ ಪೆಟ್ಟುಗಳಿಂದ ಹನುಮನ ಮೈ ಗಾಯವಾಗಿ, ಶರೀರದ ಮೇಲಣ ರೋಮವೆಲ್ಲ ರಕ್ತದಿಂದನನದು, ಬಾಲ ಸೂರ್ಯನಂತೆ ಬೆಳಗುತಲಿದ್ದನಲ್ಲದೆ ಆಂಜನೇಯನು ಕಾಲರುದ್ರನಂತೆ ಕೋಪವನ್ನು ತಾಳಿದನು ॥ ೩೪ ॥ ॥ ಹತ್ತಿರದಲ್ಲಿ ಮೃಗಗಳಿಂದಲೂ, ಘಾತುಕ ಜಂತುಗಳಿಂದಲೂ, ಮರಗಳಿಂದಲೂ ಒಡಗೂಡಿರುವ ದೊಡ್ಡ ಬೆಟ್ಟವನ್ನು ನೋಡಿ, ಅದನ್ನು ಪೆಳ್ಳಗಿಸಿ, ಬುಡ ಸಹಿತ ಕಿತ್ತು, ಎತ್ತಿ, ಆ ಇಬ್ಬರು ರಕ್ಕಸರ ಮೇಲೆಯೂ ಬೀಸಿ ಒಗೆದನು. ॥೩೫॥ ॥ ಆಬೆಟ್ಟದ ಪೆಟ್ಟು ಬಿದ್ದ ಕೂಡಲೆ ಪ್ರಘಸಭಾಸಕರ್ಣರಿಬ್ಬರೂ ಗತಾಸುಗಳಾಗಿ ಭೂಗತರಾದರು. ಹೀಗೆ ಪ್ರಧಾನರಾದ ಆಪಂಚ ಸೇನಾಪತಿಗಳೂ ಪಂಚತ್ವವನ್ನು ಪಡೆಯಲು, ಹತ ಶೇಷವಾದ ಚತುರಂಗ ಬಲವನ್ನೆಲ್ಲ ನಿಮಿಷಮಾತ್ರದಲ್ಲಿ ನಾಶಗೊಳಿಸಿದನು. ॥ ೩೬ ॥ ॥ ಅಶ್ವಗಳಿಂದ ವಾಜಿಗಳನ್ನೂ, ನಾಗಗಳಿಂ ಗಜಗಳನ್ನೂ, ವೀರ ಭಟರಿಂದ ಯೋಧರನ್ನೂ, ತೇರುಗಳಿಂದಲೇ ರಥಗಳನ್ನೂ ಬಾರಿಸಿ

ಸ ಕಪಿ ರ್ನಾಶಯಾಮಾಸ ಸಹಸ್ರಾಕ್ಷ ಇವಾಸುರಾನ್ ॥೩೭॥
ಹತೈ ರ್ನಾಗೈಶ್ಚ ತುರಗೈ ರ್ಭಗ್ನಾಕ್ಷೈಶ್ಚ ಮಹಾರಥೈಃ ॥
ಹತೈಶ್ಚ ರಾಕ್ಷಸೈ ರ್ಭೂಮಿ ರುದ್ಧ ಮಾರ್ಗಾ ಸಮಂತತಃ ॥೩೮॥ ॥
ತತಃ ಕಪಿ ಸ್ತಾನ್ ಧ್ವಜಿನೀಪತೀನ್ ರಣೇ ನಿಹತ್ಯ ವೀರಾನ್ ಸಬಲಾನ್ಸವಾಹನಾನ್ ।
ಸಮೀಕ್ಷ್ಯ ವೀರಃ ಪರಿಗೃಹ್ಯ ತೋರಣಂ ಕೃತಕ್ಷಣಃ ಕಾಲ ಇವಪ್ರಜಾಕ್ಷಯೇ॥೩೯॥
- ಇತಿಶ್ರೀಮತ್ಸುನ್ದರ ಕಾಣ್ಡೇ ಷಟ್ಚತ್ವಾರಿಂಶಸ್ಸರ್ಗಃ -

---

ಗಳಿಂದ, ಅಶ್ವಾನ್ - ವಾಜಿಗಳನ್ನೂ, ಗಜೈಃ - ಆನೆಗಳಿಂದ, ನಾಗಾನ್ - ದ್ವಿಪಗಳನ್ನೂ, ಯೋಧೈಃ - ಭಟರಿಂದ, ಯೋಧಾನ್ - ವೀರರನ್ನೂ, ರಥೈಃ - ರಥಗಳಿಂದ, ರಥಾನ್ - ತೇರುಗಳನ್ನೂ, ಅಸುರಾನ್ - ರಾಕ್ಷಸರನ್ನು, ಸಹಸ್ರಾಕ್ಷಇವ - ಇಂದ್ರನಂತೆ, ನಾಶಯಾಮಾಸ - ಧ್ವಂಸಮಾಡಿದನು ॥೩೭॥- ॥ ಭೂಮಿಃ - ರಣಭೂಮಿಯು, ಹತೈಃ - ಕೊಲ್ಲಲ್ಪಟ್ಟ, ನಾಗೈಃ - ಗಜಗಳಿಂದಲೂ ತುರಗೈಶ್ಚ - ಅಶ್ವಗಳಿಂದಲೂ, ಭಗ್ನಾಕ್ಷೈಃ - ಮುರಿದ ಅಚ್ಚುಗಳುಳ್ಳ, ಮಹಾರಥೈಃ - ದೊಡ್ಡ ತೇರುಗಳಿಂದಲೂ, ಹತೈಃ- ಹೊಡೆಯಲ್ಪಟ್ಟ, ರಾಕ್ಷಸೈಶ್ಚ - ರಕ್ಕಸರಿಂದಲೂ, ಸಮಂತತಃ - ಎಲ್ಲ ಕಡೆಗಳಲ್ಲಿಯೂ, ರುದ್ಧಮಾರ್ಗಾ - ತಡೆಯಲ್ಪಟ್ಟದಾರಿಯುಳ್ಳುದಾಗಿ, ಆಸೀತ್- ಇದ್ದಿತು ॥೩೮॥-॥ ತತಃ ತರುವಾಯ, ವೀರಃ - ಶೂರನಾದ, ಕಪಿಃ- ಆಂಜನೇಯನು, ವಿರಾನ್ - ಶೂರರಾದ, ಸಬಲಾನ್ - ಸೈನ್ಯಗಳಿಂದೊಡಗೂಡಿದ, ಸವಾಹನಾನ್ - ವಾಹನಗಳಿಂದ ಸಹಿತರಾದ, ತಾನ್ - ಆ, ಧ್ವಜಿನೀಪತೀನ್ - ಸೇನಾನಾಯಕರನ್ನು, ಸಮೀಕ್ಷ್ಯ - ನೋಡಿ, ತೋರಣಂ - ಹೊರಬಾಗಿಲನ್ನು, ಪರಿಗೃಹ್ಯ - ಆಶ್ರಯಿಸಿ, ಪ್ರಜಾಕ್ಷಯೆ (ಸತಿ) ಲೋಕವೆಲ್ಲ ನಾಶವಾಗುತ್ತಿರಲಾಗಿ, ಕಾಲಇವ - ಯಮನಂತೆ, ಕೃತಕ್ಷಣಃ - ಪಡೆದ ಅವಕಾಶವುಳ್ಳವನಾಗಿ (ವಿಶ್ರಮಿಸಿಕೊಂಡವನಾಗಿ, ತಸ್ಥೌ - ಇದ್ದನು ॥೩೯॥ ॥

—ಇಂತು ನಲವತ್ತಾರನೆಯ ಸರ್ಗಂ—

---

ಒಡ್ಡಿ ಕೆಡಹಿದನು. ಆಯಾಯ ಪ್ರಾಣಿಗಳೇ ಆಯಾಯ ಪ್ರಾಣಿಗಳನ್ನು ಕೊಲ್ಲಲಿಕ್ಕೆ ಅವನಿಗೆ ಆಯುಧಗಳಾದುವು. ಹೀಗೆ ಸಹಸ್ರನೇತ್ರನು ಅಸುರರನ್ನು ಬಡಿಯುವಂತೆ ಸಕಲಾಸುರ ಸೇನೆಯನ್ನು ಸವರಿ ನೆಲಸಮ ಮಾಡಿದನು. ॥ ೩೭ ॥ ॥ ಭೂಗತಗಳಾದ ಗಜಗಳಿಂದಲೂ, ಉರುಳಿದ ತೇಜಿಗಳಿಂದಲೂ, ಮುರಿದ ಅಚ್ಚುಗಳುಳ್ಳ ರಥಗಳಿಂದಲೂ, ಸತ್ತು ಬಿದ್ದಿರುವ ರಕ್ಕಸರ ಹೆಣಗಳ ರಾಶಿಗಳಿಂದಲೂ, ಆ ರಣ ಭೂಮಿಯಲ್ಲಿ ಎಲ್ಲೆಲ್ಲಿಯೂ ದಾರಿಯೇ ಇಲ್ಲವಾಗಿದ್ದಿತು. ॥ ೩೮ ॥ ಈ ಪ್ರಕಾರ ಆ ವೀರ ಮಾರುತಿಯು - ಆನೆ, ಕುದುರೆ, ತೇರು, ಕಾಲು ಬಲದಿಂದೊಡಗೂಡಿದ ಪಂಚ ಸೇನಾನಾಯಕರನ್ನೂ ಕಡಿದುರುಳಿಸಿ, ಬಲವು ನಿಶ್ಶೇಷವಾಯಿತೆಂದು ತಿಳಿದು, ಪ್ರಳಯದಲ್ಲಿ ಲೋಕದ ಸಮಸ್ತ ಪ್ರಜೆಗಳನ್ನೂ ನಾಶಗೊಳಿಸಿ, ಮೃತ್ಯುವು ಹೇಗೋ ಹಾಗೆ, ಸ್ವಲ್ಪ ವಿಶ್ರಾಂತಿಯನ್ನು ಪಡೆಯಲು ಮರಳಿ ಉದ್ಯಾನದ ಹೊರ ಬಾಗಿಲಿನ ಬಳಿಗೆ ಬಂದು ಉತ್ಸಾಹ ಸಂಪನ್ನನಾಗಿ ನಿಂತನು ॥೩೯॥ ।'

- ಇಂತು ನಲವತ್ತಾರನೆಯ ಸರ್ಗಂ -

ಶ್ರೀ

ಶ್ರೀರಾಮಚಂದ್ರ ಪರಬ್ರಹ್ಮಣೇನಮಃ

## —ಶ್ರೀಮತ್ಸುನ್ದರಕಾಣ್ಡೇ ಸಪ್ತಚತ್ವಾರಿಂಶಸ್ಸರ್ಗಃ—

ಸೇನಾಪತೀನ್ಪಂಚ ಸ ತು ಪ್ರಮಾಪಿತಾನ್ ಹನೂಮತಾ ಸಾನುಚರಾನ್ಸವಾಹನಾನ್।
ಸಮೀಕ್ಷ್ಯ ರಾಜಾ ಸಮರೋದ್ಧತೋನ್ಮುಖಂ ಕುಮಾರಮಕ್ಷಂ ಪ್ರಸಮೈಕ್ಷತಾಗ್ರತಃ।
ಸ ತಸ್ಯ ದೃಷ್ಟ್ಯರ್ಪಣಸಂಪ್ರಚೋದಿತಃ ಪ್ರತಾಪವಾನ್ಕಾಂಚನಚಿತ್ರಕಾರ್ಮುಕಃ ॥

---

### —ನಲವತ್ತೇಳನೆಯ ಅಧ್ಯಾಯ—

ಕಂದ —ಶಿಕ್ಷಿಸಿ ರಾಕ್ಷಸ ಸುತಹ । ರ್ಯಕ್ಷಂ ತಾ ನಕ್ಷಯಾತ್ಮ ಪೌರುಷದೋರಲ್ ॥
ಶಿಕ್ಷಿಸುತವನಂ ಹರಿ ಹ । ರ್ಯಕ್ಷಂ ತಾ ನಕ್ಷಯಾತ್ಮ ತೇಜದಿ ಮೆರೆದಂ ॥

ರಾಜಾ - ಧೊರೆಯಾದ, ಸಃತು - ಆ ರಾವಣನಾದರೋ, ಸಾನುಚರಾನ್ - ಪರಿಜನರಿಂದ ಸಹಿತರಾದ, ಸವಾಹನಾನ್ - ಚತುರಂಗ ಬಲದಿಂದೊಡಗೂಡಿರುವ, ಪಂಚ - ಐದು ಮಂದಿ, ಸೇನಾಪತೀನ್ - ಸೇನಾನಾಯಕರನ್ನು, ಹನೂಮತಾ - ಆಂಜನೇಯನಿಂದ, ಪ್ರಮಾಪಿತಾನ್ - ಮುಗಿಸಲ್ಪಟ್ಟವರನ್ನಾಗಿ, ಸಮೀಕ್ಷ್ಯ - ನೋಡಿ (ಚಿಂತಿಸಿ) ಸಮರೋದ್ಧತೋನ್ಮುಖಂ - ಯುದ್ಧಕ್ಕೋಸ್ಕರ ಕೊಬ್ಬಿದವನಾಗಿ ಮುಖವನ್ನೆತ್ತಿರುವ, ಅಕ್ಷಂ - ಅಕ್ಷನೆಂಬ, ಕುಮಾರಂ - ತನ್ನ ಮಗನನ್ನು, ಅಗ್ರತಃ - ಇದಿರಿಗೆ, ಪ್ರಸಮೈಕ್ಷತ - ಚೆನ್ನಾಗಿ ನೋಡಿದನು, ॥೧॥ ಅಥ - ಅನಂತರದಲ್ಲಿ, ಪ್ರತಾಪವಾನ್ - ಮಹಾ ಶೌರ್ಯವುಳ್ಳ, ಸಃ - ಆ ಅಕ್ಷಯ ಕುಮಾರನು, ತಸ್ಯ - ಆ ರಾವಣನ, ದೃಷ್ಟ್ಯರ್ಪಣ ಸಂಪ್ರಚೋದಿತಃ - ದೃಷ್ಟಿಯನ್ನಿಡುವುದರಿಂದ ಪ್ರೇರಿಸಲ್ಪಟ್ಟವನಾದಕಾರಣವೇ, ಕಾಂಚನ ಚಿತ್ರಕಾರ್ಮುಕಃ - ಚಿನ್ನದ ಕೆಲಸದ

---

### —ನಲವತ್ತೇಳನೆಯ ಸರ್ಗ.—

ಆನೆ, ಕುದುರೆ, ತೇರು, ಕಾಲಾಳೆಂಬ ಚತುರಂಗಬಲದೊಡನೆ ಸಹಿತರಾದ ಐದುಮಂದಿ ಸೇನಾನಾಯಕರನ್ನೂ ಹರಿಯು ರಣಾಂಗದಲ್ಲಿ ಹೊಡೆದು ಮುಲಗಿಸಿದನು ಎಂಬುದನ್ನು ರಾವಣನ ಮಗನಾದ ಅಕ್ಷನೆಂಬುವವನು ಕಂಡನು. ತಂದೆಯು ಇದಿರಿನಲ್ಲಿ, ಕಾಳಗಕ್ಕೆ ತೆರಳಲು ತನಗೆ ಅಪ್ಪಣೆಯಾದರೆ ಹೊರಡಬೇಕೆಂದು ತವಕಿಸುತ್ತಾ, ಆಸ್ಥಾನದಲ್ಲಿ ತನ್ನ ತಂದೆಯ ಮುಖವನ್ನು ತಲೆಯನ್ನೆತ್ತಿ ನೋಡುತಲಿದ್ದನು. ರಾಕ್ಷಸರಾಜನು—ತನ್ನ ಕುಮಾರನ ಮನೋಭಾವವನ್ನು ಅರಿತನು. ದೃಷ್ಟಿಸಂಜ್ಞೆಯಿಂದಲೇ ನೀನು ಬವರಕ್ಕೆ ತೆರಳಬಹುದೆಂದು ಅಪ್ಪಣೆಯನ್ನಿತ್ತನು ॥೧॥ ಅಕ್ಷಕುಮಾರನು-ತನ್ನ ತಂದೆಯ ಕಟಾಕ್ಷವು ತನ್ನಮೇಲೆ ಪಸರಿಸಿದ ಕೂಡಲೆ, ರಾಜಾಜ್ಞೆಯಾಯಿತೆಂದು ಭಾವಿಸಿ, ಮಹಾಪ್ರತಾಪಶಾಲಿಯಾದುದರಿಂದಲೇ, ಬಂಗಾರದಿಂದ ಕೈವಾಡದ ಕೆಲಸವನ್ನು ಮಾಡಿರುವ ಬಿಲ್ಲನ್ನು ಕೈಯಲ್ಲಿ ಹಿಡಿದು,

ಸಮುತ್ಪಪಾತಾಥ ಸದ ಸ್ಯುದೀರಿತೋ ದ್ವಿಜಾತಿ ಮುಖ್ಯೈರ್ಹವಿಷೇವ ಪಾವಕಃ ॥೨॥
ತತೋ ಮಹಾನ್ಬಾಲ ದಿವಾಕರ ಪ್ರಭಂ ಪ್ರತಪ್ತ ಜಾಂಬೂನದ ಜಾಲ ಸಂತತಂ ।
ರಥಂ ಸಮಾಸಾ ಯು ಯಯೌ ಸ ವೀರ್ಯವಾನ್ಮಹಾಹರಿಂ ತಂ ಪ್ರತಿ ನೈರ್ಋತರ್ಷಭಃ॥
ತತ ಸ್ತಪ ಸ್ಸಂಗ್ರಹ ಸಂಚಯಾ ರ್ಜಿತಂ ಪ್ರತಪ್ತ ಜಾಂಬೂನದ ಜಾಲ ಶೋಭಿತಂ ।
ಪತಾಕಿನಂ ರತ್ನ ವಿಭೂಷಿತಧ್ವಜಂ ಮನೋಜವಾ ಷ್ಟಾಶ್ವ ವರೈ ಸ್ಸುಯೋಜಿತಮ್ ॥೦॥
ಸುರಾಸುರಾಧೃಷ್ಯ ಮಸಂಗ ಚಾರಿಣಂ ರವಿಪ್ರಭಂ ವ್ಯೋಮಚರಂ ಸಮಾಹಿತಂ ।

---

ವಿಚಿತ್ರವಾದ ಬಿಲ್ಲುಳ್ಳವನಾಗಿ, ಸದಸಿ - ಸಭೆಯಲ್ಲಿ, ದ್ವಿಜಾತಿಮುಖ್ಯೈಃ - ಬ್ರಾಹ್ಮಣೋತ್ತಮರಿಂದ, ಹವಿಷಾ - ಆಜ್ಯಾದಿ ಹವಿಸ್ಸಿನಿಂದ, ಉದೀರಿತಃ - ಉತ್ತೇಜಿಸಲ್ಪಟ್ಟ, ಪಾವಕ ಇವ - ಅಗ್ನಿಯಂತೆ, ಸಮುತ್ಪಪಾತ - ಮೇಲಕ್ಕೆದ್ದನು ॥೨॥ ತತಃ - ಆ ಹಿಂದೆ, ಮಹಾನ್ - ಉನ್ನತನೆನಿಸಿದ, ವೀರ್ಯವಾನ್ - ಶೌರ್ಯ ಸಂಪನ್ನನಾದ, ನೈರ್ಋತರ್ಷಭಃ - ರಾಕ್ಷಸಶ್ರೇಷ್ಠನಾದ, ಸಃ - ಆ ಅಕ್ಷಕುಮಾರನು, ಪ್ರತಪ್ತ...ತಂ ಪ್ರತಪ್ತ- ಪುಟದಿಂದ ಶುದ್ಧವಾದ, ಜಾಂಬೂನದ ಜಾಲ - ಚಿನ್ನದ ರೇಕುಗಳಿಂದ, ಸಂತತಂ - ಪ್ರಕಾಶಿಸುತಲಿರುವುದಾದಕಾರಣವೇ, ಬಾಲದಿವಾಕರ ಪ್ರಭಂ - ಬಾಲ ಸೂರ್ಯನಂತಹ ಕಾಂತಿಯುಳ್ಳ, ರಥಂ - ತೇರನ್ನು, ಆಸ್ಥಾಯ - ಆಶ್ರಯಿಸಿ, (ಏರಿ) ತಂ - ಆ, ಮಹಾಹರಿಂಪ್ರತಿ - ವೀರವಾನರನನ್ನು ಕುರಿತು, ಯಯೌ - ಹೊರಟನು, ॥೩॥ (ಮತ್ತೆ ಹೇಗೆ ಹೊರಟನೆಂದರೆ) ತತಃ - ಅನಂತರದಲ್ಲಿ ಅಮರತುಲ್ಯ ವಿಕ್ರಮಃ - ದೇವತೆಗಳಿಗೆಣೆಯೆನಿಸಿದ ಶೌರ್ಯವುಳ್ಳ, ಸಃ - ಆ ರಾಕ್ಷಸನು, ತಪಸ್ಸಂಗ್ರಹ ಸಂಚಯಾರ್ಜಿತಂ - ತಪೋನುಷ್ಠಾನಗಳ ಸೇರ್ವೆಯಿಂದ ಸಂಪಾದಿಸಿದ, ಪ್ರತಪ್ತಜಾಂಬೂನದ ಜಾಲಶೋಭಿತಂ - ಪುಟಶುದ್ಧವಾದ ಬಂಗಾರದ ಗರಿಗಳಿಂದ ಮಿರುಗುತಲಿರುವ, ಪತಾಕಿನಂ - ಧ್ವಜವನ್ನೊಳಗೊಂಡಿರತಕ್ಕ, ರತ್ನ ವಿಭೂಷಿತ ಧ್ವಜಂ - ರತ್ನಗಳಿಂದ ಅಲಂಕರಿಸಲ್ಪಟ್ಟ ವೈಜಯಂತಿಯುಳ್ಳ, ಮನೋಜವಾಷ್ಟಾಶ್ವವರೈಃ - ಮನೋವೇಗವುಳ್ಳ ಎಂಟು ಉತ್ತಮಾಶ್ವಗಳಿಂದ, ಸಂಯೋಜಿತಂ - ಸೇರಿಸಲ್ಪಟ್ಟ ॥೪॥ ಸುರಾಸುರಾಧೃಷ್ಯಂ - ದೇವಾಸುರರಿಂದಲೂ ತಿರಸ್ಕರಿಸಲಶಕ್ಯವಾದ, ಅಸಂಗಚಾರಿಣಂ - ಭೂ ಸಂಬಂಧವಿಲ್ಲದೆಯೇ ಸಂಚರಿಸುವ, (ಗಮನಲಾಘವವುಳ್ಳ) ರವಿಪ್ರಭಂ - ಸೂರ್ಯನಂತೆಸೆವ, ವ್ಯೋಮಚರಂ - ಆಕಾಶದಲ್ಲಿಯೂ

---

ಶ್ರೇಷ್ಠರಾದ ಬ್ರಾಹ್ಮಣರು ಹವನ ಮಾಡುವುದರಿಂದ ಅಗ್ನಿಯು ಪ್ರಜ್ವಲಿಸುವಂತೆ, ಕೋಪಾವೇಶದಿಂದ, ಸಭಾಸ್ಥಾನವನ್ನು ಬಿಟ್ಟು ಮೇಲಕ್ಕೆದ್ದನು ॥೨॥ ಬಲು ಎತ್ತರವಾದ ಆಳು, ಅಪರಿಮಿತ ಪರಾಕ್ರಮಶಾಲಿ, ರಾಕ್ಷಸ ವೀರರೊಳಗೆ ಅಗ್ರಗಣ್ಯನು, ಬಂಗಾರದಿಂದ ಬಗೆಬಗೆಯ ಅಲಂಕಾರಗಳನ್ನು ರಚಿಸಿ, ದಿವ್ಯವಾದ ರಥವನ್ನಾಗಲೆ ತಂದು ನಿಲ್ಲಿಸಿದಾರೆ, ಬಾಲಸೂರ್ಯನಂತೆ ತಳತಳನೆ ಹೊಳೆಯುತಲಿದೆ, ಅದನ್ನು ಕಂಡನು, ಬೇಗನೆ ಏರಿದನು, ರಣಾಂಗಣದಲ್ಲಿರುವ ಹರಿವರನನ್ನು ಕುರಿತು ಹೊರಟನು ॥೩॥ ಅಕ್ಷಕುಮಾರನು ಬಹು ಕಾಲ ತಪಸ್ಸನ್ನು ಆಚರಿಸಿ, ಅದರ ಫಲವಾಗಿ ಆ ರಥವನ್ನು ಪಡೆದಿದ್ದನು. ಅದರ ಪ್ರತಿಯೊಂದು ಅಂತಸ್ತನ್ನೂ ಕಿಟಕಿ ಮೊದಲಾದವುಗಳನ್ನೂ ಶ್ರೇಷ್ಠತರವಾದ ಸುವರ್ಣಾಭರಣಗಳಿಂದ ಅಲಂಕರಿಸಿದ್ದರು, ಅದರಿಂದ ವಿರಾಜಿಸುತಲಿದ್ದಿತು, ಅಲ್ಲಲ್ಲಿ ಕಿರುದಾಳಗಳನ್ನೂ, ನಡುವೆ ಧ್ವಜವನ್ನೂ, ಕಟ್ಟಿದ್ದರು, ಮನಸ್ಸಿಗೆಣೆಯಾದ ವೇಗವುಳ್ಳ ಎಂಟು ಕುದುರೆಗಳನ್ನು ಹೂಡಿದ್ದರು, ಆ ದಿವ್ಯ ರಥವು-ದೇವಾಸುರರಿಗೂ ಅಸದಳವೆನಿಸಿದುದು,

ಸ ತೂಣಮಷ್ಟಾಸಿ ನಿಬದ್ಧಬಂಧುರಂ ಯಥಾಕ್ರಮಾವೇಶಿತ ಶಕ್ತಿ ತೋಮರಮ್ ॥೫॥
ವಿರಾಜಮಾನಂ ಪ್ರತಿಪೂರ್ಣವಸ್ತುನಾ ಸಹೇಮದಾಮ್ನಾ ಶಶಿಸೂರ್ಯವರ್ಚಸಾ ।
ದಿವಾಕರಾಭಂ ರಥಮಾಸ್ಥಿತಸ್ತತಃ ಸ ನಿರ್ಜಗಾಮಾ ಮರತುಲ್ಯವಿಕ್ರಮಃ ॥೬॥
ಸ ಪೂರಯನ್ ಖಂಚ ಮಹೀಂಚ ಸಾಚಲಾಂ ತುರಂಗಮಾತಂಗ ಮಹಾರಥಸ್ವನೈಃ ।
ಬಲೈಃ ಸಮೇತೈಸ್ಸಹಿ ತೋರಣಸ್ಥಿತಂ ಸಮರ್ಥಮಾಸೀನ ಮುಪಾಗಮತ್ಕಪಿಂ ॥೭॥
ಸ ತಂ ಸಮಾಸಾದ್ಯ ಹರಿಂ ಹರೀಕ್ಷಣೋ ಯುಗಾಂತ ಕಾಲಾಗ್ನಿ ಮಿವ ಪ್ರಜಾಕ್ಷಯೇ ।

ಸಂಚರಿಸತಕ್ಕ, ಸತೂಣಂ - ಬತ್ತಳಿಕೆಯಿಂದೊಡಗೂಡಿರುವ, ಅಷ್ಟಾಸಿಸಿ ಬದ್ಧಬಂಧುರಂ - ಎಂಟು ಕತ್ತಿಗಳಿಂದ ಸಹಿತವಾಗಿ ರಮಣೀಯವೆನಿಸಿರುವ, ಯಥಾಕ್ರಮಾವೇಶಿತಶಕ್ತಿತೋಮರಂ - ಬರಸೆಯಾಗಿ ಇಟ್ಟಿರುವ ಶಕ್ತಿ, ತೋಮರ ಮೊದಲಾದ ಆಯುಧಗಳುಳ್ಳ, ಸಮಾಹಿತಂ - ಸಿದ್ಧವಾದ ॥೫॥ ಸಹೇಮಧಾಮ್ನಾ - ಸುವರ್ಣಕಾಂತಿಯಿಂದೊಡಗೂಡಿದುದಾದಕಾರಣವೇ, ಶಶಿಸೂರ್ಯವರ್ಚಸಾ - ಚಂದ್ರ ಸೂರ್ಯರ ಕಾಂತಿಯುಳ್ಳ, ಪ್ರತಿಪೂರ್ಣವಸ್ತುನಾ - ಎಲ್ಲಕಡೆಗಳಲ್ಲಿಯೂ ತುಂಬಿದ ಯುದ್ಧಸಾಮಗ್ರಿಯಿಂದ, ವಿರಾಜಮಾನಂ - ಪ್ರಕಾಶಿಸುತಲಿರುವ, ದಿವಾಕರಾಭಂ - ಸೂರ್ಯಪ್ರಭೆಯಂತೆ ಪ್ರಭೆಯುಳ್ಳ, ರಥಂ - ತೇರನ್ನು, ಆಸ್ಥಾಯ - ಏರಿ, ತತಃ - ಆ ನಗರದಿಂದ, ನಿರ್ಜಗಾಮ - ಹೊರಟನು ॥೬॥ ಸಃಹಿ - ಆ ಅಕ್ಷನಾದರೋ, ಖಂಚ - ಆಕಾಶವನ್ನೂ, ಸಾಚಲಾಂ - ಬೆಟ್ಟಗಳಿಂದೊಡಗೂಡಿದ, ಮಹೀಂಚ - ಭೂಮಿಯನ್ನೂ, ತುರಂಗಮಾತಂಗಮಹಾರಥಸ್ವನೈಃ - ಕುದುರೆ, ಆನೆ, ದೊಡ್ಡತೇರು, ಇವುಗಳ ಧ್ವನಿಗಳಿಂದ, ಪೂರಯನ್ - ತುಂಬಿಸುವವನಾಗಿ, ಸಮೇತೈಃ - ಒಟ್ಟಾಗಿಸೇರಿರುವ, ಬಲೈಃ - ಸೇನೆಗಳಿಂದ, ಸಹಿತಃ - ಕೂಡಿದವನಾಗಿ - ತೋರಣಸ್ಥಿತಂ - ಯುದ್ಧರಂಗದಲ್ಲಿರುವ, ಸಮರ್ಥಂ - ತನ್ನೊಡನೆ ಯುದ್ಧಮಾಡಲು ಶಕ್ತನಾಗಿ, ಆಸೀನಂ - ಕುಳಿತಿರುವ, ಕಪಿಂ - ಆಂಜನೇಯನನ್ನು ಕುರಿತು, ಉಪಾಗಮತ್ - ಹತ್ತಿರಕ್ಕೆ ಬಂದನು ॥೭॥ ಹರೀಕ್ಷಣಃ - ಸಿಂಹದ ನೋಟದಂತೆ ನೋಟವುಳ್ಳ, ಸಃ - ಆ, ಅಕ್ಷಃ-ಅಕ್ಷಕುಮಾರನು, ಪ್ರಜಾಕ್ಷಯೇ - ಪ್ರಾಣಿಗಳ ನಾಶದಲ್ಲಿ, ಅವಸ್ಥಿತಂ - ಪ್ರವರ್ತಿಸಿರುವ, ಯುಗಾಂತ ಕಾಲಾಗ್ನಿಮಿವ- ಪ್ರಳಯಕಾಲದ ಅಗ್ನಿಯಂತೆ,

ಅದರ ಗಮನಕ್ಕೆಲ್ಲಿಯೂ ತಡೆಯೇ ಇಲ್ಲ. ರವಿಯಂತೆ ಬೆಳಗುತಲಿದೆ, ಆಕಾಶಗಮನಕ್ಕೂ ತಕ್ಕುದು, ಅದರೊಳಗೆ ಬಂದುಕಡೆ ಬತ್ತಳಿಕೆಯನ್ನೂ, ಎಂಟು ಕತ್ತಿಗಳನ್ನೂ ಶಕ್ತಿ, ತೋಮರ ಮುಂತಾದ ಆಯುಧಗಳನ್ನೂ ಕ್ರಮವಾಗಿ ಅಣಿಮಾಡಿ ಇಟ್ಟಿದೆ, ಒಂದು ಕಡೆ ಕ್ರೂರವಾದ ತೇಜಸ್ಸೂ, ಮತ್ತೊಂದು ಕಡೆ ಶಾಂತವಾದ ಬೆಳಕೂ ಇರುವುದರಿಂದ ಸೂರ್ಯ ಚಂದ್ರರ ಪ್ರಕಾಶದಂತೆ ಕಂಗೊಳಿಸುತಲಿದೆ, ಇಂತು ಸಕಲ ಸನ್ನಾಹದಿಂದ ಸಿದ್ಧವಾಗಿದ್ದ ಆರಥವನ್ನೇರಿ, ಅಮರರಿಗೆಣೆಯಾದ ಪರಾಕ್ರಮದಿಂದ ಶೋಭಿಸುವ ಅಕ್ಷಕುಮಾರನು ಆಯೋಧನವನ್ನು ಕುರಿತು ತೆರಳಿದನು॥೪,೫,೬॥ ಆನೆ,ಕುದುರೆ, ತೇರು,ಕಾಲಾಳುಗಳೆಂಬ ಪಡೆಯ ತುಳಿತದಿಂದಲೂ,ಘೋರವಾದ ಅದರ ರಭಸಧ್ವನಿಯಿಂದಲೂ, ಬೆಟ್ಟಗುಟ್ಟಗಳಿಂದ ಸಹಿತವಾದ ನೆಲವನ್ನೂ, ಆಕಾಶವನ್ನೂ ತುಂಬಿಸುತಲಿರುವವನಾಗಿ, ಪರಿಪೂರ್ಣಬಲನಾಗುತ್ತಾ, ಉದ್ಯಾನದ ಹೊರಬಾಗಿಲಿನಲ್ಲಿ ನಿಂತಿರುವ ಹನುಮನ ಬಳಿಗೆ ಬರುತಲಿದ್ದನು ॥೭॥ ಪ್ರಳಯಕಾಲಾಗ್ನಿಯಂತೆ ಜಾಜ್ವಲ್ಯಮಾನನಾಗಿ, ಸಮಸ್ತ ಪ್ರಜೆಗಳ ನಾಶವಾಗುತ್ತಿರುವಲ್ಲಿ ಸ್ವಲ್ಪವಿಶ್ರಾಂತಿಯನ್ನು ಪಡೆದಿರುವ ಮೃತ್ಯುವಿನಂತೆ ನೆಲಗೊಂಡಿರುವ

ಉವಸ್ಥಿತಂ ವಿಸ್ಮಿತ ಜಾತ ಸಂಭ್ರಮ ಸ್ಸಮೈಕ್ಷ ತಾಕ್ಷೋ ಬಹುಮಾನ ಚಕ್ಷುಷಾ ॥೮॥
ಸ ತಸ್ಯ ವೇಗಂ ಚ ಕಪೇ ರ್ಮಹಾತ್ಮನಃ ಪರಾಕ್ರಮಂ ಚಾರಿಷು ಪಾರ್ಥಿವಾತ್ಮಜಃ ।
ವಿಧಾರಯ ನ್ಸ್ವಂಚ ಬಲಂ ಮಹಾಬಲೋ ಹಿಮಕ್ಷಯೇ ಸೂರ್ಯ ಇವಾಭಿ ವರ್ಧತೇ ॥೯॥
ಸ ಜಾತ ಮನ್ಯುಃ ಪ್ರಸಮೀಕ್ಷ್ಯ ವಿಕ್ರಮಂ ಸ್ಥಿರಂ ಸ್ಥಿತ ಸ್ಸಂಯತಿ ದುರ್ನಿವಾರಣಮ್ ।
ಸಮಾಹಿತಾತ್ಮಾ ಹನುಮಂತ ಮಾಹವೇ ಪ್ರಚೋದಯಾಮಾಸ ಶರೈ ಸ್ತ್ರಿಭಿ ಶ್ಶಿತೈಃ ॥೧೦॥

---

ತಂ - ಆ, ಹರಿಂ - ಆಂಜನೇಯನನ್ನು, ಆಸಾದ್ಯ - ಹೊಂದಿ, ವಿಸ್ಮಿತಜಾತಸಂಭ್ರಮಃ - ಆಶ್ಚರ್ಯದಿಂದುಂಟಾದ ಭ್ರಮೆಯುಳ್ಳವನಾಗಿ, ಬಹುಮಾನಚಕ್ಷುಷಾ - ಗೌರವದೃಷ್ಟಿಯಿಂದ, ಸಮೈಕ್ಷತ - ನೋಡಿದನು ॥೮॥ ಮಹಾಬಲಃ - ಹೇರಳವಾದ ಶಕ್ತಿಯುಳ್ಳ, ಸಃ - ಆ, ಪಾರ್ಥಿವಾತ್ಮಜಃ - ರಾಕ್ಷಸರಾಜ ಪುತ್ರನಾದ ಅಕ್ಷನು, ಮಹಾತ್ಮನಃ - ಮಹಾ ಧೈರ್ಯವುಳ್ಳ, ತಸ್ಯ - ಆ, ಕಪೇಃ - ವಾನರನ, ವೇಗಂಚ - ಗಮನ ವೇಗವನ್ನೂ, ಅರಿಷು - ಹಗೆಗಳಲ್ಲಿ, ಪರಾಕ್ರಮಂಚ - ವೀರ್ಯವನ್ನೂ, ಸ್ವಂ -ತನ್ನದಾದ, ಬಲಂಚ - ಸತ್ವವನ್ನೂ, ವಿಧಾರಯನ್ (ವಿಚಾರಯನ್) ಗೊತ್ತುಮಾಡಿಕೊಳ್ಳುತಲಿರುವವನಾಗಿ, ಹಿಮಕ್ಷಯೆ - ಮಂಜುಕಳೆದು ಹೋಗುತ್ತಿರುವಲ್ಲಿ, ಸೂರ್ಯಇವ - ಸೂರ್ಯನಂತೆ, ಅಭಿವರ್ಧತೆ - ಉಬ್ಬುತಲಿದ್ದನು ॥೯॥ ಸಃ - ಆ ಅಕ್ಷನು, ಸಮಾಹಿತಾತ್ಮಾ - ದೃಢಚಿತ್ತನಾಗಿ, ದುರ್ನಿವಾರಣಂ - ತಡೆಯಲಸದಳವೆನಿಸಿದ, ವಿಕ್ರಮಂ - ಹನುಮನ ಪರಾಕ್ರಮವನ್ನು, ಪ್ರಸಮೀಕ್ಷ್ಯ - ಚೆನ್ನಾಗಿ ಯೋಚಿಸಿ, ಜಾತಮನ್ಯುಃ - ಅಂಕುರಿಸಿದ ಸಿಟ್ಟುಳ್ಳವನಾಗುತ್ತಾ, ಸಂಯತಿ - ಯುದ್ಧರಂಗದಲ್ಲಿ, ಸ್ಥಿರಂ - ದೃಢವಾಗಿ, ಸ್ಥಿತಃ- ನಿಂತವನಾಗಿ, ಹನುಮಂತಂ - ಆಂಜನೇಯನನ್ನು, ಶಿತೈಃ - ತೀಕ್ಷ್ಣವಾದ, ತ್ರಿಭಿಃ - ಮೂರಾದ, ಶರೈಃ- ಬಾಣಗಳಿಂದ, ಆಹವೆ - ಹೋರಾಟದಲ್ಲಿ, ಪ್ರಚೋದಯಾಮಾಸ - ಪ್ರೇರಿಸಿದನು ॥೧೦॥ ತತಃ - ಆಮೇಲೆ,

---

ಮಾರುತಿಯನ್ನು, ಅಕ್ಷಕುಮಾರನು-ಸಿಂಹದಂತೆಸೆವ ದೃಷ್ಟಿಗಳಿಂದ ಬಹುಗೌರವಪೂರ್ವಕವಾಗಿ ಭಾವಿಸಿ ನೋಡಿದನು. ಹನುಮನು ನಡೆಸಿರುವ ಕೆಲಸದಿಂದ ಅಕ್ಷನಿಗೆ ಬಹು ಸಂಭ್ರಮವುಂಟಾಯಿತು, ಒಡನೆ ಬೇಗನೆ ಅವನ ಬಳಿಗೆ ಬರುತಲಿದ್ದನು ॥೮॥ ಮಹಾ ಧೈರ್ಯಶಾಲಿಯಾದ ಮಾರುತಿಯು ಹಗೆಗಳಾದ ರಕ್ಕಸರಲ್ಲಿ ತೋರಿರುವ ಶೌರ್ಯದ ಪದ್ಧತಿಯನ್ನೂ, ಅವನ ವೇಗಾತಿಶಯವನ್ನೂ ಮನದೊಳಗೆ ಭಾವಿಸಿದನು, ಬಳಿಕ ರಾಕ್ಷಸರಾಜನಂದನನ್ನು ಆಕಾಶದೊಳಗೆ ಆವರಿಸಿರುವ ಹಿಮವು ತೊಲಗುತಲಿರುವಲ್ಲಿ ಸೂರ್ಯನಂತೆ ತೇಜಸ್ಸಿನಿಂದ ಹೆಚ್ಚುತ್ತಾ, ವೀರಾಗ್ರಗಣ್ಯನಾದವಾನರನ ಮತ್ತು ತನ್ನ ಬಲವನ್ನು ಚಿತ್ತದಲ್ಲಿ ನಿರ್ಧರಿಸಿದನು ॥೯॥ ಇಂತಪ್ಪ ಮಹಾವೈಭವದಿಂದ ಬರುತಲಿರುವ ಅಕ್ಷನು-ದೂರದಲ್ಲಿ ಕಪಿವರನನ್ನು ಕಂಡನು, ಆ ವೀರಹನುಮನಾದರೆ-ಬಲುವೋಡಿಯಿಂದ ಕಾಳಗವನ್ನು ಬಯಸುತನಿಂತಿದಾನೆ, ಅದುವರೆಗೆ ಹೋರಾಡಿದ ಬಳಲಿಕೆಯೆಂಬುದು ತುಸವಾದರೂ ಇಲ್ಲ. ಹಿಮ್ಮೆಟ್ಟಿಸಲಿಕ್ಕೆ ಯಾರಿಂದಲೂ ಅಸದಳನೇ ಸರಿ ಎಂದು ಕಾಣಬರುತಲಿದಾನೆ, ಅವನ ಠೀವಿಯನ್ನು ಎಷ್ಟು ಹೇಳಿದರೂ ಸಾಲದು.ಅಕ್ಷನು-ಸ್ಥಿರಚಿತ್ತನಾಗಿ ಸ್ವಲ್ಪ ಹೊತ್ತಿನವರೆಗೂ ಹನುಮನ ಆಕಾರವಿಶೇಷವನ್ನು ಹಾಗೆಯೇ ಭಾವಿಸಿ ನೋಡಿದನು, ಅವನ ವಿಕ್ರಮದ ಶೈಲಿಯನ್ನು ಕಂಡನು, ಅವನುಮಾಡಿರುವ ಕ್ರೂರವಾದ ಕೆಲಸದಿಂದ ಸಿಟ್ಟು ತಲೆಗೇರಿತು, ಕ್ರೂರವಾಗಿರುವ ಮೂರು ಅಸಮಾನವಾದ ಬಾಣಗಳನ್ನೆಸೆದು ದೂರದಿಂದಲೇ ಆತನನು

ತತಃ ಕಪಿಂ ತಂ ಪ್ರಸಮೀಕ್ಷ್ಯ ಗರ್ವಿತಂ ಜಿತಶ್ರಮಂ ಶತ್ರುಪರಾಜಯೋರ್ಜಿತಮ್ ।
ಅವೈಕ್ಷತಾಕ್ಷಸ್ಸಮುದೀರ್ಣಮಾನಸಃ ಸ ಬಾಣಪಾಣಿಃ ಪ್ರಗೃಹೀತಕಾರ್ಮುಕಃ॥೧೧॥
ಸಹೇಮನಿಷ್ಕಾಂಗದಚಾರುಕುಂಡಲಃ ಸಮಾಸಸಾದಾಶು ಪರಾಕ್ರಮಃ ಕಪಿಂ ।
ತಯೋರ್ಬಭೂವಾಪ್ರತಿಮಸ್ಸಮಾಗಮಃ ಸುರಾಸುರಾಣಾಮಪಿ ಸಂಭ್ರಮಪ್ರದಃ॥೧೨॥
ರರಾಸ ಭೂಮಿರ್ನ ತತಾಪ ಭಾನುಮಾನ್ ವವೌ ನ ವಾಯುಃ ಪ್ರಚಚಾಲ ಚಾಚಲಃ ॥
ಕಪೇಃ ಕುಮಾರಸ್ಯ ಚ ವೀಕ್ಷ್ಯ ಸಂಯುಗಂ ನನಾದ ಚ ದ್ಯೌರುದಧಿಶ್ಚ ಚುಕ್ಷುಭೇ ॥೧೩॥

ಸಃ - ಆ, ಅಕ್ಷಃ - ಅಕ್ಷನು, ಗರ್ವಿತಂ - ಹೆಮ್ಮೆಗೊಂಡಿರುವ, ಜಿತಶ್ರಮಂ - ಯುದ್ಧದ ಬಳಲಿಕೆಯಿಲ್ಲದಿರುವ, ಶತ್ರುಪರಾಜಯೋರ್ಜಿತಂ - ಹಗೆಗಳನ್ನು ಗೆದ್ದಿರುವುದರಿಂದ ಪ್ರಬಲಿಸಿರತಕ್ಕ, ತಂ - ಆ, ಕಪಿಂ- ಆಂಜನೇಯನನ್ನು, ಪ್ರಸಮೀಕ್ಷ್ಯ - ನೋಡಿ, ಸಮುದೀರ್ಣಮಾನಸಃ - (ನನಗೆ ತಕ್ಕ ವೀರನು ದೊರೆತನೆಂದು) ಸಂತುಷ್ಟಚಿತ್ತನಾಗಿ, ಬಾಣಪಾಣಿಃ - ಕೈಲಿಹಿಡಿದ ಬಾಣಗಳುಳ್ಳವನೂ, ಪ್ರಗೃಹೀತಕಾರ್ಮುಕಃ - ಧರಿಸಿದ ಧನುಸ್ಸುಳ್ಳವನೂ ಆಗಿ, ಅವೈಕ್ಷತ - ಹನುಮನನ್ನು ನೋಡಿದನು ॥೧೧॥ ಹೇಮನಿಷ್ಕಾಂಗದಚಾರುಕುಂಡಲಃ, ಹೇಮ - ಚಿನ್ನದ, ನಿಷ್ಕ - ಕಂಠಭೂಷಣ, ಅಂಗದ - ಭುಜಕೀರ್ತಿ, ಚಾರು - ಅಂದವಾದ, ಕುಂಡಲಃ - ಕರ್ಣಕುಂಡಲಗಳೂ ಉಳ್ಳ, ಪರಾಕ್ರಮಃ - ಹಗೆಗಳನ್ನಾಕ್ರಮಿಸುವ, ಸಃ - ಆ ಅಕ್ಷನು, ಕಪಿಂ - ಹನುಮನನ್ನು, ಆಶು - ಬೇಗನೆ, ಸಮಾಸಸಾದ - ಸೇರಿದನು, ಸುರಾಸುರಾಣಾಮಪಿ- ದೇವಾಸುರರಿಗೂ, ಸಂಭ್ರಮಪ್ರದಃ - ಭ್ರಾಂತಿ (ಭಯ) ಯನ್ನುಂಟುಮಾಡುವುದಾದ, ಅಪ್ರತಿಮಃ - ಅಸಮಾನವೆನಿಸಿದ, ಸಮಾಗಮಃ - ಸೇರ್ವೆಯು, (ಯುದ್ಧವು)ತಯೋಃ - ಆ ಅಕ್ಷವಾನರರಿಗೆ, ಬಭೂವ- ಉಂಟಾಯಿತು ॥೧೨॥ ಕಪೇಃ - ಹನುಮನ, ಕುಮಾರಸ್ಯ - ಅಕ್ಷಕುಮಾರನ, ಸಂಯುಗಂ - ಯುದ್ಧವನ್ನು, ವೀಕ್ಷ್ಯ - ನೋಡಿ, ಭೂಮಿಃ ನೆಲವು, ರರಾಸ - ಅಬ್ಬರಿಸಿತು (ನಡುಗಿತು, ಗುಡುಗಿತು,) ಭಾನುಮಾನ್ - ಸೂರ್ಯನು, ನತತಾಪ - (ಇವರಿಗೆ ಹೆದರಿ) ಸುಡಲಿಲ್ಲ (ತಪಿಸಲಿಲ್ಲ), ವಾಯುಃ -ಗಾಳಿಯು, ನವವೌ - ಗಟ್ಟಿಯಾಗಿ ಬೀಸಲಿಲ್ಲ, ಅಚಲಶ್ಚ - ಬೆಟ್ಟವೂ, ಪ್ರಚಚಾಲ - ಅಲ್ಲಾಡಿತು, ದ್ಯೌಶ್ಚ - ಆಕಾಶವೂ, ನನಾದ - ಧ್ವನಿಗೈದಿತು, ಉದಧಿಶ್ಚ - ಸಮುದ್ರವೂ, ಚುಕ್ಷುಭೇ - ಕ್ಷೋಭವನ್ನು ಹೊಂದಿತು -

ಯುದ್ಧಕ್ಕೆ ಎಚ್ಚರಿಸಿದನು॥೧೦॥ಶತ್ರುಗಳಿಗೆ ಪರಾಜಯವನ್ನುಂಟುಮಾಡಿರುವೆನೆಂದು ಹೆಮ್ಮೆಯಿಂದ ಮೆರೆಯುತ್ತಾ, ಯುದ್ಧಶ್ರಮವನ್ನು ಲಕ್ಷ್ಯಮಾಡದೆ ನಿಂತಿರುವ ಹನುಮನಂ ಕಂಡು, ಅಕ್ಷನಿಗೆ ಬಲವಾಗಿ ರೇಗಿತು. ಬಿಲ್ಲು ಬಾಣಮುಂತಾದವುಗಳನ್ನು ಸವರಿಸಿಕೊಂಡು ಚಾಪಪಾಣಿಯಾದನು ॥೧೧॥ ಅಕ್ಷಕುಮಾರನು ಸಾಮಾನ್ಯನಲ್ಲ, ಕಾಳಗಗಳೊಳಗೆ ದೇವಾಸುರರನ್ನೂ ಅಂಜಿಸಿ ಹಿಮ್ಮೆಟ್ಟಿಸತಕ್ಕವನು, ಸುವರ್ಣಹಾರ, ಬಾಪುರಿ, ದಿವ್ಯವಾದ ಕರ್ಣಕುಂಡಲ ಮುಂತಾದ ಆಭರಣಗಳಿಂದ ಶೋಭಿಸುತಲಿದ್ದಾನೆ, ಬಹು ವೇಗದಿಂದ ವಾನರನ ಹತ್ತಿರಕ್ಕೆ ಬಂದನು. ಬಳಿಕ ಆ ಈರ್ವರಿಗೂ ಯುದ್ಧವು ಆರಂಭವಾಯಿತು ॥೧೨॥ ಆ ಅಕ್ಷವಾನರರಿಗೆ ಅಸಮಾನವಾದ ಆ ಯೋಧನವು ಆರಂಭವಾಗಲು, ಭೂಮಿಯು ಬಲವಾಗಿ ಮೇಘದಂತೆ ಗುಡುಗಿತು, ಸೇನಾ ಧೂಳಿಯಿಂದ ಮುಚ್ಚಲ್ಪಟ್ಟವನಾಗಿ ಸೂರ್ಯನು ತಪಿಸಲಿಲ್ಲ. ಗಾಳಿಯು ಬೀಸಲಿಕ್ಕೆ ಎಡೆಯಿಲ್ಲವಾಯಿತು. ಬೆಟ್ಟಗಳೆಲ್ಲ ಅಲುಗಿದವು. ಇವರ ಘೋರವಾದ ಯುದ್ಧವಂ ಕಂಡು ಆಕಾಶದಲ್ಲಿಯೂ ಮಹತ್ತರವಾದ ಶಬ್ದವುಂಟಾಯಿತು

ತತ ಸ್ಸವೀರಸ್ಸುಮುಖಾನ್ ಪತತ್ರಿಣಃ ಸುವರ್ಣ ಪುಂಖಾನ್ ಸವಿಷಾ ನಿವೋರಗಾನ್ ।
ಸಮಾಧಿ ಸಂಯೋಗ ವಿಮೋಕ್ಷ ತತ್ತ್ವವಿಚ್ಛರಾ ನಥ ತ್ರೀ ನ್ಕಪಿಮೂ ಧ್ನ್ರ್ಯಪಾತಯತ್ ।
ಸ ತೈ ಶ್ಶರೈ ರ್ಮೂರ್ಧ್ನಿ ಸಮಂ ನಿಪಾತಿತೈಃ ಕ್ಷರ ನ್ನ ಸೃ ಗ್ದಿಗ್ಧ ವಿವೃತ್ತ ಲೋಚನಃ ॥
ನವೋದಿತಾದಿತ್ಯ ನಿಭ ಶ್ಶರಾಂಶುಮಾ ನ್ವ್ಯರಾಜ ತಾದಿತ್ಯ ಇವಾಂ ಶುಮಾಲಿಕಃ ॥೧೫॥
ತತ ಸ್ಸ ಪಿಂಗಾಧಿಪ ಮಂತ್ರಿ ಸತ್ತಮಃ ಕಪೀಕ್ಷ್ಯತಂ ರಾಜ ವರಾತ್ಮಜಂ ರಣೇ ॥

(ಅಲ್ಲಕಲ್ಲೋಲವಾಯಿತು). ॥೧೩॥ ತತಃ - ತರುವಾಯ, ಸಮಾಧಿ....ವಿತ್, ಸಮಾಧಿ - ಗುರಿಹಿಡಿಯುವ ಸಂಯೋಗ - ಬಾಣಸಂಧಾನಮಾಡುವ, ವಿಮೋಕ್ಷ - ಶರವನ್ನು ಪ್ರಯೋಗಿಸುವ ತತ್ತ್ವವಿತ್ - ಸಂಚನ್ನು ತಿಳಿಯುವ, ವೀರಃ - ಶೂರನಾದ, ಸಃ - ಅಕ್ಷನು, ಸುಮುಖಾನ್ - ಮೊನೆಯಾದ ತುದಿಯುಳ್ಳ, ಪತತ್ರಿಣಃ - ರೆಕ್ಕೆಗಳನ್ನೊಳಗೊಂಡಿರುವ, ಸುವರ್ಣಪುಂಖಾನ್ - ಚಿನ್ನದ ಹಿಡಿಗಳುಳ್ಳ, ತ್ರೀನ್ - ಮೂರಾದ, ಶರಾನ್ - ಬಾಣಗಳನ್ನು; ಸವಿಷಾನ್ - ವಿಷದಿಂದೊಡಗೂಡಿದ, ಉರಗಾನಿವ - ಸರ್ಪಗಳನ್ನು ಹೇಗೋಹಾಗೆ, ಅಥ - ಬಿಲ್ಲಿನಲ್ಲಿ ಬಾಣಗಳನ್ನು ಸಂಧಾನಮಾಡಿದ ಮೇಲೆ, ಕಪಿಮೂರ್ಧ್ನಿ - ಹನುಮಂತನ ತಲೆಯಲ್ಲಿ, ಅಪಾತಯತ್ - ಕೆಡಹಿದನು, ॥೧೪॥ ಮೂರ್ಧ್ನಿ - ತಲೆಯಲ್ಲಿ, ಸಮಂ - ಏಕಕಾಲದಲ್ಲಿ, ನಿಪಾತಿತೈಃ - ಕೆಡಹಲ್ಪಟ್ಟ, ತೈಃ - ಆ, ಶರೈಃ - ಬಾಣಗಳಿಂದ, ಕ್ಷರನ್ನಸೃಕ್...ನಃ, (ಕ್ಷರದಸೃಗ್ದಿಗ್ಧ ವಿವೃತ್ತಲೋಚನಃ) ಕ್ಷರತ್ - ಸೋರುತಲಿರುವ, ಅಸೃಕ್-ರಕ್ತದಿಂದ, ದಿಗ್ಧ - ನನೆದ, ವಿವೃತ್ತ-ತಿರುಗುತಲಿರುವ, ಲೋಚನಃ - ಕಣ್ಣುಗಳುಳ್ಳ, ನವೋದಿತಾದಿತ್ಯನಿಭಃ - ಹೊಸದಾಗಿ ಉದಿಸಿದ ಸೂರ್ಯನಿಗೆಣೆಯೆನಿಸಿ, ಶರಾಂಶುಮಾನ್ - ಕಿರಣಗಳಂತಿರುವ ಶರಗಳುಳ್ಳವನಾದಕಾರಣವೇ, ಅಂಶುಮಾಲಿಕಃ - ಕಿರಣಗಳ ಸಾಲುಳ್ಳ ಆದಿತ್ಯಇವ - ಸೂರ್ಯನಂತೆ, ವ್ಯರಾಜತ - ಪ್ರಕಾಶಿಸುತಿಲಿದ್ದನು ॥೧೫॥ ತತಃ - ಅನಂತರದಲ್ಲಿ, ಪಿಂಗಾಧಿಪಮಂತ್ರಿಸತ್ತಮಃ - ಕಪಿರಾಜನ ಮುಖ್ಯಮಂತ್ರಿಯಾದ, ಸಃ - ಆ ಹನುಮಂತನು, ರಣೇ - ಯುದ್ಧದಲ್ಲಿ, ಉದಗ್ರ...ಕಾರ್ಮುಕಂ, ಉದಗ್ರ - ಶ್ರೇಷ್ಠವಾದ (ಭಯಂಕರವಾದ) ಚಿತ್ರಾಯುಧ - ಬಗೆಬಗೆಯ ಆಯುಧಗಳುಳ್ಳ, ಚಿತ್ರಕಾರ್ಮುಕಂ - ಆಶ್ಚರ್ಯಕರವೆನಿಸಿದ ಬಿಲ್ಲೂ ಉಳ್ಳ, ರಾಜವರಾತ್ಮಜಂ - ರಾಕ್ಷಸ

ಕಡಲೂ ಅಲೆಗಳ ಅಲ್ಲಾಟದಿಂದ ಬಹು ಕ್ಷೋಭೆಯನ್ನು ಪಡೆಯಿತು ॥ ೧೩ ॥ ತರುವಾಯ- ಧನುರ್ವೇದದಲ್ಲಿ ಹೇಳಿರುವಂತೆ ಬಾಣ ಸಂಧಾನ ಮೋಕ್ಷಗಳ ಪರಿಪಾಟಿಯನ್ನು ಚೆನ್ನಾಗಿ ಬಲ್ಲ ಅಕ್ಷಕುಮಾರನು- ಮೊನೆಯಾದ ಮುಖವುಳ್ಳವುಗಳಾಗಿಯೂ, ವೇಗಾರ್ಥವಾದ ಗರಿಗಳಿಂದೊಡಗೂಡಿದವುಗಳಾಗಿಯೂ, ಕ್ರೂರವಾದ ವಿಷದಿಂದ ಸಹಿತವಾದ ಸರ್ಪಗಳಂತೆ ತೀಕ್ಷ್ಣಗಳಾಗಿಯೂ ಇರುವ ಮೂರು ಬಾಣಗಳನ್ನು ಮಾರುತಿಯ ಶಿರವನ್ನು ಗುರಿನೋಡಿ ಹೊಡೆದನು ॥ ೧೪ ॥ ಆ ಕ್ರೂರವಾದ ಬಾಣಗಳ ಪೆಟ್ಟು ಹನುಮನ ತಲೆಗೆ ಬಡಿಯಿತು. ಬಲವಾದ ಗಾಯವಾಗಿ ರಕ್ತ ಧಾರೆಯು ಇಳಿಯಿತು. ಮೆಯ್ಯೆಲ್ಲ ಕೆಂಪಾಯಿತು. ಬಾಣಗಳೆಂಬ ಕಿರಣಗಳಿಂದ ಬಳಸಲ್ಪಟ್ಟಿರುವ ಮಾರುತಿಯು- ಕೆಂಪಾದ ಕಳೆಗಳಿಂದೊಡಗೂಡಿರುವ ಬಾಲ ಸೂರ್ಯನಂತೆ ಬೆಳಗುತಲಿದ್ದನು. ॥ ೧೫ ॥ ಅನಂತರದಲ್ಲಿ- ಕಪಿ ಸಾರ್ವಭೌಮನಿಗೆ ಮುಖ್ಯ ಮಂತ್ರಿಯಾಗಿರುವ ಮಾರುತಿಯು- ರಣಾಂಗಣದಲ್ಲಿ ಮೆರೆಯುತ, ಶ್ರೇಷ್ಠವಾದ ಬಿಲ್ಲು ಬಾಣಗಳನ್ನೂ, ಬಗೆ ಬಗೆಯಾದ ಆಯುಧಗಳನ್ನೂ ಅಣಿಮಾಡಿಕೊಂಡು ಬಂದಿರುವ ಅಕ್ಷಕುಮಾರ ವೀರನನ್ನು ನೋಡಿ ಹೋರಾಡಲು

ಉದಗ್ರ ಚಿತ್ರಾಯುಧ ಚಿತ್ರಕಾರ್ಮುಕಂ ಜಹರ್ಷ ಚಾಪೂರ್ಯತ ಚಾಹವೋನ್ಮುಖಃ ॥೧೬
ಸ ಮಂದರಾಗ್ರಸ್ಥ ಇವಾಂಶುಮಾಲಿಕೋ ವಿವೃದ್ಧ ಕೋಪೋ ಬಲವೀರ್ಯ ಸಂಯುತಃ ।
ಕುಮಾರ ಮಕ್ಷಂ ಸಬಲಂ ಸವಾಹನಂ ದದಾಹ ನೇತ್ರಾಗ್ನಿ ಮರೀಚಿಭಿ ಸ್ತದಾ ॥೧೭॥
ತತ ಸ್ಸಬಾಣಾಸನ ಚಿತ್ರ ಕಾರ್ಮುಕಶ್ಶರ ಪ್ರವರ್ಷೋ ಯುಧಿ ರಾಕ್ಷಸಾಂಬುದಃ ।
ಶರಾನ್ಮುಮೋಚಾಶು ಹರೀಶ್ವರಾಚಲೆ ವಲಾಹಕೋ ವೃಷ್ಟಿ ಮಿವಾಚಲೋತ್ತಮೆ ॥೧೮॥
ತತಃ ಕಪಿ ಸ್ತಂ ರಣಚಂಡ ವಿಕ್ರಮಂ ವಿವೃದ್ಧತೇಜೋ ಬಲ ವೀರ್ಯ ಸಂಯುತಂ ।

---

ರಾಜಪುತ್ರನಾಗಿರುವ, ತಂ - ಆ ಅಕ್ಷನನ್ನು, ರಣೆ-ಯುದ್ಧದಲ್ಲಿ, ಸಮೀಕ್ಷ್ಯ ನೋಡಿ, ಆಹವೋನ್ಮುಖಃ-ಯುದ್ಧಾಭಿಮುಖನಾದವನಾಗಿ, ಜಹರ್ಷ - ಸಂತೋಷಿಸಿದನು, ಆಪೂರ್ಯತ ಚ - ಬೆಳೆದನು (ಗರ್ಜಿಸಿದನು) ॥೧೬॥ ಬಲವೀರ್ಯಸಂಯುತಃ - ಬಲಪರಾಕ್ರಮಗಳಿಂದೊಡಗೂಡಿದವನು, ವಿವೃದ್ಧಕೋಪಃ - ಹೆಚ್ಚಿದ ಸಿಟ್ಟುಳ್ಳವನೂ ಆದಕಾರಣವೇ, ಮಂದರಾಗ್ರಸ್ಥಃ - ಮಂದರ ಪರ್ವತದ ತುದಿಯಲ್ಲಿರುವ, ಅಂಶುಮಾಲಿಕಇವ - ಸೂರ್ಯನಂತೆ ಇರುವವನಾಗುತ್ತಾ, ಸಃ - ಆ ಆಂಜನೇಯನು, ಸಬಲಂ - ಸೈನ್ಯದಿಂದೊಡಗೂಡಿರುವ, ಸವಾಹನಂ - ವಾಹನದಿಂದ ಸಹಿತನಾದ, ಅಕ್ಷಂ - ಅಕ್ಷನೆಂಬ, ಕುಮಾರಂ - ರಾವಣಪುತ್ರನನ್ನು, ತದಾ - ಆಗ, ನೇತ್ರಾಗ್ನಿಮರೀಚಿಭಿಃ - ಕಣ್ಣುಗಳ ಬೆಂಕಿಯ ಕಿಡಿಗಳಿಂದ, ದದಾಹ - ಸುಡುತಲಿದ್ದನು ॥೧೭॥ ತತಃ - ಆ ಹಿಂದೆ, ಬಾಣಾಸನಚಿತ್ರಕಾರ್ಮುಕಃ - ಬಾಣವನ್ನು ಸೇರಿಸಿ ಹೊಡೆಯಲು ತಕ್ಕ ಬಿಲ್ಲುಳ್ಳವನಾಗಿ, ಯುಧಿ - ರಣದಲ್ಲಿ, ಶರಪ್ರವರ್ಷಃ - ಬಾಣದ ಮಳೆಯನ್ನು ಕರೆಯುತಲಿರುವ, ರಾಕ್ಷಸಾಂಬುದಃ - ರಾಕ್ಷಸನೆಂಬ ಮೇಘವು, ಹರೀಶ್ವರಾಚಲೆ - ವೀರಹನುಮನೆಂಬ ಪರ್ವತದಮೇಲೆ, ವಲಾಹಕಃ - ಮೇಘವು, ಅಚಲೋತ್ತಮೆ - ದೊಡ್ಡಬೆಟ್ಟದಲ್ಲಿ, ವೃಷ್ಟಿಮಿವ - ಮಳೆಯನ್ನು ಹೇಗೋಹಾಗೆ, ಶರಾನ್ - ಬಾಣಗಳನ್ನು, ಆಶು - ಬೇಗನೆ, ಮುಮೋಚ - ಬಿಟ್ಟನು, ॥೧೮॥ ತತಃ - ಆಮೇಲೆ, ಘನತುಲ್ಯವಿಕ್ರಮಃ - ಮೇಘಕ್ಕೆಣೆಯಾದ ಆಕ್ರಮಣವುಳ್ಳ (ಪರಾಕ್ರಮಾಧಿಕರ ಪರಾಕ್ರಮವುಳ್ಳ) ಕಪಿಃ - ಆಂಜನೇಯನು, ರಣಚಂಡವಿಕ್ರಮಂ - ಯುದ್ಧದಲ್ಲಿ ತೀಕ್ಷ್ಣವಾದ ಶೌರ್ಯವುಳ್ಳ, ವಿವೃದ್ಧ...ತಂ, ವಿವೃದ್ಧ - ಹೆಚ್ಚಿದ, ತೇಜಃ - ಹೊಳವಿನ ರಭಸಿನಿಂದಲೂ, ಬಲ - ದೇಹಶಕ್ತಿಯಿಂದಲೂ, ವೀರ್ಯ -

---

ತಕ್ಕ ವೀರನು ಬಂದಿರುವನೆಂದು ಹರ್ಷಗೊಂಡು ಸಿಂಹನಾದವನ್ನು ಮಾಡುತ್ತಾ ತಾನೂ ಯುದ್ಧಾರ್ಥಿಯಾಗಿ ಕಾಲನ್ನು ಮುಂದಕ್ಕೆ ಇಡತೊಡಗಿದನು ॥೧೬॥ ಮರುತ್ನಂದನನಿಗಾಗ ರೋಷವು ತಲೆಗೆ ಹತ್ತಿತು; ದೇಹ ಬಲವೂ, ಶೌರ್ಯವೂ ಹೆಚ್ಚುತ ಬಂದಿತು, ಮಂದರ ಪರ್ವತದ ಮೇಲಿರುವ ಭಾನುಮಂತನಂತೆ ಬೆಳಗುತಲಿದ್ದನು, ಬಲವಾಹನಗಳಿಂದ ಸಹಿತನಾದ ಅಕ್ಷಕುಮಾರನನ್ನು ನೇತ್ರಾಗ್ನಿಯ ಕಣಗಳ ಸರಣಿಯಿಂದ ಸುಡುವವನಂತೆ ಕಾಣಬರುತಿದ್ದನು. ॥೧೭॥ ಬಳಿಕ- ಅಕ್ಷಕುಮಾರನೆಂಬ ಕಾಲಮೇಘವು- ರಣ ಭೂಮಿಯೆಂಬ ಆಕಾಶಮಂಡಲದಲ್ಲಿ ವಿಚಿತ್ರತರವಾದ ಚಾಪವೆಂಬ ಇಂದ್ರ ಧನುಸ್ಸನ್ನು ಧರಿಸಿ, ಶರ ಪರಂಪರೆಯೆಂಬ ಮಳೆಯನ್ನು, ಕಪಿವರನೆಂಬ ದೊಡ್ಡ ಬೆಟ್ಟದ ಮೇಲೆ, ತನ್ನ ಮತ್ತು ಪಡೆಯ ಸಿಂಹನಾದವೆಂಬ ಗುಡುಗು ಸಿಡಿಲುಗಳಿಂದೊಡಗೂಡಿ, ಎಡೆ ಬಿಡದೆ ಕರೆಯುತಲಿದ್ದಿತು. ॥೧೮॥ ರಣರಂಗದಲ್ಲಿ ಅಕ್ಷಕುಮಾರನು ಪ್ರಚಂಡವಾದ ಪರಾಕ್ರಮವುಳ್ಳವನಾದನು, ತೇಜಸ್ಸು ಹೆಚ್ಚುತಲಿದೆ, ಬಲವೀರ್ಯಗಳು ತಾಳಲಾರದವುಗಳಾಗುತ ಬಂದುವು,

ಕುಮಾರ ಮಕ್ಷಂ ಪ್ರಸಮೀಕ್ಷ್ಯ ಸಂಯುಗೇ ನನಾದ ಹರ್ಷಾತ್ ಘನತುಲ್ಯ ವಿಕ್ರಮಃ॥೧೯॥
ಸಬಾಲ ಭಾವಾ ದ್ಯುಧಿ ವೀರ್ಯ ದರ್ಪಿತಃ ಪ್ರವೃದ್ಧ ಮನ್ಯುಃ ಕ್ಷತಜೋಪಮೇಕ್ಷಣಃ।
ಸಮಾಸಸಾದಾ ಪ್ರತಿಮಂ ಕಪಿಂ ರಣೇ ಗಜೋ ಮಹಾಕೂಪ ಮಿವಾವೃತಂ ತೃಣೈಃ॥೨೦॥
ಸ ತೇನ ಬಾಣೈಃ ಪ್ರಸಭಂ ನಿಪಾತಿತೈ ಶ್ಚಕಾರ ನಾದಂ ಘನನಾದ ನಿಸ್ಸ್ವನಃ ।
ಸಮುತ್ಪಪಾ ತಾಶು ನಭ ಸ್ಸಮಾರುತಿ ರ್ಭುಜೋರು ವಿಕ್ಷೇಪಣ ಘೋರ ದರ್ಶನಃ ॥೨೧॥
ಸಮುತ್ಪತಂ ತಂ ಸಮಭಿದ್ರವ ದ್ಬಲೀ ಸರಾಕ್ಷಸಾನಾಂ ಪ್ರವರಃ ಪ್ರತಾಪವಾನ್ ।

---

ಪರಾಕ್ರಮದಿಂದಲೂ, ಸಂಯುತಂ-ಕೂಡಿ ಇರುವ, ಅಕ್ಷಂ-ಅಕ್ಷನೆಂಬ, ಕುಮಾರಂ-ರಾವಣಕುಮಾರನನ್ನು, ಸಂಯುಗೇ - ರಣರಂಗದಲ್ಲಿ, ಪ್ರಸಮೀಕ್ಷ್ಯ - ನೋಡಿ, ಹರ್ಷಾತ್ - ಸಂತೋಷದಿಂದ, ನನಾದ - ಸಿಂಹನಾದವನ್ನು ಮಾಡಿದನು ॥೧೯॥ ಯುಧಿ - ರಣದಲ್ಲಿ, ವೀರ್ಯದರ್ಪಿತಃ - ಪರಾಕ್ರಮದಿಂದ ಕೊಬ್ಬಿರುವ, ಸಃ - ಆ ರಾವಣ ಕುಮಾರನು, ಬಾಲಭಾವಾತ್ - ಚಿಕ್ಕತನದಿಂದ (ಪ್ರಾಯದಿಂದ) ಪ್ರವೃದ್ಧಮನ್ಯುಃ - ಏರಿದ ಸಿಟ್ಟುಳ್ಳವನೂ, ಕ್ಷತಜೋಪಮೇಕ್ಷಣಃ - ರಕ್ತದಂತೆ ಕೆಂಪಾದ ಕಣ್ಣುಳ್ಳವನೂ ಆಗಿ, ತೃಣೈಃ-ಹುಲ್ಲುಗಳಿಂದ, ಆವೃತಂ - ಮುಚ್ಚಲ್ಪಟ್ಟಿರುವ, ಮಹಾಕೂಪಂ - ದೊಡ್ಡಬಾವಿಯನ್ನು (ಮಡುವನ್ನು) ಗಜಇವ - ಆನೆಯು ಹೇಗೋಹಾಗೆ, ರಣೇ - ಯುದ್ಧದಲ್ಲಿ, ಅಪ್ರತಿಮಂ-ಅಸಮಾನನಾದ, ಕಪಿಂ - ಹನುಮನನ್ನು, ಸಮಾಸಸಾದ - ಇದಿರಿಸಿದನು ॥೨೦॥

ಘನನಾದ ನಿಸ್ಸ್ವನಃ - ಮೇಘಗರ್ಜನೆಯಂತೆ ಗರ್ಜಿಸುತಲಿರುವ, ಸಃ- ಆ ಹನುಮಂತನು, ತೇನ ಆ ಅಕ್ಷಕುಮಾರನಿಂದ,ಪ್ರಸಭಂ ಬಲಾತ್ಕಾರವಾಗಿ, ನಿಪಾತಿತೈಃ - ತನ್ನಮೇಲೆ ಕೆಡಹಲ್ಪಟ್ಟ, ಬಾಣೈಃ - ಶರಗಳಿಂದ ಕೂಡಿದವನಾಗಿ, ನಾದಂ - ಸಿಂಹನಾದವನ್ನು, ಚಕಾರ - ಮಾಡಿದನು, ಕಿಂಚ - ಮತ್ತು-ಸಃ - ಆ, ಮಾರುತಿಃ - ಹನುಮಂತನು, ಭುಜೋರು—ನಃ, ಭುಜ - ತೋಳುಗಳ, ಊರು - ತೊಡೆಗಳ, ವಿಕ್ಷೇಪಣ - ಹಾರಿಸುವಿಕೆಯಿಂದ, ಘೋರದರ್ಶನಃ - ಭಯಂಕರವಾದ ದರ್ಶನವುಳ್ಳವನಾಗಿ, ನಭಃ - ಆಕಾಶವನ್ನು ಕುರಿತು. ಆಶು - ಬೇಗನೆ, ಸಮುತ್ಪಪಾತ - ಹಾರಿದನು ॥೨೧॥ ಬಲೀ - ಬಲವಂತನಾದ ರಾಕ್ಷಸಾನಾಂ - ರಕ್ಕಸರೊಳಗೆ, ಪ್ರವರಃ - ಗಟ್ಟಿಗನೆನಿಸಿದ, ಪ್ರತಾಪವಾನ್ - ಶೌರ್ಯವಂತನಾಗಿರುವ,

---

ಆತನ ಆಡಂಬರವನ್ನೆಲ್ಲ ಆಂಜನೇಯನು ಚೆನ್ನಾಗಿ ನೋಡಿದನು. ಕಾಲಮೇಘದಂತೆ ಅಟ್ಟಹಾಸದಿಂದ ಗರ್ಜಿಸಿದನು. ॥೧೯॥ ಅಕ್ಷಕುಮಾರನಿಗೆ ಸರಿಯಾದ ಪ್ರಾಯ, ಆ ಚಿಕ್ಕ ತನದಿಂದಲೇ ರಣಭೂಮಿಯಲ್ಲಿ ಪ್ರತಿ ಕ್ಷಣದಲ್ಲಿಯೂ ವೀರ್ಯದಿಂದ ಕೊಬ್ಬುತಲಿದಾನೆ, ರೋಷಾವೇಶ ಪರವಶನಾಗಿ, ರಕ್ತದಂತೆ ಕಣ್ಣುಗಳು ಕಂಗೊಳಿಸುತಲಿವೆ, ಅವನಿಗೂ ಕಡೆಗಾಲವು ಹತ್ತಿರಕ್ಕೆ ಬಂದಿತು, ಮಹಾ ಗಜವು ಮದವೇರಿ ಹುಲ್ಲಿನಿಂದ ಮುಚ್ಚಿಕೊಂಡಿರುವ ಆಳವಾದ ದೊಡ್ಡಬಾವಿಯ ಬಳಿಗೆ ಬರುವಂತೆ,ಅಸಮಾನ ಶೌರ್ಯನಾದ ಹನುಮಂತನಬಳಿಗೆ ಬಂದನು ॥೨೦॥ ಅಕ್ಷಕುಮಾರನ ಬಾಣಗಳ ಪೆಟ್ಟು ಮಾರುತಿಯನ್ನು ಬಹಳವಾಗಿ ಬಾಧಿಸಿತು, ಮೇಘದಂತೆ ಗರ್ಜಿಸಿದನು, ತೋಳುಗಳನ್ನು ಕರತಲದಿಂದ ಅಪ್ಪಳಿಸಿ ತಟ್ಟಿದನು, ಮೊಳಕಾಲುಗಳನ್ನು ಒದರಿದನು, ಹೆಗಲನ್ನು ಹಾರಿಸಿದನು, ಭಯಂಕರವಾದ ನೋಟವುಳ್ಳವನಾದನು, ಬಯಲಕ್ಕೆ ಇಳಿಯ ಬೀಳಲು ಆಗಸಕ್ಕೆ ಕುಪ್ಪಳಿಸಿದನು ॥೨೧॥ ಅವನು ಹಾಗೆ ಹಾರುತ್ತಲೇ ಪ್ರತಾಪ ಶಾಲಿಯಾಗಿ ರಾಕ್ಷಸೋತ್ತಮನೆನಿಸಿ ಮಹಾರಥನಾದ

ರಥೀ ರಥಿಶ್ರೇಷ್ಠತಮಃ ಕಿರನ್ ಶರೈಃ ಪಯೋಧರಃ ಶೈಲಮಿವಾಶ್ಮವೃಷ್ಟಿಭಿಃ ॥೨೨॥
ಸ ತಾನ್ ಶರಾಂಸ್ತಸ್ಯ ಹರಿರ್ವಿಮೋಕ್ಷಯನ್ ಚಚಾರ ವೀರಃ ಪಥಿ ವಾಯುಸೇವಿತೇ ।
ಶರಾಂತರೇ ಮಾರುತವದ್ವಿನಿಷ್ಪತನ್ಮನೋಜವಸ್ಸಂಯತಿ ಚಂಡವಿಕ್ರಮಃ ॥೨೩॥
ತಮಾತ್ತಬಾಣಾಸನಮಾಹವೋನ್ಮುಖಂ ಖಮಾಸ್ತೃಣಂತಂ ವಿಶಿಖೈಶ್ಶರೋತ್ತಮೈಃ।
ಅವೈಕ್ಷತಾಕ್ಷಂ ಬಹುಮಾನಚಕ್ಷುಷಾ ಜಗಾಮ ಚಿಂತಾಂ ಚ ಸ ಮಾರುತಾತ್ಮಜಃ॥೨೪
ತತಶ್ಶರೈರ್ಭಿನ್ನಭುಜಾಂತರಃ ಕಪಿಃ ಕುಮಾರವೀರೇಣ ಮಹಾತ್ಮನಾ ನದನ್ ।

ರಥೀ - ರಥಿಕನಾದ, ರಥಿಶ್ರೇಷ್ಠತಮಃ - ರಥಿಕರೊಳಗೆ ಅಗ್ರಗಣ್ಯನೆನಿಸಿಸುತ್ತಕ್ಕ, ಸಃ - ಆ ಅಕ್ಷನು, ಪಯೋಧರಃ - ಮೇಘವು, ಅಶ್ಮವೃಷ್ಟಿಭಿಃ - ಕಲ್ಲಿನ ಮಳೆಯಿಂದ, ಶೈಲಮಿವ - ಬೆಟ್ಟವನ್ನು ಹೇಗೋ ಹಾಗೆ, ಸಮುತ್ಪತನ್ತಂ - ಮೇಲಕ್ಕೆ ಹಾರುತಲಿರುವ ಹನುಮಂತನನ್ನು, ಶರೈಃ - ಬಾಣಗಳಿಂದ, ಕಿರನ್-ಹೊಡೆಯುತಲಿರುವವನಾಗಿ, ಸಮಭಿದ್ರವತ್ - ಇದಿರಿಸಿ ಓಟ್ಟಿದನು ॥೨೨॥ ವೀರಃ - ಶೂರನೆನಿಸಿರುವ, ಮನೋಜವಃ-ಮನಸ್ಸಿನಂತೆ ವೇಗವುಳ್ಳ, ಸಂಯತಿ-ಯುದ್ಧದಲ್ಲಿ, ಚಂಡವಿಕ್ರಮಃ-ತೀಕ್ಷ್ಣವಾದ ಪರಾಕ್ರಮವುಳ್ಳ, ಸಃಹರಿಃ-ಆ ಆಂಜನೇಯನು, ತಸ್ಯ - ಆ ಅಕ್ಷಕುಮಾರನ ತಾನ್-ಆ, ಶರಾನ್ - ಬಾಣಗಳನ್ನು, ವಿಮೋಕ್ಷಯನ್ - ಬಿಡಿಸಿಕೊಳ್ಳುವವನಾಗಿ, ಶರಾಂತರೇ - ಆ ಬಾಣಗಳ ಸಂದಿನಲ್ಲಿ, ಮಾರುತವತ್ - ಗಾಳಿಯಂತೆ, ವಿನಿಷ್ಪತನ್ - ತೂರುವವನಾಗುತ್ತಾ, ವಾಯುಸೇವಿತೇ - ಗಾಳಿಯಿಂದ ಆಶ್ರಯಿಸಲ್ಪಟ್ಟ, ಪಥಿ - ಆಕಾಶಮಾರ್ಗದಲ್ಲಿ, ಚಚಾರ- ಸಂಚರಿಸುತ್ತಿದ್ದನು ॥೨೩॥ ಮಾರುತಾತ್ಮಜಃ - ವಾಯುನಂದನನಾದ, ಸಃ - ಆ ಹನುಮನು, ಆತ್ತಬಾಣಾಸನಂ - ಹಿಡಿದ ಬಿಲ್ಲುಳ್ಳ, ಆಹವೋನ್ಮುಖಂ - ಯುದ್ಧಕ್ಕಾಗಿ ಇದಿರು ನೋಡುತಲಿರುವ, ವಿಶಿಖೈಃ - ವೇಗವಾದ ಮೊನೆಯುಳ್ಳ, ಶರೋತ್ತಮೈಃ - ಬಾಣಗಳಿಂದ, ಖಂ - ಆಕಾಶವನ್ನು, ಆಸ್ತೃಣಂತಂ - ಮುಚ್ಚುತಲಿರುವ, ತಂ-ಆ, ಅಕ್ಷಂ - ಅಕ್ಷನನ್ನು, ಬಹುಮಾನಚಕ್ಷುಷಾ - ಗೌರವ ದೃಷ್ಟಿಯಿಂದ, ಅವೈಕ್ಷತ - ನೋಡಿದನು, ಚಿಂತಾಂಚ-ಮುಂದಿನ ಯೋಚನೆಯನ್ನೂ, ಜಗಾಮ - ಹೊಂದಿದನು (ತಿಳಿದನು) ॥೨೪॥

ತತಃ-ತರುವಾಯು, ಮಹಾತ್ಮನಾ ಮಹಾ ಧೈರ್ಯವುಳ್ಳ, ಕುಮಾರ ವೀರೇಣ-ವೀರನಾದ ಅಕ್ಷಕುಮಾರನಿಂದ, ಶರೈಃ-ಬಾಣಗಳಿಂದ, ಭಿನ್ನ - ಭೇದಿಸಲ್ಪಟ್ಟ, ಭುಜಾಂತರಃ - ವಕ್ಷಸ್ಸ್ಥಲವುಳ್ಳವನಾಗಿ,

ಅಕ್ಷನು- ತನ್ನ ಬಲವನ್ನು ತೋರ್ಪಡಿಸುತ್ತಾ ರಥದ ಮೇಲೆ ಕುಳಿತಿರುವವನಾಗಿಯೇ, ಕಾರ್ಮುಗಿಲು ಬೆಟ್ಟದಮೇಲೆ ಮಳೆಗರೆವಂತೆ ಬಾಣದ ಮಳೆಯನ್ನು ಸುರಿಸುತ್ತಾ ಹನುಮನನ್ನು ಹಿಂಬಟ್ಟಿದನು ॥೨೨॥ ಮಾರುತಿಯು- ಆ ಬಾಣಗಳ ಪೆಟ್ಟಿಗೆ ಸಿಲುಕದೆ, ಎಲ್ಲವನ್ನೂ ತನ್ನ ಚಾತುರ್ಯದಿಂದ ತಪ್ಪಿಸಿಕೊಂಡು, ವಾಯುವೇಗದಿಂದ ವಾಯು ಮಂಡಲದಲ್ಲಿ ಪ್ರಚಂಡ ವಿಕ್ರಮನಾಗಿ, ಆ ಶರಗಳ ಸಂದಿನಲ್ಲಿಯೇ ಸಂಚರಿಸುತಲಿಂದನು ॥೨೩॥ ಅಕ್ಷನು_ಮರಳಿ ಬಿಲ್ಲನ್ನು ಹಿಡಿದು, ಬಾಣ ಸಂಧಾನವನ್ನು ಮಾಡಿ, ಯುದ್ಧಾಭಿ ಮುಖನಾಗಿ,ಬಾಣವೃಷ್ಟಿಯಿಂದ ಆಕಾಶದ ಬೈಲನ್ನು ಮುಚ್ಚುತಲಿರುವುದಂ ಕಂಡು, ಇವನು ವೀರಾಗ್ರಗಣ್ಯನೇ ಸರಿ ಎಂದು ಗೌರವ ದೃಷ್ಟಿಯಿಂದ ಅವನನ್ನು ನೋಡಿ ಶ್ಲಾಘಿಸಿ, ಮಾರುತಿಯು-ಮುಂದಾಲೋಚನೆಯನ್ನು ಮಾಡತೊಡಗಿದನು. ॥೨೪॥ ಮಹಾ ವೀರನಾದ ಅಕ್ಷನ ಬಿಂಬಿಸ ಪೆಟ್ಟುಗಳಿಂದ ಕಪಿವರನ ಎದೆಯಲ್ಲ ಸೀಳಿ ಗಾಯಗಳಾಗಿ, ಕೆನ್ನೀರು ಹರಿಯುತಲಿದೆ ಆದರೂ

ಮಹಾಭುಜಃ ಕರ್ಮವಿಶೇಷ ತತ್ವವಿ ದ್ವಿಚಿಂತಯಾಮಾ ಸ ರಣೇ ಪರಾಕ್ರಮಮ್ ॥ ೨೫
ಅಬಾಲವ ದ್ಬಾಲ ದಿವಾಕರಪ್ರಭಃ ಕರೋತ್ಯಯಂ ಕರ್ಮ ಮಹಾನ್ಮಹಾಬಲಃ।
ನ ಚಾಸ್ಯ ಸರ್ವಾಹವ ಕರ್ಮ ಶೋಭಿನಃ ಪ್ರಮಾಪಣೇ ಮೇಮತಿ ರತ್ರ ಜಾಯತೇ ॥೨೬॥
ಅಯಂ ಮಹಾತ್ಮಾ ಚ ಮಹಾಂಶ್ಚ ವೀರ್ಯತಃ ಸಮಾಹಿತ ಶ್ಚಾತಿ ಸಹಶ್ಚ ಸಂಯುಗೇ ;
ಅಸಂಶಯಂ ಕರ್ಮ ಗುಣೋದಯಾದಯಂ ಸನಾಗ ಯಕ್ಷೈರ್ಮುನಿಭಿಶ್ಚ ಪೂಜಿತಃ॥೨೭॥
ಪರಾಕ್ರಮೋತ್ಸಾಹ ವಿವೃದ್ಧ ಮಾನಸ ಸ್ಸಮೀಕ್ಷತೇ ಮಾಂ ಪ್ರಮುಖಾಗ್ರತ ಸ್ಥಿತಃ ।
ಪರಾಕ್ರಮೋ ಹ್ಯಸ್ಯ ಮನಾಂಸಿ ಕಂಪಯೇ ತ್ಸುರಾಸುರಾಣಾ ಮಪಿ ಶೀಘ್ರ ಗಾಮಿನಃ ॥

ಮಹಾಭುಜಃ - ಹೇರಳವಾದ ಬಾಹುಬಲವುಳ್ಳವನಾದಕಾರಣವೇ, ಕರ್ಮವಿಶೇಷತತ್ವವಿತ್ - ಪ್ರಕೃತ ಕಾರ್ಯವನ್ನು ಅರಿತವನಾಗಿ, ( ರಹಸ್ಯವನ್ನು ತಿಳಿದವನಾಗಿ ) ಕಪಿಃ - ಆಂಜನೇಯನು, ನರ್ದ - ಧ್ವನಿಮಾಡುತ್ತಾ, ರಣೇ - ಯುದ್ಧದಲ್ಲಿ, ಪರಾಕ್ರಮಂ - ಅಕ್ಷನಮೇಲೆ ತನ್ನ ಶೌರ್ಯವನ್ನು, ವಿಚಿನ್ತಯಾಮಾಸ (ಪ್ರಯೋಗಿಸುವ ರೀತಿಯನ್ನು) ಚಿಂತಿಸಿದನು, ॥೨೫॥ ಅಯಂ - ಈ ಅಕ್ಷನು, ಮಹಾಬಲಃ - ಹೇರಳವಾದ ಬಲವುಳ್ಳ, ಬಾಲದಿವಾಕರಪ್ರಭಃ - ಬಾಲಸೂರ್ಯನಂತೆಸವ ಕಾಂತಿಯನ್ನೊಳಗೊಂಡಿರುವವನಾಗಿ, ಅಬಾಲವತ್ - ಪಳಗಿದ ದೊಡ್ಡ ವೀರನಂತೆ, ಮಹತ್ - ಪ್ರಬಲವಾದ, ಕರ್ಮ - ಯುದ್ಧವ್ಯಾಪಾರವನ್ನು ಕರೋತಿ-ಮಾಡುತಲಿದಾನೆ, ಅತ್ರ - ಈಯುದ್ಧರಂಗದಲ್ಲಿ, ಸರ್ವಾಹವಕರ್ಮ ಶೋಭಿನಃ - ಸಮಸ್ತಯುದ್ಧವ್ಯಾಪಾರಗಳಿಂದಲೂ ಶೋಭಿಸುತಲಿರುವ, ಅಸ್ಯ - ಇವನ, ಪ್ರಮಾಪಣೇ - ಸಂಹಾರದಲ್ಲಿ, ಮೇ- ನನಗೆ, ಬುದ್ಧಿಃ - ಮನಸ್ಸು, ನಜಾಯತೇ - ಉಂಟಾಗುತಲಿಲ್ಲ, ॥೨೬॥ ಅಯಂ - ಇವನು, ಮಹಾತ್ಮಾ - ಬಹು ಧೈರ್ಯವುಳ್ಳವನು, ವೀರ್ಯತಃ - ಪರಾಕ್ರಮದಿಂದ, ಮಹಾನ್ - ಪ್ರಬಲನಾದವನು, ಸಂಯುಗೇ - ಯುದ್ಧದಲ್ಲಿ, ಸಮಾಹಿತಶ್ಚ - ಜಾಗರೂಕನಾಗಿದಾನೆ, ಅತಿಸಹಶ್ಚ - ಬಲು ಸೈರಣೆಯುಳ್ಳವನು, ಅಯಂ - ಇವನು, ಕರ್ಮಗುಣೋದಯಾತ್ - ಯುದ್ಧ ವ್ಯಾಪಾರದ ಉತ್ಕರ್ಷದಿಂದ, ಯಕ್ಷೈಃ - ಯಕ್ಷರೆಂಬ ದೇವತೆಗಳಿಂದಲೂ, ಮುನಿಭಿಶ್ಚ - ಮುನಿಗಳಿಂದಲೂ, ಪೂಜಿತಃ - ಪೂಜಿಸಲ್ಪಟ್ಟವನಾಗಿದಾನೆ, ಅಸಂಶಯಂ - ಸಂದೇಹವಿಲ್ಲ ॥೨೭॥ ಅಯಂ - ಇವನು, ಪರಾಕ್ರಮೋತ್ಸಾಹವಿವೃದ್ಧಮಾನಸಃ - ವಿರ್ಯೋತ್ಸಾಹಗಳಿಂದ

ಮಹಾ ಭುಜಬಲ ಸಂಪನ್ನನಾದ ಹರಿಯು- ಸಮಯೋಚಿತವಾದ ಕೆಲಸವನ್ನು ಮಾಡಲು ಬಲ್ಲವನಾದುದರಿಂದ, ರಣದಲ್ಲಿ ಮುಂದೆ ತನ್ನ ಪರಾಕ್ರಮದ ಪರಿಯನ್ನು ಯಾವ ಪ್ರಕಾರವಾಗಿ ತೋರಬೇಕೆಂಬುದನ್ನು ಆಲೋಚಿಸಿದನು. ॥ ೨೫ ॥ ಯದ್ಯಪಿ- ಈ ರಾಕ್ಷಸನು ಧೀರನೇ ಸರಿ. ಬಾಲ ಸೂರ್ಯನಂತೆ ಬೆಳಗುತಲಿದಾನೆ, ಮಹಾತೇಜಸ್ವಿ,ರಣದಲ್ಲಿ ಘೋರವಾದ ಕರ್ಮವನ್ನು ಮಾಡುತಲಿದಾನೆ, ಆಹವದಲ್ಲಿ ಇವನು ತೋರುತಲಿರುವ ಬಗೆ ಬಗೆಯ ಸಾಹಸದ ಕರ್ಮಗಳಿಂದ ಶೋಭಿಸುತಲಿರುವನು. ಇಂತಹ ಶೂರನನ್ನು ಕೊಲ್ಲುವುದರಲ್ಲಿ ನನ್ನ ಮನವು ಹಿಂಜರಿಯುತಲಿದೆ. ॥ ೨೬ ॥ ಇವನು ಸಾಮಾನ್ಯನಲ್ಲ, ಮಹಾ ಧೈರ್ಯ ಶಾಲಿ. ವೀರ್ಯದಲ್ಲಿಯೂ ಶ್ಲಾಘ್ಯನಾಗಿದಾನೆ. ಮತ್ತು-ಯುದ್ಧದಲ್ಲಿ ಬಹು ಎಚ್ಚರಿಕೆಯಿಂದ ಕೆಲಸವನ್ನು ಮಾಡುತಲಿದಾನೆ. ರಣಾಂಗಣದಲ್ಲಿ ನಾಗರು, ಯಕ್ಷರು, ಮುನಿಗಳು ಮುಂತಾದವರಾರೂ ಇವನ ಶೌರ್ಯವನ್ನು ತಾಳಿ ಇದಿರಿಸಿ ನಿಲ್ಲಲಾರರು. ಈ ವಿಷಯದಲ್ಲಿ ಸಂಶಯವಿಲ್ಲ, ಯುದ್ಧಶ್ರಮವನ್ನು ಚೆನ್ನಾಗಿ ಸಹಿಸತಕ್ಕವನಾಗಿದಾನೆ. ॥ ೨೭ ॥ ಪರಾಕ್ರಮದಿಂದಲೂ, ಉತ್ಸಾಹ

ನ ಖಲ್ವಯಂ ನಾಭಿಭವೇ ದುಪೇಕ್ಷಿತಃ ಪರಾಕ್ರಮೋ ಹ್ಯಸ್ಯ ರಣೇ ವಿವರ್ಧತೇ।
ಪ್ರಮಾಪಣಂ ತ್ವೇವ ಮಮಾಸ್ಯ ರೋಚತೇ ನ ವರ್ಧಮಾನೋಽಗ್ನಿ ರುಪೇಕ್ಷಿತುಂ ಕ್ಷಮಃ॥೨೯
ಇತಿ ಪ್ರವೇಗಂ ತು ಪರಸ್ಯ ತರ್ಕಯನ್ ಸ್ವಕರ್ಮ ಯೋಗಂಚ ವಿಧಾಯ ವೀರ್ಯವಾನ್ ।
ಚಕಾರ ವೇಗಂ ತು ಮಹಾಬಲ ಸ್ತದಾ ಮತಿಂ ಚ ಚಕ್ರೇಸ್ಯ ವಧೇ ಮಹಾಕಪಿಃ ॥೩೦॥
ಸ ತಸ್ಯ ತಾ ನಷ್ಟ ಹಯಾ ನ್ಮಹಾಜವಾನ್ ಸಮಾಹಿತಾನ್ ಭಾರಸಹಾ ನ್ವಿವರ್ತನೇ ।

ಉಬ್ಬಿದ ಮನಸ್ಸುಳ್ಳವನು, ಪ್ರಮುಖಾಗತಃ - ಇದಿರಿಗೆ ಬಂದವನಾಗುತ್ತಾ, ಸ್ಥಿರ-ಸ್ಥಿರವಾಗಿ ನಿಂತವನಾಗಿ, ಮಾಂ - ನನ್ನನ್ನು, ಸಮೀಕ್ಷತೆ - ನೋಡುತಲಿದಾನೆ, ಕ್ಷಿಪ್ರಗಾಮಿನಃ - ಬಹು ವೇಗವುಳ್ಳ ಅಸ್ಯ - ಇವನ, ಪರಾಕ್ರಮಃ - ವೀರ್ಯವು, ಸುರಾಸುರಾಣಾಮಪಿ - ದೇವಾಸುರರಿಗೂ, ಮನಾಂಸಿ - ಮನಸ್ಸುಗಳನ್ನು, ಕಂಪಯತೇ - ಅದಿರಿಸುತ್ತವೆ ॥೨೮॥ ರಣೇ - ಯುದ್ಧದಲ್ಲಿ, ಅಸ್ಯ - ಇವನ, ಪರಾಕ್ರಮಃ - ವೀರ್ಯವು, ಅಭಿವರ್ಧತೇಹಿ - ಹೆಚ್ಚುತಲೇ ಇದೆ, ಅಯಂ - ಇವನು, ಉಪೇಕ್ಷಿತಃ - ಅಸಡ್ಡೆ ಮಾಡಲ್ಪಟ್ಟರೆ, ನಾಭಿಭವೇದಿತಿನ-ನನ್ನನ್ನು ತಿರಸ್ಕರಿಸದೆ ಇರುವುದಿಲ್ಲ, ಮಮತು - ನನಗಾದರೋ, ಅಸ್ಯ-ಇವನ, ಪ್ರಮಾಪಣಮೇವ - ಸಂಹಾರವೇ, ರೋಚತೆ - ರುಚಿಸುತಲಿದೆ, ವರ್ಧಮಾನಃ-ಹೆಚ್ಚುತಲಿರುವ, ಅಗ್ನಿಃ - ಅಗ್ನಿಯು, ಉಪೇಕ್ಷಿತುಂ - ಅಸಡ್ಡೆಮಾಡಲಿಕ್ಕೆ, ನಕ್ಷಮಃ - ಉಚಿತವಲ್ಲ ॥೨೯॥ ವೀರ್ಯವಾನ್-ಪರಾಕ್ರಮವುಳ್ಳ, ಮಹಾಬಲಃ ಹೇರಳವಾದ ಬಲವುಳ್ಳ, ಮಹಾಕಪಿಃ - ಕಪಿಶ್ರೇಷ್ಠನು, ಪರಸ್ಯ - ಹಗೆಯಾದ ಅಕ್ಷನ, ಪ್ರವೇಗಂತು ಪರಾಕ್ರಮಾತಿಶಯವನ್ನು, ಇತಿ - ಈ ಹಿಂದೆ ಹೇಳಿದ ಮೇರೆಗೆ, ತರ್ಕಯನ್ - ಯೋಚಿಸುತ್ತಿರುವವನಾಗಿ, ಸ್ವಕರ್ಮಯೋಗಂಚ - ಮುಂದಿನ ತನ್ನ ಕೆಲಸದ ಕ್ರಮವನ್ನೂ, ವಿಧಾಯ - ಗೊತ್ತುಮಾಡಿಕೊಂಡು, ತದಾ - ಆಗ, ಅಸ್ಯ-ಈ ಅಕ್ಷಕುಮಾರನ, ವಧೆ - ಸಂಹಾರದಲ್ಲಿ, ಮತಿಂ - ಬುದ್ಧಿಯನ್ನೂ, ವೇಗಂಚ-ತ್ವರೆಯನ್ನೂ, ಚಕ್ರೆ - ಮಾಡಿದನು ॥೩೦॥ ವೀರಃ - ಪರಾಕ್ರಮಶಾಲಿಯಾದ, ಪವನಾತ್ಮಜಃ - ವಾಯುಪುತ್ರನಾಗಿರುವ, ಸಃ ಕಪಿಃ - ಆ ಹನುಮಂತನು, ಮಹಾಜವಾನ್-

ಗುಣದಿಂದಲೂ ನನ್ನ ಇದಿರಿಗೆ ನಿಂತು, ಮನಸ್ಸುಬ್ಬಿ, ನನ್ನನ್ನು ನೋಡುತಲಿರುವನು. ಇವನ ವೀರ್ಯ ದರ್ಪವನ್ನು ನೋಡಿದರೆ ಪ್ರತಿ ವೀರರ ಎದೆಗಳು ಅದಿರದೆ ಇರುವುದಿಲ್ಲ. ಸುರಾಸುರರೊಳಗೆಲ್ಲ ಇವನು ಮುಂದಾಳಾಗುವುದೇ ದಿಟ. ॥೨೮॥ ಇಂಥವನನ್ನು ನಾನು ಇರಿಯದೆ ಬಿಡುವುದು ತರವಲ್ಲ. ಬಂದುದೇಳಲಿ ಅಸಡ್ಡೆಮಾಡಿ ಬಿಟ್ಟಿದ್ದರೆ ಎಂದಿಗೂ ಇವನು ನನ್ನನ್ನು ತಿರಸ್ಕರಿಸದೆ ಇರುವುದಿಲ್ಲ. ರಣರಂಗದಲ್ಲಿ ಇವನ ಪರಾಕ್ರಮವು ಹೆಚ್ಚುತಲೇ ಇದೆ. ಆದಕಾರಣ ಇವನನ್ನು ಮುಗಿಸಲೇ ಬೇಕು, ಹೆಚ್ಚುವಾಗಲೆ- ಉರಿಯುತಲಿರುವ ಬೆಂಕಿಯನ್ನು ಉಪೇಕ್ಷೆಯಿಂದ ಆರಿಸದೆ ಹೋದರೆ ಹೇಗೋ ಹಾಗೆ. ಇವನಿಂದ ಅಪಾಯವುಂಟಾಗುತ್ತದೆ. ॥೨೯॥ ಎಂದೀ ಪ್ರಕಾರವಾಗಿ ಪ್ರಾದಿಯಾಗಿ- ಹಗೆಯ ಪರಾಕ್ರಮದ ರೀತಿಯನ್ನೆಲ್ಲಾ ಚೆನ್ನಾಗಿ ಯೋಚಿಸಿ, ತಾನು ಆಚರಿಸಬೇಕಾದ ಕೆಲಸವನ್ನು ಗೊತ್ತು ಮಾಡಿಕೊಂಡು, ಮಹಾಬಲ ಪೌರುಷಸಂಪನ್ನನಾಗುತ್ತಾ, ಅವನನ್ನು ವಧಿಸುವ ಉದ್ಯೋಗವನ್ನು ಕೈಗೊಂಡನು. ॥೩೦॥ ವೀರ ಹನುಮಂತನು- ಅಕ್ಷಕುಮಾರನ ರಥಕ್ಕೆ ಕಟ್ಟಿದ್ದ ಮಹಾವೇಗಶಾಲಿಗಳಾಗಿ ಬಗೆಬಗೆಯ ನಡಿಗೆಗಳನ್ನುಳ್ಳವಟ್ಟಿ ಎಂಟು ಕುದುರೆಗಳನ್ನೂ ಕರತಲಗಳಿಂದ ಅಡಿಗಡಿಗೂ ಅಪ್ಪಳಿಸಿ ಹೊಡೆದು ಕೆಡಹಿದನು. ಮರಳಿ ಆಕಾಶ ಮಾರ್ಗದಿಂದ ಹಾರಿ

ಜಘಾನ ವೀರಃ ಪಥಿ ವಾಯುಸೇವಿತೇ ತಲಪ್ರಹಾರೈಃ ಪವನಾತ್ಮಜಃ ಕಪಿಃ ॥೩೦॥
ತತ ಸ್ತಲೇ ನಾಭಿಹತೋ ಮಹಾರಥಃ ಸ ತಸ್ಯ ಪಿಂಗಾಧಿಪ ಮಂತ್ರಿನಿರ್ಜಿತಃ।
ಪ್ರಭಗ್ನ ನೀಡಃ ಪರಿಮುಕ್ತ ಕೂಬರಃ ಪಪಾತ ಭೂಮೌ ಹತವಾಜಿ ರಂಬರಾತ್ ॥
ಸ ತಂ ಪರಿತ್ಯಜ್ಯ ಮಹಾರಥೋ ರಥಂ ಸ ಕಾರ್ಮುಕಃ ಖಡ್ಗಧರಃ ಖಮುತ್ಪತನ್ ।
ತಪೋಭಿಯೋಗಾ ದೃಷಿ ರುಗ್ರವೀರ್ಯವಾನ್ವಿಹಾಯ ದೇಹಂ ಮರುತಾ ಮಿವಾಲಯಮ್॥೩೨॥
ತತಃ ಕಪಿ ಸ್ತಂ ವಿಚರಂತ ಮಂಬರೇ ಪತತ್ರಿ ರಾಜಾನಿಲ ಸಿದ್ಧ ಸೇವಿತೇ ।

ಬಹುವೇಗವುಳ್ಳ, ಸಮಾಹಿತಃ - ಲವಲವಿಕೆಯಿಂದೊಡಗೂಡಿದ, ವಿವರ್ತನೆ - ಬಗೆಬಗೆಯಾದ ನಡಗೆಯ ಲ್ಲಿ, ಭಾರಸಹಾನ್ - ಉರುಬನ್ನು ತಾಳತಕ್ಕ, ಅಷ್ಟ-ಎಂಟಾದ, ಹಯಾನ್ - ಕುದುರೆಗಳನ್ನು, ವಾಯು ಸೇವಿತೆ- ವಾಯುವಿನಿಂದ ಸೇವಿಸಲ್ಪಟ್ಟ, ಪಥಿ - ಮಾರ್ಗದಲ್ಲಿರುವವನಾಗಿ, ತಲಪ್ರಹಾರೈಃ - ಅಂಗೈಯ್ಯ ಪೆಟ್ಟುಗಳಿಂದ, ಜಘಾನ - ಹೊಡೆದನು ॥೩೦॥ ತತಃ - ತರುವಾಯು, ತಲೇನ - ಕರತಲದಿಂದ, ಅಭಿಹತಃ- ಹೊಡೆಯಲ್ಪಟ್ಟುದಾದ ಕಾರಣವೇ, ತಸ್ಯ - ಆ ಅಕ್ಷನ, ಸಃ - ಆ, ಮಹಾರಥಃ-ದೊಡ್ಡತೇರು, ಪಿಂಗಾ ಧಿಪಮಂತ್ರಿ ನಿರ್ಜಿತಃ - ಸುಗ್ರೀವನ ಮಂತ್ರಿಯಿಂದ ಜಯಿಸಲ್ಪಟ್ಟುದು, ಪ್ರಭಗ್ನನೀಡಃ-ಮುರಿದುಹೋ ದ ರಥಾವಯವಗಳುಳ್ಳುದೂ, ಪರಿಮುಕ್ತ ಕೂಬರಃ - ಬಿಚ್ಚಿಹೋದನೊಗವುಳ್ಳುದೂ, ಹತವಾಜಿಃ - (ಹತವಾಜೀ) ಕೊಲ್ಲಲ್ಪಟ್ಟ ಕುದುರೆಗಳುಳ್ಳುದೂ ಆಗಿ, ಅಂಬರಾತ್ - ಆಕಾಶದ ದೆಶೆಯಿಂದ, ಭೂಮೌ- ನೆಲದಲ್ಲಿ ಪಪಾತ - ಬಿದ್ದಿತು, ॥೩೧॥ ಮಹಾರಥಃ - ಮಹಾರಥನೆನಿಸಿದ, ಉಗ್ರವೀರ್ಯವಾನ್ - ಭಯಂ ಕರವಾದ ಪರಾಕ್ರಮವುಳ್ಳ, ಸಃ - ಆ ಅಕ್ಷನು, ತಂ - ಆ, ರಥಂ - ತೇರನ್ನು, ಪರಿತ್ಯಜ್ಯ - ಬಿಟ್ಟು, ಸ ಕಾರ್ಮುಕಃ-ಬಿಲ್ಲಿನಿಂದೊಡಗೂಡಿದನೂ, ಖಡ್ಗವನ್ನು ಹಿಡಿದವನೂ ಆಗಿ, ಖಂ-ಆಕಾಶವನ್ನು ಕುರಿತು, ಉ ತ್ಪತನ್ ಹಾರುವವನಾಗಿ, ತಪೋಭಿಯೋಗಾತ್-ತಪಸ್ಸಿದ್ಧಿಯ ದೆಸೆಯಿಂದ, ದೇಹಂ-ಶರೀರವನ್ನು, ವಿಹಾಯ- ಬಿಟ್ಟು, ಮರುತಾಂ-ದೇವತೆಗಳ, ಆಲಯಂ-ನೆಲೆಯಾದ ಸ್ವರ್ಗವನ್ನು ಕುರಿತು, (ಉತ್ಪತನ್-ಹಾರುತಲಿರು ವ) ಋಷಿರಿವ-ಮುನಿಯಂತೆ ಹಾಗೆ, ಬಭೂವ - ಇದ್ದನು, ॥೩೨॥ ತತಃ - ಅನಂತರದಲ್ಲಿ, ಮಾರುತತುಲ್ಯ ವಿಕ್ರಮಃ - ವಾಯುವಿಗೆಣೆಯಾದ ಪರಾಕ್ರಮವುಳ್ಳ, ಕಪಿಃ - ಹನುಮನು, ಪತತ್ರಿ ರಾಜಾನಿಲಸಿದ್ಧ

ಬಂದನು. ॥೩೦॥ ಮರುತ್ಸುತನು ತನ್ನ ಅಂಗೈಗಳಿಂದ ಅಕ್ಷನ ರಥವನ್ನು ಕರತಲದಿಂ ದ ಬಾರಿಸಿದನು. ಕಪಿಸಾರ್ವಭೌಮನಾದ ಸುಗ್ರೀವನ ಪ್ರಧಾನ ಮಂತ್ರಿಯಾಗಿರುವ ಹ ನುಮನ ಪೆಟ್ಟಿನಿಂದ ಆ ಮಹಾರಥವು ಮುರಿದು, ನೊಗ, ಅಚ್ಚು ಮೊದಲಾದ ಅವಯವಗಳೆಲ್ಲ ಕಳಚಿ ಅಶ್ವಗಳೂ ಹತಗಳಾಗಿ ಎಲ್ಲವೂ ಪುಡಿಪುಡಿಯಾಗಿ, ಅಂಬರದಿಂದ ನೆಲದಲ್ಲಿ ಉದಿರಿತು॥ ॥೩೧॥ ಆ ಬಳಿಕ ಅಕ್ಷಕುಮಾರನು-ಆ ರಥವನ್ನು ಬಿಟ್ಟು, ಬಿಲ್ಲನ್ನೂ ಖಡ್ಗವನ್ನೂ ಹಿಡಿದು, ತೀವ್ರವಾದ ತಪಸ್ಸನ್ನು ಆಚರಿಸಿದ ಮಹಾಯೋಗಿಯು ಜೀರ್ಣವಾದ ದೇಹವನ್ನು ಬಿಟ್ಟು ಅಮರಾಲಯವನ್ನು ಕುರಿತು ತೆರಳುವಂತೆ, ಗಗನಮಂಡಲಕ್ಕೆಹಾರಿ, ಹನುಮನನ್ನು ಇದಿರಿಸಿ ದನು. ॥೩೨॥ ಬಳಿಕ ಆಂಜನೇಯನು- ಪಕ್ಷಿರಾಜನಾದ ಗರುಡನಿಂದಲೂ, ತನ್ನ ತಂದೆ ಯಾದ ವಾಯುವಿನಿಂದಲೂ, ಸಿದ್ಧಪುರುಷರಿಂದಲೂ ಆಶ್ರಯಿಸಲ್ಪಡುತಲಿರುವ ಆಕಾಶಮಂಡ ಲದಲ್ಲಿಯೇಸಂಚರಿಸುತ್ತಾ, ತಂದೆಗೆ ಸಮಾನವಾಗಿ ಪರಾಕ್ರಮದ ವೇಗವುಳ್ಳವನಾಗಿ, ಮೆಲ್ಲಗೆ ಅಕ್ಷಕುಮಾರನ ಹತ್ತಿರಕೆ ಬಂದು, ಹೊಂಚುಹಾಕಿ, ಸಂಚಿನಿಂದ ಎರಡು ಕಾಲುಗಳನ್ನೂ

ಸಮೇತ್ಯ ತಂ ಮಾರುತತುಲ್ಯವಿಕ್ರಮಃ ಕ್ರಮೇಣ ಜಗ್ರಾಹ ಸಪಾದಯೋರ್ದೃಢಂ ॥೩೪॥
ಸ ತಂ ಸಮಾವಿಧ್ಯ ಸಹಸ್ರಶಃ ಕಪಿರ್ಮಹೋರಗಂ ಗೃಹ್ಯ ಇವಾಂಡಜೇಶ್ವರಃ ।
ಮುಮೋಚ ವೇಗಾತ್ಪಿತೃತುಲ್ಯ ವಿಕ್ರಮೋ ಮಹೀತಲೇ ಸಂಯತಿ ವಾನರೋತ್ತಮಃ ॥೩೫॥
ಸ ಭಗ್ನ ಬಾಹೂರು ಕಟೀ ಶಿರೋಧರಃ ಕ್ಷರನ್ನಸೃಙ್ನಿರ್ಮಥಿತಾಸ್ಥಿ ಲೋಚನಃ ।
ಸ ಭಗ್ನ ಸಂಧಿಃ ಪ್ರವಿಕೀರ್ಣ ಬಂಧನೋ ಹತಃ ಕ್ಷಿತೌ ವಾಯುಸುತೇನ ರಾಕ್ಷಸಃ ॥೩೬॥
ಮಹಾಕಪಿರ್ಭೂಮಿ ತಲೇ ನಿಪೀಡ್ಯ ತಂ ಚಕಾರ ರಕ್ಷೋಧಿಪತೇರ್ಮಹದ್ಭಯಂ ॥೩೭॥

ಸೇವಿತೇ-ಗರುಡ, ವಾಯು, ಸಿದ್ಧಪುರುಷರಿಂದ ಸೇವಿಸಲ್ಪಟ್ಟ ಅಂಬರೇ - ಆಕಾಶದಲ್ಲಿ, ವಿಚರಂತಂ - ಸಂಚರಿಸುತಲಿರುವ, ತಂ - ಆರಾಕ್ಷಸನನ್ನು, ಸಮೇತ್ಯ - ಹೊಂದಿ, ತಂ - ಅವನನ್ನು, ಕ್ರಮೇಣ - ಪಟ್ಟನಿಂದ, ಪಾದಯೋಃ - ಪಾದಗಳಲ್ಲಿ, ದೃಢಂ - ಗಟ್ಟಿಯಾಗಿ, ಜಗ್ರಾಹ - ಹಿಡಿದುಕೊಂಡನು ॥೩೪॥ ಪಿತೃತುಲ್ಯವಿಕ್ರಮಃ - ತಂದೆಗೆ ಸಮಾನವಾದ ಪರಾಕ್ರಮವುಳ್ಳವನಾಗಿ, ವಾನರೋತ್ತಮಃ - ಕಪಿವೀರನಾದ ಸಃ ಕಪಿಃ - ಆ ಹನುಮಂತನು, ಮಹೋರಗಂ - ಹೆಬ್ಬಾವನ್ನು, ಅಂಡಜೇಶ್ವರ ಇವ - ಗರುಡನ ಹಾಗೆ, ಸಂಯತಿ - ಯುದ್ಧದಲ್ಲಿ, ಗೃಹ್ಯ - ಹಿಡಿದುಕೊಂಡು, (ಗೃಹೀತ್ವಾ) ಸಹಸ್ರಶಃ - ಸಾವಿರಾರು ಬಗೆಯಾಗಿ, ಸಮಾವಿಧ್ಯ - ಚೆನ್ನಾಗಿ ಅಪ್ಪಳಿಸಿ, ವೇಗಾತ್ - ಬೇಗನೆ, ಮಹೀತಲೇ - ಭೂತಲದಲ್ಲಿ, ಮುಮೋಚ - ಎಸೆದನು, ॥೩೫॥ ವಾಯುಸುತೇನ - ಆಂಜನೇಯನಿಂದ, ಸಃ ರಾಕ್ಷಸಃ - ಆ ಅಕ್ಷಕುಮಾರನು, ಭಗ್ನ ಬಾಹೂರು ಕಟೀಶಿರೋಧರಃ - ಮುರಿದುಹೋದ ತೋಳು ತೊಡೆ ಟೊಂಕ ಕೊರಳುಗಳುಳ್ಳವನಾಗಿಯೂ, ಕ್ಷರ....ನಃ, ಕ್ಷರತ್ - ಹರಿಯುತಲಿರುವ, ಅಸೃಕ್ - ರಕ್ತದಿಂದ ನನೆದ, ನಿರ್ಮಥಿತ - ಜಜ್ಜಿಹೋದ, ಅಸ್ಥಿ - ಮೂಳೆಗಳೂ, ಲೋಚನಃ - ಕಣ್ಣುಗಳೂ ಉಳ್ಳವನೂ, ಪ್ರಕೀರ್ಣ ಬಂಧನಃ - ಶಿಥಿಲವಾದ ಸಂಧಿಪ್ರದೇಶಗಳುಳ್ಳವನೂ ಆದಕಾರಣವೇ, ಸಭಗ್ನ ಸನ್ಧಿಃ - ಮುರಿದಕೀಲುಗಳುಳ್ಳವನಾಗುತ್ತಾ, ಹತಃ - ಕೊಲ್ಲಲ್ಪಟ್ಟವನಾಗಿ, ಕ್ಷಿತೌ-ಭೂಮಿಯಲ್ಲಿ, (ಪಪಾತ - ಉರುಳಿದನು) ॥೩೬॥ ಮಹಾಕಪಿಃ - ವೀರಹನುಮಂತನು, ಭೂಮಿತಲೇ - ನೆಲದಲ್ಲಿ, ತಂ - ಆ ರಕ್ಕಸನನ್ನು, ನಿಪೀಡ್ಯ - ಹಿಂಡಿ, (ಹಿಂಸಿಸಿ) ರಕ್ಷೋಧಿಪತೇಃ - ರಾಕ್ಷಸರಾಜನಾದ ರಾವಣನಿಗೆ, ಮಹತ್ - ಹೇರಳವಾದ, ಭಯಂ - ಭಯವನ್ನು, ಚಕಾರ - ಉಂಟುಮಾಡಿದನು ॥ ೩೭॥ ॥ ಕುಮಾರೆ - ಅಕ್ಷಕುಮಾರನು, ಹತೇಸತಿ -

ಪಟ್ಟಾಗಿ ಹಿಡಿದು ॥೩೪॥ ಮೇಲಕ್ಕೆತ್ತಿ, ಗಿರಗಿರನೆ ಸಾವಿರಾರು ಬಗೆಯಾಗಿತಿರುಗಿಸಿ, ಮಹಾಸರ್ಪವನ್ನು ಹಿಡಿದು ಆಗಸಕ್ಕೆ ಹಾರುವ ಗರುಡನಂತೆ,ಬಹುವೇಗದಿಂದ ಅಂಬರಕ್ಕೆ ಕುಪ್ಪಳಿಸಿ, ಮರಳಿ ರಣಭೂಮಿಗಿಳಿದು, ನೆಲದಮೇಲೆ ಅಪ್ಪಳಿಸಿ,ಬಾರಿಸಿ,ಕೆಡಹಿ ಉರುಳಿಸಿದನು॥ ಆಗಲಾ ಅಕ್ಷನ ತೋಳುಗಳು ತುಂಡುತುಂಡಾದವು. ಟೊಂಕವು ಮುರಿಯಿತು. ತೊಡೆಗಳು ತುಮುರು ತುಮುರಾದುವು.ಕೊರಳು ತಿರಚಿತು. ಬಾಯಿಯಿಂದ ರಕುತವು ಸುರಿದುಹರಿಯಿತು. ಮೈಯೆಲ್ಲ ಜಜ್ಜಾಯಿತು, ಮೂಳೆಗಳೆಲ್ಲ ಪುಡಿಪುಡಿಯಾದುವು. ಕಣ್ಣುಗಳಡಗಿಹೋದುವು. ಸಂಧಿಬಂಧಗಳೆಲ್ಲ ಶಿಥಿಲವಾದುವು. ಕೀಲುಗಳೆಲ್ಲ ಕಳಚಿಬಿದ್ದುವು. ಸಕಲಾವಯವಗಳೂ ಛಿನ್ನಾಭಿನ್ನವಾಗಿ ಚೆದರಿ ರಣಭೂಮಿಯಲ್ಲಿ ಹರಡಿಬಿದ್ದುವು. ಇಂತು ವಾಯುನಂದನನಿಂದ ಅಕ್ಷರಾಕ್ಷಸನು ಹತನಾಗಿ ರಣಕ್ಷಿತಿಯಲ್ಲಿ ಸತ್ತು ಬಿದ್ದೊರಗಿದನು. ॥೩೬॥ ಹೀಗೆ ವೀರಹನುಮನು-ಅಕ್ಷಕುಮಾರನನ್ನು ಕೊಂದುಕೆಡಹಿ, ರಾಕ್ಷಸರಾಜನಿಗೆ ಮಹತ್ತರವಾದ ಭಯವನ್ನುಂಟುಮಾಡಿದನು. ॥೩೭॥ ಆಗ- ಆಕಾಶಮಾರ್ಗದಲ್ಲಿ ಮಹರ್ಷಿಗಳು,

ಮಹರ್ಷಿಭಿ ಶ್ಚಕ್ರಚರೈ ರ್ಮಹಾವ್ರತೈ ಸ್ಸಮೇತ್ಯ ಭೂತೈಶ್ಚ ಸಯಕ್ಷಪನ್ನಗೈಃ॥
ಸುರೈಶ್ಚ ಸೇಂದ್ರೈ ರ್ಭೃಶ ಜಾತವಿಸ್ಮಯೈ ರ್ಹತೆ ಕುಮಾರೇ ಸ ಕಪಿರ್ನಿರೀಕ್ಷಿತಃ॥೩೭॥
ನಿಹತ್ಯ ತಂ ವಜ್ರಿ ಸುತೋಪಮ ಪ್ರಭಂ ಕುಮಾರ ಮಕ್ಷಂ ಕ್ಷತಜೋಪಮೇಕ್ಷಣಂ ।
ತಮೇವ ವೀರೋಽಭಿಜಗಾಮ ತೋರಣಂ ಕೃತಕ್ಷಣಃ ಕಾಲ ಇವ ಪ್ರಜಾಕ್ಷಯೇ॥೩೮॥

— ಇತಿ ಶ್ರೀಮತ್ಸುಂದರಕಾಂಡೆ–ಸಪ್ತಚತ್ವಾರಿಂಶಸ್ಸರ್ಗಃ –

ಕೊಲ್ಲಲ್ಪಡುತಲಿರಲಾಗಿ, ಚಕ್ರಚರೈಃ-ಆಕಾಶಮಂಡಲದಲ್ಲಿ ಸಂಚರಿಸುವ, ಮಹಾವ್ರತೈಃ-ತಪೋನಿರತರಾದ, ಮಹರ್ಷಿಭಿಃ – ಮುನಿಗಳಿಂದಲೂ, ಸಯಕ್ಷಪನ್ನಗೈಃ – ಯಕ್ಷರಿಂದಲೂ, ನಾಗರಿಂದಲೂ ಒಡಗೂಡಿದ, ಭೂತೈಶ್ಚ – ಪಿಶಾಚಾದಿ ಭೂತಗಳಿಂದಲೂ, ಭೃಶಜಾತವಿಸ್ಮಯೈಃ – ಬಹಳವಾದ ಆಶ್ಚರ್ಯವುಳ್ಳವರಾದ, ಸೇಂದ್ರೈಃ - ಇಂದ್ರಸಹಿತರಾದ, ಸುರೈಶ್ಚ – ದೇವತೆಗಳಿಂದಲೂ, ಸಮೇತ್ಯ – ಒಟ್ಟಿಗೆ ಸೇರಿ, ಸಃಕಪಿಃ-ಆ ಆಂಜನೇಯನು, ನಿರೀಕ್ಷಿತಃ - (ಪ್ರೀತಿಪೂರ್ವಕವಾಗಿ) ನೋಡಲ್ಪಟ್ಟನು ||೩೭||॥ ವೀರಃ – ಮಹಾಶೂರನಾದ ಹನುಮಂತನು, ವಜ್ರಿಸುತೋಪ ಮಪ್ರಭಂ – ಇಂದ್ರಪುತ್ರನಿಗಣೆಯಾದ ಕಾಂತಿಯುಳ್ಳ, ಕ್ಷತಜೋಪಮೇಕ್ಷಣಂ – ರಕ್ತದಂತೆ ಸವಕಣ್ಣುಳ್ಳವನೂ ಆದ, ಅಕ್ಷಂ – ಅಕ್ಷನೆಂಬ, ತಂ - ಆ, ಕುಮಾರಂ-ರಾವಣಪುತ್ರನನ್ನು, ನಿಹತ್ಯ - ಕೊಂದು, ಪ್ರಜಾಕ್ಷಯೆ – ಪ್ರಜಾನಾಶವಾಗುತ್ತಿರಲಾಗಿ (ಪ್ರಳಯಕಾಲದ ಮೇಲೆ) ಕಾಲ ಇವ - ಮೃತ್ಯುವಿನಂತೆ, ಕೃತಕ್ಷಣಃ-ಪಡೆದ ಅವಕಾಶವುಳ್ಳವನಾಗಿ, ತಂ ತೋರಣಮೇವ – ಆ ಹೊರಗಿನ ಬಾಗಿಲನ್ನೇ, ಅಭಿಜಗಾಮ - ಸೇರಿದನು ||೩೮|| ||

— ಇಂತು ನಲವತ್ತೇಳನೆಯ ಸರ್ಗಂ —

ಮಹಾವ್ರತಪರರಾದ ಸಿದ್ಧಪುರುಷರು, ಯಕ್ಷರು, ನಾಗರು ಮತ್ತು ನಾನಾಭೂತಗಳೂ-ಮರುತಿಯು ಮಾಡಿದ ಮಹಾಕಾರ್ಯನನ್ನು ನೋಡಿ ಅಚ್ಚರಿಗೊಂಡರು. ಹರಿಹರ್ಯಕ್ಷನಿಂದ ಶಿಕ್ಷಿತನಾದ ಅಕ್ಷಕುಮಾರನನ್ನು ಕಂಡಸುರರು, ಅಸುರರು, ದೇವೇಂದ್ರನೂ, ಮಹತ್ತರವಾದ ವಿಸ್ಮಯವನ್ನು ಹೊಂದಿ, ಲೋಕಹಿತವನ್ನಾಚರಿಸಿದನೆಂದು ಮರುತಿಯನ್ನು ಬಹುಮಾನಪೂರ್ವಕವಾಗಿ ಭಾಪಿಸಿ ಶ್ಲಾಘಿಸಿದರು. ||೩೭|| ॥ ವಿಜಯಲಕ್ಷ್ಮಿ [illegible] ವೀರ ಹನುಮಂತನು- ಇಂದ್ರಪುತ್ರನಿಗೆಣೆಯಾದ ಪೌರುಷದಿಂದ ಶೋಭಿಸುತಲಿದ್ದ ರಕ್ತಾಕ್ಷನಾದ ಅಕ್ಷಕುಮಾರನನ್ನು ಸಂಹರಿಸಿ, ಪ್ರಜಾಕ್ಷಯವಾದ ಬಳಿಕ ಮೃತ್ಯುವು ವಿಶ್ರಮಿಸಿಕೊಳ್ಳುವಂತೆ ಸ್ವಲ್ಪ ಅವಕಾಶವನ್ನು ಪಡೆಯಲು ಮೊದಲಿನ ಸ್ಥಾನವಾದ ಉದ್ಯಾನದ ಹೊರಬಾಗಿಲಿನಲ್ಲಿ ಬಂದು ನಿಂತನು. ||೩೮|| ||

– ಇಂತು ನಲವತ್ತೇಳನೆಯ ಸರ್ಗಂ –

ಶ್ರೀಃ

ಶ್ರೀರಾಮಚಂದ್ರ ಪರಬ್ರಹ್ಮಣೇನಮಃ

## — ಶ್ರೀಮತ್ಸುಂದರಕಾಂಡೆ-ಅಷ್ಟಚತ್ವಾರಿಂಶ ಸ್ಸರ್ಗಃ —



ತತಸ್ತು ರಕ್ಷೋಧಿಪತಿರ್ಮಹಾತ್ಮಾ ಹನೂಮತಾಽಕ್ಷೇ ನಿಹತೇ ಕುಮಾರೇ ।
ಮನಸ್ಸಮಾಧಾಯ ತದೇಂದ್ರಕಲ್ಪಂ ಸಮಾದಿದೇಶೇಂದ್ರಜಿತಂ ಸರೋಷಂ ॥೧॥
ತ್ವಮಸ್ತ್ರವಿಚ್ಛಸ್ತ್ರಭೃತಾಂ ವರಿಷ್ಠ ಸ್ಸುರಾಸುರಾಣಾಮಪಿ ಶೋಕ ದಾತಾ ।

---

—ಅಷ್ಟಚತ್ವಾರಿಂಶ ಸ್ಸರ್ಗಃ—

ಕಂದ ॥ ಅಕ್ಷಂಶಿಕ್ಷಿತನಾದಂ ರಾಕ್ಷಸ ನಾಕ್ಷಣಮೆ ನೊಂದ ನಿಂದ್ರವಿಜಯಿಗೆ ಪೇಳ್ದಂ ।
ರಕ್ಷೋವೈರಿಯ ನಿ ರಿಜುಲ । ಪೇಕ್ಷಿಸುತೈತರಲವಂಗೆ ದೊರೆದಂ ಹನುಮಂ ॥

ತತಃ - ತರುವಾಯ, ಮಹಾತ್ಮಾ - ಮಹಾ ಧೈರ್ಯಶಾಲಿಯಾದ, ಸಃ - ಆ, ರಕ್ಷೋಧಿಪತಿಃ - ರಾವಣನು, ಹನೂಮತಾ - ಆಂಜನೇಯನಿಂದ, ಅಕ್ಷೇ - ಅಕ್ಷನೆಂಬ, ಕುಮಾರೇ - ಪುತ್ರನು, ನಿಹತೇಸತಿ - ಕೊಲ್ಲಲ್ಪಡುತ್ತಿರಲಾಗಿ, ತದಾ - ಆಗ, ಮನಃ - ಮನಸ್ಸನ್ನು, ಸಮಾಧಾಯ - ಸಮಾಧಾನಪಡಿಸಿಕೊಂಡು, ಇಂದ್ರಕಲ್ಪಂ - ಇಂದ್ರನಿಗೆಣೆಯೆನಿಸಿದ, ಇಂದ್ರಜಿತಂ - ಇಂದ್ರಜಿತ್ತುವನ್ನು ಕುರಿತು, ಸರೋಷಂ - ರೋಷದೊಡನೆ, ಸಮಾದಿದೇಶ - ಆಜ್ಞಾಪಿಸಿದನು ॥೧॥ (ಹೇ ಪುತ್ರ - ಎಲೈ ಕುಮಾರನೆ) ತ್ವಂ - ನೀನು, ಪಿತಾಮಹಾರಾಧನಸಂಚಿತಾಸ್ತ್ರಃ - ಬ್ರಹ್ಮನನ್ನು ಪೂಜಿಸಿ ಪಡೆದ ಅಸ್ತ್ರವುಳ್ಳವನಾಗಿದ್ದೀಯೆ, (ಆದರಿಂದಲೇ) ಅಸ್ತ್ರವಿತ್ - ಬ್ರಹ್ಮಾಸ್ತ್ರವೇ ಮೊದಲಾದ ಅಸ್ತ್ರಗಳನ್ನು ಬಲ್ಲವನು, ಶಸ್ತ್ರವಿದಾಂ - ಆಯುಧಗಳನ್ನು ಬಲ್ಲವರೊಳಗೆ, ವರಿಷ್ಠಃ - ಶ್ರೇಷ್ಠನೆನಿಸಿದವನು, ಸೇಂದ್ರೇಷು - ಇಂದ್ರನಿಂದೊಡಗೂಡಿದ,

---

- ನಲವತ್ತೆಂಟನೆಯ ಸರ್ಗಂ -

ತದನಂತರದಲ್ಲಿ ಮಹಾಧೀರನಾದ ರಾಕ್ಷಸೇಶ್ವರನು— ಅಕ್ಷಕುಮಾರನನ್ನು ಮಾರುತಿಯು ಇರಿದನು ಎಂಬ ಸಮಾಚಾರವನ್ನು ಕೇಳಿದನು. ಮನದೊಳುಂಟಾಗಿರುವ ತೀರಳವಾದ ಶೋಕವನ್ನು ಹೊರಗೆ ತೋರಲಿಲ್ಲ. ಅಂತರಂಗದಲ್ಲಿಯೇ ಅಡಗಿಸಿಕೊಂಡನು. ಅದುವರೆಗೆ ಆ ಸುದ್ದಿಯನ್ನು ಕೇಳಿ, ತಮ್ಮನು ಮಡಿದುದರಿಂದ ರೋಷದೊಡನೆ ಕುಳಿತಿರುವ ತನ್ನ ಹಿರಿಯ ಮಗನಾದ ಇಂದ್ರಜಿತುವಿನ ಮುಖವನ್ನು ನೋಡಿದನು. ರೌದ್ರಾವೇಶದೊಡನೆ ಇಂತೆಂದನು. ॥೧॥ ಎಲೈ ಇಂದ್ರಾರಿಯೆ! ನೀನು ಸಮಂತ್ರಕವಾದ ಎಲ್ಲ ಅಸ್ತ್ರವನ್ನೂ ಬಲ್ಲವನಾಗಿದ್ದೀಯೆ, ಅದರಿಂದಲೇ ಲೋಕದಲ್ಲಿ ಅಸ್ತ್ರ ವಿದ್ಯಾಪಾರಂಗತರೊಳಗೆ ಮೊದಲನೆಯವನೆಂಬ ಹೆಸರುವಾಸಿಯೂ ನಿನಗೆ ಬಂದಿದೆ, ಅಂತಹ ಶೂರನಾದುದರಿಂದಲೇ ದೇವಾಸುರರನ್ನೂ ಕಾಳಗದಲ್ಲಿ ಸೋಲಿಸಿ, ಅವರಿಗೆ ಶೋಕವನ್ನುಂಟುಮಾಡಿ

ಸಹೋದರಸ್ತೇ ದಯಿತಃ ಕುಮಾರೋಽಕ್ಷಶ್ಚ ಸೂದಿತಃ ।
ನಹಿ ತೇಷ್ವೇವ ಮೇ ಸಾರೋ ಯಸ್ತ್ವಯ್ಯರಿನಿಷೂದನ ॥೯॥
ಇದಂ ಹಿ ದೃಷ್ಟ್ವಾ ಮತಿಮನ್ಮಹದ್ಬಲಂ ಕಪೇಃ ಪ್ರಭಾವಂ ಚ ಪರಾಕ್ರಮಂ ಚ।
ತ್ವಮಾತ್ಮನಶ್ಚಾಪಿ ಸಮೀಕ್ಷ್ಯ ಸಾರಂ ಕುರುಷ್ವ ವೇಗಂ ಸ್ವಬಲಾನುರೂಪಂ ॥೧೦॥
ಬಲಾವಮರ್ದಸ್ತ್ವಯಿ ಸನ್ನಿಕೃಷ್ಟೇ ಯಥಾಗತೇ ಶಾಮ್ಯತಿ ಶಾಂತಶತ್ರೌ ।
ತಥಾ ಸಮೀಕ್ಷ್ಯಾತ್ಮಬಲಂ ಪರಂಚ ಸಮಾರಭಸ್ವಾಸ್ತ್ರವಿದಾಂ ವರಿಷ್ಠ ॥೧೧॥

---

ನನಗೆ, ಯಃ - ಯಾವ, ಸಾರಃ - ಜಯದ ನಂಬಿಕೆಯು, (ಅಸ್ತಿ - ಉಂಟೋ, ಸಃ - ಅಂತಹ ನಂಬುಗೆಯು) ತೇಷು - ಅವರಲ್ಲಿ, ನಾಸ್ತ್ಯೇವಹಿ - ಇಲ್ಲವೇ ಇಲ್ಲ, ॥೭,೮,೯॥

ಇದಂ - ಇಷ್ಟು ಅನರ್ಥವನ್ನೂ, ಮತಿಮತ್ - ಉತ್ತಮ ಬುದ್ಧಿಯುಳ್ಳ, ಮಹತ್ - ದೊಡ್ಡದಾದ, ಕಪೇಃ - ವಾನರನ, ಬಲಂ - ದೇಹಬಲವನ್ನೂ, ಪ್ರಭಾವಂಚ - ಮಹಿಮೆಯನ್ನೂ, ಪರಾಕ್ರಮಂಚ - ವೀರ್ಯವನ್ನೂ, ತ್ವಂ - ನೀನು, ದೃಷ್ಟ್ವಾ - ನೋಡಿ, ಆತ್ಮನಃ - ನಿನ್ನ, ಸಾರಂಚ - ಬಲವನ್ನೂ, ಸಮೀಕ್ಷ್ಯ - ಯೋಚಿಸಿ, ಸ್ವಬಲಾನುರೂಪಂ - ನಿನ್ನ ಶಕ್ತಿಗನುಸಾರವಾದ, ವೇಗಂ - ಯುದ್ಧಪ್ರವೃತ್ತಿಯ ಜಾಗ್ರತೆಯನ್ನು, ಕುರುಷ್ವ - ಮಾಡು, ॥೧೦॥ ಅಸ್ತ್ರವಿದಾಂ - ಅಸ್ತ್ರಶಾಸ್ತ್ರವನ್ನು ಬಲ್ಲವರೊಳಗೆ, ವರಿಷ್ಠ - ಶ್ರೇಷ್ಠನಾದ ಇಂದ್ರಜಿತ್ತುವೇ! ಶಾಂತಶತ್ರೌ - (ಶಮಿತಶತ್ರೌ) - ಅಡಗಿಸಲ್ಪಟ್ಟ ಹಗೆಗಳುಳ್ಳ, ತ್ವಯಿ - ನೀನು, ಗತೇ - ಇಲ್ಲಿಂದ ಹೊರಟು ಹೋದವನಾಗಿ, ಸನ್ನಿಕೃಷ್ಟೇ (ಸತಿ) ಹಗೆಗೆ ಸಮೀಪಸ್ಥನಾಗುತ್ತಿರಲಾಗಿ, ಬಲಾವಮರ್ದಃ - ಸೇನಾನಾಶವು, ಯಥಾ - ಹೇಗೆ, ಶಾಮ್ಯತಿ - ಇಲ್ಲದೆ ಹೋಗತ್ತದೋ, ತಥಾ - ಆ ಪ್ರಕಾರವಾಗಿ, ಆತ್ಮಬಲಂ - ನಿನ್ನ ಬಲವನ್ನೂ, ಪರಂಚ - ಮತ್ತು ಹಗೆಯ ಬಲವನ್ನು, ಸಮೀಕ್ಷ್ಯ - ಚೆನ್ನಾಗಿ ವಿಚಾರಿಸಿ, ಸಮಾರಭಸ್ವ - ಮುಂದಿನ ಕಾರ್ಯವನ್ನು ಆರಂಭಿಸು॥೧೧॥

---

ಯುದ್ಧಭೂಮಿಯಲ್ಲಿ ನಿನ್ನಿಂದ ಜಯಲಾಭದ ನಂಬುಗೆ ಯಿರುವಹಾಗೆ ನನಗೆ ಅವರಲ್ಲಿಇಲ್ಲ. ನಿನ್ನ ಬುದ್ಧಿಬಲಪೌರುಷಗಳು ಅವರೊಳಗೆಲ್ಲಿ ಬಂದಾವು ? ॥೭,೮,೯॥ ಒಬ್ಬ ವಾನರನು- ಕಿಂಕರರು ಮೊದಲ್ಗೊಂಡು ಅಕ್ಷಕುಮಾರನವರೆಗೂ ಇದ್ದ ಸಮಸ್ತ ರಾಕ್ಷಸವೀರರನ್ನೂ ಇರಿದುರುಳಿಸಿದನು, ಸಕಲಪರಿವಾರವೂ ಬಯಲಾಯಿತು, ಆ ಕೋಡಗನ ಈ ಸಾಹಸಕಾರ್ಯವನ್ನು ನಿನ್ನ ಬುದ್ಧಿಯಲ್ಲಿ ಚೆನ್ನಾಗಿ ಯೋಚಿಸು, ಅಸಾಧಾರಣವಾದ ನಿನ್ನ ಬುದ್ಧಿಬಲಪ್ರಭಾವವನ್ನೂ ಚೆನ್ನಾಗಿ ಚಿಂತಿಸು, ಇವುಗಳ ತಾರತಮ್ಯವನ್ನು ಮನದೊಳಗೆ ಚೆನ್ನಾಗಿ ವಿಚಾರಮಾಡಿ ತರುವಾಯ ನಿನ್ನ ಬುದ್ಧಿಬಲಕ್ಕೆ ತಕ್ಕ ಕೆಲಸವನ್ನು ಮಾಡು. ॥೧೦॥ ಹಗೆಗಳನ್ನಡಗಿಸುವ ಪೌರುಷವುಳ್ಳ ನೀನು- ರಣರಂಗದಲ್ಲಿ ವೈರಿಯ ಇದಿರಿಗೆ ಹೋಗಿ ಅವನೊಡನೆ ಕಲೆತರೆ, ನಮ್ಮ ಬಲಕ್ಕೆ ಉಂಟಾಗಿದ್ದ ಸಂಕಟವು ಇನ್ನುಮೇಲಾದರೂ ಸ್ವಲ್ಪ ತಗ್ಗಬೇಕು. ಹಗೆಗಳನ್ನಡಗಿಸತಕ್ಕನೀನು ಬಹು ಬಲವನ್ನು ನಾಶಗೊಳಿಸಿದ ಆ ಕಪಿಯ ಬಲವನ್ನು ವಿಚಾರಮಾಡಿನೋಡಿ, ಪರಬಲವು ಹೇಗೆ ಅಡಗಬಹುದೋ ಹಾಗೆ ಮುಂದಿನ ಪ್ರಯತ್ನವನ್ನು ಮಾಡು, ಶಸ್ತ್ರಶಾಸ್ತ್ರವಿದರಾದವರೊಳಗೆ ನೀನು ಅಗ್ರಗಣ್ಯನಾಗಿದ್ದೀಯೆ. ॥೧೧॥ ಎಲೈ ವೀರಕುಮಾರನೇ ! ನಮ್ಮ ಬಲವು- ಇದುವರೆಗೆ ಗುಂಪುಗುಂಪಾಗಿ

ನ ವೀರ ಸೇನಾ ಗಣಶೋಚ್ಯವಂತಿ ನ ವಜ್ರ ಮಾದಾಯ ವಿಶಾಲ ಸಾರಂ ।
ನ ಮಾರುತಸ್ಯಾಸ್ಯ ಗತೇಃ ಪ್ರಮಾಣಂ ನ ಚಾಗ್ನಿಕಲ್ಪಃ ಕರಣೇನ ಹಂತುಮ್॥೧೩॥
ತಮೇವ ಮರ್ಥಂ ಪ್ರಸಮೀಕ್ಷ್ಯ ಸಮ್ಯಕ್ ಸ್ವಕರ್ಮ ಸಾಮ್ಯಾದ್ಧಿ ಸಮಾಹಿತಾತ್ಮಾ !

ಹೇವೀರ – ಎಲೈ ಶೂರನೆ ! ಗಣಶೋಚಿ - ಸೇನೆಗಳನ್ನು ದುಃಖಗೊಳಿಸುವ ವಾನರನ ವಿಷಯವಾಗಿ, ಸೇನಾಃ – ಸೇನೆಗಳು, ನಾವಂತಿ - ಹೆರರನ್ನು ರಕ್ಷಿಸಲಾರವು (ತಮ್ಮನ್ನು ರಕ್ಷಿಸಿಕೊಳ್ಳಲಾರವು) ಅಲಸಾರಂ- ಹನುಮಂತನ ವಿಷಯವಾಗಿ ಅಸಾರವಾಗಿರುವ, ವಜ್ರಂ – ವಜ್ರಾಯುಧವನ್ನು, ಆದಾಯ - ತೆಗೆದುಕೊಂಡು, ತತ್ಸಮೀಪಂ – ಆ ವಾನರನ ಸಮೀಪವನ್ನು ಕುರಿತು, ನವಿಶ – ಪ್ರವೇಶಿಸಬೇಡ. ಮಾರುತಸ್ಯ- ವಾಯುಪುತ್ರನಾದ, ಅಸ್ಯ – ಈವಾನರನ, ಗತೇಃ – ಶತ್ರುವನ್ನು ಆಕ್ರಮಿಸುವವೇಗದ, ಪ್ರಮಾಣಂ – ಅಳತೆಯು, ನ - ಇಲ್ಲ, ಅಥವಾ-ಅಸ್ಯ - ಈ ಹನುಮಂತನ, ಗತೇಃ - ಗಮನದ, ಪ್ರಮಾಣಂ – ಅಳತೆಯು, ಮಾರುತಸ್ಯ - ವಾಯುವಿಗೂ, ನ - ಇಲ್ಲ, ಅಗ್ನಿಕಲ್ಪಃ – ಅಗ್ನಿಗೆಣೆಯೆನಿಸಿದ ವಾನರನು, ಕರಣೇನ, ಆಯುಧರೂಪವಾದ ಸಾಧನದಿಂದ, ಹಂತುಂ - ಕೊಲ್ಲಲಿಕ್ಕೆ, ನಶಕ್ಯಃ - ಸಾಧ್ಯನಲ್ಲ, ಅಥವಾ ವೀರ – ಎಲೈ ಶೂರನೆ ! ಸೇನಾಃ - ಸೇನೆಗಳು, ಗಣಶಃ – ಗುಂಪುಗುಂಪಾಗಿ, ನಚ್ಯವಂತಿಇತಿನ – ನಾಶವಾಗದೆ ಇಲ್ಲ, ಅಸ್ಯ - ಇವನ, ಗತೇಃ – ಯುದ್ಧವೇಗದ, ಪ್ರಮಾಣಂ – ಇಯತ್ತೆಯು, ಮಾರುತಸ್ಯ - ವಾಯುವಿಗೂ, ನ – ಇಲ್ಲ, ವಿಶಾಲಸಾರಂ – ಅಪಾರವಾದ ಶಕ್ತಿಯುಳ್ಳ, ವಜ್ರಂ – ವಜ್ರಾಯುಧವನ್ನು, ಆದಾಯ - ತೆಗೆದುಕೊಂಡರೂ, ನ - ಸಾಧ್ಯನಲ್ಲ, ಅಗ್ನಿಕಲ್ಪಃ – ಅಗ್ನಿಸದೃಶನಾದ ಆ ಕೋಡಗನು, ಕರಣೇನ - ಕಪಟಯುದ್ಧದಿಂದ, ಹನ್ತುಂಚ - ಕೊಲ್ಲಲಿಕ್ಕೂ, ನ - ಸಾಧ್ಯನಲ್ಲ, ಅಥವಾ-ವೀರಸೇನಾಃ- ಮಹಾಶೂರರ ಗುಂಪುಗಳೂ, ಗಣಶಃ – ಸಂಘಸಂಘವಾಗಿ, ನಚ್ಯವಂತೀತಿನ – ನಾಶವಾಗದೆ ಇಲ್ಲ (ಅತಃ- ಆದಕಾರಣ) ಅಲಸಾರಂ – ಅಧಿಕ ಬಲವುಳ್ಳವನಾದಕಾರಣವೇ, ವಜ್ರಂ - ವಜ್ರದಂತೆ ಮಹಾಬಲಶಾಲಿಯಾದ ಈ ವಾನರನನ್ನು, ಆದಾಯ – ಜೀವಸಹಿತ ಹಿಡಿದು, ವಿಶ – ಈನಗರವನ್ನು ಪ್ರವೇಶಿಸು, ಅಸ್ಯ- ಈ ಕಪಿಯು, ಗತೇಃ ಯುದ್ಧವೇಗದ, ಪ್ರಮಾಣಂ – ಪರಿಮಿತಿಯು, ಮಾರುತಸ್ಯ - ವಾಯುವಿಗೂ, ನ – ಇಲ್ಲ, (ಅತಃ - ಆದಕಾರಣ) ಅಗ್ನಿಕಲ್ಪಃ – ಅಗ್ನಿಯಂತೆ ಮಹಾ ತೇಜಸ್ವಿಯಾದ ಈ ವಾನರನು, ಕರಣೇನಚ - ಅಸ್ತ್ರಶಸ್ತ್ರ ಮೊದಲಾದುದರಿಂದ, ಹನ್ತುಂ - ಕೊಲ್ಲಲಿಕ್ಕೆ, ನಶಕ್ಯಃ – ಸಾಧ್ಯನಲ್ಲ, ॥೧೩॥

ಹೋದಾಗಲೆಲ್ಲ ಅದಕ್ಕೆ ದುಃಖವನ್ನು ಕಲ್ಪಿಸಿ ಇದಾನೆ.ಆದುದರಿಂದ ಅಂಥವನ ವಿಷಯದಲ್ಲಿ ನಮ್ಮ ಸೇನೆಯು ನಿನಗೆ ಬೆಂಬಲವೆನಿಸಲಾರದು. ಅಷ್ಟು ಅಪಾರವಾದ ಬಲವುಳ್ಳ ಕಪಿಯ ಮೇಲೆ ಪ್ರಬಲವಾದ ಸಾರವುಳ್ಳ ವಜ್ರಾಯುಧವನ್ನು ಪ್ರಯೋಗಿಸಿದರೂ ಉಪಯೋಗವಿಲ್ಲದಂತೆ ತೋರುತ್ತದೆ. ಆ ವಾನರನು ವಾಯುನಂದನನಂತೆ, ಈ ಕಪಿಯ ಪೌರುಷದ ಪರಿಮಾಣವು ಆತನ ತಂದೆಯಾದ ಮಾರುತನಿಗೂ ಇಲ್ಲವೆಂದು ಕಾಣುತ್ತದೆ. ಆ ಹರಿಯು ಅಗ್ನಿಯಂತೆ ಮಹಾ ತೇಜಸ್ವಿಯಾಗಿರುವುದರಿಂದ ಸಾಧಾರಣವಾದ ಆಯುಧಗಳಿಂದ ಯುದ್ಧದಲ್ಲಿ ಕೊಲ್ಲಲಿಕ್ಕೆ ಸಾಧ್ಯನಲ್ಲ. ಆದಕಾರಣ ನಿನ್ನ ಆಳ್ವಿಕೆಗೆ ಒಳಪಟ್ಟ, ಬಹು ಪ್ರಬಲರಾದ ರಾಕ್ಷಸರ ಪಡೆಯನ್ನು ಸಂಗಡ ಕರೆದೊಯ್ದರೆ, ನಿನಗೆ ಅನುಕೂಲವಾಗದೆ ಇರಲಾರದು, ಬಳಿಕ ವಜ್ರದಂತೆ ಬಹು ದೃಢಕಾಯನಾದ ಆ ಕಪಿಯನ್ನು ನೀನು ಹಿಡಿದು ಈ ನಗರದೊಳಗೆಬರಬೇಕು. ಮಾರುತನಿಗೂ ಅಗ್ನಿಗೂ ಇಮ್ಮಡಿಯಾದ ಬಲತೇಜಗಳನು

ಸ್ಮರಂಶ್ಚ ದಿವ್ಯಂ ಧನುಷೋಽಸ್ತ್ರವೀರ್ಯಂ ವ್ರಜಾಽಕ್ಷತಂ ಕರ್ಮ ಸಮಾರಭಸ್ವ ॥೧೩॥
ನ ಖಲ್ವಿಯಂ ಮತಿಶ್ಶ್ರೇಷ್ಠಾ ಯತ್ತ್ವಾಂ ಸಂಪ್ರೇಷಯಾಮ್ಯಹಂ ।
ಇಯಂ ಚ ರಾಜಧರ್ಮಾಣಾಂ ಕ್ಷತ್ರಸ್ಯ ಚ ಮತಿರ್ಮತಾ ॥೧೪॥
ನಾನಾಶಸ್ತ್ರೈಶ್ಚ ಸಂಗ್ರಾಮೆ ವೈಶಾರದ್ಯಮರಿಂದಮ ।
ಅವಶ್ಯಮೇವ ಯೋದ್ಧವ್ಯಂ ಕಾಮ್ಯಶ್ಚ ವಿಜಯೋರಣೆ ॥೧೫॥

---

ತಂ - ಆ, ಅರ್ಥಮೇವ - ಅರ್ಥವನ್ನೇ, ಸಮ್ಯಕ್ - ಚೆನ್ನಾಗಿ, ಸಮೀಕ್ಷ್ಯ - ಚಿಂತಿಸಿ, ಸ್ವಕಾರ್ಯಸಾಮ್ಯಾತ್ - ನಿನ್ನ ಕಾರ್ಯಸಿದ್ಧಿಯ ಹೋಲಿಕೆಯಿಂದ, ಸಮಾಹಿತಾತ್ಮಾ - ಸ್ಥಿರಚಿತ್ತನಾಗಿ, ದಿವ್ಯಂ - ಉತ್ತಮವಾದ, ಧನುಷಃ - ಧನುಸ್ಸಿನ, ಅಸ್ತ್ರವೀರ್ಯಂ - ಅಸ್ತ್ರಸಾರವನ್ನು, ಸ್ಮರಂಶ್ಚ - ಯೋಚಿಸುತ್ತಾ - ವ್ರಜ - ಹೊರಡು, ಅಕ್ಷತಂ - ಭಂಗವಿಲ್ಲದ, ಕರ್ಮ - ಕೆಲಸವನ್ನು, ಸಮಾರಭಸ್ವ - ಆರಂಭಿಸು ॥೧೩॥ ಅಹಂ - ನಾನು, ತ್ವಾಂ - ನಿನ್ನನ್ನು, ಸಂಪ್ರೇಷಯಾಮಿ - ಕಳುಹಿಸುವೆನು, ಇಯಂ - ಹೀಗೆ ನಿನ್ನನ್ನು ಕಳುಹಿಸುವ, ಮತಿಃ - ಬುದ್ಧಿಯು, ಶ್ರೇಷ್ಠಾ - ಉತ್ತಮವೆನಿಸುವುದು, ನಖಲು - ಖಂಡಿತವಾಗಿಯೂ ಅಲ್ಲ, ಇಯಂ - ಈ ನಿನ್ನನ್ನು ಕಳುಹುವ, ಮತಿಶ್ಚ - ಬುದ್ಧಿಯಾದರೋ, ರಾಜಧರ್ಮಾಣಾಂ - ರಾಜನೀತಿ ಧರ್ಮಗಳಿಗೂ, ಕ್ಷತ್ರಸ್ಯಚ - ಕ್ಷತ್ರಧರ್ಮವನ್ನು ಅನುಸರಿಸುವ ಕ್ಷತ್ರಿಯನಿಗೂ, ಮತಾ - ತಕ್ಕುದೆನಿಸಿದೆ ॥೧೪॥ ಅರಿಂದಮ - ಎಲೈ ಶತ್ರುಸಂಹಾರಕನೇ ?, ಸಂಗ್ರಾಮೆ - ಯುದ್ಧದಲ್ಲಿ, ನಾನಾಶಸ್ತ್ರೈಃ - ಬಗೆಬಗೆಯ ಆಯುಧಗಳಿಂದ, ವೈಶಾರದ್ಯಂ - ಯುದ್ಧಸಾಮರ್ಥ್ಯವು, (ತವ - ನನಗೆ, ಅಸ್ತಿ - ಉಂಟು, ಅತಃ - ಆದಕಾರಣ) ಅವಶ್ಯಮೇವ - ಮುಖ್ಯವಾಗಿಯೂ, ತ್ವಯಾ - ನಿನ್ನಿಂದ, ಯೋದ್ಧವ್ಯಂ - ಯುದ್ಧಮಾಡತಕ್ಕುದು, ರಣೆ - ಯುದ್ಧದಲ್ಲಿ, ವಿಜಯಶ್ಚ - ಜಯವೂ, ಕಾಮ್ಯಃ - ಬಯಸತಕ್ಕುದು,॥೧೫॥

---

ಬಳಗೊಂಡಿರುವ ಆ ಹರಿಯನ್ನು ಕಪಟ ಯುದ್ಧದಲ್ಲಿ ಜಯಿಸಲಾಗುವುದಿಲ್ಲ ಅದರಿಂದ ಬಹಳ ಎಚ್ಚರದಿಂದ ತೆರಳು ॥೧೨॥ ಎಲೈ ಇಂದ್ರಶತ್ರುವೇ ! ನಾನು ಹೇಳಿದ ಸಂಗತಿಯನ್ನೆಲ್ಲ ಚೆನ್ನಾಗಿ ವಿಚಾರಮಾಡಿ, ನೀನು ನಡೆಸುವ ಯುದ್ಧವ್ಯಾಪಾರವನ್ನು ಅನುಸರಿಸಿ ಸರಿಯಾದ ಎಚ್ಚರಿಕೆಯುಳ್ಳವನಾಗಿ, ನಿನಗೆ ತಿಳಿದಿರುವ ಯಾವಯಾವ ಅಸ್ತ್ರಗಳುಂಟೋ ಅವುಗಳ ಸಾರಾಸಾರಗಳನ್ನೆಲ್ಲ ವಿಚಾರಮಾಡಿ,ಮಂತ್ರಾಸ್ತ್ರಗಳ ಪ್ರಯೋಗೋಪಸಂಹಾರಗಳ ಮಂತ್ರಗಳನ್ನೆಲ್ಲ ಮುಂದಾಗಿ ಸ್ಮರಿಸಿಕೊಂಡು, ಮುಂದೆ ಜಯಸಿದ್ಧಿಗೆ ಕುಂದುಬಾರದಂತೆ ಮುಂದಿನ ಕೆಲಸವನ್ನು ಆರಂಭಿಸು, ನಿನಗೆ ಮೇಲಾಗಲಿ ಹೋಗಿ ಬಾ ॥ ೧೩ ॥ ಆದರೆ - ಎಲೈ ವರಕುಮಾರನೆ ! ನಾನು ಜೀವಂತನಾಗಿ, ಯುದ್ಧವಿಶಾರದನೆನಿಸಿಕೊಂಡು, ಯುದ್ಧರಂಗಕ್ಕೆ ನಾನೇ ಹೋಗದೆ, ನನ್ನ ಕಣ್ಣೆದುರಿಗೆ ನಿನ್ನನ್ನು ಕಳುಹಿಸುವುದು ಸರ್ವಾತ್ಮನಾ ಧರ್ಮವಲ್ಲ. ಇದರಿಂದ ನನ್ನ ಬುದ್ಧಿಯನ್ನು ಉತ್ತಮವಾದುದೆಂದು ಹೇಳಲಿಕ್ಕಾಗದು, ಆದರೂ ಯತ್ನವಿಲ್ಲ, ಏಕೆ ಎಂಬೆಯೋ ? ರಾಜನೀತಿಯನ್ನು ವಿಚಾರಮಾಡ ಹೋದರೆ "ಯುದ್ಧವಿಶಾರದರಾದ ಪರಿವಾರದವರಿಷ್ಟಿದ್ದರೂ ರಾಜನೇ ಬವರಕ್ಕೆ ತೆರಳಿದನು ,, ಎಂದು ಅಪಖ್ಯಾತಿ ಬರುವುದು. ಅದರಿಂದ ನಿನ್ನನ್ನು ಕಳುಹಿಸಬೇಕಾಗಿದೆ. ರಾಜನೀತಿಯನ್ನು ಅನುಸರಿಸಿರುವ ವೀರ ಕ್ಷತ್ರಿಯರಿಗೂ ಇದೇ ಸಮಯಾಚಾರವಾಗಿರುವುದು ॥ ೧೪ ॥ ಎಲೈ ಶತ್ರುಸಂಹಾರಕನೆ ! ನೀನು ಸಂಗ್ರಾಮವನ್ನು ಹೊಕ್ಕು, ಬಗೆಬಗೆಯಾದ ಅಸ್ತ್ರಶಸ್ತ್ರಗಳೆನ್ನೆಲ್ಲ

ತತಃ ಪಿತು ಸ್ತದ್ವಚನಂ ನಿಶಮ್ಯ ಪ್ರದಕ್ಷಿಣಾಂ ದಕ್ಷ ಸುತ ಪ್ರಭಾವಃ ।
ಚಕಾರ ಭರ್ತಾರ ಮದೀನಸತ್ತ್ವೋ ರಣಾಯ ವೀರಃ ಪ್ರತಿಪನ್ನ ಬುದ್ಧಿಃ ॥೧೬॥
ತತ ಸ್ತೈಸ್ಸ್ವಗಣೈ ರಿಷ್ಟೈ ರಿಂದ್ರಜಿ ತ್ಪ್ರತಿಪೂಜಿತಃ ।
ಯುದ್ಧೋದ್ಧತಃ ಕೃತೋತ್ಸಾಹ ಸ್ಸಂಗ್ರಾಮಂ ಪ್ರತ್ಯಪದ್ಯತ ॥೧೭॥
ಶ್ರೀಮಾ ನ್ಪದ್ಮ ಪಲಾಶಾಕ್ಷೋ ರಾಕ್ಷಸಾಧಿಪತೇ ಸ್ಸುತಃ ।
ನಿರ್ಜಗಾಮ ಮಹಾತೇಜಾ ಸ್ಸಮುದ್ರ ಇವ ಪರ್ವಸು ॥೧೮॥

---

ತತಃ - ಆ ಹಿಂದೆ, ದಕ್ಷಸುತಪ್ರಭಾವಃ - ದೇವತೆಗಳಿಗೆಣೆಯಾದ ಪ್ರತಾಪವುಳ್ಳ, ಅದೀನಸತ್ತ್ವಃ - ಅಧಿಕ ಬಲವುಳ್ಳ, ವೀರಃ - ಶೂರನಾದ ಇಂದ್ರಜಿತ್ತು, ಪಿತುಃ - ತಂದೆಯ, ತತ್ - ಆ, ವಚನಂ - ಮಾತನ್ನು, ನಿಶಮ್ಯ - ಕೇಳಿ. ರಣಾಯ - ಯುದ್ಧಕ್ಕೋಸ್ಕರ, ಪ್ರತಿಪನ್ನಬುದ್ಧಿಃ - ಸಮ್ಮತಿಪಟ್ಟ ಬುದ್ಧಿಯುಳ್ಳವನಾಗಿ, ಭರ್ತಾರಂ - ರಾಕ್ಷಸರಾಜನಾದ ರಾವಣನನ್ನು ಕುರಿತು, ಚಕಾರ - ಮಾಡಿದನು ॥೧೬॥ ತತಃ - ಆಮೇಲೆ, ಯುದ್ಧೋದ್ಧತಃ - ಕಾಳಗಕ್ಕಾಗಿ ಉಬ್ಬಿದ, ಇಂದ್ರಜಿತ್ - ಇಂದ್ರಜಿತ್ತಾದರೆ, ಇಷ್ಟೈಃ - ಪ್ರೀತಿಪಾತ್ರರಾದ, ತೈಃ - ಆ, ಸ್ವಗಣೈಃ - ಸ್ವಜನರಿಂದ, ಪ್ರತಿಪೂಜಿತಃ - ಗೌರವಿಸಲ್ಪಟ್ಟವನಾಗಿ. ಕೃತೋತ್ಸಾಹಃ - ಪ್ರೋತ್ಸಾಹಗೊಳಿಸಲ್ಪಟ್ಟವನಾಗುತ್ತಾ, ಸಂಗ್ರಾಮಂ - ಯುದ್ಧರಂಗವನ್ನು ಕುರಿತು, ಪ್ರತ್ಯಪದ್ಯತ - ಪ್ರಯಾಣ ಮಾಡಿದನು (ಹೊಂದಿದನು) ॥೧೭॥ ಶ್ರೀಮಾನ್- ವಿಕ್ರಮ ಸಂಪತ್ತುಳ್ಳ, ಪದ್ಮ ಪಲಾಶಾಕ್ಷಃ - ತಾವರೆಯ ಎಸಳಿನಂತೆ ಕಣ್ಣುಳ್ಳ, ಮಹಾತೇಜಾಃ - ಹೇರಳವಾದ ತೇಜಸ್ಸುಳ್ಳ, ರಾಕ್ಷಸಾಧಿಪತೇಃ - ರಾಕ್ಷಸರಾಜನ, ಸುತಃ - ಪುತ್ರನಾದ ಇಂದ್ರಜಿತ್ತು, ಪರ್ವಸು - ಪೌರ್ಣಿಮಾವಾಸ್ಯಾದಿ ಪರ್ವಕಾಲಗಳಲ್ಲಿ, ಸಮುದ್ರಃಇವ - ಕಡಲಿನಂತೆ, ನಿರ್ಜಗಾಮ - ಉಬ್ಬಿ ಹೊರಟನು ॥೧೮॥ ಇಂದ್ರಕಲ್ಪಃ- ಇಂದ್ರನಿಗೆಣೆಯೆನಿಸಿದ, ಸಃ - ಆ, ಇಂದ್ರಜಿತ್ - ಇಂದ್ರಜಿತ್ತು, ಪಕ್ಷಿರಾಜೋಪಮ ತುಲ್ಯವೇಗೈಃ - ಗರುತ್ಮಂತನಿಗೆಣೆಯಾದ ಪರಸ್ಪರ ಸದೃಶ ವೇಗವುಳ್ಳ, ಸಿತತೀಕ್ಷ್ಣದಂಷ್ಟ್ರೈಃ-ಬೆಳ್ಳಗೂ ಮೊನೆಯಾಗಿಯೂ

---

ವಿನಿಯೋಗಿಸಿ, ನಿನ್ನ ಸಾಮರ್ಥ್ಯವನ್ನೆಲ್ಲ ವ್ಯಕ್ತಗೊಳಿಸಿ, ಬಹು ಪ್ರೌಢಿಮೆಯಿಂದ ಯುದ್ಧವನ್ನು ಮಾಡಬೇಕು. ವಿಜಯಲಕ್ಷ್ಮಿಯೊಡನೆ ಹಿಂದಿರುಗಬೇಕು ॥೧೫॥ ಎಂದೀ ಪ್ರಕಾರ ಆಜ್ಞಾಪಿಸಿದ ತಂದೆಯ ವಚನವನ್ನು ಆಲಿಸಿ, ದೇವತೆಗಳಿಗೆಣೆಯಾದ ಪೌರುಷವುಳ್ಳ ಇಂದ್ರಜಿತುವು - ಗಂಭೀರವಾದ ಸ್ವಭಾವವುಳ್ಳವನಾದಕಾರಣವೇ, ಧಿರತೆಯಿಂದ ಯುದ್ಧಕ್ಕೆ ತೆರಳಲು ಬಪ್ಪಿ, ರಾಕ್ಷಸ ಸಾರ್ವಭೌಮನೂ ತಂದೆಯೂ ಆಗಿರುವ ರಾವಣನಿಗೆ ಬಲವಂದು, ಅಭಿವಂದಿಸಿ, ಪ್ರಯಾಣ ಸನ್ನದ್ಧನಾದನು ॥೧೬॥ ಆಗ - ಇಂದ್ರಜಿತುವಿಗೆ ಇಷ್ಟಮಿತ್ರರೂ, ಬಂಧುಬಳಗದವರೂ, ಪರಿಜನರೂ-ಪ್ರಯಾಣೋದ್ಯುಕ್ತನಾದ ಆತನನ್ನು ಬಹಳವಾದ ಸತ್ಕಾರಗಳಿಂದ ಗೌರವಿಸಿದರು. ಬಳಿಕ ಪುರುಹೂತ ವೈರಿಯು - ಯುದ್ಧಮಾಡಲು ಬಹು ಕುತೂಹಲವುಳ್ಳವನಾಗಿ ರಣರಂಗವನ್ನು ಕುರಿತು ಹೊರಟನು ॥೧೭॥ ಕೋಶದಂಡ ಸಹಾಯದ ತೇಜಸ್ಸು ಉಕ್ಕುಳಿಸುತಲಿದೆ, ಅರಳಿದ ತಾವರೆಯಂತೆ ಕಣ್ಣುಗಳ ಕಾಂತಿಯು ಬೆಳಗುತಲಿದೆ. ಮಹೋತ್ಸಾಹ ಸಂಪನ್ನನಾಗಿದಾನೆ. ದಶಕಂಧರ ತನಯನು - ಇಷ್ಟು ವೈಭವದಿಂದೊಡಗೂಡಿ, ಪೂರ್ಣಿಮೆ ಮೊದಲಾದ ಸಮಯದಲ್ಲಿ ಕಡಲು ಉಕ್ಕಿಬರುವ ಹಾಗೆ, ಉತ್ಸಾಹದಿಂದ ಉಬ್ಬುತ್ತಾ ಹೊರಟನು॥೧೮॥ ಮಹೇಂದ್ರನಿಗೆ ಸಮಾನವಾದ

ಸ ಪಕ್ಷಿರಾಜೋಪಮ ತುಲ್ಯವೇಗೈ ರ್ವ್ಯಾಳೈ ಶ್ಚತುರ್ಭಿಸ್ಸಿತತೀಕ್ಷ್ಣದಂಷ್ಟ್ರೈಃ।
ರಥಂ ಸಮಾಯುಕ್ತ ಮಸಂಗ ವೇಗಂ ಸಮಾರು ರೋಹೇಂದ್ರ ಜಿದಿಂದ್ರಕಲ್ಪಃ॥೧೯॥
ಸ ರಥೀ ಧನ್ವಿನಾಂ ಶ್ರೇಷ್ಠ ಶ್ಶಸ್ತ್ರಜ್ಞೋಽಸ್ತ್ರ ವಿದಾಂವರಃ।
ರಥೇ ನಾಭಿ ಯಯೌ ಕ್ಷಿಪ್ರಂ ಹನೂಮಾ ನ್ಯತ್ರ ಸೋಽಭವತ್॥೨೦॥
ಸ ತಸ್ಯ ರಥನಿರ್ಘೋಷಂ ಜ್ಯಾಸ್ವನಂ ಕಾರ್ಮುಕಸ್ಯ ಚ।
ನಿಶಮ್ಯ ಹರಿ ವೀರೋಽಸೌ ಸಂಪ್ರಹೃಷ್ಟ ತರೋಽಭವತ್॥೨೧॥
ಸುಮಹ ಚ್ಚಾಪ ಮಾದಾಯ ಶಿತ ಶಲ್ಯಾಂಶ್ಚ ಸಾಯಕಾನ್।

---

ಇರುವ ಕೋರೆಹಲ್ಲುಳ್ಳ, ಚತುರ್ಭಿಃ - ನಾಲ್ಕಾದ, ವ್ಯಾಳೈಃ - ಕ್ರೂರವಾದಗಜಗಳಿಂದ (ಘಾತುಕ ಜಂತುಗಳಿಂದ, ಸಿಂಹಗಳಿಂದ) ಸಮಾಯುಕ್ತಂ - ಕಟ್ಟಲ್ಪಟ್ಟಿರುವುದಾದಕಾರಣವೇ, ಅಸಂಗವೇಗಂ ಅಡ್ಡಿಯಿಲ್ಲದ ವೇಗವುಳ್ಳ, ರಥಂ-ರಥವನ್ನು, ಸಮಾರುರೋಹ-ಏರಿದನು ॥೧೯॥ ರಥೀ - ರಥಿಕನಾಗಿಯೂ, ಧನ್ವಿನಾಂ - ಧನುರ್ಧಾರಿಗಳೊಳಗೆ, ಶ್ರೇಷ್ಠಃ-ಶ್ರೇಷ್ಠನೆನಿಸಿದವನೂ, ಶಾಸ್ತ್ರಜ್ಞಃ - ಆಯುಧಪ್ರಯೋಗವನ್ನು ಬಲ್ಲವನೂ, ಅಸ್ತ್ರವಿದಾಂ - ಅಸ್ತ್ರವಿದ್ಯೆಯನ್ನು ಬಲ್ಲವರೊಳಗೆ, ವರಃ - ಶ್ರೇಷ್ಠನೆನಿಸಿದವನೂ ಆಗಿರುವ, ಸಃ - ಆ ಇಂದ್ರಜಿತ್ತು, ಸಃ - ಆ, ಹನುಮಾನ್ - ಆಂಜನೇಯನು. ಯತ್ರ - ಯಾವಸ್ಥಲದಲ್ಲಿ, , ಅಭವತ್ - ಇದ್ದನೋ, (ತತ್ರ - ಅಲ್ಲಿ) ರಥೇನ - ರಥದಿಂದ, ಕ್ಷಿಪ್ರಂ - ಬೇಗನೆ, ಅಭಿಯಯೌ - ಅಭಿಮುಖನಾಗಿ ಹೊರಟನು. ॥ ೨೦ ॥ ಸಃ - ಪೂರ್ವಪ್ರಸಿದ್ಧನಾದ, ಹರಿವೀರಃ - ವಾನರವೀರನಾದ, ಅಸೌ - ಈ ಹನುಮಂತನು, ತಸ್ಯ - ಆ ಇಂದ್ರಜಿತುವಿನ, ರಥನಿರ್ಘೋಷಂ - ರಥಧ್ವನಿಯನ್ನೂ, ಜ್ಯಾಸ್ವನಂ - ಮೌರ್ವಿಯ ಶಬ್ದವನ್ನೂ, ಕಾರ್ಮುಕಸ್ಯ - ಬಿಲ್ಲಿನ, (ಸ್ವನಂಚ - ಘೋಷವನ್ನೂ) ನಿಶಮ್ಯ - ಕೇಳಿ, ಸಂಪ್ರಹೃಷ್ಟತರಃ - ಹೇರಳವಾಗಿ ಹರ್ಷಗೊಂಡವನು, ಅಭವತ್ - ಆದನು ॥೨೧॥ ರಣಪಂಡಿತಃ - ಯುದ್ಧ ವಿಶಾರದನೆನಿಸಿದ ಇಂದ್ರಜಿತ್ತು, ಸುಮಹತ್-ಬಲುದೊಡ್ಡದಾದ, ಚಾಪಂ - ಬಿಲ್ಲನ್ನು, ಶಿತಶಲ್ಯಾನ್ - ಮೊನೆಯಾದ ಅಲಗುಗಳುಳ್ಳ, ಸಾಯಕಾಂಶ್ಚ - ಬಾಣಗಳನ್ನೂ, ಆದಾಯ - ತೆಗೆದುಕೊಂಡು, ಹನುಮಂತಂ - ಆಂಜನೇಯನನ್ನು, ಅಭಿಪ್ರೇತ್ಯ - ಕುರಿತು, ಜಗಾಮ -

---

ಪರಾಕ್ರಮದಿಂದ ಮೆರೆಯುತಲಿರುವ ಇಂದ್ರಜಿತುವು .... ಪಕ್ಷಿರಾಜನಾದ ಗರುಡನಿಗೆಣೆಯಾದ ವೇಗವುಳ್ಳವುಗಳಾಗಿಯೂ, ಬೆಳ್ಳಗೂ ಮೊನೆಯಾಗಿಯೂ ಇರುವ ಕೋರೆದಾಡೆಗಳುಳ್ಳುವಾಗಿಯೂ ಇರುವ ಘೋರವಾದ ನಾಲ್ಕು ಸಿಂಹಗಳನ್ನು ಹೂಡಿರತಕ್ಕ ಮತ್ತು-- ತಡೆಯಿಲ್ಲದ ವೇಗದಿಂದ ರಮಣೀಯವಾದ ತೇರನ್ನೇರಿದನು ॥೧೯॥ ಶಸ್ತ್ರಾಸ್ತ್ರಕೋವಿದರೊಳಗಗ್ರಗಣ್ಯನೂ, ಧನುರ್ಧರವರನೂ, ಮಹಾರಥನೂ ಆದ ಆ ಇಂದ್ರಜಿತುವು.... ಆಂಜನೇಯನು ನಿಂತಿದ್ದ ತೋರಣದ ಬಳಿಗೆ ರಥದಿಂದ ಪ್ರಯಾಣಮಾಡುತ ಬರುತ್ತಿದ್ದನು॥೨೦॥ ಹರಿವೀರನು.... ದೂರದಲ್ಲಿ ಬರುವ ಇಂದ್ರಜಿತುವಿನ ರಥದ ಗಂಭೀರವಾದ ಧ್ವನಿಯನ್ನೂ, ಅವನ ಧನುಷ್ಟಂಕಾರವನ್ನೂ ಕೇಳಿದನು, ತನ್ನ ಸಂಗಡಹೋರಾಡಲು ಸಮಾನವಾದ ಬಲಪೌರುಷಗಳಿಂದೊಡಗೂಡಿರುವ ವೀರನು ಬರುವನೆಂದು ಬಹಳವಾಗಿ ಹರ್ಷಗೊಂಡನು॥ ॥೨೧॥ ಅಪ್ರತಿಮ ವೀರನಾದುದರಿಂದಲೇ ರಣಪಂಡಿತನೆನಿಸಿದ ಇಂದ್ರಾರಿಯು- ಘನವಾದ ಚಾಪವನ್ನೂ, ತೀಕ್ಷ್ಣವಾದ ಅಲಗುಗಳನ್ನೊಳಗೊಂಡಿರುವ ಸಾಯಕಗಳನ್ನೂ ಪರಿಗ್ರಹಿಸಿ

ಹನುಮಂತ ಮಭಿಪ್ರೇತ್ಯ ಜಗಾಮ ರಣಪಂಡಿತಃ ॥೨೨॥
ತಸ್ಮಿಂ ಸ್ತತ ಸ್ಸಂಯತಿ ಜಾತಹರ್ಷೇ ರಣಾಯ ನಿರ್ಗಚ್ಛತಿ ಬಾಣ ಪಾಣೌ ।
ದಿಶಶ್ಚ ಸರ್ವಾಃ ಕಲುಷಾ ಬಭೂವು ರ್ಮೃಗಾಶ್ಚ ರೌದ್ರಾ ಬಹುಧಾ ವಿನೇದುಃ॥೨೩॥
ಸಮಾಗತಾ ಸ್ತತ್ರ ತು ನಾಗಯಕ್ಷಾ ಮಹರ್ಷಯ ಶ್ಚಕ್ರಚರಾ ಶ್ಚ ಸಿದ್ಧಾಃ ।
ನಭ ಸ್ಸಮಾವೃತ್ಯ ಚ ಪಕ್ಷಿಸಂಘಾ ವಿನೇದುರುಚ್ಚೈಃ ಪರಮಪ್ರಹೃಷ್ಟಾಃ ॥೨೪॥
ಆಯಾಂತಂ ಸರಥಂ ದೃಷ್ಟ್ವಾ ತೂರ್ಣ ಮಿಂದ್ರಜಿತಂ ಕಪಿಃ ।
ವಿನನಾದ ಮಹಾನಾದಂ ವ್ಯವರ್ಧತ ಚ ವೇಗವಾನ್ ॥೨೫॥

ಹೋದನು ॥೨೨॥ ತತಃ - ಆಮೇಲೆ, ತಸ್ಮಿನ್ - ಆ ಇಂದ್ರಜಿತ್ತು, ಸಂಯತಿ - ಯುದ್ಧದಲ್ಲಿ, ಜಾತಹರ್ಷೇ - ಮೊಳೆತ ಸಂತಸವುಳ್ಳವನೂ, ಬಾಣಪಾಣೌ - ಬಾಣಹಸ್ತನೂ ಆಗಿ, ರಣಾಯ - ಯುದ್ಧಕ್ಕೋಸ್ಕರ, ನಿರ್ಗಚ್ಛತಿ (ಸತಿ) ಹೊರಡುತ್ತಿರಲಾಗಿ, ಸರ್ವಾಃ - ಸಮಸ್ತವಾದ, ದಿಶಶ್ಚ - ದಿಕ್ಕುಗಳೂ, ಕಲುಷಾಃ - ಮಲಿನವಾದವುಗಳಾಗಿ, ಬಭೂವುಃ - ಇದ್ದುವು, ಮೃಗಾಶ್ಚ - ಜಂತುಗಳೂ, ರೌದ್ರಾಃ - ಭಯಂಕರಗಳಾಗಿ, ಬಹುಧಾ - ಅನೇಕಪ್ರಕಾರವಾಗಿ, ವಿನೇದುಃ - ಅಬ್ಬರಿಸಿದುವು ॥೨೩॥ ನಾಗಯಕ್ಷಾಃ- ನಾಗರು ಮತ್ತು ಯಕ್ಷರೂ, ಚಕ್ರಚರಾಃ - ಗುಂಪಾಗಿ ಸಂಚರಿಸುವ (ಆಕಾಶಚರರಾದ) ಮಹರ್ಷಯಃ - ಮಹಾಮುನಿಗಳೂ, ಸಿದ್ಧಾಶ್ಚ - ಸಿದ್ಧಪುರುಷರೂ, ಪರಮಪ್ರಹೃಷ್ಟಾಃ - ಬಹು ಸಂತೋಷಪಟ್ಟವರಾಗಿ, ನಭಃ - ಆಕಾಶವನ್ನು, ಸಮಾವೃತ್ಯ - ಆವರಿಸಿಕೊಂಡು, ತತ್ರ - 'ಯುದ್ಧರಂಗದಲ್ಲಿ, ಸಮಾಗತಾಃ - ಸೇರಿದವರಾದರು, ಪಕ್ಷಿಸಂಘಾಶ್ಚ - ಹಕ್ಕಿಗಳ ಹಿಂಡುಗಳೂ, ಉಚ್ಚೈಃ - ಗಟ್ಟಿಯಾಗಿ, ವಿನೇದುಃ - ಧ್ವನಿಮಾಡಿದುವು ॥೨೪॥ ಕಪಿಃ - ಆಂಜನೇಯನು, ಸರಥಂ - ರಥದಿಂದ ಸಹಿತನಾದ, ತೂರ್ಣಂ - ಜಾಗ್ರತೆಯಾಗಿ, ಆಯಾಂತಂ - ಬರುತ್ತಲಿರುವ, ಇಂದ್ರಜಿತಂ - ಇಂದ್ರಜಿತುವನ್ನು, ದೃಷ್ಟ್ವಾ - ನೋಡಿ, ಮಹಾನಾದಂ - ಸಿಂಹನಾದವನ್ನು, ವಿನನಾದ - ಗರ್ಜಿಸಿದನು, ವೇಗವಾನ್ - ಬಹುವೇಗಶಾಲಿಯಾಗಿ, ವ್ಯವರ್ಧತಚ-ಬೆಳೆದನು ॥೨೫॥ ದಿವ್ಯಂ - ಶ್ರೇಷ್ಠವೆನಿಸಿದ, ರಥಂ - ತೇರನ್ನು ಆಸ್ಥಿತಃ - ಆಶ್ರಯಿಸಿದವನೂ, ಚಿತ್ರಕಾರ್ಮುಕಃ - ವಿಚಿತ್ರವಾದ ಬಿಲ್ಲುಳ್ಳವನೂ ಆಗಿರುವ, ಇಂದ್ರಜಿತ್- ಇಂದ್ರಜಿತುವು, ತಟಿದೂರ್ಜಿತನಿಸ್ಸ್ವನಂ ಸಿಡಿಲಿನಂತೆ ಪ್ರಬಲವಾದ ಧ್ವನಿಯುಳ್ಳ, ಧನುಃ - ಬಿಲ್ಲನ್ನು

ಬಳಿಕ ಹನುಮಂತನನ್ನು ಇದಿರ್ಗೊಂಡನು ॥ ೨೨ ॥ ಮಹತ್ತರವಾದ ಸಂಭ್ರಮದಿಂದೊಡಗೂಡಿ ಚಾಪಪಾಣಿಯಾದ ಇಂದ್ರಜಿತುವು.... ಮಾರುತಿಯನ್ನಿದಿರ್ಗೊಳ್ಳಲು ಬರುತ್ತಿರುವಲ್ಲಿ- ಎಲ್ಲದೆಶೆಗಳೂ ಬಹು ಮಲಿನಗಳಾಗಿ ಕಾಣಬಂದುವು, ಜಂತುಗಳೆಲ್ಲವೂ ಭಯಂಕರವಾಗಿ ವಿಕಾರವಾದ ಧ್ವನಿಯನ್ನು ಮಾಡಿದುವು ॥೨೩॥ ಆ ಸಮಯದೊಳಗೆ- ನಾಗರು, ಯಕ್ಷರು, ಮಹರ್ಷಿಗಳು, ಆಕಾಶಚಾರಿಗಳಾದ ಸಿದ್ಧರೂ-ಈ ಮಹಾವೀರರ ಯುದ್ಧ ಸಂರಂಭವನ್ನು ನೋಡಬೇಕೆಂಬ ಕುತೂಹಲದಿಂದ ಆಕಾಶ ಮಂಡಲದಲ್ಲಿ ಸೇರಿದರು. ಬಗೆ ಬಗೆಯಾದ ಹಕ್ಕಿಗಳ ಹಿಂಡೂ ಭೂಮಂಡಲದಲ್ಲಿ ತುಂಬಿ ಗಟ್ಟಿಯಾಗಿ ಹರ್ಷಧ್ವನಿಗೈದುವು॥೨೪॥ ಬಹು ವೇಗದಿಂದೊಡಗೂಡಿ ರಥದಮೇಲೆ ಕುಳಿತು, ತನ್ನಿದಿರಿಗೆ ಬಂದ ಇಂದ್ರಜಿತುವನ್ನು ಕಂಡಕೂಡಲೆ ಮಾರುತಿಯು ಸಿಂಹನಾದವನ್ನು ಮಾಡಿದುವಲ್ಲದೆ, ತಾನೂ ವೇಗಶಾಲಿಯಾಗುತ್ತಾ, ಮಹೋನ್ನತನಾಗಿ ಬೆಳೆಯತೊಡಗಿದನು ॥೨೫॥ ಬಳಿಕ ಇಂದ್ರಜಿತುವು ಹನುಮನ

ಇಂದ್ರಜಿತ್ಸ್ವರಥಂ ದಿವ್ಯಮಾಸ್ಥಿತಶ್ಚಿತ್ರಕಾರ್ಮುಕಃ ।
ಧನುರ್ವಿಷ್ಫಾರಯಾಮಾಸ ತಟಿದೂರ್ಜಿತನಿಸ್ಸ್ವನಮ್ ॥೨೬॥
ತತಸ್ಸಮೇತಾವತಿತೀಕ್ಷ್ಣವೇಗೌ ಮಹಾಬಲೌ ತೌ ರಣನಿರ್ವಿಶಂಕೌ ।
ಕಪಿಶ್ಚ ರಕ್ಷೋಽಧಿಪತೇಶ್ಚ ಪುತ್ರಸ್ಸುರಾಸುರೇಂದ್ರಾವಿವ ಬದ್ಧವೈರೌ ॥೨೭॥
ಸ ತಸ್ಯ ವೀರಸ್ಯ ಮಹಾರಥಸ್ಯ ಧನುಷ್ಮತಸ್ಸಂಯತಿ ಸಮ್ಮತಸ್ಯ ।
ಶರಪ್ರವೇಗಂ ವ್ಯಹನತ್ಪ್ರವೃದ್ಧಶ್ಚಚಾರ ಮಾರ್ಗೇ ಪಿತುರಪ್ರಮೇಯೇ ॥೨೮॥
ತತಶ್ಶರಾನಾಯತತೀಕ್ಷ್ಣಶಲ್ಯಾನ್ ಸುಪತ್ರಿಣಃ ಕಾಂಚನಚಿತ್ರಪುಂಖಾನ್ ।

---

ವಿಷ್ಫಾರಯಾಮಾಸ - ದನಿಗೈಸಿದನು ॥೨೬॥ ತತಃ - ಆಮೇಲೆ, ಅತಿತೀಕ್ಷ್ಣವೇಗೌ - ಬಹು ತೀಘ್ರವಾದ ವೇಗವುಳ್ಳ, ಮಹಾಬಲೌ - ಹೇರಳವಾದ ಸಾಮರ್ಥ್ಯವುಳ್ಳ, ತೌ - ಆ, ಕಪಿಶ್ಚ - ಹನುಮಮನೂ, ರಕ್ಷೋಧಿಪತೇಃ - ರಾಕ್ಷಸರಾಜನ, ಪುತ್ರಶ್ಚ - ಮಗನಾದ ಇಂದ್ರಜಿತುವೂ, ರಣನಿರ್ವಿಶಂಕೌ - ಯುದ್ಧದಲ್ಲಿ ನಿರ್ಭಯರಾಗಿ, ಸುರಾಸುರೇಂದ್ರಾವಿವ - ಮಹಾ ದೇವಾಸುರವೀರರಹಾಗೆ, ಬದ್ಧವೈರೌ - ನಟ್ಟದ್ವೇಷವುಳ್ಳವರಾಗುತ್ತಾ, ಸಮೇತೌ - ಕಲೆತರು ॥೨೭॥ ಸಃ - ಆ ಹನುಮಂತನು, ಪ್ರವೃದ್ಧಃ - ಬೆಳೆದವನಾಗಿ, ವೀರಸ್ಯ - ಶೂರನಾದ, ಧನುಷ್ಮತಃ - ಧನುರ್ಧಾರಿಯಾದ, ಸಂಯತಿ - ಯುದ್ಧದಲ್ಲಿ, ಸಮ್ಮತಸ್ಯ - ತನಗೆ ಸಮಾನ ವೀರನೆಂದು ಒಪ್ಪಿರುವ, ತಸ್ಯ - ಆ ಇಂದ್ರಜಿತುವಿನ, ಶರಪ್ರವೇಗಂ - ಬಾಣಗಳ ವೇಗವನ್ನು, ವ್ಯಹನತ್ - (ವ್ಯರ್ಥ) ತಡೆದು ಹೊಡೆದನು, ಅಪ್ರಮೇಯೇ - ಅಳೆಯಲಳವಲ್ಲದ, ಪಿತುಃ ತಂದೆಯ, ಮಾರ್ಗೇ - ದಾರಿಯಲ್ಲಿ (ವಾಯುಮಾರ್ಗದಲ್ಲಿ) ಚಚಾರಚ- ಸಂಚರಿಸುತ್ತಿದ್ದನು ॥೨೮॥ ತತಃ- ತರುವಾಯ, ಪರವೀರಹಂತಾ - ಶತ್ರುಸಂಹಾರಕನಾದ, ವೀರಃ - ಶೂರನೆನಿಸಿದ ಇಂದ್ರಜಿತ್ತು, ಆಯತತೀಕ್ಷ್ಣಶಲ್ಯಾನ್ - ನೀಳವೂ ಮೊನೆಯೂ ಆಗಿರುವ ಅಲಗುಗಳನ್ನೊಳಗೊಂಡಿರತಕ್ಕ, ಸುಪತ್ರಿಣಃ - ಒಳ್ಳೆಯರೆಕ್ಕೆಗಳುಳ್ಳ, ಕಾಂಚನಚಿತ್ರಪುಂಖಾನ್ - ಬಂಗಾರದಿಂದ ಚಿತ್ರವಾದ ಗರಿಯುಳ್ಳ, ಸುಸನ್ನತಾನ್ -

---

ಬಳಿಗೆ ಬಂದು ಇದಿರಾಗಿ ರಥದಮೇಲೆ ಕುಳಿತು ತನ್ನ ಚಿತ್ರಕಾರ್ಮುಕವನ್ನು ಟಂಕಾರಗೊಳಿಸಿದನು. ಆ ಧನುಸ್ಸಿನಶಬ್ದವು ಸಿಡಿಲಿನ ದನಿಯಂತೆ ಎಲ್ಲಕಡೆಗಳಲ್ಲಿಯೂ ಹರಡಿತು॥೨೬॥ ಹಾಗೆಯೇ ಒಬ್ಬರಬಳಿಗೊಬ್ಬರು ಬಂದರು, ಇಬ್ಬರೂ ಮಹಾವೇಗಶಾಲಿಗಳು, ಮಹಾಬಾಹುಬಲಸಂಪನ್ನರು, ರಣಧೀರರು, ಸುರಾಸುರ ವೀರರಹಾಗೆ ಕಪಿ ರಾಕ್ಷಸವೀರರೀರ್ವರೂ ಕ್ರೂರವಾದ ವೈರದಿಂದೊಡಗೂಡಿ ಕಾಳಗಕ್ಕೆ ಕಲೆತರು ॥೨೭॥ ಮಹಾವೀರನಾದ ಮಾರುತಿಯು- ತನ್ನ ತಂದೆಯಂತೆ ವೀರ್ಯಸಂಪನ್ನನೂ, ಮಹೋನ್ನತನಾಗಿ ಬೆಳೆದವನೂ ಆಗಿ, ವಾಯುಮಂಡಲದಲ್ಲಿ ಸಂಚರಿಸುತ್ತಾ, ವೀರವರನೂ ಮಹಾರಥನೂ ರಣದಿಶಾಪಟ್ಟಮಲ್ಲನೂ ಆಗಿರುವ ಇಂದ್ರಜಿತುವಿನ ಬಾಣವೇಗವನ್ನೆಲ್ಲ ಬಡಿದು ಕೆಡಹಿದನು ॥೨೮॥ ಹಗೆಗಳ ಪಡೆಯನ್ನು ಅಡಗಿಸುವ ವೀರನೆನಿಸಿದ ಇಂದ್ರಜಿತುವು ಬಹು ನೀಳವಾಗಿಯೂ, ಮೊನೆಯಾಗಿಯೂ, ಚಿತ್ರ ವಿಚಿತ್ರಗಳಾದ ಗರಿಗಳೊನ್ನೊಳಗೊಂಡಿರುವವುಗಳಾಗಿಯೂ, ಸಿಡಿಲನಂತೆ ಕ್ರೂರವಾದ ವೇಗವುಳ್ಳವುಗಳಾಗಿಯೂ ಇರುವ ಶ್ರೇಷ್ಠವಾದ ಬಾಣಗಳನ್ನು

ಮುಮೋಚ ವೀರಃ ಪರವೀರ ಹಂತಾ ಸುಸನ್ನತಾನ್ ವಜ್ರ ನಿಪಾತವೇಗಾನ್ ॥೨೯॥
ತತಸ್ತು ತತ್ಸ್ಯಂದನ ನಿಸ್ವನಂ ಚ ಮೃದಂಗ ಭೇರೀ ಪಟಹ ಸ್ವನಂ ಚ ।
ವಿಕೃಷ್ಯಮಾಣಸ್ಯ ಚ ಕಾರ್ಮುಕಸ್ಯ ನಿಶಮ್ಯ ಘೋಷಂ ಪುನ ರುತ್ಪಪಾತ ॥೩೦॥
ಶರಾಣಾ ಮಂತರೇ ಷ್ವಾಶು ವ್ಯವರ್ತತ ಮಹಾಕಪಿಃ ।
ಹರಿ ಸ್ತಸ್ಯಾ ಭಿಲಕ್ಷ್ಯಸ್ಯ ಮೋಘಯನ್ ಲಕ್ಷ್ಯಸಂಗ್ರಹಮ್ ॥೩೧॥
ಶರಾಣಾ ಮಗ್ರತ ಸ್ತಸ್ಯ ಪುನ ಸ್ಸಮಭಿ ವರ್ತತ ।
ಪ್ರಸಾರ್ಯ ಹಸ್ತೌ ಹನುಮಾ ನುತ್ಪಪಾ ತಾನಿಲಾತ್ಮಜಃ ॥೩೨॥
ತಾ ವುಭೌ ವೇಗ ಸಂಪನ್ನೌ ರಣಕರ್ಮ ವಿಶಾರದೌ।

---

ಚೆನ್ನಾಗಿ ಬಾಗಿರುವ, ವಜ್ರನಿಪಾತವೇಗಾನ್ - ಸಿಡಿಲಿನಂತೆ ತೀವ್ರವೇಗವುಳ್ಳ. ಶರಾನ್ - ಬಾಣಗಳನ್ನು, ಮುಮೋಚ - ಪ್ರಯೋಗಿಸಿದನು ॥೨೯॥ ತತಃ - ಆ ಮೇಲೆ, (ಸಃ - ಆ ಹನುಮಂತನು) ತತ್ಸ್ಯಂದನ ನಿಸ್ವನಂಚ - ಇಂದ್ರಜಿತುವಿನ ರಥಧ್ವನಿಯನ್ನೂ, ಮೃದಂಗಭೇರೀಪಟಹಸ್ವನಂಚ - ಮದ್ದಳೆ, ನಗಾರಿ ಮತ್ತು ತಪಟೆ ಇವುಗಳ, ವಿಕೃಷ್ಯಮಾಣಸ್ಯ- ಸೆಳೆಯಲ್ಪಡುತಲಿರುವ, ಕಾರ್ಮುಕಸ್ಯ - ಬಿಲ್ಲಿನ, ಘೋಷಂ ಚ - ಧ್ವನಿಯನ್ನೂ, ಪುನಃ - ಮರಳಿ, ನಿಶಮ್ಯ - ಕೇಳಿ, ಉತ್ಪಪಾತ - ಮೇಲಕ್ಕೆ ಹಾರಿದನು ॥೩೦॥ ಮಹಾಕಪಿಃ - ವಾನರವರನೆನಿಸಿದ, ಹರಿಃ - ಆಂಜನೇಯನು, ಅಭಿಲಕ್ಷ್ಯಸ್ಯ - ಗುರಿಯನ್ನು ಹಿಡಿಯತಕ್ಕ, ತಸ್ಯ - ಆ ಇಂದ್ರಜಿತುವಿನ, ಲಕ್ಷ್ಯ ಸಂಗ್ರಹಂ - ಗುರಿಯ ಚಾತುರ್ಯವನ್ನು, ಮೋಘಯನ್ - ವ್ಯರ್ಥಗೊಳಿಸುವವನಾಗಿ, ಶರಾಣಾಂ - ಬಾಣಗಳ, ಅಂತರೇಷು - ಮಧ್ಯಭಾಗಗಳಲ್ಲಿ, ಆಶು - ಬೇಗನೆ, ವ್ಯವರ್ತ್ತತ - ಸಂಚರಿಸುತ್ತಿದ್ದನು ॥೩೧॥ ಅನಿಲಾತ್ಮಜಃ - ವಾಯುಪುತ್ರನಾದ, ಹನುಮಾನ್ - ಆಂಜನೇಯನು, ತಸ್ಯ - ಆ ಇಂದ್ರಜಿತುವಿನ, ಶರಾಣಾಂ - ಬಾಣಗಳ, ಅಗ್ರತಃ - ಇದಿರಿಗೆ, ಹಸ್ತೌ - ಕರಗಳನ್ನು, ಪ್ರಸಾರ್ಯ - ನೀಡಿ, ಪುನಃ - ಮರಳಿ, ಸಮಭಿವರ್ತ್ತತ - ಇದಿರಿಸಿನಿಂತನು (ಸಮಭ್ಯವರ್ತ್ತತ) ಉತ್ಪಪಾತಚ - ಹಾರುತಲೂ ಇದ್ದನು ॥೩೨॥ ವೇಗಸಂಪನ್ನೌ - ಗಮನವೇಗದಿಂದೊಡಗೂಡಿದ, ರಣಕರ್ಮ ವಿಶಾರದೌ - ಯುದ್ಧವ್ಯಾಪಾರದಲ್ಲಿ ಪಾಂಡಿತ್ಯವನ್ನು ಪಡೆದಿರುವ, ತೌ - ವಾನರೇಂದ್ರಜಿತ್ತುಗಳು, ಉಭೌ - ಇಬ್ಬರೂ. ಸರ್ವಭೂತಮನೋಗ್ರಾಹಿ - ಸರ್ವಪ್ರಾಣಿ ಮನೋಹರವಾದ, ಉತ್ತಮಂ -

---

ಮಾರುತಿಯನ್ನು ಗುರಿನೋಡಿ ಎಸೆದನು ॥೨೯॥ ಆಮೇಲೆ ಆ ಹನುಮಂತನು-ಇಂದ್ರಜಿತುವಿನ ರಥಧ್ವನಿಯನ್ನೂ, ಮದ್ದಲೆ, ನಗಾರಿ, ತಪಟೆ ಮೊದಲಾದ ವಾದ್ಯಧ್ವನಿಗಳನ್ನೂ, ಅಡಿಗಡಿಗೂ ನುಡಿಸುವ ಬಿಲ್ಲಿನ ಟಂಕಾರವನ್ನೂ ಕೇಳುತ್ತಾ, ಮರಳಿ ಆಕಾಶಮಂಡಲಕ್ಕೆ ಕುಪ್ಪಳಿಸಿದನು ॥೩೦॥ ಮತ್ತು-ಆ ಅಸುರನ ಬಾಣಗಳ ಗುರಿಗೆ ಸಿಲುಕದೆ, ಪ್ರತಿಯೊಂದು ಲಕ್ಷ್ಯವನ್ನೂ ತಪ್ಪಿಸುತ್ತಾ, ತನ್ನ ಗಮನ ಲಾಘವದಿಂದ ಶರಗಳಸಂದುಗಳಲ್ಲಿಯೇ ಸಂಚರಿಸುತ ಬಂದನು ॥೩೧॥ ಮರಳಿ ತನ್ನ ಕರಗಳನ್ನು ಮುಂದಕ್ಕೆ ನೀಡಿ, ಅಂಬುಗಳಿದಿರಿಗೆ ನಿಲ್ಲುತಲೂ, ಚಮತ್ಕಾರದಿಂದ ತಪ್ಪಿಸಿಕೊಂಡು, ಕುಪ್ಪಳಿಸಿ,ಹಾರಿ ತಪ್ಪಿಸಿಕೊಳ್ಳುತಲೂ ಇರುತ್ತಿದ್ದನು ॥೩೨॥ ಇಂತಾ ಮಹಾವೀರರೀರ್ವರೂ ಬಹುವೇಗಸಂಪನ್ನರಾಗಿ, ತಂತಮ್ಮ ರಣಕರ್ಮ ಚಮತ್ಕಾರಗಳನ್ನು ತೋರುತ್ತಾ, ಸಮಸ್ತ ಪ್ರಾಣಿಗಳ ಕಣ್ಮನಗಳನ್ನೂ ಸೆಳೆಯುತಕ್ಕ ಜಾಣತನದಯುದ್ಧವನ್ನು ಮಾಡುತಲಿದ್ದರು॥೩೩॥ ವೀರಹನುಮನುಬಾಣಗಳ

ಸರ್ವಭೂತ ಮನೋಗ್ರಾಹಿ ಚಕ್ರತು ರ್ಯುದ್ಧ ಮುತ್ತಮಮ್ ॥೩೨॥
ಹನೂಮತೋ ವೇದ ನ ರಾಕ್ಷಸೋಽಂತರಂ ನ ಮಾರುತಿ ಸ್ತಸ್ಯ ಮಹಾತ್ಮನೋಽಂತರಮ್ ।
ಪರಸ್ಪರಂ ನಿರ್ವಿಷಹೌ ಬಭೂವತು ಸ್ಸಮೇತ್ಯ ತೌ ದೇವ ಸಮಾನ ವಿಕ್ರಮೌ ॥೩೪॥
ತತಸ್ತು ಲಕ್ಷ್ಯೇ ಸ ವಿಹನ್ಯಮಾನೆ ಶರೇ ಷ್ವಮೋಘೇಷು ಚ ಸಂಪತತ್ಸು ।
ಜಗಾಮ ಚಿಂತಾಂ ಮಹತೀಂ ಮಹಾತ್ಮಾ ಸಮಾಧಿ ಸಂಯೋಗ ಸಮಾಹಿತಾತ್ಮಾ ॥೩೫॥
ತತೋ ಮತಿಂ ರಾಕ್ಷಸ ರಾಜಸೂನು ಶ್ಚಕಾರ ತಸ್ಮಿನ್ ಹರಿವೀರ ಮುಖ್ಯೇ ।

ಶ್ರೇಷ್ಠವೆನಿಸಿದ, ಯುದ್ಧಂ - ಕಾಳಗವನ್ನು, ಚಕ್ರತುಃ- ಮಾಡುತಲಿದ್ದರು ॥೩೩॥ ರಾಕ್ಷಸಃ- ಇಂದ್ರಜಿತುವು, ಹನೂಮತಃ - ಆಂಜನೆಯುನ, ಅಂತರಂ - ಭೇದವನ್ನು (ಗುಟ್ಟನ್ನು) ನವೇದ - ತಿಳಿಯಲಿಲ್ಲ, ಮಾರುತಿಃ - ಹನುಮನು, ಮಹಾತ್ಮನಃ - ಮಹಾಧೈರ್ಯಶಾಲಿಯಾದ, ತಸ್ಯ - ಆ ಇಂದ್ರಜಿತುವಿನ, ಅಂತರಂ - ರಹಸ್ಯವನ್ನು (ಸಂಚನ್ನು) ನವೇದ - ತಿಳಿದುಕೊಳ್ಳಲಿಲ್ಲ, ದೇವಸಮಾನವಿಕ್ರಮೌ - ದೇವತೆಗಳಿಗೆ ಣೆಯೆನಿಸಿದ ಪರಾಕ್ರಮವುಳ್ಳ, ತೌ - ಆಕಪೀಂದ್ರಜಿತುಗಳು, ಪರಸ್ಪರಂ - ಅನ್ಯೋನ್ಯವಾಗಿ, ಸಮೇತ್ಯ- ಇದಿರ್ಗೊಂಡು, ನಿರ್ವಿಷಹೌ - ಸಹಿಸಲಸದಳರೆನಿಸಿದವರಾಗಿ, ಬಭೂವತುಃ - ಇದ್ದರು ॥೩೪॥ ತತಃ - ಅನಂತರ, ಅಮೋಘೇಷು - ವ್ಯರ್ಥವಾಗದಿರುವ, ಶರೇಷು - ಬಾಣಗಳು, ಸಂಪತತ್ಸುಚ - ತನ್ನ ಮೇಲೆ ಬೀಳುತ್ತಿರಲಾಗಿ, ಲಕ್ಷ್ಯೇ-ಗುರಿಯಾದ ತಾನು. ವಿಹನ್ಯಮಾನೇಚ-ಹೊಡೆಯಲ್ಪಡುತ್ತಿರುವಲ್ಲಿಯೂ, ಸಮಾಧಿ - ಸರಿಯಾದ ಗುರಿಹಿಡಿವುದು, ಸಂಯೋಗ - ಬಾಣಸಂಧಾನ ಮಾಡುವುದು ಇವುಗಳಲ್ಲಿ, ಸಮಾಹಿತ- ಎಚ್ಚರಗೊಂಡಿರುವ, ಆತ್ಮಾ - ಸ್ಥಿರಚಿತ್ತವುಳ್ಳ, ಮಹಾತ್ಮಾ - ಮಹಾಧೀರನಾದ, ಸಃ - ಆ ಆಂಜನೇಯನು, ಮಹತೀಂ - ಹೆಚ್ಚಾದ, ಚಿಂತಾಂ - ವಿಚಾರವನ್ನು, ಜಗಾಮ - ಹೊಂದುತಲಿದ್ದನು, ॥೩೫॥ ತತಃ - ಬಳಿಕ, ರಾಕ್ಷಸರಾಜಸೂನುಃ - ರಾಕ್ಷಸರಾಜಪುತ್ರನು, ತಸ್ಯ-ಆ, ಕಪೇಃ - ಆಂಜನೇಯನ, ಅವಧ್ಯತಾಂ - ಸಂಹಾರಕ್ಕಸಾಧ್ಯವಾಗಿರುವಿಕೆಯನ್ನು, ಸಮೀಕ್ಷ್ಯ - ವಿಚಾರಮಾಡಿ, ಹರಿವೀರಮುಖ್ಯೇ - ವಾನರವೀರನಾದ, ತಸ್ಮಿನ್ - ಆ ಹನುಮನಲ್ಲಿ, ನಿಗ್ರಹಾರ್ಥಂ -ಶಿಕ್ಷಿಸಲಿಕ್ಕೆ (ಹಿಡಿಯಲಿಕ್ಕೆ) (ಅಯಂ-ಇವನು) ಕಥಂ - ಹೇಗೆ, ನಿ ಗಚ್ಛೇತ್ - ಸೋತುಹೋದಾನು ? (ನಿಶ್ಚೇಷ್ಟನಾದಾನು) ಇತಿ- ಹೀಗೆಂಬ,

ಇದಿರಿಗೆ ನಿಲ್ಲುವ, ಹಾಗೆಯೇ ತಪ್ಪಿಸಿಕೊಳ್ಳುವ ಲಾಘವವೂ, ಹಾಗೆಯೇಅವನ ಬಲಪೌರುಷಗಳ ಇಯತ್ತೆಯೂ ರಾಕ್ಷಸನಿಗೆ ಗೊತ್ತಾಗುತ್ತಿರಲಿಲ್ಲ. ವೀರಶಿರೋಮಣಿಯಾದ ಇಂದ್ರಜಿತುವಿನ ಬಾಣಪ್ರಯೋಗ ಚಾಕಚಕ್ಯವನ್ನೂ, ಅವನ ವೀರ್ಯಶೌರ್ಯಗಳ ಪ್ರಮಾಣವನ್ನೂ, ಮಾರುತಿಯೂ ತಿಳಿಯಲಾರದಿದ್ದನು, ಇಂತು ದೇವಸಮಾನ ವಿಕ್ರಮರಾದ ಆ ಇಬ್ಬರೂ ಹೋರಾಡುತಲಿದ್ದರು ॥೩೪॥ ರಾಕ್ಷಸ ಚಕ್ರವರ್ತಿಕುಮಾರನಾದ ಮೇಘನಾದನು- ಚತುರ್ಮುಖನನ್ನು ಕ್ರೂರವಾದ ತಪಸ್ಸಿನಿಂದ ತೃಪ್ತಿಗೊಳಿಸಿ ಸಂಪಾದಿಸಿದ್ದ ಅನೇಕ ಶಸ್ತ್ರಾಸ್ತ್ರಗಳನ್ನೆಲ್ಲ ಪ್ರಯೋಗಿಸುತಬಂದರೂ ಕೆಲವಕ್ಕೆ ಲಕ್ಷ್ಯವಾಗದೆಯೂ, ಮತ್ತೆ ಕೆಲವನ್ನು ಪರಾಕ್ರಮದಿಂದ ಹೊಡೆದಪ್ಪಳಿಸುತಲೂ ಬಂದುದನ್ನೂ ನೋಡುತಲಿದ್ದು, ಎಲ್ಲವೂ ವ್ಯರ್ಥವಾಯಿತಲ್ಲಾ ಎಂದು ಸಂತಪಿಸಿ, ಬಾಣಸಂಧಾನದಲ್ಲಿಯೂ, ಗುರಿ ಹಿಡಿಯುವುದರಲ್ಲಿಯೂ, ಶರಪ್ರಯೋಗದಲ್ಲಿಯೂ ಮಹಾ ಚತುರನಾಗಿದ್ದರೂ, ಬಹುವಿಧವಾಗಿ ಚಿಂತಿಸತೊಡಗಿದನು ॥೩೫॥ ಬಳಿಕ ರಾಕ್ಷಸ ರಾಜನಂದನನು - ಹರಿವರನು ಸಂಹಾರಕ್ಕೆ ಅಶಕ್ಯನಾಗಿ

ಅವಧ್ಯತಾಂ ತಸ್ಯ ಕಪೇಃ ಸ್ಸಮೀಕ್ಷ್ಯ ಕಥಂ ನಿಗಚ್ಛೇ ದಿತಿ ನಿಗ್ರಹಾರ್ಥಮ್ ॥೩೬॥
ತತಃ ಪೈತಾಮಹಂ ವೀರ ಸ್ಸೋಸ್ತ್ರ ಮಸ್ತ್ರ ವಿದಾಂವರಃ।
ಸಂದಧೇ ಸುಮಹಾತೇಜಾ ಸ್ತಂ ಹರಿಪ್ರವರಂ ಪ್ರತಿ ॥೩೭॥
ಅವಧ್ಯೋ ಯಮಿತಿ ಜ್ಞಾತ್ವಾ ತಮಸ್ತ್ರೇ ಣಾಸ್ತ್ರ ತತ್ತ್ವವಿತ್ ।
ನಿಜಗ್ರಾಹ ಮಹಾಬಾಹು ರ್ಮಾರುತಾತ್ಮಜ ಮಿಂದ್ರಜಿತ್ ॥೩೮॥
ತೇನ ಬದ್ಧ ಸ್ತತೋ ಸ್ತ್ರೇಣ ರಾಕ್ಷಸೇನ ಸ ವಾನರಃ ।
ಅಭವ ನ್ನಿರ್ವಿಚೇಷ್ಟಶ್ಚ ಪಪಾತ ಚ ಮಹೀತಲೇ ॥೩೯॥
ತತೋಥ ಬುದ್ಧ್ವಾ ಸ ತದಾಸ್ತ್ರ ಬಂಧನಂ ಪ್ರಭೋಃ ಪ್ರಭಾವಾ ದ್ವಿಗತಾತ್ಮ ವೇಗಃ ।

---

ಮತಿಂ – ಬುದ್ಧಿಯನ್ನು, ಚಕಾರ - ಮಾಡಿದನು ॥೩೬॥ ತತಃ – ಆ ಹಿಂದೆ, ವೀರಃ - ಶೂರನಾದ, ಅಸ್ತ್ರವಿದಾಂ - ಅಸ್ತ್ರವಿದ್ಯೆಯನ್ನು ಬಲ್ಲವರೊಳಗೆ, ವರಃ - ಶ್ರೇಷ್ಠನೆನಿಸಿದ, ಸುಮಹಾತೇಜಾಃ - ಪ್ರಬಲವಾದ ತೇಜಸ್ಸುಳ್ಳ, ಸಃ – ಆ ಇಂದ್ರಜಿತುವು, ಹರಿಪ್ರವರಂ ಪ್ರತಿ – ಕಪಿವೀರನನ್ನು ಕುರಿತು, ಪೈತಾಮಹಂ-ಬ್ರಹ್ಮನೇ ದೇವತೆಯಾಗಿರುವ, ಅಸ್ತ್ರಂ-ಮಂತ್ರಾಸ್ತ್ರವನ್ನು, ಸಂದಧೆ -ಮಂತ್ರಿಸಿ ಸಂಧಾನಮಾಡಿದನು ॥೩೭॥ ಅಸ್ತ್ರತತ್ತ್ವವಿತ್ - ಅಸ್ತ್ರಗಳ ರಹಸ್ಯವನ್ನು ಬಲ್ಲ, ಮಹಾಬಾಹುಃ - ಹೇರಳವಾದ ತೋಳುಗಳಬಲವುಳ್ಳ, ಇಂದ್ರಜಿತ್-ಇಂದ್ರಜಿತ್ತು, ಅಯಂ-ಈ ವಾನರನು, ಅವಧ್ಯಃ ಸಂಹಾರಕ್ಕೆತಕ್ಕವನಾಗಿಲ್ಲ ಇತಿ - ಹೀಗೆಂದು, ಜ್ಞಾತ್ವಾ - ತಿಳಿದು, ಮಾರುತಾತ್ಮಜಂ - ವಾಯುಪುತ್ರನಾದ, ತಂ - ಆ ಹನುಮಂತನನ್ನು, ಅಸ್ತ್ರೇಣ – ಬ್ರಹ್ಮಾಸ್ತ್ರದಿಂದ, ನಿಜಗ್ರಾಹ – ಹಿಡಿದನು, ॥೩೮॥ ತತಃ - ತರುವಾಯು, ಸಃವಾನರಃ - ಆ ಹನುಮನು, ತೇನ - ಆ ರಾಕ್ಷಸೇನ - ಇಂದ್ರಜಿತುವಿನಿಂದ, ಅಸ್ತ್ರೇಣ - ಬ್ರಹ್ಮಾಸ್ತ್ರದಿಂದ ಬದ್ಧಃ - ಕಟ್ಟಲ್ಪಟ್ಟವನಾಗಿ, ವಿಚೇಷ್ಟಶ್ಚ - ನಿಶ್ಚೇಷ್ಟನಾಗಿಯೂ, (ಮೂರ್ಛಿತನಾಗಿ) ಅಭವತ್ - ಆದನು, ಮಹೀತಲೆ – ಭೂತಲದಲ್ಲಿ, ಪಪಾತಚ – ಉರುಳಿದನು, ॥೩೯॥ ತತಃ – ಆಮೇಲೆ, ಹರಿಪ್ರವೀರಃ - ವಾನರವರನಾದ, ಸಃ - ಆ ಹನುಮಂತನು, ತದಾ – ಆಗ, ಅಸ್ತ್ರಬಂಧಂ - ಬ್ರಹ್ಮಾಸ್ತ್ರದ ಕಟ್ಟನ್ನು ಬುದ್ಧ್ವಾ – ತಿಳಿದು, ಪ್ರಭೋಃ-ನಿಗ್ರಹಾನುಗ್ರಹ ಸಮರ್ಥನಾದ ಬ್ರಹ್ಮನ, ಪ್ರಭಾವಾತ್- ಮಹಿಮೆಯ

---

ಇರುವನಲ್ಲಾ, ಯಾವವಿಧವಾದ ಉಪಾಯಪ್ರಯೋಗದಿಂದ ಅಡಗಬಲ್ಲನು? ಇವನನ್ನು ಹೇಗೆ ನಿಗ್ರಹಿಸಬೇಕು ಎಂಬುದಾಗಿ ಸ್ವಲ್ಪ ಹೊತ್ತು ಮನದೊಳಾಲೋಚಿಸಿ, ತರುವಾಯು ಇತಿಕರ್ತವ್ಯವನ್ನು ಬುದ್ಧಿಯಿಂದ ನಿಶ್ಚಯಿಸಿದನು ॥೩೬॥ ಆ ಹಿಂದೆ – ಅಸ್ತ್ರವಿದರೊಳಗೆ ಅಗ್ರಗಣ್ಯನೆನಿಸಿ ಮಹಾತೇಜಸ್ವಿಯಾದ ಇಂದ್ರಜಿದ್ವೀರನು- ಆ ಮಾರುತಿಯನ್ನು ಲಕ್ಷ್ಯವಿಟ್ಟು, ಬ್ರಹ್ಮನೇ ದೇವತೆಯಾಗಿರುವ ಪೈತಾಮಹಾಸ್ತ್ರವನ್ನು ಪ್ರಯೋಗಿಸುವುದೇ ಪ್ರಕೃತೋಚಿತವಾದ ಕೆಲಸವೆಂದು ಸಂಧಾನಮಾಡತೊಡಗಿದನು ॥೩೭॥ ಅಸ್ತ್ರಗಳತತ್ತ್ವವನ್ನರಿತು ಇರುವ ಬಾಹುಬಲ ಸಂಪನ್ನನಾದ ಇಂದ್ರಾರಿಯು – ಅವನ ಅವಧ್ಯತೆಯನ್ನರಿತು, ಮಾರುತಾತ್ಮಜನನ್ನು ಬ್ರಹ್ಮಾಸ್ತ್ರದಿಂದಲೇ ನಿಗ್ರಹಿಸಲಿಕ್ಕೆ ಅಣಿಯಾಗಿ ಪ್ರಯೋಗಿಸಿದನು ॥ ಆಮೇಲೆ ಆಂಜನೇಯನು – ರಾಕ್ಷಸನ ಬ್ರಹ್ಮಾಸ್ತ್ರಕ್ಕೆ ಸಿಲುಕಿದನು, ಕಟ್ಟುಬಿದ್ದನು, ಅವನ ಚೇಷ್ಟೆಯೆಲ್ಲ ಅಡಗಿತು, ಸ್ತಬ್ಧನಾದನು, ಅಡಗಿದನು, ಉಡುಗಿದನು, ಹಾಗೆಯೇ ನೆಲದಮೇಲೆ ಉರುಳಿದನು॥೩೯॥ ಆ ಹಿಂದೆ ಹರಿವೀರನು- ಸ್ವಲ್ಪಕಾಲದವರೆಗೂ ಸ್ಮೃತಿ

ಪಿತಾಮಹಾ ನುಗ್ರಹ ಮಾತ್ಮನಶ್ಚ ವಿಚಿಂತಯಾಮಾಸ ಹರಿಪ್ರವೀರಃ ॥೪೦॥
ತತ ಸ್ಸ್ವಾಯಂಭುವೈ ರ್ಮಂತ್ರೈ ರ್ಬ್ರಹ್ಮಾಸ್ತ್ರ ಮಭಿಮಂತ್ರಿತಮ್ ।
ಹನುಮಾಂ ಶ್ಚಿಂತಯಾಮಾಸ ವರದಾನಂ ಪಿತಾಮಹಾತ್ ॥೪೧॥
ನ ಮೇಽಸ್ತ್ರ ಬಂಧಸ್ಯ ಚ ಶಕ್ತಿರಸ್ತಿ ವಿಮೋಕ್ಷಣೇ ಲೋಕಗುರೋಃ ಪ್ರಭಾವಾತ್ ।
ಇತ್ಯೇವ ಮತ್ವಾ ವಿಹಿತೋಽಸ್ತ್ರ ಬಂಧೋ ಮಯಾಽಽತ್ಮಯೋನೇ ರನು ವರ್ತಿತವ್ಯಃ ॥೪೨॥
ಸ ವೀರ್ಯ ಮಸ್ತ್ರಸ್ಯ ಕಪಿ ರ್ವಿಚಾರ್ಯ ಪಿತಾಮಹಾ ನುಗ್ರಹ ಮಾತ್ಮನಶ್ಚ ।

---

ದೆಶೆಯಿಂದ, ವಿಗತಾತ್ಮವೇಗಃ - ಗತಿಸಿದ ತನ್ನ ವೇಗವುಳ್ಳವನಾಗಿ, ಅಥ - ಅನಂತರ, ಆತ್ಮನಃ - ತನ್ನ ವಿಷಯವಾದ, ಪಿತಾಮಹಾನುಗ್ರಹಂಚ - ಬ್ರಹ್ಮನ ಅನುಗ್ರಹವನ್ನು ಕೂಡ, ವಿಚಿಂತಯಾಮಾಸ - ಚೆನ್ನಾಗಿಯೋಚಿಸಿದನು, ॥೪೦॥ ತತಃ - ಆ ಹಿಂದೆ, ಹನುಮಾನ್ - ಆಂಜನೇಯನು, ಬ್ರಹ್ಮಾಸ್ತ್ರಂ - ಬ್ರಹ್ಮಾಸ್ತ್ರವನ್ನು, ಸ್ವಾಯಂಭುವೈಃ - ಬ್ರಹ್ಮಸಂಬಂಧವಾದ, ಮಂತ್ರೈಃ- ಮಹಾಮಂತ್ರಗಳಿಂದ, ಅಭಿಮಂತ್ರಿತಂ - ಅಭಿಮಂತ್ರಿಸಲ್ಪಟ್ಟಿರುವುದನ್ನಾಗಿ, (ವಿಜ್ಞಾಯ - ತಿಳಿದುಕೊಂಡು), ಪಿತಾಮಹಾತ್ - ಬ್ರಹ್ಮನ ದೆಶೆಯಿಂದುಂಟಾಗಿದ್ದ, ವರದಾನಂ - ವರಪ್ರದಾನದ ಬಗೆಯನ್ನೂ, ಚಿಂತಯಾಮಾಸ - ಯೋಚಿಸಿದನು (ಜ್ಞಾಪಿಸಿಕೊಂಡನು) ॥೪೧॥ ಲೋಕಗುರೋಃ - ಪ್ರಪಂಚಕ್ಕೆ ತಂದೆಯಾದ ಬ್ರಹ್ಮನ, ಪ್ರಭಾವಾತ್ - ಮಹಿಮೆಯದೆಶೆಯಿಂದ, ಅಸ್ತ್ರಬಂಧಸ್ಯ - ಬ್ರಹ್ಮಾಸ್ತ್ರದಿಂದುಂಟಾದ ಕಟ್ಟಿನ, ವಿಮೋಕ್ಷಣೇ - ಬಿಡುಗಡೆಯಲ್ಲಿ, ಮೇ - ನನಗೆ, ಶಕ್ತಿಃ - ಸಾಮರ್ಥ್ಯವು, ನಾಸ್ತಿ - ಇಲ್ಲವು, ಇತಿ - ಹೀಗೆಂದು, ಮತ್ವೈವ- ತಿಳಿದೇ, ವಿಹಿತಃ - (ಇಂದ್ರಜಿತುವಿನಿಂದ) ಪ್ರಯೋಗಿಸಲ್ಪಟ್ಟ, ಆತ್ಮಯೋನೇಃ- ಬ್ರಹ್ಮನ, ಅಸ್ತ್ರಬಂಧಃ- ಬ್ರಹ್ಮಾಸ್ತ್ರದಿಂದುಂಟಾಗಿರುವ ಕಟ್ಟು, ಮಯಾ - ನನ್ನಿಂದ, ಅನುವರ್ತಿತವ್ಯಃ - ಅನುಸರಿಸಲ್ಪಡತಕ್ಕುದಾಗಿದೆ, ಇತಿ - ಹೀಗೆಂದು, ಚಿಂತಯಾಮಾಸ - ಯೋಚಿಸಿದನು, ॥೪೨॥ ಸಃ - ಆ, ಕಪಿಃ - ಮಾರುತಿಯು-

---

ಇಲ್ಲದೆ ಬಿದ್ದಿದ್ದು, ಬಳಿಕ ಎಚ್ಚತ್ತು, ಅಹೋ, ಇದು ಬ್ರಹ್ಮಾಸ್ತ್ರವು, ಅದರಿಂದಲೇ ನನ್ನ ವೇಗವು ಅಡಗಿತು, ಚತುರ್ಮುಖನ ಪ್ರಭಾವವೇ ಇದಕ್ಕೆ ಕಾರಣ, ನನ್ನ ವಿಷಯದಲ್ಲಿಯೂ ಆತನು ದಯೆ ತೋರಿದಾನೆ ಎಂಬ ಸಂಗತಿಯನ್ನೂ ನೆನೆದನು ॥೪೦॥ ಇಂದ್ರಜಿತುವು ಪಠಿಸುತಲಿದ್ದ ಮಂತ್ರಗಳಿಂದ ಬ್ರಹ್ಮಾಸ್ತ್ರವೆಂದೇ ತಿಳಿದನು. ಆಗ ಮಾರುತಿಗೆ-'ನಾನು ಜನಿಸಿದಾಗಲೇ ಹಸಿವೆಯಿಂದ ನಮ್ಮ ತಾಯನ್ನು ಕುರಿತು ಆಹಾರವನ್ನು ಬೇಡಿದೆನು. ಆಕೆ- ಸೂರ್ಯಮಂಡಲವನ್ನು ಹಣ್ಣೆಂದು ತೋರಿದಳು. ಅದನ್ನು ನಾನು ನುಂಗಿದಾಗ ಭೂಮಂಡಲವೆಲ್ಲ ಕತ್ತಲಾಯಿತು. ಇಂದ್ರನು ತನ್ನ ವಜ್ರಾಯುಧವನ್ನು ಪ್ರಯೋಗಿಸಿ, ನನ್ನದೊಂದು ಕೆನ್ನೆಯನ್ನು ಇರಿದನು, ನಮ್ಮ ತಂದೆಗೆ ಸಿಟ್ಟುಹತ್ತಿ ಗುಹಾಪ್ರವೇಶಮಾಡಲು, ಬ್ರಹ್ಮದೇವನು ಬಂದು-ವಾಯುದೇವನನ್ನು ಸಮಾಧಾನಗೊಳಿಸಿ, ನನಗೆ ಹನುಮಂತನೆಂಬ ಹೆಸರನ್ನೂ, ಚಿರಜೀವಿತ್ವವನ್ನೂ, ಬ್ರಹ್ಮಾಸ್ತ್ರದಿಂದಲೂ ಸಾವಿಲ್ಲದೆ ಒಂದು ಮುಹೂರ್ತಕಾಲ ಮಾತ್ರ ಕಟ್ಟುಬಿದ್ದಿರುವಂತೆಯೂ ವರವನ್ನು ಕೊಟ್ಟಿದ್ದನು,, ಎಂಬ ಸಂಗತಿಯನ್ನು ಸ್ಮರಿಸಿ ॥೪೧॥ ಆ ಮೇಲೆ-ಲೋಕಜನಕನಾದ ಆ ಚತುರ್ಮುಖನ ಮಹಿಮೆಯಿಂದಲೇ ಈಗ ನಾನು ಈ ಕಟ್ಟನ್ನು ಬಿಡಿಸಿಕೊಳ್ಳಲಾರೆನು. ಲೋಕಗುರುವಾದ ಬ್ರಹ್ಮದೇವನ ಕಟ್ಟಳೆಯನ್ನು ಅನುಸರಿಸಿಯೇ ಇರಬೇಕು. ಎಂದು ಗೊತ್ತುಮಾಡಿಕೊಂಡು ॥೪೨॥ ತನಗೆ

ವಿಮೋಕ್ಷ ಶಕ್ತಿಂ ಪರಿ ಚಿಂತಯಿತ್ವಾ ಪಿತಾಮಹಾಜ್ಞಾ ಮನು ವರ್ತತೇಸ್ಮ ||೪೩||
ಅಸ್ತ್ರೇಣಾಪಿ ಹಿ ಬದ್ಧಸ್ಯ ಭಯಂ ಮಮ ನ ಜಾಯತೇ |
ಪಿತಾಮಹ ಮಹೇಂದ್ರಾಭ್ಯಾಂ ರಕ್ಷಿತಸ್ಯಾನಿಲೇನ ಚ ||೪೪||
ಗ್ರಹಣೇ ಚಾಪಿ ರಕ್ಷೋಭಿ ರ್ಮಹಾನ್ಮೇ ಗುಣದರ್ಶನಃ |
ರಾಕ್ಷಸಂದ್ರೇಣ ಸಂವಾದ ಸ್ತಸ್ಮಾ ದ್ಗೃಹ್ಣಂತು ಮಾಂ ಪರೇ ||೪೫||
ಸ ನಿಶ್ಚಿತಾರ್ಥಃ ಪರವೀರ ಹಂತಾ ಸಮೀಕ್ಷ್ಯ ಕಾರೀ ವಿನಿವೃತ್ತ ಚೇಷ್ಟಃ |

---

ಅಸ್ತ್ರಸ್ಯ - ಬ್ರಹ್ಮಾಸ್ತ್ರದ, ವೀರ್ಯಂ - ಪರಾಕ್ರಮವನ್ನೂ, ಆತ್ಮನಃ - ತನ್ನ, ಪಿತಾಮಹಾನುಗ್ರಹಂ - ಬ್ರಹ್ಮಾಸ್ತ್ರದ ಬಿಡುಗಡೆಯಲ್ಲಿ ಆತನ ಅನುಗ್ರಹವನ್ನೂ, ವಿಚಾರ್ಯ - ವಿಚಾರಮಾಡಿ, ವಿಮೋಕ್ಷಶಕ್ತಿಂಚ (ಒಂದು ಮುಹೂರ್ತಾನಂತರದಲ್ಲಿ ಉಂಟಾಗುವ) ಬ್ರಹ್ಮಾಸ್ತ್ರದಿಂದ ಬಿಡುಗಡೆಯ ಶಕ್ತಿಯನ್ನೂ, ಪರಿಚಿಂತಯಿತ್ವಾ - ಚೆನ್ನಾಗಿ ಯೋಚನೆಮಾಡಿ, ಪಿತಾಮಹಾಜ್ಞಾ - ಬ್ರಹ್ಮನ ಅಪ್ಪಣೆಯನ್ನು, ಅನುವರ್ತತೇಸ್ಮ - ಅನುಸರಿಸಿದನು ||೪೩|| ಅಸ್ತ್ರೇಣ - ಬ್ರಹ್ಮಸ್ತ್ರದಿಂದ, ಬದ್ಧಸ್ಯಾಪಿ - ಕಟ್ಟಲ್ಪಟ್ಟವನಾಗಿದ್ದರೂ, ಪಿತಾಮಹಮಹೇಂದ್ರಾಭ್ಯಾಂ - ಬ್ರಹ್ಮೇಂದ್ರರಿಂದಲೂ, ಅನಿಲೇನಚ - ವಾಯುವಿನಿಂದಲೂ, ರಕ್ಷಿತಸ್ಯ - ಕಾಪಾಡಲ್ಪಟ್ಟಿರುವ, ಮಮ - ನನಗೆ, ಭಯಂ - ಭಯವು, ನಜಾಯತೆ - ಉಂಟಾಗುವುದಿಲ್ಲ, ಹಿ - ನಿಶ್ಚಯ ||೪೪|| ರಕ್ಷೋಭಿಃ - ರಾಕ್ಷಸರಿಂದ, ಗ್ರಹಣೇಚಾಪಿ - ಹಿಡಿತದಲ್ಲಿಯೂ, ಗುಣದರ್ಶನಃ - ಗುಣವನ್ನು ತಿಳಿಸುವ, (ಪ್ರಕೃತದಲ್ಲಿ ದೋಷವಾಗಿ ಕಾಣಬರುವ) ಮಹಾನ್ - ಪ್ರಬಲವಾದ, ಸಂವಾದಃ - ಸಂಭಾಷಣವು, ಮೆ - ನನಗೆ, ರಾಕ್ಷಸೇಂದ್ರೇಣ - ರಾವಣನೊಡನೆ, (ಭವಿಷ್ಯತಿ - ಆಗ ಹೋಗುವುದು) ತಸ್ಮಾತ್ - ಅದರಿಂದ, ಪರೆ - ಶತ್ರುಗಳು, ಮಾಂ - ನನ್ನನ್ನು, ಗೃಹ್ಣಂತು - ಹಿಡಿಯಲಿ ||೪೫|| ಪರವೀರಹಂತಾ - ಶತ್ರುಸಂಹಾರಕನಾದ, ಸಮೀಕ್ಷ್ಯಕಾರೀ - ಚೆನ್ನಾಗಿ ಯೋಚಿಸಿ ಕೆಲಸವನ್ನು ಮಾಡುವ, ಸಃ - ಆ ಹನುಮನು, ನಿಶ್ಚಿತಾರ್ಥಃ - ಗೊತ್ತುಮಾಡಿಕೊಂಡ ಮುಂದಿನ ಕೆಲಸವುಳ್ಳವನಾಗಿ, ಅಭಿಗತೈಃ - ಇದಿರಿಸಿ ಬಂದಿರುವ, ತೈಸ್ತೈಃ - ಆಯಾಯ, ಪರೈಃ - ಶತ್ರುಗಳಿಂದ. ಪ್ರಸಹ್ಯ - ಬಲಾತ್ಕಾರವಾಗಿ, ನಿಗೃಹ್ಯ - ಹಿಡಿಯಲ್ಪಟ್ಟು, ಪರಿಭರ್ತ್ಸ್ಯಮಾನಃ - ಬೆದರಿಸಲ್ಪಡುತ್ತಿರುವವನಾದರೂ, ವಿನಿವೃತ್ತಚೇಷ್ಟಃ

---

ಪಿತಾಮಹನಅನುಗ್ರಹವಿದ್ದರೂ ಆ ಅಸ್ತ್ರದಸಾಮರ್ಥ್ಯವನ್ನುಚೆನ್ನಾಗಿವಿಚಾರಮಾಡಿ, ಬಿಡುಗಡೆಯ ಶಕ್ತಿಯ ಸಮಯವನ್ನು ನಿರೀಕ್ಷಿಸುತ್ತಾ, ಆತನ ಆಜ್ಞೆಗೆ ಒಳಗಾಗಿದ್ದನು ||೪೩|| ಕಮಲಾಸನದೇವೇಂದ್ರರಿಬ್ಬರೂ ನನ್ನನ್ನು ರಕ್ಷಿಸಿರುವುದರಿಂದ ಪ್ರಕೃತದಲ್ಲಿ ನಾನು ಈ ಅಸ್ತ್ರದಿಂದ ಬದ್ಧನಾಗಿದ್ದರೂ ಪ್ರಾಣಭಯವೇನೂ ಇಲ್ಲ. ನಮ್ಮ ತಂದೆಯೂ ನನ್ನನ್ನು ಹಾಗೆ ರಕ್ಷಿಸಿ ಇದ್ದಾನೆ ||೪೪|| ಈ ರಕ್ಕಸರು-ಈಗ ನನ್ನನ್ನು ಹಿಡಿಯುವುದರಿಂದ ನನಗೆ ಮಹತ್ತರವಾದ ಗುಣವಿದೆ ; ಅದೇನೆಂದರೆ-ಇಲ್ಲಿಂದ ಇವರು ನನ್ನನ್ನು ರಾವಣನ ಬಳಿಗೆ ಕರೆದೊಯ್ಯುವರು. ಬಳಿಕ ನನಗೆ ಅವನೊಡನೆ ಸಂವಾದವು ಬೆಳೆಯುವುದು. ಈ ಕಾರಣದಿಂದ ನನ್ನನ್ನು ಹಿಡಿಯುತಲಿದ್ದರೂ ನಾನು ಸುಮ್ಮನಿರುವುದೇ ಲೇಸು ||೪೫|| ಎಂದೀ ಪ್ರಕಾರವಾಗಿ, ಶತ್ರುಸಂಹಾರಕನೂ, ಚೆನ್ನಾಗಿ ಯೋಚಿಸಿ ಕೆಲಸ ಮಾಡತಕ್ಕವನೂ ಆಗಿರುವ ಆಂಜನೇಯನು ಚಿಂತಿಸಿ, ಏನೊಂದೂ ಚೇಷ್ಟೆಯನ್ನೂ ಮಾಡದೆ, ಹಗೆಗಳಿಂದ ಸೆಳೆಯಲ್ಪಟ್ಟರೂ, ಗದರಿಸಲ್ಪಟ್ಟರೂ ಸುಮ್ಮನಿದ್ದು, ಬರಿದು ಸಿಂಹನಾದವನ್ನೂ ಮಾಡಿದನು ||೪೬||

ಪರೈಃ ಪ್ರಸಹ್ಯಾಭಿಗತೈ ರ್ನಿಗೃಹ್ಯ ನನಾದ ತೈಸ್ತೈಃ ಪರಿಭರ್ತ್ಸ್ಯಮಾನಃ ॥೪೬॥
ತತ ಸ್ತಂ ರಾಕ್ಷಸಾ ದೃಷ್ಟ್ವಾ ನಿರ್ವಿಚೇಷ್ಟ ಮರಿಂದಮಮ್ ।
ಬಬಂಧು ಶ್ಶಣ ವಲ್ಕೈಶ್ಚ ದ್ರುಮಚೀರೈಶ್ಚ ಸಂಹತೈಃ ॥೪೭॥
ಸ ರೋಚಯಾಮಾಸ ಪರೈಶ್ಚ ಬಂಧನಂ ಪ್ರಸಹ್ಯ ವೀರೈ ರಭಿ ನಿಗ್ರಹಂ ಚ।
ಕೌತೂಹಲಾ ನ್ಮಾಂ ಯದಿ ರಾಕ್ಷಸೇಂದ್ರೋ ದ್ರಷ್ಟುಂ ವ್ಯವಸ್ಯೇ ದಿತಿ ನಿಶ್ಚಿತಾರ್ಥಃ ॥೪೮॥
ಸ ಬದ್ಧ ಸ್ತೇನ ವಲ್ಕೇನ ವಿಮುಕ್ತೋ ಸ್ತ್ರೇಣ ವೀರ್ಯವಾನ್ ।
ಅಸ್ತ್ರಬಂಧ ಸ್ಸಚಾನ್ಯಂ ಹಿ ನ ಬಂಧ ಮನುವರ್ತತೇ ॥೪೯॥
ಅಥೇಂದ್ರ ಜಿತ್ತಂದ್ರುಮಚೀರ ಬದ್ಧಂ ವಿಚಾರ್ಯ ವೀರಃ ಕಪಿಸತ್ತಮಂ ತಮ್।

ಅಡಗಿದ ಚೇಷ್ಟೆಗಳುಳ್ಳವನಾಗಿ, ನನಾದ - ಗರ್ಜಿಸಿದನು ॥೪೬॥ ತತಃ - ತರುವಾಯ. ರಾಕ್ಷಸಾಃ - ರಕ್ಕಸರು, ಅರಿಂದಮಂ - ಹಗೆಗಳನ್ನಡಗಿಸುವ, ನಿರ್ವಿಚೇಷ್ಟಂ - ಸ್ತಬ್ಧನಾಗಿರುವ, ತಂ - ಆ ಆಂಜನೇಯನನ್ನು, ದೃಷ್ಟ್ವಾ - ನೋಡಿ, ಸಂಹತೈಃ - ಹೊಸೆಯಲ್ಪಟ್ಟಿರುವ, ಶಣವಲ್ಕೈಶ್ಚ - ಸಣಬಿನ ಹುರಿಗಳಿಂದಲೂ, ದ್ರುಮಚೀರೈಶ್ಚ - ನಾರುಬಟ್ಟೆಗಳಿಂದಲೂ, ಬಬನ್ಧುಃ - ಕಟ್ಟಿದರು, ॥೪೭॥ ಸಃ - ಆ ಹನುಮಂತನು, ರಾಕ್ಷಸೇಂದ್ರಃ - ರಾಕ್ಷಸರಾಜನಾದ ರಾವಣನು, ಕೌತೂಹಲಾತ್ - ಸಂತೋಷದಿಂದ, ಮಾಂ- ನನ್ನನ್ನು, ದ್ರಷ್ಟುಂ - ನೋಡುವುದಕ್ಕೆ, ವ್ಯವಸ್ಯೇತ್-ಪ್ರಯತ್ನಿಸುವನು, ಇತಿ- ಹೀಗೆಂದು, ನಿಶ್ಚಿತಾರ್ಥಸ್ಸನ್ - ಗೊತ್ತುಮಾಡಿದ ಮುಂದಿನ ಪ್ರಯೋಜನವುಳ್ಳವನಾಗಿ, ವೀರೈಃ- ಕ್ರೂರರಾದ, ಪರೈಃ - ಹಗೆಗಳಿಂದುಂಟಾದ, ಬಂಧನಂಚ - ಕಟ್ಟನ್ನೂ, ಪ್ರಸಹ್ಯ - ಸಹಿಸಿ, (ಬಲಾತ್ಕಾರವಾಗಿ) ಅಭಿನಿಗ್ರಹಂಚ - ಹಿಡಿತವನ್ನೂ, ರೋಚಯಾಮಾಸ - ಒಪ್ಪಿಕೊಂಡನು ॥೪೮॥ ವೀರ್ಯವಾನ್ - ಪರಾಕ್ರಮಶಾಲಿಯಾದ, ಸಃ - ಆ ಹನುಮಂತನು, ತೇನ - ಆ, ವಲ್ಕಲೇನ - ನಾರುಬಟ್ಟೆಯಿಂದ, ಬದ್ಧಃ - ಕಟ್ಟಲ್ಪಟ್ಟವನಾದರೂ, ಅಸ್ತ್ರೇಣ - ಬ್ರಹ್ಮಾಸ್ತ್ರದಿಂದ, ವಿಮುಕ್ತಃ - ಬಿಡಲ್ಪಟ್ಟನು, ಸಃ - ಆ, ಅಸ್ತ್ರಬಂಧಶ್ಚ - ಬ್ರಹ್ಮಾಸ್ತ್ರದ ಕಟ್ಟೂ ಅನ್ಯಂ - ಇತರವಾದ, ಬಂಧಂ - ಕಟ್ಟನ್ನು, ನಾನುವರ್ತತೇಹಿ - ಅನುಸರಿಸುವುದಿಲ್ಲವಷ್ಟೆ ? ॥೪೯॥ ಅಥ - ಆಮೇಲೆ, ವೀರಃ- ಶೂರನಾದ, ಇಂದ್ರಜಿತ್ತು - ಇಂದ್ರಜಿತ್ತಾದರೋ, ಕಪಿಸತ್ತಮಂ-ಕಪಿಗಳಲ್ಲಿ

ಆ ಹಿಂದೆ ರಕ್ಕಸರು-ನಿಶ್ಚೇಷ್ಟನಾಗಿರುವ ಹನುಮನನ್ನು ನೋಡಿ, ಕಟ್ಟು ಬಿದ್ದು, ಕೈಗೆ ಸಿಕ್ಕಿದನೆಂದು, ಹತ್ತಿರಕ್ಕೆ ಬಂದು ಎಲ್ಲರೂ ಸುತ್ತಿಕೊಂಡು, ಸಣಬಿನ ಹುರಿಗಳಿಂದಲೂ, ನಾರು ಬಟ್ಟೆಗಳಿಂದಲೂ ಬಿಗಿಯುತ್ತಿದ್ದರು ॥೪೭॥ ಅಹಹ ! ಇದು ಒಳ್ಳೆಸಮಯ, ಇಂದು ರಾಕ್ಷಸೇಂದ್ರನನ್ನು ನೋಡುವೆನು, ಅವನು ನನ್ನನ್ನು ನೋಡಬೇಕೆಂದು ಕುತೂಹಲ ಪಡುತ್ತಿರಬೇಕು ಎಂದು ನಿಶ್ಚೈಸಿ, ಹಗೆಯು ಪಡೆಯುವರ ಕಟ್ಟನ್ನೂ, ನಿರ್ಬಂಧವನ್ನೂ, ಸೆಳೆತವನ್ನೂ ಸಹಿಸಿ ಸುಮ್ಮನಿದ್ದನು॥೪೮॥ ಹುರಿ, ನಾರು, ಬಟ್ಟೆ ಮೊದಲಾದವುಗಳಿಂದ ಕಟ್ಟಲ್ಪಟ್ಟನು. ಅಷ್ಟು ಹೊತ್ತಿಗೆ ಬ್ರಹ್ಮಾಸ್ತ್ರದ ಬಿಡುಗಡೆಯಾಯಿತು. ಮಹಾ ಪರಾಕ್ರಮಶಾಲಿಯಾದ ಹನುಮನಿಗೆ ರಕ್ಕಸರ ಕಟ್ಟುಗಳು ಮಾತ್ರವೇ ಇದ್ದುವಲ್ಲದೆ ಬ್ರಹ್ಮಾಸ್ತ್ರವೂ ಅವುಗಳನ್ನು ಅನುಸರಿಸಿ ಇರಲಿಲ್ಲ ॥೪೯॥ ಆ ಮೇಲೆ ಇಂದ್ರಜಿತುವು-ಇದನ್ನೆಲ್ಲ ನೋಡುತ್ತಿದ್ದನು. ಮಹಾವೀರನೂ ಕಪಿವರನೂ ಆಗಿರುವ ಈ ಮಾರುತಿಯು-ನಾರುಬಟ್ಟೆಗಳಿಂದಲೂ, ಹುರಿಗಳಿಂದಲೂ ಕಟ್ಟಲ್ಪಟ್ಟಿದಾನೆ, ಇವನಿಗೆ ಬ್ರಹ್ಮಾಸ್ತ್ರಬಂಧವಿರುವಂತೆ

ವಿಮುಕ್ತ ಮಸ್ತ್ರೇಣ ಜಗಾಮ ಚಿಂತಾಂ ನಾನ್ಯೇನ ಬದ್ಧೋ ಹ್ಯನು ವರ್ತತೇ ಸ್ತ್ರಮ್॥೫೧॥
ಅಹೋ ಮಹತ್ಕರ್ಮ ಕೃತಂ ನಿರಾರ್ಥಕಂ ನ ರಾಕ್ಷಸೈರ್ಮಂತ್ರಗತಿ ರ್ವಿಮೃಷ್ಟಾ।
ಪುನಶ್ಚ ನಾಸ್ತ್ರೇ ವಿಹತೇ ಸ್ತ್ರ ಮನ್ಯ ತ್ಪ್ರವರ್ತತೇ ಸಂಶಯಿತಾ ಸ್ಸ್ಮ ಸರ್ವೇ॥೫೧॥
ಅಸ್ತ್ರೇಣ ಹನುಮಾ ನ್ಮುಕ್ತೋ ನಾತ್ಮಾನ ಮವಬುಧ್ಯತ ।
ಕೃಷ್ಯಮಾಣಸ್ತು ರಕ್ಷೋಭಿ ಸ್ತೈಶ್ಚ ಬಂಧೈ ರ್ನಿಪೀಡಿತಃ ॥೫೩॥

ಶ್ರೇಷ್ಠನಾದ, ತಂ - ಆ ಹನುಮಂತನನ್ನು, ದ್ರುಮಚೀರಬದ್ಧಂ-ಗಿಡಗಳ ನಾರಿನಿಂದ ಕಟ್ಟಲ್ಪಟ್ಟವನಾದ ಕಾರಣವೇ, ಅಸ್ತ್ರೇಣ - ಬ್ರಹ್ಮಾಸ್ತ್ರದಿಂದ, ವಿಮುಕ್ತಂ - ಬಿಡಲ್ಪಟ್ಟವನನ್ನಾಗಿ, ವಿಚಾರ್ಯ - ಯೋಚಿಸಿ (ತಿಳಿದುಕೊಂಡು) ಅನ್ಯೇನ - ಬ್ರಹ್ಮಾಸ್ತ್ರಕಿಂತ ಬೇರಾದ ಕಟ್ಟಿನಿಂದ, ಬದ್ಧಃ- ಕಟ್ಟಿಬಿದ್ದವನು, ಅಸ್ತ್ರಂ ಬ್ರಹ್ಮಾಸ್ತ್ರವನ್ನು, ನಾನುವರ್ತತೇಹಿ - ಅನುಸರಿಸುವುದಿಲ್ಲವಲ್ಲವೆ? ಇತಿ - ಹೀಗೆಂದು, ಚಿಂತಾಂ - ಯೋಚನೆಯನ್ನು, ಜಗಾಮ - ಹೊಂದಿದನು ॥೫೧॥ ರಾಕ್ಷಸೈಃ - ರಕ್ಕಸರಿಂದ, ನಿರರ್ಥಕಂ - ಪ್ರಯೋಜನವಿಲ್ಲದ, ಮಹತ್ - ದೊಡ್ಡದಾದ, ಕರ್ಮ - ಕೆಲಸವು, ಕೃತಂ - ಮಾಡಲ್ಪಟ್ಟಿತು, ರಾಕ್ಷಸೈಃ - ಅಸುರರಿಂದ, ಮಂತ್ರಗತಿಃ - ಮಂತ್ರಗಳ ಗತಿಯು, ನವಿಮೃಷ್ಟಾ - ವಿಮರ್ಶೆಮಾಡಲಿಲ್ಲವಾಯಿತು, ಅಸ್ತ್ರೇ - ಬ್ರಹ್ಮಾಸ್ತ್ರವು, ವಿಹತೇಸತಿ - ಇತರವಸ್ತುವಿನಿಂದ ಹೊಡೆಯಲ್ಪಡುತ್ತಿರಲಾಗಿ, ಅನ್ಯತ್- ಬೇರೊಂದಾದ, ಅಸ್ತ್ರ- ಅಸ್ತ್ರವು, ನಪ್ರವರ್ತತೇ - ಪ್ರವರ್ತಿಸುವುದಿಲ್ಲವು, (ತಚ್ಚ - ಆ ಬ್ರಹ್ಮಾಸ್ತ್ರವೂ) ಪುನಃ - ಮರಳಿ, ನಪ್ರವರ್ತತೆ - ಪ್ರವೇಶಿಸುವುದಿಲ್ಲ, ಅಹೊ - ಆಶ್ಚರ್ಯವು, ಅತಃ - ಅದರಿಂದ) ಸರ್ವೆ - ನಾವೆಲ್ಲರೂ, ಸಂಶಯಿತಾಃ - ಸಂದೇಹವುಳ್ಳವರಾಗಿದೇವೆ, (ಇತಿ - ಹೀಗೆಂದು, ಚಿಂತಾಂ - ಯೋಚನೆಯನ್ನು, ಜಗಾಮ - ಹೊಂದಿದನು) ॥೫೧॥ ಹನುಮಾನ್ - ಆಂಜನೇಯನು. ಅಸ್ತ್ರೇಣ - ಬ್ರಹ್ಮಾಸ್ತ್ರದಿಂದ, ಮುಕ್ತಃ - ಬಿಡಲ್ಪಟ್ಟವನಾಗಿ, ಆತ್ಮಾನಂ - ತನ್ನನ್ನು. ನಾವಬುಧ್ಯತ- ತಿಳಿಯಲಿಲ್ಲ, ತೈಃ - ಆ, ರಕ್ಷೋಭಿಃ - ರಾಕ್ಷಸರಿಂದ, ಕೃಷ್ಯಮಾಣಃ - ಸೆಳೆಯಲ್ಪಡುತಲಿರುವವನೂ, ಬಂಧೈಃ-ಹಗ್ಗಮೊದಲಾದ ಕಟ್ಟುಗಳಿಂದಲೂ

**ಕಾಣಬರುವುದಿಲ್ಲ, ಬೇರೆ ಕಟ್ಟುಗಳಿಂದ ಕಟ್ಟಲ್ಪಟ್ಟವನಾಗಿರುತ್ತಾ ಬ್ರಹ್ಮಾಸ್ತ್ರಬಂಧವನ್ನು ಅನುಸರಿಸಿ ಇರುವವನಂತ ಕಾಣಬರುತಲಿದಾನೆ.॥೫೦॥ಅಹಹ ! ನಾವು ಇಷ್ಟು ಹೊತ್ತು ಪ್ರಯಾಸಪಟ್ಟು ಮಾಡಿದ ಕೆಲಸವೆಲ್ಲವೂ ವ್ಯರ್ಥವಾಯಿತು. ಬ್ರಹ್ಮಾಸ್ತ್ರದ ಸ್ವಭಾವವನ್ನೂ ಅರಿಯದೆ ಈರಾಕ್ಷಸರು ಇವನನ್ನು ಹಗ್ಗಗಳಿಂದ ಅನ್ಯಾಯವಾಗಿ ಕಟ್ಟುತಲಿದಾರೆ.ಬಂದು ಸಾರಿಪ್ರಯೋಗಿಸಿದ ಬ್ರಹ್ಮಾಸ್ತ್ರವನ್ನೇ ಮರಳಿ ಪ್ರಯೋಗಿಸಿದರೂ ಇವನ ವಿಷಯದಲ್ಲಿ ನಿರರ್ಥಕವೇ ಸರಿ. ಹೀಗಿರುವಲ್ಲಿ ಇತರ ಅಸ್ತ್ರಗಳಿಂದ ಇವನಿಗೆ ಯಾವ ತೊಂದರೆಯೂ ಆಗುವುದೇ ಇಲ್ಲ. ಈ ರಾಕ್ಷಸರಿಗೆ ಮಂತ್ರಗಳ ವೀರ್ಯವತ್ತೆಯು ತಿಳಿಯದು. ಬ್ರಹ್ಮಾಸ್ತ್ರದಕಟ್ಟೇ ಇಲ್ಲದಿರುವಾಗ ಇತರವಾದ ಕಟ್ಟುಗಳು ಇವನನ್ನು ಏನುಮಾಡಬಲ್ಲವು. ಪಿತಾಮಹಾಸ್ತ್ರದ ಬಂಧಕ್ಕೆ ಇವನು ಸಿಲುಕಿರುವನೋ ಇಲ್ಲವೋ ಎಂದು ಎಲ್ಲರೂ ಸಂಶಯ ಪಡುತಲಿದಾರೆ ॥೫೧॥ ರಾಕ್ಷಸರೊಳಗೆ ಆಂಜನೇಯನು ಬ್ರಹ್ಮಾಸ್ತ್ರಬಲದಿಂದ ಮುಕ್ತನಾಗಿದಾನೆ ಎಂಬ ಸಂಗತಿಯು ಯಾರಿಗೂ ಗೊತ್ತಾಗಲೇ ಇಲ್ಲ. ಆದ್ದರಿಂದ ದ್ರುಮಚೀರಗಳೇ ಮೊದಲಾದವುಗಳಿಂದ ಕಟ್ಟಿ, ಅವನನ್ನು ಹಿಗ್ಗಾಮುಗ್ಗಾ ಸೆಳೆದು ಹಿಂಸಿಸುತಲಿದ್ದರು. ಆದರೂ ಆದೊಂದನ್ನೂ ತಿರಸ್ಕರಿಸದೆ ಆ ಬಾಧೆಯನ್ನು ಅನುಭವಿಸುತಲೇ ಸ್ಮೃತಿಯಿಲ್ಲದವನಾಗಿ**

ಹನ್ಯಮಾನ ಸ್ತತಃ ಕ್ರೂರೈ ರಾಕ್ಷಸೈಃ ಕಾಷ್ಠಮುಷ್ಟಿಭಿಃ ।
ಸಮೀಪಂ ರಾಕ್ಷಸೇಂದ್ರಸ್ಯ ಪ್ರಾಕೃಷ್ಯತ ಸ ವಾನರಃ ॥೫೩॥
ಅಥೇಂದ್ರಜಿ ತ್ತಂ ಪ್ರಸಮೀಕ್ಷ್ಯ ಮುಕ್ತ ಮಸ್ತ್ರೇಣ ಬದ್ಧಂ ದ್ರುಮ ಚೀರ ಸೂತ್ರೈಃ।
ವ್ಯದರ್ಶಯ ತ್ತತ್ರ ಮಹಾಬಲಂ ತಂ ಹರಿಪ್ರವೀರಂ ಸಗಣಾಯ ರಾಜ್ಞೇ ॥೫೪॥
ತಂ ಮತ್ತ ಮಿವ ಮಾತಂಗಂ ಬದ್ಧಂ ಕಪಿ ವರೋತ್ತಮಮ್ ।
ರಾಕ್ಷಸಾ ರಾಕ್ಷಸೇಂದ್ರಾಯ ರಾವಣಾಯ ನ್ಯವೇದಯನ್ ॥೫೫॥

---

ನಿಪೀಡಿತಶ್ಚ - ಹಿಂಸಿಸಲ್ಪಟ್ಟವನೂ, (ಅಭೂತ್ - ಆದನು) ॥೫೨॥ ತತಃ - ತರುವಾಯ, ಸಃ - ಆ, ವಾನರಃ - ಹನುಮಂತನು, ಕ್ರೂರೈಃ - ಘಾತುಕರಾದ, ರಾಕ್ಷಸೈಃ - ರಕ್ಕಸರಿಂದ, ಕಾಷ್ಠಮುಷ್ಟಿಭಿಃ - ಕಟ್ಟಿಗೆಗಳಿಂದಲೂ, ಹಿಡಿಗಳಿಂದಲೂ, ಹನ್ಯಮಾನಃ - ಹೊಡೆಯಲ್ಪಡುತ್ತಿರುವವನಾಗಿ' ರಾಕ್ಷಸೇಂದ್ರಸ್ಯ - ರಾವಣನ, ಸಮೀಪಂ - ಹತ್ತಿರವನ್ನು ಕುರಿತು, ಪ್ರಾಕೃಷ್ಯತ - ಸೆಳೆದೊಯ್ಯಲ್ಪಟ್ಟನು ॥೫೩॥ ಅಥ - ಅನಂತರದಲ್ಲಿ, ಇಂದ್ರಜಿತ್ - ಇಂದ್ರಾರಿಯು, ತಂ - ಆ ಹನುಮಂತನನ್ನು, ದ್ರುಮಚೀರಸೂತ್ರೈಃ - ನಾರುಬಟ್ಟೆ ಮತ್ತು ಹುರಿಗಳಿಂದ, ಬದ್ಧಂ- ಕಟ್ಟಲ್ಪಟ್ಟಿರುವನಾದಕಾರಣವೇ, ಅಸ್ತ್ರೇಣ - ಬ್ರಹ್ಮಾಸ್ತ್ರದಿಂದ, ಮುಕ್ತಂ - ಬಿಡಲ್ಪಟ್ಟವನನ್ನಾಗಿ, ಪ್ರಸಮೀಕ್ಷ್ಯ - ತಿಳಿದುಕೊಂಡು, ತತ್ರ - ಆ ರಾವಣನ ಸಮೀಪದಲ್ಲಿ, ಮಹಾಬಲಂ - ಹೇರಳವಾದ ಬಲವುಳ್ಳ, ಹರಿಪ್ರವೀರಂ- ಕಪಿವರನಾದ, ತಂ- ಆ ಮಾರುತಿಯನ್ನು, ಸಗಣಾಯ - ಪರಿಜನರಿಂದ ಸಹಿತನಾದ, ರಾಜ್ಞೇ - ರಾಕ್ಷಸರಾಜನಿಗೆ, ನ್ಯದರ್ಶಯತ್ - ತೋರಿದನು ॥೫೪॥ ರಾಕ್ಷಸಾಃ - ರಕ್ಕಸರು, ಬದ್ಧಂ - ಹಗ್ಗಗಳಿಂದ ಕಟ್ಟಲ್ಪಟ್ಟಿರುವ, ತಂ - ಆ, ಕಪಿವರೋತ್ತಮಂ - ವಾನರೋತ್ತಮನನ್ನು, ಮತ್ತಂ - ಮದಿಸಿರುವ, ಮಾತಂಗಮಿವ - ಆನೆಯನ್ನು ಹೇಗೋ ಹಾಗೆ, ರಾಕ್ಷಸೇಂದ್ರಾಯ - ರಾಕ್ಷಸರಾಜನಾದ, ರಾವಣಾಯ - ದಶಕಂಠರನಿಗೆ, ನ್ಯವೇದಯನ್ - ತಿಳಿಸಿದರು ॥೫೫॥ ಅಯಂ - ಇವನು, ಕಃ - ಯಾರು? ಕಸ್ಯ - ಯಾರಕಡೆಯವನು? ಕುತಃ -

---

ಇದ್ದನು.॥೫೨॥ ರಕ್ಕಸರೆಲ್ಲ ಬಳಸಿಕೊಂಡು ಕಾಷ್ಠಗಳಿಂದಲೂ, ಮುಷ್ಟಿಗಳಿಂದಲೂ ಹನುಮನನ್ನು ಹೊಡಿಯುತಲಿದ್ದರು. ಹಾಗೆಯೇ ಆ ಕ್ರೂರರು ರಾಕ್ಷಸ ರಾಜನ ಬಳಿಗೆ ಸೆಳೆದೊಯ್ಯುತ ಬಂದರು ॥೫೩॥ ಬಳಿಕ ಇಂದ್ರಜಿತುವು-ಬ್ರಹ್ಮಾಸ್ತ್ರದಿಂದ ಮಾರುತಿಯು ಬಿಡುಗಡೆಯನ್ನು ಹೊಂದಿರುವನೆಂದು ಸ್ಪಷ್ಟವಾಗಿ ತಿಳದುಕೊಂಡನು, ದ್ರುಮಚೀರಗಳಿಂದಲೂ, ಹಗ್ಗಗಳಿಂದಲೂ ಮಾತ್ರವೇ ಕಟ್ಟಲ್ಪಟ್ಟಿರುವನೆಂತಲೂ ಭಾವಿಸಿದನು, ಮಹಾ ಬಲಶಾಲಿಯಾದ ಆ ಹರಿವೀರನನ್ನು ಹಾಗೆಯೇ ಕರೆದುತಂದು ಸಮಸ್ತ ಪರಿವಾರದಿಂದ ಪರಿವೃತನಾಗಿರುವ ರಾಕ್ಷಸರಾಜನಿಗೆ ತೋರಿಸತೊಡಗಿದನು ॥೫೪॥ ಪರಿವಾರದ ರಾಕ್ಷಸರು-ಕಟ್ಟಿಗೊಳಗಾದ ಮದದಾನೆಯಂತೆ ಬದ್ಧನಾದ ಆ ಮಾರುತಿಯನ್ನು, ರಾಕ್ಷಸ ಚಕ್ರವರ್ತಿಗೆ ಒಪ್ಪಿಸಿದರು ॥೫೫॥ ಆ ಮಹಾಸ್ಥಾನದೊಳಗೆ ನೆರೆದಿರುವ ರಾಕ್ಷಸ ವೀರರೊಳಗೆ "ಇವನು

ಕೋऽಯಂ ಕಸ್ಯ ಕುತೋऽವಾತ್ರ ಕಿಂಕಾರ್ಯಂ ಕೋ ವ್ಯಪಾಶ್ರಯಃ।
ಇತಿ ರಾಕ್ಷಸ ವೀರಾಣಾಂ ತತ್ರ ಸಂಜಜ್ಞಿರೆ ಕಥಾಃ ॥೫೬॥
ಹನ್ಯತಾಂ ದಹ್ಯತಾಂ ವಾಪಿ ಭಕ್ಷ್ಯತಾ ಮಿತಿ ಚಾಪರೆ ।
ರಾಕ್ಷಸಾ ಸ್ತತ್ರ ಸಂಕ್ರುದ್ಧಾಃ ಪರಸ್ಪರ ಮಥಾಬ್ರುವನ್ ॥೫೭॥
ಅತೀತ್ಯ ಮಾರ್ಗಂ ಸಹಸಾ ಮಹಾತ್ಮಾ ಸ ತತ್ರ ರಕ್ಷೋऽಧಿಪ ಪಾದಮೂಲೆ ।
ದದರ್ಶ ರಾಜ್ಞಃ ಪರಿಚಾರ ವೃದ್ಧಾನ್ ಗೃಹಂ ಮಹಾರತ್ನ ವಿಭೂಷಿತಂ ಚ ॥೫೮॥
ಸ ದದರ್ಶ ಮಹಾತೇಜಾ ರಾವಣಃ ಕಪಿಸತ್ತಮಂ ।
ರಕ್ಷೋऽಭಿ ರ್ವಿಕೃತಾಕಾರೈಃ ಕೃಷ್ಯಮಾಣ ಮಿತಸ್ತತಃ ॥೫೯॥

---

ಎಲ್ಲಿಂದ (ಆಗತಃ - ಬಂದಿದಾನೆ? ) ಅತ್ರ - ಇಲ್ಲಿ, ಕಿಂ - ಏನು, ಕಾರ್ಯಂ - ಕೆಲಸವು, ಅಸ್ತಿ - ಉಂಟು? ಕಃ - ಯಾವನು, ವ್ಯಪಾಶ್ರಯಃ - ಆಧಾರವು, ಇತಿ - ಹೀಗೆಂಬ, ರಾಕ್ಷಸವೀರಾಣಾಂ - ಶೂರರಾದ ರಾಕ್ಷಸರ, ಕಥಾಃ - ಕಥೆಗಳು, ತತ್ರ - ಆ ರಾವಣನ ಸಮೀಪದಲ್ಲಿ, ಸಂಜಜ್ಞಿರೆ- ಉಂಟಾಗುತಲಿದ್ದುವು॥೫೬॥ ಅಥ - ಆಮೇಲೆ, ತತ್ರ - ಅಲ್ಲಿ, ಅಪರೆ - ಕೆಲವುಮಂದಿ, ರಾಕ್ಷಸಾಃ - ರಕ್ಕಸರು, ಸಂಕ್ರುದ್ಧಾಃ - ಹೆಚ್ಚಾಗಿ ಸಿಟ್ಟುಗೊಂಡವರಾಗಿ, ಅಸ್ಮಾಭಿಃ - ನಮ್ಮಗಳಿಂದ, ಅಯಂ - ಇವನು, ಹನ್ಯತಾಂ - ಕೊಲ್ಲಲ್ಪಡಬೇಕು, ದಹ್ಯತಾಂ - ಸುಡಲ್ಪಡಬೇಕು, ಭಕ್ಷ್ಯತಾಂವಾಪಿ - ಅಥವಾ ತಿನ್ನಲ್ಪಡಬೇಕು, ಇತಿಚ - ಹೀಗೆಂದೂ, ಪರಸ್ಪರಂ - ಅನ್ಯೋನ್ಯವಾಗಿ, ಅಬ್ರುವನ್ - ಹೇಳಿಕೊಳ್ಳುತಲಿದ್ದರು ॥೫೭॥ ಮಹಾತ್ಮಾ- ಬಹುಬುದ್ಧಿಯುಳ್ಳ, ಸಃ - ಆ ಹನುಮಂತನು, ಸಹಸಾ - ಬೇಗನೆ, ರಾಜ್ಞಃ - ದೊರೆಯ, ಮಾರ್ಗಂ - ದಾರಿಯನ್ನು, ಅತೀತ್ಯ - ದಾಟಿ, ತತ್ರ - ಆ ರಾಜಮಾರ್ಗಾನಂತರದಲ್ಲಿ, ರಕ್ಷೋऽಧಿಪಪಾದಮೂಲೆ - ರಾಕ್ಷಸರಾಜನ ಚರಣಸನ್ನಿಧಾನದಲ್ಲಿ, (ಸ್ಥಿತಾನ್ - ಇರುತ್ತಿರುವ) ಪರಿಚಾರವೃದ್ಧಾನ್ - ಮಂತ್ರಿವೃದ್ಧರನ್ನು, ದದರ್ಶ- ನೋಡಿದನು, ಮಹಾರತ್ನವಿಭೂಷಿತಂ - ದಿವ್ಯರತ್ನಗಳಿಂದಲಂಕರಿಸಲ್ಪಟ್ಟಿರುವ, ಗೃಹಂಚ -ಮನೆಯುನ್ನೂ ದದರ್ಶ - ನೋಡಿದನು ॥೫೮॥ ಮಹಾತೇಜಾಃ - ಬಹುತೇಜಸ್ಸುಳ್ಳ, ಸಃ - ಆ, ರಾವಣಃ - ರಾವಣನು, ವಿಕೃತಾಕಾರೈಃ - ವಿಕಾರವಾದ ಆಕಾರವುಳ್ಳ, ರಕ್ಷೋऽಭಿಃ - ರಾಕ್ಷಸರಿಂದ, ಇತಸ್ತತಃ - ಇಲ್ಲಿಂದಲ್ಲಿಗೆ,

---

ಯಾರು ? ಯಾರ ಕಡೆಯುವನು ? ಯಾವಕಾರ್ಯವನ್ನು ಕುರಿತು ಇಲ್ಲಿಗೆ ಬಂದಿದಾನೆ ? ಈ ಕೋಡಗನಿಗೆ ರಾಕ್ಷಸ ರಾಜಧಾನಿಯಲ್ಲಿ ಕೆಲಸವೇನಿದೆ ? ಆ ಸರೆಯಾಗಿರುವ ರಾರು?,, ಎಂದೀಪ್ರಕಾರವಾಗಿ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತಲಿದ್ದರು ॥೫೬॥ ಮತ್ತೆ ಕೆಲವರು-ಈ ಕಪಿಯು ನಮ್ಮ ನಗರಕ್ಕೆ ಬಂದು ಬಲು ಹಾವಳಿಯನ್ನು ಮಾಡಿದೆ, ಇದನ್ನು ಈಗಲೆ ಕೊಂದುಬಿಡಿರಿ, ಅಥವಾ ಸುಟ್ಟು ಬಿಡಿರಿ, ಹಾಗಿಲ್ಲದಿದ್ದರೆ ಎಲ್ಲರೂ ಹಂಚಿಕೊಂಡು ತಿಂದು ಬಿಡಿರಿ ಎಂತಲೂ ಪರಸ್ಪರವಾಗಿ ಸಂಭಾಷಿಸುತಲಿದ್ದರು ॥೫೭॥ ಮಹಾ ಬುದ್ಧಿಶಾಲಿಯಾದ ಮಾರುತಿಯು-ರಕ್ಕಸರ ಹಿಂಸೆಯನ್ನು ಅನುಭವಿಸುತಲೇ ದಾರಿಯನ್ನು ದಾಟಿ, ರಾಕ್ಷಸರಾಜನ ಸನ್ನಿಧಾನಕ್ಕೆ ಬಂದು,ರಾಜನ ಪರಿವಾರದವರಾಗಿ ಕುಳಿತಿರುವ ವೃದ್ಧರಾಕ್ಷಸರನ್ನೂ, ವಜ್ರವೈಡೂರ್ಯಗಳೇ ಮೊದಲಾದ ರತ್ನಗಳನ್ನು ಕೆತ್ತಿರಚಿಸಿರುವ ರಾಕ್ಷಸ ಸಾರ್ವಭೌಮನದಿವ್ಯಮಂದಿರವನ್ನೂ ನೋಡಿದನು ॥೫೮॥ ಹಾಗೆ ಇದಿರಿಗೆ ಬರುತಲಿರುವ ಮಾರುತಿಯನ್ನು ಮಹಾಕ್ರೂರವಾದ ಆಕಾರವುಳ್ಳನಿಶಾಚರರು ಇತ್ತತ್ತಸೆಳೆಯುತಲಿದಾರೆ,

ರಾಕ್ಷಸಾಽಧಿಪತಿಂ ಚಾಪಿ ದದರ್ಶ ಕಪಿಸತ್ತಮಃ ||
ತೇಜೋಬಲ ಸಮಾಯುಕ್ತಂ ತಪಂತ ಮಿವ ಭಾಸ್ಕರಮ್ ||೬೦||
ಸರೋಷ ಸಂವರ್ತಿತ ತಾಮ್ರದೃಷ್ಟಿ ರ್ದಶಾನನ ಸ್ತಂ ಕಪಿ ಮನ್ವವೇಕ್ಷ್ಯ |
ಅಥೋಪವಿಷ್ಟಾ ನ್ಕುಲಶೀಲ ವೃದ್ಧಾ ನ್ಸಮಾದಿಶ ತ್ತಂ ಪ್ರತಿ ಮಂತ್ರಿಮುಖ್ಯಾನ್ ||೬೧||
ಯಥಾಕ್ರಮಂ ತೈ ಸ್ಸಕಪಿ ರ್ವಿಪೃಷ್ಟಃ ಕಾರ್ಯಾರ್ಥ ಮರ್ಥಸ್ಯ ಚ ಮೂಲ ಮಾದೌ |
ನಿವೇದಯಾಮಾಸ ಹರೀಶ್ವರಸ್ಯ ದೂತ ಸ್ಸಕಾಶಾ ದಹ ಮಾಗತೋಽಸ್ಮಿ ||೬೨||

—ಇತಿ ಶ್ರೀಮತ್ಸುಂದರಕಾಂಡೇ ಅಷ್ಟಚತ್ವಾರಿಂಶ ಸ್ಸರ್ಗಃ—

---

ಕೃಷ್ಯಮಾಣಂ - ಸೆಳೆಯಲ್ಪಡುತಲಿರುವ, ಕಪಿಸತ್ತಮಂ - ಕಪಿವರನನ್ನು, ದದರ್ಶ-ನೋಡಿದನು ||೫೯|| ಕಪಿಸತ್ತಮಶ್ಚಾಪಿ - ಕಪಿವರನೂ, ತೇಜೋಬಲಸಮಾಯುಕ್ತಂ - ತೇಜೋಬಲಗಳಿಂದ ಸಹಿತನಾದ, ರಾಕ್ಷಸಾಧಿಪತಿಂಚಾಪಿ - ರಾಕ್ಷಸಚಕ್ರವರ್ತಿಯನ್ನೂ, ತಪನ್ತಂ - ಸುಡುತಲಿರುವ, ಭಾಸ್ಕರಮಿವ - ಸೂರ್ಯನನ್ನು ಹೇಗೋಹಾಗೆ, ದದರ್ಶ - ನೋಡಿದನು ||೬೦|| ಅಥ - ಅನಂತರದಲ್ಲಿ, ಸಃ - ಆ, ದಶಾನನಃ - ದಶಕಂಠನು, ತಂ - ಆ, ಕಪಿಂ - ವಾನರನನ್ನು, ಅನ್ವವೇಕ್ಷ್ಯ - ಚೆನ್ನಾಗಿನೋಡಿ, ರೋಷಸಂವರ್ತಿತತಾಮ್ರದೃಷ್ಟಿಃ - ರೋಷದಿಂದ ತಿರುಗಿಸುತಲಿರುವ ಕೆಂಗಣ್ಣುಳ್ಳವನಾಗಿ, ಉಪವಿಷ್ಟಾನ್ - ಪಕ್ಕದಲ್ಲಿ ಕುಳಿತಿರುವ, ಕುಲಶೀಲವೃದ್ಧಾನ್ - ಕುಲಾಚಾರಗಳಲ್ಲಿ ಹಳಬರಾದ, ಮಂತ್ರಿಮುಖ್ಯಾನ್ - ಸಚಿವವರನ್ನು ನೋಡಿ, ತಂಪ್ರತಿ - ಆ ಕಪಿಯ ವಿಷಯವನ್ನು ಕುರಿತು, ಸಮಾದಿದೇಶ - ಆಜ್ಞೆಮಾಡಿದನು ||೬೧|| ಸಃಕಪಿಃ - ಆ ಆಂಜನೇಯನು, ಕಾರ್ಯಾರ್ಥಂ - ಮಾಡಬೇಕಾದ ಕೆಲಸದ ವಿಷಯವನ್ನು, ಅರ್ಥಸ್ಯ - ಮಾಡಿದಕೆಲಸದ, ಮೂಲಂ - ನಿಮಿತ್ತವನ್ನೂ ಕುರಿತು, ತೈಃ - ಆ ಮಂತ್ರಿಗಳಿಂದ, ಯಥಾಕ್ರಮಂ - ಕ್ರಮವಾಗಿ, ಪೃಷ್ಟಃ - ಕೇಳಲ್ಪಟ್ಟವನಾಗಿ, ಅಹಂ - ನಾನು, ದೂತಃ - ರಾಯಭಾರಿಯು, ಹರೀಶ್ವರಸ್ಯ - ಕಪಿಸಾರ್ವಭೌಮನ, ಸಕಾಶಾತ್ - ಸಮೀಪದಿಂದ, ಆಗತಃ - ಬಂದವನಾಗಿ, ಅಸ್ಮಿನ್ - ಇದೇನೆ, ಇತಿ - ಹೀಗೆಂದು, ಆದೌ - ಮೊದಲಿನಲ್ಲಿ, ನಿವೇದಯಾಮಾಸ - ತಿಳಿಯಪಡಿಸಿದನು ||೬೨||

—ಇಂತು ನಲವತ್ತೆಂಟನೆಯ ಸರ್ಗಂ—

---

ಅಂತಹ ಹನುಮನನ್ನು ರಾಕ್ಷಸರಾಜನಾದ ರಾವಣನು ಕಂಡನು||೫೯|| ಮಹತ್ತರವಾದ ರಾಜತೇಜಸ್ಸಿನಿಂದಲೂ, ಬಾಹುಬಲದಿಂದಲೂ ಸಮನ್ವಿತನಾಗಿ, ಎರಡನೆಯ ಸೂರ್ಯನಂತೆ ಬೆಳಗುತಲಿರುವ ರಾಕ್ಷಸಾಧಿಪತಿಯನ್ನೂ ವೀರಹನುಮನು ಅವಲೋಕಿಸಿದನು ||೬೦|| ವಾನರ ವೀರನನ್ನು ಕಂಡಕೂಡಲೆ ಅಸುರ ಚಕ್ರವರ್ತಿಯಾದ ರಾವಣನಿಗೆ ಹೇರಳವಾದ ಸಿಟ್ಟುಹತ್ತಿತು. ಕಣ್ಣುಗಳು ಕೆಂಪಡರಿದುವು, ದೃಷ್ಟಿಗಳು ತಿರುಗುತಲಿದ್ದುವು, ಆಬಳಿಕ-ರಾಕ್ಷಸ ಮಂತ್ರಿವೃದ್ಧರನ್ನು ನೋಡಿ, ಹನುಮನನ್ನು ಪ್ರಶ್ನೆಮಾಡುವ ವಿಷಯದಲ್ಲಿ ಆಜ್ಞಾಪಿಸಿದನು ||೬೧|| ತರುವಾಯ ನಿಶಾಚರ ಸಚಿವರು-ಎಲೈ ಕೋಡಗನೇ! ನೀನು ರಾಕ್ಷಸರಾಜಧಾನಿಯನ್ನು ಕುರಿತು ಬರಲು ಕಾರಣವೇನು? ಕಳುಹಿಸಿದವರಾರು ? ಇಲ್ಲಿ ನಿನಗೆ ಕಾರ್ಯವೇನು ? ಎಂದು ಆಂಜನೇಯನನ್ನು ಕ್ರಮವಿಲ್ಲದೆ ಒಬ್ಬರಾದ ಮೇಲೆ ಒಬ್ಬರಂತೆ ಎಲ್ಲರೂ ಕೇಳುತಬರಲು, ಹರಿಯು-ಈ ನಾನು ಕಪಿಸಾರ್ವಭೌಮನ ಊಳಿಗದವನಾಗಿ ಬಂದಿದ್ದೇನೆಂದು ಇಷ್ಟುಮಾತ್ರ ಹೇಳಿ ಸುಮ್ಮನಿದ್ದನು ||೬೨||

— ಇಂತು ನಲವತ್ತೆಂಟನೆಯ ಸರ್ಗಂ —

ಶ್ರೀಃ

ಶ್ರೀರಾಮಚನ್ದ್ರಪರಬ್ರಹ್ಮಣೇನಮಃ.

## — ಏಕೋನನೆ ಪಂಚಾಶಸ್ಸರ್ಗಃ —



ತತಸ್ಸ ಕರ್ಮಣಾ ತಸ್ಯ ವಿಸ್ಮಿತೋ ಭೀಮ ವಿಕ್ರಮಃ ।
ಹನುಮಾನ್ರೋಷ ತಾಮ್ರಾಕ್ಷೋ ರಕ್ಷೋಧಿಪ ಮನ್ವೈಕ್ಷತ ॥ ೧ ॥
ಭ್ರಾಜಮಾನಂ ಮಹಾರ್ಹೇಣ ಕಾಂಚನೇನ ವಿರಾಜತಾ ।

— ನಲವತ್ತೊಂಭತ್ತನೆಯ ಸರ್ಗಂ —

**ಕಂದ॥** ಪರಿಕಿಸಲಸುರನ ನನಿತಕೆ । ಹರಿಸುಗತಿ ಮುನಿಸಡರ್ದ ಹನುಮಾ ಚಣಿನೊಳ್ ।
ನಿರುಕಿಸ ಲಸುರನ ಸಿರಿಯಂ । ಬೆರಗಾದಂ ನಿಶಿಕರೇಂದ್ರ ವಿಭವದಿ ನಾಗಳ್ ॥

**ತತಃ** - ತರುವಾಯ, ಭೀಮಪರಾಕ್ರಮಃ - ಭಯಂಕರವಾದ ಶೌರ್ಯವುಳ್ಳ, ಸಃ ಹನುಮಾನ್ - ಆ ವಾಯುಕುಮಾರನು, ತಸ್ಯ-ಆ ರಾವಣನ, ಕರ್ಮಣಾ-ವ್ಯಾಪಾರದಿಂದ, ವಿಸ್ಮಿತಃ-ಆಶ್ಚರ್ಯಪಟ್ಟವನಾಗಿ, ರೋಷತಾಮ್ರಾಕ್ಷಃ-ಸಿಟ್ಟಿನಿಂದ ಕೆಂಪಡರಿದ ಕಣ್ಣುಳ್ಳವನಾಗಿ, ರಕ್ಷೋಧಿಪಂ-ರಾಕ್ಷಸರಾಜನನ್ನು, ಅನ್ವೈಕ್ಷತ-ಚೆನ್ನಾಗಿ ನೋಡಿದನು ॥೧॥ ಅಥ - ಬಳಿಕ, ಮಹಾರ್ಹೇಣ-ಬಹುಬೆಲೆಯುಳ್ಳ, ಕಾಂಚನೇನ-ಸುವರ್ಣಮಯವಾಗಿರುವ, ವಿರಾಜತಾ - ಪ್ರಕಾಶಿಸುತಲಿರತಕ್ಕ, ಮುಕ್ತಾಜಾಲಾವೃತೇನ - ಮುತ್ತಿನ ಗೊಂಚಲುಗಳಿಂದ

— ನಲವತ್ತೊಂಭತ್ತನೆಯ ಸರ್ಗಂ —

ಬಹು ಬುದ್ಧಿ ಬಲ ಪೌರುಷ ಸಂಪನ್ನನಾದ ಮಾರುತಿಯು- ರಾಕ್ಷಸಸಾಮ್ರಾಜ್ಯದಲ್ಲಿ ನೆಲೆಗೊಂಡಿರುವ ರಾವಣನನ್ನು ನೋಡಿದನು. ಆಗ-ಆಹಹ ! ಇಂತಹ ವಿಶೇಷವಾದ ವೈಭವದಿಂದ ಶೋಭಿಸುತಲಿರುವ ಈ ದಶಕಂಧರನು ದುರುಳನಾಗಿ, ಸೀತಾಪಹಾರರೂಪವಾದ ಎಂತಹ ನೀಚಕೃತ್ಯವನ್ನು ಮಾಡಿದನು ? ಎಂದು ಅವನ ಕೀಳು ಕೆಲಸದಿಂದ ಸಿಟ್ಟು ತಲೆಗೇರಿತು, ರೋಷದಿಂದ ಕಣ್ಣುಗಳು ಕೆಂಪಡರಿ, ತಿರುಗುತಲಿದ್ದುವು. ಮತ್ತು - ನಾನು ವನಭಂಗವನ್ನು ಮಾಡಿ, ಇವನಿಗೆ ಕ್ರೋಧವನ್ನು ಕಲ್ಪಿಸಿ, ನಾನಿದ್ದ ಸ್ಥಲಕ್ಕೇ ಇವನನ್ನು ಬರಮಾಡಿಕೊಂಡು, ಇವನೊಡನೆ ಹೋರಾಡಿ, ನನ್ನ ಪೌರುಷವನ್ನು ಇವನಿಗೆ ತೋರಬೇಕೆಂದಿದ್ದೆನು, ಹೀಗಿರಲು-ರಾಜನೀತಿಯಲ್ಲಿ ವಿಶಾರದನಾದ ಇವನು ತನ್ನ ಕುಮಾರನಾದ ಇಂದ್ರಜಿತುವನ್ನು ಕಳುಹಿ, ಬ್ರಹ್ಮಾಸ್ತ್ರದಿಂದ ಕಟ್ಟನ್ನುಂಟುಮಾಡಿಸಿ, ನನ್ನನ್ನೇ ತಾನಿರುವ ಸ್ಥಲಕ್ಕೆ ಕರೆತರಿಸಿ, ತಾನು ಉಚ್ಚಾಸನದಲ್ಲಿ ಕುಳಿತು, ನನ್ನನ್ನು ಅಡಿಯಾಳಾಗಿರುವಂತೆ ಮಾಡಿರುವನಲ್ಲಾ ಎಂದೂ ಅವನನ್ನು ಉರಿಗಣ್ಣಿನಿಂದ ದುರುದುರನೆನೋಡಿ, ತಾನು ಭೀಮಪರಾಕ್ರಮನಾದರೂ ಆಶ್ಚರ್ಯಪಡುತ್ತಿದ್ದನು ॥೧॥ ತಳತಳನೆ ಹೊಳೆಯುತಲಿರುವ ಅಮೂಲ್ಯವಾದ ಸ್ವರ್ಣಾಭರಣಗಳಿಂದ ದಶಕಂಧರನು ಹೊಳೆಯುತಲಿದ್ದನು, ದೇದೀಪ್ಯಮಾ

ಮುಕ್ತಾ ಜಾಲಾವೃತೇ ನಾಥ ಮಕುಟೇನ ಮಹಾದ್ಯುತಿಂ ॥ ೨ ॥
ವಜ್ರಸಂಯೋಗ ಸಂಯುಕ್ತೈ ರ್ಮಹಾರ್ಹ ಮಣಿವಿಗ್ರಹೈಃ ।
ಹೈಮೈರಾಭರಣೈ ಶ್ಚಿತ್ರೈ ರ್ಮನಸೇವ ಪ್ರಕಲ್ಪಿತೈಃ ॥ ॥
ಮಹಾರ್ಹ ಕ್ಷೌಮ ಸಂವೀತಂ ರಕ್ತಚಂದನ ರೂಷಿತಂ ।
ಸ್ವನುಲಿಪ್ತಂ ವಿಚಿತ್ರಾಭಿ ರ್ವಿವಿಧಾಭಿಶ್ಚ ಭಕ್ತಿಭಿಃ ॥೪॥
ವಿವೃತ್ತೈ ರ್ದರ್ಶನೀಯೈಶ್ಚ ರಕ್ತಾಕ್ಷೈ ರ್ಭೀಮ ದರ್ಶನೈಃ ।
ದೀಪ್ತ ತೀಕ್ಷ್ಣ ಮಹಾದಂಷ್ಟ್ರೈಃ ಪ್ರಲಂಬ ದಶನಚ್ಛದೈಃ ॥೫॥

---

ಆವರಿಸಲ್ಪಟ್ಟಿರುವ, ಮಕುಟೇನ-ಕಿರೀಟದಿಂದ, ಭ್ರಾಜಮಾನಂ - ಬೆಳಗುತಲಿರುವನಾದ ಕಾರಣವೇ, ಮಹಾದ್ಯುತಿಂ - ಹೇರಳವಾದ ತೇಜಸ್ಸುಳ್ಳವನಾಗಿರುವ, (ರಾಕ್ಷಸಪತಿಂ - ರಾಕ್ಷಸರಾಜನನ್ನು, ಅಪಶ್ಯತ್-ನೋಡಿದನು,-೧೪ನೆಯ ಶ್ಲೋಕದೊಡನೆ ಅನ್ವಯವು) ॥೨॥ ವಜ್ರಸಂಯೋಗ ಸಂಯುಕ್ತೈಃ - ವಜ್ರ ಮಣಿಗಳ ಸಂಬಂಧದಿಂದೊಡಗೂಡಿದ, ಮಹಾರ್ಹ ಮಣಿವಿಗ್ರಹೈಃ - ಅಮೂಲ್ಯವಾದ ರತ್ನಗಳ ಆಕಾರಗಳುಳ್ಳ, ಹೈಮೈಃ - ಚಿನ್ನದಿಂದ ಮಾಡಿರುವ, ಚಿತ್ರೈಃ - ಆಶ್ಚರ್ಯಕರಗಳಾದ, ಮನಸಾ - ಮನಸ್ಸಿನಿಂದ, ಪ್ರಕಲ್ಪಿತೈರಿವ - ಸೃಷ್ಟಿಸಲ್ಪಟ್ಟಂತಿರುವ, ಆಭರಣೈಃ - ಒಡವೆಗಳಿಂದ, (ಉಪಲಕ್ಷಿತಂ - ಕೂಡಿರುವ) ಮಹಾರ್ಹಕ್ಷೌಮಸಂವೀತಂ - ಶ್ರೇಷ್ಠವಾದ ದುಕೂಲವನ್ನು ಧರಿಸಿರತಕ್ಕ, ರಕ್ತಚಂದನ ರೂಷಿತಂ - ಕೆಂಪು ಗಂಧದಿಂದಲೇಪಿಸಲ್ಪಟ್ಟಿರುವ, ವಿಚಿತ್ರಾಭಿಃ - ಆಶ್ಚರ್ಯಕರಗಳೆನಿಸಿರುವ, ವಿವಿಧಾಭಿಃ - ಬಗೆಬಗೆಯುದಾದ, ಭಕ್ತಿಭಿಃ - ಕಸ್ತೂರಿಮೊದಲಾದವುಗಳ ರಚನೆಗಳಿಂದ, ಸ್ವನುಲಿಪ್ತಂ - ಚೆನ್ನಾಗಿ ಲೇಪಿಸಲ್ಪಟ್ಟ ॥೩-೪॥ ವಿವೃತ್ತೈಃ - ತೆರೆದಿರುವ (ಅರಳಿರುವ), ದರ್ಶನೀಯೈಶ್ಚ - ಸುಂದರಗಳಾದ, ಭೀಮದರ್ಶನೈಃ-ಭಯಂಕರಗಳೆನಿಸಿರತಕ್ಕ ನೋಟವುಳ್ಳ, ರಕ್ತಾಕ್ಷೈಃ - ಕೆಂಪಾದ ಕಣ್ಣುಗಳಿಂದಲೂ, ದೀಪ್ತತೀಕ್ಷ್ಣ ಮಹಾದಂಷ್ಟ್ರೈಃ - ಹೊಳೆಯುತಲಿರುವ, ಮೊನೆಯಾದ ಕೋರೆಹಲ್ಲುಗಳಿಂದಲೂ, ಪ್ರಲಂಬ ದಶನಚ್ಛದೈಃ - ಜೋಲಾಡುತಲಿರುವ ತುಟಿಗಳಿಂದಲೂ, ದಶಭಿಃ - ಹತ್ತಾದ, ಶಿರೋಭಿಃ - ತಲೆಗಳಿಂದಲೂ, ಭ್ರಾಜಮಾನಂ - ಪ್ರಕಾಶಿಸುತಲಿರುವನಾದ ಕಾರಣವೇ, ನಾನಾವ್ಯಾಳ ಸಮಾಕೀರ್ಣೈಃ - ವಿವಿಧವಾದ

---

ನವಾದ ಕಾಂತಿಯಿಂದೊಡಗೂಡಿರುವ ತೋರವಾದ ಮುತ್ತುಗಳ ಗೊಂಚಲುಗಳಿಂದ ಅಲಂಕೃತವಾದ ಕಿರೀಟದಿಂದ ರಾರಾಜಿಸುತಲಿದ್ದನು ॥೨॥ ಆ ರಾಕ್ಷಸ ರಾಜನು ಅಳವಟ್ಟಿರುವ ವಜ್ರವೈಡೂರ್ಯ ಗೋಮೇಧಿಕ ಪುಷ್ಯರಾಗ ಮರಕತ ಮಾಣಿಕ್ಯ ಮೊದಲಾದ ರತ್ನಗಳನ್ನು ಕೆತ್ತಿ ರಚಿಸಿರುವ ಕುಂದಣದ ಬಗೆಬಗೆಯ ಆಭರಣಗಳನ್ನು ನೋಡಿದರೆ ಇವೇನು ಏರುಕೋರೆಗಳಿಲ್ಲದಿರುವಂತೆ ಮನಸ್ಸಿನಿಂದ ನಿರ್ಮಾಣಮಾಡಲ್ಪಟ್ಟವೆಯೋ ಎಂಬಂತೆ ಕಾಣಬರುತಲಿದ್ದುವು. ಅನರ್ಘ್ಯವಾದ ದುಕೂಲಗಳನ್ನು ಧರಿಸಿ ಇದ್ದನು, ರಕ್ತ ಚಂದನ ಲೇಪನದಿಂದ ರಾರಾಜಿಸುತಲಿದ್ದನು, ಪ್ರತಿಯೊಂದು ಅವಯವದಲ್ಲಿಯೂ ನಾನಾ ವಿಧವಾದ ರಚನೆಗಳ ಚಾತುರ್ಯದಿಂದ ಪರಿಜನರು ಅಲಂಕರಿಸಿ ಇದ್ದರು ॥೩, ೪॥ ಚೆನ್ನಾಗಿ ಅರಳಿಯೂ, ಕೆಂಡದಂತೆ ಕೆಂಪಡರಿಯೂ, ಭಯಂಕರವಾದ ನೋಟವುಳ್ಳವುಗಳಾಗಿಯೂ ಇರುವ ಕೆಂಗಣ್ಣುಗಳು ಕಂಗೊಳಿಸುತಲಿದ್ದುವು. ತೋರವಾಗಿಯೂ ನೀಳವಾಗಿಯೂ, ಮೊನೆಯಾಗಿಯೂ ಇರುವ ಕೋರೆಹಲ್ಲುಗಳ ಬೆಳಕಿನಿಂದೊಡಗೂಡಿ ಜೋಲಾಡುತಲಿರುವ

ಶಿರೋಭಿ ರ್ದಶಭಿ ರ್ವೀರಂ ಭ್ರಾಜಮಾನಂ ಮಹೌಜಸಂ ।
ನಾನಾ ವ್ಯಾಳ ಸಮಾಕೀರ್ಣೈ ಶ್ಶಿಖರೈ ರಿವ ಮಂದರಂ ॥೬॥
ನೀಲಾಂಜನ ಚಯಪ್ರಖ್ಯಂ ಹಾರೇ ಣೋರಸಿ ರಾಜತಾ ।
ಪೂರ್ಣಚಂದ್ರಾಭ ವಕ್ತ್ರೇಣ ಸಬಲಾಕ ಮಿವಾಂಬುದಂ ॥೭॥
ಬಾಹುಭಿರ್ಬದ್ಧ ಕೇಯೂರೈ ಶ್ಚಂದನೋತ್ತಮ ರೂಷಿತೈಃ ।
ಭ್ರಾಜಮಾನಾಂಗದೈಃ ಪೀನೈಃ ಪಂಚಶೀರ್ಷೈ ರಿವೋರಗೈಃ ॥೮॥
ಮಹತಿ ಸ್ಫಾಟಿಕೆ ಚಿತ್ರೆ ರತ್ನಸಂಯೋಗ ಸಂಸ್ಕೃತೆ ।

ಕ್ರೂರಜಂತುಗಳಿಂದ ತುಂಬಿದ, ಶಿಖರೈಃ - ಕೋಡುಗಳಿಂದೊಡಗೂಡಿರುವ, ಮಂದರಮಿವ - ಮಂದರ ಪರ್ವತದಂತಿರಕ್ಕ, ವೀರಂ - ಮಹಾಶೂರನೆನಿಸಿದ, ಮಹೌಜಸಂ - ಮಹಾತೇಜಸ್ಸುಳ್ಳ ॥೫,೬॥ ನೀಲಾಂಜನ ಚಯಪ್ರಖ್ಯಂ - ಕಪ್ಪಾದ ಕಾಡಿಗೆಯ ಮುದ್ದೆಯಂತೆ ಕಂಗೊಳಿಸುವ, ಉರಸಿ - ಎದೆಯಲ್ಲಿ, ರಾಜತಾ-ಹೊಳೆಯುತಲಿರುವ, ಪೂರ್ಣಚಂದ್ರಾಭವಕ್ತ್ರೇಣ - ಚಂದಿರನಂತೆಸೆವ ನಾಯಕಮಣಿಯಿಂದೊಡಗೂಡಿದ, ಹಾರೇಣ - ಮುತ್ತಿನಹಾರದಿಂದ ಕೂಡಿರುವವನಾದ ಕಾರಣವೇ, ಸಬಲಾಕಂ - ಕೊಕ್ಕರೆಗಳಿಂದ ಸಹಿತವಾದ, ಅಂಬುದಮಿವ - ಮೇಘದಂತಿರಕ್ಕ, ॥೭॥ ಬದ್ಧಕೇಯೂರೈಃ - ತೊಟ್ಟಿರುವ ಭುಜಕೀರ್ತಿಗಳುಳ್ಳ, ಚಂದನೋತ್ತಮರೂಷಿತೈಃ - ಉತ್ತಮವಾದ ಶ್ರೀಗಂಧದಿಂದ ವ್ಯಾಪ್ತಗಳಾದ, ಭ್ರಾಜಮಾನಾಂಗದೈಃ - ಹೊಳೆಯುತಲಿರುವ ಬಾಪುರಿಗಳುಳ್ಳ, (ತೋಳಿನ ನಡುವೆ ಕಟ್ಟಿಕೊಳ್ಳುವ ಒಡವೆ) ಪೀನೈಃ - ಚೆನ್ನಾಗಿ ಬಲಿತಿರತಕ್ಕವುಗಳಾದಕಾರಣವೇ, ಪಂಚಶೀರ್ಷೈಃ - ಐದು ತಲೆಗಳುಳ್ಳ, ಉರಗೈರಿವ - ಸರ್ಪಗಳಂತಿರುವ, ಬಾಹುಭಿಃ - ತೋಳುಗಳಿಂದ, (ಉಪಲಕ್ಷಿತಂ - ಕೂಡಿರುವ) ಮಹತಿ - ದೊಡ್ಡದಾದ ಸ್ಫಟಿಕೆ - ಸ್ಫಟಿಕಶಿಲೆಯಿಂದ ಮಾಡಿರುವ, ಚಿತ್ರೈಃ - ಆಶ್ಚರ್ಯಕರವೆನಿಸಿರುವ, ರತ್ನಸಂಯೋಗ ಸಂಸ್ಕೃತೆ - ನವರತ್ನಗಳ ಕೆತ್ತನೆಯಿಂದ ಅಲಂಕರಿಸಲ್ಪಟ್ಟಿರುವ, ಉತ್ತಮಾಸ್ತರಣಾಸ್ತೀರ್ಣೆ - ಶ್ರೇಷ್ಠವಾದ

ತುದಿಗಳಿಗೆ ಎಣೆಯೇ ಇರಲಿಲ್ಲ ॥ ೫ ॥ ಹತ್ತು ತಲೆಗಳಿಂದ ಬೆಳಗುತಲಿದ್ದನು, ಅಪ್ರತಿಮ ವೀರನು, ಅಸದೃಶವಾದ ಕಾಂತಿ, ಅನ್ಯಾದೃಶವಾದ ತೇಜಸ್ಸು, ಇಷ್ಟು ಸಂಭ್ರಮದಿಂದಿರುವ ಅವನನ್ನು ನೋಡಿದರೆ, ನಾನಾ ವಿಧವಾದ ಘಾತುಕಜಾತುಗಳಿಂದಲೂ, ಎತ್ತರವಾದ ಕೋಡುಗಳಿಂದಲೂ ಸಹಿತವಾಗಿರುವ ಮಂದರ ಪರ್ವತದಂತೆ ಕಾಣಬರುತ್ತಿದ್ದನು ॥ ೬ ॥ ಅಗಲವಾದ ಎದೆಯಲ್ಲಿ ಪೂರ್ಣಚಂದ್ರನಂತೆಸವ ನಾಯಕ ಮಣಿಯಿಂದ ಬೆಳಗುತಲಿರುವ ತೋರಮುತ್ತಿನ ಹಾರದಿಂದಲೂ, ಕಪ್ಪಾದ ಕಾಡಿಗೆಯ ರಾಶಿಯಂತಿರುವ ಶರೀರದಿಂದಲೂ ಆ ದಶಕಂಧರನು-ಕೊಕ್ಕರೆಗಳ ಸಾಲಿನಿಂದ ಸಹಿತವಾದ ಮುಂಗಾರು ಮೋಡದಂತೆ ತೋರಿ ಬರುತಲಿದ್ದನು ॥ ೭ ॥ ಉತ್ತಮವಾದ ಚಂದನದ ಲೇಪನವನ್ನು ಪಡೆದು, ತೋಳಿನ ನಡುವೆ ಬಾಪುರಿಯೆಂಬ ಅಮೂಲ್ಯವಾದ ಆಭರಣದಿಂದ ಶೋಭಿಸುತ್ತ, ಬಾಹುಮೂಲದಲ್ಲಿ ರತ್ನಖಚಿತವಾದ ಅಂಗದಗಳಿಂದೊಡಗೂಡಿಯೂ ಇರುವ ಬಲಿತ ತೋರವಾದ ತೋಳುಗಳನ್ನು ನೋಡಿದರೆ, ಐದು ಹೆಡೆಗಳಿಂದೊಡಗೂಡಿದ ಮಹಾ ಸರ್ಪಗಳಂತೆ ಘೋರವಾಗಿದ್ದುವು ॥ ೮ ॥ ನಾನಾವಿಧವಾದ ಅಮೂಲ್ಯರತ್ನಗಳನ್ನು ಕೆತ್ತಿ, ಬಗೆಬಗೆಯ ಕೈವಾಡದ ಕೆಲಸಗಳನ್ನು ತೋರಿ, ಸ್ಫಟಿಕ ಶಿಲೆಯಿಂದ ಕಲ್ಪಿಸಿ, ರತ್ನ ಕಂಬಳಿ

ಉತ್ತಮಾ ಸ್ತರಣಾಸ್ತೀರ್ಣೆ ಸೂಪವಿಷ್ಟಂ ವರಾಸನೆ ॥ ೯ ॥
ಅಲಂಕೃತಾಭಿ ರತ್ಯರ್ಥಂ ಪ್ರಮದಾಭಿ ಸ್ಸಮಂತತಃ ।
ವಾಲ ವ್ಯಜನ ಹಸ್ತಾಭಿ ರಾರಾ ತ್ಸಮುಪ ಸೇವಿತಂ ॥೧೦॥
ದುರ್ಧರೇಣ ಪ್ರಹಸ್ತೇನ ಮಹಾಪಾರ್ಶ್ವೇನ ರಕ್ಷಸಾ ।
ಮಂತ್ರಿಭಿ ರ್ಮಂತ್ರ ತತ್ವಜ್ಞೈ ರ್ನಿಕುಂಭೇನ ಚ ಮಂತ್ರಿಣಾ ॥೧೧॥
ಸುಖೋಪವಿಷ್ಟಂ ರಕ್ಷೋಭಿ ಶ್ಚತುರ್ಭಿ ರ್ಬಲದರ್ಪಿತೈಃ ।
ಕೃತ್ಸ್ನಃ ಪರಿವೃತೋ ಲೋಕ ಶ್ಚತುರ್ಭಿ ರಿವ ಸಾಗರೈಃ ॥೧೨॥
ಮಂತ್ರಿಭಿ ರ್ಮಂತ್ರ ತತ್ವಜ್ಞೈ ರನ್ಯೈ ಶ್ಚ ಶುಭ ಬುದ್ಧಿಭಿಃ ॥

ರತ್ನಗಂಬಳಿಯನ್ನು ಹಾಸಿರುವ, ವರಾಸನೆ - ಉನ್ನತವಾದ ಸಿಂಹಾಸನದಲ್ಲಿ, ಸೂಪವಿಷ್ಟಂ - ಮೋಡಿಯಿಂದ ಕುಳಿತಿರತಕ್ಕ ॥೮-೯॥ ಅತ್ಯರ್ಥಂ - ಹೇರಳವಾಗಿ, ಅಲಂಕತಾಭಿಃ - ಅಲಂಕರಿಸಿ ಕೊಂಡಿರುವ, ವಾಲವ್ಯಜನಹಸ್ತಾಭಿಃ - ಬೀಸುವಚಾಮರಗಳನ್ನು ಕಯ್ಯಲ್ಲಿ ಹಿಡಿದಿರುವ, ಪ್ರಮದಾಭಿಃ - ಮದವತಿಯರಾದ ತರುಣಿ ಯರಿಂದ, ಆರಾತ್ - ಹತ್ತಿರದಲ್ಲಿ, ಸಮಂತತಃ - ಸುತ್ತಲೂ, ಸಮುಪಸೇವಿತಂ - ಚೆನ್ನಾಗಿ ಸೇವಿಸಲ್ಪಡುತಲಿರುವ ॥೧೦॥ ದುರ್ಧರೇಣ - ದುರ್ಧರನೆಂಬ [ಅಸಾಧ್ಯನಾದ] ಪ್ರಹಸ್ತೇನ - ಪ್ರಹಸ್ತನೆಂಬ, ಮಹಾಪಾರ್ಶ್ವೇನ - ಮಹಾಪಾರ್ಶ್ವನೆಂಬ, ರಕ್ಷಸಾ - ರಕ್ಕಸನೆಂಬ, ಮಂತ್ರಿಣಾ - ಒಳ್ಳೆಯಯೋಚನೆಯುಳ್ಳ, ನಿಕುಂಭೇನ - ನಿಕುಂಭನೆಂಬ, ಮಂತ್ರತತ್ತ್ವಜ್ಞೈಃ - ರಾಜಕಾರ್ಯ ರಹಸ್ಯಗಳನ್ನು ಬಲ್ಲ, ಮಂತ್ರಿಭಿಃ - ಮಂತ್ರಿಗಳಿಂದ, (ಉಪಲಕ್ಷಿತಂ - ಕೂಡಿರುವ) ॥೧೧॥ ಬಲದರ್ಪಿತೈಃ - ಬಲದಿಂದ ಕೊಬ್ಬಿರುವ, ಚತುರ್ಭಿಃ - ನಾಲ್ವರಾದ, ರಕ್ಷೋಭಿಃ - ರಾಕ್ಷಸರೊಡನೆ, ಸುಖೋಪವಿಷ್ಟಂ - ಸುಖವಾಗಿ ಕುಳಿತಿರುವನಾದಕಾರಣವೇ, ಚತುರ್ಭಿಃ - ನಾಲ್ಕಾದ, ಸಾಗರೈಃ - ಸಮುದ್ರಗಳಿಂದ, ಪರಿವೃತಃ - ಸುತ್ತಲ್ಪಟ್ಟಿರುವ, ಕೃತ್ಸ್ನಃ - ಸಮಸ್ತನಾದ, ಲೋಕಇವ - ಪ್ರಪಂಚದಂತಿರುವ, (ಪರಿವೃತಂ ಕೃತ್ಸ್ನಂಲೋಕಮಿವಸ್ಥಿತಂ) ॥೧೨॥ ಮಂತ್ರತತ್ವಜ್ಞೈಃ - ಯೋಚನೆಗಳ ರಹಸ್ಯವನ್ನೆಲ್ಲ ಬಲ್ಲ, ಶುಭಬುದ್ಧಿಭಿಃ ಶ್ರೇಷ್ಠವಾದ ಬುದ್ಧಿಶಕ್ತಿಯುಳ್ಳ, ಅನ್ಯೈಃ - ಮತ್ತೆ ಕೆಲವರಾದ, ಮಂತ್ರಿಭಿಃ - ಸಚಿವರಾದ, ರಕ್ಷೋಭಿಃ-ರಾಕ್ಷಸರಿಂದ, ಅನ್ವಾಸ್ಯಮಾನಂ - ಸೇವಿಸಲ್ಪಡುತಲಿರುವನಾದಕಾರಣವೇ, ಸುರೈಃ - ದೇವತೆಗಳಿಂದ.

ಯಿಂದ ಕಂಗೊಳಿಸುವ ಶ್ರೇಷ್ಠವಾದ ಸಿಂಹಾಸನದಲ್ಲಿ ಕುಳಿತು ಭಾಭಾಸಮಾನನಾಗಿದ್ದನು ।೯॥ ವಿವಿಧವಾದ ರತ್ನಾಭರಣಗಳಿಂದ ಅಲಂಕೃತರಾಗಿರುವ ಮದವತಿಯರಾದ ದಿವ್ಯಾಂಗನೆಯರು-ರಾಕ್ಷಸಾಧಿಪನ ಸಮೀಪದಲ್ಲಿ ನಿಂತು, ಕೈಗಳಲ್ಲಿ ಚಾಮರಗಳನ್ನು ಹಿಡಿದು ಪರಮಾದರದಿಂದ ಸೇವಿಸುತಲಿದ್ದರು ॥೧೦॥ ಮಹಾ ಬಾಹುಬಲ ಸಂಪನ್ನನೆನಿಸಿದ ಪ್ರಹಸ್ತ (ದುರ್ಧರ) ಮಹಾ ಪಾರ್ಶ್ವ, ರಾಜಮಂತ್ರವಿಶಾರದನಾದ ನಿಕುಂಭ, ಎಂಬ ಧೀರರಾದ ಮಂತ್ರಿವರ್ಯರು ನಿಶಾಚರೇಶ್ವರನನ್ನು ಬಳಸಿ ಕುಳಿತಿದ್ದರು. ಇವರ ನಡುವೆ ಸುಖವಾಗಿ ಕುಳಿತಿರುವ ರಕ್ಕಸರೊಡೆಯನನ್ನು ನೋಡಿದರೆ ನಾಲ್ಕು ಕಡಲುಗಳಿಂದ ಸುತ್ತಗೊಂಡಿರುವ ಜನರಾಶಿಯಂತೆ ವಿರಾಜಿಸುತದಲ್ಲಿದ್ದನು ॥ ೧೨ ॥ ರಾಜನೀತಿ ರಹಸ್ಯಗಳನ್ನೆಲ್ಲ ಅರಿತು, ಮಂತ್ರಾಲೋಚನೆಯಲ್ಲಿ ಮಹಾ ಚತುರರಾದ ಮಹಾ ಮಾತ್ಯರೂ, ಬಹು ಬುದ್ಧಿ ವಿಶಾರದರಾದ ಇತರ ರಕ್ಕಸರೂ ಆವರಿಸಿ ಕುಳಿತು, ಉಪಾಸಿಸುತಲಿದ್ದರೆ, ಅಮರಾವತಿಯಲ್ಲಿ

ಅನ್ವಾಸ್ಯಮಾನಂ ರಕ್ಷೋಭಿ ಸ್ಸುರೈರಿವ ಸುರೇಶ್ವರಂ ॥೧೩॥
ಅಪಶ್ಯ ದ್ರಾಕ್ಷಸ ಪತಿಂ ಹನೂಮಾ ನತಿತೇಜಸಂ ।
ವಿಷ್ಠಿತಂ ಮೇರುಶಿಖರ ಸತೋಯ ಮಿವತೋಯದಂ ॥೧೪॥
ಸ ತೈ ಸ್ಸಂಪೀಡ್ಯ ಮಾನೋಪಿ ರಕ್ಷೋಭಿ ರ್ಭೀಮ ವಿಕ್ರಮೈಃ ।
ವಿಸ್ಮಯಂ ಪರಮಂ ಗತ್ವಾ ರಕ್ಷೋಧಿಪ ಮವೈಕ್ಷತ ॥೧೫॥
ಭ್ರಾಜಮಾನಂ ತತೊ ದೃಷ್ಟ್ವಾ ಹನುಮಾ ನ್ರಾಕ್ಷ ಸೇಶ್ವರಂ ।
ಮನಸಾ ಚಿಂತಯಾಮಾಸ ತೇಜಸಾ ತಸ್ಯ ಮೋಹಿತಃ ॥೧೬॥
ಅಹೋ ರೂಪ ಮಹೋ ಧೈರ್ಯ ಮಹೋ ಸತ್ವ ಮಹೋ ದ್ಯುತಿಃ ।

(ಅನ್ವಾಸ್ಯಮಾನಂ- ಸೇವಿಸಲ್ಪಡುತಲಿರುವ, ಸುರೇಶ್ವರಮಿವಸ್ಥಿತಂ -ದೇವೇಂದ್ರನಂತಿರುವ ॥೧೩॥ ಅತಿತೇಜಸಂ - ಮಹಾತೇಜಸ್ಸುಳ್ಳ, ಸತೋಯಮಿವ - ನೀರಿನಿಂದ ತುಂಬಿದ, ಮೇರುಶಿಖರೆ - ಮೇರುಪರ್ವತದ ಕೋಡಿನಲ್ಲಿ, ವಿಷ್ಠಿತಂ - ನೆಲೆಗೊಂಡಿರತಕ್ಕ, ತೋಯದಮಿವಸ್ಥಿತಂ - ಮೇಘದಂತಿರುವ, ರಾಕ್ಷಸಪತಿಂ- ರಾಕ್ಷಸರಾಜನಾದ ರಾವಣನನ್ನು, ಹನುಮಾನ್ - ಆಂಜನೇಯನು, ಅಪಶ್ಯತ್ - ನೋಡಿದನು ॥೧೪॥ ಸಃ- ಆ ಹನುಮಂತನು, ಭೀಮವಿಕ್ರಮೈಃ - ಭಯಂಕರವಾದ ಪರಾಕ್ರಮವುಳ್ಳ, ತೈಃ - ಆ, ರಕ್ಷೋಭಿಃ - ರಾಕ್ಷಸರಿಂದ, ಸಂಪೀಡ್ಯಮಾನೋಪಿ - ಬಹಳವಾಗಿ ಹಿಂಸಿಸಲ್ಪಡುತಲಿದ್ದರೂ, ಪರಮಂ - ಹೆಚ್ಚಾದ, ವಿಸ್ಮಯಂ - ಆಶ್ಚರ್ಯವನ್ನು, ಗತ್ವಾ - ಹೊಂದಿ, ರಕ್ಷೋಧಿಪಂ - ರಾಕ್ಷಸರಾಜನನ್ನು, ಅವೈಕ್ಷತ - ನೋಡುತಲಿದ್ದನು ॥೧೫॥ ತತಃ - ತರುವಾಯ, ಹನುಮಾನ್ - ಆಂಜನೇಯನು, ಭ್ರಾಜಮಾನಂ - ಪ್ರಕಾಶಿಸುತಲಿರುವ, ರಾಕ್ಷಸೇಶ್ವರಂ - ಅಸುರೇಂದ್ರನನ್ನು, ದೃಷ್ಟ್ವಾ - ನೋಡಿ, ತಸ್ಯ - ಆ ರಾವಣನ, ತೇಜಸಾ - ತೇಜಸ್ಸಿನಿಂದ, ಮೋಹಿತಃ - ಭ್ರಾಂತಿಗೊಂಡವನಾಗಿ, ಮನಸಾ - ಮನಸ್ಸಿನಿಂದ, ಚಿಂತಯಾಮಾಸ - ವಿಚಾರಮಾಡತೊಡಗಿದನು ॥೧೬॥ ಮತಿಮಾನ್ - ಬುದ್ಧಿವಂತನಾದ, ಹರಿಃ - ಆಂಜನೇಯನು, ಅಮಿತೌಜಸಃ - ಅಧಿಕವಾದ ತೇಜಸ್ಸುಳ್ಳ ರಾಕ್ಷಸರಾಜಸ್ಯ - ರಾಕ್ಷಸೇಂದ್ರನ, ಪ್ರಭಾವಂ - ಪ್ರತಾಪವನ್ನು, ದೃಷ್ಟ್ವಾ - ನೋಡಿ, ರಾಕ್ಷಸರಾಜಸ್ಯ - ರಕ್ಕಸರೊಡೆಯನ, ರೂಪಂ - ಆಕಾರವು, ಅಹೋ - ಆಶ್ಚರ್ಯಕರವಾಗಿದೆ, ಧೈರ್ಯಂ - ಧೀರತೆಯೂ, ಅಹೋ - ಅದ್ಭುತವಾಗಿದೆ, ಸತ್ವಂ - ದೇಹಬಲವೂ, ಅಹೋ -

ದೇವತೆಗಳಿಂದ ಸೇವಿಸಲ್ಪಡುವ ಸುರೇಂದ್ರನಂತೆ ಸಂಶೋಭಿಸುತಲಿದ್ದನು ॥೧೩॥ ಇಂತಹ ಪಾರವೈಭವದಿಂದೊಡಗೂಡಿ, ಮೇರುಶಿಖರದಲ್ಲಿ ನೆಲೆಗೊಂಡಿರುವ ಜಲಭರಿತವಾದ ಜಲದದಂತೆ ಸಿಂಹ ಪೀಠದಲ್ಲಿ ರಾಜತೇಜದಿಂದ ಬೆಳಗುತಲಿರುವ ಯಾಮಿನೀಚರೇಂದ್ರನನ್ನು ಮಾರುತಿಯು ಚೆನ್ನಾಗಿ ಭಾವಿಸಿ ನೋಡಿದನು ॥೧೪॥ ಆ ಸಮಯದಲ್ಲಿ ಬಹು ಮಂದಿ ರಾಕ್ಷಸ ಕಿಂಕರರು-ತಂತಮ್ಮ ಪರಾಕ್ರಮಗಳನ್ನೆಲ್ಲ ತೋರುತ್ತಾ, ತನ್ನನ್ನು ಬಗೆಬಗೆಯಾಗಿ ಹಿಂಸಿಸುತಲಿದ್ದರೂ ವೈಮೇಲೆ ಪ್ರಜ್ಞೆಯಿಲ್ಲದೆಯೇ ಹನುಮನು ಅಸುರನ ಅಮೋಘವಾದ ಸಿರಿಯುಪರಿಯನ್ನೇ ನಿರುಕಿಸುತಲಿದ್ದನು ॥೧೫॥ ತೇಜೋರಾಶಿಯಾಗಿರುವ ರಾಕ್ಷಸೇಂದ್ರನ ಮಹಾಪ್ರಭಾವದಿಂದ ಬೆರಗಾದ ಮಾರುತಿಯು - ತನ್ನ ಮನದೊಳಾಲೋಚಿಸತೊಡಗಿದನು ॥೧೬॥ ಅಹಹ ಈ ರಕ್ಕಸರೊಡೆಯನ ಅತ್ಯದ್ಭುತವಾದ ಆಕಾರವನ್ನು ಬಣ್ಣಿಸಲು ಯಾರಿಗೆ ಸಾಧ್ಯ ?, ಇವನ ಧೀರತೆಯನ್ನು ನಾನು ಏನೆಂದು ಹೇಳಲಿ ? ಇವನ

ಅಹೋ ರಾಕ್ಷಸರಾಜಸ್ಯ ಸರ್ವಲಕ್ಷಣ ಯುಕ್ತತಾ ॥೧೭॥
ಯದ್ಯಧರ್ಮೋ ನ ಬಲವಾನ್ ಸ್ಯಾದಯಂ ರಾಕ್ಷಸೇಶ್ವರಃ ।
ಸ್ಯಾದಯಂ ಸುರಲೋಕಸ್ಯ ಸಶಕ್ರಸ್ಯಾಪಿ ರಕ್ಷಿತಾ ॥೧೮॥
ಅಸ್ಯ ಕ್ರೂರೈ ನೃಶಂಸೈಶ್ಚ ಕರ್ಮಭಿ ರ್ಲೋಕ ಕುತ್ಸಿತೈಃ ।
ತೇನ ಬಿಭ್ಯತಿ ಖಲ್ವಸ್ಮಾ ಲ್ಲೋಕಾ ಸ್ಸಾಮರದಾನವಾಃ ॥೧೯॥
ಅಯಂ ಹ್ಯುತ್ಸಹತೆ ಕ್ರುದ್ಧಃ ಕರ್ತು ಮೇಕಾರ್ಣವಂ ಜಗತ್ ।
ಇತಿ ಚಿಂತಾಂ ಬಹುವಿಧಾ ಮಕರೋ ನ್ಮತಿಮಾನ್ ಹರಿಃ ॥೨೦॥
ದೃಷ್ಟ್ವಾ ರಾಕ್ಷಸ ರಾಜಸ್ಯ ಪ್ರಭಾವ ಮಮಿತೌಜಸಃ ॥೨೦॥।

ಇತಿ ಶ್ರೀಮತ್ಸುಂದರಕಾಂಡೆ - ಏಕೋನಪಂಚಾಶಸ್ಸರ್ಗಃ.

---

ವಿಸ್ಮಯಕರವೆನಿಸಿದೆ, ದ್ಯುತಿಃ-ಕಾಂತಿಯೂ, ಅಹೋ-ಅಚ್ಚರಿಯನ್ನುಂಟುಮಾಡುವುದು, ಸರ್ವಲಕ್ಷಣಯುಕ್ತತಾ-ಸರ್ವಲಕ್ಷಣಸಂಪನ್ನತೆಯೂ, ಅಹೋ-ಭ್ರಾಂತಿಯನ್ನುಂಟುಮಾಡುತ್ತದೆ ॥೧೭॥ ಬಲವಾನ್-ಬಲಿಷ್ಠನಾದ, ಅಯಂ - ಈ, ರಾಕ್ಷಸೇಶ್ವರಃ - ರಾವಣನು, ಅಧರ್ಮಃ - ಧರ ರಹಿತನು, ಸ್ಯಾದ್ಯದಿ-ಆಗದೆ ಹೋಗಿದ್ದರೆ, ಅಯಂ - ಈತನು, ಸಶಕ್ರಸ್ಯ - ಇಂದ್ರನಿಂದ ಸಹಿತವಾದ, ಸುರಲೋಕಸ್ಯಾಪಿ - ದೇವಲೋಕಕ್ಕೂ, ರಕ್ಷಿತಾ - ರಕ್ಷಕನು, ಸ್ಯಾತ್ - ಆಗಬಲ್ಲನು ॥೧೮॥ ನೃಶಂಸೈಃ - ಘಾತುಕಗಳಾದ ಕಾರಣವೇ, ಕ್ರೂರೈಃ- ಭಯಂಕರಗಳಾದ, ಲೋಕಕುತ್ಸಿತೈಃ - ಲೋಕನಿಂದಿತನಾದ, ಅಸ್ಯ - ಈರಾವಣನ, ಕರ್ಮಭಿಃ - ಕೆಲಸಗಳಿಂದ, ತೇನ - ಹಿಂದೆ ಹೇಳಿದ ಅಧರ್ಮದಿಂದಲೂ, ಸಾಮರದಾನವಾಃ - ದೇವಾಸುರರಿಂದೊಡಗೂಡಿರುವ, ಲೋಕಾಃ - ಜನರು, ಅಸ್ಮಾತ್ - ಈ ರಾವಣನಿಂದ, ಬಿಭ್ಯತಿ - ಭಯಪಡುತಲಿದಾರೆ ॥೧೯॥ ಅಯಂ - ಈ ರಾವಣನು, ಕ್ರುದ್ಧಃ - ಕೋಪಗೊಂಡವನೇ ಆದರೆ, ಜಗತ್ -ಪ್ರಪಂಚವನ್ನು, ಏಕಾರ್ಣವಂ - ಒಂದೇ ಸಮುದ್ರವನ್ನಾಗಿ: ಕರ್ತುಂ - ಮಾಡಲಿಕ್ಕೆ, ಉತ್ಸಹತೆ- ಶಕ್ತನಾಗಬಲ್ಲನು, ಇತಿ-ಹೀಗೆಂದು, ಬಹುವಿಧಾಂ-ಅನೇಕಪ್ರಕಾರವಾದ, ಚಿಂತಾಂ-ಯೋಚನೆಯನ್ನು, ಅಕರೋತ್-ಮಾಡಿದನು॥೨೦॥ ॥

— ಇಂತು ನಲವತ್ತೊಂಭತ್ತನೆಯ ಸರ್ಗಂ —

---

ಸತ್ವವೋ ಅನ್ಯಾದೃಶವಾಗಿದೆ, ಇವನ ಹೊಳವಿಗೆ ಅಳವೇ ಇಲ್ಲ, ಸರ್ವಲಕ್ಷಣ ಸಂಪನ್ನತೆಯೆಂಬುದು ನನಗೆ ಪರಮಾಶ್ಚರ್ಯವನ್ನುಂಟು ಮಾಡುತಲಿದೆ, ॥೧೭॥ ಈ ನಿಶಾಚರ ಚಕ್ರವರ್ತಿಯು-ಅಯ್ಯೋ ಇಷ್ಟು ಬುದ್ಧಿ, ಬಲ, ಪೌರುಷ, ತೇಜಸ್ಸುಗಳಿಂದ ವಿರಾಜಿಸುತಲಿರುವವನಾದರೂ, ಅಧರ್ಮವೆಂಬುದೊಂದು ಮಾತ್ರ ಇವನಲ್ಲಿ ಇಲ್ಲದೆ ಹೋಗಿದ್ದರೆ, ಆಗಲಿವನು-ಅಮರರಿಂದಲೂ, ಅಮರಾಧಿಪನಿಂದಲೂ ಸಹಿತವಾದ ಸ್ವರ್ಗಲೋಕಕ್ಕೂ ಸಾರ್ವಭೌಮನಾಗುತಲಿದ್ದನೆಂಬುದರಲ್ಲಿ ಲೇಶವೂ ಸಂಶಯವಿಲ್ಲ. ॥೧೮॥ ಇವನ ಅಧರ್ಮದಿಂದ ಉಂಟಾದ ಮಹಾ ಭಯಂಕರಗಳೂ, ಹಿಂಸಾಕರಗಳೂ, ಲೋಕನಿಂದಿತಗಳೂ ಆಗಿರುವ ನೀಚಕರ್ಮಗಳಿಂದ ಸುರಾಸುರರೆಲ್ಲರೂ ಹೆದರುತಲಿದಾರೆ ॥೧೯॥ ಇವನಿಗೆ ಬಾದು ವೇಳೆ ರೋಷವು ಬಂದುದೇ ಆದರೆ-ಪ್ರಳಯದಲ್ಲಿ ಹೇಗೋ ಹಾಗೆ ಜಗತ್ತನ್ನೆಲ್ಲ ಬಾವೇ ಜಲರಾಶಿಯಾಗುವಂತೆ ಮಾಡಲು ಸಮರ್ಥನಾಗಿದಾನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ಎಂದೀಪ್ರಕಾರ ಮಹಾ ಬುದ್ಧಿಶಾಲಿಯಾದ ಆಂಜನೇಯನು-ಮಹಾ ತೇಜಸ್ಸಿನಿಂದ ವಿರಾಜಿಸುವ ರಾಕ್ಷಸರಾಜನ ಪ್ರಭಾವವನ್ನು ಕುರಿತು ನಾನಾ ವಿಧವಾಗಿ ಆಲೋಚಿಸುತಲಿದ್ದನು ॥

— ಇಂತು ನಲವತೊಂಭತನೆಯ ಸರ್ಗಂ

ಶ್ರೀಃ

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ.

## — ಶ್ರೀಮತ್ಸುನ್ದರಕಾಣ್ಡೇ ಪಂಚಾಶಸ್ಸರ್ಗಃ —



ತ ಮುದ್ವೀಕ್ಷ್ಯ ಮಹಾಬಾಹುಃ ಪಿಂಗಾಕ್ಷಂ ಪುರತ ಸ್ಸ್ಥಿತಂ ।
ಕೋಪೇನ ಮಹತಾ ವಿಷ್ಟೋ ರಾವಣೋ ಲೋಕರಾವಣಃ ॥ ೧ ॥
ಶಂಕಾ ಹತಾತ್ಮಾ ದಧ್ಯೌ ಸ ಕಪೀಂದ್ರಂ ತೇಜಸಾ ವೃತಂ ।
ಕಿಮೇಷ ಭಗವಾ ನ್ನಂದೀ ಭವೇ ತ್ಸಾಕ್ಷಾ ದಿಹಾಗತಃ ॥ ೨ ॥
ಯೇನ ಶಪ್ತೋಽಸ್ಮಿ ಕೈಲಾಸೆ ಮಯಾ ಸಂಚಾಲಿತೆ ಪುರಾ ।

---

### — ಐವತ್ತನೆಯ ಸರ್ಗಂ —

ಕಂದ॥ ಹರಿಯಾ ಪುರಕೃತರೆ ತಾಂ । ಹರಬೇ ನಿಹುದೆಂದು ಕೇಳ್ವು ದೆನ್ನುತ ಲೊರೆಯಲ್ ।
ಹರಿಯುಂ ಕೇಳ್ದು ಸಚಿವಂ । ಗರುಪಿದ ನಸುರಾಧಿಪಂಗೆ ಹಿತವಂ ನಯದಿಂ ॥

ಮಹಾಬಾಹುಃ - ಹೇರಳವಾದ ತೋಳುಬಲವುಳ್ಳ, ಲೋಕರಾವಣಃ - ಜನರನ್ನು ಗೋಳಾಡಿಸುವ, ರಾವಣಃ - ರಾವಣಾಸುರನು, ಪಿಂಗಾಕ್ಷಂ - ಹೊಂಬಣ್ಣದ ಕಣ್ಣುಳ್ಳ, ಪುರತಃ - ಇದಿರಿಗೆ, ಸ್ಥಿತಂ- ಇರುವ, ತಂ - ಆಹನುಮಂತನನ್ನು, ಉದ್ವೀಕ್ಷ್ಯ - ನೋಡಿ, ಮಹತಾ - ಹೆಚ್ಚಾದ, ಕೋಪೇನ - ಸಿಟ್ಟಿನಿಂದ, ಆವಿಷ್ಟಃ - ಕೂಡಿದವನು (ಆಸೀತ್ - ಆದನು) ॥೧॥ ಸಃ - ಆರಾವಣನು, ಶಂಕಾಹತಾತ್ಮಾ - ಸಂದೇಹದಿಂದ ಪೆಟ್ಟುಬಿದ್ದ ಮನಸ್ಸುಳ್ಳವನಾಗಿ, ಏಷಃ - ಇವನು, ಸಾಕ್ಷಾತ್ - ಪ್ರತ್ಯಕ್ಷವಾಗಿ, ಆಗತಃ - ಬಂದಿರುವ, ಭಗವಾನ್ - ಪೂಜ್ಯನಾದ, ನಂದೀ-ನಂದಿಕೇಶ್ವರನೇ, ಭವೇತ್ಕಿಂ- ಆಗಿರಬಹುದೇ? ಪುರಾ-ಪೂರ್ವದಲ್ಲಿ, ಮಯಾ - ನನ್ನಿಂದ, ಕೈಲಾಸೆ - ಕೈಲಾಸಪರ್ವತವು, ಸಂಚಾಲಿತೇ (ಸತಿ) ಚೆನ್ನಾಗಿ ಕದಲಿಸಲ್ಪಡುತ್ತಿರಲಾಗಿ, ಯೇನ- ಯಾವನಂದಿಕೇಶ್ವರನಿಂದ, (ಅಹಂ - ನಾನು) ಶಪ್ತಃ - ಶಪಿಸಲ್ಪಟ್ಟವನು, ಅಸ್ಮಿ - ಆದೆನೋ, ಸೋಯಂ - ಆಶಪಿಸಿದ ನಂದೀಕೇಶ್ವರನೇ, ವಾನರ ಮೂರ್ತಿಃ - ವಾನರಾಕಾರವುಳ್ಳವನಾಗಿ, ಸ್ಯಾತ್ಕಿಂ-ಇರಬಹುದೆ? ಅಪಿಸ್ವಿತ್ - ಅಥವಾ-ಬಾಣಃ ಬಾಣನೆಂಬ, ಅಸುರೋವಾ

---

### — ಐವತ್ತನೆಯ ಸರ್ಗ —

ಶ್ರೀಮದಾಂಜನೇಯನು ಬಾಲವನ್ನು ಉದ್ದವಾಗಿಬೆಳಸಿ, ಸಿಂಬೆಯನ್ನು ಸುತ್ತಿ, ಉಚ್ಚಾಸನವನ್ನು ಕಲ್ಪಿಸಿಕೊಂಡು, ಹೊಂಬಣ್ಣದ ಕಣ್ಣುಳ್ಳವನಾಗಿ, ತನ್ನ ಇದಿರಿಗೆ ಬಹು ಉನ್ನತನಾಗಿ ಕುಳಿತನು. ಮಹಾ ಬಾಹುಬಲಸಂಪನ್ನನಾಗಿ, ಲೋಕಕಂಟಕನೆನಿಸಿ ಜನರನ್ನೆಲ್ಲ ಗೋಳಾಡಿಸುತಲಿರುವ ರಾವಣನು-ಕಣ್ಣೆತ್ತಿ ಆತನನ್ನುನೋಡಿದನು, ಅಪಾರವಾದ ಕೋಪದ ಆವೇಶವುಂಟಾಯಿತು ॥೧॥ ಹಾಗೆಯೇ ಮನಸ್ಸಿಗೆ ಸಂಶಯವು ನಾಟಿತು, ಮಹಾ ತೇಜಸ್ವಿಯಾಗಿರುವ ಆ ಮಾರುತಿಯ ತತ್ತ್ವವನ್ನು ತಿಳಿಯಲು ಆಲೋಚಿಸ ತೊಡಗಿದನು, ಒಂದುವೇಳೆ ಪರಮೇಶ್ವರನ ವಾಹನವಾಗಿರುವ ಪೂಜ್ಯನಾದ ನಂದಿಕೇಶ್ವರನೇ ಸಾಕ್ಷಾತ್ತಾಗಿ ಇಲ್ಲಿಗೆ ಬಂದಿರಬಹುದೆ? ಎಂದು ಬಗೆದನು ॥೨॥ ಮತ್ತು-ಪೂರ್ವದಲ್ಲಿ ನಾನು- ದಿಗ್ವಿಜಯಾರ್ಥವಾಗಿ ಹೋಗಿದ್ದೆನಷ್ಟೆ ? ಆಗ ಕೈಲಾಸಪರ್ವತವನ್ನು ಬಲವಾಗಿ ಅಲ್ಲಾಡಿಸಿದೆನು,

ಸೋಽಯಂ ವಾನರ ಮೂರ್ತಿ ಸ್ಸ್ಯಾತ್ಕಿಂಸ್ವಿದ್ಬಾಣೋಽಪಿ ವಾಸುರಃ ॥೩॥
ಸ ರಾಜಾ ರೋಷತಾಮ್ರಾಕ್ಷಃ ಪ್ರಹಸ್ತಂ ಮಂತ್ರಿ ಸತ್ತಮಂ ।
ಕಾಲಯುಕ್ತ ಮುವಾಚೇದಂ ವಚೋ ವಿಪುಲ ಮರ್ಥವತ್ ॥೪॥
ದುರಾತ್ಮಾ ಪೃಚ್ಛ್ಯತಾ ಮೇಷ ಕುತಃ ಕಿಂವಾಽಸ್ಯ ಕಾರಣಂ ।
ವನಭಂಗೇ ಚ ಕೋಽಸ್ಯಾರ್ಥೋ ರಾಕ್ಷಸೀನಾಂ ಚ ತರ್ಜನೇ ॥೫॥

---

ರಾಕ್ಷಸನಾಗಿರಬಹುದೋ ? , ಇತಿ - ಹೀಗೆಂದು, ತೇಜಸಾ - ಹೆಚ್ಚಾದ ಕಾಂತಿಯಿಂದ, ಆವೃತಂ - ಕೂಡಿರುವ, ಕಪೀಂದ್ರಂ - ಆಂಜನೇಯನನ್ನು ಕುರಿತು, ದಧ್ಯೌ-ಚಿಂತಿಸಿದನು ॥೨,೩॥ ರಾಜಾ-ದೊರೆಯಾದ, ಸಃ - ಆರಾವಣನು, ರೋಷತಾಮ್ರಾಕ್ಷಃ - ಸಿಟ್ಟಿನಿಂದ ಕೆಂಪಡರಿದ ಕಣ್ಣುಳ್ಳವನಾಗಿ, ಪ್ರಹಸ್ತಂ - ಪ್ರಹಸ್ತನೆಂಬ, ಮಂತ್ರಿಸತ್ತಮಂ - ಮಂತ್ರಿಶ್ರೇಷ್ಠನನ್ನು ಕುರಿತು, ಕಾಲಯುಕ್ತಂ - ಸಮಯೋಚಿತವಾಗಿರುವ, ವಿಪುಲಂ - ವಿಸ್ತಾರವಾಗಿಯೂ, ಅರ್ಥವತ್ - ಅರ್ಥಗರ್ಭಿತವಾಗಿಯೂ ಇರುವ, ಇದಂ - ಈ ಮುಂದೆ ಹೇಳುವ, ವಚಃ - ಮಾತನ್ನು, ಉವಾಚ - ಹೇಳಿದನು ॥೪॥ ಏಷಃ - ಇವನು, ಕುತಃ - ಎಲ್ಲಿಂದ, (ಆಗತೋವಾ - ಬಂದಿರುವನೋ) ಅಸ್ಯ - ಇವನಿಗೆ, ಕಾರಣಂ - ಇಲ್ಲಿಗೆಬರಲು ನಿಮಿತ್ತವು, ಕಿಂವಾ - ಯಾವುದೋ, ಅಸ್ಯ - ಇವನಿಗೆ, ವನಭಂಗೇಚ - ತೋಟವನ್ನು ಮುರಿಯುವುದರಲ್ಲಿಯೂ, ರಾಕ್ಷಸೀನಾಂ - ರಕ್ಕಸಿಯರ, ತರ್ಜನೇಚ - ಅಂಜಿಸುವುದರಲ್ಲಿಯೂ, ಕಃ ಅರ್ಥಃ-

---

ನನ್ನನ್ನು ನೋಡಿದ ನಂದಿಕೇಶ್ವರನು ‹‹ ಎಲೈ ದುರುಳನೇ ! ಇದೇನು ಇಂತಹ ದುಷ್ಟಕಾರ್ಯವನ್ನು ಮಾಡುತ್ತಿರುವೆ? ›› ಎಂದು ಕೇಳಿದನು, ಆತನ ಮುಖವು ಸ್ವಲ್ಪ ನೀಳವಾಗಿದ್ದುದರಿಂದ ಕಪಿಯ ಮೋರೆಯು ಈ ಜಂತುವು ಕೋಡಗನಂತೆ ನನ್ನನ್ನು ಮಾತನಾಡಿಸುತಲಿದೆ ಎಂದು ಹಾಸ್ಯಮಾಡಿ ನಕ್ಕೆನು,ಆಗಲಾ ಭಗವಂತನ ವಾಹನನು -ಸಿಟ್ಟುಗೊಂಡು, ‹‹ ಎಲೈ ದುಷ್ಟಾತ್ಮನೇ! ನನ್ನ ಆಕಾರದ ಪ್ರಾಣಿಯೇ ಮುಂದೆ ನಿನಗೆ ಕೇಡನ್ನುಂಟುಮಾಡುವುದು ಎಂದು›› ಶಾಪವನ್ನಿತ್ತಿದ್ದನಲ್ಲವೆ? ಆದುದರಿಂದ ಆ ನಂದಿಯೇ ಈ ಆಕಾರವನ್ನಾಂತು ಬಂದಿರಬಹುದೆ? ಅಥವಾ ಅದೇ ಸಮಯದೊಳಗೆ ಕೈಲಾಸ ಪರ್ವತದಲ್ಲಿ ಕುಳಿತು, ಶಿವಪೂಜಾಧುರಂಧರನಾಗಿದ್ದ ಬಾಣಾಸುರನು- ತನ್ನ ಪೂಜೆಗೆ ಭಂಗವುಂಟಾದುದರಿಂದ ರೋಷಗೊಂಡು, ‹‹ ಮರವನ್ನೇರಿರುವ ಕಪಿಯು ಕುಣಿಯುತ ಕೊನೆಯನ್ನಲ್ಲಾಡಿಸುವಂತೆ ಈ ಬೆಟ್ಟವನ್ನಲುಗಿಸಿ, ನನಗೆ ಚಿತ್ತಚಾಂಚಲ್ಯವನ್ನುಂಟುಮಾಡಿದೆಯಾದುದರಿಂದ ಈ ಬಗೆಯಾದ ನಡತೆಯುಳ್ಳ ಕಪಿಯೇ ನಿನ್ನ ನಗರಿಗೆ ಕೇಡನ್ನು ಬಗೆಯಲಿ›› ಎಂದೂ ಶಾಪವನ್ನು ಕೊಟ್ಟಿದ್ದನು, ಅವನೇನಾದರೂ ಹೀಗೆ ಬಂದಿರಬಹುದೆ ಎಂದೂ ಚಿಂತಿಸಿದನು॥೩॥ಆ ಹಿಂದೆ ರಾಕ್ಷಸೇಂದ್ರನು- ರೋಷಗೊಂಡು, ಕಣ್ಣುಗಳಲ್ಲಿ ಕಿಡಿಗಳನ್ನುದಿರಿಸುತ್ತಾ,ತನಗೆ ಮುಖ್ಯಮಂತ್ರಿಯಾದ ಪ್ರಹಸ್ತನಕಡೆಗೆ ತಿರುಗಿ, ರಾಜನೀತಿಯನ್ನನುಸರಿಸಿ, ತತ್ಕಾಲಕ್ಕೆ ತಕ್ಕಂತೆಯೂ, ವಿವರವಾಗಿಯೂ, ಸಾರವಾದ ಅರ್ಥವುಳ್ಳುದಾಗಿಯೂ ಇರುವ ಮಾತನ್ನು ಹೇಳ ತೊಡಗಿದನು ॥೪॥ ಎಲೈ ಮಂತ್ರಿವರ್ಯನೆ ! ಈ ದುರುಳನಾದ ಕೋಡಗನು ಯಾರು? ಇವನ ಸ್ಥಳವು ಯಾವುದು? ಈಗ ಎಲ್ಲಿಂದಬಂದಿದಾನೆ?ಇಲ್ಲಿಗೆಬರಲು ನಿಮಿತ್ತವೇನು ಬಹು ಶೃಂಗಾರವಾಗಿದ್ದನಮ್ಮಉದ್ಯಾನವನ್ನೆಲ್ಲ ಮುರಿದು ಹಾಳುಮಾಡಿದುದರಿಂದ ಈ ಕಪಿಗೆ ಉಪಯೋಗವೇನು?

ಮತ್ಪುರೀ ಮಪ್ರಧೃಷ್ಯಾಂ ವಾ ಗಮನೆ ಕಿಂ ಪ್ರಯೋಜನಮ್ ।
ಆಯೋಧನೇ ವಾ ಕಿಂ ಕಾರ್ಯಂ ಪೃಚ್ಛ್ಯತಾ ಮೇಷ ದುರ್ಮತಿಃ ॥೬॥
ರಾವಣಸ್ಯ ವಚಃ ಶ್ರುತ್ವಾ ಪ್ರಹಸ್ತೋ ವಾಕ್ಯ ಮಬ್ರವೀತ್ ।
ಸಮಾಶ್ವಸಿ ಹಿ ಭದ್ರಂ ತೆ ನ ಭೀಃ ಕಾರ್ಯಾ ತ್ವಯಾ ಕಪೇ ॥೭॥
ಯದಿ ತಾವ ತ್ತ್ವ ಮಿಂದ್ರೇಣ ಪ್ರೇಷಿತೋ ರಾವಣಾಲಯಂ ।
ತತ್ವ ಮಾಖ್ಯಾಹಿ ಮಾಭೂ ತ್ತೇ ಭಯಂ ವಾನರ ಮೋಕ್ಷ್ಯಸೆ ॥೮॥
ಯದಿ ವೈಶ್ರವಣಸ್ಯ ತ್ವಂ ಯಮಸ್ಯ ವರುಣಸ್ಯ ವಾ ।
ಚಾರರೂಪ ಮಿದಂ ಕೃತ್ವಾ ಪ್ರವಿಷ್ಟೋ ನಃ ಪುರೀ ಮಿಮಾಂ ॥

ಪ್ರಯೋಜನವೇನು ? (ತ್ವಯಾ - ನಿನ್ನಿಂದ) ದುರಾತ್ಮಾ- ದುಷ್ಟಬುದ್ಧಿಯುಳ್ಳ, ಏಷಃ - ಈ ಕಪಿಯು) ಪೃಚ್ಛ್ಯತಾಂ – ಕೇಳಲ್ಪಡಲಿ, ಅಪ್ರಧೃಷ್ಯಾಂ - ಜಯಿಸಲಶಕ್ಯವಾದ, ಮತ್ಪುರೀಂ - ನನ್ನ ಪಟ್ಟಣವನ್ನು ಕುರಿತು, ಆಗಮನೇವಾ-ಬರುವುದರಲ್ಲಿಯೂ, ಕಿಂಪ್ರಯೋಜನಂ -ಫಲವೇನು ? ಆಯೋಧನೇವಾ-ಯುದ್ಧಮಾಡುವುದರಲ್ಲಿಯೂ, ಕಿಂಕಾರ್ಯಂ - ಪ್ರಯೋಜನವೇನು ? (ಇತಿ- ಹೀಗೆಂದು) ದುರ್ಮತಿಃ-ದುಷ್ಟಬುದ್ಧಿಯುಳ್ಳ, ಏಷಃ-ಈ ವಾನರನು, (ತ್ವಯಾ-ನಿನ್ನಿಂದ) ಪೃಚ್ಛ್ಯತಾಂ-ಪ್ರಶ್ನೆಮಾಡಲ್ಪಡಲಿ॥೫,೬॥ ಪ್ರಹಸ್ತಃ - ಪ್ರಹಸ್ತನು, ರಾವಣಸ್ಯ - ರಾವಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಕಪೇ-ಎಲೈ ವಾನರನೇ ! ತ್ವಂ-ನೀನು, ಸಮಾಶ್ವಸಿಹಿ - ಸಮಾಧಾನದಿಂದಿರು, ತೆ-ನಿನಗೆ, ಭದ್ರಂಹಿ - ಮೇಲಾಗಲಿ, ತ್ವಯಾ-ನಿನ್ನಿಂದ, ಭೀಃ- ಭಯವು, ನಕಾರ್ಯಾ-ಪಡಬೇಕಾಗಿಲ್ಲ, (ಪಡಬೇಕಾದಿಲ್ಲ) ॥೭॥ ತಾವತ್-ಈಗ, ಇಂದ್ರೇಣ- ಇಂದ್ರನಿಂದ, (ತ್ವಂ-ನೀನು,) ರಾವಣಾಲಯಂ-ಈ ರಾವಣನ ಮನೆಯನ್ನು ಕುರಿತು, ಪ್ರೇಷಿತೋಯದಿ - ಕಳುಹಿಸಲ್ಪಟ್ಟವನಾಗಿದ್ದರೆ, ತತ್ತ್ವಂ- ಯಥಾರ್ಥವನ್ನು, ಆಖ್ಯಾಹಿ-ಹೇಳು, ತೆ-ನಿನಗೆ, ಭಯಂ-ಭಯವು, ಮಾಭೂತ್ - ಆಗದಿರಲಿ, ವಾನರ-ಎಲೈ ಕಪಿಯೇ ! (ಮಯಾ-ನನ್ನಿಂದ-ತ್ವಂ-ನೀನು, ಮೋಕ್ಷ್ಯಸೆ-ಬಿಡಲ್ಪಡುತ್ತೀಯೆ ॥ ೮ ॥ ವೈಶ್ರವಣಸ್ಯ-ಕುಬೇರನಿಗಾಗಲಿ, ಯಮಸ್ಯ-ಯಮನಿಗಾಗಲಿ, ವರುಣಸ್ಯವಾ-ವರುಣನಿಗೇ ಆಗಲಿ, ಇದಂ-ಈ, ಚಾರರೂಪಂ- ದೂತವೇಷವನ್ನು, ಕೃತ್ವಾ-ಮಾಡಿಕೊಂಡು, (ಧರಿಸಿ) ನಃ-ನಮ್ಮ, ಇಮಾಂ-ಈ, ಪುರೀಂ- ಪಟ್ಟಣವನ್ನು, ಪ್ರವಿಷ್ಟಃ-ಪ್ರವೇಶಿಸಿದ,

ರಕ್ಕಸಿಯರನ್ನೆಲ್ಲ ಹೆದರಿಸಿದುದರಿಂದ ಪ್ರಯೋಜನವೇನು ? ಹೆರರಿಂದ ಹೊಗಲಸದಳವೆನಿಸಿರುವ ನನ್ನ ನಗರಿಯನ್ನು ಹೊಗುವುದರಿಂದ ಇದಕ್ಕೆ ಲಾಭವೇನು ? ರಕ್ಕಸರೊಡನೆ ಹೋರಾಡಲು ನಿಮಿತ್ತವೇನು ? ಎಂಬ ವಿಷಯಗಳಿಗೆ ಸರಿಯಾಗಿ ಉತ್ತರವನ್ನು ಕೊಡುವಂತೆ ಈ ಕೀಳಬುದ್ಧಿಯ ಕಪಿಯನ್ನು ಕೇಳತಿಳಿ ಎಂದಾಜ್ಞಾಪಿಸಿದನು ॥೫॥೬॥ ರಾವಣನ ಆಜ್ಞಾವಚನವನ್ನು ಕೇಳಿ, ಮಂತ್ರಿಪ್ರವರನಾದ ಪ್ರಹಸ್ತನು-ಮಾರುತಿಯನ್ನುಕುರಿತು ಇಂತೆಂದನು- ಎಲೈ ವಾನರನೆ! ನೀನು ಬಲು ಗಾಬರಿಪಟ್ಟಿರುವಂತೆ ಕಾಣಬರುತ್ತೀಯೆ, ಅದರಿಂದ ಆ ಮನದ ಕಳವಳವನ್ನು ಬಿಡು, ಸಮಾಧಾನದಿಂದಿರು, ನೀನು ಹೆದರಬೇಕಾದುದಿಲ್ಲ, ನಾನು ಹೇಳಿದಂತೆ ಕೇಳಿದರೆ ನಿನಗೆ ಮೇಲಾಗುವುದು, ಸಾವಧಾನದಿಂದ ನನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಕೊಡು ॥೮॥ ನೀನು- ಅಲಕಾಧಿಪತಿಯಾಗಿ, ವಿಶ್ರವಸ್ಸಿಗೆ ಮಗನೆನಿಸಿರುವ ಕುಬೇರನ ಕಿಂಕರನೆ ? ಅಥವಾ ಯಮನ ದೂತನೆ? ಇಲ್ಲವೆ ವರುಣನ ದಾಸನೆ?

ವಿಷ್ಣುನಾ ಪ್ರೇಷಿತೋ ವಾಽಸಿ ದೂತೋ ವಿಜಯ ಕಾಂಕ್ಷಿಣಾ ॥೯॥ ॥
ನ ಹಿ ತೇ ವಾನರಂ ತೇಜೋ ರೂಪಮಾತ್ರಂ ತು ವಾನರಂ ॥
ತತ್ತ್ವತಃ ಕಥಯಸ್ವಾದ್ಯ ತತೋ ವಾನರ ಮೋಕ್ಷ್ಯಸೆ ॥೧೦॥
ಅನೃತಂ ವದತ ಶ್ಚಾಪಿ ದುರ್ಲಭಂ ತವ ಜೀವಿತಂ ॥
ಅಥವಾ ಯನ್ನಿಮಿತ್ತಂ ತೆ ಪ್ರವೇಶೊ ರಾವಣಾಲಯೆ॥೧೧॥
ಏವಮುಕ್ತೋ ಹರಿಶ್ರೇಷ್ಠ ಸ್ತದಾ ರಕ್ಷೋಗಣೇಶ್ವರಂ
ಅಬ್ರವೀ ನ್ನಾಸ್ಮಿ ಶಕ್ರಸ್ಯ ಯಮಸ್ಯ ವರುಣಸ್ಯ ವಾ ।
ಧನದೇನ ನ ಮೇ ಸಖ್ಯಂ ವಿಷ್ಣುನಾ ನಾಽಸ್ಮಿ ಚೋದಿತಃ ॥೧೩॥

---

ತ್ವಂ-ನೀನು, ದೂತೋಯದಿ-ಊಳಿಗದವನೇ ಆಗಿದ್ದರೆ, ವಿಜಯಕಾಂಕ್ಷಿಣಾ - ಗೆಲುವನ್ನು ಕೋರುತಲಿರುವ, ವಿಷ್ಣುನಾ-ವಿಷ್ಣುವಿನಿಂದ, ಪ್ರೇಷಿತಃ - ಕಳುಹಿಸಲ್ಪಟ್ಟರುವ, ದೂತೋಯದಿವಾಪಿ - ದೂತನೇ ಆಗಿದ್ದರೂ, ಆಖ್ಯಾಹಿ-ಹೇಳು ॥೯॥ ವಾನರ-ಎಲೈ ಕಪಿಯೇ ! ತೆ-ನಿನ್ನ, ತೇಜಃ-ಕಾಂತಿಯು, ವಾನರಂ-ಕಪಿಯ ಸಂಬಂಧವಾದುದು, ನಹಿ-ಆಗಿಇಲ್ಲ, ರೂಪಮಾತ್ರಂತು - ಆಕಾರವು ಮಾತ್ರವೇ. ವಾನರಂ-ಕಪಿಯ ಸಂಬಂಧವಾದುದೆನಿಸಿದೆ, ತತಃ-ಆದಕಾರಣ, ಅದ್ಯ-ಇಂದು, ತತ್ತ್ವತಃ-ನಿಜವಾಗಿ, ಕಥಯಸ್ವ-ಹೇಳು, ಮೋಕ್ಷ್ಯಸೆ - ಬಿಡಿಸಲ್ಪಡುತ್ತೀಯೆ, ಅಪಿಚ- ಮತ್ತು, ಅನೃತಂ-ಸುಳ್ಳನ್ನು, ವದತಃ-ಹೇಳುತಲಿರುವ, ತವ-ನಿನಗೆ, ಜೀವಿತಂ- ಬದುಕು, ದುರ್ಲಭಂ-ಕಷ್ಟವೆಂದು ತಿಳಿ, ಅಥವಾ-ಹಾಗಿಲ್ಲದಿದ್ದರೆ, ಯತ್‌ನಿಮಿತ್ತಂ-ಯಾವ ಕಾರ್ಯವನ್ನು ಕುರಿತು, ರಾವಣಾಲಯೆ- ರಾವಣನ ಮನೆಯಲ್ಲಿ, ಪ್ರವೇಶಃ-ಪ್ರವೇಶವು, ಅಭೂತ್-ಆಯಿತೋ, ತತ್-ಆಕಾರ್ಯವನ್ನು, ಕಥಯಸ್ವ-ಹೇಳು ॥೧೦, ೧೧॥ ॥ ಏವಂ-ಈ ಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟ, ಹರಿಶ್ರೇಷ್ಠಃ - ವಾನರೋತ್ತಮನು, ತದಾ-ಆಗ, ಅಹಂ-ನಾನು, ಶಕ್ರಸ್ಯವಾ-ಇಂದ್ರನಿಗಾಗಲಿ, ಯಮಸ್ಯವಾ-ಯಮನಿಗಾಗಲಿ, ವರುಣಸ್ಯವಾ-ವರುಣನಿಗಾಗಲಿ, ದೂತಃ-ಸೇವಕನು, ನ-ಅಲ್ಲ, ಧನದೇನ- ಕುಬೇರನೊಡನೆ, ಮೆ-ನನಗೆ, ಸಖ್ಯಂ-ಸ್ನೇಹವು, ನ-ಇಲ್ಲ, ವಿಷ್ಣುನಾ-ವಿಷ್ಣುವಿನಿಂದ, ಅಹಂ-ನಾನು, ಚೋದಿತಃ-ಪ್ರೇರಿಸಲ್ಪಟ್ಟವನು, ನ ಆಗಿಲ್ಲ ॥೧೩॥ ಮಮ-

---

ಊಳಿಗದವನ ವೇಷವನ್ನು ತಾಳಿ ನಮ್ಮ ಈ ನಗರವನ್ನು ಪ್ರವೇಶಿಸಿದೆಯ? ಹಾಗಲ್ಲದಿದ್ದರೆ ನಮ್ಮನ್ನು ಜಯಿಸಬೇಕೆಂದು ಬಯಸಿ, ವಿಷ್ಣುವೇನಾದರು ನಿನ್ನನ್ನುಕಳುಹಿಸಿರುವನೆ? ॥೯॥ ನಿನ್ನ ತೇಜೋಬಲಗಳನ್ನು ನೋಡಿದರೆ, ನೀನು ಸಾಧಾರಣವಾಗಿರುವ ಕೋಡಗನಂತೆ ಕಾಣುವುದಿಲ್ಲ, ನಿನ್ನ ಆಕಾರವು ಮಾತ್ರವೇ ವಾನರಾಕಾರವಾಗಿದೆ,ಎಲೈ ವಾನರನೇ!ನಿನ್ನ ಸ್ಥಿತಿಯನ್ನು ಯಥಾರ್ಥವಾಗಿ ಈಗ ಹೇಳು, ಹಾಗಾದರೆ ನೀನು ಬಿಡುಗಡೆಯನ್ನು ಹೊಂದುತ್ತೀಯೆ, ಹಾಗಿಲ್ಲದೆ ಸುಳ್ಳನ್ನೇನಾದರು ಹೇಳತೊಡಗಿದೆಯೊ,ನಿನ್ನ ಪ್ರಾಣಗಳು ಉಳಿಯುವುದು ಖಂಡಿತವಾಗಿಯೂ ದುರ್ಲಭವೆಂದು ತಿಳಿ. ಮತ್ತಾವಕಾರಣದಿಂದ ನಮ್ಮ ದೊರೆಯ ಮನೆಗೆ ಬಂದಿರುವೆಯೋ ಅದನ್ನು ಸ್ಪಷ್ಟವಾಗಿ ತಿಳಿಸು॥೧೦-೧೧॥ಎಂದೀಪ್ರಕಾರವಾಗಿ ಕೇಳುತಲಿರಲು ವೀರವಮಾರುತಿಯು-ಪ್ರಹಸ್ತನನ್ನು ಸಡ್ಡೆಮಾಡದೆ, ಅವನ ಮುಖದ ಕಡೆಯಿಂದರಾಕ್ಷಸರಾಜನ ಕಡೆಗೆ ತಿರುಗಿ, ಇಂತೆಂದನು॥೧೨॥ನಾನು ತ್ರಿಲೋಕಾಧಿಪತಿಯಾದ ಇಂದ್ರನಕಡೆಯವನಲ್ಲ, ಪ್ರಾಣಗಳನ್ನು ಸೆಳೆಯುವ ಯಮನಿಗೆ ಸೇರಿದವನೂ ಅಲ್ಲ, ಧನಾಧಿಪತಿಯಾದ

ಜಾತಿರೇವ ಮಮ ತ್ವೇಷಾ ವಾನರೋಽಹ ಮಿಹಾಗತಃ ।
ದರ್ಶನಂ ರಾಕ್ಷಸೇಂದ್ರಸ್ಯ ದುರ್ಲಭಂ ತದಿದಂ ಮಯಾ ॥೧೪॥
ವನಂ ರಾಕ್ಷಸ ರಾಜಸ್ಯ ದರ್ಶನಾರ್ಥೆ ವಿನಾಶಿತಂ ।
ತತಸ್ತೇ ರಾಕ್ಷಸಾಃ ಪ್ರಾಪ್ತಾ ಬಲಿನೋ ಯುದ್ಧಕಾಂಕ್ಷಿಣಃ ॥೧೫॥
ರಕ್ಷಣಾರ್ಥಂ ತು ದೇಹಸ್ಯ ಪ್ರತಿಯುದ್ಧಾ ಮಯಾ ರಣೆ ।
ಅಸ್ತ್ರಪಾಶೈ ರ್ನ ಶಕ್ಯೋಽಹಂ ಬದ್ಧುಂ ದೇವಾಸುರೈ ರಪಿ ॥೧೬॥
ಪಿತಾಮಹಾದೇವ ವರೋ ಮಮಾಪ್ಯೇಷೋಽ ಭ್ಯುಪಾಗತಃ ।
ರಾಜಾನಂ ದ್ರಷ್ಟುಕಾಮೇನ ಮಯಾಸ್ತ್ರ ಮನು ವರ್ತಿತಂ ॥೧೭॥

---

ನನ್ನ, ಏಷಾ-ಈ ವಾನರರೂಪವಾಗಿರುವ, ಜಾತಿಃ-ಜಾತಿಯು, ಮಮೈವ-ನನ್ನ ಸ್ವಂತವಾದುದೇ, ವಾನರಃ-ಕಪಿಯಾಗಿರುವ, ಅಹಂ-ನಾನು, ದುರ್ಲಭಂ - ಹೊಂದಲಶಕ್ಯವಾಗಿರುವ, ರಾಕ್ಷಸೇಂದ್ರಸ್ಯ-ರಾಕ್ಷಸರಾಜನಾದ, ತವ-ನಿನ್ನ, ದರ್ಶನಂ- ದರ್ಶನದ ವಿಷಯವಾಗಿ, ಇಹ-ಇಲ್ಲಿಗೆ, ಆಗತಃ-ಬಂದಿದೇನೆ, ತತ್-ಆಕಾರಣದಿಂದ, ಮಯಾ-ನನ್ನಿಂದ, ಇದಂ-ಈ, ವನಂ-ಅಶೋಕವನವು, ರಾಕ್ಷಸರಾಜಸ್ಯ -ರಾಕ್ಷಸೇಂದ್ರನಾದ, ತವ-ನಿನ್ನ, ದರ್ಶನಾರ್ಥ-ದರ್ಶನ ಪ್ರಯೋಜನ ವಿಷಯವಾಗಿ, ವಿನಾಶಿತಂ - ನಾಶಪಡಿಸಲ್ಪಟ್ಟಿತು, ॥೧೩, ೧೪॥ ॥ ತತಃ-ಅದರಿಂದ, ಬಲಿನಃ - ಬಲವಂತರಾದ, ತೆ-ನಿನ್ನ, ರಾಕ್ಷಸಾಃ-ಕಿಂಕರರಾದ ರಕ್ಕಸರು, ಯುದ್ಧಕಾಂಕ್ಷಿಣಃ - ಯುದ್ಧಾಭಿಲಾಷೆಯುಳ್ಳವರಾಗಿ, ಪ್ರಾಪ್ತಾಃ-ಬಂದರು ॥೧೫॥ ದೇಹಸ್ಯ-ನನ್ನ ಶರೀರದ, ರಕ್ಷಣಾರ್ಥಂ - ಸಂರಕ್ಷಣೆಗೋಸ್ಕರ, ಮಯಾ-ನನ್ನಿಂದ, ರಣೆ-ಯುದ್ಧದಲ್ಲಿ, ತೆ-ಆ ರಾಕ್ಷಸರು, ಪ್ರತಿಯುದ್ಧಾಃ- ಪ್ರತಿಯಾಗಿಯುದ್ಧಮಾಡಲ್ಪಟ್ಟರು ॥೧೫॥ ದೇವಾಸುರೈರಪಿ - ಸುರಾಸುರರಿಂದಲೂ, ಅಸ್ತ್ರಪಾಶೈಃ- ಅಸ್ತ್ರಗಳಿಂದಲೂ, ಪಾಶಾಯುಧಗಳಿಂದಲೂ, ಬದ್ಧುಂ-ಕಟ್ಟಲಿಕ್ಕೆ, ನಶಕ್ಯಃ-ನಾನು ಸಾಧ್ಯನಲ್ಲ, ಏಷಃ-ಈ, ವರೋಽಪಿ-ವರವೂ, ಪಿತಾಮಹಾದೇವ - ಬ್ರಹ್ಮನಿಂದಲೇ, ಅಭ್ಯುಪಾಗತಃ-ಲಭಿಸಿದೆ, ॥೧೬॥ ॥ ರಾಜಾನಂ -ದೊರೆಯಾದ, ತ್ವಾಂ - ನಿನ್ನನ್ನು, ದ್ರಷ್ಟುಕಾಮೇನ - ನೋಡಲಾಶೆಯುಳ್ಳ, ಮಯಾ-ನನ್ನಿಂದ, ಅಸ್ತ್ರಂ-ಬ್ರಹ್ಮಾಸ್ತ್ರವು, ಅನುವರ್ತಿತಂ-ಅನುಸರಿಸಲ್ಪಟ್ಟಿತು, ಅಹಂ-ನಾನು,

---

ಕುಬೇರನೊಡನೆ ನನಗೆ ಸ್ನೇಹವಿಲ್ಲ, ವೈಕುಂಠವಾಸಿಯಾದ ವಿಷ್ಣುವೂ ನನ್ನನ್ನು ಕಳುಹಿಸಿ ಇಲ್ಲ ॥೧೩॥ ॥ ನನ್ನ ಜನ್ಮವೇ ವಾನರರಲ್ಲಿ ಉಂಟಾಗಿದೆ, ವಾನರನಾಗಿಯೇ ನಾನು ಇಲ್ಲಿಗೆ ಬಂದಿದೇನೆ, ರಾಕ್ಷಸಚಕ್ರವರ್ತಿಯಾದ ನಿನ್ನ ದರ್ಶನವು ದುರ್ಲಭವಾಗಿದ್ದುದರಿಂದ ನಾನೀಕೆಲಸವನ್ನು ಮಾಡಿದೆನು ॥೧೪॥ ॥ ರಾಕ್ಷಸರಾಜನಾದ ನಿನ್ನನ್ನು ನೋಡಬೇಕೆಂಬ ಉದ್ದೇಶದಿಂದಲೇ ನಿನ್ನ ಉದ್ಯಾನವನ್ನು ಮುರಿದೆನು. ಇದಲ್ಲದೆ ಬೇರೆದಾರಿಯು ನನಗೆ ಕಾಣಬರಲಿಲ್ಲ, ತರುವಾಯ ಬಲಶಾಲಿಗಳಾದ ನಿನ್ನ ಕಿಂಕರರಾಗಿರುವ ರಕ್ಕಸರು ನನ್ನೊಡನೆ ಕಾಳಗವನ್ನು ಬಯಸಿಬಂದರು ॥೧೫॥ ನನ್ನ ಪ್ರಾಣಗಳನ್ನು ಉಳಿಸಿಕೊಳ್ಳಬೇಕೆಂದು ಅವರನ್ನಿದಿರಿಸಿ ಯುದ್ಧವನ್ನು ಕೊಟ್ಟೆನು, ಮತ್ತು- ಅಸ್ತ್ರಗಳಿಂದಾಗಲೀ, ಪಾಶಗಳಿಂದಾಗಲೀ, ಕಟ್ಟಲಿಕ್ಕೆ ನಾನು ಸಾಧ್ಯನಾಗತಕ್ಕವನಲ್ಲ ॥೧೬॥ ॥ ಯಾವುದೊಂದರ ಕಟ್ಟಿಗೂ ಒಳಗಾಗದಂತಹ ವರವೂ ನನಗೆ ಲೋಕಕರ್ತನಾದ ಚತುರ್ಮುಖನಿಂದಲೇ ಲಭಿಸಿದೆ. ರಾಕ್ಷಸರಾಜನಾದ ನಿನ್ನನ್ನು ನೋಡಬೇಕೆಂಬ ಬಯಕೆಯಿಂದಲೇ, ನಿನ್ನ ಮಗನು ನನ್ನ

ವಿಮುಕ್ತೋ ಹ್ಯಹ ಮಸ್ತ್ರೇಣ ರಾಕ್ಷಸೈ ಸ್ತ್ವಭಿ ಪೀಡಿತಃ ।
ಕೇನಚಿ ದ್ರಾಜಕಾರ್ಯೇಣ ಸಂಪ್ರಾಪ್ತೋಽಸ್ಮಿ ತವಾಂತಿಕಂ ॥೧೮॥
ದೂತೋಽಹ ಮಿತಿ ವಿಜ್ಞೇಯೋ ರಾಘವಸ್ಯಾ ಮಿತೌಜಸಃ ।
ಶ್ರೂಯತಾಂ ಚಾಪಿ ವಚನಂ ಮಮ ಪಥ್ಯ ಮಿದಂ ಪ್ರಭೋ ॥೧೯॥
ಇತಿ ಶ್ರೀಮತ್ಸುಂದರಕಾಂಡೆ ಪಂಚಾಶಸ್ಸರ್ಗಃ

---

ರಾಕ್ಷಸೈಃ-ರಕ್ಕಸರಿಂದ, ಅಭಿಪೀಡಿತಃ - ವಿಶೇಷವಾಗಿ ತೊಂದರೆಗೊಳಿಸಲ್ಪಟ್ಟವನಾದರೂ, ಅಸ್ತ್ರೇಣ-ಬ್ರಹ್ಮಾಸ್ತ್ರದಿಂದ, ಮುಕ್ತಃ- ಬಿಡಲ್ಪಟ್ಟದ್ದೆನು ॥೧೭॥ ॥ ಕೇನಚಿತ್- ಬಂದಾನೊಂದು, ರಾಜಕಾರ್ಯೇಣ-ಪ್ರಭುಕಾರ್ಯದಿಂದ, ತವ-ನಿನ್ನ, ಅಂತಿಕಂ-ಸಮೀಪವನ್ನು ಕುರಿತು, ಸಂಪ್ರಾಪ್ತಃ-ಬಂದವನು, ಅಸ್ಮಿ-ಆಗಿದೇನೆ, ॥೧೮॥ ॥ ತ್ವಯಾ - ನಿನ್ನಿಂದ, ಅಹಂ-ನಾನು, ಅಮಿತೌಜಸಃ - ಮಹಾಪರಾಕ್ರಮವುಳ್ಳ, ರಾಘವಸ್ಯ-ಶ್ರೀರಾಮನ, ದೂತಇತಿ-ಸೇವಕನೆಂದು, ವಿಜ್ಞೇಯಃ - ತಿಳಿಯಲ್ಪಡತಕ್ಕವನು, ಪ್ರಭೋ-ಎಲೈ ದೊರೆಯೇ ! ಪಥ್ಯಂ - ಹಿತವೆನಿಸಿದುದೂ, ಇದಂ - ಈ ಮುಂದೆ ಹೇಳುವುದಾಗಿಯೂ ಇರುವ, ವಚನಂಚ-ಮಾತೂ, ತ್ವಯಾ-ನಿನ್ನಿಂದ, ಶ್ರೂಯತಾಂ - ಕೇಳಲ್ಪಡಲಿ, (ಇತ್ಯೇತತ್-ಹೀಗೆಂಬ ಮಾತನ್ನು, ರಕ್ಷೋಗಣೇಶ್ವರಂ-ರಾಕ್ಷಸರಾಜನನ್ನು ಕುರಿತು, ಅಬ್ರವೀತ್-ಹೇಳಿದನು) ॥೧೯॥

—ಇಂತು ಐವತ್ತನೆಯ ಸರ್ಗಂ—

---

ಮೇಲೆ ಪ್ರಯೋಗಿಸಿದ ಬ್ರಹ್ಮಾಸ್ತ್ರವನ್ನು ಅನುಸರಿಸಿದೆನು ॥೧೭॥ ಆದರೆ ಮುಹೂರ್ತಕಾಲವು ಮುಗಿಯುತಲೇ ಆ ಬ್ರಹ್ಮಾಸ್ತ್ರದಿಂದಲೂ ಬಿಡುಗಡೆಯನ್ನು ಹೊಂದಿದ್ದೆನು, ಈ ಹುಲ್ಲು ರಕ್ಕಸರು ಮಾತ್ರ ನನ್ನನ್ನು ಬಗೆಬಗೆಯಾಗಿ ಪೀಡಿಸುತಲಿದ್ದರು, ಬಂದಾನೊಂದು ರಾಜಕಾರ್ಯವಿದ್ದುದರಿಂದಲೇ ಈಗ ನಿನ್ನ ಬಳಿಗೆ ಬಂದಿದೇನೆ ॥ ೧೮॥ ॥ ರಘುವಂಶ ಪ್ರದೀಪನಾಗಿ, ಮಹಾಬಲತೇಜೋ ವಿರಾಜಿತನಾದ ಶ್ರೀರಾಮಚಂದ್ರನಿಗೆ ನಾನು ದಾಸನಾಗಿದೇನೆ ಎಂದುತಿಳಿ. ಮುಂದೆ ನಿನಗೆ ಹಿತವಾಗಿರುವ ಮಾತನ್ನು ಹೇಳುವೆನು, ಎಲೈ ಪ್ರಭುವೇ ಮನವಿಟ್ಟುಕೇಳು ॥೧೯॥ ॥

—ಇಂತು ಐವತ್ತನೆಯ ಸರ್ಗಂ—

ಶ್ರೀಃ
ಶ್ರೀ ರಾಮಚಂದ್ರ ಪರಬ್ರಹ್ಮಣೇನಮಃ
# ಶ್ರೀಮತ್ಸುನ್ದರಕಾಣ್ಡೇ ಏಕಪಂಚಾಶಸ್ಸರ್ಗಃ

—ಇತಿ ಶ್ರೀಮತ್ಸುಂದರಕಾಂಡೆ ಏಕಪಂಚಾಶಸ್ಸರ್ಗಃ—

ತಂ ಸಮೀಕ್ಷ್ಯ ಮಹಾಸತ್ವಂ ಸತ್ವವಾನ್ ಹರಿಸತ್ತಮಃ ।
ವಾಕ್ಯ ಮರ್ಥವ ದವ್ಯಗ್ರ ಸ್ತ ಮುವಾಚ ದಶಾಸನಂ ॥೧॥
ಅಹಂ ಸುಗ್ರೀವ ಸಂದೇಶಾ ದಿಹ ಪ್ರಾಪ್ತಸ್ತವಾಲಯಂ ।
ರಾಕ್ಷಸೇಂದ್ರ ಹರೀಶ ಸ್ತ್ವಾಂ ಭ್ರಾತಾ ಕುಶಲ ಮಬ್ರವೀತ್ ॥೨॥

---

—ಐವತ್ತೊಂದನೆಯ ಸರ್ಗ—

ಕಂ॥ ತಪನ ಕುಲಾಧಿಪ ದೂತಂ । ಕಪಿವರ ನಾಣತಿಯಿ ನಿಲ್ಲಿ ಗೃತಂ ದಿಹೆನಾಂ ।
ಅಪಹರದೆ ಸೀತೆಯ ನೊಪ್ಪಿಸು । ತಪಭಯ ನಾಗೆನೆ ಲಸಾಧು ವಸುರಂ ಮ.ಳಿದಂ ॥

ಸತ್ವವಾನ್-ಮಹಾಬಲವುಳ್ಳ, ಹರಿಸತ್ತಮಃ - ಕಪಿವರನಾದ ಹನುಮಂತನು, ಮಹಾಸತ್ವಂ- ಮಹಾ ಪರಾಕ್ರಮವುಳ್ಳ, ತಂ-ಆ ರಾವಣನನ್ನು, ಸಮೀಕ್ಷ್ಯ-ನೋಡಿ, ಅವ್ಯಗ್ರಃ - ನಿರ್ಭಯನಾಗಿ, ತಂ-ಆ, ದಶಾನನಂ-ದಶಕಂಠನನ್ನು ಕುರಿತು, ಅರ್ಥವತ್- ಸಾರವಾದ ಅರ್ಥವುಳ್ಳ, ವಾಕ್ಯಂ-ವಚನವನ್ನು, ಉವಾಚ-ಹೇಳತೊಡಗಿದನು ॥೧॥ ರಾಕ್ಷಸೇಂದ್ರ - ಎಲೈ ರಾಕ್ಷಸರಾಜನೇ ! ಅಹಂ-ನಾನು, ಸುಗ್ರೀವಸಂದೇಶಾತ್-ಸುಗ್ರೀವನಾಜ್ಞೆಯಿಂದ, ಇಹ-ಈ ಲಂಕೆಯಲ್ಲಿ, ತವ-ನಿನ್ನ, ಆಲಯಂ - ಮನೆಯನ್ನು ಕುರಿತು, ಪ್ರಾಪ್ತಃ - ಬಂದಿದೇನೆ, ಭ್ರಾತಾ - ನಿನಗೆ ಧರ್ಮಸಹೋದರನಾದ, ಹರೀಶಃ - ಕಪಿರಾಜನಾದ ಸುಗ್ರೀವನು, ತ್ವಾಂ - ನಿನ್ನನ್ನು ಕುರಿತು, ಕುಶಲಂ - ಕ್ಷೇಮವನ್ನು, ಅಬ್ರವೀತ್ - ಹೇಳಿದನು (ಕುಶಲ ಪ್ರಶ್ನೆಮಾಡಿದನು) ॥೨॥ ಧರ್ಮಾರ್ಥೋಪಹಿತಂ - ಧರ್ಮಾರ್ಥಗಳೆಂಬ ಪುರುಷಾರ್ಥಗಳಿಂದೊಡಗೂಡಿರುವ,

---

—ಐವತ್ತೊಂದನೆಯ ಸರ್ಗ—

ಮಹಾಬಾಹು ಬಲ ಸಂಪನ್ನನಾಗಿ ಕಪಿವರನೆನಿಸಿದ ಮಾರುತಿಯು- ಮಹಾ ಸತ್ವಸಂಪನ್ನನೆನಿಸಿ, ಬಲು ಬಿಂಕದಿಂದ ಕುಳಿತು ಕೇಳುತಲಿರುವ ರಾಕ್ಷಸೇಂದ್ರನ ಮುಖವನ್ನವಲೋಕಿಸಿ, ಇವನು ಸಾಮಾದ್ಯುಪಾಯಗಳೊಳಗೆ ಯಾವುದಕ್ಕೆ ಒಳಗಾಗಬಲ್ಲನು? ಎಂಬುದನ್ನು, ಸುಗ್ರೀವನ ಹಿತೋಪದೇಶವನ್ನು ಅರುಹಿ,ತಿಳಿದುಕೊಳ್ಳಬೇಕು ಎಂದು ನೆನೆದು, ಸಾರತರವಾದ ಮಾತುಗಳನ್ನಾಡತೊಡಗಿದನು ॥೧॥ ಎಲೈ ನಿಶಾಚರೇಂದ್ರನೇ! ಕಪಿಸಾರ್ವಭೌಮನಾದ ಸುಗ್ರೀವನು ಧರ್ಮಮೂಲದಿಂದ ನಿನಗೆ ಸಹೋದರ ಭಾವದಲ್ಲಿರುವನೆಂಬುದನ್ನು ನೀನು ಬಲ್ಲೆಯಷ್ಟೆ? ಪೂರ್ವದಲ್ಲಿ ನೀನು ವಾಲಿಯನ್ನು ಪ್ರಾರ್ಥಿಸಿ, ಸಖ್ಯವನ್ನು ಸಂಪಾದಿಸಿಕೊಂಡು,ಕವಲು ಮಾಡಿಕೊಂಡುದನ್ನು ಜ್ಞಾಪಿಸಿಕೊಂಡರೆ, ನಿನಗೆ ವ್ಯಕ್ತವಾಗುತದೆ. ಆ ನಿನ್ನ ಧರ್ಮಭ್ರಾತನು-ಮೊಟ್ಟಮೊದಲು ನಿನ್ನನ್ನು ಕುರಿತು ಕುಶಲಪ್ರಶ್ನೆಯನ್ನು ಮಾಡಹೇಳಿದನು, ಆತನ ಅಪ್ಪಣೆಯಿಂದಲೇ ನಾನೀಗ ಇಲ್ಲಿಗೆಬಂದಿರುವುದು ॥೨॥ ಧರ್ಮಾರ್ಥಗಳೆಂಬ

ಭ್ರಾತು ಶ್ಶೃಣು ಸಮಾದೇಶಂ ಸುಗ್ರೀವಸ್ಯ ಮಹಾತ್ಮನಃ ।
ಧರ್ಮಾರ್ಥೋಪಹಿತಂ ವಾಕ್ಯ ಮಿಹಚಾಮುತ್ರಚ ಕ್ಷಮಮ್ ॥೩॥
ರಾಜಾ ದಶರಥೋ ನಾಮ ರಥಕುಂಜರ ವಾಜಿಮಾನ್ ।
ಪಿತೇವ ಬಂಧು ರ್ಲೋಕಸ್ಯ ಸುರೇಶ್ವರ ಸಮದ್ಯುತಿಃ॥೪॥
ಜ್ಯೇಷ್ಠ ಸ್ತಸ್ಯ ಮಹಾ ಬಾಹುಃ ಪುತ್ರಃ ಪ್ರಿಯಕರಃ ಪ್ರಭುಃ ।
ಪಿತು ರ್ನಿದೇಶಾನ್ನಿ ಷ್ಕ್ರಾಂತಃ ಪ್ರವಿಷ್ಟೋ ದಂಡಕಾವನಮ್ ॥೫॥
ಲಕ್ಷ್ಮಣೇನ ಸಹ ಭ್ರಾತ್ರಾ ಸೀತಯಾ ಚಾಪಿ ಭಾರ್ಯಯಾ ।
ರಾಮೋ ನಾಮ ಮಹಾ ತೇಜಾ ಧರ್ಮ್ಯಂ ಪಂಥಾನ ಮಾಶ್ರಿತಃ ॥೬॥

ಇಹಚ - ಈ ಲೋಕದಲ್ಲಿಯೂ, ಅಮುತ್ರಚ - ಪರಲೋಕದಲ್ಲಿಯೂ ಹಿತಕರವೆನಿಸಿದ, ಮಹಾತ್ಮನಃ- ಅಪರಿಮಿತ ಬುದ್ಧಿಯುಳ್ಳ, ಭ್ರಾತುಃ - ನೀತಿಯನ್ನು ಬೋಧಿಸುವ ಸೋದರನಾದ, ಸುಗ್ರೀವಸ್ಯ - ಸುಗ್ರೀವನ, ಸಮಾದೇಶಂ - ವಾರ್ತಾರೂಪವಾದ, ವಾಕ್ಯಂ - ವಚನವನ್ನು ಶೃಣು - ಕೇಳು ॥೩॥ ರಥಕುಂಜರವಾಜಿಮಾನ್ - ಪ್ರಶಸ್ತವಾದ ರಥಗಜ ತುರಗಗಳುಳ್ಳ, ಪಿತೇವ - ತಂದೆಯಹಾಗೆ, ಲೋಕಸ್ಯ - ಭುವನಕ್ಕೆ, ಬಂಧುಃ ನಂಟನಾದ, ಸುರೇಶ್ವರಸಮದ್ಯುತಿಃ - ದೇವೇಂದ್ರನಿಗೆಣೆಯಾದ ತೇಜಸ್ಸುಳ್ಳ, ದಶರಥೋನಾಮ - ದಶರಥನೆಂದು ಪ್ರಸಿದ್ಧನಾದ, ರಾಜಾ - ದೊರೆಯು, ಆಸೀತ್ - ಇದ್ದನು ॥೪॥ ಮಹಾಭುಜಃ- ಹೇರಳವಾದ ಬಾಹುಬಲವುಳ್ಳ, ಪ್ರಿಯಕರಃ - ಸರ್ವಹಿತಕರನಾದ, ಪ್ರಭುಃ - ನಿಗ್ರಹಾನುಗ್ರಹಸಮರ್ಥನೆನಿಸಿದ, ತಸ್ಯ - ಆ ದಶರಥನಿಗೆ, ಜ್ಯೇಷ್ಠಃಪುತ್ರಃ - ಹಿರಿಯಮಗನು, ಪಿತುಃ - ತಂದೆಯ, ನಿದೇಶಾತ್ - ಆಜ್ಞೆಯುದೆಸೆಯಿಂದ, ನಿಷ್ಕ್ರಾಂತಃ - ಊರುಬಿಟ್ಟು ಹೊರಟವನಾಗಿ, ದಂಡಕಾವನಂ - ದಂಡಕಾರಣ್ಯವನ್ನು, ಪ್ರವಿಷ್ಟಃ - ಪ್ರವೇಶಿಸಿದನು ॥೫॥ ಮಹಾತೇಜಾಃ - ಹೆಚ್ಚಿದತೇಜಸ್ಸುಳ್ಳ, ರಾಮೋನಾಮ - ರಾಮನೆಂದು ಪ್ರಸಿದ್ಧನಾದ, ಸಃ - ಆ ಮಹಾಪುರುಷನು, ಭ್ರಾತ್ರಾ - ಸಹೋದರನಾದ, ಲಕ್ಷ್ಮಣೇನಸಹ- ಸೌಮಿತ್ರಿಯೊಡನೆಯೂ, ಭಾರ್ಯಯಾ - ಧರ್ಮಪತ್ನಿಯಾದ, ಸೀತಯಾಪಿಚ- ಜಾನಕಿಯೊಡನೆಯೂ, ಧರ್ಮ್ಯಂ- ಪಿತ್ರಾಜ್ಞಾರೂಪವಾದ ಧರ್ಮವನ್ನು:ಬಿಡದಿರುವ, ಪಂಥಾನಂ-ಮಾರ್ಗವನ್ನು, ಆಶ್ರಿತಃ- ಆಶ್ರಯಿಸಿದನು॥೬॥

ಪುರುಷಾರ್ಥಗಳಿಗೆ ಲೇಶವಾದರೂ ವಿರೋಧವಿಲ್ಲದೆ, ನಿನಗೆ ಇಹಪರಗಳೆಂಬೆರಡು ಲೋಕಗಳಲ್ಲಿಯೂ ಹಿತಕರಗಳೆನಿಸಿರುವಂತೆ ಹೇಳಿಕಳುಹಿಸಿರುವ ಆ ನಿನ್ನ ಧರ್ಮಸೋದರನೆನಿಸಿದ ಮಹಾತ್ಮನಾಗಿರುವ ಸುಗ್ರೀವನ ವಚನವನ್ನು ಮನಮುಟ್ಟಿ ಲಾಲಿಸು॥೩॥ ಎಲೈ ಲಂಕೇಶ್ವರನೇ! ಮಹಾತೇಜಸ್ವಿಯೆನಿಸಿ,ಚತುರಂಗಬಲ ಸಮನ್ವಿತನಾಗಿ, ಲೋಕದ ಜನರಿಗೆಲ್ಲ ಆಪ್ತಬಂಧುವಿನಂತಿರುತ್ತಾ,ಸುರೇಂದ್ರನಿಗೆ ಸಮಾನವಾದ ಕಾಂತಿಯುಳ್ಳವನಾಗಿದ್ದ ದಶರಥನೆಂಬ ಪ್ರಖ್ಯಾತನಾದ ಮಹಾರಾಜನೊಬ್ಬನುಂಟು ॥೪॥ ಆತನಿಗೆ ಆಜಾನುಬಾಹುವು, ಹಗೆಗಳಸ್ವಡಗಿಸ ಕ್ಕವನು, ಆಶ್ರಿತಜನವತ್ಸಲನು, ಮಹಾ ಬಾಹುಬಲ ಸಂಪನ್ನನೂ ಆಗಿ, ರಾಮನೆಂದು ಹೆಸರುವಾಸಿಯನ್ನು ಪಡೆದಿರುವ ಹಿರಿಯಮಗನೊಬ್ಬನಿದ್ದಾನೆ, ಯಾವಾಗಲೂ ತಂದೆಗೆ ಹಿತವನ್ನು ಮಾಡುವುದರಲ್ಲಿ ಬದ್ಧಕಂಕಣನು, ಅದರಿಂದಲೇ ಆ ರಾಮನು- ತಂದೆಯ ಅಪ್ಪಣೆಯನ್ನು, ಶಿರದೊಳಾಂತು, ತನ್ನ ರಾಜಧಾನಿಯನ್ನು ಬಿಟ್ಟು, ದಂಡಕಾವನವನ್ನು ಪ್ರವೇಶಿಸಿದ್ದನು ॥೫॥ ಧರ್ಮಕ್ಕೆ ಸ್ವಲ್ಪವೂ ತಪ್ಪಿನಡೆಯದಿರುವ ಆ ರಾಮನು - ಅರಣ್ಯಯಾತ್ರೆಗೆ

ತಸ್ಯ ಭಾರ್ಯಾ ವನೇ ನಷ್ಟಾ ಸೀತಾ ಪತಿ ಮನುವ್ರತಾ ।
ವೈದೇಹಸ್ಯ ಸುತಾ ರಾಜ್ಞೋ ಜನಕಸ್ಯ ಮಹಾತ್ಮನಃ ॥೩॥
ಸ ಮಾರ್ಗಮಾಣ ಸ್ತಾಂ ದೇವೀಂ ರಾಜಪುತ್ರ ಸ್ಸಹಾನುಜಃ ।
ಋಶ್ಯಮೂಕ ಮನುಪ್ರಾಪ್ತ ಸ್ಸುಗ್ರೀವೇಣ ಸಮಾಗತಃ ॥೪॥
ತಸ್ಯ ತೇನ ಪ್ರತಿಜ್ಞಾತಂ ಸೀತಾಯಾಃ ಪರಿಮಾರ್ಗಣಂ ।
ಸುಗ್ರೀವಸ್ಯಾಪಿ ರಾಮೇಣ ಕಪಿರಾಜ್ಯಂ ನಿವೇದಿತಂ ॥೫॥
ತತ ಸ್ತೇನ ಮೃಧೇ ಹತ್ವಾ ರಾಜಪುತ್ರೇಣ ವಾಲಿನಂ ।

---

ವೈದೇಹಸ್ಯ - ವಿದೇಹದೇಶಾಧಿಪತಿಯಾದ, ಮಹಾತ್ಮನಃ - ಮಹಾನುಭಾವನೆನಿಸಿದ, ಜನಕಸ್ಯ - ಜನಕನೆಂಬ, ರಾಜ್ಞಃ - ದೊರೆಯ, ಸುತಾ- ಮಗಳಾದ, ಪತಿಂ - ವಲ್ಲಭನನ್ನು, ಅನುವ್ರತಾ - ಅನುಸರಿಸಿದ ವ್ರತವುಳ್ಳ, ಸೀತಾ - ಸೀತೆಯೆಂಬಹೆಸರಿನವಳಾದ, ತಸ್ಯ - ಆರಾಮನ, ಭಾರ್ಯಾ -ಹೆಂಡತಿಯು, ವನೆ – ಅರಣ್ಯದಲ್ಲಿ, ನಷ್ಟಾ - ಕಾಣದೆಹೋದಳು, ॥ ೩ ॥ ಸಃ - ಆ , ರಾಜಪುತ್ರಃ – ಅರಸಿನಮಗನಾದರಾಮನು, ಸಹಾನುಜಃ - ತಮ್ಮನಿಂದೊಡಗೂಡಿದವನಾಗಿ, ತಾಂ – ಆ, ದೇವೀಂ – ಸೀತಾದೇವಿಯನ್ನು, ಮಾರ್ಗಮಾಣಃ - ಹುಡುಕುತಲಿರುವವನಾಗಿ, ಋಶ್ಯಮೂಕಂ - ಋಶ್ಯಮೂಕವೆಂಬಪರ್ವತವನ್ನು, ಅನುಪ್ರಾಪ್ತಃ - ಹೊಂದಿದವನಾಗಿ, ಸುಗ್ರೀವೇಣ - ಸುಗ್ರೀವನೊಡನೆ, ಸಮಾಗತಃ – ಕಲೆತನು, ॥ ೪ ॥ ತೇನ - ಆಸುಗ್ರೀವನಿಂದ, ಸೀತಾಯಾಃ – ಜಾನಕಿಯ, ಪರಿಮಾರ್ಗಣಂ - ಹುಡುಕೋಣವೆಂಬುದು, ತಸ್ಯ - ಆ ರಾಮನಿಗೆ, ಪ್ರತಿಜ್ಞಾತಂ - ಪ್ರತಿಜ್ಞೆಮಾಡಲ್ಪಟ್ಟಿತು, ರಾಮೇಣಾಪಿ - ರಾಮನಿಂದಲೂ, ಹರಿರಾಜ್ಯಂ ಕಪಿಸಾಮ್ರಾಜ್ಯವು, ಸುಗ್ರೀವಸ್ಯಾಪಿ - ಸುಗ್ರೀವನಿಗೂ, ನಿವೇದಿತಂ - ಒಪ್ಪಿಸಲ್ಪಟ್ಟಿತು, ॥ ೫ ॥ ತತಃ- ತರುವಾಯ, ರಾಜಪುತ್ರೇಣ - ದಶರಥನಂದನನಾದ, ತೇನ - ಆರಾಮನಿಂದ, ಮೃಧೆ – ಯುದ್ಧದಲ್ಲಿ, ವಾಲಿನಂ – ವಾಲಿಯನ್ನು, ಹತ್ವಾ – ಕೊಂದು, ಸುಗ್ರೀವಃ - ಸುಗ್ರಿವನು, ಹರ್ಯೃಕ್ಷಾಣಾಂ- ಕಪಿಗಳಮತ್ತು

---

ಹೊರಟಾಗ- ಆತನಿಗೆ ನೆೈನೆಳಲಿನಂತೆ ಅನುಸರಿಸುವ ಧರ್ಮಪತ್ನಿಯೂ, ಪರಿಪೂರ್ಣವಾದ ಭ್ರಾತೃಭಕ್ತಿಯಿಂದ ಬೆಳಗುತಲಿರುವ ಸೌಮಿತ್ರಿಯೆಂಬ ಸಹೋದರನೂ, ಆ ರಾಮನ ಮಾರ್ಗವನ್ನೇ ಅನುಸರಿಸಿ ಬಂದರು॥೩॥ ವಿದೇಹದೇಶಗಳಗರಸಾಗಿ, ಮಹಾನುಭಾವನೆನಿಸಿದ ಜನಕಮಹಾರಾಜನ ಪುತ್ರಿಯಾಗಿ,ರಾಮನ ಧರ್ಮ ಪತ್ನಿಯಾದ ಸೀತೆಯೆಂಬ ಆ ಪತಿವ್ರತಾ ಶಿರೋಮಣಿಯು - ಆ ಅರಣ್ಯದಲ್ಲಿ ವಾಸ ಮಾಡುತಲಿರುವಾಗ ಎಲ್ಲಿಯೋ ಕಾಣದೆ ಹೋದಳು॥೩॥ ಬಳಿಕ ಮಹಾರಾಜನಂದನನಾದ ರಾಮನು – ತನ್ನಧರ್ಮಭಾರ್ಯೆಯನ್ನು ವನಮಧ್ಯದೊಳಗೆ ಅಲ್ಲಲ್ಲಿ ಹುಡುಕುತ್ತಾ, ಮಾರ್ಗವಶದಿಂದ ಋಶ್ಯಮೂಕ ಪರ್ವತಕ್ಕೆ ಬಂದು ನಿನಗೆ ಧರ್ಮಭ್ರಾತೃವಾದ ನನ್ನೊಡನೆ ಕಲೆತು ಸ್ನೇಹವನ್ನು ಬೆಳಸಿದನು ॥೪॥ ಆಹಿಂದೆ ಈ ಸುಗ್ರೀವನು - ವಿದೇಹರಾಜನಂದನೆಯು ಎಲ್ಲಿ ಇದ್ದರೂ ಹುಡುಕಿಸಿ ಕುಶಲ ವೃತ್ತಾಂತವನ್ನು ತಿಳಿಸುವಂತೆ ಪ್ರತಿಜ್ಞೆಯನ್ನುಮಾಡಿದನು, ಆಹಿಂದೆ ದಶರಥನಂದನನೂ-ಕಪಿರಾಜ್ಯವಾದ ಕಿಷ್ಕಿಂಧಾ ಸಾಮ್ರಾಜ್ಯವನ್ನು ಈ ನನಗೆ ಒಪ್ಪಿಸುವುದಾಗಿ ಮಾತುಕೊಟ್ಟನು, ॥೫॥ ಅಷ್ಟು ಮಾತ್ರವೇ ಅಲ್ಲ. ತಾನು ಶಪಥವನ್ನು ಮಾಡಿದಂತೆಯೇ ಕಾಳಗದಲ್ಲಿ ವಾಲಿಯನ್ನು ಕೊಂದು, ಸಕಲ ಕಪಿಕುಲ ಸಾರ್ವಭೌಮನನಿಸುವಂತೆ ಈ ಸುಗ್ರೀವನನ್ನು ಆ ವಾಲಿಸಾಮ್ರಾಜ್ಯದಲ್ಲಿ

ಸುಗ್ರೀವ ಸ್ಥಾಪಿತೋ ರಾಜ್ಯೇ ಹರ್ಯೃಕ್ಷಾಣಾಂ ಗಣೇಶ್ವರಃ ||೧೦||
ತ್ವಯಾ ವಿಜ್ಞಾತ ಪೂರ್ವಶ್ಚ ವಾಲೀ ವಾನರ ಪುಂಗವಃ |
ರಾಮೇಣ ನಿಹತ ಸ್ಸಂಖ್ಯೇ ಶರೇ ಣೈಕೇನ ವಾನರಃ ||೧೧||
ಸ ಸೀತಾ ಮಾರ್ಗಣೇ ವ್ಯಗ್ರ ಸುಗ್ರೀವ ಸ್ಸತ್ಯ ಸಂಗರಃ |
ಹರೀ ನ್ಸಂಪ್ರೇಷ ಯಾಮಾಸ ದಿಶ ಸ್ಸರ್ವಾ ಹರೀಶ್ವರಃ ||೧೨||
ತಾಂ ಹರೀಣಾಂ ಸಹಸ್ರಾಣಿ ಶತಾನಿ ನಿಯುತಾನಿ ಚ |
ದಿಕ್ಷು ಸರ್ವಾಸು ಮಾರ್ಗಂತೆ ಹ್ಯಧ ಶ್ಚೋಪರಿ ಚಾಂಬರೆ ||೧೩||
ವೈನತೇಯ ಸಮಾಃ ಕೇಚಿ ತ್ಕೇಚಿ ತ್ತತ್ರಾ ನಿಲೋಪಮಾಃ |

---

ಕರಡಿಗಳ, ಗಣೇಶ್ವರಃ - ಪ್ರಭುವೆನಿಸಿ, ರಾಜ್ಯೇ - ರಾಜ್ಯದಲ್ಲಿ, ಸ್ಥಾಪಿತಃ - ನೆಲೆಗೊಳಿಸಲ್ಪಟ್ಟನು ||೧೦||

ತ್ವಯಾ - ನಿನ್ನಿಂದ, ವಿಜ್ಞಾತಪೂರ್ವಃ - ಪೂರ್ವದಲ್ಲಿತಿಳಿಯಲ್ಪಟ್ಟಿರುವ, ವಾನರ ಪುಂಗವಃ - ವಾನರೋತ್ತಮನಾದ, ವಾಲೀ - ವಾಲಿಯೆಂಬ, ವಾನರಃ - ಕಪಿಯು, ರಾಮೇಣ - ದಾಶರಥಿಯಿಂದ, ಏಕೇನ - ಒಂದೇ ಆದ, ಶರೇಣ - ಬಾಣದಿಂದ, ಸಂಖ್ಯೇ - ಯುದ್ಧದಲ್ಲಿ, ನಿಹತಃ - ಕೊಲ್ಲಲ್ಪಟ್ಟನು ||೧೧|| ಸತ್ಯಸಂಗರಃ - ಸತ್ಯಪ್ರತಿಜ್ಞನಾದ, ಹರೀಶ್ವರಃ - ಕಪಿಗಳಿಗರಸನೆನಿಸಿದ, ಸಃ - ಆ, ಸುಗ್ರೀವಃ - ಸುಗ್ರೀವನು, ಸೀತಾಮಾರ್ಗಣೇ - ಸೀತೆಯನ್ನು ಹುಡುಕುವುದರಲ್ಲಿ, ವ್ಯಗ್ರಃ - ಜಾಗರೂಕನಾಗಿ, ಸರ್ವಾಃ- ಸಮಸ್ತವಾದ, ದಿಶಃ - ದಿಕ್ಕುಗಳನ್ನು ಕುರಿತೂ, ಹರೀನ್ - ವಾನರರನ್ನು, ಸಂಪ್ರೇಷಯಾಮಾಸ - ಕಳುಹಿಸಿಕೊಟ್ಟನು ||೧೨|| ಹರೀಣಾಂ - ವಾನರರ, ಸಹಸ್ರಾಣಿ - ಸಾವಿರಗಳೂ, ಶತಾನಿ-ನೂರುಗಳೂ, ನಿಯುತಾನಿಚ - ಇಪ್ಪತ್ತುಸಾವಿರಗಳೂ, ಸರ್ವಾಸು - ಸಮಸ್ತವಾದ, ದಿಕ್ಷು - ದಿಕ್ಕುಗಳಲ್ಲಿಯೂ, ಅಧಃ - ಪಾತಾಳದಲ್ಲಿಯೂ, ಉಪರಿ - ಮೇಲ್ಭಾಗದಲ್ಲಿಯೂ, ಅಂಬರೇಚ - ಆಕಾಶದಲ್ಲಿಯೂ, ತಾಂ - ಆ ಜಾನಕಿಯನ್ನು, ಮಾರ್ಗಂತೆ - ಹುಡುಕುತಲಿವೆ ||೧೩|| ತತ್ರ- ಆವಾನರಕೋಟಿಯಲ್ಲಿ, ಕೇಚಿತ್ - ಕೆಲವರಾದ, ಮಹಾಬಲಾಃ - ಅಪರಿಮಿತ ಪರಾಕ್ರಮವುಳ್ಳ, ಹರಿವೀರಾಃ - ವಾನರವೀರರು, ವೈನತೇಯ ಸಮಾಃ - ಗರುಡನಿಗೆಣೆಯಾದ ಗಮನವೇಗವುಳ್ಳವರು, ಕೇಚಿತ್ - ಮತ್ತೆ ಕೆಲವರು, ಅನಿಲೋಪಮಾಃ-

---

ಪಟ್ಟಾಭಿಷಿಕ್ತನನ್ನಾಗಿಯೂ ಮಾಡಿದಾನೆ ||೧೦|| ಎಲೈನಿಶಾಚರೇಂದ್ರನೇ ! ನಾನಿನ್ನು ಹೇಳಬೇಕಾದುದೇನು ? ನೀನು ಪೂರ್ವದಲ್ಲಿ ದಿಗ್ವಿಜಯಾರ್ಥಿಯಾಗಿ ಬಂದಿದ್ದವೇಳೆ - ಕಪಿಪುಂಗವನಾದ ವಾಲಿಯು ಯಾರು ? ಎಲ್ಲಿರತಕ್ಕವನು ? ಎಂತಹ ಬಲಶಾಲಿ ? ಎಂಬುದನ್ನು ಚೆನ್ನಾಗಿ ಬಲ್ಲೆಯಷ್ಟೆ ?, ಆ ವಾಲಿಯನ್ನೇ ಈ ರಾಮನು ಬವರದಲ್ಲಿ ಬಂದೇ ಬಾಣದಿಂದ ಇರಿದುರುಳಿಸಿದುದು ! ||೧೧|| ಇಷ್ಟಾದ ಬಳಿಕ - ಕೃತಜ್ಞನಾದ ಸುಗ್ರೀವನು - ತನ್ನ ಸತ್ಯಪ್ರತಿಜ್ಞೆಯನ್ನು ಸಾರ್ಥಕಗೊಳಿಸಲು ಬಹಳ ತ್ವರೆಯುಳ್ಳವನಾಗಿ, ಸಮಸ್ತವಾನರರನ್ನೂ ಬರಮಾಡಿಕೊಂಡು, ಸೀತೆಯನ್ನು ಹುಡುಕಲಿಕ್ಕೆ ಎಂಟು ದಿಕ್ಕಿಗೂ ಕಪಿಗಳನ್ನು ಕಳುಹಿ ಇದಾನೆ, ||೧೨|| ಕೋಟ್ಯನುಕೋಟಿ ಕಪಿಗಳು - ಸುಗ್ರೀವಾಜ್ಞಾನುಸಾರವಾಗಿ ಒಂದೊಂದು ದಿಕ್ಕಿಗೂ ಹತ್ತು ಇಪ್ಪತ್ತು ಸಾವಿರಗಳಂತೆ ವಿಂಗಡಿಸಿಕೊಂಡು, ಎಲ್ಲದಿಕ್ಕುಗಳೊಳಗೂ ಭೂಮ್ಯಂತರಿಕ್ಷಗಳಲ್ಲಿಯೂ, ಪಾತಾಳದಲ್ಲಿಯೂ ಹುಡುಕುತಲಿದಾರೆ, ||೧೩|| ಆ ಕಪಿವೀರರು-ಸಾಮಾನ್ಯರಲ್ಲ, ಮಹಾ ಬಾಹು ಬಲಸಂಪನ್ನರು, ಬಹು ಬುದ್ಧಿ ವಿಶಾರದರು,

ಅಸಂಗ ಗತಯಃ ಶೀಘ್ರಾ ಹರಿವೀರಾ ಮಹಾಬಲಾಃ ॥೧೪॥
ಅಹಂ ತು ಹನುಮಾನ್ನಾಮ ಮಾರುತಸ್ಯೌರಸಃ ಸುತಃ ।
ಸೀತಾಯಾಸ್ತು ಕೃತೇ ತೂರ್ಣಂ ಶತಯೋಜನಮಾಯತಂ ॥೧೫॥
ಸಮುದ್ರಂ ಲಂಘಯಿತ್ವೈವ ತಾಂ ದಿದೃಕ್ಷುರಿಹಾಗತಃ।
ಭ್ರಮತಾ ಚ ಮಯಾ ದೃಷ್ಟಾ ಗೃಹೇ ತೇ ಜನಕಾತ್ಮಜಾ ॥೧೬॥
ತದ್ಭವಾನ್ ದೃಷ್ಟಧರ್ಮಾರ್ಥಸ್ತಪಃಕೃತಪರಿಗ್ರಹಃ ।

---

ವಾಯುವಿಗೆ ಸಮಾನರಾದವರು, (ಅದರಿಂದಲೇ) ಅಸಂಗಗತಯಃ - ತಡೆಯಿಲ್ಲದ ಗಮನವುಳ್ಳವರು, (ಅದರಿಂದಲೇ) ಶೀಘ್ರಾಃ - ಮಹಾವೇಗಸಂಪನ್ನರು ॥೧೪॥ ಮಾರುತಸ್ಯ - ವಾಯುದೇವನಿಗೆ, ಔರಸಃ - ಆತ್ಮಜನೆನಿಸಿದ, ಹನುಮಾನ್ನಾಮ - ಹನುಮಂತನೆಂಬ ಹೆಸರನ್ನು ಪಡೆದಿರುವ, ಅಹಂತು-ನಾನಾದರೋ-ಸೀತಾಯಾಃ - ಕೃತೇ - ಸೀತೆಯ ನಿಮಿತ್ತವಾಗಿಯೇ, ಶತಯೋಜನಂ- ನೂರುಗಾವುದದಷ್ಟಾದ, ಆಯತಂ - ವಿಸ್ತಾರವಾಗಿರುವ, ಸಮುದ್ರಂ - ಸಾಗರವನ್ನು, ತೂರ್ಣಂ - ಬೇಗನೆ, ಲಂಘಯಿತ್ವೈವ - ದಾಟಿಯೇ, ತಾಂ - ಆ ಸೀತೆಯನ್ನು, ದಿದೃಕ್ಷುಃ - ನೋಡಲಾಶೆಯುಳ್ಳವನಾಗಿ, ಇಹ - ಇಲ್ಲಿಗೆ, ಆಗತಃ - ಬಂದೆನು, ತೇ - ನಿನ್ನ, ಗೃಹೆ - ಮನೆಯಲ್ಲಿ, ಭ್ರಮತಾ - ಸುತ್ತುತಲಿರುವ, ಮಯಾ - ನನ್ನಿಂದ, ಜನಕಾತ್ಮಜಾ - ಜಾನಕಿಯು, ದೃಷ್ಟಾ - ನೋಡಲ್ಪಟ್ಟಳು ॥೧೫, ೧೬॥ ಮಹಾಪ್ರಾಜ್ಞ - ಹೇರಳವಾದ ಪ್ರಜ್ಞೆಯುಳ್ಳ ಎಲೌ ರಾವಣನೇ !, ಭವಾನ್ - ನೀನು, ದೃಷ್ಟಧರ್ಮಾರ್ಥಃ - ತಿಳಿಯಲ್ಪಟ್ಟ ಧರ್ಮಶಾಸ್ತ್ರಾರ್ಥವುಳ್ಳವನು, ತಪಃ ಕೃತಪರಿಗ್ರಹಃ - ತಪಸ್ಸಿನಿಂದ ಗಳಿಸಿದ ಧರ್ಮಕಳಶವುಳ್ಳವನು, ತತ್-ಆದಕಾರಣದಿಂದಲೇ, ಪರದಾರಾನ್ - ಹೆರರಹೆಂಡಿರನ್ನು, ಉಪರೋದ್ಧುಂ - ತಡೆಹಿಡಿಯಲಿಕ್ಕೆ - ನಾರ್ಹಸಿ

---

ಕೆಲವರು ಗರುಡನಿಗೆಣೆಯಾದ ವೇಗವುಳ್ಳವರು, ಮತ್ತೆ ಕೆಲವರು ವಾಯುವಿಗೆ ಸಮಾನವಾದ ಗತಿಶಕ್ತಿಯನ್ನು ಪಡೆದಿದಾರೆ, ಅವರ ದಾರಿಗೆಲ್ಲಿಯೂ ಅಡ್ಡಿಯೇ ಇಲ್ಲ, ॥೧೪॥ ಅಯ್ಯಾ ರಾವಣಾ ! ಆ ಮಹಾವೀರರೊಳಗೊಬ್ಬನಾದವನು ನಾನು, ನನ್ನನ್ನು ಹನುಮಂತನೆಂದು ಕರೆಯುತ್ತಾರೆ, ಈ ನಾನೇ ವಾಯುದೇವನಿಗೆ ಔರಸಪುತ್ರನು, ಸೀತೆಯನ್ನು ಬೆದಕಲಿಕ್ಕಾಗಿಯೇ ನೂರುಗಾವುದಗಳಷ್ಟು ವಿಸ್ತಾರವಾಗಿರುವ ಮಹೋದಧಿಯನ್ನು ನಿಮಿಷಮಾತ್ರದಲ್ಲಿ ಮಹಾವೇಗದಿಂದ ದಾಟಿ ಬಂದಿದ್ದೇನೆ ; ಸಾಗರವನ್ನು ದಾಟಿದೆನು, ಈ ನಿನ್ನ ಹೊಳಲನ್ನು ಹೊಕ್ಕೆನು, ಆಕೆಯನ್ನು ಕಾಣಬೇಕೆಂಬ ಕುತೂಹಲದಿಂದ ಇಲ್ಲೆಲ್ಲ ಹುಡುಕಿದೆನು, ಅಲ್ಲಲ್ಲಿ ಅಲೆದೆನು, ನಿನ್ನ ಮನೆಯ ತೋಟದೊಳಗೆ ಆ ಜನಕನಂದಿನಿಯನ್ನು ಕಂಡೆನು,ಈ ಮಧ್ಯೆ ಪ್ರಸಂಗಸಂಗತಿಯಿಂದ ನನ್ನ ನಿಮಿತ್ತವಾದ ವೃತ್ತಾಂತವನ್ನು ನಿನಗೆ ಅರುಹಿದೆನು. ಮುಂದೆ ಆತನ ಸಂದೇಶವನ್ನು ಪೂರ್ತಿಯಾಗಿ ಕೇಳು:-॥೧೫,೧೬॥ ಎಲೈ ರಾಕ್ಷಸರಾಜೇಂದ್ರನೇ ! ನೀನು-ಸಕಲ ಧರ್ಮನೀತಿ ಶಾಸ್ತ್ರಗಳನ್ನೆಲ್ಲ ಚೆನ್ನಾಗಿ ವಿಚಾರಮಾಡಿ,ಅವುಗಳ ಸಾರವನ್ನೆಲ್ಲ ಬಲ್ಲವನಾಗಿದ್ದೀಯೆ,ಬಹುಕಾಲ ಕಷ್ಟಪಟ್ಟು ಕ್ರೂರವಾದ ತಪಸ್ಸನ್ನಾಚರಿಸಿದವನು,ಮಹಾಪ್ರಾಜ್ಞ, ಅಪರಿಮಿತ ಪರಾಕ್ರಮಶಾಲಿ, ಇಂತಹಧೀರನಾದ ನೀನು-ಕೀಳರಾಗಿಯೂ, ಹೇಡಿಗಳಾಗಿಯೂ,ಇರುವ ಅಲ್ಪಜನರಂತೆ ಬಲಾತ್ಕಾರದಿಂದ ಹೆರರಹೆಂಡಿರನ್ನು ಕದ್ದುತಂದು ಮನೆಯಲ್ಲಿ ಬಚ್ಚಿಟ್ಟುಕೊಂಬುದು ಸರ್ವಾತ್ಮನಾ ತಕ್ಕುದಲ್ಲವೆಂಬುದನ್ನು

ಸರದಾರಾ ನ್ಮಹಾಪ್ರಾಜ್ಞ ನೋಪ ರೋದ್ಧುಂ ತ್ವ ಮರ್ಹಸಿ ॥೧೭॥
ನ ಹಿ ಧರ್ಮವಿರುದ್ಧೇಷು ಬಹ್ವಪಾಯೇಷು ಕರ್ಮಸು ।
ಮೂಲಘಾತಿಷು ಸಜ್ಜಂತೆ ಬುದ್ಧಿಮಂತೋ ಭವದ್ವಿಧಾಃ ॥೧೮॥
ಕಶ್ಚ ಲಕ್ಷ್ಮಣ ಮುಕ್ತಾನಾಂ ರಾಮಕೋಪಾನುವರ್ತಿನಾಂ ।
ಶರಾಣಾಮಗ್ರತ ಸ್ಸ್ಥಾತುಂ ಶಕ್ತೋ ದೇವಾಸುರೇ ಷ್ವಪಿ॥೧೯॥
ನಚಾಪಿ ತ್ರಿಷು ಲೋಕೇಷು ರಾಜನ್ವಿದ್ಯೇತ ಕಶ್ಚನ ।
ರಾಘವಸ್ಯ ವ್ಯಳೀಕಂ ಯಃ ಕೃತ್ವಾ ಸುಖ ಮವಾಪ್ನುಯಾತ್ ॥೨೦॥

ಯೋಗ್ಯನೆನಿಸುವುದಿಲ್ಲ. ॥೧೭॥ ಧರ್ಮವಿರುದ್ಧೇಷು - ನ್ಯಾಯಕ್ಕೆ ವಿರೋಧವಾಗಿರುವ, ಬಹ್ವಪಾಯೇಷು- ಅನೇಕಕೇಡುಗಳುಳ್ಳ, ಮೂಲಘಾತಿಷು - ಮೂಲವನ್ನು ನಾಶಪಡಿಸತಕ್ಕ, ಕರ್ಮಸು - ಕೆಲಸಗಳಲ್ಲಿ, ಭವದ್ವಿಧಾಃ - ನಿನ್ನಂತಹ ಸ್ವಭಾವವುಳ್ಳ. ಬುದ್ಧಿಮಂತಃ - ಬುದ್ಧಿಶಾಲಿಗಳು, ನಸಜ್ಜಂತೆ - ಆಸಕ್ತರಾಗುವುದಿಲ್ಲ ॥೧೮॥ ರಾಮಕೋಪಾನುವರ್ತಿನಾಂ - ರಾಮನಕೋಪವನ್ನು ಅನುಸರಿಸಿ ಇರುವ, ಲಕ್ಷ್ಮಣ ಮುಕ್ತಾನಾಂ - ಲಕ್ಷ್ಮಣನಿಂದ ಬಿಡಲ್ಪಟ್ಟ, ಶರಾಣಾಂ - ಬಾಣಗಳ, ಅಗ್ರತಃ - ಇದಿರಿಗೆ, ಸ್ಥಾತುಂ - ನಿಲ್ಲಲಿಕ್ಕೆ, ದೇವಾಸುರೇಷ್ವಪಿ - ದೇವತೆಗಳೊಳಗೂ, ರಾಕ್ಷಸರೊಳಗೂ, ಕಶ್ಚ - ಯಾವನು, ಶಕ್ತಃ - ಸಮರ್ಥನಾಗಬಲ್ಲನು ? ॥೧೯॥ ರಾಜನ್ - ಎಲೈ ರಾಕ್ಷಸ ರಾಜನೆ ! ಕಿಂಚ - ಮತ್ತು, ತ್ರಿಷು- ಮೂರಾದ, ಲೋಕೇಷ್ವಪಿ - ಲೋಕಗಳಲ್ಲಿಯೂ, ಯಃಕಶ್ಚನ-ಯಾವನೇ ಆಗಲೀ, ರಾಘವಸ್ಯ - ಶ್ರೀರಾಮನಿಗೆ, ವ್ಯಳೀಕಂ - ಅಹಿತವನ್ನು, (ಅಪರಾಧವನ್ನು) ಕೃತ್ವಾ - ಮಾಡಿ, ಸುಖಂ - ಸೌಖ್ಯವನ್ನು, ಅಪ್ನುಯಾತ್ - ಹೊಂದಬಲ್ಲನೋ, ಸಃ - ಅಂಥವನು, ನವಿದ್ಯೇತ - ಇಲ್ಲವೇಇಲ್ಲ, ॥೨೦॥ ತತ್- ಅದಕಾರಣ,(ರಾಮಾಪರಾಧವುಧರ್ಮವಿರುದ್ಧವಾದುದರಿಂದ) ತ್ರಿಕಾಲಹಿತಂ-ಮೂರುಕಾಲದಲ್ಲಿಯೂಮೇಲನ್ನು

ನಾನು ಹೇಳಬೇಕಾಗಿಲ್ಲ ॥ ೧೭ ॥ ಲೋಕದಲ್ಲಿ ಅವಿವೇಕಿಗಳು - ಹಿಂದುಮುಂದಿನ ಯೋಚನೆಯಿಲ್ಲದೆ, ಕಾರ್ಯಾಕಾರ್ಯಗಳನ್ನು ಒಗೆಯದೆ, ಮನೆಮಕ್ಕಳನ್ನೆಲ್ಲ ಹಾಳುಮಾಡಿಕೊಂಬ ಧರ್ಮಾರ್ಥವಿರುದ್ಧವಾದ ಇಂತಹ ಹೀನಕೆಲಸವನ್ನು ಮಾಡುತ್ತಾರೆ.ಅದಕ್ಕೆ ತಕ್ಕಂತೆ ಅನರ್ಥವನ್ನೂ ಪಡೆಯುವರು. ಧರ್ಮಾರ್ಥವಿರುದ್ಧವಾಗಿಯೂ, ಬಹಳವಾದ ಅಪಾಯಕ್ಕೆ ಒಳಗುಮಾಡತಕ್ಕುದಾಗಿಯೂ ಇರುವ ಇಂತಹ ನೀಚಕೃತ್ಯಗಳಲ್ಲಿ ನಿನ್ನಂತಹ ಬುದ್ಧಿಶಾಲಿಗಳು ಎಂದಿಗೂ ಪ್ರವರ್ತಿಸಿ, ಸಮೂಲವಾಗಿ ನಾಶವನ್ನು ಪಡೆಯುವುದಿಲ್ಲ॥೧೮॥ ಆದರೆ-ಎಲ ಕಪಿ ! ಸಕಲರನ್ನೂ ಸಮೂಲವಾಗಿ ನಾಶಮಾಡುವ ನನ್ನನ್ನು ಬುಡಸಹಿತ ಹಾಳುಮಾಡುವವನಾರು ಎಂಬೆಯೊ ? ಅಯ್ಯೋ ಹುಚ್ಚಾ ! ನಿನಗಿರುವ ಅಭ್ರಾಂತಿಯನ್ನು ತೊರೆ,ಅಹಹ! ರಾಮನಿಗೆ ಸಿಟ್ಟುಹತ್ತಿ, ಅವನ್ನು ಅನುಸರಿಸಿ ಲಕ್ಷ್ಮಣನು ಬಾಣಗಳನ್ನು ಬಿಟ್ಟರೆ, ದೇವತೆಗಳೊಳಗಾಗಲಿ, ರಕ್ಕಸರಲ್ಲಿಯಾಗಲಿ, ಯಾವನಾದರೂ ಆ ಕ್ರೂರಶರದ ಇದಿರಿಗೆ ನಿಮಿಷಮಾತ್ರವಾದರೂ ನಿಲ್ಲಲ್ಲಿಕ್ಕೆ ಸಾಮರ್ಥ್ಯವುಂಟೆ ? ಸರ್ವಾತ್ಮನಾಇಲ್ಲ ॥೧೯॥ ಎಲೈ ದೊರೆಯೇ ! ಸ್ವರ್ಗಮರ್ತ್ಯಪಾತಾಳಗಳೊಳಗೆ ಯಾವನೊಬ್ಬನಾದರೂ ರಾಘವನಿಗೆ ಅಹಿತವನ್ನು ಮಾಡಬೇಕೆಂದು ನೆನೆದರೆ, ಅಂಥವನು ನಿಮಿಷವಾದರೂ ಉಳಿದು ಸುಖವಾಗಿ ಬಾಳುವನೆಂಬ ಹಂಬಲನ್ನು ತೊರೆ ॥೨೦॥ ಆದುದರಿಂದ ಆ ರಾಮನಿಗೆ ಕೇಡನ್ನು ಬಗೆವುದು-ಮೇಲನ್ನುಂಟು

ತತ್ತ್ರಿಕಾಲ ಹಿತಂ ವಾಕ್ಯಂ ಧರ್ಮ್ಯ ಮರ್ಥಾನು ಬಂಧಿಚ ।
ಮನ್ಯಸ್ವ ನರದೇವಾಯ ಜಾನಕೀ ಪ್ರತಿದೀಯತಾಂ ॥೨೧॥
ದೃಷ್ಟಾ ಹೀಯಂ ಮಯಾ ದೇವೀ ಲಬ್ಧಂ ಯದಿಹ ದುರ್ಲಭಂ ।
ಉತ್ತರಂ ಕರ್ಮ ಯಚ್ಛೇಷಂ ನಿಮಿತ್ತಂ ತತ್ರ ರಾಘವಃ ॥೨೨॥
ಲಕ್ಷಿತೇಯಂ ಮಯಾ ಸೀತಾ ತಥಾ ಶೋಕ ಪರಾಯಣಾ ।
ಗೃಹ್ಯ ಯಾಂ ನಾಭಿ ಜಾನಾಸಿ ಪಂಚಾಸ್ಯಾ ಮಿವ ಪನ್ನಗೀಂ ॥೨೩॥
ನೇಯಂ ಜರಯಿತುಂ ಶಕ್ಯಾ ಸಾಸುರೈ ರಮರೈ ರಪಿ ।

---

ಉಂಟುಮಾಡುವ, ವಾಕ್ಯಂ - ಸುಗ್ರೀವವಾಕ್ಯವನ್ನು, ಧರ್ಮ್ಯಂ - ಧರ್ಮವನ್ನು ಬಿಟ್ಟು ಹೋಗದಿರುವುದನ್ನಾಗಿಯೂ, ಅರ್ಥಾನುಬಂಧಿಚ - ಧನಾದಿವಸ್ತು ಸಂಬಂಧವುಳ್ಳುದನ್ನಾಗಿಯೂ, ಮನ್ಯಸ್ವ - ತಿಳಿ, ಜಾನಕೀ- ಸೀತೆಯು, ನರದೇವಾಯ - ಮಹಾಪ್ರಭುವಾದ ರಾಮನಿಗೆ, ಪ್ರತಿದೀಯತಾಂ - ನಿನ್ನಿಂದ ಒಪ್ಪಿಸಲ್ಪಡಲಿ, ॥೨೧॥ ಮಯಾ - ನನ್ನಿಂದ, ಇಯಂ - ಈ, ದೇವೀ - ಸೀತಾದೇವಿಯು, ದೃಷ್ಟಾಹಿ - ನೋಡಲ್ಪಟ್ಟಳಷ್ಟೆ ? ಯತ್ - ಯಾವ ಸೀತಾದರ್ಶನವು, ದುರ್ಲಭಂ - ಇತರರಿಗೆ ಅಸಾಧ್ಯವೆನಿಸಿದುದೋ, ತತ್ - ಅಂತಹ ಸೀತಾಸಂದರ್ಶನವು, ಮಯಾ - ನನ್ನಿಂದ, ಇಹ - ಇಲ್ಲಿ, ಲಬ್ಧಂ - ಹೊಂದಲ್ಪಟ್ಟಿತು ಉತ್ತರಂ - ಮುಂದಿನದಾಗಿರುವ, ಶೇಷಂ - ಉಳಿದಿರತಕ್ಕ, ಕರ್ಮ - ಸೀತೆಯನ್ನು ಕರೆದೊಯ್ಯುವ ಕೆಲಸವು, (ಯಾವುದಿರುವುದೊ) ತತ್ರ - ಆ ಕಾರ್ಯದವಿಷಯದಲ್ಲಿ, ರಾಘವಃ - ಶ್ರೀರಾಮನು, ನಿಮಿತ್ತಂ - ಕಾರಣನಾಗಿದಾನೆ ॥೨೨॥ ತ್ವಂ - ನೀನು, ಯಾಂ - ಯಾವ ಸೀತೆಯನ್ನು, ಪಂಚಾಸ್ಯಾಂ - ಐದು ಮುಖಗಳುಳ್ಳ ಪನ್ನಗೀಮಿವ - ಹೆಣ್ಣುಹಾವನ್ನು ಹೇಗೋಹಾಗೆ, ಗೃಹ್ಯ - ಕರೆತಂದು, ನಾಭಿಜಾನಾಸಿ - ತಿಳಿಯದೇ ಇದ್ದೀಯೋ, ತಥಾ - ಹಾಗೆ, ಶೋಕಪರಾಯಣಾ - ನಿನ್ನ ದುಃಖಕ್ಕೆ ಮೂಲಕಾರಣವಾಗಿರುವ, ಇಯಂ- ಈ ಸೀತೆಯು, ಮಯಾ-ನನ್ನಿಂದ, ಲಕ್ಷಿತಾ-ನೋಡಲ್ಪಟ್ಟಳು, ॥೨೩॥ ಸಾಸುರೈಃ-ಅಸುರರಿಂದ ಸಹಿತರಾದ

---

ಮಾಡತಕ್ಕುದಲ್ಲ. ಇಗೋ, ಧರ್ಮಕ್ಕೂ, ನೀತಿಗೂ ಸ್ವಲ್ಪವೂ ವಿರೋಧವಿಲ್ಲದೆ, ಹಿಂದಕ್ಕೂ, ಈಗಲೂ, ಮುಂದೆಯೂ ನಿನಗೆ ಶ್ರೇಯಸ್ಸನ್ನುಂಟುಮಾಡುವುದಾಗಿಯೂ, ದೇಶಕಾಲಗಳಿಗೆ ಹಿತವೆನಿಸಿಯೂ ಇರುವ ನನ್ನ ಮಾತನ್ನು ಕೇಳು, ದಯಾನಿಧಿಯಾದ ದಾಶರಥಿಗೆ ಆತನ ಧರ್ಮಪತ್ನಿಯಾದ ಸೀತೆಯನ್ನು ತಂದೊಪ್ಪಿಸು, ಆತನು ನನ್ನ ತಪ್ಪನ್ನು ಮನ್ನಿಸುವನು ಮೇಲನ್ನು ಪಡೆ, ಸುಖವಾಗಿ ಬಾಳು,, ಎಂದಿಷ್ಟು ಸಂಗತಿಯನ್ನು ಹೇಳಿಕಳುಹಿಸಿದಾನೆ ॥ ಇನ್ನು ನನ್ನ ವೃತ್ತಾಂತವನ್ನು ಕೇಳು-ಪ್ರಭುವಿನ ಆಜ್ಞಾನುಸಾರವಾಗಿ ನಾನು ಇಲ್ಲಿಗೆ ಬಂದುದಾಯಿತು, ಹೆರರು ಪಡೆಯಲಸದಳವೆನಿಸಿದ ಸೀತಾಸಂದರ್ಶನವನ್ನು ಪಡೆದನು, ಇಲ್ಲಿಂದ ಮೇಲೆ ಮಾಡಬೇಕಾದ ಕೆಲಸವೆಲ್ಲ ರಾಮನಿಗೆ ಸೇರಿದುದು ॥೨೨॥ ಸೀತೆಯು, ನನ್ನ ಬಳಿ ವಾಗಿರುವಲ್ಲಿ, ನನ್ನನ್ನು ಯಾರು ಏನಮಾಡುವರು ಎಂದು ಬಗೆಯ ಬೇಡ ? ನಾನೇನೋ ಶೋಕ ಪರಾಯಣಳಾದ ಜಾನಕಿಯನ್ನು ಕಂಡೆನು. ನೀನು-ಈ ಸೀತೆಯನ್ನು ನಿನ್ನ ವಶವಾದ ಹೆಂಗಸೆಂದು ಎಂದಿಗೂ ಭಾವಿಸ ಬೇಡ, ಐದು ಹೆಡೆಗಳನ್ನೊಳಗೊಂಡಿರುವ ಮಹಾಕ್ರೂರವಾದ ಹೆಣ್ಣುಹಾವು ನಿನ್ನ ಮನೆಯನ್ನು ಹೊಕ್ಕಿರುವುದೆಂದೇ ತಿಳಿ ॥೨೩॥ ದೇವಾಸುರರೆಲ್ಲರೂ ಒಟ್ಟಿಗೆ ಸೇರಿ, ಈಕೆಯನ್ನು ಮನಸೋಲುವಂತೆ ಮಾಡಬೇಕೆಂದು ಪ್ರಯತ್ನಿಸಿದರೂ,

ವಿಷಸಂಸೃಷ್ಟ ಮತ್ಯರ್ಥಂ ಭುಕ್ತ ಮನ್ನಮಿವೌಜಸಾ ॥೨೪॥
ತಪ ಸ್ಸಂತಾಪ ಲಬ್ಧ ಸ್ತೇ ಯೋಽಯಂ ಧರ್ಮ ಪರಿಗ್ರಹಃ ।
ನ ಸ ನಾಶಯಿತುಂ ನ್ಯಾಯ್ಯ ಆತ್ಮಪ್ರಾಣ ಪರಿಗ್ರಹಃ ॥೨೫॥
ಅವಧ್ಯತಾಂ ತಪೋಭಿ ರ್ಯಾಂ ಭವಾನ್ಸಮನು ಪಶ್ಯತಿ ।
ಆತ್ಮನಃ ಸಾಸುರೈರ್ದೇವೈ ರ್ಹೇತು ಸ್ತತ್ರಾ ಪ್ಯಯಂ ಮಹಾನ್ ॥೨೬॥
ಸುಗ್ರೀವೋ ನಹಿ ದೇವೋಽಯಂ ನಾಸುರೋ ನತು ರಾಕ್ಷಸಃ ।
ನ ದಾನವೋ ನಗಂಧರ್ವೋ ನಯಕ್ಷೋ ನಚ ಪನ್ನಗಃ ॥೨೭॥ ॥

---

ಅಮರ್ತ್ಯೈರಪಿ - ದೇವತೆಗಳಿಂದಲೂ, ವಿಷಸಂಸೃಷ್ಟಂ - ವಿಷದಿಂದ ಸಹಿತವಾದ, ಭುಕ್ತಂ - ಭೋಜನಮಾಡಲ್ಪಟ್ಟ, ಅನ್ನಮಿವ - ಅನ್ನದಂತೆ, ಇಯಂ - ಈ ಸೀತೆಯು, ಓಜಸಾ - ಪ್ರತಾಪದಿಂದ (ಜಾಠರಾಗ್ನಿಯಿಂದ) ಜರಯಿತುಂ - ಅರಗಿಸಲಿಕ್ಕೆ (ವಶಪಡಿಸಿಕೊಳ್ಳಲಿಕ್ಕೆ) ನಶಕ್ಯಾ - ಸಾಧ್ಯಳಲ್ಲ॥೨೪॥ ತಪಸ್ಸಂತಾಪಸಂಲಬ್ಧಃ - ತಪಸ್ಸಿನ ಸಂಕಟದಿಂದ ಪಡೆದಿರುವ, ಧರ್ಮಪರಿಗ್ರಹಃ - ಧರ್ಮದಫಲವಾಗಿರುವ, ಯಃ - ಯಾವ, ತೇ - ನಿನ್ನ, ಆತ್ಮಪ್ರಾಣಪರಿಗ್ರಹಃ - ದೇಹಪ್ರಾಣಗಳ ಸಂಬಂಧವೆಂಬುದು (ಅಸ್ತಿ-ಉಂಟೋ) ಸಃ - ಅದು, (ತ್ವಯಾ - ನಿನ್ನಿಂದ) ನಾಶಯಿತುಂ - ಹಾಳುಮಾಡಿಕೊಳ್ಳಲಿಕ್ಕೆ, ನನ್ಯಾಯ್ಯಃ - ನ್ಯಾಯವಲ್ಲವಲ್ಲವೆ ॥೨೫॥ ಭವಾನ್ - ನೀನು, ತಪೋಭಿಃ - ತಪಸ್ಸುಗಳಿಂದ, (ಆರ್ಜಿತಾಂ- ಸಂಪಾದಿಸಲ್ಪಟ್ಟ) ಸಾಸುರೈಃ - ರಾಕ್ಷಸರಿಂದ ಸಹಿತರಾದ, ದೇವೈಃ-ದೇವತೆಗಳಿಂದಲೂ, ಆತ್ಮನಃ - ನಿನ್ನ, ಅವಧ್ಯತಾಂ - ಅಸಂಹಾರವನ್ನು ಸಮನುಪಶ್ಯತಿ - ಭಾವಿಸುತಲಿರುವೆಯೋ ? ತತ್ರಾಪಿ - ಹಾಗಿರುವ ಸಂದರ್ಭದಲ್ಲಿಯೂ, ಅಯಂ - ಈ ಮುಂದೆ ನಾನು ಹೇಳಹೋಗುವ, ಹೇತುಃ - ಕಾರಣವು, ಮಹಾನ್ - ದೊಡ್ಡದಾಗಿ, (ಅಸ್ತಿ - ಇದೆ) ॥೨೬॥ ಅಯಂ - ಈ ನಮ್ಮ, ಸುಗ್ರೀವಃ - ಕಪಿರಾಜನು, ದೇವಃ - ದೇವತೆಯು, ನಹಿ - ಅಲ್ಲವಷ್ಟೆ, ಅಸುರಃ - ರಾಕ್ಷಸನೂ, ನ - ಅಲ್ಲ, ರಾಕ್ಷಸಃ - ರಕ್ಕಸನೂ, ನ-ಅಲ್ಲ, ದಾನವಃ- ದಾನವನೂ, ನ - ಅಲ್ಲವು, ಗಂಧರ್ವಃ - ಗಂಧರ್ವನೂ, ನ-ಅಲ್ಲ, ಯಕ್ಷಃ - ಯಕ್ಷನೂ, ನ - ಅಲ್ಲ,

---

ವಿಷದಿಂದೊಡಗೂಡಿದ ಅನ್ನವನ್ನು ಭುಜಿಸಿ ಅದನ್ನು ಹೊಟ್ಟೆಯೊಳಗೆ ಅರಗಿಸಿಕೊಳ್ಳಲು ಹೇಗೆ ಶಕ್ಯವಲ್ಲವೋ, ಹಾಗೆ ಸಾಧ್ಯವಲ್ಲವೆಂದು ಖಂಡಿತವಾಗಿ ತಿಳಿ ॥೨೪॥ ಎಲೈ ದಶವದನನೇ! ಬಹುಕಷ್ಟಪಟ್ಟು ತಪಸ್ಸನ್ನು ಮಾಡಿ, ಧರ್ಮವನ್ನು ಸಂಪಾದಿಸಿ, ಅದಕ್ಕೆ ತಕ್ಕ ಶ್ರೇಯಸ್ಸನ್ನೂ, ಖ್ಯಾತಿಯನ್ನೂ, ಜ್ಞಾನವನ್ನೂ, ಪಡೆದು ಇದ್ದೀಯೆ. ಬಹುಕಾಲ ಜೀವಿಸುತ, ಅಖಂಡವಾದ ಸುಖಸಾಮ್ರಾಜ್ಯವನ್ನು ಅನುಭವಿಸಬಹುದು, ಇಂತಹ ಸಂಪತ್ಸಮೃದ್ಧಿಯನ್ನೆಲ್ಲ ನಿಮಿಷಮಾತ್ರದಲ್ಲಿ ಒಂದು ಕ್ರೂರ ಕೃತ್ಯವನ್ನು ಮಾಡಿ, ಹಾಳುಮಾಡಿಕೊಂಬುದು ಧರ್ಮವಲ್ಲ, ನನ್ನ ಹಿತೋಪದೇಶಕ್ಕೆ ಕಿವಿಗೊಡು॥೨೫॥ ಹೋ ! ಸೃಷ್ಟಿಕರ್ತನಾದ ಬ್ರಹ್ಮನಿಂದಲೇ ನಾನು ಪೂರ್ಣಾಯುಷ್ಯವನ್ನು ಪಡೆದು ಬಂದಿರುವಲ್ಲಿ, ಅದನ್ನು ಭಂಗಪಡಿಸಲಿಕ್ಕೆ ಯಾವನಿಂದಾದೀತು? ಎಂದು ನಿನಗೆ ಹೆಮ್ಮೆಯೊಂದಿರಬಹುದಲ್ಲವೆ ? ನಿನ್ನ ಉಗ್ರತರವಾದ ತಪಸ್ಸುಗಳಿಂದ ಯಾರೂ ನನ್ನನ್ನು ಕೊಲ್ಲಲಾರರು ಎಂದು ಭಾವಿಸಿ ಇರುವೆಯಷ್ಟೆ; ಬಂದುವೇಳೆ ದೇವಾಸುರರಿಂದ ನಿನಗೆ ಮರಣವಿಲ್ಲದಿದ್ದರೂ, ಆ ಸಂದರ್ಭದಲ್ಲಿಯೂ ತಕ್ಕ ಕಾರಣವನ್ನು ಹೇಳುತ್ತೇನೆ ಕೇಳು, ॥೨೬॥ ಸುಗ್ರೀವನನ್ನು ನೀನು ಚೆನ್ನಾಗಿ ಬಲ್ಲೆ;

ತಸ್ಮಾತ್ಪ್ರಾಣಪರಿತ್ರಾಣಂ ಕಥಂ ರಾಜನ್ಕರಿಷ್ಯಸಿ ॥ ೨೩॥ ॥
ನತು ಧರ್ಮೋಪಸಂಹಾರಮಧರ್ಮಫಲಸಂಹಿತಂ ।
ತದೇವ ಫಲಮನ್ವೇತಿ ಧರ್ಮಶ್ಚಾಧರ್ಮನಾಶನಃ ॥ ೨೪॥ ॥
ಪ್ರಾಪ್ತಂ ಧರ್ಮಫಲಂ ತಾವದ್ಭವತಾ ನಾತ್ರ ಸಂಶಯಃ।
ಫಲಮಸ್ಯಾಪ್ಯಧರ್ಮಸ್ಯ ಕ್ಷಿಪ್ರಮೇವ ಪ್ರಪತ್ಸ್ಯಸೆ ॥ ೨೫॥ ॥

ಪನ್ನಗಶ್ಚ - ನಾಗನೂ, ನ - ಅಲ್ಲ, ತಸ್ಮಾತ್- ಆದಕಾರಣ, ರಾಜನ್ - ಎಲೈ ದೊರೆಯೇ, ಕಥಂ - ಹೇಗೆ ಪ್ರಾಣಪರಿತ್ರಾಣಂ - ಪ್ರಾಣಸಂರಕ್ಷಣೆಯನ್ನು, ಕರಿಷ್ಯಸಿ - ಮಾಡಿಕೊಳ್ಳಬಲ್ಲೆ ॥೨೩॥ ॥೨೩॥ ಧರ್ಮೋಪಸಂಹಾರಂ (ಧರ್ಮೋಪಸಂಹಾರಃ) - ಧರ್ಮಫಲವಾದ ಸುಖವು, ಅಧರ್ಮಫಲಸಂಹಿತಂ (ಅಧರ್ಮಫಲಸಂಹಿತಃ) - ಅಧರ್ಮಫಲವಾದ ದುಃಖದಿಂದ ಸಹಿತವಾದುದು, ನತು (ಭವತಿ) - ಆಗುವುದಿಲ್ಲ, ತದೇವಫಲಂ - ಆ ಧರ್ಮಫಲವಾದ ಸುಖವನ್ನೇ, (ಜನಃ - ಮನುಷ್ಯನು ಪ್ರಾಣಿಯು) ಅನ್ವೇತಿ - ಅನುಸರಿಸುವನು, ಅಥವಾ - ಫಲಂ - ಧರ್ಮಫಲವು, ತದೇವ - ಆಧರ್ಮಫಲವನ್ನೇ, ಅನ್ವೇತಿ - ಅನುಸರಿಸುವುದು, ಧರ್ಮಶ್ಚ - ಧರ್ಮವಾದರೋ ಅಧರ್ಮನಾಶನಃ - ಅಧರ್ಮವನ್ನು ನಾಶಪಡಿಸತಕ್ಕುದು, (ನ - ಆಗುವುದಿಲ್ಲ) ಅರ್ಥಾಂತರ- ಧರ್ಮಃ - ಧರ್ಮವು, ಅಧರ್ಮನಾಶಶ್ಚ - ಅಧರ್ಮವನ್ನು ನಾಶಮಾಡತಕ್ಕುದೂ, (ನಭವತಿ - ಆಗುವುದಿಲ್ಲ)

ಅವನೇನು ದೇವತೆಯೋ ? ಅಸುರನೋ? ದೈತ್ಯನೊ? ಇಲ್ಲದಿದ್ದರೆ ದಾನವನೋ ಅಥವಾ ಯಕ್ಷನೋ ? ಇಲ್ಲವೆ ನಾಗನೋ? ಯೋಚಿಸಿ ಹೇಳು, ಅವರೊಳಗೆ ಯಾರೂ ಅಲ್ಲವಷ್ಟೆ ? ಆದಕಾರಣ ಎಲೈ ದೊರೆಯೇ ! ಅವನಿಂದ ನಿನ್ನ ಪ್ರಾಣಗಳನ್ನು ಹೇಗೆ ಸಂರಕ್ಷಿಸಿಕೊಳ್ಳಬಲ್ಲೆಯೋ ಅದನ್ನು ಅರುಹು ॥೨೬, ೨೩॥ ॥ ಅಥವಾ -ನಾನು ಹೇರಳವಾದ ಧರ್ಮಗಳನ್ನು ಸಂಪಾದಿಸಿ ಇದ್ದೇನೆ. ಬಹುತರವಾಗಿ ದೇವತೋಪಾಸನೆಗಳನ್ನು ಮಾಡಿದೇನೆ. ಬಂದುವೇಳೆ ಅಧರ್ಮಫಲವಾದ ದುಃಖವು ಒದಗಬಹುದಾಗಿದ್ದರೂ ಪೂರ್ವದಲ್ಲಿಯೇ ಸಿದ್ಧವಾಗಿರುವ ಧರ್ಮವು ಅಧರ್ಮ ಫಲವನ್ನು ನಾಶಪಡಿಸುವುದೆಂದು ಬಿಂಕವಿರುವುದೊ ? ಆಗಲೂ ಉದಹರಿಸುವೆನು ಕೇಳು ;— ಓ ರಾವಣಾ ! ಲೋಕದಲ್ಲಿ ಧರ್ಮಫಲವು ಧರ್ಮ ಫಲದೊಂದಿಗೂ, ಅಧರ್ಮ ಫಲವು ಅಧರ್ಮ ಫಲದೊಂದಿಗೂ ಅನುಸರಿಸಿ ಇರುವುದು. ಅಷ್ಟೇ ಹೊರತು, ಅಧರ್ಮಫಲವು ಧರ್ಮಫಲದೊಂದಿಗೆ ಕಲೆಯುವುದಿಲ್ಲ. ಹಾಗೆಯೇ ಧರ್ಮಫಲವೂ ಅಧರ್ಮಫಲದೊಂದಿಗೆ ಸೇರುವುದಿಲ್ಲ. ಕತ್ತಲಿಗೂ ಬೆಳಕಿಗೂ ಹೇಗೆ ಪರಸ್ಪರ ವಿರೋಧವುಂಟೋ, ಹಾಗೆಯೇ ಧರ್ಮಫಲವಾದ ಸುಖಕ್ಕೂ, ಅಧರ್ಮಫಲವಾದ ದುಃಖಕ್ಕೂ ಸಂಪೂರ್ಣವಾಗಿ ಬಂದಕ್ಕೊಂದು ವಿರೋಧಿಯಾಗಿರುವುದು. ಬಂದುವೇಳೆ - ಧರ್ಮಫಲವು ಅಧರ್ಮಫಲವನ್ನು ನಾಶಮಾಡುವುದಿಲ್ಲವೆ? ಎಂಬೆಯೋ ; ನೀನು ಹೇಳಿದ ನ್ಯಾಯದಿಂದಲೇ ಅಧರ್ಮಫಲವೂ ಧರ್ಮಫಲವನ್ನು ನಾಶಮಾಡಬಹುದಷ್ಟೆ ; ನಿನ್ನ ತರ್ಕವನ್ನೇ ಅವಲಂಬಿಸಿದರೂ, ಧರ್ಮಫಲವಾದ ರಾಜ್ಯಲಾಭ, ದಿಗ್ವಿಜಯ, ಸುಖಾನುಭವ ಮುಂತಾದ ಧರ್ಮಫಲವನ್ನೆಲ್ಲ ನೀನು ಅನುಭವಿಸಿದುದಾಯಿತು ಅಧರ್ಮಫಲವು ಮಾತ್ರ ನಿನಗೆ ಸಿದ್ಧವಾಗಿದೆ. ಅದನ್ನು ನೀನು ಬಹು ಸ್ವಲ್ಪ ಕಾಲದಲ್ಲಿಯೇ ಅನುಭವಿಸತಕ್ಕವನಾಗಿದ್ದೀಯೆ, ದುರ್ಬಲವಾದ ಧರ್ಮವೂ ಪ್ರಬಲವಾದ ಅಧರ್ಮದಿಂದ ನಾಶವನ್ನು ಪಡೆಯುವುದು.

ಜನ ಸ್ಥಾನ ವಧಂ ಬುದ್ಧ್ವಾ ಬುದ್ಧ್ವಾ ವಾಲಿವಧಂ ತಥಾ !
ರಾಮ ಸುಗ್ರೀವಸಖ್ಯಂ ಚ ಬುಧ್ಯಸ್ವ ಹಿತಮಾತ್ಮನಃ ॥೩೦॥
ಕಾಮಂ ಖಲ್ವಹ ಮಪ್ಯೇಕ ಸ್ಸವಾಜಿ ರಥಕುಂಜರಾಂ ।
ಲಂಕಾಂ ನಾಶಯಿತುಂ ಶಕ್ತ ಸ್ತಸ್ಯೈವತು ನ ನಿಶ್ಚಯಃ ॥೩೧॥

ಭವತಾ - ನಿನ್ನಿಂದ, ಧರ್ಮಫಲಂ- ದಿಗ್ವಿಜಯವೇ ಮೊದಲಾಗಿರುವ ಸಮಸ್ತ ಧರ್ಮಫಲವೂ, ತಾವತ್ - ಸಂಪೂರ್ಣವಾಗಿ, ಪ್ರಾಪ್ತಂ ಹೊಂದಲ್ಪಟ್ಟಿದೆ, ಅಸ್ಯ - ಈ ಪರದಾರಾಪಹಾರರೂಪವಾದ, ಅಧರ್ಮಸ್ಯ - ಅಧರ್ಮದ, ಫಲಮಪಿ - ಫಲವುಕೂಡ, ಕ್ಷಿಪ್ರಮೇವ - ಜಾಗ್ರತೆಯಲ್ಲಿಯೇ, ಪ್ರಪತ್ಸ್ಯಸೆ- ಹೊಂದುವೆ, ಅತ್ರ- ಈ ವಿಷಯದಲ್ಲಿ, ಸಂಶಯಃ - ಸಂದೇಹವು, ನ - ಇಲ್ಲವು ॥೨೮ ೨೯ ೨೯॥ ಹೇರಾವಣ - ಎಲೈ ರಾವಣನೆ! (ತ್ವಂ - ನೀನು) ಜನಸ್ಥಾನವಧಂ - ಖರಾದಿಗಳ ಸಂಹಾರವನ್ನೂ, ಬುದ್ಧ್ವಾ - ತಿಳಿದು, ತಥಾ - ಹಾಗೆಯೇ, ವಾಲಿವಧಂ - ವಾಲಿಯ ಹನನವನ್ನೂ, ಬುದ್ಧ್ವಾ - ಯೋಚಿಸಿ, ರಾಮಸುಗ್ರೀವಸಖ್ಯಂಚ - ರಾಮಸುಗ್ರೀವರ ಸ್ನೇಹವನ್ನೂ, ಬುದ್ಧ್ವಾ- ತಿಳಿದುಕೊಂಡು, ಆತ್ಮನಃ-ನಿನ್ನ, ಹಿತಂ - ಮೇಲನ್ನು, ಬುಧ್ಯಸ್ವ - ಅರಿತುಕೊಳ್ಳು ॥೩೦॥ (ಹೇರಾವಣ - ಎಲೈ ದಶಕಂಧರನೆ,) ಅಹಂ - ನಾನು ಏಕಏವ - ಒಬ್ಬನೇ, ಸವಾಜೀರಥಕುಂಜರಾಂ - ಕುದುರೆ, ತೇರು, ಆನೆಮೊದಲಾದವುಗಳಿಂದೊಡಗೂಡಿರುವ, ಲಂಕಾಂ - ಈ ಲಂಕಾನಗರವನ್ನು, ನಾಶಯಿತುಂ - ಹಾಳುಮಾಡಲಿಕ್ಕೆ, ಕಾಮಂ - ಸಂಪೂರ್ಣವಾಗಿ, ಶಕ್ತಃ - ಸಮರ್ಥನಾಗಿದೇನೆ, ತಸ್ಯತು - ಆ ರಾಮನಿಗಾದರೋ, (ಸುಗ್ರೀವನಿಗಾದರೋ) ಏಷಃ - ಈ ಲಂಕೆಯು ಸಂಪೂರ್ಣವಾಗಿ ನಾಶವಾಗಬೇಕೆಂಬುದು, ನನಿಶ್ಚಯಃ - ಸಂಕಲ್ಪವಲ್ಲ, ಅಥವಾ - ತಸ್ಯತು - ರಾಜಾಜ್ಞೆಯಿಂದ ಬಂದಿರುವ ಈ ಮಾರುತಿಗಾದರೋ, ಏಷಃ - ಈ ಲಂಕಾನಾಶವು, ನನಿಶ್ಚಯಃ - ಪ್ರಭುವಿನ ಆಜ್ಞಾರೂಪವಾದ ಸಂಕಲ್ಪವಲ್ಲ ॥೩೧॥ ರಾಮೇಣಹಿ - ರಾಮನಿಂದಲಾದರೋ, ಹರ್ಯೃಕ್ಷಗಣಸನ್ನಿಧೌ -

ನನ್ನ ಧರ್ಮವೇ ಬಲವಾದುದು, ಅಧರ್ಮವೇ ಹೀನಬಲವಾದುದು ಎಂಬೆಯೋ? ಪರಸ್ತ್ರೀಹರಣ ರೂಪವಾದ ಅಧರ್ಮದಿಂದುಂಟಾಗುವ ದುಃಖ ಪರಂಪರೆಯನ್ನು ಭಂಗಪಡಿಸುವ ಧರ್ಮಫಲವೆಂಬುದು ಪ್ರಪಂಚದಲ್ಲಿಯೇ ಇಲ್ಲ ॥೨೮, ೨೯, ೨೯ ॥ ಛೀ, ಮನುಷ್ಯಮಾತ್ರದವನಾದ ರಾಮನು - ನನ್ನನ್ನು ಏನು ಮಾಡಬಲ್ಲನು ಎಂದು ಮೆರೆಯಬೇಡ, ಜನಸ್ಥಾನದಲ್ಲಿ ವಾಸಮಾಡುತ್ತಾ, ಬಾಹುಬಲ ಪರಾಕ್ರಮಗಳಲ್ಲಿ ನಿನ್ನನ್ನು ಮೀರಿದ್ದ ಖರ ದೂಷಣರೇ ಮುಂತಾದ ಹದಿನಾಲ್ಕು ಸಾವಿರ ಮಂದಿ ರಕ್ಕಸರನ್ನೊಕ್ಕಲಿಕ್ಕಿದವನು ಆ ಮನುಷ್ಯಮಾತ್ರದ ರಾಮನೇ ಅಲ್ಲವೆ? ಅಹಹ ! ಎಲ ರಾವಣ! ಕಡಲಿನ ತಡಿಯಲ್ಲಿ ಪೂರ್ವಾಭಿಮುಖವಾಗಿ ಕುಳಿತಿರುವಾಗ, ನೀನು ಹಿಂಗಡೆಯಿಂದ ಬಂದು, ಎರಡು ಕಂಕುಳುಗಳ ಸಂದುಗಳಲ್ಲಿ ನಿನ್ನ ಇಪ್ಪತ್ತು ತೋಳುಗಳನ್ನೂ ನೀಡಿ, ಹಿಡಿಯಲಿಕ್ಕೆ ಹೋಗುವಲ್ಲಿ, ಹಾಗೆಯೇ ಎರಡು ತೋಳುಗಳಿಂದಲೂ ಇರುಕಿಸಿಕೊಂಡು, ಮೇಲಕ್ಕೆ ಹಾರಿ; ಹಿಂದೆ ಜೋಲಾಡುತ್ತಿದ್ದ ನಿನ್ನನ್ನು ನಾಲ್ಕು ಸಮುದ್ರಗಳಲ್ಲಿಯೂ ಅದ್ದಿ ಅದ್ದಿ ತೆಗೆದು, ಕಿಷ್ಕಿಂಧಾ ನಗರದ ಬಳಿಯಲ್ಲಿ ಆಕಾಶಮಾರ್ಗದಿಂದ ನಿನ್ನನ್ನು ಕೆಳಗೆ ಉರುಳಿಸಿದ್ದವನು ಯಾರು? ಬಳಿಕ ಹೆಮ್ಮೆಯು ಅಡಗಿ, ವಿಧೇಯತೆಯನ್ನು ಹೊಂದಿ ನೀನು ಯಾರ ಸಂಗಡ ಸಖ್ಯವನ್ನು ಬೆಡಿದೆ? ಆ ಧೀರನಾರು? ಜ್ಞಾಪಕವಿದೆಯೋ? ಆ ಲೋಕೈಕ ವೀರನೆನಿಸಿದ್ದ ವಾಲಿಯನ್ನು ಕೊಂದವನು ಮನುಷ್ಯಮಾತ್ರನಲ್ಲವೋ? ಆ ರಾಮನೊಡನೆಯೇ ಈಗ ಸುಗ್ರೀವನಿಗೆ

ರಾವೇಣ ಹಿ ಪ್ರತಿಜ್ಞಾತಂ ಹರ್ಯೃಕ್ಷ ಗಣಸನ್ನಿಧೌ ।
ಉತ್ಸಾದನ ಮಮಿತ್ರಾಣಾಂ ಸೀತಾ ಯೈಸ್ತು ಪ್ರಧರ್ಷಿತಾ ॥೩೬॥
ಅಪಕುರ್ವ್ಹಿ ರಾಮಸ್ಯ ಸಾಕ್ಷಾದಪಿ ಪುರಂದರಃ ।
ನ ಸುಖಂ ಪ್ರಾಪ್ನುಯಾ ದನ್ಯಃ ಕಿಂಪುನ ಸ್ತ್ವದ್ವಿಧೋಜನಃ॥೩೭॥
ಯಾಂ ಸೀತೇ ತ್ಯಭಿ ಜಾನಾಸಿ ಯೇಯಂ ತಿಷ್ಠತಿ ತೇ ವಶೇ।

ಕಪಿಗಳ ಮತ್ತು ಕರಡಿಗಳ ಸಮೀಪದಲ್ಲಿ, ಯೈಃ - ಯಾರಿಂದ, ಸೀತಾ - ಜಾನಕಿಯು, ಪ್ರಧರ್ಷಿತಾ- ಅಪಮಾನಿಸಲ್ಪಟ್ಟಳೋ (ತೇಷಾಂ - ಅಂತಹ) ಅಮಿತ್ರಾಣಾಂ - ಶತ್ರುಗಳ, ಉತ್ಸಾದನಂ-ನಾಶವು, (ಕರ್ತ್ವ್ಯಂ - ಮಾಡತಕ್ಕುದು, ಇತಿ - ಹೀಗೆಂದು) ಪ್ರತಿಜ್ಞಾತಂ - ಪ್ರತಿಜ್ಞೆಮಾಡಲ್ಪಟ್ಟಿತು ॥೩೬॥ ರಾಮಸ್ಯ- ಶ್ರೀರಾಮನಿಗೆ, ಅಪಕುರ್ವನ್ - ಅಪಕರಿಸಿದವನು, ಸಾಕ್ಷಾತ್ - ಪ್ರತ್ಯಕ್ಷವಾಗಿಬಂದ, ಪುರಂದರೋಪಿ- ಇಂದ್ರನೇ ಆದರೂ, ಸುಖಂ - ಸೌಖ್ಯವನ್ನು, ನಪ್ರಾಪ್ನುಯಾತ್ - ಹೊಂದಲಾರನು, ಅನ್ಯಃ - ಅವನಿಗಿಂತಬೇರಾದ, ತ್ವದ್ವಿಧಃ-ನಿನ್ನಂತಹ, ಜನಃ-ಮನುಷ್ಯನು, ಕಿಂಪುನಃ - ಹೇಳಬೇಕಾದುದೇನು? ॥೩೭॥ (ಹೇರಾವಣ - ಎಲರಾವಣನೇ ) ತ್ವಂ - ನೀನು, ಯಾಂ - ಯಾವಾಕೆಯನ್ನು, ಸೀತೇತಿ - ಸೀತೆಯೆಂಬದಾಗಿ, ಅಭಿಜಾನಾಸಿ - ತಿಳಿದಿರುವೆಯೋ, ಯೇಯಂ - ಯಾವ ಈ ಸೀತೆಯಾದರೆ, ತೆ - ನಿನ್ನ, ವಶೆ -

ಸ್ನೇಹವು ಉಂಟಾಗಿರುವುದು, ಇದನ್ನೆಲ್ಲ ಚನ್ನಾಗಿ, ಚಿಂತಿಸಿ ಆ ಮೇಲೆ ನಿನಗೆ ಹಿತವು ಒದಗುವ ಹಾದಿಯನ್ನು ಮನದೊಳಗೆ ವಿಚಾರಮಾಡಿ ನಿರ್ಧರಿಸು. ॥೩೪॥ ಎಲೈ ರಾವಣನೆ! ನಿನಗೆ ಮುಗಿದ ಮಾತನ್ನು ಹೇಳುತ್ತೇನೆ ಕೇಳು...ಆನೆ, ಕುದುರೆ, ತೇರು, ಕಾಲಾಳು ಮುಂತಾದ ಬಲದೊಡನೆ ನಿಬಿಡವಾಗಿರುವ ಈ ನಿನ್ನ ಲಂಕೆಯನ್ನು ನಿಮಿಷ ಮಾತ್ರದಲ್ಲಿ ಹಾಳುಮಾಡಲಿಕ್ಕೆ ನಾನೊಬ್ಬನೇ ಸಮರ್ಥನಾಗಿದೇನೆ. ಆದರೆ ಕರುಣಾನಿಧಿಯಾದ ದಾಶರಥಿಗೆ ಆ ವಿಧವಾದ ಸಂಕಲ್ಪವಿಲ್ಲ. ಏಕೆಂಬೆಯೋ ? ನೀನು ಇಂತಹ ಕ್ರೂರವಾದ ಅಪರಾಧಿಯಾಗಿದ್ದರೂ, ಶರಣಾಗತನಾಗಿ ಸೀತೆಯನ್ನು ಒಪ್ಪಿಸಿದುದೇ ಆದರೆ, ಆತನು ನಿನ್ನ ಅಪರಾಧವನ್ನು ಮನ್ನಿಸುವನು, ಅದರಿಂದಲೇ, ಈ ಕ್ಷಣದಲ್ಲಿ ನಿನ್ನನ್ನು ಸಂಹರಿಸುವಂತೆ ನನಗೆ ಆಜ್ಞೆಯನ್ನು ಕೊಟ್ಟಿಲ್ಲ. ॥೩೫॥ ಸೀತೆಯನ್ನು ಯಾರು ಅಪಮಾನ ಪಡಿಸಿದರೋ, ಅಂಥವರನ್ನು ಇರಿಯಬೇಕೆಂದು ಕಪಿಗಳ ಮತ್ತು ಕರಡಿಗಳ ಇದಿರಿನಲ್ಲಿ ಪ್ರತಿಜ್ಞೆಮಾಡಿರುವನು, ಆದಕಾರಣ ನೀನು ಆತನಿಗೆ ಶರಣಾಗತನಾಗದೆ ಹೋದರೆ ನಿನ್ನನ್ನು ಸಂಹರಿಸುವ ಕೆಲಸವು ಆತನಿಗೇ ಸೇರಿದುದಾಗಿದೆ. ॥೩೬॥ " ಮಹಾ ಬಲಶಾಲಿಯಾದ ನನ್ನನ್ನು ಸೀತಾಪಹಾರಿಯೆಂದು ರಾಮಾದಿಗಳೇನ ಮಾಡಬಲ್ಲರು''ಎಂದು ಕೊಬ್ಬಿರಬೇಡ, ತ್ರಿಲೋಕಾಧಿಪತಿಯಾದ ಇಂದ್ರನೇ ಆದರೂ, ಆ ರಾಮನಿಗೆ ಅಪಕರಿಸಲೆಳಸಿದುದೇ ಆದರೆ, ಸುಖವಾಗಿ ಬಾಳಲಾರನು. ಹೀಗಿರುವಲ್ಲಿ, ನಿನ್ನಂತಹ ಕೀಳನಾದ ಅಧಮನ ಪಾಡೇನು ? ॥೩೭॥ ಸಾರಿ ಸಾರಿ ನಿನಗೆ ನಾನು ಹೇಳುವ ಹಿತವನ್ನು ಕೇಳು :—ನಿನ್ನ ಉದ್ಯಾನದಲ್ಲಿ ವಾಸಮಾಡುತಿರುವಾಕೆಯನ್ನು ಸಾಧಾರಣವಾದ ಸೀತೆಯೆಂದು ಭಾವಿಸಬೇಡ, ಪ್ರಳಯಕಾಲದಲ್ಲಿ ಸಮಸ್ತ ಪ್ರಾಣಿವರ್ಗವನ್ನೂ ಸಮೂಲವಾಗಿ ನಾಶಗೊಳಿಸುವ ಭಗವಚ್ಛಕ್ತಿಯೆಂದು ಭಾವಿಸು, ಆಕೆಯೇ ನಿನ್ನ ಭಾಗಕ್ಕೆ ಮೃತ್ಯುದೇವತೆ, ಆ ಮಹಾನುಭಾವಳ

ಕಾಳರಾತ್ರೀತಿ ತಾಂ ವಿದ್ಧಿ ಸರ್ವಲಂಕಾ ವಿನಾಶಿನೀಮ್ ॥೩೪॥ ॥
ತದಲಂ ಕಾಲಪಾಶೇನ ಸೀತಾ ವಿಗ್ರಹ ರೂಪಿಣಾ ।
ಸ್ವಯಂ ಸ್ಕಂಧಾವಸಕ್ತೇನ ಕ್ಷಮ ಮಾತ್ಮನಿ ಚಿಂತ್ಯತಾಂ ॥೩೫॥
ಸೀತಾಯಾ ಸ್ತೇಜಸಾ ದಗ್ಧಾಂ ರಾಮಕೋಪಪ್ರಪೀಡಿತಾಮ್ ।
ದಹ್ಯಮಾನಾ ಮಿಮಾಂ ಪಶ್ಯ ಪುರೀಂ ಸಾಟ್ಟ ಪ್ರತೋಳಿಕಾಮ್ ॥೩೬॥ ॥
ಸ್ವಾನಿಮಿತ್ರಾಣಿ ಮಂತ್ರೀಂಶ್ಚ ಜ್ಞಾತೀನ್ ಭ್ರಾತ್ನ್ಸುತಾನ್ ಹಿತಾನ್ ।
ಭೋಗಾ ನ್ದಾರಾಂಶ್ಚ ಲಂಕಾಂ ಚ ಮಾವಿನಾಶ ಮುಪಾನಯ ॥೩೭॥

ಅಧೀನದಲ್ಲಿ, ತಿಷ್ಠತಿ - ಇದಾಳೆಯೋ, ಲಂಕಾನಿವಾಸಿನೀಂ - ಲಂಕೆಯೊಳು ವಾಸಮಾಡುತಲಿರುವ, ತಾಂ- ಆಸೀತೆ ಯನ್ನು, ಕಾಳರಾತ್ರೀತಿ-ಮೃತ್ಯುದೇವತೆಯೆಂದು(ಪ್ರಳಯವನ್ನು ಕಲ್ಪಿಸುವ ಭಗವಚ್ಛಕ್ತಿಯೆಂದು) ವಿದ್ಧಿ - ತಿಳಿ ॥೩೪॥ ॥ ಸೀತಾವಿಗ್ರಹರೂಪಿಣಾ - ಸೀತೆಯ ಆಕಾರವನ್ನು ಪಡೆದಿರುವ, ಸ್ವಯಂ - ತಾನಾಗಿಯೇ, ಸ್ಕಂಧಾವಸಕ್ತೇನ - ಹೆಗಲಿನಮೇಲೆ ಸುತ್ತಿಕೊಂಡಿರುವ, ಕಾಲಪಾಶೇನ- ಮೃತ್ಯುಪಾಶದಿಂದ, ಅಲಂ - ಸಾಕು (ಅದಕ್ಕೆ ತೊಡರಿಕೊಳ್ಳಬೇಡ) ತತ್ - ಆದಕಾರಣ, ತ್ವಯಾ - ನಿನ್ನಿಂದ, ಆತ್ಮನಿ - ಮನಸ್ಸಿನಲ್ಲಿ, ಕ್ಷಮಂ - ತಕ್ಕ ಉಪಾಯವು, ಚಿನ್ತ್ಯತಾಂ - ಯೋಚಿಸಲ್ಪಡಲಿ ॥೩೫॥ ॥ (ಹೇರಾವಣ - ಎಲೈರಾವಣನೇ, ತ್ವಂ - ನೀನು) ಸಾಟ್ಟಪ್ರತೋಳಿಕಾಂ - ಕೋಟೆಬುರುಜುಗಳಿಂದಲೂ ರಾಜಬೀದಿಗಳಿಂದಲೂ ಸಹಿತವಾದ, ಸೀತಾಯಾಃ - ಜಾನಕಿಯ, ತಪಸಾ - ತಪಸ್ಸಿನಿಂದ, ದಗ್ಧಾಂ - ಸುಡಲ್ಪಟ್ಟುದಾದ, ರಾಮಕೋಪಪ್ರಪೀಡಿತಾಂ - ರಾಮನ ಕೋಪದಿಂದ ಹಿಂಸಿಸಲ್ಪಟ್ಟಿರುವ, ಇಮಾಂ - ಈ, ಪುರೀಂ - ಲಂಕಾಪಟ್ಟಣವನ್ನು, ದಹ್ಯಮಾನಾಂ - ಸುಡಲ್ಪಡುತಲಿರುವುದನ್ನಾಗಿ, ಪಶ್ಯ - ಭಾವಿಸು ॥೩೬॥ ಸ್ವಾನಿ - ಸ್ವಂತಗಳಾದ, ಮಿತ್ರಾಣಿ - ಸ್ನೇಹಿತರನ್ನೂ, ಹಿತಾನ್ - ಇಷ್ಟರಾದ, ಮಂತ್ರೀಂಶ್ಚ (ಮಂತ್ರಿಣಃ) ಮಂತ್ರಿಗಳನ್ನೂ, ಜ್ಞಾತೀನ್ - ದಾಯಾದಿಗಳನ್ನೂ, ಭ್ರಾತೄನ್ - ಸಹೋದರರನ್ನೂ, ಸುತಾನ್ - ಮಕ್ಕಳನ್ನೂ, ಭೋಗಾನ್ - ಸುಖಸಾಧನೆಗಳನ್ನೂ, ದಾರಾಂಶ್ಚ - ಪತ್ನಿಯರನ್ನೂ, ಲಂಕಾಂಚ- ಲಂಕೆಯನ್ನೂ ವಿನಾಶಂ - ನಾಶವನ್ನೂ, ಮೋಪಾನಯ - ಹೊಂದಿಸಬೇಡ ॥೩೭॥ ರಾಕ್ಷಸಂರಾಜೇಂದ್ರ-ಎಲೈ

ಪಾತಿವ್ರತ್ಯವೇ ನಿನ್ನನ್ನು, ಆಗಲೆ ಸಮೂಲವಾಗಿ ನಾಶಪಡಿಸಿ ಇದೆ. ರಾಮ ಬಾಣಗಳೂ ನಿಮಿತ್ತ ಮಾತ್ರವಾಗತಕ್ಕವು ಎಂದು ತಿಳಿ ॥೩೪॥ ಇನ್ನಾದರೂ ನಿನ್ನ ದುರಾಲೋಚನೆಯನ್ನು ಬಿಡು, ಸೀತಾ ರೂಪವನ್ನು ಪಡೆದಿರುವ ಮೃತ್ಯುಪಾಶಕ್ಕೆ ಬಳಗಾಗಬೇಡ, ಆ ಕಾಲಪಾಶವಾಗಲೆ ನಿನ್ನ ಕೊರಳಿಗೆ ಸುತ್ತಿಬಿದ್ದಿದೆ, ನಿನ್ನನ್ನು ನೇಣಿಗೆತ್ತುವ ದರೊಳಗಾಗಿ ಜಾಗ್ರತೆಪಟ್ಟು ಬೇಗನೆ ಹಿತವು ಬದಗುವ ದಾರಿಯನ್ನು ಹುಡುಕು ॥೩೫॥ ಸೀತಾದೇವಿಯ ಮಹತ್ತರವಾದ ತಪೋಗ್ನಿಯಿಂದ ಈ ನಿನ್ನ ರಾಜಧಾನಿಯು ಉರಿದುಹೋಗಿದೆ, ರಾಮನ ಕೋಪದಿಂದ ಹಿಂಸಿಸಲ್ಪಟ್ಟಿದೆ, ಇನ್ನೇನು ಈಗಾಗರಾಜಸದನಗಳಿಂದಲೂ, ರಾಜಬೀದಿಗಳಿಂದಲೂ, ಉರಿಯುಲಿಕ್ಕೆ ಪ್ರಾರಂಭವಾಗುವುದು ॥೩೬॥ ಅಯ್ಯೋ, ಎಲ ರಾವಣಾ ! ಇಷ್ಟುಮಂದಿ ಮಂತ್ರಿಗಳು, ಮಿತ್ರರು, ದಾಯಾದರು, ಸಹೋದರರು, ಮಕ್ಕಳು ಮೊಮ್ಮಕ್ಕಳು, ಬೇಕಾದವರು, ಪ್ರಿಯ ವಲ್ಲಭೆಯರು, ಅಪಾರವಾದ ಐಶ್ವರ್ಯ, ಅಸದೃಶವಾದ ಭೋಗ ಸಾಧನಗಳು, ಅನ್ಯಾದೃಶವಾದ ರಾಜಧಾನಿ, ಇವುಗಳನ್ನೆಲ್ಲ ವ್ಯರ್ಥವಾಗಿ

ಸತ್ಯಂ ರಾಕ್ಷಸ ರಾಜೇಂದ್ರ ಶೃಣುಷ್ವ ವಚನಂ ಮಮ ।
ರಾಮ ದಾಸಸ್ಯ ದೂತಸ್ಯ ವಾನರಸ್ಯ ವಿಶೇಷತಃ ॥೩೮॥ ॥
ಸರ್ವಾನ್ ಲೋಕಾ ನ್ತ್ಸುಸಂಹೃತ್ಯ ಸಭೂತಾನ್ ಸಚರಾಚರಾನ್ ।
ಪುನರೇವ ತಥಾ ಸ್ರಷ್ಟುಂ ಶಕ್ತೋ ರಾಮೋ ಮಹಾಯಶಾಃ ॥೩೯॥ ॥
ದೇವಾಸುರ ನರೇಂದ್ರೇಷು ಯಕ್ಷ ರಕ್ಷೋ ಗಣೇಷು ಚ ॥೪೦॥ ॥
ವಿದ್ಯಾಧರೇಷು ಸರ್ವೇಷು ಗಂಧರ್ವೇ ಷೂರಗೇಷು ಚ ।
ಸಿದ್ಧೇಷು ಕಿನ್ನರೇಂದ್ರೇಷು ಪತತ್ರಿಷು ಚ ಸರ್ವತಃ ॥೪೧॥

---

ರಾಕ್ಷಸಾಧಿಪತಿಯೇ ! ರಾಮದಾಸಸ್ಯ - ರಾಮನಿಗೆ ಊಳಿಗದವನಾಗಿರುವ, ದೂತಸ್ಯ - ವಾರ್ತಾಹರನಾದ, ವಾನರಸ್ಯ - ಕಪಿರೂಪನಾಗಿರತಕ್ಕ, ಮಮ - ನನ್ನ, ಸತ್ಯಂ - ಯಥಾರ್ಥವಾದ, ವಚನಂ - ಮಾತನ್ನು, ಶೃಣುಷ್ವ (ಶೃಣು) ಕೇಳು ॥೩೮॥ ಮಹಾಯಶಾಃ - ಅಪಾರವಾದ ಕೀರ್ತಿಯುಳ್ಳ, ರಾಮಃ - ಶ್ರೀರಾಮನು, ಸಭೂತಾನ್ - ಪಂಚಭೂತಗಳಿಂದೊಡಗೂಡಿರುವ, ಸಚರಾಚರಾನ್-ಸ್ಥಾವರಜಂಗಮವಸ್ತುಗಳಿಂದ ಸಹಿತನಾದ, ಸರ್ವಾನ್ - ಸಮಸ್ತವಾಗಿರುವ, ಲೋಕಾನ್ -ಲೋಕಗಳನ್ನು, ಸಂಹೃತ್ಯ - ಸಂಹರಿಸಿ, ಪುನರೇವ - ಮರಳಿಯೂ, ಸ್ರಷ್ಟುಂ - ಸೃಷ್ಟಿಸಲಿಕ್ಕೆ, ಶಕ್ತಃ - ಸಮರ್ಥನಾಗಿದಾನೆ ॥ ೩೯॥ ಯಃ - ಯಾವನು, ವಿಷ್ಣುತುಲ್ಯಪರಾಕ್ರಮಂ - ವಿಷ್ಣುವಿಗೆಣೆಯಾದ ಪರಾಕ್ರಮವುಳ್ಳ, ರಾಮಂ ಪ್ರತಿ- ರಾಮನನ್ನು ಕುರಿತು, ಯುಧ್ಯೇತ - ಯುದ್ಧಮಾಡಬಲ್ಲನೋ, ಸಃ - ಅಂತಹ ಮನುಷ್ಯನು, ದೇವಾಸುರ ನರೇಂದ್ರೇಷು - ದೇವತೆಗಳಲ್ಲಿ, ರಾಕ್ಷಸರಲ್ಲಿ. ಅರಸರಲ್ಲಿಯೂ, ಯಕ್ಷರಕ್ಷೋಗಣೇಷುಚ - ಯಕ್ಷರಾಕ್ಷಸರಸಮೂಹಗಳಲ್ಲಿಯೂ, ವಿದ್ಯಾಧರೇಷು - ವಿದ್ಯಾಧರರಲ್ಲಿಯೂ, ಸರ್ವೇಷು - ಸಮಸ್ತರಾದ, ಗಂಧರ್ವೇಷು - ಗಂಧರ್ವರಲ್ಲಿಯೂ, ಉರಗೇಷುಚ - ನಾಗರಲ್ಲಿಯೂ, ಸಿದ್ಧೇಷು - ಸಿದ್ಧರಲ್ಲಿಯೂ ಕಿನ್ನರೇಂದ್ರೇಷು - ಕಿನ್ನರಶ್ರೇಷ್ಠರಲ್ಲಿಯೂ, ಸರ್ವೇಷು - ಸಮಸ್ತವಾದ, ಪತತ್ರಿಷುಚ-ಪಕ್ಷಿಗಳಲ್ಲಿಯೂ,

---

ಹಾಳುಮಾಡಿಕೊಳ್ಳಬೇಡ, ಓ ರಾವಣಾ ! ನಾನು ರಾಮನಿಗೆ ಮುಖ್ಯ ದಾಸನಾಗಿ ಇರುವುದರಿಂದ ಆತನ ಸಾಮರ್ಥ್ಯವನ್ನು ಚೆನ್ನಾಗಿ ಬಲ್ಲೆನು. ನಿನ್ನನ್ನು ಉಳುಹಿ ಹೇಗಾದರೂ ಸಂಧಿ ಮಾಡುವುದು ಉತ್ತಮವೆಂದುಬಗೆದು ದೂತನಾಗಿ ಬಂದಿದ್ದೇನೆ. ನನಗೆ ಏನಾದರೂ ಪ್ರಯೋಜನವಾಗಬೇಕೆಂಬ ಎಣಿಕೆಯಿಂದ ಬಂದವನಲ್ಲ. ಏಕೆಂದರೆ ನಾನು ವಾನರನೆಂಬುದನ್ನು ನೀನು ಬಲ್ಲೆ; ನಿನಗೆ ಹಿತವಾಗಲೆಂದೇ ಸತ್ಯವನ್ನು ಹೇಳುತ್ತೇನೆ. ಹಾಲನ್ನವನ್ನು ಣ್ಣುವ ಬಾಯಿಗೆ ಮಣ್ಣನ್ನು ಹಾಕಿಕೊಳ್ಳಬೇಡ, ॥೩೮॥ ರಾಮನನ್ನು ಸಾಧಾರಣನಾದ ಮನುಷ್ಯನೆಂದು ನೆನೆಯಬಾರದು, ಚರಾಚರಾತ್ಮಕವಾದ ಸಮಸ್ತ ಭೂತವರ್ಗವನ್ನೂ ನಿಮಿಷ ಮಾತ್ರದಲ್ಲಿ ಸಂಹರಿಸಿ ತನ್ನಲ್ಲಿ ಅಡಗಿಸಿಕೊಳ್ಳಲಿಕ್ಕೂ, ಮರಳಿ ಎಲ್ಲವನ್ನೂ ಯಥಾಪೂರ್ವವಾಗಿ ಉಂಟುಮಾಡಿ ನೆಲೆಗೊಳಿಸಲಿಕ್ಕೂ, ಮಹಾ ಯಶಸ್ವಿಯಾದ ರಾಮನಿಗೆ ಸಾಮರ್ಥ್ಯವುಂಟು ॥೩೯॥ ಭೂತ ಭವಿಷ್ಯದ್ವರ್ತಮಾನಗಳೆಂಬ ಮೂರು ಕಾಲಗಳೊಳಗೆ, ಸ್ವರ್ಗ, ಮರ್ತ್ಯ ಪಾತಾಳ ಲೋಕಗಳಲ್ಲಿಯೂ, ದೇವತೆಗಳು, ಅಸುರರು, ನರರು, ನರೇಂದ್ರರು, ಯಕ್ಷರು, ರಾಕ್ಷಸರು, ವಿದ್ಯಾಧರರು, ಗಂಧರ್ವರು, ನಾಗರು,ಸಿದ್ಧರು, ಕಿನ್ನರರು, ಪಕ್ಷಿಗಳು, ಹೆಚ್ಚಿಗೆಯಿಂದೇನು ; ಸರ್ವ ಭೂತಗಳೊಳಗೆ ಯಾರೂ ಯಾವಾಗಲೂ

ಸರ್ವಭೂತೇಷು ಸರ್ವತ್ರ ಸರ್ವಕಾಲೇಷು ನಾಸ್ತಿ ಸಃ ।
ಯೋ ರಾಮಂ ಪ್ರತಿಯುಧ್ಯೇತ ವಿಷ್ಣುತುಲ್ಯ ಪರಾಕ್ರಮಂ ।
ಸರ್ವ ಲೋಕೇಶ್ವರ ಸ್ಯೈವಂ ಕೃತ್ವಾ ವಿಪ್ರಿಯ ಮುತ್ತಮಂ ॥೪೨॥
ರಾಮಸ್ಯ ರಾಜಸಿಂಹಸ್ಯ ದುರ್ಲಭಂ ತವ ಜೀವಿತಮ್ ॥೪೩॥
ದೇವಾಶ್ಚ ದೈತ್ಯಾಶ್ಚ ನಿಶಾಚರೇಂದ್ರ ಗಂಧರ್ವ ವಿದ್ಯಾಧರ ನಾಗ ಯಕ್ಷಾಃ ।
ರಾಮಸ್ಯ ಲೋಕತ್ರಯ ನಾಯಕಸ್ಯ ಸ್ಥಾತುಂ ನ ಶಕ್ತಾ ಸ್ಸಮರೇಷು ಸರ್ವೇ ॥೪೪॥
ಬ್ರಹ್ಮಾ ಸ್ವಯಂಭೂ ಶ್ಚತುರಾನನೋ ವಾ ರುದ್ರ ಸ್ತ್ರಿಣೇತ್ರ ಸ್ತ್ರಿಪುರಾಂತಕೋ ವಾ ।

---

**ಸರ್ವಭೂತೇಷು** - ಸಮಸ್ತ ಪ್ರಾಣಿವರ್ಗಗಳಲ್ಲಿಯೂ, **ಸರ್ವತ್ರ** - ಸಮಸ್ತ ಲೋಕಗಳಲ್ಲಿಯೂ, **ಸರ್ವಕಾಲೇಷು** - ಸಕಲ ಕಾಲಗಳಲ್ಲಿಯೂ, ನಾಸ್ತಿ - ಇಲ್ಲವೇ ಇಲ್ಲ ॥ ೪೦, ೪೧, ೪೨ ॥ **ಸರ್ವಲೋಕೇಶ್ವರಸ್ಯ** - ಸಕಲಲೋಕಾಧಿಪತಿಯಾದ, ರಾಜಸಿಂಹಸ್ಯ - ರಾಜಾಧಿರಾಜನೆನಿಸಿರುವ, ರಾಮಸ್ಯ- ರಾಮನಿಗೆ, ಉತ್ತಮಂ -ಪ್ರಬಲವಾದ, ವಿಪ್ರಿಯಂ - ಅಹಿತವನ್ನು, ಕೃತ್ವಾ - ಮಾಡಿ, ಸ್ಥಿತಸ್ಯ - ಇರುವ) ತವ - ನಿನ್ನ, ಜೀವಿತಂ - ಬದುಕು, ದುರ್ಲಭಂ - ಉಳಿಯುವುದು ಕಷ್ಟವೆನಿಸಿದೆ ॥ ೪೩ ॥ **ಹೇನಿಶಾಚರೇಂದ್ರ** - ಎಲೈ ರಾಕ್ಷಸಾಧಿಪತಿಯೇ !, ದೇವಾಶ್ಚ -ದೇವತೆಗಳೂ, ದೈತ್ಯಾಶ್ಚ - ರಾಕ್ಷಸರೂ, ಗಂಧರ್ವವಿದ್ಯಾಧರನಾಗಯಕ್ಷಾಃ-ಗಂಧರ್ವರು, ವಿದ್ಯಾಧರರು ನಾಗರು, ಯಕ್ಷರು ಮುಂತಾದವರೂ ಸರ್ವೇ- ಈ ಸಮಸ್ತರೂ, ಸಮರೇಷು - ಕಾಳಗಗಳಲ್ಲಿ, ಲೋಕತ್ರಯನಾಯಕಸ್ಯ - ಮೂಲೋಕದೊಡೆಯನಾದ, ರಾಮಸ್ಯ - ರಾಮನ (ಪುರತಃ - ಇದಿರಿಗೆ) ಸ್ಥಾತುಂ - ನಿಲ್ಲಲಿಕ್ಕೆ, ನಶಕ್ತಾಃ - ಸಮರ್ಥರಲ್ಲ ॥೪೪॥ ಇಂದ್ರಃ-ಪರಮೈಶ್ವರ್ಯ ಶಾಲಿಯೆನಿಸಿದ ಇಂದ್ರನೂ, ಮಹೇಂದ್ರಃ-ವೃತ್ರಾಸುರನನ್ನು ಕೊಂದ ಮಹೇಂದ್ರನೂ, ಸುರನಾಯಕೋವಾ - ೩೩ ಕೋಟಿದೇವತೆಗಳಿಗೊಡೆಯನೆನಿಸಿದ ದೇವೇಂದ್ರನೂ, ಯುಧಿ - ಯುದ್ಧದಲ್ಲಿ, ರಾಮವಧ್ಯಂ - ರಾಮನಿಂದ ಸಂಹಾರ್ಯನಾಗಿರುವ ಪ್ರಾಣಿಯನ್ನು, ತ್ರಾತುಂ-ಸಂರಕ್ಷಿಸಲಿಕ್ಕೆ, ನಶಕ್ತಃ - ಸಮರ್ಥನಾಗಲಾರನು, ಬ್ರಹ್ಮಾ - ಮಹತ್ತರವಾದ ಅಭಿವೃದ್ಧಿಯುಳ್ಳವನೆನಿಸಿದ ಪಿತಾಮಹನೂ, ಸ್ವಯಂಭೂಃ - ಹೆರರ ಸಹಾಯವಿಲ್ಲದೆ ಸರ್ವಸ್ವತಂತ್ರವೆನಿಸಿ ಮಹಾಪ್ರಭುವಾಗಿರುವ

---

ಆ ರಾಮನನ್ನು ಇದಿರಿಸಿ ಯುದ್ಧಮಾಡಲು ಶಕ್ತರಾಗಲಾರರು, ಮಹಾ ವಿಷ್ಣುವಿಗೆಣೆಯೆನಿಸಿರುವ ರಾಮನ ಸಮಾನರೇ ಇಲ್ಲವೆಂದು ಖಂಡಿತವಾಗಿ ತಿಳಿ. ॥೪೦,೪೧,೪೨॥ ಇಂತು ಸರ್ವಲೋಕನಾಥನಾದ ರಾಮನಿಗೆ ಘೋರವಾದ ಅಹಿತವನ್ನು ಮಾಡಿ, ಆ ಪುರುಷ ಸಿಂಹನಿಗೆ ಮರೆ ಹೋಗುವುದೊಂದನ್ನು ಬಿಟ್ಟು ನಿನ್ನ ಪ್ರಾಣ ವುಳಿಯಲು ಬೇರೊಂದುಪಾಯವೇ ಇಲ್ಲವೆಂದು ದೃಢವಾಗಿನಂಬು॥೪೩॥ ಎಲೈ ನಿಶಾಚರೇಂದ್ರನೇ ! ದೇವತೆಗಳು, ದೈತ್ಯರು, ಗಂಧರ್ವರು, ವಿದ್ಯಾಧರರು, ನಾಗರು, ಯಕ್ಷರು, ಇವರೆಲ್ಲರೂ ಒಗ್ಗಟ್ಟಾದರೂ ಸರ್ವಲೋಕನಾಯಕನಾದ ರಾಮನಿದಿರಿನಲ್ಲಿ ರಣರಂಗದೊಳಗೆ ನಿಲ್ಲಲಾರರು ॥೪೪॥ ಮತ್ತು- ಬ್ರಹ್ಮನು ನನಗೆ ಮುತ್ತಾತನಾಗಬೇಕು, ನನಗೆ ಅವನ ಸಹಾಯವಿದೆ, ಶಿವನನ್ನುನಾನು ಬಹುಧಾ ಆರಾಧಿಸಿದೇನೆ, ಅವನ ಬೆಂಬಲವಿದೆ, ನನ್ನಮಗನಾದ ಮೇಘನಾದನೇ ಇಂದ್ರನನ್ನು ಜಯಿಸಿರುವನು ಅಂಥವನ ನೆರವು ನನಗೆ ಇದ್ದೇಇದೆ, ನಾನು ಸ್ವತಃ ಅಸಹಾಯ ಶೂರನಾಗಿದೇನೆ ಎಂಬ

ಇಂದ್ರೋ ಮಹೇಂದ್ರ ಸ್ಸುರನಾಯಕೋವಾ ತ್ರಾತುಂ ನಶಕ್ತಾಯುಧಿ ರಾಮವಧ್ಯಂ॥೪೫॥
ಸ ಸೌಷ್ಠವೋಪೇತ ಮದೀನವಾದಿನಃ ಕಪೇ ರ್ನಿಶಮ್ಯಾ ಪ್ರತಿಮೋ ಪ್ರಿಯಂ ವಚಃ ।
ದಶಾನನಃ ಕೋಪ ವಿವೃತ್ತ ಲೋಚನ ಸ್ಸಮಾದಿಶ ತ್ತಸ್ಯ ವಧಂ ಮಹಾಕಪೇಃ ॥೪೬॥

ಇತಿ ಶ್ರೀಮತ್ಸುಂದರಕಾಂಡೆ-ಏಕಪಂಚಾಶಸ್ಸರ್ಗಃ

---

ಸ್ವಯಂಭುವೂ, ಚತುರಾನನೋವಾ -ಸಕಲ ಲೋಕಸೃಷ್ಟಿಗೆ ಮೂಲವೆನಿಸಿದ ಜ್ಞಾನವನ್ನು ಸಂಪಾದಿಸಿಕೊಡುವ ನಾಲ್ಕುವೇದಗಳನ್ನೂ ಬಲ್ಲ ಚತುರ್ಮುಖನೂ, ನಶಕ್ತಃ-ಸಮರ್ಥನಾಗಲಾರನು, (ಕಿಂಚ-ಮತ್ತು) ರುದ್ರಃ - ದುಷ್ಟರನ್ನೆಲ್ಲ ಗೋಳಾಡಿಸುವ ಸಾಮರ್ಥ್ಯವನ್ನು ಪಡೆದಿರುವ ರುದ್ರದೇವನೂ, ತ್ರಿನೇತ್ರಃ ಲೋಕಗಳನ್ನೆಲ್ಲ ಮೋಹಗೊಳಿಸುವ ಮದನನ್ನು ಫಾಲನೇತ್ರಾಗ್ನಿಯಿಂದ ಬೂದಿಮಾಡಿದ ಮುಕ್ಕಣ್ಣನೂ ತ್ರಿಪುರಾಂತಕೋವಾ- ತ್ರಿಪುರಾಸುರರನ್ನು ಧ್ವಂಸಮಾಡಿದ ಆ ತ್ರಿಪುರಾರಿಯೂ, ನಶಕ್ತಃ - ಶಕ್ತನಲ್ಲ, ಅಥವಾ - ಸ್ವಯಂಭೂಃ - ಸ್ವಯಂಭುವೆಂತಲೂ ಚತುರಾನನಃ - ಚತುರ್ಮುಖನೆಂತಲೂ ಹೇಳಿಸಿಕೊಳ್ಳುವ, ಬ್ರಹ್ಮಾವಾ - ಲೋಕಕರ್ತನೂ, ತ್ರಿನೇತ್ರಃ- ಮುಕ್ಕಣ್ಣನೆಂತಲೂ, ತ್ರಿಪುರಾಂತಕಃ - ತ್ರಿಪುರಸಂಹಾರಿಯೆಂತಲೂ ಬಿರುದನ್ನು ಪಡೆದಿರುವ, ರುದ್ರೋವಾ - ರುದ್ರನೇ ಆದರೂ, ಮಹೇಂದ್ರಃ- ಮಹೇಂದ್ರನೆಂತಲೂ, ಸುರನಾಯಕಃ-ಸುರಾಧಿಪನೆಂತಲೂ ಹೆಸರುವಾಸಿಯನ್ನು ಪಡೆದಿರುವ, ಇಂದ್ರೋವಾ - ಸುರೇಶ್ವರನಾದರೂ, ಯುಧಿ - ರಣರಂಗದಲ್ಲಿ, ರಾಮವಧ್ಯಂ - ರಾಮನು ವಧಿಸಲು ತಕ್ಕವನಾಗಿರುವವನನ್ನು, ತ್ರಾತುಂ - ರಕ್ಷಿಸಲಿಕ್ಕೆ, ನಶಕ್ತಾಃ - ಸಮರ್ಥರಾಗಲಾರರು ॥೪೫॥ ಅಪ್ರತಿಮಃ-ಅಸಮಾನನೆನಿಸಿದ, ಸಃ - ಆ, ದಶಾನನಃ - ದಶಕಂಠನು, ಅದೀನವಾದಿನಃ - ನಿರ್ಭಯನಾಗಿ ಹೇಳುತಲಿರುವ ಕಪೇಃ - ಆಂಜನೇಯನ, ಸೌಷ್ಠವೋಪೇತಂ - ಶಬ್ದಾರ್ಥಗಳ ಸ್ಪಷ್ಟತೆಯಿಂದೊಡಗೂಡಿರುವ, ಪ್ರಿಯಂ - ಹಿತವಾದ ವಚಃ - ಮಾತನ್ನು, ನಿಶಮ್ಯ - ಕೇಳಿ, ಕೋಪವಿವೃತ್ತಲೋಚನಃ - ಸಿಟ್ಟಿನಿಂದ ಕಣ್ಣುಗಳನ್ನು ತಿರುಗಿಸುತಲಿರುವವನಾಗಿ, ತಸ್ಯ-ಆ, - ಮಹಾಕಪೇಃ - ವೀರಾಂಜನೇಯನ, ವಧಂ - ಸಂಹಾರವನ್ನು, ಸಮಾದಿಶತ್ - ಆಜ್ಞಾಪಿಸಿದನು ॥೪೬॥

— ಇಂತು ಐವತ್ತೊಂದನೆಯ ಸರ್ಗ —.

---

ಫೊಗರೇನಾದರೂಇದ್ದರೆ ಕೇಳು:— ಮಹತ್ತರವಾದ ಅಭಿವೃದ್ಧಿಯನ್ನು ಪಡೆದು ಎಲ್ಲರಿಗಿಂತಲೂ ದೊಡ್ಡವನೆನಿಸಿದ ಬ್ರಹ್ಮನೇ ಆಗಲಿ, ಪರಮ ಸ್ವತಂತ್ರನೆನಿಸಿ, ಸರ್ವಲೋಕ ಸೃಷ್ಟಿಕರ್ತನೆನಿಸಿದ ಸ್ವಯಂಭುವೇ ಆಗಲಿ, ನಾಲ್ಕು ವೇದಗಳನ್ನೂ ಅರಿತು ಸರ್ವ ಕಾರ್ಯ ನಿರ್ವಾಹಕನೆನಿಸಿದ ಚತುರ್ಮುಖನೇ ಆಗಲಿ, ಅಥವಾ - ಪ್ರಳಯದಲ್ಲಿ ಸರ್ವ ಲೋಕವನ್ನೂ ಸಂಹರಿಸುವ ಇಲ್ಲವೆ ದುಷ್ಟರನ್ನೆಲ್ಲ ದಂಡಿಸಿ ದುಃಖಗೊಳಿಸುವ ರುದ್ರನಾಗಲೀ, ಸರ್ವ ಪ್ರಾಣಿವರ್ಗವನ್ನೂ ಮೋಹಗೊಳಿಸುವ ಮನ್ಮಥನನ್ನು ನಿಮಿಷಮಾತ್ರದಲ್ಲಿ ಫಾಲನೇತ್ರಾಗ್ನಿಯಿಂದ ಸುಟ್ಟು ಬೂದಿಮಾಡಿದ ಮುಕ್ಕಣ್ಣನೇ ಆಗಲಿ, ತಪಃ ಫಲದಿಂದ ಆಕಾಶದಲ್ಲಿ ನಗರಗಳನ್ನು ಕಲ್ಪಿಸಿಕೊಂಡಿದ್ದ ತ್ರಿಪುರಾಸುರರನ್ನು ಧ್ವಂಸ ಮಾಡಿ ತ್ರಿಪುರಾರಿಯೆಂಬ ಬಿರುದನ್ನು ಪಡೆದಿರುವ ಪರಮೇಶ್ವರನೇ ಆಗಲಿ, ಸರ್ವೈಶ್ವರ್ಯ ಸಂಪನ್ನನೆನಿಸಿದ ಇಂದ್ರನಾಗಲಿ, ವೃತ್ರಾಸುರನನ್ನು ಇರಿದ ಮಹೇಂದ್ರನಾಗಲಿ, ಮೂವತ್ತು ಮೂರುಕೋಟಿ ದೇವತೆಗಳಿಗೆ ಒಡೆಯನೆನಿಸಿದ ಸುರೇಶ್ವರನೇ ಆಗಲೀ

ಹೆಚ್ಚಿಗೆಯಿಂದೇನು? ಬಟ್ಟೆಗೆ ಸೇರಿದ ಇವರೆಲ್ಲರೂ ಆಗಲಿ, ಸಮರ ಭೂಮಿಯಲ್ಲಿ ರಾಮನುಯಾರನ್ನು ಕೊಲ್ಲಬೇಕೆಂದು ಬಗೆವನೋ, ಅಂಥವನನ್ನು ಬಿಡಿಸಲಿಕ್ಕೆ ಸರ್ವಾತ್ಮನಾ ಶಕ್ತರಾಗಲಾರರು ಎಂದು ಖಂಡಿತವಾಗಿ ತಿಳಿ ॥೨೫॥ ಎಂಬೀ ಪ್ರಕಾರವಾಗಿ ಶಬ್ದ ಸೌಷ್ಠವದಿಂದಲೂ, ಅರ್ಥಗಾಂಭೀರ್ಯದಿಂದಲೂ, ಮಹಾ ವೀರರೂ ಮಾಯಾವಿಗಳೂ ಆಗಿರುವ ರಕ್ಕಸರ ಪಡೆಯ ನಡುವೆ ದೇಶಾಂತರದಲ್ಲಿ ತನ್ನವರಿಲ್ಲದೆ ಒಬ್ಬನಾಗಿದ್ದರೂ, ಯಾರನ್ನೂ ಸಡ್ಡೆ ಮಾಡದೆ, ನಿರ್ಭಯನಾಗಿ ನುಡಿಯುತಲಿರುವ ಆ ವಾನರವೀರನ ಹಿತ ವಚನವನ್ನು ಕೇಳಿದ ಕೂಡಲೇ ಅಪ್ರತಿಮ ವೀರನಾದ ದಶಗಳನು ರೌದ್ರಾವೇಶವನ್ನು ತಾಳಿ, ಕಿಡಿಗಳನ್ನುದುರಿಸುತಲಿರುವ ಕಣ್ಣುಗಳನ್ನು ತಿರುಗಿಸುತ್ತಾ, ಈ ದುರುಳ ಕೋಡಗನನ್ನು ಈಗಲೆ ಕೊಂದು ಬಿಡಿರಿ ಎಂದು ತನ್ನ ಪರಿವಾರದವರಿಗಾಜ್ಞಾಪಿಸಿದನು ॥೪೬॥

—ಇಂತು ಐವತ್ತೊಂದನೆಯ ಸರ್ಗಂ—



ಶ್ರೀಃ.

ಶ್ರೀರಾಮಚನ್ದ್ರ ಪರಬ್ರಹ್ಮಣೇ ನಮಃ.

ಶ್ರೀಮತ್ಸುಂದರಕಾಂಡೇ–ದ್ವಿಪಂಚಾಶಸ್ಸರ್ಗಃ



ತಸ್ಯ ತದ್ವಚನಂ ಶ್ರುತ್ವಾ ವಾನರಸ್ಯ ಮಹಾತ್ಮನಃ ।
ಆಜ್ಞಾಪಯದ್ವಧಂ ತಸ್ಯ ರಾವಣಃ ಕ್ರೋಧಮೂರ್ಛಿತಃ ॥೧॥

ಕಂದ॥ ದೂತನ ನಿರಿಪುದು ಸಲ್ಲದು । ನೀತಿಯು ನುರೆಬಲ್ಲ ಧೀರ ರೊಪ್ಪರು ದೊರೆಯೋ!
ಪ್ರೀತಿಯೊ ಳಿಂತೆನ ಲನುಜಂ । ಘಾತುಕ ನಾ ನಿಶಿಚರೇಂದ್ರ ನಿನಿಸರೆಯಾದಂ॥

ರಾವಣಃ – ದಶಕಂಧರನು, ಮಹಾತ್ಮನಃ – ಮಹಾಧೈರ್ಯವುಳ್ಳ, ತಸ್ಯ – ಆ, ವಾನರಸ್ಯ – ಆಂಜನೇಯನ, ತತ್ – ಆ, ವಚನಂ – ಮಾತನ್ನು, ಶ್ರುತ್ವಾ – ಕೇಳಿ, ಕ್ರೋಧಮೂರ್ಛಿತಃ–ರೋಷದಿಂದ ಮೈಮರೆತವನಾಗಿ, ತಸ್ಯ – ಆ ಮಾರುತಿಯು, ವಧಂ – ಸಂಹಾರವನ್ನು, ಆಜ್ಞಾಪಯತ್ – ಪರಿಜನರಿಗೆ ಆಜ್ಞಾಪಿಸಿದನು, ॥೧॥ ದೌತ್ಯಂ – ದೂತಕೃತ್ಯವನ್ನು, ನಿವೇದಿತವತಃ – ತಿಳಿಯ ಪಡಿಸಿದ, ತಸ್ಯ – ಆ

— ಐವತ್ತೆರಡನೆಯ ಸರ್ಗಂ —

ವಾನರ ವರನಾದ ಮಾರುತಿಯ ಮಾತುಗಳನ್ನು ಕೇಳಿದ ಕೂಡಲೆ ನಿಶಾಚರ ಚಕ್ರವರ್ತಿಯಾದ ರಾವಣನಿಗೆ ಹೇರಳವಾದ ರೋಷವು ತಲೆಗೇರಿತು. ಮೈಮೇಲೆ ಸ್ಮೃತಿಯೇ ತಪ್ಪಿಹೋಯಿತು. ಕ್ರೋಧಾಂಧರಿಗೆ ಕರ್ತವ್ಯಾ ಕರ್ತವ್ಯಗಳು ತಿಳಿಯುತವೆಯೆ ! ಹಿತಾಹಿತಗಳನ್ನೆಣಿಸುವರೆ ? ಅದರಿಂದಲೇ – ಈ ಕಪಿಯನ್ನು ಸಂಹರಿಸಿರಿ ಎಂದು ತನ್ನ ಅನುಚರರಿಗೆ ಆಜ್ಞಾಪಿಸಿದನು ॥೧॥ ದೂರದೇಶದಿಂದ ದೂತನಾಗಿ ಬಂದು, ನ್ಯಾಯವಾದ ತನ್ನ ದೂತ

ವಧೇ ತಸ್ಯ ಸಮಾಜ್ಞಪ್ತೇ ರಾವಣೇನ ದುರಾತ್ಮನಾ ।
ನಿವೇದಿತವತೊ ದೌತ್ಯಂ ನಾನುಮೇನೇ ವಿಭೀಷಣಃ ॥೨॥
ತಂ ರಕ್ಷೋಧಿಪತಿಂ ಕ್ರುದ್ಧಂ ತಚ್ಚ ಕಾರ್ಯ ಮುಪಸ್ಥಿತಮ್ ।
ವಿದಿತ್ವಾ ಚಿಂತಯಾಮಾಸ ಕಾರ್ಯಂ ಕಾರ್ಯವಿಧೌ ಸ್ಥಿತಃ ॥೩॥
ನಿಶ್ಚಿತಾರ್ಥ ಸ್ತತ ಸ್ಸಾಮ್ನಾ ಪೂಜ್ಯಂ ಶತ್ರುಜಿ ದಗ್ರಜಂ ।
ಉವಾಚ ಹಿತ ಮತ್ಯರ್ಥಂ ವಾಕ್ಯಂ ವಾಕ್ಯವಿಶಾರದಃ ॥೪॥

ಹನುಮಂತನ, ವಧೆ-ಕೊಲೆಯು, ದುರಾತ್ಮನಾ - ಪಾಪಾತ್ಮನಾದ, ರಾವಣೇನ - ರಾವಣನಿಂದ, ಆಜ್ಞಪ್ತೇ (ಸತಿ) ಆಜ್ಞಾಪಿಸಲ್ಪಡುತ್ತಿರಲಾಗಿ, ವಿಭೀಷಣಃ - ವಿಭೀಷಣನು, ವಧಂ - ದೂತವಧೆಯನ್ನು, ನಾನು ಮೇನೆ - ಸಮ್ಮತಿಸಲಿಲ್ಲ ॥೨॥ ಕಾರ್ಯವಿಧೌ - ಮಾಡಬೇಕಾದ ಕೆಲಸದಲ್ಲಿ (ಮಂತ್ರಿತ್ವದಲ್ಲಿ) ಸ್ಥಿತಃ ಇದ್ದ, (ಸಃ-ಆ ವಿಭೀಷಣನು) ರಕ್ಷೋಧಿಪತಿಂ - ರಾವಣನನ್ನು, ಕ್ರುದ್ಧಂ - ಕೋಪಗೊಂಡವನನ್ನಾಗಿಯೂ, ತತ್ - ಆದೂತಸಂಹಾರರೂಪವಾಗಿರುವ, ಕಾರ್ಯಂಚ - ಕೆಲಸವನ್ನೂ, ಉಪಸ್ಥಿತಂ - ಪ್ರಾಪ್ತವಾದುದನ್ನಾಗಿಯೂ, ವಿದಿತ್ವಾ - ತಿಳಿದುಕೊಂಡು, ಕಾರ್ಯಂ - ಮುಂದೆ ಮಾಡಬೇಕಾದ ಕೆಲಸವನ್ನು ಚಿಂತಯಾಮಾಸ - ವಿಚಾರಮಾಡತೊಡಗಿದನು ॥೩॥ ತತಃ - ತರುವಾಯ, ಶತ್ರುಜಿತ್ - ಶತ್ರುಗಳನ್ನು ಗೆದ್ದವನಾಗಿಯೂ (ಇಂದ್ರಿಯ ಜಯವುಳ್ಳವನಾಗಿಯೂ) ವಾಕ್ಯ ವಿಶಾರದಃ - ಮಾತನಾಡುವುದರಲ್ಲಿ ಬುದ್ಧಿವಂತನಾಗಿಯೂ ಇರುವ ವಿಭೀಷಣನು, ನಿಶ್ಚಿತಾರ್ಥಃ - ಕರ್ತವ್ಯವನ್ನು ನಿಶ್ಚಯಿಸಿಕೊಂಡವನಾಗಿ, ಅಗ್ರಜಂ-ಅಣ್ಣನನ್ನು, ಅಪೂಜ್ಯ- ಗೌರವಿಸಿ (ಅಪೂಜ್ಯ-ಗೌರವಿಸದೆ) ಸಾಮ್ನಾ - ಸಾಮೋಪಾಯದಿಂದ, ಅತ್ಯನ್ತಂ - ವಿಶೇಷವಾಗಿ, ಹಿತಂ - ಮೇಲನ್ನುಂಟುಮಾಡುವ, ವಾಕ್ಯಂ - ವಚನವನ್ನು, ಉವಾಚ - ಹೇಳತೊಡಗಿದನು ॥೪॥ ರಾಕ್ಷಸೇಂದ್ರ - ಎಲೈ ನಿಶಾಚರೇಂದ್ರನೇ ! ರೋಷಂ - ಕ್ರೋಧವನ್ನು, ತ್ಯಜ-ಬಿಡು,

ಕೃತ್ಯವನ್ನು ತಿಳಿಯಪಡಿಸಿದ ಮಾರುತಿಯನ್ನು ವಧಿಸಬೇಕೆಂದು ದುರಾತ್ಮನಾದ ರಾವಣನು ವಧೆಯನ್ನು ಆಜ್ಞಾಪಿಸಿದುದನ್ನು ಧರ್ಮಪರಾಯಣನಾದ ವಿಭೀಷಣನು ಕೇಳಿದನು ಆದರೆ ಆ ಅಕೃತ್ಯವನ್ನು ಆತನು ಸಮ್ಮತಿಸಲಿಲ್ಲ ॥೨॥ ರಾಕ್ಷಸಾಧಿಪತಿಯು ರೋಷಪರವಶನಾಗಿರುವುದನ್ನೂ, ಕ್ರೂರವಾದ ಸಂಹಾರ ಕಾರ್ಯವು ಸಮೀಪಿಸಿರುವುದನ್ನೂ ತಿಳಿದು ವಿಭೀಷಣನು-"ಮೃತ್ಯುವು ಸಮೀಪಿಸಿ ಬಂದಾಗ ಪುರುಷನು - ತನ್ನ ಬುದ್ಧಿಬಲಗಳು ಹಾಯುವವರೆಗೂ ಪ್ರಯತ್ನಿಸಿ, ಆ ಮೃತ್ಯುವನ್ನು ಹಿಂದಕ್ಕೆ ತಳ್ಳಬೇಕು, ಆದರಿಂದ ಆ ಮೃತ್ಯುವು ತೊಲಗದೆ ಹೋದರೆ ಆಗ ಪುರುಷದೋಷವಿಲ್ಲ,, ಎಂಬ ಶಾಸ್ತ್ರವನ್ನು ಚೆನ್ನಾಗಿ ಬಲ್ಲಾತನಾದುದರಿಂದ ಪ್ರಕೃತದಲ್ಲಿ ಏನಮಾಡಬೇಕೆಂದು ಯೋಚಿಸ ತೊಡಗಿದನು ॥೩॥ ಬಳಿಕ - ಸಾಧ್ಯವಾದ ಮಟ್ಟಿಗೆ ಸಾಮೋಪಾಯವನ್ನೇ ವಿನಿಯೋಗಿಸಬೇಕೆಂದು ನಿಶ್ಚೈಸಿದನು. ಹಗೆಗಳನ್ನೆಲ್ಲ ಗೆದ್ದಿರುವ ತನ್ನ ಅಣ್ಣನಾದ ರಾವಣನನ್ನು ಮನದೊಳಗೆ ಅಸತ್ಕಾರ್ಯದಿಂದ ಅಸಡ್ಡೆಮಾಡಿದ್ದರೂ ಪ್ರಕೃತದಲ್ಲಿ ಅವನನ್ನು ಕ್ರೂರಕೃತ್ಯದಿಂದ ಹಿಂದಿರುಗಿಸಬೇಕೆಂದು ಭಾವಿಸಿ, ಗೌರವಿಸಿ, ಸಮಯೋಚಿತವಾಗಿ ಮಾತನಾಡುವುದರಲ್ಲಿ ಬಲು ಜಾಣನಾದುದರಿಂದ ಹಿತವಾದ ವಚನ ಜಾತವನ್ನು ಉದಹರಿಸ ತೊಡಗಿದನು, ॥೪॥ ಎಲೈ ರಾಕ್ಷಸರಾಜೇಂದ್ರನೇ ! ಪಾರವಿಲ್ಲದೆ ಏರುತಲಿರುವ ರೋಷವನ್ನು ತಡೆ, ಸ್ಥೈರಣೆಯನ್ನು ತಾಳು

ಕ್ಷಮಸ್ವ ರೋಷಂ ತ್ಯಜ ರಾಕ್ಷಸೇಂದ್ರ ಪ್ರಸೀದ ಮದ್ವಾಕ್ಯ ಮಿದಂ ಶೃಣುಷ್ವ।
ವಧಂ ನ ಕುರ್ವಂತಿ ಪರಾವರಜ್ಞಾ ದೂತಸ್ಯ ಸಂತೋ ವಸುಧಾಧಿಪೇಂದ್ರಾಃ॥
ರಾಜಧರ್ಮ ವಿರುದ್ಧಂ ಚ ಲೋಕವೃತ್ತೇಶ್ಚ ಗರ್ಹಿತಂ ।
ತವ ಚಾಸದೃಶಂ ವೀರ ಕಪೇ ರಸ್ಯ ಪ್ರಮಾಪಣಮ್ ॥೬॥
ಧರ್ಮಜ್ಞಶ್ಚ ಕೃತಜ್ಞಶ್ಚ ರಾಜಧರ್ಮ ವಿಶಾರದಃ ।
ಪರಾವರಜ್ಞೋ ಭೂತಾನಾಂ ತ್ವಮೇವ ಪರಮಾರ್ಥವಿತ್ ॥೭॥
ಗೃಹ್ಯಂತೇ ಯದಿ ರೋಷೇಣ ತ್ವಾದೃಶೋಽಪಿ ವಿಪಶ್ಚಿತಃ ।
ತತ ಶ್ಶಾಸ್ತ್ರ ವಿಪಶ್ಚಿತ್ತ್ವಂ ಶ್ರಮ ಏವ ಹಿ ಕೇವಲಮ್ ॥೮॥

ಪ್ರಸೀದ - ಪ್ರಸನ್ನನಾಗು, ಕ್ಷಮಸ್ವ - ಸೈರಿಸು, ಇದಂ - ಈಮುಂದೆ ಹೇಳಹೋಗುವ, ಮದ್ವಾಕ್ಯಂ-ನನ್ನ ಮಾತನ್ನು, ಶೃಣುಷ್ವ - ಕೇಳು, (ಶೃಣು) ಪರಾವರಜ್ಞಾಃ - ಉತ್ತಮಾಧಮಕಾರ್ಯಗಳನ್ನು ಬಲ್ಲ, (ಗ್ರಾಹ್ಯಾಗ್ರಾಹ್ಯಗಳನ್ನು ತಿಳಿದಿರುವ) ಸಂತಃ - ಯೋಗ್ಯರಾದ, ವಸುಧಾಧಿಪೇಂದ್ರಾಃ - ಭೂಪತಿಗಳು, ದೂತಸ್ಯ - ರಾಯಭಾರಿಯ, ವಧಂ - ಸಂಹಾರವನ್ನು, ನಕುರ್ವಂತಿ - ಮಾಡುವುದಿಲ್ಲ॥೫॥ ಹೇವೀರ - ಎಲೈ ಶೂರನೇ !, ಅಸ್ಯ - ಈ, ಕಪೇಃ - ಹನುಮಂತನ, ಪ್ರಮಾಪಣಂ- ಸಂಹಾರಕಾರ್ಯವು, ರಾಜಧರ್ಮ ವಿರುದ್ಧಂ - ರಾಜನೀತಿಗೆ ವಿರುದ್ಧವಾದುದು, ಲೋಕವೃತ್ತೇಶ್ಚ - ಲೋಕವ್ಯವಹಾರಕ್ಕೂ, ಗರ್ಹಿತಂ - ನಿಂದಿತವಾದುದು, ತವಚ - ನಿನ್ನಂತಹ ಧೀರನಿಗೂ, ಅಸದೃಶಂ ಅನುರೂಪವಾದುದಲ್ಲ ॥೬॥ ತ್ವಮೇವ - ನೀನೇ, ಭೂತಾನಾಂ - ಪ್ರಾಣಿಗಳೊಳಗೆ, ಧರ್ಮಜ್ಞಃ - ಮನ್ವಾದಿಗಳ ಧರ್ಮಗಳನ್ನು ಬಲ್ಲವನು, ಕೃತಜ್ಞಶ್ಚ - ಹೆರರುಮಾಡಿದುಪಕಾರವನ್ನು ತಿಳಿಯತಕ್ಕವನು, ರಾಜಧರ್ಮವಿಶಾರದಃ - ರಾಜಧರ್ಮಗಳನ್ನೆಲ್ಲ ತಿಳಿದವನು, ಪರಾವರಜ್ಞಃ - ಪ್ರಬಲ ದುರ್ಬಲರನ್ನು ಅರಿತವನು, ಪರಮಾರ್ಥವಿತ್ - ತತ್ವಜ್ಞನೂ ಹೌದು ॥೭॥ ರೋಷೇಣ - ಕೋಪದಿಂದ, ತ್ವಾದೃಶಃ - ನಿಮ್ಮಂತಹ, ವಿಪಶ್ಚಿತೋಽಪಿ - ವಿದ್ವಾಂಸರೂ ಗೃಹ್ಯಂತೆಯದಿ-ಗ್ರಹಿಸಲ್ಪಡುವವರೇ ಆದರೆ, ತತಃ-ತರುವಾಯ, ಶಾಸ್ತ್ರವಿಪಶ್ಚಿತ್ತ್ವಂ-ಶಾಸ್ತ್ರಪಾಂಡಿತ್ಯವು ಕೇವಲಂ-ವಿಶೇಷವಾಗಿ, ಶ್ರಮಏವಹಿ-ಪ್ರಯಾಸಮಾತ್ರವೇ ಅಲ್ಲವೆ ॥ ೮ ॥ ಶತ್ರುಘ್ನ-ಶತ್ರುಸಂಹಾರಕನಾದ

ಪ್ರಸನ್ನತೆಯನ್ನು ತೋರು, ವಿನಯಪೂರ್ವಕವಾಗಿ ನಾನು ಅರಿಕೆಮಾಡುವ ಬಿನ್ನಪವನ್ನು ಲಾಲಿಸು, ಹಿಂದು ಮುಂದಿನ ಆಲೋಚನೆಯನ್ನು ಅರಿತು, ಉತ್ತಮಾಧಮ ಕಾರ್ಯಗಳ ತಾರತಮ್ಯವನ್ನು ತಿಳಿದು, ಬೆಳಗುವ ವಸುಧಾಧಿಪತಿಗಳು ದೂತವಧೆಗೆಳಸುವುದಿಲ್ಲ ॥ ೫ ॥ ಈ ಆಳಾಗದವನನ್ನು ಕೊಲೆಮಾಡಿಸುವುದು ರಾಜನೀತಿಗೆ ಸಂಪೂರ್ಣ ವಿರುದ್ಧವಾಗಿದೆ, ಲೋಕದ ನಡತೆಯಲ್ಲಿ ಬಲು ಹೀಯಾಳಿಕೆಗೆ ಗುರಿಯಾಗಿದೆ, ರಣದಿಶಾಪಟ್ಟಮಲ್ಲನಾದ ನಿನ್ನಂತಹ ಧೀರನಿಗೆ ತಕ್ಕುದೆನಿಸಿಯೂ ಇಲ್ಲ ॥೬॥ ನೀನಾದರೆ - ಸಕಲ ಧರ್ಮನೀತಿಗಳ ಮರ್ಮಗಳನ್ನೆಲ್ಲ ಬಲ್ಲವನು, ಹೆರರೆಸಗಿದ ಮೇಲನ್ನು ಮರೆಯದೆ ನೆನೆಯತಕ್ಕವನು.ಮಾಡತಕ್ಕುದನ್ನೂ, ಬಿಡತಕ್ಕುದನ್ನೂ ಚೆನ್ನಾಗಿ ಅರಿತು ಇದ್ದೀಯೆ, ಸಕಲ ಪ್ರಾಣಿಗಳೊಳಗೂ ಉತ್ತಮನೆನಿಸಿಯೂ ಇದ್ದೀಯೆ, ಸಮಸ್ತ ರಹಸ್ಯಗಳೂ ನಿನ್ನ ಮನದೊಳಗೆ ಅಡಗಿವೆ ॥೭॥ ಸಕಲ ವಿದ್ಯಾ ವಿಶಾರದರಾದ ನಿನ್ನಂತಹ ಮಹಾತ್ಮರೂ ಕೋಪಪರವಶರಾಗುವುದಾದರೆ, ಶಾಸ್ತ್ರಾಭ್ಯಾಸವನ್ನು ಮಾಡೋಣವೆಂಬುದು ಕೇವಲ ಶ್ರಮವಾಗಿ ಪರಿಣಮಿಸುವುದು.

ತಸ್ಮಾತ್ಪ್ರಸೀದ ಶತ್ರುಘ್ನ ರಾಕ್ಷಸೇಂದ್ರ ದುರಾಸದ ।
ಯುಕ್ತಾಯುಕ್ತಂ ವಿನಿಶ್ಚಿತ್ಯ ದೂತದಂಡೋ ವಿಧೀಯತಾಮ್ ॥೯॥
ವಿಭೀಷಣ ವಚಶ್ಶ್ರುತ್ವಾ ರಾವಣೋ ರಾಕ್ಷಸೇಶ್ವರಃ ।
ರೋಷೇಣ ಮಹತಾ ವಿಷ್ಟೋ ವಾಕ್ಯಮುತ್ತರ ಮಬ್ರವೀತ್ ॥೧೦॥
ನ ಪಾಪಾನಾಂ ವಧೇ ಪಾಪಂವಿದ್ಯತೇ ಶತ್ರುಸೂದನ ।
ತಸ್ಮಾದೇನಂ ವಧಿಷ್ಯಾಮಿ ವಾನರಂ ಪಾಪಚಾರಿಣಂ ॥೧೧॥
ಅಧರ್ಮಮೂಲಂ ಬಹು ರೋಷಯುಕ್ತ ಮನಾರ್ಯಜುಷ್ಟಂ ವಚನಂನಿಶಮ್ಯ

---

ರಾಕ್ಷಸೇಂದ್ರ-ರಾಕ್ಷಸಸಾರ್ವಭೌಮನೆ!, ದುರಾಸದ-ಹಗೆಗಳಿಗಸದಳನೆನಿಸಿದವನೇ! ತಸ್ಮಾತ್-ಇಷ್ಟುಸಾಮರ್ಥ್ಯವುನಿನ್ನಲ್ಲಿರುವಕಾರಣದಿಂದಲೇ, ಪ್ರಸೀದ-ಶಾಂತನಾಗು, ಯುಕ್ತಾಯುಕ್ತಂ ಉಚಿತಾನುಚಿತಗಳನ್ನು, ವಿನಿಶ್ಚಿತ್ಯ-ಚೆನ್ನಾಗಿಗೊತ್ತುಮಾಡಿಕೊಂಡು, (ತ್ವಯಾ-ನಿನ್ನಿಂದ) ದೂತದಂಡಃ- ದೂತಶಿಕ್ಷೆಯು, ವಿಧೀಯತಾಂ-ಮಾಡಲ್ಪಡಲಿ ॥ ೯ ॥

ರಾಕ್ಷಸೇಶ್ವರಃ - ಅಸುರೇಂದ್ರನಾದ, ರಾವಣಃ - ರಾವಣನು, ವಿಭೀಷಣವಚಃ - ವಿಭೀಷಣನ ಮಾತನ್ನು, ಶ್ರುತ್ವಾ - ಕೇಳಿ, ಮಹತಾ - ಪ್ರಬಲವಾದ, ರೋಷೇಣ - ಸಿಟ್ಟಿನಿಂದ, ಆವಿಷ್ಟಃ - ಕೂಡಿದವನಾಗಿ, ಉತ್ತರಂವಾಕ್ಯಂ - ಮುಂದಿನ ಮಾತನ್ನು, ಅಬ್ರವೀತ್ - ಹೇಳತೊಡಗಿದನು ॥೧೦॥ ಶತ್ರುಸೂದನ - ಶತ್ರುಸಂಹಾರಕನಾದ ಎಲೈ ವಿಭೀಷಣನೇ!, ಪಾಪಾನಾಂ - ಪಾಪಿಷ್ಠರಾದವರ, ವಧೆ - ಸಂಹಾರದಲ್ಲಿ, ಪಾಪಂ - ದೋಷವು, ನವಿದ್ಯತೆ - ಇರುವುದಿಲ್ಲ, ತಸ್ಮಾತ್ - ಆದಕಾರಣ, ಪಾಪಚಾರಿಣಂ - ಪಾಪಕರ್ಮವನ್ನು ಮಾಡಿರುವ, ಏನಂ - ಈ, ವಾನರಂ - ಕಪಿಯನ್ನು, ವಧಿಷ್ಯಾಮಿ (ಹನಿಷ್ಯಾಮಿ) ಕೊಲ್ಲುವೆನು ॥೧೧॥ ಬುದ್ಧಿಮತಾಂ - ಬುದ್ಧಿಶಾಲಿಗಳೊಳಗೆ, ವರಿಷ್ಠಃ - ಶ್ರೇಷ್ಠನೆನಿಸಿದ, ವಿಭೀಷಣಃ - ವಿಭೀಷಣನು, ಅಧರ್ಮಮೂಲಂ - ಅಧರ್ಮಕ್ಕೆ ಕಾರಣವಾಗಿರುವ, ಬಹುರೋಷಯುಕ್ತಂ - ಬಹುಕ್ರೋಧದಿಂದೊಡಗೂಡಿರತಕ್ಕ, ಅನಾರ್ಯಜುಷ್ಟಂ - ಅಯೋಗ್ಯರನುಸರಿಸಬೇಕಾದ, ವಚನಂ - ಮಾತನ್ನು,

---

ವುದಲ್ಲದೆ, ಅದರಿಂದ ಫಲವೇನಾದರು ಉಂಟೆ! ॥೮॥ ಪರರಿಗೆ ಅಸದಳನೆನಿಸಿ, ಹಗೆಗಳನ್ನೆಲ್ಲ ಇರಿದು, ಅಡಗಿಸಿರುವ ರಾಜೇಂದ್ರನೇ! ಪ್ರಕೃತದಲ್ಲಿ ಪ್ರಸನ್ನನಾಗು. ಇದನ್ನು ಮಾಡಬಹುದು, ಇದನ್ನು ಮಾಡಬಾರದು ಎಂಬುದನ್ನು ಚೆನ್ನಾಗಿ ಯೋಚಿಸಿ, ಬಳಿಕ ಈ ದೂತನಿಗೆ ಉಚಿತವಾದ ದಂಡವನ್ನು ವಿಧಿಸು ॥೯॥ ಎಂದೀ ಪ್ರಕಾರವಾಗಿ ಧರ್ಮನೀತಿಗಳನ್ನನುಸರಿಸಿ ಮೃದು ಮಧುರವಾದ ಮಾರ್ಗದಿಂದ ಉದಹರಿಸಿದ ವಿಭೀಷಣನ ವಚನವನ್ನಾಲಿಸಿ, ರಾಕ್ಷಸೇಶ್ವರನು - ರೋಷ ಪರವಶನಾಗಿರುತ್ತಲೇ ಆತನಂ ಕುರಿತು ಇಂತೆಂದನು ॥೧೦॥ ಶತ್ರು ಸಂಹಾರಕನಾದ ಎಲೈ ವಿಭೀಷಣಾ! ನೀನು ಹೇಳಿದುದೆಲ್ಲಾ ಸರಿಯೆ, ಆದರೆ - ಪಾಪಾತ್ಮರಾದವರನ್ನು ಕೊಲ್ಲುವುದರಿಂದ ಪಾಪವಿಲ್ಲ. ಇವನಾದರೆ—ವನಭಂಗವೇ ಮೊದಲಾದ ಪಾಪಕಾರ್ಯಗಳನ್ನು ಮಾಡಿದಾನೆ, ಆದಕಾರಣ ಈ ಪಾಪಿಷ್ಠನನ್ನು ಕೊಲ್ಲಲು ಆಜ್ಞಾಪಿಸಿದೆನು ॥ ೧೧॥ ಅಧರ್ಮಕ್ಕೆ ಮೂಲವೆನಿಸಿಯೂ, ಬಹು ರೋಷದಿಂದೊಡಗೂಡಿಯೂ, ಅಯೋಗ್ಯರಿಂದ ಆಚರಿಸತಕ್ಕುದೂ ಆಗಿರುವ ಅಣ್ಣನಾದ ರಾವಣನ ಮಾತನ್ನು ಕೇಳಿ, ಬುದ್ಧಿವಂತರೊಳಗೆ ಅಗ್ರಗಣ್ಯನೆನಿಸಿದ ವಿಭೀಷಣನು- ಉತ್ತಮವಾದ ಅರ್ಥವನ್ನು

ಉವಾಚ ವಾಕ್ಯಂ ಪರಮಾರ್ಥ ತತ್ವಂ ವಿಭೀಷಣೋ ಬುದ್ಧಿಮತಾಂ ವರಿಷ್ಠಃ||
ಪ್ರಸೀದ ಲಂಕೇಶ್ವರ ರಾಕ್ಷಸೇಂದ್ರ ಧರ್ಮಾರ್ಥ ಯುಕ್ತಂ ವಚನಂ ಶೃಣುಷ್ವ ।
ದೂತಾ ನವಧ್ಯಾ ನ್ಸಮಯೇಷು ರಾಜನ್ ಸರ್ವೇಷು ಸರ್ವತ್ರ ವದಂತಿ ಸಂತಃ ||೧೨||
ಅಸಂಶಯಂ ಶತ್ರು ರಯಂ ಪ್ರವೃದ್ಧಃ ಕೃತಂ ಹ್ಯನೇನಾ ಪ್ರಿಯ ಮಪ್ರಮೇಯಂ ।
ನದೂತ ವಧ್ಯಾಂ ಪ್ರವದಂತಿ ಸಂತೋ ದೂತಸ್ಯ ದೃಷ್ಟಾ ಬಹವೋ ಹಿ ದಂಡಾಃ ||೧೩||
ವೈರೂಪ್ಯ ಮಂಗೇಷು ಕಶಾಭಿಘಾತೋ ಮೌಂಡ್ಯಂ ತಥಾ ಲಕ್ಷಣ ಸನ್ನಿಪಾತಃ।

---

ನಿಶಮ್ಯ - ಕೇಳಿ, ಪರಮಾರ್ಥತತ್ವಂ - ಉತ್ತಮಾರ್ಥವುಳ್ಳ ಮತ್ತು ಯಥಾರ್ಥವಾಗಿರುವ, ವಾಕ್ಯಂ - ಮಾತನ್ನು, ಉವಾಚ - ಹೇಳತೊಡಗಿದನು ||೧೧|| ಲಂಕೇಶ್ವರ - ಎಲೈ ಲಂಕಾಧಿಪತಿಯೇ !, ರಾಕ್ಷಸೇಂದ್ರ - ರಾಕ್ಷಸಶ್ರೇಷ್ಠನೇ ! ಪ್ರಸೀದ - ಪ್ರಸನ್ನನಾಗು, ಧರ್ಮಾರ್ಥಯುಕ್ತಂ - ಧರ್ಮಾರ್ಥಗಳಿಂದೊಡಗೂಡಿದ, ವಚನಂ - ನನ್ನಮಾತನ್ನು, ಶೃಣುಷ್ವ - ಕೇಳು, ರಾಜನ್ - ಎಲೈದೊರೆಯೇ !, ದೂತಾಃ - ಊಳಿಗದವರು, ಸರ್ವೇಷು - ಸಮಸ್ತವಾದ, ಸಮಯೇಷು - ಕಾಲಗಳಲ್ಲಿಯೂ, ಸರ್ವತ್ರ - ಎಲ್ಲದೇಶಗಳಲ್ಲಿಯೂ, ವಧ್ಯಾಃ - ಸಂಹಾರಾರ್ಹರು, ನ - ಅಲ್ಲ, (ಇತಿ - ಹೀಗೆಂದು) ಸನ್ತಃ - ಸತ್ಪುರುಷರು, ವದಂತಿ - ಹೇಳುತ್ತಾರೆ ||೧೨|| ಹಿ - ಏತಕೆಂದರೆ, ಅನೇನ - ಈ ವಾನರನಿಂದ, ಅಪ್ರಮೇಯಂ - ಅಳೆಯಲಸದಳವೆನಿಸಿದ, ಅಪ್ರಿಯಂ - ಅಕ್ಷವಧೆಯೇ ಮುಂತಾದ ಅನಿಷ್ಟವು, ಕೃತಂ - ಮಾಡಲ್ಪಟ್ಟಿದೆ, (ತತ್ - ಅದಕಾರಣ,) ಅಯಂ - ಇವನು, ಪ್ರವೃದ್ಧಃ - ಪ್ರಬಲನಾದ, ಶತ್ರುಃ - ಹಗೆಯು, ಅಸಂಶಯಂ - ಸಂದೇಹವಿಲ್ಲ, ಹಿ - ಯಾವಕಾರಣದಿಂದ, (ನೀತಿಜ್ಞೈಃ - ನೀತಿಯನ್ನು ಬಲ್ಲವರಿಂದ) ದೂತಸ್ಯ- ದೂತನಿಗೆ, ಬಹವಃ - ಅನೇಕವಿಧವಾದ, ದಂಡಾಃ - ಶಿಕ್ಷೆಗಳು, ದೃಷ್ಟಾಃ - ನೋಡಲ್ಪಟ್ಟವೆಯೋ, (ತತ್ - ಆ ಕಾರಣದಿಂದಲೇ) ಸನ್ತಃ - ಸತ್ಪುರುಷರು, ದೂತವಧ್ಯಾಂ - ದೂತಸಂಹಾರವನ್ನು, ನಪ್ರವದಂತಿ - ಹೇಳುವುದಿಲ್ಲ ||೧೩|| ಸಂತಃ - ಸತ್ಪುರುಷರು, ದೂತೇ - ರಾಯಭಾರಿಯಲ್ಲಿ, ಅಂಗೇಷು -

---

ಒಳಗೊಂಡಿರುವುದಾಗಿಯೂ ಯಥಾರ್ಥವಾಗಿಯೂ ಇರುವ ಮತ್ತೊಂದು ಮಾತನ್ನು ಹೇಳಲಿಕ್ಕಾರಂಭಿಸಿದನು||೧೧||ರಾಕ್ಷಸ ಸಾರ್ವಭೌಮನೆನಿಸಿದ ಎಲೈ ಲಂಕಾಧಿಪತಿಯೇ! ಕ್ಷಮಾಗುಣಸಂಪನ್ನನಾಗಿ ಮೃದುತೆಯನ್ನು ತೋರು.ಧರ್ಮಾರ್ಥಗಳಿಗೆ ವಿರೋಧವಿಲ್ಲದ ನನ್ನ ಮಾತನ್ನು ದಯೆಮಾಡಿ ಲಾಲಿಸು. ಸತ್ಪುರುಷರು - ಯಾವ ದೇಶದಲ್ಲಿಯೂ ಯಾವ ಕಾಲದಲ್ಲಿಯೂ, ಧರ್ಮನೀತಿಗಳನ್ನನುಸರಿಸಿರುವ ದೊರೆಗಳು ದೂತನನ್ನು ಕೊಲ್ಲಿಸಬಾರದು ಎಂದು ಹೇಳುತ್ತಾರೆ ||೧೨|| ಎಲೈ ರಾಕ್ಷಸ ಮಂಡಲಾಧಿಪತಿಯೇ ! ನೀನು ಹೇಳಿದಂತೆ ಇವನು ಹಗೆ ಎಂಬುದು ದಿಟ. ಈ ವಿಷಯದಲ್ಲಿ ಸಂಶಯವಿಲ್ಲ, ಪ್ರಬಲ ಶತ್ರುವೆನಿಸಿಯೇ ದುರುಳತನದಿಂದ ಹೇರಳವಾದ ಅನಿಷ್ಟ ಕಾರ್ಯವನ್ನು ಮಾಡಿ, ನಿನ್ನ ಮನಸ್ಸಿಗೆ ಬಹು ವ್ಯಾಕುಲವನ್ನುಂಟುಮಾಡಿದಾನೆ, ಆದರೂ, ಸಾಧುಗಳು - ದೂತವಧೆಯನ್ನು ಒಪ್ಪುವುದಿಲ್ಲ, ಅದು ರಾಜನೀತಿಗೆ ಸಂಪೂರ್ಣ ವಿರೋಧವಾದುದು. ಹಾಗಾದರೆ ಇವನನ್ನು ದಂಡಿಸದೆಯೇ ಬಿಟ್ಟುಬಿಡಬೇಕು ಎಂದು ನಾನು ಹೇಳುವುದಿಲ್ಲ. ನೀತಿಯನ್ನನುಸರಿಸಿ, ದೂತನಿಗೆ ಮಾಡಬೇಕಾದ ದಂಡನೆಗಳು ಅನೇಕವಿಧಗಳಾಗಿವೆ ಅವುಗಳಲ್ಲಿ ಯಾವುದಾದರೊಂದನ್ನು ಆಚರಿಸುವಂತೆ ಆಳುಗಳಿಗೆ ಆಜ್ಞಾಪಿಸು ||೧೩|| ಯಾವುದಾದರೊಂದು ಅಂಗಕ್ಕೆ ಭಂಗವನ್ನುಂಟುಮಾಡ

ಏತಾನ್ ಹಿ ದೂತೇ ಪ್ರವದಂತಿ ದಂಡಾನ್ ವಧಸ್ತು ದೂತಸ್ಯನನಶ್ರುತೋಽಪಿ ॥೧೫॥
ಕಥಂಚ ಧರ್ಮಾರ್ಥ ವಿನೀತ ಬುದ್ಧಿಃ ಪರಾವರ ಪ್ರತ್ಯಯ ನಿಶ್ಚಿತಾರ್ಥಃ ।
ಭವದ್ವಿಧಃ ಕೋಪವಶೇ ಹಿ ತಿಷ್ಠೇ ತ್ಕೋಪಂ ನಿಯಚ್ಛಂತಿ ಹಿ ಸತ್ವವಂತಃ ॥೧೬॥
ನಧರ್ಮ ವಾದೇ ನಚ ಲೋಕವೃತ್ತೇ ನ ಶಾಸ್ತ್ರಬುದ್ಧಿ ಗ್ರಹಣೇಷು ಚಾಪಿ ।
ವಿದ್ಯೇತ ಕಶ್ಚಿ ತ್ತವ ವೀರ ತುಲ್ಯ ಸ್ತ್ವಂ ಹ್ಯುತ್ತಮ ಸ್ಸರ್ವ ಸುರಾಸುರಾಣಾಂ ॥೧೭॥

---

ಕರಚರಣಾದಿ ಅವಯವಗಳಲ್ಲಿ, ವೈರೂಪ್ಯಂ-ಆಕಾರವಿಕಾರವು, ಕಶಾಭಿಘಾತಃ-ಕೋರಡದ ಪೆಟ್ಟು (ಚಬಕ ಹೊಡೆವುದು) ಮೌಣ್ಡ್ಯಂ - ತಲೆಗೆ ಮುಂಡನವನ್ನು ಮಾಡಿಸುವುದು, ತಥಾ - ಹಾಗೆಯೇ, ಲಕ್ಷಣಸನ್ನಿಪಾತಃ - ಬರೆಹಾಕುವುದೇ ಮೊದಲಾದ ಗುರುತುಮಾಡುವುದು. (ಇತಿ - ಇಂತೆಂಬ) ಏತಾನ್ - ಈ ದಂಡಾನ್ - ದಂಡನೆಗಳನ್ನು, ಪ್ರವದಂತಿ - ಹೇಳುತ್ತಾರೆ, ನಃ- ನಮ್ಮಿಂದ, ದೂತಸ್ಯ - ದಾಸನ, ವಧಃ- ಕೊಲೆಯು, ನಶ್ರುತೋಽಪಿ - ಕೇಳಲ್ಪಟ್ಟೇ ಇಲ್ಲವು ॥೧೫॥ ಧರ್ಮವಿನೀತಬುದ್ಧಿಃ - ಧರ್ಮನೀತಿಗಳಲ್ಲಿ ಶಿಕ್ಷಿತ ಬುದ್ಧಿಯುಳ್ಳ, ಪರಾ....ರ್ಥಃ,ಪರ - ಉತ್ತಮಕಾರ್ಯದ, ಅಪರ - ಅಧಮಕಾರ್ಯದ, ಪ್ರತ್ಯಯ - ತಿಳವಳಿಕೆಯಿಂದ, ನಿಶ್ಚಿತ - ಗೊತ್ತುಮಾಡಲ್ಪಟ್ಟ, ಅರ್ಥಃ - ಕರ್ತವ್ಯಾರ್ಥವುಳ್ಳ, ಭವದ್ವಿಧಃ - ನಿನ್ನಂತಹ ಧೀರನು, ಕೋಪವಶೆ - ಸಿಟ್ಟಿನ ಅಧೀನದಲ್ಲಿ, ಕಥಂಚ - ಹೇಗೆ, ತಿಷ್ಠೇತ್ - ನೆಲೆಗೊಳ್ಳುವನು ?, ಹಿ - ಮತ್ತೇನೆಂದರೆ, ಸತ್ತ್ವವಂತಃ - ಸತ್ವಗುಣ ಸಂಪನ್ನರು (ಮಹಾಬಲಶಾಲಿಗಳು) ಕೋಪಂ - ತಮಗುಂಟಾಗುವ ಕ್ರೋಧವನ್ನು, ನಿಯಚ್ಛಂತಿ - ಅಡಗಿಸುತ್ತಾರೆ, ಹಿ - ನಿಶ್ಚಯ, ॥೧೬॥ ಹೇವೀರ - ಎಲೈಶೂರನೆ! ಧರ್ಮವಾದೆ - ಧರ್ಮಶಾಸ್ತ್ರೋದಾಹರಣೆಯಲ್ಲಿ, ತವ - ನಿನಗೆ, ತುಲ್ಯಃ - ಸಮನೆನಿಸಿದವನು, ಕಶ್ಚಿತ್ - ಒಬ್ಬನೂ, ನವಿದ್ಯೇತ - ಇಲ್ಲವು, ಲೋಕವೃತ್ತೇಚ- ಲೋಕವ್ಯವಹಾರ ಪರಿಜ್ಞಾನದಲ್ಲಿಯೂ, ನ - ಇಲ್ಲ, ಶಾಸ್ತ್ರಬುದ್ಧಿಗ್ರಹಣೇಷುಚಾಪಿ - ಶಾಸ್ತ್ರಾರ್ಥಪರಿಜ್ಞಾನಗಳಲ್ಲಿಯೂ, ನ - ಇಲ್ಲ ತ್ವಂಹಿ - ನೀನೊಬ್ಬನೇ, ಸರ್ವಸುರಾಸುರಾಣಾಂ - ಸಮಸ್ತ ದೇವಾಸುರರೊಳಗೂ, ಉತ್ತಮಃ - ಶ್ರೇಷ್ಠನೆನಿಸಿದವನು, ॥೧೭॥

---

ಬಹುದು, ಅಥವಾ ಬೆತ್ತದಿಂದ ಪೆಟ್ಟುಗಳನ್ನು ಹೊಡೆಯಿಸಬಹುದು, ಇಲ್ಲವೆ ತಲೆಯನ್ನು ಮುಂಡನ ಮಾಡಿಸಬಹುದು, ಹಾಗಿಲ್ಲದಿದ್ದರೆ ಮೈಯೊಳಗೆ ಏನಾದರೊಂದು ಗುರುತನ್ನು ಮಾಡಿಸಬಹುದು. ಈ ಮೊದಲಾದವುಗಳಲ್ಲಿ ಒಂದನ್ನು ವಿಧಿಸುವುದೇ ಉಚಿತವಲ್ಲದೆ ದೂತರನ್ನು ಕೊಲ್ಲಿಸುವ ಧರ್ಮವನ್ನು ಮಾತ್ರ ಯಾವ ಶಾಸ್ತ್ರದಲ್ಲಿಯೂ ನೋಡಿಲ್ಲ. ಮಾಡಿಸಿದ್ದನ್ನು ಕಂಡಿಲ್ಲ, ಕೇಳಿಯೂ ಇಲ್ಲ. ॥೧೫॥ ಧರ್ಮನೀತಿಗಳಲ್ಲಿ ಚೆನ್ನಾಗಿ ಶಿಕ್ಷಿತನಾಗಿ, ಲೋಕವ್ಯವಹಾರದಲ್ಲಿ ಪಳಗಿ, ಕಾರ್ಯಾ ಕಾರ್ಯಗಳ ತಾರತಮ್ಯವನ್ನೆಲ್ಲ ಅರಿತು, ಶಾಸ್ತ್ರಜ್ಞರೊಳಗೆ ಅಗ್ರೇಸರನೆನಿಸಿಕೊಂಡೂ ಇರತಕ್ಕ ನಿನ್ನಂತಹ ಧೀರನೂ, ಕೋಪಕ್ಕೀಡಾಗಿ-ಅಕಾರ್ಯವನ್ನು ಮಾಡಲಿಕ್ಕೆ ಪ್ರವರ್ತಿಸುವುದು ಹೇಗೆ ? ಸತ್ಯಧರ್ಮ ಸಂಪನ್ನರಾದವರು ರಾಜಸತಾಮಸಗಳಿಗೊಳಗಾಗದೆ ಸಮಯ ವಿಶೇಷದಲ್ಲಿ ಸಂಭವಿಸುವ ಕೋಪವನ್ನು ಅಡಗಿಸಿಕೊಳ್ಳಲೇ ಬೇಕು ॥೧೬॥ ಧರ್ಮಶಾಸ್ತ್ರ ಪರಿಜ್ಞಾನದಲ್ಲಿಯೂ, ರಾಜಧರ್ಮಗಳನ್ನುವಹಿಸುವುದರಲ್ಲಿಯೂ, ಲೋಕ ವ್ಯವಹಾರಗಳ ತಿಳವಳಿಕೆಯಲ್ಲಿಯೂ, ಪ್ರಜೆಗಳನ್ನು ಉಚಿತ ಧರ್ಮಮಾರ್ಗದಲ್ಲಿ ನೆಲೆಗೊಳಿಸುವುದರಲ್ಲಿಯೂ,ಎಲೈ ವೀರನೇ ? ನಿನಗೆ ಸಮನೆನಿಸಿದವನು ಮೂಲೋಕದಲ್ಲಿಯೂ ಇಲ್ಲ. ಸಮಸ್ತ ಸುರಾಸುರ ಸಮುದಾಯದಲ್ಲೆಲ್ಲ ನೀನು ಸರ್ವೋತ್ತಮನೆಂದು

ನಚಾಪ್ಯಸ್ಯ ಕಪೇ ರ್ಘಾತೇ ಕಂಚಿ ತ್ಪಶ್ಯಾ ಮ್ಯಹಂ ಗುಣಂ ।
ತೇಷ್ವಯಂ ಪಾತ್ಯತಾಂ ದಂಡೋ ಯೈರಯಂ ಪ್ರೇಷಿತಃ ಕಪಿಃ ॥ ೧೮ ॥
ಸಾಧುರ್ವಾ ಯದಿವಾ ಸಾಧುಃ ಪರೈ ರೇಷ ಸಮರ್ಪಿತಃ ।
ಬ್ರುವ ನ್ಪರಾರ್ಥಂ ಪರವಾ ನ್ನ ದೂತೋ ವಧಮರ್ಹತಿ ॥ ೧೯ ॥
ಅಪಿಚಾಸ್ಮಿ ನ್ಹತೇ ರಾಜ ನ್ನಾನ್ಯಂ ಪಶ್ಯಾಮಿ ಖೇಚರಂ ।

ಅಹಂ - ನಾನು, ಅಸ್ಯ - ಈ, ಕಪೇಃ - ವಾನರನ, ಘಾತೇ - ಸಂಹಾರದಲ್ಲಿ, ಕಂಚಿತ್ - ಯಾವುದೊಂದು. ಗುಣಂ - ಗುಣವನ್ನೂ, ನಪಶ್ಯಾಮಿ - ಕಾಣೆನು, ಯೈಃ - ಯಾರಿಂದ, ಕಪಿಃ - ಈ ವಾನರನು, ಪ್ರೇಷಿತಃ - ಕಳುಹಿಸಲ್ಪಟ್ಟಿರುವನೋ, ತೇಷು - ಅವರಲ್ಲಿ, ಅಯಂ - ಈ. ದಂಡಃ - ಸಂಹಾರರೂಪವಾದ ದಂಡವು, (ತ್ವಯಾ - ನಿನ್ನಿಂದ) ಪಾತ್ಯತಾಂ - ಕೆಡಹಲ್ಪಡಲಿ (ಉಪಯೋಗಿಸು)॥೧೮॥ ಏಷಃ - ಇವನು, ಸಾಧುರ್ವಾ - ಸಜ್ಜನನೋ, ಅಸಾಧುರ್ವಾ - ಕೆಟ್ಟವನೋ, ಪರೈಃ - ಹಗೆಗಳಿಂದ, ಸಮರ್ಪಿತಃ - ಕಳುಹಿಸಲ್ಪಟ್ಟಿದಾನೆ, ಪರವಾನ್ - ಪರಾಧೀನನಾದವನು, (ಅದರಿಂದಲೇ) ಪರಾರ್ಥಂ - ಪರಪ್ರಯೋಜನವನ್ನು ಕುರಿತು, ಬ್ರುವನ್ - ಮಾತನಾಡುವವನಾಗಿದಾನೆ, (ಅತಃ - ಅದರಿಂದಲೇ) ದೂತಃ - ದೂತನು, ವಧಂ- ಕೊಲೆಯನ್ನು, ನಾರ್ಹತಿ - ಹೊಂದತಕ್ಕವನಾಗುವುದಿಲ್ಲ ॥೧೯॥ ಅಪಿಚ - ಮತ್ತು, ರಾಜನ್ - ಎಲೈ ದೊರೆಯೇ !, ಅಸ್ಮಿನ್ - ಈ ದೂತನು, ಹತೇ (ಸತಿ) ಕೊಲ್ಲಲ್ಪಡುತ್ತಿರಲಾಗಿ, ಇಹ - ಇಲ್ಲಿಗೆ, ಯಃ - ಯಾವನು, ಪರಂ - ವಿಸ್ತಾರವಾಗಿರುವ, ಮಹೋದಧೇಃ - ಮಹಾಸಮುದ್ರದ, ಪಾರಂ - ಆಚೆಯ ದಡವನ್ನು ಕುರಿತು, ಪುನಃ - ಮರಳಿ, ಆಗಚ್ಛೇತ್ - ಬರಬಲ್ಲನೋ (ತಂ - ಅಂತಹ) ಅನ್ಯಂ - ಬೇರೊಬ್ಬ

ಹೆಸರುವಾಸಿಯನ್ನು ಪಡೆದಿದ್ದೀಯೆ ॥ ೧೭ ॥ ಇದಲ್ಲದೆ ಮತ್ತೊಂದು ಮಾತನ್ನು ಹೇಳುತ್ತೇನೆ ಲಾಲಿಸು - ಈ ಕೋಡಗನನ್ನು ಕೊಂದ ಮಾತ್ರದಿಂದಲೇ ನನಗೇನೂ ಗುಣವು ತೋರುವುದಿಲ್ಲ. ಯಾವ ಹಗೆಗಳು ನಿನಗೆ ಇಷ್ಟು ತೊಂದರೆಯನ್ನುಂಟುಮಾಡುವಂತೆ ಈ ದೂತನನ್ನು ಕಳುಹಿಸಿದರೋ, ಅವರಲ್ಲಿ, ನಿನ್ನ ಕ್ರೂರವಾದ ದಂಡವನ್ನು ಕೆಡಹು, ಅದು ನ್ಯಾಯವೂ, ಧರ್ಮವೂ ಆಗಿರುವುದು ॥೧೮॥ ಈ ದೂತನು ಸಾಧುವಾಗಿಯಾದರೂ ಇರಲಿ ಅಥವಾ ಅಸಾಧುವಾಗಿಯಾಗಿಯಾದರೂ ಇರಲಿ, ಇವನನ್ನು ಶತ್ರುಗಳು ಕಳುಹಿಸಿ ಇದಾರೆ, ರಾಯಭಾರಿಯಾಗಿ ಬಂದು ತನ್ನ ಪ್ರಭುವಿನಾಜ್ಞೆಯನ್ನು ಪರತಂತ್ರವಾಗಿ ನಡೆಯಿಸಿರುವ ಈ ದೂತನನ್ನು ಸಂಹರಿಸುವುದು ಮಾತ್ರ ಧರ್ಮವಾಗಿ ತೋರುವುದಿಲ್ಲ, ॥೧೯॥ ಮತ್ತು -ಇವನನ್ನು ನೀನು ಕೊಲ್ಲಿಸಿದುದೇ ಆದರೆ - ಎಲೈ ದೊರೆಯೇ ! ಇವನಂತೆ ಹಿಂದಕ್ಕೆ ಆಕಾಶಮಾರ್ಗದಿಂದ ಹಾರಿಹೋಗಿ ಶತ್ರುಗಳಿಗೆ ಈ ವೃತ್ತಾಂತವನ್ನು ತಿಳಿಸುವವರೇ ಇಲ್ಲ. ಆಗ ನೀನು ಹಗೆಗಳಿಗೆ ಯಾವ ಪ್ರತೀಕಾರವನ್ನು ಮಾಡಿದಂತಾಯಿತು ? ಇವನನ್ನು ಮಾತ್ರ ಕೊಲ್ಲಿಸಿದುದರಿಂದ ನಿನಗೇನು ಪ್ರಯೋಜನವಾದಂತಾಯಿತು ? ಇಂತಪಾರವಾದ ಸಾಗರವನ್ನು ದಾಟಿ ಇಲ್ಲಿಗೆ ಮರಳಿ ಬರುವವರಾರು ? ಆದಕಾರಣ ಇವನಿಗೆ ಯಾವುದಾದರೊಂದು ದಂಡನೆಯನ್ನು ವಿಧಿಸಿ ಕಳುಹಿಸಿದರೆ ಶತ್ರುಗಳದನ್ನು ಕಂಡಕೂಡಲೆ ದೂತನಿಗಾದ ಭಂಗವು ತಮಗೇ ಆದಂತೆ ಭಾವಿಸಿ, ಸರ್ವ ಪ್ರಯತ್ನದಿಂದಲೂ ಇಲ್ಲಿಗೆ ಬರಹೋಗುವರು, ಆಗ ಅವರಲ್ಲಿ ನಿನ್ನ ರೋಷವನ್ನೆಲ್ಲ ಕಾರಬಹುದು. ॥೨೦॥ ಆದಕಾರಣ

ಇಹ ಯಃ ಪುನ ರಾಗಚ್ಛೇ ತ್ಖರಂ ಪಾರಂ ಮಹೋದಧೇಃ ॥ ೨೦ ॥
ತಸ್ಮಾ ನ್ನಾಸ್ಯ ವಧೇ ಯತ್ನಃ ಕಾರ್ಯಃ ಪರ ಪುರಂಜಯ ।
ಭವಾ ನ್ಸೇಂದ್ರೇಷು ದೇವೇಷು ಯತ್ನ ಮಾಸ್ಥಾತು ಮರ್ಹತಿ ॥ ೨೧ ॥
ಅಸ್ಮಿ ನ್ವಿನಷ್ಟೇ ನಹಿ ದೂತ ಮನ್ಯಂ ಪಶ್ಯಾಮಿ ಯ ಸ್ತೌ ನರರಾಜ ಪುತ್ರೌ ।
ಯುದ್ಧಾಯ ಯುದ್ಧಪ್ರಿಯ ದುರ್ವಿನೀತಾ ವುದ್ಯೋಜಯೇ ದ್ದೀರ್ಘ ಪಥಾವರುದ್ಧೌ ॥

---

ಖೇಚರಂ - ಆಕಾಶ ಚರನನ್ನು, ನಪಶ್ಯಾಮಿ - ಅರಿಯೆನು ॥೨೦॥ ಪರಪುರಂಜಯ - ಹಗೆಗಳ ಪುರಗಳನ್ನು ಗೆದ್ದ ದೊರೆಯೇ!, ಭವಾನ್ - ನೀನು, ಸೇಂದ್ರೇಷು - ಇಂದ್ರನಿಂದೊಡಗೂಡಿರುವ, ದೇವೇಷು - ದೇವತೆಗಳಲ್ಲಿ, ಯತ್ನಂ - ಯುದ್ಧಪ್ರಯತ್ನವನ್ನು, ಆಸ್ಥಾತುಂ - ಆಚರಿಸಲಿಕ್ಕೆ, ಅರ್ಹತಿ - ತಕ್ಕವನಾಗಿದ್ದೀಯೆ, ತಸ್ಮಾತ್ - ಆದಕಾರಣ, ಅಸ್ಯ - ಈ ದೂತನ, ವಧೆ - ಸಂಹಾರದಲ್ಲಿ, ಯತ್ನಃ - ಪ್ರಯತ್ನವು, (ತ್ವಯಾ - ನಿನ್ನಿಂದ,) ನಕಾರ್ಯಃ - ಮಾಡತಕ್ಕುದಲ್ಲ. ॥೨೧॥ ಅಸ್ಮಿನ್ - ಈ ದೂತನು, ವಿನಷ್ಟೇಸತಿ - ನಾಶವಾಗಿ ಹೋಗುತ್ತಿರಲಾಗಿ, ಯುದ್ಧಪ್ರಿಯ - ಬವರವನ್ನು ಬಯಸುವ ಭೂಪತಿಯೇ: ಯಃ - ಯಾವನು, ದುರ್ವಿನೀತೌ - ದುರ್ನೀತಿಯುಳ್ಳರುವ, ದೀರ್ಘಪಥಾವರುದ್ಧೌ - ದೂರವಾದ ದಾರಿಯಿಂದ ತಡೆಯಲ್ಪಟ್ಟವರೂ, ರಾಜಪುತ್ರೌ - ರಾಜಕುಮಾರರೂ ಆಗಿರುವ, ತೌ - ಆ ರಾಮ ಲಕ್ಷ್ಮಣರನ್ನು ಯುದ್ಧಾಯ - ಕಾಳಗಕ್ಕೆ, ಉದ್ಯೋಜಯೇತ್ - ಪ್ರಯತ್ನಗೊಳಿಸುವನೋ, ತಂ - ಅಂತಹ, ಅನ್ಯಂ - ಬೇರಾದ, ದೂತಂ - ಆಳನ್ನು, ನಪಶ್ಯಾಮಿ - ಕಾಣೆನು ॥ ೨೨ ॥ ( ಕಿಂಚ - ಮತ್ತು ) ಪರಾಕ್ರಮ - ಶೌರ್ಯದಿಂದಲೂ, ಉತ್ಸಾಹ - ಉತ್ತೇಜನದಿಂದಲೂ, ಮನಸ್ವಿನಾಂ - ಧೀರರಾದ, ಸುರಾಸುರಾಣಾಮಪಿ - ದೇವಾಸುರರಿಗೂ, ದುರ್ಜಯೇನ - ಜಯಿಸಲಸಾಧ್ಯನಾದ, ತ್ವಯಾ - ನಿನ್ನಿಂದ, ಮನೋನಂದನನೈಋತಾನಾಂ - ಮನಸ್ಸನ್ನು ಆನಂದಗೊಳಿಸುವ ರಾಕ್ಷಸರಿಗೆ ಒದಗಬಹುದಾದ, ಯುದ್ಧಯತಿಃ - ಯುದ್ಧಲಾಭವು, ನಾಶಯಿತುಂ - ಹಾಳುಮಾಡಲಿಕ್ಕೆ, ಯುಕ್ತಾ - ಉಚಿತ

---

ಇವನನ್ನು ಕೊಲ್ಲಿಸುವುದರಲ್ಲಿ ನಿನ್ನ ಪ್ರಯತ್ನವನ್ನು ವಿನಿಯೋಗಿಸಬೇಡ, ಎಲೈ ಶತ್ರು ಸಂಹಾರಕನೇ ! ಇಂದ್ರನೇ ಮೊದಲಾದವರಿಂದ ಸಹಿತರಾದ ದೇವತೆಗಳನ್ನು ಇದಿರಿಸಿ ನಿಲ್ಲತಕ್ಕ ಧೀರನಾಗಿದ್ದೀಯೆ, ಅಂತಹ ನಿನ್ನ ಮನವು ಈ ಕೀಳು ಕೆಲಸದಲ್ಲಿ ಪ್ರವರ್ತಿಸಬಾರದು, ॥೨೧॥ ಯುದ್ಧವನ್ನು ಮಾಡಿದರೆ ಮೇಲಾಗುವುದೆ ? ಕೇಡಾಗುವುದೆ ? ಎಂಬ ವಿವೇಕವಿಲ್ಲದೆ ಬವರವನ್ನು ಮಾತ್ರ ಬಯಸುತಲಿರುವ ಆ ರಾಜಪುತ್ರರು - ಈ ದೂತನು ಇಲ್ಲಿಯೇ ನಾಶವಾಗಿ ಹೋದಬಳಿಕ ಇಲ್ಲಿನ ಸುದ್ದಿಯುನ್ನು ತಿಳಿಯಲಾರದೆ ಹೋಗುವರು, ಬಹುದೂರದ ದಾರಿಯಲ್ಲಿ ಇದಾರೆ. ಬೇರೊಬ್ಬ ದೂತನಾವನೂ ಇವನಂತೆ ಇಲ್ಲಿ ಇಲ್ಲ, ಇವನಾದರೆ ಇಲ್ಲಿಂದ ಹೋಗಿ ಅವರಿಗೆ ಉತ್ತೇಜನವನ್ನುಂಟುಮಾಡುವನು, ಬಳಿಕ ಅವರು ಬಂದೇ ಬರುವರು - ಆಗ ನಿನ್ನ ಮನೋರಥವು ಸಫಲವಾಗುವುದು ॥೨೨॥ ಎಲೈ ಅಸುರ ಭೂದೇವೇಂದ್ರನೇ ! ಬಾಹುಬಲ ಸಂಪನ್ನರೂ, ಮಹೋತ್ಸಾಹ ಸಮನ್ವಿತರೂ, ಧೀರರೂ ಆಗಿರುವ ದೇವಾಸುರರಿಗೂ ಜಯಿಸಲಸದಳನೆನಿಸಿರುವ ನೀನು - ರಣಕರ್ಮ ವಿಶಾರದರಾಗಿ, ನಿನ್ನ ಮನಸ್ಸಿಗೆ ಆನಂದವನ್ನುಂಟುಮಾಡುವ ರಾಕ್ಷಸ ವೀರಭಟರಿಗೆ ಸಂಭವಿಸಬಹುದಾದ ಯುದ್ಧಸಂರಂಭ ಲಾಭವನ್ನು, ಈ ಕೋಡಗನ ಕೊಲೆಯಿಂದ ತಪ್ಪಿಸಬೇಡ, ॥೨೩॥

ಪರಾಕ್ರಮೋತ್ಸಾಹ ಮನಸ್ವಿನಾಂಚ ಸುರಾಸುರಾಣಾಮಪಿ ದುರ್ಜಯೇನ ।
ತ್ವಯಾ ಮನೋನಂದನ ನೈರ್‌ಋತಾನಾಂ ಯುದ್ಧಾಯತಿ ರ್ನಾಶಯಿತುಂ ನ ಯುಕ್ತಾ ॥೨೩॥
ಹಿತಾಶ್ಚ ಶೂರಾಶ್ಚ ಸಮಾಹಿತಾಶ್ಚ ಕುಲೇಷು ಜಾತಾಶ್ಚ ಮಹಾಗುಣೇಷು ॥
ಮನಸ್ವಿನ ಶ್ಶಸ್ತ್ರಭೃತಾಂ ವರಿಷ್ಠಾಃ ಕೋಟ್ಯಗ್ರತ ಸ್ತೇ ಸುಭೃತಾಶ್ಚ ಯೋಧಾಃ ॥೨೪॥
ತದೇಕ ದೇಶೇನ ಬಲಸ್ಯ ತಾವ ತ್ಕೇಚಿ ತ್ತವಾದೇಶ ಕೃತೋ ಭಿಯಾಂತು ।
ತೌ ರಾಜಪುತ್ರೌ ವಿನಿಗೃಹ್ಯ ಮೂಢೌ ಪರೇಷು ತೇ ಭಾವಯಿತುಂ ಪ್ರಭಾವಮ್ ॥೨೫॥
ನಿಶಾಚರಣಾ ಮಧಿಪೋ ನುಜಸ್ಯ ವಿಭೀಷಣ ಸ್ಯೋತ್ತಮ ವಾಕ್ಯ ಮಿಷ್ಟಮ್ ॥
ಜಗ್ರಾಹ ಬುದ್ಧ್ಯಾ ಸುರಲೋಕ ಶತ್ರು ರ್ಮಹಾಬಲೋ ರಾಕ್ಷಸ ರಾಜಮುಖ್ಯಃ ॥೨೬॥

ಇತಿ ಶ್ರೀಮತ್ಸುಂದರಕಾಂಡೇ – ದ್ವಿಪಂಚಾಶಸ್ಸರ್ಗಃ.

ಎನಿಸಿದುದು,ನ - ಅಲ್ಲ, ॥೨೩॥ ಹಿತಾಶ್ಚ-ಮೇಲನ್ನೆಸಗುವ, ಶೂರಾಶ್ಚ - ಪರಾಕ್ರಮ ಶಾಲಿಗಳೆನಿಸಿರುವ, ಸಮಾಹಿತಾಶ್ಚ - ಬಲು ಎಚ್ಚರದಿಂದಿರುವ, ಮಹಾಗುಣೇಷು - ಬಹುಗುಣಗಳುಳ್ಳ, ಕುಲೇಷು - ಮನೆತನಗಳಲ್ಲಿ, ಜಾತಾಶ್ಚ - ಹುಟ್ಟಿದವರೂ ಆಗಿರತಕ್ಕ, ಮನಸ್ವಿನಃ - ಧೀರರಾದ, ಶಸ್ತ್ರಭೃತಾಂ - ಆಯುಧಪಾಣಿಗಳೊಳಗೆ, ವರಿಷ್ಠಾಃ - ಪ್ರಬಲರೆನಿಸಿದ, ಕೋಟೀ -ಕೋಟಿ ಸಂಖ್ಯೆಯುಳ್ಳುದ, ಸುಸಂಭೃತಾಶ್ಚ- ನಿನ್ನಿಂದ ಚೆನ್ನಾಗಿ ಪೋಷಿಸಲ್ಪಟ್ಟ, ಯೋಧಾಃ - ವೀರಭಟರು, ತೆ - ನಿನ್ನ, ಅಗ್ರತಃ - ಇದಿರಿಗೆ, (ವರ್ತಂತೆ - ಸಿದ್ಧವಾಗಿದ್ದಾರೆ) ॥೨೪॥ ತತ್ - ಆದಕಾರಣ, (ಇಷ್ಟು ಬಲಬಲವಿರುವುದರಿಂದ) ತವ - ನಿನ್ನ ಆದೇಶಕೃತಃ - ಆಜ್ಞೆಯನ್ನಾಚರಿಸುವ, ಕೇಚಿತ್ - ಕೆಲವು ಮಂದಿ ಯೋಧರು, ಮೂಢೌ - ತಿಳಿವಳಿಕೆಯಿಲ್ಲದ, (ಕಾಳಗದಿಂದ ತಮಗೆ ಕೇಡ ಗುವುದೆಂದು ಅರಿಯದಿರುವ) ತೌ - ಆ, ರಾಜಪುತ್ರೌ - ರಾಜಕುಮಾರರನ್ನು, ವಿನಿಗೃಹ್ಯ - ತಿರಸ್ಕರಿಸಿ (ನೆರೆಹಿಡಿದು) ತೆ - ನಿನ್ನ, ಪ್ರಭಾವಂ - ಪ್ರತಾಪವನ್ನು, ಪರೇಷು- ಹಗೆಗಳಲ್ಲಿ, ಭಾವಯಿತುಂ - ಪ್ರಕಾಶಗೊಳಿಸಲಿಕ್ಕೆ ಬಲಸ್ಯ - ಸೈನ್ಯದ, ಏಕದೇಶೇನ - ಒಂದು ಭಾಗದೊಡನೆ, ತಾವತ್ - ಈಗಲೇ, ಅಭಿಯಾಂತು - ಇದಿರಿಸಿ ಹೋಗಲಿ, ॥೨೫॥ ನಿಶಾಚರಾಣಾಂ - ರಾತ್ರಿಂಚರರಿಗೆ, ಅಧಿಪಃ - ಪ್ರಭುವೆನಿಸಿದ, ಸುರಲೋಕಶತ್ರುಃ - ದೇವತೆಗಳಿಗೆ ಹಗೆಯಾದ, ಮಹಾಬಲಃ - ಹೇರಳವಾದ ತೋಳುಬಲವುಳ್ಳ, ರಾಕ್ಷಸರಾಜಮುಖ್ಯಃ - ರಜನೀಚರ ಚಕ್ರವರ್ತಿಯಾದ ರಾವಣನು, ಅನುಜಸ್ಯ - ತಮ್ಮನಾದ, ವಿಭೀಷಣಸ್ಯ - ವಿಭೀಷಣನ, ಇಷ್ಟಂ - ಹಿತವೆನಿಸಿದ, ಉತ್ತಮವಾಕ್ಯಂ - ಮೇಲಾದನುಡಿಯನ್ನು. ಬುದ್ಧ್ಯಾ - ತನ್ನ ಮನಸ್ಸಿನಿಂದ, ಜಗ್ರಾಹ - ಗ್ರಹಿಸಿದನು ॥೨೬॥

— ಐವತ್ತೆರಡನೆಯ ಸರ್ಗಂ —

ಮತ್ತು ನಿನಗೆ ಕಿಂಕರರಾಗಿ, ಹಿತವನ್ನು ಬಯಸುತ್ತಾ, ಬಹು ಜಾಗರೂಕತೆಯನ್ನು ಪಡೆದು, ಮಹಾ ಗುಣಗಳಿಗಾಕರವಾದ ಸತ್ಕುಲದಲ್ಲಿ ಜನಿಸಿ, ಶಸ್ತ್ರಕೋವಿದರೂ ಆಗಿರುವ ಧೀರರಾದ ಕೋಟಾನುಕೋಟಿ ವೀರಭಟರು - ನಿನ್ನ ಕಟಾಕ್ಷಪಾತವನ್ನು ಇದಿರು ನೋಡುತ್ತಾ, ನಿನ್ನಿದಿರಿಗೆ ಅಂಜಲಿಬದ್ಧರಾಗಿ ನಿಂತಿರುವರು ॥೨೪॥ ಅಂತಹ ಪಡೆಯೊಳಗೆ ಕೆಲವರು ನಿನ್ನ ಆಜ್ಞೆಯನ್ನು ಶಿರದೊಳಾಂತು ಇಲ್ಲಿಂದ ಮೊದಲೇ ತೆರಳಿ, ಅವಿವೇಕಿಗಳಾಗಿರುವ ಆ ರಾಜ ಕುಮಾರರನ್ನು ಇದಿರಿಸಿ, ನಿಗ್ರಹಿಸಿ, ಹಾಗೆಯೇ ನಿನ್ನ ಅಪಾರವಾದ ಪರಾಕ್ರಮದ ಪದ್ಧತಿಯನ್ನು ಅವರಲ್ಲಿ ತೋರಲಿ ॥ ೨೫ ॥ ಎಂದಿಂತು ವಿಸ್ತಾರವಾಗಿ ಉದಹರಿಸಿದ ತಮ್ಮನ ಸಾರತರವಾದ ವಚನವನ್ನಾಲಿಸಿ, ನಕ್ತಂಚರನಾಯಕನಾದಸುರಾರಿಯು - ಆ ಹಿತೋಪದೇಶವನ್ನು ತನ್ನ ಮನಸ್ಸಿನಿಂದ ಪರಿಗ್ರಹಿಸಿ ಉಚಿತವೆಂದು ಭಾವಿಸಿದನು - ॥೨೬॥

— ಇಂತು ಐವತ್ತೆರಡನೆಯ ಸರ್ಗಂ —

ಶ್ರೀಃ

## — ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ —

## — ಶ್ರೀಮತ್ಸುನ್ದರಕಾಣ್ಡೆ ತ್ರಿಪಂಚಾಶಸ್ಸರ್ಗಃ —

ತಸ್ಯ ತದ್ವಚನಂ ಶ್ರುತ್ವಾ ದಶಗ್ರೀವೋ ಮಹಾಬಲಃ ।
ದೇಶ ಕಾಲ ಹಿತಂ ವಾಕ್ಯಂ ಭ್ರಾತು ರುತ್ತರ ಮಬ್ರವೀತ್ ॥೧॥
ಸಮ್ಯ ಗುಕ್ತಂ ಹಿ ಭವತಾ ದೂತ ವಧ್ಯಾ ವಿಗರ್ಹಿತಾ ।
ಅವಶ್ಯಂ ತು ವಧಾ ದನ್ಯಃ ಕ್ರಿಯತಾ ಮಸ್ಯ ನಿಗ್ರಹಃ ॥೨॥
ಕಪೀನಾಂ ಕಿಲ ಲಾಂಗೂಲ ಮಿಷ್ಟಂ ಭವತಿ ಭೂಷಣಮ್ ।

ಕಂದ॥ ಅನುಜನ ನುಡಿಯಂ ರಾವಣ । ನನುನಯದಿಂ ದೊಪ್ಪುಗೆಯ್ದು ದೂತಗ್ರೋರದಂ ।
ವನಚರವಾಲಕೆ ಬೆಂಕಿಯ । ನನುಗೊಳಿಸುತೆ ಪುರದೊಳಿಂದು ಮೆರಯಿಸಿರೆನುತಂ ॥

ಮಹಾಬಲಃ - ಹೇರಳವಾದ ಬಲವುಳ್ಳ, ದಶಗ್ರೀವಃ - ರಾವಣನು, ತಸ್ಯ - ಆ ವಿಭೀಷಣನ, ತತ್ - ಆ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ದೇಶಕಾಲಹಿತಂ-ದೇಶಕಾಲಗಳಿಗೆ ಹಿತವಾಗಿರುವ, ಭ್ರಾತುಃ - ಸಹೋದರನ, ವಾಕ್ಯಂ - ವಚನವನ್ನುಕುರಿತು, ಉತ್ತರಂ-ಉತ್ತರವನ್ನು, ಅಬ್ರವೀತ್ - ಹೇಳತೊಡಗಿದನು ॥೧॥ ಭವತಾ - ನಿನ್ನಿಂದ, ದೂತವಧ್ಯಾ - ದೂತಸಂಹಾರವು, ವಿಗರ್ಹಿತಾ - ವಿಶೇಷವಾಗಿ ನಿಂದಿತವಾದುದು, (ಇತಿ - ಹೀಗೆಂದು) ಸಮ್ಯಕ್ - ಚೆನ್ನಾಗಿ, ಉಕ್ತಂಹಿ - ಹೇಳಲ್ಪಟ್ಟಿತಷ್ಟೆ ? ಅವಶ್ಯಂ - ಮುಖ್ಯವಾಗಿ, ವಧಾತ್ - ಕೊಲೆಗಿಂತಲೂ, ಅನ್ಯಃ - ಬೇರಾದ, ಅಸ್ಯ - ಈ ವಾನರನ, ನಿಗ್ರಹಃ - ದಂಡವು, ಕ್ರಿಯತಾಂ - ಮಾಡಲ್ಪಡಲಿ ॥೨॥ ಕಪೀನಾಂ - ವಾನರರಿಗೆ, ಲಾಂಗೂಲಂ - ಬಾಲವು, ಇಷ್ಟಂ - ಹಿತವೆನಿಸಿದ, ಭೂಷಣಂ - ಆಭರಣವಾಗಿ, ಭವತಿ - ಇದೆ, (ತತ್ - ಆದಕಾರಣ) ಅಸ್ಯ - ಈ ವಾನರನ, ತತ್ - ಆ ಬಾಲವು, ಶೀಘ್ರಂ - ಬೇಗನೆ, ದಹ್ಯತಾಂ - ಸುಡಲ್ಪಡಲಿ, ದಗ್ಧೇನ - ಸುಡಲ್ಪಟ್ಟ, ತೇನ - ಆ ಬಾಲದಿಂದ, (ಉಪಲಕ್ಷಿತಃ — ಕೂಡಿದವನಾಗಿ)ಗಚ್ಛತು - (ತನ್ನ

## —ಐವತ್ತ ಮೂರನೆಯ ಸರ್ಗ—

ಬಾಹುಬಲದಿಂದ ಅಪ್ರತಿಮ ವೀರನೆನಿಸಿದ ದಶಗ್ರೀವನು - ಆ ಸ್ಥಳಕ್ಕೂ, ಆ ಸಮಯಕ್ಕೂ ಉಚಿತವಾಗಿರುವ ಹಾಗೆ, ತಮ್ಮ ತಮ್ಮನಾದ ವಿಭೀಷಣನು ಸಕಾರಣವಾಗಿ ಉದಹರಿಸಿದ ವಚನಗಳನ್ನೆಲ್ಲ ಲಾಲಿಸಿ ಆತನನ್ನು ಕುರಿತು ಇಂತೆಂದನು॥೧॥ ಎಲೈ ವಿಭೀಷಣನೇ! ದೂತನನ್ನು ವಧಿಸುವುದು ಧರ್ಮವಲ್ಲ, ಲೋಕನಿಂದಿತವಾದುದು, ಎಂದು ನೀನು ಉದಹರಿಸಿದುದೆಲ್ಲ ಬಹು ಸಮ್ಮತವಾಗಿದೆ,ಆದುದರಿಂದಲೇ ನಿನ್ನ ಅನುಮತಿಯಂತೆ ಈ ಕೋಡಗನನ್ನು ಕೊಲ್ಲದೆಯೇ ಬೇರಾವುದಾದರೊಂದು ಶಿಕ್ಷೆಯನ್ನು ವಿಧಿಸಲಿ ॥೨॥ ಲೋಕದಲ್ಲಿ ಕಪಿಗಳಿಗೆ ಬಾಲವೇ ಬಹು ಇಷ್ಟವೆನಿಸಿದ ಭೂಷಣವಾಗಿರುತ್ತದೆ. ಆದಕಾರಣ ಈ ಕೋಡಗನ

ತದಸ್ಯ ದೀಪ್ಯತಾಂ ಶೀಘ್ರಂ ತೇನ ದಗ್ಧೇನ ಗಚ್ಛತು ॥೩॥
ತತಃ ಪಶ್ಯಂ ತ್ವಿಮಂ ದೀನ ಮಂಗ ವೈರೂಪ್ಯ ಕರ್ಶಿತಮ್ ।
ಸಮಿತ್ರ ಜ್ಞಾತ ಯ ಸ್ಸರ್ವೇ ಬಾಂಧವಾ ಸ್ಸ ಸುಹೃಜ್ಜನಾಃ ॥೪॥
ಆಜ್ಞಾಪಯ ದ್ರಾಕ್ಷಸೇಂದ್ರಃ ಪುರಂ ಸರ್ವಂ ಸ ಚತ್ವರಂ ।
ಲಾಂಗೂಲೇನ ಪ್ರದೀಪ್ತೇನ ರಕ್ಷೋಭಿಃ ಪರಿಣೀಯತಾಮ್ ॥೫॥
ತಸ್ಯ ತದ್ವಚನಂ ಶ್ರುತ್ವಾ ರಾಕ್ಷಸಾಃ ಕೋಪ ಕರ್ಶಿತಾಃ ।
ವೇಷ್ಟಯಂತಿ ಸ್ಮ ಲಾಂಗೂಲಂ ಜೀರ್ಣೈಃ ಕಾರ್ಪಾಸಕೈಃ ಪಟೈಃ ॥೬॥
ಸಂವೇಷ್ಟ್ಯಮಾನೇ ಲಾಂಗೂಲೇ ವ್ಯವರ್ಧತ ಮಹಾಕಪಿಃ ।

ಯಜಮಾನನಬಳಿಗೆ) ಹೋಗಲಿ, ॥೩॥ ತತಃ-ಅನಂತರದಲ್ಲಿ, ಸಮಿತ್ರಜ್ಞಾತಯಃ - ಆಪ್ತದಾಯಾದರೊಡನೆ ಸಹಿತರಾದ, ಸಸುಹೃಜ್ಜನಾಃ - ಒಳ್ಳೆಯಮನಸ್ಸಿನವರಿಂದ ಕೂಡಿದ, ಬಾಂಧವಾಃ - ನಂಟರು, ಅಂಗವೈರೂಪ್ಯಕರ್ಶಿತಂ - ಅಂಗವಿಕಾರದಿಂದ ನವೆದು ಹೋಗಿರುವ, ದೀನಂ - ಉತ್ಸಾಹಶೂನ್ಯನಾದ (ಖಿನ್ನನಾದ) ಇಮಂ - ಈ ವಾನರನನ್ನು, ಪಶ್ಯಂತು - ನೋಡಲಿ ॥೪॥ (ಇತಿ-ಹೀಗೆಂದು) ರಾಕ್ಷಸೇಂದ್ರಃ - ರಾವಣನು, ರಕ್ಷೋಭಿಃ - ರಾಕ್ಷಸರಿಂದ, ಪ್ರದೀಪ್ತೇನ - ಸುಡುತಲಿರುವ, ಲಾಂಗೂಲೇನ - ಬಾಲದಿಂದ, (ಉಪಲಕ್ಷಿತಃ - ಕೂಡಿದ ಈ ಕಪಿಯು) ಸಚತ್ವರಂ - ರಾಜಮಾರ್ಗಗಳಿಂದೊಡಗೂಡಿದ, ಸರ್ವಂ - ಸಮಸ್ತವಾದ, ಪುರಂ - ಪಟ್ಟಣದಲ್ಲಿ, ಪರಿಣೀಯತಾಂ - ತಿರುಗಿಸಲ್ಪಡಲಿ, (ಇತಿ - ಇಂತೆಂದು) ಆಜ್ಞಾಪಯತ್ - ಅಣತಿಯನಿತ್ತನು ॥೫॥ ರಾಕ್ಷಸಾಃ - ರಕ್ಕಸರು, ತಸ್ಯ - ಆರಾವಣನ, ತತ್ - ಆ, ವಚನಂ-ಮಾತನ್ನು, ಶ್ರುತ್ವಾ - ಕೇಳಿ, ಕೋಪಕರ್ಶಿತಾಃ - ಕೋಪದಿಂದ ಆಕ್ರಮಿಸಲ್ಪಟ್ಟವರಾಗಿ, ಲಾಂಗೂಲಂ - ವಾನರನ ಬಾಲವನ್ನು, ಜೀರ್ಣೈಃ - ಹಳೆಯವಾದ, ಕಾರ್ಪಾಸಕೈಃ - ಹತ್ತಿಯಿಂದಮಾಡಿದ, ಪಟೈಃ - ಬಟ್ಟೆಗಳಿಂದ, ವೇಷ್ಟಯಂತಿಸ್ಮ - ಸುತ್ತಿದರು ॥೬॥ ಲಾಂಗೂಲೇ - ಬಾಲವು, ಸಂವೇಷ್ಟ್ಯಮಾನೇ (ಸತಿ)-ಬಟ್ಟೆಗಳಿಂದ ಸುತ್ತಲ್ಪಡುತಲಿರಲಾಗಿ, ತತ್ರ - ಆ ಬಾಲದಲ್ಲಿ, ತೇ-ಆ ರಾಕ್ಷಸರು, ತೈಲೇನ -

ಬಾಲಕ್ಕೆ ಬೆಂಕಿಯನ್ನು ಹತ್ತಿಸಿ ಸುಟ್ಟುಬಿಡಿ ಸುಟ್ಟಬಾಲವನ್ನು ಕೊಂಡುಹೋಗಿ ತನ್ನ ಯಜಮಾನನಿಗೆ ತೋರಲಿ ॥೩॥ ನಂಟರಿಷ್ಟರಿಷ್ಟರೂ, ದಾಯಾದರೂ, ಇನ್ನೂ ಬೇಕಾದವರೂ ಸಹ—ಬಾಲವನ್ನು ಸುಟ್ಟಿಸಿಕೊಂಡು, ಕೆಟ್ಟ ಮೋರೆಯನ್ನು ತೋರುತ್ತಾ, ವಿಕಾರವಾಗಿ ಕಳೆಗುಂದಿರುವ ಈ ವಾನರನನ್ನು, ನೋಡಲಿ ॥೪॥ ಇನ್ನು ತಡಮಾಡಬೇಡಿರಿ, ಬಾಲವನ್ನು ಉರಿಸುತ್ತಾ, ನಮ್ಮ ಈ ನಗರದಲ್ಲಿ - ಯಾವುದೊಂದು ಸ್ವಲ್ಪ ಸ್ಥಲವನ್ನೂ ಬಿಡದಂತೆ ಮನೆಮನೆಯ ಅಂಗಳಗಳ ಮುಂದೆಲ್ಲ ಮೆರೆಯಿಸಿ ಸುತ್ತಿಸಿರಿ. ಎಲ್ಲರೂ ನೋಡಿ ಸಂತೋಷಿಸಲಿ ಎಂದೀಪ್ರಕಾರವಾಗಿ ರಾಕ್ಷಸೇಶ್ವರನು ಆಜ್ಞಾಪಿಸಿದನು ॥೫॥ ಅಸುರೇಂದ್ರನಾಜ್ಞೆಯಾದ ಕೂಡಲೆ ರಕ್ಕಸರೆಲ್ಲ ಬಲು ಸಿಟ್ಟುಗೊಂಡು, ಮೊದಲೇ ಆ ಹನುಮನಿಂದ ಬಲವಾಗಿ ನೊಂದಿದ್ದರಾದುದರಿಂದ ದ್ವೇಷವನ್ನು ಕಾರುತ್ತಾ, ಹತ್ತಿಯನ್ನೂ, ಹಳೆಯ ಬಟ್ಟೆಗಳನ್ನೂ, ತಂದು ಆ ಕಪಿಯ ಬಾಲವನ್ನು ಸುತ್ತಲಿಕ್ಕೆ ಮೊದಲಿಟ್ಟರು ॥೬॥ ಹಾಗೆ ಅವರೆಲ್ಲರೂ ಸುತ್ತಿಕೊಂಡು ಸುತ್ತುತಲಿರುವಲ್ಲಿ ಅಂಜನೆಯನು-ಮಹಾರಣ್ಯದಲ್ಲಿ ಒಣಗಿದ ಕಟ್ಟಿಗೆಗೆ ತಗಲಿದ ಕಿಚ್ಚು ಹತ್ತಿಕೊಂಡು ಹೇರಳವಾಗಿ ಉರಿಯುವಹಾಗೆ ಮಹೋನ್ನತನಾಗಿ ಬೆಳೆಯ ತೊಡಗಿದನು॥

ಶುಷ್ಕ ಮಿಂಧನ ಮಾಸಾದ್ಯ ವನೇಷ್ವಿವ ಹುತಾಶನಃ ||೭||
ತೈಲೇನ ಪರಿಷಿಚ್ಯಾಥ ತೇಗ್ನಿಂ ತತ್ರಾ ಭ್ಯಪಾತಯನ್ ||೭|| ||
ಲಾಂಗೂಲೇನ ಪ್ರದೀಪ್ತೇನ ರಾಕ್ಷಸಾಂ ಸ್ತಾ ನಪಾತಯತ್ |
ರೋಷಾ ಮರ್ಷ ಪರೀತಾತ್ಮಾ ಬಾಲಸೂರ್ಯ ಸಮಾನನಃ ||೮||
ಲಾಂಗೂಲಂ ಸಂಪ್ರದೀಪ್ತಂತು ದ್ರಷ್ಟುಂ ತಸ್ಯ ಹನೂಮತಃ |
ಸಹಸ್ತ್ರೀ ಬಾಲವೃದ್ಧಾಶ್ಚ ಜಗ್ಮುಃ ಪ್ರೀತಾ ನಿಶಾಚರಾಃ ||೯||
ಸಭೂಯಸ್ಸಂಗತೈಃ ಕ್ರೂರೈ ರಾಕ್ಷಸೈ ರ್ಹರಿಸತ್ತಮಃ ||

ಎಣ್ಣೆಯಿಂದ, ಪರಿಷಿಚ್ಯ - ನನೆಯಿಸಿ, ಅಥ - ಆಮೇಲೆ, ಅಗ್ನಿಂ - ಬೆಂಕಿಯನ್ನು, ಅಭ್ಯಪಾತಯನ್ - ಹೊತ್ತಿಸಿದರು, ವನೇಷು - ಅರಣ್ಯಗಳಲ್ಲಿ, ಶುಷ್ಕಂ - ಒಣಗಿದ, ಇಂಧನಂ - ಕಟ್ಟಿಗೆಯನ್ನು, ಆಸಾದ್ಯ-ಹೊಂದಿ, ಹುತಾಶನ ಇವ, ಅಗ್ನಿಯಂತೆ, ಮಹಾಕಪಿಃ - ಆಂಜನೇಯನು, ವ್ಯವರ್ಧತ - ಬೆಳೆಯತೊಡಗಿದನು || ೭,೭|| || ರೋಷಾಮರ್ಷಪರೀತಾತ್ಮಾ - ಸಿಟ್ಟಿನಿಂದಲೂ ಅಸಹನೆದಿಂದಲೂ ತುಂಬಿದ ಮನಸ್ಸುಳ್ಳವನಾದ ಕಾರಣವೇ, ಬಾಲಸೂರ್ಯಸಮಾನನಃ -ಬಾಲಸೂರ್ಯನಿಗೆಣೆಯೆನಿಸಿದ ಮುಖವುಳ್ಳ ಮಾರುತಿಯು, ತಾನ್ - ಆ, ರಾಕ್ಷಸಾನ್ - ರಕ್ಕಸರನ್ನು, ಪ್ರದೀಪ್ತೇನ-ಉರಿಯುತಲಿದ್ದ, ಲಾಂಗೂಲೇನ - ಬಾಲದಿಂದ, ಅಪಾತಯತ್ - ಹೊಡೆದನು (ಕೆಡಹಿದನು) ||೮|| ಸಹಸ್ತ್ರೀ ಬಾಲವೃದ್ಧಾಃ - ಹೆಂಗಸರಿಂದಲೂ ಹುಡುಗರಿಂದಲೂ ಸಹಿತರಾದ, ನಿಶಾಚರಾಶ್ಚ - ರಾಕ್ಷಸರಾದರೋ - ತಸ್ಯ - ಆ, ಹನುಮತಃ - ಆಂಜನೇಯನ, ಸಂಪ್ರದೀಪ್ತಂ - ಬಲವಾಗಿ ಉರಿಯುತಲಿರುವ, ಲಾಂಗೂಲಂ - ಬಾಲವನ್ನು, ದ್ರಷ್ಟುಂ - ನೋಡಲಿಕ್ಕೆ, ಜಗ್ಮುಃ - ಹೋದರು ||೯|| || ವೀರಃ - ಶೂರನೆನಿಸಿದ, ಹರಿಸತ್ತಮಃ - ಕಪಿವರನಾದ, ಸಃ - ಆಮಾರುತಿಯು, ಭೂಯಃ - ಮರಳಿ, ಸಂಗತೈಃ - ಕಲೆತ, ಕ್ರೂರೈಃ - ಘಾತುಕರಾದ, ರಾಕ್ಷಸೈಃ -

ಅಸುರರು ಹರಿಯ ವಾಲಧಿಗೆ ಹತ್ತಿಬಟ್ಟೆಗಳನ್ನೆಲ್ಲ ಸುತ್ತಿ, ಯಥೇಷ್ಟವಾಗಿ ಎಣ್ಣೆಯನ್ನು ಸುರಿದು, ಅಗ್ನಿಯನ್ನು ಮುಟ್ಟಿಸಿದರು ||೭|| || ಹಾಗೆ ಬಾಲಕ್ಕೆ ಬೆಂಕಿಯನ್ನಿಟ್ಟಕೂಡಲೆ ಹನುಮನು- ಆ ಉರಿಯುತಲಿರುವ ಬಾಲದಿಂದ ಕೆಲವುಂದಿ ರಕ್ಕಸರ ಮೋರೆಗಳನ್ನು ಸೀದು ನೆಲದಮೇಲೆ ಉರುಳಿಸಿದನು. ಮತ್ತು-ರೋಷಪರವಶನಾಗಿ ಕೆಂಪಾದಮುಖದಿಂದಲೂ, ಉರಿಯುತಲಿರುವ ಬಾಲದಿಂದಲೂ, ಬಾಲಸೂರ್ಯನಂತೆ ಬೆಳಗುತಲಿದ್ದನು ||೮|| || 'ಅಶೋಕವನವನ್ನು ಮುರಿದು, ಸೀತೆಯೊಡನೆ ಮಾತನಾಡಿ, ರಕ್ಕಸರನ್ನೆಲ್ಲ ತೊಂದರೆ ಪಡಿಸಿದ ಕಪಿಯಬಾಲಕ್ಕೆ ಬೆಂಕಿಯನ್ನಿಟ್ಟು ಊರಲ್ಲೆಲ್ಲ ಮೆರೆಯಿಸುತಲಿರುವರಂತೆ' ಎಂಬ ಸುದ್ದಿಯು ಊರೊಳಗೆ ಹರಡಿತು. ಎಲ್ಲೆಲ್ಲಿಯೂ ಹೆಂಗಸರು, ಹುಡುಗರು, ಮುದುಕರು ಮುಂತಾದವರೆಲ್ಲರೂ ಗುಂಪುಗುಂಪಾಗಿ ವಿನೋದವನ್ನು ನೋಡಬೇಕೆಂದು ಬರುತಲಿದ್ದರು ||೯|| || ಬಹುಮಂದಿ ನಿಶಾಚರರು ಹನುಮನ ಸುತ್ತಲೂ ಮುತ್ತಿಕೊಂಡು ಅವನನ್ನು

ನಿಬದ್ಧಃ ಕೃತವಾ ನ್ವೀರ ಸ್ತತ್ಕಾಲ ಸದೃಶೀಂ ಮತಿಮ್ ||೧೦||
ಕಾಮಂ ಖಲು ನ ಮೇ ಶಕ್ತಾ ನಿಬದ್ಧಸ್ಯಾಪಿ ರಾಕ್ಷಸಾಃ ||೧೧||
ಛಿತ್ವಾ ಪಾಶಾ ನ್ಸಮುತ್ಪತ್ಯ ಹನ್ಯಾ ಮಹ ಮಿಮಾನ್ಪುನಃ |
ಯದಿ ಭರ್ತುರ್ ಹಿತಾರ್ಥಾಯ ಚರಂತಂ ಭರ್ತೃ ಶಾಸನಾತ್ ||೧೨||
ಬಧ್ನಂತ್ಯೇ ತೇ ದುರಾತ್ಮನೋ ನತು ಮೇ ನಿಷ್ಕೃತಿಃ ಕೃತಾ |
ಸರ್ವೇಷಾ ಮೇವ ಪರ್ಯಾಪ್ತೋ ರಾಕ್ಷಸಾನಾ ಮಹಂ ಯುಧಿ ||೧೩||
ಕಿಂತು ರಾಮಸ್ಯ ಪ್ರೀತ್ಯರ್ಥಂ ವಿಷಹಿಷ್ಯೇ ಽ ಹ ಮೀದೃಶಂ |
ಲಂಕಾ ಚಾರಯಿತವ್ಯಾ ಮೇ ಪುನರೇವ ಭವೇದಿತಿ ||೧೪||

ರಕ್ಕಸರಿಂ, ನಿಬದ್ಧಃ - ಕಟ್ಟಲ್ಪಟ್ಟವನಾಗಿ, ತತ್ಕಾಲಸದೃಶೀಂ - ಆ ಕಾಲಕ್ಕೆ ಉಚಿತವಾದ, ಮತಿಂ - ಬುದ್ಧಿಯನ್ನು, ಕೃತವಾನ್ - ಮಾಡಿದನು ||೧೦|| || ರಾಕ್ಷಸಾಃ - ರಕ್ಕಸರು, ನಿಬದ್ಧಸ್ಯಾಪಿ-ಕಟ್ಟಲ್ಪಟ್ಟವನಾಗಿದ್ದರೂ, ಮೆ - ನನಗೆ, ಕಾಮಂ - ವಿಶೇಷವಾಗಿ, ಶಕ್ತಾಃ - ಸಮರ್ಥರು, ನಖಲು - ಆಗಲಾರರಷ್ಟೆ? ||೧೧|| ಅಹಂ - ನಾನು, ಪಾಶಾನ್ - ಹಗ್ಗಗಳನ್ನು, ಛಿತ್ವಾ - ಕತ್ತರಿಸಿ, ಸಮುತ್ಪತ್ಯ - ಮೇಲಕ್ಕೆಹಾರಿ, ಇಮಾನ್ - ಈ ರಾಕ್ಷಸರನ್ನು, ಪುನಃ - ಮರಳಿ, ಹನ್ಯಾಂ - ಕೊಲ್ಲುವೆನು, ಭರ್ತುಃ- ಪ್ರಭುವಿಗೆ ಹಿತಾರ್ಥಾಯ - ಹಿತವನ್ನು ಮಾಡಲಿಕ್ಕೆ, ಚರಂತಂ - ಸಂಚರಿಸುತ್ತಲಿರುವ, ಮಾಂ - ನನ್ನನ್ನು ದುರಾತ್ಮನಃ - ದುಷ್ಟಬುದ್ಧಿಯುಳ್ಳ, ಏತೆ - ಈ ರಾಕ್ಷಸರು, ಭರ್ತೃಶಾಸನಾತ್ - ಪ್ರಭುವಾದ ರಾವಣನ ಅಪ್ಪಣೆಯಿಂದ, ಯದಿಬಧ್ನಂತಿ - ಕಟ್ಟುತ್ತಲಿರುವವರೇ ಆದರೆ, ಮೆ - ನನಗೆ, ನಿಷ್ಕೃತಿಃ - ಪ್ರತಿಕ್ರಿಯೆಯು, ನತುಕೃತಾ - ಮಾಡಿದಂತೆ ಆಗಲಿಲ್ಲ, ಯುಧಿ - ಯುದ್ಧದಲ್ಲಿ, ಸರ್ವೇಷಾಂ - ಸಮಸ್ತರಾದ, ರಾಕ್ಷಸಾನಾಂ - ರಕ್ಕಸರ, ಹನನೆ - ಕೊಲ್ಲುವಿಕೆಯಲ್ಲಿ, ಅಹಮೇವ - ನಾನೇ, ಪರ್ಯಾಪ್ತಃ - ಸಾಕಾದವನಾಗಿದೇನೆ |೧೨, ೧೩|| ಕಿಂತು - ಆದರೆ, ರಾಮಸ್ಯ - ರಾಮನ, ಪ್ರೀತ್ಯರ್ಥಂ - ಸಂತೋಷಕ್ಕೋಸ್ಕರ, ಲಂಕಾ - ಲಂಕೆಯು, ಚಾರಯಿತವ್ಯಾ - ಸಂಚರಿಸಲ್ಪಡತಕ್ಕದು, ಭವೇದಿತಿಚ-ಆಗಬೇಕಾಗಿದೆಯೆಂದೂ, ಅಹಂ - ನಾನು, ಈದೃಶಂ - ಈ ಬಂಧನ ರೂಪಕಾರ್ಯವನ್ನು, ವಿಷಹಿಷ್ಯೇವೈ - ಸಹಿಸುವೆನು ||೧೪||

ಬಹುಕ್ರೌರ್ಯದಿಂದ ಹಿಂಸಿಸುತಬಂದರು, ಆದರೆ ಹನುಮನು ಬಹುಬುದ್ಧಿವಂತನಾದುದರಿಂದ ಆ ಕಾಲಕ್ಕೆ ಸರಿಯಾಗಿ ಚಿಂತಿಸತೊಡಗಿದನು ||೧೦|| || ಇಷ್ಟುಮಂದಿ ಅಸುರರು ನನ್ನನ್ನು ಬಳಸಿ ಕಟ್ಟಿದಾರೆ, ಅದರೂ ನನ್ನನ್ನು ಅಡಗಿಸಲಿಕ್ಕೆ ಇವರಲ್ಲೊಬ್ಬನೂ ಸಮರ್ಥನಾಗಲಾರ್ರ. ಇವರಿಷ್ಟುಮಂದಿಯನ್ನೂ ನಾನೊಬ್ಬನೇ,ಹೊಡೆದು ಕೆಡಹಬಲ್ಲೆನು ||೧೧|| ಬಳ್ಳೆಯದು, ಆಗಲಿ, ಇವರು ತಮ್ಮ ಪ್ರಭುವಿನಾಣತಿಯನ್ನು ಅನುಸರಿಸಿ, ಯಜಮಾನನ ಸಂತೋಷಕ್ಕೋಸ್ಕರವಾಗಿ ನನ್ನನ್ನು ಬಂಧಿಸಿ,ಹೀಗೆ ಕುಣಿಸುತಲಿದಾರೆ,ಇಷ್ಟುಮಾತ್ರದಿಂದ ತನಗೆ ಇವರೇನೂ ಪ್ರತೀಕಾರವನ್ನು ಮಾಡಿದಂತಾಗಲಿಲ್ಲ. ಕಾಳಗಕ್ಕೆ ನಿಂತರೆ ನಾನೊಬ್ಬನೇ ಇವರನ್ನೆಲ್ಲ ಧೂಳೀಪಟಮಾಡಬಲ್ಲೆನು. ಇವರು ಕಟ್ಟಿರುವ ಹಗ್ಗಗಳನ್ನೆಲ್ಲ ಕಿತ್ತು ಪುಡಿಪುಡಿಮಾಡುವೆನು, ಇವರನ್ನೆಲ್ಲ ಸದೆಬಡಿವೆನು ||೧೨, ೧೩|| ಆದರೆ ಈಗಲೆ ಈ ಕೆಲಸವನ್ನು ಮಾಡಬಾರದು, ರಾಮನಿಗೆ ಮೇಲನ್ನು ಮಾಡಬೇಕೆಂಬ ಬಯಕೆಯಿಂದಲೇ ಇದನ್ನೆಲ್ಲ ಸಹಿಸಿಕೊಂಡಿರುವೆನು. ಏಕೆಂದರೆ-ನಾನು ಹೇಗಿದ್ದರೂ ಈ ಲಂಕೆಯನ್ನೆಲ್ಲ ಚೆನ್ನಾಗಿ

ರಾತ್ರೌ ನಹಿ ಸುದೃಷ್ಟಾ ಮೇ ದುರ್ಗಕರ್ಮ ವಿಧಾನತಃ ।
ಅವಶ್ಯಮೇವ ದ್ರಷ್ಟವ್ಯಾ ಮಯಾ ಲಂಕಾ ನಿಶಾಕ್ಷಯೇ ॥೧೫॥
ಕಾಮಂ ಬದ್ಧಸ್ಯ ಮೇ ಭೂಯಃ ಪುಚ್ಛಸ್ಯೋದ್ದೀಪನೇನ ಚ ।
ಪೀಡಾಂ ಕುರ್ವಂತು ರಕ್ಷಾಂಸಿ ನಮೇಽಸ್ತಿ ಮನಸಶ್ಶ್ರಮಃ ॥೧೬॥
ತತಸ್ತೇ ಸಂವೃತಾಕಾರಂ ಸತ್ವವಂತಂ ಮಹಾಕಪಿಮ್ ।
ಪರಿಗೃಹ್ಯ ಯಯುರ್ಹೃಷ್ಟಾ ರಾಕ್ಷಸಾಃ ಕಪಿಕುಂಜರಂ ॥೧೭॥
ಶಂಖಭೇರೀ ನಿನಾದೈಸ್ತಂ ಘೋಷಯಂತಸ್ಸ್ವಕರ್ಮಭಿಃ ।

ಮೇ - ನನ್ನಿಂದ, ರಾತ್ರೌ - ರಾತ್ರಿಯಲ್ಲಿ, ಲಂಕಾ - ಲಂಕಾಪಟ್ಟಣವು, ದುರ್ಗಕರ್ಮವಿಧಾನತಃ - ಕೋಟೆಯು ಕಟ್ಟಡವೇ ಮೊದಲಾದುವನ್ನನುಸರಿಸಿ, ನಸುದೃಷ್ಟಾಹಿ - ಚೆನ್ನಾಗಿ ನೋಡಲ್ಪಡಲಿಲ್ಲವಲ್ಲ, (ಇತಿ - ಈ ಕಾರಣದಿಂದಲೂ) ಮಯಾ - ನನ್ನಿಂದ, ನಿಶಾಕ್ಷಯೇ - ಬೆಳಗಿನಹೊತ್ತಿನಲ್ಲಿ, ಲಂಕಾ - ಲಂಕೆಯು, ಅವಶ್ಯಮೇವ - ತಪ್ಪದೆಯೇ, ದ್ರಷ್ಟವ್ಯಾ - ನೋಡಲ್ಪಡತಕ್ಕದಾಗಿದೆ ॥೧೫॥ ಕಾಮಂ - ಚೆನ್ನಾಗಿ, ಬದ್ಧಸ್ಯ - ಕಟ್ಟಲ್ಪಟ್ಟ, ಮೇ - ನನ್ನ, ಪುಚ್ಛಸ್ಯ - ಬಾಲದ, ಉದ್ದೀಪನೇನಚ - ಸುಡುವಿಕೆಯಿಂದಲೂ, ರಕ್ಷಾಂಸಿ - ರಾಕ್ಷಸರು, ಭೂಯಃ - ಮರಳಿ, ಪೀಡಾಂ - ಬಾಧೆಯನ್ನು, ಕುರ್ವನ್ತು - ಮಾಡಲಿ, ಮೇ- ನನ್ನ, ಮನಸಃ - ಮನಸ್ಸಿಗೆ, ಶ್ರಮಃ - ಆಯಾಸವು, ನಾಸ್ತಿ - ಇಲ್ಲ, ಇತಿ - ಹೀಗೆಂದು, ಹರಿಸತ್ತಮಃ- ಕಪಿವರನಾದ ಹನುಮನು, ತತ್ಕಾಲಸದೃಶೀಂ - ಆ ಸಮಯೋಚಿತವಾದ, ಮತಿಂ ಬುದ್ಧಿಯನ್ನು, ಕೃತವಾನ್ - ಮಾಡಿದನು ॥೧೬॥ ತತಃ - ಆಮೇಲೆ, ತೇ -ಆ, ರಾಕ್ಷಸಾಃ - ರಕ್ಕಸರು, ಹೃಷ್ಟಾಃ - ಸಂತೋಷಿಸುವವರಾಗಿ, ಸಂವೃತಾಕಾರಂ - ಗುಟ್ಟಾದ ಮನೋಭಾವವುಳ್ಳ, ಸತ್ವವಂತಂ - ಶ್ರೇಷ್ಠವಾದ ಬಲವುಳ್ಳ, ಮಹಾಕಪಿಂ - ವಾನರೋತ್ತಮನೆನಿಸಿದ, ಕಪಿಕುಂಜರಂ - ಆಂಜನೇಯನನ್ನು ಪರಿಗೃಹ್ಯ - ಹಿಡಿದುಕೊಂಡು, ಯಯುಃ-ಹೊರಟರು॥೧೭॥ಕ್ರೂರಕರ್ಮಾಣಃ-ಘಾತುಕ ಕಾರ್ಯವನ್ನಾಚರಿಸುವ, ರಾಕ್ಷಸಾಃ-

ನೋಡಿಕೊಂಡು ಹೋಗಿರಬೇಕು, ಮರಳಿ ಇದಕ್ಕೋಸ್ಕರ ನಾನೇಕೆ ಶ ಮಪಡಬೇಕು ॥ ನಿನ್ನೆಯ ರಾತ್ರಿಯಲ್ಲಿ ಸೀತೆಯನ್ನು ಹುಡುಕುವ ಗದ್ದಲದಲ್ಲಿದ್ದೆನು, ಅದರಿಂದಲೆ ಕೋಟೆಯನ್ನು ಹೇಗೆ ಕಟ್ಟಿದೆ ? ಕೋಟೆಬುರುಜುಗಳು ಹೇಗೆ ಇವೆ, ಕೊತ್ತಲಗಳು ಎಂತಹವು ? ಎಲ್ಲೆಲ್ಲಿ ರಹಸ್ಯವಾದ ಸ್ಥಳಗಳಿವೆ ? ಎಂಬೀಮೊದಲಾದುದನ್ನೆ ಚೆನ್ನಾಗಿ ಪರೀಕ್ಷಿಸಿನೋಡಿಯಿಲ್ಲ, ಆದಕಾರಣ ಈ ಬೆಳಗಿನಲ್ಲಿ ಅದನ್ನೆಲ್ಲ ವಿಶದವಾಗಿ ನೋಡಿ ತಿಳಿಯುವೆನು. ಇದೆಲ್ಲ ನನಗೆ ಆವಶ್ಯಕವಾಗಿಬೇಕು ॥೧೫॥ ಈ ಅಸುರರು ತಮ್ಮ ಮನಬಂದಹಾಗೆ ನನ್ನೆನ್ನು ಕಟ್ಟಲಿ ಮರಮರಳಿ ನನ್ನ ಬಾಲಕ್ಕೆ ಬೆಂಕಿಯನ್ನೂ ಹತ್ತಿಸಲಿ, ನನಗೆ ಹಿಂಸೆಯನ್ನೂ ಕಲ್ಪಿಸಲಿ, ಆದರೂ ನನ್ನ ಮನಸ್ಸಿಗೇನೂ ಶ್ರಮವು ಕಾಣಬರುವುದಿಲ್ಲ ಎಂದಾಲೋಚಿಸುತಲಿದ್ದನು ॥ ಆಗಲಾ ರಾಕ್ಷಸರು ಕಪಿವರನನ್ನು ಅಪ್ರತಿಮವೀರನೆಂತಲೂ, ಮಹಾಸತ್ವಸಂಪನ್ನನೆಂತಲೂ, ತನ್ನ ಮನೋಗತವನ್ನು ಅಡಗಿಸಿಕೊಂಡಿರುವನೆಂತಲೂ, ಮುಂದೆ ತಮಗೆಲ್ಲ ವಿಪತ್ತು ಬರುವುದೆಂತಲೂ ಅರಿಯದೆ, ಬಹುಸಂತೋಷದಿಂದ ಕೋಡಗನು ಕೈಗೆಸಿಕ್ಕಿರುವನೆಂದು ಅವನನ್ನು ಮನಬಂದಂತೆ ಎಳೆಯುತ್ತಾ, ಅಲ್ಲಲ್ಲಿ ಸುತ್ತಿಸುತ ಬಂದರು ॥೧೭॥ ಕೆಲವರು ಶಂಖಗಳನ್ನೂದಿದರು, ಮತ್ತೆ ಕೆಲವರು ನಗಾರಿಗಳನ್ನು ಬಾರಿಸಿದರು, ಇನ್ನು ಕೆಲವರು- ‹‹ಇಗೋ

ರಾಕ್ಷಸಾಃ ಕ್ರೂರಕರ್ಮಾಣ ಶ್ಚಾರಯಂತಿ ಸ್ಮ ತಾಂ ಪುರೀಮ್ ॥೧೮॥
ಅನ್ವೀಯಮಾನೋ ರಕ್ಷೋಭಿ ರ್ಯಯೌ ಸುಖ ಮರಿಂದಮಃ ।
ಹನುಮಾಂ ಶ್ಚಾರಯಾಮಾಸ ರಾಕ್ಷಸಾನಾಂ ಮಹಾಪುರೀಮ್ ॥೧೯॥
ಅಥಾಪಶ್ಯ ದ್ವಿಮಾನಾನಿ ವಿಚಿತ್ರಾಣಿ ಮಹಾಕಪಿಃ ॥
ಸಂವೃತಾನ್ ಭೂಮಿ ಭಾಗಾಂಶ್ಚ ಸುವಿಭಕ್ತಾಂಶ್ಚ ಚತ್ವರಾನ್ ॥೨೦॥
ವೀಥೀಶ್ಚ ಗೃಹ ಸಂಬಾಧಾಃ ಕಪಿ ಶ್ಶೃಂಗಾಟಕಾನಿ ಚ ।

---

ನಿಶಾಚರರು, ಸ್ವಕರ್ಮಭಿಃ - ಸಿಂಹನಾದವೇ ಮೊದಲಾದ ತಮ್ಮ ಅಟ್ಟಹಾಸಗಳಿಂದಲೂ, ಶಂಖಭೇರೀನಿನಾದೈಶ್ಚ - ಶಂಖ ದುಂದುಭಿ ಮೊದಲಾದವುಗಳ ಧ್ವನಿಗಳಿಂದಲೂ, ತಾಂ-ಆ, ಪುರೀಂ - ಪಟ್ಟಣದಲ್ಲಿ,ಘೋಷಯಂತಃ - ಸಾರುತ್ತಾ (ಉದ್ಘೋಷಿಸುತ್ತಾ) ಚಾರಯಂತಿಸ್ಮ -ತಿರುಗಿಸುತಲಿದ್ದರು ॥೧೮॥ ಅರಿಂದಮಃ - ಹಗೆಗಳನ್ನಡಗಿಸುವ, ಹನುಮಾನ್ - ಮಾರುತಿಯು, ರಕ್ಷೋಭಿಃ-ರಾಕ್ಷಸರಿಂದ, ಅನ್ವೀಯಮಾನಃ-ಅನುಸರಿಸಲ್ಪಡುತಲಿರುವವನಾಗಿ, ಸುಖಂ - ಸುಖವಾಗಿ, ಯಯೌ - ಹೊರಟನು, ರಾಕ್ಷಸಾನಾಂ - ನಿಶಾಚರರ, ಮಹಾಪುರೀಂ - ದೊಡ್ಡಪಟ್ಟಣವನ್ನು, ಚಾರಯಾಮಾಸ - ಶೋಧಿಸುತ ಬಂದನು ॥೧೯॥ ಅಥ - ಅನಂತರದಲ್ಲಿ, ಮಹಾಕಪಿಃ - ಆಂಜನೇಯನು, ವಿಚಿತ್ರಾಣಿ - ಆಶ್ಚರ್ಯಕರಗಳೆನಿಸಿದ, ವಿಮಾನಾನಿ, ಆಕಾಶವಾಹನಗಳನ್ನೂ, ಸಂವೃತಾನ್ - ಆ ವರಣಗಳಾಗಿರುವ, ಭೂಮಿಭಾಗಾಂಶ್ಚ - ಭೂಪ್ರದೇಶಗಳನ್ನೂ, ಸುವಿಭಕ್ತಾನ್ - ಚೆನ್ನಾಗಿ ಏರ್ಪಡಿಸಿರುವ, ಚತ್ವರಾನ್ ಚ - ಚತುಷ್ಪಥಗಳನ್ನು (ಚೌಕ ಅಥವಾ - ಅಂಗಳಗಳು) ಅಪಶ್ಯತ್ - ನೋಡುತ ಬಂದನು ॥೨೦॥ ಪವನಾತ್ಮಜಃ - ವಾಯುಪುತ್ರನಾದ, ಕಪಿಃ - ಹನುಮನು, ಗೃಹಸಂಬಾಧಾಃ - ಮನೆಗಳಿಗೆ ಹೊಂದಿಕೊಂಡಿರುವ, ವೀಥೀಂಶ್ಚ - ಬೀದಿಗಳನ್ನೂ, ಶೃಂಗಾಟಕಾನಿಚ - ನಾಲ್ಕುಬೀದಿಗಳೊಡಗೂಡಿರುವ ಸ್ಥಳಗಳನ್ನೂ, ತಥಾ - ಹಾಗೆಯೇ, ರಥ್ಯೋಪರಥ್ಯಾಂಶ್ಚ - ದೊಡ್ಡ ಮತ್ತು ಸಣ್ಣ ಬೀದಿಗಳನ್ನೂ, ತಥೈವ - ಅದೇಪ್ರಕಾರವಾಗಿ, ಗೃಹಕಾಂತಾರಾನ್ - ಚಿಕ್ಕಮನೆಗಳನ್ನೂ, (ಮರೆಮಾಡಿರುವ ಬಾಗಿಲುಗಳನ್ನೂ) ಮೇಘಸಂಕಾಶಾನ್ - ಮೇಘಗಳಿಗೆಣೆಯಾದ, ಗೃಹಾಂಶ್ಚ -

---

ಹಗೆಗಳ ಕಡೆಯಿಂದ ಬಂದ ಕೋಡಗನಿದು, ನಮ್ಮ ಅಶೋಕವನದಲ್ಲಿ ಹಾವಳಯನ್ನು ಮಾಡಿತು, ನಮ್ಮ ಚಕ್ರವರ್ತಿಯು ಇದಕ್ಕೆ ಈ ವಿಧವಾದ ದಂಡವನ್ನು ವಿಧಿಸಿ ಇರುವನು,, ಎಂದೀಪ್ರಕಾರ ಉದ್ಘೋಷಿಸುತ್ತಾ ಸಾರುತಬರುತಲಿದ್ದರು. ಬೇರೆ ಕೆಲಮಂದಿ ಕ್ರೂರರಾದ ನಿಶಾಚರರು ಹನುಮನನ್ನು ತಿರುಗಿಸುತ ಬರುತ್ತಿದ್ದರು ॥೧೮॥ ಇಂತು ಆ ಪಲಾಶನರಿಂದ ಅನುಸರಿಸಲ್ಪಟ್ಟವನಾಗಿ ಮಾರುತಿಯು-ಎಲ್ಲೆಲ್ಲಿ ಯಾವಯಾವ ವಿಶೇಷ ಸಂಗತಿಗಳು ಇರುವುವು ಎಂದು ನೋಡಿ, ಮನದೊಳವುಗಳನ್ನು ನೆನಪಿಟ್ಟುಕೊಳ್ಳುತ್ತಾ, ಸರ್ವಶತ್ರುಸಂಹಾರಕನಾಗಿದ್ದರೂ ಸುಮ್ಮನೆ ಬರುತಲಿದ್ದನು ॥ ೧೯ ॥ ಬಳಕ ಸಂಚಾರಕ್ರಮದಲ್ಲಿ ವಿಚಿತ್ರತರಗಳಾದ ವಿಮಾನಗಳನ್ನುಕಂಡನು, ಗುಟ್ಟಾದ ಭೂಭಾಗಳನ್ನು ನೋಡಿದನು,ನೆಲಮಾಳಿಗೆಗಳನ್ನವಲೋಕಿಸಿದನು, ಅಂಗಳಗಳನ್ನು ವಿಂಗಡಿಸಿರುವುದನ್ನು ಈಕ್ಷಿಸಿದನು॥೨೦॥ರಾಜವೀಧಿಗಳನ್ನು ನಿರುಕಿಸಿದನು, ಬತ್ತಾಗಿರುವ ಮಹಡಿಯ ಮನೆಗಳ ಸಾಲುಗಳನ್ನುದೃಷ್ಟಿಸಿದನು, ಚತುಷ್ಪಥಗಳಲ್ಲಿ ತಿರುಗಿದನು, ದೊಡ್ಡದೊಡ್ಡ ಬೀದಿಗಳನ್ನೂ, ಸಣ್ಣಹಾದಿಗಳನ್ನೂ ವಿಮರ್ಶೆಮಾಡಿದನು, ಸಣ್ಣಸಣ್ಣ ಮನೆಗಳನ್ನೂ, ಕಿರುಮನೆಗಳನ್ನೂ ಪರಾಮರ್ಶಿಸಿದನು.

ತಥಾ ರಥ್ಯೋಪರಥ್ಯಾಶ್ಚ ತಥೈವ ಗೃಹಕಾಂತರಾನ್ ॥೨೧॥
ಗೃಹಾಂಶ್ಚ ಮೇಘಸಂಕಾಶಾನ್ ದದರ್ಶ ಪವನಾತ್ಮಜಃ ॥೨೧॥ ॥
ಚತ್ವರೇಷು ಚತುಷ್ಕೇಷು ರಾಜಮಾರ್ಗೇ ತಥೈವಚ ॥
ಘೋಷಯಂತಿ ಕಪಿಂ ಸರ್ವೇ ಚಾರೀಕ ಇತಿ ರಾಕ್ಷಸಾಃ ॥೨೨॥
ಸ್ತ್ರೀ ಬಾಲ ವೃದ್ಧಾ ನಿರ್ಜಗ್ಮು ಸ್ತತ್ರ ತತ್ರ ಕುತೂಹಲಾತ್ ॥
ತಂ ಪ್ರದೀಪಿತ ಲಾಂಗೂಲಂ ಹನುಮಂತಂ ದಿದೃಕ್ಷವಃ ॥೨೩॥
ದೀಪ್ಯಮಾನೇ ತತ ಸ್ತಸ್ಯ ಲಾಂಗೂಲಾಗ್ರೇ ಹನೂಮತಃ ॥
ರಾಕ್ಷಸ್ಯ ಸ್ತಾ ವಿರೂಪಾಕ್ಷ್ಯ ಶ್ಶಂಸು ರ್ದೇವ್ಯಾ ಸ್ತ ದಪ್ರಿಯಮ್ ॥೨೪॥
ಯಸ್ತ್ವಯಾ ಕೃತಸಂವಾದ ಸ್ಸೀತೇ ತಾಮ್ರಮುಖಃ ಕಪಿಃ ॥

---

ಸೂರ್ಯಾದಿನವ ಗ್ರಹಗಳನ್ನೂ, ದದರ್ಶ - ನೋಡಿದನು ॥೨೧॥ ಸರ್ವೇ - ಸಮಸ್ತರಾದ, ರಾಕ್ಷಸಾಃ - ರಕ್ಕಸರು, ಚತ್ವರೇಷು - ಮನೆಯ ಮುಂದಣ ಅಂಗಳಗಳಲ್ಲಿಯೂ, ಚತುಷ್ಕೇಷು - ನಾಲ್ಕು ಬೀದಿಗಳು ಕಲೆತಿರುವಲ್ಲಿನ ಮನೆಗಳಲ್ಲಿಯೂ, ತಥೈವ - ಹಾಗೆಯೇ, ರಾಜಮಾರ್ಗೇಚ - ರಾಜವೀಧಿಯಲ್ಲಿಯೂ, ಕಪಿಂ - ಆಂಜನೇಯನನ್ನು, ಚಾರೀಕಇತಿ - ಗೂಢಚಾರನೆಂದು (ಯಾವನೋ ಒಬ್ಬ ದಾರಿಗಳ್ಳನೆಂದು) ಘೋಷಯಂತಿ - ಸಾರಿಸುತಲಿದ್ದರು ॥೨೨॥ ॥ ಸ್ತ್ರೀಬಾಲವೃದ್ಧಾಃ - ಹೆಂಗಸರು, ಹುಡುಗರು, ಮುದುಕರೂ, ಕುತೂಹಲಾತ್ - ವಿನೋದದಿಂದ, ಪ್ರದೀಪಿತಲಾಂಗೂಲಂ - ಉರಿಯುತಲಿರುವ ಬಾಲವುಳ್ಳ, ತಂ - ಆ, ಹನೂಮನ್ತಂ - ಆಂಜನೇಯನನ್ನು, ದಿದೃಕ್ಷವಃ - ನೋಡಲೆಳಸಿದವರಾಗಿ, ತತ್ರತತ್ರ - ಅಲ್ಲಲ್ಲಿ, ನಿರ್ಜಗ್ಮುಃ - ಹೊರಗೆ ಹೊರಟರು ॥೨೩॥ ॥ ತತಃ - ಆ ಹಿಂದೆ, ತಸ್ಯ - ಆ, ಹನೂಮತಃ - ಮಾರುತಿಯ, ಲಾಂಗೂಲಾಗ್ರೇ - ಬಾಲದತುದಿಯು, ದೀಪ್ಯಮಾನೇಸತಿ - ಉರಿಯುತ್ತಿರಲಾಗಿ, ವಿರೂಪಾಕ್ಷ್ಯಃ - ವಿಕಾರವಾದ ಕಣ್ಣುಗಳುಳ್ಳ, ರಾಕ್ಷಸ್ಯಃ - ರಾಕ್ಷಸಸ್ತ್ರೀಯರು, ತತ್ - ಆ, ಅಪ್ರಿಯಂ - ಅಹಿತವಾದ ಸುದ್ದಿಯನ್ನು, ದೇವ್ಯಾಃ - ಸೀತಾದೇವಿಗೆ, ಶಂಸುಃ - (ಶಶಂಸುಃ) ಹೇಳಿದರು, ॥೨೪॥ ॥ ಹೇಸೀತೆ - ಎಲೌಸೀತೆಯೇ !, ತಾಮ್ರಮುಖಃ - ಕೆಂಪುಮುಖವುಳ್ಳ, ಯಃ - ಯಾವ, ಕಪಿಃ - ಕೋಡಗನು ತ್ವಯಾ - ನಿನ್ನೊಡನೆ, ಕೃತಸಂವಾದಃ - ಮಾಡಲ್ಪಟ್ಟ ಸಂಭಾಷಣೆಯುಳ್ಳವನಾದನೋ, ಸಃ - ಆ

---

ಮೇಘಮಂಡಲದವರೆಗೂ ವ್ಯಾಪಿಸಿರುವ ರಾಜಸದನಗಳನ್ನೂ ಸಂಭಾವಿಸಿದನು ॥೨೧॥ ॥ ನಾಲ್ಕು ಬೀದಿಗಳು ಕಲೆತಿರುವ ಸ್ಥಳಗಳಲ್ಲಿಯೂ, ಹಾಗೆಯೇ ರಾಜಮಾರ್ಗದಲ್ಲಿಯೂ, ಆ ರಾಕ್ಷಸರು ಸಾಧಾರಣನಾದ ಚಾರಪುರುಷನೆಂದು ಭಾವಿಸಿ, ಸಾರುತ್ತಾ ಹನುಮನನ್ನು ತಿರುಗಿಸುತ ಬರುತಲಿದ್ದರು ॥೨೨॥ ಉರಿಯುತಲಿರುವ ಬಾಲದಿಂದೊಡಗೂಡಿದ ಹನುಮಂತನನ್ನು ನೋಡಬೇಕೆಂಬ ಕುತೂಹಲದಿಂದ ಹೆಂಗಸರು, ಹುಡುಗರು, ಮುದುಕರು ಮುಂತಾದವರೆಲ್ಲರೂ ಓಡಿಬರುತಲಿದ್ದರು ॥೨೩॥ ಬೀದಿಬೀದಿಗಳಲ್ಲಿಯೂ ಉರಿಯಿಂದೊಡಗೂಡಿದ ಬಾಲದಹನುಮನನ್ನು ಮೆರೆಯಿಸುತಲಿರುವುದನ್ನು ಕಂಡರಕ್ಕಸಿಯರು-ವಿಕಾರವಾದ ಕಣ್ಣು ಮೋರೆಗಳಿಂದೊಡಗೂಡಿದವರಾಗಿ ಸೀತೆಯ ಬಳಿಗೆ ಓಡಿಬಂದು, ಆಕೆಯ ಮನಸ್ಸಿಗೆ ಬಹುನೋವನ್ನುಂಟುಮಾಡುವ ಸುದ್ದಿಯನ್ನು ಹೇಳತೊಡಗಿದರು ॥೨೪॥ ಓ ಸೀತೆ! ನಿನ್ನೆಯ ದಿವಸ ಇಲ್ಲಿಗೆ ಬಂದು, ಒಬ್ಬ ಕೆಂಪು ಮುಖದ ಕೋಡಗನು ನಿನ್ನೊಂದಿಗೆ

ಲಾಂಗೂಲೇನ ಪ್ರದೀಪ್ತೇನ ಸಏಷ ಪರಿಣೀಯತೇ ॥೨೫॥
ಶ್ರುತ್ವಾ ತದ್ವಚನಂ ಕ್ರೂರ ಮಾತ್ಮಾಪ ಹರಣೋಪಮಂ ॥
ವೈದೇಹೀ ಶೋಕ ಸಂತಪ್ತಾ ಹುತಾಶನ ಮುಪಾಗಮತ್ ॥೨೬॥
*ಮಂಗಳಾಭಿಮುಖೀ ತಸ್ಯ ಸಾ ತದಾ ಸ್ಮೀ ನ್ಮಹಾಕಪೇಃ ॥
ಉಪತಸ್ಥೇ ವಿಶಾಲಾಕ್ಷೀ ಪ್ರಯತಾ ಹವ್ಯ ವಾಹನಮ್ ॥೨೭॥
ಯದ್ಯಸ್ತಿ ಪತಿ ಶುಶ್ರೂಷಾ ಯದ್ಯಸ್ತಿ ಚರಿತಂ ತಪಃ ॥
ಯದಿಚಾ ಸ್ತ್ಯೇಕ ಪತ್ನೀತ್ವಂ ಶೀತೋಭವ ಹನೂಮತಃ ॥೨೮॥
ಯದಿ ಕಶ್ಚಿ ದನುಕ್ರೋಶ ಸ್ತಸ್ಯ ಮಯ್ಯಸ್ತಿ ಧೀಮತಃ ॥

ಏಷಃ - ಈಕಪಿಯೇ, (ರಾಕ್ಷಸ್ಯೈಃ - ರಕ್ಕಸರಿಂದ) ಪ್ರದೀಪ್ತೇನ - ಉರಿಯುತಲಿರುವ, ಲಾಂಗೂಲೇನ - ಬಾಲದಿಂದ, ಪರಿಣೀಯತೆ - ಎಲ್ಲಕಡೆಗಳಲ್ಲಿಯೂ ಸುತ್ತಿಸಲ್ಪಡುತಲಿದಾನೆ ॥೨೫॥ ॥ ವೈದೇಹೀ - ಜಾನಕಿಯು, ಆತ್ಮಾಪಹರಣೋಪಮಂ - ತನ್ನ ಮರಣಕ್ಕೆ ಸಮಾನವಾದ ಕಾರಣವೇ (ತನ್ನ ಅಪಹಾರಕ್ಕೆ ಸದೃಶವಾದ) ಕ್ರೂರಂ - ಘಾತುಕವೆನಿಸಿದ, ತದ್ವಚನಂ - ಆ ರಕ್ಕಸಿಯರ ಮಾತನ್ನು, ಶ್ರುತ್ವಾ - ಕೇಳಿ, ಶೋಕಸಂತಪ್ತಾ - ದುಃಖದಿಂದ ಪೀಡಿತಳಾಗಿ, ಹುತಾಶನಂ - ಅಗ್ನಿಯನ್ನು, (ಮನಸಾ - ಮನಸ್ಸಿನಿಂದ) ಉಪಾಗಮತ್ - ನೆನೆದಳು (ಪ್ರಾರ್ಥಿಸಿದಳು) ॥೨೬॥ ॥ ತದಾ - ಆಗ, ವಿಶಾಲಾಕ್ಷೀ - ವಿಸ್ತಾರವಾದ ಕಣ್ಣುಳ್ಳ (ದೂರದೃಷ್ಟಿಯುಳ್ಳ) ಸಾ - ಆ ಸೀತಾದೇವಿಯು, ಮಹಾಕಪೇಃ - ವಾನರೋತ್ತಮನೆನಿಸಿದ, ತಸ್ಯ - ಆ ಆಂಜನೇಯನಿಗೆ, ಮಂಗಳಾಭಿಮುಖೀ - ಮಂಗಳಾಶಾಸನವನ್ನು ಚರಿಸಲುದ್ಯುಕ್ತಳು, ಆಸೀತ್ - ಆದಳು, (ಕಿಂಚ - ಮತ್ತು) ಪ್ರಯತಾ - ಪರಿಶುದ್ಧಳಾಗಿ, ಹವ್ಯವಾಹನಂ - ಅಗ್ನಿದೇವತೆಯನ್ನು, ಉಪತಸ್ಥೇ - ಉಪಾಸಿಸಿದಳು ॥೨೭॥ ॥ (ಹೇಅಗ್ನೇ - ಎಲೈ ಅಗ್ನಿಯೇ! ಮಮ-ನನಗೆ) ಪತಿಶುಶ್ರೂಷಾ-ಪತಿಸೇವಾಫಲವು, ಅಸ್ತಿಯದಿ - ಇದ್ದರೇ ಆದರೂ, ಚರಿತಂ - ಆಚರಿಸಲ್ಪಟ್ಟ, ಪತಿಧ್ಯಾನರೂಪವಾದ, ತಪಃ - ತಪಸ್ಸು, (ತಪಃಫಲವು) ಅಸ್ತಿಯದಿ - ಇದ್ದರೇ ಆದರೂ, ಹನೂಮತಃ - ಆಂಜನೇಯನಿಗೆ, (ತ್ವಂ - ನೀನು) ಶೀತಃ - ತಂಪಾಗಿರತಕ್ಕವನು, ಭವ - ಆಗು ॥೨೮॥ ॥ ಧೀಮತಃ - ಪ್ರಶಸ್ತವಾದ ಬುದ್ಧಿಯುಳ್ಳ, ತಸ್ಯ - ಆ ರಾಮನಿಗೆ, ಮಯಿ-ನನ್ನಲ್ಲಿ, ಕಶ್ಚಿತ್-ಒಂದು ಬಗೆಯಾದ ಅನುಕ್ರೋಶಃ-

ಮಾತನಾಡಲಿಲ್ಲವೆ? ಆ ಕಪಿಯುಬಾಲಕ್ಕೆ ಬಟ್ಟೆಯನ್ನು ಸುತ್ತಿ, ಬೆಂಕಿಯನ್ನು ಹತ್ತಿಸಿ, ಊರೊಳಗೆಲ್ಲ ಮೆರೆಯಿಸುತಲಿದಾರೆ ॥೨೫॥ ಎಂದ ಆ ರಕ್ಕಸಿಯರ ಬಹುಕ್ರೂರವಾದ ನುಡಿಯನ್ನು ಕೇಳಿ, ಜಾನಕಿಯು-ತನ್ನ ಪಂಚಪ್ರಾಣಗಳೂ ಹಾರಿಹೋದಂತೆ ಸಂಕಟ ಪಟ್ಟಳಲ್ಲದೆ ಶೋಕಪರವಶಳಾಗಿ ಅಗ್ನಿದೇವತೆಯನ್ನು ತನ್ನ ಮನಸ್ಸಿನಿಂದ ನೆನೆದಳು ॥೨೬॥ ಮತ್ತು-ಆವಾನರವರನಿಗೆ ಮಂಗಳಾಶಾಸನವನ್ನು ಮಾಡಬೇಕೆಂದಾಲೋಚಿಸಿ, ಪರಿಶುದ್ಧಾಂತಃಕರಣದಿಂದ ಹನುಮಂಗೆ ಮೇಲಾಗುವಂತೆ ಹವ್ಯವಾಹನನನ್ನು ಪ್ರಾರ್ಥಿಸತೊಡಗಿದಳು ॥ ಎಲೈ ಅಗ್ನಿದೇವನೇ! ನನಗೆ - ಮನಃ ಪೂರ್ವಕವಾಗಿ ಪತಿಸೇವೆಯನ್ನು ಮಾಡಿದ ಫಲವು ಇದ್ದದೇ ಆದರೆ, ನಾನು ಶ್ರೀರಾಮನಿಗೆ ಧರ್ಮಪತ್ನಿಯೆನಿಸಿಕೊಂಡಿರುವ ತಪಃ ಫಲವು ಇದ್ದರೆ, ಪಾತಿವ್ರತ್ಯ ಫಲವೂ ನನಗೆ ಇದ್ದರೆ, ನೀನು ಮಾರುತಿಗೆ ತಂಪನ್ನುಂಟುಮಾಡಿ ಶಾಂತನಾಗಿರು ॥೨೮॥ ಎಲೈ ಅಗ್ನಿದೇವನೇ! ಶ್ರೀರಾಮಚಂದ್ರನಿಗೆ ನನ್ನಲ್ಲಿ ದಯೆಯೆಂಬುದು

ಯದಿ ವಾ ಭಾಗ್ಯಶೇಷೋ ಮೇ ಶೀತೋಭವ ಹನೂಮತಃ ॥೨೯॥
ಯದಿಮಾಂ ವೃತ್ತ ಸಂಪನ್ನಾಂ ತತ್ಸಮಾಗಮ ಲಾಲಸಾಮ್ ॥
ಸ ವಿಜಾನಾತಿ ಧರ್ಮಾತ್ಮಾ ಶೀತೋಭವ ಹನೂಮತಃ ॥೩೦॥
ಯದಿ ಮಾಂ ತಾರಯೇ ದಾರ್ಯ ಸ್ಸುಗ್ರೀವ ಸ್ಸತ್ಯ ಸಂಗರಃ ॥
ಅಸ್ಮಾ ದ್ದುಃಖಾಂಬು ಸಂರೋಧಾ ಚ್ಛೀತೋಭವ ಹನೂಮತಃ ॥೩೧॥

ದಯೆಯೂ (ಅಸ್ತಿ) ಯದಿ - ಇರುವುದಾದರೆ, ಮೇ - ನನಗೆ, ಭಾಗ್ಯಶೇಷಃ - ಒಳ್ಳೆಯ ದೈವಸಹಾಯದ ಉಳಿವೂ, ಅಸ್ತಿಯದಿ - ಇದ್ದುದೇ ಆದರೆ, (ತ್ವಂ - ನೀನು) ಹನೂಮತಃ - ಆಂಜನೇಯನಿಗೆ, ಶೀತಃ - ತಣ್ಣಗಿರತಕ್ಕವನು, ಭವ - ಆಗು, ॥೨೯॥ ಧರ್ಮಾತ್ಮಾ - ಧರ್ಮದಲ್ಲಿ ಮನಸ್ಸುಳ್ಳ, (ಧರ್ಮಸ್ವಭಾವದವನಾದ) ಸಃ - ಆ ಮಾರುತಿಯು, ಮಾಂ - ನನ್ನನ್ನು, ವೃತ್ತಸಂಪನ್ನಾಂ - ಒಳ್ಳೆಯ ನಡತೆಯುಳ್ಳವಳನ್ನಾಗಿಯೂ, ತತ್ಸಮಾಗಮಲಾಲಸಾಂ - ಆ ರಾಮನ ಪ್ರಾಪ್ತಿಯಲ್ಲಿಯೇ ಆಶೆಯುಳ್ಳವಳನ್ನಾಗಿಯೂ ವಿಜಾನಾತಿಯದಿ - ತಿಳಿಯುವವನಾಗಿದ್ದರೆ, (ತ್ವಂ - ನೀನು) ಹನೂಮತಃ - ಹನುಮಂತನಿಗೆ, ಶೀತಃ - ತಣ್ಣಗಿರತಕ್ಕವನು, ಭವ - ಆಗು, ॥೩೦॥

ಅರ್ಯ-ಎಲೈ ಪೂಜ್ಯನಾದ ಅಗ್ನಿಯೇ ! ಅಥವಾ- ಆರ್ಯಃ-ಯೋಗ್ಯನಾದ, ಸತ್ಯಸಂಗರಃ-ಸತ್ಯಪ್ರತಿಜ್ಞನಾಗಿರುವ, ಸುಗ್ರೀವಃ - ಸುಗ್ರೀವನು ಮಾಂ-ನನ್ನನ್ನು, ಅಸ್ಮಾತ್-ಈ, ದುಃಖಾಂಬುಸಂರೋಧಾತ್ - ದುಃಖಸಾಗರದಿಂದ, ತಾರಯೇದ್ಯದಿ - ದಾಟಿಸುವವನೇ ಆಗಿದ್ದರೆ, ತ್ವಂ-ನೀನು, ಹನೂಮತಃ-ಆಂಜನೇಯನಿಗೆ, ಶೀತಃ- ಶಾಂತನಾಗಿರುವವನು, ಭವ-ಆಗು ॥೩೧॥ ತತಃ-ಸೀತೆಯು ಹಾಗೆ ಪ್ರಾರ್ಥಿಸಿದ ಮೇಲೆ, ತೀಕ್ಷ್ಣಾರ್ಚಿಃ-ತೀವ್ರವಾದ ತೇಜಸ್ಸುಳ್ಳ, ಅವ್ಯಗ್ರಃ -ನಿಂತು ಉರಿಯುತಲಿದ್ದ, ಅನಲಃ-ಬಾಲದಲ್ಲಿನ ಬೆಂಕಿಯು, ಮೃಗಶಾಬಾಕ್ಷ್ಯಾಃ - ಹುಲ್ಲೆಯ ಕರುವಿನಂತೆ ಕಣ್ಣುಳ್ಳ ಸೀತೆಯ, (ಮಹಿಮ್ನಾ-ಪಾತಿವ್ರತ್ಯಮಹಿಮೆಯಿಂದ) ಪ್ರದಕ್ಷಿಣಶಿಖಃ-ಬಲಗಡೆಯಾಗಿ ಸುತ್ತುತಲಿರುವ ಜ್ವಾಲೆಗಳುಳ್ಳದಾಗಿ, ಕಪೇಃ-ಮಾರುತಿಗೆ, ಶಿವಂ-ಶುಭವನ್ನು, ಶಂಸನ್ನಿವ-ಹೇಳುತಲಿರುವುದೆಂಬಂತೆ, ಜಜ್ವಾಲ-ಉರಿಯುತಲಿದ್ದಿತು ॥

ಇದ್ದುದೇ ಆದರೆ, ಮತ್ತು ನನ್ನ ಸಂಬಂಧವಾದ ಸುಕೃತಲೇಶದ ಫಲವಾದರೂ ಇದ್ದರೆ,ಆದರೆ ಮಹಿಮೆಯಿಂದ ಆಂಜನೇಯನಿಗೆ ನಿನ್ನ ಸಂಬಂಧವಾದ ದಾಹವಿಲ್ಲದಂತೆ ತಣ್ಣಗೆ ಇರು ॥ ಧರ್ಮಾತ್ಮನಾದ ಆಂಜನೇಯನು-ನನ್ನನ್ನು ಸದಾಚಾರಸಂಪನ್ನಳನ್ನಾಗಿಯೂ, ಅನವರತವೂ ಶ್ರೀರಾಮಚಂದ್ರನನ್ನು ಪಡೆಯುವುದರಲ್ಲಿಯೇ ಆಸಕ್ತಿಯುಳ್ಳವಳನ್ನಾಗಿಯೂ, ತಿಳಿದಿರುವವನೇ ಆದರೆ, ಹನುಮಂತನಿಗೆ ನೀನು ತಣ್ಣಗೆ ಇರು ॥೩೦॥ ಮತ್ತು-ಸತ್ಯಪ್ರತಿಜ್ಞನಾಗಿರುವ ಧರ್ಮಾತ್ಮನಾದ ಸುಗ್ರೀವನು-ಈದುಃಖಸಮುದ್ರದಿಂದ ನನ್ನನ್ನು ದಾಟಿಸುವುದೇ ಸತ್ಯವಾಗಿದ್ದರೆ, ಎಲೈ ಅಗ್ನಿದೇವನೇ ! ನೀನು-ಆಂಜನೇಯನ ಬಾಲದಲ್ಲಿ ತಣ್ಣಗೆ ಇರು ॥೩೧॥ ಎಂದೀಪ್ರಕಾರವಾಗಿ ಭಕ್ತಿಭಾವದಿಂದ ಪ್ರಾರ್ಥಿಸಲು, ಇತ್ತ - ಆ ವೀರಪತಿವ್ರತೆಯಾದ ಸೀತಾದೇವಿಯ ಶಪಥಪೂರ್ವಕವಾದ ಪ್ರಾರ್ಥನೆಯ ಪ್ರಭಾವದಿಂದ,ಮಾರುತಿಯ ಬಾಲದಲ್ಲಿ,ಜಾಜ್ವಲ್ಯಮಾನವಾಗಿ ತೀವ್ರವಾಗಿರುವ ಜ್ವಾಲೆಗಳಿಂದ ಉರಿಯುತಲಿದ್ದ ಅಗ್ನಿಯು - ಪ್ರದಕ್ಷಿಣಾಕಾರವಾದ ಜ್ವಾಲೆಗಳಿಂದ ಆಂಜನೇಯನಿಗೆ ಶುಭವನ್ನು ಸೂಚಿಸುವನೆಂಬಂತೆ

ತತ ಸ್ತೀಕ್ಷ್ಣಾರ್ಚಿ ರವ್ಯಗ್ರಃ ಪ್ರದಕ್ಷಿಣ ಶಿಖೋಽನಲಃ ॥
ಜಜ್ವಾಲ ಮೃಗ ಶಾಬಾಕ್ಷ್ಯಾ ಶ್ಶಂಸನ್ನಿವ ಶಿವಂ ಕಪೇಃ ॥೩೨॥
ಹನುಮ ಜ್ಜನಕಶ್ಚಾಪಿ ಪುಚ್ಛಾನಲ ಯುತೋಽ ನಿಲಃ ॥
ವವೌ ಸ್ವಾಸ್ಥ್ಯ ಕರೋ ದೇ ವ್ಯಾಃ ಪ್ರಾಲೇಯಾನಿಲ ಶೀತಳಃ ॥೩೩॥ ॥
ದಹ್ಯಮಾನೇ ಚ ಲಾಂಗೂಲೇ ಚಿಂತಯಾಮಾಸ ವಾನರಃ ॥೩೪॥
ಪ್ರದೀಪ್ತೋಽಗ್ನಿ ರಯಂ ಕಸ್ಮಾ ನ್ನ ಮಾಂ ದಹತಿ ಸರ್ವತಃ ।
ದೃಶ್ಯತೇ ಚ ಮಹಾಜ್ವಾಲಃ ಕರೋತಿ ನ ಚ ಮೇ ರುಜಮ್ ॥೩೫॥
ಶಿಶಿರಸ್ಯೇವ ಸಂಪಾತೋ ಲಾಂಗೂಲಾಗ್ರೇ ಪ್ರತಿಷ್ಠಿತಃ ॥ ೩೬॥
ಅಥವಾ ತದಿದಂ ವ್ಯಕ್ತಂ ಯದ್ದೃಷ್ಟಂ ಪ್ಲವತಾಮಯಾ॥

ಹನುಮಜ್ಜನಕಃ - ಮಾರುತಿಯ ತಂದೆಯಾದ, ಅನಿಲಶ್ಚ-ವಾಯುವೂ, ಪುಚ್ಛಾನಲಯುತೋಽಪಿ - ಬಾಲದಬೆಂಕಿಯ ಉರಿಯಿಂದೊಡಗೂಡಿದ್ದರೂ, ದೇವ್ಯಾಃ-ಸೀತಾದೇವಿಯ, (ಪ್ರಭಾವಾತ್ - ಮಹಿಮೆಯಿಂದ, ಕಪೇಃ - ಹನುಮಂತನಿಗೆ) ಪ್ರಾಲೇಯಾನಿಲಶೀತಲಃ - ಮಂಜಿನೊಡಗೂಡಿರುವ ತಣ್ಣನೆಯಗಾಳಿಯಂತಿರುತ್ತಾ, ಸ್ವಾಸ್ಥ್ಯಕರಃ - ಸುಖವನ್ನುಂಟುಮಾಡುವವನಾಗಿ, ವವೌ - ಬೀಸುತಲಿದ್ದನು ॥೩೩॥ ॥ ವಾನರಃ-ಮಾರುತಿಯೂ, ಲಾಂಗೂಲೆ - ಬಾಲವು, ದಹ್ಯಮಾನೆಸತಿ - ಸುಡಲ್ಪಡುತ್ತಿರಲಾಗಿ, ಪ್ರದೀಪ್ತಃ - ಹೇರಳವಾಗಿ ಉರಿಯುತಲಿದ್ದ, ಅಯಂ-ಈ, ಅಗ್ನಿಃ-ಅಗ್ನಿಯು, ಮಾಂ-ನನ್ನನ್ನು, ಸರ್ವತಃ-ಎಲ್ಲಕಡೆಗಳಲ್ಲಿಯೂ, ಕಸ್ಮಾತ್ - ಯಾವಕಾರಣದಿಂದ, ನದಹತಿ-ಸುಡುತಲಿಲ್ಲ ? (ಅಗ್ನಿಸ್ತು-ಅಗ್ನಿಯಾದರೋ) ಮಹಾಜ್ವಾಲಶ್ಚ-ತೀವ್ರವಾದ ತೇಜಸ್ಸುಳ್ಳುದಾಗಿಯೇ, ದೃಶ್ಯತೆ-ಕಾಣಬರುತಲಿದೆ, (ಕಿಂತು-ಆದರೆ) ಮೆ-ನನಗೆ, ರುಜಂ-ಪೀಡೆಯನ್ನು, ನಚಕರೋತಿ - ಮಾಡುತಲಿಲ್ಲ, ಶಿಶಿರಸ್ಯ- ಶೀತಲಪದಾರ್ಥದ, ಸಂಪಾತ ಇವ-ಸಂಬಂಧದಂತೆ, (ಸ್ಥಿತಃ-ಇರುವುದಾಗಿ) ಲಾಂಗೂಲಾಗ್ರೆ - ಬಾಲದ ತುದಿಯಲ್ಲಿ, ಪ್ರತಿಷ್ಠಿತಃ-ನೆಲೆಗೊಂಡಿದೆ॥೩೬॥ ॥ಅಥವಾ-ಹಾಗಿಲ್ಲದಿದ್ದರೆ,ಸರಿತಾಂ-ನದಿಗಳಿಗೆ,ಪತೌ-ಒಡೆಯನಾದ ಸಮುದ್ರದಲ್ಲಿ,ಪ್ಲವತಾ-

ಶಾಂತನಾಗುತ ಬಂದನು ॥೩೨॥ ಮತ್ತು-ವೈದೇಹಿಯ ಪಾತಿವ್ರತ್ಯದ ಮಹಿಮೆಯಿಂದ ಮಾರುತಿಯ ತಂದೆಯಾದ ವಾಯುವು-ಹನುಮನ ಬಾಲದಲ್ಲಿನ ಅಗ್ನಿಜ್ವಾಲೆಯೊಡನೆ ಕಲೆತು, ಬಹುತೀಕ್ಷ್ಣವಾಗಿರುತ್ತಿದ್ದರೂ, ಪುತ್ರವಾತ್ಸಲ್ಯದಿಂದ ಮಂಜಿನಷ್ಟೋಶೆ ಬೀಸುವ ಗಾಳಿಯಂತೆ ತಣ್ಣಗೆ ಬೀಸುತ್ತಾ, ಹನುಮನಿಗೆ ಸುಖವನ್ನುಂಟುಮಾಡಿದನು ॥೩೩॥ ವಾನರೋತ್ತಮನಾದ ಹನುಮನು-ತನ್ನ ಬಾಲದಲ್ಲಿ ಜ್ವಾಲಾಮಾಲೆಗಳಿಂದ ಉರಿಯುತಲಿರುವ ಅಗ್ನಿಯನ್ನು ನೋಡಿ, ತನ್ನ ಮನದೊಳಗೆ ಅಹಹ ! ಇದೇನಾಶ ರ್ಯ ! ನನ್ನ ಬಾಲದೊಳಗುದ್ದಕ್ಕೂ ಅಗ್ನಿಯು ಪ್ರಕಾಶಮಾನನಾಗಿ ಉರಿಯುತಲಿದಾನೆ,ಜ್ವಾಲೆಗಳು ಹೇರಳವಾಗಿ ಕಾಣುತಲಿವೆ. ಆದರೆ ನನಗೆ ಮಾತ್ರ ಪೀಡೆಯನ್ನು ಉಂಟುಮಾಡುತಲಿಲ್ಲ, ನನಗೆ ಬಿಸಿಯು ತೋರದಿರಲು ಕಾರಣವೇನು ? ಶೀತಲವಾದ ವಸ್ತುವಿನ ಸಂಪರ್ಕದಿಂದ ಎಂತಹ ಸುಖವುಂಟಾಗುವುದೋ, ನನಗೀಗ ಅಂತಹ ಸುಖವುಂಟಾಗುತಿದೆಯಲ್ಲ ! ಎಂದು ಕೊಂಡನು॥೩೪,೩೫॥ ಓಹೋ ! ಈಗ ಸ್ಪಷ್ಟವಾಗುತಲಿದೆ-ಹಿಂದೆ ನಾನು ಕಡಲನ್ನು ದಾಟಿ ಬರುತಲಿರುವ ಸಮಯದೊಳಗೆ

ರಾಮ ಪ್ರಭಾವಾ ದಾಶ್ಚರ್ಯಂ ಪರ್ವತ ಸ್ಸರಿತಾಂ ಪತೌ ॥೨೬॥
ಯದಿ ತಾವ ತ್ಸಮುದ್ರಸ್ಯ ಮೈನಾಕಸ್ಯ ಚ ಧೀಮತಃ ॥
ರಾಮಾರ್ಥಂ ಸಂಭ್ರಮ ಸ್ತಾದೃ ಕ್ಕಿಮಗ್ನಿ ರ್ನ ಕರಿಷ್ಯತಿ ॥೨೭॥
ಸೀತಾಯಾ ಶ್ಚಾನೃಶಂಸ್ಯೇನ ತೇಜಸಾ ರಾಘವಸ್ಯ ಚ ॥
ಪಿತುಶ್ಚ ಮಮ ಸಖ್ಯೇನ ನ ಮಾಂ ದಹತಿ ಪಾವಕಃ ॥೨೮॥
ಭೂಯ ಸ್ಸ ಚಿಂತಯಾಮಾಸ ಮುಹೂರ್ತಂ ಕಪಿಕುಂಜರಃ ॥೨೯॥

---

ತೇಲಿಬರುತಲಿದ್ದ, ಮಯಾ-ನನ್ನಿಂದ, ಪರ್ವತಃ-ಪರ್ವತರೂಪವಾದ, ಆಶ್ಚರ್ಯಂ-ಅದ್ಭುತ ವಸ್ತುವು ರಾಮಪ್ರಭಾವಾತ್-ರಾಮನ ಮಹಿಮೆಯಿಂದ, ಯತ್-ಯಾವಕಾರಣದಿಂದ, ದೃಷ್ಟಂ-ನೋಡಲ್ಪಟ್ಟಿತೋ (ತತ್-ಆಕಾರಣದಿಂದಲೇ) ತತ್‍ಇದಮಪಿ- ಅಂತಹ ಇದೊಂದು ಆಶ್ಚರ್ಯವು, (ರಾಮಪ್ರಭಾವಾತ್-ರಾಮ ಮಹಿಮೆಯಿಂದಲೇ) ದೃಷ್ಟಂ-ನೋಡಲ್ಪಟ್ಟಿತು, ವ್ಯಕ್ತಂ - ನಿಶ್ಚಯವಾಗಿದೆ ॥೨೬॥ ॥ ಧೀಮತಃ-ಪ್ರಶಸ್ತಬುದ್ಧಿಯುಳ್ಳ, ಸಮುದ್ರಸ್ಯ- ಸಮುದ್ರನಿಗೂ, ಮೈನಾಕಸ್ಯಚ - ಮೈನಾಕಪರ್ವತಕ್ಕೂ, ರಾಮಾರ್ಥಂ-ರಾಮನಿಗೋಸ್ಕರ, ಸಂಭ್ರಮಃ - ತ್ವರೆಯು, ತಾವತ್-ಸಂಪೂರ್ಣವಾಗಿ, ಸ್ಯಾದ್ಯದಿ-ಇರುತ್ತಿರುವಲ್ಲಿ, ತಾದೃಕ್- ಅಂತಹ, ಅಗ್ನಿಃ - ಅಗ್ನಿಯೂ, ಕಿಂ-ಏತಕ್ಕೋಸ್ಕರ, (ಸಂಭ್ರಮಂ - ತ್ವರೆಯನ್ನು, ಕಾರ್ಯಾನುಕೂಲತೆಯನ್ನು) ನಕರಿಷ್ಯತಿ - ಮಾಡುವುದಿಲ್ಲ? ॥೨೭॥ ॥ ಸೀತಾಯಾಃ-ಜಾನಕಿಯ, ಆನೃಶಂಸ್ಯೇನ-ದಯೆಯಿಂದಲೂ, ರಾಘವಸ್ಯ - ಶ್ರೀರಾಮನ, ತೇಜಸಾಚ - ತೇಜಸ್ಸಿನಿಂದಲೂ, ಮಮ-ನನ್ನ, ಪಿತುಃ-ತಂದೆಯಾದ ವಾಯುವಿನ, ಸಖ್ಯೇನ - ಸ್ನೇಹದಿಂದ, ಪಾವಕಶ್ಚ-ಅಗ್ನಿಯೂ, ಮಾಂ-ನನ್ನನ್ನು ನದಹತಿ - ಸುಡುತಲಿಲ್ಲ ॥೨೮॥ ಕಪಿಕುಂಜರಃ - ವಾನರ ಶ್ರೇಷ್ಠನೆನಿಸಿದ, ಸಃ - ಆ ಮಾರುತಿಯು, ಭೂಯಃ - ಮರಳಿ, ಮುಹೂರ್ತಂ - ಸ್ವಲ್ಪಹೊತ್ತು (ಕರ್ತವ್ಯಂ - ಮುಂದಿನ ಕೆಲಸವನ್ನು) ಚಿಂತಯಾಮಾಸ - ಯೋಚಿಸಿದನು, ಅಥ - ಆ ಹಿಂದೆ, ಮಹಾಕಪಿಃ - ವಾನರೋತ್ತಮನು, ವೇಗೇನ - ವೇಗದಿಂದ, ಉತ್ಪಪಾತ - ಮೇಲಕ್ಕೆ ಹಾರಿದನು, ನನಾದಚ - ಸಿಂಹಗರ್ಜನೆಯನ್ನೂ ಮಾಡಿದನು ॥೨೯॥ ತತಃ - ತರುವಾಯ, ಶ್ರೀಮಾನ್ - ಶೋಭಾಸಂಪನ್ನನಾದ, ಅನಿಲಾತ್ಮಜಃ - ಆಂಜನೇಯನು, ವಿಭಕ್ತರಕ್ಷಸ್ಸಂಬಾಧಂ - ರಕ್ಕಸರ ಗದ್ದಲವನ್ನು ಬೇರ್ಪಡಿಸುವ (ರಾಕ್ಷಸಸಂಚಾರವಿಲ್ಲದ) ಶೈಲಶೃಂಗಮಿವ -

---

ಅಸಮಯದಲ್ಲಿ, ಮತ್ತು ಅಸ್ಥಾನದಲ್ಲಿ, ಮೈನಾಕಪರ್ವತವು ಬಂದು ಉಪಚರಿಸಿದುದೂ, ಈಗ ಲೀತೀಪ್ರಾರ್ಚಿಗಳನ್ನೊಳಗೊಂಡಿರುವ ಅಗ್ನಿಯು ಶಾಂತವಾಗಿರುವುದೂ, ಮಹಾನುಭಾವನಾದ ಶ್ರೀರಾಮಚಂದ್ರನ ಮಹಿಮೆಯಿಂದಲ್ಲದೆ ಬೇರಲ್ಲ॥೨೬॥ ಸಮುದ್ರದ ಮೇಲೆ ಹಾರಿಬರುತಲಿರುವಾಗ, ನಿರಾಲಂಬವಾದ ಮಾರ್ಗದಲ್ಲಿ ಸಾಗರಮೈನಾಕರಿಬ್ಬರೂ ಕೃತಜ್ಞರಾಗಿ ಶ್ರೀರಾಮ ಮಹಿಮೆಯಿಂದ ನನಗೆ ಕಾರ್ಯಾನುಕೂಲರಾಗಿರುವಲ್ಲಿ, ನನಗೆ ತಂದೆಯೂ, ಆತನಿಗೆ ಮಿತ್ರನೂ ಆಗಿರುವ ಅಗ್ನಿವಾಯುಗಳಿಬ್ಬರೂ ಕಾರ್ಯಸಹಾಯಕರಾಗಲು ಅಡ್ಡಿಯೇನು? ॥ ಸೀತಾದೇವಿಯ ಪಾತಿವ್ರತ್ಯದ ಮಹಿಮೆಯಿಂದಲೂ, ಶ್ರೀರಾಮನ ಪ್ರತಾಪದ ಪ್ರಭಾವದಿಂದಲೂ, ನನ್ನ ತಂದೆಯಲ್ಲಿರುವ ಸ್ನೇಹದಿಂದಲೂ ಪಾವಕನು ನನ್ನನ್ನು ಸುಡದೆ ಇದ್ದಾನೆ. ಎಂದೀಪ್ರಕಾರವಾಗಿ ಮಾರುತಿಯು-ಸ್ವಲ್ಪಹೊತ್ತಿನವರೆಗೂ ಚಿಂತಿಸುತಲಿದ್ದು, ಮರಳಿ ಈಗ ಮಾಡಬೇಕಾದ ಕೆಲಸವೇನಿರುವುದೆಂದು ಆಲೋಚಿಸುತ ಮೇಲಕ್ಕೆ ಹಾರಿದನು ॥೨೯॥ ॥

ಉತ್ಪಪಾತಾಥ ವೇಗೇನ ನನಾದ ಚ ಮಹಾಕಪಿಃ ।
ಪುರದ್ವಾರಂ ತತಶ್ಶ್ರೀಮಾನ್ ಶೈಲಶೃಂಗ ಮಿವೋನ್ನತಂ ॥೪೦॥
ವಿಭಕ್ತ ರಕ್ಷಸ್ಸಂಬಾಧ ಮಾಸಸಾದಾನಿಲಾತ್ಮಜಃ ।
ಸ ಭೂತ್ವಾ ಶೈಲಸಂಕಾಶಃ ಕ್ಷಣೇನ ಪುನ ರಾತ್ಮವಾನ್ ॥೪೧॥
ಹ್ರಸ್ವತಾಂ ಪರಮಾಂ ಪ್ರಾಪ್ತೋ ಬಂಧನಾ ನ್ಯವಶಾತಯತ್ ॥೪೧॥
ವಿಮುಕ್ತ ಶ್ಚಾಭವ ಚ್ಛ್ರೀಮಾನ್ ಪುನಃ ಪರ್ವತ ಸನ್ನಿಭಃ ।
ವೀಕ್ಷಮಾಣ ಶ್ಚ ದದೃಶೇ ಪರಿಘಂ ತೋರಣಾಶ್ರಿತಮ್ ॥೪೨॥
ಸ ತಂ ಗೃಹ್ಯ ಮಹಾಬಾಹುಃ ಕಾಲಾಯಸ ಪರಿಷ್ಕೃತಂ ।
ರಕ್ಷಿಣ ಸ್ತಾ ನ್ಪುನ ಸ್ಸರ್ವಾನ್ ಸೂದಯಾಮಾಸ ಮಾರುತಿಃ ॥೪೩॥

ಪರ್ವತಶಿಖರದಂತೆ, ಉನ್ನತಂ - ಎತ್ತರವಾದ, ಪುರದ್ವಾರಂ - ಊರುಬಾಗಿಲನ್ನು, ಆಸಸಾದ-ಹೊಂದಿದನು ॥೪೦॥ ಆತ್ಮವಾನ್ - ಧೀರಸ್ವಭಾವವುಳ್ಳ, ಸಃ-ಆ ಮಾರುತಿಯು, ಕ್ಷಣೇನ - ಸ್ವಲ್ಪಕಾಲದಿಂದಲೇ, ಶೈಲಸಂಕಾಶಃ - ಬೆಟ್ಟಕ್ಕೆಣೆಯೆನಿಸಿದವನು, ಭೂತ್ವಾ - ಆಗಿ, ಪುನಃ - ಮರಳಿ, ಪರಮಾಂ - ಬಹುಹೆಚ್ಚಾದ, ಹ್ರಸ್ವತಾಂ - ಸೂಕ್ಷ್ಮತೆಯನ್ನು, ಪ್ರಾಪ್ತಃ - ಹೊಂದಿದವನಾಗಿ, ಬಂಧನಾನಿ - ಕಟ್ಟುಗಳನ್ನು, ಅವಶಾತಯತ್ - ಸಡಲಿಸಿದನು (ನಾಶಪಡಿಸಿದನು) ॥೪೧॥ ಶ್ರೀಮಾನ್ - ಧೈರ್ಯಸಂಪದವುಳ್ಳ (ಸಃ - ಆಮಾರುತಿಯು) ವಿಮುಕ್ತಃ - ಕಟ್ಟುಗಳಿಂದ ಬಿಡಲ್ಪಟ್ಟವನಾಗಿ, ಪುನಃ - ಮರಳಿ, ಪರ್ವತ ಸನ್ನಿಭಃ - ಬೆಟ್ಟದಂತೆ ತೋರವಾದವನು, ಅಭವತ್ - ಆದನು, ತೋರಣಾಶ್ರಿತಂ - ಹೊರಬಾಗಿಲಿನಲ್ಲಿರುವ, ಪರಿಘಂ - ಲೋಹದಂಡವನ್ನು, ವೀಕ್ಷಮಾಣಃ - ನೋಡುತಲಿರುವವನಾಗಿ, ದದೃಶೆ - ಕಾಣಬಂದನು ॥ ಮಹಾಬಾಹುಃ - ಹೇರಳವಾದ ತೋಳ್ಬಲವುಳ್ಳ, ಸಃಮಾರುತಿಃ - ಆ ಹನುಮನು, ಕಾಲಾಯುಸಪರಿಷ್ಕೃತಂ - ಕಬ್ಬಿಣದಿಂದ ಮಾಡಿರುವ, ತಂ - ಆ ಲೋಹದಂಡವನ್ನು, ಗೃಹ್ಯ- ತೆಗೆದುಕೊಂಡು, (ಗೃಹೀತ್ವಾ) ರಕ್ಷಿಣಃ - ಕಾವಲುಗಾರರಾದ, ತಾನ್ - ಆಹೊರಬಾಗಿಲಿನಲ್ಲಿದ್ದ, ಸರ್ವಾನ್ ಪುನಃ - ರಕ್ಕಸರನ್ನೆಲ್ಲರನ್ನೂ, ಸೂದಯಾಮಾಸ - ನಾಶಗೊಳಿಸಿದನು ॥೪೩॥ ರಣಚಂಡವಿಕ್ರಮಃ - ಕಾಳಗದಲ್ಲಿ ತೀವ್ರವಾದ ಪರಾಕ್ರಮವುಳ್ಳ, ಸಃ-ಆ ಹನುಮಂತನು, ತಾನ್ - ಆ ದ್ವಾರರಕ್ಷಕರನ್ನು, ನಿಹತ್ಯಾ - (ನಿಹತ್ಯ) ಕೊಂದು, ಪುನಃ ಮರಳಿ, ಲಂಕಾಮೇವ-ಲಂಕೆಯನ್ನೇ, ಸಮಿಕ್ಷಮಾಣಃ-ನೋಡುತಲಿರುವವನಾಗಿ,

ಧೈರ್ಯಲಕ್ಷ್ಮಿಯಿಂದೊಡಗೂಡಿದ ಆ ಅನಿಲಾತ್ಮಜನು - ಬಂದೇ ಕುಪ್ಪಳಿನಿಂದ ಹಾರಿಬಂದು ಬೆಟ್ಟದಂತೆ ಬಹುಎತ್ತರವಾಗಿರುವ ಆ ಲಂಕಾನಗರದ ಪುರದ್ವಾರದಲ್ಲಿನ ನಿರ್ಜನವಾದ ದ್ವಾರ ಪ್ರದೇಶಕ್ಕೆ ಬಂದಿಳಿದನು ॥೪೦॥ ಬಳಿಕ ಮಹಾಧೀರನಾದ ಆ ಹರಿಯು-ಪರ್ವತಾಕಾರವಾಗಿ ಬೆಳೆದು ಕೆಲವು ಕಟ್ಟುಗಳನ್ನೂ, ಬಹು ಸೂಕ್ಷ್ಮವಾದರೂಪನ್ನು ತಾಳುತ್ತ ಕೆಲವು ಕಟ್ಟುಗಳನ್ನೂ, ಸಡಲಿಸಿ ತುಂಡುತುಂಡಾಗಿ ಮಾಡಿಕೆಡಹಿದನು॥೪೧॥ ಮಹಾ ಶೂರನಲ್ಲವೆ? ಕೂಡಲೆ ಮರಳಿ ಮಹಾಗಿರಿಯಂತೆ ಬೆಳೆದು,ರಕ್ಕಸರೆಲ್ಲರೂ ತನ್ನನ್ನು ನೋಡುತ್ತಿರುವಹಾಗೆಯೇ ಪಕ್ಕದಲ್ಲಿ ದ್ವಾರಬಂಧನಕ್ಕಣಿಮಾಡಿದ್ದ ಬಹುತೋರವಾದ ಲೋಹದಂಡವನ್ನು ನೋಡಿದನು ॥೪೨॥ ರಣಚಂಡವಿಕ್ರಮನಾದ ಆಂಜನೇಯನು, ತೋರವಾಗಿರುವ ಆ ಕಬ್ಬಿಣದ ಆಯುಧವನ್ನೆತ್ತಿ, ಬಾಗಿಲಿನಲ್ಲಿಕಾವಲುಗಾರರಾಗಿದ್ದ ರಕ್ಕಸರನ್ನೆಲ್ಲಉಕ್ಕಿ, ತರಿದೊಟ್ಟಿ, ಮರಳಿ

ಸ ತಾ ನ್ನಿಹತ್ವಾ ರಣ ಚಂಡ ವಿಕ್ರಮು ಸ್ಸಮೀಕ್ಷಮಾಣಃ ಪುನರೇವ ಲಂಕಾಂ ||
ಪ್ರದೀಪ್ತ ಲಾಂಗೂಲ ಕೃತಾರ್ಚಿಮಾಲೀ ಪ್ರಕಾಶತಾದಿತ್ಯ ಇವಾರ್ಚಿಮಾಲೀ ||೪೪|| ||

ಇತಿ ಶ್ರೀಮತ್ಸುಂದರಕಾಂಡೆ - ತ್ರಿಪಂಚಾಶಸ್ಸರ್ಗಃ.

---

ಪ್ರದೀಪ್ತ - ಉರಿಯುತಲಿರುವ, ಲಾಂಗೂಲ - ಬಾಲದಿಂದ, ಕೃತ - ಮಾಡಲ್ಪಟ್ಟ, ಅರ್ಚಿಮಾಲೀ- (ಅರ್ಚಿರ್ಮಾಲೀ) ಜ್ವಾಲೆಗಳ ಜಾಲವುಳ್ಳವನಾಗಿ, (ಅರ್ಚಿಮಾಲೀ) - ಕಾಂತಿ ಪಙ್ತಿಯುಳ್ಳ, ಆದಿತ್ಯ ಇವ - ಸೂರ್ಯನಂತೆ, ಪ್ರಕಾಶತ (ಪ್ರಾಕಾಶತ) - ಹೊಳೆಯುತಲಿದ್ದನು ||೪೪|| ||

— ಇಂತು ಐವತ್ತು ಮೂರನೆಯ ಸರ್ಗಂ —

---

ಲಂಕೆಯ ಕಡೆಗೆ ಹಾಯನೋಡುತ್ತಾ, ಬಾಲದಲ್ಲಿ ಬೆಳಗುತಲಿರುವ ಅಗ್ನಿಜ್ವಾಲೆಗಳಿಂದ ಆವರಿಸಲ್ಪಟ್ಟಿರುವ ಆಂಜನೇಯನು ತೇಜೋರಾಶಿಯಾದ ಬಾಲಸೂರ್ಯನಂತೆ ಕಂಗೊಳಿಸುತಲಿದ್ದನು ||೪೪||

— ಇಂತು ಐವತ್ತುಮೂರನೆಯ ಸರ್ಗಂ —

---

—ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ—

## — ಚತುಃ ಪಂಚಾಶಸ್ಸರ್ಗಃ —

---

ವೀಕ್ಷಮಾಣ ಸ್ತತೋ ಲಂಕಾಂ ಕಪಿಃ ಕೃತ ಮನೋರಥಃ ||
ವರ್ಧಮಾನ ಸಮುತ್ಸಾಹಃ ಕಾರ್ಯಶೇಷ ಮಚಿಂತಯತ್ ||೧||

---

— ಐವತ್ತನಾಲ್ಕನೆಯ ಸರ್ಗಂ —

ಕಂದ|| ವಾಲದಿ ಬೆಳಗುವ ಕಿಚ್ಚಿಗೆ, ಮೇಲೆನಿಸುತೆ ಮೆರೆಯುತಿರ್ದ ಲಂಕೆಯ ನಾಗಳ್ |
ಕಾಲನ ತೆರದಿಂ ಮಾರುತಿ | ಲೀಲೆಯಿನಾಹುತಿಯ ನಿತ್ತು ತೃಪ್ತಿಯ ನಡೆಸಂ ||

ತತಃ - ತರುವಾಯ, ಕಪಿಃ - ಆಂಜನೇಯನು, ಲಂಕಾಂ-ಲಂಕಾನಗರವನ್ನು, ವೀಕ್ಷಮಾಣಃ- ನೋಡುತಲಿರುವವನಾಗಿ, ಕೃತಮನೋರಥಃ - ಪಡೆದ ಕೋರಿಕೆಯುಳ್ಳವನಾದ ಕಾರಣವೇ, ವರ್ಧಮಾನ ಸಮುತ್ಸಾಹಃ - ಹೆಚ್ಚುತಲಿರುವ ಸಂತೋಷವಿಲಾಸವುಳ್ಳವನಾಗುತ್ತಾ, ಕಾರ್ಯಶೇಷಂ - ಮುಂದೆ ಉಳಿದಿರುವ ಕಾರ್ಯವನ್ನು, ಅಚಿಂತಯತ್ - ಯೋಚಿಸ ತೊಡಗಿದನು ||೧|| ಯತ್ - ನಾನು ಮಾಡಿದ ಯಾವ ಕೆಲಸವು, ಏಷಾಂ - ಈ, ರಕ್ಷಸಾಂ - ರಾಕ್ಷಸರಿಗೆ, ಭೂಯಃ - ಬಹಳವಾಗಿ, ಸಂತಾಪಜನನಂ - ಸಂಕಟವನ್ನುಂಟುಮಾಡತಕ್ಕದು, ಭವೇತ್- ಆಗುವುದೋ, ಇಹ- ಈ ಲಂಕೆಯಲ್ಲಿ, ಸಾಂಪ್ರತಂ - ಈಗ

---

— ಐವತ್ತನಾಲ್ಕನೆಯ ಸರ್ಗಂ —

ಆ ತರುವಾಯ ಮಾರುತಾತ್ಮಜನು—ಮನೋರಥವೆಲ್ಲ ಸಫಲವಾಯಿತೆಂದು ಲಂಕಾನಗರವನ್ನು ನೋಡುತ್ತಾ, ಮನೋಲ್ಲಾಸದೊಡನೆ ಬೆಳೆದನು ಮುಂದೆ ಮಾಡಬೇಕಾಗಿ ಉಳಿದ ಕೆಲಸವನ್ನು ಯೋಚಿಸತೊಡಗಿದನು||೧||ಈಗ ನಾನು ಮಾಡಬೇಕಾದಕಾರ್ಯಭಾಗವು

ಕಿನ್ನು ಖಲ್ವವಶಿಷ್ಟಂ ಮೇ ಕರ್ತವ್ಯ ಮಿಹ ಸಾಂಪ್ರತಂ ।
ಯದೇಷಾಂ ರಕ್ಷಸಾಂ ಭೂಯ ಸ್ಸಂತಾಪ-ಜನನಂ ಭವೇತ್ ॥೨॥
ವನಂ ತಾವ ತ್ಪ್ರಮಥಿತಂ ಪ್ರಕೃಷ್ಟಾ ರಾಕ್ಷಸಾ ಹತಾಃ ।
ಬಲೈಕ ದೇಶಃ ಕ್ಷಪಿತ ಶ್ಶೇಷಂ ದುರ್ಗ ವಿನಾಶನಮ್ ॥೩॥
ದುರ್ಗೇ ವಿನಾಶಿತೇ ಕರ್ಮ ಭವೇ ತ್ಸುಖ ಪರಿಶ್ರಮಮ್ ।
ಅಲ್ಪಯತ್ನೇನ ಕಾರ್ಯೇ$\mathcal{S}$ಸ್ಮಿನ್ ಮಮ ಸ್ಯಾ ತ್ಸಫಲ ಶ್ಶ್ರಮಃ ॥೪॥
ಯೋಹ್ಯಯಂ ಮಮ ಲಾಂಗೂಲೇ ದೀಪ್ಯತೇ ಹವ್ಯವಾಹನಃ ।

ಮೇ-ನನಗೆ, ತತ್-ಅಂತಹ, ಕಿನ್ನುಖಲು - ಮತ್ತೆಯಾವ, ಕರ್ತವ್ಯಂ-ಮಾಡಬೇಕಾದ ಕೆಲಸವು, ಅವಶಿಷ್ಟಂ-ಉಳಿದಿದೆ ॥೨॥ ತಾವತ್ - ಸಂಪೂರ್ಣವಾಗಿ (ಮೊದಲು) ವನಂ-ಅಶೋಕವನವು, ಪ್ರಮಥಿತಂ-ಧ್ವಂಸಮಾಡಲ್ಪಟ್ಟಿತು, ಪ್ರಕೃಷ್ಟಾಃ - ಪ್ರಬಲರೆನಿಸಿದ, ರಾಕ್ಷಸಾಃ-ದೈತ್ಯರು, ಹತಾಃ-ಕೊಲ್ಲಲ್ಪಟ್ಟರು, ಬಲೈಕದೇಶಃ-ಸೇನೆಯ ಒಂದುಭಾಗವು, ಕ್ಷಪಿತಃ - ನಾಶಗೊಳಿಸಲ್ಪಟ್ಟಿತು, ದುರ್ಗವಿನಾಶನಂ-ಈ ಕೋಟೆಯನ್ನು ಸುಡೋಣವು ಮಾತ್ರವೇ, ಶೇಷಂ-ಉಳಿದಿದೆ ॥೩॥ (ಮಯಾ-ನನ್ನಿಂದ) ದುರ್ಗೇ - ಕೋಟೆಯು, ವಿನಾಶಿತೇ - (ಸತಿ) ಹಾಳುಮಾಡಲ್ಪಡುತ್ತಿರಲಾಗಿ, ಕರ್ಮ - ಹಿಂದೆ ನಾನು ಮಾಡಿದ ವನಭಂಗವೇ ಮೊದಲಾದ ಕೆಲಸವು, ಸುಖಪರಿಶ್ರಮಂ - ಸುಖಕರವೆನಿಸಿದ ಆಯಾಸವುಳ್ಳುದು, ಭವೇತ್-ಆಗುವುದು, ಅಲ್ಪಯತ್ನೇನ-ಮಿತವಾದ ಪ್ರಯತ್ನದಿಂದಲೇ, ಅಸ್ಮಿನ್-ಈ, ಕಾರ್ಯೇ - ದುರ್ಗವಿನಾಶರೂಪವಾದ ಕಾರ್ಯವು, (ಕೃತೇಸತಿ - ಮಾಡಲ್ಪಡುತ್ತಿರಲಾಗಿ) ಮಮ-ನನ್ನ, ಶ್ರಮಃ-ಆಯಾಸವು, ಸಫಲಃ-ಸಾರ್ಥಕವಾದುದು, ಭವೇತ್-ಆಗುವುದು ॥೪॥ ಯಃ-ಯಾವ, ಅಯಂ-ಈ, ಹವ್ಯವಾಹನಃ-ಅಗ್ನಿಯು, ಮಮ-ನನ್ನ, ಲಾಂಗೂಲೆ-ಬಾಲದಲ್ಲಿ, ದೀಪ್ಯತೆ-ಬೆಳಗುತಲಿದೆಯೋ, ಅಸ್ಯ-ಈ ಅಗ್ನಿಗೆ, ಏಭಿಃ-ಈ, ಗೃಹೋತ್ತಮೈಃ-ಉತ್ತಮವಾದ ಮನೆಗಳಿಂದ, ಸಂತರ್ಪಣಂ-ಒಳ್ಳೆಯ ಸಮಾರಾಧನೆಯು, ಕರ್ತುಂ-ಮಾಡಲಿಕ್ಕೆ.

ಏನು ಉಳಿದಿದೆ ; ಯಾವುದನ್ನು ಮಾಡಿದರೆ ಲಂಕಾನಗರ ನಿವಾಸಿಗಳಾದ ರಕ್ಕಸರಿಗೆಲ್ಲ ಹೇರಳವಾದ ಸಂಕಟವುಂಟಾಗುವುದು ? ॥೨॥ ಮೊಟ್ಟಮೊದಲು ಈ ಪಟ್ಟಣಕ್ಕೆ ಮುಖಾಲಂಕಾರವಾಗಿದ್ದ ಅಶೋಕವನವನ್ನು ಬುಡಮುಟ್ಟ ಮುರಿದು ಹಾಳುಮಾಡಿದುದಾಯಿತು. ಪ್ರಬಲರಾದ ರಕ್ಕಸರನ್ನೆಲ್ಲ ಸದೆಬಡಿದೆನು, ರಾವಣನ ಪಡೆಯ ಒಂದುಭಾಗವನ್ನೇ ನಾಶಗೊಳಿಸಿದಂತಾಯಿತು, ಆದರೆ ಈ ಲಂಕಾದುರ್ಗವೊಂದನ್ನು ನಾಶಗೊಳಿಸಿದರೆ, ಆಗ ನನ್ನ ಕೈಲಾದಮಟ್ಟಿಗೆ ಎಲ್ಲವನ್ನೂ ಮಾಡಿದಂತಾಗಬಹುದು ॥೩॥ ನಾನು ಇದುವರೆಗೆ ಮಾಡಿದ ಸಮುದ್ರಲಂಘನವೇ ಮೊದಲಾದ ಕೆಲಸವೆಲ್ಲ ಬಹು ಶ್ರಮಸಾಧ್ಯವಾದುದು, ಈಗಲೀಲಂಕೆಯ ಕೋಟೆಗೆ ಅಲ್ಪಪ್ರಯತ್ನದಿಂದ ಬೆಂಕಿಯನ್ನಿಟ್ಟರೆ, ಆ ಬಳಲಿಕೆಯೆಲ್ಲ ಪರಿಹರವಾಗಿ, ಮನಸ್ಸಿಗೆ ವಿಶ್ರಾಂತಿಯುಂಟಾಗುವುದು ॥೪॥ ಅಗ್ನಿಗೆ ಹವಿಸ್ಸನ್ನು ಭಕ್ಷಿಸುವವನು ಎಂಬ ಹೆಸರು ಲೋಕಪ್ರಸಿದ್ಧವಾಗಿದೆ, ಈಗ ಆ ಹುತಾಶನನು ನನ್ನ ಬಾಲದಲ್ಲಿ ಬೆಳಗುತಲಿದಾನೆ, ಇಷ್ಟುಹೊತ್ತೂ ನನ್ನ ವಾಲಧಿಯನ್ನು ಆಶ್ರಯಿಸಿ ಇದ್ದು, ನನ್ನ ಮನಸ್ಸಿಗೆ ಕೊರತೆಯನ್ನು ಉಂಟುಮಾಡದೆ ಇದ್ದುದರಿಂದ ಈತನಿಗೆ ಈಗ-ಈ ಲಂಕೆಯೊಳಗಣ ದಿವ್ಯಭವನಗಳನ್ನೆಲ್ಲ ಸಮರ್ಪಿಸಿದರೆ, ನಾನು ಸಂತರ್ಪಣೆಯನ್ನು ಮಾಡಿದಂತಾಗುವುದು. ಇದೇ ನ್ಯಾಯವಾದ

ಅಸ್ಯ ಸಂತರ್ಪಣಂ ನ್ಯಾಯ್ಯಂ ಕರ್ತುಮೇಭಿರ್ಗೃಹೋತ್ತಮೈಃ ||೫||
ತತಃ ಪ್ರದೀಪ್ತ ಲಾಂಗೂಲ ಸ್ಸವಿದ್ಯುದಿವ ತೋಯದಃ ।
ಭವನಾಗ್ರೇಷು ಲಂಕಾಯಾ ವಿಚಚಾರ ಮಹಾಕಪಿಃ ||೬||
ಗೃಹಾದ್ಗೃಹಂ ರಾಕ್ಷಸಾನಾ ಮುದ್ಯಾನಾನಿ ಚ ವಾನರಃ ।
ವೀಕ್ಷಮಾಣೋ ಹ್ಯಸಂತ್ರಸ್ತಃ ಪ್ರಾಸಾದಾಂಶ್ಚ ಚಚಾರ ಸಃ ||೭||
ಅವಪ್ಲುತ್ಯ ಮಹಾವೇಗಃ ಪ್ರಹಸ್ತಸ್ಯ ನಿವೇಶನಮ್ ।
ಅಗ್ನಿಂ ತತ್ರ ಸ ನಿಕ್ಷಿಪ್ಯ ಶ್ವಸನೇನ ಸಮೋ ಬಲೀ ||೮||
ತತೋನ್ಯತ್ಪುಪ್ಲುವೇ ವೇಶ್ಮ ಮಹಾಪಾರ್ಶ್ವಸ್ಯ ವೀರ್ಯವಾನ್ ।

---

ನ್ಯಾಯ್ಯಂ - ತಕ್ಕುದೆನಿಸಿದೆ ||೫|| ತತಃ - ಹಾಗೆ ಆಲೋಚನೆ ಮಾಡಿದಮೇಲೆ, ಪ್ರದೀಪ್ತಲಾಂಗೂಲಃ-ಉರಿಯುತಲಿರುವ ಬಾಲವುಳ್ಳ, ಮಹಾಕಪಿಃ - ವಾನರೋತ್ತಮನು, ಸವಿದ್ಯುತ್-- ಮಿಂಚಿನಿಂದೊಡಗೂಡಿದ, ತೋಯದಇವ-ಸಂಧ್ಯಾಕಾಲದ ಮೇಘದಹಾಗೆ, ಲಂಕಾಯಾಃ - ಲಂಕಾನಗರಿಯ, ಭವನಾಗ್ರೇಷು-ಮನೆಗಳ ಮೇಲ್ಭಾಗಗಳಲ್ಲಿ, ವಿಚಚಾರ - ಸಂಚರಿಸುತಲಿದ್ದನು ||೬|| ಸಃ-ಆ, ವಾನರಃ-ಕಪಿಯು, ರಾಕ್ಷಸಾನಾಂ-ರಕ್ಕಸರ, ಗೃಹಾತ್-ಮನೆಯ ದೆಸೆಯಿಂದ, ಗೃಹಂ--ಮತ್ತೊಂದು ಮನೆಯನ್ನೂ ಉದ್ಯಾನಾನಿಚ-ಉಪವನಗಳನ್ನೂ, ಪ್ರಾಸಾದಾಂಶ್ಚ-ರಾಜಭವನಗಳನ್ನೂ, ವೀಕ್ಷಮಾಣಃ- ನೋಡುತಲಿರುವವನಾಗಿ, ಅಸಂತ್ರಸ್ತಃ-ಭಯವಿಲ್ಲದವನಾಗಿಯೇ ಚಚಾರ- ತಿರುಗುತಲಿದ್ದನು ||೭|| ಶ್ವಸನೇನ-ವಾಯುವಿನೊಡನೆ, ತುಲ್ಯಃ-ಸಮಾನನಾದ ಕಾರಣವೇ, ಮಹಾವೇಗಃ - ಬಹುವೇಗವುಳ್ಳವನೂ, ಬಲೀ-ಬಲಿಷ್ಠನೂ, ವೀರ್ಯವಾನ್- ಶೌರ್ಯವುಳ್ಳವನೂ ಆಗಿರುವ, ಸಃ-ಆ, ಹನುಮಾನ್ - ಆಂಜನೇಯನು, ಪ್ರಹಸ್ತಸ್ಯ-ಪ್ರಹಸ್ತನೆಂಬ ಮಂತ್ರಿಯ, ನಿವೇಶನಂ - ಮನೆಯನ್ನು ಕುರಿತು, ಅವಪ್ಲುತ್ಯ - ಹೊಂದಿ, ತತ್ರ-ಅಲ್ಲಿ ಅಗ್ನಿಂ-ಬೆಂಕಿಯನ್ನು, ನಿಕ್ಷಿಪ್ಯ-ಇಟ್ಟು, ತತಃ-ತರುವಾಯ, ಅನ್ಯತ್- ಬೇರೊಂದಾದ, ಮಹಾಪಾರ್ಶ್ವಸ್ಯ-ಮಹಾಪಾರ್ಶ್ವನೆಂಬ ರಾಕ್ಷಸನ, ವೇಶ್ಮ - ಮನೆಯನ್ನು ಕುರಿತು, ಪುಪ್ಲುವೆ - ಕುಪ್ಪಳಿಸಿದನು (ಸಃ-ಆ ಹನುಮಂತನು) ಕಾಲಾನಲಶಿಖೋಪಮಂ- ಪ್ರಳಯಾಗ್ನಿಗೆಣೆಯೆನಿಸಿದ, ಅಗ್ನಿಂ-ಕಿಚ್ಚನ್ನು, ಮುಮೋಚ-ಬಿಟ್ಟನು ||೮, ೯|| ಮಹಾತೇಜಾಃ - ಹೇರಳವಾದ ಪ್ರತಾಪವುಳ್ಳ, ಹರಿಯೂಥಪಃ - ವಾನರಾಗ್ರೇಸರ

---

ಕೆಲಸ ||೫|| ಎಂದು ಮನದೊಳಾಲೋಚಿಸಿದ ಮರುನ್ನಂದನನು-ಬಾಲದೊಳುರಿಯುತಲಿರುವ ಬೆಂಕಿಯಿಂದ ಮಿಂಚಿನೊಡಗೂಡಿರುವ ಮೇಘದಂತೆ ಬೆಳಗುತ್ತಾ, ಲಂಕಾನಗರಿಯ ದಿವ್ಯರಾಜಸದನಗಳ ಮೇಲೆ ಸಂಚರಿಸತೊಡಗಿದನು ||೬|| ಒಂದುಮನೆಯಿಂದ ಬೇರೊಂದು ಮನೆಗೂ ರಾಕ್ಷಸರ ಮನೆದೋಟಗಳೊಳಗೆ ಒಂದರಿಂದ ಮತ್ತೊಂದಕ್ಕೂ ಹಾರುತ್ತಾ, ಅವುಗಳನ್ನೆಲ್ಲ ಕ್ರಮವಾಗಿ ನೋಡಿಕೊಂಡು, ನಿರ್ಭಯನಾಗಿ ಉಪ್ಪರಿಗೆಗಳ ಮೇಲೆ ತಿರುಗುತಬಂದನು ||೭|| ಹಾಗೆಯೇ ಒಂದುಸಾರಿ ಮಹಾವೇಗಸಂಪನ್ನನಾಗಿ ಪ್ರಹಸ್ತನೆಂಬ ರಾವಣನ ಮುಖ್ಯಮಂತ್ರಿಯ ಮನೆಯಮೇಲಕ್ಕೆ ಕುಪ್ಪಳಿಸಿ ಅಗ್ನಿಗೆಣೆಯಾದ ಮಾರುತಿಯು ಅಲ್ಲಿ ಅಗ್ನಿಪ್ರತಿಷ್ಠೆಯನ್ನು ಮಾಡಿದನು ||೮|| ಅಲ್ಲಿಂದ ಮಹಾಪಾರ್ಶ್ವನೆಂಬ ನಿಶಾಚರನ ಮನೆಯ ಮೇಲಕ್ಕೆ ಚಂಗನೆ ಹಾರಿದನು. ವೀರಹನುಮನು ಅಲ್ಲಿಯೂ ಕಾಲಾಗ್ನಿಯಂದದೊಳುರಿವ ಕಿಚ್ಚನ್ನು ಮುಟ್ಟಿಸಿದನು||೯|| ಆ ಹಿಂದೆ-ವಜ್ರದಂತಹ ಕೋರೆಹಲ್ಲಿನವನಾದ ವಜ್ರದಂಷ್ಟ್ರ

ಮುಮೋಚ ಹನುಮಾ ನಗ್ನಿಂ ಕಾಲಾನಲ ಶಿಖೋಪಮಮ್ ॥೯॥
ವಜ್ರದಂಷ್ಟ್ರಸ್ಯ ಚ ತಥಾ ಪುಪ್ಲುವೇ ಸ ಮಹಾಕಪಿಃ ।
ಶುಕಸ್ಯ ಚ ಮಹಾತೇಜಾ ಸ್ಸಾರಣಸ್ಯ ಚ ಧೀಮತಃ ॥೧೦॥
ತಥಾ ಚೇಂದ್ರಜಿತೋ ವೇಶ್ಮ ದದಾಹ ಹರಿ ಯೂಥಪಃ ।
ಜಂಬುಮಾಲೇ ಸ್ಸುಮಾಲೇಶ್ಚ ದದಾಹ ಭವನಂ ತತಃ ॥೧೧॥
ರಶ್ಮಿಕೇತೋಶ್ಚ ಭವನಂ ಸೂರ್ಯಶತ್ರೋ ಸ್ತಥೈವಚ ।
ಹ್ರಸ್ವಕರ್ಣಸ್ಯ ದಂಷ್ಟ್ರಸ್ಯ ರೋಮಶಸ್ಯ ಚ ರಕ್ಷಸಃ ॥೧೨॥
ಯುದ್ಧೋನ್ಮತ್ತಸ್ಯ ಮತ್ತಸ್ಯ ಧ್ವಜಗ್ರೀವಸ್ಯ ರಕ್ಷಸಃ ।
ವಿದ್ಯುಜ್ಜಿಹ್ವಸ್ಯ ಘೋರಸ್ಯ ತಥಾ ಹಸ್ತಿಮುಖಸ್ಯ ಚ ॥೧೩॥
ಕರಾಳಸ್ಯ ಪಿಶಾಚಸ್ಯ ಶೋಣಿತಾಕ್ಷಸ್ಯ ಚೈವಹಿ ।

---

ನೆನಿಸಿದ ಸಃ-ಆ, ಮಹಾಕಪಿಃ-ಆಂಜನೇಯನು, ತಥಾ-ಹಾಗೆಯೇ, ವಜ್ರದಂಷ್ಟ್ರಸ್ಯ - ವಜ್ರದಂಷ್ಟ್ರನೆಂಬುವವನ, ಧೀಮತಃ-ಬುದ್ಧಿವಂತನಾದ, ಶುಕಸ್ಯಚ- ಶುಕನೆಂಬುವವನ, ಸಾರಣಸ್ಯಚ-ಸಾರಣನ, ವೇಶ್ಮಚ - ಮನೆಯನ್ನು ಕುರಿತೂ, ಪುಪ್ಲುವೆ-ಹಾರಿದನು ॥೧೦॥ ತಥಾಚ- ಹಾಗೆಯೇ, ಇಂದ್ರಜಿತಃ - ಇಂದ್ರಜಿತುವಿನ, ವೇಶ್ಮ-ಮನೆಯನ್ನು, ದದಾಹ - ಸುಟ್ಟನು, ತತಃ-ಆಮೇಲೆ, ಜಂಬುಮಾಲೇಃ - ಜಂಬುಮಾಲಿಯ, ಸುಮಾಲೇಶ್ಚ - ಸುಮಾಲಿಯೆಂಬ ರಕ್ಕಸನ, ಭವನಂ-ಮನೆಯನ್ನು, ದದಾಹ-ಉರಿಸಿದನು ॥೧೧॥ ಮಹಾತೇಜಾಃ-ಮಹಾಪ್ರತಾಪವುಳ್ಳ, ಹರಿಪುಂಗವಃ - ಕಪಿವರನು, ರಶ್ಮಿಕೇತೋಶ್ಚ - ರಶ್ಮಿಕೇತುವಿನ, ಭವನಂ-ಮನೆಯನ್ನು, ತಥೈವ - ಹಾಗೆಯೇ, ಸೂರ್ಯಶತ್ರೋಃ - ಸೂರ್ಯಶತ್ರುವಿನ, ಹ್ರಸ್ವಕರ್ಣಸ್ಯ-ಹ್ರಸ್ವಕರ್ಣನ, ದಂಷ್ಟ್ರಸ್ಯ-ದಂಷ್ಟ್ರನ, ರೋಮಶಸ್ಯ - ರೋಮಶನೆಂಬ, ರಕ್ಷಸಃ-ರಾಕ್ಷಸನ ॥೧೨॥ ಯುದ್ಧೋನ್ಮತ್ತಸ್ಯ-ಯುದ್ಧೋನ್ಮತ್ತನೆಂಬುವವನ, ಮತ್ತಸ್ಯ-ಮತ್ತನೆಂಬುವವನ, ಧ್ವಜಗ್ರೀವಸ್ಯ-ಧ್ವಜಗ್ರೀವನೆಂಬ, ರಕ್ಷಸಃ-ರಾಕ್ಷಸನ, ವಿದ್ಯುಜ್ಜಿಹ್ವಸ್ಯ- ವಿದ್ಯುಜ್ಜಿಹ್ವನ, ತಥಾ-ಹಾಗೆಯೇ, ಘೋರಸ್ಯ-ಭಯಂಕರನಾದ, ಹಸ್ತಿಮುಖಸ್ಯಚ - ಹಸ್ತಿಮುಖನೆಂಬುವವನ ॥೧೩॥ ಕರಾಳಸ್ಯ-ಕರಾಳನ, ಪಿಶಾಚಸ್ಯ -

---

ಗಿಣಿಯ ಮೂಗಿನಂತೆ ಮೂಗುಳ್ಳ ಶುಕ, ಸಂಗೀತದಲ್ಲಿ ನಿಪುಣನಾಗಿದ್ದ ಸಾರಣ, ಈ ರಕ್ಕಸರ ಮನೆಗಳಿಗೆ ಕ್ರಮವಾಗಿ ಅಗ್ನಿಪ್ರವೇಶವನ್ನು ಮಾಡಿಸಿ ॥೧೦॥ ಹಾಗೆಯೇ ಮೆಲ್ಲಗೆ ತನ್ನನ್ನು ಮೊದಲು ಬ್ರಹ್ಮಾಸ್ತ್ರದಿಂದ ಕಟ್ಟಿದ ಇಂದ್ರಜಿತುವಿನ ಮನೆಯಬಳಿಗೆ ಬಂದು, ಆ ಮನೆಯು ಚೆನ್ನಾಗಿ ಸುತ್ತಲೂ ಹತ್ತಿಕೊಳ್ಳುವ ವರೆಗೂ ಅಗ್ನಿಯನ್ನು ಸಮರ್ಪಣೆಮಾಡಿ, ಆ ಮೇಲೆ ಜಂಬುಮಾಲಿಯ ಮನೆಯನ್ನು ಉರಿಸಿದನು ॥೧೧॥ ಅಲ್ಲಿಂದ ಮುಂದೆ ಹೊರಟನು-ಬೆಳಗುತಲಿರುವ ಧ್ವಜವನ್ನು ನಟ್ಟಿರುವ ರಶ್ಮಿಕೇತು, ಬಿಸಿಲಿಗೆಡೆಗುಡದಿರುವ ಸೂರ್ಯಶತ್ರು, ಮೋಟುಕಿವಿಯುವನಾದ ಹ್ರಸ್ವಕರ್ಣ, ನೀಳವಾದ ಹಲ್ಲುಳ್ಳ ದ್ರಂಷ್ಟ್ರ, ತುಂಬಿದ ಮೈಗೂದಲುಳ್ಳ ರೋಮಶ, ॥೧೨॥ ಕಾಳಗದಲ್ಲಿ ಬಲು ಕೊಬ್ಬಿದವನೆನಿಸಿದ ಯುದ್ಧೋನ್ಮತ್ತ, ಮದಶಾಲಿಯಾದ ಮದ, ದಾಳದಂತೆ ಕೊರಳುಳ್ಳ ಧ್ವಜಗ್ರೀವ, ಮಿಂಚಿನಂತೆ ಹೊಳೆವ ನಾಲಗೆಯುಳ್ಳ ಮಹಾಶೂರನಾದ ವಿದ್ಯುಜ್ಜಿಹ್ವ, ಆನೆಯಂತೆ ಮೋರೆಯುಳ್ಳ ಹಸ್ತಿ ಮುಖ॥ ಭಯಂಕರನೆನಿಸಿದ ಕರಾಳ, ಹಾಗೆಯೇ ಪಿಶಾಚ, ರಕ್ತದಂತೆ ಕೆಂಗಣ್ಣುಳ್ಳ ರಕ್ತಾಕ್ಷ

ಕುಂಭಕರ್ಣಸ್ಯ ಭವನಂ ಮಕರಾಕ್ಷಸ್ಯ ಚೈವಹಿ ॥೧೪॥
ಯಜ್ಞ ಶತ್ರೋಶ್ಚ ಭವನಂ ಬ್ರಹ್ಮಶತ್ರೋ ಸ್ತಥೈವ ಚ ।
ನರಾಂತಕಸ್ಯ ಕುಂಭಸ್ಯ ನಿಕುಂಭಸ್ಯ ದುರಾತ್ಮನಃ ॥೧೫॥
ವರ್ಜಯಿತ್ವಾ ಮಹಾತೇಜಾ ವಿಭೀಷಣ ಗೃಹಂ ಪ್ರತಿ ।
ಕ್ರಮಮಾಣಃ ಕ್ರಮೇಣೈವ ದದಾಹ ಹರಿ ಪುಂಗವಃ ॥೧೬॥
ತೇಷು ತೇಷು ಮಹಾರ್ಹೇಷು ಭವನೇಷು ಮಹಾಯಶಾಃ ।
ಗೃಹೇಷ್ವ ದ್ಧಿಮತಾ ಮೃದ್ಧಿಂ ದದಾಹ ಸ ಮಹಾಕಪಿಃ॥೧೭॥
ಸರ್ವೇಷಾಂ ಸಮತಿಕ್ರಮ್ಯ ರಾಕ್ಷಸೇಂದ್ರಸ್ಯ ವೀರ್ಯವಾನ್ ।
ಆಸಸಾ ದಾಥ ಲಕ್ಷ್ಮೀವಾನ್ ರಾವಣಸ್ಯ ನಿವೇಶನಮ್ ॥೧೮॥

ಪಿಶಾಚನ, ಶೋಣಿತಾಕ್ಷಸ್ಯಚೈವಹಿ-ಶೋಣಿತಾಕ್ಷನೆಂಬುವವನ, ಕುಂಭಕರ್ಣಸ್ಯ-ಕುಂಭಕರ್ಣನ, ಮಕರಾಕ್ಷಸ್ಯಚೈವಹಿ-ಮಕರಾಕ್ಷನೆಂಬ ರಕ್ಕಸನ, ಭವನಂ - ಮನೆಗಳನ್ನೂ, ॥೧೪॥ ಯಜ್ಞಶತ್ರೋಶ್ಚ-ಯಜ್ಞಶತ್ರುವೆಂಬುವವನ, ತಥೈವಚ- ಹಾಗೆಯೇ, ಬ್ರಹ್ಮಶತ್ರೋಃ -ಬ್ರಹ್ಮಶತ್ರುವಿನ, ನರಾಂತಕಸ್ಯ-ನರಾಂತಕನ, ಕುಂಭಸ್ಯ-ಕುಂಭನೆಂಬುವವನ, ದುರಾತ್ಮನಃ- ದುಷ್ಟಬುದ್ಧಿಯುಳ್ಳ, ನಿಕುಂಭಸ್ಯ-ನಿಕುಂಭನ, ಭವನಂ-ಮನೆಗಳನ್ನೂ ॥೧೫॥ ವಿಭೀಷಣಗೃಹಂ- ವಿಭೀಷಣನ ಮನೆಯನ್ನು, ವರ್ಜಯಿತ್ವಾ-ಬಿಟ್ಟು, ಪ್ರತಿಗೃಹಂ-ಪ್ರತಿಯೊಂದು ಮನೆಯನ್ನೂ, ಕ್ರಮೇಣೈವ- ಒರಸೆಯಾಗಿಯೇ, ಕ್ರಮಮಾಣಃ-ಹಾರುತಲಿರುವವನಾಗಿ, ಮಹಾತೇಜಾಃ-ಮಹಾಬಲನಾದ ಹನುಮಂತನು, ದದಾಹ-ಸುಡುತ್ತಬಂದನು ॥೧೬॥ ಮಹಾಯಶಾಃ-ಹೇರಳವಾದ ಕೀರ್ತಿಯುಳ್ಳ, ಸಃ-ಆ, ಮಹಾಕಪಿಃ-ಹನುಮಂತನು, ಮಹಾರ್ಹೇಷು- ಬಹುಬೆಲೆಯಾದ, ತೇಷುತೇಷು- ಆಯಾಯ, ಭವನೇಷು-ಮನೆಗಳಲ್ಲಿ, ಋದ್ಧಿಮತಾಂ - ಮಹದೈಶ್ವರ್ಯಶಾಲಿಗಳ, ಋದ್ಧಿಂ-ಸಮೃದ್ಧಿಯನ್ನೆಲ್ಲ, ದದಾಹ-ಸುಡುತಬಂದನು ॥೧೭॥ ಅಥ-ಅನೇಲೆ, ವೀರ್ಯವಾನ್-ಪರಾಕ್ರಮಶಾಲಿಯಾದ, ಲಕ್ಷ್ಮೀವಾನ್ - ಧೈರ್ಯಲಕ್ಷ್ಮಿಯುಳ್ಳ ಮಾರುತಿಯು, ಸರ್ವೇಷಾಂ - ಸಮಸ್ತರ ಮನೆಗಳನ್ನೂ, ಸಮತಿಕ್ರಮ್ಯ-ದಾಟಿ, ರಾಕ್ಷಸೇಂದ್ರಸ್ಯ-ರಕ್ಕಸರೊಡೆಯನಾದ, ರಾವಣಸ್ಯ-ರಾವಣಾಸುರನ

ಬುರಡೆಗಿವಿ ಯವನಾದ ಕುಂಭ ಕರ್ಣ, ಮೊಸಳೆಯಂತೆ ಕಣ್ಣುಳ್ಳ ಮಕರಾಕ್ಷ॥೧೪॥ ಮುನಿಗಳಾಚರಿಸುವ ಯಾಗಗಳನ್ನು ಹಾಳು ಮಾಡುವ ಯಜ್ಞಶತ್ರು,ತಪಸ್ವಿಗಳಾದ ಬ್ರಾಹ್ಮಣರನ್ನು ಹಿಂಸಿಸುವ ಬ್ರಹ್ಮ ಶತ್ರು, ಮಾನವರನ್ನು ತಿನ್ನುವುದರಲ್ಲಿ ನಿಪುಣನಾದ ನರಾಂತಕ, ಹಾಗೆಯೇ ಅಲ್ಲಲ್ಲಿ ಅಡಗಿ ಪ್ರಾಣಿಗಳನ್ನು ಹಿಂಸಿಸುವ ದುರಾತ್ಮರಾದ ಕುಂಭನಿಕುಂಭರು ॥ ಈ ಮೊದಲಾದವರ ಮನೆಗಳನ್ನೆಲ್ಲ ಅಗ್ನಿಗೆ ಆಹುತಿಯನ್ನು ಕೊಟ್ಟು, ಧರ್ಮಾತ್ಮನಾದ ವಿಭೀಷಣನ ಮನೆಯೊಂದನ್ನು ಮಾತ್ರ ಬಿಟ್ಟು, ಒಂದೊಂದು ಮನೆಯನ್ನೂಕ್ರಮವಾಗಿ ಸುಡುತ ಬಂದನು ॥೧೬॥ ಹೆಸರುವಾಸಿಯನ್ನು ಪಡೆದಿರುವ ವೀರಹನುಮಂತನು ಅಮೂಲ್ಯಗಳೆನಿಸಿದ ಆಯಾಯ ಮನೆಗಳಲ್ಲಿಯೂ ಬೆಳಗುತಲಿದ್ದ ಮಹಾ ಸಮೃದ್ಧಿಗಳನ್ನೆಲ್ಲ ನಿಶ್ಶೇಷವಾಗಿ ಭಸ್ಮ ಮಾಡುತಲಿದ್ದನು॥೧೭॥ ಆ ಧೀರಹನುಮಂತನು—ಅಲ್ಲಿಂದ ಮುಂದೆ ಎಲ್ಲ ರಕ್ಕಸರ ಮನೆಗಳನ್ನೂ ಅಗ್ನಿಪ್ರವೇಶದ ಮೂಲಕದಾಟಿ, ಲಂಕಾಸಾರ್ವಭೌಮನಾದ ರಾವಣನ ಮನೆಯ ಮೇಲಕ್ಕೆ ಬಂದನು ॥೧೮॥ ಆ ರಾಜಸದನವೇ ಬಹುಮುಖ್ಯವೆನಿಸಿದುದು. ವಜ್ರ ವೈಡೂರ್ಯಾದಿ

ತತ ಸ್ತಸ್ಮಿ ನ್ಗೃಹೇ ಮುಖ್ಯೇ ನಾನಾರತ್ನ ವಿಭೂಷಿತೇ ।
ಮೇರು ಮಂದರ ಸಂಕಾಶೇ ಸರ್ವಮಂಗಳ ಶೋಭಿತೇ ॥೧೯॥
ಪ್ರದೀಪ್ತ ಮಗ್ನಿ ಮುತ್ಸೃಜ್ಯ ಲಾಂಗೂಲಾಗ್ರೇ ಪ್ರತಿಷ್ಠಿತಮ್ ।
ನನಾದ ಹನುಮಾ ನ್ವೀರೋ ಯುಗಾಂತ ಜಲದೋ ಯಥಾ ॥೨೦॥
ಶ್ವಸನೇನ ಚ ಸಂಯೋಗಾ ದತಿವೇಗೋ ಮಹಾಬಲಃ ।
ಕಾಲಾಗ್ನಿ ರಿವ ಜಜ್ವಾಲ ಪ್ರಾವರ್ಧತ ಹುತಾಶನಃ ॥೨೧॥
ಪ್ರದೀಪ್ತ ಮಗ್ನಿಂ ಪವನ ಸ್ತೇಷು ವೇಶ್ಮ ಸ್ವಚಾರಯತ್ ।
ಅಭೂ ಚ್ಛ್ವಸನ ಸಂಯೋಗಾ ದತಿವೇಗೋ ಹುತಾಶನಃ ॥೨೨॥

ನಿವೇಶನಂ - ಮನೆಯನ್ನು, ಆಸಸಾದ - ಹೊಂದಿದನು ॥ ೧೮ ॥ ತತಃ-ತರುವಾಯ, ವೀರಃ - ಶೂರನಾದ, ಹನುಮಾನ್-ಆಂಜನೇಯನು, ನಾನಾರತ್ನವಿಭೂಷಿತೇ-ಬಗೆಬಗೆಯ ರತ್ನಗಳಿಂದ ಅಲಂಕರಿಸಲ್ಪಟ್ಟಿರುವ, ಮೇರುಮಂದರಸಂಕಾಶೆ - ಮೇರುಮಂದರ ಪರ್ವತಗಳಿಗೆಣೆಯಾದ, ಸರ್ವಮಂಗಳಶೋಭಿತೆ-ಸಕಲ ಮಂಗಳ ವಸ್ತುಗಳಿಂದ ಪ್ರಕಾಶಿಸುತಲಿರುವ, ಮುಖ್ಯೇ - ಪ್ರಧಾನವೆನಿಸಿದ, ತಸ್ಮಿನ್ -ಆ, ಗೃಹೆ-ರಾವಣನ ಮನೆಯಲ್ಲಿ, ಲಾಂಗೂಲಾಗ್ರೇ - ಬಾಲದ ಕೊನೆಯೊಳಗೆ, ಪ್ರತಿಷ್ಠಿತಂ-ನೆಲೆಗೊಂಡಿರುವ, ಪ್ರದೀಪ್ತಂ-ಉರಿಯುತಲಿದ್ದ, ಅಗ್ನಿಂ - ಬೆಂಕಿಯನ್ನು, ಉತ್ಸೃಜ್ಯ-ಬಿಟ್ಟು, ಯುಗಾಂತಜಲದೋಯಥಾ-ಪ್ರಳಯಕಾಲದ ಮೇಘವು ಹೇಗೋಹಾಗೆ, ನನಾದ- ಸಿಂಹನಾದವನ್ನು ಮಾಡಿದನು ॥೧೯, ೨೦॥ ಹುತಾಶನಃ-ಹನುಮನ ಬಾಲದ ಬೆಂಕಿಯು, ಶ್ವಸನೇನ - ವಾಯುವಿನೊಡನೆ, ಸಂಯೋಗಾತ್-ಸಂಪರ್ಕದ ದೆಸೆಯಿಂದ, ಅತಿವೇಗಃ - ಬಹುವೇಗವುಳ್ಳವನೂ, ಮಹಾಬಲಃ - ಬಹುಪ್ರತಾಪವುಳ್ಳವನೂ ಆಗಿ, ಕಾಲಾಗ್ನಿರಿವ-ಪ್ರಳಯಕಾಲದ ಅಗ್ನಿಯಹಾಗೆ, ಜಜ್ವಾಲ - ಪ್ರಜ್ವಲಿಸತೊಡಗಿದನು, ಪ್ರಾವರ್ಧತ - ಹೆಚ್ಚುತಹೋದನು ॥೨೧॥ ಪವನಃ - ವಾಯುವು, ಪ್ರದೀಪ್ತಂ - ಉರಿಯುತಲಿರುವ, ಅಗ್ನಿಂ - ಬೆಂಕಿಯನ್ನು, ತೇಷು-ಆ, ವೇಶ್ಮಸು-ಮನೆಗಳಲ್ಲಿ, ಅಚಾರಯತ್ - ಸಂಚಾರಮಾಡಿಸುತಲಿದ್ದನು, ಹುತಾಶನಃ - ಅಗ್ನಿಯೂ, ಶ್ವಸನಸಂಯೋಗಾತ್ - ವಾಯುಸಂಪರ್ಕದಿಂದ, ಅತಿವೇಗಃ - ಮಹಾವೇಗವುಳ್ಳವನಾಗುತ್ತಾ,

ನಾನಾರತ್ನಗಳಿಂದ ಶೋಭಾಯಮಾನವಾಗಿದ್ದುದು, ಮೇರುಮಂದರ ಗಿರಿಗಳಂತೆ ಬಹುಮಂಗಳಕರವಾಗಿದ್ದಿತು ॥೧೯॥ ಅಂತಹ ದಿವ್ಯಭವನವನ್ನು ಕಾಲಾಗ್ನಿಗೆ ಬಲಿಕೊಟ್ಟು, ವೀರಾಗ್ರೇಸರನಾದ ಹನುಮನು ಪ್ರಳಯಕಾಲದಲ್ಲಿನ ಮೇಘವು ಹೇಗೋ ಹಾಗೆ ಸಿಂಹಗರ್ಜನೆಯನ್ನು ಮಾಡಿದನು ॥೨೦॥ ಆ ಮಹಾರಾಜಸದನದಲ್ಲಿ ನೆಲೆಗೊಂಡ ಹುತಾಶನನ್ನು ವಾಯುವಿನ ಸಂಪರ್ಕದಿಂದ ಪ್ರಬಲಿಸಿ, ಜ್ವಾಲಾಮಾಲೆಗಳ ವೇಗವುಳ್ಳುದಾಗಿ, ಕಾಲಾಗ್ನಿಯಂತೆ ಬೆಳೆಯ ತೊಡಗಿತು ॥೨೧॥ ಮತ್ತು-ಅಗ್ನಿಯು ಗಾಳಿಯ ಸಹಾಯದಿಂದ ಅಲ್ಲಿಂದ ಮುಂದೆ ಹನುಮನಿಗೆ ಹೆಚ್ಚಾಗಿ ಆಯಾಸವನ್ನುಂಟುಮಾಡಬಾರದೆಂಬಂತೆ, ತಾನೇ ತಾನಾಗಿ ಬೆಳೆಯುತ್ತಾ, ಒಂದುಮನೆಯಿಂದ ಬೇರೊಂದು ಮನೆಗೆ ಮಹಾವೇಗದಿಂದ ಸ್ವತಂತ್ರವಾಗಿಯೇ ಸಂಚರಿಸತೊಡಗಿತು ॥೨೨॥ ಬಳಿಕ-ಸುವರ್ಣಮಯವಾದ ಗವಾಕ್ಷಗಳನ್ನೊಳಗೊಂಡುವೂ, ಮುಕ್ತಾಮಣಿಗಳ ರಚನೆಯುಳ್ಳುವೂ, ನಾನಾರತ್ನ ಖಚಿತವಾದುವೂ, ಅದ್ದರಿಂದಲೇ ಅಮೂಲ್ಯಗಳೆನಿಸಿದುವೂ ಆಗಿರುವ ಆ ದಿವ್ಯಭವನಗಳೆಲ್ಲ ಬೆಂಕಿಯಿಂದ

ತಾನಿ ಕಾಂಚನ ಜಾಲಾನಿ ಮುಕ್ತಾಮಣಿ ಮಯಾನಿ ಚ ।
ಭವನಾ ನ್ಯವಶೀರ್ಯಂತ ರತ್ನವಂತಿ ಮಹಾಂತಿ ಚ ॥೨೧॥
ತಾನಿ ಭಗ್ನ ವಿಮಾನಾನಿ ನಿಪೇತು ರ್ವಸುಧಾತಲೇ ।
ಭವನಾನೀವ ಸಿದ್ಧಾನಾ ಮಂಬರಾ ತ್ಪುಣ್ಯ ಸಂಕ್ಷಯೇ ॥೨೨॥
ಸಂಜಜ್ಞೇ ತುಮುಲ ಶ್ಶಬ್ದೋ ರಾಕ್ಷಸಾನಾಂ ಪ್ರಧಾವತಾಮ್ ।
ಸ್ವಗೃಹಸ್ಯ ಪರಿತ್ರಾಣೇ ಭಗ್ನೋತ್ಸಾಹೋರ್ಜಿತ ಶ್ರಿಯಾಂ ॥೨೩॥

---

ಅಭೂತ್-ಇದ್ದನು ॥೨೦॥ ಕಾಂಚನಜಾಲಾನಿ - ಬಂಗಾರದ ಕಿಟಕಿಗಳುಳ್ಳವೂ, ಮುಕ್ತಾಮಣಿಮಯಾನಿಚ - ಮುತ್ತು ರತ್ನಗಳ ರಚನೆಯುಳ್ಳವೂ, ರತ್ನವನ್ತಿ - ಶ್ರೇಷ್ಠವಸ್ತುಗಳುಳ್ಳವೂ, ಮಹಾಂತಿಚ-ಅಮೂಲ್ಯಗಳೆನಿಸಿದುವೂ ಆಗಿರುವ, ತಾನಿ-ಆ, ಭವನಾನಿ-ಮನೆಗಳು, ಅವಶೀರ್ಯಂತ - ಸಿಡಿದುಹೋದುವು (ಅವಾಶೀರ್ಯಂತ) ॥೨೧॥ ತಾನಿ-ಆ, ಭಗ್ನವಿಮಾನಾನಿ - ಮುರಿದುಹೋದ ದಿವ್ಯವಿಮಾನಗಳು, ಪುಣ್ಯಸಂಕ್ಷಯೆ-ಧರ್ಮವು ನಾಶವಾಗಿ ಹೋಗುತಲಿರುವಲ್ಲಿ, ಸಿದ್ಧಾನಾಂ- ಸಿದ್ಧರೆಂಬ ದೇವತೆಗಳ, ಭವನಾನೀವ-ಮನೆಗಳಂತೆ, ಅಂಬರಾತ್ - ಆಕಾಶದ ದೆಶೆಯಿಂದ, ವಸುಧಾತಲೆ - ಭೂತಲದಲ್ಲಿ, ನಿಪೇತುಃ-ಬೀಳುತಲಿದ್ದುವು ॥೨೨॥ ಸ್ವಗೃಹಸ್ಯ - ತಮ್ಮ ಮನೆಗಳ, ಪರಿತ್ರಾಣೆ - ರಕ್ಷಣೆಯಲ್ಲಿ, ಭಗ್ನ - ನಷ್ಟವಾದ-ಉತ್ಸಾಹ - ಸಂತೋಷವಿಲಾಸಗಳೂ, ಊರ್ಜಿತ-ಪ್ರಬಲವಾದ, ಶ್ರಿಯಾಂ - ಸಂಪತ್ತುಗಳೂ ಉಳ್ಳವರಾದ ಕಾರಣವೇ, ಪ್ರಧಾವತಾಂ-ಓಡುತಲಿರುವ, ರಾಕ್ಷಸಾನಾಂ-ರಾಕ್ಷಸರ, ಏಷಃ-ಇದು, (ಈವಿಪತ್ತು) ವಾನರರೂಪೇಣ-ಕಪಿರೂಪದಿಂದ, ಆಯಾತಃ- ಬಂದಿರುವ, ಅಗ್ನಿಃ-ಅಗ್ನಿಯೇಸರಿ, ನೂನಂ-ನಿಶ್ಚಯವು, ಹಾ, ಕಷ್ಟವು (ಇತಿ-ಹೀಗೆಂಬ) ತುಮುಲಃ - ಕೋಲಾಹಲವಾದ, ಶಬ್ದಃ - ಧ್ವನಿಯು,ಸಂಜಜ್ಞೇ-ಉಂಟಾಯಿತು ॥೨೩॥ ಸ್ತನಂಧಯಧರಾಃ-ಹಾಲುಕುಡಿವ ಮಕ್ಕಳನ್ನೆತ್ತಿಕೊಂಡರುವ, ಕಾಶ್ಚಿತ್-ಕೆಲವುಮಂದಿ, ಸ್ತ್ರಿಯಃ-ಹೆಂಗಸರು, ಮುಕ್ತಮೂರ್ಧಜಾಃ - ಕೆದರಿದ ತಲೆಗೂದಲುಳ್ಳವರಾಗಿ, ಕ್ರನ್ದಂತ್ಯಃ-ಗಟ್ಟಿಯಾಗಿ

---

ಉರಿದು ತುಮುರು ತುಮುರಾಗಿ ಸಿಡಿದು, ಒಡೆದು, ಹಾರಿ, ಚೆದರಿ. ಛಿಂದೂ ಛಿಂಗವಾಗಿ ಬೀಳುತಲಿದ್ದುವು ॥೨೧॥ ಮುಗಿಲನ್ನು ಮುಟ್ಟುತಲಿದ್ದ ದಿವ್ಯ ವಿಮಾನಗಳು ಆಸ್ಮಾನನು ಮುಟ್ಟಿಸಿದ ಬೆಂಕಿಯ ಬೇಗೆಯಿಂದ ಮುರಿದು ಬೀಳುತಲಿದ್ದರೆ--ಗಳಿಸಿದ್ದ ಪುಣ್ಯವೆಲ್ಲ ನಶಿಸಿ ಹೋದಬಳಿಕ ಆಕಾಶದಿಂದ ನೆಲಕ್ಕೆ ಉರುಳುವ ಸಿದ್ಧರೆಂಬ ದೇವತೆಗಳ ಭವನಗಳಂತೆ ಕಾಣಬರುತಲಿದ್ದುವು ॥೨೨॥ ಇನ್ನೇನ ಹೇಳುವುದು ? ಎಲ್ಲೆಲ್ಲಿಯೂ ಅಲ್ಲಕಲ್ಲೋಲವ. ಗದ್ದಲವು ಹತ್ತಿತು, ಅಬ್ಬರಿಸುತ ರಕ್ಕಸರೆಲ್ಲ ಓಡಾಡತೊಡಗಿದರು. ಸಮಸ್ತ ಸಂಪತ್ಸಮೃದ್ಧಿಯಿಂದ ಬೆಳಗುತಲಿದ್ದ ಮಹಾರಾಜಧಾನಿಯೆಲ್ಲ ಉರಿದು ಬೂದಿಯಾಗುತಲಿದೆ. ರಕ್ಕಸರಿಗೆ ರಕ್ಷಿಸಿಕೊಳ್ಳಲು ಬೇರೆದಾರಿ ತೋರದು, ಉತ್ಸಾಹವೆಲ್ಲ ಅಡಗಿತು. ಮುಂದೇನು ಮಾಡಬೇಕೆಂಬುದು ತೋರದು. ಎಲ್ಲರೂ ಪಲಾಯನ ಸೂಕ್ತವನ್ನು ಪಾರಾಯಣ ಮಾಡತೊಡಗುತಲಿದಾರೆ. ಹಾ ! ಅಯ್ಯೋ ! ಇದು ಕೇಡಗಸಲ್ಲಾ ! ಕಪಿರೂಪದಿಂದ ಬಂದಿರುವ ಕಾಲಾಗ್ನಿಯೇ ಸರಿ ಎಂಬ ಕೂಗು ಎಲ್ಲೆಲ್ಲಿಯೂ ಕೇಳಬರುತಲಿದೆ ॥೨೩॥-॥ ಮನೆಗಳ ಮೇಲುಮಹಡಿಗಳೊಳಗೆ ಮಕ್ಕಳಿಗೆ ಎದೆಯೂಡಿಸಲಿಕ್ಕೆ ಕುಳಿತಿದ್ದ ಹೆಂಗಸರು -ಹಾಗಹಾಗೆಯೇ ಕೆಳಗೆ ಉರುಳುತಲಿದಾರೆ, ಮತ್ತೆ ಕೆಲಮಂದಿಮಾನಿನಿಯರು ಬೆಂಕಿಯಿಂದ

ನೂನ ಮೇಷೋಽಗ್ನಿ ರಾಯಾತಃ ಕಪಿರೂಪೇಣ ಹಾ ಇತಿ ।
ಕ್ರಂದಂತ್ಯ ಸ್ಸಹ ಸಾ ಪೇತು ಸ್ಸ್ತನಂಧಯ ಧರಾ ಸ್ಸ್ರಿಯಃ ॥೨೬॥
ಕಾಶ್ಚಿ ದಗ್ನಿ ಪರೀತೇಭ್ಯೋ ಹರ್ಮ್ಯೇಭ್ಯೋ ಮುಕ್ತ ಮೂರ್ಧಜಾಃ ।
ಪತಂತ್ಯೋ ರೇಜಿರೇ ಽ ಭ್ರೇಭ್ಯ ಸ್ಸೌದಾಮಿನ್ಯ ಇವಾಂಬರಾತ್ ॥೨೭॥
ವಜ್ರ ವಿದ್ರುಮ ವೈಡೂರ್ಯ ಮುಕ್ತಾ ರಜತ ಸಂಹಿತಾನ್ ।
ವಿಚಿತ್ರಾ ನ್ಭವನಾ ನ್ಧಾತೂನ್ ಸ್ಯಂದಮಾನಾ ನ್ದದರ್ಶ ಸಃ ॥೨೮॥
ನಾಗ್ನಿ ಸ್ತೃಪ್ಯತಿ ಕಾಷ್ಠಾನಾಂ ತೃಣಾನಾಂ ಹರಿ ಯೂಥಪಃ ।
ನಾಗ್ನೇ ರ್ನಾಪಿ ವಿಶಸ್ತಾನಾಂ ರಾಕ್ಷಸಾನಾಂ ವಸುಂಧರಾ ॥೨೯॥

ಅಳುತ್ತಾ, ಅಗ್ನಿಪರೀತೇಭ್ಯಃ-ಬೆಂಕಿಯ ಉರಿಯಿಂದ ಆವರಿಸಲ್ಪಟ್ಟಿರುವ, ಹರ್ಮ್ಯೇಭ್ಯಃ-ಮಹಡಿಗಳಿಂದ, ಸಹಸಾ-ಬೇಗನೆ, ಪೇತುಃ - ಉದುರುತ್ತಿದ್ದರು ॥೨೬॥ ॥ ಹರ್ಮ್ಯೇಭ್ಯಃ-ರಾಜಸದನಗಳಿಂದ, ಪತಂತ್ಯಃ-ಬೀಳುತಲಿದ್ದ ಆ ಹೆಂಗಸರು, ಅಂಬರಾತ್ - ಆಕಾಶದ ದೆಶೆಯಿಂದ (ಆಕಾಶದಲ್ಲಿರುವ) ಅಭ್ರೇಭ್ಯಃ-ಮೇಘಗಳಿಂದ, ಪತಂತ್ಯಃ - ಬೀಳುತಲಿರುವ, ಸೌದಾಮಿನ್ಯಃಇವ - ಮಿಂಚುಗಳ ಹಾಗೆ, ರೇಜಿರೆ-ಪ್ರಕಾಶಿಸುತಲಿದ್ದರು ॥೨೭॥ ಸಃ - ಆ ಮಾರುತಿಯು, ವಜ್ರ....ತಾನ್, ವಜ್ರ - ವಜ್ರಗಳಿಂದಲೂ, ವಿದ್ರುಮ-ಹವಳಗಳಿಂದಲೂ, ವೈಡೂರ್ಯ - ವಿಡೂರಮಣಿಗಳಿಂದಲೂ, ಮುಕ್ತಾ - ಮುತ್ತುಗಳಿಂದಲೂ, ರಜತ-ಬೆಳ್ಳಿಯಿಂದಲೂ ಸಂಹಿತಾನ್ - ಸೇರಿಸಲ್ಪಟ್ಟಿರುವ, ವಿಚಿತ್ರಾನ್ - ಆಶ್ಚರ್ಯಕರಗಳೆನಿಸಿದ ,ಭವನಾನ್- (ಭವನಾನಿ) ಮನೆಗಳನ್ನು, ಸ್ಯಂದಮಾನಾನ್ - ಕರಗಿ ಹರಿಯುತಲಿರುವ, ಧಾತೂನ್ - ಸುವರ್ಣಾದಿಲೋಹಗಳನ್ನೂ, ದದರ್ಶ - ನೋಡುತಲಿದ್ದನು ॥೨೮॥ ಅಗ್ನಿಃ-ಬೆಂಕಿಯು, ಕಾಷ್ಠಾನಾಂ - ಕಟ್ಟಿಗೆಗಳಿಂದಲೂ, ತೃಣಾನಾಂ - ಹುಲ್ಲುಗಳಿಂದಲೂ, (ಯಥಾ-ಹೇಗೆ) ನತೃಪ್ಯತಿ - ತೃಪ್ತಿಪಡುವುದಿಲ್ಲವೋ, ಅಗ್ನೇಃ- ಅಗ್ನಿಯಿಂದ, ವಿಶಸ್ತಾನಾಂ-ಮರಣವನ್ನು ಹೊಂದಿದ, ರಾಕ್ಷಸಾನಾಂ - ರಾಕ್ಷಸರಿಂದ, ವಸುಂಧರಾಪಿ-ಭೂಮಿಯೂ (ಯಥಾ ಹೇಗೆ) ನತೃಪ್ಯತಿ - ತಣಿಯುವುದಿಲ್ಲವೋ, (ತಥಾ-ಹಾಗೆಯೇ) ಹರಿಯೂಥಪಃ - ಕಪಿವರನೂ, (ರಾಕ್ಷಸವಧೆ - ರಾಕ್ಷಸ ಸಂಹಾರದಲ್ಲಿ, ನಾಪಿತೃಪ್ಯತಿ - ತೃಪ್ತಿಪಡುತ್ತಿರಲಿಲ್ಲ) ॥೨೯॥ ವಹ್ನೇಃ-

ಉರಿದು ಹೋಗುತಲಿರುವ ಮನೆಗಳಿಂದ ತಲೆಗಳನ್ನೆಲ್ಲ ಕೆದರಿಕೊಂಡು, ಅರೆಗಾಯಿ ಬರೆಗಾಯಾಗಿ ಸುಟ್ಟು ಕರಿದು ಬೀಳುತಲಿದಾರೆ ॥೨೬॥-॥ ಮಹಾಸೌಂದರ್ಯಶಾಲಿನಿಯರಾದ ಆ ಅಬಲೆಯರು ಹಾಗೆ ಉರುಳುತಲಿದ್ದರೆ ಆಕಾಶದಲ್ಲಿನ ಮೇಘಗಳಿಂದ ಉದ್ಗಿರುತಲಿರುವ ಮಿಂಚುಗಳಂತೆ ಕಂಗೊಳಿಸುತಲಿದ್ದರು ॥೨೭॥ ಜಾಜ್ವಲ್ಯಮಾನಗಳಾಗಿ ಉರಿಯುತಲಿರುವ ಮನೆಗಳಿಂದ ಸಿಡಿದುಬೀಳುತಲಿರುವ ವಜ್ರ, ವೈಡೂರ್ಯ, ಗೋಮೇಧಿಕ ಪುಷ್ಯರಾಗ, ಮರಕತ ಮಾಣಿಕ್ಯಾದಿ ರತ್ನಗಳನ್ನೂ, ಒಡೆದು ಬೀಳುತಲಿರುವ ಮುತ್ತಿನ ಗೊಂಚಲುಗಳನ್ನೂ, ಕರಗಿ ಹರಿಯುತಲಿರುವ ಚಿನ್ನ ಬೆಳ್ಳಿ ಮೊದಲಾದ ನಾನಾಲೋಹಗಳನ್ನೂ ವೀರಹನುಮನು ವಿನೋದದಿಂದ ನೋಡುತಲಿದ್ದನು ॥೨೮॥ ಕಟ್ಟಿಗೆಗಳನ್ನೂ, ಹುಲ್ಲಿನ ರಾಶಿಯನ್ನೂ ಸುಡುವುದರಿಂದ ಅಗ್ನಿಯೂ,ಸತ್ತುಬೀಳುವ ಪ್ರಾಣಿಗಳಿಂದ ಭೂಮಿಯೂ, ತೃಪ್ತಿಯನ್ನು ಪಡೆಯದ ಹಾಗೆ, ಮಹಾವೀರನಾದ ಮಾರುತಿಯೂ ಆ ಲಂಕಾನಗರಿಯು ಉರಿದು ಗುಡ್ಡೆಯಾಗಿ ಬೀಳುತಲಿರುವ ಉರಿಯಿಂದ ತಣಿಯದೆ ಇದ್ದನು ॥೨೯॥ ಆ ಮನೆಗಳಿಂದೇಳುತಲಿರುವ

ಕ್ವಚಿತ್ಕಿಂಶುಕ ಸಂಕಾಶಾಃ ಕ್ವಚಿ ಚ್ಛಾಲ್ಮಲಿ ಸನ್ನಿಭಾಃ ।
ಕ್ವಚಿತ್ಕುಂಕುಮ ಸಂಕಾಶಾ ಶ್ಶಿಖಾ ವಹ್ನೇ ಶ್ಚಕಾಶಿರೇ ॥೩೦॥
ಹನೂಮತಾ ವೇಗವತಾ ವಾನರೇಣ ಮಹಾತ್ಮನಾ ।
ಲಂಕಾಪುರಂ ಪ್ರದಗ್ಧಂ ತದ್ರುದ್ರೇಣ ತ್ರಿಪುರಂ ಯಥಾ ॥೩೧॥
ತತಸ್ತು ಲಂಕಾಪುರ ಪರ್ವತಾಗ್ರೇ ಸಮುತ್ಥಿತೋ ಭೀಮ ಪರಾಕ್ರಮೋಽಗ್ನಿಃ ।
ಪ್ರಸಾರ್ಯ ಚೂಡಾ ವಲಯಂ ಪ್ರದೀಪ್ತೋ ಹನೂಮತಾ ವೇಗವತಾ ವಿಸೃಷ್ಟಃ॥
ಯುಗಾಂತ ಕಾಲಾನಲ ತುಲ್ಯವೇಗ ಸ್ಸಮಾರು ತೋಽಗ್ನಿ ರ್ವವೃಧೇ ದಿವಿಸ್ಪೃಕ್ ।

ಬೆಂಕಿಯು, ಶಿಖಾಃ-ಜ್ವಾಲೆಗಳು, ಕ್ವಚಿತ್-ಒಂದು ಕಡೆಯಲ್ಲಿ, ಕಿಂಶುಕಸಂಕಾಶಾಃ - ಮುತ್ತುಗದ ಹೂವಿಗೆಣೆಯಾಗಿಯೂ, ಕ್ವಚಿತ್ - ಮತ್ತೊಂದುಕಡೆ, ಶಾಲ್ಮಲಿಸನ್ನಿಭಾಃ - ಬೂರಗದ ಹೂವಿಗೆ ಸಮಾನವಾಗಿಯೂ, ಕ್ವಚಿತ್-ಮತ್ತೊಂದುಕಡೆ, ಕುಂಕುಮಸಂಕಾಶಾಃ - ಕುಂಕುಮಕ್ಕೆ ಸದೃಶವಾಗಿಯೂ, ಚಕಾಶಿರೆ-ಬೆಳಗುತಲಿದ್ದುವು ॥೩೦॥ ವೇಗವತಾ-ಮಹಾವೇಗಶಾಲಿಯಾದ, ಮಹಾತ್ಮನಾ - ಮಹಾಧೈರ್ಯಸಂಪನ್ನನಾಗಿರುವ, ಹನೂಮತಾ- ಆಂಜನೇಯನೆಂಬ, ವಾನರೇಣ-ಕಪಿಯಿಂದ,ತತ್‌ತ್ರಿಪುರಂ-ಆ ಪ್ರಸಿದ್ಧವಾದ ಮೂರುಪುರಗಳು, ರುದ್ರೇಣಯಥಾ - ಈಶ್ವರನಿಂದ ಹೇಗೋಹಾಗೆ, ಲಂಕಾಪುರಂ - ಲಂಕಾಪಟ್ಟಣವೂ ಪ್ರದಗ್ಧಂ-ಸುಡಲ್ಪಟ್ಟಿತು ॥೩೧॥ ತತಃ-ತರುವಾಯ, ವೇಗವತಾ - ವೇಗಶಾಲಿಯಾದ, ಹನೂಮತಾ-ಮಾರುತಿಯಿಂದ, (ಗೃಹೇಷು - ಮನೆಗಳಲ್ಲಿ) ವಿಸೃಷ್ಟಃ-ಬಿಡಲ್ಪಟ್ಟ, ಭೀಮಪರಾಕ್ರಮಃ-ಭಯಂಕರವಾದ ವ್ಯಾಪ್ತಿಯುಳ್ಳ, ಅಗ್ನಿಸ್ತು-ಅಗ್ನಿಯಾದರೋ, ಚೂಡಾವಲಯಂ - ಜ್ವಾಲೆಗಳ ಸಮುದಾಯವನ್ನು, ಪ್ರಸಾರ್ಯ-ಹರಡಿ, ಪ್ರದೀಪ್ತಃ-ಉರಿಯುತಲಿರುವುದಾಗಿ, ಲಂಕಾಪುರಪರ್ವತಾಗ್ರೇ -ಲಂಕಾಪಟ್ಟಣಕ್ಕೆ ಆಧಾರವಾದ ಬೆಟ್ಟದ ತುದಿಯಲ್ಲಿ, ಸಮುದ್ಧತಃ - ತಲೆಯನ್ನೆತ್ತಿದುದಾಗಿ, (ಪ್ರಜಜ್ವಾಲ-ಜ್ವಲಿಸುತಲಿದ್ದಿತು) ॥ ಯುಗಾಂತಕಾಲಾನಲತುಲ್ಯವೇಗಃ - ಪ್ರಳಯಾಗ್ನಿಗೆಣೆಯಾದ ವೇಗವುಳ್ಳ, ಸಮಾರುತಃ - ವಾಯುವಿನಿಂದ ಕೂಡಿದುದಾದಕಾರಣವೇ, ದಿವಿಸ್ಪೃಕ್ - ಆಕಾಶದಲ್ಲಿ ವ್ಯಾಪಿಸುತಲಿರುವುದಾಗಿ, ವಿಧೂಮರಶ್ಮಿಃ-ಹೊಗೆ

ಉರಿಯು, ಕೆಲವೆಡೆಗಳಲ್ಲಿ ಮುತ್ತುಗದ ಹೂಗಳ ಆಕಾರಗಳಾಗಿಯೂ, ಮತ್ತೆ ಕೆಲವೆಡೆಗಳಲ್ಲಿಬೂರಗದ ಹೂಗಿಡಗಳ ಆಕೃತಿಯಾಗಿಯೂ, ಇನ್ನು ಕೆಲವು ಸ್ಥಳಗಳಲ್ಲಿ ಕುಂಕುಮಕ್ಕೆಣೆಯಾದ ಶಿಖೆಗಳುಳ್ಳುವಾಗಿಯೂ ಬೆಳಗುತಲಿದ್ದುವು ॥೩೦॥ ಪೂರ್ವದಲ್ಲಿ ರುದ್ರದೇವನು ಗಗನದಲ್ಲಿ ನೆಲೆಗೊಂಡಿದ್ದ ತ್ರಿಪುರಾಸುರರ ಪುರಗಳನ್ನು ಉರುಹಿದಂತೆ ಮಹಾವೀರ ಮಾರುತಿಯು ಮಹಾರೋಷಪರವಶನಾಗಿ ಲಂಕಾನಗರಿಯನ್ನು ಸುಟ್ಟುಬಿಟ್ಟನು ॥ ೩೧ ॥ ಮಹಾವೀರನಾದ ಮಾರುತಿಯು ಪ್ರತಿಷ್ಠೆಮಾಡಿದ ಅಗ್ನಿಯು ಪರ್ವತಾಗ್ರದಲ್ಲಿ ನೆಲೆಗೊಂಡಿರುವುದಾಗಿ, ಭಯಂಕರವಾದ ಜ್ವಾಲೆಗಳಿಂದೊಡಗೂಡಿದುದಾ, ನಾನಾದಿಕ್ಕುಗಳಲ್ಲಿಯೂ ಹರಡುತಲಿರುವ ಬೇಗೆಯ ವೇಗವುಳ್ಳುದೂ ಆಗಿಬೆಳೆದುಬೆಳಗುತಲಿದ್ದಿತು ॥೩೨॥ ಲಂಕಾನಗರವನ್ನು ಸುಡುತಲಿರುವ ಕಿಚ್ಚು-ಪ್ರಳಯ ಕಾಲದ ಅಗ್ನಿಯಂತೆ ಮಹಾ ವೇಗದಿಂದೊಡಗೂಡಿದೆ, ಬಿರುಗಾಳಿಯಿಂದೊಡಗೂಡಿದೆ, ಮುಗಿಲನ್ನು ಮುಟ್ಟುತಲಿದೆ, ಹೊಗೆಯಿಲ್ಲದಬೆಳಕಿನ ಹೊಳವು ಎಲ್ಲೆಲ್ಲಿಯೂ ಹರಡುತಲಿದೆ, ರಾಕ್ಷಸರಶರೀರಗಳೆಂಬ ಆಜ್ಯಾಹುತಿಗಳನ್ನು ಹೊಂದಿ ನಿಮಿಷ ನಿಮಿಷಕ್ಕೂ ಹೇರಳವಾಗುತಲಿರುವ ಜ್ವಾಲೆಗಳಿಂದ ಹೆಚ್ಚಿ ಹೋಗುತಲೂ ಇದೆ ॥

ವಿಧೂಮ ರಶ್ಮಿ ರ್ಭವನೇಷು ಸಕ್ತೋ ರಕ್ಷಶ್ಶರೀರಾಜ್ಯ ಸಮರ್ಪಿತಾರ್ಚಿಃ ॥೩೩॥
ಆದಿತ್ಯ ಕೋಟೀ ಸದೃಶ ಸ್ಸುತೇಜಾ ಲಂಕಾಂ ಸಮಸ್ತಾಂ ಪರಿವಾರ್ಯ ತಿಷ್ಠನ್।
ಶಬ್ದೈ ರನೇಕೈ ರಶನಿ ಪ್ರರೂಢೈ ರ್ಭಿಂದ ನ್ನಿವಾಂಡಂಪ್ರಬಭೌ ಮಹಾಗ್ನಿಃ॥೩೪॥
ತತ್ರಾಂಬರಾ ದಗ್ನಿ ರತಿಪ್ರವೃದ್ಧೋ ರೂಕ್ಷಪ್ರಭಃ ಕಿಂಶುಕ ಪುಷ್ಪ ಚೂಡಃ।
ನಿರ್ವಾಣ ಧೂಮಾಕುಲ ರಾಜಯಶ್ಚ ನೀಲೋತ್ಪಲಾಭಾಃ ಪ್ರಚಕಾಶಿರೇ ಽ ಭ್ರಾಃ ॥
ವಜ್ರೀ ಮಹೇಂದ್ರ ಸ್ತ್ರಿದಶೇಶ್ವರೋ ವಾ ಸಾಕ್ಷಾದ್ಯಮೋ ವಾ ವರುಣೋಽನಿಲೋವಾ
ರುದ್ರೋಽಗ್ನಿ ರರ್ಕೋ ಧನದಶ್ಚ ಸೋಮೋ ನ ವಾನರೋಽಯಂ ಸ್ವಯಮೇವ ಕಾಲಃ ॥

ಯಿಲ್ಲದ ಕಾಂತಿಯುಳ್ಳುದೂ, ಭವನೇಷು-ಮನೆಗಳಲ್ಲಿ, ಸಕ್ತಃ-ಸಂಬಂಧಿಸಿದುದೂ ಆಗಿರುವ, ಅಗ್ನಿಃ-ಅಗ್ನಿಯು, ರಕ್ಷಶ್ಶರೀರಾಜ್ಯಸಮರ್ಪಿತಾರ್ಚಿಃ - ರಾಕ್ಷಸ ಶರೀರವೆಂಬ ತುಪ್ಪದಿಂದ ಹೆಚ್ಚಿಸಲ್ಪಟ್ಟ ತೇಜಸ್ಸುಳ್ಳುದಾಗಿ, ವವೃಧೇ-ವೃದ್ಧಿ ಹೊಂದುತಲಿದಿತು ॥೩೩॥ ಆದಿತ್ಯಕೋಟೀಸದೃಶಃ - ಕೋಟಿಸೂರ್ಯರಿಗೆಣೆಯೆನಿಸಿದ, ಸುತೇಜಾಃ - ಮಹಾಪ್ರಕಾಶವುಳ್ಳ, ಮಹಾಗ್ನಿಃ - ತೀವ್ರವಾದ ಅಗ್ನಿಯು, ಸಮಸ್ತಾಂ-ಸಂಪೂರ್ಣವಾದ, ಲಂಕಾಂ - ಲಂಕಾನಗರವನ್ನು, ಪರಿವಾರ್ಯ - ಸುತ್ತಿಕೊಂಡು, ತಿಷ್ಠನ್-ಇರುತ್ತಾ, ಅಶನಿಪ್ರರೂಢೈಃ-ಸಿಡಿಲಿನಂತೆ ತೀವ್ರವಾದ, ಅನೇಕೈಃ - ಲೆಕ್ಕವಿಲ್ಲದಷ್ಟು, ಶಬ್ದೈಃ- ಧ್ವನಿಗಳಿಂದ, ಅಂಡಂ-ಬ್ರಹ್ಮಾಂಡವನ್ನು, ಭಿಂದನ್ನಿವ - ಭೇದಿಸುವಂತೆ, ಪ್ರಬಭೌ - ಪ್ರಕಾಶಿಸುತಲಿದ್ದಿತು ॥೩೪॥ ತತ್ರ- ಆ ಲಂಕೆಯಲ್ಲಿ, ಅಂಬರಾತ್-ಆಕಾಶದವರೆಗೂ, ಅತಿಪ್ರವೃದ್ಧಃ-ಬಲವಾಗಿ ಬೆಳೆದು ಹೋಗಿರುವ, ಅಗ್ನಿಃ-ಅಗ್ನಿಯು, ರೂಕ್ಷಪ್ರಭಃ- ಬಲುಚುರುಕಾದ ತೇಜಸ್ಸುಳ್ಳುದೂ, ಕಿಂಶುಕಪುಷ್ಪಚೂಡಃ - ಮುತ್ತುಗದ ಹೂವಿನಂತೆ ತುದಿಯುಳ್ಳುದೂ, (ಅಭೂತ್ - ಆಗಿದ್ದಿತು) ಅಭ್ರಾಶ್ಚ (ಅಭ್ರಾಣಿಚ) - ಮೇಘಗಳೂ, ನಿರ್ವಾಣಧೂಮಾಕುಲರಾಜಯಃ-ಶಾಂತವಾದ ಹೊಗೆಗಳ ಸಾಲುಳ್ಳವುದಕಾರಣವೇ, ನೀಲೋತ್ಪಲಾಭಾಃ-ಕನ್ನೈದಿಲೆಯಂತೆ ಕಾಂತಿಯುಳ್ಳವುಗಳಾಗಿ, ಚಕಾಶಿರೆ - ಬೆಳಗುತಲಿದ್ದವು ॥೩೫॥ ಬಹವಃ - ಅನೇಕವಾದ, ವಿಶಿಷ್ಟಾಃ-ಬಲದಿಂದ ಹೆಚ್ಚಿರುವ, ರಕ್ಷೋಗಣಾಃ-ರಾಕ್ಷಸರ ಗುಂಪುಗಳು, ಸರ್ವೇ-ಎಲ್ಲವೂ, ಸಮೇತ್ಯ,

ಏಕ ಕಾಲದಲ್ಲಿ ಉದಿಸಿದ ಕೋಟಿ ಸೂರ್ಯರ ಪ್ರಕಾಶವನ್ನು ಪಡೆದಿದೆ,ಆ ಅಪಾರವಾದ ತೇಜಸ್ಸಿಗೆಣೆಯೇ ಇಲ್ಲ. ಲಂಕಾನಗರವನ್ನೆಲ್ಲ ಸುತ್ತುವರಿದುಹತ್ತಿ ಕೊಂಡಿದೆ, ಯಾವ ದಿಕ್ಕಿನಲ್ಲಿ ನೋಡಿದರೂ ಭುಗಿ ಭುಗಿಲು, ಚಟಚಟ, ಝಳಝಳಫಳ ಫಳ, ಥಳ ಥಳ, ಹಾ ಹಾ, ಹೊಹೋ, ಅಯ್ಯೋ ಎಂಬ ಅಗ್ನಿಜ್ವಾಲಾಶಬ್ದಗಳಿಂದೊಡಗೂಡಿದ ರಕ್ಕಸರ ಹಾ ಹಾ ಕಾರಗಳಿಂದೊಡಗೂಡಿ ಬ್ರಹ್ಮಾಂಡವನ್ನೇ ಭೇದಿಸುವುದೆಂಬಂತೆಬೆಳಗುತಲಿದ್ದಿತು ॥ ೩೪ ॥ ಮುತ್ತುಗದ ಹೂವಿನಂತಹ ಶಿಖೆಯುಳ್ಳುದೂ, ತಡೆಯಲಸದಳವೆನಿಸಿದ ಹಬೆಯುಳ್ಳುದೂ, ಮುಗಿಲಿನವರೆಗೆ ಬೆಳೆದುಹೋಗಿರುವುದೂ, ಹೊಗೆಯಿಲ್ಲದ ಜ್ವಾಲೆಗಳಿಂದೊಡಗೂಡಿರುವುದೂ ಆಗಿರುವ ಅಗ್ನಿಯಿಂದ ಮೇಘ ಮಂಡಲವೆಲ್ಲ ಕನ್ನೈದಿಲೆಗಳ ರೇಕುಗಳಂತೆ ಕಂಗೊಳಿಸುತಲಿದ್ದವು ॥ ೩೫ ॥ ನಾನಾ ಪ್ರಾಣಿ ಸಮೂಹಗಳಿಂದಲೂ ದಿವ್ಯ ಗೃಹಗಳಿಂದಲೂ, ವಿಚಿತ್ರತರಗಳಾದ ತರುಲತೆಗಳಿಂದಲೂ ಸಹಿತವಾಗಿ ಸುಟ್ಟು ಹೊಗಿರುವ ಲಂಕೆಯನ್ನು ನೋಡಿ, ಮಹಾ ಬಲ ಪರಾಕ್ರಮಗಳಿಂದೊಡಗೂಡಿರುವ ರಕ್ಕಸರೆಲ್ಲ ಗುಂಪು ಗುಂಪಾಗಿ ನೋಡುತ್ತಾ, ಈ ಲಂಕೆಯನ್ನುರಿಸುತಲಿರುವ ಮಹಾ ಭೂತವು

ಕಿಂ ಬ್ರಹ್ಮಣ ಸ್ಸರ್ವಪಿತಾಮಹಸ್ಯ ಸರ್ವಸ್ಯ ಧಾತು ಶ್ಚತುರಾನನಸ್ಯ ।
ಇಹಾಗತೋ ವಾನರ ರೂಪಧಾರೀ ರಕ್ಷೋಪ ಸಂಹಾರ ಕರಃ ಪ್ರಕೋಪಃ ॥೩೩॥
ಕಿಂ ವೈಷ್ಣವಂ ವಾ ಕಪಿರೂಪ ಮೇತ್ಯ ರಕ್ಷೋ ವಿನಾಶಾಯ ಪರಂ ಸುತೇಜಃ ।
ಅನಂತ ಮವ್ಯಕ್ತ ಮಚಿಂತ್ಯ ಮೇಕಂ ಸ್ವಮಾಯಯಾ ಸಾಂಪ್ರತ ಮಾಗತಂ ವಾ ॥೩೪॥
ಇತ್ಯೇದ ಮೂಚು ರ್ಬಹವೋ ವಿಶಿಷ್ಟಾ ರಕ್ಷೋಗಣಾ ಸ್ತತ್ರ ಸಮೇತ್ಯ ಸರ್ವೆ ।

---

ಕಲಿತಂ, ತತ್ರ-ಆ ಲಂಕೆಯಲ್ಲಿ ಸಪ್ರಾಣಿಸಂಘಾಂ - ಪ್ರಾಣಿಸಮೂಹದಿಂದೊಡಗೂಡಿರುವ, ಸಗೃಹಾಂ-ಮನೆಗಳಿಂದ ಸಹಿತವಾದ, ಸವೃಕ್ಷಾಂ-ಮರಗಳಿಂದ ಕೂಡಿರತಕ್ಕ, ತಾಂ-ಪುರೀಂ ಆ ಪಟ್ಟಣವನ್ನು ಸಹಸಾ-ಬೇಗನೆ, ದಗ್ಧಾಂ - ಸುಡಲ್ಪಟ್ಟುದನ್ನಾಗಿ, ಸಮೀಕ್ಷ್ಯ- ನೋಡಿ, ಅಯಂ - ಈ ಲಂಕೆಯನ್ನು ಸುಡುವವನು, ವಜ್ರೀ - ವಜ್ರಾಯುಧವನ್ನು ಧರಿಸಿರುವ, ಮಹೇಂದ್ರಃ - ವೃತ್ರಾಸುರನನ್ನು ಕೊಂದ, ತ್ರಿದಶೇಶ್ವರೋವಾ - ದೇವೇಂದ್ರನೋ ? ಸಾಕ್ಷಾತ್ - ಪ್ರತ್ಯಕ್ಷವಾಗಿ, (ಆಗತಃ-ಬಂದಿರುವ) ಯಮೋವಾ-ಮೃತ್ಯುವೇನೋ, ವರುಣೋವಾ- ವರುಣನೋ, ಅನಿಲೋವಾ - ವಾಯುವೋ, ರುದ್ರೋವಾ-ಪರಮೇಶ್ವರನೋ, ಅಗ್ನಿರ್ವಾ-ಅಗ್ನಿಯೋ, ಅರ್ಕೋಥ - ಅಥವಾ ಸೂರ್ಯನೋ, ಧನದಶ್ಚ-ಕುಬೇರನೋ-ಸೋಮೋವಾ - ಚಂದ್ರನೋ, ಅಯಂ-ಇವನು, ವಾನರಃ - ಕಪಿಯುಮಾತ್ರ, ನ-ಅಲ್ಲವು, ಸ್ವಯಂ-ತಾನು, ಕಾಲಪಿನ-ಪ್ರಳಯಕಾಲವೇ, ಸರ್ವಪಿತಾಮಹಸ್ಯ-ಸಮಸ್ತಪ್ರಾಣಿಗಳಿಗೂ ತಾತನೆನಿಸಿದ, ಸರ್ವಸ್ಯ-ಸಮಸ್ತಕ್ಕೂ, ಧಾತುಃ- ಸೃಷ್ಟಿಕರ್ತನಾಗಿರುವ, ಚತುರಾನನಸ್ಯ - ನಾಲ್ಕುಮುಖಗಳನ್ನೊಳಗೊಂಡಿರುವ, ಬ್ರಹ್ಮಣಃ-ಬ್ರಹ್ಮನ, ಪ್ರಕೋಪಃ- ರೋಷವು, ವಾನರರೂಪಧಾರೀ- ಕಪಿರೂಪವನ್ನು ಧರಿಸಿದುದಾಗಿ, ರಕ್ಷೋಪಸಂಹಾರಕರಃ - ಸರ್ವರಾಕ್ಷಸನಾಶವನ್ನು ಮಾಡುತಲಿರುವುದಾಗಿ, ಇಹ-ಇಲ್ಲಿಗೆ, ಆಗತಃಕಿಂವಾ ಬಂದಿರುವುದೋ ಹೇಗೊ ? ಅನಂತಂ-ಕೊನೆಯಿಲ್ಲದ, ಅವ್ಯಕ್ತಂ-ಸ್ಪಷ್ಟವಾಗದಿರುವ, ಅಚಿಂತ್ಯಂ -ಯೋಚಿಸಲಳವಲ್ಲದ, ಏಕಂ - ಅಸಹಾಯವೆನಿಸಿರುವ, ಪರಂ-ಸರ್ವೋತ್ತಮವೆನಿಸಿದ, ವೈಷ್ಣವಂ ವಿಷ್ಣುಸಂಬಂಧವೆನಿಸಿದ, ಸುತೇಜೋವಾ - ಮಹಾತೇಜಸ್ಸೋ, ಸಾಂಪ್ರತಂ- ಈಗ, ಸ್ವಮಾಯಯಾ-ತನ್ನ ಮಾಯೆಯಿಂದ, ರಕ್ಷೋವಿನಾಶಾಯ - ರಾಕ್ಷಸರ ನಾಶಕ್ಕೋಸ್ಕರ, ಕಪಿರೂಪಂ - ವಾನರಾವತಾರವನ್ನು

---

ವಜ್ರಪಾಣಿಯಾದ ಇಂದ್ರನೋ, ವೃತ್ರವಧೆಯನ್ನು ಮಾಡಿದ ಮಹೇಂದ್ರನೋ ?, ಮೂವತ್ತು ಮೂರು ಕೋಟಿ ದೇವರ್ಕಳಿಗೊಡೆಯನಾದ ಸುರನಾಯಕನೋ ?, ಅಥವಾ ಲೋಕವನ್ನು ಹಾಳುಮಾಡಲುದ್ಯುಕ್ತನಾಗಿ ಇದಿರಿಗೆ ಬಂದ ಮೃತ್ಯುವೇನೋ ?, ಇಲ್ಲವೆ ಪ್ರಳಯಾಗ್ನಿ ರುದ್ರಸೂರ್ಯರೋ, ಅಥವಾ ವರುಣನೋ, ಹಾಗಿಲ್ಲದಿದ್ದರೆ ಪ್ರಳಯಕಾಲದಲ್ಲಿ ಭೂಮ್ಯಂತರಕ್ಷಗಳಲ್ಲಿ ಏಕಾಕಾರವಾಗಿ ಬೀಸತೊಡಗಿದ ಕಾಲಾನಿಲನೋ?, ಅದೂ ಅಲ್ಲದಿದ್ದರೆ ದೇಶಕಾಲಗಳ ಅಳವಿಗೊಳಗಾಗದೆ, ಸಕಲ ಪ್ರಾಣಿಗಳಿಗೂ ಪಿತಾಮಹನೆನಿಸಿಕೊಂಡು, ಸರ್ವಭೂತವರ್ಗವನ್ನು ಸೃಷ್ಟಿಸತಕ್ಕ ಚತುರ್ಮುಖನ ಮಹಾಕೋಪವು ರಾಕ್ಷಸರ ಪಡೆಯನ್ನೇ ಸಮೂಲವಾಗಿ ನಾಶಪಡಿಸಬೇಕೆಂಬ ಕೋರಿಕೆಯಿಂದ ಈ ಬಗೆಯ ಕಪಿರೂಪವನ್ನಾಂತು ಬಂದಿರುವುದೋ, ಹಾಗೂ ಇಲ್ಲದಿದ್ದರೆ-ಮಹಾವಿಷ್ಣುವಿನ ಸಂಬಂಧವಾಗಿ, ಚಿಂತಿಸಲಳವಲ್ಲದುದೂ,ಅದರಿಂದಲೇ ಪಾರವಿಲ್ಲದುದೂ, ವ್ಯಕ್ತವಲ್ಲದುದೂ,ಅಸಮಾನವೆನಿಸಿದುದೂ, ಅದ್ವಿತೀಯವಾದುದೂ ಆಗಿರುವ ದಿವ್ಯತೇಜವು ರಾಕ್ಷಸರ ಸುಳಿವನ್ನೇ

ಸ ಪ್ರಾಣಿ ಸಂಘಾಂ ಸಗೃಹಾಂ ಸವೃಕ್ಷಾಂ ದಗ್ಧಾಂ ಪುರೀಂ ತಾಂ ಸಹಸಾ ಸಮೀಕ್ಷ್ಯ॥
ತತಸ್ತು ಲಂಕಾ ಸಹಸಾ ಪ್ರದಗ್ಧಾ ಸರಾಕ್ಷಸಾ ಸಾಶ್ವರಥಾ ಸನಾಗಾ ।
ಸಪಕ್ಷಿಸಂಘಾ ಸಮೃಗಾ ಸವೃಕ್ಷಾ ರುರೋದ ದೀನಾ ತುಮುಲಂ ಸಶಬ್ದಂ ॥೪೦॥
ಹಾತಾತ ಹಾಪುತ್ರಕ ಕಾಂತ ಮಿತ್ರ ಹಾಜೀವಿತಂ ಭೋಗಯುತಂ ಸುಪುಣ್ಯಂ ।

---

ಏತ್ಯ-ಹೊಂದಿ, ಆಗತಂವಾ - ಬಂದಿದೆಯೋ, ಇತ್ಯೇವಂ-ಈ ಪ್ರಕಾರವಾಗಿ, ಊಚುಃ - ಹೇಳಿಕೊಳ್ಳು ತಲಿದ್ದರು ॥೩೬, ೩೭, ೩೮, ೩೯॥ ತತಸ್ತು-ಆಮೇಲೆ ಸಾದರೋ, ಲಂಕಾ-ಲಂಕಾಪಟ್ಟಣವು,ಸರಾಕ್ಷಸಾ-ರಾಕ್ಷಸರಿಂದೊಡಗೂಡಿದುದೂ, ಸಾಶ್ವರಥಾ- ಕುದುರೆ ತೇರುಗಳಿಂದ ಸಹಿತವಾದುದೂ, ಸನಾಗಾ-ಆನೆಗಳಿಂದ ಯುಕ್ತವಾದುದೂ, ಸಪಕ್ಷಿಸಂಘಾ- ಹಕ್ಕಿಗಳ ಹಿಂಡಿನಿಂದ ಸಹಿತವಾದುದೂ, ಸಮೃಗಾ -ಮೃಗಗಳಿಂದ ಕೂಡಿದುದೂ, ಸವೃಕ್ಷಾ - ಮರಗಳಿಂದ ಸೇರಿದದೂ ಆಗಿ, ಸಹಸಾ-ಬೇಗನೆ, ಪ್ರದಗ್ಧಾ-ಸುಡಲ್ಪಟ್ಟುದಾಗುತ್ತಾ, ದೀನಾ- ಸಂತೋಷಶೂನ್ಯವಾದುದಾಗಿ, ತುಮುಲಂ-ಬಲುಗದ್ದಲದೊಡನೆ, ಸಶಬ್ದಂ-ಆರ್ಭಟದಿಂದೊಡಗೂಡಿ, ರುರೋದ- ಅಳುತಲಿದ್ದಿತು ॥೪೦॥ (ಅದೆಂತೆಂದರೆ) ಹಾತಾತ-ಓ ತಂದೆಯೋ, ಹಾಪುತ್ರಕ-ಓ ನನ್ನ ಕಂದಾ !, ಹಾಕಾಂತ-ಓ ನನ್ನ ಪತಿಯೇ! ಹಾಮಿತ್ರ-ಅಯ್ಯೋ, ನನ್ನ ಸ್ನೇಹಿತನೇ !, ಭೋಗಯುತಂ- ಸುಖಪೂರ್ಣವಾದುದೂ, ಸುಪುಣ್ಯಂ-ಉತ್ತಮವಾದ ಸುಕೃತವುಳ್ಳುದೂ ಆಗಿರುವ, ಜೀವಿತಂ - ಬದುಕು, (ಹತಂ - ಹಾಳಾಯಿತಲ್ಲಾ,) ಏವಂ-ಈಪ್ರಕಾರವಾಗಿ, ಬಹುಧಾ - ಅನೇಕ ಪ್ರಕಾರವಾಗಿ, ಬ್ರುವದ್ಭಿಃ-ಹೇಳುತಲಿರುವ, ರಕ್ಷೋಭಿಃ-ರಾಕ್ಷಸರಿಂದ, ಘೋರತರಃ - ಬಹುತೀವ್ರವೆನಿ

---

ಸುಟ್ಟು ಅಳಿಸಿಬಿಡಬೇಕೆಂದು ನೆನೆದು, ವಾನರಾಕಾರದಿಂದೈತಂದಿರುವುದೋ ಹೇಳತೀರದು, ಅಹಹ ! ಈ ತೇಜಸ್ಸು-ಇಂಥದೆಂದು ಬಣ್ಣಿಸಲಳವಲ್ಲವಾಗಿದೆ ಎಂದು ತಂಡೋಪತಂಡವಾಗಿ ಮಾತನಾಡಿ ಕೊಳ್ಳುತಲಿದ್ದರು ॥೩೬, ೩೭, ೩೮, ೩೯॥ ಅನಂತರ-ರಾಕ್ಷಸರು, ಅಶ್ವಗಳು, ರಥಗಳು, ಗಜಗಳು, ಪಕ್ಷಿಗಳು, ವೃಕ್ಷಗಳು, ಈ ಮೊದಲಾದವುಗಳಿಂದೊಡಗೂಡಿದ ಲಂಕೆಯೆಲ್ಲ ಸುಟ್ಟು, ಎಲ್ಲೆಲ್ಲಿಯೂ ಗದ್ದಲವೂ, ಕೋಲಾಹಲ ಶಬ್ದವೂ, ತುಂಬಿದ್ದುದರಿಂದ ಲಂಕೆಯೇ ಗೊಳೋ ಎಂದು ಅಳುತಲಿದ್ದಂತೆ ಕಾಣಬರುತಲಿದ್ದಿತು ॥೪೦॥ ಒಂದು ಕಡೆ- ಅಯ್ಯೋ, ಅಪ್ಪಾ ! ಎಂಬ ಗೋಳೂ, ಮತ್ತೊಂದು ಕಡೆ - ಅಯ್ಯೋ, ಹಾ ! ನನ್ನ ಕಂದಾ ! ಮಗುವೇ ! ಹೋದೆಯಾ ? ಎಂಬ ರೋದನವೂ, ಇನ್ನೊಂದು ಕಡೆ- ಹಾ ನನ್ನ ಪ್ರಾಣವಲ್ಲಭಾ ಎಲ್ಲಿಹೋದೆ ? ಬೇರೊಂದೆಡೆಯಲ್ಲಿ ಅಹಹ ! ಎನ್ನ ಪ್ರಾಣಮಿತ್ರನೇ ! ಉರಿಗೆ ಸಿಲುಕಿದೆಯಾ ? ಅಯ್ಯೋ ಪ್ರಾಣಹೋಯಿತೇ ? ಸುಖವೆಲ್ಲ ನಾಶವಾಯಿತೇ ? ಪುಣ್ಯಫಲವೆಲ್ಲ ಹಾಳಾಯತೇ ? ಎಂದೀ ಪ್ರಕಾರ ಕಲ್ಮನವವರ ಎದೆಯೂ ಒಡೆಯುವಂತೆಯೂ, ಕರ್ಣಕಠೋರವಾಗುವ ಹಾಗೂ, ನೋಡುವವರ ಕಣ್ಣುಗಳು ಸಿಡಿದು ಬೀಳುವ ಹಾಗೂ ಅಬ್ಬರಿಸುತ, ಅಯ್ಯೋ ಪಾಪಿ ರಾವಣಾ ! ಸೀತೆಯನ್ನಿಲ್ಲಿ ತಂದೆ ? ಊರಿಗೇ ವಿಪತ್ತನ್ನು ತಂದೊಡ್ಡಿದೆಯಾ ? ಸರ್ವಸೌಖ್ಯದೊಳಿದ್ದ ಲಂಕಾ ಸಾಮ್ರಾಜ್ಯ ಲಕ್ಷ್ಮಿಯನ್ನೇ ಆಪತ್ತಿಗೀಡು ಮಾಡಿದೆಯಾ ? ನಮ್ಮ ಮನೆ ಮಕ್ಕಳನ್ನೆಲ್ಲ ಮೃತ್ಯುವಿಗೆ ಬಲಿಕೊಟ್ಟೆಯ ? ನಮ್ಮ ಗೋಳು ನಿನಗೆ ತಟ್ಟದೆ ಹೋಗುವುದೇ ? ಎಲ್ಲರನ್ನೂ ಹಾಳುಮಾಡಿ ನೀನೂ ಹಾಳಾಗುವಂತಾಯಿತೇ?ಎಂದೀಪ್ರಕಾರ ಬಗೆಬಗೆಯಾಗಿರುವ

ರಕ್ಷೋಭಿ ರೇವಂ ಬಹುಧಾ ಬ್ರುವದ್ಭಿಃ ಶಬ್ದಃ ಕೃತೋ ಘೋರತರ ಸ್ಸುಭೀಮಃ॥೪೧॥
ಹುತಾಶನ ಜ್ವಾಲ ಸಮಾವೃತಾ ಸಾ ಹತಪ್ರವೀರಾ ಪ್ರರಿವೃತ್ತಯೋಧಾ ॥
ಹನೂಮತಃ ಕ್ರೋಧಬಲಾಭಿ ಭೂತಾ ಬಭೂವ ಶಾಪೋಪ ಹತೇವ ಲಂಕಾ ॥೪೨॥
ಸಸಂಭ್ರಮ ತ್ರಸ್ತ ವಿಷಣ್ಣ ರಾಕ್ಷಸಾಂ ಸಮುಜ್ಜ್ವಲ ಜ್ಜ್ವಲ ಹುತಾಶ ನಾಂ ಕಿತಾಂ ।
ದದರ್ಶ ಲಂಕಾಂ ಹನುಮಾನ್ ಮಹಾಮನಾಃ ಸ್ವಯಂಭು ಕೋಪೋಪ ಹತಾ ಮಿವಾವನಿಂ
ಭಙ್ಕ್ತ್ವಾ ವನಂ ಪಾದಪ ರತ್ನ ಸಂಕುಲಂ ಹತ್ವಾ ತು ರಕ್ಷಾಂಸಿ ಮಹಾಂತಿ ಸಂಯುಗೇ ॥

---

ಸಿದುದಾದಕಾರಣವೇ, ಸುಭೀಮಃ- ಭಯಂಕರವೆನಿಸಿದ, ಶಬ್ದಃ-ಧ್ವನಿಯು, ಕೃತಃ-ಮಾಡಲ್ಪಟ್ಟಿತು ॥ ಹುತಾಶನಜ್ವಾಲಸಮಾವೃತಾ - ಅಗ್ನಿಜ್ವಾಲೆಗಳಿಂದ ಸುತ್ತುವರಿಯಲ್ಪಟ್ಟ, ಹತಪ್ರವೀರಾ-ಸತ್ತವೀರ ಭಟರುಳ್ಳುದೂ, ಪರಿವೃತ್ತಯೋಧಾ - ಓಡಿದ ಯುದ್ಧವೀರರುಳ್ಳುದೂ ಆಗಿರುವ, ಸಾಲಂಕಾ-ಆ ಲಂಕಾನಗರವು, ಹನೂಮತಃ-ಮಾರುತಿಯ, ಕ್ರೋಧಬಲಾಭಿಭೂತಾ - ರೋಷಬಲಗಳಿಂದ ತಿರಸ್ಕರಿಸಲ್ಪಟ್ಟದಾಗಿ, ಶಾಪೋಪಹತೇವ-ಶಾಪದಿಂದ ಪೆಟ್ಟುಬಿದ್ದಿರುವುದೆಂಬಂತೆ, (ಬಭೂತ್-ಇದ್ದಿತು) ॥೪೨॥ ಮಹಾಮನಾಃ-ಧೀರಚಿತ್ತನಾದ, ಹನುಮಾನ್-ಆಂಜನೇಯನು, ಸಮುಜ್ಜ್ವಲತ್ - ಜ್ವಲಿಸುತಲಿರುವ, ಜ್ವಾಲ-ಉರಿಗಳುಳ್ಳ, ಹುತಾಶನ- ಅಗ್ನಿಯಿಂದ, ಅಂಕಿತಾ - ಗುರುತುಮಾಡಲ್ಪಟ್ಟಿರುವುದಾದಕಾರಣವೇ, ಸಸಂಭ್ರಮತ್ರಸ್ತವಿಷಣ್ಣರಾಕ್ಷಸಾಂ - ತೊಂದರೆಯಿಂದೊಡಗೂಡಿ ಭಯಪಟ್ಟು ದುಃಖಿಸುವ ರಕ್ಕಸರಿಂದೊಡಗೂಡಿರುವ, ಲಂಕಾಂ-ಲಂಕಾನಗರಿಯನ್ನು, ಸ್ವಯಂಭುಕೋಪೋಪಹತಾಂ - ಭಗವಂತನ ಕೋಪದಿಂದ ನಾಶಗೊಳಿಸಲ್ಪಟ್ಟ, ಅವನಿಮಿವ - ಭೂಮಿಯನ್ನೋಪಾದಿಯಲ್ಲಿ, ದದರ್ಶ - ನೋಡುತಲಿದ್ದನು ॥ ೪೩ ॥ ಪವನಾತ್ಮಜಃ-ವಾಯುನಂದನನೆನಿಸಿದ, ಕಪಿಃ - ಹನುಮಂತನು, ಪಾದಪರತ್ನಸಂಕುಲಂ- ಶ್ರೇಷ್ಠವಾದ ವೃಕ್ಷಗಳಿಂದೊಡಗೂಡಿದ, ವನಂ-ಅಶೋಕವನವನ್ನು, ಭಙ್ಕ್ತ್ವಾ-ಮುರಿದು ಹಾಳುಮಾಡಿ, ಸಂಯುಗೇ-ಯುದ್ಧದಲ್ಲಿ, ಮಹಾಂತಿ- ಪ್ರಬಲರಾದ, ರಕ್ಷಾಂಸಿ-ರಕ್ಕಸರನ್ನು, ಹತ್ವಾ-ಕೊಂದು, ಗೃಹರತ್ನಮಾಲಿನೀಂ

---

ಪ್ರಲಾಪವು ಕೇಳಬರುತಲಿದ್ದಿತು. ॥ ೪೧ ॥ ಹುತಾಶನನ ಜ್ವಾಲೆಯು ಎಲ್ಲೆಲ್ಲಿಯೂ ಸುತ್ತು ಬಳಸಿದೆ, ಪ್ರಬಲವಾದ ಬಹುಮಂದಿ ವೀರರು ಹತರಾದರು, ಮಹಾ ಯೋಧರನೇಕ ಮಂದಿ ಉರಿಯಿಂದ ತಪ್ಪಿಸಿಕೊಂಡು ದಿಕ್ಕಾಪಾಲಾಗಿ ಓಡಿದ್ದರು. ವೀರಹನುಮನ ಸಿಟ್ಟಿಗೂ, ಬಲಕ್ಕೂ ಸಿಲುಕಿ ಉರಿಯುತಲಿರುವ ಲಂಕೆಯು, ಕ್ರೂರತರವಾದ ಶಾಪಕ್ಕೊಳಗಾಗಿ ದಹಿಸಿ ಹೋಗುತ್ತಿರುವಂತೆ ಕಾಣಬರುತಲಿದ್ದಿತು. ॥೪೨॥ ಮಹಾ ಧೀರನಾದ ಆಂಜನೇಯನು- ತನ್ನ ಬಾಲದ ಬೆಂಕಿಯಿಂದ ಲಂಕೆಯು ಸುಡುತಲಿರುವಾಗ, ಅಲ್ಲಿನ ರಕ್ಕಸರೆಲ್ಲರೂ ದಿಕ್ಕು ತೋರದೆ ತೊಂದರೆಗೊಂಡು, ಭಯದಿಂದ ನಡುಗುತ್ತಾ ನರಳುತಲಿರುವುದನ್ನು ನೋಡಿ, ಪ್ರಳಯ ಕಾಲದಲ್ಲಿ ಪರಮೇಶ್ವರನ ಕೋಪಾಗ್ನಿಗೀಡಾದ ಪ್ರಪಂಚದಂತಿರುವುದೆಂದು ಭಾವಿಸುತಲಿದ್ದನು ॥೪೩॥ ದಿವ್ಯವೃಕ್ಷಗಳಿಂದೊಡಗೂಡಿದ, ಅಶೋಕವನವನ್ನು ನಾಶಪಡಿಸಿ, ಕಾಳಗದೊಳಗೆ ಲೆಕ್ಕವಿಲ್ಲದ ರಕ್ಕಸರನ್ನೊಕ್ಕಲಿಕ್ಕಿ, ಸುವರ್ಣರತ್ನಾಲಂಕೃತಗಳಾಗಿದ್ದ ದಿವ್ಯ ಭವನಗಳಿಂದ ವಿರಾಜಮಾನವಾದ ಲಂಕಾನಗರಿಯನ್ನು ಸುಟ್ಟು, ಪವಮಾನನಂದನನಾದ ವೀರಹನುಮನು ಶಾಂತನಾಗುತ, ॥೪೪॥ ಲಂಕಾನಗರಿಗೆ ಆಸರೆಯಾಗಿರುವ ತ್ರಿಕೂಟ ಪರ್ವತದ ಶಿಖರಾಗ್ರದಲ್ಲಿ ನಿಂತು, ಬಾಲದಲ್ಲಿ ಬೆಳಗು

ದಗ್ಧ್ವಾ ಪುರೀಂ ತಾಂ ಗೃಹ ರತ್ನ ಮಾಲಿನೀಂ ತಸ್ಥೌ ಹನೂಮಾ ನ್ಪವನಾತ್ಮಜಃ ಕಪಿಃ॥
ತ್ರಿಕೂಟ ಶೃಂಗಾಗ್ರ ತಲೇ ವಿಚಿತ್ರೇ ಪ್ರತಿಷ್ಠಿತೋ ವಾನರ ರಾಜ ಸಿಂಹಃ ।
ಪ್ರದೀಪ್ತ ಲಾಂಗೂಲ ಕೃತಾರ್ಚಿಮಾಲೀ ವ್ಯರಾಜತಾ ದಿತ್ಯ ಇವಾಂಶು ಮಾಲೀ ॥೪೫॥
ಸ ರಾಕ್ಷಸಾಂ ಸ್ತಾ ನ್ಸುಬಹೂಂಶ್ಚ ಹತ್ವಾ ವನಂಚ ಭಜ್ಞ್ತ್ವಾ ಬಹು ಪಾದಪಾಂತತ್ ।
ವಿಸೃಜ್ಯ ರಕ್ಷೋಭವನೇಷು ಚಾಗ್ನಿಂ ಜಗಾಮ ರಾಮಂ ಮನಸಾ ಮಹಾತ್ಮಾ ॥೪೬॥
ತತಸ್ತು ತಂ ವಾನರವೀರ ಮುಖ್ಯಂ ಮಹಾಬಲಂ ಮಾರುತ ತುಲ್ಯವೇಗಂ ।
ಮಹಾಮತಿಂ ವಾಯುಸುತಂ ವರಿಷ್ಠಂ ಪ್ರತುಷ್ಟುವು ರ್ದೇವ ಗಣಾಶ್ಚ ಸರ್ವೇ ॥೪೭॥

---

ಉತ್ತಮಸೌಧಗಳ ಸಾಲುಳ್ಳ, ತಾಂ - ಆ, ಪುರೀಂ ಪಟ್ಟಣವನ್ನು, ದಗ್ಧ್ವಾ - ಸುಟ್ಟು, ತಸ್ಥೌ-ಶಾಂತನಾಗುತ್ತಿದ್ದನು ॥೪೪॥ ವಿಚಿತ್ರೇ - ಆಶ್ಚರ್ಯಕರವೆನಿಸಿದ, ತ್ರಿಕೂಟಶೃಂಗಾಗ್ರತಲೆ - ತ್ರಿಕೂಟಪರ್ವತದ ಕೋಡಿನತುದಿಯಲ್ಲಿ, ಪ್ರತಿಷ್ಠಿತಃ-ನೆಲೆಗೊಂಡಿದ್ದ, ವಾನರರಾಜಸಿಂಹಃ - ವಾನರವರರಲ್ಲಿ ಉತ್ತಮನೆನಿಸಿದ ಮಾರುತಿಯು, ಪ್ರದೀಪ್ತ - ಉರಿಯುತಲಿರುವ, ಲಾಂಗೂಲ - ಬಾಲದಲ್ಲಿನ ಅಗ್ನಿಯಿಂದ, ಕೃತ-ಮಾಡಲ್ಪಟ್ಟ, ಅರ್ಚಿ-ಜ್ವಾಲೆಗಳ, ಮಾಲೀ - ಸಾಲುಳ್ಳವನಾಗಿ, ಅಂಶುಮಾಲೀ -ಕಿರಣಗಳ ಸಾಲುಳ್ಳ, ಆದಿತ್ಯ ಇವ-ಸೂರ್ಯನಂತೆ, ವ್ಯರಾಜತ - ಬೆಳಗುತಲಿದ್ದನು ॥೪೫॥ ಮಹಾತ್ಮಾ - ಮಹಾಬುದ್ಧಿಯುಳ್ಳ, ಸಃ-ಆ ಹನುಮಂತನು,ಬಹುಪಾದಪಾಂ-ಅನೇಕ ತರುಗಳುಳ್ಳ,ತತ್-ಆ,ವನಂಚ-ಅಶೋಕವನವನ್ನೂ,ಭಜ್ಞ್ತ್ವಾ-ಮುರಿದು ಹಾಳುಮಾಡಿ, ಸುಬಹೂನ್-ಅನೇಕಮಂದಿ, ತಾನ್-ಆ, ರಾಕ್ಷಸಾನ್- ರಕ್ಕಸರನ್ನು, ಹತ್ವಾ-ಕೊಂದು, ರಕ್ಷೋಭವನೇಷು-ರಾಕ್ಷಸರಮನೆಗಳಲ್ಲಿ, ಅಗ್ನಿಂಚ-ಅಗ್ನಿಯನ್ನೂ, ವಿಸೃಜ್ಯ-ಬಿಟ್ಟು, (ಇಟ್ಟು) ಮನಸಾ-ಮನಸ್ಸಿನಿಂದ, ರಾಮಂ-ಶ್ರೀರಾಮನನ್ನು, ಜಗಾಮ-ಹೊಂದಿದನು (ನೆನೆದನು) ॥೪೬॥ತತಃ-ತರುವಾಯ,ವಾನರವೀರ್ಯಮುಖ್ಯಂ-ಕಪಿವರರಲ್ಲಿ ಮೊದಲನೆಯವನೆನಿಸಿದ, ಮಹಾಬಲಂ-ಹೇರಳವಾದ ಬಲವುಳ್ಳ, ಮಾರುತತುಲ್ಯವೇಗಂ-ವಾಯುವೇಗ ಸಮಾನವೇಗವುಳ್ಳ, ಮಹಾಮತಿಂ- ಹೆಚ್ಚಿದ ಬುದ್ಧಿಯುಳ್ಳ, ವಾಯುಸುತಂ-ವಾಯುನಂದನನಾಗಿರುವ, ವರಿಷ್ಠಂ - ಶ್ರೇಷ್ಠನಾದ, ತಂ-ಆ ಹನುಮಂತನನ್ನು, ಸರ್ವೆ-ಸಮಸ್ತರಾದ, ದೇವಗಣಾಶ್ಚ-ದೇವಸಮೂಹದವರೆಲ್ಲರೂ, ಪ್ರತುಷ್ಟುವುಃ- ವಿಶೇಷವಾಗಿ ಹೊಗಳಿದರು ॥೪೭॥ ಮಹಾತೇಜಾಃ-ಹೆಚ್ಚಿದ ತೇಜಸ್ಸುಳ್ಳ, ಸಃ-ಆ, ಮಹಾಕಪಿಃ-ಹನುಮಂತನು, ವನಂ-ಅಶೋಕವನವನ್ನು,

---

ತಲಿರುವ ಅಗ್ನಿಜ್ವಾಲೆಯಿಂದ ಆವರಿಸಲ್ಪಟ್ಟದ್ದರೆ, ಆ ವಾನರೋತ್ತಮನು-ಕಿರಣಗಳ ರಾಜಿಯಿಂದ ವಿರಾಜಿಸುತಲಿರುವ ಭಾಸ್ಕರನಂತೆ ಭಾಸಮಾನನಾಗಿದ್ದನು ॥೪೫॥ ಇಂತು ಶೂರಾಗ್ರಗಣ್ಯನಾದ ಪ್ರಾಭಂಜನಿಯು- ಅನೇಕ ಮಂದಿ ನಿಶಾಚರರನ್ನು ಧ್ವಂಸಮಾಡಿ, ರಮಣೀಯ ವೃಕ್ಷಸಮೂಹದಿಂದೆಸೆಯುತಲಿದ್ದ ಮಹಾ ವನವನ್ನು ಮುರಿದು, ಹಾಳುಮಾಡಿ, ರಕ್ಕಸರ ಮನೆಗಳಿಗೆಲ್ಲ ಬೆಂಕಿಯನ್ನಿಕ್ಕಿ, ತರುವಾಯ ಮನದೊಳಗೆ ಶ್ರೀರಾಮನನ್ನು ಧ್ಯಾನಮಾಡುತಲಿದ್ದನು ॥೪೬॥ ವಾನರ ವೀರರಲ್ಲಿ ಮೊದಲನೆಯವನೆನೆಸಿದವನೂ, ಅಪರಿಮಿತ ಬಲನೂ, ತಂದೆಯಾದ ಮಾರುತನಿಗೆಣೆಯಾದ ವೇಗವುಳ್ಳವನೂ, ಮಹಾ ಬುದ್ಧಿ ವಿಶಾರದನೂ ಆಗಿರುವ ಆಂಜನೇಯನನ್ನು ನೋಡಿ, ಆಕಾಶ ಚಾರಿಗಳಾದ ದೇವತೆಗಳೆಲ್ಲರೂ ಅದ್ಭುತವಾದ ಕಾರ್ಯವನ್ನು ಮಾಡಿದನೆಂದು ಆಶ್ಚರ್ಯ ಪಡುತಲಿದ್ದರು ॥೪೭॥ ಮಹಾ ತೇಜಸ್ವಿಯಾದ

ಭಙ್ಕ್ತ್ವಾ ವನಂ ಮಹಾ ತೇಜಾಃ ಹತ್ವಾ ರಕ್ಷಾಂಸಿ ಸಂಯುಗೇ ।
ದಗ್ಧ್ವಾ ಲಂಕಾಂಪುರೀಂ ರಮ್ಯಾಂ ರರಾಜ ಸ ಮಹಾಕಪಿಃ ॥ ೪೮ ॥
ತತ್ರ ದೇವಾ ಸ್ಸಗಂಧರ್ವಾ ಸ್ಸಿದ್ಧಾಶ್ಚ ಪರಮರ್ಷಯಃ ।
ದೃಷ್ಟ್ವಾ ಲಂಕಾಂ ಪ್ರದಗ್ಧಾಂ ತಾಂ ವಿಸ್ಮಯಂ ಪರಮಂ ಗತಾಃ ॥ ೪೯॥
ತಂ ದೃಷ್ಟ್ವಾ ವಾನರಶ್ರೇಷ್ಠಂ ಹನುಮಂತಂ ಮಹಾಕಪಿಂ ।
ಕಾಲಾಗ್ನಿ ರಿತಿ ಸಂಚಿಂತ್ಯ ಸರ್ವಭೂತಾನಿ ತತ್ರಸುಃ ॥೫೦॥
ದೇವಾಶ್ಚ ಸರ್ವೇ ಮುನಿಪುಂಗವಾಶ್ಚ ಗಂಧರ್ವ ವಿದ್ಯಾಧರ ನಾಗ ಯಕ್ಷಾಃ ।
ಭೂತಾನಿ ಸರ್ವಾಣಿಮಹಾಂತಿ ತತ್ರಜಗ್ಮುಃ ಪರಾಂಪ್ರೀತಿ ಮತುಲ್ಯರೂಪಾಂ

— ಇತಿ ಶ್ರೀಮತ್ಸುಂದರಕಾಂಡೇ-ಚತುಃಪಂಚಾಶಸ್ಸರ್ಗಃ —

ಭಙ್ಕ್ತ್ವಾ-ಹಾಳುಮಾಡಿ, ಸಂಯುಗೆ - ಯುದ್ಧದಲ್ಲಿ, ರಕ್ಷಾಂಸಿ-ರಕ್ಕಸರನ್ನು, ಹತ್ವಾ-ಕೊಂದು, ರಮ್ಯಾಂ ಮನೋಹರವಾದ, ಲಂಕಾಂಪುರೀಂ - ಲಂಕಾಪಟ್ಟಣವನ್ನು, ದಗ್ಧ್ವಾ- ಸುಟ್ಟು, ರರಾಜ - ಹೊಳೆಯುತ ಲಿದ್ದನು ॥೪೮॥ ತತ್ರ-ಆ ಸಮಯದಲ್ಲಿ, ಸಗಂಧರ್ವಾಃ - ಗಂಧರ್ವರೊಡನೆ ಸಹಿತರಾದ, ದೇವಾಃ - ದೇವತೆಗಳೂ, ಸಿದ್ಧಾಶ್ಚ - ಸಿದ್ಧರೂ, ಪರಮರ್ಷಯಃ - ಮಹರ್ಷಿಗಳೂ, ಪ್ರದಗ್ಧಾಂ-ಸುಡಲ್ಪಟ್ಟ ತಾಂ-ಆ, ಲಂಕಾಂ- ಲಂಕಾನಗರವನ್ನು, ದೃಷ್ಟ್ವಾ-ನೋಡಿ, ಪರಮಂ ಅಧಿಕವಾದ, ವಿಸ್ಮಯಂ- ಆಶ್ಚರ್ಯವನ್ನು, ಗತಾಃ-ಹೊಂದುತ್ತಿದ್ದರು ॥೪೯॥ ಸರ್ವಭೂತಾನಿ-ಸಮಸ್ತ ಪ್ರಾಣಿಗಳೂ, ವಾನರಶ್ರೇಷ್ಠಂ-ವಾನರೋತ್ತಮನಾದ, ಹನೂಮಂತಂ-ಮಾರುತಿಯೆಂಬ, ತಂ-ಆ, ಮಹಾಕಪಿಂ -ಆಂಜನೇಯನನ್ನು, ದೃಷ್ಟ್ವಾ-ನೋಡಿ, ಕಾಲಾಗ್ನಿರಿತಿ-ಪ್ರಳಯಾಗ್ನಿಯೆಂದು, ಸಂಚಿಂತ್ಯ ಯೋಚಿಸಿ, ತತ್ರಸುಃ-ಹೆದರುತಲಿದ್ದವು ॥೫೦॥ ತತ್ರ-ಆ ಸಮಯದಲ್ಲಿ, ಸರ್ವೇ- ಸಮಸ್ತರಾದ ದೇವಾಶ್ಚ-ದೇವತೆಗಳೂ, ಮುನಿಪುಂಗವಾಶ್ಚ-ಮಹರ್ಷಿಗಳೂ, ಗಂಧರ್ವವಿದ್ಯಾಧರನಾಗಯಕ್ಷಾಃ-ಗಂಧರ್ವರು, ವಿದ್ಯಾಧರರು, ನಾಗರು, ಯಕ್ಷರುಗಳೂ, ಮಹಾಂತಿ-ಮಹತ್ತರಗಳಾದ, ಭೂತಾನಿ - ಪ್ರಾಣಿಗಳೂ ಅತುಲ್ಯರೂಪಾಂ - ಅಸಮಾನವಾದ ಸ್ವರೂಪವುಳ್ಳ, ಪರಾಂ-ಅಧಿಕವಾದ, ಪ್ರೀತಿಂ-ಸಂತೋಷವನ್ನು, ಜಗ್ಮುಃ-ಹೊಂದಿದರು ॥

— ಇಂತು ಐವತ್ತನಾಲ್ಕನೆಯ ಸರ್ಗಂ —

ಆಂಜನೇಯನು ವನಭಂಗವನ್ನು ಮಾಡಿ, ನಕ್ತಂಚರರನ್ನು ಸದೆಬಡಿದು, ರಮಣೀಯವಾದ ಲಂಕೆಯನ್ನುರಿಸಿ ವಿರಾಜಿಸುತಲಿರುವುದನ್ನೂ, ॥ ೪೮॥ ಭೂಮ್ಯಂತರಿಕ್ಷಗಳಿಗೆ ಏಕಾಕಾರವಾಗಿರುವ ಉರಿಯಿಂದೊಡಗೂಡಿದ ಲಂಕೆಯನ್ನೂ ನೋಡಿದ ದೇವತೆಗಳು, ಗಂಧರ್ವರು, ಸಿದ್ಧರು, ಮಹರ್ಷಿಗಳು ಮುಂತಾದವರು ಅಪಾರವಾದ ಆಶ್ಚರ್ಯವನ್ನು ಹೊಂದುತಲಿದ್ದರು ॥೪೯॥ ಅತ್ಯದ್ಭುತವಾದ ಆಕಾರದಿಂದಲೂ, ತೇಜೋರಾಶಿಯಿಂದಲೂ ಬೆಳಗುತಲಿರುವ ಆ ವಾನರೋತ್ತಮನನ್ನು ನೋಡಿದ ಸಮಸ್ತ ಭೂತಗಳೂ ಹೆದರಿ ನಡುಗುತಲಿದ್ದುವು ॥೫೦॥ ಸಮಸ್ತ ದೇವತೆಗಳೂ, ಮಹಾ ಮುನಿಗಳೂ, ಗಂಧರ್ವ, ವಿದ್ಯಾಧರ, ನಾಗ, ಯಕ್ಷರೂ, ಇತರ ಸಮಸ್ತ ಪ್ರಾಣಿಗಳೂ- ಲೋಕಕಂಟಕನಾಗಿರುವ ರಾವಣನ ಹೆಮ್ಮೆಯು ಅಡಗಲು ಮಹಾ ತೇಜಸ್ವಿಯಾದ ಮಾರುತಿಯು ಅಸದೃಶವಾದ ಕಾರ್ಯವನ್ನು ಮಾಡಿದನೆಂದು ನೋಡಿ ಸಂತೋಷಿಸುತಲಿದ್ದರು ॥೫೧॥

— ಇಂತು ಐವತ್ತನಾಲ್ಕನೆಯ ಸರ್ಗಂ —

ಶ್ರೀಃ

## ಶ್ರೀರಾಮ ಚನ್ದ್ರ ಪರಬ್ರಹ್ಮಣೇನಮಃ

## ಶ್ರೀಮತ್ಸುನ್ದರಕಾಣ್ಡೇ-ಪಂಚಪಂಚಾಶಸ್ಸರ್ಗಃ



ಲಂಕಾಂ ಸಮಸ್ತಾಂ ಸಂದೀಪ್ಯ ಲಾಂಗೂಲಾಗ್ನಿಂ ಮಹಾಬಲಃ ।
ನಿರ್ವಾಪಯಾಮಾಸ ತದಾ ಸಮುದ್ರೇ ಹರಿಸತ್ತಮಃ ॥೧॥

---

— ಐವತ್ತೈದನೆಯ ಸರ್ಗಂ —

ಕಂದ॥ ಲಂಕೆಯ ನುರುಹಿದ ಮಾರುತಿ । ಬೆಂಕಿಯೊಳಾ ಸೀತೆ ಬೆಂದಳೆನುತಲೆ ಕೊರಗಲ್ ।
ಶಂಕೆಯ ದಿನಿಸಿಲ್ಲೆನುತಾ । ತಂಕವನಾ ಖೇಚರರ್ಕಳಿಳುಪಿದ ರಾಗಳ್ ॥

ಮಹಾಬಲಃ - ಹೇರಳವಾದ ಬಲವುಳ್ಳ, ಹರಿಸತ್ತಮಃ - ಕಪಿವರನಾದ ಹನುಮನು, ಸಮಸ್ತಾಂ - ಸಕಲವಾದ, ಲಂಕಾಂ - ಲಂಕಾನಗರವನ್ನು, ಸಂದೀಪ್ಯ - ಉರಿಸಿ, ತದಾ - ಆಗ, ಲಾಂಗೂಲಾಗ್ನಿಂ ಬಾಲದಲ್ಲಿನ ಬೆಂಕಿಯನ್ನು ಸಮುದ್ರೇ - ಕಡಲಿನಲ್ಲಿ, ನಿರ್ವಾಪಯಾಮಾಸ - ಆರಿಸಿದನು ॥೧॥ ವಾನರಃ- ಕಪಿವರನಾದ, ಹನುಮಾನ್ - ಮಾರುತಿಯು, ಸಂದೀಪ್ಯಮಾನಾಂ - ಬಲವಾಗಿ ಉರಿಯುತಲಿಪ್ಪ, ವಿಧ್ವಸ್ತಾಂ - ಹಾಳಾಗಿ ಹೋಗಿರುವ, ತ್ರಸ್ತರಕ್ಷೋಗಣಾಂ - ಹೆದರಿದ ರಕ್ಕಸರ ಪಡೆಯುಳ್ಳ, ಲಂಕಾಂ - ಲಂಕೆಯೆಂಬ, ಪುರೀಂ - ಪಟ್ಟಣವನ್ನು, ಅವೇಕ್ಷ್ಯ-ನೋಡಿ, ಚಿಂತಯಾಮಾಸ- ಯೋಚಿಸತೊಡಗಿದನು॥೨॥ ತಸ್ಯ- ಆ ಮಾರುತಿಗೆ, ಸುಮಹಾನ್ - ಅತ್ಯಧಿಕವಾದ, ತ್ರಾಸಃ - ಭಯವು, ಅಭೂತ್ - ಉಂಟಾಯಿತು

---

— ಐವತ್ತೈದನೆಯ ಸರ್ಗಂ —

ಮಹಾ ಬಲಶಾಲಿಯಾದ ವಾನರೋತ್ತಮನು--ತನ್ನ ಬಾಲದ ಬೆಂಕಿಯಿಂದ ಲಂಕಾ ನಗರವನ್ನೆಲ್ಲ ಸಂಪೂರ್ಣವಾಗಿ ಮನವಾರ ಸುಟ್ಟು, ಆಮೇಲೆ ಆ ವಾಲಾಗ್ನಿಯನ್ನು ಕಡನಲ್ಲಿ ಅದ್ದಿ ಆರಿಸಿದನು॥೧॥ ಆಗಲಾ ಹನುಮಂತನ ವಾಲಾಗ್ನಿಯಿಂದಲಂಕೆಯೆಲ್ಲಹೊತ್ತಿಕೊಂಡುಉರಿಯುತಲಿದೆ, ಒಂದುಕಡೆಯಿಂದ ಹಾಳಾಗುತಲಿದೆ, ರಕ್ಕಸರೆಲ್ಲಹೆದರಿ ನಡುಗುತಲಿದಾರೆ, ಈಅವಸ್ಥೆಯೊಳಿರುವ ಲಂಕೆಯನ್ನು ಹನುಮನುನೋಡಿದನು. ಬಳಿಕ ಮನದೊಳಗೆ ಬಲವಾಗಿಚಿಂತೆಯುಂಟಾಯಿತು॥೨॥ಅದೆಂತೆಂದರೆ- ಇದ್ದಕ್ಕಿದ್ದ ಹಾಗೆ ಮಹಾ ಭಯವುಂಟಾಯಿತು,ಅಯ್ಯೋ ಇದೇನನ್ಯಾಯ? ಅಂಕೆಯಿಲ್ಲದೆ ಲಂಕೆಯನ್ನುಸುಟ್ಟ ಈ ನಾನು-ಬಲು ಕೆಟ್ಟ ಕೆಲಸವನ್ನು ಮಾಡಿಬೆಟ್ಟೆನಲ್ಲ ? ಛೆ! ಛೀ! ನನ್ನ ಬಾಳನ್ನು ಸುಡಬೇಕು, ನನ್ನನ್ನು ಎಷ್ಟು

ಸಂದೀಪ್ಯಮಾನಾಂ ವಿಧ್ವಸ್ತಾಂ ತ್ರಸ್ತ ರಕ್ಷೋಗಣಾಂ ಪುರೀಂ ।
ಅವೇಕ್ಷ್ಯ ಹನುಮಾ ನ್ಲಂಕಾಂ ಚಿಂತಯಾಮಾಸ ವಾನರಃ ॥೨॥
ತಸ್ಯಾಭೂ ತ್ಸುಮಹಾಂ ಸ್ತ್ರಾಸಃ ಕುತ್ಸಾ ಚಾತ್ಮ ನ್ಯಜಾಯತ ।
ಲಂಕಾಂ ಪ್ರದಹತಾ ಕರ್ಮ ಕಿಂಸ್ವಿ ತ್ಕೃತ ಮಿದಂ ಮಯಾ ॥೩॥
ಧನ್ಯಾ ಸ್ತೇ ಪುರುಷ ಶ್ರೇಷ್ಠಾ ಯೇ ಬುದ್ಧ್ಯಾ ಕೋಪ ಮುತ್ಥಿತಂ ।
ನಿರುಂಧಂತಿ ಮಹಾತ್ಮಾನೋ ದೀಪ್ತ ಮಗ್ನಿ ಮಿವಾಂಭಸಾ ॥೪॥
ಕ್ರುದ್ಧಃ ಪಾಪಂ ನ ಕುರ್ಯಾ ತ್ಕಃ ಕ್ರುದ್ಧೋ ಹನ್ಯಾ ದ್ಗುರೂ ನಪಿ

ಆತ್ಮನಿ - ಮನಸ್ಸಿನಲ್ಲಿ, (ತನ್ನ ವಿಷಯವಾಗಿ ) ಕುತ್ಸಾಚ - ನಿಂದೆಯೂ, ಅಜಾಯತ - ಉಂಟಾಯಿತು. ಲಂಕಾಂ - ಲಂಕೆಯನ್ನು, ಪ್ರದಹತಾ - ಸುಡುತಲಿರುವ, ಮಯಾ - ನನ್ನಿಂದ, ಕಿಂಸ್ವಿತ್ - ಎಷ್ಟುನಿಂದಿತವಾದ, ಇದಂ - ಈ, ಕರ್ಮ - ಕೆಲಸವು, ಕೃತಂ - ಮಾಡಲ್ಪಟ್ಟಿತು ? ॥೩॥ ಯೆ - ಯಾವ, ಮಹಾತ್ಮಾನಃ - ಒಳ್ಳೆಯ ಮನಸ್ಸುಳ್ಳ ಧೀರರು, ಉತ್ಥಿತಂ - ಮೊಳೆತ, ಕೋಪಂ - ಸಿಟ್ಟನ್ನು, ಬುದ್ಧ್ಯಾ - ವಿವೇಕ ಶಕ್ತಿಯಿಂದ, ಅಂಭಸಾ - ಜಲದಿಂದ, ದೀಪ್ತಂ - ಉರಿಯುತಲಿರುವ, ಅಗ್ನಿಮಿವ - ಬೆಂಕಿಯನ್ನು ಹೇಗೋ ಹಾಗೆ, ನಿರುಂಧಂತಿ - ಅಡಗಿಸುತ್ತಾರೆಯೋ, ತೇ - ಅಂತಹ, ಪುರುಷಶ್ರೇಷ್ಠಾಃ - ಪುರುಷೋತ್ತಮರೇ, ಧನ್ಯಾಃ - ಪುಣ್ಯಾತ್ಮರು ॥೪॥ ಕ್ರುದ್ಧಃ - ಸಿಟ್ಟುಗೊಂಡ, ಕಃ - ಯಾವ ಮನುಷ್ಯನು, ಪಾಪಂ - ಪಾಪಕಾರ್ಯವನ್ನು, ನಕುರ್ಯಾತ್ - ಮಾಡದೆ ಹೋಗುವನು ? ಕ್ರುದ್ಧಃ ಕೋಪಿಸಿದವನು, ಗುರೂನಪಿ - ಗುರುಗಳನ್ನು ಕೂಡ, ಹನ್ಯಾತ್ - ಕೊಲ್ಲುವನು, ಕ್ರುದ್ಧಃ - ರೋಷಗೊಂಡ, ನರಃ - ಮನುಷ್ಯನು, ಪರುಷಯಾ - ಕಠಿನವಾದ, ವಾಚಾ - ಮಾತಿನಿಂದ, ಸಾಧೂನ್ - ಸಜ್ಜನರನ್ನು, ಅಧಿಕ್ಷಿಪೇತ್ - ನಿಂದಿಸುವನು ॥೫॥ ಪ್ರಕುಪಿತಃ - ಹೇರಳವಾಗಿ ಖತಿಗೊಂಡವನು, ವಾಚ್ಯಾವಾಚ್ಯಂ - ಹೇಳಬಹುದು ಹೇಳಬಾರದೆಂಬ ಮಾತನ್ನು, ಕರ್ಹಿಚಿತ್ - ಸರ್ವಾತ್ಮನಾ, ನವಿಜಾನಾತಿ - ತಿಳಿಯುವುದಿಲ್ಲ. ಕ್ರುದ್ಧಸ್ಯ - ಕ್ರೋಧಗೊಂಡವನಿಗೆ. ಅಕಾರ್ಯಂ - ಮಾಡಬಾರದ ಕೆಲಸವು, ನಾಸ್ತಿ - ಇಲ್ಲವು, (ಕ್ರುದ್ಧಸ್ಯ - ಸಿಟ್ಟು ಹತ್ತಿದವನಿಗೆ) ಕ್ವಚಿತ್ - ಎಲ್ಲಿಯೂ, ಅವಾಚ್ಯಂ ಹೇಳಬಾರದ ಮಾತು,

ನಿಂದಿಸಿದರೂ ಸಾಲದು ॥೩॥ ಅಹಹ ! ಲೋಕದಲ್ಲಿ ಬೆಂಕಿಯಿಂದ ಬೇಗೆಯುಂಟಾದ ಹಾಗೆ ಮನದೊಳಗೆ ಕೋಪದಿಂದ ತಾಪವುಂಟಾಗುವುದು. ಆದರೆ ನೀರಿನಿಂದ ಬೆಂಕಿಯನ್ನು ಆರಿಸುವ ಹಾಗೆ, ತಮ್ಮ ವಿವೇಕಶಕ್ತಿಯಿಂದಲೇ ಆ ತೀವ್ರವಾದ ಸಿಟ್ಟನ್ನು ಅಡಗಿಸಬೇಕು. ಯಾರಾದರೆ ಆ ಪ್ರಕಾರವಾಡುವರೋ, ಅಂತಹ ಮಹನೀಯರೇ ಪುಣ್ಯಾತ್ಮರು, ತಮ್ಮ ಬುದ್ಧಿಶಕ್ತಿಯಿಂದ ಮಿತಿಮೀರುವ ಸಿಟ್ಟನ್ನು ಅಡಗಿಸುವವರಿಗಿಂತಲೂ ಮೀರಿದವರೇ ಇಲ್ಲ ॥೪॥ ಅಯ್ಯೋ ! ಈಪ್ರಪಂಚದಲ್ಲಿ ಕೋಪಗೊಂಡ ಪಾಪಿಯು ಎಂತಹ ಕಾರ್ಯವನ್ನು ಮಾಡಲಿಕ್ಕೂ ಹಿಂದೆಗೆಯುವುದಿಲ್ಲ. ತನಗೆ ವಿದ್ಯೋಪದೇಶವನ್ನು ಮಾಡಿದ ಗುರುಗಳನ್ನಾದರೂ ಕೊಂದು ಬಿಡುವನು, ಸಿಟ್ಟುಗೊಂಡ ಮನುಜನು ಮಹಾಕ್ರೂರವಾದ ಮಾತಿನಿಂದ ಎಂತಹ ಸತ್ಪುರುಷರನ್ನಾದರೂ ನಿಂದಿಸಿ ಬಿಡುವನು ॥೫॥ ಇದನ್ನು ಆಡಬಹುದು ಇದನ್ನು ಆಡಬಾರದು ಎಂಬ ವಿವೇಕವು ಕೋಪಿಷ್ಠನಿಗೆ ಇರುವುದಿಲ್ಲ. ಕೋಪವು ಬಂದಾಗ ಏನೊಂದನ್ನೂ ಅರಿಯದೆ ಕಣ್ಣುಕಾಣದ ಕುರುಡನಾಗುತ್ತಾನೆ, ರೋಷಗೊಂಡವನಿಗೆ

ಕ್ರುದ್ಧಃ ಪರುಷಯಾ ವಾಚಾ ನರ ಸ್ಸಾಧೂ ನಧಿಕ್ಷಿಪೇತ್ ॥೫॥
ವಾಚ್ಯಾವಾಚ್ಯಂ ಪ್ರಕುಪಿತೋ ನ ವಿಜಾನಾತಿ ಕರ್ಹಿಚಿತ್ ।
ನಾಕಾರ್ಯ ಮಸ್ತಿ ಕ್ರುದ್ಧಸ್ಯ ನಾವಾಚ್ಯಂ ವಿದ್ಯತೇ ಕ್ವಚಿತ್ ॥೬॥
ಯ ಸ್ಸಮುತ್ಪತಿತಂ ಕ್ರೋಧಂ ಕ್ಷಮಯೈವ ನಿರಸ್ಯತಿ ।
ಯಥೋರಗ ಸ್ತ್ವಚಂ ಜೀರ್ಣಾಂ ಸವೈ ಪುರುಷ ಉಚ್ಯತೇ ॥೭॥
ಧಿಗಸ್ತು ಮಾಂ ಸುದುರ್ಬುದ್ಧಿಂ ನಿರ್ಲಜ್ಜಂ ಪಾಪಕೃತ್ತಮಂ ।
ಅಚಿಂತಯಿತ್ವಾ ತಾಂ ಸೀತಾ ಮಗ್ನಿದಂ ಸ್ವಾಮಿಘಾತುಕಂ ॥೮॥
ಯದಿ ದಗ್ಧಾ ತ್ವಿಯಂ ಲಂಕಾ ನೂನ ಮಾರ್ಯಾಪಿಜಾನಕೀ ।

---

ನವಿದ್ಯತೆ - ಇರುವುದಿಲ್ಲ. ॥೬॥ ಉರಗಃ - ಸರ್ಪವು, ಜೀರ್ಣಾಂ-ಹಳೆಯದಾದ ತ್ವಚಂಯಥಾ - ಪರೆಯನ್ನು ಹೇಗೋ ಹಾಗೆ, ಯಃ - ಯಾವ ಮನುಷ್ಯನು, ಸಮುತ್ಪತಿತಂ - ಉಕ್ಕುತ ಬರುವ, ಕ್ರೋಧಂ - ಕೋಪವನ್ನು, ಕ್ಷಮಯೈವ - ತಾಳ್ಮೆಯಿಂದಲೇ, ನಿರಸ್ಯತಿ - ತೊಲಗಿಸುತ್ತಾನೆಯೋ, ಸವೈ - ಅವನು ಮಾತ್ರವೇ, ಪುರುಷಃ - ಮಹಾ ಪುರುಷನೆಂದು, ಉಚ್ಯತೆ - ಹೇಳಲ್ಪಡುತ್ತಾನೆ ॥೭॥ ತಾಂ - ಆ, ಸೀತಾಂ ಸೀತಾದೇವಿಯನ್ನು, ಅಚಿಂತಯಿತ್ವಾ - ನೆನೆಯದೆಯೇ, (ಲಂಕಾಯಾಂ ಲಂಕೆಯಲ್ಲಿ) ಅಗ್ನಿದಂ - ಬೆಂಕಿಯನ್ನು ಹತ್ತಿಸಿದವನಾದಕಾರಣವೇ, ಸ್ವಾಮಿ ಘಾತುಕಂ - ಸ್ವಾಮಿ ದ್ರೋಹವನ್ನು ಮಾಡಿದ, (ಅದರಿಂದಲೇ) ಪಾಪಕೃತ್ತಮಂ - ಪಾಪಿಷ್ಠರೊಳಗೆ ಮೊದಲನೆಯವನೆನಿಸಿರುವ, ನಿರ್ಲಜ್ಜಂ - ನಾಚಿಕೆಯಿಲ್ಲದ, ಸುದುರ್ಬುದ್ಧಿಂ - ಅತ್ಯಂತ ನೀಚಬುದ್ಧಿಯುಳ್ಳ, ಮಾಂ -ನನ್ನನ್ನು ಕುರಿತು, ಧಿಕ್ - ನಿಂದೆಯು, ಅಸ್ತು - ಉಂಟಾಗಬೇಕು (ನನ್ನನ್ನು ನಿಂದಿಸಬೇಕು) ॥೮॥ ಇಯಂ - ಈ, ಲಂಕಾ - ಲಂಕಾಪಟ್ಟಣವು, ದಗ್ಧಾಯದಿ - ಸುಡಲ್ಪಟ್ಟಿದ್ದೇ ಆದರೆ ಆರ್ಯಾ - ಪೂಜ್ಯಳಾದ ಜಾನಕ್ಯಪಿ - ಸೀತೆಯು ಸಹ, ನೂನಂ- ನಿಜವಾಗಿ, ದಗ್ಧಾ - ಸುಡಲ್ಪಟ್ಟವಳೇ ಆಗಿದ್ದಾಳೆ, ತೇನ - ಅಂತಹ ಕೋಪಿಷ್ಠನಾದ ಕಾರಣವೇ,

---

ಮಾಡಬಾರದ ಕೆಲಸವೇ ಇಲ್ಲದೆ ಹೋಗುತ್ತದೆ. ಆಡಬಾರದ ಮಾತೂ ಇಲ್ಲದೆ ಹೋಗುವುದು ॥೬॥ ಹಾವು ತನ್ನ ಮೈಮೇಲಣ ಜೀರ್ಣವಾದ ಪರೆಯನ್ನು ತೊರೆಯುವ ಹಾಗೆ ಲೋಕದಲ್ಲಿ ಯಾವಮನುಷ್ಯನು ಉಕ್ಕಿಬರುವ ಕೋಪವನ್ನು ತಾಳ್ಮೆಯಿಂದಲೇ ಅಡಗಿಸಿ ತೊರೆಯುತ್ತಾನೆಯೋ,ಆತನೇ ಮಹಾಪುರುಷನೆಂದು ಎಲ್ಲರಿಂದಲೂ ಕೊಂಡಾಡಲ್ಪಡುವನು॥ ಅಯ್ಯೋ!ನಾನು ಬಹು ದುರ್ಬುದ್ಧಿಯುಳ್ಳವನಾದೆನು. ಇಲ್ಲಿ ಸೀತೆ ಇರುವಳಲ್ಲಾ? ಸುಡಬಾರದು ಎಂದು ವಿವೇಚನೆ ಮಾಡದೆ ಹೋದೆ. ಇಂತಹ ಅನಿಷ್ಟಕಾರ್ಯವನ್ನುಮಾಡಿಯೂ ನಾಚಿಕೆಯಿಲ್ಲದೆ ಹೋಗಿರುವ ನನ್ನನ್ನು ನಿಂದಿಸಬೇಕು. ಪಾಪಕಾರ್ಯವನ್ನು ಮಾಡುವವರೊಳಗೆ ಮೊದಲನೆಯವನೆನಿಸಿದ ಈ ನನ್ನನ್ನು ಎಷ್ಟುಸಾರಿ ಛೀ ಎಂದರೂ ಸಾಲದಾಗಿದೆ. ಸ್ವಲ್ಪವೂ ಮುಂದಾಲೋಚನೆಯಿಲ್ಲದೆ ಸೀತೆಯನ್ನು ಸುಟ್ಟುಬಿಟ್ಟು, ಸ್ವಾಮಿದ್ರೋಹಕ್ಕೆ ಒಳಗಾದೆನಲ್ಲಾ ? ಅಯ್ಯೋ ಮುಂದೇನುಗತಿಯೋ ನಾನು ಕಾಣೆನು ॥೮॥ ಇಷ್ಟು ಪ್ರಬಲವಾದ ಜ್ವಾಲೆಯಿಂದ ಲಂಕಾನಗರವೇ ಉರಿದು ಹೋಗುವಲ್ಲಿ ಸೀತೆಯು ಉರಿದು ಹೋಗದೆ ಇರುತ್ತಾಳೆಯೆ ? ಖಂಡಿತವಾಗಿ ಪೂಜ್ಯಳಾದ ಆ ಜಾನಕಿಯೂ ಸುಟ್ಟೇ ಹೋಗಿದ್ದಾಳೆ, ಅಂತಹ ಮಹಾಪಾಪಕಾರ್ಯವನ್ನು ಮಾಡಿದ ನಾನು-ಅಜ್ಞಾನದಿಂದ ಸ್ವಾಮಿಕಾರ್ಯವನ್ನು

ವಗ್ಧಾ ತೇನ ಮಯಾ ಭರ್ತು ರ್ಹತಂ ಕಾರ್ಯ ಮಜಾನತಾ ॥೯॥
ಯದರ್ಥ ಮಯ ಮಾರಂಭ ಸ್ತತ್ಕಾರ್ಯ ಮವಸಾದಿತಂ ।
ಮಯಾ ಹಿ ದಹತಾ ಲಂಕಾಂ ನ ಸೀತಾ ಪರಿರಕ್ಷಿತಾ ॥೧೦॥
ಈಷತ್ಕಾರ್ಯ ಮಿದಂ ಕಾರ್ಯಂ ಕೃತ ಮಾಸೀ ನ್ನ ಸಂಶಯಃ ।
ತಸ್ಯ ಕ್ರೋಧಾಭಿ ಭೂತೇನ ಮಯಾ ಮೂಲಕ್ಷಯಃ ಕೃತಃ ॥೧೧॥
ವಿನಷ್ಟಾ ಜಾನಕೀ ನೂನಂ ನಹ್ಯದಗ್ಧಃ ಪ್ರದೃಶ್ಯತೇ ।

---

ಅಜಾನತಾ - ಏನನ್ನೂ ಅರಿಯದೆಹೋದ, ಮಯಾ - ನನ್ನಿಂದ, ಭರ್ತುಃ - ಸ್ವಾಮಿಯ, ಕಾರ್ಯಂ - ಕೆಲಸವು, ಹತಂ - ನಾಶಗೊಳಿಸಲ್ಪಟ್ಟಿತು, ॥೯॥ ಹಿ - ಯಾವ ಕಾರಣದಿಂದ, ಲಂಕಾಂ - ಲಂಕೆಯನ್ನು, ದಹತಾ - ಸುಡುತಲಿರುವ, ಮಯಾ - ನನ್ನಿಂದ, ಸೀತಾ - ಜಾನಕಿಯು, ನಪರಿರಕ್ಷಿತಾ - ಸಂರಕ್ಷಿಸಲ್ಪಡಲಿಲ್ಲವೋ, ತತ್ - ಆ ಕಾರಣದಿಂದಲೇ, ಯದರ್ಥಂ - ಯಾವ ಕಾರ್ಯಕ್ಕೋಸ್ಕರ, ಅಯಂ - ಈ ಆರಂಭಃ - ಪ್ರಯತ್ನವು, ಕೃತಃ - ನನ್ನಿಂದ ಮಾಡಲ್ಪಟ್ಟಿತೋ, ತತ್ - ಆ, ಕಾರ್ಯಂ - ಕೆಲಸವು, ಅವಸಾದಿತಂ - ಹಾಳುಮಾಡಲ್ಪಟ್ಟಿತು ॥೧೦॥ ಇದಂ - ಈ ಸೀತಾ ಸಂದರ್ಶನ ರೂಪವಾದ, ಕಾರ್ಯಂ - ಮಹತ್ಕಾರ್ಯವು, ಈಷತ್ಕಾರ್ಯಂ - ರಾಮನಿಗೆ ಸುದ್ದಿಯನ್ನು ತಿಳಿಸುವುದು ಮಾತ್ರವೆ ಉಳಿದ ಕೆಲಸವಾಗಿದ್ದಿತು, ತಸ್ಯ - ಆ ರಾಮನ, (ಕಾರ್ಯಂ - ಮಾಡಬೇಕಾಗಿದ್ದ ಕಾರ್ಯವು) ಕೃತಂ - ಈಗ ಚೆನ್ನಾಗಿ ಮಾಡಲ್ಪಟ್ಟುದು, ಆಸೀತ್ - ಆಯಿತು, ನಸಂಶಯಃ - ಸಂದೇಹವಿಲ್ಲ., ಕ್ರೋಧಾಭಿಭೂತೇನ - ಸಿಟ್ಟಿನಿಂದ ತಿರಸ್ಕರಿಸಲ್ಪಟ್ಟ, ಮಯಾ - ನನ್ನಿಂದ, ಮೂಲಕ್ಷಯಃ - ಸರ್ವಕಾರ್ಯ ಮೂಲವಸ್ತುವಾದ ಸೀತೆಯನ್ನು ನಾಶಪಡಿಸಿದ ಕೆಲಸವು, ಕೃತಃ - ಮಾಡಲ್ಪಟ್ಟಿತು, ನಸಂಶಯಃ -ಸಂದೇಹವಿಲ್ಲ. ॥೧೧॥ ಹಿ - ಯಾವ ಕಾರಣದಿಂದ, ಲಂಕಾಯಾಂ - ಲಂಕೆಯಲ್ಲಿ, ಕಶ್ಚಿತ್ - ಯಾವುದೊಂದು, ಉದ್ದೇಶಃ - ಸ್ಥಲವೂ, ಅದಗ್ಧಃ - ಸುಡಲ್ಪಡದಿರುವುದಾಗಿ, ನದೃಶ್ಯತೆ - ಕಾಣಬರುವುದಿಲ್ಲ, (ತತ್ - ಆ ಕಾರಣದಿಂದಲೇ ) ಸರ್ವಾ - ಸಮಸ್ತವಾದ

---

ಸಂಪೂರ್ಣವಾಗಿ ಹಾಳುಮಾಡಿದಂತಾಯಿತು ॥೯॥ ಈ ನಾನು-ಸೀತೆಯನ್ನು ಕಂಡು,ಆಕೆಯ ಯೋಗಕ್ಷೇಮವನ್ನು ತಿಳಿದ ಕೊಂಡು, ಆ ಸುದ್ದಿಯನ್ನು ಶ್ರೀರಾಮನಿಗೆ ತಿಳಿಸಬೇಕಾಗಿರುವ ಕೆಲಸಕ್ಕಾಗಿ ಇಲ್ಲಿಗೆ ಬಂದವನು, ಆ ನನ್ನ ಪ್ರಯತ್ನದಿಂದ ಮಾಡಬೇಕಾದ ಕೆಲಸವನ್ನೆಲ್ಲ ಮಾಡಿಮುಗಿಸಿದಂತಾಯಿತು. ಅಯ್ಯೋ! ಲಂಕೆಯನ್ನು ಸುಡುವಾಗ ಸೀತೆಯನ್ನು ಸಂರಕ್ಷಿಸಿಕೊಳ್ಳಲಾರದೆ,ಹೋದೆನೆ ? ನಾನೆಂತಹ ಪಾಪಾತ್ಮನಾದೆನು ॥೧೦॥ ಕಡಲನ್ನು ದಾಟಿ, ರಾವಣನ ಮನೆಯನ್ನು ಹೊಕ್ಕು, ಜಾನಕಿಯನ್ನು ಹುಡುಕಿ, ಆಕೆಯನ್ನು ಕಂಡು, ಆಸಮಾಚಾರವನ್ನ ರಾಮನಿಗೆ ತಿಳಿಸಬೇಕಾಗಿರುವ ಕೆಲಸಗಳಲ್ಲಿ ಎಲ್ಲವನ್ನೂ ಮಾಡಿ ಮುಗಿಸಿ, ಸ್ವಲ್ಪಮಾತ್ರವೇ ಉಳಿದಿದ್ದ ಕೆಲಸವನ್ನು ದೊಡ್ಡ ಕೆಲಸವನ್ನಾಗಿ ಮಾಡಿ ಬಿಟ್ಟೆನು, ಉಳಿದಿದ್ದ ಆ ಸ್ವಲ್ಪಕಾರ್ಯವೇ ಮಹತ್ಕಾರ್ಯವಾಗಿದ್ದಿತು. ಅದನ್ನು ಏತಕ್ಕೂ ಕೆಲಸಕ್ಕೆ ಬಾರದಕೆಲಸವನ್ನಾಗಿ ಮಾಡಿಬಿಟ್ಟೆನಲ್ಲ ? ಕೋಪಪರವಶನಾಗಿ ಕಣ್ಣು ಕಾಣದೆ ಹೋದನಾನು-ನನ್ನ ಸರ್ವಪ್ರಯತ್ನಕ್ಕೂ ಮೂಲವಾಗಿದ್ದ ಸೀತೆಯನ್ನೇ ನಾಶಗೊಳಿಸಿದುದು ಸರ್ವನಾಶವನ್ನು ಮಾಡಿದಂತಾಯಿತು ॥೧೧॥ ಸೀತೆಯು ಸುಟ್ಟು ಬೂದಿಯಾಗಿ ನಾಶವಾಗಿದಾಳೆ, ಸಂದೇಹವಿಲ್ಲ ಏಕೆಂದರೆ-ಈಲಂಕೆಯೊಳಗೆ ಯಾವುದೊಂದು ಸ್ವಲ್ಪ ಸ್ಥಳವೂ ಸುಟ್ಟು ಹೋಗದೆ ಇಲ್ಲ

ಲಂಕಾಯಾಂ ಕಶ್ಚಿ ದುದ್ದೇಶಃ ಸರ್ವಾ ಭಸ್ಮೀಕೃತಾ ಪುರೀ ॥೧೨॥
ಯದಿ ತದ್ವಿಹತಂ ಕಾರ್ಯಂ ಮಮ ಪ್ರಜ್ಞಾ ವಿಪರ್ಯಯಾತ್ ।
ಇಹೈವ ಪ್ರಾಣ ಸನ್ನ್ಯಾಸೋ ಮಮಾಪಿ ಹ್ಯದ್ಯ ರೋಚತೇ ॥೧೩॥
ಕಿಮಗ್ನೌ ನಿಪತಾ ಮ್ಯದ್ಯ ಆಹೋ ಸ್ವಿ ದ್ಬಡಬಾ ಮುಖೇ ।
ಶರೀರ ಮಾಹೋ ಸತ್ತ್ವಾನಾಂ ದದ್ಮಿ ಸಾಗರ ವಾಸಿನಾಂ ॥೧೪॥
ಕಥಂ ಹಿ ಜೀವತಾ ಶಕ್ಯೋ ಮಯಾ ದ್ರಷ್ಟುಂ ಹರೀಶ್ವರಃ ।

ಪುರೀ - ಲಂಕಾಪಟ್ಟಣವು, ಭಸ್ಮೀಕೃತಾ - ಬೂದಿಯಾಗಿ ಮಾಡಲ್ಪಟ್ಟದೆ. (ತತ್ - ಅದರಿಂದಲೇ) ಜಾನಕೀ - ಸೀತೆಯೂ, ನೂನಂ - ನಿಜವಾಗಿಯೂ, ವಿನಷ್ಟಾ - ನಾಶವಾದವಳಾಗಿಯೇ, ಸ್ಯಾತ್ - ಇರಬೇಕು ॥೧೨॥ ತತ್ - ಆ, ಕಾರ್ಯಂ - ಕೆಲಸವು, ಮಮ - ನನ್ನ, ಪ್ರಜ್ಞಾವಿ ಪರ್ಯಯಾತ್ - ತಿಳುವಳಿಕೆ ತಪ್ಪುವುದರ ದೆಶೆಯಿಂದ, ವಿಹತಂಯದಿ - ಕೆಲಸವು ಕೆಟ್ಟುಹೋಗಿದ್ದ ಪಕ್ಷದಲ್ಲಿ, ಇಹೈವ - ಇಲ್ಲಿಯೇ, ಪ್ರಾಣ ಸನ್ನ್ಯಾಸಃ - ಪ್ರಾಣತ್ಯಾಗವೇ, ಮಮಾಪಿ - ನನಗೂ, ಅದ್ಯ-ಈಗ, ರೋಚತೆ- ಇಷ್ಟವಾಗಿದೆ ॥೧೩॥ (ಅಹಂ - ನಾನು) ಅದ್ಯ - ಈಗ, ಅಗ್ನೌ - ಬೆಂಕಿಯಲ್ಲಿ, ನಿಪತಾಮಿಕಿಂ - ಬೀಳಲೆ ? ಆಹೋಸ್ವಿತ್- ಅಥವಾ, ಬಡಬಾಮುಖೆ - ಬಡಬಾಗ್ನಿಯ ಮುಖದಲ್ಲಿ ( ಸಮುದ್ರದಲ್ಲಿ) ನಿಪತಾಮಿಕಿಂ - ಬೀಳಲೆ ! ಆಹೋ (ಸ್ವಿತ್) ಅಥವಾ, ಸಾಗರವಾಸಿನಾಂ - ಸಮುದ್ರದಲ್ಲಿ ವಾಸಮಾಡುತಲಿರುವ, ಸತ್ತ್ವಾನಾಂ - ಜಂತುಗಳಿಗೆ, ಶರೀರಂ - ದೇಹವನ್ನು, ದದ್ಮಿ ಕಿಂ - ( ದದಾಮಿ) ಕೊಟ್ಟುಬಿಡಲೆ ॥೧೪॥ ಕಾರ್ಯ ಸರ್ವಸ್ವಘಾತಿನಾ - ಕಾರ್ಯ ಸ್ವರೂಪವನ್ನೇ ಹಾಳುಮಾಡಿದವನಾಗಿ, ಜೀವತಾ - ಬದುಕಿ ಇರುವ, ಮಯಾ -ನನ್ನಿಂದ ಹರೀಶ್ವರಃ - ಸುಗ್ರೀವನು, ಕಥಂ - ಹೇಗೆ, ದ್ರಷ್ಟುಂ - ನೋಡಲಿಕ್ಕೆ, ಶಕ್ಯಃ- ಸಾಧ್ಯನು. ಪುರುಷ ಶಾರ್ದೂಲೌ - ಪುರುಷ ಶ್ರೇಷ್ಠರೆನಿಸಿದ, ತೌವಾ - ಆ ರಾಮಲಕ್ಷ್ಮಣರಾದರೂ, (ಕಥಂ -ಹೇಗೆ, ದ್ರಷ್ಟುಂ - ನೋಡಲಿಕ್ಕೆ, ಶಕ್ಯೌ - ಸಾಧ್ಯರಾಗುವರು.) ॥೧೫॥ ತತ್ - ಆದಕಾರಣ, ಮಯಾ - ನನ್ನಿಂದ

ಎಲ್ಲವೂ ಬೂದಿಯಾಗಿ ಹೋಗಿದೆ, ಪಟ್ಟಣವೇ ಉರಿದು ಗುಡ್ಡೆ ಯಾಗುವಲ್ಲಿ ಸೀತೆಯುಳಿವುದುಂಟೆ ? ॥೧೨॥ ನನ್ನ ಹಾಳುಬುದ್ಧಿಯಿಂದ ಸೀತೆಯೇನಾದರು ಸುಟ್ಟು ಹೋಗಿದ್ದ ಪಕ್ಷದಲ್ಲಿ, ಆ ಮೇಲೆ ನಾನು ಪ್ರಾಣಗಳನ್ನು ತೊರೆದುಕೊಂಬುದೇ ಮೇಲಲ್ಲದೆ ಮತ್ತಾವುದೂ ರುಚಿಸುವುದಿಲ್ಲ॥೧೩॥ ನನ್ನ ಸಾವಿಗೆ ಸಾಧನೆಯಾವುದು? ಬೆಂಕಿಯಲ್ಲಿ ಬೀಳಲೆ? ಉಸಿರನ್ನು ತೊರೆದುಕೊಳ್ಳಲೆ ? ಬಡಬಾಗ್ನಿಗೆ ಈ ದೇಹವನ್ನು ತುತ್ತಾಗಿ ಒಪ್ಪಿಸಲೆ ? ಅಥವಾ ಜಲಚರಗಳಾಗಿರುವ ಮೊಸಳೆ ಮೊದಲಾದವುಗಳಿಗೆ ಆಹಾರವಾಗಿ ಈದೇಹವನ್ನೊಪ್ಪಿಸಲೆ ? ಮತ್ತಾವರೀತಿಯಿಂದ ಈ ಒಡಲನ್ನು ನೀಗಲಿ ? ॥೧೪॥ ಈ ಸಂದರ್ಭದಲ್ಲಿ ನಾನು ಹೇಗಾದರೂ ಸಾಯಬೇಕಲ್ಲದೆ ಉಳಿಯಲಿಕ್ಕಾಗದು, ಒಂದು ವೇಳೆ ಬದುಕಿ ಇದ್ದುದೇ ಆದರೆ-ಇಂತಹ ಕ್ರೂರಕಾರ್ಯವನ್ನು ಮಾಡಿ ಹೋಗಿ,ವಾನರಾಧಿಪತಿಯಾದ ಸುಗ್ರೀವನ ಮುಖವನ್ನು ನೋಡುವುದು ಹೇಗೆ ? ಮಹಾನೀಚಕಾರ್ಯವನ್ನು ಮಾಡಿ ಆತನಿಗೆ ನನ್ನ ಮುಖವನ್ನು ಹೇಗೆತೋರಿಸಲಿ ? ಮತ್ತು ಕಾರ್ಯ ನಿರ್ಮೂಲಕ್ಷಯವನ್ನು ಮಾಡಿ, ಪುರುಷೋತ್ತಮರೆನಿಸಿದ ಆರಾಮಲಕ್ಷ್ಮಣರನ್ನು ನೋಡುವುದೆಂತು ? ಎಲ್ಲರೂ ಎಲ್ಲಕಡೆಗಳಲ್ಲಿಯೂ ನನ್ನನ್ನು ನಿಂದಿಸದೆ ಹೋಗುವರೆ ? ಮಹತ್ತರವಾದ ಅನರ್ಥಕ್ಕೆ ಈಡಾದೆನಲ್ಲ ? ದಿಕ್ಕುತೋರದಿರುವುದೆ ? ॥೧೫॥

ತೌ ವಾ ಪುರುಷಶಾರ್ದೂಲೌ ಕಾರ್ಯ್ಯ ಸರ್ವಸ್ವ ಘಾತಿನಾ ॥೧೫॥
ಮಯಾ ಖಲು ತದೇವೇದಂ ರೋಷದೋಷಾ ತ್ಪ್ರದರ್ಶಿತಂ ।
ಪ್ರಥಿತಂ ತ್ರಿಷು ಲೋಕೇಷು ಕಪಿತ್ವ ಮನವಸ್ಥಿತಂ ॥೧೬॥
ಧಿಗಸ್ತು ರಾಜಸಂ ಭಾವ ಮನೀಶ ಮನವಸ್ಥಿತಂ ।
ಈಶ್ವರೇ ಣಾಪಿ ಯದ್ರಾ ಗಾ ನ್ಮಯಾ ಸೀತಾ ನ ರಕ್ಷಿತಾ ॥ ೭॥
ವಿನಷ್ಟಾ ಯಾಂ ತು ಸೀತಾಯಾಂ ತಾವುಭೌ ವಿನಶಿಷ್ಯತಃ ।
ತಯೋ ರ್ವಿನಾಶೇ ಸುಗ್ರೀವಃ ಸಬಂಧು ರ್ವಿನಶಿಷ್ಯತಿ ॥೧೮॥

---

ರೋಷದೋಷಾತ್ - ರಕ್ಕಸರಲ್ಲಿ ತೋರುವ ಕೋಪವೆಂಬ ತಪ್ಪಿನಿಂದ, ಇದಂ - ಈ ಕೆಲಸವು, ಪ್ರದರ್ಶಿತಂ - ಪ್ರಕಾಶಗೊಳಿಸಲ್ಪಟ್ಟಿತು. (ತತ್ - ಅದರಿಂದಲೇ ) ತ್ರಿಷು - ಮೂರಾದ, ಲೋಕೇಷು - ಲೋಕಗಳಲ್ಲಿಯೂ, ಕಪಿತ್ವಂ - ಕೋಡಗನ ಕೆಲಸವು, ಅನವಸ್ಥಿತಂ - ವಕ್ರವಾದುದೆಂದು, ಪ್ರಥಿತಂ - ಪ್ರಸಿದ್ಧವೇ ಆಗಿದೆ, ॥೧೬॥

ಯತ್ - ಯಾವಕಾರಣದಿಂದ, ಸೀತಾ - ಸೀತಾದೇವಿಯು, ಈಶ್ವರೇಣಾಪಿ - ರಕ್ಷಣಸಮರ್ಥನಾಗಿದ್ದರೂ, ಮಯಾ - ನನ್ನಿಂದ, ರಾಗಾತ್ - ಆಗ್ರಹದಿಂದ, ನರಕ್ಷಿತಾ - ಸಂರಕ್ಷಿಸಲ್ಪಡಲಿಲ್ಲವೋ, (ತತ್-ಆಕಾರಣದಿಂದಲೇ) ಅನೀಶಂ - ಯಜಮಾನನಿಲ್ಲದೆ ಹೋದುದರಿಂದಲೇ, ಅನವಸ್ಥಿತಂ - ಗೊತ್ತಿಲ್ಲದೆ ಹೋದ (ಚಪಲರೂಪವಾದ) ರಾಜಸಂ - ರಜೋಗುಣ ಸಂಬಂಧವಾಗಿರುವ, ಭಾವಂ - ನನ್ನ ಸ್ವಭಾವವನ್ನು, ಧಿಗಸ್ತು - ನಿಂದಿಸಬೇಕಾಗಿದೆ ॥೧೭॥ ಸೀತಾಯಾಂತು - ಜಾನಕಿಯಾದರೋ, ವಿನಷ್ಟಾಯಾಂ (ಸತ್ಯಾಂ)-ನಾಶವಾಗಿ ಹೋಗುತ್ತಿರಲಾಗಿ, ತೌ - ಆ ರಾಮಲಕ್ಷ್ಮಣರು, ಉಭೌ - ಇಬ್ಬರೂ, ವಿನಶಿಷ್ಯತಃ - ನಾಶವಾಗಿ ಹೋಗುವರು (ಸಾಯುವರು) ತಯೋಃ - ಆ ರಾಮಲಕ್ಷ್ಮಣರ, ವಿನಾಶೇ (ಸತಿ) ನಾಶವುಂಟಾಗುತ್ತಿರಲಾಗಿ, ಸಬಂಧುಃ - ಬಂಧುಗಳಿಂದೊಡಗೂಡಿದ, ಸುಗ್ರೀವಃ - ಸುಗ್ರೀವನೂ, ವಿನಶಿಷ್ಯತಿ - ನಾಶವಾಗುವನು, ॥ ೧೮ ॥ ಭ್ರಾತೃವತ್ಸಲಃ - ಸಹೋದರ ಪ್ರೀತಿಯುಳ್ಳ ಧರ್ಮಾತ್ಮಾ -ಧರ್ಮ

---

ಕಪಿಚೇಷ್ಟೆಯು ಬಹುವಕ್ರವಾದುದು ಎಂಬಸಂಗತಿಯು ಮೂಲೋಕದಲ್ಲಿಯೂ ಮೊದಲೇ ಪ್ರಸಿದ್ಧವಾಗಿದೆ. ರೋಷವೆಂಬ ದೋಷಕ್ಕೆ ಒಳಗಾದ ನಾನು-ಅದೇ ಅರ್ಥವನ್ನೇ ಚೆನ್ನಾಗಿ ಪ್ರಕಾಶಗೊಳಿಸಿದಂತಾಯಿತು ॥೧೬॥ ಸೀತೆಯನ್ನು ಬೆಂಕಿಯ ಉರಿಗೆ ಸಿಲುಕದಂತೆ ಸಂರಕ್ಷಿಸಿಕೊಳ್ಳಬಹುದಾಗಿದ್ದಿತು. ಶಕ್ತನಾಗಿದ್ದರೂ ನಾನು ಹಾಗೆ ಮಾಡದೆಹೋದೆನು "ಆಳುಮಾಡಿದುದು ಹಾಳು" ಎಂಬ ಗಾದೆಯು ಸಟೆಯಲ್ಲ,ದಂಡಿಸುವವರಿಲ್ಲದೆ ಸ್ವತಂತ್ರನಾಗಿ ನಾನು ಮಾಡಿದ ಕೆಲಸವನ್ನು ಎಷ್ಟು ಹೀಯಾಳಿಸಿದರೂ ಸಾಲದಾಗಿದೆ, ನನ್ನ ರಜೋಗುಣಸ್ವಭಾವವನ್ನು ಸುಡಬೇಕು ॥೧೭॥ ಮಾಡಬಾರದ ಕೆಲಸವನ್ನೇನೋ ಮಾಡಿದುದಾಯಿತು, ಮುಂದೇನು ಗತಿ ? ಕಪಿಯು ಲಂಕೆಗಿಟ್ಟ ಬೆಂಕಿಯಲ್ಲಿ ಸೀತೆಯು ಸಿಲುಕಿ ಸತ್ತಳು ಎಂಬ ಸುದ್ದಿಯು ತಿಳಿದ ಕೂಡಲೆ ರಾಮಲಕ್ಷ್ಮಣರಿಬ್ಬರೂ ಒಟ್ಟಿಗೆ ಸಾಯುವರು, ಅವರು ಗತಿಸಿದ ಬಳಿಕ, ಕಪಿರಾಜನಾದ ಸುಗ್ರೀವನು ತನ್ನ ಬಂಧುಬಳಗದಿಂದೊಡಗೂಡಿ ಪ್ರಾಣಗಳನ್ನು ಕಳೆದುಕೊಂಬನು ॥೧೮॥ ಹೀಗೆ ರಾಮಲಕ್ಷ್ಮಣರೂ, ಸಮಿತ್ರ ಬಾಂಧವನಾದ ಸುಗ್ರೀವನೂ ಬರೆಗಿದ ಸಮಾಚಾರವು ತಿಳಿದ ಬಳಿಕ ಸೋದರರಲ್ಲಿಯೇ ಪ್ರಾಣಗಳನ್ನಿಟ್ಟ

ಏತದೇವ ವಚ ಶ್ಶ್ರುತ್ವಾ ಭರತೋ ಭ್ರಾತೃ ವತ್ಸಲಃ ।
ಧರ್ಮಾತ್ಮಾ ಸಹ ಶತ್ರುಘ್ನಃ ಕಥಂ ಶಕ್ಷ್ಯತಿ ಜೀವಿತುಂ ॥೧೯॥
ಇಕ್ಷ್ವಾಕು ವಂಶೇ ಧರ್ಮಿಷ್ಠೇ ಗತೇ ನಾಶ ಮಸಂಶಯಂ ।
ಭವಿಷ್ಯಂತಿ ಪ್ರಜಾ ಸ್ಸರ್ವಾ ಶ್ಶೋಕ ಸಂತಾಪ ಪೀಡಿತಾಃ ॥೨೦॥
ತದಹಂ ಭಾಗ್ಯ ರಹಿತೋ ಲುಪ್ತಧರ್ಮಾರ್ಥ ಸಂಗ್ರಹಃ ।
ರೋಷದೋಷ ಪರೀತಾತ್ಮಾ ವ್ಯಕ್ತಂ ಲೋಕ ವಿನಾಶನಃ ॥೨೧॥
ಇತಿ ಚಿಂತಯತ ಸ್ತಸ್ಯ ನಿಮಿತ್ತಾ ನ್ಯುಪಪೇದಿರೇ ।

ಮಾಯಣನಾದ, ಭರತಃ-ಭರತನೂ, ಏತದೇವವಚಃ-ಈ ಸದ್ದಿಯನ್ನೇ, ಶ್ರುತ್ವಾ - ಕೇಳಿ, ಸಹಶತ್ರುಘ್ನಃ-ಶತ್ರುಘ್ನನಿಂದ ಸಹಿತನಾಗಿ, ಕಥಂ-ಹೇಗೆ, ಜೀವಿತುಂ-ಬದುಕಿರಲಿಕ್ಕೆ, ಶಕ್ಷ್ಯತಿ-ಶಕ್ತನಾಗುವನು ?, ॥೧೯॥ ಧರ್ಮಿಷ್ಠೇ - ಧರ್ಮಕ್ಕೆ ಆಸರೆಯಾಗಿರುವ, ಇಕ್ಷ್ವಾಕುವಂಶೇ ಇಕ್ಷ್ವಾಕುರಾಜಕುಲವು, ನಾಶಂ - ನಾಶವನ್ನು, ಗತೇಸತಿ - ಹೊಂದುತ್ತಿರಲಾಗಿ, ಸರ್ವಾಃ - ಸಮಸ್ತರಾದ, ಪ್ರಜಾಃ- ಜನರು, ಶೋಕಸಂತಾಪ ಪೀಡಿತಾಃ - ದುಃಖದ ತಾಪದಿಂದ ಪೀಡಿಸಲ್ಪಟ್ಟವರಾಗಿ, ಭವಿಷ್ಯಂತಿ - ಆಗುವರು, ಅಸಂಶಯಂ - ಸಂದೇಹವೇ ಇಲ್ಲ ॥೨೦॥ ತತ್ - ಆದಕಾರಣ, ಅಹಂ - ನಾನು, ಭಾಗ್ಯರಹಿತಃ - ಅದೃಷ್ಟಹೀನನು, ಲುಪ್ತಧರ್ಮಾರ್ಥಸಂಗ್ರಹಃ-ಕೊರತೆಗೊಳಗಾದ ಧರ್ಮಾರ್ಥಗಳ ಸಂಪಾದನೆಯುಳ್ಳವನೂ ಆದೆನು, ರೋಷದೋಷ ಪರೀತಾತ್ಮಾ - ಕೋಪವೆಂಬ ತಪ್ಪಿಗೀಡಾದ ಮನಸ್ಸುಳ್ಳವನಾದ ಕಾರಣವೇ, ವ್ಯಕ್ತಂ - ಸ್ಪಷ್ಟವಾಗಿ, ಲೋಕವಿನಾಶನಃ - ಸದ್ಗತಿಯನ್ನೇ ಹಾಳುಮಾಡಿಕೊಂಡವನಾದೆನು, (ಇತಿ - ಹೀಗೆಂದು, ಸಃ ವಾನರಃ- ಆ ಆಂಜನೇಯನು, ಚಿಂತಯಾಮಾಸ - ಚಿಂತಿಸಿದನು) ॥೨೧॥ ಇತಿ - ಈ ಪ್ರಕಾರವಾಗಿ, ಚಿಂತಯತಃ - ಚಿಂತಿಸುತಲಿರುವ, ತಸ್ಯ - ಆ ಮಾರುತಿಗೆ, ನಿಮಿತ್ತಾನಿ - ಶುಭಶಕುನಗಳು, ಉಪಪೇದಿರೆ - ತೋರಿದುವು, ಪೂರ್ವಂ - ಮೊದಲು, ಸಾಕ್ಷಾತ್ - ಪ್ರತ್ಯಕ್ಷವಾಗಿ, ಉಪಲಬ್ಧಾನ್ಯಪಿ - ಅನುಭವಿಸಿದ ಶಕುನಗಳನ್ನೂ, ಪುನಃ - ಮರಳಿ, ಅಚಿಂತಯುತ್ ನೆನೆದನು ॥೨೨॥ ಅಥವಾ -ಹಾಗಿಲ್ಲದಿದ್ದರೆ, ಚಾರುಸರ್ವಾಂಗೀ

ಕೊಂಡಿರುವ ಮಹಾಧರ್ಮಾತ್ಮನಾದ ಭರತನು ಶತ್ರುಘ್ನನೊಡನೆ ಪ್ರಾಣಗಳನ್ನುಳಿಸಿಕೊಂಡು ಬದುಕಿ ಇರುವುದೇ ಇಲ್ಲ ॥೧೯॥ ಲೋಕೋತ್ತರವೆನಿಸಿದ ಧರ್ಮದಲ್ಲಿ ನಲೆಗೊಂಡಿರುವ ಇಕ್ಷ್ವಾಕುರಾಜ ಕುಲವೇ ಸಮೂಲವಾಗಿ ನಾಶವನ್ನು ಪಡೆಯುತ್ತಿರಲಾಗಿ, ಆ ನಾಡಿನ ಪ್ರಜೆಗಳೆಲ್ಲರೂ ಅಪಾರವಾದ ಶೋಕಕ್ಕೆ ಈಡಾಗುವರು ॥೨೦॥ ಇಷ್ಟು ಅನರ್ಥವು ಸಂಭವಿಸುತ್ತಿರುವಲ್ಲಿ ನಾನು ಧರ್ಮಾರ್ಥಗಳನ್ನೆಲ್ಲ ನಾಶಪಡಿಸಿಕೊಂಡವನಾಗಲಿಲ್ಲವೆ ? ರೋಷವೆಂಬ ದೋಷಕ್ಕೆ ಒಳಬಿದ್ದ ನಾನುಲೋಕವನ್ನೇ ಹಾಳುಮಾಡಿದವನಾಗಲಿಲ್ಲವೆ ? ನನಗಿಂತಲೂ ಈ ಲೋಕದಲ್ಲಿ ನಿರ್ಭಾಗ್ಯನು ಮತ್ತಾವನಿರುವನು ? ಅಯ್ಯೋ ನನ್ನ ಜನ್ಮವೇಕೆ ? ನಾನು ಬದುಕಿದ್ದೂ ಫಲವೇನು ? ॥೨೧॥ ಎಂದೀಪ್ರಕಾರವಾಗಿ ಆಂಜನೇಯನು ಅಪಾರವಾದ ಚಿಂತೆಯಿಂದ ಕೊರಗುತ್ತಾ ಇರುವಲ್ಲಿ-ಬಲದ ಕಣ್ಣು ಅದಿರುವುದು, ಬಲದತೊಡೆಯು ನಡುಗುವುದು ಈ ಮೊದಲಾದ ಕೆಲವು ಶುಭಶಕುನಗಳುಂಟಾದುವು, ಮತ್ತು-ಸೀತಾಸಂದರ್ಶನಕ್ಕಿಂತಲೂ ಮೊದಲು ತನ್ನ ಅನುಭವಕ್ಕೆ ಬಂದ ಬೇರೆ ಕೆಲವು ಶುಭನಿಮಿತ್ತಗಳೂ ತಲೆದೋರಿ ಆ ಮಾರುತಿಯನ್ನು ಸಂತೈಸುವಂತಿದ್ದುವು, ಆಗಲಾ ಆಂಜನೇಯನು-ಬೇರೊಂದು ಬಗೆಯಾಗಿ ಆಲೋಚಿಸತೊಡಗಿದನು॥೨೨॥ಆಹಾ! ಈ ಲಂಕಾನಾಶದಿಂದ ಸೀತೆಯುನಾಶವನ್ನೂ

ಪೂರ್ವ ಮ ಪ್ಯುಪಲಬ್ಧಾನಿ ಸಾಕ್ಷಾತ್ಪುನರಚಿಂತಯುತ್ ॥೨೨॥
ಅಥವಾ ಚಾರು ಸರ್ವಾಂಗೀ ರಕ್ಷಿತಾ ಸ್ವೇನ ತೇಜಸಾ ।
ನ ನಶಿಷ್ಯತಿ ಕಲ್ಯಾಣೀ ನಾಗ್ನಿ ರಗ್ನೌ ಪ್ರವರ್ತತೇ ॥೨೩॥
ನಹಿ ಧರ್ಮಾತ್ಮನ ಸ್ತಸ್ಯ ಭಾರ್ಯಾ ಮಮಿತ ತೇಜಸಃ ।
ಸ್ವಚಾರಿತ್ರಾಭಿ ಗುಪ್ತಾಂ ತಾಂ ಸ್ಪ್ರಷ್ಟು ಮರ್ಹತಿ ಪಾವಕಃ ॥೨೪॥
ನೂನಂ ರಾಮಪ್ರಭಾವೇನ ವೈದೇಹ್ಯಾ ಸ್ಸುಕೃತೇನ ಚ ।
ಯನ್ಮಾಂ ದಹನ ಕರ್ಮಾಯಂ ನಾದಹ ದ್ಧವ್ಯ ವಾಹನಃ ॥೨೫॥

---

ಅಂದವಾದ ಎಲ್ಲ ಅವಯವಗಳುಳ್ಳ, ಕಲ್ಯಾಣೀ - ಸುಮಂಗಳಿಯಾದ ಸೀತಾದೇವಿಯು, ಸ್ವೇನ - ತನ್ನದಾದ, ತೇಜಸಾ - ಪಾತಿವ್ರತ್ಯ ಮಹಿಮೆಯಿಂದ, ರಕ್ಷಿತಾ - ಸಂರಕ್ಷಿಸಲ್ಪಟ್ಟವಳಾಗಿ, ನನಶಿಷ್ಯತಿ ನಾಶವಾಗದೆ ಇರಬಹುದು (ಹಿ-ಏತಕೆಂದರೆ) ಅಗ್ನಿಃ - ಅಗ್ನಿಯೇ, ಅಗ್ನೌ - ಬೆಂಕಿಯಲ್ಲಿ, ನಪ್ರವರ್ತತೇ - ಪ್ರವರ್ತಿಸುವುದಿಲ್ಲ ॥೨೩॥ ಧರ್ಮಾತ್ಮನಃ-ಧರ್ಮಸ್ವರೂಪನಾಗಿರುವ, ಅಮಿತತೇಜಸಃ - ಅಪಾರವಾದ ತೇಜಸ್ಸುಳ್ಳ, ತಸ್ಯ - ಆ ರಾಮನ, ಭಾರ್ಯಾಂ - ಧರ್ಮಪತ್ನಿಯಾದ, ಸ್ವಚಾರಿತ್ರಾಭಿಗುಪ್ತಾಂ - ತನ್ನ ಒಳ್ಳೆ ನಡತೆಯಿಂದಲೇ ರಕ್ಷಿಸಲ್ಪಟ್ಟಿರುವ, ತಾಂ - ಆ ಸೀತೆಯನ್ನು, ಪಾವಕಃ - ಅಗ್ನಿಯು, ಸ್ಪ್ರಷ್ಟುಂ - ಮುಟ್ಟಲಿಕ್ಕೂ, ನಾರ್ಹತಿ - ತಕ್ಕವನಾಗುವುದಿಲ್ಲ ॥೨೪॥ ದಹನಕರ್ಮಾ - ಸುಡುವ ಕೆಲಸವುಳ್ಳ, ಅಯಂ- ಈ, ಹವ್ಯವಾಹನಃ-ಅಗ್ನಿಯು, ಯತ್ - ಯಾವಕಾರಣದಿಂದ, ಮಾಂ - ನನ್ನನ್ನು ನಾದಹತ್ - ಸುಡಲಿಲ್ಲವೋ, ತತ್ - ಆ ಕಾರಣದಿಂದಲೇ, ರಾಮಪ್ರಭಾವೇನ - ಶ್ರೀರಾಮನ ಮಹಿಮೆಯಿಂದಲೂ, ವೈದೇಹ್ಯಾಃ-ಸೀತಾದೇವಿಯ, ಸುಕೃತೇನಚ - ಪುಣ್ಯದಿಂದಲೂ, (ಸಃ - ಆ ಅಗ್ನಿಯು, ತಾಂ - ಆಜಾನಕಿಯನ್ನು ಸ್ಪ್ರಷ್ಟುಂ - ಮುಟ್ಟಲಿಕ್ಕೂ, ನಾರ್ಹತಿ - ಶಕ್ತನಾಗುವುದಿಲ್ಲ) ನೂನಂ - ನಿಶ್ಚಯವು ॥೨೫॥ ಯಾ -

---

ಅದರಿಂದ ರಾಮಾದಿಗಳ ವಿನಾಶವನ್ನೂ ಊಹಿಸಿದೆನಲ್ಲವೆ ? ಈಗಲೇ ಶುಭನಿಮಿತ್ತಗಳನ್ನು ನೋಡಿದರೆ ಅಂತಹ ಮಹಾವಿಪತ್ತು ಸಂಭವಿಸಲಾರದೆಂದು ತೋರುತ್ತದೆ. ಏತಕೆಂದರೆ-ಸರ್ವಾಂಗಸುಂದರಿ ಯೆನಿಸಿ, ಸರ್ವಮಂಗಳಗಳಿಗೂ ಮಾತೃಸ್ಥಾನವಾದ ಸೀತಾದೇವಿಯಲ್ಲಿ ಈ ಅಗ್ನಿಗಿಂತಲೂ ಮೀರಿದ ತೇಜಸ್ಸಿನೊಳಗೆ ಕೂಡಿರುವ ಪಾತಿವ್ರತ್ಯಾಗ್ನಿಯು ನೆಲೆಗೊಂಡಿದೆ, ಅದಕ್ಕೆ ಚ್ಯುತಿಯೇ ಇಲ್ಲ. ಅದರಿಂದಲೇ ಆಕೆಯ ಸಂರಕ್ಷಣೆಯು ನಿಷ್ಕಂಟಕವಾಗಿ ನೆರವೇರುವುದು, ಈ ಅಗ್ನಿಯು ಇತರ ಪದಾರ್ಥಗಳನ್ನು ಸುಡಬಲ್ಲುದಲ್ಲದೆ ತನಗಿಂತಲೂ ಮೀರಿದಪಾತಿವ್ರತ್ಯಾಗ್ನಿಯನ್ನು ದಹಿಸಲಾರದು ॥೨೩॥ ಮತ್ತು-ಆಸೀತೆಯು ಪಾತಿವ್ರತ್ಯಮಹಿಮೆಯೊಂದನ್ನು ಮಾತ್ರವೆ ಧರಿಸಿಯಿಲ್ಲ. ಮಹಾಪ್ರತಾಪಶಾಲಿಯಾಗಿ, ಮಹಾಧರ್ಮಾತ್ಮನೂ ಆಗಿರುವ ಶ್ರೀರಾಮನಿಗೆ ಧರ್ಮಭಾರ್ಯೆಯೂ ಆಗಿ ಇರುವುದರಿಂದ, ಅಂತಹ ಸಚ್ಚರಿತ್ರ ಪವಿತ್ರ ಶರೀರವನ್ನು, ಈ ಪಾವಕನು ಮುಟ್ಟಲಿಕ್ಕೂ ಶಕ್ತನಾಗಲಾರನು ॥೨೪॥ ಇದೂ ಅಲ್ಲದೆ-ಆಸೀತಾರಾಮರಿಗೆ ಕಿಂಕರನಾಗಿದ್ದಮಾತ್ರದಲ್ಲಿಯೇ ಆ ಶ್ರೀರಾಮ ಪ್ರಭಾವದಿಂದಲೂ, ಮಹಾನುಭಾವಳಾದ ವೈದೇಹಿಯ ಸುಕೃತದಿಂದಲೂ, ಸಮಸ್ತವನ್ನೂ ಸುಟ್ಟು ಬೂದಿಮಾಡುವ ಈ ಅಗ್ನಿಯು-ನನ್ನನ್ನು ಸುಡದಿರುವಲ್ಲಿ,ಆ ಸೀತೆಯನ್ನುಸ್ಪರ್ಶಮಾಡಲಿಕ್ಕಾದರೂ ಸಾಮರ್ಥ್ಯವುಂಟೆ? ಸರ್ವಾತ್ಮನಾ ಇಲ್ಲ॥೨೫॥ಮತ್ತು-ಲಕ್ಷ್ಮಣಭರತ ಶತ್ರುಘ್ನರೆಂಬ

ತ್ರಯಾಣಾಂ ಭರತಾದೀನಾಂ ಭ್ರಾತೄಣಾಂ ದೇವತಾಚ ಯಾ ।
ರಾಮಸ್ಯ ಚ ಮನಃಕಾಂತಾ ಸಾ ಕಥಂ ವಿನಶಿಷ್ಯತಿ ॥೨೬॥
ಯದ್ವಾ ದಹನ ಕರ್ಮಾಯಂ ಸರ್ವತ್ರ ಪ್ರಭು ರವ್ಯಯಃ ।
ನ ಮೇ ದಹತಿ ಲಾಂಗೂಲಂ ಕಥಮಾರ್ಯಾಂ ಪ್ರಧಕ್ಷ್ಯತಿ ॥೨೭॥
ಪುನಶ್ಚಾಚಿಂತಯ ತ್ತತ್ರ ಹನುಮಾ ನ್ವಿಸ್ಮಿತ ಸ್ತದಾ ।
ಹಿರಣ್ಯನಾಭಸ್ಯ ಗಿರೇ ರ್ಜಲಮಧ್ಯೇ ಪ್ರದರ್ಶನಂ ॥೨೮॥
ತಪಸಾ ಸತ್ಯ ವಾಕ್ಯೇನ ಅನನ್ಯತ್ವಾಚ್ಚ ಭರ್ತರಿ ।

---

ಯಾವಸೀತಾದೇವಿಯು, ತ್ರಯಾಣಾಂ - ಮೂವರಾದ, ಭ್ರಾತೄಣಾಂ - ಸೋದರರಾಗಿರುವ, ಭರತಾದೀನಾಂ - ಭರತನೇ ಮೊದಲಾದವರಿಗೆ, ದೇವತಾಚ - ಇಷ್ಟದೇವತೆಯಾಗಿರುವಳೋ, (ಯಾ-ಯಾವಸೀತಾದೇವಿಯಾದರೆ) ರಾಮಸ್ಯ - ಶ್ರೀರಾಮನಿಗೆ, ಮನಃ ಕಾಂತಾ - ಮನಸ್ಸಿಗೆ ಇಷ್ಟಳಾದವಳೋ, ಸಾ - ಅಂತಹ ಸೀತಾದೇವಿ, ಕಥಂ - ಹೇಗೆ, ವಿನಶಿಷ್ಯತಿ - ನಾಶವಾಗುವಳು ? ॥೨೬॥ ಯದ್ವಾ- ಅಥವಾ, ಮತ್ತು ) ದಹನಕರ್ಮಾ - ಸುಡುವ ಸ್ವಭಾವವುಳ್ಳ, ಸರ್ವತ್ರ - ಎಲ್ಲ ಕಡೆಗಳಲ್ಲಿಯೂ, ಪ್ರಭುಃ - ಸುಡಲು ಶಕ್ತನಾದ, ಅವ್ಯಯಃ - ನಾಶವಿಲ್ಲದ, ಅಯಂ - ಈ, ಅಗ್ನಿಃ-ಅಗ್ನಿಯು, (ಯತ್-ಯಾವ ಕಾರಣದಿಂದ) ಮೇ - ನನ್ನ, ಲಾಂಗೂಲಂ - ಬಾಲವನ್ನು, ನ ದಹತಿ - (ನಾದಹತ್) ಸುಡಲಿಲ್ಲವೋ, (ತತ್ - ಆ ಕಾರಣದಿಂದ) ಆರ್ಯಾಂ - ಪೂಜ್ಯಳಾದ ಸೀತಾದೇವಿಯನ್ನು, ಕಥಂ - ಹೇಗೆ, ಪ್ರಧಕ್ಷ್ಯತಿ- ಸುಡಬಲ್ಲನು॥೨೭॥ ಹನುಮಾನ್ - ಆಂಜನೇಯನು, ತದಾ - ಆಗ, ತತ್ರ - ಅಲ್ಲಿ, ಪುನಶ್ಚ - ಮರಳಿ, ವಿಸ್ಮಿತಃ - ಅಶ್ಚರ್ಯಪಟ್ಟವನಾಗಿ, ಜಲಮಧ್ಯೇ - ಸಮುದ್ರಜಲ ಮಧ್ಯದಲ್ಲಿ, ಹಿರಣ್ಯನಾಭಸ್ಯ - ಮೈನಾಕವೆಂಬ, ಗಿರೇಃ - ಪರ್ವತದ, ಪ್ರದರ್ಶನಂ - ದರ್ಶನವನ್ನೂ, ಅಚಿಂತಯತ್ - ನೆನೆದನು, ॥೨೮॥ ಸಾಪಿ - ಆ ಸೀತಾದೇವಿಯಾದರೋ, ತಪಸಾ - ತಪಸ್ಸಿನಿಂದಲೂ, ಸತ್ಯವಾಕ್ಯೇನ - ಸತ್ಯವಾಕ್ಯದಿಂದಲೂ, ಭರ್ತರಿ- ಪತಿಯಲ್ಲಿ, ಅನನ್ಯತ್ವಾಚ್ಚ - ಭಿನ್ನ ಭಾವವನ್ನಿಡದಿರುವುದರಿಂದಲೂ, (ಭಕ್ತಿಯನ್ನಿಟ್ಟಿರುವುದರಿಂದಲೂ) ಅಗ್ನಿಂ -

---

ಮೂವರಿಗೂ ಸೀತಾದೇವಿಯು ಪ್ರತ್ಯಕ್ಷವಾಗಿರುವ ಪೂಜ್ಯದೇವತೆಯಾಗಿರುವಳು ಸರ್ವವಂದ್ಯನಾದ ರಾಮನಿಗೆ ಪ್ರಾಣಪ್ರಿಯಳಾಗಿದಾಳೆ, ಅಂತಹ ಮಾತೆಯು ನಾಶವಾಗುವುದೆಂದರೇನು ? ಅದು ಹಾಗಿರಲಿ, ಯಾವಾಗಲೂ, ಎಲ್ಲಲ್ಲಿಯೂ ಎಲ್ಲವನ್ನೂ ಸುಡುವ ಸ್ವಭಾವವುಳ್ಳ ಮಹಾನುಭಾವನಾದ ಅಗ್ನಿಯು ಬಾಲದಲ್ಲಿ ನೆಲೆಗೊಂಡಿರುವಾಗ್ಗ ನನ್ನನ್ನೇಸುಡಲಿಲ್ಲವಲ್ಲ ? ಹಾಗಿರುವಲ್ಲಿ ಸರ್ವಪೂಜ್ಯಳಾದ ಆ ಲೋಕಮಾತೆಯನ್ನು ಹೇಗೆ ಸುಡಬಲ್ಲನು ? ಸರ್ವಾತ್ಮನಾ ಸಂಭವಿಸ ತಕ್ಕುದಲ್ಲ ॥೨೬,೨೭॥ ಎಂದೀವಿಧವಾಗಿ ಚಿಂತಿಸಿದುದಲ್ಲದೆ ಬೇರೊಂದು ಬಗೆಯಾಗಿ ಯೋಚಿಸತೊಡಗಿದನು-ಅಹಹ! ನಾನು ಹಿಂದೆ ಸಮುದ್ರದ ಮೇಲೆಆಕಾಶದಲ್ಲಿ ನಿರಾಲಂಬನಾಗಿ ಹಾರಿಬರುತಲಿರುವಲ್ಲಿ-ನನಗೆ ಸಹಾಯವನ್ನು ಮಾಡಲೆಳಸಿ ಬಂದ ಮೈನಾಕ ಪರ್ವತವನ್ನು ಕಂಡುದೊಂದು ಮಹತ್ತರವಾದ ಆಶ್ಚರ್ಯವಲ್ಲವೆ ? ನಾನೆಲ್ಲಿ ? ಹಿರಣ್ಯನಾಭವೆಲ್ಲಿ ? ರಾಮಪ್ರಭಾವದಿಂದ ಇಂತಹ ಅದ್ಭುತವೆಲ್ಲ ಸಂಭವಿಸುತ್ತಿರುವಲ್ಲಿ, ಅಗ್ನಿಯು ಅಂತಹ ಪುರುಷೋತ್ತಮನ ಧರ್ಮವಲ್ಲಭೆಯನ್ನು ಸ್ಪರ್ಶಮಾಡುವುದುಂಟೆ ? ॥೨೮॥ ಅಸಮಾನವಾದ ತಪಸ್ಸು, ಅಸದೃಶವಾದ ಸತ್ಯಸಂಧತೆ, ಅನ್ಯಾದೃಶವಾದ ಪತಿಭಕ್ತಿ ಇತ್ಯಾದಿ

ಅಪಿ ಸಾ ನಿರ್ದಹೇ ದಗ್ನಿಂ ನ ತಾ ಮಗ್ನಿಃ ಪ್ರಧಕ್ಷ್ಯತಿ ॥೨೯॥
ಸ ತಥಾ ಚಿಂತಯಂ ಸ್ತತ್ರ ದೇವ್ಯಾ ಧರ್ಮ ಪರಿಗ್ರಹಂ ।
ಶುಶ್ರಾವ ಹನುಮಾ ನ್ವಾಕ್ಯಂ ಚಾರಣಾನಾಂ ಮಹಾತ್ಮನಾಮ್ ॥೩೦॥
ಅಹೋ ಖಲು ಕೃತಂ ಕರ್ಮ ದುಷ್ಕರಂ ಹಿ ಹನೂಮತಾ ।
ಅಗ್ನಿಂ ವಿಸೃಜತಾಽಭೀಕ್ಷ್ಣಂ ಭೀಮಂ ರಾಕ್ಷಸವೇಶ್ಮನಿ ॥೩೧॥
ಪ್ರಪಲಾಯಿತ ರಕ್ಷಸ್ಸ್ತ್ರೀ ಬಾಲ ವೃದ್ಧ ಸಮಾಕುಲಾ ।
ಜನಕೋಲಾಹಲಾಧ್ಮಾತಾ ಕ್ರಂದಂತೀ ವಾಽದ್ರಿ ಕಂದರೇ ॥ ೩೨॥

ಅಗ್ನಿಯನ್ನೇ, ನಿರ್ದಹೇತ್ - ಸುಡಬಲ್ಲಳು, ಅಗ್ನಿಃ - ಅಗ್ನಿಯು, ತಾಂ- ಆ ಸೀತಾದೇವಿಯನ್ನು, ನಪ್ರಧಕ್ಷ್ಯತಿ - ಸುಡಲಾರನು ॥೨೯॥ ತತ್ರ - ಆ ಲಂಕೆಯಲ್ಲಿ, ದೇವ್ಯಾಃ - ಸೀತಾದೇವಿಯ, ಧರ್ಮಪರಿಗ್ರಹಂ- ಪುಣ್ಯ ಪ್ರಭಾವವನ್ನೂ, ತಥಾ - ಹಾಗೆಯೇ, ಚಿಂತಯನ್- ಚಿಂತಿಸುತಲಿರುವ, ಸಃ - ಆ, ಹನುಮಾನ್- ಮಾರುತಿಯು, ಮಹಾತ್ಮನಾಂ - ಮಹಾನುಭಾವರಾದ, ಚಾರಣಾನಾಂ - ಆಕಾಶಚಾರಿಗಳಾದ ಚಾರಣರ್‍ನ ವಾಕ್ಯಂ - ನುಡಿಯನ್ನು, ಶುಶ್ರಾವ - ಕೇಳಿದನು ॥೩೦॥ (ಅದೆಂತೆಂದರೆ) ರಾಕ್ಷಸವೇಶ್ಮನಿ - ರಕ್ಕಸರ ಮನೆಗಳಲ್ಲಿ, ಭೀಮಂ - ಭಯಂಕರವೆನಿಸಿದ, ಅಗ್ನಿಂ - ಬೆಂಕಿಯನ್ನು, ಅಭೀಕ್ಷ್ಣಂ- ವಿಶೇಷವಾಗಿ, ವಿಸೃಜತಾ - ಬಿಡುತಲಿರುವ (ಹತ್ತಿಸುತಲಿರುವ) ಹನೂಮತಾ - ಆಂಜನೇಯನಿಂದ, ದುಷ್ಕರಂ - ಕಷ್ಟಸಾಧ್ಯವಾದ, ಕರ್ಮ - ಕೆಲಸವು, ಕೃತಂಖಲು - ಮಾಡಲ್ಪಟ್ಟಿತಲ್ಲ, ಅಹೋ . ಆಶ್ಚರ್ಯವೆನಿಸಿದೆ. ॥೩೧॥ ಪ್ರಲಾಯಿತ ....ಕುಲಾ, ಪ್ರಪಲಾಯಿತ - ಓಡುತಲಿರುವ, ರಕ್ಷಸ್ಸ್ತ್ರೀ- ರಾಕ್ಷಸರಿಂದಲೂ, ರಕ್ಕಸಿಯರಿಂದಲೂ, ಬಾಲ - ಹುಡುಗರಿಂದಲೂ, ವೃದ್ಧ - ಮುದುಕರಿಂದಲೂ, ಸಮಾಕುಲಾ - ವ್ಯಾಕುಲವನ್ನು ಹೊಂದಿರುವ, ಜನ ಕೋಲಾಹಲಾಧ್ಮಾತಾ- ಜನರ ಕೋಲಾಹಲದಿಂದ ನಿಬಿಡವಾಗಿಯೂ ಇರುವುದಾದಕಾರಣವೇ, ಅದ್ರಿಕಂದರೆ- ಬೆಟ್ಟದ ಗವಿಯಲ್ಲಿ, ಕ್ರಂದಂತೀವ- ಗೋಳಿಡುವಂತಿರುವಸಾಟ್ಟ,ಪ್ರಕಾರತೋರಣಾ- ಬುರುಜು, ಕೋಟೆ, ಹೊರಬಾಗಿಲು ಇವುಗಳಿಂದ ಸಹಿತವಾದ, ಸರ್ವಾ-ಸಮಸ್ತವಾದ, ಇಯಂ -ಈ, ನಗರೀ - ಲಂಕಾಪಟ್ಟಣವು, ದಗ್ಧಾ -ಸುಡಲ್ಪಟ್ಟಿದೆ, ಜಾನಕೀ - ಸೀತೆಯಾದರೋ, ನದಗ್ಧಾ- ಸುಡಲ್ಪಡಲಿಲ್ಲ

ಮಹಿಮೆಗಳಿಗೆ ಆ ಸ್ಪದಳಾಗಿರುವ ಆ ವೈದೇಹಿಯು-ಅಗ್ನಿಯನ್ನೇ ದಹಿಸುವಷ್ಟು ಸಮರ್ಥಳಾಗಿರುವಲ್ಲಿ, ಆ ಪುಣ್ಯಾತ್ಮಳನ್ನು ಅಗ್ನಿಯು ಮುಟ್ಟುವುದೆಂದರೇನು ? ಎಂದಿಗೂ ಹಾಗಾಗಲಾರದು ॥೨೯॥ ಎಂದೀಪ್ರಕಾರವಾಗಿಯೂ ಆಂಜನೇಯನು ಆಲಂಕೆಯೊಳಗೆ ಶ್ರೀರಾಮಧರ್ಮಪತ್ನಿಯವಿಷಯವಾಗಿ ಚಿಂತಿಸುತ್ತಿರುವಲ್ಲಿ-ಆಕಾಶಮಾರ್ಗದಲ್ಲಿ ಗಮಿಸುತಲಿದ್ದ ಚಾರಣರ ವಾಕ್ಯವನ್ನು ಕೇಳಿಕೊಂಡನು-॥೩೦॥ ಚಾರಣರು-''ಆಹಾ ! ಈಹನುಮಂತನು ಶ್ರೀರಾಮಕಿಂಕರನಾದುದರಿಂದಲೇ ಹೆರರು ಮಾಡಲಸದಳವೆನಿಸಿರುವ ಈ ಲಂಕಾದಾಹರೂಪವಾದ ಅತ್ಯದ್ಭುತಕಾರ್ಯವನ್ನು ಮಾಡಿದನು. ಈ ನಗರಿಗೆ ಬೆಂಕಿಯನ್ನಿಡುವುದೆಂದರೇನು ಸಾಧಾರಣದ ಕೆಲಸವೆ ? ॥೩೧॥ ಈ ಲಂಕೆಯೊಳಗೆ ರಕ್ಕಸರನ್ನೂ, ರಕ್ಕಸಿಯರನ್ನೂ, ಅವರ ಮಕ್ಕಳನ್ನೂ, ಮುದುಕರನ್ನೂ ಇಷ್ಟು ಭಯಗೊಳಿಸಿರುವನು. ಅದರಿಂದಲೇ ನಡುಗುತ ಇವರೆಲ್ಲರೂ ದಿಕ್ಕಾಪಾಲಾಗಿ ಓಡುತಲಿದಾರೆ, ಜನರ ಕೋಲಾಹಲವು ಅಪಾರವೆನಿಸಿದೆ, ಬೆಟ್ಟದ ಗವಿಯೊಳಗೆ ಪ್ರತಿಧ್ವನಿಹೊರಡುವಂತೆ ಈ ಲಂಕೆಯೇ ಗೋಳಿಡುತಲಿದೆ॥೩೨॥ಕೋಟೆ

ದಗ್ಧೇಯಂ ನಗರೀ ಸರ್ವಾ ಸಾಟ್ಟ ಪ್ರಾಕಾರ ತೋರಣಾ ।
ಜಾನಕೀ ನ ಚ ದಗ್ಧೇತಿ ವಿಸ್ಮಯೋಽದ್ಭುತ ಮೇ ವ ನಃ ॥೩೩॥
ಸನಿಮಿತ್ತೈಶ್ಚ ದೃಷ್ಟಾರ್ಥೈಃ ಕಾರಣೈಶ್ಚ ಮಹಾಗುಣೈಃ ।
ಋಷಿವಾಕ್ಯೈಶ್ಚ ಹನುಮಾ ನಭವ ತ್ಪ್ರೀತ ಮಾನಸಃ ॥೩೪॥
ತತಃ ಕಪಿಃ ಪ್ರಾಪ್ತ ಮನೋ ರಥಾರ್ಥ ಸ್ತಾ ಮಕ್ಷತಾಂ ರಾಜಸುತಾಂ ವಿದಿತ್ವಾ ।
ಪ್ರತ್ಯಕ್ಷತ ಸ್ತಾಂ ಪುನರೇವ ದೃಷ್ಟ್ವಾ ಪ್ರತಿಪ್ರಯಾಣಾಯ ಮತಿಂ ಚಕಾರ॥೩೫॥

ಇತಿ ಶ್ರೀಮತ್ಸುಂದರಕಾಂಡೇ-ಪಂಚಪಂಚಾಶಸ್ಸರ್ಗಃ

---

ಇತಿ - ಹೀಗೆಂಬ, ವಿಸ್ಮಯಃ - ಆಶ್ಚರ್ಯವು, ನಃ - ನಮಗೆ, ಅದ್ಭುತಏವ- ಹಿಂದೆಂದೂ ನೋಡದ ಕೆಲಸವಾಗಿ, ಅಭೂತ್ - ಆಯಿತು, (ಇತಿ - ಹೀಗೆಂಬ, ವಾಕ್ಯಂ - ಮಾತನ್ನು, ಶುಶ್ರಾವ- ಕೇಳಿದನು ) ॥೩೨, ೩೩॥ ಸಃ - ಆ, ಹನುಮಾನ್ - ಮಾರುತಿಯು, ನಿಮಿತ್ತೈಃ - ಬಲಗಣ್ಣು ಅದಿರುವುದೆ ಮೊದಲಾದಶಕುನಗಳಿಂದಲೂ, ದೃಷ್ಟಾರ್ಥೈಃ - ಅನುಭವಿಸಿದಫಲಗಳುಳ್ಳ, ಕಾರಣೈಃ - ಸೀತಾಪಾತಿವ್ರತ್ಯವೇ ಮೊದಲಾದ ಕಾರಣಗಳಿಂದಲೂ, ಮಹಾಗುಣೈಃ- ಸೀತಾಕುಶಲ ರೂಪವಾದ ಉತ್ತಮ ಗುಣವುಳ್ಳ, ಋಷಿ ವಾಕ್ಯೈಶ್ಚ - ಚಾರಣರ ವಚನಗಳಿಂದಲೂ ಪ್ರೀತಮಾನಸಃ - ಸಂತುಷ್ಟವಾದ ಮನಸ್ಸುಳ್ಳವನು, ಅಭವತ್ - ಆದನು ॥೩೪॥ ತತಃ - ಆ ಹಿಂದೆ, ಕಪಿಃ - ಆಂಜನೇಯನು, ಪ್ರಾಪ್ತ ಮನೋರಥಾರ್ಥಃ- ಹೊಂದಿದ ಸೀತಾಕ್ಷೇಮ ರೂಪವಾದ ಕೋರಿಕೆಯುಳ್ಳವನಾಗಿ, ತಾಂ - ಆ, ರಾಜಸುತಾಂ - ಜನಕರಾಜನಂದಿನಿಯನ್ನು, ಅಕ್ಷತಾಂ - ಕ್ಷೇಮದಿಂದಿರುವವಳನ್ನಾಗಿ, ವಿದಿತ್ವಾ - ತಿಳಿದು, ತಾಂ - ಆಕೆಯನ್ನು ಪುನರೇವ - ಮರಳಿಯೂ, ಪ್ರತ್ಯಕ್ಷತಃ - ಇದಿರಿಗೆ, ದೃಷ್ಟ್ವಾ - ದರ್ಶನಮಾಡಿ, ಪ್ರತಿಪ್ರಯಾಣಾಯ - ಹಿಂದಿರುಗಿ ಹೊರಡಲು, ಮತಿಂ - ಬುದ್ಧಿಯನ್ನು, ಚಕಾರ - ಮಾಡಿದನು ॥೩೫॥

—ಇಂತು ಐವತ್ತೈದನೆಯ ಸರ್ಗಂ —

---

ಕೊತ್ತಲಗಳು, ದಿಡ್ಡಿಬಾಗಿಲುಗಳು, ಹೊರಬಾಗಿಲುಗಳು ಬುರುಜುಗಳು, ಮೊದಲ್ಗೊಂಡು ಸಮಸ್ತವೂ ಉರಿದು ಗುಡ್ಡೆ ಬೀಳುತಲಿದೆ. ಆಹಹ! ಇಷ್ಟಾದರೂ ಸೀತೆಯು ಮಾತ್ರದಹಿಸಿ ಹೋಗದೆ ಸುಖವಾಗಿರುವಳಲ್ಲಾ ? ಇಂತಹ ಅದ್ಭುತವನ್ನು ನಾವು ಹಿಂದೆಲ್ಲಿಯು ಕೇಳದುದೂ ಇಲ್ಲ, ನೋಡಿದುದೂ ಇಲ್ಲ,, ಎಂದೀಪ್ರಕಾರಮಾತನಾಡಿಕೊಂಡು ತೆರಳುತಲಿದ್ದರು. ಆಗಲಾ ಆಂಜನೇಯನು-ಇದುವರೆಗೆ ತನಗಾದ ಶುಭಶಕುನಗಳಿಂದಲೂ, ತನ್ನ ಅನುಭವಕ್ಕೆ ಬಂದ ಸೀತಾರಾಮರ ಪಾತಿವ್ರತ್ಯ ಪ್ರಭಾವಾದಿ ಅದ್ಭುತಕಾರಣಗಳಿಂದಲೂ ಮಹಾಗುಣವನ್ನೊಳಗೊಂಡಿರುವ ಚಾರಣರ ಪ್ರಿಯವಚನಗಳಿಂದಲೂ, ಸೀತೆಯು ಕುಶಲದಿಂದಿರುವಳೆಂದು ಪ್ರೀತಿಸಂಪನ್ನನಾದನು ॥೩೪॥ ಇಂತು ಆವೀರಾಂಜನೇಯನು-ಜನಕರಾಜನಂದಿನಿಯು ಸುಖವಾಗಿರುವಳೆಂಬ ಶುಭಸಮಾಚಾರದಿಂದ ಕೈಗೂಡಿದ ಮನೋರಥವುಳ್ಳವನಾಗಿ, ಮರಳಿ ಸೀತೆಯ ಸನ್ನಿಧಾನಕ್ಕೈತಂದು, ಆಕೆಯ ಸಂದರ್ಶನವನ್ನು ಮಾಡಿ, ಅನಂದದೊಡನೆ ಆ ಮಹಾದೇವಿಯನ್ನು ಸೇವಿಸಿ, ಶ್ರೀರಾಮನ ಸನ್ನಿಧಾನವನ್ನು ಕುರಿತು ಪ್ರಯಾಣವನ್ನು ಬೆಳಸಬೇಕೆಂದು ಆಲೋಚಿಸುತಲಿದ್ದನು ॥೩೫॥

— ಇಂತು ಐವತ್ತೈದನೆಯ ಸರ್ಗಂ —

ಶ್ರೀ

—ಶ್ರೀ ರಾಮಚನ್ದ್ರ ಪರಬ್ರಹ್ಮಣೇ ನಮಃ —

# ಶ್ರೀಮತ್ಸುಂದರಕಾಣ್ಡೇ ಷಟ್ಪಂಚಾಶಸ್ಸರ್ಗಃ

ತತಸ್ತು ಶಿಂಶುಪಾ ಮೂಲೇ ಜಾನಕೀಂ ಪರ್ಯ್ಯುಪ ಸ್ಥಿತಾಂ ।
ಅಭಿವಾದ್ಯಾ ಬ್ರವೀ ದ್ದಿಷ್ಟ್ಯಾ ಪಶ್ಯಾಮಿ ತ್ವಾ ಮಿಹಾಕ್ಷತಾಮ್॥೧॥
ತತ ಸ್ತಂ ಪ್ರಸ್ಥಿತಂ ಸೀತಾ ವೀಕ್ಷಮಾಣಾ ಪುನಃಪುನಃ ।

— ಐವತ್ತಾರನೆಯ ಸರ್ಗಂ —

ಕಂದ॥ ಚಾರಣವಚನವ ನಾಲಿಸಿ । ಮಾರುತಿ ತಾಂ ಕುಶಲದಿರ್ಪ ಭೂಮಿಜೆ ಗಾಗಳ್।
ಆ ರಾಮದೂ ಳಭಿವಂದಿಸಿ । ಪಾರಾಗಲ್ ಪದುಳದಿಂದೆ ಪೊರಮಡುತಿರ್ದಂ ॥

ತತಃ - ಅನಂತರದಲ್ಲಿ, ಶಿಂಶುಪಾಮೂಲೇ - ಶಿಂಶುಪಾ ವೃಕ್ಷದ ಬುಡದಲ್ಲಿ, ಪರ್ಯ್ಯುಪಸ್ಥಿತಾಂ - ಕುಳಿತಿರುವ, ಜಾನಕೀಂ - ಸೀತೆಯನ್ನು, ಅಭಿವಾದ್ಯ - ನಮಸ್ಕರಿಸಿ, (ಹೇದೇವಿ-ಎಲೌ ತಾಯೇ) ತ್ವಾಂ - ನಿನ್ನನ್ನು, ಇಹ - ಇಲ್ಲಿ, ಅಕ್ಷತಾಂ - ನಾಶವಿಲ್ಲದವಳನ್ನಾಗಿ, ದಿಷ್ಟ್ಯಾ-ದೈವಯೋಗದಿಂದ, ಪಶ್ಯಾಮಿ - ನೋಡುತಲಿದೇನೆ (ಇತಿ - ಹೀಗೆಂದು) ಸಃ - ಆ ಹನುಮಂತನು, ಅಬ್ರವೀತ್ - ಹೇಳಿದನು ॥೧॥ ತತಃ - ಆ ಹಿಂದೆ, ಸೀತಾ - ಸೀತೆಯು, ಪ್ರಸ್ಥಿತಂ - ಪ್ರಯಾಣಸನ್ನದ್ಧನಾದ, ತಂ - ಆ ಹನುಮಂತನನ್ನು, ಪುನಃಪುನಃ - ಅಡಿಗಡಿಗೂ, ವೀಕ್ಷಮಾಣಾ - ನೋಡುತಲಿರುವವಳಾಗಿ, ಭರ್ತೃಸ್ನೇಹಾನ್ವಿತಂ - ಪತಿಯಲ್ಲಿನ ಪ್ರೇಮದಿಂದೊಡಗೂಡಿರುವ, ವಾಕ್ಯಂ - ಮಾತನ್ನು, ಹನುಮಂತಂ - ಆಂಜನೇಯನನ್ನು ಕುರಿತು

— ಐವತ್ತಾರನೆಯಸರ್ಗಂ —

ಬಳಿಕಪವಮಾನನಂದನನು-ಅಶೋಕವನದಲ್ಲಿನ ಶಿಂಶುಪಾವೃಕ್ಷದ ತಡಿಗೈತಂದು,ಅಲ್ಲಿ ಸುಖವಾಗಿ ಕುಳಿತಿರುವ ವೈದೇಹರಾಜನಂದಿನಿಯನ್ನು ಕಂಡು ಅಭಿವಂದಿಸಿ, ಎಲೌ ತಾಯೆ! ನಾನು ಈ ಲಂಕೆಯನ್ನು ಸುಡುವಂದು, ನೀನು ಅಕ್ಷತಳಾಗಿರುವುದನ್ನುನೋಡಿ, ಬಹಳವಾಗಿ ಹರ್ಷಿತನಾದೆನು. ಇದು ನನ್ನಭಾಗ್ಯೋದಯವೇಸರಿ. ಇನ್ನುನನಗೆ ಅಪ್ಪಣೆಯಾದರೆ ಶ್ರೀ ರಾಮನಸನ್ನಿಧಿಯನ್ನುಕುರಿತು ಪ್ರಯಾಣಮಾಡುವೆನು ಎಂದು ಅರಿಕೆಮಾಡಿದನು ॥೧॥ ಆ ಹಿಂದೆ ಸೀತಾದೇವಿಯು - ಹೊರಡಲುಸಿದ್ಧನಾಗುತಲಿರುವ ಮಾರುತಿಯನ್ನು ಪುನಃಪುನಃ ನೋಡುತ್ತಾ, ಪತಿಯಲ್ಲಿನ ಭಕ್ತಿಯನ್ನೂ, ಹನುಮಂತನಲ್ಲಿ ತನಗಿರುವ ವಾತ್ಸಲ್ಯವನ್ನೂ

ಭರ್ತೃ ಸ್ನೇಹಾನ್ವಿತಂ ವಾಕ್ಯಂ ಹನುಮಂತ ಮಭಾಷತ ॥೨॥
ಕಾಮ ಮಸ್ಯ ತ್ವಮೇ ವೈಕಃ ಕಾರ್ಯಸ್ಯ ಪರಿಸಾಧನೆ ।
ಪರ್ಯಾಪ್ತಃ ಪರವೀರಘ್ನ ಯಶಸ್ಯ ಸ್ತೇ ಫಲೋದಯಃ ॥೩॥
ಶರೈಸ್ತು ಸಂಕುಲಾಂ ಕೃತ್ವಾ ಲಂಕಾಂ ಪರ ಬಲಾರ್ದನಃ ।
ಮಾ ನ್ನಯೇ ದ್ಯದಿ ಕಾಕುತ್‌ಸ್ಥಃ ತತ್ತಸ್ಯ ಸದೃಶಂ ಭವೇತ್॥೪॥
ತದ್ಯಥಾ ತಸ್ಯವಿಕ್ರಾಂತ ಮನುರೂಪಂ ಮಹಾತ್ಮನಃ ।
ಭವ ತ್ಯಾಹವ ಶೂರಸ್ಯ ತಥಾ ತ್ವ ಮುಪ ಪಾದಯ ॥೫॥

---

ಅಭಾಷತ - ಹೇಳತೊಡಗಿದಳು ॥೨॥ ಹೇ ಪರವೀರಘ್ನ - ಶತ್ರು ವೀರರನ್ನಿರಿಯುವ ಎಲೈ ಹನುಮನೇ ! ತ್ವಂ - ನೀನು, ಏಕಏವ - ಒಬ್ಬನೇ, ಅಸ್ಯ - ಈ, ಕಾರ್ಯಸ್ಯ - ರಕ್ಕಸರನ್ನೆಲ್ಲ ಇರಿದು ನನ್ನನ್ನು ರಾಮನ ಸನ್ನಿಧಿಗೈದಿಸುವ ಕೆಲಸದ, ಸಾಧನೆ - ಸಾಧನೆಯಲ್ಲಿ, ಕಾಮಂ - ಸಂಪೂರ್ಣವಾಗಿ, ಪರ್ಯಾಪ್ತಃ - ಪೂರ್ಣ ಸಮರ್ಥನಾಗಿದ್ದೀಯೆ, ತೆ - ನಿನ್ನ, ಫಲೋದಯಃ - ಸತ್ವಾತಿಶಯವು, ತೆ - ನಿನಗೆ, ಯಶಸ್ಯಃ - ಕೀರ್ತಿಸಂಪಾದಕವಾಗಿರುವುದು, ರಾಮಸ್ಯ - ರಾಮನಿಗೆ. ನತು - ಇಲ್ಲ, (ಕಿಂತು - ಮತ್ತೇನೆಂದರೆ) ಪರಬಲಾರ್ದನಃ - ಶತ್ರುಗಳನ್ನು ಪೀಡಿಸುವ, ಕಾಕುತ್‌ಸ್ಥಃ - ಶ್ರೀರಾಮನು, ಲಂಕಾಂ - ಲಂಕೆಯನ್ನು, ಶರೈಃ - ಬಾಣಗಳಿಂದ, ಸಂಕುಲಾಂ - ನಿಬಿಡವಾದುದನ್ನಾಗಿ, ಕೃತ್ವಾ - ಮಾಡಿ, ಮಾಂ- ನನ್ನನ್ನು, ನಯೇದ್ಯದಿ, ಕರೆದೊಯ್ಯುವುದೇ ಆದರೆ; ತತ್ - ಆ ಕಾರ್ಯವು, ತಸ್ಯ - ಆ ರಾಮನಿಗೆ, ಸದೃಶಂ - ತಕ್ಕುದು, ಭವೇತ್ - ಆಗುವುದು ॥೪॥ ತತ್ - ಅದಕಾರಣದಿಂದ, ಮಹಾತ್ಮನಃ - ಮಹಾಧೀರನಾದ, ಆಹವಶೂರಸ್ಯ - ಯುದ್ಧ ವಿಶಾರದನಾಗಿರುವ, ತಸ್ಯ - ಆ ರಾಮನಿಗೆ, ಅನುರೂಪಂ - ತಕ್ಕುದೆನಿಸಿದ, ವಿಕ್ರಾಂತಂ - ಪರಾಕ್ರಮವು, ಯಥಾ - ಹೇಗೆ, ಭವತಿ - ಉಂಟಾಗುತ್ತದೆಯೋ, ತಥಾ - ಆಪ್ರಕಾರವಾಗಿ, ತ್ವಂ- ನೀನು, ಉಪಪಾದಯ - ಉದಹರಿಸು (ಮಾಡು) ॥೫॥ ಹನುಮಾನ್ - ಆಂಜನೇಯನು, ತತ್ - ಆ, ಅರ್ಥೋಪಹಿತಂ - ರಾಮಕಾರ್ಯಕ್ಕೆ ತಕ್ಕುದೆನಿಸಿರುವ, ಪ್ರಶ್ರಿತಂ - ಅರ್ಥ ಗರ್ಭಿತವಾದ

---

ಪ್ರಕಾಶಗೊಳಿಸುವಮಾತನ್ನು ಹೇಳ ತೊಡಗಿದಳು ॥೨॥ ಎಲೈ ಮಹಾವೀರನಾದ ಆಂಜನೇಯನೇ ! ನೀನು ಒಬ್ಬನೇ ಆದರೂ ಈ ರಕ್ಕಸರನ್ನೆಲ್ಲ ಸದೆಬಡಿದು, ನನನ್ನು ಶ್ರೀರಾಮನಸನ್ನಿಧಿಗೆ ಕರೆದೊಯ್ಯಲು ಸಮರ್ಥನಾಗಿದ್ದೀಯೆ, ಆದರೆ - ನೀನು ಸಮರ್ಥನೆಂದು ನಿನ್ನ ಬಲವನ್ನೇ ಪ್ರಕಾಶಗೊಳಿಸಿ, ನಿಶಾಚರರನ್ನೆಲ್ಲ ಇರಿದು, ನನ್ನನ್ನು ಕರೆದೊಯ್ದರೆ, ಈ ಕೀರ್ತಿಯೆಲ್ಲ ನಿನಗೇ ಬರುವುದಲ್ಲದೆ ರಾಮನಿಗೆ ಬಾರದು. ಅದರಿಂದ - ಶ್ರೀ ರಾಮನೇ ಕಪಿಸೇನಾಸಮೇತನಾಗಿ ಇಲ್ಲಿಗೆ ಬಂದು ಈ ಯಾಮಿನೀಚರರಹುಟ್ಟನ್ನೆಲ್ಲ ಅಡಗಿಸಿ, ನನ್ನನ್ನು ಕರೆದೊಯ್ದುದೇ ಆದರೆ, ಆಗ ನನ್ನ ಪ್ರಾಣನಾಥನಿಗೆ ಅಪಾರವಾದಕೀರ್ತಿಯು ಬರುವುದು. ಆ ಕಾರ್ಯವು ಆತನಿಗೇ ತಕ್ಕುದೆನಿಸಿದೆ. ॥೩,೪॥ ರಣಧೀರನಾದ ರಾಮನಿಗೆ ತಕ್ಕುದೆನಿಸಿರುವ ಪರಾಕ್ರಮವು ಯಾವ ಪ್ರಕಾರದಿಂದ ಪ್ರಕಾಶಕ್ಕೆ ಬರಬಲ್ಲುದೋ, ಮತ್ತು-ಮೂಲೋಕದಲ್ಲಿಯೂ, ಆತನ ಯಶಸ್ಸು ಹೇಗೆ ಹರಡಬಲ್ಲುದೋ, ಹಾಗೆ ಮಾಡತಕ್ಕ ಕೆಲಸದ ಭಾರವು ನಿನ್ನದಾಗಿದೆ ॥೫॥ ಎಂದೀಪ್ರಕಾರ ರಾಮಹಿತಾರ್ಥವಾಗಿ ಬಹು ವಿನಯದಿಂದೊಡಗೂಡಿದುದೂ, ಯುಕ್ತಿಸಹವಾದುದೂ, ಭಾವಗರ್ಭಿತವಾದುದೂ ಆಗಿರುವ ವೈದೇಹಿಯ

ತದಥೋ೯ಪ ಹಿತಂ ವಾಕ್ಯಂ ಪ್ರಶ್ರಿತಂ ಹೇತು ಸಂಹಿತಂ ।
ನಿಶಮ್ಯ ಹನುಮಾಂ ಸ್ತಸ್ಯಾ ವಾಕ್ಯ ಮುತ್ತರ ಮಬ್ರವೀತ್ ॥ ॥
ಕ್ಷಿಪ್ರ ಮೇಷ್ಯತಿ ಕಾಕುತ್ಸ್ಥೋ ಹರ್ಯೃಕ್ಷ ಪ್ರವರೈ ರ್ವೃತಃ ।
ಯಸ್ತೇ ಯುಧಿ ವಿಜಿತ್ಯಾರೀ೯ ಶೋಕಂ ವ್ಯಪ ನಯಿಷ್ಯತಿ ॥೩॥
ಏವ ಮಾಶ್ವಾಸ್ಯ ವೈದೇಹೀಂ ಹನುಮಾ ನ್ಮಾರುತಾತ್ಮಜಃ ।
ಗಮನಾಯ ಮತಿಂ ಕೃತ್ವಾ ವೈದೇಹೀ ಮಭ್ಯ ವಾದಯತ್ ॥೪॥
ತತ ಸ್ಸ ಕಪಿ ಶಾರ್ದೂಲ ಸ್ಸ್ವಾಮಿ ಸಂದರ್ಶ ನೋತ್ಸುಕಃ ।
ಆರುರೋಹ ಗಿರಿಶ್ರೇಷ್ಠ ಮರಿಷ್ಟ ಮರಿ ಮರ್ದನಃ ॥೯॥
ತುಂಗ ಪದ್ಮಕ ಜುಷ್ಟಾಭಿ ರ್ನೀಲಾಭಿ ರ್ವನ ರಾಜಿಭಿಃ ।

ಹೇತು ಸಂಹಿತಂ - ಯುಕ್ತಿಯಿಂದೊಡಗೂಡಿರುವ, ತಸ್ಯಾಃ - ಆ ಜಾನಕಿಯು, ವಾಕ್ಯಂ - ನುಡಿಯನ್ನು, ನಿಶಮ್ಯ - ಕೇಳಿ, ಉತ್ತರಂ - ಬದುಲುಮಾತನ್ನು ಅಬ್ರವೀತ್ - ಹೇಳತೊಡಗಿದನು ॥೩॥ ಯಃ - ಯಾವ ರಾಮನು, ಹರ್ಯೃಕ್ಷಪ್ರವರೈಃ - ಶ್ರೇಷ್ಠರಾದ ವಾನರರಿಂದಲೂ ಭಲ್ಲೂಕಗಳಿಂದಲೂ, ವೃತಃ - ಆವರಿಸಲ್ಪಟ್ಟವನಾಗಿ, ಯುಧಿ - ಯುದ್ಧದಲ್ಲಿ, ಅರೀ೯ - ಶತ್ರುಗಳನ್ನು, ವಿಜಿತ್ಯ - ಗೆದ್ದು, ತೇ - ನಿನ್ನ, ಶೋಕಂ - ವ್ಯಸನವನ್ನು, ವ್ಯಪನಯಿಷ್ಯತಿ - ಪರಿಹರಿಸುವನೋ, ಸಃ - ಅಂತಹ, ಕಾಕುತ್ಸ್ಥಃ - ಶ್ರೀರಾಮನು, ಕ್ಷಿಪ್ರಂ - ಬೇಗನೆ, ಏಷ್ಯತಿ - ಬರುವನು, ॥೩॥ ಮಾರುತಾತ್ಮಜಃ ವಾಯುನಂದನನಾದ, ಹನುಮಾ೯ - ಆಂಜನೇಯನು, ವೈದೇಹೀಂ - ಜಾನಕಿಯನ್ನು ಕುರಿತು, ಏವಂ - ಈ ಪ್ರಕಾರವಾಗಿ ಆಶ್ವಾಸ್ಯ - ಸಂತೈಸಿ, ಗಮನಾಯ - ಶ್ರೀರಾಮಸನ್ನಿಧಿಗೆ ತೆರಳಲು, ಮತಿಂ-ಬುದ್ಧಿಯನ್ನು, ಕೃತ್ವಾ-ಮಾಡಿ, ವೈದೇಹೀಂ - ಸೀತೆಯನ್ನು, ಅಭ್ಯವಾದಯತ್- ವಂದಿಸಿದನು ॥೪॥ ತತಃ-ತರುವಾಯ, ಅರಿಮರ್ದನಃ - ಶತ್ರುಸಂಹಾರಕನಾದ, ಕಪಿಶಾರ್ದೂಲಃ-ಕಪಿವರನೆನಿಸಿರುವ, ಸಃ-ಆ ಮಾರುತಿಯು, ಸ್ವಾಮಿಸಂದರ್ಶನೋತ್ಸುಕಃ - ಪ್ರಭುವಾದ ರಾಮನನ್ನು ದರ್ಶನಮಾಡಲು ಆಸಕ್ತನಾಗಿ, ಗಿರಿಶ್ರೇಷ್ಠಂ - ಪರ್ವತೋತ್ತಮವಾದ, ಅರಿಷ್ಟಂ - ಅರಿಷ್ಟವೆಂಬ ಪರ್ವತವನ್ನು, ಆರುರೋಹ - ಏರಿದನು ॥೯॥ ತುಂಗ ಪದ್ಮಕಜುಷ್ಟಾಭಿಃ - ತೋರವಾದ ತಾವರೆಗಳಿಂದೊಡಗೂಡಿರುವ, ನೀಲಾಭಿಃ - ಕಪ್ಪು, ವನರಾಜಿಭಿಃ-

ವಚನವನ್ನಾಲಿಸಿ, ಪ್ರತ್ಯುತ್ತರವನ್ನು ಕೈಗೊಂಡನು ॥ ೬ ॥ ಎಲೌ ತಾಯೆ! ರಘುಕುಲಲಲಾಮನಾದ, ರಾಮನು - ನಿನ್ನ ಅನುಮತಿಯಂತೆ ಕಪಿವರಸೇನೆಯಿಂದ ಪರಿವೃತನಾಗಿ, ಜಾಗ್ರತೆಯಲ್ಲಿಯೇ ಇಲ್ಲಿಗೆ ಬರಹೋಗುವನು, ರಣಾಂಗಣದಲ್ಲಿ ಹಗೆಗಳಾದ ರಕ್ಕಸರನ್ನೆಲ್ಲ ಸಮೂಲವಾಗಿನಾಶಗೊಳಿಸಿ, ನಿನ್ನದುಃಖವನ್ನೆಲ್ಲ ಪರಿಹರಿಸುವನು, ನೀನು ಅದುವರೆಗೂಚಿಂತಿಸದೆ ಸೌಖ್ಯದಿಂದ ಸ್ವಲ್ಪಕಾಲವನ್ನು ನಿರೀಕ್ಷಿಸುತಲಿರು ॥೩॥ ಎಂದೀಪ್ರಕಾರ ಮಾರುತಾತ್ಮಜನು - ಮಹೀಸುತೆಯನ್ನು ಸಂತೈಸಿ, ತಾನು ರಾಮಸನ್ನಿಧಿಗೆ ಹೊರಡಲುಸನ್ನದ್ಧನಾಗಿ, ವೈದೇಹಿಗೆ ಅಭಿವಂದನಂಗೈದನು ॥೪॥ ಹಾಗೆಯೇ ಜಾನಕಿಯ ಅಪ್ಪಣೆಯನ್ನುಪಡೆದ ಕಪಿವರನು - ತನ್ನ ಸ್ವಾಮಿಯನ್ನು ದರ್ಶನಮಾಡಬೇಕೆಂದು ಅತ್ಯಂತತ್ವರೆಯಿಂದೊಡಗೂಡಿದವನಾಗಿ, ಅರಿಷ್ಟವೆಂಬಪರ್ವತನನ್ನು ಏರಿದನು ॥೯॥ ಆ ಪರ್ವತದಲ್ಲಿ ಎಲ್ಲೆಲ್ಲಿಯೂ ಅರಳಿದತಾವರೆಗಳು ಹರಡಿಇದ್ದುದರಿಂದಲೂ, ಕೋಡುಗಳಸಂದುಗಳಲ್ಲಿ

ಸೋತ್ತರೀಯ ಮಿವಾಂಭೋದೈ ಶ್ಶೃಂಗಾಂತರ ವಿಳಂಬಿಭಿಃ ॥೧೦॥
ಬೋಧ್ಯಮಾನ ಮಿವ ಪ್ರೀತ್ಯಾ ದಿವಾಕರ ಕರೈ ಶ್ಶುಭೈಃ ।
ಉನ್ಮಿಷಂತ ಮಿವೋದ್ಧೂತೈ ರ್ಲೋಚನೈ ರಿವ ಧಾತುಭಿಃ ॥೧೧॥
ತೋಯೌಘ ನಿಸ್ಸ್ವನೈ ರ್ಮಂದ್ರೈಃ ಪ್ರಾಧೀತ ಮಿವ ಪರ್ವತಮ್ ।
ಪ್ರಗೀತ ಮಿವ ವಿಸ್ಪಷ್ಟೈ ರ್ನಾನಾ ಪ್ರಸ್ರವಣ ಸ್ವನೈಃ ॥೧೨॥
ದೇವದಾರುಭಿ ರತ್ಯುಚ್ಚೈ ರೂರ್ಧ್ವಬಾಹು ಮಿವ ಸ್ಥಿತಮ್ ।
ಪ್ರಪಾತ ಜಲನಿರ್ಘೋಷೈಃ ಪ್ರಾಕ್ರುಷ್ಟ ಮಿವ ಸರ್ವತಃ ॥೧೩॥

---

ವನಪಜ್ತಿಗಳಿಂದಲೂ, ಶೃಂಗಾಂತರ ವಿಳಂಬಿಭಿಃ - ಕೋಡುಗಳ ನಡುವೆ ಜೋಲಾಡುತಲಿರುವ, ಅಂಭೋದೈಃ - ಮೇಘಗಳಿಂದಲೂ, ಸೋತ್ತರೀಯುಮಿವ(ಸ್ಥಿತಂ)ಮೇಲುಹೊದಿಕೆಯನ್ನು ಹೊದ್ದಿರುವಂತಿರುವ, ॥೧೦॥ ಶುಭೈಃ - ಮಂಗಳಕರಗಳಾದ, (ಎಳೆಯವಾದ) ದಿವಾಕರ ಕರೈಃ - ಸೂರ್ಯಕಿರಣಗಳೆಂಬ ಕರಗಳಿಂದ, ಪ್ರೀತ್ಯಾ - ವಿಶ್ವಾಸದಿಂದ, ಬೋಧ್ಯಮಾನಮಿವ (ಸ್ಥಿತಂ) ತಿಳಿಸುತಲಿರುವುದೋ ಎಂಬಂತಿರುವ, ಉದ್ಧೂತೈಃ - ಪ್ರಕಾಶವಾದ, ಲೋಚನೈರಿವ (ಸ್ಥಿತೈಃ) ನೇತ್ರಗಳಂತಿರುವ, ಧಾತುಭಿಃ - ಮಣಿಶಿಲೆಮೊದಲಾದ ಧಾತುಗಳಿಂದ, ಉನ್ಮಿಷಂತಮಿವ (ಸ್ಥಿತಂ) ರೆಪ್ಪೆಬಡಿಯುವಂತಿರುವ (ನೋಡುವಂತಿರುವ) ॥೧೧॥ ಮಂದ್ರೈಃ - ಗಂಭೀರವಾದ, ತೋಯೌಘನಿಸ್ವನೈಃ - ಗಿರಿನದಿಗಳ ಧ್ವನಿಗಳಿಂದ, ಪ್ರಾಧೀತಂ-ಓದಲುದ್ಯುಕ್ತವಾದ, ಪರ್ವತಮಿವ (ಸ್ಥಿತಂ) ಗಿರಿಯಂತಿರುವ, ವಿಸ್ಪಷ್ಟೈಃ - ಬಹುಸ್ಪಷ್ಟವಾಗಿರುವ, ನಾನಾಪ್ರಸ್ರವಣಸ್ವನೈಃ - ಬಗೆಬಗೆಯಾದ ಚಿಲುಮೆಗಳ ದನಿಗಳಿಂದ, ಪ್ರಗೀತಮಿವ (ಸ್ಥಿತಂ) ಹಾಡುತಲಿದೆಯೋ ಎಂಬಂತಿರುವ, ॥೧೨॥ ಅತ್ಯುಚ್ಚೈಃ - ಬಲುಎತ್ತರವಾದ, ದೇವದಾರುಭಿಃ - ದೇವದಾರುವೃಕ್ಷಗಳಿಂದ, ಊರ್ಧ್ವಬಾಹುಮಿವ (ಸ್ಥಿತಂ) ಮೇಲಕ್ಕೆ ಎತ್ತಿರುವನೀಳವಾದ ತೋಳುಗಳುಳ್ಳದೋ ಎಂಬಂತಿರುವ, ಪ್ರಪಾತಜಲನಿರ್ಘೋಷೈಃ - ಬೆಟ್ಟದ ಜರಿಗಳ ನೀರಿನ ದನಿಗಳಿಂದ, ಸರ್ವತಃ - ಎಲ್ಲಕಡೆಗಳಲ್ಲಿಯೂ, ಪ್ರಾಕ್ರುಷ್ಟಮಿವ (ಸ್ಥಿತಂ) ರೋದನ ಮಾಡುವುದೋ ಎಂಬಂತಿರುವ ॥೧೩॥ ಶ್ಯಾಮೈಃ- ಕಪ್ಪಾಗಿರುವ, ಕಂಪಮಾನೈಃ- ಅಲುಗುತಲಿರತಕ್ಕ, ಶರದ್ಘನೈಃ - ಶರತ್ಕಾಲದ ಮೇಘಗಳಿಂದ

---

ಜೋಲಾಡುತಲಿರುವ-ಸುತ್ತುವರಿದ ಮೊಡಗಳಿಂದಲೂ, ವಿಸ್ತಾರವಾದ ವನರಾಜಿಗಳಿಂದಲೂ ಗಿರಿಯು - ಅಂದವಾದ ಮೇಲು ಹೊದಿಕೆಯನ್ನು ಅಳವಟ್ಟಿದ್ದಂತೆ ಬೆಳಗುತಲಿದ್ದಿತು. ॥ ೧೦ ॥ ಹೊಳೆವ ಎಳಬಿಸಲಿನ ಬೆಳಕುಗಳಿಂದ ಸೂರ್ಯನು - ತನ್ನ ಕಿರಣಗಳೆಂಬ ಕರಗಳಿಂದ ತೋರಿಸುತಲಿರುವಂತೆ ಕಾಣಬರುತಲಿದ್ದಿತು. ಬೆಟ್ಟದಲ್ಲಿ ತಳತಳನೆ ಹೊಳೆಯುತಲಿರುವ ಕಾವಿ ಮೊದಲಾದ ಕಲ್ಲುಗಳ ಹೊಳವಿನಿಂದ ಕಣ್ಣುಗಳನ್ನು ತೆರೆದು ನೋಡುತಲಿರುವುದೆಂಬಂತೆ ಕಂಗೊಳಿಸುತಲಿದ್ದಿತ್ತು ॥೧೧॥ ಅಲ್ಲಲ್ಲಿಹರಿಯುತಲಿರುವಹೊಳೆಗಳ ಬಲವಾದ ಸದ್ದಿನಿಂದ ಆ ಅದ್ರಿಯು ಅಧ್ಯಯನಮಾಡುತಲಿರುವಂತೆ ತೋರುತಲಿದ್ದಿತು. ಆ ಬೆಟ್ಟದನಾನಾಭಾಗಗಳಲ್ಲಿ ಹರಿಯುತಲಿವ ಗಿರಿಯಲ್ಲಿನ ಉಟಿಗಳಿಂದ ಅಚಲವುಸಂಗೀತವನ್ನು ಹೇಳುತಲಿರುವಂತೆ ವಿರಾಜಿಸುತಲಿದ್ದಿತು ॥ ೧೨॥ ಸುತ್ತುವರಿದು ಎತ್ತರವಾಗಿ ಬೆಳದಿರುವ ದೇವದಾರು ವೃಕ್ಷಗಳಿಂದಲೂ ಜಲಘೋಷಗಳಿಂದಲೂ,ತೋಳುಗಳನ್ನೆತ್ತಿ ಗಟ್ಟಿಯಾಗಿ ಕೂಗಿ ಅಬ್ಬರಿಸುವಂತಿದ್ದಿತು॥೧೩॥ಕಪ್ಪು ಬಣ್ಣವನ್ನೊಳಗೊಂಡುವೂ,

ವೇಪಮಾನ ಮಿವ ಶ್ಯಾಮೈಃ ಕಂಪಮಾನೈ ಶ್ಶರದ್ಘನೈಃ ।
ವೇಣುಭಿ ರ್ಮಾರುತೋ ದ್ಧೂತೈಃ ಕೂಜಂತ ಮಿವ ಕೀಚಕೈಃ॥೧೪॥
ನಿಶ್ಶ್ವಸಂತ ಮಿವಾಮರ್ಷಾ ದ್ಘೋರೈ ರಾಶೀ ವಿಷೋಪಮೈಃ ।
ನೀಹಾರ ಕೃತ ಗಂಭೀರೈ ರ್ಧ್ಯಾಯಂತ ಮಿವ ಗಹ್ವರೈಃ ॥೧೫॥
ಮೇಘಪಾದ ನಿಭೈಃ ಪಾದೈಃ ಪ್ರಕ್ರಾಂತ ಮಿವ ಸರ್ವತಃ ।
ಜೃಂಭಮಾಣ ಮಿವಾಕಾಶೆ ಶಿಖರೈ ರಭ್ರ ಮಾಲಿಭಿಃ ॥೧೬॥
ಕೂಟೈಶ್ಚ ಬಹುಧಾಕೀರ್ಣೈ ಶ್ಶೋಭಿತಂ ಬಹುಕಂದರೈಃ ।
ಸಾಲ ತಾಲಾಶ್ವ ಕರ್ಣೈಶ್ವ ವಂಶೈಶ್ಚ ಬಹುಭಿ ರ್ವೃತಮ್ ॥೧೭॥

---

ವೇಪಮಾನಮಿವ (ಸ್ಥಿತಂ) ನಡುಗುತ್ತಿದೆಯೋ ಎಂಬಂತಿರುವ, ಮಾರುತೋದ್ಧೂತೈಃ - ಗಾಳಿಯಿಂದ ಶಬ್ದಮಾಡಿಸಲ್ಪಟ್ಟ, ಕೀಚಕೈಃ - ಬಿದಿರು ಬೊಂಬುಗಳೆಂಬ, ವೇಣುಭಿಃ-ಕೊಳಲುಗಳಿಂದ, ಕೂಜಂತಮಿವ (ಸ್ಥಿತಂ) ಹಾಡನ್ನು ಹೇಳುತಲಿದೆಯೋ ಎಂಬಂತಿರುವ ॥೧೪॥ ಘೋರೈಃ - ಭಯಂಕರಗಳೆನಿಸಿದ, ಆಶೀವಿಷೋಪಮೈಃ - ಮಹಾಸರ್ಪಗಳಿಂದ, ಹನುಮಂತಿ - ಮಾರುತಿಯಲ್ಲಿ, ಅಮರ್ಷಾತ್ - ರೋಷದಿಂದ, ನಿಶ್ಶ್ವಸಂತಮಿವ (ಸ್ಥಿತಂ) - ನಿಟ್ಟುಸಿರನ್ನು ಬಿಡುತಲಿದೆಯೋಎಂಬಂತಿರುವ, ನೀಹಾರಕೃತಗಂಭೀರೈಃ - ಮಂಜಿನಿಂದ ತುಂಬಿರುವ, ಗಹ್ವರೈಃ- ಗವಿಗಳಿಂದ, ಧ್ಯಾಯಂತಮಿವ (ಸ್ಥಿತಂ) ಧ್ಯಾನಿಸುತಲಿದೆಯೋ ಎಂಬಂತಿರುವ, ॥ ೧೫ ॥ ಮೇಘಪಾದನಿಭೈಃ - ಮೋಡಗಳನೆರಳುಗಳಂತಿರುವ, ಪಾದೈಃ - ಸುತ್ತಲೂ ಇರುವ ಚಿಕ್ಕಗುಡ್ಡಗಳಿಂದ, ಸರ್ವತಃ - ಎಲ್ಲಕಡೆಗಳಲ್ಲಿಯೂ, ಪ್ರಕ್ರಾಂತಮಿವ - (ಸ್ಥಿತಂ) ಅಡಿಗಳನ್ನಿಟ್ಟು ನಡೆಯುತಲಿದೆಯೋ ಎಂಬಂತಿರುವ, ಅಭ್ರಮಾಲಿಭಿಃ - ಮೋಡಗಳ ಸಾಲುಳ್ಳ, ಶಿಖರೈಃ - ಕೋಡುಗಳಿಂದ, ಜೃಂಭಮಾಣಮಿವ (ಸ್ಥಿತಂ) ಆ ಕಳಿಸುತ ಲಿದೆಯೋ ಎಂಬಂತಿರುವ, ॥ ೧೬ ॥ ಬಹುಧಾ - ಅನೇಕ ಪ್ರಕಾರವಾಗಿ, ಕೀರ್ಣೈಃ - ಹನುಮನಕಾಲಿನಿಂದ ಚೆದರಿಸಲ್ಪಟ್ಟ, ಕೂಟೈಶ್ಚ - ಕೋಡುಗಳಿಂದಲೂ, ಬಹುಕಂದರೈಃ - ಅನೇಕವಾದ ಗವಿಗಳಿಂದಲೂ, ಶೋಭಿತಂ - ಪ್ರಕಾಶಿಸುತಲಿರುವ, ಬಹುಭಿಃ - ನಾನಾಪ್ರಕಾರಗಳಾದ, ಸಾಲತಾಲಾಶ್ವಕರ್ಣೈಶ್ಚ - ಸಜ್ಜರಸ ತಾಳೆ, ಅಶ್ವಕರ್ಣಮೊದಲಾದ ಮರಗಳಿಂದ, ವಂಶೈಶ್ಚ - ಬಿದುರುಗಳಿಂದಲೂ, ವೃತಂ -

---

ಚಲಿಸುತಲಿರುವುವೂ ಆಗಿರುವ ಶರತ್ಕಾಲದ ಮೇಘಗಳಿಂದಲೂ, ಗಾಳಿಯಿಂದಅಲುಗಿ, ಧ್ವನಿಮಾಡುತಲಿರುವ, ಬಿದಿರು ಮೆಳೆಗಳಿಂದಲೂ ಆ ನಗವು-ಕೊಳಲುಗಳನ್ನು ಹಿಡಿದು ಹಾಡುವಂತೆ ಶೋಭಿಸುತಲಿತ್ತು ॥ ೧೪ ॥ ಒಂದುಕಡೆ- ಭಯಂಕರಗಳೆನಿಸಿದ ಮಹಾ ಸರ್ಪಗಳಿಂದತೀವ್ರವಾದ ನಿಟ್ಟುಸಿರನ್ನು ಬಿಡುತಲಿದೆಯೋ ಎಂಬಂತೆಯೂ, ಗವಿಗಳ ಬಾಯ್ಗಳಗೆಲ್ಲಮೋಡಗಳು ಕವಿದು, ಆವರಿಸಿರುವ ಮೋಡಗಳಿಂದ ಧ್ಯಾನಾಸಕ್ತವಾಗಿರುವುದೆಂಬಂತೆಯೂ ಭಾಸಮಾನವಾಗಿದ್ದಿತು ॥೧೫॥ ಮಹಾ ಮೇಘಗಳ ಛಾಯೆಗಳಂತಿರುವ ಸಣ್ಣ ಸಣ್ಣ ಗುಡ್ಡಗಳಿಂದ ಹೆಜ್ಜೆಯನ್ನೂರಿ ಮೆಲ್ಲಡಿಗಳ ನಡಗೆಯನ್ನು ಅನುಸರಿಸಿರುವುದೆಂಬಂತೆಯೂ, ಮೋಡಗಳನ್ನೊಳಗೊಂಡಿರುವ ಕೋಡುಗಳಿಂದ ಬಾಯ್ದೆರೆದು ಆಕಳಿಸುತಲಿರುವುದೆಂಬಂತೆಯೂ ಕಾಣಬರುತಲಿದ್ದಿತು ॥೧೬॥ ಹನುಮನ ತುಳಿತದಿಂದ ಚೆದರಿಹೋದ ಶಿಖರಗಳಿಂದಲೂ, ಎಲ್ಲೆಲ್ಲಿಯೂ ಕಾಣಬರುವ ಗುಹೆಗಳಿಂದಲೂ, ಸಜ್ಜೆ,ತಾಳೆ, ಅಶ್ವಕರ್ಣ

ಲತಾ ವಿತಾನೈ ರ್ವಿತತೈಃ ಪುಷ್ಪವದ್ಭಿ ರಲಂಕೃತಮ್ ।
ನಾನಾ ಮೃಗ ಗಣಾಕೀರ್ಣಂ ಧಾತು ನಿಷ್ಯಂದ ಭೂಷಿತಮ್ ॥೧೮॥
ಬಹು ಪ್ರಸ್ರವಣೋಪೇತಂ ಶಿಲಾ ಸಂಚಯ ಸಂಕಟಮ್ ।
ಮಹರ್ಷಿ ಯಕ್ಷ ಗಂಧರ್ವ ಕಿನ್ನರೋರಗ ಸೇವಿತಂ ॥೧೯॥
ಲತಾ ಪಾದಪ ಸಂಘಾತಂ ಸಿಂಹಾಧ್ಯುಷಿತ ಕಂದರಮ್ ।
ವ್ಯಾಘ್ರಸಂಘ ಸಮಾಕೀರ್ಣಂ ಸ್ವಾದು ಮೂಲ ಫಲದ್ರುಮಂ ॥೨೦॥
ತಮಾರು ರೋಹ ಹನುಮಾನ್ ಪರ್ವತಂ ಪವನಾತ್ಮಜಃ ।
ರಾಮದರ್ಶನ ಶೀಘ್ರೇಣ ಪ್ರಹರ್ಷೇಣಾಭಿ ಚೋದಿತಃ ॥೨೧॥
ತೇನಪಾದ ತಲಾಕ್ರಾಂತಾ ರಮ್ಯೇಷು ಗಿರಿ ಸಾನುಷು॥

ಸುತ್ತಲ್ಪಟ್ಟಿರುವ॥೧೭॥ ಪುಷ್ಪವದ್ಭಿಃ – ಹೂಗಳನ್ನೊಳಗೊಂಡಿರುವ, ವಿತತೈಃ – ಹರಡಿರುವ (ವಿಸ್ತಾರಗಳಾದ) ಲತಾವಿತಾನೈಃ - ಬಳ್ಳಿಗಳ ಪೊದೆಗಳಿಂದ, ಅಲಂಕೃತಂ - ಶೃಂಗರಿಸಲ್ಪಟ್ಟಿರುವ, ನಾನಾಮೃಗಗಣಾಕೀರ್ಣಂ - ಬಗೆಬಗೆಯ ಮೃಗಗಳಿಂದ ನಿಬಿಡವಾಗಿರತಕ್ಕ, ಧಾತುನಿಷ್ಯಂದಭೂಷಿತಂ - ಮಣಿಶಿಲೆ ಮೊದಲಾದ ಧಾತುಗಳ ಪ್ರವಾಹಗಳಿಂದೊಡಗೂಡಿದುದೂ, ॥೧೮॥ ಬಹುಪ್ರಸ್ರವಣೋಪೇತಂ - ಅನೇಕ ಚಿಲುಮೆಗಳಿಂದೊಡಗೂಡಿದುದೂ, ಶಿಲಾಸಂಚಯ ಸಂಕಟಂ- ಶಿಲೆಗಳ ರಾಶಿಯಿಂದಬಿಡುವಿಲ್ಲದುದೂ, ಮಹರ್ಷಿಗಂಧರ್ವ ಕಿನ್ನರೋರಗಸೇವಿತಂ - ಮುನಿಗಳು, ಗಂಧರ್ವರು, ಕಿನ್ನರರು, ಸರ್ಪಗಳು ಇವರುಗಳಿಂದ ಸೇವಿಸಲ್ಪಡುತಲಿರುವುದೂ ಆಗಿರುವ ॥ ೧೯ ॥ ಲತಾಪಾದಪ ಸಂಘಾತಂ - ಲತಾವೃಕ್ಷಗಳ ಸಮೂಹಗಳುಳ್ಳ, ಸಿಂಹಾಧ್ಯುಷಿತ ಕಂದರಂ - ಸಿಂಹಗಳಿಂದ ಆಶ್ರಯಿಸಲ್ಪಟ್ಟ ಗುಹೆಗಳುಳ್ಳುದೂ, ವ್ಯಾಘ್ರಸಂಘಸಮಾಕೀರ್ಣಂ - ಹುಲಿಗಳ ಗುಂಪಿನಿಂದ ತುಂಬಿರುವ, ಸ್ವಾದುಮೂಲ ಫಲದ್ರುಮಂ - ರುಚಿಯಾದ ಗೆಡ್ಡೆ, ಹಣ್ಣು, ಮರ, ಇವುಗಳುಳ್ಳುದೂ ಆಗಿರುವ ॥ ೨೦ ॥ ತಂ - ಆ, ಪರ್ವತಂ - ಅರಿಷ್ಟ ಪರ್ವತವನ್ನು, ಪವನಾತ್ಮಜಃ - ವಾಯುನಂದನನಾದ, ಹನುಮಾನ್ - ಆಂಜನೇಯನು, ರಾಮದರ್ಶನ ಶೀಘ್ರೇಣ - ಶ್ರೀರಾಮದರ್ಶನದ ತ್ವರೆಯುಳ್ಳ, ಪ್ರಹರ್ಷೇಣ - ಮಹಾಸಂತೋಷದಿಂದ, ಅಭಿಚೋದಿತಃ - ಪ್ರೇರಿತನಾಗಿ, ಆರುರೋಹ-ಏರಿದನು ॥೨೧॥ ರಮ್ಯೇಷು-ಅಂದವಾಗಿರುವ, ಗಿರಿ

ಮೊದಲಾದ ಮರಗಳಿಂದಲೂ, ಬಿದಿರು ಮೆಳೆಗಳಿಂದಲೂ ಶೃಂಗಾರವಾಗಿದ್ದಿತು ॥೧೭॥ ಹರಡಿ, ಬೆಳೆದು, ಹೂಗಳಿಂದ ತುಂಬಿರುವ ಬಳ್ಳಿಗಳ ಪೊದೆಗಳಿಂದಲೂ, ನಾನಾ ವಿಧವಾದ ಮೃಗಗಳಿಂದಲೂ, ಗೈರಿಕಾದಿ ಧಾತುಗಳಿಂದಲೂ ಅಲಂಕರಿಸಲ್ಪಟ್ಟಿದ್ದಿತು. ಬಹುತರವಾದ ಗಿರಿನದಿಗಳಿಂದಲೂ, ಬತ್ತಾಗಿರುವ ಕಲ್ಲುಗಳ ರಾಶಿಗಳಿಂದಲೂ, ಮಹರ್ಷಿಗಳು, ಯಕ್ಷರು, ಗಂಧರ್ವರು,ಕಿನ್ನರರು, ಉರಗರು, ಈ ಮೊದಲಾದವರಿಂದಲೂ ಸೇವಿಸಲ್ಪಡುತ್ತಾ॥೧೮೧೯॥ ವಿಚಿತ್ರಗಳಾದ ಲತೆಗಳಿಂದಲೂ, ವಿವಿಧವಾದ ಪಾದಪಗಳಿಂದಲೂ, ಸಿಂಹವ್ಯಾಘ್ರಾದಿ ಮೃಗ ಸಮೂಹಗಳಿಂದಲೂ, ಆಶ್ಚರ್ಯಕರಗಳೆನಿಸಿದ ಗುಹೆಗಳಿಂದಲೂ, ಸವಿಯಾದ ಹಣ್ಣು ಹಂಪಲುಗಳಿಂದಲೂ, ಗೆಡ್ಡೆಗೆಣಸುಗಳಿಂದಲೂ, ಫಲವೃಕ್ಷಗಳಿಂದಲೂ, ಜಲಾಶಯಗಳಿಂದಲೂ ಪರಿವೃತವಾಗಿ, ॥೨೦॥ ಮಹಾ ವೈಭವದಿಂದ ರಾರಾಜಿಸುತಲಿರುವ ಅರಿಷ್ಟಪರ್ವತವನ್ನು ಪವನ ನಂದನನಾದ ಹನುಮಂತನು ಶ್ರೀರಾಮ ಸಂದರ್ಶನ ಕುತೂಹಲದಿಂದ ಹರ್ಷಗೊಂಡು

ಸಘೋಷಾ ಸ್ಸಮಶೀರ್ಯಂತ ಶಿಲಾ ಶ್ಚೂರ್ಣೀಕೃತಾ ಸ್ತತಃ ||೨೨||
ಸ ತ ಮಾರುಹ್ಯ ಶೈಲೇಂದ್ರಂ ವ್ಯವರ್ಧತ ಮಹಾಕಪಿಃ |
ದಕ್ಷಿಣಾ ದುತ್ತರಂ ಪಾರಂ ಪ್ರಾರ್ಥಯನ್ ಲವಣಾಂಭಸಃ ||೨೩||
ಅಧಿರುಹ್ಯ ತತೋ ವೀರಃ ಪರ್ವತಂ ಪವನಾತ್ಮಜಃ |
ದದರ್ಶ ಸಾಗರಂ ಭೀಮಂ ಮೀನೋರಗ ನಿಷೇವಿತಮ್ ||೨೪||
ಸಮಾರುತ ಇವಾ ಕಾಶಂ ಮಾರುತಸ್ಯಾತ್ಮ ಸಂಭವಃ |
ಪ್ರಪೇದೆ ಹರಿಶಾರ್ದೂಲೊ ದಕ್ಷಿಣಾ ದುತ್ತರಾಂ ದಿಶಮ್ ||೨೫||
ಸ ತದಾ ಪೀಡಿತ ಸ್ತೇನ ಕಪಿನಾ ಪರ್ವತೋತ್ತಮಃ |

---

ಸಾನುಷು - ಬೆಟ್ಟಗಳ ಜರಿಗಳಲ್ಲಿಯೂ (ಗವಿಗಳಲ್ಲಿಯೂ) ಶಿಲಾಃ - ಕಲ್ಲುಗಳು, ತೇನ - ಆ ಹನುಮಂತನಿಂದ, ಪಾದತಲಾಕ್ರಾಂತಾಃ-ಪಾದತಲಗಳಿಂದ ತುಳಿಯಲ್ಪಟ್ಟವುಗಳಾಗಿ, ತತಃ-ತರುವಾಯು, ಸಘೋಷಾಃ ಶಬ್ದಗಳಿಂದೊಡಗೂಡಿದವುಗಳಾಗುತ್ತಾ, ಚೂರ್ಣೀಕೃತಾಃ - ಪುಡಿಯಾಗಿ ಮಾಡಲ್ಪಟ್ಟವುಗಳಾಗಿ, ಸಮಶೀರ್ಯಂತ - ಹುಡಿಮಾಲ್ಪಟ್ಟುವು ||೨೨|| ಸಃ - ಆ, ಮಹಾಕಪಿಃ - ವೀರಹನುಮಂತನು, ತಂ-ಆ ಶೈಲೇಂದ್ರಂ - ಶ್ರೇಷ್ಠವಾದ ಪರ್ವತವನ್ನು, ಆರುಹ್ಯ - ಏರಿ, ಲವಣಾಂಭಸಃ- ಉಪ್ಪುನೀರಿನ ಕಡಲಿನ, ದಕ್ಷಿಣಾತ್ - ತೆಂಕಲದಡದಿಂದ, ಉತ್ತರಂಪಾರಂ - ಬಡಗಲದಡವನ್ನು, (ಗಂತುಂ - ಹೊಂದಲಿಕ್ಕೆ) ಪ್ರಾರ್ಥಯನ್ - ಕೋರುತಲಿರುವವನಾಗಿ, ವ್ಯವರ್ಧತ - ಬೆಳೆಯತೊಡಗಿದನು ||೨೩|| ತತಃ-ಆ ಹಿಂದೆ, ವೀರಃ - ಶೂರನಾದ, ಪವನಾತ್ಮಜಃ - ವಾಯುಪುತ್ರನು, ಪರ್ವತಂ - ಅರಿಷ್ಟಪರ್ವತವನ್ನು, ಅಧಿರುಹ್ಯ - ಹತ್ತಿ, ಮೀನೋರಗನಿಷೇವಿತಂ- ಮೀನುಗಳಿಂದಲೂ, ಹಾವುಗಳಿಂದಲೂ ಕೂಡಿರುವುದಾದ ಕಾರಣವೇ, ಭೀಮಂ - ಭಯಂಕರವೆನಿಸಿದ, ಸಾಗರಂ - ಸಮುದ್ರವನ್ನು, ದದರ್ಶ - ನೋಡಿದನು ||೨೪|| ಮಾರುತಸ್ಯ - ವಾಯುವಿಗೆ, ಆತ್ಮಸಂಭವಃ - ಪುತ್ರನೆನಿಸಿದ, ಹರಿಶಾರ್ದೂಲಃ - ವಾನರಶ್ರೇಷ್ಠನಾದ, ಸಃ - ಆ ಮಾರುತಿಯು, ಮಾರುತಃ - ವಾಯುವು, ಆಕಾಶಮಿವ - ಗಗನವನ್ನು ಹೇಗೋ ಹಾಗೆ, ದಕ್ಷಿಣಾತ್ - ದಕ್ಷಿಣಭಾಗದ ದೆಶೆಯಿಂದ, ಉತ್ತರಾಂದಿಶಂ-ಉತ್ತರದಿಕ್ಕನ್ನು, ಪ್ರಪೇದೆ-ಹೊಂದಿದನು ||೨೫|| ತದಾ - ಆಗ, ತೇನ - ಆ, ಕಪಿನಾ - ಹನುಮಂತನಿಂದ, ಪೀಡಿತಃ - ಬಾಧಿಸಲ್ಪಟ್ಟ, ಪರ್ವತೋತ್ತಮಃ-

---

ಬಲುಬೇಗನೆ ಏರಿದನು||೨೧||ತರುವಾಯು ಮಾರುತಿಯು ತನ್ನ ಕಾಲನ್ನೂರಿ ಹಾರುವ ವೇಗದಲ್ಲಿರುವ ಸಮಯದೊಳಗೆ ಪಾದತಲಪೀಡಿತಗಳಾದ ಗಿರಿಸಾನುಗಳಲ್ಲಿನ ಶಿಲೆಗಳು-ಘೋರವಾದ ಶಬ್ದಗಳಿಂದೊಡಗೂಡಿ, ಪುಡಿಪುಡಿಯಾಗಿ ಅಲ್ಲಲ್ಲಿ ಉದಿರುತ್ತಿದ್ದುವು ||೨೨|| ಹನುಮಂತನಿಷ್ಟು ಆರ್ಭಟದಿಂದ ಆ ಅರಿಷ್ಟಪರ್ವತವನ್ನೇರಿ ಕುಪ್ಪಳಿಸಿ ಹಾರಲಿಕ್ಕೆ ಸಿದ್ಧನಾಗುತ್ತಾ ಆ ಸಮುದ್ರದ ದಕ್ಷಿಣತೀರದಿಂದ ಉತ್ತರ ತೀರಕ್ಕೆ ಸೇರಲೆಳಸಿ ಬೆಳೆಯತೊಡಗಿದನು||೨೩|| ಮಹಾ ವೀರನಾದ ಹನುಮನು ಆ ಬೆಟ್ಟದತುಟ್ಟತುದಿಗೆ ಏರಿದನು, ಮಹಾ ಮತ್ಸ್ಯಗಳಿಂದಲೂ, ಘೋರವಾದ ಸರ್ಪಗಳಿಂದಲೂನಿಬಿಡವಾಗಿ, ಬಹು ಗಂಭೀರವೆನಿಸಿರುವ ಮಹಾಸಾಗರವನ್ನು ಹಾಯನೋಡಿದನು||೨೪|| ಆಮೇಲೆ ಆ ಮಾರುತಾತ್ಮಜನು-ಮಹಾ ವೇಗವನ್ನೊಳಗೊಂಡಿರುವ ವಾಯುವು ಆಕಾಶದಲ್ಲಿ ಗಮಿಸುವಂತೆ ತಾನೂ ಗಮಿಸಲೆಳಸಿ, ದಕ್ಷಿಣ ದಿಕ್ಕಿನಿಂದ ಉತ್ತರ ದಿಕ್ಕಿಗೆ ಹಾರಲಣಿಯಾದನು ||೨೫|| ಕುಪ್ಪಳಿಸುವ ವೇಗದಲ್ಲಿ ಮಾರುತಿಯು

ರರಾಸ ಸಹ ತೈ ರ್ಭೂತೈಃ ಪ್ರವಿಶ ನ್ವಸುಧಾ ತಲಮ್ ॥
ಕಂಪಮಾನೈಶ್ಚ ಶಿಖರೈಃ ಪತದ್ಭಿ ರಪಿ ಚ ದ್ರುಮೈಃ ॥೧೬॥
ತಸ್ಯೋರು ವೇಗೋನ್ಮಥಿತಾಃ ಪಾದಪಾಃ ಪುಷ್ಪಶಾಲಿನಃ ।
ನಿಪೇತು ರ್ಭೂತಲೇ ರುಗ್ಣಾ ಶ್ಶಕ್ರಾಯುಧ ಹತಾ ಇವ ॥೧೭॥
ಕಂದರಾಂತರ ಸಂಸ್ಥಾನಾಂ ಪೀಡಿತಾನಾಂ ಮಹೌಜಸಾಮ್ ।
ಸಿಂಹಾನಾಂ ನಿನದೋ ಭೀಮೋ ನಭೋ ಭಿಂದ ನ್ಸ ಶುಶ್ರುವೇ ॥೧೮॥
ಸ್ರಸ್ತ ವ್ಯಾವಿದ್ಧ ವಸನಾ ವ್ಯಾಕುಲೀಕೃತ ಭೂಷಣಾಃ ।
ವಿದ್ಯಾಧರ್ಯ ಸ್ಸಮುತ್ಪೇತುಃ ಸಹಸಾ ಧರಣೀ ಧರಾತ್ ॥೧೯॥

---

ಪರ್ವತಶ್ರೇಷ್ಠವೆನಿಸಿದ, ಸಃ - ಆ ಅರಿಷ್ಟಪರ್ವತವು, ತೈಃ - ಅಲ್ಲಿದ್ದ, ಭೂತೈಸ್ಸಹ - ಪ್ರಾಣಿಗಳೊಡನೆ, ವಸುಧಾತಲಂ - ಭೂಪ್ರದೇಶವನ್ನು, ಪ್ರವಿಶನ್ - ಪ್ರವೇಶಮಾಡುತಲಿರುವುದಾಗಿ, ರರಾಸ - ಅಬ್ಬರಿಸುತಲಿದ್ದಿತು ॥೧೬॥ ಕಂಪಮಾನೈಃ - ಕದಲುತ್ತಿದ್ದ, ಶಿಖರೈಃ-ಕೋಡುಗಳಿಂದಲೂ, ಪತದ್ಭಿಃ- ಬೀಳುತಲಿದ್ದ, ದ್ರುಮೈಶ್ಚ - ಮರಗಳಿಂದಲೂ, ರುಗ್ಣಾಃ - ಹಿಂಸಿಸಲ್ಪಟ್ಟ, ತಸ್ಯ - ಆಹನುಮಂತನ, ಊರುವೇಗೋನ್ಮಥಿತಾಃ - ವೇಗಾತಿಶಯದಿಂದ ಬಾಧಿಸಲ್ಪಟ್ಟವೂ, ಪುಷ್ಪಶಾಲಿನಃ - ಹೂವುಗಳಿಂದೊಡಗೂಡಿದವುಗಳೂ ಆದ, ಪಾದಪಾಃ - ವೃಕ್ಷಗಳು, ಶಕ್ರಾಯುಧಹತಾ ಇವ-ವಜ್ರಾಯುಧದಿಂದ ಹೊಡೆಯಲ್ಪಟ್ಟವುಗಳಂತೆ, ಭೂತಲೇ - ಭೂಪ್ರದೇಶದಲ್ಲಿ, ನಿಪೇತುಃ - ಬೀಳುತ್ತಿದ್ದುವು ॥೧೭॥ ಕಂದರಾಂತರ ಸಂಸ್ಥಾನಾಂ - ಬೆಟ್ಟದಗವಿಗಳಲ್ಲಿರುವ, ಪೀಡಿತಾನಾಂ - ಬಾಧಿಸಲ್ಪಟ್ಟ, ಮಹೌಜಸಾಂ - ಮಹಾಪರಾಕ್ರಮವುಳ್ಳ, ಸಿಂಹಾನಾಂ - ಸಿಂಹಗಳ, ಭೀಮಃ - ಭಯಂಕರವೆನಿಸಿದ, ನಿನದಃ - ಧ್ವನಿಯು, ನಭಃ-ಆಕಾಶವನ್ನು, ಭಿಂದನ್-ಒಡೆಯುತಲಿರುವುದಾಗಿ, ಸಃ-ಆ ಧ್ವನಿಯು, (ಜನೈಃ-ಜನಗಳಿಂದ) ಶುಶ್ರುವೇ-ಕೇಳಲ್ಪಟ್ಟಿತು ॥೧೮॥ ವಿದ್ಯಾಧರ್ಯಃ - ವಿದ್ಯಾಧರಸ್ತ್ರೀಯರು, ಸ್ರಸ್ತವ್ಯಾವಿದ್ಧವಸನಾಃ - ಸಡಲಿಹರಿದು ಹೋದವಸ್ತ್ರಗಳುಳ್ಳವರೂ, ವ್ಯಾಕುಲೀಕೃತಭೂಷಣಾಃ - ಚೆದರಿಹೋದ ಒಡವೆಗಳೂ ಉಳ್ಳವರಾಗಿ, ಧರಣೀಧರಾತ್ - ಭೂಪ್ರದೇಶದಿಂದ, ಸಮುತ್ಪೇತುಃ - ಮೇಲಕ್ಕೆ ಹಾರಿಹೋದರು ॥೧೯॥ ಅತಿಪ್ರಮಾಣಾಃ -

---

ಪಾದತಲದಿಂದ ಪರ್ವತವನ್ನು ಊರಿ ತುಳಿಯಲು, ಆಗಲಾಗಿರಿಯು-ತನ್ನಲ್ಲಿರುವ ಪ್ರಾಣಿಭೂತಗಳಿಂದ ಗಟ್ಟಿಯಾಗಿ ಅಬ್ಬರಿಸುತ್ತಾ, ಪಾತಾಳಕ್ಕೆ ಇಳಿಯುವಂತೆ ಕೆಳಕ್ಕೆ ಅಡಕತು ॥೧೬॥ ಬೆಟ್ಟದ ಕೋಡುಗಳೆಲ್ಲ ಗಲಗನೆ ನಡುಗಿದುವು, ಮರಗಳೆಲ್ಲ ಬುಡಸಹಿತ ಹಾಚಿಬಿದ್ದುವು, ಹನುಮನ ತೊಡೆಗಳ ವೇಗಕ್ಕೆ ಸಿಲುಕಿ, ಪುಷ್ಪ ಫಲಭರಿತಗಳಾದ ತರುಗಳು ಇಂದ್ರನ ವಜ್ರಾಯುಧದಿಂದ ಪೆಟ್ಟುಬಿದ್ದವುಗಳಂತೆ ಕೆಡದುರುಳುತ್ತಿದ್ದುವು ॥ ೧೭ ॥ ॥ ಗವಿಗಳೊಳಗೆ ಸುಖವಾಗಿ ಪವಳಿಸಿದ್ದ ಮಹಾ ಶೌರ್ಯಸಂಪನ್ನಗಳಾದ ಸಿಂಹಗಳು-ಹನುಮನು-ಪಾದತಲದಿಂದಬೆಟ್ಟವನ್ನು ಬಲವಾಗಿ ಮೆಟ್ಟಲು, ಪರ್ವತಕಂಪದಿಂದ ಬೆದರಿ ಘೋರವಾಗಿ ಅಬ್ಬರಿಸಿದುವು. ಆ ಗರ್ಜನೆಯಿಂದನಭೋಮಂಡಲವೇಬಡೆದು ಹೋಗುವಂತೆ ಕೇಳಬರುತಲಿದ್ದಿತು ॥೧೮॥ ॥ ಆ ಮಹಾಶೈಲದಲ್ಲಿ ವಾಸಮಾಡುತಲಿದ್ದ ವಿದ್ಯಾ ಧರಾಂಗನೆಯರು-ಹನುಮನು ಹಾರುವ ಗದ್ದಲದಲ್ಲಿ ಹೆದರಿ, ಉದಿರಿಹೋದ ಆಭರಣಗಳುಳ್ಳವರೂ, ತೊಡಾ ಹರಿದುಹೋದ ದಿವ್ಯಾಂಬರಗಳುಳ್ಳವರೂ ಆಗುತ್ತಾ, ಬಲುವೇಗನೆ ಗಗನಮಂಡಲಕ್ಕೆ ಹಾರಿ

ಅತಿಪ್ರಮಾಣಾ ಬಲಿನೋ ದೀಪ್ತ ಜಿಹ್ವಾ ಮಹಾವಿಷಾಃ ।
ನಿಪೀಡಿತ ಶಿರೋಗ್ರೀವಾ ವ್ಯವೇಷ್ಟಂತ ಮಹಾಹಯಃ ॥೩೦॥
ಕಿನ್ನರೋರಗ ಗಂಧರ್ವ ಯಕ್ಷ ವಿದ್ಯಾಧರಾ ಸ್ತದಾ ।
ಪೀಡಿತಂ ತಂ ನಗವರಂ ತ್ಯಕ್ತ್ವಾ ಗಗನ ಮಾಸ್ಥಿತಾಃ ॥೩೧॥
ಸಚ ಭೂಮಿಧರ ಶ್ರೀಮಾ ನ್ಬಲಿನಾ ತೇನ ಪೀಡಿತಃ ।
ಸವೃಕ್ಷ ಶಿಖರೋದಗ್ರಃ ಪ್ರವಿವೇಶ ರಸಾತಲಂ॥೩೨॥
ದಶಯೋಜನ ವಿಸ್ತಾರ ಸ್ತ್ರಿಂಶದ್ಯೋಜನ ಮುಚ್ಛ್ರಿತಃ ।

ಬಲುತೋರವಾಗಿರುವ, ಬಲಿನಃ - ಹೇರಳವಾದ ಸತ್ವವುಳ್ಳ, ದೀಪ್ತಜಿಹ್ವಾಃ - ಉರಿಯುತಲಿರುವ ನಾಲಗೆಗಳುಳ್ಳ, ಮಹಾವಿಷಾಃ - ತೀವ್ರವಾದ ವಿಷವುಳ್ಳ, ನಿಪೀಡಿತ ಶಿರೋಗ್ರೀವಾಃ - ಹಿಂಸಿಸಲ್ಪಟ್ಟ ತಲೆಗಳೂ ಕೊರಳುಗಳೂ ಉಳ್ಳುವಾಗಿ, ಮಹಾಹಯಃ - ಮಹಾಸರ್ಪಗಳು ವ್ಯವೇಷ್ಟಂತ - ಸುತ್ತಿಕೊಂಡುವು (ಮುದುರಿಕೊಂಡುವು) ॥೩೦॥ ಕಿನ್ನರೋರಗ ಗಂಧರ್ವವಿದ್ಯಾಧರಾಃ- ಕಿನ್ನರರು, ಉರಗರು, ಗಂಧರ್ವರು, ವಿದ್ಯಾಧರರು ಮುಂತಾದವರು, ಪೀಡಿತಂ - ಹನುಮಂತನಿಂದ ಹಿಂಸಿಸಲ್ಪಟ್ಟ, ನಗವರಂ - ಪರ್ವತಶ್ರೇಷ್ಠವಾದ, ತಂ - ಆ ಅರಿಷ್ಟಪರ್ವತವನ್ನು, ತ್ಯಕ್ತ್ವಾ - ಬಿಟ್ಟು, ಗಗನಂ - ಆಕಾಶವನ್ನು, ಆಸ್ಥಿತಾಃ - ಆಶ್ರಯಿಸಿದರು ॥೩೧॥ ಶ್ರೀಮಾನ್ - ಮರಗಿಡಬಳ್ಳಿಗಳ ಸೊಬಗುಳ್ಳ, ಸವೃಕ್ಷಶಿಖರೋದಗ್ರಃ - ಮರಗಳಿಂದಲೂ ಕೋಡುಗಳಿಂದಲೂ ಸಹಿತವಾಗಿ ಎತ್ತರವಾದ, ಸಃ - ಆ, ಭೂಮಿಧರಶ್ಚ - ಪರ್ವತವೂ, ಬಲಿನಾ - ಬಲವಂತನಾದ, ತೇನ - ಆ ಹನುಮಂತನಿಂದ, ಪೀಡಿತಃ - ಬಾಧಿಸಲ್ಪಟ್ಟುದಾಗಿ, ರಸಾತಲಂ- ಪಾತಾಳವನ್ನು, ಪ್ರವಿವೇಶ - ಪ್ರವೇಶಿಸಿತು (ಹೊಗುವಂತಿದ್ದಿತು) ॥೩೨॥ ದಶಯೋಜನ ವಿಸ್ತಾರಃ - ಹತ್ತುಗಾವುದಗಳ ಅಗಲವುಳ್ಳ, ತ್ರಿಂಶದ್ಯೋಜನಂ - ಮೂವತ್ತುಗಾವುದಗಳಷ್ಟು, ಉಚ್ಛ್ರಿತಃ - ಎತ್ತರವಾದ, ಸಃ- ಆ, ಧರಾಧರಃ - ಪರ್ವತವು, ಧರಣ್ಯಾಂ - ಭೂಮಿಯಲ್ಲಿ, ಸಮತಾಂ - ಸಮತೆಯನ್ನು, ಯಾತಃ - ಹೊಂದಿದುದು, ಬಭೂವ - ಆಯಿತು ॥೩೩॥ ಸಃ - ಆ, ಹರಿಃ - ಮಾರುತಿಯು, ಭೀಮಂ

ಹೋದರು ॥೨೯॥ ಬಲು ನೀಳಗಳಾಗಿಯೂ ತೋರಗಳಾಗಿಯೂ ಇದ್ದ, ವಿಷಧರಗಳೂ ಕ್ರೂರರಸನಗಳೂ ಉಳ್ಳ ಮಹಾಸರ್ಪಗಳು-ಆ ಮಾರುತಿಯ ಮಹಾಸಂಭ್ರಮದಲ್ಲಿ ತಮ್ಮ ತಲೆಗಳಿಗೂ ಕೊರಳುಗಳಿಗೂ ನೋವು ಉಂಟಾಗಲು ಮಹಾಭಯದಿಂದ ಅಲ್ಲಲ್ಲಿಯೇ ತಮ್ಮ ಒಡಲುಗಳನ್ನು ಸಿಂಬೆಗಳಾಗಿ ಸುತ್ತಿಕೊಂಡು ಮುದುರಿ ಬಿದ್ದುಕೊಂಡುವು ॥೩೦॥ ಮತ್ತು ಆ ಮಹಾಧರಾಧರದಲ್ಲಿದ್ದ ಕಿನ್ನರರು, ಉರಗರು, ಗಂಧರ್ವರು, ಯಕ್ಷರು, ವಿದ್ಯಾಧರರು ಮೊದಲಾದವರೆಲ್ಲರೂ ಹನುಮನಿಂದ ಪೀಡಿಸಲ್ಪಟ್ಟ ಬೆಟ್ಟದಲ್ಲಿ ನಿಲ್ಲಲಾರದೆ ತತ್ಕ್ಷಣದಲ್ಲಿಯೇ ನಭೋಮಂಡಲವನ್ನು ಕುರಿತು ತೆರಳಿದರು ॥೩೧॥ ॥ ಮತ್ತಾ ಭೂಮಿಧರವು-ವಿಚಿತ್ರತರುಲತೆಗಳ ವೈಭವವನ್ನು ಪಡೆದಿದ್ದಿತಾದರೂ,ಆ ಸಮಯದಲ್ಲಿ ಬಹು ಹಿಂಸೆಯನ್ನು ಪಡೆದು, ಉನ್ನತವಾದ ಶಿಖರಗಳಿಂದಲೂ, ತರುಗಳಿಂದಲೂ ಪಾತಾಳಕ್ಕೆ ಇಳಿದುಹೋಗುವಂತಿದ್ದಿತು ॥೩೨॥ ॥ ಮಹಾಮಾರುತಿಯ ಲಂಘನವೇಗದಲ್ಲಿ-ಕಾಲಿನಿಂದ ತುಳಿಯಲ್ಪಟ್ಟು ಹತ್ತುಗಾವುದಗಳ ಅಗಲವೂ, ಮೂವತ್ತು ಗಾವುದಗಳ ಉನ್ನತವೂ ಇದ್ದ ಆ ಮಹಾಪರ್ವತವು ನೆಲಮಟ್ಟವಾಗಿ ನಿಂತಿತು ॥೩೩॥ ॥ ಆ ವೇಳೆಯೊಳಗೆ ಮಹಾ ವೀರಾಗ್ರೇಸರನಾದ

ಧರಣ್ಯಾಂ ಸಮತಾಂ ಯಾತಃ ಸ ಬಭೂವ ಧರಾಧರಃ ॥೩೩॥
ಸ ಲಿಲಂಘಯಿಷು ರ್ಭೀಮಂ ಸಲೀಲಂ ಲವಣಾರ್ಣವಂ ।
ಕಲ್ಲೋಲಾ ಸ್ಫಾಲವೇಲಾಂತ ಮುತ್ಪಪಾತ ನಭೋಹರಿಃ ॥೩೪॥

—ಇತಿ ಶ್ರೀಮತ್ಸುಂದರಕಾಂಡೆಷಟ್ಪಂಚಾಶಸ್ಸರ್ಗಃ—

ಭಯಂಕರವೆನಿಸಿದುದೂ, ಕಲ್ಲೋಲ - ಅಲೆಗಳ, ಆಸ್ಫಾಲ - ಪೆಟ್ಟುಗಳ್ಳ, ವೇಲಾ - ದಡದ, ಅಂತಂ - ತುದಿಯುಳ್ಳುದೂ ಆಗಿರುವ, ಲವಣಾರ್ಣವಂ - ಸಮುದ್ರವನ್ನು, ಲಿಲಂಘಯಿಷುಃ- ದಾಟಲೆಳಸಿದವನಾಗಿ, ಸಲೀಲಂ- ವಿಲಾಸದೊಡನೆ, ನಭಃ - ಆಕಾಶವನ್ನು ಕುರಿತು, ಉತ್ಪಪಾತ- ಹಾರಿದನು ॥೩೪॥

— ಇಂತು ಐವತ್ತಾರನೆಯ ಸರ್ಗಂ —

ಮಾರುತಿಯು-ಪ್ರಬಲವಾದ ತರಂಗಗಳ ಬಲವಾದಪೆಟ್ಟಿನಿಂದೊಡಗೂಡಿದ ದಡವನ್ನುಳ್ಳುದೂ, ಮಹಾ ಭಯಂಕರವೆನಿಸಿದುದೂ ಆಗಿರುವ ಮಹಾ ಸಮುದ್ರವನ್ನು ದಾಟಲೆಳಸಿ, ಕುಪ್ಪಳಿಸಿ, ಆಕಾಶಮಂಡಲಕ್ಕೆ ಹಾರತೊಡಗಿದನು ॥೩೪॥ ॥

—ಇಂತು ಐವತ್ತಾರನೆಯ ಸರ್ಗಂ—

ಶ್ರೀಃ

ಶ್ರೀರಾಮ ಚನ್ದ್ರ ಪರಬ್ರಹ್ಮಣೇನಮಃ

## ಶ್ರೀಮತ್ಸುನ್ದರಕಾಣ್ಡೇ - ಸಪ್ತಪಂಚಾಶಸ್ಸರ್ಗಃ.

ಸ ಚಂದ್ರ ಕುಮುದಂ ರಮ್ಯಂ ಸಾರ್ಕ ಕಾರಂಡವಂ ಶುಭಮ್ ।
ತಿಷ್ಯ ಶ್ರವಣ ಕಾದಂಬ ಮಭ್ರಶೈವಾಲ ಶಾದ್ವಲಂ ॥೧॥

— ಐವತ್ತೇಳನೆಯ ಸರ್ಗಂ —

ಕಂದ॥ ವಾತಾತ್ಮಜನಾಕಡಲಂ । ವಾತಾಧಿಕ ವೇಗದಿಂದೆ ದಾಂಟುತಲೈದಲ್ ।
ಸೀತಾಕುಶಲವ ನರಿಯಲ್ । ಕೌತೂಹಲದಿಂದೆ ನಿಂದರಾಗಳ್ ಕಪಿಗಳ್ ॥

ಸಚಂದ್ರಕುಮುದಂ - ಚಂದ್ರನೆಂಬ ಕುಮುದಪುಷ್ಪದಿಂದೊಡಗೂಡಿದ, ರಮ್ಯಂ - ರಮಣೀಯವಾಗಿರುವ, ಸಾರ್ಕಕಾರಂಡವಂ - ಸೂರ್ಯನೆಂಬ ನೀರು ಕೋಳಿಯಿಂದ ಸಹಿತವಾದ, ಶುಭಂ - ಮಂಗಳ

—ಐವತ್ತೇಳನೆಯ ಸರ್ಗಂ—

ಅನಂತರದಲ್ಲಿ-ಚಂದ್ರನೆಂಬ ಬೆಳ್ದಾವರೆ, ಸೂರ್ಯನೆಂಬ ಜಲಪಕ್ಷಿ, ಪುಷ್ಯ ಮತ್ತು ಶ್ರವಣ ನಕ್ಷತ್ರಗಳೆಂಬ ಕಲಹಂಸೆಗಳು, ಮೇಘಮಂಡಲವೆಂಬ ಪಾವಸೆ ಮತ್ತು ಹಸಿರು ಹುಲ್ಲಿನ ಬೈಲು, ಪುನರ್ವಸು ನಕ್ಷತ್ರವೆಂಬ ಮೀನು, ಅಂಗಾರಕನೆಂಬ ತೋರವಾದ ಮೊಸಳೆ, ಐರಾವತವೆಂಬ ದ್ವೀಪ, ಸ್ವಾತೀ ನಕ್ಷತ್ರವೆಂಬ ಹಂಸೆ, ವಾಯು ಸಮುದಾಯವೆಂಬ ಅಲೆಗಳಹಿಂಡು, ಹರಡಿದ ಚಂದ್ರಕಿರಣವೆಂಬತಣ್ಣೀರು, ನಾಗ, ಯಕ್ಷ, ಗಂಧರ್ವರೆಂಬ

ಪುನರ್ವಸು ಮಹಾಮೀನಂ ಲೋಹಿತಾಂಗ ಮಹಾಗ್ರಹಮ್ ।
ಐರಾವತ ಮಹಾದ್ವೀಪಂ ಸ್ವಾತೀಹಂಸ ವಿಲೋಳಿತಮ್ ॥೨॥
ವಾತ ಸಂಘಾತ ಜಾತೋರ್ಮಿ ಚಂದ್ರಾಂಶು ಶಿಶಿರಾಂಬುಮತ್ ।
ಭುಜಂಗ ಯಕ್ಷ ಗಂಧರ್ವ ಪ್ರಬುದ್ಧ ಕಮಲೋತ್ಪಲಮ್ ॥೩॥
ಅಪಾರ ಮಪರಿಶ್ರಾನ್ತಃ ಪುಪ್ಲುವೇ ಗಗನಾರ್ಣವಮ್ ।
ಹನುಮಾನ್ಮಾರುತಗತಿ ರ್ಮಹಾನೌರಿವ ಸಾಗರಮ್ ॥೪॥
ಗ್ರಸಮಾನ ಇವಕಾಶಂ ತಾರಾಧಿಪ ಮಿವೋಲ್ಲಿಖನ್ ।
ಹರನ್ನಿವ ಸನಕ್ಷತ್ರಂ ಗಗನಂ ಸಾರ್ಕಮಂಡಲಮ್ ॥೫॥
ಮಾರುತಸ್ಯಾತ್ಮಜಃ ಶ್ರೀಮಾನ್ ಕಪಿ ರ್ವ್ಯೋಮಚರೋ ಮಹಾನ್ ।

---

ಕರವೆನಿಸಿರುವ, ಪುಷ್ಯಶ್ರವಣ ಕಾದಂಬಂ-ಪುಷ್ಯಶ್ರವಣನಕ್ಷತ್ರಗಳೆಂಬ ಕಲಹಂಸಗಳುಳ್ಳ, ಅಭ್ರಶೈವಾಲ ಶಾದ್ವಲಂ-ಮೇಘಗಳೆಂಬಪಾಸೆಮತ್ತು ಎಳೆಯ ಹುಲ್ಲೂ ಉಳ್ಳ॥೧॥ ಪುನರ್ವಸುಮಹಾಮೀನಂ-ಪುನರ್ವಸು ನಕ್ಷತ್ರವೆಂಬ ತೋರವಾದಮೀನುಳ್ಳ, ಲೋಹಿತಾಂಗಮಹಾಗ್ರಹಂ-ಅಂಗಾರಕತಾರೆಯೆಂಬದೊಡ್ಡ ಮೊಸಳೆಯುಳ್ಳ, ಐರಾವತ ಮಹಾದ್ವೀಪಂ-ಇಂದ್ರನಾನೆಯೆಂಬ ಮಹಾದ್ವೀಪವುಳ್ಳ, ಸ್ವಾತೀಹಂಸವಿಲೋಳಿತಂ-ಸ್ವಾತೀನಕ್ಷತ್ರವೆಂಬಅಂಚೆಯಿಂದಸಹಿತವಾದ॥೨॥ ವಾತ...ಮತ್, ವಾತಸಂಘಾತ-ವಾಯುಸಮೂಹವೆಂಬ, ಸಂಜ್ಞಾತ-ಉಂಟಾದ, ಊರ್ಮಿ - ಅಲೆಗಳುಳ್ಳುದೂ, ಚಂದ್ರಾಂಶು - ಚಂದ್ರಕಿರಣಗಳೆಂಬ, ಅಂಬುಮತ್ - ಜಲವುಳ್ಳುದೂ; ಭುಜಂಗ .... ಕಮಲೋತ್ಪಲಂ, ಭುಜಂಗ - ನಾಗರು, ಯಕ್ಷ-ಯಕ್ಷರು, ಗಂಧರ್ವ - ಗಂಧರ್ವರು ಎಂಬ, ಪ್ರಬುದ್ಧ - ಅರಳಿದ, ಕಮಲೋತ್ಪಲಂ - ತಾವರೆ ಮತ್ತು ನೈದಿಲೆಗಳುಳ್ಳುದೂ, ॥೩॥ ಅಪಾರಂ - ಪಾರವಿಲ್ಲದುದೂ ಆಗಿರುವ, ಗಗನಾರ್ಣವಂ - ಆಕಾಶವೆಂಬ ಸಮುದ್ರವನ್ನು, ಮಾರುತಗತಿಃ- ವಾಯುವೇಗವುಳ್ಳ, ಹನುಮಾನ್-ಆಂಜನೇಯನು, ಅಪರಿಶ್ರಾಂತಃ-ಶ್ರಮವಿಲ್ಲದವನಾಗಿಯೇ ಸಾಗರಂ - ಸಮುದ್ರವನ್ನು, ಮಹಾನೌರಿವ-ದೊಡ್ಡಹಡೆಯಂತೆ, ಪುಪ್ಲುವೆ-ದಾಟಿದನು ॥೪॥ ಮಾರುತಸ್ಯ-ವಾಯುವಿಗೆ, ಆತ್ಮಜಃ-ಪುತ್ರನಾದ, ಶ್ರೀಮಾನ್-ಧೈರ್ಯಸಂಪತ್ತುಳ್ಳ, ವ್ಯೋಮಚರಃ-ಆಕಾಶಚರನಾಗಿರುವ ಮಹಾನ್-ಮಹೋನ್ನತನಾಗಿ ಬೆಳೆದಿರುವ, ಹನುಮಾನ್-ಆಂಜನೇಯನೆಂಬ, ಕಪಿಃ-ವಾನರವೀರನು, ಆಕಾಶಂ-ಅಂತರಿಕ್ಷವನ್ನು, ಗ್ರಸಮಾನಇವ-ನುಂಗುತಲಿರುವನೆಂಬಂತೆ, ತಾರಾಧಿಪಂ-ಉಡುರಾಜನನ್ನು, (ನಖೈಃ ಉಗುರಗಳಿಂದ) ಉಲ್ಲಿಖನ್ನಿವ - ತುರಿಸುವನೆಂಬಂತೆಯೂ, ಸನಕ್ಷತ್ರಂ-ನಕ್ಷತ್ರಗಳಿಂದೊಡಗೂಡಿದುದೂ, ಸಾರ್ಕಮಂಡಲಂ - ಸೂರ್ಯಮಂಡಲದಿಂದೊಡಗೂಡಿದುದೂ ಆಗಿರುವ, ಗಗನಂ-ಮುಗಿಲನ್ನು, ಹರನ್ನಿವ-

---

ಅರಳಿದ ತಾವರೆಗಳು ಮತ್ತು ಕನ್ನೈದಿಲೆಗಳು ಈ ಮೊದಲಾದವುಗಳಿಂದ ಬಹು ರಮ್ಯವೂ, ಶುಭಕರವೂ ಆಗಿ, ಅಪಾರವೆನಿಸಿರುವ ಗಗನವೆಂಬ ಮಹಾಸಾಗರವನ್ನು, ಮಾರುತಾತ್ಮಜನಾದ ಆಂಜನೇಯನು-ಮಾರುತನಿಗಿಮ್ಮಡಿಯಾದ ವೇಗವುಳ್ಳವನಾಗಿ, ಲೇಶವಾದರೂ ಆಯಾಸವಿಲ್ಲದೆ, ದೊಡ್ಡನಾವೆಯು ಹೇಗೋಹಾಗೆ ದಾಟುತಲಿದ್ದನು ॥೧,೨,೩,೪॥ ವಿಸ್ತಾರವಾಗಿರುವ ಆಕಾಶನ್ನು ನುಂಗುವವನ ಹಾಗೂ, ತಾರೆಗಳಗೊಡೆಯನಾದ ಚಂದಿರನನ್ನು ಕರತಲದಿಂದ ತಡಹುವನಂತೆಯೂ, ನಕ್ಷತ್ರಗಳಿಂದಲೂ, ರವಿಮಂಡಲದಿಂದಲೂ ಒಡಗೂಡಿರುವ ಗಗನಮಂಡಲವನ್ನು ಹಸ್ತಗಳಿಂದ ಅಪಹರಿಸುವವನಂತೆಯೂ ಇರುತ್ತಾ, ಧೈರ್ಯ

ಹನುಮಾನ್ಮೇಘ ಜಾಲಾನಿ ವಿಕರ್ಷನ್ನಿವ ಗಚ್ಛತಿ ॥೬॥
ಪಾಂಡುರಾರುಣ ವರ್ಣಾನಿ ನೀಲ ಮಾಂಜಿಷ್ಠ ಕಾನಿ ಚ ।
ಹರಿತಾರುಣ ವರ್ಣಾನಿ ಮಹಾಭ್ರಾಣಿ ಚಕಾಶಿರೇ ॥೭॥
ಪ್ರವಿಶನ್ನಭ್ರಜಾಲಾ ನಿ ನಿಷ್ಪತಂಶ್ಚ ಪುನಃಪುನಃ।
ಪ್ರಚ್ಛನ್ನಶ್ಚ ಪ್ರಕಾಶಶ್ಚ ಚಂದ್ರಮಾ ಇವ ಲಕ್ಷ್ಯತೇ ॥೮॥
ವಿವಿಧಾಭ್ರಘನಾಪನ್ನ ಗೋಚರೋ ಧವಳಾಂಬರಃ ।
ದೃಶ್ಯಾದೃಶ್ಯ ತನು ರ್ವೀರ ಸ್ತದಾ ಚಂದ್ರಾಯತೇಂಬರೇ ॥೯॥

ಕೈಯಿಂದ ಹಿಡಿಯುವನೆಂಬಂತೆಯೂ, ಮೇಘಜಾಲಾನಿ - ಮೋಡಗಳಹಿಂಡುಗಳನ್ನು, ವಿಕರ್ಷನ್ನಿವ - ಸೆಳೆಯುತಲಿರುವನೆಂಬಂತೆಯೂ, ಗಚ್ಛತಿ-ತೆರಳುತಲಿದ್ದನು॥೫-೬॥ಪಾಂಡುರಾರುಣವರ್ಣಾನಿ-ಬಿಳುಪುಕೆಂಪು ಬಣ್ಣಗಳುಳ್ಳವೂ, ನೀಲಮಾಂಜಿಷ್ಠಕಾನಿಚ - ಕಪ್ಪು ಮತ್ತು ಹಸಿರುಬಣ್ಣವುಳ್ಳವೂ,ಹರಿತಾರುಣವರ್ಣಾನಿ- ಅರಿಸಿನ ಮತ್ತು ಕೆಂಪುಬಣ್ಣದಿಂದ ಕಲಿತವರ್ಣವುಳ್ಳವೂ ಆಗಿರುವ, ಮಹಾಭ್ರಾಣಿ - ತೋರವಾದಮೇಘ ಗಳು, ಚಕಾಶಿರೆ - ಬೆಳಗುತಲಿದ್ದುವು ॥ ೭ ॥ (ಸಃ - ಆ ಹನುಮಂತನು) ಅಭ್ರಜಾಲಾನಿ - ಮೇಘಗಳ ಗುಂಪುಗಳನ್ನು, ಪ್ರವಿಶನ್ - ಒಳಹೊಗುತಲಿರುವವನಾಗಿಯೂ, ಪುನಃಪುನಃ - ಅಡಿಗಡಿಗೂ, ನಿಷ್ಪತಂಶ್ಚ - ಹೊರಗೆಬರುತಲಿವವನಾಗಿಯೂ, ಪ್ರಚ್ಛನ್ನಶ್ಚ - ಮೋಡಗಳಲ್ಲಿಮರೆಯಾಗುವವನೂ, ಪ್ರಕಾಶ್ಚ - ಸ್ವಲ್ಪಹೊತ್ತುಹೊರಗೆಕಾಣಿಸಿಕೊಳ್ಳುವವನೂಆಗಿರುವ, ಚಂದ್ರಮಾಇವ - ಚಂದ್ರನಂತೆ, (ಜನೈಃ - ಜನರಿಂದ,) ಲಕ್ಷ್ಯತೆ - ನೋಡಲ್ಪಡುತ್ತಿದ್ದನು ॥ ೮ ॥ ವಿವಿಧಾಭ್ರಘನಾಪನ್ನಗೋಚರಃ - ಬಗೆ ಬಗೆಯಾದಮೋಡಗಳಹಿಂಡಿನಲ್ಲಿಹೊಂದಿದದಾರಿಯುಳ್ಳವನೂ, ಧವಳಾಂಬರಃ-ಶುಭ್ರವಸ್ತ್ರವುಳ್ಳವನೂಆಗಿರುವ ವೀರಃ - ಶೂರನಾದಮಾರುತಿಯು, ತದಾ - ಆಗ, ಅಂಬರೆ - ಆಕಾಶದಲ್ಲಿ, ದೃಶ್ಯಾದೃಶ್ಯತನುಃ - ಕಂಡುಕಾಣಬರದಶರೀರವುಳ್ಳವನಾಗಿ, ಚಂದ್ರಾಯತೆ - ಚಂದ್ರನಂತಾಗುತಲಿದ್ದನು ॥ ೯ ॥ ವಾಯುನಂದನಃ - ವಾಯುಪುತ್ರನು, ಮೇಘಬೃಂದಾನಿ - ಮೇಘಗಳಸಮೂಹಗಳನ್ನು, ದಾರಯನ್ -ಬಡೆಯುತಲಿರುವನಾಗಿ,

ಶೌರ್ಯಗಳಿಂದ ಶೋಭಿಸುತಲಿರುವ ಮಾರುತಿಯು-ಮೇಘ ಬೃಂದಗಳನ್ನು ಕೈಗಳಿಂದ ಸೆಳೆಯುವತ್ತಿರುವನೆಂಬಂತೆ ಹಾರಿಬರುತಲಿದ್ದನು ॥೫,೬॥ಆಗಲಾ ಬಾಂದಳದಲ್ಲಿ-ಕೆಲಮೇಘಗಳು ಬಿಳಿಯ ಬಣ್ಣದವುಗಳಾಗಿಯೂ, ಮತ್ತೆ ಕೆಲವು ಕೆಂಬಣ್ಣದವುಗಳಾಗಿಯೂ, ಇನ್ನು ಕೆಲವು ಕಪ್ಪು ಮತ್ತು ಹೊಂಬಣ್ಣದವುಗಳಾಗಿಯೂ, ಬೇರೆ ಕೆಲವು-ಹಸಿರು ಮತ್ತು ಕೆಂಪು ಬಣ್ಣಗಳಿಂದ ಮಿಶ್ರವಾದವುಗಳಾಗಿಯೂ ಕಂಗೊಳಿಸುತಲಿದ್ದುವು॥೭॥ವ್ಯೋಮಯಾನದಿಂದ ಬರುತಲಿರುವ ಮಾರುತಿಯು-ಒಂದುವೇಳೆ-ಮೇಘಸಮುದಾಯದ ಒಳಹೊಗುತಲೂ, ಮತ್ತೊಂದುವೇಳೆ ಹೊರಗೆ ಕಾಣಿಸಿಕೊಳ್ಳುತಲೂ ಇರುತ್ತಾ, ಒಂದುಸಾರಿ ಕಾಣಬರುತ್ತಲೂ, ಮತ್ತೊಂದುಸಾರಿ ಮರೆಯಾಗಿ ಕಾಣಬರದೆಯೂ ಇರುವ ಚಂದ್ರಮಂಡಲದಂತೆ ಕಾಣಬರುತ್ತಿದ್ದನು ॥೮॥ ಮತ್ತು-ಬಗೆಬಗೆಯಾಗಿರುವ ಮೋಡಗಳ ಒಳಹಾದಿಯಲ್ಲಿ ಹಾದುಬರುತ್ತಾ, ಶುಭ್ರವಸ್ತ್ರಧರನಾಗಿರುವ ಮಾರುತಿಯು-ಒಂದುಬಾರಿ ದೃಷ್ಟಿಗೋಚರನಾಗುತಲೂ ಇನ್ನೊಂದುಬಾರಿ ಗೋಚರಿಸದೆಯೂ ಆಗಸದಲ್ಲಿ ತೆರಳುತಲಿದ್ದರೆ, ಚಂದ್ರನಂತಿರುತ್ತಿದ್ದನು ॥೯॥ ಇಂತು ಮೋಡಗಳ ಬಡ್ಡನ್ನು ಬಡೆದು ನುಗ್ಗಿ ಬರುತಲಿರುವ ಮಾರುತಿಯು,

ತಾರ್ಕ್ಷ್ಯಾಯಮಾಣೋ ಗಗನೇ ಬಭಾಸೇ ವಾಯುನಂದನಃ ।
ದಾರಯನ್ಮೇಘಬೃಂದಾನಿ ನಿಷ್ಪತಂಶ್ಚ ಪುನಃಪುನಃ ॥೧೦॥
ನದನ್ನಾದೇನ ಮಹತಾ ಮೇಘಸ್ವನ ಮಹಾಸ್ವನಃ ।
ಪ್ರವರಾನ್ರಾಕ್ಷಸಾನ್ ಹತ್ವಾ ನಾಮ ವಿಶ್ರಾವ್ಯ ಚಾತ್ಮನಃ ॥೧೧॥
ಆಕುಲಾಂ ನಗರೀಂ ಕೃತ್ವಾ ವ್ಯಥಯಿತ್ವಾ ಚ ರಾವಣಮ್ ।
ಅರ್ದಯಿತ್ವಾ ಬಲಂ ಘೋರಂ ವೈದೇಹೀಮಭಿವಾದ್ಯ ಚ ॥
ಆಜಗಾಮ ಮಹಾತೇಜಾಃ ಪುನರ್ಮಧ್ಯೇನ ಸಾಗರಮ್ ॥೧೨॥ ॥
ಪರ್ವತೇಂದ್ರಂ ಸುನಾಭಂ ಚ ಸಮುಪಸ್ಪೃಶ್ಯ ವೀರ್ಯವಾನ್ ।

---

ಪುನಃಪುನಃ - ಅಡಿಗಡಿಗೂ, ನಿಷ್ಪತಂಶ್ಚ - ಮೋಡಗಳಿಂದ ಹೊರಗೆಬರುತ್ತಲೂ, ಗಗನೇ - ಆಕಾಶದಲ್ಲಿ, ತಾರ್ಕ್ಷ್ಯಾಯಮಾಣಃ - ಗರುಡನಂತಿರುವವನಾಗಿ, ಬಭಾಸೇ - ಪ್ರಕಾಶಿಸುತಲಿದ್ದನು ॥೧೦॥ ಮಹಾತೇಜಾಃ - ಹೇರಳವಾದ ಪ್ರತಾಪವುಳ್ಳ ಹನುಮಂತನು, ಮೇಘಸ್ವನಮಹಾಸ್ವನಃ - ಮೇಘಗರ್ಜನೆಯಂತೆ ಗರ್ಜಿಸುತಲಿದ್ದ ನಾದಕಾರಣವೇ, ಮಹತಾ-ದೊಡ್ಡದಾದ, ನಾದೇನ-ಶಬ್ದದಿಂದ, ನರ್ದನ್-ಸಿಂಹನಾದವನ್ನು ಮಾಡುತ್ತಾ, ಪ್ರವರಾನ್-ಮಹಾ ಪ್ರಬಲರೆನಿಸಿದ್ದ, ರಾಕ್ಷಸಾನ್-ರಕ್ಕಸರನ್ನು, ಹತ್ವಾ-ಕೊಂದು, ಆತ್ಮನಃ-ತನ್ನ, ನಾಮ-ಹೆಸರನ್ನು, ವಿಶ್ರಾವ್ಯಚ - ಎಲ್ಲಕಡೆಗಳಲ್ಲಿಯೂ ಪ್ರಕಾಶಗೊಳಿಸಿ, ನಗರೀಂ- ಲಂಕಾಪುರವನ್ನು, ಆಕುಲಾಂ - ವ್ಯಥೆಪಡುತಲಿರುವುದನ್ನಾಗಿ, ಕೃತ್ವಾ - ಮಾಡಿ, ರಾವಣಂ-ರಾವಣನನ್ನು-ವ್ಯಥಯಿತ್ವಾಚ-ಸಂಕಟಪಡಿಸಿ, ಘೋರಂ - ಭಯಂಕರವೆನಿಸಿದ, ಬಲಂ-ಸೇನೆಯನ್ನು, ಅರ್ದಯಿತ್ವಾ, ಮರ್ದಿಸಿ, ವೈದೇಹೀಂ-ಜಾನಕಿಯನ್ನು, ಅಭಿವಾದ್ಯಚ- ನಮಸ್ಕಾರಮಾಡಿಯೂ, ಪುನಃ-ಮರಳಿ, ಸಾಗರಮಧ್ಯೇನ-ಸಮುದ್ರದ ಮಧ್ಯಮಾರ್ಗದಿಂದ, ಆಜಗಾಮ- ಹೊರಟು ಬಂದನು ॥೧೧, ೧೨॥ ವೀರ್ಯವಾನ್ - ಮಹಾಶೌರ್ಯಸಂಪನ್ನನಾದ ಹನುಮಂತನು, ಪರ್ವತೇಂದ್ರಂ - ಪರ್ವತಶ್ರೇಷ್ಠವೆನಿಸಿದ, ಸುನಾಭಂಚ-ಮೈನಾಕಪರ್ವತವನ್ನೂ, ಸಮುಪಸ್ಪೃಶ್ಯ - ಕರತಲದಿಂದ ತಡವಿ, ಜ್ಯಾಮುಕ್ತಃ - ಹೆದೆಯಿಂದ ಬಿಡಲ್ಪಟ್ಟ, ನಾರಾಚಇವ-ಬಾಣದಂತೆ, ಮಹಾವೇಗಃ- ಬಹುವೇಗವುಳ್ಳವನಾಗಿ, ಅಭ್ಯುಪಾಗತಃ-ಹೊರಟುಬರುತ್ತಿದ್ದನು ॥೧೩॥ ॥ ಹರಿಪುಂಗವಃ - ಕಪಿಪ್ರವರನಾದ, ಸಃ - ಆ ಮಾರುತಿಯು, ಕಿಂಚಿತ್-

---

ಮಹಾವೇಗಸಂಪನ್ನನಾಗಿ, ಗರುತ್ಮಂತನಂತೆ ಗಗನಮಾರ್ಗದಲ್ಲಿ ವಿರಾಜಿಸುತಲಿದ್ದನು ॥೧೦॥ ಅಪ್ರತಿಮ ವೀರನಾದ ಹನುಮಂತನು-ಪ್ರಬಲರಾಗಿದ್ದ ರಕ್ಕಸರನ್ನೆಲ್ಲ ಇರಿದು, ತನ್ನ ಮತ್ತು ತನ್ನ ಸ್ವಾಮಿಯ ಹೆಸರನ್ನು ಲಂಕಾನಗರದಲ್ಲಿ ಉದ್ಘೋಷಿಸಿ, ಪುರವನ್ನು ಉರುಹಿ, ಆಕುವಿಕ್ಕೊಳಗು ಮಾಡಿ, ಲಂಕಾನಾಥನು ಮಹತ್ತರವಾದ ವ್ಯಥೆಗೀಡಾಗುವಂತೆಸಗಿ, ಭಯಂಕರವೆನಿಸಿದ ರಕ್ಕಸರ ಪಡೆಯನ್ನೂ ಸದೆಬಡಿದು, ವಿದೇಹ ರಾಜನಂದಿನಿಯನ್ನು ಅಭಿವಂದಿಸಿ, ಮಹಾತೇಜಸ್ಸಂಪನ್ನನಾಗಿ, ಮೇಘಧ್ವನಿಯಂತೆ ಗಂಭೀರವಾಗಿ ಗರ್ಜಿಸುತ್ತಾ, ಸಾಗರದ ಮೇಲಣ ಮಧ್ಯಮಾರ್ಗದಿಂದ ಹೊರಟುಬಂದನು. ॥೧೧,೧೨,೧೩॥ ॥ ಹಾಗೆಯೇ ಮಹಾತೇಜಸ್ಸಂಪನ್ನನಾದ ಹನುಮನು-ಮಧ್ಯಮಾರ್ಗದಲ್ಲಿ ಕಂಡ ಮೈನಾಕನಿಗೆ ಲಂಕೆಯಲ್ಲಿ ನಡೆದ ಸಮಾಚಾರವನ್ನೆಲ್ಲ ಅರುಹಿ, ಕಿವಿಯವರೆಗೆ ಸೆಳೆದ ಮೌರ್ವಿಯಿಂದೆಸೆದ ಬಾಣದಂತೆ ಮಹಾವೇಗದಿಂದ ಬರುತ್ತಾ ॥೧೩॥ ॥ ಮತ್ತೆ ಸ್ವಲ್ಪದೂರದ ದಾರಿಯನ್ನು ದಾಟಿ

ಜ್ಯಾಮುಕ್ತ ಇವ ನಾರಾಚೋ ಮಹಾವೇಗೋ ಭ್ಯುಪಾಗತಃ ||೧೩|| ||
ಸ ಕಿಂಚಿ ದನುಸಂಪ್ರಾಪ್ತಃ ಸಮಾಲೋಕ್ಯ ಮಹಾಗಿರಿಮ್ |
ಮಹೇಂದ್ರಂ ಮೇಘ ಸಂಕಾಶಂ ನನಾದ ಹರಿಪುಂಗವಃ ||೧೪|| ||
ಸ ಪೂರಯಾಮಾಸ ಕಪಿ ರ್ದಿಶೋ ದಶ ಸಮಂತತಃ |
ನದ ನ್ನಾದೇನ ಮಹತಾ ಮೇಘಸ್ವನ ಮಹಾಸ್ವನಃ ||೧೫|| ||
ಸ ತಂ ದೇಶ ಮನುಪ್ರಾಪ್ತಃ ಸುಹೃದ್ದರ್ಶನ ಲಾಲಸಃ |
ನನಾದ ಹರಿಶಾರ್ದೂಲೋ ಲಾಂಗೂಲಂ ಚಾ ಪ್ಯಕಂಪಯತ್ ||೧೬|| ||
ತಸ್ಯ ನನಾದ್ಯಮಾನಸ್ಯ ಸುಪರ್ಣ ಚರಿತೇ ಪಥಿ |
ಫಲತೀ ವಾಸ್ಯ ಘೋಷೇಣ ಗಗನಂ ಸಾರ್ಕ ಮಂಡಲಮ್ ||೧೭|| ||

ಬಂದನೆಂದು ಸ್ಥಲವನ್ನು, ಅನುಸಂಪ್ರಾಪ್ತಃ - ಹೊಂದಿದವನಾಗಿ, ಮೇಘಸಂಕಾಶಂ-ಮೇಘಕ್ಕೆಣೆಯೆನಿಸಿ, ಮಹೇಂದ್ರಂ-ಮಹೇಂದ್ರವೆಂಬ, ಮಹಾಗಿರಿಂ-ಮಹಾಪರ್ವತವನ್ನು, ಸಮಾಲೋಕ್ಯ-ಚೆನ್ನಾಗಿನೋಡಿ, ನನಾದ - ಸಿಂಹನಾದವನ್ನು ಮಾಡಿದನು ||೧೪|| ಸಃ-ಆ, ಕಪಿಃ-ಹನುಮಂತನು, ಮೇಘಸ್ವನಮಹಾಸ್ವನಃ-ಮೇಘಧ್ವನಿಯಂತೆ ಧ್ವನಿಯುಳ್ಳವನಾದಕಾರಣವೇ, ಮಹತಾ- ಪ್ರಬಲವಾದ, ನಾದೇನ-ಧ್ವನಿಯಿಂದ ನದನ್ - ಶಬ್ದಮಾಡುತ್ತಿರುವನಾಗುತ್ತಾ, ದಶ-ಹತ್ತಾದ, ದಿಶಃ-ದಿಕ್ಕುಗಳನ್ನೂ, ಪೂರಯಾಮಾಸ-ತುಂಬಿದನು ||೧೫|| ಹರಿಶಾರ್ದೂಲಃ-ವಾನರೋತ್ತಮನಾದ, ಸಃ-ಆ ಹನುಮಂತನು, ತಂ-ಆ, ದೇಶಂ-ಸ್ಥಲವನ್ನು, ಅನುಪ್ರಾಪ್ತಃ-ಹೊಂದಿದವನಾಗಿ, ಸುಹೃದ್ದರ್ಶನಲಾಲಸಃ - ಮಿತ್ರಸಂದರ್ಶನದ ಕುತೂಹಲವುಳ್ಳವನಾಗುತ್ತಾ, ನನಾದ- ಗರ್ಜಿಸಿದನು, ಲಾಂಗೂಲಂಚ - ಬಾಲವನ್ನೂ, ಅಕಂಪಯತ್-ಅಲುಗಿಸಿದನು ||೧೬|| || ಸುಪರ್ಣಚರಿತೇ - ಗರುತ್ಮಂತನಿಂದ ಸಂಚರಿಸಲ್ಪಟ್ಟ, ಪಥಿ-ಆಕಾಶಮಾರ್ಗದಲ್ಲಿ, ನನಾದ್ಯಮಾನಸ್ಯ - ವಿಶೇಷವಾಗಿ ಗರ್ಜಿಸುತಲಿರುವ, ತಸ್ಯ-ಆ, ಅಸ್ಯ - ಹನುಮಂತನ. ಘೋಷೇಣ -ಧ್ವನಿಯಿಂದ, ಸಾರ್ಕಮಂಡಲಂ-ಸೂರ್ಯಮಂಡಲದಿಂದ ಸಹಿತವಾದ, ಗಗನಂ- ಆಕಾಶವು, ಫಲತೀವ-ಸಿಡಿದು ಹೋಗುವಂತಿದ್ದಿತು ||೧೭|| || ಮಹಾಬಲಾಃ - ಹೇರಳವಾದ ಬಲವುಳ್ಳ, ಶೂರಾಃ - ಪರಾಕ್ರಮಶಾಲಿಗಳಾದ, ಯೇತು - ಯಾವ ವಾನರರಾದರೆ, ವಾಯುಪುತ್ರದಿದೃಕ್ಷವಃ - ಹನುಮಂತನನ್ನು ನೋಡಬೇಕೆಂಬ ಬಯಕೆಯುಳ್ಳವರಾಗಿ, ಸಮುದ್ರಸ್ಯ-ಕಡಲಿನ, ಉತ್ತರೆ- ಬಡಗಲಕಡೆಯದಾದ, ತೀರೆ-ದಡದಲ್ಲಿ, ತತ್ರ-

ಬಂದಾನೊಂದು ಪ್ರದೇಶಕ್ಕೆ ಬರಲವಲ್ಲಿಗೆ, ಮುಗಿಲನ್ನು ಮುಟ್ಟುತಲಿರುವ ಮಹೇಂದ್ರಪರ್ವತವನ್ನುಕಂಡು, ಹರ್ಷಪರವಶನಾಗಿ, ಸಿಂಹನಾದವನ್ನು ಮಾಡಿದನು ||೧೪|| ಮಹಾಮೇಘದಂತೆ ಗರ್ಜಿಸುತ್ತಿರುವ ವೀರಹನುಮನ ಸಿಂಹನಾದವು ಹತ್ತುದಿಕ್ಕುಗಳಲ್ಲಿಯೂ ವ್ಯಾಪಿಸಿತು||೧೫|| ಮಹೇಂದ್ರಪರ್ವತದ ಸಮೀಪಕ್ಕೆ ಬಂದನು. ಮಹೇಂದ್ರಪರ್ವತದಲ್ಲಿ-ತನ್ನಬರವನ್ನೇ ಇದಿರುನೋಡುತಲಿರುವಜಾಂಬವಂತನೇಮೊದಲಾದಮಿತ್ರರನ್ನೆಲ್ಲ ನೋಡಬೇಕೆಂಬುವ ಹತ್ತರವಾದ ಕುತೂಹಲದಿಂದ ಮರಳಿ ಸಿಂಹಗರ್ಜನೆಯನ್ನು ಮಾಡಿದುದಲ್ಲದೆ, ತನ್ನ ಬಾಲವನ್ನೂ ವಿನೋದದಿಂದಅಲ್ಲಾಡಿಸಿದನು||೧೬|| ಪಕ್ಷಿಗಳು ಸಂಚರಿಸುವ ಗಗನಮಾರ್ಗದಲ್ಲಿಗರ್ಜಿಸುತಲಿರುವಮಾರುತಿಯಧ್ವನಿಯಿಂದ ಸೂರ್ಯಮಂಡಲದಿಂದ ಸಹಿತವಾದ ನಭೋಮಂಡಲವುಬಿಡೆದುಹೋಗುವಂತಿದ್ದಿತು||೧೭||ಆಂಜನೇಯನು ಲಂಕೆಗೆತೆರಳಿದಮೇಲೆ ಮಹಾಶೂರ

ಯೇತು ತತ್ರೋತ್ತರೇ ತೀರೆ ಸಮುದ್ರಸ್ಯ ಮಹಾಬಲಾಃ ।
ಪೂರ್ವಂ ಸಂವಿಷ್ಠಾ ಶೂರಾ ವಾಯುಪುತ್ರ ದಿದೃಕ್ಷವಃ ॥೧೮॥
ಮಹತೋ ವಾಯು ನುನ್ನಸ್ಯ ತೋಯದಸ್ಯೇವ ಗರ್ಜಿತಮ್ ।
ಶುಶ್ರುವು ಸ್ತೇ ತಥಾ ಘೋಷ ಮೂರುವೇಗಾ ದ್ಧನೂಮತಃ ॥೧೯॥
ತೇ ದೀನಮನಸ ಸ್ಸರ್ವೇ ಶುಶ್ರುವುಃ ಕಾನನೌಕಸಃ ।
ವಾನರೇಂದ್ರಸ್ಯ ನಿರ್ಘೋಷಂ ಪರ್ಜನ್ಯ ನಿನದೋಪಮಮ್ ॥೨೦॥
ನಿಶಮ್ಯ ನದತೋ ನಾದಂ ವಾನರಾ ಸ್ತೇ ಸಮಂತತಃ ।
ಬಭೂವು ರುತ್ಸುಕಾ ಸ್ಸರ್ವೇ ಸುಹೃದ್ದರ್ಶನ ಕಾಂಕ್ಷಿಣಃ ॥೨೧॥
ಜಾಂಬವಾನ್ ಸ ಹರಿಶ್ರೇಷ್ಠಃ ಪ್ರೀತಿಸಂಹೃಷ್ಟ ಮಾನಸಃ ।

ಆ ಮಹೇಂದ್ರದೊಳಗೆ, ಪೂರ್ವಂ - ಮೊದಲು, ಸಂವಿಷ್ಠಾಃ-ನೆಲೆಗೊಂಡಿದ್ದರೋ, ತೇ-ಅವರೆಲ್ಲರೂ, ತದಾ-ಆಗ, ವಾಯುನುನ್ನಸ್ಯ-ವಾಯುವಿನಿಂದ ಪ್ರೇರಿಸಲ್ಪಟ್ಟ, ಮಹತಃ -ದೊಡ್ಡದಾದ, ತೋಯದಸ್ಯ-ಮೇಘದ, ಗರ್ಜಿತಮಿವ- ಗುಡುಗಿನಂತೆ, ಊರುವೇಗಂ - ತೊಡೆಗಳವೇಗವುಳ್ಳ, ಹನೂಮತಃ-ಆಂಜನೇಯನ, ಘೋಷಂ-ಧ್ವನಿಯನ್ನು, ಶುಶ್ರುವುಃ-ಕೇಳಿದರು ॥೧೮, ೧೯॥ ದೀನಮನಸಃ - ಉತ್ಸಾಹವಿಲ್ಲದ ಮನಸ್ಸುಳ್ಳವರಾಗಿದ್ದ, ತೇ-ಆ, ವನೌಕಸಃ - ವಾನರರು, ಸರ್ವೇ-ಎಲ್ಲರೂ, ಪರ್ಜನ್ಯನಿನದೋಪಮಂ-ಮೇಘಧ್ವನಿಗೆಣೆಯಾದ, ವಾನರೇಂದ್ರಸ್ಯ - ಕಪಿವರನ, ನಿರ್ಘೋಷಂ- ಧ್ವನಿಯನ್ನು, ಶುಶ್ರುವುಃ-ಕೇಳಿದರು ॥೨೦॥ ತೇ-ಆ, ಸರ್ವೇ - ಸಮಸ್ತರಾದ, ವಾನರಾಃ - ಕಪಿಗಳು, ಸುಹೃದ್ದರ್ಶನಕಾಂಕ್ಷಿಣಃ-ಮಿತ್ರನನ್ನು ನೋಡಬೇಕೆಂಬ ತವಕವುಳ್ಳವರಾದ ಕಾರಣವೇ, ನದತಃ-ಧ್ವನಿಮಾಡುತಲಿರುವ ಮಾರುತಿಯ, ಸಮಂತತಃ -ಎಲ್ಲಕಡೆಗಳಲ್ಲಿಯೂ ಹರಡುತಲಿರುವ, ನಾದಂ - ಧ್ವನಿಯನ್ನು, ನಿಶಮ್ಯ-ಕೇಳಿ, ಉತ್ಸುಕಾಃ- ದರ್ಶನದಲ್ಲಿ ಅತ್ಯಾಶೆಯುಳ್ಳವರು, ಬಭೂವುಃ - ಆಗಿದ್ದರು ॥೨೧॥ ಸಃ-ಆ, ಜಾಂಬವಾನ್-ಜಾಂಬವಂತನೆಂಬ, ಹರಿಶ್ರೇಷ್ಠಃ-ಕಪಿನಾಯಕನು, ಪ್ರೀತಿಸಂಹೃಷ್ಟಮಾನಸಃ - ಹನುಮದ್ದರ್ಶನ ಕುತೂಹಲದಿಂದ ಅರಳಿದ ಮನಸ್ಸುಳ್ಳವನಾಗಿ, ಸರ್ವಾನ್ - ಸಮಸ್ತರಾದ, ಹರೀನ್ - ವಾನರರನ್ನು,

ರಾದ ಅಂಗದಜಾಂಬವಂತರೇ ಮೊದಲಾದವರು-ಕುಶಲವೃತ್ತಾಂತವನ್ನು ತರುವನೆಂದು ನಿರೀಕ್ಷಿಸುತಲಿದ್ದರಷ್ಟೆ ? ದಕ್ಷಿಣ ಸಮುದ್ರದ ಉತ್ತರತೀರದಲ್ಲಿದ್ದ ಆ ವಾನರರಿಗೆ ಮಹತ್ತರವಾದ ವಾಯುವೇಗದಿಂದ ಬಂದ ಮೇಘಗರ್ಜನೆಯಂತಿರುವ ಹನುಮನ ಸಿಂಹಗರ್ಜನೆಯ ಶಬ್ದವೂ, ಅವನು ಹಾರಿಬರುವ ವೇಗದಲ್ಲಿನ ತೊಡೆಗಳ ಶಬ್ದವೂ ಕೇಳಬಂದಿತು ॥೧೮, ೧೯॥ ಅದುವರೆಗೆ ವನೌಕಸರೆಲ್ಲರೂ ಮಾರುತಿಯು ಬರಲಿಲ್ಲವಲ್ಲಾ ಎಂದು ಬಹುಖಿನ್ನರಾಗಿ ಪೇಚಾಡುತಲಿದ್ದರು. ಅಂಥವರಿಗೆ ಮೇಘಗರ್ಜನೆಯಂತಿರುವ ಹನುಮನ ಸಿಂಹನಾದವು ಬಹಳವಾಗಿ ಹರ್ಷಗೊಳಿಸಿತು ॥೨೦॥ ಆಧ್ವನಿಯನ್ನು ಕೇಳಿದ ಕೂಡಲೆ ವಾನರರೆಲ್ಲರೂ ದಿಗ್ಭ್ರಮೆಯನ್ನು ಹೊಂದಿದರು, ಸುತ್ತಲೂ ಅತ್ಯಾತುರದಿಂದ ತಿರುತಿರುಗಿ ನೋಡಿದರು, ಮಿತ್ರನನ್ನು ಎಂದಿಗೆ ಕಾಣುವೆವೋ ಎಂದು ತವಕದಿಂದ ಉದ್ಗ್ರೀವರಾಗಿ ಯಾವ ದೆಸೆಯಿಂದ ಬಂದಿಳಿವನೋ ಎಂದು ನಿರೀಕ್ಷಿಸುತಲಿದ್ದರು ॥೨೧॥ ಹನುಮನ ಬರವು ಸುಳಿದ ಕೂಡಲೆ ಕಪಿನಾಯಕನಾದ ಜಾಂಬವಂತನು - ವಾನರರನ್ನೆಲ್ಲ ತನ್ನ ಬಳಿಗೆ ಕರೆದು,

ಹರ್ಷೇ ಣಾಭ್ಯೂರ್ಧ್ವ ಮಾಣೋಽಸೌ ರಮ್ಯೇ ಪರ್ವತ ನಿರ್ಝರೇ ।
ಛಿನ್ನಪಕ್ಷ ಇವಾಕಾಶಾ ತ್ಪಪಾತ ಧರಣೀಧರಃ ॥೩೦॥ ॥
ತತ ಸ್ತೇ ಪ್ರೀತಮನಸಃ ಸರ್ವೇ ವಾನರ ಪುಂಗವಾಃ ।
ಹನೂಮಂತಂ ಮಹಾತ್ಮಾನಂ ಪರಿವಾರ್ಯೋಪ ತಸ್ಥಿರೇ ॥೩೧॥ ॥
ಪರಿವಾರ್ಯ ಚ ತೇ ಸರ್ವೇ ಪರಾಂ ಪ್ರೀತಿ ಮುಪಾಗತಾಃ ॥೩೨॥
ಪ್ರಹೃಷ್ಟ ವದನಾ ಸ್ಸರ್ವೇ ಹನುಮಂತ ಮುಪಾಗತಂ ।
ಉಪಾಯನಾನಿ ಚಾದಾಯ ಮೂಲಾನಿ ಚ ಫಲಾನಿ ಚ ॥೩೩॥
ಪ್ರತ್ಯರ್ಚ್ಯಯನ್ ಹರಿಶ್ರೇಷ್ಠಂ ಹರಯೋ ಮಾರುತಾತ್ಮಜಮ್ ॥೩೪॥ ॥
ಹನುಮಾಂ ಸ್ತು ಗುರೂ ನ್ವೃದ್ಧಾ ನ್ಜಾಂಬವ ತ್ಪ್ರಮುಖಾಂ ಸ್ತದಾ॥

ಕತ್ತರಿಸಿದ ರೆಕ್ಕೆಯುಳ್ಳ, ಧರಣೀಧರಇವ-ಪರ್ವತದ ಹಾಗೆ, ಆಕಾಶಾತ್ - ಆಗಸದ ದೆಸೆಯಿಂದ, ನಿಪಪಾತ-ಇಳಿದನು ॥೩೦॥ ತತಃ - ತರುವಾಯ, ಸರ್ವೆ - ಸಮಸ್ತರಾದ, ವಾನರಪುಂಗವಾಃ -ವಾನರ ಶ್ರೇಷ್ಠರು, ಪ್ರೀತಮನಸಃ - ಸಂತುಷ್ಟಾಂತರಂಗರಾಗಿ, ಮಹಾತ್ಮಾನಂ-ಮಹಾನುಭಾವನಾದ, ಹನುಮಂತಂ - ಮಾರುತಿಯನ್ನು; ಪರಿವಾರ್ಯ - ಆವರಿಸಿಕೊಂಡು, ಉಪತಸ್ಥಿರೆ-ಸೇವಿಸಿದರು, ತೇಸರ್ವೆ-ಆವಾನರರೆಲ್ಲರೂ, ಪರಿವಾರ್ಯ ಸುತ್ತಿಕೊಂಡೂ, ಪರಾಂ - ಎಲೆಯಿಲ್ಲದ, ಪ್ರೀತಿಂ - ಸಂತೋಷವನ್ನು, ಉಪಾಗತಾಃ - ಹೊಂದಿದರು ॥೩೧, ೩೨॥ ಸರ್ವೆ - ಸಮಸ್ತರಾದ, ಹರಯಃ - ವಾನರರು, ಪ್ರಹೃಷ್ಟವದನಾಃ-ಪ್ರಸನ್ನಮುಖರಾಗಿ, ಅರೋಗಂ - ರೋಗವಿಲ್ಲದವನಾಗಿ, ಉಪಾಗತಂ - ಬಂದಿರುವ, ಹರಿಶ್ರೇಷ್ಠಂ - ಕಪಿವರನೆನಿಸಿದ, ತಂ - ಆ, ಮಾರುತಾತ್ಮಜಂ - ಆಂಜನೇಯನನ್ನು, ಮೂಲಾನಿಚ-ಗೆಣಸುಗಳನ್ನೂ, ಫಲಾನಿಚ - ಹಣ್ಣುಗಳನ್ನೂ, ಉಪಾಯನಾನಿ - ಕಾಣಿಕೆಗಳನ್ನಾಗಿ, ಆದಾಯಚ - ತೆಗೆದುಕೊಂಡು ಬಂದು, ಪ್ರತ್ಯರ್ಚಯನ್ - ಗೌರವಿಸಿದರು ॥೩೩, ೩೪॥ ಹನುಮಾನ್ - ಹನುಮಂತನೆಂಬ, ಸಃ - ಆ, ಮಹಾಕಪಿಃ - ಆಂಜನೇಯನು, ತದಾ - ಆಗ, ಗುರೂನ್ - ಶ್ರೇಷ್ಠರಾದ, ವೃದ್ಧಾನ್ - ಮುದುಕರಾಗಿರುವ, ಜಾಂಬವತ್ಪ್ರಮುಖಾನ್ - ಜಾಂಬವನೇ ಮೊದಲಾಗಿರತಕ್ಕ ವಾನರರನ್ನೂ, ಕುಮಾರಂ - ಚಿಕ್ಕವನಾದ, ಅಂಗದಂಚೈವ - ಅಂಗದನನ್ನೂ, ಅವಂದತ - ನಮಸ್ಕರಿಸಿದನು ॥೩೫॥ ತಾಭ್ಯಾಂ -

ಪರ್ವತದಲ್ಲಿ ರೆಕ್ಕೆಯು ಕತ್ತರಿಸಿಹೋಗಲು, ಆಗಸದಿಂದ ಕೆಳಗೆಬೀಳುವಗಿರಿಯೋ ಎಂಬಂತೆ ಇಳಿದನು ॥೩೦॥ ಹಾಗೆ ಇಳಿದ ಹನುಮನನ್ನು ನೋಡಿದ ಕೂಡಲೆ, ವಾನರೋತ್ತಮರೆಲ್ಲರೂ ಅಪರಿಮಿತ ಸಂತೋಷ ಭರಿತರಾಗಿ,ಮಹಾನುಭಾವನಾದ ಆಂಜನೇಯನನ್ನು ಸುತ್ತುಗಟ್ಟಿನಿಂತು, ಆನಂದ ಪರವಶರಾಗುತ್ತಿದ್ದರು ॥೩೧,೩೨॥ ಎಲ್ಲರಮುಖದಲ್ಲಿಯೂ ಸಂತೋಷವು ಉಕ್ಕುತಲಿದ್ದಿತು, ಶತ್ರುನಗರಿಗೆ ಹೋಗಿದ್ದು, ಆರೋಗ್ಯಭಾಗ್ಯದಿಂದೊಡಗೂಡಿ, ಸುಖವಾಗಿ ಬಂದಿರುವ ಮಾರುತಿಯನ್ನು ಕಣ್ಣಾರನೋಡಿ ಆನಂದಿಸಿ. ಆ ವನದಲ್ಲಿನ ಕಂದ ಮೂಲ ಫಲಗಳನ್ನುತಂದು, ಹನುಮನಿಗೆ ಉಪಹಾರವಾಗಿ ಒಪ್ಪಿಸಿ,ಆತನನ್ನುಬಹಳವಾಗಿ ಗೌರವಿಸಿ, ಆದರಿಸಿ, ಉಪಚರಿಸಿದರು ॥೩೩॥ ತರುವಾಯ ಮಾರುತಿಯು-ವೃದ್ಧರಾಗಿಯೂ ಗುರುಗಳಾಗಿಯೂ ಇರುವ ಜಾಂಬವನೇ ಮೊದಲಾದವರನ್ನೂ, ವಾಲಿಪುತ್ರನಾಗಿ ಯುವರಾಜನೆನಿಸಿರುವ ಅಂಗದ ಮುಂತಾದವರನ್ನೂ ಮರ್ಯಾದೆಯನ್ನನುಸರಿಸಿ ವಂದನಾದಿಗಳನ್ನು

ಕುಮಾರ ಮಂಗದಂ ಚೈವ ಸೋಽವಂದತ ಮಹಾಕಪಿಃ ॥೩೪॥ ॥
ಸ ತಾಭ್ಯಾಂ ಪೂಜಿತಃ ಪೂಜ್ಯಃ ಕಪಿಭಿಶ್ಚ ಪ್ರಸಾದಿತಃ ॥
ದೃಷ್ಟಾ ಸೀತೇತಿ ವಿಕ್ರಾಂತ ಸ್ಸಂಕ್ಷೇಪೇಣ ನ್ಯವೇದಯತ್ ॥೩೫॥ ॥
ನಿಷಸಾದ ಚ ಹಸ್ತೇನ ಗೃಹೀತ್ವಾ ವಾಲಿನ ಸ್ಸುತಂ ॥
ರಮಣೀಯೆ ವನೋದ್ದೇಶೆ ಮಹೇಂದ್ರಸ್ಯ ಗಿರೇ ಸ್ತದಾ ।
ಹನುಮಾ ನಬ್ರವೀ ದ್ಧೃಷ್ಟ ಸ್ತದಾ ತಾ ನ್ವಾನರರ್ಷಭಾನ್ ॥೩೬॥
ಅಶೋಕ ವನಿಕಾ ಸಂಸ್ಥಾ ದೃಷ್ಟಾ ಸಾ ಜನಕಾತ್ಮಜಾ ।
ರಕ್ಷ್ಯಮಾಣಾ ಸುಘೋರಾಭೀ ರಾಕ್ಷಸೀಭಿ ರನಿಂದಿತಾ ॥೩೭॥
ಏಕವೇಣೀ ಧರಾ ಬಾಲಾ ರಾಮದರ್ಶನ ಲಾಲಸಾ ।

---

ಜಾಂಬವದಂಗದರಿಂದ, ಪೂಜಿತಃ - ಗೌರವಿಸಲ್ಪಟ್ಟ, ಪೂಜ್ಯಃ - ಎಲ್ಲರಿಗೂ ಪೂಜ್ಯನಾದ, ಕಪಿಭಿಶ್ಚ - ಇತರವಾನರರಿಂದ, ಪ್ರಸಾದಿತಃ - ಅನುಗ್ರಹಗೊಳಿಸಲ್ಪಟ್ಟವನಾದ, ವಿಕ್ರಾಂತಃ - ಪರಾಕ್ರಮಶಾಲಿಯೆನಿಸಿರುವ, ಸಃ - ಆ ಹನುಮನು, ಸೀತಾದೃಷ್ಟೇತಿ - ಸೀತೆಯು ನೋಡಲ್ಪಟ್ಟಳೆಂದು, ಸಂಕ್ಷೇಪೇಣ - ಸಂಗ್ರಹದಿಂದ, ನ್ಯವೇದಯತ್ - ಅರಿಕೆ ಮಾಡಿದನು ॥೩೫॥ ತದಾ - ಆಗ, ಹನುಮಾನ್-ಆಂಜನೇಯನು, ರಮಣೀಯೆ - ಮನೋಹರವಾಗಿರುವ, ಮಹೇಂದ್ರಸ್ಯ - ಮಹೇಂದ್ರವೆಂಬ, ಗಿರೇಃ - ಪರ್ವತದ ವನೋದ್ದೇಶೆ - ವನಪ್ರದೇಶದಲ್ಲಿ, ವಾಲಿನಃ - ವಾಲಿಯು, ಸುತಂ - ಪುತ್ರನಾದ ಅಂಗದನನ್ನು, ಹಸ್ತೇನ - ಕೈಯಿಂದ, ಗೃಹೀತ್ವಾ - ಹಿಡಿದುಕೊಂಡು, ನಿಷಸಾದಚ - ಕುಳಿತುಕೊಂಡನು, ತದಾ - ಆಗ, ಹೃಷ್ಟಃ - ಸಂತೋಷಪಟ್ಟವನಾಗಿ, ತಾನ್ - ಆ ವಾನರರ್ಷಭಾನ್ - ವಾನರ ಶ್ರೇಷ್ಠರನ್ನು ಕುರಿತು, ಅಬ್ರವೀತ್ - ಹೇಳತೊಡಗಿದನು, ॥೩೬॥ ೩೭॥

ಅಶೋಕವನಿಕಾಸಂಸ್ಥಾ - ಅಶೋಕವನದಲ್ಲಿ ನೆಲೆಗೊಂಡಿರುವ, ಸುಘೋರಾಭಿಃ - ಮಹಾಭಯಂ

---

ಒಪ್ಪಿಸಿದನು॥೩೪॥ಆ ಮೇಲೆ-ಮಹಾಪರಾಕ್ರಮಶಾಲಿಯೆನಿಸಿ, ಎಲ್ಲರ ಗೌರವಕ್ಕೂ ಪಾತ್ರನಾಗಿ ಪೂಜ್ಯನೆನಿಸಿರುವ ಆಂಜನೇಯನು-ಜಾಂಬವಾಂಗದರಿಂದ ಆದರಿಸಲ್ಪಟು, ಇತರ ವಾನರರಿಗೆಲ್ಲ ಅವರವರ ಯೋಗ್ಯತಾನುಸಾರವಾಗಿ ಮರ್ಯಾದೆಯನ್ನು ತೋರಿದನು ಆಹಿಂದೆ „ಎಲೈ ವಾನರೋತ್ತಮನೇ ? ನೀನು ಹೋಗಿ ಬಂದ ಕಾರ್ಯವೇನಾಯಿತು ?" ಎಂದ ಅವರ ಪ್ರಶ್ನೆಯನ್ನು ಕೇಳಿ, ಮೊದಲು - ಸೀತೆಯು ಎಂದು ಹೇಳಿ, ಮುಂದಿನ ಮಾತನ್ನು ಹೇಳುವುದರೊಳಗಾಗಿ, ಮುಂದೇನ ಹೇಳುವನೋ ಎಂದು ಕಪಿವರರಿಗೆ ಎಷ್ಟು ಕಳವಳವುಂಟಾಗುವುದೋ ಎಂದು ಭಾವಿಸಿ, ಹಾಗೆ ಹೇಳದೆ, „ಕಂಡೆನು ಸೀತೆ ಯನ್ನು" ಎಂದೇ ಸಂಕ್ಷೇಪವಾಗಿ ತಾನು ಹೋಗಿ ಬಂದ ಸುದ್ದಿಯನ್ನು ತಿಳಿಸಿದನು ॥೩೫॥ ಹಾಗೆಯೇ ಯುವರಾಜನಾದ ಅಂಗದನ ಬಲಗೈಯ್ಯನ್ನು ತನ್ನ ಕರತಲದಿಂದ ಹಿಡಿದು, ಮಹೇಂದ್ರಪರ್ವತದ ಮನೋಹರವಾಗಿರುವ ಒಂದಾನೊಂದು ವನಪ್ರದೇಶದಲ್ಲಿ ಕುಳ್ಳಿರಿಸಿ, ಬಹು ಸಂತುಷ್ಟಾಂತರಂಗನಾದ ಹನುಮಂತನು-ಎಲ್ಲವಾನರರನ್ನೂ ಕುರಿತು ತನ್ನ ಗಮನಾಗಮನದ ಸಮಾಚಾರವನ್ನು ವಿವರವಾಗಿ ಹೇಳತೊಡಗಿದನು ॥೩೬॥, ೩೭॥ ಎಲೈವಾನರೋತ್ತಮರೇ ! ಜಾನಕಿಯು-ಲಂಕಾನಗರದ ನಡುವೆ ಇರುವ ಅಶೋಕವನದಲ್ಲಿ ಇದ್ದಾಳೆ, ಭಯಂಕರವೆನಿಸಿರುವ

ಉಪವಾಸ ಪರಿಶ್ರಾಂತಾ ಜಟಿಲಾ ಮಲಿನಾ ಕೃಶಾ ॥೪೯॥
ತತೋ ದೃಷ್ಟೇತಿ ವಚನಂ ಮಹಾರ್ಥ ಮಮೃತೋಪಮಮ್ ।
ನಿಶಮ್ಯ ಮಾರುತೇ ಸ್ಸರ್ವೇ ಮುದಿತಾ ವಾನರಾ ಭವನ್ ॥೫೦॥
ಕ್ಷ್ವೇಳಂತ್ಯನ್ಯೇ ನದಂತನ್ಯೇ ಗರ್ಜಂತ್ಯನ್ಯೇ ಮಹಾಬಲಾಃ ।
ಚಕ್ರುಃ ಕಿಲಕಿಲಾ ಮನ್ಯೇ ಪ್ರತಿಗರ್ಜಂತಿ ಚಾ ಪರೇ ॥೫೧॥

ಕೆರಿಯರಾದ, ರಾಕ್ಷಸೀಭಿಃ - ರಕ್ಕಸಿಯರಿಂದ, ರಕ್ಷ್ಯಮಾಣಾ - ಸಂರಕ್ಷಿಸಲ್ಪಡುತಲಿರುವ, ಅನಿಂದಿತಾ - ದೋಷಲೇಶವಿಲ್ಲದ, ಏಕವೇಣೀಧರಾ - ಒಂದೆಳೆಯ ಜಡೆಯುಳ್ಳ, ಬಾಲಾ -ಚಿಕ್ಕವಯಸ್ಸಿನ, ರಾಮದರ್ಶನಲಾಲಸಾ - ಶ್ರೀ ರಾಮನ ಸಂದರ್ಶನದಲ್ಲಿಯೇ ಆಸಕ್ತಳಾಗಿರುವ, ಉಪವಾಸ ಪರಿಶ್ರಾಂತಾ - ಆಹಾರವಿಲ್ಲದೆ ಬಳಲಿರುವ, ಜಟಿಲಾ - ಜಡೆಯನ್ನುಳ್ಳ, ಮಲಿನಾ-ಮಾಸಿದ ಶರೀರವುಳ್ಳ, ಕೃಶಾ - ನವೆದುಹೋಗಿರುವ, ಸಾ - ಆ, ಜನಕಾತ್ಮಜಾ - ಜಾನಕಿಯು, (ಮಯಾ - ನನ್ನಿಂದ), ದೃಷ್ಟಾ - ನೋಡಲ್ಪಟ್ಟಳು ॥ ॥೪೮-೪೯॥ ತತಃ - ಆ ಹಿಂದೆ, ವಾನರಾಃ - ಕಪಿವರರು, ಸರ್ವೇ-ಎಲ್ಲರೂ, ಮಹಾರ್ಥಂ - ಮಹತ್ತರವಾದ ಪ್ರಯೋಜನವುಳ್ಳ, ಅಮೃತೋಪಮಂ - ಅಮೃತ ಸಮಾನವಾದ, ಮಾರುತೇಃ - ವಾಯುನಂದನನ, ದೃಷ್ಟೇತಿ - ನೋಡಲ್ಪಟ್ಟಳು ಎಂಬ, ವಚನಂ - ನುಡಿಯನ್ನು, ನಿಶಮ್ಯ - ಕೇಳಿ, ಮುದಿತಾಃ - ಆನಂದವುಳ್ಳವರು ಭವನ್ (ಅಭವನ್) ಆದರು ॥೫೦॥ ಮಹಾಬಲಾಃ - ಮಹಾಪರಾಕ್ರಮವುಳ್ಳ, ಅನ್ಯೇ - ಮತ್ತೆ ಕೆಲವರಾದ ವಾನರರು, ಕ್ಷ್ವೇಳಂತಿ - ಸಿಂಹನಾದವನ್ನು ಮಾಡುತಲಿದ್ದರು, ಅನ್ಯೇ - ಬೇರೆಕೆಲವರು, ನದಂತಿ - ಗರ್ಜಿಸುತಲಿದ್ದರು, ಅನ್ಯೇ - ಇನ್ನು ಕೆಲವರು, ಗರ್ಜಂತಿ - ಅಟ್ಟಹಾಸವನ್ನು ಮಾಡುತಲಿದ್ದರು ಅನ್ಯೇ - ಅಪರರು, ಕಿಲಕಿಲಾಶಬ್ದಂ - ಕೋಲಾಹಲಧ್ವನಿಯನ್ನು, ಚಕ್ರುಃ - ಮಾಡುತಲಿದ್ದರು, ಅಪರೇ - ಇತರರು, ಪ್ರತಿಗರ್ಜಂತಿಚ - ಪ್ರತಿಧ್ವನಿ ಬರುವಹಾಗೆ ಹರ್ಷಧ್ವನಿಯನ್ನು ಮಾಡುತಲಿದ್ದರು ॥೫೧॥ ಕೇಚಿತ್ - ಕೆಲವುಮಂದಿಯಾದ, ಕಪಿಕುಂಜರಾಃ - ವಾನರಶ್ರೇಷ್ಠರು, ಪ್ರಹೃಷ್ಟಾಃ -ಬಹಳವಾಗಿ

ರಾಕ್ಷಸವನಿತೆಯರು ಆಕೆಯನ್ನು ಆವರಿಸಿಕೊಂಡು, ಕಾವಲಾಗಿ ಕಾಪಾಡುತಲಿದ್ದಾರೆ, ಆಕೆ ಹಾನುಭಾವಗಳಲ್ಲಿ ಯಾವುದೊಂದು ದೋಷಲೇಶವೂ ಇಲ್ಲ. ಎಣ್ಣೆಯನ್ನುಹಚ್ಚಿ ಬಾಚುವುದೇ ಮೊದಲಾದ ಸಂಸ್ಕಾರವಿಲ್ಲದಿರುವುದರಿಂದ ತಲೆಯಕೂದಲೆಲ್ಲ ಒಂದೇಜಡೆಯಾಗಿದೆ, ಇನ್ನೂ ಚಿಕ್ಕವಯಸ್ಸಿನ ಸಾಧ್ವಿಯಾದುದರಿಂದ ಏನುಮಾಡಬೇಕೆಂಬುದನ್ನೂ ಅರಿಯಲಾರದೆ, ಶ್ರೀ ರಾಮನನ್ನು ಎಂದಿಗೆ ಕಾಣುವೆನೋ ಎಂದು ಹಗಲಿರುಳೂ ಚಿಂತಿಸುತಲಿರುವಳು, ಮತ್ತು ಇದೇಕೊರಗಿನಿಂದ ನಿದ್ರಾಹಾರಗಳಿಲ್ಲದೆ ಕೃಶಿಸಿ ಹೋಗಿದ್ದಾಳೆ, ಸ್ನಾನಾದಿಗಳಿಲ್ಲದಿರುವುದರಿಂದ ಬಹುಮಲಿನ ಶರೀರಳಾಗಿದ್ದಾಳೆ. ಈ ದಶೆಯಲ್ಲಿರುವ ಸೀತೆಯನ್ನು ನೋಡಿದೆನು ॥೪೮,೪೯॥ ಎನಲು, ಮಹತ್ತರವಾದ ಲಾಭರೂಪವಾಗಿ, ಸೀತೆಯನ್ನುನೋಡಿದೆನು, ಎಂಬ ಅಮೃತಮಯವಾದ ಅಕ್ಷರಗಳು ಕಿವಿಗಳಿಗೆ ಹೊಕ್ಕಕೂಡಲೆ ವಾನರರೆಲ್ಲರೂ ಪೇಳಲಸದಳವಾದ ಹರ್ಷನಿರ್ಭರರಾದರು. ॥೫೦॥ ಮತ್ತು - ಕೆಲವರು ಸಿಂಹದಂತೆ ಗರ್ಜಿಸಿದರು, ಮತ್ತೆ ಕೆಲವರು ಚೀರುಕೀರುಗಳೆಂಬ ಅವ್ಯಕ್ತ ಧ್ವನಿಗಳನ್ನು ಮಾಡಿದರು, ಇನ್ನು ಕೆಲವರು ಕಿಲಕಿಲವೆಂಬ ಕೋಲಾಹಲವನ್ನೂ, ಬೇರೆ ಕೆಲವರು ಅಟ್ಟಹಾಸಗಳನ್ನೂ ಮಾಡುತಲಿದ್ದರು ॥೫೧॥ ಅನ್ಯರು ಕೆಲವರು ತಮ್ಮ ಬಾಲಗಳನ್ನೆತ್ತಿಕೊಂಡು ಕುಣಿದರು. ಇತರರು

ಕೇಚಿ ದುಚ್ಛ್ರಿತ ಲಾಂಗೂಲಾಃ ಪ್ರಹೃಷ್ಟಾಃ ಕಪಿ ಕುಂಜರಾಃ।
ಅಂಚಿತಾಯತದೀರ್ಘಾಣಿ ಲಾಂಗೂಲಾನಿ ಪ್ರವಿವ್ಯಧುಃ ॥೪೩॥
ಅಪರೇ ಚ ಹನೂಮಂತಂ ವಾನರಾ ವಾರಣೋಪಮಮ್ ।
ಆಪ್ಲುತ್ಯ ಗಿರಿ ಶೃಂಗೇಭ್ಯಃ ಸಂಸ್ಪೃಶಂತಿ ಸ್ಮ ಹರ್ಷಿತಾಃ ॥೪೪॥
ಉಕ್ತವಾಕ್ಯಂ ಹನೂಮಂತ ಮಂಗದ ಸ್ತ ಮಥಾ ಬ್ರವೀತ್ ।
ಸರ್ವೇಷಾಂ ಹರಿವೀರಾಣಾಂ ಮಧ್ಯೇ ವಚನ ಮುತ್ತಮಂ ॥೪೫॥
ಸತ್ವೇ ವೀರ್ಯೇ ನ ತೇ ಕಶ್ಚಿ ತ್ಸಮೋ ವಾನರ ವಿದ್ಯತೇ ।

ಸಂತೋಷಿಸಿದವರಾಗಿ, ಉಚ್ಛ್ರಿತಲಾಂಗೂಲಾಃ-ಮೇಲಕ್ಕೆತ್ತಿದ ಬಾಲವುಳ್ಳವರಾಗಿಯೂ, ಅಂಚಿತಾಯತದೀರ್ಘಾಣಿ-ಅಂದವೂ, ತೋರವೂ, ನೀಳವೂ ಆಗಿರುವ, ಲಾಂಗೂಲಾನಿ - ಬಾಲಗಳನ್ನು, ಪ್ರವಿವ್ಯಧುಃ -ಎತ್ತಿ ಕೊಡಹಿದರು ॥೪೩॥ ಅಪರೆ - ಇನ್ನು ಕೆಲವುಂದಿ, ವಾನರಾಃ - ವಾನರರೂ, ಹರ್ಷಿತಾಃ - ಸಂತೋಷವುಳ್ಳವರಾಗಿ, ಗಿರಿಶೃಂಗೇಭ್ಯಃ - ಬೆಟ್ಟದ ಕೋಡುಗಲ್ಲುಗಳಿಂದ, ಆಪ್ಲುತ್ಯ - ಪುಟನೆಗೆದು ಬಂದು, ವಾರಣೋಪಮಂ - ಆನೆಯಂತಿರುವ, ಹನೂಮಂತಂ - ಆಂಜನೇಯನನ್ನು, ಸಂಸ್ಪೃಶಂತಿಸ್ಮ - ಅಪ್ಪಿಕೊಳ್ಳುತಲಿದ್ದರು ॥೪೪॥ ಅಥ - ಅನಂತರದಲ್ಲಿ, ಅಂಗದಃ - ವಾಲಿಪುತ್ರನು, ಉಕ್ತವಾಕ್ಯಂ - ಸೀತೆಯನ್ನು ನೋಡಿದೆನೆಂಬ ಮಾತನ್ನು ಹೇಳಿದ, ತಂ - ಆ, ಹನೂಮಂತಂ - ಆಂಜನೇಯನನ್ನು ಕುರಿತು, ಸರ್ವೇಷಾಂ - ಸಮಸ್ತರಾದ, ಹರಿವೀರಾಣಾಂ - ಕಪಿವೀರರ, ಮಧ್ಯೇ - ನಡುವೆ, ಉತ್ತಮಂ - ಶ್ರೇಷ್ಠವೆನಿಸಿದ, ವಚನಂ - ವಾಕ್ಯವನ್ನು, ಅಬ್ರವೀತ್ - ಹೇಳತೊಡಗಿದನು ॥೪೫॥ ಯತ್ - ಯಾವ ಕಾರಣ, ವಿಸ್ತೀರ್ಣಂ - ವಿಸ್ತಾರವಾದ, ಸಾಗರಂ - ಸಮುದ್ರವನ್ನು, ಅವಪ್ಲುತ್ಯ - ದಾಟಿ, ಪುನಃ - ಮರಳಿ, ಆಗತಃ - ಬಂದವನಾಗಿದ್ದೀಯೋ, ತತ್ - ಆದಕಾರಣ, ವಾನರ-ಎಲೈ ಮಾರುತಿಯೇ, ಸತ್ವೇ

ಕೆಲವರು ಕೇಕೆಗಳನ್ನು ಹಾಕುತಲಿದ್ದರು, ತವಿತರರು ಸುಂದರವಾಗಿಯೂ, ತೋರವಾಗಿಯೂ, ನೀಳವಾಗಿಯೂ ಇರುವ ಬಾಲಗಳನ್ನು ಮೇಲಕ್ಕೆತ್ತಿ ನೆಲಕ್ಕೆ ಅಪ್ಪಳಿಸುತಲಿದ್ದರು ॥೪೩॥ ಮತ್ತೆ ಕೆಲವು ಮಂದಿ ವಾನರವೀರರು – ಹೃದಯದಲ್ಲಿ ಸಂತೋಷವು ಅಡಗದೆ, ಮದಗಜದಂತೆ ಕುಳಿತಿರುವ ಆಂಜನೇಯನ ಬಳಿಗೆ ಬೆಟ್ಟದ ಕೋಡುಗಲ್ಲುಗಳಿಂದ ಕುಪ್ಪಳಿಸಿ, ಹಾರಿಬಂದು ಮೈದಡವುತಲಿದ್ದರು ॥೪೪॥ ಸಮಸ್ತ ವಾನರ ವೀರರ ನಡುವೆ ಕುಳಿತಿರುವ ಅಂಗದನು – ಸೀತಾ ಸಂದರ್ಶನವನ್ನು ಮಾಡಿದೆನೆಂದು ಹೇಳಿದ ಆಂಜನೇಯನ ಮಧುರ ವಚನವನ್ನಾಲಿಸಿ ಇಂತೆಂದನು–॥೪೫॥ ಮಹಾ ಸತ್ವಸಂಪನ್ನನಾದ ಎಲೈ ಹನುಮಂತನೇ ! ಇಷ್ಟು ವಿಸ್ತಾರವಾದ ಸಾಗರವನ್ನು ದಾಟಿ, ಹಗೆಯ ಹೊಳಲನ್ನು ಹೊಕ್ಕು, ಕಾರ್ಯವನ್ನೂ ಸಾಧಿಸಿ, ಸುರಕ್ಷಿತನಾಗಿ ಬಂದಿರುವುದನ್ನು ನೋಡಿದರೆ, ಬಲ ಪರಾಕ್ರಮಾದಿಗಳಲ್ಲಿ ನಿನಗೆ ಎಣೆಯೆನಿಸಿದವನೊಬ್ಬನೂ ಇಲ್ಲ, ನಿನಗೆ ಸುಗ್ರೀವನಲ್ಲಿರುವ ಭಕ್ತಿಯೂ, ನಿನ್ನ ಧೈರ್ಯ ಪರಾಕ್ರಮಗಳೂ, ಅಪಾರವಾದ ಆಶ್ಚರ್ಯವನ್ನು ಉಂಟುಮಾಡುತಲಿವೆ, ಮತ್ತು–ನೀನು ಶ್ರೀರಾಮಚಂದ್ರನ ಧರ್ಮ ಭಾರ್ಯೆಯನ್ನು ದರ್ಶನ ಮಾಡಿದುದು, ನಿನ್ನ ಪೂರ್ವಜನ್ಮದಸುಕೃತ ಪರಿಪಾಕವಲ್ಲದೆಬೇರಿಲ್ಲ ನಿನ್ನ ಭಾಗ್ಯವೇ ಭಾಗ್ಯ, ಇನ್ನುಮೇಲೆ ಶ್ರೀರಾಮನು ಸೀತಾ ವಿಯೋಗದಿಂದುಂಟಾಗಿದ್ದ ಮನೋವ್ಯಥೆಯನ್ನು ಪರಿಹರಿಸಿಕೊಳ್ಳುವನು.

ಯದವಪ್ಲುತ್ಯ ವಿಸ್ತೀರ್ಣಂ ಸಾಗರಂ ಪುನರಾಗತಃ ॥೪೫॥
ಅಹೋ ಸ್ವಾಮಿನಿ ತೇ ಭಕ್ತಿ ರಹೋ ವೀರ್ಯ ಮಹೋ ಧೃತಿಃ ।
ದಿಷ್ಟ್ಯಾ ದೃಷ್ಟಾ ತ್ವಯಾ ದೇವೀ ರಾಮಪತ್ನೀ ಯಶಸ್ವಿನೀ ॥
ದಿಷ್ಟ್ಯಾ ತ್ಯಕ್ಷ್ಯತಿ ಕಾಕುತ್ಥ್ಸ ಶ್ಶೋಕಂ ಸೀತಾ ವಿಯೋಗಜಂ ॥೪೬॥
ತತೋಂಗದಂ ಹನೂಮಂತಂ ಜಾಂಬವಂತಂ ಚ ವಾನರಾಃ ॥
ಪರಿವಾರ್ಯ ಪ್ರಮುದಿತಾ ಭೇಜಿರೇ ವಿಪುಲಾ ಶ್ಶಿಲಾಃ ॥೪೭॥
ಶ್ರೋತು ಕಾಮಾ ಸ್ಸಮುದ್ರಸ್ಯ ಲಂಘನಂ ವಾನರೋತ್ತಮಾಃ ॥೪೮॥
ದರ್ಶನಂ ಚಾಪಿ ಲಂಕಾಯಾ ಸ್ಸೀತಾಯಾ ರಾವಣಸ್ಯ ಚ ॥೪೮॥ ॥
ತಸ್ಥುಃ ಪ್ರಾಂಜಲಯ ಸ್ಸರ್ವೇ ಹನುಮ ದ್ವದನೋನ್ಮುಖಾಃ ॥೪೯॥

---

ಬಲದಲ್ಲಿಯೂ, ವೀರ್ಯೆ - ಪರಾಕ್ರಮದಲ್ಲಿಯೂ, ತೆ - ನಿನಗೆ, ಸಮಃ - ಎಣೆಯೆನಿಸಿದವನು, ಕಶ್ಚಿತ್ - ಯಾವನೊಬ್ಬನೂ, ನವಿದ್ಯತೆ - ಇಲ್ಲವು ॥೪೫॥ ಸ್ವಾಮಿನಿ - ಪ್ರಭುವಿನಲ್ಲಿ, ತೇ - ನಿನಗೆ, ಭಕ್ತಿಃ- ಭಕ್ತಿಯೂ, (ಪೂಜ್ಯಾನುರಾಗವು) ಅಹೋ - ಆಶ್ಚರ್ಯಕರವೆನಿಸಿದೆ. ವೀರ್ಯಂ ಪರಾಕ್ರಮವು, ಅಹೋ- ಅದ್ಭುತವೆನಿಸಿದೆ, ಧೃತಿಃ - ಧೈರ್ಯವು (ಉತ್ಸಾಹವು) ಅಹೋ - ಅಸದೃಶವೆನಿಸಿದೆ, ತ್ವಯಾ ನಿನ್ನಿಂದ, ಯಶಸ್ವಿನೀ - ಒಳ್ಳೆಯ ಹೆಸರುವಾಸಿಯುಳ್ಳ, ದೇವೀ - ಪಟ್ಟದರಸಿಯಾದ, ರಾಮಪತ್ನೀ-ರಾಮಭಾರ್ಯೆಯಾದ ಸೀತೆಯು, ದಿಷ್ಟ್ಯಾ - ಭಾಗ್ಯವಶದಿಂದ, ದೃಷ್ಟಾ - ನೋಡಲ್ಪಟ್ಟಳು ॥೪೬॥ ಕಾಕುತ್ಸ್ಥಃ - ಶ್ರೀರಾಮನು, ಸೀತಾವಿಯೋಗಜಂ , ಸೀತೆಯ ಅಗಲಿಕೆಯಿಂದುಟಾದ. ಶೋಕಂ - ದುಃಖವನ್ನು, ದಿಷ್ಟ್ಯಾ - ದೈವಯೋಗದಿಂದ, ತ್ಯಕ್ಷ್ಯತಿ - ಬಿಡುವನು ॥೪೬॥ ॥ ತತಃ _ ತರುವಾಯ, ವಾನರಾಃ - ವಾನರರು, ಅಂಗದಂ - ಅಂಗದನನ್ನೂ, ಹನೂಮಂತಂ - ಮಾರುತಿಯನ್ನೂ, ಜಾಂಬವಂತಂಚ- ಜಾಂಬವಂತನನ್ನೂ, ಪರಿವಾರ್ಯ - ಸುತ್ತುಬಳಿಸಿ, ಪ್ರಮುದಿತಾಃ - ಸಂತೋಷವುಳ್ಳವರಾಗಿ, ವಿಪುಲಾಃ - ವಿಸ್ತಾರಗಳಾಗಿರುವ, ಶಿಲಾಃ - ಹಲಗೆಗಲ್ಲುಗಳನ್ನು, ಭೇಜಿರೆ - ಹೊಂದಿದರು ॥೪೭॥ ವಾನರೋತ್ತಮಾಃ - ವಾನರಶ್ರೇಷ್ಠರು ಸರ್ವೆ - ಎಲ್ಲರೂ, ಸಮುದ್ರಸ್ಯ - ಸಾಗರದ, ಲಂಘನಂ - ದಾಟೋಣವನ್ನೂ, ಲಂಕಾಯಾಃ - ಲಂಕೆಯ, ಸೀತಾಯಾಃ - ಜಾನಕಿಯ, ರಾವಣಸ್ಯಚ - ರಾವಣನ, ದರ್ಶನಂಚಾಪಿ - ನೋಡೋಣವನ್ನೂ, ಶ್ರೋತುಕಾಮಾಃ - ಕೇಳಲಾಶೆಯುಳ್ಳವರಾಗಿ, ಪ್ರಾಂಜಲಯಃ - ಅಂಜಲಿ ಬದ್ಧರಾಗುತ್ತಾ, ಹನುಮದ್ವದನೋನ್ಮುಖಾಃ-ಹನುಮನ ಮುಖಕ್ಕಿದಿರಾಗಿ ಎತ್ತಿದ ಮುಖಗಳುಳ್ಳವರಾಗಿಯೂ, ತಸ್ಥುಃ - ಇದ್ದರು ॥೪೮॥ ॥೪೯॥ ತತ್ರ - ಆ ಮಹೇಂದ್ರಪರ್ವತದಲ್ಲಿ, ಶ್ರೀಮಾನ್-ಸಂತೋಷಸಂಪದವುಳ್ಳ, ಅಂಗದಃ- ಅಂಗದನು,

---

॥೪೫, ೪೬॥ ॥ ಎಂದು ಹೇಳುತ್ತಿರಲು—ಅದನ್ನು ಕೇಳಿ, ಬಹಳವಾಗಿ ಸಂತೋಷಪಡುತಲಿರುವ ವಾನರರೆಲ್ಲರೂ ಅಂಗದ, ಜಾಂಬವಂತ, ಆಂಜನೇಯ ಇವರನ್ನು ಆವರಿಸಿ ವಿಸ್ತಾರವಾದ ಶಿಲಾತಲಗಳಲ್ಲಿ ಕುಳಿತು ॥೪೭॥ ಸಮುದ್ರ ಲಂಘನ ಕ್ರಮವನ್ನೂ, ಸೀತಾ ಸಂದರ್ಶನದ ವಿವರವನ್ನೂ, ಲಂಕೆಯನ್ನು ಹೊಕ್ಕ ರೀತಿಯನ್ನೂ, ರಾವಣನನ್ನು ಕಂಡ ಬಗೆಯನ್ನೂ ಕೇಳಲು ಕುತೂಹಲವುಳ್ಳವರಾಗಿ, ಮಾರುತಿಯ ಮುಖದ ಕಡೆಗೆ ಉನ್ಮುಖರಾಗಿ, ಕೈಗಳನ್ನು ಜೋಡಿಸಿ ಕುಳಿತರು ॥೪೯॥ ಅನೇಕ ಮಂದಿ ವಾನರ ವೀರರಿಂದ ಆವರಿಸಲ್ಪಟ್ಟು, ಅವರಿಂದ ಸೇವಿಸಲ್ಪಡುತ್ತಾ, ಮಧ್ಯದಲ್ಲಿ ಕುಳಿತಿರುವ ಅಂಗದನು - ಸ್ವರ್ಗ

ತಸ್ಥೌ ತತ್ರಾಂ ಗದ ಶ್ರೀಮಾ ನ್ವಾನರೈ ರ್ಬಹುಭಿ ರ್ವೃತಃ ।
ಉಪಾಸ್ಯಮಾನೊ ವಿಬುಧೈ ರ್ದಿವಿ ದೇವ ಪತಿ ರ್ಯಥಾ ॥೫೦॥
ಹನೂಮತಾ ಕೀರ್ತಿಮತಾ ಯಶಸ್ವಿನಾ ತಥಾಂಗದೇ ನಾಂಗದ ಬದ್ಧ ಬಾಹುನಾ ।
ಮುದಾ ತದಾಽಧ್ಯಾಸಿತ ಮುನ್ನತ ನ್ಮಹ ನ್ಮಹೀಧರಾಗ್ರಂ ಜ್ವಲಿತಂ ಶ್ರಿಯಾಽಭವತ್॥೫೦॥
— ಇತಿ ಶ್ರೀಮತ್ಸುಂದರಕಾಂಡೆ-ಸಪ್ತಪಂಚಾಶಸ್ಸರ್ಗಃ. —

ಬಹುಭಿಃ - ಅನೇಕರಾದ, ವಾನರೈಃ - ವಾನರರಿಂದ, ವೃತಃ - ಆವರಿಸಲ್ಪಟ್ಟವನಾದಕಾರಣವೇ, ದಿವಿ - ಸ್ವರ್ಗದಲ್ಲಿ, ವಿಬುಧೈಃ - ದೇವತೆಗಳಿಂದ, ಉಪಾಸ್ಯಮಾನಃ - ಸೇವಿಸಲ್ಪಡುತಲಿರುವ, ದೇವಪತಿ ರ್ಯಥಾ - ದೇವೇಂದ್ರನು ಹೇಗೋ ಹಾಗೆ, ತಸ್ಥೌ - ಇದ್ದನು ॥೫೦॥ ಕೀರ್ತಿಮತಾ - ಒಳ್ಳೆಯ ಹೆಸರುವಾಸಿಯುಳ್ಳ, ಹನೂಮತಾ - ಆಂಜನೇಯನಿಂದಲೂ, ತಥಾ - ಹಾಗೆಯೇ ಯಶಸ್ವಿನಾ - ಪ್ರಶಸ್ತ ಕೀರ್ತಿಯುಳ್ಳ, ಅಂಗದಬದ್ಧಬಾಹುನಾ - ಭುಜಕೀರ್ತಿಯಿಂದೊಡಗೂಡಿದ ತೋಳುಳ್ಳವನೂ ಆಗಿರುವ, ಅಂಗದೇನ - ವಾಲಿಪುತ್ರನಿಂದಲೂ, ಮುದಾ - ಸಂತೋಷದಿಂದ, ತದಾ - ಆಗ, ಅಧ್ಯಾಸಿತಂ - ಆಶ್ರಯಿಸಲ್ಪಟ್ಟ, ಉನ್ನತಂ - ಎತ್ತರವಾಗಿರುವ, ಮಹತ್ - ತೋರವಾಗಿರುವ, ಮಹೀಧರಾಗ್ರಂ - ಮಹೇಂದ್ರಪರ್ವತ ಶಿಖರವು, ಶ್ರಿಯಾ - ಅಲಂಕಾರ ಸಂಪತ್ತಿನಿಂದ, ಜ್ವಲಿತಂ - ಶೋಭಿಸುತಲಿರುವುದು, ಅಭವತ್ ಆಗಿದ್ದಿತು.
—ಇಂತು ಐವತ್ತೇಳನೆಯ ಸರ್ಗಂ—

ಲೋಕದಲ್ಲಿ ದೇವ ಸಮೂಹದಿಂದ ಸೇವಿಸಲ್ಪಡುತಲಿರುವ ದೇವೇಂದ್ರನಂತೆ ಶೋಭಿಸುತಲಿದ್ದನು ॥೫೦॥ ಆಗ ಬಹು ಉನ್ನತವಾದ ಮಹೇಂದ್ರ ಪರ್ವತಾಗ್ರದಲ್ಲಿ - ಕಾರ್ಯವನ್ನು ಸಾಧಿಸಿ, ಬಹುತರ ಕೀರ್ತಿಯನ್ನು ಸಂಪಾದಿಸಿದ ಆಂಜನೇಯನಿಂದಲೂ, ಬಾಪುರಿಯೇ ಮೊದಲಾದ ಆಭರಣಗಳಿಂದ ಅಲಂಕೃತನಾಗಿ, ವಾನರ ಪರಿವಾರದಿಂದಲೂ ಸಹಿತನಾಗಿ, ಕುಳಿತಿರುವ ಅಂಗದನಿಂದ ಆ ಪರ್ವತೋತ್ತಮವು ಬಹು ತರವಾಗಿ ಶೋಭಿಸುತಲಿದ್ದಿತು
— ಇಂತು ಐವತ್ತೇಳನೆಯ ಸರ್ಗಂ —



ಶ್ರೀಃ

## ಶ್ರೀ ರಾಮಚನ್ದ್ರ ಪರಬ್ರಹ್ಮಣೇ ನಮಃ

## ಶ್ರೀಮತ್ಸುಂದರಕಾಂಡೆ-ಅಷ್ಟಪಂಚಾಶಸ್ಸರ್ಗಃ



ತತ ಸ್ತಸ್ಯ ಗಿರೇ ಶ್ಶೃಂಗೇ ಮಹೇಂದ್ರಸ್ಯ ಮಹಾಬಲಾಃ ।
ಹನುಮ ತ್ಪ್ರಮುಖಾಃ ಪ್ರೀತಿಂ ಹರಯೋ ಜಗ್ಮು ರುತ್ತಮಾಮ್ ॥೧॥
ತಂ ತತಃ ಪ್ರೀತಿ ಸಂಹೃಷ್ಟಃ ಪ್ರೀತಿಮಂತಂ ಮಹಾಕಪಿಮ್ ।
ಜಾಂಬವಾ ನ್ಕಾರ್ಯ ವೃತ್ತಾಂತ ಮಪೃಚ್ಛ ದನಿಲಾತ್ಮಜಂ ॥೨॥
ಕಥಂ ದೃಷ್ಟಾ ತ್ವಯಾ ದೇವೀ ಕಥಂ ವಾ ತತ್ರ ವರ್ತತೆ ।

---

—ಐವತ್ತೆಂಟನೆಯ ಸರ್ಗಂ—

ಕಂದ॥ ಅಂಗದ ಜಾಂಬವ ಮುಖಹರಿ । ಪುಂಗವರಾಮೋದದಿಂದೆ ಬೆಸಗೊಳೆ ಹನುಮಂ ।
ಲಂಘಿಸಿ ಕಡಲಂ ಲಂಕೆಯೊ । ಳುಂಗುರವಂ ಸೀತೆ ಗಿತ್ತ ಕುಶಲವ ನೊರೆದಂ ॥

ತತಃ - ಅನಂತರದಲ್ಲಿ, ತಸ್ಯ ಮಹೇಂದ್ರಸ್ಯ - ಆ ಮಹೇಂದ್ರ ಪರ್ವತದ, ಶೃಂಗೇ - ಶಿಖರದಲ್ಲಿ ಮಹಾಬಲಾಃ - ಮಹಾ ಪರಾಕ್ರಮ ಶಾಲಿಗಳಾದ, ಹನೂಮತ್ಪ್ರಮುಖಾಃ - ಆಂಜನೇಯನೇ ಮೊದಲಾದ, ಹರಯಃ - ಕಪಿಗಳು, ಉತ್ತಮಾಂ - ಅತಿಶಯವಾದ, ಪ್ರೀತಿಂ - ಸಂತೋಷವನ್ನು, ಜಗ್ಮುಃ, ಹೊಂದಿದರು. ॥೧॥ ತತಃ - ಆ ಮೇಲೆ, ಪ್ರೀತಿಸಂಹೃಷ್ಟಃ - ಸಂತೋಷದಿಂದುಬ್ಬಿದವನಾದ, ಜಾಂಬವಾನ್ - ಜಾಂಬವಂತನು, ಪ್ರೀತಿಮಂತಂ - ಸುಪ್ರೀತನಾದ, ಮಹಾ ಕಪಿಂ- ವಾನರೋತ್ತಮನಾದ, ತಂ ಅನಿಲಾತ್ಮಜಂ-ಆವಾಯುಪುತ್ರನಾದ ಆಂಜನೇಯನನ್ನು ಕುರಿತು, ಕಾರ್ಯವೃತ್ತಾಂತಂ - ಅವನು ನಡೆಸಿದ ಕೆಲಸಗಳ ಅಂದರೆ ಸೀತಾದರ್ಶನ ಮೊದಲಾದ ಕಾರ್ಯವಿವರವನ್ನು, ಅಪೃಚ್ಛತ್ - ಕೇಳಿದನು. ॥೨॥ ಹೇ ಮಹಾ ಕಪೇ ! ಎಲೈ ಕಪಿಶ್ರೇಷ್ಠನಾದ ಆಂಜನೇಯನೇ ! ತತ್ರ-ಆ ಲಂಕಾಪಟ್ಟಣದಲ್ಲಿ, ದೇವೀ-ಸೀತಾದೇವಿಯು, ತ್ವಯಾ-ನಿನ್ನಿಂದ, ಕಥಂ-ಹೇಗೆ, ದೃಷ್ಟಾ - ಕಾಣಲ್ಪಟ್ಟಳು. ಕಥಂವಾ-ಹೇಗೆ,ವರ್ತತೇ-ಇರುತ್ತಾಳೆ. ಕ್ರೂರಕರ್ಮಾ-ಪಾಪಾತ್ಮನಾದ, ಸಃ ದಶಾನನಃ-ಆ ರಾವಣನು, ತಸ್ಯಾಂವಾ-

---

—ಐವತ್ತೆಂಟನೆಯ ಸರ್ಗಂ—

ಅನಂತರದಲ್ಲಿ ಹನುಮಂತನೇ ಮೊದಲಾದ ಮಹಾ ಬಲಶಾಲಿಗಳಾದ ಕಪಿವೀರರು-ಆ ಮಹೇಂದ್ರ ಪರ್ವತದ ಶಿಖರದ ಮೇಲೆ ಆನಂದ ಭರಿತರಾಗಿ ಕೂತುಕೊಂಡಿದ್ದರು. ॥೧॥ ಹೀಗೆ ಕೂತುಕೊಂಡ ಮೇಲೆ, ಬಹು ಸಂತೋಷದಿಂದ ಕೂಡಿದ ಜಾಂಬವಂತನು-ಹರ್ಷದಿಂದ ಹಿಗ್ಗುತ್ತಿರುವ ವಾಯುಪುತ್ರನಾದ ಆಂಜನೇಯನನ್ನು ಕುರಿತು-ಸೀತಾದರ್ಶನಕ್ಕಾಗಿ ಹೋಗಿ ಬಂದ ಸಮಾಚಾರವನ್ನು ಕೇಳಿದನು. ॥೨॥ ಶೂರನಾದ ಎಲೈ ಆಂಜನೇಯನೇ ! ನೀನು ಸೀತಾದೇವಿಯನ್ನು ಹೇಗೆ ನೋಡಿದೆ ? ಆ ಲಂಕಾಪಟ್ಟಣದಲ್ಲಿ ಸೀತೆಯು ಹೇಗಿರುವಳು ? ಕ್ರೂರಾತ್ಮನಾದ ರಾವಣನು ಆ ಸೀತಾದೇವಿಯ ವಿಷಯದಲ್ಲಿ ಯಾವರೀತಿಯಲ್ಲಿ

ತಸ್ಯಾಂ ವಾ ಸ ಕಥಂ ವೃತ್ತಃ ಕ್ರೂರಕರ್ಮಾ ದಶಾನನಃ ॥೩॥
ತತ್ತ್ವತ ಸ್ಸರ್ವ ಮೇತ ನ್ನಃ ಪ್ರಬ್ರೂಹಿ ತ್ವಂ ಮಹಾಕಪೇ ॥
ಶ್ರುತಾರ್ಥಾ ಶ್ಚಿಂತಯಿಷ್ಯಾಮೋ ಭೂಯಃ ಕಾರ್ಯ ವಿನಿಶ್ಚಯಮ್ ॥೪॥
ಯಶ್ಚಾರ್ಥ ಸ್ತತ್ರ ವಕ್ತವ್ಯೋ ಗತ್ಯೈ ರಸ್ಮಾಭಿ ರಾತ್ಮವಾನ್ ।
ರಕ್ಷಿತವ್ಯಂ ಚ ಯತ್ತತ್ರ ತದ್ಭವಾ ನ್ವ್ಯಾಕರೋತು ನಃ ॥೫॥
ಸ ನಿಯುಕ್ತ ಸ್ತತ ಸ್ತೇನ ಸಂಪ್ರಹೃಷ್ಟ ತನೂರುಹಃ ।
ಪ್ರಣಮ್ಯ ಶಿರಸಾ ದೇವ್ಯೈ ಸೀತಾಯೈ ಪ್ರತ್ಯಭಾಷತ ॥೬॥
ಪ್ರತ್ಯಕ್ಷ ಮೇವ ಭವತಾಂ ಮಹೇಂದ್ರಾಗ್ರಾ ತ್ಖ ಮಾಪ್ಲುತಃ ॥

---

ಆ ಸೀತಾದೇವಿಯ ವಿಷಯದಲ್ಲಿಯಾದರೂ, ಕಥಂವೃತ್ತಃ-ಏನುಮಾಡಬೇಕೆಂದಿರುವನು,ಏತತ್ ಸರ್ವಂ ಮೇಲೆ ಹೇಳಿದ ಎಲ್ಲಾ ವಿಷಯವನ್ನೂ, ನಃ - ನಮ್ಮಗಳಿಗೆ, ತತ್ವತಃ - ಯಥಾರ್ಥವಾಗಿ, ತ್ವಂ - ನೀನು, ಪ್ರಬ್ರೂಹಿ - ವಿವರವಾಗಿ ಹೇಳು. (ಏಕೆಂದರೆ) ಶ್ರುತಾರ್ಥಾಃ - ಕೇಳಲ್ಪಟ್ಟ ಸಮಾಚಾರವುಳ್ಳ ನಾವು, ಭೂಯಃ - ಪುನಃ, ಕಾರ್ಯವಿನಿಶ್ಚಯಂ - ಮುಂದೆ ಮಾಡಬೇಕಾದ ನಿಶ್ಚಯವನ್ನು, ಚಿಂತಯಿಷ್ಯಾಮಃ - ವಿಚಾರಮಾಡೋಣ ॥೩-೪॥ ತತ್ರ - ಆ ಶ್ರೀರಾಮನ ಸನ್ನಿಧಿಯಲ್ಲಿ, ಯಶ್ಚಾರ್ಥಃ - ಯಾವ ವಿಷಯವು, ಗತ್ಯೈಃ - ತಲಪಿದ, ಅಸ್ಮಾಭಿಃ - ನಮ್ಮಗಳಿಂದ, ವಕ್ತವ್ಯಃ ಹೇಳಲ್ಪಡತಕ್ಕದ್ದಾಗಿದೆಯೋ, ತತ್ರ - ಅಲ್ಲಿ, ಯತ್ - ರಕ್ಷಿತವ್ಯಂಚ - ಗೋಪನಮಾಡಲ್ಪಡ ತಕ್ಕದ್ದೋ, ತತ್ - ಅದನ್ನು ಆತ್ಮವಾನ್ - ಬುದ್ಧಿಶಾಲಿಯಾದ, ಭವಾನ್ - ನೀನು, ನಃ - ನಮ್ಮಗಳಿಗೆ, ವ್ಯಾಕರೋತು - ವಿವರಿಸುವನಾಗು ॥೫॥ ತತಃ - ಹೀಗೆ ಹೇಳಿದ ನಂತರ, ತೇನ - ಆ ಜಾಂಬವಂತನಿಂದ ನಿಯುಕ್ತಃ ಆಜ್ಞಾಪಿಸಲ್ಪಟ್ಟ, ಸಂಪ್ರಹೃಷ್ಟತನೂರುಹಃ - ಸಂತೋಷದಿಂದ ರೋಮಾಂಚಿತ ಶರೀರವುಳ್ಳವನಾದ, ಸಃ - ಆ ಆಂಜನೇಯನು, ದೇವ್ಯೈ - ಪೂಜ್ಯಳಾದ, ಸೀತಾಯೈ - ಸೀತೆಗೋಸ್ಕರ, ಶಿರಸಾ - ತಲೆಯಿಂದ, ಪ್ರಣಮ್ಯ - ನಮಸ್ಕರಿಸಿ, ಪ್ರತ್ಯಭಾಷತ - ಹೇಳಿದನು. ॥೬॥ ಅಹಂ - ನಾನು, ಉದಧೇಃ - ಸಮುದ್ರದ, ದಕ್ಷಿಣಂ ಪಾರಂ - ದಕ್ಷಿಣ ದಿಕ್ಕಿನ ದಡವನ್ನು, ಕಾಂಕ್ಷಮಾಣಃ - ಅಪೇಕ್ಷಿಸುವವನಾಗಿ, ಸಮಾಹಿತಃ - ಮನಸ್ಸ್ಥೈರ್ಯವುಳ್ಳವನಾಗಿ, ಮಹೇಂದ್ರಾಗ್ರಾತ್ - ಮಹೇಂದ್ರಪರ್ವತದ ಶಿಖರದಿಂದ, ಖಂ - ಅಂತರಿಕ್ಷವನ್ನು, ಆಪ್ಲುತಃ - ಹಾರಿದೆನು, (ಇದು) ಭವತಾಂ - ನಿಮ್ಮಗಳ, ಪ್ರತ್ಯಕ್ಷಮೇವ - ಎದುರಿಗೇ

---

ನಡೆದುಕೊಳ್ಳುತ್ತಿರುವನು ? ॥೩॥ ಎಲೈ ವಾನರವೀರನೇ ! ಇವೆಲ್ಲವನ್ನು ಯಥಾರ್ಥವಾಗಿ ನಮಗೆ ಹೇಳು. ನಿನ್ನ ಮಾತನ್ನು ಕೇಳಿದ ಮೇಲೆ ಆ ವಿಷಯವಾಗಿ ನಾವು ಮುಂದೆ ಮಾಡಬೇಕಾದ ಕೆಲಸವನ್ನು ಕುರಿತು ಆಲೋಚಿಸೋಣ. ॥೪॥ ಬುದ್ಧಿಶಾಲಿಯಾದ ನೀನು ನಡೆದ ಸಂಗತಿಯನ್ನೆಲ್ಲಾ ಬಿಡದೆ ಹೇಳು. ಶ್ರೀರಾಮಚಂದ್ರನ ಸಮೀಪದಲ್ಲಿ ಹೇಳಬೇಕಾದ ಮಾತುಗಳು ಯಾವುವೋ, ಬಿಡಬೇಕಾದ ವಿಷಯಗಳು ಯಾವುವೋ, ಅವನ್ನು ಸಹ ನಮಗೆ ತಿಳಿಸು. ಎಂದನು ॥೫॥ ಹೀಗೆ ಜಾಂಬವಂತನು ಪ್ರಶ್ನೆಮಾಡಿದ ತರುವಾಯ ಅತ್ಯಾನಂದದಿಂದ ಆಂಜನೇಯನ ಶರೀರವು ರೋಮಾಂಚಿತವಾಯಿತು. ಕೂಡಲೆ ಸೀತಾದೇವಿಗೆ ತಲೆಯನ್ನು ಬಾಗಿಸಿ ಹೇಳುವುದಕ್ಕುಜ್ಜುಗಿಸಿದನು. ॥೬॥ ನಿಮ್ಮಗಳ ಕಣ್ಣೆದುರಿಗೆ ನಾನು ಮಹೇಂದ್ರಪರ್ವತದ ಶಿಖರದಿಂದ ಸಾಗರದ ದಕ್ಷಿಣದಿಕ್ಕಿನ ದಡವನ್ನು ಕುರಿತು

ಉದಧೇ ರ್ದಕ್ಷಿಣಂ ಪಾರಂ ಕಾಂಕ್ಷಮಾಣ ಸ್ಸಮಾಹಿತಃ ॥೭॥
ಗಚ್ಛತಶ್ಚ ಹಿ ಮೇ ಘೋರಂ ವಿಘ್ನರೂಪ ಮಿವಾಭವತ್ ।
ಕಾಂಚನಂ ಶಿಖರಂ ದಿವ್ಯಂ ಪಶ್ಯಾಮಿ ಸು ಮನೋಹರಂ ॥೮॥
ಸ್ಥಿತಂ ಪಂಥಾನ ಮಾವೃತ್ಯ ಮೇನೆ ವಿಘ್ನಂ ಚ ತಂ ನಗಂ ॥೮॥॥
ಉಪಸಂಗಮ್ಯ ತಂ ದಿವ್ಯಂ ಕಾಂಚನಂ ನಗ ಸತ್ತಮಂ ॥
ಕೃತಾ ಮೇ ಮನಸಾ ಬುದ್ಧಿ ರ್ಭೇತ್ತವ್ಯೋಽಯಂ ಮಯೇತಿಚ ॥೯॥॥
ಪ್ರಹತಂ ಚ ಮಯಾ ತಸ್ಯ ಲಾಂಗೂಲೇನ ಮಹಾಗಿರೇಃ ॥

ನಡೆದುದಾಗಿರುತ್ತದೆ. ॥೭॥ ಗಚ್ಛತಶ್ಚ-ಹೋಗುತ್ತಿರುವ, ಮೇ-ನನಗೆ, ಘೋರಂ - ಭಯಂಕರವಾದ, ವಿಘ್ನರೂಪಮಿವ - ಪ್ರಯಾಣಕ್ಕೆ ಅಡ್ಡಿಯಾದಂತೆ, ಅಭೂದ್ಧಿ - ಆಯಿತಲ್ಲವೆ ; (ಅದೇನೆಂದರೆ) ದಿವ್ಯಂ, ದೇವಯೋಗ್ಯವಾದ, ಸುಮನೋಹರಂ - ರಮ್ಯವಾದ, ಕಾಂಚನಂ - ಸುವರ್ಣಮಯವಾದ, ಶಿಖರಂ - ಶೃಂಗವನ್ನು, ಪಶ್ಯಾಮಿ -ನೋಡಿದೆನು ॥೮॥ ಪಂಥಾನಂ - ಮಾರ್ಗವನ್ನು, ಆವೃತ್ಯ - ಆವರಿಸಿ, ಸ್ಥಿತಂ- ನಿಂತಿರುವ, ತಂನಗಂ - ಆ ಪರ್ವತವನ್ನು, ವಿಘ್ನಂಚ - ವಿಘ್ನವನ್ನಾಗಿಯೇ, ಮೇನೇ- ತಿಳಿದೆನು,॥೮॥ ದಿವ್ಯಂ - ಶ್ರೇಷ್ಠವಾದ, ಕಾಂಚನಂ - ಸುವರ್ಣಮಯವಾದ, ತಂನಗಸತ್ತಮಂ - ಆ ಶ್ರೇಷ್ಠವಾದ ಪರ್ವತವನ್ನು, ಉಪಸಂಗಮ್ಯ - ಸೇರಿ, ಅಯಂ - ಈ ಪರ್ವತವು, ಮಯಾ - ನನ್ನಿಂದ, ಭೇತ್ತವ್ಯಃ - ಒಡೆಯಲ್ಪಡತಕ್ಕದು, ಇತಿ - ಹೀಗೆಂದು, ಮೇ - ನನ್ನ, ಮನಸಾ - ಮನಸ್ಸಿನಿಂದ, ಬುದ್ಧಿಃ - ನಿಶ್ಚಯವು, ಕೃತಾಚ - ಮಾಡಲ್ಪಟ್ಟಿತು. ॥೯॥॥ ತಸ್ಯಮಹಾಗಿರೇಃ- ಆ ದೊಡ್ಡ ಪರ್ವತದ, ಸೂರ್ಯಸಂಕಾಶಂ - ಸೂರ್ಯನಂತೆ ಹೊಳೆಯುತ್ತಿರುವ, ಶಿಖರಂ - ಶೃಂಗವು, ಮಯಾ - ನನ್ನಿಂದ, ಲಾಂಗೂಲೇನ - ಬಾಲದಿಂದ, ಪ್ರಹತಂಚ - ಹೊಡೆಯಲ್ಪಟ್ಟದ್ದಾಗಿ, ಸಹಸ್ರಧಾ - ಸಾವಿರಪಾಲಾಗಿ, ವ್ಯಶೀರ್ಯತ- ಸೀಳಿಹೋಯಿತು. ॥೧೦॥ ॥ ಸಮಹಾಗಿರಿಃ - ಆ ದೊಡ್ಡ ಪರ್ವತವು, ತಂಚವ್ಯವಸಾಯಂ - ಹಾಗೆ ಒಡೆದುಹೋಗುತ್ತಿರುವುದನ್ನು, ದೃಷ್ಟ್ವಾ - ನೋಡಿ, ಮನಃ - ಮನಸ್ಸನ್ನು, ಪ್ರಹ್ಲಾದಯನ್ನಿವ - ಆಹ್ಲಾದಪಡಿಸುತ್ತಿರುವಂತೆ ಪುತ್ರ - ಎಲೈ ಮಗುವೇ !, ಇತಿ - ಹೀಗೆಂದು, ಮಧುರಾಂ - ಮೃದುವಾದ, ವಾಣೀಂ -

ಆಕಾಶ ಮಾರ್ಗದಲ್ಲಿ ಏಕಾಗ್ರಚಿತ್ತನಾಗಿ ಹಾರಿದೆನಷ್ಟೆ ? ॥೭॥ ಹೀಗೆ ಹಾರುತ್ತಿದ್ದ ನನ್ನ ಮಾರ್ಗಕ್ಕೆ ಅಡ್ಡಲಾಗಿ ಒಂದು ಪರ್ವತವು ಸಮುದ್ರದಿಂದ ಮೇಲಕ್ಕೆದ್ದಿತು. ಅದು ದಿವ್ಯವಾದ ಸುವರ್ಣಮಯವಾಗಿರುವ ಶಿಖರದಿಂದೊಪ್ಪುತಿದ್ದಿತು, ನನ್ನ ದಾರಿಗೆಅದು ಅಡ್ಡಲಾಗಿ ನಿಂತದ್ದರಿಂದ ನನ್ನ ಪ್ರಯಾಣಕ್ಕೆ ವಿಘ್ನ ವುಂಟಾದಂತೆ ಅದನ್ನು ಭಾವಿಸಿದೆನು.' ॥೮॥ ॥ ಹೀಗೆ ಅಡ್ಡಲಾಗಿನಿಂತಿದ್ದ ಸುವರ್ಣಮಯವಾದ ದಿವ್ಯಪರ್ವತವನ್ನು ನೋಡಿ,ಇದನ್ನು ಒಡೆದುಹಾಕಿ ಹೋಗಬೇಕೆಂದು ನಾನು ಯೋಚಿಸಿದೆನು. ॥೯॥ ಹಾಗೆಯೇ ನಾನು ಬಾಲದಿಂದ ಹೊಡೆಯಲು, ಸೂರ್ಯನಂತೆ ದೇದೀಪ್ಯಮಾನವಾಗಿದ್ದ ಆ ದಿವ್ಯವಾದ ಪರ್ವತದಶಿಖರವು- ಸಾವಿರ ಪಾಲಾಗಿ ಚೂರುಚೂರಾಗಿ ಒಡೆದು ಹೋಯಿತು. ॥೧೦॥ ॥ ಹೀಗೆ ನಡೆಸಿದ ನನ್ನ ಕೆಲಸವನ್ನು ನೋಡಿ, ಆ ಮಹಾ ಪರ್ವತವು ನನ್ನೊಡನೆ ಮಾತಾಡುವುದಕ್ಕುಪಕ್ರಮಿಸಿತು. ಎಲೈ ಮಗುವೇ ! ಎಂದು ಮೃದು ಮಧುರವಾಗಿ ಕೂಗಿತು. ಆ ಮಾತು ನನ್ನ ಕೋಪವನ್ನು ದೂರಮಾಡಿ, ನನಗೆ ಸಂತಸವನ್ನುಂಟುಮಾಡಿತು.॥೧೧॥ಹೀಗೆ ಆ ಪರ್ವತವು ನನ್ನನ್ನು

ಶಿಖರಂ ಸೂರ್ಯ ಸಂಕಾಶಂ ವ್ಯಶೀರ್ಯತ ಸಹಸ್ರಧಾ ॥೧೦॥
ವ್ಯವಸಾಯಂ ಚ ತಂ ಬುದ್ಧ್ವಾ ಸ ಹೋವಾಚ ಮಹಾಗಿರಿಃ
ಪುತ್ರೇತಿ ಮಧುರಾಂ ವಾಣೀಂ ಮನಃ ಪ್ರಹ್ಲಾದಯನ್ನಿವ ॥೧೧॥
ಪಿತೃವ್ಯಂ ಚಾಪಿ ಮಾಂ ವಿದ್ಧಿ ಸಖಾಯಂ ಮಾತರಿಶ್ವನಃ ॥
ಮೈನಾಕ ಮಿತಿ ವಿಖ್ಯಾತಂ ನಿವಸಂತಂ ಮಹೋದಧೌ ॥೧೨॥
ಪಕ್ಷವಂತಃ ಪುರಾ ಪುತ್ರ ಬಭೂವುಃ ಪರ್ವತೋತ್ತಮಾಃ ॥
ಛಂದತಃ ಪೃಥಿವೀಂ ಚೇರು ರ್ಬಾಧಮಾನಾ ಸ್ಸಮಂತತಃ ॥೧೩॥
ಶ್ರುತ್ವಾ ನಗಾನಾಂ ಚರಿತಂ ಮಹೇಂದ್ರಃ ಪಾಕಶಾಸನಃ ॥
ಚಿಚ್ಛೇದ ಭಗವಾ ನ್ಪಕ್ಷಾ ನ್ವಜ್ರೇ ಣೈಷಾಂ ಸಹಸ್ರಶಃ ॥೧೪॥
ಅಹಂ ತು ಮೋಕ್ಷಿತ ಸ್ತಸ್ಮಾ ತ್ತವ ಪಿತ್ರಾ ಮಹಾತ್ಮನಾ ॥

---

ಮಾತನ್ನು, ಉವಾಚಹ - ಹೇಳಿತು, ॥೧೧॥ ಮಾತರಿಶ್ವನಃ - ನಿನ್ನ ತಂದೆಯಾದ ವಾಯುವಿನ, ಸಖಾಯಂ - ಸ್ನೇಹಿತನಾಗಿಯೂ, ಮೈನಾಕಮಿತಿ - ಮೈನಾಕವೆಂಬದಾಗಿ, ವಿಖ್ಯಾತಂ-ಪ್ರಖ್ಯಾತವಾಗಿಯೂ, ಮಹೋದಧೌ - ಸಮುದ್ರದಲ್ಲಿ, ನಿವಸಂತಂ - ವಾಸಮಾಡುತ್ತಿರುವನಾಗಿಯೂ ಇರುವ, ಮಾಂ-ನನ್ನನ್ನು, ಪಿತೃವ್ಯಂಚಾಪಿ - ನಿನ್ನ ಚಿಕ್ಕತಂದೆಯನ್ನಾಗಿ-ವಿದ್ಧಿ-ತಿಳಿ ॥೧೨॥ ಹೇಪುತ್ರ - ಎಲೈ ಮಗುವೆ, ಪುರಾ - ಪೂರ್ವದಲ್ಲಿ, ಪರ್ವತೋತ್ತಮಾಃ - ದೊಡ್ಡದೊಡ್ಡ ಪರ್ವತಗಳು, ಪಕ್ಷವಂತಃ - ರೆಕ್ಕೆಗಳುಳ್ಳವುಗಳಾಗಿ, ಬಭೂವುಃ-ಇದ್ದವು, (ತೇ-ಆಪರ್ವತಗಳು) ಸಮಂತತಃ ಎಲ್ಲಾದೇಶಗಳಲ್ಲೂ, ಬಾಧಮಾನಾಃ ತೊಂದರೆ ಪಡಿಸುತ್ತಿರುವವುಗಳಾಗಿ, ಛಂದತಃ - ಮನಸ್ಸಿಗೆ ತೋರಿದ ಹಾಗೆಲ್ಲಾ, ಪೃಥಿವೀಂ - ಭೂಮಂಡಲವನ್ನು, ಚೇರುಃ-ತಿರುಗುತ್ತಿದ್ದವು, ॥೧೩॥ ಭಗವಾನ್ ಪೂಜ್ಯನಾದ, ಪಾಕಶಾಸನಃ - ಪಾಕನೆಂಬರಾಕ್ಷಸನನ್ನು ಸಂಹರಿಸಿದವನಾದ, ಮಹೇಂದ್ರಃ - ದೇವೇಂದ್ರನು, ನಗಾನಾಂ-ಪರ್ವತಗಳ, ಚರಿತಂ-ಚರಿತ್ರೆಯನ್ನು, ಶ್ರುತ್ವಾ - ಕೇಳಿ, ಏಷಾಂ - ಈ ಪರ್ವತಗಳ, ಪಕ್ಷಾನ್ - ರೆಕ್ಕೆಗಳನ್ನು, ವಜ್ರೇಣ-ವಜ್ರಾಯುಧದಿಂದ, ಸಹಸ್ರಶಃ - ಅನೇಕ ಪ್ರಕಾರವಾಗಿ, ಚಿಚ್ಛೇದ - ಕತ್ತರಿಸಿದನು ॥೧೪॥ ಹೇವತ್ಸ .ಎಲೈ ಮಗುವೆ ! ಅಹಂತು - ನಾನಾದರೋ, ಮಹಾತ್ಮನಾ - ಮಹಾನುಭಾವನಾದ, ತವ-ನಿನ್ನ, ಪಿತ್ರಾ - ತಂದೆಯಾದ, ಮಾರುತೇನ - ವಾಯುವಿನಿಂದ, ತದಾ - ಆಕಾಲದಲ್ಲಿ, ತಸ್ಮಾತ್ - ಆ ದೇವೇಂದ್ರನ ದೆಸೆಯಿಂದ,

---

ಕುರಿತು ಎಲೈ ಆಂಜನೇಯನೆ ! ನಾನು ನಿನಗೆ ಚಿಕ್ಕತಂದೆಯಾಗ ಬೇಕು. ನಾನು ನಿನ್ನ ತಂದೆಯಾದ ವಾಯುವಿನ ಸ್ನೇಹಿತನು. ನನ್ನ ಹೆಸರು ಮೈನಾಕಪರ್ವತವು ನಾನು ಈ ಸಮುದ್ರದಲ್ಲಿ ವಾಸಮಾಡಿಕೊಂಡಿರುವೆನು. ॥೧೨॥ ಎಲೈ ಮಗುವೇ ! ಪೂರ್ವದಲ್ಲಿ ಪರ್ವತಗಳಿಗೆಲ್ಲಾ ರೆಕೆ ಗಳಿದ್ದುವು. ಆಗ ಪರ್ವತಗಳೆಲ್ಲಾ ಮನಸ್ಸು ಬಂದ ಕಡೆಗೆ ಹಾರಿ ಹೋಗಿ, ಪಟ್ಟಣಗಳ ಮೇಲೂ, ಊರುಗಳ ಮೇಲೂ, ಕೂತುಕೊಂಡು, ಲೋಕವನ್ನೆಲ್ಲಾ ಬಾಧಿಸುತಿದ್ದುವು ॥೧೩॥ ಹೀಗೆ ಪರ್ವತಗಳು ಲೋಕಕಂಟಕಗಳಾಗಿರುವುದನ್ನು ಕೇಳಿ ದೇವೇಂದ್ರನು ಲೋಕವನ್ನು ರಕ್ಷಿಸುವುದಕ್ಕಾಗಿ ತನ ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನೆಲ್ಲಾ ಸಾವಿರಾರು ಚೂರುಗಳಾಗುವಂತೆ ಕತ್ತರಿಸಿ ಹಾಕಿದನು. ೧೪॥ ಎಲೈ ಮಗುವೇ ! ಅಂಥಾ ಕಷ್ಟಕಾಲವು ನನಗೆ ಪ್ರಾಪ್ತವಾಗಿದ್ದಾಗ ನಿಮ್ಮ ತಂದೆಯಾದ

ಮಾರುತೇನ ತದಾ ವತ್ಸ ಪ್ರಕ್ಷಿಪ್ತೋಽಸ್ಮಿ ಮಹಾರ್ಣವೇ ॥೧೫॥
ರಾಮಸ್ಯ ಚ ಮಯಾ ಸಾಹ್ಯೇ ವರ್ತಿತವ್ಯ ಮರಿಂದಮ ॥
ರಾಮೋ ಧರ್ಮಭೃತಾಂ ಶ್ರೇಷ್ಠೋ ಮಹೇಂದ್ರ ಸಮವಿಕ್ರಮಃ ॥೧೬॥
ಏತ ಚ್ಛ್ರುತ್ವಾ ವಚ ಸ್ತಸ್ಯ ಮೈನಾಕಸ್ಯ ಮಹಾತ್ಮನಃ ।
ಕಾರ್ಯ ಮಾವೇದ್ಯ ತು ಗಿರೇ ರುದ್ಯತಂ ಚ ಮನೋಮಮ ॥ ೧೭॥
ತೇನ ಚಾಹ ಮನುಜ್ಞಾತೋ ಮೈನಾಕೇನ ಮಹಾತ್ಮನಾ ॥
ಸಚಾ ಪ್ಯಂತರ್ಹಿತ ಶ್ಶೈಲೋ ಮಾನುಷೇಣ ವಪುಷ್ಮತಾ ।
ಶರೀರೇಣ ಮಹಾಶೈಲ ಶ್ಶೈಲೇನ ಚ ಮಹೋದಧೌ ॥೧೮॥
ಉತ್ತಮಂ ಜವ ಮಾಸ್ಥಾಯ ಶೇಷಂ ಪಂಥಾನ ಮಾಸ್ಥಿತಃ ।

---

ಮೋಕ್ಷಿತಃ - ಬಿಡುಗಡೆ ಮಾಡಿಸಲ್ಪಟ್ಟವನಾಗಿ, ಮಹಾರ್ಣವೇ - ಅಗಾಧವಾದ ಈ ಸಮುದ್ರದಲ್ಲಿ, ಪ್ರಕ್ಷಿಪ್ತೋಽಸ್ಮಿ - ಹಾಕಲ್ಪಟ್ಟೆನು ॥೧೫॥ ಹೇ ಅರಿಂದಮ - ಎಲೈ ಶತ್ರುಸಂಹಾರಕನಾದ ಮಾರುತಿಯೇ! ಮಯಾ - ನನ್ನಿಂದ, ರಾಮಸ್ಯ - ಶ್ರೀರಾಮನ, ಸಾಹ್ಯೇಚ - ಸಹಾಯ ಕಾರ್ಯದಲ್ಲಿ, ವರ್ತಿತವ್ಯಂ-ಪ್ರಯತ್ನಿಸೋಣವಾಗಿದೆ, ಏಕೆಂದರೆ-ರಾಮಃ - ಶ್ರೀರಾಮನು, ಧರ್ಮಭೃತಾಂ- ಧರ್ಮಿಷ್ಠರೊಳಗೆ, ಶ್ರೇಷ್ಠಃ - ಉತ್ತಮನಾದವನು, ಮತ್ತು ಮಹೇಂದ್ರಸಮವಿಕ್ರಮಃ - ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನು, ॥೧೬॥ ಮಹಾತ್ಮನಃ - ಮಹಾ ಮಹಿಮೆಯುಳ್ಳ, ತಸ್ಯಮೈನಾಕಸ್ಯ - ಆ ಮೈನಾಕಪರ್ವತದ, ಏತದ್ವಚಃ - ಈ ಮಾತನ್ನು, ಶ್ರುತ್ವಾ - ಕೇಳಿ, ಗಿರೇಃ - ಆ ಮೈನಾಕಪರ್ವತಕ್ಕೆ, ಕಾರ್ಯಂ - ಮಾಡಬೇಕಾದ ಕೆಲಸವನ್ನು, ಆವೇದ್ಯಚ-ಹೇಳಿ, ಮಮ-ನನ್ನ, ಮನಃ - ಮನಸ್ಸು, ಉದ್ಯತಂ - ಉದ್ಯುಕ್ತವಾಯಿತು (ಪಾ-ಉದ್ಧೃತಂ - ಮುಂದಕ್ಕೆ ಚಲಿಸಿತು) ॥೧೭॥ ಅಹಂ - ನಾನು, ಮಹಾತ್ಮನಾ - ಪೂಜ್ಯನಾದ, ತೇನ ಮೈನಾಕೇನ - ಆ ಮೈನಾಕಪರ್ವತದಿಂದ, ಅನುಜ್ಞಾತಶ್ಚ - ಅಪ್ಪಣೆಯನ್ನು ಸಹ ಪಡೆದನು, ಸಚ ಶೈಲೋಽಪಿ- ಆ ಮೈನಾಕಪರ್ವತವೂ ಕೂಡ, ವಪುಷ್ಮತಾ- ಪುಷ್ಕಳವಾದ, ಮಾನುಷೇಣ- ಮನುಷ್ಯಸಂಬಂಧವಾದ, ಶರೀರೇಣ-ದೇಹದಿಂದ, ಅಂತರ್ಹಿತಃ-ಮರೆಯಾಯಿತು, ಶೈಲೇನ-ಶಿಲಾಸಂಬಂಧವಾದ ಶರೀರದಿಂದ, ಮಹಾಶೈಲಸ್ಸನ್ - ದೊಡ್ಡ ಪರ್ವತವಾಗಿ, ಮಹೋದಧೌ- ಸಮುದ್ರದ ಮೇಲುಭಾಗದಲ್ಲಿ (ಸ್ಥಿತಶ್ಚ - ನಿಂತಿತ್ತು) ॥೧೮॥ ಉತ್ತಮಂ - ಶ್ರೇಷ್ಠವಾದ, ಜವಂ - ವೇಗವನ್ನು, ಆಸ್ಥಾಯ-

---

ವಾಯುವು ನನ್ನನ್ನು ಎತ್ತಿಕೊಂಡು ಬಂದು, ಈ ಸಾಗರದ ಮಧ್ಯದಲ್ಲಿ ಹಾಕಿ ಕಾಪಾಡಿದನು ॥೧೫॥ ಈಗ ನೀನು ಶ್ರೀರಾಮನ ಕಾರ್ಯಕ್ಕಾಗಿ ಹೋಗುತ್ತಿರುವೆ. ಶ್ರೀರಾಮನು ಸಕಲ ಧರ್ಮಗಳನ್ನೂ ತಿಳಿದವನು. ಪರಾಕ್ರಮದಲ್ಲಿ ದೇವೇಂದ್ರನಿಗೆ ಸಮಾನನು. ಅಂಥಾ ರಾಮನ ಕಾರ್ಯಕ್ಕೆ ನನ್ನಿಂದಾಗುವ ಸಹಾಯವನ್ನು ಮಾಡುವುದು ನನಗೆ ಧರ್ಮವಾಗಿರುತ್ತದೆ. ॥೧೬॥ ಹೀಗೆ ಹೇಳಿದ ಮಹಾತ್ಮನಾದ ಮೈನಾಕನ ಮಾತನ್ನು ಕೇಳಿ,ನಾನು ಉದ್ಯೋಗಿಸಿರುವ ಕಾರ್ಯವನ್ನು ಆತನಿಗೆ ತಿಳಿಸಿ, ಮುಂದಕ್ಕೆ ಪ್ರಯಾಣಮಾಡಲುದ್ಯುಕ್ತನಾದೆನು. ॥೧೭॥ ಆಗ ಮೈನಾಕನು ಮುಂದಿನ ಪ್ರಯಾಣಕ್ಕೆ ನನಗೆ ಅನುಜ್ಞೆಯನ್ನುಕೊಟ್ಟು ತಾನು ತನ್ನ ಮನುಷ್ಯರೂಪನ್ನು ಮರೆಮಾಡಿಕೊಂಡು, ದೊಡ್ಡ ಪರ್ವತರೂಪದಿಂದ ಸಮುದ್ರದ ಮೇಲು ಭಾಗದಲ್ಲಿ ನಿಂತಿದ್ದನು. ॥೧೮॥ ಪ್ರಯಾಣವನ್ನು ಬೇಗ ಮುಗಿಸಬೇಕೆಂದು

ತತೋಽಹಂ ಸುಚಿರಂ ಕಾಲಂ ವೇಗೇ ನಾಭ್ಯಗಮಂ ಪಥಿ ॥೨೦॥
ತತಃ ಪಶ್ಯಾಮ್ಯಹಂ ದೇವೀಂ ಸುರಸಾಂ ನಾಗ ಮಾತರಂ ।
ಸಮುದ್ರಮಧ್ಯೇ ಸಾದೇವೀ ವಚನಂ ಮಾ ಮಭಾಷತ ॥೨೧॥
ಮಮ ಭಕ್ಷಃ ಪ್ರದಿಷ್ಟ ಸ್ತ್ವ ಮಮರೈ ಹ‌ರಿ ಸತ್ತಮ ।
ಅತ ಸ್ತ್ವಾಂ ಭಕ್ಷಯಿಷ್ಯಾಮಿ ವಿಹಿತ ಸ್ತ್ವಂ ಚಿರಸ್ಯಮೇ ॥೨೨॥
ಏವ ಮುಕ್ತಃ ಸುರಸಯಾ ಪ್ರಾಂಜಲಿಃ ಪ್ರಣತ ಸ್ಥಿತಃ ।
ವಿವರ್ಣ ವದನೋ ಭೂತ್ವಾ ವಾಕ್ಯಂ ಚೇದ ಮುದೀರಯಮ್ ॥೨೩॥
ರಾಮೋ ದಾಶರಥಿ ಶ್ರೀಮಾನ್ ಪ್ರವಿಷ್ಟೋ ದಂಡಕಾವನಂ ।

---

ಅವಲಂಬಿಸಿ, ಶೇಷಂ - ಉಳಿದಿರುವ, ಪಂಥಾನಂ ಮಾರ್ಗವನ್ನು, ಆಸ್ಥಿತಃ - ಹೊಂದಿದ, ಅಹಂ - ನಾನು, ತತಃ - ಆ ಮೇಲೆ, ಸುಚಿರಂ ಕಾಲಂ - ಬಹುಕಾಲದವರೆಗೆ, ಪಥಿ - ಮಾರ್ಗದಲ್ಲಿ, ವೇಗೇನ - ಜಾಗ್ರತೆಯಿಂದ, ಅಭ್ಯಗಮಂ - ಪ್ರಯಾಣಮಾಡಿದೆನು ॥೨೦॥ ತತಃ - ಅನಂತರದಲ್ಲಿ, ಅಹಂ - ನಾನ , ನಾಗ ಮಾತರಂ - ಸರ್ಪಗಳಿಗೆ ತಾಯಿಯಾದ, ಸುರಸಾಂ ದೇವೀಂ - ಸುರಸೆಯೆಂಬ ದೇವತೆಯನ್ನು-ಪಶ್ಯಾಮಿ - ನೋಡಿದೆನು, ಸಾದೇವೀ - ಆ ಸುರಸೆಯು, ಸಮುದ್ರಮಧ್ಯೇ - ಸಾಗರ ಮಧ್ಯದಲ್ಲಿ, ಮಾಂ - ನನ್ನನ್ನು ಕುರಿತು, ವಚನಂ - ಮಾತನ್ನು, ಅಭಾಷತ- ಹೇಳಿದಳು ॥೨೧॥ ಹೇಹರಿಸತ್ತಮ- ಎಲೈ ಕಪಿಶ್ರೇಷ್ಠನೇ . ತ್ವಂ - ನೀನು, ಅಮರೈಃ - ದೇವತೆಗಳಿಂದ, ಮಮ - ನನಗೆ, ಭಕ್ಷಃ -ತಿಂದುಹಾಕುವ ಪದಾರ್ಥವಾಗಿ, ಪ್ರದಿಷ್ಟಃ-ಕೊಡಲ್ಪಟ್ಟಿರುತ್ತೀಯೆ, ಅತಃ - ಆಕಾರಣದಿಂದ, ತ್ವಾಂ - ನಿನ್ನನ್ನು, ಭಕ್ಷಯಿಷ್ಯಾಮಿ - ತಿಂದುಹಾಕುತ್ತೇನೆ, ತ್ವಂ - ನೀನು, ಮೇ - ನನಗೆ, ಚಿರಸ್ಯ - ಬಹುಕಾಲಕ್ಕೆ, ವಿಹಿತಃ-ಸಿಕ್ಕಿರುವೆ ॥೨೨॥ ಏವಂ - ಈ ರೀತಿಯಾಗಿ, ಸುರಸಯಾ - ಸುರಸೆಯಿಂದ, ಉಕ್ತಃ - ಹೇಳಲ್ಪಟ್ಟ. ಪ್ರಾಂಜಲಿಃ - ಕೈಯನ್ನು ಜೋಡಿಸಿಕೊಂಡವನಾಗಿ, ಪ್ರಣತಃ - ನಮಸ್ಕಾರಮಾಡಿದವನಾಗಿ, ಸ್ಥಿತಃ - ನಿಂತುಕೊಂಡ ನಾನು ವಿವರ್ಣವದನಃ -ಕಾಂತಿವಿಹೀನವಾದ ಮುಖವುಳ್ಳವನು, ಭೂತ್ವಾ ಆಗಿ, ಇದಂ-ಮುಂದೆಹೇಳುವ, ವಾಕ್ಯಾಂಚ-ವಾಕ್ಯವನ್ನು ಕೂಡ, ಉದೀರಯಂ - ಹೇಳಿದೆನು ॥೨೩॥ ದಾಶರಥಿಃ - ದಶರಥರಾಜನ ಮಗನಾದ ಶ್ರೀಮಾನ್ - ಸಂಪದ್ಯುಕ್ತನಾದ, ಪರಂತಪಃ- ಶತ್ರುಸಂಹಾರಕನಾದ, ರಾಮಃ- ಶ್ರೀರಾಮನು, ಭ್ರಾತ್ರಾ- ತಮ್ಮನಾದ, ಲಕ್ಷ್ಮಣೇನ - ಲಕ್ಷ್ಮಣನೊಡನೆಯೂ, ಸೀತಯಾಸಹ - ಸೀತಾದೇವಿಯೊಡನೆಯೂ

---

ಆಮೇಲೆ ನನ್ನ ವೇಗವನ್ನು ಹೆಚ್ಚಿಸಿದೆನು. ಹೀಗೆ ಬಹು ಕಾಲ ವೇಗದಿಂದ ಹಾರಿಹೋಗು ತ್ತಿದ್ದೆನು. ॥ ೨೦ ॥ ಕೆಲವುದೂರ ಹೋದನಂತರ ಸರ್ಪಗಳಿಗೆ ತಾಯಿಯಾದ ಸುರಸೆ ಯೆಂಬ ದೇವತೆಯು ಸಮುದ್ರದ ಮಧ್ಯದಲ್ಲಿ ನಿಂತುಕೊಂಡು, ನನ್ನನ್ನು ಕಂಡು, ಎಲೈ ವಾನರೋತ್ತಮನೇ ! ದೇವತೆಗಳು ನಿನ್ನನ್ನು ನನಗೆ ಆಹಾರವಾಗಿ ಕೊಟ್ಟಿರುವರು. ಬಹಳ ದಿವಸಗಳ ಮೇಲೆ ನೀನು ನನಗೆ ಸಿಕ್ಕಿರುವೆಯಾದಕಾರಣ ಈಗ ನಾನು ನಿನ್ನನ್ನು ತಿಂದು ಬಿಡುವೆನು. ॥೨೨॥ ಹೀಗೆ ಸುರಸೆಹೇಳಿದ ಮಾತನ್ನು ಕೇಳಿ, ನನ್ನ ಮುಖವು ಬಣ್ಣಗೆಟ್ಟಿತು. ನಾನು ಕೈಜೋಡಿಸಿಕೊಂಡು, ಅವಳಿಗೆ ನಮಸ್ಕಾರಮಾಡಿ, ಹೀಗೆ ಹೇಳಿದೆನು ॥೨೩॥ ಎಲೌ ನಾಗಮಾತೆಯೇ ! ದಶರಥ ಚಕ್ರವರ್ತಿಯ ಮಗನಾದ ಶ್ರೀರಾಮನು-ತನ್ನ ಪತ್ನಿ ಯಾದ ಸೀತಾದೇವಿಯಿಂದಲೂ,ತಮ್ಮನಾದ ಲಕ್ಷ್ಮಣನಿಂದಲೂ ಕೂಡಿ,ದಂಡಕಾರಣ್ಯವನ್ನು

ಲಕ್ಷ್ಮಣೇನ ಸಹಭ್ರಾತ್ರಾ ಸೀತಯಾ ಚ ಪರಂತಪಃ ॥೨೦॥
ತಸ್ಯ ಸೀತಾ ಹೃತಾ ಭಾರ್ಯಾ ರಾವಣೇನ ದುರಾತ್ಮನಾ ।
ತಸ್ಯಾ ಸ್ಸಕಾಶಂ ದೂತೋಽಹಂ ಗಮಿಷ್ಯೇ ರಾಮ ಶಾಸನಾತ್ ॥೨೫॥ ॥
ಕರ್ತು ಮರ್ಹಸಿ ರಾಮಸ್ಯ ಸಾಹಾಯ್ಯಂ ವಿಷಯೇಸತೀ ।
ಅಥವಾ ಮೈಥಿಲೀಂ ದೃಷ್ಟ್ವಾ ರಾಮಂ ಚಾಕ್ಲಿಷ್ಟ ಕಾರಿಣಮ್ ॥
ಆಗಮಿಷ್ಯಾಮಿ ತೇ ವಕ್ತ್ರಂ ಸತ್ಯಂ ಪ್ರತಿಶೃಣೋಮಿ ತೆ ॥೨೬॥
ಏವ ಮುಕ್ತಾ ಮಯಾ ಸಾ ತು ಸುರಸಾ ಕಾಮ ರೂಪಿಣೀ ।

---

ದಂಡಕಾವನಂ-ದಂಡಕಾರಣ್ಯವನ್ನು, ಪ್ರವಿಷ್ಟಃ - ಪ್ರವೇಶಿಸಿದನು ॥೨೪॥ ತಸ್ಯ - ಆ ರಾಮನ, ಭಾರ್ಯಾ ಹೆಂಡತಿಯಾದ, ಸೀತಾ - ಸೀತೆಯು, ದುರಾತ್ಮನಾ - ಪಾಪಿಷ್ಠನಾದ, ರಾವಣೇನ - ರಾವಣನಿಂದ, ಹೃತಾ - ಅಪಹರಿಸಲ್ಪಟ್ಟಳು, ದೂತಃ - ಅವನ ಆಳಾದ, ಅಹಂ - ನಾನು, ರಾಮಶಾಸನಾತ್ -ಶ್ರೀ ರಾಮನ ಅಪ್ಪಣೆಯ ಪ್ರಕಾರ, ತಸ್ಯಾಃ - ಆ ಸೀತಾದೇವಿಯ, ಸಕಾಶಂ - ಸಮೀಪವನ್ನು ಕುರಿತು, ಗಮಿಷ್ಯೇ - ಹೋಗುತ್ತಿರುವೆನು ॥೨೫॥ ವಿಷಯೇ-ಸ್ವರಾಜ್ಯದಲ್ಲಿ, ಸತೀ - ವಾಸಮಾಡಿಕೊಂಡಿರುವ ನೀನು, ರಾಮಸ್ಯ - ಶ್ರೀ ರಾಮನಿಗೆ, ಸಾಹಾಯ್ಯಂ - ಉತ್ಸಾಹವನ್ನು, ಕರ್ತುಂ - ಮಾಡುವುದಕ್ಕೆ ಅರ್ಹಸಿ - ಯೋಗ್ಯಳಾಗಿದ್ದೀಯೆ, ಅಥವಾ - ಹಾಗಿಲ್ಲದಿದ್ದರೆ, ಮೈಥಿಲೀಂ - ಸೀತಾದೇವಿಯನ್ನು, ಅಕ್ಲಿಷ್ಟಕಾರಿಣಂ - ನಿರ್ವಿಘ್ನವಾಗಿ ಕಾರ್ಯಸಿದ್ಧಿಯನ್ನು ಪಡೆದ, ರಾಮಂಚ - ಶ್ರೀ ರಾಮನನ್ನು ಸಹ, ದೃಷ್ಟ್ವಾ ನೋಡಿ, ತೇ - ನಿನ್ನ, ವಕ್ತ್ರಂ - ಮುಖವನ್ನು, ಆಗಮಿಷ್ಯಾಮಿ - ಪ್ರವೇಶಿಸುವೆನು , ತೇ - ನಿನಗೆ, ಸತ್ಯಂ - ನಿಜವಾಗಿಯೂ, ಪ್ರತಿಶೃಣೋಮಿ - ಮಾತುಕೊಡುತ್ತೇನೆ, ॥೨೬॥ ಮಯಾ - ನನ್ನಿಂದ, ಏವಂ - ಈ ರೀತಿಯಾಗಿ, ಉಕ್ತಾ - ಹೇಳಲ್ಪಟ್ಟ, ಕಾಮರೂಪಿಣೀ - ಮನಬಂದರೂಪವನ್ನು ಧರಿಸತಕ್ಕವಳಾದ, ಸಾ ಸುರಸಾತು - ಆ ಸುರಸೆಯಾದರೋ, ಕಶ್ಚಿತ್ - ಒಬ್ಬನೂ ಸಹ, ನಾತಿವರ್ತೇತ - ನನ್ನನ್ನು ಅತಿಕ್ರಮಿಸಿ ಹೋಗಲಾರನು, ಏಷಃ - ಇದು, ಮಮ-ನನಗೆ, ವರಃ -ಅನುಗ್ರಹವು (ಎಂಬದಾಗಿ) ಅಬ್ರವೀತ್ - ಹೇಳಿದಳು ॥೨೭॥ ಏವಂ - ಹೀಗೆ, ಸುರಸಯಾ - ಸುರಸೆಯಿಂದ, ಉಕ್ತಃ - ಹೇಳಲ್ಪಟ್ಟ

---

ಪ್ರವೇಶಿಸಿ, ಅಲ್ಲಿ ವಾಸಮಾಡಿಕೊಂಡಿದ್ದನು. ಅಲ್ಲಿ ದುಷ್ಟರಾದ ಅನೇಕ ರಾಕ್ಷಸರನ್ನು ಕೊಂದನು. ಆ ಶ್ರೀರಾಮನ ಧರ್ಮಪತ್ನಿಯಾದ ಸೀತಾದೇವಿಯನ್ನು ದುರಾತ್ಮನಾದ ರಾವಣನು ಅಪಹರಿಸಿಕೊಂಡು ಹೋಗಿರುವನು. ಅದಕ್ಕಾಗಿ ಶ್ರೀರಾಮನು ಸೀತೆಯನ್ನು ನೋಡಿಕೊಂಡು ಬರುವುದಕ್ಕಾಗಿ ನನ್ನನ್ನು ಕಳುಹಿಸಿರುವನು. ನಾನು ಶ್ರೀರಾಮನ ದೂತನು॥೨೪ ೨ ॥ ಆದುದರಿಂದ ನನ್ನ ಪ್ರಯಾಣಕ್ಕೆ ನೀನು ವಿಘ್ನವನ್ನು ಮಾಡಬೇಡ. ರಾಮಕಾರ್ಯಕ್ಕೆ ನೀನು ಸಹಾಯಮಾಡಬೇಕು. ನಿನ್ನ ರಾಜ್ಯದಲ್ಲಿಯೇ ನೀನು ಇದ್ದುಕೊಂಡಿರು. ಹಾಗಿಲ್ಲದಿದ್ದರೆ ನಾನು ಸೀತಾದರ್ಶನವನ್ನು ಮಾಡಿ, ಆ ಸಂಗತಿಯನ್ನು ಶ್ರೀರಾಮನಿಗೆ ತಿಳಿಸಿದ ಮೇಲೆ ನಿನ್ನ ಇಷ್ಟಾನುಸಾರವಾಗಿ ನಿನ್ನ ಬಾಯಿಗೆ ಬಂದು ಸೇರುವೆನು. ಈ ಮಾತಿಗೆ ತಪ್ಪುವುದಿಲ್ಲ. ಸತ್ಯವಾಗಿಯೂ ಬರುವೆನು ॥೨೬॥ ॥ ಹೀಗೆ ನಾನು ಹೇಳಲು ಅದನ್ನು ಕೇಳಿ ಕಾಮರೂಪಿಣಿಯಾದ ಸುರಸೆಯು-ಅಯ್ಯಾ ! ನನ್ನನ್ನು ಯಾರೂ ಅತಿಕ್ರಮಿಸಿ ಹೋಗಕೂಡದು, ಇದು ನನಗೆ ವರವಾಗಿರುತ್ತದೆ ಎಂದಳು. ಆ ಮಾತನ್ನು ಕೇಳಿದಕ್ಷಣವೇ ನಾನು

ಅಬ್ರವೀನ್ನಾತಿ ವರ್ತೇತ ಕಶ್ಚಿದೇಷ ವರೋ ಮಮ ||೨೭||
ಏವ ಮುಕ್ತ ಸ್ಸುರಸಯಾ ದಶಯೋಜನ ಮಾಯತಃ ||
ತತೋಽರ್ಧ ಗುಣ ವಿಸ್ತಾರೋ ಬಭೂವಾಹಂ ಕ್ಷಣೇನ ತು ||೨೮||
ಮತ್ಪ್ರಮಾಣಾ ನುರೂಪಂ ಚ ವ್ಯಾದಿತಂ ತು ಮುಖಂ ತಯಾ |
ತದ್ದೃಷ್ಟ್ವಾ ವ್ಯಾದಿತಂ ಚಾಸ್ಯಂ ಹ್ರಸ್ವಂ ಹ್ಯಕರವಂ ವಪುಃ ||೨೯||
ತಸ್ಮಿನ್ ಮುಹೂರ್ತೇ ಚ ಪುನ ರ್ಬಭೂವಾಂ ಗುಷ್ಠ ಮಾತ್ರಕಃ ||೩೦||
ಅಭಿಪತ್ಯಾಶು ತದ್ವಕ್ತ್ರಂ ನಿರ್ಗತೋಽಹಂ ತತಃ ಕ್ಷಣಾತ್ ||೩೦||
ಅಬ್ರವೀ ತ್ಸುರಸಾ ದೇವೀ ಸ್ವೇನ ರೂಪೇಣ ಮಾಂ ಪುನಃ ||೩೧||

ಅಹಂ - ನಾನು, ಕ್ಷಣೇನ - ಒಂದು ಕ್ಷಣಕಾಲದೊಳಗೆ, ದಶಯೋಜನಂ - ಹತ್ತು ಗಾವುದದವರೆಗೆ, ಆಯತಃ - ಉದ್ದವಾಗಿಯೂ, ತತಃ - ಅದಕ್ಕಿಂತಲೂ, ಅರ್ಧಗುಣವಿಸ್ತಾರಃ - ಇನ್ನೂ ಹೆಚ್ಚು ಅಗಲ ಉಳ್ಳವನಾಗಿಯೂ, ಬಭೂವ - ಆದೆನು ||೨೮||-|| ತಯಾತು-ಅವಳಿಂದಲಾದರೋ, ಮತ್ಪ್ರಮಾಣಾನುರೂಪಂ - ನನ್ನಷ್ಟೇ ಪ್ರಮಾಣವುಳ್ಳ, ವದನಂಚ - ಮುಖವೂ, ವ್ಯಾದಿತಂ- ತೆರೆಯಲ್ಪಟ್ಟಿತು, ತತ್-ಆ ಆಸ್ಯಂಚ - ಮುಖವನ್ನು, ದೃಷ್ಟ್ವಾ- ನೋಡಿ. ವಪುಃ - ಶರೀರವನ್ನು, ಹ್ರಸ್ವಂ - ಸೂಕ್ಷ್ಮವಾಗಿ, ಅಕರವಂಹಿ - ಮಾಡಿದೆನಲ್ಲವೆ, ತಸ್ಮಿನ್ - ಮುಹೂರ್ತೇಚಪುನಃ - ಆ ಕಾಲದಲ್ಲಿಯೇ, ಅಂಗುಷ್ಠಮಾತ್ರಕಃ - ಹೆಬ್ಬೆರಳಿನಷ್ಟು ಸಣ್ಣನಾಗಿ, ಬಭೂವ - ಆದೆನು, ||೩೦|| ಅಹಂ - ನಾನು, ತದ್ವಕ್ತ್ರಂ - ಆ ಸುರಸೆಯ ಮುಖವನ್ನು, ಅಭಿಪತ್ಯ - ನುಗ್ಗಿ, ಕ್ಷಣಾತ್ - ಒಂದು ಕ್ಷಣಕಾಲದಲ್ಲಿ, ತತಃ - ಆ ಮುಖದ ದೆಸೆಯಿಂದ, ಆಶು - ಬೇಗನೆ, ನಿರ್ಗತಃ - ಹೊರಟು ಬಂದೆನು, ಸುರಸಾದೇವೀ - ನಾಗಮಾತೆಯಾದ ಸುರಸೆಯು, ಪುನಃ - ಮತ್ತೆ, ಸ್ವೇನರೂಪೇಣ - ತನ್ನ ನಿಜರೂಪದಿಂದ, ಮಾಂ - ನನ್ನನು, ಕುರಿತು, ಅಬ್ರವೀತ್ - ಹೇಳಿದಳು ||೩೧|| ಹೇ ಹರಿಶ್ರೇಷ್ಠ - ಎಲೈ ವಾನರೋತ್ತಮನಾದ ಆಂಜನೇಯನೇ, ಹೇಸೌಮ್ಯ-ಸೌಮ್ಯನೇ, ಅರ್ಥಸಿದ್ಧ್ಯೈ - ನಿನ್ನ ಇಷ್ಟಾರ್ಥವನ್ನು ಪಡೆಯುವುದಕ್ಕಾಗಿ ಯಥಾಸುಖಂ - ಸೌಖ್ಯವಾಗಿ, ಗಚ್ಛ - ಹೋಗು, ವೈದೇಹೀಂಚ - ಸೀತಾದೇವಿಯನ್ನು ಕೂಡಾ, ಮಹಾತ್ಮನಾ ಮಹಾನುಭಾವನಾದ, ರಾಘವೇಣ - - ಶ್ರೀರಾಮಚಂದ್ರನೊಡನೆ, ಸಮಾನಯ - ಸೇರಿಸು, ಹೇ ವಾನರ ಎಲೈ ಕಪಿಶ್ರೇಷ್ಠನೇ ! ತವ - ನಿನಗೆ. ಪ್ರೀತಾಸ್ಮಿ - ಸುಪ್ರೀತಳಾಗಿರುವೆನು. ಹೇ ಮಹಾಬಾಹೋ -

ಹತ್ತು ಗಾವುದದ ಉದ್ದವಾಗಿಯೂ, ಅದಕ್ಕಿಂತ ಸ್ವಲ್ಪ ಹೆಚ್ಚು ಅಗಲವುಳ್ಳವನಾಗಿಯೂ ಬೆಳೆದೆನು. ||೨೮|| || ಅವಳೂ ಸಹ ನನ್ನ ಪ್ರಮಾಣಕ್ಕೆ ಅನುಗುಣವಾಗಿಯೇ ಬಾಯನ್ನು ತೆರೆದಳು. ||೨೯|| ಹಾಗೆ ಅವಳು ಬಾಯನ್ನು ತೆರೆದುದನ್ನು ಕಂಡು, ನಾನು ಮತ್ತೆ ಸಣ್ಣರೂಪವನ್ನು ಹೊಂದಿ, ಅಂಗುಷ್ಠಮಾತ್ರದ ಗಾತ್ರವುಳ್ಳವನಾಗಿ,ತತ್‌ಕ್ಷಣವೇ ಅವಳ ಮುಖದಿಂದ ಈಚೆಗೆ ಬಂದು ಮುಂದಕ್ಕೆ ಹೊರಟೆನು. ಆಗ ಸುರಸಾದೇವಿಯು ತನ್ನನಿಜರೂಪದಿಂದ ನನ್ನನ್ನು ಕುರಿತು-ಎಲೈ ಕಪಿಶ್ರೇಷ್ಠನೇ ! ಎಲೈ ಸೌಮ್ಯನೇ ! ನಿನಗೆ ಕಾರ್ಯಸಿದ್ಧಿಯಾಗಲಿ, ನೀನು ಸುಖವಾಗಿ ಹೋಗಿಬಾ, ಸೀತಾದೇವಿಯನ್ನುಶ್ರೀರಾಮನ ಸನ್ನಿಧಿಗೆಕರೆದುಕೊಂಡು ಹೋಗಿ ಬಿಡು. ನಿನ್ನ ವಿಷಯದಲ್ಲಿ ನಾನು ಸುಪ್ರೀತಳಾದೆನು. ನೀನು ಸೌಖ್ಯವನ್ನುಹೊಂದು ಎಂದುಹೇಳಿದಳು. ||೩೦-೩೨|| ಆ ಬಳಿಕ ಸಕಲಪ್ರಾಣಿಗಳೂ-ಸಾಧು, ಸಾಧು, ಎಂದು

ಅರ್ಥಸಿದ್ಧ್ಯೈ ಹರಿಶ್ರೇಷ್ಠ ಗಚ್ಛ ಸೌಮ್ಯ ಯಥಾಸುಖಮ್ ।
ಸಮಾನಯ ಚ ವೈದೇಹೀಂ ರಾಘವೇಣ ಮಹಾತ್ಮನಾ ॥೩೩॥
ಸುಖೀ ಭವ ಮಹಾಬಾಹೋ ಪ್ರೀತಾಽಸ್ಮಿ ತವ ವಾನರ ।
ತತೋಽಹಂ ಸಾಧು ಸಾಧ್ವೀತಿ ಸರ್ವಭೂತೈಃ ಪ್ರಶಂಸಿತಃ ॥೩೪॥
ತತೋಽಂತರಿಕ್ಷಂ ವಿಪುಲಂ ಪ್ಲುತೋಽಹಂ ಗರುಡೋ ಯಥಾ ।
ಛಾಯಾ ಮೇ ನಿಗೃಹೀತಾ ಚ ನಚ ಪಶ್ಯಾಮಿ ಕಿಂಚನ ॥೩೫॥
ಸೋಽಹಂ ವಿಗತ ವೇಗಸ್ತು ದಿಶೋ ದಶ ವಿಲೋಕಯನ್ ।
ನ ಕಿಂಚಿ ತ್ತತ್ರ ಪಶ್ಯಾಮಿ ಯೇನ ಮೇಽಪ ಹೃತಾ ಗತಿಃ ॥೩೬॥
ತತೋ ಮೇ ಬುದ್ಧಿ ರುತ್ಪನ್ನಾ ಕಿನ್ನಾಮ ಗಮನೇ ಮಮ ।
ಈದೃಶೋ ವಿಘ್ನ ಉತ್ಪನ್ನೋ ರೂಪಂ ಯತ್ರ ನ ದೃಶ್ಯತೇ ॥೩೭॥

ಎಲೈ ಬಾಹುಪರಾಕ್ರಮವುಳ್ಳ ವಾನರನೇ! ಸುಖೀಭವ - ಸೌಖ್ಯವನ್ನು ಹೊಂದು ॥೩೩॥ ತತಃ - ಆ ಮೇಲೆ, ಸರ್ವಭೂತೈಃ - ಸಕಲ ಪ್ರಾಣಿಗಳಿಂದಲೂ, ಸಾಧುಸಾಧ್ವೀತಿ - ಸಾಧು, ಸಾಧು, ಎಂದು, ಪ್ರಶಂಸಿತಃ - ಹೊಗಳಲ್ಪಟ್ಟೆನು. (ಇಲ್ಲಿ ಸಾಧ್ವೀತಿ ಎಂದು ದೀರ್ಘವು ಆರ್ಷಪ್ರಯೋಗವೆಂದು ತಿಳಿಯಬೇಕು) ॥೩೪॥ ತತಃ - ಆ ಬಳಿಕ, ಅಹಂ - ನಾನು, ಗರುಡೋಯಥಾ - ಗರುತ್ಮಂತನ ಹಾಗೆ, ವಿಪುಲಂ - ವಿಸ್ತಾರವಾದ, ಅಂತರಿಕ್ಷಂ - ಆಕಾಶದಲ್ಲಿ ಪ್ಲುತಃ - ಹಾರುತ್ತಿದ್ದೆನು. ಮೇ - ನನ್ನ, ಛಾಯಾ- ನೆರಳು, ನಿಗೃಹೀತಾ - ಹಿಡಿಯಲ್ಪಟ್ಟಿತು, ಕಿಂಚನ - ಛಾಯಾಗ್ರಾಹಿಯಾದ ಯಾವ ಪ್ರಾಣಿಯನ್ನೂ, ನಚಪಶ್ಯಾಮಿ - ಕಾಣದೇ ಹೋದೆನು, ॥ ೩೫ ॥ ಸೋಽಹಂತು - ಆ ನಾನಾದರೋ, ವಿಗತವೇಗಸ್ಸನ್- ಪ್ರತಿಬಂಧಪಲ್ಪಟ್ಟ ವೇಗವುಳ್ಳವನಾಗಿ, ದಶದಿಶಃ - ಹತ್ತುದಿಕ್ಕುಗಳನ್ನೂ, ವಿಲೋಕಯನ್ - ನೋಡುವವನಾಗಿ, ಯೇನ - ಯಾವ ಪ್ರಾಣಿಯಿಂದ, ಮೇ - ನನ್ನ, ಗತಿಃ - ಗಮನವು, ಅಪಹೃತಾ - ಅಪಹರಿಸಲ್ಪಟ್ಟಿತೋ ಅದನ್ನು, ತತ್ರ - ಅಲ್ಲಿ, ನಕಿಂಚಿತ್ ಪಶ್ಯಾಮಿ - ಸ್ವಲ್ಪವೂ ಕಾಣಲಿಲ್ಲ. ॥೩೬॥ ತತಃ - ಆಮೇಲೆ, ಮಮ - ನನ್ನ, ಗಮನೇ - ಪ್ರಯಾಣದಲ್ಲಿ, ಕಿಂನಾಮ - ಏನುಪ್ರಯೋಜನವು ? ಯತ್ರ- ಯಾವ ಪ್ರಯಾಣದಲ್ಲಿ, ಈದೃಶಃ - ಇಂಥಾ, ವಿಘ್ನಃ - ಪ್ರತಿಬಂಧಕವು, ಉತ್ಪನ್ನಃ- ಉಂಟಾಯಿತೋ, ರೂಪಂ - ಆಕಾರವು, ನದೃಶ್ಯತೆ ಕಾಣಲ್ಪಡುವುದಿಲ್ಲ. (ಇತಿ-ಹೀಗೆ) ಮೇ - ನನಗೆ, ಬುದ್ಧಿಃ - ಬುದ್ಧಿಯು, ಉತ್ಪನ್ನಾ - ಉಂಟಾಯಿತು ॥೩೭॥

ಸಾಧುವಾದವನ್ನು ಹೇಳುತ್ತ, ನನ್ನನ್ನು ಹೊಗಳುತ್ತಿರಲು, ನಾನು ಗರುಡನಂತೆ ಆಕಾಶದಲ್ಲಿ ಹಾರಿಹೋಗುತ್ತಿದ್ದೆನು. ಹೀಗೆ ಮಹಾವೇಗವಾಗಿ ಹಾರುತ್ತಿದ್ದ ನನ್ನ ನೆರಳನ್ನು ಯಾರೋ ತಡೆದು ಬಿಟ್ಟರು. ತಡೆದವರು ಯಾರೋ ನನಗೆ ತಿಳಿಯಲಿಲ್ಲ. ಯಾವ ಪ್ರಾಣಿಯೂ ಸಹ ಅಲ್ಲಿರಲಿಲ್ಲ. ॥೩೪-೩೫॥ ಹೀಗೆ ತಡೆಯಲ್ಪಟ್ಟ ವೇಗವುಳ್ಳ ನಾನು-ಹತ್ತುದಿಕ್ಕುಗಳಲ್ಲಿಯೂ ಕಣ್ಣಿಟ್ಟು ನೋಡಿದಾಗ್ಯೂ ಅಲ್ಲಿ ಯಾವ ಪ್ರಾಣಿಯೂ ನನಗೆ ಕಾಣಿಸಲಿಲ್ಲ. ॥೩೬॥ ಹೀಗೆ ನನ್ನ ಪ್ರಯಾಣಕ್ಕೆ ವಿಘ್ನವುಂಟಾದ ಮೇಲೆ, ನಾನು ಏನು ಮಾಡುವುದಕ್ಕೂ ತೋರದೆ, ವಿಘ್ನವನ್ನುಂಟುಮಾಡಿದ ಪ್ರಾಣಿಯು ಕಾಣಿಸುವುದಿಲ್ಲವಲ್ಲ, ಇದೇನಿರಬಹುದು ? ಎಂದು ನನಗೆ ಯೋಚನೆಯುಂಟಾಯಿತು. ॥೩೭॥ ಹೀಗೆ ವ್ಯಸನ ಪಡುತ್ತಿದ್ದ ನನ್ನ ದೃಷ್ಟಿಯು ಕೆಳಭಾ

ಅಧೋಭಾಗೇನ ಮೇ ದೃಷ್ಟಿಃ ಶೋಚತಾ ಪಾತಿತಾ ಮಯಾ ।
ತತೋಽದ್ರಾಕ್ಷ ಮಹಂ ಭೀಮಾಂ ರಾಕ್ಷಸೀಂ ಸಲಿಲೇ ಶಯಾಮ್ ॥೩೭॥
ಪ್ರಹಸ್ಯ ಚ ಮಹಾನಾದ ಮುಕ್ತೋಽಹಂ ಭೀಮಯಾ ತಯಾ ।
ಅವಸ್ಥಿತ ಮಸಂಭ್ರಾಂತ ಮಿದಂ ವಾಕ್ಯ ಮಶೋಭನಮ್ ॥೩೮॥
ಕ್ವಾಸಿ ಗಂತಾ ಮಹಾಕಾಯ ಕ್ಷುಧಿತಾಯಾ ಮಮೇಪ್ಸಿತಃ ।
ಭಕ್ಷಃ ಪ್ರೀಣಯ ಮೇ ದೇಹಂ ಚಿರ ಮಾಹಾರ ವರ್ಜಿತಮ್ ॥೩೯॥
ಬಾಢ ಮಿತ್ಯೇವ ತಾಂ ವಾಣೀಂ ಪ್ರತ್ಯಗೃಹ್ಣ ಮಹಂ ತತಃ ।
ಆಸ್ಯ ಪ್ರಮಾಣಾ ದಧಿಕಂ ತಸ್ಯಾಃ ಕಾಯ ಮಪೂರಯಮ್ ॥೪೦॥

---

ಶೋಚತಾ - ದುಃಖಪಡುತ್ತಿರುವ, ಮಯಾ - ನನ್ನಿಂದ, ಅಧೋಭಾಗೇನ - ಕೆಳಭಾಗದಿಂದ- ಮೇ - ನನ್ನ, ದೃಷ್ಟಿಃ - ನೋಟವು, ಪಾತಿತಾ - ಬೀಳಿಸಲ್ಪಟ್ಟಿತು, ತತಃ - ಅನಂತರ, ಅಹಂ - ನಾನು ಭೀಮಾಂ - ಭಯಂಕರಳಾದ, ಸಲಿಲೇ - ನೀರಿನಲ್ಲಿ, ಶಯಾಂ - ಮಲಗಿರುವ, ರಾಕ್ಷಸೀಂ - ಒಬ್ಬ ರಾಕ್ಷಸಸ್ತ್ರೀಯನ್ನು, ಅದ್ರಾಕ್ಷಂ - ನೋಡಿದೆನು ॥೩೭॥ ಅಹಂ - ನಾನು, ಭೀಮಯಾ - ಭಯಂಕರಳಾದ, ತಯಾ - ಅವಳಿಂದ, ಮಹಾನಾದಂ - ಗಟ್ಟಿಯಾದಧ್ವನಿಯಿಂದ ಕೂಡಿ, ಪ್ರಹಸ್ಯ - ನಕ್ಕು, ಅವಸ್ಥಿತಂ - ನಿಶ್ಚೇಷ್ಟನಾದ, ಅಸಂಭ್ರಾಂತಂ - ಭಯವಿಲ್ಲದವನಾದ ನನ್ನನ್ನು ಲಕ್ಷೀಕರಿಸಿ, ಅಶೋಭನಂ - ಅಮಂಗಳಕರವಾದ, ಇದಂವಾಕ್ಯಂ - ಈ ಮಾತು, ಉಕ್ತಃ - ಹೇಳಲ್ಪಟ್ಟೆನು, ॥೩೮॥ ಹೇಮಹಾಕಾಯ - ಎಲೈ ದೊಡ್ಡದೇಹವುಳ್ಳವನೇ ! ಕ್ವ - ಎಲ್ಲಿಗೆ, ಗಂತಾಸಿ - ಹೋಗುತ್ತಿರುವೆ, ಕ್ಷುಧಿತಾಯಾಃ - ಆಹಾರಾಪೇಕ್ಷೆಯುಳ್ಳ, ಮಮ - ನನಗೆ, ಈಪ್ಸಿತಃ - ಇಷ್ಟವಾದ, ಭಕ್ಷಃ - ತಿಂಡಿಯಾಗಿದ್ದೀಯೆ, ಚಿರಂ - ಬಹುಕಾಲದಿಂದ, ಆಹಾರವರ್ಜಿತಂ - ತಿಂಡಿಯಿಲ್ಲದೇ ಇರುವ, ಮೇ - ನನ್ನ, ದೇಹಂ - ಶರೀರವನ್ನು, ಪ್ರೀಣಯ- ಸಂತೋಷಪಡಿಸು ॥೩೯॥ ತತಃ - ಆಬಳಿಕ, ಅಹಂ - ನಾನು, ಬಾಢಮಿತ್ಯೇವ - ಹಾಗೆಯೇ ಆಗಲೆಂದು, ತಾಂವಾಣೀಂ - ಆ ಮಾತನ್ನು, ಪ್ರತ್ಯಗೃಹ್ಣಂ - ಅಂಗೀಕರಿಸಿದೆನು, ಮತ್ತು, ತಸ್ಯಾಃ - ಅವಳ, ಆಸ್ಯಪ್ರಮಾಣಾತ್ - ಬಾಯಿಯ ಅಳತೆಗಿಂತಲೂ, ಅಧಿಕಂ - ದೊಡ್ಡದಾಗಿ, ಕಾಯಂ - ನನ್ನ ಶರೀರವನ್ನು, ಅಪೂರಯಂ - ದೊಡ್ಡದನ್ನಾಗಿ ಮಾಡಿದೆನು, ತಸ್ಯಾಃ - ಅವಳ, ಆಸ್ಯಂಚ - ಮುಖವೂ ಕೂಡ, ಮಮ - ನನ್ನ, ಭಕ್ಷಣೇ - ತಿನ್ನುವ ವಿಷಯದಲ್ಲಿ, ಮಹತ್ - ದೊಡ್ಡದಾಗಿಯೂ, ಭೀಮಂ - ಭಯಂಕರವಾಗಿಯೂ, ವರ್ಧತೇ-ವೃದ್ಧಿಯಾಯಿತು ॥೪೦॥ ಸಾ-ಅವಳು, ಮಾಂ-ಕಾಮರೂಪಿಯಾದ ನನ್ನನ್ನು,

---

ಗಕ್ಕೆ ಪ್ರಸರಿಸಲಾಗಿ, ಮಹಾ ಭಯಂಕರವಾದ ರೂಪವನ್ನು ಧರಿಸಿ, ನೀರಿನಮೇಲೆ ಮಲಗಿದ್ದ ಒಬ್ಬ ರಾಕ್ಷಸಿಯನ್ನು ಕಂಡೆನು. ॥ ೩೭ ॥ ಆಗ ಅವಳು ಗಟ್ಟಿಯಾಗಿ ಅಟ್ಟಹಾಸವನ್ನು ಮಾಡುತ್ತ, ನಿಶ್ಚೇಷ್ಟಳಾಗಿ, ಭಯಪಡದೆ ನನ್ನನ್ನು ಕುರಿತು-ಎಲೈ ದೊಡ್ಡ ದೇಹವುಳ್ಳವನೇ ! ನೀನು ಎಲ್ಲಿಗೆ ಹೋಗುತ್ತೀಯೆ ? ಬಹುಕಾಲದಿಂದ ಆಹಾರವಿಲ್ಲದ ನನಗೆ ನೀನು ಉತ್ತಮವಾದ ಆಹಾರವಾಗಿ ದೊರಕಿರುವುದರಿಂದ ನಿನ್ನನ್ನು ತಿಂದು ತೃಪ್ತಳಾಗುವೆನು ಎಂದು ಅಮಂಗಳ ಕರವಾಗಿ ಮಾತನಾಡಲು, ಅದನ್ನು ಕೇಳಿ,ನಾನು ಹಾಗೆಯೇ ಆಗಲೆಂದು ಬಾಯೊಳಕ್ಕೆ ಹೊಕ್ಕು, ಅವಳ ಬಾಯಿಯ ಪ್ರಮಾಣಕ್ಕಿಂತಲೂ ದೊಡ್ಡದಾಗಿ ನನ್ನ ದೇಹವನ್ನು ಬೆಳೆಸಿದೆನು. ನಾನು ದೇಹವನ್ನು ಬೆಳೆಸಿದುದನ್ನು ತಿಳಿದು, ಅವಳೂ ಸಹ ನನ್ನನ್ನು ತಿನ್ನಬೇಕೆಂಬ

ತಸ್ಯಾ ಶ್ಚಾಸ್ಯಂ ಮಹ ದ್ಭೀಮಂ ವರ್ಧತೇ ಮಮ ಭಕ್ಷಣೇ ।
ನಚ ಮಾಂ ಸಾತು ಬಬುಧೇ ಮಮ ವಾ ವಿಕೃತಂ ಕೃತಮ್ ॥೪೧॥
ತತೋಽಹಂ ವಿಪುಲಂ ರೂಪಂ ಸಂಕ್ಷಿಪ್ಯ ನಿಮಿಷಾಂತರಾತ್ ।
ತಸ್ಯಾ ಹೃದಯ ಮಾದಾಯ ಪ್ರಪತಾಮಿ ನಭ ಸ್ಸ್ಥಲಮ್ ॥೪೨॥
ಸಾ ವಿಸೃಷ್ಟ ಭುಜಾ ಭೀಮಾ ಪಪಾತ ಲವಣಾಂಭಸಿ ।
ಮಯಾ ಪರ್ವತ ಸಂಕಾಶಾ ನಿಕೃತ್ತ ಹೃದಯಾ ಸತೀ ॥೪೩॥
ಶೃಣೋಮಿ ಖಗತಾನಾಂ ಚ ಸಿದ್ಧಾನಾಂ ಚಾರಣೈ ಸ್ಸಹ ।
ರಾಕ್ಷಸೀ ಸಿಂಹಿಕಾ ಭೀಮಾ. ಕ್ಷಿಪ್ರಂ ಹನುಮತಾ ಹತಾ ॥೪೪॥
ತಾಂ ಹತ್ವಾ ಪುನರೇವಾಹಂ ಕೃತ್ಯ ಮಾತ್ಯಯಿಕಂ ಸ್ಮರನ್ ।

---

ಸಾಧು-ಚೆನ್ನಾಗಿ, ನಬುಬುಧೇ-ತಿಳಿಯಲಿಲ್ಲ, ಕೃತಂ-ಮಾಡಲ್ಪಟ್ಟ, ಮಮ-ನನ್ನ ಸಂಬಂಧವಾದ, ವಿಕೃತಂ ವಾ – ವಿಕಾರಸ್ವರೂಪವನ್ನಾದರೂ, ನಚಬುಬುಧೇ – ಅವಳು ತಿಳಿಯಲಿಲ್ಲ ॥೪೧॥ ತತಃ – ಆ ಮೇಲೆ, ಅಹಂ – ನಾನು, ವಿಪುಲಂ – ದೊಡ್ಡದಾದ, ರೂಪಂ – ಆಕಾರವನ್ನು, ನಿಮಿಷಾಂತರಾತ್ – ಒಂದು ನಿಮಿಷದೊಳಗೆ, ಸಂಕ್ಷಿಪ್ಯ – ಚಿಕ್ಕದನ್ನಾಗಿ ಮಾಡಿಕೊಂಡು, ತಸ್ಯಾಃ – ಅವಳ, ಹೃದಯಂ – ಶರೀರವನ್ನು, ಆದಾಯ – ಸೀಳಿ, ನಭಸ್ಸ್ಥಲಂ-ಆಕಾಶಮಾರ್ಗವನ್ನು ಕುರಿತು, ಪ್ರಪತಾಮಿ – ಹಾರಿಹೋದೆನು ॥೪೨॥ ವಿಸೃಷ್ಟಭುಜಾ – ಕಳೆದುಕೊಂಡ ತೋಳುಗಳುಳ್ಳ, ಭೀಮಾ- ಭಯಂಕರಳಾದ, ಮಯಾ- ನನ್ನಿಂದ, ನಿಕೃತ್ತಹೃದಯಾ – ಸೀಳಲ್ಪಟ್ಟ ಶರೀರವುಳ್ಳವಳಾದ, ಅಸತೀ – ದುಷ್ಟಳಾದ, ಸಾ – ಆ ರಾಕ್ಷಸಿಯು, ಪರ್ವತಸಂಕಾಶಾ – ದೊಡ್ಡ ಬೆಟ್ಟದಂತೆ, ಲವಣಾಂಭಸಿ – ಸಮುದ್ರದ ಉಪ್ಪುನೀರಿನಲ್ಲಿ ಪಪಾತ – ಬಿದ್ದಳು ॥೪೩॥ ಭೀಮಾ – ಭಯಂಕರಳಾದ, ಸಿಂಹಿಕಾ – ಸಿಂಹಿಕೆಯೆಂಬ, ರಾಕ್ಷಸೀ – ರಕ್ಕಸಿಯು, ಹನುಮತಾ – ಆಂಜನೇಯನಿಂದ, ಕ್ಷಿಪ್ರಂ – ಜಾಗ್ರತೆಯಾಗಿ, ಹತಾ – ಸಂಹರಿಸಲ್ಪಟ್ಟಳು ಎಂಬ, ಚಾರಣೈಸ್ಸಹ – ಚಾರಣರುಗಳೊಡನೆ ಕೂಡಿದ, ಖಗತಾನಾಂ – ಆಕಾಶದಲ್ಲಿ ಸಂಚಾರವುಳ್ಳ, ಸಿದ್ಧಾನಾಂ – ಸಿದ್ಧರೆಂಬ ದೇವತೆಗಳ, ವಚಃ – ಮಾತನ್ನು, ಶೃಣೋಮಿ – ಕೇಳಿದೆನು ॥೪೪॥ ಅಹಂ – ನಾನು, ತಾಂ – ಆ ಸಿಂಹಿಕೆಯನ್ನು, ಹತ್ವಾ – ಕೊಂದು, ಪುನರೇವ – ಮತ್ತೂ, ಆತ್ಯಯಿ

---

ಆಸೆಯಿಂದ ಅತಿಭಯಂಕರವಾಗಿ ತನ್ನ ಬಾಯನ್ನು ಮೊದಲಿಗಿಂತಲೂ ಅಗಲವಾಗಿ ತೆರೆದಳು. ॥೩೯-೪೦॥ ॥ ನಾನು ಕಾಮರೂಪಿಯೆಂಬುದನ್ನಾಗಲಿ, ವಿಕಾರವಾದ ನನ್ನ ರೂಪವನ್ನಾಗಲಿ ತಿಳಿಯದೇ ಹೋದಳು. ॥ ೪೧ ॥ ಅವಳು ಹೀಗೆ ಬಾಯಿತೆರೆದ ಮೇಲೆ ನನ್ನ ಆಕಾರವನ್ನು ಚಿಕ್ಕದು ಮಾಡಿಕೊಂಡು, ಒಂದು ನಿಮಿಷದೊಳಗೆ ಅವಳ ಶರೀರವನ್ನು ಸೀಳಿಕೊಂಡು ಆಕಾಶಕ್ಕೆ ಹಾರಿಹೋದೆನು. ॥೪೨॥ ಹೀಗೆ ನನ್ನಿಂದ ಭೇದಿಸಲ್ಪಟ್ಟ ಶರೀರವುಳ್ಳ ಅನೀಚಳಾದ ರಾಕ್ಷಸಿಯು-ಕತ್ತರಿಸಲ್ಪಟ್ಟತೋಳುಗಳುಳ್ಳವಳಾಗಿ, ಅತಿಭಯಂಕರವಾಗಿ ಕಾಣಿಸಿಕೊಳ್ಳುತ್ತಾ, ದೊಡ್ಡಬೆಟ್ಟದಂತೆ ಆ ಸಾಗರದ ಉಪ್ಪುನೀರಿನಲ್ಲಿ ಬಿದ್ದಳು ॥೪೩॥ ಆಗ ಆಕಾಶದಲ್ಲಿ ಸಂಚರಿಸುತ್ತಿದ್ದ ಸಿದ್ಧರು-ಚಾರಣರೊಡನೆ, ಭಯಂಕರಾಕಾರಳಾದ ಸಿಂಹಿಕೆಯೆಂಬ ರಾಕ್ಷಸಿಯನ್ನು ಆಂಜನೇಯನು ನಿಮಿಷ ಮಾತ್ರದಲ್ಲಿ ಸಂಹರಿಸಿಬಿಟ್ಟನೆಂದು ಅಂದುಕೊಳ್ಳುತಿದ್ದ ಮಾತು ನನ್ನ ಕಿವಿಗೆ ಕೇಳಿಸಿತು ॥೪೪॥ ನಾನು ಹೀಗೆ ಆ ಸಿಂಹಿಕೆಯ

ಗತ್ವಾ ಚಾಹಂ ಮಹಾಧ್ವಾನಂ ಪಶ್ಯಾಮಿ ನಗ ಮಂಡಿತಮ್ ॥೪೧॥
ದಕ್ಷಿಣಂ ತೀರ ಮುದಧೇಃ ಲಙ್ಕಾ ಯತ್ರ ಚ ಸಾ ಪುರೀ ॥೪೫॥
ಅಸ್ತಂ ದಿನಕರೇ ಯಾತೇ ರಕ್ಷಸಾಂ ನಿಲಯಂ ಪುರಮ್
ಪ್ರವಿಷ್ಟೋಽಹ ಮವಿಜ್ಞಾತೋ ರಕ್ಷೋಭಿ ರ್ಭೀಮ ವಿಕ್ರಮೈಃ ॥೪೬॥
ತತ್ರ ಪ್ರವಿಶತ ಶ್ಚಾಪಿ ಕಲ್ಪಾಂತ ಘನ ಸನ್ನಿಭಾ ।
ಅಟ್ಟಹಾಸಂ ವಿಮುಂಚಂತೀ ನಾರೀ ಕಾ ಪ್ಯುತ್ಥಿತಾ ಪುರಃ ॥೪೭॥
ಜಿಘಾಂಸಂತೀಂ ತತ ಸ್ತಾಂ ತು ಜ್ವಲದಗ್ನಿ ಶಿರೋರುಹಾಮ್ ।
ಸವ್ಯ ಮುಷ್ಟಿ ಪ್ರಹಾರೇಣ ಪರಾಜಿತ್ಯ ಸುಭೈರವಾಮ್ ॥೪೮॥

---

ಕಂ - ಪ್ರಾಣಾಂತಿಕವಾದ, ಕರ್ಮ - ಕೆಲಸವನ್ನು, ಸ್ಮರನ್ - ಯೋಚಿಸುವವನಾಗಿ, ಅಹಂ - ನಾನು, ಮಹಾಧ್ವಾನಂ - ಅತಿದೀರ್ಘವಾದ ಮಾರ್ಗವನ್ನು, ಗತ್ವಾಚ -ಪ್ರಯಾಣಮಾಡಿ, ಯತ್ರಚ - ಯಾವ ದಕ್ಷಿಣ ತೀರದಲ್ಲಿ, ಸಾ - ಆ ಪ್ರಸಿದ್ಧವಾದ, ಲಂಕಾ - ಲಂಕೆಯೆಂಬ ಪಟ್ಟಣವು ಇರುವುದೋ ಅಂಥಾ, ನಗಮಂಡಿತಂ - ಪರ್ವತಗಳಿಂದ ಅಲಂಕರಿಸಲ್ಪಟ್ಟ, ಅಥವಾ ವೃಕ್ಷಗಳಿಂದ ಶೋಭಿಸುವ, ಉದಧೇಃ - ಸಮುದ್ರದ, ದಕ್ಷಿಣಂ ತೀರಂ - ದಕ್ಷಿಣ ದಿಕ್ಕಿನ ದಡವನ್ನು, ಪಶ್ಯಾಮಿ - ನೋಡಿದೆನು, ॥೪೫॥ ದಿನಕರೇ- ಸೂರ್ಯನು, ಅಸ್ತಂ - ಅಸ್ತಪರ್ವತವನ್ನು, ಯಾತೇಸತಿ - ಹೊಂದುತ್ತಿರಲಾಗಿ, ಭೀಮವಿಕ್ರಮೈಃ - ಭಯಂಕರವಾದ ಪರಾಕ್ರಮವುಳ್ಳ, ರಕ್ಷೋಭಿಃ - ರಾಕ್ಷಸರಿಂದ, ಅವಿಜ್ಞಾತಸ್ಸನ್- ಕಾಣಿಸಿಕೊಳ್ಳದವನಾಗಿ ರಕ್ಷಸಾಂ - ರಾಕ್ಷಸರ, ನಿಲಯಂ - ಸ್ಥಾನವಾದ, ಪುರಂ - ಲಂಕಾಪಟ್ಟಣವನ್ನು ಪ್ರವಿಷ್ಟಃ - ಪ್ರವೇಶಿಸಿದೆನು ॥೪೬॥ ತತ್ರ - ಅಲ್ಲಿ, ಪ್ರವಿಶತಃ - ಪ್ರವೇಶಮಾಡುತ್ತಿರುವ ನನ್ನ, ಪುರಃ-ಮುಂದುಗಡೆಯಲ್ಲಿ ಕಲ್ಪಾಂತಘನಸನ್ನಿಭಾ - ಪ್ರಳಯಕಾಲದ ಮೇಘದಂತಿರುವ, ಅಟ್ಟಹಾಸಂ- ಗಟ್ಟಿಯಾಗಿ ನಗುವಿಕೆಯನ್ನು ವಿಮುಂಚಂತೀ - ಬಿಡುತ್ತಿರುವ, ಕಾಪಿನಾರೀ-ಒಬ್ಬ ಹೆಂಗಸು, ಉತ್ಥಿತಾ-ಎದ್ದು ನಿಂತುಕೊಂಡಳು. ॥೪೭॥ ತತಃ - ಅನಂತರದಲ್ಲಿ, ಜಿಘಾಂಸಂತೀಂ - ಕೊಲ್ಲುವಾಕಲೆಳಸುತ್ತಿರುವವಳಾಗಿಯೂ, ಜ್ವಲದಗ್ನಿಶಿರೋರುಹಾಂ - ಉರಿಯುತ್ತಿರುವ ಬೆಂಕಿಯಂತಿರುವ ತಲೆಕೂದಲುಳ್ಳವಳಾಗಿಯೂ, ಸುಭೈರವಾಂ-ಮಹಾಭಯಂಕರಗಳಾಗಿಯೂ ಇರುವ, ತಾಂ - ಆ ರಕ್ಕಸಿಯನ್ನು, ಸವ್ಯಮುಷ್ಟಿಪ್ರಹಾರೇಣ - ಎಡದಮುಷ್ಟಿಯ ಏಟಿನಿಂದ, ಪರಾಜಿತ್ಯ - ಜಯಿಸಿ, ಪ್ರದೋಷಕಾಲೇ - ಸಾಯಂಕಾಲದಲ್ಲಿ, ಪ್ರವಿಶಂ - ಪ್ರವೇಶಿಸಿದೆನು ॥೪೮॥ ಭೀತಯಾ - ಹೆದರಿಕೊಂಡಿರುವ, ತಯಾ - ಆ ರಾಕ್ಷಸಿಯಿಂದ, ಅಹಂ - ನಾನು, ಉದಿತಃ

---

ನ್ನು ಕೊಂದು, ಆ ಕೊಲೆ ಗೆಲಸವನ್ನೇ ಮನಸ್ಸಿನಲ್ಲಿ ಚಿಂತಿಸುತ್ತ, ಬಹುದೂರ ಪ್ರಯಾಣ ಮಾಡಿ ಪ್ರಸಿದ್ಧವಾದ ಲಂಕಾಪಟ್ಟಣವು ಯಾವಸ್ಥಳದಲ್ಲಿ ಪ್ರಕಾಶಿಸುತ್ತಿದೆಯೋ, ಅಂಥಾ ದಕ್ಷಿಣ ದಿಕ್ಕಿನ ಸಮುದ್ರದ ತೀರವನ್ನು ನೋಡಿದೆನು. ॥೪೫॥ ॥ ಸೂರ್ಯನು ಮುಳುಗುವ ಸಮಯಕ್ಕೆ ಸರಿಯಾಗಿ ಪುಷ್ಕಳವಾದ ರಕ್ಕಸರಿಂದ ಕಿಕ್ಕಿರಿದಿರುವ ಲಂಕಾಪುರವನ್ನು ಮಹಾ ಬಲಶಾಲಿಗಳಾದ ಯಾವ ರಾಕ್ಷಸರ ಕಣ್ಣಿಗೂ ಗೋಚರಿಸದಂತೆ ಪ್ರವೇಶಿಸಿದೆನು. ॥೪೬॥ ಹೀಗೆ ಪಟ್ಟಣದೊಳಕ್ಕೆ ಹೋಗುವಾಗ ಪ್ರಳಯಕಾಲದ ಮೇಘದಂತೆ ಕಾಣಿಸಿಕೊಳ್ಳುತ್ತ, ಗಟ್ಟಿಯಾಗಿ ಕೇಕೆಹಾಕುತ್ತ, ಒಬ್ಬ ಹೆಂಗಸು ನನ್ನ ಮುಂದುಗಡೆಯಲ್ಲಿ ಬಂದುನಿಂತಳು. ॥೪೭॥ ಹೀಗೆ ನಿಂತುಕೊಂಡ ಕಾಲದಲ್ಲಿ ಅವಳ ತಲೆಯ ಕೂದಲು ಉರಿಯುತ್ತಿರುವ ಬೆಂಕಿಯಂತೆ

ಪ್ರದೋಷ ಕಾಲೇ ಪ್ರವಿಶಂ ಭೀತಯಾಽಹಂ ತಯೋದಿತಃ ||೪೯||
ಅಹಂ ಲಂಕಾಪುರೀ ವೀರ ನಿರ್ಜಿತಾ ವಿಕ್ರಮೇಣ ತೇ |
ಯಸ್ಮಾತ್ತಸ್ಮಾದ್ವಿಜೇತಾಽಸಿ ಸರ್ವರಕ್ಷಾಂಸ್ಯಶೇಷತಃ||೫೦||
ತತ್ರಾಹಂ ಸರ್ವರಾತ್ರಂ ತು ವಿಚಿನ್ವನ್ ಜನಕಾತ್ಮಜಾಮ್ |
ರಾವಣಾಂತಃಪುರಗತೋ ನಚಾಪಶ್ಯಂ ಸುಮಧ್ಯಮಾಂ ||೫೧||
ತತಸ್ಸೀತಾಮಪಶ್ಯಂಸ್ತು ರಾವಣಸ್ಯ ನಿವೇಶನೇ |
ಶೋಕಸಾಗರಮಾಸಾದ್ಯ ನ ಪಾರಮುಪಲಕ್ಷಯೇ ||೫೨||
ಶೋಚತಾ ಚ ಮಯಾ ದೃಷ್ಟಂ ಪ್ರಾಕಾರೇಣ ಸಮಾವೃತಮ್ |
ಕಾಂಚನೇನ ವಿಚಿತ್ರೇಣ ಗೃಹೋಪವನಮುತ್ತಮಂ ||೫೩||

ಹೇಳಲ್ಪಟ್ಟೆನು, ಹೇವೀರ - ಎಲೈಶೂರನೆ! ಅಹಂ - ನಾನು, ಲಂಕಾಪುರೀ - ಲಂಕಾಪಟ್ಟಣವು, ಯಸ್ಮಾತ್ - ಯಾವಕಾರಣದಿಂದ, ತೇ - ನಿನ್ನ, ವಿಕ್ರಮೇಣ - ಪರಾಕ್ರಮದಿಂದ, ನಿರ್ಜಿತಾ - ಜಯಿಸಲ್ಪಟ್ಟೆನೋ, ತಸ್ಮಾತ್ - ಆ ಕಾರಣದಿಂದ, ಸರ್ವರಕ್ಷಾಂಸಿ - ಸಮಸ್ತ ರಾಕ್ಷಸರನ್ನೂ, ಅಶೇಷತಃ - ಸಂಪೂರ್ಣವಾಗಿ, ವಿಜೇತಾ - ಜಯಿಸತಕ್ಕವನು, ಅಸಿ - ಆಗಿರುತ್ತೀಯೆ ||೫೦|| ತತ್ರ - ಅಲ್ಲಿ, ಅಹಂತು - ನಾನು, ಸರ್ವರಾತ್ರಂ - ರಾತ್ರಿಯೆಲ್ಲೆಲ್ಲಾ, ಜನಕಾತ್ಮಜಾಂ - ಸೀತಾದೇವಿಯನ್ನು, ರಾವಣಾಂತಃಪುರಗತಃ - ರಾವಣನ ರಾಣೀವಾಸವನ್ನು ಸೇರಿದವನಾಗಿ, ವಿಚಿನ್ವಂಶ್ಚ - ಹುಡುಕುತ್ತಿರುವನಾದರೂ, ಸುಮಧ್ಯಮಾಂ - ಸುಂದರವಾದ ಮಧ್ಯಭಾಗವುಳ್ಳ ಸೀತಾದೇವಿಯನ್ನು, ನಚಾಪಶ್ಯಂ - ಕಾಣಲಿಲ್ಲ||೫೧|| ತತಃ - ಅನಂತರ, ರಾವಣಸ್ಯ - ರಾವಣನ, ನಿವೇಶನೇ - ಅರಮನೆಯಲ್ಲಿ, ಸೀತಾಂತು - ಸೀತಾದೇವಿಯನ್ನು, ಅಪಶ್ಯನ್ - ಕಾಣದೇ ಹೋದವನಾಗಿ, ಶೋಕಸಾಗರಂ - ದುಃಖವೆಂಬ ಸಮುದ್ರವನ್ನು, ಆಸಾದ್ಯ - ಹೊಂದಿ, ಪಾರಂ - ಕೊನೆಯನ್ನು, ನೋಪಲಕ್ಷಯೇ - ಕಾಣದೇ ಹೋದೆನು ||೫೨|| ಶೋಚತಾಚ - ದುಃಖಪಡುತ್ತಿರುವ, ಮಯಾ - ನನ್ನಿಂದ, ವಿಕೃಷ್ಟೇನ - ಬಹಳ ಉದ್ದವಾದ, ಕಾಂಚನೇನ - ಸುವರ್ಣಮಯವಾದ, ಪ್ರಾಕಾರೇಣ - ಕೋಟೆಯಿಂದ, ಸಮಾವೃತಂ - ಸುತ್ತಲ್ಪಟ್ಟಿರುವ, ಉತ್ತಮಂ - ರಮ್ಯವಾದ, ಗೃಹೋಪವನಂ - ಉದ್ಯಾನವನವು, ದೃಷ್ಟಂ - ಕಾಣಲ್ಪಟ್ಟಿತು ||೫೩|| ಸಃ - ಆ ನಾನು,

ಕಾಣಿಸಿಕೊಳ್ಳುತ್ತಿತ್ತು. ಅವಳ ಆಕಾರವು ಬಹು ಭಯಂಕರವಾಗಿತ್ತು. ಅವಳು ನನ್ನನ್ನು ಕೊಲ್ಲಬೇಕೆಂದು ಬಂದಳು. ನಾನು ನನ್ನ ಎಡಗೈ ಮುಷ್ಟಿಯಿಂದ ಅವಳಿಗೆ ಒಂದು ಗುದ್ದನ್ನು ಕೊಡಲಾಗಿ, ಅವಳು ಸೋತುಹೋಗಿ, ಭಯಪಡುತ್ತ, ನನ್ನನ್ನು ಕುರಿತು—ಎಲೈ ವೀರನೇ! ನಾನು ಲಂಕಾಪುರಿಯು, ನಿನ್ನ ಪರಾಕ್ರಮದಿಂದ ನಾನು ಸೋತುಹೋದೆನಾದ ಕಾರಣ ನೀನು ಇಲ್ಲಿರತಕ್ಕ ಸಕಲರಾದ ರಾಕ್ಷಸರನ್ನು ಜಯಿಸುವುದರಲ್ಲಿ ಸಂದೇಹವಿಲ್ಲ. ಎಂದು ಹೇಳಿದಳು, ಆಗ ಪ್ರದೋಷಕಾಲವಾಗಿತ್ತು. ನಾನು ಊರಿನೊಳಕ್ಕೆ ಪ್ರವೇಶಿಸಿದೆನು ಹೀಗೆ ಪ್ರವೇಶಿಸಿದ ನಾನು ಆ ಪಟ್ಟಣದಲ್ಲೂ ರಾವಣನ ರಾಣಿವಾಸದಲ್ಲೂ ಆ ರಾತ್ರಿಯೆಲ್ಲಾ ಹುಡುಕಿದಾಗ್ಯೂ ಸೀತಾದೇವಿಯನ್ನು ಕಾಣಲಿಲ್ಲ|| ೪೮-೪೯-೫೦-೫೧|| ರಾವಣನ ಮನೆಯಲ್ಲಿ ಸೀತೆಯು ನನಗೆ ಸಿಕ್ಕದೇ ಹೋದುದರಿಂದ ದುಃಖಸಮುದ್ರದಲ್ಲಿ ಮುಳುಗಿ, ದಡವನ್ನು ಕಾಣದೆ ಪೇಚಾಡುತ್ತಿದ್ದೆನು. ||೫೨|| ಹೀಗೆ ಶೋಕಿಸುತ್ತಿರುವ ನನಗೆ ಅತಿದೀರ್ಘವಾದ, ಚಿನ್ನದ

ಸಪ್ರಾಕಾರ ಮವಪ್ಲುತ್ಯ ಪಶ್ಯಾಮಿ ಬಹು ಪಾದಪಮ್ ॥೫೩॥
ಅಶೋಕ ವನಿಕಾ ಮಧ್ಯೇ ಶಿಂಶುಪಾ ಪಾದಪೋ ಮಹಾನ್ ।
ತ ಮಾರುಹ್ಯ ಚ ಪಶ್ಯಾಮಿ ಕಾಂಚನಂ ಕದಳೀವನಮ್ ॥೫೪॥
ಅದೂರೇ ಶಿಂಶುಪಾ ವೃಕ್ಷಾ ತ್ಪಶ್ಯಾಮಿ ವರವರ್ಣಿನೀಂ ।
ಶ್ಯಾಮಾಂ ಕಮಲ ಪತ್ರಾಕ್ಷೀ ಮುಪವಾಸ ಕೃಶಾನನಾಮ್ ॥
ತದೇಕ ವಾಸ ಸ್ಸಂವೀತಾಂ ರಜೋಧ್ವಸ್ತ ಶಿರೋರುಹಾಮ್ ೫೫॥
ಶೋಕ ಸಂತಾಪ ದೀನಾಂಗೀಂ ಸೀತಾಂ ಭರ್ತೃ ಹಿತೇ ಸ್ಥಿತಾಂ ।

ಪ್ರಾಕಾರಂ - ಕೋಟೆಯನ್ನು, ಅವಪ್ಲುತ್ಯ - ಹಾರಿ, ಬಹುಪಾದಪಂ - ಅನೇಕವೃಕ್ಷಗಳುಳ್ಳ ಉದ್ಯಾನವನ್ನು, ಪಶ್ಯಾಮಿ-ಕಂಡೆನು ॥೫೩॥ ಅಶೋಕವನಿಕಾಮಧ್ಯೇ - ಅಶೋಕವನದ ಮಧ್ಯದಲ್ಲಿ, ಮಹಾನ್ - ಅತಿದೊಡ್ಡದಾದ, ಶಿಂಶುಪಾಪಾದಪಃ - ಶಿಂಶುಪಾ ವೃಕ್ಷವು, (ಅಸ್ತಿ - ಇದೆ) ತಂ - ಆ ಶಿಂಶುಪಾವೃಕ್ಷವನ್ನು, ಆರುಹ್ಯ-ಹತ್ತಿ, ಕಾಂಚನಂ-ಸುವರ್ಣಮಯವಾದ, ಕದಳೀವನಂ-ಬಾಳೆತೋಟವನ್ನು, ಪಶ್ಯಾಮಿಚ-ಕಂಡೆನು ॥೫೪॥ ಶಿಂಶುಪಾವೃಕ್ಷಾತ್ - ಶಿಂಶುಪಾವೃಕ್ಷದಿಂದ, ಅದೂರೇ-ಸಮೀಪದಲ್ಲಿ, ವರವರ್ಣಿನೀಂ - ಉತ್ತಮವರ್ಣವುಳ್ಳವಳಾದ, ಶ್ಯಾಮಾಂ-ಯೌವನಮಧ್ಯಸ್ಥಳಾದ, ಕಮಲಪತ್ರಾಕ್ಷೀಂ - ತಾವರೆಯ ಎಸಳಿನಂತೆ ಕಣ್ಣುಳ್ಳವಳಾದ, ಉಪವಾಸಕೃಶಾನನಾಂ, ಉಪವಾಸ - ಆಹಾರವನ್ನು ತೆಗೆದುಕೊಳ್ಳದೇ ಇರುವುದರಿಂದ, ಕೃಶ - ಸಣ್ಣಗಾದ, ಆನನಾಂ - ಮುಖವುಳ್ಳವಳಾದ, ತದೇಕವಾಸಸ್ಸಂವೀತಾಂ- ರಾವಣನು ಅಪಹರಿಸಲ್ಪಟ್ಟ ಕಾಲದಲ್ಲಿ ಯಾವವಸ್ತ್ರವನ್ನು ಧರಿಸಿದ್ದಳೋ ಅದೇವಸ್ತ್ರದಿಂದ ಆಚ್ಛಾದಿತಳಾದ, ರಜೋಧ್ವಸ್ತಶಿರೋರುಹಾಂ - ಧೂಳಿನಿಂದ ಮಾಸಿಹೋದ ತಲೆಗೂದಲುಳ್ಳವಳಾದ, ಶೋಕಸಂತಾಪದೀನಾಂಗೀಂ - ಕಾಯಿಕ ಮಾನಸಿಕ ದುಃಖಗಳಿಂದ ಬಡವಾದ ಶರೀರವುಳ್ಳ, ಭರ್ತೃಹಿತೇ-ಪತಿಯು ಹಿತಕಾರ್ಯದಲ್ಲಿ, ಸ್ಥಿತಾಂ - ಇರುವ, ವಿರೂಪಾಭಿಃ - ವಿಕಾರವಾದ ಆಕಾರವುಳ್ಳ, ಕ್ರೂರಾಭಿಃ - ಭಯವನ್ನುಂಟುಮಾಡುವ, ಮಾಂಸಶೋಣಿತಭಕ್ಷಾಭಿಃ - ಮಾಂಸ, ರಕ್ತ ಇವುಗಳೇ ಆಹಾರವಾಗಿರುವ, ರಾಕ್ಷ

ಗೋಡೆಗಳಿಂದ ಕಂಗೊಳಿಸುತ್ತಿದ್ದ ದಿವ್ಯವಾದ ಒಂದು ಉದ್ಯಾನವು ಕಾಣಿಸಿತು. ॥೫೩॥ ಆ ಗೋಡೆಯನ್ನು ಹಾರಿ ನೋಡಲಾಗಿ, ಅಲ್ಲಿ ಅನೇಕ ಜಾತಿಯ ಮರಗಳಿದ್ದುವು. ಆ ಅಶೋಕವನದ ಮಧ್ಯಭಾಗದಲ್ಲಿ ಬಲುದೊಡ್ಡದಾದ ಶಿಂಶುಪಾವೃಕ್ಷವೊಂದಿದ್ದಿತು. ನಾನು ಆ ಮರವನ್ನು ಹತ್ತಿ ನೋಡಲಾಗಿ, ಒಂದು ಬಾಳೆಯತೋಟವು ಕಾಣಿಸಿತು. ಅಲ್ಲಿದ್ದ ಬಾಳೆಯ ಗಿಡಗಳೆಲ್ಲವೂ ಚಿನ್ನದ ಗಿಡಗಳಾಗಿದ್ದುವು. ॥೫೪॥ ಅಲ್ಲಿದ್ದ ಶಿಂಶುಪಾವೃಕ್ಷದ ಸಮೀಪದಲ್ಲಿ ಉತ್ತಮಸ್ತ್ರೀಲಕ್ಷಣಗಳಿಂದ ಕೂಡಿದ ಒಬ್ಬ ಹೆಂಗಸನ್ನು ನೋಡಿದೆನು. ಅವಳು ಯೌವನ ಮಧ್ಯಸ್ಥಳಾಗಿದ್ದಳು, ಅವಳ ಕಣ್ಣುಗಳು ತಾವರೆಯ ಎಸಳಿನಂತೆ ನೀಳವಾಗಿದ್ದುವು ಮುಖವು ಬಾಡಿ ಹೋಗಿದ್ದುದರಿಂದ ಬಹು ಕಾಲದಿಂದ ನಿದ್ರಾಹಾರಗಳಿಲ್ಲದವಳಂತೆ ಕಾಣಿಸುತ್ತಿದ್ದಳು. ಮಲಿನವಾದ ಒಂದೇ ಬಟ್ಟೆಯನ್ನುಟ್ಟಿದ್ದಳು. ತಲೆತುಂಬ ಧೂಳು ತುಂಬಿಕೊಂಡಿದ್ದಿತು, ಮನೋವ್ಯಥೆಯೂ, ಶರೀರ ಸಂಬಂಧವಾದದುಃಖವೂ ಬಹುವಾಗಿದ್ದುದರಿಂದ ಮೈಯೆಲ್ಲಾ ಬಡವಾಗಿದ್ದಿತು, ಮತ್ತು-ಅವಳು ತನ್ನ ಪತಿಯನ್ನುಧ್ಯಾನಿಸುತ್ತ ಕುಳಿತಿದ್ದಳು, ಅವಳ ಸುತ್ತಲೂ ಮಹಾಕ್ರೂರರಾಗಿ ರಕ್ತ, ಮಾಂಸಾಹಾರಿಗಳಾದ

ರಾಕ್ಷಸೀಭಿ ರ್ವಿರೂಪಾಭಿಃ ಕ್ರೂರಾಭಿ ರಭಿ ಸಂವೃತಾಂ ॥೫೭॥
ಮಾಂಸ ಶೋಣಿತ ಭಕ್ಷ್ಯಾಭಿ ರ್ವ್ಯಾಘ್ರೀಭಿ ರ್ಹರಿಣೀಮಿವ ॥೫೭॥ ॥
ಸಾ ಽಽ ಮಯಾ ರಾಕ್ಷಸೀಮಧ್ಯೇ ತರ್ಜ್ಯಮಾನಾ ಮುಹು ರ್ಮುಹುಃ ॥
ಏಕವೇಣೀಧರಾ ದೀನಾ ಭರ್ತೃಚಿಂತಾ ಪರಾಯಣಾ ।
ಭೂಮಿಶಯ್ಯಾ ವಿವರ್ಣಾಂಗೀ ಪದ್ಮಿನೀವ ಹಿಮಾಗಮೇ ॥೫೯॥
ರಾವಣಾ ದ್ವಿನಿವೃತ್ತಾರ್ಥಾ ಮರ್ತವ್ಯ ಕೃತ ನಿಶ್ಚಯಾ ।
ಕಥಂಚಿ ನ್ಮೃಗಶಾಬಾಕ್ಷೀ ತೂರ್ಣ ಮಾಸಾದಿತಾ ಮಯಾ ॥೬೦॥
ತಾಂ ದೃಷ್ಟ್ವಾ ತಾದೃಶೀಂ ನಾರೀಂ ರಾಮಪತ್ನೀಂ ಯಶಸ್ವಿನೀಂ ।

---

ಸೀಭಿಃ - ರಾಕ್ಷಸಿಯರಿಂದ, ಅಭಿಸಂವೃತಾಂ - ಸುತ್ತಲ್ಪಟ್ಟವಳಾದ ಕಾರಣವೇ, ವ್ಯಾಘ್ರೀಭಿಃ - ಹೆಣ್ಣು ಹುಲಿಗಳಿಂದ ಸುತ್ತಲ್ಪಟ್ಟ, ಹರಿಣೀಮಿವಸ್ಥಿತಾಂ - ಹೆಣ್ಣುಜಿಂಕೆಯಂತಿರುವ, ಸೀತಾಂ - ಸೀತಾದೇವಿಯನ್ನು, ಪಶ್ಯಾಮಿ - ಕಂಡೆನು ॥೫೭॥ ॥

ಸಾಮಯಾ - ದುಃಖದೊಡನೆ ಕೂಡಿದ, ರಾಕ್ಷಸೀಮಧ್ಯೇ - ರಕ್ಕಸಿಯರ ಮಧ್ಯದಲ್ಲಿ, ಮುಹುರ್ಮುಹುಃ - ಬಾರಿಬಾರಿಗೂ, ತರ್ಜ್ಯಮಾನಾ - ಹೆದರಿಸಲ್ಪಡುತ್ತಿರುವ, ಏಕವೇಣೀಧರಾ - ತಿರಿಗಟ್ಟಿದ ಒಂದೇಜಡೆಯುಳ್ಳವಳಾದ, ದೀನಾ - ಬಡತನವನ್ನು ಪಡೆದ, ಭರ್ತೃಚಿಂತಾಪರಾಯಣಾ- ಪತಿಯನ್ನೇಸದಾ ಧ್ಯಾನಿಸುತ್ತಿರುವ, ಭೂಮಿಶಯ್ಯಾ - ಬರೀನೆಲದಮೇಲೆ ಮಲಗಿರುವ, ವಿವರ್ಣಾಂಗೀ - ಬಣ್ಣಕೆಟ್ಟ ಶರೀರವುಳ್ಳ, ಹಿಮಾಗಮೇ - ಹಿಮಂತಋತುವಿನಲ್ಲಿರುವ, ಪದ್ಮಿನೀವಸ್ಥಿತಾ ಕಮಲದ ಬಳ್ಳಿಯಂತಿರುವ ರಾವಣಾತ್ - ರಾವಣನದೆಸೆಯಿಂದ, ವಿನಿವೃತ್ತಾರ್ಥಾ - ಹಿಂತಿರುಗಿದ ಮನೋನಿಶ್ಚಯವುಳ್ಳ, ಮರ್ತವ್ಯ ಕೃತನಿಶ್ಚಯಾ - ಪ್ರಾಣವನ್ನು ಕಳೆದುಕೊಳ್ಳಲು ನಿಶ್ಚಯಿಸಿಕೊಂಡಿರುವ, ಮೃಗಶಾಬಾಕ್ಷೀ-ಜಿಂಕೇಮರಿಯಕಣ್ಣುಗಳಂತೆ ಕಣ್ಣುಳ್ಳವಳಾದ ಸೀತಾದೇವಿಯು, ಮಯಾ - ನನ್ನಿಂದ, ಕಥಂಚಿತ್ - ಅತಿಪ್ರಯಾಸದಿಂದ, ಆಸಾದಿತಾ- ಹೊಂದಲ್ಪಟ್ಟಳು॥೬೦॥ತಾದೃಶೀಂ-ಅಂಥಾ ಅವಸ್ಥೆಯನ್ನು ಪಡೆದಿರುವ,ರಾಮಪತ್ನೀಂ-ಶ್ರೀರಾಮನ ಹೆಂಡತಿಯಾದ, ಯಶಸ್ವಿನೀಂ- ಕೀರ್ತಿಶಾಲಿನಿಯಾದ, ತಾಂ ನಾರೀಂ - ಆ ಸೀತಾದೇವಿಯನ್ನು

---

ವಿಕಾರಸ್ವರೂಪವುಳ್ಳ ಹಲವು ರಕ್ಕಸಿಯರು ತುಂಬಿಕೊಂಡಿದ್ದರು, ಹೀಗೆ ರಕ್ಕಸಿಯರಿಂದ ಸುತ್ತಲ್ಪಟ್ಟಿದ್ದ ಆಕೆಯು—ಹೆಣ್ಣು ಹುಲಿಗಳಿಂದ ಸುತ್ತಲ್ಪಟ್ಟ ಹೆಣ್ಣು ಜಿಂಕೆಯಂತೆ ಕಾಣಿಸುತ್ತಿದ್ದಳು ॥೫೭॥ ॥ ಆ ರಕ್ಕಸಿಯರು ಪ್ರತಿಕ್ಷಣದಲ್ಲೂ ಆಕೆಯನ್ನು ನಾನಾಪ್ರಕಾರವಾಗಿ ಹೆದರಿಸುತ್ತಿದ್ದರು, ಆಕೆಯ ತಲೆಯ ಕೂದಲುಗಳೆಲ್ಲವೂ ತಿರಿಗಟ್ಟಿ ಒಂದೇ ಜಡೆಯಾಗಿದ್ದಿತು, ತನ್ನ ಪತಿಯನ್ನೇ ಅನುಗಾಲವೂ ಧ್ಯಾನಮಾಡುತ್ತಿದ್ದಳು. ಹಾಸಿಗೆಯಿಲ್ಲದೆ ನೆಲದಮೇಲೆಯೇ ಮಲಗುತ್ತಿದ್ದುದರಿಂದ ಮೈಯೆಲ್ಲವೂ ಮಾಸಿಹೋಗಿತ್ತು, ಹೀಗೆ ಮಾಸಿದ ಮೈಯುಳ್ಳ ಆಕೆಯು ಹಿಮಕಾಲದ ತಾವರೇ ಬಳ್ಳಿಯಂತೆ ಕಳೆಗುಂದಿದ್ದಳು. ಆಕೆಯ ಮನೋನಿಶ್ಚಯವು ರಾವಣನ ಅಭಿಪ್ರಾಯಕ್ಕೆ ವಿರುದ್ಧವಾಗಿದ್ದಿತು, ಅಲ್ಲದೆ ಪ್ರಾಣತ್ಯಾಗಮಾಡಿಕೊಳ್ಳುವುದಕ್ಕೂ ನಿಶ್ಚಯಿಸಿರುವಂತೆ ತೋರುತ್ತಿತ್ತು,ಹೀಗೆ ಅತಿದುಃಖದಿಂದ ಪೇಚಾಡುತ್ತಿದ್ದ ಹರಿಣಾಕ್ಷಿಯಾದ ಸೀತಾದೇವಿಯು ಅತಿಪ್ರಯಾಸದಿಂದ ನನಗೆ ಗೋಚರವಾದಳು. ॥೬೦॥ ಆಗ ನಾನು-ಇಂಥಾ ಅತಿಕಷ್ಟವನ್ನು ಅನುಭವಿಸುತ್ತಿದ್ದ ಶ್ರೀರಾಮಪತ್ನಿಯನ್ನು

ತತ್ರೈವ ಶಿಂಶುಪಾ ವೃಕ್ಷೇ ಪಶ್ಯನ್ನಹ ಮವಸಿ ತಃ ॥೬೧॥
ತತೋ ಹಲಹಲಾ ಶಬ್ದಂ ಕಾಂಚೀ ನೂಪುರ ಮಿಶ್ರಿತಮ್ ।
ಶೃಣೋ ಮ್ಯಧಿಕ ಗಂಭೀರಂ ರಾವಣಸ್ಯ ನಿವೇಶನೇ ॥೬೨॥
ತತೋಹಂ ಪರಮೋದ್ವಿಗ್ನಃ ಸ್ವಂರೂಪಂ ಪ್ರತಿ ಸಂಹರನ್ ।
ಅಹಂ ತು ಶಿಂಶುಪಾವೃಕ್ಷೇ ಪಕ್ಷೀವ ಗಹನೇ ಸ್ಥಿತಃ ॥೬೩॥
ತತೋ ರಾವಣ ದಾರಾಶ್ಚ ರಾವಣಶ್ಚ ಮಹಾಬಲಃ ।
ತಂ ದೇಶಂ ಸಮನು ಪ್ರಾಪ್ತಾ ಯತ್ರ ಸೀತಾಭವತ್ ಸ್ಥಿತಾ ॥೬೪॥
ತಂ ದೃಷ್ಟ್ವಾಥ ವರಾರೋಹಾ ಸೀತಾ ರಕ್ಷೋ ಮಹಾಬಲಂ ।

---

ದೃಷ್ಟ್ವಾ - ನೋಡಿ, ಅಹಂ - ನಾನು, ತತ್ರೈವಶಿಂಶುಪಾವೃಕ್ಷೇ - ಆ ಶಿಂಶುಪಾವೃಕ್ಷದಮೇಲೆಯೇ, ಪಶ್ಯನ್ನವಸ್ಥಿತಃ - ನೋಡುತ್ತ ಕುಳಿತುಕೊಂಡೆನು ॥೬೧॥ ತತಃ - ಅಮೇಲೆ, ರಾವಣಸ್ಯ - ರಾವಣನ, ನಿವೇಶನೇ - ಪ್ರವೇಶಮಾಡಿದ ಕಾಲದಲ್ಲಿ, ಅಧಿಕಗಂಭೀರಂ - ಬಹುಗಂಭೀರವಾದ, ಕಾಂಚೀನೂಪುರಮಿಶ್ರಿತಂ - ಡಾಬು, ಕಾಲುಕಡಗ ಇವುಗಳ ಶಬ್ದದಿಂದಕೂಡಿದ, ಹಲಹಲಾಶಬ್ದಂ - ಹಲಹಲ ಎಂಬ ಧ್ವನಿಯನ್ನು, ಶೃಣೋಮಿ - ಕೇಳಿದೆನು. ॥೬೨॥ ತತಃ - ಆಮೇಲೆ, ಅಹಂ - ನಾನು, ಪರಮೋದ್ವಿಗ್ನಃ - ಅತ್ಯಂತಗಾಬರಿಪಟ್ಟವನಾಗಿ, ಸ್ವಂರೂಪಂ- ನನ್ನ ನಿಜರೂಪವನ್ನು, ಉಪಸಂಹರನ್ - ಮರೆಸಿಕೊಂಡವನಾಗಿ, ಶಿಂಶುಪಾವೃಕ್ಷೇತು - ಆ ಶಿಂಶುಪಾವೃಕ್ಷದಮೇಲೆಯೇ, ಅಹಂ - ನಾನು, ಪಕ್ಷೀವ - ಹಕ್ಕಿಯಂತೆ, ಗಹನೇ - ಎಲೆಗಳ ಮಧ್ಯದಲ್ಲಿ, ಸ್ಥಿತಃ - ಇದ್ದೆನು ॥೬೩॥ ತತಃ - ಆಬಳಿಕ, ರಾವಣದಾರಾಶ್ಚ - ರಾವಣನ ಹೆಂಡತಿಯರೂ, ಮಹಾಬಲಃ - ಮಹಾಪರಾಕ್ರಮಶಾಲಿಯಾದ, ರಾವಣಶ್ಚ - ರಾವಣನೂ, ಯತ್ರ - ಎಲ್ಲಿ, ಸೀತಾ - ಸೀತಾದೇವಿಯು, ಸ್ಥಿತಾಭವತ್ - ಇದ್ದಳೋ, ತಂದೇಶಂ - ಆ ಪ್ರದೇಶವನ್ನು ಕುರಿತು, ಸಮನುಪ್ರಾಪ್ತಾಃ - ಬಂದರು ॥೬೪॥ ಅಥ - ಅನಂತರದಲ್ಲಿ, ವರಾರೋಹಾ - ಉತ್ತಮಸ್ತ್ರೀಯಾದ, ಸೀತಾ - ಸೀತೆಯು, ತತ್‌ರಕ್ಷೋಮಹಾಬಲಂ - ಆ ರಾಕ್ಷಸರ ಗುಂಪನ್ನು, ದೃಷ್ಟ್ವಾ - ನೋಡಿ, ಊರೂ - ಎರಡುತೊಡೆಗಳನ್ನು, ಪೀನೌ - ದಪ್ಪನಾಗಿರುವ, ಸ್ತನೌ - ಎರಡು ಸ್ತನಗಳನ್ನು, ಸಂಕುಚ್ಯ - ಸಂಕೋಚಮಾಡಿಕೊಂಡು, ಬಾಹುಭ್ಯಾಂ - ಎರಡು ತೋಳುಗಳಿಂದ ಪರಿರಭ್ಯಾಪಿ - ಮುಚ್ಚಿ

---

ನೋಡುತ್ತ ಆ ಶಿಂಶುಪಾವೃಕ್ಷದ ಮೇಲೆ ಕುಳಿತುಕೊಂಡೆನು ॥ ೬೧ ॥ ಆ ಬಳಿಕ ಅತಿ ಗಂಭೀರವಾದ ಆಭರಣಗಳ ಹಲುಹಲ ಶಬ್ದವು ಕೇಳಿಸಿತು, ಅದು ಕಾಲಕಡಗ ಡಾಬು ಮೊದಲಾದ ಸ್ತ್ರೀಯರ ಆಭರಣಗಳ ಧ್ವನಿಯಾಗಿದ್ದಿತು, ಆ ಧ್ವನಿಯು ಅನೇಕ ಸ್ತ್ರೀಯರಿಂದೊಡಗೂಡಿದ ರಾವಣನ ಆಗಮನವನ್ನು ಸೂಚಿಸುತ್ತಿದ್ದಿತು ॥೬೨॥ ಅದನ್ನು ಕೇಳಿ ನಾನು ಗಾಬರಿಪಟ್ಟುಕೊಂಡು, ನನ್ನ ನಿಜರೂಪವನ್ನುಮರೆಸಿಕೊಂಡು, ಆ ಶಿಂಶುಪಾವೃಕ್ಷದ ಮೇಲೆ ಒಂದು ಹಕ್ಕಿಯಂತೆ ಎಲೆಗಳ ಮರೆಯಲ್ಲಿ ಅವಿತುಕೊಂಡು ಕುಳಿತಿದ್ದೆನು ॥೬೩॥ ಬಳಿಕ ಅಂತಃಪುರದ ರಾಣಿಯರಿಂದೊಡಗೂಡಿದ ರಾವಣನು-ಸೀತಾದೇವಿಯು ಕುಳಿತುಕೊಂಡಿದ್ದ ಪ್ರದೇಶಕ್ಕೆಬಂದನು ॥೬೪॥ ಆಗ ಸೀತಾದೇವಿಯು ಆ ರಾಕ್ಷಸ ಮತ್ತು ರಾಕ್ಷಸಿಯರ ಗುಂಪನ್ನು ನೋಡಿ, ತನ್ನತೊಡೆಗಳನ್ನು ಸಂಕೋಚಪಡಿಸಿಕೊಂಡು,ಬಾಹುಗಳಿಂದ

ಸಂಕುಚ್ಯೋರೂ ಸ್ತನೌ ಪೀನೌ ಬಾಹುಭ್ಯಾಂ ಪರಿರಭ್ಯ ಚ ॥೧೫॥
ವಿತ್ರಸ್ತಾಂ ಪರಮೋದ್ವಿಗ್ನಾಂ ವೀಕ್ಷಮಾಣಾಂ ತತ ಸ್ತತಃ ।
ತ್ರಾಣಂ ಕಿಂಚಿ ದಪಶ್ಯಂತೀಂ ವೇಪಮಾನಾಂ ತಪಸ್ವಿನೀಂ ॥೧೬॥
ತಾ ಮುವಾಚ ದಶಗ್ರೀವ ಸ್ಸೀತಾಂ ಪರಮ ದುಃಖಿತಾಂ ।
ಅವಾಕ್ಛಿರಾಃ ಪ್ರಪತಿತೋ ಬಹುಮನ್ಯಸ್ವ ಮಾ ಮಿತಿ ॥೧೭॥
ಯದಿಚೇ ತ್ತ್ವಂ ತು ದರ್ಪಾ ನ್ಮಾಂ ನಾಭಿ ನಂದಸಿ ಗರ್ವಿತೇ ।
ದ್ವೌಮಾಸಾವಂತರಂ ಸೀತೆ ಪಾಸ್ಯಾಮಿ ರುಧಿರಂ ತವ ॥೧೮॥
ಏತ ಚ್ಛ್ರುತ್ವಾ ವಚ ಸ್ತಸ್ಯ ರಾವಣಸ್ಯ ದುರಾತ್ಮನಃ ।
ಉವಾಚ ಪರಮ ಕ್ರುದ್ಧಾ ಸೀತಾ ವಚನ ಮುತ್ತಮಮ್ ॥೧೯॥

ಕೂತಿದ್ದಳು. ॥೧೫॥ ದಶಗ್ರೀವಃ - ಹತ್ತು ತಲೆಗಳುಳ್ಳ ರಾವಣನು, ವಿತ್ರಸ್ತಾಂ - ಭೀತಳಾಗಿರುವ ಪರಮೋದ್ವಿಗ್ನಾಂ - ಅತಿಗಾಬರಿಯುಳ್ಳವಳಾದ ಕಾರಣವೇ, ತತಸ್ತತಃ ಎಲ್ಲಾಕಡೆಗಳಲ್ಲೂ, ವೀಕ್ಷಮಾಣಾಂ- ನೋಡುತ್ತಿರುವ, ತ್ರಾಣಂ - ರಕ್ಷಣೆಯನ್ನು, ಕಿಂಚಿತ್ - ಸ್ವಲ್ಪವೂ, ಅಪಶ್ಯಂತೀಂ - ಕಾಣದೆ ಇರುವವಳಾದ, ವೇಪಮಾನಾಂ - ನಡುಗುತ್ತಿರುವವಳಾದ, ತಪಸ್ವಿನೀಂ - ಅಂತಸ್ತಾಪವುಳ್ಳ, ಪರಮದುಃಖಿತಾಂ - ಅತಿಶೋಕವುಳ್ಳ, ತಾಂಸೀತಾಂ- ಆ ಸೀತಾದೇವಿಯನ್ನು ಕುರಿತು, ಅಹಂ- ನಾನು, ಅವಾಕ್ಛಿರಾಃ- ಮುಖವನ್ನು ಕೆಳಗೆಮಾಡಿಕೊಂಡು, ಪ್ರಪತಿತಃ - ನಮಸ್ಕಾರಮಾಡಿರುತ್ತೇನೆ, ಮಾಂ - ನನ್ನನ್ನು, ಬಹುಮನ್ಯಸ್ವ - ದೊಡ್ಡಮನಸ್ಸಿನಿಂದನೋಡು, ತ್ವಂತು-ನೀನಾದರೋ, ದರ್ಪಾತ್-ಅಹಂಕಾರದಿಂದ, ಮಾಂ - ನನ್ನನ್ನು, ಯದಿ - ಬಂದುವೇಳೆ, ನಾಭಿನಂದಸಿಚೇತ್ - ಸಂತೋಷಪಡಿಸದೇಹೋದರೆ, ಗರ್ವಿತೇಸೀತೇ - ಎಲೈ ಅಹಂಕಾರವುಳ್ಳವಳಾದಸೀತೆಯೇ ! ತವ - ನಿನ್ನ, ರುಧಿರಂ - ರಕ್ತವನ್ನು, ಪಾಸ್ಯಾಮಿ - ಕುಡಿದುಬಿಡುತ್ತೇನೆ. (ಈವಿಷಯದಲ್ಲಿ) ದ್ವೌಮಾಸೌ - ಎರಡುತಿಂಗಳವರಿಗೆ, ಅಂತರಂ - ಅವಧಿಯನ್ನುಕೊಟ್ಟಿರುತ್ತೇನೆ, ಇತಿ - ಹೀಗೆಂದು, ಉವಾಚ - ಹೇಳಿದನು, ॥೧೮॥ ದುರಾತ್ಮನಃ - ಅತಿ ದುಷ್ಟನಾದ, ತಸ್ಯ ರಾವಣಸ್ಯ-ಆ ರಾವಣನ, ಏತದ್ವಚಃ-ಈಮಾತನ್ನು, ಶ್ರುತ್ವಾ-ಕೇಳಿ, ಪರಮಕ್ರುದ್ಧಾ- ಅತಿಕೋಪಿಷ್ಠಳಾದ, ಸೀತಾ-ಸೀತಾದೇವಿಯು, ಉತ್ತಮಂ-ಯೋಗ್ಯವಾದ, ವಚಃ ಮಾತನ್ನು, ಉವಾಚ - ಹೇಳಿದಳು.

ಎದೆಯನ್ನು ಮುಚ್ಚಿಕೊಂಡು, ಕುಳಿತುಕೊಂಡಳು ॥೧೫॥ ಹೀಗೆ ಅತಿಭೀತಿಯಿಂದಲೂ, ಗಾಬರಿಯಿಂದಲೂ, ಕಳವಳಪಡುತ್ತಾ, ದಿಕ್ಕು ದಿಕ್ಕುಗಳನ್ನೂ ನೋಡಿ, ತನ್ನನ್ನು ರಕ್ಷಿಸತಕ್ಕವರಾರನ್ನೂ ಕಾಣದೆ ನಡುಗುತ್ತ, ದೀನಳಾಗಿ ದುಃಖಿತೆಯಾಗಿರುವ ಸೀತಾದೇವಿಯನ್ನು ಕಂಡು, ರಾವಣನು ಎಲೈ ಶೋಭನಾಂಗಿಯೇ ! ನಾನು ನಿನ್ನ ಪಾದಗಳಿಗೆ ನಮಸ್ಕಾರಮಾಡಿ ಬೇಡಿಕೊಳ್ಳುವೆನು, ನನ್ನನ್ನು ಬಹುಮಾನಿಸು, ಹಾಗಿಲ್ಲದೆ ದುರಹಂಕಾರದಿಂದ ನೀನು ಬಂದುವೇಳೆ ನನ್ನನ್ನುಸಂತೋಷಪಡಿಸದಿದ್ದರೆ, ನಿನ್ನನ್ನು ಕೊಂದು, ನಿನ್ನರಕ್ತವನ್ನು ಹೀರಿಬಿಡುವೆನು. ಎಲೆ ಸೀತೆಯೇ ! ಇದಕ್ಕೆ ಇನ್ನು ಮೂವತ್ತು ದಿನಗಳವರಿವಿಗೆ ನಿನಗೆ ಅವಧಿಯನ್ನು ಕೊಟ್ಟಿರುವೆನು. ॥೧೮॥ ಹೀಗೆ ಮಾತನಾಡುತ್ತಿರುವ ದುರಾತ್ಮನಾದ ರಾವಣನ ವಾಕ್ಯವನ್ನು ಕೇಳಿದ ಕೂಡಲೇ, ಅತಿ ಕೋಪಿಷ್ಠಳಾಗಿ ಸೀತಾದೇವಿಯು-ಅವನಿಗೆ ಯೋಗ್ಯವಾದ ರೀತಿಯಲ್ಲಿ ಹೇಳಿದ ಉತ್ತರವೇನಂದರೆ—ಎಲಾ ರಾಕ್ಷಸಾಧಮನೇ !

ರಾಕ್ಷಸಾಧಮ ರಾಮಸ್ಯ ಭಾರ್ಯಾ ಮಮಿತ ತೇಜಸಃ ।
ಇಕ್ಷ್ವಾಕು ಕುಲ ನಾಥಸ್ಯ ಸ್ನುಷಾಂ ದಶರಥಸ್ಯ ಚ
ಅವಾಚ್ಯಂ ವದತೋ ಜಿಹ್ವಾ ಕಥಂ ನ ಪತಿತಾ ತವ । ॥೨೦॥
ಕಿಂಚಿ ದ್ವೀರ್ಯಂ ತವಾ ನಾರ್ಯ ಯೋ ಮಾಂ ಭರ್ತು ರಸನ್ನಿಧೌ ।
ಅಪಹೃತ್ಯಾ ಗತಃ ಪಾಪ ತೇನಾ ದೃಷ್ಟೋ ಮಹಾತ್ಮನಾ ॥೨೧॥
ನ ತ್ವಂ ರಾಮಸ್ಯ ಸದೃಶೋ ದಾಸ್ಯೇ ಪ್ಯಸ್ಯ ನ ಯುಜ್ಯಸೇ ।
ಯಜ್ಞೀಯ ಸ್ಸತ್ಯ ವಾದೀ ಚ ರಣಶ್ಲಾಘೀ ಚ ರಾಘವಃ ॥೨೨॥
ಜಾನಕ್ಯಾ ಪರುಷಂ ವಾಕ್ಯ ಮೇವಮುಕ್ತೋ ದಶಾನನಃ ।

---

ಹೇರಾಕ್ಷಸಾಧಮ - ಅತಿನೀಚನಾದರಾಕ್ಷಸನೆ! ಅಮಿತತೇಜಸಃ - ಮಹಾತೇಜಸ್ವಿಯಾದ ರಾಮಸ್ಯ - ರಾಮನ, ಭಾರ್ಯಾಂ - ಪತ್ನಿಯಾಗಿಯೂ, ಇಕ್ಷ್ವಾಕುಕುಲನಾಥಸ್ಯ - ಇಕ್ಷ್ವಾಕುಮಹಾರಾಜನವಂಶವನ್ನು ಕಾಪಾಡತಕ್ಕವನಾದ, ದಶರಥಸ್ಯ ದಶರಥರಾಜನ, ಸ್ನುಷಾಂಚ ಸೊಸೆಯಾಗಿಯೂ ಇರುವ ನನ್ನನ್ನು ಕುರಿತು, ಅವಾಚ್ಯಂ - ಆಡಬಾರದಮಾತನ್ನು, ವದತಃ - ಹೇಳುತ್ತಿರುವ, ತವ - ನಿನ,, ಜಿಹ್ವಾ - ನಾಲಗೆಯು, ಕಥಂ - ಹೇಗೆ, ನಪತಿತಾ - ಬಿದ್ದುಹೋಗಲಿಲ್ಲ? ॥೨೦॥ ॥ ಹೇಅನಾರ್ಯ - ಎಲೈ ಅಯೋಗ್ಯನೆ !, ಹೇಪಾಪ - ಎಲೈ ಪಾಪಿಷ್ಠನೇ, ಯಃ - ಯಾವನೀನು, ಭರ್ತುಃ- ನನ್ನಪತಿಯು, ಅಸನ್ನಿಧೌ - ಹತ್ತಿರದಲ್ಲಿಲ್ಲದಕಾಲದಲ್ಲಿ, ಮಾಂ - ನನ್ನನ್ನು, ಅಪಹೃತ್ಯ - ಅಪಹರಿಸಿಕೊಂಡು, ಆಗತಃ - ಬಂದೆಯೋ, ಮಹಾತ್ಮನಾ - ಮಹಾನುಭಾವನಾದ, ತೇನ - ಆ ರಾಮನಿಂದ, ಅದೃಷ್ಟಃ - ಕಾಣಲ್ಪಡಲಿಲ್ಲವೋ, ತವ - ಅಂಥಾನಿನ್ನ ವೀರ್ಯಂ - ಪರಾಕ್ರಮ, ಕಿಂಚಿತ್ - ಅತಿತುಚ್ಛವಾದುದೆಂದುತಿಳಿ. ॥೨೧॥ ॥ ತ್ವಂ - ನೀನು, ರಾಮಸ್ಯ - ಶ್ರೀರಾಮನಿಗೆ, ನಸದೃಶಃ - ಸಮಾನನಲ್ಲ, ಅಸ್ಯ - ಈ ಶ್ರೀರಾಮನ, ದಾಸ್ಯೇಪಿ - ಸೇವಾವೃತ್ತಿಯಲ್ಲಿಯೂ, ನಯುಜ್ಯಸೇ - ಸೇರತಕ್ಕವನಲ್ಲ, ರಾಘವಃ - ಶ್ರೀರಾಮನು, ಯಜ್ಞೀಯಃ - ಯಜ್ಞಮಾಡುವುದಕ್ಕೆಯೋಗ್ಯನಾದವನು, ಸತ್ಯವಾದೀಚ - ಸತ್ಯಸಂಧನು, ರಣಶ್ಲಾಘೀಚ - ಯುದ್ಧದಲ್ಲಿಶ್ಲಾಘಿಸಲ್ಪಡತಕ್ಕವನೂಆಗಿದ್ದನೆ. ॥೨೨॥ ಜಾನಕ್ಯಾ - ಸೀತಾದೇವಿಯಿಂದ, ಏವಂ - ಈ ರೀತಿಯಾಗಿ, ಪರುಷಂ - ಕಠಿನವಾದ, ವಾಕ್ಯಂ - ವಾಕ್ಯವನ್ನು, ಉಕ್ತಃ - ಹೇಳಲ್ಪಟ್ಟ, ದಶಾನನಃ - ರಾವಣನು, ಸಹಸಾ ತತ್‌ಕ್ಷಣದಲ್ಲಿಯೇ, ಕೋಪ ತ್- ಸಿಟ್ಟಿನವೇಗದಿಂದ, ಚಿತಸ್ಥಃ - ಚಿತೆಯಮೇಲೆ

---

ಮಹಾ ತೇಜಸ್ವಿಯಾದ ಶ್ರೀರಾಮನಿಗೆ ಹೆಂಡತಿಯಾಗಿಯೂ, ಇಕ್ಷ್ವಾಕುವಂಶದ ರಾಜನಾದ ದಶರಥ ಮಹಾರಾಜನಿಗೆ ಸೊಸೆಯಾಗಿಯೂ ಇರುವ ನನ್ನನ್ನು ಕುರಿತು ಅತಿ ನೀಚವಾದ ಇಂಥಾ ಮಾತನ್ನು ಆಡುವ ನಿನ್ನ ನಾಲಿಗೆಯು ಏಕೆ ಬಿದ್ದುಹೋಗಲಿಲ್ಲ. ॥೨೦॥ ಅಯೋಗ್ಯನೇ ! ಪಾಪಿಷ್ಠನೇ ! ನನ್ನ ಪತಿಯಾದ ಶ್ರೀರಾಮನು ಇಲ್ಲದ ವೇಳೆಯಲ್ಲಿ ಆ ಮಹಾನುಭಾವನಿಗೆ ಕಾಣಿಸಿಕೊಳ್ಳದಂತೆ ಕಳ್ಳನ ಹಾಗೆ ನನ್ನನ್ನು ಅಪಹರಿಸಿಕೊಂಡು ಬಂದಾಗಲೇ ನಿನ್ನ ಶೌರ್ಯವು ಅತಿ ತುಚ್ಛವಾದುದೆಂದು ವಿಶದವಾಗಿ ತಿಳಿಯಿತು. ॥೨೧॥

ಯಜ್ಞಾರ್ಹವಾದ ಗುಣಗಳಿಂದ ಕೂಡಿದವನಾಗಿಯೂ, ಸತ್ಯವಾದಿಯಾಗಿಯೂ; ಯುದ್ಧದಲ್ಲಿ ಶ್ಲಾಘ್ಯವಾದ ಶೌರ್ಯವುಳ್ಳವನಾಗಿಯೂ ಇರುವ ಶ್ರೀರಾಮನಿಗೆ ನೀನು ಎಂದಿಗೂ ಸಮನಾಗಲಾರೆ, ಕೊನೆಗೆ ಆ ಮಹಾನುಭಾವನ ದಾಸನಾಗಿರುವದಕ್ಕೂ ಯೋಗ್ಯನಲ್ಲ ॥

ಜಜ್ವಾಲ ಸಹಸಾ ಕೋಪಾ ಚ್ಚಿತಾಸ್ಥ ಇವ ಪಾವಕಃ ॥೩೩॥-॥
ವಿವೃತ್ಯ ನಯನೇ ಕ್ರೂರೇ ಮುಷ್ಟಿ ಮುದ್ಯಮ್ಯ ದಕ್ಷಿಣಮ್ ।
ಮೈಥಿಲೀಂ ಹಂತು ಮಾರಬ್ಧಃ ಸ್ತ್ರೀಭಿ ರ್ಹಾಹಾ ಕೃತಂ ತದಾ ॥೩೪॥-॥
ಸ್ತ್ರೀಣಾಂ ಮಧ್ಯಾ ತ್ಸಮುತ್ಪತ್ಯ ತಸ್ಯ ಭಾರ್ಯಾ ದುರಾತ್ಮನಃ ।
ವರಾ ಮಂಡೋದರೀ ನಾಮ ತಯಾ ಸ ಪ್ರತಿಷೇಧಿತಃ ॥೩೫॥
ಉಕ್ತ ಶ್ಚ ಮಧುರಾಂ ವಾಣೀಂ ತಯಾ ಸ ಮದನಾರ್ದಿತಃ ।
ಸೀತಯಾ ತವ ಕಿಂ ಕಾರ್ಯಂ ಮಹೇಂದ್ರ ಸಮ ವಿಕ್ರಮ ॥೩೬॥-॥
ದೇವ ಗಂಧರ್ವ ಕನ್ಯಾಭಿ ರ್ಯಕ್ಷ ಕನ್ಯಾಭಿ ರೇವಚ ॥

---

ಹಾಕಲ್ಪಟ್ಟ, ಪಾವಕಇವ - ಬೆಂಕಿಯಹಾಗೆ, ಜಜ್ವಾಲ - ಉರಿದನು. ॥೩೩॥ ॥ ಕ್ರೂರೇ - ಭಯಂಕರವಾದ, ನಯನೇ - ಕಣ್ಣುಗಳನ್ನು, ವಿವೃತ್ಯ-ತೆರೆದುಕೊಂಡು, ದಕ್ಷಿಣಂ - ಬಲಭಾಗದ, ಮುಷ್ಟಿಂ - ಕೈಮುಷ್ಟಿಯನ್ನು, ಉದ್ಯಮ್ಯ - ಮೇಲಕ್ಕೆತ್ತಿ, ಮೈಥಿಲೀಂ - ಸೀತಾದೇವಿಯನ್ನು, ಹಂತುಂ-ಕೊಲ್ಲುವುದಕ್ಕೆ, ಆರಬ್ಧಃ - ಪ್ರಾರಂಭಿಸಿದನು, ತದಾ - ಆಕಾಲದಲ್ಲಿ, ಸ್ತ್ರೀಭಿಃ - ಅಲ್ಲಿದ್ದ ಸ್ತ್ರೀಜನರಿಂದ, ಹಾಹಾಕೃತಂ - ಹಾಹಾಕಾರವು ಮಾಡಲ್ಪಟ್ಟಿತು ॥ ೩೪॥ ॥ ದುರಾತ್ಮನಃ - ದುಷ್ಟನಾದ, ತಸ್ಯ - ಆ ರಾವಣನ, ಭಾರ್ಯಾ - ಹೆಂಡತಿಯಾದ, ವರಾ-ಶ್ರೇಷ್ಠಳಾದ, ಮಂಡೋದರೀನಾಮ - ಮಂಡೋದರಿ ಯೆಂಬ ಸ್ತ್ರೀಯು (ಮಂಡ-ಅಲಂಕಾರವಾದ, ಉದರೀ-ಹೊಟ್ಟೆಯುಳ್ಳವಳು, ಮಂದೋದರೀ ಎಂಬ ಪಾಠದಲ್ಲಿ ಮಂದ-ಸಣ್ಣನಾದ, ಉದರೀ - ಹೊಂಕವುಳ್ಳವಳೆಂದ ವ್ಯುತ್ಪತ್ತಿಮಾಡಬೇಕು) ಸ್ತ್ರೀಣಾಂ - ಸ್ತ್ರೀಯರ, ಮಧ್ಯಾತ್ - ಮಧ್ಯಭಾಗದಿಂದ, ಸಮುತ್ಪತ್ಯ - ಓಡಿಬಂದು, ತಯಾ - ಆ ಮಂಡೋದರಿಯಿಂದ, ಸಃ - ಆ ರಾವಣನು, ಪ್ರತಿಷೇಧಿತಃ - ಪಥೋಪಾಯದಿಂದ ನಿವಾರಿಸಲ್ಪಟ್ಟನು ॥೩೫॥ ॥ ತಯಾ-ಆ ಮಂಡೋದರಿಯಿಂದ. ಮದನಾರ್ದಿತಃ - ಮನ್ಮಥಪೀಡಿತನಾದ, ಸಃ - ಆರಾವಣನು, ಮಹೇಂದ್ರಸಮವಿಕ್ರಮ-ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನೆ! ಪ್ರಭೋ - ಎಲೈ ರಾಜಾಧಿರಾಜನೇ! ತವ-ನಿನಗೆ, ಸೀತಯಾ - ಸೀತಾದೇವಿಯಿಂದ, ಕಿಂಕಾರ್ಯಂ - ಏನುಪ್ರಯೋಜನವು, ದೇವಗಂಧರ್ವಕನ್ಯಾಭಿಃ - ದೇವತೆಗಳ ಮತ್ತು ಗಂಧರ್ವ ಕನ್ಯಕೆಯರೊಡನೆಯೂ, ಯಕ್ಷಕನ್ಯಾಭಿರೇವಚ - ಯಕ್ಷಕನ್ಯೆಯರೊಡನೆಯೂ ಸಹ, ಸಾರ್ಧಂ - ಕೂಡಿಕೊಂಡು, ರಮಸ್ವ - ಕ್ರೀಡಿಸು, ಸೀತಯಾ-ಸೀತಾ

---

ಹೀಗೆ ಸೀತೆಯು ಅತಿ ಕಠಿನವಾದ ಮಾತುಗಳನ್ನು ಕೇಳಿದ ದಶಕಂಠನು ಚಿತೆಯಮೇಲೆಹಾಕಲ್ಪಟ್ಟ ಬೆಂಕಿಯಂತೆ ಅತಿಭಯಂಕರಾಕಾರನಾಗಿ, ಕೋಪೋದ್ದೀಪಿತನಾಗಿ, ಅತಿಕ್ರೂರವಾದ ತನ್ನಕಣ್ಣುಗಳನ್ನು ತೆರೆದುಕೊಂಡು, ಬಲದಮುಷ್ಟಿಯನ್ನು ಮೇಲಕ್ಕೆತ್ತಿ ಜನಕನಂದಿನಿಯಾದ ಸೀತಾದೇವಿಯನ್ನು ಕೊಲ್ಲುವುದಕ್ಕುದ್ಯಕ್ತನಾದನು, ಆಗ ಅಲ್ಲಿದ್ದ ತರುಣಿಯರೆಲ್ಲರೂ ಹಾ ಹಾ ಕಾರವನ್ನು ಮಾಡುತ್ತಿದ್ದರು ॥೩೪॥ ಆಗ ಆ ದುರಾತ್ಮನಾದ ರಾವಣನಿಗೆ ಪತ್ನಿಯಾದ ಮಂಡೋದರಿಯೆಂಬ ಉತಮಸ್ತ್ರೀಯು, ಅಲ್ಲಿದ್ದ ಹೆಂಗಸರ ಮಧ್ಯದಿಂದೆದ್ದು ಬಂದು, ಅವನನ್ನು ತಡೆದು, ಎಲೈ ಪ್ರಭುವೇ! ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ನಿನಗೆ ಸೀತೆಯಿಂದೇನು ಪ್ರಯೋಜನವಿರುವುದು? ಬಹುಮಂದಿ ದೇವತಾಸ್ತ್ರೀರುಗಳೂ, ಗಂಧರ್ವಕನ್ಯೆಯರೂ ನೀನು ಹೇಳಿದಂತೆ ಕೇಳುವವರಾಗಿರುವಲ್ಲಿ, ಅವರು

ಸಾರ್ಧಂ ಪ್ರಭೋ ರಮಸ್ವೇಹ ಸೀತಯಾ ಕಿಂ ಕರಿಷ್ಯಸಿ ॥ ॥೩೭॥
ತತ ಸ್ತಾಭಿ ಸ್ಸಮೇತಾಭಿ ರ್ನಾರೀಭಿ ಸ್ಸ ಮಹಾಬಲಃ ॥
ಪ್ರಸಾದ್ಯ ಸಹಸಾ ನೀತೋ ಭವನಂ ಸ್ವಂ ನಿಶಾಚರಃ ॥೩೮॥
ಯಾತೇ ತಸ್ಮಿನ್ ದಶಗ್ರೀವೇ ರಾಕ್ಷಸ್ಯೋ ವಿಕೃತಾ ಽ ನನಾಃ ।
ಸೀತಾಂ ನಿರ್ಭರ್ತ್ಸಯಾಮಾಸು ರ್ವಾಕ್ಯೈಃ ಕ್ರೂರೈ ಸ್ಸುದಾರುಣೈಃ॥೩೯॥
ತೃಣವ ದ್ಭಾಷಿತಂ ತಾಸಾಂ ಗಣಯಾ ಮಾಸ ಜಾನಕೀ ।
ಗರ್ಜಿತಂ ಚ ತದಾ ತಾಸಾಂ ಸೀತಾಂ ಪ್ರಾಪ್ಯ ನಿರರ್ಥಕಮ್ ॥೪೦॥
ವೃಥಾ ಗರ್ಜಿತನಿ ಶ್ಚೇಷ್ಟಾ ರಾಕ್ಷಸ್ಯಃ ಪಿಶಿತಾಶನಾಃ ।

---

ದೇವಿಯಿಂದ, ಕಿಂಕರಿಷ್ಯಸಿ - ಏನುಸುಖಪಡುತ್ತಿ, ಇತಿ - ಹೀಗೆ, ಮಧುರಾಂ - ಸವಿಯಾದ, ವಾಣೀಂ - ಮಾತನ್ನು, ಉಕ್ತಃ - ಹೇಳಲ್ಪಟ್ಟನು, ॥ ೩೭॥ ॥ ತತಃ - ಅನಂತರದಲ್ಲಿ, ಸಮೇತಾಭಿಃ - ಅಲ್ಲಿಸೇರಿದ್ದ ತಾಭಿಃನಾರೀಭಿಃ - ಆ ಸ್ತ್ರೀಯರಿಂದ, ಮಹಾಬಲಃ - ಮಹಾಪರಾಕ್ರಮಶಾಲಿಯಾದ, ಸಃ ನಿಶಾಚರಃ - ಆ ರಾಕ್ಷಸರಾಜನಾದ ರಾವಣನು, ಪ್ರಸಾದ್ಯ - ಸಮಾಧಾನಪಡಿಸಿ, ಸಹಸಾ - ಜಾಗ್ರತೆಯಾಗಿ; ಸ್ವಂಭವನಂ - ತನ್ನ ಅರಮನೆಯನ್ನು, ನೀತಃ - ಒಯ್ಯಲ್ಪಟ್ಟನು ॥೩೮॥ ॥ ತಸ್ಮಿನ್ ದಶಗ್ರೀವೇ - ಆ ರಾವಣನು, ಯಾತೇಸತಿ - ಹೊರಟುಹೋಗಲಾಗಿ, ವಿಕೃತಾನನಾಃ - ವಿಕಾರವಾದ ಮುಖಗಳುಳ್ಳ, ರಾಕ್ಷಸ್ಯಃ - ರಕ್ಕಸಿಯರು, ಸುದಾರುಣೈಃ - ಅತಿಭಯಂಕರವಾದ, ಕ್ರೂರೈಃ - ಕಠಿನವಾದ, ವಾಕ್ಯೈಃ - ವಾಕ್ಯಗಳಿಂದ, ಸೀತಾಂ - ಸೀತಾದೇವಿಯನ್ನು, ನಿರ್ಭರ್ತ್ಸಯಾಮಾಸುಃ - ಹೆದರಿಸಿದರು ॥೩೯॥ ॥ ಜಾನಕೀ - ಸೀತಾದೇವಿಯು, ತಾಸಾಂ - ಆ ರಾಕ್ಷಸಿಯರ, ಭಾಷಿತಂ - ಮಾತನ್ನು, ತೃಣವತ್ - ಹುಲ್ಲುಕಡ್ಡಿಗೆ ಸಮಾನವಾಗಿ, ಗಣಯಾಮಾಸ - ಗಣಿಸಿದಳು, ತದಾ - ಆ ಕಾಲದಲ್ಲಿ, ಸೀತಾಂ ಸೀತಾದೇವಿಯನ್ನು, ಪ್ರಾಪ್ಯ - ಹೊಂದಿ, ತಾಸಾಂ - ಆ ರಾಕ್ಷಸಿಯರ, ಗರ್ಜಿತಂಚ - ಗರ್ಜನೆಯೂ ಸಹ, ನಿರರ್ಥಕಂ - ನಿಷ್ಪ್ರಯೋಜನವಾಯಿತು ॥೪೦॥ ॥ ವೃಥಾ - ವ್ಯರ್ಥವಾದ, ಗರ್ಜಿತನಿಶ್ಚೇಷ್ಟಾಃ - ಗರ್ಜನೆಯಿಂದ ನಿರ್ವ್ಯಾಪಾರವುಳ್ಳ, ಪಿಶಿತಾಶನಾಃ - ಮಾಂಸಭಕ್ಷಕರಾದ, ತಾಃ ರಾಕ್ಷಸ್ಯಃ - ಆ ರಾಕ್ಷಸಸ್ತ್ರೀಯರು, ಮಹತ್ - ದೊಡ್ಡದಾದ, ಸೀತಾಧ್ಯವಸಿತಂ - ಸೀತಾದೇವಿಯ ಮನೋನಿಶ್ಚಯವನ್ನು, ರಾವಣಾಯ - ರಾವಣನಿಗೆ, ಶಂಸುಃ

---

ಗಳೊಡನೆ ನೀನು ಬೇಕಾದ ಸೌಖ್ಯಗಳನ್ನನುಭವಿಸು. ಈ ಸೀತೆಯಿಂದ ನಿನಗೇನು ಪ್ರಯೋಜನವು? ಎಂಬದಾಗಿ ಮೃದುಮಧುರವಾದ ಮಾತುಗಳಿಂದ ಮದನಾವಸ್ಥೆಯುಳ್ಳ ರಾವಣನನ್ನು ಸಮಾಧಾನಪಡಿಸಿದಳು ॥೩೭॥ ಹೀಗೆ ಅಲ್ಲಿದ್ದ ಸ್ತ್ರೀಯರೆಲ್ಲರೂ ಮಹಾಬಲಿಷ್ಠನಾದ ರಾವಣನನ್ನು ಸಮಾಧಾನಪಡಿಸುತ್ತ, ಅರಮನೆಗೆ ಕರೆದುಕೊಂಡು ಹೋದರು ॥೩೮॥ ರಾವಣನು ಹೊರಟುಹೋದ ತರುವಾಯ ವಿಕಾರವಾದ ರೂಪವುಳ್ಳ ಬಹುಮಂದಿ ರಕ್ಕಸಿಯರು ಭಯಂಕರಗಳಾಗಿಯೂ, ಅತಿ ಕಠಿನಗಳಾಗಿಯೂ ಇರುವ ಮಾತುಗಳಿಂದ ಸೀತಾದೇವಿಯನ್ನು ಹೆದರಿಸುತ್ತಿದ್ದರು ॥೩೯॥ ಜಾನಕಿಯು ಆ ರಕ್ಕಸಿಯರ ಬಿರುನುಡಿಗಳನ್ನು ಲೆಕ್ಕಿಸದೆ ಹುಲ್ಲುಕಡ್ಡಿಗಳಂತೆ ಭಾವಿಸುತ್ತಿದ್ದಳು. ಅವರುಗಳ ಅಬ್ಬರಗಳೆಲ್ಲವೂ ಸೀತೆಯ ಬಳಿಯಲ್ಲಿ ನಿರರ್ಥಕಗಳಾದುವು ॥೪೦॥ ಮಾಂಸಭಕ್ಷಕರಾದ ಆ ರಕ್ಕಸಿಯರು ಹೀಗೆ ತಮ್ಮ ಪ್ರಯತ್ನಗಳೆಲ್ಲವೂ ಫಲಿಸದೆ ಹೋಗಲು, ತಮ್ಮ ಚೇಷ್ಟೆಗಳನ್ನೆಲ್ಲಾ

ರಾವಣಾಯ ಶಶಂಸು ಸ್ತಾ ಸ್ಸೀತಾಧ್ಯವಸಿತಂ ಮಹತ್ ॥೪೧॥ ॥
ತತ ಸಾ ಸ್ಸಹಿತಾ ಸ್ಸರ್ವಾ ವಿಹತಾಶಾ ನಿರುದ್ಯಮಾಃ ।
ಪರಿಕ್ಷಿಪ್ಯ ಸಮಂತಾ ತ್ತಾಂ ನಿದ್ರಾವಶ ಮುಪಾಗತಾಃ ॥೪೨॥ ॥
ತಾಸು ಚೈವಂ ಪ್ರಸುಪ್ತಾಸು ಸೀತಾ ಭರ್ತೃ ಹಿತೇ ರತಾ ।
ವಿಲಪ್ಯ ಕರುಣಂ ದೀನಾ ಪ್ರಶುಶೋಚ ಸು ದುಃಖಿತಾ ॥೪೩॥ ॥
ತಾಸಾಂ ಮಧ್ಯಾ ತ್ಸಮುತ್ಥಾಯ ತ್ರಿಜಟಾ ವಾಕ್ಯ ಮಬ್ರವೀತ್ ।
ಆತ್ಮಾನಂ ಖಾದತ ಕ್ಷಿಪ್ರಂ ನ ಸೀತಾ ವಿನಶಿಷ್ಯತಿ ॥೪೪॥ ॥
ಜನಕಸ್ಯಾ ಽ ತ್ಮಜಾ ಸಾಧ್ವೀ ಸ್ನುಷಾ ದಶರಥಸ್ಯ ಚ ।

---

ಹೇಳಿದರು. ॥೪೧॥ ತತಃ – ಅನಂತರದಲ್ಲಿ, ಸಹಿತಾಃ – ಒಟ್ಟುಗೂಡಿದ, ತಾಃಸರ್ವಾಃ – ಆ ರಾಕ್ಷಸಿಯರೆಲ್ಲರೂ, ವಿಹತಾಶಾ – ಆಶಾರಹಿತರಾಗಿಯೂ, ನಿರುದ್ಯಮಾಃ – ಪ್ರಯತ್ನಶೂನ್ಯರಾಗಿಯೂ, ತಾಂ ಸಮಂತಾತ್ – ಆ ಸೀತಾದೇವಿಯು ಸುತ್ತಲೂ, ಪರಿಕ್ಷಿಪ್ಯ – ಆವರಿಸಿಕೊಂಡು, ನಿದ್ರಾವಶಂ – ನಿದ್ರೆಯ ಅಧೀನವನ್ನು, ಉಪಗತಾಃ – ಹೊಂದಿದರು ॥೪೨॥ ॥ ತಾಸುಚ – ಆ ರಾಕ್ಷಸಸ್ತ್ರೀಯರೂ, ಏವಂ ಹೀಗೆ, ಪ್ರಸುಪ್ತಾಸು–ಮಲಗಿಕೊಂಡು ನಿದ್ರೆಮಾಡುತ್ತಿರಲಾಗಿ, ಭರ್ತೃಹಿತೇ-ಪತಿಯ ಹಿತಕಾರ್ಯದಲ್ಲಿ, ರತಾ–ಆಸಕ್ತಳಾದ, ಸೀತಾ – ಸೀತಾದೇವಿಯು, ದೀನಾ-ದೀನಳಾಗಿಯೂ, ಸುದುಃಖಿತಾ ಅತಿದುಃಖವುಳ್ಳವಳಾಗಿಯೂ, ಕರುಣಂ-ದೈನ್ಯದಿಂದಕೂಡಿ, ವಿಲಪ್ಯ-ರೋದನಮಾಡಿ, ಪ್ರಶುಶೋಚ –ಅತಿಯಾಗಿದುಃಖಿಸಿದಳು ॥೪೩॥ ॥ ತಾಸಾಂ - ಆ ರಾಕ್ಷಸಿಯರ, ಮಧ್ಯಾತ್ - ಮಧ್ಯದಿಂದ, ತ್ರಿಜಟಾ – ತ್ರಿಜಟೆಯೆಂಬುವಳು, ಸಮುತ್ಥಾಯ - ಮೇಲಕ್ಕೆದ್ದು, ವಾಕ್ಯಂ – ಮುಂದೆ ಹೇಳುವ ವಾಕ್ಯವನ್ನು, ಅಬ್ರವೀತ್ – ಹೇಳಿದಳು. ಆತ್ಮಾನಂ - ನನ್ನನ್ನು, ಕ್ಷಿಪ್ರಂ – ಬೇಗನೆ, ಖಾದತ – ತಿನ್ನಿರಿ, ಜನಕಸ್ಯ - ಜನಕಮಹಾರಾಜನ, ಆತ್ಮಜಾ – ಮಗಳಾದ, ದಶರಥಸ್ಯ – ದಶರಥರಾಜನ, ಸ್ನುಷಾಚ - ಸೊಸೆಯಾಗಿಯೂ ಇರುವ, ಸಾಧ್ವೀ -ಪತಿವ್ರತೆಯಾದ, ಸೀತಾ – ಸೀತಾದೇವಿಯು, ನವಿನಂಕ್ಷ್ಯತಿ – ನಾಶಹೊಂದುವುದಿಲ್ಲ, ಹಿ – ಯಾವಕಾರಣದಿಂದ, ರಕ್ಷಸಾಂಚ – ರಾಕ್ಷಸರುಗಳ, ವಿನಾಶಾಯ – ನಾಶಕ್ಕೂ, ಅಸ್ಯಾಃ – ಈ ಸೀತೆಯ, ಭರ್ತುಃ – ಪತಿಯಾದ ಶ್ರೀರಾಮನಿಗೆ, ಜಯಾಯಚ – ಜಯವಾಗುವುದಕ್ಕೂ, ಮಯಾ - ನನ್ನಿಂದ, ಅದ್ಯ – ಈಗ,

---

ಬಿಟ್ಟುರಾಮಪತ್ನಿಯ ಮನೋದಾರ್ಢ್ಯವನ್ನುಕುರಿತು ರಾವಣನಿಗೆ ಅರಿಕೆ ಮಾಡಿದರು॥೪೧॥॥ ಆ ಬಳಿಕ ಆಶಾಭಂಗದಿಂದ ಸೀತಾದೇವಿಯು ಹತ್ತಿರದಲ್ಲಿ ತಮ್ಮ ಗರ್ಜನೆ ಳನ್ನೆಲ್ಲಾ ನಿಲ್ಲಿಸಿ ಆಕೆಯ ಸುತ್ತಲೂ ಮಲಗಿಕೊಂಡು ನಿದ್ರೆಯನ್ನು ಮಾಡುತ್ತಿದ್ದರು ॥೪೨॥ ಅವರುಗಳು ಹಾಗೆ ನಿದ್ರಿಸುತ್ತಿರುವ ಸಮಯದಲ್ಲಿ ಜಾನಕಿಯು–ಪತಿಪರಾಯಣಳಾಗಿ, ತನ್ನ ಪತಿಯ ಹಿತವನ್ನೇ ಚಿಂತಿಸುತ್ತ ಅತಿದೀನಳಾಗಿ ರೋದನ ಮಾಡುತ್ತಿದ್ದಳು ॥೪೩ ॥ ಆಗ ಅಲ್ಲಿಮಲಗಿದ್ದ ರಾಕ್ಷಸಿಯರ ಮಧ್ಯದಲ್ಲಿ ತ್ರಿಜಟೆಯೆಂಬವಳು ಥಟ್ಟನೆ ಎದ್ದು ನಿಂತುಕೊಂಡು, ಆರಕ್ಕಸಿಯರನ್ನುಕುರಿತು–ಜನಕರಾಜನ ಪುತ್ರಿಯಾಗಿಯೂ ದಶರಥಮಹಾರಾಜನ ಸೊಸೆಯಾಗಿಯೂ, ಪತಿವ್ರತೆಯಾಗಿಯೂ ಇರುವ ಈ ಸೀತಾದೇವಿಯು ಉತ್ತರೋತ್ತರ ಶ್ರೇಯಸ್ಸನ್ನು ಪಡೆಯುವವಳಾಗಿರುವಳಲ್ಲದೆ ಈಕೆಗೆ ಎಂದಿಗೂಹಾನಿಸಂಭವಿಸುವುದಿಲ್ಲ. ನನ್ನನ್ನೇ ಭಕ್ಷಿಸಿಬಿಡಿ, ಹೀಗೆ ಏಕೆ ಹೇಳುವೆನೆಂದರೆ– ಈಗತಾನೇ ನಾನೊಂದು ಕನಸನ್ನು

ಸ್ವಪ್ನೋ ಹ್ಯದ್ಯ ಮಯಾ ದೃಷ್ಟೋ ದಾರುಣೋ ರೋಮಹರ್ಷಣಃ ।
ರಕ್ಷಸಾಂ ಚ ವಿನಾಶಾಯ ಭರ್ತುರಸ್ಯಾ ಜಯಾಯ ಚ ॥೮೬॥
ಅಲ ಮೇಷಾ ಪರಿತ್ರಾತುಂ ರಾಘವಾ ದ್ರಾಕ್ಷಸೀ ಗಣಮ್ ।
ಅಭಿಯಾಚಾಮ ವೈದೇಹೀ ಮೇತದ್ಧಿ ಮಮ ರೋಚತೆ ॥೮೭॥
ಯಸ್ಯಾ ಹ್ಯೇವಂ ವಿಧ ಸ್ಸ್ವಪ್ನೋ ದುಃಖಿತಾಯಾಃ ಪ್ರದೃಶ್ಯತೇ ।
ಸಾ ದುಃಖೈ ರ್ವಿವಿಧೈ ರ್ಮುಕ್ತಾ ಸುಖ ಮಾಪ್ನೋ ತ್ಯನುತ್ತಮಮ್ ॥೮೮॥
ಪ್ರಣಿಪಾತ ಪ್ರಸನ್ನಾ ಹಿ ಮೈಥಿಲೀ ಜನಕಾತ್ಮಜಾ ॥೮೮॥ ॥

---

ದಾರುಣಃ - ಭಯಂಕರವಾದ, ರೋಮಹರ್ಷಣಃ - ರೋಮಾಂಚವನ್ನುಂಟುಮಾಡುವ, ಸ್ವಪ್ನಃ ಕನಸು, ದೃಷ್ಟಃ - ಕಾಣಲ್ಪಟ್ಟಿತೋ, ॥೮೬॥ ಅಸ್ಮಾತ್ ರಾಘವಾತ್ - ಈ ಶ್ರೀರಾಮನ ದೆಸೆಯಿಂದ, ರಾಕ್ಷಸೀಗಣಂ - ರಕ್ಕಸಿಯರ ಗುಂಪನ್ನು, ಪರಿತ್ರಾತುಂ - ರಕ್ಷಿಸುವುದಕ್ಕೆ, ಅಲಂ - ಶಕ್ತಳಾದ, ವೈದೇಹೀಂ - ಸೀತಾದೇವಿಯನ್ನು, ಅಭಿಯಾಚಾಮ - ಬೇಡಿಕೊಳ್ಳೋಣ, ಮಮ - ನನಗೆ, ಏತತ್ - ಈ ವಿಷಯವು, ರೋಚತೇಹಿ - ತಿಳಿಯುತ್ತದೆಯಲ್ಲವೆ, ॥೮೭॥ ಹಿ - ಯಾವಕಾರಣದಿಂದ, ದುಃಖಿತಾಯಾಃ - ವ್ಯಸನಪಡುತ್ತಿರುವ, ಯಸ್ಯಾಃ - ಯಾವಸೀತೆಯ ವಿಷಯವಾದ, ಸ್ವಪ್ನಃ - ಕನಸು, ಏವಂವಿಧಃ- ಈ ರೀತಿಯಾಗಿ, ಪ್ರದೃಶ್ಯತೇ -ಕಾಣಲ್ಪಡುವುದೋ, ಸಾ - ಆ ಸೀತೆಯು, ವಿವಿಧೈಃ - ಅನೇಕ ಪ್ರಕಾರವಾದ, ದುಃಖೈಃ - ವ್ಯಸನಗಳಿಂದ, ಮುಕ್ತಾ - ಬಿಡಲ್ಪಟ್ಟವಳಾಗಿ, ಅನುತ್ತಮಂ - ಸರ್ವೋತ್ಕೃಷ್ಟವಾದ, ಸುಖಂ - ಸೌಖ್ಯವನ್ನು, ಆಪ್ನೋತಿ - ಹೊಂದುತ್ತಾಳೆ. ॥೮೮॥ ಜನಕಾತ್ಮಜಾ - ಜನಕರಾಜನ ಪುತ್ರಿಯಾದ, ಮೈಥಿಲೀ - ಸೀತಾದೇವಿಯು, ಪ್ರಣಿಪಾತಪ್ರಸನ್ನಾಹಿ - ನಮಸ್ಕಾರ ಮಾತ್ರದಿಂದ ಪ್ರಸನ್ನಳಾಗುವವಳಲ್ಲವೆ, ॥೮೮॥ ॥ ತತಃ - ಅನಂತರದಲ್ಲಿ, ಭರ್ತುಃ - ಪತಿಯಾದ ಶ್ರೀರಾಮನ, ವಿಜಯಹರ್ಷಿತಾ - ತ್ರಿಜಟಾಸ್ವಪ್ನದಲ್ಲಿ ಸೂಚಿತವಾದ ರಾಮಜಯದಿಂದ ಹರ್ಷಿತಳಾದ, ಹ್ರೀಮತೀ - ಲಜ್ಜೆಯುಳ್ಳವಳಾದ, ಸಾಬಾಲಾ - ಆ ಸೀತಾದೇವಿಯು, ತತ್ - ಆ ಸ್ವಪ್ನವು ತಥ್ಯಂಯದಿ - ನಿಜವಾಗಿದ

---

ಕಂಡೆನು. ಅದು ಅತಿ ಭಯಂಕರವಾಗಿಯೂ ರೋಮಾಂಚವನ್ನುಂಟುಮಾಡತಕ್ಕದ್ದಾಗಿಯೂ ಇರುವುದು. ಆ ಕನಸಿನಿಂದ ರಾಕ್ಷಸರುಗಳಿಗೆಲ್ಲಾ ನಾಶವೂ, ಈಕೆಯ ಪತಿಯಾದ ಶ್ರೀರಾಮನಿಗೆ ವಿಜಯವೂ ಖಂಡಿತವಾಗಿ ಸಂಭವಿಸುವುದು ॥೮೬॥ ಶ್ರೀ ರಾಮನ ದೆಸೆಯಿಂದ ಈ ರಕ್ಕಸಿಯರನ್ನು ಕಾಪಾಡುವುದಕ್ಕೆ ಈಕೆಯೊಬ್ಬಳೇ ಶಕ್ತಳಾಗಿರುವಳು. ಆದಕಾರಣ ಈ ಸೀತಾದೇವಿಯನ್ನೇ ಬೇಡಿಕೊಳ್ಳೋಣ, ಹೀಗೆ ಮಾಡುವುದೇ ಅತ್ಯುತ್ತಮವಾದ ಉಪಾಯವೆಂದು ನನಗೆ ತೋರುತ್ತದೆ, ಎಂದು ಹೇಳಿದಳು. ॥೮೭॥ ಈ ರೀತಿಯಾದ ಸ್ವಪ್ನವನ್ನು ಯಾವ ಸೀತಾ ನಿಮಿತ್ತವಾಗಿ ನಾನು ಕಂಡೆನೊ, ಅಂಥಾ ಈ ವೈದೇಹಿಯು ಸಕಲ ದುಃಖಗಳಿಂದಲೂ ವಿಮುಕ್ತಳಾಗಿ ಸರ್ವೋತ್ತಮವಾದ ಸೌಖ್ಯವನ್ನು ಪಡೆಯುವಳು. ಜನಕನಂದಿನಿಯಾದ ಈ ಸೀತಾದೇವಿಯು ತನಗೆ ನಮಸ್ಕರಿಸಿದವರ ಅಪರಾಧಗಳನ್ನೆಲ್ಲಾ ಕ್ಷಮಿಸಿ ಪ್ರಸನ್ನಳಾಗುವವಳಲ್ಲವೆ! ॥೮೮॥ ತ್ರಿಜಟೆಯು ಹೀಗೆ ಹೇಳಿದ ತರುವಾಯ ಸೀತಾದೇವಿಯು ಲಜ್ಜೆಯಿಂದ ಕೂಡಿದವಳಾಗಿ, ತ್ರಿಜಟೆಯ ಸ್ವಪ್ನವೃತ್ತಾಂತದಿಂದ ಶ್ರೀರಾಮನಿಗೆ ವಿಜಯವಾಗುವುದೆಂಬುದನ್ನು ತಿಳಿದು, ಅತಿ ಹರ್ಷಿತಳಾಗಿ ನಿನ್ನ ಸ್ವಪ್ನವು

ತತ ಸ್ಸಾ ಹ್ರಿ ಮತೀ ಬಾಲಾ ಭರ್ತುರ್ ವ್ವಿಜಯ ಹರ್ಷಿತಾ ||
ಅವ್ರೋಚ ದ್ಯದಿ ತತ್ತಥ್ಯಂ ಭವೇಯಂ ಶರಣಂ ಹಿವಃ ||೪೯|| ||
ತಾಂ ಚಾಹಂ ತಾದೃಶೀಂ ದೃಷ್ಟ್ವಾ ಸೀತಾಯಾ ದಾರುಣಾಂ ದಶಾವ್ಮ್ ||
ಚಿಂತಯಾ ಮಾಸವಿಕ್ರಾಂತೋ ನ ಚ ಮೇ ನಿರ್ವೃತಂ ಮನಃ||೯೦|| |
ಸಂ ಭಾಷಣಾರ್ಥಂಚ ಮಯಾ ಜಾನಕ್ಯಾ ಶ್ಚಿಂತಿತೋ ವಿಧಿಃ ||
ಇಕ್ಷ್ವಾಕೂಣಾಂ ಹಿ ವಂಶಸ್ತು ತತೋ ಮಮ ಪುರಸ್ಕೃತಃ ||೯೧||||
ಶ್ರುತ್ವಾತು ಗದಿತಾಂ ವಾಚಂ ರಾಜರ್ಷಿ ಗಣ ಪೂಜಿತಾವ್ಮ್ ||
ಪ್ರತ್ಯಭಾಷತ ಮಾಂ ದೇವೀ ಬಾಷ್ಪೈಃ ಪಿಹಿತ ಲೋಚನಾ ||೯೨|||

ಪಕ್ಷದಲ್ಲಿ, ವಃ - ನಿಮ್ಮಗಳಿಗೆ, ಶರಣಂಭವೇಯಂಹಿ - ರಕ್ಷಕಳಾಗುವೆನಲ್ಲವೆ ? ಇತಿ - ಹೀಗೆಂದು, ಅವ್ರೋಚತ್ - ಹೇಳಿದಳು. ||೪೯|| || ಅಹಂ - ನಾನು, ತಾಂ - ಆ ಸೀತೆಯನ್ನೂ, ಸೀತಾಯಾಃ - ಸೀತಾದೇವಿಯ, ತಾದೃಶೀಂ - ಆ ವಿಧವಾದ, ದಾರುಣಾಂ - ಅತಿಕಠೋರವಾದ, ದಶಾಂಚ - ಅವಸ್ಥೆಯನ್ನೂ ಸಹ, ದೃಷ್ಟ್ವಾ - ನೋಡಿ, ವಿಕ್ರಾಂತಃ - ಅತಿದುಃಖಾಕ್ರಾಂತನಾಗಿ, ಚಿಂತಯಾಮಾಸ - ಯೋಚಿಸಿದೆನು. ಮೇ - ನನ್ನ, ಮನಃ - ಮನಸ್ಸು, ನನಿರ್ವೃತಂಚ - ಸಂತುಷ್ಟವಾಗದೇ ಹೋಯಿತು ||೯೦|| || ಜಾನಕ್ಯಾಃ - ಸೀತಾದೇವಿಯ, ಸಂಭಾಷಣಾರ್ಥಂ - ಎದುರಿನಲ್ಲಿ ನಿಂತು ಮಾತನಾಡುವುದಕ್ಕಾಗಿ, ಮಯಾ-ನನ್ನಿಂದ, ವಿಧಿಶ್ಚ - ಉಪಾಯವೂ ಸಹ, ಚಿಂತಿತಃ - ಯೋಚಿಸಲ್ಪಟ್ಟಿತು, ತತಃ - ಆಮೇಲೆ, ಇಕ್ಷ್ವಾಕೂಣಾಂ - ಇಕ್ಷ್ವಾಕುವಂಶದ ರಾಜರ, ವಂಶಸ್ತು - ಕುಲಪರಂಪರೆಯು, ಮಮ - ನನ್ನಿಂದ, ಪುರಸ್ಕೃತೋಹಿ - ಮುಂದುಮಾಡಲ್ಪಟ್ಟಿತಲ್ಲವೇ, (ಹೇಳಲ್ಪಟ್ಟಿತಲ್ಲವೆ) ||೯೧|| || ಬಾಷ್ಪೈಃ - ಕಣ್ಣೀರುಗಳಿಂದ, ಪಿಹಿತ - ಮುಚ್ಚಲ್ಪಟ್ಟ, ಲೋಚನಾ - ಕಣ್ಣುಗಳುಳ್ಳ, ದೇವೀ - ಸೀತಾದೇವಿಯು, ಗದಿತಾಂ - ನನ್ನಿಂದ ಹೇಳಲ್ಪಟ್ಟ, ರಾಜರ್ಷಿಗಣಪೂಜಿತಾಂ - ಅನೇಕ ರಾಜಋಷಿಗಳ ಸಮೂಹದಿಂದ ಪೂಜಿಸಲ್ಪಟ್ಟ, ವಾಚಂತು - ಮಾತನ್ನಾದರೋ, ಶ್ರುತ್ವಾ - ಕೇಳಿ, ಮಾಂಪ್ರತಿ - ನನ್ನನ್ನು ಕುರಿತು, ಅಭಾಷತ - ಮಾತನಾಡಿದಳು. ||೯೨|| || ಹೇವಾನರಪುಂಗನ - ಎಲೈ ಕಪಿಶ್ರೇಷ್ಠನೇ ; ತ್ವಂ - ನೀನು, ಕಃ - ಯಾರು? ಇಹ - ಇಲ್ಲಿಗೆ, ಕೇನ - ಯಾವಮಾರ್ಗದಿಂದ, ಕಥಂ - ಹೇಗೆ, ಪ್ರಾಪ್ತಶ್ಚ - ಬಂದೆ?, ರಾಮೇಣ - ಶ್ರೀರಾಮನೊಡನೆ, ತೇ - ನಿನಗೆ, ಕಾಚಪ್ರೀತಿಃ - ಯಾವವಿಧವಾದ ಸ್ನೇಹವಿರುತ್ತದೆ ? ತತ್ - ಅದನ್ನು

ನಿಜವಾಗುವ ಪಕ್ಷದಲ್ಲಿ ನಿಮ್ಮೆಲ್ಲರನ್ನೂ ನಾನು ರಕ್ಷಿಸುವೆನೆಂದು ಹೇಳಿದಳು ||೪೯|| || ಆಗ ನಾನು ಈರೀತಿಯಾಗಿ ಶೋಕಿಸುತ್ತಿರುವ ಸೀತಾದೇವಿಯನ್ನೂ, ಆಕೆಯ ದುರ್ದಶೆಯನ್ನೂ ನೋಡಿ, ಅತಿದುಃಖದಿಂದ ಕೂಡಿದವನಾಗಿ ಯೋಚಿಸುತ್ತ ಕುಳಿತೆನು. ನನ್ನ ಮನಸ್ಸು ಸಮಾಧಾನವನ್ನು ಪಡೆಯಲಿಲ್ಲ, ಆಕೆಯೊಡನೆ ಮಾತನಾಡುವುದಕ್ಕಾಗಿ ಪ್ರಕೃತೋಚಿತವಾದ ಉಪಾಯವನ್ನು ಯೋಚಿಸಿ ಮೊದಲು ಇಕ್ಷ್ವಾಕು ವಂಶದಲ್ಲಿ ಹುಟ್ಟಿದ ಮಹಾರಾಜರುಗಳ ಅನುಕ್ರಮವನ್ನು ಹೇಳುವುದಕ್ಕೆ ಪ್ರಾರಂಭಿಸಿದೆನು ||೯೧|| || ಹೀಗೆ ಬಹುಮಂದಿ ರಾಜರ್ಷಿಗಳಿಂದ ಶ್ಲಾಘ್ಯವಾದ ನನ್ನ ಮಾತುಗಳನ್ನು ಕೇಳಿ ಜಾನಕಿಯು ಕಣ್ಣಿನಲ್ಲಿ ನೀರುತುಂಬಿಕೊಂಡು, ನನ್ನನ್ನು ಕುರಿತು — ಎಲೈ ವಾನರೋತ್ತಮನೇ ! ನೀನು ಯಾರು ಎಲ್ಲಿಂದಬಂದೆ ? ಈ ಸ್ಥಳಕ್ಕೆ

ಕಸ್ತ್ವಂ ಕೇನ ಕಥಂ ಚೇಹ ಪ್ರಾಪ್ತೋ ವಾನರಪುಂಗವ ॥
ಕಾಚ ರಾಮೇಣ ತೇ ಪ್ರೀತಿ ಸ್ತನ್ಮೇ ಶಂಸಿತು ಮರ್ಹಸಿ ॥೯೩॥ ॥
ತಸ್ಯಾ ಸ್ತದ್ವಚನಂ ಶ್ರುತ್ವಾ ಹ್ಯಹ ಮ ಪ್ಯಬ್ರುವಂ ವಚಃ ॥
ದೇವಿ ರಾಮಸ್ಯ ಭರ್ತುರ್ಸ್ತೇ ಸಹಾಯೋ ಭೀಮ ವಿಕ್ರಮಃ ॥೯೪॥ ॥
ಸುಗ್ರೀವೋ ನಾಮ ವಿಕ್ರಾಂತೋ ವಾನರೇಂದ್ರೋ ಮಹಾ ಬಲಃ ॥೯೫॥
ತಸ್ಯ ಮಾಂ ವಿದ್ಧಿ ಭೃತ್ಯಂ ತ್ವಂ ಹನೂಮಂತ ಮಿಹಾಗತಮ್ । ॥೯೫॥॥
ಭರ್ತ್ರಾಹಂ ಪ್ರೇಷಿತ ಸ್ತುಭ್ಯಂ ರಾಮೇಣಾ ಕ್ಲಿಷ್ಟಕರ್ಮಣಾ ॥೯೬॥
ಇದಂ ಚ ಪುರುಷ ವ್ಯಾಘ್ರಃ ಶ್ರೀಮಾನ್ ದಾಶರಥಿ ಸ್ಸ್ವಯಮ್ ।
ಅಂಗುಳೀಯ ಮಭಿಜ್ಞಾನ ಮದಾ ತ್ತುಭ್ಯಂ ಯಶಸ್ವಿನಿ ॥೯೭॥

ಮೇ - ನನಗೆ, ಶಂಸಿತುಂ - ಹೇಳುವುದಕ್ಕೆ, ಅರ್ಹಸಿ - ಯೋಗ್ಯನಾಗಿರುವೆ, ॥೯೩॥ ॥ ತಸ್ಯಾಃ - ಆ ಸೀತಾದೇವಿಯು, ತತ್ವಚನಂ - ಆ ಮಾತನ್ನು, ಶ್ರುತ್ವಾ - ಕೇಳಿ, ಅಹಮಪಿ - ನಾನೂ ಸಹ, ವಚಃ-ಮಾತನ್ನು, ಅಬ್ರುವಂಹಿ - ಹೇಳಿದೆನು. ॥೯೪॥ ದೇವಿ - ಎಲೈ ಸೀತಾದೇವಿಯೇ ! ತೇ-ನಿನ್ನ, ಭರ್ತುಃ-ಪತಿಯಾದ, ರಾಮಸ್ಯ - ಶ್ರೀರಾಮನಿಗೆ, ಸಹಾಯಃ - ಸ್ನೇಹಿತನಾದ, ಭೀಮವಿಕ್ರಮಃ - ಮಹಾಪರಾಕ್ರಮವುಳ್ಳ, ವಿಕ್ರಾಂತಃ - ಶತ್ರುನಾಶಕನಾದ, ಮಹಾಬಲಃ - ದೊಡ್ಡ ಕಪಿಸೈನ್ಯವುಳ್ಳ, ಸುಗ್ರೀವೋ ನಾಮ - ಸುಗ್ರೀವನೆಂಬುವನು (ಅಸ್ತಿ - ಇರುವನು). ತಸ್ಯ - ಆ ಸುಗ್ರೀವನ, ಭೃತ್ಯಂ - ಆಳಾದ, ಇಹ - ಈ ಸ್ಥಳಕ್ಕೆ, ಆಗತಂ - ಬಂದಿರುವ, ಮಾಂ - ನನ್ನನ್ನು, ತ್ವಂ - ನೀನು, ಹನೂಮಂತಂ - ಹನುಮಂತನೆಂಬವನನ್ನಾಗಿ, ವಿದ್ಧಿ - ತಿಳಿ, ॥೯೫॥॥ ಅಹಂ- ನಾನು, ತುಭ್ಯಂ- ನಿನಗೋಸ್ಕರ, ಭರ್ತ್ರಾ-ಪತಿಯಾದ, ಅಕ್ಲಿಷ್ಟಕರ್ಮಣಾ - ಕಷ್ಟಪಡದೆ ಕೆಲಸಮಾಡತಕ್ಕವನಾದ, ರಾಮೇಣ - ರಾಮನಿಂದ, ಪ್ರೇಷಿತಃ - ಕಳುಹಿಸಲ್ಪಟ್ಟಿರುವೆನು ॥೯೬॥ ಹೇ ಯಶಸ್ವಿನಿ - ಎಲೌ ಕೀರ್ತಿಸಂಪನ್ನಳಾದ ಸೀತೆಯೇ ? ಪುರುಷವ್ಯಾಘ್ರಃ - ಪುರುಷೋತ್ತಮನಾದ, ಶ್ರೀಮಾನ್ - ಸಂಪದ್ಯುಕ್ತನಾದ, ದಾಶರಥಿಃ - ಶ್ರೀರಾಮನು, ಸ್ವಯಂ - ತಾನು, ಇದಂ - ಈ, ಅಂಗುಳೀಯಂಚ - ಮುದ್ರೆಯ ಉಂಗುರವನ್ನು ಸಹ, ತುಭ್ಯಂ - ನಿನಗೋಸ್ಕರ, ಅದಾತ್ - ಕೊಟ್ಟನು. ॥೯೭॥

ದೇವಿ-ಎಲೌಸೀತಾದೇವಿಯೇ, ತತ್-ಆದಕಾರಣ, ತ್ವಯಾ-ನಿನ್ನಿಂದ ವಿಧಿಸಲ್ಪಡುವ, ಆಜ್ಞಾಸ್ತ್ವಂ-

ನೀನು ಹೇಗೆಬಂದೆ ? ಶ್ರೀರಾಮನೊಡನೆ ನಿನಗೆ ಸ್ನೇಹವು ಹೇಗುಂಟಾಯಿತು ? ಇದನ್ನೆಲ್ಲಾ ನನಗೆ ತಿಳಿಸು ಎಂದು ಕೇಳಿದಳು ॥೯೩॥ ॥ ಆ ಮಾತನ್ನು ಕೇಳಿ ನಾನು-ಎಲೌ ದೇವಿಯೆ! ಕಪಿಗಳಿಗೆಲ್ಲಾ ರಾಜನಾಗಿಯೂ,ಮಹಾ ಬಲವುಳ್ಳವನಾಗಿಯೂ ಇರುವ ಸುಗ್ರೀವನೆಂಬುವನು ನಿನ್ನ ಪತಿಯಾದ ಶ್ರೀರಾಮನಿಗೆ ಸ್ನೇಹಿತನಾಗಿರುವನು, ಆ ಸುಗ್ರೀವನಿಗೆ ನಾನು ಭೃತ್ಯನಾಗಿರುವೆನು. ನನ್ನನ್ನು ಹನುಮಂತನೆಂದು ಕರೆಯುವರು. ಸದ್ಧರ್ಮನಿರತನಾದ ಶ್ರೀರಾಮನು ನಿನಗೋಸ್ಕರ ನನ್ನನ್ನು ಇಲ್ಲಿಗೆ ಕಳುಹಿಸಿಕೊಟ್ಟಿರುವನು ॥೯೬॥ ಎಲೌ ಯಶಸ್ವಿನಿಯಾದ ಜಾನಕಿಯೇ! ಪುರುಷೋತ್ತಮನಾದ ಶ್ರೀರಾಮನು ತನ್ನ ಕೈ ಬೆರಳಿನಲ್ಲಿಟ್ಟುಕೊಂಡಿದ್ದ ಈ ಮುದ್ರೆಯ ಉಂಗುರವನ್ನು ಗುರುತಾಗಿ ನಿನಗೆ ಕಳುಹಿಸಿಕೊಟ್ಟಿರುವನು ॥೯೭॥ ಆದಕಾರಣ ನೀನು ಹೇಗೆ ಅಪ್ಪಣೆಯನ್ನು ಕೊಡುವೆಯೋ ಆದರಂತೆ

ತದಿಚ್ಛಾಮಿ ತ್ವಯಾಽಽಜ್ಞಪ್ತಂ ದೇವಿ ಕಿಂ ಕರವಾಣ್ಯಹಮ್।
ರಾಮ ಲಕ್ಷ್ಮಣಯೋಃ ಪಾರ್ಶ್ವಂ ನಯಾಮಿ ತ್ವಾಂ ಕಿ ಮುತ್ತರಮ್॥೯೮॥
ಏತ ಚ್ಛ್ರುತ್ವಾ ವಿದಿತ್ವಾ ಚ ಸೀತಾ ಜನಕ ನಂದಿನೀ।
ಆಹ ರಾವಣ ಮುತ್ಸಾದ್ಯ ರಾಘವೋ ಮಾಂ ನಯ ತ್ವಿತಿ ॥೯೯॥
ಪ್ರಣಮ್ಯ ಶಿರಸಾ ದೇವೀ ಮಹ ಮಾರ್ಯಾ ಮನಿಂದಿತಾಮ್।
ರಾಘವಸ್ಯ ಮನೋ ಹ್ಲಾದ ಮಭಿಜ್ಞಾನ ಮಯಾಚಿಷಮ್ ॥೧೦೦॥
ಅಥ ಮಾ ಮಬ್ರವೀ ತ್ಸೀತಾ ಗೃಹ್ಯತಾ ಮಯಮುತ್ತಮಃ।
ಮಣಿ ರ್ಯೇನ ಮಹಾಬಾಹೂ ರಾಮ ಸ್ತ್ವಾಂ ಬಹುಮನ್ಯತೇ ॥೧೦೧॥

ಅಪ್ಪಣೆಯನ್ನು, ಇಚ್ಛಾಮಿ - ಅಪೇಕ್ಷಿಸುತ್ತೇನೆ, ಅಹಂ - ನಾನು, ಕಿಂ - ಏನನ್ನು, ಕರವಾಣಿ - ಮಾಡಲಿ! ? ತ್ವಾಂ - ನಿನ್ನನ್ನು, ರಾಮಲಕ್ಷ್ಮಣಯೋಃ - ಶ್ರೀರಾಮ ಮತ್ತು ಲಕ್ಷ್ಮಣ ಇವರುಗಳ, ಪಾರ್ಶ್ವಂ - ಸಮೀಪವನ್ನು. ನಯಾಮಿ - ಹೊಂದಿಸುವೆನು. ಉತ್ತರಂ - ಇದಕ್ಕೆ ಪ್ರತ್ಯುತ್ತರವು, ಕಿಂ-ಏನು ? ॥೯೮॥ ಜನಕ ನಂದಿನೀ - ಜನಕರಾಜನ ಪುತ್ರಿಯಾದ, ಸೀತಾ - ಸೀತಾದೇವಿಯು, ಏತತ್-ಈ ಮಾತನ್ನು, ಶ್ರುತ್ವಾ - ಕೇಳಿ, ವಿದಿತ್ವಾಚ - ತಿಳಿದು, ರಾಘವಃ - ಶ್ರೀರಾಮನು, ರಾವಣಂ-ರಾವಣನನ್ನು, ಉತ್ಸಾದ್ಯ - ಸಂಹರಿಸಿ, ಮಾಂ - ನನ್ನನ್ನು, ನಯತು - ಕರೆದು ಕೊಂಡು ಹೋಗಲಿ, ಇತಿ-ಹೀಗೆ, ಆಹ - ಹೇಳಿದಳು ॥೯೯॥ ಅಹಂ - ನಾನು, ಅನಿಂದಿತಾಂ - ದೋಷ ಶೂನ್ಯಳಾದ, ಆರ್ಯಾಂ - ಪೂಜ್ಯಳಾದ, ದೇವೀಂ - ಸೀತಾದೇವಿಯನ್ನು, ಶಿರಸಾ - ತಲೆಯಿಂದ, ಪ್ರಣಮ್ಯ - ನಮಸ್ಕರಿಸಿ, ರಾಘವಸ್ಯ-ಶ್ರೀರಾಮನಿಗೆ, ಮನೋಹ್ಲಾದಂ - ಮನಸ್ಸನ್ನು ಸಂತೋಷಪಡಿಸತಕ್ಕ, ಅಭಿಜ್ಞಾನಂ - ಗುರುತನ್ನು, ಅಯಾಚಿಷಂ - ಬೇಡಿಕೊಂಡೆನು ॥೧೦೦॥ ಅಥ-ಅನಂತರದಲ್ಲಿ, ಸೀತಾ - ಸೀತಾದೇವಿಯು, ಮಾಂ-ನನ್ನನ್ನು ಕುರಿತು, ಉತ್ತಮಃ - ಶ್ರೇಷ್ಠವಾದ, ಅಯಂ ಮಣಿಃ - ಈ ರತ್ನವು, ಗೃಹ್ಯತಾಂ - ಗ್ರಹಿಸಲ್ಪಡಲಿ, ಯೇನ - ಯಾವರತ್ನದಿಂದ, ಮಹಾಬಾಹುಃ - ದೊಡ್ಡದಾದ ತೋಳುಗಳುಳ್ಳ. ರಾಮಃ - ಶ್ರೀರಾಮನು, ತ್ವಾಂ - ನಿನ್ನನ್ನು, ಬಹುಮನ್ಯತೇ-ಬಹುಮಾನಮಾಡುವನೋ, ಇತಿ-ಹೀಗೆಂಬುದಾಗಿ ಅಬ್ರವೀತ್ - ಹೇಳಿದಳು, ॥೧೦೧॥ ವರಾರೋಹಾ - ಉತ್ತಮಸ್ತ್ರೀಯಾದ ಸೀತಾದೇವಿಯು, ಇತಿ - ಹೀಗೆ,

ನಡೆಸುವೆನು. ಈಗ ನಾನು ಮಾಡಬೇಕಾದ ಕಾರ್ಯವೇನು? ನಿನ್ನನ್ನು ಶ್ರೀರಾಮಲಕ್ಷ್ಮಣರ ಸನ್ನಿಧಿಗೆ ಕರೆದುಕೊಂಡುಹೋಗಿ ಬಿಡುವೆನು. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವನ್ನು ತಿಳಿಸು॥೯೮॥ ಹೀಗೆ ಹೇಳಿದ ನನ್ನ ಮಾತನ್ನುಕೇಳಿ ಜನಕನಂದಿನಿಯು ಸ್ವಲ್ಪಹೊತ್ತು ಯೋಚಿಸಿ, ಶ್ರೀರಾಮನೇ ಇಲ್ಲಿಗೆಬಂದು ರಾವಣನನ್ನು ಕೊಂದು, ನನ್ನನ್ನು ಕರೆದುಕೊಂಡುಹೋಗುವುದೇ ನನಗೆ ಯುಕ್ತವಾಗಿ ತೋರುವುದೆಂದು ಹೇಳಿದಳು ॥೯೯॥ ಆಗ ನಾನು ಪೂಜ್ಯಳಾದ, ಸೀತಾದೇವಿಗೆ ವಂದಿಸಿ, ಶ್ರೀರಾಮನಿಗೆ ನಂಬಿಕೆ ಹುಟ್ಟುವುದಕ್ಕಾಗಿ ಒಂದು ಕುರುಹನ್ನು ದಯಪಾಲಿಸಬೇಕೆಂದು ಕೇಳಿಕೊಂಡೆನು ॥೧೦೦॥ ಆ ಬಳಿಕ ಸೀತೆಯು ದಿವ್ಯವಾದ ತನ್ನ ಚೂಡಾರತ್ನವನ್ನು ತೆಗೆದು, ಎಲೈ ವಾನರನೇ! ಇದನ್ನು ತೆಗೆದುಕೊಂಡು ಹೋಗಿ ಶ್ರೀರಾಮನಿಗೆ ಕೊಡು. ಇದರಿಂದ ಮಹಾಭುಜನಾದ ಶ್ರೀರಾಮನಿಗೆ ನಂಬಿಕೆಯುಂಟಾಗಿ ನಿನಗೆ ಬಹುಮಾನವನ್ನು ಕೊಡುವನು ॥೧೦೧॥ ಹೀಗೆಹೇಳಿ ಉತ್ತಮಾಂಗನೆಯಾದ

ಇತ್ಯುಕ್ತ್ವಾತು ವರಾರೋಹಾ ಮಣಿಪ್ರವರ ಮದ್ಭುತಮ್ ।
ಪ್ರಾಯಚ್ಛತ್ಪರಮೋದ್ವಿಗ್ನಾ ವಾಚಾ ಮಾಂ ಸಂದಿದೇಶ ಹ ॥ ೧೦೨॥
ತತ ಸ್ತಸ್ಯೈ ಪ್ರಣಮ್ಯಾಹಂ ರಾಜಪುತ್ರ್ಯೈ ಸಮಾಹಿತಃ ।
ಪ್ರದಕ್ಷಿಣಂ ಪರಿಕ್ರಾಮ ಮಿಹಾಭ್ಯುದ್ಗತ ಮಾನಸಃ ॥೧೦೩॥
ಉತ್ತರಂ ಪುನರೇವಾಹಂ ನಿಶ್ಚಿತ್ಯ ಮನಸಾ ತಯಾ ।
ಹನೂಮ ನ್ಮಮ ವೃತ್ತಾಂತಂ ವಕ್ತು ಮರ್ಹಸಿ ರಾಘವೇ ॥೧೦೪॥
ಯಥಾ ಶ್ರುತ್ವೈವ ನ ಚಿರಾ ತ್ತಾ ವುಭೌ ರಾಮಲಕ್ಷ್ಮಣೌ ।
ಸುಗ್ರೀವ ಸಹಿತೌ ವೀರಾ ವುಪೇಯಾ ತಾಂ ತಥಾ ಕುರು ॥೧೦೫॥
ಯದ್ಯ ನ್ಯಥಾ ಭವೇ ದೇತ ದ್ದ್ವೌ ಮಾಸೌ ಜೀವಿತಂ ಮಮ ।

ಉಕ್ತ್ವಾ - ಹೇಳಿ, ಅದ್ಭುತಂ - ಆಶ್ಚರ್ಯವನ್ನುಂಟುಮಾಡುವ, ಮಣಿಪ್ರವರಂ - ಶ್ರೇಷ್ಠವಾದ ರತ್ನವನ್ನು, ಪ್ರಾಯಚ್ಛತ್ - ಕೊಟ್ಟಳು, ಪರಮೋದ್ವಿಗ್ನಾ - ಅತಿಭಯವುಳ್ಳವಳಾಗಿ, ವಾಚಾ - ಬಾಯಿಮಾತಿನಿಂದ, ಮಾಂ - ನನ್ನನ್ನು, ಸಂದಿದೇಶಹ - ಹೇಳಿಕಳುಹಿಸಿದಳು, ೧೦೨ ॥ ತತಃ - ಆ ಮೇಲೆ ಅಹಂ - ನಾನು, ತಸ್ಯೈ ರಾಜ ಪುತ್ರ್ಯೈ - ಆ ಸೀತಾದೇವಿಗೆ, ಪ್ರಣಮ್ಯ - ನಮಸ್ಕರಿಸಿ, ಸಮಾಹಿತಃ - ಸಮಾಧಾನ ಮನಸ್ಕನಾಗಿ, ಇಹ - ಇಲ್ಲಿಗೆ, ಅಭ್ಯುದ್ಗತಮಾನಸಃ - ಬರಬೇಕೆಂಬ ಮನಸ್ಸುಳ್ಳವನಾಗಿ, ಪ್ರದಕ್ಷಿಣಂ - ಪ್ರದಕ್ಷಿಣವನ್ನು, ಪರಿಕ್ರಾಮಂ - ಸುತ್ತಿದೆನು, ॥೧೦೩॥ ಪುನಃ - ಮತ್ತೆ, ಇದಂ - ಈ ಮುಂದೆ ಹೇಳುವ, ಉತ್ತರಂ - ಪ್ರತ್ಯುತ್ತರವನ್ನು, ಮನಸಾ - ಮನಸ್ಸಿನಿಂದ, ನಿಶ್ಚಿತ್ಯ - ನಿಶ್ಚಯಿಸಿಕೊಂಡು, ತಯಾ - ಆ ಸೀತಾದೇವಿಯಿಂದ, ಹೇಹನುಮನ್ - ಎಲೈ ಆಂಜನೇಯನೇ ! ಮಮ - ನನ್ನ, ವೃತ್ತಾಂತಂ - ಸಮಾಚಾರವನ್ನು, ರಾಘವೇ - ಶ್ರೀರಾಮನಲ್ಲಿ, ವಕ್ತುಂ - ಹೇಳುವುದಕ್ಕೆ, ಅರ್ಹಸಿ-ಯೋಗ್ಯನಾಗಿದೀಯೆ, ಸುಗ್ರೀವಸಹಿತೌ - ಸುಗ್ರೀವನಿಂದ ಕೂಡಿದ, ವೀರೌ - ಪರಾಕ್ರಮಶಾಲಿಗಳಾದ, ತೌ ಉಭೌರಾಮಲಕ್ಷ್ಮಣೌ ಶ್ರೀರಾಮ ಮತ್ತು ಲಕ್ಷ್ಮಣ ಇವರಿಬ್ಬರೂ, ಶ್ರುತ್ವೈವ - ನನ್ನ ಸಮಾಚಾರವನ್ನು ಕೇಳಿದ ಕೂಡಲೇ, ನಚಿರಾತ್ - ಬೇಗನೆ, ಯಥಾ - ಹೇಗೆ, ಉಪೇಯಾತಾಂ - ಇಲ್ಲಿಗೆ ಬರುವರೋ, ತಥಾ - ಹಾಗೆ, ಕುರು - ಮಾಡು, ಏತತ್ - ಹೀಗೆ ಬರುವಿಕೆಯು, ಅನ್ಯಥಾ - ಬೇರೆವಿಧವಾಗಿ, ಭವೇದ್ಯದಿ - ಆದರೆ, ಅಂದರೆ ರಾಮಲಕ್ಷ್ಮಣರು ಬಾರದೇಹೋದರೆ, ದ್ವೌಮಾಸೌ-

ಸೀತಾದೇವಿಯು - ಶ್ರೇಷ್ಠವಾದ ಚೂಡಾರತ್ನವನ್ನು ಕೊಟ್ಟು, ಬಾಯಿಮಾತಿನಿಂದಲೂ ಸಮಾಚಾರವನ್ನು ಹೇಳಿಕಳುಹಿಸಿರುವಳು ॥೧೦೨॥ ಆ ಬಳಿಕ ರಾಜಪುತ್ರಿಯಾದ ಆಕೆಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡಿ, ಸಮಾಧಾನಚಿತ್ತನಾಗಿ, ಇಲ್ಲಿಗೆ ಬರಬೇಕೆಂಬ ಕುತೂಹಲವುಳ್ಳವನಾದೆನು ॥೧೦೩॥ ಆ ಜಾನಕಿಯು ಹೇಳಬೇಕಾದ ಮಾತನ್ನು ಪುನಃ ಜ್ಞಾಪಿಸಿಕೊಂಡು, ಎಲೈ ಹನುಮಂತನೇ! ಮಹಾ ಶೂರರಾದ ರಾಮಲಕ್ಷ್ಮಣರು ನನ್ನ ಸಮಾಚಾರವನ್ನು ಕೇಳಿದಕೂಡಲೇ ಸುಗ್ರೀವನೊಡನೆ ಇಲ್ಲಿಗೆ ಬರುವುದಕ್ಕಾಗಿ ಹೇಗೆ ಪ್ರಯತ್ನವನ್ನು ಮಾಡಬೇಕೋ ಹಾಗೆಮಾಡು. ಇದಕ್ಕೆ ವ್ಯತಿರಿಕ್ತವಾಗಿ ಅವರು ಇಲ್ಲಿಗೆ ಬಾರದೆ ಇದ್ದ ಪಕ್ಷದಲ್ಲಿ, ಇನ್ನು ಎರಡು ಪಕ್ಷಗಳು ಮಾತ್ರ ನಾನು ಪ್ರಾಣಗಳನ್ನು ಧರಿಸಿರುವೆನು. ಆ ಅವಧಿಯೊಳಗಾಗಿ ಶ್ರೀರಾಮನು ನನ್ನನ್ನು ನೋಡದೆ ಇದ್ದಲ್ಲಿ ಅನಾಥಳಂತೆ ನಾನು

ನಮಾಂ ದ್ರಕ್ಷ್ಯತಿ ಕಾಕುತ್ಸ್ಥೋ ಮ್ರಿಯೇ ಸಾಹ ಮನಾಥವತ್ ॥೧೦೬॥
ತ ಚ್ಛ್ರುತ್ವಾ ಕರುಣಂ ವಾಕ್ಯಂ ಕ್ರೋಧೋ ಮಾ ಮಭ್ಯವರ್ತತ ।
ಉತ್ತರಂ ಚ ಮಯಾ ದೃಷ್ಟಂ ಕಾರ್ಯಶೇಷ ಮನಂತರಮ್ ॥೧೦೭॥
ತತೋಽವರ್ಧ ತ ಮೇ ಕಾಯ ಸ್ತದಾ ಪರ್ವತ ಸನ್ನಿಭಃ ।
ಯುದ್ಧಕಾಂಕ್ಷೀ ವನಂ ತಚ್ಚ ವಿನಾಶಯಿತು ಮಾರಭೇ ೧೦೮॥
ತದ್ಭಗ್ನ ವನಷಂಡಂ ತು ಭ್ರಾಂತ ತ್ರಸ್ತ ಮೃಗದ್ವಿಜಮ್ ।
ಪ್ರತಿಬುದ್ಧಾ ನಿರೀಕ್ಷಂತೇ ರಾಕ್ಷಸ್ಯೋ ವಿಕೃತಾ ನನಾಃ ॥೧೦೯॥

---

ಎರಡು ತಿಂಗಳವರಿವಿಗೆ, ಮಮ - ನನ್ನ, ಜೀವಿತಂ - ಪ್ರಾಣವು ಇರುತ್ತದೆ, ಸಾಹಂ - ಆ ನಾನು, ಅ ನಾಥವತ್- ದಿಕ್ಕಿಲ್ಲದವಳಂತೆ, ಮ್ರಿಯೇ-ಪ್ರಾಣವನ್ನು ಬಿಡುವೆನು, ಕಾಕುತ್ಸ್ಥಃ-ಶ್ರೀರಾಮನು, ಮಾಂ - ನನ್ನನ್ನು, ನದ್ರಕ್ಷ್ಯತಿ - ನೋಡುವುದಿಲ್ಲ (ಇತಿ-ಎಂಬದಾಗಿ, ಉಕ್ತಃ - ಹೇಳಲ್ಪಟ್ಟೆನು,) (ಇಲ್ಲಿಮಾ ಸಶಬ್ದವು ಪಕ್ಷಪರವಾಗಿರುತ್ತದೆ, ಎರಡು ತಿಂಗಳು ಅಂದರೆ ಎರಡುಪಕ್ಷಗಳೆಂದು ಅರ್ಥ)॥೧೦೬॥ ಕರುಣಂ- ದುಃಖದಿಂದ ಕೂಡಿದ, ತತ್‌ವಾಕ್ಯಂ - ಆ ಮಾತನ್ನು, ಶ್ರುತ್ವಾ - ಕೇಳಿ, ಕ್ರೋಧಃ-ಕೋಪವು, ಮಾಂ- ನನ್ನನ್ನು, ಅಭ್ಯವರ್ತತ - ಆವರಿಸಿಕೊಂಡಿತು, ಅನಂತರಂ - ಆ ಮೇಲೆ, ಉತ್ತರಂ - ಮುಂದೆಮಾಡ ಬೇಕಾದ, ಕಾರ್ಯಶೇಷಂಚ-ಲಂಕಾನಾಶನರೂಪವಾದ ಕೆಲಸವೂ ಸಹ, ಮಯಾ-ನನ್ನಿಂದ, ದೃಷ್ಟಂ-ನೋಡಲ್ಪಟ್ಟಿತು. ॥೧೦೭॥ ತತಃ - ಆಮೇಲೆ, ಮೇ - ನನ್ನ, ಕಾಯಃ - ಶರೀರವು, ಅವರ್ಧತ- ಬೆಳೆಯಿತು. ತದಾ - ಆಗ, ಪರ್ವತಸನ್ನಿಭಃ - ಪರ್ವತಕ್ಕೆ ಸಮಾನನಾದ, ಯುದ್ಧಕಾಂಕ್ಷೀ, ಯುದ್ಧವನ್ನು ಬಯಸಿದ ನಾನು, ತಚ್ಚವನಂ - ಆ ಅಶೋಕವನವನ್ನು, ವಿನಾಶಯಿತುಂ - ಮುರಿದು ಹಾಕುವುದಕ್ಕೆ, ಆರಭೇ- ಪ್ರಾರಂಭಿಸಿದೆನು. ॥೧೦೮॥ ಭಗ್ನಂ - ಮುರಿದುಹಾಕಲ್ಪಟ್ಟ, ಭ್ರಾಂತತ್ರಸ್ತಮೃಗದ್ವಿಜಂ - ಗಾಬರಿ ಯಿಂದ ಹೆದರಿದ ಮೃಗಗಳೂ ಪಕ್ಷಿಗಳೂ ಉಳ್ಳ, ತದ್ವನಷಂಡಂ-ಆ ಮರಗಳ ಗುಂಪನ್ನು, ಪ್ರತಿಬುದ್ಧಾಃ ಎಚ್ಚತ್ತುಕೊಂಡ, ವಿಕೃತಾನನಾಃ - ವಿಕಾರವಾದ ಮುಖಗಳುಳ್ಳ, ರಾಕ್ಷಸ್ಯಃ - ರಕ್ಕಸಿಯರು, ನಿರೀಕ್ಷಂತೇ - ನೋಡಿದರು. ॥೧೦೯॥ ತಸ್ಮಿನ್ ವನೇ - ಆ ವನದಲ್ಲಿ, ಮಾಂ-ನನ್ನನ್ನು, ದೃಷ್ಟ್ವಾಚ-ನೋಡಿಯೂ,

---

ಪ್ರಾಣವನ್ನು ಕಳೆದುಕೊಳ್ಳುವೆನು. ಈ ನನ್ನ ಸಮಾಚಾರವನ್ನು ಶ್ರೀರಾಮನಿಗೆ ನೀನು ತಿಳಿ ಸು ಎಂದು ಹೇಳಿದಳು ॥೧೦೬॥ ಸೀತಾದೇವಿಯು ಅತಿ ದೀನಳಾಗಿ ಹೇಳಿದ ಈ ಮಾತುಗಳನ್ನು ಕೇಳಿದಕೂಡಲೇ ನನಗೆ ಅತಿ ಕೋಪವುಂಟಾಯಿತು. ಅನಂತರದಲ್ಲಿ ಮುಂದೆಮಾಡಬೇಕಾದ ಕಾರ್ಯಶೇಷವನ್ನು ಆಲೋಚಿಸಿ, ಈ ಲಂಕಾಪಟ್ಟಣವನ್ನೆಲ್ಲಾ ನಾಶಮಾಡಬೇಕೆಂದೆಣಿಸಿದೆನು ॥೧೦೭॥ ಹೀಗೆ ಯೋಚಿಸುತ್ತಿದ್ದ ನನ್ನ ಶರೀರವು ಒಂದು ದೊಡ್ಡ ಪರ್ವತದಂತೆ ಬೆಳೆಯುವುದಕ್ಕುಪಕ್ರಮಿಸಿತು. ನೀಚರಾದ ರಕ್ಕಸರೊಡನೆ ಯುದ್ಧಮಾಡಬೇಕೆಂಬ ಅಪೇಕ್ಷೆಯಿಂದ ಆ ಅಶೋಕವನದಲ್ಲಿರುವ ಮರಗಳನ್ನೆಲ್ಲಾ ಮುರಿದುಹಾಕುವುದಕ್ಕುಪಕ್ರಮಿಸಿದೆನು ॥೧೦೮॥ ಹೀಗೆ ನಾನು ಆ ವನದಲ್ಲಿರುವ ವೃಕ್ಷಗಳನ್ನೆಲ್ಲಾ ಮುರಿದು ಹಾಕುತ್ತಿರುವಾಗ್ಗ ಅಲ್ಲಿದ್ದ ಮೃಗಗಳೂ, ಪಕ್ಷಿಗಳೂ, ಬೆದರಿ ಗಾಬರಿಯಿಂದ ಓಡಿಹೋಗುತ್ತಿದ್ದವು. ಇದನ್ನು ನೋಡಿ ಅಲ್ಲಿ ನೇಮಿಸಲ್ಪಟ್ಟಿದ್ದ ರಕ್ಕಸಿಯರೆಲ್ಲರೂ ಎಚ್ಚತ್ತು ವಿಕಾರವಾದ ಮುಖಗಳಿಂದ ನೋಡುತ್ತ, ಮರಗಳ ಮೇಲೆ ಓಡಾಡುತ್ತಿರುವ ನನ್ನನ್ನು ಕಂಡು, ಅಲ್ಲಲ್ಲೇ ಗುಂಪು

ಮಾಂ ಚ ದೃಷ್ಟ್ವಾ ವನೇ ತಸ್ಮಿನ್ ಸಮಾಗಮ್ಯ ತತ ಸ್ತತಃ ।
ತಾ ಸ್ಸಮ ಭ್ಯಾಗತಾಃ ಕ್ಷಿಪ್ರಂ ರಾವಣಾ ಯಾಚ ಚಕ್ಷಿರೇ ॥೧೧೦॥
ರಾಜ ನ್ವನ ಮಿದಂ ದುರ್ಗಂ ತವ ಭಗ್ನಂ ದುರಾ ತ್ಮನಾ ।
ವಾನರೇಣ ಹ್ಯವಿಜ್ಞಾಯ ತವ ವೀರ್ಯಂ ಮಹಾಬಲ ॥೧೧೧॥
ದುರ್ಬುದ್ಧೇ ಸ್ತಸ್ಯ ರಾಜೇಂದ್ರ ತವ ವಿಪ್ರಿಯ ಕಾರಿಣಃ ।
ವಧ ಮಾಜ್ಞಾಪಯ ಕ್ಷಿಪ್ರಂ ಯಥಾಽ ಸೌ ವಿಲಯಂ ವ್ರಜೇತ್ ॥೧೧೨॥
ತಚ್ಛ್ರುತ್ವಾ ರಾಕ್ಷಸೇಂದ್ರೇಣ ವಿಸೃಷ್ಟಾ ಭೃಶ ದುರ್ಜಯಾಃ ।
ರಾಕ್ಷಸಾಃ ಕಿಂಕರಾ ನಾಮ ರಾವಣಸ್ಯ ಮನೋಽನುಗಾಃ ॥೧೧೩॥

ತತಸ್ತತಃ - ಆಯಾಯ ಸ್ಥಳಗಳಲ್ಲಿ, ಸಮಾಗಮ್ಯ - ಗುಂಪುಕೂಡಿ, ಸಮಭ್ಯಾಗತಾಃ - ಬಂದ ವರಾಗಿ, ಕ್ಷಿಪ್ರಂ - ಬಹುಬೇಗನೆ, ರಾವಣಾಯ - ರಾವಣನಿಗೆ, ಆ ಚಚಕ್ಷಿರೇ - ಹೇಳಿದರು. ॥೧೧೦॥ ಮಹಾಬಲ - ಮಹಾ ಪರಾಕ್ರಮಶಾಲಿಯಾದ, ಹೇರಾಜನ್ - ಎಲೈ ರಾವಣಾಸುರನೇ ! ದುರ್ಗಂ - ಪ್ರವೇಶಿಸುವುದಕ್ಕೆ ಅಸಾಧ್ಯವಾದ, ತವ - ನಿನ್ನ ಇದಂವನಂ - ಈ ವನವು, ದುರಾತ್ಮನಾ - ದುಷ್ಟನಾದ ವಾನರೇಣ, ಕೋತಿಯಿಂದ, ತವ - ನಿನ್ನ, ವೀರ್ಯಂ - ಬಲವನ್ನು, ಅವಿಜ್ಞಾಯ - ತಿಳಿಯದೆ, ಭಗ್ನಂಹಿ ಮುರಿಯಲ್ಪಟ್ಟಿತು. ॥೧೧೧॥ ಹೇರಾಜೇಂದ್ರ-ಎಲೈ ರಾವಣಾಸುರನೇ ! ದುರ್ಬುದ್ಧೇಃ- ದುಷ್ಟ ಬುದ್ಧಿಯುಳ್ಳ, ತವ - ನಿನಗೆ, ವಿಪ್ರಿಯಕಾರಿಣಃ - ಅಹಿತವಾದ ಕೆಲಸವನ್ನು ಮಾಡಿದ, ತಸ್ಯ - ಆ ಕಪಿಯ, ವಧಂ - ಸಂಹಾರವನ್ನು, ಕ್ಷಿಪ್ರಂ - ಜಾಗ್ರತೆಯಾಗಿ, ಯಥಾ - ಹೇಗೆ, ಅಸೌ - ಈ ಕಪಿಯು ವಿಲಯಂ - ನಾಶವನ್ನು, ವ್ರಜೇತ್ - ಹೊಂದುವುದೋ, ತಥಾ - ಹಾಗೆ, ಆಜ್ಞಾಪಯ - ಅಪ್ಪಣೆಕೊಡು, ತತ್ - ಆ ಮಾತನ್ನು, ಶ್ರುತ್ವಾ - ಕೇಳಿ, ರಾಕ್ಷಸೇಂದ್ರೇಣ - ರಾವಣನಿಂದ, ಭೃಶದುರ್ಜಯಾಃ - ಸುತರಾಂ ಜಯಿಸುವುದಕ್ಕೆ ಅಸಾಧ್ಯರಾದ, ರಾವಣಸ್ಯ - ರಾವಣನ, ಮನೋಽನುಗಾಃ-ಅಭಿಪ್ರಾಯಕ್ಕೆ ತಕ್ಕಂತೆ ನಡೆಯತಕ್ಕವರಾದ, ಕಿಂಕರಾನಾಮ - ಕಿಂಕರರೆಂಬ, ರಾಕ್ಷಸಾಃ - ರಾಕ್ಷಸರು, ವಿಸೃಷ್ಟಾಃ - ಕಳುಹಿಸಲ್ಪಟ್ಟರು. ॥೧೧೨॥ ಶೂಲಮುದ್ಗರಪಾಣಿನಾಂ-ಶೂಲಾಯುಧ, ಮುದ್ಗರಾಯುಧ ಇವುಗಳೇ ಕೈಯಲ್ಲುಳ್ಳ

ಕೂಡಿ, ಮಾತನಾಡಿಕೊಳ್ಳುತ್ತ, ಬೇಗನೆ ಓಡಿಹೋಗಿ, ರಾವಣನಲ್ಲಿ ಈ ಸಮಾಚಾರವನ್ನು ತಿಳಿಸಿದರು ॥೧೧೦॥ ಎಲೈ ರಾಕ್ಷಸರಾಜನೇ ! ಯಾರಿಂದಲೂ ಪ್ರವೇಶಿಸಲಶಕ್ಯವಾದ ನಿನ್ನ ಅಶೋಕವನವನ್ನು ಯಾವುದೋ ಒಂದು ದುಷ್ಟಕಪಿಯು ನಿನ್ನ ಬಾಹುಬಲದ ಮಹಿಮೆಯನ್ನು ತಿಳಿಯದೆ ಮುರಿದು ಹಾಕುತ್ತಿರುವುದು ॥೧೧೧॥ ಎಲೈ ರಾಜೇಂದ್ರನೇ ನಿನಗೆ ಕೇಡಕನ್ನು ಮಾಡುತ್ತಿರುವ ದುರ್ಮತಿಯಾದ ಆಕೋತಿಯನ್ನು ಸಂಹರಿಸುವುದಕ್ಕಾಗಿ ಬೇಗ ಅಪ್ಪಣೆಯನ್ನು ಕೊಡು. ಆ ದುಷ್ಟಕಪಿಯು ನಷ್ಟವಾಗಲಿ ಎಂದು ಹೇಳಲು, ಈ ಮಾತುಗಳನ್ನು ಕೇಳಿದ ರಾವಣನು ತನ್ನ ಮನೋವೃತ್ತಿಗನುಸಾರವಾಗಿ ನಡೆದುಕೊಳ್ಳತಕ್ಕವರಾಗಿಯೂ, ಯಾರಿಂದಲೂ ಜಯಿಸಲಸಾಧ್ಯರಾಗಿಯೂ ಇರುವ ಕಿಂಕರರೆಂಬ ರಾಕ್ಷಸವೀರರನ್ನು ಕಳುಹಿಸಿಕೊಟ್ಟನು.॥೧೧೨,೧೧೩॥ ಅವರು ಕೈಯಲ್ಲಿಶೂಲ ಮುದ್ಗರ ಮೊದಲಾದ ಆಯುಧಗಳನ್ನು ಧರಿಸಿ, ನನ್ನಮೇಲೆ ಯುದ್ಧಕ್ಕೆ ಬಂದರು. ಅವರುಗಳು ಎಂಭತ್ತುಸಾವಿರ ಮಂದಿ ಇದ್ದರು. ಅವರೆಲ್ಲರನ್ನೂ ಒಂದುಲೋಹಮುಂಡಿಗೆಯಿಂದಲೇ ಸದೆಬಡಿದೆನು ॥೧೧೪॥

ತೇಷಾ ಮಶೀತಿ ಸಾಹಸ್ರಂ ಶೂಲಮುದ್ಗರ ಪಾಣಿನಾಮ್ ।
ಮಯಾ ತಸ್ಮಿ ನ್ವನೋದ್ದೇಶೇ ಪರಿಘೇಣ ನಿಷೂದಿತಮ್ ॥೧೨೪॥
ತೇಷಾಂ ತು ಹತಶೇಷಾ ಯೇ ತೇ ಗತ್ವಾ ಲಘುವಿಕ್ರಮಾಃ ।
ನಿಹತಂ ಚ ಮಹತ್ಸೈನ್ಯಂ ರಾವಣಾಯಾ ಚಚಕ್ಷಿರೇ ॥೧೨೫॥
ತತೋ ಮೇ ಬುದ್ಧಿ ರುತ್ಪನ್ನಾ ಚೈತ್ಯಪ್ರಾಸಾದ ಭಂಜನೇ ॥
ತತ್ರಸ್ಥಾ ನ್ರಾಕ್ಷಸಾನ್ ಹತ್ವಾ ಶತಂ ಸ್ತಂಭೇ ನ ವೈ ಪುನಃ ॥೧೨೬॥
ಲಲಾಮ ಭೂತೋ ಲಂಕಾಯಾ ಸ್ಸವೈ ವಿಧ್ವಂಸಿತೋ ರುಷಾ ।
ತತಃ ಪ್ರಹಸ್ತಸ್ಯ ಸುತಂ ಜಂಬು ಮಾಲಿನ ಮಾದಿಶತ್ ॥೧೨೭॥
ರಾಕ್ಷಸೈ ರ್ಬಹುಭಿ ಸ್ಸಾರ್ಧಂ ಘೋರರೂಪೈ ರ್ಭಯಾನಕೈಃ ।

ತೇಷಾಂ - ಆ ರಾಕ್ಷಸರ, ಅಶೀತಿಸಾಹಸ್ರಂ - ಎಂಬತ್ತು ಸಾವಿರ ಸಂಖ್ಯೆಯು, ಮಯಾ - ನನ್ನಿಂದ, ತಸ್ಮಿನ್ವನೋದ್ದೇಶೇ - ಆ ಅಶೋಕವನದಲ್ಲಿ, ಪರಿಘೇಣ - ಒಂದು ಲಾಳಮುಂಡಿಗೆಯಿಂದಲೇ, ನಿಷೂದಿತಂ - ಸಂಹರಿಸಲ್ಪಟ್ಟಿತು. ॥೧೨೪॥ ತೇಷಾಂತು - ಅವರುಗಳೊಳಗೆ, ಹತಶೇಷಾಃ - ಸತ್ತು ಉಳಿದವರು, ಯೇ - ಯಾರುಂಟೋ - ಲಘುವಿಕ್ರಮಾಃ - ಸ್ವಲ್ಪ ಶಕ್ತಿಯುಳ್ಳ, ತೇ - ಅವರುಗಳು, ಗತ್ವಾ - ಹೋಗಿ, ನಿಹತಂ - ಸಂಹರಿಸಲ್ಪಟ್ಟ, ಮಹತ್ - ಅಧಿಕವಾದ, ಸೈನ್ಯಂಚ - ಸೈನ್ಯವನ್ನು ಕೂಡ, ರಾವಣಾಯ - ರಾವಣನಿಗೆ, ಆಚಚಕ್ಷಿರೇ - ಹೇಳಿದರು. ॥೧೨೫॥ ತತಃ - ಅನಂತರಲ್ಲಿ, ಮೇ - ನನಗೆ, ಬುದ್ಧಿಃ - ಬುದ್ಧಿಯು (ಮುಂದೆ ಹೇಳುವ ರೀತಿಯಲ್ಲಿ) ಉತ್ಪನ್ನಾ - ಹುಟ್ಟಿತು, ಚೈತ್ಯಪ್ರಾಸಾದಂ - ನಗರಮಧ್ಯದ ಮಹಡಿಯನ್ನು, ಆಕ್ರಮಂ - ಆಕ್ರಮಿಸಿದೆನು, ತತ್ರಸ್ಥಾನ್ - ಅಲ್ಲಿ ಇದ್ದಂಥಾ, ಶತಂ ರಾಕ್ಷಸಾನ್ - ನೂರುಜನ ರಾಕ್ಷಸರನ್ನು, ಸ್ತಂಭೇನವೈ - ಅಲ್ಲಿನ ಒಂದು ಕಂಬದಿಂದಲೇನೆ, ಹತ್ವಾ - ಸಂಹರಿಸಿ, ಲಂಕಾಯಾಃ - ಲಂಕಾಪಟ್ಟಣಕ್ಕೆ, ಲಲಾಮಭೂತಃ - ತಿಲಕಪ್ರಾಯವಾಗಿದ್ದ, ಸಃವೈ - ಆ ಚೈತ್ಯಪ್ರಾಸಾದವು, ಮಯಾ - ನನ್ನಿಂದ, ವಿಧ್ವಂಸಿತಃ - ನಿರ್ಮೂಲವಾಡಲ್ಪಟ್ಟಿತು. ॥೧೨೬॥ ॥ ತತಃ - ಆಮೇಲೆ, ಪ್ರಹಸ್ತಸ್ಯ-ಪ್ರಹಸ್ತನೆಂಬುವನ, ಸುತಂ - ಮಗನಾದ, ಜಂಬುಮಾಲಿನಂ - ಜಂಬುಮಾಲಿಯೆಂಬುವನನ್ನು, ಬಹುಭಿಃ-ಅನೇಕಸಂಖ್ಯೆಯುಳ್ಳ, ಘೋರರೂಪೈಃ- ಕ್ರೂರವಾದ ರೂಪವುಳ್ಳ, ಭಯಾನಕೈಃ-ಅತಿಭಯಂಕರರಾದ, ರಾಕ್ಷಸೈಸ್ಸಾರ್ಧಂ- ರಾಕ್ಷಸರೊಡನೆ, ಆದಿಶತ್- ಆಜ್ಞಾಪಿಸಿದನು. ॥೧೨೭॥

ಅವರಲ್ಲಿ ಹತಶೇಷರಾದ ಕೆಲವರು ಶಕ್ತಿಹೀನರಾಗಿ ಆ ರಾಕ್ಷಸ ಸೈನ್ಯವನ್ನೆಲ್ಲಾ ಕೊಂದುಹಾಕಿದ ಸಂಗತಿಯನ್ನು ರಾವಣನಿಗೆ ತಿಳಿಸಿದರು. ॥೧೨೫॥ ಬಳಿಕ ರಾಕ್ಷಸ ಕುಲದೇವತೆಯ ಚೈತ್ಯ ಪ್ರಾಸಾದವನ್ನು ಪ್ರವೇಶಿಸಿದ ನನಗೆ ಅದನ್ನು ನಾಶಪಡಿಸಬೇಕೆಂಬ ಬುದ್ಧಿಯುಂಟಾಯಿತು. ಅದರಂತೆ ನಾನು ಅಲ್ಲಿಗೆ ಹೋಗಿ ಅಲ್ಲಿದ್ದ ನೂರುಮಂದಿ ರಾಕ್ಷಸರನ್ನು ಒಂದು ಸ್ತಂಭದಿಂದಲೇ ಕೊಂದು, ಲಂಕಾ ವನಿತೆಗೆ ತಿಲಕಪ್ರಾಯವಾಗಿದ್ದ ಆ ಚೈತ್ಯ ಪ್ರಾಸಾದವನ್ನೆಲ್ಲಾ ಧ್ವಂಸ ಮಾಡಿಬಿಟ್ಟೆನು ॥೧೨೬॥ ॥ ಆ ಬಳಿಕ ರಾವಣನು ಪ್ರಹಸ್ತನ ಮಗನಾದ ಜಂಬುಮಾಲಿಯೆಂಬವನನ್ನು ಕಳುಹಿಸಿದನು. ಅವನೊಡನೆ ಘೋರವಾದ ರೂಪವುಳ್ಳವರಾಗಿಯೂ, ಭಯಪಡಿಸತಕ್ಕವರಾಗಿಯೂ ಇರುವ ಬಹುಮಂದಿ ರಾಕ್ಷಸ ವೀರರು ಸಹಾಯರಾಗಿ ಬಂದಿದ್ದರು. ಹೀಗೆ ಮಹಾಬಲ ಸಂಪನ್ನನಾಗಿಯೂ ಯುದ್ಧ

ತಮಹಂ ಬಲಸಂಪನ್ನಂ ರಾಕ್ಷಸಂ ರಣ ಕೋವಿದಮ್ ॥
ಪರಿಘೇಣಾ ತಿಘೋರೇಣ ಸೂದಯಾಮಿ ಸಹಾನುಗಮ್ ॥೧೧೮॥ ॥
ತಚ್ಛ್ರುತ್ವಾ ರಾಕ್ಷಸೇಂದ್ರ ಸ್ತು ಮಂತ್ರಿಪುತ್ರಾ ನ್ಮಹಾಬಲಾನ್ ॥೧೧೯॥
ಪದಾತಿ ಬಲಸಂಪನ್ನಾನ್ ಪ್ರೇಷಯಾಮಾಸ ರಾವಣಃ ।
ಪರಿಘೇಣೈವ ತಾನ್ ಸರ್ವಾ ನ್ನಯಾಮಿ ಯಮ ಸಾದನಮ್ ॥೧೨೦॥
ಮಂತ್ರಿ ಪುತ್ರಾನ್ ಹತಾನ್ ಶ್ರುತ್ವಾ ಸಮರೇ ಲಘು ವಿಕ್ರಮಾನ್ ।
ಪಂಚ ಸೇನಾಗ್ರಗಾನ್ ಶೂರಾನ್ ಪ್ರೇಷಯಾಮಾಸ ರಾವಣಃ ॥೧೨೧॥
ತಾನಹಂ ಸಹ ಸೈನ್ಯಾಂ ಸ್ತಾನ್ಸರ್ವಾ ನೇವಾ ಭ್ಯಸೂದಯಮ್ ॥೧೨೨॥

ಅಹಂ-ನಾನು, ಬಲಸಂಪನ್ನಂ - ಅನೇಕ ಸೈನ್ಯದೊಡನೆ ಕೂಡಿದ, ರಣಕೋವಿದಂ-ಯುದ್ಧದಲ್ಲಿ ಗಟ್ಟಿಗನಾದ, ಸಹಾನುಗಂ-ಅನುಚರರೊಡನೆ ಕೂಡಿದ, ತಂರಾಕ್ಷಸಂ-ಆ ಜಂಬುಮಾಲಿಯನ್ನು, ಅತಿಘೋರೇಣ-ಮಹಾ ಭಯಂಕರವಾದ, ಪರಿಘೇಣ-ಲಾಳವುಂಡಿಗೆಯಿಂದ, ಸೂದಯಾಮಿ-ಸಂಹರಿಸಿದೆನು. ।೧೧೮॥ ॥ ತತ್ - ಆ ಜಂಬುಮಾಲಿ ಸತ್ತದ್ದನ್ನು, ಶ್ರುತ್ವಾ - ಕೇಳಿ, ರಾಕ್ಷಸೇಂದ್ರಃ - ರಕ್ಕಸರೊಡೆಯನಾದ, ರಾವಣಸ್ತು - ರಾವಣನಾದರೋ. ಮಹಾಬಲಾನ್ - ಅತಿಶೂರರಾದ, ಪದಾತಿಬಲಸಂಪನ್ನಾನ್ - ಕಾಲಾಳುಗಳ ಸೈನ್ಯದಿಂದ ಕೂಡಿದವರಾದ, ಮಂತ್ರಿಪುತ್ರಾನ್ - ಅಮಾತ್ಯಸುತರನ್ನು, ಪ್ರೇಷಯಾಮಾಸ - ಕಳುಹಿಸಿದನು, ತಾನ್‌ಸರ್ವಾನ್ - ಅವರೆಲ್ಲರನ್ನೂ, ಪರಿಘೇಣೈವ - ಒಂದು ಪರಿಘದಿಂದಲೇ, ಯಮಸಾದನಂ-ಯಮನ ಮನೆಯನ್ನು, ನಯಾಮಿ - ಹೊಂದಿಸಿದೆನು. ।೧೨೦॥ ರಾವಣಃ - ರಾವಣನು, ಹತಾನ್ - ಮೃತರಾದ, ಮಂತ್ರಿಪುತ್ರಾನ್ - ಅಮಾತ್ಯಪುತ್ರರ ಸಮಾಚಾರವನ್ನು, ಶ್ರುತ್ವಾ - ಕೇಳಿ, ಸಮರೇ - ಯುದ್ಧದಲ್ಲಿ, ಲಘುವಿಕ್ರಮಾನ್ - ಚಟುವಟಿಕೆಯಿಂದ ಕೂಡಿದ ಪರಾಕ್ರಮವುಳ್ಳ, ಶೂರಾನ್ - ಬಾಹುಬಲವುಳ್ಳವರಾದ, ಪಂಚ - ಐದಾದ, ಸೇನಾಗ್ರಗಾನ್ - ಸೈನ್ಯಾಧಿಪತಿಗಳನ್ನು, ಪ್ರೇಷಯಾಮಾಸ - ಕಳುಹಿಸಿದನು. ಅಹಂ - ನಾನು, ಸಹಸೈನ್ಯಾನ್ - ಸೇನಾಸಮೇತರಾದ, ತಾನ್‌ಸರ್ವಾನೇವ - ಅವರೆಲ್ಲರನ್ನೂ, ಅಭ್ಯಸೂದಯಂ - ಸಂಹರಿಸಿದೆನು ।೧೨೨॥ ॥ ತತಃ - ಆಮೇಲೆ, ದಶಗ್ರೀವಃ - ಹತ್ತುತಲೆಗಳುಳ್ಳ, ರಾವಣಃ - ರಾವಣನು, ಪುನಃ - ಮತ್ತೂ, ಮಹಾಬಲಂ - ಅತಿಪರಾಕ್ರಮಿಯಾದ, ಪುತ್ರಂ - ತನ್ನ ಮಗನಾದ

ದಲ್ಲಿ ಪ್ರವೀಣನಾಗಿಯೂ ಇದ್ದ ಆ ಜಂಬುಮಾಲಿಯನ್ನೂ, ಅವನ ಅನುಚರರನ್ನೂ ಸಹ ಅತಿ ಘೋರವಾದ ಪರಿಘದಿಂದಲೇ ಸಂಹರಿಸಿದೆನು. ॥೧೧೮ ॥ ॥ ಅದನ್ನು ಕೇಳಿ ರಾವಣನು ಭುಜಬಲ ಸಂಪನ್ನರಾಗಿಯೂ ಅನೇಕ ಸೈನ್ಯಗಳೊಡನೆ ಕೂಡಿದವರಾಗಿಯೂ ಇರುವ ಅಮಾತ್ಯ ಪುತ್ರರನ್ನು ಕಳುಹಿಸಲು, ಅವರೆಲ್ಲರನ್ನೂ ಅದೇ ಪರಿಘದಿಂದಲೇ ಯಮನ ಮನೆಗೆ ಕಳುಹಿಸಿದೆನು. ॥೧೨೦॥ ಯುದ್ಧ ಮಾಡುವುದರಲ್ಲಿ ಅತಿ ಚತುರರಾದ ಅಮಾತ್ಯ ಪುತ್ರರು ಮೃತರಾದ ಸಂಗತಿಯನ್ನು ಕೇಳಿ ರಾವಣನು—ಐದು ಮಂದಿ ಸೈನ್ಯಾಧಿಪತಿಗಳನ್ನು ಕಳುಹಿಸಿಕೊಟ್ಟನು. ಮಹಾ ಶೂರರೆಂದು ಪ್ರಖ್ಯಾತಿಯನ್ನು ಪಡೆದ ಅವರನ್ನೂ, ಅವರ ಸೈನ್ಯವನ್ನೂ ಸಹ ಸಂಹರಿಸಿದೆನು.. ॥೧೨೨॥ ॥ ಆ ಬಳಿಕ ದಶಗ್ರೀವನು ಮಹಾ ಬಲಶಾಲಿಯಾದ ಅಕ್ಷಕುಮಾರನನ್ನು ಬಹು ಮಂದಿ ರಾಕ್ಷಸರೊಡನೆ ನನ್ನ ಸಂಗಡ ಯುದ್ಧ ಮಾಡುವುದಕ್ಕಾಗಿ ಕಳುಹಿಸಿದನು. ಆ ಅಕ್ಷ

ತತಃ ಪುನ ರ್ದಶಗ್ರೀವಃ ಪುತ್ರ ಮಕ್ಷಂ ಮಹಾಬಲಮ್ ॥
ಬಹುಭೀ ರಾಕ್ಷಸೈ ಸ್ಸಾರ್ಧಂ ಪ್ರೇಷಯಾಮಾಸ ರಾವಣಃ ॥೧೨೩॥
ತಂತು ಮಂಡೋದರೀ ಪುತ್ರಂ ಕುಮಾರಂ ರಣಪಂಡಿತಮ್ ॥
ಸಹಸಾ ಖಂ ಸಮುತ್ಕ್ರಾಂತಂ ಪಾದಯೋ ಸ್ಸಗೃಹೀ ತವಾನ್ ।
ಚರ್ಮಾಸಿನಂ ಶತಗುಣಂ ಭ್ರಾಮಯಿತ್ವಾ ವ್ಯಪೇಷಯಮ್ ॥೧೨೪॥
ತ ಮಕ್ಷ ಮಾಗತಂ ಭಗ್ನಂ ನಿಶಮ್ಯ ಸ ದಶಾನನಃ ।
ತತ ಇಂದ್ರಜಿತಂ ನಾಮ ದ್ವಿತೀಯಂ ರಾವಣ ಸ್ಸುತಮ್ ॥
ವ್ಯಾದಿದೇಶ ಸು ಸಂಕ್ರುದ್ಧೋ-ಬಲಿನಂ ಯುದ್ಧ ದುರ್ಮದಮ್ ॥೧೨೫॥
ತಚ್ಚಾ ಪ್ಯಹಂ ಬಲಂ ಸರ್ವಂ ತಂ ಚ ರಾಕ್ಷಸ ಪುಂಗವಮ್ ॥

ಅಕ್ಷಂ - ಅಕ್ಷನೆಂಬುವನನ್ನೂ, ಬಹುಭಿಃ - ಅನೇಕರಾದ, ರಾಕ್ಷಸೈಃಸಾರ್ಧಂ - ರಾಕ್ಷಸರೊಡನೆಕೂಡಿ, ಪ್ರೇಷಯಾಮಾಸ - ಕಳುಹಿಸಿದನು. ॥೧೨೩॥ ಮಂಡೋದರೀಪುತ್ರಂ - ಮಂಡೋದರಿಯಮಗನಾದ, ರಣಪಂಡಿತಂ-ಯುದ್ಧಕೋವಿದನಾದ, ಸಹಸಾ-ಜಾಗ್ರತೆಯಾಗಿ, ಖಂ-ಆಕಾಶವನ್ನು, ಸಮುತ್ಕ್ರಾಂತಂ-ಹಾರುತ್ತಿರುವ, ಚರ್ಮಾಸಿನಂ - ಗುರಾಣಿಯನ್ನೂ ಕತ್ತಿಯನ್ನೂ ಹಿಡಿದಿರುವ, (ಇಲ್ಲಿ ಚರ್ಮಾಸಿನಂ - ಎಂದು ಪ್ರಯೋಗವು ಆರ್ಷವು) ತಂತು - ಆ ಅಕ್ಷಕುಮಾರನನ್ನಾದರೋ, ಪಾದಯೋಃ - ಎರಡು ಕಾಲುಗಳಲ್ಲಿಯೂ, ಗೃಹೀತ್ವಾ - ಎಳೆದುಕೊಂಡು (ಎರಡು ಕಾಲುಗಳನ್ನು ಹಿಡಿದು ಎಳೆದುಕೊಂಡು) ಶತಗುಣಂ - ನೂರುಬಾರಿ, ಭ್ರಾಮಯಿತ್ವಾ - ಗಿರಿಗಿರನೆ-ತಿರುಗಿಸಿ, ವ್ಯಪೇಷಯಂ - ಅರೆದು ಬಿಟ್ಟೆನು ॥೧೨೪॥ ಆಗತಂ - ಬಂದ, ತಂಅಕ್ಷಂ - ಆ ಅಕ್ಷಕುಮಾರನನ್ನು, ಭಗ್ನಂ - ಮೃತನಾದುದನ್ನು, ನಿಶಮ್ಯ - ಕೇಳಿ, ದಶಾನನಃ - ಹತ್ತುತಲೆಯುಳ್ಳವನಾದ, ರಾವಣಃ-ರಾವಣನು, ತತಃ - ಆ ಮೇಲೆ, ಸುಸಂಕ್ರುದ್ಧಃ-ಮಹಾಕೋಪದಿಂದ ಕೂಡಿದವನಾಗಿ, ಬಲಿನಂ - ಅತಿಬಲಿಷ್ಠನಾದ, ಯುದ್ಧದುರ್ಮದಂ - ಕಾಳಗದ ಕೊಬ್ಬುಳ್ಳವನಾದ, ಇಂದ್ರಜಿತಂನಾಮ - ಇಂದ್ರಜಿತ್ತೆಂಬ ಹೆಸರುಳ್ಳ (ಇಂದ್ರನನ್ನು ಜಯಿಸಿದವನು) ದ್ವಿತೀಯಂ - ಎರಡನೆಯ, ಸುತಂ - ಮಗನನ್ನು, ವ್ಯಾದಿದೇಶ - ಅಪ್ಪಣೆಮಾಡಿ ಕಳುಹಿಸಿದನು ॥೧೨೫॥ ಅಹಂ - ನಾನು, ಸರ್ವಂ - ಸಮಸ್ತವಾದ, ತತ್‌ಬಲಂಚಾಪಿ - ಆ ಸೈನ್ಯವನ್ನೂ, ರಾಕ್ಷಸಪುಂಗವಂ - ರಾಕ್ಷಸಶ್ರೇಷ್ಠನಾದ, ತಂಚ - ಆ ಇಂದ್ರಜಿತ್ತನ್ನೂ, ರಣೇ - ಯುದ್ಧದಲ್ಲಿ, ನಷ್ಟೌಜಸಂ - ಕುಂದಿದ

ಕುಮಾರನು ರಾವಣನ ಪಟ್ಟಮಹಿಷಿಯಾದ ಮಂಡೋದರಿಯ ಗರ್ಭದಲ್ಲಿ ಜನಿಸಿದವನು. ಯುದ್ಧ ಮಾಡುವುದರಲ್ಲಿ ಬಹು ಅನುಭವ ಶಾಲಿಯಾಗಿದ್ದುದರಿಂದ ಬೇಗನೆ ಆಕಾಶಕ್ಕೆ ಹಾರಿ, ಅಲ್ಲಿ ನಿಂತು, ಕೈಯಲ್ಲಿ ಕತ್ತಿಯನ್ನೂ, ಗುರಾಣಿಯನ್ನೂ ಹಿಡಿದುಕೊಂಡು, ಯುದ್ಧ ಮಾಡುತ್ತಿದ್ದನು. ಆಗ ನಾನು ಅವನ ಎರಡು ಕಾಲುಗಳನ್ನೂ ಹಿಡಿದು ಎಳೆದುಕೊಂಡು, ನೂರುಬಾರಿ ಗಿರಗಿರನೆ ತಿರುಗಿಸಿ, ನೆಲಕ್ಕೆ ಅಪ್ಪಳಿಸಿ ಕೊಂದುಬಿಟ್ಟೆನು. ॥೧೨೪॥ ಆ ಅಕ್ಷಕುಮಾರನೂ ಸಹ ಮಡಿದ ಸಂಗತಿಯು ರಾವಣನಿಗೆ ತಿಳಿಯಿತು. ಅದನ್ನು ಕೇಳಿದ ಕೂಡಲೇ ರಾವಣನು ಅತಿ ಕೋಪೋದ್ದೀಪಿತನಾಗಿ ಪ್ರಖ್ಯಾತ ಬಾಹುಬಲವುಳ್ಳವನಾಗಿಯೂ, ಯುದ್ಧದಲ್ಲಿ ಅತಿ ಚತುರನಾಗಿಯೂ ಇರುವ ಇಂದ್ರಜಿತ್ತೆಂಬ ಎರಡನೆಯ ಮಗನನ್ನು ಕಳುಹಿಸಿದನು. ಆಗ ನಾನು ಅವನನ್ನೂ, ಅವನ ಸೈನ್ಯವೆಲ್ಲವನ್ನೂ

ನಷ್ಟ್ವಾಜಸಂ ರಣೇ ಕೃತ್ವಾ ಪರಂ ಹರ್ಷ ಮುಪಾಗಮಮ್ ||೧೨೬||
ಮಹತಾ ಹಿ ಮಹಾಬಾಹುಃ ಪ್ರತ್ಯಯೇನ ಮಹಾಬಲಃ |
ಪ್ರೇಷಿತೋ ರಾವಣೇನೈವ ಸಹ ವೀರೈರ್ಮದೋತ್ಕಟೈಃ ||೧೨೭||
ಸೋಽಪ್ಯವಧ್ಯಂ ಹಿ ಮಾಂ ಬುಧ್ವಾ ಸ್ವಬಲಂ ಚಾಪಿ ಮರ್ದಿತಮ್ |
ಬ್ರಾಹ್ಮೇಣಾಸ್ತ್ರೇಣ ಸತು ಮಾಂ ಪ್ರಾಬಧ್ನಾಚ್ಚ ಸುವೇಗಿತಃ ||೧೨೮||
ರಜ್ಜುಭಿಶ್ಚಾಪಿ ಬಧ್ನಂತಿ ತತೋ ಮಾಂ ತತ್ರ ರಾಕ್ಷಸಾಃ |
ರಾವಣಸ್ಯ ಸಮೀಪಂ ಚ ಗೃಹೀತ್ವಾ ಮಾ ಮುಪಾನಯನ್ ||೧೨೯||
ದೃಷ್ಟ್ವಾ ಸಂಭಾಷಿತಶ್ಚಾಹಂ ರಾವಣೇನ ದುರಾತ್ಮನಾ |

ಕೊಬ್ಬುಳ್ಳವನನ್ನಾಗಿ, ಕೃತ್ವಾ - ಮಾಡಿ, ಪರಂ - ಹೆಚ್ಚಾದ, ಹರ್ಷಂ-ಸಂತೋಷವನ್ನು, ಉಪಾಗಮಂ-ಹೊಂದಿದೆನು ||೧೨೬|| ಮಹಾಬಾಹುಃ - ಹೆಚ್ಚಾದ ತೋಳುಬಲವುಳ್ಳವನಾದ, ಮಹಾಬಲಃ - ದೊಡ್ಡ ಸೈನ್ಯವುಳ್ಳವನಾದ ಇಂದ್ರಜಿತ್ತು, ಮಹತಾ - ಹೆಚ್ಚಾದ, ಪ್ರತ್ಯಯೇನಾಪಿ - ನಂಬಿಕೆಯಿಂದಲೇ, ರಾವಣೇನೈವ - ರಾವಣನಿಂದಲೇ, ಮದೋತ್ಕಟೈಃ - ಮಿತಿಮೀರಿದ ಕೊಬ್ಬುಳ್ಳ, ವೀರೈಸ್ಸಹ - ಶೂರರೊಡನೆ ಕೂಡಿ, ಪ್ರೇಷಿತಃ - ಕಳುಹಲ್ಪಟನು ||೧೨೭|| ಸಃ - ಆ ಇಂದ್ರಜಿತ್ತು, ಮಾಂ - ನನ್ನನ್ನು, ಅವಿಷಹ್ಯಂ - ಸಹಿಸಲಸಾಧ್ಯನನ್ನಾಗಿಯೂ, ಅವಮರ್ದಿತಂ - ನಾಶಮಾಡಲ್ಪಟ್ಟ, ಸ್ವಬಲಂಚ - ತನ್ನ ಸೈನ್ಯವನ್ನೂ ಸಹ, ಬುಧ್ವಾ - ತಿಳಿದು, ಅತಿವೇಗಿತಃ - ಬಹಳ ವೇಗವುಳ್ಳವನಾಗಿ, ಬ್ರಾಹ್ಮೇಣ - ಬ್ರಹ್ಮದೇವತಾಕವಾದ, ಅಸ್ತ್ರೇಣ - ಅಸ್ತ್ರದಿಂದ, ಸತು-ಆ ಇಂದ್ರಜಿತ್ತು ಮಾಂ-ನನ್ನನ್ನು, ಪ್ರಾಬಧ್ನಾಚ್ಚ-ಕಟ್ಟಿಬಿಟ್ಟನಲ್ಲವೆ ||೧೨೮|| ತತಃ - ತರುವಾಯ, ತತ್ರ - ಅಲ್ಲಿ, ರಾಕ್ಷಸಾಃ - ರಾಕ್ಷಸರು ರಜ್ಜುಭಿಶ್ಚಾಪಿ - ಹಗ್ಗಗಳಿಂದ ಕೂಡ, ಮಾಂ - ನನ್ನನ್ನು, ಬಧ್ನಂತಿ-ಕಟ್ಟಿದರು - ಮತ್ತು, ಮಾಂ ನನ್ನನ್ನು, ಗೃಹೀತ್ವಾ - ತೆಗೆದುಕೊಂಡು, ರಾವಣಸ್ಯ - ರಾವಣನ, ಸಮೀಪಂಚ - ಸಮೀಪವನ್ನು ಸಹ ಉಪಾನಯನ್ - ಒಯ್ದರು ||೧೨೯|| ಅಹಂ - ನಾನು, ದುರಾತ್ಮನಾ - ನೀಚನಾದ, ರಾವಣೇನ - ರಾವಣನಿಂದ, ದೃಷ್ಟ್ವಾ - ನೋಡಿ, ಸಂಭಾಷಿತಶ್ಚ - ಮಾತನಾಡಿಸಲ್ಪಟ್ಟೆನು, ಲಂಕಾಗಮನಂ - ಲಂಕಾಪಟ್ಟಣಕ್ಕೆ ಬರುವಿಕೆಯನ್ನು, ರಾಕ್ಷಸಾನಾಂ ರಾಕ್ಷಸರ, ತಂ - ಆ ಪ್ರಸಿದ್ಧವಾದ, ವಧಂಚ-ಸಂಹಾರವನ್ನೂ

ಮರ್ದಿಸಿ, ರಣದಲ್ಲಿ ಅವರ ಶಕ್ತಿಯನ್ನೆಲ್ಲಾ ಕುಂದಿಸಿ, ಅಪರಿಮಿತವಾದ ಸಂತೋಷವನ್ನು ಹೊಂದಿದೆನು ||೧೨೬|| ರಾವಣನು ಇಂದ್ರಜಿತ್ತನ್ನು ಯುದ್ಧಕ್ಕೆ ಕಳುಹಿಸುವಾಗಲೇ ಇವನು ಮಹಾ ಬಲಶಾಲಿಯೆಂತಲೂ, ಜಯವನ್ನೇ ಪಡೆದು ಬರುವನೆಂತಲೂ, ಪ್ರಬಲವಾದ ನಂಬಿಕೆಯನ್ನು ಇಟ್ಟುಕೊಂಡೇ ಇವನನ್ನು ಮಿತಿಮೀರಿದ ಮದದಿಂದ ಕೂಡಿದ ವೀರರೊಡನೆ ಕಳುಹಿಸಿಕೊಟ್ಟನು ||೧೨೭|| ಆಗ ಇಂದ್ರಜಿತ್ತು-ನನ್ನನ್ನು ಜಯಿಸಲಸಾಧ್ಯನೆಂಬೂ, ನನ್ನಿಂದ ತನ್ನ ಸೈನ್ಯವೆಲ್ಲವೂ ನಷ್ಟ ಹೊಂದಿತೆಂದೂ ಸಹ ತಿಳಿದು, ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ, ಬಹು ವೇಗದಿಂದ ನನ್ನನ್ನು ಬಂಧಿಸಿದನು ||೧೨೮|| ಆ ಮೇಲೆ ಬ್ರಹ್ಮಾಸ್ತ್ರಬದ್ಧನಾದ ನನ್ನನ್ನು ಅಲ್ಲಿದ್ದ ರಾಕ್ಷಸರು ಹಗ್ಗಗಳಿಂದಲೂ ಸಹ ಕಟ್ಟಿ, ರಾವಣನ ಸಮೀಪಕ್ಕೆ ಕರೆದುಕೊಂಡು ಹೋಗಿ ಬಿಟ್ಟರು ||೧೨೯|| ಆಗ ದುರಾತ್ಮನಾದ ರಾವಣನು ನನ್ನನ್ನು ಕುರಿತು ನೀನು ಯಾರು ? ಇಲ್ಲಿಗೆ ಏಕೆಬಂದೆ ?

ಪೃಷ್ಟಶ್ಚ ಲಂಕಾ ಗಮನಂ ರಾಕ್ಷಸಾನಾಂ ಚ ತಂ ವಧಮ್ ‖೧೪೦‖-‖
ತತ್ಸರ್ವಂ ಚ ಮಯಾ ತತ್ರ ಸೀತಾರ್ಥ ಮಿತಿ ಜಲ್ಪಿತಮ್ ‖೧೪೧‖
ಅಸ್ಯಾ ಸ್ಸಂದರ್ಶನಾ ಕಾಂಕ್ಷೀ ಪ್ರಾಪ್ತ ಸ್ತ್ವದ್ಭವನಂ ವಿಭೋ ।
ಮಾರುತ ಸ್ಯೌರಸಃ ಪುತ್ರೋ ವಾನರೋ ಹನುಮಾ ನಹಮ್ ‖೧೪೨‖
ರಾಮದೂತಂ ಚ ಮಾಂ ವಿದ್ಧಿ ಸುಗ್ರೀವ ಸಚಿವಂ ಕಪಿಂ ‖
ಸೋಽಹಂ ದೌತ್ಯೇನ ರಾಮಸ್ಯ ತ್ವತ್ಸಕಾಶ ಮಿಹಾಗತಃ ‖೧೪೩‖
ಸುಗ್ರೀವಶ್ಚ ಮಹಾತೇಜಾ ಸ್ಸ ತ್ವಾಂ ಕುಶಲ ಮಬ್ರವೀತ್ ।
ದರ್ಮಾರ್ಥಕಾಮಸಹಿತಂ ಹಿತಂ ಪಥ್ಯ ಮುವಾಚಹ ‖೧೪೪‖
ವಸತೋಽಋಶ್ಯ ಮೂಕೇ ಮೇ ಪರ್ವತೇ ವಿಪುಲ ದ್ರುಮೇ ।
ರಾಘವೋ ರಣವಿಕ್ರಾಂತೋ ಮಿತ್ರತ್ವಂ ಸ ಮುಪಾಗತಃ ‖೧೪೫‖

---

ಸಹ ಕುರಿತು, ಪೃಷ್ಟಶ್ಚ - ಕೇಳಲ್ಪಟ್ಟೆನು ‖೧೪೦‖-‖ ತತ್ರ - ಅಲ್ಲಿ, ಮಯಾ - ನನ್ನಿಂದ, ತತ್ಸರ್ವಂಚ - ಅವೆಲ್ಲವೂ, ಸೀತಾರ್ಥಂ - ಸೀತಾದೇವಿಗಾಗಿಯೇ ಮಾಡಲ್ಪಟ್ಟಿತು, ಇತಿ - ಹೀಗೆ, ಜಲ್ಪಿತಂ - ಹೇಳೋಣಾಯಿತು, ‖೧೪೧‖ ಹೇವಿಭೋ - ಎಲೈ ರಾಕ್ಷಸರಾಜನೇ, ಅಹಂ - ನಾನು, ಮಾರುತಸ್ಯ - ವಾಯುವಿಗೆ, ಔರಸಃ ಪುತ್ರಃ-ಸ್ವಂತಮಗನಾಗಿರುವೆನು, ಹನುಮಾನ್ - ಹನುಮಂತನೆಂಬ ಹೆಸರುಳ್ಳ, ವಾನರಃ - ಕಪಿಯು, ಅಹಂ - ನಾನು ಅಸ್ಯಾಃ - ಈ ಸೀತಾದೇವಿಯು, ದರ್ಶನಾಕಾಂಕ್ಷೀ - ದರ್ಶನಮಾಡಬೇಕೆಂಬ ಅಪೇಕ್ಷೆಯುಳ್ಳವನಾಗಿ, ತ್ವದ್ಭವನಂ - ನಿನ್ನ ಮನೆಯನ್ನು ಕುರಿತು, ಪ್ರಾಪ್ತಃ - ಬಂದೆನು (ಇಲ್ಲಿ ಅಸ್ಯಾಹಂ -ಎಂದು ಆರ್ಷಪ್ರಯೋಗವು) ‖೧೪೨‖ ಮಾಂ - ನನ್ನನ್ನು, ರಾಮದೂತಂ- ಶ್ರೀ ರಾಮನ ಸೇವಕನನ್ನಾಗಿಯೂ, ಸುಗ್ರೀವಸಚಿವಂ - ಸುಗ್ರೀವನಿಗೆ ಮಂತ್ರಿಯಾದ, ಕಪಿಂಚ - ಕಪಿಯನ್ನಾಗಿಯೂ, ವಿದ್ಧಿ - ತಿಳಿ, ಸೋಽಹಂ - ಅಂಥಾ ನಾನು, ರಾಮಸ್ಯ - ಶ್ರೀ ರಾಮನ, ದೂತೇನ-ಸೇವಕಕೃತ್ಯದಿಂದ, ಇಹ - ಇಲ್ಲಿ, ತ್ವತ್ಸಕಾಶಂ - ನಿನ್ನ ಹತ್ತಿರವನ್ನು ಕುರಿತು, ಆಗತಃ - ಬಂದೆನು ‖೧೪೩‖ ಮಹಾತೇಜಾಃ - ಅತಿತೇಜಸ್ವಿಯಾದ, ಸಃ - ಆ ಪ್ರಸಿದ್ಧನಾದ, ಸುಗ್ರೀವಶ್ಚ - ಸುಗ್ರೀವನೆಂಬ ಕಪಿರಾಜನೂ ಸಹ, ತ್ವಾಂ - ನಿನ್ನನ್ನು ಕುರಿತು, ಕುಶಲಂ - ಕ್ಷೇಮವನ್ನು ಅಬ್ರವೀತ್- ಕೇಳಿದನು, ಧರ್ಮಾರ್ಥಕಾಮಸಹಿತಂ - ಧರ್ಮ, ಅರ್ಥ, ಕಾಮ, ಎಂಬ ತ್ರಿವರ್ಗಸಾಧನೆಗಳಿಂದ ಕೂಡಿದ, ಹಿತಂ-ಉತ್ತರೋತ್ತರ

---

ನಮ್ಮ ರಾಕ್ಷಸರುಗಳನ್ನು ಏತಕೆ ಕೊಂದೆ? ಎಂದು ಕೇಳಿದನು ‖೧೪೦‖ ಆಗ ನಾನು ಈ ಕೆಲಸಗಳನ್ನೆಲ್ಲಾ ಸೀತಾದೇವಿಯ ಸಲುವಾಗಿಯೇ ಮಾಡಿದೆನೆಂದು ಉತ್ತರಕೊಟ್ಟೆನು ‖೧೪೧‖ ಮತ್ತು ನನ್ನ ಹೆಸರು ಹನುಮಂತನು ; ನಾನು ವಾಯುವಿನ ಸ್ವಂತಮಗನು; ಎಲೈ ರಾಕ್ಷಸರಾಜನೇ ! ಈ ಸೀತಾದೇವಿಯನ್ನು ನೋಡುವುದಕ್ಕಾಗಿಯೇ ನಿನ್ನ ಮನೆಗೆ ಬಂದೆನು ‖೧೪೨‖ ಅಲ್ಲದೆ ಶ್ರೀರಾಮನಿಗೆ ನಾನು ಸೇವಕನಾಗಿಯೂ, ಸುಗ್ರೀವನಿಗೆ ಮಂತ್ರಿಯಾಗಿಯೂ ಇರುವೆನು. ಆದಕಾರಣ ರಾಮದೂತನಾಗಿ ಈಗ ನಿನ್ನ ಸಮೀಪಕ್ಕೆ ಬಂದಿರುವೆನು ‖೧೪೩‖ ಮಹಾತೇಜಸ್ವಿಯಾದ ಸುಗ್ರೀವಮಹಾರಾಜನು ನಿನ್ನ ಕ್ಷೇಮವನ್ನು ಕೇಳಿದನು. ಮತ್ತು ನಿನಗೆ ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗಗಳಿಗೂ, ಇಹಪರ ಸೌಖ್ಯಗಳಿಗೂ ಸಾಧಕವಾದ ಹಿತೋಕ್ತಿಯನ್ನು ಹೇಳಿ ಕಳುಹಿಸಿರುವನು.

ತೇನ ಮೇ ಕಥಿತಂ ರಾಜನ್ ಭಾರ್ಯಾ ಮೇ ರಕ್ಷಸಾಹೃತಾ ।
ತತ್ರ ಸಾಹಾಯ್ಯ ಮಸ್ಮಾಕಂ ಕಾರ್ಯಂ ಸರ್ವಾತ್ಮನಾತ್ವಯಾ ॥೧೩೬॥
ಮಯಾಚ ಕಥಿತಂ ತಸ್ಮೈ ವಾಲಿ ನಶ್ಚ ವಧಂಪ್ರತಿ ।
ತತ್ರ ಸಾಹಾಯ್ಯ ಹೇತೋರ್ಮೇ ಸಮಯಂ ಕರ್ತುಮರ್ಹಸಿ ॥೧೩೭॥
ವಾಲಿನಾ ಹೃತ ರಾಜ್ಯೇನ ಸುಗ್ರೀವೇಣ ಮಹಾಪ್ರಭುಃ ।
ಚಕ್ರೇ ಽ ಗ್ನಿಸಾಕ್ಷಿಕಂ ಸಖ್ಯಂ ರಾಘವಸ್ಸಹ ಲಕ್ಷ್ಮಣಃ ॥೧೩೮॥
ತೇನ ವಾಲಿನ ಮುತ್ಪಾಟ್ಯ ಶರೇ ಣೈಕೇನ ಸಂಯುಗೇ ।

---

ಫಲದಾಯಕವಾಗಿಯೂ, ಪಥ್ಯಂ - ಇಹಲೋಕಸುಖದಾಯಕವಾಗಿಯೂ ಇರುವ ಮಾತನ್ನು, ಉವಾಚಹ - ಹೇಳಿದನು ॥೧೩೪॥ ಋಶ್ಯಮೂಕೇ - ಋಶ್ಯಮೂಕವೆಂಬ, ವಿಪುಲದ್ರುಮೇ - ಅನೇಕ ಮರಗಳಿಂದ ಕೂಡಿದ, ಪರ್ವತೇ - ಬೆಟ್ಟದಲ್ಲಿ ವಸತಃ - ವಾಸಮಾಡುತ್ತಿರುವ, ಮೇ - ನನ್ನ ಮಿತ್ರತ್ವಂ - ಸ್ನೇಹವನ್ನು, ರಣವಿಕ್ರಾಂತಃ - ಯುದ್ಧದಲ್ಲಿ ಮಹಾಶೂರನಾದ, ರಾಘವಃ- ಶ್ರೀ ರಾಮನು, ಸಮುಪಾಗತಃ- ಹೊಂದಿದನು ॥೧೩೫॥ ತೇನರಾಜ್ಞಾ - ಆ ಶ್ರೀ ರಾಮನಿಂದ, ಮೇ - ನನ್ನ, ಭಾರ್ಯಾ - ಪತ್ನಿಯು, ರಕ್ಷಸಾ - ಒಬ್ಬ ರಾಕ್ಷಸನಿಂದ, ಹೃತಾ - ಅಪಹರಿಸಲ್ಪಟ್ಟಳು ತತ್ರ - ಆ ವಿಷಯದಲ್ಲಿ, ತ್ವಯಾ - ನಿನ್ನಿಂದ, ಅಸ್ಮಾಕಂ - ನಮಗೆ ಸಾಹಾಯ್ಯಂ ಸಾಹ್ಯವು, ಸರ್ವಾತ್ಮನಾ - ಸರ್ವಪ್ರಕಾರದಿಂದಲೂ, ಕಾರ್ಯಂ-ಮಾಡಲ್ಪಡತಕ್ಕದ್ದು ಎಂದು, ಕಥಿತಂ - ಹೇಳಲ್ಪಟ್ಟಿತು ॥೧೩೬॥

ತಸ್ಮೈ - ಆ ಶ್ರೀರಾಮನಿಗೆ, ಮಯಾಚ - ನನ್ನಿಂದಲೂ, ವಾಲಿನಃ - ವಾಲಿಯೆಂಬ ನನ್ನ ಅಣ್ಣನ, ವಧಂಪ್ರತಿ - ಸಂಹಾರವನ್ನು ಸಹ ಕುರಿತು ಕಥಿತಂ - ಹೇಳಲ್ಪಟ್ಟಿತು. ತತ್ರ-ಆ ವಿಷಯದಲ್ಲಿ, ಸಾಹಾಯ್ಯಹೇತೋಃ, ಸಾಹ್ಯವನ್ನು ಮಾಡುವುದಕ್ಕಾಗಿ, ಮೇ - ನನಗೆ, ಸಮಯಂ - ವಾಗ್ದಾನವನ್ನು, ಕರ್ತುಂ - ಮಾಡುವುದಕ್ಕೆ, ಅರ್ಹಸಿ - ಯೋಗ್ಯನಾಗಿದ್ದೀಯೆ, ॥೧೩೭॥ ಮಹಾಪ್ರಭುಃ - ಮಹಾರಾಜನಾದ, ರಾಘವಃ - ಶ್ರೀರಾಮನು, ಸಹಲಕ್ಷ್ಮಣಃ - ಲಕ್ಷ್ಮಣನೊಡನೆ ಕೂಡಿ, ವಾಲಿನಾ - ವಾಲಿಯಿಂದ, ಹೃತರಾಜ್ಯೇನ - ಅಪಹರಿಸಲ್ಪಟ್ಟ ರಾಜ್ಯವುಳ್ಳ, ಸುಗ್ರೀವೇಣ- ಸುಗ್ರೀವನಾದ ನನ್ನೊಡನೆ, ಅಗ್ನಿಸಾಕ್ಷಿಕಂ-ಯಜ್ಞೇಶ್ವರನೇಸಾಕ್ಷಿಯಾಗಿ ಉಳ್ಳ, ಸಖ್ಯಂ-ಸ್ನೇಹವನ್ನು, ಚಕ್ರೇ-ಮಾಡಿಕೊಂಡನು ॥೧೩೮॥ ತೇನ - ಆ ಶ್ರೀರಾಮನಿಂದ, ಏಕೇನ ಶರೇಣ - ಒಂದುಬಾಣದಿಂದಲೇ, ಸಂಯುಗೇ - ಯುದ್ಧದಲ್ಲಿ,

---

ಅದೇನೆಂದರೆ:-ಎಲೈ ರಾವಣನೇ! ಅನೇಕ ವಿಧವಾದ ವೃಕ್ಷಗಳಿಂದ ಅಲಂಕೃತವಾದ ಋಶ್ಯಮೂಕ ಪರ್ವತದಲ್ಲಿ ನಾನು ವಾಸಮಾಡಿಕೊಂಡಿದ್ದಾಗ, ಶ್ರೀರಾಮನೊಡನೆ ನನಗೆ ಸ್ನೇಹವುಂಟಾಯಿತು ॥೧೩೫॥ ಆಗ ಶ್ರೀರಾಮನು - ಎಲೈ ಸುಗ್ರೀವನೆ ! ಒಬ್ಬ ರಾಕ್ಷಸನು ನನ್ನ ಪತ್ನಿಯನ್ನು ಅಪಹರಿಸಿಕೊಂಡು ಹೋಗಿರುವನು. ಆ ಕೆಲಸಕ್ಕಾಗಿ ನೀನು ನನಗೆ ಖಂಡಿತವಾಗಿಯೂ ಸಹಾಯಕನಾಗಬೇಕು ಎಂದು. ಕೇಳಿಕೊಂಡನು ॥೧೩೬॥ ನಾನೂ ಸಹ ವಾಲಿಯನ್ನು ಸಂಹರಿಸುವ ವಿಷಯ ದಲ್ಲಿ ನೀನು ನನಗೆ ಖಂಡಿತವಾದ ವಾಗ್ದಾನವನ್ನು ಮಾಡಬೇಕೆಂದು ಶ್ರೀರಾಮನನ್ನು ಕೇಳಿಕೊಂಡೆನು ॥೧೩೭॥ ಆದಕಾರಣ ವಾಲಿಯಿಂದ ಅಪಹರಿಸಲ್ಪಟ್ಟ ರಾಜ್ಯವುಳ್ಳ ನನ್ನೊಡನೆ ಲಕ್ಷ್ಮಣನಿಂದ ಕೂಡಿದ ಶ್ರೀರಾಮನು-ಅಗ್ನಿಸಾಕ್ಷಿಕವಾಗಿ ಸ್ನೇಹವನ್ನು ಮಾಡಿಕೊಂಡನು॥೧೩೮॥ ಅದರಂತೆ ಶ್ರೀರಾಮನು ಯುದ್ಧದಲ್ಲಿ

ವಿಭೀಷಣೇ ನೈವ ಮುಕ್ತೋ ರಾವಣ ಸ್ಸಂದಿದೇಶತಾನ್ ।
ರಾಕ್ಷಸಾ ನೇತದೇವಾಸ್ಯ ಲಾಂಗೂಲಂ ದಹ್ಯತಾ ಮಿತಿ ॥೧೪೯॥
ತತ ಸ್ತಸ್ಯ ವಚಃ ಶ್ರುತ್ವಾ ಮಮ ಪುಚ್ಛಂ ಸಮಂತತಃ ।
ವೇಷ್ಟಿತಂ ಶಣವಲ್ಕೈಶ್ಚ ಜೀರ್ಣೈಃ ಕಾರ್ಪಾಸಜೈಃ ಪಟೈಃ ॥೧೫೦॥
ರಾಕ್ಷಸಾ ಸಿದ್ಧಸನ್ನಾಹಾ ಸ್ತತ ಸ್ತೇ ಚಂಡವಿಕ್ರಮಾಃ ।
ತದಾದಹ್ಯಂತ ಮೇ ಪುಚ್ಛಂ ಜ್ಞಾತ್ವಾ ಮಾಂ ಕಾಷ್ಠ ಮುಷ್ಟಿಭಿಃ॥
ಬದ್ಧಸ್ಯ ಬಹುಭಿಃ ಪಾಶೈ ರ್ಯಂತ್ರಿತಸ್ಯ ಚ ರಾಕ್ಷಸೈಃ ॥೧೫೧॥
ತತಸ್ತೇ ರಾಕ್ಷಸಾ ಶ್ಶೂರಾ ಬದ್ಧಂ ಮಾ ಮಗ್ನಿ ಸಂವೃತಮ್ ।

ವಧ್ಯಾ - ಆಳನ್ನುಕೊಂದುಹಾಕುವುದು, ನದೃಷ್ಟಾಹಿ - ಕಾಣಲ್ಪಟ್ಟಿಲ್ಲವಲ್ಲ, ಹಿತವಾದಿನಾ - ಹಿತವನ್ನುಹೇಳುವ, ದೂತೇನ - ಆಳಿನಿಂದ, ಯಥಾರ್ಥಂ - ನಿಜಸ್ಥಿತಿಯು, ವೇದಿತವ್ಯಂಚ - ತಿಳಿಯಲ್ಪಡತಕ್ಕದ್ದು, ಅತುಲವಿಕ್ರಮ - ಅಸಾಧಾರಣಪರಾಕ್ರಮಶಾಲಿಯಾದ ಎಲೈ ರಾವಣನೇ, ದೂತಸ್ಯ - ದೂತನ ಸಂಬಂಧವಾದ, ಅಪರಾಧೇ -ತಪ್ಪಿತವು, ಸುಮಹತ್ಯಪಿ - ಎಷ್ಟು ಪ್ರಬಲವಾಗಿದ್ದಾಗ್ಯೂ, ವಿರೂಪಕರಣಂ- ಅಂಗವಿಕಾರವನ್ನು ಮಾಡಿ ಕಳುಹಿಸುವುದು, ದೃಷ್ಟಂ - ನೋಡಲ್ಪಟ್ಟಿರುತ್ತದೆ, ಶಾಸ್ತ್ರತಃ - ಶಾಸ್ತ್ರಪಂಕ್ತಿಯಿಂದ, ವಧಃ - ಕೊಲ್ಲುವುದು, ನಾಸ್ತಿ - ಇಲ್ಲ, ಇತಿ - ಹೀಗೆ, ಯಾಚಿತಃ - ಪ್ರಾರ್ಥಿಸಲ್ಪಟ್ಟನು ॥ ವಿಭೀಷಣೇನ - ವಿಭೀಷಣನಿಂದ, ಏವಂ - ಈ ರೀತಿಯಾಗಿ, ಉಕ್ತಃ - ಹೇಳಲ್ಪಟ್ಟ, ರಾವಣಃ - ರಾವಣನು, ಅಸ್ಯ - ಈ ಹನುಮಂತನ, ಏತತ್ - ಈ ಲಾಂಗೂಲಮೇವ - ಬಾಲವೇ, ದಹ್ಯತಾಂ - ಸುಡಲ್ಪಡಲಿ, ಇತಿ-ಹೀಗೆಂದು, ತಾನ್ ರಾಕ್ಷಸಾನ್ - ಆ ರಾಕ್ಷಸರನ್ನು, ಸಂದಿದೇಶ - ಅಜ್ಞಾಪಿಸಿದನು, ॥೧೪೯॥ ತತಃ - ಅನಂತರದಲ್ಲಿ, ತಸ್ಯ-ಆವಿಭೀಷಣನ, ವಚಃ - ಮಾತನ್ನು, ಶ್ರುತ್ವಾ - ಕೇಳಿ, ಪುಚ್ಛಂ - ಬಾಲವು, ಸಮಂತತಃ - ಎಲ್ಲಾ ಕಡೆಯಲ್ಲಿಯೂ, ಶಣವಲ್ಕೈಃ - ಸೆಣಬಿನ ನಾರುಗಳಿಂದಲೂ, ಕಾರ್ಪಾಸಜೈಃ - ಹತ್ತಿಯಿಂದ ಮಾಡಿದ, ಪಟೈಶ್ಚ-ಬಟ್ಟೆಗಳಿಂದಲೂ, ವೇಷ್ಟಿತಂ - ಸುತ್ತಲ್ಪಟ್ಟಿತು, ॥೧೫೦॥ ತತಃ-ಆ ಮೇಲೆ, ಸಿದ್ಧಸನ್ನಾಹಾಃ - ಜೊತೆಗೊಳಿಸಿದ ಸಾಮಗ್ರಿಗಳುಳ್ಳ, ಚಂಡವಿಕ್ರಮಾಃ - ಮಹಾ

ಯಥಾರ್ಥವಾದ ಸಂಗತಿಯನ್ನು ತಿಳಿದುಕೊಳ್ಳಬೇಕು. ದೂತನು ಒಂದು ವೇಳೆ ಎಂಥಾ ದೊಡ್ಡ ಅಪರಾಧವನ್ನು ಮಾಡಿದ್ದಾಗ್ಯೂ ಅವನನ್ನು ಸಂಹರಿಸುವುದು ಶಾಸ್ತ್ರಕ್ಕೆ ವಿರುದ್ಧವಾದ ಕಾರ್ಯವಲ್ಲದೆ ಯೋಗ್ಯವಾದ ಕೆಲಸವಲ್ಲ. ಅಸದೃಶವಾದ ಬಾಹುಬಲವುಳ್ಳ ಎಲೈ ರಾಕ್ಷಸರಾಜನೇ! ಎಲ್ಲಾ ರಾಜನೀತಿಯಲ್ಲಿಯೂ ದೂತನಿಗೆ ಅಂಗವಿಕಾರವನ್ನು ಮಾಡಿ ಕಳುಹಿಸಬೇಕೆಂದು ಹೇಳಲ್ಪಟ್ಟಿರುತ್ತದೆ ಯಾದಕಾರಣ ನೀನೂಸಹ ಹಾಗೆ ಮಾಡುವುದು ಯೋಗ್ಯವಾಗಿರುತ್ತದೆ ಎಂದು ನನ್ನ ನಿಮಿತ್ತವಾಗಿ ವಿಭೀಷಣನು ರಾವಣನನ್ನು ಬೇಡಿಕೊಂಡನು ॥೧೪೮॥ ಹೀಗೆ ಹೇಳಿದ ವಿಭೀಷಣನ ಮಾತನ್ನು ಯುಕ್ತವೆಂದು ಗ್ರಹಿಸಿ ರಾವಣನು ಈ ಕಪಿಯ ಬಾಲವನ್ನೇ ಸುಟ್ಟು ಕಳುಹಿಸಿರಿ ಎಂದು ಅಲ್ಲಿದ್ದ ರಾಕ್ಷಸರಿಗೆ ಆಜ್ಞಾಪಿಸಿದನು. ॥೧೪೯॥ ಆ ಮಾತನ್ನು ಕೇಳಿದಕೂಡಲೇ ನನ್ನ ಬಾಲವನ್ನೆಲ್ಲಾ ಸಣಬುದಾರಗಳಿಂದಲೂ, ಹತ್ತಿಯಬಟ್ಟೆಗಳಿಂದಲೂ ಅಲ್ಲಿದ್ದ ರಾಕ್ಷಸರೆಲ್ಲರೂ ಬಲವಾಗಿ ಸುತ್ತಿದರು. ॥೧೫೦॥ ಆಗ ನನ್ನ ಬಾಲವನ್ನು ಸುಡುವುದಕ್ಕಾಗಿ ಬೇಕಾದ ಉಪಕರಣಗಳನ್ನೆಲ್ಲ

ದಹತ್ಯೇವ ಹ ಸಸಂಭ್ರಾಂತೋ ಯುಗಾಂತಾಗ್ನಿರಿವ ಪ್ರಜಾಃ ॥೧೫॥
ವಿನಷ್ಟಾ ಜಾನಕೀ ವ್ಯಕ್ತಂ ನಹ್ಯದಗ್ಧಃ ಪ್ರದೃಶ್ಯತೇ ।
ಲಂಕಾಯಾಃ ಕಶ್ಚಿ ದುದ್ದೇಶ ಸ್ಸರ್ವಾ ಭಸ್ಮೀಕೃತಾ ಪುರೀ ॥೧೬॥
ದಹತಾಚ ಮಯಾ ಲಂಕಾ ದಗ್ಧಾ ಸೀತಾ ನ ಸಂಶಯಃ ॥೧೭॥
ರಾಮಸ್ಯ ಹಿ ಮಹತ್ಕಾರ್ಯಂ ಮಯೇದಂ ವಿತಥೀಕೃತಮ್ ।
ಇತಿ ಶೋಕ ಸಮಾವಿಷ್ಟ ಶ್ಚಿಂತಾಮಹ ಮುಪಾಗತಃ ॥೧೮॥
ಅಥಾಹಂ ವಾಚ ಮಶ್ರೌಷಂ ಚಾರಣಾನಾಂ ಶುಭಾಕ್ಷರಾಮ್ ।

---

ಸಾಟ್ಟಗೋಪುರಾಂ - ಬುರುಜುಗಳಿಂದಲೂ, ಪುರದ್ವಾರಗಳಿಂದಲೂ ಕೂಡಿದ, ತಾಂಪುರೀಂ - ಆ ಲಂಕಾಪಟ್ಟಣವನ್ನು, ಯುಗಾಂತಾಗ್ನಿಃ - ಪ್ರಳಯಕಾಲದ ಯಜ್ಞೇಶ್ವರನು, ಪ್ರಜಾಇವ - ಪ್ರಜೆಗಳನ್ನೋಪಾದಿಯಲ್ಲಿ, ದಹಾಮಿ - ಸುಟ್ಟುಬಿಟ್ಟೆನ, ಜಾನಕೀ - ಸೀತಾದೇವಿಯು, ವಿನಷ್ಟಾ-ನಾಶಹೊಂದಿದಳು (ಅದುಹೇಗೆಂದರೆ) ಲಂಕಾಯಾಂ - ಲಂಕಾಪಟ್ಟಣದಲ್ಲಿ, ಕಶ್ಚಿತ್ - ಒಂದಂದ. ಉದ್ದೇಶಃ - ಪ್ರದೇಶವಾದರೂ, ಅದಗ್ಧಃ-ಸುಡಲ್ಪಡದೇ ಇರುವುದಾಗಿ,ನದೃಶ್ಯತೇಹಿ-ಕಾಣಲ್ಪಡುವುದಿಲ್ಲವಲ್ಲವೆ? ಸರ್ವಾಪುರೀ-ಪಟ್ಟಣವೆಲ್ಲವೂ ಭಸ್ಮೀಕೃತಾ - ಬೂದಿಮಾಡಲ್ಪಟ್ಟಿತು ಲಂಕಾಂ-ಲಂಕಾಪಟ್ಟಣವನ್ನು, ದಹತಾ - ಸುಡುತ್ತಿರುವ, ಮಯಾ -ನನ್ನಿಂದ, ಸೀತಾಚ-ಸೀತಾದೇವಿಯೂ ಕೂಡ, ದಗ್ಧಾ - ಸುಡಲ್ಪಟ್ಟಳು, ಅಸ್ಮಿನ್-ಈ ವಿಷಯದಲ್ಲಿ, ಸಂಶಯಃ - ಸಂದೇಹವು, ನ-ಇಲ್ಲ, ರಾಮಸ್ಯ - ರಾಮನ, ಮಹತ್ - ದೊಡ್ಡದಾದ, ಇದಂಕಾರ್ಯಂ- ಈ ಕೆಲಸವು, ಮಯಾ ನನ್ನಿಂದ, ವಿತಥೀಕೃತಂಹಿ- ವ್ಯರ್ಥಮಾಡಲ್ಪಟ್ಟಿತಲ್ಲವೆ, ಇತಿ - ಈ ಪ್ರಕಾರವಾಗಿ, ಶೋಕಸಮಾವಿಷ್ಟಃ - ಮಹಾವ್ಯಸನದಿಂದ ಕೂಡಿದ, ಅಹಂ - ನಾನು ಚಿಂತಾಂ - ಯೋಚನೆಯನ್ನು, ಉಪಾಗತಃ - ಹೊಂದಿದೆನು, ॥೧೮॥

ಅಥ - ಅನಂತರದಲ್ಲಿ, ಜಾನಕೀ - ಸೀತಾದೇವಿಯು, ನಚದಗ್ಧಾ - ಸುಟ್ಟುಹೋಗಲಿಲ್ಲ. ಇತಿ - ಹೀಗೆಂಬ, ಚಾರಣಾನಾಂ - ಚಾರಣರೆಂಬ ದೇವತೆಗಳ, ಶುಭಾಕ್ಷರಾಂ - ಮಂಗಳಕರವಾದ ಅಕ್ಷರಗಳುಳ್ಳ, ವಿಸ್ಮಯೋದಂತ ಭಾಷಿತಾಂ - ಆಶ್ಚರ್ಯಕರವಾದ ವರ್ತಮಾನವುಳ್ಳ ವಾಚಂ - ಮಾತನ್ನು, ಅಶ್ರೌಷಂ

---

ಸ್ವಲ್ಪವೂ ದಿಗಿಲುಪಡದೆ, ಪ್ರಳಯಕಾಲದ ಅಗ್ನಿಯು ಪ್ರಜೆಗಳನ್ನು ಸುಡುವ ಹಾಗೆ ಸುಟ್ಟುಬಿಟ್ಟೆನು. ಹೀಗೆ ಪಟ್ಟಣವನ್ನೆಲ್ಲಾ ಸುಟ್ಟುಹಾಕಿದ ಮೇಲೆ ಸೀತಾದೇವಿಯ ಜ್ಞಾಪಕವು ನನಗೆ ಬಂತು, ಓಹೋ! ಊರನ್ನೆಲ್ಲಾ ಸುಟ್ಟುಹಾಕುವಾಗ ಸೀತಾದೇವಿಯೂ ಸಹ ಖಂಡಿತವಾಗ ಸುಟ್ಟುಹೋಗಿರಬೇಕು. ಈ ಊರಿನಲ್ಲಿ ನನ್ನಿಂದ ಸುಡಲ್ಪಡದ ಸ್ವಲ್ಪಭಾಗವಾದರೂ ಇರುವುದಿಲ್ಲ. ಪಟ್ಟಣವೆಲ್ಲವೂ ಸಂಪೂರ್ಣವಾಗಿ ಸುಟ್ಟುಹೋಗಿರುತ್ತದೆ. ಈ ಹಾಳುಲಂಕಾಪಟ್ಟಣವನ್ನು ಸುಡುವುದಕ್ಕಾಗಿ ಹೊರಟ ನಾನು ಸೀತಾದೇವಿಯನ್ನುಸಹ ಸುಟ್ಟುಬಿಟ್ಟೆನು. ಈ ವಿಷಯದಲ್ಲಿ ಸಂಶಯವಿಲ್ಲ. ಆಹಾ! ಶ್ರೀ ರಾಮನ ಕಾರ್ಯಭಾಗವೆಲ್ಲಾ ನನ್ನಿಂದ ವ್ಯರ್ಥವಾಯಿತಲ್ಲಾ! ಏನ ಮಾಡಲಿ ಎಂದು ಅತಿದುಃಖದಿಂದ ಚಿಂತಿಸುತ್ತ ಕೂತುಕೊಂಡೆನು॥೧೮॥ ಹೀಗೆ ಯೋಚಿಸುತ್ತಾ ಕೂತುಕೊಂಡಿರುವಾಗ, ಜಾನಕಿಯು ಸುಟ್ಟುಹೋಗಲಿಲ್ಲ, ಎಂಬ ವಾಕ್ಯವು ನನ್ನ ಕಿವಿಗೆ ಕೇಳಿಸಿತು. ಆ ಮಾತು ನನಗೆ ಆಶ್ಚರ್ಯವನ್ನುಂಟುಮಾಡಿತು. ಆ ಶುಭಕರವಾದ ಮಾತು ಆಕಾಶದಲ್ಲಿ ಸಂಚರಿಸುತ್ತಿದ್ದ

ತತಃ ಪರ್ವತ ಮಾಸಾದ್ಯ ತತ್ರಾರಿಷ್ಟ ಮಹಂ ಪುನಃ ॥
ಪ್ರತಿಪ್ಲವನ ಮಾರೇಭೇಯುಷ್ಮದ್ದರ್ಶನ ಕಾಂಕ್ಷಯಾ ॥೧೬೩॥
ತತಃ ಪವನ ಚಂದ್ರಾರ್ಕಸಿದ್ಧ ಗಂಧರ್ವಸೇವಿತಮ್ ।
ಪಂಥಾನ ಮಹ ಮಾಕ್ರಮ್ಯ ಭವತೋ ದೃಷ್ಟ ವಾನಿಹ ॥೧೬೪॥
ರಾಘವ ಸ್ಯ ಪ್ರಭಾವೇನ ಭವತಾಂ ಚೈವ ತೇಜಸಾ ।
ಸುಗ್ರೀವಸ್ಯ ಚ ಕಾರ್ಯಾರ್ಥಂ ಮಯಾ ಸರ್ವ ಮನುಷ್ಠಿತಮ್॥೧೬೫॥
ಏತ ತ್ಸರ್ವಂ ಮಯಾ ತತ್ರ ಯಥಾವ ದುಪಪಾದಿತಮ್ ।
ಅತ್ರಯನ್ನ ಕೃತಂ ಶೇಷಂ ತತ್ಸರ್ವಂ ಕ್ರಿಯತಾಮಿತಿ ॥೧೬೬॥
ಇತಿ ಶ್ರೀಮತ್ಸುಂದರೆ ಕಾಂಡೆ-ಅಷ್ಟಪಂಚಾಶಸ್ಸರ್ಗಃ.

---

ನಿಮ್ಮಗಳನ್ನು ನೋಡತಕ್ಕಂಥ ಅಪೇಕ್ಷೆಯಿಂದ, ಪ್ರತಿಪ್ಲವನಂ - ಹಿಂತಿರುಗಿ ಹಾರುವಿಕೆಯನ್ನು, ಆರೇಭೇ - ಪ್ರಾರಂಭಿಸಿದೆನು, ॥೧೬೩॥ ತತಃ - ಆ ಮೇಲೆ, ಅಹಂ - ನಾನು, ಪವನ ಚಂದ್ರಾರ್ಕಸಿದ್ಧಗಂಧರ್ವ ಸೇವಿತಂ, ಪವನ-ವಾಯುವಿನಿಂದಲೂ ಚಂದ್ರ - ಚಂದ್ರನಿಂದಲೂ, ಅರ್ಕ - ಸೂರ್ಯನಿಂದಲೂ, ಸಿದ್ಧ - ಸಿದ್ಧರಿಂದಲೂ, ಗಂಧರ್ವ - ಗಂಧರ್ವರಿಂದಲೂ, ಸೇವಿತಂ - ಸೇವಿಸಲ್ಪಟ್ಟ, ಪಂಥಾನಂ - ಆಕಾಶಮಾರ್ಗವನ್ನು, ಆ ಕ್ರಮ್ಯ - ಆ ಕ್ರಮಿಸಿ ಇಹ - ಇಲ್ಲಿ, ಭವತಃ - ನಿಮ್ಮಗಳನ್ನು, ದೃಷ್ಟವಾನ್ - ನೋಡಿದೆನು ॥೧೬೪॥ ಶ್ರೀ ರಾಘವಸ್ಯ - ಶ್ರೀರಾಮನ, ಪ್ರಭಾವೇನ-ಮಹಿಮೆಯಿಂದಲೂ, ಭವತಾಂ ನಿಮ್ಮಗಳ, ತೇಜಸಾಚ-ಅನುಗ್ರಹದಿಂದಲೂ, ಸುಗ್ರೀವಸ್ಯ-ನಮ್ಮ ಸ್ವಾಮಿಯಾದ ಸುಗ್ರೀವನ, ಕಾರ್ಯಾರ್ಥಂಚ ಕೆಲಸಕ್ಕೋಸ್ಕರವಾಗಿಯೂ, ಮಯಾ-ನನ್ನಿಂದ, ಸರ್ವಂ-ಎಲ್ಲವೂ, ಅನುಷ್ಠಿತಂ-ಮಾಡಲ್ಪಟ್ಟಿತು, ॥೧೬೫॥ ತತ್ರ - ಆ ಲಂಕಾ ಪಟ್ಟಣದಲ್ಲಿ, ಏತತ್ಸರ್ವಂ-ಹಿಂದೆ ಹೇಳಿದ ಸಮಸ್ತ ಕಾರ್ಯವೂ, ಮಯಾ - ನನ್ನಿಂದ, ಯಥಾವತ್-ನಡೆದ ಹಾಗೆಯೇ, ಉಪಪಾದಿತಂ-ಹೇಳಲ್ಪಟ್ಟಿತು, ಅತ್ರ-ಈ ಕಾರ್ಯದಲ್ಲಿ, ಯತ್ - ಯಾವುದು, ನಕೃತಂ - ಮಾಡಲ್ಪಡಲಿಲ್ಲವೋ, ಶೇಷಂ - ಉಳಿದಿರುವ, ತತ್ಸರ್ವಂ - ಅದೆಲ್ಲವೂ, ಕ್ರಿಯತಾಂ - ನಿಮ್ಮಿಂದ ಮಾಡಲ್ಪಡಲಿ, ಇತಿ- ಹೀಗೆಂದು, ಉವಾಚ-ಹೇಳಿದನು, ॥೧೬೬॥

— ಇಂತು ಐವತ್ತೆಂಟನೆಯ ಸರ್ಗಂ —

---

ಮೇಲಕ್ಕೆ ಹತ್ತಿ ನಿಮ್ಮಗಳನ್ನು ನೋಡಬೇಕೆಂಬ ಬಯಕೆಯಿಂದ ಹಿಂತಿರುಗಿ ಹಾರುವುದಕ್ಕೆ ಪ್ರಕ್ರಮಿಸಿದೆನು ॥೧೬೩॥ ಅನಂತರ ವಾಯು, ಚಂದ್ರ, ಸೂರ್ಯ, ಗಂಧರ್ವರು ಇವರುಗಳಿಂದ ಸೇವಿಸಲ್ಪಟ್ಟ, ಆಕಾಶಮಾರ್ಗವಾಗಿ ಹಾರಿ ಬಂದು ಈ ಸಮುದ್ರತೀರದಲ್ಲಿ ನಿಮ್ಮಗಳನ್ನು ನೋಡಿದೆನು ॥೧೬೪॥ ಶ್ರೀ ರಾಮನಮಹಿಮೆಯಿಂದಲೂ, ನಿಮ್ಮಗಳಅನುಗ್ರಹದಿಂದಲೂ ನಮ್ಮ ಸ್ವಾಮಿಯಾದ ಸುಗ್ರೀವ ಕಾರ್ಯಕ್ಕಾಗಿ ನಾನು ಮಾಡಬೇಕಾದ ಕೆಲಸವನ್ನೆಲ್ಲಾ ಮಾಡಿದೆನು॥೧೬೫॥ ಅಲ್ಲದೆ ರಾವಣನ ಪಟ್ಟಣದಲ್ಲಿ ಹೇಳತಕ್ಕ ಮಾತುಗಳನ್ನೆಲ್ಲಾ ಕ್ರಮವಾಗಿ ಹೇಳಿದೆನು. ಈ ವಿಷಯದಲ್ಲಿ ನಾನು ಮಾಡದೇ ಬಿಟ್ಟಿರುವ ಕೆಲಸವು ಯಾವುದು ಉಳಿದಿರುವುದೋ ಅದನ್ನೆಲ್ಲಾ ನೀವುಗಳು ಮಾಡಬೇಕಾಗಿಕೋರುವೆನು ಎಂದು ಹನುಮಂತನು ಜಾಂಬವಂತ ಮೊದಲಾದವರೊಡನೆ ಹೇಳಿದನು ॥೧೬೬॥

ಇಂತು ಐವತ್ತೆಂಟನೆಯ ಸರ್ಗವು

ಶ್ರೀ.

ಶ್ರೀರಾಮ ಚನ್ದ್ರ ಪರಬ್ರಹ್ಮಣೇನಮಃ

# ಶ್ರೀಮತ್ಸುನ್ದರ ಕಾಣ್ಡೇ ಏಕೋನ ಷಷ್ಠಿತಮಸ್ಸರ್ಗಃ



ಏತ ದಾಖ್ಯಾಯ ತತ್ಸರ್ವಂ ಹನುಮಾನ್ಮಾರುತಾತ್ಮಜಃ ।
ಭೂಯಸ್ಸಮುಪ ಚಕ್ರಾಮ ವಚನಂ ವಕ್ತು ಮುತ್ತರಮ್ ॥೧॥
ಸಫಲೋ ರಾಘವೋದ್ಯೋಗ ಸ್ಸುಗ್ರೀವಸ್ಯ ಚ ಸಂಭ್ರಮಃ ।
ಶೀಲ ಮಾಸಾದ್ಯ ಸೀತಾಯಾ ಮಮಚ ಪ್ರವಣಂ ಮನಃ ॥೨॥

— ಐವತ್ತೊಂಭತ್ತನೆಯ ಸರ್ಗಂ —

ಕಂದ—ಹನುಮಂ ಲಂಕೆಯವೃತ್ತಾಂತ । ನನುವಿಂದಂ ಕಪಿವರರ್ಗೆ ಪೇಳ್ದು ಬಳಿಕಂ ।
ಇನಕುಲ ನಾಥನಿಗವನೀ । ತನುಜೆಯ ನನುಗೊಳಿಪುದೆಂದ ನನುನಯದಿಂದಂ ॥

ಮಾರುತಾತ್ಮಜಃ - ವಾಯುನಂದನನಾದ, ಹನುಮಾನ್ - ಆಂಜನೇಯನು, ತತ್ ಏತತ್ - ಕಡಲನ್ನು ಹಾರಿದ್ದು ಮೊದಲು ಇಲ್ಲಿಯವರೆಗೂ, ಸರ್ವಂ - ಸಮಸ್ತ ವಿಚಾರವನ್ನೂ, ಆಖ್ಯಾಯ - ಹೇಳಿ-ಭೂಯಃ - ಮರಳಿ, ಉತ್ತರಂ - ಮುಂದಿನ ಮತ್ತೆ ಕೆಲವಾದ, ವಚನಂ - ಮಾತನ್ನು, ವಕ್ತುಂ - ಹೇಳಲಿಕ್ಕೆ, ಉಪಚಕ್ರಾಮ - ಆರಂಭಿಸಿದನು ॥೧॥ ರಾಘವೋದ್ಯೋಗಃ - ರಾಮನ ಪ್ರಯತ್ನವು, ಸಫಲಃ, ಸಾರ್ಥಕವಾದುದು, ಸುಗ್ರೀವಸ್ಯ - ಸುಗ್ರೀವನ, ಸಂಭ್ರಮಶ್ಚ - ತ್ವರೆಯೂ, (ಉತ್ಸಾಹವೂ) ಸಫಲಃ-ಫಲದಿಂದೊಡಗೂಡಿರುದು, ಸೀತಾಯಾಃ - ಜಾನಕಿಯ, ಶೀಲಂ-ಒಳ್ಳೆಯ ಸ್ವಭಾವವನ್ನು (ಪಾತಿವ್ರತ್ಯವನ್ನೂ) ಆಸಾದ್ಯ - ಹೊಂದಿ (ತಿಳಿದು) ಮಮ ಚ ನನ್ನ, ಮನಶ್ಚ - ಮನಸ್ಸಾದರೋ, ಪ್ರವಣಂ - ಪರಿಪಕ್ವವಾದುದಾಗಿದೆ, ॥೨॥ ರಾಕ್ಷಸಾಧಿಪಃ - ರಾಕ್ಷಸ ಚಕ್ರವರ್ತಿಯಾದ, ಅಸೌ - ಈ, ರಾವಣಃ - ರಾವಣನು, ತಪಸಾ - ತನ್ನ ತಪಶ್ಶಕ್ತಿಯಿಂದ, ಸರ್ವಥಾ - ಸರ್ವಪ್ರಕಾರದಿಂದಲೂ, ಅತಿವೃದ್ಧಃ - ಬಹು

— ಐವತ್ತೊಂಭತ್ತನೆಯ ಸರ್ಗಂ —

ಮಾರುತಾತ್ಮಜನಾದ ಆಂಜನೇಯನು - ಇಂತು ತಾನು ಲಂಕೆಗೆ ಹೋಗಿ ಬಂದ ಸುದ್ದಿಯನ್ನೆಲ್ಲ ಅಂಗದ ಜಾಂಬವ ಮೊದಲಾದವರಿಗೆ ತಿಳಿಸಿ, ಮುಂದೆ ಮತ್ತೆ ಕೆಲವು ಸಂಗತಿಗಳನ್ನು ಹೇಳತೊಡಗಿದನು ॥೧॥ ಎಲೈ ವಾನರರುಗಳಿರಾ! ಮಹಾನುಭಾವಳಾದ ಸೀತಾದೇವಿಯ ಮಹಿಮೆಯನ್ನು ನೋಡಿದರೆ, ಯಾವ ಕೆಲಸವನ್ನೂ ಅಸಾಧ್ಯವೆಂದು ಹೇಳಲಾಗುವುದಿಲ್ಲ. ಆಕೆಯ ಪಾತಿವ್ರತ್ಯವೇ ಸಮಸ್ತ ಕಾರ್ಯವನ್ನೂ ಮಾಡುವುದೆಂತಲೂ, ಅದರಿಂದಲೇ ಶ್ರೀರಾಮನ ಪ್ರಯತ್ನವೆಲ್ಲ ಸಫಲವಾಗುವುದೆಂತಲೂ, ಸುಗ್ರೀವನು ಆ ರಾಮನಲ್ಲಿ ತೋರುವ ಪರಮಾದರವೂ ಫಲಕಾರಿಯಾಗುವುದೆಂತಲೂ; ನನ್ನ ಮನಸ್ಸು ನಿಸ್ಸಂದೇಹವಾಗಿ ಒಪ್ಪುತಲಿದೆ. ॥೨॥ ಆದರೆ - ಸಮಸ್ತವನ್ನೂ ಸಾಧಿಸತಕ್ಕ ತೀವ್ರವಾದ ತಪಸ್ಸನ್ನಾಚರಿಸಿ, ಸಕಲ ವರಗಳನ್ನೂ ಪಡೆದು, ಸರ್ವ ವಿಧವಾಗಿರುವ ಬಲಾಧಿಕ್ಯವನ್ನೂ

ತಪಸಾ ಧಾರಯೇ ಲ್ಲೋಕಾನ್ ಕ್ರುದ್ಧೋವಾ ನಿರ್ದಹೇ ದಪಿ ।
ಸರ್ವಥಾತಿ ಪ್ರವೃದ್ಧೋ ಸೌ ರಾವಣೋ ರಾಕ್ಷಸಾಧಿಪಃ ॥೨॥
ತಸ್ಯ ತಾಂ ಸ್ಪೃಶತೋ ಗಾತ್ರಂ * ತಪಸಾನ ವಿನಾಶಿತಮ್ ॥೩॥ ॥
ನ ತದಗ್ನಿ ಶಿಖಾ ಕುರ್ಯಾ ತ್ಸಂಸ್ಪೃಷ್ಟಾ ಪಾಣಿನಾ ಸತೀ
ಜನಕಸ್ಯಾತ್ಮಜಾ ಕುರ್ಯಾತ್ ಯತ್ಕ್ರೋಧ ಕಲುಷೀಕೃತಾ ॥೪॥ ॥

ಪ್ರಭಾವಾತಿಶಯದಿಂದ, ಲೋಕಾನ್-ಲೋಕಗಳನ್ನು, ಧಾರಯೇತ್ - ತನ್ನವಶಮಾಡಿಕೊಳ್ಳಬಲ್ಲನು (ಪೋಷಿಸಬಲ್ಲನು) ಅಪಿವಾ - ಅಥವಾ, ಕ್ರುದ್ಧಃ (ಚೇತ್) ಸಿಟ್ಟುಗೊಂಡವನೇ ಆದರೆ, ನಿರ್ದಹೇತ್ - ಸುಟ್ಟುಬಿಡಬಲ್ಲನು, ತಾಂ - ಪತಿವ್ರತಾಶಿರೋಮಣಿಯೆನಿಸಿದ ಆ ಸೀತೆಯನ್ನು, ಸ್ಪೃಶತಃ - ಮುಟ್ಟುವವನೇ ಆದರೆ ತಸ್ಯ - ಆರಾವಣನ, ಗಾತ್ರಂ - ಶರೀರವು, ತಪಸಾ - ಸೀತೆಯತಪಶ್ಶಕ್ತಿಯಿಂದ, ನವಿನಾಶಿತಂ - ನಾಶಗೊಳಿಸಲ್ಪಡದಿರುವುದಿಲ್ಲ ॥ ೨, ೩ ॥ ಜನಕಸ್ಯ - ಜನಕ ಮಹಾರಾಜನ ಆತ್ಮಜಾ - ಪುತ್ರಿಯಾದ ಸೀತಾದೇವಿಯು, ಕ್ರೋಧಕಲುಷೀ ಕೃತಾ (ಸತೀ) - ಕೋಪದಿಂದ ತೀವ್ರಗೊಳಿಸಲ್ಪಟ್ಟವಳೇ ಆದರೆ, ಯತ್ - ಯಾವಕೆಲಸವನ್ನು, ಕುರ್ಯಾತ್ - ಮಾಡಬಲ್ಲಳೋ, ತತ್ ಅಂತಹ ಕೆಲಸವನ್ನು,

ಹೊಂದಿರುವ ಆ ರಾಕ್ಷಸ ಚಕ್ರವರ್ತಿಯಾದ ರಾವಣನು ಅನುಗ್ರಹವನ್ನು ತೋರುವುದಾದರೆ ಎಲ್ಲಾ ಲೋಕಗಳನ್ನೂ ಸಂರಕ್ಷಿಸಲು ಸಮರ್ಥನಾಗಿದ್ದಾನೆ, ಒಂದು ವೇಳೆ ಅವನಿಗೆ ಕೋಪವೇನಾದರೂ ಬಂದದ್ದೇ ಆದರೆ ಆ ಕೂಡಲೆ ಲೋಕಗಳನ್ನೆಲ್ಲ ಕಾಲಾಗ್ನಿಯಂತೆ ಸುಟ್ಟು ಬೂದಿಯನ್ನಾಗಿ ಮಾಡಲಿಕ್ಕೂ ಶಕ್ತನೆಂಬ ವಿಷಯದಲ್ಲಿ ಸಂದೇಹವೇ ಇಲ್ಲ ಅಂತಹ ರಾವಣನು ಬಲಾತ್ಕಾರದಿಂದ ಸೀತಾದೇವಿಯನ್ನು ಸ್ಪರ್ಶ ಮಾಡಿದವನೇ ಆದರೆ, ತತ್ಕ್ಷಣದಲ್ಲಿಯೇ ಅವನ ಶರೀರವು ಆಕೆಯ ತಪೋಗ್ನಿಯಿಂದ ಬೆಂದು ಹೋಗದೆ ಇರದು. ಅದರಿಂದಲೇ ಬಲಾತ್ಕರಿಸದೆ ಇದ್ದಾನೆ. ಮತ್ತು - ಇದುವರೆಗೇ ಅವನು ಸೀತಾದೇವಿಯನ್ನು ಕೊಂಡೊಯ್ದ ಸಮಯದಲ್ಲಿ ಆಕೆಯ ಸ್ಪರ್ಶಮಾತ್ರದಿಂದಲೇ ದಹಿಸದೆ ಹೋಗಲು ಅವನ ಕ್ರೂರವಾದ ತಪಶ್ಶಕ್ತಿಯೇ ಕಾರಣವೆಂದು ತೋರುತ್ತದೆ, ಈಗ ಅವನ ತಪಃಫಲವೆಲ್ಲ ನಾಶವಾಗಿ ಹೋಗಿರುವುದೆಂತಲೂ, ಕೇವಲ ಶುಷ್ಕನಾಗಿ ಉಳಿದಿರುವುದೆಂತಲೂ, ಅದರ ಸಾರವನ್ನು ಜಾನಕಿಯ ಪಾತಿವ್ರತ್ಯಾಗ್ನಿಯು ಸೆಳೆದಿರುವುದೆಂತಲೂ, ರಾಮನ ಪ್ರಯತ್ನವು ಅವನನ್ನು ಸುತರಾಂ ಭಸ್ಮವನ್ನಾಗಿ ಮಾಡಲು ನಿಮಿತ್ತವಾಗಿದೆಯೆಂತಲೂ ನಿಶ್ಚಯಿಸುತ್ತೇನೆ ॥೩॥ ಪತಿಯ ಮೂಲಕವಾಗಿಯೇ ಹಗೆಯನ್ನು ತೀರಿಸಿಕೊಳ್ಳುವುದು ವೀರಪತ್ನಿಯ

* ಇಲ್ಲಿ ರಾವಣನು - ಹಿಂದೆ ವೈಕುಂಠವಾಸಿಯಾದ ಶ್ರೀಮನ್ನಾರಾಯಣನ ದ್ವಾರಪಾಲನಾಗಿದ್ದು ಸನಕ ಸನಂದನರ ಶಾಪಕ್ಕೊಳಗಾಗಿ, ರಾಕ್ಷಸ ದೇಹ ಸಂಬಂಧದಿಂದ ತಮೋಗುಣಕ್ಕೆ ಡೈಯಾಗಿ, ಶರೀರಸಂಬಂಧದಿಂದ ತಮೋಗುಣ ಕಾರ್ಯವನ್ನೂ, ಆತ್ಮ ಸತ್ವ ಗುಣದಿಂದ ಮುಕ್ತತ್ವದ ಕಾರ್ಯವನ್ನೂ ಮಾಡುತಲಿದ್ದನು. ವೇದವತಿಯು ಶಾಪವನ್ನನುಸರಿಸಿಯೂ, ಅನರಣ್ಯನ ಶಾಪವನ್ನನುಸರಿಸಿಯೂ. ಬ್ರಹ್ಮನ ವರವನ್ನನುಸರಿಸಿಯೂ, ಕ್ರಮವಾಗಿ ಸೀತೆಯು ಕಾರಣವಾಗಿ, ಸೂರ್ಯವಂಶದಲ್ಲಿಯೇ ಮಾನುಷ ರೂಪದ ಶ್ರೀಹರಿಯ ಮೂಲಕವೇ, ಶತ್ರುವಾಗಿರುವ ರಾವಣನ ಸಂಹಾರವು ಆಗಬೇಕಾದುದು ಉಚಿತವೆಂಬುದನ್ನು ಶ್ರೀಮದಾಂಜನೇಯನು ವ್ಯಕ್ತಪಡಿಸಿ ಇದ್ದಾನೆ.

ಜಾಂಬವತ್ಪ್ರಮುಖಾನ್ ಸರ್ವಾನ್ ಅನುಜ್ಞಾಪ್ಯ ಮಹಾಹರೀನ್ ॥
ಅಸ್ಮಿನ್ನೇವಂ ಗತೇ ಕಾರ್ಯೇ ಭವತಾಂ ಚ ನಿವೇದಿತೇ ॥

ಅಗ್ನಿಶಿಖಾ - ಅಗ್ನಿಜ್ವಾಲೆಯು, ಪಾಣಿನಾ - ಹಸ್ತದಿಂದ, ಸ್ಪೃಷ್ಟಾಪಿ - ಮುಟ್ಟಲ್ಪಟ್ಟದ್ದಾದರೂ, ನ ಕುರ್ಯಾತ್ - ಮಾಡಲಾರದು ॥೪॥ ಏವಂ - ಈ ಪ್ರಕಾರವಾಗಿ, ಗತೇ - ನಡೆದ, ಅಸ್ಮಿನ್ - ಸೀತಾದರ್ಶನಾದಿರೂಪವಾಗಿರುವ, ಕಾರ್ಯೇ - ಕೆಲಸವು, ಭವತಾಂ ಚ - ನಿಮಗೂ, ನಿವೇದಿತೇ ಸತಿ - ತಿಳಿಸಲ್ಪಡುತಲಿರಲಾಗಿ, ಜಾಂಬವತ್ಪ್ರಮುಖಾನ್ - ಜಾಂಬವಂತನೇ ಮೊದಲಾಗಿರುವ, ಸರ್ವಾನ್ - ಸಮಸ್ತರಾದ, ಮಹಾಹರೀನ್ - ವಾನರೋತ್ತಮರನ್ನು, ಅನುಜ್ಞಾಪ್ಯ - ಸಮ್ಮತಿಗೊಳಿಸಿ, ವೈದೇಹ್ಯಾ ಸಹ - ಸೀತೆಯೊಡನೆ

ಧರ್ಮವಾದುದರಿಂದಲೂ, ಹಾಗಮಾಡದುದು ಪತಿಗೆ ಗೌರವವಾದುದರಿಂದಲೂ, "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ", ಗರತಿಯಾದ ಹೆಂಗಸಿಗೆ ಎಂದಿಗೂ ಸ್ವಾತಂತ್ರ್ಯವಿಲ್ಲ ಎಂಬ ಧರ್ಮಶಾಸನವಿರುವುದರಿಂದಲೂ, ಅದನ್ನು ಆಕೆ ಅನುಸರಿಸಬೇಕಾದುದು ಧರ್ಮವಾದುದರಿಂದಲೂ, ಇದರಂತೆಯೆ ಆಕೆಯು ಭರ್ತೃಪಾರತಂತ್ರ್ಯವನ್ನು ಅವಲಂಬಿಸಿರುವುದರಿಂದಲೂ ಸೀತಾದೇವಿಯು ಆ ಕೀಳನಲ್ಲಿ ತನ್ನ ಕೋಪಾಗ್ನಿ ಜ್ವಾಲೆಯನ್ನು ವಿನಿಯೋಗಿಸದೆ ಉಪೇಕ್ಷೆಯಿಂದಿರುವಳು, ಆದರಿಂದಲೇ ಅವನಿನ್ನೂ ಬದುಕಿ ಇದ್ದಾನೆ. ಆಕೆಗೆ ಒಂದು ವೇಳೆ ತೀವ್ರವಾದ ಕೋಪವೇ ಬಂದಿದ್ದಾದರೆ, ಅವನಾಗಲೆ ಧ್ವಂಸವಾಗಿ ಹೋಗುತಲಿದ್ದನು. ಆ ಮಹಾನುಭಾವಳ ಪಾತಿವ್ರತ್ಯಾಗ್ನಿಯನ್ನು, ಕೈಯಿಂದ ಮುಟ್ಟಿದರೂ ಪ್ರಳಯಾಗ್ನಿಯು ದಹಿಸಲಾರದ. ಆ ಮಹಾನುಭಾವಳಿಗೆ ರೋಷವು ಹತ್ತಿ ಕ್ರೂರವಾದ ಶಾಪವನ್ನು ಕೊಡದಿರುವುದರಿಂದಲೇ ಆಕೆಯನ್ನು ಕೊಂಡೊಯ್ಯುವ ವೇಳೆಯಲ್ಲಿ ಸ್ಪರ್ಶಮಾತ್ರದಿಂದ ಅವನು ನಾಶವಾಗಿ ಹೋಗದೆ ತನ್ನ ಅಖಂಡತಪಃಪ್ರಭಾವದಿಂದ ಜೀವಸಹಿತನಾಗಿದ್ದಾನೆ. ಇದೇ ಅರ್ಥವನ್ನೇ ಆ ಪುಣ್ಯಾತ್ಮಳು—"ಅಸಂದೇಶಾತ್ತು ರಾಮಸ್ಯ ತಪಸಶ್ಚಾನುಪಾಲನಾತ್ । ನ ತ್ವಾಂ ಕುರ್ಮಿ ದಶಗ್ರೀವ ಭಸ್ಮ ಭಸ್ಮಾರ್ಹ ತೇಜಸಾ" ಎಲವೋ ಕೀಳನಾದ ದಶಗಳನೇ! ನನ್ನ ವಲ್ಲಭನ ಅಪ್ಪಣೆಯಿಲ್ಲದಿರುವುದರಿಂದಲೂ, ನನ್ನ ತಪಸ್ಸನ್ನು ಲೋಪವಿಲ್ಲದಂತೆ ಕಾಪಾಡಿಕೊಳ್ಳಬೇಕಾದುದು ನನಗೆ ಧರ್ಮವಾಗಿರುವುದರಿಂದಲೂ, ನಿಮಿಷಮಾತ್ರದಲ್ಲಿ ನಿನ್ನನ್ನು ಭಸ್ಮವನ್ನಾಗಿ ಮಾಡುವ ತೀಕ್ಷ್ಣವಾದ ತೇಜಸ್ಸನ್ನೊಳಗೊಂಡಿರುವ ನನ್ನ ಪಾತಿವ್ರತ್ಯಾಗ್ನಿಯಿಂದ ನಿನ್ನನ್ನು ದಹಿಸದೆ ಇದ್ದೇನೆ. ಎಂದು ಮೇಲೆ ನಾನು ಹೇಳಿದ ಅರ್ಥವನ್ನೇ ಅವನ ಇದಿರಿಗೇ ಉದಹರಿಸಿದಳು. ॥೪॥ ॥ ಎಂದೀ ಪ್ರಕಾರವಾಗಿ ಮಾರುತಿಯು - ಲಂಕಾಪ್ರವೇಶಮೊದಲ್ಗೊಂಡು ಸಮಸ್ತ ಸಮಾಚಾರವನ್ನೂ ಜಾಂಬವನೇ ಮೊದಲಾದ ಕಪಿವರರಿಗೆ ಅರಿಕೆ ಮಾಡಿ, ಬಳಿಕ-ಎಲೈ ಹರಿವರರೇ! ಇದುವರೆಗೆ ಇಷ್ಟು ಕಾರ್ಯವು ನಡೆದಿದೆ. ಎಲ್ಲವನ್ನೂ ನಿಮಗೆ ವಿಜ್ಞಾಪಿಸಿದ್ದೇನೆ. ಇನ್ನುಮೇಲೆ ನೀವುಗಳೆಲ್ಲರೂ ಸಮ್ಮತಿಸಿದರೆ ನಾವೆಲ್ಲರೂ ಕಲೆತು ಲಂಕೆಗೆ ಹೋಗಿ, ರಕ್ಕಸರನ್ನೆಲ್ಲ ಇರಿದು, ಸೀತೆಯನ್ನು ಕರೆದುಕೊಂಡು ಬಂದು ರಾಮಲಕ್ಷ್ಮಣರನ್ನು ದರ್ಶನ ಮಾಡುವುದು ನ್ಯಾಯವಾಗಿದೆ ಎಂದು ತೋರುತ್ತದೆ. ॥೫, ೬॥ ಆದರೆ—ಸಕಲ ರಾಕ್ಷಸರ ಪಡೆಯಿಂದೊಡಗೂಡಿರುವ ಲಂಕಾನಗರಿಯನ್ನೂ, ರಾಕ್ಷಸ ಚಕ್ರವರ್ತಿಯೆನಿಸಿರುವ ಮಹಾಬಲಿಷ್ಠನಾದ ರಾವಣನನ್ನೂ

ನ್ಯಾಯ್ಯಂ ಸ್ಮ ಸಹ ವೈದೇಹ್ಯಾ ದ್ರಷ್ಟುಂ ತೌ ಪಾರ್ಥಿವಾತ್ಮಜೌ ॥ ೬ ॥
ಅಹ ಮೇಕೋಽಪಿ ಪರ್ಯಾಪ್ತ ಸ್ಸರಾಕ್ಷಸ ಗಣಾಂ ಪುರೀಮ್ ।
ತಾಂ ಲಂಕಾಂ ತರಸಾ ಹನ್ತುಂ ರಾವಣಂ ಚ ಮಹಾಬಲಮ್ ॥೭॥
ಕಿಂ ಪುನ ಸ್ಸಹಿತೋ ವೀರ್ಯೈ ರ್ಬಲವದ್ಭಿಃ ಕೃತಾತ್ಮಭಿಃ ॥
ಕೃತಾಸ್ತ್ರೈಃ ಪ್ಲವಗೈ ಶ್ಶೂರೈ ರ್ಭವದ್ಭಿ ರ್ವಿಜಯೈಷಿಭಿಃ ॥೮॥
ಅಹಂ ತು ರಾವಣಂ ಮತ್ತಂ ಸಸೈನ್ಯಂ ಸಪುರಸ್ಸರಮ್ ।
ಸಹ ಪುತ್ರಂ ವಧಿಷ್ಯಾಮಿ ಸಹೋದರ ಯುತಂ ಯುಧಿ ॥೯॥
ಬ್ರಾಹ್ಮ ಮೈನ್ದ್ರಂ ಚ ರೌದ್ರಂ ಚ ವಾಯವ್ಯಂ ವಾರುಣಂ ತಥಾ ।

---

ತೌ - ಆ, ಪಾರ್ಥಿವಾತ್ಮಜೌ - ದಶರಥಪುತ್ರರನ್ನು, ದ್ರಷ್ಟುಂ - ನೋಡಲಿಕ್ಕೆ, ನ್ಯಾಯ್ಯಂಸ್ಮ - ನ್ಯಾಯವಾಗಿದೆಯಲ್ಲವೆ ? ॥೫, ೬॥ ಸರಾಕ್ಷಸಗಣಾಂ - ರಾಕ್ಷಸರ ಗುಂಪಿನಿಂದೊಡಗೂಡಿದ, ತಾಂ-ಆ, ಲಂಕಾಂ - ಲಂಕೆಯೆಂಬ, ಪುರೀಂ - ನಗರಿಯನ್ನೂ, ಮಹಾಬಲಂ - ಹೇರಳವಾದ ಬಲವುಳ್ಳ, ರಾವಣಂಚ-ದಶಗಳನನ್ನೂ, ಹನ್ತುಂ - ಕೊಲ್ಲಲಿಕ್ಕೆ, ಅಹಂ - ನಾನು, ಏಕೋಽಪಿ - ಒಬ್ಬನೇ ಆಗಿದ್ದರೂ. ಪರ್ಯಾಪ್ತಃ - ಸಮರ್ಥನಾಗಿದೇನೆ, ವೀರ್ಯೈಃ - ಶೂರನೆನಿಸಿರುವ, ಬಲವದ್ಭಿಃ - ಬಲಿಷ್ಠರೆನಿಸಿದ, ಕೃತಾತ್ಮಭಿಃ - ಶಿಕ್ಷಿತಬುದ್ಧಿಯುಳ್ಳ (ಧೀರರಾಗಿರುವ) ಕೃತಾಸ್ತ್ರೈಃ - ಶಿಕ್ಷಿತ ಅಸ್ತ್ರವಿದ್ಯೆಯುಳ್ಳ, ಶೂರೈಃ - ಬಲಪ್ರಾಕಾರವನ್ನು ಮಾಡುವ, ವಿಜಯೈಷಿಭಿಃ - ಜಯಾಭಿಲಾಷಿಗಳಾದ, ಪ್ಲವಗೈಃ - ಉತ್ಸಾಹದಿಂದ ಕುಪ್ಪಳಿಸುತಲಿರುವ, ಭವದ್ಭಿಃ-ನಿಮ್ಮೊಡನೆಯೂ, ಸಹಿತ (ಸ್ಥಿತಃ) ಕೂಡಿದವನೇ ಆದರೆ, ಕಿಂಪುನಃ - ರಕ್ಕಸರನ್ನು ಇರಿಯುವ ವಿಷಯದಲ್ಲಿ ಹೇಳಬೇಕಾದುದೇನು ? ॥೭, ೮॥ ಅಹಂತು-ನಾನಾದರೋ, ಮತ್ತಂ - ಕೊಬ್ಬಿರುವ, ಸಸೈನ್ಯಂ - ಸೇನೆಯಿಂದ ಸಹಿತನಾಗಿರುವ, ಸಪುರಸ್ಸರಂ - ಭೃತ್ಯರಿಂದೊಡಗೂಡಿದ, ಸಹಪುತ್ರಂ-ಪುತ್ರರಿಂದ ಕೂಡಿರುವ, ಸಹೋದರೈಯುತಂ - ತಮ್ಮಂದಿರಿಂದಲೂ ಯುಕ್ತನಾಗಿರತಕ್ಕ, ರಾವಣಂ - ರಾವಣನನ್ನು, ಯುಧಿ - ರಣದಲ್ಲಿ, ವಧಿಷ್ಯಾಮಿ - ಕೊಲ್ಲಬಲ್ಲೆನು, (ಹನಿಷ್ಯಾಮಿ) ॥೯॥ ಬ್ರಾಹ್ಮಂ - ಬ್ರಹ್ಮಾಸ್ತ್ರವು, ಐನ್ದ್ರಂ - ಇಂದ್ರಾಸ್ತ್ರವು, ರೌದ್ರಂ - ರುದ್ರಾಸ್ತ್ರವು, ವಾರುಣಂ - ವರುಣಾಸ್ತ್ರವು, ತಥಾ - ಹಾಗೆಯೇ, ವಾಯವ್ಯಂ - ವಾಯುವೇ ದೇವತೆಯಾಗಿರುವ ಅಸ್ತ್ರವು ವಾರುಣಂ-ವರುಣಾಸ್ತ್ರವು, (ಇತಿ-ಹೀಗೆಂಬ) ಇಂದ್ರಜಿತಃ - ಇಂದ್ರಜಿತುವಿನ, ಅಸ್ತ್ರಾಣಿ - ಮಂತ್ರಸಹಿತವಾದ ಅಸ್ತ್ರಗಳು, ಸಂಯುಗೇ-ಯುದ್ಧದಲ್ಲಿ, ದುರ್ನಿರೀಕ್ಷಾಣಿಯದಿ - ನೋಡಲಶಕ್ಯವಾದವುಗಳಾಗಿದ್ದರೂ, ತಾನಿ - ಅಂತಹ ಅಸ್ತ್ರಗಳನ್ನೆಲ್ಲ, ಅಹಂ - ನಾನು, ವಿಧಮಿಷ್ಯಾಮಿ - ಧ್ವಂಸಮಾಡಬಲ್ಲೆನು, ಭವತಾಂ - ನಿಮ್ಮಗಳಿಂದ್ಯ

---

ನಾಶಗೊಳಿಸಲಿಕ್ಕೆ ನಾನೊಬ್ಬನೇ ಸಮರ್ಥನಾಗಿದೇನೆ,ಹೀಗಿರಲು,ಮಹಾ ಬಲ ಪರಾಕ್ರಮಗಳಿಂದೊಡಗೂಡಿ, ರಣರಂಗಗಳಲ್ಲಿ ಪಳಗಿ, ಸಕಲ ಶಸ್ತ್ರಾಸ್ತ್ರವಿಶಾರದರಾಗಿ, ವಿಜಯವನ್ನು ಬಯಸತಕ್ಕವರಾಗಿಯೂ ಇರುವ ನೀವುಗಳೂ ಸಹಾಯ ಮಾಡುವವರೇ ಆದರೆ, ರಾಕ್ಷಸರ ಹುಟ್ಟನ್ನೇ ಅಡಗಿಸುವ ವಿಷಯದಲ್ಲಿ ಸಂಶಯವುಂಟೆ ? ಸರ್ವಾತ್ಮನಾ ಇಲ್ಲ ॥೭, ೮॥ ನಾನಾದರ ಬಲಪರಾಕ್ರಮಗಳಿಂದ ಕೊಬ್ಬಿ, ಸೇನೆಗಳಿಂದಲೂ, ಭೃತ್ಯರಿಂದಲೂ, ಪುತ್ರಪೌತ್ರಾದಿಗಳಿಂದಲೂ, ತಮ್ಮಂದಿರಿಂದಲೂ ಸಹಿತನಾಗಿರುವ ರಾವಣನನ್ನು ಸಮರದಲ್ಲಿ ಇರಿಯಬಲ್ಲೆನು ॥೯॥ ಮತ್ತು- ಬ್ರಹ್ಮನೇ ದೇವತೆಯಾಗಿರುವ ಬ್ರಹ್ಮಾಸ್ತ್ರ, ಹಾಗೆಯೇ ಇಂದ್ರಾಸ್ತ್ರ, ರೌದ್ರಾಸ್ತ್ರ, ವಾಯುವ್ಯಾಸ್ತ್ರ, ವಾರುಣಾಸ್ತ್ರ, ಈ ಮೊದಲಾದವುಗಳನ್ನು

ಯದಿ ಶಕ್ರಜಿತೋಽಸ್ತ್ರಾಣಿ ದುರ್ನಿಕ್ಷ್ಯಾಣಿ ಸಂಯುಗೇ ॥೧೦॥
ತಾನ್ಯಹಂ ವಿಧಮಿಷ್ಯಾಮಿ ನಿಹನಿಷ್ಯಾಮಿ ರಾಕ್ಷಸಾನ್ ।
ಭವತಾ ಮಭ್ಯನುಜ್ಞಾತೋ ವಿಕ್ರಮೋ ಮೇ ರುಣದ್ಧಿ ತಂ ॥೧೧॥
ಮಯಾಽತುಲಾ ವಿಸೃಷ್ಟಾ ಹಿ ಶೈಲವೃಷ್ಟಿರ್ನಿರಂತರಾ ।
ದೇವಾನಪಿ ರಣೇ ಹನ್ಯಾತ್ಕಿಂ ಪುನಸ್ತಾನ್ನಿಶಾಚರಾನ್ ॥೧೨॥
ಸಾಗರೋಽಪ್ಯತಿಯಾದ್ವೇಲಾಂ ಮನ್ದರಃ ಪ್ರಚಲೇದಪಿ ।
ನ ಜಾಂಬವನ್ತಂ ಸಮರೇ ಕಂಪಯೇದರಿವಾಹಿನೀ ॥೧೩॥
ಸರ್ವರಾಕ್ಷಸಸಂಘಾನಾಂ ರಾಕ್ಷಸಾ ಯೇ ಚ ಪೂರ್ವಕಾಃ ।

ಅಪ್ಪಣೆಮಾಡಲ್ಪಟ್ಟವನಾಗಿ, ರಾಕ್ಷಸಾನ್ - ರಕ್ಕಸರನ್ನು, ನಿಹನಿಷ್ಯಾಮಿ-ನಾಶಗೊಳಿಸುವೆನು, ಮೇ-ನನ್ನ, ವಿಕ್ರಮಃ - ಪರಾಕ್ರಮವು, ತಂ - ಆ ಇಂದ್ರಜಿತುವನ್ನೂ, ರುಣದ್ಧಿ - ತಡೆಯಬಲ್ಲುದು॥೧೦,೧೧॥ ಮ ಯಾ - ನನ್ನಿಂದ, ರಣೇ-ಯುದ್ಧದಲ್ಲಿ, ವಿಸೃಷ್ಟಾ - ಸುರಿಸಲ್ಪಟ್ಟ, ಅತುಲಾ - ಅಸದೃಶವಾದ, ನಿರಂತ ರಾ - ಎಡೆಬಿಡದಿರುವ, (ಅಖಂಡವಾದ) ಶೈಲವೃಷ್ಟಿಃ-ಬೆಟ್ಟಗಳ ಮಳೆಯು, ದೇವಾನಪಿ - ದೇವತೆಗಳ ನ್ನೂ ಕೂಡ, ಹನ್ಯಾತ್ - ಕೊಲ್ಲಬಲ್ಲುದು, ತಾನ್ - ಆ ಅಲ್ಪರಾದ, ನಿಶಾಚರಾನ್ - ರಾಕ್ಷಸರನ್ನು, ಕಿಂ ಪುನಃ - ಹೇಳಬೇಕಾದುದೇನು ? ॥೧೨॥ ಸಾಗರೋಽಪಿ - ಸಮುದ್ರವು ಕೂಡ, ವೇಲಾಂ - ದಡವನ್ನು, ಅತಿಯಾತ್ (ಅತೀಯಾತ್) ಅತಿಕ್ರಮಿಸಬಹುದು, ಮನ್ದರೋಽಪಿ - ಮಂದರಪರ್ವತವಾದರೂ, ಪ್ರಚ ಲೇತ್- ಹೇರಳವಾಗಿ ಅಲುಗಬಹುದು, ಜಾಂಬವಂತಂ - ಜಾಂಬವಂತನನ್ನು, ಸಮರೇ- ಯುದ್ಧದಲ್ಲಿ, ಅರಿ ವಾಹಿನೀ - ಶತ್ರುಸೇನೆಯು, ನಕಂಪಯೇತ್- ಕದಲಿಸಲಾರದು ॥೧೩॥ ಸರ್ವ ರಾಕ್ಷಸ ಸಂಘಾನಾಂ - ಸ ಮಸ್ತ ರಾಕ್ಷಸರ ಸಮೂಹಗಳೊಳಗೆ, ಯೇ-ಯಾರು, ಪೂರ್ವಕಾಃ - ಮೊದಲನೆಯವರೋ, (ಪ್ರಧಾನ ಅಂತಹ ರಾಕ್ಷಸರ) ವಿನಾಶಾಯ - ನಾಶಕ್ಕೋಸ್ಕರ, ವೀರಃ - ಬಲಶಾಲಿಯೆನಿಸಿದ, ವಾಲಿಸೂನುಃ - ವಾ ಲಿಪುತ್ರನಾದ ಅಂಗದನೊಬ್ಬ, ಕಪಿಃ - ವಾನರೋತ್ತಮನು, ಏಕಃ - ಒಬ್ಬನೇ, ಅಲಂ - ಸಾಕು.

ಪ್ರಯೋಗಿಸುವುದರಲ್ಲಿ ಇಂದ್ರಜಿತುವು ನಿಸ್ಸೀಮನಾಗಿದಾನೆ. ರಣಾಂಗಣದಲ್ಲಿ ಅವನ ಅ ಸ್ತ್ರಗಳ ಕ್ರೌರ್ಯವನ್ನು ಸರ್ವಥಾ ನೋಡಿ ತಡೆಯಲಾಗುವುದಿಲ್ಲ ॥೧೦॥ ಆದರೂ, ಅವುಗಳೆ ನ್ನೆಲ್ಲ ನಾನು ಧ್ವಂಸಮಾಡಬಲ್ಲೆನು, ನೀವುಗಳು ಅಪ್ಪಣೆಯನ್ನಿತ್ತರೆ ರಕ್ಕಸರನ್ನೆ ಲ್ಲ ಸದೆಬಡಿವೆನು, ಅಲ್ಲದೆ ನನ್ನ ಪರಾಕ್ರಮವು ಆ ಮೇಘನಾದನನ್ನು ಲಕ್ಷಿಸದೆ ಧ್ವಂಸ ಮಾಡಬಲ್ಲುದಾಗಿದೆ ॥೧೧॥ ನಾನು ಯುದ್ಧದಲ್ಲಿ ನಿಂತು, ಬೆಟ್ಟಗಳ ಮಳೆಯನ್ನು ಸುರಿಸಲಿಕ್ಕೆ ಮೊದಲಿಟ್ಟರೆ, ಆ ಶೈಲವೃಷ್ಟಿಯು ದೇವತೆಗಳನ್ನಾದರೂ ಸಂಹರಿಸಬಲ್ಲುದು, ಹೀಗಿರಲಾ ಗಿ ಆ ಪುಡಿರಕ್ಕಸರನ್ನು ಸಂಹರಿಸುವುದು ಏನೂ ಆಶ್ಚರ್ಯವಲ್ಲ ॥೧೨॥ ನಮ್ಮ ಪರಾಕ್ರಮಗ ಳೆಲ್ಲಾ ಹಾಗಿರಲಿ, ಮಹಾಬಾಹುಬಲಸಂಪನ್ನನಾದ ಜಾಂಬವನು ಯುದ್ಧಕ್ಕೆ ಕೈಕಟ್ಟಿನಿಂ ದರೆ— ಸಾಗರವಾದರೂ ಅಲ್ಲಕಲ್ಲೋಲವಾಗುವುದು, ಮಂದರಪರ್ವತವಾದರೂ ನಡು ಗಿಹೋಗುವುದು, ಯಾವ ಶತ್ರುಸೇನೆಯಾದರೂ ಈತನನ್ನು ಅಲುಗಿಸಲಾರದು॥೧೩॥ ಮತ್ತು ರಾಕ್ಷಸರ ಪಡೆಗಳೊಳಗೆಲ್ಲ ಮುಂದಾಳುಗಳೆನಿಸಿ ಹೆಸರುವಾಸಿಯನ್ನು ಪಡೆದಿರುವ ನಿಶಾಚರರ ನ್ನೆಲ್ಲ ಸಮೂಲವಾಗಿ ನಾಶಪಡಿಸಲಿಕ್ಕೆ ಸಕಲ ವಾನರಯೂಥಪತಿಯಾದ ಅಂಗದನೊಬ್ಬನೇ

ಅಲ ಮೇಕೋ ವಿನಾಶಾಯ ವೀರೋ ವಾಲಿಸುತಃ ಕಪಿಃ ॥೧೪॥
ಪನಸ ಸ್ಸೋರು ವೇಗೇನ ನೀಲಸ್ಯಾಪಿ ಮಹಾತ್ಮನಃ ।
ಮಂದರೋಪ್ಯವ ಶೀರ್ಯೇತ ಕಿಂಪುನ ರ್ಯುಧಿ ರಾಕ್ಷಸಾಃ ॥೧೫॥
ಸದೇವಾಸುರ ಯಕ್ಷೇಷು ಗಂಧರ್ವೋರಗ ಪಕ್ಷಿಷು ।
ಮೈಂದಸ್ಯ ಪ್ರತಿಯೋದ್ಧಾರಂ ಶಂಸತ ದ್ವಿವಿದಸ್ಯವಾ ॥೧೬॥
ಅಶ್ವಿಪುತ್ರೌ ಮಹಾಭಾಗಾ ವೇತೌ ಪ್ಲವಗ ಸತ್ತಮೌ ।
ಏತಯೋಃ ಪ್ರತಿಯೋದ್ಧಾರಂ ನ ಪಶ್ಯಾಮಿ ರಣಾಜಿರೇ॥೧೭॥
ಪಿತಾಮಹ ವರೋತ್ಸೇಕಾ ತ್ಪರಮಂ ದರ್ಪಮಾಸ್ಥಿತೌ ।
ಅಮೃತ ಪ್ರಾಶಿನಾ ವೇತೌ ಸರ್ವವಾನರ ಸತ್ತಮೌ ॥೧೮॥

(ಸಮರ್ಥನು) ॥೧೪॥ ಮಹಾತ್ಮನಃ -ಮಹಾಧೀರನಾದ, ಪನಸಸ್ಯ-ಪನಸನೆಂಬವಾನರವೀರನ, ನೀಲಸ್ಯಾಪಿ-ನೀಲನ, ಊರುವೇಗೇನ - ತೀವ್ರವಾದ ಗಮನವೇಗದಿಂದ, ಮಂದರೋಪಿ - ಮಂದರ ಪರ್ವತವು ಕೂಡ, ಅವಶೀರ್ಯೇತ - ಸಿಡಿದು ಹೋದೀತು, ಯುಧಿ - ಯುದ್ಧದಲ್ಲಿ, ರಾಕ್ಷಸಾಃ - ರಾಕ್ಷಸರು, ಕಿಂಪುನಃ-ಹೇಳತಕ್ಕುದೇನು ? ॥೧೫॥ ಸದೇವಾಸುರ ಯಕ್ಷೇಷು - ದೇವತೆಗಳು, ಅಸುರರು, ಯಕ್ಷರು ಇವರಿಂದ ಸಹಿತರಾದ, ಗಂಧರ್ವೋರಗ ಪಕ್ಷಿಷು - ಗಂಧರ್ವರು, ಉರಗರು, ಪಕ್ಷಿಗಳು ಇವುಗಳೆಲ್ಲರಲ್ಲಿಯೂ, ಮೈಂದಸ್ಯವಾ - ಮೈಂದನಿಗಾದರೂ ದ್ವಿವಿದಸ್ಯವಾ - ದ್ವಿವಿದನೆಂಬ ವಾನರನಿಗಾಗಲಿ, ಪ್ರತಿಯೋದ್ಧಾರಂ - ಇದಿರಿಸಿಯುದ್ಧ ಮಾಡುವವನನ್ನು, ಶಂಸತ - ಹೇಳಿರಿ ॥೧೬॥ ಏತೌ - ಈ, ಪ್ಲವಗಸತ್ತಮೌ ವಾನರೋತ್ತಮ ರೆನಿಸಿರುವ, ಅಶ್ವಿಪುತ್ರೌ - ಅಶ್ವಿನೀ ದೇವತೆಗಳ ಮಕ್ಕಳು, ಮಹಾಭಾಗೌ - ಮಹಾಪ್ರಭಾವವುಳ್ಳವರು, ಏತಯೋಃ - ಈ ವಾನರರಿಗೆ, ಪ್ರತಿಯೋದ್ಧಾರಂ - ಇದಿರಿಸಿ ಯುದ್ಧ ಮಾಡುವವನನ್ನು, ರಣಾಜಿರೇ-ರಣಾಂಗಣದಲ್ಲಿ, ನಪಶ್ಯಾಮಿ-ಕಾಣೆನು, ॥೧೭॥ ಏತೌ- ಈ ಮೈಂದದ್ವಿವಿದರು, ಪಿತಾಮಹವರೋತ್ಸೇಕಾತ್ - ಬ್ರಹ್ಮನವರದಾನದಿಂದ, ಪರಮಂ - ಉತ್ಕೃಷ್ಟವಾದ, ದರ್ಪಂ-ಕೊಬ್ಬನ್ನು, ಆಸ್ಥಿತೌ - ಹೊಂದಿರುವರು, ಅಮೃತಪ್ರಾಶಿನೌ - ಅಮೃತಪಾನಮಾಡಿದವರು, (ಅದರಿಂದಲೇ) ವಾನರೋತ್ತಮೌ - ವಾನರಾಗ್ರಗಣ್ಯರೆನಿಸಿರುವರು ॥೧೮॥

ಸಾಲದೆ ! ಅತಿಸುಸಮರ್ಥನಾಗಿದ್ದಾನೆ ॥೧೪॥ ಈ ಪಿವಿನಸನ ಪನಸನೀಲರ ಪ್ರಮದ ಊರುವೆಯಿಂದ ಮಂದರಪರ್ವತವಾದರೂ ಪುಡಿಪುಡಿಯಾಗುವುದು. ಕಾಳಗದಲ್ಲಿ ನಿಶಾಚರರು ಚೂರ್ಣವಾಗಲು ಅಡ್ಡಿಯೇನು ? ॥೧೫॥ ದೇವತೆಗಳಲ್ಲಾಗಲಿ, ಅಸುರರಲ್ಲಾಗಲಿ, ಗಂಧರ್ವರಲ್ಲಾಗಲಿ, ನಾಗರಲ್ಲಾಗಲಿ, ಪಕ್ಷಿವಿಶೇಷಗಳಲ್ಲಾಗಲೀ ಯಾವಾದರೊಬ್ಬರಣದಲ್ಲಿ ಈ ಮೈಂದನನ್ನು ಇದಿರಿಸಿ ಯುದ್ಧಮಾಡುವವನನ್ನೇ ಕಾಣೆನು,ನಿಮಗೇನಾದರೂ ತಿಳಿದಿದ್ದರೆ ಹೇಳಿರಿ ॥೧೬॥ ಅಶ್ವಿನೀ ದೇವತೆಗಳಿಗೆ ಪುತ್ರರೆನಿಸಿ, ಮಹಾ ಬಲಪರಾಕ್ರಮ ಸಂಪನ್ನರಾಗಿರುವ ಮಹಾತ್ಮರಾದ ಈ ಕಪಿ ಪುಂಗವರಿಗೆ ಆಯೋಧನದಲ್ಲಿ ಇದಿರಿಗೆ ನಿಲ್ಲುವವರು ಯಾರಾದರು ಇದಾರಯೆ ? ಸರ್ವಾತ್ಮನಾ ಇಲ್ಲವು ॥೧೭॥ ಇವರಿಗೆ ಸರ್ವಲೋಕ ಪಿತಾಮಹನೆನಿಸಿರುವ ಬ್ರಹ್ಮದೇವನವರವುಂಟು, ಅದರಿಂದಿವರು ಪ್ರಬಲವಾದ ದರ್ಪವನ್ನು ಹೊಂದಿ ಇದಾರೆ, ಮತ್ತು-ಇವರು ಅಮೃತಪಾನವನ್ನು ಮಾಡಿದವರು, ಅಲ್ಲದೆ ಸರ್ವವಾನರರಲ್ಲಿಯೂ ಅಗ್ರ

ಅಶ್ವಿನೋರ್ಮಾನನಾರ್ಥಂ ಹಿ ಸರ್ವಲೋಕಪಿತಾಮಹಃ ।
ಸರ್ವಾವಧ್ಯತ್ವಮತುಲಮನಯೋರ್ದತ್ತವಾನ್ಪುರಾ ॥೧೯॥
ವರೋತ್ಸೇಕೇನ ಮತ್ತೌ ಚ ಪ್ರಮಥ್ಯ ಮಹತೀಂ ಚಮೂಂ ।
ಸುರಾಣಾಮಮೃತಂ ವೀರೌ ಪೀತವನ್ತೌ ಪ್ಲವಂಗಮೌ ॥೨೦॥
ಏತಾವೇವ ಹಿ ಸಂಕ್ರುದ್ಧೌ ಸವಾಜಿರಥಕುಂಜರಾಂ ।
ಲಂಕಾಂ ನಾಶಯಿತುಂ ಶಕ್ತೌ ಸರ್ವೇ ತಿಷ್ಠಂತು ವಾನರಾಃ ॥೨೧॥
ಮಯೈವ ನಿಹತಾ ಲಂಕಾ ದಗ್ಧಾ ಭಸ್ಮೀಕೃತಾ ಪುನಃ ।

ಸರ್ವಲೋಕಪಿತಾಮಹಃ - ಎಲ್ಲಾ ಜನರಿಗೂ ತಾತನೆನಿಸಿರುವ ಬ್ರಹ್ಮನು, ಪುರಾ - ಪೂರ್ವದಲ್ಲಿ, ಅನಯೋಃ - ಈ ಮೈಂದದ್ವಿವಿದರಿಗೆ, ಅಶ್ವಿನೋಃ - ಅಶ್ವಿನೀದೇವತೆಗಳ, ಮಾನನಾರ್ಥಂ - ಮರ್ಯಾದೆಗೋಸ್ಕರ, ಅತುಲಂ - ಅಸಮಾನವೆನಿಸಿದ, ಸರ್ವಾವಧ್ಯತ್ವಂ - ಯಾರಿಂದಲೂ ಸಾವಿಲ್ಲದಿರೋಣವನ್ನು, ದತ್ತವಾನ್, ಕೊಟ್ಟವನಾಗಿದಾನೆ ॥೧೯॥ ( ಕಿಂಚ - ಮತ್ತು ) ವೀರೌ - ಶೂರರೆನಿಸಿರುವ, ಪ್ಲವಂಗಮೌ - ವಾನರರು ವರೋತ್ಸೇಕೇನ - ವರದಾನದ ಕೊಬ್ಬಿನಿಂದ, ಮತ್ತೌ - ಮದಿಸಿದವರಾಗಿ, (ರಿಪೂಣಾಂ - ಶತ್ರುಗಳ) ಮಹತೀಂ - ದೊಡ್ಡದಾದ, ಚಮೂಂ ಸೇನೆಯನ್ನು, ಪ್ರಮಥ್ಯ ಮಥಿಸಿ, ಸುರಾಣಾಂ - ದೇವತೆಗಳ, ಅಮೃತಂ - ಅಮೃತವನ್ನು, ಪೀತವನ್ತೌ - ಪಾನ ಮಾಡಿದವರಾಗಿದಾರೆ ॥೨೦॥ ಸರ್ವೇ - ಸಮಸ್ತರಾದ, ವಾನರಾಃ - ಕಪಿಗಳೂ, ತಿಷ್ಠಂತು - ಇರಲಿ, ಏತಾವೇವಹಿ - ಈ ಮೈಂದದ್ವಿವಿದರೇ, ಸಂಕ್ರುದ್ಧೌ - ಕೋಪಿಸಿಕೊಂಡವರೇ ಆದರೆ, ಸವಾಜಿರಥಕುಂಜರಾಂ-ಕುದುರೆ,ತೇರು, ಆನೆ ಇವುಗಳಿಂದ ಸಹಿತವಾದ, ಲಂಕಾಂ ಲಂಕಾನಗರವನ್ನು, ನಾಶಯಿತುಂ - ನಾಶಪಡಿಸಲಿಕ್ಕೆ, ಶಕ್ತೌ - ಸಮರ್ಥರಾಗಿದಾರೆ ॥೨೧॥ ಮಯೈವ-ನನ್ನಿಂದಲೇ, ಲಂಕಾ - ಲಂಕಾಧಿದೇವಿಯು ನಿಹತಾ-ಹೊಡೆಯಲ್ಪಟ್ಟಳು. ಪುನಃ - ಮತ್ತೆ, (ಲಂಕಾ - ಲಂಕಾನಗರಿಯೂ), ದಗ್ಧಾ - ಸುಡಲ್ಪಟ್ಟದ್ದಾಗಿ, ಭಸ್ಮೀಕೃತಾ - ಬೂದಿಮಾಡಲ್ಪಟ್ಟಿತು, ಮಯಾ

ಗ್ರಣ್ಯರೆನಿಸಿರುವರು ॥೧೮॥ ಎಲೈ ವಾನರೋತ್ತಮರುಗಳಿರಾ ! ಸರ್ವಲೋಕ ಸೃಷ್ಟಿ ಕರ್ತನಾದ ಬ್ರಹ್ಮನು-ಪೂರ್ವದಲ್ಲಿ ತನಗೆ ಅಶ್ವಿನೀದೇವತೆಗಳಲ್ಲಿರುವ ಗೌರವದಿಂದ ಅವರ ಮಕ್ಕಳಾದ ಈ ಮೈಂದದ್ವಿವಿದರಿಗೆ ಯಾರಿಂದಲೂ ಸಾವಿಲ್ಲದಂತೆ ಅಸದೃಶವಾದವ ರವನ್ನು ಕೊಟ್ಟಿದಾನೆ ॥೧೯॥ ವೀರ್ಯವಂತರಾದ ಈ ವಾನರರಿಬ್ಬರೂ ಬ್ರಹ್ಮನ ವರ ದಿಂದ ಮಹಾ ಬಲಿಷ್ಠರಾಗಿ, ದೇವತೆಗಳ ಮಹತ್ತರವಾದ ಸೇನೆಯನ್ನು ಜಯಿಸಿ, ದೇವತೆಗಳಿಂದ ಮರ್ಯಾದೆಯನ್ನು ಹೊಂದಿ, ಅವರುಕೊಟ್ಟ ಅಮೃತವನ್ನು ಪಾನಮಾಡಿ ದವರಾಗಿದಾರೆ, ॥೨೦॥ ಇಂತಹ ಮಹಾವೀರರು ಕ್ರೋಧಪರವಶರಾಗಿ ಯುದ್ಧಕ್ಕೆ ನಿಂತರೆ, ಆನೆ ಕುದುರೆ ತೇರು ಕಾಲಾಳುಗಳಿಂದೊಡಗೂಡಿದ ಲಂಕೆಯನ್ನು ನಾಶಪಡಿಸಲು ಸಮ ರ್ಥರಾಗಿದಾರೆ, ಇವರಿಗೆ ಮತ್ತೆ ಯಾವ ಕಪಿಗಳ ಸಹಾಯವೂ ಬೇಕಾಗಿಲ್ಲ ॥೨೧॥ ನಾನು ಅಲ್ಲಿಗೆ ಹೋಗಿದ್ದ ವೇಳೆಯಲ್ಲಿ ಬಹಳಮಟ್ಟಿಗೆ ರಾಕ್ಷಸ ವೀರರನ್ನು ಸಂಹರಿಸಿ ಇದೇನೆ, ಮತ್ತು- ಲಂಕಾನಗರಿಯನ್ನು ಸುಟ್ಟು ಬೂದಿ ಮಾಡಿದೇನೆ, ಅಲ್ಲದೆ ದೊಡ್ಡ ದೊಡ್ಡ ರಾಜಮಾರ್ಗಗಳಲ್ಲೆಲ್ಲ ನಮ್ಮ ಪ್ರಭುಗಳ ಹೆಸರು ವಾಸಿಯನ್ನು ಹೊಗಳಿದೇನೆ

ರಾಕ್ಷಸೀಭಿ ರ್ವಿರೂಪಾಭಿ ರ್ದೃಷ್ಟಾ ಹಿ ಪ್ರಮದಾ ವನೇ ॥೩೦॥
ಏಕವೇಣೀ ಧರಾ ದೀನಾ ಭರ್ತೃಚಿಂತಾ ಪರಾಯಣಾ ।
ಅಧಶ್ಶಯ್ಯಾ ವಿವರ್ಣಾಂಗೀ ಪದ್ಮಿನೀವ ಹಿಮಾಗಮೇ ॥೩೧॥
ರಾವಣಾ ದ್ವಿನಿವೃತ್ತಾರ್ಥಾ ಮರ್ತವ್ಯ ಕೃತನಿಶ್ಚಯಾ ।
ಕಥಂಚಿ ನ್ಮೃಗಶಾಬಾಕ್ಷೀ ವಿಶ್ವಾಸ ಮುಪಪಾದಿತಾ ॥೩೨॥
ತತ ಸ್ಸಂಭಾಷಿತಾ ಚೈವ ಸರ್ವಮರ್ಥಂಚ ದರ್ಶಿತಾ ।
ರಾಮ ಸುಗ್ರೀವ ಸಖ್ಯಂ ಚ ಶ್ರುತ್ವಾ ಪ್ರೀತಿ ಮುಪಾಗತಾ ॥೩೩॥

---

ರಕ್ಕಸಿಯರಿಂದ, ಮುಹುರ್ಮುಹುಃ - ಅಡಿಗಡಿಗೂ, ತರ್ಜ್ಯಮಾನಾ - ಬೆದರಿಸಲ್ಪಟ್ಟಿರುವ, ಸಾ - ಆ ಸೀತಾದೇವಿಯು, ಮಯಾ - ನನ್ನಿಂದ, ದೃಷ್ಟಾ - ನೋಡಲ್ಪಟ್ಟಳು ॥೩೦॥ ಏಕವೇಣೀಧರಾ - ಒಂದೇ ಎಳೆಯ ಜಡೆಯನ್ನು ಧರಿಸಿದವಳೆ, ದೀನಾ - ಉತ್ಸಾಹವಿಲ್ಲದವಳಾಗಿದ್ದಾಳೆ, ಭರ್ತೃಚಿಂತಾಪರಾಯಣಾ - ಪತಿಸ್ಮರಣೆಯೇ ಮುಖ್ಯವಾದವನಾಗಿರುವಳು, ಅಧಶ್ಶಯ್ಯಾ - ನೆಲವೇ ಹಾಸಿಗೆಯಾಗಿದ್ದಾಳೆ, (ಅದರಿಂದಲೇ) ಹಿಮಾಗಮೇ - ಹಿಮಗಾಲದಲ್ಲಿ, ಪದ್ಮಿನೀವ - ತಾವರೆಯಬಳ್ಳಿಯ ಹಾಗೆ, ವಿವರ್ಣಾಂಗೀ - ಕಾಂತಿಹೀನವಾದ ಶರೀರವುಳ್ಳವಳಾಗಿರುವಳು ॥೩೧॥ ರಾವಣಾತ್ - ರಾವಣನಿಂದ, ವಿನಿವೃತ್ತಾರ್ಥಾ - ವಿಮುಖವಾದ ಕೋರಿಕೆಯುಳ್ಳವಳಾಗಿದ್ದಾಳೆ (ಅದರಿಂದಲೇ) ಮರ್ತವ್ಯಕೃತನಿಶ್ಚಯಾ - ಮರಣದಲ್ಲಿ ಮನಸ್ಸನ್ನಿಟ್ಟಿದ್ದಾಳೆ, ಮೃಗಶಾಬಾಕ್ಷೀ - ಜಿಂಕೆಯ ಮರಿಯ ಕಣ್ಣುಗಳುಳ್ಳ, (ಸಾ - ಆ ಸೀತೆಯು, ಮಯಾ ನನ್ನಿಂದ,) ಕಥಂಚಿತ್ - ಬಹುಕಷ್ಟದಿಂದ, ವಿಶ್ವಾಸಂ - ನಂಬುಗೆಯನ್ನು, ಉಪಪಾದಿತಾ - ಹೊಂದಿಸಲ್ಪಟ್ಟಳು, ॥೩೨॥ ತತಃ - ಆ ಮೇಲೆ, ಸಂಭಾಷಿತಾಚ - ಮಾತನಾಡಿಸಲ್ಪಟ್ಟಳು, ಸರ್ವಂ - ಸಮಸ್ತವಾದ, ಅರ್ಥಂಚ - ರಾಮನು ಹೇಳಿಕಳುಹಿಸಿದ್ದ ಸಂಗತಿಯನ್ನೂ, ದರ್ಶಿತಾ - ತಿಳಿಸಲ್ಪಟ್ಟಳು, ರಾಮಸುಗ್ರೀವ ಸಖ್ಯಂಚ - ರಾಮ ಸುಗ್ರೀವರ ಸ್ನೇಹವನ್ನೂ, ಶ್ರುತ್ವಾ - ಕೇಳಿ, ಪ್ರೀತಿಂ - - ಉಪಾಗತಾ - ಹೊಂದಿದಳು ॥೩೩॥

---

ಸಿಯುವ ನಡುವೆ ಕಂಡೆನು, ಆ ಸೀಚರಾದ ಹೆಂಗಸರು ಆ ಸಾಧ್ವಿಯನ್ನು ಬಹುವಾಗಿ ಹಿಂಸಿಸುತಲಿದ್ದಾರೆ, ಆ ನಿಶಾಚರಾಂಗನೆಯರ ರೂಪವೇ ಬಹು ವಿಕಾರವಾದುದು ॥೩೦॥ ಇಂತವರ ನಡುವೆ - ಒಂದೆಳೆಯ ಜಡೆಯನ್ನು ಧರಿಸಿ, ಬಹುದೀನಳಾಗಿ, ಅನವರತವೂ ಪತಿಯನ್ನೇ ನೆನೆಯುತ್ತ, ನೆಲದ ಮೇಲೆಯೇ ಕುಳಿತು, ಧೂಳಿನ ಮುಖಿಯಾಗಿ, ಅವಯವಗಳೆಲ್ಲ ಬಾಡಿಹೋಗಿರುವುದರಿಂದ ಹಿಮಋತುವಿನಲ್ಲಿ ತಾವರೆಯ ಬಳ್ಳಿಯು ಹೇಗೋ ಹಾಗೆ, ಬಹು ಶೋಚನೀಯಳಾಗಿರುವಳು ॥೩೧॥ ದುರಾತ್ಮನಾದ ರಾವಣನನ್ನು ಸ್ಮರಿಸದೆ ಸಾಯಲೇಬೇಕೆಂದು ಸರ್ವಪ್ರಕಾರದಿಂದಲೂ ನಿಶ್ಚಯಮಾಡಿಕೊಂಡಿರುವಳು, ಆದರೂ ಹುಲ್ಲೆಯ ಕರುವಿನಂತೆ ಕಣ್ಣುಳ್ಳ ಆ ಜಾನಕಿಯನ್ನು ಬಹುಕಷ್ಟಪಟ್ಟು ದರ್ಶನಮಾಡಿದೆನು, ಆದರೂ, ನಾನು ರಾಮದೂತನೆಂದೂ, ಆತನ ಸಂದೇಶಹರನಾಗಿ ಬಂದಿರುವೆನೆಂದೂ ಬಹು ಪ್ರಯಾಸದಿಂದ ನಂಬಿಕೆಯನ್ನುಂಟುಮಾಡಿದೆನು ॥೩೨॥ ಆ ಮೇಲೆ ಕುಶಲ ಪ್ರಶ್ನೆಯೇ ಮೊದಲಾದ ಸಂಭಾಷಣೆಯನ್ನು ನಡೆಸಿದೆನು, ಎಲ್ಲ ಸಂಗತಿಗಳನ್ನೂ ಅರಿಕೆ ಮಾಡಿದೆನು, ರಾಮ ಸುಗ್ರೀವರಿಗುಂಟಾಗಿರುವ ಸಖ್ಯವನ್ನೂ ಬಿನ್ನವಿಸಿದೆನು, ಇಷ್ಟಾದ ಮೇಲೆ ಆ ಮಹಾನುಭಾವಳು ಬಹುತರವಾದ ಪ್ರೀತಿಯನ್ನು ಹೊಂದಿದಳು ॥೩೩॥ ದೃಢತರವಾದ ಆಕೆಯ ಪಾತಿವ್ರತ್ಯವೂ,

ನಿಯತ ಸ್ಸಮುದಾಚಾರೋ ಭಕ್ತೋ ಭರ್ತರಿ ಚೋತ್ತಮಾ ॥
ಯನ್ನಹಂತಿ ದಶಗ್ರೀವಂ ಸ ಮಹಾತ್ಮಾ ಕೃತಾಗಸಮ್ ।
ನಿಮಿತ್ತಮಾತ್ರಂ ರಾಮಸ್ತು ವಧೆ ತಸ್ಯ ಭವಿಷ್ಯತಿ॥೨೪॥ ॥
ಸಾ ಪ್ರಕೃತ್ಯೈವ ತನ್ವಂಗೀ ತ ದ್ವಿಯೋಗಾಚ್ಚ ಕರ್ಶಿತಾ ।
ಪ್ರತಿಪತ್ಪಾಠ ಶೀಲಸ್ಯ ವಿದ್ಯೇವ ತನುತಾಂ ಗತಾ ॥॥೨೫॥॥
ಏವ ಮಾಸ್ತೇ ಮಹಾಭಾಗಾ ಸೀತಾಶೋಕಪರಾಯಣಾ ;

---

(ಅಸ್ಯಾಃ - ಈ ಸೀತಾದೇವಿಯ, ನಿಯತಃ - ದೃಢವಾದ, ಸಮುದಾಚಾರಃ ಪಾತಿವ್ರತ್ಯವು, ಭರ್ತರಿ- ಪತಿಯಲ್ಲಿ, ಉತ್ತಮಾ- ಶ್ರೇಷ್ಠವೆನಿಸಿರುವ, ಭಕ್ತಿಶ್ಚ - ಭಕ್ತಿಯೂ, (ಇತ್ಯೇತದ್ದ್ವಯಂ-ಈ ಎರಡೂ) ಕೃತಾಗಸಂ - ಮಾಡಲ್ಪಟ್ಟ ತಪ್ಪುಳ್ಳ, ದಶಗ್ರೀವಂ - ರಾವಣನನ್ನು, ಯತ್-ಯಾವಕಾರಣದಿಂದ, ನಹಂತಿ- ಕೊಲ್ಲದಿರುವುದೋ, ತತ್ - ಆಕಾರಣದಿಂದಲೇ, ಸಃ - ಆ ರಾವಣನು, ಮಹಾತ್ಮಾ - ಹೇರಳವಾದ ತಪಸ್ಸಿನ ಮಹಿಮೆಯುಳ್ಳವನೆಂದು (ಜ್ಞಾತವ್ಯಃ - ತಿಳಿಯಲ್ಪಡತಕ್ಕವನಾಗಿದ್ದಾನೆ) ತರ್ಹಿ-ಆದರೆ, ರಾಮಸ್ತು - ರಾಮನಾದರೋ, ತಸ್ಯ - ಆರಾವಣನ, ವಧೇ - ಸಂಹಾರದಲ್ಲಿಯಾದರೋ, (ಕರ್ತೃ-ಕರ್ತೃವು) ಭವಿಷ್ಯತಿ - ಆಗುವನು, (ಸೀತಾ ತು-ಸೀತೆಯಾದರೋ) ನಿಮಿತ್ತ ಮಾತ್ರಂ - ಅವನ ಕೊಲೆಗೆ ಸಾಮಾನ್ಯಕಾರಣಳಾದವಳು ಮಾತ್ರವೇ (ಭವತಿ - ಆಗುತ್ತಾಳೆ)॥೨೪, ೨೪॥ ಪ್ರಕೃತ್ಯೈವ - ಸ್ವಭಾವದಿಂದಲೇ, ತನ್ವಂಗೀ - ಕೃಶಾಂಗಿಯಾಗಿರುವವಳು, ತದ್ವಿಯೋಗಾತ್ - ಆ ರಾಮನ ಅಗಲಿಕೆಯಿಂದ, ಕರ್ಶಿತಾಚ - ನವೆದು [illegible] ಪ್ರತಿಪತ್ಪಾಠ ಶೀಲಸ್ಯ ಪಾಡ್ಯಮಿಯಲ್ಲಿ ಓದುವ ಸ್ವಭಾವವುಳ್ಳ [illegible] ಗತಾ-ಹೊಂದಿದಾಳೆ ॥೨೫॥ [illegible] ಏವಂ-ಈ ಪ್ರಕಾರವಾಗಿ, ಶೋಕಪರಾಯಣಾ - [illegible] ಆಸ್ತೇ-ಇದಾಳೆ, ಅತ್ರ - ಈ ಕಾರ್ಯವಿಷಯದಲ್ಲಿ, [illegible] ಮಾಡಬೇಕಾಗಿರುವುದೋ

---

ಪ್ತಿಯಲ್ಲಿ ನೆಲೆಗೊಂಡಿರುವ ಭಕ್ತಿ [illegible] ಮಹಾಪರಾಧಿಯಾಗಿದ್ದರೂ ಆಕೆಯು ತಪೋಗ್ನಿಯು [illegible] ಭಸ್ಮವನ್ನಾಗಿ ಮಾಡದಿರುವುದನ್ನು ನೋಡಿದರೆ, ಅವನೂ ಮಹಾತಪಃ ಫಲವುಳ್ಳವನಾಗಿದ್ದಾನೆ ಎಂದೇ ಹೇಳಬೇಕಾಗಿದೆ, ಆದರೂ ಆ ಖೂಳನನ್ನು ಸಂಹರಿಸಲಿಕ್ಕೆ ರಾಮನೇ ಕಾರಣನಾಗಬೇಕಾಗಿರುವುದು ॥೨೪ ೨೪॥ ಆ ಸತೀ ಶಿರೋಮಣಿ ಯಾದ ಸೀತೆಯಾದರ ಸ್ವಭಾವದಿಂದಲೇ ಕೃಶಾಂಗಿಯಾಗಿರುವಳು, ಇದರ ಮೇಲೆ ರಾಮನ ಅಗಲಿಕೆಯಿಂದ ನವೆದು ಹೋಗಿದಾಳೆ. ಇದರಿಂದಲೆ ಪಾಡ್ಯಮಿಯಲ್ಲಿ ವಿದ್ಯೆಯನ್ನು ಪಾಠಮಾಡುವವನ ವಿದ್ಯೆಯು ಕೃಶವಾಗುವ ಹಾಗೆ ಬಡತನವನ್ನು ಹೊಂದಿರುವಳೆಂದು ಹೇಳಬಹುದಾಗಿದೆ ॥೨೫॥ ಮಹಾಪುಣ್ಯಾತ್ಮಳಾದ ಜಾನಕಿಯು ಬಹುಶೋಕಪರವಶಳಾಗಿ ಇಂತಹ ಕಷ್ಟದಶೆಯಲ್ಲಿರುವಳು, ಈ ಸಂದರ್ಭದಲ್ಲಿ ಮುಂದೇನಮಾಡಬೇಕೋ

ಯದತ್ರ ಪ್ರತಿಕರ್ತವ್ಯಂ ತತ್ಸರ್ವಂ ಪ್ರತಿಪದ್ಯತಾಮ್ ॥೩೬॥

ಇತಿ ಶ್ರೀಮತ್ಸುಂದರಕಾಂಡೆ-ಏಕೋನ ಷಷ್ಠಿತಮಸ್ಸರ್ಗಃ

ತತ್ ಸರ್ವಂ-ಅದೆಲ್ಲವೂ, (ಯುಷ್ಮಾಭಿಃ- ನಿಮ್ಮಗಳಿಂದ) ಉಪಪ್ರತ್ಯತಾಂ ನೆಟ್ಟಗೆ ಮಾಡಲ್ಪಡಲಿ॥೩೬॥

— ಇಂತು ಐವತ್ತೊಂಭತ್ತನೆಯ ಸರ್ಗಂ —

ಅದೆಲ್ಲ ನೀವೇಸರಿ ಮಾಡಿ ನೆರವೇರಿಸ ಬೇಕಾಗಿದೆ, ಎಂದು ಹೇಳಿ ವಿರಮಿಸಿದನು ॥೩೬॥

— ಇಂತು ಐವತ್ತೊಂಭತ್ತನೆಯ ಸರ್ಗಂ —

ಶ್ರೀ.

ಶ್ರೀರಾಮ ಚನ್ದ್ರ ಪರಬ್ರಹ್ಮಣೇನಮಃ

## ಶ್ರೀಮತ್ಸುನ್ದರ ಕಾಣ್ಡೇ ಷಷ್ಠಿತಮಸ್ಸರ್ಗಃ

ತಸ್ಯ ತದ್ವಚನಂ ಶ್ರುತ್ವಾ ವಾಲಿಸೂನು ರಭಾಷತ ।
ಅಯುಕ್ತಂ ತು ವಿನಾ ದೇವೀಂ ದೃಷ್ಟವದ್ಭಿಶ್ಚ ವಾನರಾಃ ॥೧॥
ಸಮೀಪಂ ಗಂತುಮಸ್ಮಾಭೀ ರಾಘವಸ್ಯ ಮಹಾತ್ಮನಃ ।
ದೃಷ್ಟ್ವಾ ದೇವೀ ನಚಾನೀತಾ ಇತಿ ತತ್ರ ನಿವೇದನಂ ।
ಅಯುಕ್ತಮಿವ ಪಶ್ಯಾಮಿ ಭವದ್ಭಿಃ ಖ್ಯಾತವಿಕ್ರಮೈಃ ॥೨॥

— ಅರವತ್ತನೆಯ ಸರ್ಗ —

ಕಂದ—ಹರಿವರ ವಚನವ ನಾಲಿಸಿ । ಹರಿಗಳ್ ತಾಂ ಸೀತೆಯಿಂಬಿ ಪೋಪುದೆ ಸರಿಯೆನೆ ।
ಹರಿನಾಯಕ ಜಾಂಬವನಾ । ಸಿರಿರಾಮನ ಮತಿಯನರಿತು ನಡೆಯಿರಿ ಯೆಂದಂ ॥

ವಾಲಿಸೂನುಃ - ವಾಲಿಪುತ್ರನಾದ ಅಂಗದನು, ತಸ್ಯ - ಆ ಹನುಮಂತನ, ತತ್- ಆ, ವಚನಂ- ಮಾತನ್ನು, ಶ್ರುತ್ವಾ - ಕೇಳಿ, ಹೇ ವಾನರಾಃ - ಎಲೈ ಕಪಿಗಳಿರಾ ! ದೃಷ್ಟವದ್ಭಿಃ-ಸೀತೆಯನ್ನು ನೋಡಿರುವ, ಅಸ್ಮಾಭಿಃ - ನಮ್ಮಗಳಿಂದ, ಮಹಾತ್ಮನಃ - ಮಹಾನುಭಾವನಾದ, ರಾಘವಸ್ಯ - ಶ್ರೀರಾಮನ, ಸಮೀಪಂ – ಸನ್ನಿಧಾನವನ್ನು ಕುರಿತು, ದೇವೀಂವಿನಾ- ಸೀತಾದೇವಿಯನ್ನು ಬಿಟ್ಟು, ಗಂತುಂ -ಹೋಗಲಿಕ್ಕೆ, ಅಯುಕ್ತಂ - ಯುಕ್ತವಲ್ಲ, ॥೧॥ ದೇವೀ - ಸೀತಾದೇವಿಯು, ದೃಷ್ಟ್ವಾ - ನೋಡಲ್ಪಟ್ಟಳು

— ಅರುವತ್ತನೆಯ ಸರ್ಗಂ —

ಪ್ರಭಂಜನಾತ್ಮಜನಾದ ಆಂಜನೇಯನು ತನ್ನ ಯಾವ ವೃತ್ತಾಂತವನ್ನೂ ಜಾಂಬವನೇ ಮೊದಲಾದ ವಾನರೋತ್ತಮರಿಗೆ ತಿಳಿಸಿ, ಸೀತೆಯ ಕಷ್ಟದಶೆಯನ್ನು ವಿವರಿಸಿ, ಕಪಿವೀರರ ಪರಾಕ್ರಮವನ್ನು ಹೊಗಳಿ, ಸೀತೆಯನ್ನು ಬಿಟ್ಟು ನಾವುಗಳು ಮಾತ್ರವೇ ಹೋಗಿ, ರಾಮಲಕ್ಷ್ಮಣರನ್ನು ನೋಡುವುದು ಸಂಗತವಲ್ಲವೆಂದು ಸೂಚಿಸಿದುದನ್ನು ಕೇಳಿ, ಯುವರಾಜನಾದ ಅಂಗದನು-ವಾನರರನ್ನು ನೋಡಿ, ಎಲೈ ಕಪಿವೀರರುಗಳಿರಾ ! ನಾವುಗಳು ಸೀತೆಯನ್ನು ಕಂಡೂ, ಆಕೆಯಿಲ್ಲದೆಯೇ ಶ್ರೀರಾಮ ಸನ್ನಿಧಿಗೆ ತೆರಳುವುದು ಅಯುಕ್ತವಾಗಿ

ನ ಹಿ ನಃ ಪ್ಲವನೇ ಕಶ್ಚಿ ನ್ನಾಪಿ ಕಶ್ಚಿ ತ್ಪರಾಕ್ರಮೇ ।
ತುಲ್ಯಃ ಸ್ಸಾಮರ ದೈತ್ಯೇಷು ಲೋಕೇಷು ಹರಿಸತ್ತಮಾಃ ॥೩॥ ॥
ತೇಷ್ವೇವಂ ಹತವೀರೇಷು ರಾಕ್ಷಸೇಷು ಹನೂಮತಾ ।
ಕಿಮನ್ಯ ದತ್ರ ಕರ್ತವ್ಯಂ ಗೃಹೀತ್ವಾ ಯಾಮ ಜಾನಕೀಂ ॥೪॥ ॥
ತಮೇವಂ ಕೃತ ಸಂಕಲ್ಪಂ ಜಾಂಬವಾನ್ ಹರಿಸತ್ತಮಃ ।

---

ತು - ಆದರೆ, ನಚಾನೀತಾ - ತರಲ್ಪಡಲಿಲ್ಲ, ಇತಿ - ಹೀಗೆಂದು, ತತ್ರ - ಆ ರಾಮ ಸನ್ನಿಧಿಯಲ್ಲಿ, ಖ್ಯಾತವಿಕ್ರಮೈಃ - ಹೆಸರುವಾಸಿಯನ್ನು ಪಡೆದ ಪರಾಕ್ರಮವುಳ್ಳ ಭವದ್ಭಿಃ - ನಿಮ್ಮಗಳಿಂದ, ನಿವೇದನಂಚ-ತಿಳಿಸೋಣವೂ, ಅಯುಕ್ತಮಿವ - ಅನುಚಿತವೆಂದೇ, ಪಶ್ಯಾಮಿ -ಭಾವಿಸುತ್ತೇನೆ, ಹರಿಸತ್ತಮಾಃ - ಎಲೈ ಕಪಿವೀರರುಗಳಿರಾ ! ಸಾಮರದೈತ್ಯೇಷು- ದೇವಾಸುರರು ಮೊದಲಾದವರುಳ್ಳ, ಲೋಕೇಷು-ಲೋಕಗಳಲ್ಲಿ, ಕಶ್ಚಿತ್ - ಯಾವನಾದರೂ, ಪ್ಲವನೇ-ಹಾರುವುದರಲ್ಲಿಯೂ, ನಃ-ನಮಗೆ, ತುಲ್ಯಃ-ಸಮನೆನಿಸಿದವನು, ನ-ಇಲ್ಲ, ಪರಾಕ್ರಮೇಽಪಿ - ಶೌರ್ಯದಲ್ಲಿಯೂ, ಕಶ್ಚಿತ್ - ಯಾವನೂ, ನಹಿ - ಇಲ್ಲವಲ್ಲ ? ॥ ೩॥ ॥ ತೇಷು - ಆ, ರಾಕ್ಷಸೇಷು - ರಕ್ಕಸರು, ಹನೂಮತಾ- ಆಂಜನೇಯನಿಂದ, ಹತವೀರೇಷು (ಸತ್ಸು) ಕೊಲ್ಲಲ್ಪಟ್ಟ ವೀರರುಳ್ಳವರಾಗುತ್ತಿರಲಾಗಿ, ಅತ್ರ-ಈ ಲಂಕೆಯಲ್ಲಿ, ಕರ್ತವ್ಯಂ - ಮಾಡತಕ್ಕುದಾಗಿರುವ, ಅನ್ಯತ್ - ಬೇರೆ ಕೆಲಸವು, ಕಿಂ - ಯಾವುದು, ಅಸ್ತಿ-ಉಂಟು ? ಜಾನಕೀಂ - ಸೀತೆಯನ್ನು, ಗೃಹೀತ್ವಾ - ಕರೆದುಕೊಂಡು, ಯಾಮ - ಹೋಗೋಣ, (ಇತಿ - ಹೀಗೆಂದ) ವಾನರಾನ್-ಕಪಿಗಳನ್ನು ಕುರಿತು, ಅಭಾಷತ-ಹೇಳಿದನು ॥೪॥ ॥ ಅರ್ಥವಿತ್ - ಕಾರ್ಯಜ್ಞನಾದ, ಹರಿಸತ್ತಮಃ - ಕಪಿಗಳಿಗೆಲ್ಲ ಯಜಮಾನನಾಗಿರುವ, ಜಾಂಬವಾನ್-ಜಾಂಬವಂತನು, ಪರಮಪ್ರೀತಃ-ವಿಶೇಷವಾಗಿ ಸಂತೋಷಿಸುವವನಾಗುತ್ತಾ, ಏವಂ - ಈ ಮುಂದೆ ಹೇಳುವಂತೆ, ಕೃತಸಂಕಲ್ಪಂ-ಮಾಡಲ್ಪಟ್ಟ ಯೋಚನೆಯುಳ್ಳ,

---

ತೋರುತಲಿದೆ, ದೇವಾಸುರರೇ ಮೊದಲಾದವರೊಳಗೆ ನಿಮ್ಮಗಳ ಗಮನವೇಗಕ್ಕಾಗಲಿ, ಪರಾಕ್ರಮಾತಿಶಯಕ್ಕಾಗಲಿ ನಮ್ಮೊಡನೆ ಸಮನೆನಿಸಿದ ವೀರನೇ ಇಲ್ಲ. ಇಂತು ಪ್ರಸಿದ್ಧ ಪರಾಕ್ರಮಶಾಲಿಗಳಾದ ನಾವು ರಾಮಸನ್ನಿಧಿಗೆ ಹೋಗಿ, “ಸೀತೆಯನ್ನು ಕಂಡೆವು, ಆದರೆ ಆಕೆಯನ್ನು ಕರೆತರಲಿಲ್ಲ” ಎಂಬದಾಗಿ ಹೇಳೋಣವು ಬಹು ಅನುಚಿತವೆಂದು ಭಾವಿಸುತ್ತೇನೆ ಮತ್ತು-ಈ ವೀರಾಂಜನೇಯನು ಲಂಕೆಗೆ ಹೋಗಿ ಅಲ್ಲಿನ ರಾಕ್ಷಸರೊಳಗೆ ಮುಖ್ಯಮುಖ್ಯರಾದ ವೀರರನ್ನೆಲ್ಲಾ ಸಂಹರಿಸಿಯೇ ಬಂದಿದಾನೆ, ಅಲ್ಲದೆ ಲಂಕೆಯನ್ನು ಸುಡುತ್ತ ಬಂದಿರುವನು. ಇಷ್ಟಾದಮೇಲೆ ನಾವು ಮಾಡಬೇಕಾದ ಕೆಲಸವು ವಿಶೇಷವಾಗಿ ಉಳಿದಿಲ್ಲ. ಅದರಿಂದ ನಾವೆಲ್ಲರೂ ಲಂಕೆಗೆ ಹೋಗಿ ಜಾನಕಿಯನ್ನು ಕರೆತಂದು ರಾಮನ ಸನ್ನಿಧಾನಕ್ಕೆ ಹೋದರೆ, ನಮಗಳಿಗೆಲ್ಲರಿಗೂ ಗೌರವವಾಗಿಯೂ, ಸಂತೋಷಕರವಾಗಿಯೂ ಇರುವುದಲ್ಲವೆ ? ಎಂದನು ॥೧, ೨, ೩, ೪॥ ಆ ಕಪಿಸೇನೆಗೆಲ್ಲ ಯಜಮಾನನಾಗಿರುವ ಜಾಂಬವಂತನು-ಅದನ್ನು ಕೇಳಿ, ಅಯ್ಯಾ ರಾಜಕುಮಾರಾ ! ಯಾವ ಸಮಯದಲ್ಲಿ ಯಾವ ಕಾರ್ಯವನ್ನು ಮಾಡಬೇಕೋ, ಆ ಕಾರ್ಯವನ್ನು ನೀನು ಚೆನ್ನಾಗಿ ಬಲ್ಲೆ. ನೀನು ಹೇಳಿದುದು ಈ ಕಾಲದೇಶಗಳಿಗೆ ತಕ್ಕುದಾಗಿಯೇ ಇದೆ. ನೀನು ಇಷ್ಟು ಉತ್ಸಾಹದಿಂದ ಹೇಳುತ್ತಿರುವುದನ್ನು ಕೇಳಿದರೆ ನನಗೂ ಬಹಳ ಸಂತೋಷವಾಗುತಲಿದೆ, ಆದರೆ-ನಾನೊಂದುಮಾತನ್ನು

ಉವಾಚ ಪರಮ ಪ್ರೀತೋ ವಾಕ್ಯ ಮರ್ಥವ ದರ್ಥವಿತ್ ||೫|| ||
ನ ತಾವ ದೇಷಾ ಮತಿ ರಕ್ಷಮಾ ನೋ ಯಥಾ ಭವಾ ನ್ಪಶ್ಯತಿ ರಾಜಪುತ್ರ |
ಯಥಾ ತು ರಾಮಸ್ಯ ಮತಿ ರ್ನಿವಿಷ್ಟಾ ತಥಾ ಭವಾನ ಶ್ಯತು ಕಾರ್ಯ ಸಿದ್ಧಿಮ್||೬||
ಇತಿ ಶ್ರೀಮತ್ಸುಂದರಕಾಂಡೆ ಷಷ್ಟಿತಮಸ್ಸರ್ಗಃ

ತಂ-ಆ ಅಂಗದನನ್ನು ಕುರಿತು, ಅರ್ಥವತ್-ಪ್ರಶಸ್ತವಾದ ಅರ್ಥವುಳ್ಳ, ವಾಕ್ಯಂ-ವಚನವನ್ನು, ಉವಾಚ-ಹೇಳತೊಡಗಿದನು ||೫|| ಹೇರಾಜಪುತ್ರ-ಎಲೈ ರಾಜಕುಮಾರನೇ !, ಭವಾನ್ - ನೀನು, ಯಥಾ-ಹೇಗೆ, ಪಶ್ಯತಿ - ಆಲೋಚನೆಮಾಡುತ್ತಿರುವೆಯೋ, ಏಷಾ - ಇಂತಹ, ಮತಿಃ - ಆಲೋಚನೆಯು ನಃ-ನಮಗೆ, ತಾವತ್ - ಈಗ, ಅಕ್ಷಮಾ-ತಕ್ಕುದೆನಿಸದುದು, ನ-ಅಲ್ಲವೆ? ತಕ್ಕುದೇ ಹೌದು, (ತಥಾಪಿ-ಹಾಗಾದಾಗ್ಯೂ) ರಾಮಸ್ಯ - ರಾಮನಿಗೆ, ಯಥಾ - ಹೇಗೆ, ಮತಿಃ - ಸಮ್ಮತಿಯು, ನಿವಿಷ್ಟಾ - ನೆಲೆಗೊಂಡಿರುವುದೋ, ತಥಾ - ಹಾಗೆ, ಭವಾನ್ - ನೀನು, ಕಾರ್ಯಸಿದ್ಧಿಂ - ಕೆಲಸವು ಕೈಸೇರುವುದನ್ನು, ಪಶ್ಯತು - ಆಲೋಚಿಸು || ೬|| ||

— ಇಂತು ಅರವತ್ತನೆಯ ಸರ್ಗಂ —

ಹೇಳುತ್ತೇನೆ, ನನ್ನನ್ನು ಮುದುಕನೆಂದು ತಿರಸ್ಕರಿಸದೆ ಆ ನಾನು ಹೇಳುವ ನುಡಿಯು ಯುಕ್ತಿಯುಕ್ತವಾಗಿದ್ದರೆ ಅದನ್ನು ಗ್ರಹಿಸು, ಅದೇನು ಎಂಬೆಯೋ ? ಕೇಳು:—||೫||-|| ನೀನು ಯುವರಾಜನೇ ಹೌದು, ನಿನ್ನ ಯೋಚನೆಯೂ ಚೆನ್ನಾಗಿದೆ, ನಾವೆಲ್ಲ ನೀನು ಹೇಳಿದ ಕಾರ್ಯವನ್ನು ನೆರವೇರಿಸಲು ಸಮರ್ಥರೂ ಆಗಿದೇವೆ. ಆದಾಗ್ಯೂ, ಶ್ರೀರಾಮನ ಅನುಮತಿಯಿಲ್ಲದೆ ನಾವೇ ಸ್ವತಂತ್ರಿಸಿ, ಯಾವುದೊಂದು ಕೆಲಸವನ್ನು ಮಾಡುವುದೂ ಉಚಿತವಲ್ಲ. ಆದಕಾರಣ ಇದುವರೆಗೆ ನಡೆದಿರುವ ಸಂಗತಿಯನ್ನು ಆ ಮಹಾನುಭಾವನಿಗೆ ವಿಜ್ಞಾಪಿಸಿ, ಮುಂದೆ ಆತನ ಆಜ್ಞೆಯು ಹೇಗಾಗುವುದೋ ಹಾಗೆ ನಾವೆಲ್ಲರೂ ನಡೆದುಕೊಳ್ಳಬೇಕಾದುದು ಧರ್ಮವೆಂದು ನನಗೆ ತೋರುತ್ತದೆ, ಇದರಮೇಲೆ ಮಹಾ ಬುದ್ಧಿಶಾಲಿಯಾದ ನೀನುಯಾವ ಬಗೆಯಾದ ಕಾರ್ಯಸಿದ್ಧಿಯು ನ್ಯಾಯವೋ ಅದನ್ನು ಯೋಚಿಸಿ ನಿರ್ಧರಿಸು ಎಂದು ಹೇಳಿ ಸುಮ್ಮನಾದನು ||೬||-||

— ಇಂತು ಅರವತ್ತನೆಯ ಸರ್ಗಂ —

ಶ್ರೀ.

ಶ್ರೀರಾಮ ಚನ್ದ್ರ ಪರಬ್ರಹ್ಮಣೇನಮಃ

# ಶ್ರೀಮತ್ಸುನ್ದರ ಕಾಣ್ಡೇ ಏಕಷಷ್ಠಿತಮ ಸ್ಸರ್ಗಃ



ತತೋ ಜಾಂಬವತೋ ವಾಕ್ಯ ಮಗೃಹ್ಣಂತ ವನೌಕಸಃ ।
ಅಂಗದ ಪ್ರಮುಖಾ ವೀರಾ ಹನುಮಾಂ ಶ್ಚ ಮಹಾ ಕಪಿಃ ॥೧॥
ಪ್ರೀತಿ ಮಂತ ಸ್ತತ ಸ್ಸರ್ವೇ ವಾಯುಪುತ್ರ ಪುರಸ್ಸರಾಃ ।
ಮಹೇಂದ್ರಾ ಽ ದ್ರಿಂ ಪರಿತ್ಯಜ್ಯ ಪುಪ್ಲುವುಃ ಪ್ಲವಗರ್ಷಭಾಃ ॥೨॥

— ಅರುವತ್ತೊಂದನೆಯಸರ್ಗಂ —

ಕಂದ — ಮಧುವನವ ನೈದಿ ಕಪಿಗಳ್ । ಮೈಧು ಸೇವನದಿಂದೆ ಕೊರ್ವಿ ಬನಮಂ ಕಿಡಿಸಲ್ ।
ದಧಿವಕ್ತ್ರಾಭಿಧ ವನಪಂ ।। ಮಧುರೇತರ ವಚನದಿಂದ ಬವರಂ ತಡೆದಂ ॥

ತತಃ - ತರುವಾಯ, ಅಂಗದಪ್ರಮುಖಾಃ - ಅಂಗದನೇಮೊದಲಾಗಿರುವ, ವೀರಾಃ - ಶೂರರಾದ, ವನೌಕಸಹಃ - ವಾನರರು, ಜಾಂಬವತಃ- ಜಾಂಬವಂತನ, ವಾಕ್ಯಂ - ಮಾತನ್ನು, ಅಗೃಹ್ಣಂತ - ಅಂಗೀಕರಿಸಿದರು, ಹನುಮಾನ್ ಚ - ಹನುಮಂತನೂ, ಮಹಾಕಪಿಃ -ವಾನರೋತ್ತಮನೂ, ಅಗೃಹ್ಣತ - ಅಂಗೀಕರಿಸಿದನು, ॥ ೧ ॥ ತತಃ - ಆಹಿಂದೆ, ವಾಯುಪುತ್ರಪುರಸ್ಸರಾಃ - ಹನುಮಂತನೇಮೊದಲಾಗಿರುವ, ಸರ್ವೇ - ಸಮಸ್ತರಾದ, ಪ್ಲವಗರ್ಷಭಾಃ - ವಾನರೋತ್ತಮರು, ಪರಮಪ್ರೀತಾಃ - ಬಹಳವಾಗಿಸಂತೋಷಿಸಿದವರಾಗಿ, ಮಹೇಂದ್ರಾದ್ರಿಂ - ಮಹೇಂದ್ರಪರ್ವತವನ್ನು, ಪರಿತ್ಯಜ್ಯ - ಬಿಟ್ಟು, ಪುಪ್ಲುವುಃ - ಕುಪ್ಪಳಿಸುತ್ತ ಹೊರಟರು ॥ ೨ ॥ ಮೇರುಮಂದರಸಂಕಾಶಾಃ-ಮೇರುಮಂದರಗಿರಿಗಳಿಗೆಣೆಯಾದ,

— ಅರವತ್ತೊಂದನೆಯ ಸರ್ಗಂ —

ಬಳಿಕ ಕಪಿವೃದ್ಧನಾಗಿರುವ ಜಾಂಬವನು ಹೇಳಿದ ಬುದ್ಧಿವಾದವನ್ನು ಅಂಗದನೇಮೊದಲಾದವಾನರರೆಲ್ಲರೂ ಒಪ್ಪಿಕೊಂಡರು, ಮಹಾಬುದ್ಧಿಶಾಲಿಯಾದ ಆಂಜನೇಯನೂ ರಾಮಾಜ್ಞೆಯಂತೆ ನಡೆಯಬೇಕೆಂದಜಾಂಬವನ ನುಡಿಯನ್ನು ಸಂಪೂರ್ಣವಾಗಿ ಸಮ್ಮತಿಸಿದನು ॥೧॥ ಆಹಿಂದೆ - ಕಪಿವೀರಾಗ್ರೇಸರನಾದ ಆಂಜನೇಯನು ಮುಂದೆಹೊರಟನು, ಇತರವಾನರರೆಲ್ಲರೂ ಆತನನ್ನುಹಿಂಬಾಲಿಸಿದರು, ಎಲ್ಲರೂಮಹೇಂದ್ರಪರ್ವತವನ್ನು ಬಿಟ್ಟು ಕೇಕೆಹಾಕುತ್ತಾ, ಸೀತೆಯನ್ನುಕಂಡ ಸಂತೋಷಾತಿಶಯದಿಂದ ಕುಪ್ಪಳಿಸುತ್ತಾ ಹೊರಟರು॥೨॥ಆ ಕಪಿವೀರರಲ್ಲಿ ಒಬ್ಬೊಬ್ಬರೂ ಮೇರುಮಂದರಗಳಂತೆ ತೋರವಾಗಿರುತ್ತಾ,

ಮೇರು ಮಂದರ ಸಂಕಾಶಾ ಮತ್ತಾ ಇವ ಮಹಾಗಜಾಃ ।
ಛಾದಯಂತ ಇವಾ ಕಾಶಂ ಮಹಾ ಕಾಯಾ ಮಹಾ ಬಲಾಃ ॥೩॥
ಸಭಾಜ್ಯ ಮಾನಂ ಭೂತೈ ಸ್ತು ಮಾತ್ಮ ವಂತಂ ಮಹಾಬಲಮ್ ।
ಹನೂ ಮಂತಂ ಮಹಾ ವೇಗಂ ವಹಂತ ಇವ ದೃಷ್ಟಿಭಿಃ ॥೪॥
ರಾಘವೇ ಚಾರ್ಥ ನಿರ್ವೃತ್ತಿಂ ಕರ್ತುಂ ಚ ಪರಮಂ ಯಶಃ ।
ಸಮಾಧಾಯ ಸಮೃದ್ಧಾ ರ್ಥಾಃ ಕರ್ಮಸಿದ್ಧಿ ಭಿ ರುನ್ನತಾಃ ॥೫॥
ಪ್ರಿಯಾ ಖ್ಯಾನೋ ನ್ಮುಖಾ ಸ್ಸರ್ವೇ ಸರ್ವೇ ಯುದ್ಧಾ ಭಿ ನಂದಿನಃ ।
ಸರ್ವೇ ರಾಮ ಪ್ರತೀ ಕಾರೇ ನಿಶ್ಚಿತಾರ್ಥಾ ಮನಸ್ವಿನಃ ॥೬॥

ಮತ್ತಾಃ - ಮದಿಸಿರುವ, ಮಹಾಗಜಾಇವ - ದೊಡ್ಡಆನೆಗಳಂತಿರತಕ್ಕ, ಆಕಾಶಂ - ನಭೋಮಂಡಲವನ್ನು, ಛಾದಯಂತಇವ - ಮುಚ್ಚುತಲಿರುವರೋಎಂಬಂತಿರುವ, ಮಹಾಕಾಯಾಃ - ತೋರವಾದಮೈಗಳುಳ್ಳ, ಮಹಾಬಲಾಃ - ಹೇರಳವಾದಶಕ್ತಿಯುಳ್ಳ, ॥ ೩ ॥ ಭೂತೈಃ - ಸರ್ವಪ್ರಾಣಿಗಳಿಂದಲೂ, ಸಭಾಜ್ಯಮಾನಂ - ಗೌರವಿಸಲ್ಪಡುತ್ತಿರುವ, ಆತ್ಮವಂತಂ - ಧೈರ್ಯಸಂಪನ್ನನಾಗಿರುವ, ಮಹಾಬಲಂ - ಹೆಚ್ಚಿದಶಕ್ತಿಯುಳ್ಳ, ವೇಗವಂತಂ - ಬಹುತರವೇಗವನ್ನೊಳಗೊಂಡಿರುವ, ಹನುಮಂತಂ - ಆಂಜನೇಯನನ್ನು, ದೃಷ್ಟಿಭಿಃ - ನೋಟಗಳಿಂದ, ವಹಂತಇವ (ಸ್ಥಿತಾಃ -) ಹೊತ್ತುಕೊಂಡುಹೋಗುವವರಂತಿರುವ, ॥ ೪ ॥ ರಾಘವೇ - ರಾಮನಲ್ಲಿ, ಅರ್ಥನಿರ್ವೃತ್ತಿಂ - ಕಾರ್ಯಸಿದ್ಧಿಯನ್ನು, ಪರಮಂ - ಉತ್ತಮವಾದ, ಯಶಃ - ಕೀರ್ತಿಯನ್ನು, ಕರ್ತುಂ - ಉಂಟುಮಾಡಲಿಕ್ಕೆ, ಸಮಾಧಾಯ - ನಿಶ್ಚಯಿಸಿ, ಸಮೃದ್ಧಾರ್ಥಾಃ - ಸಿದ್ಧವಾದಕಾರ್ಯವುಳ್ಳವರಾದಕಾರಣವೇ, ಕರ್ಮಸಿದ್ಧಿಭಿಃ - ಕಾರ್ಯಸಿದ್ಧಿಗಳಿಂದ, ಉನ್ನತಾಃ - ಉಬ್ಬಿದವರಾಗಿರುವ, ಸರ್ವೇ - ಸಮಸ್ತವಾನರರೂ, ॥ ೫ ॥ ಪ್ರಿಯಾಖ್ಯಾನೋನ್ಮುಖಾಃ-ಹಿತವಚನವನ್ನು ಹೇಳಲುವ್ಯಕ್ತರಾಗಿ, ಸರ್ವೇ - ಎಲ್ಲರೂ, ಯುದ್ಧಾಭಿನಂದಿನಃ - ಕಾಳಗದಲ್ಲಿಸಂತೋಷವುಳ್ಳವರೂ, ಸರ್ವೇ-ಎಲ್ಲರೂ, ರಾಮಪ್ರತೀಕಾರೇ - ರಾಮನಿಗೆಪ್ರತ್ಯುಪಕಾರಮಾಡುವುದರಲ್ಲಿ, ನಿಶ್ಚಿತಾರ್ಥಾಃ-ಗೊತ್ತುಮಾಡಿದಪ್ರಯೋಜನವುಳ್ಳವರೂ, ಮನಸ್ವಿನಃ-ಸ್ಥಿರವಾದಮನಸ್ಸುಳ್ಳವರಾಗಿ, ಪುಪ್ಲುವುಃ-ಹಾರುತಹೊರಟರು

ಮಹಾಗಜಗಳಂತೆ ಕೊಬ್ಬಿದ್ದರು, ಇವರ ಆಗಮನದ ವೈಭವದಿಂದ ಆಕಾಶದಬೈಲು ಮುಚ್ಚಿಹೋಗುವಂತಿದ್ದಿತು ॥೩॥ ಆ ಸಮಯದಲ್ಲಿ ಸಮಸ್ತಪ್ರಾಣಿಗಳೂ ಧೀರನಾದ ಮಾರುತಿಯನ್ನು ಬಹಳವಾಗಿ ಗೌರವಿಸುತಲಿದ್ದರು. ಮಹಾ ವೇಗಶಾಲಿಯಾದ ಆ ಹನುಮಂತನನ್ನು ಕಪಿಗಳೆಲ್ಲ ಕಣ್ಣುಗಳಿಂದಲೇ ಹೊತ್ತುಕೊಂಡು ಹೋಗುತ್ತಿರುವರೆಂಬಂತೆ ಸಂತೋಷಾತಿಶಯದಿಂದ ದುರುದುರನೆ ನೋಡುತಲಿದ್ದರು ॥೪॥ ಸೀತಾಸಂದರ್ಶನರೂಪವಾದ ಕಾರ್ಯಸಿದ್ಧಿಯನ್ನು ಶ್ರೀ ರಾಮನಿಗೆ ನಾನು ಮುಂದು, ತಾನು ಮುಂದು ಎಂದು ಸೂಚಿಸಲಾಶೆಯುಳ್ಳವರಾಗಿಯೂ, ಮುಂದೆ ಆತನಿಗೆ ಮಹತ್ತರವಾದ ಯಶಸ್ಸನ್ನು ಸಂಪಾದಿಸಿಕೊಡಬೇಕೆಂಬ ಬಯಕೆಯುಳ್ಳವರಾಗಿಯೂ ಗೊತ್ತುಮಾಡಿಕೊಂಡು, ಕಾರ್ಯಸಿದ್ಧಿಯಿಂದ ಹೇರಳವಾಗಿ ಕೊಬ್ಬಿ ನಡೆಯುತಲಿದ್ದರು. ॥೫॥ ಎಲ್ಲರಿಗೂ ರಾಮನಿಗೆ ಪ್ರಿಯಸಮಾಚಾರವನ್ನುತಿಳಿಸಬೇಕೆಂಬ ಕುತೂಹಲ, ಯುದ್ಧದಲ್ಲಿ ಕೈಕೈಕೂಡಿದವೇಳೆ ಹಗೆಗಳೊಡನೆ ಕಲೆತು ಬೇಗನೆ ಯುದ್ಧಮಾಡಬೇಕೆಂದು ಎಲ್ಲರಿಗೂ ಬಯಕೆ, ಎಲ್ಲರೂ ಶ್ರೀ ರಾಮನಿಗೆ ತಮ್ಮ

ಪ್ಲವಮಾನಾಃ ಖಮಾಪ್ಲುತ್ಯ ತತಸ್ತೇ ಕಾನನೌಕಸಃ ।
ನಂದನೋಪಮಮಾಸೇದುರ್ವನಂ ದ್ರುಮಲತಾಯುತಮ್ ॥೭॥
ಯತ್ತನ್ಮಧುವನಂ ನಾಮ ಸುಗ್ರೀವಸ್ಯಾಭಿರಕ್ಷಿತಮ್ ।
ಅಧೃಷ್ಯಂ ಸರ್ವಭೂತಾನಾಂ ಸರ್ವಭೂತಮನೋಹರಂ ॥೮॥
ಯದ್ರಕ್ಷತಿ ಮಹಾವೀರ್ಯಸ್ಸದಾ ದಧಿಮುಖಃ ಕಪಿಃ ।
ಮಾತುಲಃ ಕಪಿಮುಖ್ಯಸ್ಯ ಸುಗ್ರೀವಸ್ಯ ಮಹಾತ್ಮನಃ ॥೯॥
ತೇ ತದ್ವನಮುಪಾಗಮ್ಯ ಬಭೂವುಃ ಪರಮೋತ್ಕಟಾಃ ।

---

|| ೬ || ತತಃ - ಆಮೇಲೆ, ತೇ - ಆ, ಕಾನನೌಕಸಃ - ವಾನರರು ಖಂ - ಆಕಾಶವನ್ನು ಕುರಿತು ಆಪ್ಲುತ್ಯ - ಹಾರಿ, ಪ್ಲವಮಾನಾಃ - ತೇಲಿಹೋಗುತಲಿರುವವರಾಗಿ, ನಂದನೋಪಮಂ - ಇಂದ್ರೋದ್ಯಾನಕ್ಕೆಣೆಯಾದ ದ್ರುಮಲತಾಯುತಂ-ಮರಗಳಿಂದಲೂ ಬಳ್ಳಿಗಳಿಂದಲೂ ಸಹಿತವಾಗಿರುವ, ವನಂ- ವನವನ್ನು, ಆಸೇದುಃ - ಸೇರಿದರು || ೭ || ಅಭಿರಕ್ಷಿತಂ - ಸುತ್ತಲೂ ವಾನರರಿಂದ ರಕ್ಷಿಸಲ್ಪಡುತಲಿರುವ, ಸರ್ವಭೂತಾನಾಂ - ಎಲ್ಲಪ್ರಾಣಿಗಳಿಗೂ, ಅಧೃಷ್ಯಂ - ತಿರಸ್ಕರಿಸಲಶಕ್ಯವಾಗಿರುವ, ಸರ್ವಭೂತಮನೋಹರಂ - ಸರ್ವಪ್ರಾಣಿಗಳ ಮನಸ್ಸನ್ನೂ ಅಪಹರಿಸತಕ್ಕ, ಸುಗ್ರೀವಸ್ಯ - ಸುಗ್ರೀವನ, ಯತ್ - ಯಾವ ಉದ್ಯಾನವನವು, ಮಧುವನಂನಾಮ-ಮಧುವನವೆಂದು ಪ್ರಸಿದ್ಧವಾದುದೋ, || ೮ || ಕಪಿಮುಖ್ಯಸ್ಯ - ವಾನರವರನೆನಿಸಿರುವ, ಮಹಾತ್ಮನಃ - ಮಹಾಧೀರನಾದ, ಸುಗ್ರೀವಸ್ಯ - ಸುಗ್ರೀವನಿಗೆ, ಮಾತುಲಃ - ಸೋದರಮಾವನಾಗಿರುವ, ಮಹಾವೀರಃ - ಹೇರಳವಾದ ಪರಾಕ್ರಮವುಳ್ಳ, ದಧಿಮುಖಃ - ದಧಿಮುಖನೆಂಬ, ಕಪಿಃ - ವಾನರನು, ಯತ್ -ಯಾವ ಮಧುವನವನ್ನು, ರಕ್ಷತಿ - ಕಾಪಾಡುತಲಿರುವನೋ, || ೯ || ತತ್- ಅಂತಹ, ವಾನರೇಂದ್ರಸ್ಯ - ಸುಗ್ರೀವನ, ಮನಃಕಾಂತಂ - ಮನಸ್ಸಿಗೆ ಅತ್ಯಂತ ಇಷ್ಟವಾದ, ಮಹತ್ - ವಿಸ್ತಾರವಾಗಿರುವ, ವನಂ - ಉದ್ಯಾನವನವನ್ನು, ತೇ - ಆ, ವಾನರಾಃ - ವಾನರರು, ಉಪಾಗಮ್ಯ -

---

ಕ್ರಮವನ್ನು ತೋರಿ, ಕೃತಜ್ಞತೆಯನ್ನೂ ಪ್ರಕಟಿಸಬೇಕೆಂಬ ತವಕ; ಎಲ್ಲರೂ ಮಹಾ ಧೀರರು॥ ಆ ವನೌಕಸರೆಲ್ಲರೂ ಪರಮಸಂತೋಷದಿಂದ ಕೂಪ್ಪಳಿಸುತ್ತಾ, ಹಾರುತ್ತಾ, ನೆಗೆಯುತ್ತಾ ದಾಟುತ್ತಾ, ಆಕಾಶದಲ್ಲಿ ತೇಲಿಹೋಗುತ್ತಾ, ವಿಚಿತ್ರಗಮನಚಾತುರ್ಯದಿಂದ ಬಂದು, ಬಗೆಬಗೆಯ ಮರ ಗಿಡ ಬಳ್ಳಿಗಳಿಂದೊಡಗೂಡಿ, ಇಂದ್ರೋದ್ಯಾನದಂತೆ ರಮಣೀಯವಾಗಿರುವ ಮಧುವನದ ಬಳಿಗೆ ಬಂದರು ॥೭॥ ಆ ಮಧುವನವಾದರೆ ಕಪಿಸಾರ್ವಭೌಮನಾದ ಸುಗ್ರೀವನಿಗೆ ಸೇರಿದುದು, ಸಮೃದ್ಧ ಪುಷ್ಪಫಲಾದಿಸೌಭಾಗ್ಯದಿಂದಲೂ, ಜೇನುಕೊಡಗಳಿಂದ ತುಂಬಿದ್ದುದರಿಂದಲೂ, ಮಧುವನವೆಂಬ ಸಾರ್ಥಕನಾಮದಿಂದ ಲೋಕಪ್ರಸಿದ್ಧವಾಗಿದ್ದಿತು, ಅದನ್ನು ಬಹುಮಂದಿ ಕಾವಲಿದ್ದು, ಕಟ್ಟುನಿಟ್ಟಿನಿಂದ ಕಾಪಾಡುತಲಿದ್ದರು, ಯಾವುದೊಂದು ಪ್ರಾಣಿಯೂ ಅದರೊಳಹೊಗಲು ಲೇಶವಾದರೂ ಅವಕಾಶವಿಲ್ಲದಂತಿದ್ದಿತು, ಮತ್ತು ಸರ್ವಪ್ರಾಣಿಮನೋಹರವಾಗಿದ್ದುದು, ॥೮॥ ಮಹಾಧೀರನೆನಿಸಿದ ಸುಗ್ರೀವನಿಗೆ ಸೋದರಮಾವನೆನಿಸಿದ ದಧಿಮುಖನೆಂಬ ಕಪಿವೀರನು ಭುಜಬಲಶಾಲಿಯೆನಿಸಿ, ಆ ಮಧುವನವನ್ನು ಸರ್ವದಾ ಬಲು ಎಚ್ಚರಿಕೆಯಿಂದ ಸಂರಕ್ಷಿಸುತಲಿದ್ದನು, ॥೯॥ ಇಂತಹ ಪಾರವಾದ ಸೊಬಗಿನಿಂದ ಕಂಗೊಳಿಸುತಲಿರುವ ಆ ಮಧುವನವನ್ನು ಸೇರಿ, ಮಹಾವೀರರೆನಿಸಿದ, ಕಪಿಗಳೆಲ್ಲರೂ

ವಾನರಾ ವಾನರೇಂದ್ರಸ್ಯ ಮನಃಕಾಂತಂ ಮಹಾ ವನಮ್ ||೧೦||
ತತಸ್ತೇ ವಾನರಾ ಹೃಷ್ಟಾ ದೃಷ್ಟ್ವಾ ಮಧುವನಂ ಮಹತ್ |
ಕುಮಾರ ಮಭ್ಯಯಾಚಂತ ಮಧೂನಿ ಮಧುಪಿಂಗಳಾಃ ||೧೧||
ತತಃ ಕುಮಾರ ಸ್ತಾನ್ ವೃದ್ಧಾನ್ ಜಾಂಬವ ತ್ಪ್ರಮುಖಾನ್ ಕಪೀನ್ |
ಅನುಮಾನ್ಯ ದದೌ ತೇಷಾಂ ನಿಸರ್ಗಂ ಮಧುಭಕ್ಷಣೇ ||೧೨||
ತತಶ್ಚಾ ಽ ನುಮತಾಃ ಸ್ಸರ್ವೇ ಸಂಪ್ರಹೃಷ್ಟಾ ವನೌಕಸಃ |

---

ಸೇರಿ, ಪರಮೋತ್ಕಟಾಃ - ಹೇರಳವಾದ ಉತ್ಸಾಹವುಳ್ಳವರು, ಬಭೂವುಃ - ಆದರು ||೧೦|| ತತಃ - ಆ ಮೇಲೆ, ಮಧುಪಿಂಗಳಾಃ - ಜೇನುತುಪ್ಪದಂತೆ ಹಸಿರು ಬಣ್ಣದವರಾದ, ತೇ - ಆ, ವಾನರಾಃ - ಕಪಿಗಳು, ಮಹತ್ - ದೊಡ್ಡದಾದ, ಮಧುವನಂ - ಸುಗ್ರೀವೋದ್ಯಾನವನ್ನು, ದೃಷ್ಟ್ವಾ - ನೋಡಿ, ಹೃಷ್ಟಾಃ - ಸಂತುಷ್ಟರಾಗಿ, ಕುಮಾರಂ - ಅಂಗದನನ್ನು ಕುರಿತು, ಮಧೂನಿ - ಜೇನು ಕೊಡಗಳನ್ನು, ಅಭ್ಯಯಾಚಂತ - ಬೇಡಿದರು ||೧೧|| ತತಃ - ತರುವಾಯ, ಕುಮಾರಃ - ಅಂಗದನು, ವೃದ್ಧಾನ್ - ಮುದುಕರಾಗಿರುವ, ಜಾಂಬವತ್ಪ್ರಮುಖಾನ್ - ಜಾಂಬವನೇ ಮೊದಲಾಗಿರುವ ತಾನ್ - ಆ, ಕಪೀನ್ - ವಾನರರನ್ನು, ಅನುಮಾನ್ಯ - ಸಮ್ಮತಿಗೊಳಿಸಿ, ತೇಷಾಂ - ಮಧುವನ್ನು ಯಾಚಿಸಿದ ವಾನರರಿಗೆ, ಮಧುಭಕ್ಷಣೇ - ಮಧುಪಾನದ ವಿಷಯದಲ್ಲಿ, ನಿಸರ್ಗಂ - ಆಜ್ಞೆಯನ್ನು, ದದೌ - ಕೊಟ್ಟನು ||೧೨|| ಸಂಪ್ರಹೃಷ್ಟಾಃ - ಮೊದಲೇ ಸೀತಾದರ್ಶನದಿಂದ ಸಂತೋಷಿಸಿರುವ, ತತಃ - ಆ ಹಿಂದೆ, ಮಧುಭಕ್ಷಣೇ - ಮಧುಪಾನದ ವಿಷಯದಲ್ಲಿ, ಅನುಮತಾಃ - ಅಂಗದನಿಂದ ಸಮ್ಮತಿಸಲ್ಪಟ್ಟವರೂ ಆಗಿರುವವರಾದ ಕಾರಣವೇ, ಮುದಿತಾಃ - ಆನಂದವುಳ್ಳವರಾಗಿ, ಪ್ರೇರಿತಾಃ - ಪ್ರೋತ್ಸಾಹವುಳ್ಳವರಾಗುತ್ತಾ, ಸರ್ವೇ - ಸಮಸ್ತರಾದ, ವನೌಕಸಃ - ವಾನರರು, ತತಃ-ತರುವಾಯ, ಪ್ರನೃತ್ಯಂತಃ - ಮನಬಂದಂತೆ ಕುಣಿಯುತಲಿರುವವರು,

---

ಸರ್ವರ ಕಣ್ಮನಗಳನ್ನೂ ಸೆಳೆಯುತಲಿರುವ ಆ ಸುಗ್ರೀವನ ಮಧುವನದ ಸೌಭಾಗ್ಯವನ್ನು ಕಂಡು ಹೇರಳವಾಗಿ ಸಂತೋಷಿಸಿದರು ||೧೦|| ಆ ಮೇಲೆ ಮಧುವಿನಂತೆ ಪಿಂಗಳವರ್ಣರಾಗಿ ಹರ್ಷಪರವಶರಾದ ಆ ಕಪಿಗಳು ಮೆಲ್ಲಗೆ ಅಂಗದನ ಬಳಿಗೆ ಬಂದು, ಎಲೈ ಯುವರಾಜನೇ ! ನಾವುಗಳೆಲ್ಲರೂ ಹಸಿವೆಬಾಯಾರಿಕೆಗಳಿಂದ ತೊಂದರೆಪಡುತಲಿದ್ದೇವೆ, ಈ ವನದಲ್ಲಿನ ಫಲಾದಿಗಳನ್ನು ಭಕ್ಷಿಸಲಿಕ್ಕೂ, ಮನಃಪೂರ್ವಕ ಮಧುಪಾನವನ್ನು ಮಾಡಲಿಕ್ಕೂ, ಅಪ್ಪಣೆಯನ್ನು ಕೊಡಬೇಕೆಂದು ವಿನಯದಿಂದ ಬೇಡಿದರು. ||೧೧|| ಬಳಿಕ ಅಂಗದನು - ತಾನು ಯುವರಾಜನೇ ಆಗಿದ್ದರೂ, ಮಂತ್ರಿಗಳ ಸಮ್ಮತಿಯಿಲ್ಲದೆ ಯಾವುದೊಂದು ಕೆಲಸವನ್ನೂ ಮಾಡಬಾರದೆಂದೆಣಿಸಿದು, ಜಾಂಬವಾದಿ ವೃದ್ಧಮಂತ್ರಿಗಳನ್ನು ಕಂಡು, ಎಲೈ ಜಾಂಬವಂತನೇ ! ಕಪಿಗಳೆಲ್ಲರೂ ನಮ್ಮಂತೆ ಸೀತಾಸಂದರ್ಶನದಿಂದುಂಟಾದ ಸಂತೋಷದಿಂದ ಕೂಡಿದವರಾಗಿ, ಬಹುದೂರದ ದಾರಿಯನ್ನು ದಾಟಿಬಂದು ಬಳಲಿರುವರು, ಈ ಮಧುವನವನ್ನು ಹೊಕ್ಕು, ಜೇನುತುಪ್ಪವೇ ಮೊದಲಾದ ಆಹಾರದಿಂದ ತೃಪ್ತರಾಗುವಂತೆ ಅಪ್ಪಣೆಯನ್ನು ಕೊಡಬಹುದೇ ? ಎಂದು ಕೇಳಿ, ಆತನನ್ನು ಸಮ್ಮತಿಗೊಳಿಸಿ, ಬಳಿಕ ವಾನರರಿಗೆ ಯಥೇಷ್ಟವಾಗಿ ಮಧುವನ್ನು ಅನುಭವಿಸುವಂತೆ ಆಜ್ಞೆಯನ್ನಿತ್ತನು ||೧೨|| ಕಪಿವೀರರಿಗೆಲ್ಲ ಜಾಂಬವನ ಮತ್ತು ಯುವರಾಜನಾದ ಅಂಗದನ ಅನುಜ್ಞೆಯಾಯಿತು, ಎಲ್ಲರೂ ಪ್ರೇರಿತರಾದರು

ಮುದಿತಾಶ್ಚ ತತಸ್ತೇ ಚ ಪ್ರನೃತ್ಯಂತೋಽಭವಂಸ್ತತಃ ॥೧೩॥
ಗಾಯಂತಿ ಕೇಚಿತ್ ಪ್ರಣದಂತಿ ಕೇಚಿ ನ್ನೃತ್ಯಂತಿ ಕೇಚಿತ್ ಪ್ರಹಸಂತಿ ಕೇಚಿತ್॥
ಪತಂತಿ ಕೇಚಿ ದ್ವಿಚರಂತಿ ಕೇಚಿತ್ ಪ್ಲವಂತಿ ಕೇಚಿತ್ ಪ್ರಲಪಂತಿ ಕೇಚಿತ್॥೧೪॥
ಪರಸ್ಪರಂ ಕೇಚಿ ದುಪಾಶ್ರಯಂತೇ ಪರಸ್ಪರಂ ಕೇಚಿ ದುಪಾಕ್ರಮಂತೇ ।
ಪರಸ್ಪರಂ ಕೇಚಿ ದುಪ ಬ್ರುವಂತೇ ಪರಸ್ಪರಂ ಕೇಚಿ ದುಪಾರಮಂತೇ ॥೧೫॥
ದ್ರುಮಾ ದ್ದ್ರುಮಂ ಕೇಚಿ ದಭಿದ್ರವಂತಿ ಕ್ಷಿತೌ ನಗಾಗ್ರಾ ನ್ನಿಪತಂತಿ ಕೇಚಿತ್ ।

---

ಅಭವನ್ - ಆಗಿದ್ದರು ॥೧೩॥ ಕೇಚಿತ್ - ಕೆಲವರು, ಗಾಯಂತಿ - ಗಾನವಮಾಡತೊಡಗಿದರು, ಕೇಚಿತ್ - ಕೆಲವರು, ಪ್ರಣದಂತಿ - ಲಾಗಹಾಕ ತೊಡಗಿದರು, (ತಲೆಕೆಳಗಾಗಿ ಉರುಳತೊಡಗಿದರು) ಕೇಚಿತ್ - ಮತ್ತೆ ಕೆಲವರು, ನೃತ್ಯಂತಿ - ನಾಟ್ಯವಾಡುತಲಿದ್ದರು, ಕೇಚಿತ್ - ಇನ್ನು ಕೆಲವರು, ಪ್ರಹಸಂತಿ - ಅಟ್ಟಹಾಸ ಮಾಡುತಲಿದ್ದರು, ಕೇಚಿತ್ - ಬೇರೆಕೆಲವರು, ಪತಂತಿ - ಧುಮ್ಮಿಕ್ಕುತಲಿದ್ದರು, ಕೇಚಿತ್ - ಇತರರು ಕೆಲವರು, ವಿಚರಂತಿ - ಓಡಾಡುತಲಿದ್ದರು, ಕೇಚಿತ್ - ಅನ್ಯರುಕೆಲವರು, ಪ್ಲವಂತಿ - ಕುಪ್ಪಳಿಸುತ್ತಲಿದ್ದರು, ಕೇಚಿತ್ - ಅಪರರುಕೆಲವರು, ಪ್ರಲಪಂತಿ - ಮನಬಂದಂತೆ ಹರಟುತಲಿದ್ದರು ॥೧೪॥ ಕೇಚಿತ್ - ಕೆಲವರು, ಪರಸ್ಪರಂ - ಅನ್ಯೋನ್ಯವಾಗಿ, ಉಪಾಶ್ರಯಂತೆ - ಸೇವಿಸಿಕೊಳ್ಳುತಲಿದ್ದರು, ಕೇಚಿತ್ - ಕೆಲವರು, ಪರಸ್ಪರಂ - ಒಬ್ಬರಿಗೊಬ್ಬರು, ಉಪಾಕ್ರಮಂತೆ- ಆಕ್ರಮಿಸುತಲಿದ್ದರು, ಕೇಚಿತ್ - ಕೆಲವರು, ಪರಸ್ಪರಂ - ಅನ್ಯೋನ್ಯವಾಗಿ, ಉಪಬ್ರುವಂತೆ - ಮಾತನಾಡಿಕೊಳ್ಳುತಲಿದ್ದರು, ಕೇಚಿತ್ - ಕೆಲವರು, ಪರಸ್ಪರಂ - ಅನ್ಯೋನ್ಯವಾಗಿ, ಉಪಾರಮಂತೆ- ಆಟವಾಡುತಲಿದ್ದರು ॥೧೫॥ ಕೇಚಿತ್ - ಕೆಲವರು, ದ್ರುಮಾತ್ - ಒಂದು ಮರದಿಂದ, ದ್ರುಮಂ - ಮತ್ತೊಂದು ಮರವನ್ನು ಕುರಿತು, ಅಭಿದ್ರವಂತೆ - ಓಡುತಲಿದ್ದರು, ಕೇಚಿತ್ - ಕೆಲವರು, ನಗಾಗ್ರಾತ್ ಮರದ ತುದಿಯಿಂದ, ಕ್ಷಿತೌ - ನೆಲದಲ್ಲಿ, ನಿಪತಂತಿ - ಧುಮುಕುತಲಿದ್ದರು, ಕೇಚಿತ್ - ಕೆಲವರು, ಉದೀರ್ಣವೇಗಾಃ - ಅಧಿಕ ವೇಗವುಳ್ಳವರಾಗಿ, ಮಹೀತಲಾತ್ - ಭೂತಲದಿಂದ, ಮಹಾದ್ರುಮಾಗ್ರಾಣಿ -

---

ಹರ್ಷಪರವಶರಾದರು, ಕುಣಿಯುತ್ತಾ ಮಧುವನವನ್ನು ಪ್ರವೇಶಿಸಿದರು ॥ ೧೩ ॥ ಆ ಸಂತೋಷದಿಂದ ಕೆಲವರು ಸಂಗೀತವನ್ನುಹಾಡತೊಡಗಿದರು, ಕೆಲವರು ನೆಲದವರೆಗೂ ತಲೆಗಳನ್ನುತೂಗಾಡಿಸುತಲಿದ್ದರು, ಮತ್ತೆ ಕೆಲವರು ಕುಣಿಯುತ್ತಿದ್ದರು, ಇನ್ನುಕೆಲವರು ಕುಡಿಯುತಲಿದ್ದರು, ಬೇರೆ ಕೆಲವರು ಕೇಕೆಹಾಕಿ ಅಟ್ಟಹಾಸದ ನಗೆಯನ್ನುತೋರಿದರು ಇತರರು ಕುಪ್ಪಳಿಸುತಲಿದ್ದರು, ತದನ್ಯರು ಇಲ್ಲಿಂದಲ್ಲಿಗೂ, ಅಲ್ಲಿಂದಿಲ್ಲಿಗೂ, ಓಡಾಡುತ್ತಾ ಬಂದರು. ಪರರು ಕೆಲವರು ಮೇಲಕ್ಕೆ ಹಾರುತ್ತಲೂ, ಹಲ್ಲುಗಳನ್ನುಕಿರಿದು ಮನಬಂದಂತೆಹರಟುತಲೂಇದ್ದರು ॥೧೪॥ ಆವಾನರರೊಳಗೆ ಕೆಲಕೆಲವರು ಒಂದೊಂದುಗುಂಪಾಗಿಸೇರಿ ಒಂದೊಂದುಪಂಗಡದವರು ಬೇರೊಂದುಗುಂಪಿನವರಿಗೆ ಫಲಾದಿಗಳನ್ನು ಕೊಟ್ಟು ಉಪಚರಿಸುತಲಿದ್ದರು, ಮತ್ತೆ ಕೆಲವರು ಒಬ್ಬರಮೇಲೊಬ್ಬರಂತೆ ಕುಳಿತುತೆರಳುತಲೂ, ಪರಸ್ಪವಾಗಿಮಾತುಗಳನ್ನಾಡಿಕೊಳ್ಳುತಲೂ, ಅನ್ಯೋನ್ಯವಾಗಿ ವಿನೋದದ ಆಟಗಳನ್ನಾಡುತಲೂ ಆ ವನದೊಳಗೆನುಗ್ಗುತ್ತಿದ್ದರು॥೧೫॥ ಕೆಲವರು ಮರದಿಂದಮರಕ್ಕೆಹಾರಿ, ನೆಗೆದು, ಕುಪ್ಪಳಿಸುತ್ತಲೂ, ಕೆಲವರು ಮರಗಳತುದಿಗಳಿಂದಕೆಳಕ್ಕೆ ದುಮ್ಮಿಕ್ಕುತಲೂ,

ಮಹೀತಲಾ ತ್ಕೇಚಿ ದುದೀರ್ಣ ವೇಗಾ ಮಹಾದ್ರುಮಾ ಗ್ರಾಣ್ಯ ಭಿ ಸಂಪತಂತಿ॥
ಗಾಯಂತ ಮನ್ಯಃ ಪ್ರಹಸ ನ್ನುಪೈತಿ ಹಸಂತ ಮನ್ಯಃ ಪ್ರರುದ ನ್ನುಪೈತಿ ।
ರುದಂತ ಮನ್ಯಃ ಪ್ರಣುದ ನ್ನುಪೈತಿ ನುದಂತ ಮನ್ಯಃ ಪ್ರಣದ ನ್ನುಪೈತಿ ॥೧೩॥
ಸಮಾಕುಲಂ ತತ್ಕಪಿ ಸೈನ್ಯ ಮಾಸೀ ನ್ಮಧು ಪ್ರಪಾನೋತ್ಕಟ ಸತ್ವ ಚೇಷ್ಟಮ್ ।
ನ ಚಾತ್ರ ಕಶ್ಚಿ ನ್ನಬಭೂವ ಮತ್ತೋ ನಚಾತ್ರ ಕಶ್ಚಿ ನ್ನಬಭೂವ ತೃಪ್ತಃ ॥೧೪
ತತೋ ವನಂ ತತ್ಪರಿ ಭಕ್ಷ್ಯಮಾಣಂ ದ್ರುಮಾಂಶ್ಚ ವಿಧ್ವಂಸಿತ ಪತ್ರಪುಷ್ಪಾನ್ ।

ದೊಡ್ಡ ಮರಗಳ ಕೊನೆಗಳನ್ನು, ಅಭಿಸಂಪತಂತಿ - ಏರುತಲಿದ್ದರು, ॥೧೨॥ ಅನ್ಯಃ - ಬೇರೊಬ್ಬ ಕಪಿಯು, ಗಾಯಂತಂ - ಗಾನಮಾಡುತಲಿರುವ ಇನ್ನೊಬ್ಬ ಕಪಿಯನ್ನು, ಪ್ರಹಸನ್ - ನಗುತಲಿರುವವನಾಗಿ, ಉಪೈತಿ - ಹೊಂದುತಲಿದ್ದನು, ಅನ್ಯಃ - ಮತ್ತೊಬ್ಬನು, ಹಸಂತಂ - ನಗುತಲಿರುವವನನ್ನು, ಪ್ರರುದನ್ - ಮನಬಂದಂತೆಮಾತನಾಡುವವನಾಗಿ, ಉಪೈತಿ - ಸೇರುತಲಿರುವನು, ಅನ್ಯಃ-ಬೇರೊಬ್ಬನು, ರುದಂತಂ - ಅಳುತಲಿರುವವನನ್ನು, ಪ್ರಣುದನ್ - ಪ್ರೇರಿಸುತಲಿರುವವನಾಗಿ, ಉಪೈತಿ - ಹೊಂದುತಲಿದ್ದನು, ಅನ್ಯಃ - ಮಗುದೊಬ್ಬನು, ನುದಂತಂ - ಪ್ರೇರಿಸುತಲಿರುವವನನ್ನು, ಪ್ರಣದನ್ - ಹೇರಳವಾಗಿ ಅಬ್ಬರಿಸುತಲಿರುವವನಾಗುತ್ತಾ, ಉಪೈತಿ - ಸೇರುತಲಿದ್ದನು ॥೧೩॥

ಸಮಾಕುಲಂ - ಗಲಿಬಿಗದ್ದಲವಾಗಿರುವ, ತತ್ - ಆ, ಕಪಿಸೈನ್ಯಂ - ವಾನರ ಸೇನೆಯು, ಮಧುಪ್ರಪಾನೋತ್ಕಟ ಸತ್ವಚೇಷ್ಟಂ - ಜೇನುತುಪ್ಪವನ್ನು ಕುಡಿವುದರಿಂದ ಹೇರಳವಾದ ಚೇಷ್ಟೆಯುಳ್ಳುದು, ಆಸೀತ್ - ಆಯಿತು, ಅತ್ರ - ಈ ಮಧುವನದಲ್ಲಿ, (ವಾನರ ಸೇನೆಯಲ್ಲಿ) ಕಶ್ಚಿತ್ - ಒಬ್ಬನಾದರೂ, ಮತ್ತಃ - ಮದವೇರಿದವನು, ನಬಭೂವೇತಿನ - ಇಲ್ಲವೆಂಬುದಿಲ್ಲ (ಎಲ್ಲರೂ ಮಡಿಸಿದ್ದರು) ಅತ್ರ - ಈ ವನದಲ್ಲಿ, ಕಶ್ಚಿತ್ - ಒಬ್ಬನಾದರೂ, ತೃಪ್ತಃ-ತಣಿದವನೂ, ನಬಭೂವೇತಿನ-ಆಗಿರಲಿಲ್ಲವೆಂಬುದಿಲ್ಲ ॥೧೪॥ ತತಃ - ಆ ಮೇಲೆ, ದಧಿವಕ್ತ್ರನಾಮಾ - ದಧಿಮುಖನೆಂಬ, ಕಪಿಃ - ವಾನರನು, ಪರಿಭಕ್ಷ್ಯಮಾಣಂ -

ಇನ್ನು ಕೆಲವರು ನೆಲದಮೇಲೆಯೇ ಬಹುವೇಗದಿಂದ ಓಡುತಲೂ, ಬೇರೆ ಕೆಲವರು ದೊಡ್ಡದೊಡ್ಡ ಮರಗಳಮೇಲಕ್ಕೆ ಬಿರುಬಿರನೆ ಏರುತಲೂ ಇದ್ದರು.॥೧೨॥ ಒಬ್ಬವಾನರನುಹರ್ಷದಿಂದ ಹಾಡುತಲಿರುವಲ್ಲಿ, ಬೇರೊಬ್ಬನು ಹಲ್ಕಿರಿದುನಗುತಲಾ ಆವನಬಳಿಗೆ ಓಡುತಲಿರುವನು,ಹಾಗೆನಗುತಲಿರುವವನ ಬಳಿಗೆ ಬೇರೊಬ್ಬನು ಕಾರಣವಿಲ್ಲದೆ ತದಿಂದಅಳುತ್ತಾ ತೆರಳಿದನು, ಅಂತುಗೋಳಾಡುವವನಹತ್ತಿರಕ್ಕೆ ಇನ್ನೊಬ್ಬನು-ಅವನಿಗೆಉತ್ತೇಜನವನ್ನುಕೊಡುತ್ತಾ ಬಂದನು, ಹಾಗೆಪ್ರೇರಿಸುತಲಿರುವವನ ಬಳಿಗೆ ಮಗುದೊಬ್ಬನು --ಗಟ್ಟಿಯಾಗಿ ಅಬ್ಬರಿಸುತ್ತಾ ಬರುತಲಿದ್ದನು. ಇಂತು ಆ ಮಹಾವಾನರರು ಮನಬಂದ ಚೇಷ್ಟೆಗಳಿಂದ ಕೋಲಾಹಲವನ್ನುಮಾಡುತಲಿದ್ದರು ॥೧೩॥ ಸ್ವೇಚ್ಛಾನುಸಾರವಾಗಿ ಮಧುಪಾನವನ್ನು ಮಾಡಿದರು, ಮದವುತಲೆಗೇರಿತು, ಬಗೆಬಗೆಯ ವಿಕಾರವಾದ ಚೇಷ್ಟೆಗಳಿಂದ ಕಪಿಗಳಪಡೆಯೊಳಗೆ ಹೇಳಲಳವಿಲ್ಲದಗದ್ದಲವುಂಟಾಯಿತು, ಆಗುಂಪಿನೊಳಗೆಮದವೇರದ ಕಪಿಯೇಇಲ್ಲ. ಜೇನುತುಪ್ಪವನ್ನು ಮನವಾರಕುಡಿದು ತಣಿಯದವಾನರನೇಇಲ್ಲ, ಎಲ್ಲರೂ ಬೇಕಾದಹಾಗೆ ಹಣ್ಣು ಹಂಪಲುಗಳನ್ನು ತಿಂದು, ತೇಗಿ, ತುಪ್ಪವನ್ನು ಕುಡಿದು, ಲೆಕ್ಕವಿಲ್ಲದ ಚೇಷ್ಟೆಗಳಲ್ಲಿರುತ್ತಿದ್ದರು ॥೧೪॥ ಎಲ್ಲಮರಗಳಹಣ್ಣುಗಳನ್ನೂ ತಿಂದು, ಎಲೆ,ಕಾಯಿ, ಹೂಗಳನ್ನೆಲ್ಲ

ಸಮೀಕ್ಷ್ಯ ಕೋಪಾದ್ದಧಿವಕ್ತ್ರನಾಮಾ ನಿವಾರಯಾಮಾಸ ಕಪಿಃ ಕಪೀಂಸ್ತಾನ್॥
ಸ ತೈಃ ಪ್ರವೃದ್ಧೈಃ ಪರಿಭರ್ತ್ಸ್ಯಮಾನೋ ವನಸ್ಯ ಗೋಪ್ತಾ ಹರಿವೀರವೃದ್ಧಃ।
ಚಕಾರ ಭೂಯೋ ಮತಿಮುಗ್ರತೇಜಾ ವನಸ್ಯ ರಕ್ಷಾಂ ಪ್ರತಿ ವಾನರೇಭ್ಯಃ॥
ಉವಾಚ ಕಾಂಶ್ಚಿತ್ಪರುಷಾಣಿ ಧೃಷ್ಟಮಸಕ್ತಮನ್ಯಾಂಶ್ಚ ತಲೈರ್ಜಘಾನ।
ಸಮೇತ್ಯ ಕೈಶ್ಚಿತ್ಕಲಹಂ ಚಕಾರ ತಥೈವ ಸಾಮ್ನೋಪಜಗಾಮ ಕಾಂಶ್ಚಿತ್ ॥೧೧॥
ಸ ತೈರ್ಮದಾತ್ಸಂಪರಿವಾರ್ಯ ವಾಕ್ಯೈರ್ಬಲಾಚ್ಚ ತೇನ ಪ್ರತಿವಾರ್ಯಮಾಣೈಃ।

---

ಅನುಭವಿಸುತಲಿರುವ, ತತ್ - ಆ, ವನಂ - ಮಧುವನವನ್ನು ವಿಧ್ವಂಸಿತಪತ್ರಪುಷ್ಪಾನ್ - ಹಾಳುಮಾಡಿದ ಎಲೆಗಳು ಮತ್ತು ಹೂಗಳುಳ್ಳ, ದ್ರುಮಾನ್ ಚ-ಮರಗಳನ್ನೂ, ಸಮೀಕ್ಷ್ಯ-ನೋಡಿ, ಕೋಪಾತ್ - ಸಿಟ್ಟಿನಿಂದ, ತಾನ್ - ಆ, ಕಪೀನ್ - ವಾನರರನ್ನು, ನಿವಾರಯಾಮಾಸ - ತಡೆದನು ॥೯॥ ಉಗ್ರತೇಜಾಃ - ಭಯಂಕರವಾದ ಪ್ರತಾಪವುಳ್ಳ, ವನಸ್ಯ - ಮಧುವನಕ್ಕೆ, ಗೋಪ್ತಾ - ರಕ್ಷಕನಾಗಿರುವ, ಹರಿವೀರವೃದ್ಧಃ - ವಾನರವೀರರಲ್ಲಿ ಹಿರಿಯುವನಾದ, ಸಃ - ಆ ದಧಿಮುಖನು, ಪ್ರವೃದ್ಧೈಃ - ಕೊಬ್ಬಿರುವ ತೈಃ - ಆ ವಾನರರಿಂದ, ಪರಿಭರ್ತ್ಸ್ಯಮಾನಃ-ಹೆದರಿಸಲ್ಪಡುತ್ತಿರುವವನಾಗಿ, ವಾನರೇಭ್ಯಃ - ಕಪಿಗಳಿಂದ, ರಕ್ಷಾಂಪ್ರತಿ - ವನರಕ್ಷಣವನ್ನು ಕುರಿತು, ಭೂಯಃ - ಮರಳಿ, ಮತಿಂ-ಆಲೋಚನೆಯನ್ನು, ಚಕಾರ ಮಾಡತೊಡಗಿದನು ॥೧೦॥ (ಸಃ-ಆದಧಿಮುಖನು) ಕಾಂಶ್ಚಿತ್ - ಕೆಲವರನ್ನು, ಧೃಷ್ಟಂ - ದಡುಕಿ, ಪರುಷಾಣಿ - ಕಠಿಣವಾದ ಮಾತುಗಳನ್ನು, ಉವಾಚ - ಹೇಳಿದನು, ಅನ್ಯಾನ್ ಚ - ಮತ್ತೆ ಕೆಲವರನ್ನಾದರೋ, ಅಸಕ್ತಂ - ಅಡ್ಡಿಯಿಲ್ಲದೆ, ತಲೈಃ - ಅಂಗೈಗಳಿಂದ, ಜಘಾನ-ಅಪ್ಪಳಿಸಿದನು, ಕೈಶ್ಚಿತ್-ಕೆಲವರೊಡನೆ, ಸಮೇತ್ಯ-ಕಲೆತು, ಕಲಹಂ - ಜಗಳವನ್ನು, ಚಕಾರ-ಮಾಡಿದನು, ತಥೈವ-ಹಾಗೆಯೇ ಕಾಂಶ್ಚಿತ್ - ಮತ್ತೆ ಕೆಲವರನ್ನು, ಸಾಮ್ನಾ - ಮೃದುವಚನಗಳಿಂದ, ಉಪಜಗಾಮ-ಹೊಂದಿದನು ॥೧೧॥

---

ಉಪಮರಿಸಿ, ಗಿಡಬಳ್ಳಿಗಳನ್ನೆಲ್ಲ ತುಳಿದು, ಮುರಿದು, ಹಾಳುಮಾಡುವುದರಿಂದ ಧ್ವಂಸವಾಗುವ ಆ ವನವನ್ನು ವನಪಾಲಕನಾದ ದಧಿಮುಖನೆಂಬ ವಾನರನು ನೋಡಿ, ಬಹಳವಾಗಿ ಸಿಟ್ಟುಗೊಂಡು, “ಎಲೈ ವಾನರರುಗಳಿರಾ ! ಸುಗ್ರೀವನು ತೀವ್ರವಾದ ದಂಡನೆಯನ್ನು ಮಾಡತಕ್ಕವನು ಎಂಬುದನ್ನು ನೀವು ಬಲ್ಲಿರಿ, ಈ ದುಡುಕುತನವು ನಿಮಗೆ ತಕ್ಕುದಲ್ಲ, ಹೇರಳವಾಗಿ ಶಿಕ್ಷೆಗೆ ಒಳಗಾಗುತ್ತೀರಿ, ಕ್ರೂರವಾದ ಶಿಕ್ಷೆಗೆಗುರಿಯಾಗುವಿರಿ, ಎಂಬುದಾಗ ಹೇಳಿ ಅವರನ್ನು ತಡೆದನು ॥೯॥ ದಧಿಮುಖನು ಹಾಗೆಗದರಿಸಿ ಬೈದಕೊಡಲೆವಾನರರಿಗೆಲ್ಲ ಬೆಂಬಲದ ಕೊಬ್ಬಿನಿಂದ ಹಮ್ಮೇರಿತು, ವನಪಾಲಕನಾದ ದಧಿಮುಖನು ವಯಸ್ಸಿನಲ್ಲಿ ಹಿರಿಯುವನೇ ಹೌದು. ಮಹಾಶೂರನಾಗಿದ್ದುದೂ ದಿಟ, ವಾನರರೆಲ್ಲರೂ ತನ್ನನ್ನು ತಿರಸ್ಕರಿಸುತಬಂದರು, ಆದರೂ ಮರಳಿ ವನವು ಹಾಳಾಗಿಹೋಗುವುದಲ್ಲಾ ಎಂಬ ಸಂಕಟದಿಂದ ಅವರನ್ನು ನೋಡಿ ॥೧೦॥ ಕೆಲವರಿಗೆ ಬಿರುನುಡಿಗಳನ್ನು ಪ್ರಯೋಗಿಸಿದನು, ಮತ್ತೆ ಕೆಲವರನ್ನು ಗದರಿಸಿ ಛೀ ಎಂದನು ಮತ್ತೆ ಕೆಲವರನ್ನು ಹೊರಗೆತಳ್ಳಿದನು, ಇನ್ನು ಕೆಲವರನ್ನು ಕೈಗಳಿಂದ ಬಾರಿಸಿದನು, ಕೆಲವರನ್ನು ಅಪ್ಪಳಿಸಿದನು, ಇಕ್ಕಿದನು, ಕುಕ್ಕಿದನು, ತಟ್ಟಿದನು, ಕುಟ್ಟಿದನು, ಬೈದೆದಿದನು, ಬಡಿದಾಟದಿಂದ ಅಟ್ಟಿದನು, ಕೆಲವರನ್ನು ಮೃದುಮಧುರ ವಚನಗಳಿಂದ ಅಡ್ಡಿಮಾಡಿದನು ॥ ೧೧ ॥ ಆದರೇನು ? ಅಯ್ಯೋ ! ಅವನೊಬ್ಬನ ಹಿಡಿತಕ್ಕೆ ಅವರೆಷ್ಟುಮಂದಿ

ಪ್ರಧರ್ಷಿತ ಸ್ತ್ಯಕ್ತ ಭಯೈಸ್ಸಮೇತ್ಯ ಪ್ರಕೃಷ್ಯತೇ ವಾ ಪ್ಯನವೇಕ್ಷ್ಯ ದೋಷಮ್ ॥
ನಖೈಸ್ತು ದಂತೋ ದಶನ್ನೈ ರ್ದಶಂತ ಸ್ತಲೈಶ್ಚ ಪಾದೈಶ್ಚ ಸಮಾಪಯಂತಃ ।
ಮದಾ ತ್ಕಪಿಂ ತಂ ಕಪಯ ಸ್ಸಮಗ್ರಾ ಮಹಾವನಂ ನಿರ್ವಿಷಯಂ ಚ ಚಕ್ರುಃ ॥೩೩॥

— ಇತಿ ಶ್ರೀಮತ್ಸುಂದರಕಾಂಡೇ-ಏಕಷಷ್ಟಿ ತಮಸ್ಸರ್ಗಃ. —

ಅಪಿಚ - ಮತ್ತು, ಸಃ - ಆದಧಿಮುಖನು, ತೇನ-ಆತನಿಂದ, ನಿವಾರ್ಯ ಮಾಣೈಃ - ತಡೆಯಲ್ಪಡುತಲಿರುವವರಾದರೂ, ತ್ಯಕ್ತಭಯೈಃ - ಬಿಡಲ್ಪಟ್ಟ ಭಯವುಳ್ಳ, ತೈಃ - ಆ ವಾನರರಿಂದ, ಮದಾತ್ - ಕೊಬ್ಬಿನಿಂದ, ಬಲಾಚ್ಚ - ಬಲದಿಂದಲೂ ಪರಿವಾರ್ಯ - ಸುತ್ತಿಕೊಂಡು, ವಾಕ್ಯೈಃ - ನಿಂದಾವಚನಗಳಿಂದ, ಪ್ರಧರ್ಷಿತಃ - ಅವಮಾನಿಸಲ್ಪಟ್ಟವನಾಗಿ, ಸಮೇತ್ಯ - ಹತ್ತಿರಕ್ಕೆ ಬಂದು, ದೋಷಂ - (ಸುಗ್ರೀವನ ಸೋದರಮಾವನಾಗಿರುವ ತನ್ನನ್ನು ಹೊಡೆಯೋಣವೆಂಬ) ತಪ್ಪನ್ನು, ಅನವೇಕ್ಷ್ಯ - ಲಕ್ಷ್ಯಮಾಡದೆಯೇ, ಪ್ರಕೃಷ್ಯತೇ - ಮನಬಂದಂತೆ ಸೆಳೆಯಲ್ಪಡುತ್ತಿದ್ದನು ॥೩೨॥ ಸಮಗ್ರಾಃ- ವನದೊಳಗೆಲ್ಲ ತುಂಬಿಕೊಂಡಿರುವ, ಕಪಯಃ - ವಾನರರು. ತಂ - ಆ, ಕಪಿಂ - ದಧಿಮುಖನೆಂಬ ವಾನರನನ್ನು, ಮದಾತ್- ಹೆಮ್ಮೆಯಿಂದ, ನಖೈಃ - ಉಗುರುಗಳಿಂದ, ತುದಂತಃ-ಕೆರೆಯುತಲಿರುವವರೂ, (ಗೀರುತಲಿರುವವರೂ) ದನ್ತೈಃ - ಹಲ್ಲುಗಳಿಂದ, ದಶಂತಃ - ಕವರುತಲಿರುವವರೂ, ತಲೈಶ್ಚ - ಅಂಗೈಗಳಿಂದಲೂ, ಪಾದೈಶ್ಚ - ಅಂಗಾಲುಗಳಿಂದಲೂ, ಸಮಾಪಯಂತಃ-ಒದೆಯುತಲಿರುವವರೂ ಆಗಿ, ಮಹಾವನಂ-ಆದೊಡ್ಡವನವನ್ನು, ನಿರ್ವಿಷಯಂ - ಮಧುಫಲಾದಿಗಳೊಂದೂ ಇಲ್ಲದಂತೆ, ಚಕ್ರುಶ್ಚ - ಮಾಡಿಬಿಟ್ಟರು, ॥೩೩॥

— ಇಂತು ಅರವತ್ತೊಂದನೆಯ ಸರ್ಗಂ —

ಒಳಗಾಗುವುದುಂಟೆ? ಕಪಿಗಳಗೆಲ್ಲ ಮಧುಪಾನದಿಂದುಂಟಾದ ಮದದಜೊತೆಗೆ ರೋಷವೂ ತಲೆಗೇರಿತು, ಬಲಾತ್ಕಾರದಿಂದ ತಡೆಯುತಲಿರುವ ದಧಿಮುಖನನ್ನು, ಎಲ್ಲರೂ ಸುತ್ತಿಕೊಂಡರು ಸುಗ್ರೀವನು ತೀಕ್ಷ್ಣವಾಗಿ ದಂಡಿಸುವವನೆಂಬುದೂ, ಆತನಿಗೆ ಈ ದಧಿಮುಖನು ಸೋದರ ಮಾವನೆಂದೂ, ಈತನನ್ನು ಹೊಡೆದು; ಬಡಿದು, ಬೈದು, ತೊಂದರೆಮಾಡಿದರೆ ಅದು ದೊಡ್ಡ ತಪ್ಪಾಗುವುದೆಂದೂ ಲಕ್ಷ್ಯಮಾಡದೆ ಆ ವನಪಾಲನನ್ನು ಹಿಗ್ಗಾಮುಗ್ಗಾ ಎಳೆದು, ತಳ್ಳಿ, ತಿರಸ್ಕರಿಸಿ, ತಮ್ಮ ಮನ ಬಂದಂತೆ ಹಾವಳಿ ಮಾಡಿ ವಿಜೃಂಭಿಸುತಲೇ ಇದ್ದರು ॥೩೨॥ ಕೆಲವರು ಆ ವನಪಾಲನಾದ ದಧಿಮುಖನನ್ನು ಉಗುರುಗಳಿಂದ ಗೀಚಿದರು. ಮತ್ತೆ ಕೆಲವರು ಹಲ್ಲುಗಳಿಂದ ಕವರಿದರು, ಇನ್ನು ಕೆಲವರು ಕರತಲಗಳಿಂದ ತೀಡಿದರು, ಕಾಲುಗಳಿಂದ ತುಳಿದರು, ಹಾಗೂ ಹೀಗೂ ಅವನನ್ನು ಅರೆಜೀವನನ್ನಾಗಿ ಮಾಡಿ, ಆ ವನವನ್ನು ಹೂವಾಗಲೀ ಕಾಯಾಗಲಿ, ಹಣ್ಣಾಗಲಿ, ಎಲೆಯಾಗಲಿ, ಏನೊಂದೂ ಇಲ್ಲದಂತೆ ಬಟ್ಟಬಯಲಾಗುವಂತೆ ಮಾಡಿದರು ॥೩೩॥

— ಇಂತು ಅರವತ್ತೊಂದನೆಯ ಸರ್ಗಂ —



ಶ್ರೀಃ.

## ಶ್ರೀರಾಮಚಂದ್ರ ಪರಬ್ರಹ್ಮಣೇನಮಃ

## ಶ್ರೀಮತ್ಸುಂದರ ಕಾಣ್ಡೇ ದ್ವಿಷಷ್ಟಿತಮಸ್ಸರ್ಗಃ

ತಾ ನುವಾಚ ಹರಿಶ್ರೇಷ್ಠೋ ಹನುಮಾ ನ್ವಾನರರ್ಷಭಃ ।
ಅವ್ಯಗ್ರ ಮನಸೋ ಯೂಯಂ ಮಧು ಸೇವತ ವಾನರಾಃ ॥೧॥
ಅಹ ಮಾವಾರಯಿಷ್ಯಾಮಿ ಯುಷ್ಮಾಕಂ ಪರಿಪಂಥಿನಃ ॥೧½॥

—ಅರವತ್ತೆರಡನೆಯ ಸರ್ಗಂ—

ಕಂ॥ ವನದೊಳಗೆ ಯಳಿಯಲ್ ಮಧು । ವನಪಂ ನೆರೆದಂಡಿಸಲ್ಕೆ ಹರಿಗಳನವರುಂ ।
ಜನದೊಡೆಯಂ ಗುರು ಹಿಂಸೆಯು । ನನುಗೊಳಿಸಲ್ ಭಯದಿ ನೋಡಿ ಪ್ರಭುವಿಂಗೊರೆದಂ॥

ವಾನರರ್ಷಭಃ-ಕಪಿವರನೆನಿಸಿದ, ಹರಿಶ್ರೇಷ್ಠಃ- ಶ್ರೇಷ್ಠರಾದ ವಾನರರುಳ್ಳ, ಹನೂಮಾನ್-ಆಂಜನೇಯನು, ಹೇವಾನರಾಃ- ಎಲೈ ಕಪಿಗಳಿರಾ!, ಯೂಯಂ - ನೀವುಗಳು, ಅವ್ಯಗ್ರಮನಸಃ-ಸ್ಥಿರವಾದ ಮನಸ್ಸುಳ್ಳವರಾಗಿ ಮಧು ಜೇನುತುಪ್ಪವನ್ನು, ಸೇವತ- ಅನುಭವಿಸಿರಿ, (ಸೇವನ್ತ್ವ) ಅಹಂ-ನಾನು, ಯುಷ್ಮಾಕಂ-ನಿಮ್ಮಗಳಿಗೆ, ಪರಿಪಂಥಿನಃ- ಹಗೆಗಳಾದವರನ್ನು, ಆವಾರಯಿಷ್ಯಾಮಿ - ತೊಲಗಿಸುವೆನು, (ಇತಿ-ಹೀಗೆಂದು) ತಾನ್-ಆ ವಾನರರನ್ನು ಕುರಿತು, ಉವಾಚ- ಹೇಳಿದನು ॥೧॥ ಹರೀಣಾಂ-ವಾನರರೊಳಗೆ, ಪ್ರವರಃ - ಶ್ರೇಷ್ಠನೆನಿಸಿದ, ಅಂಗದಃ - ಅಂಗದನು, ಪ್ರಸನ್ನಾತ್ಮಾ - ಸಂತೋಷದ ಮನಸ್ಸುಳ್ಳವನಾಗಿ, ಹನೂಮತಃ - ಆಂಜನೇಯನ, ವಾಕ್ಯಂ - ಮಾತನ್ನು, ಶ್ರುತ್ವಾ-ಕೇಳಿ, ಅಂಗದರ ಯಃ-ಎಲೈ

—ಅರವತ್ತೆರಡನೆಯ ಸರ್ಗಂ—

ತದನಂತರದಲ್ಲಿ—ವಾನರಶ್ರೇಷ್ಠನೂ, ಜಾಂಬವಂತನೇ ಮೊದಲಾದ ಹರಿವೀರರನ್ನು ಸಹಾಯವಾಗಿ ಪಡೆದಿರುವವನೂ ಆಗಿರುವ ವೀರ ಹನುಮನು - ಫಲಾಹಾರದಲ್ಲಿಯೂ ಮಧುಪಾನಾದಿಗಳಲ್ಲಿಯೂ ಉದ್ಯುಕ್ತರಾಗಿರುವ ವಾನರರನ್ನು ನೋಡಿ, ಎಲೈ ಕಪಿವೀರರುಗಳಿರಾ ! ನೀವೆಲ್ಲರೂ ಈ ವನದೊಳಗೆ ನಿರ್ಭಯರಾಗಿ ನುಗ್ಗಿ ನಿಮ್ಮ ನಿಮ್ಮ ಮನಬಂದಹಾಗೆ ಬೇಕಾದುದನ್ನೆಲ್ಲ ಪರಿಗ್ರಹಿಸಿ ಅನುಭವಿಸಬಹುದು. ನಿಮ್ಮನ್ನು ಯಾರಾದರು ಅಡ್ಡಿ ಮಾಡಲಿಕ್ಕೆ ಬಂದುದೇ ಆದರೆ ಅಂತಹ ಶತ್ರುಗಳನ್ನು ತಡೆದು ಶಿಕ್ಷಿಸಿ ಓಡಿಸುವೆನು ಎಂದು ಅಪ್ಪಣೆಯನ್ನು ಕೊಟ್ಟನು ॥೧½॥ ಮಧುಪಾನಾರ್ಥವಾಗಿ ಆಂಜನೇಯನು ಅನುಜ್ಞೆಯನ್ನಿತ್ತ ಕೂಡಲೆ ಅದನ್ನು ಕೇಳಿ ಯುವರಾಜನಾದ ಅಂಗದನು - ಬಹಳ ಸಂತಸಗೊಂಡವನಾಗಿ, ಹರಿಗಳನ್ನು ಕುರಿತು ಇಂತೆಂದನು. ಎಲೈ ವಾನರರುಗಳಿರಾ ! ಮಹತ್ತರವಾದ ಕಾರ್ಯಸಿದ್ಧಿಯನ್ನು ಪಡೆದುಬಂದಿರುವ ಆಂಜನೇಯನ ಅನುಮತಿಯಿಂದ ಮಾಡ

ಶ್ರುತ್ವಾ ಹನುಮತೋ ವಾಕ್ಯಂ ಹರೀಣಾಂ ಪ್ರವರೋಽಙ್ಗದಃ॥೨॥
ಪ್ರತ್ಯುವಾಚ ಪ್ರಸನ್ನಾತ್ಮಾ ಪಿಬಂತು ಹರಯೋ ಮಧು ।
ಅವಶ್ಯಂ ಕೃತಕಾರ್ಯಸ್ಯ ವಾಕ್ಯಂ ಹನುಮತೊ ಮಯಾ ॥ ೩ ॥
ಅಕಾರ್ಯ ಮಪಿ ಕರ್ತವ್ಯಂ ಕಿಮಂಗ ಪುನರೀದೃಶಮ್ ॥೩॥ ॥
ಅಂಗದಸ್ಯ ಮುಖಾ ಚ್ಛ್ರುತ್ವಾ ವಚನಂ ವಾನರರ್ಷಭಾಃ ।
ಸಾಧು ಸಾಧ್ವಿತಿ ಸಂಹೃಷ್ಟಾ ವಾನರಾಃ ಪ್ರತ್ಯಪೂಜಯನ್ ॥೪॥ ॥
ಪೂಜಯಿತ್ವಾಽಙ್ಗದಂ ಸರ್ವೇ ವಾನರಾ ವಾನರರ್ಷಭಮ್ ।
ಜಗ್ಮು ರ್ಮಧುವನಂ ಯತ್ರ ನದೀ ವೇಗಾ ಇವ ದ್ರುತಮ್ ॥೫॥ ॥

ವಾನರರುಗಳಿರಾ!, (ಭವಂತಃ-ನೀವುಗಳು, ಮಧು - ಮದ್ಯವನ್ನು, ಜೇನನ್ನು) ಪಿಬನ್ತು - ಪಾನಮಾಡಿರಿ, ॥೨॥ ಕೃತಕಾರ್ಯಸ್ಯ - ಮಾಡಿದಕೆಲಸವುಳ್ಳ, ಹನುಮತಃ- ಆಂಜನೇಯನ, ವಾಕ್ಯಂ- ಮಾತು, ಅಕಾರ್ಯಮಪಿ - ಮಾಡತಕ್ಕುದಲ್ಲದಿದ್ದರೂ, ಅವಶ್ಯಂ - ಮುಖ್ಯವಾಗಿ, ಕರ್ತವ್ಯಂ-ಮಾಡತಕ್ಕುದೇಸರಿ, (ಏವಂಸತಿ ಹೀಗಿರಲಾಗಿ) ಈದೃಶಂ- ಈಮಾಡತಕ್ಕುದೇ ಆಗಿರುವ ಕೆಲಸವನ್ನು, ಕಿಂಪುನಃ-ಮಾಡಿರೆಂದು ಹೇಳಬೇಕಾದುದೇನು ? ॥೩॥ ವಾನರರ್ಷಭಾಃ - ವಾನರೋತ್ತಮರಾದ, ವಾನರಾಃ- ಕಪಿಗಳು, ಅಂಗದಸ್ಯ ಯುವರಾಜನ, ಮುಖಾತ್ - ಮುಖದಿಂದ ಹೊರಟ, ವಚನಂ-ಮಾತನ್ನು,ಶ್ರುತ್ವಾ-ಕೇಳಿ, ಸಂಹೃಷ್ಟಾಃ-ಹೇರಳವಾಗಿ ಸಂತೋಷಿಸಿದವರಾಗಿ, ಸಾಧುಸಾಧ್ವಿತಿ - ಮೇಲುಮೇಲೆಂದು, ಪ್ರತ್ಯಪೂಜಯನ್-ಗೌರವಿಸಿದರು ॥೪॥ ಸರ್ವೇ- ಸಮಸ್ತರಾದ, ವಾನರಾಃ --ಕಪಿಗಳೂ, ವಾನರರ್ಷಭಂ-ಕಪಿಶ್ರೇಷ್ಠನಾದ, ಅಂಗದಂ-ಅಂಗದನನ್ನು, ಪೂಜಯಿತ್ವಾ-ಗೌರವಿಸಿ, ಯತ್ರ-ಎಲ್ಲಿ, ಮಧುವನಂ - ಮಧುವನವು, ಅಸ್ತಿ ಉಂಟೋ, ತತ್ರ-ಅಲ್ಲಿಗೆ, ನದೀವೇಗಾಇವ - ಹೊಳೆಗಳ ವೇಗಗಳಹಾಗೆ, ದ್ರುತಂ-ಬೇಗನೆ, ಜಗ್ಮುಃ-ನುಗ್ಗಿದರು ॥೫॥ ಪಟವಃ-ಸಮರ್ಥರಾಗಿರುವ, ಸರ್ವೇ - ಸಮಸ್ತರಾದ, ತೇ-ಆವಾನರರು, ವೈಧಿಲೀಂ-ಸೀತೆಯ ವೃತ್ತಾಂತವನ್ನು, ಶ್ರುತ್ವಾ - ಹನುಮನಿಂದ ಕೇಳಿ, ಮಧುವನಂ - ಸುಗ್ರೀವೋದ್ಯಾನವನ್ನು, ದೃಷ್ಟ್ವಾಚ-ನೋಡಿದಮೇಲೆ, ಪ್ರವಿಷ್ಟಾಃ - ಒಳಹೊಕ್ಕವರಾಗಿ, ವೀರ್ಯತಃ - ಪರಾಕ್ರಮದಿಂದಲೂ,

ಬಾರದ ಕೆಲಸವನ್ನಾದರೂ ಮಾಡತಕ್ಕುದೇ ಸರಿ. ಹೀಗಿರುವಲ್ಲಿ, ಇಂತಹ ಮಧುಪಾನರೂಪವಾದ ಸಂತೋಷದ ಕೆಲಸವನ್ನು ಮಾಡತಕ್ಕ ವಿಷಯದಲ್ಲಿ ಅಭ್ಯಂತರವೇನಿದೆ ? ನೀವೆಲ್ಲರೂ ಯಥೇಚ್ಛವಾಗಿ ಮಧುಪಾನವನ್ನು ಮಾಡಿರಿ ಎಂದು ತಾನೂ ಅಜ್ಞೆಯನ್ನಿತ್ತನು ॥೨, ೩॥ ॥ ಇಂತು ಅಂಗದನು—ಹನುಮಂತನ ಇಷ್ಟಾನುಸಾರವಾಗಿ ಮಧುಫಲಾದಿ ಭಕ್ಷಣೆಗೆ ಉತ್ತರವನ್ನು ಕೊಡಲು, ವಾನರ ವೀರರೆಲ್ಲ ಹೇರಳವಾಗಿ ಸಂತೋಷಿಸಿ, ಎಲೈ ಮಹಾಪ್ರಭುವೇ ! ನಿನಗೆ ಜಯವಾಗಲಿ ! ಕೃತಜ್ಞತೆಯಿಂದ ಆಂಜನೇಯನಿಗೆ ಗೌರವವನ್ನಿತ್ತು, ನಮ್ಮಗಳಿಗೆಲ್ಲ ಸಂತೋಷವನ್ನುಂಟುಮಾಡಲು ಮಧು ಭಕ್ಷಣಕ್ಕೆ ಆಜ್ಞೆಯನ್ನಿತ್ತುದು ಬಹು ಶ್ಲಾಘ್ಯವಾಗಿದೆ ಎಂದು ಅಂಗದನನ್ನು ವಿಶೇಷವಾಗಿ ಕೊಂಡಾಡಿದರು ॥೪॥ ॥ ಇಂತು ವಾನರವೀರರು ಆತನನ್ನು ಹೊಗಳಿ, ಮಹಾನದಿಗಳ ವೇಗಗಳು ಹೇಗೋ ಹಾಗೆ ಸರ್ವರೂ ಬಹು ಸಂಭ್ರಮದಿಂದ ಮಧು ವನಕ್ಕೆ ನುಗ್ಗಿದರು ॥೫॥ ॥ ವನದ ಒಳಹೊಕ್ಕ ಕೂಡಲೆ ತಂತಮ್ಮ ಪರಾಕ್ರಮದಿಂದ ಕಪಿಗಳು-ಹನುಮಂತನ ಮೂಲಕ

ತೇ ಪ್ರವಿಷ್ಟಾ ಮಧುವನಂ ಪಾಲಾ ನಾಕ್ರಮ್ಯ ವೀರ್ಯತಃ ॥ ೬ ॥
ಅತಿಸರ್ಗಾ ಚ್ಚ ಪಟವೋ ದೃಷ್ಟ್ವಾ ಶ್ರುತ್ವಾ ಚ ಮೈಥಿಲೀಮ್ ।
ಪಪು ಸ್ಸರ್ವೇ ಮಧು ತದಾ ರಸವ ತ್ಫಲ ಮಾದದುಃ ॥ ೭ ॥
ಉತ್ಪತ್ಯ ಚ ತತ ಸ್ಸರ್ವೇ ವನಪಾಲಾನ್ ಸಮಾಗತಾನ್ ।
ತಾಡಯಂತಿ ಸ್ಮ ಶತಶ ಸ್ಸಕ್ತಾನ್ ಮಧುವನೇ ತದಾ ॥ ೮ ॥
ಮಧೂನಿ ದ್ರೋಣ ಮಾತ್ರಾಣಿ ಬಾಹುಭಿಃ ಪರಿಗೃಹ್ಯ ತೇ ।
ಪಿಬಂತಿ ಸಹಿತಾ ಸ್ಸರ್ವೇ ಭಕ್ಷಯಂತಿ ತಥಾಽ ಪರೆ ॥ ೯ ॥
ಕೇಚಿ ತ್ಪೀತ್ವಾಽ ಪವಿಧ್ಯಂತಿ ಮಧೂನಿ ಮಧುಪಿಂಗಳಾಃ ।

ಅತಿಸರ್ಗಾಚ್ಚ-ಅಂಗದನ ಅನುಜ್ಞೆಯಿಂದಲೂ, ಪಾಲಾನ್-ವನಪಾಲಕರನ್ನು, ಆಕ್ರಮ್ಯ-ಆಕ್ರಮಿಸಿ, ತದಾ-ಆಗ, ರಸವತ್-ರುಚಿಯಾಗಿರುವ, ಮಧು-ಜೇನುತುಪ್ಪವನ್ನು (ಮದ್ಯವನ್ನು) ಪಪುಃ-ಪಾನಮಾಡಿದರು, ಫಲಂ-ಹಣ್ಣುಗಳನ್ನೂ, ಆದದುಃ-ಪರಿಗ್ರಹಿಸಿದರು (ತಿಂದರು) ॥೬, ೭॥ ಕಿಂಚ-ಮತ್ತು ತತಃ-ಆಮೇಲೆ, ಸರ್ವೇ-ಅಂಗದನ ಆಜ್ಞೆಯನ್ನು ಪಡೆದವರೆಲ್ಲರೂ, ಉತ್ಪತ್ಯ-ಹಾರಿ, ಸಮಾಗತಾನ್, ತಮ್ಮ ಮೇಲೆ ಬಿದ್ದುಬರುವ, ಮಧುವನೆ-ಮಧುವನದಲ್ಲಿ, ಸಕ್ತಾನ್-ಆಸಕ್ತರಾದ, ವನಪಾಲಾನ್-ವನಪಾಲರನ್ನು, ತದಾ-ಆಗ, ಶತಶಃ-ಅನೇಕ ವಿಧವಾಗಿ, ತಾಡಯಂತಿಸ್ಮ-ಹೊಡೆದರು ॥೮॥ ಸರ್ವೇ-ಸಮಸ್ತರಾದ, ತೇ-ಆ ವಾನರರು, ಸಹಿತಾಃ-ಒಟ್ಟುಗೂಡಿದವರಾಗಿ, ಬಾಹುಭಿಃ-ತೋಳುಗಳಿಂದ, ದ್ರೋಣಮಾತ್ರಾಣಿ-ಕೊಳಗಗಳಷ್ಟು ತೋರವಾಗಿರುವ, ಮಧೂನಿ-ಜೇನುಕೊಡಗಳನ್ನು, ಪರಿಗೃಹ್ಯ-ತೆಗೆದುಕೊಂಡು, ಪಿಬಂತಿಸ್ಮ-ಪಾನಮಾಡಿದರು, ಅಪರೆ-ಮತ್ತೆ ಕೆಲವರು, ಮಧೂನಿ-ಜೇನುಕೊಡಗಳನ್ನು, ನಿಘ್ನಂತಿಸ್ಮ ಹಾಳುಮಾಡಿದರು ॥೯॥ ಮಧುಪಿಂಗಳಾಃ-ಜೇನಿನಂತೆ ಪಿಂಗಳವರ್ಣವುಳ್ಳ, ಕೇಚಿತ್-ಕೆಲವಂದಿ ವಾನರರು, ಮಧೂನಿ-ಜೇನುಕೊಡಗಳನ್ನು, ಪೀತ್ವಾ-ಪಾನಮಾಡಿ, ಅಪವಿಧ್ಯಂತಿ-ಎಸೆಯುತಲಿದ್ದರು, ಕೇಚಿತ್-ಮತ್ತೆ ಕೆಲವರು, ಉತ್ಕಟಾಃ-ಮದದಿಂದ ಕೊಬ್ಬಿದವರಾಗಿ, ಮಧೂಚ್ಛಿಷ್ಟೇನ-

ಸೀತೆಯ ಕುಶಲ ವೃತ್ತಾಂತವನ್ನು ಕೇಳಿದುದರಿಂದಲೂ, ಆ ಮಧುವನದಲ್ಲಿನ ಮಧು ಫಲಾದಿಗಳ ಸಮೃದ್ಧಿಯನ್ನು ನೋಡುವುದರಿಂದಲೂ ಅಪಾರವಾದ ಸಂತೋಷವನ್ನು ಹೊಂದಿ, ಅಂಗದನ ಆಜ್ಞಾಬಲದಿಂದ ತಮ್ಮ ಪರಾಕ್ರಮಗಳನ್ನು ಪ್ರಕಾಶಗೊಳಿಸಿ, ಆ ವನವನ್ನು ಕಾವಲಿನಿಂದ ಕಾಪಾಡುತಲಿರುವ ವಾನರರನ್ನು ಲಕ್ಷ್ಯಮಾಡದೆ ತಿರಸ್ಕರಿಸಿ ಅಲ್ಲಿರುವ ರುಚಿಕರವಾದ ಜೇನನ್ನು ಕಿತ್ತು, ಮರಗಳಲ್ಲಿನ ಸವಿಯಾದ ಹಣ್ಣುಗಳನ್ನೆಲ್ಲಾ ಕುಯ್ದು ಸ್ವಾಧೀನಪಡಿಸಿಕೊಂಡರು ॥೬॥ ॥೭॥ ಮತ್ತು-ಶ್ಲಾಘ್ಯವೆನಿಸಿದ ಸಮೃದ್ಧಿಯಿಂದ ಮೆರೆಯುತಲಿರುವ ವನವನ್ನು ಆಕ್ರಮಿಸಿ. ತಮ್ಮನ್ನು ತಡೆಯುಲಿಕ್ಕೆ ಬರುತಲಿರುವ ವಾನರರನ್ನೆಲ್ಲ ಸುತ್ತಲೂ ಗುಂಪುಗುಂಪಾಗಿ ಮುತ್ತಿಕೊಂಡು, ಸ್ವೇಚ್ಛೆಯಿಂದ ಚೆನ್ನಾಗಿ ತಾಡಿಸಿದರು ॥೮॥ ಹಾಗೆಯೇ—ಒಂದೊಂದು ಕೊಳಗದಷ್ಟು ತುಪ್ಪದಿಂದ ತುಂಬಿರುವ ಜೇನು ಕೊಡಗಳನ್ನು ಕಿತ್ತು ತುಪ್ಪವನ್ನು ಒಬ್ಬೊಬ್ಬನೂ ಕುಡಿಯುತಲಿದ್ದನು, ಕೆಲವರು ಕುಡಿದುಳಿದುದನ್ನು ಕೆಳಗೆ ಒಗೆಯುತಲಿದ್ದರು ॥೯॥ ತುಪ್ಪದ ಒಣ್ಣದವರಾದ ಕೆಲವರು ತುಪ್ಪವನ್ನು ಕುಡಿದು ಸಿಪ್ಪೆಯನ್ನು ಎಸೆಯುತಲೂ, ಮತ್ತೆ ಕೆಲವರು ಕುಡಿತದಿಂದ ಮತ್ತರಾಗಿ

ಮಧೂಚ್ಛಿಷ್ಟೇನ ಕೇಚಿಚ್ಚ ಜಘ್ನು ರನ್ಯೋನ್ಯ ಮುತ್ಕಟಾಃ ॥ ೧೦ ॥
ಅಪರೇ ವೃಕ್ಷ ಮೂಲೇತು ಶಾಖಾಂ ಗೃಹ್ಯ ವ್ಯವಸ್ಥಿತಾಃ ।
ಅತ್ಯರ್ಥಂ ಚ ಮದಗ್ಲಾನಾಃ ಪರ್ಣಾನ್ಯಾಸ್ತೀರ್ಯ ಶೇರತೇ ॥ ೧೧ ॥
ಉನ್ಮತ್ತ ಭೂತಾಃ ಪ್ಲವಗಾ ಮಧು ಮತ್ತಾಶ್ಚ ಹೃಷ್ಟವತ್ ।
ಕ್ಷಿಪಂತಿ ಚ ತದಾಽನ್ಯೋನ್ಯಂ ಸ್ಖಲಂತಿ ಚ ತಥಾಽಪರೇ ॥ ೧೨ ॥
ಕೇಚಿತ್ ಕ್ಷ್ವೇಳಾಂ ಪ್ರಕುರ್ವಂತಿ ಕೇಚಿ ತ್ಕೂಜಂತಿ ಹೃಷ್ಟವತ್ ।
ಹರಯೋ ಮಧುನಾ ಮತ್ತಾಃ ಕೇಚಿ ತ್ಸುಪ್ತಾ ಮಹೀತಲೇ ॥ ೧೩ ॥
ಕೃತ್ವಾ ಕೇಚಿ ದ್ಧಸಂತ್ಯನ್ಯೇ ಕೇಚಿ ತ್ಕುರ್ವಂತಿ ಚೇತರತ್ ।

---

ಮೇಣದಿಂದ, ಅನ್ಯೋನ್ಯಂ- ಪರಸ್ಪರವಾಗಿ, ಜಘ್ನುಃ - ಹೊಡೆದಾಡಿದರು ॥೧೦॥ ಅಪರೇ-ಮತ್ತೆ ಕೆಲ ಮಂದಿ ವಾನರರು, ವೃಕ್ಷಮೂಲೇ - ಮರಗಳ ಬುಡಗಳಲ್ಲಿ, ಶಾಖಾಂ - ಮರದ ಕೊನೆಗಳನ್ನು, ಗೃಹ್ಯ- ಹಿಡಿದುಕೊಂಡು, ವ್ಯವಸ್ಥಿತಾಃ-ನಿಂತಿದ್ದರು, ಅಪರೇ- ಇತರರು, ಅತ್ಯರ್ಥಂ - ವಿಶೇಷವಾಗಿ, ಮದಗ್ಲಾನಾಃ-ಮದದಿಂದ ಬಾಡಿದವರಾಗಿ, (ಮತ್ತರಾಗಿ) ಪರ್ಣಾನಿ - ಎಲೆಗಳನ್ನು, ಆಸ್ತೀರ್ಯ-ಹಾಸಿಕೊಂಡು ಶೇರತೇ - ಮಲಗುತ್ತಿದ್ದರು ॥೧೧॥ ಮಧುಮತ್ತಾಃ - ಜೇನುಕುಡಿದು ಮದಿಸಿರುವವರಾದ ಕಾರಣವೇ, ಉನ್ಮತ್ತಭೂತಾಃ - ಹುಚ್ಚು ಹಿಡಿದವರಂತಾಗುತ್ತಾ, ಅಪರೇ - ಮತ್ತೆಕೆಲವುಮಂದಿ, ಪ್ಲವಗಾಃ-ಕಪಿಗಳು, ತದಾ-ಆಗ, ಅನ್ಯೋನ್ಯಂ-ಪರಸ್ಪರವಾಗಿ, ಹೃಷ್ಟವತ್ - ಸಂತೋಷವಾಗಿ, ಕ್ಷಿಪಂತಿ- ತಳ್ಳುತಲಿದ್ದರು, ತಥಾ-ಹಾಗೆಯೇ, ಸ್ಖಲಂತಿ- ತಟ್ಟಾಡುತಲಿದ್ದರು ॥೧೨॥ ಕೇಚಿತ್-ಕೆಲವರು, ಕ್ಷ್ವೇಳಾಂ-ಸಿಂಹನಾದವನ್ನು, ಪ್ರಕುರ್ವಂತಿ - ಮಾಡುತಲಿದ್ದರು, ಕೇಚಿತ್-ಮತ್ತೆ ಕೆಲವರು, ಹೃಷ್ಟವತ್-ಸಂತೋಷವಾಗಿ, ಕೂಜಂತಿ - ಧ್ವನಿಮಾಡುತ್ತಲಿದ್ದರು, ಕೇಚಿತ್-ಬೇರೆ ಕೆಲವುಮಂದಿ, ಹರಯಃ-ಕಪಿಗಳು, ಮಧುನಾ-ಮಕರಂದ ಪಾನದಿಂದ, ಮತ್ತಾಃ-ಮೈಮೇಲೆ ಪ್ರಜ್ಞೆಯಿಲ್ಲದವರಾಗಿ, ಮಹೀತಲೇ-ನೆಲದಮೇಲೆ, ಸುಪ್ತಾಃ-ಮಲಗಿ ನಿದ್ರೆಮಾಡುತಿದ್ದರು ॥೧೩॥ ಕೇಚಿತ್-ಕೆಲವರು (ಅವಾಚ್ಯಕರ್ಮ-ಹೇಳಬಾರದ ಕೆಲಸವನ್ನು)

---

ವಿನೋದದಿಂದ ಒಬ್ಬರನ್ನೊಬ್ಬರು ಕೋಡಗಳಿಂದ ಹೊಡೆದಾಡುತ್ತಿದ್ದರು ॥ ೧೦ ॥ ಇನ್ನು ಕೆಲವು ಮಂದಿ ವಾನರರು—ಮರಗಳ ಬುಡಗಳಲ್ಲಿ ನಿಂತು, ಶಾಖೆಗಳನ್ನು ಹಿಡಿದು ಜೋಲಾಡತೊಡಗಿದರು, ಬೇರೆ ಕೆಲವರು—ಮದವೇರಿ, ಮೈಮೇಲೆ ಪ್ರಜ್ಞೆಯಿಲ್ಲದೆ ಸೊಪ್ಪುಗಳನ್ನು ನೆಲದಮೇಲೆ ಎಳೆದುಕೊಂಡು, ಅವುಗಳ ಮೇಲೆ ಪವಳಿಸುತ್ತಲಿದ್ದರು ॥೧೧॥ ಇತರರು ಕೆಲಮಂದಿ ಜೇನನ್ನು ಹೀರಿ, ಮದವೇರಲು, ಪ್ರಜ್ಞೆಯಿಲ್ಲದೆ ಹುಚ್ಚರಂತೆ ಆಡುತ್ತಿದ್ದರು, ತದನ್ಯರು ಸಂತೋಷದಿಂದ ಉಬ್ಬಿ, ಒಬ್ಬರನ್ನೊಬ್ಬರು ತಳ್ಳುತ್ತಲೂ, ಮೇಲೆ ಬೀಳುತ್ತಲೂ; ಎತ್ತಿ ಹಾಕುತಲೂ, ಎಡಹುತಲೂ, ತಡಹುತಲೂ ಮುಗ್ಗರಿಸುತಲೂ, ಯದ್ವಾತದ್ವಾದ ಆಟಗಳನ್ನಾಡುತಿದ್ದರು ॥೧೨॥ ಕೆಲಕೆಲರು ಸಿಂಹನಾದವನ್ನು ಮಾಡಿದರು, ಮತ್ತೆ ಕೆಲವರು ಸಂತೋಷದಿಂದ ಹಕ್ಕಿಗಳ ಹಾಗೆ ಕೂಗಿದರು. ಮಧುಮತ್ತರಾದ ಮತ್ತೆ ಕೆಲವರು ಮೈಮರವೆಯಿಂದ ನೆಲದಮೇಲೆ ಬಿದ್ದು ಉರುಳಿದರು ॥೧೩॥ ಮದೋನ್ಮತ್ತರಾದ ಇನ್ನು ಕೆಲವರು ಹೇಳಬಾರದ ಮತ್ತು ಮಾಡಬಾರದ ಚೇಷ್ಟೆಗಳಿಂದ ಹಲ್ಕಿರಿದು ನಗುತಲೂ, ತಾವು ತಾವು ಮಾಡಿದ ಕೆಲಸಗಳನ್ನು

ಕೃತ್ವಾ ಕೇಚಿ ದ್ವದಂತ್ಯನ್ಯೇ ಕೇಚಿ ದ್ಬುಧ್ಯಂತಿ ಚೇತರತ್॥೧೪॥
ಯೇಽಪ್ಯತ್ರ ಮಧುಪಾಲಾಃ ಸ್ಯುಃ ಪ್ರೇಷ್ಯಾ ದಧಿಮುಖಸ್ಯ ತು ।
ತೇಽಪಿ ತೈರ್ವಾನರೈರ್ಭೀಮೈಃ ಪ್ರತಿಷಿದ್ಧಾ ದಿಶೋ ಗತಾಃ ॥೧೫॥
ಜಾನುಭಿಸ್ತು ಪ್ರಕೃಷ್ಟಾಶ್ಚ ದೇವಮಾರ್ಗಂ ಪ್ರದರ್ಶಿತಾಃ ।
ಅಬ್ರುವನ್ ಪರಮೋದ್ವಿಗ್ನಾ ಗತ್ವಾ ದಧಿಮುಖಂ ವಚಃ ॥೧೬॥
ಹನೂಮತಾ ದತ್ತವರೈರ್ಹತಂ ಮಧುವನಂ ಬಲಾತ್ ।

---

ಕೃತ್ವಾ-ಮಾಡಿ, ಹಸನ್ತಿ-ನಗುತಲಿದ್ದರು, ಅನ್ಯೇ-ಇತರರಾದ, ಕೇಚಿತ್ - ಮತ್ತೆ ಕೆಲವರು, ಇತರಚ್ಚ-ಬೇರೆ ಕೆಲಸವನ್ನು, ಕುರ್ವಂತಿ - ಮಾಡುತಲಿದ್ದರು, ಕೇಚಿತ್-ಇನ್ನು ಕೆಲವರು, ವದಂತಿ-ತಾವು ಮಾಡಿದ ಕೆಲಸಗಳನ್ನು) ಹೇಳುತಲಿದ್ದರು, ಅನ್ಯೇ - ತದಿತರರಾದ, ಕೇಚಿತ್ - ಕೆಲವರು, ಇತರತ್-ಬೇರೆ ಕೆಲಸವನ್ನು, ಬುಧ್ಯಂತಿ-(ಹೀಗೆ ಮಾಡಬೇಕೆಂದು) ಸಂಕಲ್ಪಿಸುತ್ತಿದ್ದರು ॥೧೪॥ (ಅಪಿಚ-ಮತ್ತು) ಅತ್ರ-ಈ ಮಧುವನದಲ್ಲಿ, ದಧಿಮುಖಸ್ಯ - ದಧಿಮುಖನ, ಪ್ರೇಷ್ಯಾಃ -ಭೃತ್ಯರಾದ, ಯೇ-ಯಾವ, ಮಧುಪಾಲಾಃ-ಜೇನು ಕೊಡಗಳಿಗೆ ಕಾವಲುಗಾರರಾಗಿ, ಸ್ಯುಃ - ಇದ್ದರೋ, ತೇಽಪಿ-ಅವರೂ, ಭೀಮೈಃ-ಭಯಂಕರರಾದ, ತೈಃ-ಅಂಗದಾಜ್ಞಾನುವರ್ತಿಗಳಾದ, ವಾನರೈಃ-ಕಪಿಗಳಿಂದ, ಪ್ರತಿಷಿದ್ಧಾಃ - ತಡೆಯಲ್ಪಟ್ಟವರಾಗಿ ದಿಶಃ - ದಿಕ್ಕುಗಳನ್ನು ಕುರಿತು, ಗತಾಃ-ಓಡಿದರು ॥೧೫॥ ತೇ-ಆ ದಧಿಮುಖನ ಕಡೆಯವರಾದ ವಾನರರು, ಜಾನುಭಿಃ-ಮೊಳಕಾಲುಗಳಿಂದ, ಪ್ರಕೃಷ್ಟಾಃ - ಹೊಡೆಯಲ್ಪಟ್ಟವರೂ, ದೇವಮಾರ್ಗಂ-ಅಪಾನ ಪ್ರದೇಶವನ್ನು, ಪ್ರದರ್ಶಿತಾಶ್ಚ - ತೋರಿಸಲ್ಪಟ್ಟವರೂ ಆಗಿ, ಪರಮೋದ್ವಿಗ್ನಾಃ-ಬಹಳ ಹೆದರಿದವರಾಗುತ್ತಾ, ಗತ್ವಾ-ಓಡಿಹೋಗಿ, ದಧಿಮುಖಂ-ದಧಿಮುಖನನ್ನು ಕುರಿತು, ವಚಃ-ಮಾತನ್ನು, ಅಬ್ರುವನ್-ಹೇಳಿದರು, ಹನೂಮತಾ-ಮಾರುತಿಯಿಂದ, ದತ್ತವರೈಃ- ಕೊಡಲ್ಪಟ್ಟ ವರವುಳ್ಳವರಿಂದ, (ಅನುಗ್ರಹಿಸಲ್ಪಟ್ಟವರಿಂದ) ಬಲಾತ್ - ಬಲಾತ್ಕಾರವಾಗಿ, ಮಧುವನಂ-ಸುಗ್ರೀವನ ಮಧುವನವು, ಹತಂ-ನಾಶಮಾಡಲ್ಪಟ್ಟಿತು ವಯಂಚ-ನಾವುಗಳೂ, ಜಾನುಭಿಃ-ಮೊಳಕಾಲುಗಳಿಂದ, ಕೃಷ್ಟಾಃ-ಹೊಡೆಯಲ್ಪಟ್ಟವು, ದೇವಮಾರ್ಗಂಚ-

---

ಹೇಳಿಕೊಳ್ಳುತಲೂ, ಮುಂದೆ ಇಂತಿಂತಹ ಕೆಲಸಗಳನ್ನು ಮಾಡಬೇಕೆಂದು ಯೋಚಿಸುತಲೂ ಇದ್ದರು ॥೧೪॥ ಇಂತಹ ಸಮಯದಲ್ಲಿ ಆ ಮಧುವನಕ್ಕೆ ಯಜಮಾನನಾಗಿರುವ ದಧಿಮುಖನಿಗೆ ದಾಸರಾಗಿ, ಆ ವನವನ್ನು ರಕ್ಷಿಸುತಲಿದ್ದ ವಾನರರು- ಅಂಗದ ಹನುಮರ ಆಜ್ಞಾನುವರ್ತಿಗಳಾಗಿ, ವನವನ್ನು ಹಾಳುಮಾಡುತಲಿರುವವರನ್ನು ತಡೆದು, ಅವರಿಂದ ಒದೆಗಳನ್ನು ತಿಂದು, ತಾಳಲಾರದೆ ದಿಕ್ಕಾಪಾಲಾಗಿ ಓಡಿಹೋದರು ॥೧೫॥ ಮತ್ತು- ಅಂಗದನ ಕಡೆಯವರಾದ ವಾನರರು....ದಧಿಮುಖನ ಕಡೆಯವರಾದ ವನಪಾಲರೊಳಗೆ ಕೆಲವರನ್ನು ಮೊಳಕಾಲುಗಳಿಂದ ತಿವಿದು, ತಮ್ಮ ಅಪಾನ ಪ್ರದೇಶವನ್ನು ಅವರಿಗೆ ತೋರಿ, ಅಪಮಾನಪಡಿಸಿ ಓಡಿಸಿದರು, ಹಾಗೆ ಪೆಟ್ಟುತಿಂದವರು ಹೆದರಿ ದಧಿಮುಖನಿದ್ದೆಡೆಗೆ ಓಡಿಹೋಗಿ ಅವನನ್ನು ಕುರಿತು—॥೧೬॥ ಎಲೈ ವನದೊಡೆಯನೆ ! ಹನುಮನ ಅಪ್ಪಣೆಯನ್ನು ಪಡೆದು ಅನೇಕ ಮಂದಿ ವಾನರರು—ಬಲಾತ್ಕಾರದಿಂದ, ವನದೊಳಗೆ ನುಗ್ಗಿ, ಜೇನು ಕೊಡಗಳನ್ನೆಲ್ಲಾ ಕಿತ್ತು, ಹಣ್ಣು ಹಂಪಲುಗಳನ್ನುದಿರಿಸಿ, ತೋಟವನ್ನು ಹಾಳುಮಾಡಿ, ಅತಿಕ್ರಮಿಸದಂತೆ ತಡೆಯಲಿಕ್ಕೆ ಹೋದ ನಮ್ಮನ್ನು ಕಾಲುಗಳಿಂದ ಒದೆದು, ಅಪಾನ ಪ್ರದೇಶವನು

ವಯಂಚ ಜಾನುಭಿಃ ಕೃಷ್ಟಾ ದೇವಮಾರ್ಗಂ ಚ ದರ್ಶಿತಾಃ ॥೧೭॥
ತತೋ ದಧಿಮುಖಃ ಕ್ರುದ್ಧೋ ವನಪಸ್ತತ್ರ ವಾನರಃ ।
ಹತಂ ಮಧುವನಂ ಶ್ರುತ್ವಾ ಸಾಂತ್ವಯಾಮಾಸ ತಾನ್ ಹರೀನ್ ॥೧೮॥
ಇಹಾ ಗಚ್ಛತ ಗಚ್ಛಾಮೋ ವಾನರಾನ್ ಬಲದರ್ಪಿತಾನ್ ।
ಬಲೇನ ವಾರಯಿಷ್ಯಾಮೋ ಮಧು ಭಕ್ಷಯತೋ ವಯಮ್ ॥೧೯॥
ಶ್ರುತ್ವಾ ದಧಿ ಮುಖಸ್ಯೇದಂ ವಚನಂ ವಾನರರ್ಷಭಾಃ ।
ಪುನ ರ್ವೀರಾ ಮಧುವನಂ ತೇನೈವ ಸಹಸಾ ಯಯುಃ ॥೨೦॥
ಮಧ್ಯೇ ತೇಷಾಂ ದಧಿಮುಖಃ ಪ್ರಗೃಹ್ಯ ಸುಮಹಾತರುಮ್ ।
ತಾನಭ್ಯ ಧಾವ ದ್ವೇಗೇನ ವೀರ್ಯೈ ರನ್ಯೈಃ ಪ್ಲವಂಗಮೈಃ ॥೨೧॥

---

ದೇವಮಾರ್ಗವನ್ನೂ, ದರ್ಶಿತಾಃ - ತೋರಿಸಲ್ಪಟ್ಟೆವು ॥ ೧೭ ॥ ತತಃ-ಆ ಹಿಂದೆ, ದಧಿಮುಖಃ-ದಧಿಮುಖನೆಂಬ, ವನಪಃ-ವನಪಾಲಕನಾದ, ವಾನರಃ-ಕಪಿಯು, ತತ್ರ-ಅಲ್ಲಿ, ಮಧುವನಂ-ಮಧುವನವನ್ನು ಹತಂ - ಹಾಳುಮಾಡಲ್ಪಟ್ಟದನ್ನಾಗಿ, ಶ್ರುತ್ವಾ - ಕೇಳಿ, ಕ್ರುದ್ಧಃ - ಕೋಪಗೊಂಡವನಾಗಿ, ತಾನ್ - ಆ ಹರೀನ್ - ತನ್ನ ಕಡೆಯ ಕಪಿಗಳನ್ನು, ಸಾಂತ್ವಯಾಮಾಸ - ಸಮಾಧಾನಪಡಿಸಿದನು ॥೧೮॥ ಇಹ - ಈ ನನ್ನ ಹಿಂದೆ, ಆಗಚ್ಛತ - ಬನ್ನಿರಿ, ಗಚ್ಛಾಮಃ - ಹೋಗೋಣ, ವಯಂ - ನಾವೆಲ್ಲರೂ, ಬಲದರ್ಪಿತಾನ್ ಬಲದಿಂದ ಕೊಬ್ಬಿರುವ, ಮಧು - ಜೇನನ್ನು, ಭಕ್ಷಯತಃ -ಭಕ್ಷಿಸುತಲಿರುವ, ವಾನರಾನ್ - ಕಪಿಗಳನ್ನು ಬಲೇನ - ಶಕ್ತಿಯಿಂದ (ನಮ್ಮ ಸೇನೆಯಿಂದ) ವಾರಯಿಷ್ಯಾಮಃ - ಓಡಿಸೋಣ ॥೧೯॥ ವೀರಾಃ - ಶೂರರಾದ, ವಾನರರ್ಷಭಾಃ - ವಾನರೋತ್ತಮರು, ದಧಿಮುಖಸ್ಯ - ದಧಿಮುಖನೆಂಬ ವನಪಾಲನ, ಇದಂ ಈ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಪುನಃ - ಮರಳಿ, ತೇನೈವ - ಆಮಾರ್ಗದಿಂದಲೇ, ಸಹಸಾ - ಬೇಗನೆ, ಮಧುವನಂ - ಮಧುವನವನ್ನು ಕುರಿತು, ಯಯುಃ - ಹೊರಟರು ॥೨೦॥ ತೇಷಾಂ - ಈ ಕಪಿಗಳ, ಮಧ್ಯೇ - ನಡುವೆ, ದಧಿಮುಖಃ - ದಧಿಮುಖನೆಂಬ ವನಪಾಲನು, ತರುಂ - ಮರವನ್ನು, ತರಸಾ - ವೇಗದಿಂದ, ಪ್ರಗೃಹ್ಯ - ತೆಗೆದುಕೊಂಡು, ವೇಗೇನ - ವೇಗದಿಂದ, ಸಮಭ್ಯಧಾವತ್ - ವನವನ್ನು ಹಾಳುಮಾಡುವವರಿಗಿದಿರಾಗಿ ಓಡಿಬಂದನು, ತೇ - ಆ, ಸರ್ವೇ - ಸಮಸ್ತರಾದ, ಪ್ಲವಂಗಮಾಃ - ಕಪಿಗಳೂ, (ಸಮಭ್ಯಧಾವನ್ - ಓಡಿಬಂದರು) ॥ ೨೧ ॥ ತೇ - ಆ

---

ತೋರಿ ತಿರಸ್ಕರಿಸಿ ಅಟ್ಟಿಬಿಟ್ಟರು ಎಂಥರು ॥೧೭॥ ಆ ವನದ ಯಜಮಾನನಾದ ದಧಿಮುಖನು-ವನವು ಹಾಳಾಯಿತೆಂಬ ಅವರ ಮಾತನ್ನು ಕೇಳಿ, ಹೇರಳವಾಗಿ ಸಿಟ್ಟುಗೊಂಡು ಪೆಟ್ಟು ಬಿದ್ದು ಬಂದವರನ್ನು ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸಿದನು ॥೧೮॥ ಮತ್ತು ಎಲೈ ವಾನರರುಗಳಿರಾ ! ನಾವೆಲ್ಲರೂ ಆ ದುಷ್ಟರು ಇರುವ ಬಳಿಗೆ ಹೋಗೋಣ ಬನ್ನಿರಿ. ಬಲದಿಂದ ಕೊಬ್ಬಿರುವ ಆ ದುರ್ಗಳರನ್ನು ಮಧು ವನವನ್ನು ಹಾಳುಮಾಡದಂತೆ ನಮ್ಮ ಬಲದಿಂದ ಅಡ್ಡಿಮಾಡೋಣ ಎಂದನು ॥೧೯॥ ದಧಿಮುಖನ ಮುಖದಿಂದ ಹೊರಟ ಆ ಮಾತನ್ನು ಕೇಳಿ, ಆತನ ಭೃತ್ಯರಾದ ವಾನರವೀರರು ಆತನೊಡನೆ ಕಲೆತು, ಮರಳಿ ಮಧುವನದ ತಡಿಗೈತಂದರು ॥೨೦॥ ಆ ಪಡೆಯ ನಡುವೆ ಇರುವ ದಧಿಮುಖನು ಪಕ್ಕದಲ್ಲಿದ್ದ ಎತ್ತರವಾದ ಮರವನ್ನು ನೋಡಿ, ಅದನ್ನು ತನ್ನ ಬಾಹುಬಲದಿಂದ ಬುಡಸಹಿತ ಕಿತ್ತು

ತೇ ಶಿಲಾಃ ಪಾದಪಾಂಶ್ಚಾಪಿ ಪಾಷಾಣಾಂಶ್ಚಾಪಿ ವಾನರಾಃ ।
ಗೃಹೀತ್ವಾಽಭ್ಯಗಮನ್ ಕ್ರುದ್ಧಾ ಯತ್ರ ತೇ ಕಪಿ ಕುಂಜರಾಃ ॥೨೨॥
ತೇ ಸ್ವಾಮಿ ವಚನಂ ವೀರಾ ಹೃದಯೇಷ್ವವಸಜ್ಯ ತತ್ ।
ತ್ವರಯಾಹ್ಯಭ್ಯಧಾವಂತ ಸಾಲತಾಲ ಶಿಲಾಯುಧಾಃ ॥೨೩॥
ವೃಕ್ಷಸ್ಥಾಂಶ್ಚ ತಲಸ್ಥಾಂಶ್ಚ ವಾನರಾನ್ ಬಲ ದರ್ಪಿತಾನ್ ।
ಅಭ್ಯ ಕ್ರಾಮಂ ಸ್ತತೋ ವೀರಾಃ ಪಾಲಾ ಸ್ತತ್ರ ಸಹಸ್ರಶಃ ॥೨೪॥
ಅಥದೃಷ್ಟ್ವಾ ದಧಿಮುಖಂ ಕ್ರುದ್ಧಂ ವಾನರ ಪುಂಗವಾಃ ।

ದಧಿಮುಖನ ಕಡೆಯುವರಾದ, ವಾನರಾಃ - ಕಪಿಗಳು, ಕ್ರುದ್ಧಾಃ - ಸಿಟ್ಟುಗೊಂಡವರಾಗಿ, ಶಿಲಾಃ - ಕಲ್ಲುಗಳನ್ನೂ, ಪಾದಪಾಂಶ್ಚಾಪಿ - ಮರಗಳನ್ನೂ, ಪರ್ವತಾಂಶ್ಚಾಪಿ - ಬೆಟ್ಟಗಳನ್ನೂ, ಗೃಹೀತ್ವಾ - ತೆಗೆದುಕೊಂಡು, ಯತ್ರ - ಯಾವ ಸ್ಥಳದಲ್ಲಿ, ತೇ - ಆ, ಕಪಿಕುಂಜರಾಃ-ವಾನರಶ್ರೇಷ್ಠರು, (ಆಗ- ಇದ್ದರೋ, ತತ್ರ - ಅಲ್ಲಿಗೆ) ಅಭ್ಯಗಮನ್ - ಇದಿರಾಗಿಬಂದರು ॥೨೨॥ ವೀರಾಃ - ಶೂರರಾದ, ತೇ-ಆ ವಾನರರು, ತತ್ - ಆ, ಸ್ವಾಮಿವಚನಂ-ತಮ್ಮದೊರೆಯಾದ ದಧಿಮುಖನ ಮಾತನ್ನು, ಹೃದಯೇಷು- ಮನಸ್ಸುಗಳಲ್ಲಿ, ಅವಸಜ್ಯ- ಇಟ್ಟುಕೊಂಡು, ಸಾಲ ತಾಲ ಶಿಲಾಯುಧಾಃ - ಸರ್ಜವೃಕ್ಷ, ತಾಳೆಯ ಮರ, ಬಂಡೆ ಇವುಗಳನ್ನೇ ಆಯುಧಗಳನ್ನಾಗಿ ಹಿಡಿದವರಾಗಿ, ತ್ವರಯಾ-ವೇಗದಿಂದ, ಅಭ್ಯಧಾವಂತ- ಓಡಿಬಂದರು ॥೨೩॥ ತತಃ - ಆ ಹಿಂದೆ, ತತ್ರ - ಇಲ್ಲಿ, ವೀರಾಃ - ಶೂರರಾದ, ಸಹಸ್ರಶಃ - ಸಾವಿರಾರುಮಂದಿ, ಪಾಲಾಃ - ಮಧುವನಪಾಲಕರು, ವೃಕ್ಷಸ್ಥಾಂಶ್ಚ - ಮರಗಳ ಮೇಲಿರುವವರನ್ನೂ, ತಲಸ್ಥಾಂಶ್ಚ - ನೆಲದ ಮೇಲಿರುವವರನ್ನೂ, ಬಲದರ್ಪಿತಾನ್ - ಬಲದಿಂದ ಕೊಬ್ಬಿರುವ, ವಾನರಾನ್ - ವಾನರರನ್ನು, ಅಭ್ಯಕ್ರಾಮನ್ - ಇದಿರಿಸಿದರು, ॥೨೪॥ ಅಥ-ಆಮೇಲೆ, ಹನುಮತ್ಪ್ರಮುಖಾಃ - ಹನುಮಂತನೇ ಮೊದಲಾಗಿರುವ, ವಾನರ ಪುಂಗವಾಃ - ಕಪಿಶ್ರೇಷ್ಠರು, ಕ್ರುದ್ಧಂ - ಸಿಟ್ಟುಗೊಂಡಿರುವ, ದಧಿಮುಖಂ- ದಧಿಮುಖನೆಂಬ ವಾನರನನ್ನು, ದೃಷ್ಟ್ವಾ - ನೋಡಿ, ತದಾ-ಆಗ, ವೇಗೇನ-ವೇಗದಿಂದ, ಅಭ್ಯಧಾವಂತ-

ಕೊಂಡು, ವನವನ್ನು ಹಾಳುಮಾಡುತಲಿರುವ ವಾನರರಿದ್ದೆಡೆಗೆ ಬಂದನು ॥೨೧॥ ಆತನ ಭೃತ್ಯರಾದ ವಾನರರೂ- ದೊಡ್ಡದೊಡ್ಡ ಬಂಡೆಗಳನ್ನೂ, ತೋರವಾದ ತರುಗಳನ್ನೂ ಬೆಟ್ಟಗಳನ್ನೂ ಕಿತ್ತು ಆಯುಧಗಳನ್ನಾಗಿ ಹಿಡಿದು, ಮಹಾರೋಷಪರವಶರಾಗಿ ದಧಿಮುಖನನ್ನು ಹಿಂಬಾಲಿಸಿ ಬಂದರು ॥೨೨॥ ಬಳಿಕ ದಧಿಮುಖಸೇವಕರು ಮಹಾಪರಾಕ್ರಮಶಾಲಿಗಳಾಗಿ ತಮ್ಮ ಪ್ರಭುವಿನಾಣತಿಯನ್ನು ಶಿರದೊಳಾಂತು, ಮನದೊಳಗೆ ಧೈರ್ಯವನ್ನು ತಾಳಿ, ತರುಗಳನ್ನೂ, ತಾಳೆಯ ಮರಗಳನ್ನೂ, ದೊಡ್ಡ ಅರೆಗಳನ್ನೂ ಆಯುಧಗಳನ್ನಾಗಿ ಉಪಯೋಗಿಸುತ್ತ ಹಗೆಗಳನ್ನಿದಿರಿಸಿದರು ॥೨೩॥ ಮಧುವಿಗಾಗಿ ಮರಗಳ ಮೇಲೆ ಕುಳಿತಿರುವವರನ್ನೂ, ಹಣ್ಣುಗಳಿಗಾಗಿ ನೆಲದಲ್ಲಿರುವವರನ್ನೂ,ಬಲದಿಂದ ಕೊಬ್ಬಿದವರನ್ನೂ ಸಾವಿರಾರು ಕಾವಲಿಗರು ಇದಿರಿಸಿ ಹೊಡೆಯಲಾರಂಭಿಸಿದರು ॥೨೪॥ ಆಗ ಹನುಮಂತನೇ ಮೊದಲಾದ ಕಪಿವೀರರು-ಇದಿರಾಳುಗಳು ಬಂದು ತಮ್ಮ ಕಡೆಯ ಕಪಿಗಳನ್ನು ತೊಂದರೆಪಡಿಸುತಲಿರುವುದನ್ನು ನೋಡಿ, ಓಹೋ ವನಪಾಲನಾದ ದಧಿಮುಖನು ಸಿಟ್ಟುಗೊಂಡು, ತಮ್ಮವರಿಗೆ ಅಡ್ಡಿಯಾಗದ ಹಾಗೂ, ವೇಧೆಯಾಗದ ಹಾಗೂ, ಮಾಡಬೇಕೆಂದು, ನೆನೆದು, ಬೇಗನೆ

ಅಭ್ಯಧಾವಂತ ವೇಗೇನ ಹನೂಮತ್ಪ್ರಮುಖಾಸ್ತದಾ ॥೨೫॥
ತಂ ಸವೃಕ್ಷಂ ಮಹಾಬಾಹುಮಾಪತಂತಂ ಮಹಾಬಲಮ್ ।
ಆರ್ಯಕಂ ಪ್ರಾಹರತ್ತತ್ರ ಬಾಹುಭ್ಯಾಂ ಕುಪಿತೋಽಂಗದಃ ॥೨೬॥
ಮದಾಂಧಶ್ಚ ನವೇದೈನ ಮಾರ್ಯಕೋಽಯಂ ಮಮೇತಿ ಸಃ ।
ಅಥೈನಂ ನಿಷ್ಪಿಪೇಷಾಶು ವೇಗವದ್ವಸುಧಾತಲೇ ॥೨೭॥
ಸಭಗ್ನಬಾಹೂರುಭುಜೋ ವಿಹ್ವಲಃ ಶೋಣಿತೋಕ್ಷಿತಃ ।
ಮುಮೋಹ ಸಹಸಾ ಭೀತೋ ಮುಹೂರ್ತಂ ಕಪಿಕುಂಜರಃ ॥೨೮॥
ಸ ಸಮಾಶ್ವಸ್ಯ ಸಹಸಾ ಸಂಕ್ರುದ್ಧೋ ರಾಜಮಾತುಲಃ ।

---

ದಧಿಮುಖನಿಗಿದಿರಾಗಿ ಓಡಿಬಂದರು ॥ ೨೫ ॥ ಅಂಗದಃ - ಅಂಗದನು, ಕುಪಿತಃ - ಕೋಪಗೊಂಡವನಾಗಿ, ತತ್ರ - ಅಲ್ಲಿ, ಸವೃಕ್ಷಂ - ವೃಕ್ಷದಿಂದ ಸಹಿತನಾದವನೂ, ಮಹಾಬಾಹುಂ - ಹೇರಳವಾದ ಬಾಹುಬಲವುಳ್ಳವನೂ, ಮಹಾಬಲಂ - ಹೆಚ್ಚಾದ ದೇಹಶಕ್ತಿಯುಳ್ಳವನೂ, ಆಪತಂತಂ - ತಮ್ಮ ಇದಿರಿಗೆ ಬರುತಲಿರುವವನೂ, ಆರ್ಯಕಂ - ತಮಗೆ ಪೂಜ್ಯನೂ ಆಗಿರುವ, ತಂ - ಆ ದಧಿಮುಖನನ್ನು, ಬಾಹುಭ್ಯಾಂ - ತೋಳುಗಳಿಂದ, ಪ್ರಾಹರತ್ - ಹೊಡೆದನು ॥೨೬॥ ಮದಾಂಧಃ - ಮದದಿಂದ ವೈಮೇಲೆ ಪ್ರಜ್ಞೆಯಿಲ್ಲದ, ಸಃ - ಆ ಅಂಗದನು, ಅಯಂ - ಇವನು, ಮಮ - ನನಗೆ, ಆರ್ಯಕಃ - ಪೂಜ್ಯನು, ಇತಿ - ಹೀಗೆಂದು, ನವೇದ - ಅರಿಯದೆ ಹೋದನು, ಅಥ - ಆ ಮೇಲೆ, ವೇಗವತ್ (ವೇಗವಂತಂ) ವೇಗವುಳ್ಳ, ಏನಂ - ಈ ದಧಿಮುಖನನ್ನು, ವಸುಧಾತಲೇ - ಭೂತಲದಲ್ಲಿ, ಆಶು - ಬೇಗನೆ, ನಿಷ್ಪಿಪೇಷ - ಹೊಸಕಿದನು ॥೨೭॥

ಭೀತಃ - ಪರಾಕ್ರಮಶಾಲಿಯಾದ, ಕಪಿಕುಂಜರಃ - ಕಪಿಶ್ರೇಷ್ಠನೆನಿಸಿರುವ, ಸಃ - ಆ ದಧಿಮುಖನು, ಭಗ್ನ - ಮುರಿದು ಹೋದ, ಬಾಹೂ - ತೋಳುಗಳೂ, ಊರು - ತೊಡೆಗಳೂ, ಭುಜಃ - ಹೆಗಲೂ ಉಳ್ಳವನಾಗಿ, ವಿಹ್ವಲಃ - ಖಿನ್ನನಾಗುತ್ತಾ, ಸಹಸಾ - ಬೇಗನೆ, ಶೋಣಿತೋಕ್ಷಿತಃ - ರಕ್ತದಿಂದ ನನೆದವನಾಗಿ, ಮುಹೂರ್ತಂ - ಸ್ವಲ್ಪಹೊತ್ತಿನವರೆಗೂ, ಮುಮೋಹ - ಮೂರ್ಛೆ ಬಿದ್ದನು ॥ ೨೮ ॥

---

ಅವರಿದಿರಿಗ ತಾವೂ ಓಂದರು ॥೨೫॥ ಹೇರಳವಾದ ಬಲವುಳ್ಳ ದಧಿಮುಖನು ದೊಡ್ಡ ಮರವನ್ನು ಕೈಯ್ಯಲ್ಲಿ ಹಿಡಿದು ಶೌರ್ಯವನ್ನು ತೋರುತ್ತಾ, ಇದಿರಿಗೆ ಬರುವ ದಧಿಮುಖನನ್ನು ನೋಡಿ, ಅಂಗದನು ಸಿಟ್ಟುಗೊಂಡು, ತನ್ನ ಚಿಕ್ಕಪ್ಪನಾದ ಸುಗ್ರೀವನಿಗೆ ಸೋದರ ಮಾವನೆನಿಸಿ, ತನಗೆ ಪೂಜ್ಯನಾಗಿದ್ದರೂ, ಆ ದಧಿಮುಖನನ್ನು ಲಕ್ಷ್ಯಮಾಡದೆ, ತನ್ನ ಎರಡು ಕೈಗಳಿಂದಲೂ ಅವನನ್ನು ಅಪ್ಪಳಿಸಿದನು ॥೨೬॥ ಆಗ ಅಂಗದನೂ ಮಧುಪಾನದಿಂದ ಮದಿಸಿದ್ದನಾದುದರಿಂದಲೇ ಇವನು ದಧಿಮುಖ, ತನಗೆ ಪೂಜ್ಯ ಎಂಬುದನ್ನೂ ಅರಿಯದೆ ಅವನನ್ನು ಬೇಗನೆ ಹೊಡೆದು, ನೆಲದ ಮೇಲೆ ಕೆಡಹಿ, ಕಾಲಿನಿಂದ ಅದುಮಿ, ಹೊರಳಿಸಿ ಕೆಡಹಿದನು ॥೨೭॥ ದಧಿಮುಖನ ತೋಳಿಗೆ ಪೆಟ್ಟುಬಿದ್ದಿತು. ತೊಡೆಗಳಿಗೆ ನೋವು ತಗಲಿತ್ತು, ಹೆಗಲಿಗೆ ವೇದನೆಯಾಯಿತು. ಸಪ್ಪಗಾಗಿ ಬಿದ್ದನು, ಗಾಯಗಳಿಂದ ಹೊರಟ ರಕ್ತದಲ್ಲಿ ನನೆದನು, ಮಹಾವೀರನಾದ ದಧಿಮುಖನು ಸ್ವಲ್ಪ ಹೊತ್ತಿನವರೆಗೂ ಮೂರ್ಛೆ ಬಿದ್ದನು ॥ ದಧಿಮುಖನಾದರೆ ಸಕಲ ಕಪಿಕುಲ ಸಾರ್ವಭೌಮನಾದ ಸುಗ್ರೀವನಿಗೆ ಸೋದರ ಮಾವ

ವಾನರಾನ್ ವಾರಯಾಮಾಸ ದಂಡೇನ ಮಧುಮೋಹಿತಾನ್ ॥೨೯॥
ಸ ಕಥಂಚಿ ದ್ವಿಮುಕ್ತಸ್ತೈ ರ್ವಾನರೈ ರ್ವಾನರರ್ಷಭಃ ।
ಉವಾಚೈ ಕಾಂತ ಮಾಗಮ್ಯ ಸ್ವಾನ್ ಭೃತ್ಯಾನ್ ಸಮುಪಾಗತಾನ್ ॥೩೦॥
ಏತೇ ತಿಷ್ಠಂತು ಗಚ್ಛಾಮೋ ಭರ್ತಾ ನೋ ಯತ್ರ ವಾನರಃ ।
ಸುಗ್ರೀವೋ ವಿಪುಲಗ್ರೀವೋ ಸಹ ರಾಮೇಣ ತಿಷ್ಠತಿ ॥೩೧॥
ಸರ್ವಂ ಚೈವಾಂಗದೇ ದೋಷಂ ಶ್ರಾವಯಿಷ್ಯಾಮಿ ಪಾರ್ಥಿವೇ ।
ಅಮರ್ಷೀ ವಚನಂ ಶ್ರುತ್ವಾ ಘಾತಯಿಷ್ಯತಿ ವಾನರಾನ್ ॥೩೨॥

ರಾಜಮಾತುಲಃ - ಸುಗ್ರೀವನಿಗೆ ಸೋದರ ಮಾವನಾದ, ಸಃ - ಆದಧಿಮುಖನು, ಸಹಸಾ-ಬೇಗನೆ ಸಮಾಶ್ವಾಸ್ಯ - ಸಮಾಧಾನಮಾಡಿಸಿಕೊಂಡು, (ಮೂರ್ಛೆ-ತಿಳಿದೆದ್ದು) ಸಂಕ್ರುದ್ಧಃ - ರೋಷಗೊಂಡವನಾಗಿ, ಮಧುಮೋಹಿತಾನ್ - ಮಧುಪಾನದಿಂದ ಮೈಮರೆತಿರುವ, ವಾನರಾನ್ - ಕಪಿಗಳನ್ನು, ದಂಡೇನ-ಬೆತ್ತದಿಂದ, ವಾರಯಾಮಾಸ - ತೊಲಗಿಸತೊಡಗಿದನು ॥೨೯॥ ವಾನರರ್ಷಭಃ - ಕಪಿಶ್ರೇಷ್ಠನಾದ, ಸಃ - ಆ ದಧಿಮುಖನು, ತೈಃ - ತನ್ನಿಂದ ಪೆಟ್ಟುಬಿದ್ದ, ವಾನರೈಃ - ಕಪಿಗಳಿಂದ, ಕಥಂಚಿತ್ - ಬಹುಕಷ್ಟದಿಂದ, ವಿಮುಕ್ತಃ-ಬಿಡಲ್ಪಟ್ಟವನಾಗಿ, ಏಕಾಂತಂ - ಗುಟ್ಟಿದ ಸ್ಥಳವನ್ನು, ಆಶ್ರಿತ್ಯ - ಹೊಂದಿ ಸಮುಪಾಗತಾನ್-ತನ್ನ ಬಳಿಗೆ ಬಂದ, ಸ್ವಾನ್-ತನ್ನವರಾದ, ಭೃತ್ಯಾನ್-ಸೇವಕರನ್ನು ಕುರಿತು, ಉವಾಚ-ಹೇಳಿದನು ॥೩೦॥ ಏತೇ-ನಮ್ಮವನವನ್ನು ಹಾಳುಮಾಡುತಲಿರುವ ಈವಾನರರು, ತಿಷ್ಠಂತು - ಇಲ್ಲಿಯೇ ಇರಲಿ, ನಃ - ನಮಗೆ, ಭರ್ತಾ - ಪ್ರಭುವಾದ, ವಿಪುಲಗ್ರೀವಃ-ತೋರವಾದ ಕೊರಳುಳ್ಳ ಸುಗ್ರೀವಃ-ಸುಗ್ರೀವನೆಂಬ, ವಾನರಃ-ಕಪಿರಾಜನು, ರಾಮೇಣ ಸಹ - ರಾಮನೊಡನೆ, ಯತ್ರ- ಯಾವಸ್ಥಲದಲ್ಲಿ, ತಿಷ್ಠತಿ-ಇರುವನೆಯೋ, ತತ್ರ-ಅಲ್ಲಿಗೆ, ಗಚ್ಛಾಮಃ - ಹೋಗೋಣ ॥೩೧॥ ಅಂಗದೇಚೈವ - ಅಂಗದನಲ್ಲಿಯೇ, ಸರ್ವಂ - ಸಮಸ್ತವಾದ, ದೋಷಂ -ತಪ್ಪನ್ನು, ಪಾರ್ಥಿವೇ-ಸುಗ್ರೀವನಲ್ಲಿ, (ಸುಗ್ರೀವನಿಗೆ) ಶ್ರಾವಯಿಷ್ಯಾಮಿ - ಶ್ರುತಪಡಿಸುವೆನು, ಸಃ-ಆ ಸುಗ್ರೀವನು, ವಚನಂ - ನನ್ನ ಮಾತನ್ನು, ಶ್ರುತ್ವಾ-ಕೇಳಿ, ಅಮರ್ಷೀ-ರೋಷಪೂರ್ಣನಾಗಿ, ವಾನರಾನ್-ಈ ಕಪಿಗಳನ್ನು, ಘಾತಯಿಷ್ಯತಿ - ಹೊಡೆಯಿಸುವನು,

ಆದರೂ, ತನಗೂ ಇಂತಹ ಅವಸ್ಥೆಯು ಸಂಭವಿಸಿತು ಎಂದು ವಿಶೇಷವಾಗಿ ರೋಷಗೊಂಡವನಾದರೂ, ಸ್ವಲ್ಪಹೊತ್ತಿನ ಮೇಲೆ ಚೇತರಿಸಿಕೊಂಡೆದ್ದು, ಕೈಲಿ ದಂಡವನ್ನು ಹಿಡಿದು, ಮಧುಪಾನದಿಂದ ಮತ್ತರಾಗಿದ್ದ ಕೆಲಮಂದಿ ಕಪಿಗಳನ್ನು ಶಿಕ್ಷಿಸಿ ಓಡಿಸಿದನು ॥೨೯॥ ಆದರೂ ದಧಿಮುಖನನ್ನು ಬಿಡದೆ ಕಪಿಗಳೆಲ್ಲ ಸುತ್ತಿಕೊಂಡು, ಹೊಡೆಯಲಿಕ್ಕೆ ಆರಂಭಿಸಿದರು. ಆಗ-ದಧಿಮುಖನು ಬಹುಕಷ್ಟಪಟ್ಟು ಅವರಿಂದ ತನ್ನನ್ನು ಬಿಡಿಸಿಕೊಂಡು, ತನ್ನವರನ್ನೆಲ್ಲ ಏಕಾಂತದಲ್ಲಿ ಒಂದು ಕಡೆ ಸೇರಿಸಿ ಇಂತೆಂದನು॥೩೦॥ ಎಲೈ ಸೇವಕರುಗಳಿರಾ! ಈ ಅಂಗದ, ಹನುಮ ಮೊದಲಾದವರೆಲ್ಲರೂ ಈ ವನವನ್ನು ಹಾಳುಮಾಡುತ್ತಾ ಇಲ್ಲಿಯೇ ಇರಲಿ. ತೋರವಾದ ಕೊರಳುಳ್ಳ ನಮ್ಮ ಪ್ರಭುವಾದ ಸುಗ್ರೀವನು ಎಲ್ಲಿರುವನೋ, ನಾವೆಲ್ಲರೂ ಅಲ್ಲಿಗೇ ಹೋಗೋಣ, ಆತನು ರಾಮನ ಸಂಗಡಲೇ ಸೇರಿ ಇರುವನು ॥೩೧॥ ಇಲ್ಲಿ ನಡೆದ ಹಾವಳಿಯೆಲ್ಲ ಅಂಗದನದೇ ಆಗಿದೆ, ಆದಕಾರಣ ಸಮಸ್ತದೋಷಕ್ಕೂ ಅಂಗದನೇ ಮೂಲವೆಂದು ರಾಜನಾದ ಸುಗ್ರೀವನಿಗೆ ಬಿನ್ನವಿಸುವೆನು, ನನ್ನ ಮಾತನ್ನು ಕೇಳಿದೊಡನೆಯೇ ಅರಸು ಬಹಳವಾಗಿ ಸಿಟ್ಟುಗೊಂಬನು. ಈ ದುಷ್ಟವಾನರರನ್ನೆಲ್ಲಾ

ಇಷ್ಟಂ ಮಧುವನಂ ಹ್ಯೇತ ತ್ಸುಗ್ರೀವಸ್ಯ ಮಹಾತ್ಮನಃ ।
ಪಿತೃ ಪೈತಾಮಹಂ ದಿವ್ಯಂ ದೇವೈರಪಿ ದುರಾಸದಮ್ ॥೩೩॥
ಸ ವಾನರಾ ನಿಮಾನ್ ಸರ್ವಾ ನ್ಮಧು ಲುಬ್ಧಾನ್ ಗತಾಯುಷಃ ।
ಘಾತಯಿಷ್ಯತಿ ದಂಡೇನ ಸುಗ್ರೀವ ಸ್ಸ ಸುಹೃಜ್ಜನಾನ್ ॥೩೪॥
ವಧ್ಯಾಹ್ಯೇತೇ ದುರಾತ್ಮಾನೋ ನೃಪಾಜ್ಞಾ ಪರಿಭಾವಿನಃ ।
ಅಮರ್ಷ ಪ್ರಭವೋ ರೋಷ ಸ್ಸಫಲೋ ನೋಭವಿಷ್ಯತಿ ॥೩೫॥
ಏವ ಮುಕ್ತ್ವಾ ದಧಿಮುಖೋ ವನಪಾಲಾನ್ ಮಹಾಬಲಃ।
ಜಗಾಮ ಸಹಸೋತ್ಪತ್ಯ ವನಪಾಲೈ ಸ್ಸಮನ್ವಿತಃ ॥೩೬॥

---

॥೩೩॥ ಏತತ್ - ಈ, ಮಧುವನಂ - ಮಧುವನವು, ಮಹಾತ್ಮನಃ - ಮಹಾನುಭಾವನಾದ, ಸುಗ್ರೀವಸ್ಯ - ಸುಗ್ರೀವನಿಗೆ, ಇಷ್ಟಂ-ಪ್ರೀತಿಪಾತ್ರವಾದುದು. ಪಿತೃಪೈತಾಮಹಂ - ತಂದೆತಾತಂದಿರಿಂದ ಬಂದುದು, ದಿವ್ಯಂ - ಶ್ರೇಷ್ಠವೆನಿಸಿದುದು, ದೇವೈರಪಿ - ದೇವತೆಗಳಿಂದಲೂ, ದುರಾಸದಂ - ಹೊಗಲಸದಳವೆನಿಸಿದುದು, ॥೩೪॥ ಸಃ - ಆ ಸುಗ್ರೀವನು, ಮಧುಲುಬ್ಧಾನ್ - ಮಧುಪಾನದಲ್ಲಿ ಆಶೆಯುಳ್ಳ, ಗತಾಯುಷಃ - ಕಳೆದ ಆಯುಷ್ಯವುಳ್ಳ, ಸಸುಹೃಜ್ಜನಾನ್ - ಮಿತ್ರರಿಂದೊಡಗೂಡಿದ, ಇಮಾನ್ - ಈ, ಸರ್ವಾನ್ - ಸಮಸ್ತರಾದ, ವಾನರಾನ್ -ಕಪಿಗಳನ್ನು, ದಂಡೇನ - ಕಟ್ಟಿಗೆಯಿಂದ, ಘಾತಯಿಷ್ಯತಿ - ಹೊಡೆಸುವನು ॥೩೫॥ ದುರಾತ್ಮಾನಃ - ದುಷ್ಟಬುದ್ಧಿಯುಳ್ಳ, ಏತೇ - ಈ ವಾನರರು, ನೃಪಾಜ್ಞಾಪರಿಭಾವಿನಃ - ಸುಗ್ರೀವಾಜ್ಞೆಯನ್ನು ತಿರಸ್ಕರಿಸಿರುವವರಾದ ಕಾರಣವೇ, ವಧ್ಯಾಃಹಿ - ಕೊಲ್ಲಲ್ಪಡತಕ್ಕವರೇ ಆಗಿರುವರು. ಅಮರ್ಷಪ್ರಭವಃ - ಅಸಹನದಿಂದುಂಟಾಗಿರುವ, ನಃ- ನಮ್ಮ, ರೋಷಃ- ಕೋಪವು, ಸಫಲಃ - ಪ್ರಯೋಜನದಿಂದ ಸಹಿತವಾದುದು, ಭವಿಷ್ಯತಿ-ಆಗುವುದು, (ಇತಿ ದಧಿಮುಖಃ ಭೃತ್ಯಾನ್ ಉವಾಚ) ॥೩೬॥ ಮಹಾಬಲಃ - ಹೇರಳವಾದ ಬಲವುಳ್ಳ, ದಧಿಮುಖಃ - ದಧಿಮುಖನು, ವನಪಾಲಾನ್ - ವನಪಾಲಕರನ್ನು ಕುರಿತು, ಏವಂ - ಈ ಪ್ರಕಾರವಾಗಿ ಉಕ್ತ್ವಾ - ಹೇಳಿ, ವನಪಾಲೈಃ - ತೋಟದ ಕಾವಲುಗಾರರೊಡನೆ, ಸಮನ್ವಿತಃ - ಕೂಡಿದವನಾಗಿ, ಸಹಸಾ - ಬೇಗನೆ,

---

ಚೆನ್ನಾಗಿ ದಂಡಿಸುವನು ॥ ೩೨ ॥ ಏಕೆಂದರೆ-ಈ ಮಧುವನವು ಕಪಿರಾಜನಾದ ಸುಗ್ರೀವನಿಗೆ ಅತ್ಯಂತ ಇಷ್ಟವಾದುದು. ಇದಲ್ಲದೆ ಆತನ ತಂದೆ ತಾತಂದಿರಕಾಲದಿಂದಲೂ ಅನುಸರಿಸಿ ಬಂದಿದೆ. ದೇವತೆಗಳು ಕೂಡ ಇದರ ಒಳಹೊಗಲು ಹೆದರುತ್ತಿರುವರು ॥೩೩॥ ಇಂತಹ ರಮಣೀಯವಾದವನದಲ್ಲಿ ಮಧುವನ್ನು ಕುಡಿದು, ಈ ದುರುಳರು ಹಾಳುಮಾಡುವರೆಂಬ ಸಂಗತಿಯೂ ಆತನಿಗೆ ತಿಳಿದರೆ, ಇವರ ಆಯುಷ್ಯವೇ ಮುಗಿಯಿತು. ಸುಗ್ರೀವನೆಂದರೇನು ಸಾಮಾನ್ಯನೆ ? ಮಹಾ ಕ್ರೂರವಾದ ಆಜ್ಞೆಯುಳ್ಳವನಲ್ಲವೆ ? ಮಿತ್ರಬಾಂಧವರೊಡನೆ ಇವರೆಲ್ಲರನ್ನೂ ಧ್ವಂಸಮಾಡಿಸುವನು ॥೩೪॥ ಅಂತಹ ಸಾರ್ವಭೌಮನ ಅಪ್ಪಣೆಯನ್ನು ಈ ಖೂಳರು ಅತಿಕ್ರಮಿಸಿ ಇರುವರಲ್ಲಾ ? ಇವರಿಗಿಂತಲೂ ದುರಾತ್ಮರಿನ್ನುಂಟೆ ? ಇವರ ದುರುಳ ತನಕ್ಕೆ ತಕ್ಕಫಲವನ್ನು ಅನುಭವಿಸುವರು, ನಮಗೆ ಇವರು ರೋಷವನ್ನು ಉಂಟುಮಾಡಿದ್ದು ವ್ಯರ್ಥವಾಗುವುದಿಲ್ಲ. ನಡೆಯಿರಿ, ಎಲ್ಲರೂ ಹೊರಡೋಣ ಎಂದು ಹೇಳಿ॥೩೫॥ ವನಪಾಲನಾದ ದಧಿಮುಖನು ವನಪಾಲರನ್ನೆಲ್ಲ ಸಂಗಡ ಕರೆದುಕೊಂಡು ಬಹುವೇಗದಿಂದ

ನಿಮೇಷಾಂತರ ಮಾತ್ರೇಣ ಸಹಿ ಪ್ರಾಪ್ತೋ ವನಾಲಯಃ ।
ಸಹಸ್ರಾಂಶು ಸುತೋ ಧೀಮಾನ್ ಸುಗ್ರೀವೋ ಯತ್ರ ವಾನರಃ ॥೩೭॥
ರಾಮಂಚ ಲಕ್ಷ್ಮಣಂ ಚೈವ ದೃಷ್ಟ್ವಾ ಸುಗ್ರೀವ ಮೇವಚ ।
ಸಮ ಪ್ರತಿಷ್ಠಾಂ ಜಗತೀ ಮಾಕಾಶಾ ನ್ನಿಪಪಾತಹ ॥೩೮॥
ಸನ್ನಿಪತ್ಯ ಮಹಾವೀರ್ಯ ಸ್ಸರ್ವೈ ಸ್ತೈಃ ಪರಿವಾರಿತಃ ।
ಹರಿ ರ್ದಧಿಮುಖಃ ಪಾಲೈಃ ಪಾಲಾನಾಂ ಪರಮೇಶ್ವರಃ ॥೩೯॥
ಸ ದೀನ ವದನೋ ಭೂತ್ವಾ ಕೃತ್ವಾ ಶಿರಸಿ ಚಾಂಜಲಿಮ್ ।
ಸುಗ್ರೀವಸ್ಯ ಶುಭೌ ಮೂರ್ಧ್ನಾ ಚರಣೌ ಪ್ರತ್ಯಪೀಡಯತ್ ॥೪೦॥

ಇತಿ ಶ್ರೀಮತ್ಸುಂದರಕಾಂಡೇ-ದ್ವಿಷಷ್ಠಿತಮಸ್ಸರ್ಗಃ

---

ಉತ್ಪತ್ಯ - ಹಾರಿ, ಜಗಾಮ - ಹೊರಟನು ॥೩೬॥ ಸಃ - ಆ, ವನಾಲಯಃ - ಕಾಡುಮನೆಯುವನಾದ ದಧಿಮುಖನು, ಸಹಸ್ರಾಂಶು ಸುತಃ - ಸೂರ್ಯ ಪುತ್ರನಾದ, ಧೀಮಾನ್ - ಪ್ರಶಸ್ತ ಬುದ್ಧಿಯುಳ್ಳ, ಸುಗ್ರೀವಃ - ಸುಗ್ರೀವನೆಂಬ, ವಾನರಃ - ಕಪೀಶ್ವರನು, ಯತ್ರ - ಎಲ್ಲಿ, (ಅಸ್ತಿ - ಇರುವನೆಯೋ) ತತ್ರ - ಅಲ್ಲಿಗೆ, ನಿಮೇಷಾಂತರ ಮಾತ್ರೇಣ - ರೆಪ್ಪೆ ಬಡಿಯುವಷ್ಟರೊಳಗೆ, ಪ್ರಾಪ್ತಃ - ಬಂದನು ॥೩೭॥ ಸಃ- ಆ ದಧಿಮುಖನು, ರಾಮಂಚ - ಶ್ರೀರಾಮನನ್ನೂ, ಲಕ್ಷ್ಮಣಂಚೈವ - ಲಕ್ಷ್ಮಣನನ್ನೂ, ಸುಗ್ರೀವ ಮೇವಚ - ಸುಗ್ರೀವನನ್ನೂ, ದೃಷ್ಟ್ವಾ - ನೋಡಿ, ಆಕಾಶಾತ್ - ಆಗಸದಿಂದ, ಸಮಪ್ರತಿಷ್ಠಾಂ - ಸಮಭೂಮಿಯುಳ್ಳ, ಜಗತೀಂ - ನೆಲವನ್ನು ಕುರಿತು, ನಿಪಪಾತ - ಇಳಿದನು ॥೩೮॥ ಮಹಾ ವೀರ್ಯಃ- ಮಹಾ ಪರಾಕ್ರಮವುಳ್ಳ, ಪಾಲಾನಾಂ - ಮಧುವನ ಪಾಲಕರಿಗೆ, ಪರಮೇಶ್ವರಃ - ಮುಖ್ಯಪ್ರಭುವಾದ, ಸಃ - ಆ ದಧಿಮುಖನೆಂಬ, ಹರಿಃ - ವಾನರನು, ಪಾಲೈಃ - ವನಪಾಲಕರಾದ, ಸರ್ವೈಃ - ಸಮಸ್ತರಾಗಿರುವ, ತೈಃ - ಆ ವಾನರರೊಡನೆ, ಪರಿವಾರಿತಃ - ಸುತ್ತಲ್ಪಟ್ಟವನಾಗಿ, ಸನ್ನಿಪತ್ಯ- ಸಮೀಪಕ್ಕೆ ಬಂದು, ದೀನವದನಃ - ಕಳೆಗುಂದಿದ ಮೋರೆಯುಳ್ಳವನು, ಭೂತ್ವಾ - ಆಗಿ, ಶಿರಸಿ - ತಲೆಯಲ್ಲಿ, ಅಂಜಲಿಂಚ- ಕೈಜೋಡಿಸೋಣವನ್ನು, ಕೃತ್ವಾ - ಮಾಡಿ, ಸುಗ್ರೀವಸ್ಯ - ಸುಗ್ರೀವನ, ಶುಭೌ - ಮಂಗಳ ಕರಗಳೆನಿಸಿದ, ಚರಣೌ - ಪಾದಗಳನ್ನು, ಮೂರ್ಧ್ನಾ-ತಲೆಯಿಂದ, ಪ್ರತ್ಯಪೀಡಯತ್-ಒತ್ತಿದನು ॥೩೯, ೪೦॥

— ಇಂತು ಅರುವತ್ತೆರಡನೆಯ ಸರ್ಗಂ —

---

ಒಡಗೂಡಿದವನಾಗಿ ಅಲ್ಲಿಂದ ಹಾರಿ ಹೊರಟನು ॥೩೬॥ ಮುಹೂರ್ತಮಾತ್ರದಲ್ಲಿಯೇ-ಸೂರ್ಯಪುತ್ರನೆನಿಸಿ ಕಪಿಸಾರ್ವಭೌಮನೂ ಆಗಿರುವ ಸುಗ್ರೀವನಿದ್ದ ಸ್ಥಳಕ್ಕೆ ಬಂದನು ॥೩೭॥ ಬಂದಾನೊಂದು ಸಮಭೂಮಿಯಲ್ಲಿ ರಾಮಲಕ್ಷ್ಮಣರೊಡನೆ ಕುಳಿತಿರುವ ಸುಗ್ರೀವನನ್ನು ಕಂಡೆನು, ನಭೋಮಂಡಲದಿಂದ ಭೂಮಂಡಲಕ್ಕೆ ಇಳಿದನು ॥೩೮॥ ತನ್ನ ಭೃತ್ಯರಾದ ಸಮಸ್ತ ವಾನರ ವೀರರಿಂದಲೂ ಸಹಿತನಾಗಿ ಮಹಾ ಪರಾಕ್ರಮಶಾಲಿಯಾಗಿ ವನಪಾಲರಿಗೆಲ್ಲ ದೊರೆಯಾಗಿರುವ ದಧಿಮುಖನು ಸುಗ್ರೀವನ ಸನ್ನಿಧಾನಕ್ಕೆ ಬಂದನು ॥೩೯॥ ಕಳೆಗುಂದಿದ ಮುಖವುಳ್ಳವನಾಗಿ, ಅಂಜಲಿಯನ್ನು ಶಿರದಮೇಲಿಟ್ಟು, ಕಪಿರಾಜನಾದ ಸುಗ್ರೀವನ ಮಂಗಳಕರವಾದ ಅಡಿದಾವರೆಗಳಿಗೆ ಅಭಿವಂದನವಂ ಗೈದನು ॥೪೦॥

—ಇಂತು ಅರುವತ್ತೆರಡನೆಯ ಸರ್ಗಂ—

ಶ್ರೀ.

ಶ್ರೀರಾಮಚನ್ದ್ರ ಪರಬ್ರಹ್ಮಣೇನಮಃ

# ಶ್ರೀಮತ್ಸುಂದರಕಾಂಡೆ-ತ್ರಿಷಷ್ಟಿತಮಸ್ಸರ್ಗಃ

ತತೋ ಮೂರ್ಧ್ನಾ ನಿಪತಿತಂ ವಾನರಂ ವಾನರರ್ಷಭಃ ।
ದೃಷ್ಟ್ವೈವೋದ್ವಿಗ್ನ ಹೃದಯೋ ವಾಕ್ಯ ಮೇತ ದುವಾಚ ಹ ॥೧॥
ಉತ್ತಿಷ್ಠೋತ್ತಿಷ್ಠ ಕಸ್ಮಾತ್ತ್ವಂ ಪಾದಯೋಃ ಪತಿತೋ ಮಮ ।
ಅಭಯಂ ತೇ ಪ್ರದಾಸ್ಯಾಮಿ ಸರ್ವ ಮೇವಾಭಿ ಧೀಯತಾಮ್ ॥೨॥
ಸತು ವಿಶ್ವಾಸಿತ ಸ್ತೇನ ಸುಗ್ರೀವೇಣ ಮಹಾತ್ಮನಾ ।
ಉತ್ಥಾಯ ಸ ಮಹಾಪ್ರಾಜ್ಞೋ ವಾಕ್ಯಂ ದಧಿಮುಖೋ ಽ ಬ್ರವೀತ್ ॥೩॥

— ಅರುವತ್ತು ಮೂರನೆಯ ಸರ್ಗಂ —

ಕಂ॥ ವನಭಂಗ ಮಾದು ದೆಂದಾ । ವನಪಂಬಲ್ ವಿನಯದಿಂದೆ ಬಿನ್ನವಿಸಲ್ ತಾಂ ।
ವನಗೃಹರೊಡೆಯಂ ಮಧುವನ । ಹನನದಿ ನವರ್ಯ ಕೃತಾರ್ಥ ರೆಂದ್ಭೂ ಮುದದಿಂ ॥

ತತಃ - ತರುವಾಯ, ಮೂರ್ಧ್ನಾ - ತಲೆಯಿಂದ, ನಿಪತಿತಂ - ಕೆಳಗೆ ಬಿದ್ದ, (ನಮಸ್ಕರಿಸಿದ) ವಾನರಂ - ದಧಿಮುಖನೆಂಬ ಕಪಿವರನನ್ನು, ವಾನರರ್ಷಭಃ - ವಾನರ ನಾಯಕನಾದ ಸುಗ್ರೀವನು, ದೃಷ್ಟ್ವೈವ - ನೋಡಿದ ಮಾತ್ರದಲ್ಲಿಯೇ, ಉದ್ವಿಗ್ನಹೃದಯಃ - ಭಯಪಟ್ಟ ಮನಸ್ಸುಳ್ಳವನಾಗಿ, ಏತತ್ - ಈ ಮುಂದಿನ, ವಾಕ್ಯಂ - ಮಾತನ್ನು, ಉವಾಚ - ಹೇಳಿದನು ॥೧॥ ಹೇ ವೀರ - ಎಲೈ ಶೂರನೇ! ಉತ್ತಿಷ್ಠ - ಮೇಲಕ್ಕೆ ಏಳು, ಕಸ್ಮಾತ್ - ಯಾವ ಕಾರಣದಿಂದ, ಮಮ - ನನ್ನ, ಪಾದಯೋಃ - ಪಾದಗಳಲ್ಲಿ, ಪತಿತಃ - ಬಿದ್ದವನಾಗಿದ್ದೀಯೆ ?, ತೇ - ನಿನಗೆ, ಅಭಯಂ - ನಿರ್ಭಯವು, ಭವೇತ್ - ಉಂಟಾಗುವುದು, ಸರ್ವಮೇವ - ಸಮಸ್ತ ವೃತ್ತಾಂತವೂ, (ತ್ವಯಾ - ನಿನ್ನಿಂದ) ಅಭಿಧೀಯತಾಂ - ಹೇಳಲ್ಪಡಲಿ ॥೨॥ ಸುಮಹಾಪ್ರಾಜ್ಞಃ - ಹೇರಳವಾದ ಜ್ಞಾನವುಳ್ಳ, ಸಃ - ಆ, ದಧಿಮುಖಸ್ತು - ದಧಿಮುಖನಾದರೋ, ಮಹಾತ್ಮನಾ - ಮಹಾ ಧೀರನಾದ, ಸುಗ್ರೀವೇಣ - ಸುಗ್ರೀವನಿಂದ, ವಿಶ್ವಾಸಿತಃ - ಸಂತೈಸಲ್ಪಟ್ಟವನಾಗಿ, ಉತ್ಥಾಯ - ಎದ್ದು, ವಾಕ್ಯಂ - ಮುಂದಿನ ಮಾತನ್ನು, ಅಬ್ರವೀತ್ - ಹೇಳತೊಡಗಿದನು, ॥೩॥ ಹೇರಾಜನ್ - ಎಲೈ ದೊರೆಯೇ ! ಯತ್ - ಯಾವ, ವನಂ - ನಿನ್ನ ಮಧುವನವು,

—ಅರುವತ್ತು ಮೂರನೆಯಸರ್ಗಂ.—

ಮಧುವನಪಾಲನಾದ ದಧಿಮುಖನು ಪಾದತಲದಲ್ಲಿ ಅಡ್ಡಬಿದ್ದಿರುವುದನ್ನು ವಾನರ ರಾಜನಾದ ಸುಗ್ರೀವನು ಕಂಡನು, ಮನದೊಳಗೆ ಬಹಳವಾಗಿ ಹೆದರಿದನು, ಮುಂದೆ ಹೇಳ ತೊಡಗಿದನು ॥೧॥ ಎಲೈ ವಾನರೋತ್ತಮನೇ ! ಏಳು, ಮೇಲಕ್ಕೆ ಏಳು, ನೀನು ಹೀಗೆ ಬಂದು ನನ್ನ ಪಾದಗಳಲ್ಲಿ ನಮಸ್ಕರಿಸಲು ಕಾರಣವೇನು ? ಎಲೈ ಕಪಿವೀರನೇ ! ಹೆದರಬೇಡ, ನೀನು ಹೇಳಬೇಕೆಂದಿರುವ ಸಂಗತಿಯನ್ನೆಲ್ಲ ವಿಶದವಾಗಿ ಹೇಳು॥೨॥ ಎಂದೀ ಪ್ರಕಾರವಾಗಿ ಮೃದು ಮಧುರವಾದ ಮಾತುಗಳಿಂದ ಸಂತೈಸಿದ

ನೈವರ್ಕ್ಷ ರಜಸಾ ರಾಜ ನ್ನ ತ್ವಯಾ ನಾಪಿ ವಾಲಿನಾ ।
ವನಂ ನಿಸೃಷ್ಟ ಪೂರ್ವಂ ಹಿ ಭಕ್ಷಿತಂ ತಚ್ಚ ವಾನರೈಃ ॥೪॥
ಏಭಿಃ ಪ್ರಧರ್ಷಿತಾ ಶ್ಚೈವ ವಾನರಾ ವನ ರಕ್ಷಿಭಿಃ ।
ಮಧೂ ನ್ಯಚಿಂತಯಿತ್ವೇ ಮಾನ್ ಭಕ್ಷಯಂತಿ ಪಿಬಂತಿಚ ॥೫॥
ಶಿಷ್ಟಂ ತತ್ರಾ ಪವಿಧ್ಯಂತಿ ಭಕ್ಷಯಂತಿ ತಥಾಪರೆ ।
ನಿವಾರ್ಯಮಾಣಾ ಸ್ತೇ ಸರ್ವೇ ಭ್ರುವೌ ವೈ ದರ್ಶಯಂತಿ ಹಿ ॥೬॥

---

ಋಕ್ಷರಜಸಾ - ಋಕ್ಷರಜಸ್ಸೆಂಬ ಪ್ರಸಿದ್ಧನಾದ ವಾನರೋತ್ತಮನಿಂದ, ನಿಸೃಷ್ಟಪೂರ್ವಂಹಿ - ಪೂರ್ವ ದಲ್ಲಿ ಹೆರರಿಗೋಸ್ಕರ ಕೊಡಲ್ಪಟ್ಟದು, ನ - ಆಗಲಿಲ್ಲವೋ, ತ್ವಯಾ - ನಿನ್ನಿಂದಲೂ, ನನಿಸೃಷ್ಟಪೂ ರ್ವಂ - ಹಿಂದೆ ಕೊಡಲ್ಪಡಲಿಲ್ಲವೋ, ವಾಲಿನಾಪಿ-ವಾಲಿಯಿಂದಲೂ,ನ-ಕೊಡಲ್ಪಡಲಿಲ್ಲವೋ, ತತ್-ಅಂತಹ ಮಧುವನವು, ವಾನರೈಃ ಅಂಗದ ಮೊದಲಾದ ಕಪಿಗಳಿಂದ, ಭಕ್ಷಿತಂ - ಅನುಭವಿಸಲ್ಪಟ್ಟಿತು ॥ ೪ ॥ ಏಭಿಃ - ಈ ನನ್ನೊಡನೆ ಬಂದಿರುವ,ವನರಕ್ಷಿಭಿಃ - ವನಪಾಲಕರಾಗಿರುವವರಿಂದ, ಪ್ರಧರ್ಷಿತಾಶ್ಚೈವ-ತಡೆ ಯಲ್ಪಟ್ಟವರಾಗಿ, ವಾನರಾಃ - ಅಂಗದ ಮುಂತಾದ ಕಪಿಗಳು, ಇಮಾನ್ - ಈ ವಾನರರನ್ನು, ಅಚಿಂತ ಯಿತ್ವಾ - ಲಕ್ಷ್ಯಮಾಡದೆಯೇ, (ಫಲಾನಿ - ಹಣ್ಣುಗಳನ್ನು) ಭಕ್ಷಯನ್ತಿ - ತಿನ್ನುತಲಿದಾರೆ, ಮಧೂ ನಿ - ಜೇನುಗಳನ್ನು, ಪಿಬನ್ತಿಹಿಚ - ಕುಡಿಯುತಲಿದಾರೆಯಲ್ಲ ॥೫॥ ಅಪರೆ . ಮತ್ತೆ ಕೆಲವರು, ಭಕ್ಷ ಯಂತಿ-ತಿನ್ನುತಲಿದಾರೆ, ತಥಾ-ಹಾಗೆಯೇ, ಶಿಷ್ಟಂ-ಉಳಿದುದನ್ನು, ಅತ್ರ-ಈ ವನದಲ್ಲಿ, ಅಪವಿಧ್ಯಂತಿ- ಕೆಳಗೆ ಎಸೆಯುತಲಿದಾರೆ, ಸರ್ವೆ-ಸಮಸ್ತರಾದ, ತೇ-ಆ ವಾನರರು, ನಿವಾರ್ಯಮಾಣಾಃ-ಮಧುಪಾನ ಮಾ ಡದಂತೆ ತಡೆಯಲ್ಪಟ್ಟವರಾಗಿ, ಭ್ರುವೌ-ಕಣ್ಣುಹುಬ್ಬುಗಳನ್ನು, ದರ್ಶಯನ್ತಿಹಿ-ತೋರುತ್ತಿರುವರು ॥೬॥

---

ಮಹಾತ್ಮನಾಗಿರುವ ಸುಗ್ರೀವನ ಮಾತನ್ನು ಕೇಳಿದ ಪ್ರಾಜ್ಞನಾದ ದಧಿಮುಖನು ಮೇಲ ಕ್ಕೆದ್ದು ನಿಂತು, ತನ್ನೊಡೆಯನ ಕುರಿತು ಇಂತೆಂದನು.— ॥೩॥ ಎಲೈ ಕಪಿಸಾರ್ವ ಭೌಮನೇ ! ನಿಮ್ಮ ತಾತನಾದ ಋಕ್ಷರಜಸ್ಸೆಂಬ ವಾನರೋತ್ತಮನು - ಇದುವರೆಗ ಎಂದೂ ನಿಮ್ಮಯ್ಯನ ಮಧುವನಕ್ಕೆ ಪ್ರವೇಶಿಸಲು ಯಾರಿಗೂ ಅಪ್ಪಣೆಯನ್ನಿತ್ತಿರಲಿ ಲ್ಲವೋ, ಹಾಗೆಯೇ ನಿನ್ನಿಂದಲಾಗಲಿ, ನಿಮ್ಮ ಅಣ್ಣನಾದ ವಾಲಿಯಿಂದಲಾಗಲೀ ಅನು ಜ್ಞೆಯನ್ನು ಕೊಟ್ಟಿದ್ದುದಿಲ್ಲವೋ, ಅಂತಹ ಮಧುವನದೊಳಗೆ ನುಗ್ಗಿ,ಅಂಗದನೇ ಮೊದ ಲಾದ ವಾನರರು-ಜೇನು ಕೊಡಗಳೇ ಮೊದಲಾದುದನ್ನೆಲ್ಲ ಕಿತ್ತು ಯಥೇಷ್ಟವಾಗಿ ಅನು ಭವಿಸಿ ಬಿಟ್ಟರು ॥೪॥ ಎಲೈ ಅರಸೇ ! ಇಗೋ, ಈನನ್ನೊಡನೆ ಬಂದಿರುವ ವನ ಪಾಲರೆಲ್ಲ ಒಗ್ಗಟ್ಟಾಗಿ ಹೋಗಿ "ಇದು ಸುಗ್ರೀವಾಜ್ಞೆಗೊಳಪಟ್ಟಿರುವ ಜೇನು ತೋಟ, ಇದನ್ನು ಯಾರೂ ಆತನ ಅಪ್ಪಣೆಯಿಲ್ಲದೆ ಅತಿಕ್ರಮಿಸಿ ಪ್ರವೇಶಿಸಕೂಡದು. ಹಾಗೆ ಪ್ರವೇಶಿಸಿದರೆ ಕ್ರೂರವಾದ ದಂಡನೆಗೆ ಒಳಗಾಗುವಿರಿ,, ಎಂದು ಬಹುತರವಾಗಿ ಹೇಳಿ ತ ಡೆದಾಗ್ಯೂ,ಲೇಶವಾದರೂ ಲಕ್ಷ್ಯಮಾಡದೆ,ಇವರನ್ನೆಲ್ಲ ತಿರಸ್ಕರಿಸಿ, ಬಲಾತ್ಕಾರವಾಗಿಜೇನು ಕೊಡಗಳನ್ನೆಲ್ಲ ಕಿತ್ತು ಇಚ್ಛಾನುಸಾರವಾಗಿ ಭಕ್ಷಿಸುತಲಿದಾರೆ ॥ ೫ ॥ ಕೆಲವರು ಹಾಗೆ ಕುಡಿದು,ತಿಂದು,ಉಳಿದುದನ್ನು ಎಲ್ಲೆಲ್ಲಿಯೂ ಎರಚುತಲಿದಾರೆ. ಅವರಲ್ಲಿ ಮತ್ತೆ ಕೆಲವರು ಭಕ್ಷಿಸುತಲಿದಾರೆ. ಅವರನ್ನುತಡೆಯಲಿಕ್ಕೆ ಹೋದರೆ, ಹಲ್ಗಿರಿಯುತ್ತಲೂ, ಹುಬ್ಬುಗಳನ್ನು

ಇಮೇಹಿ ಸಂರಬ್ಧ ತರಾ ಸ್ತಥಾ ತೈ ಸ್ಸಂಪ್ರಧರ್ಷಿತಾಃ ।
ವಾರಯಂತೋ ವನಾ ತ್ತಸ್ಮಾ ತ್ಕ್ರುದ್ಧೈ ರ್ವಾನರ ಪುಂಗವೈಃ ॥೩॥
ತತ ಸ್ತೈ ರ್ಬಹುಭಿ ರ್ವೀರೈ ರ್ವಾನರೈ ರ್ವಾನರರ್ಷಭ ।
ಸಂರಕ್ತ ನಯನೈಃ ಕ್ರೋಧಾ ದ್ಧರಯಃ ಪ್ರವಿಚಾಲಿತಾಃ ॥೪॥
ಪಾಣಿಭಿ ರ್ನಿಹತಾಃ ಕೇಚಿ ತ್ಕೇಚಿ ಜ್ಜಾನುಭಿ ರಾಹತಾಃ ।
ಪ್ರಕೃಷ್ಟಾ ಶ್ಚ ಯಥಾಕಾಮಂ ದೇವಮಾರ್ಗಂ ಚ ದರ್ಶಿತಾಃ ॥೫॥
ಏವ ಮೇತೇ ಹತಾ ಶ್ಶೂರಾ ಸ್ತ್ವಯಿ ತಿಷ್ಠತಿ ಭರ್ತರಿ ।

ಇಮೇ - ಈವನ ಪಾಲಕರು, ಸಂರಬ್ಧತರಾಃ - ಸಿಟ್ಟುಗೊಂಡವರಾಗಿ (ತಡೆಯಲು ಉದ್ಯುಕ್ತರಾಗಿ) ತಥಾ - ಹಾಗೆಯೇ, ತಸ್ಮಾತ್ - ಆ ಮಧುವನದಿಂದ, ವಾರಯಂತಃ - ಅಡ್ಡಿಮಾಡುವವರಾಗುತ್ತಾ, ಕ್ರುದ್ಧೈಃ - ಕೋಪಗೊಂಡ, ತೈಃ - ಆ ಅಂಗದನೇ ಮೊದಲಾದ, ವಾನರಪುಂಗವೈಃ - ವಾನರವೀರರಿಂದ, ಸಂಪ್ರಧರ್ಷಿತಾಹಿಃ - ಹೇರಳವಾಗಿ ಹಿಂಸಿಸಲ್ಪಟ್ಟಿರುವರಲ್ಲ ॥೩॥ ಹೇ ವಾನರರ್ಷಭ - ಎಲೈ ಕಪಿರಾಜನೇ, ತತಃ - ತರುವಾಯ, ಬಹುಭಿಃ - ಅನೇಕರಾದ, ವೀರೈಃ - ಪರಾಕ್ರಮಶಾಲಿಗಳಾಗಿರುವ ಕ್ರೋಧಾತ್ - ಕೋಪದಿಂದ, ಸಂರಕ್ತನಯನೈಃ - ಕೆಂಪಡರಿದ ಕಣ್ಣುಗಳುಳ್ಳ, ತೈಃ - ಆ, ವಾನರೈಃ - ಅಂಗದ ಮೊದಲಾದ ವಾನರರಿಂದ, ಹರಯಃ - ವನಪಾಲರಾದ ವಾನರರು, ಪ್ರವಿಚಾಲಿತಾಃ - ಓಡಿಸಲ್ಪಟ್ಟರು ॥೪॥ ಕೇಚಿತ್ - ಕೆಲವುಮಂದಿ ವನಪಾಲರು, ಪಾಣಿಭಿಃ - ಕೈಗಳಿಂದ, ನಿಹತಾಃ - ಹೊಡೆಯಲ್ಪಟ್ಟರು, ಕೇಚಿತ್ - ಮತ್ತೆ ಕೆಲವರು, ಜಾನುಭಿಃ- ಮೊಳಕಾಲುಗಳಿಂದ, ಆಹತಾಃ-ಬಡೆಯಲ್ಪಟ್ಟರು, ಕೇಚಿತ್ - ಇನ್ನು ಕೆಲವರು, ಯಥಾಕಾಮಂ - ಮನಸ್ಸು ಬಂದಹಾಗೆ, ಪ್ರಕೃಷ್ಟಾಶ್ಚ - ಹಿಗ್ಗಾಮುಗ್ಗಾ ಎಳೆಯಲ್ಪಟ್ಟರು, ಕೇಚಿತ್ - ಬೇರೆ ಕೆಲವರು, ದೇವಮಾರ್ಗಂಚ - ಅಪಾನ ಪ್ರದೇಶವನ್ನು, ದರ್ಶಿತಾಶ್ಚ - ತೋರಿಸಲ್ಪಟ್ಟರು ॥೫॥ (ಹೇ ಸುಗ್ರೀವ - ಎಲೈ ಸುಗ್ರೀವನೇ) ಭರ್ತರಿ - ಪ್ರಭುವಾದ, ತ್ವಯಿ-ನೀನು ತಿಷ್ಠತಿ (ಸತಿ) ಮಹೋನ್ನತನಾಗಿ ಇದ್ದಾಗ್ಯೂ, (ಶೂರಾಃ - ಶೂರರಾದ, ಏತೇ - ಈ ವನಪಾಲಕರು, (ತೈಃ - ಅವರಿಂದ) ಏವಂ - ಹೀಗೆ, ಹತಾಃ - ಹೊಡೆಯಲ್ಪಟ್ಟರು; (ಕಿಂಚ - ಮತ್ತು) ತೈಃ - ಆ ವಾನರರಿಂದ, ಕೃತ್ಸ್ನಂ -ಸಮಸ್ತವಾದ, ಮಧುವನಂಚೈವ-ಮಧುವನವೂ, ಪ್ರಕಾಮಂ-ಯಥೇಚ್ಛವಾಗಿ

ಹಾರಿಸುತ್ತಲೂ,ಪರಿಹಾಸಮಾಡಿ ಅಪಮಾನಿಸುತ್ತಲಿರುವರು ॥೨॥ ಈನಮ್ಮ ವನಪಾಲರು ಬಟ್ಟುಗೂಡಿ ಸರ್ವ ಪ್ರಯತ್ನದಿಂದಲೂ ವನದೊಳಗೆ ಹೋಗದಂತೆ ತಡೆದರೂ ನಿಲ್ಲದೆ, ಅಂಗದನೇ ಮೊದಲಾದವರು-ರೋಷಪರವಶರಾಗಿ ಇವರನ್ನೆಲ್ಲ ಹೆದರಿಸಿ, ಗದರಿಸಿ, ತಿರಸ್ಕರಿಸಿದರು ॥೩॥ ಎಲೈ ಸುಗ್ರೀವ ಮಹಾರಾಜನೇ ! ಹೀಗೆ ಅಂಗದನೇ ಮೊದಲಾದ ಬಹುಮಂದಿ ವಾನರವೀರರು-ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, ಮಹಾ ಕೋಪದಿಂದ ಈ ತೋಟದ ಕಾವಲುಗಾರರನ್ನೆಲ್ಲ ಹೊಡೆದು ಅಟ್ಟಿಬಿಟ್ಟರು ॥ ೪ ॥ ಕೆಲವರನ್ನು ಕೈಗಳಿಂದ ಬಾರಿಸಿದರು, ಕೆಲವರನ್ನು ಮೊಳಕಾಲುಗಳಿಂದ ತಿವಿದುರುಳಿಸಿದರು, ಮತ್ತೆ ಕೆಲವರನ್ನು ದಿಕ್ಕಾಪಾಲಾಗಿಸೆಳೆದು ಅಪಾನ ಪ್ರದೇಶವನ್ನು ತೋರಿ, ಮಾನಭಂಗವನ್ನು ಮಾಡಿದರು ॥೫॥ ಎಲೈ ಸುಗ್ರೀವನೇ ! ನೀನು ನಮ್ಮಗಳಿಗೆಲ್ಲ ಚಕ್ರವರ್ತಿಯಾಗಿದ್ದಾಗ್ಯೂ ನಿನ್ನನ್ನೂ ಲಕ್ಷ್ಯಮಾಡದೆ ಅಂಗದನೇ ಮೊದಲಾದ ವಾನರರು ಮಧುವನ್ನೆಲ್ಲ ಭಕ್ಷಿಸಿ,

ಯಥಾ ಮಾಮಾಪ್ನುಯಾಚ್ಛೀಘ್ರಂ ಹತ್ವಾ ರಾವಣಮಾಹವೇ ॥೨॥
ಯದಿ ವಾ ಮನ್ಯಸೇ ವೀರ ವಸೈಕಾಹಮರಿಂದಮ ।
ಕಸ್ಮಿಂಶ್ಚಿತ್ಸಂವೃತೇ ದೇಶೇ ವಿಶ್ರಾಂತಃ ಶ್ವೋ ಗಮಿಷ್ಯಸಿ ॥೩॥
ಮಮ ಚಾಪ್ಯಲ್ಪಭಾಗ್ಯಾಯಾಃ ಸಾನ್ನಿಧ್ಯಾತ್ತವ ವೀರ್ಯವನ್ ।
ಅಸ್ಯ ಶೋಕಸ್ಯ ಪಾಪಸ್ಯ ಮುಹೂರ್ತಂ ಸ್ಯಾದ್ವಿಮೋಕ್ಷಣಮ್ ॥೪॥
ಗತೇ ಹಿ ತ್ವಯಿ ವಿಕ್ರಾಂತೇ ಪುನರಾಗಮನಾಯ ವೈ ।
ಪ್ರಾಣಾನಾಮಪಿ ಸಂದೇಹೋ ಮಮ ಸ್ಯಾನ್ನಾತ್ರ ಸಂಶಯಃ ॥೫॥
ತವಾದರ್ಶನಜಃ ಶೋಕೋ ಭೂಯೋ ಮಾಂ ಪರಿತಾಪಯೇತ್ ।

---

ತ್ವಯಾ - ನಿನ್ನಿಂದ, ರಾಮಃ - ಶ್ರೀರಾಮನು, ವಾಚ್ಯಃ - ಹೇಳಲ್ಪಡತಕ್ಕವನು, ॥೨॥ ಹೇ ಅರಿಂದಮ - ಹಗೆಗಳನ್ನಡಗಿಸುವ, ವೀರ - ಎಲೈ ಶೂರನೇ, ಮನ್ಯಸೇ ಯದಿ ವಾ - ನೀನು ಒಪ್ಪುವುದಾದರೆ, ಏಕಾಹಂ - ಒಂದು ದಿವಸಮಾತ್ರ, ವಸ - ಇಲ್ಲಿ ಇರು, ಶ್ವಃ - ನಾಳೆ, ಕಸ್ಮಿಂಶ್ಚಿತ್ - ಒಂದಾನೊಂದು, ಸಂವೃತೇ - ಮರ ಮೊದಲಾದವುಗಳಿಂದ ಮರೆಯಾಗಿರುವ, ದೇಶೇ - ತಾಣದಲ್ಲಿ, ವಿಶ್ರಾಂತಃ - ಬಳಲಿಕೆಯನ್ನು ಕಳೆದುಕೊಂಡವನಾಗಿ, ಗಮಿಷ್ಯಸಿ - (ಚೇತ್) ಹೋಗುವವನೇ ಆದರೆ, ಹೇ ವೀರ್ಯವನ್ - ಎಲೈ ಪರಾಕ್ರಮ ಸಂಪನ್ನನೇ, ತವ - ನಿನ್ನ, ಸಾನ್ನಿಧ್ಯಾತ್ - ಸಮೀಪ ಸ್ಥಿತಿಯ ದೆಸೆಯಿಂದ, ಅಲ್ಪ ಭಾಗ್ಯಾಯಾಃ - ಅಲ್ಪವಾದ ಅದೃಷ್ಟವುಳ್ಳ, ಮಮ ಚ - ನನಗೂ, ಅಸ್ಯ - ಈ, ಶೋಕವಿಪಾಕಸ್ಯ - ದುಃಖರೂಪವಾದ ಪಾಪಫಲಕ್ಕೆ, ವಿಮೋಕ್ಷಣಂ - ಸ್ವಲ್ಪಮಟ್ಟಿಗೆ ಕಡಿಮೆಯಾಗೋಣವು, ಸ್ಯಾತ್ - ಆಗುವದು, ॥೩-೪॥ ವಿಕ್ರಾಂತೇ - ಪರಾಕ್ರಮಶಾಲಿಯಾದ, ತ್ವಯಿ - ನೀನು, ಗತೇಸತಿ - ಹೊರಟುಹೋಗುತ್ತಿರಲಾಗಿ, ಪುನಃ - ಮರಳಿ, ಆಗಮನಾಯ - ಬರಲಿಕ್ಕೆ, (ಪ್ರತೀಕ್ಷಮಾಣಾಯಾಃ - ಇದಿರು ನೋಡುತಲಿರುವ) ಮಮ - ನನ್ನ, ಪ್ರಾಣಾನಾಮಪಿ - ಪ್ರಾಣಗಳಿಗೂ, ಸಂದೇಹಃ - ಸಂಶಯವು, ಸ್ಯಾತ್ - ಉಂಟಾಗುವುದು, ಅತ್ರ - ಈ ವಿಷಯದಲ್ಲಿ, ಸಂಶಯಃ - ಸಂದೇಹವು, ನಹಿ - ಇಲ್ಲವು ॥

---

ಸಂಗಡ ಹೇಳಬೇಕು. ಅದರಂತೆನಡೆಸಬೇಕು ॥೨॥ ಎಲೈ ಮಹಾವೀರನೆ ! ನೀನು ಹೇರಳವಾದ ಮಾರ್ಗಾಯಾಸವನ್ನು ಹೊಂದಿ ಇದ್ದೀಯೆ, ಆದಕಾರಣ ನಿನ್ನ ಮನಸ್ಸು ಒಪ್ಪಿದರೆ ಈ ಬಳಿ ಮರಗಿಡಬಳ್ಳಿಗಳಿಂದಪೊದೆಯಾಗಿ ಸ್ವಲ್ಪ ಮರೆಯಾಗಿರುವ ಯಾವುದಾದರೊಂದು ಸ್ಥಳದಲ್ಲಿ ಇಂದು ಉಳಿದಿದ್ದು, ಬಳಲಿಕೆಯನ್ನು ಕಳೆದುಕೊಂಡು, ನಾಳೆಹೊರಟರೆ ನಿನಗೆಸೌಖ್ಯವಾಗಿರುವುದಿಲ್ಲವೆ ? ಮತ್ತು-ನೀನು ಸ್ವಲ್ಪಕಾಲವಾದರೂ ಇಲ್ಲಿ ಇದ್ದರೆ, ನಿರ್ಭಾಗ್ಯಳಾದನನಗೆ ಇಲ್ಲಿ ಅನುಭವಿಸುತಲಿರುವ ಪಾಪಕರ್ಮಫಲರೂಪದ ದುಃಖಾನುಭವದಲ್ಲಿ ಸ್ವಲ್ಪಮಟ್ಟಿಗಾದರೂ ಪರಿಹಾರವಾಗುವುದು ॥೩,೪॥ ಎಲೈ ಹನುಮಂತನೇ ! ಮಹಾಪರಾಕ್ರಮಶಾಲಿಯಾದ ನೀನು-ಶ್ರೀರಾಮನಸನ್ನಿಧಿಗೆ ತೆರಳಿದ ತರುವಾಯ, ಮರಳಿ ಯಾವಾಗ ಬರುವೆಯೋ ಎಂದು, ನಿನ್ನ ಬರುವಿಕೆಯನ್ನೇ ಎದುರುನೋಡುತ್ತಿರುವಾಗಲೇ ನನ್ನಪ್ರಾಣಗಳು ಹಾರಿಹೋಗುತ್ತವೆಯೆಂದು ತೋರುತ್ತದೆ, ಈ ವಿಷಯದಲ್ಲಿ ಸಂಶಯವೇ ಇಲ್ಲ ॥೫॥ ಎಲೈ ಹನುಮಂತನೇ! ಇದುವರೆಗೆ ನಾನು-ಸೌಖ್ಯದ ಸುಳಿವನ್ನು ಕಾಣದೆ ಅಪಾರವಾದ ದುಃಖವನ್ನೇ ಅನುಭವಿಸುತ್ತಾ, ಭಾಗ್ಯಹೀನಳಾಗಿರುವಲ್ಲಿ, ನೀನುಬಂದುದರಿಂದ ನನ್ನಶೋಕವು

ದುಃಖಾ ದ್ದುಃಖ ಪರಾಭೂತಾಂ ದುರ್ಗತಾಂ ದುಃಖ ಭಾಗಿನೀಮ್ ||೬||
ಅಯಂ ಚ ವೀರ ಸಂದೇಹ ಸ್ತಿಷ್ಠತೀವ ಮಮಾಗ್ರತಃ |
ಸುಮಹಾಂ ಸ್ತ್ವತ್ಸಹಾಯೇಷು ಹರ್ಯೃಕ್ಷೇಷು ಹರೀಶ್ವರ
ಕಥಂ ನು ಖಲುದುಷ್ಪಾರಂ ತರಿಷ್ಯಂತಿ ಮಹೋದಧಿಮ್ |
ತಾನಿ ಹರ್ಯೃಕ್ಷ ಸೈನ್ಯಾನಿ ತೌ ವಾ ನರ ವರಾತ್ಮಜೌ ||೮||
ತ್ರಯಾಣಾ ಮೇವ ಭೂತಾನಾಂ ಸಾಗರಸ್ಯಾಸ್ಯ ಲಂಘನೇ |

---

ತವ - ನಿನ್ನ, ಅದರ್ಶನಜಃ - ದರ್ಶನವಿಲ್ಲದಿರುವುದರಿಂದುಂಟಾದ, ಶೋಕಃ - ದುಃಖವು, ದುಃಖಾತ್ ಹಿಂದಿನ ದುಃಖಕ್ಕಿಂತಲೂ, ದುಃಖ ಪರಾಭೂತಾಂ - ಅಧಿಕ ದುಃಖದಿಂದ ಪೀಡಿತಳಾಗುವೆನಾದಕಾರಣವೇ, ದುರ್ಗತಾಂ - ಬಹುಕಷ್ಟ ದೆಸೆಯುವಳಾದ, ದುಃಖಭಾಗಿನೀಂ - ಶೋಕವನ್ನನುಭವಿಸುತಲಿರುವ, ಮಾಂ - ನನ್ನನ್ನು, ಭೂಯಃ - ಪುನಃ, ಪರಿತಾಪಯೇತ್ - ಸಂತಾಪ ಪಡಿಸುವುದು ||೬|| ವೀರ - ಪರಾಕ್ರಮಶಾಲಿಯಾದ, ಹರೀಶ್ವರ - ವಾನರಶ್ರೇಷ್ಠನೆ, ತ್ವತ್ಸಹಾಯೇಷು - ನಿನಗೆ ಸಹಾಯಕರಾಗಿರುವ, ಹರ್ಯೃಕ್ಷೇಷು - ವಾನರರಲ್ಲಿ ಮತ್ತು ಕರಡಿಗಳಲ್ಲಿಯೂ, ಅಯಂ - ಈ ಮುಂದೆ ಹೇಳುವ, ಸುಮಹಾನ್ - ಹೆಚ್ಚಾದ, ಸಂದೇಹಃ-ಸಂಶಯವು, ಮಮ - ನನ್ನ - ಅಗ್ರತಃ - ಇದಿರಿಗೆ, ತಿಷ್ಠತೀವ-ನಿಂತಿರುವಂತಿದೆ, ||೭|| ತಾನಿ - ಆ, ಹರ್ಯೃಕ್ಷಸೈನ್ಯಾನಿ-ವಾನರರ ಮತ್ತು ಭಲ್ಲೂಕಗಳ ಸೇನೆಗಳಾಗಲಿ, ನರವರಾತ್ಮಜೌ - ರಾಜಕುಮಾರರಾದ, - ತೌವಾ - ಆ ರಾಮ ಲಕ್ಷ್ಮಣರಾಗಲಿ, ದುಷ್ಪಾರಂ - ದೂರವಾದ ಪೀರದಡವುಳ್ಳ, ಮಹೋದಧಿಂ - ದೊಡ್ಡ ಕಡಲನ್ನು, ಕಥಂನುಖಲು - ಯಾವ ತೆರನಾಗಿ, ತರಿಷ್ಯಂತಿ - ದಾಟಬಲ್ಲರು ||೮|| ಹೇ ವೀರ-ಎಲೈ ಶೂರನೆ, ಕಾರ್ಯವಿದಾಂ - ಮಾಡತಕ್ಕ ಕೆಲಸಗಳನ್ನು ಬಲ್ಲವರೊಳಗೆ, ವರ - ಶ್ರೇಷ್ಠನಾದವನೇ, ಅಸ್ಯ - ಈ, ಸಾಗರಸ್ಯ - ಸಮುದ್ರದ, ಲಂಘನೇ - ದಾಟೋಣದಲ್ಲಿ, ವೈನತೇಯಸ್ಯ - ಗರುತ್ಮಂತನಿಗೂ, ತವವಾ, ನಿನಗೂ, ಮಾರುತಸ್ಯ - ವಾಯುವಿಗೂ,

---

ಸ್ವಲ್ಪಮಟ್ಟಿಗೆ ಕಡಮೆಯಾಗಿದ್ದಿತು, ಈಗ ನೀನು ನನ್ನನ್ನು ಬಿಟ್ಟುಹೋಗುವುದರಿಂದ ಪೂರ್ವದಲ್ಲಿಅನುಭವಿಸುತಲಿದ್ದ ದುಃಖಕ್ಕಿಂತಲೂ ಪ್ರಬಲವಾದದುಃಖವನುಭವಿಸುವುದು||೬|| ಎಲೈ ಶೂರನಾದ ಮಾರುತಿಯೇ ! ನಿನಗೆಸಹಾಯಕರಾಗಿರುವ ವಾನರರಲ್ಲಿಯೂ, ಕರಡಿಗಳಲ್ಲಿಯೂ ನನಗೆಬಂದುದೊಡ್ಡಸಂದೇಹವು ಬೆಟ್ಟದಂತೆ ಇದಿರಿಗೆ ನಿಂತುಕಾಣಬರುತಲಿದೆ. ಅದಕ್ಕೆ ಏನುಸಮಾಧಾನವನ್ನು ಯೋಚಿಸಿರುವೆಯೋ ಅದನ್ನುಹೇಳು ||೭|| ಅಂತಹ ಸಂಶಯವೇನು ಎಂಬೆಯೋ ? ನೀನುಈಗಹಾರಿಬಂದಿರುವ ಕಡಲನ್ನು ಉತ್ತರತೀರದಿಂದ ದಕ್ಷಿಣತೀರಕ್ಕೆ ಹೆರರುಹಾರಿಬರುವುದೆಂಬುದು ಸುಲಭವಲ್ಲ. ಆದಕಾರಣ ನಿನ್ನವರಾದವಾನರರಾಗಲೀ ಭಲ್ಲೂಕಗಳಾಗಲಿ, ದಶರಥರಾಜನಂದನರಾದ ಆ ರಾಮಲಕ್ಷ್ಮಣರೇಆಗಲಿ, ಹೇಗೆ ದಾಟಬಂದಾರು ಎಂದು ಸಂಶಯಪಡುತಲಿರುವೆನು ||೮||

ಎಲೈ ಆಂಜನೇಯನೇ ! ನೀನು ಸಮಯೋಚಿತವಾಗಿ ಎಲ್ಲಕೆಲಸಗಳನ್ನೂ ಸರಿಪಡಿಸಲು ಬಲು ಜಾಣನಾಗಿದ್ದೀಯೆ, ಮಹಾಪರಾಕ್ರಮಶಾಲಿ, ನಿನಗೆ ತಿಳಿಯದಿರುವುದಾವುದೂ ಇಲ್ಲ. ಈಸಮುದ್ರವನ್ನು ದಾಟುವ ವಿಷಯದಲ್ಲಿ ನೀನೊಬ್ಬ, ಮಹಾವೇಗಶಾಲಿಯಾದ ಗರುಡನೊಬ್ಬ, ಸ್ವಭಾವದಿಂದಲೇ ಆಶುಗಾಮಿಯಾದ ವಾಯುದೇವನೊಬ್ಬ, ಈಮೂವರನ್ನು

ಶಕ್ತಿಸ್ಸ್ಯಾದ್ವೈನತೇಯಸ್ಯ ತವ ವಾ ಮಾರುತಸ್ಯ ವಾ ॥೯॥
ತದಸ್ಮಿನ್ ಕಾರ್ಯನಿರ್ಯೋಗೇ ವೀರ್ಯೈವಂ ದುರತಿಕ್ರಮೇ।
ಕಿಂ ಪಶ್ಯಸಿ ಸಮಾಧಾನಂ ಬ್ರೂಹಿ ಕಾರ್ಯವಿದಾಂ ವರ ॥೧೦॥
ಕಾಮಮಸ್ಯ ತ್ವಮೇವೈಕಃ ಕಾರ್ಯಸ್ಯ ಪರಿಸಾಧನೇ ।
ಪರ್ಯಾಪ್ತಃ ಪರವೀರಘ್ನ ಯಶಸ್ಯಸ್ತೇ ಬಲೋದಯಃ ॥೧೧॥
ಬಲೈಸ್ಸಮಗ್ರೈರ್ಯದಿ ಮಾಂ ಹತ್ವಾ ರಾವಣಮಾಹವೇ ।
ವಿಜಯೀ ಸ್ವಾಂ ಪುರೀಂ ರಾಮೋ ನಯೇತ್ತತ್ಸ್ಯಾದ್ಯಶಸ್ಕರಮ್ ॥೧೨॥

ಕ್ರಿಯಾಣಾಂ-ಈ ಮೂರ ದ, ಭೂತಾನಾಮೇವ-ಪ್ರಾಣಿಗಳಿಗೆ ಮಾತ್ರವೇ: ಶಕ್ತಿಃ-ಸಾಮರ್ಥ್ಯವು, ಸ್ಯಾತ್ ಇರುವುದು, ತತ್-ಆದಕಾರಣ, ಏವಂ ಹೀಗೆ, ದುರತಿಕ್ರಮೇ-ದಾಟಲಸದಳವೆನಿಸಿದ, ಅಸ್ಮಿನ್ ಈ, ಕಾರ್ಯನಿ ನಿರ್ಯೋಗೇ- ಕಾರ್ಯಸಿದ್ಧಿಯವಿಷಯದಲ್ಲಿ, ಕಿಂ-ಯಾವ, ಸಮಾಧಾನಂ-ಪ್ರತ್ಯುತ್ತರವನ್ನು, ಪಶ್ಯತಿ-ಯೋಚಿಸಿ ಇದ್ದೀಯೆ ?ಬ್ರೂಹಿ-ಹೇಳು ॥೯-೧೦॥

ಪರವೀರಘ್ನ - ಶತ್ರುವೀರರನ್ನು ಹೊಡೆವ ಧೀರನೆ !, ಅಸ್ಯ-ಈ, ಕಾರ್ಯಸ್ಯ - ರಾಮನು ನನ್ನ ನ್ನು ಪಡೆವ ಕಾರ್ಯದ, ಪರಿಸಾಧನೇ - ನಿರ್ವಾಹದಲ್ಲಿ, ತ್ವಂ - ನೀನು, ಏಕಏವ - ಒಬ್ಬನೇ, ಪರ್ಯಾ ಪ್ತಃ - ಪೂರ್ಣಶಕ್ತನು, ತೇ - ನಿನ್ನ, ಬಲೋದಯಃ - ಬಲಾಭಿವೃದ್ಧಿಯು, ಯಶಸ್ಯಃ - ಕೀರ್ತಿಕರವೆನಿಸಿ ದುದು ॥೧೧॥ ರಾಮಃ - ಶ್ರೀರಾಮನು, ಸಮಗ್ರೈಃ - ಸಂಪೂರ್ಣಗಳಾದ, ಬಲೈಃ - ಸೇನೆಗಳಿಂದ ಆಹವೇ - ಯುದ್ಧದಲ್ಲಿ, ರಾವಣಂ - ರಾವಣನನ್ನು, ಹತ್ವಾ - ಕೊಂದು, ಮಾಂ - ನನ್ನನ್ನು, ಸ್ವಾಂ- ತನ್ನದಾದ, ಪುರೀಂ - ಪಟ್ಟಣವನ್ನು ಕುರಿತು, ನಯೇದ್ಯದಿ-ಕರೆದೊಯ್ಯುವವನ ಆದರೆ, ತತ್- ಹಾಗೆನ ನ್ನನ್ನು ಕರೆದು ಕೊಂಡುಹೋಗೋಣವು, ಯಶಸ್ಕರಂ ಕೀರ್ತಿಕರವೆನಿಸಿದುದು, ಸ್ಯಾತ್-ಆಗುವುದು॥೧೨॥ ವೀರಸ್ಯ - ಪರಾಕ್ರಮಶಾಲಿಯಾದ, ತಸ್ಯ-ಆ ರಾಮನಿಗೆ, [ಪತ್ನೀ - ಭಾರ್ಯೆಯಾದ] ಇವಳನ್ನು, ರಕ್ಷ ಸಾ-ರಾವಣನಿಂದ, ಉಪಧಿನಾ - ಕಪಟೋಪಾಯದಿಂದ, ವನಾತ್-ಅರಣ್ಯದ ದೆಸೆಯಿಂದ, ಯಥಾ-ಹೇಗೆ,

ಬಿಟ್ಟರೆ ಮತ್ತಾರೂ ಈ ಸಾಗರವನ್ನು ನೆಗೆಯಲಾರರು. ಹೀಗೆ ಇಕ್ಕಟ್ಟಾಗಿ ಬಲು
ಪೇಚಾಟಕ್ಕೆ ಬಂದಿರುವ ಕೆಲಸದ ತೊಂದರೆಯಲ್ಲಿ ಮುಂದಿನ ಯೋಚನೆ ಯೇನು? ರಾಮಾ
ದಿಗಳೆಲ್ಲ ಇಲ್ಲಿಗೆ ಬರಲು ದಾರಿಹೇಗೆ ? ಇದಕ್ಕೆ ತಕ್ಕಂತೆ ಯಾವರೀತಿಚಿಂತಿಸಿ ಇದ್ದೀಯೆ ?
ಅದನ್ನು ನನಗೆತಿಳಿಸು ॥೯-೧೦॥ ಎಲೈ ವಾನರೋತ್ತಮನೆ! ನೀನಾದರೆ ಹಗೆಗಳಪಡೆಯನ್ನು
ಸದೆಬಡೆಯತಕ್ಕ ವೀರನು, ರಾಮಲಕ್ಷ್ಮಣ ಮೊದಲಾದವರಾರೂ ಇಲ್ಲಿಗೆ ಬರದೆ ಯಿದ್ದ
ರೂ, ನಿನ್ನೊಬ್ಬನೇ ಈ ಕಾರ್ಯವನ್ನೆಲ್ಲಾ ಸಾಧಿಸಬಲ್ಲೆ. ಅದರಂತೆ ನೀನೇ ಈ ಕೆಲಸವ
ನ್ನೆಲ್ಲ ಮಾಡಿಬಿಟ್ಟರೆ, ಈಕೀರ್ತಿಯೆಲ್ಲ ನಿನಗೇ ಬರುವುದಲ್ಲದೆ, ರಾಮನಿಗೆ ಬರಲಾರದು॥೧೧॥
ಎಲೈ ವಾನರವರನೇ ! ಶ್ರೀರಾಮನು ಚತುರಂಗ ಬಲಸಮೇತನಾಗಿ, ಈ ಲಂಕೆಗೆ ಬಂದು,
ರಣಾಂಗಣದಲ್ಲಿ ರಾವಣನನ್ನು ಸೀಳಿ, ವಿಜಯಲಕ್ಷ್ಮೀಸಂಪನ್ನನಾಗಿ, ನನ್ನನ್ನು ತನ್ನ ನಗರಿ
ಗೆ ಕರೆದುಕೊಂಡು ಹೋದರೆ, ಆಗಲದು-ಆ ರಾಮನಿಗೆ ಕೀರ್ತಿಕರವಾಗುವುದು ॥೧೨॥
ಹಾಗಿಲ್ಲದೆ ದುರಾತ್ಮನಾದ ಈ ರಾವಣನು ರಾಕ್ಷಸಾಧಮನಾದುದರಿಂದ ರಾಮನ ಧುಸ್ಸಹವಾ
ದ ಪರಾಕ್ರಮವನ್ನು ಸಹಿಸಲಾರದೆ, ಮಾಯೋಪಾಯದಿಂದ ಮಹಾ ವೀರಭಾರ್ಯೆಯಾದ

ಯಥಾಹಂ ತಸ್ಯ ವೀರಸ್ಯ ವನಾ ದುಪಧಿನಾ ಹೃತಾ ।
ರಕ್ಷಸಾ ತದ್ಭಯಾ ದೇವ ತಥಾ ನಾರ್ಹತಿ ರಾಘವಃ ॥೧೩॥
ಬಲೈಸ್ತು ಸಂಕುಲಾಂ ಕೃತ್ವಾ ಲಂಕಾಂ ಪರ ಬಲಾರ್ದನಃ ।
ಮಾಂ ನಯೇದ್ಯದಿ ಕಾಕುತ್ಸ್ಥ ಸ್ತತ್ತಸ್ಯ ಸದೃಶಂ ಭವೇತ್ ॥೧೪
ತದ್ಯಥಾ ತಸ್ಯ ವಿಕ್ರಾಂತ ಮನುರೂಪಂ ಮಹಾತ್ಮನಃ ।
ಭವ ತ್ಯಾಹವ ಶೂರಸ್ಯ ತಥಾ ತ್ವ ಮುಪಪಾದಯ ॥೧೫॥
ತದರ್ಥೋಪ ಹಿತಂ ವಾಕ್ಯಂ ಪ್ರಶ್ರಿತಂ ಹೇತು ಸಂಹಿತಮ್ ।

**ಹೃತಾ**-ಅಪಹರಿಸಲ್ಪಟ್ಟೆನೊ, **ತಥಾ**-ಹಾಗೆಯೇ, **ತದ್ಭಯಾದೇವ**-ಆ ರಾವಣನ ಭಯದಿಂದಲೆ, **ರಾಘವಃ**-ರಾಮನೂ, (ಮಾಂ-ನನ್ನನ್ನು, ಪ್ರಾಪ್ತುಂ-ಹೊಂದಲಿಕ್ಕೆ) **ನಾರ್ಹತಿ**- ತಕ್ಕವನೆನಿಸುವುದಿಲ್ಲ ॥ ೧೩ ॥ **ಪರಬಲಾರ್ದನಃ**-ಶತ್ರುಸೈನ್ಯವನ್ನು ಧ್ವಂಸಮಾಡುವ, **ಕಾಕುತ್ಸ್ಥಃ** - ಶ್ರೀರಾಮನು, **ಬಲೈಃ**-ಸೇನೆಗಳಿಂದ **ಲಂಕಾಂ**-ಲಂಕಾನಗರವನ್ನು **ಸಂಕುಲಾಂ**-ದುಃಖದಿಂದೊಡಗೂಡಿದುದನ್ನಾಗಿ, **ಕೃತ್ವಾ**-ಮಾಡಿ, **ಮಾಂ**-ನನ್ನನ್ನು, **ನಯೇದ್ಯದಿ** - ಕರೆದೊಯ್ಯುವವನೇ ಆದರೆ, **ತತ್**-ಹಾಗೆ ಕರೆದೊಯ್ಯೋಣವು, **ತಸ್ಯ**-ಆತನಿಗೆ, **ಸದೃಶಂ**-ತಕ್ಕುದೆಂದು, **ಭವೇತ್**-ಆಗುವುದು, ॥ ೧೪ ॥ **ತತ್**-ಆದಕಾರಣ, **ಮಹಾತ್ಮನಃ**- ಮಹಾನುಭಾವನಾದ, **ಆಹವಧೀರಸ್ಯ**-ರಣಧೀರನಾಗಿರುವ, **ತಸ್ಯ**-ಆ ರಾಮನಿಗೆ, **ಯಥಾ**-ಹೇಗೆ, **ವಿಕ್ರಾಂತಂ**- ಪರಾಕ್ರಮವು, **ಅನುರೂಪಂ**-ತಕ್ಕುದೆನಿಸಿದುದು, **ಭವತಿ**-ಆಗುವುದೋ, **ತಥಾ**-ಹಾಗೆ **ತ್ವಂ**-ನೀನು, **ಉಪಪಾದಯ**-ಮಾಡು (ಹೇಳು) ॥ ೧೫ ॥ **ಅಹಂ**-ನಾನು, **ಅರ್ಥೋಪಹಿತಂ**-ಉತ್ತಮಾರ್ಥಗರ್ಭಿತವಾಗಿರುವ, **ಪ್ರಶ್ರಿತಂ**-ಸಂಗ್ರಹರೂಪವಾಗಿರತಕ್ಕ, **ಹೇತುಸಂಹಿತಂ**-ಕಾರಣದಿಂದೊಡಗೂಡಿರುವ, (ಯುಕ್ತಿ ಯುಕ್ತವಾದ) ಶೇಷಂ ಹಿಂದೆ ಹೇಳಲ್ಪಡದಿರುವುದೂ ಆದ, **ತತ್**-ಆ ಸೀತಾದೇವಿಯಾದ, **ವಾಕ್ಯಂ** - ಮಾತನ್ನು, **ನಿಶಮ್ಯ**-ಕೇಳಿ, **ತತಃ** - ತರುವಾಯ, **ಉತ್ತರಂ**-ಈ ಮುಂದಿನದಾದ, **ವಾಕ್ಯಂ** - ಮಾತನ್ನು, **ಅಬ್ರವಂ**-

ನನ್ನನ್ನು ಕಳ್ಳನಂತೆ ಕದ್ದು ತಂದನು. ಶ್ರೀರಾಮನೂ ಹಾಗೆಯೇ ಕಪಟೋಪಾಯದಿಂದ, ನನ್ನನ್ನು ಕೊಂಡೊಯ್ದರೆ, ಆ ಧೀರನಿಗೆ ಅದು ತಕ್ಕುದೆನಿಸುವುದಿಲ್ಲ, ಪ್ರತ್ಯುತನಾಚಿಕೆಯನ್ನುಂಟುಮಾಡುವುದು. ಹಾಗೆ ಆಗಬಾರದು. ರಾವಣನಂತೆ ರಾಮನು ಹೇಡಿಯಲ್ಲ, ಅಪ್ರತಿಮವೀರನು, ಅದರಿಂದಲೇ ಈ ಖೂಳರಾವಣನನ್ನುಗೆದ್ದು ನನ್ನನ್ನುಕೊಂಡುಹೋಗುವುದೇ ಧೀರತನ. ಹಾಗಿಲ್ಲದೆ ಉಪೇಕ್ಷೆಮಾಡಿದರೆ, ಶಕ್ತನಾಗಿದ್ದರೂ ಅಸಡ್ಡೆಮಾಡಿದನೆಂದು ಲೋಕಾಪವಾದಕ್ಕೆ ಗುರಿಯಾಗುವನು. ಆ ಲೋಕಾಪವಾದಕ್ಕಾದರೂ ಹೆದರಬೇಕು॥೧೩॥ ನಶತ್ರುಸೈನ್ಯಭಂಜಕನಾದರಾಮನು ವಾನರ ಸೇನೆಯೊಡನೆ ಲಂಕೆಗೆ ಬಂದು ಇಲ್ಲಿನವರೆಲ್ಲ ರ್ವ್ರ ಮುಟ್ಟುಗೋಳನ್ನು ಹಾಕಿಸಿ ನನ್ನನ್ನು ಕರೆದೊಯ್ದರೆ, ಅದೇ ಅವನಿಗೆ ತಕ್ಕುದೆನಿಸುವುದು ॥ ೧೪ ॥ ವಿಲೈ ಹನುಮಂತನೇ ! ಮಹಾನುಭಾವನಾದ ಶ್ರೀರಾಮನು ರಣಧೀರನಾದುರಿಂದ ಆತನ ಶೌರ್ಯಧೈರ್ಯಗಳಿಗೆ ಅನುಗುಣವಾಗಿರುವಂತೆ ಪರಾಕ್ರಮವನ್ನು ಅವಲಂಬಿಸುವ, ಹಾಗೆ ನೀನು ಮಾಡಬೇಕು ॥ ೧೫ ॥ ಇಂತು ಸೀತಾದೇವಿಯು ಪ್ರಕಸಾರಿದಯುಕ್ತನಾಗಿಯೂ, ನಿರ್ಣಯ ಯುಕ್ತವಾಗಿಯೂ, ಸಯುಕ್ತಿಕವಾಗಿಯೂ ಇರುವಂತೆ ಹರಸದಉಅರ್ಲದನ್ನುಕೇಳಿ, ಅದಕ್ಕೆ ತಕ್ಕಂತೆ ನಾನೂ ಈ ಪ್ರತ್ಯುತ್ತರವನ್ನಿತ್ತನು ॥೧೬॥

ನಿಶಮ್ಯಾಹಂ ತತಶ್ಶೇಷಂ ವಾಕ್ಯಮುತ್ತರ ಮಬ್ರುವಮ್॥೧೬॥
ದೇವಿ ಹರ್ಯೃಕ್ಷ ಸೈನ್ಯಾನಾ ಮೀಶ್ವರಃ ಪ್ಲವತಾಂ ವರಃ ।
ಸುಗ್ರೀವ ಸ್ಸತ್ವಸಂಪನ್ನಸ್ತವಾರ್ಥೇ ಕೃತ ನಿಶ್ಚಯಃ ॥೧೭॥
ತಸ್ಯ ವಿಕ್ರಮ ಸಂಪನ್ನಾ ಸ್ಸತ್ವವಂತೋ ಮಹಾಬಲಾಃ ।
ಮನಸ್ಸಂಕಲ್ಪ ಸದೃಶಾ ನಿದೇಶೇ ಹರಯಃ ಸ್ಥಿತಾಃ ॥೧೮॥
ಯೇಷಾಂ ನೋಪರಿ ನಾಧಸ್ತಾ ನ್ನತಿರ್ಯ್ಯ ಕ್ಸಜ್ಜತೇ ಗತಿಃ ।
ನಚ ಕರ್ಮಸು ಸೀದಂತಿ ಮಹತ್ಸ್ವಮಿತ ತೇಜಸಃ ॥೧೯॥

---

ಹೇಳಿದೆನು ॥೧೬॥ ಹೇದೇವಿ - ಎಲೌ ಸೀತಾದೇವಿಯೇ, ಹರ್ಯೃಕ್ಷಸೈನ್ಯಾನಾಂ-ಕಪಿಭಲ್ಲೂಕಗಳ ಸೇನೆಗಳಿಗೆಲ್ಲ, ಈಶ್ವರಃ-ಪ್ರಭುವಾದಾತ, ಪ್ಲವತಾಂ-ಕಪಿಗಳೊಳಗೆ, ವರಃ-ಶ್ರೇಷ್ಠನೆನಿಸಿದ, ಸತ್ವಸಂಪನ್ನಃ-ಬಲಯುಕ್ತನಾಗಿರತಕ್ಕ, ಸುಗ್ರೀವಃ-ಸುಗ್ರೀವನು, ತವಾರ್ಥೇ - ನಿನ್ನ ಉದ್ದೇಶವನ್ನು ಸಾಧಿಸುವುದರಲ್ಲಿ, ಕೃತನಿಶ್ಚಯಃ-ಮಾಡಲ್ಪಟ್ಟ ಸಂಕಲ್ಪವುಳ್ಳವನಾಗಿದ್ದಾನೆ ॥೧೭॥

ವಿಕ್ರಮ ಸಂಪನ್ನಾಃ - ಅಧಿಕ ಪರಾಕ್ರಮದಿಂದೊಡಗೂಡಿದವರೂ, ಸತ್ವವಂತಃ - ದೇಹಬಲಯುಕ್ತರೂ, ಮಹಾಬಲಾಃ - ಹೇರಳವಾದ ಪಡೆಯುಳ್ಳವರೂ, ಮನಸ್ಸಂಕಲ್ಪ ಸಂದೃಶಾಃ - ಕೋರಿದಂತೆ ನಡೆಯ ತಕ್ಕವರೂ ಆಗಿರುವ, ಹರಯಃ - ಕಪಿಗಳು, ತಸ್ಯ-ಆ ಸುಗ್ರೀವನ, ನಿದೇಶೇ - ಆಜ್ಞೆಯಲ್ಲಿ, ಸ್ಥಿತಾಃ - ಇದ್ದಾರೆ, ॥೧೮॥ ಯೇಷಾಂ - ಈ ವಾನರರ, ಗತಿಃ - ಗಮನವು, ಉಪರಿ - ಮೇಲ್ಭಾಗದಲ್ಲಿಯೂ, ನಸಜ್ಜತೆ - ತಡೆನಿಲ್ಲದು, ಅಧಸ್ತಾತ್ - ಕೆಳಗಡೆಯಲ್ಲಿಯೂ, ನ - ತಡೆಯಿಲ್ಲದುದು, ತಿರ್ಯಕ್ ಅಡ್ಡವಾಗಿಯೂ, ನ - ನಿರಾಟಂಕವಾದ ದ್ದು, ಅಮಿತತೇಜಸಃ ಅಧಿಕಪರಾಕ್ರಮವುಳ್ಳವರು, ಮಹತ್ಸು-ಮಹತ್ತರಗಳಾದ, ಕರ್ಮಸು ಚ ಕೆಲಸಗಳಲ್ಲಿ ಯೂ, ನಸೀದಂತಿ-ವ್ಯರ್ಥರಾಗತಕ್ಕವರಲ್ಲ ॥೧೯॥ ಮಹೋತ್ಸಾಹೈಃ-ಮಹಾಪ್ರಯತ್ನವುಳ್ಳ ಬಲದರ್ಪಿತೈಃ-ಬಲದಿಂದ ಕೊಬ್ಬಿರುವ, ವಾನರಾ ನಾಮಾಶಿಭಿಃ-

---

ಎಲೌ ಮಹಾದೇವಿಯೇ ! ಸಮಸ್ತ ವಾನರ ಸೇನಾಧೀಶ್ವರನೂ, ಮಹಾಬಲಶಾಲಿಯೂ ಆಗಿರುವ ಸುಗ್ರೀವನು ನಿನ್ನನ್ನು ಶ್ರೀರಾಮನ ಸನ್ನಿಧಿಗೆ ಕೊಂಡೊಯ್ಯಲು ತಕ್ಕ ಪ್ರಯತ್ನವನ್ನು ಮಾಡುವನು. ಈ ವಿಷಯದಲ್ಲಿ ದೃಢಸಂಕಲ್ಪನಾಗಿರುವ ॥೧೭॥ ಎಲೌ ಮಾತೆಯೇ! ಅಂತಹ ಸುಗ್ರೀವನ ಬಳಿಯಲ್ಲಿ ಆತನ ಆಜ್ಞೆಯನ್ನು ಲೇಶವಾದರೂ ಮೀರದೆ ಅನೇಕ ವಾನರ ವೀರರು ಕಿಂಕರರಾಗಿ ಇರುವರು. ಅವರೆಲ್ಲ ಹೇರಳವಾದ ಬುದ್ಧಿಬಲಸಾಮರ್ಥ್ಯಗಳನ್ನು ಪಡೆದವರು, ಅಸದೃಶವಾದ ಪೌರುಷಶಾಲಿಗಳು, ಮತ್ತು ಅವರು ಮನಸ್ಸಿನಲ್ಲಿ ಎಲ್ಲಿಗೆ ಹೋಗಬೇಕೆಂದು ಸಂಕಲ್ಪಿಸುವರೋ ಅನಿಮಿಷದಲ್ಲಿಯೇ ಆ ಸ್ಥಳವನ್ನು ಸೇರತಕ್ಕವರು ॥೧೮॥ ಈ ವಾನರರು ನಭೋಮಂಡಲದಲ್ಲಿಯೂ, ಭೂಮಿಯಲ್ಲಿಯೂ, ಲೇಶವಾದರೂ ತಡೆಯಿಲ್ಲದೆ ಅತಿವೇಗದಿಂದ ಹೋಗಲು ಸಮರ್ಥರಾದವರು. ಇಂತಹ ಅಪರಿಮಿತ ಪರಾಕ್ರಮವುಳ್ಳ ಈ ವೀರರು ಎಂತಹ ಮಹತ್ಕಾರ್ಯದಲ್ಲಿಯೂ ಹಿಂದೆಗೆಯತಕ್ಕವರಲ್ಲ, ಆಲಸ್ಯಪರರಲ್ಲ, ಹೇಡಿಗಳಲ್ಲ, ಬಳಲತಕ್ಕವರಲ್ಲ ಮತ್ತು ಕಾರ್ಯವನ್ನು ಸಾಧಿಸತಕ್ಕವರು ॥೧೯॥ ಇಷ್ಟುಮಾತ್ರವೇ ಅಲ್ಲ. ಆ ವಾನರವೀರರು ಅನೇಕವೇಳೆ ಆಕಾಶಮಾರ್ಗದಲ್ಲಿ ಹೊರಟು, ಈ ಭೂಮಂಡಲವನ್ನೆಲ್ಲ ಸುತ್ತಿಬಂದಿರತಕ್ಕವರು, ಇದಲ್ಲದೆ ಆ ಹರಿಯೂಥ

ಅಸಕೃತ್ ತ್ರೈರ್ಮಹಾಘೋರ್ಯ್ವಾಸರ್ಯೆ ಬಲಸಂಯುತೈಃ ।
ಪ್ರದಕ್ಷಿಣೀಕೃತಾ ಭೂಮಿ ರ್ವಾಯುಮಾರ್ಗಾನುಸಾರಿಭಿಃ ॥೩೧॥
ಮದ್ವಿಶಿಷ್ಟಾಶ್ಚ ತುಲ್ಯಾಶ್ಚ ಸಂತಿ ತತ್ರ ವನೌಕಸಃ।
ಮತ್ತಃ ಪ್ರತ್ಯವರಃ ಕಶ್ಚಿ ನ್ನಾಸ್ತಿ ಸುಗ್ರೀವ ಸನ್ನಿಧೌ॥೩೨।
ಅಹಂ ತಾವ ದಿಹ ಪ್ರಾಪ್ತಃ ಕಿಂ ಪುನಸ್ತೇ ಮಹಾಬಲಾಃ।
ನಹಿ ಪ್ರಕೃಷ್ಟಾಃ ಪ್ರೇಷ್ಯಂತೇ ಪ್ರೇಷ್ಯಂತೇ ಹೀತರೇಜನಾಃ ॥೩೩॥
ತದಲಂ ಪರಿತಾಪೇನ ದೇವಿ ಮನ್ಯು ರ್ವ್ಯಪೈತು ತೇ।
ಏಕೋತ್ಪಾತೇನ ವೈ ಲಂಕಾ ಮೇಷ್ಯಂತಿ ಹರಿಯೂಥಪಾಃ ॥೩೪॥

---

ಆಕಾಶಮಾರ್ಗದಿಂದ ಸಂಚರಿಸತಕ್ಕ, ತೈಃ - ಆ ವಾನರರಿಂದ, ಭೂಮಿಃ ಅವನಿಯು, ಅಸಕೃತ್ - ಅನೇಕಾವರ್ತಿ, ಪ್ರದಕ್ಷಿಣೀಕೃತಾ - ಪ್ರದಕ್ಷಿಣೆಮಾಡಲ್ಪಟ್ಟದೆ, ಮತ್ - ನನಗಿಂತಲೂ, ವಿಶಿಷ್ಟಾಶ್ಚ - ಅಧಿಕಬಲರೂ, ತುಲ್ಯಾಶ್ಚ - ಸಮಾನಬಲರೂ ಆಗಿರುವ, ವನೌಕಸಃ - ವಾನರರು, ತತ್ರ-ಆಸುಗ್ರೀವಸನ್ನಿಧಿಯಲ್ಲಿ, ಸನ್ತಿ - ಇದ್ದಾರೆ, ಸುಗ್ರೀವಸನ್ನಿಧೌ - ಸುಗ್ರೀವನಸಮೀಪದಲ್ಲಿ, ಮತ್ತಃ - ನನಗಿಂತಲೂ, ಪ್ರತ್ಯವರಃ-ಹೀನಬಲನು, ಕಶ್ಚಿತ್ - ಬ್ಬನಾದರೂ, ನಾಸ್ತಿ - ಇಲ್ಲವು ॥೩೨॥ ಅಹಂತಾವತ್ - ನನ್ನಂಥವನೇ ಇಹ - ಇಲ್ಲಿಗೆ, ಪ್ರಾಪ್ತಃ - ಬಂದವನಾಗಿದೇನೆ, ಮಹಾಬಲಾಃ - ಹೇರಳವಾದ ಬಲವುಳ್ಳ, ತೇ-ಆವಾನರರು ಕಿಂಪುನಃ - ಹೇಳಬೇಕಾದದೇನು, ಪ್ರಕೃಷ್ಟಾಃ - ಬಲಿಷ್ಠರಾದವರು, ನಪ್ರೇಷ್ಯನ್ತೇಹಿ - ಮೊದಲು ಕಳುಹಿಸಲ್ಪಡುವುದಿಲ್ಲವಷ್ಟೆ, ಇತರೇಜನಾಃ - ಸಾಧಾರಣವಾಗಿರುವವರು, ಪ್ರೇಷ್ಯನ್ತೇಹಿ - ಮೊದಲು ಕಳುಹಿಸಲ್ಪಡುತ್ತಾರೆಯಲ್ಲವೆ, ॥೩೩॥ ತತ್ - ಆದಕಾರಣ, ದೇವಿ - ಎಲೌ ಸೀತಾದೇವಿಯೇ, ಪರಿತಾಪೇನ - ವ್ಯಥೆಯಿಂದ, ಅಲಂ - ಸಾಕು, ತೇ - ನಿನ್ನ, ಮನ್ಯುಃ - ದುಃಖವು, ವ್ಯಪೈತು - ತೊಲಗಲಿ. ತೇ - ಆ, ಹರಿಯೂಥಪಾಃ - ವಾನರಾಧಿಪತಿಗಳು, ಏಕೋತ್ಪಾತೇನ - ಒಂದೇ ಹಾರುವಿಕೆಯಿಂದ, ಲಂಕಾಂ - ಲಂಕೆಯನ್ನು ಕುರಿತು, ಏಷ್ಯಂತಿ - ಬರುತ್ತಾರೆ ॥೩೪॥ ಮಹಾಭಾಗೇ - ಎಲೌ ಪುಣ್ಯಾತ್ಮಳೇ,

---

ಪತಿಗಳೊಳಗೆ ಕೆಲವರು ನನಗಿಂತಲೂ ಅಧಿಕಬಲರು. ಮತ್ತೆ ಕೆಲವರು ನನಗೆ ಸಮಾನವಾದ ಬಲಶಾಲಿಗಳಾಗಿದ್ದಾರೆ, ಆ ಸುಗ್ರೀವನಸನ್ನಿಧಾನದಲ್ಲಿರುವವರೊಳಗೆ ಹುಡುಕಿನೋಡಿದರೂ ನನಗಿಂತ ಹೀನಬಲನೆನಿಸಿದವನೊಬ್ಬನೂ ಇಲ್ಲ ॥೩೧-೩೨॥ ಎಲೌ ತಾಯೇ! ಲೋಕೋತ್ತರವೀರನಾದ ಆ ಶ್ರೀರಾಮಚಂದ್ರನ ದೂತರೊಳಗೆ ಸಾಮಾನ್ಯನಾಗಿರುವ ನಾನೇ ಇಂತು ಅಸಾಧ್ಯವಾಗಿರುವ ಸಮುದ್ರವನ್ನು ದಾಟಿ ಇಲ್ಲಿಗೆ ಬಂದಿರುವಲ್ಲಿ ಮಹಾಬಲಪರಾಕ್ರಮಶಾಲಿಗಳಾದ ಆ ವಾನರವೀರರಿಗೆ ಇದು ಎಷ್ಟರ ಕೆಲಸ ? ಅವರಿಲ್ಲಿಗೆ ಬರಲಾರರೆಂದು ನೀನು ಎಳ್ಳಷ್ಟಾದರೂ ಸಂಶಯಪಡಬೇಡ. ಲೋಕದಲ್ಲಿ ಪ್ರಭುಗಳಾದವರು ಕಾರ್ಯದಸಂದರ್ಭವನ್ನು ತಿಳಿದುಬರಲು ಹಗೆಗಳ ಪಟ್ಟಣಕ್ಕೆ ಸಾಮಾನ್ಯರನ್ನು ಕಳುಹುವರಲ್ಲದೆ, ಮೊದಲೇ ಮಹಾಬಲರನ್ನು ಕಳುಹಿಸುವುದಿಲ್ಲ ॥೩೩॥ ಎಲೌ ಜನನಿ! ನೀನಿನ್ನು ದುಃಖಪಡಬೇಡ. ಕೇವಲ ದುಃಖಪಡುವುದರಿಂದ ಕೆಲಸವು ಕೈಗೂಡುವುದೇ ? ಎಂದಿಗೂ ನೆರವೇರದು. ಆ ವಾನರ ಸೇನಾಧಿಪತಿಗಳೆಲ್ಲರೂ ನನ್ನ ಮೂಲಕ ನಿನ್ನ ಕ್ಷೇಮಸಮಾಚಾರವನ್ನು ತಿಳಿದಕೂಡಲೆ ಮಹೋತ್ಸಾಹಸಂಪನ್ನರಾಗಿ ಒಂದೇ ನೆಗೆತದಿಂದ ಹಾರಿ ಈ ಲಂಕೆಗೆ ಬಂದುಸೇರುವರು

ಮಮ ಪೃಷ್ಠಗತೌ ತೌ ಚ ಚಂದ್ರಸೂರ್ಯಾ ವಿವೋದಿತೌ ।
ತ್ವತ್ಸಕಾಶಂ ಮಹಾಭಾಗೇ ನೃಸಿಂಹಾ ವಾಗಮಿಷ್ಯತಃ ॥೨೪॥
ಅರಿಘ್ನಂ ಸಿಂಹ ಸಂಕಾಶಂ ಕ್ಷಿಪ್ರಂ ದ್ರಕ್ಷ್ಯಸಿ ರಾಘವಮ್।
ಲಕ್ಷ್ಮಣಂ ಚ ಧನುಷ್ಪಾಣಿಂ ಲಂಕಾದ್ವಾರ ಮುಪಸ್ಥಿತಮ್ ॥೨೫॥
ನಖದಂಷ್ಟ್ರಾಯುಧಾನ್ ವೀರಾನ್ ಸಿಂಹ ಶಾರ್ದೂಲ ವಿಕ್ರಮಾನ್ ।
ವಾನರಾನ್ ವಾರಣೇಂದ್ರಾಭಾನ್ ಕ್ಷಿಪ್ರಂ ದ್ರಕ್ಷ್ಯಸಿ ಸಂಗತಾನ್ ॥೨೬॥

ಉದಿತೌ - ಏಳಿಗೆಯಲ್ಲಿರುವ, (ಉದಿಸಿದ) ಚಂದ್ರಸೂರ್ಯಾ ವಿವ (ಸ್ಥಿತೌ) ಚಂದ್ರಸೂರ್ಯರ ಹಾಗಿರತಕ್ಕ ನೃಸಿಂಹೌ - ಪುರುಷಶ್ರೇಷ್ಠರೆನಿಸಿದ, ತೌ - ಆ ರಾಮ ಲಕ್ಷ್ಮಣರು, ಮಮ - ನನ್ನ ಪೃಷ್ಠ ಗತೌ- ಬೆನ್ನಿನಮೇಲೆ ಕುಳಿತವರಾಗಿ, ತ್ವತ್ಸಕಾಶಂ - ನಿನ್ನಸನ್ನಿಧಾನವನ್ನು ಕುರಿತು, ಆಗಮಿಷ್ಯತಃ - ಬರುವರು ॥೨೪॥ ಅರಿಘ್ನಂ - ಅರಿಗಳನ್ನಿರಿಯುವ, ಸಿಂಹಸಂಕಾಶಂ - ಸಿಂಹಕ್ಕೆಣೆಯೆನಿಸಿದ, ಧನುಷ್ಪಾಣಿಂ - ಚಾಪ ಹಸ್ತನಾದ, ಲಂಕಾದ್ವಾರಂ-ಲಂಕೆಯ ಬಾಗಿಲನ್ನು, ಉಪಸ್ಥಿತಂ -ಹೊಂದಿದವನೂ ಆಗಿರುವ, ರಾಘವಂ- ಶ್ರೀ ರಾಮನನ್ನೂ, ಲಕ್ಷ್ಮಣಂಚ- ಲಕ್ಷ್ಮಣನನ್ನೂ ಕ್ಷಿಪ್ರಂ - ಶೀಘ್ರದಲ್ಲಿಯೇ ದ್ರಕ್ಷ್ಯಸಿ - ನೋಡುವೆ ॥೨೫॥

ನಖದಂಷ್ಟ್ರಾಯುಧಾನ್-ಉಗುರು, ಕೋರೆಹಲ್ಲುಗಳೇ ಆಯುಧಗಳಾಗಿರುವ, ವೀರಾನ್-ಶೂರರಾದ, ಸಿಂಹಶಾರ್ದೂಲ ವಿಕ್ರಮಾನ್ -ಸಿಂಹಗಳ ಮತ್ತು ಶಾರ್ದೂಲಗಳ ಪರಾಕ್ರಮದಂತೆ ಪರಾಕ್ರಮವುಳ್ಳ, ವಾರಣೇಂದ್ರಾಭಾನ್-ಹೆಣ್ಣಾನೆಗಳಂತೆ ಉನ್ನತರಾದ, ಸಂಗತಾನ್ - ಒಗ್ಗಟ್ಟಾಗಿರತಕ್ಕ, ವಾನರಾನ್-ಹರಿಗಳನ್ನೂ, ಕ್ಷಿಪ್ರಂ-ಸ್ವಲ್ಪಕಾಲದಲ್ಲಿಯೇ, (ತ್ವಂ-ನೀನು) ದ್ರಕ್ಷ್ಯಸಿ-ನೋಡಹೋಗುವೆ ॥೨೬॥ ಶೈಲಾಂಬುದ ನಿಕಾಶಾನಾಂ-ಬೆಟ್ಟಗಳಿಗೂ, ಮೋಡಗಳಿಗೂ ಎಣೆಯೆನಿಸಿದ, ಲಂಕಾಮಲಯ ಸಾನುಷು- ಲಂಕೆಗೆ

ಆಗ ನಿನ್ನದುಃಖವೆಲ್ಲವೂ ಪರಿಹರವಾಗುವುದು ॥೨೩॥ ಎಲೌ ಪುಣ್ಯಾತ್ಮಳೇ! ಆಗತಾನೆ ಉದಿಸಿದ ಸೂರ್ಯಚಂದ್ರರಂತೆ ಪ್ರಕಾಶಿಸುತಲಿರುವವರೂ, ಮಹಾಬಲಿಷ್ಠರೂ, ಪುರುಷ ಸಿಂಹರೂ ಆಗಿರುವ ರಾಮಲಕ್ಷ್ಮಣರು ನನ್ನಬೆನ್ನಿನಮೇಲೆಕುಳಿತು,ಬಹುಶೀಘ್ರದಲ್ಲಿ ಇಲ್ಲಿಗೆಬಂದುಸೇರುವರು ॥೨೪॥ ಎಲೌ ಮಹಾಭಾಗೇ! ಮಹಾ ಪರಾಕ್ರಮ ಶಾಲಿಗಳು, ಸಿಂಹಗಳಹಾಗೂ, ಹುಲಿಗಳಹಾಗೂ, ಉಗುರುಗಳನ್ನೂ ಕೋರೆಹಲ್ಲುಗಳನ್ನೂ ಆಯುಧಗಳನ್ನಾಗಿ ಪಡೆದಿರುವವರೂ ಆಗಿರುವ ವಾನರವೀರರು-ದೇಹೊನ್ನತಿ ಯಲ್ಲಿಯೂ, ಧೈರ್ಯದಲ್ಲಿಯೂ ಬೆಟ್ಟಗಳಂತೆಯೂ, ಆನೆಗಳಹಾಗೂ ಬೆಳಗುತ, ಬಹುಶೀಘ್ರದಲ್ಲಿ ಇಲ್ಲಿಗೆಬರುವುದನ್ನು ನೀನು ನೋಡಹೋಗುವೆ ॥೨೬॥ ಮತ್ತು ಎಲೌ ಪೂಜ್ಯಳೆ! ಪರ್ವತಗಳಂತೆಯೂ ಮೇಘಗಳಹಾಗೂ, ಪ್ರಕಾಶಿಸುತಲಿರುವ ವಾನರ ಶ್ರೇಷ್ಠರನೇಕರು- ಈ ಲಂಕೆಯ ಸಮಿಪಾ

ಶೈಲಾಂಬುದ ನಿಕಾಶಾನಾಂ ಲಂಕಾಮಲಯ ಸಾನುಷು ।
ನರ್ದತಾಂ ಕಪಿಮುಖ್ಯಾನಾ ಮಚಿರಾ ಚ್ಛ್ರೋಷ್ಯಸಿಸ್ವನಮ್ ॥೨೭॥
ನಿವೃತ್ತ ವನವಾಸಂ ಚ ತ್ವಯಾ ಸಾರ್ಧಮರಿಂದಮಮ್ ।
ಅಭಿಷಿಕ್ತ ಮಯೋಧ್ಯಾಯಾಂ ಕ್ಷಿಪ್ರಂ ದ್ರಕ್ಷ್ಯಸಿ ರಾಘವಮ್॥೨೮॥

ಸಾನುಷು ಲಂಕಾ ಮಲಯ ಪರ್ವತದ ತಪ್ಪಲುಗಳಲ್ಲಿ, ನರ್ದತಾಂ - ಧ್ವನಿ ಮಾಡುತಲಿರುವ, ಕಪಿಮುಖ್ಯಾನಾಂ-ವಾನರೋತ್ತಮರ, ಸ್ವನಂ - ಸಿಂಹನಾದವನ್ನೂ, ಅಚಿರಾತ್. ಕ್ಷಿಪ್ರದಲ್ಲಿಯೇ, ಶ್ರೋಷ್ಯಸಿ- ಕೇಳುವೆ । ದೇವಿ-ಎಲೌ ತಾಯೇ, ತ್ವಯಾಸಾರ್ಧಂ - ನಿನ್ನೊಡಗೂಡಿ, ನಿವೃತ್ತ ವನವಾಸಂಚ- ತೀರಿಸಿದ ಅರಣ್ಯವಾಸ ವ್ರತವುಳ್ಳವನೂ, ಅರಿಂದಮಂ - ಹಗೆಗಳನ್ನಡಗಿಸಿದವನೂ, ಅಯೋಧ್ಯಾಯಾಂ- ಅಯೋಧ್ಯಾನಗರದಲ್ಲಿ, ಅಭಿಷಿಕ್ತಂ - ಪಟ್ಟಾಭಿಷಿಕ್ತನಾದ, ರಾಘವಂ - ಶ್ರೀರಾಮನನ್ನು, ಕ್ಷಿಪ್ರಂ - ತ್ವರೆಯಲ್ಲಿಯೇ, ದ್ರಕ್ಷ್ಯಸಿ - ಅವಲೋಕಿಸುವೆ ।೨೮॥

ತತಃ-ಹೀಗೆ ಹೇಳಿದಮೇಲೆ, ಮಮ-ನನ್ನದಾದ, ತವಾಪಿ ನಿನ್ನದೂ ಇಗಿರುವ, ಶೋಕೇನ - ದುಃಖದಿಂದ, ತದಾ-ಆಗ, ಅಭಿಪೀಡಿತಾ- ಪೀಡಿಸಲ್ಪಟ್ಟವಳಾದ, ಮೈಥಿಲಾತ್ಮಜಾ - ಜಾನಕಿಯು, ಅದೀನಭಾಷಿಣಾ-ಉತ್ಸಾಹವುಂಟಾಗುವ ಹಾಗೆ ಗಂಭೀರವಾಗಿ ಮಾತನಾಡುತಲಿರುವ, ಮಯಾ-ನನ್ನಿಂದ, ಶಿವಾಭಿಃ-ಮಂಗಳಕರಳೂ, ಇಷ್ಟಾಭಿಃ-ಹಿತವೆನಿಸಿದವುಗಳೂ ಆಗಿರುವ, ವಾಗ್ಭಿಃ-ವಚನಗಳಿಂದ, ಅಭಿಪ್ರಸಾದಿತಾ-

ಪದಲ್ಲಿರುವ ಮಲಯಪರ್ವತದ ತಪ್ಪಲಿಗೆಬಂದು, ಮಹೋತ್ಸಾಹಸಂಪನ್ನರಾಗಿ ವಿನೋದದಿಂದ ಸಿಂಹಧ್ವನಿಯನ್ನು ಮಾಡುವರು. ಆ ಶುಭಶಬ್ದವನ್ನು ನೀನು ಜಾಗ್ರತೆಯಲ್ಲಿಯೇ ಕೇಳ ಹೋಗುವೆ ॥ ೨೭ ॥ ಎಲೌ ಲೋಕ ಮಾನ್ಯಳೇ ! ಇನ್ನು ಮೇಲೆ ಶ್ರೀರಾಮನು ಶೀಘ್ರದಲ್ಲಿಯೇ ಇಲ್ಲಿಗೆ ಬಂದು ಶತ್ರುಗಳನ್ನು ಸದೆ ಬಡಿದು, ತಂದೆಯ ಅಪ್ಪಣೆಯಂತೆ ವನವಾಸ ವ್ರತವನ್ನು ಪೂರ್ಣಮಾಡಿ; ನಿನ್ನೊಡನೆ ಅಯೋಧ್ಯಾಪಟ್ಟಣವನ್ನು ಸೇರಿ, ಸ್ವಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗುವನು. ನೀನು ಆ ಮಹೋತ್ಸವವನ್ನು ತ್ವರೆಯಲ್ಲಿಯೇ ಅನುಭವಿಸ ಹೋಗುವೆ. ತಾಯೇ ! ಅದುವರೆಗೆ ಸ್ವಲ್ಪ ತಾಳ್ಮೆಯಿಂದಿರು ॥ ೨೮ ॥ ಎಂದೀ ಪ್ರಕಾರವಾಗಿ ನಾನು ಹೇಳಿ ಹೊರಡಲುದ್ಯುಕ್ತನಾಗುತ್ತಿರಲು, ನಿನ್ನ ಸಚ್ಚರಿತ್ರೆಯನ್ನು ಹೇಳುತಲಿದ್ದ ನನ್ನನ್ನು ಬಿಟ್ಟಿರಲಾರದೆಯೂ ನಿನ್ನನ್ನು ಅಗಲಿ ಇರುವುದರಿಂದಲೂ ವುಂಟಾದ ದುಃಖಾತಿರೇಕದಿಂದ ವಿಚಾರಪರಳಾಗಿದ್ದ ಆ ವೈದೇಹಿಯನ್ನು ಈಗ ನಿನ್ನೊಡನೆ ನಾನು ಹೇಳಿದ ರೀತಿಯಿಂದ ಮಂಗಳಕರಗಳೆನಿಸಿದ ಪ್ರಿಯವಚನಗಳನ್ನು ಹೇಳಿ, ಸಂತೈಸಲು ಆಕೆ

ಕೃತ್ಸ್ನಂ ಮಧುವನಂ ಚೈವ ಪ್ರಕಾಮಂ ತೈಃ ಪ್ರಭಕ್ಷ್ಯತೇ ॥೧೦॥
ಏವಂ ವಿಜ್ಞಾಪ್ಯಮಾನಂ ತಂ ಸುಗ್ರೀವಂ ವಾನರರ್ಷಭಮ್ ।
ಅಪೃಚ್ಛತ್ತಂ ಮಹಾಪ್ರಾಜ್ಞೋ ಲಕ್ಷ್ಮಣಃ ಪರವೀರಹಾ ॥೧೧॥
ಕಿಮಯಂ ವಾನರೋ ರಾಜನ್ ವನಪಃ ಪ್ರತ್ಯುಪಸ್ಥಿತಃ ।
ಕಂ ಚಾರ್ಥಮಭಿನಿರ್ದಿಶ್ಯ ದುಃಖಿತೋ ವಾಕ್ಯಮಬ್ರವೀತ್ ॥೧೨॥
ಏವಮುಕ್ತಸ್ತು ಸುಗ್ರೀವೋ ಲಕ್ಷ್ಮಣೇನ ಮಹಾತ್ಮನಾ ।
ಲಕ್ಷ್ಮಣಂ ಪ್ರತ್ಯುವಾಚೇದಂ ವಾಕ್ಯಂ ವಾಕ್ಯವಿಶಾರದಃ ॥೧೩॥
ಆರ್ಯ ಲಕ್ಷ್ಮಣ ಸಂಪ್ರಾಹ ವೀರೋ ದಧಿಮುಖಃ ಕಪಿಃ ।

---

ಪ್ರಭಕ್ಷ್ಯತೇ-ಅನುಭವಿಸಲ್ಪಡುತಲಿದೆ ॥೧೦॥ ಏವಂ - ಹೀಗೆಂದು ವಿಜ್ಞಾಪ್ಯಮಾನಂ - ಬಿನ್ನವಿಸುತ್ತಿರುವ, ವಾನರರ್ಷಭಂ-ಕಪಿವರನೆನಿಸಿದ, ತಂ-ಆ, ಸುಗ್ರೀವಂ-ಸುಗ್ರೀವನನ್ನು, ಪರವೀರಹಾ- ಶತ್ರುಸಂಹಾರಕನಾದ, ಲಕ್ಷ್ಮಣಃ-ಸೌಮಿತ್ರಿಯು, ಅಪೃಚ್ಛತ್-ಪ್ರಶ್ನೆಮಾಡಿದನು ॥೧೧॥ ಹೇರಾಜನ್-ಎಲೈ ಕಪಿರಾಜನೇ ! ಅಯಂ-ಈ, ವನಪಃ-ವನಪಾಲಕನಾದ, ವಾನರಃ-ವಾನರನು, ಕಂ-ಯಾವ, ಅರ್ಥಂ, ಪ್ರಯೋಜನವನ್ನು, ಅಭಿನಿರ್ದಿಶ್ಯ-ಉದ್ದೇಶಿಸಿ, ಪ್ರತ್ಯುಪಸ್ಥಿತಃ-ಬಂದವನಾಗಿದಾನೆ ?, ಕಿಂ - ಏತಕ್ಕೋಸ್ಕರ, ದುಃಖಿತಃ - ದುಃಖವುಳ್ಳವನಾಗಿ, ವಾಕ್ಯಂ - ಮಾತನ್ನು, ಅಬ್ರವೀತ್ - ಹೇಳಿದನು, ॥೧೨॥ ವಾಕ್ಯವಿಶಾರದಃ -ಮಾತನಾಡುವುದರಲ್ಲಿ ಬುದ್ಧಿವಂತನಾದ, ಸುಗ್ರೀವಸ್ತು- ಸುಗ್ರೀವನಾದರೋ, ಮಹಾತ್ಮನಾ - ಮಹಾಬುದ್ಧಿಯುಳ್ಳ, ಲಕ್ಷ್ಮಣೇನ - ಸೌಮಿತ್ರಿಯಿಂದ, ಏವಂ ಈ ಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟವನಾಗಿ, ಲಕ್ಷ್ಮಣಂ - ಲಕ್ಷ್ಮಣನನ್ನು ಕುರಿತು, ಇದಂ - ಈ ಮುಂದಿನ, ವಾಕ್ಯಂ - ಮಾತನ್ನು, ಪ್ರತ್ಯುವಾಚ - ಹೇಳತೊಡಗಿದನು ॥೧೩॥ ಆರ್ಯ - ಎಲೈ ಪೂಜ್ಯನಾದ, ಲಕ್ಷ್ಮಣ - ಲಕ್ಷ್ಮಣನೇ !, ವೀರಃ - ಶೂರನೆನಿಸಿರುವ, ದಧಿಮುಖಃ - ದಧಿಮುಖನೆಂಬ, ಕಪಿಃ - ವಾನರನು, ದಕ್ಷಿಣಾಂ - ತೆಂಕಲಾದ, ಆಶಾಂ - ದಿಕ್ಕನ್ನು, ವಿಚಿತ್ಯ - ಹುಡುಕಿ, ಆಗತೈಃ - ಬಂದಿರುವ, ಹರಿಪುಂಗವೈಃ -

---

ಇವರನ್ನೂ ಹೊಡೆದು, ಇಷ್ಟು ಹಾವಳಿಯನ್ನು ಮಾಡಿದಾರೆ ॥೧೦॥ ಎಂದೀ ಪ್ರಕಾರವಾಗಿ ಕಪಿರಾಜನಾದ ಸುಗ್ರೀವನನ್ನು ಕುರಿತು ದಧಿಮುಖನು ವಿಜ್ಞಾಪಿಸುತಲಿರುವುದನ್ನು ಮಹಾ ಪ್ರಾಜ್ಞನೂ, ಶತ್ರುಸಂಹಾರಕನೂ ಆಗಿರುವ ಲಕ್ಷ್ಮಣನು ಕಂಡು-ಪ್ರಶ್ನೆ ಮಾಡತೊಡಗಿದನು- ॥ ೧೧ ॥ ವಾನರರಾಜನಾದ ಎಲೈ . ಸುಗ್ರೀವನೇ ! ಮಧುವನ ಪಾಲಕನಾದ ಈ ವಾನರನು ಏತಕ್ಕೋಸ್ಕರ ಇಲ್ಲಿಗೆ ಬಂದಿದಾನೆ ? ಬಹು ದುಃಖದಿಂದೊಡಗೂಡಿ, ದೀನತೆಯಿಂದ ತನಗೆ ಯಾವ . ಪ್ರಯೋಜನವಾಗಬೇಕೆಂದು ನಿನ್ನ ಸಂಗಡ ಹೇಳಿದನು ? ಆ ಸಂಗತಿಯೇನು ? ಎಂದು ಸುಗ್ರೀವನನ್ನು ಕೇಳಿದನು ॥೧೨॥ ಇಂತೆಂದ ಮಹಾನುಭಾವನಾದ ಲಕ್ಷ್ಮಣನ ನುಡಿಯನ್ನು ಕೇಳಿ, ಮಾತನಾಡುವುದರಲ್ಲಿ ಬಹು ಜಾಣನಾದ ಸುಗ್ರೀವನು-ಲಕ್ಷ್ಮಣನನ್ನು ಕುರಿತು ಇಂತು ಪ್ರತ್ಯುತ್ತರವನ್ನಿತ್ತನು ॥೧೩॥ ಎಲೈ ಪೂಜ್ಯನಾದ ಲಕ್ಷ್ಮಣನೇ ! ಅಂಗದನೇ ಮೊದಲಾದ ಕಪಿವೀರರು- ಸೀತಾದೇವಿಯನ್ನು ಹುಡುಕಿ ಸುದ್ದಿಯನ್ನು ತರಲಿಕ್ಕೆ ದಕ್ಷಿಣದಿಕ್ಕನ್ನು ಕುರಿತು ತೆರಳಿದ್ದರಷ್ಟೆ? ಅವರೆಲ್ಲರೂ ಈಗ ಹಿಂದಿರುಗಿ ಬಂದು, ನಮ್ಮ ಮಧುವನದೊಳಗೆ ನುಗ್ಗಿ, ಜೇನುಕೊಡಗಳನ್ನೆಲ್ಲ

ಅಂಗದ ಪ್ರಮುಖೈರ್ವೀರೈರ್ಭಕ್ಷಿತಂ ಮಧು ವಾನರೈಃ ॥೧೪॥
ವಿಚಿತ್ಯ ದಕ್ಷಿಣಾಮಾಶಾಮಾಗತ್ಯ ಹರಿಪುಂಗವೈಃ ।
ನೈಷಾಮಕೃತಕೃತ್ಯಾನಾಮೀದೃಶಃ ಸ್ಯಾದುಪಕ್ರಮಃ ॥೧೫॥
ಆಗತೈಶ್ಚ ಪ್ರಮಥಿತಂ ಯಥಾ ಮಧುವನಂ ಹಿ ತೈಃ ।
ಧರ್ಷಿತಂ ಚ ವನಂ ಕೃತ್ಸ್ನಮುಪಯುಕ್ತಂ ಚ ವಾನರೈಃ ॥೧೬॥
ವನಂ ಯದಾಭಿಪನ್ನಾಸ್ತೇ ಸಾಧಿತಂ ಕರ್ಮ ವಾನರೈಃ ।
ದೃಷ್ಟಾ ದೇವೀ ನ ಸಂದೇಹೋ ನ ಚಾನ್ಯೇನ ಹನೂಮತಾ ॥೧೭॥

---

ವಾನರ ವರರಾದ, ವೀರೈಃ - ಶೂರರೆನಿಸಿದ, ಅಂಗದಪ್ರಮುಖೈಃ ಅಂಗದನೇ ಮೊದಲಾಗಿರುವ, ವಾನರೈಃ- ಕಪಿಗಳಿಂದ, ಮಧು - ಜೇನುತುಪ್ಪವು, ಭಕ್ಷಿತಂ - ಅನುಭವಿಸಲ್ಪಟ್ಟಿತು, ಇತಿ - ಹೀಗೆಂದು, ಸಂಪ್ರಾಹ- ಹೇಳಿದನು, ಹಿ - ಆದರೆ ಆಗತೈಃ - (ಸೀತಾದರ್ಶನರೂಪವಾದ ಕಾರ್ಯವನ್ನು ಮಾಡಿಕೊಂಡು) ಬಂದಿರುವ, ತೈಃ - ಆ, ವಾನರೈಃ - ಕಪಿಗಳಿಂದ, ಮಧುವನಂ - ಮಧುವನವು, ಪ್ರಮಥಿತಂ - ನಾಶಗೊಳಿಸಲ್ಪಟ್ಟಿದೆ, ಧರ್ಷಿತಂಚ - ಆಕ್ರಮಿಸಲ್ಪಟ್ಟಿದೂ, ಕೃತ್ಸ್ನಂ - ಸಮಸ್ತವಾದ, ವನಂ - ವನವು, ಉಪಯುಕ್ತಂಚ - ಉಪಯೋಗಿಸಲ್ಪಟ್ಟುದೂ ಆಗಿದೆ, ಅಕೃತಕೃತ್ಯಾನಾಂ- ಮಾಡಲ್ಪಡದ ಕಾರ್ಯವುಳ್ಳ, ಏಷಾಂ ಈ ವಾನರರಿಗೆ, ಈದೃಶಃ - ಇಂತಹ, (ಮಧುವನಧ್ವಂಸರೂಪವಾದ) ಉಪಕ್ರಮಃ - ಆರಂಭವು, ಯಥಾ - ಹೇಗೆ, ನಸ್ಯಾತ್ - ಆಗಲಾರದೋ, (ತಥಾ - ಹಾಗೆ, ಮನ್ಯೇ - ಭಾವಿಸುತ್ತೇನೆ)॥೧೪, ೧೫, ೧೬॥ ತೇ - ಆ ಅಂಗದನೇ ಮೊದಲಾದ ವೀರರು, ಯದಾ - ಯಾವಾಗ, ವನಂ - ಮಧುವನವನ್ನು, ಅಭಿಪನ್ನಾಃ- ಆಕ್ರಮಿಸಿದರೋ, ತದಾ - ಆಗಲೇ, ವಾನರೈಃ - ಕಪಿಗಳಿಂದ, ಕರ್ಮ - ಪ್ರಕೃತಕಾರ್ಯವು, ಸಾಧಿತಂ ಚ - ಸಾಧಿಸಲ್ಪಟ್ಟೇ ಇದೆ, ಹನೂಮತಾ - ಹನುಮಂತನಿಂದ, ದೇವೀ - ಸೀತಾದೇವಿಯು, ದೃಷ್ಟಾ- ನೋಡಲ್ಪಟ್ಟಳೆ, ನಸಂದೇಹಃ - ಸಂಶಯವಿಲ್ಲ, ಅನ್ಯೇನ - ಇತರರಿಂದ, ನಚ- ಇಲ್ಲ ॥೧೭॥ ಅಸ್ಯ- ಈ ಸೀತಾ

---

ಕಿತ್ತು, ಇಚ್ಛಾನುಸಾರವಾಗಿ ಭಕ್ಷಿಸಿದರಂತೆ, ಹೀಗೆ ಮಧುವನವನ್ನೆಲ್ಲ ಭಂಗಪಡಿಸಿದರೆಂಬ ಸುದ್ದಿಯನ್ನು ನನ್ನೊಡನೆ ಹೇಳಲಿಕ್ಕೆ ಆ ವನಪಾಲನಾದ ಈ ದಧಿಮುಖನು ಬಂದಿರುವನು. ಅದೇ ಸಮಾಚಾರವನ್ನೇ ಈಗ ಹೇಳುತಲಿವಾನ; ಆದರೆ ಅವರು ಯಾವ ಕಾರ್ಯವನ್ನು ಕುರಿತು ಹೋಗಿದ್ದರೋ, ಆ ಕಾರ್ಯವನ್ನು ಕೈಗೂಡಿಸಿಕೊಂಡವರಾಗಿಯೇ ಬಂದಿರಬೇಕು. ಹಾಗೆ ಅವರು ಕೃತಕಾರ್ಯರಾಗಿ ಬಾರದೆಇದ್ದ ಪಕ್ಷಗಲ್ಲಿ, ಬಲಾತ್ಕಾರದಿಂದ ಈ ಮಧುವನಕ್ಕೆ ನುಗ್ಗುವ ಉದ್ಯೋಗವನ್ನು ಎಷ್ಟುಮಾತ್ರವೂ ಮಾಡಲಾರರು, ಕಾರ್ಯಸಿದ್ಧಿಯನ್ನು ಪಡೆದು ಬಂದಿರುವುದರಿಂದಲೇ ವನಪಾಲಕರುಗಳನ್ನೂ ಸ್ವೀಕರಿಸಿ, ವನವನ್ನೂ ಹಾಳುಮಾಡಿ, ಇವರನ್ನೂ ಲಕ್ಷ್ಯಮಾಡದೆ, ಬಹುಹಾವಳಿಯನ್ನು ಮಾಡಿದ್ದಾರೆ ॥೧೪, ೧೫, ೧೬॥ ಅಂಗದನೇ ಮೊದಲಾದ ಕಪಿವರರು ಯಾವಾಗಲಾದರೆ ವನವನ್ನುನುಗ್ಗಿದರೋ, ಆಗಲೇ ಅವರು ಕಾರ್ಯವನ್ನು ಸಾಧಿಸಿಕೊಂಡು ಬಂದಿರುವರೆಂದು ನಿಶ್ಚಯಿಸುತ್ತೇನೆ, ಸೀತಾದೇವಿಯನ್ನು ನೋಡಿಯೇ ಬಂದಿದ್ದಾರೆ, ಆದರೆ ಹನುಮನೇ ಆ ಕೆಲಸವನ್ನು ಮಾಡಿರುವನಲ್ಲದೆ ಬೇರಾರೂ ಅಲ್ಲ, ಆರರೂ ಈ ಕಾರ್ಯವನ್ನು ಸಾಧಿಸಬೇಕಾದರೆ ಹನುಮಂತನೊಬ್ಬನನ್ನು ಬಿಟ್ಟು ಮತ್ತಾವನೂ ನಿಮಿತ್ತನಾಗಲಾರನು.॥

ನ ಹ್ಯನ್ಯ ಸ್ಸಾಧನೇ ಹೇತುಃ ಕರ್ಮಣೋಽಸ್ಯ ಹನೂಮತಃ ।
ಕಾರ್ಯಸಿದ್ಧಿರ್ಮತಿಶ್ಚೈವ ತಸ್ಮಿಂಸ್ತು ಹರಿಪುಂಗವೇ ||೧೮||
ವ್ಯವಸಾಯಶ್ಚ ವೀರ್ಯಂ ಚ ಶ್ರುತಂ ಚಾಪಿ ಪ್ರತಿಷ್ಠಿತಮ್ ||೧೮|| ||
ಜಾಂಬವಾನ್ ಯತ್ರ ನೇತಾ ಸ್ಯಾದಂಗದಶ್ಚ ಮಹಾಬಲಃ ।
ಹನುಮಾಂಶ್ಚಾಪ್ಯಧಿಷ್ಠಾತಾ ನ ತತ್ರ ಗತಿರನ್ಯಥಾ ||೧೯|| ||
ಅಂಗದಪ್ರಮುಖೈರ್ವೀರೈರ್ಹತಂ ಮಧುವನಂ ಕಿಲ ||೨೦||
ವಾರಯಂತಶ್ಚ ಸಹಿತಾಸ್ತಥಾ ಜಾನುಭಿರಾಹತಾಃ ।

ದರ್ಶನರೂಪವಾದ, ಕರ್ಮಣಃ - ಕೆಲಸದ, ಸಾಧನೇ - ಸಾಧಿಸುವುದರಲ್ಲಿ, ಹನೂಮತಃ - ಹನುಮಂತನಿಗಿಂತಲೂ, ಅನ್ಯಃ - ಬೇರಾದ, ಹೇತುಃ - ಕಾರಣವು, ನಹಿ - ಇಲ್ಲವೇ ಇಲ್ಲ, ವಾನರಪುಂಗವೇ - ವಾನರೋತ್ತಮನಾದ, ತಸ್ಮಿನ್ - ಆ ಹನುಮಂತನಲ್ಲಿ, ಕಾರ್ಯಸಿದ್ಧಿಃ - ಕಾರ್ಯನಿರ್ವಾಹಶಕ್ತಿಯೂ, ಮತಿಶ್ಚೈವ ಊಹಾಶಕ್ತಿಯೂ, ವ್ಯವಸಾಯಶ್ಚ - ಕಾರ್ಯಸಿದ್ಧಿಗೆ ತಕ್ಕ ಪ್ರಯತ್ನವೂ, ವೀರ್ಯಂಚ - ಪರಾಕ್ರಮವೂ, (ಇತ್ಯೇತೇ - ಹೀಗೆಂಬ, ಗುಣಾಃ - ಶ್ಲಾಘ್ಯಸುಗುಣಗಳು, ಸಂತಿ - ಇವೆ,) ಶ್ರುತಂಚಾಪಿ - ಇವುಗಳಿಗೆಲ್ಲ ಮೂಲವಾದ ಶಾಸ್ತ್ರಪರಿಜ್ಞಾನವೂ, ಪ್ರತಿಷ್ಠಿತಂ - ನೆಲೆಗೊಂಡಿದೆ ||೧೮|| ಯತ್ರ - ಯಾವ ಕಾರ್ಯದಲ್ಲಿ, ಜಾಂಬವಾನ್ - ಜಾಂಬವಂತನು, ನೇತಾ - ಮಂತ್ರಿಯು, ಸ್ಯಾತ್ - ಆಗುವನೋ, ಮಹಾಬಲಃ - ಅಧಿಕವಾದ ಬಲವುಳ್ಳ, ಅಂಗದಶ್ಚ - ಅಂಗದನೂ, (ನೇತಾಚ - ನಾಯಕನಾಗಿಯೂ, ಸ್ಯಾತ್ - ಇರುವನೋ) ಹನುಮಾಂಶ್ಚಾಪಿ - ಹನುಮಂತನೂ, ಅಧಿಷ್ಠಾತಾ - ಮುಖ್ಯನಾಗಿರುವನೋ, ತಸ್ಯ - ಆ ಕಾರ್ಯದ, ಗತಿಃ - ಸಿದ್ಧಿಯು, ಅನ್ಯಥಾ - ಬೇರೆವಿಧವಾಗಿ, ನ(ಭವೇತ್) - ಆಗಲಾರದು ||೧೯|| ಅಂಗದಪ್ರಮುಖೈಃ - ಅಂಗದನೇ ಮೊದಲಾಗಿರುವ, ವೀರೈಃ - ಶೂರರಿಂದ, ಮಧುವನಂ - ಮಧುವನವು, ಹತಂ ಕಿಲ - ಕೆಡಿಸಲ್ಪಟ್ಟಿತಷ್ಟೆ, ಸಹಿತಾಃ - ಒಗ್ಗಟ್ಟಾದವರೂ, ವಾರಯಂತಃ - ತಡೆಯುತ್ತಿರುವವರೂ ಆಗಿರುವ ವನಪಾಲಕರು, (ತೈಃ - ಆ ಅಂಗದನೇ ಮೊದಲಾದವರಿಂದ) ಜಾನುಭಿಃ - ಮೊಳಕಾಲುಗಳಿಂದ, ಆಹತಾಃ - ಹೊಡೆಯಲ್ಪಟ್ಟಿದ್ದಾರೆ, ಏತದರ್ಥಂ - ಈ ಸಂಗತಿಯನ್ನು ತಿಳಿಸುವುದಕ್ಕೋಸ್ಕರವೇ, ಮಧುರವಾಕ್ - ಹಿತವಚನನಾದ, ಅಯಂ - ಈತನು, ಇಹ - ಇಲ್ಲಿಗೆ, ಪ್ರಾಪ್ತಃ - ಬಂದವನಾಗಿದ್ದಾನೆ, ನಾಮ್ನಾ - ಹೆಸರಿನಿಂದ, ದಧಿಮುಖೋನಾಮ - ದಧಿಮುಖನೆಂದು ಹೆಸರಾದ, ಪ್ರಖ್ಯಾತವಿಕ್ರಮಃ - ಪ್ರಸಿದ್ಧವಾದ ಪರಾಕ್ರಮವುಳ್ಳ, ಹರಿಃ - ವಾನರನಾಗಿದ್ದಾನೆ ||೨೦, ೨೧ || ಮಹಾಬಾಹೋ - ಹೇರಳವಾದ ಬಾಹು

ಬಲವುಳ್ಳ ಸೌಮಿತ್ರಿಯೇ! ಅದು ಹೇಗೆಂಬೆಯೋ ? ಕಾರ್ಯನಿರ್ವಾಹಸಾಮರ್ಥ್ಯ, ಮುಂದಿನ ಆಗುಹೋಗುಗಳ ತಿಳಿವಳಿಕೆ, ಆ ಕಾರ್ಯಸಿದ್ಧಿಗೆ ತಕ್ಕ ಪ್ರಯತ್ನ, ಇವುಗಳಿಗೆ ಅನುರೂಪವಾದ ಪರಾಕ್ರಮ, ಇವುಗಳಿಗೆಲ್ಲ ಮೂಲವಾದ ಶಾಸ್ತ್ರಪರಿಜ್ಞಾನ ಇಂತಿದೆಲ್ಲವೂ ಆ ವೀರಹನುಮನಲ್ಲಿ ನೆಲೆಗೊಂಡಿವೆ ||೧೮ || ಯಾವ ಕಾರ್ಯದಲ್ಲಿ -ಹಿರಿಯವನೆನಿಸಿದ ಜಾಂಬವಂತನು ಪ್ರಧಾನನಾಗಿಯೂ, ಯುವರಾಜನೂ ಮಹಾಬಲನೂ ಆಗಿರುವ ಅಂಗದನು ನಾಯಕನಾಗಿಯೂ, ಆಂಜನೇಯನು ನಿರ್ವಾಹಕನಾಗಿಯೂ ನಿಲ್ಲುವರೋ, ಅಂತಹ ಕಾರ್ಯವು ಸಿದ್ಧಿಸದೆ ಎಂದಿಗೂ ತಪ್ಪಿಹೋಗಲಿಕ್ಕಿಲ್ಲ ||೧೯ || ಈ ವನಪಾಲರಾದ ವಾನರರು ಒಗ್ಗಟ್ಟಾಗಿ ತಡೆದರೂ, ಇವರನ್ನೆಲ್ಲಾ ಮೊಳಕಾಲುಗಳಿಂದ

ಏತದರ್ಥಮಯಂ ಪ್ರಾಪ್ತೋ ವಕ್ತುಂ ಮಧುರ ವಾಗಿಹ ॥೨೧॥
ನಾಮ್ನಾ ದಧಿಮುಖೋ ನಾಮ ಹರಿಃ ಪ್ರಖ್ಯಾತವಿಕ್ರಮಃ ॥೨೧॥-॥
ದೃಷ್ಟಾ ಸೀತಾ ಮಹಾಬಾಹೋ ಸೌಮಿತ್ರೇ ಪಶ್ಯ ತತ್ತ್ವತಃ ॥
ಅಭಿಗಮ್ಯ ತಥಾ ಸರ್ವೇ ಪಿಬಂತಿ ಮಧು ವಾನರಾಃ ॥೨೨॥-॥
ನ ಚಾಪ್ಯದೃಷ್ಟ್ವಾ ವೈದೇಹೀಂ ವಿಶ್ರುತಾಃ ಪುರುಷರ್ಷಭಾಃ ॥
ವನಂ ದತ್ತವರಂ ದಿವ್ಯಂ ಧರ್ಷಯೇಯು ರ್ವನೌಕಸಃ ॥೨೩॥-॥
ತತಃ ಪ್ರಹೃಷ್ಟೋ ಧರ್ಮಾತ್ಮಾ ಲಕ್ಷ್ಮಣ ಸ್ಸಹ ರಾಘವಃ ॥೨೪॥
ಶ್ರುತ್ವಾ ಕರ್ಣಸುಖಾಂ ವಾಣೀಂ ಸುಗ್ರೀವ ವದನಾಚ್ಚ್ಯುತಾಮ್ ।

ಬಲವುಳ್ಳ, ಹೇಸೌಮಿತ್ರೇ - ಎಲೈ ಲಕ್ಷ್ಮಣನೇ, ಸೀತಾ - ಸೀತಾದೇವಿಯು, ದೃಷ್ಟಾ - ನೋಡಲ್ಪಟ್ಟಳು, ತತ್ತ್ವತಃ - ಯಥಾರ್ಥವಾಗಿ, ಪಶ್ಯ - ನೋಡು, ಸರ್ವೆ - ಸಮಸ್ತರಾದ, ವಾನರಾಃ - ಕಪಿಗಳು, ಅಭಿಗಮ್ಯ - ಬಂದು, ತಥಾ - ಹಾಗೆ, (ನಿರ್ಭಯವಾಗಿ) ಮಧು - ಜೇನನ್ನು, ಪಿಬಂತಿ - ಕುಡಿಯುತಲಿದ್ದಾರೆ ॥೨೨॥ ಪುರುಷರ್ಷಭ - ಎಲೈ ಪುರುಷಶ್ರೇಷ್ಠನೆ! ವಿಶ್ರುತಾಃ - ಪ್ರಸಿದ್ಧರಾದ, ವನೌಕಸಃ - ಕಪಿಗಳು, ದತ್ತವರಂ - ಋಕ್ಷರಜಸ್ಸೆಂಬ ವಾನರನಿಗೆ ಬ್ರಹ್ಮನಿಂದ ಕೊಡಲ್ಪಟ್ಟ ವರವುಳ್ಳ, ದಿವ್ಯಂ - ಶ್ರೇಷ್ಠವೆನಿಸಿದ, ವನಂ - ಮಧುವನವನ್ನು, ವೈದೇಹೀಂ - ಸೀತೆಯನ್ನು, ಅದೃಷ್ಟ್ವಾಪಿ - ನೋಡದೆಯೇ, ನ ಚ ಧರ್ಷಯೇಯುಃ - ಆಕ್ರಮಿಸಲಾರರು ॥೨೨॥೨೩॥ ಧರ್ಮಾತ್ಮಾ - ಧರ್ಮಬುದ್ಧಿಯುಳ್ಳ, ಲಕ್ಷ್ಮಣಃ - ಲಕ್ಷ್ಮಣನು, ಸಹರಾಘವಃ - ರಾಮನಿಂದ ಸಹಿತನಾಗಿ, ಸುಗ್ರೀವವದನಾತ್ - ಸುಗ್ರೀವನ ಮುಖದಿಂದ, ಚ್ಯುತಾಂ - ಹೊರಟುಬಂದ, ಕರ್ಣಸುಖಾಂ - ಕಿವಿಗಿಂಪಾಗಿರುವ, ವಾಣೀಂ - ಮಾತನ್ನು, ಶ್ರುತ್ವಾ - ಕೇಳಿ, ಪ್ರಹೃಷ್ಟಃ - ಹೇರಳವಾಗಿ ಸಂತಸಗೊಂಡವನಾದನು, ತತಃ - ಅಮೇಲೆ, ಮಹಾಬಲಃ - ಹೇರಳವಾದ ಬಲವುಳ್ಳ, ರಾಮಃ - ರಾಮನು, ಭೃಶಂ - ಬಹಳವಾಗಿ, ಪ್ರಾಹೃಷ್ಯತ - ಹೊರಗೆಹಿಗ್ಗಿದನು, ಲಕ್ಷ್ಮಣಶ್ಚ

ಬದೆದು, ಅಂಗದನೇ ಮೊದಲಾದ ವೀರರು ಮಧುವನವನ್ನು ಹಾಳುಮಾಡಿದರೆಂಬ ಸುದ್ದಿಯನ್ನು ಹೇಳಬೇಕೆಂದೇ ಮಧುರವಚನನಾದ ಈ ವಾನರನು ಇಲ್ಲಿಗೆ ಬಂದಿದಾನೆ, ಹೆಸರಿನಲ್ಲಿ ಇವನ್ನು ದಧಿಮುಖನೆಂದು ಕರೆಯುತ್ತಾರೆ. ಈತನು ಸಾಮಾನ್ಯನಲ್ಲ, ಮಹಾಪರಾಕ್ರಮಸಂಪನ್ನನು ॥೨೦, ೨೧ ॥ ಎಲೈ ಲಕ್ಷ್ಮಣನೆ! ಖಂಡಿತವಾಗಿಯೂ, ಸೀತಾದೇವಿಯನ್ನು ನೋಡಿಬಂದಿದ್ದಾರೆ, ಆ ಸಂತೋಷದಿಂದಲೇ ಹಿಂದಿರುಗಿಬಂದು, ಯಾರನ್ನೂ ಸಡ್ಡೆಮಾಡದೆ, ತಮಗೇನೂ ಕೇಡಾಗುವುದಿಲ್ಲವೆಂದುನೆನೆದು, ಎಲ್ಲರೂ ಮಧುವನ್ನು ಪಾನಮಾಡುತಲಿದಾರೆ, ಎಲ್ಲರೂ ಹೇರಳವಾದ ಪರಾಕ್ರಮಶಾಲಿಗಳೆಂದು ಹೆಸರುವಾಸಿಯನ್ನು ಪಡೆದಿರುವರು, ವೀನಶಾಲಿಗಳು, ಈವನವು-ಬ್ರಹ್ಮನ ವರಬಲದಿಂದ ನಮ್ಮ ತಂದೆಯಾದ ಋಕ್ಷರಜಸ್ಸೆಂಬ ವಾನರನಿಗೆ ಲಭಿಸಿದುದು, ಇಂತಹ ದಿವ್ಯವನವನ್ನು ಕಾರ್ಯಸಿದ್ಧಿಯಾಗದಿದ್ದರೆ ಎಂದಿಗೂ ಆಕ್ರಮಿಸುತ್ತಲಿರಲಿಲ್ಲ॥೨೨,೨೩॥ಧರ್ಮಾತ್ಮರೂ,ಮಹಾಬಲ ಪರಾಕ್ರಮಶಾಲಿಗಳೂ ಆಗಿರುವ ರಾಮಲಕ್ಷ್ಮಣರು-ಕಪಿರಾಜನಾದ ಸುಗ್ರೀವನ ಮುಖದಿಂದ ಹೊರಟುಬರುತಲಿರುವ ಕರ್ಣಾನಂದಕರವಾದ ಈವಾಣಿಯನ್ನು ಕೇಳಿ, ಮಾನಸಿಕವಾದ ಆನಂದವನ್ನೂ, ಬಹಿರಂಗವಾದ ರೋಮಾಂಚರೂಪವಾಗಿರುವ ಹರ್ಷವನ್ನೂ, ಹೊಂದಿದರು ॥

ಪ್ರಾಹೃಷ್ಯತ ಭೃಶಂ ರಾಮೋ ಲಕ್ಷ್ಮಣಶ್ಚ ಮಹಾಬಲಃ ॥೨೫॥
ಶ್ರುತ್ವಾ ದಧಿಮುಖಸ್ಯೇದಂ. ಸುಗ್ರೀವಸ್ತು ಪ್ರಹೃಷ್ಯ ಚ ।
ವನಪಾಲಂ ಪುನರ್ವಾಕ್ಯಂ ಸುಗ್ರೀವಃ ಪ್ರತ್ಯಭಾಷತ ॥೨೬॥
ಪ್ರೀತೋಽಸ್ಮಿ ಸೋಽಹಂ ಯದ್ಭುಕ್ತಂ ವನಂ ತೈಃ ಕೃತ ಕರ್ಮಭಿಃ ।
ಮರ್ಷಿತಂ ಮರ್ಷಣೀಯಂ ಚ ಚೇಷ್ಟಿತಂ ಕೃತಕರ್ಮಣಾಮ್ ॥೨೭॥
ಇಚ್ಛಾಮಿ ಶೀಘ್ರಂ ಹನುಮತ್ಪ್ರಧಾನಾನ್ ಶಾಖಾಮೃಗಾಂಸ್ತಾನ್ ಮೃಗರಾಜದರ್ಪಾನ್।
ದ್ರಷ್ಟುಂ ಕೃತಾರ್ಥಾನ್ ಸಹ ರಾಘವಾಭ್ಯಾಂ ಶ್ರೋತುಂ ಚ ಸೀತಾಧಿಗಮೇ ಪ್ರಯತ್ನಂ॥

---

ಲಕ್ಷ್ಮಣನೂ, ಪ್ರಾಹೃಷ್ಯತ (ಪ್ರಾಹೃಷ್ಯತ್) -ಸಂತೋಷದಿಂದುಬ್ಬಿದನು ॥೨೪, ೨೫॥ ಸುಗ್ರೀವಃ - ಉತ್ತಮವಾದ ಕಂಠವುಳ್ಳ, ಸುಗ್ರೀವಸ್ತು - ಸುಗ್ರೀವನಾದರೋ, ದಧಿಮುಖಸ್ಯ - ದಧಿಮುಖನ, ಇದಂ - ಈ ಹಿಂದೆಹೇಳಿದ ಮಾತನ್ನು, ಶ್ರುತ್ವಾ - ಕೇಳಿ, ಪ್ರಹೃಷ್ಯ ಚ - ಸಂತೋಷಪಟ್ಟು, ವನಪಾಲಂ ಪ್ರತಿ - ವನಪಾಲಕನಾದ ದಧಿಮುಖನನ್ನು ಕುರಿತು, ಪುನಃ - ಮರಳಿ, ವಾಕ್ಯಂ - ಮತ್ತೊಂದು ಮಾತನ್ನು, ಅಭಾಷತ - ಹೇಳಿದನು ॥೨೬॥ ಕೃತಕರ್ಮಭಿಃ - ಮಾಡಿದ ಕೆಲಸವುಳ್ಳ, ತೈಃ - ಆ ಅಂಗದನೇ ಮೊದಲಾದವರಿಂದ, ವನಂ - ಮಧುವನವು, ಭುಕ್ತಂ - ಅನುಭವಿಸಲ್ಪಟ್ಟಿತು (ಇತಿಯದಸ್ತಿ - ಹೀಗೆಂಬುದಾವ ಸಂಗತಿಯುಂಟೋ) ತಸ್ಯ - ಆ ವನಾನುಭವಕ್ಕೆ, ಅಹಂ - ನಾನು, ಪ್ರೀತಃ - ಸಂತೋಷಪಟ್ಟವನಾಗಿ, ಅಸ್ಮಿ - ಇದೇನೆ, ಕೃತಕರ್ಮಣಾಂ - ಮಾಡಿದಕೆಲಸವುಳ್ಳವರ, ಮರ್ಷಣೀಯಂ- ಸಹಿಸತಕ್ಕದೆನಿಸಿದ, ಚೇಷ್ಟಿತಂ - ಕೆಲಸವು, ಮರ್ಷಿತಂ ಚ - ಸಹಿಸಲ್ಪಟ್ಟಿದೆ ॥೨೭॥ ಅಹಂ-ನಾನು, ಹನುಮತ್ಪ್ರಧಾನಾನ್- ಹನುಮಂತನೇ ಮೊದಲಾಗಿರುವ, ಮೃಗರಾಜದರ್ಪಾನ್ - ಸಿಂಹದಂತೆ ಮದವುಳ್ಳ, ಕೃತಾರ್ಥಾನ್ - ಮಾಡಿದಕೆಲಸವುಳ್ಳ, ತಾನ್ - ಆ, ಶಾಖಾಮೃಗಾನ್ - ವಾನರರನ್ನು, ಸಹರಾಘವಾಭ್ಯಾಂ - ರಾಮಲಕ್ಷ್ಮಣರೊಡನೆ, ಶೀಘ್ರಂ - ಬೇಗನೆ, ದ್ರಷ್ಟುಂ - ನೋಡಲಿಕ್ಕೂ, ಸೀತಾಧಿಗಮೇ - ಸೀತಾಪ್ರಾಪ್ತಿಯಲ್ಲಿ, ಪ್ರಯತ್ನಂ - ಉದ್ಯೋಗವನ್ನು, (ತೇಭ್ಯಃ - ಆ ವಾನರರಿಂದ) ಶ್ರೋತುಂ - ಕೇಳಲಿಕ್ಕೂ, ಇಚ್ಛಾಮಿ -

---

॥೨೪ ೨೫॥ಸುಗ್ರೀವನಾದರೆ ರೋಮೋದ್ಗಮವನ್ನುಂಟುಮಾಡುತಲಿರುವ ದಧಿಮುಖನ ಮಾತುಗಳನ್ನು ಕೇಳಿ; ಆ ವನಪಾಲನನ್ನು ಕುರಿತು ಹೀಗೆ ಹೇಳಿದನು॥೨೬॥ಎಲೈ ವನಪಾಲಕನಾದ ದಧಿಮುಖನೇ ! ನೀನು ಸಿಟ್ಟುಗೊಳ್ಳಬೇಡ. ಪ್ರಕೃತದಲ್ಲಿ ನಾವೆಲ್ಲರೂ ಸಂತೋಷಪಡಬೇಕಾಗಿದೆ. ಅಂಗದನೇ ಮೊದಲಾದ ವಾನರವೀರರು ಕೃತಕಾರ್ಯರಾಗಿ ಬಂದು, ಸಂತೋಷದಿಂದ ನಮ್ಮ ಮಧುವನವನ್ನು ಹೊಕ್ಕು, ಮಧುಪಾನ ಮಾಡಿದರೆಂಬ ಸುದ್ದಿಯನ್ನು ಕೇಳಿ, ನಾನೂ ಬಹಳವಾಗಿ ಸಂತೋಷಿಸುತ್ತೇನೆ. ಕೃತಕೃತ್ಯರಾಗಿ ಬಂದಿರುವವರ ಅತಿಕ್ರಮದ ಕೆಲಸವೂ ಸಹಿಸತಕ್ಕದಾಗಿರುವುದರಿಂದ ಸಹಿಸಲೇ ಬೇಕು ॥೨೭॥ ಆದಕಾರಣ ಸಿಂಹದಂತೆ ಮಹಾಶೌರ್ಯ ಸಂಪನ್ನರಾಗಿ, ಪ್ರಕೃತಕಾರ್ಯವನ್ನೂ ನಿರ್ವಾಹಮಾಡಿಕೊಂಡು ಬಂದಿರುವ ಹನುಮಂತನೇ ಮೊದಲಾಗಿರುವ ಆ ಕಪಿವೀರರನ್ನು ನಾನು ಬಹುಬೇಗನೆ ನೋಡಲಿಕ್ಕೂ, ಮತ್ತು-ರಾಮಲಕ್ಷ್ಮಣರೊಡನೆ ಕಲೆತು, ಆ ಕಪಿವರರು ಸೀತಾದೇವಿಯನ್ನು ಕಾಣಲು ಮಾಡಿದ ಪ್ರಯತ್ನವನ್ನು ಅವರ ಮುಖದಿಂದ ಕೇಳಲಿಕ್ಕೂ, ಬಹಳವಾಗಿ ಕುತೂಹಲಪಡುತಲಿದ್ದೇನೆ ॥೨೮॥ ಎಂದು, ಬಳಿಕ ಕಪಿರಾಜನಾದ ಸುಗ್ರೀವನು ಸಂತೋಷ

ಪ್ರೀತಿಸ್ಫೀತಾಕ್ಷೌ ಸಂಪ್ರಹೃಷ್ಟೌ, ಕುಮಾರೌ ದೃಷ್ಟ್ವಾ ಸಿದ್ಧಾರ್ಥೌ ವಾನರಾಣಾಂ ಚ ರಾಜಾ
ಅಂಗೈಸ್ಸಂಹೃಷ್ಟೈಃ ಕರ್ಮಸಿದ್ಧಿಂ ವಿದಿತ್ವಾ ಬಾಹ್ವೋರಾಸನ್ನಾಂ ಸೋತಿಮಾತ್ರಂ ನನಂದ॥

ಇತಿ ಶ್ರೀಮತ್ಸುಂದರಕಾಂಡೇ-ತ್ರಿಷಷ್ಟಿತಮಸ್ಸರ್ಗಃ.

ಕೋರತ್ತೇನೆ ॥೨೪॥ ವಾನರಾಣಾಂ - ಕಪಿಗಳಿಗೆ, ರಾಜಾ-ಅರಸಾದ, ಸಚ - ಆ ಸುಗ್ರೀವನು, ಪ್ರೀತಿಸ್ಫೀತಾಕ್ಷೌ - ಸಂತೋಷದಿಂದ ಅರಳಿದ ಕಣ್ಣುಳ್ಳವರೂ, ಸಂಪ್ರಹೃಷ್ಟೌ - ಅರಳಿದ ಮೈಗೂದಲುಳ್ಳವರೂ, ಸಿದ್ಧಾರ್ಥೌ - ಸಿದ್ಧವಾಗುತ ಬಂದಿರುವ ಕಾರ್ಯವುಳ್ಳವರೂ ಆಗಿರುವ, ರಾಜಪುತ್ರೌ - ದಶರಥನಂದನರನ್ನು ದೃಷ್ಟ್ವಾ - ನೋಡಿ, ಸಂಹೃಷ್ಟೈಃ - ನೆಟ್ಟಗೆನಿಂದ ಕೂದಲುಳ್ಳ, ಅಂಗೈಃ - ಅವಯವಗಳಿಂದ ಕೂಡಿದವನಾಗಿ, ಕರ್ಮಸಿದ್ಧಿಂ - ಸೀತಾಲಾಭರೂಪವಾದ ಪ್ರಕೃತಕಾರ್ಯಸಿದ್ಧಿಯನ್ನು, ಬಾಹ್ವೋಃ - ಕರಗಳಲ್ಲಿ, ಆಸನ್ನಾಂ - ಇರುವುದನ್ನಾಗಿ, ವಿದಿತ್ವಾ - ತಿಳಿದು, ಅತಿಮಾತ್ರಂ - ವಿಶೇಷವಾಗಿ, ನನಂದ - ಸಂತೋಷಿಸಿದನು ॥೨೫॥

—ಇಂತು ಅರುವತ್ತು ಮೂರನೆಯ ಸರ್ಗಂ —

ದಿಂದ ಅರಳಿದ ಕಣ್ಣುಳ್ಳವರೂ, ರೋಮಾಂಚವುಳ್ಳವರೂ, ಬಹುತ್ವರೆಯಲ್ಲಿ ಕಾರ್ಯಸಿದ್ಧಿಯನ್ನು ಪಡೆಯಬೇಕೆಂದು ಕುತೂಹಲವುಳ್ಳವರೂ ಆಗಿರುವ ರಾಮಲಕ್ಷ್ಮಣರನ್ನು ನೋಡಿ, ತಾನೂ ಹೇರಳವಾದ ಸಂತೋಷದಿಂದ ರೋಮಾಂಚವುಳ್ಳವನಾಗಿ, ಅಲ್ಲಿಂದ ಮುಂದೆ ಮಾಡಬೇಕಾದ ಕಾರ್ಯನಿರ್ವಾಹವು ತನ್ನ ಕೈಸೇರಿರುವುದೆಂದು ಮನಸ್ಸಿನಲ್ಲಿ ಗೊತ್ತುಮಾಡಿಕೊಂಡು ಪರಮಾನಂದಭರಿತನಾಗುತ್ತಿದ್ದನು ॥೨೫॥

—ಇಂತು ಅರುವತ್ತು ಮೂರನೆಯ ಸರ್ಗಂ —

ಶ್ರೀ.

ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ

## ಶ್ರೀಮತ್ಸುಂದರಕಾಂಡೇ-ಚತುಷ್ಷಷ್ಟಿತಮಸ್ಸರ್ಗಃ.

ಸುಗ್ರೀವೇಣೈವಮುಕ್ತಸ್ತು ಹೃಷ್ಟೋ ದಧಿಮುಖಃ ಕಪಿಃ।
ರಾಘವಂ ಲಕ್ಷ್ಮಣಂ ಚೈವ ಸುಗ್ರೀವಂ ಚಾಭ್ಯವಾದಯತ್ ॥೧॥

— ಅರುವತ್ತು ನಾಲ್ಕನೆಯ ಸರ್ಗಂ —

ಕಂದ॥ ಮುಳಿಸಂ ತೊರೆದಾ ವನಪಂ । ಘಳಿಲನೆ ಮಧುವನಕೆ ಸಾರ್ದು ವಿಷಯುವ ನರುಹಲ್ ।
ದಳದಿಂದೈದಿದ ಹರಿಗಳು । ವಿಳಯಣುಗಿಯು ಪದುಳದಿರವ ರಾಮಂಗೊರೆದರ್ ॥

ಸುಗ್ರೀವೇಣ - ಸುಗ್ರೀವನಿಂದ, ಏವಂ - ಈ ಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟ, ದಧಿಮುಖಃ - ದಧಿಮುಖನೆಂಬ, ಕಪಿಸ್ತು - ವಾನರನಾದರೋ, ಹೃಷ್ಟಃ - ಸಂತೋಷಿಸಿದವನಾಗಿ, ರಾಘವಂ-ರಾಮನನ್ನೂ, ಲಕ್ಷ್ಮಣಂಚೈವ -ಲಕ್ಷ್ಮಣನನ್ನೂ, ಸುಗ್ರೀವಂಚ ಸುಗ್ರೀವನನ್ನೂ, ಅಭ್ಯವಾದಯತ್-

—ಅರುವತ್ತುನಾಲ್ಕನೆಯ ಸರ್ಗಂ—

ಬಳಿಕ ಕಪಿರಾಜನಾದ ಸುಗ್ರೀವನ ವಚನವನ್ನಾಲಿಸಿದ ದಧಿಮುಖನು ವಿಶೇಷವಾಗಿ ಹರ್ಷಿಸಿ, ರಾಮಲಕ್ಷ್ಮಣ ಸುಗ್ರೀವರನ್ನು ಕ್ರಮವಾಗಿ ವಂದಿಸಿದನು. ಹಾಗೆ ಆ ಮೂವರನ್ನೂ

ಸ ಪ್ರಣಮ್ಯ ಚ ಸುಗ್ರೀವಂ ರಾಘವೌ ಚ ಮಹಾಬಲೌ।
ವಾನರೈಸ್ಸಹಿತಶ್ಶೂರೈರ್ದಿವಮೇವೋತ್ಪಪಾತಹ॥೨॥
ಸ ಯಥೈವಾಗತಃ ಪೂರ್ವಂ ತಥೈವ ತ್ವರಿತಂ ಗತಃ।
ನಿಪತ್ಯ ಗಗನಾದ್ಭೂಮೌ ತದ್ವನಂ ಪ್ರವಿವೇಶ ಹ ॥೩॥
ಸ ಪ್ರವಿಷ್ಟೋ ಮಧುವನಂ ದದರ್ಶ ಹರಿಯೂಥಪಾನ್ ।
ವಿಮದಾನುತ್ಥಿತಾನ್ ಸರ್ವಾನ್ಮೇಹಮಾನಾನ್ಮಧೂದಕಮ್ ॥೪॥
ಸ ತಾನುಪಾಗಮದ್ವೀರೋ ಬದ್ಧ್ವಾ ಕರಪುಟಾಂಜಲಿಮ್ ।
ಉವಾಚ ವಚನಂ ಶ್ಲಕ್ಷ್ಣಮಿದಂ ಹೃಷ್ಟವದಂಗದಮ್ ॥೫॥

ನಮಸ್ಕರಿಸಿದನು ॥೧॥ ಸಃ - ಆ ದಧಿಮುಖನು, ಸುಗ್ರೀವಂ - ಸುಗ್ರೀವನನ್ನು, ಮಹಾಬಲೌ - ಹೇರಳವಾದ ಬಲವುಳ್ಳ, ರಾಘವೌ ಚ - ರಾಮ ಲಕ್ಷ್ಮಣರನ್ನೂ, ಪ್ರಣಮ್ಯ ಚ - ನಮಸ್ಕರಿಸಿಯೂ, ಶೂರೈಃ - ಪರಾಕ್ರಮಶಾಲಿಗಳೂ, ಸಹಿತೈಃ - ಒಡಗೂಡಿದವರೂ ಆಗಿರುವ, ವಾನರೈಸ್ಸಹ - ವಾನರರಿಂದೊಡಗೂಡಿ, ದಿವಮೇವ - ಆಕಾಶವನ್ನು ಕುರಿತೇ, ಉತ್ಪಪಾತ ಹ - ಹಾರಿ ಹೊರಟನು ॥೨॥ ಸಃ - ಆ ದಧಿಮುಖನು, ಪೂರ್ವಂ - ಮೊದಲು, ಯಥೈವ - ಹೇಗಾದರೆ, ಆಗತಃ - ಬಂದನೋ ತಥೈವ - ಹಾಗೆಯೇ, ತ್ವರಿತಂ - ಬೇಗನೆ, ಗತಃ - ಹೊರಟು ಹೋದವನಾಗಿ, ಗಗನಾತ್ - ಆಗಸದಿಂದ, ಭೂಮೌ - ನೆಲದಲ್ಲಿ, ನಿಪತ್ಯ - ಇಳಿದು, ತತ್ - ಆ, ಮಧುವನಂ - ಮಧುವನವನ್ನು, ಪ್ರವಿವೇಶ ಹ - ಒಳಹೊಕ್ಕನು ॥೩॥ ಮಧುವನಂ - ಮಧುವನವನ್ನು, ಪ್ರವಿಷ್ಟಃ - ಪ್ರವೇಶಿಸಿದ, ಸಃ - ಆ ದಧಿಮುಖನು, ಮಧೂದಕಂ - ಮದ್ಯವನ್ನೂ, ಉದಕವನ್ನೂ, ಮೇಹಮಾನಾನ್ - ಮೂತ್ರವಾಗಿ ಬಿಡುತಲಿರುವವರಾದ ಕಾರಣವೇ, ವಿಮದಾನ್ - ಮದರಹಿತರಾಗಿ, ಉತ್ಥಿತಾನ್ - ಎಚ್ಚೆತ್ತಿರುವ, ಸರ್ವಾನ್ - ಸಮಸ್ತರಾದ, ಹರಿಯೂಥಪಾನ್ - ವಾನರಾಧಿಪತಿಗಳನ್ನು, ದದರ್ಶ ಹ - ನೋಡಿದನು ॥೪॥ ವೀರಃ - ಪರಾಕ್ರಮಶಾಲಿಯಾದ, ಸಃ - ಆ ದಧಿಮುಖನು, ಕರಪುಟಾಂಜಲಿಂ - ಕರತಲಗಳ ಜೋಡಣೆಯನ್ನು, ಬದ್ಧ್ವಾ - ಕಟ್ಟಿ, (ಕೈ ಜೋಡಿಸಿ) ತಾನ್ - ಆ ಅಂಗದಾದಿ ವಾನರರನ್ನು, ಉಪಾಗಮತ್ - ಹೊಂದಿದವನು, ಅಂಗದಂ - ಅಂಗದನನ್ನು ಕುರಿತು, ಇದಂ - ಈ ಮುಂದಿನ, ಶ್ಲಕ್ಷ್ಣಂ - ಮೃದುವಾದ, ವಚನಂ - ಮಾತನ್ನು, ಹೃಷ್ಟವತ್ - ಸಂತೋಷವುಳ್ಳವನಂತೆ, ಉವಾಚ - ಹೇಳ ತೊಡಗಿದನು

ನಮಸ್ಕರಿಸಿದ ತರುವಾಯ ತನ್ನ ಸಂಗಡ ಬಂದಿದ್ದ ವನಪಾಲಕರೊಡನೆ ತನ್ನ ಸ್ಥಾನವನ್ನು ಕುರಿತು ತೆರಳಲು, ಮುಗಿಲ ಮಾರ್ಗಕ್ಕೆ ಹಾರಿದನು ॥೧-೨॥ ನಭೋಮಂಡಲದಲ್ಲಿ ತಾನು ಬಂದ ದಾರಿಯನ್ನೇ ಅನುಸರಿಸಿ ಬಹು ವೇಗದಿಂದ ಹೋಗಿ, ಗಗನಮಾರ್ಗದಿಂದ ತನ್ನ ವನಪ್ರದೇಶದ ಭೂಮಿಯಲ್ಲಿ ಇಳಿದು, ಮಧುವನವನ್ನು ಪ್ರವೇಶಿಸಿದನು ॥ ೩ ॥ ಹಾಗೆ ಪ್ರವೇಶಮಾಡಿದ ತರುವಾಯ ಮನಬಂದಂತೆ ಜೇನುತುಪ್ಪವನ್ನು ಕುಡಿದು, ಮತ್ತರಾಗಿ ಜೇನು ತುಪ್ಪವನ್ನೂ, ಜಲವನ್ನೂ ಮೂತ್ರವಾಗಿ ತೊರೆದುದರಿಂದ ತಲೆಗೇರಿದ್ದ ಮದವಿಳಿದು, ಎಚ್ಚೆತ್ತಿರುವ ಕಪಿನಾಯಕರನ್ನು ಕಂಡನು ॥ ೪ ॥ ಮಹಾಪರಾಕ್ರಮಶಾಲಿಯಾದ ದಧಿಮುಖನು ಅಂಜಲಿಬದ್ಧನಾಗಿ, ಅಂಗದನೇ ಮೊದಲಾದ ಕಪಿವೀರರ ಬಳಿಗೆ ಬಂದು, ಅಂಗದನನ್ನು ಕಂಡು, ಬಹು ಸಂತೋಷದಿಂದೊಡಗೂಡಿ

ಸೌಮ್ಯ ರೋಷೋ ನ ಕರ್ತವ್ಯೋ ಯದೇಭಿ ರಭಿ ವಾರಿತಮ್ ।
ಅಜ್ಞಾನಾ ದ್ರಕ್ಷಿಭಿಃ ಕ್ರೋಧಾ ದ್ಭವಂತಃ ಪ್ರತಿ ಷೇಧಿತಾಃ ॥೬॥
ಯುವರಾಜ ಸ್ತ್ವ ಮೀಶಶ್ಚ ವನಸ್ಯಾಸ್ಯ ಮಹಾಬಲ ।
ಮೌರ್ಖ್ಯಾ ತ್ಪೂರ್ವಂ ಕೃತೋ ದೋಷ ಸ್ತಂ ಭವಾನ್ ಕ್ಷಂತು ಮರ್ಹಸಿ ॥೭॥
ಆಖ್ಯಾತಂ ಹಿ ಮಯಾ ಗತ್ವಾ ಪಿತೃವ್ಯಸ್ಯ ತವಾನಘ ।
ಇಹೋಪ ಯಾತಂ ಸರ್ವೇಷಾ ಮೇತೇಷಾಂ ವನಚಾರಿಣಾಮ್ ॥೮॥
ಸ ತ್ವದಾಗಮನಂ ಶ್ರುತ್ವಾ ಸಹೈಭಿ ರ್ಹರಿ ಯೂಥಪೈಃ ।

---

॥೫॥ ಹೇ ಸೌಮ್ಯ - ಎಲೈ ಶಾಂತನೇ ! ಏಭಿಃ - ಈ ನಮ್ಮಿಂದ, (ತ್ವಂ-ನೀನು) ಅಭಿವಾರಿತಃ - ತಡೆಯಲ್ಪಟ್ಟವನಾದೆ, (ಏತಸ್ಮಿನ್ - ಈವಿಷಯದಲ್ಲಿ,) ರೋಷಃ - ಕೋಪವು, ನಕರ್ತವ್ಯಃ - ಮಾಡತಕ್ಕದ್ದಲ್ಲ, ರಕ್ಷಿಭಿಃ - ವನಪಾಲರಿಂದ, ಅಜ್ಞಾನಾತ್ - ತಿಳುವಳಿಕೆಯಿಲ್ಲದುದರಿಂದ, ಕ್ರೋಧಾತ್ - ಕೋಪದ ವೇಗದಿಂದ, ಭವಂತಃ - ನೀವುಗಳು, ಪ್ರತಿಷೇಧಿತಾಃ - ಅಡ್ಡಿಮಾಡಲ್ಪಟ್ಟಿರಿ ॥೬॥ ಮಹಾಬಲ - ಬಾಹುಬಲಶಾಲಿಯಾದ ಅಂಗದನೇ !, ಅಸ್ಯ - ಈ, ವನಸ್ಯ - ಮಧುವನಕ್ಕೆ, ತ್ವಂ - ನೀನು, ಯುವರಾಜಃ - ಯುವರಾಜನು, ಈಶಶ್ಚ - ಪ್ರಭುವೂ ಆಗಿದ್ದೀಯೆ, ಮೌರ್ಖ್ಯಾತ್ - ಅಜ್ಞಾನದಿಂದ, ಅಸ್ಮಾಭಿಃ - ನಮ್ಮಗಳಿಂದ, ಪೂರ್ವಂ- ಮೊದಲು, ಯಃ - ಯಾವ, ದೋಷಃ-ತಪ್ಪು, ಕೃತಃ - ಮಾಡಲ್ಪಟ್ಟಿತೋ, ತಂ - ಆತಪ್ಪನ್ನು, ಭವಾನ್ - ನೀನು, ಕ್ಷಂತುಂ - ಸಹಿಸಲಿಕ್ಕೆ, ಅರ್ಹಸಿ - ತಕ್ಕವನಾಗಿದ್ದೀಯೆ ॥೭॥ ಹೇಅನಘ - ಎಲೈದೋಷರಹಿತನೆ, ತವ - ನಿನ್ನ, ಪಿತೃವ್ಯಸ್ಯ - ಚಿಕ್ಕಪ್ಪನಾದ ಸುಗ್ರೀವನ, (ಸಮೀಪಂ - ಸನ್ನಿಧಾನವನ್ನು ಕುರಿತು,) ಗತ್ವಾ - ಹೋಗಿ, ಇಹ - ಈವನದಲ್ಲಿ, ಏತೇಷಾಂ - ಈ, ಸರ್ವೇಷಾಂ - ಸಮಸ್ತರಾದ, ವನಚಾರಿಣಾಂ - ವಾನರರ, ಉಪಯಾತಂ - ಆಗಮನವು, ಮಯಾ - ನನ್ನಿಂದ, ಆಖ್ಯಾತಂಹಿ - ಹೇಳಲ್ಪಟ್ಟಿತು ॥೮॥ ಸಃ - ಆ ನಿಮ್ಮ ಚಿಕ್ಕತಂದೆಯಾದ, ಅಸೌ - ಈ ಸುಗ್ರೀವನು, ಹರಿಯೂಥಪೈಸ್ಸಹ - ವಾನರಾಧಿಪತಿಗಳೊಡನೆ, ತ್ವದಾಗಮನಂ- ನಿನ್ನಬರುವಿಕೆಯನ್ನು, ಶ್ರುತ್ವಾ - ಕೇಳಿ, ವನಂ - ಮಧುವನವನ್ನು, ಪ್ರಧರ್ಷಿತಂ - ಆಕ್ರಮಿಸಲ್ಪಟ್ಟದನ್ನಾಗಿ

---

ಮೃದುಮಧುರವಾದ ಮಾತುಗಳಿಂದ ಇಂತೆಂದನು ॥೫॥ ಎಲೈ ಶಾಂತಸ್ವಭಾವವುಳ್ಳ ಅಂಗದನೆ ! ಈ ಮಧುವನಪ್ರವೇಶಕಾಲದಲ್ಲಿ ನಿಮ್ಮನ್ನು ನಾವುಗಳು ತಡೆದ ಅತಿಕ್ರಮವನ್ನು ಕ್ಷಮಿಸಬೇಕು. ಈ ವನಪಾಲಕರು ತತ್ವವನ್ನರಿಯದೆ ಆಗ್ರಹದಿಂದ ನಿಮ್ಮನ್ನು ಅಡ್ಡಿಗೊಳಿಸಿದರು. ಇದಕ್ಕಾಗಿ ನೀನು ಕೋಪಿಸಬಾರದು ॥ ೬ ॥ ಮತ್ತು ಎಲೈ ಅಂಗದಾ ! ನೀನು ಮಹಾಬಲಶಾಲಿ, ಇದಲ್ಲದೆ ಯುವರಾಜನೂ ಆಗಿರುದ್ದೀಯೆ. ಇನ್ನುಮೇಲೆ ಮಹಾರಾಜನೂ ಆಗುವವನು. ನಾವು ಅರಿಯದೆ ತಪ್ಪನ್ನು ಮಾಡಿದೆವು. ಅದನ್ನು ನೀನು ದಯಮಾಡಿ ಮನ್ನಿಸಬೇಕು ॥ ೭ ॥ ಎಲೈ ದೋಷರಹಿತನೇ ! ನಾನು ಇಲ್ಲಿಂದ ತೆರಳಿ, ನಿಮ್ಮ ಚಿಕ್ಕತಂದೆಯಾದ ಸುಗ್ರೀವನ ಬಳಿಗೆ ಹೋಗಿ, ಕಪಿನಾಯಕರಾದ ನೀವುಗಳೆಲ್ಲರೂ ಇಲ್ಲಿಗೆ ಬಂದಿರುವುದಾಗಿ ಬಿನ್ನವಿಸಿದೆನು ॥ ೮ ॥ ವಾನರರಾಜನಾದ ಸುಗ್ರೀವನು ನನ್ನಿಂದ ಈ ನಿಮ್ಮ ಮಧುವನಪ್ರವೇಶದ ಸಮಾಚಾರವನ್ನು ಕೇಳಿ, ನಿಮ್ಮೆಲ್ಲರ ಆಗಮನದಿಂದಲೂ, ಮಧುಭಕ್ಷಣದಿಂದಲೂ ವಿಶೇಷವಾಗಿ ಸಂತೋಷಿಸಿದನಲ್ಲದೆ ಲೇಶವಾದರೂ

ಪ್ರಹೃಷ್ಟೋ ನ ತು ರುಷ್ಟೋಽಸೌ ವನಂ ಶ್ರುತ್ವಾ ಪ್ರಧರ್ಷಿತಮ್ ॥೯॥
ಪ್ರಹೃಷ್ಟೋ ಮಾಂ ಪಿತೃವ್ಯಸ್ತೇ ಸುಗ್ರೀವೋ ವಾನರೇಶ್ವರಃ ।
ಶೀಘ್ರಂ ಪ್ರೇಷಯ ಸರ್ವಾಂಸ್ತಾನಿತಿ ಹೋವಾಚ ಪಾರ್ಥಿವಃ ॥೧೦॥
ಶ್ರುತ್ವಾ ದಧಿಮುಖಸ್ಯೇದಂ ವಚನಂ ಶ್ಲಕ್ಷ್ಣಮಂಗದಃ ।
ಅಬ್ರವೀತ್ತಾನ್ ಹರಿಶ್ರೇಷ್ಠೋ ವಾಕ್ಯಂ ವಾಕ್ಯವಿಶಾರದಃ ॥೧೧॥
ಶಂಕೇ ಶ್ರುತೋಽಯಂ ವೃತ್ತಾಂತೋ ರಾಮೇಣ ಹರಿಯೂಥಪಾಃ ।
ತತ್ ಕ್ಷಮಂ ನೇಹ ನಃ ಸ್ಥಾತುಂ ಕೃತೇ ಕಾರ್ಯೇ ಪರಂತಪಾಃ ॥೧೨॥
ಪೀತ್ವಾ ಮಧು ಯಥಾಕಾಮಂ ವಿಶ್ರಾಂತಾ ವನಚಾರಿಣಃ ।

---

ಶ್ರುತ್ವಾ ಚ - ಕೇಳಿಯೂ, ಪ್ರಹೃಷ್ಟಃ - ವಿಶೇಷವಾಗಿ ಸಂತೋಷಿಸಿದನು, ನ ತು ರುಷ್ಟಃ - ಕೋಪಿಸಿಕೊಳ್ಳಲಿಲ್ಲ, ॥೯॥ ತೇ - ನಿನ್ನ, ಪಿತೃವ್ಯಃ - ಚಿಕ್ಕತಂದೆಯಾದ, ವಾನರೇಶ್ವರಃ - ಕಪಿರಾಜನಾಗಿರತಕ್ಕ, ಸುಗ್ರೀವಃ - ಸುಗ್ರೀವನೆಂಬ, ಪಾರ್ಥಿವಃ - ಅರಸ, ಸರ್ವಾನ್ - ಸಮಸ್ತರಾದ, ತಾನ್ - ಆ ವಾನರರನ್ನು, ಶೀಘ್ರಂ - ಬೇಗನೆ, ಪ್ರೇಷಯ - ಕಳುಹಿಸು, ಇತಿ ಚ - ಹೀಗೆಂದೇ, ಮಾಂ - ನನ್ನನ್ನು ಕುರಿತು, ಉವಾಚ - ಹೇಳಿದನು, ॥೧೦॥ ಹರಿಶ್ರೇಷ್ಠಃ ವಾನರೋತ್ತಮನಾದ, ವಾಕ್ಯವಿಶಾರದಃ - ಮಾತನಾಡುವುದರಲ್ಲಿ ಜಾಣನಾಗಿರತಕ್ಕ, ಅಂಗದಃ - ಅಂಗದನು, ದಧಿಮುಖಸ್ಯ - ದಧಿಮುಖನ, ಶ್ಲಕ್ಷ್ಣಂ - ಮನೋಹರವಾದ, ಇದಂ ವಚನಂ - ಈ ಮಾತನ್ನು, ಶ್ರುತ್ವಾ ಕೇಳಿ ತಾನ್ - ಆ ವಾನರರನ್ನು ಕುರಿತು, ಅಬ್ರವೀತ್ - ಹೇಳಿದನು ॥೧೧॥ ಪರಂತಪಾಃ - ಶತ್ರುಸಂಹಾರಕರಾಗಿರುವ, ಹೇ ಹರಿಯೂಥಪಾಃ - ಎಲೈ ಕಪಿನಾಯಕರುಗಳಿರಾ, ರಾಮೇಣ - ರಾಮನಿಂದ, ಅಯಂ - ಈ ನಮ್ಮಿಂದಾಗಮಾಡಲ್ಪಟ್ಟಿರುವ, ವೃತ್ತಾಂತಃ - ಸಮಾಚಾರವು, ಶ್ರುತಃ - ಕೇಳಲ್ಪಟ್ಟಿರುವುದು, (ಇತಿ-ಹೀಗೆಂದು) ಶಂಕೇ - ಊಹಿಸುತ್ತೇನೆ, ಕಾರ್ಯೇ - ಪ್ರಕೃತಕಾರ್ಯವು, (ಯುಷ್ಮಾಭಿಃ - ನಿಮ್ಮಿಂದ) ಕೃತೇ (ಸತಿ) - ಮಾಡಲ್ಪಟ್ಟಿರಲಾಗಿ, ಇಹ - ಇಲ್ಲಿ ನಃ - ನಮಗೆ, ಸ್ಥಾತುಂ - ನಿಲ್ಲಲಿಕ್ಕೆ, ನ ಕ್ಷಮಂ - ತಕ್ಕುದಲ್ಲ, ॥೧೨॥ ವನಚಾರಿಣಃ - ವಾನರರು, ಮಧು - ಜೇನನ್ನು, ಯಥಾಕಾಮಂ - ಯಥೇಚ್ಛವಾಗಿ, ಪೀತ್ವಾ - ಪಾನಮಾಡಿ, ವಿಶ್ರಾಂತಾಃ - ವಿಶ್ರಮಿಸಿಕೊಂಡವರಾಗಿದ್ದಾರೆ, ಶೇಷಂ - ಉಳಿದಿರುವ ಕಾರ್ಯವು, ಕಿಮಸ್ತಿ - ಏನಿದೆ? ಮೇ - ನನ್ನ, ಗುರುಃ - ತಂದೆಯಾದ, ಸುಗ್ರೀವಃ - ಸುಗ್ರೀವನು, ಘುತ್ರ-

---

ಸಿಟ್ಟುಗೊಳ್ಳಲಿಲ್ಲ ॥೯॥ ನಿನಗೆ ಪಿತೃವ್ಯನೆನಿಸಿದ ಆ ಸುಗ್ರೀವನು-ವಿಶೇಷವಾಗಿ ಸಂತೋಷಿಸಿದುದಲ್ಲದೆ, ಮಧುವನದ ಬಳಿಗೆ ಬಂದಿರುವ ಅಂಗದನೇ ಮೊದಲಾದ ಕಪಿವೀರರನ್ನೆಲ್ಲ ಜಾಗ್ರತೆಯಿಂದ ಕಳುಹು ಎಂದು ನನಗೆ ಆಜ್ಞಾಪಿಸಿದನು ॥೧೦॥ ಎಂದ ವನಪಾಲನಾದ ದಧಿಮುಖನ ಮಧುರ ವಚನವನ್ನು ಕೇಳಿ, ಕಪಿವೀರನೂ, ಮಾತನಾಡುವುದರಲ್ಲಿ ಜಾಣನೂ ಆಗಿರುವ ಅಂಗದನು-ತನ್ನವರಾದ ಕಪಿನಾಯಕರನ್ನು ನೋಡಿ ಹೀಗೆಂದನು ॥೧೧॥ ಎಲೈ ಕಪಿನಾಯಕರುಗಳಿರಾ! ಓಹೋ! ನಾವೆಲ್ಲರೂ ಇಲ್ಲಿಗೆ ಬಂದಿರುವ ಸುದ್ದಿಯು ರಾಮನಿಗೆ ತಿಳಿದಿರಬೇಕು ಎಂದು ಊಹಿಸುತ್ತೇನೆ. ಕೆಲಸವನ್ನು ಮಾಡಿಕೊಂಡು ಬಂದಬಳಿಕ ನಾವು ಇನ್ನಿಲ್ಲಿ ನಿಂತಿರುವುದು ಸರ್ವಾತ್ಮನಾ ಸರಿಯಲ್ಲ. ॥೧೨॥ ನಮ್ಮವರೆಲ್ಲರೂ ಮನಸಾರ ಮಧುಪಾನವನ್ನು ಮಾಡಿ, ಬಳಲಿಕೆಯನ್ನೆಲ್ಲ ಕಳೆದು, ಸುಖವಾಗಿರುವರು. ನಾವಿನ್ನು ಇಲ್ಲಿ ಮಾಡಬೇಕಾದ ಕೆಲಸವೇನೂ ಉಳಿದಿಲ್ಲ. ಆದಕಾರಣ

ಕಿಂ ಶೇಷಂ ಗಮನಂ ತತ್ರ ಸುಗ್ರೀವೋ ಯತ್ರ ವೋ ಗುರುಃ ||೧೩||
ಸರ್ವೇ ಯಥಾ ಮಾಂ ವಕ್ಷ್ಯಂತಿ ಸಮೇತ್ಯ ಹರಿ ಯೂಥಪಾಃ |
ತಥಾಽಸ್ಮಿ ಕರ್ತಾ ಕರ್ತವ್ಯೇ ಭವದ್ಭಿಃ ಪರವಾನಹಮ್ ||೧೪||
ನಾಜ್ಞಾಪಯಿತುಮೀಶೋಽಹಂ ಯುವರಾಜೋಽಸ್ಮಿ ಯದ್ಯಪಿ |
ಅಯುಕ್ತಂ ಕೃತಕರ್ಮಾಣೋ ಯೂಯಂ ಧರ್ಷಯಿತುಂ ಮಯಾ ||೧೫||
ಬ್ರುವತಸ್ತ್ವಂಗದಸ್ಯೈವಂ ಶ್ರುತ್ವಾ ವಚನಮವ್ಯಯಮ್ |
ಪ್ರಹೃಷ್ಟಮನಸೋ ವಾಕ್ಯಮಿದಮೂಚುರ್ವನೌಕಸಃ ||೧೬||
ಏವಂ ವಕ್ಷ್ಯತಿ ಕೋ ರಾಜನ್ ಪ್ರಭುಃ ಸನ್ ವಾನರರ್ಷಭ |

---

ಎಲ್ಲಿ, (ಅಸ್ತಿ - ಇದಾನೆಯೋ,) ತತ್ರ - ಅಲ್ಲಿಗೆ, ಗಮನಂ - ಹೋಗೋಣವು, ಕಾರ್ಯಂ - ಅವಶ್ಯಕರ್ತವ್ಯವಾಗಿದೆ ||೧೩|| ಹೇ ಹರಿಯೂಥಪಾಃ - ಎಲೈವಾನರನಾಯಕರುಗಳಿರಾ ! (ಭವನ್ತಃ - ನೀವುಗಳು) ಸರ್ವೇ - ಎಲ್ಲರೂ, ಸಮೇತ್ಯ - ಸೇರಿ, ಮಾಂ - ನನ್ನನ್ನು ಕುರಿತು, ಯಥಾ - ಹೇಗೆ, ವಕ್ಷ್ಯಂತಿ-ಹೇಳುವಿರೋ, ತಥಾ - ಹಾಗೆ, ಕರ್ತಾ - ಮಾಡತಕ್ಕವನು, ಅಸ್ಮಿ - ಆಗಿದ್ದೇನೆ, ಕರ್ತವ್ಯೇ - ಮಾಡಬೇಕಾದ ಕೆಲಸದಲ್ಲಿ, ಅಹಂ - ನಾನು, ಪರವಾನ್-ಪರಾಧೀನನಾಗಿರುವೆನು ||೧೪|| ಯದ್ಯಪಿ - ಪ್ರಾಯಶಃ, (ವಿಚಾರಿಸಿದರೆ) ಅಹಂ - ನಾನು, ಯುವರಾಜಃ - ಯುವರಾಜನಾಗಿ, ಅಸ್ಮಿ ಇದ್ದೇನೆ, (ತಥಾಪಿ - ಹಾಗಾದರೂ) ಆಜ್ಞಾಪಯಿತುಂ-ಆಜ್ಞೆಮಾಡಲಿಕ್ಕೆ, ಈಶಃ ಸಮರ್ಥನು, ನ-ಅಲ್ಲ, ಕೃತಕರ್ಮಾಣಃ-ಮಾಡಿದ ಕೆಲಸವುಳ್ಳ, ಯೂಯಂ-ನೀವುಗಳು, ಮಯಾ- ನನ್ನಿಂದ, ಧರ್ಷಯಿತುಂ-ತಿರಸ್ಕರಿಸಿ ಆಜ್ಞೆಮಾಡಲಿಕ್ಕೆ, ಅಯುಕ್ತಂ - ತಕ್ಕದ್ದರೆನಿಸುವುದಿಲ್ಲ || ೧೫ || ವನೌಕಸಃ - ವಾನರರು, ಏವಂ : ಈಪ್ರಕಾರವಾಗಿ, ಬ್ರುವತಃ - ಹೇಳುತಲಿರುವ, ಅಂಗದಸ್ಯ - ಅಂಗದನ, ಅವ್ಯಯಂ - ಶ್ರೇಷ್ಠವೆನಿಸಿದ, ವಚನಂ - ಮಾತನ್ನು, ಶ್ರುತ್ವಾ - ಕೇಳಿ, ಪ್ರಹೃಷ್ಟಮನಸಃ - ಸಂತುಷ್ಟವಾದ ಮನಸ್ಸುಳ್ಳವರಾಗಿ, ಇದಂ - ಈ, ವಾಕ್ಯಂ - ಮಾತನ್ನು, ಊಚುಃ - ಹೇಳಿದರು || ೧೬ || ವಾನರರ್ಷಭ - ವಾನರೋತ್ತಮನಾದ, ರಾಜನ್ - ಎಲೈ ಯುವರಾಜನೆ !, ಕಃ-ಮತ್ತಾವನು, ಪ್ರಭುಃ ಸನ್ - ಪ್ರಭುವೆನಿಸಿದವನಾಗಿ, ಏವಂ-

---

ನಮ್ಮ ಚಿಕ್ಕ ತಂದೆಯಾದ ಸುಗ್ರೀವನ ಸನ್ನಿಧಿಗೆ ಹೋಗತಕ್ಕದ್ದು ಮೇಲಲ್ಲವೇ ? || ೧೩ || ಆದರೆ ಕಪಿಕುಲನಾಯಕರಾದ ನೀವೆಲ್ಲರೂ ಒಗ್ಗಟ್ಟಾಗಿ ಹೇಗೆ ಹೇಳುವಿರೋ, ಅದರಂತೆಯೇ ನಾನು ನಡೆಯತಕ್ಕವನು. ಮುಂದೆ ಮಾಡಬೇಕಾದ ಕೆಲಸದಲ್ಲಿ ನಾನು ನಿಮ್ಮ ಆಧೀನನಲ್ಲದೆ ಸರ್ವಾತ್ಮನಾ ಸ್ವತಂತ್ರನಲ್ಲ ||೧೪|| ನಿಮ್ಮನ್ನು ಹೀಗೆಯೇ ಮಾಡಿರೆಂದು ಆಜ್ಞಾಪಿಸಲು ನನಗೆ ಶಕ್ತಿಯಿಲ್ಲ. ನಾನು ಯುವರಾಜನೇ ಆಗಿದ್ದರೂ ಹಾಗೆ ಪ್ರವರ್ತಿಸಲಾರೆನು. ನೀವೆಲ್ಲರೂ ಕಾರ್ಯಸಿದ್ಧಿಯನ್ನು ಪಡೆದವರಾಗಿದ್ದೀರಿ. ಆದುದರಿಂದ ನಾನು ನಿಮ್ಮನ್ನು ನಿಯಮಿಸುವುದು ಉಚಿತವಲ್ಲ ||೧೫|| ಎಂದೀಪ್ರಕಾರವಾಗಿ ಹೇಳುತಲಿರುವ ಯುವರಾಜನಾದ ಅಂಗದನ ವಿನಯಪೂರ್ಣವಾದ ವಚನವನ್ನು ಕೇಳಿ, ವಾನರರೆಲ್ಲ ಸಂತುಷ್ಟಾಂತರಂಗರಾದುದಲ್ಲದೆ ಆತನನ್ನು ಕುರಿತು ಇಂತೆಂದರು || ೧೬ || ಎಲೈ ಯುವರಾಜನಾದ ಅಂಗದನೆ! ನೀನು ನಮ್ಮಗಳಿಗೆಲ್ಲ ಪ್ರಭುವಾಗಿದ್ದಾಗ್ಯೂ ಈಪ್ರಕಾರ ಹೇಳುತಲಿರುವುದನ್ನು ನೋಡಿದರೆ ನಮಗೆ ಬಹಳ ಆಶ್ಚರ್ಯವುಂಟಾಗುತಲಿದೆ. ಎಲೈ ವಾನರೋತ್ತಮನೇ

ಐಶ್ವರ್ಯ ಮದ ಮತ್ತೋಹಿ ಸರ್ವೋऽಹ ಮಿತಿ ಮನ್ಯತೇ ॥೧೭॥
ತವ ಚೇದಂ ಸುಸದೃಶಂ ವಾಕ್ಯಂ ನಾನ್ಯಸ್ಯ ಕಸ್ಯಚಿತ್।
ಸನ್ನತಿ ರ್ಹಿ ತವಾಖ್ಯಾತಿ ಭವಿಷ್ಯ ಚ್ಛುಭ ಯೋಗ್ಯತಾಂ ॥೧೮॥
ಸರ್ವೇ ವಯ ಮಪಿ ಪ್ರಾಪ್ತಾಸ್ತತ್ರ ಗಂತುಂ ಕೃತಕ್ಷಣಾಃ।
ಸ ಯತ್ರ ಹರಿ ವೀರಾಣಾಂ ಸುಗ್ರೀವಃ ಪತಿ ರವ್ಯಯಃ ॥೧೯॥
ತ್ವಯಾ ಹ್ಯನುಕ್ತೈ ಹರಿ ಭಿ ರ್ನೈವ ಶಕ್ಯಂ ಪದಾ ತ್ಪದಮ್ ।
ಕ್ವಚಿದ್ಗಂತುಂ ಹರಿಶ್ರೇಷ್ಠ ಬ್ರೂಮ ಸ್ಸತ್ಯ ಮಿದಂ ತು ತೇ ॥೨೦॥

---

ಈ ಪ್ರಕಾರವಾಗಿ, ವಕ್ಷ್ಯತಿ - ಹೇಳುವನು ? ಐಶ್ವರ್ಯಮದಮತ್ತಃ - ಪ್ರಭುತ್ವದ ಮದದಿಂದ ಹವ್ವೆಗೊಂಡವರಾಗಿ, ಸರ್ವಃ - ಎಲ್ಲರೂ, ಅಹಮಿತಿ - ಸವಸ್ತವೂ ನಾವೇ ಎಂದು, ಮನ್ಯತೇ - ಭಾವಿಸುತ್ತಾರೆ, ಹಿ - ನಿಶ್ಚಯ ॥ ೧೭ ॥ ಇದಂ - ಈ, ವಾಕ್ಯಂ - ವಚನವು ತವಚ - ನಿನಗೇ, ಸದೃಶಂ - ತಕ್ಕುದೆನಿಸಿವೆಯಲ್ಲವೆ ? ಕಸ್ಯಚಿತ್ - ಮತ್ತಾವನಿಗೂ, ನಸದೃಶಂ - ತಕ್ಕುದೆನಿಸುವುದಿಲ್ಲ, ತವ - ನಿನ್ನ, ಸನ್ನತಿರ್ಹಿ - ವಿನಯವೆಂಬುದು, ಭವಿಷ್ಯಚ್ಛುಭಯೋಗ್ಯತಾಂ - ಮುಂದಿನ ಶುಭಕ್ಕೆ ಯೋಗ್ಯತೆಯನ್ನು, ಆಖ್ಯಾತಿ - ಹೇಳುತಲಿದೆ ॥ ೧೮ ॥ (ಅತ್ರ - ಇಲ್ಲಿ) ಪ್ರಾಪ್ತಾಃ - ಬಂದಿರುವ, ವಯಂ - ನಾವು, ಸರ್ವೇಽಪಿ - ಎಲ್ಲರೂ, ಹರಿವೀರಾಣಾಂ - ವಾನರ ವೀರರಿಗೆ, ಪತಿಃ - ಒಡೆಯನೂ, ಅವ್ಯಯಃ - ಶ್ರೇಷ್ಠನೂ ಎನಿಸಿದ, ಸಃ - ಆ, ಸುಗ್ರೀವಃ - ಸುಗ್ರೀವನು, ಯತ್ರ - ಎಲ್ಲಿ, (ಅಸ್ತಿ - ಇದಾನೆಯೋ) ತತ್ರ - ಅಲ್ಲಿಗೆ, ಗಂತುಂ - ಹೋಗಲಿಕ್ಕೆ, ಕೃತಕ್ಷಣಾಃ - ಮಾಡಲ್ಪಟ್ಟ ಉತ್ಸಾಹವುಳ್ಳವರಾಗಿ, (ಸ್ಮಃ - ಇವೇವೆ,) ॥೧೯॥ ಹರಿಶ್ರೇಷ್ಠ - ವಾನರಶ್ರೇಷ್ಠನಾದ ಅಂಗದನೇ, ತ್ವಯಾ - ನಿನ್ನಿಂದ, ಅನುಕ್ತೈಃ - ಹೇಳಲ್ಪಡದಿರುವ, ಹರಿಭಿಃ - ವಾನರರಿಂದ, ಕ್ವಚಿತ್ - ಎಲ್ಲಿಯೂ, ಪದಾತ್ - ಒಂದು ಹೆಜ್ಜೆಯಿಂದ, ಪದಂ - ಬೇರೊಂದು ಹೆಜ್ಜೆಯನ್ನು, ಗಂತುಂ - ಹೋಗಲಿಕ್ಕೆ, ನಶಕ್ಯಂ - ಶಕ್ತರಲ್ಲ. ತೇ - ನಿನಗೆ, ಸತ್ಯಂ - ಸತ್ಯವಾದ, ಇದಂ - ಈ ಮಾತನ್ನು, ಬ್ರೂಮಃ-ಹೇಳುತ್ತೇವೆ

---

ನಿನ್ನಂತೆ ಇಷ್ಟು ವಿನಯದಿಂದ ಮತ್ತೊಬ್ಬನು ಹೇಳಬಲ್ಲನೆ ? ಎಂದಿಗೂ ಹೇಳಲಾರ. ಲೋಕದಲ್ಲಿ ಪ್ರಭುತ್ವದಿಂದೊಡಗೂಡಿರುವವರು ಐಶ್ವರ್ಯದಿಂದ ಮದಿಸಿ, ಸರ್ವವೂ ನಾವೇ ಎಂದು ತಿಳಿಯುವವರಲ್ಲದೆ ನಿನ್ನಂತೆ ಹೀಗೆ ವಿನಯಸಂಪನ್ನರಾಗಿ ಎಂದಿಗೂ ಇರುವುದಿಲ್ಲ ॥ ೧೭ ॥ ಸಕಲ ಸದ್ಗುಣ ಸಂಪನ್ನನೆನಿಸಿರುವ ನಿನಗೆ ಒಬ್ಬನಿಗೆ ವಾಕ್ಯ ಈ ರೀತಿಯಾಗಿಹೇಳುವುದು ತಕ್ಕುದೆನಿಸಿದೆಯಲ್ಲದೆ ಇತರರಿಗೆ ಇಲ್ಲ. ನಿನಗೆ ಉಂಟಾಗಿರುವ ಈವಿನಯವು ಮುಂದೆ ನಿನಗೆ ಅಪಾರವಾದ ಶುಭವು ಬರಗುವ ಯೋಗ್ಯತೆಯನ್ನು ಸೂಚಿಸುತಲಿದೆ, ॥ ೧೮ ॥ ಇಗೋ, ನಾವೆಲ್ಲ ಒಟ್ಟಿಗೆ ಸೇರಿಬಂಗಿದ್ದೇವೆ, ಮತ್ತು ನಿನ್ನೊಡನೆ ಹೊರಡಲು ಸಿದ್ಧರಾಗಿಯೂ ಇದ್ದೇವೆ. ಸಕಲ ಕಪಿಕುಲನಾಥನಾದ ಸುಗ್ರೀವನ ಸನ್ನಿಧಿಗೆ ತೆರಳಲು ಯಾವ ಅಭ್ಯಂತರವೂ ಇಲ್ಲ ॥ ೧೯ ॥ ಎಲೈ ಹರಿವರನಾದ ಅಂಗದನೇ! ನಿನ್ನ ಅಪ್ಪಣೆಯಿಲ್ಲದಿದ್ದರೆ ನಮ್ಮೊಳಗೆ ಯಾವನೊಬ್ಬನೂ ಒಂದು ಅಡಿಯನ್ನು ಕದಲಿಸಿ ಮುಂದಿನ ಹೆಜ್ಜೆಯನ್ನಿಡಲು ಶಕ್ತನಾಗಲಾರನು. ನಿನ್ನ ವಿಷಯದಲ್ಲಿ ನಾವು ಇಂತಹ ಕಿಂಕರರಾಗಿ ಇರುವೆವು. ನಾವೆಲ್ಲರೂ ಐಕಕಂಠ್ಯದಿಂದ ಈಸತ್ಯವಚನವನ್ನು ಹೇಳುತ್ತೇವೆ ॥೨೦॥

ಏವಂ ತು ವದತಾಂ ತೇಷಾ ಮಂಗದಃ ಪ್ರತ್ಯಭಾಷತ॥
ಬಾಢಂ ಗಚ್ಛಾಮ ಇತ್ಯುಕ್ತ್ವಾ ಖ ಮುತ್ಪೇತು ರ್ಮಹಾಬಲಾಃ ॥೨೧॥
ಉತ್ಪತಂ ತ ಮನೂ ತ್ಪೇತು ಸ್ಸರ್ವೇ ತೇ ಹರಿ ಯೂಥಪಾಃ।
ಕೃತ್ವಾ ಕಾಶಂ ನಿರಾಕಾಶಂ ಯಂತ್ರೋ ತ್ಕ್ಷಿಪ್ತಾ ಇವಾಚಲಾಃ ॥೨೨॥
ತೇಽಂಬರಂ ಸಹಸೋ ತ್ಪತ್ಯ ವೇಗವಂತಃ ಪ್ಲವಂಗಮಾಃ।
ವಿನದಂತೋ ಮಹಾನಾದಂ ಘನಾ ವಾತೇರಿತಾ ಯಥಾ॥೨೩॥
ಅಂಗದೇಽಪ್ಯ ನನುಪ್ರಾಪ್ತೇ ಸುಗ್ರೀವೋ ವಾನರಾಧಿಪಃ ।
ಉವಾಚ ಶೋಕೋ ಪಹತಂ ರಾಮಂ ಕಮಲ ಲೋಚನಮ್॥೨೪॥

॥೨೦॥ ತೇಷಾಂ - ಆ ವಾನರರು, ಏವಂ - ಈ ಪ್ರಕಾರವಾಗಿ, ವದತಾಂತು - (ಸತಾಂ) ಹೇಳುತ್ತಿರಲಾಗಿ, ಅಂಗದಃ ಅಂಗದನು, ಬಾಢಮಿತಿ - ಹಾಗೆಯೇ ಆಗಲೆಂದು, ಪ್ರತ್ಯಭಾಷತ - ಪ್ರತ್ಯುತ್ತರವನ್ನಿತ್ತನು, ಮಹಾಬಲಾಃ - ಹೇರಳವಾದ ಬಲವುಳ್ಳ ವಾನರರುಗಳಿರಾ! ಗಚ್ಛಾಮಃ- ಹೋಗೋಣ, ಇತಿ - ಹೀಗೆಂದು, ಉಕ್ತ್ವಾ - ಹೇಳಿ, ಖಂ - ಆಕಾಶವನ್ನು ಕುರಿತು, ಉತ್ಪೇತುಃ - ಹಾರಿದರು॥೨೧ ಸರ್ವೇ - ಸಮಸ್ತರಾದ, ತೇ - ಆ, ಹರಿಯೂಥಪಾಃ - ವಾನರನಾಯಕರು, ಯಂತ್ರೋತ್ಕ್ಷಿಪ್ತಾಃ - ಯಂತ್ರದಿಂದ ಹಾರಿಸಲ್ಪಟ್ಟ, ಅಚಲಾ ಇವ - ಬೆಟ್ಟಗಳ ಹಾಗೆ, ಆಕಶಂ - ಆಕಾಶವನ್ನು, ನಿರಾಕಾಶಂ - ಅವಕಾಶ ವಿಲ್ಲದುದನ್ನಾಗಿ, ಕೃತ್ವಾ - ಮಾಡಿ, ಉತ್ಪತಂತಂ - ಹಾರುತಲಿರುವ ಅಂಗದನನ್ನು ಕುರಿತು, ಅನೂತ್ಪೇತುಃ - ಹಿಂಬಾಲಿಸಿ ಹಾರಿದರು, ॥೨೨॥ ತೇ - ಆ, ಪ್ಲವಂಗಮಾಃ - ಕಪಿಗಳು, ವಾತೇರಿತಾಃ - ಗಾಳಿಯಿಂದ ಪ್ರೇರಿಸಲ್ಪಟ್ಟ, ಘನಾಯಥಾ - ಮೇಘಗಳು ಹೇಗೋ ಹಾಗೆ, ವೇಗವಂತಃ- ಬಹುವೇಗವುಳ್ಳವರಾಗಿ, ಅಂಬರಂ - ಆಕಾಶವನ್ನು ಕುರಿತು, ಸಹಸಾ - ಬೇಗನೆ, ಉತ್ಪತ್ಯ - ಹಾರಿ, ಮಹಾನಾದಂ - ಸಿಂಹನಾದವನ್ನು, ವಿನದಂತಃ - ಮಾಡುತಲಿರುವವರಾಗಿ, ಜಗ್ಮುಃ-ಹೊರಟರು ॥೨೩॥ ಅಂಗದೇ - ಅಂಗದನು, ಅನನುಪ್ರಾಪ್ತೇಸತಿ - ಬರದೆ ಇರುತ್ತಿರಲಾಗಿ, ವಾನರಾಧಿಪಃ - ವಾನರ ರಾಜನಾದ, ಸುಗ್ರೀವಃ - ಸುಗ್ರೀವನು, ಶೋಕೋಪಹತಂ - ದುಃಖದಿಂದ ಪೆಟ್ಟುಬಿದ್ದಿರುವ, ಕಮಲಲೋಚನಂ - ತಾವರೆಯಂತೆ ಕಣ್ಣುಳ್ಳ, ರಾಮಂ - ರಾಮನನ್ನು ಕುರಿತು, ಉವಾಚ - ಹೇಳತೊಡಗಿದನು॥

ಎಂದೀಪ್ರಕಾರವಾಗಿ ಕಪಿವರರೆಲ್ಲರೂ ಹೇಳುತ್ತಿರಲಾಗಿ. ಅಂಗದನು - ಕಪಿರಾಜನಾದ ಸುಗ್ರೀವನಿರುವಲ್ಲಿಗೆ ಹೋಗೋಣವೆಂದು ಹೇಳಿ, ಮಹಾಪರಾಕ್ರಮಶಾಲಿಗಳಾದ ಕಪಿಗಳೊಡನೆ ಆಕಾಶಕ್ಕೆ ಹಾರಿದನು ॥ ೨೧ ॥ ಅಂಗದನು ಹಾರಿದ ಕೂಡಲೇ ಉಳಿದ ಸಮಸ್ತ ಕಪಿವೀರರೂ ಆತನನ್ನು ಹಿಂಬಾಲಿಸಿ ಹಾರಿದರು, ಆಕಾಶದಲ್ಲಿ ಸ್ವಲ್ಪವೂ ಬಿಡುವಿಲ್ಲದಂತೆ ನಿಬಿಡಗಟ್ಟಿ ಬರುತಲಿದ್ದರು, ಯಂತ್ರದಿಂದ ಎಸೆದ ಬೆಟ್ಟಗಳಸಾಲಿನಂತೆ ಕಂಗೊಳಿಸುತಲಿದ್ದರು॥೨೨॥ ಆಕಾಶದಲ್ಲಿ ಮಹಾವೇಗದಿಂದ ಹಾರಿ ಬರುತ್ತಾ, ಗಾಳಿಯಿಂದ ಹೊಡೆದುಕೊಂಡು ಬರುವ ಮೋಡಗಳಂತೆ ಗರ್ಜಿಸುತ್ತಲೂ ಹೊರಟುಬರುತಲಿದ್ದರು ॥೨೩॥ ಇತ್ತ-ಯುವರಾಜನಾದ ಅಂಗದನು ಬರುವುದು ಸ್ವಲ್ಪ ವಿಳಂಬವಾಗುತಿರಲಾಗಿ, ಕಾರ್ಯಸಿದ್ಧಿಯ ವಿಷಯದಲ್ಲಿ ಸಂಶಯಯುಕ್ತನಾಗಿ, ವ್ಯಥೆಪಡುತಲಿರುವ ಕಮಲಲೋಚನನಾದ ರಾಮನನ್ನು ನೋಡಿ, ಕಪಿರಾಜನಾದ ಸುಗ್ರೀವನು ಇಂತೆಂದನು ॥೨೪॥ ಎಲೈರಾಮಭದ್ರನೆ! ನೀನಿನ್ನು ಚಿಂತಿಸಬೇಡ,

ಸಮಾಶ್ವಸಿಹಿ ಭದ್ರಂ ತೇ ದೃಷ್ಟ್ವಾ ದೇವೀ ನ ಸಂಶಯಃ ।
ನಾಗಂತು ಮಿಹ ಶಕ್ಯಂ ತೈ ರತೀತೇ ಸಮಯೇ ಹಿ ನಃ ॥೨೦॥
ನ ಮತ್ಸಕಾಶ ಮಾಗಚ್ಛೇ ತ್ಕೃತ್ಯೇ ಹಿ ವಿನಿಪಾತಿತೇ ।
ಯುವರಾಜೋ ಮಹಾಬಾಹುಃ ಪ್ಲವತಾಂ ಪ್ರವರೋಂಽಗದಃ ॥೨೧॥
ಯದ್ಯ ಪ್ಯಕೃತ ಕೃತ್ಯಾನಾ ಮೀದೃಶ ಸ್ಸ್ಯಾದು ಪಕ್ರಮಃ ।
ಭವೇತ್ಸ ದೀನವದನೋ ಭ್ರಾಂತ ವಿಪ್ಲುತ ಮಾನಸಃ ॥೨೨॥
ಪಿತೃ ಪೈತಾಮಹಂ ಚೈತತ್ಪೂರ್ವಕೈ ರಭಿರಕ್ಷಿತಮ್ ।

(ಹೇ ರಾಮ - ಎಲೈ ರಾಮನೇ) ಸಮಾಶ್ವ ಸಿಹಿ - ಸಮಾಧಾನದಿಂದಿರು, ತೇ - ನಿನಗೆ, ಭದ್ರಂ - ಶುಭ ವಾಗಲಿ, ದೇವೀ - ಸೀತಾದೇವಿಯು, ದೃಷ್ಟಾ - ನೋಡಲ್ಪಟ್ಟಿದ್ದಾಳೆ. ನಸಂಶಯಃ - ಸಂದೇಹವಿಲ್ಲ ನಃ - ನಮ್ಮ, ಸಮಯೇ - ನಿಬಂಧನೆಯು, (ಗೊತ್ತಾಗಿದ್ದ ಒಂದು ತಿಂಗಳ ಕಾಲವು,) ಅತೀತೇ - (ಸತಿ) ಕಳೆದು ಹೋಗುತ್ತಿರಲಾಗಿ, ತೈಃ - ಆ ವಾನರರಿಂದ, ಇಹ - ಇಲ್ಲಿಗೆ, ಆಗಂತುಂ - ಬರಲಿಕ್ಕೆ, ನಶಕ್ಯಂಹಿ - ಶಕ್ಯವಲ್ಲವಲ್ಲವೆ ? ॥೨೦॥ ಯುವರಾಜಃ - ಚಿಕ್ಕದೊರೆಯಾಗಿರುವ, ಮಹಾಬಾಹುಃ - ಹೆಚ್ಚಿದ ತೋಳುಬಲವುಳ್ಳ, ಪ್ಲವತಾಂ - ಹಾರುವವರೊಳಗೆ, ಪ್ರವರಃ - ಶ್ರೇಷ್ಠನೆನಿಸಿದ, ಅಂಗದಃ - ಅಂಗದನು, ಕೃತ್ಯೇ - ಪ್ರಕೃತಕಾರ್ಯವು, ವಿನಿಪಾತಿತೇ (ಸತಿ) - ಕೆಟ್ಟು ಹೋಗುತಲಿರಲಾಗಿ, ಮತ್ಸಕಾಶಂ - ನನ್ನ ಸಮೀಪವನ್ನು ಕುರಿತು, ನಾಗಚ್ಛೇತ್ - ಬರಲಾರನ, ಹಿ - ನಿಶ್ಚಯ ॥೨೧॥ ಅಕೃತ ಕೃತ್ಯಾನಾಂ - ಮಾಡದಿರುವ ಕೆಲಸವುಳ್ಳವರಿಗೆ, ಈದೃಶಃ - ಈ ವನಭಂಗರೂಪವಾಗಿರುವ, ಉಪಕ್ರಮಃ - ಉದ್ಯೋಗವು, ಯದ್ಯಪಿ - ವಿಚಾರಮಾಡಿನೋಡಿದರೆ, ಸ್ಯಾತ್ - ವುಂಟಾಗಿದೆ (ತಥಾಸತಿ - ಹಾಗಾಗಿದ್ದರೆ) ಸಃ - ಆ, ಪ್ಲವಗೇಶ್ವರನು ಅಂಗದನಾದರೋ, ದೀನವದನಃ - ಕಳೆಗುಂದಿದ ಮುಖವುಳ್ಳವನೂ, ಭ್ರಾಂತ ವಿಪ್ಲುತ ಮಾನಸಃ - ಭ್ರಾಂತಿಯಿಂದ ಚಂಚಲವಾದ ಮನಸ್ಸುಳ್ಳವನೂ, ಅಹೃಷ್ಟಶ್ಚ - ಸಂತೋಷ ಹೀನನೂ, ಭವೇತ್ ಆಗಬೇಕು, ಪಿತೃಪೈತಾಮಹಂ - ತಂದೆತಾತಂದಿರ ಕಾಲದಿಂದ ಬಂದಿರತಕ್ಕ,

ಸಮಾಧಾನದಿಂದಿರು. ಮುಂದೆ ನಿನಗೆ ಮಂಗಳವುಂಟಾಗುವುದು. ಕಪಿಗಳೆಲ್ಲ ನಾವು ಒಂದುತಿಂಗಳು ಕಾಲ ಮಾತ್ರವೇ ಗಡುವನ್ನಾಗಿ ಗೊತ್ತುಮಾಡಿದ್ದುದು. ಈಗ ಆಕ್ಲುಪ್ತ ಕಾಲವು ಮೀರಿಹೋಗದೆ, ಒಂದುವೇಳೆ ಕಾರ್ಯವು ಕೈಕೂಡದೆ ಹೋಗಿದ್ದರೆ ಈ ಕಪಿನಾಯಕರು ನನ್ನಿದಿರಿಗೆ ಬರಲು ಮುಖವಿರುತ್ತಿರಲಿಲ್ಲ. ಸೀತಾದೇವಿಯನ್ನು ಕಂಡೇ ಬಂದಿರುವರು. ಈ ವಿಷಯದಲ್ಲಿ ಸಂಶಯವೇ ಇಲ್ಲ. ಹಾಗಿಲ್ಲದೆ ಅವರು ಬರಲು ಸಾಧ್ಯವೇ ಇಲ್ಲ ॥೨೦॥ ಕೆಲಸವು ಕೆಟ್ಟುಹೋಗಿದ್ದರೆ ಅವರು ನನ್ನಿದಿರಿಗೆ ಬರೋಣವೆಂದರೆ ಏನು ? ಮಹಾ ಬಲಶಾಲಿಯೂ, ಯುವರಾಜನೂ ಆಗಿರುವ ಅಂಗದನು ಕೆಲಸವನ್ನು ಕೆಡಿಸಿಕೊಂಡು ಬರಲಾರನು ॥೨೧॥ ಒಂದುವೇಳೆ ಕಾರ್ಯವು ಕೆಟ್ಟುಹೋಗಿಯೇ ಇದ್ದಿತು ? ಆಗ ಇವರು ಮಧುವನದಲ್ಲಿ ಅತಿಕ್ರಮ ಪ್ರವೇಶವನ್ನು ಮಾಡಲಾರರು. ಒಂದು ಸಮಯ ಹಾಗೆ ಮಾಡಿದಮೇಲೆ ಅಂಗದನಿಗೆ ಮುಖವು ಕೆಟ್ಟು ಹೋಗುತ್ತಲಿದ್ದಿತು. ಭಯಭ್ರಾಂತನಾಗುತ್ತಿದ್ದನು, ನಮ್ಮ ತಂದೆತಾತಂದಿರ ಕಾಲದಿಂದಲೂ ಅನುಕ್ರಮವಾಗಿ ಬಂದು, ನಮ್ಮ ಪೂರ್ವಿಕರೆಲ್ಲರೂ ಬಲು ಎಚ್ಚರಿಕೆಯಿಂದ ಕಾಪಾಡುತಲಿದ್ದ ಈ ಮಧುವನು ಎಂದಿಗೂ

ನ ಮೇ ಮಧುವನಂ ಹನ್ಯಾದಹೃಷ್ಟಃ ಪ್ಲವಗೇಶ್ವರಃ ॥೨೮॥
ಕೌಸಲ್ಯಾ ಸುಪ್ರಜಾ ರಾಮ ಸಮಾಶ್ವಸಿಹಿ ಸುವ್ರತ।
ದೃಷ್ಟಾ ದೇವೀ ನ ಸಂದೇಹೋ ನಚಾನ್ಯೇನ ಹನೂಮತಾ ॥೨೯॥
ನಹ್ಯನ್ಯಃ ಕರ್ಮಣೋ ಹೇತುಃ ಸಾಧನೇಽಸ್ಯ ಹನೂಮತಃ।
ಹನೂಮತಿ ಹಿ ಸಿದ್ಧಿಶ್ಚ ಮತಿಶ್ಚ ಮತಿಸತ್ತಮ ॥೩೦॥
ವ್ಯವಸಾಯಶ್ಚ ವೀರ್ಯಂ ಚ ಸೂರ್ಯೇ ತೇಜ ಇವ ಧ್ರುವಮ್।

---

ಪೂರ್ವಕೈಃ - ನಮ್ಮ ಹಿರಿಯರಿಂದ, ಅಭಿರಕ್ಷಿತಂ-ಸಂರಕ್ಷಿಸಲ್ಪಟ್ಟದ್ದಾಗಿರುವ, ಮೇ - ನನ್ನ, ಏತತ್ - ಈ ಮಧುವನಂಚ - ಮಧುವನವನ್ನಾದರೂ, ನಹನ್ಯಾತ್ - ಹಾಳುಮಾಡುತ್ತಲಿರಲಿಲ್ಲ, ॥ ೨೭-೨೮ ॥ ಕೌಸಲ್ಯಾ - ಕೌಸಲ್ಯಾದೇವಿಯು, ಸುಪ್ರಜಾಃ - ಒಳ್ಳೆಯ ಮಗನನ್ನುಳ್ಳವಳು (ಅಭೂತ್ - ಆಗಿದ್ದಾಳೆ) ಸುವ್ರತ - ಪಿತೃವಾಕ್ಯ ಪರಿಪಾಲನವ್ರತವುಳ್ಳ, ರಾಮ - ಎಲೈ ರಾಮನೇ! ಸಮಾಶ್ವಸಿಹಿ - ನೆಮ್ಮದಿಯಿಂದಿರು, ದೇವೀ - ಸೀತಾ ದೇವಿಯು, ಹನೂಮತಾ - ಆಂಜನೇಯನಿಂದ, ದೃಷ್ಟಾ - ನೋಡಲ್ಪಟ್ಟದ್ದಾಳೆ ಅನ್ಯೇನ - ಇತರರಿಂದ, ನಚದೃಷ್ಟಾ - ನೋಡಲ್ಪಟ್ಟಿಲ್ಲ, ನಸಂದೇಹಃ - ಸಂಶಯವಿಲ್ಲ ॥೨೯॥ ಅಸ್ಯ - ಈ, ಕರ್ಮಣಃ - ಕೆಲಸದ, ಸಾಧನೇ - ನಿರ್ವಾಹದಲ್ಲಿ, ಹನೂಮತಃ - ಹನುಮಂತನಿಗಿಂತಲೂ, ಅನ್ಯಃ - ಬೇರಾದವನು, ಹೇತುಃ - ಕಾರಣ ಭೂತನು, ನ - ಆಗಿಲ್ಲ, ಮತಿಸತ್ತಮ - ಎಲೈ ಬುದ್ಧಿಶಾಲಿಯೇ, ಹನೂಮತಿ - ಆಂಜನೇಯನಲ್ಲಿ, ಸಿದ್ಧಿಃ - ಕಾರ್ಯಸಿದ್ಧಿಯೂ, ಮತಿಃ - ಮುಂದಿನ ಸಂಗತಿಯನ್ನರಿಯುವ ಜ್ಞಾನವೂ, ವ್ಯವಸಾಯಶ್ಚ - ಪ್ರಯತ್ನವೂ, ವೀರ್ಯಂಚ - ಪರಾಕ್ರಮವೂ (ಏತದ್ಗುಣಜಾಲ - ಈ ಗುಣ ಸಮುದಾಯವು,) ಸೂರ್ಯೇ - ಸೂರ್ಯನಲ್ಲಿ, ತೇಜಇವ ತೇಜಸ್ಸು ಹೇಗೋ ಹಾಗೆ, (ಅಸ್ತಿ - ಉಂಟು,) ಧ್ರುವಂ - ನಿಶ್ಚಯ ॥೩೦॥- ಅಮಿತ ವಿಕ್ರಮ - ಅಪರಿಮಿತ ಪರಾಕ್ರಮವುಳ್ಳ ಎಲೈ ರಾಮನೆ, ಯತ್ರ - ಯಾವ ಕಾರ್ಯದಲ್ಲಿ, ಜಾಂಬವಾನ್ - ಜಾಂಬವಂತನು, ನೇತಾ - ಮಂತ್ರಿಯು, ಸ್ಯಾತ್ - ಆಗುವನೋ, ಅಂಗದಶ್ಚ - ಅಂಗದನೂ, ಬಲೇಶ್ವರಃ - ವಾನರನಾಯಕನಾಗಿ, (ಸ್ಯಾತ್-ಆಗುವನೋ)

---

ಹಾಳುಮಾಡುತ್ತಿರಲಿಲ್ಲ. ಆದಕಾರಣ ಇದನ್ನೆಲ್ಲ ಯೋಚಿಸಿನೋಡಿದರೆ ಸರ್ವಪ್ರಕಾರದಿಂದಲೂ, ಇವರು ಕೃತಕಾರ್ಯರಾಗಿಯೇ ಬಂದಿದ್ದಾರೆ ॥ ೨೭-೨೮ ॥ ಎಲೈ ರಾಮಭದ್ರನೆ! ಕೌಸಲ್ಯಾದೇವಿಯು ಒಳ್ಳೆಯ ಮಗನನ್ನು ಹಡೆದಿದ್ದಾಳೆ, ಪಿತೃವಾಕ್ಯಪರಿಪಾಲನರೂಪವಾದ ಸತ್ಯವ್ರತವುಳ್ಳ ರಾಮಚಂದ್ರನೆ! ಸಮಾಧಾನದಿಂದೊಡಗೂಡಿದ ಮನಸ್ಸುಳ್ಳವನಾಗಿರು, ಖಂಡಿತವಾಗಿಯೂ ಸೀತಾದೇವಿಯನ್ನು ನೋಡಿಬಂದಿದ್ದಾರೆ, ಆದರೆ ಹನುಮಂತನೇ ಅಲ್ಲದೆ ಮತ್ತಾರೂ ಅಲ್ಲ, ಇದನ್ನು ಖಂಡಿತವಾಗಿ ತಿಳಿ ॥ ೨೯ ॥ ಅವನನ್ನು ಬಿಟ್ಟರೆ ಈ ಮಹತ್ಕಾರ್ಯವನ್ನು ಸಾಧಿಸಲು ಮತ್ತಾರೂ ಕಾರಣ ಭೂತರಾಗಲಾರರು, ಏಕೆಂದರೆ — ಆ ವೀರಹನುಮನಲ್ಲಿ ಕಾರ್ಯಸಿದ್ಧಿಯಾಗುವ ಶಕ್ತಿಯು, ಮುಂದಿನ ಆಗುಹೋಗುಗಳ ತಿಳುವಳಿಕೆಯು, ಆ ಕಾರ್ಯಸಾಫಲ್ಯಕ್ಕೆ ತಕ್ಕ ಪ್ರಯತ್ನವು, ಕಾರ್ಯನಿರ್ವಾಹಕ್ಕೋಪಯುಕ್ತವಾದ ವೀರ್ಯ ಇವುಗಳೆಲ್ಲವೂ, ಸೂರ್ಯನಲ್ಲಿ ತೇಜಸ್ಸು ಹೇಗೋ ಹಾಗೆ ನೆಲೆಗೊಂಡಿರುವುವು. ಈ ವಿಷಯದಲ್ಲಿ ಸಂದೇಹವಿಲ್ಲ ಸತ್ಯವೆಂದು ತಿಳಿ ॥೩೦॥ ಇದೂ ಅಲ್ಲದೆ — ಯಾವ ಕಾರ್ಯದಲ್ಲಿ ಜಾಂಬವಂತನು ಮಂತ್ರಿಯಾಗಿಯೂ, ಅಂಗದನು ಯುವರಾಜನಾಗಿಯೂ, ವೀರಹನುಮನು ಕಾರ್ಯ

ಜಾಂಬವಾನ್ಯತ್ರ ನೇತಾ ಸ್ಯಾದಂಗದಶ್ಚ ಬಲೇಶ್ವರಃ ॥೩೦॥
ಹನೂಮಾಂಶ್ಚಾಪ್ಯಧಿಷ್ಠಾತಾ ನ ತಸ್ಯ ಗತಿರನ್ಯಥಾ ।
ಮಾ ಭೂಶ್ಚಿಂತಾಸಮಾಯುಕ್ತಃ ಸಂಪ್ರತ್ಯಮಿತವಿಕ್ರಮ ॥೩೧॥
ತತಃ ಕಿಲಕಿಲಾಶಬ್ದಂ ಶುಶ್ರಾವಾಸನ್ನಮಂಬರೇ ।
ಹನೂಮತ್ಕರ್ಮದೃಪ್ತಾನಾಂ ನರ್ದತಾಂ ಕಾನನೌಕಸಾಮ್ ॥೩೨॥
ಕಿಷ್ಕಿಂಧಾಮುಪಯಾತಾನಾಂ ಸಿದ್ಧಿಂ ಕಥಯತಾಮಿವ ॥೩೩॥
ತತಃ ಶ್ರುತ್ವಾ ನಿನಾದಂ ತಂ ಕಪೀನಾಂ ಕಪಿಸತ್ತಮಃ ।
ಆಯತಾಂಚಿತಲಾಂಗೂಲಃ ಸೋಽಭವದ್ಧೃಷ್ಟಮಾನಸಃ ॥೩೪॥

ಹನೂಮಾಂಶ್ಚಾಪಿ - ಹನುಮಂತನೂ, ಅಧಿಷ್ಠಾತಾ - ಅಧ್ಯಕ್ಷನಾಗಿ (ಸಂರಕ್ಷಕನು) ಭವೇತ್ - ಆಗಿದ್ದವನೋ, ತಸ್ಯ - ಅಂತಹ ಕಾರ್ಯದ, ಗತಿಃ - ಸಿದ್ಧಿಯು, ಅನ್ಯಥಾ - ಬೇರೆವಿಧವಾಗಿ, ನ - ಆಗುವದಿಲ್ಲ, ಸಂಪ್ರತಿ - ಈಗ, ತ್ವಂ - ನೀನು, ಚಿಂತಾಸಮಾಯುಕ್ತಃ - ಚಿಂತೆಯಿಂದೊಡಗೂಡಿದವನು, ಮಾಭೂಃ - ಆಗಬೇಡ ॥೩೦-೩೧॥ ತತಃ - ಅನಂತರದಲ್ಲಿ, (ಸುಗ್ರೀವಃ - ಸುಗ್ರೀವನು,) ಹನುಮತ್ಕರ್ಮದೃಪ್ತಾನಾಂ - ಹನುಮಂತನ ಕೆಲಸದಿಂದ ಕೊಬ್ಬಿರುವವರಾದ ಕಾರಣವೇ, ಗರ್ಜತಾಂ - ಗರ್ಜಿಸುತ್ತಲಿರುವ, ಕಿಷ್ಕಿಂಧಾಂ - ಕಿಷ್ಕಿಂಧಾ ನಗರವನ್ನು ಕುರಿತು, ಉಪಯಾತಾನಾಂ - ಸಮೀಪಿಸಿ ಬಂದಿರುವ, ಸಿದ್ಧಿಂ - ಕಾರ್ಯಸಿದ್ಧಿಯನ್ನು, ಕಥಯತಾಮಿವ - ಹೇಳುತ್ತಲಿರುವವರಂತಿರುವ, ಕಾನನೌಕಸಾಂ - ವಾನರರ, ಕಿಲಕಿಲಾಶಬ್ದಂ - ಕಿಲಕಿಲಧ್ವನಿಯನ್ನು, ಅಂಬರೇ - ಆಕಾಶದಲ್ಲಿ, ಆಸನ್ನಂ - ಸಮೀಪದಲ್ಲಿಯೇ, ಶುಶ್ರಾವ - ಕೇಳಿದನು ॥೩೩॥ ತತಃ - ಆ ಹಿಂದೆ, ಕಪಿಸತ್ತಮಃ - ವಾನರಶ್ರೇಷ್ಠನಾದ, ಸಃ - ಆ ಸುಗ್ರೀವನು, ಕಪೀನಾಂ - ವಾನರರ, ತಂ - ಆ, ನಿನಾದಂ - ಧ್ವನಿಯನ್ನು, ಶ್ರುತ್ವಾ - ಕೇಳಿ, ಆಯತ - ನೀಳವಾದ, ಅಂಚಿತ - ಸುಂದರವಾದ, ಲಾಂಗೂಲಃ - ಬಾಲವುಳ್ಳವನಾಗಿ, ಹೃಷ್ಟಮಾನಸಃ - ಸಂತೋಷಿಸಿದ ಮನಸ್ಸುಳ್ಳವನು, ಅಭವತ್ - ಆದನು, ॥೩೪॥ ತೇ - ಆ, ಹರಯೋಽಪಿ - ಕಪಿಗಳೂ, ರಾಮದರ್ಶನಕಾಂಕ್ಷಿಣಃ - ರಾಮನನ್ನು ನೋಡುವ ಆಸೆಯುಳ್ಳವರಾಗಿ, ಅಂಗದಂ-

ಸೇನಾನಾಯಕನಾಗಿಯೂ ಇರುವರೋ, ಅಂತಹ ಕಾರ್ಯವು ಸಿದ್ಧಿಸದೆಂದಿಗೂ ಕೆಟ್ಟುಹೋಗುವುದಿಲ್ಲ, ಎಂತಹ ಅಸಾಮಾನ್ಯವಾದ ಕೆಲಸವನ್ನಾದರೂ ಸಾಧಿಸಿಕೊಂಡೇ ಬರುವರು. ಅಪರಿಮಿತ ಪರಾಕ್ರಮವುಳ್ಳ ಪ್ರಿಯ ರಾಘವನೆ! ನೀನು ಚಿಂತೆಗೊಳಗಾಗದೆ ನೆಮ್ಮದಿಯಿಂದಿರು ॥೩೦ ॥೩೧॥ ಎಂದು ಕಪಿಕುಲಸಾರ್ವಭೌಮನಾದ ಸುಗ್ರೀವನು- ಶ್ರೀರಾಮಚಂದ್ರನೊಡನೆ ಹೇಳುತ್ತಿರಲಾಗಿಯೇ, ನಭೋಮಂಡಲದಲ್ಲಿ ಬರುತ್ತಲಿದ್ದ ಕಪಿವರರು- ಮಾರುತಿಯು ಮಾಡಿದ ಕಾರ್ಯ ನಿರ್ವಾಹದಿಂದ ಕೊಬ್ಬಿದವರಾಗಿ ಮಾಡುತಲಿದ್ದ ಸಿಂಹಗರ್ಜನೆಯು ಕಿವಿಗೆ ಕೇಳಿಬಂದಿತು. ಮತ್ತು- ಕಿಷ್ಕಿಂಧಾನಗರದ ಸಮೀಪಕ್ಕೆ ಬಂದವರಾಗಿಯೂ ತಿಳಿದುಬಂದಿತು ಆ ಸಿಂಹನಾದವು ಕಾರ್ಯಸಿದ್ಧಿಯನ್ನು ತಿಳಿಸುವಂತಿದ್ದಿತು ॥೩೨-೩೩॥ ಕಪಿಪುಂಗವನಾದ ಸುಗ್ರೀವನು - ಆ ಕಪಿವರರ ಕಿಲಕಿಲನೆಂಬ ಕೋಲಾಹಲಶಬ್ದವನ್ನು ಕೇಳಿ, ನೀಳವಾದುದೂ, ನೆಟ್ಟಗೊದಲುಳ್ಳುದೂ, ಬಹುಸುಂದರವಾದುದೂ ಆಗಿರುವ ಬಾಲದಿಂದೊಡಗೂಡಿ, ಸಂತೋಷಭರಿತವಾದ ಮನಸ್ಸನ್ನುಳ್ಳವನಾದನು ॥೩೪॥ ಅದುವರೆಗೆ ಕಪಿಗಳೆಲ್ಲರೂ ಶ್ರೀರಾಮ

ಆಜಗ್ಮು ಸ್ತೇಪಿ ಹರಯೋ ರಾಮದರ್ಶನಕಾಂಕ್ಷಿಣಃ ।
ಅಂಗದಂ ಪುರತಃ ಕೃತ್ವಾ ಹನೂಮಂತಂ ಚ ವಾನರಮ್॥೩೪॥
ತೇಂಗದ ಪ್ರಮುಖಾವೀರಾಃ ಪ್ರಹೃಷ್ಟಾಶ್ಚ ಮುದಾನ್ವಿತಾಃ।
ನಿಪೇತು ರ್ಹರಿ ರಾಜಸ್ಯ ಸಮೀಪೇ ರಾಘವಸ್ಯಚ ॥೩೬॥
ಹನೂಮಾಂಶ್ಚ ಮಹಾಬಾಹುಃ ಪ್ರಣಮ್ಯ ಶಿರಸಾತತಃ।
ನಿಯತಾ ಮಕ್ಷತಾಂ ದೇವೀಂ ರಾಘವಾಯ ನ್ಯವೇದಯತ್ ॥೩೭॥
ನಿಶ್ಚಿತಾರ್ಥ ಸ್ತತ ಸ್ತಸ್ಮಿನ್ ಸುಗ್ರೀವಃ ಪವನಾತ್ಮಜೇ ।
ಲಕ್ಷ್ಮಣಃ ಪ್ರೀತಿಮಾನ್ ಪ್ರೀತಂ ಬಹು ಮಾನಾ ದವೈಕ್ಷತ ॥೩೮॥

---

ಅಂಗದನನ್ನೂ, ಹನೂಮಂತಂ - ಆಂಜನೇಯನನ್ನು, ವಾನರಂ ಚ - ವಾನರನನ್ನೂ, ಪುರತಃ - ಮುಂದುಗಡೆಯಲ್ಲಿ, ಕೃತ್ವಾ - ಮಾಡಿಕೊಂಡು, ಆಜಗ್ಮುಃ - ಬಂದರು ॥೩೫॥ ಅಂಗದಪ್ರಮುಖಾಃ - ಅಂಗದನೇ ಮೊದಲಾಗಿರುವ, ತೇ - ಆ ವಾನರರು, ಪ್ರಹೃಷ್ಟಾಃ - ಸಂತೋಷ ಪಟ್ಟವರಾ, ಮುದಾ - ಹೊರಗಿನ ಸಂತೋಷದಿಂದ, ಅನ್ವಿತಾಶ್ಚ - ಒಡಗೂಡಿದವರೂ ಆಗಿ, ಹರಿರಾಜಸ್ಯ - ಕಪಿರಾಜನಾದ ಸುಗ್ರೀವನ, ರಾಘವಸ್ಯಚ - ಶ್ರೀರಾಮನ, ಸಮೀಪೇ - ಸನ್ನಿಧಾನದಲ್ಲಿ, ನಿಪೇತುಃ - ಇಳಿದರು, ॥೩೬॥ ತತಃ - ತರುವಾಯ - ಮಹಾಬಾಹುಃ - ಹೇರಳವಾದ ಭುಜಬಲವುಳ್ಳ, ಹನುಮಾಂಶ್ಚ - ಹನುಮಂತನೂ, ಶಿರಸಾ - ಶಿರಸ್ಸಿನಿಂದ, ಪ್ರಣಮ್ಯ - ನಮಸ್ಕರಿಸಿ, ದೇವೀಂ - ಸೀತಾದೇವಿಯನ್ನು, ನಿಯತಾಂ - ನಿಯಮವುಳ್ಳವಳನ್ನಾಗಿಯೂ, ಅಕ್ಷತಾಂ - ಕುಶಲಸಂಪನ್ನಳನ್ನಾಗಿಯೂ, ರಾಘವಾಯ - ಶ್ರೀರಾಮನಿಗೆ, ನ್ಯವೇದಯತ್ - ಬಿನ್ನವಿಸಿದನು, ॥೩೭॥ ತತಃ - ಅನಂತರದಲ್ಲಿ, ಸುಗ್ರೀವಃ - ಸುಗ್ರೀವನು, ತಸ್ಮಿನ್ ಆ ಪವನಾತ್ಮಜೇ - ವಾಯುನಂದನನಲ್ಲಿ, ನಿಶ್ಚಿತಾರ್ಥಃ - ಗೊತ್ತಾದ ಕಾರ್ಯವುಳ್ಳವನು, (ಅಭೂತ್ - ಆದನು) ಲಕ್ಷ್ಮಣಃ - ಲಕ್ಷ್ಮಣನು, ಪ್ರೀತಿಮಾನ್ - ಬಹು ಪ್ರೀತಿಯುಳ್ಳವನಾಗಿ, ಪ್ರೀತಂ ಸಂತುಷ್ಟನಾಗಿರುವ ಹನುಮಂತನನ್ನು, ಬಹುಮಾನಾತ್ - ಗೌರವದಿಂದ, ಅವೈಕ್ಷತ - ನೋಡಿದನು

---

ಸದರ್ಶನ್ನವಲ್ಲಿ ಮಹತ್ತರವಾದ ಕುತೂಹಲವುಳ್ಳವರಾಗಿ,ನಾನು ಮುಂದು, ತಾನು ಮುಂದೆಂದು ತ್ವರೆಯಿಂದ ಅಂಗದನನ್ನೂ, ಆಂಜನೇಯನನ್ನೂ, ಮುಂದುಮಾಡಿಕೊಂಡು, ಕೇವಲ ಸಮೀಪಕ್ಕೆ ಬಂದರು॥೩೫॥ಆಗ ಅಂಗದನೇ ಮೊದಲಾದ ಕಪಿವೀರರು-ಅಂತರಂಗ ಸಂತೋಷದಿಂದಲೂ, ಬಹಿರಂಗ ಸಂತೋಷದಿಂದಲೂ ಒಡಗೂಡಿದವರಾಗಿ, ಕಪಿರಾಜನಾದ ಸುಗ್ರೀವನ ಮತ್ತು ರಘುಕುಲಲಲಾಮನಾದ ಶ್ರೀರಾಮನ ಸನ್ನಿಧಾನದಲ್ಲಿ ಬಂದಿಳಿದರು॥೩೬॥ ಬಳಿಕ ಮಹಾಬಾಹುಬಲಸಂಪನ್ನನಾದ ವೀರಾಂಜನೇಯನು-ದೂರದಿಂದಲೇ ನಮಸ್ಕರಿಸಿ, ಸೀತಾದೇವಿಯು ಸುಕ್ಷೇಮದಿಂದಿರುವಳೆಂದೂ, ನಿಯಮ ಪರಳಾಗಿರುವಳೆಂದೂ ಶ್ರೀರಾಮಚಂದ್ರನಿಗೆ ಬಿನ್ನವಿಸಿದನು ॥ ೩೭ ॥ ಬಳಿಕ ಕಪಿರಾಜನಾದ ಸುಗ್ರೀವನು- ಆಂಜನೇಯನೇ ಕಾರ್ಯನಿರ್ವಾಹವನ್ನು ಮಾಡಿಕೊಂಡು ಬಂದಿರುವನೆಂದು ಮನದೊಳಗೆ ನಿಶ್ಚೈಸಿ, ಸಂತೋಷಿಸಿದನು. ಲಕ್ಷ್ಮಣನು ಕಾರ್ಯಸಿದ್ಧಿಯ ಶುಭಾಕಾರವನ್ನು ತಿಳಿಸಿ, ಪ್ರೀತಿಸಂಪನ್ನನಾಗಿರುವ ಆಂಜನೇಯನನ್ನು ಲಕ್ಷ್ಮಣನು ಪ್ರೀತಿಗೌರವಗಳಿಂದ ಅವಲೋಕಿಸಿದನು ॥೩೮॥ ರಘುಕುಲಾಂಬುಧಿ ಚಂದ್ರನೂ, ಮಹಾವೀರನೂ ಆಗಿರುವ ಶ್ರೀರಾಮನು

ಪ್ರೀತ್ಯಾ ಚ ರಮ್ಯಮಾಣೋಥ ರಾಘವಃ ಪರ ವೀರಹಾ ।
ಬಹುಮಾನ್ಯೇನ ಮಹತಾ ಹನೂಮಂತ ಮವೈಕ್ಷತ ॥೭೯॥ ॥

— ಇತಿ ಶ್ರೀಮತ್ಸುಂದರಕಾಂಡೇ ಚತುಷ್ಷಷ್ಟಿತಮಸರ್ಗಃ —

ಅಥ-ಆಮೇಲೆ, ಪರವೀರಹಾ-ಶತ್ರುಸಂಹಾರಕನಾದ, ರಾಘವಃ- ಶ್ರೀರಾಮನೂ, ಪ್ರೀತ್ಯಾ - ಸಂತೋಷದಿಂದ, ರಮಮಾಣಃ-ಆನಂದಿಸುವವನಾಗಿ, ಹನೂಮಂತಂ-ಆಂಜನೇಯನನ್ನು, ಮಹತಾ-ಹೇರಳವಾದ, ಬಹುಮಾನೇನ-ಗೌರವದಿಂದ, ಇವೈಕ್ಷತ - ಭಾವಿಸಿದನು ॥೩೯॥ ॥

— ಇಂತು ಅರವತ್ತುನಾಲ್ಕನೆಯ ಸರ್ಗಂ —

ಸಂತೋಷ ಸಾಗರದಲ್ಲಿ ಮುಳುಗಿ ತೇಲುತ್ತಾ, ಮಹತ್ತರವಾದ ಪ್ರೀತಿಗೌರವಗಳಿಂದ ಆಂಜನೇಯನನ್ನು ಅವಲೋಕಿಸುತಲಿದ್ದನು ॥೭೯॥ ॥

— ಇಂತು ಅರವತ್ತುನಾಲ್ಕನೆಯ ಸರ್ಗಂ —

ಶ್ರೀ.

ಶ್ರೀ ರಾಮ ಚನ್ದ್ರ ಪರಬ್ರಹ್ಮಣೇ ನಮಃ

## ಶ್ರೀಮತ್ಸುಂದರಕಾಂಡೇ-ಪಂಚಷಷ್ಟಿತಮಸ್ಸರ್ಗಃ

ತತಃ ಪ್ರಸ್ರವಣಂ ಶೈಲಂ ತೇ ಗತ್ವಾ ಚಿತ್ರ ಕಾನನಮ್।
ಪ್ರಣಮ್ಯ ಶಿರಸಾ ರಾಮಂ ಲಕ್ಷ್ಮಣಂ ಚ ಮಹಾಬಲಮ್ ॥೧॥

— ಅರುವತ್ತೈದನೆಯ ಸರ್ಗಂ —

ಕಂದ॥ ರಾಮನ ವಚನದೆ ಹರಿಗಳ್ । ಪ್ರೇಮದಿ ಹಿತಂ ಶ್ರೀರಿಸಲ್ಕೆ ಪವನಾತ್ಮಜನಂ॥
ನೇಮದಿ ಹನುಮಂ ಸೀತೆ । ಕ್ಷೇಮೋದಂತವನ ಪೇಳ್ದು ರತ್ನವನಿತ್ತಂ ॥

ತತಃ - ತರುವಾಯ, ತೇ - ಆ ವಾನರರು, ಚಿತ್ರಕಾನನಂ - ವಿಚಿತ್ರವಾದ ಅಡವಿಗಳುಳ್ಳ, ಪ್ರಸ್ರವಣಂ - ಪ್ರಸ್ರವಣವೆಂಬ, ಶೈಲಂ - ಪರ್ವತವನ್ನು, ಗತ್ವಾ - ಹೊಂದಿ, ಮಹಾಬಲಂ - ಹೇರಳವಾದ ಬಲವುಳ್ಳ, ರಾಮಂ - ಶ್ರೀರಾಮನನ್ನೂ, ಲಕ್ಷ್ಮಣಂಚ - ಲಕ್ಷ್ಮಣನನ್ನೂ, ಶಿರಸಾ - ಶಿರಸ್ಸಿನಿಂದ, ಪ್ರಣಮ್ಯ-ನಮಸ್ಕರಿಸಿ, ಯುವರಾಜಂ - ಅಂಗದನನ್ನು, ಪುರಸ್ಕೃತ್ಯ - ಮುಂದಿಟ್ಟುಕೊಂಡು, ಸುಗ್ರೀವಂ - ಸುಗ್ರೀವನನ್ನು, ಅಭಿವಾದ್ಯಚ - ನಮಸ್ಕರಿಸಿಯೂ, ಅಥ-ಆಮೇಲೆ, ಸೀತಾಯಾಃ-ಜಾನಕಿಯ, ಪ್ರವೃತ್ತಿಂ -

— ಅರುವತ್ತೈದನೆಯಸರ್ಗಂ —

ಬಳಿಕ ಜಾಂಬವಹನುಮದಾದಿ ಕಪಿವೀರರು - ವಿಚಿತ್ರತರಗಳಾದ ಅರಣ್ಯಗಳನ್ನೊಳಗೊಂಡಿರುವ ಪ್ರಸ್ರವಣಗಿರಿಯಲ್ಲಿಸೇರಿ, ತಮ್ಮ ಶಿರಸ್ಸುಗಳಿಂದ ಮಹಾಬಲಶಾಲಿಯಾದ ಶ್ರೀರಾಮಚಂದ್ರನನ್ನೂ, ಲಕ್ಷ್ಮಣನನ್ನೂ ಸುಗ್ರೀವನನ್ನೂ ಅಭಿವಂದಿಸಿ, ಯುವರಾಜನಾದ ಅಂಗದನನ್ನು ಮುಂದುಮಾಡಿ, ಸೀತೆಯನ್ನು ದರ್ಶನಮಾಡಿದ ಸಮಾಚಾರವನ್ನು ವಿವರಿಸಿ

ಯುವರಾಜಂ ಪುರಸ್ಕೃತ್ಯ ಸುಗ್ರೀವ ಮಭಿವಾದ್ಯ ಚ।
ಪ್ರವೃತ್ತಿ ಮಥ ಸೀತಾಯಾಃ ಪ್ರವಕ್ತು ಮುಪಚಕ್ರಮುಃ ॥೨॥
ರಾವಣಾಂತಃಪುರೇ ರೋಧಂ ರಾಕ್ಷಸೀಭಿಶ್ಚ ತರ್ಜನಮ್ ।
ರಾಮೇ ಸಮನುರಾಗಂ ಚ ಯಶ್ಚಾಯಂ ಸಮಯಃ ಕೃತಃ ॥೩॥
ಏತ ದಾಖ್ಯಾಂತಿ ತೇ ಸರ್ವೇ ಹರಯೋ ರಾಮಸನ್ನಿಧೌ।
ವೈದೇಹೀ ಮಕ್ಷತಾಂ ಶ್ರುತ್ವಾ ರಾಮಸ್ತೂತ್ತರ ಮಬ್ರವೀತ್ ॥೪॥
ಕ್ವ ಸೀತಾ ವರ್ತತೇ ದೇವೀ ಕಥಂಚ ಮಯಿ ವರ್ತತೇ ।

ವೃತ್ತಾಂತವನ್ನು, ಪ್ರವಕ್ತುಂ - ವಿವರಿಸಿ ಹೇಳಲಿಕ್ಕೆ, ಉಪಚಕ್ರಮುಃ - ಪ್ರಾರಂಭಿಸಿದರು ॥೧-೨॥ ರಾವಣಾಂತಃಪುರೇ - ರಾವಣನ ಅಂತಃಪುರದೊಳಗೆ, ರೋಧಂ - ಸೀತೆಗುಂಟಾಗಿರುವ ನಿರ್ಬಂಧವನ್ನು, ರಾಕ್ಷಸೀಭಿಃ - ರಕ್ಕಸಿಯರಿಂದಾಗುತಲಿರುವ, ತರ್ಜನಂಚ-ಬೆದರಿಕೆಯನ್ನೂ, ರಾಮೇ- ಶ್ರೀರಾಮನಲ್ಲಿ, ಸಮನುರಾಗಂಚ - ಸೀತೆಗಿರುವ ಪ್ರೇಮವನ್ನೂ, ಯಃ-ಯಾವ, ಸಮಯಃ-ಎರಡು ತಿಂಗಳ ಗಡುವು, ಕೃತಃ - ರಾವಣನಿಂದ ಮಾಡಲ್ಪಟ್ಟಿರುವುದೋ, ತಂ - ಅದನ್ನೂ, ಇತ್ಯೇತತ್ - ಇದೆಲ್ಲವನ್ನೂ, ಸರ್ವೇ - ಸಮಸ್ತರಾದ, ಹರಯಃ - ವಾನರರು, ರಾಮಸನ್ನಿಧೌ - ಶ್ರೀ ರಾಮನ ಸಮೀಪದಲ್ಲಿ, ಆಖ್ಯಾಂತಿ - ಹೇಳುತಲಿದ್ದರು ॥೩॥ ರಾಮಸ್ತು - ಶ್ರೀರಾಮನಾದರೋ, ವೈದೇಹೀಂ - ಸೀತೆಯನ್ನು, ಅಕ್ಷತಾಂ - ನಾಶವಿಲ್ಲದವಳನ್ನಾಗಿ, ಶ್ರುತ್ವಾ - ಕೇಳಿ, ಉತ್ತರಂ - ಬದಲು ಮಾತನ್ನು, ಅಬ್ರವೀತ್ - ಹೇಳತೊಡಗಿದನು ॥ ೪ ॥ ಹೇ ವಾನರಾಃ - ಎಲೈ ವಾನರರುಗಳಿರಾ, ಸೀತಾ - ಜಾನಕಿಯು, ಕ್ವ-ರಾವಣನ ಅಂತಃಪುರದೊಳಗೆ ಯಾವಸ್ಥಳದಲ್ಲಿ, ವರ್ತತೇ - ಇದ್ದಾಳೆ, ದೇವೀ - ಸೀತಾದೇವಿಯು ಮಯಿಚ - ನನ್ನಲ್ಲಿಯೂ, ಕಥಂ - ಹೇಗೆ, ವರ್ತತೆ - ಇದ್ದಾಳೆ, ವೈದೇಹೀಂ ಪ್ರತಿ - ಸೀತೆಯನ್ನು

ಅರಿಕೆಮಾಡಲಿಕ್ಕೆ ಪ್ರಾರಂಭಿಸಿ, ಇಂತೆಂದರು— ॥೧,೨॥ ಎಲೈ ರಾಘವೇಂದ್ರನೇ! ಜಾನಕಿಯು ರಾವಣನ ಅಂತಃಪುರದಲ್ಲಿ ನಿರ್ಬಂಧಕ್ಕೆ ಸಿಲುಕಿದ್ದಾಳೆ, ರಕ್ಕಸಿಯರು ಆಕೆಯನ್ನು ಬೆದರಿಸುತ ತೊಂದರೆಗೊಳಿಸುತಲಿರುವರು. ಆ ಮಹಾನುಭಾವಳ ಮನಸ್ಸು ನಿನ್ನಲ್ಲಿಯೇ ನೆಲೆಗೊಂಡಿರುವದು, ರಾವಣನು ಆಕೆಗೆ ಎರಡು ತಿಂಗಳ ಕಾಲವನ್ನು ಗಡುವು ಮಾಡಿರುವನು, ಎಂದೀಪ್ರಕಾರ ಸರ್ವವಾನರರೂ ಶ್ರೀರಾಮನ ಸನ್ನಿಧಾನದಲ್ಲಿ ಅರಿಕೆಮಾಡುತ್ತಿರಲು, ರಾಮನು-ವೈದೇಹಿಯು ಪ್ರಾಣಸಹಿತಳಾಗಿರುವಳೆಂಬ ಸುದ್ದಿಯನ್ನು ಕೇಳಿ ಸಂತೋಷಿಸುತ್ತಾ ಮಗುಳಿಂತೆಂದನು ॥ ೩-೪ ॥ * ಎಲೈ ಪ್ರಿಯವಾನರರುಗಳಿರಾ ! ಸೀತೆಯು-ರಾವಣನ ಅಂತಃಪುರದೊಳಗೆ ಯಾವಸ್ಥಳದಲ್ಲಿ ಇದ್ದಾಳೆ? ನನ್ನ ವಿಷಯದಲ್ಲಿ ಆಕೆಯ ಚಿತ್ತವೃತ್ತಿಯು ಹೇಗೆ ಇದೆ? ನೀವು ಇಲ್ಲಿಂದ ತೆರಳಿ ಆಕೆಯನ್ನು ಕಂಡ ಬಗೆಯನ್ನೆಲ್ಲ

* ಕಪಿಗಳು ರಾವಣಾಂತಃಪುರದಲ್ಲಿ ಸೀತೆ ಇರುವಳೆಂದು ಹೇಳಿದ ಕೂಡಲೆ, ರಾಮನು ಅವಳ ನಿಜವಾದ ಪಾತಿವ್ರತ್ಯವನ್ನು ಬಲ್ಲವನಾದರೂ, ಲೋಕವ್ಯವಹಾರ ರೀತಿಯಿಂದ, ನಿಜವನ್ನು ಹೊರಪಡಿಸಲಿಕ್ಕೂ, ಇವರೊಳಗೆ ಜಾನಕಿಯನ್ನು ಸಾಕ್ಷಾತ್ತಾಗಿ ನೋಡಿಬಂದವರಾರು, ಎಂಬುದನ್ನು ಅವರಿಂದಲೆ ವ್ಯಕ್ತಗೊಳಿಸಲಿಕ್ಕೂ ಹೀಗೆ ಪ್ರಶ್ನೆ ಮಾಡಿದನು.

ಏತನ್ಮೇ ಸರ್ವಮಾಖ್ಯಾತ ವೈದೇಹೀಂ ಪ್ರತಿ ವಾನರಾಃ ॥೫॥
ರಾಮಸ್ಯ ಗದಿತಂ ಶ್ರುತ್ವಾ ಹರಯೋ ರಾಮಸನ್ನಿಧೌ ।
ಚೋದಯಂತಿ ಹನೂಮಂತಂ ಸೀತಾವೃತ್ತಾಂತ ಕೋವಿದಂ ॥೬॥
ಶ್ರುತ್ವಾತು ವಚನಂ ತೇಷಾಂ ಹನೂಮಾನ್ಮಾರುತಾತ್ಮಜಃ ।
ಪ್ರಣಮ್ಯ ಶಿರಸಾ ದೇವ್ಯೈ ಸೀತಾಯೈ ತಾಂ ದಿಶಂ ಪ್ರತಿ ॥
ಉವಾಚ ವಾಕ್ಯಂ ವಾಕ್ಯಜ್ಞಃ ಸೀತಾಯಾ ದರ್ಶನಂಯಥಾ ॥೭॥ ॥
ಸಮುದ್ರಂ ಲಂಘಯಿತ್ವಾಽಹಂ ಶತಯೋಜನ ಮಾಯತಂ ।

ಕುರಿತು, ಏತತ್ - ಈ, ಸರ್ವಂ - ಸಮಸ್ತವನ್ನೂ, ಮೇ - ನನಗೆ, ಆಖ್ಯಾತ - ಹೇಳಿರಿ ॥ ೫ ॥ ಹರಯಃ - ವಾನರರು, ರಾಮಸ್ಯ - ಶ್ರೀ ರಾಮನ, ಗದಿತಂ - ಮಾತನ್ನು, ಶ್ರುತ್ವಾ - ಕೇಳಿ, ರಾಮಸನ್ನಿಧೌ - ರಾಮನ ಸಮೀಪದಲ್ಲಿ, ಸೀತಾವೃತ್ತಾಂತ ಕೋವಿದಂ - ಸೀತೆಯ ಸಮಾಚಾರವನ್ನೆಲ್ಲಾ ಬಲ್ಲವನಾಗಿರುವ, ಹನೂಮಂತಂ - ಆಂಜನೇಯನನ್ನು, ಚೋದಯಂತಿ - ಪ್ರೇರಿಸ ತೊಡಗಿದರು ॥ ೬ ॥ ವಾಕ್ಯಜ್ಞಃ - ಉಚಿತವಚನಗಳನ್ನು ಬಲ್ಲ, ಮಾರುತಾತ್ಮಜಃ - ವಾಯು ನಂದನನಾದ, ಹನುಮಾನ್ - ಆಂಜನೇಯನು, ತೇಷಾಂ - ಆ ವಾನರರ, ವಚನಂ - ಪ್ರೇರಣವಚನವನ್ನು, ಶ್ರುತ್ವಾ - ಕೇಳಿ, ಸೀತಾಯೈ ದೇವ್ಯೈ - ಸೀತಾದೇವಿಯನ್ನು, ತಾಂ - ಆಸೀತೆಯಿರುವ ದಿಶಂಪ್ರತಿಚ-ದಿಕ್ಕನ್ನು ಕುರಿತೂ, ಪ್ರಣಮ್ಯ-ನಮಸ್ಕರಿಸಿ, ಸೀತಾಯಾಃ - ಜಾನಕಿಯು, ದರ್ಶನಂ - ದರ್ಶನವು, ಯಥಾ - ಹೇಗೆ, (ಜಾತಂ - ಉಂಟಾಯಿತೋ) ತಥಾ - ಹಾಗೆ, ವಾಕ್ಯಂತು - ಮಾತನ್ನಾದರೋ, ಉವಾಚ -ಹೇಳತೊಡಗಿದನು, ॥೭॥ (ಹೇಸ್ವಾಮಿನ್ - ಎಲೈ ಪ್ರಭುವೆ,) ಅಹಂ - ನಾನು, ಜಾನಕೀಂ - ಜನಕಪುತ್ರಿಯಾದ, ಸೀತಾಂ - ಸೀತಾದೇವಿಯನ್ನು, ದಿದೃಕ್ಷಯಾ - ನೋಡಲಾಶೆಯಿಂದ, ಮಾರ್ಗಮಾಣಃ - ಹುಡುಕುತಲಿರುವವನಾಗಿ,

ಕ್ರಮವಾಗಿ ಸರ್ವವೃತ್ತಾಂತವನ್ನೂ ವಿವರಿಸಿರಿ ಎಂದನು ॥ ೫ ॥ ಶ್ರೀರಾಮನ ವಚನವನ್ನಾಲಿಸಿದ ವಾನರರು-ಸೀತಾವೃತ್ತಾಂತ ಪರಿಜ್ಞಾನದಲ್ಲಿ ಪಂಡಿತನಾಗಿರುವ ಪವಮಾನ ನಂದನನನ್ನು ರಾಮನ ಸನ್ನಿಧಾನದಲ್ಲಿ ಮುಂದೆ ತಂದು ನಿಲ್ಲಿಸಿ, ವೃತ್ತವನ್ನು ಅರಿಕೆಮಾಡುವಂತೆ ಪ್ರೇರಿಸುತಲಿದ್ದರು ॥ ೬ ॥ ಬಳಿಕ ವೀರಹನುಮನು - ಆ ಕಪಿವರರ ಪ್ರೇರಣ ವಚನವನ್ನಾಲಿಸಿ, ಶ್ರೀರಾಮನಸನಿಧಾನದಲ್ಲಿ ಅಂಜಲಿಬದ್ಧನಾಗಿ ನಿಂತು, ವೈದೇಹಿಗೂ, ಆಕೆಯಿರುವ ದಿಕ್ಕಿಗೂ ನಮಸ್ಕರಿಸಿ, ಮಾತನಾಡುವುದರಲ್ಲಿ ಬಲುಜಾಣನಾದುದರಿಂದಲೂ, ತನ್ನ ಸ್ವಾಮಿಯಾದ ಶ್ರೀರಾಮನ ಮನೋಭಾವವನ್ನು ಬಲ್ಲವನಾದುದರಿಂದಲೂ ಮೊಟ್ಟಮೊದಲು ಆ ರಾಮನು „ಸೀತೆಯು ಎಲ್ಲಿದ್ದಾಳೆ ? ನನ್ನ ವಿಷಯದಲ್ಲಿ ಹೇಗ್ಗ ಇದ್ದಾಳೆ?„ಎಂದು ಕೇಳಿದ ಭಾವಗರ್ಭಿತವಾದ ವಚನಗಳಿಗೆ ಸರಿಯಾಗಿಯೂ,ಹಿಂದೆ ಸೀತಾದೇವಿಯು-ತನಗೆ ಹೇಳಿದ್ದ „ವಾಚಾಧರ್ಮಮವಾಪ್ನುಹಿ-ಎಲೈ ಆಂಜನೇಯನೇ ! ನೀನು ಬಹು ಬುದ್ಧಿಶಾಲಿ, ಅದರಿಂದ ಸಮಯಾನುಸಾರವಾಗಿ ಆಡುವ ಮಾತಿನಿಂದ ಧರ್ಮವನ್ನು ಸಂಪಾದಿಸು" ಎಂಬ ಮಾತಿಗನುಸಾರವಾಗಿಯೂ, ಸೀತಾಸಂದರ್ಶನದ ಬಗೆಯನ್ನು ಪ್ರಕೃತೋಚಿತವಾಗಿ ಬಿನ್ನವಿಸತೊಡಗಿದನು ॥ ೭ ॥-॥ ಎಲೈ ಪ್ರಭುವೆ ! ಈ ನಾನು ನೂರುಗಾವುದಗಳ ದೂರವಾಗಿರುವ ಸಮುದ್ರವನ್ನು ದಾಟ ಜಾನಕಿಯನ್ನರಸುತ, ಎಂದಿಗೆ ಕಂಡೇನೆಂಬ ತವಕದಿಂದ

ರಾಮ ಸುಗ್ರೀವ ಸಖ್ಯಂ ಚ ಶ್ರುತ್ವಾ ಪ್ರೀತಿ ಮುಪಾಗತಾ ॥೧೬॥
ನಿಯತ ಸ್ಸಮುದಾಚಾರೋ ಭಕ್ತಿಶ್ಚಾಸ್ಯಾ ಸ್ತಥಾ ತ್ವಯಿ ।
ಏವಂ ಮಯಾ ಮಹಾ ಭಾಗಾ ದೃಷ್ಟ್ವಾ ಜನಕನಂದಿನೀ ॥೧೭॥
ಉಗ್ರೇಣ ತಪಸಾ ಯುಕ್ತಾ ತ್ವದ್ಭಕ್ತ್ಯಾ ಪುರುಷರ್ಷಭ ॥೧೮॥
ಅಭಿಜ್ಞಾನಂ ಚ ಮೇ ದತ್ತಂ ಯಥಾವೃತ್ತಂ ತವಾಂತಿಕೇ ।
ಚಿತ್ರಕೂಟೇ ಮಹಾಪ್ರಾಜ್ಞ ವಾಯಸಂ ಪ್ರತಿ ರಾಘವ ॥೧೯॥
ವಿಜ್ಞಾಪ್ಯಶ್ಚ ನರವ್ಯಾಘ್ರೋ ರಾಮೋ ವಾಯುಸುತ ತ್ವಯಾ ॥

ಮಾತನಾಡಿಸಲ್ಪಟ್ಟಳು, ಸರ್ವಂ - ಸಮಸ್ತವಾದ, ಅರ್ಥಂ ಚ - ಸಂಗತಿಯನ್ನೂ, ದರ್ಶಿತಾ - ತಿಳಿಯಿಸಲ್ಪಟ್ಟಳು, (ಸಾ - ಆಕೆಯು,) ರಾಮಸುಗ್ರೀವಸಖ್ಯಂ - ರಾಮ ಸುಗ್ರೀವರ ಗೆಳೆತನವನ್ನು, ಶ್ರುತ್ವಾ - ಕೇಳಿ, ಪ್ರೀತಿಂ ಚ - ಸಂತೋಷವನ್ನೂ, ಉಪಾಗತಾ - ಹೊಂದಿದಳು ॥೧೬॥

ಪುರುಷರ್ಷಭ - ಎಲೈ ಪುರುಷಶ್ರೇಷ್ಠನೇ, ಅಸ್ಯಾಃ - ಈಕೆಗೆ, ಸಮುದಾಚಾರಃ - ನಡತೆಯು, ನಿಯತಃ - ನಿಯಮದಿಂದೊಡಗೂಡಿದೆ, (ತಥಾ - ಹಾಗೆಯೇ) ತ್ವಯಿ - ನಿನ್ನಲ್ಲಿ, ಭಕ್ತಿಶ್ಚ - ಪೂಜ್ಯಾನುರಾಗವು, (ಅಸ್ತಿ - ಉಂಟು,) ಮಹಾಭಾಗಾ - ಮಹತ್ತರವಾದ ಪ್ರಭಾವವುಳ್ಳ, ಉಗ್ರೇಣ - ತೀವ್ರವಾದ, ತಪಸಾ - ತಪಸ್ಸಿನಿಂದಲೂ, ತ್ವದ್ಭಕ್ತ್ಯಾ - ನಿನ್ನಲ್ಲಿರುವ ಭಕ್ತಿಯಿಂದಲೂ, ಯುಕ್ತಾ - ಕೂಡಿದವಳಾಗಿ, ಜನಕನನ್ದಿನೀ - ಸೀತಾದೇವಿಯು, ಮಯಾ - ನನ್ನಿಂದ, ಏವಂ - ಈಪ್ರಕಾರವಾಗಿ, ದೃಷ್ಟಾ - ನೋಡಲ್ಪಟ್ಟಳು, ॥೧೭-೧೮॥ ಮಹಾಪ್ರಾಜ್ಞ - ಹೇರಳವಾದತಿಳಿವಳಿಕೆಯುಳ್ಳ, ಹೇರಾಘವ - ಎಲೈ ರಾಮನೆ !, ಚಿತ್ರಕೂಟೇ - ಚಿತ್ರಕೂಟಪರ್ವತದಲ್ಲಿ, ತವ - ನಿನ್ನ, ಅಂತಿಕೇ - ಸಮೀಪದಲ್ಲಿ, ವಾಯಸಂಪ್ರತಿ - ಕಾಕಾಸುರನನ್ನು ಕುರಿತು, ಯಥಾ - ಯಾವಪ್ರಕಾರವಾಗಿ, ವೃತ್ತಂ - ನಡೆಯಿತೋ ತಥಾ - ಆ ಪ್ರಕಾರವಾಗಿಯೇ, ಅಭಿಜ್ಞಾನಂ ಚ - ಗುರುತೂ, ಮೇ - ನನಗೆ, (ತಯಾ - ಆಕೆಯಿಂದ) ದತ್ತಂ - ಕೊಡಲ್ಪಟ್ಟಿತು ॥ ೧೯ ॥ ಹೇವಾಯುಸುತ - ಎಲೈ ವಾಯುನಂದನನೇ, ಇಹ - ಇಲ್ಲಿ, ತ್ವಯಾ - ನಿನ್ನಿಂದ, ಯತ್ - ಯಾವುದು, ಅಖಿಲೇನ - ಸಂಪೂರ್ಣವಾಗಿ, ದೃಷ್ಟಂ - ನೋಡಲ್ಪಟ್ಟಿತೋ

ಉಂಟಾದ ಸಖ್ಯವನ್ನೂ ಉಳಿದ ಸಮಸ್ತ ಕುಶಲವೃತ್ತಾಂತವನ್ನೂ ಅರಿಕೆಮಾಡಿದೆನು, ಆದನ್ನೆಲ್ಲ ಕೇಳಿದ ತರುವಾಯ ಪ್ರೀತಿಯನ್ನು ಹೊಂದಿದಳು ॥೧೬॥ ಎಲೈ ಪುರುಷಸಿಂಹನೇ! ಆಕೆಯ ನಡತೆಯೆಲ್ಲವೂ ಬಹು ನಿಯಮದಿಂದೊಡಗೂಡಿರುವುದು, ನಿನ್ನವಿಷಯವಾಗಿ ಆಕೆಗಿರುವ ಪೂಜ್ಯಾನುರಾಗವು ಶ್ಲಾಘ್ಯವೆನಿಸಿದೆ, ಜನಕರಾಜನಂದಿನಿಯಾದ ಆ ಪುಣ್ಯಾತ್ಮಳನ್ನು ಈರೀತಿಯಾಗಿ ಕಂಡೆನು, ನಿರ್ಮಲತರವೆನಿಸಿದ ಭಕ್ತಿಯಿಂದಲೂ ಕ್ರೂರತರವಾದತಪಸ್ಸಿನಿಂದಲೂ ಒಡಗೂಡಿರುವಳು ॥ ೧೭-೧೮ ॥ ಹಿಂದೆ ನಿನ್ನೊಡನೆ ಚಿತ್ರಕೂಟಪರ್ವತದಲ್ಲಿ ವಾಸಮಾಡುತ್ತಿರುವಲ್ಲಿ- ಕಾಕಾಸುರನು ನಡೆಸಿದ ಸಂಗತಿಯನ್ನೂ, ಆ ಕಾಗೆಯ ಮೇಲೆ ನೀನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಶಿಕ್ಷಿಸಿದ ಸಮಾಚಾರವನ್ನೂ, ಗುರುತನ್ನಾಗಿ ನಿನಗೆ ಅರಿಕೆಮಾಡುವಂತೆ ನನಗೆ ಆಜ್ಞಾಪಿಸಿದಳು ॥೧೯ ॥ ಮತ್ತು - ಎಲೈ ಪವಮಾನನಂದನನೇ ! ನೀನು ಇಲ್ಲಿ ಯಾವ ಯಾವ ನಡತೆಯನ್ನು ನೋಡಿದೆಯೋ, ಅದನ್ನೆಲ್ಲ ಪುರುಷೋತ್ತಮನಾದ ಶ್ರೀರಾಮನೊಡನೆ ಸ್ವಲ್ಪವೂ ಬಿಡದಂತೆ ವಿಜ್ಞಾಪಿಸು ಎಂದು ಜಾನಕಿಯು ನನ್ನನ್ನು

ಅಖಿಲೇ ನೇಹ ಯದ್ದೃಷ್ಟ ಮಿತಿ ಮಾಮಾಹ ಜಾನಕೀ ॥೨೦॥
ಅಯಂ ಚಾಸ್ಮೈ ಪ್ರದಾತವ್ಯಂ ಯತ್ನಾತ್ಸುಪರಿರಕ್ಷಿತಂ ॥
ಬ್ರುವತಾ ವಚನಾನ್ಯೇವಂ ಸುಗ್ರೀವಸ್ಯೋಪ ಶೃಣ್ವತಃ॥೨೧॥
ಏಷ ಚೂಡಾಮಣಿಃ ಶ್ರೀಮಾನ್ಮಯಾ ಸುಪರಿರಕ್ಷಿತಃ।
ಮನಶ್ಶಿಲಾಯಾ ಸ್ತಿಲಕೋ ಗಂಡಪಾರ್ಶ್ವೇ ನಿವೇಶಿತಃ॥೨೨॥
ತ್ವಯಾ ಪ್ರಣಷ್ಟೇ ತಿಲಕೇ ತಂ ಕಿಲ ಸ್ಮರ್ತುಮರ್ಹಸಿ।
ಏಷ ನಿರ್ಯಾತಿತಃ ಶ್ರೀಮಾನ್ಮಯಾ ತೇ ವಾರಿ ಸಂಭವಃ ॥೨೩॥
ಏತಂ ದೃಷ್ಟ್ವಾ ಪ್ರಮೋದಿಷ್ಯೇ ವ್ಯಸನೇ ತ್ವಾಮಿವಾನಘ ।

---

(ತತ್ಸರ್ವಂ - ಅದೆಲ್ಲವೂ,) ನರವ್ಯಾಘ್ರಃ - ಪುರುಷ ಶ್ರೇಷ್ಠನಾದ, ರಾಮಃ - ಶ್ರೀರಾಮನು, ತ್ವಯಾ ನಿನ್ನಿಂದ, ವಿಜ್ಞಾಪ್ಯಃ - ಚೆನ್ನವಿಸಲ್ಪಡತಕ್ಕವನು, ಇತಿ - ಹೀಗೆಂದು, ಜಾನಕೀ - ಸೀತೆಯು, ಮಾಂ ನನ್ನನ್ನು ಕುರಿತು, ಆಹ - ಹೇಳಿದಳು ॥ ೨೦ ॥ ಏಷಃ - ಇದು, ಶ್ರೀಮಾನ್ - ಶೋಭಾಯುಕ್ತವಾದ ಚೂಡಾಮಣಿಃ - ಶಿರೋರತ್ನವು, ಮಯಾ - ನನ್ನಿಂದ, ಸುಪರಿರಕ್ಷಿತಃ - ಚೆನ್ನಾಗಿ ಕಾಪಾಡಲ್ಪಡುತಲಿದ್ದಿತು. ತಿಲಕೆ - ಹಣೆಯಬಟ್ಟು, ಪ್ರಣಷ್ಟೇಸತಿ - ಅಳಿಸಿಹೋಗುತಿರಲಾಗಿ, ತಿಲಕಃ - ಆಬೊಟ್ಟು, ಗಂಡಪಾರ್ಶ್ವೇ - ಕೆನ್ನೆಯಮೇಲೆ, ನಿವೇಶಿತಃ - ನಿನ್ನಿಂದ ಇಡಲ್ಪಟ್ಟಿತಲ್ಲವೆ? ತಂ - ಆಬೊಟ್ಟಿಡುವಿಕೆಯನ್ನು, ಸ್ಮರ್ತುಂ - ನೆನಸಿಕೊಳ್ಳಲಿಕ್ಕೆ, ಅರ್ಹಸಿಕಿಲ - ತಕ್ಕವನಾಗಿದ್ದೀಯಲ್ಲವೆ? ಶ್ರೀಮಾನ್ - ಕಾಂತಿಸಂಪನ್ನವಾದ, ಏಷಃ - ಈ, ವಾರಿಸಂಭವಃ - ಚೂಡಾಮಣಿಯು, ತೆ - ನಿನಗೋಸ್ಕರ, ಮಯಾ - ನನ್ನಿಂದ, ನಿರ್ಯಾತಿತಃ - ಕಳುಹಿಸಲ್ಪಟ್ಟನೆ ॥ ೨೧-೨೩ ॥ ಹೇ ಅನಘ - ಎಲೈ ಪಾಪಶೂನ್ಯನೆ !, ವ್ಯಸನೆ - ಇಂತಹ ದುಃಖಕಾಲದಲ್ಲಿ, ತ್ವಾಮಿವ - ನಿನ್ನನ್ನು ಹೇಗೋ ಹಾಗೆ, ಏತಂ - ಈ ಶಿರೋರತ್ನವನ್ನು, (ಈ ದಿವ್ಯನಾಮಾಂಗುಳೀಯಕವನ್ನು) ದೃಷ್ಟ್ವಾ - ನೋಡಿ, ಪ್ರಮೋದಿಷ್ಯೇ - ಹೇರಳವಾಗಿ ಸಂತೋಷಿಸುತ್ತೇನೆ, ದಶರಥಾತ್ಮಜ-

---

ಕುರಿತು ಹೇಳಿದಳು ॥೨೦॥ ಇದಲ್ಲದೆ, ನಾನು ಬಹುಎಚ್ಚರಿಕೆಯಿಂದ ಕಾಪಾಡಿಕೊಂಡಿದ್ದ ಈ ಬಹುತರಶೋಭಾಸಂಪನ್ನವಾಗಿರುವ ಚೂಡಾರತ್ನವನ್ನು—ಎಲೈ ರಾಮಭದ್ರನೇ ಬಹುಜಾಗರೂಕತೆಯಿಂದರಕ್ಷಿಸುತ್ತಿದ್ದೆನು, ಅದೇ ಈ ರತ್ನವು, ಇದೊಂದುಗುರುತು, ಮತ್ತು ಹಿಂದೆನನ್ನ ಹಣೆಯಬಟ್ಟು ಅಳಿಸಿಹೋದಾಗ, ನನ್ನಪ್ರಾಣನಾಥನಾದ ನೀನು ಮಣಿಶಿಲೆಯೆಂಬ ಗೈರಿಕಧಾತುವಿನ ಗಂಧದಬಟ್ಟನ್ನು ನನ್ನಕೆನ್ನೆಯಮೇಲೆ ಇಡುತ್ತಿರಲಿಲ್ಲವೆ? ಇದೂಒಂದುಗುರುತು ಎಂದುಹೇಳು. ಮತ್ತು-ನಾಥನಾದನಿನ್ನನ್ನು ಅಗಲಿರುವ ಈ ಸಮಯದಲ್ಲಿ, ನಿನಗಿಂತಲೂ ಹೆಚ್ಚಾಗಿಪ್ರೀತಿಸುತಲಿದ್ದ ಈ ಚೂಡಾಮಣಿಯನ್ನು ನಿನ್ನನ್ನೇ ಪ್ರತ್ಯಕ್ಷದಲ್ಲಿ ನೋಡುತಲಿರುವಂತೆ ಭಾವಿಸುತಲಿದ್ದೆನು, ದೋಷರಹಿತನಾದ ಎಲೈದಶರಥನಂದನನೇ ! ಈ ಆಪತ್ಕಾಲದಲ್ಲಿ ಇದೇನನ್ನಪ್ರಾಣಧಾರಣೆಗೆ ಕಾರಣವಾಗಿದ್ದಿತು. ಇನ್ನು ಒಂದು ತಿಂಗಳು ಕಾಲಮಾತ್ರ ಪ್ರಾಣದಿಂದಿರುವೆನಲ್ಲದೆ ಆಮೇಲೆಖಂಡಿತವಾಗಿಯೂ ಪ್ರಾಣಸಹಿತಳಾಗಿ ಇರಲಾರೆನು. ಈ ರಕ್ಕಸಿಯರ ನಿರ್ಬಂಧಕ್ಕೊಳಗಾಗಿರುವ ನನ್ನಜೀವಿತವು ಖಂಡಿತವಾಗಿಯೂ ಉಳಿಯುವುದಿಲ್ಲ. ಎಂಬೀನುಡಿಗಳನ್ನು ಸುಗ್ರೀವನು ಕಿವಿಗಳಿಂದ ಕೇಳುತ್ತಿರುವಹಾಗೆ ರಾಮನಿಗೆ ಒಪ್ಪಿಸುತ್ತಾ, ರಾಮನಕೈಗೆ ಕೊಡಬೇಕು ಎಂದು ಹೇಳಿಕೊಟ್ಟಿದ್ದಾಳೆ ॥೨೧,೨೨,೨೩,೨೪॥

ಜೀವಿತಂ ಧಾರಯಿಷ್ಯಾಮಿ ಮಾಸಂ ದಶರಥಾತ್ಮಜ ॥ ೨೩ ॥
ಊರ್ಧ್ವಂ ಮಾಸಾನ್ನ ಜೀವೇಯಂ ರಕ್ಷಸಾಂ ವಶ ಮಾಗತಾ ॥ ೨೪ ॥
ಇತಿ ಮಾ ಮಬ್ರವೀತ್ ಸೀತಾ ಕೃಶಾಂಗೀ ಧರ್ಮ ಚಾರಿಣೀ ॥ ೨೫ ॥
ರಾವಣಾಂತಃ ಪುರೇ ರುದ್ಧಾ ಮೃಗೀವೋತ್ಫುಲ್ಲ ಲೋಚನಾ ।
ಏತದೇವ ಮಯಾ ಖ್ಯಾತಂ ಸರ್ವಂ ರಾಘವ ಯದ್ಯಥಾ ।
ಸರ್ವಥಾ ಸಾಗರಜಲೆ ಸಂತಾರಃ ಪ್ರವಿಧೀಯತಾಮ್ ॥ ೨೬ ॥

ಎಲೈ ದಶರಥ ನಂದನನೆ !, ಮಾಸಂ - ಒಂದು ತಿಂಗಳು, ಜೀವಿತಂ - ಪ್ರಾಣವನ್ನು, ಧಾರಯಿಷ್ಯಾಮಿ - ನಿಲ್ಲಿಸಿಕೊಂಡಿರುವೆನು ॥ ೨೩ ॥ ರಕ್ಷಸಾಂ - ರಕ್ಕಸರಿಗೆ, ವಶಂ - ಸ್ವಾಧೀನತೆಯನ್ನು, - ಆಗತಾ - ಹೊಂದಿರುವ. (ಅಹಂ - ಈ ನಾನು) ಮಾಸಾತ್ - ತಿಂಗಳಿಗಿಂತಲೂ, ಊರ್ಧ್ವಂ - ಮೇಲೆ ನಜೀವೇಯಂ - ಜೀವಿಸಲಾರೆನು ॥ ೨೪ ॥ ಏವಂ - ಈ ಪ್ರಕಾರವಾಗಿ, (ಮಯಾ - ನನ್ನಿಂದ, ಉಕ್ತಾನಿ- ಹೇಳಲ್ಪಟ್ಟ) ವಚನಾನಿ- ಮಾತುಗಳನ್ನು, ಸುಗ್ರೀವಸ್ಯ - ಸುಗ್ರೀವನು, ಉಪಶೃಣ್ವತಃ - (ಸತಃ) ಕೇಳುತ್ತಿರಲಾಗಿಯೇ, ಬ್ರುವತಾ - ಹೇಳುತಲಿರುವ, (ತ್ವಯಾ-ನಿನ್ನಿಂದ) ಯತ್ನಾತ್- ಪ್ರಯತ್ನದ ದೆಸೆಯಿಂದ ಸುಪರಿರಕ್ಷಿತಃ-ಚೆನ್ನಾಗಿ ರಕ್ಷಿಸಲ್ಪಟ್ಟ. ಅಯಂ - ಈ ಚೂಡಾರತ್ನವು, ಅಸ್ಮೈ - ಈ ರಾಮನಿಗೆ, ಪ್ರದಾತವ್ಯಃ-ಕೊಡಲ್ಪಡತಕ್ಕದು ॥ ೨೪ ॥ ॥

ಕೃಶಾಂಗೀ - ಬಡವಾದ ಮೈಯುಳ್ಳ, ಧರ್ಮಚಾರಿಣೀ- ಧರ್ಮವನ್ನಾಚರಿಸುತಲಿರುವ, ಮೃಗೀವ - ಹೆಣ್ಣುಹುಲ್ಲೆಯ ಹಾಗೆ, ಉತ್ಫುಲ್ಲಲೋಚನಾ - ಅರಳಿದ ಕಣ್ಣುಳ್ಳ, ರಾವಣಾಂತಃಪುರೆ- ರಾವಣನ ಅಂತಃಪುರದಲ್ಲಿ, ರುದ್ಧಾ - ರಕ್ಕಸಿಯರಿಂದ ತಡೆಯಲ್ಪಟ್ಟಿರುವ, ಸೀತಾ- ಜಾನಕಿಯು, ಇತಿ- ಈ ಪ್ರಕಾರವಾಗಿ, ಮಾಂ - ನನ್ನೊಡನೆ, ಅಬ್ರವೀತ್ - ಹೇಳಿದಳು ॥ ೨೫ ॥ ॥ ರಾಘವ - ಎಲೈ ರಾಮ ಭದ್ರನೆ, ಯತ್ - ಯಾವುದು, ಯಥಾ - ಹೇಗೆ, (ವೃತ್ತಂ - ನಡೆಯಿತೋ) ಏತತ್ - ಈ, ಸರ್ವಮೇವ - ಸಮಸ್ತವೂ, ಮಯಾ - ನನ್ನಿಂದ, ಆಖ್ಯಾತಂ - ಹೇಳಲ್ಪಟ್ಟಿತು, ಸರ್ವಥಾ - ಸರ್ವಪ್ರಕಾರದಿಂದಲೂ, ಸಾಗರಜಲೆ - ಸಮುದ್ರೋದಕದಲ್ಲಿ, ಸಂತಾರಃ - ಸೇತುವೆಯು, (ತ್ವಯಾ - ನಿನ್ನಿಂದ,) ಪ್ರವಿಧೀಯತಾಂ - ಕಟ್ಟಿಸಲ್ಪಡಲಿ ॥ ೨೬ ॥ ॥ ವಾಯು ಪುತ್ರಃ - ಮಾರುತಿಯು, ತೌ - ಆ, ರಾಜಪುತ್ರೌ-ರಾಜಕುಮಾರರನ್ನು ಜಾತಶ್ವಾಸೌ - ಉಂಟಾದ ಜೀವಿತವುಳ್ಳವರನ್ನಾಗಿ, ವಿದಿತ್ವಾ - ತಿಳಿದು, ತತ್ - ಆ, ಅಭಿಜ್ಞಾನಂಚ -

ಮಹಾಭಯಕ್ಕೊಳಗಾದ, ಹೆಣ್ಣುಹುಲ್ಲೆಯಂತೆ ಚಂಚಲಾಕ್ಷಿಯೂ, ಶೋಕದಿಂದ ನವೆದು ಹೋಗಿ ರಾವಣಾಂತಃಪುರದಲ್ಲಿ ರಕ್ಕಸಿಯರಿಂದ ನಿರ್ಬಂಧಿಸಲ್ಪಟ್ಟಿರುವವಳಾದ ಜಾನಕಿಯು ಶ್ರೇಯಸ್ಕರವಾದ ಧರ್ಮದಲ್ಲಿ ತತ್ಪರಳಾಗಿ ನನ್ನೊಡನೆ ಇಷ್ಟುಸಂಗತಿಗಳನ್ನು ತಿಳಿಸಿದಳು ॥ ೨೫ ॥ ಎಲೈ ರಘುಕುಲ ಲಲಾಮನೇ ! ಆ ಮಹಾದೇವಿಯು ನನ್ನೊಡನೆ ಯಾವ ಯಾವ ವಿಷಯವನ್ನು ತಿಳಿಸಿದ್ದಳೋ ಅದೆಲ್ಲವನ್ನೂ ನಿನ್ನ ಸನ್ನಿಧಾನದಲ್ಲಿ ಅರಿಕೆ ಮಾಡಿಕೊಂಡಿರುವೆನು. ಸರ್ವಪ್ರಕಾರದಿಂದಲೂ ಶೀಘ್ರವಾಗಿ ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿಸುವ ಪ್ರಯತ್ನವನ್ನು ಮಾಡಬೇಕು ॥ ೨೬ ॥ ॥ ಎಂದೀಪ್ರಕಾರವಾಗಿ ಪವಮಾನನಂದನನಾದ ಆಂಜನೇಯನು-ತನ್ನವಚನಗಳ ಶ್ರವಣದಿಂದ ಸಂತುಷ್ಟರಾದ ರಾಮಲಕ್ಷ್ಮಣರನ್ನು ನೋಡಿ, ಸೀತಾ ದೇವಿಯು ಕೊಟ್ಟಿದ್ದ ಚೂಡಾರತ್ನವನ್ನು ಶ್ರೀರಾಮ

ತೌ ಜಾತಾಶ್ವಾಸೌ ರಾಜಪುತ್ರೌ ವಿದಿತ್ವಾ ತಚ್ಚಾಭಿಜ್ಞಾನಂ ರಾಘವಾಯ ಪ್ರದಾಯ ।
ದೇವ್ಯಾಚಾಖ್ಯಾತಂ ಸರ್ವಮೇವಾನುಪೂರ್ವ್ಯಾದ್ವಾಚಾಸಂಪೂರ್ಣಂ ವಾಯುಪುತ್ರಃ ಶಶಂಸ॥
ಇತಿ ಶ್ರೀಮತ್ಸುಂದರಕಾಂಡೆ-ಪಂಚಷಷ್ಠಿತಮಸ್ಸರ್ಗಃ.

---

ಗುರುತನ್ನೂ, ರಾಘವಾಯ - ಶ್ರೀರಾಮನಿಗೆ, ಪ್ರದಾಯ - ಕೊಟ್ಟು, ದೇವ್ಯಾಚ - ಸೀತಾದೇವಿಯಿಂದ ಲೂ, ಆಖ್ಯಾತಂ - ಹೇಳಲ್ಪಟ್ಟ, ಸರ್ವಮೇವ - ಸಮಸ್ತ ವೃತ್ತಾಂತವನ್ನೆ, ಆನುಪೂರ್ವ್ಯಾತ್ - ಕ್ರಮವಾಗಿ, ವಾಚಾ - ಮಾತಿನಿಂದಲೂ, ಸಂಪೂರ್ಣಂ - ಮೊದಲಿನಿಂದ ತುದಿಯುವರೆಗೂ, ಶಶಂಸ - ಹೇಳಿದನು ॥೨೭॥

— ಇಂತು ಅರುವತ್ತೈದನೆಯ ಸರ್ಗಂ —

---

ಚಂದ್ರನಿಗೊಪ್ಪಿಸಿ, ಸೀತಾದೇವಿಯು ಹೇಳಿದ್ದ ಸಮಸ್ತವಿಷಯವನ್ನೂ ಮೊದಲಿನಿಂದ ತುದಿಯುವರೆಗೂ ಒಂದನ್ನೂ ಬಿಡದಂತೆ ಬಿನ್ನವಿಸಿದನು ॥ ೨೭ ॥

— ಇಂತು ಅರುವತ್ತೈದನೆಯ ಸರ್ಗಂ —



ಶ್ರೀಃ.

ಶ್ರೀ ರಾಮ ಚನ್ದ್ರ ಪರಬ್ರಹ್ಮಣೇ ನಮಃ

## ಶ್ರೀಮತ್ಸುಂದರಕಾಂಡೆ-ಷಟ್ಷಷ್ಠಿತಮಸ್ಸರ್ಗಃ.

ಏವ ಮುಕ್ತೋ ಹನುಮತಾ ರಾಮೋ ದಶರಥಾತ್ಮಜಃ ।
ತಂ ಮಣಿಂ ಹೃದಯೇ ಕೃತ್ವಾ ಪ್ರರುರೋದ ಸಲಕ್ಷ್ಮಣಃ ॥ ೧ ॥

---

— ಅರವತ್ತಾರನೆಯ ಸರ್ಗಂ —

ಕಂ॥ ಮಣಿದಾ ಮಾರುತಿ ಕೊಡಾ। ಮಣಿಯಂ ಕುಡೆ ರಾಮನಂದು ಸಂತಸದಿಂ ಮೋಹ।
ಎಣೆಯಿಲ್ಲದ ಸಂಕಟದಿಂ। ಚಣ ಚಣಕಂ ಮಡದಿ ನುಡಿದ ನುಡಿಯೇನೆಂದ॥೧॥

ದಶರಥಾತ್ಮಜಃ ದಶರಥ ನಂದನನಾದ, ರಾಮಃ-ರಾಮನು, ಹನುಮತಾ - ಆಂಜನೇಯನಿಂದ, ಏವಂ - ಈ ಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟವನಾಗಿ, ತಂ - ಆ, ಮಣಿಂ ಚೂಡಾಮಣಿಯನ್ನು, ಹೃದಯೇ - ಎದೆಯಮೇಲೆ, ಕೃತ್ವಾ - ಇಟ್ಟುಕೊಂಡು, ಸಲಕ್ಷ್ಮಣಃ - ಲಕ್ಷ್ಮಣನಿಂದ ಸಹಿತನಾಗಿ, ಪ್ರರುರೋದ - ಹೇರಳವಾಗಿ ಅತ್ತನು ॥ ೧ ॥ ರಾಘವಃ - ಶ್ರೀರಾಮನು, ತಂ - ಆ, ಮಣಿಶ್ರೇಷ್ಠಂ-

— ಅರುವತ್ತಆರನೆಯ ಸರ್ಗ —

ಹನುಮಂತ ನಿಂತು ಹೇಳಿದ ಸೀತಾ ವೃತ್ತಾಂತವನ್ನು ಕೇಳಿ, ದಶರಥ ನಂದನನಾದ ರಾಘವನು-ಆತನು ಕೊಟ್ಟ ದಿವ್ಯಚೂಡಾಮಣಿಯನ್ನು ತನ್ನ ಎದೆಗೆ ಒತ್ತಿಕೊಂಡು, ಹೇರಳವಾಗಿ ಅಳತೊಡಗಿದನು. ಹಾಗೆ ದೀನನಾದ ರಾಮನನ್ನು ನೋಡಿದ ಲಕ್ಷ್ಮಣನೂ ತಾಳಲಾರದೆ ಬಹಳವಾಗಿ ದುಃಖಾಕ್ರಾಂತನಾದನು ॥ ೧ ॥ ಶೋಕಭಾರದಿಂದ ಬಹು ದೀನನಾದ

ತಂ ತು ದೃಷ್ಟ್ವಾ ಮಣಿಶ್ರೇಷ್ಠಂ ರಾಘವ ಶ್ಶೋಕ ಕರ್ಶಿತಃ ।
ನೇತ್ರಾಭ್ಯಾ ಮಶ್ರು ಪೂರ್ಣಾಭ್ಯಾಂ ಸುಗ್ರೀವ ಮಿದ ಮಬ್ರವೀತ್ ॥ ೨ ॥
ಯಥೈವ ಧೇನುಃ ಸ್ರವತಿ ಸ್ನೇಹಾ ದ್ವತ್ಸಸ್ಯ ವತ್ಸಲಾ ।
ತಥಾ ಮಮಾಪಿ ಹೃದಯಂ ಮಣಿರತ್ನಸ್ಯ ದರ್ಶನಾತ್ ॥೩॥
ಮಣಿರತ್ನ ಮಿದಂ ದತ್ತಂ ವೈದೇಹ್ಯಾಃ ಶ್ವಶುರೇಣ ಮೇ।
ವಧೂಕಾಲೇ ಯಥಾಬದ್ಧ ಮಧಿಕಂ ಮೂರ್ಧ್ನಿ ಶೋಭತೇ ॥೪॥
ಅಯಂ ಹಿ ಜಲ ಸಂಭೂತೋ ಮಣಿ ಸ್ಸಜ್ಜನ ಪೂಜಿತಃ ।

---

ಚೂಡಾರತ್ನವನ್ನು, ದೃಷ್ಟ್ವಾ - ನೋಡಿ, ಶೋಕಕರ್ಶಿತಃ . ದುಃಖದಿಂದ ಬಾಡಿದವನಾಗಿ, ಅಶ್ರು ಪೂರ್ಣಾಭ್ಯಾಂ-ನೀರಿನಿಂದ ತುಂಬಿರುವ, ನೇತ್ರಾಭ್ಯಾಂ-ಕಣ್ಣುಗಳಿಂದೊಡಗೂಡಿದವನಾಗಿಯೂ, ಸುಗ್ರೀವಂ - ಸುಗ್ರೀವನನ್ನು ಕುರಿತು, ಇದಂ - ಈ ಮುಂದಿನ ಮಾತನ್ನು, ಅಬ್ರವೀತ್ - ಹೇಳತೊಡಗಿದನು॥ ಹೇ ಸುಗ್ರೀವ - ಎಲೈ ಸುಗ್ರೀವನೆ, ವತ್ಸಲಾ - ಕರುವಿನಲ್ಲಿ ಮಮತೆಯುಳ್ಳ, ಧೇನುಃ - ಆಕಳು, ವತ್ಸಸ್ಯ - ತನ್ನ ಕರುವನ್ನು, ದರ್ಶನಾತ್ - ನೋಡುವುದರಿಂದ, ಸ್ನೇಹಾತ್ - ಪ್ರೇಮದ ದೆಶೆಯಿಂದ, ಯಥೈವ - ಹೇಗೆ, ಸ್ರವತಿ - (ಕೆಚ್ಚಲಿನಲ್ಲಿ) ಹಾಲನ್ನು ಜನಿಯಿಸುವುದೋ, ತಥಾ ಹಾಗೆಯೇ, ಮಮ - ನನ್ನ, ಹೃದಯಮಪಿ - ಮನಸ್ಸೂ, ಮಣಿರತ್ನಸ್ಯ - ಈ ಶ್ರೇಷ್ಠವಾದ ಮಣಿಯನ್ನು, ದರ್ಶನಾತ್ - ನೋಡುವುದರಿಂದ, ದ್ರವತಿ - ದ್ರವಿಸುತಲಿದೆ (ಕರಗುತ್ತಲಿದೆ) ॥೩॥ ಇದಂ - ಈ, ಮಣಿರತ್ನಂ - ಶ್ರೇಷ್ಠವಾದ ಮಣಿಯು, ವಧೂಕಾಲೆ - ಹೆಣ್ಣನ್ನು ನನಗೆ ಒಪ್ಪಿಸುವಕಾಲದಲ್ಲಿ, (ವಿವಾಹದಲ್ಲಿ) ಮೇ - ನನಗೆ, ಶ್ವಶುರೇಣ - ಮಾವನಾದ ಜನಕನಿಂದ, ದತ್ತಂ - ಕೊಡಿಸಲ್ಪಟ್ಟದಾಗಿ, ಯಥಾ - ಹೇಗೆ, ಅಧಿಕಂ - ಹೆಚ್ಚಾಗಿ, ಶೋಭತೆ - ಪ್ರಕಾಶಿಸುತದೆಯೋ, ತಥಾ ಹಾಗೆ, ವೈದೇಹ್ಯಾಃ - ಜಾನಕಿಯು, ಮೂರ್ಧ್ನಿ - ಶಿರಸ್ಸಿನಲ್ಲಿ, ಬದ್ಧಂ - ಕಟ್ಟಲ್ಪಟ್ಟಿತು ॥ ೪ ॥ ಧೀಮತಾ - ಪ್ರಶಸ್ತವಾದ ಜ್ಞಾನವುಳ್ಳವನೂ, ಯಜ್ಞೇ - ಯಜ್ಞಕಾಲದಲ್ಲಿ, ಪರಮತುಷ್ಟೇನ - ಹೆಚ್ಚಾಗಿ ಸಂತೋಷಿಸಿದವನೂ ಆದ ಶಕ್ರೇಣ - ಇಂದ್ರನಿಂದ ಜಲಸಂಭೂತಃ - ಸಮುದ್ರಜಲದಲ್ಲಿ ಉತ್ಪನ್ನವಾದುದೂ, ಸಜ್ಜನಪೂಜಿತಃ-ಸತ್ಪುರುಷರಿಂದ ಪೂಜಿಸಲ್ಪಟ್ಟದೂ ಆಗಿರುವ, ಅಯಂ-ಈ ಮಣಿಯೂ, ಜನಕಾಯ ಜನಕಮಹಾರಾಜನಿಗೋಸ್ಕರ

---

ರಾಮನು-ನೀರುತುಂಬಿದ ಕಣ್ಣುಗಳಿಂದ ಆ ಚೂಡಾಮಣಿಯನ್ನು ನೋಡಿ ನೋಡಿ, ಸುಗ್ರೀವನನ್ನು ಕುರಿತು ಇಂತೆಂದನು ॥ ೨ ॥ ಅಯ್ಯಾ ಸುಗ್ರೀವಾ ! ಆಕಳಿಗೆ ಸರ್ವಪ್ರೇಮಾಸ್ಪದವಾದ ಎಳೆಗರುವನ್ನು ಕಂಡ ಕೂಡಲೆ, ವಾತ್ಸಲ್ಯಾತಿಶಯದಿಂದ ಕೆಚ್ಚಲಿನಮೂಲಕ ಹಾಲು ಹೇಗೆ ದ್ರವಿಸುವುದೋ, ಹಾಗೆಯೇ ಈ ಗಲೀಮಣಿಯನ್ನು ನೋಡಿದೊಡನೆ ನನ್ನ ಮನವು ಕರಗಿಹೋಗುತಲಿದೆ ॥ ೩ ॥ ಸೀತಾವಿವಾಹ ಕಾಲದಲ್ಲಿ ನನ್ನ ಮಾವನಾದ ಜನಕ ಮಹಾರಾಜನು-ಈ ದಿವ್ಯ ಚೂಡಾರತ್ನವನ್ನು ನನ್ನ ಪ್ರಾಣಪ್ರಿಯಳಾದ ಸೀತೆಯ ಶಿರದಲ್ಲಿ ತಾನಾಗಿ ಅಲಂಕರಿಸಿದನು, ಅಂದಿನಿಂದಲೂ ಹೇರಳವಾಗಿ ಶೋಭಿಸುತಲಿದ್ದಿತು ॥೪॥ ಈ ದಿವ್ಯರತ್ನವು ಸಮುದ್ರಜಲದಲ್ಲಿ ಸಂಭವಿಸಿದುದು,ದೇವೇಂದ್ರನ ಬಳಿಯಲ್ಲಿದ್ದಿತು, ಸರ್ವಜನರಿಗೂ ಪೂಜ್ಯವೆನಿಸಿದುದು, ನನ್ನಮಾವನು ಯಜ್ಞವನ್ನುಮಾಡುವ ಸಮಯದಲ್ಲಿ ಹವಿರ್ಭಾಗವನ್ನು ಗ್ರಹಿಸಲು ವೇದಮಂತ್ರಗಳಿಂದ ಬಹಳವಾಗಿಸ್ತೋತ್ರಮಾಡಿದುದನ್ನು ಕೇಳಿ

ಯಜ್ಞೇ ಪರಮತುಷ್ಟೇನ ದತ್ತ ಶ್ಶಕ್ರೇಣ ಧೀಮತಾ ॥೫॥
ಇಮಂ ದೃಷ್ಟ್ವಾ ಮಣಿಶ್ರೇಷ್ಠಂ ಯಥಾ ತಾತಸ್ಯ ದರ್ಶನಮ್ ।
ಅದ್ಯಾಸ್ಮ್ಯವಗತಸ್ಸೌಮ್ಯ ವೈದೇಹಸ್ಯ ತಥಾ ವಿಭೋಃ ॥೬॥
ಅಯಂ ಹಿ ಶೋಭತೇ ತಸ್ಯಾಃ ಪ್ರಿಯಾಯಾ ಮೂರ್ಧ್ನಿ ಮೇ ಮಣಿಃ ।
ಅಸ್ಯಾದ್ಯ ದರ್ಶನೇ ಸಾಹಂ ಪ್ರಾಪ್ತಾಂ ತಾಮಿವ ಚಿನ್ತಯೇ ॥೭॥
ಕಿಮಾಹ ಸೀತಾ ವೈದೇಹೀ ಬ್ರೂಹಿ ಸೌಮ್ಯ ಪುನಃ ಪುನಃ ।
ಪಿಪಾಸುಮಿವ ತೋಯೇನ ಸಿಞ್ಚನ್ತೀ ವಾಕ್ಯವಾರಿಣಾ ॥೮॥

---

ದತ್ತಃ - ಕೊಡಲ್ಪಟ್ಟಿತು ॥೫॥ ಹೇ ಸೌಮ್ಯ - ಎಲೈ ಶಾಂತಸ್ವಭಾವನಾದ ಸುಗ್ರೀವನೇ ! ಅಹಂ - ನಾನು, ಅದ್ಯ - ಇಂದು, ಇಮಂ - ಈ, ಮಣಿಶ್ರೇಷ್ಠಂ - ಶ್ರೇಷ್ಠವಾದ ರತ್ನವನ್ನು, ದೃಷ್ಟ್ವಾ - ನೋಡಿ, ತಾತಸ್ಯ - ನನ್ನ ತಂದೆಯಾದ ದಶರಥನ, ದರ್ಶನಂ - ದರ್ಶನವನ್ನು, ಯಥಾ - ಹೇಗೆ, ಅವಗತಃ - ಹೊಂದಿದವನೋ, ವೈದೇಹಸ್ಯ - ವಿದೇಹದೇಶಾಧಿಪತಿಯಾದ, ವಿಭೋಃ - ಜನಕ ಮಹಾರಾಯನ, (ದರ್ಶನಂ - ದರ್ಶನವನ್ನು, ಯಥಾ - ಹೇಗೆ, ಅವಗತಃ - ಹೊಂದಿದವನೋ) ತಥಾ - ಹಾಗೆ, ಅಸ್ಮಿ - ಆಗಿದ್ದೇನೆ ॥೬॥ ಅಯಂ - ಈ, ಮಣಿಃ - ಚೂಡಾಮಣಿಯು, ಮೇ - ನನ್ನ, ಪ್ರಿಯಾಯಾಃ - ಪ್ರಾಣಪ್ರಿಯಳಾದ, ತಸ್ಯಾಃ - ಆ ಸೀತೆಯ, ಮೂರ್ಧ್ನಿ - ಶಿರಸ್ಸಿನಲ್ಲಿ, ಶೋಭತೇಹಿ - ಶೋಭಿಸುತಲಿದ್ದಿತಲ್ಲಾ, ಸಃ ಅಹಂ - ನಾನು, ಅದ್ಯ - ಇಂದು, ಅಸ್ಯ - ಈ ಮಣಿಯ, ದರ್ಶನೇನ ನೋಟದಿಂದ, ತಾಂ - ಆ ಸೀತೆಯನ್ನು, ಪ್ರಾಪ್ತಾಮಿವ - ಹೊಂದಿದವನಂತೆ, ಚಿಂತಯೇ - ಭಾವಿಸುತಲಿದ್ದೇನೆ ॥೭॥ ಹೇ ಸೌಮ್ಯ - ಶಾಂತನಾದ ಓ ಆಂಜನೇಯಾ (ಸುಗ್ರೀವಾ) ವೈದೇಹೀ - ಜನಕಪುತ್ರಿಯಾದ, ಸೀತಾ - ಸೀತಾದೇವಿಯು, ತೋಯೇನ - ಜಲದಿಂದ, ಪಿಪಾಸುಮಿವ - ದಾಹಗೊಂಡವನನ್ನು ಹೇಗೋ ಹಾಗೆ, ವಾಕ್ಯವಾರಿಣಾ - ವಚನೋದಕದಿಂದ, (ಮಾಂ - ನನ್ನನ್ನು) ಸಿಂಚಂತೀ - ತೋಯಿಸುವವಳಾಗಿ, ಕಿಂ - ಏನನ್ನು, ಆಹ - ಹೇಳಿದಳೋ, ತತ್ - ಅದನ್ನು, ಪುನಃಪುನಃ - ಮರಳಿಮರಳಿ, (ಅನೇಕಾವರ್ತಿ) ಬ್ರೂಹಿ - ಹೇಳು ॥೮॥ ಸೌಮಿತ್ರೇ - ಓ ಲಕ್ಷ್ಮಣಾ, ವಾರಿ ಸಂಭವಂ - ಜಲದಲ್ಲಿ

---

ಪರಮಸಂತುಷ್ಟನಾದ ಆ ಸುರನಾಯಕನು ಆ ಜನಕಚಕ್ರವರ್ತಿಗೆ ಇದನ್ನು ಕೊಟ್ಟಿದ್ದನು ॥೫॥ ಸೀತೆಯ ಪಾಣಿಗ್ರಹಣಕಾಲದಲ್ಲಿ ನನ್ನ ತಂದೆಗೆ ತೋರಿಸಿ, ಜನಕನು ಸೀತೆಯ ಶಿರದಲ್ಲಿ ಅಲಂಕರಿಸಿದ್ದುದರಿಂದ ಈಗ ಇದನ್ನು ನೋಡಲು, ನನ್ನ ಅತ್ತೆ ಮಾವಂದಿರ, ಮತ್ತು ನನ್ನ ತಂದೆಯ ನೆನಪು ಬರುತಲಿದೆ ॥೬॥ ನನ್ನ ಪ್ರಿಯವಲ್ಲಭೆಯ ಶಿರದಲ್ಲಿ ಶೋಭಿಸುತಲಿದ್ದ ಈ ಮಣಿರತ್ನವನ್ನು ಈಗ ನೋಡಿ, ಸಾಕ್ಷಾತ್ತಾಗಿ ಆ ಸೀತೆಯನ್ನೇ ಪಡೆದವನಂತೆ ಭಾವಿಸುತಲಿದ್ದೇನೆ॥ ಅಯ್ಯಾ ಆಂಜನೇಯಾ! ನೀರಡಿಕೆಯಿಂದ ಕೇದಳವಾಗಿ ತೊಂದರೆಪಡುವವನಿಗೆ ಪಾನಮಾಡಲಿಕ್ಕೆ ದಿವ್ಯೋದಕವನ್ನು ಕೊಟ್ಟರೆ ಅವನಿಗೀಗ ಎಷ್ಟು ಸಂತೋಷವಾಗುವುದೋ, ಹಾಗೆಯೇ ಈಗ ನನಗೆ ಸೀತೆಯ ವೃತ್ತಾಂತವನ್ನು ಇಂಪಾಗಿ ಕಿವಿಗಳಿಂದ ಕೇಳುವುದರಿಂದ ಪರಮಾನಂದವುಂಟಾಗುವುದು. ಅದರಿಂದಲೇ ಆ ಸೀತೆಯು ಇನ್ನೂ ಏನೇನನ್ನು ಹೇಳಿದಳೋ ಆ ವೃತ್ತಾಂತವನ್ನೇ ಅಡಿಗಡಿಗೂ ನನಗೆ ಹೇಳುವವನಾಗು ॥೮॥ ಲಕ್ಷ್ಮಣಾ ! ಈ ದಿವ್ಯ ಚೂಡಾಮಣಿಯು ಇಂದಿನವರೆಗೆ ಎಂದೂ ಸೀತೆಯ ಶಿರವನ್ನು ಅಗಲಿ ಇದ್ದುದೇ ಇಲ್ಲ. ಹೀಗಿರಲು

ಇತಸ್ತು ಕಿಂ ದುಃಖತರಂ ಯದಿಮಾಂ ವಾರಿ ಸಂಭವಾಮ್।
ಮಣಿಂ ಪಶ್ಯಾಮಿ ಸೌಮಿತ್ರೇ ವೈದೇಹೀ ಮಾಗತಾಂ ವಿನಾ ॥೯॥
ಚಿರಂ ಜೀವತಿ ವೈದೇಹೀ ಯದಿ ಮಾಸಂ ಧರಿಷ್ಯತಿ ।
ಕ್ಷಣಂ ಸೌಮ್ಯ ನ ಜೀವೇಯಂ ವಿನಾ ತಾ ಮಸಿತೇಕ್ಷಣಾಮ್ ॥೧೦॥
ನಯ ಮಾಮಪಿ ತಂ ದೇಶಂ ಯತ್ರ ದೃಷ್ಟಾ ಮಮ ಪ್ರಿಯಾ।
ನ ತಿಷ್ಠೇಯಂ ಕ್ಷಣಮಪಿ ಪ್ರವೃತ್ತಿ ಮುಪಲಭ್ಯ ಚ ॥೧೧॥
ಕಥಂ ಸಾ ಮಮ ಸುಶ್ರೋಣೀ ಭೀರು ಭೀರು ಸ್ಸತೀ ಸದಾ।

---

ಹುಟ್ಟಿದ, ಇದಂ ಈ, ಮಣಿಂ - ಚೂಡಾಮಣಿಯನ್ನು, ವೈದೇಹೀಂವಿನಾ - ಸೀತೆಯನ್ನು ಬಿಟ್ಟು, ಆಗತಂ - ಬಂದಿರುವುದನ್ನಾಗಿ, ಪಶ್ಯಾಮಿ - ನೋಡುತಲಿದ್ದೇನೆ, (ಇತಿ - ಹೀಗೆಂಬುದು, ಯದಸ್ತಿ - ಯಾವುದುಂಟೋ) ಇತಸ್ತು - ಇದಕ್ಕಿಂತಲೂ, ದುಃಖತರಂ - ಅತಿಶಯವಾದ ದುಃಖವು ಕಿಂ - ಯಾವುದು (ಅಸ್ತಿ - ಉಂಟು) ॥೯॥ ಸೌಮ್ಯ - ಶಾಂತನಾದ, ಎಲೈ ಲಕ್ಷ್ಮಣನೇ, ವೈದೇಹೀ - ಸೀತೆಯು, ಮಾಸಂ - ಒಂದು ತಿಂಗಳು, ಧರಿಷ್ಯತಿಯದಿ - ಜೀವಿಸುವವಳೇ ಆದರೆ, ಚಿರಂ - ಬಹುಕಾಲವು, ಜೀವತಿ - ಬದುಕುವಳು, ಅಹಂ - ನಾನಾದರೋ, ಅಸಿತೇಕ್ಷಣಾಂ - ಕಪ್ಪಾದ ದೃಷ್ಟಿಯುಳ್ಳ, ತಾಂವಿನಾ - ಆ ಸೀತೆಯನ್ನು ಬಿಟ್ಟು, ಕ್ಷಣ (ಮಪಿ-) ಸ್ವಲ್ಪಕಾಲವಾದರೂ, ನಜೀವೇಯಂ - ಬದುಕಲಾರೆನು, ॥೧೦॥ (ಹನುಮನ್ - ಎಲೈ ಆಂಜನೇಯನೆ, ತ್ವಯಾ - ನಿನ್ನಿಂದ) ಯತ್ರ - ಎಲ್ಲಿ, ಮಮ - ನನ್ನ, ಪ್ರಿಯಾ - ಪ್ರಾಣಪ್ರಿಯಳು, ದೃಷ್ಟಾ - ನೋಡಲ್ಪಟ್ಟಳೋ, ತಂ - ಆ, ದೇಶಂ - ಸ್ಥಲವನ್ನು ಕುರಿತು, ಮಾಮಪಿ ನನ್ನನ್ನೂ, ನಯ - ಕರೆದುಕೊಂಡು ಹೋಗು, ಪ್ರವೃತ್ತಿಂ - ಸೀತಾವೃತ್ತಾಂತವನ್ನು, ಉಪಲಭ್ಯಚ - ತಿಳಿದೂ, ಕ್ಷಣಮಪಿ - ಕ್ಷಣಕಾಲವುಕೂಡ, ನತಿಷ್ಠೇಯಂ - ಉಳಿಯಲಾರೆನು ॥೧೧॥ ಸುಶ್ರೋಣೀ - ಅಂದವಾದ ಟೊಂಕವುಳ್ಳವಳೂ, ಸದಾ - ಯಾವಾಗಲೂ, ಭೀರುಭೀರುಃ - ಹೇಡಿಯಾದ ಭಯಪಡುವ ಸ್ವಭಾವದವಳೂ, ಸತೀ - ಪತಿವ್ರತಾಶಿರೋಮಣಿಯೂ ಆಗಿರುವವಳು, ಮಮ - ನನ್ನವಳಾದ, ಸಾ - ಆಸೀತೆಯು, ಘೋರಾಣಾಂ - ವಿಕಾರರೂಪವವರಾದಕಾರಣವೇ, ಭಯಾವಹಾನ್ - ಭಯಂಕರರಾದ,

---

ಇ ದುಃಖಕೆಯನ್ನು ಅಗಲಿಬಂದಿರುವ ಈಮಣಿಯನ್ನು ನೋಡುತಲಿರುವ ನನಗೆ ಇದಕ್ಕಿಂತಲೂ ಹೆಚ್ಚಿನದುಃಖವಿನ್ನಾವುದುಂಟು ಹೇಳಪ್ಪಾ ॥೯॥ ಅಯ್ಯೋ ಲಕ್ಷ್ಮಣಾ! ಸೀತೆಯು-ನಾನು ಇನ್ನು ಒಂದು ತಿಂಗಳಕಾಲಕ್ಕಿಂತ ಹೆಚ್ಚಾಗಿ ಬದುಕಲಾರೆನೆಂದು ಹೇಳಕಳುಹಿಸಿ ಇದ್ದಾಳೆಯಲ್ಲವೆ ? ನನ್ನ ಆಗಮನದ ಆಶೆಯಿಂದ ಇನ್ನೂಸ್ವಲ್ಪ ಹೆಚ್ಚಿನಕಾಲವಾದರೂಜೀವಿಸಿ ಇರಬಹುದು, ನಾನೀಗ ಆಕೆಯನ್ನು ಬಿಂದ ಕ್ಷಣಕಾಲವಾದರೂ ಅಗಲಿ ಜೀವಿಸಿ ಇರಲಾರೆನಲ್ಲಾ?ಏನಮಾಡಲಿ? ॥೧೦॥ ಎಲೈ ಆಂಜನೇಯನೇ! ಸೀತೆಯು ಇಂತಹ ಸ್ಥಳದಲ್ಲಿರುವಳೆಂಬುದನ್ನು ಅರಿಯದೆ ತಹತಹಪಡುತಲಿದ್ದೆನು, ಆಕೆಯ ಸುದ್ದಿಯನ್ನು ತಿಳಿದಮೇಲೆ ಇನ್ನು ನಾನೊಂದು ನಿಮಿಷಮಾತ್ರವಾದರೂ ತಾಳಲಾರೆನು. ಆದಕಾರಣ ನೀನು ಆಕೆಯನ್ನು ಎಲ್ಲಿ ಕಂಡೆಯೋ ಅಲ್ಲಿಗೆ ನನ್ನನ್ನೂ ಬೇಗನೆ ಕರೆದೊಯ್ಯಬಾರದೆ ? ॥೧೧॥ ಅಯ್ಯೋ ! ಸರ್ವಾಂಗಸುಂದರಿಯೂ ಸ್ವಭಾವ ಭಯಸ್ವಭಾವದವಳೂ ಆಗಿರುವ ನನ್ನ ಪ್ರಾಣಪ್ರಿಯಳು - ವಿಕಾರವಾದ ಆಕಾರಗಳಿಂದ ಮಹಾಭಯಂಕರರಾದ ರಾಕ್ಷಸರನಡುವೆ ಸಿಲುಕಿ ಹೇಗೆ

ಭಯಾವಹಾನಾಂ ಘೋರಾಣಾಂ ಮಧ್ಯೇ ತಿಷ್ಠತಿ ರಕ್ಷಸಾಂ ॥೧೦॥
ಶಾರದ ಸ್ತಿಮಿರೋನ್ಮುಕ್ತೋ ನೂನಂ ಚಂದ್ರ ಇವಾಂಬುದೈಃ।
ಆವೃತಂ ವದನಂ ತಸ್ಯಾ ನ ವಿರಾಜತಿ ರಾಕ್ಷಸೈಃ ॥೧೧॥
ಕಿಮಾಹ ಸೀತಾ ಹನುಮಂ ಸ್ತತ್ವತಃ ಕಥಯಾದ್ಯ ಮೇ।
ಏತೇನ ಖಲು ಜೀವಿಷ್ಯೇ ಭೇಷಜೇ ನಾತುರೋ ಯಥಾ॥೧೨॥
ಮಧುರಾ ಮಧುರಾಲಾಪಾ ಕಿಮಾಹ ಮಮ ಭಾಮಿನೀ।
ಮದ್ವಿಹೀನಾ ವರಾರೋಹಾ ಹನುಮನ್ ಕಥಯಸ್ವ ಮೇ ॥ ೧೩ ॥

—ಇತಿ ಶ್ರೀಮತ್ಸುನ್ದರಕಾಣ್ಡೇ ಷಟ್ಷಷ್ಟಿತಮಸ್ಸರ್ಗಃ—

---

ರಕ್ಷಸಾಂ - ರಾಕ್ಷಸರ, ಮಧ್ಯೇ - ನಡುವೆ, ಕಥಂ - ಹೇಗೆ, ತಿಷ್ಠತಿ - ಇರಾಳೆಯೋ ॥ ೧೦ ॥ ರಾಕ್ಷಸೈಃ - ರಕ್ಕಸರಿಂದ, ಆವೃತಂ - ಸುತ್ತುಗಟ್ಟಲ್ಪಟ್ಟಿರುವ, ತಸ್ಯಾಃ - ಆ ಸೀತೆಯ, ವದನಂ - ಮುಖವು, ಅಂಬುದೈಃ - ಮೋಡಗಳಿಂದ, (ಆವೃತಃ-ಮುಚ್ಚಲ್ಪಟ್ಟಿರುವವನೂ,) ತಿಮಿರೋನ್ಮುಕ್ತಃ- ಕತ್ತಲೆಯಿಂದ ಬಿಡಲ್ಪಟ್ಟವನೂ, ಶಾರದಃ - ಶರತ್ಕಾಲದಲ್ಲಿರುವವನೂ ಆಗಿರುವ, ಚಂದ್ರಇವ - ಚಂದ್ರನಂತೆ, ನವಿರಾಜತಿ - ಪ್ರಕಾಶಿಸುವುದಿಲ್ಲ ॥೧೧॥ ಹನುಮನ್ - ಎಲೈ ಆಂಜನೇಯನೇ, ಸೀತಾ - ಸೀತಾದೇವಿಯು, ಕಿಂ - ಏನನ್ನು, ಆಹ - ಹೇಳಿದಳು, ತತ್ವತಃ - ವಾಸ್ತವವಾಗಿ, ಅದ್ಯ ಈಗ, ಮೇ - ನನಗೆ, ಕಥಯ - ಹೇಳು, ಏತೇನ-ಈ ನಿನ್ನ ಹೇಳುವಿಕೆಯಿಂದ, ಭೇಷಜೇನ - ಔಷಧದಿಂದ, ಆತುರೋಯಥಾ - ರೋಗಿಯು ಹೇಗೋಹಾಗೆ, ಜೀವಿಷ್ಯೇಖಲು - (ಜೀವಿಷ್ಯಾಮಿ) - ಜೀವಿಸುವೆನು॥ ಹನುಮನ್ - ಎಲೈ ಆಂಜನೇಯನೇ, ಮಧುರಾ - ಸುಂದರಿಯೂ, ಮಧುರಾಲಾಪಾ - ಇಂಪಾದ ನುಡಿಯುಳ್ಳವಳೂ, ವರಾರೋಹಾ - ಉತ್ತಮ ಸಾಧ್ವಿಯೂ ಆಗಿರುವ, ಮಮ - ನನ್ನ, ಭಾಮಿನೀ - ಪ್ರಿಯಳಾದ ಸೀತೆಯು, ಮದ್ವಿಹೀನಾ - ನನ್ನಿಂದ ಅಗಲಿದವಳಾಗಿ, ಕಿಂ - ಏನನ್ನು, ಆಹ - ಹೇಳಿದಳೋ, (ತತ್ - ಅದನ್ನು) ಕಥಯ - ಹೇಳು ॥೧೩॥

— ಇಂತು ಅರವತ್ತಾರನೆಯ ಸರ್ಗಂ —

---

ಜೀವಿಸುತ್ತಿರುವಳೋ ಅದನ್ನು ನೆನೆನು ಈ ದುಃಖವನ್ನು ನಾನು ಹೇಗೆಸಹಿಸಲಿ! ॥೧೦॥ ಎಲೈ ಮಾರುತಿಯೇ! ಈಗಲೂ ಕ್ರೂರ ರಾಕ್ಷಸರು ಸುತ್ತಲೂ ಸುತ್ತಿಕೊಂಡಿರುವುದರಿಂದ ಶರತ್ಕಾಲದಲ್ಲಿ ಕತ್ತಲೆಲ್ಲ ಕಳೆದುಹೋಗಿದ್ದರೂ ಮೇಘಗಳಿಂದ ಆವರಿಸಲ್ಪಟ್ಟಿರುವ ಚಂದ್ರಮಂಡಲದಂತೆ ನನ್ನ ಪ್ರಿಯಳ ಮುಖವುಶೋಭಿಸದೇ ಇರುವುದಲ್ಲವೆ? ॥೧೧॥ ಓ ಆಂಜನೇಯ! ಸೀತೆಯು ಏನೇನ ಹೇಳಿದಳೋ ಅದನ್ನೇ ನಿಜವಾಗಿ ಮೊದಲಿನಿಂದಲೂ ಮತಳಿನನಗೆ ಹೇಳಬೇಕು, ಅದನ್ನು ಕೇಳುತ್ತಿಲದಿಂದ, ರೋಗಿಯು ಔಷಧದಿಂದ ಬೆಳಗೆ ಹಾಗೆ ಸ್ವಲ್ಪ ಉಸಿರನ್ನು ತಾಳಿರುವೆನು ॥೧೨॥ ಎಲೈ ಹನುಮಂತನೆ! ಸರ್ವೋತ್ತಮಳೆನಿಸಿದವಳೂ, ಅಧಿಕ ಸೌಂದರ್ಯವತಿಯೂ ಆಗಿರುವ ನನ್ನಪ್ರಿಯವಲ್ಲಭೆಯು ಪ್ರಿಯವಚನಗಳು ಬಹುಕಾವ್ಯಗಳಾಗಿರುವುದರಿಂದ ನನ್ನನ್ನು ಅಗಲಿರುವ ಆ ಸುಂದರಿಯು ಹೇಳಿದಮಾತುಗಳನ್ನೇ ಮರಳಿ ಹೇಳಿ ನನಗೆ ಆನಂದವನ್ನುಂಟುಮಾಡು ಎಂದನು ॥೧೩॥

—ಇಂತು ಅರುವತ್ತಾರನೆಯ ಸರ್ಗವು—

ಶ್ರೀ.

ಶ್ರೀ ರಾಮಚನ್ದ್ರ ಪರಬ್ರಹ್ಮಣೇನಮಃ.

## ಶ್ರೀಮತ್ಸುಂದರಕಾಂಡೆ ಸಪ್ತಷಷ್ಟಿತಮಸ್ಸರ್ಗಃ



ಏವಮುಕ್ತಸ್ತು ಹನುಮಾನ್ ರಾಘವೇಣ ಮಹಾತ್ಮನಾ ।
ಸೀತಾಯಾ ಭಾಷಿತಂ ಸರ್ವಂ ನ್ಯವೇದಯತ ರಾಘವೇ ॥೧॥
ಇದಮುಕ್ತವತೀ ದೇವೀ ಜಾನಕೀ ಪುರುಷರ್ಷಭ ।
ಪೂರ್ವವೃತ್ತಮಭಿಜ್ಞಾನಂ ಚಿತ್ರಕೂಟೇ ಯಥಾತಥಮ್ ॥೨॥
ಸುಖಸುಪ್ತಾ ತ್ವಯಾ ಸಾರ್ಧಂ ಜಾನಕೀ ಪೂರ್ವಮುತ್ಥಿತಾ ।
ವಾಯಸಃ ಸಹಸೋತ್ಪತ್ಯ ವಿದದಾರ ಸ್ತನಾಂತರೇ ॥೩॥

---

—ಅರವತ್ತೇಳನೆಯ ಸರ್ಗಂ—

ಕಂ॥ ಒಡೆಯನೆ ಲಾಲಿಸು ಜಾನಕಿ । ಕಡುಶೋಕದೊಳಿರ್ದು ಕಾಕವೃತ್ತವ ಪೇಳ್ದಂ ।
ಮುಡಿಯೊಳಗಿರ್ದ ಮಣಿಯಂ । ಕುಡುವುದಿದೆ ಪೇಳ್ದಳೆಂದು ಹನುಮಂ ನುಡಿದಂ॥

ಮಹಾತ್ಮನಾ - ಮಹಾನುಭಾವನಾದ, ರಾಘವೇಣ - ರಾಮನಿಂದ, ಏವಂ - ಈ ಪ್ರಕಾರವಾಗಿ, ಉಕ್ತಃ - ಹೇಳಲ್ಪಟ್ಟ, ಹನುಮಾನ್ - ಆಂಜನೇಯನಾದರೋ, ಸೀತಾಯಾಃ - ಜಾನಕಿಯ, ಸರ್ವಂ - ಸಮಸ್ತವಾದ, ಭಾಷಿತಂ - ಮಾತೆಲ್ಲವನ್ನು, ರಾಘವೇ - ರಾಮನಲ್ಲಿ, ನ್ಯವೇದಯತ - ಅರಿಕೆ ಮಾಡಿದನು ॥೧॥ ಪುರುಷರ್ಷಭ - ಎಲೈ ಪುರುಷಶ್ರೇಷ್ಠನೇ, ಜಾನಕೀ ದೇವೀ - ಸೀತಾ ದೇವಿಯು, ಚಿತ್ರಕೂಟೇ - ಚಿತ್ರಕೂಟಪರ್ವತದಲ್ಲಿ, ಪೂರ್ವವೃತ್ತಂ - ಹಿಂದೆ ನಡೆದ, ಇದಂ - ಈ, ಅಭಿಜ್ಞಾನಂ - ಗುರುತಿನ ಸಮಾಚಾರವನ್ನು, ಯಥಾತಥಂ - ಯಥಾವತ್ತಾಗಿ, ಉಕ್ತವತೀ - ಹೇಳಿದಳು ॥೨॥ ತ್ವಯಾಸಾರ್ಧಂ - ನಿನ್ನೊಡನೆ, ಸುಖಸುಪ್ತಾ - ಸುಖವಾಗಿ ಪವಳಿಸಿದ್ದ, ಜಾನಕೀ - ಸೀತಾ ದೇವಿಯು, ಪೂರ್ವಂ - ನಿನಗಿಂತ ಮೊದಲು, ಉತ್ಥಿತಾ - ಎದ್ದಳಂತೆ. (ತದಾ - ಆಗ) ವಾಯಸಃ - ಕಾಗೆಯು, ಸಹಸಾ - ಬೇಗನೆ, ಉತ್ಪತ್ಯ - ಹಾರಿಬಂದು, ಸ್ತನಾಂತರೇ - ಸ್ತನ ಮಧ್ಯದಲ್ಲಿ, ವಿದದಾರ - ಕೊಕ್ಕಿನಿಂದ

---

— ಅರವತ್ತೇಳನೆಯ ಸರ್ಗ —

ಮಹಾನುಭಾವನಾದ ಶ್ರೀರಾಮಚಂದ್ರನು ಹೇಳಿದಮಾತುಗಳನ್ನು ಕೇಳಿದ ಧೀರನಾದ ಮಾರುತಿಯು-ತನ್ನೊಡನೆ ಸೀತೆಯು ತಿಳಿಸಿದಸಂಗತಿಯನ್ನೆಲ್ಲ ರಾಘವನಿಗೆ ಮರಳಿ ಅರಿಕೆ ಮಾಡಲಿಕ್ಕೆ ಆರಂಭಿಸಿದನು ॥೧॥ ಎಲೈ ಪುರುಷೋತ್ತಮನೇ! ಪೂರ್ವದಲ್ಲಿ ಚಿತ್ರಕೂಟ ಪರ್ವತದೊಳಗೆ ಕಾಕಾಸುರನಿಂದ ನಡೆದುದೆಂದು ನಾನುಮೇಲೆ ಹೇಳಿದ ವೃತ್ತಾಂತವನ್ನೇ, ಹೇಗೆ ನಡೆಯಿತೋ ಹಾಗೆಯೇ ನಿನ್ನೊಡನೆ ನಂಬುಗೆಗಾಗಿ ಗುರುತನ್ನಾಗಿ ಅರಿಕೆಮಾಡುವಂತೆ ಹೇಳಿದಳು ॥೨॥ ಅದೆಂತೆಂದರೆ:- ಎಲೈ ರಾಮಚಂದ್ರನೇ, ನಿನ್ನ ತೊಡೆಯಮೇಲೆ ಸೀತೆ ಸುಖವಾಗಿ ಮಲಗಿದ್ದು, ಆ ಹಿಂದೆ ಎಚ್ಚತ್ತು ಕುಳಿತಿರಲು, ಬಂದಾನೊಂದುವಾಯಸವು ಆಕೆ ಕುಳಿತಿದ್ದ ಬಳಿಗೆ

ಪರ್ಯಾಯೇಣ ಚ ಸುಪ್ತಸ್ತ್ವಂ ದೇವ್ಯಂಕೇ ಭರತಾಗ್ರಜ ।
ಪುನಶ್ಚ ಕಿಲ ಪಕ್ಷೀ ಸ ದೇವ್ಯಾ ಜನಯತಿ ವ್ಯಥಾಮ್ ॥೪॥
ತತಃ ಪುನರುಪಾಗಮ್ಯ ವಿದದಾರ ಭೃಶಂ ಕಿಲ ।
ತತಸ್ತ್ವಂ ಬೋಧಿತಸ್ತಸ್ಯಾ ಶೋಣಿತೇನ ಸಮುತ್ಕ್ಷಿತಃ ॥೫॥
ವಾಯಸೇನ ಚ ತೇನೈವ ಸತತಂ ಬಾಧ್ಯಮಾನಯಾ ।
ಬೋಧಿತಃ ಕಿಲ ದೇವ್ಯಾ ತ್ವಂ ಸುಖಸುಪ್ತಃ ಪರಂತಪ ॥೬॥
ತಾಂ ತು ದೃಷ್ಟ್ವಾ ಮಹಾಬಾಹೋ ದಾರಿತಾಂ ಚ ಸ್ತನಾಂತರೇ ।
ಆಶೀವಿಷ ಇವ ಕ್ರುದ್ಧೋ ನಿಶ್ವಸನ್ನಭ್ಯಭಾಷಥಾಃ ॥೭॥

ಸೀಳಿತಂತೆ, ॥೩॥ ಭರತಾಗ್ರಜ - ಎಲೈರಾಮನೇ, ಪರ್ಯಾಯೇಣ - ಕ್ರಮದಿಂದ, (ಆಕೆ ಪವಳಿಸಿದ್ದ ತರುವಾಯ ನೀನು) ದೇವ್ಯಂಕೇ - ಸೀತೆಯ ತೊಡೆಯಮೇಲೆ, ತ್ವಂಚ - ನೀನೂ, ಸುಪ್ತಃ - ಮಲಗಿದ್ದೆಯಂತೆ, (ತದಾ- ಆಗ) ಪುನಶ್ಚ-ಮರಳಿ, ಸಃ - ಆ, ಪಕ್ಷೀ - ಕಾಗೆಯು, ದೇವ್ಯಾಃ - ಸೀತೆಗೆ, ವ್ಯಥಾಂ - ಬಾಧೆಯನ್ನು, ಜನಯತಿಕಿಲ - ಉಂಟು ಮಾಡುತಲಿದ್ದಿತಂತೆ, ॥೪॥ ತತಃ - ಆ ಹಿಂದೆ, ಸಃ - ಆ ವಾಯಸವು, ಪುನಃಪುನಃ-ಅಡಿಗಡಿಗೂ, ಭೃಶಂ - ಬಹಳವಾಗಿ, ವಿದದಾರಕಿಲ - ಗಾಯಮಾಡುತಲಿದ್ದಿತಂತೆ, ತ್ವಂ - ನೀನು, ತಸ್ಯಾಃ - ಆ ಸೀತೆಯ, ಶೋಣಿತೇನ - ಗಾಯದ ರಕ್ತದಿಂದ, ಸಮುತ್ಕ್ಷಿತಃ - ತೋಯಿಸಲ್ಪಟ್ಟವನಾದಕಾರಣವೇ, ಬೋಧಿತಃ - ಎಚ್ಚರಗೊಳಿಸಲ್ಪಟ್ಟೆಯಂತೆ ॥೫॥ ಪರಂತಪ - ಹಗೆಗಳನ್ನು ತಾಪಗೊಳಿಸುವ ಎಲೈ ಪ್ರಭುವೇ, ತೇನ- ಆ, ವಾಯಸೇನೈವ - ಕಾಗೆಯಿಂದಲೇ, ಸತತಂ - ಬಹಳ ಹೊತ್ತಿನವರೆಗೂ, ಬಾಧ್ಯಮಾನಯಾ - ತೊಂದರೆಗೊಳಿಸಲ್ಪಡುತಲಿದ್ದ, ದೇವ್ಯಾ - ಸೀತಾದೇವಿಯಿಂದ, ಸುಖಸುಪ್ತಃ - ಸುಖವಾಗಿ ಮಲಗಿದ್ದ, ತ್ವಂ - ನೀನು, ಬೋಧಿತಃ ಕಿಲ - ಎಚ್ಚರಗೊಳಿಸಲ್ಪಟ್ಟವನಾದೆಯಂತೆ ॥೬॥ ಹೇ ಮಹಾಬಾಹೋ - ಹೇರಳವಾದ ತೋಳು ಬಲವುಳ್ಳ ಎಲೈ ರಾಮನೆ, ತ್ವಂ - ನೀನು, ಸ್ತನಾಂತರೇ - ಸ್ತನಮಧ್ಯದಲ್ಲಿ, ದಾರಿತಾಂ - ಗಾಯಮಾಡಲ್ಪಟ್ಟಿರುವ ತಾಂ - ಆಕೆಯನ್ನು, ದೃಷ್ಟ್ವಾ - ನೋಡಿ, (ಕ್ರುದ್ಧಃ - ಕೋಪಗೊಂಡಿರುವ,) ಆಶೀವಿಷಇವ - ಸರ್ಪದಂತೆ, ನಿಶ್ವಸನ್ - ನಿಟ್ಟುಸಿರನ್ನು ಬಿಡುತಲಿರುವವನೂ, ಕ್ರುದ್ಧಃ - ಸಿಟ್ಟುಗೊಂಡವನೂ ಆಗಿ, ಅಭ್ಯಭಾಷಥಾಃ - ಮಾತನಾಡಿದೆಯಂತೆ ಹೇ ಭೀರು - ಭಯ ಸ್ವಭಾವದ ಬ

ಬಂದು ಸ್ತನಮಧ್ಯಭಾಗವನ್ನು ತನ್ನ ಕೊಕ್ಕಿನಿಂದ ಸೀಳಿತಂತೆ ॥೩॥ ಆಗ ಆಕೆಯಂತೆ ನೀನೂ ದೇವಿಯ ತೊಡೆಯ ಮೇಲೆ ಪವಳಿಸಿಯಿದ್ದೆ, ಆ ಸಮಯದೊಳಗೆ ಮರಳಿ ಆ ವಾಯಸವು ಜಾನಕಿಗೆ ವ್ಯಥೆಯನ್ನುಂಟುಮಾಡುತಲಿದ್ದಿತು ॥೪॥ ಹೀಗೆ ಮರಮರಳಿ ಆ ಬಲಿಭೋಜನನು ಬಂದು, ಕುಟುಕಿ ಹೇರಳವಾಗಿ ನೊವನ್ನುಂಟುಮಾಡುತ್ತಿರಲು, ಗಾಯದಿಂದ ಹೊರಟ ರಕ್ತಬಿಂದುಗಳು ನಿನ್ನ ಮೇಲೆ ಉದುರಿದುವು, ಅದರಿಂದ ಮೈತೋಯಲು ನಿನಗೆ ಎಚ್ಚರಿಕೆಯುಂಟಾಯಿತು ॥೫॥ ಅಡಿಗಡಿಗೂ ತೊಂದರೆಗೊಳಿಸುತಲಿರುವ ಆ ವಾಯಸದಿಂದ ಬಾಧಿತಳಾಗುತಲಿದ್ದ ಸೀತೆಯು ತೊಡೆಯಮೇಲೆ ಹಾಯಾಗಿ ಪವಳಿಸಿದ್ದ ನೀನು ಎಚ್ಚತ್ತೆ ॥೬॥ ಎಲೈ ಮಹಾಬಾಹುವೇ! ಸ್ತನಮಧ್ಯದಲ್ಲಿ ಗಾಯವನ್ನು ಹೊಂದಿರುವ ಜಾನಕಿಯನ್ನು ನೋಡಿ ಮನಮರುಗಿ ಮಹಾಸರ್ಪದಂತೆ ಕ್ರೂರಕರವಾಗಿ ರೋಷಗೊಂಡು, ನಿಟ್ಟುಸಿರನ್ನು ಬಿಡುತ್ತಾ

ನಖಾಗ್ರೈಃ ಕೇನ ತೇ ಭೀರು ದಾರಿತಂ ತು ಸ್ತನಾಂತರಮ್ ।
ಕಃ ಕ್ರೀಡತಿ ಸರೋಷೇಣ ಪಂಚವಕ್ತ್ರೇಣ ಭೋಗಿನಾ ॥೮॥
ನಿರೀಕ್ಷಮಾಣಃ ಸ್ಸಹಸಾ ವಾಯಸಂ ಸಮವೈಕ್ಷಥಾಃ।
ನಖೈ ಸ್ಸರುಧಿರೈ ಸ್ತೀಕ್ಷ್ಣೈ ಸ್ತಾ ಮೇವಾಭಿಮುಖಂ ಸ್ಥಿತಂ ॥೯॥
ಸುತಃ ಕಿಲ ಸ ಶಕ್ರಸ್ಯ ವಾಯಸಃ ಪತತಾಂ ವರಃ ।
ಧರಾಂತರ ಚರ ಶ್ಶೀಘ್ರಂ ಪವನಸ್ಯ ಗತೌ ಸಮಃ ॥೧೦॥
ತತ ಸ್ತಸ್ಮಿ ನ್ಮಹಾಬಾಹೋ ಕೋಪ ಸಂವರ್ತಿತೇಕ್ಷಣಃ ।
ವಾಯಸೇ ತ್ವಂ ಕೃಥಾಃ ಕ್ರೂರಾಂ ಮತಿಂ ಮತಿಮತಾಂ ವರ ॥೧೧॥
ಸದರ್ಭಂ ಸಂಸ್ತರಾ ದ್ಗೃಹ್ಯ ಬ್ರಹ್ಮಾಸ್ತ್ರೇಣ ಹ್ಯಯೋಜಯಃ ।

---

ಸೀತೆ, ಕೇನ - ಯಾರಿಂದ, ನಖಾಗ್ರೈಃ - ಉಗುರುಗಳಿಂದ, ತೇ - ನಿನ್ನ, ಸ್ತನಾಂತರಂ - ಸ್ತನಮಧ್ಯಭಾಗವು, ದಾರಿತಂತು - ಗಾಯಗೊಳಿಸಲ್ಪಟ್ಟಿತು, ಸರೋಷೇಣ - ರೋಷದಿಂದೊಡಗೂಡಿದ, ಪಂಚವಕ್ತ್ರೇಣ - ಐದು ತಲೆಗಳುಳ್ಳ, ಭೋಗಿನಾ - ಸರ್ಪದೊಡನೆ, ಕಃ - ಯಾವನು, ಕ್ರೀಡತಿ - ಆಟವಾಡುತಲಿದಾನೆ, ॥೮॥ (ತ್ವಂ - ನೀನು,) ನಿರೀಕ್ಷಮಾಣಃ - ಅತ್ತಿತ್ತ ನೋಡುತಲಿರುವವನಾಗಿ, ಸರುಧಿರೈಃ - ರಕ್ತದಿಂದೊಡಗೂಡಿರುವ, ತೀಕ್ಷ್ಣೈಃ - ಮೊನೆಯಾದ, ನಖೈಃ - ಉಗುರುಗಳಿಂದ, ತಾಮೇವ - ಆಕೆಗೇ, ಅಭಿಮುಖಂ - ಇದಿರಾಗಿ, ಸ್ಥಿತಂ - ಇದ್ದ, ವಾಯಸಂ - ಕಾಗೆಯನ್ನು, ಸಮವೈಕ್ಷಥಾಃ - ನೋಡಿದೆಯಂತೆ ॥ ೯ ॥ ಪತತಾಂ - ಹಕ್ಕಿಗಳೊಳಗೆ, ವರಃ - ಶ್ರೇಷ್ಠವಾದ, ಸಃ - ಆ, ವಾಯಸಃ - ಕಾಗೆಯು, ಶಕ್ರಸ್ಯ - ಇಂದ್ರನ, ಸುತಃಕಿಲ - ಮಗನಂತೆ, ಶೀಘ್ರಂ - ಬೇಗನೆ, ಧರಾಂತರಚರಃ - ಬೆಟ್ಟದೊಳಗೆ ಸಂಚರಿಸುವುದೂ, (ಪಾತಾಳದಲ್ಲಿ ಸಂಚರಿಸುವಂಥಾದ್ದು) ಪವನಸ್ಯ - ವಾಯುವಿನ, ಗತೌ - ಗಮನದಲ್ಲಿ, ಸಮಃ - ಸದೃಶವಾಗಿರುವುದೂ ಆಗಿದ್ದಿತಂತೆ ॥ ೧೦ ॥ ತತಃ - ಆ ಮೇಲೆ, ಮಹಾಬಾಹೋ - ಹೆಚ್ಚಿದ ತೋಳು ಬಲವುಳ್ಳವನೇ, ಮತಿಮತಾಂ - ಪ್ರಶಸ್ತ ಬುದ್ಧಿಯುಳ್ಳವರೊಳಗೆ, ವರ - ಉತ್ತಮನೇ, ತಸ್ಮಿನ್ - ಆ, ವಾಯಸೇ - ಕಾಗೆಯಲ್ಲಿ, ಕೋಪಸಂವರ್ತಿತೇಕ್ಷಣಃ - ಸಿಟ್ಟಿನಿಂದ ಕೆಂಪಡರಿದ ಕಣ್ಣುಳ್ಳ, ತ್ವಂ - ನೀನು, ಕ್ರೂರಾಂ - ಘಾತುಕವಾದ, ಮತಿಂ - ಬುದ್ಧಿಯನ್ನು, ಕೃಥಾಃ - (ಅಕೃಥಾಃ) ಮಾಡಿದೆಯಂತೆ, ॥ ೧೧ ॥ ಸಃ - ಅಂತಹ (ತ್ವಂ - ನೀನು)

---

ಹೀಗೆ ಹೇಳಿದೆ ॥೭॥ ಭಯಶೀಲಳಾದ ಓ ಸೀತೆ! ನಿನ್ನ ಸ್ತನಮಧ್ಯಭಾಗದಲ್ಲಿ ಉಗುರುಗಳಿಂದ ಗಾಯಮಾಡಿದವರಾರು ? ಸಿಟ್ಟುಗೊಂಡ ಐದು ಹೆಡೆಯ ಹಾವಿನೊಡನೆ ಸರಸವಾಡುವಂತೆ ನನ್ನ ಸಂಗಡ ಆಟವಾಡುವವನಾರು? ಅವನಿಗುಂಟಾಗುವ ಗತಿಯನ್ನು ನೋಡು ಎಂದು ಹೇಳುತ್ತಾ ॥೮॥ ಬೇಗನೆ ಸುತ್ತಲೂ ತಿರುಗಿನೋಡಿ, ತಪ್ಪನ್ನು ಮಾಡಿದ ವಾಯಸವನ್ನು ಕಂಡೆ, ಅದರ ಮೊನೆಯಾದ ಉಗುರುಗಳೆಲ್ಲ ರಕ್ತದಿಂದ ನನೆದಿದ್ದುವು, ಮತ್ತು ಆ ಕಾಗೆಯು ಆಕೆಯ ಇದಿರಿಗೇ ಇದ್ದಿತು ॥೯॥ ಬಲು ದೊಡ್ಡ ಹಕ್ಕಿಯಾಗಿದ್ದ ಆ ಚಿಂಜೀವಿಯು ಇಂದ್ರನಿಗೆ ಮಗನಂತೆ, ಗಮನದಲ್ಲಿ ವಾಯುವಿಗೆಣೆಯೆನಿಸಿದ್ದಿತು, ಅದಕ್ಕೆ ಬೆಟ್ಟದಲ್ಲಿಯೂ, ಪಾತಾಳದಲ್ಲಿಯೂ ಬಹುವೇಗದಿಂದ ಸಂಚರಿಸುವ ಶಕ್ತಿಯಿದ್ದಿತು ॥೧೦॥ ಎಲೈ ಮಹಾವೀರನೇ! ಕೋಪದಿಂದ ಕೆಂಪಡರಿ ತಿರುಗುತಲಿರುವ ದೃಷ್ಟಿಯುಳ್ಳ ನೀನು ಆ ವಾಯಸವನ್ನು ಆಗಲೇ

ನಚ ಸರ್ವೇ ರಣೇ ಶಕ್ತಾ ರಾಮಂ ಪ್ರತಿ ಸಮಾಸಿತುಮ್ ॥೧೯॥
ತಸ್ಯವೀರ್ಯವತಃ ಕಶ್ಚಿದ್ಯದ್ಯಸ್ತಿ ಮಯಿ ಸಂಭ್ರಮಃ।
ಕ್ಷಿಪ್ರಂ ಸುನಿಶಿತೈರ್ಬಾಣೈರ್ಹನ್ಯತಾಂ ಯುಧಿ ರಾವಣಃ ॥೨೦॥
ಭ್ರಾತುರಾದೇಶಮಾಜ್ಞಾಯ ಲಕ್ಷ್ಮಣೋ ವಾ ಪರಂತಪಃ।
ಸ ಕಿಮರ್ಥಂ ನರವರೋ ನ ಮಾಂ ರಕ್ಷತಿ ರಾಘವಃ ॥೨೧॥
ಶಕ್ತೌ ತೌ ಪುರುಷವ್ಯಾಘ್ರೌ ವಾಯ್ವಗ್ನಿ ಸಮ ತೇಜಸೌ।
ಸುರಾಣಾಮಪಿ ದುರ್ಧರ್ಷೌ ಕಿಮರ್ಥಂ ಮಾಮುಪೇಕ್ಷತಃ ॥೨೨॥
ಮಮೈವ ದುಷ್ಕೃತಂ ಕಿಂಚಿನ್ಮಹದಸ್ತಿ ನ ಸಂಶಯಃ।

---

ರಾಮನನ್ನು, ಪ್ರತಿಸಮಾಸಿತುಂ - ಇದಿರಿಸಿ ಯುದ್ಧ ಮಾಡಲಿಕ್ಕೆ, ನಶಕ್ತಾಃ - ಸಮರ್ಥರಾಗಿಲ್ಲ, ಗಂಧರ್ವಾ ಅಪಿ - ಗಂಧರ್ವರೂ, ನ - ಸಮರ್ಥರಲ್ಲ, ಅಸುರಾಃ - ರಕ್ಕಸರೂ, ನ - ಸಮರ್ಥರಲ್ಲ, ಮರುದ್ಗಣಾಃ - ದೇವತಾಸಮೂಹಗಳೂ, ನ - ಶಕ್ತಗಳಲ್ಲ, ಸರ್ವೇಚ - ಒಟ್ಟಿಗೆ ಸೇರಿದ ಇವರೆಲ್ಲರೂ ನಸಮಸಂಭ್ರಾಃ - ಶಕ್ತರಾಗುತ್ತಿರಿಲ್ಲ, ॥೧೯॥ ವೀರ್ಯವತಃ - ಪರಾಕ್ರಮ ಶಾಲಿಯಾದ, ತಸ್ಯ - ಆ ರಾಮನಿಗೆ, ಮಯಿ - ನನ್ನಲ್ಲಿ, ಕಶ್ಚಿತ್ - ಯಾವುದೊಂದರೊಂದು, ಸಂಭ್ರಮಃ - ತ್ವರೆಪಡುವ ಕುತೂಹಲವು, ಅಸ್ತಿಯದಿ - ಇದ್ದುದೇ ಆದರೆ, (ರಾಮೇಣ - ರಾಮನಿಂದ,) ಸುನಿಶಿತೈಃ - ತೀಕ್ಷ್ಣಗಳಾದ, ಬಾಣೈಃ - ಬಾಣಗಳಿಂದ, ರಾವಣಃ - ರಾವಣನು, ಯುಧಿ - ಯುದ್ಧದಲ್ಲಿ. ಕ್ಷಿಪ್ರಂ - ಬೇಗನೆ, ಹನ್ಯತಾಂ - ಕೊಲ್ಲಲ್ಪಡಲಿ, ॥೨೦॥ ಪರಂತಪಃ - ಹಗೆಗಳನ್ನಡಗಿಸುವ, ನರವರಃ - ಪುರುಷ ಶ್ರೇಷ್ಠನಾದ, ರಾಘವಃ - ರಘುಕುಲ ಸಂಭವನಾದ, ಸಃ - ಆ, ಲಕ್ಷ್ಮಣೋವಾ - ಲಕ್ಷ್ಮಣನಾದರೂ, ಭ್ರಾತುಃ - ಅಣ್ಣನ, ಆದೇಶಂ - ಆಜ್ಞೆಯನ್ನು, ಆಜ್ಞಾಯ - ತಿಳಿದುಕೊಂಡು, (ಪಡೆದು) ಕಿಮರ್ಥಂ - ಏತಕ್ಕೋಸ್ಕರ, ಮಾಂ - ನನ್ನನ್ನು. ನರಕ್ಷತಿ - ಕಾಪಾಡದೆ ಇದಾನೆ ॥೨೧॥ ವಾಯ್ವಗ್ನಿ ಸಮತೇಜಸೌ - ವಾಯು ಮತ್ತು ಅಗ್ನಿಗಳಿಗೆ ಸಮಾನವಾದ ತೇಜಸ್ಸುಳ್ಳವರೂ, ಶಕ್ತೌ - ಸಮರ್ಥರೂ, ಸುರಾಣಾಮಪಿ - ದೇವತೆಗಳಿಗೂ, ದುರ್ಧರ್ಷೌ - ಇದಿರಿಸಲಸದಳರೂ ಆಗಿರುವ, ಪುರುಷವ್ಯಾಘ್ರೌ ಪುರುಷ ಶ್ರೇಷ್ಠರಾದ, ತೌ - ಆ ರಾಮ ಲಕ್ಷ್ಮಣರು, ಕಿಮರ್ಥಂ - ಏತಕ್ಕೋಸ್ಕರ, ಮಾಂ - ನನ್ನನ್ನು, ಉಪೇಕ್ಷತಃ - (ಉಪೇಕ್ಷೇತೇ) ಉಪೇಕ್ಷೆ ಮಾಡುತಲಿದಾರೆ ॥೨೨॥ ಸಂತಮಃ - ಹಗೆಗಳಿಗೆ

---

ರಣದಲ್ಲಿ ಇದಿರಿಸಿ ನಿಲ್ಲಲಾರರು, ಒಂದು ವೇಳೆ ಇವರೆಲ್ಲರೂ ಒಟ್ಟಾದರೂ ರಾಮನಿಗಿದಿರಾಗಿ ನಿಲ್ಲಲಾರರು ॥೧೯॥ - ಆ ಮಹಾವೀರನಾದ ರಾಮನಿಗೆ ನನ್ನಲ್ಲಿ ಪ್ರೀತಿಯಿರುವುದಾದರೆ ತಡಮಾಡದೆ ತನ್ನ ಪರಾಕ್ರಮವನ್ನು ತೋರಿ, ಕ್ರೂರವಾದ ಬಾಣಗಳಿಂದ ರಾವಣನನ್ನು ಇರಿಯುತಲಿಲ್ಲನೇಕೆ ॥೨೦॥ ಹಾಗಿಲ್ಲದಿದ್ದರೆ ಅಣ್ಣನ ಅಪ್ಪಣೆಯನ್ನು ಪಡೆದು ಲಕ್ಷ್ಮಣನಾದರೂ ರಾಕ್ಷಸರನ್ನು ಸಂಹರಿಸಿ, ನನ್ನನ್ನು ಸಂರಕ್ಷಿಸದಿರಲು ನಿಮಿತ್ತವೇನು ? ॥೨೧॥ ಶಕ್ತರೂ, ಪುರುಷೋತ್ತಮರೂ, ವಾಯು ಮತ್ತು ಅಗ್ನಿಗಳಿಗೆಣೆಯಾದ ಪರಾಕ್ರಮವುಳ್ಳವರೂ ಆಗಿರುವ ರಾಮಲಕ್ಷ್ಮಣರು ದೇವತೆಗಳಿಗೂ ಅಸಾಧ್ಯರೆನಿಸಿರುವಲ್ಲಿ ನನ್ನನ್ನು ಉಪೇಕ್ಷೆ ಮಾಡಿರಲು ಕಾರಣವೇನು ? ॥೨೨॥ ಎಲೈ ಮಾರುತಿಯೇ ! ಅವರು ಹೀಗೆ ಉದಾಸೀನರಾಗಿರಲಿಕ್ಕೆ ನನ್ನದೇ ಆಗಿರುವ ಯಾವುದೋ ಒಂದು ಮಹಾಪಾಪವೇ ನಿಮಿತ್ತವಾಗಿ

ತತೋ ಮಯಾವಾಗ್ಭಿ ರದೀನ ಭಾಷಿಣಾ ಶಿವಾಭಿ ರಿಷ್ಟಾಭಿ ರಭಿ ಪ್ರಸಾದಿತಾ।
ಜಗಾಮಶಾಂತಿಂ ಮಮ ಮೈಥಿಲಾತ್ಮಜಾ ತವಾಪಿ ಶೋಕೇನ ತದಾಭಿ ಪೀಡಿತಾ ॥೨೯॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ, ಆದಿಕಾವ್ಯೇ, ಶ್ರೀಮದ್ವಾಲ್ಮೀಕೀಯೇ
ಚತುರ್ವಿಂಶತ್ಸಹಸ್ರಿಕಾಯಾಂ ಸಂಹಿತಾಯಾಂ
ಶ್ರೀಮತ್ಸುಂದರಕಾಣ್ಡೇ
— ಅಷ್ಟಷಷ್ಟಿತಮಸ್ಸರ್ಗಃ —

ಪ್ರಸನ್ನಳಾಗಿ ಮಾಡಲ್ಪಟ್ಟವಳಾಗಿ, ಶಾಂತಿ-ಸಮಾಧಾನವನ್ನು, (ದುಃಖನಿವೃತ್ತಿಯನ್ನು) ಜಗಾಮ-ಹೊಂದಿದಳು ॥೨೯॥

ಇಂತು ಪುರಾತನವೆನಿಸಿ, ಆದಿಕಾವ್ಯವಾಗಿ, ವಾಲ್ಮೀಕಿಮುನಿಯಿಂದ ರಚಿಸಲ್ಪಟ್ಟು
ಇಪ್ಪತ್ತುನಾಲ್ಕುಸಾವಿರಶ್ಲೋಕಗಳಿಂದೊಡಗೂಡಿ, ವೇದಕ್ಕೆಣೆಯೆನಿಸಿರುವ
ಶ್ರೀಮದ್ರಾಮಾಯಣಸುನ್ದರಕಾಣ್ಡದಲ್ಲಿ
—ಅರವತ್ತೆಂಟನೆಯ ಸರ್ಗವು—

ದೊಡ್ಡಬೆಲೆಯ ನಾರಾಯಣಶರ್ಮನಿಂದ ರಚಿತವಾದ ರಸಾಯನವೆಂಬ
ಟೀಕೆಯಿಂದ ಸಹಿತವಾಗಿ ಪರಿಪೂರ್ಣತೆಯನ್ನೈದಿತು.
— ಶ್ರೀರಾಮಚಂದ್ರ ಚರಣಾರವಿಂದಾರ್ಪಣಂ —

ಶೋಕವನ್ನು ತೊರೆದರೂ ನಿನ್ನ ಬಿಂತೆ ತಪ್ಪಲಿಲ್ಲ, ಅದರಿಂ ಪ್ರಸನ್ನಳಾಗಿ ಸಂತುಷ್ಟಾಂತರಂಗಳಾಗುತ್ತಾ ನನ್ನನ್ನು ವಾತ್ಸಲ್ಯದಿಂದ ಗೌರವಿಸಿ ಕಳುಹಿದಳು ॥೨೯॥

— ಇಂತು ಅರುವತ್ತೆಂಟನೆಯ ಸರ್ಗಂ —

ಚನ್ದ್ರಬಿಮ್ಬ ಸಮಾಕಾರಂ ಮಾಣಿಕ್ಯ ಪ್ರಭಯಾಯುತಂ।
ಹನೂಮತ್ಸೇವಿತಂ ಧ್ಯಾಯೇ ತತ್ಸುನ್ದರಕಾಣ್ಡ ಮುತ್ತಮಂ॥
ಯತ್ರಯತ್ರ ರಘುನಾಥಕೀರ್ತನಂ ತತ್ರತತ್ರ ಕೃತ ಮಸ್ತಕಾಞ್ಜಲಿಂ।
ಬಾಷ್ಪವಾರಿ ಪರಿಪೂರ್ಣಲೋಚನಂ ಮಾರುತಿಂ ನಮತ ರಾಕ್ಷಸಾನ್ತಕಂ॥

ಶ್ಲೋ॥ ಪ್ರಸಾದೀಚಾಭ್ದ ಪೌಷಸ್ಯ ಪೂರ್ಣಿಮಾಯಾಮಿಯಂ ಕೃತಿಃ।
ನಾರಾಯಣೇನ ವಿವೃತಾ ರಾಮಚನ್ದ್ರ ಪದಾರ್ಪಿತಾ॥